# ಶ್ರೀ ಸಿದ್ಧಾಂತ ಶಿಖಾಮಣಿ

# ಪ್ರವಚನಪ್ರಭೆ

ಸಂಪುಟ ೧

"ವಿದ್ಯಾವಾಚಸ್ಪತಿ"
ಶ್ರೀ ೧೦೦೮ ಕಾಶೀ ಜಗದ್ಗುರು
**ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು**



ಶ್ರೀ ಶಿವಯೋಗಿಶಿವಾಚಾರ್ಯ ವಿರಚಿತ

# ಶ್ರೀ ಸಿದ್ಧಾಂತ ಶಿಖಾಮಣಿ

# ಪ್ರವಚನಪ್ರಭೆ

## ಸಂಪುಟ - ೧

ವೀರಶೈವ ಧರ್ಮ ಸಿದ್ಧಾಂತ ಗ್ರಂಥ

ಶ್ರೀ ಶಿವಯೋಗಿಶಿವಾಚಾರ್ಯ ವಿರಚಿತ

# ಶ್ರೀ ಸಿದ್ಧಾಂತ ಶಿಖಾಮಣಿ
# ಪ್ರವಚನಪ್ರಭೆ

ಪರಿಚ್ಛೇದ ೧-೧೪, ಅಂಗಸ್ಥಲಗಳು ೧-೪೪

ಸಂಪುಟ - ೧

ಆಶೀರ್ವಚನ

"ವಿದ್ಯಾವಾಚಸ್ಪತಿ"

ಶ್ರೀಮತ್ ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು

ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು

ಜಂಗಮವಾಡಿಮಠ, ವಾರಾಣಸಿ

ಸಂಕಲನ

ಶ್ರೀ ಷ. ಬ್ರ. ಡಾ. ಮಹಾದೇವ ಶಿವಾಚಾರ್ಯ ಸ್ವಾಮಿಗಳು,

ಬಬಲೇಶ್ವರ

ಪ್ರಕಾಶಕರು

ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆ,

ಬೆಂಗಳೂರು - ೫೬

Shree Shivayogi Shivacharya Virachita **Shree Siddhanta Shikhamani Pravachanaprabhe** By H. H. Shree 1008 Kashi Jagadguru Dr. Chandrashekhar Shivacharya Mahaswamiji Jangamawadimath, Varanasi. (U.P.)

Compilation by :
Dr. Mahadeva Shivacharya Swamiji, Babaleshwar

Published by,
Shree Jagadguru Panchacharya Manava Dharma Samsthe
Bangalore - 53

Revised First Edition : 2009
Re-Print : 2016
Copies : 2000



ಗ್ರಂಥ ದೊರೆಯುವ ಸ್ಥಳ :
ಶ್ರೀ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನ
ಸಂಭಾಪೂರ ರಸ್ತೆ, ಗದಗ – ೫೮೨ ೧೦೧
ಫೋನ ನಂ. 08372(STD) 239009
Mobile : 9964712993, 9880944739
E-mail : guruk1008@gmail.com
ಶ್ರೀ ಅಮರೇಶ್ವರಮಠ ಗುಳೇದಗುಡ್ಡ ಜಿ. ಬಾಗಲಕೋಟ
ಫೋನ ನಂ. 08357 - 250564

ಪರಿಷ್ಕೃತ ಪ್ರಥಮ ಮುದ್ರಣ : ೨೦೦೯
ಮರು ಮುದ್ರಣ : ೨೦೧೬
ಪ್ರತಿಗಳು : ೨೦೦೦

ಬೆಲೆ : ರೂ. ೫೦೦/- (ಸಂಪುಟ ೧ ಮತ್ತು ೨)
ಮ್ಯಾಪಲೀಥೊ ೬೦ ಜಿ.ಎಸ್.ಎಮ್.

ಮುದ್ರಕರು :
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ – ೫೮೨ ೧೦೧
Email : chaitanyaoffset@gmail.com

ಶ್ರೀ ಜಗದ್ಗುರು ರೇಣುಕಾಚಾರ್ಯ ಭಗವತ್ಪಾದರು

**ಶ್ರೀ ಅಗಸ್ತ್ಯಮಹರ್ಷಿಗೆ ಉಪದೇಶ ನೀಡುತ್ತಿರುವವರು**



ಶ್ರೀ ಜಗದ್ಗುರು ಪ್ರಸನ್ನ ಪಂಚ ಪೀಠಾಧೀಶ್ವರರು







ಶ್ರೀ ಕಾಶೀ ಪೀಠದ ಸರ್ವ ಪೂರ್ವಾಚಾರ್ಯರ ದಿವ್ಯ ಸನ್ನಿಧಿಗೆ

## ಸಮರ್ಪಣೆ



ಶ್ರೀ ಶ್ರೀ ಶ್ರೀ ೧೦೦೮ ಅಂ. ಜಗದ್ಗುರು
ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ
ಪುಣ್ಯಾರಾಧನೆಯ ರಜತಮಹೋತ್ಸವ ಹಾಗೂ
ಸರ್ವ ಪೂರ್ವಾಚಾರ್ಯರ ಆರಾಧನಾ ಮಹೋತ್ಸವದ ನಿಮಿತ್ಯ ಅರ್ಪಣೆ

ದಿನಾಂಕ : 27-09-2014 ಶನಿವಾರ

ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು

ಡಾ|| ಚಂದ್ರಶೇಖರ ಶಿವಾಚಾರ್ಯ ಮಹಾಸನ್ನಿಧಿಯವರ

# ಪೀಠಾರೋಹಣದ ರಜತಮಹೋತ್ಸವ



(ಕಾರ್ತಿಕ ಬಹುಳ ಪಂಚಮಿ) ದಿನಾಂಕ : 11-11-2014 ಮಂಗಳವಾರ

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಶ್ರೀಮತ್ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು

**ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು,**

ಜಂಗಮವಾಡಿಮಠ, ವಾರಾಣಸಿ (ಉ.ಪ್ರ.)

## ಆಶೀರ್ವಚನ

''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಗ್ರಂಥದ ಪರಿಷ್ಕೃತ ಪ್ರಥಮ ಆವೃತ್ತಿಯನ್ನು ಇದೀಗ ಬಿಡುಗಡೆ ಮಾಡಲು ಸನ್ನಿಧಿಗೆ ಪರಮ ಸಂತೋಷವಾಗುತ್ತಿದೆ. ಈ ಪೂರ್ವದಲ್ಲಿ ಈ ಗ್ರಂಥವು ನಾಲ್ಕು ಆವೃತ್ತಿಗಳನ್ನು ಕಂಡಿದೆ ಆ ಆವೃತ್ತಿಗಳಲ್ಲಿ ಯಾವುದೇ ಪರಿಷ್ಕರಣವನ್ನು ಮಾಡಿರಲಿಲ್ಲ. ಆದರೆ ಈ ಆವೃತ್ತಿಯ ನಮ್ಮ ಮುನ್ನೋಟ ಎಂಬ ಭಾಗದಲ್ಲಿ ಅನೇಕ ಹೊಸ ವಿಷಯಗಳನ್ನು ಜೋಡಿಸಲಾಗಿದೆ. ಇತ್ತೀಚಿನ ದಿನಮಾನ ಗಳಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಇಂಗ್ಲಿಷ ಮತ್ತು ತೆಲಗು ಆವೃತ್ತಿಗಳು ಹೊರಬಂದಿದ್ದು ಅವುಗಳ ವೈಶಿಷ್ಟ್ಯತೆಯ ಬಗ್ಗೆ ತಿಳಿಸಲಾಗಿದೆ. ಅದರಂತೆ ಮೈಸೂರಿನ ಇಮ್ಮಡಿ ಶ್ರೀ ಶಿವಬಸವ ಸ್ವಾಮಿಗಳು ''ಸಿದ್ಧಾಂತ ಶಿಖಾಮಣಿ ಮತ್ತು ಇತರ ಭಾಷ್ಯಗಳ ನಿಜದ ನಿಲುವು'' ಎಂಬ ಗ್ರಂಥವನ್ನು ಇತ್ತೀಚೆಗೆ ಪ್ರಕಟಿಸಿದ್ದು ಆ ಗ್ರಂಥದಲ್ಲಿ ಈ ಸಿದ್ಧಾಂತ ಶಿಖಾಮಣಿಯ ಕಾಲಮಾನದ ಬಗ್ಗೆ ಕೆಲವು ಊಹಾಪೋಹಗಳನ್ನು ಮಾಡಿದ್ದಾರೆ. ಅವು ಗಳಿಗೆ ಸರಿಯಾದ ಸಮಾಧಾನವನ್ನು ಈ ಪರಿಷ್ಕೃತ ಪ್ರಥಮ ಆವೃತ್ತಿಯಲ್ಲಿ ಕೊಡಲಾಗಿದೆ. ಇದಲ್ಲದೇ ಮುಖಪುಟದ ವಿನ್ಯಾಸವನ್ನು ಸಹ ಪರಿವರ್ತನೆಗೊಳಿಸಲಾಗಿದೆ. ಈ ಎಲ್ಲ ಕಾರಣಗಳಿಂದ ಈ ಆವೃತ್ತಿಗೆ ''ಪರಿಷ್ಕೃತ ಪ್ರಥಮ ಆವೃತ್ತಿ'' ಎಂದು ಹೆಸರಿಸಲಾಗಿದೆ.

ಕರ್ನಾಟಕದ ಪ್ರತಿ ಗ್ರಾಮ–ನಗರಗಳ ಗ್ರಂಥಾಲಯಗಳಲ್ಲಿ ಈ ಗ್ರಂಥವು ದೊರೆ ಯುವಂತಾದರೆ ಹೆಚ್ಚಿನ ಜನರಿಗೆ ಪ್ರಯೋಜನ ಲಭಿಸುವದು. ಈ ದಿಶೆಯಲ್ಲಿ ಸಂಬಂಧಿಸಿದ ಅಧಿಕಾರಿಗಳು ಗಮನ ಹರಿಸುವರೆಂಬ ನಂಬಿಕೆ ನಮಗಿದೆ. ಆದ್ದರಿಂದ ಸಂಶೋಧಕರು, ಜಿಜ್ಞಾಸುಗಳು ಹಾಗೂ ಜನಸಾಮಾನ್ಯರು ಈ ಗ್ರಂಥದ ಅಧ್ಯಯನವನ್ನು ಮಾಡಿ ತಮ್ಮ ಜ್ಞಾನವನ್ನು ವೃದ್ಧಿಸಿಕೊಳ್ಳಲೆಂಬುದಾಗಿ ಆಶೀರ್ವದಿಸುತ್ತೇವೆ.

ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆಯ ವರ್ತಮಾನ ಅಧ್ಯಕ್ಷರಾದ ಹಿಮವತ್ ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ರಾವಲ್ ಭೀಮಾಶಂಕರಲಿಂಗ ಶಿವಾಚಾರ್ಯ ಭಗವತ್ಪಾದರು ತಮ್ಮ ಅನುಗ್ರಹ ಆಶೀರ್ವಚನವನ್ನು ದಯಪಾಲಿಸಿದ್ದಕ್ಕೆ ಶ್ರೀ ಸನ್ನಿಧಿಯ ಚರಣಾರವಿಂದಗಳಲ್ಲಿ ಅನಂತ

ಪ್ರಣಾಮಗಳನ್ನು ಸಮರ್ಪಿಸುತ್ತೇವೆ. ಮುದ್ರಣ ಸಂಶೋಧನೆಯಲ್ಲಿ ನಿಷ್ಠೆಯಿಂದ ಕಾರ್ಯಮಾಡಿದ ಪ್ರೊ. ಆ.ಸಿ. ಹಿರೇಮಠ ಹಾಗೂ ಶ್ರೀ ಎಂ. ಪಿ. ಎಂ. ಶಾಂತವೀರಯ್ಯ ಇವರಿಗೆ ಅನಂತ ಮಂಗಲಾಶೀರ್ವಾದಗಳು.

ಅದರಂತೆ ನಿಷ್ಠೆಯಿಂದ ಕಾರ್ಯ ನಿರ್ವಹಿಸಿದ ಗದುಗಿನ ತ್ವರಿತ ಮುದ್ರಣದ ಮಾಲಕರಾದ ಶ್ರೀ ಅಶೋಕ ಖಟವಟೆ ಮತ್ತು ಕಾರ್ಮಿಕ ವರ್ಗದವರಿಗೆ ಶುಭಾಶೀರ್ವಾದಗಳು.

ಇತ್ಯಾಶಿಷ :

೨೫–೧೨–೨೦೦೮

ಶ್ರೀಮತ್ ಹಿಮವತ್ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದ್ಗುರು 'ರಾವಲ್'
**ಶ್ರೀ ಭೀಮಶಂಕರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು,**
ಅಧ್ಯಕ್ಷರು ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆ,
ಶ್ರೀ ಮಹಾಂತರಮಠ ಚಿಕ್ಕಪೇಟೆ ಬೆಂಗಳೂರು

## ಆಶೀರ್ವಚನ

ಶ್ರೀ ಸಿದ್ಧಾಂತ ಶಿಖಾಮಣಿಯು ವೀರಶೈವ ಧರ್ಮದ ಸಿದ್ಧಾಂತವನ್ನು ಬೋಧಿಸುವ ಅತ್ಯಂತ ಶ್ರೇಷ್ಠ ಮತ್ತು ಪವಿತ್ರವಾದ ಗ್ರಂಥವಾಗಿದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸುಪ್ರಸಿದ್ಧನಾದ ಅಗಸ್ತ್ಯ ಮಹರ್ಷಿಗೆ ಇಪ್ಪತ್ತೆಂಟು ಶಿವಾಗಮಗಳ ಸಾರವನ್ನು ಶ್ರೀ ಸಿದ್ಧಾಂತ ಶಿಖಾಮಣಿಯ ಮೂಲಕ ಬೋಧಿಸಿರುವರು. ಈ ಗ್ರಂಥವನ್ನು ಸಾವಿರಾರು ವರುಷಗಳ ಹಿಂದೆ ಶ್ರೀ ಶಿವಯೋಗಿ ಶಿವಾಚಾರ್ಯರು ಬರೆದಿರುವರು. ಶ್ರೀ ಸಿದ್ಧಾಂತ ಶಿಖಾಮಣಿಯು ಪದ್ಯರೂಪದಿಂದ ಹೊರಬಂದಿರುವುದರಿಂದ "ಶ್ರೀರೇಣುಕಗೀತೆ" ಎಂದು ಪ್ರಸಿದ್ಧಿ ಪಡೆದಿದೆ. ಈ ಗ್ರಂಥವು ಇಪ್ಪತ್ತೊಂದು ಪರಿಚ್ಛೇದ ಗಳಿಂದ ಹೆಣೆಯಲ್ಪಟ್ಟು, ಚಾರಿತ್ರಿಕ ಮತ್ತು ವೀರಶೈವ ಸಿದ್ಧಾಂತವನ್ನು ಬೋಧಿಸುವ ಗ್ರಂಥವಾಗಿದೆ. ವೀರಶೈವರಿಗೆ ಮುಖ್ಯವಾದ ೧೦೧ ಸ್ಥಲಗಳು ಈ ಗ್ರಂಥದಲ್ಲಿ ಬೋಧಿಸಲ್ಪಟ್ಟಂತೆ ಇತರೆ ವೀರಶೈವ ಗ್ರಂಥಗಳಲ್ಲಿ ಕಾಣಲು ಕಷ್ಟಸಾಧ್ಯ. ಶೈವಾಗಮಗಳ ಉತ್ತರ ಭಾಗದಲ್ಲಿ ಪ್ರತಿಪಾದಿಸಲ್ಪಟ್ಟ ವೀರಶೈವ ಸಿದ್ಧಾಂತವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಸರಳ– ಸುಂದರವಾಗಿ ಬರೆದಿರುವರು. ವೀರಶೈವ ಸ್ಥಲ ಕಟ್ಟಿನ ಕ್ರಮವನ್ನು ತಿಳಿದು ಕೊಳ್ಳಲು ಈ ಗ್ರಂಥವು ಪ್ರಾಧಾನ್ಯತೆಯನ್ನು ಪಡೆದುಕೊಂಡಿದೆ.

ಸಂಸ್ಕೃತದಲ್ಲಿರುವ ಈ ಗ್ರಂಥವನ್ನು ಸಂಸ್ಕೃತದ ಅನುಭವವುಳ್ಳವರು ಮಾತ್ರ ಓದುವಂತಹ ಕಾಲವೊಂದಿತ್ತು. ಪಂ. ಕಾಶೀನಾಥ ಶಾಸ್ತ್ರಿಗಳು ನಾಗನೂರು ಮತ್ತು ಇನ್ನೂ ಅನೇಕ ವಿದ್ವಾಂಸರ ಪರಿಶ್ರಮದಿಂದ ಕನ್ನಡದಲ್ಲಿ ಅನುವಾದ ಆದನಂತರ ಸರ್ವರೂ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಓದಿ ಅರ್ಥೈಸಿಕೊಳ್ಳಲು ಸುಲಭ ಸಾಧ್ಯವಾಯಿತು.

ಕಾಶೀ ಜಗದ್ಗುರು ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ತಾವು ಗುಳೇದಗುಡ್ಡದ ಶ್ರೀ ಅಮರೇಶ್ವರ ಮಠದ ಪಟ್ಟಾಧ್ಯಕ್ಷರಾಗಿದ್ದಾಗ ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರವಚನ ಮಾಡಲು ಪ್ರಾರಂಭಿಸಿದರು. ಅವರು ಅಲ್ಲಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರವಚನ ಮಾಡಿರುವುದನ್ನು ಧ್ವನಿಸುರುಳಿಯಲ್ಲಿ ಅಳವಡಿಸತೊಡಗಿದರು. ಬಹುಜನ ಅಧ್ಯಾತ್ಮ ಜೀವಿಗಳ ಅಪೇಕ್ಷೆಯಂತೆ, ದಾನಿಗಳ ಸಹಾಯ ದೊಂದಿಗೆ ಸ್ಥಲ ಕಟ್ಟಿನ

ವಿಹಾರವು ನನಗೆ ಅತ್ಯಂತ ಆನಂದವನ್ನು ತಂದುಕೊಟ್ಟಿತು. ಮಹಾನ್ ತತ್ತ್ವವೇತ್ತರೂ, ಅಧ್ಯಾತ್ಮದಂಥ ಕಠಿಣ ವಿಷಯವನ್ನು ಸುಲಲಿತವಾಗಿ ಬೋಧಿಸಬಲ್ಲ ಮಹಾನ್ ವಾಗ್ಮಿಗಳೂ ಹಾಗೂ ಸಾಹಿತ್ಯ ಪರಿಣಿತರೂ ಆದ ಶ್ರೀ ಕಾಶೀ ಜಗದ್ಗುರುಗಳವರು ಜ್ಞಾನದಾಕಾಶದಲ್ಲಿ ತಾವು ಮಾತ್ರ ವಿಹರಿಸುವುದಲ್ಲದೆ ಗರುಡಪಕ್ಷಿಯು ತನ್ನ ಶಿಶುವನ್ನು ತನ್ನ ಪಕ್ಕದಲ್ಲಿಟ್ಟುಕೊಂಡು ಹಾರಾಡಲು ಕಲಿಸುವಂತೆ, ಶಿಶುವಿನೋಪಾದಿಯಲ್ಲಿರುವ ನನ್ನನ್ನು ಕೈಹಿಡಿದು ಮುನ್ನಡೆಸಿ ತತ್ತ್ವಜ್ಞಾನಾಮೃತವನ್ನು ಉಣಬಡಿಸಿದ್ದಾರೆ. ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಎಂಬ ಬೃಹತ್‌ಗ್ರಂಥದ ಸಂಕಲನಕಾರನಾಗುವ ಸದವಕಾಶ ವನ್ನು ದಯಪಾಲಿಸಿದ್ದಾರೆ. ನನ್ನಂತೆಯೇ ಹಿಪ್ಪರಗಿ ಹಿರೇಮಠ ಹಾಗೂ ಎಡೂರ ಮಠಾಧ್ಯಕ್ಷರಾದ ಡಾ. ಶ್ರೀ ಷ.ಬ್ರ. ಸಿದ್ಧರಾಮ ಶಿವಾಚಾರ್ಯರು ಸಹಸಂಕಲನಕಾರರಾಗಿ ಕಾರ್ಯ ನೆರವೇರಿಸಲು ಶ್ರೀ ಸನ್ನಿಧಿಯವರು ಆಶೀರ್ವದಿಸಿದ್ದಾರೆ. ಆ ಮಹಾಸನ್ನಿಧಾನದ ಮಾತೃವಾತ್ಸಲ್ಯಕ್ಕೆ ಮಾರುಹೋಗಿ ನನ್ನ ಒಡಲಾಳದಿಂದ ಮೂಡಿಬಂದ ನುಡಿನೈವೇದ್ಯ ವನ್ನು ಅವರ ಅಡಿದಾವರೆಗಳಿಗೆ ಭಕ್ತಿಪೂರ್ವಕವಾಗಿ ಅರ್ಪಿಸುತ್ತೇನೆ.

ಈ ಗ್ರಂಥವು ಈಗಾಗಲೇ ಹೆಚ್ಚು ಜನಾನುರಾಗವನ್ನು ಪಡೆದಿದೆ. ಇದು ಸಂತೋಷದ ಸಂಗತಿ. ಪರಮಪೂಜ್ಯ ಶ್ರೀ ಕಾಶೀ ಸನ್ನಿಧಿಯವರು ಈ ಪೂರ್ವದಲ್ಲಿ ಆಶೀರ್ವಚನದ ಉಪೋದ್ಘಾತದಲ್ಲಿ ಗ್ರಂಥದ ಕಾಲಮಾನಕುರಿತು ವಿಶೇಷ ಮಾಹಿತಿಯನ್ನು ಅದರಲ್ಲಿ ಸೇರಿಸಿ ಅದಕ್ಕೆ ಉಪೋದ್ಘಾತದ ಬದಲಾಗಿ 'ಮುನ್ನೋಟ' ಎಂಬ ಶೀರ್ಷಿಕೆಯಲ್ಲಿ ಪರಿಷ್ಕರಿಸಿದ್ದಾರೆ. ಮುಖಪುಟದ ವಿನ್ಯಾಸವನ್ನು ಸಹ ಪೂರ್ಣ ಬದಲಾಯಿಸಿ ಅದರ ಅಂದವನ್ನು ಹೆಚ್ಚಿಸಿದ ಪರಿಷ್ಕೃತ ಪ್ರಥಮ ಮುದ್ರಣವನ್ನು ಪ್ರಕಟಿಸುತ್ತಿರುವದು ಸ್ತುತ್ಯವಾಗಿದೆ.

ಇತಿ ಶಿವಂ ಭೂಯಾತ್

ಶ್ರೀ ಷ.ಬ್ರ. ಡಾ. ಮಹಾದೇವ ಶಿವಾಚಾರ್ಯ ಸ್ವಾಮಿಗಳು
ಬೃಹನ್ಮಠ ಬಬಲೇಶ್ವರ ''ಶಿವಾದ್ವೈತ ಆಚಾರ್ಯ''
''ಶಕ್ತಿವಿಶಿಷ್ಟಾದ್ವೈತ ಚಕ್ರವರ್ತಿ''

# ಪ್ರಕಾಶಕರ ನುಡಿ

ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆಯನ್ನು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು ಸ್ಥಾಪಿಸಿದ್ದು, ಕೇಂದ್ರ ಕಾರ್ಯಾಲಯ ಬೆಂಗಳೂರಿನಲ್ಲಿದೆ. ವೀರಶೈವ ಧರ್ಮವು ಒಂದು ಕೋಮು ಅಥವಾ ಪಂಗಡಕ್ಕೆ ಸೀಮಿತವಾದ ಸಂಕುಚಿತ ಧರ್ಮವಲ್ಲ. ಮನುಕುಲದ ಒಳಿತಿಗಾಗಿ, ಉದಾತ್ತ ತತ್ತ್ವಗಳನ್ನೊಳಗೊಂಡು, ಅನುಕರಣೀಯ ಆಚಾರ ಸಂಹಿತೆಯನ್ನು ರೂಪಿಸಿಕೊಂಡು ಮುನ್ನಡೆಯುತ್ತಿರುವ ಮಹಾನ್ ಜೀವಂತ ಧರ್ಮವಾಗಿದೆ. ಅಂತೆಯೇ ''ಮಾನವ ಧರ್ಮಕ್ಕೆ ಜಯವಾಗಲಿ'' ''ಧರ್ಮದಿಂದಲೇ ವಿಶ್ವಕ್ಕೆ ಶಾಂತಿ'' ಎಂಬ ಧ್ಯೇಯ ವಾಕ್ಯವನ್ನು ಶ್ರೀ ರಂಭಾಪುರಿ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರು ಅನುಗ್ರಹಿಸಿದ್ದಾರೆ. ಆ ಉದಾತ್ತ ಧ್ಯೇಯಕ್ಕನುಗುಣವಾಗಿ ಈ ಸಂಸ್ಥೆಯು ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಲಿದೆ. ಲೋಕ ಕಲ್ಯಾಣವೇ ಈ ಸಂಸ್ಥೆಯ ಹೆಗ್ಗುರಿ.

ಗ್ರಂಥ ಪ್ರಕಟಣೆಯು ಜನಮಾನಸವನ್ನು ತಿದ್ದಿ ತೀಡಿ ಬುದ್ಧಿಗಲಿಸಿ ಭಾವೈಕ್ಯತೆಯನ್ನು ಮೂಡಿಸಬಲ್ಲ ಒಂದು ಸಾಧನೆಯಾಗಿದೆ. ಅಂತೆಯೇ ಶ್ರೀಮತ್ ಕಾಶೀ ಜ್ಞಾನ ಸಿಂಹಾಸನಾಧೀಶ್ವರ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ಆಶೀರ್ವಚನಗಳನ್ನು ಕ್ರೋಢೀಕರಿಸಿ ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಯೆಂಬ ಹೆಸರಿನಲ್ಲಿ ಎರಡು ಸಂಪುಟಗಳಲ್ಲಿ ಪ್ರಕಟಿಸಲು ಒಪ್ಪಿಗೆ ದಯಪಾಲಿಸಿದ ಗ್ರಂಥಕರ್ತರಾದ ಶ್ರೀ ಕಾಶೀ ಜಗದ್ಗುರುಗಳವರಿಗೆ ಸಂಸ್ಥೆಯು ಚಿರಋಣಿಯಾಗಿದೆ.

ಪ್ರಸ್ತುತ ಪರಿಷ್ಕೃತವಾದ ಈ ಗ್ರಂಥವನ್ನು ಅಚ್ಚುಕಟ್ಟಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಗದುಗಿನ ತ್ವರಿತಮುದ್ರಣಾಲಯದವರಿಗೆ ಹೃದಯಾರೆ ಹರಸಲಾಗಿದೆ.

ಸಂಕಲನ ಸೇವೆ ಸಲ್ಲಿಸಿದ ಶ್ರೀ ಷ.ಬ್ರ.ಡಾ. ಮಹಾದೇವ ಶಿವಾಚಾರ್ಯ ಸ್ವಾಮಿಗಳು ಬೃಹನ್ಮಠ ಬಬಲೇಶ್ವರ ಮತ್ತು ಡಾ. ಶ್ರೀ ಷ.ಬ್ರ. ಸಿದ್ಧರಾಮ ಶಿವಾಚಾರ್ಯರು ಹಿರೇಮಠ ಹಿಪ್ಪರಗಿ ಮತ್ತು ಎಡೂರ ಅವರ ಕಾರ್ಯ ಸ್ತುತ್ಯವಾಗಿದೆ. ಪ್ರಾ. ಅ.ಸಿ. ಹಿರೇಮಠ ರಾಣೆಬೆನ್ನೂರು, ಶ್ರೀ ಕೆ. ವ್ಹಿ ಬಾಳಿಕಾಯಿ, ನಿವೃತ್ತಶಿಕ್ಷಕರು, ಗದಗ ಮತ್ತು ಶ್ರೀ ಎಂ. ಪಿ. ಎಂ. ಶಾಂತವೀರಯ್ಯ, ಹರಪನಹಳ್ಳಿ ಅವರು ತುಂಬ ಶ್ರಮವಹಿಸಿ ಕರಡು ಪ್ರತಿ ತಿದ್ದಿ ಶುದ್ಧಗೊಳಿಸಲು ಶ್ರಮಿಸಿದ್ದಾರೆ. ಅವರಿಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಸಕಲ ಸನ್ಮಂಗಲಗಳನ್ನು ಕರುಣಿಸಲಿ.

ಈ ಪರಿಷ್ಕೃತ ಗ್ರಂಥ ಪ್ರಕಟಣಾ ಸೇವೆಯಲ್ಲಿ ಪ್ರತ್ಯಕ್ಷವಾಗಿ ಹಾಗೂ ಅಪ್ರತ್ಯಕ್ಷವಾಗಿ ಭಾಗಿಗಳಾದ ಸಕಲರಿಗೂ ಸನ್ಮಂಗಳಾಶೀರ್ವಾದಗಳು.

ಪ್ರಕಾಶಕರು

ಚಿಕ್ಕಪೇಟೆ, ಬೆಂಗಳೂರು ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆ,

ಶ್ರೀಮಹಾಂತರಮಠ

# ಪರಿಷ್ಕೃತ ಪ್ರಥಮ ಆವೃತ್ತಿಗೊಂದು ಬಿನ್ನಪ

ಸದ್ಧರ್ಮಾಭಿಮಾನಿಗಳೇ,

''ತತ್ತ್ವಾಮೃತ ಕಲಶ''ವೆಂದು ಪ್ರಖ್ಯಾತವಾಗಿರುವ ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ''ಯು ಇದೀಗ ಪರಿಷ್ಕೃತಗೊಂಡು ಪ್ರಥಮ ಆವೃತ್ತಿಯಾಗಿ ಹೊಸವೇಷ ಭೂಷಣದೊಂದಿಗೆ ಪ್ರಕಟವಾಗುತ್ತಿರುವುದು ಆನಂದಾಭಿಮಾನದ ಸಂಗತಿಯಾಗಿದೆ.

ಶ್ರೀಮತ್ ಕಾಶೀ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ಆಳವಾದ ಅಧ್ಯಯನ, ಅಧ್ಯಾಪನ, ಅನುಭವ ತ್ರಯಗಳು ಪರಿಪಕ್ವತೆಗೊಂಡು ಈ ಗ್ರಂಥದಲ್ಲಿ ವ್ಯಕ್ತವಾಗಿವೆ. ಅಂತಹ ತತ್ತ್ವಜ್ಞಾನಾಮೃತವನ್ನು ಸದ್ಭಕ್ತರು ಸವಿದು ಸುಖಿಗಳಾಗಲಿ.

ಶ್ರೀಮತ್ ಕಾಶೀ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ಈ ಆಶೀರ್ವಚನಗಳು ಅತ್ಯಂತ ಜನಪ್ರಿಯವಾಗಲು ಅವರ ಸರಳ, ನೇರ, ಸುಂದರ, ಸಹಜ, ನಿರೂಪಣಶೈಲಿ ಕಾರಣವಾಗಿದೆ. ಶಬ್ದಾಡಂಬರಗಳ ಡೊಂಬರಾಟವಿಲ್ಲ. ಪರಿಣಾಮಕಾರಿ ಹಾಗೂ ಸಮಯೋಚಿತ ಉಪಮಾನ ಉಪಮೇಯಗಳು ಮನೋಜ್ಞವಾಗಿ ನಿರೂಪಿತವಾಗಿವೆ. ಹೀಗಾಗಿ ಈ ಗ್ರಂಥದಲ್ಲಿ ಪಾಂಡಿತ್ಯಕ್ಕೆ ಸುಧಾರಸ ಪಾಕದ ಲೇಪವಿದೆ. ಮಹಾನ್ ತತ್ತ್ವಗಳ ಸಕೃದ್ದರ್ಶನವು ಈ ಬೃಹತ್ ಗ್ರಂಥದಲ್ಲಿ ಓದುಗರಿಗೆ ಸುಲಭವಾಗಿ ಆಗುತ್ತದೆ. ಇದು ಸುವರ್ಣಕ್ಕೆ ಕುಂದಣವಿಟ್ಟಂತಾಗಿದೆ. ಇಂತಹ ಅಪರೂಪದ ಗ್ರಂಥಗಳನ್ನು ಕನ್ನಡ ಕುಲಕೋಟಿಯ ಕೈಗಿಡಲು ನಮಗೆ ತುಂಬಾ ಸಂತೋಷವೆನಿಸುತ್ತದೆ. ಸಹೃದಯ ಓದುಗರು ಸ್ವಾಗತಿಸಿ ಪ್ರೋತ್ಸಾಹಿಸುವಿರೆಂಬ ನಂಬಿಗೆಯೂ ನಮಗಿದೆ. ಸರ್ವೋಪಯೋಗಿಯಾದ ಈ ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಗ್ರಂಥವು ಕರ್ನಾಟಕದ ಪ್ರತಿಯೊಂದು ಗ್ರಾಮ– ನಗರಗಳ ಜನರು ಅತ್ಯವಶ್ಯವಾಗಿ ಅಧ್ಯಯನ ಮಾಡಬೇಕಾದ ಗ್ರಂಥವಾಗಿರುವುದರಿಂದ ಕರ್ನಾಟಕ ಸರ್ಕಾರವು ಪ್ರತಿಯೊಂದು ಗ್ರಂಥಾಲಯುದಲ್ಲಿ ಈ ಗ್ರಂಥವು ದೊರೆಯುವಂತೆ ವ್ಯವಸ್ಥೆ ಮಾಡಿದರೆ, ಸಾರ್ವಜನಿಕರಿಗೆ ಹೆಚ್ಚಿನ ಪ್ರಯೋಜನಕಾರಿಯಾಗುವಲ್ಲಿ ಸಂದೇಹವಿಲ್ಲ. ಕಾರಣ ಇದಕ್ಕೆ ಸಂಬಂಧಿತ ಅಧಿಕಾರಿಗಳು ನಮ್ಮ ಈ ವಿಚಾರದತ್ತ ಅವಶ್ಯವಾಗಿ ಗಮನಹರಿಸುವರೆಂಬ ನಂಬಿಕೆ ನಮಗಿದೆ. ಅದರಂತೆ ವೈಯಕ್ತಿಕವಾಗಿಯೂ ಈ ಗ್ರಂಥ ಪ್ರತಿಗಳು ಮನೆ–ಮಠ ಮಂದಿರಗಳನ್ನು ಅಲಂಕರಿಸಲಿ. ಜನಮನೋಬುದ್ಧಿಗೆ ತಲುಪಲಿ.

ರಾಣೆಬೆನ್ನೂರು

ಪ್ರೊ. ಅ. ಸಿ. ಹಿರೇಮಠ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸದಸ್ಯರು

# ಗ್ರಂಥಾಂತರಂಗ



## ಅಂಗಸ್ಥಲಗಳು (೧-೪೪)

ಭಕ್ತಸ್ಥಲ

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಶ್ರೀಮತ್ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು

ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು,

ಜಂಗಮವಾಡಿಮಠ, ವಾರಾಣಸಿ (ಉ.ಪ್ರ.)

ಇವರು ಆಶೀರ್ವದಿಸಿದ

# ಮುನ್ನೋಟ

ಭಾರತದೇಶವು ಧರ್ಮ ಮತ್ತು ಸಿದ್ಧಾಂತಗಳ ತವರುಮನೆಯಾಗಿರುತ್ತದೆ. ಇಲ್ಲಿ ಪ್ರಸಿದ್ಧಗಳಾಗಿರುವ ಅನೇಕ ಸಿದ್ಧಾಂತಗಳಲ್ಲಿ ವೀರಶೈವ ಸಿದ್ಧಾಂತವೂ ಸಹ ಸುಪ್ರಸಿದ್ಧ ವಾದುದಾಗಿದೆ. ವೀರಶೈವ ಸಿದ್ಧಾಂತವು ಒಂದು ಸನಾತನವಾದ ಸಿದ್ಧಾಂತವಾಗಿದೆ. ಶಿವನ ಆದೇಶದ ಮೇರೆಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಪ್ರತಿಯೊಂದು ಯುಗದಲ್ಲಿ ಅವತರಿಸಿ ಈ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದ ಬಗ್ಗೆ ಆಗಮಾದಿ ಗ್ರಂಥಗಳ ಆಧಾರವು ಉಪಲಬ್ಧವಿದೆ.

ದ್ವಾಪರಯುಗದ ಆಚಾರ್ಯರಾದ ರೇಣುಕ, ದಾರುಕ, ಘಂಟಾಕರ್ಣ, ಧೇನು ಕರ್ಣ ಮತ್ತು ವಿಶ್ವಕರ್ಣರೆಂಬ ಶ್ರೀ ಜಗದ್ಗುರು ಪಂಚಾಚಾರ್ಯರು ಕ್ರಮವಾಗಿ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಮತ್ತು ದೂರ್ವಾಸ ಮಹರ್ಷಿಗಳಿಗೆ ವೀರಶೈವ ಸಿದ್ಧಾಂತವನ್ನು ಬೋಧಿಸಿದ ಸಂಗತಿಯು ಸುಪ್ರಸಿದ್ಧವಾದುದಾಗಿದೆ. ಈ ಪಂಚಾಚಾರ್ಯರು ವೀರಶೈವ ಸಿದ್ಧಾಂತದ ಸ್ಥಾಪನೆ ಮತ್ತು ಪ್ರಚಾರಕ್ಕಾಗಿ ಐದು ಪೀಠಗಳನ್ನು ಸಂಸ್ಥಾಪಿಸಿದ್ದಾರೆ. ರಂಭಾಪುರಿ ಯಲ್ಲಿ ವೀರಪೀಠ, ಉಜ್ಜಯಿನಿಯಲ್ಲಿ ಸದ್ಧರ್ಮಪೀಠ, ಹಿಮವತ್ ಕೇದಾರದಲ್ಲಿ ವೈರಾಗ್ಯಪೀಠ, ಶ್ರೀ ಶೈಲದಲ್ಲಿ ಸೂರ್ಯಪೀಠ ಮತ್ತು ಕಾಶೀಕ್ಷೇತ್ರದಲ್ಲಿ ಜ್ಞಾನಪೀಠ ವೆಂಬುದಾಗಿ ಅನಾದಿಕಾಲದಿಂದಲೂ ಪ್ರಸಿದ್ಧ ಗಳಾಗಿವೆ. ಈ ಪೀಠ ಪರಂಪರೆಯು ಅನಾದಿ ಕಾಲದಿಂದ ಇಂದಿನವರೆಗೆ ನಡೆದುಕೊಂಡು ಬಂದಿರುತ್ತದೆ.

ಈ ಸನಾತನವಾದ ವೀರಶೈವ ಸಿದ್ಧಾಂತಕ್ಕೆ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳೇ ಮೂಲ ಆಧಾರಗಳು. ಶ್ರೀಶಿವಯೋಗಿ ಶಿವಾಚಾರ್ಯರು–

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಮ್ ॥

(ಸಿ. ಶಿ. ೫-೧೪)

ಈ ಪ್ರಕಾರವಾಗಿ ಅದನ್ನು ಸಮರ್ಥಿಸಿದ್ದಾರೆ.

## ಆಗಮ

ಶಿವನ ಮುಖಾರವಿಂದದಿಂದ ಹೊರಹೊರಟ ಉಪದೇಶಕ್ಕೆ ಆಗಮವೆಂದು ಕರೆಯುತ್ತಾರೆ. ಇದನ್ನೇ ಭಾಸ್ಕರೀ ಗ್ರಂಥದಲ್ಲಿ–

ಆಗತಂ ಶಿವವಕ್ತ್ರಾತ್ತು ಗತಂ ಚ ಗಿರಿಜಾಮುಖೇ
ಮತಂ ಶ್ರೀವಾಸುದೇವೇನ ಆಗಮಸ್ತೇನ ಕೀರ್ತಿತಃ ॥

(ಭಾಸ್ಕರೀ ದ್ವಿ ಭಾಗ ಪೃಷ್ಠ, ೮೫)

ಎಂಬುದಾಗಿ ಪ್ರತಿಪಾದಿಸಲಾಗಿದೆ. ತಾತ್ಪರ್ಯವೇನೆಂದರೆ, ಶಿವನ ಮುಖಾರವಿಂದ ದಿಂದ ಹೊರ ಹೊಮ್ಮಿ ಪಾರ್ವತಿಗೆ ಉಪದೇಶಿಸಲ್ಪಟ್ಟ ಹಾಗೂ ವಾಸುದೇವನಿಂದ ಅರ್ಥಾತ್ ಭಗವಾನ್ ವಿಷ್ಣುವಿನಿಂದ ಸಮ್ಮತಿಸಲ್ಪಟ್ಟ ವಾಙ್ಮಯವೇ ಆಗಮಸಾಹಿತ್ಯವು. ಹೀಗೆ ಆಗಮ ಎಂಬ ಮೂರು ಅಕ್ಷರಗಳಿಂದ ಆಗಮ ಶಬ್ದದ ರೂಢಾರ್ಥವಾಗಿರುತ್ತದೆ.

ಇನ್ನು ಆಗಮ ಶಬ್ದದ ಯೌಗಿಕಾರ್ಥದ ಬಗ್ಗೆ ವಿಚಾರಿಸುವುದಾದರೆ– ''ಆಸಮಂತಾತ್ ಅರ್ಥಂ ಗಮಯತಿ ಇತಿ ಆಗಮಃ'' ಅಂದರೆ ಸಂಪೂರ್ಣವಾದ ತತ್ತ್ವಜ್ಞಾನವನ್ನು ಉಪದೇಶಿಸುವ ಶಾಸ್ತ್ರವೇ ಆಗಮವೆಂಬುದಾಗಿ ತಿಳಿದುಕೊಳ್ಳಬೇಕು. ಇದೂ ಅಲ್ಲದೆ– ''ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾತ್ ಅಭ್ಯುದಯ ನಿಃಶ್ರೇಯಸೋಪಾಯಾಃ ಸ ಆಗಮಃ'' (ಯೋಗಸೂತ್ರ, ೧೫೫ ತತ್ತ್ವ ವೈಶಾರದಿ) ಎಂಬ ವ್ಯುತ್ಪತ್ತಿಗನುಸಾರವಾಗಿ ಯಾವ ಶಾಸ್ತ್ರದಲ್ಲಿ ಐಹಿಕದ ಅಭ್ಯುದಯ ಮತ್ತು ಪಾರಲೌಕಿಕ ವಾದ ಮುಕ್ತಿಯ ಉಪಾಯಗಳು ಸಹಜವಾಗಿ ತಿಳಿಯಲ್ಪಡುತ್ತವೆಯೋ ಅದಕ್ಕೇನೇ ಆಗಮ ಎಂಬುದಾಗಿ ಕರೆಯಲಾಗುತ್ತದೆಯೆಂಬುದು ವಿದ್ವಾಂಸರಾದ ವಾಚಸ್ಪತಿ ಮಿಶ್ರರ ಅಭಿಪ್ರಾಯವಾಗಿದೆ. ಆಗಮಕ್ಕೆ ''ತಂತ್ರ'' ಎಂಬ ಪರ್ಯಾಯ ನಾಮವೂ ಉಂಟು. ''ತನ್ಯತೇ ವಿಸ್ತಾರ್ಯತೇ ಜ್ಞಾನಮನೇನ ಇತಿ ತಂತ್ರಮ್'' ಎಂಬ ವ್ಯುತ್ಪತ್ತಿಗನುಸಾರವಾಗಿ ಯಾವುದರ ಅಧ್ಯಯನದಿಂದ ಮನುಷ್ಯನಿಗೆ ಸರ್ವವಿಧವಾದ ಜ್ಞಾನವು ಪ್ರಾಪ್ತವಾಗುವುದೋ ಅದಕ್ಕೇನೇ ತಂತ್ರವೆಂಬುದಾಗಿ ಕರೆಯಲಾಗಿದೆ. ತಂತ್ರ ಶಬ್ದದ ಈ ವಿಧವಾದ ಯೌಗಿಕಾರ್ಥವು–

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

ಎಂಬ ಕಾಮಿಕಾಗಮದ ಈ ವಚನದಿಂದ ಸಿದ್ಧವಾಗುತ್ತದೆ.

## ಆಗಮ ಭೇದಗಳು

ಆಗಮಾ ಬಹುಧಾಃಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ॥

(ಸಿ.ಶಿ. ೫–೯)

ಎಂಬ ಶ್ರೀ ಸಿದ್ಧಾಂತ ಶಿಖಾಮಣಿಯ ಉಕ್ತಿಗನುಸಾರವಾಗಿ ಶೈವಾಗಮ, ಪಾಶುಪತಾಗಮ, ಸೋಮಾಗಮ ಮತ್ತು ಲಾಕುಲಾಗಮವೆಂಬುದಾಗಿ ಆಗಮಗಳು

ಅನೇಕ ವಿಧಗಳಾಗಿರುತ್ತವೆ. ಇವುಗಳಲ್ಲಿ ಶೈವಾಗಮವು ಪುನಃ ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತ ಎಂಬುದಾಗಿ ನಾಲ್ಕು ಪ್ರಕಾರವಾಗಿರುತ್ತದೆ. ಶಕ್ತಿ ತತ್ತ್ವವನ್ನೇ ಪ್ರಧಾನವಾಗಿ ಉಪದೇಶಿಸುವ ಆಗಮಕ್ಕೆ ವಾಮಾಗಮವೆಂತಲೂ, ಭೈರವ ತತ್ತ್ವವನ್ನು ಪ್ರಧಾನವಾಗಿ ಪ್ರತಿಪಾದಿಸುವ ಆಗಮಕ್ಕೆ ದಕ್ಷಿಣಾಗಮವೆಂತಲೂ, ಸಪ್ತಮಾತೃಕೆಯರ ಉಪಾಸನೆಯನ್ನು ನಿರೂಪಿಸುವ ಆಗಮಕ್ಕೆ ಮಿಶ್ರಾಗಮವೆಂತಲೂ, ಇನ್ನು ವೇದ ಸಮ್ಮತ ವಾದ ತತ್ತ್ವ ಜ್ಞಾನವನ್ನು ಉಪದೇಶಮಾಡುವ ಆಗಮಕ್ಕೆ ಸಿದ್ಧಾಂತಾಗಮವೆಂದೂ ಕರೆಯಲಾಗುತ್ತದೆ.

ಇವುಗಳಲ್ಲದೆ ಸೌರ ಮತ್ತು ಗಾಣಪತ್ಯ ಎಂಬ ಅನೇಕ ಆಗಮಗಳು ಸಹ ಪ್ರಸಿದ್ಧ ವಾಗಿರುತ್ತವೆ. ಒಟ್ಟಿನಲ್ಲಿ ಒಂದುನೂರಾ ಎಂಟು ಪಾಂಚರಾತ್ರಾಗಮಗಳು, ಅರವತ್ನಾಲ್ಕು ಶಾಕ್ತಾಗಮಗಳು ಮತ್ತು ಅವುಗಳ ಉಪಾಗಮಗಳು ಮೂರುನೂರಾ ಇಪ್ಪತ್ತೇಳು, ಇಪ್ಪತ್ತೆಂಟು ಶೈವಾಗಮಗಳು ಮತ್ತು ಅವುಗಳ ಉಪಾಗಮಗಳು ಒಂದುನೂರಾ ಇಪ್ಪತ್ತೇಳು, ಎಪ್ಪತ್ತೈದು ವೈಷ್ಣವಾಗಮಗಳು ಮತ್ತು ಅವುಗಳ ಉಪಾಗಮಗಳು ಇನ್ನೂರಾ ಐದು ಹೀಗೆ ಅದರ ಸಾಹಿತ್ಯ ಅತ್ಯಂತ ವಿಪುಲವಾಗಿರುತ್ತದೆ.

## ಶೈವಾಗಮ (ಸಿದ್ಧಾಂತಾಗಮ)

ಶಿವನು ಉಪದೇಶಿಸಿದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಆಗಮಗಳಿಗೆ ಶೈವಾಗಮ ಎಂಬುದಾಗಿ ಕರೆಯುತ್ತಾರೆ. ಇವುಗಳಿಗೇನೇ ಸಿದ್ಧಾಂತಾಗಮಗಳೆಂತಲೂ ಕರೆಯುವುದುಂಟು. ''ಆಪ್ತೋಕ್ತಿರತ್ರ ಸಿದ್ಧಾಂತಃ ಶಿವ ಏವಾಪ್ತಿ ಮಾನ್ಯತಃ'' ಎಂಬ ಶಿವಾಚಾರ್ಯರು – ''ಸಿದ್ಧಾಂತ ಶಬ್ದಃ ಪಂಕಜಾದಿಶಬ್ದವದ್ ಯೋಗರೂಢ್ಯಾ ಶಿವಪ್ರಣೀತೇಷು ಕಾಮಿಕಾದಿಷು ದಶಾಷ್ಟಾದಶತಂತ್ರೇಷು ಪ್ರಸಿದ್ಧಃ'' (ರತ್ನತ್ರಯ ಪುಟ–೫) ಎಂಬುದಾಗಿ ಬರೆದಿದ್ದಾರೆ. ತಾತ್ಪರ್ಯವೇನೆಂದರೆ, ಯಥಾರ್ಥ ವಕ್ತೃವಾಗಿರುವ ಆಪ್ತ ಪುರುಷನಿಂದ ಹೇಳಲ್ಪಟ್ಟ ಉಪದೇಶಕ್ಕೆ ಸಿದ್ಧಾಂತವೆಂದು ಕರೆಯುತ್ತಾರೆ. ಸಿದ್ಧಾಂತ ವೆಂದರೆ ಕೊನೆಯದಾದ ನಿರ್ಣಯವೆಂದರ್ಥ. ಈ ಪ್ರಪಂಚದಲ್ಲಿ ಪರಮಾತ್ಮನೇ ನಿಜವಾದ ಆಪ್ತನು. ಅವನ ಮುಖಾರವಿಂದದಿಂದ ಹೊರಹೊಮ್ಮಿದ ಕಾರಣದಿಂದ ಇಪತ್ತೆಂಟು ಶೈವಾಗಮಗಳಿಗೆ ಸಿದ್ಧಾಂತಾಗಮಗಳೆಂದು ಕರೆಯಲಾಗಿದೆ. ಹೀಗೆ ಯೋಗಾರ್ಥ ಮತ್ತು ರೂಢಾರ್ಥಗಳಿಂದ ಕೂಡಿದ ಶೈವಾಗಮಗಳಿಗೆ ಸಿದ್ಧಾಂತಾಗಾಮಗಳೆಂಬ ಹೆಸರು ಬಂದಿರುವುದುಂಟು.

## ಆಗಮದ ವಿಷಯವಸ್ತು :

ಪ್ರತಿಯೊಂದು ಆಗಮದಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದ ಅಥವಾ ವಿದ್ಯಾಪಾದ ಎಂಬುದಾಗಿ ನಾಲ್ಕು ಪಾದಗಳಿರುತ್ತವೆ. ಇವುಗಳಲ್ಲಿ ಕ್ರಿಯಾಪಾದದೊಳಗೆ ದೇವಾಲಯಗಳ ನಿರ್ಮಾಣ, ಮೂರ್ತಿಶಿಲ್ಪ, ಪ್ರಾಣ ಪ್ರತಿಷ್ಠಾಪನಾದಿ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಚರ್ಯಾಪಾದದಲ್ಲಿ ಪ್ರತಿಷ್ಠಾಪಿ ಸಲ್ಪಟ್ಟ ಮೂರ್ತಿಗಳ ಪೂಜೆ–ಉತ್ಸವ ಮತ್ತು ಹೋಮ–ಹವನಾದಿ ಕ್ರಿಯೆಗಳು

ನಿರೂಪಿಸಲ್ಪಟ್ಟಿವೆ. ಯೋಗಪಾದದಲ್ಲಿ ಅಷ್ಟಾಂಗಯೋಗಸಾಧನೆಯು ಮತ್ತು ಜ್ಞಾನ ಪಾದದಲ್ಲಿ ದಾರ್ಶನಿಕ ವಿಷಯಗಳಾದ ಪತಿ–ಪಶು–ಪಾಶ ಇವುಗಳಲ್ಲದೆ, ಮೂವತ್ತಾರು ತತ್ತ್ವಗಳ ವಿಶ್ಲೇಷಣೆಯೂ ಸಹ ಮಾಡಲ್ಪಟ್ಟಿರುತ್ತದೆ.

### ಆಗಮಗಳ ಕಾಲ

ನಮ್ಮ ದೇಶದ ಪ್ರಾಚೀನವಾದ ವಾಙ್ಮಯವೆಂದರೆ ವೇದ ಮತ್ತು ಆಗಮಗಳು. ಇವೆರಡೂ ಶಿವನಿಂದಲೇ ಹೊರಹೊಮ್ಮಿದವುಗಳಾಗಿರುತ್ತವೆ. ಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮುಖಗಳಿಂದ ಕ್ರಮವಾಗಿ ಋಗ್ವೇದ, ಯಜುರ್ವೇದ. ಸಾಮವೇದ ಮತ್ತು ಅಥರ್ವಣವೇದಗಳು ಹೊರಹೊಮ್ಮಿದರೆ, ಶಿವನ ಐದನೆಯದಾದ ಈಶಾನಮುಖದಿಂದ ಇಪ್ಪತ್ತೆಂಟು ಶಿವಾಗಮಗಳು ಹೊರ ಹೊಮ್ಮಿರುವುದಾಗಿ ಶಾಸ್ತ್ರಗಳು ಪ್ರತಿಪಾದಿಸಿರುತ್ತವೆ. ಆದ್ದರಿಂದ ಈ ವೇದಾಗಮಗಳು ಸನಾತನವಾದವುಗಳು ಆಗಿರುತ್ತವೆ. ಆದ ಕಾರಣ ಇವುಗಳ ನಿರ್ದಿಷ್ಟವಾದ ಕಾಲವನ್ನು ಹೇಳುವುದು ಅಷ್ಟೊಂದು ಸುಲಭವಾದುದಲ್ಲ. ಆದರೂ ಇತಿಹಾಸತಜ್ಞರು ಐದುಸಾವಿರ ವರ್ಷ ಪ್ರಾಚೀನವೆಂಬುದಾಗಿ ಒಪ್ಪಿದ್ದಾರೆ. ಶಿವೋಪದಿಷ್ಟಗಳಾದ ಇಪ್ಪತ್ತೆಂಟು ಶಿವಾಗಮೋಕ್ತ ಸಾಹಿತ್ಯವೂ ಸಹ ಅತ್ಯಂತ ವಿಶಾಲವಾದುದಾಗಿರುತ್ತದೆ. ಶ್ರೀ ಮನ್ನಿಜಗುಣ ಶಿವಯೋಗಿಗಳ ವಿಚಾರದಂತೆ ಪ್ರತಿಯೊಂದು ಆಗಮಗಳು ಲಕ್ಷ ಲಕ್ಷ ಶ್ಲೋಕಗಳನ್ನು ಹೊಂದಿದವುಗಳಾಗಿವೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ಆ ಆಗಮ ಸಾಹಿತ್ಯವು ಖಂಡಿತವಾಗಿ ಅತ್ಯಂತ ಅಲ್ಪ ಪ್ರಮಾಣದಲ್ಲಿ ದೊರೆಯುತ್ತಿರುವುದು ವಿಷಾದನೀಯ ವಾಗಿದೆ. ಆಗಮಗಳ ದೊರೆತಷ್ಟು ಭಾಗವನ್ನು ಸಂಗ್ರಹಿಸಿ, ವಿದ್ವಾಂಸರಿಂದ ಸಂಪಾದಿಸಿ ಪ್ರಕಾಶಗೊಳಿಸುವ ಮಹತ್ಕಾರ್ಯವನ್ನು ಕಾಶೀ ಮಹಾಪೀಠವು ಹಮ್ಮಿಕೊಂಡಿದ್ದು ಈಗಾಗಲೇ ಚಂದ್ರ ಜ್ಞಾನಾಗಮ, ಕಾರಣಾಗಮ, ಮಕುಟಾಗಮ, ಸೂಕ್ಷ್ಮಾಗಮ ಮತ್ತು ಪಾರಮೇಶ್ವರಾಗಮ ವನ್ನು ಹಿಂದಿ, ಇಂಗ್ಲೀಷ ಮತ್ತು ಕನ್ನಡಭಾಷೆಯ ಅನುವಾದ ದೊಂದಿಗೆ ಪ್ರಕಾಶನ ಗೊಳಿಸಲಾಗಿದೆ. ಆಗಮಗಳ ಕನ್ನಡಾನುವಾದ ಕಾರ್ಯವು ಬೆಂಗಳೂರ ಮಹಾನಗರದಲ್ಲಿ ಸ್ಥಾಪಿಸಲ್ಪಟ್ಟ ಕಾಶೀಮಹಾಪೀಠದ ವೀರಶೈವ ಅನುಸಂಧಾನ ಸಂಸ್ಥೆಯಲ್ಲಿ ನಡೆಯುತ್ತಿರುವುದು ಸಂತೋಷದ ಸಂಗತಿಯಾಗಿದೆ.

### ಆಗಮಗಳು ವೀರಶೈವ ಸಿದ್ಧಾಂತದ ಉಗಮ ಸ್ಥಾನಗಳು

ವೀರಶೈವ ತತ್ತ್ವಜ್ಞಾನವು ಅರ್ಥಾತ್ ಸಿದ್ಧಾಂತವು ಮೂಲತಃ ಶಿವಾಗಮ ಗಳಲ್ಲಿಯೇ ಪ್ರತಿಪಾದಿಸಲ್ಪಟ್ಟಿರುತ್ತದೆ. ಈ ಪೂರ್ವದಲ್ಲಿ ಹೇಳಿದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳ ಉತ್ತರ ಭಾಗದಲ್ಲಿ ವೀರಶೈವ ಸಿದ್ಧಾಂತವು ಪ್ರತಿಪಾದಿಸಿರುವುದಾಗಿ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ –

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಮ್ ।

(ಸಿ.ಶಿ. ೫-೧೪)

ಹೀಗೆ ನಿರೂಪಿಸಲಾಗಿದೆ. ತಾತ್ಪರ್ಯವೇನೆಂದರೆ, ಸಿದ್ಧಾಂತಾಗಮಗಳೆಂದು ಪ್ರಸಿದ್ಧ ಗಳಾಗಿರುವ ಇಪ್ಪತ್ತೆಂಟು ಶಿವಾಗಮಗಳ ಪೂರ್ವ ಭಾಗದಲ್ಲಿ ಶೈವಸಿದ್ಧಾಂತವು ಪ್ರತಿಪಾದಿಸಲ್ಪಟ್ಟಿದೆ. ಉತ್ತರ ಭಾಗದಲ್ಲಿ ವೀರಶೈವ ಸಿದ್ಧಾಂತವು ಪ್ರಸ್ತಾಪಿಸಲ್ಪಟ್ಟಿದೆ ಎಂಬುದಾಗಿ ವೇದಾಗಮಾದಿ ಸಂಸ್ಕೃತ ವಾಙ್ಮಯದ ಮಹಾನ್ ವಿದ್ವಾಂಸರಾದ ಶ್ರೀ ಶಿವಯೋಗಿ ಶಿವಾಚಾರ್ಯರು ಅಭಿಪ್ರಾಯಪಟ್ಟಿದ್ದಾರೆ.

ಅಂತೆಯೇ ಅವರು ''ವೇದಾಗಮಗಳಲ್ಲಿ ಅಲ್ಲಲ್ಲಿ ಹೇಳಲ್ಪಟ್ಟ ವೀರಶೈವ ಸಿದ್ಧಾಂತ ವನ್ನು ಸಂಗ್ರಹಿಸಿ ತಮ್ಮದೇ ಆದ ಒಂದು ವಿಶಿಷ್ಟ ಶೈಲಿಯಲ್ಲಿ ವೀರಶೈವ ಸಿದ್ಧಾಂತವನ್ನು ಸಕ್ರಮವಾಗಿ ನೂರೊಂದು ಸ್ಥಲಗಳ ರೂಪದಲ್ಲಿ ವಿಂಗಡಿಸಿರುವುದನ್ನು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಕಾಣಬಹುದಾಗಿದೆ.

### ವೀರಶೈವ ಸಾಹಿತ್ಯದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಸ್ಥಾನ

ವೀರಶೈವ ಸಿದ್ಧಾಂತದ ತತ್ತ್ವಗಳು ವೇದ, ಆಗಮ, ಉಪನಿಷತ್ತು, ಪುರಾಣ ಮತ್ತು ಇತಿಹಾಸಾದಿ ಗ್ರಂಥಗಳಲ್ಲಿ ಪ್ರಸಂಗಾನುಸಾರವಾಗಿ ಅಲ್ಲಲ್ಲಿ ಪ್ರತಿಪಾದಿಸಲ್ಪಟ್ಟಿರುವುದನ್ನು ಕಾಣಬಹುದಾಗಿದೆ. ಶ್ರೀ ಶಿವಯೋಗಿ ಶಿವಾಚಾರ್ಯರು ಅವರ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟ ವೀರಶೈವ ತತ್ತ್ವಗಳನ್ನು ಕೂಲಂಕಷವಾಗಿ ಅಭ್ಯಸಿಸಿ ಈ ಸಿದ್ಧಾಂತವನ್ನು ಅಚ್ಚುಕಟ್ಟಾಗಿ ವ್ಯವಸ್ಥಿತಗೊಳಿಸುವ ಉದ್ದೇಶದಿಂದ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ ರಚನೆಯನ್ನು ಮಾಡಿರುವುದಾಗಿ ಅವರೇ ನಿರೂಪಿಸಿ –

ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಮ್ ।
ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ॥

ವೇದಮಾರ್ಗಾವಿರೋಧೇನ ವಿಶಿಷ್ಟಾಚಾರಸಿದ್ಧಯೇ ।
ಅಸನ್ಮಾರ್ಗನಿರಾಸಾಯ ಪ್ರಮೋದಾಯ ವಿವೇಕಿನಾಮ್ ॥

ಸರ್ವಸ್ವಂ ವೀರಶೈವಾನಾಂ ಸಕಲಾರ್ಥಪ್ರಕಾಶಕಮ್ ।
ಅಸ್ಪೃಷ್ಟಮಖಿಲೈರ್ದೋಷೈರಾದೃತಂ ಶುದ್ಧಮಾನಸೈಃ ॥

ವೀರಶೈವಮಹಾತಂತ್ರಮೇಕೋತ್ತರಶತಸ್ಥಲಮ್ ।
ಅನುಗ್ರಹಾಯ ಲೋಕಾನುಮಭ್ಯದಾತ್ ಸುಧಿಯಾಂ ವರಃ

(ಸಿ.ಶಿ.೧; ೨೫-೨೭, ವ. ೩೦)

ಈ ಶ್ಲೋಕಗಳಿಂದ ತಿಳಿದುಬರುತ್ತದೆ. ತಾತ್ಪರ್ಯವೇನೆಂದರೆ, ಗ್ರಂಥಕರ್ತೃವಾದ ಶಿವಯೋಗಿ ಶಿವಾಚಾರ್ಯರು ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮ ಗಳನ್ನು ಶಿವಸಂಬಂಧಿಗಳಾದ ಎಲ್ಲ ಪುರಾಣಗಳನ್ನು ಮತ್ತು ವೇದಭಾಗವನ್ನು ಆದರ ಪೂರ್ವಕವಾಗಿ ಅಭ್ಯಸಿಸಿ ವೈದಿಕಮಾರ್ಗಕ್ಕೆ ವಿರೋಧವಾಗದ ಹಾಗೆ ಮತ್ತು ವೀರಶೈವರ ವಿಶಿಷ್ಟಗಳಾದ ಆಚಾರಗಳನ್ನು ಪ್ರತಿಪಾದಿಸಲೋಸುಗ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ವನ್ನು ರಚಿಸಿದವರಾಗಿರುತ್ತಾರೆ. ಇದು ವೀರಶೈವದ ಸಕಲ ವಿಷಯಗಳನ್ನು ಪ್ರತಿಪಾದಿಸುವ

ಏಕೈಕ ಗ್ರಂಥವಾಗಿರುತ್ತದೆ. ಅಂತೆಯೇ ಇದಕ್ಕೆ 'ವೀರಶೈವಸರ್ವಸ್ವ' ಎಂಬುದಾಗಿ ಕರೆಯಲಾಗಿದೆ. ಈ ಗ್ರಂಥದಲ್ಲಿಯಾವುದೇ ವಿಧವಾದ ದೋಷವಿರುವುದಿಲ್ಲ. ವೀರಶೈವ ಸಿದ್ಧಾಂತವು ಈ ಗ್ರಂಥದಲ್ಲಿ ನೂರೊಂದು ಸ್ಥಲಗಳ ರೂಪದಲ್ಲಿ ವಿಂಗಡಿಸಲ್ಪಟ್ಟಿರುತ್ತದೆ. ಶ್ರೀ ಶಿವಯೋಗಿ ಶಿವಾಚಾರ್ಯರು ಲೋಕಕಲ್ಯಾಣದ ಉದ್ದೇಶಕ್ಕಾಗಿಯೇ ಈ ಗ್ರಂಥವನ್ನು ರಚಿಸಿರುತ್ತಾರೆ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿತವಾದ ಏಕೋತ್ತರಶತಸ್ಥಲಾತ್ಮಕ ವಾದ ಈ ಸಿದ್ಧಾಂತವನ್ನು ಮೊಟ್ಟಮೊದಲು ಶಿವನು ಶಿವೆಗೆ ಮತ್ತು ತನ್ನ ಶಿವಗಣರಿಗೆ ಉಪದೇಶಿಸಿದ್ದನು. ಶಿವನಿಂದ ಉಪದೇಶಪಡೆದ ಶಿವನ ಪ್ರಮುಖರಾದ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣರೆಂಬ ಗಣೇಶ್ವರರು ಭೂಲೋಕದಲ್ಲಿ ಕ್ರಮವಾಗಿ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಮತ್ತು ದೂರ್ವಾಸ ರೆಂಬ ಮಹರ್ಷಿಗಳಿಗೆ ಶಿವಾದ್ವೈತ ಸಿದ್ಧಾಂತವನ್ನು ಉಪದೇಶಿಸಿರುತ್ತಾರೆ. ಈ ಶಿವಗಣರಲ್ಲೊಬ್ಬರಾದ ಶ್ರೀ ರೇಣುಕಗಣೇಶ್ವರನು ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದ ಶಿವಾದ್ವೈತ ಸಿದ್ಧಾಂತವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ಈ ಸಿದ್ಧಾಂತ ಶಿಖಾಮಣಿಯಲ್ಲಿ ರೇಣುಕಾಗಸ್ತ್ಯರ ಸಂವಾದ ರೂಪವಾಗಿ ವಿವರಿಸಿದ್ದನ್ನು ಇಲ್ಲಿ ಕಾಣಬಹುದಾಗಿದೆ.

ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುತ್ತಿರುವ ಸಂಸ್ಕೃತ ವಾಙ್ಮಯದಲ್ಲಿ ಅತ್ಯಂತ ಪ್ರಾಚೀನವಾದ ಮತ್ತು ಕ್ರಮಬದ್ಧವಾದ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿ ಎಂಬುದರಲ್ಲಿ ಎರಡು ಮಾತಿಲ್ಲ. ವೀರಶೈವ ಸಿದ್ಧಾಂತದ ಷಟ್‌ಸ್ಥಲ ಸಿದ್ಧಾಂತವನ್ನು ನೂರೊಂದು ಅವಾಂತರ ಸ್ಥಲಗಳ ರೂಪದಲ್ಲಿ ಮೊಟ್ಟಮೊದಲು ವಿಶ್ಲೇಷಿಸಿದವರೆಂದರೆ ಶ್ರೀ ಶಿವಯೋಗಿ ಶಿವಾಚಾರ್ಯರೇ !

ಶಿವಾಗಮಗಳಲ್ಲಿ ಮತ್ತು ಶೈವ ಪುರಾಣಗಳಲ್ಲಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂಬ ಷಟ್‌ಸ್ಥಲಗಳ ನಿರೂಪಣೆಯು ಬಂದಿರುವುದನ್ನು ಕಾಣಬಹುದಾಗಿದೆ. ಆದರೆ ಶ್ರೀ ಶಿವಯೋಗಿ ಶಿವಾಚಾರ್ಯರು ಈ ಷಟ್‌ಸ್ಥಲಗಳನ್ನು ಮೊದಲು ಅಂಗಷಟ್‌ಸ್ಥಲ ಮತ್ತು ಲಿಂಗಷಟ್‌ಸ್ಥಲವೆಂಬುದಾಗಿ ವಿಭಾಗಿಸಿ, ಅವುಗಳಲ್ಲಿ ಕ್ರಮವಾಗಿ ನಾಲ್ವತ್ನಾಲ್ಕು ಹಾಗೂ ಐವತ್ತೇಳು ಸೂಕ್ಷ್ಮ ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಒಬ್ಬ ಸಾಧಕನು ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ತಲುಪಬೇಕಾದರೆ ಅತಿ ಸೂಕ್ಷ್ಮಾತಿ ಸೂಕ್ಷ್ಮಗಳಾದ ಮಾನಸಿಕ ವಿಕಾಸದ ಹಂತಗಳನ್ನು ಹೇಗೆ ತಲುಪುವನೆಂಬುದನ್ನು ಅತಿ ಮಾರ್ಮಿಕವಾಗಿ ಶ್ರೀ ಶಿವಯೋಗಿ ಶಿವಾಚಾರ್ಯರು ಈ ಗ್ರಂಥದಲ್ಲಿ ಪ್ರತಿಪಾದಿಸಿದ್ದನ್ನು ಕಾಣಬಹುದು. ಅವರು ಮಾಡಿದ ಸಾಧಕನ ಈ ಮಾನಸಿಕ ವಿಕಾಸದ ಹಂತಗಳೇ ಏಕೋತ್ತರಶತಸ್ಥಲಗಳು. ಈ ಸೂಕ್ಷ್ಮವಾದ ವಿಶ್ಲೇಷಣೆಯು ನಮಗೆ ಪ್ರಪ್ರಥಮವಾಗಿ ಕಂಡುಬರುವುದು ಶ್ರೀ ಸಿದ್ಧಾಂತ ಶಿಖಾಮಣಿ ಯಲ್ಲಿಯೇ. ಆದ್ದರಿಂದ ವೀರಶೈವ ಸಿದ್ಧಾಂತವನ್ನು ಸಕ್ರಮವಾಗಿ ಶಾಸ್ತ್ರಬದ್ಧವಾಗಿ ನಿರೂಪಿಸಿದ ಪ್ರಥಮ ಪ್ರಾಚೀನ ಗ್ರಂಥ ವೆಂದರೆ ಶ್ರೀ ಸಿದ್ಧಾಂತ ಶಿಖಾಮಣಿಯೇ ಆಗಿದೆ. ಇದರ ಶ್ರೇಯಸ್ಸು ಶ್ರೀ ಶಿವಯೋಗಿ ಶಿವಾಚಾರ್ಯರಿಗೇನೇ ಸಲ್ಲತಕ್ಕುದಾಗಿದೆ.

ಶ್ರೀ ಶಿವಯೋಗಿ ಶಿವಾಚಾರ್ಯರ ನಂತರದ ರಚನಾಕಾರರಾದ ಗುಬ್ಬಿ ಮಲ್ಲಣಾರ್ಯ ಮೊದಲಾದವರು 'ಗಣಭಾಷಿತರತ್ನಮಾಲೆ' ಮುಂತಾದ ಗ್ರಂಥಗಳಲ್ಲಿ ನೂರೊಂದು ಸ್ಥಲಗಳ ವಿಶ್ಲೇಷಣೆಯನ್ನು ಮಾಡಿರುವುದನ್ನು ಕಾಣಬಹುದು. ಪರವರ್ತಿ ರಚನಾಕಾರರ ಈ ನೂರೊಂದು ಸ್ಥಲಗಳ ವಿಶ್ಲೇಷಣೆಗೆ ಶ್ರೀ ಶಿವಯೋಗಿ ಶಿವಾಚಾರ್ಯರ ಶ್ರೀ ಸಿದ್ಧಾಂತ ಶಿಖಾಮಣಿಯೇ ಮೂಲವೆಂಬುದರಲ್ಲಿ ಯಾವ ಸಂದೇಹವಿಲ್ಲ. ಆದ್ದರಿಂದ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ನೂರೊಂದು ಸ್ಥಲಗಳ ರೂಪದಲ್ಲಿ ಪ್ರಪ್ರಥಮವಾಗಿ ವಿಶ್ಲೇಷಿಸಿದವರೇ ಶ್ರೀ ಶಿವಯೋಗಿ ಶಿವಾಚಾರ್ಯರಾದ್ದರಿಂದ ಅವರು ರಚಿಸಿದ ಶ್ರೀ ಸಿದ್ಧಾಂತ ಶಿಖಾಮಣಿಯು ವೀರಶೈವ ಸಾಹಿತ್ಯದಲ್ಲಿ ಅಗ್ರಸ್ಥಾನವನ್ನು ಪಡೆದುದಾಗಿದೆ.

ವೇದಾಂತ ಶಾಸ್ತ್ರದ ಪ್ರಸ್ಥಾನತ್ರಯದಲ್ಲಿ ಪ್ರಸಿದ್ಧವಾಗಿರುವ ಶ್ರೀ ಮದ್ಭಗವದ್ಗೀತೆಯು ಸಕಲ ಉಪನಿಷತ್ತುಗಳ ಸಾರ ಸರ್ವಸ್ವವಾಗಿರುವಂತೆ, ಶ್ರೀ ಸಿದ್ಧಾಂತ ಶಿಖಾಮಣಿಯು ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳ ಸಾರ ಸರ್ವಸ್ವವಾಗಿರುತ್ತದೆ. ಶ್ರೀ ಕೃಷ್ಣ ಭಗವಂತನು ಅರ್ಜುನನಿಗೆ ಉಪದೇಶಿಸಿದ್ದನ್ನೇ ಶ್ರೀವ್ಯಾಸಮಹರ್ಷಿಯು ಶ್ರೀ ಮದ್ಭಗವದ್ಗೀತೆಯಲ್ಲಿ ಸಂಗ್ರಹಿಸಿರುವಂತೆ, ಶ್ರೀ ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದ ವೀರಶೈವ ಸಿದ್ಧಾಂತವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಸಂಗ್ರಹಿಸಿದ್ದಾರೆಂಬುದು ಶ್ರೀ ಮರಿತೋಂಟದಾರ್ಯರ –

ರೇಣುಕಾಗಸ್ತ್ಯಸಂವಾದಂ ನಿಗಮಾಗಮವಿಶ್ರುತಮ್ ।
ಪ್ರದೀಪಯತಿ ಗುಪ್ತಾರ್ಥಮುದ್ಧೃತ್ಯ ಶಿವಯೋಗಿರಾಟ್ ॥

ಎಂಬ ಈ ಉಕ್ತಿಯಿಂದ ಸಿದ್ಧವಾಗುತ್ತದೆ. ತಾತ್ಪರ್ಯವೇನೆಂದರೆ, ಶಿವಯೋಗಿಗಳಲ್ಲಿ ಶ್ರೇಷ್ಠರಾದ ಶ್ರೀ ಶಿವಯೋಗಿ ಶಿವಾಚಾರ್ಯರು ನಿಗಮಾಗಮಗಳಲ್ಲಿ ಪ್ರಸಿದ್ಧವಾಗಿರುವ ಮತ್ತು ಅತ್ಯಂತ ಗೂಢವಾಗಿರುವ ಶಿವಾದ್ವೈತ ಸಿದ್ಧಾಂತವನ್ನು ಅದರಿಂದ ಹೊರತೆಗೆದು ರೇಣುಕಾಗಸ್ತ್ಯರ ಸಂವಾದ ರೂಪದಲ್ಲಿ ಪ್ರಸಿದ್ಧಪಡಿಸಿದವರಾಗಿರುತ್ತಾರೆ. ಅತ್ಯಂತ ಪ್ರಾಚೀನಕಾಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ರೀ ಅಗಸ್ತ್ಯ ಮಹರ್ಷಿಗೆ ಶಿವಾದ್ವೈತ ಸಿದ್ಧಾಂತವನ್ನು ಉಪದೇಶಿಸಿದ ಘಟನೆಯನ್ನು ಲಕ್ಷ್ಯದಲ್ಲಿರಿಸಿಕೊಂಡು ಶ್ರೀ ಶಿವಯೋಗಿ ಶಿವಾಚಾರ್ಯರ ಈ ರಚನೆಗೆ ರೇಣುಕಾಗಸ್ತ್ಯ ಸಂವಾದವೇ ಮೂಲವೆಂಬುದಾಗಿ ತಿಳಿದುಬರುತ್ತದೆ.

ಲಿಂ. ಶ್ರೀ ಶ್ರೀ ಶೈಲಜಗದ್ಗುರು ವಾಗೀಶಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು, ಲಿಂ. ವೇ. ಪಂ. ಕಾಶೀನಾಥ ಶಾಸ್ತ್ರಿಗಳು ಮತ್ತು ಲಿಂ. ವೇ. ಪಂ. ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯ ಶಾಸ್ತ್ರಿಗಳು ಮೊದಲಾದ ವಿದ್ವಾಂಸರ ಅಭಿಪ್ರಾಯಗಳ ಮೇರೆಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದ ಶಿವಾದ್ವೈತ ಸಿದ್ಧಾಂತವು 'ರೇಣುಕಾಗಸ್ತ್ಯ ಸಂವಾದ'ವೆಂಬ ಗ್ರಂಥದಲ್ಲಿ ಮೊದಲು ಸಂಗ್ರಹಿಸಲ್ಪಟ್ಟಿದ್ದು, ಅದನ್ನೇ ಮೂಲ ಆಧಾರವನ್ನಾಗಿಟ್ಟುಕೊಂಡು ಶ್ರೀ ಶಿವಯೋಗಿ

ಶಿವಾಚಾರ್ಯರು ವೇದಾಗಮಗಳ ಪ್ರಮಾಣಗಳನ್ನು ಬಳಸಿ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ರಚಿಸಿದ್ದಾರೆಂಬುದು ತಿಳಿದುಬರುತ್ತದೆ. ಈ ವಿಚಾರವು ಸ್ವೀಕರಣೀಯವೂ ಆಗಿದೆ.

### ಗ್ರಂಥನಾಮ ರಹಸ್ಯ

ಶ್ರೀ ರೇಣುಕಾಗಸ್ತ್ಯ ಸಂವಾದಾತ್ಮಕವಾದ ಈ ಗ್ರಂಥಕ್ಕೆ ಶ್ರೀ ಶಿವಯೋಗಿ ಶಿವಾಚಾರ್ಯರು ''ಶ್ರೀ ಸಿದ್ಧಾಂತ ಶಿಖಾಮಣಿ''ಯೆಂಬ ನಾಮಕರಣವನ್ನು ಮಾಡಿದ್ದಾರೆ. ಈ ಗ್ರಂಥಕ್ಕೆ ಈ ಪ್ರಕಾರವಾದ ಹೆಸರನ್ನಿಡುವದರಲ್ಲಿಯೂ ಒಂದು ರಹಸ್ಯವು ಅಡಗಿರುವುದಾಗಿರುತ್ತದೆ. ಅದೇನೆಂದರೆ, ಈ ಪೂರ್ವದಲ್ಲಿಯೇ ನಾವು ಹೇಳಿದಂತೆ ಕಾಮಿಕಾದಿ-ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳಿಗೆ ಸಿದ್ಧಾಂತಾಗಮಗಳೆಂಬುದಾಗಿ ಕರೆಯಲಾಗಿದೆ. ಈ ಸಿದ್ಧಾಂತಾಗಮಗಳ ಉತ್ತರಭಾಗದಲ್ಲಿ ವೀರಶೈವ ಸಿದ್ಧಾಂತವು ನಿರೂಪಿಸಲ್ಪಟ್ಟಿದೆ. ಹೀಗೆ ಸಿದ್ಧಾಂತಾಗಮಗಳ ಕೊನೆಯ ಭಾಗದಲ್ಲಿ ಹೇಳಲ್ಪಟ್ಟ ಸಿದ್ಧಾಂತವನ್ನೇ ಈ ಗ್ರಂಥದಲ್ಲಿ ವಿಸ್ತಾರರೂಪವಾಗಿ ನಿರೂಪಿಸಲ್ಪಟ್ಟಿರೋಣದಿಂದ ಇದಕ್ಕೆ ಸಿದ್ಧಾಂತಗಳ ಶಿಖಾಮಣಿಯೆಂಬುದಾಗಿ ಹೆಸರಿಸಲಾಗಿದೆ. ಅಂದರೆ ಇದುವೇ ಕೊನೆಯದಾದ ಸಿದ್ಧಾಂತವು. ಇದರ ಮೇಲೆ ಮತ್ತೊಂದು ಸಿದ್ಧಾಂತವಿರುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು. ಇದನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು–

ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಮ್ ।
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥

(ಸಿ.ಶಿ. ೧-೩೦)

ಹೀಗೆ ಸಮರ್ಥಿಸಿದ್ದಾರೆ. ಹಿಮಾಲಯ ಪರ್ವತದ ಶಿಖರ ಶ್ರೇಣಿಗಳಲ್ಲಿ ಗೌರೀಶಂಕರ ಶಿಖರವು ಅತ್ಯುನ್ನತವಾಗಿದ್ದು, ಅದಕ್ಕಿಂತಲೂ ಉನ್ನತವಾದ ಶಿಖರವು ಬೇರೊಂದಿಲ್ಲದಿರೋಣದರಿಂದ ಅದಕ್ಕೆ ಶಿಖರ ಶಿಖಾಮಣಿ ಎನ್ನುವಹಾಗೆ, ಈ ಗ್ರಂಥದಲ್ಲಿ ನಿರೂಪಿಸಲ್ಪಟ್ಟ ಶಿವಾದ್ವೈತ ಸಿದ್ಧಾಂತಕ್ಕಿಂತಲೂ ಮಿಗಿಲಾದ ಬೇರೊಂದು ಸಿದ್ಧಾಂತ ವಿಲ್ಲದಿರೋಣದರಿಂದ ಇದಕ್ಕೆ ಶ್ರೀ ಸಿದ್ಧಾಂತ ಶಿಖಾಮಣಿಯೆಂಬ ನಾಮಕರಣವನ್ನು ಮಾಡಿರುವುದು ಅನ್ವರ್ಥಕವಾಗಿದೆ. ಈ ಗ್ರಂಥನಾಮದ ಸಂಪೂರ್ಣವಾದ ವಿಶ್ಲೇಷಣೆಯನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಈ ಗ್ರಂಥದ ಕೊನೆಯಲ್ಲಿ–

ಶ್ರೀವೇದಾಗಮವೀರಶೈವಸರಣಿಂ ಶ್ರೀ ಷಟ್‌ಸ್ಥಲೋದ್ಯನ್ಮಣಿಮ್
ಶ್ರೀಜೀವೇಶ್ವರಯೋಗಪದ್ಮತರಣಿಂ ಶ್ರೀಗೋಪ್ಯಚಿಂತಾಮಣಿಮ್ ॥
ಶ್ರೀಸಿದ್ಧಾಂತ ಶಿಖಾಮಣಿಂ ಲಿಖಯಿತಾ ಯಸ್ತಂ ಲಿಖಿತ್ವಾಪರಾನ್
ಶ್ರುತ್ವಾ ಶ್ರಾವಯಿತಾ ಸ ಯಾತಿ ವಿಮಲಾಂ ಭುಕ್ತಿಂ ಚ ಮುಕ್ತಿಂ ಪರಾಮ್ ॥

(ಸಿ.ಶಿ. ೨೧-೫೪)

ಹೀಗೆ ಮಾಡಿದ್ದಾರೆ. ತಾತ್ಪರ್ಯವೇನೆಂದರೆ, ವೇದ ಮತ್ತು ಆಗಮಗಳಲ್ಲಿ ಪ್ರತಿಪಾದಿಸಲ್ಪಟ್ಟ ವೀರಶೈವ ಸರಣಿಯನ್ನೇ ಈ ಗ್ರಂಥದಲ್ಲಿ ಅನುಸರಿಸಲಾಗಿದೆ. ಏಕೋತ್ತರ ಶತಸ್ಥಲಾತ್ಮಕವಾದ ವೀರಶೈವ ಷಟ್‌ಸ್ಥಲಮಾರ್ಗವನ್ನು ಪ್ರಕಾಶಗೊಳಿಸುವ ಶ್ರೇಷ್ಠವಾದ

ಮಣಿಯೋಪಾದಿಯಲ್ಲಿ ಈ ಗ್ರಂಥವು ವಿರಾಜಮಾನವಾದುದಾಗಿದೆ. ಜೀವ ಹಾಗೂ ಈಶ್ವರರ ಸಾಮರಸ್ಯರೂಪವಾದ ಪದ್ಮವನ್ನು ಅರ್ಥಾತ್ ಕಮಲವನ್ನು ಅರಳಿಸುವುದರಲ್ಲಿ ಈ ಗ್ರಂಥವು ತರಣಿ ಅರ್ಥಾತ್ ಸೂರ್ಯಪ್ರಾಯವಾಗಿರುತ್ತದೆ. ಹಾಗೂ ಮಂಗಲಕರವಾದ ಶಿವರಹಸ್ಯಾರ್ಥವನ್ನು ಪ್ರಕಾಶನಗೊಳಿಸುವ ಚಿಂತಾಮಣಿಯೋಪಾದಿಯಲ್ಲಿ ಇರುವಂತಹ ದಿವ್ಯ ಮಣಿಯೇ ಈ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥವನ್ನು ಯಾರು ಬರೆಯುವವರೋ ಅಥವಾ ಅನ್ಯರಿಂದ ಬರೆಯಿಸುವವರೋ ಮತ್ತು ಯಾರು ಇದನ್ನು ಭಕ್ತಿಯಿಂದ ಶ್ರವಣಮಾಡುವವರೋ ಹಾಗೂ ಅನ್ಯರಿಗೆ ಶ್ರವಣ ಮಾಡಿಸುವವರೋ ಅವರು ನಿರ್ಮಲವಾದ ಐಹಿಕ ಸುಖ–ಭೋಗವನ್ನು ಪಡೆದು ಕೊನೆಗೆ ಪರತರವಾದ ಮುಕ್ತಿಯನ್ನು ಸಹ ಹೊಂದುವರು.

ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ ಬಗ್ಗೆ ವಿವರಿಸಿದ ಈ ವಿಶ್ಲೇಷಣೆಯನ್ನು ನೋಡಿದಾಗ ಇಲ್ಲಿರುವ ಈ ಸಿದ್ಧಾಂತವು ವೇದಾಗಮ ಸಮ್ಮತವಾದುದೆಂಬುದು ತಿಳಿದುಬರುವುದಲ್ಲದೆ ಗ್ರಂಥದ ಹೆಸರು ಶ್ರೀ ಸಿದ್ಧಾಂತ ಶಿಖಾಮಣಿಯೆಂಬುದಾಗಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಹೀಗೆ ಶ್ರೀ ಶಿವಯೋಗಿ ಶಿವಾಚಾರ್ಯರು ತಾವು ವಿರಚಿಸಿದ ಈ ಗ್ರಂಥಕ್ಕೆ ತಾವೇ ಕೊಟ್ಟ ಹೆಸರು ಅನ್ವರ್ಥಕವಾದುದೆಂಬುದನ್ನು ಇಲ್ಲಿ ಸಮರ್ಥಿಸಿರುವುದಾಗಿ ಕಂಡುಬರುತ್ತದೆ.

ಈ ಗ್ರಂಥಕ್ಕೆ ಶ್ರೀ ಸಿದ್ಧಾಂತಶಿಖಾಮಣಿಯೆಂಬುದಾಗಿ ಹೆಸರಿಸಿರುವಲ್ಲಿ ಇರುವ ಇನ್ನೊಂದು ರಹಸ್ಯವೇನೆಂದರೆ, ವೇದಾಗಮಸಮ್ಮತಗಳಾದ ದ್ವೈತಾದ್ವೈತ ಸಿದ್ಧಾಂತಗಳನ್ನು ಖಂಡಿಸದೆ ಅವರೆಡರಲ್ಲಿ ಸಮನ್ವಯವನ್ನು ಸಾಧಿಸಿ ಸಮನ್ವಯಾತ್ಮಕವಾದ ಸರ್ವ ಗ್ರಾಹ್ಯವಾದ ಶ್ರೇಷ್ಠ ಸಿದ್ಧಾಂತವು ಈ ಗ್ರಂಥದಲ್ಲಿ ನಿರೂಪಿಸಲ್ಪಟ್ಟಿರೋಣದರಿಂದ ಇದಕ್ಕಿಟ್ಟಿರುವ ಶ್ರೀ ಸಿದ್ಧಾಂತ ಶಿಖಾಮಣಿಯೆಂಬ ನಾಮವು ಸಾರ್ಥಕವಾದುದಾಗಿದೆ.

## ಗ್ರಂಥ ಹಾಗೂ ಗ್ರಂಥಕರ್ತನ ಕಾಲನಿರ್ಣಯ

ಶ್ರೀ ಸಿದ್ಧಾಂತ ಶಿಖಾಮಣಿಯ ರಚನಾಕಾರರು ಶ್ರೀ ಶಿವಯೋಗಿ ಶಿವಾಚಾರ್ಯರೆಂಬುದು ಈ ಗ್ರಂಥದ ಪ್ರಥಮ ಪರಿಚ್ಛೇದದಲ್ಲಿ ಬರುವ ಕವಿಯ ವಂಶವರ್ಣನೆಯಿಂದ ತಿಳಿದುಬರುತ್ತದೆ. ಪ್ರಥಮ ಪರಿಚ್ಛೇದದ ಹದಿಮೂರನೆಯ ಶ್ಲೋಕದಿಂದ ಇಪ್ಪತ್ನಾಲ್ಕನೆಯ ಶ್ಲೋಕದವರೆಗಿನ ಹನ್ನೆರಡು ಶ್ಲೋಕಗಳಲ್ಲಿ ತನ್ನ ವಂಶ ಹಾಗೂ ತನ್ನ ವ್ಯಕ್ತಿತ್ವದ ಬಗ್ಗೆ ಹೇಳಿಕೊಂಡಿದ್ದನ್ನು ಕಾಣಬಹುದು. ಅಲ್ಲಿ ವರ್ಣಿಸಿದ ವಿಷಯದ ಆಧಾರದ ಮೇಲೆ ತಿಳಿದುಬರುವುದೇನೆಂದರೆ, ಅತ್ಯಂತ ಪ್ರಾಚೀನಕಾಲದಲ್ಲಿ ಇವರ ವಂಶದೊಳಗೆ ಆಚಾರ್ಯರಲ್ಲಿ ಅಗ್ರಗಣ್ಯನೂ, ಶಿವಜ್ಞಾನ ಸಾಗರನೂ ಆಗಿರುವಂಥ ಶಿವಯೋಗಿ ಎಂಬ ಹೆಸರಿನ ಓರ್ವ ಆಚಾರ್ಯನಿದ್ದನು. ಆ ಶಿವಯೋಗಿಗೆ ಮುದ್ದದೇವನೆಂಬ ಓರ್ವ ಆಚಾರ್ಯನು ಸಂತಾನನಾಗಿ ಪ್ರಾಪ್ತನಾದನು. ಆ ಮುದ್ದದೇವನೂ ಸಹ ಶಿವಯೋಗಿಗಳಿಗೆ ಮೂರ್ಧನ್ಯನಾಗಿದ್ದನಲ್ಲದೆ ಸರ್ವರಿಗೂ ಮುದವನ್ನುಂಟುಮಾಡುವವನಾಗಿದ್ದನು. ಅಂತೆಯೇ ಅವನಿಗೆ ಮುದ್ದದೇವನೆಂಬ ಅಭಿದಾನವು ಪ್ರಾಪ್ತವಾಗಿತ್ತು. ಆ

ಮುದ್ದದೇವನಿಗೆ ಸಿದ್ಧನಾಥ ಶಿವಾಚಾರ್ಯನೆಂಬ ಒಬ್ಬ ಸತ್ಪುತ್ರನು ಜನಿಸಿದನು. ಈ ಸಿದ್ಧನಾಥ ಶಿವಾಚಾರ್ಯನಾದರೂ ಶಿವಸಿದ್ಧಾಂತದ ನಿರ್ಣಯವನ್ನು ಮಾಡುವ ಸಾಮರ್ಥ್ಯವನ್ನು ಪಡೆದುಕೊಂಡವನಾಗಿದ್ದನು. ಇವನು ಆಚಾರ ಸಂಪನ್ನನೂ ಮತ್ತು ಶಿವಜ್ಞಾನಿಯೂ ಆಗಿರೋಣದರಿಂದ ಇವನಿಗೆ ಆ ಕಾಲದಲ್ಲಿ 'ವೀರಶೈವ ಶಿಖಾರತ್ನ' ಎಂಬ ಸಮ್ಮಾನಪೂರ್ಣವಾದ ಉಪಾಧಿಯು ಪ್ರಾಪ್ತವಾಗಿತ್ತು. ಇಂತಹ ಸುಪ್ರಸಿದ್ಧನಾದ ಆ ಸಿದ್ಧನಾಥ ಶಿವಾಚಾರ್ಯನಿಗೆ ಶಿವಯೋಗಿ ಎಂಬ ಹೆಸರಿನ ಓರ್ವ ಸುಪುತ್ರನು ಜನಿಸಿದನು. ಶಿವಯೋಗ ಸಾಮರ್ಥ್ಯದಿಂದ ಶಿವಾನುಭವವನ್ನು ಪಡೆದ ಕಾರಣ ಇವನಿಗೆ ಶಿವಯೋಗಿಯೆಂಬ ಹೆಸರು ಅನ್ವರ್ಥಕವಾಗಿದೆ. ಈ ಶಿವಯೋಗಿಯೇ ಗ್ರಂಥಕರ್ತೃವಾದ ಶಿವಯೋಗಿ ಶಿವಾಚಾರ್ಯನು.

ಇಲ್ಲಿ ಬಂದಿರುವ ಕವಿಯ ವಂಶ ವರ್ಣನೆಯಿಂದ ತಿಳಿದುಬರುವ ಮುಖ್ಯ ವಿಷಯವೇನೆಂದರೆ, ಗ್ರಂಥಕರ್ತನಾದ ಶಿವಯೋಗಿ ಶಿವಾಚಾರ್ಯನು ತನ್ನ ವಂಶದ ಮೂಲ ಶಿವಯೋಗಿಯೆಂಬವನಿಗೆ ಮರಿಮೊಮ್ಮಗನಾಗಿಯೂ, ಮುದ್ದದೇವನ ಮೊಮ್ಮಗನಾಗಿಯೂ ಸಿದ್ಧನಾಥನ ಮಗನಾಗಿಯೂ ಇದ್ದನೆಂಬುದು ತಿಳಿದುಬರುತ್ತದೆ. ಇದಕ್ಕಿಂತಲೂ ಹೆಚ್ಚಿನದಾದ ದೇಶ–ಕಾಲಾದಿಗಳ ಬಗ್ಗೆ ಯಾವ ವಿಷಯವೂ ತಿಳಿದು ಬರವುದಿಲ್ಲ. ಅಜ್ಜ–ಮುತ್ತಜ್ಜರ ಹೆಸರುಗಳನ್ನು ಮೊಮ್ಮಕ್ಕಳಿಗೆ, ಮರಿಮೊಮ್ಮಕ್ಕಳಿಗೆ ಇಡುವ ರೂಢಿಯು ಇಂದಿಗೂ ಸಹ ಲೋಕದಲ್ಲಿ ಕಂಡುಬರುವುದುಂಟು. ಅದರಂತೆ ಈ ಶಿವಯೋಗಿ ಶಿವಾಚಾರ್ಯರು ತಮ್ಮ ಮುತ್ತಜ್ಜನ ಹೆಸರಿನಿಂದ ಪ್ರಸಿದ್ಧರಾದರೆಂಬುದು ತಿಳಿದುಬರುತ್ತದೆ.

ಶ್ರೀ ಶಿವಯೋಗಿ ಶಿವಾಚಾರ್ಯರ ವಂಶದಲ್ಲಿ ಬಂದಿರುವ ಮುದ್ದದೇವ ಮತ್ತು ಸಿದ್ಧನಾಥ ಎಂಬ ಹೆಸರುಗಳನ್ನು ನೋಡಿ ಕೆಲವು ಜನ ವಿದ್ವಾಂಸರಿಗೆ ಇವರ ವಂಶದ ಬಗ್ಗೆ ತಪ್ಪು ಕಲ್ಪನೆಯು ಮೂಡಿರುವುದು ಸಹ ಕಂಡುಬರುತ್ತದೆ. ಹದಿನೇಳನೆಯ ಶತಮಾನದಲ್ಲಿ ಆಗಿಹೋದ ಮರಿತೋಂಟದಾರ್ಯರೆಂಬ ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸರು ಶ್ರೀ ಸಿದ್ಧಾಂತ ಶಿಖಾಮಣಿಗೆ ''ತತ್ತ್ವಪ್ರದೀಪಿಕಾ'' ಎಂಬ ಸಂಸ್ಕೃತ ವ್ಯಾಖ್ಯಾನವನ್ನು ಬರೆದಿದ್ದಾರೆ. ಅವರು ತಮ್ಮ ವ್ಯಾಖ್ಯಾನದ ಆರಂಭದಲ್ಲಿ – ''ಅತ್ರ ಕಲಿಕಾಲ ಪ್ರವೇಶಾನಂತರಂ ಲೋಕಹಿತಾರ್ಥಂ ರೇಣುಕಗಣೇಶ್ವರ ಇತಿ ಪ್ರಸಿದ್ಧೋ ರೇವಣಸಿದ್ಧೇಶ್ವರಃ ಕುಂಭಸಂಭವಾಯ ವೀರಶೈವಶಾಸ್ತ್ರಮುಪದಿಷ್ಟವಾನ್ । ತದನಂತರಂ ರೇವಣಸಿದ್ಧೇಶ್ವರ ದೃಷ್ಟಿಗರ್ಭಸಂಭೂತ–ಸಿದ್ಧರಾಮೇಶ್ವರ ಸಂಪ್ರದಾಯ ಪ್ರಸಿದ್ಧಃ ಸಕಲನಿಗಮಾಗಮ ಪಾರಗಃ ಶಿವಯೋಗೀಶ್ವರ ಇತ್ಯಭಿದಾನವಾನ್ ಕಶ್ಚಿನ್ಮಾಹೇಶ್ವರಃ ತದ್ರೇಣುಕಾಗಸ್ತ್ಯ ಸಂವಾದಂ ನಿರ್ವಿಘ್ನೇನ ಸ್ವಶಿಷ್ಯಾನ್ ಬೋಧಯಿತುಂ ಸ್ವ ಮನಸಿ ಕೃತಸಕಲಸಿದ್ಧಾಂತ ಶ್ರೇಷ್ಠ ನಿಗಮಾಗಮೈಕ್ಯಗರ್ಭೀಕಾರಲಕ್ಷಣಸ್ವೇಷ್ಟದೇವತಾನಮಸ್ಕಾರರೂಪಮಂಗಲಂ ಶಿಷ್ಯ ಶಿಕ್ಷಾರ್ಥಂ ಸಪ್ತಭಿಃ ಶ್ಲೋಕೈರ್ನಿಬಧ್ನಾತಿ ।'' ಹೀಗೆ ಬರೆದಿರುವುದನ್ನು ಕಾಣುತ್ತೇವೆ. ಇಲ್ಲಿ ಶ್ರೀಮರಿತೋಂಟದಾರ್ಯರು ಗ್ರಂಥಕರ್ತೃವಾದ ಶಿವಯೋಗಿ ಶಿವಾಚಾರ್ಯರನ್ನು

ಸೊನ್ನಲಿಗೆಯ ಶ್ರೀಸಿದ್ಧರಾಮೇಶ್ವರನ ವಂಶಸ್ಥರೆಂಬುದಾಗಿ ಪ್ರತಿಪಾದಿಸಿದ್ದಾರೆ. ಇವರ ಈ ಪ್ರತಿಪಾದನೆಗೆ ಮೂಲವೆಂದರೆ ಕವಿಯ ವಂಶವರ್ಣನೆಯಲ್ಲಿ ಬಂದಿರುವ ಮುದ್ದದೇವ ಹಾಗೂ ಸಿದ್ಧನಾಥನೆಂಬ ನಾಮಗಳೇ ಆಗಿರುತ್ತವೆ.

ಇಲ್ಲಿ ವಿಚಾರಣೀಯವಾದ ವಿಷಯವೇನೆಂದರೆ ಶಾಲಿವಾಹನ ಶಕೆ ೧೦೨೦ರಲ್ಲಿ ಸೊನ್ನಲಿಗೆಯಲ್ಲಿ ಮುದ್ದಗೌಡ ಮತ್ತು ಸುಗ್ಗಲಾದೇವಿಯರೆಂಬ ದಂಪತಿಗಳ ಪವಿತ್ರ ಉದರದಲ್ಲಿ, ಶ್ರೀ ರೇವಣಸಿದ್ಧೇಶ್ವರ ಕೃಪಾಶೀರ್ವಾದದಿಂದ ಶ್ರೀ ಸಿದ್ಧರಾಮೇಶ್ವರರ ಜನ್ಮವಾದ ವಿಷಯವು ರಾಘವಾಂಕ ಕವಿಯಿಂದ ವಿರಚಿಸಲ್ಪಟ್ಟ ಸಿದ್ಧರಾಮ ಚಾರಿತ್ರ್ಯ ವೆಂಬ ಪುರಾಣಗ್ರಂಥದಿಂದ ತಿಳಿದುಬರುತ್ತದೆ. ಶ್ರೀ ಮರಿ ತೋಂಟದಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ಕವಿಯ ವಂಶವರ್ಣನೆಯಲ್ಲಿ ಬರುವ ಮುದ್ದದೇವ ಎಂಬ ಹೆಸರನ್ನು ಮುದ್ದಗೌಡನೆಂಬುದಾಗಿ ಭಾವಿಸಿ ಸಿದ್ಧನಾಥನನ್ನು ಸಿದ್ಧರಾಮನೆಂಬುದಾಗಿ ತಿಳಿದು ಶ್ರೀ ಶಿವಯೋಗಿಯನ್ನು ಇವರ ವಂಶ ಸಂಜಾತನನ್ನಾಗಿ ಇಲ್ಲಿ ಹೇಳಿದ್ದನ್ನು ನೋಡಿದರೆ ಕಿಂಚಿತ್ ನಾಮಸಾಮ್ಯದಿಂದುಂಟಾದ ಒಂದು ಭ್ರಮೆಯೆಂಬುದಾಗಿ ತಿಳಿದುಕೊಳ್ಳಬೇಕು.

ಒಂದು ವೇಳೆ ಮರಿತೋಂಟದಾರ್ಯರ ಈ ಪ್ರತಿಪಾದನೆಯನ್ನು ಸತ್ಯ ವೆಂಬುದಾಗಿ ಭಾವಿಸಿದರೆ, ಶ್ರೀ ಶಿವಯೋಗಿ ಶಿವಾಚಾರ್ಯರನ್ನು ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರರ ವಂಶಸ್ಥರನ್ನಾಗಿ ಭಾವಿಸಬೇಕಾಗುವುದಲ್ಲದೆ ಸಿದ್ಧಾಂತ ಶಿಖಾಮಣಿಯ ಕಾಲವನ್ನು ಹನ್ನೆರಡನೆಯ ಶತಮಾನವೆಂದು ಒಪ್ಪಿಕೊಳ್ಳ ಬೇಕಾಗುವುದು. ಆದರೆ ಮರಿತೋಂಟದಾರ್ಯರ ಈ ಪ್ರತಿಪಾದನೆಯು ಅನೇಕ ಕಾರಣಗಳಿಂದ ಒಪ್ಪಿಕೊಳ್ಳಲು ಅನರ್ಹವಾಗಿರುತ್ತದೆ. ಅದು ಹೇಗೆಂದರೆ, ಮರಿತೋಂಟದಾರ್ಯರು ಹೇಳಿದ ಸಿದ್ಧರಾಮೇಶ್ವರ ಸಂಪ್ರದಾಯ ಎಂಬ ಶಬ್ದಕ್ಕೆ ಸಿದ್ಧರಾಮೇಶ್ವರವಂಶವೆಂದು ತಿಳಿದುಕೊಂಡರೆ ಸಿದ್ಧರಾಮೇಶ್ವರ ಚಾರಿತ್ರ್ಯದಲ್ಲಿ ಅವರಿಗೆ ಶಿವಯೋಗಿಯೆಂಬ ಪುತ್ರನಿದ್ದನೆಂಬ ಉಲ್ಲೇಖವು ಅಲ್ಲೆಲ್ಲಿಯೂ ಬಂದಿರುವುದಿಲ್ಲ. ಇದೂ ಅಲ್ಲದೆ ಅವರು ಅವಿವಾಹಿತರಿದ್ದ ಕಾರಣದಿಂದಾಗಿ ಅವರಿಂದ ಸಂತತಿಯು ಸಂಭವಿಸಿತೆಂದು ಹೇಳಲು ಯೋಗ್ಯ ಕಾರಣವು ಕಂಡುಬರುವುದಿಲ್ಲ. ಒಂದು ವೇಳೆ ಶಿವಯೋಗಿ ಶಿವಾಚಾರ್ಯರ ತಂದೆಯ ಹೆಸರು ಸಿದ್ಧರಾಮೇಶ್ವರನೆಂಬುದಾಗಿ ಇದ್ದದ್ದೇ ಆದರೆ ಗ್ರಂಥ ಕರ್ತೃವು ತನ್ನ ತಂದೆಯ ಹೆಸರನ್ನು ಹೇಳುವಾಗ ಇದ್ದಕ್ಕಿದ್ದಂತೆ ಸಿದ್ಧರಾಮನೆಂಬುದಾಗಿ ಹೇಳಬಹು ದಾಗಿತ್ತೇ ವಿನಾ ಅದನ್ನು ಕೆಡಿಸಿ ಸಿದ್ಧನಾಥನೆಂಬುದಾಗಿ ಹೇಳುವ ಅವಶ್ಯಕತೆಯೇ ಇರಲಿಲ್ಲ.

ಆತನು ತನ್ನ ವಂಶವನ್ನು ವರ್ಣಿಸುವಾಗ ''ತಸ್ಯಾಸೀನ್ನಂದನಃ ಶಾಂತಃ ಸಿದ್ಧನಾಥಾಭಿದಃ ಶುಚಿಃ'' ಎಂಬುದಾಗಿ ಬರೆಯದೆ ''ತಸ್ಯಾಸೀನ್ನಂದನಃ ಶಾಂತಃ ಸಿದ್ಧರಾಮಾಭಿದಃ ಶುಚಿಃ'' ಎಂಬುದಾಗಿ ಬರೆದಿದ್ದರೆ ಛಂದೋಭಂಗವಾಗುವ ಪ್ರಶ್ನೆಯೇ ಇರುತ್ತಿರಲಿಲ್ಲ. ಆದ್ದರಿಂದ ಛಂದೋಭಂಗದ ಭಯದಿಂದ ನಾಮಾಕ್ಷರಗಳಲ್ಲಿ ವ್ಯತ್ಯಾಸ ವಾಗಿದೆಯೆಂಬುದಾಗಿ ಹೇಳಲು ಅವಕಾಶವಿರುವುದಿಲ್ಲ. ಇದೂ ಅಲ್ಲದೆ ಸಿದ್ಧರಾಮೇಶ್ವರರ

ವಂಶದಲ್ಲಿ ಶಿವಯೋಗಿ ಶಿವಾಚಾರ್ಯ ಎಂಬ ಹೆಸರಿನ ಇಷ್ಟು ಸುಪ್ರಸಿದ್ಧನಾದ ವ್ಯಕ್ತಿಯು ಆಗಿ ಹೋದ ವಿಷಯವು ಅದೆಲ್ಲಿಯೂ ಉಲ್ಲೇಖಿಸಲ್ಪಟ್ಟಿರುವುದಿಲ್ಲ.

ಇದೂ ಅಲ್ಲದೆ ಇನ್ನೊಂದು ಮಹತ್ತ್ವದ ವಿಷಯವೇನೆಂದರೆ ಸೊಲ್ಲಾಪುರದ ಶ್ರೀ ಸಿದ್ಧರಾಮೇಶ್ವರರ ತಂದೆಯ ಹೆಸರು ಮುದ್ದಗೌಡ ಎಂಬುದಾಗಿ ಇದೆಯೇ ಹೊರತು ಮುದ್ದದೇವನೆಂಬುದಾಗಿ ಇರುವುದಿಲ್ಲ. ಆದ್ದರಿಂದ ನಾಮಾಕ್ಷರಗಳಲ್ಲಿ ಕಿಂಚಿತ್ ಸಾಮ್ಯತೆಯು ಕಂಡುಬಂದಾಗ ಇಂತಹ ಸಂಬಂಧವನ್ನು ನಿರೂಪಿಸುವುದು ಯೋಗ್ಯವಾಗಿ ಕಂಡುಬರುವುದಿಲ್ಲ. ಒಂದು ವೇಳೆ ಮುದ್ದದೇವನೇ ಮುದ್ದಗೌಡನೆಂಬುದಾಗಿ ತರ್ಕಿಸಿದಲ್ಲಿ ಸೋಲಾಪುರದ ಮುದ್ದಗೌಡನ ತಂದೆಯ ಹೆಸರು ಸೋಮಗೌಡನೆಂಬುದಾಗಿ ಇರದೆ ಶಿವಯೋಗಿ ಎಂಬುದಾಗಿ ಇರಬಹುದಾಗಿತ್ತು. ಆದರೆ ಸಿದ್ಧರಾಮಚಾರಿತ್ರ್ಯದಲ್ಲಿ ಮುದ್ದಗೌಡನ ತಂದೆಯ ಹೆಸರು ಸೋಮದೇವ (ಸೋಮಗೌಡ) ಎಂಬುದಾಗಿ ಸ್ಪಷ್ಟವಾಗಿ ಪ್ರತಿಪಾದಿಸಲಾಗಿದೆ. ಆದ್ದರಿಂದ ಮುದ್ದದೇವ ಹಾಗೂ ಮುದ್ದಗೌಡ ಎಂಬ ವ್ಯಕ್ತಿಗಳು ಭಿನ್ನ–ಭಿನ್ನರೆಂಬುದಾಗಿಯೇ ತಿಳಿದುಕೊಳ್ಳಬೇಕು.

ಇನ್ನು ಒಂದು ವೇಳೆ ಗ್ರಂಥಕರ್ತೃವಿನ ಮೂಲ ಪುರುಷನಾದ ಶಿವಯೋಗಿಯನ್ನೇ ಸೊಲ್ಲಾಪುರದ ಸಿದ್ಧರಾಮ ಶಿವಯೋಗಿಯೆಂಬುದಾಗಿ ಭಾವಿಸುವುದೂ ಸಹ ಅಷ್ಟೊಂದು ಸೂಕ್ತವೆನಿಸುವುದಿಲ್ಲ. ಏಕೆಂದರೆ ಸೊನ್ನಲಿಗೆಯ ಸಿದ್ಧರಾಮೇಶ್ವರನ ನಂತರ ಅವರ ವಂಶದಲ್ಲಿ ಮುದ್ದದೇವ, ಸಿದ್ಧನಾಥ ಮತ್ತು ಶಿವಯೋಗಿಗಳೆಂಬ ವ್ಯಕ್ತಿಗಳು ಇರುವ ಉಲ್ಲೇಖವೂ ಸಹ ಅದೆಲ್ಲಿಯೂ ಕಂಡುಬರುವುದಿಲ್ಲ. ಇನ್ನು ಸಿದ್ಧರಾಮ ಸಂಪ್ರದಾಯ ವೆಂಬ ಶಬ್ದದ ಅರ್ಥವನ್ನು ವಂಶಪರಂಪರೆಯೆಂಬುದಾಗಿ ತಿಳಿದುಕೊಳ್ಳದೆ ಶಿಷ್ಯ ಪರಂಪರೆಯೆಂದು ಗ್ರಹಿಸಿದರೂ, ಈ ಹೆಸರಿನ ಶಿಷ್ಯ ಪರಂಪರೆಯೂ ಸಹ ಇದ್ದದ್ದು ಅದೆಲ್ಲಿಯೂ ಉಲ್ಲೇಖಿಸಲ್ಪಟ್ಟಿರುವುದಿಲ್ಲ. ಸಿದ್ಧರಾಮೇಶ್ವರನ ಶಿಷ್ಯನಾದ ಶಿವಯೋಗಿ ಯೆಂಬುವನು ಇದ್ದನೆಂಬುದರ ಬಗ್ಗೆ ಅದಾವ ಪ್ರಮಾಣಗಳೂ ದೊರೆಯುವುದಿಲ್ಲ. ಆದ್ದರಿಂದ ಗ್ರಂಥಕರ್ತೃವಾದ ಶಿವಯೋಗಿಯ ವಂಶ ಅಥವಾ ಶಿಷ್ಯ ಪರಂಪರೆಗೆ ಸೊಲ್ಲಾಪುರದ ಸಿದ್ಧರಾಮೇಶ್ವರರ ಅದಾವ ಸಂಬಂಧವೂ ಹೊಂದಿಕೆಯಾಗುವುದಿಲ್ಲ. ಇದೂ ಅಲ್ಲದೆ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ರಚಿಸುವಾಗ ಶಿವಾಗಮನಗಳನ್ನು ಹಾಗೂ ಶೈವ ಪುರಾಣಾದಿ ಗ್ರಂಥಗಳನ್ನು ಅವಲೋಕಿಸಿರುವುದಾಗಿ ಹೇಳಿರುವರಲ್ಲದೆ ಹನ್ನೆರಡನೆಯ ಶತಮಾನದ ಅದಾವ ಶರಣರ ವಚನ ಸಾಹಿತ್ಯವನ್ನು ಅವಲೋಕಿಸಿದ ವಿಷಯವನ್ನು ಹೇಳದಿರೋಣದರಿಂದ ಈ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧರಾಮೇಶ್ವರ ಮತ್ತು ಶ್ರೀ ಬಸವೇಶ್ವರ ಮುಂತಾದ ಶರಣರ ಕಾಲಕ್ಕಿಂತಲೂ ಪ್ರಾಚೀನರಾದವರೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಈ ಎಲ್ಲ ದೃಷ್ಟಿಕೋನಗಳಿಂದ ವಿಚಾರಿಸಲಾಗಿ, ಪ್ರಾಚೀನ ಶಿವಯೋಗಿ ಶಿವಾಚಾರ್ಯರ ಪುತ್ರನು ಮುದ್ದದೇವ ಶಿವಾಚಾರ್ಯನು, ಮುದ್ದದೇವ ಶಿವಾಚಾರ್ಯನ ಪುತ್ರನು ಸಿದ್ಧನಾಥ ಶಿವಾಚಾರ್ಯನು ಮತ್ತು ಸಿದ್ಧನಾಥ ಶಿವಾಚಾರ್ಯನ ಪುತ್ರನು

ಶಿವಯೋಗಿ ಶಿವಾಚಾರ್ಯನು ಎಂಬ ಗ್ರಂಥಕರ್ತನ ವಂಶಪರಂಪರೆಯು ಸೊಲ್ಲಾಪುರದ ಸಿದ್ಧರಾಮೇಶ್ವರರ ವಂಶಪರಂಪರೆಗಿಂತಲೂ ಅತ್ಯಂತ ಭಿನ್ನವಾಗಿರೋಣದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧರಾಮೇಶ್ವರರ ಸಂಪ್ರದಾಯದವರಿದ್ದ ರೆಂಬುದಾಗಿ ಹೇಳುವ ಶ್ರೀ ಮರಿ ತೋಂಟದಾರ್ಯರ ಅಭಿಪ್ರಾಯವು ತರ್ಕಸಂಗತವಾದುದಲ್ಲವೆಂಬುದರಲ್ಲಿ ಅದಾವ ಸಂದೇಹವೂ ಇರುವುದಿಲ್ಲ.

ಆಸ್ಥಾನ ವಿದ್ವಾಂಸರಾದ ಎನ್. ಆರ್. ಕರಿಬಸವ ಶಾಸ್ತ್ರಿಗಳು ಈ ಸಿದ್ಧಾಂತ ಶಿಖಾಮಣಿ ಗ್ರಂಥಕ್ಕೆ ''ತಾತ್ಪರ್ಯ ದೀಪಿಕಾ'' ಎಂಬ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾರೆ. ಅವರು ತಾವು ಬರೆದಿರುವ ಈ ಗ್ರಂಥದ ಪ್ರಸ್ತಾವನೆಯಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರು ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರರ ಸಂಪ್ರದಾಯ ದವರೆಂಬ ಶ್ರೀ ಮರಿ ತೋಂಟದಾರ್ಯರ ವಿಚಾರವನ್ನು ಅಲ್ಲಗಳೆದಿರುವರಲ್ಲದೆ ಶ್ರೀ ಸಿದ್ಧಾಂತ ಶಿಖಾಮಣಿಯು, ಬಸವಾದಿ ಶಿವಶರಣರ ಅವತಾರಕ್ಕಿಂತಲೂ ಪೂರ್ವಕಾಲದ್ದೆಂಬುದಾಗಿ ತಮ್ಮ ಸ್ಪಷ್ಟವಾದ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮ ವಂಶ ಪರಂಪರೆಯನ್ನು ಹೇಳುವಾಗ ತನ್ನ ತಾಯಿ, ಅಜ್ಜಿ ಹಾಗೂ ಮುತ್ತಜ್ಜಿಯರ ಹೆಸರುಗಳನ್ನು ಹೇಳದೆ ತಂದೆ–ಅಜ್ಜ– ಹಾಗೂ ಮುತ್ತಜ್ಜರ ಹೆಸರುಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಇವರ ಈ ವಂಶಪರಂಪರೆಯು ಗೃಹಸ್ಥ ಪರಂಪರೆಯಾಗಿರದೆ ಪುತ್ರವರ್ಗದ ಗುರು ಪರಂಪರೆ ಎಂಬುದಾಗಿ ಹೇಳಲು ಅವಕಾಶವಿದೆ. ಪುತ್ರವರ್ಗದ ಗುರುಪರಂಪರೆಯಲ್ಲಿ ತಮ್ಮ ವಂಶಸಂಜಾತನಾದ ಓರ್ವ ಯೋಗ್ಯ ವಟುವಿಗೆ ದೀಕ್ಷಾದಿ ಸಂಸ್ಕಾರಗಳನ್ನು ಮಾಡಿ ಮುಂದೆ ತಮ್ಮ ಮಠಪರಂಪರೆಗೆ ಉತ್ತರಾಧಿಕಾರಿ ಶಿವಾಚಾರ್ಯರನ್ನಾಗಿ ಮಾಡುತ್ತಾರೆ. ಈ ಪರಂಪರೆಯಲ್ಲಿ ಬರುವ ಶಿಷ್ಯನಿಗೆ ಪುತ್ರನೆಂಬುದಾಗಿಯೂ ಸಹ ಕರೆಯುವುದುಂಟು. ಅಂತೆಯೇ ಶಿವಯೋಗಿ ಶಿವಾಚಾರ್ಯರು ಇಲ್ಲಿ 'ನಂದನ' ಎಂಬ ಶಬ್ದವನ್ನು ಪ್ರಯೋಗಿಸಿದ್ದನ್ನು ಕಾಣಬಹುದು. ವೀರಶೈವಧರ್ಮದ ಗುರುವರ್ಗದ ಮಠಗಳಲ್ಲಿ ಪುತ್ರವರ್ಗ ಸಂಪ್ರದಾಯದ ಮಠಪರಂಪರೆಯು ಅತ್ಯಂತ ಪ್ರಾಚೀನ ಕಾಲದಿಂದ ನಡೆದುಬಂದುದಾಗಿದ್ದು ಅದು ಇಂದಿಗೂ ಸಹ ಪ್ರಚಲಿತದಲ್ಲಿರುತ್ತದೆ. ಈ ದೃಷ್ಟಿಯಿಂದ ನೋಡಲಾಗಿ ಪ್ರಾಚೀನಕಾಲದ ಶ್ರೀ ಶಿವಯೋಗಿ ಶಿವಾಚಾರ್ಯನ ಶಿಷ್ಯನು ಮುದ್ದದೇವ ಶಿವಾಚಾರ್ಯನು. ಆ ಮುದ್ದದೇವ ಶಿವಾಚಾರ್ಯನ ಶಿಷ್ಯನು ಸಿದ್ಧನಾಥ ಶಿವಾಚಾರ್ಯನು ಮತ್ತು ಆ ಸಿದ್ಧನಾಥ ಶಿವಾಚಾರ್ಯನ ಶಿಷ್ಯನು ಈ ಗ್ರಂಥಕರ್ತೃವಾದ ಶಿವಯೋಗಿ ಶಿವಾಚಾರ್ಯನೆಂಬುದಾಗಿ ಒಪ್ಪಿಕೊಳ್ಳುವುದು ಸೂಕ್ತ ಎಂಬುದಾಗಿ ನಮಗೆ ತಿಳಿದು ಬರುತ್ತದೆ. ಇದರ ಮೇಲಿಂದ' ಶ್ರೀ ಶಿವಯೋಗಿ ಶಿವಾಚಾರ್ಯರು ಪುತ್ರವರ್ಗ ಪರಂಪರೆಯ ಒಂದು ಗುರುವರ್ಗ ಮಠದ ಪಟ್ಟಾಧ್ಯಕ್ಷರಾಗಿದ್ದರೆಂಬುದಾಗಿ ಊಹಿಸಬಹು ದಾಗಿದೆ. ವೀರಶೈವ ಧರ್ಮದಲ್ಲಿ ಪಂಚಪೀಠಗಳು, ಪಂಚಪೀಠಗಳ ಶಾಖಾನುವರ್ತಿ ಗಳಾದ ಶಿವಾಚಾರ್ಯರ ಪರಂಪರೆಯು ಸನಾತನ ವಾದುದೆಂಬುದರಲ್ಲಿ ಅದಾವ ಸಂದೇಹವಿರುವುದಿಲ್ಲ.

### ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲನಿರ್ಣಯದಲ್ಲಿ
### ಶ್ರೀ ಎಸ್. ಎನ್. ದಾಸಗುಪ್ತರ ಅನವಧಾನತೆ :

ಭಾರತೀಯ ತತ್ತ್ವಜ್ಞಾನದ ಇತಿಹಾಸವನ್ನು ಬರೆದಿರುವ ಶ್ರೀ ಎಸ್. ಎನ್. ದಾಸಗುಪ್ತರು "A History of Indian philosophy" ಎಂಬ ಹೆಸರಿನ ಗ್ರಂಥವನ್ನು ಐದು ಖಂಡಗಳಲ್ಲಿ ಪ್ರಕಟಪಡಿಸಿದ್ದಾರೆ. ಅವುಗಳಲ್ಲಿ ಐದನೆಯದಾದ ಖಂಡವೇ 'Southern Schools of Shaivism' ಎಂಬುದಾಗಿರುತ್ತದೆ. ಇದರಲ್ಲಿ ಉಳಿದ ಶೈವ ಪರಂಪರೆಗಳ ಇತಿಹಾಸವನ್ನು ಹೇಳುವದರ ಜೊತೆಗೆ, ವೀರಶೈವ ದರ್ಶನದ ಇತಿಹಾಸ ಮತ್ತು ಸಾಹಿತ್ಯದ ಬಗ್ಗೆ ವಿವೇಚನೆಯನ್ನು ಮಾಡಲಾಗಿದೆ. ಈ ಸಂದರ್ಭದಲ್ಲಿ ಶ್ರೀ ದಾಸಗುಪ್ತರು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ ಕಾಲನಿರ್ಣಯವನ್ನು ಮಾಡುವ ಪ್ರಸಂಗದಲ್ಲಿ– "Siddhanta Shikhamani refers to Basava and is itself referred to by Sripati. This shows that the book must have been written between the dates of Basava and Sripati (H.I.P;P-44) ಎಂಬುದಾಗಿ ಬರೆದಿದ್ದಾರೆ. ತಾತ್ಪರ್ಯವೇನೆಂರೆ, ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಬಸವೇಶ್ವರರ ಉಲ್ಲೇಖವಿದ್ದು ಶ್ರೀಪತಿ ಪಂಡಿತಾರಾಧ್ಯರು ತಮ್ಮ ಶ್ರೀಕರ ಭಾಷ್ಯದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಪ್ರಮಾಣರೂಪವಾಗಿ ಉಲ್ಲೇಖಿಸಿದ್ದಾರೆ. ಇದನ್ನವ ಲೋಕಿಸಿದಾಗ ಶ್ರೀ ಸಿದ್ಧಾಂತ ಶಿಖಾಮಣಿಯು ಬಸವೇಶ್ವರರ ನಂತರ ಹಾಗೂ ಶ್ರೀಪತಿಯ ಮೊದಲು ರಚಿಸಲ್ಪಟ್ಟಿರಬಹುದು ಎಂಬುದು ದಾಸಗುಪ್ತರ ಆಶಯವಾಗಿರುತ್ತದೆ. ದಾಸಗುಪ್ತರ ಈ ವಿಚಾರದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀಪತಿ ಪಂಡಿತಾರಾಧ್ಯ ರಿಗಿಂತಲೂ ಪೂರ್ವದ್ದೆನ್ನುವ ವಿಚಾರವು ಯೋಗ್ಯವಾಗಿದ್ದರೂ, ಬಸವೇಶ್ವರರ ಉಲ್ಲೇಕವು ಈ ಗ್ರಂಥದಲ್ಲಿ ಬಂದಿರೋಣದರಿಂದ ಇದು ಬಸವೇಶ್ವರರ ನಂತರದ್ದೆಂಬ ವಿಚಾರವು ತರ್ಕಸಂಗತವಾಗಿರುವುದಿಲ್ಲ.

ಶ್ರೀ ದಾಸಗುಪ್ತರು ಸಿದ್ಧಾಂತ ಶಿಖಾಮಣಿಯಲ್ಲಿ ಬಸವೇಶ್ವರರ ಉಲ್ಲೇಖವು ಬಂದ ಪ್ರಸಂಗವನ್ನು ಎತ್ತಿ ತೋರಿಸುವುದಕ್ಕಾಗಿ–

''ಅಥ ವೀರಭದ್ರಾಚಾರ–ಬಸವೇಶ್ವರಾಚಾರಂ ಸೂಚಯನ್ ಭಕ್ತಾಚಾರ ಭೇದಂ ಪ್ರತಿಪಾದಯತಿ–

ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ।
ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋಭವೇತ್ ॥

(ಸಿ.ಶಿ. ೯–೩೭)''

ಶ್ರೀ ಸಿದ್ಧಾಂತ ಶಿಖಾಮಣಿಯ ಈ ಅಂಶವನ್ನು ಉಲ್ಲೇಖಿಸಿದ್ದಾರೆ. ಮೇಲಿನ ಉಲ್ಲೇಖದಲ್ಲಿ ಬಸವೇಶ್ವರರ ಹೆಸರು ಶ್ಲೋಕದಲ್ಲಿ ಬಂದಿರದೆ ಈ ಗ್ರಂಥಕ್ಕೆ ಸಂಸ್ಕೃತ ವ್ಯಾಖ್ಯಾನವನ್ನು ಬರೆದಿರುವ ಮರಿತೋಂಟದಾರ್ಯರ ಅವತರಣಿಕೆಯಲ್ಲಿ ವೀರಭದ್ರ ಹಾಗೂ ಬಸವೇಶ್ವರರ ಉಲ್ಲೇಖಗಳು ಬಂದಿರುವುದನ್ನು ಕಾಣಬಹುದು. ಇಲ್ಲಿರುವ

ಸಂದರ್ಭವೇನೆಂದರೆ–ಮೇಲಿನ ಶ್ಲೋಕದಲ್ಲಿ ವೀರಶೈವ ಧರ್ಮದಲ್ಲಿ ಪ್ರಸಿದ್ಧಗಳಾದ ಪಂಚ ಆಚಾರಗಳಲ್ಲೊಂದಾದ ಗಣಾಚಾರ ಸ್ವರೂಪವು ನಿರೂಪಿಸಲ್ಪಟ್ಟಿದೆ. ಈ ಗಣಾಚಾರದ ಪ್ರಕಾರ ಶಿವಭಕ್ತನಾದವನು ಶಿವನಿಂದೆಯನ್ನು ಅದೆಂದೂ ಕೇಳಕೂಡದು. ಒಂದು ವೇಳೆ ತನ್ನೆದುರಿನಲ್ಲಿ ಯಾರಾದರೂ ಶಿವನಿಂದೆಯನ್ನು ಮಾಡಿದರೆ ತನ್ನಲ್ಲಿ ಸಾಮರ್ಥ್ಯವಿದ್ದರೆ ಆ ಶಿವನಿಂದಕನನ್ನು ಶಪಿಸಬೇಕು ಇಲ್ಲವೆ ಸಂಹರಿಸಬೇಕು. ಇವೆರಡೂ ಸಾಧ್ಯವಾಗದಿದ್ದಲ್ಲಿ ಆ ಸ್ಥಾನವನ್ನಾದರೂ ಬಿಟ್ಟು ತೊಲಗಬೇಕು. ಶ್ರೀ ಸಿದ್ಧಾಂತ ಶಿಖಾಮಣಿಯ ಈ ಗಣಾಚಾರದ ಸ್ವರೂಪವು ವಾಚಕರಿಗೆ ಸ್ಪಷ್ಟವಾಗಿ ಬೋಧವಾಗ ಬೇಕೆಂಬ ಉದ್ದೇಶದಿಂದ ವ್ಯಾಖ್ಯಾನಕಾರರಾದ ಮರಿತೋಂಟದಾರ್ಯರು ಅವತರಣಿಕೆ ಯಲ್ಲಿ ವೀರಭದ್ರಾಚಾರ ಹಾಗೂ ಬಸವೇಶ್ವರಾಚಾರಗಳನ್ನು ಉಲ್ಲೇಖಿಸಿದ್ದಾರೆ. ಅಂದರೆ ಪ್ರಾಚೀನ ಕಾಲದಲ್ಲಿ ದಕ್ಷ ಪ್ರಜಾಪತಿಯು ಶಿವನಿಗೆ ಅಪಮಾನಮಾಡುವ ಉದ್ದೇಶದಿಂದ ಒಂದು ಯಜ್ಞವನ್ನು ಹಮ್ಮಿಕೊಂಡಿರುವಾಗ ಶ್ರೀ ವೀರಭದ್ರನು ಆ ಯಜ್ಞವನ್ನು ಧ್ವಂಸಗೊಳಿಸಿದನಲ್ಲದೆ ಶಿವನಿಂದಕನಾದ ದಕ್ಷ ಪ್ರಜಾಪತಿಯ ಶಿರವನ್ನು ಹರಿದು ಅವನಿಗೆ ಕುರಿದಲೆಯನಿಟ್ಟ ಪ್ರಸಂಗವು ಪುರಾಣದಲ್ಲಿ ಸುಪ್ರಸಿದ್ಧವಾಗಿರುತ್ತದೆ. ಇದುವೇ ಶಿವನಿಂದಕರನ್ನು ಸಂಹರಿಸಬೇಕೆನ್ನುವುದಕ್ಕೆ ಉದಾಹರಣರೂಪವಾದ ಶ್ರೀ ವೀರ ಭದ್ರಾಚಾರವಾಗಿರುತ್ತದೆ. ಇನ್ನು ಶಿವನಿಂದಕನನ್ನು ಸಂಹರಿಸುವ ಸಾಮರ್ಥ್ಯವಿರದಿದ್ದರೆ ಆ ಸ್ಥಾನವನ್ನು ಬಿಟ್ಟು ತೊಲಗಬೇಕೆನ್ನುವುದಕ್ಕೆ ಶ್ರೀ ಮರಿತೋಂಟದಾರ್ಯರು ಶ್ರೀ ಬಸವೇಶ್ವರಾಚಾರವನ್ನು ಉಲ್ಲೇಖಿಸಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಕ್ರಾಂತಿಯಾಗಿ ಶಿವಶರಣರನ್ನು ಕೊಲ್ಲುವ ಪ್ರಸಂಗ ಬಂದೊದಗಿಧಾಗ ಅದನ್ನು ಪ್ರತೀಕಾರಪೂರ್ವಕ ತಡೆಯುವುದಾಗದ ಕಾರಣ ಶ್ರೀ ಬಸವೇಶ್ವರರು ಕಲ್ಯಾಣವನ್ನು ಬಿಟ್ಟು ಕೂಡಲಸಂಗಮಕ್ಕೆ ನಿರ್ಗಮಿಸಿದ ವಿಷಯವು ಇತಿಹಾಸ ಪ್ರಸಿದ್ಧವಾದುದಾಗಿದೆ. ಬಸವೇಶ್ವರರ ಈ ನಿರ್ಗಮನವೇ ಬಸವೇಶ್ವರಾಚಾರ ವೆಂಬುದು ಶ್ರೀ ಮರಿತೋಂಟದಾರ್ಯರ ಅಭಿಪ್ರಾಯವಾಗಿದೆ. ಈ ಪ್ರಸಂಗವನ್ನವ ಲೋಕಿಸಿದಾಗ ಬಸವೇಶ್ವರರ ಉಲ್ಲೇಖವು ಮೂಲ ಸಿದ್ಧಾಂತ ಶಿಖಾಮಣಿಯಲ್ಲಿ ಬಂದಿರದೆ ವ್ಯಾಖ್ಯಾನಕಾರರಾದ ಶ್ರೀಮರಿತೋಂಟದಾರ್ಯರು ಬರೆದ ಅವತರಣಿಕೆಯಲ್ಲಿ ಬಂದುದಾಗಿರುತ್ತದೆ. ಆದ್ದರಿಂದ ವ್ಯಾಖ್ಯಾನಕಾರರು ಬಸವೇಶ್ವರರ ನಂತರದವರೆಂದು ಹೇಳಬಹುದಲ್ಲದೆ, ಮೂಲಗ್ರಂಥಕಾರರಾದ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಬಸವೇಶ್ವರರ ನಂತರದವರೆಂಬುದಾಗಿ ಹೇಳಲು ಅವಕಾಶವಿರುವುದಿಲ್ಲ. ಆದರೆ ದಾಸಗುಪ್ತರು ಮೂಲಗ್ರಂಥ ಹಾಗೂ ವ್ಯಾಖ್ಯಾನದ ಲೇಖಕರು ಭಿನ್ನ ಭಿನ್ನರೆಂದು ತಿಳಿದುಕೊಳ್ಳದೆ ಭ್ರಮೆಗೊಂಡು ಈ ರೀತಿಯಾಗಿ ಉಲ್ಲೇಖಿಸಿರುವುದು ಐತಿಹಾಸಿಕ ಕ್ಷೇತ್ರದಲ್ಲಿ ಅಕ್ಷಮ್ಯ ಅಪರಾಧವಾಗಿರುತ್ತದೆ. ಆದ್ದರಿಂದ ಇವರ "Siddhanta Shikhamani refers to Basava" ಎಂಬ ಈ ಉಕ್ತಿಯು ಪ್ರಮಾದಪೂರ್ಣವೂ ಪ್ರಮಾಣಶೂನ್ಯವೂ ಆಗಿರುತ್ತದೆ.

ಶ್ರೀ ದಾಸಗುಪ್ತರ ಇನ್ನೊಂದು ಪ್ರಮಾದವನ್ನು ಪ್ರಸ್ತುತ ಸಂದರ್ಭದಲ್ಲಿ ಉಲ್ಲೇಖಿಸುವುದು ಉಚಿತವಾಗಿ ಕಂಡುಬರುತ್ತದೆ. ಅದೇನೆಂದರೆ ಶ್ರೀ ಬಸವೇಶ್ವರರು ತಮ್ಮ ಬಾಲ್ಯಾವಸ್ಥೆಯಲ್ಲಿ ಜನ್ಮಸ್ಥಾನವಾದ ಬಾಗೇವಾಡಿಯನ್ನು ಬಿಟ್ಟು ತನ್ನ ಮಾವನಾದ ಬಲದೇವನ ಕಡೆಗೆ ಹೋಗುವ ಉದ್ದೇಶದಿಂದ ಕಲ್ಯಾಣಕ್ಕೆ ಹೋದರೆಂಬುದು ಇತಿಹಾಸ ಪ್ರಸಿದ್ಧವಾದ ಸಂಗತಿಯಾಗಿದೆ. ಈ ಪ್ರಸಂಗವನ್ನು ಹೇಳುವ ಸಂದರ್ಭದಲ್ಲಿ ಶ್ರೀ ದಾಸಗುಪ್ತರು– "From his native place Bagewadi he went to Kalyan near Bombay at a a comparatively youn age when Bijjal was reigning there as king (A.D. 1157-1167) (A.H.I.P. Vol. V. P-42) ಇಲ್ಲಿ ಕಲ್ಯಾಣವೆಂದರೆ ಕರ್ನಾಟಕ ಪ್ರಾಂತದ ಬೀದರ ಜಿಲ್ಲೆಯಲ್ಲಿ ಬರುವ ಕಲ್ಯಾಣವೆಂಬುದಾಗಿ ಹೇಳದೆ ಮುಂಬೈ ಸಮೀಪದಲ್ಲಿರುವ ಕಲ್ಯಾಣವೆಂಬುದಾಗಿ ಹೇಳಿರುವುದನ್ನು ನೋಡಿದರೆ, ಶ್ರೀ ದಾಸಗುಪ್ತರಿಗೆ ಅದೆಷ್ಟರಮಟ್ಟಿಗೆ ಭೌಗೋಲಿಕ ಜ್ಞಾನವಿತ್ತೆಂಬುದು ತಿಳಿದುಬರುತ್ತದೆ. ಆದ್ದರಿಂದ ಇವರ ಇಂತಹ ನಿರ್ಣಯಗಳು ಅಪಹಾಸ್ಯಾಸ್ಪದಗಳಾಗಿದ್ದು ವಿದ್ವಾಂಸರಿಂದ ಸ್ವೀಕರಿಸಲು ಅನರ್ಹಗಳಾಗಿರುತ್ತವೆ. ದೊಡ್ಡ ದೊಡ್ಡ ವ್ಯಕ್ತಿಗಳೂ ಸಹ ಅವಧಾನಶೂನ್ಯ ರಾದಾಗ ಇಂತಹ ಅಪರಾಧಗಳನ್ನು ಎಸಗುವುದು ಸಹಜವಾಗಿರುತ್ತದೆ. ಆದಕಾರಣ ಇತಿಹಾಸದ ಬಗ್ಗೆ ಬರೆಯುವಾಗ ಮೈತುಂಬ ಎಚ್ಚರಾಗಿರಬೇಕೆಂಬುದು ಅತ್ಯಂತ ಆವಶ್ಯಕವಾಗಿರುತ್ತದೆ. ಆದ್ದರಿಂದ ದಾಸಗುಪ್ತರ ಗ್ರಂಥದಲ್ಲಿರುವ ಈ ತಪ್ಪುಗಳನ್ನು ಈ ಗ್ರಂಥದ ಮುಂದಿನ ಸಂಪಾದಕರು ತಿದ್ದಿ ಸುಧಾರಿಸಿದರೆ ಶ್ರೀ ದಾಸಗುಪ್ತರನ್ನು ದೋಷ ಮುಕ್ತರನ್ನಾಗಿ ಮಾಡಿದಂತಾಗುತ್ತದೆ. ಆದಕಾರಣ ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀ ಬಸವೇಶ್ವರರ ನಂತರದ ಗ್ರಂಥವಾಗಿರದೆ, ಅವರಿಗಿಂತಲೂ ಪ್ರಾಚೀನವಾದು ದೆಂಬುದಾಗಿ ತಿಳಿದುಕೊಳ್ಳಬೇಕು. ಈ ವಿಷಯದಲ್ಲಿ ಶ್ರೀ ಬಸವೇಶ್ವರರ ಒಂದು ವಚನದಲ್ಲಿ ಉದಾಹರಿಸಲ್ಪಟ್ಟ ಶ್ರೀ ಸಿದ್ಧಾಂತ ಶಿಖಾಮಣಿಯ ಶ್ಲೋಕವೇ ಪ್ರಮಾಣ ಭೂತವಾಗಿರುತ್ತದೆ.

ಶ್ರೀ ಬಸವೇಶ್ವರರು–

'ನಿನೊಲಿಯಿತ್ತೇ ಪುಣ್ಯ ನೀನೊಲ್ಲದುದೇ ಪಾಪ' ಎಂಬ ಈ ವಚನದಲ್ಲಿ–
ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ

(ಸಿ. ಶಿ. ೯–೧೧)

ಈ ಶ್ಲೋಕವನ್ನು ಉದಾಹರಿಸಿದ್ದಾರೆ. ಹೀಗೆ ಸ್ವತಃ ಬಸವೇಶ್ವರರೇ ಶ್ರೀ ಸಿದ್ಧಾಂತ ಶಿಖಾಮಣಿಯ ಶ್ಲೋಕವನ್ನು ತಮ್ಮ ವಚನದಲ್ಲಿ ಉದಾಹರಿಸುವುದನ್ನು ನೋಡಿದರೆ ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀ ಬಸವೇಶ್ವರನಿಗಿಂತಲೂ ಪೂರ್ವದ್ದೆಂದು ಸಿದ್ಧ ವಾಗುತ್ತದೆ. ಈ ವಿಚಾರವನ್ನು ಬೆಂಗಳೂರಿನ ಶ್ರೀ ಚ. ಸುಂದರೇಶನ್ ಎಂಬ ಓರ್ವ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಇವರು ಸಂಸ್ಕೃತ ಶ್ಲೋಕವುಳ್ಳ ಶ್ರೀ ಬಸವೇಶ್ವರರ ವಚನಗಳನ್ನು ಸಂಕಲಿಸಿ ಸಂಪಾದಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಶ್ರೀಕರಭಾಷ್ಯದ ಆಧಾರದಿಂದ ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲನಿರ್ಣಯ :

ಈ ಪೂರ್ವದಲ್ಲಿ ನಿರ್ಣಯಿಸಿದಂತೆ ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲವು ಹನ್ನೆರಡನೆಯ ಶತಮಾನದ ಬಸವೇಶ್ವರಾದಿ ಶಿವಶರಣರಿಗಿಂತಲೂ ಪ್ರಾಚೀನವೆಂಬುದು ಸಿದ್ಧವಾಗಿದ್ದರೂ, ಎಷ್ಟು ಪ್ರಾಚೀನವೆಂಬುದರ ಬಗ್ಗೆ ಸಂಶೋಧನೆ ಅವಶ್ಯಕವಾದುದು. ಬಾದರಾಯಣನು ಬರೆದಿರುವ ಬ್ರಹ್ಮಸೂತ್ರಗಳ ಮೇಲೆ ಶ್ರೀಪತಿ ಪಂಡಿತಾರಾಧ್ಯರು ವೀರಶೈವ ಸಿದ್ಧಾಂತ ಪ್ರತಿಪಾದಕವಾದ ಭಾಷ್ಯವನ್ನು ಬರೆಗಿದ್ದಾರೆ. ಅದುವೇ ಶ್ರೀಕರ ಭಾಷ್ಯವೆಂಬುದಾಗಿ ಸುಪ್ರಸಿದ್ಧವಾಗಿದೆ. ಈ ಭಾಷ್ಯದಲ್ಲಿ–

"ಪವಿತ್ರಂತೇ (ಋಗ್ವೇದ ೯-೮೩-೧) ಇತಿ ಋಗ್ವೇದ ಮಂತ್ರಸ್ಯ-
ಋಗಿತ್ಯಾಹ ಪವಿತ್ರಂತೇವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಮ್ ॥
ದೀಕ್ಷಯಾ ರಹಿತಃ ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಮ್ ।
ಇತಿ ಸಿದ್ಧಾಂತ ಶಿಖಾಮಣೌ ಶ್ರೀ ರೇಣುಕಾಚಾರ್ಯೇಣ
ಲಿಂಗಧಾರಣಪರತ್ವೇನ ನಿರ್ದೇಶಾತ್ ।"

(ಬ್ರ. ಸೂ. ಶ್ರೀಕರ ೧-೧-೧-)

ಹೀಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲಿನ ಶ್ಲೋಕವನ್ನು ಪ್ರಮಾಣ ರೂಪವಾಗಿ ಉದಾಹರಿಸಿ ಶ್ರೀ ಸಿದ್ಧಾಂತ ಶಿಖಾಮಣಿಯ ಗ್ರಂಥನಾಮನಿರ್ದೇಶವನ್ನೂ ಸಹ ಮಾಡಿರುವುದನ್ನು ಕಾಣುತ್ತೇವೆ. ಇದರಿಂದ ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀಪತಿ ಪಂಡಿತಾರಾಧ್ಯರಿಗಿಂತಲೂ ಪೂರ್ವಕಾಲದ್ದೆಂಬುದು ಸಿದ್ಧವಾಗುತ್ತದೆ.

ಕಾಶಿಯ ಸುಪ್ರಸಿದ್ಧ ವಿದ್ವಾಂಸರೂ, ಭಾರತೀಯ ತತ್ತ್ವಶಾಸ್ತ್ರದ ಇತಿಹಾಸವೇತ್ತರೂ ಆದ ಪಂಡಿತ ಬಲದೇವ ಉಪಾಧ್ಯಾಯರು 'ಭಾರತೀಯ ದರ್ಶನ'ವೆಂಬ ಹೆಸರಿನ ಬೃಹದ್ ಗ್ರಂಥವನ್ನು ಹಿಂದೀ ಭಾಷೆಯಲ್ಲಿ ಬರೆದಿದ್ದಾರೆ. ಆ ಗ್ರಂಥದ ೪೬೯ನೆಯ ಪುಟದಲ್ಲಿ ಶ್ರೀಪತಿ ಪಂಡಿತಾರಾಧ್ಯರ ಕಾಲವನ್ನು ಕ್ರಿ.ಶ. ೧೧೬೦ ಎಂಬುದಾಗಿ ಸಿದ್ಧಪಡಿಸಿದ್ದಾರೆ. ಇದೂ ಅಲ್ಲದೆ ಟಿ.ಎಸ್.ನಾರಾಯಣ ಶಾಸ್ತ್ರಿಗಳು ಪ್ರಾಚೀನವಾದ ಶಿಲಾಲೇಖದ ಆಧಾರದಿಂದ ಶ್ರೀಪತಿ ಪಂಡಿತಾರಾಧ್ಯರ ಕಾಲವನ್ನು ಕ್ರಿ.ಶ. ೧೦೭೨ ಎಂಬುದಾಗಿ ನಿರ್ಧರಿಸಿರುವುದನ್ನು ಕಾಣಬಹುದು. (The Indian Review, Vol. No. 16 May 1915. P.5)

ಕಾಶೀ ಮಹಾಪೀಠದ ಜಗದ್ಗುರುಗಳಾಗಿದ್ದ ಲಿಂ ॥ ವೀರಭದ್ರ ಶಿವಾಚಾರ್ಯ (ಚಿದರೆಮಠದ ಶ್ರೀ ವೀರಭದ್ರ ಶರ್ಮಾ) ಮಹಾಸ್ವಾಮಿಗಳು ಆಂಧ್ರ ಪ್ರದೇಶದಲ್ಲಿಯ ವಿಜಯವಾಡಾ ಎಂಬಲ್ಲಿಯ ಮಲ್ಲೇಶ್ವರ ದೇವಸ್ಥಾನದೊಳಗೆ ಪಲ್ಲಕೇತರಾಜನಿಂದ ಬರೆಯಿಸಲ್ಪಟ್ಟ ಶಿಲಾಲೇಖದ ಆಧಾರದಿಂದ ಶ್ರೀಪತಿಪಂಡಿತಾರಾಧ್ಯರ ಕಾಲವನ್ನು ಕ್ರಿ.ಶ. ೧೦೭೦. ಎಂಬುದಾಗಿ ನಿರ್ಣಯಿಸಿದ್ದಾರೆ. (ಶ್ರೀಕರಭಾಷ್ಯ ಚತುಸ್ಸೂತ್ರೀ ಪೀಠಿಕಾ ಪುಟ–೯) ಹೀಗೆ ಮೇಲಿನ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಶ್ರೀಕರಭಾಷ್ಯದ ಕಾಲವು ಹನ್ನೊಂದನೆಯ ಶತಮಾನವೆಂಬುದು ಸಿದ್ದವಾಗುತ್ತದೆ.

## ಶ್ರೀಕರ ಭಾಷ್ಯದ ಕಾಲನಿರ್ಣಯದಲ್ಲಿ ಹಯವದನರಾಯರ ವಿಚಾರದ ವಿಮರ್ಶೆ

ಬೆಂಗಳೂರ ನಿವಾಸಿಗಳೂ ಮಧ್ವಮತಾನುಯಾಯಿಗಳೂ ಆದ ಶ್ರೀ ಸಿ. ಹಯವದನರಾವ್ ಎಂಬ ವಿದ್ವಾಂಸರು ಶ್ರೀಕರಭಾಷ್ಯವನ್ನು ಸಂಪಾದಿಸಿ ಮುದ್ರಿಸಿದ್ದಾರೆ. ಅವರು ಮೊದಲನೆಯ ಸಂಪುಟದಲ್ಲಿ ಶ್ರೀಕರಭಾಷ್ಯದ ಬಗ್ಗೆ ಸುದೀರ್ಘವಾದ ಉಪೋದ್ಘಾತ (Introduction) ವನ್ನು ಬರೆದಿದ್ದಾರೆ. ಅದರಲ್ಲಿ ಅವರು ನಿರೂಪಿಸಿದಂತೆ ಶ್ರೀಕರಭಾಷ್ಯದಲ್ಲಿ 'ಮಧ್ವ' ಶಬ್ದದ ಪ್ರಯೋಗವಾಗಿರೋಣದರಿಂದ ಇದು ಮಧ್ವಾಚಾರ್ಯರ ನಂತರದ್ದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ ಶ್ರೀಕರಭಾಷ್ಯದಲ್ಲಿಯ– ''ಮಧ್ವಾದ್ವೈತಕ್ಷಪಣಕತಾರ್ಕಿಕಾದಯಃ (ತಾರ್ಕಿಕಾದಿಭಿಃ) ಜೀವಾನಾಂ ವಿಭುತ್ವಾಂಗೀಕಾರಾತ್ ತನ್ನಿರಾಸಾರ್ಥಮೇತ ದಧಿಕರಣಪ್ರಾರಂಭಃ'' (ಬ್ರ.ಸೂ.ಶ್ರೀಕರ ೨–೩–೧೮. ಪುಟ – ೨೬೩) ಈ ಭಾಷ್ಯಾಂಶವನ್ನು ಉದಾಹರಿಸಿದ್ದಾರೆ. ಇಲ್ಲಿ ಬಂದಿರುವ 'ಮಧ್ವ' ಶಬ್ದವನ್ನು ನೋಡಿ ಶ್ರೀಕರಭಾಷ್ಯವು ಮಧ್ವಾಚಾರ್ಯರ ನಂತರದ್ದು ಎಂಬ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. (ಶ್ರೀಕರಭಾಷ್ಯದ ಇಂಗ್ಲೀಷ ಪ್ರಸ್ತಾವನಾ ಪುಟ–೯೫–೯೮, ಬೆಂಗಳೂರ ಪ್ರೆಸ್ ೧೯೩೬).

ಶ್ರೀ ಸಿ. ಹಯವದನರಾಯರ ಮೇಲಿನ ಈ ವಿಚಾರವು ತರ್ಕಸಂಗತವಾಗಿ ರುವುದಿಲ್ಲ, ಕಾರಣವೇನೆಂದರೆ ಇಲ್ಲಿರುವ 'ಮಧ್ವ' ಶಬ್ದವು ಪ್ರಕ್ಷಿಪ್ತವಾದುದು. ಶ್ರೀಪತಿ ಪಂಡಿತಾರಾಧ್ಯರು– ''ಉತ್ಕ್ರಾಂತಿಗತ್ಯಾಗತೀನಾಮ್'' (ಬ್ರ.ಸೂ. ೨–೩–೧೮). ಈ ಬಾದರಾಯಣ ಸೂತ್ರಕ್ಕೆ ಭಾಷ್ಯವನ್ನು ಬರೆಯುತ್ತಿರುವಾಗ ಜೀವಾತ್ಮನನ್ನು ವಿಭುವನ್ನಾಗಿ ಒಪ್ಪಿದರೆ ಲೋಕಾಂತರ ಮತ್ತು ದೇಹಾಂತರಾದಿಗಳಿಗೆ ಗಮನಾಗಮನವಾಗಲೀ ಉತ್ಕ್ರಾಂತಿಯಾಗಲೀ ಸಂಭವಿಸುವುದಿಲ್ಲ. ಆದ್ದರಿಂದ ಆತ್ಮನನ್ನು ಅಣು ಪರಿಮಾಣವನ್ನಾಗಿ ಒಪ್ಪಬೇಕೆಂಬುದಾದ ತಮ್ಮ ಮತವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಆತ್ಮವನ್ನು ವಿಭುವಾಗಿ ಒಪ್ಪುವ ದಾರ್ಶನಿಕರ ಮತಗಳನ್ನು ಇಲ್ಲಿ ಖಂಡಿಸಿರುವುದು ಕಂಡುಬರುತ್ತದೆ. ಅದ್ವೈತ ವೇದಾಂತಿಗಳೂ ಮತ್ತು ತಾರ್ಕಿಕಾದಿಗಳೂ ಆತ್ಮವನ್ನು 'ವಿಭು' ಪರಿಮಾಣವನ್ನಾಗಿ ಒಪ್ಪಿಕೊಂಡಿರುತ್ತಾರೆ. ಆದ್ದರಿಂದ ಅವರ ಹೆಸರುಗಳು ಇಲ್ಲಿ ಬಂದಿರುವುದು ಸೂಕ್ತವಾಗಿ ಕಂಡರೂ ಇಲ್ಲಿ ಬಂದಿರುವ 'ಮಧ್ವ' ಶಬ್ದವು ಅಪ್ರಾಸಂಗಿಕ ಎಂಬುದಾಗಿ ಕಂಡುಬರುತ್ತದೆ. ಏಕೆಂದರೆ ಮಧ್ವಾಚಾರ್ಯರು– ''ಹೇತೂನಾಂ ಸಕಾಶಾದಣುರೇವ'' (ಬ್ರ.ಸೂ. ಪೂರ್ಣಪ್ರಜ್ಞಭಾಷ್ಯ– ೨–೩–೨೦) ಹೀಗೆ ಆತ್ಮನನ್ನು ಅಣುವನ್ನಾಗಿ ಒಪ್ಪಿಕೊಂಡಿ ರುತ್ತಾರೆ. ಶ್ರೀಪತಿ ಪಂಡಿತಾರಾಧ್ಯರು ವಿಭುವಾತ್ಮವಾದಿಗಳನ್ನು ಖಂಡಿಸುವ ಸಂದರ್ಭದಲ್ಲಿ ಅಣುವಾತ್ಮವಾದಿಗಳಾದ ಮಧ್ವಮತದ ಪ್ರಸ್ತಾಪವು ಅಪ್ರಸ್ತುತವೆಂಬುದು ವಿದ್ವಾಂಸರಿಗೆ ಅರಿವಾಗದೇ ಇರದು. ಆದ್ದರಿಂದ ಬೇರೆಲ್ಲೂ ಮಧ್ವ ಶಬ್ದದ ಬಳಕೆಯಾಗದೆ ಇದೊಂದು ಸ್ಥಾನದಲ್ಲಿ ಬಳಕೆಯಾಗಿದ್ದು ಅದೂ ಸಹ ಅಪ್ರಸ್ತುತವಾಗಿರೋಣದರಿಂದ ಪ್ರಕ್ಷಿಪ್ತ ವೆಂಬುದು ಸಿದ್ಧವಾಗುತ್ತದೆ. ಇದೂ ಅಲ್ಲದೆ ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾ ರಾಧ್ಯರು ಸಂಪಾದಿಸಿದ ಶ್ರೀಕರಭಾಷ್ಯ ಭೂಮಿಕೆಯಲ್ಲಿ ತಾಳೆಗರಿಯಲ್ಲಿರುವ ಪ್ರತಿಯಲ್ಲಿ

'ಮಧ್ವ' ಶಬ್ದವು ಅದೆಲ್ಲೂ ಇರುವುದಿಲ್ಲ ಎಂಬುದಾಗಿ ಪ್ರತಿಪಾದಿಸಿದ್ದಾರೆ. (ಶ್ರೀಕರ ಭಾಷ್ಯ ಭೂಮಿಕಾ ಪುಟ–೧೨೧, ಮೈಸೂರು ವಿಶ್ವವಿದ್ಯಾಲಯ ಪ್ರಕಾಶನ ೧೯೭೭)

ಇದೇ ಪ್ರಕಾರ ಚಿದಿರೇಮಠದ ಶ್ರೀ ವೀರಭದ್ರ ಶರ್ಮರೂ ಸಹ (ಕಾಶೀ ಪೀಠದ ಆಳನೆಯ ಜಗದ್ಗುರುಗಳು) ತಾವು ಸಂಪಾದಿಸಿದ 'ಶ್ರೀಕರಭಾಷ್ಯ ಚತುಸ್ಸೂತ್ರಿ'ಯಲ್ಲಿ– ''ಈ ಗ್ರಂಥದಲ್ಲಿ ಶಂಕರಾಚಾರ್ಯರ ಹಾಗೂ ರಾಮಾನುಜಾಚಾರ್ಯರ ಭಾಷ್ಯಗಳ ಅಂಶಗಳನ್ನು ಶ್ರೀಪಂಡಿತಾರಾಧ್ಯರು ಅಲ್ಲಲ್ಲಿ ಉದಾಹರಿಸಿರುವಂತೆ ಮಧ್ವಭಾಷ್ಯದ ಒಂದಂಶವನ್ನೂ ಸಹ ಉದಾಹರಿಸಿರುವುದು ಕಂಡುಬರುವುದಿಲ್ಲ, ಆದ್ದರಿಂದ ಇಲ್ಲಿ ಬಂದಿರುವ 'ಮಧ್ವ' ಶಬ್ದವು ಪ್ರಕ್ಷಿಪ್ತವಾದುದೇ ಎಂಬುದಾಗಿ ನಿರ್ಣಯಿಸಬೇಕಾಗಿದೆ. ಶ್ರೀಕರಭಾಷ್ಯದಲ್ಲಿ ಬಂದಿರುವ ದ್ವೈತಮತದ ಖಂಡನೆಯು ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತವಾಗಿರದೆ ಅವರಿಗಿಂತಲೂ ಪ್ರಾಚೀನದಲ್ಲಿದ್ದ ದ್ವೈತಮತದ ಖಂಡನೆಯೆಂಬುದಾಗಿ ತಿಳಿದುಕೊಳ್ಳಬೇಕೆಂದು ತಿಳಿಯಪಡಿಸಿ 'ಮಧ್ವ' ಶಬ್ದದ ಪ್ರಕ್ಷಿಪ್ತತೆಯನ್ನು ಸ್ಪಷ್ಟಪಡಿಸಿದ್ದಾರೆ. (ಶ್ರೀಕರಭಾಷ್ಯಚತುಸ್ಸೂತ್ರಿ ಪೀಠಿಕಾ ಪುಟ–೧೦ ಶೈವಭಾರತೀಯ ಭವನ ಜಂಗಮವಾಡಿಮಠ ವಾರಾಣಸಿ ೧೯೫೭)

ಇದೂ ಅಲ್ಲದೆ ಮಧ್ವಾಚಾರ್ಯರ ಕಾಲವು ಕ್ರಿ.ಶ. ಹನ್ನೆರಡನೆಯ ಶತಮಾನ ಎಂಬುದಾಗಿ ಡಾ|| ಸರ್ವಪಲ್ಲಿ ರಾಧಾಕೃಷ್ಣನ್ (Indian Philosophy Vol. II P.738) ಇವರು ಅಭಿಪ್ರಾಯಪಡುತ್ತಾರೆ. ಈ ಪೂರ್ವದಲ್ಲಿ ಅನೇಕ ವಿದ್ವಾಂಸರ ಅಭಿಪ್ರಾಯಗಳ ಆಧಾರದ ಮೇಲೆ ಶ್ರೀಪತಿಪಂಡಿತಾರಾಧ್ಯರ ಕಾಲವು ಹನ್ನೊಂದನೆಯ ಶತಮಾನ ವೆಂಬುದಾಗಿ ಸಿದ್ಧವಾಗಿರೋಣದರಿಂದ ಮಧ್ವಾಚಾರ್ಯರು ಶ್ರೀಪಂಡಿತಾರಾಧ್ಯರಿ ಗಿಂತಲೂ ಅರ್ವಾಚೀನರೇ ಹೊರತು ಪ್ರಾಚೀನರಲ್ಲವೆಂಬುದನ್ನು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಆದ್ದರಿಂದ ಶ್ರೀ ಸಿ. ಹಯವದನರಾವ್ ಅವರು 'ಮಧ್ವ' ಶಬ್ದವನ್ನು ಜೋಡಿಸಿ ಶ್ರೀಪತಿಪಂಡಿತರನ್ನು ಮಧ್ವಾಚಾರ್ಯರಿಗಿಂತಲೂ ಅರ್ವಾಚೀನರೆಂದು ಹೇಳಬಯಸಿದ ಪ್ರಯತ್ನವು ವಿಫಲವಾದುದೆಂಬುದು ವಿದ್ವಜ್ಜನ ವೇದ್ಯವಾಗಿದೆ.

ಒಟ್ಟಿನ ಮೇಲೆ ಅನೇಕ ವಿದ್ವಾಂಸರ ಸೂಕ್ತವಾದ ಅಭಿಪ್ರಾಯದ ಮೇರೆಗೆ ಶ್ರೀಪತಿಪಂಡಿತಾರಾಧ್ಯರ ಕಾಲವು ಹನ್ನೊಂದನೇ ಶತಮಾನವೆಂದು ಸಿದ್ಧವಾಗುತ್ತಿ ರುವಾಗ, ಶ್ರೀಕರಭಾಷ್ಯದಲ್ಲಿ ಉಲ್ಲೇಖಗೊಂಡಿರುವ ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲವು ಅದಕ್ಕೂ ಪ್ರಾಚೀನವೆಂಬುದು ಸಹಜವಾಗಿ ಸಿದ್ಧವಾಗುತ್ತದೆ.

### ಶ್ರೀ ಕಂಠಭಾಷ್ಯಕ್ಕಿಂತಲೂ ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಾಚೀನತ್ವ

ಶ್ರೀಕಂಠ ಶಿವಾಚಾರ್ಯರು ''ಅವಿಭಾಗೇನ ದೃಷ್ಟತ್ವಾತ್'' (ಬ್ರ.ಸೂ. ೪–೪–೪) ಈ ಬ್ರಹ್ಮಸೂತ್ರದ ತಮ್ಮ ಶ್ರೀಕಂಠಭಾಷ್ಯದಲ್ಲಿ ''ಮುಕ್ತ ಶಿವಸಮೋಭವೇತ್'' (ಸಿ.ಶಿ. ೭) ಎಂಬ ಶ್ರೀ ಸಿದ್ಧಾಂತ ಶಿಖಾಮಣಿಯ ಶ್ಲೋಕಾಂಶವನ್ನು ಪ್ರಮಾಣ ರೂಪವಾಗಿ ಉದಾಹರಿಸಿದ್ದಾರೆ. ಶ್ರೀಕಂಠ ಶಿವಾಚಾರ್ಯರ ಕಾಲವು ಕ್ರಿ.ಶ. ೧೦ನೆಯ ಶತಮಾನಯೆಂಬುದಾಗಿ ವಿದ್ವಾಂಸರು ಮಾನ್ಯ ಮಾಡಿದ್ದಾರೆ. ೧೦ನೆ ಶತಮಾನದ

ಶ್ರೀಕಂಠಭಾಷ್ಯದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಶ್ಲೋಕಾಂಶವು ಉದ್ಧೃತವಾಗಿರೋಣದರಿಂದ ಶ್ರೀ ಸಿದ್ಧಾಂತ ಶಿಖಾಮಣಿಯು ೧೧ನೆ ಶತಮಾನಕ್ಕಿಂತಲೂ ಪ್ರಾಚೀನವಾದುದು ಎಂಬುದು ಸ್ಪಷ್ಟವಾಗುತ್ತದೆ.

## ಆದ್ಯಶಂಕರಾಚಾರ್ಯರಿಗಿಂತಲೂ ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಾಚೀನತ್ವ

'ಗುರುವಂಶಕಾವ್ಯ' ಮತ್ತು 'ಶಿವತತ್ತ್ವರತ್ನಾಕರ' ಮುಂತಾದ ಗ್ರಂಥಗಳಲ್ಲಿ ಶ್ರೀರೇಣುಕರ ಅಪರಾವತಾರಿಯಾದ ಶ್ರೀ ರೇವಣಸಿದ್ಧೇಶ್ವರರಿಂದ ಆದ್ಯ ಶಂಕರಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗ ಮತ್ತು ರತ್ನಗರ್ಭ ಗಣಪತಿಯನ್ನು ಪ್ರದಾನ ಮಾಡಿರುವ ವಿಷಯವು ಉಲ್ಲೇಖಿಸಲ್ಪಟ್ಟಿದೆ. ಈ ವಿಷಯವು ಸಿದ್ಧಾಂತ ಶಿಖಾಮಣಿಯ ಕರ್ತೃವಾದ ಶ್ರೀ ಶಿವಯೋಗಿ ಶಿವಾಚಾರ್ಯರಿಗೆ ತಿಳಿದಿರುವಂತೆ ಕಂಡುಬರುವುದಿಲ್ಲ. ಇಲ್ಲವಾದರೆ ಈಶಾನ್ಯಗುರು ಮತ್ತು ಚತುರ್ಮುಖ ಬ್ರಹ್ಮರಸರು ತಾವು ವಿರಚಿಸಿದ 'ರೇಣುಕ ಚಂಪೂ' ಮತ್ತು 'ರೇವಣ ಸಿದ್ಧೇಶ್ವರರ ಪುರಾಣಾ'ದಿ ಗ್ರಂಥಗಳಲ್ಲಿ ರೇಣುಕರ ಹಾಗೂ ರೇವಣಸಿದ್ಧೇಶ್ವರರ ಲೀಲೆಗಳನ್ನು ಮಿಶ್ರಣಮಾಡಿ ವರ್ಣಿಸಿರುವಂತೆ ಶ್ರೀ ಶಿವಯೋಗಿ ಶಿವಾಚಾರ್ಯರೂ ಸಹ ಶ್ರೀ ಸಿದ್ಧಾಂತ ಶಿಖಾಮಣಿಯ ಕೊನೆಯ ಭಾಗದಲ್ಲಿ ತ್ರಿಕೋಟಿ ಶಿವಲಿಂಗಸ್ಥಾಪನೆಯ ಲೀಲೆಯನ್ನು ವರ್ಣಿಸುವುದರ ಜೊತೆಗೆ ಆದಿ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗ ಪ್ರದಾನದ ವಿಷಯವನ್ನೂ ಸಹ ವರ್ಣಿಸಬಹುದಾಗಿತ್ತು. ಆದರೆ ಅವರು ಆ ಪ್ರಸಂಗವನ್ನು ಇಲ್ಲಿ ಉಲ್ಲೇಖಿಸದಿರೋಣದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಆದ್ಯ ಶಂಕರಾಚಾರ್ಯರಿಗಿಂತಲೂ ಪೂರ್ವದವರಾಗಿರಬಹುದೆಂದು ಊಹಿಸಬಹುದಾಗಿದೆ. ಶ್ರೀ ಆದ್ಯ ಶಂಕರಾಚಾರ್ಯರ ಕಾಲವನ್ನು ಇತಿಹಾಸಕರರು ಏಳನೆಯ ಶತಮಾನವೆಂದು ನಿರ್ಣಯಿಸಿದ್ದಾರೆ. ಈ ದೃಷ್ಟಿಯಿಂದ ಶ್ರೀ ಸಿದ್ಧಾಂತ ಶಿಖಾಮಣಿಯ ಕರ್ತೃವಾದ ಶಿವಯೋಗಿ ಶಿವಾಚಾರ್ಯರ ಮತ್ತು ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲವನ್ನು ಏಳನೆಯ ಶತಮಾನಕ್ಕಿಂತಲೂ ಪೂರ್ವದ್ದೆಂಬುದಾಗಿ ತರ್ಕಿಸಬಹುದಾಗಿದೆ.

## ಬೌದ್ಧಮತ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿ

ನಾಗನೂರು ಬ್ರಹ್ಮನ್ನಠಾಧ್ಯಕ್ಷರಾದ ಲಿಂ|| ಪಂಡಿತ ಕಾಶೀನಾಥ ಶಾಸ್ತ್ರಿಗಳವರು 'ಭಾವ ಪ್ರಕಾಶ'ವೆಂಬ ಹೆಸರಿನ ಕನ್ನಡ ಭಾವಾನುವಾದದೊಂದಿಗೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ಸಂಪಾದಿಸಿ ಪ್ರಕಟಪಡಿಸಿದ್ದಾರೆ. ಆ ಗ್ರಂಥವು ಈಗಾಗಲೇ ಅನೇಕ ಆವೃತ್ತಿಗಳನ್ನು ಹೊಂದಿ ಜನಾನುರಾಗವನ್ನು ಪಡೆದುದಾಗಿದೆ. ವಿದ್ವಾಂಸರೂ ಹಾಗೂ ಸಂಶೋಧಕರು ಆದ ಲಿಂ|| ಪಂ|| ಕಾಶೀನಾಥ ಶಾಸ್ತ್ರಿಗಳವರು ಶ್ರೀ ಸಿದ್ಧಾಂತ ಶಿಖಾಮಣಿಗೆ ಬರೆದ ಪ್ರಸ್ತಾವನೆಯಲ್ಲಿ–

> ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ ।
> ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ ॥ (ಸಿ. ಶಿ. ೧-೨೩)

ಈ ಶ್ಲೋಕವನ್ನು ಉದಾಹರಿಸಿ ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮನ್ನು ಬೌದ್ಧಾದಿ ನಾಸ್ತಿಕ ಮತಗಳೆಂಬ ಘೋರವಾದ ಅಂಧಕಾರವನ್ನು ದೂರ ಮಾಡುವಲ್ಲಿ ಸೂರ್ಯನನ್ನಾಗಿ ಉಪಮಿಸಿಕೊಂಡಿದ್ದಾರೆ. ಇಂದಿಗೆ ಸುಮಾರು ಎರಡು ಸಾವಿರ ವರ್ಷ ಪೂರ್ವದಲ್ಲಿ ಭಾರತದೇಶದಲ್ಲಿ ಬೌದ್ಧಮತದ ಪ್ರಬಲವಾದ ಪ್ರಚಾರವು ಇತ್ತೆಂಬುದು ಕಂಡುಬರುತ್ತದೆ. ಈ ನಾಸ್ತಿಕ ಮತವನ್ನು ಖಂಡಿಸಿ ಸನಾತನವಾದ ವೀರಶೈವ ಸಿದ್ಧಾಂತವನ್ನು ಪ್ರಸಿದ್ಧಪಡಿಸಲೋಸುಗ ಶ್ರೀ ಶಿವಯೋಗಿ ಶಿವಾಚಾರ್ಯರು ರೇಣುಕಾಗಸ್ತ್ಯ ಸಂವಾದ ರೂಪವಾದ ಈ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ವಿರಚಿಸಿರುವುದಾಗಿ ಕಂಡುಬರುತ್ತದೆ. ಆದ್ದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರ ಕಾಲವು ಇಂದಿಗೆ ಸುಮಾರು ಎರಡು ಸಾವಿರ ವರ್ಷ ಪೂರ್ವದ್ದೆಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. (ಸಿ. ಶಿ. ಪ್ರಸ್ತಾವನಾ ಪುಟ–೭. ಕಾಶೀನಾಥ ಗ್ರಂಥಮಾಲಾ ಮೈಸೂರು ೧೯೩೭)

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಲಿಂ|| ಶ್ರೀ ೧೦೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ''ಸಿದ್ಧಾಂತ ಶಿಖಾಮಣಿ ಸತ್ಯಾರ್ಥ ಪ್ರಕಾಶ'' ಎಂಬ ಕಿರು ಹೊತ್ತಿಗೆಯನ್ನು ವಿರಚಿಸಿರುತ್ತಾರೆ. ಅದರಲ್ಲಿ– 'ರೇಣುಕ ಸಂಪ್ರದಾಯದವನಾದ ಶ್ರೀ ಶಿವಯೋಗಿ ಶಿವಾಚಾರ್ಯನು ಬೌದ್ಧ ಮತದ ಪ್ರಬಲ ವಿರೋಧಿಯಾಗಿದ್ದನೆಂಬುದನ್ನು ತಾನೇ ಹೇಳಿಕೊಂಡಿರೋಣದರಿಂದ ಮತ್ತು ಆದ್ಯ ಶ್ರೀ ರೇವಣಸಿದ್ಧೇಶ್ವರರ ಚರಿತ್ರೆಯನ್ನೂ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ವರ್ಣಿಸದಿರೋಣದರಿಂದ ಶ್ರೀ ಶಿವಯೋಗಿ ಶಿವಾಚಾರ್ಯನ ಕಾಲವನ್ನು ಇಂದಿಗೆ ಸುಮಾರು ಎರಡು ಸಾವಿರ ವರ್ಷಪೂರ್ವದ್ದಾಗಿರಬಹುದೆಂದು ನಿಶ್ಚಯಿಸ ಬಹುದಾಗಿದೆ; (ಸಿ.ಶಿ.ಸತ್ಯಾರ್ಥ ಪ್ರಕಾಶ ಪುಟ – ೨) ಎಂಬ ತಮ್ಮ ವಿಚಾರವನ್ನು ವ್ಯಕ್ತ ಪಡಿಸಿದ್ದಾರೆ.

ಮೇಲೆ ವಿವರಿಸಲ್ಪಟ್ಟಿರುವ ಲಿಂ. ವೇ. ಪಂಡಿತ ಕಾಶೀನಾಥ ಶಾಸ್ತ್ರಿಗಳವರ ಮತ್ತು ಲಿಂ. ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸನ್ನಿಧಿಯವರ ವಿಚಾರಾನುಸಾರವಾಗಿ ಶ್ರೀ ಶಿವಯೋಗಿ ಶಿವಾಚಾರ್ಯರು ಬೌದ್ಧ ಮತದ ಪ್ರಬಲ ಪ್ರಚಾರ ಕಾಲದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ವಿರಚಿಸಿರುತ್ತಾರೆಂಬ ವಿಚಾರವನ್ನು ಮಂಡಿಸಿರುತ್ತಾರೆ. ಪ್ರಾಯಃ ೭ನೆಯ ಶತಮಾನದ ನಂತರ ಬೌದ್ಧ ಮತವು ಕ್ಷೀಣಿಸುತ್ತಾ ಹೋಗಿ ೧೦ನೆಯ ಶತಮಾನದ ಒಳಗಾಗಿ ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತ್ತೆಂಬುದು ಇತಿಹಾಸತಜ್ಞರ ವಿಚಾರವಾಗಿದೆ. ಆದ್ದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ೭ನೆಯ ಶತಮಾನಕ್ಕಿಂತಲೂ ಪೂರ್ವದಲ್ಲಿಯೇ ಇದ್ದರೆಂಬುದು ಖಚಿತವಾಗುವುದು. ಇದುಅಲ್ಲದೆ ೬ನೆಯ ಶತಮಾನದ ಕಂಚಿ ಶಾಸನದಲ್ಲಿ ೨೮ ಶಿವಾಗಮಗಳ ನಾಮೋಲ್ಲೇಖವು ಕಂಡು ಬರುತ್ತದೆ. ಅಂದಾಗ ೬ನೆಯ ಶತಮಾನದಲ್ಲಿ ೨೮ ಶಿವಾಗಮಗಳಿಂದಲೇ ವೀರಶೈವ ಸಿದ್ಧಾಂತವನ್ನು

ತಿಳಿದುಕೊಳ್ಳ ಬೇಕಾಗುತ್ತಿತ್ತು. ಈ ೨೮ ಶಿವಾಗಮುಗಳನ್ನು ಎಲ್ಲರಿಂದಲೂ ಅಧ್ಯಯನ ಮಾಡುವುದು ಅಸಾಧ್ಯ. ಅವೆಲ್ಲವುಗಳ ಆಧಾರದ ಮೇಲೆ ಸಂಪೂರ್ಣ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಒಂದು ಗ್ರಂಥವನ್ನೂ ರಚಿಸಿ ಸಮಗ್ರ ವೀರಶೈವ ಸಮಾಜವನ್ನು ಬೌದ್ಧಾದಿ ಧರ್ಮಗಳಿಂದ ಪ್ರಭಾವಿತರಾಗದ ಹಾಗೆ ಸಂರಕ್ಷಿಸಿಕೊಳ್ಳುವ ಉದ್ದೇಶದಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ವಿರಚಿಸಿದ್ದಾರೆಂಬುದು ತಿಳಿದು ಬರುತ್ತದೆ. ಅಂತೆಯೇ ಶ್ರೀ ಶಿವಯೋಗಿ ಶಿವಾಚಾರ್ಯರು ಗ್ರಂಥಾರಂಭದಲ್ಲಿ ''ಯೇನ ರಕ್ಷಾವತಿ ಜಾತಾ ಶಿವಭಕ್ತಿ : ಸನಾತನೀ।'' (ಸಿ.ಶಿ. ೧–೨೩) ಈ ಶ್ಲೋಕದಲ್ಲಿ ಬೌದ್ಧಾದಿ ಮತಗಳೆಂಬ ಕಾರ್ಗತ್ತಲೆಯನ್ನು ಹೋಗಲಾಡಿಸುವಲ್ಲಿ ತನ್ನನ್ನು ಸೂರ್ಯ ನನ್ನಾಗಿ ಹೇಳಿ ಕೊಂಡಿದ್ದಾನೆ. ಆದ್ದರಿಂದ ೭ನೆಯ ಶತಮಾನದಲ್ಲಿ ಸನಾತನವಾದ ವೀರಶೈವ ಧರ್ಮದ ಮೇಲೆ ಇತರ ಧರ್ಮೀಯರ ಛಾಯೆ ಬೀಳದ ಹಾಗೆ ಸಂರಕ್ಷಿಸಿದ ಕೀರ್ತಿ ಶ್ರೀ ಶಿವಯೋಗಿ ಶಿವಾಚಾರ್ಯರಿಗೆ ಸಲ್ಲುತ್ತದೆ. ಆದ್ದರಿಂದ ಶಿವಯೋಗಿ ಶಿವಾಚಾರ್ಯರ ಮಾತಿನಿಂದಲೇ ಶ್ರೀ ಸಿದ್ಧಾಂತ ಶಿಖಾಮಣಿ ಕಾಲವನ್ನು ನಿರ್ಣಯಿಸುವದಾದರೆ ೭ನೆಯ ಶತಮಾನವೆಂದು ಹೇಳಲಾಗುವುದು.

ಬೆಂಗಳೂರ ವಿಶ್ವವಿದ್ಯಾಲಯದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರೂ ಶ್ರೇಷ್ಠ ಸಂಶೋಧಕರೂ ಸದ್ಯಃ ಕಾಶೀಮಹಾಪೀಠದಿಂದ ಬೆಂಗಳೂರ ಮಹಾನಗರದಲ್ಲಿ ಸ್ಥಾಪಿಸಲ್ಪಟ್ಟ ''ವೀರಶೈವ ಅನುಸಂಧಾನ ಸಂಸ್ಥಾನ''ದ ನಿರ್ದೇಶಕರೂ ಆಗಿರುವ ಡಾ|| ಎಂ. ಶಿವಕುಮಾರ ಸ್ವಾಮಿಗಳವರು ಧಾರವಾಡ ನಗರದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದ ವ್ಯಾಖ್ಯಾನ ಮಾಲೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಬಗ್ಗೆ ಮೂರು ಉಪನ್ಯಾಸಗಳನ್ನು ನೀಡಿರುತ್ತಾರೆ. ಆ ಉಪನ್ಯಾಸಗಳೇ ''ಸಿದ್ಧಾಂತ ಶಿಖಾಮಣಿ– ಮೂರು ಉಪನ್ಯಾಸಗಳು'' ಎಂಬ ಹೆಸರಿನಿಂದ ೧೯೮೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದಲೇ ಪ್ರಕಾಶನಗೊಂಡಿರುತ್ತವೆ. ಈ ಉಪನ್ಯಾಸ ಗ್ರಂಥದಲ್ಲಿ ಡಾ|| ಎಂ. ಶಿವಕುಮಾರ ಸ್ವಾಮಿಗಳವರು ಶ್ರೀಕರಭಾಷ್ಯದ ಕಾಲವನ್ನು ಸಶಾಸ್ತ್ರೀಯವಾಗಿ ನಿರ್ಣಯಿಸುವುದರ ಮೂಲಕ ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲವನ್ನು ಕ್ರಿಸ್ತ ಶಕ ಎಂಟನೆಯ ಶತಮಾನಕ್ಕಿಂತಲೂ ಪೂರ್ವದ್ದೆಂಬುದಾದ ತಮ್ಮ ವಿದ್ವತ್ಪೂರ್ಣವಾದ ವಿಚಾರವನ್ನು ಪ್ರಸ್ತಾಪಿಸಿರುತ್ತಾರೆ.

ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲ ನಿರ್ಣಯದ ಸಂದರ್ಭದಲ್ಲಿ ಪ್ರಾಚೀನ ಹಾಗೂ ಅರ್ವಾಚೀನರಾದ ಅನೇಕ ವಿದ್ವಾಂಸರ ಮತ–ಮತಾಂತರಗಳನ್ನು ಇಲ್ಲಿ ಪರ್ಯಾಲೋಚಿಸಲಾಗಿದೆ. ಈ ಎಲ್ಲ ವಿಚಾರಗಳ ಆಧಾರದಿಂದ ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲವು ಕ್ರಿಸ್ತಶಕ ಎಂಟನೆಯ ಶತಮಾನಕ್ಕಿಂತಲೂ ಪೂರ್ವದ್ದೆಂಬುದಾಗಿ ಹೇಳುವಲ್ಲಿ ಸಾಕಷ್ಟು ಪುರಾವೆಗಳು ದೊರೆತಿರೋಣದರಿಂದ ನಿಶ್ಚಿತವಾಗಿ ಈ ವಿಚಾರವನ್ನು ಒಪ್ಪಬಹುದಾಗಿದೆ. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಆಗಿಹೋದ ಬಸವೇಶ್ವರಾದಿ ಶಿವಶರಣರಿಗಿಂತಲೂ ಸುಮಾರು ನಾಲ್ಕುನೂರು ವರ್ಷ ಪೂರ್ವದಲ್ಲಿಯೇ

ಶ್ರೀ ಸಿದ್ಧಾಂತ ಶಿಖಾಮಣಿಯು ವಿರಚಿತವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಂತೆಯೇ ಅನೇಕ ವಚನಕಾರರ ಮೇಲೆ ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಭಾವವು ಆಗಿರುವುದನ್ನೂ ಸಹ ವಚನಗಳ ಅಧ್ಯಯನದಿಂದ ಪುಷ್ಟೀಕರಿಸುವುದು ಸಾಧ್ಯವಿದೆ.

**ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರ ಭಾಷ್ಯ : ನಿಜದ ನಿಲುವು ಗ್ರಂಥದ ಬಗ್ಗೆ ಕೆಲವು ವಿಚಾರಗಳು**

ಮೈಸೂರಿನ ವಿದ್ವಾನ್ ಶ್ರೀ ಇಮ್ಮಡಿ ಶಿವ ಬಸವ ಸ್ವಾಮಿಗಳು ಈ ಗ್ರಂಥವನ್ನು ರಚಿಸಿ ಪ್ರಚಾರ ಪಡಿಸಿದ್ದಾರೆ. ಈ ಗ್ರಂಥದಲ್ಲಿ ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರ ಭಾಷ್ಯಗಳ ಕಾಲ ಮಾನದ ಬಗ್ಗೆ ಸಾಕಷ್ಟು ಚರ್ಚೆಯನ್ನು ಮಾಡಿದ್ದಾರೆ. ಶ್ರೀ ಸ್ವಾಮಿಗಳವರು ಹರಸಾಹಸವನ್ನು ಮಾಡಿ ಮೂರು ಮಾತುಗಳನ್ನು ಸಾಧಿಸಲು ಪ್ರಯತ್ನಪಟ್ಟದ್ದು ಕಂಡು ಬರುತ್ತದೆ.

೧. ಸಿದ್ಧಾಂತ ಶಿಖಾಮಣಿಯು ಒಂದು ಸಂಕಲನ ಗ್ರಂಥ

೨. ಇದು ಹನ್ನೆರಡನೆ ಶತಮಾನದ ನಂತರದ್ದು

೩. ಇದರಲ್ಲಿ ಬರುವ ನೂರೊಂದು ಸ್ಥಲಗಳ ವಿವೇಚನೆಯು ಶ್ರೀ ಶಿವಯೋಗಿ ಶಿವಾಚಾರ್ಯರ ಪ್ರಥಮ ಪರಿಕಲ್ಪನೆ ಅಲ್ಲ

ಹೀಗೆ ಶ್ರೀಗಳವರು ಈ ಗ್ರಂಥದ ತುಂಬೆಲ್ಲ ನಕಾರಾತ್ಮಕ ವಿಚಾರಗಳನ್ನೇ ತುಂಬಿದ್ದಾರೆ. ಶ್ರೀಗಳವರು ಮೇಲಿನ ಮೂರು ಮಾತುಗಳನ್ನು ಸಾಧಿಸಲು ಪಟ್ಟ ಪ್ರಯತ್ನವು ಎಷ್ಟು ಸೂಕ್ತ ಎನ್ನುವದರ ಬಗ್ಗೆ ಇಲ್ಲಿ ವಿಚಾರಿಸಲಾಗುವದು.

ಹಿಪ್ಪರಗಿ ಹಿರೇಮಠ ಹಾಗೂ ಎಡೂರು ಕಾಡಸಿದ್ಧೇಶ್ವರ ಮಠದ ಪಟ್ಟಾಧ್ಯಕ್ಷರಾದ ಶ್ರೀ ಷ.ಬ್ರ. ಡಾ|| ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳವರು – ''ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರ ಭಾಷ್ಯ : ನಿಜದ ನಿಲುವು ಗ್ರಂಥದ ತಪ್ಪು ಹೆಜ್ಜೆಗಳು'' ಎಂಬ ವಿದ್ವತ್ ಪೂರ್ಣವಾದ ಲೇಖನದಲ್ಲಿ ಶ್ರೀ ಇಮ್ಮಡಿ ಶಿವ ಬಸವ ಸ್ವಾಮಿಗಳು ನಿಜದ ನಿಲುವು ಬರೆಯುವಾಗ ಎಷ್ಟು ಕಡೆ ತಪ್ಪು ಹೆಜ್ಜೆಗಳನ್ನು ಇಟ್ಟಿದ್ದಾರೆಂಬುದನ್ನು ಈ ಲೇಖದಲ್ಲಿ ಉಲ್ಲೇಖಿಸಿದ್ದಾರೆ. ಆ ಲೇಖದ ಆಧಾರದ ಮೇಲೆ ಕೆಲವು ವಿಚಾರಗಳನ್ನು ಇಲ್ಲಿ ನಾವು ಹೇಳಬಯಸುತ್ತೇವೆ.

ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀ ಶಿವಯೋಗಿ ಶಿವಾಚಾರ್ಯರ ಸ್ವಂತ ರಚನೆಯೇ ವಿನಃ ಅದೊಂದು ಸಂಕಲನ ಗ್ರಂಥವಲ್ಲ. ಶ್ರೀ ಸಿದ್ಧಾಂತ ಸಿಖಾಮಣಿಯಲ್ಲಿ ಒಟ್ಟು ೧೪೩೭ ಶ್ಲೋಕಗಳಿವೆ. ಅವುಗಳ ಪೈಕಿ ಕೇವಲ ೩೫೦ ಶ್ಲೋಕಗಳಿಗೆ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳವರು ಮೂಲವನ್ನು ಕಂಡುಹಿಡಿದಿದ್ದಾರೆ. ಉಳಿದ ೧೦೮೭ ಶ್ಲೋಕಗಳಿಗೆ ಮೂಲವನ್ನು ಕಂಡುಹಿಡಿಯಲು ಶ್ರೀಗಳವರಿಗೆ ಸಾಧ್ಯವಾಗಿಲ್ಲ ಅಂದ ಮೇಲೆ ೧೦೮೭ ಶ್ಲೋಕಗಳು ಶ್ರೀ ಶಿವಯೋಗಿ ಶಿವಾಚಾರ್ಯರ ರಚನೆಯಂತಲೆ ಶ್ರೀ ಸ್ವಾಮಿಗಳು ಒಪ್ಪಿಕೊಂಡಂತಾಗಿದೆ. ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ

ಶಿಖಾಮಣಿಯನ್ನು ರಚಿಸುವಾಗ ಇಪ್ಪತ್ತೆಂಟು ಶಿವಾಗಮಗಳನ್ನು ಮತ್ತು ಶೈವ ಪುರಾಣಗಳನ್ನು ಆಧಾರವಾಗಿ ಬಳಸಿಕೊಂಡಿದ್ದೇವೆ ಎಂಬುದಾಗಿ ಅವರೇ ಸ್ವತಃ ಹೇಳಿರುವದರಿಂದ ತಾವು ಬರೆಯಲು ಹೊರಟ ಶ್ರೀ ಸಿದ್ಧಾಂತ ಶಿಖಾಮಣಿಗೆ ಆಧಾರ ರೂಪವಾಗಿ ೩೫೦ ಶ್ಲೋಕಗಳನ್ನು ಬೇರೆ ಬೇರೆ ಮೂಲಗಳಿಂದ ತೆಗೆದುಕೊಂಡು ತಮ್ಮ ಗ್ರಂಥದಲ್ಲಿ ಬಳಸಿಕೊಂಡಿದ್ದಾರೆ. ಇದು ಅವರ ಪ್ರಾಮಾಣಿಕ ಪಾಂಡಿತ್ಯಕ್ಕೆ ಒಂದು ಸಾಕ್ಷಿ ಯಾಗಿದೆ. ಆದ್ದರಿಂದ ಶಿವಾಗಮಗಳ ಆಧಾರದ ಮೇಲೆ ಶ್ರೀ ಶಿವಯೋಗಿ ಶಿವಾಚಾರ್ಯರು ರಚಿಸಿರುವ ಒಂದು ಅಪೂರ್ವವಾದ ಕೃತಿಯೇ ಶ್ರೀ ಸಿದ್ಧಾಂತ ಶಿಖಾಮಣಿಯೆಂಬುದಾಗಿ ನಿಷ್ಪಕ್ಷ ಪಾತದ ಸಹೃದಯ ಪಂಡಿತರು ಸರ್ವರು ಒಪ್ಪಿಕೊಳ್ಳಲೇ ಬೇಕು.

ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ಕಳೆದ ನಾಲ್ಕು ನೂರು ವರ್ಷಗಳ ಕಾಲಾವಧಿಯಲ್ಲಿ ಅನೇಕ ಜನ ವಿದ್ವಾಂಸರು ಬೇರೆ ಬೇರೆ ಭಾಷೆಗಳಲ್ಲಿ ವ್ಯಾಖ್ಯಾನಗಳನ್ನು ಬರೆದು ಈ ಗ್ರಂಥವನ್ನು ಜನೋಪಯೋಗಿ ಯಾಗುವಂತೆ ಮಾಡಿದ್ದಾರೆ. ಅವರಲ್ಲಿ ಶ್ರೀ ಸೋಸಲೆ ರೇವಣರಾಧ್ಯರು, ಶ್ರೀ ಮರಿ ತೋಂಟದಾರ್ಯರು, ಶ್ರೀ ಉಜ್ಜಯಿನೀಶ, ಅಜ್ಞಾತ ಕವಿ, ಪಂಡಿತ ಎನ್.ಆರ್. ಕರಿಬಸವ ಶಾಸ್ತ್ರಿಗಳು, ಪಂಡಿತ ಕಾಶೀನಾಥ ಶಾಸ್ತ್ರಿಗಳು, ಎಮ್. ಎಲ್. ನಾಗಣ್ಣ ಡಾ|| ಜ.ಚ.ನಿ., ಬಿಜಾಪುರ ಜ್ಞಾನ ಯೋಗಾಶ್ರಮದ ಲಿಂ. ಮಲ್ಲಿಕಾರ್ಜುನ ಸ್ವಾಮಿಗಳು, ಬೆಂಗಳೂರು ವಿಶ್ವವಿದ್ಯಾಲಯದ ಡಾ|| ಶಿವಕುಮಾರ ಸ್ವಾಮಿಗಳು, ಗದಗಿನ ಡಾ. ಪುಟ್ಟರಾಜ ಕವಿ ಗವಾಯಿಗಳು, ಗುಲ್ಬರ್ಗಾದ ಡಾ|| ಚಂದ್ರಶೇಖರ ಕಪಾಳೆ, ವಾರಾಣಸಿಯ ಡಾ|| ರಾಧೇಶಾಮ್ ಚತುರ್ವೇದಿ, ತಿರುವಣ್ಣಾ ಮಲೈಯ ಶ್ರೀ ಶಿವಪ್ರಕಾಶ ಸ್ವಾಮಿಗಳು, ಆಂಧ್ರ ಪ್ರದೇಶದ ಚನ್ನಪುಗ್ಗಡ ನಾಗೇಶ್ವರ್ ರಾವ್, ಸಂ. ಶಿ. ಭೂಸನೂರ ಮಠ ಮತ್ತು ಬೆಳಗಾವಿಯ ಡಾ|| ಎಸ್.ಜಿ. ಫಿವಾರಿ ಮುಂತಾದವರು ಸುಪ್ರಸಿದ್ಧರಾಗಿದ್ದಾರೆ. ಇವರೆಲ್ಲ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಕನ್ನಡ, ಸಂಸ್ಕೃತ, ತಮಿಳು, ತೆಲಗು, ಇಂಗ್ಲೀಷ ಮತ್ತು ಹಿಂದಿ ಭಾಷೆ ಗಳಿಗೆ ಅನುವಾದ ಮಾಡಿದ್ದಾರೆ. ಇಷ್ಟು ಜನ ವಿದ್ವಾಂಸರ ಪೈಕಿ ಯಾರೊಬ್ಬರೂ ಶ್ರೀ ಸಿದ್ಧಾಂತ ಶಿಖಾಮಣಿಗೆ ಸಂಕಲನ ಗ್ರಂಥವೆಂದು ಹೇಳಿರುವುದಿಲ್ಲ. ಆದರೆ ಪ್ರತಿಯೊಬ್ಬ ಲೇಖಕರು ಅತ್ಯಂತ ಗೌರವ ಪೂರಕವಾಗಿ ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀ ಶಿವಯೋಗಿ ಶಿವಾಚಾರ್ಯರ ಅಪೂರ್ವ ಕೃತಿಯೆಂದೆ ಪ್ರಶಂಸಿದ್ದಾರೆ. ಆದ್ದರಿಂದ ಶ್ರೀ ಸಿದ್ಧಾಂತ ಶಿಖಾಮಣಿಯು ಒಂದು ಸಂಕಲನ ಗ್ರಂಥವೆಂದು ಸಾಧಿಸಲು ಹೊರಟಿದ್ದ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳವರ ವಾದವು ಸತ್ವಹೀನವಾದುದೆಂದು ತಿಳಿದುಕೊಳ್ಳಬೇಕು.

ಇನ್ನು ಯಾವುದೇ ಒಂದು ಕೃತಿಯಲ್ಲಿ ಸ್ವಲ್ಪರ ಮಟ್ಟಿಗೆ ಬೇರೆ ಬೇರೆ ಮೂಲಗಳ ಶ್ಲೋಕಗಳನ್ನು ಆಧಾರವಾಗಿ ಬಳಸಿದ ಮಾತ್ರಕ್ಕೆ ಆ ಕೃತಿಯನ್ನು ಸಂಕಲನ ಕೃತಿಯೆಂದು ಹೇಳುವುದಾದರೇ ಶ್ರೀ ಮದ್‌ಭಗವದ್‌ಗೀತೆಯಲ್ಲಿಯೂ ಸಹ ಪಾರಮೇಶ್ವರ

ಆಗಮದ ಮತ್ತು ಅನೇಕ ಉಪನಿಷತ್ತಗಳ ಮೂಲ ಶ್ಲೋಕಗಳನ್ನು ಯಥಾವತ್ತಾಗಿ ಬಳಸಿರುವದರಿಂದ ಅದನ್ನು ವ್ಯಾಸನ ಕೃತಿಯೆಂದು ಹೇಳದೆ ಅದನ್ನು ಅವನ ಸಂಕಲನ ಗ್ರಂಥವೆಂದು ಹೇಳಬೇಕಾಗಬಹುದು. ಹಾಗೇನಾದರು ಯಾರಾದರೂ ಹೇಳಿದರೆ ಆ ಮಾತು ಹಾಸ್ಯಾಸ್ಪದವಾಗುವುದಲ್ಲದೆ ಅದನ್ನು ಯಾರೂ ಗೌರವಿಸಲಾರರು. ಅದೇ ಪ್ರಕಾರ ೧೨ನೆಯ ಶತಮಾನದ ಶಿವಶರಣರ ವಚನಗಳಲ್ಲಿ ವೇದೋಪನಿಷತ್‌ಗಳ ಮತ್ತು ಶಿವಾಗಮುಗಳ ಸಂಸ್ಕೃತ ಸೂಕ್ತಿಗಳು ಬಳಸಲ್ಪಟ್ಟಿವೆ. ಇನ್ನು ಕೆಲವೂ ವಚನಗಳು ಆ ಸಂಸ್ಕೃತ ಸೂಕ್ತಿಗಳ ನೇರ ಅನುವಾದದಂತೆ ಮೂಡಿಬಂದಿರುತ್ತವೆ. ಹೀಗೆಂದ ಮಾತ್ರಕ್ಕೆ ವಚನ ಸಾಹಿತ್ಯವನ್ನು ಅನುವಾದ ಸಾಹಿತ್ಯ ಅಥವಾ ಸಂಕಲನ ಸಾಹಿತ್ಯವೆಂದು ಹೇಳುವುದು ಹೇಗೆ ಸೂಕ್ತವಲ್ಲವೊ ಅದರಂತೆ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಸಂಕಲಿತ ಗ್ರಂಥವೆಂದು ಹೇಳುವ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳ ವಾದವು ಹುರಳಿಲ್ಲದ್ದೆಂದು ತಿಳಿದುಕೊಳ್ಳಬೇಕು.

೨. ಇನ್ನು ಶ್ರೀ ಸಿದ್ಧಾಂತ ಶಿಖಾಮಣಿಯು ೧೨ನೆಯ ಶತಮಾನದ ನಂತರದ್ದು ಎಂದು ಹೇಳುವ ಶ್ರೀ ಇಮ್ಮಡಿ ಶಿವ ಬಸವ ಸ್ವಾಮಿಗಳ ವಾದವೂ ಸಹ ಸೂಕ್ತವಾದದ್ದಲ್ಲ. ಏಕೆಂದರೆ ೧೨ನೆಯ ಶತಮಾನದ ಪಾಲ್ಕುರಿಕಿ ಸೋಮನಾಥ ತನ್ನ ''ಪಂಡಿತರಾಧ್ಯ ಚರಿತೆ'' ಮತ್ತು ''ಬಸವ ಪುರಾಣ''ಗಳಲ್ಲಿ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯರು ತಮ್ಮ ''ಶಿವತತ್ತ್ವಸಾರ'' ಗ್ರಂಥದಲ್ಲಿ ಶ್ರೀ ಪತಿ ಪಂಡಿತಾರಾಧ್ಯರ ಮತ್ತು ಶ್ರೀಕರ ಭಾಷ್ಯದ ಉಲ್ಲೇಖವನ್ನು ಮಾಡಿರುವದರಿಂದ ಶ್ರೀಪತಿ ಪಂಡಿತಾರಾಧ್ಯರು ೧೨ನೆಯ ಶತಮಾನಕ್ಕಿಂತಲು ಪೂರ್ವದವರೆಂಬುದು ತಿಳಿದು ಬರುತ್ತದೆ. ಈಗಾಗಲೇ ಅನೇಕ ದಾರ್ಶನಿಕ ಇತಿಹಾಸ ತಜ್ಞರು ಶ್ರೀ ಪತಿ ಪಂಡಿತಾರಾಧ್ಯರ ಕಾಲವನ್ನು ೧೦೬೦ ಎಂದು ನಿಶ್ಚಯಿಸಿದ್ದಾರೆ. ಹೀಗೆ ೧೧ನೆಯ ಶತಮಾನದ ಶ್ರೀಕರ ಭಾಷ್ಯದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಉಲ್ಲೇಖವಿರುವುದರಿಂದ ಸಿದ್ಧಾಂತ ಶಿಖಾಮಣಿಯ ಕಾಲವು ೧೨ನೆಯ ಶತಮಾನದ ನಂತರದ್ದು ಎಂಬ ವಾದವು ಅರ್ಥ ಹೀನವಾದದ್ದು. ಇದು ಅಲ್ಲದೇ ೧೨ನೆಯ ಶತಮಾನದ ಷಟ್‌ಸ್ಥಲ ಜ್ಞಾನಿ ಚೆನ್ನಬಸವಣ್ಣನವರು

ಸಾಧಕದೆಸೆಯಲ್ಲಿ ಕುಲವನರಸಲಹುದಲ್ಲದೆ
ಸಿದ್ಧದೆಸೆಯಲ್ಲಿ ಅರಸಲಹುದೆ ?
--------------------
--------------------

ಎಂಬ ವಚನದಲ್ಲಿ–

ಶಿವಭಕ್ತಿಸಮಾವೇಶೇ ನ ಜಾತಿ ಪರಿಕಲ್ಪನಾ ।
ಇಂಧನೇಷ್ವಗ್ನಿದಗ್ಧೇಷು ಕೋವಾ ಭೇದ: ಪ್ರಕೀರ್ತ್ಯತೇ ॥

ಈ ಶ್ಲೋಕವನ್ನು ಉದಾಹರಿಸಿದ್ದಾರೆ. ಈ ಶ್ಲೋಕವು ಶ್ರೀ ಸಿದ್ಧಾಂತ ಶಿಖಾಮಣಿಯ ೧೧ನೆಯ ಪರಿಚ್ಛೆದದ ೫೫ನೆಯ ಶ್ಲೋಕವಾಗಿದೆ. ಶ್ರೀ ಸಿದ್ಧಾಂತ ಶಿಖಾಮಣಿ ಶ್ಲೋಕಗಳಿಗೆ

ಮೂಲವನ್ನು ಹೇಳಿದ ಶ್ರೀ ಇಮ್ಮಡಿ ಶಿವ ಬಸವ ಸ್ವಾಮಿಗಳು ಈ ಶ್ಲೋಕಕ್ಕೆ ಯಾವ ಮೂಲವನ್ನು ತೋರಿಸಿಲ್ಲ. ಆದ್ದರಿಂದ ಈ ಶ್ಲೋಕವು ಶ್ರೀ ಶಿವಯೋಗಿ ಶಿವಾಚಾರ್ಯರ ಸ್ವಂತ ರಚನೆಯಾಗಿದ್ದು ಈ ಶ್ಲೋಕವು ೧೨ನೆಯ ಶತಮಾನದ ಶ್ರೀ ಚೆನ್ನಬಸವಣ್ಣನವರು ತಮ್ಮ ಮೇಲಿನ ವಚನದಲ್ಲಿ ಪ್ರಮಾಣ ರೂಪವಾಗಿ ಸ್ವೀಕರಿಸಿರುವುದು ಕಂಡುಬರುತ್ತದೆ. ಆದ್ದರಿಂದ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ೧೨ನೆಯ ಶತಮಾನದ ನಂತರದ ಕೃತಿಯೆಂದು ಹೇಳಿದಕ್ಕೆ ಸರಿಯಾದ ಆಧಾರಗಳು ಇರುವುದಿಲ್ಲ. ಅಂತೆಯೇ ಶ್ರೀ ಸಿದ್ಧಾಂತ ಶಿಖಾಮಣಿಯು ೧೨ನೆಯ ಶತಮಾನಕ್ಕಿಂತಲು ಪೂರ್ವದ್ದೆಂಬುದು ಖಚಿತವಾದದ್ದು.

೩. ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಬರುವ ನೂರೊಂದು ಸ್ಥಲಗಳ ವಿವೇಚನೆಯೂ ಪ್ರಥಮ ಪರಿಕಲ್ಪನೆ ಅಲ್ಲವೆಂಬ ಶ್ರೀ ಇಮ್ಮಡಿ ಶಿವ ಬಸವ ಸ್ವಾಮಿಗಳ ೩ನೆಯ ಆಕ್ಷೇಪವು ಸಹ ನಿರಾಧಾರವಾದದ್ದು. ಇಲ್ಲಿಯವರೆಗೂ ಉಪಲಬ್ಧವಿರುವ ವೀರಶೈವ ಧರ್ಮದ ಯಾವುದೇ ಸಂಸ್ಕೃತದ ಗ್ರಂಥದಲ್ಲಾಗಲಿ ಅಥವಾ ಕನ್ನಡದಲ್ಲಿರುವ ಶರಣರ ವಚನ ಸಾಹಿತ್ಯದಲ್ಲಾಗಲಿ ನೂರೊಂದು ಸ್ಥಲಗಳ ವಿವೇಚನೆಯೂ ದೊರೆಯುವುದಿಲ್ಲ. ೧೨ನೇ ಶತಮಾನದ ಶರಣರ ಪೈಕಿ ಶ್ರೀ ಅಲ್ಲಮ ಪ್ರಭುಗಳು ತಮ್ಮ ೭೮೯ನೆಯ ವಚನದಲ್ಲಿ ಕೇವಲ ೪೭ ಲಿಂಗಸ್ಥಲಗಳ ಹೆಸರುಗಳನ್ನು ಮಾತ್ರ ಹೇಳಿದ್ದಾರೆ. ಅದರಂತೆ ಶ್ರೀ ಚೆನ್ನಬಸವಣ್ಣನವರು ತಮ್ಮ ೮೮೯ನೆಯ ವಚನದಲ್ಲಿ ನೂರೊಂದು ಸ್ಥಲಗಳ ಹೆಸರನ್ನು ಮಾತ್ರ ಉಲ್ಲೇಖಿಸಿದ್ದಾರೆ. ಆದರೆ, ಅವುಗಳ ವಿಶ್ಲೇಷಣೆಯು ಅಲ್ಲಿ ದೊರೆಯುವುದಿಲ್ಲ. ಕೇವಲ ನಾಮ ನಿರ್ದೇಶನ ಮಾಡುವುದು ಪ್ರತಿಜ್ಞೆಯಾಗುವುದಲ್ಲದೆ ಅದರ ವಿವರಣೆ ಆಗುವುದಿಲ್ಲ. ಆದ್ದರಿಂದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದ ರೀತಿಯಲ್ಲಿ ನೂರೊಂದು ಸ್ಥಲಗಳ ಪರಿಭಾಷೆ ಮತ್ತು ಅವುಗಳ ವ್ಯಾಖ್ಯಾನಗಳು ಬೇರೆಲ್ಲಿಯೂ ಸಿಗಲಿಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ನೂರೊಂದು ಸ್ಥಲಗಳ ಪ್ರಥಮ ವಿವೇಚನಕಾರನೂ ಶ್ರೀ ಶಿವಯೋಗಿ ಶಿವಾಚಾರ್ಯನೆಂತಲೆ ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಈ ವಿಷಯದಲ್ಲಿ ಡಾ|| ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು ತಮ್ಮ ಲೇಖದಲ್ಲಿ ಹೆಚ್ಚಿನ ವಿವರಣೆಯನ್ನು ಕೊಟ್ಟಿದ್ದಾರೆ. ವಿಶೇಷ ಜಿಜ್ಞಾಸುಗಳು ಅವರ ಲೇಖವನ್ನು ಅಭ್ಯಸಿಸಬಹುದು. ಇದು ಅಲ್ಲದೆ ಪ್ರಾಧ್ಯಾಪಕ ಸಂ.ಶಿ. ಭೂಸನೂರಮಠ ಮತ್ತು ಡಾ|| ಎಸ್.ಜಿ. ಘಿವಾರಿ ಇವರಿಂದ ಸಂಪಾದಿತವಾದ ಮತ್ತು ಶ್ರೀಮದ್ ವೀರಶೈವ ಶಿವಯೋಗಮಂದಿರ ಸಂಸ್ಥೆಯಿಂದ ಪ್ರಕಟಗೊಂಡ ''ವೀರಶೈವ ಸಿದ್ಧಾಂತ ಶಿಖಾಮಣಿ'' ಎಂಬ ಗ್ರಂಥದ ಉಪೋದ್ಘಾತ ಭಾಗದಲ್ಲಿ ಪುಟ ಸಂಖ್ಯೆ ೨೭ರಲ್ಲಿ – ''ಶ್ರೀ ಸಿದ್ಧಾಂತ ಶಿಖಾಮಣಿ ೫ರಿಂದ ೨೧ನೆಯ ಪರಿಚ್ಛೇದಗಳಲ್ಲಿ ರೇಣುಕಾಚಾರ್ಯರಿಂದ ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಿಸಿದ ವೀರಶೈವದ ತತ್ತ್ವೋಪದೇಶವು ಸುವ್ಯವಸ್ಥಿತವಾಗಿ ನಿರೂಪಿತವಾಗಿದೆ. ಈ ೧೬ ಪರಿಚ್ಛೇದಗಳಲ್ಲಿ ಷಟ್ ಸ್ಥಲಾಂತರ್ಗತವಾದ ನೂರೊಂದು ಅವಾಂತರ ಸ್ಥಲಗಳ ವಿವೇಚನೆ ಮಾಡಲಾಗಿದೆ. ೪೪ ಅಂಗಸ್ಥಲಗಳು ಮತ್ತು ೫೭

ಲಿಂಗಸ್ಥಲಗಳು ಒಟ್ಟಿಗೆ ಏಕೋತ್ತರ ಶತಸ್ಥಲದ ವಿವರಣೆಯನ್ನು ಪ್ರಪ್ರಥಮವಾಗಿ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಕೊಡಲಾಗಿದೆ.'' ಎಂಬುದಾಗಿ ವಚನ ಶಾಸ್ತ್ರದ ಪ್ರಗಾಢ ಅಭ್ಯಾಸಕರಾದ ಸಂ. ಶಿ. ಭೂಸನೂರಮಠ ಅವರೇ ಒಪ್ಪಿಕೊಂಡಿರುವುದನ್ನು ಇಲ್ಲಿ ಮುಖ್ಯವಾಗಿ ಪರಿಗಣಿಸಬೇಕು. ಆದ್ದರಿಂದ ನೂರೊಂದು ಸ್ಥಲಗಳ ಪ್ರಪ್ರಥಮ ವಿವೇಚನೆಯೂ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಬಂದಿದೆ ಎಂಬುದು ಸರ್ವಸಮ್ಮತವಾದ ವಿಚಾರವು.

ಇದರಂತೆ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳವರ ಮೇಲಿನ ಮೂರುವಾದ ಗಳನ್ನು ಶಾಸ್ತ್ರೀಯವಾಗಿ ಖಂಡಿಸಲು ಬೆಂಗಳೂರು ವಿಶ್ವವಿದ್ಯಾಲಯದ ಡಾ|| ಎಂ. ಶಿವಕುಮಾರ ಸ್ವಾಮಿಗಳವರು ಸಹ ಪ್ರಯತ್ನ ಪಟ್ಟಿದ್ದಾರೆ. ಅವರು ಶ್ರೀ ಸ್ವಾಮಿಗಳವರ ನಿಜದ ನಿಲುವು ಗ್ರಂಥಕ್ಕೆ ಒಂದು ಪ್ರತಿಕ್ರಿಯೆ ಎಂಬ ಶೀರ್ಷಿಕೆಯ ಒಂದು ಲೇಖವನ್ನು ಬರೆದಿದ್ದಾರೆ. ಆ ಲೇಖದಲ್ಲಿಯೂ ಸಹ ಶ್ರೀ ಸ್ವಾಮಿಗಳವರ ಮೂರು ವಾದಗಳು ಖಂಡಿಸಲ್ಪಟ್ಟಿವೆ. ಆದ ಕಾರಣ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳ ನಿಜದ ನಿಲುವು ಎಂಬ ಗ್ರಂಥವು ತತ್ತ್ವ ಜಿಜ್ಞಾಸು ಪರವಾದುದಲ್ಲ. ಆದ ಕಾರಣ ಆ ಗ್ರಂಥದ ಬಗ್ಗೆ ಹೆಚ್ಚಿನ ಗಮನ ಹರಿಸುವುದು ಯೋಗ್ಯವಲ್ಲವೆಂದು ತಿಳಿದು ಇಲ್ಲಿ ಸೂಚ್ಯವಾಗಿ ಶ್ರೀ ಸ್ವಾಮೀಜಿ ಅವರ ವಿಚಾರಗಳ ಸೂಕ್ತಾಸೂಕ್ತತೆ ಬಗ್ಗೆ ಸ್ವಲ್ಪನ್ನು ವಿವೇಚಿಸಲಾಗಿದೆ.

ಇತ್ತೀಚಿನ ದಿನಮಾನಗಳಲ್ಲಿ ಸಂಸ್ಕೃತ ಭಾಷೆಯ ಅಧ್ಯಯನವಿಲ್ಲದ ಮತ್ತು ಪೂರ್ವಗ್ರಹಪೀಡಿತರಾದ ಅನೇಕ ಜನ ವಿದ್ವಾಂಸರು ಶ್ರೀ ಸಿದ್ಧಾಂತ ಶಿಖಾಮಣಿಯ ಕಾಲದ ಬಗ್ಗೆ ಅಸಂಬದ್ಧ ಪ್ರಲಾಪವನ್ನು ಮಾಡುತ್ತಿರುವುದನ್ನು ನೋಡಿದರೆ ಅತ್ಯಂತ ಸೋಜಿಗವೆನಿಸುತ್ತದೆ. ಯಾವಾಗಲೂ ವಿದ್ವಾಂಸರಾದವರು ಪೂರ್ವಗ್ರಹ ಪೀಡಿತರಾಗದೆ ಸಂಶೋಧನೆಯ ದೃಷ್ಟಿಯುಳ್ಳವರಾಗಿರಬೇಕು. ಇದರಿಂದ ತಮ್ಮ ಬುದ್ಧಿಯ ವಿಕಾಸವಾಗುವುದಲ್ಲದೆ ಜನಸಾಮಾನ್ಯರಿಗೆ ಅಂಥವರಿಂದ ಯೋಗ್ಯ ಮಾರ್ಗದರ್ಶನ ವಾಗುವ ಸಾಧ್ಯತೆಯಿರುತ್ತದೆ. ಯಾವಾಗಲೂ ವಿದ್ವಾಂಸರಾದವರು ವ್ಯಕ್ತಿ ಸಿದ್ಧಾಂತ ಮತ್ತು ಭಾಷೆಗಳ ಬಗ್ಗೆ ಮಾತ್ಸರ್ಯಭಾವನೆಯಿಲ್ಲದವರಾಗಿರಬೇಕು. ಅಂದಾಗಲೇನೇ ಸರ್ವಗ್ರಾಹ್ಯವಾದ ಮತ್ತು ಸಮನ್ವಯಾತ್ಮಕವಾದ ವಿಚಾರವು ಹೊರಹೊಮ್ಮಲು ಸಾಧ್ಯವಾಗುತ್ತದೆ. ಇಂತಹ ಗುಣಸಂಪನ್ನತೆ ಇಲ್ಲದ ವಿದ್ವಾಂಸರು ತಮ್ಮ ಬುದ್ಧಿಯಿಂದ ತಾವು ವಂಚಿತರಾಗುವರಲ್ಲದೆ ಜನಸಾಮಾನ್ಯರನ್ನೂ ಸಹ ಪಥ–ಭ್ರಷ್ಟರನ್ನಾಗಿ ಮಾಡುತ್ತಾರೆ. ಇಂಥವರಲ್ಲಿ ಸುಧಾರಣೆಯಾಗಬೇಕಾದದ್ದು ಅತ್ಯವಶ್ಯಕವಾಗಿರುತ್ತದೆ.

### ಶಿವಯೋಗಿ ಶಿವಾಚಾರ್ಯರ ದೇಶವಿಚಾರ

ಶ್ರೀ ಸಿದ್ಧಾಂತ ಶಿಖಾಮಣಿಯ ಕರ್ತೃವಾದ ಶ್ರೀ ಶಿವಯೋಗಿ ಶಿವಾಚಾರ್ಯರು ಗ್ರಂಥದಲ್ಲಿ ಹೇಳಿದ ತಮ್ಮ ವಂಶವರ್ಣನೆಯಲ್ಲಿ ಅದೆಲ್ಲಿಯೂ ತಮ್ಮ ಜನ್ಮಸ್ಥಾನದ ಬಗ್ಗೆ ಉಲ್ಲೇಖವನ್ನು ಮಾಡಿರುವುದಿಲ್ಲ. ಆದರೂ ಇವರ ವಂಶದಲ್ಲಿ ಬಂದಿರುವ

ಶಿವಯೋಗಿ, ಮುದ್ದದೇವ, ಸಿದ್ಧನಾಥ ಮುಂತಾದ ಹೆಸರುಗಳ ಆಧಾರದಿಂದ ಇವರು ಕರ್ನಾಟಕ ಪ್ರಾಂತದವರಿರಬಹುದೆಂಬುದಾಗಿ ಲಿಂ|| ಪಂಡಿತ ಕಾಶೀನಾಥ ಶಾಸ್ತ್ರೀಗಳವರ ಅಭಿಪ್ರಾಯವಾಗಿದೆ. ಇನ್ನು ಡಾ|| ಜ.ಚ.ನಿ. ಎಂಬ ಕಾವ್ಯನಾಮದಿಂದ ಕನ್ನಡ ಸಾಹಿತ್ಯದಲ್ಲಿ ಸುಪ್ರಸಿದ್ಧರಾಗಿದ್ದ ನಿಡುಮಾಮಿಡಿಯ ಶ್ರೀ ಚೆನ್ನಬಸವ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳವರು 'ಶ್ರೀ ಶಿವಯೋಗಿ ಶಿವಾಚಾರ್ಯರು ಕರ್ನಾಟಕದ ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ಬರುವ ಸಾಲೋಟಗಿ ಗ್ರಾಮದಲ್ಲಿ ಅತ್ಯಂತ ಪ್ರಾಚೀನಕಾಲದಲ್ಲಿದ್ದ ಸಂಸ್ಕೃತ ವಿದ್ಯಾಪೀಠದ ಮಹಾಮಹೋಪಾಧ್ಯಾಯರಾಗಿದ್ದರೆಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಸಾಲೋಟಗಿ ಗ್ರಾಮದಲ್ಲಿ ಇಂದಿಗೂ ಆ ವಿದ್ಯಾಪೀಠದ ಅವಶೇಷಗಳನ್ನು ಕಾಣಬಹುದಾಗಿದೆ. ಇದೂ ಅಲ್ಲದೆ ಆ ಸಾಲೋಟಗಿ ಗ್ರಾಮದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಜಂಗಮ ಪರಿವಾರಗಳು ಇಂದಿಗೂ ಇರುವುದನ್ನು ಕಾಣುತ್ತೇವೆ. ಇದರಿಂದ ತಿಳಿದು ಬರುವುದೇನೆಂದರೆ, ಅಂದು ವೇದಾಗಮಗಳ ಅಧ್ಯಯನಕ್ಕಾಗಿ ಜಂಗಮ ವಟುಗಳು ಶಾಸ್ತ್ರಾಧ್ಯಯನವನ್ನು ಮಾಡಿ ವಿದ್ವಾಂಸರಾಗಿ ಕೊನೆಗೆ ಅಲ್ಲಿಯ ಆ ವಿದ್ಯಾ ಪೀಠದಲ್ಲಿ ಶಿಕ್ಷಕರಾಗಿ ಉಳಿದುಕೊಂಡಿರಬಹುದು. ಆದ ಕಾರಣ ಇಷ್ಟೊಂದು ಜಂಗಮ ಪರಿವಾರಗಳು ಅಲ್ಲಿ ನೆಲೆಸಿರಲು ಕಾರಣವಾಗಿರಬಹುದೆಂದು ಊಹಿಸಬಹುದಾಗಿದೆ.

ಸಾಲೋಟಗಿ ಗ್ರಾಮದಲ್ಲಿ ಊರ ಹೊರಗೆ ಒಂದು ಶಿವಯೋಗೀಶ್ವರರ ಸಮಾಧಿ ಇರುವುದನ್ನು ಕಾಣಬಹುದಾಗಿದೆ. ಆದರೆ ಈ ಸಮಾಧಿಯು ಆ ಪ್ರಾಚೀನ ಶಿವಯೋಗಿ ಶಿವಾಚಾರ್ಯರ ಸಮಾಧಿಯಾಗಿರದೆ ಅವರ ಹೆಸರನ್ನೇ ಇಟ್ಟುಕೊಂಡಿರುವ ಇತ್ತೀಚಿನ ಒಬ್ಬ ಶರಣರ ಸಮಾಧಿಯಾಗಿದೆಯೆಂದು ಅಧಿಕೃತವಾಗಿ ನಾವು ಹೇಳಬಯಸುತ್ತೇವೆ. ಈ ಸಾಲೋಟಗಿ ಗ್ರಾಮದಲ್ಲಿ ಈ ವಿಷಯಕವಾಗಿ ಸಂಶೋಧಕರು ಇನ್ನೂ ಹೆಚ್ಚಿನ ಸಂಶೋಧನೆಯನ್ನು ಮಾಡಬೇಕಾದ ಆವಶ್ಯಕತೆ ಇದೆ.

### ಶ್ರೀ ರೇಣುಕಾಗಸ್ತ್ಯರ ಐತಿಹ್ಯ

ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ರೇಣುಕಾಗಸ್ತ್ಯ ಸಂವಾದ ರೂಪವಾಗಿ ವಿರಚಿಸಿದ್ದಾರೆ. ಆದ್ದರಿಂದ ಈ ರೇಣುಕಾಗಸ್ತ್ಯರ ವಿಷಯಕವಾಗಿಯೂ ತಿಳಿದುಕೊಳ್ಳುವುದು ಅತ್ಯವಶ್ಯಕವಾದುದಾದ್ದರಿಂದ ಕೆಲವೊಂದು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲಾಗುತ್ತದೆ.

### ಶ್ರೀ ಜಗದ್ಗುರು ರೇಣುಕಾಚಾರ್ಯರು

ವೀರಶೈವ ಮಹಾಮತದ ದ್ವಾಪರಯುಗದ ಪಂಚಾಚಾರ್ಯರೆಂದು ಪ್ರಸಿದ್ಧರಾದ ಶ್ರೀ ರೇಣುಕ, ಶ್ರೀ ದಾರುಕ, ಶ್ರೀಘಂಟಾಕರ್ಣ, ಶ್ರೀ ಧೇನುಕರ್ಣ ಮತ್ತುಶ್ರೀ ವಿಶ್ವಕರ್ಣ ರೆಂಬ ಪಂಚ ಆಚಾರ್ಯರಲ್ಲೊಬ್ಬರಾದವರೇ ಶ್ರೀ ಜಗದ್ಗುರು ರೇಣುಕಾಚಾರ್ಯರು. ಇವರು ಶಿವನ ಆದೇಶದ ಮೇರೆಗೆ ವೀರಶೈವ ಮಹಾಮತವನ್ನು ಸಂಸ್ಥಾಪಿಸಲೋಸುಗ ಆಂಧ್ರಪ್ರದೇಶದ ಕೊಲ್ಲಿಪಾಕಿ ಶ್ರೀ ಸೋಮೇಶ್ವರ ಮಹಾಲಿಂಗದಿಂದ ಫಾಲ್ಗುಣಮಾಸದ ಶುಕ್ಲಪಕ್ಷದ ತ್ರಯೋದಶಿಯಂದು ಆವಿರ್ಭೂತರಾದರು. ಅಂತೆಯೇ ಅಂದಿನಿಂದ

ಇಂದಿನವರೆಗೆ ಶ್ರೀ ರಂಭಾಪುರಿ ಮಹಾಪೀಠದಲ್ಲಿ ಪ್ರತೀವರ್ಷ ಆ ಮಹೂರ್ತದಂದು ಶ್ರೀ ಜಗದ್ಗುರು ರೇಣುಕಾಚಾರ್ಯರ ಜಯಂತಿ ಅರ್ಥಾತ್ ಪ್ರಾಕಟ್ಯ ಮಹೋತ್ಸವವನ್ನು ಆಚರಿಸುತ್ತ ಬಂದಿದ್ದಾರೆ.

ಶ್ರೀ ಜಗದ್ಗುರು ರೇಣುಕಾಚಾರ್ಯರು ಕೊಲ್ಲಿಪಾಕಿಯ ಸೋಮೇಶ್ವರ ಮಹಾ ಲಿಂಗದಿಂದ ಆವಿರ್ಭೂತರಾಗಿ, ಅಲ್ಲಿಯ ಜನರಿಗೆ ತನ್ನ ಆವಿರ್ಭಾವದ ಕಾರಣವನ್ನರುಹಿ, ಅಲ್ಲಿಂದ ಆಕಾಶಮಾರ್ಗವಾಗಿ ಮಲಯ ಪರ್ವತಕ್ಕೆ ಬಂದು, ಅಲ್ಲಿದ್ದ ಅಗಸ್ತ್ಯ ಮಹರ್ಷಿ ಯಿಂದ ಪೂಜೆಗೊಂಡು, ಕುಶಲ ವಾರ್ತಾಲಾಪದನಂತರ ಅಗಸ್ತ್ಯ ಮಹರ್ಷಿಯ ಮನಸ್ಸಿನಲ್ಲಿರುವ ದ್ವೈತಾದ್ವೈತ ವಿಷಯಕವಾದ ಸಂದೇಹವನ್ನು ದೂರಮಾಡುವುದಕ್ಕಾಗಿ ಏಕೋತ್ತರ ಶತಸ್ಥಲಾತ್ಮಕವಾದ ಶ್ರೀ ಶಿವಾದ್ವೈ ೖತ ಸಿದ್ಧಾಂತವನ್ನು ಉಪದೇಶಿಸಿದರು. ಅವರು ಮಾಡಿದ ಆ ಉಪದೇಶವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ಸಂಗ್ರಹಿಸಿ ಶ್ರೀ ಸಿದ್ಧಾಂತ ಶಿಖಾಮಣಿಯ ಗ್ರಂಥರೂಪದಲ್ಲಿ ಉಪಲಬ್ಧ ಮಾಡಿಕೊಂಡಿದ್ದಾರೆ.

ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಗೆ ಶಿವಾದ್ವೈತ ಸಿದ್ಧಾಂತವನ್ನು ಉಪದೇಶಮಾಡಿದ ನಂತರ ವಿಭೀಷಣನ ಅಭೀಷ್ಟ ಸಿದ್ಧಿಗೋಸುಗ ಲಂಕೆಗೆ ದಯಮಾಡಿಸಿ ರಾವಣನು ಸಂಕಲ್ಪಿಸಿದ ನವಕೋಟಿ ಶಿವಲಿಂಗಗಳ ಪ್ರತಿಷ್ಠಾಪನೆಯಲ್ಲಿ ಉಳಿದಿರುವ ಮೂರು ಕೋಟಿ ಶಿವಲಿಂಗಗಳನ್ನು ಏಕಕಾಲದಲ್ಲಿಯೇ ಮೂರುಕೋಟಿ ಗುರುರೂಪವನ್ನು ಧಾರಣಮಾಡಿ ಸಂಸ್ಥಾಪಿಸಿ ರಾವಣನ ಸಂಕಲ್ಪವನ್ನು ಪೂರ್ಣಗೊಳಿಸಿ ವಿಭೀಷಣನಿಗೆ ಅನುಗ್ರಹವನ್ನುಂಟು ಮಾಡಿ ಅಲ್ಲಿಂದ ಅಂತರ್ಧಾನರಾಗುತ್ತಾರೆ.

ಈ ಪ್ರಕಾರವಾಗಿ ಅತ್ಯಂತ ಮಹಿಮಾಸಂಪನ್ನರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು, ಭೂಲೋಕದಲ್ಲಿ ಕೆಲವು ವರ್ಷ ಗುಪ್ತವಾಗಿ, ಕೆಲವು ವರ್ಷ ಪ್ರಕಟವಾಗಿ, ಸರ್ವತ್ರ ಸಂಚರಿಸಿ ಅನೇಕ ಜನರನ್ನು ಕೇವಲ ತಮ್ಮ ಕೃಪಾಕಟಾಕ್ಷದಿಂದ ಕೃತಾರ್ಥರನ್ನಾಗಿಸುತ್ತ ಮತ್ತೆ ಕೆಲವರನ್ನು ಶಿವಾದ್ವೈತಜ್ಞಾನೋಪದೇಶದ ಮೂಲಕ ಶಿವಜ್ಞಾನಿಗಳನ್ನಾಗಿಸುತ್ತ ದುರಾಚಾರಿಗಳಾದ ಪಾಖಂಡಿಗಳನ್ನು ಖಂಡಿಸತ್ತ ವೀರಶೈವ ಸಿದ್ಧಾಂತವನ್ನು ಭೂಲೋಕದಲ್ಲಿ ಪ್ರತಿಷ್ಠಾಪಿಸಿ, ತಮ್ಮ ಅವತಾರದ ಪ್ರಯೋಜನವು ಪೂರ್ಣವಾದ ಬಳಿಕ ಪುನಃ ಕೊಲ್ಲಿಪಾಕಿಯ ಶ್ರೀಸೋಮೇಶ್ವರ ದೇವಸ್ಥಾನಕ್ಕೆ ದಯಮಾಡಿಸುತ್ತಾರೆ. ಅಲ್ಲಿ ಶಿವನನ್ನು ವಿಧಿವತ್ತಾಗಿ ಪ್ರಾರ್ಥಿಸಿ ಪುನಃ ಶಿವನ ಆದೇಶದ ಮೇರೆಗೆ ಆ ಸೋಮೇಶ್ವರ ಲಿಂಗದಲ್ಲಡಗಿ ಶಿವಸಾನ್ನಿಧ್ಯವನ್ನು ಪಡೆದುಕೊಳ್ಳುತ್ತಾರೆ.

## ಲಿಂಗೋದ್ಭವ ಲೀಲಾವಿಮರ್ಶೆ

ಶಿವನ ಪ್ರಮುಖ ಗಣರಾದ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣರು ಶಿವನಷ್ಟೇ ಮಹಿಮಾಸಂಪನ್ನರಾಗಿರುತ್ತಾರೆ. ಆದ್ದರಿಂದ ಅವರು ಭೂಲೋಕದಲ್ಲಿ ಜನಸಾಮಾನ್ಯರಂತೆ ಜನಿಸಿ ಬರದೆ ಶಿವನ ಅಪ್ಪಣೆಯ ಮೇರೆಗೆ ಲಿಂಗೋದ್ಭವರಾಗಿ ಬಂದಿರುವ ವಿಷಯವು ಶಿವಾಗಮಗಳಲ್ಲಿ ಮತ್ತು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿಸಲ್ಪಟ್ಟಿರುತ್ತದೆ. ಮಹಿಮಾಶಾಲಿಗಳ ಈ ವಿಧವಾದ

ಆವಿರ್ಭಾವಕ್ಕೆ ಆಶ್ಚರ್ಯಪಡಬೇಕಾದುದೇನಿಲ್ಲ, ಭಕ್ತ ಪ್ರಹ್ಲಾದನಿಗಾಗಿ ವಿಷ್ಣು ಭಗವಂತನು ಕಂಬದಲ್ಲಿ ಆವಿರ್ಭವಿಸಿದ ವಿಷಯವು ಮತ್ತು ಭಕ್ತಮಾರ್ಕಂಡೇಯನಿಗಾಗಿ ಶಿವನು ಶಿವಲಿಂಗದಿಂದ ಪ್ರಕಟವಾದುದು ಸರ್ವಜನ ವೇದ್ಯ ವಿಷಯವಾಗಿದೆ. ಹೀಗಿರುವಾಗ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗಾವಿರ್ಭಾವಕ್ಕೆ ಶಂಕಿಸುವ ಅವಶ್ಯಕತೆಯಿರುವುದಿಲ್ಲ. ಆಚಾರ್ಯರ ಲಿಂಗಾವಿರ್ಭಾವವನ್ನು ಕರ್ನಾಟಕದ ಶರಣರು ತಮ್ಮ ವಚನಗಳಲ್ಲಿ ವಿವರಿಸಿದ್ದನ್ನು ಕಾಣಬಹುದಾಗಿದೆ. ಅಕ್ಕಮಹಾದೇವಿಯು–

ಲಿಂಗದಿಂದುದಯಿಸಿ ಅಂಗವಿಡಿದಿಪ್ಪ ಪುರಾತನರ
ಇಂಗಿತವನೇನೆಂದು ಬೆಸಗೊಂಬಿರಯ್ಯಾ ?
ಅವರ ನಡೆಯೇ ಆಗಮ, ಅವರ ನುಡಿಯೇ ವೇದ,
ಅವರ ಲೋಕದ ಮಾನವರೆಂದೆನ್ನಬಹುದೇ !
ಅದೆಂತೆಂದೊಡೆ -
ವೃಕ್ಷಾದ್ಭವಂತಿ ಬೀಜಾನಿ ತದ್ವೃಕ್ಷೇ ಲೀಯತೇ ಪುನಃ
ರುದ್ರಲೋಕಂ ಪರಿತ್ಯಜ್ಯ ಶಿವಲೋಕೇ ಭವಿಷ್ಯತಿ
ಎಂದುದಾಗಿ
ಅಂಕೋಲೆಯ ಬೀಜದಿಂದಾಯಿತ್ತು ವೃಕ್ಷವು
ಆ ವೃಕ್ಷವು ಮರಳಿ ಬೀಜದೊಳಡಗಿತ್ತು.
ಆ ಪ್ರಕಾರದಿಂದ ಲಿಂಗದೊಳಗಿದ್ದ ಪುರಾತನರು
ಆ ಲಿಂಗದೊಳಗೆ ಬೆರೆಸಿದರು ನೋಡಿರಯ್ಯಾ !
ಇಂತಪ್ಪ ಪುರಾತನರಿಗೆ ನಾನು ಶರಣೆಂದು
ಹುಟ್ಟುಗೆಟ್ಟೆನಯ್ಯಾ ಚೆನ್ನಮಲ್ಲಿಕಾರ್ಜುನಾ !

ಈ ತನ್ನ ವಚನದಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯರು, ಲಿಂಗಾವಿರ್ಭಾವ ಮತ್ತು ಆ ಲಿಂಗದಲ್ಲಿಯೇ ಅಡಗಿದ ವಿಷಯವನ್ನು ಬೀಜವೃಕ್ಷದ ದೃಷ್ಟಾಂತದಿಂದ ವಿವರಿಸಿದ್ದನ್ನಿಲ್ಲಿ ಕಾಣಬಹುದು. ಬೀಜದಿಂದ ವೃಕ್ಷವು ಉದ್ಭವಿಸುವುದಲ್ಲದೆ ಆ ವೃಕ್ಷವು ಪುನಃ ಬೀಜದಲ್ಲಿ ಅಡಗುವ ನೈಸರ್ಗಿಕ ಸ್ಥಿತಿಯನ್ನು ಸರ್ವರೂ ಸಹಜವಾಗಿ ಕಾಣುವುದುಂಟು. ಹೀಗೆ ಸರ್ವಾನುಭವಸಿದ್ಧವಾದ ಮತ್ತು ಸುಪ್ರಸಿದ್ಧವಾದ ಬೀಜ–ವೃಕ್ಷ ನ್ಯಾಯದಿಂದ ಪಂಚಾಚಾರ್ಯರ ಲಿಂಗಾವಿರ್ಭಾವವನ್ನು ಲೋಕಕ್ಕೆ ತಿಳಿಯಪಡಿಸಿ ಅಂತಹ ಆ ಲಿಂಗಾವತಾರಿಗಳು ನಡೆದದ್ದೇ ಆಗಮ ಮತ್ತು ನುಡಿದದ್ದೇ ವೇದವೆಂಬುದಾಗಿ ಹೇಳಿ ಅವರಿಗೆ ತಾನು ಶರಣಾಗಿ ತನ್ನ ಭವವನ್ನು ಕಳೆದುಕೊಂಡ ವಿಚಾರವನ್ನರುಹಿ ಜಗದ್ಗುರು ಪಂಚಾಚಾರ್ಯರ ಮಹಿಮಾತಿಶಯವನ್ನು ಅಕ್ಕಮಹಾದೇವಿಯು ತಿಳಿಯ ಪಡಿಸಿದ್ದಾಳೆ.

ಇದೇ ಪ್ರಕಾರವಾಗಿ ಅನಾದಿತೋಂಟದ ಸಿದ್ಧಲಿಂಗರೂ ಸಹ–

ಆದಿಯಲ್ಲಿ ಶಿವತತ್ತ್ವದಲ್ಲಿ ರೇಣುಕನುದಯನಾಗದಿದ್ದರೆ
ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತೋ
ಆ ಶಿವಲಿಂಗದಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ
ರೇವಣಸಿದ್ಧೇಶ್ವರನು ಅನಾದಿಮುಕ್ತನಲ್ಲ
ಅವಾಂತರಮುಕ್ತನೆಂಬ ಅಜ್ಞಾನಿಗಳಿಗೆ ನಾಯಕನರಕ ತಪ್ಪದು.

ಈ ತಮ್ಮ ವಚನದಲ್ಲಿ ಶ್ರೀ ಜಗದ್ಗುರು ರೇಣುಕರ ಹಾಗೂ ರೇವಣ ಸಿದ್ಧೇಶ್ವರರ ನಾಮೋಲ್ಲೇಖವನ್ನು ಮಾಡಿ ಅವರು ಲಿಂಗದಿಂದಾವಿರ್ಭವಿಸಿ, ಕೊನೆಗೆ ಲಿಂಗದಲ್ಲಿಯೇ ಅಡಗಿದ ವಿಷಯವನ್ನು ಸುಸ್ಪಷ್ಟವಾಗಿ ತಿಳಿಯಪಡಿಸುತ್ತ ಅನಾದಿಮುಕ್ತರಾದ ಅವರನ್ನು ಅವಾಂತರಮುಕ್ತರೆಂದು ಯಾರಾದರೂ ಕರೆದರೆ ಅಂಥವರಿಗೆ ಘೋರವಾದ ರೌರವ ನರಕವು ಪ್ರಾಪ್ತವಾಗದೇ ಇರದೆಂಬ ವಿಚಾರವನ್ನು ಸುಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ.

ಹೀಗೆ ಶಿವಶರಣ ಶಿವಶರಣೆಯರು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಲಿಂಗಾವಿರ್ಭಾವಾದಿ ವಿಷಯಗಳನ್ನು ಜನಸಾಮಾನ್ಯರಿಗೆ ತಿಳಿಯಪಡಿಸಿ ಇದರ ಮುಖಾಂತರ ಅವರಲ್ಲಿರುವ ತಮ್ಮ ಭಕ್ತಿಯನ್ನೂ ಸಹ ವ್ಯಕ್ತಪಡಿಸಿದ್ದನ್ನು ನೋಡಿದರೆ, ಶ್ರೀ ಜಗದ್ಗುರು ಪಂಚಾಚಾರ್ಯರು ಎಂತಹ ಮಹಿಮಾನ್ವಿತರಾಗಿದ್ದರೆಂಬುದು ತಿಳಿದು ಬರುತ್ತದೆ. ಇದೂ ಅಲ್ಲದೆ ಸುಪ್ರಭೇದಾಗಮ, ಸ್ವಯಂಭುವಾಗಮ ಮತ್ತು ವೀರಲೈಂಗ್ಯೋಪನಿಷತ್ ಮುಂತಾದ ಆಗಮೋಪನಿಷತ್ತುಗಳಲ್ಲಿಯೂ ಸಹ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗೋದ್ಭವ ವಿಷಯವು ಪ್ರತಿಪಾದಿಸಲ್ಪಟ್ಟಿರೋಣದರಿಂದ ಇದನ್ನು ಸರ್ವರೂ ಶ್ರದ್ಧೆಯಿಂದ ಒಪ್ಪಿಕೊಳ್ಳಬೇಕು.

ಲಿಂಗಾವತಾರಾದಿ ವಿಷಯಗಳು ಜನಸಾಮಾನ್ಯರ ದೃಷ್ಟಿಯಲ್ಲಿ ಆಶ್ಚರ್ಯಕರವಾಗಿ ತೋರುತ್ತಿದ್ದರೂ, ಯೋಗಿಗಳ ದೃಷ್ಟಿಯಲ್ಲಿ ಅದೊಂದು ಸಹಜವಾದ ಘಟನೆಯು. ತತೋಣಿಮಾದಿ ಪ್ರಾದುರ್ಭವಃ ಕಾಯಸಂಪತ್ ತದ್ಧರ್ಮಾಭಿಘಾತಶ್ಚ (ಯೋ. ಸೂ. ೩–೪೫ ಭೋಜ್ಯವೃತ್ತಿ) ಎಂಬ ಭೋಜದೇವನ ಈ ವೃತ್ತಿಯಲ್ಲಿ ಯೋಗ ಸಾಮರ್ಥ್ಯ ದಿಂದ ಪಂಚಮಹಾಭೂತಗಳನ್ನು ವಶಪಡಿಸಿಕೊಂಡಿರುವ ಯೋಗಿಗಳಿಗೆ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ ಮತ್ತು ವಶಿತ್ವಗಳೆಂಬ ಅಷ್ಟಸಿದ್ಧಿಗಳು ಸಹಜವಾಗಿ ಪ್ರಾಪ್ತವಾಗಿರುತ್ತವೆಂಬ ವಿಷಯವನ್ನು ಭೋಜದೇವನು ವಿವರಿಸಿದ್ದಾನೆ. ಅಂದರೆ ಯೋಗಸಿದ್ಧಿಯನ್ನು ಪಡೆದ ಮಹಾಪುರುಷರು ಪರಮಾಣುವಿ ನಂತೆ ಅತಿಸೂಕ್ಷ್ಮವಾದ ಆಕಾರವನ್ನು ತಾಳುವರಲ್ಲದೆ ಆಕಾಶದಷ್ಟು ವಿಶಾಲವಾದ ಸ್ವರೂಪವನ್ನು ಸಹ ತಾಳಬಲ್ಲರು. ಅವರು ಅರಳೆಯಂತೆ ಅತಿ ಹಗುರಾಗಲೂಬಹುದು ಮತ್ತು ಪ್ರಚಂಡ ಪರ್ವತದಂತೆ ಸಂಕಲ್ಪಿಸಿದ ಹಾಗೆ ಶರೀರವನ್ನು ಧರಿಸುವ ಸಾಮರ್ಥ್ಯವನ್ನು ಪಡೆದುಕೊಂಡವರಾಗಿರುತ್ತಾರೆ. ಅವರು ಸರ್ವತಂತ್ರ ಸ್ವತಂತ್ರರಾಗಿರೋಣದರಿಂದ ಅವರು ಮಾಡುವ ವ್ಯವಹಾರದ ಬಗ್ಗೆ ಅದಾರೂ ಪ್ರಶ್ನೆ ಮಾಡಲಾಗುವುದಿಲ್ಲ.

ಇಂತಹ ಯೋಗಸಿದ್ಧರು ಅತಿ ಕಠಿಣವಾದ ವಜ್ರವನ್ನೂ ಸಹ ಪ್ರವೇಶಿಸಿ ಹೊರಬರಬಲ್ಲರು. ಯೋಗಿಗಳ ಈ ಸಾಮರ್ಥ್ಯವನ್ನು ಶ್ರೀ ಸ್ವಾಮಿ ವಿವೇಕಾನಂದರು– "The yogees and saints of India can enter into diamond also by their phantastic power of Yoga". ಹೀಗೆ ವರ್ಣಿಸಿದ್ದಾರೆ. ಜನಸಾಮಾನ್ಯರಿಗೆ ಅಸಾಧ್ಯವೆನಿಸುವ ಘಟನೆಗಳು ಇವರಿಗೆ ಸುಲಭಸಾಧ್ಯಗಳಾಗಿರುತ್ತವೆ. ಈ ತೆರನಾಗಿ ಯೋಗ ಸಾಧನೆಯನ್ನು ಮಾಡಿದವರಿಗೆ ಇಷ್ಟೊಂದು ಸಾಮರ್ಥ್ಯವಿರುವಾಗ ಸಹಜಯೋಗಿಗಳೂ

ಶಿವನಷ್ಟೇ ಸಾಮರ್ಥ್ಯಶಾಲಿಗಳೂ ಆದ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗಾವಿರ್ಭಾವವು ಅವರ ದೃಷ್ಟಿಯಲ್ಲಿ ಅದೊಂದು ಸಹಜವಾದ ಘಟನೆಯಾಗಿರುತ್ತದೆ. ನಮ್ಮ ದೇಶದ ಯೋಗ ತಂತ್ರ ಮತ್ತು ಜ್ಯೋತಿಷ್ಯಾದಿ ಗೂಢವಿದ್ಯೆಗಳು ಅಭ್ಯಾಸದ ಅಭಾವದ ಮೂಲಕವಾಗಿ ಲುಪ್ತವಾಗುತ್ತಿರೋಣದರಿಂದ ಮಹಾಪುರುಷರ ದಿವ್ಯ ಚರಿತ್ರೆಯನ್ನು ತಿಳಿದುಕೊಳ್ಳುವುದು ಇಂದು ಪಾಮರಜೀವಿಗಳಿಗೆ ಕಠಿಣವಾಗಿ ತೋರುತ್ತಿದೆ.

ಹೀಗೆ ಆಗಮ, ಉಪನಿಷತ್ತು ಮತ್ತು ಶರಣರ ವಚನಗಳಲ್ಲಿ ಬರುವ ಉಲ್ಲೇಖನಗಳ ಮೂಲಕವಾಗಿ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗಾವಿರ್ಭಾವವು ಸುಸ್ಪಷ್ಟವಾಗಿ ಸಿದ್ಧವಾಗುತ್ತಿರುವಾಗ ಅದರ ಬಗ್ಗೆ ಅಶ್ರದ್ಧೆ ಹಾಗೂ ಸಂದೇಹಾದಿಗಳನ್ನು ತಾಳಿಕೊಳ್ಳಲು ಅವಕಾಶವೇ ಇರುವುದಿಲ್ಲ.

**ಶ್ರೀ ಅಗಸ್ತ್ಯ ಮಹರ್ಷಿಯ ದೇಶಕಾಲ ವಿಚಾರ :**

ಶ್ರೀ ಸಿದ್ಧಾಂತ ಶಿಖಾಮಣಿಯು ರೇಣುಕಾಗಸ್ತ್ಯ ಸಂವಾದರೂಪವಾಗಿ ರೋಣದರಿಂದ ಶ್ರೀ ರೇಣುಕರ ಬಗ್ಗೆ ತಿಳಿದುಕೊಂಡಂತೆ ಅಗಸ್ತ್ಯ ಮಹರ್ಷಿಯ ವಿಷಯವಾಗಿಯೂ ತಿಳಿದುಕೊಳ್ಳುವುದೂ ಅಷ್ಟೇ ಅವಶ್ಯಕವಾಗಿರೋಣದರಿಂದ ದೊರೆತಿರುವ ಪ್ರಮಾಣಗಳ ಆಧಾರದ ಮೇಲೆ ಕೆಲವೊಂದು ವಿಚಾರಗಳನ್ನು ಇಲ್ಲಿ ವಿವರಿಸಲಾಗುವುದು.

ಬಂಗಾಲದೇಶದ ಓ. ಸಿ. ಗಂಗೂಲಿ ಎಂಬವರು ''ಪೂರ್ವಕಾಲಿಕ ದ್ವೀಪಾಂತರ ಸಂಚಾರಿ ಅಗಸ್ತ್ಯ'' ಎಂಬ ಶೀರ್ಷಿಕೆಯ ಲೇಖನವನ್ನು ಬರೆದಿದ್ದಾರೆ. ಇದನ್ನು ಫ.ಗು. ಹಳಕಟ್ಟಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಅವರ ಆ ಲೇಖನದ ಪ್ರಕಾರವಾಗಿ ಅಗಸ್ತ್ಯ ಮಹರ್ಷಿಯು ಅತ್ಯಂತ ಪ್ರಾಚೀನಕಾಲದಲ್ಲಿ ಕಾಶೀ ಮಹಾಕ್ಷೇತ್ರದಲ್ಲಿ ನಿವಾಸಿಸುತ್ತಿದ್ದನೆಂಬುದು ತಿಳಿದುಬರುತ್ತದೆ. ಕಾಲಾಂತರದಲ್ಲಿ ವಿಂಧ್ಯ ಪರ್ವತವನ್ನು ದಾಟಿ ದಕ್ಷಿಣಭಾರತಕ್ಕೆ ತೆರಳಿದನು. ಮಧ್ಯ ಮಾರ್ಗದಲ್ಲಿ ಮಹಾರಾಷ್ಟ್ರ ಪ್ರದೇಶದಲ್ಲಿಯ ನಾಶಿಕದ ಸಮೀಪ ಒಂದು ಆಶ್ರಮವನ್ನು ನಿರ್ಮಿಸಿ ಕೆಲಕಾಲ ಅಲ್ಲಿದ್ದನು. ಅಲ್ಲಿರುವ ವಾತಾಪಿ ಮತ್ತು ಇಲ್ವಲರೆಂಬ ಈರ್ವ ಅಸುರರನ್ನು ತನ್ನ ಸಂಕಲ್ಪ ಸಾಮರ್ಥ್ಯದಿಂದಲೇ ಸಂಹರಿಸಿದನು. ನಂತರ ಪಾಂಡ್ಯ ದೇಶಕ್ಕೆ ಹೋಗಿ ಅಲ್ಲಿ ರಾಜಗುರು ಪದವಿಯನ್ನು ಪಡೆದುಕೊಂಡನು. ಇದೂ ಅಲ್ಲದೆ ಅಗಸ್ತ್ಯ ಮಹರ್ಷಿಯು ತಮಿಳು ಭಾಷೆಯಲ್ಲಿ ''ಅಗತ್ತಿ'' ಎಂಬ ವ್ಯಾಕರಣ ಶಾಸ್ತ್ರವನ್ನು ಬರೆದಿರುನೆಂಬುದಾಗಿ ತಿಳಿದುಬರುತ್ತದೆ. ಕನ್ಯಾಕುಮಾರಿಯ ಸಮೀಪದಲ್ಲಿರುವ ''ಪೋಧೀಯ'' ಎಂಬ ಹೆಸರಿನ ಪರ್ವತದ ಮೇಲೆ ಅದೃಶ್ಯನಾಗಿದ್ದುಕೊಂಡು ಕೆಲವು ವರ್ಷ ತಪಸ್ಸನ್ನಾಚರಿಸಿದನು. ಅನಂತರ ಸಾಗರವನ್ನು ದಾಟಿ ''ಕಾಂಬೋಡಿಯಾ'' ದೇಶಕ್ಕೆ ಹೋದನು. ಇವನು ಸಾಗರವನ್ನು ದಾಟಿಹೋಗಿರೋಣದರಿಂದ ಪುರಾಣಗಳಲ್ಲಿ ಸಪ್ತಸಾಗರಗಳನ್ನು ಪ್ರಾಶನಮಾಡಿದನೆಂಬುದಾಗಿ ವರ್ಣಿಸಲಾಗಿದೆ.

ಕಾಂಬೋಡಿಯಾದ 'ಅಂಕೋರವಾಟ'ದಲ್ಲಿರುವ ಶಿಲಾಲೇಖದ ಆಧಾರದ ಮೇಲಿಂದ ''ಆರ್ಯದೇಶದ ಅಗಸ್ತ್ಯನೆಂಬ ಹೆಸರಿನ ಬ್ರಾಹ್ಮಣನು ಕಾಂಬೋಡಿಯಾ

ದ್ವೀಪಕ್ಕೆ ಬಂದು ತನ್ನ ಯೋಗ ಸಿದ್ಧಿಯ ಸಾಮರ್ಥ್ಯದಿಂದ ಹಾಗೂ ತನ್ನಲ್ಲಿರುವ ಅಲೌಕಿಕ ಶಕ್ತಿಯಿಂದ ಅಲ್ಲಿರುವ ಭದ್ರೇಶ್ವರ ಮಹಾದೇವನನ್ನು ಪೂಜಿಸಿದನೆಂಬ ವಿಷಯವು ತಿಳಿದುಬರುತ್ತದೆ.

'ಜಾವಾ' ದೇಶದ ಪೂರ್ವಭಾಗದಲ್ಲಿಯ 'ದಿನಮಯ' ಎಂಬ ಗ್ರಾಮದ ಸಮೀಪ ಒಂದು ಶಿಲಾಲೇಖವಿರುತ್ತದೆ. ಇದು ಕ್ರಿ.ಪೂ. ೭೬೦ ರದ್ದಾಗಿದ್ದು ಅದರಲ್ಲಿ ಅಗಸ್ತ್ಯ ಮಹರ್ಷಿಯ ಮೂರ್ತಿಯು ಕೆತ್ತಲ್ಪಟ್ಟಿರುತ್ತದೆ. ಈ ಶಿಲಾಲೇಖದಲ್ಲಿ ಅಗಸ್ತ್ಯನನ್ನು ಶಿವಗುರುವೆಂತಲೂ, ಭಟ್ಟಾರಕಗುರುವೆಂತಲೂ ಸಂಬೋಧಿಸಲಾಗಿದೆ.

ಶ್ರೀ ಫ. ಗು. ಹಳಕಟ್ಟಿಯವರ ವಿಚಾರದಂತೆ, ಅಗಸ್ತ್ಯನ ಜನ್ಮ ಭೂಮಿಯು ಕರ್ನಾಟಕ ರಾಜ್ಯದ ಚಿಕ್ಕಮಗಳೂರ ಜಿಲ್ಲೆಯಲ್ಲಿರುವ ''ಕಲಶ'' ಎಂಬ ಹೆಸರಿನ ಗ್ರಾಮವು ಆಗಿದೆ. ಕಾರಣವೇನೆಂದರೆ ಆ ಕಲಶ ಗ್ರಾಮದಲ್ಲಿ ಇಂದಿಗೂ ಅಗಸ್ತ್ಯ ಸ್ಮಾರಕದ ಕೆಲ ಅವಶೇಷಗಳು ಸಿಗುವುದುಂಟು. ಅಂತೆಯೇ ಅಗಸ್ತನಿಗೆ ಕಲಶೋದ್ಭವ, ಕುಂಭಸಂಭವ ಎಂಬ ಹೆಸರುಗಳಿಂದ ಸಂಬೋಧಿಸಿದ್ದನ್ನು ಕಾಣುತ್ತೇವೆ. (ಶ್ರೀ ಗಂಗೂಲಿ ಮತ್ತು ಹಳಕಟ್ಟಿಯವರ ವಿಚಾರದ ಈ ಸಾರಾಂಶವನ್ನು ಆಸ್ಥಾನ ವಿದ್ವಾನ್ ಶ್ರೀ ಎಂ.ಜಿ. ನಂಜುಂಡಾರಾಧ್ಯರು ಬರೆದಿರುವ ಶ್ರೀಕರಭಾಷ್ಯದ ಭೂಮಿಕೆಯಿಂದ ಸ್ವೀಕರಿಸಲಾಗಿದೆ.)

ಶ್ರೀ ಗಂಗೂಲಿ ಮತ್ತು ಹಳಕಟ್ಟಿಯವರ ವಿಚಾರವನ್ನು ನೋಡಿದಾಗ ಅಗಸ್ತ್ಯ ಮುನಿಯ ಜನ್ಮಸ್ಥಾನದ ವಿಷಯದಲ್ಲಿ ಭಿನ್ನ ಭಿನ್ನ ಮತವಿರುವುದಾಗಿ ಕಂಡುಬರುತ್ತದೆ. ಇವರೀರ್ವರ ವೈಮತ್ಯಗಳಲ್ಲಿ ಸಮನ್ವಯವನ್ನು ಸಾಧಿಸುವುದಾದರೆ ನಮ್ಮ ವಿಚಾರದ ಪ್ರಕಾರ ಅಗಸ್ತ್ಯ ಮಹರ್ಷಿಯು ಮೂಲತಃ ಉತ್ತರಭಾರತದವನೇ ಆಗಿರಬೇಕು. ಯಾಕಂದರೆ ಉತ್ತರ ಭಾರತದ ಕಾಶೀ ಮುಂತಾದ ಕ್ಷೇತ್ರಗಳಲ್ಲಿ ಇಂದಿಗೂ ಸಹ ಅಗಸ್ತ್ಯನ ಹೆಸರಿನ ಅನೇಕ ಸ್ಥಾನಗಳು ಪ್ರತ್ಯಕ್ಷವಾಗಿ ಕಂಡುಬರುತ್ತವೆ.

ಕಾಶೀಮಹಾಕ್ಷೇತ್ರದಲ್ಲಿ ಅಗಸ್ತ್ಯನು ನಿವಾಸಿಸಿದ ಸ್ಥಾನದಲ್ಲಿ ಒಂದು ಸುಪ್ರಸಿದ್ಧವಾದ ಕುಂಡ (ಹೊಂಡ)ವಿತ್ತು. ಅದಕ್ಕೆ 'ಅಗಸ್ತ್ಯಕುಂಡ'ವೆಂತಲೇ ಕರೆಯುತ್ತಿದ್ದರು. ಇಂದು ಆ ಕುಂಡವು ಇರದೇಯಿದ್ದರೂ ಕಾಶಿಯ ಆ ಪರಿಸರದ ಓಣಿಗೆ ಅಗಸ್ತ್ಯ ಕುಂಡವೆಂತಲೇ ಕರೆಯುತ್ತಾರೆ. ಕಾಶಿಯ ಸಮೀಪದಲ್ಲಿಯೇ ವಿಂಧ್ಯಾಚಲವೆಂಬ ಪರ್ವತವಿದೆ. ಅಲ್ಲಿ 'ವಿಂಧ್ಯವಾಸಿನೀ' ಎಂಬ ಒಂದು ಸುಪ್ರಸಿದ್ಧವಾದ 'ಶಕ್ತಿಪೀಠ'ವೂ ಸಹ ರಾರಾಜಿಸುತ್ತದೆ. ಈ ವಿಂಧ್ಯಪರ್ವತದ ಅಧಿಷ್ಠಾತೃವಾದ ವಿಂಧ್ಯನು ಅಗಸ್ತ್ಯ ಮಹರ್ಷಿಯ ಶಿಷ್ಯನಾಗಿದ್ದನು. ಅತೀ ಸಣ್ಣವನಾಗಿದ್ದ ಈ ವಿಂಧ್ಯನಿಗೆ ಹಿಮಾಲಯ ಮತ್ತು ಮೇರು ಪರ್ವತಾದಿ ಗಳಿಗಿಂತಲೂ ತಾನು ಉನ್ನತನಾಗಿ ಬೆಳೆಯಬೇಕೆಂಬ ಉದ್ದೇಶದಿಂದ ತಪಸ್ಸನ್ನಾಚರಿಸಿ ಆ ತಪೋಸಾಮರ್ಥ್ಯದಿಂದ ಕ್ರಮವಾಗಿ ಉನ್ನತೋನ್ನತವಾಗಿ ಬೆಳೆಯ ತೊಡಗಿದನು. ಇವನ ಈ ಬೆಳವಣಿಗೆಯಿಂದ ಸಂತ್ರಸ್ತರಾದ ದೇವತೆಗಳು ಅಗಸ್ತ್ಯನಿಗೆ ಮೊರೆಹೋಗಿ ನಿನ್ನ ಶಿಷ್ಯನ ಈ ಬೆಳವಣಿಗೆಯನ್ನು ತಡೆಯಬೇಕು. ಇಲ್ಲವಾದರೆ ಲೋಕಗಳೆಲ್ಲ ಅಂಧಕಾರಮಯಗಳಾಗುತ್ತವೆ ಎಂಬುದಾಗಿ ಕೇಳಿಕೊಂಡರು. ದೇವತೆಗಳ ಲೋಕ

ಕಲ್ಯಾಣದ ಈ ಪ್ರಾರ್ಥನೆಯನ್ನು ಮನ್ನಿಸಿ ಮಹರ್ಷಿಯಾದ ಅಗಸ್ತ್ಯನು ತನ್ನ ಶಿಷ್ಯನಾದ ವಿಂಧ್ಯನ ಬಳಿಗೆ ಹೋಗಲು ವಿಂಧ್ಯನು ತನ್ನ ಗುರುವಿಗೆ ಸಾಷ್ಟಾಂಗ ನಮಸ್ಕಾರವೆರಗಿದನು. ಆಗ ಅಗಸ್ತ್ಯರು– ''ಎಲೈ ವಿಂಧ್ಯನೇ ಸದ್ಯಃ ನಾನು ದಕ್ಷಿಣ ಭಾರತದ ಸಂಚಾರಕ್ಕಾಗಿ ಹೊರಟ್ಟಿದ್ದೇನೆ ನಾನು ಮರಳಿ ಬರುವವರೆಗೆ ನೀನು ಏಳ ಕೂಡದು'' ಎಂದು ಆದೇಶಿಸಿ ಅಗಸ್ತ್ಯ ಮಹರ್ಷಿಯು ದಕ್ಷಿಣಭಾರತಕ್ಕೆ ಹೋಗಿರಬೇಕು. ಒಮ್ಮೆ ದಕ್ಷಿಣದತ್ತ ಹೋದ ಅಗಸ್ತ್ಯನು ಮರಳಿ ಉತ್ತರದ ಕಡೆಗೆ ಬಂದಿರುವುದಿಲ್ಲ.

ದಕ್ಷಿಣ ಪ್ರಾಂತದಲ್ಲೆಲ್ಲಾ ಸಂಚಾರ ಮಾಡುತ್ತ ಕೊನೆಗೆ ಕರ್ನಾಟಕ ಪ್ರಾಂತದ ಚಿಕ್ಕ ಮಗಳೂರ ಜಿಲ್ಲೆಯ ಮಲಯ ಪರ್ವತದಲ್ಲಿರುವ 'ಕಲಶ' ಎಂಬ ಗ್ರಾಮದ ಸಮೀಪದಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ನಿವಾಸತೊಡಗಿರಬಹುದು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯನ ಈ ಆಶ್ರಮಕ್ಕೆ ದಯಮಾಡಿಸಿ ಅವನಿಗೆ ಶಿವಾದ್ವೈತ ಸಿದ್ಧಾಂತವನ್ನು ಉಪದೇಶಿಸಿದರು. ಹೀಗೆ ಕಲಶಗ್ರಾಮದ ತನ್ನ ಆಶ್ರಮದಲ್ಲಿ ಗುರೂಪದೇಶ ವನ್ನು ಪಡೆದು ಗುರುಕರಸಂಜಾತನಾದ ಕಾರಣದಿಂದಾಗಿ ಇವನಿಗೆ 'ಕಲಶ ಸಂಭವ' ಅಥವಾ 'ಕುಂಭೋದ್ಭವ' ಎಂಬ ಹೆಸರುಗಳು ಪ್ರಚಲಿತದಲ್ಲಿ ಬಂದಿರಬಹುದು. ಗುರುವಿನಿಂದ ದೀಕ್ಷಾದಿ ಸಂಸ್ಕಾರವನ್ನು ಪಡೆದು ಉಪದೇಶವನ್ನು ಪಡೆದುಕೊಂಡಾಗ ಮನುಷ್ಯನಿಗೆ ಒಂದು ಹೊಸ ಜನ್ಮವಾದಂತೆ ಎಂಬುದು ಶಾಸ್ತ್ರೀಯ ವಿಚಾರವಾಗಿದೆ. ತಂದೆ–ತಾಯಿಗಳಿಂದ ನಮಗೆ ಸಂಸ್ಕಾರಹೀನವಾದ ಮಾಂಸಪಿಂಡವು ಪ್ರಾಪ್ತವಾದರೆ, ಗುರು ಅದಕ್ಕೆ ಸಂಸ್ಕಾರವನ್ನು ಕೊಟ್ಟು ಅದನ್ನು ಮಂತ್ರ ಪಿಂಡವನ್ನಾಗಿಸುತ್ತಾನೆ. ಹೀಗೆ ಸಂಸ್ಕಾರವನ್ನು ಪಡೆಯುವುದೂ ಸಹ ಒಂದು ವಿಧವಾದ ಪುನರ್ಜನ್ಮವಿದ್ದಂತೆಯೆ'. 'ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರಾತ್ ದ್ವಿಜ ಉಚ್ಯತೇ' ಎಂಬ ಈ ಉಕ್ತಿಯಲ್ಲಿ ಉಪನಯನ ಇಲ್ಲವೆ ದೀಕ್ಷಾದಿ ಸಂಸ್ಕಾರವನ್ನು ಪಡೆದವರಿಗೆ 'ದ್ವಿಜ'ರೆಂಬುದಾಗಿ ಸಂಬೋಧಿಸಲಾಗಿದೆ. 'ದ್ವಿಜ'ಯೆಂದರೆ ಎರಡನೆಯ ಜನ್ಮವನ್ನು ಪಡೆದವನು ಎಂದರ್ಥ. ಈ ವಿಚಾರದಂತೆ ಕಲಶಗ್ರಾಮದ ತನ್ನ ಆಶ್ರಮದಲ್ಲಿ ಅಗಸ್ತ್ಯ ಮಹರ್ಷಿಯು ಶ್ರೀ ಜಗದ್ಗುರು ರೇಣುಕರಿಂದ ಸಂಸ್ಕಾರವನ್ನು ಪಡೆದು ತತ್ತ್ವೋಪದೇಶವನ್ನು ಪಡೆದು ಕೊಂಡ ಕಾರಣ ಕಲಶಗ್ರಾಮದಲ್ಲಿ ಅವನ ದ್ವಿತೀಯ ಜನ್ಮವಾಯಿತೆಂದು ಹೇಳುವುದು ಸಶಾಸ್ತ್ರೀಯವಾಗಿರುತ್ತದೆ. ಹೀಗೆ ಅಗಸ್ತ್ಯನನ್ನು ಕಲಶಸಂಭವನೆಂದು ಸ್ವೀಕರಿಸಿದಾಗ ಓ.ಸೀ. ಗಂಗೂಲಿಯವರ ಹಾಗೂ ಶ್ರೀ ಫ.ಗು. ಹಳಕಟ್ಟಿಯವರ ವಿಚಾರಗಳಲ್ಲಿ ಸಮನ್ವಯವನ್ನು ಸಾಧಿಸಬಹುದಾಗಿದೆ. ಅಂದರೆ ಉತ್ತರಭಾರತದಲ್ಲಿ ತಂದೆ ತಾಯಿಗಳಿಂದ ಜನ್ಮಪಡೆದ ಅಗಸ್ತ್ಯನು ಕಲಶ ಗ್ರಾಮದಲ್ಲಿ ಗುರುಕರ ಸಂಜಾತನಾದನೆಂದು ಹೇಳಿದರೆ ಅದಾವ ಬಾಧೆಯೂ ಉಂಟಾಗುವುದಿಲ್ಲ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಮಲಯ ಪರ್ವತದ ಹಾಗೂ ಅಗಸ್ತ್ಯಾಶ್ರಮದ ವಿಸ್ತೃತವಾದ ವರ್ಣನೆಯು ಬಂದಿದ್ದರೂ, ಅಲ್ಲಿ ಕಲಶಗ್ರಾಮದ ಉಲ್ಲೇಖವು ಬಂದಿರುವುದಿಲ್ಲ. ಇದರಿಂದ ಆ ಕಲಶಗ್ರಾಮವು ಅಗಸ್ತ್ಯನ ಆಶ್ರಮದಿಂದ ದೂರ

ದಲ್ಲಿರಬಹುದು. ದೂರದ ಆ ಗ್ರಾಮವನ್ನು ಪ್ರಸ್ತುತ ಪ್ರಸಂಗದಲ್ಲಿ ವರ್ಣಿಸುವ ಅವಶ್ಯಕತೆಯು ಗ್ರಂಥಕರ್ತೃವಿಗೆ ಕಂಡು ಬಂದಿರಲಿಕ್ಕಿಲ್ಲ ಎಂದು ಊಹಿಸಬಹುದಾಗಿದೆ. ಏನೇ ಆದರೂ ಈ ವಿಷಯದಲ್ಲಿ ಇನ್ನೂ ಸಂಶೋಧನೆಯು ಅವಶ್ಯವೆನಿಸುತ್ತದೆ.

ಈ ಪೂರ್ವದಲ್ಲಿ ಹೇಳಿದಂತೆ ಅಗಸ್ತ್ಯ ಮಹರ್ಷಿಯ ಉಲ್ಲೇಖವು ಜಾವಾ ದೇಶದ ''ದಿನಮಯ'' ಎಂಬ ಗ್ರಾಮದಲ್ಲಿರುವ ಕ್ರಿ.ಪೂ. ೭೬೦ ರಲ್ಲಿಯ ಶಿಲಾಲೇಖದಲ್ಲಿ ಉದ್ಧೃತವಾಗಿರೋಣದರಿಂದ ಅಗಸ್ತ್ಯ ಮಹರ್ಷಿಯು ಸುಮಾರು ಮೂರು ಸಾವಿರ ವರ್ಷ ಪೂರ್ವದಲ್ಲಿ ಇದ್ದನೆಂಬುದು ಸಿದ್ಧವಾಗುತ್ತದೆ.ಅಗಸ್ತ್ಯ ಮಹರ್ಷಿಯ ದೇಶ, ಕಾಲ ವಿಷಯಕವಾದ ವಿಚಾರದ ಜೊತೆಗೆ ಆತನ ಗ್ರಂಥ ನಿರ್ಮಿತಿಯ ವಿಷಯದಲ್ಲಿಯೂ ಸಹ ಸಂಶೋಧನೆಯು ಅವಶ್ಯಕವಾದುದಾಗಿದೆ. ಅಗಸ್ತ್ಯ ಮಹರ್ಷಿಯು ಬ್ರಹ್ಮಸೂತ್ರಗಳ ಮೇಲೆ ವೀರಶೈವ ಸಿದ್ಧಾಂತ ಪರವಾದ ವೃತ್ತಿಯನ್ನು ಬರೆದಿರುವನೆಂಬ ಪ್ರಸಿದ್ಧಿಯಿದೆ. ಶ್ರೀಪತಿ ಪಂಡಿತಾರಾಧ್ಯರು ಆ ಅಗಸ್ತ್ಯ ವೃತ್ತಿಯನ್ನೇ ಆಧಾರವಾಗಿಟ್ಟುಕೊಂಡು ಶ್ರೀಕರ ಭಾಷ್ಯವನ್ನು ಬರೆದಿರುವುದಾಗಿ ಶ್ರೀಪತಿ ಪಂಡಿತಾರಾಧ್ಯರ–

ಅಗಸ್ತ್ಯಮುನಿ ಚಂದ್ರೇಣ ಕೃತಾಂ ವೈಯ್ಯಾಶಿಕೀಂ ಶುಭಾಮ್ ।
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂ ಕರಮ್ ॥ (ಶ್ರೀಕರ)

ಈ ಭಾಷಾರಂಭದಲ್ಲಿರುವ ಈ ಶ್ಲೋಕದಿಂದ ತಿಳಿದುಬರುತ್ತದೆ. ಅಂದರೆ ರೇಣುಕ ರಿಂದ ವೀರಶೈವ ಸಿದ್ಧಾಂತದ ಉಪದೇಶವನ್ನು ಪಡೆದನಂತರ ಮಹರ್ಷಿ ಅಗಸ್ತ್ಯನು ಬಾದರಾಯಣ ಸೂತ್ರಗಳಿಗೆ ವೀರಶೈವ ಸಿದ್ಧಾಂತಪರವಾದ ವೃತ್ತಿಯನ್ನು ಬರೆದಿದ್ದ ನೆಂಬುದು ಸಿದ್ಧವಾಗುತ್ತದೆ. ಈ ವೃತ್ತಿಗೆ ಅಗಸ್ತ್ಯ ವೃತ್ತಿಯೆಂದು ಕರೆಯುವುದುಂಟು.

ಪಂಜಾಬ ರಾಜ್ಯದ ಲುಧಿಯಾನಾ ಜಿಲ್ಲೆಯಲ್ಲಿರುವ ''ಜಗರಾವೋ'' ಎಂಬ ಗ್ರಾಮದಲ್ಲಿ ಪಂಜಾಬ ಸಂಸ್ಕೃತ ಅಕಾಡೆಮಿಯು ಅಗಸ್ತ್ಯ ಮಹರ್ಷಿಯ ಸಾಹಿತ್ಯದ ಬಗ್ಗೆ ಸಂಶೋಧನೆಯ ಕಾರ್ಯವನ್ನು ಪ್ರಾರಂಭಿಸಿರುತ್ತದೆ.ಇದೊಂದು ಒಳ್ಳೆಯದಾದ ಸಂಗತಿಯು. ಅವರ ಸಂಶೋಧನೆಯು ಉಳಿದೆಲ್ಲ ಸಂಶೋಧಕರಿಗೆ ಒಂದು ದಿಕ್ಸೂಚಿಯಾಗುವಲ್ಲಿ ಸಂದೇಹವಿಲ್ಲ. ಆದಕಾರಣ ಅಗಸ್ತ್ಯ ಮಹರ್ಷಿಯ ದೇಶ, ಕಾಲ ಹಾಗೂ ಸಾಹಿತ್ಯಾದಿಗಳ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ಮಾಡಬಯಸುವವರು ಈ ಸಂಸ್ಥೆಯೊಂದಿಗೆ ಸಂಪರ್ಕಿಸುವುದು ಸೂಕ್ತವಾದ ವಿಚಾರವಾಗಿದೆ.

### ಶ್ರೀ ಸಿದ್ಧಾಂತ ಶಿಖಾಮಣಿಯ ಭಾಷ್ಯ-ಟೀಕೆ ಹಾಗೂ ಪ್ರವಚನಾದಿ ರಚನಾಕಾರರು

ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ಅನೇಕ ಜನರು ಸಂಸ್ಕೃತ, ಹಿಂದೀ, ಮರಾಠಿ, ಕನ್ನಡ, ತೆಲುಗು, ತಮಿಳು ಮತ್ತು ಇಂಗ್ಲೀಷ ಮುಂತಾದ ಭಾಷೆಗಳಲ್ಲಿ ತಮ್ಮ ರೀತಿಯೊಳಗೆ ಗ್ರಂಥಸ್ಥ ವಿಷಯವನ್ನು ತಿಳಿಯಪಡಿಸಲೋಸುಗ ಭಾಷ್ಯ, ಟೀಕೆ, ಭಾವಾನುವಾದ ಹಾಗೂ ಪ್ರವಚನಾದಿ ರೂಪದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ನಮ್ಮ ಗಮನಕ್ಕೆ ಬಂದಿರುವ ಅಂತಹ ಕೃತಿ ಹಾಗೂ ಕೃತಿಕಾರರ ವಿವರಣೆಯನ್ನು ಸಂಕ್ಷಿಪ್ತವಾಗಿ ಯಾದಿ ರೂಪದಲ್ಲಿ ವಿವರಿಸಲಾಗುವುದು.

೧. ಶ್ರೀ ಸಿದ್ಧಾಂತ ಶಿಖಾಮಣಿಗೆ ಪದವಾಕ್ಯ ಪ್ರಮಾಣಜ್ಞರಾದ ಶ್ರೀ ಮರಿ ತೋಂಟದಾರ್ಯರು 'ತತ್ತ್ವಪ್ರದೀಪಿಕಾ'ಯೆಂಬ ಸಂಸ್ಕೃತ ವ್ಯಾಖ್ಯಾನವನ್ನು ಹದಿನೇಳನೆಯ ಶತಮಾನದಲ್ಲಿ ವಿರಚಿಸಿದ್ದಾರೆ. ಈ ಗ್ರಂಥಕ್ಕೆ ಇದೊಂದೇ ಪ್ರಾಚೀನ ಸಂಸ್ಕೃತ ವ್ಯಾಖ್ಯಾನವಾದ್ದರಿಂದ ಇದನ್ನೇ ಭಾಷ್ಯವೆಂಬುದಾಗಿ ಪರಿಗ್ರಹಿಸಬಹುದಾಗಿದೆ.

೨. ಶ್ರೀ ಸಿದ್ಧಾಂತ ಶಿಖಾಮಣಿಗೆ ಹದಿನೇಳನೆಯ ಶತಮಾನದಲ್ಲಿಯೇ ಸೋಸಲೇ ರೇವಣಾರಾಧ್ಯರೆಂಬುವರು ''ಸಿದ್ಧಾರ್ಥ ಬೋಧಿನೀ'' ಯೆಂಬ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾರೆ.

೩. ಶ್ರೀ ಸಿದ್ಧಾಂತ ಶಿಖಾಮಣಿಗೆ ಮರಿತೋಂಟದಾರ್ಯರು ಬರೆದ ಸಂಸ್ಕೃತ ವ್ಯಾಖ್ಯಾನವನ್ನೇ ತೆಲುಗು ಲಿಪಿಯಲ್ಲಿ ಶ್ರೀ ಪಿ.ಆರ್.ಕರಿಬಸವಶಾಸ್ತ್ರಿಗಳು ಸಂಪಾದಿಸಿದ್ದಾರೆ. ಇದನ್ನು ಮೈಸೂರಿನ ಯಜಮಾನ ವೀರಸಂಗಪ್ಪನವರು ಕ್ರಿ.ಶ. ೧೮೮೦ ನೆಯ ಇಸ್ವಿಯಲ್ಲಿ ಪ್ರಕಾಶನ ಪಡಿಸಿದ್ದಾರೆ.

೪. ವೀರಶೈವ ಸಿದ್ಧಾಂತ ಶಿಖಾಮಣಿ ರಸ್ತಾಪೂರಮಠದ ಹಳ್ಳದ ಬಸವಾರ್ಯ ನೆಂಬುವನು ಕನ್ನಡ ಲಿಪಿಯಲ್ಲಿ ಕ್ರಿ.ಶ. ೧೯೦೨ ನೆಯ ಇಶ್ವಿಯಲ್ಲಿ ಪ್ರಕಟಪಡಿಸಿದ್ದಾನೆ.

೫. ಶ್ರೀ ಸಿದ್ಧಾಂತ ಶಿಖಾಮಣಿ :
ಶ್ರೀ ಮರಿತೋಂಟದಾರ್ಯರ ಸಂಸ್ಕೃತ ಭಾಷ್ಯವುಳ್ಳ ಇದರ ಮೂಲ ಶ್ಲೋಕಗಳಿಗೆ ಮರಾಠಿ ಭಾವಾರ್ಥವನ್ನು ಬರೆದು ಮಣೂರ ಮಠಾಧ್ಯಕ್ಷರಾದ ಶ್ರೀ ಮಲ್ಲಿಕಾರ್ಜುನ ಶಾಸ್ತ್ರಿಗಳು ಸಿದ್ಧಪಡಿಸಿದ್ದಾರೆ. ಇದು ೧೯೦೫ನೆಯ ಇಸ್ವಿಯಲ್ಲಿ ಎರಡು ಭಾಗಗಳಲ್ಲಿ ಸೊಲ್ಲಾಪುರದ ವಾರದ ಮಲ್ಲಪ್ಪನವರಿಂದ ಪ್ರಕಾಶಿಸಲ್ಪಟ್ಟಿದೆ.

೬. ಸಿದ್ಧಾಂತ ಶಿಖಾಮಣಿ :
ಶ್ರೀ ಎನ್.ಆರ್. ಕರಿಬಸವ ಶಾಸ್ತ್ರಿಗಳು ಮರಿತೋಂಟದಾರ್ಯರ ಸಂಸ್ಕೃತ ಭಾಷ್ಯವನ್ನು ಆಧಾರವಾಗಿಟ್ಟುಕೊಂಡು ಅದನ್ನು 'ತಾತ್ಪರ್ಯದೀಪಿಕಾ' ಯೆಂಬ ಕನ್ನಡ ಅನುವಾದದೊಂದಿಗೆ ಸಂಪಾದಿಸಿದ್ದಾರೆ. ಈ ಗ್ರಂಥವು ೧೯೧೪ರಲ್ಲಿ ಪ್ರಪ್ರಥಮವಾಗಿ ಮೈಸೂರಿನ ಯಜಮಾನ ವೀರಸಂಗಪ್ಪ ನವರಿಂದ ಪ್ರಕಾಶಪಡಿಸಲ್ಪಟ್ಟಿತು. ಇದೇ ಗ್ರಂಥವೇ ಪುನಃ ಲಿಂ. ಶ್ರೀ ಸಂ. ಶಿ. ಭೂಸನೂರಮಠ ಅವರ ಸಂಪಾದಕತ್ವದಲ್ಲಿ ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯಿಂದ ೧೯೬೨ನೆಯ ಇಸ್ವಿಯಲ್ಲಿ ಪ್ರಕಾಶಿಸಲ್ಪಟ್ಟಿದೆ.

೭. ಸಿದ್ಧಾಂತ ಶಿಖಾಮಣಿ

ಲಿಂ. ಪಂಡಿತ ಕಾಶೀನಾಥ ಶಾಸ್ತ್ರಿಗಳು ಶ್ರೀ ಸಿದ್ಧಾಂತ ಶಿಖಾಮಣಿಯ ಮೂಲ ಶ್ಲೋಕಗಳಿಗೆ 'ಭಾವ ಪ್ರಕಾಶ'ವೆಂಬ ಕನ್ನಡ ವ್ಯಾಖ್ಯಾನವನ್ನು ಬರೆದು ೧೯೩೦ನೆಯ ಇಸ್ವಿಯಲ್ಲಿ ಪ್ರಥಮವಾಗಿ ಮೈಸೂರಿನಿಂದ ಪ್ರಕಾಶನ ಪಡಿಸಿದರು. ಇದು ಇಂದು ಅನೇಕ ಆವೃತ್ತಿಗಳನ್ನು ಕಂಡು ಜನಪ್ರಿಯವಾಗಿದೆ.

೮. ಸಿದ್ಧಾಂತ ಶಿಖಾಮಣಿ

ಮೈಸೂರಿನ ಎಂ.ಎಲ್. ನಾಗಣ್ಣಾ ಇವರು ಮರಿತೋಂಟದಾರ್ಯರ ಸಂಸ್ಕೃತ ಭಾಷ್ಯವುಳ್ಳ ತೆಲುಗು ಹಾಗೂ ಕನ್ನಡ ಲಿಪಿಯ ಆಧಾರದ ಮೇಲೆ ಕನ್ನಡಾನುವಾದವನ್ನು ವಿರಚಿಸಿ ೧೯೫೫ನೆಯ ಇಸ್ವಿಯಲ್ಲಿ ಪ್ರಕಾಶನ ಪಡಿಸಿದ್ದಾರೆ.

೯. ಸಿದ್ಧಾಂತ ಶಿಖಾಮಣಿ (ಪ್ರವಚನ)

ವಿಜಾಪುರದ ಜ್ಞಾನಯೋಗಾಶ್ರಮದ ಲಿಂ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಸಿದ್ಧಾಂತ ಶಿಖಾಮಣಿಯ ಮೇಲೆ ಮಾಡಿದ ಪ್ರವಚನಗಳನ್ನು ಅವರ ಶಿಷ್ಯರಾದ ಶ್ರೀ ಸಿದ್ಧೇಶ್ವರ ಸ್ವಾಮಿಯವರು ಕನ್ನಡದಲ್ಲಿ ಸಂಗ್ರಹಿಸಿ ಗದುಗಿನ ಶಿವಾನಂದಮಠದಿಂದ ೧೯೬೭ನೆಯ ಇಸ್ವಿಯಲ್ಲಿ ಪ್ರಕಟಪಡಿಸಿದ್ದಾರೆ. ಅದನ್ನೇ ಶ್ರೀ ಸುತ್ತೂರು ಶ್ರೀ ಶಿವರಾತ್ರೀಶ್ವರ ಮಠದಿಂದ ಪುನರ್ ಮುದ್ರಿಸಿದ್ದಾರೆ. ಅದನ್ನೇ ಸಂಕೇಶ್ವರದ ಶ್ರೀಕಾಂತ ಅರಳಿ ಎಂಬುವರು ಮರಾಠಿಗೆ ಅನುವಾದಿಸಿ ಪ್ರಕಾಶಪಡಿಸಿದ್ದಾರೆ. ಇದೂ ಸಹ ಗದುಗಿನ ಶಿವಾನಂದಮಠದಿಂದ ೧೯೭೭ರಲ್ಲಿ ಪ್ರಕಾಶನಗೊಂಡಿದೆ.

೧೦. ಸಿದ್ಧಾಂತ ಶಿಖಾಮಣಿ (ಜೀವನ ಸಿದ್ಧಾಂತ)

ಡಾ. ಜ.ಚ.ನಿ.ಯೆಂಬ ಕಾವ್ಯ ನಾಮದಿಂದ ಪ್ರಸಿದ್ಧರಾದ ನಿಡುಮಾಮಿಡಿಯ ಶ್ರೀ ಚೆನ್ನಬಸವ ದೇಶೀಕೇಂದ್ರ ಶಿವಾಚಾರ್ಯ ಸ್ವಾಮಿಗಳು ಆರು ಸಂಪುಟಗಳಲ್ಲಿ ಈ ಗ್ರಂಥವನ್ನು ೧೯೯೯ ಹಾಗೂ ೭೦ರಲ್ಲಿ ಬೆಂಗಳೂರಿನ ನಿಡುಮಾಮಿಡಿ ಪುಸ್ತಕ ಭಾಂಡಾರದಿಂದ ಪ್ರಕಾಶನ ಗೊಳಿಸಿದ್ದಾರೆ. ಇವರು ಪ್ರತಿಯೊಂದು ಸಂಪುಟದಲ್ಲಿ ಲಿಂಗ ಹಾಗೂ ಲಿಂಗಷಟ್‌ಸ್ಥಲಗಳನ್ನು ಒಂದೆಡೆ ಸೇರಿಸಿ ವಿದ್ವತ್ಪೂರ್ಣವಾಗಿ ವಿವೇಚಿಸಿದ್ದಾರೆ. ಇವರೇ 'ಮಣಿಕಾಂತಿ' ಮತ್ತು 'ಮಣಿಮುಕುರ'ಗಳೆಂಬ ಗ್ರಂಥಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿಯ ಕನ್ನಡ ಪದ್ಯಾನುರೂಪ ವಾಗಿಯೂ ಸಹ ವಿರಚಿಸಿದ್ದನ್ನಿಲ್ಲಿ ಸ್ಮರಿಸಬಹುದಾಗಿದೆ. ''ಮಣಿ ವಚನ'' ಎಂಬುದೂ ಸಹ ಇವರದೇ ವಚನಗ್ರಂಥ.

೧೧. ಸಿದ್ಧಾಂತ ಶಿಖಾಮಣಿ (ತಮಿಳು ಅನುವಾದ)

ತಿರುವಣ್ಣಮಲೈಯ ಶಿವಪ್ರಕಾಶ ಸ್ವಾಮಿಯೆಂಬವರು ತಮಿಳು ಭಾಷೆಗೆ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಅನುವಾದಿಸಿದ್ದಾರೆ. ಇದು ತಮಿಳುನಾಡಿನ ''ಕುಂಭಕೋಣಮ್'' ದಿಂದ ಪ್ರಕಟನಗೊಂಡಿದೆ.

೧೨. ಸಿದ್ಧಾಂತ ಶಿಖಾಮಣಿ (ತೆಲುಗು ಅನುವಾದ)

ಶ್ರೀ ಚೆನ್ನಪುಗ್ಗಡ ನಾಗೇಶ್ವರರಾವ ಎಂಬುವವರು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ತೆಲುಗು ಭಾಷೆಯಲ್ಲಿ ಅನುವಾದಿಸಿ ಪ್ರಕಾಶನಗೊಳಿಸಿದ್ದಾರೆ.

೧೩. ಸಿದ್ಧಾಂತ ಶಿಖಾಮಣಿ (ರೇಣುಕ ಗೀತಾ)

ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿದ್ದ ಡಾ. ಎಂ. ಶಿವಕುಮಾರ ಸ್ವಾಮಿಗಳವರು ೧೯೬೯ರಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಸ್ಥಲಕಟ್ಟಿನ ಮೇಲೆ ಆಯ್ದ ಶ್ಲೋಕಗಳಿಗೆ ಇಂಗ್ಲೀಷ ಅನುವಾದವನ್ನು ಬರೆದು ಪ್ರಕಾಶನಗೊಳಿಸಿದ್ದಾರೆ.

೧೪. ಸಿದ್ಧಾಂತ ಶಿಖಾಮಣಿ (ರೇಣುಕ ಗೀತಾ)

ಚಿತ್ರದುರ್ಗ ನಿವಾಸಿಯಾದ ನಿಜಗುಣಸಿದ್ಧನೆಂಬ ಕಾವ್ಯನಾಮವನ್ನಿರಿಸಿಕೊಂಡ ಶ್ರೀ ಎಸ್. ಎಂ. ಸಿದ್ಧಯ್ಯ ಇವರು ಸಿದ್ಧಾಂತ ಶಿಖಾಮಣಿಯನ್ನು ಭಾಮಿನಿ ಷಟ್ಪದಿಯಲ್ಲಿ ಕನ್ನಡ ಭಾಷೆಗೆ ಅನುವಾದಿಸಿದ್ದಾರೆ. ಇವರ ಈ ಕೃತಿಯು ಕನ್ನಡ ಸಾಹಿತ್ಯ ಲೋಕಕ್ಕೆ ಒಂದು ಅಪೂರ್ವವಾದ ಕೊಡುಗೆಯಾಗಿದೆ.

೧೫. ಸಿದ್ಧಾಂತ ಶಿಖಾಮಣಿ (ಹಿಂದೀ ಪದ್ಯಾನುವಾದ)

ಗದುಗಿನ ತ್ರಿಭಾಷಾ ಕವಿಗಳೆಂದೇ ಪ್ರಸಿದ್ಧರಾಗಿರುವ ಡಾ|| ಪುಟ್ಟರಾಜ ಕವಿ ಗವಾಯಿಗಳವರು ಸಿದ್ಧಾಂತ ಶಿಖಾಮಣಿಯ ಸರ್ವಶ್ಲೋಕಗಳನ್ನು ಹಿಂದೀಭಾಷೆಯ 'ದೋಹಾ' ರೂಪದಲ್ಲಿ ಅನುವಾದಿಸಿದ್ದಾರೆ. ಕನ್ನಡಿಗರಾದ ಇವರು ಹಿಂದೀ ಪದ್ಯಾನುವಾದವನ್ನು ಮಾಡಿದ್ದು ಹಿಂದೀ ಸಾಹಿತ್ಯ ಲೋಕಕ್ಕೆ ಇದೊಂದು ವೀರಶೈವರ ಅಪೂರ್ವ ಕೊಡುಗೆಯಾಗಿರುತ್ತದೆ. ಇದು ಕ್ರಿ.ಶ. ೧೯೭೭ ರಲ್ಲಿ ಗದುಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದಿಂದ ಪ್ರಕಟಗೊಂಡಿದೆ.

೧೬. ಸಿದ್ಧಾಂತ ಶಿಖಾಮಣಿ (ಮರಾಠಿ ಭಾವಾನುವಾದ)

ಡಾ|| ಚಂದ್ರಶೇಖರ ಕಪಾಳೆ, ಗುಲಬರ್ಗಾ, ಪಂ|| ಶರಣಯ್ಯಾ ಶಾಸ್ತ್ರಿ ಸೋಲಾಪುರ ಮತ್ತು ಡಾ|| ಶೇ.ದೇ. ಪಸಾರಕರ ಸೋಲಾಪುರ ಈ

ಮೂರು ಜನ ಸಂಸ್ಕೃತ ಹಾಗೂ ಮರಾಠಿಯ ವಿದ್ವಾಂಸರು. ಕಾಶೀ ಜಗದ್ಗುರು ಡಾ|| ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಮರಾಠಿ ಭಾಷೆಯಲ್ಲಿ ಭಾವಾನುವಾದವನ್ನು ಮಾಡಿದ್ದಾರೆ. ಇದರಲ್ಲಿ ಮರಿತೋಂಟದಾರ್ಯರ ಸಂಸ್ಕೃತ ವ್ಯಾಖ್ಯಾನವೂ ಸಹ ಮರಾಠಿ ಭಾಷೆಗೆ ಅನುವಾದಗೊಂಡಿದೆ. ಈ ಗ್ರಂಥವು ೧೯೯೦ರಲ್ಲಿ ಸೊಲ್ಲಾಪುರದ ವೀರಶೈವ ಸಾಹಿತ್ಯ ಸಂಶೋಧನ ಮಂಡಳದಿಂದ ಪ್ರಕಟಗೊಂಡಿದೆ. ಈ ಗ್ರಂಥಕ್ಕೆ ಶ್ರೀ ಕಾಶೀ ಜಗದ್ಗುರುಗಳವರು ಸುದೀರ್ಘವಾದ ಸಂಪಾದಕೀಯ ಲೇಖನವನ್ನು ಅನುಗ್ರಹಿಸಿದ್ದಾರೆ.

೧೭. ಸಿದ್ಧಾಂತ ಶಿಖಾಮಣಿ (ಹಿಂದೀ ಅನುವಾದ) :

ಕಾಶೀ ವಿದ್ಯಾಪೀಠದ ಕನ್ನಡ ಪ್ರಾಧ್ಯಾಪಕರಾದ ಡಾ|| ಶಾಂತಶರ್ಮಾ ಹಿರೇಮಠ (ಶ್ರೀ ಷ. ಬ್ರ. ಡಾ|| ಶ್ರೀಪತಿಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಹಿರೇಜೇವರಗಿ) ಇವರು 'ಭಾವ ಮಂಜೂಷಾ' ಎಂಬ ಹೆಸರಿನ ಹಿಂದೀ ವ್ಯಾಖ್ಯಾನವನ್ನು ವಿರಚಿಸಿದ್ದಾರೆ. ಇದು ಮುದ್ರಣ ವಾಗುತ್ತಲಿದ್ದು ಕೆಲವೇ ದಿನಗಳಲ್ಲಿ ಹೊರಬರಲಿದೆ.

೧೮. ಶ್ರೀ ಸಿದ್ಧಾಂತ ಶಿಖಾಮಣಿ ಮರಾಠಿ ಪ್ರವಚನ (ಜನ್ಮ ಹಾ ಅಖೇರಚಾ)

ಶ್ರೀ ಕಾಶಿ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿ ಗಳವರು ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ವಿವಿಧ ಗ್ರಾಮ ನಗರಗಳಲ್ಲಿ ಮಾಡಿದ ಹಿಂದಿ ಪ್ರವಚನಗಳನ್ನು ಸೊಲ್ಲಾಪುರದ ಸಂಗಮೇಶ್ವರ ಮಹಾವಿದ್ಯಾಲಯದ ಮರಾಠಿ ಪ್ರಾಧ್ಯಾಪಕರಾದ ಡಾ. ಸೆ. ದೆ. ಪಸಾರಕರ ಇವರು ಮರಾಠಿ ಭಾಷೆಗೆ ಅನುವಾದಿಸಿ ಅದನ್ನು ಸಂಪಾದಿಸಿದ್ದಾರೆ. ಈ ಗ್ರಂಥಕ್ಕೆ ''ಜನ್ಮ ಹಾ ಅಖೇರಚಾ'' ಎಂಬ ಹೆಸರನ್ನು ಕೊಡಲಾಗಿದೆ. ಮೊದಲು ಈ ಗ್ರಂಥವು ಹನ್ನೆರಡು ಬಿಡಿ ಬಿಡಿ ಭಾಗಗಳಲ್ಲಿ ಮುದ್ರಣ ಗೊಂಡಿತ್ತು, ಸದ್ಯ, ಆ ಎಲ್ಲಾ ಭಾಗಗಳನ್ನು ಒಂದುಗೂಡಿಸಿ ಒಂದೇ ಬೃಹತ ಗ್ರಂಥರೂಪದಲ್ಲಿ ಕಾಶೀಪೀಠದಿಂದ ಪ್ರಕಾಶನಗೊಳಿಸಲಾಗಿದೆ. ಈ ಗ್ರಂಥವು ಈಗಾಗಲೇ ನಾಲ್ಕು ಆವೃತ್ತಿಗಳನ್ನು ಪಡೆದಿದ್ದು ಮಹಾರಾಷ್ಟ್ರದ ವೀರಶೈವ ಹಾಗೂ ಇತರ ಧಾರ್ಮಿಕ ಭಕ್ತರಿಂದ ಮತ್ತು ವಿದ್ವಾಂಸರಿಂದ ಮನ್ನಣೆಯನ್ನು ಪಡೆದುಕೊಂಡಿದೆ. ೧೯೯೧ ರಲ್ಲಿ ಪ್ರಥಮವಾಗಿ ಮುದ್ರಣಗೊಂಡ ಈ ಗ್ರಂಥವು ೨೦೦೯ರ ವರೆಗೆ ಅಂದರೆ ಹದಿನೆಂಟು ವರ್ಷಗಳ ಈ ಕಾಲಾವಧಿಯಲ್ಲಿ ಮಹಾರಾಷ್ಟ್ರದ ತುಂಬೆಲ್ಲ ಪ್ರಚಾರಗೊಂಡಿರುವುದು ಒಂದು ಸಂತೋಷದ ಸಂಗತಿ.

೧೯. ವೀರಶೈವ ಸಿದ್ಧಾಂತ ಶಿಖಾಮಣಿ :
ಉಜ್ಜೈನೀಶನೆಂಬ ಪ್ರಾಚೀನ ಕನ್ನಡ ವಿದ್ವಾಂಸನು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಕನ್ನಡ ಭಾಷೆಗೆ ಅನುವಾದಿಸಿದ್ದಾನೆ. ಕ್ರಿ.ಶ. ೧೯೯೮ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಈ ಗ್ರಂಥವನ್ನು ಶ್ರೀ ರಂಭಾಪುರಿ ಪೀಠದ ದತ್ತಿ ಉಪನ್ಯಾಸ ಯೋಜನೆಯ ಅಡಿಯಲ್ಲಿ ಪ್ರಕಾಶನಗೊಳಿಸಿದೆ. ಇಲ್ಲಿಯವರೆಗ ಉಪಲಬ್ಧವಿರುವ ಕನ್ನಡಾನುವಾದದ ಸಿದ್ಧಾಂತ ಶಿಖಾಮಣಿಯೊಳಗೆ ಇದುವೇ ಪ್ರಾಚೀನವಾದುದಾಗಿದೆ. ಈ ಉಜ್ಜೈನೀಶನ ಕಾಲವು ಕ್ರಿ.ಶ. ೧೫೨೨ ಎಂದು ಡಾ. ಸಾ. ಶಿ. ಮರುಳಯ್ಯ ಅವರು ಉಲ್ಲೇಖಿಸಿದ್ದಾರೆ.

೨೦. ಅಜ್ಞಾತ ವಿರಚಿತ ಸಿದ್ಧಾಂತ ಶಿಖಾಮಣಿ ವ್ಯಾಖ್ಯೆ :
ಈ ಗ್ರಂಥವನ್ನು ವಿದ್ವಾಂಸರಾದ ಜಿ. ಜಿ. ಮಂಜುನಾಥನ್ ಇವರು ಸಂಪಾದಿಸಿದ್ದಾರೆ. ಈ ಗ್ರಂಥವು ಶ್ರೀ ರಂಭಾಪೂರಿ ಪೀಠದ ದತ್ತಿ ಉಪನ್ಯಾಸ ಯೋಜನೆಯ ಅಡಿಯಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ೨೦೦೦ ಇಸ್ವಿಯಲ್ಲಿ ಪ್ರಕಟಗೊಳಿಸಿದೆ. ಈ ಗ್ರಂಥದ ಅನುವಾದಕರು ಯಾರೆಂಬುದು ತಿಳಿಯದ ಕಾರಣ ಇದಕ್ಕೆ ಅಜ್ಞಾತ ವಿರಚಿತ ಎಂಬುದಾಗಿ ಹೇಳಲಾಗಿದೆ. ಈ ಗ್ರಂಥದಲ್ಲಿ ೫ನೆಯ ಪರಿಚ್ಛೇದಿಂದ ೨೦ನೇ ಪರಿಚ್ಛೇದವರೆಗಿನ ಸಿದ್ಧಾಂತ ಭಾಗವು ಮಾತ್ರ ಕನ್ನಡ ಭಾಷೆಗೆ ಅನುವಾದಿಸಲ್ಪಟ್ಟಿದೆ.

೨೧. ಸಿದ್ಧಾಂತ ಶಿಖಾಮಣಿ (ಮರಾಠಿ ಅನ್ವಯಾರ್ಥ ಮತ್ತು ಭಾವಾರ್ಥ)
ಡಾ|| ಚಂದ್ರಶೇಖರ ಕಪಾಳೆ ಗುಲಬರ್ಗಾ ಇವರು ಶ್ರೀ ಕಾಶೀ ಜಗದ್ಗುರು ಡಾ|| ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಮೂಲ ಶ್ಲೋಕಗಳಿಗೆ ಮರಾಠಿ ಅನ್ವಯಾರ್ಥ ಹಾಗೂ ಭಾವಾರ್ಥವನ್ನು ಬರೆದು ಸಾದರಪಡಿಸಿದ್ದಾರೆ. ಈ ಗ್ರಂಥವೂ ಸಹ ಕಾಶೀ ಜಗದ್ಗುರುಗಳವರಿಂದ ಸಂಪಾದಿಸಲ್ಪಟ್ಟಿದೆ. ಇದು ಕಾಶೀ ಜಂಗಮವಾಡೀ ಮಠದ ಶೈವ ಭಾರತೀ ಭವನದಿಂದ ಕ್ರಿ.ಶ. ೧೯೯೧ ರಲ್ಲಿ ಪ್ರಕಾಶನಗೊಂಡಿದೆ.

೨೨. ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ :
ಶ್ರೀ ಕಾಶೀ ಜಗದ್ಗುರು ಡಾ|| ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ಪೂರ್ವಾಶ್ರಮದಲ್ಲಿ, ಅಂದರೆ ಇಂದಿಗೆ ಸುಮಾರು ಮೂವತ್ತು ವರ್ಷಗಳ ಹಿಂದೆ ಶ್ರೀ ಸಿದ್ಧಾಂತ ಶಿಖಾಮಣಿಯ ನೂರೊಂದು ಸ್ಥಲಗಳ ಮೇಲೆ ಪ್ರವಚನ ಶೈಲಿಯ ನೂರಾ ಒಂದು ಕಿರು ಹೊತ್ತಿಗೆಗಳನ್ನು ಹೊರತರುವ ಸಂಕಲ್ಪವನ್ನ ಮಾಡಿ ತಾವು ಕಾಶೀ ಪೀಠಾಧೀಶ್ವರರಾಗುವ

ಪೂರ್ವದಲ್ಲಿ ಪಿಂಡಸ್ಥಲದಿಂದ ರುದ್ರಾಕ್ಷ ಧಾರಣಸ್ಥಲದವರೆಗೆ ಏಳು ಕಿರಣಗಳನ್ನು ಗುಳೇದಗುಡ್ಡದ ಅಮರೇಶ್ವರ ಪ್ರಕಾಶನದಿಂದ ಪ್ರಕಟ ಗೊಳಿಸಿದರು. ಮುಂದೆ ಕಾಶೀ ಪೀಠದ ಜಗದ್ಗುರುತ್ವವನ್ನು ಸ್ವೀಕರಿಸಿದ ನಂತರ ವಿಭಿನ್ನ ಸ್ಥಾನಗಳಲ್ಲಿ ಅವರು ಗೈದ ಆಶೀರ್ವಚನಗಳನ್ನು ಬಬಲೇಶ್ವರ ಬೃಹನ್ಮಠದ ಶ್ರೀ ಷ.ಬ್ರ. ಡಾ. ಮಹಾದೇವ ಶಿವಾಚಾರ್ಯ ಸ್ವಾಮಿ ಗಳವರು ಸಂಕಲನ ಮಾಡಿದ್ದಾರೆ. ಅವರು ಸಂಕಲನಗೊಳಿಸಿದ ಪಂಚಾಕ್ಷರ ಜಪಸ್ಥಲದಿಂದ ಸಹಭೋಜನಸ್ಥಲದ ವರೆಗಿನ ಸರ್ವ ಅಂಗಸ್ಥಲಗಳು ಬಿಡಿಬಿಡಿಯಾಗಿಯೂ ಸಂಯುಕ್ತರೂಪವಾಗಿಯೂ ಅಮರೇಶ್ವರ ಪ್ರಕಾಶನದಿಂದಲೇ (೧೯೭೦–೧೯೮೯) ಪ್ರಕಟಗೊಂಡಿವೆ.

ದೀಕ್ಷಾ ಪಾದೋದಕ ಸ್ಥಲದಿಂದ ಜ್ಞಾನಶೂನ್ಯ ಸ್ಥಲದವರೆಗಿನ ಅವಶಿಷ್ಟಗಳಾದ ಲಿಂಗಸ್ಥಲದ ಆಶೀರ್ವಚನಗಳನ್ನು ಹಿಪ್ಪರಗಿಯ ಶ್ರೀ ಸಿದ್ಧರಾಮದೇವರು ಸಂಕಲನ ಗೈದಿದ್ದಾರೆ. ಸದ್ಯಃ ಶ್ರೀ ಸಿದ್ಧಾಂತ ಶಿಖಾಮಣಿಯ ಪೂರ್ವ ಪೀಠಿಕೆಯನ್ನೊಳಗೊಂಡ ನೂರೊಂದು ಸ್ಥಲಗಳ ಆಶೀರ್ವಚನಗಳನ್ನು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಯೆಂಬ ಶೀರ್ಷಿಕೆಯುಳ್ಳ ಒಂದು ಬೃಹದ್‌ಗ್ರಂಥವು ಎರಡು ಸಂಪುಟಗಳಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆಯಿಂದ ದಿ. ೯ ಏಪ್ರೀಲ್ ೨೦೦೦ನೆಯ ಇಸ್ವಿಯಲ್ಲಿ ಪ್ರಕಟಗೊಳಿಸಲಾಗಿದೆ.

೨೩. ಶ್ರೀ ಸಿದ್ಧಾಂತ ಶಿಖಾಮಣಿ ಆಂಗ್ಲಾನುವಾದ

ಬೆಂಗಳೂರು ವಿಶ್ವವಿದ್ಯಾಲಯದ ವಿಶ್ರಾಂತ ಪ್ರಾಧ್ಯಾಪಕರು ಸಂಸ್ಕೃತ ಆಂಗ್ಲ ವಿದ್ವಾಂಸರು ಹಾಗೂ ಸಂಸ್ಕೃತ ವಿಭಾಗದ ಮುಖ್ಯಸ್ಥರಾಗಿದ್ದ ಡಾ. ಎಂ. ಶಿವಕುಮಾರಸ್ವಾಮಿ ಅವರು ಶ್ರೀ ಮರಿತೋಂಟದಾರ್ಯ ಅವರ ತತ್ತ್ವ ಪ್ರದೀಪಿಕಾ ವ್ಯಾಖ್ಯಾನದಿಂದ ಕೂಡಿದ ಶ್ರೀ ಸಿದ್ಧಾಂತ ಶಿಖಾಮಣಿ ಯನ್ನು ಆಂಗ್ಲಭಾಷೆಗೆ ಅನುವಾದಿಸಿದ್ದಾರೆ. ಸಂಸ್ಕೃತ ಶ್ಲೋಕಗಳ ಅನುವಾದವನ್ನು ಪ್ರತ್ಯೇಕವಾಗಿ ನೀಡಿ ವ್ಯಾಖ್ಯಾನದ ಅನುವಾದವನ್ನು ಸಹ ಪ್ರತ್ಯೇಕವಾಗಿ ಮಾಡಿ ಕನ್ನಡ ಮತ್ತು ಸಂಸ್ಕೃತ ಅರಿಯದ ಆಂಗ್ಲ ಭಾಷೆ ಬಲ್ಲವರಿಗೆ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಕೊಡಮಾಡಿದ್ದಾರೆ. ಈ ಗ್ರಂಥಕ್ಕೆ ಸುದೀರ್ಘ ಪ್ರಸ್ತಾವನೆಯನ್ನು (Introduction-page 147) ಬರೆದಿರುವುದು. ಈ ಗ್ರಂಥದ ವೈಶಿಷ್ಟ್ಯವಾಗಿದೆ. ಡಬಲ್ ಕೌನ್ ಆಕಾರದ ೧೨೫೦ ಪುಟಗಳ ಈ ಬೃಹದ್ ಗ್ರಂಥವು ಪರಭಾಷಾ ಓದುಗರಿಗೆ ಅತ್ಯಂತ ಉಪಯುಕ್ತವಾಗಿದೆ. ಈ ಕಾರ್ಯಗೈದ ಡಾ. ಎಂ. ಶಿವಕುಮಾರ ಸ್ವಾಮಿ ಅವರ ಈ ಮಹತ್ಕಾರ್ಯವು ಕೃತಜ್ಞತೆಗೆ ಪಾತ್ರವಾಗಿದೆ.

ಈ ಗ್ರಂಥವು ಶ್ರೀ ಕಾಶಿ ಜಂಗಮವಾಡಿ ಮಠದ ಶೈವಭಾರತಿ ಶೋಧ ಪ್ರತಿಷ್ಠಾನದಿಂದ ೨೦೦೭ನೆಯ ಇಸ್ವಿಯಲ್ಲಿ ಪ್ರಕಾಶನವಾಗಿದೆ. ಶ್ರೀ ಕಾಶೀ ಜಗದ್ಗುರು

ಮಹಾಸನ್ನಿಧಿಯವರ ಷಷ್ಠಿಪೂರ್ತಿ ಸಮಾರಂಭದ ಮುಕ್ತಾಯ ಸಮಾರಂಭ (೨೦೦೭ ನವ್ಹೆಂಬರ್ ೨೬,೨೭,೨೮)ದಂದು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ಪ್ರಸಾದ ಹಸ್ತಗಳಿಂದ ಲೋಕಾರ್ಪಣವಾಗಿದೆ.

೨೪. ಶ್ರೀ ಸಿದ್ಧಾಂತ ಶಿಖಾಮಣಿಯ ಹಿಂದಿ ಆವೃತ್ತಿ

ಕಾಶಿ ಹಿಂದು ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದ ವಿಶ್ರಾಂತ ಪ್ರಾಧ್ಯಾಪಕರು ''ಶಾಸ್ತ್ರ ಚೂಡಾಮಣಿ'' ವಿದ್ವಾಂಸರಾದ ಡಾ. ರಾಧೇಶ್ಯಾಂ ಚತುರ್ವೇದಿ ಅವರು ಶ್ರೀ ಸಿದ್ಧಾಂತ ಶಿಖಾಮಣಿಯ ಮೂಲ ಸಂಸ್ಕೃತ ಶ್ಲೋಕಗಳಿಗೆ ''ಜ್ಞಾನವಟಿ'' ಎಂಬ ಹಿಂದಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಅಲ್ಲದೆ ೨೧ ಪರಿಚ್ಛೇದಗಳ ಸಾರವನ್ನು ಹಿಂದಿ ಭಾಷೆಯಲ್ಲಿ ಪ್ರಸ್ತಾವನೆಯಾಗಿ ನೀಡಿದ್ದಾರೆ. ಈ ಗ್ರಂಥಕ್ಕೆ ಶ್ರೀ ಕಾಶಿ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ವಿಸ್ತೃತವಾದ ಆಶೀರ್ವಚನವು ನೀಡಲ್ಪಟ್ಟಿದೆ.

೨೫. ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆಯ ತೆಲಗು ಆವೃತ್ತಿ

ಹೈದರಾಬಾದ್ ಉಸ್ಮಾನಿಯಾ ವಿಶ್ವವಿದ್ಯಾಲಯದ ಪ್ರೊ. ಮಠಂ ಲಿಂಗಯ್ಯ ಇವರು ಕನ್ನಡದ ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆಯ ಎರಡೂ ಸಂಪುಟಗಳನ್ನು ತೆಲಗು ಭಾಷೆಗೆ ಅನುವಾದ ಮಾಡಿದ್ದಾರೆ. ಪ್ರತಿಯೊಂದು ಪ್ರವಚನಕ್ಕೆ ''ವಿಶೇಷ ಪ್ರದೀಪಿಕ'' ಎಂಬ ಶೀರ್ಷಿಕೆಯ ಅಡಿಯಲ್ಲಿ ತಮ್ಮದೇ ಆದ ಪೂರಕವಾದ ವಿಚಾರಗಳನ್ನು ಇದರಲ್ಲಿ ಅಳವಡಿಸಿದ್ದಾರೆ. ಇದು ೨೦೦೯ನೆಯ ಜುಲೈ ೨೩ ರಂದು ಆಂಧ್ರಪ್ರದೇಶದ ಮೆಹಬೂಬ ನಗರದಲ್ಲಿ ಶ್ರೀ ಕಾಶೀ ಸನ್ನಿಧಿಯವರ ಶ್ರಾವಣ ಮಾಸದ ಅನುಷ್ಠಾನದ ಆರಂಭದ ದಿನದಂದು ಲೋಕಾರ್ಪಣವಾಯ್ತು. ಮೆಹಬೂಬ ನಗರದ ಸುಪ್ರಸಿದ್ಧ ಮುದ್ರಕರಾದ ಶ್ರೀ ಮುಕ್ತಾ ಶ್ರೀಶೈಲಂ ಇವರು ತಮ್ಮ ತಂದೆ–ತಾಯಿಗಳ ಸ್ಮರಣಾರ್ಥವಾಗಿ ೧೦೦೦/– ಗ್ರಂಥಗಳ ಮುದ್ರಣ ಸೇವೆ ಮಾಡಿರುವುದು ಅವಿಸ್ಮರಣೀಯವಾಗಿದೆ. ಹಾಗೆಯೇ ಆಂಧ್ರ ಪ್ರದೇಶದ ಅನೇಕ ಭಕ್ತರ ಉದಾರ ದೇಣಿಗೆಯಿಂದ ಮತ್ತೊಂದು ಸಾವಿರ ಪ್ರತಿಗಳು ಅದೇ ಸಮಯಕ್ಕೆ ಮುದ್ರಣಗೊಂಡಿವೆ. ಡಬಲ್ ಡೇಮಿ ಆಕಾರದ ಒಂದೇ ಸಂಪುಟದ ಈ ಗ್ರಂಥವು ಹನ್ನೆರಡು ನೂರು ಪುಟಗಳಲ್ಲಿ ಪ್ರಕಟಗೊಂಡಿದೆ. ಇಂಥ ಬೃಹತ್ತಾದ ಮಹತ್ವದ ಸಾಹಿತ್ಯವು ತೆಲುಗು ಭಾಷೆಯಲ್ಲಿ ಆಂಧ್ರ ವೀರಶೈವರಿಗೆ ಪ್ರಪ್ರಥಮವಾಗಿ ಲಭಿಸಿದುದು ಸಂತೋಷವುಂಟು ಮಾಡಿದ್ದು ಆಂಧ್ರ ವೀರಶೈವರು ಆದರದಿಂದ ಸ್ವಾಗತಿಸಿದ್ದಾರೆ.

ಶ್ರೀ ಕಾಶೀ ಸನ್ನಿಧಿಯವರು ೨೦೦೯ನೆಯ ಇಸ್ವಿಯ ಶ್ರಾವಣಮಾಸವನ್ನು ತೆಲಂಗಾಣದ ಆರು ಜಿಲ್ಲೆಗಳಲ್ಲಿ ಮಾಡಿ ವಿಶೇಷ ಧರ್ಮಪ್ರಚಾರ ಕಾರ್ಯಗೈದರು. ಆಗ ಈ ಧರ್ಮಯಾತ್ರೆಯ ನೆಪದಲ್ಲಿ ಈ ಗ್ರಂಥವು ಮನೆ ಮನೆಗೆ ತಲುಪಿ ಜನಮನದಲ್ಲಿ ಧರ್ಮಪ್ರಜ್ಞೆಯನ್ನು ಮೂಡಿಸಿದುದು ತೆಲಂಗಾಣದ ಜನತೆಗೆ ಅತೀವ ಸಂತಸ ತಂದಿದೆ. ಈ ಗ್ರಂಥದ ಮುದ್ರಣ ಕಾರ್ಯದಲ್ಲಿ ಸರ್ವರ ಸಹಯೋಗವನ್ನು ಹಾಗೂ ಸಹಕಾರವನ್ನು ಪಡೆಯುವಲ್ಲಿ ಶ್ರಮಿಸಿದ ವೀರಶೈವ ಧರ್ಮ ಪ್ರಚಾರಕ ಸಂಘದ ಕಾರ್ಯದರ್ಶಿಯಾದ ಹೈದರಾಬಾದ್ ನಿವಾಸಿ ಶ್ರೀ ಜಗದೇವ ಹಿರೇಮಠ ಅವರ ಸೇವೆಯು ಶ್ಲಾಘನೀಯವಾಗಿದೆ.

೨೬. ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆಯ ಪರಿಷ್ಕೃತ ಆವೃತ್ತಿ

ಇದೀಗ ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಗ್ರಂಥವು ಪರಿಷ್ಕೃತಗೊಂಡು ಪ್ರಕಟವಾಗುತ್ತಲಿದೆ. ಈ ಗ್ರಂಥದ ಉಪೋದ್ಘಾತ ಪ್ರಕರಣದಲ್ಲಿ ಅನೇಕ ಸಂಶೋಧಿತ ವಿಷಯಗಳನ್ನು ಅಳವಡಿಸಲಾಗಿದೆ. ಅದು ''ಮುನ್ನೋಟ''ವೆಂದು ಕರೆಯಲ್ಪಟ್ಟಿದೆ. ಈ ಎರಡೂ ಸಂಪುಟಗಳ ಮುಖಪುಟ ವಿನ್ಯಾಸವನ್ನೂ ಸಹ ಸಂಪೂರ್ಣವಾಗಿ ಬದಲಿಸಿ ಅದರ ಅಂದವನ್ನು ಇನ್ನಷ್ಟು ಆಕರ್ಷಣೀಯವಾಗಿ ಮಾಡಲಾಗಿದೆ. ಈ ಪರಿಷ್ಕೃತ ಪ್ರಥಮ ಆವೃತ್ತಿಯು ೨೦೦೯ರ ಅಂತಿಮ ಹಂತದಲ್ಲಿ ಲೋಕಾರ್ಪಣವಾಗುತ್ತಿರುವುದು ಇನ್ನಷ್ಟು ಜನಮನವನ್ನು ತನ್ನತ್ತ ಆಕರ್ಷಿಸಿ ಇದರಲ್ಲಡಗಿದ ಆಧ್ಯಾತ್ಮಿಕ ಐಸಿರಿಯನ್ನು ಸೂರೆಗೊಳ್ಳುವಲ್ಲಿ ಸಂಶಯ ವಿಲ್ಲವೆಂದು ಭಾವಿಸಲಾಗಿದೆ.

೨೭. ಶ್ರೀ ಸಿದ್ಧಾಂತ ಶಿಖಾಮಣಿ ಪಾರಾಯಣ ಗ್ರಂಥ

ಈ ಗ್ರಂಥದಲ್ಲಿ ಪಾರಾಯಣಕ್ಕೆ ಸಂಬಂಧಿಸಿದ ನ್ಯಾಸ, ಧ್ಯಾನ, ಮತ್ತು ಮಾಹಾತ್ಮ್ಯಾದಿಗಳಿಗೆ ಸಂಬಂಧಿಸಿದ ಶ್ಲೋಕಗಳನ್ನು ವಿದ್ವಾಂಸರಿಂದ ವಿರಚಿಸಿ ಗ್ರಂಥಾರಂಭದಲ್ಲಿ ಸಂಯೋಜಿಸಲಾಗಿದೆ. ಈ ಗ್ರಂಥದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ೧ ರಿಂದ ೨೧ ಪರಿಚ್ಛೇದಗಳಲ್ಲಿ ಬರುವ ಎಲ್ಲ ಶ್ಲೋಕಗಳಿಗೆ ಸಂಕ್ಷೇಪವಾದ ಅರ್ಥ ವಿವರಣೆಯನ್ನು ಕನ್ನಡದಲ್ಲಿ ಕೊಡಲಾಗಿದೆ. ಇದರ ಕನ್ನಡ ಅನುವಾದವು ಶ್ರೀ ಕಾಶಿ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳಿಂದ ವಿರಚಿತವಾಗಿದ್ದು ಈ ಗ್ರಂಥವನ್ನು ಬೆಂಗಳೂರಿನ ವಿಜ್ಞಾನಿಗಳಾದ ಡಾ. ಎಸ್.ಆರ್. ಸಿದ್ಧಲಿಂಗಪ್ಪನವರು ಸಂಪಾದಿಸಿದ್ದಾರೆ. ಈ ಗ್ರಂಥವು ಕಾಶೀ ಮಹಾಪೀಠದ ಶೈವಭಾರತಿ ಶೋಧ ಪ್ರತಿಷ್ಠಾನದಿಂದ ೨೦೦೯ರಲ್ಲಿ ಮುದ್ರಣಗೊಂಡಿರುತ್ತದೆ. ಈ ಗ್ರಂಥವು ಪಾರಾಯಣ ಮಾಡುವವರಿಗೆ ಮತ್ತು ಸ್ವಾಧ್ಯಾಯವನ್ನು ಮಾಡಬಯಸುವವರಿಗೆ ಅತ್ಯಂತ ಉಪಯೋಗಿ ಗ್ರಂಥವಾಗಿ

ರುತ್ತದೆ. ಕಾರಣ ಪ್ರತಿಯೊಬ್ಬರು ಇದರ ಪ್ರಯೋಜನವನ್ನು ಅವಶ್ಯವಾಗಿ ಪಡೆದುಕೊಳ್ಳಬೇಕು. ಇದೊಂದು ಅಪೂರ್ವವಾದ ಗ್ರಂಥವು.

ಈ ವಿಧವಾಗಿ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ಅಂದಿನಿಂದ ಇಂದಿನವರೆಗೆ ಅನೇಕ ವಿದ್ವಾಂಸರು ಈ ಗ್ರಂಥಕ್ಕೆ ಭಾಷ್ಯ, ಟೀಕೆ ಹಾಗೂ ಪ್ರವಚನರೂಪದ ಕೃತಿಗಳನ್ನು ರಚಿಸಿ ಈ ಗ್ರಂಥದ ತತ್ತ್ವವನ್ನು ಸಾಮಾನ್ಯ ಜನರವರೆಗೆ ಮುಟ್ಟಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾರೆ. ಜಿಜ್ಞಾಸುಗಳು ಈ ಎಲ್ಲ ಗ್ರಂಥಗಳನ್ನು ಸಂಗ್ರಹಿಸಿ ಆಯಾ ಗ್ರಂಥದಲ್ಲಿ ಬರುವ ವೈಶಿಷ್ಟ್ಯತೆಯನ್ನು ಅನುಲಕ್ಷಿಸಿ ತಮ್ಮ ಜ್ಞಾನ ಭಾಂಡಾರವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಬೇಕು.

**ಶ್ರೀ ಸಿದ್ಧಾಂತ ಶಿಖಾಮಣಿಯ ಅಂತರಂಗಾವಲೋಕನ :**

ಶ್ರೀ ಸಿದ್ಧಾಂತ ಶಿಖಾಮಣಿಯು ವೀರಶೈವ ಸಿದ್ಧಾಂತದ ಸರ್ವೋತ್ಕೃಷ್ಟ ಗ್ರಂಥ ವಾಗಿರುತ್ತದೆ. ವೇದಾಗಮಗಳಲ್ಲಿ ಪ್ರತಿಪಾದಿಸಲ್ಪಟ್ಟ ವೀರಶೈವ ತತ್ತ್ವಸಿದ್ಧಾಂತವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಇಲ್ಲಿ ಶ್ರೀ ರೇಣುಕಾಗಸ್ತ್ಯರ ಸಂವಾದ ರೂಪದಲ್ಲಿ ಪ್ರತಿಪಾದಿಸಿದ್ದಾರೆ. ಶ್ರೀ ಶಿವಯೋಗಿ ಶಿವಾಚಾರ್ಯರ ದೃಷ್ಟಿಯಲ್ಲಿ ವೇದ ಮತ್ತು ಆಗಮಗಳು ಪರಸ್ಪರ ಭಿನ್ನ ವಿಚಾರದ ಪ್ರತಿದ್ವಂದ್ವಿಯಾದ ವಾಙ್ಮಯವಲ್ಲ. ಆದರೆ ಒಂದೇ ವಿಷಯವನ್ನು ಪ್ರತಿಪಾದಿಸುವ ಪರಸ್ಪರ ಪೂರಕವಾದ ವಾಙ್ಮಯವು. ಅಂತೆಯೇ ಶ್ರೀ ಶಿವಯೋಗಿ ಶಿವಾಚಾರ್ಯರು–

ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶ್ಯಂ ಜ್ಞೇಯಂ ಪಂಡಿತೈರೇತಯೋಸ್ಸದಾ ॥

(ಸಿ.ಶಿ. ೫–೧೩)

ತಮ್ಮ ಈ ಉಕ್ತಿಯಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾರೆ. ತಾತ್ಪರ್ಯವೇನೆಂದರೆ ಇಲ್ಲಿ ಪ್ರಯೋಗಿಸಲ್ಪಟ್ಟ ವೇದ ಶಬ್ದಕ್ಕೆ ಸುಪ್ರಸಿದ್ಧಗಳಾದ ನಾಲ್ಕು ವೇದಗಳೆಂತಲೂ ಮತ್ತು ಸಿದ್ಧಾಂತ ಶಬ್ದಕ್ಕೆ ಇಪ್ಪತ್ತೆಂಟು ಶಿವಾಗಮಗಳೆಂತಲೂ ಅರ್ಥೈಸಿಕೊಳ್ಳಬೇಕು. ಹೀಗೆ ವೇದಗಳಲ್ಲಾಗಲೀ ಅಥವಾ ಸಿದ್ಧಾಂತ ಸಂಜ್ಞಕಗಳಾದ ಇಪ್ಪತ್ತೆಂಟು ಶಿವಾಗಮಗಳಲ್ಲಾಗಲೀ ಒಂದೇ ವಿಷಯವು ಪ್ರತಿಪಾದಿಸಲ್ಪಟ್ಟಿರೋಣದರಿಂದ ಅವೆರಡನ್ನೂ ಪಂಡಿತರು ಪ್ರಮಾಣಗಳನ್ನಾಗಿ ಸ್ವೀಕರಿಸಬೇಕೆಂಬ ತಮ್ಮ ಸಮನ್ವಯ ದೃಷ್ಟಿಯನ್ನು ತಿಳಿಯಪಡಿಸಿ ಎರಡೂ ವಾಙ್ಮಯದ ಸಾಮಂಜಸ್ಯವನ್ನು ಅರುಹಿದ್ದಾರೆ.

ಈ ಜಗತ್ತಿನಲ್ಲಿಯ ಬಹಳಷ್ಟು ಜನ ವಿದ್ವಾಂಸರು ತಮ್ಮ ಬುದ್ಧಿಬಲವನ್ನು ಪರಸ್ಪರ ಪ್ರತಿದ್ವಂದ್ವಿ ವಿಚಾರದಲ್ಲಿ ಹ್ರಾಸಮಾಡಿಕೊಳ್ಳುತ್ತಿರುವುದನ್ನು ಅನುಲಕ್ಷಿಸಿ ಶ್ರೀ ಶಿವಯೋಗಿ ಸಿವಾಚಾರ್ಯರು ಎಲ್ಲ ವಿದ್ವಾಂಸರಿಗೆ ಒಂದು ಕಿವಿಮಾತನ್ನು–

ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ।

(ಸಿ.ಶಿ. ೫–೪)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ನಮ್ಮ ದೇಶದಲ್ಲಿಯ ಸಾಂಖ್ಯ, ಯೋಗ, ಪಾಂಚರಾತ್ರ ಮತ್ತು ಪಾಶುಪತ ಮುಂತಾದ ದರ್ಶನಗಳು ವೇದಾಗಮ ಮೂಲಕಗಳಾಗಿರೋಣದರಿಂದ ಇವುಗಳನ್ನಾರೂ ಯುಕ್ತಿ ಪ್ರಯುಕ್ತಿಗಳಿಂದ ಖಂಡಿಸ ಕೂಡದು. ಒಂದು ವೇಳೆ ಈ ಸಮನ್ವಯ ದೃಷ್ಟಿಯನ್ನು ಪರಿತ್ಯಜಿಸಿದ್ದೇ ಆದರೆ ಸುಂದೋಪಸುಂದ ನ್ಯಾಯದಂತೆ ಸರ್ವದರ್ಶನಗಳು ಖಂಡಿತಗಳಾಗಿ ಕೊನೆಗೆ ಯಾವ ನಿಷ್ಕರ್ಷವೂ ಪ್ರಾಪ್ತವಾಗುವುದಿಲ್ಲ. ಅಂತೆಯೇ ಶ್ರೀ ಶಿವಯೋಗಿ ಶಿವಾಚಾರ್ಯರು ತಾವು ವಿರಚಿಸಿದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಮತಮತಾಂತರಗಳ ಖಂಡನ–ಮಂಡನಗಳಿಗೆ ಅವಕಾಶವನ್ನು ಕೊಡದೆ ದ್ವೈತಾದ್ವೈತ ಸಿದ್ಧಾಂತಗಳ ಸಮನ್ವಯವನ್ನು ಸಾಧಿಸುವುದಕ್ಕಾಗಿ ಸರ್ವಮಾನ್ಯವಾದ ಷಟ್‌ಸ್ಥಲ ಸಿದ್ಧಾಂತವನ್ನು ಇಲ್ಲಿ ಉಪದೇಶಿಸಿದ್ದಾರೆ.

ಶ್ರೀ ಮದ್ಭಗವದ್ಗೀತೆಯು ಅರ್ಜುನನ ಮೋಹವನ್ನು ನಿರಸನ ಮಾಡುವ ಉದ್ದೇಶದಿಂದ ಉಪದೇಶಿಸಲ್ಪಟ್ಟ ಗ್ರಂಥವಾಗಿರುವಂತೆ, ಶ್ರೀ ಅಗಸ್ತ್ಯ ಮಹರ್ಷಿಯ ದ್ವೈತಾದ್ವೈತಗಳ ಸಂದೇಹ ಬುದ್ಧಿಯನ್ನು ದೂರಮಾಡುವುದಕ್ಕಾಗಿ ಶ್ರೀ ಸಿದ್ಧಾಂತ ಶಿಖಾಮಣಿಯು ಶ್ರೀ ಜಗದ್ಗುರು ರೇಣುಕರಿಂದ ಉಪದೇಶಿಸಲ್ಪಟ್ಟಿದೆ. ಅಗಸ್ತ್ಯ ಮಹರ್ಷಿಯು ಸಾಮಾನ್ಯವಾದ ವ್ಯಕ್ತಿಯೇನಲ್ಲ, ಸರ್ವಶಾಸ್ತ್ರಗಳನ್ನು ಬಲ್ಲ ಮಹಾ ಮೇಧಾವಿಯಾದ ಹಾಗೂ ಪರಮ ತಪಸ್ವಿಯಾದ ವ್ಯಕ್ತಿತ್ವ ಅವನದಾಗಿತ್ತು. ಹೀಗಿದ್ದರೂ ದ್ವೈತಸಿದ್ಧಾಂತವು ಸತ್ಯವಾದುದೋ ಅಥವಾ ಅದ್ವೈತ ಸಿದ್ಧಾಂತವು ಸತ್ಯವಾದುದೋ? ಎಂಬ ಸಂಶಯವು ಮಾತ್ರ ಅವನ ಮನಸ್ಸಿನಲ್ಲಿ ಬೇರೂರಿಕೊಂಡಿತ್ತು. ಅಂತೆಯೇ ಅಗಸ್ತ್ಯರು ಶ್ರೀ ರೇಣುಕರನ್ನು ಕುರಿತು–

ಉಕ್ತ್ವಾ ಭವಾನ್ ಸಕಲಲೋಕಮಹೋಪಕಾರಂ ।
ಸಿದ್ಧಾಂತಸಂಗ್ರಹಮನಾದೃತಬಾಹ್ಯತಂತ್ರಮ್ ।
ಸದ್ಯಃ ಕೃತಾರ್ಥಯಿತುಮರ್ಹತಿ ದಿವ್ಯಯೋಗಿನ್
ನಾನಾಗಮಶ್ರವಣರ್ತಿತಸಂಶಯಂ ಮಾಮ್ ॥

(ಸಿ.ಶಿ. ೪–೫೪)

ಈ ವಿಧವಾಗಿ ಪ್ರಾರ್ಥಿಸಿಕೊಂಡಿದ್ದಾರೆ. ಅಗಸ್ತ್ಯರ ಈ ಪ್ರಾರ್ಥನೆಯನ್ನು ನೋಡಿದಾಗ ಅವರು ನಾನಾ ವಿಧ ಆಗಮಗಳನ್ನು ಅಭ್ಯಸಿಸಿದ್ದರೆಂಬುದು ತಿಳಿದು ಬರುವದರ ಜೊತೆಗೆ ಸಂಶಯಗ್ರಸ್ತರಾಗಿದ್ದರೆಂಬುದೂ ಸಹ ಸ್ಪಷ್ಟವಾಗುತ್ತದೆ. ತನ್ನಲ್ಲುಂಟಾದ ಇಂಥ ಸಂದೇಹಗಳು ಅದೆಷ್ಟೋ ಜನರಲ್ಲಿ ಹುಟ್ಟಬಹುದೆಂದು ಉದ್ದೇಶವನ್ನಿಟ್ಟುಕೊಂಡೇ ಸಕಲರಿಗೂ ಮಹಾನ್ ಉಪಕಾರವಾಗುವಂಥ ಸಿದ್ಧಾಂತವನ್ನು ಉಪದೇಶಿಸಿ ತನ್ನೊಂದಿಗೆ ಸರ್ವರನ್ನೂ ಕೃತಾರ್ಥಗೊಳಿಸಬೇಕೆಂಬ ಸಮಷ್ಟಿರೂಪವಾದ ಪ್ರಾರ್ಥನೆಯನ್ನು ಶ್ರೀ ಅಗಸ್ತ್ಯರು ರೇಣುಕಭಗವತ್ಪಾದರಿಗೆ ಮಾಡಿಕೊಂಡಿದ್ದಾರೆ.

ಮಹರ್ಷಿ ಅಗಸ್ತ್ಯನ ಈ ಪ್ರಾರ್ಥನೆಯನ್ನು ಮನ್ನಿಸಿಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ದ್ವೈತಾದ್ವೈತಗಳ ಸಮನ್ವಯರೂಪವಾದ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಈ ಗ್ರಂಥದಲ್ಲಿ ಸವಿಸ್ತಾರವಾಗಿ ಉಪದೇಶಿಸಿದ್ದಾರೆ.

ಈ ಗ್ರಂಥದಲ್ಲಿ ಒಟ್ಟು ಇಪ್ಪತ್ತೊಂದು ಪರಿಚ್ಛೇದಗಳಿರುತ್ತವೆ. ಇವುಗಳಲ್ಲಿ ಮೊದಲಿನ ನಾಲ್ಕು ಪರಿಚ್ಛೇದಗಳಲ್ಲಿ ಮಂಗಲಾಚರಣೆ, ಕವಿಯ ವಂಶವರ್ಣನೆ, ಕೈಲಾಸ ಪರ್ವತದಲ್ಲಿಯ ಶಿವನ ಒಡ್ಡೋಲಗದ ವರ್ಣನೆ, ಶ್ರೀ ಜಗದ್ಗುರು ರೇಣುಕರ ಸೋಮೇಶ್ವರ ಲಿಂಗಾವಿರ್ಭಾವ ವರ್ಣನೆ ಮತ್ತು ಅಗಸ್ತ್ಯಾಶ್ರಮದ ವರ್ಣನೆ ಮುಂತಾದ ವಿಷಯಗಳು ಸವಿಸ್ತಾರವಾಗಿ ವರ್ಣಿಸಲ್ಪಟ್ಟಿರುತ್ತವೆ. ಈ ಗ್ರಂಥದ ಐದನೆಯ ಪರಿಚ್ಛೇದದಿಂದ ಇಪ್ಪತ್ತನೆಯ ಪರಿಚ್ಛೇದದವರೆಗಿನ ಗ್ರಂಥಭಾಗದಲ್ಲಿ ಅತಿಮುಖ್ಯವಾದ ಷಟ್‌ಸ್ಥಲ ಸಿದ್ಧಾಂತವು ನಿರೂಪಿಸಲ್ಪಟ್ಟಿದೆ. ಇನ್ನು ಕೊನೆಯದಾದ ಇಪ್ಪತ್ತೊಂದನೆಯ ಪರಿಚ್ಛೇದದಲ್ಲಿ ಶ್ರೀ ಲಂಕೆಯೊಳಗೆ ರೇಣುಕರು ಮಾಡಿದ ತ್ರಿಕೋಟಿ ಶಿವಲಿಂಗ ಸ್ಥಾಪನಲೀಲೆಯನ್ನು ವರ್ಣಿಸಲಾಗಿದೆ. ಇದಿಷ್ಟು ಈ ಗ್ರಂಥದ ಸ್ಥೂಲವಾದ ಒಳನೋಟವು.

**ಶ್ರೀ ಸಿದ್ಧಾಂತ ಶಿಖಾಮಣಿಯ ಏಕೋತ್ತರಶತಸ್ಥಲಗಳು :**

ವೀರಶೈವ ಸಿದ್ಧಾಂತದಲ್ಲಿ ಸ್ಥಲ ಶಬ್ದವು ಒಂದು ಪ್ರಮುಖವಾದ ದಾರ್ಶನಿಕ ಪಾರಿಭಾಷಿಕ ಶಬ್ದವಾಗಿದೆ. ಯಾವುದಕ್ಕೆ ಪರಶಿವ ಪರಬ್ರಹ್ಮವೆಂಬ ಶಬ್ದಗಳು ಪ್ರಯೋಗಿಸಲ್ಪಟ್ಟಿರುತ್ತವೆಯೋ ಅದ್ಕಕೇನೇ ಇಲ್ಲಿ ಸ್ಥಲವೆಂಬುದಾಗಿ ಕರೆಯಲಾಗಿದೆ.

ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಮ್ ।
ಪುನಃ ಪುನಸ್ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಮ್ ॥

ಎಂಬ ಉಕ್ತಿಯಂತೆ ಈ ಚರಚರಾತ್ಮಕವಾದ ಜಗತ್ತು ಯಾವುದರಲ್ಲಿ ಇರುತ್ತದೆಯೋ ಕೊನೆಗೆ ಯಾವುದರಲ್ಲಿ ಲಯವಾಗುತ್ತದೆಯೋ ಅಂತಹ ಆ ಪರಶಿವಲಿಂಗಕ್ಕೆ ಅರ್ಥಾತ್ ಪರಬ್ರಹ್ಮತತ್ತ್ವಕ್ಕೆ ಸ್ಥಲವೆಂಬುದಾಗಿ ಕರೆಯಲಾಗಿದೆ. ಈ ಸ್ಥಲತತ್ತ್ವವು ತನ್ನ ವಿನೋದಕ್ಕಾಗಿ ಅಂಗಸ್ಥಲ ಮತ್ತು ಲಿಂಗಸ್ಥಲವೆಂಬುದಾಗಿ ವಿಭಾಗವನ್ನು ಪಡೆಯುತ್ತದೆ. ಮುಂದೆ ಆ ಅಂಗಸ್ಥಲವು ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗವೆಂತಲೂ, ಅದೇ ಪ್ರಕಾರವಾಗಿ ಲಿಂಗಸ್ಥಲವೂ ಸಹ ಇಷ್ಟಲಿಂಗ, ಪ್ರಾಣಲಿಂಗ ಹಾಗೂ ಭಾವಲಿಂಗ ಎಂಬುದಾಗಿ ಮೂರು ವಿಧವಾಗಿ ರೂಪಗೊಳ್ಳುತ್ತದೆ. ಮುಂದೆ ಈ ಮೂರು ಮೂರು ಅಂಗ ಮತ್ತು ಲಿಂಗಸ್ಥಲಗಳು ಇನ್ನಷ್ಟು ವಿಸ್ತಾರಗೊಂಡು ಆರು-ಆರು ಪ್ರಕಾರಗಳಾಗುತ್ತವೆ. ಅವುಗಳಲ್ಲಿ ತ್ಯಾಗಾಂಗವು ಭಕ್ತ ಮತ್ತು ಮಾಹೇಶನೆಂತಲೂ, ಭೋಗಾಂಗವು ಪ್ರಸಾದಿ ಹಾಗೂ ಪ್ರಾಣಲಿಂಗಿಯೆಂತಲೂ, ಅದೇ ಪ್ರಕಾರವಾಗಿ ಯೋಗಾಂಗವು ಶರಣ ಮತ್ತು ಐಕ್ಯವೆಂಬುದಾಗಿ ಆರು ಪ್ರಕಾರವಾಗಿ ವಿಕಾಸಗೊಳ್ಳುತ್ತದೆ.

ಇದರಂತೇನೇ ಇಷ್ಟಲಿಂಗವು ಆಚಾರಲಿಂಗ, ಗುರುಲಿಂಗವೆಂತಲೂ ಪ್ರಾಣಲಿಂಗವು ಶಿವಲಿಂಗ ಜಂಗಮಲಿಂಗವೆಂತಲೂ ಮತ್ತು ಭಾವಲಿಂಗವು ಪ್ರಸಾದಲಿಂಗ ಮತ್ತು ಮಹಾಲಿಂಗವೆಂಬುದಾಗಿ ವಿಕಾಸಗೊಳ್ಳುವುದು. ಹೀಗೆ ಅಂಗ-ಲಿಂಗಗಳು ಷಡ್ ವಿಧಗಳಾಗಿ ರೂಪಗೊಂಡು ಅಂಗಷಟ್‌ಸ್ಥಲ ಮತ್ತು ಲಿಂಗಷಟ್‌ಸ್ಥಲಗಳೆಂಬುದಾಗಿ ರೂಪಗೊಳ್ಳುತ್ತವೆ. ಈ ಅಂಗ ಹಾಗೂ ಲಿಂಗಷಟ್‌ಸ್ಥಲಗಳನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಮವಾಗಿ ನಾಲ್ವತ್ನಾಲ್ಕು ಹಾಗೂ ಐವತ್ತೇಳು ವಿಭಾಗಗಳಲ್ಲಿ ಸೂಕ್ಷ್ಮವಾಗಿ ವಿವೇಚಿಸಿದ್ದನ್ನಿಲ್ಲಿ ಕಾಣಬಹುದಾಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯ ಪಿಂಡಸ್ಥಲದಿಂದ ಸಹ ಭೋಜನ ಸ್ಥಲದವರೆಗಿನ ನಾಲ್ವತ್ನಾಲ್ಕು ಅಂಗಸ್ಥಲಗಳಲ್ಲಿ ಸಾಧಕನ ಅಂತರಂಗದ ವಿಕಾಸ ಸ್ಥಿತಿಯನ್ನು ವಿವರಿಸಿ ಕೊನೆಗೆ ಐಕ್ಯಸ್ಥಿತಿಯನ್ನು ನಿರೂಪಿಸಲಾಗಿದೆ. ಹೀಗೆ ಲಿಂಗೈಕ್ಯಸ್ಥಿತಿಯನ್ನು ಪಡೆದು ಲಿಂಗರೂಪನೇ ಆದ ಆ ಶಿವಯೋಗಿಯ ಜೀವನ್ಮುಕ್ತಿಯ ಸ್ಥಿತಿಯನ್ನು ದೀಕ್ಷಾಗುರು ಸ್ಥಲದಿಂದ ಮೊದಲು ಗೊಂಡು ಜ್ಞಾನಶೂನ್ಯಸ್ಥಲದವರೆಗಿನ ಐವತ್ತೇಳು ಲಿಂಗಸ್ಥಲಗಳಲ್ಲಿ ವಿವರಿಸಿಲಾಗಿದೆ. ಈ ವಿಧವಾಗಿ ಒಟ್ಟು ನೂರೊಂದು ಸ್ಥಲಗಳಲ್ಲಿ ಸಾಧಕನು ಪರಿಪೂರ್ಣವಾದ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದುವ ಸೂಕ್ಷ್ಮಾತಿಸೂಕ್ಷ್ಮವಾದ ಮನೋವಿಕಾಸವಾದ ಮಹಾಮಾರ್ಗವನ್ನು ಇಲ್ಲಿ ವಿವರಿಸಿದ್ದನ್ನು ಕಾಣಬಹುದಾಗಿದೆ.

ಈ ವಿಧವಾದ ನೂರೊಂದು ಸ್ಥಲಗಳ ವಿಶ್ಲೇಷಣಾತ್ಮಕವಾದ ಮೊದಲ ಗ್ರಂಥ ವೆಂದರೆ ಶ್ರೀಸಿದ್ಧಾಂತ ಶಿಖಾಮಣಿಯೇ ಆಗಿರುತ್ತದೆ. ಈ ಗ್ರಂಥದ ಆಧಾರದ ಮೇಲಿಂದಲೇ ಪರಿವರ್ತಿಸಿ ಅನೇಕ ಜನ ವಿದ್ವಾಂಸರು ಈ ನೂರೊಂದು ಸ್ಥಲಗಳನ್ನು ತಮ್ಮ ಪರಿಯಲ್ಲಿ ವಿವೇಚಿಸಿದ್ದನ್ನು ಕಾಣಬಹುದು. ಹದಿನೇಳನೆಯ ಶತಮಾನದಲ್ಲಿ ಆಗಿಹೋದ ಶ್ರೀ ಮರಿತೋಂಟದಾರ್ಯರು 'ಕೈವಲ್ಯಸಾರ' ಎಂಬ ತಮ್ಮ ಗ್ರಂಥದಲ್ಲಿ ನೂರೊಂದು ಸ್ಥಲಗಳನ್ನು ವಿವರಿಸಿದ್ದಾರೆ. ಇದೇ ಪ್ರಕಾರವಾಗಿ ಹದಿನಾರನೆಯ ಶತಮಾನದ ಶ್ರೀಮನ್ನಿಜಗುಣ ಶಿವಯೋಗಿಗಳು ತಾವು ರಚಿಸಿದ ವಿವೇಕ ಚಿಂತಾಮಣಿಯಲ್ಲಿ ಏಕೋತ್ತರಶತಸ್ಥಲಗಳನ್ನು ವಿವರಿಸಿದ್ದಾರೆ. ಇದರಂತೆ ಹದಿನೈದನೆಯ ಶತಕದ ಆರಂಭ ದವರಾಗಿದ್ದ ಶ್ರೀ ಮೊಗ್ಗೆಯಮಾಯಿದೇವರು ಷಟ್‌ಸ್ಥಲದ 'ಏಕೋತ್ತರಶತಪದಿ'ಯೆಂಬ ಗ್ರಂಥದಲ್ಲಿ, ಹದಿನೈದನೆಯ ಶತಕದವರೇ ಆದ ಮಹಾಲಿಂಗದೇವರು, ಜಕ್ಕಣಾರ್ಯರು ಮತ್ತುಗುಬ್ಬಿಯ ಮಲ್ಲಣ್ಣಾರ್ಯ ಮುಂತಾದವರು ಕ್ರಮವಾಗಿ ಏಕೋತ್ತರ ಶತಸ್ಥಲಗಳು ಮತ್ತು 'ಗಣಭಾಷಿತ ರತ್ನಮಾಲೆ' ಎಂಬ ಗ್ರಂಥಗಳಲ್ಲಿ ನೂರೊಂದು ಸ್ಥಲಗಳ ಬಗ್ಗೆ ವಿವರಿಸಿದ್ದನ್ನು ಕಾಣಬಹುದು. ಈ ರೀತಿಯಾಗಿ ನೂರೊಂದು ಸ್ಥಲಗಳ ನಿಲುವನ್ನು ನಿರೂಪಿಸಿದ ಪರವರ್ತಿ ಸರ್ವಗ್ರಂಥಕಾರರಿಗೆಲ್ಲ ಶ್ರೀ ಶಿವಯೋಗಿ ಶಿವಾಚಾರ್ಯರ ಶ್ರೀ ಸಿದ್ಧಾಂತ ಶಿಖಾಮಣಿಯೇ ಮೂಲವೆಂಬುದರಲ್ಲಿ ಸಂದೇಹವಿರುವುದಿಲ್ಲ. ಇತ್ತೀಚೆಗೆ ವಿಜಾಪುರ ಜಿಲ್ಲೆಯ ತೊರವಿಗ್ರಾಮದ ಶ್ರೀ ಲಕ್ಕಪ್ಪ ಶಿರಹಟ್ಟಿ ಎಂಬುವವರೂ ಸಹ ''ನೂರೊಂದು ನೆಲೆಯ ನಿಲುವು'' ಎಂಬ ಲಘು ಗ್ರಂಥವನ್ನು ವಿರಚಿಸಿದ್ದನ್ನು ಸಹ ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ತತ್ತ್ವಶಾಸ್ತ್ರದ ವಿಶ್ಲೇಷಣೆಯ ಜೊತೆಗೆ ಸಾಧಕನಿಗೆ ಅವಶ್ಯವಾಗಿ ಬೇಕಾಗಿರುವ ಆಚಾರ-ವಿಚಾರಗಳ ಬಗ್ಗೆಯೂ ಕೂಲಂಕಷವಾಗಿ ವಿವೇಚಿಸ ಲಾಗಿದೆ. ವೀರಶೈವ ಸಿದ್ಧಾಂತದ ಪ್ರಮುಖ ತತ್ತ್ವಗಳಾದ ಅಷ್ಟಾವರಣ, ಪಂಚಾಚಾರ ಹಾಗೂ ಷಟ್‌ಸ್ಥಲಗಳ ವಿಚಾರಗಳು ಸವಿಸ್ತಾರವಾಗಿ ಇಲ್ಲಿ ನಿರೂಪಿತವಾಗಿರೋಣದ ರಿಂದ ಈ ಗ್ರಂಥವು ವೀರಶೈವರಿಗೆ ಸರ್ವಸ್ವವಾಗಿರುತ್ತದೆ. ಅಂತೆಯೇ ಶ್ರೀ ಶಿವಯೋಗಿ ಶಿವಾಚಾರ್ಯರು-

ಸರ್ವಸ್ವಂ ವೀರಶೈವಾನಾಂ ಸಕಲಾರ್ಥಪ್ರಕಾಶನಂ ।
ಅಸ್ಪೃಷ್ಟಮಖಿಲೈರ್ದೋಷೈರಾದೃತಂ ಶುದ್ಧಮಾನಸೈ :

( ಸಿ.ಶಿ. ೧–೨೨)

ಎಂಬುದಾಗಿ ಈ ಗ್ರಂಥದ ಹಿರಿಮೆ–ಗರಿಮೆಗಳನ್ನು ವರ್ಣಿಸಿದ್ದಾರೆ. ಈ ಗ್ರಂಥವು ಧಾರ್ಮಿಕ ಆಚಾರ–ವಿಚಾರಗಳನ್ನು ಬೋಧಿಸುವುದರ ಜೊತೆಗೆ ಅತಿ ಮಹತ್ತ್ವಪೂರ್ಣವಾದ ಸಮಾಜಶಾಸ್ತ್ರವನ್ನೂ ಸಹ ಉಪದೇಶಿಸುತ್ತದೆ. ಈ ಗ್ರಂಥದ ಒಂಭತ್ತನೆಯ ಪರಿಚ್ಛೇದದಲ್ಲಿ ಬರುವ ಭಕ್ತಮಾರ್ಗಕ್ರಿಯಾಸ್ಥಲದಲ್ಲಿ ವೀರಶೈವ ಧರ್ಮೋಚಿತವಾದ ಆಚಾರ–ವಿಚಾರ ಮತ್ತು ಸಮಾಜಶಾಸ್ತ್ರವು ವಿಶೇಷವಾಗಿ ಉಲ್ಲೇಖಿತವಾಗಿದೆ. ಕಾರಣ ಜಿಜ್ಞಾಸುಗಳು ಆ ಭಾಗವನ್ನು ಅವಶ್ಯವಾಗಿ ಅವಲೋಕಿಸಬೇಕು.

ಹೀಗೆ ವೀರಶೈವ ಧರ್ಮ ದರ್ಶನಗಳ ಸರ್ವಾಂಗೀಣ ವಿಚಾರಗಳು ಶ್ರೀಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿಸಲ್ಪಟ್ಟಿರೋಣದರಿಂದ ಹಲವು ಹನ್ನೆರಡು ಗ್ರಂಥಗಳನ್ನೋದುವದಕ್ಕಿಂತ ಇದೊಂದು ಗ್ರಂಥವನ್ನು ಮಾತ್ರ ಚೆನ್ನಾಗಿ ಅಭ್ಯಸಿಸಿ ಮನನ ಮಾಡಿಕೊಂಡು, ಇಲ್ಲಿ ಹೇಳಿರುವ ಆಚಾರಸಂಹಿತೆಯನ್ನು ಆಚರಣೆಯಲ್ಲಿ ತಂದಿದ್ದೇ ಆದರೆ ಅವನು ಇದೇ ಜನ್ಮದಲ್ಲಿ ಲಿಂಗಾಂಗಸಾಮರಸ್ಯವನ್ನು ಪಡೆದು ''ಏಕೇನ ಜನ್ಮನಾ ಮುಕ್ತಿ:'' ಎಂಬ ಆಗಮೋಕ್ತಿಯನ್ನು ಸಾರ್ಥಕಪಡಿಸಿ ಕೊಂಡಂತಾಗುತ್ತದೆ.

### ಶ್ರೀ ಸಿದ್ಧಾಂತ ಶಿಖಾಮಣಿಯ ಸಾಹಿತ್ಯ ಸೌಂದರ್ಯ :

ಶ್ರೀಸಿದ್ಧಾಂತ ಶಿಖಾಮಣಿಯ ಗ್ರಂಥಕರ್ತೃವಾದ ಶ್ರೀ ಶಿವಯೋಗಿ ಶಿವಾಚಾರ್ಯರು ವೇದಾಗಮೋಪನಿಷತ್ಪುರಾಣೇತಿಹಾಸಗಳ ಪ್ರಕಾಂಡ ವಿದ್ವಾಂಸರಾಗಿದ್ದರಲ್ಲದೆ, ಓರ್ವ ಶ್ರೇಷ್ಠಕವಿಯೂ ಸಹ ಆಗಿದ್ದರೆಂಬುದು ಅವರ ಈ ಕೃತಿಯನ್ನು ಸಾಹಿತ್ಯಕ ದೃಷ್ಟಿಯಿಂದವಲೋಕಿಸಿದಾಗ ತಿಳಿದುಬರುತ್ತದೆ. ಈ ಗ್ರಂಥದ ಮುಖ್ಯ ವಿಷಯವು ತತ್ತ್ವಸಿದ್ಧಾಂತವಾಗಿದ್ದರೂ ಇದು ಪದ್ಯರೂಪವಾಗಿರೋಣದರಿಂದ ಕವಿಯು ತನ್ನ ಚಾತುರ್ಯದಿಂದ ಇದರಲ್ಲಿ ಕಾವ್ಯಗುಣಗಳನ್ನು ತುಂಬಿದ್ದಾರೆ. ಇಲ್ಲಿರುವ ವರ್ಣನಾ ಶೈಲಿಯು ಸಹಜ ಹಾಗೂ ಸ್ವಾಭಾವಿಕವಾಗಿದ್ದು, ಕವಿಯು ಪ್ರಸಂಗಾನುಸಾರವಾಗಿ ಗುಣ–ರಸ ಹಾಗೂ ಅಲಂಕಾರಾದಿಗಳನ್ನು ಅತ್ಯಂತ ಕುಶಲಪೂರ್ವಕವಾಗಿ ಇಲ್ಲಿ ಸಂಯೋಜಿಸಿದ್ದಾರೆ. ಆದಕಾರಣ ಸಾಹಿತ್ಯಗುಣಗಳ ದೃಷ್ಟಿಯಿಂದಲೂ ಇದೊಂದು ಶ್ರೇಷ್ಠ ದರ್ಜೆಯ ಕಾವ್ಯವಾಗಿರುತ್ತದೆ.

ಧಾರವಾಡ–ಕರ್ನಾಟಕ ವಿಶ್ವವಿದ್ಯಾಲಯದ ಸಂಸ್ಕೃತವಿಭಾಗದ ಪ್ರಾಧ್ಯಾಪಕರಾದ ಡಾ|| ಮಲ್ಲಿಕಾರ್ಜುನ ಪರಡ್ಡಿಯವರು ಶ್ರೀಸಿದ್ಧಾಂತ ಶಿಖಾಮಣಿಯ ಸಾಹಿತ್ಯಕ ಸರ್ವೇಕ್ಷಣವನ್ನು ಮಾಡಿ ಒಂದು ನಿಬಂಧವನ್ನು ಬೆಂಗಳೂರು ಮಹಾನಗರದಲ್ಲಿ ಜರುಗಿದ ಶ್ರೀ ಶಿವಯೋಗಿ ಶಿವಾಚಾರ್ಯರ ದ್ವಾದಶ ಶತಮಾನೋತ್ಸವದ ಸಂದರ್ಭದಲ್ಲಿ ಸಾದರಪಡಿಸಿದ್ದರು. ಅದರ ಆಧಾರದ ಮೇಲೆ ಇಲ್ಲಿ ಕೆಲವೊಂದು ವಿಚಾರಗಳನ್ನು ಸ್ಪಷ್ಟಪಡಿಸುತ್ತೇವೆ.

**ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರಯೋಗಿಸಿದ ಅಲಂಕಾರಗಳು :**

ಸಂಸ್ಕೃತ ಕಾವ್ಯಶಾಸ್ತ್ರದಲ್ಲಿ ಅಲಂಕಾರಕ್ಕೆ ಒಂದು ವಿಶೇಷವಾದ ಮಹತ್ತ್ವವಿದೆ. ಆದ್ದರಿಂದಲೇ ಶ್ರೀ ಶಿವಯೋಗಿ ಶಿವಾಚಾರ್ಯರೂ ಸಹ ಈ ಗ್ರಂಥದಲ್ಲಿ ಅನೇಕ ಕಡೆ ಸಾಕಷ್ಟು ಅಲಂಕಾರಗಳನ್ನು ಬಳಸಿರುತ್ತಾರೆ. ಅಲಂಕಾರಗಳಲ್ಲಿ ಉಪಮಾಲಂಕಾರವು ಪ್ರಸ್ತುತ ವಿಷಯವನ್ನು ಸ್ಪಷ್ಟಪಡಿಸುವುದರಲ್ಲಿ ಮತ್ತು ಕಾವ್ಯದ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಅತ್ಯಂತ ಉಪಯುಕ್ತವಾಗಿರೋಣದರಿಂದ ಈ ಗ್ರಂಥದಲ್ಲಿ ಶ್ರಿ ಶಿವಯೋಗಿ ಶಿವಾಚಾರ್ಯರು ಅದರ ಬಳಕೆಯನ್ನು ವಿಪುಲವಾಗಿ ಮಾಡಿದ್ದಾರೆ.

**ಉಪಮಾಲಂಕಾರ :**

ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ ।
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ ॥

(ಸಿ. ಶಿ. ೧–೨೦)

ಶ್ರೀ ಶಿವಯೋಗಿ ಶಿವಾಚಾರ್ಯರು ತನ್ನ ವಂಶವನ್ನು ವರ್ಣಿಸುವ ಉಪಯುಕ್ತ ಶ್ಲೋಕದಲ್ಲಿ ಉಪಯೋಗಿಸಿದ ಉಪಮಾಲಂಕಾರದ ಸಾಮ್ಯವು ಮಹಾಕವಿಕಾಳಿದಾಸನು ಬರೆದ ರಘುವಂಶ ಮಹಾಕಾವ್ಯದ ಪ್ರಥಮಸರ್ಗದಲ್ಲಿಯ–

ತದನ್ವಯೇ ಶುದ್ಧಿಮತಿ ಪ್ರಸೂತಃ ಶುದ್ಧಿಮತ್ತರಃ ।
ದಿಲೀಪ ಇತಿ ರಾಜೇಂದುರಿಂದುಃಕ್ಷೀರನಿಧಾವಿವ ॥ (ರಘು ೧–೧೨)

ಎಂಬ ದಿಲೀಪನ ವರ್ಣನೆಗೆ ಸಾಮ್ಯವಾಗಿರುತ್ತದೆ. ಅದೇ ಪ್ರಕಾರವಾಗಿ–

ನಾಭಿಸ್ಥಾನಾವಲಂಬಿನ್ಯಾ ನವಮೌಕ್ತಿಕಮಾಲಯಾ ।
ಗಂಗಯೇವ ಕೃತಾಶ್ಲೇಷಂ ಮೌಲಿಭಾಗಾವತೀರ್ಣಯಾ (ಸಿ.ಶಿ. ೩–೨೨)

ಈ ಶ್ಲೋಕದೊಳಗೆ ಶ್ರೀ ಶಿವಯೋಗಿ ಶಿವಾಚಾರ್ಯರು ಶಿವನ ಕಂಠದೊಳಗೆ ನಾಭಿಪರ್ಯಂತವಾಗಿ ಜೋಲಾಡುತ್ತಿರುವ ನೂತನವಾದ ಮುತ್ತಿನ ಮಾಲೆಗೆ ಗಂಗೆಯ ಉಪಮಾನವನ್ನು ಕೊಟ್ಟಿರುತ್ತಾರೆ. ಶಿವನ ಕಂಠದಲ್ಲಿರುವ ಆ ಮುತ್ತಿನ ಮಾಲೆಯನ್ನು ನೋಡಿ ಸಾಕ್ಷಾತ್ ಗಂಗೆಯು ಶಿವನನ್ನು ಆಲಂಗಿಸಿಕೊಂಡಿರುವಳೋ ಏನೋ ಎನ್ನುವಂತೆ ಬಹುಸುಂದರವಾದ ಉಪಮಾಲಂಕಾರವನ್ನು ಕವಿಯು ಬಳಸಿದ್ದನ್ನಿಲ್ಲಿ ಕಾಣಬಹುದು. ಶ್ರೀಶಿವಯೋಗಿ ಶಿವಾಚಾರ್ಯರು ಮೇಲೆ ಉದಾಹರಿಸಲ್ಪಟ್ಟ ಎರಡೂ ಉದಾಹರಣೆಗಳಲ್ಲಿ ಉಪಯೋಗಿಸಿದ ಉಪಮಾಲಂಕಾರದಲ್ಲಿ ಬಳಸಲ್ಪಟ್ಟ ಉಪಮಾನ ಮತ್ತು ಉಪಮೇಯಗಳ ಲಿಂಗ ವಚನಗಳನ್ನೂ ಸಹ ಅತ್ಯಂತ ಯೋಗ್ಯವಾಗಿ ಯೋಜಿಸ ಲಾಗಿದೆ. ಆದುದರಿಂದ ಈ ಅಲಂಕಾರದಲ್ಲಿ ಯಾವದೋಷವೂ ಇರುವುದಿಲ್ಲ, ಇದರಿಂದ ಕವಿಯ ರಚನಾಚಾತುರ್ಯವು ತಿಳಿದುಬರುತ್ತದೆ.

**ಮಾಲೋಪಮಾ :**

ಶ್ರೀ ಶಿವಯೋಗಿ ಶಿವಾಚಾರ್ಯರು ಉಪಮಾಲಂಕಾರದ ಜೊತೆಗೆ ಮಾಲೋಪಮಾಲಂಕಾರವನ್ನೂ ಸಹ ಬಳಸಿರುತ್ತಾರೆ. ಉದಾಹರಣೆಗಾಗಿ–

ಅರ್ಥಹೀನಾ ಯಥಾ ವಾಣಿ ಪತಿಹೀನಾ ಯಥಾ ಸತೀ ।
ಶ್ರುತಿಹೀನಾ ಯಥಾ ಬುದ್ಧಿರ್ಭಾವಹೀನಾ ತಥಾ ಕ್ರಿಯಾ ॥ (ಸಿ.ಶಿ. ೧೬–೧೯)

ಈ ಶ್ಲೋಕವನ್ನು ನೋಡಬಹುದು. ಈ ಶ್ಲೋಕದಲ್ಲಿ ಭಾವರಹಿತವಾದ ಕ್ರಿಯೆಯು ಅರ್ಥಾತ್ ಭಾವನೆಯಿಲ್ಲದ ಕ್ರಿಯೆಯು ಅರ್ಥವಿಲ್ಲದ ವಾಣಿಯಂತೆ, ಪತಿಯಿಲ್ಲದ ಸತಿಯಂತೆ ಮತ್ತು ಶ್ರುತಿಯ ಅಧ್ಯಯನವಿಲ್ಲದ ಬುದ್ಧಿಯಂತೆ ವ್ಯರ್ಥವೆಂಬುದಾಗಿ ಹೇಳಿದ್ದಾರೆ. ಇಲ್ಲಿ ಒಂದು ಉಪಮೇಯಕ್ಕೆ ಅನೇಕ ಉಪಮಾನಗಳನ್ನು ಬಳಸಿರುವದರಿಂದ ಇದಕ್ಕೆ ಮಾಲೋಪಮಾ ಎಂದು ಕರೆಯುತ್ತಾರೆ. ಪ್ರಸ್ತುತ ವಿಷಯವನ್ನು ಕವಿಯು ಬಹುಸುಂದರವಾದ ಮಾಲೋಪಮೆಯಿಂದ ಅಲಂಕೃತಗೊಳಿಸಿದ್ದನ್ನಿಲ್ಲಿ ಕಾಣಬಹುದು.

**ಪ್ರತಿವಸ್ತೂಪಮಾ :**

ಪರಿಜ್ಞಾತೇ ಶಿವೇ ಸಾಕ್ಷಾತ್ಕೋಽವಾಽನ್ಯಮಭಿಕಾಂಕ್ಷತಿ ।
ನಿಧಾನೇ ಮಹತಿ ಪ್ರಾಪ್ತೇ ಕಃ ಕಾಚಂ ಯಾಚತೇಽನ್ಯತಃ ॥ (ಸಿ.ಶಿ. ೧೩–೬)

ಶ್ರುತ್ಯಾದಿ ಪ್ರಮಾಣಗಳಿಂದ ಸಾಕ್ಷಾತ್ ಶಿವನೇ ಅನುಭವಗೋಚರವಾಗಲು ಬೇರೆ ದೇವರನ್ನು ಯಾರಾದರೂ ಅಪೇಕ್ಷಿಸುವರೇ? ಅನರ್ಘ್ಯವಾದ ರತ್ನ ಸಂಪತ್ತಿಯು ಪ್ರಾಪ್ತವಾಗಿರಲು ಕಾಜಿನಮಣಿಗಳನ್ನು ಅನ್ಯರಿಂದ ಬೇಡಬಹುದೇ? ಎಂಬ ಅರ್ಥವುಳ್ಳ ಈ ಶ್ಲೋಕದಲ್ಲಿ ಶಿವಜ್ಞಾನವು ಪ್ರಾಪ್ತವಾದವರಿಗೆ ಅದಾವ ಅನ್ಯ ವಸ್ತುವಿನ ಅಪೇಕ್ಷೆಯಿರುವುದಿಲ್ಲ ಎಂಬ ವಿಷಯವನ್ನು ಪ್ರತಿವಸ್ತೂಪಮಾ ಅಲಂಕಾರ ಮೂಲಕವಾಗಿ ಇಲ್ಲಿ ಬಹುಸುಂದರವಾಗಿ ವರ್ಣಿಸಲಾಗಿದೆ.

ಇದೇ ಪ್ರಕಾರವಾಗಿ–

ಶಿವಾನಂದಂ ಸಮಾಸಾದ್ಯ ಕೋಽವಾಽನ್ಯಮುಪತಿಷ್ಠತೇ ।
ಗಂಗಾಮೃತಂ ಪರಿತ್ಯಜ್ಯ ಕಃ ಕಾಂಕ್ಷೇನ್ಮೃಗತೃಷ್ಣಿಕಾಮ್ ॥ (ಸಿ.ಶಿ. ೧೩–೭)

ಈ ಶ್ಲೋಕದಲ್ಲಿಯೂ ಸಹ ಗಂಗಾಮೃತವನ್ನು ಪ್ರಾಶನಮಾಡಿದ ವ್ಯಕ್ತಿಯು ಮೃಗಜಲದ ಅಪೇಕ್ಷೆಯನ್ನು ಮಾಡದಿರುವಂತೆ ಶಿವಾನಂದವನ್ನು ಪಡೆದ ಶಿವಯೋಗಿಯು ಬೇರಾವುದರ ಅಪೇಕ್ಷೆಯನ್ನು ಮಾಡಲಾರನು. ಇಲ್ಲಿ ಕವಿಯು ತಾನು ಹೇಳಬೇಕಾದ ವಿಷಯವನ್ನು ಪ್ರತಿವಸ್ತೂಪಮಾಲಂಕಾರದ ಸಹಾಯದಿಂದ ಸ್ಪಷ್ಟಪಡಿಸಿರುತ್ತಾನೆ. ಮೇಲಿನ ಎರಡೂ ಉದಾಹರಣೆಗಳಲ್ಲಿ ಪ್ರಶ್ನಾರ್ಥಕ ರಚನೆಯಿದ್ದು ಅಲ್ಲಿಯೇ ಅದರ ಉತ್ತರವನ್ನೂ ಸಹ ಸೂಚಿಸಿರೋಣದರಿಂದ ಇಲ್ಲಿ ಪ್ರಶ್ನಾಲಂಕಾರವೂ ಸಹ ಇರುವುದೆಂಬುದಾಗಿ ಹೇಳಬಹುದಾಗಿದೆ. ಇದೂ ಅಲ್ಲದೆ ಎರಡನೆಯ ಉದಾಹರಣೆಯಲ್ಲಿ ಗಂಗಾಜಲಕ್ಕೆ ಅಮೃತವೆಂಬುದಾಗಿ ಕರೆದಿರೋಣದರಿಂದ ಇಲ್ಲಿ ರೂಪಕಾಲಂಕಾರವೂ ಸಹ

ಇರುವುದೆಂಬುದಾಗಿ ತಿಳಿದುಕೊಳ್ಳಬೇಕು ಹೀಗೆ ಶ್ರೀ ಶಿವಯೋಗಿ ಶಿವಾಚಾರ್ಯರು ಒಂದೇ ಶ್ಲೋಕದಲ್ಲಿ ಅನೇಕ ಅಲಂಕಾರಗಳನ್ನು ನಿಯೋಜಿಸಿದ ಅನೇಕ ಉದಾಹರಣೆಗಳನ್ನು ಕಾಣಬಹುದಾಗಿದೆ.

**ಪರಿಕರಾಲಂಕಾರ :**

ಮಲಕೋಶೇ ಶರೀರೇಸ್ಮಿನ್ ಮಹಾದುಃಖವಿವರ್ಧನೇ ।
ತಡಿದಂಕುರಸಂಕಾಶೇ ಕೋವಾ ರುಚ್ಯೇತಪಂಡಿತಃ ॥ (ಸಿ.ಶಿ. ೫–೬೮)

ಕವಿಯು ಈ ಶ್ಲೋಕದಲ್ಲಿ ಮನುಷ್ಯ ಶರೀರಕ್ಕಾಗಿ ಉಪಯೋಗಿಸಿದ ಮಲಕೋಶ, ಮಹಾದುಃಖವಿವರ್ಧನ ಮತ್ತು ತಡಿದಂಕರಸಂಕಾಶಗಳೆಂಬ ವಿಶೇಷಣಗಳು ಹೇತು ಗರ್ಭಿತಗಳೂ ಹಾಗೂ ಅರ್ಥಗರ್ಭಿತಗಳೂ ಆಗಿರುವುದರಿಂದ ಇಲ್ಲಿ ಅತಿಸುಂದರವಾದ ಪರಿಕರಾಲಂಕಾರವು ಎದ್ದುಕಾಣುತ್ತದೆ.

**ರೂಪಕಾಲಂಕಾರ :**

ಶ್ರೀ ಶಿವಯೋಗಿ ಶಿವಾಚಾರ್ಯರು ಗ್ರಂಥಾರಂಭದ ಶಿವಸ್ತುತಿರೂಪವಾದ ಮಂಗಲ ಶ್ಲೋಕವನ್ನು ರೂಪಕಾಲಂಕಾರದಿಂದಲೇ ಅಲಂಕರಿಸಿರುತ್ತಾರೆ. ಅದು ಹೇಗೆಂದರೆ–

ತ್ರೈಲೋಕ್ಯಸಂಪದಾಲೇಖ್ಯಸಮುಲ್ಲೇಖನಭಿತ್ತಯೇ ।
ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇನಮಃ ॥ (ಸಿ.ಶಿ. ೧–೧)

ಶಿವನಸ್ತುತಿಪರವಾದ ಈ ಶ್ಲೋಕದಲ್ಲಿ ಶಿವನೆಂಬ ಉಪಮೇಯಕ್ಕೆ ಮೂರು ಲೋಕದ ಸಂಪತ್ತೆಂಬ ಚಿತ್ರವನ್ನೇ ಚಿತ್ರಿಸಲು ಭಿತ್ತಿರೂಪವಾದ ಉಪಮಾನದ ಆರೋಪವನ್ನು ಮಾಡಲಾಗಿದೆ. ಅದೇ ಪ್ರಕಾರವಾಗಿ ಮೂರು ಲೋಕಗಳಿಗೆ ಸಂಪತ್ತಿನ ಹಾಗೂ ಚಿತ್ರದ ಆರೋಪವನ್ನು ಮಾಡಿರೋಣದರಿಂದ ಇಲ್ಲಿ ಬಹು ಸುಂದರವಾದ ರೂಪಕಾಲಂಕಾರವಿದೆಂಬುದು ತಿಳಿದುಬರುತ್ತದೆ.

ಜ್ಞಾನಚಂದ್ರಸಮುದ್ಭೂತಾಂ ಪರಮಾನಂದಚಂದ್ರಿಕಾಮ್
ಪಶ್ಯಂತಿ ಪರಮಾಕಾಶೇ ಮುಕ್ತಿರಾತ್ರೌ ಮಹಾಧಿಯಃ ॥ (ಸಿ.ಶಿ. ೧೯–೧೪)

ಈ ಶ್ಲೋಕದಲ್ಲಿ ಜೀವನ್ಮುಕ್ತನಾದ ಮಹಾಜ್ಞಾನಿಯು ತನಗೆ ಉತ್ಪನ್ನವಾದ ಆತ್ಮಜ್ಞಾನದಿಂದ ಸದಾ ಆನಂದವನ್ನು ಅನುಭವಿಸುತ್ತಿರುತ್ತಾನೆ ಎಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಈ ಶ್ಲೋಕದಲ್ಲಿ ಅತಿ ಸುಂದರವಾದ ರೂಪಕಾಲಂಕಾರವನ್ನು ಪ್ರತಿಪಾದಸಿದ್ದಾರೆ. ಮೇಲಿನ ಈ ಶ್ಲೋಕದಲ್ಲಿ ಮಹಾಜ್ಞಾನಿಯು ಮುಕ್ತಿರೂಪವಾದ ರಾತ್ರಿಯಲ್ಲಿ ಚಿದ್ರೂಪವೆಂಬ ಆಕಾಶದೊಳಗೆ ಜ್ಞಾನರೂಪಿಯಾದ ಚಂದ್ರನಿಂದ ಸ್ರವಿಸುತ್ತಿರುವ ಪರಮಾನಂದ ರೂಪಿಯಾದ ಚಂದ್ರಿಕೆಯನ್ನು ನೋಡುತ್ತಿರುತ್ತಾನೆ. ಇಲ್ಲಿ ಸಾಂಗರೂಪಕದ ಮೂಲಕ ಸುಂದರವಾದ ಚಿತ್ರಣವನ್ನು ಚಿತ್ರಿಸುವುದರ ಮೂಲಕ ಕಾಣಬಹುದು.

ಇದೂ ಅಲ್ಲದೆ ಕೈಲಾಸದ ವರ್ಣನೆ ಮತ್ತು ಅಗಸ್ತ್ಯಾಶ್ರಮದ ವರ್ಣನೆಯ ಪ್ರಸಂಗದಲ್ಲಿ ದೃಷ್ಟಾಂತ–ಉತ್ಪ್ರೇಕ್ಷಾ–ಪ್ರಶ್ನ–ಶ್ಲೇಷ ಮತ್ತು ಸಾರ ಮುಂತಾದ ಅನೇಕ ಅರ್ಥಾಲಂಕಾರಗಳ ಮನೋಹರವಾದ ಯೋಜನೆಯನ್ನು ಮಾಡಿದ್ದು ಕಾಣಬಹು ದಾಗಿದೆ. ಅರ್ಥಾಲಂಕಾರಗಳಂತೆ ಶಬ್ದಾಲಂಕಾರಗಳ ಬಳಕೆಯೂ ಸಹ ಅಲ್ಲಲ್ಲಿ ಆಗಿರುವದನ್ನು ನೋಡಬಹುದು, ವರ್ಣಗಳ ಪುನರಾವೃತ್ತಿಯಿಂದ ನಾದ ಮಾಧುರ್ಯ ವನ್ನುಂಟು ಮಾಡುವ ಅನುಪ್ರಾಸಾಲಂಕಾರವನ್ನು 'ಕಾಲಿಮ್ನಾಕಾಲ ಕೂಟಸ್ಯ ಕಂಠನಾಲೇ ಕಲಂಕಿತಮ್' (ಸಿ.ಶಿ. ೩–೧೯)

ಈ ಚರಣದಲ್ಲಿ ಕಾಣಬಹುದಾಗಿದೆ. ಅದರಂತೆ
'ಜ್ಯೋತಿರ್ಲಿಂಗಾನುಸಂಧಾನಮಾಂತರಂ ಲಿಂಗಧಾರಣಮ್''

(ಸಿ.ಶಿ. ೬–೩೮)

ಶ್ರೀ ಸಿದ್ಧಾಂತ ಶಿಖಾಮಣಿಯ ಈ ಚರಣದಲ್ಲಿ ಅನುನಾಸಿಕದ ಪುನರಾವರ್ತನೆ ಯಿಂದ ಶ್ರುತಿಮಾಧುರ್ಯವು ಕಂಡುಬರುತ್ತದೆ.

ಹೀಗೆ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರು ಗ್ರಂಥದ ಅನೇಕ ಭಾಗಗಳಲ್ಲಿ ಅನೇಕ ವಿಧಗಳಾದ ಅರ್ಥಾಲಂಕಾರ ಮತ್ತು ಶಬ್ದಾಲಂಕಾರಗಳನ್ನು ಯೋಜಿಸಿರುತ್ತಾರೆ. ಹೀಗೆ ಅಲಂಕಾರಗಳನ್ನು ಸಂಯೋಜಿಸಿದ್ದರೂ ಎಲ್ಲಿಯೂ ವರ್ಣನೆಯಲ್ಲಿ ಕ್ಲಿಷ್ಟತೆಯು ಕಂಡು ಬರುವುದಿಲ್ಲ. ಇದಕ್ಕೆ ವಿಪರೀತವಾಗಿ ಸರಳ ಹಾಗೂ ಸುಬೋಧ ಶೈಲಿಯಲ್ಲಿ ಈ ಗ್ರಂಥವನ್ನು ರಚಿಸಿರೋಣದರಿಂದ ಪ್ರಸಾದ ಹಾಗೂ ಮಾಧುರ್ಯಾದಿ ಗುಣಗಳ ಪ್ರತೀತಿಯು ಅನುಭವಗೋಚರವಾಗುವುದು.

ಶ್ರೀ ಸಿದ್ಧಾಂತ ಶಿಖಾಮಣಿಯ ವಿಷಯವು ತತ್ತ್ವಜ್ಞಾನ ಪ್ರಧಾನವಾದದ್ದಾಗಿದ್ದರೂ ಗ್ರಂಥದಲ್ಲಿ ಪ್ರಸಂಗಾನುಸಾರವಾಗಿ ಶಾಂತ, ಭಕ್ತಿ ಶೃಂಗಾರ, ಅದ್ಭುತ, ವೀರ ಮತ್ತು ಭೀಭತ್ಸ ಮುಂತಾದ ರಸಗಳನ್ನು ಕಾವ್ಯದಲ್ಲಿ ಬಳಸುವಲ್ಲಿ ಕವಿಗೆ ಯಶಸ್ಸು ಪ್ರಾಪ್ತವಾಗಿದೆ. ಸಂಪೂರ್ಣವಾದ ಈ ಗ್ರಂಥದಲ್ಲಿ ಅದೆಲ್ಲಿಯೂ ಕ್ಲಿಷ್ಟತೆ, ಕರ್ಣ ಕಠೋರತೆ, ದೂರಾನ್ವಯ, ದುರ್ಬೋಧತೆ ಮತ್ತು ಸಂದಿಗ್ಧತಾ ಮುಂತಾದ ದೋಷಗಳೊಂದೂ ಕಂಡುಬರುವುದಿಲ್ಲ. ಒಟ್ಟಿನ ಮೇಲೆ ಶ್ರೀ ಶಿವಯೋಗಿ ಶಿವಾಚಾರ್ಯರ ಶ್ರೇಷ್ಠ ಕೃತಿಯಾದ ಶ್ರೀ ಸಿದ್ಧಾಂತ ಶಿಖಾಮಣಿಯು ವೀರಶೈವ ತತ್ತ್ವಜ್ಞಾನವನ್ನು ಸಕ್ರಮವಾಗಿ ಹಾಗೂ ಅತಿಸುಂದರ ಶೈಲಿಯಲ್ಲಿ ಪ್ರತಿಪಾದಿಸುವ ಸಾಹಿತ್ಯಕ ಸೌಂದರ್ಯ ದಿಂದೊಡಗೂಡಿದ ಒಂದು ಶ್ರೇಷ್ಠ ಕಾವ್ಯವೆಂಬುದಾಗಿ ಹೇಳಬಹುದಾಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಸರ್ವವಿಧ ವಿಷಯಗಳು ಅಡಗಿಸಿಕೊಂಡಿ ರೋಣದರಿಂದ ಆಯಾ ದೃಷ್ಟಿಯಿಂದ ಈ ಗ್ರಂಥವನ್ನು ಅವಲೋಕಿಸಿದರೆ ಇಲ್ಲಿ ಅಡಗಿರುವ ಸರ್ವ ತತ್ತ್ವಗಳನ್ನು ಹೊರತರಲು ಸಾಧ್ಯವಾಗುತ್ತದೆ. ಈ ಗ್ರಂಥವನ್ನು ದಾರ್ಶನಿಕ ದೃಷ್ಟಿ, ಧಾರ್ಮಿಕ ದೃಷ್ಟಿ, ಸಾಮಾಜಿಕ ದೃಷ್ಟಿ, ನೈತಿಕ ದೃಷ್ಟಿ, ಸಾಹಿತ್ಯಕ

ದೃಷ್ಟಿ ಮತ್ತು ಪರಂಪರಾಗತ ಐತಿಹಾಸಿಕ ಮುಂತಾದ ದೃಷ್ಟಿಗಳಿಂದ ಅವಲೋಕಿಸ ಬಹುದಾಗಿದೆ. ಚಿಕಿತ್ಸಕ ಬುದ್ಧಿಯ ಅನೇಕ ಜನ ಸಂಶೋಧಕರು ಎಲ್ಲ ದೃಷ್ಟಿಗಳಿಂದಲೂ ಒಂದೊಂದು ಪ್ರಬಂಧವನ್ನು ರಚಿಸುವಷ್ಟು ಸಾಮಗ್ರಿಯು ಈ ಗ್ರಂಥದಲ್ಲಿ ಅಡಕ ವಾಗಿದೆ. ನಾನಾವಿಧ ರತ್ನಗಳನ್ನು ತನ್ನ ಉದರದಲ್ಲಿ ಅಡಗಿಸಿಕೊಂಡು ರತ್ನಾಕರದಂತೆ ಅರ್ಥಾತ್ ಸಮುದ್ರದಂತೆ ಸರ್ವವಿಧ ಸಂಪತ್ತನ್ನು ತನ್ನುದರದಲ್ಲಿಟ್ಟುಕೊಂಡಿರುವ ವಸುಂಧರೆ ಅರ್ಥಾತ್ ಭೂಮಿಯಂತೆ, ಸರ್ವ ವಿಷಯಗಳನ್ನೊಳಗೊಂಡ ಇದೊಂದು ಮಹತ್ತರವಾದ ಕೃತಿ ರತ್ನವೆಂಬುದನ್ನು ಯಾರೂ ಮರೆಯಬಾರದು. ಕಾರಣ ಪ್ರತಿಯೊಬ್ಬರೂ ಈ ಗ್ರಂಥವನ್ನು ಸಂಗ್ರಹಿಸಿಕೊಂಡು ಪ್ರತಿನಿತ್ಯ ಸ್ವಾಧ್ಯಾಯವನ್ನು ಮಾಡಬೇಕೆಂಬುದು ನಮ್ಮದೊಂದು ಸಲಹೆಯಾಗಿದೆ.

**ಪ್ರಸ್ತುತ ಗ್ರಂಥದ ಪ್ರಯೋಜನ :**

ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆಯೆಂಬ ಎರಡು ಸಂಪುಟಗಳ ಬೃಹತ್ ಕೃತಿಯು ಶ್ರೀ ಜಗದ್ಗುರು ಪಂಚಾಚಾರ್ಯ ಯುಗಮಾನೋತ್ಸವದ ಶುಭ (ದಿ. ೯–೪–೨೦೦೦) ಸಂದರ್ಭದಂದು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ಕರಕಮಲಗಳಿಂದ ಬಿಡುಗಡೆಹೊಂದಿ ಜನಸಾಮಾನ್ಯರ ಕೈಸೇರಿರುವುದು ಒಂದು ಸಂತೋಷದ ಸಂಗತಿಯಾಗಿರುತ್ತದೆ. ಇಲ್ಲಿಯವರೆಗೆ ಕನ್ನಡ ಭಾಷೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಅನೇಕ ಕೃತಿಗಳು ವಿಭಿನ್ನ ಲೇಖಕರಿಂದ ಹೊರಬಂದಿದ್ದರೂ ಅವೆಲ್ಲವುಗಳಿ ಗಿಂತಲೂ ಇದೊಂದು ವಿಲಕ್ಷಣವಾದ ಕೃತಿಯಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯ ವಾಗಿದೆ. ನಾವು ನಾನಾ ಭಾಗಗಳಲ್ಲಿ ಹಾಗೂ ಕಾಶೀ ಮಹಾಕ್ಷೇತ್ರದಲ್ಲಿ ವಿವಿಧ ಪರ್ವ ಗಳಲ್ಲಿ ಭಕ್ತಸ್ತೋಮವನ್ನುದ್ದೇಶಿಸಿ ಅತಿ ಕ್ಲಿಷ್ಟವಾದ ತಾತ್ತ್ವಿಕ ವಿಚಾರಗಳನ್ನು ಅತ್ಯಂತ ಸುಲಭಗೊಳಿಸಿ ಉಪದೇಶಿಸಿದ್ದು ಸರಿಯಷ್ಟೇ ! ಉಪದೇಶದ ಪ್ರಸಂಗದಲ್ಲಿ ವೇದ, ಆಗಮ, ಉಪನಿಷತ್ತು, ಶರಣರ ವಚನ ಸಾಹಿತ್ಯ ಮತ್ತು ಅನೇಕ ರಾಷ್ಟ್ರೀಯ ದಾಸ–ಸಂತರ ಉಕ್ತಿದೋಹೆಗಳನ್ನು ಪ್ರಸಂಗಾನುಸಾರವಾಗಿ ಉದಾಹರಿಸಲಾಗಿದೆ. ಗ್ರಂಥದ ಮೂಲ ವಿಷಯವೂ ಶ್ರೋತೃಗಳಿಗೆ ಸ್ಪಷ್ಟವಾಗಿ ತಿಳಿಯುವಂತೆ ಬೋಧಿಸಲಾಗಿದೆ.

ಯಾವುದೇ ವಿಷಯವು ಕೇವಲ ಯುಕ್ತಿ ಪ್ರಮಾಣಗಳಿಂದ ಅಷ್ಟೊಂದು ಸ್ಪಷ್ಟ ವಾಗುವುದಿಲ್ಲವಾದ್ದರಿಂದ ಅದರ ಸುಸ್ಪಷ್ಟತೆಗಾಗಿ ದೃಷ್ಟಾಂತಗಳನು ಬಳಸುವ ಒಂದು ಪದ್ಧತಿಯು ಪ್ರವಚನ ಪರಂಪರೆಯಲ್ಲಿ ಬಂದುದಾಗಿದೆ. ಅಂತೆಯೇ ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ ಎಂಬ ಈ ಗ್ರಂಥದಲ್ಲಿ ಪ್ರಸಂಗಾನುಸಾರವಾಗಿ ಸಂದರ್ಭೋಚಿತಗಳಾದ ಅನೇಕ ದೃಷ್ಟಾಂತಗಳನ್ನು ಬಳಸಿ ಈ ಗ್ರಂಥದ ಮನೋಹರತೆ ಯನ್ನು ಹೆಚ್ಚಿಸಲಾಗಿದೆ. ಈ ಗ್ರಂಥವನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತರೆ ಸಾಕು ಇದು ವಾಚಕನನ್ನು ತಾನೇ ಓದಿಸಿಕೊಂಡು ಹೋಗುತ್ತದೆ.

ಭಗವದ್ಗೀತಾ ಮುಂತಾದ ಗ್ರಂಥಗಳ ಮೇಲೆ ಅನೇಕ ಜರ ಪ್ರವಚನ ಶೈಲಿಯ ಗ್ರಂಥಗಳಿರುವುದನ್ನು ಕಂಡು ಶ್ರೀ ಮಹಾಸನ್ನಿಧಿಯ ಮನಸ್ಸಿನಲ್ಲಿ ಶ್ರೀ ಸಿದ್ಧಾಂತ

ಶಿಖಾಮಣಿಯ ಮೇಲೆ ಪ್ರವಚನ ಶೈಲಿಯ ಗ್ರಂಥಗಳನ್ನು ಹೊರತರುವ ವಿಚಾರವು ಇಂದಿಗೆ ಸುಮಾರು ಮೂವತ್ತು ವರ್ಷಗಳ ಪೂರ್ವದಲ್ಲಿಯೇ ಮೂಡಿಬಂದಿತ್ತು ಅಂದಿನಿಂದ ಇಂದಿನವರೆಗೆ ಅವ್ಯಾಹತವಾಗಿ ಮಾಡಿದ ಚಿಂತನ ಮಂಥನಗಳ ಫಲವೇ ಈ ಕೃತಿಯು.

ಈ ಪೂರ್ವದಲ್ಲಿ ಬಿಡಿ ಬಿಡಿ ಭಾಗದಲ್ಲಿ ಪ್ರಕಟಗೊಂಡ ಈ ಕೃತಿಯು ಅದೆಷ್ಟೋ ಜನಾನುರಾಗವನ್ನು ಪಡೆದುಕೊಂಡಿದೆ. ವೀರಶೈವ ಧರ್ಮ ಪರಂಪರೆಯಲ್ಲಿ ಅನೇಕ ಜನ ಶಿವಾಚಾರ್ಯರು, ಶಾಸ್ತ್ರಿಗಳು ಮತ್ತು ಪ್ರವಚನಕಾರರು ಚರಿತ್ರಾತ್ಮಕಗಳಾದ ಗ್ರಂಥಗಳಮೇಲೆ ಪ್ರವಚನವನ್ನು ಮಾಡುವವರ ಸಂಖ್ಯೆಯು ಅಧಿಕ ವಾಗಿದೆ. ಆದರೆ ಅಧ್ಯಾತ್ಮಿಕ ಗ್ರಂಥಗಳ ಮೇಲೆ ಪ್ರವಚನ ಮಾಡುವವರ ಸಂಖ್ಯೆ ಅತ್ಯಂತ ವಿರಳವಾಗಿದೆ. ಕಾರಣ ಉದಯೋನ್ಮುಖ ಪ್ರವಚನಕಾರರು ಶ್ರೀ ಸಿದ್ಧಾಂತ ಶಿಖಾಮಣಿ ಮುಂತಾದ ಗ್ರಂಥಗಳ ಮೇಲೆ ಪ್ರವಚನವನ್ನು ಮಾಡುವ ಅಭ್ಯಾಸವನ್ನು ಮೈಗೂಡಿಸಿಕೊಳ್ಳಲೆಂಬ ಉದ್ದೇಶದಿಂದ ನಾವೀಗ ಈ ಕೃತಿಯನ್ನು ಸಂಪೂರ್ಣವಾಗಿ ಸಜ್ಜುಗೊಳಿಸಿ ಪ್ರಕಾಶಿಸುತ್ತಿದ್ದೇವೆ.

ಒಂದು ಸಂತೋಷದ ಸಂಗತಿಯೇನೆಂದರೆ ಇತ್ತೀಚಿನ ಹತ್ತಾರು ವರ್ಷಗಳಲ್ಲಿ ಶ್ರೀ ಕಾಶೀ ಮಹಾಪೀಠದಲ್ಲಿ ಅಭ್ಯಾಸಮಾಡಿದ ಅನೇಕ ಜನ ಶಿವಾಚಾರ್ಯರು ಹಾಗೂ ಕರ್ನಾಟಕಾದಿ ಪ್ರಾಂತಗಳಲ್ಲಿಯೇ ಅಧ್ಯಯನಗೈದ ಮತ್ತೆ ಕೆಲವು ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ತಾತ್ವಿಕವಾದ ಪ್ರವಚನವನ್ನು ಮಾಡುತ್ತಿದ್ದಾರೆ. ಈ ಪರಂಪರೆಯು ಇನ್ನೂ ಹೆಚ್ಚು ಹೆಚ್ಚಾಗಿ ಬೆಳೆಯಬೇಕೆಂಬುದು ಶ್ರೀ ಮಹಾಸನ್ನಿಧಿಯ ಆಶಯವಾಗಿದೆ.

'ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ' ಎಂಬ ಈ ಬೃಹದ್‌ಗ್ರಂಥವನ್ನು ರಚಿಸುವಲ್ಲಿ ಅದೆಷ್ಟೋ ಪ್ರಾಚೀನ ಗ್ರಂಥಗಳ ಸಹಾಯವನ್ನು ಪಡೆದುಕೊಳ್ಳಲಾಗಿದೆ. ಪ್ರಾಚೀನ ಗ್ರಂಥಗಳ ಜೊತೆಗೆ ಆಧುನಿಕ ವಿದ್ವಾಂಸರ ಕೆಲ ವಿಚಾರಗಳನ್ನೂ ಸಹ ಪ್ರಸಂಗಾನುಸಾರವಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ. ಮೊದಲು ಏಳು ಕಿರಣಗಳವರೆಗೆ ಈ ಕಿರುಹೊತ್ತಿಗೆಗಳನ್ನು ನಾವೇ ಬರೆದಿದ್ದರೂ ಮುಂದಿನ ಎಲ್ಲ ಕೃತಿಗಳನ್ನು ಬರೆಯುವಲ್ಲಿ ವಿಜಾಪುರ ಜಿಲ್ಲೆಯ ಬಬಲೇಶ್ವರ ಬೃಹನ್ಮಠದ ಪಟ್ಟಾಧ್ಯಕ್ಷರಾದ ಶ್ರೀ ಷ.ಬ್ರ. ಡಾ. ಮಹಾದೇವ ಶಿವಾಚಾರ್ಯ ಸ್ವಾಮಿಗಳವರ ಪಾತ್ರವು ಪ್ರಮುಖವಾದುದು. ವಿದ್ವಾಂಸರೂ ಸಹೃದಯ ಸಂಪನ್ನರೂ ವಿನಯಾದಿಗುಣಮಣಿಮಂಡಿತರೂ ಆದ ಶ್ರೀ ಸ್ವಾಮೀಜಿಯವರು ಶ್ರೀ ಮಹಾಸನ್ನಿಧಿಯು ಕರೆದಲ್ಲೆಲ್ಲ ಬಂದು ತಮ್ಮ ವೈಯಕ್ತಿಕವಾದ ಮಠದ ವ್ಯವಹಾರಗಳನ್ನು ಬದಿಗಿರಿಸಿ ಸಂಪೂರ್ಣ ಸಮಾಜಕ್ಕೆ ಉಪಯೋಗವಾಗುವ ಸಮಷ್ಟಿಕಾರ್ಯದಲ್ಲಿ ತಮ್ಮನ್ನು ಬಹುಪಾಲು ತೊಡಗಿಸಿಕೊಂಡದ್ದು ಶ್ರೀ ಮಹಾಸನ್ನಿಧಿಗೆ

ಅತ್ಯಂತ ಸಂತೋಷವನ್ನುಂಟುಮಾಡಿದೆ. ಶ್ರೀ ಸ್ವಾಮಿಗಳವರ ಈ ಸಹಯೋಗದಿಂದಲೇ ಈ ಸಮಗ್ರವಾದ ಕೃತಿಯು ಇಷ್ಟೊಂದು ಬೇಗನೆ ಪರಿಪೂರ್ಣಗೊಂಡಿತೆಂಬುದನ್ನು ಇಲ್ಲಿ ಅವಶ್ಯವಾಗಿ ನೆನಪಿಸಿಕೊಳ್ಳಬೇಕಾಗುತ್ತದೆ.

ಯಾವುದೇ ಕಾರ್ಯವನ್ನು ಪೂರ್ಣಮಾಡುವ ಸಂಕಲ್ಪವನ್ನು ಯಾರೇ ಮಾಡಿದ್ದರೂ ಅವರೋರ್ವರಿಂದಲೇ ಆ ಕಾರ್ಯವು ಆದೆಂದೂ ಪೂರ್ಣವಾಗುವುದಿಲ್ಲ. ಅದಕ್ಕೆ ಅನೇಕ ಸಣ್ಣ–ಪುಟ್ಟ ಶಕ್ತಿಗಳ ಸಹಯೋಗವೂ ಸಹ ಅವಶ್ಯವಾಗಿ ಬೇಕಾಗುತ್ತದೆ. ಈ ದಿಶೆಯಲ್ಲಿ ನಮ್ಮೀ ಕೃತಿರಚನೆಯಲ್ಲಿ ಬಬಲೇಶ್ವರದ ಪಟ್ಟಾಧ್ಯಕ್ಷರಂತೆ, ಹಿಪ್ಪರಗಿ ಎಡೂರು, ಪಟ್ಟಾಧ್ಯಕ್ಷರಾಗಿರುವ ಶ್ರೀ ಷ.ಬ್ರ. ಡಾ. ಸಿದ್ಧರಾಮ ಪಂಡಿತರಾಧ್ಯ ಶಿವಾಚಾರ್ಯ ಸ್ವಾಮಿಗಳು ಸಹ ಲಿಂಗಷಟ್‌ಸ್ಥಲದಲ್ಲಿ ಬರುವ ಶರಣ ಹಾಗೂ ಐಕ್ಯಸ್ಥಲಗಳ ಸಂಕಲನೆಯನ್ನು ಮಾಡಿದ್ದಾರೆ. ಇವರು ಚಿಕ್ಕವಯಸ್ಸಿನವರಾಗಿದ್ದರೂ ಸದಾ ವಿದ್ಯಾವ್ಯಸನಿಗಳಾಗಿ ಬಹುಪಾಲು ಸಮಯವನ್ನು ಸ್ವಾಧ್ಯಾಯ ಪ್ರವಚನಗಳಲ್ಲಿ ವ್ಯಯಮಾಡುತ್ತಿರುವುದು ಶ್ರೀ ಮಹಾಸನ್ನಿಧಿಗೆ ಸಂತೋಷವನ್ನು ತಂದಿದೆ. ಶ್ರೀ ಷ.ಬ್ರ.ಡಾ. ಸಿದ್ಧರಾಮ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಎಡೂರು ಪಟ್ಟಾಧ್ಯಕ್ಷರಾದ ನಂತರ ಶ್ರೀ ವಿರೂಪಾಕ್ಷಲಿಂಗ ದೇವಸ್ಥಾನದ ಧರ್ಮಾಧಿಕಾರಿ ಆಗಿದ್ದು ಆ ಕ್ಷೇತ್ರದ ಅಭಿವೃದ್ಧಿಗೆ ಅಹರ್ನಿಸಿ ಶ್ರಮಿಸುತ್ತಿರುವುದು ಹಿರಿಯ ಸಾಧನೆ ಆಗಿದೆ. ಈ ಈರ್ವರು ತಮ್ಮ ಭಾವೀ ಜೀವನದಲ್ಲಿ ಇನ್ನೂ ಹೆಚ್ಚಿನ ಸೈದ್ಧಾಂತಿಕ ಕೃತಿಗಳನ್ನು ಹೊರ ತರುವಲ್ಲಿ ಪರಿಶ್ರಮಿಸಬೇಕು. ವೀರಶೈವ ಸಾಹಿತ್ಯೇತಿಹಾಸದಲ್ಲಿ ಇವರ ಸ್ವತಂತ್ರಗಳಾದ ಕೃತಿಗಳೂ ಸಹ ವಿಭಿನ್ನ ಭಾಷೆಗಳಲ್ಲಿ ಹೊರಬರಲೆಂದು ಶ್ರೀ ಮಹಾಸನ್ನಿಧಿಯು ಮನಃಪೂರ್ವಕವಾಗಿ ಆಶೀರ್ವದಿಸುತ್ತದೆ.

ಎರಡು ಸಂಪುಟಗಳಲ್ಲಿ ಪ್ರಕಟನೆಗೊಳ್ಳುತ್ತಿರುವ ಈ ಬೃಹತ್ ಕೃತಿಯನ್ನು ಪ್ರಕಾಶಗೊಳಿಸುವ ಪ್ರಸಂಗ ಬಂದೊದಗಿದಾಗ ಇಂದಿನ ನಮ್ಮ ಸಮಾನ ಪೀಠಾಚಾರ್ಯರೆಲ್ಲ ಈ ಗ್ರಂಥದ ಬಗ್ಗೆ ಅತ್ಯಂತ ಗೌರವವನ್ನು ತಾಳಿ ಅಭಿಮಾನದಿಂದ ಇದನ್ನು ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆಯಿಂದ ಪ್ರಕಟಪಡಿಸಿ ಸರ್ವತ್ರ ಪ್ರಚಾರಗೊಳಿಸುವ ಒಂದು ಬೃಹದ್ ಯೋಜನೆಯನ್ನು ಹಮ್ಮಿಕೊಂಡು ಪ್ರಕಾಶನಕ್ಕೆ ಬೇಕಾಗುವ ಆರ್ಥಿಕ ವ್ಯವಸ್ಥೆಯನ್ನೂ ಸಹ ಮಾಡಿರುವುದು ಸುತ್ತ್ಯವಾಗಿದೆ. ಕಾರಣ ಅವರೆಲ್ಲರಿಗೆ ನಮ್ಮ ಭಕ್ತಿಯ ಅನಂತ ನಮನಗಳು.

ಹುಬ್ಬಳ್ಳಿ ಮಹಾನಗರದಲ್ಲಿ ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಅದರಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ ಕೃತಿಯನ್ನಿರಿಸಿ ಈ ಗ್ರಂಥದ ''ಗಜ ಮಹೋತ್ಸವ''ವನ್ನು ಮಾಡಿ ಇದನ್ನು ಬಿಡುಗಡೆ ಮಾಡಲಾಗಿದ್ದು ಅವಿಸ್ಮರಣೀಯವಾಗಿದೆ. ಕನ್ನಡನಾಡಿನ ಪ್ರತಿಯೊಬ್ಬ ಭಕ್ತರು ಈ ಪ್ರವಚನಾಮೃತವನ್ನು ಸವಿದು ಸಂತೋಷಗೊಂಡಿದ್ದಾರೆ. ಆದ್ದರಿಂದ ನಮ್ಮೀ ಪರಿಶ್ರಮವು ಸಾರ್ಥಕವೆಂಬುದಾಗಿ ಭಾವಿಸುತ್ತೇವೆ.

ಈ ಗ್ರಂಥದ ಕರಡು ಪ್ರತಿ ತಿದ್ದುವಲ್ಲಿ ಅತ್ಯಂತ ಆಸ್ಥೆವಹಿಸಿ ಸೇವೆಮಾಡಿದ ವಿದ್ವಾಂಸರೂ, ಸಹೃದಯರೂ, ಪಂಚಪೀಠಗಳ ಪರಮಭಕ್ತರೂ ಆಗಿರುವ ರಾಣೇಬೆನ್ನೂರಿನ ನಿವೃತ್ತಪ್ರಾಧ್ಯಾಪಕರಾದ ಶ್ರೀ ಅ. ಸಿ. ಹಿರೇಮಠರವರಿಗೆ, ಗದುಗಿನ ನಿವೃತ್ತ ಶಿಕ್ಷಕರಾದ ವೇ. ಮೂ. ಕೆ. ವ್ಹಿ. ಬಾಳಿಕಾಯಿಮಠ ಮತ್ತು ಹರಪನಹಳ್ಳಿ ಶ್ರೀ ಉಜ್ಜಯನಿ ಜಗದ್ಗುರು ಮರುಳಾರಾಧ್ಯ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರಾದ ಶ್ರೀ ಎಂ.ಪಿ.ಎಂ. ಶಾಂತವೀರಯ್ಯಾ ಅವರಿಗೆ ಈ ಶುಭ ಸಂದರ್ಭದಲ್ಲಿ ಅನೇಕ ಮಂಗಲಾಶೀರ್ವಾದಗಳನ್ನು ದಯಪಾಲಿಸಲಾಗುತ್ತದೆ.

ಶ್ರೀ ಕಾಶೀಪೀಠದ ಪರಮಭಕ್ತರೂ ಗದಗ ನಿವಾಸಿಗಳೂ ಆದ ಶ್ರೀ ಬಸವಕುಮಾರ ಹಾಗೂ ವಿಶ್ವನಾಥ ಅಬ್ಬಿಗೇರಿ ಸಹೋದರರು ಈ ಗ್ರಂಥದ ಮುದ್ರಣಕ್ಕೆ ಸಂಬಂಧಪಟ್ಟ ಅನೇಕ ವಿಧವಾದ ಸೇವೆಗಳನ್ನು ಸಹರ್ಷದಿಂದ ಮಾಡುತ್ತಿರುತ್ತಾರೆ. ಇವರಿಗೆ ಹಾಗೂ ಇವರ ಪರಿವಾರಕ್ಕೆಲ್ಲ ಅನಂತ ಮಂಗಲಾಶೀರ್ವಾದಗಳು. ಇದರಂತೆ ಈ ಗ್ರಂಥವನ್ನು ಅತ್ಯಲ್ಪ ವೇಳೆಯಲ್ಲಿ ಅಚ್ಚುಕಟ್ಟಾಗಿ ಅಚ್ಚು ಮಾಡಿಕೊಟ್ಟ ಗದುಗಿನ ಮುದ್ರಣಾಲಯದ ಸಂಚಾಲಕರಾದ ಶ್ರೀ ಕೆ. ಅಶೋಕರವರಿಗೂ ಹಾಗೂ ಅವರ ಸಿಬ್ಬಂದಿ ವರ್ಗದವರಿಗೂ. ಅನಂತ ಮಂಗಲಾಶೀರ್ವಾದಗಳು.

**ಸಮರ್ಪಣೆ:**

'ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ' ಎಂಬ ಪರಿಷ್ಕೃತ ಪ್ರಥಮ ಮುದ್ರಣದ ಎರಡು ಸಂಪುಟಗಳ ಈ ಬೃಹತ್‌ಕೃತಿಯನ್ನು ನಮ್ಮ ಪಂಚಪೀಠಗಳ ಪೂರ್ವಾಚಾರ್ಯರ ಸ್ಮರಣೆಯೊಂದಿಗೆ ಉಜ್ಜಯಿನಿ ಮಹಾಪೀಠದ ಪರಮತಪಸ್ವಿಗಳಾದ ಲಿಂ. ಶ್ರೀ ೧೦೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸನ್ನಿಧಿಗೆ ಸಮರ್ಪಿಸಿ, ನಮ್ಮನ್ನು ನಾವು ಧನ್ಯರನ್ನಾಗಿ ಭಾವಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇತ್ಯಾಶಿಷಃ

ದಾವಣಗೆರೆ — ಶ್ರೀ ಶಾ.ಶ. ೧೯೩೧, ಶ್ರೀ ವಿರೋಧಿನಾಮ ಸಂವತ್ಸರ,

೨೫-೧೨-೨೦೦೯ — ಪುಷ್ಯ ಶುದ್ಧ ಅಷ್ಟಮಿ ಶುಕ್ರವಾರ

# ಪ್ರಥಮ ಪರಿಚ್ಛೇದ

## ಪೂರ್ವಪೀಠಿಕಾ

ಅನೇಕವಿಧಸಿದ್ಧಾಂತಶಿಖಾಮಣಿಮನಾಮಯಮ್ ।
ಶ್ರೀವೀರಶೈವಸಿದ್ಧಾಂತಮೇಕೋತ್ತರಶತಸ್ಥಲಮ್ ॥
ರೇಣುಕಾಗಸ್ತ್ಯಸಂವಾದಂ ನಿಗಮಾಗಮವಿಶ್ರುತಮ್ ।
ಪ್ರದೀಪಯತಿ ಗುಪ್ತಾರ್ಥಮುದ್ಧೃತ್ಯ ಶಿವಯೋಗಿರಾಟ್ ॥
(ಶ್ರೀ ಮರಿತೋಂಟದಾರ್ಯರ ವ್ಯಾಖ್ಯಾನದ ಪ್ರಾರಂಭ ಶ್ಲೋಕಗಳು–ಯುಗ್ಮಕ)

ಅರ್ಥ : ಅನೇಕವಿಧ ಸಿದ್ಧಾಂತ ಶಿಖಾಮಣಿಂ=ಅನೇಕ ಪ್ರಕಾರದ ಸಿದ್ಧಾಂತಗಳಿಗೆಲ್ಲ ಶಿಖಾಮಣಿಯೋಪಾದಿಯಲ್ಲಿರುವ, ಅನಾಮಯಮ್=ದೋಷರಹಿತವಾದ, ಏಕೋತ್ತರಶತಸ್ಥಲಮ್=ನೂರೊಂದು ಸ್ಥಲಗಳಿಂದ ಕೂಡಿರುವ, ನಿಗಮಾಗಮ ವಿಶ್ರುತಂ=ವೇದಾಗಮಗಳಲ್ಲಿ ಪ್ರಸಿದ್ಧವಾದ, ರೇಣುಕಾಗಸ್ತ್ಯಸಂವಾದಂ= ಶ್ರೀಜಗದ್ಗುರು ರೇಣುಕ ಭಗವತ್ಪಾದರ ಹಾಗೂ ಶ್ರೀ ಅಗಸ್ತ್ಯಮಹರ್ಷಿಗಳ ಸಂವಾದ ರೂಪದಲ್ಲಿರುವ, ಶ್ರೀವೀರಶೈವಸಿದ್ಧಾಂತಂ=ವೀರಶೈವ ಸಿದ್ಧಾಂತವನ್ನು, ಶಿವಯೋಗಿ ರಾಟ್=ಶಿವಯೋಗಿ ಶಿವಾಚಾರ್ಯರು, ಗುಪ್ತಾರ್ಥಮುದ್ಧೃತ್ಯ=ಗೂಢವಾದ (ರಹಸ್ಯ ವಾದ) ಅರ್ಥವನ್ನು ಹೊರತೆಗೆದು, ಪ್ರದೀಪಯತಿ=ಪ್ರಕಟಪಡಿಸುತ್ತಾರೆ.

ನಿಗಮಾಗಮಗಳಲ್ಲಿ ಪ್ರಸಿದ್ಧವಾಗಿರುವ, ಎಲ್ಲ ಸಿದ್ಧಾಂತಗಳಿಗೆ ಶಿಖಾಮಣಿ ಯೋಪಾದಿಯಲ್ಲಿರುವ, ನೂರೊಂದು ಸ್ಥಲಗಳಾತ್ಮಕವಾದ ವೀರಶೈವ ಸಿದ್ಧಾಂತವು ಪ್ರಥಮದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರಿಂದ ಮಹಿಮಾಶಾಲಿಯಾದ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಿಸಲ್ಪಟ್ಟಿತು. ಆ ಉಪದೇಶದ ಗೂಢವಾದ ತತ್ತ್ವವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ''ಸಿದ್ಧಾಂತ ಶಿಖಾಮಣಿ'' ಎಂಬ ಗ್ರಂಥರೂಪದಲ್ಲಿ ಬರೆದು ಪ್ರಸಿದ್ಧಪಡಿಸಿರುತ್ತಾರೆ ಎಂಬ ಅಂಶವನ್ನು ಶ್ರೀ ಮರಿತೋಂಟ ದಾರ್ಯರು ತಮ್ಮ ವ್ಯಾಖ್ಯಾನದ ಪ್ರಾರಂಭದಲ್ಲಿ ಈ ಎರಡು ಶ್ಲೋಕಗಳಲ್ಲಿ ತಿಳಿಸಿರುತ್ತಾರೆ.

''ನಿರ್ವಿಘ್ನ ಸಮಾಪ್ತಿಕಾಮೋ ಮಂಗಲಮಾಚರೇತ್'' ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಬೇಕೆಂಬ ಅಭಿಲಾಷೆಯುಳ್ಳವನು ಗ್ರಂಥಾರಂಭದಲ್ಲಿ ಮಂಗಲವನ್ನು ಆಚರಿಸಬೇಕೆಂಬುದು ಶಿಷ್ಟಾಚಾರವು.

ಗ್ರಂಥಾರಂಭದಲ್ಲಿ ಶಿಷ್ಟಾಚಾರಕ್ಕನುಸಾರವಾಗಿ ಮಾಡಲ್ಪಡುವ ಮಂಗಲಾ ಚರಣವು (೧) ವಸ್ತುನಿರ್ದೇಶರೂಪ (೨) ನಮಸ್ಕಾರರೂಪ ಮತ್ತು (೩) ಆಶೀರ್ವಾದ ರೂಪವೆಂಬುದಾಗಿ ಮೂರು ವಿಧವಾಗಿದೆ. ಗ್ರಂಥದಲ್ಲಿ ಪ್ರತಿಪಾದಿಸಲಿರುವ ವಸ್ತು (ಪರಮತತ್ತ್ವ)ವನ್ನೇ ನೇರವಾಗಿ ವರ್ಣಿಸಲು ಪ್ರಾರಂಭಿಸಿದರೆ ಅದಕ್ಕೆ ವಸ್ತು

ನಿರ್ದೇಶರೂಪ ಮಂಗಲವೆನ್ನುತ್ತಾರೆ. ವಿಷಯವನ್ನು ಪ್ರತಿಪಾದಿಸುವ ಪೂರ್ವದಲ್ಲಿ ತನ್ನ ಇಷ್ಟದೇವತೆಗೆ ನಮಸ್ಕರಿಸುವುದು ನಮಸ್ಕಾರರೂಪವಾದ ಮಂಗಲವು. ಇನ್ನು ಇಷ್ಟದೇವರಿಗೆ ನಮಸ್ಕಾರವನ್ನು ಮಾಡದೇ, ಆ ಇಷ್ಟದೇವರಿಗೆ ಜಯವಾಗಲಿ ಎಂದು ಹೃದಯತುಂಬಿ ಹರಸುವುದಕ್ಕೆ ಆಶೀರ್ವಾದರೂಪವಾದ ಮಂಗಲವೆನ್ನುತ್ತಾರೆ. ಹೀಗೆ ಯಾವುದೇ ಆಸ್ತಿಕ ಗ್ರಂಥವನ್ನು ನೋಡಿದರೆ ಗ್ರಂಥಾರಂಭದಲ್ಲಿ ಈ ಮೂರರ ಪೈಕಿ ಯಾವುದಾದರೊಂದು ಮಂಗಲಾಚರಣವು ಅವಶ್ಯವಾಗಿ ದೃಷ್ಟಿಗೋಚರವಾಗುವುದು.

ಇದೇ ಶಿಷ್ಟಾಚಾರದ ಅನುಕರಣೆಯನ್ನು ಮಾಡಿದ ಶ್ರೀ ಶಿವಯೋಗಿ ಶಿವಾಚಾರ್ಯರಾದರೂ ತಾವು ಬರೆಯಲಿರುವ ''ಸಿದ್ಧಾಂತ ಶಿಖಾಮಣಿ'' ಎಂಬ ನೂರೊಂದು ಸ್ಥಲಗಳ ಈ ಬೃಹದ್ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಂಡು, ಮುಂದೆ ಶಿಷ್ಯ ಪ್ರಶಿಷ್ಯರೂಪವಾಗಿ ಜ್ಞಾನಧಾರೆಯು ಅಖಂಡವಾಗಿ ಪ್ರವಹಿಸುತ್ತಿರಲೆಂಬ ಸದುದ್ದೇಶದಿಂದ ಶಿವಶಕ್ತಿಯರ ಅವಿನಾಭಾವ ಸಂಬಂಧವನ್ನು ಒಪ್ಪುವ ವೀರಶೈವ ಸಿದ್ಧಾಂತಕ್ಕನುಗುಣವಾಗಿ ಶಿವಶಕ್ತಿಯರಿಗೆ ನಮಸ್ಕಾರರೂಪವಾದ ಮಂಗಲಾಚರಣೆಯನ್ನು ಹನ್ನೆರಡು ಶ್ಲೋಕಗಳಲ್ಲಿ ಮಾಡಿರುತ್ತಾರೆ. ಈ ಮಂಗಲಾಚರಣೆಯಲ್ಲಿ ವೀರಶೈವ ಸಿದ್ಧಾಂತದ ರಹಸ್ಯವನ್ನೇ ಅಡಗಿಸಿಟ್ಟಿರುವುದು ಶ್ರೀ ಶಿವಯೋಗಿ ಶಿವಾಚಾರ್ಯರ ಅಲೌಕಿಕ ಪ್ರತಿಭೆಯ ಫಲವಾಗಿದೆ. ಪ್ರಕೃತದಲ್ಲಿ ಆ ಮಂಗಲ ಶ್ಲೋಕಗಳ ರಹಸ್ಯವನ್ನು ತಿಳಿಯೋಣ.

## ಶಿವಸ್ತುತಿ

ತ್ರೈಲೋಕ್ಯಸಂಪದಾಲೇಖ್ಯಸಮುಲ್ಲೇಖನಭಿತ್ತಯೇ ।
ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ (ಸಿ. ಶಿ. ೧–೧)

ಅರ್ಥ : ತ್ರೈಲೋಕ್ಯ=ಮೂರುಲೋಕವೆಂಬ, ಸಂಪದಾಲೇಖ್ಯ=ಸಂಪದ್ರೂಪವಾದ ಚಿತ್ರದ, ಸಮುಲ್ಲೇಖನ=ಬರವಣಿಗೆಗೆ, ಭಿತ್ತಯೇ=ಆಧಾರವಾದ ಗೋಡೆಯಂತಿರುವ, ಸಚ್ಚಿದಾನಂದರೂಪಾಯ=ಸತ್ತು, ಚಿತ್ತು ಮತ್ತು ಆನಂದರೂಪನಾದ, ಬ್ರಹ್ಮಣೇ=ವಿಶಾಲರೂಪನಾದ, ಶಿವಾಯ=ಪರಶಿವನಿಗೆ, ನಮಃ=ನಮಸ್ಕಾರವು.

ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂದು ಶಾಸ್ತ್ರಗಳಲ್ಲಿ ಮೂರು ಲೋಕಗಳು ವರ್ಣಿಸಲ್ಪಟ್ಟಿವೆ. ಸದ್ಯಃ ನಾವು ವಾಸಿಸುತ್ತಿರುವ ಲೋಕವು ಮರ್ತ್ಯಲೋಕವು. ''ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಅಧೋ ಗಚ್ಛಂತಿ ತಾಮಸಾಃ'' ಎಂಬ ಗೀತೋಕ್ತಿಯಂತೆ ನಾವು ವಾಸಿಸುತ್ತಿರುವ ಲೋಕದ ಮೇಲ್ಭಾಗದಲ್ಲಿರುವುದು ಸ್ವರ್ಗ ಲೋಕವೆಂತಲೂ, ಅಧೋಭಾಗದಲ್ಲಿರುವುದು ಪಾತಾಳಲೋಕವೆಂತಲೂ ಪ್ರಸಿದ್ಧಿಯು. ಈ ಮೂರೂ ಲೋಕಗಳಲ್ಲಿರುವ ಚರಾಚರ ವಸ್ತುಗಳೇ ಚಿತ್ರವಿದ್ದಂತೆ. ಯಾವುದೇ ಚಿತ್ರದ ನಿರ್ಮಾಣಕ್ಕೆ ಆಧಾರವಾಗಿ ಗೋಡೆಯು ಅವಶ್ಯಕವಾದುದು. ಮೂರು ಲೋಕಗಳೆಂಬ ವಿಶಾಲವಾದ ಚಿತ್ರರಚನೆಗೆ ಪರಶಿವನೇ ಆಧಾರವಾದ ಗೋಡೆಯಾಗಿದ್ದಾನೆ. ಈ ಪರಶಿವನು ಸದ್ರೂಪನೂ, ಚಿದ್ರೂಪನೂ ಮತ್ತು ಆನಂದರೂಪನೂ ಆಗಿರುವುದರಿಂದ ಈ ಜಗತ್ತಾದರೂ ಸತ್ತಾಗಿಯೂ, ಚಿತ್ತಾಗಿಯೂ ಹಾಗೂ ಆನಂದರೂಪವಾಗಿಯೂ

ತೋರುತ್ತದೆ. ಚಿತ್ರಕ್ಕಿಂತಲೂ ಗೋಡೆಯು ವಿಶಾಲವಾಗಿರುವಂತೆ, ಈ ಮೂರು ಲೋಕಕ್ಕಿಂತಲೂ ಪರಶಿವನು ಬಹು ವ್ಯಾಪಕನಾಗಿದ್ದಾನೆ. ಅಂತೆಯೇ ಅವನಿಗೆ 'ಬ್ರಹ್ಮ' ಎಂದು ಕರೆದಿದ್ದಾರೆ. ''ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್'' ಎನ್ನುವ ವೇದ ಮಂತ್ರವಾದರೂ ಪರಮಾತ್ಮನ ವ್ಯಾಪಕತೆಯನ್ನು ಸಮರ್ಥಿಸುತ್ತದೆ.

''ಶಿವ ಏಕೋ ಧ್ಯೇಯಸ್ಸರ್ವಮನ್ಯತ್ಪರಿತ್ಯಜ್ಯ'' ಎಲ್ಲವನ್ನೂ ಬಿಟ್ಟು ಜಗದಾಧಾರ ನಾದ ಪರಶಿವನೊಬ್ಬನನ್ನೇ ಧ್ಯಾನಿಸಬೇಕೆಂಬ ಶ್ರುತಿವಚನದಂತೆ ಶ್ರೀ ಶಿವಯೋಗಿ ಶಿವಾಚಾರ್ಯರು ಆ ಪರಾತ್ಪರ ಪರಶಿವನಿಗೆ ನಮಸ್ಕಾರಗೈಯುತ್ತಾರೆ.

ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಮ್ (ಸಿ. ಶಿ. ೧–೨)

ಅರ್ಥ : ಬ್ರಹ್ಮೇತಿ=ಬ್ರಹ್ಮವೆಂಬ, ವ್ಯಪದೇಶಸ್ಯ=ಶಬ್ದ ವ್ಯವಹಾರಕ್ಕೆ, ವೇದಾಂತಿನೋ=ವೇದಾಂತಿಗಳು, ಯಂ=ಯಾವನನ್ನು, ವಿಷಯಂ=ವಿಷಯ (ಅರ್ಥ) ವನ್ನಾಗಿ, ಪ್ರಚಕ್ಷತೇ=ಹೇಳುತ್ತಾರೋ, ಜಗನ್ಮೂಲಂ=ಜಗತ್ತಿಗೆ ಮೂಲನಾಗಿರುವ, ತಂ=ಆ, ಪರಶಿವಂ=ಪರಶಿವನನ್ನು, ನಮಾಮಿ=ನಮಿಸುತ್ತೇನೆ.

'ಬೃಹತ್ವಾತ್ ಬ್ರಹ್ಮ' ಎಂಬ ವ್ಯುತ್ಪತ್ತಿಯ ಮೇರೆಗೆ ಎಲ್ಲಕ್ಕೂ ದೊಡ್ಡದಾದ ವಸ್ತುವನ್ನು 'ಬ್ರಹ್ಮ'ವೆಂದು ಕರೆಯುತ್ತಾರೆ. ನಮಗೆ ತೋರುವ ವಸ್ತುಗಳಲ್ಲೆಲ್ಲ ಭೂಮಿಯು ಬಹುವಿಶಾಲವಾಗಿ ತೋರುತ್ತದೆ. ಆದರೆ ಆ ಭೂಮಿಗಿಂತಲೂ ಜಲವು ವಿಶಾಲ ವಾದದ್ದು. ಹೀಗೆಯೇ ವಿಚಾರಿಸುತ್ತ ಹೋದರೆ ಜಲಕ್ಕಿಂತಲೂ ಅಗ್ನಿಯು, ಅಗ್ನಿಗಿಂತಲೂ ವಾಯು, ವಾಯುವಿಗಿಂತಲೂ ಆಕಾಶ ಮತ್ತು ಆಕಾಶಕ್ಕಿಂತಲೂ ಪರಮಾತ್ಮನು ವಿಶಾಲನಾಗಿದ್ದಾನೆ. ಅಂತೆಯೇ ''ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥ್ವೀ, ಪೃಥ್ವಿವ್ಯಾ ಓಷಧಯಃ, ಓಷಧಿಭ್ಯೋಽನ್ನಂ, ಅನ್ನಾತ್ ಪ್ರಜಾಃ'' ಎಂಬ ಶ್ರುತಿಯಾದರೂ ನಿರತಿಶಯ ವ್ಯಾಪಕವಾದದ್ದು ಪರಮಾತ್ಮನೆಂಬುದಾಗಿಯೇ ವರ್ಣಿಸಿರುತ್ತದೆ. ಹೀಗೆ ಎಲ್ಲಕ್ಕೂ ದೊಡ್ಡವನಾದ ಆ ಪರಮಾತ್ಮನನ್ನು ವೇದಾಂತ ಶಾಸ್ತ್ರಕಾರರು 'ಬ್ರಹ್ಮ' ಎಂಬುದಾಗಿ ಕರೆಯುತ್ತಾರೆ. ಎಲ್ಲಕ್ಕೂ ವಿಶಾಲವಾಗಿ ಜಗತ್ತಿನ ಉತ್ಪತ್ತಿ, ಸ್ಥಿತಿ ಹಾಗೂ ಲಯಗಳಿಗೆ ಕಾರಣೀಭೂತನಾದ ಆ ಪರಶಿವನಿಗೆ ನಮಸ್ಕಾರವು.

ಯಸ್ಯೋರ್ಮಿಬುದ್ಬುದಾಭಾಸಃ ಷಟ್ತ್ರಿಂಶತ್ತತ್ತ್ವಸಂಚಯಃ ।
ನಿರ್ಮಲಂ ಶಿವನಾಮಾನಂ ತಂ ವಂದೇ ಚಿನ್ಮಹೋದಧಿಮ್ (ಸಿ. ಶಿ. ೧–೩)

ಅರ್ಥ : ಷಟ್‌ತ್ರಿಂಶತ್ತತ್ವಸಂಚಯಃ=ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳ ಸಮೂಹವು, ಯಸ್ಯ=ಯಾವ ಶಿವನೆಂಬ ಸಮುದ್ರದ, ಊರ್ಮಿ ಬುದ್ಬುದಾಭಾಸಃ=ನೆರೆತೊರೆಯ ಸ್ವರೂಪವೋ, ತಂ=ಆ, ನಿರ್ಮಲಂ=ಮಲತ್ರಯ ರಹಿತನಾದ, ಶಿವನಾಮಾನಂ=ಶಿವನೆಂಬ ಹೆಸರಿನ, ಚಿನ್ಮಹೋದಧಿಂ=ಜ್ಞಾನಸಾಗರ ವನ್ನು, ವಂದೇ=ನಮಿಸುತ್ತೇನೆ.

ಶಿವನೇ ಮೊದಲುಗೊಂಡು ಭೂಮಿಯೇ ಕೊನೆಯದಾಗಿರುವ ಮೂವತ್ತಾರು ತತ್ತ್ವಗಳು ಯಾವ ಜ್ಞಾನಸಮುದ್ರನಾದ ಪರಶಿವನಲ್ಲಿ ನೆರೆ-ತೊರೆಗಳಂತೆ ತೋರುತ್ತಿವೆಯೋ ಅಂತಹ ನಿರ್ಮಲಸ್ವಭಾವದ ಪರಶಿವನಿಗೆ ನಮಸ್ಕರಿಸುತ್ತೇನೆ.

ವಿಶೇಷ ವಿಚಾರ : ಶ್ರೀ ಶಿವಯೋಗಿ ಶಿವಾಚಾರ್ಯರು ಈ ಶ್ಲೋಕದಲ್ಲಿ ವೀರಶೈವ ಸಿದ್ಧಾಂತ ಸಮ್ಮತಗಳಾದ ಮೂವತ್ತಾರು ತತ್ತ್ವಗಳ ಉತ್ಪತ್ತಿಯ ವಿಷಯವನ್ನು ಬಹು ಸಂಗ್ರಹವಾಗಿ ನಿರೂಪಿಸಿರುತ್ತಾರೆ. ಈ ತತ್ತ್ವಗಳ ಯಥಾರ್ಥ ಜ್ಞಾನವಾಗದೇ ವೀರಶೈವ ಸಿದ್ಧಾಂತದ ಜ್ಞಾನವಾಗಲಾರದು. ಅಂತೆಯೇ ಈ ಪ್ರಸಂಗದಲ್ಲಿ ಆ ತತ್ತ್ವಗಳ ಸ್ವರೂಪದ ಬಗ್ಗೆ ಶಾಸ್ತ್ರೀಯವಾಗಿ ವಿಚಾರಿಸೋಣ.

ವೀರಶೈವ ಸಿದ್ಧಾಂತಾನುಸಾರವಾಗಿ ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ವಿಮರ್ಶಶಕ್ತಿಯು ನಿಹಿತವಾಗಿದೆ. ''ಏಕೋಽಹಂ ಬಹುಸ್ಯಾಂ ಪ್ರಜಾಯೇಯ'' (ಛಾಂದೋ ೬-೨-೩) ಎಂಬ ಶ್ರುತಿವಚನದಂತೆ ಆ ಪರಶಿವನಿಗೆ ಜಗದುತ್ಪತ್ತಿ ಮಾಡುವ ಇಚ್ಛೆಯುಂಟಾಗಲು, ಆತನ ವಿಮರ್ಶಶಕ್ತಿಯಲ್ಲಿ ಸ್ಫುರಣವಾಗಿ ''ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಸ್ಸು, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥಿವಿ''ಗಳೆಂಬ ಮೂವತ್ತಾರು ತತ್ತ್ವಗಳು ಉತ್ಪನ್ನಗಳಾದವು.

ಪರಶಿವನಿಗೆ 'ಕೇವಲಾವಸ್ಥೆ' ಮತ್ತು 'ಲೀಲಾವಸ್ಥೆ'ಗಳೆಂದು ಎರಡು ಅವಸ್ಥೆಗಳುಂಟು. ಕೇವಲಾವಸ್ಥೆಯಲ್ಲಿ ಪರಶಿವನು ಎಲ್ಲವನ್ನೂ ತನ್ನಲ್ಲಡಗಿಸಿಕೊಂಡು ತಾನೋರ್ವನೇ ಇರುತ್ತಾನೆ. ''ಏಕಾಕೀ ನೈವ ರಮತೇ'' ಎನ್ನುವ ವಚನದಂತೆ ಅನಂತ ಕಾಲದವರೆಗೆ ತಾನೋರ್ವನೇ ಇದ್ದು ಬೇಸರಿಸಿದಾಗ ''ಇದಂ ಜಗತ್ ಸೃಜೇಯಮ್'' ಎನ್ನುವ ಇಚ್ಛೆಯುಂಟಾಗುತ್ತದೆ. ಈ ಇಚ್ಛೆಯುಂಟಾದೊಡನೆ, ಸ್ತಬ್ಧವಾದ ಸಮುದ್ರದಲ್ಲಿ ವಾಯುವಿನ ಸಂಪರ್ಕವಾದೊಡನೆ ಸೂಕ್ಷ್ಮವಾದ ಕಂಪನವುಂಟಾಗುವಂತೆ, ಪರಮಾತ್ಮನಲ್ಲಿ ಸ್ವಲ್ಪ ಚಲನೆಯುಂಟಾಗುತ್ತದೆ. ಪ್ರಾಥಮಿಕವಾದ ಈಷತ್ ಚಲನೆಯೇ ವಿಮರ್ಶ ಶಕ್ತಿ ಎನಿಸಿಕೊಳ್ಳುತ್ತದೆ. ಪರಶಿವನ ಇಚ್ಛಾಶಕ್ತಿರೂಪವಾದ ಈ ವಿಮರ್ಶ ಶಕ್ತಿಯು ಅಂತರಂಗದಲ್ಲಿ ಜ್ಞಾನಶಕ್ತಿ ಎಂತಲೂ ಮತ್ತು ಬಹಿರಂಗದಲ್ಲಿ ಕ್ರಿಯಾಶಕ್ತಿ ಎಂತಲೂ ವಿಕಾಸಗೊಳ್ಳುತ್ತದೆ. ಹೀಗೆ ಒಂದೇ ಆಗಿದ್ದ ಆ ವಿಮರ್ಶ ಶಕ್ತಿಯು ಇಚ್ಛಾಶಕ್ತಿ, ಜ್ಞಾನಶಕ್ತಿ ಹಾಗೂ ಕ್ರಿಯಾಶಕ್ತಿಗಳೆಂಬ ಮೂರು ಆಕಾರಗಳನ್ನು ಧರಿಸುತ್ತದೆ. ಅಂತೆಯೇ ಶ್ರೀ ರೇಣುಕ ಭಗವತ್ಪಾದರು-

ಗುಣತ್ರಯಾತ್ಮಿಕಾ ಶಕ್ತಿರ್ಬ್ರಹ್ಮನಿಷ್ಠಾ ಸನಾತನೀ ।
ತದ್ವೈಷಮ್ಯಾತ್ ಸಮುತ್ಪನ್ನಾ ತಸ್ಮಿನ್ ವಸ್ತುತ್ರಯಾಭಿಧಾ ॥

(ಸಿ. ಶಿ. ೫-೩೯)

ಎಂಬುದಾಗಿ ಶಕ್ತಿಯ ತ್ರಿವಿಧರೂಪವನ್ನು ನಿರೂಪಿಸಿರುತ್ತಾರೆ.

ಇಲ್ಲಿ ತಿಳಿದುಕೊಳ್ಳಬೇಕಾದ ಒಂದು ದಾರ್ಶನಿಕ ರಹಸ್ಯವಿದೆ. ಅದೇನೆಂದರೆ-

ವಿಮರ್ಶಶಕ್ತಿಗೆ 'ಅವಿಭಾಗಪರಾಮರ್ಶದಶಾ' ಮತ್ತು 'ವಿಭಾಗ ಪರಾಮರ್ಶದಶಾ' ಎಂಬುದಾಗಿ ಎರಡು ಅವಸ್ಥೆಗಳುಂಟು. ಸೃಷ್ಟಿಯಾಗುವ ಪೂರ್ವದಲ್ಲಿ ''ಮಯೂರಾಂಡ ರಸನ್ಯಾಯ''ದಂತೆ, ಅಂದರೆ ನವಿಲಿನ ತತ್ತಿಯಲ್ಲಿ ಮುಂದೆ ಹುಟ್ಟಲಿರುವ ಪಕ್ಷಿಯ ಕೈಕಾಲು ಮುಂತಾದ ಅವಯವಗಳೂ, ರೆಕ್ಕೆಯ ನಾನಾ ಪ್ರಕಾರದ ಬಣ್ಣಗಳೂ, ಒಂದೇ ರಸದಲ್ಲಿ ಕಾಣದಂತೆ ಅಡಗಿರುವಂತೆ, ಜಗದುತ್ಪತ್ತಿಗೆ ಕಾರಣೀಭೂತಗಳಾದ ಇಚ್ಛಾ, ಜ್ಞಾನ ಮತ್ತು ಕ್ರಿಯಾಶಕ್ತಿಗಳು ವಿಭಾಗ ಹೊಂದದೇ ವಿಮರ್ಶಶಕ್ತಿಯಲ್ಲಿ ಅಡಗಿರುವಾಗ, ಆ ಸ್ಥಿತಿಯನ್ನೇ ಅವಿಭಾಗಪರಾಮರ್ಶ ಅವಸ್ಥೆಯೆನ್ನುವರು. ಮುಂದೆ ಜಗದುತ್ಪತ್ತಿಯ ಕಾಲದಲ್ಲಿ ಆ ಇಚ್ಛಾ, ಜ್ಞಾನ ಹಾಗೂ ಕ್ರಿಯಾಶಕ್ತಿಗಳು ವಿಮರ್ಶಶಕ್ತಿಯಿಂದ ಹೊರಹೊರಟಾಗ ಅದನ್ನು ವಿಭಾಗಪರಾಮರ್ಶ ಅವಸ್ಥೆ ಎಂದು ಕರೆಯುತ್ತಾರೆ. ಶಿವಾದ್ವೈತಮಂಜರಿಯಲ್ಲಿ ಶ್ರೀ ಸ್ವಪ್ರಭಾನಂದ ಶಿವಾಚಾರ್ಯರು–

ಅನಾದಿನಿಧನಾಚ್ಛಾಂತಾಚ್ಛಿವಾತ್ ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ।

ಈ ರೀತಿಯಾಗಿ ತತ್ತ್ವಗಳ ಉತ್ಪತ್ತಿಯ ಪೂರ್ವದಲ್ಲಿ ಉತ್ಪನ್ನಗಳಾದ ಶಕ್ತಿಗಳ ಕ್ರಮವನ್ನು ಪ್ರತಿಪಾದಿಸಿದ್ದಾರೆ. ಈ ಶಕ್ತಿಗಳಿಂದ ಕೂಡಿಕೊಂಡೇ ಪರಶಿವಚೈತನ್ಯವು ಮೂವತ್ತಾರು ತತ್ತ್ವಗಳ ರೂಪದಲ್ಲಿ ಪರಿಣಮಿಸುತ್ತದೆ.

(೧) ಶಿವತತ್ತ್ವ- ಪೂರ್ವದಲ್ಲಿ ಹೇಳಿದ ಇಚ್ಛಾಶಕ್ತಿಯ ಅಂತರಂಗ ಭೂತವಾದ ಜ್ಞಾನಾಂಶದಲ್ಲಿ ಪ್ರವೇಶಿಸಿದ ಪರಶಿವಚೈತನ್ಯವೇ ಶಿವತತ್ತ್ವವೆಂದು ಕರೆಯಿಸಿ ಕೊಳ್ಳುತ್ತದೆ. ಈ ಶಿವತತ್ತ್ವವನ್ನೇ ಶಿವ, ನೀಲಕಂಠ, ತ್ರಿಲೋಚನ, ಚಂದ್ರಶೇಖರ ಮುಂತಾಗಿ ಕರೆಯುತ್ತಾರೆ. ಸಗುಣರೂಪವಾದ ಈ ಶಿವತತ್ತ್ವವೇ ಮುಮುಕ್ಷುಗಳಿಂದ ಉಪಾಸಿಸಲ್ಪಡುವಂಥದಾಗಿದೆ.

(೨) ಶಕ್ತಿತತ್ತ್ವ–ಇಚ್ಛಾಶಕ್ತಿಯ ಬಹಿರಂಗವಾದ ಕ್ರಿಯಾಂಶದಲ್ಲಿ ಪ್ರವೇಶಿಸಿದ ಚೈತನ್ಯವೇ ಶಕ್ತಿತತ್ತ್ವವು. ಇದೇ ಸದಾಶಿವಾದಿ ಭೂಮ್ಯಂತಗಳಾದ ಖಳ ತತ್ತ್ವಗಳಿಗೆ ಉಪಾದಾನಕಾರಣವಾಗಿರುತ್ತದೆ. ಅಂತೆಯೇ ಶಿವಯೋಗಿ ಶಿವಾಚಾರ್ಯರು–

ಸದಾಶಿವಮುಖಾಶೇಷತತ್ತ್ವ ಮೌಕ್ತಿಕಶುಕ್ತಿಕಾಮ್ ।
ವಂದೇ ಮಾಹೇಶ್ವರೀಂ ಶಕ್ತಿಂ ಮಹಾಮಾಯಾದಿ ರೂಪಿಣೀಮ್ ॥

(ಸಿ. ಶಿ. ೨–೨)

ಈ ರೀತಿಯಾಗಿ ಶಕ್ತಿತತ್ತ್ವದ ಉಪಾದಾನತ್ವವನ್ನು ಪ್ರತಿಪಾದಿಸಿದ್ದಾರೆ.

(೩) ಸದಾಶಿವತತ್ತ್ವ-ಶಕ್ತಿತತ್ತ್ವವು ಇಚ್ಛಾಶಕ್ತಿಯ ಅಂತರಂಗವಾದ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿದಾಗ ನೀರಿನಲ್ಲಿ ನೆನೆಹಾಕಿದ ಕಡಲೆಯು ಉಬ್ಬಿ ಅಂಕುರೋನ್ಮುಖವಾಗುವಂತೆ, ಒಂದು ವಿಲಕ್ಷಣವಾದ ಅವಸ್ಥೆಯನ್ನು ಪಡೆದು ಮುಂದೆ ಉತ್ಪನ್ನವಾಗಲಿರುವ ಪ್ರಪಂಚವನ್ನು ಕುರಿತು 'ಅಹಮಿದಂ' ನಾನು ಈ ಪ್ರಪಂಚವು ಎಂಬ ಅಭಿಮಾನವನ್ನು ತಾಳಲು ಅದಕ್ಕೆ 'ಸದಾಶಿವತತ್ತ್ವ'ವೆನ್ನುತ್ತಾರೆ.

(೪) ಈಶ್ವರತತ್ತ್ವ-ಶಕ್ತಿತತ್ತ್ವವು ಇಚ್ಛಾಶಕ್ತಿಗೆ ಬಹಿರಂಗವಾದ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ ಉತ್ತಮ ಕ್ಷೇತ್ರದಲ್ಲಿ ಬಿತ್ತಿದ ಉತ್ತಮ ಬೀಜದಂತೆ ಅಂಕುರಿಸಿ, ಅಂಕುರಿತವಾದ ಪ್ರಪಂಚವನ್ನು ಕುರಿತು 'ಅಹಮಿದಂ' ನಾನು ಈ ಪ್ರಪಂಚವು ಎಂಬ ಅಭಿಮಾನವನ್ನು ಪಡೆಯಲು ಅದಕ್ಕೆ 'ಈಶ್ವರ ತತ್ತ್ವ'ವೆನ್ನುತ್ತಾರೆ.

'ಸದಾಶಿವತತ್ತ್ವ'ಕ್ಕೂ ಹಾಗೂ 'ಈಶ್ವರತತ್ತ್ವ'ಕ್ಕೂ ಇರುವ ಸೂಕ್ಷ್ಮವಾದ ಅಂತರ ವೇನೆಂದರೆ-ಭೂಮಿಯಲ್ಲಿ ಬಿತ್ತಿದ ಬೀಜವು ಮೊದಲು ಅಂಕುರೋನ್ಮುಖವಾಗಿ ನಂತರ ಹೇಗೆ ಅಂಕುರಿತವಾಗುತ್ತದೆಯೋ, ಅದರಂತೆ ಶಕ್ತಿತತ್ತ್ವವು ಇಚ್ಛಾಶಕ್ತಿಯ ಅಂತರಂಗ ವಾದ ಜ್ಞಾನಾಂಶವನ್ನು ಪ್ರವೇಶಿಸಿ ಅಂಕುರಾಯಮಾನ ಬೀಜದಂತೆ ಇದ್ದು ಸದಾಶಿವ ತತ್ತ್ವವೆನಿಸಿಕೊಂಡರೆ, ಕ್ರಿಯಾಂಶವನ್ನು ಪ್ರವೇಶಿಸಿದ ಅದೇ ಶಕ್ತಿತತ್ತ್ವವೇ ಅಂಕುರಿತ ಬೀಜದಂತೆ ಕ್ರಿಯಾಪ್ರಾಧಾನ್ಯದಿಂದ ಈಶ್ವರತತ್ತ್ವವೆನಿಸಿಕೊಳ್ಳುತ್ತದೆ. ಇದನ್ನು 'ನಾರಾಯಣ' ಎಂಬುದಾಗಿಯೂ ಕರೆಯುತ್ತಾರೆ.

(೫) ಶುದ್ಧವಿದ್ಯಾತತ್ತ್ವ-ಕ್ರಿಯಾಪ್ರಧಾನವಾದ 'ಇದಂ' ಹಾಗೂ ಜ್ಞಾನ ಪ್ರಧಾನವಾದ 'ಅಹಂ' ಇವೆರಡಕ್ಕೂ 'ಸಾಗರತರಂಗನ್ಯಾಯ'ದಿಂದ ಅಭೇದ ಜ್ಞಾನವಾಗಿ 'ಅಹಮೇವೇದಂ ಜಗತ್' ಈ ಜಗತ್ತೆಲ್ಲವೂ ನಾನೇ ಎಂಬ ಜ್ಞಾನವು ಶಕ್ತಿತತ್ತ್ವಕ್ಕೆ ಉಂಟಾಗಲು, ಆಗ ಅದು 'ಶುದ್ಧವಿದ್ಯಾತತ್ತ್ವ'ವೆನಿಸಿಕೊಳ್ಳುತ್ತದೆ. ಗುರುಗಳ ಉಪದೇಶ ದಿಂದ ಶಾಸ್ತ್ರಜನ್ಯವಾದ ನಿರ್ಮಲ ಜ್ಞಾನಕ್ಕೆ 'ಶುದ್ಧವಿದ್ಯೆ' ಎಂದು ಕರೆಯುವರು. ಈ ಶುದ್ಧವಿದ್ಯೆಯ ಪರಿಣಾಮವೇ ಚತುರ್ಮುಖಬ್ರಹ್ಮನು. ಇಲ್ಲಿಯವರೆಗೆ ಹೇಳಿದ ಈ ಐದು ತತ್ತ್ವಗಳಲ್ಲಿ ಶಿವಾಂಶವು ಅಧಿಕವಾಗಿರುವುದರಿಂದ ಇವುಗಳಿಗೆ ಶುದ್ಧತತ್ತ್ವಗಳೆಂದು ಕರೆಯುತ್ತಾರೆ.

(೬) ಮಾಯಾತತ್ತ್ವ-ಶುದ್ಧವಿದ್ಯಾರೂಪವಾಗಿ ಪರಿಣಮಿಸಿರುವ ಶಕ್ತಿತತ್ತ್ವದಲ್ಲಿ ನವಿಲಿನ ತತ್ತಿಯ ರಸದಲ್ಲಿ ಪಾದ-ಪಕ್ಷ-ವರ್ಣವೈಚಿತ್ರ್ಯಾದಿಗಳು ಅಡಕವಾಗಿರುವಂತೆ, ಭಾವೀ ಪ್ರಪಂಚದ ಸಕಲ ಸಾಮಗ್ರಿಗಳೂ ಸೂಕ್ಷ್ಮರೂಪವಾಗಿ ಅಡಗಿರುತ್ತವೆ. ಯಾವಾಗ ಆ ಎಲ್ಲ ತತ್ತ್ವಗಳ ಪರಸ್ಪರ ಭೇದಜ್ಞಾನ ಉಂಟಾಗುತ್ತದೆಯೋ ಆಗ ಆ ಶುದ್ಧವಿದ್ಯೆಯೇ 'ಮಾಯಾತತ್ತ್ವ'ವೆನಿಸಿಕೊಳ್ಳುವುದು. ಈ ಮಾಯಾ ತತ್ತ್ವದ ಪ್ರಭಾವದಿಂದಲೇ ಪರಮಾತ್ಮನ ಅಂಶವಾದ ಜೀವಾತ್ಮನಲ್ಲಿ 'ನಾಹಮೀಶ್ವರಃ' ನಾನು ಈಶ್ವರನಲ್ಲ ಎಂಬ ಭ್ರಮೆಯು ಉತ್ಪನ್ನವಾಗುತ್ತದೆ. ಈ ಮಾಯಾಶಕ್ತಿಯ ಪ್ರಭಾವದಿಂದಲೇ ಶುದ್ಧನಾದ ಜೀವಾತ್ಮನು 'ಸಂಸಾರಿ' ಎಂದೆನಿಸಿಕೊಳ್ಳುತ್ತಾನೆ.

(೭-೧೧) ಕಲಾದಿಪಂಚತತ್ತ್ವಗಳು-ಪರಮಾತ್ಮನ ಅಂಶನಾದ ಜೀವಾತ್ಮನು ಮಾಯೆಯಿಂದ ಅಪಹರಿಸಲ್ಪಟ್ಟ ಐಶ್ವರ್ಯವುಳ್ಳವನಾಗಿರುವುದರಿಂದ, ಇವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪರಿಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವರೂಪಗಳಾದ ಶಕ್ತಿಗಳು ಸಂಕೋಚಗೊಂಡು, ಕಲಾ, ವಿದ್ಯಾ, ರಾಗ, ಕಾಲ, ನಿಯತಿಗಳಾಗಿ ಪರಿಣಮಿಸಿ ಜೀವಾತ್ಮನನ್ನು ಆವರಿಸುತ್ತವೆ. ಅಂತೆಯೇ ಇವುಗಳನ್ನು ಪಂಚಕಂಚುಕಗಳೆಂದೂ ಕರೆಯುತ್ತಾರೆ. ಜೀವಾತ್ಮನಲ್ಲಿಯ ಸರ್ವಕರ್ತೃತ್ವಶಕ್ತಿಯು ಸಂಕೋಚಗೊಂಡು ಅಲ್ಪ

ಕರ್ತೃತ್ವವನ್ನು ಪಡೆದಾಗ 'ಕಲಾತತ್ತ್ವ'ವೆನಿಸಿಕೊಳ್ಳುವುದು. ಸರ್ವಜ್ಞತ್ವ ಶಕ್ತಿಯು ಸಂಕುಚಿತವಾಗಿ, 'ವಿದ್ಯಾತತ್ತ್ವ'ವಾಯಿತು. ಜೀವಾತ್ಮನ ಪರಿಪೂರ್ಣತ್ವವು ಸಂಕೋಚವಾಗಿ ಅಪೂರ್ಣತ್ವವನ್ನು ತಾಳಿ 'ರಾಗತತ್ತ್ವ'ವೆನಿಸಿಕೊಳ್ಳುವುದು. ಈ ರಾಗದ ಪ್ರಭಾವದಿಂದಲೇ ಜೀವನು ಸ್ರಕ್–ಚಂದನ–ವನಿತಾದಿ ವಿಷಯಗಳಲ್ಲಿ ಆಸಕ್ತನಾಗುತ್ತಾನೆ. ಇನ್ನು ಜೀವಾತ್ಮನ ನಿತ್ಯತ್ವವು ಸಂಕೋಚಗೊಂಡು ಅನಿತ್ಯತ್ವವಾಗಿ ಭೂತ, ಭವಿಷ್ಯತ್ ಹಾಗೂ ವರ್ತಮಾನ ರೂಪವಾದ 'ಕಾಲತತ್ತ್ವ'ವೆನಿಸಿಕೊಳ್ಳುತ್ತದೆ. ಅದರಂತೆ ವ್ಯಾಪಕತ್ವವು ಸಂಕೋಚಗೊಂಡು ಅವ್ಯಾಪಕವಾಗಿ 'ಈ ಕಾರಣದಿಂದ ಈ ಕಾರ್ಯವೇ ಹುಟ್ಟುವುದು ಬೇರೆಯದು ಹುಟ್ಟಲಾರದು' ಎಂಬ ನಿಯಮಕ್ಕೆ ಅಸಾಧಾರಣ ಕಾರಣವಾದ 'ನಿಯತಿತತ್ತ್ವ' ವೆನಿಸಿಕೊಳ್ಳುವುದು. ಈ ಪಂಚಕಂಚುಕಗಳಿಂದ ಬದ್ಧನಾದ ಜೀವಾತ್ಮ (ಪುರುಷ)ನು ಸಂಸಾರದಲ್ಲಿ ಪ್ರವೃತ್ತನಾಗುತ್ತಾನೆ.

(೧೨) ಪುರುಷತತ್ತ್ವ–ಕಟ್ಟಿಗೆಯ ಸಂಯೋಗವಾಗಲು ಅಗ್ನಿಯಿಂದ ಸಣ್ಣ ಸಣ್ಣ ಕಿಡಿಗಳು ಆವಿರ್ಭವಿಸುವ ಪರಶಿವನ ಇಚ್ಛಾಶಕ್ತಿಯ ಸಂಯೋಗದಿಂದ ಅವಿರ್ಭ ವಿಸುವ ಶಿವಾಂಶವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ, 'ಪುರುಷತತ್ತ್ವ'ವೆನಿಸಿಕೊಳ್ಳುವುದು. ಇವನಿಗೆ ಆಣವಮಲವು ಆವರಿಸಿರುವುದರಿಂದ ಆತ್ಮನಲ್ಲಿ ಅನಾತ್ಮತ್ವವನ್ನು ಆರೋಪಿಸಿ ಕೊಂಡು, 'ನಾಹಮೀಶ್ವರಃ' ನಾನು ಪರಮಾತ್ಮನಲ್ಲ ಎಂದು ಪರಮಾತ್ಮನಿಗಿಂತಲೂ ತನ್ನನ್ನು ಭಿನ್ನನನ್ನಾಗಿಯೂ, ಅಣುವನ್ನಾಗಿಯೂ ತಿಳಿದುಕೊಳ್ಳುವನಲ್ಲದೇ, ಅನಾತ್ಮವಾದ ದೇಹಾದಿಗಳಲ್ಲಿ ಆತ್ಮ ಬುದ್ಧಿಯನ್ನು ತಾಳುವನು. ಇದೇ ಪ್ರಕಾರ ಅನ್ಯೋನ್ಯಾಭಾವ ಭೇದ ಲಕ್ಷಣಾತ್ಮಕವಾದ ಮಾಯಾಮಲದಿಂದ ಆವೃತನಾಗಿ ತನ್ನನ್ನು ಹಾಗೂ ತನಗೆ ಸಂಬಂಧಪಟ್ಟವರನ್ನು ಮಾತ್ರ ಪ್ರೀತಿಸುವವನಾಗಿ ಅನ್ಯರೊಡನೆ ವೈರವನ್ನು ತಾಳುತ್ತಾನೆ. ಹೀಗೆ ಈ ರಾಗ–ದ್ವೇಷಗಳ ಮೂಲಕವಾಗಿಯೇ ಶುಭಾಶುಭ ಕರ್ಮಗಳನ್ನು ಆಚರಿಸುವವನಾಗಿ ಕಾರ್ಮಿಕಮಲದಿಂದಲೂ ಆವೃತನಾಗುತ್ತಾನೆ. ಈ ಪ್ರಕಾರವಾಗಿ ಆಣವ–ಮಾಯಾ–ಕಾರ್ಮಿಕಗಳೆಂಬ ತ್ರಿವಿಧಮಲಗಳಿಂದ ಆವೃತ್ತನಾಗಿ ಸಂಸಾರದಲ್ಲಿ ಸುಖ ದುಃಖಗಳನ್ನು ಅನುಭವಿಸುತ್ತ ಸಂಚರಿಸುವ ಜೀವಾತ್ಮನನ್ನು 'ಪುರುಷತತ್ತ್ವ'ವೆಂದು ಕರೆಯುವರು. ಮಾಯಾತತ್ತ್ವವನ್ನೇ ಮೊದಲುಗೊಂಡು ಪುರುಷತತ್ತ್ವ ಪರ್ಯಂತ ಗಳಾದ ಈ ಏಳು ತತ್ತ್ವಗಳನ್ನು ಶುದ್ಧಾಶುದ್ಧ ತತ್ತ್ವಗಳೆಂದು ಹೇಳುವರು.

(೧೩) ಪ್ರಕೃತಿತತ್ತ್ವ-ಇಲ್ಲಿಯವರೆಗೆ ಹೇಳಲ್ಪಟ್ಟ ಹನ್ನೆರಡು ತತ್ತ್ವಗಳು ತ್ರಿಗುಣಾತೀತಗಳು. ಪ್ರಪಂಚವಾದರೋ ತ್ರಿಗುಣಾತ್ಮಕವಾದುದು. ಆದ್ದರಿಂದ ಪ್ರಪಂಚದ ಉತ್ಪತ್ತಿಗೆ ಕಾರಣೀಭೂತವಾದ ಪ್ರಕೃತಿತತ್ತ್ವದ ಬಗ್ಗೆ ವಿವರಿಸುತ್ತಾರೆ.

ಕಾರ್ಯೋನ್ಮುಖ್ಯಗರ್ಭಿತವಾದ ಇಚ್ಛಾಶಕ್ತಿಯು ತನ್ನಲ್ಲಿರುವ ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳಲ್ಲಿ 'ಜ್ಞಾನಂ ಕ್ರಿಯಾ ನ ಭವತಿ, ಕ್ರಿಯಾ ಜ್ಞಾನಂ ನ ಭವತಿ' ಜ್ಞಾನವು ಕ್ರಿಯೆಯಾಗಲಾರದು; ಕ್ರಿಯೆಯು ಜ್ಞಾನವಾಗಲಾರದು ಎಂಬ ಅನ್ಯೋನ್ಯಾಭಾವರೂಪ ಭೇದಬುದ್ಧಿಪ್ರಧಾನವಾದ ಮಾಯಾ ತತ್ತ್ವದಲ್ಲಿ ಪ್ರತಿಸ್ಫುರಿಸಲು 'ಪ್ರಕೃತಿತತ್ತ್ವ' ವೆನಿಸಿಕೊಳ್ಳುವುದು. ಇದು ಸತ್ತ್ವ, ರಜಸ್ ಮತ್ತು ತಮೋಗುಣಗಳ ಸಾಮ್ಯಾವಸ್ಥಾರೂಪ

ವಾಗಿರುತ್ತದೆ. ಪ್ರಪಂಚದ ರಚನೆಯಲ್ಲಿ ಇದೇ ಪ್ರಧಾನವಾಗಿರುವುದರಿಂದ ಇದನ್ನು 'ಪ್ರಧಾನ'ವೆಂತಲೂ ಕರೆಯುತ್ತಾರೆ. ಈ ಪ್ರಕೃತಿತತ್ತ್ವವೇ ಬುದ್ಧಿಯನ್ನೇ ಮೊದಲು ಗೊಂಡು ಪೃಥ್ವೀತತ್ತ್ವಪರ್ಯಂತಗಳಾದ ಇಪ್ಪತ್ತೂಮ್ರು ತತ್ತ್ವಗಳಿಗೆ ಮೂಲಕಾರಣ ವಾಗಿರುತ್ತದೆ.

(೧೪-೩೬) ಮಹದಾದಿತ್ರಯೋವಿಂಶತಿ ತತ್ತ್ವಗಳು- ಪ್ರಕೃತಿ ಎಂದೆನಿಸಿಕೊಂಡ ಶಕ್ತಿತತ್ತ್ವವೇ ನಿಶ್ಚಯಾತ್ಮಕವಾದ ವ್ಯವಹಾರವನ್ನು ಮಾಡುವುದಾಗಿ 'ಬುದ್ಧಿತತ್ತ್ವ' ವೆನಿಸಿಕೊಳ್ಳುವುದು. ಇದನ್ನೇ ಮಹತ್ ತತ್ತ್ವವೆಂತಲೂ ಕರೆಯುತ್ತಾರೆ. ಬುದ್ಧಿ ತತ್ತ್ವವಾದೀ ಶಕ್ತಿತತ್ತ್ವವೇ ನಾನು, ನನ್ನದು ಎಂದು ಅಭಿಮಾನಪಡುವುದಾಗಿ 'ಅಹಂಕಾರ ತತ್ತ್ವ'ವೆಂದು ಕರೆಯಲ್ಪಡುವುದು. ಅದೇ ಶಕ್ತಿತತ್ತ್ವವೇ 'ಮೋಟು ಮರವೋ ಕಳ್ಳನೋ' ಮುಂತಾದ ಸಂಕಲ್ಪ-ವಿಕಲ್ಪಗಳಿಗೆ ಕಾರಣವಾದುದಾಗಿ 'ಮನಸ್ತತ್ತ್ವ' ವೆನಿಸಿಕೊಳ್ಳುವುದು. ಬುದ್ಧಿ ಅಹಂಕಾರ ಮತ್ತು ಮನಸ್ಸುಗಳೆಂಬ ಈ ಮೂರೂ ತತ್ತ್ವಗಳು ಸುಖ-ದುಃಖಾದ್ಯಾಂತರಿಕ ಪದಾರ್ಥಗಳ ವ್ಯವಹಾರಕ್ಕೆ ಅಸಾಧಾರಣ ಕಾರಣಗಳಾಗಿರು ವುದರಿಂದ ಇವುಗಳನ್ನು 'ಅಂತಃಕರಣ'ವೆಂದು ಕರೆಯುವರು. ಈ ಅಂತಃಕರಣವು ಇಚ್ಛಾ ಶಕ್ತಿಪ್ರಧಾನವಾಗಿರುವುದು.

ಪೂರ್ವದಲ್ಲಿ ಹೇಳಿದ ಪ್ರಕೃತಿ ತತ್ತ್ವವೇ ಜ್ಞಾನಶಕ್ತಿಪ್ರಾಧಾನ್ಯದಿಂದ ಶಬ್ದ ಜ್ಞಾನಕ್ಕೆ ಸಾಧನವಾಗಿ 'ಶ್ರೋತ್ರತತ್ತ್ವ'ವೆಂದೂ, ಸ್ಪರ್ಶಜ್ಞಾನಕ್ಕೆ ಸಾಧನವಾಗಿ 'ತ್ವಕ್‌ತತ್ತ್ವ' ವೆಂದೂ, ರೂಪಜ್ಞಾನಕ್ಕೆ ಸಾಧನವಾಗಿ 'ನೇತ್ರತತ್ತ್ವ'ವೆಂದೂ, ರಸಜ್ಞಾನಕ್ಕೆ ಸಾಧನವಾಗಿ 'ಜಿಹ್ವಾತತ್ತ್ವ'ವೆಂತಲೂ, ಗಂಧಜ್ಞಾನಕ್ಕೆ ಸಾಧನವಾಗಿ 'ಘ್ರಾಣತತ್ತ್ವ'ವೆಂದೂ, ಹೇಳಿಸಿ ಕೊಳ್ಳುವುದು. ಈ ಐದು ಇಂದ್ರಿಯಗಳು ಶರೀರದಲ್ಲಿ ಇದ್ದು ಬಾಹ್ಯವಿಷ ಯಗಳ ಜ್ಞಾನಕ್ಕೆ ಸಾಧನಗಳಾಗಿರುವುದರಿಂದ ಇವುಗಳನ್ನು ಬಾಹ್ಯಕರಣಗಳೆಂದು ಕರೆಯುತ್ತಾರೆ.

ಇದೇ ಪ್ರಕಾರವಾಗಿ ಆ ಪ್ರಕೃತಿತತ್ತ್ವವೇ ರಜೋಗುಣಪ್ರಾಧಾನ್ಯದಿಂದ, ಉಚ್ಚಾರಣಕ್ರಿಯೆಗೆ ಸಾಧನವಾಗಿ 'ವಾಕ್ತತ್ತ್ವ'ವೆಂದೂ, ಆದಾನ-ಪ್ರದಾನಾದಿ ಕ್ರಿಯೆಗಳಿಗೆ ಸಾಧನವಾಗಿ, 'ಪಾಣಿತತ್ತ್ವ'ವೆಂದೂ, ಗಮನಾಗಮನಾಧಿ ಕ್ರಿಯೆಗಳಿಗೆ ಸಾಧನವಾಗಿ 'ಪಾದತತ್ತ್ವ'ವೆಂದೂ, ಮಲಪರಿತ್ಯಾಗಕ್ಕೆ ಸಾಧನವಾಗಿ 'ಪಾಯುತತ್ತ್ವ' ವೆಂದೂ, ರೇತೋಮೂತ್ರಪರಿತ್ಯಾಗಕ್ಕೆ ಸಾಧನವಾಗಿ 'ಉಪಸ್ಥತತ್ತ್ವ'ವೆಂತಲೂ ಹೇಳಿಸಿ ಕೊಳ್ಳುತ್ತದೆ. ಈ ಐದು ಇಂದ್ರಿಯಗಳು ಕ್ರಿಯಾಶಕ್ತಿಪ್ರಧಾನವಾಗಿರುವುದರಿಂದ ಇವುಗಳನ್ನು ಕರ್ಮೇಂದ್ರಿಯಗಳೆಂದು ಕರೆಯುತ್ತಾರೆ.

ಇಲ್ಲಿಯವರೆಗೆ ಪ್ರತಿಪಾದಿಸಿದ ಬುದ್ಧಿತತ್ತ್ವವೇ ಮೊದಲುಗೊಂಡು ಉಪಸ್ಥತತ್ತ್ವ ಪರ್ಯಂತಗಳಾದ ಹದಿಮೂರು ತತ್ತ್ವಗಳಲ್ಲಿ ಅಂತಃಕರಣವು ಇಚ್ಛಾಶಕ್ತಿ ಪ್ರಧಾನ ವಾದುದು; ಪಂಚಜ್ಞಾನೇಂದ್ರಿಯಗಳು ಜ್ಞಾನಶಕ್ತಿ ಪ್ರಧಾನವಾದವುಗಳು ಮತ್ತು ಪಂಚಕರ್ಮೇಂದ್ರಿಯಗಳು ಕ್ರಿಯಾಶಕ್ತಿಪ್ರಧಾನವಾದವುಗಳೆಂದು ತಿಳಿದುಕೊಳ್ಳಬೇಕು.

ಹೀಗೆಯೇ ಆ ಪ್ರಕೃತಿತತ್ತ್ವವೇ ತಮೋಗುಣ ಪ್ರಾಧಾನ್ಯದಿಂದ ಕೇವಲ ಶ್ರೋತ್ರೇಂದ್ರಿಯಗ್ರಾಹ್ಯವಾದ 'ಶಬ್ದತತ್ತ್ವ' ರೂಪವಾಗಿಯೂ, ಕೇವಲ ತ್ವಗಿಂದ್ರಿಯ

ಗ್ರಾಹ್ಯವಾದ 'ಸ್ಪರ್ಶತತ್ತ್ವ' ರೂಪವಾಗಿಯೂ, ಕೇವಲ ನೇತ್ರೇಂದ್ರಿಯಗ್ರಾಹ್ಯವಾದ 'ರೂಪತತ್ತ್ವ'ವಾಗಿಯೂ, ಕೇವಲ ಜಿಹ್ವೇಂದ್ರಿಯಗ್ರಾಹ್ಯವಾದ 'ರಸತತ್ತ್ವ'ರೂಪವಾಗಿಯೂ, ಕೇವಲ ಘ್ರಾಣೇಂದ್ರಿಯಗ್ರಾಹ್ಯವಾದ, 'ಗಂಧತತ್ತ್ವ'ರೂಪವಾಗಿಯೂ ಪರಿಣಮಿಸುವುದು.

ಈ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳು ಕ್ರಮವಾಗಿ ಧ್ವನ್ಯಾತ್ಮಕ–ವರ್ಣಾತ್ಮಕವಾಗಲಿ, ಶೀತೋಷ್ಣರೂಪವಾಗಲಿ, ನೀಲಪೀತಾದಿಯಾಗಲಿ, ಮಧುರಾಮ್ಲರೂಪವಾಗಲಿ ಮತ್ತು ಸುಗಂಧ–ದುರ್ಗಂಧ ರೂಪವಾಗಿಯೇ ಆಗಲಿ, ವಿಭಾಗವಾಗಿ ತೋರದೇ ಸಾಮಾನ್ಯಗಳಾಗಿರುವುದರಿಂದ ಇವುಗಳನ್ನು ಪಂಚತನ್ಮಾತ್ರೆಗಳೆಂದು ಕರೆಯುತ್ತಾರೆ. ಇವು ಅತ್ಯಂತ ಸೂಕ್ಷ್ಮವಾದವುಗಳು. ಇವುಗಳಿಂದ ಸ್ಥೂಲಗಳಾದ ಪಂಚಮಹಾಭೂತಗಳು ಉತ್ಪನ್ನವಾಗುತ್ತವೆ.

ಪಂಚಮಹಾಭೂತಗಳ ಉತ್ಪತ್ತಿಕ್ರಮವು ಅದ್ವೈತವೇದಾಂತಕ್ಕಿಂತಲೂ ಇಲ್ಲಿ ಭಿನ್ನವಾಗಿ ಪ್ರತಿಪಾದಿಸಲ್ಪಟ್ಟಿದೆ. ಅದೆಂತೆಂದರೆ–ಮೊದಲು ತಾಮಸಾಹಂಕಾರದಿಂದ ಶಬ್ದತನ್ಮಾತ್ರವು, ಆ ಶಬ್ದತನ್ಮಾತ್ರೆಯಿಂದ ಶಬ್ದೈಕ ಗುಣವುಳ್ಳ 'ಆಕಾಶತತ್ತ್ವ'ವೂ; ಆಕಾಶದಿಂದ ಸ್ಪರ್ಶತನ್ಮಾತ್ರೆಯೂ, ಪುನಃ ಆ ಸ್ಪರ್ಶತನ್ಮಾತ್ರೆಯಿಂದ ಶಬ್ದ ಹಾಗೂ ಸ್ಪರ್ಶವೆಂಬ ಎರಡು ಗುಣವುಳ್ಳ 'ವಾಯುತತ್ತ್ವ'ವೂ ಉತ್ಪನ್ನವಾಯಿತು. ಈ ವಾಯುತತ್ತ್ವದಿಂದ ರೂಪ ತನ್ಮಾತ್ರೆಯೂ, ಪುನಃ ಆ ರೂಪತನ್ಮಾತ್ರೆಯಿಂದ ಶಬ್ದ, ಸ್ಪರ್ಶ ಮತ್ತು ರೂಪವೆಂಬ ಮೂರು ಗುಣವುಳ್ಳ 'ಅಗ್ನಿತತ್ತ್ವ'ವೂ ಉತ್ಪನ್ನವಾಯಿತು. ಈ ಅಗ್ನಿ ತತ್ತ್ವದಿಂದ ರಸತನ್ಮಾತ್ರೆಯೂ, ಪುನಃ ಆ ರಸತನ್ಮಾತ್ರೆಯಿಂದ ಶಬ್ದ, ಸ್ಪರ್ಶ ರೂಪ ಮತ್ತು ರಸವೆಂಬ ನಾಲ್ಕು ಗುಣವುಳ್ಳ ಜಲತತ್ತ್ವವೂ ಉತ್ಪನ್ನವಾಯಿತು. ಈ ಜಲತತ್ತ್ವದಿಂದ ಗಂಧತನ್ಮಾತ್ರೆಯೂ, ಪುನಃ ಆ ಗಂಧ ತನ್ಮಾತ್ರೆಯಿಂದ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಐದು ಗುಣವುಳ್ಳ ಪೃಥ್ವೀತತ್ತ್ವವೂ ಉತ್ಪನ್ನವಾಯಿತು.

"ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ ಅದ್ಭ್ಯಃ ಪೃಥಿವಿ (ತೈ. ಉ. ೨–೧–೧) ಎಂಬ ಶ್ರುತಿವಾಕ್ಯದಲ್ಲಿ ಪಂಚಮಹಾಭೂತಗಳ ಉತ್ಪತ್ತಿಯ ಕ್ರಮವನ್ನು ನಿರೂಪಿಸುವಾಗ ಮಧ್ಯದಲ್ಲಿ ಪಂಚತನ್ಮಾತ್ರೆಗಳ ಹೆಸರುಗಳನ್ನು ಹೇಳಿರುವುದಿಲ್ಲ, ಆದರೂ ಉತ್ತರೋತ್ತರ ಭೂತಗಳಲ್ಲಿ ಪೂರ್ವ ಪೂರ್ವ ಭೂತಗಳ ಗುಣಗಳ ಅಸ್ತಿತ್ವವು ಕಂಡುಬರುವುದರಿಂದ ಎರಡು ಭೂತಗಳ ಮಧ್ಯದಲ್ಲಿ ತನ್ಮಾತ್ರೆಗಳನ್ನು ಅವಶ್ಯವಾಗಿ ಕಲ್ಪಿಸಬೇಕಾಗುತ್ತದೆ.

ಹೀಗೆ ಉತ್ಪನ್ನವಾದ ಸ್ಥೂಲ ಪಂಚಮಹಾಭೂತಗಳಿಂದ ಹದಿನಾಲ್ಕು ಲೋಕಗಳೂ ಹಾಗೂ ಆಯಾ ಲೋಕಗಳಲ್ಲಿರುವ ಸಕಲ ಪ್ರಾಣಿಗಳ ಸ್ಥೂಲ ಶರೀರಗಳೂ ಮತ್ತು ತತ್ತತ್ ಶರೀರೋಚಿತಗಳಾದ ಅನ್ನ–ಪಾನಾದಿಗಳೂ ಉತ್ಪನ್ನವಾಗುತ್ತವೆ.

ನಿಗಮಾಗಮ ಪ್ರಸಿದ್ಧಗಳಾದ ಶಿವತತ್ತ್ವವೇ ಮೊದಲುಗೊಂಡು ಪೃಥಿವಿ ತತ್ತ್ವ ಪರ್ಯಂತಗಳಾದ ಮೂವತ್ತಾರು ತತ್ತ್ವಗಳು ಶಕ್ತಿವಿಶಿಷ್ಟಪರಶಿವ ಬ್ರಹ್ಮದ ಪರಿಣಾಮ ರೂಪವಾಗಿರುವುದರಿಂದ ವೀರಶೈವ ಸಿದ್ಧಾಂತದಲ್ಲಿ ಅವಿಕೃತಪರಿಣಾಮವಾದವನ್ನೂ, ಜಗತ್ಸತ್ಯತ್ವವಾದವನ್ನೂ ಸ್ವೀಕರಿಸುತ್ತಾರೆ.

ಈ ರೀತಿಯಾಗಿ ಶಕ್ತಿವಿಶಿಷ್ಟವಾದ ಪರಶಿವನು ಮೂವತ್ತಾರು ತತ್ತ್ವಗಳ ರೂಪದಲ್ಲಿ ಪರಿಣಾಮವನ್ನು ಹೊಂದಿ ಲೀಲಾವಿನೋದವನ್ನನುಭವಿಸುತ್ತಾನೆ. ಈ ಲೀಲಾವ್ಯಾಪಾರ ಮುಗಿದ ನಂತರ ತನ್ನ ಶಕ್ತಿಯನ್ನು ಸಂಕೋಚಗೊಳಿಸಿ, ಆಮೆಯು ತನ್ನ ಅವಯವಗಳನ್ನು ಮುದುರಿಕೊಳ್ಳುವಂತೆ, ಸಚರಾಚರ ಪ್ರಪಂಚವೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡು ತಾನೋರ್ವನೇ ಕೇವಲಾವಸ್ಥೆಯಲ್ಲಿ ಉಳಿಯುತ್ತಾನೆ.

ಯದ್ಭಾಸಾ ಭಾಸತೇ ವಿಶ್ವಂ ಯತ್ಸುಖೇನಾನುಮೋದತೇ ।
ನಮಸ್ತಸ್ಮೈ ಗುಣಾತೀತವಿಭವಾಯ ಪರಾತ್ಮನೇ (ಸಿ. ಶಿ. ೧–೪)

ಅರ್ಥ : ವಿಶ್ವಂ=ಸಮಸ್ತ ಪ್ರಪಂಚವು, ಯದ್ಭಾಸಾ=ಯಾವ ಪರಶಿವನ ಪ್ರಕಾಶದಿಂದ, ಭಾಸತೇ=ಪ್ರಕಾಶಿಸುತ್ತದೆಯೋ, ಯತ್ಸುಖೇನ=ಯಾವ ಪರಶಿವನ ಆನಂದದಿಂದ, ಅನುಮೋದತೇ=ಆನಂದಿಸುತ್ತದೆಯೋ, ಗುಣಾತೀತ ವಿಭವಾಯ= ಹೇಯ ಸತ್ತ್ವಾದಿಗುಣರಹಿತ ವೈಭವಶಾಲಿಯಾದ, ತಸ್ಮೈ=ಆ, ಪರಾತ್ಮನೇ= ಪರಮಾತ್ಮನಿಗೆ, ನಮಃ=ನಮಸ್ಕಾರವು.

ಪ್ರಕಾಶ ಹಾಗೂ ಆನಂದಗಳು ಪ್ರತಿಯೊಬ್ಬರಿಗೂ ಬೇಕಾಗುವ ವಸ್ತುಗಳು. ಅವುಗಳು ಈ ಜಗತ್ತಿನಲ್ಲಿ ತೋರುವುದರಿಂದ, ಜೀವಿಗಳು ಜಗತ್ತಿನ ಕಡೆಗೆ ಸಮ್ಮುಖವಾಗಿ ಸಾಗುತ್ತಲಿದ್ದಾರೆ. ಆದರೆ ಜಗತ್ತಿನಲ್ಲಿ ತೋರುವ ಈ ಪ್ರಕಾಶ ಹಾಗೂ ಆನಂದಗಳು ಜಗತ್ತಿನಲ್ಲಿಯೇ ಇರುವವುಗಳಲ್ಲ; ಆದರೆ ಜಗತ್ತಿಗೆ ಕಾರಣೀಭೂತನಾದ ಪರಮಾತ್ಮನಲ್ಲಿ ಇರುವಂಥವುಗಳು. ಅಗ್ನಿಯ ಸಂಪರ್ಕದಿಂದ ಜಲವು ಉಷ್ಣವಾಗಿ ತೋರುವಂತೆ, ಮಧುರವಾದ ಸಕ್ಕರೆ ಮುಂತಾದ ಪದಾರ್ಥಗಳ ಸಂಪರ್ಕದಿಂದ ಸಿಹಿಯಲ್ಲದ ಪದಾರ್ಥಗಳು ಸಿಹಿಯಾಗಿ ತೋರುವಂತೆ, ಪ್ರಕಾಶ ಹಾಗೂ ಆನಂದಶೂನ್ಯವಾದ ಪ್ರಪಂಚವು ಪರಶಿವನ ಸಂಬಂಧದಿಂದ, ''ತಸ್ಯ ಭಾಸಾ ಸರ್ವಮಿದಂ ವಿಭಾತಿ'', ''ತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪ ಜೀವಂತಿ'' ಎನ್ನುವ ಶ್ರುತಿವಚನಗಳ ಆಧಾರದಿಂದ, ಪ್ರಕಾಶಮಯವಾಗಿಯೂ ಮತ್ತು ಆನಂದಮಯವಾಗಿಯೂ ತೋರುತ್ತದೆ. ಸತ್ತು, ಚಿತ್ತು, ಆನಂದ, ನಿತ್ಯ ಮತ್ತು ಪರಿಪೂರ್ಣಸ್ವರೂಪನಾದ ಪರಶಿವನಲ್ಲಿ ಮಾಯಿಕಗಳಾದ ಸತ್ತ್ವ, ರಜಸ್ ಹಾಗೂ ತಮೋಗುಣಗಳು ಇರುವುದಿಲ್ಲ. ಇಂತಹ ನಿರ್ಗುಣೈಶ್ವರ್ಯಸಂಪನ್ನನಾದ ಪರಶಿವನಿಗೆ ಗ್ರಂಥಕಾರರು ನಮನಗಳನ್ನರ್ಪಿಸುತ್ತಾರೆ.

ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ ।
ನಿಷ್ಕಲಂಕಸ್ವಭಾವಾಯ ನಮಃ ಶಾಂತಾಯ ಶಂಭವೇ (ಸಿ. ಶಿ. ೧–೫)

ಅರ್ಥ : ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ=ಸದಾಶಿವತತ್ತ್ವವನ್ನೇ ಮೊದಲುಗೊಂಡು ಪೃಥಿವೀತತ್ತ್ವಪರ್ಯಂತಗಳಾದ ಸಕಲ ತತ್ತ್ವಗಳ ಪ್ರಾಕಟ್ಯ ವನ್ನು ಮಾಡುವ, ನಿಷ್ಕಳಂಕಸ್ವಭಾವಾಯ=ನಿರ್ಮಲ ಸ್ವಭಾವದ, ಶಾಂತಾಯ= ಶಾಂತನಾದ, ಶಂಭವೇ=ಪರಮಾತ್ಮನಿಗೆ, ನಮಃ=ನಮಸ್ಕಾರವು.

ಪರಶಿವನು ತನ್ನಲ್ಲಿ ಅವಿನಾಭಾವಸಂಬಂಧದಿಂದಿರುವ ವಿಮರ್ಶ ಶಕ್ತಿಯಿಂದ ಮೂವತ್ತಾರು ತತ್ತ್ವಾತ್ಮಕವಾದ ಪ್ರಪಂಚವನ್ನು ಸೃಜಿಸಿ ತಾನು ಮಾತ್ರ, ಅನೇಕ ಮೋಡ,

ಮಳೆ, ಧೂಳಿಗಳಿದ್ದರೂ ಆಕಾಶವು ಅವಾವುದರಿಂದಲೂ ಲಿಪ್ತವಾಗದಿರುವಂತೆ, ''ಶುದ್ಧಮೀಶ್ವರಚೈತನ್ಯಮ್'' ಎಂಬ ಪ್ರಮಾಣವಚನಾನುಸಾರವಾಗಿ ನಿರ್ಲಿಪ್ತನಾಗಿದ್ದು ನಿಷ್ಕಲಸ್ವಭಾವನೂ, ಶಾಂತನೂ ಎಂದು ಕರೆಯಿಸಿಕೊಳ್ಳುತ್ತಾನೆ. ಪ್ರತಿಯೊಬ್ಬ ಜೀವಿಯೂ ಸಕಲ ದೋಷಗಳನ್ನು ನೀಗಿ ಶಾಂತಿಯನ್ನು ಪಡೆಯಬೇಕಾದರೆ ಆ ಪರಮಾತ್ಮನಿಗೇನೇ ಶರಣು ಹೋಗಬೇಕೆಂಬ ಭಾವವನ್ನು ಈ ಶಿವಯೋಗಿ ಶಿವಾಚಾರ್ಯರು ತಾವು ಆ ಪರಶಿವನಿಗೆ ಶರಣು ಹೊಕ್ಕು ಅನ್ಯರಿಗೆ ಮಾರ್ಗದರ್ಶನ ಮಾಡಿದ್ದಾರೆ.

ಸ್ವೇಚ್ಛಾವಿಗ್ರಹಯುಕ್ತಾಯ ಸ್ವೇಚ್ಛಾವರ್ತನವರ್ತಿನೇ।
ಸ್ವೇಚ್ಛಾಕೃತತ್ರಿಲೋಕಾಯ ನಮಃ ಸಾಂಬಾಯ ಶಂಭವೇ (ಸಿ. ಶಿ. ೧–೬)

ಅರ್ಥ : ಸ್ವೇಚ್ಛಾವಿಗ್ರಹಯುಕ್ತಾಯ=ತನ್ನ ಇಚ್ಛಾಶಕ್ತಿಯಿಂದ ದೇಹವನ್ನು ಧರಿಸಿದ, ಸ್ವೇಚ್ಛಾವರ್ತನವರ್ತಿನೇ=ತನ್ನ ಇಚ್ಛಾಶಕ್ತಿಯಿಂದ ತನಗೆ ಬೇಕಾದ ಆಚರಣೆಯಲ್ಲಿ ತೊಡಗಿರುವ, ಸ್ವೇಚ್ಛಾಕೃತತ್ರಿಲೋಕಾಯ=ತನ್ನ ಇಚ್ಛಾಶಕ್ತಿ ಮಾತ್ರದಿಂದಲೇ ಮೂರು ಲೋಕಗಳನ್ನೂ ಸೃಜಿಸಿದ, ಸಾಂಬಾಯ=ಶಕ್ತಿಯುಕ್ತನಾದ, ಶಂಭವೇ=ಪರಮಾತ್ಮನಿಗೆ, ನಮಃ =ನಮಸ್ಕಾರವು.

ಪರಶಿವನು ಲೀಲಾಮೂರ್ತಿಯು. ಆತನು ಸರ್ವತಂತ್ರ ಸ್ವತಂತ್ರನು. ತನಗೆ ಬೇಕಾದಾಗ ಬೇಕಾದ್ದನ್ನು ಮಾಡಬಲ್ಲನು. ಅಂತೆಯೇ ''ಸ್ಥಿರೇಭಿರಂಗೈಃ ಪುರುರೂಪ ಉಗ್ರಃ'' ಎಂಬ ಶ್ರುತಿವಚನದಂತೆ ಭಕ್ತಾನುಗ್ರಹಾರ್ಥವಾಗಿಯೂ, ತತ್ತ್ವಾತ್ಮಕ ಸೃಷ್ಟಿಗಾಗಿಯೂ, ಜ್ಞಾನಿಗಳಿಗೆ ಸಾಯುಜ್ಯ ಪ್ರದಾನಾರ್ಥವಾಗಿಯೂ ತಾನೇ ನಾನಾವಿಧಗಳಾದ ಲೀಲಾಮಯ ಸ್ವರೂಪಗಳನ್ನು ಧರಿಸುತ್ತಾನೆ. ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧತ್ವ, ಸ್ವತಂತ್ರತ್ವ, ಅಲುಪ್ತಶಕ್ತಿತ್ವ ಮತ್ತು ಅನಂತಶಕ್ತಿತ್ವಗಳೆಂಬ ಷಡ್ಗುಣೈಶ್ವರ್ಯಗಳಿಂದ ಯುಕ್ತನಾದ ಕಾರಣ ತನ್ನ ಇಚ್ಛೆಗೆ ತಡೆ ಇಲ್ಲದವನಾಗಿರುತ್ತಾನೆ. ಪರಾಶಕ್ತಿಯಿಂದ ಕೂಡಿದವನಾದ ಈ ಪರಶಿವನು ತನ್ನ ಇಚ್ಛಾಮಾತ್ರದಿಂದಲೇ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನು ಸೃಜಿಸಬಲ್ಲ ಆ ಪರಮಾತ್ಮನಿಗೆ ಅನಂತ ವಂದನೆಗಳು.

ಯತ್ರ ವಿಶ್ರಾಮ್ಯತೀಶತ್ವಂ ಸ್ವಾಭಾವಿಕಮನುತ್ತಮಮ್।
ನಮಸ್ತಸ್ಮೈ ಮಹೇಶಾಯ ಮಹಾದೇವಾಯ ಶೂಲಿನೇ (ಸಿ. ಶಿ. ೧–೭)

ಅರ್ಥ : ಸ್ವಾಭಾವಿಕ=ಸಹಜವಾದ, ಅನುತ್ತಮಂ=ಸರ್ವಶ್ರೇಷ್ಠವಾದ ಈಶತ್ವಂ= ಒಡೆತನವು, ಯತ್ರ=ಯಾರಲ್ಲಿ ವಿಶ್ರಾಮ್ಯತಿ=ವಿಶ್ರಮಿಸುವುದೋ, ತಸ್ಮೈ=ಅಂತಹ, ಮಹೇಶಾಯ=ಮಹೇಶ್ವರನಾದ, ಶೂಲಿನೇ=ತ್ರಿಶೂಲಧಾರಿಯಾದ, ಮಹಾದೇವಾಯ=ಪರಮೇಶ್ವರನಿಗೆ, ನಮಃ=ನಮಸ್ಕಾರ.

ಜಗತ್ತಿನಲ್ಲಿ ಒಬ್ಬರಮೇಲೊಬ್ಬರು ಒಡೆಯರಾಗಿರುವುದನ್ನು ಕಾಣುತ್ತೇವೆ. ಪೃಥ್ವಿಯ ಸರ್ವಶ್ರೇಷ್ಠ ಒಡೆಯನಿಗೆ 'ಚಕ್ರವರ್ತಿ' ಎಂದು ಕರೆಯುತ್ತಾರೆ. ಇದೇ ಪ್ರಕಾರವಾಗಿ ಹದಿನಾಲ್ಕು ಲೋಕಗಳಿಗೆ ವಿಭಿನ್ನ ಒಡೆಯರುಂಟು. ಆದರೆ ಇವರೆಲ್ಲರ

ಮೇಲೆ ಸರ್ವಶ್ರೇಷ್ಠ ಶಾಸಕನೂ, ಒಡೆಯನೂ ಆಗಿರುವವನು ಪರಶಿವನು; ಇವನ ಮೇಲೆ ಮತ್ತಾರೂ ಒಡೆಯರಿಲ್ಲ. ಒಡೆತನದ ಸೀಮೆಯು ಇಲ್ಲಿ ಪರಿಸಮಾಪ್ತವಾಗುತ್ತದೆ. ಅಂತೆಯೇ ಇವನನ್ನು ಮಹೇಶನೆಂತಲೂ, ಮಹಾದೇವನೆಂತಲೂ ಕರೆಯುತ್ತಾರೆ. ''ತಮೀಶ್ವರಾಣಾಂ ಪರಮಂ ಮಹೇಶ್ವರಮ್'' ಎಂಬ ಶ್ರುತಿವಚನವು ಇದನ್ನು ಸಮರ್ಥಿಸುತ್ತದೆ.

ಘೃತಕಾಠಿನ್ಯಮೂರ್ತಿಸ್ಸಚ್ಚಿದಾನಂದಲಕ್ಷಣಾ ।
ಶಿವಾಭಿಧೇನ ಸ್ಯೈವಾಸ್ತಿ ಶಿವ ಏವ ಹಿ ಸ ಸದಾ ॥

ಅಂದರೆ ಹೆತ್ತತುಪ್ಪದಂತೆ ಮೂರ್ತವಾದ ಸಚ್ಚಿದಾನಂದಲಕ್ಷಣಲಕ್ಷಿತವಾದ ಪರವಸ್ತುವೇ 'ಶಿವ'ನೆಂಬ ಹೆಸರಿನಿಂದಿರುವುದು. ಅದೇ ಶಿವನು ಎಂದು ಹೇಳಿರುವ ಸೂತಗೀತೆಯ ವಚನದಂತೆ, ನಿಷ್ಕಲಪರಬ್ರಹ್ಮವೇ ತಾನಾಗಿಯೂ, ''ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ । ಬ್ರಹ್ಮವಿಷ್ಣುರುದ್ರೇಂದ್ರಾಸ್ಸಂಪ್ರಸೂಯಂತೇ ನ ಕಾರಣಮ್ ॥'' ಎಂಬ ಶ್ರುತಿಪ್ರಮಾಣದಂತೆ ಬ್ರಹ್ಮವಿಷ್ಣ್ವಾದಿ ಪಿಪೀಲಿಕಾಂತ ಸಕಲ ಜಗತ್ಸೃಷ್ಟಿ, ರಕ್ಷಣ, ಭಕ್ಷಣಗಳಿಗೆ ಕರ್ತನಾಗಿರುವುದರಿಂದ ಮಹೇಶ್ವರನಾಗಿಯೂ, ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿರೂಪವಾದ ತ್ರಿಶೂಲವನ್ನು ಧರಿಸಿರುವ ''ದೇವೇಷು ಚ ಮಹಾನ್ ದೇವೋ ಮಹಾದೇವಸ್ತತಃ ಸ್ಮೃತಃ'' ಎನ್ನುವ ವಚನದಂತೆ ಬ್ರಹ್ಮವಿಷ್ಣ್ವಾದಿ ದೇವತೆಗಳಿಗೆಲ್ಲಾ ಪೂಜ್ಯನಾಗಿಯೂ, ತನಗಿಂತ ಉತ್ಕೃಷ್ಟವಾದ ಮತ್ತೊಂದು ದೈವವಿಲ್ಲದವನಾಗಿಯೂ, ಪರಮಪ್ರಕಾಶನಾಗಿಯೂ ಇರುವ ಪರಶಿವನಿಗೆ ನಮಸ್ಕಾರವು.

ಹೀಗೆ ಏಳು ಶ್ಲೋಕಗಳಿಂದ ಮಾಡಿರುವ ಶಿವಸ್ತುತಿಯನ್ನವಲೋಕಿಸಿದಾಗ ವೀರಶೈವ ಸಿದ್ಧಾಂತವು ಚಿದಚಿತ್ಪ್ರಪಂಚಾಕಾರ ಪರಮಶಕ್ತಿವಿಶಿಷ್ಟಬ್ರಹ್ಮಾದ್ವೈತ ಲಕ್ಷಣವುಳ್ಳದ್ದೆಂದು ಸಿದ್ಧವಾಗುವುದೆಂದು ಶ್ರೀ ಮರಿತೋಂಟದಾರ್ಯರು ತಾವು ಬರೆದ ಸಿದ್ಧಾಂತ ಶಿಖಾಮಣಿಯ ತತ್ತ್ವಪ್ರದೀಪಿಕಾ ಎಂಬ ಸಂಸ್ಕೃತ ವ್ಯಾಖ್ಯಾನದಲ್ಲಿ ತಮ್ಮ ಅಭಿಪ್ರಾಯವನ್ನು ಪ್ರಕಟಪಡಿಸಿದ್ದಾರೆ.

ಗ್ರಂಥಕಾರರಾದ ಶ್ರೀ ಶಿವಯೋಗಿ ಶಿವಾಚಾರ್ಯರು ನಿಗಮಾಗಮ ಸಮ್ಮತವಾಗಿ ಶಿವನನ್ನು ಸ್ತುತಿಸಿದ ನಂತರ ಅವನಲ್ಲಿ ಅವಿನಾಭಾವಸಂಬಂಧದಿಂದಿರುವ ಶಕ್ತಿಯನ್ನು ಐದು ಶ್ಲೋಕಗಳಿಂದ ಸ್ತುತಿಸಲು ಪ್ರಾರಂಭಿಸುತ್ತಾರೆ.

## ಶಕ್ತಿಸ್ತುತಿ

ಯಾಮಾಹುಸ್ಸರ್ವಲೋಕಾನಾಂ ಪ್ರಕೃತಿಂ ಶಾಸ್ತ್ರಪಾರಗಾಃ ।
ತಾಂ ಧರ್ಮಚಾರಿಣೀಂ ಶಂಭೋಃ ಪ್ರಣಮಾಮಿ ಪರಾಂ ಶಿವಾಂ
(ಸಿ. ಶಿ. ೧–೮)

ಅರ್ಥ : ಶಾಸ್ತ್ರಪಾರಗಾಃ=ಶಾಸ್ತ್ರಕೋವಿದರು, ಯಾಂ=ಯಾವ ಶಕ್ತಿಯನ್ನು, ಸರ್ವಲೋಕಾನಾಂ=ಎಲ್ಲ ಲೋಕಗಳ, ಪ್ರಕೃತಿಂ=ಮೂಲತಾಣವನ್ನಾಗಿ, ಆಹುಃ=ಹೇಳುವರೋ, ಶಂಭೋಃ=ಪರಮಾತ್ಮನ, ಧರ್ಮಚಾರಿಣೀಂ=ಸಹಧರ್ಮಿಣಿಯಾದ, ತಾಂ=ಆ, ಪರಾಂ ಶಿವಾಂ=ಪರಶಿವೆಯನ್ನು, ಪ್ರಣಮಾಮಿ=ನಮಸ್ಕರಿಸುತ್ತೇನೆ.

ವೀರಶೈವ ಸಿದ್ಧಾಂತವನ್ನು ಆಮೂಲಾಗ್ರವಾಗಿ ತಿಳಿದ ತತ್ತ್ವದರ್ಶಿಗಳು, ''ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ'', ''ಚಿಚ್ಛಕ್ತಿವಲ್ಲಭಃ ಶಿವಃ'', ''ಪರಾಸ್ಯ ಶಕ್ತಿರ್ವಿವಿಧೈವ ಯ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ'' ಮುಂತಾದ ಶ್ರುತಿಗಳ ಪ್ರಾಮಾಣ್ಯದಿಂದ ಶಿವನ ಸಹಧರ್ಮಿಣಿಯಾದ ಶಕ್ತಿಯನ್ನು ಸಕಲ ಪ್ರಪಂಚದ ಉತ್ಪತ್ತಿಗೆ ಮೂಲಕಾರಣವನ್ನಾಗಿ ಹೇಳುವರೋ, ಆ ಪರಶಿವೆಗೆ ಅನಂತ ನಮಸ್ಕಾರಗಳು.

ಜಗದುತ್ಪತ್ತಿಯಲ್ಲಿ ಶಿವನ ಪಾತ್ರವಿದ್ದಷ್ಟೇ ಶಕ್ತಿಯದಾದರೂ ಪಾತ್ರವಿದೆ. ಶಿವನು ಜಗತ್ತಿಗೆ ನಿಮಿತ್ತಕಾರಣನಾದರೆ, ಶಕ್ತಿಯು ಉಪಾದಾನಕಾರಣವಾಗುತ್ತಾಳೆ. ಆದ್ದರಿಂದಲೇ ಶಕ್ತಿ ವಿಶಿಷ್ಟನಾದ ಶಿವನು ಜಗದುತ್ಪತ್ತಿಯಲ್ಲಿ ಊರ್ಣನಾಭಿ (ಜೇಡರ ಹುಳ) ಯಂತೆ ಅಭಿನ್ನ ನಿಮಿತ್ತೋಪಾದಾನಕಾರಣನೆನಿಸಿಕೊಳ್ಳುತ್ತಾನೆ. ಶ್ರೀ ಶಿವಯೋಗಿ ಶಿವಾಚಾರ್ಯರು ಶಕ್ತಿಗೆ 'ಸಹಧರ್ಮಚಾರಿಣೀ' ಎಂಬ ವಿಶೇಷಣವನ್ನು ಬಳಸಿರುವುದು ಬಹಳ ಅರ್ಥ ಪೂರ್ಣವಾಗಿದೆ. ಸಹಧರ್ಮಚಾರಿಣೀ ಎಂದರೆ ಶಿವನೊಂದಿಗೆ ಸದಾ ಕೂಡಿಕೊಂಡಿ ರುವವಳು ಎಂದರ್ಥವಾಗುತ್ತದೆ. ಇದನ್ನೇ ಕವಿಕುಲಗುರುವಾದ ಶ್ರೀ ಕಾಳಿದಾಸನು ರಘುವಂಶ ಕಾವ್ಯದ ಪ್ರಾರಂಭದಲ್ಲಿ–

ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ।
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ॥

ಎಂದು ಮಂಗಲಾಚರಣೆಯನ್ನು ಮಾಡಿ, ಈ ಶ್ಲೋಕದಲ್ಲಿ ಶಬ್ದ ಮತ್ತು ಅರ್ಥಗಳಲ್ಲಿ ನಿತ್ಯವಾದ ಸಂಬಂಧವಿರುವಂತೆ ಜಗಜ್ಜನನೀಜನಕರಾದ ಪಾರ್ವತೀ–ಪರಮೇಶ್ವರ ರಾದರೂ ನಿತ್ಯಸಂಬಂಧಿಗಳೆಂದು ಪ್ರತಿಪಾದಿಸಿದ್ದಾನೆ. ಪಾರ್ವತೀ ಪರಮೇಶ್ವರರೆನ್ನುವ ಶಬ್ದಗಳು ಪೌರಾಣಿಕವಾದವುಗಳು; ಆದರೆ ತತ್ತ್ವಶಾಸ್ತ್ರದ ದೃಷ್ಟಿಯಲ್ಲಿ ಶಿವ–ಶಕ್ತಿಯರೆಂದು ಕರೆಯಲ್ಪಡುತ್ತಾರೆ. ''ನಮಃ ಸೋಮಾಯ ಚ ರುದ್ರಾಯ ಚ'' (ತೈ. ಸಂ.೪–೫–೮). ''ಉಮಾ ಸಹಾಯಂ ಪರಮೇಶ್ವರಂ ಪ್ರಭುಂ'' (ಕೈವಲ್ಯ. ಉ. ೧–೭). ''ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ'' (ಶ್ವೇತಾಶ್ವತರ ಉ. ೪–೧೦) ಮುಂತಾದ ಶ್ರುತಿವಾಕ್ಯಗಳಾದರೂ ಶಿವಶಕ್ತಿಯರ ಅವಿನಾಭಾವ ರೂಪವಾದ ನಿತ್ಯಸಂಬಂಧವನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ. ಸಿದ್ಧಾಂತ ಶಿಖಾಮಣಿಯ ಇಪ್ಪತ್ತನೇ ಪರಿಚ್ಛೇದದಲ್ಲಿ–

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿತಾ ॥

(ಸಿ. ಶಿ. ೨೦–೩೮)

ವಿಶ್ವದ ಸಮಸ್ತ ವಸ್ತುಗಳನ್ನು ಪ್ರಕಾಶಪಡಿಸುವ ಬೆಳದಿಂಗಳು ಚಂದ್ರನಲ್ಲಿ ಸ್ಥಿರವಾಗಿ ರುವಂತೆ, ಚರಾಚರಾತ್ಮ ಸಕಲ ಪದಾರ್ಥಗಳನ್ನೂ ಪ್ರಕಾಶಪಡಿಸುವ ವಿಮರ್ಶಶಕ್ತಿಯು ಪ್ರಕಾಶಸ್ವರೂಪನಾದ ಪರಶಿವನಲ್ಲಿ ಸ್ಥಿರವಾಗಿರುವುದೆಂಬ ವಿಷಯವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯರನ್ನು ಕುರಿತು ಉಪದೇಶಿಸಿರುವುದನ್ನು ಕಾಣುತ್ತೇವೆ.

ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವು ''ಅಸ್ಮಿ ಪ್ರಕಾಶೇ, ನಂದಾಮಿ'' ನಾನು ಇದ್ದೇನೆ, ಪ್ರಕಾಶಿಸುತ್ತೇನೆ ಮತ್ತು ಆನಂದಿಸುತ್ತೇನೆ ಎಂಬ ಅನುಭವದಿಂದ ಕೂಡಿರುತ್ತದೆ. ಈ ಅನುಭವವೇ ಪರಬ್ರಹ್ಮದ ವಿಮರ್ಶಶಕ್ತಿಯು. ಒಂದು ವೇಳೆ ಈ ಶಕ್ತಿಯನ್ನು ಪರಶಿವನಲ್ಲಿ ಒಪ್ಪದಿದ್ದರೆ ಪ್ರಕಾಶರೂಪವಾದ ಸ್ಫಟಿಕವು ತನ್ನ ಪ್ರಕಾಶವನ್ನು ಅರಿಯದಿರುವುದರಿಂದ ಜಡವಾಗಿರುವಂತೆ ಬ್ರಹ್ಮವಾದರೂ ಜಡವಾಗಬೇಕಾದೀತು. ಸುಂದರನಾದ ಕುರುಡನಿಗೆ ತನ್ನ ಸುಂದರತೆಯನ್ನು ಅರಿಯುವ ದೃಷ್ಟಿಶಕ್ತಿ ಇಲ್ಲದಿರುವುದ ರಿಂದ ಅವನಿಗೆ ಅವನ ಸೌಂದರ್ಯವು ವ್ಯರ್ಥವಾಗುವಂತೆ, ಬ್ರಹ್ಮಕ್ಕೆ ತನ್ನ ಸಚ್ಚಿದಾನಂದ ಸ್ವರೂಪವನ್ನು ತಿಳಿಯುವ ಶಕ್ತಿ ಇಲ್ಲದಿದ್ದರೆ ತನ್ನ ಸಚ್ಚಿದಾನಂದಸ್ವರೂಪವು ವ್ಯರ್ಥ ವಾಗುವುದು. ಆದ್ದರಿಂದ ಪರಶಿವಬ್ರಹ್ಮದಲ್ಲಿ ಸಚ್ಚಿದಾನಂದ ರೂಪಾನುಭವ ಶಕ್ತಿಯನ್ನು ಸ್ವೀಕರಿಸಲೇಬೇಕಾಗುವುದು. ಇದರಿಂದ ಬ್ರಹ್ಮವು ಶಕ್ತಿ ವಿಶಿಷ್ಟವೆಂಬುದು ಸಿದ್ಧವಾಗುವುದು.

ವಿಮರ್ಶಶಕ್ತಿಯಿಂದ ಕೂಡಿರುವ ಬ್ರಹ್ಮವು ಅದ್ವೈತ ವೇದಾಂತದಂತೆ ನಿರ್ವಿಶೇಷ ವಾಗಿರದೇ ಸವಿಶೇಷವಾಗಿರುವುದು. ಅಂತೆಯೇ ಚರಾಚರಾತ್ಮಕವಾದ ಜಗದುತ್ಪತ್ತಿಗೆ ಕಾರಣೀಭೂತವಾಗಿರುವುದು. ಶಕ್ತಿವಿಶಿಷ್ಟವಾದ ಬ್ರಹ್ಮದಿಂದ ಉತ್ಪನ್ನವಾದ ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲಿ ಒಂದಿಲ್ಲೊಂದು ಶಕ್ತಿಯು ಕಂಡುಬರುವುದು. ಪೃಥ್ವಿಯಲ್ಲಿ ಧಾರಣಶಕ್ತಿ, ಜಲದಲ್ಲಿ ಆಪ್ಯಾಯನ ಶಕ್ತಿ, ತೇಜದಲ್ಲಿ ಜ್ವಲನಶಕ್ತಿ, ವಾಯುವಿನಲ್ಲಿ ಸ್ಪಂದನಶಕ್ತಿ, ಆಕಾಶದಲ್ಲಿ ವ್ಯಾಪನಶಕ್ತಿ, ವೃಕ್ಷಾದಿಗಳಲ್ಲಿ ಜಲಾಕರ್ಷಣ ಶಕ್ತಿ, ವನಸ್ಪತಿ ಗಳಲ್ಲಿ ರೋಗನಾಶಕಶಕ್ತಿ , ರೇಡಿಯೋ ಮುಂತಾದ ಯಂತ್ರಗಳಲ್ಲಿ ಧ್ವನಿಯನ್ನು ಆಕರ್ಷಿಸಿ ವಿಸ್ತಾರಗೊಳಿಸುವ ಶಕ್ತಿ, ವಿದ್ಯುತ್ತಿನಲ್ಲಿ ನಾನಾವಿಧ ಯಂತ್ರಚಾಲನಾಶಕ್ತಿ–ಈ ರೀತಿಯಾಗಿ ಪ್ರತಿಯೊಂದು ವಸ್ತು ಹಾಗೂ ವ್ಯಕ್ತಿಗಳಲ್ಲಿ ಒಂದಿಲ್ಲೊಂದು ಶಕ್ತಿ ಇರುವುದು ಸರ್ವಾನುಭವವಾದದ್ದು. ಆದ್ದರಿಂದ ಈ ಜಗತ್ತು ಶಿವ–ಶಕ್ತಿಯರ ವಿಲಾಸವು.

ಜಗತ್ತಿಗೆ ಶಿವ–ಶಕ್ತಿಯರ ವಿಲಾಸವನ್ನು ಹೇಳುವ ಈ ಸಿದ್ಧಾಂತವನ್ನು 'ಶಕ್ತಿ ವಿಶಿಷ್ಟಾದ್ವೈತಸಿದ್ಧಾಂತ'ವೆಂದು ಕರೆಯುತ್ತಾರೆ. ''ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ತಾಭ್ಯಾಂವಿಶಿಷ್ಟೌ ಜೀವೇಶೌ, ತಯೋರದ್ವೈತಂ=ಶಕ್ತಿವಿಶಿಷ್ಟಾದ್ವೈತಮ್'' ಇದು ಶಕ್ತಿವಿಶಿಷ್ಟಾದ್ವೈತ ಪದದ ವ್ಯುತ್ಪತ್ತಿಯು. ಶಿವನು ಶಕ್ತಿವಿಶಿಷ್ಟನಾಗಿರುವಂತೆ. ಜೀವಾತ್ಮನೂ ಸಹ ಶಕ್ತಿಯುಕ್ತ ನಾಗಿರುತ್ತಾನೆ. ಶಿವನ ಶಕ್ತಿಯು ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವ ರೂಪವಾಗಿದ್ದರೆ, ಜೀವನ ಶಕ್ತಿಯು ಅಲ್ಪಜ್ಞತ್ವ ಹಾಗೂ ಅಲ್ಪಕರ್ತೃತ್ವರೂಪವಾಗಿದೆ. ಜೀವಾತ್ಮನು ಪರಮಾತ್ಮನಲ್ಲಿ ಸಮರಸನಾಗುವಾಗ ತನ್ನ ಶಕ್ತಿಯ ವಿಕಾಸವನ್ನು ಹೊಂದುವನು. ಹೀಗೆ ವಿಕಸಿತವಾದ ಶಕ್ತಿವಿಶಿಷ್ಟ ಜೀವಾತ್ಮನಿಗೂ ಮತ್ತು ಶಕ್ತಿವಿಶಿಷ್ಟ ಪರಶಿವನಿಗೂ ಸಾಮರಸ್ಯ ವನ್ನು ಹೇಳುವ ಸಿದ್ಧಾಂತವೇ 'ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ'ವು. ಈ ಸಿದ್ಧಾಂತದಲ್ಲಿ ಶಕ್ತಿಯು ಪರಮಾತ್ಮನನ್ನು ಬಿಟ್ಟು ಎಂದೂ ಅಗಲುವುದಿಲ್ಲವಾದ್ದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಶಕ್ತಿಯನ್ನು ಸ್ತುತಿಸುವಾಗ ಶಿವನ ಸಹಧರ್ಮಚಾರಿಣಿ ಎಂಬುದಾಗಿ ವರ್ಣಿಸಿರುತ್ತಾರೆ.

ಯಯಾ ಮಹೇಶ್ವರಃ ಶಂಭುರ್ನಾಮರೂಪಾದಿಸಂಯುತಃ।
ತಸ್ಯೈ ಮಾಯಾಸ್ವರೂಪಾಯೈ ನಮಃ ಪರಮಶಕ್ತಯೇ (ಸಿ. ಶಿ. ೧–೯)

ಅರ್ಥ : ಯಯಾ=ಯಾವ ಶಕ್ತಿಯಿಂದ, ಮಹೇಶ್ವರಃ=ಮಹಾದೇವನಾದ, ಶಂಭುಃ=ಪರಮಾತ್ಮನು, ನಾಮರೂಪಾದಿಸಂಯುತಃ=ಅನೇಕ ನಾಮ ರೂಪಗಳಿಂದ ಯುಕ್ತನಾಗಿರುವನೋ ತಸ್ಯೈ=ಆ, ಮಾಯಾಸ್ವರೂಪಾಯೈ=ಅಘಟಿತ ಘಟನಾ ಸಾಮರ್ಥ್ಯಶಾಲಿನಿಯಾದ, ಪರಮಶಕ್ತಯೇ=ಸರ್ವಶ್ರೇಷ್ಠ ಶಕ್ತಿಗೆ, ನಮಃ=ನಮಸ್ಕಾರವು.

ಸ್ವಭಾವತಃ ನಾಮರೂಪಗಳಿಲ್ಲದ ಪರಶಿವನು ಶಕ್ತಿಯ ವಶದಿಂದ ಅನೇಕ ನಾಮ–ರೂಪಗಳನ್ನು ಧರಿಸಿದವನಾಗಿದ್ದಾನೆ. ಶ್ರೀ ನಿಜಗುಣ ಶಿವಯೋಗಿಗಳು ಇದೇ ಮಾತನ್ನೇ ''ಹೇಳ ಹೆಸರಿಲ್ಲದ ಭವನು ನಿನ್ನ ದೆಸೆಯಿಂದ, ಭಾಳಲೋಚನನಾಗಿ ನಿಖಿಳ ನಿರ್ಜರರ ಮೇಳಕ್ಕೆ ಅಧಿಪತಿಯಾದನು ಎಂದೊಡೆ, ಆಗಮ ನಿಗಮ ಜಾಲವು ಐದುವವೆ ನಿಜನುತಿಗೆ ನಗಜಾತೆ'' ಈ ರೀತಿಯಾಗಿ ಬಹು ಸುಂದರವಾಗಿ ನಿರೂಪಿಸಿರು ತ್ತಾರೆ.

''ಶಕ್ತೋ ಯಯಾ ಸ ಶಂಭುರ್ಭುಕ್ತೌ ಮುಕ್ತೌ ಚ ಪಶುಗಣಸ್ಯಾಸ್ಯ'' ಎಂಬ ತತ್ತ್ವಪ್ರಕಾಶಿಕಾ ವಚನದಂತೆ ಸ್ವಸಮವೇತವಾದ ಚಿಚ್ಛಕ್ತಿಯ ವಶದಿಂದ ಅನೇಕ ನಾಮರೂಪ ಮತ್ತು ಕ್ರಿಯಾದಿಗಳಿಂದ ವಿಶಿಷ್ಟನಾಗಿ ಜೀವಕೋಟಿಗೆ ಭಕ್ತಿಮುಕ್ತಿಯನ್ನು ಕೊಡಲು ಸಮರ್ಥನೆನಿಸಿಕೊಂಡಿರುವನೋ, ಅಂಥ ಜಗದುಪಾದಾನ ಕಾರಣೀಭೂತ ಸತ್ತ್ವ–ರಜಸ್ತಮೋಗುಣಾತ್ಮಕ ಮಾಯಾನಾಮಕವಾದ ಮೂಲ ಪ್ರಕೃತಿಯಾದ ಪರಶಿವಸಮವೇತ ನಿತ್ಯಶಕ್ತಿಗೆ ನಮಸ್ಕಾರ.

ಶಿವಾದ್ಯಾದಿಸಮುತ್ಪನ್ನ ಶಾಂತ್ಯತೀತಪರೋತ್ತರಾಂ।
ಮಾತರಂ ತಾಂ ಸಮಸ್ತಾನಾಂ ವಂದೇ ಶಿವಕರೀಂ ಶಿವಾಮ್ (ಸಿ.ಶಿ. ೧–೧೦)

ಶಿವ=ಪರಶಿವನಿಂದ, ಆದ್ಯಾದಿಸಮುತ್ಪನ್ನ=ಮೊದಮೊದಲು ಆವಿರ್ಭವಿಸಿದ, ಶಾಂತ್ಯತೀತಪರೋತ್ತರಾ=ಶಾಂತ್ಯತೀತಕಲೆಗಿಂತಲೂ ಶ್ರೇಷ್ಠವಾದ, ಸಮಸ್ತಾನಾಂ=ಎಲ್ಲರ, ಮಾತರಂ=ತಾಯಿಯಾದ, ತಾಂ=ಆ, ಶಿವಕರೀಂ=ಮಂಗಲವನ್ನುಂಟುಮಾಡುವ, ಶಿವಾಂ=ಸರ್ವಮಂಗಲೆಯನ್ನು, ವಂದೇ= ವಂದಿಸುವೆನು.

ಶಿವನು ತನ್ನ ವಿನೋದಕ್ಕಾಗಿ ತಾನೊರ್ವನೇ 'ಲಿಂಗ' ಮತ್ತು 'ಅಂಗ'ವೆಂಬುದಾಗಿ ವಿಭಕ್ತನಾಗುತ್ತಾನೆ. ಪುನಃ ಆ ಲಿಂಗವು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗವೆಂಬುದಾಗಿಯೂ, ಅದೇ ಪ್ರಕಾರವಾಗಿ ಅಂಗವಾದರೂ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಹಾಗೂ ಐಕ್ಯವೆಂಬುದಾಗಿಯೂ ರೂಪವನ್ನು ತಾಳುತ್ತದೆ. ಹೀಗೆ ಶಿವನು ಲಿಂಗ ಮತ್ತು ಅಂಗ ರೂಪದಲ್ಲಿ ಆರಾರು ಪ್ರಕಾರವಾಗಿ ವಿಭಕ್ತನಾದಾಗ ಅವನಲ್ಲಿ ಅವಿನಾಭಾವ ಸಂಬಂಧಿನಿಯಾದ ಶಕ್ತಿಯೂ ಮೊದಲು 'ಕಲಾ' ಮತ್ತು 'ಭಕ್ತಿ' ಎಂಬುದಾಗಿ ಎರಡು ವಿಧವಾಗಿ ವಿಭಕ್ತವಾಗಿ, ಕಲೆಯು ಲಿಂಗವನ್ನೂ ಹಾಗೂ ಭಕ್ತಿಯು ಅಂಗವನ್ನೂ ಆಶ್ರಯಿಸುತ್ತದೆ. ಅಂಗನನ್ನಾಶ್ರಯಿಸಿದ ಭಕ್ತಿಯು ಆರು ವಿಧವಾದ ಅಂಗಕ್ಕನುಸಾರವಾಗಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ ಮತ್ತು

ಸಮರಸಭಕ್ತಿಗಳೆಂದು ಆರು ವಿಧವಾಗಿ ವಿಭಕ್ತವಾದಂತೆ, ಲಿಂಗವನ್ನಾಶ್ರಯಿಸಿದ ಕಲೆಯಾದರೂ ಆರು ಲಿಂಗಗಳಿಗನುಗುಣವಾಗಿ ಕ್ರಮವಾಗಿ ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯತೀತಕಲೆ ಮತ್ತು ಶಾಂತ್ಯತೀತೋತ್ತರ ಕಲೆ ಎಂದು ಆರು ಪ್ರಕಾರವಾಗುತ್ತದೆ.

ಇಲ್ಲಿ ಆಚಾರಲಿಂಗವನ್ನು ಆಶ್ರಯಿಸಿದ ಕಲೆಯೇ ನಿವೃತ್ತಿ ಕಲೆಯು, ''ನಿವರ್ತ್ಯತೇ ಅನಯಾ ಇತಿ ನಿವೃತ್ತಿಃ'' ಎಂಬ ನಿರ್ವಚನಕ್ಕನುಸಾರವಾಗಿ ಯಾವ ಆಚಾರ ಲಿಂಗವನ್ನಾಶ್ರಯಿಸಿದ ಕಲಾಶಕ್ತಿಯ ಕೃಪೆಯಿಂದ ಭಕ್ತಸ್ಥಲದಲ್ಲಿಯ ಸಾಧಕನ ಕರ್ಮಭೋಗವು ನಿವೃತ್ತವಾಗುತ್ತದೆಯೋ, ಅದನ್ನು 'ನಿವೃತ್ತಿಕಲೆ' ಎಂದು ಕರೆಯುವರು. ಇದಕ್ಕೆ 'ಕ್ರಿಯಾಶಕ್ತಿ' ಎಂಬ ಪರ್ಯಾಯ ನಾಮವೂ ಇದೆ.

''ಪ್ರಕರ್ಷೇಣ ಸ್ಥಾಪ್ಯಂತೇ ಅನಯಾ ಇತಿ ಪ್ರತಿಷ್ಠಾ'' ಇದು ಪ್ರತಿಷ್ಠಾ ಕಲಾ ಶಬ್ದದ ನಿರ್ವಚನವು. ಇದು ಗುರುಲಿಂಗವನ್ನು ಆಶ್ರಯಿಸಿರುತ್ತದೆ. ಆ ಗುರು ಲಿಂಗಾರಾಧಕರಾದ ಮಹೇಶಸ್ಥಲದ ಸಾಧಕರ ಮನೋವೃತ್ತಿಯು ಶಿವನಲ್ಲಿ ಸ್ಥಿರಗೊಳ್ಳುವಂತೆ ಅನುಗ್ರಹಿಸುವುದೇ ಪ್ರತಿಷ್ಠಾಕಲೆಯು. ಈ ಕಲಾಶಕ್ತಿಯ ಕೃಪೆಯಿಂದಲೇ ಸಾಧಕನಲ್ಲಿಯ ಸಂಸಾರದಲ್ಲಿರುವ ರಾಗವು ಕ್ರಮೇಣ ದೂರೀಕರಿಸಲ್ಪಡುತ್ತದೆ. ಈ ಕಲೆಗೆ ಜ್ಞಾನಶಕ್ತಿ ಎಂಬ ಪರ್ಯಾಯನಾಮವಿದೆ.

''ಆತ್ಮಾನಂ ಯಯಾ ವೇತ್ತಿ ಸಾ ವಿದ್ಯಾ'' ಇದು ವಿದ್ಯಾಕಲಾ ಶಬ್ದದ ನಿರ್ವಚನವು. ಯಾವ ಕಲಾಶಕ್ತಿಯ ಕೃಪೆಯಿಂದ ಪ್ರಸಾದಿಸ್ಥಲದ ಸಾಧಕನು ಶಿವಲಿಂಗಾರಾಧನೆಯ ಫಲವಾಗಿ ತನ್ನ ಆತ್ಮದ ಅರಿವನ್ನು ಮಾಡಿಕೊಳ್ಳುತ್ತಾನೆಯೋ ಅದೇ ವಿದ್ಯಾಕಲೆಯು. ಇದನ್ನು ಇಚ್ಛಾಶಕ್ತಿ ಎಂತಲೂ ಕರೆಯುತ್ತಾರೆ.

ಶಾಂತಿದಾಯಕವಾದ ಕಲೆಯೇ ಶಾಂತಿಕಲೆಯು. ಇದು ಜಂಗಮಲಿಂಗವನ್ನಾಶ್ರಯಿಸಿರುತ್ತದೆ. ಈ ಜಂಗಮಲಿಂಗಾರಾಧಕನಾದ ಪ್ರಾಣಲಿಂಗಿಸ್ಥಲದ ಸಾಧಕನಲ್ಲಿಯ ಆಣವ, ಮಾಯಿಕ ಮತ್ತು ಕಾರ್ಮಿಕ ಮಲಗಳೆಂಬ ಪಾಶತ್ರಯದ ನಿವೃತ್ತಿಯಾಗಿ ಮನಸ್ಸಿನಲ್ಲಿ ಶಾಂತಿದೊರೆಯುವುದು ಈ ಶಾಂತಿಕಲೆಯ ಕೃಪೆಯಿಂದಲೇ. ಈ ಶಾಂತಿಕಲೆಯನ್ನು ಆದಿಶಕ್ತಿ ಎಂತಲೂ ಕರೆಯುವರು.

ಶಾಂತಿಕಲೆಯಿಂದ ಅತೀತವಾದ ಕಲೆಯೇ ಶಾಂತ್ಯತೀತ ಕಲೆಯು. ಇದು ಪ್ರಸಾದಲಿಂಗವನ್ನು ಆಶ್ರಯಿಸಿರುತ್ತದೆ. ಈ ಪ್ರಸಾದ ಲಿಂಗಾರಾಧಕನಾದ ಶರಣಸ್ಥಲದ ಸಾಧಕನಿಗೆ ಈ ಕಲೆಯ ಕೃಪೆಯಿಂದಲೇ ಸಚ್ಚಿದಾನಂದೈಕರಸರೂಪನಾದ ಪರಶಿವನ ಸ್ವರೂಪದ ಅರಿವಾಗುತ್ತದೆ. ಈ ಶಾಂತ್ಯತೀತ ಕಲೆಗೆ ಪರಾಶಕ್ತಿ ಎಂಬ ನಾಮಾಂತರ ಉಂಟು.

ಶಾಂತ್ಯತೀತ ಕಲೆಯನ್ನು ಮೀರಿರುವ ಅತ್ಯಂತ ಸೂಕ್ಷ್ಮವಾದ ಕಲೆಯೇ ಶಾಂತ್ಯತೀತೋತ್ತರಾಕಲೆಯು. ಇದು ಮಹಾಲಿಂಗವನ್ನು ಆಶ್ರಯಿಸಿರುತ್ತದೆ. ಈ ಮಹಾಲಿಂಗದ ಉಪಾಸಕನಾದ ಐಕ್ಯಸ್ಥಲದ ಸಾಧಕನು ಈ ಕಲೆಯ ಕೃಪೆಯಿಂದಲೇ ಸಚ್ಚಿದಾನಂದೈಕರೂಪನಾದ ಪರಶಿವನಲ್ಲಿ ಸಮರಸವನ್ನು ಪಡೆಯುತ್ತಾನೆ. ಈ ಶಾಂತ್ಯತೀತೋತ್ತರಾ ಕಲೆಗೆ ಚಿಚ್ಛಕ್ತಿ ಎಂಬ ಪರ್ಯಾಯ ನಾಮವಿದೆ.

ಜಗದುತ್ಪತ್ತಿಯ ಸಮಯದಲ್ಲಿ ಈ ಶಾಂತ್ಯತೀತೋತ್ತರಕಲೆಯೇ ಶಿವನಿಂದ ಪ್ರಥಮದಲ್ಲಿ ಆವಿರ್ಭವಿಸುತ್ತದೆ. ಸಮಸ್ತಪ್ರಪಂಚಕ್ಕೆಲ್ಲ ಮಾತೃಸ್ಥಾನದಲ್ಲಿರುವ, ಎಲ್ಲರಿಗೂ ಮಂಗಲವನ್ನುಂಟುಮಾಡುವ ಸರ್ವಮಂಗಲೆಯಾದ ಆ ಶಾಂತ್ಯತೀತೋತ್ತರಾಕಲೆ ಎಂಬ ಪರ್ಯಾಯ ನಾಮವುಳ್ಳ ಚಿಚ್ಛಕ್ತಿಗೆ ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮ ಭಕ್ತಿಪುರಃಸರವಾದ ನಮನಗಳನ್ನು ಸಮರ್ಪಿಸುತ್ತಾರೆ.

ಇಚ್ಛಾಜ್ಞಾನಾದಿರೂಪೇಣ ಯಾ ಶಂಭೋರ್ವಿಶ್ವಭಾವಿನೀ ।
ವಂದೇ ತಾಂ ಪರಮಾನಂದಪ್ರಬೋಧಲಹರೀಂ ಶಿವಾಮ್ (ಸಿ. ಶಿ.೧–೧೧)

ಅರ್ಥ : ಶಂಭೋಃ=ಪರಮಾತ್ಮನ ಸಂಬಂಧಿನಿಯಾದ, ಯಾ=ಯಾವ ಶಕ್ತಿಯು, ಇಚ್ಛಾಜ್ಞಾನಾದಿರೂಪೇಣ=ಇಚ್ಛಾಜ್ಞಾನ ಮತ್ತು ಕ್ರಿಯಾಶಕ್ತಿಯ ರೂಪದಿಂದ, ವಿಶ್ವಭಾವಿನೀ=ಜಗತ್ತನ್ನು ಬೆಳಗುತ್ತಿರುವಳೋ, ಪರಮಾನಂದ ಪ್ರಬೋಧಲಹರೀಂ= ಪರಮಾನಂದಜ್ಞಾನದ ಪ್ರವಾಹಳಾದ, ತಾಂ=ಆ, ಶಿವಾಂ=ಶಕ್ತಿಯನ್ನು, ವಂದೇ= ವಂದಿಸುವೆನು.

''ಪರಾಸ್ಯ ಶಕ್ತಿರ್ವಿಮಲಾ ವಿತರ್ಕಾ ಸ್ವಾಭಾವಿಕೀ ರುದ್ರ ಸಮಾನಧರ್ಮಿಣೀ ! ಜ್ಞಾನಕ್ರಿಯೇಚ್ಛಾದಿಸಹಸ್ರರೂಪಾ ತನ್ಮೇಮನಶ್ಶಿವ ಸಂಕಲ್ಪಮಸ್ತು'' ಎಂಬ ಶ್ರುತಿ ಪ್ರಮಾಣದಂತೆ ಯಾವ ಶಕ್ತಿಯು ಪರಶಿವನ ಇಚ್ಛಾಶಕ್ತಿ ಜ್ಞಾನಶಕ್ತಿ ಮತ್ತು ಕ್ರಿಯಾಶಕ್ಯಾದಿರೂಪದಿಂದ ಜಗತ್ತನ್ನು ಪ್ರಕಾಶಗೊಳಿಸುತ್ತಿರುವಳೋ, ಸಚ್ಚಿದಾನಂದ ಲಹರೀ ಸ್ವರೂಪಳಾದ ಪರಶಿವೆಗೆ ಅನಂತ ನಮನಗಳು.

ಅಮೃತಾರ್ಥಂ ಪ್ರಪನ್ನಾನಾಂ ಯಾ ಸುವಿದ್ಯಾಪ್ರದಾಯಿನೀ ।
ಅಹರ್ನಿಶಮಹಂ ವಂದೇ ತಾಮೀಶಾನಮನೋರಮಾಂ (ಸಿ. ಶಿ. ೧–೧೨)

ಅರ್ಥ : ಅಮೃತಾರ್ಥಂ=ಅಮೃತತ್ವದ (ಮುಕ್ತಿಯ) ಪ್ರಾಪ್ತಿಗಾಗಿ, ಪ್ರಪನ್ನಾನಾಂ=ತನ್ನ ಮೊರೆಹೊಕ್ಕವರಿಗೆ, ಯಾ=ಯಾವಳು, ಸುವಿದ್ಯಾಪ್ರದಾಯಿನೀ=ಉತ್ತಮವಾದ ಜ್ಞಾನವನ್ನು ಕರುಣಿಸುವಳೋ, ತಾಂ=ಆ, ಈಶಾನ ಮನೋರಮಾಂ= ಶಿವನ ಧರ್ಮಪತ್ನಿಯಾದ ಶಿವೆಯನ್ನು, ಅಹಂ=ನಾನು, ಅಹರ್ನಿಶಂ=ಹಗಲಿರುಳೂ, ವಂದೇ= ವಂದಿಸುತ್ತೇನೆ.

ಅಮೃತತ್ವವು ಮನುಷ್ಯಜೀವನದ ಮುಖ್ಯವಾದ ಗುರಿಯು. ಇದಕ್ಕೆ ಮುಕ್ತಿ ಮೋಕ್ಷ, ಕೈವಲ್ಯವೆಂತಲೂ ಪರ್ಯಾಯನಾಮವುಂಟು. ಈ ಮುಕ್ತಿ ದೊರೆ ಯಬೇಕಾದರೆ ''ವೇದಾಂತವಾಕ್ಯಜಾ ವಿದ್ಯಾ ಶಿವಜೀವೈಕ್ಯ ಬೋಧಿನೀ'' ಎಂಬ ಸೂತ ಸಂಹಿತಾ ವಚನಾನುಸಾರವಾಗಿ ಶಿವ–ಜೀವರ ಐಕ್ಯ ಬೋಧಕವಾದ ಜ್ಞಾನವು ಅತ್ಯಾವಶ್ಯಕವಾದದ್ದು. ಇದನ್ನೇ ಉಪನಿಷತ್ತುಗಳು ''ತತ್ತ್ವಮಸಿ'' ಎಂಬುದಾಗಿ ಬೋಧಿಸುತ್ತವೆ. ಮೋಕ್ಷಪ್ರದಾಯಕವಾದ, ಪರಮಪವಿತ್ರವಾದ ಆ ಐಕ್ಯಜ್ಞಾನವು ಕೇವಲ ಜೀವಿಗಳ ಪ್ರಯತ್ನದಿಂದ ದೊರೆಯಲಾರದು. ಅದಕ್ಕಾಗಿ ಚಿಚ್ಛಕ್ತಿಗೆ ಶರಣಾಗತರಾಗಲೇಬೇಕು. ಸ್ವಪ್ರಯತ್ನದಿಂದ ಪ್ರಾಪ್ತಿಮಾಡಿಕೊಂಡ ಜ್ಞಾನದಲ್ಲಿ ಅಭಿಮಾನ ಅಹಂಕಾರಾದಿಗಳಿರುವುದರಿಂದ ಆ ಪಥದ ಜ್ಞಾನದಿಂದ ಮುಕ್ತಿಗೆ ಬದಲಾಗಿ ಮನುಷ್ಯನು ಬಂಧನಕ್ಕೊಳ

ಗಾಗುತ್ತಾನೆ. ಪ್ರಪತ್ತಿಯಿಂದ ಪ್ರಾಪ್ತವಾದ ಜ್ಞಾನದಲ್ಲಿ ಅಹಂಕಾರವೆಲ್ಲವೂ ನಶಿಸಿ ಆ ಜ್ಞಾನದಲ್ಲಿ ಪ್ರಸಾದಬುದ್ಧಿಯಿರುವುದರಿಂದ ಜೀವಾತ್ಮನು ಸಹಜವಾಗಿಯೇ ಕೈವಲ್ಯವನ್ನು ಪಡೆಯುತ್ತಾನೆ. ಅಂತೆಯೇ ಮಹಾಮಹಿಮರಾದ ಶ್ರೀ ಶಿವಯೋಗಿ ಶಿವಾಚಾರ್ಯರು ಆ ಶಕ್ತಿಯನ್ನು ಹಗಲಿರುಳೂ ನುತಿಸುತ್ತೇನೆ ಎಂದು ಹೇಳಿದ್ದಾರೆ.

''ಅನನ್ಯಾ ಸ್ಯಾಚ್ಛಿವಾ ಸೈವ ವಸ್ತುತೋ ಮೂರ್ತಿರೈಶ್ವರೀ'' ಎಂಬ ಪೌಷ್ಕರ ವಚನಾನುಸಾರವಾಗಿ ಈ ಐದು ಶ್ಲೋಕಗಳ ಪರ್ಯಂತವಾಗಿ ಸ್ತುತಿಸಲ್ಪಟ್ಟ ಶಕ್ತಿಯು ಶಿವನ ಜೊತೆಗೆ ಸದಾ ಅಭಿನ್ನಳಾಗಿರುವಳೆಂದೇ ಭಾವಿಸಬೇಕು.

ಶ್ರೀ ಶಿವಯೋಗಿ ಶಿವಾಚಾರ್ಯರು ಶಿಷ್ಟಾಚಾರದ ಪರಿಪಾಲನೆಗಾಗಿ, ಬರೆಯಲ ಪೇಕ್ಷಿಸಿರುವ ಶ್ರೀ ಸಿದ್ಧಾಂತಶಿಖಾಮಣಿ ಗ್ರಂಥದ ನಿರ್ವಿಘ್ನ ಪರಿಸಮಾಪ್ತಿಗಾಗಿ ಹನ್ನೆರಡು ಶ್ಲೋಕಗಳಿಂದ ವೀರಶೈವ ಸಿದ್ಧಾಂತಕ್ಕನುಗುಣವಾಗಿ, ಶಿವಶಕ್ತಿಯರ ನಮಸ್ಕಾರ ರೂಪವಾದ ಮಂಗಲಾಚರಣೆಯನ್ನು ಮಾಡಿರುತ್ತಾರೆ. ಈ ಗ್ರಂಥವನ್ನು ಅಭ್ಯಾಸಮಾಡಿ ನೂರೊಂದು ಸ್ಥಲಗಳ ನಿಲುವನ್ನು ತಿಳಿದು ಶಿವಸಾಮರಸ್ಯವನ್ನು ಪಡೆಯಲಪೇಕ್ಷಿಸುವ ಪ್ರತಿಯೊಬ್ಬ ವ್ಯಕ್ತಿಯೂ ಈ ಶಿವಶಕ್ತಿಯರ ಸ್ತುತಿಯನ್ನು ಭಕ್ತಿಪೂರ್ವವಾಗಿ ಪ್ರತಿದಿನ ಆಚರಿಸಿ ಅವರೀರ್ವರ ಅನುಗ್ರಹದಿಂದ ಅವರೊಡನೆ ಸಾಮರಸ್ಯವನ್ನು ಪಡೆದು ತನ್ನ ಜೀವನವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳಬೇಕು.

ಹೀಗೆ ಗ್ರಂಥಾರಂಭದಲ್ಲಿ ಮಂಗಲವನ್ನಾಚರಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಮುಂದೆ ಬಹಳ ಸಂಕ್ಷಿಪ್ತವಾಗಿ ತಮ್ಮ ವಂಶ ವರ್ಣನೆಯನ್ನು ಮಾಡಿರುತ್ತಾರೆ. ಅದನ್ನೇ ಈಗ ಪರ್ಯಾಲೋಚಿಸೋಣ.

## ಗ್ರಂಥಕರ್ತ

## ಶ್ರೀ ಶಿವಯೋಗಿ ಶಿವಾಚಾರ್ಯರ ವಂಶವರ್ಣನೆ

ಕಶ್ಚಿದಾಚಾರಸಿದ್ಧಾನಾಮಗ್ರಣೀಃ ಶಿವಯೋಗಿನಾಮ್ ।

ಶಿವಯೋಗೀತಿ ವಿಖ್ಯಾತಃ ಶಿವಜ್ಞಾನಮಹೋದಧಿಃ (ಸಿ. ಶಿ. ೧–೧೩)

ಅರ್ಥ : ಆಚಾರಸಿದ್ಧಾನಾಂ=ಸದಾಚಾರಸಂಪನ್ನರಾದ, ಶಿವಯೋಗಿನಾಮ್= ಶಿವಯೋಗಿಗಳಲ್ಲಿ ಅಗ್ರಣೀಃ=ಮುಂದಾಳಾಗಿರುವ, ಶಿವಜ್ಞಾನ ಮಹೋದಧಿಃ= ಶಿವಜ್ಞಾನಕ್ಕೆ ಸಾಗರಸ್ವರೂಪನಾದ, ಶಿವಯೋಗೀತಿ= ಶಿವಯೋಗಿ ಎಂಬ ಹೆಸರಿನಿಂದ, ವಿಖ್ಯಾತಃ=ಪ್ರಸಿದ್ಧನಾದ ಓರ್ವ ಮಹಾಮಹಿಮನು, ಆಸೀತ್=ಇದ್ದನು.

ಈ ಗ್ರಂಥಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರ ವಂಶದಲ್ಲಿ ಶಿವಯೋಗಿಗಳಿಗೆ ಅಗ್ರಗಣ್ಯನೂ, ಶಿವಜ್ಞಾನಸಮುದ್ರನೂ ಆದ 'ಶಿವಯೋಗಿ' ಎಂಬ ಹೆಸರಿನ ಓರ್ವ ದಿವ್ಯಜ್ಞಾನಿಯು ಇದ್ದನು.

ಶಿವಭಕ್ತಿಸುಧಾಸಿಂಧುಜೃಂಭಣಾಮಲಚಂದ್ರಿಕಾ ।

ಭಾರತೀ ಯಸ್ಯ ವಿದಧೇ ಪ್ರಾಯಃ ಕುವಲಯೋತ್ಸವಮ್

ತಸ್ಯ ವಂಶೇ ಸಮುತ್ಪನ್ನೋ ಮುಕ್ತಾಮಣಿರಿವಾಮಲಃ ।
ಮುದ್ದದೇವಾಭಿದಾಚಾರ್ಯೋ ಮೂರ್ಧನ್ಯಃ ಶಿವಯೋಗಿನಾಮ್

(ಸಿ. ಶಿ. ೧೪–೧೫)

ಅರ್ಥ : ಯಸ್ಯ=ಪ್ರಸಿದ್ಧನಾದ ಯಾವ ಶಿವಯೋಗಿಯ, ಶಿವಭಕ್ತಿಸುಧಾ ಸಿಂಧು ಜೃಂಭಣಾಮಲಚಂದ್ರಿಕಾ=ಶಿವಭಕ್ತಿರೂಪಸುಧಾಸಮುದ್ರವನ್ನು ಉಕ್ಕೇರಿಸುವುದರಲ್ಲಿ ನಿರ್ಮಲವಾದ ಬೆಳದಿಂಗಳೋಪಾದಿಯಲ್ಲಿ ಇರುವ, ಭಾರತೀ=ವಾಣಿಯು, ಕುವಲ ಯೋತ್ಸವಂ=ಭೂಮಂಡಲವೆಂಬ ಕುಮುದಕ್ಕೆ ಸಂತೋಷವನ್ನು, ವಿದಧೇ=ಉಂಟು ಮಾಡಿತೋ, ತಸ್ಯ=ಆ ಶಿವಯೋಗಿಯ, ವಂಶೇ=ವಂಶದಲ್ಲಿ(ಬಿದಿರಿನಲ್ಲಿ,) ಅಮಲಃ= ನಿರ್ಮಲವಾದ, ಮುಕ್ತಾಮಣಿರಿವ=ಮುತ್ತಿನಮಣಿಯಂತೆ, ಶಿವಯೋಗಿ ನಾಮ್= ಶಿವಯೋಗಿಗಳಿಗೆ, ಮೂರ್ಧನ್ಯಃ=ಶ್ರೇಷ್ಠನಾದ, ಮುದ್ದದೇವಾಭಿದಾ ಚಾರ್ಯಃ= ಮುದ್ದದೇವನೆಂಬ ಆಚಾರ್ಯನು, ಸಮುತ್ಪನ್ನಃ=ಹುಟ್ಟಿದನು.

ಗ್ರಂಥಕರ್ತರಾದ ಶಿವಯೋಗಿ ಶಿವಾಚಾರ್ಯರ ಮೂಲ ಪುರುಷನಾದ ಆ ಶಿವಯೋಗಿಯ ವಚನಾಮೃತವನ್ನು ಕೇಳಿದರೆ ಭಕ್ತರ ಮನಸ್ಸಿನಲ್ಲಿ ಶಿವಭಕ್ತಿಯು ಪೂರ್ಣಚಂದ್ರನನ್ನು ಕಂಡ ಸಮುದ್ರದಂತೆ ಉಕ್ಕೇರುತ್ತಿತ್ತು, ಇದೆಲ್ಲವನ್ನು ಕಂಡ ನಾಡಿನ ಜನರಿಗೆಲ್ಲ ಅತಿ ಸಂತೋಷವಾಗುತ್ತಿತ್ತು, ಇಂತಹ ಆ ಶಿವಯೋಗಿಯ ವಂಶದಲ್ಲಿ, ಶ್ರೇಷ್ಠವಾದ ಬಿದಿರಿನಲ್ಲಿ ಮುತ್ತಿನ ಮಣಿಯು ಹುಟ್ಟುವಂತೆ, ಶಿವಯೋಗಿ ಗಳಿಗೆ ಅಗ್ರಗಣ್ಯನಾದ 'ಮುದ್ದದೇವ'ನೆಂಬ ಆಚಾರ್ಯನು ಜನಿಸಿದನು.

ಮುದ್ದಾನಾತ್ ಸರ್ವಜಂತೂನಾಂ ಪ್ರಣತಾನಾಂ ಪ್ರಬೋಧತಃ ।
ಮುದ್ದದೇವ ಇತಿ ಖ್ಯಾತಾ ಸಮಾಖ್ಯಾ ಯಸ್ಯ ವಿಶ್ರುತಾ (ಸಿ. ಶಿ. ೧–೧೬)

ಅರ್ಥ : ಪ್ರಣತಾನಾಂ=ಶರಣಾಗತರಾದವರಿಗೆ, ಪ್ರಬೋಧತಃ=ಜ್ಞಾನೋಪ ದೇಶದಿಂದ, ಸರ್ವಜಂತೂನಾಂ=ಸಮಸ್ತ ಪ್ರಾಣಿಗಳಿಗೆ, ಮುದ್ದಾನಾತ್= ಸಂತೋಷವನ್ನುಂಟುಮಾಡುವುದರಿಂದ, ಖ್ಯಾತಾ=ಪ್ರಸಿದ್ಧವಾದ, ಯಸ್ಯ=ಯಾವನ, ಸಮಾಖ್ಯಾ=ಹೆಸರು, ಮುದ್ದದೇವ ಇತಿ=ಮುದ್ದದೇವನೆಂದು, ವಿಶ್ರುತಾ= ಅನ್ವರ್ಥ ವಾಯಿತೋ.

ಸಕಲ ಪ್ರಾಣಿಗಳಿಗೆ ನೋಟಮಾತ್ರದಿಂದ ಮತ್ತು ಶರಣಾಗತರಾದವರಿಗೆ ಜ್ಞಾನೋಪದೇಶದಿಂದ ಸಂತೋಷವನ್ನುಂಟು ಮಾಡುತ್ತಿರುವುದರಿಂದ ಈ ಆಚಾರ್ಯ ನಿಗೆ 'ಮುದ್ದದೇವ'ನೆಂಬ ಹೆಸರು ಅನ್ವರ್ಥವಾಗಿಯೂ ರೂಢವಾಗಿಯೂ, ಇದ್ದಿತು.

ತಸ್ಯಾಸೀನ್ನಂದನಃ ಶಾಂತಃ ಸಿದ್ಧನಾಥಾಭಿಧಃ ಶುಚಿಃ ।
ಶಿವಸಿದ್ಧಾಂತನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕಃ (ಸಿ. ಶಿ. ೧–೧೭)

ಅರ್ಥ : ತಸ್ಯ=ಆ ಮುದ್ದದೇವನಿಗೆ, ಶಾಂತಃ=ಪ್ರಶಾಂತನೂ, ಶುಚಿಃ= ಪವಿತ್ರನೂ, ಶಿವಾತ್ಮಕಃ=ಶಿವಸ್ವರೂಪನೂ, ಶಿವಸಿದ್ಧಾಂತನಿರ್ಣೇತಾ=ಶಿವಾದ್ವೈತ ಸಿದ್ಧಾಂತ ನಿರ್ಣಾಯಕನೂ ಆದ, ಸಿದ್ಧನಾಥಾಭಿದಃ ಸಿದ್ಧನಾಥನೆಂಬ ಹೆಸರಿನ ಶಿವಾಚಾರ್ಯನು, ನಂದನಃ=ಮಗನು, ಆಸಿತ್=ಇದ್ದನು.

ಆ ಮುದ್ದದೇವನಿಗೆ ಪವಿತ್ರನೂ, ರಾಗದ್ವೇಷಾದಿರಹಿತನೂ, ಶಿವಸ್ವರೂಪಿಯೂ, ಪಶು–ಪತಿ–ಪಾಶವೆಂಬ ಪದಾರ್ಥತ್ರಯದ ವಿಚಾರವನ್ನು ಮಾಡುವ ಕ್ರಿಯಾ, ಚರ್ಯಾ, ಜ್ಞಾನ, ಯೋಗಗಳೆಂಬ ನಾಲ್ಕು ಪಾದಗಳಿಂದ ಕೂಡಿದ ಶಿವಾಗಮಗಳ ಅರ್ಥವನ್ನು ನಿರ್ಣಯಿಸುವವನೂ ಆದ ಸಿದ್ಧನಾಥ ಶಿವಾಚಾರ್ಯ ನೆಂಬವನು ಮಗನಾಗಿ ಜನಿಸಿದನು.

ವೀರಶೈವಶಿಖಾರತ್ನಂ ವಿಶಿಷ್ಟಾಚಾರಸಂಪದಂ।
ಶಿವಜ್ಞಾನಮಹಾಸಿಂಧುಂ ಯಂ ಪ್ರಶಂಸಂತಿ ದೇಶಿಕಾಃ (ಸಿ. ಶಿ. ೧–೧೮)

ಅರ್ಥ : ದೇಶಿಕಾಃ=ಉಪದೇಶಮಾಡುವ ಆಚಾರ್ಯರು, ಯಂ=ಯಾವ ಸಿದ್ಧನಾಥ ಶಿವಾಚಾರ್ಯನನ್ನು, ವೀರಶೈವ ಶಿಖಾರತ್ನಂ=ವೀರಶೈವವೃಂದಕ್ಕೆ ಶಿಖಾಮಣಿ ಸ್ವರೂಪನನ್ನಾಗಿಯೂ, ವಿಶಿಷ್ಟಾಚಾರಸಂಪದಂ=ಶ್ರೇಷ್ಠವಾದ ಆಚಾರವುಳ್ಳವನನ್ನಾಗಿಯೂ, ಶಿವಜ್ಞಾನಮಹಾಸಿಂಧುಂ=ಶಿವಜ್ಞಾನದ ಸಾಗರನನ್ನಾಗಿಯೂ, ಪ್ರಶಂಸಂತಿ= ಹೊಗಳುತ್ತಾರೆಯೋ.

ಯಸ್ಯಾಚಾರ್ಯಕುಲೇ ಜಾತಾ ಸತಾಮಾಚಾರಮಾತೃಕಾ।
ಶಿವಭಕ್ತಿಃ ಸ್ಥಿರಾ ಯಸ್ಮಿನ್ ಜಜ್ಞೇ ವಿಗತವಿಪ್ಲವಾ (ಸಿ. ಶಿ. ೧–೧೯)

ಅರ್ಥ : ಯದಾಚಾರ್ಯಕುಲೇ=ಯಾವ ಸಿದ್ಧನಾಥ ಶಿವಾಚಾರ್ಯನ ವಂಶದಲ್ಲಿ, ಸತಾಂ=ಸತ್ಪುರುಷರ, ಆಚಾರಮಾತೃಕಾ=ಆಚಾರಗಳ ಮೂಲವು, ಜಾತಾ=ಉತ್ಪನ್ನ ವಾಯಿತೋ, ಯಸ್ಮಿನ್=ಯಾವ ಸಿದ್ಧನಾಥನಲ್ಲಿ, ವಿಗತ ವಿಪ್ಲವಾ=ಉಪದ್ರವರಹಿತ ವಾದ, ಶಿವಭಕ್ತಿಃ=ಶಿವಭಕ್ತಿಯು, ಸ್ಥಿರಾಜಜ್ಞೇ ಸುಸ್ಥಿರವಾಯಿತೋ.

ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ।
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ (ಸಿ. ಶಿ. ೧–೨೦)

ಅರ್ಥ : ವೀರಶಿವಾಚಾರ್ಯಶಿಖಾರತ್ನಸ್ಯ=ವೀರಶೈವಶಿವಾಚಾರ್ಯರಿಗೆ ಶಿಖಾಮಣಿಯೋಪಾದಿಯಲ್ಲಿರುವ, ತಸ್ಯ=ಆ ಸಿದ್ಧನಾಥ ಶಿವಾಚಾರ್ಯರಿಗೆ, ಸಿಂಧೋಃ=ಸಮುದ್ರದಿಂದ, ಸುಧಾಕರ ಇವ=ಚಂದ್ರನೋಪಾದಿಯಲ್ಲಿ ಶಿವಯೋಗೀತಿ= ಶಿವಯೋಗಿ ಶಿವಾಚಾರ್ಯನೆಂಬ, ನಂದನಃ=ಪುತ್ರನು, ಅಭವತ್=ಉದಿಸಿದನು.

ಇಂತಹ ವೀರಶೈವಾಚಾರ್ಯ ಶ್ರೇಷ್ಠನಾದ ಸಿದ್ಧನಾಥ ಶಿವಾಚಾರ್ಯನಿಗೆ, ಕ್ಷೀರಸಾಗರದಲ್ಲಿ ಚಂದ್ರನು ಹುಟ್ಟುವಂತೆ, ಶಿವಯೋಗಿ ಶಿವಾಚಾರ್ಯನೆಂಬ ಮಗನು ಜನಿಸಿದನು.

ಇಲ್ಲಿಯವರೆಗೆ ವರ್ಣನೆಯನ್ನು ಮಾಡಿದ ವಂಶಪರಂಪರೆಯನ್ನವಲೋಕಿಸಿದಾಗ ಮೂಲಪುರುಷನಾದ ಶಿವಯೋಗಿಗೆ ಮುದ್ದದೇವನೆಂಬ ಮಗನೂ, ಆ ಮುದ್ದದೇವನಿಗೆ ಸಿದ್ಧನಾಥನೆಂಬ ಮಗನೂ, ಆ ಸಿದ್ಧನಾಥನಿಗೆ ಶಿವಯೋಗಿ ಎಂಬ ಮಗನೂ ಇದ್ದನೆಂಬುದು ತಿಳಿದುಬರುತ್ತದೆ. ಸಿದ್ಧನಾಥನ ಮಗನಾದ ಶಿವಯೋಗಿಯೇ ಈ ಗ್ರಂಥಕರ್ತನಾದ ಶಿವಯೋಗಿ ಶಿವಾಚಾರ್ಯನು. ಹುಟ್ಟಿದ ಮಕ್ಕಳಿಗೆ ಅಜ್ಜ–ಮುತ್ತಜ್ಜರ

ಹೆಸರುಗಳನ್ನು ಇಡುವುದು ಲೋಕದ ರೂಢಿಯಾಗಿದೆ. ಅದೇ ಪ್ರಕಾರವಾಗಿ ಇಲ್ಲಿ ಗ್ರಂಥಕಾರನ ಮುತ್ತಜ್ಜನೂ, ಈ ವಂಶದ ಸುಪ್ರಸಿದ್ಧ ವ್ಯಕ್ತಿಯೂ ಆದ ಶಿವಯೋಗಿಯ ಹೆಸರನ್ನೇ ಈ ಗ್ರಂಥಕಾರನಿಗೆ ಇಡಲಾಗಿದೆ.

ಮುಂದಿನ ಹನ್ನೆರಡು ಶ್ಲೋಕಗಳಲ್ಲಿ ಸ್ವನಾಮ ಪ್ರಶಂಸಾಪೂರ್ವಕ ಗ್ರಂಥಕಾರನು ಈ ಗ್ರಂಥದ ಅವತರಣಿಕೆಯನ್ನು ನಿರೂಪಿಸುತ್ತಿದ್ದಾನೆ–

ಚಿದಾನಂದಪರಾಕಾಶಶಿವಾನುಭವಯೋಗತಃ।
ಶಿವಯೋಗೀತಿ ನಾಮೋಕ್ತಿರ್ಯಸ್ಯ ಯಾಥಾರ್ಥ್ಯಯೋಗಿನೀ

(ಸಿ. ಶಿ. ೧–೨೧)

ಅರ್ಥ : ಚಿದಾನಂದಪರಾಕಾಶ ಶಿವಾನುಭವಯೋಗತಃ=ಸಚ್ಚಿದಾನಂದನೂ, ಪರಮಪ್ರಕಾಶನೂ ಆದ ಪರಶಿವನ ಸ್ವರೂಪಾನುಭವದಿಂದ, ಯಸ್ಯ=ಯಾವನಿಗೆ, ಶಿವಯೋಗೀತಿ=ಶಿವಯೋಗಿ ಎಂಬ, ನಾಮೋಕ್ತಿ=ಹೆಸರು, ಯಾಥಾರ್ಥ್ಯ ಯೋಗಿನೀ= ಯಥಾರ್ಥವಾಗಿ ಅನ್ವಯಿಸುತ್ತದೆ.

ಈ ಶಿವಯೋಗಿ ಶಿವಾಚಾರ್ಯನು ಸಚ್ಚಿದಾನಂದ ಪರಾಕಾಶ ರೂಪವಾದ ಪರಶಿವನೊಂದಿಗೆ ಸಮರಸಗೊಂಡಿದ್ದರಿಂದ ಅಂದರೆ, ಶಿವನೊಂದಿಗೆ ಸಮರಸ ಯೋಗವನ್ನು ಸಾಧಿಸಿದ್ದರಿಂದ ಆತನಿಗೆ 'ಶಿವಯೋಗಿ' ಎಂಬ ಹೆಸರು ಅನ್ವರ್ಥಕವೇ ಆಗಿತ್ತು.

ಶಿವಾಗಮಪರಿಜ್ಞಾನಪರಿಪಾಕಸುಗಂಧಿನಾ।
ಯದೀಯಕೀರ್ತಿಪುಷ್ಪೇಣ ವಾಸಿತಂ ಹರಿತಾಂ ಮುಖಮ್

(ಸಿ. ಶಿ. ೧–೨೨)

ಅರ್ಥ : ಶಿವಾಗಮಪರಿಜ್ಞಾನಪರಿಪಾಕಸುಗಂಧಿನಾ=ಶಿವಾಗಮದ ಪರಿಪೂರ್ಣ ಜ್ಞಾನವೆಂಬ ಪರಿಮಳದಿಂದ ಸುಗಂಧಿತವಾದ, ಯದೀಯ=ಯಾವ ಶಿವಯೋಗಿ ಶಿವಾಚಾರ್ಯನ, ಕೀರ್ತಿಪುಷ್ಪೇಣ=ಕೀರ್ತಿ ಎಂಬ ಕುಸುಮದಿಂದ, ಹರಿತಾಂ= ದಿಕ್ಕುಗಳ, ಮುಖಂ=ಮುಖವು, ವಾಸಿತಂ=ಸುವಾಸಿತವಾಗಿ ಮಾಡಲ್ಪಟ್ಟಿತೋ.

ಶಿವಾಗಮಗಳ ಪರಿಪೂರ್ಣ ಜ್ಞಾನಿಯಾದ ಶ್ರೀ ಶಿವಯೋಗಿ ಶಿವಾಚಾರ್ಯನ ಕೀರ್ತಿಯು ದಶದಿಕ್ಕುಗಳಲ್ಲಿಯೂ ಹರಡಿತ್ತು.

ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ।
ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ (ಸಿ. ಶಿ. ೧–೨೩)

ಅರ್ಥ : ಬೌದ್ಧಾದಿ=ಬೌದ್ಧವೇ ಮೊದಲಾದ, ಪ್ರತಿಸಿದ್ಧಾಂತ=ವಿರೋಧಿ ನಾಸ್ತಿಕ ಸಿದ್ಧಾಂತಗಳೆಂಬ, ಮಹಾಧ್ವಾಂತ=ಕಾರ್ಗತ್ತಲೆಗೆ, ಅಂಶುಮಾಲಿನಾ=ಸೂರ್ಯನೋ ಪಾದಿಯಲ್ಲಿರುವ, ಯೇನ=ಯಾವ ಶಿವಯೋಗಿ ಶಿವಾಚಾರ್ಯನಿಂದ, ಸನಾತನೀ= ಸನಾತನವಾದ, ಶಿವಭಕ್ತಿಃ=ಶಿವಭಕ್ತಿಯು, ರಕ್ಷಾವತೀ=ರಕ್ಷಿಸಲ್ಪಟ್ಟಂಥಾದ್ದು ಜಾತಾ= ಆಯಿತೋ.

ಬೌದ್ಧ–ಜೈನ ಮೊದಲಾದ ನಾಸ್ತಿಕ ದರ್ಶನಗಳೆಂಬ ಕತ್ತಲೆಯನ್ನು ಹೊಡೆದೋಡಿಸಿ, ಸನಾತನವಾದ ಶಿವಭಕ್ತಿಯನ್ನು ಸಂರಕ್ಷಿಸಿ, ಶ್ರೀ ಶಿವಯೋಗಿ ಶಿವಾಚಾರ್ಯನು ಸೂರ್ಯನಂತೆ ಸರ್ವೋತ್ಕೃಷ್ಟವಾಗಿ ಒಪ್ಪುತ್ತಿದ್ದನು.

ಸ ಮಹಾವೀರಶೈವಾನಾಂ ಧರ್ಮಮಾರ್ಗಪ್ರವರ್ತಕಃ।
ಶಿವತತ್ತ್ವಪರಿಜ್ಞಾನಚಂದ್ರಿಕಾವೃತಚಂದ್ರಮಾಃ (ಸಿ. ಶಿ. ೧–೨೪)

ಅರ್ಥ : ಶಿವತತ್ತ್ವಪರಿಜ್ಞಾನ=ಶಿವತತ್ತ್ವದ ಪರಿಪೂರ್ಣಜ್ಞಾನವೆಂಬ, ಚಂದ್ರಿಕಾ=ಬೆಳದಿಂಗಳಿಂದ, ವೃತಚಂದ್ರಮಾಃ=ಆವರಿಸಲ್ಪಟ್ಟ ಚಂದ್ರನಂತಿರುವ, ಸಃ=ಆ ಶಿವಯೋಗಿ ಶಿವಾಚಾರ್ಯನು, ಮಹಾವೀರಶೈವಾನಾಂ=ಶ್ರೇಷ್ಠರಾದ ವೀರಶೈವರಿಗೆ, ಧರ್ಮಮಾರ್ಗಪ್ರವರ್ತಕಃ=ಧರ್ಮಮಾರ್ಗವನ್ನು ತೋರಿಸುವವನಾಗಿದ್ದನು.

ಚಂದ್ರನು ಬೆಳದಿಂಗಳಿಂದ ಕೂಡಿಕೊಂಡಿರುವಂತೆ, ಶಿವತತ್ತ್ವದ ಪರಿಪೂರ್ಣಜ್ಞಾನದಿಂದ ಕೂಡಿದ ಶ್ರೀ ಶಿವಯೋಗಿ ಶಿವಾಚಾರ್ಯನು, ಕತ್ತಲೆಯಲ್ಲಿ ಪೂರ್ಣಚಂದ್ರಿಕೆಯು ದಾರಿತೋರುವಂತೆ, ವೀರಶೈವಧರ್ಮದ ಶ್ರೇಷ್ಠ ಆಚಾರ್ಯರಿಗೂ ಮಾರ್ಗದರ್ಶಕನಾಗಿದ್ದನು.

ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಮ್ ।
ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ॥ (ಸಿ. ಶಿ. ೧–೨೫)

ಅರ್ಥ : ಕಾಮಿಕಾದ್ಯಾನಿ=ಕಾಮಿಕಾಗಮವನ್ನೇ ಮೊದಲುಗೊಂಡು, ವಾತುಲಾಂತಾನಿ=ವಾತುಲಾಗಮವೇ ಕೊನೆಯದಾಗಿ, ಶೈವತಂತ್ರಾಣಿ=ಶೈವಾಗಮಗಳನ್ನು, ತು=ಮತ್ತು, ಅಖಿಲಾನಿ=ಸಮಸ್ತಗಳಾದ, ಶೈವಾನಿ=ಶಿವಸಂಬಂಧಿಗಳಾದ, ಪುರಾಣಾನಿ=ಪುರಾಣಗಳನ್ನು, ಆಲೋಕ್ಯ=ಪ್ರೀತಿಪೂರ್ವಕ ಚೆನ್ನಾಗಿ ನೋಡಿ ಅಂದರೆ ಪರಿಶೀಲಿಸಿ.

ಮೇಲೆ ವರ್ಣಿತನಾದ ಈ ಶಿವಯೋಗಿ ಶಿವಾಚಾರ್ಯನು ಸಿದ್ಧಾಂತ ಶಿಖಾಮಣಿಯನ್ನು ಬರೆಯಬೇಕಾದರೆ=(೧) ಕಾಮಿಕ, (೨) ಯೋಗಜ, (೩) ಚಿಂತ್ಯ, (೪) ಕಾರಣ, (೫) ಅಜಿತ, (೬) ದೀಪ್ತ (೭) ಸೂಕ್ಷ್ಮ (೮) ಸಹಸ್ರ, (೯) ಅಂಶುಮಾನ್, (೧೦) ಸುಪ್ರಭೇದ, (೧೧) ವಿಜಯ, (೧೨) ನಿಃಶ್ವಾಸ, (೧೩) ಸ್ವಾಯಂಭುವ, (೧೪) ಅನಿಲ, (೧೫) ವೀರ, (೧೬) ರೌರವ, (೧೭) ಮುಕುಟ, (೧೮) ವಿಮಲ, (೧೯) ಚಂದ್ರಜ್ಞಾನ, (೨೦) ಬಿಂಬ, (೨೧) ಪ್ರೋದ್ಗೀತ, (೨೨) ಲಲಿತ, (೨೩) ಸಿದ್ಧ (೨೪) ಸಂತಾನ, (೨೫) ಸರ್ವೋಕ್ತ, (೨೬) ಪಾರಮೇಶ್ವರ, (೨೭) ಕಿರಣ, (೨೮) ವಾತುಲ ಎಂಬ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿರುವವನಲ್ಲದೇ, ವ್ಯಾಸೋಕ್ತಗಳಾದ ಶಿವ ಸಂಬಂಧಿ ಸಕಲ ಪುರಾಣಗಳನ್ನೂ ನೋಡಿರುವುದಾಗಿ ತಿಳಿಸಿ, ಇನ್ನು ತಾನು ಬರೆದ ಗ್ರಂಥದ ಪ್ರಯೋಜನವನ್ನು ಮುಂದಿನ ಶ್ಲೋಕಗಳಲ್ಲಿ ನಿರೂಪಿಸುತ್ತಾನೆ.

ವೇದಮಾರ್ಗಾವಿರೋಧೇನ ವಿಶಿಷ್ಟಾಚಾರಸಿದ್ಧಯೇ ।
ಅಸನ್ಮಾರ್ಗನಿರಾಸಾಯ ಪ್ರಮೋದಾಯ ವಿವೇಕಿನಾಮ್
(ಸಿ. ಶಿ. ೧–೨೬)

ಅರ್ಥ : ವೇದಮಾರ್ಗಾವಿರೋಧೇನ=ವೈದಿಕಮಾರ್ಗಕ್ಕೆ ವಿರೋಧವಾಗದಂತೆ, ವಿಶಿಷ್ಟಾಚಾರಸಿದ್ಧಯೇ=ಸದಾಚಾರದ ಸಿದ್ಧಿಗಾಗಿ, ಅಸನ್ಮಾರ್ಗ ನಿರಾಸಾಯ= ಜೈನ–ಬೌದ್ಧಾದಿ ಅಸನ್ಮಾರ್ಗಗಳ ನಿರಸನಕ್ಕಾಗಿ, ವಿವೇಕಿನಾಂ=ವೇದಾಗಮಾದಿಗಳ ಜ್ಞಾನವುಳ್ಳವರ, ಪ್ರಮೋದಾಯ=ಸಂತೋಷಕ್ಕಾಗಿ.

ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯವು ವೈದಿಕ ಮಾರ್ಗಕ್ಕೆ ವಿರೋಧ ವಲ್ಲದ, ಆಗಮಸಮ್ಮತವಾದ ಸದಾಚಾರವನ್ನು ಪ್ರತಿಪಾದಿಸುವಂತಹದು. ನಾಸ್ತಿಕವಾದ ವನ್ನು ಪ್ರಸಾರಮಾಡುವ ಜೈನ–ಬೌದ್ಧಾದಿಗಳನ್ನು ನಿರಸನ ಮಾಡುವಂತಹದು ಮತ್ತು ವಿವೇಕಿಗಳಿಗೆ ಸಂತೋಷವನ್ನುಂಟು ಮಾಡುವಂತಹದು.

ಸರ್ವಸ್ವಂ ವೀರಶೈವಾನಾಂ ಸಕಲಾರ್ಥಪ್ರಕಾಶನಮ್ ।
ಅಸ್ಪೃಷ್ಟಮಖಿಲೈರ್ದೋಷೈರಾದೃತಂ ಶುದ್ಧಮಾನಸೈಃ (ಸಿ.ಶಿ. ೧–೨೭)

ಅರ್ಥ : ವೀರಶೈವಾನಾಂ=ವೀರಶೈವರಿಗೆ, ಸರ್ವಸ್ವಂ=ಸರ್ವಸ್ವವಾದ, ಸಕಲಾರ್ಥ ಪ್ರಕಾಶನಮ್=ಸರ್ವಾರ್ಥವನ್ನೂ ಪ್ರಕಾಶಗೊಳಿಸುವ, ಅಖಿಲೈಃ=ಸಮಸ್ತಗಳಾದ, ದೋಷೈಃ=ದೋಷಗಳಿಂದ, ಅಸ್ಪೃಷ್ಟಂ=ಮುಟ್ಟಲ್ಪಡದಿರುವ, ಶುದ್ಧ ಮಾನಸೈಃ= ಪರಿಶುದ್ಧವಾದ ಮನಸ್ಸುಳ್ಳವರಿಂದ, ಅದೃತಂ=ಸ್ವೀಕರಿಸಲ್ಪಟ್ಟ–

ವೀರಶೈವರಿಗೆ ಸಕಲ ಪುರುಷಾರ್ಥ ಪ್ರಕಾಶಕವಾದ ಸರ್ವಸ್ವ ದಂತಿರುವ ಈ ಏಕೋತ್ತರಶತಸ್ಥಲ ಸಿದ್ಧಾಂತವು, ದೋಷಶೂನ್ಯವೂ ಶುದ್ಧಮನಸ್ಕರಿಂದ ಆದರಣೀ ಯವೂ ಆಗಿರುತ್ತದೆ.

ತೇಷ್ವಾಗಮೇಷು ಸರ್ವೇಷು ಪುರಾಣೇಷ್ವಖಿಲೇಷು ಚ ।
ಪುರಾ ದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ (ಸಿ. ಶಿ. ೧–೨೮)

ಅರ್ಥ : ಸರ್ವೇಷು=ಪೂರ್ವದಲ್ಲಿಹೇಳಿದ ಎಲ್ಲ, ತೇಷ್ವಾಗಮೇಷು=ಇಪ್ಪತ್ತೆಂಟು ಶಿವಾಗಮಗಳಲ್ಲಿ, ಚ=ಮತ್ತು ಅಖಿಲೇಷು=ಸಮಸ್ತಗಳಾದ, ಪುರಾಣೇಷು= ಪುರಾಣ ಗಳಲ್ಲಿ, ಪುರಾ=ಪೂರ್ವದಲ್ಲಿ, ದೇವೇನ=ಪರಮಾತ್ಮನಿಂದ, ದೇವ್ಯೈ=ಪಾರ್ವತಿಗೆ, ಚ=ಮತ್ತು, ತನ್ನಂದನಾಯ=ಮಗನಾದ ಷಣ್ಮುಖನಿಗೆ, ಕಥಿತಂ= ಹೇಳಲ್ಪಟ್ಟಿದೆ.

ನೂರೊಂದು ಸ್ಥಲಗಳಿಂದ ಕೂಡಿದ ಈ ವೀರಶೈವ ಸಿದ್ಧಾಂತವು, ಸಮಸ್ತ ಆಗಮ ಹಾಗೂ ಪುರಾಣಗಳಲ್ಲಿ ಹಿಂದೆ ಪರಮಾತ್ಮನು ಪಾರ್ವತಿ ಹಾಗೂ ಮಗನಾದ ಷಣ್ಮುಖನಿಗೆ ಉಪದೇಶಿಸಲ್ಪಟ್ಟ ವಿಷಯವೇ ಆಗಿದೆ.

ತತ್ಸಂಪ್ರದಾಯಸಿದ್ಧೇನ ರೇಣುಕೇನ ಮಹಾತ್ಮನಾ ।
ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃ ಕ್ಷಿತೌ (ಸಿ. ಶಿ. ೧–೨೯)

ಅರ್ಥ : ತತ್ಸಂಪ್ರದಾಯಸಿದ್ಧೇನ=ಆ ಶಿವಸಂಪ್ರದಾಯದಲ್ಲಿ ಪ್ರಸಿದ್ಧನಾದ, ಮಹಾತ್ಮನಾ=ಮಹಾಮಹಿಮನಾದ, ರೇಣುಕೇನ ಗಣೇಶ್ವರೇಣ=ರೇಣುಕಗಣೇಶ್ವರ ನಿಂದ, ಕ್ಷಿತೌ=ಭೂಮಂಡಲದಲ್ಲಿ, ಪುನಃ=ಮತ್ತೆ ಅಗಸ್ತ್ಯಾಯ=ಅಗಸ್ತ್ಯಮಹರ್ಷಿಗೆ, ಕಥಿತಮ್=ಹೇಳಲ್ಪಟ್ಟಿತು.

ಶಿವನ ಸದ್ಯೋಜಾತಮುಖದಿಂದ ಪ್ರಾದುರ್ಭವಿಸಿ ಶಿವಸಂಪ್ರದಾಯ ದವರೆಂದು ಪ್ರಸಿದ್ಧರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಪರಮಾತ್ಮನಿಂದ ಪಾರ್ವತಿ ಹಾಗೂ ಷಣ್ಮುಖರಿಗೆ ಪೂರ್ವದಲ್ಲಿ ಉಪದೇಶಿಸಲ್ಪಟ್ಟ ನೂರೊಂದು ಸ್ಥಲಾತ್ಮಕವಾದ ಈ ವೀರಶೈವ ಸಿದ್ಧಾಂತವನ್ನು, ಈ ಭೂಮಂಡಲದಲ್ಲಿ ಪ್ರಪ್ರಥಮವಾಗಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಿಸಿದರು.

ವೀರಶೈವಮಹಾತಂತ್ರಮೇಕೋತ್ತರಶತಸ್ಥಲಮ್ ।
ಅನುಗ್ರಹಾಯ ಲೋಕಾನಾಮಭ್ಯಧಾತ್ ಸುಧಿಯಾಂ ವರಃ

(ಸಿ. ಶಿ. ೧–೩೦)

ಅರ್ಥ : ಏಕೋತ್ತರಶತಸ್ಥಲಂ=ನೂರೊಂದು ಸ್ಥಲಗಳಿಂದ ಕೂಡಿದ, ವೀರಶೈವ ಮಹಾತಂತ್ರಂ=ವೀರಶೈವ ಸಿದ್ಧಾಂತವನ್ನು, ಲೋಕಾನಾಂ=ಜನರ, ಅನುಗ್ರಹಾಯ= ಅನುಗ್ರಹಕ್ಕಾಗಿ, ಸುಧಿಯಾಂ=ಬುದ್ಧಿವಂತರಲ್ಲಿ, ವರಃ=ಶ್ರೇಷ್ಠನಾದ ಶಿವಯೋಗಿ ಶಿವಾಚಾರ್ಯನು, ಅಭ್ಯಧಾತ್=ಹೇಳಿದನು.

ಈ ಗ್ರಂಥಕರ್ತನಾದ ಶ್ರೀ ಶಿವಯೋಗಿ ಶಿವಾಚಾರ್ಯನು ಪೂರ್ವದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯಮಹರ್ಷಿಗಳಿಗೆ ಉಪದೇಶಿಸಿದ ಪಿಂಡಾದಿ ಜ್ಞಾನಶೂನ್ಯಾಂತಗಳಾದ ನೂರೊಂದು ಸ್ಥಲಾತ್ಮಕವಾದ ಈ ವೀರಶೈವ ಸಿದ್ಧಾಂತವನ್ನು ಲೋಕಾನುಗ್ರಹಕ್ಕಾಗಿ ಸಂಗ್ರಹಿಸಿ ಬರೆದಿರುತ್ತಾನೆ.

ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಮ್ ।
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ

(ಸಿ. ಶಿ. ೧–೩೧)

ಅರ್ಥ : ಸರ್ವೇಷಾಂ=ಸಮಸ್ತ, ಶೈವತಂತ್ರಾಣಾಮ್=ಶೈವತಂತ್ರಗಳ, ಉತ್ತರತ್ವಾತ್=ಉತ್ತರಭಾಗದಲ್ಲಿ ಇರುವುದರಿಂದ, ನಿರುತ್ತರತ್ವಾತ್=ಇದರ ಉತ್ತರ ಭಾಗದಲ್ಲಿ ಯಾವ ಸಿದ್ಧಾಂತವೂ ಇಲ್ಲದಿರುವುದರಿಂದ, ಲೋಕೇಃ=ಜಗತ್ತಿನಲ್ಲಿ, ಯತ್=ಯಾವ ಈ ವೀರಶೈವ ಸಿದ್ಧಾಂತವು, ಸಿದ್ಧಾಂತ ಶಿಖಾಮಣಿಃ=ಸಿದ್ಧಾಂತಗಳ ಶಿಖಾಮಣಿ ಎಂಬ, ನಾಮ್ನಾ=ಹೆಸರಿನಿಂದ, ಪ್ರತೀಯತೇ=ಪ್ರಖ್ಯಾತವಾಗಿರುತ್ತದೆ.

ಈ ವೀರಶೈವ ಸಿದ್ಧಾಂತವು ಎಲ್ಲ ಶೈವತಂತ್ರಗಳ (ಶೈವಾಗಮಗಳ) ಕೊನೆಯ ಭಾಗದಲ್ಲಿ ಹೇಳಲ್ಪಟ್ಟಿರುವುದರಿಂದ ಮತ್ತು ಈ ಸಿದ್ಧಾಂತದ ಮೇಲೆ ಮತ್ತಾವ ಸಿದ್ಧಾಂತವೂ ಇಲ್ಲದಿರುವುದರಿಂದ ಇದಕ್ಕೆ ಸಿದ್ಧಾಂತಗಳಲ್ಲಿ ಶಿಖಾಮಣಿ ಎಂಬ ಅನ್ವರ್ಥದಲ್ಲಿ ''ಸಿದ್ಧಾಂತ ಶಿಖಾಮಣಿ'' ಎಂಬ ಹೆಸರು ಪ್ರಖ್ಯಾತವಾಗಿರುತ್ತದೆ–

ಅನುಗತಸಕಲಾರ್ಥೇ ಶೈವತಂತ್ರೈಃ ಸಮಸ್ತೈಃ ।
ಪ್ರಕಟಿತ ಶಿವಬೋಧಾದ್ವೈತಭಾವಪ್ರಸಾದೇ ।
ವಿಧದತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ ।
ಪಶುಪತಿಮತಸಾರೇ ಪಂಡಿತ ಶ್ಲಾಘನೀಯ (ಸಿ. ಶಿ. ೧–೩೨)

ಅರ್ಥ : ಸಮಸ್ತೈಃ=ಎಲ್ಲ, ಶೈವತಂತ್ರೈಃ=ಶೈವಸಿದ್ಧಾಂತಗಳಿಂದ ಅನುಗತ ಸಕಲಾರ್ಥೇ=ಅನುಸರಿಸಲ್ಪಟ್ಟ ಸಕಲ ಪದಾರ್ಥಗಳಿಂದ ಕೂಡಿದ, ಪ್ರಕಟಿತ= ಪ್ರಕಟಿಸಲ್ಪಟ್ಟ, ಶಿವಬೋಧ=ಶಿವಜ್ಞಾನದಿಂದುಂಟಾದ, ಅದ್ವೈತ ಭಾವಪ್ರಸಾದೇ= ಶಿವಾದ್ವೈತಭಾವರೂಪ ಪ್ರಸಾದವುಳ್ಳ, ಪಂಡಿತಶ್ಲಾಘನೀಯೇ=ಪಂಡಿತರಿಂದ ಪ್ರಶಂಸಿಸಲ್ಪಟ್ಟ, ಪಶುಪತಿಮತಸಾರೇ=ಪಾಶುಪತಮತದ ಸಾರರೂಪವಾದ, ಅಸ್ಮಿನ್= ಈ ಸಿದ್ಧಾಂತದಲ್ಲಿ, ವಿಶಿಷ್ಟಾಃ=ವಿಶಿಷ್ಟ (ಶ್ರೇಷ್ಠ)ರಾದ, ವೀರಶೈವಾಃ=ವೀರಶೈವರು, ಮತಿಂ=ಬುದ್ಧಿಯನ್ನು, ವಿಧದತು=ತೊಡಗಿಸಲಿ.

ಈ ''ಸಿದ್ಧಾಂತ ಶಿಖಾಮಣಿ'' ಎಂಬ ಗ್ರಂಥವು ಸಕಲ ಶಿವಾಗಮ ಗಳಿಂದ ಆರಿಸಿ ಸೇರಿಸಲ್ಪಟ್ಟ ಸರ್ವ ರಹಸ್ಯಾರ್ಥವುಳ್ಳದಾಗಿರುವುದಾಗಿಯೂ, ಶಿವಾದ್ವೈತ ಜ್ಞಾನವನ್ನು ಪ್ರಕಟಿಸಿರುವ ಕಾರಣ ಲಿಂಗಾಂಗ ಸಾಮರಸ್ಯರೂಪ ಅನುಗ್ರಹದಿಂದ ಕೂಡಿದು ದಾಗಿಯೂ, ವೇದಾಗಮಜ್ಞರಿಂದ ಪ್ರಶಂಸಿತವಾಗಿಯೂ, ಪಾಶುಪತ ಮತದಲ್ಲಿ ಶ್ರೇಷ್ಠವಾಗಿಯೂ ಇರುವುದರಿಂದ ಶ್ರೇಷ್ಠರಾದ ವೀರಶೈವರು ಈ ಗ್ರಂಥದ ಅಧ್ಯಯನ–ಅಧ್ಯಾಪನದಲ್ಲಿ ತಮ್ಮ ಬುದ್ಧಿಯನ್ನು ತೊಡಗಿಸುವವರಾಗಲಿ.

ಈ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿತವಾದ ನೂರೊಂದು ಸ್ಥಲಗಳಿಂದ ಕೂಡಿದ ವೀರಶೈವ ಸಿದ್ಧಾಂತವು ಮೊದಲು ಶಿವನಿಂದ ಪಾರ್ವತಿ ಹಾಗೂ ಷಣ್ಮುಖರಿಗೆ ಉಪದೇಶಿಸಲ್ಪಟ್ಟಿದೆ. ಆ ಉಪದೇಶವೇ ಇಂದು ಇಪ್ಪತ್ತೆಂಟು ಶಿವಾಗಮಗಳ ರೂಪದಲ್ಲಿ ಇರುತ್ತದೆ. ಅನಂತರ ಶಿವನ ಸದ್ಯೋಜಾತ ಮುಖ ಸಂಜಾತರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವನ ಅಪ್ಪಣೆಯ ಮೇರೆಗೆ ಭೂಲೋಕದಲ್ಲಿ ಕೊಲ್ಲಿಪಾಕಿ ಕ್ಷೇತ್ರದ ಶ್ರೀ ಸೋಮೇಶ್ವರ ಮಹಾಲಿಂಗದಿಂದ ಪ್ರಾದುರ್ಭವಿಸಿ, ಪ್ರಪ್ರಥಮವಾಗಿ ಈ ವೀರಶೈವ ಸಿದ್ಧಾಂತವನ್ನು ಮಲಯ ಪರ್ವತ ನಿವಾಸಿಯೂ, ಮಹಾಮಹಿಮನೂ ಆದ ಶ್ರೀ ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದರು. ಅದುವೇ ''ರೇಣುಕಾಗಸ್ತ್ಯಸಂವಾದ'' ಎಂಬ ಗ್ರಂಥರೂಪದಲ್ಲಿ ಪ್ರಸಿದ್ಧವಾಗಿತ್ತು. ಈ ''ರೇಣುಕಾ ಗಸ್ತ್ಯಸಂವಾದ''ವೆಂಬ ಗ್ರಂಥವನ್ನಾ ಧಾರವಾಗಿ ಇಟ್ಟುಕೊಂಡು, ಶ್ರೀ ಶಿವಯೋಗಿ ಶಿವಾಚಾರ್ಯರು, ಆ ಮೂಲ ವಿಷಯವನ್ನು ಪುಷ್ಟಿಗೊಳಿಸುವುದಕ್ಕಾಗಿ ವೇದ, ಆಗಮ ಮತ್ತು ಉಪನಿಷತ್ತುಗಳಲ್ಲಿ ಬರುವ ವೀರಶೈವ ತತ್ತ್ವಗಳನ್ನೆಲ್ಲ ಅಳವಡಿಸಿಕೊಂಡು ಈ 'ಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥವನ್ನು ನಮ್ಮೆಲ್ಲರ ಕಲ್ಯಾಣಕ್ಕಾಗಿ ರಚಿಸಿದ್ದಾರೆ. ಆದಕಾರಣ ಪ್ರತಿಯೊಬ್ಬ ವೀರಶೈವನೂ ಈ ಗ್ರಂಥದ ಪಾರಾಯಣ, ಪಠಣ, ಅಭ್ಯಾಸಾದಿಗಳನ್ನು ಮಾಡಿ ಗ್ರಂಥಸ್ಥವಾದ ಏಕೋತ್ತರಶತ (ನೂರೊಂದು) ಸ್ಥಲದ ವಿಷಯವನ್ನು ಬುದ್ಧಿಯಲ್ಲಿ ಅರಗಿಸಿಕೊಂಡು ತಮ್ಮೆಲ್ಲರ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ
ಪೂರ್ವಪೀಠಿಕಾ ಭಾಗದ ಪ್ರಥಮ ಪರಿಚ್ಛೇದವು ಪೂರ್ಣವಾದುದು.

■■

## ದ್ವಿತೀಯ ಪರಿಚ್ಛೇದ

### ಮಂಗಲಾಚರಣ

ಶ್ರೀ ಶಿವಯೋಗಿ ಶಿವಾಚಾರ್ಯರು ಈ ಎರಡನೇ ಪರಿಚ್ಛೇದವನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಿಷ್ಟಾಚಾರವನ್ನನುಸರಿಸಿ ವಿಘ್ನವಿನಾಶಕ್ಕಾಗಿ ಪುನಃ ಎರಡು ಶ್ಲೋಕಗಳಿಂದ ಪಾರ್ವತೀಪರಮೇಶ್ವರರ ನಮಸ್ಕಾರರೂಪ ಮಂಗಲವನ್ನಾಚರಿಸುತ್ತಾರೆ.

ಸಚ್ಚಿದಾನಂದರೂಪಾಯ ಸದಸದ್ವ್ಯಕ್ತಿಹೇತವೇ ।
ನಮಃ ಶಿವಾಯ ಸಾಂಬಾಯ ಸಗಣಾಯ ಸ್ವಯಂಭುವೇ ॥ (ಸಿ. ಶಿ. ೨-೧)

ಅರ್ಥ : ಸದಸದ್ವ್ಯಕ್ತಿಹೇತವೇ=ಸದಸದ್ರೂಪವಾದ ಪ್ರಪಂಚದ ಆವಿರ್ಭಾವಕ್ಕೆ ಕಾರಣನಾದ, ಸಾಂಬಾಯ=ಭವಾನೀಸಹಿತನಾದ, ಸಗಣಾಯ=ಪ್ರಮಥಗಣರಿಂದ ಕೂಡಿರುವ, ಸ್ವಯಂಭುವೇ=ಅಯೋನಿಜನಾದ, ಸಚ್ಚಿದಾನಂದ ರೂಪಾಯ=ಸಚ್ಚಿದಾನಂದಸ್ವರೂಪನಾದ, ಶಿವಾಯ=ಪರಮಾತ್ಮನಿಗೆ, ನಮಃ=ನಮಸ್ಕಾರವು.

ಜಡ ಮತ್ತು ಚೇತನಾತ್ಮಕವಾದ ದ್ವಿವಿಧ ಪ್ರಪಂಚದ ಉತ್ಪತ್ತಿಗೆ ಕಾರಣನೂ, ಸತ್ತು ಚಿತ್ತುಮತ್ತು ಆನಂದಗಳೇ ಸ್ವರೂಪವಾಗಿ ಉಳ್ಳವನೂ, ಪಾರ್ವತೀ ಸಮೇತನೂ, ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಮೊದಲಾದ ಪಾರ್ಶ್ವದ ಗಣರಿಂದ ಕೂಡಿಕೊಂಡವನೂ ಅಯೋನಿಜನೂ ಆದ ಪರಶಿವನಿಗೆ ನಮಸ್ಕಾರವು.

ಸದಾಶಿವಮುಖಾಶೇಷತತ್ತ್ವಮೌಕ್ತಿಕಶುಕ್ತಿಕಾಂ ।
ವಂದೇ ಮಾಹೇಶ್ವರೀಂ ಶಕ್ತಿಂ ಮಹಾಮಾಯಾದಿರೂಪಿಣೀಂ ॥ (ಸಿ. ಶಿ. ೨-೨)

ಅರ್ಥ : ಸದಾಶಿವಮುಖಾಶೇಷ=ಸದಾಶಿವಾದಿ ಭೂಮ್ಯಂತಗಳಾದ, ತತ್ತ್ವ ಮೌಕ್ತಿಕ=ತತ್ತ್ವಗಳೆಂಬ ಮುತ್ತುಗಳಿಗೆ, ಶುಕ್ತಿಕಾಂ=ಚಿಪ್ಪೆಯಂತಿರುವ, ಮಹಾ ಮಾಯಾದಿರೂಪಿಣೀಂ=ಮಹಾಮಾಯಾದಿ ಅನೇಕ ರೂಪಗಳುಳ್ಳ, ಮಾಹೇಶ್ವರೀಂ=ಮಹೇಶ್ವರನ ಸಂಬಂಧಿನಿಯಾದ, ಶಕ್ತಿಂ=ಶಕ್ತಿಯನ್ನು, ವಂದೇ=ನಮಿಸುವೆನು.

ಮೂವತ್ತಾರು ತತ್ತ್ವಗಳಲ್ಲಿ ಸದಾಶಿವ ತತ್ತ್ವವನ್ನೇ ಮೊದಲು ಮಾಡಿಕೊಂಡು ಭೂಮಿತತ್ತ್ವಪರ್ಯಂತಗಳಾದ ಮೂವತ್ತಾರು ತತ್ತ್ವಗಳೆಂಬ ಮುತ್ತುಗಳ ಉತ್ಪತ್ತಿಗೆ ಕಾರಣೀಭೂತವಾದ ಚಿಪ್ಪೆಯಂತಿರುವ, (ಸಕಲ ತತ್ತ್ವಗಳ ಜನನಿಯಾದವಳು ಎಂದರ್ಥ) ಶುದ್ಧ ವಿದ್ಯೆ, ಮಹಾಮಾಯೆ, ಪ್ರಕೃತಿ, ಪರಾವಿದ್ಯೆ, ಪರಬಿಂದು, ಕುಂಡಲಿನಿ, ಶಬ್ದಬ್ರಹ್ಮ ಮೊದಲಾದ ಅನೇಕ ನಾಮಗಳುಳ್ಳವಳೂ ಆದ ಶಿವಸಮೇತಳಾದ ಚಿಚ್ಛಕ್ತಿಗೆ ನಮಸ್ಕಾರವು.

### ವಸ್ತು ನಿರ್ದೇಶನ

ಇನ್ನು ಜಗತ್ತಿನ ಸೃಷ್ಟಿಕ್ರಮವನ್ನು ಹೇಳಲಪೇಕ್ಷಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ನಾಲ್ಕು ಶ್ಲೋಕಗಳಿಂದ ವಸ್ತುನಿರ್ದೇಶನವನ್ನು ಮಾಡುತ್ತಾರೆ.

ಅಸ್ತಿ ಸಚ್ಚಿತ್ಸುಖಾಕಾರಮಲಕ್ಷಣಪದಾಸ್ಪದಂ ।
ನಿರ್ವಿಕಲ್ಪಂ ನಿರಾಕಾರಂ ನಿರಸ್ತಾಶೇಷವಿಪ್ಲವಂ ॥ (ಸಿ. ಶಿ. ೨–೩ )

ಅರ್ಥ : ಸಚ್ಚಿತ್ಸುಖಾಕಾರಂ=ಸಚ್ಚಿದಾನಂದಸ್ವರೂಪವೂ, ಅಲಕ್ಷಣಪದಾಸ್ಪದಂ =ಗುರುತಿಸಲು ಬಾರದಿರುವ ಸ್ಥಾನದಲ್ಲಿರುವುದೂ, ನಿರ್ವಿಕಲ್ಪಂ=ಭೇದರಹಿತವೂ, ನಿರಾಕಾರಂ=ಆಕಾರಶೂನ್ಯವೂ, ನಿರಸ್ತಾಶೇಷವಿಪ್ಲವಂ=ಸಮಸ್ತ ಬಾಧೆಯನ್ನು ನೀಗಿ ದುದೂ ಆದ ಅತಿಸೂಕ್ಷ್ಮವಾದ ಒಂದು ವಸ್ತುವು, (ಸೃಷ್ಟಿಯ ಪೂರ್ವದಲ್ಲಿ) ಅಸ್ತಿ=ಇತ್ತು

ಪರಿಚ್ಛೇದಕಥಾಶೂನ್ಯಂ ಪ್ರಪಂಚಾತೀತವೈಭವಂ ।
ಪ್ರತ್ಯಕ್ಷಾದಿಪ್ರಮಾಣಾನಾಮಗೋಚರಪದೇ ಸ್ಥಿತಂ ॥ (ಸಿ. ಶಿ. ೨–೪)

ಅರ್ಥ : ಪರಿಚ್ಛೇದಕಥಾಶೂನ್ಯಂ=ದೇಶ, ಕಾಲ ಮತ್ತು ಪರಿಚ್ಛೇದವಿಲ್ಲದಿರುವ, ಪ್ರಪಂಚಾತೀತವೈಭವಂ=ಲೌಕಿಕವೈಭವವನ್ನು ಮೀರಿದ, ಪ್ರತ್ಯಕ್ಷಾದಿಪ್ರಮಾಣಾನಾಂ= ಪ್ರತ್ಯಕ್ಷಾದಿಪ್ರಮಾಣಗಳಿಗೆ, ಅಗೋಚರಪದೇ=ನಿಲುಕದಿರುವ ಸ್ಥಾನದಲ್ಲಿ, ಸ್ಥಿತಂ= ಇರುವ.

ಸ್ವಪ್ರಕಾಶಂ ಪರಾಕಾಶಮನೌಪಮ್ಯಮನಾಮಯಂ ।
ಸರ್ವಜ್ಞಂ ಸರ್ವಗಂ ಶಾಂತಂ ಸರ್ವಶಕ್ತಿನಿರಂಕುಶಂ ॥ (ಸಿ. ಶಿ. ೨–೫)

ಅರ್ಥ : ಸ್ವಪ್ರಕಾಶಂ=ಸ್ವಯಂಪ್ರಕಾಶಸ್ವರೂಪವೂ, ಪರಾಕಾಶಂ=ಶ್ರೇಷ್ಠವಾದ ಆಕಾಶವೂ, ಅನೌಪಮ್ಯಂ=ಉಪಮಾರಹಿತವೂ, ಅನಾಮಯಂ=ಜನನ–ಮರಣ ರೂಪ ಬಾಧೆ ಇಲ್ಲದಿರುವ, ಸರ್ವಜ್ಞಂ=ಎಲ್ಲವನ್ನೂ ತಿಳಿದ, ಸರ್ವಗಂ=ವ್ಯಾಪಕವಾದ, ಶಾಂತಂ=ಉಪದ್ರವವಿಲ್ಲದ, ಸರ್ವಶಕ್ತಿನಿರಂಕುಶಂ=ನಾನಾವಿಧಶಕ್ತಿಸಮನ್ವಿತವೂ ಆದ.

ಶಿವರುದ್ರಮಹಾದೇವಭವಾದಿಪದಸಂಜ್ಞಿತಂ ।
ಅದ್ವಿತೀಯಮನಿರ್ದೇಶ್ಯಂ ಪರಂ ಬ್ರಹ್ಮ ಸನಾತನಂ ॥ (ಸಿ. ಶಿ. ೨–೬)

ಅರ್ಥ : ಶಿವರುದ್ರಮಹಾದೇವಭವಾದಿಪದಸಂಜ್ಞಿತಂ=ಶಿವರುದ್ರ, ಮಹಾ ದೇವ, ಭವ ಮುಂತಾದ ಹೆಸರುಗಳಿಂದ ಕರೆಯಿಸಿಕೊಳ್ಳುವ, ಅದ್ವಿತೀಯಂ= ಸಜಾತೀಯ, ವಿಜಾತೀಯ, ಸ್ವಗತಭೇದಶೂನ್ಯವಾದ, ಅನಿರ್ದೇಶ್ಯಂ=ತೋರಿಸಲು ಬಾರದಿರುವ, ಸನಾತನಂ=ಯಾವಾಗಲೂ ಇರುವ, ಪರಂಬ್ರಹ್ಮ=ಪರಬ್ರಹ್ಮವು ಒಂದೇ ಇತ್ತೆಂಬ ಭಾವವು.

ಜಗತ್ತಿನ ಸೃಷ್ಟಿಯನ್ನು ಹೇಳಲಪೇಕ್ಷಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಈ ಜಗದುತ್ಪತ್ತಿಯ ಪೂರ್ವದಲ್ಲಿ ಇದ್ದ ಪರಶಿವಬ್ರಹ್ಮನ ಸ್ವರೂಪವನ್ನು ಈ ನಾಲ್ಕು ಶ್ಲೋಕ ಗಳಿಂದ ವರ್ಣಿಸಿದ್ದಾರೆ.

ಆ ಪರಶಿವಬ್ರಹ್ಮವು ಸತ್ತು, ಚಿತ್ತು, ಆನಂದಗಳೇ ತನ್ನ ಸ್ವರೂಪವಾಗಿ ಉಳ್ಳದ್ದಾಗಿ ಎಲ್ಲರಿಗೂ ಸಹಜವಾಗಿ ವೇದ್ಯವಾಗದಂತೆ ಎಲ್ಲೆಡೆಯಲ್ಲಿ ಹುದುಗಿಕೊಂಡಿದೆ. ಅಂತೆಯೇ ಅದು ಪರಿಚ್ಛೇದಶೂನ್ಯವೆಂದು ಹೇಳಿದ್ದಾರೆ. ಪರಿಚ್ಛೇದವು ದೇಶ, ಕಾಲ ಮತ್ತು ವಸ್ತುಗಳ ಭೇದದಿಂದ ಮೂರು ವಿಧವಾಗಿರುತ್ತದೆ. ಒಂದು ದೇಶದಲ್ಲಿ ಇದ್ದು ಮತ್ತೊಂದು ದೇಶ

ದಲ್ಲಿ ಇಲ್ಲದಿರುವುದೇ ದೇಶ ಪರಿಚ್ಛೇದವು; ಒಂದು ಕಾಲದಲ್ಲಿ ಇದ್ದು ಮತ್ತೊಂದು ಕಾಲದಲ್ಲಿ ಇಲ್ಲದಿರುವುದೇ ಕಾಲಪರಿಚ್ಛೇದವು; ಒಂದು ವಸ್ತುವಿನಲ್ಲಿ ಇದ್ದು ಮತ್ತೊಂದು ವಸ್ತುವಿನಲ್ಲಿ ಇಲ್ಲದಿರುವುದೇ ವಸ್ತುಪರಿಚ್ಛೇದವು. ಆದರೆ ಪರಶಿವಬ್ರಹ್ಮವು ಎಲ್ಲ ದೇಶ, ಎಲ್ಲಕಾಲ, ಎಲ್ಲ ವಸ್ತುಗಳಲ್ಲಿ ಇರುವುದರಿಂದ ದೇಶಾದಿ ಪರಿಚ್ಛೇದಶೂನ್ಯವೆಂದು ಕರೆಯಿಸಿಕೊಳ್ಳುವುದು.

ಇನ್ನು ಪ್ರಪಂಚದ ವೈಭವವು ಕ್ಷಣಿಕವಾಗಿರುವುದರಿಂದ ಪರಶಿವನು ಆ ಕ್ಷಣಿಕ ವೈಭವಕ್ಕಿಂತಲೂ ವಿಲಕ್ಷಣವಾದ ಶಾಶ್ವತ ವೈಭವದಿಂದ ಕೂಡಿರುವವನಾಗಿದ್ದಾನೆ. ಯಾವುದೇ ವಸ್ತುವನ್ನು ಅರಿಯಬೇಕಾದರೆ ಪ್ರತ್ಯಕ್ಷ, ಅನುಮಾನಾದಿ ಆರು ಪ್ರಮಾಣ ಗಳಲ್ಲಿ ಯಾವುದಾದರೊಂದು ಪ್ರಮಾಣವು ಸಹಾಯಕವಾಗುತ್ತದೆ. ಆದರೆ ಈ ಪ್ರಮಾಣಗಳಾವುವೂ ಪರಶಿವನನ್ನು ಸಾಕ್ಷಾತ್ ಬೋಧಿಸಲಾರವು. ಅಂತೆಯೇ ಅವನು ಪ್ರಮಾಣಾಗೋಚರನು. ಸೂರ್ಯನು ತನ್ನ ಬೆಳಕಿನಲ್ಲಿಯೇ ತಾನು ತೋರುವಂತೆ ಪರಶಿವ ನರೂ ತನ್ನ ಪ್ರಕಾಶಕ್ಕೆ ಬೇರೆ ಪ್ರಕಾಶವನ್ನಪೇಕ್ಷಿಸದಿರುವುದರಿಂದ ''ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ'' ಎಂಬ ಶ್ರುತಿಪ್ರಮಾಣಾನುಸಾರವಾಗಿ ಸ್ವಯಂಪ್ರಕಾಶ ನಾಗಿರುತ್ತಾನೆ. ಪರಶಿವನಂತಹ ಮತ್ತೊಬ್ಬ ಪರಶಿವನಿಲ್ಲದಿರುವುದರಿಂದ ಉಪಮಾನ ರಹಿತನೂ, ಶರೀರಾದಿಗಳಿಲ್ಲದಿರುವುದರಿಂದ ಜನನ-ಮರಣಾದಿ ದೋಷ ಶೂನ್ಯನೂ, ಸರ್ವಜ್ಞನೂ, ಸರ್ವತ್ರ ವ್ಯಾಪಕನೂ, ಶಾಂತನೂ, ಸರ್ವಶಕ್ತಿಸಮನ್ವಿತನೂ ಆದ ಆ ಪರಶಿವನೋರ್ವನೇ ಈ ಜಗದುತ್ಪತ್ತಿಯ ಪೂರ್ವದಲ್ಲಿ ತಾನೇ ತಾನಾಗಿ ತಾನೋರ್ವನೇ ಇದ್ದನು.

ತತ್ರಲೀನಮಭೂತ್ ಪೂರ್ವಂ ಚೇತನಾಚೇತನಂ ಜಗತ್ ।
ಸ್ವಾತ್ಮಲೀನಂ ಜಗತ್ಕಾರ್ಯಂ ಸ್ವಪ್ರಕಾಶ್ಯಂ ತದದ್ಭುತಂ ॥ (ಸಿ. ಶಿ. ೨-೭)

ಅರ್ಥ : ತತ್ರ-ಆ ಪರಶಿವಬ್ರಹ್ಮದಲ್ಲಿ, ಚೇತನಾಚೇತನಂ=ಚರಾಚರವಾದ, ಜಗತ್=ಪ್ರಪಂಚವು, ಪೂರ್ವಂ=ಸೃಷ್ಟಿಯ ಪೂರ್ವದಲ್ಲಿ, ಲೀನಂ=ಉಭಯೇಂದ್ರಿಯ ಗಳಿಗೆ ಅಗೋಚರವಾಗಿ, ಅಭೂತ್=ಆಯಿತು. ತತ್=ಆ, ಅದ್ಭುತಂ=ಅದ್ಭುತವಾದ, ಸ್ವಾತ್ಮಲೀನಂ=ತನ್ನಲ್ಲಿಯೇ ಅಡಗಿರುವ, ಜಗತ್ಕಾರ್ಯಂ=ಜಗದ್ರೂಪವಾದ ಕಾರ್ಯವು, ಸ್ವಪ್ರಕಾಶ್ಯಂ=ತನ್ನಿಂದಲೇ ಪ್ರಕಾಶಿಸಲು ಯೋಗ್ಯವಾದದ್ದು.

ಪೂರ್ವದಲ್ಲಿ ವರ್ಣಿಸಲ್ಪಟ್ಟ ಶಕ್ತಿಸಮೇತವಾದ ಪರಶಿವಬ್ರಹ್ಮದಲ್ಲಿ ಚರಾಚರಾ ತ್ಮಕವಾದ ಜಗತ್ತು ಸೃಷ್ಟಿಗಿಂತಲೂ ಪೂರ್ವದಲ್ಲಿ ಜ್ಞಾನೇಂದ್ರಿಯ-ಕರ್ಮೇಂದ್ರೀಯ ಗಳಿಗೊಂದಕ್ಕೂ ಗೋಚರವಾಗದೇ ಅಡಗಿದ್ದಿತು. ಇದೇ ಒಂದು ಆಶ್ಚರ್ಯಕರವಾದ ಸಂಗತಿಯು. ಈ ಪ್ರಕಾರವಾಗಿ ಬ್ರಹ್ಮನ ಆತ್ಮಶಕ್ತಿಯಲ್ಲಿ ಅಡಗಿದ್ದ ಜಗತ್ತು, ತನ್ನನ್ನು ಪ್ರಕಾಶಗೊಳಿಸುವ ವಸ್ತುವು ಮತ್ತೊಂದಿಲ್ಲದ ಕಾರಣ ಆ ಪರಶಿವ ಬ್ರಹ್ಮದಿಂದಲೇ ಪ್ರಕಾಶಿಸಿಕೊಳ್ಳಲು ಯೋಗ್ಯವಾದ ಕಾರ್ಯರೂಪವನ್ನು ತಾಳಿತು.

ಶಿವಾಭಿದಂ ಪರಂ ಬ್ರಹ್ಮ ಜಗನ್ನಿರ್ಮಾತುಮಿಚ್ಛಯಾ ।
ಸ್ವರೂಪಮಾದಧೇ ಕಿಂಚಿತ್ ಸುಖಸ್ಫೂರ್ತಿವಿಜೃಂಭಿತಂ ॥ (ಸಿ. ಶಿ. ೨-೮ )

ಅರ್ಥ : ಶಿವಾಭಿದಂ=ಶಿವನೆಂಬ ಹೆಸರುಳ್ಳ, ಪರಂಬ್ರಹ್ಮ=ಪರಬ್ರಹ್ಮವು, ಜಗನ್ನಿರ್ಮಾತುಮಿಚ್ಛಯಾ=ಜಗತ್ತನ್ನು ನಿರ್ಮಿಸುವ ಇಚ್ಛೆಯಿಂದ, ಸುಖಸ್ಫೂರ್ತಿ ವಿಜೃಂಭಿತಂ=ಆನಂದಸ್ಫೂರ್ತಿಯುತವಾದ, ಕಿಂಚಿತ್=ಸ್ವಲ್ಪ, ಸ್ವರೂಪಂ=ಸ್ವರೂಪ ವನ್ನು, ಆದಧೇ=ಧರಿಸಿತು.

ಜಗತ್ಸೃಷ್ಟಿಯ ಮೊದಲಿದ್ದ ಆ ಪರಶಿವಬ್ರಹ್ಮಕ್ಕೆ ಜಗತ್ತನ್ನು ಸೃಜಿಸಬೇಕೆಂಬ ಇಚ್ಛೆಯು ಉಂಟಾದಕೂಡಲೇ ಆನಂದಬಾಹುಲ್ಯದಿಂದ ಉಬ್ಬಿದ ಒಂದು ವಿಲಕ್ಷಣ ವಾದ ಸ್ವರೂಪವನ್ನು ತಾಳಿಕೊಂಡಿತು. ಈ ಸ್ವರೂಪವನ್ನೇ ಮುಂದೆ ಮೂರು ಶ್ಲೋಕ ಗಳಲ್ಲಿ ವರ್ಣಿಸುತ್ತಾರೆ.

ನಿರಸ್ತದೋಷಸಂಬಂಧಂ ನಿರುಪಾಧಿಕಮವ್ಯಯಂ ।
ದಿವ್ಯಮಪ್ರಾಕೃತಂ ನಿತ್ಯಂ ನೀಲಕಂಠಂ ತ್ರಿಲೋಚನಮ್ ॥ (ಸಿ. ಶಿ. ೨–೯)

ಅರ್ಥ : ನಿರಸ್ತದೋಷಸಂಬಂಧಂ=ಜರಾ–ಮರಣಾದಿ ಸಕಲದೋಷಗಳಿಲ್ಲ ದಿರುವ, ನಿರುಪಾಧಿಕಂ=ಉಪಾಧಿಶೂನ್ಯವಾದ, ಅವ್ಯಯಂ=ನಾಶರಹಿತವಾದ, ಅಪ್ರಾಕೃತಂ=ಪ್ರಕೃತಿಯ ಸಂಬಂಧವಿಲ್ಲದಿರುವ, ನಿತ್ಯಂ=ಶಾಶ್ವತವಾದ, ದಿವ್ಯಂ= ಶ್ಲಾಘನೀಯವಾದ, ನೀಲಕಂಠಂ=ನೀಲಕಂಠನಾದ, ತ್ರಿಲೋಚನಂ=ಮುಕ್ಕಣ್ಣ ನೆಂದೆನಿಸಿಕೊಂಡ.

ನೀಲಕಂಠನೆಂತಲೂ, ತ್ರಿಲೋಚನನೆಂತಲೂ ಕರೆಯಿಸಿಕೊಳ್ಳುವ ಆ ಪರಶಿವ ಬ್ರಹ್ಮವು, ಹುಟ್ಟು–ಸಾವುಗಳೆಂಬ ಯಾವ ದೋಷವಿಲ್ಲದಿರುವುದೂ, ಮಾಯಾವು– ಅವಿದ್ಯಾದಿ ಉಪಾಧಿಯಿಲ್ಲದಿರುವುದೂ, ಪ್ರಕೃತಿಸಂಬಂಧ ಶೂನ್ಯವಾದುದೂ, ಶ್ಲಾಘನೀಯವೂ, ತ್ರಿಕಾಲಗಳಲ್ಲಿ ಬಾಧರಹಿತವೂ, ನಿತ್ಯವೂ ಆಗಿರುತ್ತದೆ.

ಚಂದ್ರಾರ್ಧಶೇಖರಂ ಶುದ್ಧಂ ಶುದ್ಧಸ್ಫಟಿಕಸನ್ನಿಭಂ ।
ಶುದ್ಧಮುಕ್ತಾಫಲಾಭಾಸಮುಪಾಸ್ಯಂ ಗುಣಮೂರ್ತಿಭಿಃ ॥ (ಸಿ. ಶಿ. ೨–೧೦)

ಅರ್ಥ : ಚಂದ್ರಾರ್ಧಶೇಖರಂ=ಅರ್ಧಚಂದ್ರನನ್ನು ಧರಿಸಿದ, ಶುದ್ಧಂ=ಪವಿತ್ರ ವಾದ, ಶುದ್ಧಸ್ಫಟಿಕಸನ್ನಿಭಂ=ನಿರ್ಮಲವಾದ ಸ್ಫಟಿಕದಂತೆ ಇರುವ, ಶುದ್ಧಮುಕ್ತಾಫಲಾ ಭಾಸಂ=ಪರಿಶುದ್ಧಮುತ್ತಿನ ಕಾಂತಿಯಂತೆ ಕಾಂತಿಯುಳ್ಳ, ಗುಣಮೂರ್ತಿಭಿಃ=ಬ್ರಹ್ಮಾದಿ ತ್ರಿಮೂರ್ತಿಗಳಿಂದ, ಉಪಾಸ್ಯಂ=ಉಪಾಸಿಸಲು ಯೋಗ್ಯವಾದ.

ಆ ಪರಶಿವಬ್ರಹ್ಮವು ಸ್ವಚ್ಛವಾದ ಸ್ಫಟಿಕ ಹಾಗೂ ಮುತ್ತಿನ ಕಾಂತಿಯಂತೆ ಕಾಂತಿ ಯುಳ್ಳದ್ದಾಗಿಯೂ, ಪವಿತ್ರವೂ, ಚಂದ್ರಖಂಡವನ್ನು ಮಸ್ತಕದಲ್ಲಿ ಧರಿಸಿ ಚಂದ್ರಶೇಖರ ನೆಂದು ಪ್ರಸಿದ್ಧವಾದುದೂ, ಬ್ರಹ್ಮ–ವಿಷ್ಣ್ವಾದಿಗಳಿಂದ ಪೂಜೆಗೊಳ್ಳುವಂತಹ ದಾಗಿಯೂ ಇರುತ್ತದೆ.

ವಿಶುದ್ಧಜ್ಞಾನಕರಣಂ ವಿಷಯಂ ಸರ್ವಯೋಗಿನಾಂ ।
ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸಮಪ್ರಭಂ ॥ (ಸಿ. ಶಿ. ೨–೧೧)
ಅಪ್ರಾಕೃತಗುಣಾಧಾರಮನಂತಮಹಿಮಾಸ್ಪದಂ ।

ಅರ್ಥ : ವಿಶುದ್ಧಜ್ಞಾನಕರಣಂ=ನಿರ್ಮಲವಾದ ಜ್ಞಾನಕ್ಕೆ ಕಾರಣೀಭೂತವೂ, ಸರ್ವಯೋಗಿನಾಂ=ಸಮಸ್ತ ಯೋಗಿಗಳಿಗೆ, ವಿಷಯಂ=ಜ್ಞಾನಕ್ಕೆ ವಿಷಯವೂ, ಕೋಟಿ ಸೂರ್ಯಪ್ರತೀಕಾಶಂ=ಕೋಟಿ ಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳದ್ದೂ, ಚಂದ್ರ ಕೋಟಿಸಮಪ್ರಭಂ=ಕೋಟಿ ಚಂದ್ರರ ಕಾಂತಿಗೆ ಸಮಾನವಾದ ಕಾಂತಿಯುಳ್ಳದ್ದೂ ಅಪ್ರಾಕೃತಗುಣಾಧಾರಂ=ಪ್ರಕೃತಿಸಂಬಂಧವಾಗಿರದ ಸರ್ವಜ್ಞತ್ವಾದಿ ಅನಂತಕಲ್ಯಾಣ ಗುಣಗಳಿಗಾಶ್ರಯವಾಗಿಯೂ, ಅನಂತ ಮಹಿಮಾಸ್ಪದಂ=ಅಘಟಿತಘಟನಾರೂಪ ಅನಂತಮಹಿಮೆಯಿಂದ ಕೂಡಿದುದೂ.

ಕೋಟಿಸೂರ್ಯರ ಪ್ರಕಾಶದಷ್ಟು ಪ್ರಕಾಶವುಳ್ಳ, ಕೋಟಿಚಂದ್ರರ ಕಾಂತಿಯಂತೆ ಕಾಂತಿಯುಳ್ಳ–ಅಪ್ರಾಕೃತಗಳಾದ ಸರ್ವಜ್ಞತ್ವಾದಿ ಗುಣಗಳಿಂದ ಕೂಡಿರುವ, ಅಘಟಿತ ಘಟನಾಸಾಮರ್ಥ್ಯವುಳ್ಳ, ನಿರ್ಮಲಜ್ಞಾನಕ್ಕೆ ಕಾರಣೀಭೂತವೂ ಆದ ಆ ಪರಶಿವ ಬ್ರಹ್ಮವು ತನ್ನಲ್ಲಿ ಅಡಗಿದ ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯುಳ್ಳದ್ದಾಯಿತು.

ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದಲಕ್ಷಣಾ ॥ (ಸಿ. ಶಿ. ೨–೧೨)

ಸಮಸ್ತಲೋಕನಿರ್ಮಾಣಸಮವಾಯಸ್ವರೂಪಿಣೀ ।
ತದಿಚ್ಛಯಾಽಭವತ್ ಸಾಕ್ಷಾತ್ತತ್ಸ್ವರೂಪಾನುಕಾರಿಣೀ ॥ (ಸಿ. ಶಿ. ೨–೧೩)

ಅರ್ಥ : ಸಚ್ಚಿದಾನಂದಲಕ್ಷಣಾ=ಸತ್ತು–ಚಿತ್ತು–ಆನಂದಸ್ವರೂಪಳಾದ, ಸಮಸ್ತ ಲೋಕ ನಿರ್ಮಾಣಸಮವಾಯಸ್ವರೂಪಿಣೀ=ಜಗದುತ್ಪತ್ತಿಯಲ್ಲಿ ಉಪಾದಾನ ಕಾರಣ ಳಾದ, ತದೀಯಾ=ಆ ಪರಶಿವನ ಸಂಬಂಧವಾದ, ಪರಮಾಶಕ್ತಿಃ=ವಿಮರ್ಶಶಕ್ತಿಯು, ತದಿಚ್ಛಯಾ=ಆ ಪರಶಿವನ ಇಚ್ಛೆಗನುಸಾರವಾಗಿ, ಸಾಕ್ಷಾತ್=ತಾನೇ, ತತ್ಸ್ವರೂಪಾನು ಕಾರಿಣೀ=ಆ ಪರಮಾತ್ಮನ ಸ್ವರೂಪವನ್ನೇ ಹೋಲುವಂತಹುದು, ಅಭವತ್= ಆಯಿತು.

ಶಿವನಲ್ಲಿ ಜಗತ್ತನ್ನು ಸೃಷ್ಟಿಸುವ ಇಚ್ಛೆಯಾದೊಡನೆ ಅವನಲ್ಲಿ ಅವಿನಾಭಾವರೂಪ ದಿಂದ ಇರುವ ವಿಮರ್ಶಶಕ್ತಿಯು ಪರಶಿವನ ಸ್ವರೂಪಕ್ಕೆ ಸಮಾನವಾದ ಸಚ್ಚಿದಾನಂದ ಸ್ವರೂಪವನ್ನು ತಾಳಿ ವಿಭಾಗಪರಾಮರ್ಶದಶೆಯಿಂದ ಸಮಸ್ತ ಪ್ರಪಂಚದ ಉತ್ಪತ್ತಿಗೆ ಉಪಾದಾನಕಾರಣೀಭೂತಳಾದಳು.

''ನಾಸತೋ ವಿದ್ಯತೇ ಭಾವಃ'' ಎಂಬ ಉಕ್ತಿಯಂತೆ ಸೃಷ್ಟಿಯಪೂರ್ವದಲ್ಲಿ ಈ ಜಗತ್ತು ಪರಶಿವನಲ್ಲಿ ಅವಿನಾಭಾವಸಂಬಂಧದಿಂದ ಇರುವ ವಿಮರ್ಶಶಕ್ತಿಯಲ್ಲಿ ಲೀನ ವಾಗಿರುತ್ತದೆ. ಆ ಸಮಯದಲ್ಲಿ ''ಮಯೂರಾಂಡ ರಸನ್ಯಾಯ''ದಂತೆ ಅಂದರೆ ನವಿಲಿನ ತತ್ತಿಯಲ್ಲಿ ರಸವು ಒಂದೇ ಬಗೆಯಾಗಿ ತೋರಿದರೂ, ಅದರಲ್ಲಿ ಆ ಪಕ್ಷಿಯ ಕಾಲು, ರೆಕ್ಕೆ ಮುಂತಾದ ಅವಯವಗಳು ಅಡಗಿಕೊಂಡಿರುವಂತೆ, ಈ ವಿಮರ್ಶಶಕ್ತಿಯಲ್ಲಿ ಈ ಜಗತ್ತು ಜ್ಞಾನೇಂದ್ರಿಯಕ್ಕಾಗಲಿ, ಕರ್ಮೇಂದ್ರಿಯಕ್ಕಾಗಲಿ ಗೋಚರವಾಗದ ಹಾಗೆ ಅಡಗಿ ಕೊಂಡಿರುತ್ತದೆ. ಶಿವನ ಇಚ್ಛೆಯಿಂದ ಬಹಿಃಪ್ರಕಟವಾಗಿ ಸೃಷ್ಟಿಗೊಳ್ಳುವಾಗ, ಒಂದು ಮರದಲ್ಲಿ ಎಲೆ, ಹೂವು, ಕಾಯಿ ಮೊದಲಾದವುಗಳು ಹುಟ್ಟಿ ಬೇರೆ ಬೇರೆಯಾಗಿ ತೋರುವಂತೆ, ಜಗತ್ತು ವಿಭಿನ್ನವಾಗಿ ತೋರುತ್ತದೆ. ವಸ್ತುತಃ ಗಿಡದಲ್ಲಿಯ ಎಲೆ, ಹೂವು,

ಕಾಯಿಗಳು ಗಿಡದ ಸ್ವರೂಪವೇ ಆಗಿರುವಂತೆ, ಈ ಭಿನ್ನವಾಗಿ ತೋರುವ ಜಗತ್ತಾದರೂ ಶಕ್ತಿಸ್ವರೂಪವೇ ಆಗಿರುತ್ತದೆ. ಹೀಗೆ ಶಕ್ತಿ ಹಾಗೂ ಜಗತ್ತುಗಳಲ್ಲಿ ಭೇದಾಭೇದ ಸಂಬಂಧ ವಿದೆ. ಆಮೆಯು ಪ್ರಸಾರಗೊಂಡ ತನ್ನ ಅವಯವಗಳನ್ನು ಸಂಕೋಚಗೊಳಿಸಿಕೊಳ್ಳು ವಂತೆ, ಈ ಶಕ್ತಿಯು ಜಗತ್ಸಂಹಾರ ದಶೆಯಲ್ಲಿ ಪ್ರಪಂಚವನ್ನು ತನ್ನಲ್ಲಿ ಲೀನಗೊಳಿಸಿ ಕೊಂಡು ತಾನು ಆ ಪರಶಿವನಲ್ಲಿ ಲೀನವಾಗುತ್ತದೆ. ಹೀಗೆ ವೀರಶೈವ ಸಿದ್ಧಾಂತದಲ್ಲಿ, ಶಕ್ತಿಯ ವಿಕಾಸದಿಂದ ಸೃಷ್ಟಿ ಹಾಗೂ ಶಕ್ತಿಯ ಸಂಕೋಚದಿಂದ ಸಂಹಾರ ಕ್ರಿಯೆಗಳು ನೆರವೇರುತ್ತವೆಂದು ಪ್ರತಿಪಾದಿಸಲಾಗಿದೆ.

## ಸೃಷ್ಟಿಕ್ರಮ ನಿರೂಪಣೆ

ಗ್ರಂಥಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರು ಜಗತ್ತಿಗೆ ಕಾರಣೀಭೂತ ರಾದ ಶಿವಶಕ್ತಿಯರ ಸ್ವರೂಪವನ್ನು ವರ್ಣಿಸಿ ಇನ್ನು ಮುಂದೆ ''ಸ ಐಕ್ಷತ'', ''ಲೋಕಾನ ಸೃಜತ'', ''ಯಥಾಪೂರ್ವಮಕಲ್ಪಯತ್'' ಇತ್ಯಾದಿ ಶ್ರುತಿವಚನಕ್ಕನುಸಾರವಾಗಿ ಸೃಷ್ಟಿಯ ಕ್ರಮವನ್ನು ನಿರೂಪಿಸುತ್ತಾರೆ–

ಸ ಶಂಭುರ್ಭಗವಾನ್ ದೇವಃ ಸರ್ವಜ್ಞಃ ಸರ್ವಶಕ್ತಿಕಃಮಾನ್ ।
ಜಗತ್ಸಿಸೃಕ್ಷುಃ ಪ್ರಥಮಂ ಬ್ರಹ್ಮಾಣಂ ಸರ್ವದೇಹಿನಾಂ ॥ (ಸಿ. ಶಿ. ೨–೧೪)
ಕರ್ತಾರಂ ಸರ್ವಲೋಕಾನಾಂ ವಿದಧೇ ವಿಶ್ವನಾಯಕಃ ।

ಅರ್ಥ : ಭಗವಾನ್=ಷಡ್ಗುಣೈಶ್ವರ್ಯಶಾಲಿಯಾದ, ದೇವ=ಕ್ರೀಡನಶೀಲನಾದ, ಸರ್ವಜ್ಞಃ=ಸರ್ವಜ್ಞನಾದ, ಸರ್ವಶಕ್ತಿಕಃ=ಸಾಮರ್ಥ್ಯಶಾಲಿಯಾದ, ವಿಶ್ವನಾಯಕಃ= ಜಗತ್ತಿಗೆ ಒಡೆಯನಾದ, ಸಃ=ಆ, ಶಂಭುಃ=ಸರ್ವೇಶ್ವರನಾದ ಆ ಪರಮೇಶ್ವರನು, ಜಗತ್=ಪ್ರಪಂಚವನ್ನು ಸಿಸೃಕ್ಷುಃ=ಸೃಷ್ಟಿಸುವ ಇಚ್ಛೆಯುಳ್ಳವನಾಗಿ, ಸರ್ವಲೋಕಾನಾಂ =ಹದಿನಾಲ್ಕು ಲೋಕಗಳನ್ನಾಶ್ರಯಿಸಿರುವ, ಸರ್ವದೇಹಿನಾಂ=ಎಲ್ಲ ಜೀವಿಗಳ, ಕರ್ತಾರಂ=ಸೃಷ್ಟಿಮಾಡುವ, ಬ್ರಹ್ಮಾಣಂ=ಬ್ರಹ್ಮನನ್ನು, ಪ್ರಥಮಂ=ಮೊದಲು, ವಿಧದೇ =ನಿರ್ಮಿಸಿದನು.

''ಐಶ್ವರ್ಯಸ್ಯ ಸಮಗ್ರಸ್ಯ ಜ್ಞಾನಸ್ಯ ಯಶಸಶ್ರಿಯಃ । ವೈರಾಗ್ಯಸ್ಯ ಚ ಧರ್ಮಸ್ಯ ಷಣ್ಣಾಂ ಭಗ ಇತೀರಿತಃ ॥'' ಎಂಬ ವಚನದಂತೆ ಸರ್ವವಿಧವಾದ ಸಂಪತ್ತು, ಜ್ಞಾನ, ಯಶಸ್ಸು, ಶೋಭೆ, ವೈರಾಗ್ಯ ಮತ್ತು ಧರ್ಮವೆಂಬ ಆರು ಪ್ರಕಾರವಾದ ಐಶ್ವರ್ಯಕ್ಕೆ ''ಭಗ''ವೆನ್ನುತ್ತಾರೆ. ಈ ಆರೂ ಐಶ್ವರ್ಯಗಳೂ ಪರಮಾತ್ಮನಲ್ಲಿ ಇರುವುದರಿಂದ ಆತನನ್ನು 'ಭಗವಾನ್' ಎಂದು ಕರೆಯುತ್ತಾರೆ. ಇಂತಹ ಐಶ್ವರ್ಯಶಾಲಿಯೂ, ಸರ್ವಜ್ಞನೂ, ಸರ್ವೇಶ್ವರನೂ, ಸರ್ವಸಮರ್ಥನೂ ಆದ ಆ ಪರಮೇಶ್ವರನು ಜಗತ್ತನ್ನು ಸೃಷ್ಟಿಸುವ ಪೂರ್ವದಲ್ಲಿ ''ವಿಶ್ವಾಧಿಕೋ ರುದ್ರೋ ಮಹರ್ಷಿರ್ಹಿರಣ್ಯಗರ್ಭಂ ಜನಯಾಮಾಸಪೂರ್ವಮ್'' ಎಂಬ ಯಜುರ್ವೇದದ ವಚನಾನುಸಾರವಾಗಿ ಹದಿನಾಲ್ಕು ಲೋಕ ಹಾಗೂ ಆ ಎಲ್ಲ ಲೋಕಗಳಿಗನುಗುಣಗಳಾದ ಜೀವರಾಶಿಗಳನ್ನು ಸೃಷ್ಟಿಸಬಲ್ಲ ಬ್ರಹ್ಮನನ್ನು ನಿರ್ಮಿಸಿದನು.

ತಸ್ಮೈ ಪ್ರಥಮಪುತ್ರಾಯ ಶಂಕರಃ ಶಕ್ತಿಮಾನ್ವಿಭುಃ ||

ಸರ್ವಜ್ಞಃ ಸಕಲಾ ವಿದ್ಯಾಃ ಸಾನುಗ್ರಹಮುಪಾದಿಶತ್ (ಸಿ. ಶಿ. ೨–೧೫)

ಅರ್ಥ : ಶಕ್ತಿಮಾನ್=ಶಕ್ತಿಸಮನ್ವಿತನಾದ, ವಿಭುಃ=ವ್ಯಾಪಕನಾದ, ಸರ್ವಜ್ಞಃ= ಎಲ್ಲವನ್ನು ತಿಳಿದಿರುವ, ಶಂಕರಃ=ಪರಮೇಶ್ವರನು, ತಸ್ಮೈ=ಆ, ಪ್ರಥಮಪುತ್ರಾಯ= ಮೊದಲಿನ ಮಗನಾದ ಬ್ರಹ್ಮನಿಗೆ, ಸಕಲಾಃ=ಎಲ್ಲ ವಿದ್ಯಾಃ=ವಿದ್ಯೆಗಳನ್ನು ಸಾನು ಗ್ರಹಂ=ಅನುಗ್ರಹಪೂರ್ವಕವಾಗಿ, ಉಪಾದಿಶತ್=ಉಪದೇಶಿಸಿದನು.

''ಯೋ ಬ್ರಹ್ಮಾಣಂ ವಿಧದಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ'' ಎಂಬ ಶ್ವೇತಾಶ್ವತರೋಪನಿಷದ್ವಚನ ಪ್ರಮಾಣದಂತೆ ಸರ್ವಜ್ಞನೂ, ಸರ್ವ ಶಕ್ತನೂ, ವ್ಯಾಪಕನೂ ಆದ ಆ ಪರಶಿವನು ತನ್ನ ಪ್ರಥಮಪುತ್ರನಾದ ಬ್ರಹ್ಮನಿಗೆ ಅನುಗ್ರಹಪೂರ್ವಕವಾಗಿ ಸಕಲ ವಿದ್ಯೆಗಳನ್ನೂ ಉಪದೇಶಿಸಿದನು.

ಪ್ರಾಪ್ತವಿದ್ಯೋಮಹಾದೇವಾದ್ಬ್ರಹ್ಮಾವಿಶ್ವನಿಯಾಮಕಾತ್ ||

ಸಮಸ್ತಲೋಕನಿರ್ಮಾಣಸಮುದ್ಯೋಗಪರೋಽಭವತ್ (ಸಿ. ಶಿ. ೨–೧೬)

ವಿಶ್ವನಿಯಾಮಕಾತ್=ಜಗತ್ತಿನ ನಿಯಾಮಕನಾದ, ಮಹಾದೇವಾತ್=ಪರ ಮಾತ್ಮನಿಂದ, ಪ್ರಾಪ್ತವಿದ್ಯಃ=ಪ್ರಾಪ್ತವಾದ ವಿದ್ಯೆಯುಳ್ಳ, ಬ್ರಹ್ಮಾ=ಬ್ರಹ್ಮನು, ಸಮಸ್ತ ಲೋಕ=ಹದಿನಾಲ್ಕು ಲೋಕಗಳ, ನಿರ್ಮಾಣ=ನಿರ್ಮಿಸುವ, ಸಮುದ್ಯೋಗಪರಃ= ಉದ್ಯೋಗಾಸಕ್ತನಾಗಿ, ಅಭವತ್=ಆದನು.

ಜಗನ್ನಿಯಾಮಕನಾದ ಪರಮೇಶ್ವರನಿಂದ ವಿದ್ಯೆಗಳನ್ನು ಅಭ್ಯಸಿಸಿದ ಬ್ರಹ್ಮನು ಜಗತ್ತನ್ನು ನಿರ್ಮಿಸುವ ಉದ್ಯೋಗದಲ್ಲಿ ತೊಡಗಿದನು.

ಕೃತೋದ್ಯೋಗೋಽಪಿ ನಿರ್ಮಾಣೇ ಜಗತಾಂ ಶಂಕರಾಜ್ಞಯಾ || (ಸಿ. ಶಿ. ೨–೧೭)

ಅಜ್ಞಾತೋಪಾಯ ಸಂಪತ್ತಿರಭವನ್ಮಾಯಯಾವೃತಃ

ಅರ್ಥ : ಶಂಕರಾಜ್ಞಯಾ=ಪರಮಾತ್ಮನ ಅಪ್ಪಣೆಯಮೇರೆಗೆ ಜಗತಾಂ=ಲೋಕ ಗಳ, ನಿರ್ಮಾಣೇ=ನಿರ್ಮಿಸುವುದರಲ್ಲಿ, ಕೃತೋದ್ಯೋಗೋಪಿ=ಪ್ರಯತ್ನಿಸಿದರೂ, ಮಾಯಯಾ=ಮಾಯೆಯಿಂದ, ಆವೃತಃ=ಆವರಿಸಿದವನಾದ್ದರಿಂದ, ಅಜ್ಞಾತೋಪಾಯ ಸಂಪತ್ತಿಃ=ಉಪಾಯವನ್ನು ತಿಳಿಯದವನು, ಅಭವತ್=ಆದನು.

ಪರಮಾತ್ಮನ ಅಪ್ಪಣೆಯ ಮೇರೆಗೆ ಬ್ರಹ್ಮನು ಜಗತ್ತನ್ನು ಸೃಷ್ಟಿಸಲು ಪ್ರಯತ್ನ ಪಟ್ಟನಾದರೂ ಮಾಯೆಯಿಂದ ಆವೃತನಾಗಿರುವುದರಿಂದ ಉಪಾಯವನ್ನು ತಿಳಿಯದವ ನಾದನು.

ವಿಧಾತುಮಖಿಲಾನ್‌ಲೋಕಾನುಪಾಯಂ ಪ್ರಾಪ್ತುಮಿಚ್ಛಯಾ

ಪುನಸ್ತಂ ಪ್ರಾರ್ಥಯಾಮಾಸ ದೇವದೇವಂ ತ್ರಿಯಂಬಕಮ್ || (ಸಿ. ಶಿ. ೨–೧೮)

ಅರ್ಥ : ಅಖಿಲಾನ್=ಸಕಲ, ಲೋಕಾನ್=ಲೋಕಗಳನ್ನು, ವಿಧಾತುಂ= ಸೃಷ್ಟಿಸುವುದಕ್ಕಾಗಿ, ಉಪಾಯಂ=ಯುಕ್ತಿಯನ್ನು, ಪ್ರಾಪ್ತುಮಿಚ್ಛಯಾ=ಪಡೆಯುವ

ಅಪೇಕ್ಷೆಯಿಂದ, ದೇವದೇವಂ=ದೇವರಿಗೆ ದೇವನಾದ, ತ್ರಿಯಂಬಕಂ=ಮುಕ್ಕಣ್ಣನನ್ನು, ಪುನಃ=ಮತ್ತೊಮ್ಮೆ ಪ್ರಾರ್ಥಯಾಮಾಸ=ಪ್ರಾರ್ಥಿಸಿದನು.

ಜಗನ್ನಿರ್ಮಾಣದಲ್ಲಿ ಉಪಾಯಕಾಣದ ಬ್ರಹ್ಮನು ಪುನಃ ಉಪಾಯವನ್ನು ತಿಳಿದು ಕೊಳ್ಳಬೇಕೆಂಬ ಅಪೇಕ್ಷೆಯುಳ್ಳವನಾಗಿ ದೇವದೇವೋತ್ತಮನಾದ ಪರಶಿವನನ್ನು ಕುರಿತು ಹೀಗೆ ಪ್ರಾರ್ಥನೆ ಮಾಡತೊಡಗಿದನು.

ಪ್ರಾರ್ಥನೆಯ ಪ್ರಕಾರವನ್ನು ಈಗ ನಿರೂಪಿಸುತ್ತಾರೆ–

ನಮಸ್ತೇ ದೇವದೇವೇಶ ನಮಸ್ತೇ ಕರುಣಾಕರ । (ಸಿ. ಶಿ. ೨–೧೯)

ಅಸ್ಮದಾದಿಜಗಜ್ಜಾಲನಿರ್ಮಾಣವಿಧಿಷು ಕ್ಷಮ

ಉಪಾಯಂ ವದ ಮೇ ಶಂಭೋ ಜಗತ್ಸೃಷ್ಟೌ ಜಗತ್ಪತೇ । (ಸಿ. ಶಿ. ೨–೨೦)

ಸರ್ವಜ್ಞಃ ಸರ್ವಶಕ್ತಿಸ್ತ್ವಂ ಸರ್ವಕರ್ತಾ ಸನಾತನಃ

ಅರ್ಥ : ದೇವದೇವೇಶ=ದೇವಾಧಿದೇವನೇ, ಕರುಣಾಕರ=ಕರುಣಾ ಸಮುದ್ರನೇ, ನಮಸ್ತೇ=ನಿನಗೆ ನಮಸ್ಕಾರವು ಅಸ್ಮಾದಾದಿ ಜಗಜ್ಜಾಲ ನಿರ್ಮಾಣ ವಿಧಿಷು=ನನ್ನನ್ನೇ ಮೊದಲುಗೊಂಡು ಸಮಸ್ತ ಜಗತ್ತನ್ನೂ ನಿರ್ಮಿಸುವ ವಿಧಾನಗಳಲ್ಲಿ, ಕ್ಷಮ=ಸಮರ್ಥ ನಾದ ಶಿವನೇ ! ತ್ವಂ=ನೀನು, ಸರ್ವಜ್ಞಃ=ಸರ್ವಜ್ಞನೂ, ಸರ್ವಶಕ್ತಿ=ಸರ್ವಶಕ್ತಿ ಸಮನ್ವಿತನೂ, ಸರ್ವಕರ್ತಾ=ಎಲ್ಲವನ್ನು ಮಾಡಬಲ್ಲವನೂ, ಸನಾತನಃ=ಸನಾತನನೂ ಆಗಿರುವಿ; ಆದ್ದರಿಂದ, ಜಗತ್ಪತೇ=ಜಗತ್ತಿಗೆ ಒಡೆಯನಾದ, ಶಂಭೋ!=ಹೇ ಪರಮಾತ್ಮನೇ ! ಮೇ=ನನಗೆ, ಜಗತ್ಸೃಷ್ಟೌ=ಜಗದುತ್ಪತ್ತಿಯ ಬಗ್ಗೆ, ಉಪಾಯಂ= ಉಪಾಯವನ್ನು, ವದ=ಹೇಳು.

ಎಲೈ ದೇವದೇವೋತ್ತಮನೇ ! ನಿನಗೆ ನಮಸ್ಕಾರವು. ಹೇ ದಯಾ ಸಾಗರನೇ ! ನಿನಗೆ ನಮಸ್ಕಾರವು. ನಾನೇ ಮೊದಲಾದ ಸಕಲ ಜಗತ್ತನ್ನು ಸೃಷ್ಟಿಸುವ ಕಾರ್ಯದಲ್ಲಿ ಸಮರ್ಥನಾದ ಸ್ವಾಮಿಯೇ ! ನಿನಗೆ ನಮಸ್ಕಾರಗಳು. ಜಗದೀಶ್ವರನಾದ ಎಲೈ ಶಂಭುವೇ ! ನೀನು ಜಗನ್ನಿರ್ಮಾಣ ಕರ್ತನೂ, ಸರ್ವಜ್ಞನೂ ಸರ್ವಸಮರ್ಥನೂ, ಸರ್ವೇಶ್ವರನೂ, ಶಾಶ್ವತನೂ ಆಗಿರುವಿ ; ಆದಕಾರಣ ನನಗೆ ಜಗತ್ತನ್ನು ಸೃಷ್ಟಿಸುವ ಉಪಾಯವನ್ನು ಹೇಳಿಕೊಡು–ಎಂಬುದಾಗಿ ನಾನಾ ವಿಧದಲ್ಲಿ ಬ್ರಹ್ಮನು ಶಿವನನ್ನು ಸ್ತುತಿಸಿದನು.

ಇತಿ ಸಂಪ್ರಾರ್ಥಿತಃ ಶಂಭುರ್ಬ್ರಹ್ಮಣಾ ವಿಶ್ವನಾಯಕಃ । (ಸಿ. ಶಿ. ೨–೨೧)

ಉಪಾಯಮವದತ್ತಸ್ಮೈ ಲೋಕಸೃಷ್ಟಿಪ್ರವರ್ತಕಂ

ಅರ್ಥ : ಇತಿ=ಈ ಪ್ರಕಾರವಾಗಿ, ಬ್ರಹ್ಮಣಾ=ಬ್ರಹ್ಮನಿಂದ, ಸಂಪ್ರಾರ್ಥಿತಃ= ಪ್ರಾರ್ಥಿಸಲ್ಪಟ್ಟ, ವಿಶ್ವನಾಯಕಃ=ಜಗತ್ತಿನ ಒಡೆಯನಾದ, ಶಂಭುಃ=ಪರಮಾತ್ಮನು, ತಸ್ಮೈ=ಆ ಬ್ರಹ್ಮನಿಗೆ, ಲೋಕಸೃಷ್ಟಿಪ್ರವರ್ತಕಂ=ಜಗತ್ತಿನ ಸೃಷ್ಟಿಯಲ್ಲಿ ಪ್ರವರ್ತಕವಾದ, ಉಪಾಯಂ=ಉಪಾಯವನ್ನು, ಅವದತ್=ಹೇಳಿದನು.

ಹೀಗೆ ಬ್ರಹ್ಮನಿಂದ ಅನನ್ಯವಾಗಿ ಪ್ರಾರ್ಥಿಸಲ್ಪಟ್ಟ ಪರಮಾತ್ಮನು ಬ್ರಹ್ಮನಿಗೆ ಜಗತ್ಸೃಷ್ಟಿಸಾಧಕವಾದ ಉಪಾಯವನ್ನು ಹೇಳಿಕೊಟ್ಟನು.

ಉಪಾಯಮೀಶ್ವರೇಣೋಕ್ತಂ ಲಬ್ಧ್ವಾಽಪಿ ಚತುರಾನನಃ । (ಸಿ. ಶಿ. ೨–೨೨)
ನ ಸಮರ್ಥೋಽಭವತ್ಕರ್ತುಂ ನಾನಾರೂಪಮಿದಂ ಜಗತ್

ಅರ್ಥ : ಚತುರಾನನಃ=ಬ್ರಹ್ಮನು, ಈಶ್ವರೇಣೋಕ್ತಂ=ಪರಮಾತ್ಮನಿಂದ ಹೇಳಲ್ಪಟ್ಟ, ಉಪಾಯಂ=ಉಪಾಯವನ್ನು, ಲಬ್ಧ್ವಾಽಪಿ=ಪಡೆದುಕೊಂಡರೂ, ನಾನಾರೂಪಂ= ನಾನಾ ಪ್ರಕಾರವಾದ, ಇದಂ=ಈ, ಜಗತ್=ಜಗತ್ತನ್ನು, ಕರ್ತುಂ=ನಿರ್ಮಿಸಲು, ಸಮರ್ಥಃ=ಸಮರ್ಥನು, ನ ಅಭವತ್=ಆಗಲಿಲ್ಲ.

ಚತುರ್ಮುಖನಾದ ಬ್ರಹ್ಮನು ಪರಮಾತ್ಮನಿಂದ ಜಗತ್ ಸೃಷ್ಟಿಯ ಉಪಾಯವನ್ನು ತಿಳಿದುಕೊಂಡರೂ ಸಹ ಬಹು ವಿಚಿತ್ರವಾದ ಈ ಜಗತ್ತನ್ನು ಸೃಷ್ಟಿಸಲು ಸಮರ್ಥನಾಗಲಿಲ್ಲ.

ಪುನಸ್ತಂ ಪ್ರಾರ್ಥಯಾಮಾಸ ಬ್ರಹ್ಮಾ ವಿಹ್ವಲಮಾನಸಃ (ಸಿ. ಶಿ. ೨–೨೩)
ದೇವದೇವ ಮಹಾದೇವ ಜಗತ್ಪ್ರಥಮಕಾರಣ ।
ನಮಸ್ತೇ ಸಚ್ಚಿದಾನಂದ ಸ್ವೇಚ್ಛಾವಿಗ್ರಹರಾಜಿತ (ಸಿ. ಶಿ. ೨–೨೪)
ಭವ ಶರ್ವ ಮಹೇಶಾನ ಸರ್ವಕಾರಣಕಾರಣ ।
ಭವದುಕ್ತೋಽಪ್ಯುಪಾಯೋ ಮೇ ನ ಕಿಂಚಿದ್ ಜ್ಞಾಯತೇಽಧುನಾ
(ಸಿ. ಶಿ. ೨.೨೪–೨೫)
ಸೃಷ್ಟಿಂ ವಿಧೇಹಿ ಭಗವನ್ ಪ್ರಥಮಂ ಪರಮೇಶ್ವರ ।
ಜ್ಞಾತೋಪಾಯಸ್ತತಃ ಕುರ್ಯಾಂ ಜಗತ್ಸೃಷ್ಟಿಮುಮಾಪತೇ (ಸಿ. ಶಿ. ೨–೨೬)

ಅರ್ಥ : ವಿಹ್ವಲಮಾನಸಃ=ವ್ಯಾಕುಲಮನಸ್ಕನಾದ, ಬ್ರಹ್ಮಾ=ಬ್ರಹ್ಮನು ಪುನಃ= ಮತ್ತೆ, ತಂ=ಆ ಪರಮಾತ್ಮನನ್ನು ಕುರಿತು, ಪ್ರಾರ್ಥಯಾಮಾಸ=ಹೀಗೆ ಪ್ರಾರ್ಥಿಸಿದನು. ದೇವದೇವ=ಹೇ ದೇವದೇವನೇ ! ಮಹಾದೇವ=ಮಹಾದೇವನೇ ! ಜಗತ್ಪ್ರಥಮ ಕಾರಣ=ಜಗದ ಆದಿಕಾರಣನೇ ! ಸಚ್ಚಿದಾನಂದ=ಸಚ್ಚಿದಾನಂದ ಸ್ವರೂಪನೇ ! ಸ್ವೇಚ್ಛಾ ವಿಗ್ರಹರಾಜಿತ=ಇಚ್ಛಾನುಸಾರವಾಗಿ ಧರಿಸಿದ ಶರೀರ ಉಳ್ಳವನೇ ! ಭವ=ಹೇ ಭವನೇ !, ಶರ್ವ=ಶರ್ವನೇ !, ಮಹೇಶಾನ= ಮಹೇಶ್ವರನೇ !, ಭವ=ಹೇ ಭವನೇ!, ಶರ್ವ=ಶರ್ವನೇ !, ನಮಸ್ತೇ=ನಿನಗೆ ನಮಸ್ಕಾರವು, ಭವದುಕ್ತಃ=ನಿನ್ನಿಂದ ಹೇಳಲ್ಪಟ್ಟ, ಉಪಾಯಃ=ಉಪಾಯವು, ಮೇ=ನನಗೆ, ಅಧುನಾ=ಈಗ, ಕಿಂಚಿತ್=ಸ್ವಲ್ಪ ಸಹ, ನ ಜ್ಞಾಯತೇ=ತಿಳಿಯದಾಗಿದೆ, ಹೇ ಭಗವನ್=ಹೇ ಭಗವಂತನಾದ, ಪರಮೇಶ್ವರ= ಪರಮೇಶ್ವರನೇ !, ಪ್ರಥಮಂ=ಮೊದಲು, ಸೃಷ್ಟಿಂ=ಜಗತ್ತಿನ ಸೃಷ್ಟಿಯನ್ನು, ವಿಧೇಹಿ= ಮಾಡು, ಹೇ ಉಮಾಪತೇ=ಹೇ ಉಮಾಧವನೇ ! ತತಃ=ಅನಂತರ, ಜ್ಞಾತೋ ಪಾಯಃ=ಉಪಾಯವನ್ನು ತಿಳಿದವನಾಗಿ, ಜಗತ್ಸೃಷ್ಟಿಂ=ಜಗತ್ತಿನ ರಚನೆಯನ್ನು, ಕುರ್ಯಾಂ=ಮಾಡುತ್ತೇನೆ.

ಪರಮಾತ್ಮನಿಂದ ಉಪಾಯವನ್ನು ತಿಳಿದುಕೊಂಡರೂ ಸಹ ಸೃಷ್ಟಿ ಮಾಡಲು ಅಸಮರ್ಥನಾದ ಬ್ರಹ್ಮನು ವ್ಯಾಕುಲವಾದ ಮನಸ್ಸುಳ್ಳವನಾಗಿ ಮತ್ತೆ ಪರಮಾತ್ಮನನ್ನು ಕುರಿತು ಈ ರೀತಿಯಾಗಿ ಪ್ರಾರ್ಥಿಸತೊಡಗಿದನು–ಹೇ ದೇವಾಧಿದೇವನಾದ ಮಹಾದೇವನೇ ! ಜಗತ್ಕಾರಣನೇ ! ಸಚ್ಚಿದಾನಂದಸ್ವರೂಪನೇ ! ಭವ, ಶರ್ವ, ಮಹೇಶ್ವರಾದಿ ಅನಂತ ನಾಮವುಳ್ಳವನೇ ! ಎಲ್ಲಕ್ಕೂ ಕಾರಣೀಭೂತನಾದವನೇ ! ನೀನು ಉಪಾಯವನ್ನು ಹೇಳಿದರೂ ನನಗೆ ತಿಳಿಯದಾಗಿದೆ. ಆದ್ದರಿಂದ ಹೇ ಪರಮೇಶ್ವರನೇ ! ನೀನು ಮೊದಲು ಸೃಷ್ಟಿಯನ್ನು ಮಾಡು, ಅದನ್ನು ನೋಡಿಕೊಂಡು ನಾನು ಸೃಷ್ಟಿಯನ್ನು ಮಾಡಲು ಪ್ರಯತ್ನಿಸುತ್ತೇನೆ–ಎಂಬುದಾಗಿ ನಾನಾ ರೀತಿಯಲ್ಲಿ ಪ್ರಾರ್ಥಿಸಿದನು.

ಇತ್ಯೇವಂ ಪ್ರಾರ್ಥಿತಃ ಶಂಭುರ್ಬ್ರಹ್ಮಣಾ ವಿಶ್ವಯೋನಿನಾ ।
ಸಸರ್ಜಾತ್ಮ ಸಮಪ್ರಖ್ಯಾನ್ ಸರ್ವಜ್ಞಾನ್ ಸರ್ವಶಕ್ತಿಕಾನ್

ಪ್ರಬೋಧಪರಮಾನಂದಪರಿವಾಹಿತಮಾನಸಾನ್ ।
ಪ್ರಮಥಾನ್ ವಿಶ್ವನಿರ್ಮಾಣಪ್ರಲಯಾದಿವಿಧಿಕ್ಷಮಾನ್ (ಸಿ. ಶಿ. ೨.೨೭–೨೮)

ಅರ್ಥ : ಇತ್ಯೇವಂ=ಈ ಪ್ರಕಾರವಾಗಿ, ವಿಶ್ವಯೋನಿನಾ=ಸೃಷ್ಟಿಕರ್ತನಾದ, ಬ್ರಹ್ಮಣಾ=ಬ್ರಹ್ಮನಿಂದ, ಪ್ರಾರ್ಥಿತಃ=ಪ್ರಾರ್ಥಿಸಲ್ಪಟ್ಟ, ಶಂಭುಃ=ಪರಮಾತ್ಮನು, ಆತ್ಮ ಸಮಪ್ರಖ್ಯಾನ್=ತನಗೆ ಸಮಾನವಾದ ಪ್ರತಿಭೆಯುಳ್ಳ, ಸರ್ವಜ್ಞಾನ್=ಸರ್ವಜ್ಞರಾದ, ಸರ್ವಶಕ್ತಿಕಾನ್=ಸರ್ವಶಕ್ತಿ ಸಮನ್ವಿತರಾದ, ಪ್ರಬೋಧಪರಮಾನಂದ ಪರಿವಾಹಿತ ಮಾನಸಾನ್=ಜ್ಞಾನಾನಂದಗಳಿಂದ ತುಂಬಿದ ಮನಸ್ಸುಳ್ಳ, ವಿಶ್ವನಿರ್ಮಾಣ ಪ್ರಲಯಾದಿವಿಧಿಕ್ಷಮಾನ್=ಜಗತ್ತಿನ ನಿರ್ಮಾಣ ಮತ್ತು ಪ್ರಲಯಮಾಡುವುದರಲ್ಲಿ ಸಮರ್ಥರಾದ, ಪ್ರಮಥಾನ್=ರೇಣುಕ–ದಾರುಕಾದಿ ಪ್ರಮಥರನ್ನು, ಸಸರ್ಜ= ನಿರ್ಮಿಸಿದನು.

ಸೃಷ್ಟಿಕರ್ತನಾದ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಶಿವನು– ''ಪ್ರಜಾಃ ಸೃಜೇತಿ ನಿರ್ದಿಷ್ಟಶ್ಚಂದ್ರಮೌಳಿರ್ವಿರಿಂಚಿನಾ । ಸಸರ್ಜ ಮನಸಾ ರುದ್ರಾನಾತ್ಮ ತುಲ್ಯಾನ್ಮಹೇಶ್ವರಾನ್ ॥ ನೀಲಕಂಠಾಂಸ್ತ್ರಿನೇತ್ರಾಂಶ್ಚ ಜಟಾಮುಕುಟಮಂಡಿತಾನ್'' ಈ ಪ್ರಕಾರಗಳಾದ ಆದಿತ್ಯ, ಕೂರ್ಮ, ಆದಿ ಪುರಾಣಗಳ ವಚನಾನುಸಾರವಾಗಿ ತನಗೆ ಸಮಾನವಾದ ತೇಜಸ್ಸುಳ್ಳವರೂ, ಸರ್ವವ್ಯಾಪಿಗಳೂ, ಸರ್ವಸಮರ್ಥರೂ, ಉತ್ಕೃಷ್ಟ ಜ್ಞಾನಾನಂದಗಳಲ್ಲಿ ಮಗ್ನವಾದ ಮನಸ್ಸುಳ್ಳವರೂ, ಜಗತ್ತಿನ ನಿರ್ಮಾಣ ಹಾಗೂ ಲಯವನ್ನು ಮಾಡುವ ಸಾಮರ್ಥ್ಯವುಳ್ಳವರೂ ಆದ ರೇಣುಕ–ದಾರುಕಾದಿ ಅಸಂಖ್ಯಾತ ಶಿವಗಣರನ್ನು ಸೃಷ್ಟಿಸಿದನು.

ವಿಶೇಷ ವಿಚಾರ– ಬ್ರಹ್ಮನ ಸೃಷ್ಟಿಯ ಪೂರ್ವದಲ್ಲಿ ಶಿವನು ಬ್ರಹ್ಮನಿಗೆ ಸೃಷ್ಟಿಯ ಕಲೆಯನ್ನು ತೋರಿಸಿಕೊಡುವುದಕ್ಕಾಗಿ ಸೃಷ್ಟಿಸಿದ ಅನೇಕ ಶಿವಗಣರಲ್ಲಿ–ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಐದು ಜನ ಶಿವಗಣರಿಂದ ವೀರಶೈವರು ಉತ್ಪನ್ನರಾಗಿರುತ್ತಾರೆ.

ಅಂತೆಯೇ –

''ಈಶಾನಮುಖಸಂಜಾತಾ ವೀರಶೈವಾ ಮಹೌಜಸಃ |
ವೀರೋ ನಂದೀ ತಥಾ ಭೃಂಗೀ ವೃಷಭಃ ಸ್ಕಂದ ಏವ ಚ ||''

(ಪಾಶುಪತತಂತ್ರ)

ಅತಿವರ್ಣಾಶ್ರಮಾಃ ಪೂರ್ವೇ ನಂದ್ಯಾದಿಪ್ರಮಥಾಃ ಸ್ಮೃತಾಃ |
ತತ್ಸಂತತಿಸಮಾಯಾತಾ ವೀರಶೈವಾ ಇತಿ ಶ್ರುತಾಃ ||

(ವೀರಶೈವ ಸದಾಚಾರ ಸಂಗ್ರಹ ೬–೪)

ಎಂಬ ವಚನಗಳ ಪ್ರಮಾಣದಿಂದ ಈ ಐವರೂ, ವೀರಶೈವರ ಗೋತ್ರಪುರುಷರೆಂದು ಕರೆಯಿಸಿಕೊಳ್ಳುತ್ತಾರೆ.

ಗೋತ್ರಪುರುಷರು ವಂಶದ ಮೂಲ ವ್ಯಕ್ತಿಗಳಾದ್ದರಿಂದ ಅವರು ಪತ್ನೀಪರಿಗ್ರಹ ಮಾಡಿರಬೇಕಾಗುತ್ತದೆ. ಹಾಗಾದರೆ ವೀರಶೈವ ಗೋತ್ರಪುರುಷರ ಪತ್ನಿಯರಾರು ? ಎಂಬ ಜಿಜ್ಞಾಸೆಯು ಉಂಟಾಗುತ್ತದೆ ; ಅದಕ್ಕೆ ''ಕ್ರಿಯಾಸಾರ'' ಮತ್ತು ''ವೀರಶೈವಾನಂದ–ಚಂದ್ರಿಕಾ'' ''ಲಿಂಗಪುರಾಣ'' ಮುಂತಾದ ಗ್ರಂಥಗಳಲ್ಲಿ ಶಿವಗಣರ ಪತ್ನಿಯರು ಪ್ರತಿಪಾದಿಸಲ್ಪಟ್ಟಿದ್ದಾರೆ. ಅದನ್ನೇ ವಿಚಾರಿಸೋಣ–

ವೀರಭದ್ರೋಮಹಾತೇಜಾ ಹಿಮಕುಂದೇಂದುಸನ್ನಿಭಃ |
ಭದ್ರಕಾಳೀಪ್ರಿಯೋ ನಿತ್ಯಂ ಮಾತೃಣಾಮಭಿರಕ್ಷಕಃ ||

(ಲಿಂಗಪುರಾಣ)

ಎನ್ನುವ ಲಿಂಗಪುರಾಣದ ವಚನದಲ್ಲಿ ''ವೀರ'' ಅಥವಾ ''ವೀರಭದ್ರ''ನೆಂಬ ಶಿವಗಣನಿಗೆ ''ಭದ್ರಕಾಳಿ'' ಎಂಬ ಪತ್ನಿ ಇದ್ದಳೆಂದು ಪ್ರತಿಪಾದಿಸಲ್ಪಟ್ಟಿದೆ. ಇಂದಿಗೂ ಕೂಡಾ ವೀರಭದ್ರ ದೇವಾಲಯದ ಪಕ್ಕದಲ್ಲಿಯೇ ಭದ್ರಕಾಳಿಯ ಮಂದಿರಗಳಿರುವುದನ್ನು ಕಾಣುತ್ತೇವೆ. ಅದೇ ಪ್ರಕಾರವಾಗಿ ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ ಕ್ರಿಯಾಸಾರ ಎಂಬ ಗ್ರಂಥದ ಹದಿನಾಲ್ಕನೇ ಉಪದೇಶದಲ್ಲಿ ಆವರಣ ಪೂಜಾವಿಧಾನವನ್ನು ತಿಳಿಸುವಾಗ ತೃತೀಯವಾದ ಆವರಣ ಪೂಜೆಯಲ್ಲಿ ''ಕುಂಡಲಿನೀಸಹಿತಾಯ ನಂದಿಕೇಶ್ವರಾಯ ನಮಃ, ಹ್ಲಾದಿನೀಸಹಿತಾಯ ಭೃಂಗಿಣೇ ನಮಃ, ಭದ್ರಾಸಹಿತಾಯ ವೃಷಭಾಯ ನಮಃ, ದೇವಯಾನೀಸಹಿತಾಯ ಸ್ಕಂದಾಯ ನಮಃ'', (ಕ್ರಿಯಾಸಾರ, ಭಾಗ ೨, ಪುಟ ೨೭೮–೨೭೯, O.R.I. ಮೈಸೂರ ಪ್ರಕಾಶನ) ಎಂಬುದಾಗಿ ನಂದೀಶ್ವರನಿಗೆ ಕುಂಡಲಿನೀ, ಭೃಂಗಿಗೆ ಹ್ಲಾದಿನೀ, ವೃಷಭನಿಗೆ ಭದ್ರಾ, ಸ್ಕಂದನಿಗೆ ದೇವಯಾನೀ ಎಂಬ ಪತ್ನಿಯರ ಉಲ್ಲೇಖವನ್ನು ಮಾಡಿರುತ್ತಾರೆ. ಇದೂ ಅಲ್ಲದೆ ಶ್ರೀ ಮರಿತೋಂಟದಾರ್ಯರು ವೀರಶೈವಾನಂದಚಂದ್ರಿಕೆಯ ವಾದಕಾಂಡದಲ್ಲಿ ನಂದೀಶ್ವರನಿಗೆ ''ಸುಯಶಾ'' ಎಂಬ ಪತ್ನಿ ಇದ್ದಳೆಂಬುದನ್ನು ಪ್ರತಿಪಾದಿಸಿದ್ದಾರೆ. ಹೀಗೆ ವೀರಶೈವ ಗೋತ್ರಪುರುಷರಾದ ವೀರನು ಭದ್ರಕಾಳಿಯನ್ನೂ, ನಂದಿಯು ಕುಂಡಲಿನೀ ಅಥವಾ ಸುಯಶಾಳನ್ನೂ, ಭೃಂಗಿಯು ಹ್ಲಾದಿನಿಯನ್ನೂ, ವೃಷಭನು ಭದ್ರಾಳನ್ನೂ ಮತ್ತು ಸ್ಕಂದನು ದೇವಯಾನಿಯನ್ನೂ ಪತ್ನಿಯರನ್ನಾಗಿ ಪರಿಗ್ರಹಿಸಿರುವುದು ಸಿದ್ಧವಾಗುತ್ತದೆ.

''ಅಥ ಯದಿ ಸ್ತ್ರೀಲೋಕಕಾಮೋ ಭವತಿ'' ಎಂಬ ಶ್ರುತಿಪ್ರಮಾಣಾನುಸಾರವಾಗಿ ನಿತ್ಯಮುಕ್ತರೂ, ಅನಾದಿಮುಕ್ತರೂ ಆದ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಈ ಶಿವಗಣರಿಗೆ ಸರ್ವಸ್ವಾತಂತ್ರ್ಯವಿರುವುದರಿಂದ ಲೀಲಾ ವಿನೋದಕ್ಕಾಗಿ ಇವರು ಸ್ತ್ರೀ ಪರಿಗ್ರಹವನ್ನು ಮಾಡಿರುವುದರಿಂದ ಇವರಲ್ಲಿ ರಾಗ–ದ್ವೇಷಾದಿಗಳಿಲ್ಲದ ಮೂಲಕವಾಗಿ ಇವರು ಸಂಸಾರಬಂಧನಕ್ಕೊಳಗಾಗಲಾರರು. ಇಂತಹ ಶಿವಗಣರ ಸಂತಾನವೇ ವೀರಶೈವರು. ಆದಕಾರಣ ಪ್ರತಿಯೊಬ್ಬ ವೀರಶೈವರೂ ಪೂಜಾದಿ ಕ್ರಿಯೆಗಳನ್ನು ಮಾಡುವಾಗ ಸಂಕಲ್ಪದಲ್ಲಿ ತಮ್ಮ ಗೋತ್ರದ ಮೂಲಪುರುಷರ ಹೆಸರುಗಳನ್ನು ಹೇಳುವ ಪದ್ಧತಿ ಇದೆ. ಬಹುಜನ ವೀರಶೈವರಿಗೆ ತಮ್ಮ ಗೋತ್ರಪುರುಷರ ಹೆಸರುಗಳೇ ಗೊತ್ತಿರುವುದಿಲ್ಲ, ಕಾರಣ ಅಂಥವರು ತಮ್ಮ ಮನೆಯ ಗುರುಗಳಿಂದ ಕೇಳಿ ತಿಳಿದುಕೊಳ್ಳಬೇಕು.

ಇನ್ನು ವೀರಶೈವ ಧರ್ಮದ ಕಲಿಯುಗದ ಪಂಚಾಚಾರ್ಯರಾದ ಶ್ರೀ ಜಗದ್ಗುರು ರೇವಣಾರಾಧ್ಯ, ಶ್ರೀಜಗದ್ಗುರು ಮರುಳಾರಾಧ್ಯ, ಶ್ರೀ ಜಗದ್ಗುರು ಏಕೋರಾಮಾರಾಧ್ಯ, ಶ್ರೀ ಜಗದ್ಗುರು ಪಂಡಿತಾರಾಧ್ಯ, ಶ್ರೀ ಜಗದ್ಗುರು ವಿಶ್ವಾರಾಧ್ಯರೆಂಬ ಆಚಾರ್ಯರು ಕ್ರಮವಾಗಿ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದ ಗೋತ್ರೋತ್ಪನ್ನರಾದ ವೀರಶೈವರಿಗೆಲ್ಲ ಆದಿಗುರುಗಳಾಗಿರುತ್ತಾರೆ.

ಈ ಪ್ರಕಾರವಾಗಿ ವೀರಶೈವ ಗೋತ್ರ ಪುರುಷರಾದ ವೀರ, ನಂದಿ ಮೊದಲಾದವರು, ಈ ಗೋತ್ರೋತ್ಪನ್ನರಾದ ವೀರಶೈವರಿಗೆ, ಆದಿ ಗುರುಗಳಾದ ಶ್ರೀ ಜಗದ್ಗುರು ರೇಣುಕಾದಿ ಆಚಾರ್ಯರು ಶಿವಸಂಕಲ್ಪ ಸೃಷ್ಟಿಯಲ್ಲಿಯ ಶಿವಗಣರೆಂದು ತಿಳಿದುಕೊಳ್ಳಬೇಕು.

ತೇಷು ಪ್ರಮಥವರ್ಗೇಷು ಸೃಷ್ಟೇಷು ಪರಮಾತ್ಮನಾ ।
ರೇಣುಕೋ ದಾರುಕಶ್ಚೇತಿ ದ್ವಾವಭೂತಾಂ ಶಿವಪ್ರಿಯೌ ॥ (ಸಿ. ಶಿ. ೨–೨೯)

ಅರ್ಥ : ಪರಮಾತ್ಮನಾ=ಪರಮಾತ್ಮನಿಂದ, ಸೃಷ್ಟೇಷು=ಸೃಜಿಸಲ್ಪಟ್ಟ, ತೇಷು=ಆ, ಪ್ರಮಥವರ್ಗೇಷು=ಪ್ರಮಥ ಸಮೂಹದಲ್ಲಿ, ರೇಣುಕಃ=ರೇಣುಕರು, ಚ=ಮತ್ತು, ದಾರುಕಃ=ದಾರುಕರು, ದ್ವೌ=ಈ ಇಬ್ಬರೂ, ಶಿವಪ್ರಿಯೌ=ಶಿವನಿಗೆ ಪ್ರೀತಿ ಪಾತ್ರರು, ಅಭೂತಾಂ=ಆದರು.

ಹೀಗೆ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಅನೇಕ ಜನ ಪ್ರಮಥಗಣ ಸಮೂಹದಲ್ಲಿ ರೇಣುಕ ಮತ್ತು ದಾರುಕರೆಂಬ ಇಬ್ಬರು ಪ್ರಮಥಗಣರು ಪರಮಾತ್ಮನ ಅತ್ಯಂತ ಪ್ರೀತಿಗೆ ಪಾತ್ರರಾಗಿದ್ದರು.

ಸರ್ವವಿದ್ಯಾವಿಶೇಷಜ್ಞೌಸರ್ವಕಾರ್ಯವಿಚಕ್ಷಣೌ ।
ಮಾಯಾಮಲವಿನಿರ್ಮುಕ್ತೌಮಹಿಮಾತಿಶಯೋಜ್ಜ್ವಲೌ
ಆತ್ಮಾನಂದಪರಿಸ್ಫೂರ್ತಿರಸಾಸ್ವಾದನಲಂಪಟೌ ।
ಶಿವತತ್ತ್ವಪರಿಜ್ಞಾನತಿರಸ್ಕೃತಭವಾಮಯೌ

ನಾನಾಪಥಮಹಾಶೈವತಂತ್ರನಿರ್ವಾಹತತ್ಪರೌ ।
ವೇದಾಂತಸಾರಸರ್ವಸ್ವವಿವೇಚನವಿಚಕ್ಷಣೌ
ನಿತ್ಯಸಿದ್ಧೌನಿರಾತಂಕೌ ನಿರಂಕುಶಪರಾಕ್ರಮೌ ।
ತಾದೃಶೌ ತೌ ಮಹಾಭಾಗೌ ಸಂವೀಕ್ಷ್ಯ ಪರಮೇಶ್ವರಃ
ಸಮರ್ಥೌ ಸರ್ವಕಾರ್ಯೇಷು ವಿಶ್ವಾಸಂ ಪರಮಾಶ್ರಿತೌ ।
ಅಂತಃಪುರದ್ವಾರಪಾಲೌ ನಿರ್ಮಮೇ ನಿಯತೌ ವಿಭುಃ (ಸಿ. ಶಿ. ೨.೩೦–೩೪)

ಅರ್ಥ : ಅವರೀರ್ವರೂ, ಸರ್ವವಿದ್ಯಾವಿಶೇಷಜ್ಞೌ=ಎಲ್ಲ ವಿದ್ಯೆಗಳ ವಿಶೇಷಾರ್ಥವನ್ನು ಬಲ್ಲವರೂ, ಸರ್ವಕಾರ್ಯವಿಚಕ್ಷಣೌ=ಎಲ್ಲ ಕಾರ್ಯಗಳನ್ನು ಕುಶಲಪೂರ್ವಕವಾಗಿ ಮಾಡಬಲ್ಲವರೂ, ಮಾಯಾಮಲವಿನಿರ್ಮುಕ್ತೌ=ಮಾಯಾಶಕ್ತಿಯಿಂದ ನಿರ್ಮಿತಗಳಾದ ಆಣವಾದಿ ಮಲತ್ರಯಗಳ ಸಂಬಂಧದಿಂದ ಬಿಡಲ್ಪಟ್ಟವರೂ, ಮಹಿಮಾತಿಶಯೋಜ್ಜ್ವಲೌ=ಉಜ್ಜ್ವಲವಾದ ಮಹಿಮೆಯಿಂದ ಕೂಡಿದವರೂ, ಆತ್ಮಾನಂದಪರಿಸ್ಫೂರ್ತಿರಸಾಸ್ವಾದನ ಲಂಪಟೌ=ಆತ್ಮಾನಂದ ಪರಿಪೂರ್ಣವಾದ ಅಮೃತರಸವನ್ನು ಆಸ್ವಾದಿಸುವುದರಲ್ಲಿ ಆಸಕ್ತರೂ, ಶಿವತತ್ತ್ವ ಪರಿಜ್ಞಾನತಿರಸ್ಕೃತಭವಾಮಯೌ=ಶಿವತತ್ತ್ವಜ್ಞಾನದಿಂದ ಜನನ–ಮರಣರೂಪ ರೋಗವನ್ನು ಜಯಿಸಿದವರೂ, ನಾನಾಪಥಮಹಾಶೈವತಂತ್ರ ನಿರ್ವಾಹತತ್ಪರೌ=ನಾನಾ ಮಾರ್ಗಗಳಿಂದ, ಮಹಾ ಶಿವಸಿದ್ಧಾಂತವನ್ನು ಸ್ಥಾಪಿಸುವುದರಲ್ಲಿ ಆಸಕ್ತರೂ, ವೇದಾಂತ ಸಾರಸರ್ವಸ್ವವಿವೇಚನ ವಿಚಕ್ಷಣೌ=ಉಪನಿಷತ್ತುಗಳ ಸಾರಸರ್ವಸ್ವವನ್ನು ವಿವೇಚಿಸುವುದರಲ್ಲಿ ಸಮರ್ಥರೂ, ನಿತ್ಯಸಿದ್ಧೌ=ಶಾಶ್ವತವಾಗಿ ಭೌತಿಕ ಸಿದ್ಧಿಯುಳ್ಳವರೂ, ನಿರಾತಂಕೌ=ಯಾವ ವಿಧವಾದ ತಡೆಯಿಲ್ಲದವರೂ, ನಿರಂಕುಶ ಪರಾಕ್ರಮೌ=ಅಪ್ರತಿಹತವಾದ ಪರಾಕ್ರಮವುಳ್ಳವರೂ, ಆಗಿದ್ದರು. ಸರ್ವ ಕಾರ್ಯೇಷು ಸಮರ್ಥೌ=ಸರ್ವಕಾರ್ಯ ನಿರ್ವಾಹಸಮರ್ಥರೂ, ವಿಶ್ವಾಸಂ ಪರಮಾಶ್ರಿತೌ=ಅತ್ಯಂತ ವಿಶ್ವಾಸಪಾತ್ರರೂ ಆದ, ತಾದೃಶೌ=ಅಂತಹ, ತೌ ಮಹಾಭಾಗೌ=ಆ ಮಹಿಮಾಶಾಲಿಗಳಾದ ಅವರನ್ನು, ಸಂವೀಕ್ಷ್ಯ=ಚೆನ್ನಾಗಿ ನಿರೀಕ್ಷಿಸಿದ, ವಿಭುಃ=ವ್ಯಾಪಕನಾದ, ಪರಮೇಶ್ವರಃ=ಪರಮೇಶ್ವರನು, ನಿಯತೌ=ನಿಶ್ಚಿತರಾದ, ಅಂತಃಪುರ ದ್ವಾರಪಾಲೌ=ಅಂತಃಪುರದ ದ್ವಾರಪಾಲರನ್ನಾಗಿ, ನಿರ್ಮಮೇ=ನಿಯಮಿಸಿದನು.

ಶಿವಸೃಷ್ಟಿಯ ಅನಂತರ ಶಿವಗಣರಲ್ಲಿ ಸಕಲಶಾಸ್ತ್ರಗಳನ್ನೂ ಬಲ್ಲವರೂ, ಅಘಟಿತ ಘಟನಾ ಕಾರ್ಯಗಳನ್ನು ಮಾಡಲು ಸಮರ್ಥರಾದವರೂ, ಆಣವ–ಮಾಯಾ ಮತ್ತು ಕಾರ್ಮಿಕಗಳೆಂಬ ಮಲತ್ರಯರಹಿತರೂ, ತಮ್ಮ ಉತ್ಕೃಷ್ಟವಾದ ಮಹಾತ್ಮ್ಯದಿಂದ ಬೆಳಗುವವರೂ, ಆತ್ಮಾನಂದ ರಸಾಸ್ವಾದನಾಸಕ್ತರೂ, ಜನನ–ಮರಣರಹಿತರೂ, ಅನೇಕ ವಿಧವಾಗಿ ಶಿವಸಿದ್ಧಾಂತವನ್ನು ಪ್ರತಿಷ್ಠಾಪಿಸಬಲ್ಲವರೂ, ಉಪನಿಷತ್ತುಗಳ ತಾತ್ಪರ್ಯ ಪರಿಶೀಲಕರೂ, ಶಾಶ್ವತ ಅಣಿಮಾದಿ ಸಿದ್ಧಿಯುಳ್ಳವರೂ, ಅಪ್ರತಿಹತ ಪರಾಕ್ರಮವುಳ್ಳವರೂ, ಶುದ್ಧಾತ್ಮರೂ, ಅತ್ಯಂತ ವಿಶ್ವಾಸ ಪಾತ್ರರೂ ಆದ ''ಆ ರೇಣುಕ ಮತ್ತು ದಾರುಕ''ರೆಂಬ ಇಬ್ಬರು ಶಿವಗಣರನ್ನು ಪರಮಾತ್ಮನು ತನ್ನ ಅಂತಃಪುರದ ದ್ವಾರಪಾಲಕರನ್ನಾಗಿ ಮಾಡಿಕೊಂಡನು.

ಗಣೇಶ್ವರೌ ರೇಣುಕ ದಾರುಕಾವುಭೌ ।
ವಿಶ್ವಾಸಭೂತೌ ನವ–ಚಂದ್ರಮೌಲೇಃ ।
ಅಂತಃಪುರದ್ವಾರಗತೌ ಸದಾ ತೌ ।
ವಿತೇನತುರ್ವಿಶ್ವಪತೇಸ್ತು ಸೇವಾಂ (ಸಿ. ಶಿ. ೨–೩೫)

ಅರ್ಥ : ನವಚಂದ್ರಮೌಲೇಃ=ಬಾಲಚಂದ್ರನನ್ನು ಧರಿಸಿದ, ಪರಮಾತ್ಮನ, ವಿಶ್ವಾಸಭೂತೌ=ವಿಶ್ವಾಸಪಾತ್ರರಾದ, ಅಂತಃಪುರದ್ವಾರಗತೌ=ಅಂತಃಪುರದ ದ್ವಾರ ಪಾಲಕರಾದ, ತೌ=ಆ, ಉಭೌ=ಇಬ್ಬರಾದ, ರೇಣುಕ ದಾರುಕೌ=ರೇಣುಕ–ದಾರುಕ ರೆಂಬ, ಗಣೇಶ್ವರೌ=ಗಣೇಶ್ವರರು, ಸದಾ=ಯಾವಾಗಲೂ, ವಿಶ್ವಪತೇಃ=ಜಗತ್ತಿಗೆ ಒಡೆಯನಾದ ಪರಮಾತ್ಮನ, ಸೇವಾಂ=ಸೇವೆಯನ್ನು, ವಿತೇನತುಃ=ಮಾಡಿದರು.

ಈ ರೇಣುಕ ದಾರುಕರೆಂಬ ಗಣಾಧೀಶ್ವರರು ಚಂದ್ರಮೌಳಿಯಾದ ಪರಮಾತ್ಮನ ಪ್ರೀತಿಗೆ ಪಾತ್ರರಾಗಿದ್ದುಕೊಂಡು ಅಂತಃಪುರದ ದ್ವಾರಪಾಲಕರಾಗಿ ಪರಮಾತ್ಮನ ಸೇವೆಯನ್ನು ಮಾಡತೊಡಗಿದರು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ ಪೂರ್ವಪೀಠಿಕಾ ಭಾಗದ ದ್ವಿತೀಯ ಪರಿಚ್ಛೇದವು ಪೂರ್ಣವಾದುದು.



# ತೃತೀಯ ಪರಿಚ್ಛೇದ

## ಶಿವಸಭಾವರ್ಣನೆ

ಕವಿಯು ಎಂಟು ಶ್ಲೋಕಗಳಿಂದ ಕೈಲಾಸವರ್ಣನೆಯನ್ನು ಮಾಡುತ್ತಾನೆ.

ಕದಾಚಿಡಥ ಕೈಲಾಸೇ ಕಲಧೌತಶಿಲಾಮಯೇ ।
ಗಂಧರ್ವವಾಮನಯನಾಕ್ರೀಡಾಮೌಕ್ತಿಕದರ್ಪಣೇ ॥

(ಸಿ. ಶಿ. ೩–೧)

**ಅರ್ಥ :** ಅಥ=ಅನಂತರ, ಕದಾಚಿತ್=ಒಂದಾನೊಂದು ಸಮಯದಲ್ಲಿ, ಕಲಧೌತಶಿಲಾಮಯೇ=ಬೆಳ್ಳಿಯ ಪಾಷಾಣದಿಂದ ತುಂಬಿದ, ಗಂಧರ್ವವಾಮ ನಯನಾಕ್ರೀಡಾಮೌಕ್ತಿಕದರ್ಪಣೇ=ಗಂಧರ್ವಸ್ತ್ರೀಯರ ಕ್ರೀಡೆಗೆ ಮುತ್ತಿನ ದರ್ಪಣ ದೋಪಾದಿಯಲ್ಲಿ ಇರುವ, ಕೈಲಾಸೇ=ಕೈಲಾಸದಲ್ಲಿ ಶೋಭಿಸುತ್ತಿದ್ದ ರತ್ನಮಂಟಪ ಮಧ್ಯದಲ್ಲಿದ್ದ ರತ್ನ ಸಿಂಹಾಸನವನ್ನು ಪರಮಾತ್ಮನು ಅಲಂಕರಿಸಿದ್ದನು–ಎಂಬುದಾಗಿ ಎಂಟು–ಒಂಭತ್ತನೇ ಶ್ಲೋಕಕ್ಕೆ ಸಂಬಂಧವಿದೆ.

ಮಂದಾರಬಕುಲಾಶೋಕಮಾಕಂದಪ್ರಾಯಭೂರುಹೇ ।
ಮಲ್ಲೀಮರಂದನಿಷ್ಯಂದಪಾನಪೀನಮಧುವ್ರತೇ ॥

(ಸಿ. ಶಿ. ೩–೨)

**ಅರ್ಥ :** ಮಂದಾರ–ಬಕುಲ–ಅಶೋಕ–ಮಾಕಂದಪ್ರಾಯಭೂರುಹೇ= ಮಂದಾರ, ಬಕುಲ, ಅಶೋಕ, ಮಾವು ಮೊದಲಾದ ವೃಕ್ಷಗಳಿಂದ ನಿಬಿಡವಾದ, ಮಲ್ಲೀಮರಂದನಿಷ್ಯಂದ=ಮಲ್ಲಿಗೆಯ ಹೂವುಗಳಿಂದ ಹೊರಡುವ ಪರಿಮಳದ, ಪಾನ ಪೀನಮಧುವ್ರತೇ=ಪಾನದಿಂದ ಪರಿಪುಷ್ಟಗಳಾದ ಭ್ರಮರಗಳಿಂದ ಶೋಭಿಸುತ್ತಿರು ವುದು ಕೈಲಾಸ ಪರ್ವತವೆಂದು ಭಾವವು.

ಕುಂಕುಮಸ್ತಬಕಾಮೋದಕೂಲಂಕಷಹರಿನ್ಮುಖೇ ।
ಕಲಕಂಠಕುಲಾಲಾಪಕಂದಲದ್ರಾಗಬಂಧುರೇ

(ಸಿ. ಶಿ. ೩–೩)

**ಅರ್ಥ :** ಕುಂಕುಮಸ್ತಬಕ=ಕೆಂಪು ಹೂವುಗಳ ಗುಚ್ಛದ, ಆಮೋದ=ಸುವಾಸನೆ ಯಿಂದ, ಕೂಲಂಕಷ=ತುಂಬಿದ, ಹರಿನ್ಮುಖೇ=ದಿಕ್ಪ್ರದೇಶಗಳುಳ್ಳ, ಕಲಕಂಠ= ಕೋಗಿಲೆಗಳ, ಕುಲ=ಸಮೂಹದ, ಆಲಾಪಕಂದಲ=ಮಧುರ ಧ್ವನಿಯಿಂದುತ್ಪನ್ನ ವಾದ, ರಾಗಬಂಧುರೇ=ಪಂಚಮಸ್ವರದಿಂದ ಮನೋಹರವಾದ (ಕೈಲಾಸದಲ್ಲಿ).

ಕಿನ್ನರೀಗೀತಮಾಧುರ್ಯಪರಿವಾಹಿತಗಹ್ವರೇ ।
ಸಾನಂದವರಯೋಗೀಂದ್ರಬೃಂದಾಲಂಕೃತಕಂದರೇ ॥

(ಸಿ. ಶಿ. ೩–೪)

ಅರ್ಥ : ಕಿನ್ನರೀ=ಕಿನ್ನರ ಸ್ತ್ರೀಯರ,ಗೀತ=ಗಾನದ, ಮಾಧುರ್ಯ=ಮಧುರ ಧ್ವನಿಯಿಂದ, ಪರಿವಾಹಿತ=ವ್ಯಾಪ್ತವಾದ, ಗಹ್ವರೇ=ಗವಿಗಳುಳ್ಳ, ಸಾನಂದವರ ಯೋಗೀಂದ್ರ=ಸಾನಂದಯೋಗಿಗಳ, ವೃಂದ=ಸಮೂಹದಿಂದ, ಅಲಂಕೃತ= ಅಲಂಕರಿಸಲ್ಪಟ್ಟ, ಕಂದರೇ=ಗುಹೆಗಳುಳ್ಳ (ಕೈಲಾಸದಲ್ಲಿ).

ಹೇಮಾರವಿಂದಕಲಿಕಾಸುಗಂಧಿರಸಮಾನಸೇ ।
ಶಾತಕುಂಭಮಯೋತ್ತುಂಗಶತಸ್ತಂಭವಿರಾಜಿತೇ

(ಸಿ. ಶಿ. ೩–೫)

ಅರ್ಥ : ಹೇಮಾರವಿಂದ=ಸುವರ್ಣಕಮಲಗಳ, ಕಲಿಕಾ=ಮೊಗ್ಗೆಗಳ, ಸುಗಂಧಿ ರಸ=ಸುಗಂಧಿರಸದಿಂದ ತುಂಬಿದ, ಮಾನಸೇ=ಮಾನಸಸರೋವರವುಳ್ಳ, ಶಾಂತಕುಂಭ ಮಯ=ಸುವರ್ಣಮಯಗಳಾದ, ಉತ್ತುಂಗ=ಉನ್ನತಗಳಾದ, ಶತಸ್ತಂಭ=ನೂರಾರು ಕಂಭಗಳಿಂದ, ವಿರಾಜಿತೇ=ಶೋಭಿಸುತ್ತಿರುವ (ಕೈಲಾಸದಲ್ಲಿ ವಿರಾಜಿಸುತ್ತಿರುವ).

ಮಾಣಿಕ್ಯದೀಪಕಲಿಕಾಮರೀಚಿದ್ಯೋತಿತಾಂತರೇ ।
ದ್ವಾರತೋರಣಸಂರೂಢಶಂಖಪದ್ಮನಿಧಿದ್ವಯೇ

(ಸಿ. ಶಿ. ೩–೬)

ಅರ್ಥ : ಮಾಣಿಕ್ಯದೀಪಕಲಿಕಾ=ಮಾಣಿಕ್ಯದ ದೀಪಜ್ವಾಲೆಯ, ಮರೀಚಿ= ಕಾಂತಿಯಿಂದ, ದ್ಯೋತಿಕಾಂತರೇ=ಪ್ರಕಾಶಮಾನವಾದ ಅಂತಃಪುರವುಳ್ಳ, ದ್ವಾರ ತೋರಣ=ಹೊರಬಾಗಿಲಲ್ಲಿರುವ ತೋರಣದ ಎರಡು ಕಂಭಗಳ ಮೇಲೆ, ಸಂರೂಢ= ಇರಿಸಲ್ಪಟ್ಟ. ಶಂಖಪದ್ಮನಿಧಿದ್ವಯೇ=ಶಂಖ ಮತ್ತು ಪದ್ಮವೆಂಬ ನಿಧಿಯುಳ್ಳ (ರತ್ನ ಮಂಟಪದಲ್ಲಿ).

ಮುಕ್ತಾತಾರಕಿತೋದಾರವಿತಾನಾಂಬರಮಂಡಿತೇ ।
ಸ್ಪರ್ಶಲಕ್ಷಿತವೈಢೂರ್ಯಮಯಭಿತ್ತಿಪರಂಪರೇ

(ಸಿ. ಶಿ. ೩–೭)

ಅರ್ಥ : ಮುಕ್ತಾತಾರಕಿತೋದಾರ=ನಕ್ಷತ್ರಗಳಂತಿರುವ ಮುತ್ತುಗಳಿಂದ ವಿರಚಿತ ವಾದ, ವಿತಾನಾಂಬರ=ವಿಶಾಲವಾದ ಮೇಲ್ಕಟ್ಟಿನ ವಸ್ತ್ರದಿಂದ, ಮಂಡಿತೇ= ಅಲಂಕೃತವಾದ, ಸ್ಪರ್ಶಲಕ್ಷಿತ=ಮುಟ್ಟುವಿಕೆಯಿಂದಲೇ ಕಂಡುಹಿಡಿಯಬೇಕಾದ, ವೈಡೂರ್ಯಮಯ=ವೈಡೂರ್ಯಮಣಿಮಯವಾದ, ಭಿತ್ತಿ ಪರಂಪರೇ=ಗೋಡೆಗಳ ಸಾಲುಗಳಿಂದ ಕೂಡಿದ (ರತ್ನಮಂಟಪದಲ್ಲಿ).

ಸಂಚರತ್ಪ್ರಮಥಶ್ರೇಣಿಪದವಾಚಾಲನೂಪುರೇ ।
ಪ್ರವಾಲವಲಭೀ ಶೃಂಗ ಶೃಂಗಾರಮಣಿಮಂಟಪೇ

(ಸಿ. ಶಿ. ೩–೮)

ಅರ್ಥ : ಸಂಚರತ್=ಅಲ್ಲಿ ಸಂಚರಿಸುತ್ತಿರುವ, ಪ್ರಮಥಶ್ರೇಣೀ=ಪ್ರಮಥ ಸಮುದಾಯದ, ಪದವಾಚಾಚಲನೂಪುರೇ=ಚರಣಗಳಲ್ಲಿರುವ ಗೆಜ್ಜೆಯ ಸರಗಳಿಂದ ಶಬ್ದಾಯಮಾನವಾದ, ಪ್ರವಾಲ=ಹವಳದ, ವಲಭೀಶೃಂಗ=ಪ್ರಾಕಾರ ಶೃಂಗಗಳಿಂದ, ಶೃಂಗಾರ=ಅಲಂಕೃತವಾದ, ಮಣಿಮಂಟಪೇ=ರತ್ನಮಂಟಪದಲ್ಲಿ ಶೋಭಿಸುತ್ತಿದ್ದ ಸಿಂಹಾಸನದಲ್ಲಿ ಪರಮೇಶ್ವರನು ಮಂಡಿಸಿದ್ದನೆಂಬುದು ಮುಂದಿನ ಶ್ಲೋಕದಿಂದ ಸಂಬಂಧವಾಗುತ್ತದೆ.

ಶ್ರೀ ಶಿವಯೋಗಿ ಶಿವಾಚಾರ್ಯರು ಇಲ್ಲಿ ಎಂಟು ಶ್ಲೋಕಗಳ ಪರ್ಯಂತವಾಗಿ ಶಿವನ ಕೈಲಾಸದ ಹಾಗೂ ರತ್ನಮಂಟಪದ ವರ್ಣನೆಯನ್ನು ಮಾಡಿದ್ದಾರೆ. ಅದನ್ನೇ ಸಾರರೂಪವಾಗಿ ವಿವರಿಸುತ್ತೇವೆ–ಶಿವನು ನಿವಾಸಿಸುವ ಕೈಲಾಸ ಪರ್ವತವು ಬೆಳ್ಳಿಯ ಶಿಲೆಗಳಿಂದ ಕೂಡಿಕೊಂಡಿರುವುದರಿಂದ ಅದು ಅಲ್ಲಿ ವಾಸಿಸುವ ಗಂಧರ್ವ ಸ್ತ್ರೀಯರಿಗೆ ಕ್ರೀಡೆಯ ಮುತ್ತಿನ ಕನ್ನಡಿಯಂತೆ ತೋರುತ್ತಿದೆ. ಈ ಪರ್ವತವು ಮಂದಾರ, ಬಕುಲ, ಅಶೋಕ, ಮಾವು ಮೊದಲಾದ ಅನೇಕ ಉತ್ತಮೋತ್ತಮ ವೃಕ್ಷಗಳಿಂದ ನಿಬಿಡವಾಗಿ ರುವುದಲ್ಲದೇ ಇಲ್ಲಿ ಮಲ್ಲಿಗೆ ಕುಸುಮಗಳ ಮಕರಂದವನ್ನು ಸವಿದ ಭ್ರಮರಗಳು ಪರಿಪುಷ್ಟಗಳಾಗಿ ಹಾರಾಡುತ್ತಲಿವೆ. ಕೆಂಪು ಕುಸುಮಗಳ ಗುಚ್ಛಗಳ ಪರಿಮಳದಿಂದ ನಾಲ್ಕೂ ದಿಕ್ಕುಗಳು ಸುಗಂಧಪೂರ್ಣಗಳಾಗಿದ್ದವಲ್ಲದೇ, ಇಲ್ಲಿ ತುಂಬಿ ಹರಿಯುವ ನದಿಗಳೂ ಆ ಪರಿಮಳದಿಂದ ಯುಕ್ತಗಳಾಗಿದ್ದವು. ಕೋಗಿಲೆಗಳ ಕುಹೂऽऽऽ ಕುಹೂऽऽऽ ಎಂಬ ಪಂಚಮಧ್ವನಿಯು ಆ ಪರ್ವತದಲ್ಲೆಲ್ಲ ಪ್ರತಿಧ್ವನಿಸುತ್ತಿತ್ತು, ಈ ಪರ್ವತದ ಕೆಲವು ಗವಿಗಳಲ್ಲಿ ಕಿನ್ನರ ಸ್ತ್ರೀಯರು ಮಧುರವಾದ ಗಾನವನ್ನು ಮಾಡುತ್ತಿದ್ದರೆ, ಮತ್ತೆ ಕೆಲವು ಗವಿಗಳಲ್ಲಿ ಸಾನಂದಯೋಗೀಂದ್ರರ ಅನೇಕ ಜನ ಶಿಷ್ಯರಾದ ಯೋಗಿಗಳು ತಮ್ಮ ಯೋಗಸಾಧನೆಯನ್ನು ಮಾಡುತ್ತಿದ್ದರು. ಕೈಲಾಸ ಪರ್ವತದಲ್ಲಿಯ ಮಾನಸ ಸರೋವರವು ತನ್ನ ಸುವರ್ಣ ಕಮಲಗಳ ಸುವಾಸನೆಯಿಂದ ಪರ್ವತವನ್ನೆಲ್ಲ ಸುಗಂಧಭರಿತವನ್ನಾಗಿ ಮಾಡಿತ್ತು.

ಈ ಕೈಲಾಸಮಧ್ಯದಲ್ಲಿ, ಸುವರ್ಣ ನಿರ್ಮಿತಗಳಾದ ವಿಶಾಲ ಕಂಭಗಳಿಂದ ರಚಿಸಲ್ಪಟ್ಟ ಒಂದು ಬಹು ದೊಡ್ಡದಾದ ಮಂಟಪವು ವಿರಾಜಿಸುತ್ತಿತ್ತು. ಅದರಲ್ಲಿ ಮಾಣಿಕ್ಯ ಮೊದಲಾದ ದಿವ್ಯರತ್ನಗಳಿಂದ ನಿರ್ಮಿತಗಳಾದ ದೀಪಗಳ ಪ್ರಕಾಶವು ವ್ಯಾಪಕವಾಗಿತ್ತು. ಆ ಮಂಟಪದ ಮಹಾದ್ವಾರದ ತೋರಣಸ್ತಂಭಗಳ ಮೇಲೆ ಶಂಖ ಹಾಗೂ ಪದ್ಮಗಳೆಂಬ ನಿಧಿಗಳನ್ನು ಇರಿಸಿದ್ದರು. ಆ ವಿಶಾಲವಾದ ಮಂಟಪದ ಛತ್ತು ನಕ್ಷತ್ರದಂತಿರುವ ಮುತ್ತುಗಳಿಂದ ರಚಿತವಾಗಿತ್ತಲ್ಲದೇ, ಗೋಡೆಗಳ ಸಾಲುಗಳು ವೈಡೂರ್ಯಮಣಿಗಳಿಂದ ವಿರಚಿತಗಳಾಗಿದ್ದವು. ಆ ಕೈಲಾಸದಲ್ಲಿ ಅತ್ತಿತ್ತ ಸಂಚರಿ ಸುತ್ತಿರುವ ಪ್ರಮಥಪುಂಗವರ ಪಾದಗಳಲ್ಲಿಯ ಗೆಜ್ಜೆಯ ಶಬ್ದಗಳು ಯಾವಾಗಲೂ ಕೇಳಿಬರುತ್ತಿದ್ದವು. ಹೀಗೆ ಸರ್ವ ಸಂಪದ್ಭರಿತವಾದ ಆ ಕೈಲಾಸದಲ್ಲಿ ಹವಳದಿಂದ ಮಾಡಿದ ಶಿಖರಗಳುಳ್ಳ ಒಂದು ದಿವ್ಯ ಮಂಟಪದಲ್ಲಿ ಒಂದಾನೊಂದು ಸಮಯ ಪರಮಾತ್ಮನು ಆಸೀನನಾಗಿದ್ದನು.

ಇಂತಹ ಸಿಂಹಾಸನದಲ್ಲಿ ಆಸೀನನಾದ ಆ ಪರಮಾತ್ಮನನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಹದಿನೈದು ಶ್ಲೋಕಗಳಿಂದ ವರ್ಣಿಸುತ್ತಾರೆ–

ವಂದಾರುದೇವಮುಕುಟಮಂದಾರರಸವಾಸಿತಂ ।
ರತ್ನಸಿಂಹಾಸನಂ ದಿವ್ಯಮಧ್ಯಸ್ಥಂ ಪರಮೇಶ್ವರಂ

(ಸಿ. ಶಿ. ೩–೯)

ಅರ್ಥ : ವಂದಾರು=ನಮಸ್ಕರಿಸುತ್ತಿರುವ, ದೇವ=ದೇವತೆಗಳ, ಮುಕುಟ ಮಂದಾರ=ಕಿರೀಟಗಳಲ್ಲಿರುವ ಮಂದಾರ ಕುಸುಮಗಳ, ರಸ=ಪರಿಮಳದಿಂದ, ವಾಸಿತಂ=ಸುವಾಸಿತವಾಗಿರುವ, ದಿವ್ಯಂ=ದೇವಲೋಕಸಂಬಂಧಿಯಾದ, ರತ್ನಸಿಂಹಾಸನಂ=ರತ್ನಸಿಂಹಾಸನವನ್ನು ಅಧ್ಯಸ್ಥಂ=ಆಶ್ರಯಿಸಿ ಕುಳಿತಿರುವ, ಪರಮೇಶ್ವರಂ= ಪರಮೇಶ್ವರನನ್ನು, ಪರಿವಾರದೇವತೆಗಳು ಸೇವಿಸುತ್ತಿದ್ದರು.

ತಮಾಸ್ಥಾನಗತಂ ದೇವಂ ಸರ್ವಲೋಕಮಹೇಶ್ವರಂ ।
ತ್ರಯ್ಯಂತಕಮಲಾರಣ್ಯವಿಹಾರಕಲಹಂಸಕಂ

(ಸಿ. ಶಿ. ೩–೧೦)

ಅರ್ಥ : ಪೂರ್ವೋಕ್ತವಾದ ಸಿಂಹಾಸನದಲ್ಲಿ ಪರಮಾತ್ಮನು ಹೇಗೆ ಶೋಭಿಸುತ್ತಿದ್ದನೆಂಬುದನ್ನು ವರ್ಣಿಸುತ್ತಾರೆ–

ತ್ರಯೀ=ವೇದಗಳ, ಅಂತ=ಕೊನೆಯ ಭಾಗವಾದ ಉಪನಿಷತ್ತೆಂಬ, ಕಮಲಾರಣ್ಯ=ಕಮಲಗಳ ವನದಲ್ಲಿ, ವಿಹಾರ=ವಿಹರಿಸುತ್ತಿರುವ, ಕಲಹಂಸಕಂ= ರಾಜಹಂಸನಂತಿರುವ, ಆಸ್ಥಾನಗತಂ=ಆಸ್ಥಾನದಲ್ಲಿ ಕುಳಿತಿರುವ, ಸರ್ವಲೋಕ ಮಹೇಶ್ವರಂ=ಸಕಲ ಲೋಕಗಳಿಗೆ ಒಡೆಯನಾದ, ತಂ ದೇವಂ=ದೇವತೆಗಳಿಗೂ ದೇವನಾದ ಆ ಪರಮೇಶ್ವರನನ್ನು (ಪರಿವಾರ ದೇವತೆಗಳು ಸೇವಿಸುತ್ತಿದ್ದರು).

ಉದಾರಗುಣಮೋಂಕಾರ ಶುಕ್ತಿಕಾಪುಟಮೌಕ್ತಿಕಂ ।
ಸರ್ವಮಂಗಲಸೌಭಾಗ್ಯ ಸಮುದಾಯನಿಕೇತನಂ

(ಸಿ. ಶಿ. ೩–೧೧)

ಅರ್ಥ : ಉದಾರಗುಣಂ=ಔದಾರ್ಯಗುಣವುಳ್ಳ, ಓಂಕಾರ=ಓಂಕಾರವೆಂಬ, ಶುಕ್ತಿಕಾಪುಟ=ಶುಕ್ತಿಕಾಪುಟಕ್ಕೆ, ಮೌಕ್ತಿಕಂ=ಮುತ್ತಿನ ಸ್ವರೂಪನೂ, ಸರ್ವ=ನಾನಾ ಪ್ರಕಾರಗಳಾದ, ಮಂಗಲ=ಮಂಗಲಗಳ, ಸೌಭಾಗ್ಯ=ಸೌಭಾಗ್ಯಗಳ, ಸಮುದಾಯ= ಸಮೂಹಕ್ಕೆ, ನಿಕೇತನಂ=ಮಂದಿರಸ್ವರೂಪನೂ.

ಸಂಸಾರವಿಷಮೂರ್ಛಾಲಜೀವಸಂಜೀವನೌಷಧಂ ।
ನಿತ್ಯಪ್ರಕಾಶನೈರ್ಮಲ್ಯಂ ಕೈವಲ್ಯಸುರಪಾದಪಂ

(ಸಿ. ಶಿ. ೩–೧೨)

ಅರ್ಥ : ಸಂಸಾರ=ಸಂಸಾರವೆಂಬ, ವಿಷ=ವಿಷದಿಂದ, ಮೂರ್ಚ್ಛಾಲ=ಮೂರ್ಚ್ಛಿತರಾದ, ಜೀವ=ಜೀವಿಗಳಿಗೆಲ್ಲ, ಸಂಜೀವನೌಷಧಮ್=ಸಂಜೀವನೀ ಔಷಧದಂತಿರುವ, ನಿತ್ಯಪ್ರಕಾಶ=ನಿತ್ಯಪ್ರಕಾಶದಿಂದ, ನೈರ್ಮಲ್ಯಂ=ನಿರ್ಮಲ ಸ್ವಭಾವದವನಾದ, ಕೈವಲ್ಯ ಸುರಪಾದಪಂ=ಮುಕ್ತಿರೂಪ ಕಲ್ಪವೃಕ್ಷನಾಗಿರುವ.

ಅನಂತಪರಮಾನಂದಮಕರಂದಮಧುವ್ರತಂ ।
ಆತ್ಮಶಕ್ತಿಲತಾಪುಷ್ಯತ್ರಿಲೋಕೀಪುಷ್ಪಕೋರಕಂ

(ಸಿ. ಶಿ. ೩–೧೩)

ಅರ್ಥ : ಅನಂತ=ಅಪಾರವಾದ, ಪರಮಾನಂದ=ಪರಮಾನಂದವೆಂಬ, ಮಕರಂದ=ಪುಷ್ಪರಸವನ್ನು ಪಾನಮಾಡುವುದರಲ್ಲಿ, ಮಧುವ್ರತಂ=ಭೃಂಗಸ್ವರೂಪನಾದ, ಆತ್ಮಶಕ್ತಿ=ತನ್ನಲ್ಲಿ ನಿತ್ಯಸಂಬಂಧದಿಂದಿರುವ ಶಕ್ತಿ ಎಂಬ, ಲತಾ=ಬಳ್ಳಿಯಿಂದ, ಪುಷ್ಯತ್=ರಕ್ಷಿಸಲ್ಪಡುತ್ತಿರುವ, ತ್ರಿಲೋಕೀ=ಮೂರು ಲೋಕಗಳೆಂಬ, ಪುಷ್ಪ=ಹೂವುಗಳ, ಕೋರಕಂ=ಮೊಗ್ಗೆಗಳನ್ನುಳ್ಳವನಾದ.

ಬ್ರಹ್ಮಾಂಡಕುಂಡಿಕಾಷಂಡಪಿಂಡೀಕರಣಪಂಡಿತಂ ।
ಸಮಸ್ತದೇವತಾಚಕ್ರ ಚಕ್ರವರ್ತಿಪದೇ ಸ್ಥಿತಂ

(ಸಿ. ಶಿ. ೩–೧೪)

ಅರ್ಥ : ಬ್ರಹ್ಮಾಂಡ=ಅನಂತ ಬ್ರಹ್ಮಾಂಡಗಳೆಂಬ, ಕುಂಡಿಕಾ=ಪಾತ್ರೆಗಳ, ಷಂಡ=ಸಮೂಹವನ್ನು, ಪಿಂಡೀಕರಣ=ಒಂದುಗೂಡಿಸುವುದರಲ್ಲಿ, ಪಂಡಿತಂ=ಕುಶಲನಾದ, ಸಮಸ್ತ=ಎಲ್ಲ, ದೇವತಾಚಕ್ರ=ದೇವತಾಸಮೂಹಕ್ಕೆ, ಚಕ್ರವರ್ತಿಪದೇ=ಸಾರ್ವಭೌಮಸ್ಥಾನದಲ್ಲಿ, ಸ್ಥಿತಂ=ಇರುತ್ತಿರುವ,

ಚಂದ್ರಬಿಂಬಾಯುತಚ್ಛಾಯಾದಾಯಾದದ್ಯುತಿವಿಗ್ರಹಂ ।
ಮಾಣಿಕ್ಯಮುಕುಟಜ್ಯೋತಿರ್ಮಂಜರೀಪಿಂಜರಾಂಬರಂ

(ಸಿ. ಶಿ. ೩–೧೫)

ಅರ್ಥ : ಅಯುತ=ಹತ್ತುಸಾವಿರ, ಚಂದ್ರಬಿಂಬಚ್ಛಾಯಾ=ಚಂದ್ರಮಂಡಲಗಳ ಕಾಂತಿಗೆ, ದಾಯಾದ=ಸ್ಪರ್ಧಿಸುತ್ತಿರುವ, ದ್ಯುತಿ=ಕಾಂತಿಯಿಂದ ಕೂಡಿದ, ವಿಗ್ರಹಂ=ದೇಹವುಳ್ಳ, ಮಾಣಿಕ್ಯಮುಕುಟ=ರತ್ನಕಿರೀಟಗಳ (ನಮಸ್ಕರಿಸಲು ಬಂದ ದೇವತೆಗಳ ಮಸ್ತಕದಲ್ಲಿ ಇರುವ), ಜ್ಯೋತಿರ್ಮಂಜರೀ=ಪ್ರಕಾಶಮಾನಗಳಾದ ಕಿರಣಗಳಿಂದ, ಪಿಂಜರಾಂಬರಂ=ವಿಚಿತ್ರ ಬಣ್ಣದ ವಸ್ತ್ರವುಳ್ಳವನಾದ.

ಚೂಡಾಲಂ ಸೋಮಕಲಯಾ ಸುಕುಮಾರಬಿಸಾಭಯಾ ।
ಕಲ್ಯಾಣಪುಷ್ಪಕಲಿಕಾಕರ್ಣಪೂರಮನೋಹರಂ

(ಸಿ. ಶಿ. ೩–೧೬)

ಅರ್ಥ : ಸುಕುಮಾರ=ಕೋಮಲವಾದ, ಬಿಸ=ಕಮಲತಂತುವಿನಂತೆ, ಆಭಯಾ =ಪ್ರಕಾಶಿಸುವ, ಸೋಮಕಲಯಾ=ಚಂದ್ರಕಲೆಯಿಂದ, ಚೂಡಾಲಂ=ಶಿರೋಭೂಷಣ ವಾದವನಾದ, ಕಲ್ಯಾಣ=ಮಂಗಲಗಳಾದ, ಪುಷ್ಪಕಲಿಕಾ=ಹೂವಿನ ಮೊಗ್ಗೆಗಳೆಂಬ, ಕರ್ಣಪೂರ=ಕರ್ಣಾಭರಣದಿಂದ, ಮನೋಹರಂ=ಸುಂದರನಾಗಿ ತೋರುತ್ತಿರುವ,

ಮುಕ್ತಾವಲಯಸಂಬದ್ಧರುಂಡಮಾಲಾವಿರಾಜಿತಂ ।
ಪರ್ಯಾಪ್ತಚಂದ್ರಸೌಂದರ್ಯಪರಿಪಂಥಿಮುಖಶ್ರಿಯಂ

(ಸಿ. ಶಿ. ೩–೧೭)

ಅರ್ಥ : ಮುಕ್ತಾವಲಯ=ಮುತ್ತಿನಸರಗಳಿಂದ, ಸಂಬದ್ಧ=ಯುಕ್ತವಾದ, ರುಂಡ ಮಾಲಾ=ರುಂಡಮಾಲೆಯಿಂದ, ವಿರಾಜಿತಂ=ಶೋಭಿಸುವವನಾದ, ಪರ್ಯಾಪ್ತ= ಪರಿಪೂರ್ಣನಾದ, ಚಂದ್ರ=ಚಂದ್ರನ, ಸೌಂದರ್ಯ=ಸೌಂದರ್ಯವನ್ನು, ಪರಿಪಂಥಿ= ತಿರಸ್ಕರಿಸುತ್ತಿರುವ, ಮುಖಶ್ರಿಯಂ=ಮುಖದಕಾಂತಿಯುಳ್ಳವನಾದ.

ಪ್ರಾತಃ ಸಂಫುಲ್ಲಕಮಲಪ್ರತೀಕಾಶತ್ರಿಲೋಚನಂ ।
ಮಂದಸ್ಮಿತಮಿತಾಲಾಪಮಧುರಾಧರಪಲ್ಲವಂ

(ಸಿ. ಶಿ. ೩–೧೮)

ಅರ್ಥ : ಪ್ರಾತಃ=ಪ್ರಾತಃಕಾಲದಲ್ಲಿ, ಸಂಫುಲ್ಲ=ಅರಳಿದ, ಕಮಲ=ಕಮಲ ಗಳಿಗೆ, ಪ್ರತೀಕಾಶ=ಸಮಾನಗಳಾದ, ತ್ರಿಲೋಚನಂ=ಮೂರು ನೇತ್ರಗಳುಳ್ಳವನಾದ, ಮಂದಸ್ಮಿತ=ಮುಗುಳ್ನಗೆಯಿಂದ, ಮಿತಾಲಾಪ=ಮಿತಭಾಷಣದಿಂದ ಯುಕ್ತಗಳಾದ, ಮಧುರಾಧರಪಲ್ಲವಂ=ಸುಮನೋಹರವಾದ ತುಟಿಗಳುಳ್ಳವನಾದ.

ಗಂಡಮಂಡಲಪರ್ಯಂತಕ್ರೀಡನ್ಮಕರಕುಂಡಲಂ ।
ಕಾಲಿಮ್ನಾ ಕಾಲಕೂಟಸ್ಯ ಕಂಠನಾಲೇ ಕಲಂಕಿತಂ

(ಸಿ. ಶಿ. ೩–೧೯)

ಅರ್ಥ : ಗಂಡಮಂಡಲಪರ್ಯಂತ=ಗಲ್ಲದವರೆಗೆ, ಕ್ರೀಡನ್= ಜೋಲಾಡುತ್ತಿ ರುವ, ಮಕರಕುಂಡಲಂ=ಮೊಸಳೆಯಾಕಾರದ ಕುಂಡಲಗಳನ್ನು ಧರಿಸಿದ, ಕಂಠನಾಲೇ =ಕುತ್ತಿಗೆಯಲ್ಲಿ, ಕಾಲಕೂಟಸ್ಯ=ಕಾಲಕೂಟ ವಿಷದ, ಕಾಲಿಮ್ನಾ= ಕಪ್ಪುಛಾಯೆಯಿಂದ, ಕಲಂಕಿತಂ=ಕಪ್ಪುಕಲೆಯುಳ್ಳವನಾದ.

ಮಣಿಕಂಕಣಕೇಯೂರಮರೀಚಿಕರಪಲ್ಲವೈಃ ।
ಚತುರ್ಭಿಃ ಸಂವಿರಾಜಂತಂ ಬಾಹುಮಂದಾರಶಾಖಿಭಿಃ

(ಸಿ. ಶಿ. ೩–೨೦)

ಅರ್ಥ : ಮಣಿಕಂಕಣ=ರತ್ನದ ಕಡಗಗಳ, ಕೇಯೂರ=ರತ್ನಮಯ ಭುಜಕಿರೀಟ (ತೋಳುಬಳೆ)ಗಳ, ಮರೀಚಿ=ಕಾಂತಿಯಿಂದ ಕೂಡಿದ, ಕರಪಲ್ಲವೈಃ=ಚಿಗುರಿನಂತೆ ಕೋಮಲಗಳಾದ ಹಸ್ತಗಳುಳ್ಳ ಮತ್ತು ಚತುರ್ಭಿಃ ಮಂದಾರಶಾಖಿಭಿಃ=ಮಂದಾರ

ವೃಕ್ಷದ ಶಾಖೆಗಳಂತೆ ಸುಂದರಗಳಾದ ನಾಲ್ಕು ಭುಜಗಳಿಂದ, ಸಂವಿರಾಜತಂ= ಪರಿಶೋಭಿಸುತ್ತಿರುವ,

ಗೌರೀಪಯೋಧರಾಶ್ಲೇಷಕೃತಾರ್ಥಭುಜಮಧ್ಯಮಂ ।
ಸುವರ್ಣಬ್ರಹ್ಮಸೂತ್ರಾಂಕಂ ಸೂಕ್ಷ್ಮಕೌಶೇಯವಾಸಸಂ

(ಸಿ. ಶಿ. ೩–೨೧)

ಅರ್ಥ : ಗೌರೀ=ಪಾರ್ವತೀದೇವಿಯ, ಪಯೋಧರ=ಕುಚಗಳ, ಆಶ್ಲೇಷ= ಆಲಿಂಗನದಿಂದ, ಕೃತಾರ್ಥ=ಸಾರ್ಥಕವಾದ, ಭುಜಮಧ್ಯಮಂ=ಎದೆಯುಳ್ಳಂತಹ, ಸುವರ್ಣ=ಸುವರ್ಣದ, ಬ್ರಹ್ಮಸೂತ್ರಾಂಕಂ= ಯಜ್ಞೋಪವೀತದಿಂದ ಯುಕ್ತನಾದ, ಸೂಕ್ಷ್ಮ=ಅತಿ ಸೂಕ್ಷ್ಮವಾದ, ಕೌಶೇಯ=ರೇಶ್ಮೆಯ, ವಾಸಸಂ=ವಸ್ತ್ರವನ್ನು ಧರಿಸಿದ.

ನಾಭಿಸ್ಥಾನಾವಲಂಬಿನ್ಯಾ ನವಮೌಕ್ತಿಕಮಾಲಯಾ ।
ಗಂಗಯೇವ ಕೃತಾಶ್ಲೇಷಂ ಮೌಲಿಭಾಗಾವತೀರ್ಣಯಾ

(ಸಿ. ಶಿ. ೩–೨೨)

ಅರ್ಥ : ನಾಭಿಸ್ಥಾನ=ನಾಭಿಸ್ಥಾನದವರೆಗೆ, ಅವಲಂಬಿನ್ಯಾ=ಜೋಲಾಡುತ್ತಿರುವ, ಮೌಲಿಭಾಗ=ಮಸ್ತಕಭಾಗದಿಂದ, ಅವತೀರ್ಣಯಾ=ಇಳಿದುಬಂದ, ಗಂಗಯೇವ= ಗಂಗೆಯೋ ಏನೋ ಎಂಬಂತೆ ಇರುವ, ನವ=ನೂತನವಾದ, ಮೌಕ್ತಿಕಮಾಲಾಯಾ= ಮುತ್ತಿನಸರದಿಂದ, ಕೃತಾಶ್ಲೇಷಂ=ಆಲಿಂಗಿತನಾಗಿರುವ.

ಪದೇನ ಮಣಿಮಂಜೀರಪ್ರಭಾಪಲ್ಲವಿತಶ್ರಿಯಾ ।
ಚಂದ್ರವತ್ ಸ್ಫಾಟಿಕಂ ಪೀಠಂ ಸಮಾವೃತ್ಯ ಸ್ಥಿತಂ ಪುರಃ

(ಸಿ. ಶಿ. ೩–೨೩)

ಅರ್ಥ : ಪುರಃ=ಮುಂಭಾಗದಲ್ಲಿ, ಮಣಿಮಂಜೀರ=ರತ್ನನೂಪುರಗಳ, ಪ್ರಭಾ =ಕಾಂತಿಯಿಂದ, ಪಲ್ಲವಿತಶ್ರಿಯಾ=ಪಲ್ಲವಾಕಾರದ ಶೋಭೆಯನ್ನು ಧರಿಸಿದ, ಪದೇನ=ಪಾದದಿಂದ, ಚಂದ್ರವತ್=ಚಂದ್ರನಂತೆ ಶುಭ್ರವಾಗಿರುವ, ಸ್ಫಾಟಿಕಂ= ಸ್ಫಟಿಕಮಯವಾದ, ಪೀಠ=ಪಾದಪೀಠವನ್ನು, ಸಮಾವೃತ್ಯ=ಮೆಟ್ಟಿ, ಸ್ಥಿತಂ=ಕುಳಿತಿರುವ ಪರಮೇಶ್ವರನನ್ನು ಪರಿವಾರ ದೇವತೆಗಳು ಸೇವಿಸುತ್ತಿದ್ದರು ಎಂದು ಭಾವವು.

ಶ್ರೀ ಶಿವಯೋಗಿ ಶಿವಾಚಾರ್ಯರು ಒಂಭತ್ತನೇ ಶ್ಲೋಕದಿಂದ ಇಪ್ಪತ್ತು ಮೂರನೇ ಶ್ಲೋಕದವರೆಗೆ ಸಿಂಹಾಸನಾಸೀನನಾದ ಪರಶಿವನನ್ನು ನಾನಾ ವಿಧದಲ್ಲಿ ವರ್ಣಿಸಿರುತ್ತಾರೆ. ಅದನ್ನೇ ಈಗ ಸಂಕ್ಷಿಪ್ತವಾಗಿ ವಿವರಿಸುತ್ತೇವೆ–ಕೈಲಾಸ ಪರ್ವತ ದಲ್ಲಿಯ ಸಿಂಹಾಸನದ ಮೇಲೆ ಕುಳಿತ ಆ ಪರಶಿವನ ದರ್ಶನಕ್ಕಾಗಿ ಆಗಮಿಸಿದ ದೇವತೆಗಳ ಕಿರೀಟಗಳಲ್ಲಿಯ ಮಂದಾರ ಪುಷ್ಪಗಳ ಸುಗಂಧವು ಎಲ್ಲೆಡೆಯಲ್ಲಿ ಹರಡಿತ್ತು ದೇವಾಧಿದೇವನಾದ ಪರಮಾತ್ಮನು ಉಪನಿಷತ್ತುಗಳ ತತ್ವಾರ್ಥದಲ್ಲಿಯೇ ತಲ್ಲೀನನಾಗಿ ಕುಳಿತಿದ್ದನು. ಅತ್ಯಂತ ಉದಾರ ಸ್ವಭಾವದವನಾದ ಪರಮಾತ್ಮನು ಓಂಕಾರವೆಂಬ

ಚಿಪ್ಪಿನಿಂದ ಉದಯಿಸಿದ ಮುತ್ತಿನೋಪಾದಿಯಲ್ಲಿ ಸಮಸ್ತ ಮಂಗಲ ಪರಂಪರೆಗಳಿಗೆ ಮತ್ತು ಸಕಲ ಸೌಭಾಗ್ಯಗಳಿಗೆ ಮಂದಿರಸ್ವರೂಪನಾಗಿದ್ದನು. ಸಂಸಾರರೂಪವಾದ ವಿಷಪಾನದಿಂದ ಮೂರ್ಛಿತರಾದ ಜೀವಿಗಳಿಗೆ ಸಂಜೀವಿನಿ ಔಷಧದಂತಿರುವ ಶಿವನು ಮೋಕ್ಷಾಪೇಕ್ಷಿಗಳಿಗೆ ಮುಕ್ತಿಯನ್ನು ಕೊಡುವ ಕಲ್ಪವೃಕ್ಷದಂತೆ ಪರಿಶೋಭಿಸುತ್ತಿದ್ದನು.

ಶಾಶ್ವತಾನಂದಸ್ವರೂಪವಾದ ಆ ಪರಶಿವನು ತನ್ನಲ್ಲಿ ಅವಿನಾಭಾವ ಸಂಬಂಧ ದಿಂದಿರುವ ಶಕ್ತಿಯಿಂದ ಮೂರು ಲೋಕಗಳನ್ನೂ ಸೃಜಿಸಿದವನಾಗಿದ್ದಾನೆ. ಪ್ರಳಯ ಸಮಯದಲ್ಲಿ ಅನಂತಕೋಟಿ ಬ್ರಹ್ಮಾಂಡಗಳನ್ನು ಒಂದುಗೂಡಿಸಿ ತನ್ನಲ್ಲಿ ಅಡಗಿಸಿ ಕೊಳ್ಳುವ ಸಾಮರ್ಥ್ಯವುಳ್ಳ ಇವನು ಸಕಲ ದೇವತಾ ಸಮೂಹಕ್ಕೆ ಚಕ್ರವರ್ತಿಯೂ ಆಗಿರುತ್ತಾನೆ. ಶಿವನ ದೇಹದ ಕಾಂತಿಯು ಹತ್ತುಸಾವಿರ ಚಂದ್ರರ ಕಾಂತಿಗೆ ಸಮಾನವಾಗಿತ್ತಲ್ಲದೇ, ನಮಸ್ಕರಿಸಲು ಬಂದ ಅನೇಕ ದೇವತೆಗಳ ಕಿರೀಟಗಳಲ್ಲಿಯ ರತ್ನಗಳ ಕಾಂತಿಯಿಂದ ಶಿವನ ವಸ್ತ್ರಗಳು ನಾನಾ ವರ್ಣರಂಜಿತಗಳಾಗಿ ಪರಿಶೋಭಿ ಸುತ್ತಿದ್ದವು. ಅತಿ ಕೋಮಲವಾದ ಕಮಲದ ದಂಟಿನಂತೆ ಇರುವ ಬಾಲಚಂದ್ರನನ್ನು ತನ್ನ ಮಸ್ತಕದಲ್ಲಿ ಧರಿಸಿದ ಶಿವನು, ಕಿವಿಯಲ್ಲಿ ಮಂಗಲಕರಗಳಾದ ಪುಷ್ಪಗಳನ್ನು ಕುಂಡಲಗಳನ್ನಾಗಿ ಮಾಡಿಕೊಂಡಿದ್ದನು. ಪೂರ್ಣಚಂದ್ರನ ಜೊತೆಗೆ ಸ್ಪರ್ಧಿಸುವ ಮುಖಮಂಡಲವುಳ್ಳ ಶಿವನು, ಕೊರಳಲ್ಲಿ ಮುತ್ತಿನ ಸರದಿಂದ ಕಟ್ಟಿದ ರುಂಡಮಾಲೆ ಗಳನ್ನು ಶಿವನು ಧರಿಸಿದ್ದನು. ಶಿವನ ತ್ರಿನೇತ್ರಗಳು ಅರಳಿದ ಕಮಲಗಳಂತೆ ಪರಿಶೋಭಿಸುತ್ತಿದ್ದವು. ಕಪೋಲ ಪರ್ಯಂತವಾಗಿ ಜೋಲಾಡುತ್ತಿರುವ ಮಕರ ಕುಂಡಲ ಗಳನ್ನು ಧರಿಸಿದ ಶಿವನ ಕಂಠವು, ಕಾಲಕೂಟ ವಿಷದ ಪಾನದ ಪರಿಣಾಮವಾಗಿ ಕಪ್ಪು ಬಣ್ಣದಿಂದ ಒಪ್ಪುತ್ತಿತ್ತು. ಕಲ್ಪವೃಕ್ಷದ ರೆಂಬೆಗಳಂತಿರುವ ಶಿವನ ನಾಲ್ಕೂ ಕೈಗಳಲ್ಲಿ ಮುತ್ತಿನ ಕಂಕಣಗಳು ಮತ್ತು ಭುಜಕಿರೀಟ (ತೋಳುಬಂದಿ)ಗಳು ಶೋಭಿಸುತ್ತಿದ್ದವು. ಚಿನ್ನದ ಯಜ್ಞೋಪವೀತವನ್ನೂ, ತೆಳುವಾದ ರೇಶ್ಮೆ ವಸ್ತ್ರಗಳನ್ನೂ ಧರಿಸಿದ ಶಿವನು, ಪಾರ್ವತಿಯ ಕುಚಾಲಿಂಗನದಿಂದ ತನ್ನ ಎದೆಯನ್ನು ಸಾರ್ಥಕವಾಗಿ ಮಾಡಿಕೊಂಡಿ ದ್ದನು. ಶಿವನ ಕೊರಳಲ್ಲಿ ನಾಭಿಪರ್ಯಂತವಾಗಿ ನೇತಾಡುತ್ತಿರುವ ಮುತ್ತಿನ ಸರವು, ಶಿವನ ವಕ್ಷಸ್ಥಲವನ್ನು ಗಂಗೆಯು ಆಲಿಂಗಿಸಿರುವಳೋ ಏನೋ ಎಂಬಂತೆ ತೋರುತ್ತಿತ್ತು ಹೀಗೆಲ್ಲ ಸುಶೋಭಿತನಾದ ಶಿವನು ಸಿಂಹಾಸನದ ಮುಂದಿರುವ ಚಂದ್ರಕಾಂತ ಶಿಲೆಯಿಂದ ನಿರ್ಮಿತವಾದ ಪಾದಪೀಠದ ಮೇಲೆ ತನ್ನೊಂದು ಪಾದವನ್ನು ಇರಿಸಿ ಒಳ್ಳೇ ಠೀವಿಯಿಂದ ಆಸೀನನಾಗಿದ್ದನು.

ಹೀಗೆ ಪರಮಾತ್ಮನನ್ನು ವರ್ಣಿಸಿದ ಕವಿಯು ಇನ್ನು ಮುಂದೆ ಹದಿಮೂರು ಶ್ಲೋಕಗಳಿಂದ ವಾಮಪಾರ್ಶ್ವದಲ್ಲಿದ್ದ ಶಕ್ತಿಯನ್ನು ವರ್ಣಿಸುತ್ತಾನೆ–

ವಾಮಪಾರ್ಶ್ವನಿವಾಸಿನ್ಯಾ ಮಂಗಲಪ್ರಿಯವೇಷಯಾ ।
ಸಮಸ್ತಲೋಕನಿರ್ಮಾಣಸಮವಾಯಸ್ವರೂಪಯಾ

(ಸಿ. ಶಿ. ೩–೨೪)

ಅರ್ಥ : ವಾಮಪಾರ್ಶ್ವ=ಪರಶಿವನ ಎಡಭಾಗದಲ್ಲಿ, ನಿವಾಸಿನ್ಯಾ=ಕುಳಿತಿರುವ, ಮಂಗಲ=ಮಂಗಲಕರಗಳೂ, ಪ್ರಿಯ=ಪ್ರಿಯಕರಗಳೂ ಆದ, ವೇಷಾಯಾ= ವೇಷವುಳ್ಳ, ಸಮಸ್ತ=ಎಲ್ಲ ಲೋಕ=ಭುವನಗಳ, ನಿರ್ಮಾಣ=ನಿರ್ಮಿಸುವುದರಲ್ಲಿ ಸಮವಾಯಸ್ವರೂಪಾಯ=ಶಿವನೊಂದಿಗೆ ಸಮವಾಯ (ನಿತ್ಯ) ಸಂಬಂಧದಿಂದ ಇರುವವಳಾದ ಪಾರ್ವತಿಯೊಡನೆ ಕುಳಿತಿದ್ದ ಶಿವನನ್ನು ಪರಿವಾರ ದೇವತೆಗಳು ಸೇವಿಸುತ್ತಿದ್ದರು.

ಇಚ್ಛಾಜ್ಞಾನಕ್ರಿಯಾರೂಪಬಹುಶಕ್ತಿವಿಲಾಸಯಾ ।
ವಿದ್ಯಾತತ್ತ್ವಪ್ರಕಾಶಿನ್ಯಾ ವಿನಾಭಾವವಿಹೀನಯಾ

(ಸಿ. ಶಿ. ೩–೨೫)

ಅರ್ಥ : ಇಚ್ಛಾ–ಜ್ಞಾನ–ಕ್ರಿಯಾರೂಪ=ಇಚ್ಛಾ, ಜ್ಞಾನ, ಕ್ರಿಯಾರೂಪವಾದ, ಬಹುಶಕ್ತಿ=ಅನೇಕ ಶಕ್ತಿಗಳಿಂದ, ವಿಲಾಸಾಯ=ಕೂಡಿರುವವಳಾದ, ವಿದ್ಯಾತತ್ತ್ವ= ಆತ್ಮವಿದ್ಯಾಸ್ವರೂಪವನ್ನು, ಪ್ರಕಾಶಿನ್ಯಾ=ಪ್ರಕಾಶಿಸುವವಳಾದ, ವಿನಾಭಾವವಿಹೀನಯಾ =ಶಿವನೊಡನೆ ಅವಿನಾಭಾವ ಸಂಬಂಧದಿಂದ ಇರುವವಳಾದ.

ಸಂಸಾರವಿಷಕಾಂತಾರದಾಹದಾವಾಗ್ನಿಲೇಖಯಾ ।
ಧಮ್ಮಿಲ್ಲಮಲ್ಲಿಕಾಮೋದಝುಂಕುರ್ವದ್ಭೃಂಗಮಾಲಯಾ

(ಸಿ. ಶಿ. ೩–೨೬)

ಅರ್ಥ : ಸಂಸಾರ=ಸಂಸಾರವೆಂಬ, ವಿಷಕಾಂತಾರ=ವಿಷದ ಅರಣ್ಯವನ್ನು, ದಾಹ =ಸುಡವುದರಲ್ಲಿ,ದಾವಾಗ್ನಿಲೇಖಯಾ=ಅರಣ್ಯಾಗ್ನಿಯೋಪಾದಿಯಲ್ಲಿರುವ, ಧಮ್ಮಿಲ್ಲ= ತುರುಬಿನಲ್ಲಿರುವ, ಮಲ್ಲಿಕಾ=ಮಲ್ಲಿಗೆ ಹೂವುಗಳ, ಆಮೋದ=ಸುಗಂಧದಿಂದ, ಝುಂಕುರ್ವದ್=ಝೇಂಕರಿಸುತ್ತಿರುವ, ಭೃಂಗಮಾಲಯಾ=ಭ್ರಮರಗಳ ಪಂಕ್ತಿ ಯುಳ್ಳವಳಾದ.

ಸಂಪೂರ್ಣಚಂದ್ರಸೌಭಾಗ್ಯಸಂವಾದಿ ಮುಖಪದ್ಮಯಾ ।
ನಾಸಾಮೌಕ್ತಿಕಲಾವಣ್ಯನಾಸೀರಸ್ಮಿತಶೋಭಯಾ

(ಸಿ. ಶಿ. ೩–೨೭)

ಅರ್ಥ : ಸಂಪೂರ್ಣಚಂದ್ರಸೌಭಾಗ್ಯ=ಪೂರ್ಣಚಂದ್ರನ ಸೌಂದರ್ಯದೊಡನೆ, ಸಂವಾದಿ=ಸ್ಪರ್ಧಿಸುತ್ತಿರುವ, ಮುಖಪದ್ಮಯಾ=ಮುಖ ಕಮಲವುಳ್ಳವಳಾದ, ನಾಸಾ ಮೌಕ್ತಿಕ=ನತ್ತಿನಲ್ಲಿಯ ಮುತ್ತಿನ, ಲಾವಣ್ಯ=ಸೌಂದರ್ಯದಿಂದ, ನಾಸೀರಸ್ಮಿತ=ಉತ್ಕೃಷ್ಟ ವಾದ ಮಂದಹಾಸದ ಶೋಭೆಯಿಂದ, ಶೋಭಯಾ=ಶೋಭಾಯ ಮಾನಳಾದ.

ಮಣಿತಾಟಂಕರಂಗಾಂತರ್ವಲಿತಾಪಾಂಗಲೀಲಯಾ ।
ನೇತ್ರದ್ವಿತಯಸೌಂದರ್ಯನಿಂದಿತೇಂದೀವರತ್ವಿಷಾ

(ಸಿ. ಶಿ. ೩–೨೮)

ಅರ್ಥ : ಮಣಿ=ರತ್ನದ, ತಾಟಂಕ=ಕರ್ಣಾಭರಣ (ವಾಲೆ)ಗಳೆಂಬ ರಂಗಾಂತಃ =ರಂಗಮಂಟಪದ ಮಧ್ಯದಲ್ಲಿ, ವಲಿತ=ಹೊರಳಿದ (ಚೆಲ್ಲಿದ) ಅಪಾಂಗಲೀಲಯಾ= ಕಟಾಕ್ಷ (ಕಡೆಗಣ್ಣು ನೋಟ)ವುಳ್ಳವಳಾದ, ನೇತ್ರದ್ವಿತಯ=ಎರಡೂ ಕಣ್ಣುಗಳ, ಸೌಂದರ್ಯ=ಸೌಂದರ್ಯದಿಂದ, ನಿಂದಿತ=ತಿರಸ್ಕರಿಸಲ್ಪಟ್ಟ, ಇಂದೀವರತ್ವಿಷಾ= ಕನ್ನೈದಿಲೆಗಳ ಕಾಂತಿಯುಳ್ಳ.

ಕುಸುಮಾಯುಧಕೋದಂಡಕುಟಿಲಭ್ರೂವಿಲಾಸಯಾ ।
ಬಂದೂಕಕುಸುಮಚ್ಛಾಯಾಬಂಧುಭೂತಾಧರಶ್ರಿಯಾ

(ಸಿ. ಶಿ. ೩–೨೯)

ಅರ್ಥ : ಕುಸಮಾಯುಧ=ಮನ್ಮಥನ, ಕೋದಂಡ=ಧನುಸ್ಸಿನಂತೆ, ಕುಟಿಲ= ವಕ್ರವಾಗಿರುವ (ಮಣಿದಿರುವ), ಭ್ರೂವಿಲಾಸಯಾ=ಹುಬ್ಬುಗಳ ಶೋಭೆಯುಳ್ಳವ ಳಾದ, ಬಂದೂಕಕುಸುಮ=ಗುಲಾಬಿಹೂವಿನ, ಛಾಯಾ=ಕಾಂತಿಗೆ, ಬಂಧುಭೂತ= ಬಂಧುವಿನಂತಿರುವ, ಅಧರಶ್ರಿಯಾ=ತುಟಿಗಳ ಶೋಭೆಯುಳ್ಳವಳಾದ.

ಕಂಠನಾಲಜಿತಾನಂಗಕಂಬುಬಿಬ್ಬೋಕಸಂಪದಾ ।
ಬಾಹುದ್ವಿತಯಸೌಭಾಗ್ಯವಂಚಿತೋತ್ಪಲಮಾಲಯಾ

(ಸಿ. ಶಿ. ೩–೩೦)

ಅರ್ಥ : ಕಂಠನಾಲ=(ತನ್ನ) ಕುತ್ತಿಗೆಯಿಂದ, ಜಿತ=ಗೆಲ್ಲಲ್ಪಟ್ಟ, ಅನಂಗ= ಮನ್ಮಥನ, ಕಂಬುಬಿಬ್ಬೋಕ=ವಿಜಯಶಂಖನ ನಾದಮಾಧುರ್ಯದ, ಸಂಪದಾ= ಶೋಭೆಯುಳ್ಳವಳಾದ, ಬಾಹುದ್ವಿತಯ=ಎರಡೂ ಭುಜಗಳ, ಸೌಭಾಗ್ಯ=ಸೌಭಾಗ್ಯ ದಿಂದ, ವಂಚಿತ=ವಂಚಿಸಲ್ಪಟ್ಟ, ಉತ್ಪಲಮಾಲಯಾ=ಕನ್ನೈದಿಲೆಯ ಮಾಲೆಯುಳ್ಳ.

ಸ್ಥಿರಯೌವನಲಾವಣ್ಯಶೃಂಗಾರಿತಶರೀರಯಾ ।
ಅತ್ಯಂತಕಠಿನೋತ್ತುಂಗಪೀವರಸ್ತನಭಾರಯಾ

(ಸಿ. ಶಿ. ೩–೩೧)

ಅರ್ಥ : ಸ್ಥಿರ=ನಿತ್ಯವಾದ, ಯೌವನ=ತಾರುಣ್ಯದ, ಲಾವಣ್ಯ=ಲಾವಣ್ಯದಿಂದ, ಶೃಂಗಾರಿತ=ಪರಿಶೋಭಿಸುತ್ತಿರುವ, ಶರೀರಯಾ=ಶರೀರವುಳ್ಳ, ಅತ್ಯಂತ ಕಠಿಣ= ಅತ್ಯಂತ ಕಠಿಣವಾದ, ಉತ್ತುಂಗ=ಉನ್ನತಗಳಾದ, ಪೀವರ=ಪುಷ್ಟಗಳಾದ, ಸ್ತನ= ಕುಚಗಳ, ಭಾರಯಾ=ಭಾರದಿಂದ ಕೂಡಿದವಳಾದ.

ಮೃಣಾಲವಲ್ಲರೀತಂತುಬಂಧುಭೂತಾವಲಗ್ನಯಾ ।
ಶೃಂಗಾರತಟಿನೀತುಂಗಪುಲಿನಶ್ರೋಣಿಭಾರಯಾ

(ಸಿ. ಶಿ. ೩–೩೨)

ಅರ್ಥ : ಮೃಣಾಲ=ಕಮಲದ, ವಲ್ಲರೀ=ಬಳ್ಳಿಯ, ತಂತು=ತುಂತುವಿಗೆ, ಬಂಧುಭೂತ=ಸಮಾನವಾದ, ಅವಲಗ್ನಯಾ=ನಡುವಿನಿಂದ ಕೂಡಿರುವ (ಅತಿ ಸಣ್ಣ

ನಡುವುಳ್ಳ), ಶೃಂಗಾರತಟಿನೀ=ಶೃಂಗಾರ ರೂಪನದಿಗೆ, ತುಂಗ=ಉನ್ನತವಾದ, ಪುಲಿನ=ಉಸುಕಿನ ದಿನ್ನೆಗಳಂತಿರುವ, ಶ್ರೋಣಿ=ನಿತಂಬಗಳ, ಭಾರಯಾ=ಭಾರ ದಿಂದ ಕೂಡಿರುವ.

ಕುಸುಂಭಕುಸುಮಚ್ಛಾಯಾ ಕೋಮಲಾಂಬರಶೋಭಯಾ ।
ಶೃಂಗಾರೋದ್ಯಾನಸಂರಂಭರಂಭಾಸ್ತಂಭೋರುಕಾಂಡಯಾ

(ಸಿ. ಶಿ. ೩-೩೩)

ಅರ್ಥ : ಕುಸುಂಭ=ಕುಸುಬೆಯ, ಕುಸುಮ=ಹೂವಿನ, ಛಾಯಾ=ಶೋಭೆ ಯಂತಿರುವ, ಕೋಮಲ=ರಮ್ಯವಾದ, ಅಂಬರ=ವಸ್ತ್ರದಿಂದ, ಶೋಭಯಾ= ಶೋಭಿಸುತ್ತಿರುವ, ಶೃಂಗಾರ=ಶೃಂಗಾರವೆಂಬ, ಉದ್ಯಾನ=ತೋಟದ, ಸಂರಂಭ= ಶೋಭೆಗೆ, ರಂಭಾಸ್ತಂಭ=ಬಾಳೆಯ ದಿಂಡಿನಂತಿರುವ, ಊರುಕಾಂಡಯಾ= ತೊಡೆಗಳುಳ್ಳವಳಾದ.

ಚೂತಪ್ರವಾಲಸುಷಮಾಸುಕುಮಾರಪದಾಬ್ಜಯಾ ।
ಸ್ಥಿರಮಂಗಲಶೃಂಗಾರಭೂಷಣಾಲಂಕೃತಾಂಗಯಾ

(ಸಿ. ಶಿ. ೩-೩೪)

ಅರ್ಥ : ಚೂತ=ಮಾವಿನ, ಪ್ರವಾಲ=ಚಿಗುರಿನಂತೆ, ಸುಷಮಾ=ಅತ್ಯಂತ ಶೋಭಾಯಮಾನಳಾದ, ಸುಕುಮಾರ=ಮೃದುಗಳಾದ, ಪದಾಬ್ಜಯಾ=ಪಾದ ಕಮಲಗಳುಳ್ಳವಳಾದ, ಸ್ಥಿರಮಂಗಲ=ನಿತ್ಯಮಂಗಲಾತ್ಮಕಗಳಾದ, ಶೃಂಗಾರ=ಶೃಂಗಾರ ಯೋಗ್ಯವಾದ, ಭೂಷಣ=ಅಲಂಕಾರಗಳಿಂದ, ಅಲಂಕೃತಾಂಗಯಾ=ಅಲಂಕೃತವಾದ ಶರೀರವುಳ್ಳವಳಾದ.

ಹಾರನೂಪುರಕೇಯೂರಚಮತ್ಕೃತಶರೀರಯಾ ।
ಚಕ್ಷುರಾನಂದಲತಯಾ ಸೌಭಾಗ್ಯಕುಲವಿದ್ಯಯಾ

(ಸಿ. ಶಿ. ೩-೩೫)

ಅರ್ಥ : ಹಾರ=ಪುಷ್ಪ-ರತ್ನಾದಿಗಳ ಹಾರದಿಂದ, ನೂಪುರ=ಕಾಲಿನ ಗೆಜ್ಜೆ ಗಳಿಂದ, ಕೇಯೂರ=ವಂಕಿಗಳಿಂದ, ಚಮತ್ಕೃತ=ಪರಿಶೋಭಿಸುತ್ತಿರುವ, ಶರೀರಯಾ= ಶರೀರವುಳ್ಳವಳಾದ, ಚಕ್ಷುಃ=ನೋಡುವವರ ಕಣ್ಣುಗಳಿಗೆ, ಆನಂದಲತಯಾ=ಆನಂದದ ಲತೆಯಂತಿರುವವಳಾದ, ಸೌಭಾಗ್ಯಕುಲವಿದ್ಯಯಾ=ಸೌಭಾಗ್ಯ ಕುಲವಿದ್ಯಾ ಸ್ವರೂಪಳೂ ಆದ.

ಉಮಯಾ ಸಮಮಾಸೀನಂ ಲೋಕಜಾಲಕುಟುಂಬಯಾ ।
ಅಪೂರ್ವರೂಪಮಭಜನ್ ಪರಿವಾರಾಃ ಸಮಂತತಃ (ಸಿ. ಶಿ. ೩-೩೬)

ಅರ್ಥ : ಲೋಕಜಾಲಕುಟುಂಬಯಾ=ಸಕಲಲೋಕಗಳೇ ಕುಟುಂಬಗಳಾಗುಳ್ಳ, ಉಮಯಾ ಸಮಂ=ಉಮಾದೇವಿಯೊಡನೆ, ಆಸೀನಂ=ದಿವ್ಯಸಿಂಹಾಸನವನ್ನಲಂ

ಕರಿಸಿದ, ಅಪೂರ್ವರೂಪಂ=ಅಸಾಧಾರಣವಾದ ರೂಪದಿಂದ ಕೂಡಿರುವ, ಆ ಪರಮೇಶ್ವರನನ್ನು, ಪರಿವಾರಾ=ಮೂವತ್ತುಮೂರು ಕೋಟಿ ಸಂಖ್ಯರಾದ ದೇವತೆ ಗಳ ಪರಿವಾರವು, ಸಮಂತತಃ=ಸುತ್ತಲೂ ನಿಂತು, ಅಭಜನ್=ಸೇವೆ ಮಾಡಿದರು.

ಪರಶಿವನ ವರ್ಣನೆಯ ನಂತರ ಶ್ರೀ ಶಿವಯೋಗಿ ಶಿವಾಚಾರ್ಯರು ಹದಿಮೂರು ಶ್ಲೋಕಗಳಿಂದ ಪರಮಾತ್ಮನ ವಾಮಾಂಕಿತಳಾದ ಪಾರ್ವತಿಯನ್ನು ವರ್ಣಿಸಿದ್ದಾರೆ. ಅದರ ಸಾರವನ್ನೇ ಈಗ ನಿರೂಪಿಸಿದ್ದೇವೆ–

ಶಿವನ ವಾಮಭಾಗದಲ್ಲಿ ಕುಳಿತ ಪಾರ್ವತಿಯು ಸಕಲ ಜಗತ್ತಿಗೆ ಉಪಾದಾನ ಕಾರಣಳೂ, ಇಚ್ಛಾ ಜ್ಞಾನ ಮತ್ತು ಕ್ರಿಯಾ ಎಂಬ ನಾನಾ ಶಕ್ತಿಗಳಿಂದ ಕೂಡಿದವಳೂ, ಆತ್ಮವಿದ್ಯೆಯನ್ನು ಪ್ರಕಾಶಪಡಿಸುವವಳೂ, ಶಿವನನ್ನು ಅಗಲದೇ ಹೊಂದಿಕೊಂಡಿರು ವವಳೂ ಆಗಿದ್ದಾಳೆ. ಜನನ–ಮರಣಾತ್ಮಕ ಸಂಸಾರವೆಂಬ ವಿಷಮಯವಾದ ಗೊಂಡಾರಣ್ಯವನ್ನು ಸುಡುವ ಕಾಡ್ಗಿಚ್ಚಿನಂತೆ ಶೋಭಿಸುವ ಪಾರ್ವತಿಯ ಮುಡಿಯಲ್ಲಿಯ ಮಲ್ಲಿಗೆ ಹೂವಿನ ಮಕರಂದಕ್ಕಾಗಿ ಭ್ರಮರಗಳೆಲ್ಲ ಝೇಂಕಾರಮಾಡುತ್ತ ಅವಳನ್ನು ಸುತ್ತುವರಿಯುತ್ತಿದ್ದವು.

ಪೂರ್ಣಚಂದ್ರನಂತೆ ಕಾಂತಿಯುಕ್ತವಾದ ಮುಖಮಂಡಲವುಳ್ಳ ಅವಳು ಮುತ್ತಿನ ನತ್ತನ್ನು ಧರಿಸಿದುದರಿಂದ ಆಕೆಯ ಮುಗುಳ್ನಗೆಯು ಮತ್ತಷ್ಟು ಶೋಭಾಯಮಾನವಾಗಿ ತೋರುತ್ತಿತ್ತು, ಕಿವಿಯಲ್ಲಿರುವ ರತ್ನದ ತಾಟಂಕ (ವೋಲೆ) ದತ್ತ ಹೊರಳಿದ ಪಾರ್ವತಿಯ ನೇತ್ರಗಳು ನೈದಿಲೆಗಳ ಕಾಂತಿಯನ್ನು ತಿರಸ್ಕರಿಸುವಂತಿದ್ದವು. ಬಾಗಿದ ಮನ್ಮಥನ ಬಿಲ್ಲಿನಾಕಾರದ ಹುಬ್ಬುಗಳುಳ್ಳ ಶಿವೆಯ ತುಟಿಗಳು ಗುಲಾಬಿ ಹೂವಿನ ಕಾಂತಿಯನ್ನು ಮೀರಿಸುವಂತಿದ್ದವು. ಮನ್ಮಥನ ಶಂಖವನ್ನು ಆಕಾರ ಹಾಗೂ ಧ್ವನಿಗಳ ಮುಖಾಂತರ ಗೆಲ್ಲುವ ಸಾಮರ್ಥ್ಯದ ಕಂಠವುಳ್ಳ ಮತ್ತು ನೈದಿಲೆ ಹೂವಿನ ಮಾಲೆಗಳ ಸೊಬಗಿನಂತೆ ಇರುವ ತೋಳುಗಳುಳ್ಳ ಪಾರ್ವತಿಯ ಶರೀರವು, ಶಾಶ್ವತವಾದ ತಾರುಣ್ಯದಿಂದ ಕಂಗೊಳಿಸುತ್ತಿತ್ತು. ಪೀವರಗಳೂ, ಉನ್ನತಗಳೂ, ಕಠಿಣಗಳೂ ಆದ ಸ್ತನ ಮಂಡಲ ಗಳನ್ನು ಧರಿಸಿದ ಗಿರಿಜೆಯ ನಡುವು ತಾವರೆ ಬಳ್ಳಿಯ ದೇಂಟಿನಂತೆ ಅತಿ ಸೂಕ್ಷ್ಮ ವಾಗಿತ್ತಲ್ಲದೆ, ಕಟಿಪಶ್ಚಾದ್ಭಾಗಗಳು ಉಸುಕಿನ ದಿನ್ನೆಗಳಂತೆ ಅತಿಸ್ಥೂಲಗಳಾಗಿದ್ದವು.

ಬಾಳೆಯ ದಿಂಡುಗಳಂತೆ ನುಣುಪಾದ ತೊಡೆಗಳುಳ್ಳ ಪಾರ್ವತಿಯು, ಕುಸುಬೆ ಹೂವಿನ ಬಣ್ಣದ ಅತಿ ಮೃದುವಾದ ವಸ್ತ್ರವನ್ನು ಧರಿಸಿದ್ದಳು. ಮಾವಿನ ಚಿಗುರಿನಂತೆ ಕಾಂತಿಯುಕ್ತಗಳೂ, ಕೋಮಲಗಳೂ ಆದ ಪಾದಗಳುಳ್ಳ ಭವಾನಿಯು ಶಾಶ್ವತ ಮಂಗಲಪ್ರದಗಳಾದ ಶೃಂಗಾರಪೂರ್ಣ ಅಲಂಕಾರಗಳಿಂದ ಅಲಂಕೃತಗಳಾಗಿದ್ದಳು. ಮುತ್ತಿನಹಾರ, ಕಾಲ್ಗೆಜ್ಜೆ, ವಂಕಿ ಈ ಎಲ್ಲ ಆಭರಣಗಳನ್ನೂ ಧರಿಸಿದ ರುದ್ರಾಣಿಯು ನೋಡುವವರ ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಿದ್ದಳು. ಸಮಸ್ತಲೋಕಗಳೇ ತನ್ನ ಕುಟುಂಬಗಳಾಗುಳ್ಳ ಈ ಉಮಾದೇವಿಯೊಡನೆ ಸಿಂಹಾಸನವನ್ನು ಅಲಂಕರಿಸಿದ ಶಿವನನ್ನು ಮೂವತ್ತುಮೂರು ಕೋಟಿ ದೇವತೆಗಳೆಲ್ಲ ಸುತ್ತುವರಿದು ಸೇವಿಸುತ್ತಿದ್ದರು.

ಹೀಗೆ ಪಾರ್ವತಿ–ಪರಮೇಶ್ವರರನ್ನು ವರ್ಣಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಇಪ್ಪತ್ತು ಶ್ಲೋಕಗಳಿಂದ ದೇವತೆಗಳು ಮಾಡುತ್ತಿರುವ ಸೇವೆಯನ್ನು ವರ್ಣಿಸುತ್ತಾರೆ.

ಪುಂಡರೀಕಾಕೃತಿಸ್ವಚ್ಛಂ ಪೂರ್ಣಚಂದ್ರಸಹೋದರಂ ।
ದಧೌ ತಸ್ಯ ಮಹಾಲಕ್ಷ್ಮೀಃ ಸಿತಮಾತಪವಾರಣಂ (ಸಿ. ಶಿ. ೩–೩೭)

ಅರ್ಥ : ಮಹಾಲಕ್ಷ್ಮೀಃ=ಲಕ್ಷ್ಮೀದೇವಿಯು, ತಸ್ಯ=ಆ ಪರಮೇಶ್ವರನಿಗೆ, ಪುಂಡರೀಕಾಕೃತಿ=ಶುಭ್ರಕಮಲದಂತೆ, ಸ್ವಚ್ಛಂ=ಶುಭ್ರವಾಗಿರುವ, ಪೂರ್ಣಚಂದ್ರ ಸಹೋದರಂ=ಪೂರ್ಣಚಂದ್ರನಂತೆ, ಸೀತಂ=ತಂಪಾದ, ಆತಪವಾರಣಂ= ಶ್ವೇತಛತ್ರವನ್ನು, ದಧೌ=ಧರಿಸಿದ್ದಳು (ಹಿಡಿದಿದ್ದಳು).

ಶ್ರೀ ಲಕ್ಷ್ಮಿದೇವಿಯು ಶ್ವೇತಕಮಲ ಮತ್ತು ಪೂರ್ಣಚಂದ್ರರಂತೆ ಶುಭ್ರವೂ, ಶೀತಲವೂ ಆದ ಶ್ವೇತಛತ್ರವನ್ನು ಹಿಡಿದುಕೊಂಡು ಶಿವನ ಸೇವೆಯನ್ನು ಮಾಡುತ್ತಿದ್ದಳು.

ತಂತ್ರೀ ಝುಂಕಾರಶಾಲಿನ್ಯಾ ಸಂಗೀತಾಮೃತವಿದ್ಯಯಾ ।
ಉಪತಸ್ಥೇ ಮಹಾದೇವಮುಪಾಂತೇ ಚ ಸರಸ್ವತೀ (ಸಿ. ಶಿ. ೩–೩೮)

ಅರ್ಥ : ಸರಸ್ವತೀ=ಸರಸ್ವತೀದೇವಿಯು, ತಂತ್ರೀ=ವೀಣೆಯ, ಝುಂಕಾರ ಶಾಲಿನ್ಯಾ=ಝುಂಕಾರದೊಡನೆ ಕೂಡಿದ, ಸಂಗೀತಾಮೃತ ವಿದ್ಯಯಾ=ಅಮೃತದಂತಿ ರುವ ಗಾನವಿದ್ಯೆಯಿಂದ, ಉಪಾಂತೇ=ಸಮೀಪದಲ್ಲಿ ಇದ್ದು, ಮಹಾದೇವಂ= ಪರಮಾತ್ಮನನ್ನು, ಉಪತಸ್ಥೇ=ಸೇವಿಸಿದಳು.

ಶ್ರೀ ಸರಸ್ವತಿದೇವಿಯು ಪರಮಾತ್ಮನ ನಿಕಟದಲ್ಲಿ ನಿಂತು ತನ್ನ ಸುಮಧುರ ವೀಣೆಯಿಂದ ಹೊರಡುವ ಅಮೃತಸದೃಶವಾದ ಗಾನ ವಿದ್ಯೆಯಿಂದ ಪರಮಾತ್ಮನನ್ನು ಸೇವಿಸಿದಳು.

ಝುಣತ್ಕಂಕಣಜಾತೇನ ಹಸ್ತೇನೋಪನಿಷದ್ವಧೂಃ ।
ಓಂಕಾರತಾಲವೃಂತೇನ ವೀಜಯಾಮಾಸ ಶಂಕರಂ
(ಸಿ. ಶಿ. ೩–೩೯)

ಅರ್ಥ : ಉಪನಿಷದ್ವಧೂಃ=ಉಪನಿಷತ್ತೆಂಬ ಸ್ತ್ರೀಯಳು, ಝುಣತ್ಕಂಕಣ ಜಾತೇನ=ಝೇಂಕರಿಸುವ ಬಳೆಗಳಿಂದ ಕೂಡಿದ, ಹಸ್ತೇನ=ಕೈಯಿಂದ, ಓಂಕಾರ ತಾಲವೃಂತೇನ=ಓಂಕಾರವೆಂಬ ಬೀಸಣಿಕೆಯಿಂದ, ಶಂಕರಂ=ಪರಮಾತ್ಮನಿಗೆ, ವೀಜಯಾಮಾಸ=ಗಾಳಿಯನ್ನು ಬೀಸಿದಳು.

ಉಪನಿಷತ್ತೆಂಬ ಸ್ತ್ರೀಯು ಓಂಕಾರವೆಂಬ ಬೀಸಣಿಕೆಯಿಂದ ಸುಮಧುರವಾದ ಬಳೆಗಳ ಶಬ್ದವನ್ನು ಮಾಡುತ್ತ ಪರಮಾತ್ಮನಿಗೆ ಗಾಳಿಯನ್ನು ಬೀಸುತ್ತಿದ್ದಳು.

ಚಲಚ್ಚಾಮರಿಕಾಹಸ್ತಾ ಝುಂಕುರ್ವನ್ಮಣಿಕಂಕಣಾಃ ।
ಆಸೇವಂತ ತಮೀಶಾನಮಭಿತೋ ದಿವ್ಯಕನ್ಯಕಾಃ

(ಸಿ. ಶಿ. ೩–೪೦)

ಅರ್ಥ : ಝುಂಕುರ್ವನ್=ಶಬ್ದಾಯಮಾನಗಳಾದ, ಮಣಿಕಂಕಣಾಃ=ರತ್ನದ ಬಳೆಗಳುಳ್ಳ, ಚಲತ್=ಚಲಿಸುತ್ತಿರುವ, ಚಾಮರಿಕಾಹಸ್ತಾಃ=ಚಾಮರಗಳಿಂದ ಕೂಡಿದ ಹಸ್ತಗಳುಳ್ಳ, ದಿವ್ಯಕನ್ಯಕಾಃ=ದೇವಲೋಕದ ಕನ್ಯೆಯರು, ತಂ=ಆ, ಈಶಾನಂ=ಪರಮಾತ್ಮನನ್ನು, ಅಭಿತಃ=ಸುತ್ತಲೂ, ಆಸೇವಂತ=ಸೇವಿಸುತ್ತಿದ್ದರು.

ಕೈಗಳಲ್ಲಿ ಚಾಮರಗಳನ್ನು ಹಿಡಿದು ಬೀಸುತ್ತಿರುವ ಕಾರಣ ಧ್ವನಿಮಾಡುತ್ತಿರುವ ರತ್ನದ ಬಳೆಗಳನ್ನು ಧರಿಸಿದ ಇಂದ್ರಾಣಿ ಮೊದಲಾದ ದೇವತಾ ಸ್ತ್ರೀಯರು ಪರಮಾತ್ಮನ ಸುತ್ತಲೂ ನಿಂತು ಚಾಮರ ಹಾಕುತ್ತಿದ್ದರು.

ಚಾಮರಾಣಾಂ ವಿಲೋಲಾನಾಂ ಮಧ್ಯೇ ತನ್ಮುಖಮಂಡಲಂ ।
ರರಾಜ ರಾಜಹಂಸಾನಾಂ ಭ್ರಮತಾಮಿವ ಪಂಕಜಂ

(ಸಿ. ಶಿ. ೩–೪೧)

ಅರ್ಥ : ವಿಲೋಲಾನಾಂ=ಚಲಿಸುತ್ತಿರುವ, ಚಾಮರಾಣಾಂ=ಚಾಮರಗಳ, ಮಧ್ಯೇ=ಮಧ್ಯದಲ್ಲಿ, ತತ್=ಆ ಪರಮಾತ್ಮನ, ಮುಖಮಂಡಲಂ=ಮುಖವು, ಭ್ರಮತಾಂ=ಸಂಚರಿಸುತ್ತಿರುವ, ರಾಜಹಂಸಾನಾಂ=ರಾಜಹಂಸ ಪಕ್ಷಿಗಳ, ಮಧ್ಯೇ=ಮಧ್ಯದಲ್ಲಿ, ಪಂಕಜಮಿವ=ಕಮಲದೋಪಾದಿಯಲ್ಲಿ, ರರಾಜ=ಶೋಭಿಸುತ್ತಿತ್ತು.

ದೇವಕನ್ಯೆಯರಿಂದ ಬೀಸಲ್ಪಡುತ್ತಿರುವ ಚಾಮರಗಳ ಮಧ್ಯದಲ್ಲಿರುವ ಪರಶಿವನ ಮುಖಮಂಡಲವು, ಸರೋವರದಲ್ಲಿ ಅತ್ತಿತ್ತ ಸಂಚರಿಸುತ್ತಿರುವ ರಾಜಹಂಸ ಪಕ್ಷಿಗಳ ಮಧ್ಯದಲ್ಲಿರುವ ತಾವರೆ (ಕಮಲ)ಯಂತೆ ಪ್ರಕಾಶಿಸುತ್ತಿತ್ತು.

ಮಂತ್ರೇಣ ತಮಸೇವಂತ ವೇದಾಃ ಸಾಂಗವಿಭೂತಯಃ ।
ಭಕ್ತ್ಯಾ ಚೂಡಾಮಣಿಂ ಕಾಂತಂ ವಹಂತ ಇವ ಮೌಲಿಭಿಃ

(ಸಿ. ಶಿ. ೩–೪೨)

ಅರ್ಥ : ಸಾಂಗವಿಭೂತಯಃ=ಶಿಕ್ಷಾ–ವ್ಯಾಕರಣಾದಿ ಷಡಂಗಯುಕ್ತಗಳಾದ, ವೇದಾಃ=ಋಗ್ವೇದಾದಿಗಳು, ಮೌಲಿಭಿಃ=ಉಪನಿಷದ್ಭಾಗವೆಂಬ ತಮ್ಮ ಶಿರಸ್ಸುಗಳಿಂದ, ತಂ=ಆ ಪರಮಾತ್ಮನನ್ನು ಕಾಂತಂ=ಮನೋಹರವಾದ, ಚೂಡಾಮಣಿಂ=ಚೂಡಾಮಣಿಯನ್ನು, ವಹಂತಃ ಇವ=ಧರಿಸಿದಂತವುಗಳಾಗಿ, ಮಂತ್ರೇಣ=ಮಂತ್ರದಿಂದ, ಭಕ್ತ್ಯಾ=ಭಕ್ತಿಪೂರ್ವಕವಾಗಿ, ಅಸೇವಂತ=ಸೇವಿಸಿದವು.

ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ ಮತ್ತು ಜ್ಯೋತಿಷ ವೇದಗಳಲ್ಲಿಯ ವರ್ಣ ಮತ್ತು ಸ್ವರಗಳ ಉಚ್ಚಾರಣೆಯು ಕಲಿಸಲ್ಪಡುವ ಶಾಸ್ತ್ರಕ್ಕೆ "ಶಿಕ್ಷಾ" ಎನ್ನುತ್ತಾರೆ. ಧರ್ಮದ ವಿಧಿ–ವಿಧಾನಗಳನ್ನು ತಿಳಿಸುವ ವೇದಾಂಗಕ್ಕೆ "ಕಲ್ಪ"ವೆನ್ನುವರು. ಶಬ್ದಗಳ

ವ್ಯುತ್ಪತ್ತಿಯನ್ನು ತಿಳಿಸುವ ಶಾಸ್ತ್ರಕ್ಕೆ "ವ್ಯಾಕರಣ"ವೆಂದು ಹೆಸರು. ವ್ಯಾಸ ಮಹರ್ಷಿಗಳಿಂದ ರಚಿತವಾದ ವೈದಿಕ ಶಬ್ದಗಳ ವಿವರಣಾ ಪರವಾದ ಗ್ರಂಥಕ್ಕೆ "ನಿರುಕ್ತ" ವೆಂದು ಹೆಸರು. ಪದ್ಯಗಳ ವೃತ್ತವನ್ನು ಬೋಧಿಸುವ ಶಾಸ್ತ್ರಕ್ಕೆ "ಛಂದಸ್" ಎನ್ನುತ್ತಾರೆ. ಇನ್ನು ಸೂರ್ಯಾದಿ ಗ್ರಹಗಳ ಗತಿಗಳನ್ನು ತಿಳಿಸಬಲ್ಲ ಶಾಸ್ತ್ರಕ್ಕೆ "ಜ್ಯೋತಿಷ" ಎನ್ನುತ್ತಾರೆ) ಗಳೆಂಬ ಷಡಂಗಗಳಿಂದ ಯುಕ್ತಗಳಾದ ಋಗ್ವೇದಾ ವೇದಗಳು ತಮ್ಮ ಶಿರಸ್ಸಿನಂತಿರುವ ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾದ ಪರಮಾತ್ಮನನ್ನು ಅನೇಕ ಮಂತ್ರಗಳಿಂದ ಭಕ್ತಿಪುರಃಸರವಾಗಿ ಸ್ತುತಿಸುತ್ತಿದ್ದವು.

ತದೀಯಾಯುಧಧಾರಿಣ್ಯಸ್ತತ್ಸಮಾನವಿಭೂಷಣಾ ঃ।
ಅಂಗಭೂತಾಃ ಸ್ತ್ರಿಯಃ ಕಾಶ್ಚಿದಾಸೇವಂತ ತಮೀಶ್ವರಂ

(ಸಿ. ಶಿ. ೩–೪೩)

ಅರ್ಥ : ತದೀಯ=ಆ ಪರಮಾತ್ಮನ, ಆಯುಧ=ಆಯುಧಗಳನ್ನು, ಧಾರಿಣ್ಯಃ=ಧರಿಸಿರುವ, ತತ್=ಆ ಪರಮಾತ್ಮನ, ಸಮಾನ=ಸಮಾನಗಳಾದ, ವಿಭೂಷಣಾಃ=ಅಲಂಕಾರಗಳನ್ನು ಧರಿಸಿರುವ, ಅಂಗಭೂತಾಃ=ಶಿವನಿಗೆ ಅಂಗ ಭೂತರಾದ, ಕಾಶ್ಚಿತ್=ಕೆಲವು, ಸ್ತ್ರಿಯಃ=ದೇವಸ್ತ್ರೀಯರು, ತಂ=ಆ, ಈಶ್ವರಂ=ಪರಮಾತ್ಮನನ್ನು, ಆಸೇವಂತ=ಸೇವಿಸುತ್ತಿದ್ದರು.

ಈ ಕೈಲಾಸದಲ್ಲಿಯ ಕೆಲವು ಸ್ತ್ರೀಯರು ಪರಮಾತ್ಮನಂತೆ ಆಯುಧ ಹಾಗೂ ಆಭರಣಗಳನ್ನು ಧರಿಸಿಕೊಂಡು, ಪರಮಾತ್ಮನ ಅಂಗಗಳೋಪಾದಿಯಲ್ಲಿದ್ದು ಸೇವೆಯನ್ನು ಸಲ್ಲಿಸುತ್ತಿದ್ದರು.

ಆಪ್ತಾಧಿಕಾರಿಣಃ ಕೇಚಿದನಂತಪ್ರಮುಖಾ ಅಪಿ।
ಅಷ್ಟೌವಿದ್ಯೇಶ್ವರಾ ದೇವಮಭಜಂತ ಸಮಂತತ ঃ

(ಸಿ. ಶಿ. ೩–೪೪)

ಅರ್ಥ : ಆಪ್ತಾಧಿಕಾರಿಣಃ=ಶಿವನಿಗೆ ಆಪ್ತಾಧಿಕಾರಿಗಳಾದ ಅನಂತ ಪ್ರಮುಖಾಃ=ಅನಂತನೇ ಮೊದಲಾದ, ಅಷ್ಟೌ=ಎಂಟು ಜನ, ವಿದ್ಯೇಶ್ವರಾಃ=ವಿದ್ಯೇಶ್ವರರು, ಸಮಂತತಃ=ಸುತ್ತಲೂ ನಿಂತು, ದೇವಂ=ಮಹಾದೇವನನ್ನು, ಅಭಜಂತ=ಭಜಿಸುತ್ತಿದ್ದರು.

ಪರಮಾತ್ಮನ ಆಪ್ತಾಧಿಕಾರಿಗಳಾದ ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ ಮತ್ತು ಶಿಖಂಡಿ ಎಂಬ ಹೆಸರಿನ ಎಂಟು ಜನ ವಿದ್ಯೇಶ್ವರರೂ ಪರಮಾತ್ಮನನ್ನು ಭಜಿಸುತ್ತಿದ್ದರು.

ತತೋ ನಂದೀ ಮಹಾಕಾಲಶ್ಚಂಡೋ ಭೃಂಗಿರಿಟಿಸ್ತತ ঃ।
ಘಂಟಾಕರ್ಣಃ ಪುಷ್ಪದಂತಃ ಕಪಾಲೀ ವೀರಭದ್ರಕಃ

ಏವಮಾದ್ಯಾ ಮಹಾಭಾಗಾ ಮಹಾಬಲಪರಾಕ್ರಮಾಃ ।
ನಿರಂಕುಶಮಹಾಸತ್ತ್ವಾ ಭೇಜಿರೇ ತಂ ಮಹೇಶ್ವರಂ

(ಸಿ. ಶಿ. ೩.೪೫–೪೬)

ಅರ್ಥ : ತತಃ=ಅನಂತರ, ನಂದೀ=ನಂದೀಶ್ವರನು, ಮಹಾಕಾಲಃ= ಮಹಾಕಾಲನು, ಚಂಡಃ=ಚಂಡನು, ಭೃಂಗಿರಿಟಿಃ=ಭೃಂಗಿರಿಟಿಯು, ಘಂಟಾಕರ್ಣಃ= ಘಂಟಾಕರ್ಣನು, ಪುಷ್ಪದಂತಃ=ಪುಷ್ಪದಂತನು, ಕಪಾಲೀ=ಕಪಾಲಿಯು, ವೀರಭದ್ರಕಃ =ವೀರಭದ್ರನು, ಏವಮಾದ್ಯಾಃ=ಇವರೇ ಮೊದಲಾದ, ಮಹಾಬಲ ಪರಾಕ್ರಮಾಃ= ಮಹಾನ್ ಬಲಶಾಲಿಗಳೂ, ಪರಾಕ್ರಮಿಗಳೂ, ನಿರಂಕುಶ ಮಹಾಸತ್ತ್ವಾಃ= ನಿರಂಕುಶಸತ್ತ್ವಶಾಲಿಗಳೂ, ಮಹಾಭಾಗಾಃ= ಮಹಾಮಹಿಮರೂ ಆದ ಪ್ರಮಥರು, ತಂ=ಆ, ಮಹೇಶ್ವರಂ=ಪರಮಾತ್ಮನನ್ನು, ಭೇಜಿರೇ=ಸೇವಿಸುತ್ತಿದ್ದರು.

ನಿರಂಕುಶಸಾಮರ್ಥ್ಯಶಾಲಿಗಳೂ, ಮಹಾಪರಾಕ್ರಮಿಗಳೂ ಆದ ನಂದೀಶ್ವರ, ಮಹಾಕಾಲ, ಚಂಡ, ಭೃಂಗಿರಿಟಿ, ಘಂಟಾಕರ್ಣ, ಪುಷ್ಪದಂತ, ಕಪಾಲೀ, ವೀರಭದ್ರ ಇವರೇ ಮೊದಲಾದ ಶಿವನ ಪ್ರಮಥಗಣರು ಪರಮಾತ್ಮನನ್ನು ಸೇವಿಸುತ್ತಿದ್ದರು.

ಪರಮಾತ್ಮನ ಸೇವೆಯನ್ನು ಮಾಡುತ್ತಿರುವ ಪ್ರಮಥಗಣರನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಐದು ಶ್ಲೋಕಗಳಿಂದ ಈಗ ವರ್ಣಿಸುತ್ತಾರೆ–

ಅಣಿಮಾದಿಕಮೈಶ್ವರ್ಯಂ ಯೇಷಾಂ ಸಿದ್ಧೇರಪೋಹನಂ ।
ಬ್ರಹ್ಮಾದಯಃ ಸುರಾ ಯೇಷಾಮಾಜ್ಞಾಲಂಘನಭೀರವಃ

(ಸಿ. ಶಿ. ೩–೪೭)

ಅರ್ಥ : ಯೇಷಾಂ=ಯಾವ ಪ್ರಮಥರ, ಸಿದ್ಧೇಃ=ಸಿದ್ಧಿಯ ಮುಂದೆ, ಅಣಿ ಮಾದಿಕಮೈಶ್ವರ್ಯಂ=ಅಣಿಮಾದಿ ಅಷ್ಟಸಿದ್ಧಿಗಳು, ಅಪೋಹನಂ=ತುಚ್ಛವಾದವು ಗಳೋ, ಬ್ರಹ್ಮಾದಯಃ=ಬ್ರಹ್ಮನೇ ಮೊದಲಾದ, ಸುರಾಃ=ದೇವತೆಗಳು, ಯೇಷಾಂ= ಯಾವ ಪ್ರಮಥರ, ಆಜ್ಞಾಲಂಘನ=ಆಜ್ಞೆಯನ್ನು ಉಲ್ಲಂಘಿಸುವುದರಲ್ಲಿ, ಭೀರವಃ= ಭಯಪಡುವರೋ,

ಮೋಕ್ಷಲಕ್ಷ್ಮೀಪರಿಷ್ವಂಗಮುದಿತಾ ಯೇಽಂತರಾತ್ಮನಾ ।
ಯೇಷಾಮೀಷತ್ಕರಂ ವಿಶ್ವಸರ್ಗಸಂಹಾರಕಲ್ಪನಂ

(ಸಿ. ಶಿ. ೩–೪೮)

ಅರ್ಥ : ಯೇ=ಯಾವ ಪ್ರಮಥರು, ಮೋಕ್ಷಲಕ್ಷ್ಮೀ=ಮೋಕ್ಷಲಕ್ಷ್ಮಿಯ, ಪರಿಷ್ವಂಗ=ಆಲಿಂಗನದಿಂದ, ಅಂತರಾತ್ಮನಾ=ಹೃದಯದಿಂದ, ಮುದಿತಾಃ=ಸಂತುಷ್ಟ ರಾಗಿರುವರೋ, ವಿಶ್ವ=ಜಗತ್ತಿನ, ಸರ್ಗ=ಸೃಷ್ಟಿ, ಸಂಹಾರಕಲ್ಪನಂ=ಸಂಹಾರ ಕ್ರಿಯೆ ಗಳು, ಯೇಷಾಂ=ಯಾರಿಗೆ, ಈಷತ್ಕರಂ=ಅತಿಸುಲಭಸಾಧ್ಯಗಳೋ.

ಜ್ಞಾನಶಕ್ತಿಃ ಪರಾ ಯೇಷಾಂ ಸರ್ವವಸ್ತುಪ್ರಕಾಶಿನೀ ।
ಆನಂದಕಣಿಕಾ ಯೇಷಾಂ ಹರಿಬ್ರಹ್ಮಾದಿಸಂಪದಃ

(ಸಿ. ಶಿ. ೩–೪೯)

ಅರ್ಥ : ಯೇಷಾಂ=ಯಾವ ಪ್ರಮಥರ, ಪರಾ=ಸರ್ವೋತ್ಕೃಷ್ಟವಾದ, ಜ್ಞಾನಶಕ್ತಿಃ=ಜ್ಞಾನಶಕ್ತಿಯು, ಸರ್ವವಸ್ತುಪ್ರಕಾಶಿನೀ=ಸಕಲ ವಸ್ತುಗಳ ಯಥಾರ್ಥ ಜ್ಞಾನವನ್ನು ಉಂಟುಮಾಡುವುದೋ, ಹರಿಬ್ರಹ್ಮಾದಿ=ಹರಿಬ್ರಹ್ಮಾದಿ ದೇವತೆಗಳ, ಸಂಪದಃ=ಐಶ್ವರ್ಯಗಳು, ಯೇಷಾಂ=ಯಾರಿಗೆ, ಆನಂದಕಣಿಕಾ=ಆನಂದದ ಲೇಶಗಳಾಗಿ ತೋರುವವೋ.

ಆಕಾಂಕ್ಷಂತೇ ಪದಂ ಯೇಷಾಂ ಯೋಗಿನೋ ಯೋಗತತ್ಪರಾಃ ।
ಕಾಂಕ್ಷಣೀಯ ಫಲೋ ಯೇಷಾಂ ಸಂಕಲ್ಪಃ ಕಲ್ಪಪಾದಪಃ

(ಸಿ. ಶಿ. ೩–೫೦)

ಅರ್ಥ : ಯೋಗತತ್ಪರಾಃ=ಶಿವಯೋಗತತ್ಪರರಾದ, ಯೋಗಿನಃ=ಯೋಗಿಗಳು, ಯೇಷಾಂ=ಯಾರ, ಪದಂ=ಸ್ಥಾನವನ್ನು, ಆಕಾಂಕ್ಷಂತೇ=ಅಪೇಕ್ಷಿಸುವರೋ, ಯೇಷಾಂ =ಯಾರ, ಸಂಕಲ್ಪಃ=ಸಂಕಲ್ಪವು, ಕಾಂಕ್ಷಣೀಯ ಫಲಃ=ಅಪೇಕ್ಷಿಸಿದ ಫಲವನ್ನು ಕೊಡುವ, ಕಲ್ಪಪಾದಪಃ=ಕಲ್ಪವೃಕ್ಷಪ್ರಾಯವಾಗಿರುವುದೋ.

ಕರ್ಮಕಾಲಾದಿಕಾರ್ಪಣ್ಯಚಿಂತಾ ಯೇಷಾಂ ನ ವಿದ್ಯತೇ ।
ಯೇಷಾಂ ವಿಕ್ರಮಸನ್ನಾಹಾ ಮೃತ್ಯೋರಪಿ ಚ ಮೃತ್ಯವಃ । (ಸಿ. ಶಿ. ೩–೫೧)
ತೇ ಸಾರೂಪ್ಯಪದಂ ಪ್ರಾಪ್ತಾಃ ಪ್ರಮಥಾ ಭೇಜಿರೇ ಶಿವಂ

ಅರ್ಥ : ಯೇಷಾಂ=ಯಾವ ಪ್ರಮಥರಿಗೆ, ಕರ್ಮ=ಸಂಚಿತ, ಆಗಾಮಿ, ಪ್ರಾರಬ್ಧಗಳೆಂಬ ಕರ್ಮಗಳ, ಕಾಲ=ಭೂತ, ಭವಿಷ್ಯದ್ವರ್ತಮಾನಕಾಲಗಳ, ಕಾರ್ಪಣ್ಯ ಚಿಂತಾ=ಕಾಮಾದಿಗಳಿಂದುತ್ಪನ್ನವಾದ ಕೃಪಣತಾ ರೂಪವಾದ ಚಿಂತೆಯಾಗಲೀ, ನ ವಿದ್ಯತೇ=ಇರುವುದಿಲ್ಲವೋ, ಯೇಷಾಂ=ಯಾರ, ವಿಕ್ರಮ ಸನ್ನಾಹಾಃ=ಪರಾಕ್ರಮದ ಉದ್ಯೋಗಗಳು, ಮೃತ್ಯೋರಪಿ=ಮೃತ್ಯುವಿಗೂ, ಮೃತ್ಯವಃ=ಮೃತ್ಯುಗಳಾಗಿರುವವೋ, ಸಾರೂಪ್ಯಪದಂ ಪ್ರಾಪ್ತಾಃ=ಶಿವಸಾರೂಪ್ಯ ಪದವನ್ನು ಪಡೆದಿರುವ, ತೇ=ಆ, ಪ್ರಮಥಾಃ=ಪ್ರಮಥರು, ಶಿವಂ=ಪರಮಾತ್ಮನನ್ನು, ಭೇಜಿರೇ=ಸೇವಿಸುತ್ತಿದ್ದರು.

ಪರಮಾತ್ಮನ ಸೇವೆಗೈಯುತ್ತಿರುವ ಪ್ರಮಥಪುಂಗವರು ; ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ ಪ್ರಾಕಾಮ್ಯ, ಈಶತ್ವ, ವಶಿತ್ವಗಳೆಂಬ ಅಷ್ಟಸಿದ್ಧಿಗಳನ್ನು ತಿರಸ್ಕರಿಸಬಲ್ಲ ಸಿದ್ಧಿಗಳನ್ನು ಪಡೆದಿದ್ದರಲ್ಲದೇ, ಬ್ರಹ್ಮಾದಿ ದೇವತೆಗಳು ಇವರ ಆಜ್ಞೆಯನ್ನು ಮೀರಲು ಭಯಪಡುತ್ತಿದ್ದರು. ಜೀವನ್ಮುಕ್ತರೂ, ಅಂತರಾತ್ಮನ ಆನಂದದಲ್ಲಿ ತಲ್ಲೀನರೂ ಆದ ಇವರಿಗೆ ಜಗತ್ತಿನ ಸೃಷ್ಟಿ–ಸಂಹಾರಗಳೆಂದರೆ ವಿನೋದದ ಕ್ರೀಡೆಗಳಂತೆ ತೋರುತ್ತಿದ್ದವು.

ಜಗತ್ತಿನ ಸಕಲ ಪದಾರ್ಥಗಳನ್ನೂ ಯಥಾರ್ಥವಾಗಿ ತಿಳಿದುಕೊಳ್ಳುವ ಜ್ಞಾನ ಶಕ್ತಿಯಿಂದ ಕೂಡಿದ ಇವರು ಹರಿ–ಬ್ರಹ್ಮಾದಿಗಳ ಸಂಪತ್ತುಗಳನ್ನು ತುಚ್ಛವಾಗಿ ಕಾಣುತ್ತಿದ್ದರು. ಯಾವ ಪ್ರಮಥರ ಸ್ಥಾನಾಭಿಲಾಷಿಗಳಾದ ಮಹಾ ಮಹಾ ಶಿವಯೋಗಿಗಳು ಯೋಗಸಾಧನೆಯನ್ನು ಮಾಡುತ್ತಿರುವರೋ ಅಂತಹ ಈ ಪ್ರಮಥರು ಸಂಕಲ್ಪ ಮಾತ್ರದಿಂದ ಇಷ್ಟಾರ್ಥವನ್ನು ಪೂರ್ತಿ ಮಾಡುವಂಥವರಾಗಿದ್ದರು.

ಕಾಲ–ಕರ್ಮ–ಕಾಮಾದಿ ಚಿಂತೆಗಳಿಲ್ಲದ ಈ ಪ್ರಮಥರು ಮೃತ್ಯುವಿಗೂ ಮೃತ್ಯುರೂಪವಾಗಿದ್ದರು. ಪರಶಿವನ ಸಾರೂಪ್ಯಮೋಕ್ಷವನ್ನು ಪಡೆದ ಈ ಅನಂತ ಮಹಿಮಾಶಾಲಿಗಳಾದ ಪ್ರಮಥಪುಂಗವರು ನಾನಾರೀತಿಯಿಂದ ಪರಮಾತ್ಮನನ್ನು ಸೇವಿಸುತ್ತಿದ್ದರು.

ಬ್ರಹ್ಮೋಪೇಂದ್ರಮಹೇಂದ್ರಾದ್ಯಾ ವಿಶ್ವಂತತ್ರಾಧಿಕಾರಿಣಂ ।
ಆಯುಧಾಲಂಕೃತಪ್ರಾಂತಾಃ ಪರಿತಸ್ತಂ ಸಿಷೇವಿರೇ

(ಸಿ. ಶಿ. ೩–೫೭)

ಅರ್ಥ : ಬ್ರಹ್ಮೋಪೇಂದ್ರಮಹೇಂದ್ರಾದ್ಯಾಃ=ಬ್ರಹ್ಮ–ವಿಷ್ಣು–ಇಂದ್ರ ಮೊದಲಾದ ದೇವತೆಗಳು, ಆಯುಧಾಲಂಕೃತಪ್ರಾಂತಾಃ=ತಮ್ಮ ತಮ್ಮ ಆಯುಧಗಳಿಂದ ಅಲಂಕೃತರಾದಂಥವರಾಗಿ, ವಿಶ್ವತಂತ್ರಾಧಿಕಾರಿಣಾಂ=ಜಗತ್ತಿನ ಸೂತ್ರಧಾರಿಯಾದ, ತಂ=ಆ ಪರಮೇಶ್ವರನನ್ನು, ಪರಿತಃ=ಸುತ್ತಲೂ ನಿಂತು, ಸಿಷೇವಿರೇ=ಸೇವಿಸುತ್ತಿದ್ದರು.

ಬ್ರಹ್ಮ–ವಿಷ್ಣು–ಇಂದ್ರ ಇವರೇ ಮೊದಲಾದ ಮೂವತ್ತುಮೂರು ಕೋಟಿ ದೇವತೆಗಳು ತಮ್ಮ ತಮ್ಮ ಆಯುಧಗಳನ್ನು ಧರಿಸಿಕೊಂಡು ಜಗತ್ತಿನ ಸೂತ್ರಧಾರಿಯಾದ ಪರಮಾತ್ಮನ ಸುತ್ತಲೂ ಜಾಗೃತರಾಗಿ ನಿಂತು ಹಲವು ಬಗೆಯಿಂದ ಸೇವಿಸುತ್ತಿದ್ದರು.

ಆದಿತ್ಯಾ ವಸವೋ ರುದ್ರಾ ಯಕ್ಷಗಂಧರ್ವಕಿನ್ನರಾಃ
ದಾನವಾ ರಾಕ್ಷಸಾ ದೈತ್ಯಾಃ ಸಿದ್ಧಾ ವಿದ್ಯಾಧರೋರಗಾಃ ।
ಅಭಜಂತ ಮಹಾದೇವಮಪರಿಚ್ಛಿನ್ನಸೈನಿಕಾಃ

(ಸಿ. ಶಿ. ೩.೫೩–೫೪)

ಅರ್ಥ: ಆದಿತ್ಯಾಃ=ದ್ವಾದಶ ಸೂರ್ಯರು, ವಸವಃ=ಅಷ್ಟವಸುಗಳು, ರುದ್ರಾಃ= ಏಕಾದಶ ರುದ್ರರು, ಯಕ್ಷ=ಕುಬೇರ ಮೊದಲಾದ ಯಕ್ಷರು, ಗಂಧರ್ವ=ಹಾಹಾ, ಹೂಹೂ ಮೊದಲಾದ ಗಂಧರ್ವರು, ಕಿನ್ನರಾಃ=ಅಶ್ವಮುಖನೇ ಮೊದಲಾದ ಕಿನ್ನರರು, ದಾನವಾಃ=ದಾನವರು, ರಾಕ್ಷಸಾಃ=ರಾಕ್ಷಸರು, ದೈತ್ಯಾಃ= ದೈತ್ಯರು, ಸಿದ್ಧಾಃ= ಆದಿನಾಥನೇ ಮೊದಲಾದ ಸಿದ್ಧರು, ವಿದ್ಯಾಧರ=ಮಣಿಭದ್ರಾದಿ ವಿದ್ಯಾಧರರು, ಉರಗಾಃ=ಶೇಷನೇ ಮೊದಲಾದ ಸರ್ಪಗಳು, ಅಪರಿಚ್ಛಿನ್ನಸೈನಿಕಾಃ=ಅಸಂಖ್ಯಾತ ಸೈನಿಕರುಳ್ಳವರಾಗಿ, ಮಹಾದೇವಂ= ಪರಮಾತ್ಮನನ್ನು, ಅಭಜಂತ=ಭಜಿಸುತ್ತಿದ್ದರು.

ಹನ್ನೆರಡು ಜನ ಸೂರ್ಯರು, ಎಂಟು ವಸುಗಳು, ಹನ್ನೊಂದು ಜನ ರುದ್ರರು, ಕುಬೇರನೇ ಮೊದಲಾದ ಯಕ್ಷರು, ಹಾಹಾ, ಹೂಹೂ ಮೊದಲಾದ ಗಂಧರ್ವರು, ಅಶ್ವಮುಖನೇ ಮೊದಲಾದ ಕಿನ್ನರರು, ರಾವಣಾದಿ ರಾಕ್ಷಸರು, ತಾರಕಾದಿ ದೈತ್ಯರು, ಆದಿನಾಥಾದಿ ಸಿದ್ಧರು, ಮಣಿಭದ್ರಾದಿ ವಿದ್ಯಾಧರರು, ಶೇಷನೇ ಮೊದಲಾದ ನಾಗಗಳು, ತಮ್ಮ ತಮ್ಮ ಅಸಂಖ್ಯ ಪರಿವಾರದಿಂದೊಡಗೂಡಿ ಪರಮೇಶ್ವರನನ್ನು ಭಜಿಸುತ್ತಿದ್ದರು.

ವಸಿಷ್ಠೋ ವಾಮದೇವಶ್ಚ ವಿಶ್ವಾಮಿತ್ರಾತ್ರಿಶೌನಕಾ ಃ ।
ದಧೀಚಿರ್ಗೌತಮಶ್ಚೈವ ಸಾನಂದಶುಕನಾರದಾ ಃ

ಉಪಮನ್ಯುಭೃಗುವ್ಯಾಸಪರಾಶರಮರೀಚಯಃ ।
ಇತ್ಯಾದ್ಯಾ ಮುನಯಃ ಸರ್ವೇ ನೀಲಕಂಠಂ ಸಿಷೇವಿರೇ

(ಸಿ. ಶಿ. ೩.೫೫-೫೬)

ಅರ್ಥ : ವಸಿಷ್ಠಃ=ವಸಿಷ್ಠನು, ವಾಮದೇವಃ=ವಾಮದೇವನು, ವಿಶ್ವಾ ಮಿತ್ರಃ= ವಿಶ್ವಾಮಿತ್ರನು, ಅತ್ರಿಃ=ಅತ್ರಿಋಷಿಯು, ಶೌನಕಃ=ಶೌನಕನು, ದಧೀಚಿಃ=ದಧೀಚಿಯು, ಗೌತಮಃ=ಗೌತಮನು, ಸಾನಂದಃ=ಸಾನಂದನು, ಶುಕಃ=ಶುಕದೇವನು, ನಾರದಃ=ನಾರದನು, ಉಪಮನ್ಯುಃ=ಉಪಮನ್ಯುವು, ಭೃಗುಃ=ಭೃಗುವು, ವ್ಯಾಸಃ= ವ್ಯಾಸನು, ಪರಾಶರಃ=ಪರಾಶರನು, ಚ=ಮತ್ತು ಮರೀಚಿಃ=ಮರೀಚಿಯು, ಇತ್ಯಾದ್ಯಾಃ =ಇವರೇ ಮೊದಲಾದ, ಸರ್ವೇ=ಎಲ್ಲ, ಮುನಯಃ=ಮಹರ್ಷಿಗಳು, ನೀಲಕಂಠಂ= ಪರಮಾತ್ಮನನ್ನು, ಸಿಷೇವಿರೇ=ಸೇವಿಸುತ್ತಿದ್ದರು.

ಶಿವನ ಆ ಒಡ್ಡೋಲಗದಲ್ಲಿ ವಶಿಷ್ಠ , ವಾಮದೇವ, ವಿಶ್ವಾಮಿತ್ರ, ಅತ್ರಿ, ಶೌನಕ, ದಧೀಚಿ, ಗೌತಮ, ಸಾನಂದ, ಶುಕ, ನಾರದ, ಉಪಮನ್ಯು, ಭೃಗು, ವ್ಯಾಸ, ಪರಾಶರ ಮೊದಲಾದ ಋಷಿಗಳೆಲ್ಲರೂ ಪರಮೇಶ್ವರನನ್ನು ಸೇವಿಸಿದರು.

ಪಾರ್ಶ್ವಸ್ಥಪರಿವಾರಾಣಾಂ ವಿಮಲಾಂಗೇಷು ಬಿಂಬಿತ ಃ ।
ಸರ್ವಾಂತರ್ಗತಮಾತ್ಮಾನಾಂ ಸ ರೇಜೇ ದರ್ಶಯನ್ನಿವ

(ಸಿ. ಶಿ. ೩-೫೭)

ಅರ್ಥ : ಪಾರ್ಶ್ವಸ್ಥ=ತನ್ನ ಎಡ-ಬಲ ಭಾಗಗಳಲ್ಲಿ ನಿಂತಿರುವ, ಪರಿವಾರಾಣಾಂ=ಪರಿವಾರದವರ, ವಿಮಲಾಂಗೇಷು=ಅತ್ಯಂತ ನಿರ್ಮಲಗಳಾದ ಶರೀರಗಳಲ್ಲಿ, ಬಿಂಬಿತಃ=ಪ್ರತಿಬಿಂಬಿತನಾದ, ಸಃ=ಆ ಪರಮಾತ್ಮನು, ಸರ್ವಾಂತರ್ಗತಂ= ಎಲ್ಲರೊಳಗಿರುವ, ಆತ್ಮಾನಂ=ತನ್ನನ್ನು, ದರ್ಶಯನ್ನಿವ=ತೋರಿಸುವವನೋಪಾದಿಯಲ್ಲಿ, ರೇಜೇ=ಪರಿಶೋಭಿಸಿದನು.

ತನ್ನ ಇಕ್ಕೆಲಗಳಲ್ಲಿ ನಿಂತಿರುವ ತನ್ನ ಪರಿವಾರದ ದೇವತೆಗಳ ನಿರ್ಮಲಗಳಾದ ಶರೀರಗಳ ಮೇಲೆ ಶಿವನ ಪ್ರತಿಬಿಂಬವು ಬಿದ್ದಿತ್ತು, ಆದ್ದರಿಂದ ಆ ಸನ್ನಿವೇಶವು ಹೇಗೆ

ತೋರುತ್ತಿತ್ತೆಂದರೆ, ಶಿವನು ತಾನು ಎಲ್ಲರಲ್ಲಿ ಅಡಗಿಕೊಂಡಿರುವುದನ್ನು ತೋರಿಸುತ್ತಿರುವನೋ ಏನೋ ಎಂಬಂತೆ ಕಾಣುತ್ತಿತ್ತು.

ಹೀಗೆ ಶಿವನ ಒಡ್ಡೋಲಗವನ್ನು ವಿವರಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಇನ್ನು ಮುಂದೆ ಶಿವನ ದೇವತಾಸಾರ್ವಭೌಮ ವ್ಯಾಪಾರವನ್ನು ವರ್ಣಿಸುತ್ತಾರೆ–

ಕ್ಷಣಂ ಸ ಶಂಭುರ್ದೇವಾನಾಂ ಕಾರ್ಯಭಾಗಂ ನಿರೂಪಯನ್ ।
ಕ್ಷಣಂ ಗಂಧರ್ವರಾಜಾನಾಂ ಗಾನವಿದ್ಯಾಂ ವಿಭಾವಯನ್

(ಸಿ. ಶಿ. ೩–೫೮)

ಅರ್ಥ : ಸಃ=ಆ, ಶಂಭುಃ=ಪರಮಾತ್ಮನು, ಕ್ಷಣಂ=ಕ್ಷಣಕಾಲದವರೆಗೆ, ದೇವಾನಾಂ=ದೇವತೆಗಳ, ಕಾರ್ಯಭಾಗಂ= ಮಾಡಬೇಕಾದ ಕಾರ್ಯಗಳ ಬಗ್ಗೆ, ನಿರೂಪಯನ್= ಆಜ್ಞಾಪಿಸುವವನಾದರೆ, ಕ್ಷಣಂ=ಒಂದು ಕ್ಷಣಕಾಲ, ಗಂಧರ್ವ ರಾಜಾನಾಂ= ಶ್ರೇಷ್ಠ ಗಂಧರ್ವರ, ಗಾನವಿದ್ಯಾಂ=ಗಾನವಿದ್ಯೆಯನ್ನು, ವಿಭಾವಯನ್=ಆಲಿಸುತ್ತಿದ್ದನು.

ಬ್ರಹ್ಮವಿಷ್ಣ್ವಾದಿಭಿರ್ದೇವೈಃ ಕ್ಷಣಮಾಲಾಪಮಾಚರನ್ ।
ಕ್ಷಣಂ ದೇವಮೃಗಾಕ್ಷೀಣಾಂ ಲಾಲಯನ್ ನೃತ್ಯವಿಭ್ರಮಂ

(ಸಿ. ಶಿ. ೩–೫೯)

ಅರ್ಥ : ಕ್ಷಣಂ=ಕ್ಷಣಕಾಲ, ಭೃಂಗಿಣಾ=ಭೃಂಗಿಯಿಂದ, ಪರಿಕಲ್ಪಿತಂ= ಆಚರಿಸಲ್ಪಟ್ಟ, ಹಾಸ್ಯನೃತ್ಯಂ=ವಿನೋದಪೂರ್ಣವಾದ ನೃತ್ಯವನ್ನು, ಪಶ್ಯನ್= ನೋಡುವವನಾಗಿದ್ದನು. ಇದೂ ಅಲ್ಲದೇ ಸರ್ವತಂತ್ರಾಧಿಕಾರಿಣಾ=ಸಮಸ್ತ ಕಾರ್ಯಾಧಿಕಾರಿಯಾದ, ವೇತ್ರಹಸ್ತೇನ=ದಂಡಧಾರಿಯಾದ, ಸದಾ=ಯಾವಾಗಲೂ, ಪಾರ್ಶ್ವಂ=ತನ್ನ ಸಮೀಪತೆಯನ್ನು, ಅಮುಂಚತಾ=ಬಿಡದಿರುವ, ಆತ್ಮಾಭಿಪ್ರಾಯವೇದಿನಾ=ತನ್ನ ಮನೋಗತವನ್ನು ತಿಳಿದಿರುವ, ನಂದಿನಾ=ನಂದೀಶ್ವರನಿಂದ, ಕಾಂಶ್ಚಿತ್=ಕೆಲವರನ್ನು ಆನಯನ್=ಕರೆಯಿಸುತ್ತಿದ್ದನು, ಚ=ಮತ್ತು, ಕಾಂಶ್ಚಿತ್=ಕೆಲವರನ್ನು, ಭ್ರೂವಿಲಾಸತಃ =ನೇತ್ರಸಂಜ್ಞೆಯಿಂದ, ವಿಸೃಜನ್= ಕಳುಹಿಸುತ್ತಿದ್ದನು, ಅನ್ಯಾನ್=ಕೆಲವರನ್ನು, ಸಂಭಾವಯನ್=ಪ್ರಿಯೋಕ್ತಿಗಳಿಂದ ಸಂತೋಷ ಪಡಿಸುತ್ತಿದ್ದನು, ಅನ್ಯಾನ್=ಮತ್ತೆ ಕೆಲವರನ್ನು, ನಿಯಾಮಯನ್= ಬಂಧಿಸುತ್ತಿದ್ದನು (ಇರಲು ಸೂಚಿಸುತ್ತಿದ್ದನು)

ಸಮಸ್ತಭುವನಾಧೀಶಮೌಲಿಲಾಲಿತಶಾಸನಃ ।
ಅಕುಂಠಶಕ್ತಿರವ್ಯಾಜಲಾವಣ್ಯ ಲಲಿತಾಕೃತಿಃ

(ಸಿ. ಶಿ. ೩–೬೩)

ಅರ್ಥ : ಸಮಸ್ತ=ಎಲ್ಲ, ಭುವನ=ಲೋಕಗಳ, ಅಧೀಶ=ಒಡೆಯರ, ಮೌಲಿ= ಮಸ್ತಕದಿಂದ, ಲಾಲಿತ=ಪಾಲಿಸಲ್ಪಟ್ಟ, ಶಾಸನಃ=ಆಜ್ಞೆಯುಳ್ಳವನೂ ಅಕುಂಠಶಕ್ತಿಃ= ಕುಂಠಿತವಾಗದೇ ಇರುವ ಶಕ್ತಿಯುಳ್ಳ ಅವ್ಯಾಜ=ಕೃತ್ರಿಮವಲ್ಲದ, ಲಾವಣ್ಯ= ಸೌಂದರ್ಯದಿಂದ, ಲಲಿತಾಕೃತಿಃ=ಮನೋಹರವಾದ ಆಕೃತಿಯುಳ್ಳವನೂ ಆಗಿದ್ದನು.

ಸ್ಥಿರಯೌವನಸೌರಭ್ಯಶೃಂಗಾರಿತಕಲೇವರಃ ।
ಆತ್ಮಶಕ್ತ್ಯಮೃತಾಸ್ವಾದರಸೋಲ್ಲಾಸಿತಮಾನಸಃ

(ಸಿ. ಶಿ. ೩–೬೪)

ಅರ್ಥ : ಸ್ಥಿರ=ಸ್ಥಿರವಾಗಿರುವ, ಯೌವನಸೌರಭ್ಯ=ತಾರುಣ್ಯದಿಂದ, ಶೃಂಗಾರಿತ=ಅಲಂಕೃತವಾದ, ಕಲೇವರಃ=ಶರೀರವುಳ್ಳವನಾಗಿ, ಆತ್ಮಶಕ್ತ್ಯಮೃತ= ತನ್ನಲ್ಲಿರುವ ಶಕ್ತಿರೂಪವಾದ ಅಮೃತದ, ಆಸ್ವಾದರಸ=ರಸಾಸ್ವಾದದಿಂದ ಉಲ್ಲಾಸಿತ= ಸಂತುಷ್ಟವಾದ, ಮಾನಸಃ=ಮನಸ್ಸುಳ್ಳವನಾಗಿ,

ಸ್ವಾಭಾವಿಕಮಹೈಶ್ವರ್ಯ ವಿಶ್ರಾಂತಿಪರಮಾವಧಿಃ ।
ನಿಷ್ಕಲಂಕಮಹಾಸತ್ತ್ವನಿರ್ಮಿತಾನೇಕವಿಗ್ರಹಃ

(ಸಿ. ಶಿ. ೩–೬೫)

ಅರ್ಥ : ಸ್ವಾಭಾವಿಕ=ಸ್ವಾಭಾವಿಕವಾಗಿ ನೆಲೆಸಿರುವ, ಮಹೈಶ್ವರ್ಯ=ಸರ್ವಜ್ಞತ್ವಾದಿ ಮಹೈಶ್ವರ್ಯಗಳ, ವಿಶ್ರಾಂತಿ=ವಿಶ್ರಾಂತಿಗೆ, ಪರಮಾವಧಿಃ= ಪರ್ಯಂತ ಭೂಮಿಸ್ವರೂಪವಾದ, ನಿಷ್ಕಲಂಕ=ಕಲಂಕಶೂನ್ಯವಾದ, ಮಹಾಸತ್ತ್ವ= ಮಹಾಶಕ್ತಿಯಿಂದ, ನಿರ್ಮಿತ=ನಿರ್ಮಿಸಲ್ಪಟ್ಟ, ಅನೇಕವಿಗ್ರಹಃ=ಅನೇಕಾನೇಕ ಮಂಗಲ ಮೂರ್ತಿಯುಳ್ಳವನಾಗಿ.

ಅಖಂಡಾರಾತಿದೋರ್ದಂಡಕಂಡೂಖಂಡನಪಂಡಿತಃ ।
ಚಿಂತಾಮಣಿಃ ಪ್ರಪನ್ನಾನಾಂ ಶ್ರೀಕಂಠಃ ಪರಮೇಶ್ವರಃ

(ಸಿ. ಶಿ. ೩.೬೬)

ಅರ್ಥ : ಅಖಂಡ=ಅನೇಕ, ಅರಾತಿ=ಸಜ್ಜನವೈರಿಗಳ, ದೋರ್ದಂಡ= ಭುಜಗಳ, ಕಂಡೂ=ಕಂಡೂತಿ (ತಿಂಡಿ)ಯನ್ನು, ಖಂಡನ= ಹೋಗಲಾಡಿಸುವುದರಲ್ಲಿ, ಪಂಡಿತಃ=ಸಮರ್ಥನಾದ ಪ್ರಪನ್ನಾನಾಂ=ಶರಣಾಗತರಾದವರಿಗೆ, ಚಿಂತಾಮಣಿಃ= ಚಿಂತಾಮಣಿಸ್ವರೂಪನೂ ಆದ, ಶ್ರೀಕಂಠ=ಶ್ರೀಕಂಠನಾದ, ಪರಮೇಶ್ವರಃ= ಪರಮೇಶ್ವರನು ಸಭೆಯಲ್ಲಿ ಶೋಭಿಸುತ್ತಿದ್ದನೆಂಬ ಭಾವವು.

ಕೈಲಾಸದ ಒಡ್ಡೋಲಗದಲ್ಲಿ ಕುಳಿತ ಶಿವನು ಒಂದು ಕ್ಷಣ ದೇವತೆಗಳಿಗೆ ಕಾರ್ಯಗಳ ಬಗ್ಗೆ ಆಜ್ಞಾಪಿಸುತ್ತಿದ್ದರೆ, ಮರುಕ್ಷಣದಲ್ಲಿ ಗಂಧರ್ವಶ್ರೇಷ್ಠರ ಗಾನವಿದ್ಯೆಯನ್ನು ಲಾಲಿಸುತ್ತಿದ್ದನು. ಸ್ವಲ್ಪ ಸಮಯ ಬ್ರಹ್ಮಾದಿದೇವತೆಗಳ ಜೊತೆಗೆ ಮಾತನಾಡುತ್ತಿದ್ದರೆ, ಮತ್ತೆ ರಂಭಾದಿದೇವತಾ ಸ್ತ್ರೀಯರ ನರ್ತನ ವೈಭವದತ್ತ ಲಕ್ಷ್ಯ ಕೊಡುತ್ತಿದ್ದನು. ವೇದೋಚ್ಚಾರಣೆಯನ್ನು ಮಾಡುತ್ತಿರುವ ವ್ಯಾಸಾದಿಗಳ ಕಡೆಗೆ ಒಳ್ಳೆಯ ಲಕ್ಷ್ಯ ವಹಿಸುತ್ತಿದ್ದ ಪರಮಾತ್ಮನು ಮಧ್ಯಮಧ್ಯದಲ್ಲಿ ಪಾರ್ವತಿಯ ಬಿಂಬೋಷ್ಠದತ್ತ ದೃಷ್ಟಿ ಹೊರಳಿಸುತ್ತಿದ್ದನು.

ಸಭೆಯಲ್ಲಿ ಭೃಂಗಿಯು ಮಾಡುತ್ತಿರುವ ಹಾಸ್ಯಮಯವಾದ ನೃತ್ಯವನ್ನು ಬಹು ಆನಂದದಿಂದ ನೋಡುತ್ತಿದ್ದ ಪರಮಾತ್ಮನು, ತನ್ನ ಸಮೀಪದಲ್ಲಿಯೇ ದಂಡಧರನಾಗಿ ನಿಂತಿರುವ ನಂದೀಶ್ವರನ ಮಾಧ್ಯಮದಿಂದ ಕೆಲವರಿಗೆ ಪ್ರಿಯೋಕ್ತಿಗಳಿಂದ ಸಂತೋಷ

ವನ್ನುಂಟುಮಾಡುತ್ತಿದ್ದನಲ್ಲದೇ, ತಪ್ಪಿತಸ್ಥರಾದ ಕೆಲವರನ್ನು ಬಂಧಿಗಳನ್ನಾಗಿ ಮಾಡುತ್ತಿದ್ದನು.

ಸಕಲ ಬ್ರಹ್ಮಾಂಡಾಧಿಪತಿಯಿಂದ ಬ್ರಹ್ಮನೂ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತಿದ್ದನು. ಅಪ್ರತಿಹತವಾದ ಸಾಮರ್ಥ್ಯವುಳ್ಳ ಸ್ವಾಭಾವಿಕ ಲಾವಣ್ಯದಿಂದ ಮನೋಹರವಾದ ಶರೀರವುಳ್ಳ ವೃದ್ಧಿ ಕ್ಷಯಗಳಿಲ್ಲದೇ ಒಂದೇ ಸಮನಾಗಿರುವ ಯೌವನದಿಂದ ಕೂಡಿದ ಪರಮಾತ್ಮನು, ತನ್ನಲ್ಲಿ ಲೀನವಾಗಿರುವ ಚಿಚ್ಛಕ್ತಿಯ ಪರಮಾ ನಂದರಸಾಸ್ವಾದದಲ್ಲಿ ತಲ್ಲೀನವಾದ ಮನಸ್ಸುಳ್ಳವನಾಗಿದ್ದನು.

ಉಪಾಧಿರಹಿತನೂ, ಸರ್ವಜ್ಞತ್ವಾದಿ ಷಡ್ಗುಣೈಶ್ವರ್ಯಗಳಿಗೆ ತಾನೋರ್ವನೇ ಆಶ್ರಯದಾತನೂ, ತನ್ನ ಅಪಾರವಾದ ಸಾಮರ್ಥ್ಯದ ಬಲದಿಂದ ನಾನಾವಿಧ ಲೀಲಾಮೂರ್ತಿಗಳನ್ನು ಧರಿಸಬಲ್ಲ ಪರಮಾತ್ಮನು, ದುಷ್ಟನಿಗ್ರಹಕರನಾಗಿದ್ದನಲ್ಲದೇ ಶಿಷ್ಟರ ಇಷ್ಟಾರ್ಥವನ್ನೂ ಕೊಡಬಲ್ಲ ಕಲ್ಪವೃಕ್ಷದೋಪಾದಿಯಲ್ಲಿ ವಿರಾಜಿಸುತ್ತಿದ್ದನು.

ಹೀಗೆ ಶಿವನ ವೈಭವವನ್ನೂ ಹಾಗೂ ರಾಜ್ಯವ್ಯಾಪಾರವನ್ನೂ ವರ್ಣಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಇನ್ನು ಮುಂದೆ ಶ್ರೀ ರೇಣುಕ ಗಣೇಶ್ವರನ ಮೇಲಿರುವ ಶಿವನ ಪ್ರೇಮಾಧಿಕ್ಯವನ್ನು ವಿಸ್ತರಿಸುತ್ತಾರೆ.

ಸಭಾಂತರಗತಂ ತಂತ್ರಂ ರೇಣುಕಂ ಗಣನಾಯಕಂ ।
ಪ್ರಸಾದಂ ಸುಲಭಂ ದಾತುಮಾಹೂಯೇತ್ಥಂ ಸಮಾದಿಶತ್

(ಸಿ. ಶಿ. ೩.೬೭)

ಅರ್ಥ : ಸಃ=ಆ ಪರಮಾತ್ಮನು, ಸಭಾಂತರಗತಂ=ಸಭೆಯಲ್ಲಿರುವ, ತಂತ್ರಂ ಪ್ರಸಿದ್ಧನಾದ, ರೇಣುಕ–ರೇಣುಕನೆಂಬ ಹೆಸರಿನ, ಗಣನಾಯಕಂ=ಗಣ ಶ್ರೇಷ್ಠನನ್ನು, ಸುಲಭಂ=ಸುಲಭಪ್ರಾಪ್ಯವಾದ, ತಾಂಬೂಲಂ=ತಾಂಬೂಲವನ್ನು ಪ್ರಸಾದಂ=ಪ್ರಸಾದ ರೂಪವಾಗಿ, ದಾತುಂ=ಕೊಡುವುದಕ್ಕಾಗಿ, ಆಹೂಯ=ಕರೆದು, ಇತ್ಥಂ=ಹೀಗೆ, ಸಮಾದಿಶತ್–ಆದೇಶಿಸಿದನು.

ಶಿವಸಭೆಯಲ್ಲಿ ಕುಳಿತಿದ್ದ ಎಲ್ಲ ಗಣ್ಯರಿಗೆ ಶ್ರೇಷ್ಠನಾಗಿರುವ ರೇಣುಕಗಣೇಶ್ವರನನ್ನು ತಾಂಬೂಲರೂಪವಾದ ಪ್ರಸಾದವನ್ನು ಕೊಡುವ ನೆವದಲ್ಲಿ ಶಿವನು ಕರೆದನು.

ಶ್ರೀಶೈಲಸ್ಯೋತ್ತರೇ ಭಾಗೇ ತ್ರಿಲಿಂಗವಿಷಯೇ ಶುಭೇ ।
ಕುಲ್ಯಪಾಕಾಭಿದಂ ಪುಣ್ಯಕ್ಷೇತ್ರಮೇಕಂ ವಿರಾಜತೇ

(ಸಿ. ಶಿ. ೩–೬೮)

(ಕೊಲ್ಲಿಪಾಕ್ಯಭಿಧಾನೋಽಸ್ತಿ ಕೋಽಪಿ ಗ್ರಾಮೋ ಮಹತ್ತರಃ)

ಅರ್ಥ : ಶ್ರೀಶೈಲಸ್ಯ=ಶ್ರೀಶೈಲಪರ್ವತದ, ಉತ್ತರೇ ಭಾಗೇ=ಉತ್ತರ ಭಾಗದಲ್ಲಿರುವ, ಶುಭೇ=ಮಂಗಳವಾದ, ತ್ರಿಲಿಂಗವಿಷಯ=ತೆಲಗುದೇಶದಲ್ಲಿ (ಆಂಧ್ರ ಪ್ರದೇಶದಲ್ಲಿ), ಕುಲ್ಯಪಾಕಾಭಿದಂ='ಕುಲ್ಯಪಾಕ'ವೆಂಬ ಹೆಸರಿನ, ಏಕಂ=ಒಂದು ಪುಣ್ಯ ಕ್ಷೇತ್ರಂ=ಪುಣ್ಯಕ್ಷೇತ್ರವು, ವಿರಾಜತೇ=ಶೋಭಿಸುತ್ತದೆ.

ಬಳಿಕ ಶಿವನು ಹೀಗೆ ಆದೇಶವಿತ್ತನು.

೧) ಎಲೈ ರೇಣುಕನೇ, ಶ್ರೀಶೈಲ ಕ್ಷೇತ್ರದ ಉತ್ತರ ಭಾಗದಲ್ಲಿರುವ ಮಂಗಳ ಮಯ ವಾದ ತೆಲಗು ದೇಶದಲ್ಲಿ(ಆಂಧ್ರ ಪ್ರದೇಶದಲ್ಲಿ) 'ಕುಲ್ಯಪಾಕ'ವೆಂಬ ಹೆಸರಿನ ಒಂದು ಪುಣ್ಯಕ್ಷೇತ್ರವು ವಿರಾಜಿಸುತ್ತದೆ.

ಸೋಮೇಶ್ವರಾಭಿಧಾನಸ್ಯ ತತ್ರ ವಾಸವತೋ ಮಮ ।
ಅಸ್ಪೃಶನ್ ಮಾನುಷಂ ಭಾವಂ ಲಿಂಗಾತ್ಪ್ರಾದುರ್ಭವಿಷ್ಯಸಿ

(ಸಿ. ಶಿ. ೩–೭೯)

ಅರ್ಥ : ತತ್ರ=ಆ ಪುಣ್ಯಕ್ಷೇತ್ರದಲ್ಲಿ ಸೋಮೇಶ್ವರಾಭಿಧಾನಸ್ಯ=ಸೋಮೇಶ್ವರ ನೆಂಬ ಹೆಸರಿನ, ವಾಸವತಃ=ವಾಸಿಸುತ್ತಿರುವ, ಮಮ=ನನ್ನ, ಲಿಂಗಾತ್=ಲಿಂಗರೂಪ ಶರೀರದಿಂದ, ಮಾನುಷಂ ಭಾವಂ=ಮಾನವರೂಪವನ್ನು, ಅಸ್ಪೃಶನ್=ಹೊಂದದೇ, ಪ್ರಾದುರ್ಭವಿಷ್ಯಸಿ=ಅವತರಿಸುವಿ.

ಆ ಕುಲ್ಯಪಾಕ ಕ್ಷೇತ್ರದಲ್ಲಿ ನಾನು ಸೋಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ. ಆದ್ದರಿಂದ ಹೇ ರೇಣುಕನೇ, ನೀನು ಮನುಷ್ಯರೂಪವನ್ನು ತಾಳದೇ ದಿವ್ಯತೇಜೋಮಯ ಶರೀರಿಯಾಗಿ ಲಿಂಗರೂಪವಾದ ಆ ನನ್ನ ಶರೀರದಿಂದ ಅವತರಿಸುವವನಾಗು.

ಮದೀಯಲಿಂಗಸಂಭೂತಂ ಮದ್ಭಕ್ತಪರಿಪಾಲಕಂ ।
ವಿಸ್ಮಿತಾ ಮಾನುಷಾಃ ಸರ್ವೇ ತ್ವಾಂ ಭಜಂತು ಮದಾಜ್ಞಯಾ

(ಸಿ. ಶಿ. ೩–೮೦)

ಅರ್ಥ : ಮದೀಯ=ನನ್ನ, ಲಿಂಗಸಂಭೂತಂ=ಲಿಂಗರೂಪಶರೀರದಿಂದ ಪ್ರಾದುರ್ಭವಿಸಿದ, ಮದ್ಭಕ್ತಪರಿಪಾಲಕಂ=ನನ್ನ ಭಕ್ತರ ರಕ್ಷಕನಾದ, ತ್ವಾಂ=ನಿನ್ನನ್ನು (ನೋಡಿ), ಸರ್ವೇ=ಎಲ್ಲ ಮಾನುಷಾಃ=ಮನುಷ್ಯರೂ, ವಿಸ್ಮಿತಾಃ=ಚಕಿತರಾಗಿ, ಮದಾಜ್ಞಯಾ=ನನ್ನ ಆಜ್ಞೆಯಿಂದ, ಭಜಂತು=ಸೇವಿಸಲಿ.

ಶ್ರೀ ಸೋಮೇಶ್ವರ ಶಿವಲಿಂಗದಿಂದ ಉದಿಸಿದ, ಭಕ್ತಪರಿಪಾಲಕನಾದ ನಿನ್ನನ್ನು ಎಲ್ಲ ಮನುಷ್ಯರೂ ಆಶ್ಚರ್ಯಚಕಿತರಾಗಿ ನೋಡುತ್ತಾರಲ್ಲದೇ, ನನ್ನ ಆಜ್ಞೆಯ ಪ್ರಕಾರವಾಗಿ ಅವರೆಲ್ಲರೂ ನಿನ್ನ ಸೇವೆಗೈಯುತ್ತಾರೆ.

ಮದದ್ವೈತಪರಂ ಶಾಸ್ತ್ರಂ ವೇದವೇದಾಂತಸಮ್ಮತಂ ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ

(ಸಿ. ಶಿ. ೩–೮೧)

ಅರ್ಥ : ಸರ್ವೇಷಾಂ=ಎಲ್ಲರಿಗೆ, ಹಿತಕಾರಕಂ=ಹಿತಕಾರಿಯಾದ, ವೇದ ವೇದಾಂತಸಮ್ಮತಂ=ವೇದೋಪನಿಷತ್ ಸಮ್ಮತವಾದ, ಮದದ್ವೈತ ಪರಂ=ಶಿವಾದ್ವೈತ ರೂಪವಾದ, ಶಾಸ್ತ್ರಂ=ಶಾಸ್ತ್ರವನ್ನು, ಭೂಲೋಕೇ=ಭೂಲೋಕದಲ್ಲಿ, ಸ್ಥಾಪಯಿಷ್ಯಸಿ=ಸ್ಥಾಪಿಸುವಿ.

ಹೇ ರೇಣುಕನೇ ! ಸೋಮೇಶ್ವರಲಿಂಗದಿಂದ ಪ್ರಾದುರ್ಭವಿಸಿದ ನೀನು ಜಗತ್ತಿನ ಸಮಸ್ತಮಾನವರಿಗೆ ಹಿತಕಾರಕವಾದ ವೇದ, ಆಗಮ, ಉಪನಿಷತ್ತುಗಳಿಗೆ ಸಮ್ಮತವಾದ ಶಿವಾದ್ವೈತ (ವೀರಶೈವ) ಸಿದ್ಧಾಂತವನ್ನು ಸ್ಥಾಪಿಸುವವನಾಗು.

ವಿಶೇಷ ವಿಚಾರ : ವೀರಶೈವ ಸಿದ್ಧಾಂತವು ಶಿವಾದ್ವೈತ, ವಿಶೇಷಾದ್ವೈತ,ಶಕ್ತಿ ವಿಶಿಷ್ಟಾದ್ವೈತ ಮತ್ತು ಭೇದಾಭೇದಗಳೆಂಬ ಅನೇಕ ನಾಮಗಳಿಂದ ಪ್ರಸಿದ್ಧವಾಗಿರುತ್ತದೆ. ಅದನ್ನೇ ಇಲ್ಲಿ ಪರಮಾತ್ಮನು 'ಮದದ್ವೈತ' ಎಂಬ ಶಬ್ದದಿಂದ 'ಶಿವಾದ್ವೈತ' ಎಂಬುದನ್ನು ತಿಳಿಸಿದ್ದಾನೆ. ಈ ಸಿದ್ಧಾಂತವು ಶಿವನ ಅಪ್ಪಣೆಯ ಮೇರೆಗೆ ಭೂಲೋಕದಲ್ಲಿ ಶ್ರೀ ರೇಣುಕರಿಂದ ಪ್ರಪ್ರಥಮವಾಗಿ ಉಪದೇಶಿಸಲ್ಪಟ್ಟಿರುವುದರಿಂದ ಶ್ರೀ ಜಗದ್ಗುರು ರೇಣುಕಾಚಾರ್ಯರು ವೀರಶೈವ ಧರ್ಮಸಂಸ್ಥಾಪಕರಾದ ಪಂಚಾಚಾರ್ಯರಲ್ಲಿ ಅಗ್ರಗಣ್ಯರೆನಿಸಿದ್ದಾರೆ.

ಮಮ ಪ್ರತಾಪಮತುಲಂ ಮದ್ಭಕ್ತಾನಾಂ ವಿಶೇಷತಃ ।
ಪ್ರಕಾಶಯ ಮಹೀಭಾಗೇ ವೇದಮಾರ್ಗಾನುಸಾರತಃ

(ಸಿ. ಶಿ. ೩–೭)

ಅರ್ಥ : ಮಮ=ನನ್ನ, ಅತುಲಂ=ಉಪಮಾತೀತವಾದ, ಪ್ರತಾಪಂ=ಪ್ರತಾಪ ವನ್ನು, ವಿಶೇಷತಃ=ವಿಶೇಷವಾಗಿ, ಮದ್ಭಕ್ತಾನಾಂ=ನನ್ನ ಭಕ್ತರ, ವೇದ ಮಾರ್ಗಾನು ಸಾರತಃ=ವೇದಮಾರ್ಗಾನುಸಾರವಾಗಿ, ಮಹೀಭಾಗೇ=ಭೂಮಂಡಲದಲ್ಲಿ ಪ್ರಕಾ ಶಯ=ಪ್ರಸಿದ್ಧಗೊಳಿಸು.

ಹೇ ರೇಣುಕನೇ ! ನೀನು ಭೂಲೋಕದಲ್ಲಿ ಅವತರಿಸಿದ ನಂತರ ಉಪಮಾತೀತ ವಾದ ನನ್ನ ಮಹಿಮೆಯನ್ನಷ್ಟೇ ಅಲ್ಲ, ವಿಶೇಷವಾಗಿ ನನ್ನ ಭಕ್ತರ ಮಹಿಮೆಯನ್ನೂ ವೈದಿಕ ಮಾರ್ಗಕ್ಕೆ ಅನುಸಾರವಾಗಿ ಪ್ರಕಾಶಪಡಿಸು.

ಇತ್ಯುಕ್ತ್ವಾಪರಮೇಶ್ವರಃ ಭಗವಾನ್ ಭದ್ರಾಸನಾದುತ್ಥಿತೋ ।
ಬ್ರಹ್ಮೋಪೇಂದ್ರ ಮುಖ್ಯಾನ್ವಿಸೃಜ್ಯ ವಿಬುಧಾನ್ ಭ್ರೂಸಂಜ್ಞಯಾ ಕೇವಲಂ ।
ಪಾರ್ವತ್ಯಾ ಸಹಿತೋ ಗಣೈರಭಿಮತೈಃ ಪ್ರಾಪ ಸ್ವಮಂತಃಪುರಂ ।
ಕ್ಷೋಣೀಭಾಗಮವಾತರತ್ ಪಶುಪತೇರಾಜ್ಞಾವಶಾದ್ರೇಣುಕಃ

(ಸಿ. ಶಿ. ೩.೭೩–೭೪)

ಅರ್ಥ : ಇತಿ=ಈ ಪ್ರಕಾರವಾಗಿ, ಸಃ=ಆ, ಭಗವಾನ್=ಷಡ್ಗುಣೈಶ್ವರ್ಯ ಶಾಲಿಯಾದ, ಪರಮೇಶ್ವರಃ=ಪರಮೇಶ್ವರನು, ಉಕ್ತ್ವಾ=ಶ್ರೀ ರೇಣುಕಗಣೇಶ್ವರನಿಗೆ ಆಜ್ಞೆಯನ್ನು ಮಾಡಿ, ಭದ್ರಾಸನಾತ್=ಮಂಗಲಮಯವಾದ ತನ್ನ ಸಿಂಹಾಸನದಿಂದ, ಉತ್ಥಿತಃ=ಎದ್ದು, ಕೇವಲಂ=ಕೇವಲ, ಭ್ರೂಸಂಜ್ಞಯಾ=ಹುಬ್ಬಿನ ಸಂಜ್ಞೆಯಿಂದ, ಬ್ರಹ್ಮೋಪೇಂದ್ರಮುಖ್ಯಾನ್=ಬ್ರಹ್ಮ, ವಿಷ್ಣು ಮೊದಲಾದ, ವಿಬುಧಾನ್=ದೇವತೆ ಗಳನ್ನು, ವಿಸೃಜ್ಯ=ಕಳುಹಿಸಿ, ಪಾರ್ವತ್ಯಾ=ಪಾರ್ವತಿಯೊಡನೆ, ಸಹಿತಃ=ಯುಕ್ತನಾಗಿ,

ಅಭಿಮತ್ಯೈಃ=ತನಗೆ ಬೇಕಾದ, ಗಣ್ಯೈಃ=ಶಿವಗಣರಿಂದ ಕೂಡಿಕೊಂಡು, ಸ್ವಂ=ತನ್ನ, ಅಂತಃಪುರ=ಅಂತಃಪುರವನ್ನು, ಪ್ರಾಪ=ಹೊಂದಿದನು. ರೇಣುಕಃ=ರೇಣುಕಗಣೇಶ್ವರನಾದರೋ, ಪಶುಪತೇಃ=ಪಶುಪತಿಯ, ಆಜ್ಞಾವಶಾತ್=ಆಜ್ಞಾನುಸಾರವಾಗಿ, ಕ್ಷೋಣಿಭಾಗಂ=ಭೂಮಂಡಲದಲ್ಲಿ, ಅವಾತರತ್=ಅವತರಿಸಿದನು.

ಶ್ರೀ ರೇಣುಕಗಣೇಶ್ವರನಿಗೆ ಹೀಗೆ ಆಜ್ಞಾಪಿಸಿದ ನಂತರ ಪರಮಾತ್ಮನು ತನ್ನ ಮಂಗಲಮಯವಾದ ಸಿಂಹಾಸನದಿಂದ ಎದ್ದು, ಕೇವಲ ಹುಬ್ಬಿನ ಸಂಜ್ಞೆಯಿಂದಲೇ ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳನ್ನು ಕಳುಹಿಸಿ, ಪಾರ್ವತಿ ಹಾಗೂ ತನಗೆ ಬೇಕಾದ ಕೆಲಜನ ಶಿವಗಣರನ್ನು ಕರೆದುಕೊಂಡು ತನ್ನ ಅಂತಃಪುರವನ್ನು ಪ್ರವೇಶಿಸಿದನು. ಇತ್ತ ಶ್ರೀ ರೇಣುಕ ಗಣೇಶ್ವರನು ಪರಶಿವನ ಆಜ್ಞೆಯಂತೆ ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ ಶಿವಲಿಂಗದಿಂದ ಅವತರಿಸುವುದಕ್ಕಾಗಿ ಭೂಮಂಡಲದತ್ತ ಪ್ರಯಾಣವನ್ನು ಬೆಳಸಿದನು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು "ಶ್ರೀ ಸಿದ್ಧಾಂತಶಿಖಾಮಣಿ ಪ್ರವಚನ ಪ್ರಭೆ" ಗ್ರಂಥದ
ಪೂರ್ವಪೀಠಿಕಾ ಭಾಗದ ತೃತೀಯ ಪರಿಚ್ಛೇದವು ಪೂರ್ಣವಾದುದು.

■■

# ಚತುರ್ಥ ಪರಿಚ್ಛೇದ

## ಶ್ರೀ ಜಗದ್ಗುರು ರೇಣುಕಾವತಾರ

ಪರಶಿವನ ಅಪ್ಪಣೆಯ ಮೇರೆಗೆ ವೀರಶೈವ ಸಿದ್ಧಾಂತವನ್ನು ಪ್ರತಿಷ್ಠಾಪಿಸುವುದಕ್ಕಾಗಿ ಕೊಲ್ಲಿಪಾಕಿ ಕ್ಷೇತ್ರದ ಸೋಮೇಶ್ವರ ಶಿವಲಿಂಗದಿಂದ ಅವತರಿಸಿದ ಶ್ರೀ ರೇಣುಕರ ಅವತಾರವನ್ನೂ ಹಾಗೂ ಅವತರಿಸಿದಾಗಿನ ಅವರ ಸ್ವರೂಪವನ್ನೂ ಶ್ರೀ ಶಿವಯೋಗಿ ಶಿವಾಚಾರ್ಯರು ವರ್ಣಿಸಲು ಪ್ರಾರಂಭಿಸುತ್ತಾರೆ–

ಅಥ ತ್ರಿಲಿಂಗವಿಷಯೇ ಕುಲ್ಯಪಾಕಾಭಿಧೇ ಸ್ಥಲೇ ।
ಸೋಮೇಶ್ವರಮಹಾಲಿಂಗಾತ್ಪ್ರಾದುರಾಸೀತ್ ಸ ರೇಣುಕಃ

(ಸಿ. ಶಿ. ೪–೧)

ಅರ್ಥ : ಅಥ=ಶಿವನ ಆಜ್ಞೆಯ ನಂತರ, ಸಃ=ಆ ಪ್ರಸಿದ್ಧನಾದ, ರೇಣುಕಃ= ರೇಣುಕಗಣೇಶ್ವರನು, ತ್ರಿಲಿಂಗವಿಷಯೇ=ತೆಲುಗುದೇಶದಲ್ಲಿ (ಸುಪ್ರಸಿದ್ಧ ಕ್ಷೇತ್ರವಾದ), ಕುಲ್ಯಪಾಕಾಭಿಧೇ=ಕುಲ್ಯಪಾಕವೆಂಬ ಹೆಸರಿನ, ಸ್ಥಲೇ=ಕ್ಷೇತ್ರದಲ್ಲಿ, ಸೋಮೇಶ್ವರ ಮಹಾಲಿಂಗಾತ್=ಸೋಮೇಶ್ವರವೆಂಬ ಹೆಸರಿನ ಮಹಾಲಿಂಗದಿಂದ, ಪ್ರಾದುರಾಸೀತ್ =ಅವತರಿಸಿದನು.

ಶಿವನಿಂದ ಅಪ್ಪಣೆಯನ್ನು ಪಡೆದು ಬಂದ ಶ್ರೀ ರೇಣುಕ ಗಣೇಶ್ವರನು ತೆಲಗು ದೇಶದಲ್ಲಿ ಸುಪ್ರಸಿದ್ಧ ಕ್ಷೇತ್ರವಾದ ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ ಮಹಾಲಿಂಗದಿಂದ ಉದ್ಭವಿಸಿದನು.

ಪ್ರಾದುರ್ಭೂತಂ ತಮಾಲೋಕ್ಯ ಶಿವಲಿಂಗಾತ್ತ್ರಿಲಿಂಗಜಾಃ ।
ವಿಸ್ಮಿತಾಃ ಪ್ರಾಣಿನಃ ಸರ್ವೇ ಬಭೂವುರತಿತೇಜಸಂ

(ಸಿ. ಶಿ. ೪–೨)

ಅರ್ಥ : ತ್ರಿಲಿಂಗಜಾಃ=ತೆಲಗುದೇಶದ ಜನರು, ಶಿವಲಿಂಗಾತ್=ಸೋಮೇಶ್ವರಲಿಂಗದಿಂದ, ಪ್ರಾದುರ್ಭೂತಂ=ಉದ್ಭವಿಸಿದ, ಅತಿತೇಜಸಂ=ಅತ್ಯಂತ ತೇಜಸ್ವಿಯಾದ, ತಂ=ಆ ರೇಣುಕ ಗಣೇಶ್ವರನನ್ನು, ಆಲೋಕ್ಯ=ನೋಡಿ, ಸರ್ವೇ=ಎಲ್ಲ ಪ್ರಾಣಿನಃ=ಜೀವಿಗಳೂ, ವಿಸ್ಮಿತಾಃ=ಆಶ್ಚರ್ಯವುಳ್ಳವರು, ಬಭೂವುಃ=ಆದರು.

ಶ್ರೀ ಸೋಮೇಶ್ವರ ಶಿವಲಿಂಗದಿಂದ ಉದ್ಭವಿಸಿದ ಅತ್ಯಂತ ತೇಜಸ್ವಿಯಾದ ಶ್ರೀ ರೇಣುಕ ಗಣೇಶ್ವರನನ್ನು ಕಂಡ ತೆಲಗು ದೇಶದ ಎಲ್ಲ ಜನರು ಪರಮಾಶ್ಚರ್ಯವುಳ್ಳವರಾದರು.

ಭಸ್ಮೋದ್ಧೂಲಿತಸರ್ವಾಂಗಂ ಸಾರರುದ್ರಾಕ್ಷಭೂಷಣಂ ।
ಜಟಾಮುಕುಟಸಂಯುಕ್ತಂ ತ್ರಿಪುಂಡ್ರಾಂಕಿತಮಸ್ತಕಂ

(ಸಿ. ಶಿ. ೪–೩)

ಅರ್ಥ: ಭಸ್ಮೋದ್ಧೂಲಿತ=ಭಸ್ಮಲಿಪ್ತವಾದ, ಸರ್ವಾಂಗಂ=ಸಕಲ ಅವಯವಗಳುಳ್ಳ, ಸಾರ=ಶ್ರೇಷ್ಠಗಳಾದ, ರುದ್ರಾಕ್ಷಭೂಷಣಂ=ರುದ್ರಾಕ್ಷಗಳಿಂದ ಅಲಂಕೃತ

ನಾದ, ಜಟಾಮುಕುಟ=ಜಟಾಮುಕುಟಗಳಿಂದ, ಸಂಯುಕ್ತಂ=ಯುಕ್ತನಾಗಿರುವ, ತ್ರಿಪುಂಡಾಂಕಿತಮಸ್ತಕಂ=ಮಸ್ತಕ (ಹಣೆ)ದಲ್ಲಿ ತ್ರಿಪುಂಡ್ರವನ್ನು ಧರಿಸಿರುವ, ರೇಣುಕ ಗಣೇಶ್ವರನನ್ನು ನೋಡಿ ಪರಮಾಶ್ಚರ್ಯಗೊಂಡರು.

ಕಟೀತಟೀಪಟೀಭೂತಕಂಥಾಪಟಲಬಂಧುರಂ ।
ದಧಾನಂ ಯೋಗದಂಡಂ ಚ ಭಸ್ಮಾಧಾರಂ ಕಮಂಡಲಂ

(ಸಿ. ಶಿ. ೪–೪)

ಅರ್ಥ : ಕಟೀತಟೀ=ನಡುವಿಗೆ, ಪಟೀಭೂತ=ವಸ್ತ್ರದಂತಿದ್ದ, ಕಂಥಾಪಟಲ=ಪರಿಧಾನದಿಂದ, ಬಂಧುರಂ=ಮನೋಹರವಾದ, ಯೋಗದಂಡಂ=ಯೋಗ ದಂಡವನ್ನು, ಚ=ಮತ್ತು, ಭಸ್ಮಾಧಾರಂ=ಭಸ್ಮಕ್ಕೆ ಆಧಾರವಾದ, ಕಮಂಡಲಂ=ಕಮಂಡಲವನ್ನು, ದಧಾನಂ=ಧರಿಸಿರುವ ರೇಣುಕ ಗಣೇಶ್ವರನನ್ನು ನೋಡಿ ಆಶ್ಚರ್ಯಗೊಂಡರು.

ಶಿವಾದ್ವೈತಪರಿಜ್ಞಾನಪರಮಾನಂದಮೋದಿತಂ ।
ನಿರ್ಧೂತಸರ್ವಸಂಸಾರವಾಸನಾದೋಷಪಂಜರಂ

(ಸಿ. ಶಿ. ೪–೫)

ಅರ್ಥ : ಶಿವಾದ್ವೈತಪರಿಜ್ಞಾನ=ಶಿವಾದ್ವೈತಜ್ಞಾನದಿಂದುಂಟಾದ, ಪರಮಾನಂದ=ಪರಮಾನಂದದಲ್ಲಿ, ಮೋದಿತಂ=ಆನಂದಿತನಾಗಿರುವ, ನಿರ್ಧೂತ=ಹೋಗಲಾಡಿಸಲ್ಪಟ್ಟ, ಸರ್ವ=ಸಮಸ್ತ ಸಂಸಾರವಾಸನಾ=ಸಂಸಾರವಾಸನಾ ರೂಪವಾದ, ದೋಷ=ದೋಷರೂಪವಾದ, ಪಂಜರಂ= ಪಂಜರವುಳ್ಳ.

ಶಿವಾಗಮಸುಧಾಸಿಂಧುಸಮುನ್ಮೇಷಸುಧಾಕರಂ ।
ಚಿತ್ತಾರವಿಂದಸಂಗೂಢಶಿವಪಾದಾಂಬುಜದ್ವಯಂ

(ಸಿ. ಶಿ. ೪–೬)

ಅರ್ಥ : ಶಿವಾಗಮ=ಶಿವಾಗಮವೆಂಬ, ಸುಧಾಸಿಂಧು=ಅಮೃತ ಸಮುದ್ರದ, ಸಮುನ್ಮೇಷ=ಅಭಿವೃದ್ಧಿಗೆ, ಸುಧಾಕರಂ=ಚಂದ್ರಸ್ವರೂಪನಾದ, ಚಿತ್ತಾರವಿಂದ=ಹೃದಯಕಮಲದಲ್ಲಿ, ಸಂಗೂಢ=ಗೋಪನೀಯವಾಗಿ ಇರಿಸಿದ, ಶಿವಪಾದಾಂಬುಜದ್ವಯಂ=ಶಿವನ ಪಾದಪದ್ಮಗಳುಳ್ಳ.

ಯಮಾದಿಯೋಗತಂತ್ರಜ್ಞಂ ಸ್ವತಂತ್ರಂ ಸರ್ವಕರ್ಮಸು ।
ಸಮಸ್ತಸಿದ್ಧಸಂತಾನ ಸಮುದಾಯಶಿಖಾಮಣಿಂ

(ಸಿ. ಶಿ. ೪–೭)

ಅರ್ಥ : ಯಮಾದಿ=ಯಮ–ನಿಯಮಾದಿ ರೂಪವಾದ, ಯೋಗ ತಂತ್ರಜ್ಞಂ =ಅಷ್ಟಾಂಗಯೋಗಸ್ವರೂಪವನ್ನು ತಿಳಿದಿರುವ, ಸರ್ವಕರ್ಮಸು=ಎಲ್ಲ ಕ್ರಿಯೆಗಳಲ್ಲಿ ಸ್ವತಂತ್ರಂ=ಸ್ವತಂತ್ರನಾಗಿರುವ, ಸಮಸ್ತ=ಎಲ್ಲ ಸಿದ್ಧ ಸಂತಾನಸಮು ದಾಯ=ಸಿದ್ಧ ಕುಲಸಮುದಾಯಕ್ಕೆ, ಶಿಖಾಮಣಿಂ=ಶಿಖಾಮಣಿ ಸ್ವರೂಪನಾಗಿರುವ,

ವೀರಸಿದ್ಧಾಂತನಿರ್ವಾಹಕೃತಪಟ್ಟನಿಬಂಧನಂ ।
ಆಲೋಕಮಾತ್ರನಿರ್ಭಿನ್ನಸಮಸ್ತಪ್ರಾಣಿಪಾತಕಂ

(ಸಿ. ಶಿ. ೪–೮)

ಅರ್ಥ : ವೀರಸಿದ್ಧಾಂತ=ವೀರಶೈವಸಿದ್ಧಾಂತವನ್ನು, ನಿರ್ವಾಹ=ನೆಲೆಗೊಳಿಸು ವುದಕ್ಕಾಗಿ, ಕೃತಪಟ್ಟನಿಬಂಧನಂ=ಪಟ್ಟವನ್ನು ಕಟ್ಟಿಕೊಂಡಿರುವ, ಆಲೋಕಮಾತ್ರ= ಕೇವಲ ನೋಟದಿಂದ, ನಿರ್ಭಿನ್ನ=ನಾಶವಾದ, ಸಮಸ್ತ = ಎಲ್ಲ, ಪ್ರಾಣಿ ಪಾತಕಂ= ಪ್ರಾಣಿಗಳ ಪಾಪವುಳ್ಳ ,

ತಮಪೃಚ್ಛನ್ ಜನಾಃ ಸರ್ವೇ ನಮಂತಃ ಕೋ ಭವಾನಿತಿ ।
ಇತಿ ಪೃಷ್ಟೋ ಮಹಾಯೋಗೀ ಜನ್ಯೈರ್ವಿಸ್ಮಿತಮಾನಸೈಃ

(ಸಿ. ಶಿ. ೪–೯)

ಅರ್ಥ : ತಂ=ಈ ರೀತಿ ಇರುವ ಶ್ರೀ ರೇಣುಕಗಣೇಶ್ವರನನ್ನು, ಸರ್ವೇ=ಎಲ್ಲ, ಜನಾಃ=ಜನರೂ, ನಮಂತಃ=ನಮಸ್ಕರಿಸುವಂಥವರಾಗಿ, ಕೋ ಭವಾನಿತಿ=ತಾವು ಯಾರು ? ಎಂಬುದಾಗ್ಗಿ, ಅಪೃಚ್ಛನ್=ಕೇಳಿದರು. ವಿಸ್ಮಿತಮಾನಸೈಃ=ಆಶ್ಚರ್ಯಗೊಂಡ ಮನಸ್ಸುಳ್ಳ, ಜನ್ಯೈಃ=ಜನರಿಂದ, ಇತಿ=ಹೀಗೆ, ಪೃಷ್ಟಃ=ಕೇಳಲ್ಪಟ್ಟ, ಮಹಾಯೋಗೀ= ಮಹಾಯೋಗಿಯಾದ ಶ್ರೀ ರೇಣುಕನು (ಹೇಳತೊಡಗಿದನು).

ಪರಶಿವನ ಅಪ್ಪಣೆಯ ಮೇರೆಗೆ ಸೋಮೇಶ್ವರ ಶಿವಲಿಂಗದಿಂದ ಅವತರಿಸಿದ ಶ್ರೀ ರೇಣುಕ ಭಗವತ್ಪಾದರು ಸರ್ವಾಂಗಗಳಲ್ಲಿ ಭಸ್ಮವನ್ನು ಲೇಪಿಸಿಕೊಂಡಿ ದ್ದರಲ್ಲದೇ ಉತ್ತಮೋತ್ತಮಗಳಾದ ರುದ್ರಾಕ್ಷಗಳನ್ನು ಧರಿಸಿದ್ದರು. ಜಟಾಮುಕುಟಧಾರಿಗಳಾದ ಇವರು ಹಣೆಯಲ್ಲಿ ಸುಂದರವಾದ ಮೂರು ಬೆರಳು ಭಸ್ಮವನ್ನು ಪೂಸಿಕೊಂಡಿದ್ದರು. ಟೊಂಕಕ್ಕೆ ಅಲಂಕಾರರೂಪವಾಗಿ ವಸ್ತ್ರವನ್ನು ಕಟ್ಟಿಕೊಂಡು ಒಂದು ಕೈಯಲ್ಲಿ ಯೋಗ ದಂಡವನ್ನೂ, ಮತ್ತೊಂದು ಕೈಯಲ್ಲಿ ಭಸ್ಮವನ್ನಿಡುವ ಕಮಂಡಲವನ್ನೂ ಧರಿಸಿದ್ದರು.

ಲಿಂಗಾಂಗ ಸಾಮರಸ್ಯ ಜ್ಞಾನದಿಂದುಂಟಾದ ಪರಮಾನಂದದಿಂದ ಸಂತುಷ್ಟರಾದ ಇವರು ಜನನ–ಮರಣರೂಪ ಸಂಸಾರದ ಸಕಲ ದೋಷ ಸಮೂಹವನ್ನೆಲ್ಲ ಕೊಡಹಿ ಬಿಟ್ಟಿದ್ದರು. ಶಿವಾಗಮಗಳ ಸಾರವನ್ನು ಪ್ರಸಾರಗೊಳಿಸಬಲ್ಲ ಇವರು ಶಿವಾಗಮಗಳೆಂಬ ಅಮೃತ ಸಮುದ್ರವನ್ನು ಹೆಚ್ಚಿಸುವುದರಲ್ಲಿ ಚಂದ್ರನೋಪಾದಿಯಲ್ಲಿ ಪ್ರಕಾಶಿಸುತ್ತಿದ್ದರು.

ಹೃದಯಮಂದಿರದಲ್ಲಿ ಪರಮಾತ್ಮನ ಪಾದಾರವಿಂದಗಳನ್ನು ಭಯಭಕ್ತಿಯಿಂದ ಸದಾ ಧ್ಯಾನಿಸುತ್ತಿರುವ ಶ್ರೀ ರೇಣುಕ ಭಗವತ್ಪಾದರು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಮತ್ತು ಸಮಾಧಿಗಳೆಂಬ ಅಷ್ಟಾಂಗ ಯೋಗಗಳ ಮರ್ಮವನ್ನು ಬಲ್ಲವರಾಗಿದ್ದರು. ಇವರು ಸರ್ವಕ್ರಿಯೆಗಳಲ್ಲಿ ಸ್ವತಂತ್ರರೂ, ಸಮಸ್ತ ಸಿದ್ಧಸಮೂಹಕ್ಕೆ ಶಿಖಾಮಣಿ ಸ್ವರೂಪರೂ ಆಗಿದ್ದರು. ದೃಷ್ಟಿ ಮಾತ್ರದಿಂದಲೇ ಸಕಲ ಪ್ರಾಣಿಗಳ ಪಾತಕಗಳನ್ನು ಉರುಹಬಲ್ಲ ಶ್ರೀ ರೇಣುಕ ಭಗವತ್ಪಾದರು, ವೀರಶೈವ ಸಿದ್ಧಾಂತವನ್ನು ಭೂಮಂಡಲದಲ್ಲಿ ನೆಲೆಗೊಳಿಸುವುದಕ್ಕಾಗಿ ಕಟಿಬದ್ಧರಾಗಿ ಬಂದಿದ್ದರು. ಈ ರೀತಿಯಾಗಿ ಇರುವ ಮಹಾಯೋಗಿಪುಂಗವರಾದ ಶ್ರೀ ರೇಣುಕ ಗಣೇಶ್ವರರನ್ನು ನೋಡಿದ ಅಲ್ಲಿಯ ಜನರು ಆಶ್ಚರ್ಯಚಕಿತರಾಗಿ ಸಾಷ್ಟಾಂಗವೆರಗಿ ಅತ್ಯಂತ ವಿನಮ್ರಭಾವದಿಂದ ತಾವು ಯಾರು ? ಎಂಬುದಾಗಿ ಪ್ರಶ್ನೆಯನ್ನು ಮಾಡಿದರು.

## ಅವತಾರದ ಉದ್ದೇಶ

ಹೀಗೆ ಪ್ರಾರ್ಥಿಸಲ್ಪಟ್ಟ ಶ್ರೀ ರೇಣುಕ ಗಣೇಶ್ವರರು ಆ ಎಲ್ಲ ಜನರಿಗೆ ತಮ್ಮ ಪರಿಚಯವನ್ನು ಮಾಡಿಕೊಡುತ್ತಾರೆ–

ಪ್ರತ್ಯುವಾಚ ಶಿವಾದ್ವೈತಮಹಾನಂದಪರಾಯಣಃ ।
ಪಿನಾಕಿನಃ ಪಾರ್ಶ್ವವರ್ತೀ ರೇಣುಕಾಖ್ಯೋ ಗಣೇಶ್ವರಃ

(ಸಿ. ಶಿ. ೪–೧೦)

ಅರ್ಥ : ಶಿವಾದ್ವೈತ=ಶಿವಾದ್ವೈತದ, ಮಹಾನಂದ=ಮಹಾನಂದದಲ್ಲಿ, ಪರಾಯಣಃ=ದತ್ತಚಿತ್ತನಾದ, ಪಿನಾಕಿನಃ=ಪರಮಾತ್ಮ ಪಾರ್ಶ್ವವರ್ತೀ=ಪಾರ್ಶ್ವದಲ್ಲಿ ಇರುವ, ರೇಣುಕಾಖ್ಯಃ=ರೇಣುಕನೆಂಬ ಹೆಸರಿನ, ಗಣೇಶ್ವರಃ=ಗಣೇಶ್ವರನು, ಪ್ರತ್ಯುವಾಚ=ಹೇಳಿದನು.

ಸದಾ ಪರಮಾತ್ಮನ ಸಮೀಪದಲ್ಲಿ ವಾಸಿಸುವವನೂ, ಶಿವಾದ್ವೈತ ಆನಂದದಲ್ಲಿ ತಲ್ಲೀನನಾದವನೂ ಆದ ಶ್ರೀ ರೇಣುಕ ಗಣೇಶ್ವರನು ಆ ಎಲ್ಲ ಜನರಿಗೆ ಈ ರೀತಿಯಾಗಿ ಹೇಳತೊಡಗಿದನು.

ಶಿವಾದೇಶಾನುಸಾರೇಣ ಶಿವಲಿಂಗಾದಿಹಾಭವಂ ।
ನಾಮ್ನಾ ರೇಣುಕಸಿದ್ಧೋಽಹಂ ಸಿದ್ಧಸಂತಾನನಾಯಕಃ

(ಸಿ. ಶಿ. ೪–೧೧)

ಅರ್ಥ: ಶಿವಾದೇಶಾನುಸಾರೇಣ=ಶಿವನ ಆದೇಶದ ಅನುಸಾರವಾಗಿ, ಇಹ= ಇಲ್ಲಿ (ಭೂಲೋಕದಲ್ಲಿ), ಶಿವಲಿಂಗಾತ್=ಶಿವಲಿಂಗದಿಂದ, ಅಭವಂ=ಉದ್ಭವಿಸಿದೆನು. ಸಿದ್ಧಸಂತಾನ=ಸಿದ್ಧಸಮೂಹಕ್ಕೆಲ್ಲ, ನಾಯಕಃ=ಒಡೆಯನಾದ, ಅಹಂ=ನಾನು, ನಾಮ್ನಾ=ಹೆಸರಿನಿಂದ, ರೇಣುಕಸಿದ್ಧಃ=ರೇಣುಕಸಿದ್ಧನು.

ಎಲೈ ಮಹಾಭಕ್ತರೇ ! ಸಿದ್ಧರ ಸಮೂಹಕ್ಕೆಲ್ಲ ಒಡೆಯನಾದ ರೇಣುಕ ಸಿದ್ಧನೆಂಬ ಹೆಸರಿನ ನಾನು ಪರಮಾತ್ಮನ ಆದೇಶಾನುಸಾರವಾಗಿ (ವೀರಶೈವ ಧರ್ಮ ಸ್ಥಾಪನೆಗಾಗಿ) ಈ ಸೋಮೇಶ್ವರ ಶಿವಲಿಂಗದಿಂದ ಉದ್ಭವಿಸಿರುವೆನು.

ಸ್ವಚ್ಛಂದಾಚಾರೀ ಲೋಕೇಸ್ಮಿನ್ ಶಿವಸಿದ್ಧಾಂತಪಾಲಕಃ ।
ಖಂಡಯನ್ ಜೈನಚಾರ್ವಾಕಬೌದ್ಧಾದೀನಾಂ ದುರಾಗಮಾನ್

(ಸಿ. ಶಿ. ೪–೧೨)

ಅರ್ಥ: ಅಸ್ಮಿನ್=ಈ, ಲೋಕೇ=ಜಗತ್ತಿನಲ್ಲಿ, ಸ್ವಚ್ಛಂದಾಚಾರೀ=ಸ್ವತಂತ್ರನಾಗಿದ್ದು, ಜೈನ–ಚಾರ್ವಾಕ–ಬೌದ್ಧಾದೀನಾಂ=ಜೈನ–ಚಾರ್ವಾಕ–ಬೌದ್ಧಾದಿ ಸಿದ್ಧಾಂತಗಳ, ದುರಾಗಮಾನ್=ನಾಸ್ತಿಕ ಆಗಮಗಳನ್ನು, ಖಂಡಯನ್=ಖಂಡಿಸುವವನಾಗಿ, ಶಿವಸಿದ್ಧಾಂತಪಾಲಕಃ=ಶಿವಸಿದ್ಧಾಂತವನ್ನು ಪರಿಪಾಲಿಸುವವನಾಗಿದ್ದೇನೆ.

ಎಲೈ ಮಹಾಜನಗಳೇ ! ಈ ಜಗತ್ತಿನಲ್ಲಿ ನಾನು ಸರ್ವತಂತ್ರ ಸ್ವತಂತ್ರನು. ನಾಸ್ತಿಕವಾದವನ್ನು ಪ್ರಚಾರಗೊಳಿಸುವ ಚಾರ್ವಾಕ–ಜೈನ–ಬೌದ್ಧಗಳೆಂಬ ಕುತ್ಸಿತ ಗಳಾದ ಆಗಮಗಳನ್ನು ಖಂಡಿಸಿ, ಶಿವಾಗಮಗಳ ಸಿದ್ಧಾಂತವನ್ನು ಪ್ರತಿಷ್ಠಾಪಿಸುವುದ ಕ್ಕಾಗಿ ನಾನು ಅವತರಿಸಿದ್ದೇನೆ.

ವಿಶೇಷ ವಿಚಾರ : ಭಾರತದಲ್ಲಿ, ದೇವರು, ಪರಲೋಕಾದಿಗಳನ್ನು ಒಪ್ಪುವ ದರ್ಶನಗಳಿಗೆ ಆಸ್ತಿಕ ದರ್ಶನಗಳೆಂದೂ, ಅವುಗಳನ್ನು ಒಪ್ಪದಿರುವ ದರ್ಶನಗಳಿಗೆ ನಾಸ್ತಿಕ ದರ್ಶನಗಳೆಂದೂ ಹೆಸರು. ಈ ಎರಡೂ ಸಿದ್ಧಾಂತಗಳು ಇಂದು ನಿನ್ನಿನ ವಾಗಿರದೇ, ವೇದಾಗಮೋಪನಿಷತ್ಕಾಲಗಳಿಂದಲೂ ಬಂದಿರುವ ಅನಾದಿ ಸಿದ್ಧಾಂತ ಗಳು. ಈ ಅನಾದಿ ಸಂಸಿದ್ಧವಾದ ನಾಸ್ತಿಕ ದರ್ಶನವನ್ನನುಸರಿಸಿ ಹುಟ್ಟಿದ ಇವುಗಳಲ್ಲಿ ಚಾರ್ವಾಕ, ಜೈನ ಮತ್ತು ಬೌದ್ಧದರ್ಶನಗಳು ಪ್ರಸಿದ್ಧವಾದ ನಾಸ್ತಿಕ ದರ್ಶನಗಳು. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ ಮೀಮಾಂಸಾ, ಉತ್ತರ ಮೀಮಾಂಸೆ ಗಳೆಂಬಿವುಗಳು ಆಸ್ತಿಕದರ್ಶನಗಳು. ಶ್ರೀ ಶಿವಯೋಗಿ ಶಿವಾಚಾರ್ಯರ ಕಾಲದಲ್ಲಿ ಚಾರ್ವಾಕ, ಜೈನ ಮತ್ತು ಬೌದ್ಧಗಳೆಂಬ ನಾಸ್ತಿಕ ದರ್ಶನಗಳ ಪ್ರಬಲವಾದ ಪ್ರಚಾರ ವಿದ್ದಂತೆ ತೋರುತ್ತದೆ. ಅಂತೆಯೇ ಅವರು ತಾವು ಮಾಡಬಯಸಿದ ನಾಸ್ತಿಕ ದರ್ಶನಗಳ ಖಂಡನೆಯನ್ನು ಶ್ರೀ ರೇಣುಕ ಭಗವತ್ಪಾದರ ಮುಖದಿಂದ ಹೇಳಿಸಿದ್ದಾರೆ. ಇದರಿಂದ ಶ್ರೀ ಜಗದ್ಗುರು ರೇಣುಕಾಚಾರ್ಯರು ಜೈನ ಮತ್ತು ಬೌದ್ಧ ಧರ್ಮದ ನಂತರದವರೆಂಬ ಭ್ರಮೆಯನ್ನು ಯಾರೂ ಮಾಡಿಕೊಳ್ಳಬಾರದು. ಆದರೆ ಗ್ರಂಥಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರು ಮಾತ್ರ ಜೈನ ಮತ್ತು ಬೌದ್ಧಮತಗಳ ಪ್ರಬಲ ಪ್ರಚಾರ ಕಾಲದಲ್ಲಿ ಇದ್ದರೆಂಬುದು ಇದರಿಂದ ಸಿದ್ಧವಾಗುತ್ತದೆ.

## ಮಲಯಾದ್ರಿವರ್ಣನೆ

ಕೊಲ್ಲಿಪಾಕಿಯ ಜನರಿಗೆ ತಮ್ಮ ಪರಿಚಯವನ್ನು ಮಾಡಿಕೊಟ್ಟ ಶ್ರೀ ರೇಣುಕ ಭಗವತ್ಪಾದರು ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ವೀರಶೈವ ಸಿದ್ಧಾಂತವನ್ನು ಉಪದೇಶಿಸು ವುದಕ್ಕಾಗಿ ಮಲಯಪರ್ವತಕ್ಕೆ ತೆರಳುತ್ತಾರೆ–

ಇತ್ಯುಕ್ತ್ವಾ ಪಶ್ಯತಾಂ ತೇಷಾಂ ವಿಷಯಸ್ಥಿರಚಕ್ಷುಷಾಂ ।
ಉತ್ಥಾಯ ವ್ಯೋಮಮಾರ್ಗೇಣ ಮಲಯಾದ್ರಿಮುಪಾಗಮತ್

(ಸಿ. ಶಿ. ೪–೧೩)

ಅರ್ಥ : ಇತಿ=ಈ ಪ್ರಕಾರವಾಗಿ, ಉಕ್ತ್ವಾ=ಹೇಳಿ, ವಿಷಯಸ್ಥಿರ ಚಕ್ಷುಷಾಂ= ನೋಡುವ ಕ್ರಿಯೆಯಲ್ಲಿ ರೆಪ್ಪೆಬಡೆಯದೇ ಇರುವ ಕಣ್ಣುಗಳುಳ್ಳ, ತೇಷಾಂ=ಆ ಜನರು, ಪಶ್ಯತಾಂ=ನೋಡುತ್ತಿರಲಾಗಿ, ಉತ್ಥಾಯ=ಆ ಸ್ಥಾನದಿಂದ ಎದ್ದು ವ್ಯೋಮ ಮಾರ್ಗೇಣ=ಆಕಾಶಮಾರ್ಗದಿಂದ, ಮಲಯಾದ್ರಿಂ=ಮಲಯ ಪರ್ವತವನ್ನು, ಉಪಾಗಮತ್=ಹೊಂದಿದನು.

ಕೊಲ್ಲಿಪಾಕಿಯ ಜನರಿಗೆ ಈ ರೀತಿಯಾಗಿ ಹೇಳಿದ ಶ್ರೀ ರೇಣುಕ ಭಗವತ್ಪಾದರು, ಜನರು ನೋಡುತ್ತಿದ್ದಂತೆಯೇ ಆಕಾಶಮಾರ್ಗವಾಗಿ ಮಲಯ ಪರ್ವತಕ್ಕೆ ಪ್ರಯಾಣ ಬೆಳೆಸಿದರು.

ಶ್ರೀ ಶಿವಯೋಗಿ ಶಿವಾಚಾರ್ಯರು ಮೂರು ಶ್ಲೋಕಗಳಿಂದ ಆ ಮಲಯ ಪರ್ವತವನ್ನು ವರ್ಣಿಸುತ್ತಾರೆ–

ನವಚಂದನಕಾಂತಾರಕಂದಲನ್ಮಂದಮಾರುತಂ ।
ಅಭಂಗುರಭುಜಂಗಸ್ತ್ರೀಸಂಗೀತರಸಸಂಕುಲಂ

(ಸಿ. ಶಿ. ೪–೧೪)

ಅರ್ಥ : ನವ=ನೂತನವಾದ, ಚಂದನ=ಗಂಧದ, ಕಾಂತಾರ=ಅರಣ್ಯವನ್ನು, ಕಂದಲನ್=ಭೇದಿಸಿ ಹೋಗುತ್ತಿರುವ, ಮಂದಮಾರುತಂ=ಮಂದವಾದ ಗಾಳಿಯುಳ್ಳ, ಅಭಂಗುರ=ಭೇಬಿಡವಾದ, ಭುಜಂಗಸ್ತ್ರೀ=ಹೆಣ್ಣುಸರ್ಪಗಳ, ಸಂಗೀತ ರಸ=ಗಾನರಸ ದಿಂದ, ಸಂಕುಲಂ=ವ್ಯಾಪ್ತವಾಗಿರುವ,

ಕರಿಪೋತಕರಾಕೃಷ್ಟಸ್ಫುರದೇಲಾತಿವಾಸಿತಂ ।
ವರಾಹದಂಷ್ಟ್ರಿಕಾಧ್ವಸ್ತಮುಸ್ತಾಸುರಭಿಕಂದರಂ

(ಸಿ. ಶಿ. ೪–೧೫)

ಅರ್ಥ : ಕರಿಪೋತ=ಆನೆಮರಿಗಳ, ಕರ=ಸೊಂಡಿಲುಗಳಿಂದ, ಆಕೃಷ್ಟ=ಕಿತ್ತು ಹಾಕಿದ, ಸ್ಫುರತ್ ಏಲಾ=ಕಂಗೊಳಿಸುವ ಯಾಲಕ್ಕಿಯ ಬಳ್ಳಿಗಳಿಂದ, ವಾಸಿತಂ= ಸುವಾಸನೆಗೊಂಡಿರುವ, ವರಾಹ=ಕಾಡುಹಂದಿಗಳ, ದಂಷ್ಟ್ರಿಕಾ=ಕೋರೆಗಳಿಂದ, ಧ್ವಸ್ತ =ಕಿತ್ತುಹಾಕಲ್ಪಟ್ಟ, ಮುಸ್ತಾ=ಜೇಕಿನ ಗಡ್ಡೆಗಳ, ಸುರಭಿ=ಸುಗಂಧವುಳ್ಳ, ಕಂದರಂ= ಗವಿಗಳುಳ್ಳ,

ಪಟೀರದಲಪರ್ಯಂಕಪ್ರಸುಪ್ತವ್ಯಾಧದಂಪತಿಂ ।
ಮಾಧವೀಮಲ್ಲಿಕಾಜಾತೀಮಂಜರೀರೇಣುರಂಜಿತಂ

(ಸಿ. ಶಿ. ೪–೧೬)

ಅರ್ಥ : ಪಟೀರ=ಗಂಧದ ಗಿಡದ, ದಲ=ಎಲೆಗಳಿಂದ ರಚಿಸಲ್ಪಟ್ಟ, ಪರ್ಯಂಕ =ಪಲ್ಲಂಗದಮೇಲೆ, ಪ್ರಸುಪ್ತ=ಮಲಗಿದ, ವ್ಯಾಧದಂಪತಿಂ=ಬೇಡರ ದಂಪತಿಗಳುಳ್ಳ, ಮಾಧವೀ=ದುಂಡುಮಲ್ಲಿಗೆ, ಮಲ್ಲಿಕಾ=ಮಲ್ಲಿಗೆ, ಜಾತೀ=ಜಾಜೀಹೂ, ಇವುಗಳ ಮಂಜರೀ=ಗೊಂಚಲುಗಳ, ರೇಣು=ಪರಾಗದಿಂದ, ರಂಜಿತಂ=ರಂಜಿಸುತ್ತಿರುವ,

ಶ್ರೀ ರೇಣುಕ ಭಗವತ್ಪಾದರು ಕೊಲ್ಲಿಪಾಕಿಕ್ಷೇತ್ರದಿಂದ ಆಕಾಶ ಮಾರ್ಗವಾಗಿ ಹೊರಟು ಮಲಯಪರ್ವತಕ್ಕೆ ದಯಮಾಡಿಸುತ್ತಾರೆ. ಆ ಮಲಯ ಪರ್ವತವು ಅನೇಕ ಚಂದನದ ಗಿಡಗಳಿಂದ ಅಲಂಕೃತವಾಗಿತ್ತು, ಅಲ್ಲಿಯ ವಾತಾವರಣವು ಮಂದ ಸುಗಂಧ ದಿಂದ ಪರಿಪೂರ್ಣವಾಗಿತ್ತು, ಅಲ್ಲಿಯ ಚಂದನದ ಗಿಡಗಳಿಗೆ ಸುತ್ತುವರಿದಿರುವ ಹೆಣ್ಣು ಸರ್ಪಗಳು ತಮ್ಮ ಸುಮಧುರವಾದ ಸಂಗೀತ ರಸದಿಂದ ಇಡೀ ಪರ್ವತವನ್ನೇ ಸೂರೆ

ಗೊಳಿಸಿದ್ದವು. ಮಲಯ ಪರ್ವತದಲ್ಲಿಯ ಆನೆಯ ಮರಿಗಳು ತಮ್ಮ ಸೊಂಡಿಲುಗಳಿಂದ ಏಲಕ್ಕಿಯ ಬಳ್ಳಿಗಳನ್ನು ಕಿತ್ತು ಹಾಕಿರುವುದರಿಂದ ಪರ್ವತವೆಲ್ಲಾ ಏಲಕ್ಕಿಯ ಸುವಾಸನೆಯಿಂದ ತುಂಬಿ ಹೋಗಿತ್ತು, ಅಲ್ಲಿಯ ಕಾಡುಹಂದಿಗಳು ಜೇಕಿನ ಗಡ್ಡೆಗಳನ್ನು ಕಿತ್ತು ಗವಿಗಳಲ್ಲಿ ಒಗೆದಿರುವುದರಿಂದ ಆ ಗವಿಗಳೆಲ್ಲ ಸುಗಂಧಪೂರ್ಣಗಳಾಗಿದ್ದವು.

ಮಲಯ ಪರ್ವತದಲ್ಲಿಯ ಬೇಡರ ದಂಪತಿಗಳು ಚಂದನದ ಎಲೆಗಳಿಂದ ನಿರ್ಮಿತವಾಗಿರುವ ಹಾಸಿಗೆಯ ಮೇಲೆ ವಿಶ್ರಾಂತಿ ಹೊಂದುತ್ತಿದ್ದರು. ಅಲ್ಲಿಯ ದುಂಡು ಮಲ್ಲಿಗೆ, ಮಲ್ಲಿಗೆ, ಜಾಜಿ ಮುಂತಾದ ಹೂವುಗಳ ಪರಾಗವು ಪರ್ವತವನ್ನೆಲ್ಲ ವ್ಯಾಪಿಸಿತ್ತು (ಇಂತಹ ಮಲಯ ಪರ್ವತಕ್ಕೆ ಶ್ರೀ ರೇಣುಕ ಭಗವತ್ಪಾದರು ಆಕಾಶ ಮಾರ್ಗವಾಗಿ ದಯಮಾಡಿಸುತ್ತಾರೆ).

## ಅಗಸ್ತ್ಯಾಶ್ರಮವರ್ಣನೆ

ಇನ್ನು ಮುಂದೆ ಈ ಮಲಯ ಪರ್ವತದಲ್ಲಿರುವ ಶ್ರೀ ಅಗಸ್ತ್ಯಮಹರ್ಷಿ ಆಶ್ರಮವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ವರ್ಣಿಸಲು ಪ್ರಾರಂಭಿಸುತ್ತಾರೆ–

ತತ್ರ ಕುತ್ರಚಿದಾಭೋಗೇ ಸರ್ವರ್ತುಕುಸುಮದ್ರುಮೇ ।
ಅಪಶ್ಯದಾಶ್ರಮಂ ದಿವ್ಯಮಗಸ್ತ್ಯಸ್ಯ ಮಹಾಮುನೇಃ

(ಸಿ. ಶಿ. ೪–೧೭)

ಅರ್ಥ : ಸರ್ವರ್ತು=ಸರ್ವಋತುಸಂಬಂಧಿಗಳಾದ, ಕುಸುಮ=ಹೂವುಗಳುಳ್ಳ, ದ್ರುಮೇ=ಮರಗಳಿಂದ ಕೂಡಿದ, ತತ್ರ=ಆ ಮಲಯ ಪರ್ವತದ, ಕುತ್ರ ಚಿತ್=ಒಂದಾನೊಂದು, ಆಭೋಗೇ=ವಿಶಾಲಪ್ರದೇಶದಲ್ಲಿ, ಮಹಾ ಮುನೇಃ– ಮಹರ್ಷಿಯಾದ, ಅಗಸ್ತ್ಯಸ್ಯ=ಅಗಸ್ತ್ಯನ, ದಿವ್ಯಂ=ದಿವ್ಯವಾದ, ಆಶ್ರಮಂ=ಆಶ್ರಮವನ್ನು, ಅಪಶ್ಯತ್=ನೋಡಿದನು.

ಮಂದಾರಚಂದನಪ್ರಾಯೈರ್ಮಂಡಿತಂ ತರುಮಂಡಲೈಃ ।
ಶಾಖಾಶಿಖರಸಂಲೀನತಾರಕಾಗಣಕೋರಕೈಃ

(ಸಿ. ಶಿ. ೪–೧೮)

ಅರ್ಥ : ಶಾಖಾಶಿಖರ=ಟೊಂಗೆಗಳ ತುದಿಗಳಲ್ಲಿ, ಸಂಲೀನ=ಅಡಗಿರುವ ತಾರಕಾಗಣಕೋರಕೈಃ=ನಕ್ಷತ್ರ ಸಮೂಹದಂತಿರುವ ಮೊಗ್ಗೆಗಳುಳ್ಳ, ಮಂದಾರ ಚಂದನ ಪ್ರಾಯೈಃ=ಕಲ್ಪವೃಕ್ಷ, ಚಂದನ ಮೊದಲಾದ, ತರುಮಂಡಲೈಃ=ಮರಗಳ ಸಮೂಹಗಳಿಂದ, ಮಂಡಿತಂ=ಅಲಂಕೃತವಾದ,.

ಮುನಿಕನ್ಯಾಕರಾನೀತಕಲಶಾಂಬುವಿವರ್ಧಿತೈಃ ।
ಆಲವಾಲಜಲಾಸ್ವಾದಮೋದಮಾನಮೃಗೀಗಣೈಃ

(ಸಿ. ಶಿ. ೪–೧೯)

ಅರ್ಥ : ಮುನಿಕನ್ಯಾ=ಋಷಿಗಳ ಕನ್ಯೆಯರ, ಕರಾನೀತ=ಕೈಗಳಿಂದ ತಂದ, ಕಲಶಾಂಬು=ಕೊಡಗಳ ನೀರಿನಿಂದ, ವಿವರ್ಧಿತೈಃ=ಬೆಳೆದಿರುವ, ಆಲವಾಲ=ಮಡಿ

ಗಳಲ್ಲಿರುವ, ಜಲ=ನೀರಿನ, ಆಸ್ವಾದ=ಸೇವನೆಯಿಂದ, ಮೋದಮಾನ=ಆನಂದ ಹೊಂದುತ್ತಿರುವ, ಮೃಗೀಗಣೈಃ=ಹೆಣ್ಣುಚಿಗರಿಗಳ ಗುಂಪುಳ್ಳ, (ಮರಗಳಿಂದ ಆ ಆಶ್ರಮ ಅಲಂಕೃತವಾಗಿತ್ತು).

ಹೇಮಾರವಿಂದನಿಷ್ಯಂದಮಕರಂದಸುಗಂಧಿಭಿಃ ।
ಮರಾಲಾಲಾಪವಾಚಾಲವೀಚಿಮಾಲಾಮನೋಹರೈಃ

(ಸಿ. ಶಿ. ೪–೨೦)

ಅರ್ಥ : ಹೇಮಾರವಿಂದ=ಸುವರ್ಣಕಮಲಗಳಿಂದ, ನಿಷ್ಯಂದ=ಸೋರುತ್ತಿರುವ, ಮಕರಂದ=ಮಕರಂದದಿಂದ, ಸುಗಂಧಿಭಿಃ=ಸುಗಂಧ ವಿಶಿಷ್ಟಗಳಾದ, ಮರಾಲ=ರಾಜ ಹಂಸಗಳ, ಆಲಾಪ=ಮಧುರಧ್ವನಿಯಿಂದ, ವಾಚಾಲ=ಶಬ್ದಾಯಮಾನಗಳಾದ, ವೀಚಿಮಾಲಾ=ತರಂಗಗಳ ಸಾಲುಗಳಿಂದ ಮನೋಹರೈಃ=ಸುಂದರಗಳಾದ.

ಇಂದೀವರವರಜ್ಯೋತಿರಂಧೀಕೃತಹರಿನ್ಮುಖೈಃ ।
ಲೋಪಾಮುದ್ರಾಪದನ್ಯಾಸಚರಿತಾರ್ಥತಟಾಂಕಿತೈಃ

(ಸಿ. ಶಿ. ೪–೨೧)

ಅರ್ಥ : ಇಂದೀವರ=ನೀಲಕಮಲಗಳ, ವರಜ್ಯೋತಿ=ಶ್ರೇಷ್ಠವಾದ ಕಾಂತಿ ಯಿಂದ, ಅಂಧೀಕೃತ=ಅಂಧಕಾರಯುಕ್ತಗಳಾಗಿ ಮಾಡಲ್ಪಟ್ಟ, ಹರಿನ್ಮುಖೈಃ=ದಿಕ್ಕು ಗಳುಳ್ಳ, ಲೋಪಾಮುದ್ರಾ=ಅಗಸ್ತ್ಯಪತ್ನಿಯಾದ ಲೋಪಾಮುದ್ರೆಯ, ಪದನ್ಯಾಸ= ಸಂಚಾರದಿಂದ, ಚರಿತಾರ್ಥ=ಸಾರ್ಥಕಗಳಾದ, ತಟಾಂಕಿತೈಃ=ದಂಡೆಗಳುಳ್ಳ, (ಸರೋವರ ಗಳಿಂದ ಆ ಆಶ್ರಮ ಸುತ್ತುವರಿಯಲ್ಪಟ್ಟಿತ್ತು.)

ಹಾರನೀಹಾರಕರ್ಪೂರಹರಹಾಸಾಮಲೋದಕೈಃ ।
ನಿತ್ಯನೈಮಿತ್ತಿಕಸ್ನಾನನಿಯಮಾರ್ಥೈಸ್ತಪಸ್ವಿನಾಂ

(ಸಿ. ಶಿ. ೪–೨೨)

ಅರ್ಥ : ಹಾರ=ಮುತ್ತಿನಸರ, ನೀಹಾರ=ಹಿಮ, ಕರ್ಪೂರ=ಕರ್ಪೂರ, ಹರ ಹಾಸ=ಶಿವನ ಮಂದಹಾಸ, ಇವುಗಳಂತೆ, ಅಮಲೋದಕೈಃ=ಶುಭ್ರಜಲದಿಂದ ಕೂಡಿದ, ತಪಸ್ವಿನಾಂ=ತಪಸ್ವಿಗಳ, ನಿತ್ಯನೈಮಿತ್ತಿಕಸ್ನಾನ=ನಿತ್ಯ ಮತ್ತು ನೈಮಿತ್ತಿಕ ಸ್ನಾನ ಕ್ಕಾಗಿ, ನಿಯಮಾರ್ಥೈಃ=ನಿಯಮಿತಗಳಾದ,

ಪ್ರಕೃಷ್ಟಮಣಿಸೋಪಾನೈಃ ಪರಿವೀತಂ ಸರೋವರೈಃ ।
ವಿಮುಕ್ತಸತ್ವವೈರಸ್ಯಂ ಬ್ರಹ್ಮಲೋಕಮಿವಾಪರಂ

(ಸಿ. ಶಿ. ೪–೨೩)

ಅರ್ಥ : ಪ್ರಕೃಷ್ಟ=ಶ್ರೇಷ್ಠಗಳಾದ, ಮಣಿ=ರತ್ನಗಳಿಂದ ನಿರ್ಮಿತಗಳಾದ, ಸೋಪಾನೈಃ ಪಾವಟಿಗೆಗಳುಳ್ಳ (ಸೋಪಾನಗಳುಳ್ಳ), ಸರೋವರೈಃ=ಸರೋವರಗಳಿಂದ, ಪರಿವೀತಂ= ಸುತ್ತುವರಿಯಲ್ಪಟ್ಟ, ವಿಮುಕ್ತ=ಬಿಡಲ್ಪಟ್ಟ, ಸತ್ವ=ಪ್ರಾಣಿಗಳ, ವೈರಸ್ಯಂ=ಪರಸ್ಪರ ವೈರ ಭಾವವುಳ್ಳ, ಅಪರಂ=ಬೇರೊಂದು, ಬ್ರಹ್ಮಲೋಕಮಿವ=ಬ್ರಹ್ಮಲೋಕದಂತೆ ಇರುವ, (ಹಾಗೆಯೇ),

ಹೂಯಮಾನಾಜ್ಯಸಂತಾನಧೂಮಗಂಧಿಮಹಾಸ್ಥಲಂ ।
ಶುಕಸಂಸತ್ಸಮಾರಬ್ಧಶ್ರುತಿಶಾಸ್ತ್ರೋಪಬೃಂಹಣಂ

(ಸಿ. ಶಿ. ೪–೨೪)

ಅರ್ಥ : ಹೂಯಮಾನ=ಹವನಮಾಡಲ್ಪಡುವ, ಆಜ್ಯ=ತುಪ್ಪದ, ಸಂತಾನ=ಧಾರೆಯಿಂದ ಉತ್ಪನ್ನವಾದ, ಧೂಮ=ಹೊಗೆಯಿಂದ, ಗಂಧಿ=ಸುಗಂಧದಿಂದ ಕೂಡಿದ, ಮಹಾಸ್ಥಲಂ=ವಿಶಾಲವಾದ ಸ್ಥಾನವುಳ್ಳ, ಶುಕಸಂಸತ್=ಗಿಳಿಗಳ ಸಮೂಹದಿಂದ, ಸಮಾರಬ್ಧ=ಆರಂಭಿಸಲ್ಪಟ್ಟ, ಶ್ರುತಿಶಾಸ್ತ್ರೋಪಬೃಂಹಣಂ=ವೇದ–ಶಾಸ್ತ್ರ–ಪುರಾಣಗಳ ಪ್ರಸಂಗವುಳ್ಳುದೂ ಆದ, (ಅಗಸ್ತ್ಯಾಶ್ರಮವನ್ನು ನೋಡಿದನು.)

ಆಕಾಶಮಾರ್ಗವಾಗಿ ಮಲಯಪರ್ವತಕ್ಕೆ ಆಗಮಿಸಿದ ಶ್ರೀ ರೇಣುಕ ಭಗವತ್ಪಾದರು ಆ ಮಲಯಪರ್ವತದ ಒಂದು ಭಾಗದಲ್ಲಿ ಅಗಸ್ತ್ಯ ಮಹರ್ಷಿಗಳ ಆಶ್ರಮವನ್ನು ನೋಡುತ್ತಾರೆ. ಆ ಆಶ್ರಮವು ಹೇಗೆ ಇತ್ತೆಂದರೆ–ಕಲ್ಪವೃಕ್ಷ ಮತ್ತು ಚಂದನದ ಮರಗಳ ಟೊಂಗೆಗಳಲ್ಲಿ ಇರುವ ಹೂವಿನ ಮೊಗ್ಗುಗಳು ಆಕಾಶದಲ್ಲಿಯ ನಕ್ಷತ್ರಗಳಂತೆ ಪರಿಶೋಭಿಸುತ್ತಿದ್ದವು. ಆಶ್ರಮದ ಈ ಎಲ್ಲ ಗಿಡಗಳಿಗೆ ಋಷಿಕುಮಾರಿಯರು ತಾವೇ ಕೊಡಗಳನ್ನು ಹೊತ್ತು ನೀರು ಹಾಕುತ್ತಿದ್ದರು. ಆಶ್ರಮದ ಅನೇಕ ಹೆಣ್ಣು ಚಿಗರಿಗಳು ಗಿಡಗಳ ಮಡಿಗಳಲ್ಲಿಯ ನೀರನ್ನು ಕುಡಿದು ಸಂತೋಷಿತಗಳಾಗುತ್ತಿದ್ದವು.

ಶ್ರೀ ಅಗಸ್ತ್ಯ ಮಹರ್ಷಿಯ ಆಶ್ರಮದ ಸುತ್ತಲೂ ಅನೇಕ ಸರೋವರಗಳು ವಿರಾಜಿಸುತ್ತಿದ್ದವು. ಆ ಸರೋವರಗಳು ತಮ್ಮಲ್ಲಿ ಅರಳಿದ ಅನೇಕ ಸುವರ್ಣ ಕಮಲಗಳ ಸುಗಂಧಗಳಿಂದ ವ್ಯಾಪ್ತವಾಗಿದ್ದವು. ಆ ಸರಸ್ಸುಗಳಲ್ಲಿರುವ ರಾಜಹಂಸಗಳು ಮಾಡುತ್ತಿರುವ ಮಧುರವಾದ ಧ್ವನಿ ಮತ್ತು ತರಂಗಗಳ ಧ್ವನಿಯಿಂದ ಸರೋವರಗಳು ಮನೋಹರವಾಗಿ ಕಾಣುತ್ತಿದ್ದವು. ಆ ಸರೋವರಗಳಲ್ಲಿ ಅರಳಿರುವ ನೀಲಕಮಲಗಳ ಕಪ್ಪು ಛಾಯೆಯು ದಶದಿಕ್ಕುಗಳನ್ನೆಲ್ಲ ಅಂಧಕಾರಮಯಗಳನ್ನಾಗಿ ಮಾಡಿದ್ದವು. ಅಗಸ್ತ್ಯ ಮಹರ್ಷಿಗಳ ಧರ್ಮಪತ್ನಿಯಾದ ಲೋಪಾಮುದ್ರಾದೇವಿಯರ ಪಾದವಿನ್ಯಾಸದಿಂದ ಆ ಸರೋವರಗಳ ದಂಡೆಗಳು ಧನ್ಯವಾದವುಗಳಾಗಿದ್ದವು.

ಮುತ್ತಿನಹಾರ, ಹಿಮದ ಬಂಡೆ, ಕರ್ಪೂರ ಮತ್ತು ಶಿವನ ಮಂದಹಾಸಗಳಂತೆ ಅತಿ ಶುಭ್ರಗಳಾದ ಆ ಸರೋವರಗಳ ಪವಿತ್ರ ಜಲದಲ್ಲಿ ಅಲ್ಲಿಯ ತಪಸ್ವಿಗಳೆಲ್ಲ ನಿತ್ಯ ಮತ್ತು ನೈಮಿತ್ತಿಕ ಸ್ನಾನಗಳನ್ನು ಆಚರಿಸುತ್ತಿದ್ದರು. ಈ ಎಲ್ಲ ಸರೋವರಗಳ ಸೋಪಾನಗಳು ಬೆಲೆಬಾಳುವ ರತ್ನಶಿಲೆಗಳಿಂದ ನಿರ್ಮಿಸಲ್ಪಟ್ಟಿದ್ದವು.

ಶ್ರೀ ಅಗಸ್ತ್ಯ ಮಹರ್ಷಿಗಳ ಆಶ್ರಮದಲ್ಲಿಯ ಅನೇಕ ಕ್ರೂರ ಪ್ರಾಣಿಗಳೂ ಸಹ ಪರಸ್ಪರವಾದ ವೈರಭಾವವನ್ನು ಮರೆತು ಬಾಳುತ್ತಿದ್ದವು. ಹೀಗೆ ವೈರಶೂನ್ಯವಾದ ಆ ಆಶ್ರಮವು ಎರಡನೇ ಬ್ರಹ್ಮಲೋಕದಂತೆ ಕಂಗೊಳಿಸುತ್ತಿತ್ತು. ಹವನದ ಸುಗಂಧವಾದ ಧೂಮದಿಂದ ವ್ಯಾಪ್ತವಾದ ಆ ಆಶ್ರಮದಲ್ಲಿ ಗಿಳಿಗಳು ಪರಸ್ಪರವಾಗಿ ವೇದ, ಶಾಸ್ತ್ರ ಹಾಗೂ ಪುರಾಣಗಳ ಅನೇಕ ವಿಷಯಗಳ ಮೇಲೆ ಚರ್ಚಿಸುತ್ತಿದ್ದವು. ಹೀಗೆ ಸರ್ವವಿಧದಿಂದಲೂ ಸುಮನೋಹರವಾದ ಅಗಸ್ತ್ಯರ .ಆಶ್ರಮವನ್ನು ಶ್ರೀ ರೇಣುಕ ಭಗವತ್ಪಾದರು ನೋಡಿದರೆಂಬ ಭಾವವು.

## ಅಗಸ್ತ್ಯಮುನಿವರ್ಣನೆ

ಆಶ್ರಮವನ್ನು ವರ್ಣಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಇನ್ನು ಮುಂದೆ ಆ ಆಶ್ರಮದಲ್ಲಿ ವಿರಾಜಿಸುತ್ತಿದ್ದ ಶ್ರೀ ಅಗಸ್ತ್ಯಮಹರ್ಷಿಗಳನ್ನು ವರ್ಣಿಸುತ್ತಾರೆ–

ತಸ್ಯ ಮಧ್ಯೇ ಸಮಾಸೀನಂ ಮೂಲೇ ಚಂದನಭೂರುಹಃ ।
ಸುಕುಮಾರದಲಚ್ಛಾಯಾದೂರಿತಾದಿತ್ಯತೇಜಸಃ

(ಸಿ. ಶಿ. ೪–೨೫)

ಅರ್ಥ : ತಸ್ಯ=ಆ ಆಶ್ರಮದ, ಮಧ್ಯೇ=ಮಧ್ಯದಲ್ಲಿ, ಸುಕುಮಾರ=ಕೋಮಲ ಗಳಾದ, ದಲ=ಎಲೆಗಳ, ಛಾಯಾ=ನೆರಳಿನಿಂದ, ದೂರಿತ=ನಿವಾರಿಸಲ್ಪಟ್ಟ, ಆದಿತ್ಯ ತೇ ಜಸಃ=ಸೂರ್ಯನ ಕಿರಣಗಳುಳ್ಳ, ಚಂದನ=ಗಂಧದ, ಭೂರುಹಃ=ಗಿಡದ, ಮೂಲೇ= ಅಡಿಯಲ್ಲಿ, ಸಮಾಸೀನಂ=ಕುಳಿತಿರುವ, (ಅಗಸ್ತ್ಯನನ್ನು ಶ್ರೀ ರೇಣುಕರು ನೋಡಿದ ರೆಂದು ಸಂಬಂಧ)

ತಡಿತ್ಪಿಂಗಜಟಾಭಾರೈಸ್ತ್ರಿಪುಂಡ್ರಾಂಕಿತಮಸ್ತಕೈಃ ।
ಭಸ್ಮೋದ್ಧೂಲಿತಸರ್ವಾಂಗೈಃ ಸ್ಫುರದ್ರುದ್ರಾಕ್ಷಭೂಷಣೈ ಃ

(ಸಿ. ಶಿ. ೪–೨೬)

ಅರ್ಥ : ತಡಿತ್=ಮಿಂಚಿನಂತೆ, ಪಿಂಗ=ಪಿಂಗಲವರ್ಣದ, ಜಟಾಭಾರೈಃ=ಜಡೆ ಗಳ ಭಾರವುಳ್ಳ, ತ್ರಿಪುಂಡ್ರಾಂಕಿತ=ಮೂರುಬೆರಳು ಭಸ್ಮದಿಂದ ಚಿಹ್ನಿತವಾದ, ಮಸ್ತಕೈಃ= ಹಣೆಯುಳ್ಳ, ಭಸ್ಮೋದ್ಧೂಲಿತ=ಭಸ್ಮೋದ್ಧೂಲನವನ್ನು ಮಾಡಿದ, ಸರ್ವಾಂಗೈಃ=ಸಕಲ ಅವಯವಗಳುಳ್ಳ, ಸ್ಫುರತ್=ಒಪ್ಪುತ್ತಿರುವ, ರುದ್ರಾಕ್ಷಭೂಷಣೈಃ=ರುದ್ರಾಕ್ಷಿಗಳ ಆಭರಣಗಳುಳ್ಳ.

ನವವಲ್ಕಲವಾಸೋಭಿರ್ನಾನಿಯಮಧಾರಿಭಿ ಃ ।
ಪರಿವೀತಂ ಮುನಿಗಣೈಃ ಪ್ರಮಥೈರಿವ ಶಂಕರಂ

(ಸಿ. ಶಿ. ೪–೨೭)

ಅರ್ಥ : ನವ=ನೂತನಗಳಾದ, ವಲ್ಕಲ=ನಾರುಮಡಿಗಳನ್ನು , ವಾಸೋಭಿಃ= ಉಟ್ಟಿರುವ, ನಾನಾನಿಯಮಧಾರಿಭಿಃ=ಅನೇಕ ವ್ರತಗಳನ್ನು ಪರಿಪಾಲಿಸುತ್ತಿರುವ, ಪ್ರಮಥೈಃ=ಪ್ರಮಥಗಣರಿಂದ, ಶಂಕರಮಿವ=ಪರಮಾತ್ಮನೋಪಾದಿಯಲ್ಲಿ, ಮುನಿಗಣೈಃ= ಮುನಿಗಳ ಸಮೂಹದಿಂದ ಪರಿವೀತಂ=ಸುತ್ತುವರಿಯಲ್ಪಟ್ಟ.

ಸಮುಜ್ಜ್ವಲಜ್ಜಟಾಜಾಲೈಸ್ತಪಃಪಾದಪಪಲ್ಲವೈಃ ।
ಸುರ್ಫತ್ಸೌದಾಮಿನೀಕಲ್ಪೈರ್ಜ್ವಾಲಾಜಾಲೈರಿವಾನಲಂ

(ಸಿ. ಶಿ. ೪–೨೮)

ಅರ್ಥ : ತಪಃಪಾದಪ=ತಪಸ್ಸೆಂಬ ವೃಕ್ಷದ, ಪಲ್ಲವೈಃ=ಚಿಗುರೆಲೆಗಳಿಗೆ ಸಮಾನ ಗಳಾದ, ಸ್ಫುರತ್=ಹೊಳೆಯುತ್ತಿರುವ, ಸೌದಾಮಿನೀಕಲ್ಪೈಃ=ಮಿಂಚಿಗೆ ಸಮಾನ ಗಳಾದ, ಜ್ವಾಲಾಜಾಲೈಃ=ಜ್ವಾಲೆಗಳ ಸಮೂಹದಿಂದ, ಅನಲಮಿವ=ಅಗ್ನಿಯೋಪಾದಿ

ಯಲ್ಲಿ ಜಟಾಜಾಲೈಃ=ಜಡೆಗಳ ಸಮೂಹದಿಂದ, ಸಮುಜ್ವಲತ್=ಉಜ್ಜ್ವಲನಾಗಿ ತೋರುತ್ತಿರುವ.

ವಿಶುದ್ಧಭಸ್ಮಕೃತಯಾ ತ್ರಿಪುಂಡ್ರಾಂಕಿತರೇಖಯಾ ।
ತ್ರಿಸ್ರೋತಸೇವಸಂಬದ್ಧಶಿಲಾಭಾಗಂ ಹಿಮಾಚಲಂ

(ಸಿ. ಶಿ. ೪–೨೯)

ಅರ್ಥ : ವಿಶುದ್ಧಭಸ್ಮ=ಪರಿಶುದ್ಧವಾದ ಭಸ್ಮದಿಂದ, ಕೃತಯಾ=ಮಾಡಲ್ಪಟ್ಟ, ತ್ರಿಪುಂಡ್ರಾಂಕಿತರೇಖಯಾ=ಭಸ್ಮದ ಮೂರು ರೇಖೆಯಿಂದ (ಕೂಡಿದ), (ಅಗಸ್ತ್ಯನು), ತ್ರಿಸ್ರೋತಸಾ=ಗಂಗೆಯ ಮೂರು ಪ್ರವಾಹಗಳಿಂದ, ಸಂಬದ್ಧಶಿಲಾಭಾಗಂ=ಸಂಬಂಧವಾದ ಕಲ್ಲಿನ ಭಾಗವುಳ್ಳ, ಹಿಮಾಚಲಂ ಇವ=ಹಿಮಾಚಲಪರ್ವತದಂತೆ (ತೋರುತ್ತಿರುವ),

ಭಸ್ಮಾಲಂಕೃತಸರ್ವಾಂಗಂ ಶಶಾಂಕಮಿವ ಭೂಗತಂ ।
ವಸಾನಂ ವಲ್ಕಲಂ ನವ್ಯಂ ಬಾಲಾತಪಸಮಪ್ರಭಂ

(ಸಿ. ಶಿ. ೪–೩೦)

ಅರ್ಥ : ಭಸ್ಮಾಲಂಕೃತ=ಭಸ್ಮದಿಂದ ಅಲಂಕೃತವಾದ, ಸರ್ವಾಂಗಂ=ಎಲ್ಲ ಅವಯವಗಳುಳ್ಳ, ಅಂತೆಯೇ, ಭೂಗತಂ=ಭೂಮಿಯಲ್ಲಿಯ, ಶಶಾಂಕಮಿವ=ಚಂದ್ರನಂತೆ ತೋರುತ್ತಿರುವ, ನವ್ಯಂ=ನೂತನವಾದ, ವಲ್ಕಲಂ=ನಾರು ಮಡಿಯನ್ನು, ವಸಾನಂ=ಉಟ್ಟಿರುವ, ಆದ್ದರಿಂದ, ಬಾಲಾತಪ=ಎಳೆಬಿಸಿಲಿಗೆ, ಸಮಪ್ರಭಂ=ಸಮಾನವಾದ ಕಾಂತಿಯುಳ್ಳ.

ವಡವಾಗ್ನಿ ಶಿಖಾಜಾಲಸಮಾಲೀಢಮಿವಾರ್ಣವಂ ।
ಸರ್ವಾಸಾಮಪಿ ವಿದ್ಯಾನಾಂ ಸಮುದಾಯನಿಕೇತನಂ

(ಸಿ. ಶಿ. ೪–೩೧)

ಅರ್ಥ : ವಡವಾಗ್ನಿ=ವಡವಾಗ್ನಿಯ, ಶಿಖಾಜಾಲ=ಜ್ವಾಲಾಜಾಲದಿಂದ, ಸಮಾಲೀಢ=ವ್ಯಾಪ್ತವಾದ, ಅರ್ಣವಮಿವ=ಸಮುದ್ರದಂತೆ ತೋರುತ್ತಿರುವ, ಸರ್ವಾಸಾಮಪಿ=ಎಲ್ಲ ವಿದ್ಯಾನಾಂ=ವಿದ್ಯೆಗಳ, ಸಮುದಾಯ=ಸಮುದಾಯಕ್ಕೆ, ನಿಕೇತನಂ=ಆಶ್ರಯನಾಗಿರುವ.

ನ್ಯಕ್ಕೃತಪ್ರಾಕೃತಾಹಂತಂ ನಿರೂಢಶಿವಭಾವನಂ ।
ತೃಣೀಕೃತಜಗಜ್ಜಾಲಂ ಸಿದ್ಧೀನಾಮುದಯಸ್ಥಲಂ

( ಸಿ. ಶಿ. ೪–೩೨)

ಅರ್ಥ : ನ್ಯಕ್ಕೃತ=ತಿರಸ್ಕರಿಸಲ್ಪಟ್ಟ, ಪ್ರಾಕೃತ=ಪ್ರಕೃತಿಸಂಬಂಧವಾದ, ಅಹಂತಂ=ಅಹಂಕಾರವುಳ್ಳ, ನಿರೂಢ=ದೃಢವಾದ, ಶಿವಭಾವನಂ=ಶಿವಭಾವನೆಯುಳ್ಳ, ತೃಣೀಕೃತ=ತುಚ್ಛವಾಗಿ ಮಾಡಲ್ಪಟ್ಟ, ಜಗಜ್ಜಾಲಂ=ಜಗತ್ತಿನ ಜಾಲವುಳ್ಳ, ಸಿದ್ಧೀನಾಂ=ಅನೇಕ ಸಿದ್ಧಿಗಳಿಗೆ, ಉದಯಸ್ಥಲಂ=ಉದಯದ ಸ್ಥಾನದಂತಿರುವ.

ಮೋಹಾಂಧಕಾರತಪನಂ ಮೂಲಬೋಧಮಹೀರುಹಂ ।
ದದರ್ಶ ಸ ಮಹಾಯೋಗೀ ಮುನಿಂ ಕಲಶಸಂಭವಂ

(ಸಿ. ಶಿ. ೪–೩೩)

ಅರ್ಥ : ಮೋಹಾಂಧಕಾರ=ಮೋಹವೆಂಬ ಅಂಧಕಾರಕ್ಕೆ, ತಪನಂ=ಸೂರ್ಯನಂತಿರುವ, ಮೂಲಬೋಧ=ಸ್ವಸ್ವರೂಪಜ್ಞಾನಕ್ಕೆ ಮಹೀರುಹಂ=ಕಲ್ಪವೃಕ್ಷದಂತಿರುವ, ಕಲಶಸಂಭವಂ=ಕಲಶೋದ್ಭವನಾದ, ಮುನಿಂ=ಅಗಸ್ತ್ಯ ಮುನಿಯನ್ನು, ಸಃ=ಆ, ಮಹಾಯೋಗೀ=ಮಹಾಯೋಗಿಯಾದ ರೇಣುಕ ಗಣೇಶ್ವರನು, ದದರ್ಶ=ನೋಡಿದನು.

ಶ್ರೀ ರೇಣುಕ ಭಗವತ್ಪಾದರು ಮಲಯಪರ್ವತಕ್ಕೆ ಬಂದು ಅಲ್ಲಿಯ ಆಶ್ರಮವನ್ನು ವೀಕ್ಷಿಸುತ್ತಿರುವಾಗ ಆ ಆಶ್ರಮದ ಮಧ್ಯದಲ್ಲಿರುವ ಒಂದು ಶ್ರೀಗಂಧ ವೃಕ್ಷದ ಕೆಳಗೆ ಕುಳಿತಿರುವ ಶ್ರೀ ಅಗಸ್ತ್ಯಮಹರ್ಷಿಯನ್ನು ಕಂಡರು. ಶ್ರೀ ಅಗಸ್ತ್ಯ ಮಹರ್ಷಿಯ ಜಡೆಗಳು ಮಿಂಚಿನಂತೆ ಹೊಳೆಯುತ್ತಿದ್ದವು. ಸರ್ವಾಂಗಗಳಲ್ಲಿ ಭಸ್ಮೋದ್ಧೂಲನವನ್ನು ಮಾಡಿಕೊಂಡು ಮಸ್ತಕದಲ್ಲಿ ತ್ರಿಪುಂಡ್ರಧಾರಿಯಾಗಿ ಪ್ರಕಾಶ ಮಾನವಾದ ರುದ್ರಾಕ್ಷಿಗಳನ್ನು ಧರಿಸಿರುವ ಶ್ರೀ ಅಗಸ್ತ್ಯಮಹರ್ಷಿಯ ಸುತ್ತಲೂ, ನೂತನಗಳಾದ ನಾರುಮಡಿಗಳನ್ನು ಉಟ್ಟು, ಅನೇಕ ವ್ರತಾಚರಣೆಯಲ್ಲಿ ತತ್ಪರವಾದ ಮುನಿಗಳು ಕುಳಿತುಕೊಂಡಿದ್ದರು. ಈ ಸನ್ನಿವೇಶವು ನೋಡುವವರಿಗೆ ಪ್ರಮಥಗಣರಿಂದ ಸುತ್ತುವರಿಯಲ್ಪಟ್ಟ ಶಂಕರನು ಕುಳಿತಂತೆ ತೋರುತ್ತಿತ್ತು

ತಪಸ್ಸೆಂಬ ವೃಕ್ಷದ ಚಿಗುರೆಲೆಗಳಂತೆ, ಮಿಂಚಿನ ಬಳ್ಳಿಗಳಂತೆ, ಹೊಳೆಯುವ ಜಡೆಗಳನ್ನು ಧರಿಸಿದ ಶ್ರೀ ಅಗಸ್ತ್ಯಮಹರ್ಷಿಯು ಜ್ವಾಲೆಗಳಿಂದಾವೃತವಾದ ಅಗ್ನಿಯಂತೆ ತೇಜಃಪುಂಜನಾಗಿ ತೋರುತ್ತಿದ್ದನು. ಶರೀರದ ಮೇಲೆ ತ್ರಿಪುಂಡ್ರವನ್ನು ಧರಿಸಿದ ಮಹರ್ಷಿಯು ಗಂಗಾನದಿಯ ಮೂರು ಪ್ರವಾಹಗಳಿಂದ ಕೂಡಿದ ಹಿಮಾಲಯ ಪರ್ವತದ ಶಿಲಾಪ್ರದೇಶದಂತೆ ಶೋಭಿಸುತ್ತಿದ್ದನು.

ಶರೀರದ ತುಂಬೆಲ್ಲ ಭಸ್ಮವನ್ನು ಲೇಪಿಸಿಕೊಂಡಿರುವುದರಿಂದ ಈತನು ಭೂಮಿಯಲ್ಲಿಯ ಅಪರ ಚಂದ್ರನಂತೆ ಶುಭ್ರವಾಗಿ ಶೋಭಿಸುತ್ತಿದ್ದನಲ್ಲದೇ, ಹೊಸನಾರು ಬಟ್ಟೆಗಳನ್ನು ಧರಿಸಿಕೊಂಡಿರುವುದರಿಂದ ಹೂಬಿಸಿಲಿನಂತೆ ಕಾಂತಿಯುಕ್ತನಾಗಿ ತೋರುತ್ತಿದ್ದನು.

ಸಮಸ್ತ ವಿದ್ಯೆಗಳಿಗೆ ಆಗರನೂ, ಸಮುದ್ರದಂತೆ ಗಂಭೀರನೂ, ಶರೀರಾದಿಗಳಲ್ಲಿಯ ಅಹಂಕಾರ–ಮಮಕಾರಗಳನ್ನು ಬಿಟ್ಟವನೂ, ಶಿವಭಜನೆಯಲ್ಲಿ ಸದಾಲೀನವಾದ ಮನಸ್ಸುಳ್ಳವನೂ, ಅಣಿಮಾದಿ ಅಷ್ಟಸಿದ್ಧಿಗಳ ಮೂಲಸ್ಥಾನನೂ ಆದ ಶ್ರೀ ಅಗಸ್ತ್ಯನು ಜಗತ್ತಿನ ಮೋಹಜಾಲವನ್ನೆಲ್ಲ ತ್ಯಜಿಸಿ ನಿರ್ಲಿಪ್ತನಾಗಿದ್ದನು. ಮೋಹವೆಂಬ ಗಾಢಾಂಧಕಾರವನ್ನು ತನ್ನ ಜ್ಞಾನಸೂರ್ಯನಿಂದ ನಿವಾರಿಸಿಕೊಂಡು ಸ್ವಸ್ವರೂಪಾನಂದದಲ್ಲಿ ಅಧೀನನಾಗಿರುವ ಈ ಅಗಸ್ತ್ಯ ಮಹರ್ಷಿಯನ್ನು ಶ್ರೀ ರೇಣುಕ ಭಗವತ್ಪಾದರು ನೋಡಿದರು.

## ಶ್ರೀ ರೇಣುಕಾಗಸ್ತ್ಯಸಮಾಗಮ

ತನ್ನ ಆಶ್ರಮಕ್ಕೆ ಆಗಮಿಸಿದ ಶ್ರೀ ರೇಣುಕ ಭಗವತ್ಪಾದರನ್ನು ಕಂಡ ಶ್ರೀ ಅಗಸ್ತ್ಯಮಹರ್ಷಿಯು ಸ್ವಾಗತಿಸಿ ಪೂಜಿಸುತ್ತಾನೆ–

ತಮಾಗತಂ ಮಹಾಸಿದ್ಧಂ ಸಮೀಕ್ಷ್ಯ ಕಲಶೋದ್ಭವಃ ।
ಗಣೇಂದ್ರಂ ರೇಣುಕಾಭಿಖ್ಯಂ ವಿವೇದ ಜ್ಞಾನಚಕ್ಷುಷಾ

(ಸಿ. ಶಿ. ೪–೩೪)

ಅರ್ಥ : ಕಲಶೋದ್ಭವಃ=ಅಗಸ್ತ್ಯನು, ಆಗತಂ=ಬಂದಿರುವ, ಮಹಾಸಿದ್ಧಂ= ಮಹಾಸಿದ್ಧನಾದ, ತಂ=ಅವನನ್ನು, ಸಮೀಕ್ಷ್ಯ=ರೇಣುಕನೆಂಬ ಹೆಸರಿನ, ಗಣೇಂದ್ರಂ= ಗಣೇಂದ್ರನನ್ನಾಗಿ, ವಿವೇದ=ತಿಳಿದನು.

ತಸ್ಯಾನುಭಾವಂ ವಿಜ್ಞಾಯ ಸಹಸ್ಯೈವ ಸಮುತ್ಥಿತ ಃ ।
ಲೋಪಾಮುದ್ರಾಕರಾನೀತ್ಯೈರುದಕೈರತಿಪಾವನೈ ಃ

(ಸಿ. ಶಿ. ೪–೩೫)

ಅರ್ಥ : ಸಃ=ಆ ರೇಣುಕನ, ಅನುಭಾವಂ=ಪ್ರಭಾವವನ್ನು, ವಿಜ್ಞಾಯ=ತಿಳಿದು, ಸಹಸ್ಯೈವ=ಕೂಡಲೇ, ಸಮುತ್ಥಿತಃ=ಎದ್ದುನಿಂತನು ಮತ್ತು ಲೋಪಾ ಮುದ್ರಾ= ಧರ್ಮಪತ್ನಿಯಾದ ಲೋಪಾಮುದ್ರಾದೇವಿಯ, ಕರ=ಹಸ್ತದಿಂದ, ಆನೀತೈಃ= ತರಲ್ಪಟ್ಟ, ಅತಿಪಾವನೈಃ=ಅತ್ಯಂತ ಪವಿತ್ರಗಳಾದ, ಉದಕೈಃ=ನೀರಿನಿಂದ (ಪಾದ ಗಳನ್ನು ತೊಳೆದನು).

ಪಾದೌ ಪ್ರಕ್ಷಾಲಯಾಮಾಸ ಸ ತಸ್ಯ ಶಿವಯೋಗಿನ ಃ ।
ಸಂಪೂಜ್ಯ ತಂ ಯಥಾಶಾಸ್ತ್ರಂ ತನ್ನಿಯೋಗಪುರಃಸರಂ

(ಸಿ. ಶಿ. ೪–೩೬)

ಅರ್ಥ : ಸಃ=ಆ ಅಗಸ್ತ್ಯನು, ತಸ್ಯ=ಆ, ಶಿವಯೋಗಿನಃ=ಶಿವಯೋಗಿಯಾದ ಶ್ರೀ ರೇಣುಕ ಭಗವತ್ಪಾದರ, ಪಾದೌ=ಎರಡೂ ಪಾದಗಳನ್ನು, ಪ್ರಕ್ಷಾಲಯಾಮಾಸ= ತೊಳೆದನು; ಯಥಾಶಾಸ್ತ್ರಂ=ಶಾಸ್ತ್ರೋಕ್ತಪದ್ಧತಿಯಂತೆ, ತಂ=ಆ ರೇಣುಕನನ್ನು, ಸಂಪೂಜ್ಯ=ಪೂಜೆಮಾಡಿ, ತತ್=ಅವರ, ನಿಯೋಗಪುರಃಸರಂ=ಅಪ್ಪಣೆಯ ಮೇರೆಗೆ, (ಆಸನದಲ್ಲಿ ಕುಳಿತನು)

ಮುನಿರ್ವಿನಯಸಂಪನ್ನೋ ನಿಷಸಾದಾಸನಾಂತರೇ ।
ಸಮಾಸೀನಂ ಮುನಿವರಂ ಸರ್ವತೇಜಸ್ವಿನಾಂ ವಿಭುಂ

(ಸಿ. ಶಿ. ೪–೩೭)

ಅರ್ಥ : ವಿನಯಂಸಪನ್ನಃ=ವಿನಯದಿಂದ ಕೂಡಿದ, ಮುನಿಃ=ಅಗಸ್ತ್ಯನು, ಆಸನಾಂತರೇಃ=ಬೇರೊಂದು ಆಸನದಲ್ಲಿ, ನಿಷಸಾದ=ಕುಳಿತನು. ಸಮಾಸೀನಂ=ಕುಳಿತಿ

ರುವ, ಸರ್ವ ತೇಜಸ್ವಿನಾಂ=ಎಲ್ಲ ತೇಜಸ್ವಿಗಳಿಗೆ, ವಿಭುಂ=ಶ್ರೇಷ್ಠನಾದ, ಮುನಿವರಂ= ಮುನಿಶ್ರೇಷ್ಠನಾದ ಅಗಸ್ತ್ಯನನ್ನು (ಕುಶಲಪ್ರಶ್ನೆಯನ್ನು ಕೇಳಿದನೆಂಬ ಭಾವವು).

ಶ್ರೀ ರೇಣುಕ ಭಗವತ್ಪಾದರು ತನ್ನ ಆಶ್ರಮಕ್ಕೆ ದಯಮಾಡಿಸಿದ್ದನ್ನು ಕಂಡ ಅಗಸ್ತ್ಯಮಹರ್ಷಿಯು ತನ್ನ ದಿವ್ಯದೃಷ್ಟಿಯಿಂದ ಅವರ ಮಹಿಮೆಯನ್ನು ಅರಿತು, ಕೂಡಲೆ ತನ್ನ ಆಸನವನ್ನು ಬಿಟ್ಟು ಎದ್ದು, ತನ್ನ ಧರ್ಮಪತ್ನಿಯಾದ ಲೋಪಾಮುದ್ರಾದೇವಿ ಯಿಂದ ತರಲ್ಪಟ್ಟ ಪವಿತ್ರ ಜಲದಿಂದ ಶ್ರೀ ರೇಣುಕ ಭಗವತ್ಪಾದರ ಪವಿತ್ರವಾದ ಪಾದ ಕಮಲಗಳನ್ನು ತೊಳೆದನು. ಶಾಸ್ತ್ರೋಕ್ತ ಪದ್ಧತಿಯಂತೆ ದಂಪತಿಗಳು ಶ್ರೀ ಮಹಾಗುರು ವಿನ ಪಾದಪೂಜೆಯನ್ನು ಮಾಡಿದರು. ನಂತರ ಅತಿ ವಿನಯ ಸಂಪನ್ನನಾದ ಅಗಸ್ತ್ಯನು ಶ್ರೀ ರೇಣುಕಾಚಾರ್ಯರ ಅಪ್ಪಣೆಯ ಮೇರೆಗೆ ತಾನು ಬೇರೊಂದು ಆಸನದಲ್ಲಿ ಕುಳಿತು ಕೊಂಡನು. ಹೀಗೆ ಈರ್ವರೂ ಆಸೀನರಾದ ಬಳಿಕ ಸಿದ್ಧಕುಲ ಚಕ್ರವರ್ತಿಯಾದ ಶ್ರೀ ರೇಣುಕ ಭಗವತ್ಪಾದರು ಸಮಸ್ತ ತೇಜಸ್ವಿ ಪುರುಷರಲ್ಲಿ ಅಗ್ರಗಣ್ಯನಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಪ್ರಶಾಂತವಾದ ವಾಣಿಯಿಂದ ಕುಶಲ ಪ್ರಶ್ನೆಗಳನ್ನು ಪ್ರಾರಂಭಿಸುತ್ತಾರೆ.

ಇನ್ನು ಮುಂದೆ ಶ್ರೀ ರೇಣುಕರು ಅಗಸ್ತ್ಯನನ್ನು ಕುರಿತು ಕುಶಲ ವಾರ್ತೆಯನ್ನು ಕೇಳುತ್ತಾರೆ–

ಉವಾಚ ಶಾಂತಯಾ ವಾಚಾ ರೇವಣಃ ಸಿದ್ಧಶೇಖರ :।
ನಿರ್ವಿಘ್ನಂ ವರ್ತಸೇ ಕಿಂ ನು ನಿತ್ಯಾ ತೇ ನಿಯಮಕ್ರಿಯಾ ? ॥
ಅಥವಾಗಸ್ತ್ಯ ತೇಜಸ್ವಿನ್ ಕುತಃ ಸ್ಯುಸ್ತೇಂತರಾಯಕಾ : ?

(ಸಿ. ಶಿ. ೪–೩೮)

ಅರ್ಥ : ಸಿದ್ಧಶೇಖರಃ=ಸಿದ್ಧಶ್ರೇಷ್ಠನಾದ, ರೇವಣಃ=ರೇವಣನು, (ರೇಣು ಕನು), ಶಾಂತಯಾ=ಪ್ರಶಾಂತವಾದ, ವಾಚಾ=ವಾಣಿಯಿಂದ, ಉವಾಚ=ನುಡಿದನು, ನಿರ್ವಿಘ್ನಂ=ವಿಘ್ನವಿಲ್ಲದಂತೆ, ವರ್ತಸೇ=ಇರುವೆಯಾ ? ತೇ=ನಿನ್ನ, ನಿಯಮ ಕ್ರಿಯಾಃ=ನಿಯಮಕ್ರಿಯೆಗಳು, ನಿತ್ಯಾ ಕಿಂ ನು=ನಿರ್ವಿಘ್ನವಾಗಿ ನಡೆಯುತ್ತಿದೆಯಷ್ಟೆ ?, ಅಥವಾ=ಅಥವಾ, ತೇಜಸ್ವಿನ್=ತೇಜಸ್ವಿಯಾದ, ಅಗಸ್ತ್ಯ=ಅಗಸ್ತ್ಯನೇ, ತೇ=ನಿನಗೆ, ಅಂತರಾಯಕಾಃ=ವಿಘ್ನಗಳು, ಕುತಃಸ್ಯುಃ=ಹೇಗೆ ತಾನೇ ಆಗಬಲ್ಲವು ? (ಸಂಭವಿ ಸಲಾರವು).

ಶ್ರೀ ಅಗಸ್ತ್ಯರಿಂದ ಆತಿಥ್ಯವನ್ನು ಹೊಂದಿದ ಸಿದ್ಧಕುಲ ಚಕ್ರವರ್ತಿಗಳಾದ ಶ್ರೀ ರೇಣುಕ ಭಗವತ್ಪಾದರು ತಮ್ಮ ಪ್ರಶಾಂತ ಗಂಭೀರವಾದ ವಾಣಿಯಿಂದ ಶ್ರೀ ಅಗಸ್ತ್ಯನನ್ನು ಕೇಳುತ್ತಾರೆ–

ಎಲೈ ಮಹರ್ಷಿಯೇ ! ನೀನು ಸೌಖ್ಯವಾಗಿರುವೆಯಾ ? ನಿನ್ನ ನಿತ್ಯಗಳಾದ ನಿಯಮ ಕ್ರಿಯೆಗಳು ನಿರ್ವಿಘ್ನವಾಗಿ ಸಾಗಿರುವವೇ ? ಹೇ ತೇಜಸ್ವಿಯಾದ ಅಗಸ್ತ್ಯನೇ ! ನಿನಗೆ ವಿಘ್ನಗಳಾದರೂ ಬರಲು ಹೇಗೆ ಸಾಧ್ಯ ? (ಏಕೆಂದರೆ).

ವಿಂಧ್ಯೋ ನಿರುದ್ಧೋ ಭವತಾ ವಿಶ್ವೋಲ್ಲಂಘನವಿಭ್ರಮಃ ।
ನಹುಷೋ ರೋಷಲೇಶಾತ್ತೇ ಸದ್ಯಃ ಸರ್ಪತ್ವಮಾಗತ ಃ ॥

(ಸಿ. ಶಿ. ೪-೩೯)

ಅರ್ಥ : ವಿಶ್ವ=ಜಗತ್ತನ್ನು ಉಲ್ಲಂಘನ=ಉಲ್ಲಂಘಿಸಬೇಕೆಂಬ, ವಿಭ್ರಮಃ= ಗರ್ವವುಳ್ಳ, ವಿಂಧ್ಯಃ=ವಿಂಧ್ಯಪರ್ವತವು, ಭವತಾ=ನಿನ್ನಿಂದ, ನಿರುದ್ಧಃ=ತಡೆಯಲ್ಪಟ್ಟಿತು; ತೇ=ನಿನ್ನ, ರೋಷಲೇಶಾತ್=ಅಲ್ಪ ಕ್ರೋಧದಿಂದ, ನಹುಷ=ನಹುಷ ಚಕ್ರವರ್ತಿಯು, ಸದ್ಯಃ=ತತ್‌ಕ್ಷಣದಲ್ಲಿ, ಸರ್ಪತ್ವಂ=ಸರ್ಪ ಜನ್ಮಕ್ಕೆ, ಆಗತಃ=ಬಂದನು.

ಹೇ ಅಗಸ್ತ್ಯನೇ ! ಅಸಾಧ್ಯವಾಗಿ ಬೆಳೆಯುತ್ತ ವಿಶ್ವವನ್ನೇ ಮೀರುವ ಅಭಿಮಾನಿಯಾದ ವಿಂಧ್ಯನು ನಿನ್ನಿಂದಲೇ ತಡೆಯಲ್ಪಟ್ಟನಲ್ಲದೇ, ದೇವೇಂದ್ರನ ಪಟ್ಟವನ್ನೇರುವ ಉದ್ದೇಶದಿಂದ ಸಪ್ತರ್ಷಿಗಳ ಮೇನೆಯಲ್ಲಿ ಕುಳಿತು ಹೊರಟಿರುವ ನಹುಷನು ನಿನಗೆ ಎಸಗಿದ ಅಪಮಾನದ ಕಾರಣದಿಂದ ತತ್‌ಕ್ಷಣದಲ್ಲಿಯೇ ಸರ್ಪನಾಗಿ ಭೂಮಿಗೆ ಬಿದ್ದನು.

ಆಚಾಂತಾ ಭವತಾ ಪೂರ್ವಂ ಪಂಕಶೇಷಾಃ ಪಯೋಧಯಃ ।
ಜೀರ್ಣಸ್ತೇ ಜಾಠರೇ ವಹ್ನೌ ದೃಪ್ತೋ ವಾತಾಪಿದಾನವಃ

(ಸಿ. ಶಿ. ೪-೪೦)

ಅರ್ಥ : ಪೂರ್ವಂ=ಪೂರ್ವದಲ್ಲಿ, ಪಯೋಧಯಃ=ಸಪ್ತಸಮುದ್ರಗಳು, ಭವತಾ =ನಿನ್ನಿಂದ, ಪಂಕಶೇಷಾಃ=ಕೆಸರುಮಾತ್ರ ಉಳಿಯುವಹಾಗೆ, ಆಚಾಂತಾಃ=ಪಾನ ಮಾಡಲ್ಪಟ್ಟವು, ದೃಪ್ತಃ=ಕೊಬ್ಬಿದ, ವಾತಾಪಿದಾನವಃ=ವಾತಾಪಿ ಎಂಬ ರಾಕ್ಷಸನೂ, ತೇ=ನಿನ್ನ, ಜಾಠರೇ=ಜಠರಸಂಬಂಧಿಯಾದ, ವಹ್ನೌ=ಅಗ್ನಿಯಲ್ಲಿ, ಜೀರ್ಣಃ=ಜೀರ್ಣವಾದನು.

ಹೇ ಅಗಸ್ತ್ಯನೇ ! ನೀನು ಪೂರ್ವಕಾಲದಲ್ಲಿ ಸಪ್ತ ಸಮುದ್ರಗಳ ಜಲವನ್ನೆಲ್ಲ ಕುಡಿದು ಆ ಸಮುದ್ರಗಳಲ್ಲಿ ಕೇವಲ ಕೆಸರು ಉಳಿಯುವಂತೆ ಮಾಡಿದ್ದೆ; ಇಷ್ಟೇ ಅಲ್ಲ, ಅತ್ಯಂತ ಸೊಕ್ಕಿದ ವಾತಾಪಿ ಎಂಬ ರಾಕ್ಷಸನು ನಿನ್ನ ಜಠರಾಗ್ನಿಯಲ್ಲಿ ದಗ್ಧವಾಗಿ ಹೋದನು.

ಏವಂವಿಧಾನಾಂ ಚಿತ್ರಾಣಾಂ ಸರ್ವಲೋಕಾತಿಶಾಯಿನಾಂ ।
ಕೃತ್ಯಾನಾಂ ತು ಭವಾನ್ ಕರ್ತಾ ಕಸ್ತೇಽಗಸ್ತ್ಯ ಸಮಪ್ರಭಃ

(ಸಿ. ಶಿ. ೪-೪೧)

ಅರ್ಥ : ಅಗಸ್ತ್ಯ=ಹೇ ಅಗಸ್ತ್ಯನೇ, ಏವಂವಿಧಾನಾಂ=ಈ ಪ್ರಕಾರವಾಗಿರುವ, ಸರ್ವಲೋಕಾತಿಶಾಯಿನಾಂ=ಸಕಲ ಜಗಕ್ಕೂ ಅತಿಶಯಗಳಾದ, ವಿಚಿತ್ರಾಣಾಂ= ವಿಚಿತ್ರವಾದ, ಕೃತ್ಯಾನಾಂ=ಕಾರ್ಯಗಳ, ಕರ್ತಾ–ಮಾಡುವವನಾಗಿ, ಭವಾನ್= ನೀನು (ಇರುವಿ); ಆದ್ದರಿಂದ, ತೇ=ನಿನಗೆ, ಸಮಪ್ರಭಃ=ಸಮಾನವಾದ ಸಾಮರ್ಥ್ಯವುಳ್ಳವನು ಕಃ=ಯಾರಿದ್ದಾರೆ ? ಯಾರೂ ಇಲ್ಲ.

ಹೇ ಅಗಸ್ತ್ಯನೇ ! ಈ ಪ್ರಕಾರವಾಗಿ ಅನೇಕ ಅಲೌಕಿಕ ಲೀಲೆಗಳನ್ನು ಮಾಡಿರುವ ನಿನಗೆ ಸರಿಸಮಾನರು ಈ ಜಗತ್ತಿನಲ್ಲಿ ಯಾರೂ ಇರುವುದಿಲ್ಲ.

ಶಿವಾದ್ವೈತಪರಾನಂದಪ್ರಕಾಶನಪರಾಯಣಂ ।
ಭವಂತಮೇಕಂ ಶಂಸಂತಿ ಪ್ರಕೃತ್ಯಾ ಸಂಗವರ್ಜಿತಂ

(ಸಿ. ಶಿ. ೪–೪೨)

ಅರ್ಥ : ಭವಂತಮೇಕಂ=ನಿನ್ನೊಬ್ಬನನ್ನೇ, ಶಿವಾದ್ವೈತ=ಶಿವಾದ್ವೈತ ಜ್ಞಾನ ದಿಂದುಂಟಾದ, ಪರಾನಂದ=ಶ್ರೇಷ್ಠವಾದ ಆನಂದವನ್ನು, ಪ್ರಕಾಶನ=ಪ್ರಕಾಶಪಡಿಸು ವುದರಲ್ಲಿ, ಪರಾಯಣಂ=ಆಸಕ್ತನಾಗಿಯೂ, ಪ್ರಕೃತ್ಯಾ=ಪ್ರಕೃತಿಯಿಂದ, ಸಂಗವರ್ಜಿತಂ =ಸಂಗರಹಿತನನ್ನಾಗಿಯೂ, ಶಂಸಂತಿ=ಹೊಗಳುತ್ತಾರೆ.

ಹೇ ಅಗಸ್ತ್ಯನೇ ! ಶಿವಾದ್ವೈತಪರಿಜ್ಞಾನದಿಂದ ಉಂಟಾಗುವ ಪರಮಾನಂದ ವನ್ನು ತೋರ್ಪಡಿಸುವವನೂ, ಮಾಯಾಸಂಬಂಧವಿಲ್ಲದವನೂ ಆದ ವ್ಯಕ್ತಿ ಎಂದರೆ ನೀನೊಬ್ಬನೇ ಇರುವಿ ಎಂಬುದಾಗಿ ಜಗತ್ತಿನ ಜನರೆಲ್ಲರೂ ಹೇಳುತ್ತಿರುವರು.

ಪುರಾ ಹೈಮವತೀಸೂನುರವದತ್ತೇ ಷಡಾನನಃ ।
ಶಿವಧರ್ಮೋತ್ತರಂ ನಾಮ ಶಾಸ್ತ್ರಮೀಶ್ವರಭಾಷಿತಂ

(ಸಿ. ಶಿ. ೪–೪೩)

ಅರ್ಥ : ಪುರಾ=ಪೂರ್ವದಲ್ಲಿ, ಹೈಮವತೀ=ಪಾರ್ವತಿಯ, ಸೂನುಃ=ಮಗ ನಾದ, ಷಡಾನನಃ=ಷಣ್ಮುಖನು, ತೇ=ನಿನಗೆ, ಈಶ್ವರಭಾಷಿತಂ=ಈಶ್ವರನಿಂದ ಹೇಳಲ್ಪಟ್ಟ, ಶಿವಧರ್ಮೋತ್ತರಂ=ಶಿವಧರ್ಮೋತ್ತರ ಎಂಬ ಹೆಸರಿನ, ಶಾಸ್ತ್ರಂ=ಶಾಸ್ತ್ರ ವನ್ನು, ಅವದತ್=ಉಪದೇಶಿಸಿದನು.

ಹೇ ಅಗಸ್ತ್ಯನೇ ! ಪೂರ್ವಕಾಲದಲ್ಲಿ ಪಾರ್ವತೀನಂದನನಾದ ಷಣ್ಮುಖನು, ಶಿವಪ್ರೋಕ್ತವಾದ ಶಿವಧರ್ಮೋತ್ತರವೆಂಬ ಶಾಸ್ತ್ರವನ್ನು ನಿನಗೆ ಉಪದೇಶಿಸಿದ್ದನು.

ಭಕ್ತಿಃ ಶೈವೀ ಮಹಾಘೋರಸಂಸಾರಭಯಹಾರಿಣೀ ।
ತ್ವಯಾ ರಾಜನ್ವತೀ ಲೋಕೇ ಜಾತಾಽಗಸ್ತ್ಯ ಮಹಾಮುನೇ

(ಸಿ. ಶಿ. ೪–೪೪)

ಅರ್ಥ : ಅಗಸ್ತ್ಯಮಹಾಮುನೇ=ಹೇ ಅಗಸ್ತ್ಯ ಮಹರ್ಷಿಯೇ ! ಮಹಾಘೋರ= ಅತ್ಯಂತ ಘೋರವಾದ, ಸಂಸಾರಭಯ=ಸಂಸಾರದ ಭಯವನ್ನು, ಹಾರಿಣೀ=ದೂರ ಮಾಡುವ, ಶೈವೀ=ಶಿವಸಂಬಂಧಿಯಾದ, ಭಕ್ತಿಃ=ಭಕ್ತಿಯು, ಲೋಕೇ=ಈ ಜಗತ್ತಿನಲ್ಲಿ ತ್ವಯಾ=ನಿನ್ನಿಂದ, ರಾಜನ್ವತೀ=ಪ್ರಕಾಶಿಸುವಂಥಾದ್ದು, ಜಾತಾ=ಆಯಿತು.

ಎಲೈ ಅಗಸ್ತ್ಯಮಹರ್ಷಿಯೇ ! ಘೋರವಾದ ಸಂಸಾರದ ಹೆದರಿಕೆಯನ್ನು ದೂರಮಾಡಬಲ್ಲ ಶಿವಭಕ್ತಿಯು ನಿನ್ನಿಂದಲೇ ಈ ಜಗತ್ತಿನಲ್ಲಿ ಪ್ರಕಾಶಿಸುವಂಥದ್ದಾಯಿತು.

## ಅಗಸ್ತ್ಯಾಭಿಲಾಷೆ

ಶ್ರೀ ರೇಣುಕ ಭಗವತ್ಪಾದರಿಂದ ಹೇಳಿದ ಈ ನುಡಿಗಳನ್ನು ಕೇಳಿದ ಅಗಸ್ತ್ಯನು ತನ್ನ ಜೀವನವನ್ನು ಸಾರ್ಥಕವನ್ನಾಗಿ ಭಾವಿಸಿ ಈ ರೀತಿಯಾಗಿ ವಿಜ್ಞಾಪಿಸಿಕೊಂಡನು–

ಇತಿ ತಸ್ಯ ವಚಃ ಶ್ರುತ್ವಾ ಸಿದ್ಧಸ್ಯ ಮುನಿಪುಂಗವಃ ।
ಗಂಭೀರಗುಣಯಾ ವಾಚಾ ಬಭಾಷೇ ಭಕ್ತಿಪೂರ್ವಕಂ

(ಸಿ. ಶಿ. ೪–೪೫)

ಅರ್ಥ : ಮುನಿಪುಂಗವಃ=ಮುನಿಶ್ರೇಷ್ಠನಾದ ಅಗಸ್ತ್ಯನು, ತಸ್ಯ=ಆ, ಸಿದ್ಧಸ್ಯ=ಗಣಾಧೀಶ್ವರನಾದ ಶ್ರೀ ರೇಣುಕನ, ಇತಿ=ಈ ಪ್ರಕಾರವಾದ, ವಚಃ=ನುಡಿಗಳನ್ನು, ಶ್ರುತ್ವಾ=ಕೇಳಿ, ಭಕ್ತಿಪೂರ್ವಕಂ=ಭಕ್ತಿಪುರಃಸರವಾಗಿ, ಗಂಭೀರಗುಣಯಾ=ಗಂಭೀರ ಸ್ವಭಾವದ, ವಾಚಾ=ಮಾತಿನಿಂದ, ಬಭಾಷೆ=ನುಡಿದನು.

ಶ್ರೀ ರೇಣುಕ ಗಣಾಧೀಶ್ವರರು ಹೇಳಿರುವ ಮಾತುಗಳನ್ನು ಕೇಳಿದ ಶ್ರೀ ಅಗಸ್ತ್ಯ ಮಹರ್ಷಿಯು ಭಕ್ತಿಪೂರ್ವಕವಾಗಿ ಅತ್ಯಂತ ಗೌರವಪೂರ್ಣವಾದ ವಾಣಿಯಿಂದ ನುಡಿಯತೊಡಗಿದನು.

ಅಹಮೇವ ಮುನೀಂದ್ರಾಣಾಂ ಲಾಲನೀಯೋಽಸ್ಮಿ ಸರ್ವದಾ ।
ಭವದಾಗಮಸಂಪತ್ತಿರ್ಮಾಂ ವಿನಾ ಕಸ್ಯ ಸಂಭವೇತ್ ?

(ಸಿ. ಶಿ. ೪–೪೬)

ಅರ್ಥ : ಭವದಾಗಮಸಂಪತ್ತಿಃ=ನಿನ್ನ ಆಗಮನ ರೂಪವಾದ ಸಂಪತ್ತು, ಮಾಂ ವಿನಾ=ನನ್ನ ಹೊರತಾಗಿ, ಕಸ್ಯ=ಯಾರಿಗೆ, ಸಂಭವೇತ್=ಉಂಟಾದೀತು ? ಆದ್ದರಿಂದ ಮನೀಂದ್ರಾಣಾಂ=ಮುನಿಶ್ರೇಷ್ಠರಿಗೆಲ್ಲ, ಸರ್ವದಾ=ಯಾವಾಗಲೂ, ಅಹಮೇವ=ನಾನೊಬ್ಬನೇ, ಲಾಲನೀಯಃ=ಶ್ಲಾಘನೀಯನಾದವನು, ಅಸ್ಮಿ=ಇರುತ್ತೇನೆ.

ಎಲೈ ಆಚಾರ್ಯವರ್ಯನೇ ? ಬೇರೆ ಯಾವ ಋಷಿಗಳಿಗೂ ಸಿಗದೇ ಇರುವ ನಿನ್ನ ದರ್ಶನ ಭಾಗ್ಯವು ನನಗೆ ದೊರೆತಿರುವುದರಿಂದ ನಾನು ನನ್ನನ್ನು ಎಲ್ಲ ಮಹರ್ಷಿಗಳಿಗಿಂತಲೂ ಶ್ರೇಷ್ಠನನ್ನಾಗಿ ತಿಳಿದುಕೊಳ್ಳುತ್ತೇನೆ.

ಸ್ಥಿರಮದ್ಯ ಶಿವಜ್ಞಾನಂ ಸ್ಥಿರಾ ಮೇ ತಾಪಸಕ್ರಿಯಾ ।
ಭವದ್ದರ್ಶನಪುಣ್ಯೇನ ಸ್ಥಿರಾ ಮೇ ಮುನಿರಾಜತಾ

(ಸಿ. ಶಿ. ೪–೪೭)

ಅರ್ಥ : ಭವದ್ದರ್ಶನ=ನಿಮ್ಮ ದರ್ಶನದಿಂದುಂಟಾದ, ಪುಣ್ಯೇನ=ಪುಣ್ಯದಿಂದ, ಅದ್ಯ=ಇಂದು, ಮೇ=ನನ್ನ, ಶಿವಜ್ಞಾನಂ=ಶಿವಜ್ಞಾನವು, ಸ್ಥಿರಂ=ಸ್ಥಿರವಾದುದು, ಮೇ=ನನ್ನ, ತಾಪಸಕ್ರಿಯಾ=ತಪಃಕ್ರಿಯೆಯು, ಸ್ಥಿರಾ=ಸ್ಥಿರವಾದುದು, ಮೇ=ನನ್ನ, ಮುನಿರಾಜತಾ=ಮುನಿಸಾರ್ವಭೌಮತ್ವವು, ಸ್ಥಿರಾ=ಸ್ಥಿರವಾದದ್ದಾಗಿದೆ.

ಹೇ ಗಣಶ್ರೇಷ್ಠನೇ ! ನಿಮ್ಮ ದರ್ಶನದಿಂದುಂಟಾದ ಪುಣ್ಯವಿಶೇಷದಿಂದಲೇ ಇಂದು ನನ್ನ ಶಿವಜ್ಞಾನ ಮತ್ತು ತಪಃಕ್ರಿಯೆಗಳು ಸ್ಥಿರಗಳಾಗಿವೆಯಲ್ಲದೇ ಮುನಿ ಸಾರ್ವಭೌಮನೆಂದು ಪ್ರಾಪ್ತವಾದ ಬಿರುದು ಇಂದು ಸ್ಥಿರವಾಗಿ ತೋರುತ್ತದೆ.

ಸಂಸಾರಸರ್ಪದಷ್ಟಾನಾಂ ಮೂರ್ಚ್ಛಿತಾನಾಂ ಶರೀರಿಣಾಂ ।
ಕಟಾಕ್ಷಸ್ತವ ಕಲ್ಯಾಣಂ ಸಮುಜ್ಜೀವನಭೇಷಜಂ

(ಸಿ. ಶಿ. ೪–೪೮)

ಅರ್ಥ : ಸಂಸಾರ=ಸಂಸಾರವೆಂಬ, ಸರ್ಪ=ಸರ್ಪದಿಂದ, ದಷ್ಟಾನಾಂ= ಕಚ್ಚಲ್ಪಟ್ಟ, ಅಂತೆಯೇ ಮೂರ್ಛಿತಾನಾಂ=ಮೂರ್ಛೆಗೊಂಡ, ಶರೀರಿಣಾಂ=ಜೀವಿ ಗಳಿಗೆ, ತವ=ನಿನ್ನ, ಕಟಾಕ್ಷಃ=ಕಟಾಕ್ಷವು, ಕಲ್ಯಾಣಂ=ಮಂಗಲಮಯವಾದ, ಸಮುಜ್ಜೀವಭೇಷಜಂ=ಜೀವಂತಗೊಳಿಸುವ ಔಷಧ ಇದ್ದಂತೆ ಇದೆ.

ಹೇ ಆಚಾರ್ಯವರ್ಯನೇ ! ಜನನ-ಮರಣ ರೂಪವಾದ ಸಂಸಾರವೆಂಬ ಸರ್ಪದಿಂದ ಕಚ್ಚಲ್ಪಟ್ಟು ಮೂರ್ಛೆಗೊಂಡಿರುವ ಜೀವಿಗಳಿಗೆ ಕರುಣಾಪೂರ್ಣವಾದ ನಿನ್ನ ಕಟಾಕ್ಷವು ಸಂಜೀವನ ಔಷಧದಂತಿದೆ.

ಸಮಸ್ತ ಲೋಕಸಂದಾಹತಾಪತ್ರಯಮಹಾನಲಃ ।
ತ್ವತ್ಪದಾಂಬುಕಣಾಸ್ವಾದಾದುಪಶಾಮ್ಯತಿ ದೇಹಿನಾಂ

(ಸಿ. ಶಿ. ೪-೪೯)

ಅರ್ಥ : ದೇಹಿನಾಂ=ಜೀವರಿಗೆ ಸಂಬಂಧಿಸಿದ, ಸಮಸ್ತ=ಎಲ್ಲ, ಲೋಕ=ಲೋಕ ಗಳನ್ನು, ಸಂದಾಹ=ಸುಡುತ್ತಿರುವ, ತಾಪತ್ರಯ=ತಾಪತ್ರಯವೆಂಬ, ಮಹಾನಲಃ= ಭಯಂಕರವಾದ ಜ್ವಾಲೆಯು, ತ್ವತ್=ನಿನ್ನ, ಪದಾಂಬು=ಪಾದೋದಕದ, ಕಣ= ಕಣದ, ಆಸ್ವಾದಾತ್=ಆಸ್ವಾದನೆಯಿಂದ, ಉಪಶಾಮ್ಯತಿ=ಶಾಂತವಾಗುತ್ತದೆ.

ಹೇ ಯೋಗಿವರ್ಯನೇ ! ಸಮಸ್ತ ಲೋಕಗಳಲ್ಲಿರುವ ಜೀವಿಗಳನ್ನು ಸುಡುತ್ತಿರುವ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತಾಪತ್ರಯಗಳು ತಮ್ಮಯ ಚರಣಾಮೃತದ ಒಂದು ಕಣದ ಆಸ್ವಾದನೆಯ ಮಾತ್ರದಿಂದಲೇ ಶಾಂತಗಳಾಗುತ್ತವೆ.

ರೇಣುಕಂ ತ್ವಾಂ ವಿಜಾನಾಮಿ ಗಣನಾಥಂ ಶಿವಪ್ರಿಯಂ ।
ಅವತೀರ್ಣಮಿಮಾಂ ಭೂಮಿಂ ಮದನುಗ್ರಹಕಾಂಕ್ಷಯಾ

(ಸಿ. ಶಿ. ೪-೫೦)

ಅರ್ಥ : ಮದನುಗ್ರಹ=ನನ್ನನ್ನು ಅನುಗ್ರಹಿಸಬೇಕೆಂಬ, ಕಾಂಕ್ಷಯಾ=ಇಚ್ಛೆ ಯಿಂದ, ಇಮಾಂ=ಈ, ಭೂಮಿಂ=ಭೂಮಿಗೆ, ಅವತೀರ್ಣ=ಅವತರಿಸಿರುವ, ಶಿವ ಪ್ರಿಯಂ=ಶಿವನಿಗೆ ಪ್ರಿಯನಾದ, ಗಣನಾಥಂ=ಗಣರಿಗೆ ಒಡೆಯನಾದ, ತ್ವಾಂ= ನಿನ್ನನ್ನು, ರೇಣುಕಂ=ರೇಣುಕನನ್ನಾಗಿ, ವಿಜಾನಾಮಿ=ತಿಳಿಯುತ್ತೇನೆ.

ಹೇ ಗಣಶ್ರೇಷ್ಠನಾದ ರೇಣುಕಾಚಾರ್ಯನೇ ! ಶಿವನ ಅತ್ಯಂತ ಪ್ರೇಮಕ್ಕೆ ಪಾತ್ರ ನಾದ ನೀನು ನನ್ನನ್ನು ಅನುಗ್ರಹಿಸುವುದಕ್ಕಾಗಿ ಈ ಭೂಲೋಕಕ್ಕೆ ಅವತರಿಸಿರುವೆ ಎಂಬು ದನ್ನು ನಾನು ಬಲ್ಲೆನು.

ಭವಾದೃಶಾನಾಂ ಸಿದ್ಧಾನಾಂ ಪ್ರಬೋಧಧ್ವಸ್ತಜನ್ಮನಾಂ ।
ಪ್ರವೃತ್ತಿರೀದೃಶೀ ಲೋಕೇ ಪರಾನುಗ್ರಹಕಾರಿಣೀ ॥

(ಸಿ. ಶಿ. ೪-೫೧)

ಅರ್ಥ : ಪ್ರಬೋಧ=ಜ್ಞಾನದಿಂದ, ಧ್ವಸ್ತ=ನಾಶವಾದ, ಜನ್ಮನಾಂ=ಜನ್ಮಗಳುಳ್ಳ, ಭವಾದೃಶಾನಾಂ=ತಮ್ಮಂತಹ, ಸಿದ್ಧಾನಾಂ=ಸಿದ್ಧ ಪುರುಷರ, ಈದೃಶೀ=ಈ ಪ್ರಕಾರ

ವಾದ, ಪ್ರವೃತ್ತಿಃ=ಪ್ರವೃತ್ತಿಯು, ಪರಾನುಗ್ರಹಕಾರಿಣೀ=ಪರರಿಗೆ ಅನುಗ್ರಹವನ್ನು ಉಂಟುಮಾಡುವಂಥದು.

ಎಲೈ ಆಚಾರ್ಯಶ್ರೇಷ್ಠನೆ! ಶಿವಜ್ಞಾನದಿಂದ ಜನನ–ಮರಣಾತ್ಮಕ ಸಂಸಾರವನ್ನು ನಾಶಮಾಡಿಕೊಂಡ ತಮ್ಮಂಥ ಸಿದ್ಧಪುರುಷರ ಈ ರೀತಿಯಾದ ಲೋಕ ಸಂಚಾರವೂ ಸಕಲ ಪ್ರಾಣಿಗಳಿಗೆ ಅನುಗ್ರಹವನ್ನು ಉಂಟುಮಾಡುವಂಥಹದಾಗಿದೆ.

ತ್ವನ್ಮುಖಾಚ್ಛ್ರೋತುಮಿಚ್ಛಾಮಿ ಸಿದ್ಧಾಂತಂ ಶ್ರುತಿಸಮ್ಮತಂ ।
ಸರ್ವಜ್ಞ ವದ ಮೇ ಸಾಕ್ಷಾಚ್ಛೈವಂ ಸರ್ವಾರ್ಥಸಾಧಕಂ

ಸದ್ಯಃ ಸಿದ್ಧಿಕರ, ಪುಂಸಾಂ ಸರ್ವಯೋಗೀಂದ್ರಸೇವಿತಂ ।
ದುರಾಚಾರ್ಯೈರನಾಘ್ರಾತಂ ಸ್ವೀಕೃತಂ ವೇದವೇದಿಭಿಃ ।
ಶಿವಾತ್ಮೈಕ್ಯಮಹಾಬೋಧಸಂಪ್ರದಾಯಪ್ರವರ್ತಕಂ

(ಸಿ. ಶಿ. ೪.೫೨–೫೩)

ಅರ್ಥ : ಸರ್ವಜ್ಞ=ಹೇ ಸರ್ವಜ್ಞನೇ, ಶ್ರುತಿಸಮ್ಮತಂ=ವೇದಸಮ್ಮತವಾದ, ಸಿದ್ಧಾಂತಂ=ಸಿದ್ಧಾಂತವನ್ನು, ತ್ವನ್ಮುಖಾತ್=ನಿನ್ನ ಮುಖದಿಂದ ಶ್ರೋತುಮಿಚ್ಛಾಮಿ= ಕೇಳಲಪೇಕ್ಷೆಯುಳ್ಳವನಾಗಿದ್ದೇನೆ. ಆದುದರಿಂದ, ಹೇ ಪೂಜ್ಯನೇ, ಸರ್ವಾರ್ಥ ಸಾಧಕಂ =ಸಕಲಪುರುಷಾರ್ಥಸಾಧಕವಾದ, ಶೈವಂ=ಶಿವಸಂಬಂಧಿಯಾದ, ಪುಂಸಾ=ಮನುಷ್ಯ ರಿಗೆ, ಸದ್ಯಃ=ಕೂಡಲೇ, ಸಿದ್ಧಿಕರಂ=ಸಿದ್ಧಿಯನ್ನುಂಟುಮಾಡುವ, ಸರ್ವಯೋಗೀಂದ್ರ= ಎಲ್ಲ ಯೋಗಿವರೇಣ್ಯರಿಂದ, ಸೇವಿತಂ=ಸೇವಿತವಾದ. ದುರಾಚಾರ್ಯೈಃ=ದುರಾಚಾರಿ ಗಳಿಂದ, ಅನಾಘ್ರಾತಃ=ಮೂಸಿಸಲ್ಪಡದಿರುವ, ವೇದ ವೇದಿಭಿಃ=ವೇದಬಲ್ಲವರಿಂದ, ಸ್ವೀಕೃತಂ=ಸ್ವೀಕರಿಸಲ್ಪಟ್ಟ, ಶಿವಾತ್ಮೈಕ್ಯ ಮಹಾಬೋಧ=ಶಿವ ಜೀವರ ಐಕ್ಯರೂಪ ಜ್ಞಾನದ, ಸಂಪ್ರದಾಯ=ಪರಂಪರೆಯನ್ನು, ಪ್ರವರ್ತಕಂ=ಉಂಟುಮಾಡುವ, ಈ ಸಿದ್ಧಾಂತ ಶಾಸ್ತ್ರವನ್ನು, ಮೇ=ನನಗೆ, ಸಾಕ್ಷಾತ್=ಸಾಕ್ಷಾತ್ತಾಗಿ, ವದ=ಉಪದೇಶಿಸು.

ಹೇ ಸರ್ವಜ್ಞನಾದ ಗಣೇಶ್ವರನೇ, ವೇದಸಮ್ಮತವಾದ ಧರ್ಮ–ಅರ್ಥ–ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡುವ, ಶಿವಸಂಬಂಧಿಯಾದ, ಕೂಡಲೇ ಸಿದ್ಧಿಯನ್ನುಂಟುಮಾಡುವ, ಎಲ್ಲ ಯೋಗಿ ಶ್ರೇಷ್ಠರಿಂದ ಸ್ವೀಕರಿಸಲ್ಪಟ್ಟಿರುವ, ನಾಸ್ತಿಕರಿಂದ ಮುಟ್ಟಲಸಾಧ್ಯವಾದ, ವೇದ ಬಲ್ಲವರಿಂದ ಸ್ವೀಕೃತವಾದ ಶಿವ–ಜೀವೈಕ್ಯ ಜ್ಞಾನದ ಸಂಪ್ರದಾಯವನ್ನು ಪ್ರವರ್ತಿಸುವ ಮಹಾಸಿದ್ಧಾಂತವನ್ನು, ನಿನ್ನ ಮುಖಾರ ವಿಂದದಿಂದಲೇ ಕೇಳಬೇಕೆಂಬ ಅಪೇಕ್ಷೆಯುಳ್ಳವನಾಗಿದ್ದೇನೆ; ಆದ್ದರಿಂದ ಕೃಪೆಮಾಡಿ ನನಗೆ ಉಪದೇಶಿಸಬೇಕೆಂದು ಶ್ರೀ ಅಗಸ್ತ್ಯ ಮಹರ್ಷಿಯು ಶ್ರೀ ರೇಣುಕ ಭಗವತ್ಪಾದ ರನ್ನು ಅನನ್ಯವಾಗಿ ಬೇಡಿಕೊಂಡನು.

ಉಕ್ತ್ವಾ ಭವಾನ್ ಸಕಲಲೋಕಮಹೋಪಕಾರಂ ।
ಸಿದ್ಧಾಂತಸಂಗ್ರಹಮನಾದೃತಬಾಹ್ಯತಂತ್ರಂ ।

ಸದ್ಯಃ ಕೃತಾರ್ಥಯಿತುಮರ್ಹತಿ ದಿವ್ಯಯೋಗಿನ್
ನಾನಾಗಮಶ್ರವಣವರ್ತಿತಸಂಶಯಂ ಮಾಂ

( ಸಿ. ಶಿ. ೪–೫೩)

ಅರ್ಥ : ದಿವ್ಯಯೋಗಿನ್=ಹೇ ದಿವ್ಯಯೋಗಿಯೇ ! ಅನಾದೃತ=ಖಂಡಿಸಲ್ಪಟ್ಟ, ಬಾಹ್ಯತಂತ್ರಂ=ವೇದಬಾಹ್ಯ ತಂತ್ರವುಳ್ಳ, ಸಕಲಲೋಕ=ಸಕಲ ಪ್ರಾಣಿಗಳಿಗೆ, ಮಹೋಪಕಾರಂ=ಮಹಾನ್ ಉಪಕಾರಿಯಾದ, ಸಿದ್ಧಾಂತಸಂಗ್ರಹಂ=ಸಿದ್ಧಾಂತದ ಸಂಗ್ರಹವನ್ನು, ಉಕ್ತ್ವಾ=ಉಪದೇಶಮಾಡಿ, ನಾನಾಗಮ=ಅನೇಕ ಆಗಮಗಳ, ಶ್ರವಣವರ್ತಿತ=ಕೇಳುವಿಕೆಯಿಂದ ಪ್ರಾಪ್ತವಾದ, ಸಂಶಯಂ=ಸಂಶಯವುಳ್ಳ, ಮಾಂ= ನನ್ನನ್ನು, ಭವಾನ್=ತಾವು, ಸದ್ಯಃ=ಕೂಡಲೇ, ಕೃತಾರ್ಥಯಿತುಂ=ಕೃತಾರ್ಥನನ್ನಾಗಿ ಮಾಡಲು, ಅರ್ಹತಿ=ಯೋಗ್ಯರಾಗಿರುವಿರಿ.

ಮಹಾಯೋಗಿಯಾದ ಹೇ ರೇಣುಕಾಚಾರ್ಯನೇ ! ಕಾಮಿಕಾದಿ ವಾತುಲಾಂತ ಗಳಾದ ಇಪ್ಪತ್ತೆಂಟು ಆಗಮ ಶಾಸ್ತ್ರಗಳನ್ನು ಕೇಳಿ ನನ್ನ ಮನಸ್ಸಿನಲ್ಲಿ ಅನೇಕ ಸಂದೇಹಗಳು ಉದ್ಭವಿಸಿವೆ. ಆ ಎಲ್ಲ ಸಂದೇಹಗಳನ್ನೂ ನಿವಾರಿಸಬಲ್ಲ, ವೇದವನ್ನು ಅಂಗೀಕರಿಸದೇ ಇರುವ ಜೈನ, ಬೌದ್ಧ, ಚಾರ್ವಾಕಾದಿ ನಾಸ್ತಿಕ ಸಿದ್ಧಾಂತಗಳನ್ನು ಖಂಡಿಸಬಲ್ಲ, ಜಗತ್ತಿನ ಸಕಲ ಮಾನವರಿಗೆ ಕಲ್ಯಾಣವನ್ನುಂಟುಮಾಡುವ, ಶಿವಸಿದ್ಧಾಂತ ಶಾಸ್ತ್ರವನ್ನು ನನಗೆ ಉಪದೇಶಮಾಡಿ, ಸದ್ಯಃ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಶ್ರೀ ಅಗಸ್ತ್ಯನು ಪುನಃ ಪ್ರಾರ್ಥಿಸಿಕೊಂಡನು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ ಪೂರ್ವಪೀಠಿಕಾ ಭಾಗದ ಚತುರ್ಥ ಪರಿಚ್ಛೇದವು ಪೂರ್ಣವಾದುದು.

■■

# ಪಂಚಮ ಪರಿಚ್ಛೇದ

## ಶಿವಾದ್ವೈತ ಸಿದ್ಧಾಂತೋಪದೇಶ

ಈ ಪ್ರಕಾರವಾಗಿ ಶ್ರೀ ಅಗಸ್ತ್ಯ ಮಹರ್ಷಿಯ ವಿಜ್ಞಾಪನೆಯನ್ನು ಕೇಳಿದ ನಂತರ, ವೇದಾಗಮಸಮ್ಮತವಾದ ವೀರಶೈವ ಸಿದ್ಧಾಂತವನ್ನು ಭೂಲೋಕದಲ್ಲಿ ಸಂಸ್ಥಾಪಿಸುವುದಕ್ಕಾಗಿಯೇ ಭೂಮಿಗೆ ಅವತರಿಸುವ ಶ್ರೀ ರೇಣುಕ ಭಗವತ್ಪಾದರು ತಾವು ಪ್ರಾರಂಭಿಸಬೇಕಾದ ಉಪದೇಶವು ನಿರ್ವಿಘ್ನವಾಗಿ ಪರಿಸಮಾಪ್ತವಾಗಬೇಕೆಂಬ ಉದ್ದೇಶದಿಂದ ಶಿಷ್ಟಾಚಾರ ಪದ್ಧತಿಯಂತೆ ಮನಸ್ಸಿನಲ್ಲಿಯೇ ಶಿವನನ್ನು ಧ್ಯಾನಿಸಿ ಉಪದೇಶವನ್ನು ಪ್ರಾರಂಭಿಸುತ್ತಾರೆ.

ಅಥಾಗಸ್ತ್ಯವಚಃ ಶ್ರುತ್ವಾ ರೇಣುಕೋ ಗಣನಾಯಕಃ ।
ಧ್ಯಾತ್ವಾ ಕ್ಷಣಂ ಮಹಾದೇವಂ ಸಾಂಬಮಾಹ ಸಮಾಹಿತಃ

(ಸಿ. ಶಿ. ೫–೧)

ಅರ್ಥ : ಅಥ=ಅನಂತರ, ಅಗಸ್ತ್ಯವಚಃ=ಅಗಸ್ತ್ಯನ ಮಾತನ್ನು, ಶ್ರುತ್ವಾ=ಕೇಳಿ, ಗಣನಾಯಕಃ=ಗಣಶ್ರೇಷ್ಠನಾದ, ರೇಣುಕಃ=ರೇಣುಕನು, ಕ್ಷಣಂ=ಒಂದು ಕ್ಷಣಕಾಲ, ಸಮಾಹಿತಃ=ಶಾಂತಚಿತ್ತನಾಗಿ, ಸಾಂಬಂ=ಶಕ್ತಿವಿಶಿಷ್ಟವಾದ, ಮಹಾದೇವಂ=ಶಿವನನ್ನು, ಧ್ಯಾತ್ವಾ=ಧ್ಯಾನಿಸಿ, ಆಹ=ಹೇಳಿದನು.

ಶ್ರೀ ಅಗಸ್ತ್ಯ ಮಹರ್ಷಿಯ ವಿಜ್ಞಾಪನೆಯನ್ನು ಕೇಳಿದ ಶ್ರೀ ರೇಣುಕ ಭಗವತ್ಪಾದರು, ಪ್ರಶಾಂತವಾದ ಮನಸ್ಸಿನಿಂದ ಪರಮಾತ್ಮನನ್ನು ಒಂದು ಕ್ಷಣಕಾಲ ಧ್ಯಾನಿಸಿ ಉಪದೇಶಿಸಲು ಪ್ರಾರಂಭಿಸುತ್ತಾರೆ.

ಅಗಸ್ತ್ಯ ಮುನಿಶಾರ್ದೂಲ ಸಮಸ್ತಾಗಮಪಾರಗ ।
ಶಿವಜ್ಞಾನಕರಂ ವಕ್ಷ್ಯೇ ಸಿದ್ಧಾಂತಂ ಶೃಣು ಸಾದರಂ

(ಸಿ. ಶಿ. ೫–೨)

ಅರ್ಥ : ಸಮಸ್ತಾಗಮ=ಎಲ್ಲ ಆಗಮಗಳ, ಪಾರಗ=ಪಾರಂಗತವಾದ, ಮುನಿಶಾರ್ದೂಲ=ಮುನಿಶ್ರೇಷ್ಠನಾದ, ಅಗಸ್ತ್ಯ=ಹೇ ಅಗಸ್ತ್ಯನೇ ! ಶಿವಜ್ಞಾನಕರಂ = ಶಿವಜ್ಞಾನವನ್ನುಂಟುಮಾಡುವ, ಸಿದ್ಧಾಂತ=ಸಿದ್ಧಾಂತವನ್ನು, ವಕ್ಷ್ಯೇ=ಹೇಳುತ್ತೇನೆ, ಸಾದರಂ=ಆದರ ಪೂರ್ವಕವಾಗಿ, ಶೃಣು=ಕೇಳು.

ಸಕಲ ಶಾಸ್ತ್ರಗಳನ್ನೂ ಬಲ್ಲ ಮುನಿಶ್ರೇಷ್ಠನಾದ ಎಲೈ ಆಗಸ್ತ್ಯ ಮಹರ್ಷಿಯೇ, ಶಿವಜ್ಞಾನವನ್ನುಂಟುಮಾಡಬಲ್ಲ ಸಿದ್ಧಾಂತ ತತ್ತ್ವವನ್ನು ನಿನಗೆ ಹೇಳುತ್ತೇನೆ ; ಆದರ ಪೂರ್ವಕವಾಗಿ ಆಲಿಸುವವನಾಗು.

ತಾವು ಹೇಳಬೇಕಾಗಿರುವ ಸಿದ್ಧಾಂತದ ಮಹತ್ತ್ವವನ್ನು ತಿಳಿಸುವುದಕ್ಕಾಗಿ ಜಗತ್ತಿನಲ್ಲಿಯ ಅನೇಕ ಸಿದ್ಧಾಂತಗಳ ಸ್ವರೂಪಗಳನ್ನು ಹೊಂದಲು ತಿಳಿಸುತ್ತಾರೆ–

ಅಗಸ್ತ್ಯ ಬಹುಧಾ ಖ್ಯಾತಾಃ ಸಿದ್ಧಾಂತಾ ರುಚಿಭೇದತಃ ।
ಭಿನ್ನಾಚಾರಸಮಾಯುಕ್ತಾ ಭಿನ್ನಾರ್ಥಪ್ರತಿಪಾದಕಾಃ

(ಸಿ. ಶಿ. ೫–೩)

ಅರ್ಥ : ಅಗಸ್ತ್ಯ=ಹೇ ಅಗಸ್ತ್ಯನೇ !, ರುಚಿಭೇದತಃ=ಅಪೇಕ್ಷೆಯ ವೈಚಿತ್ರ್ಯದಿಂದ ಭಿನ್ನಾಚಾರ=ಬೇರೆ ಬೇರೆ ಆಚಾರಗಳಿಂದ, ಸಮಾಯುಕ್ತಾಃ=ಕೂಡಿರುವ, ಭಿನ್ನಾರ್ಥ= ಬೇರೆ ಬೇರೆ ಅರ್ಥವನ್ನು, ಪ್ರತಿಪಾದಕಾಃ=ಕೇಳುತ್ತಿರುವ, ಸಿದ್ಧಾಂತಾಃ=ಸಿದ್ಧಾಂತಗಳು, ಬಹುಧಾ=ಬಹಳಷ್ಟು, ಖ್ಯಾತಾಃ=ಪ್ರಸಿದ್ಧಗಳಾಗಿವೆ.

ಎಲೈ ಅಗಸ್ತ್ಯನೇ ! ಈ ಜಗತ್ತಿನಲ್ಲಿ ಹೇಳುವವರ ಮತ್ತು ಕೇಳುವವರ ಅಪೇಕ್ಷೆಗಳ ವೈಚಿತ್ರ್ಯದ ಪರಿಣಾಮವಾಗಿ ಬೇರೆ ಬೇರೆ ಆಚಾರ ಮತ್ತು ಬೇರೆ ಬೇರೆ ಅರ್ಥಗಳನ್ನು ಪ್ರತಿಪಾದಿಸುವ ಅನೇಕ ಸಿದ್ಧಾಂತಗಳು ಪ್ರಸಿದ್ಧಗಳಾಗಿರುತ್ತವೆ.

ಆ ಸಿದ್ಧಾಂತಗಳು ಯಾವವು ? ಎಂಬ ಜಿಜ್ಞಾಸೆಯುಂಟಾದಾಗ ಸದ್ಯಃ ಅವುಗಳ ಹೆಸರುಗಳನ್ನು ನಿರೂಪಿಸುತ್ತಾರೆ–

ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಏತಾನಿ ಮಾನಭೂತಾನಿ ನಹಂತವ್ಯಾನಿ ಯುಕ್ತಿಭಿಃ

(ಸಿ. ಶಿ. ೫–೪)

ಅರ್ಥ : ಸಾಂಖ್ಯಂ=ಸಾಂಖ್ಯಶಾಸ್ತ್ರವು, ಯೋಗಃ=ಯೋಗಶಾಸ್ತ್ರವು, ಪಾಂಚ ರಾತ್ರಂ=ವೈಷ್ಣವಸಿದ್ಧಾಂತವು, ಪಾಶುಪತಂ=ಪಾಶುಪತಶಾಸ್ತ್ರವು, ವೇದಾಃ=ಋಗ್ವೇದಾದಿ ವೇದಗಳ ಪೂರ್ವಕಾಂಡವಾಗಿರುವ ಮೀಮಾಂಸಾ ಶಾಸ್ತ್ರವು, ಏತಾನಿ= ಇವೆಲ್ಲವುಗಳೂ, ಮಾನಭೂತಾನಿ=ಪ್ರಮಾಣಭೂತಗಳಾಗಿವೆ. ಆದ್ದರಿಂದ, ಯುಕ್ತಿಭಿಃ= ಯುಕ್ತಿಗಳಿಂದ, ನ ಹಂತವ್ಯಾನಿ=ಖಂಡಿಸಲ್ಪಡತಕ್ಕವುಗಳಲ್ಲ.

ತಾತ್ಪರ್ಯ : ಹೇ ಅಗಸ್ತ್ಯನೇ ! ಸಾಂಖ್ಯ, ಯೋಗ, ಪಾಂಚರಾತ್ರ, ವೇದ ಮತ್ತು ಪಾಶುಪತಗಳೆಂಬ ಹೆಸರಿನ ಅನೇಕ ಸಿದ್ಧಾಂತಗಳು ಜಗತ್ತಿನಲ್ಲಿ ಪ್ರಸಿದ್ಧಗಳಾಗಿವೆ. ಇವುಗಳಲ್ಲಿ ಸಾಂಖ್ಯಶಾಸ್ತ್ರವು ಕಪಿಲಮಹರ್ಷಿಯಿಂದ ಪ್ರಣೀತವಾಗಿದೆ. ಈ ಸಿದ್ಧಾಂತದಲ್ಲಿ ಪ್ರಕೃತಿ ಮತ್ತು ಪುರುಷ ಎಂಬ ಎರಡು ಮುಖ್ಯ ತತ್ತ್ವಗಳು ಅಂಗೀಕೃತ ಗಳಾಗಿವೆ. ಈ ಸಾಂಖ್ಯ ಸಿದ್ಧಾಂತವು ಪ್ರಕೃತಿ ಪುರುಷರಿಗಿಂತ ವಿಲಕ್ಷಣವಾದ ಈಶ್ವರನನ್ನು ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಇವರು ನಿರೀಶ್ವರ ಸಾಂಖ್ಯರೆನಿಸುವರು.

ಇನ್ನು ಯೋಗಶಾಸ್ತ್ರವು ಪತಂಜಲಿ ಮಹರ್ಷಿಯಿಂದ ಪ್ರಣೀತವಾಗಿದೆ. ಇದರಲ್ಲಿ ಕಷ್ಟಸಾಧ್ಯಗಳಾದ ಯಮ–ನಿಯಮಾದಿ ಅಷ್ಟಾಂಗಯೋಗಗಳು ಪ್ರತಿಪಾದಿಸಲ್ಪಟ್ಟಿವೆ. ಅಲ್ಲದೆ, ಸದ್ಗತಿಯ ಪ್ರಾಪ್ತಿಗಾಗಿ ಈಶ್ವರನ ಅನುಗ್ರಹವನ್ನೂ ಇವರು ಒಪ್ಪಿಕೊಳ್ಳುವುದ ರಿಂದ ಈ ಯೋಗಶಾಸ್ತ್ರಾನುಯಾಯಿಗಳು ಸೇಶ್ವರಸಾಂಖ್ಯರೆಂಬ ಹೆಸರಿನಿಂದಲೂ ಕರೆಯಲ್ಪಡುತ್ತಾರೆ.

ಪಾಂಚರಾತ್ರಶಾಸ್ತ್ರವು, ವಾಸುದೇವನಿಂದ ಪ್ರಣೀತವಾದದ್ದು. ಇದರಲ್ಲಿ ವೈಷ್ಣವದೀಕ್ಷೆಯ ಅಂಗಭೂತವಾದ ತಪ್ತ, ಶಂಖ–ಚಕ್ರಾದಿ ಧಾರಣೆಯು ನಿರೂಪಿಸಲ್ಪ ಟ್ಟಿದೆ. ಈ ಸಿದ್ಧಾಂತದಲ್ಲಿ ಚಿತ್–ಅಚಿತ್ ಈಶ್ವರನೆಂಬ ಮೂರು ಪದಾರ್ಥಗಳು ಪ್ರತಿ ಪಾದಿಸಲ್ಪಟ್ಟಿವೆ. ಈ ಪಾಂಚರಾತ್ರ ತಂತ್ರಕ್ಕೆ ವೈಷ್ಣವ ಸಿದ್ಧಾಂತವೆಂತಲೂ ಹೆಸರುಂಟು.

ಪಶು–ಪಾಶ–ಪತಿಗಳೆಂಬ ಪದಾರ್ಥತ್ರಯವನ್ನು ಹೇಳುವ ಸಿದ್ಧಾಂತಕ್ಕೆ 'ಪಾಶುಪಾತ ಸಿದ್ಧಾಂತ'ವೆಂದು ಹೆಸರು. ಇದು ಮೂಲತಃ ಆಗಮರೂಪದಲ್ಲಿ ಶಿವನಿಂದ ಪ್ರತಿಪಾದಿಸಲ್ಪಟ್ಟ ಶೈವಸಿದ್ಧಾಂತವು.

ಶಿವನ ಅಪ್ರಯತ್ನಸಿದ್ಧ ನಿಃಶ್ವಾಸಗಳಿಂದ ನಿಃಸೃತಗಳಾದ ಋಗ್ಯಜುಃ ಸಾಮಗಳೆಂಬ ವೇದಗಳ ಪೂರ್ವಕಾಂಡವಾದ ಜೈಮಿನಿ ಮಹರ್ಷಿಗಳಿಂದ ಪ್ರಣೀತವಾದ ಸಿದ್ಧಾಂತಕ್ಕೆ

ಪೂರ್ವ ಮೀಮಾಂಸಾ ಸಿದ್ಧಾಂತವೆಂದು ಹೆಸರು. ಇದಾದರೂ ಅನೀಶ್ವರವಾದಿ ಸಿದ್ಧಾಂತವು.

ಹೀಗೆ ಜಗತ್ತಿನಲ್ಲಿ ಪ್ರಸಿದ್ಧಗಳಾಗಿರುವ ಈ ಎಲ್ಲ ಸಿದ್ಧಾಂತಗಳೂ ಪ್ರಮಾಣರೂಪ ಗಳಾಗಿರುವುದರಿಂದ, ತರ್ಕಾದಿ ಯುಕ್ತಿಗಳಿಂದ ಯಾರೂ ಇವುಗಳ ಖಂಡನೆಯನ್ನು ಮಾಡಕೂಡದು.

ವಿಶೇಷ ವಿಚಾರ : ಗ್ರಂಥಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರ ಕಾಲಕ್ಕೆ ಸಾಂಖ್ಯ–ಯೋಗ–ಪಾಂಚರಾತ್ರ–ಪಾಶುಪತ–ಮೀಮಾಂಸಾಶಾಸ್ತ್ರಗಳು ಪ್ರಮಾಣ ಗಳಾಗಿ ಪ್ರಸಿದ್ಧಗಳಾಗಿರಬೇಕು. ಅಂತೆಯೇ ಸಮನ್ವಯವಾದಿಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರು ಅವುಗಳ ಖಂಡನೆಯನ್ನು ನಿರಾಕರಿಸಿದ್ದಾರೆ. ವೇದಾಗಮಸಮ್ಮತವಾದ ಯಾವುದೇ ಸಿದ್ಧಾಂತವಾದರೂ ಅದು ಅಪಸಿದ್ಧಾಂತವಾಗಿರಲಾರದು. ಆದ್ದರಿಂದ ಅದರ ಖಂಡನೆಯನ್ನು ಮಾಡುವುದು ಸರಿಯಲ್ಲ–ಎನ್ನುವುದು ಗ್ರಂಥಕರ್ತರ ಗೂಢಾ ಭಿಪ್ರಾಯವಾಗಿದೆ. ಅಂತೆಯೇ, ತಾವು ಮಾಡಿದ ಪ್ರತಿಜ್ಞಾನುಸಾರವಾಗಿ, ಈ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಎಲ್ಲಿಯೂ ವೇದಾಗಮಸಮ್ಮತಗಳಾದ ಯಾವುದೇ ಸಿದ್ಧಾಂತ ವನ್ನೂ ಖಂಡಿಸುವ ಯಾವ ಪ್ರಯತ್ನವನ್ನೂ ಇವರು ಮಾಡಿರುವುದಿಲ್ಲ. ಭಾರತದಲ್ಲಿ ಹೀಗೆ ಪ್ರತಿಯೊಬ್ಬ ಸಿದ್ಧಾಂತವಾದಿಯೂ ತಮ್ಮ ತಮ್ಮ ಮತ ಗ್ರಂಥಗಳಲ್ಲಿ ಅನ್ಯಸಿದ್ಧಾಂತ ಗಳ ಖಂಡನೆಯನ್ನು ಬಿಟ್ಟು ಕೇವಲ ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾದರೆ, ದಾರ್ಶನಿಕರ ಪರಸ್ಪರವಾದ ಕಲಹವೇ ನಿಂತುಹೋಗುತ್ತದೆ. ಎಲ್ಲ ನದಿಗಳ ನೀರು ಕೊನೆಗೆ ಸಮುದ್ರವನ್ನೇ ಸೇರುವಂತೆ, ಎಲ್ಲ ಸಿದ್ಧಾಂತಗಳ ಲಕ್ಷ್ಯವೂ ಪರಮಗತಿಯನ್ನು ಹೊಂದುವುದೇ ಆಗಿದೆ. ಈ ಉದಾತ್ತ ಭಾವನೆಯನ್ನು ಇರಿಸಿಕೊಂಡಿರುವ ಶ್ರೀ ಶಿವಯೋಗಿ ಶಿವಾಚಾರ್ಯರೇ ಧನ್ಯರು; ಮತ್ತು ಅವರ ಕೃತಿರತ್ನವಾದ ಈ ಸಿದ್ಧಾಂತ ಶಿಖಾಮಣಿಯೇ ಲೋಕಮಾನ್ಯವಾದುದು.

ಸಾಂಖ್ಯಾದಿ ಶಾಸ್ತ್ರಗಳು ಪ್ರಾಮಾಣಿಕಗಳಾಗಿರಲು ಕಾರಣವೇನು ? ಎಂಬುದರ ಬಗ್ಗೆ ಉಪದೇಶಿಸುತ್ತಾರೆ–

ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।
ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿ ನಿಶ್ಚಿತಂ

(ಸಿ. ಶಿ. ೫–೫)

ಅರ್ಥ : ಮಹಾಮುನೇ=ಮಹರ್ಷಿಯಾದ ಅಗಸ್ತ್ಯನೇ ! ಸರ್ವೇಷಾಂ= ಎಲ್ಲ ಸಾಂಖ್ಯಾದೀನಾಂ=ಸಾಂಖ್ಯಾದಿಶಾಸ್ತ್ರಗಳಿಗೆ, ವೇದಃ=ವೇದವೇ, ಪ್ರಧಾನಂ= ಪ್ರಧಾನ ವಾದುದು, ವೇದಾನುಸರಣಾತ್=ವೇದವನ್ನು ಅನುಸರಿಸುವುದರಿಂದ, ಏಷಾಂ=ಇವು ಗಳ, ಪ್ರಾಮಾಣ್ಯಂ=ಪ್ರಾಮಾಣ್ಯವು, ನಿಶ್ಚಿತಂ=ನಿಶ್ಚಿತವಾದದ್ದು.

ಹೇ ಮಹರ್ಷಿಯೇ ! ಈ ಸಾಂಖ್ಯ, ಯೋಗ, ಪಾಂಚರಾತ್ರ ಮತ್ತು ಪೂರ್ವ ಮೀಮಾಂಸಾ ಎಂಬ ಶಾಸ್ತ್ರಗಳಿಗೆಲ್ಲ ವೇದವೇ ಮೂಲ ಕಾರಣವಾಗಿರುವುದರಿಂದ; ಇವೆಲ್ಲ ಪ್ರಾಮಾಣಿಕಗಳಾದ ಶಾಸ್ತ್ರಗಳೆಂದು ಕರೆಯಿಸಿಕೊಳ್ಳುತ್ತವೆ.

ಇನ್ನು ಸಾಂಖ್ಯಾದಿಶಾಸ್ತ್ರಗಳಿಗಿಂತಲೂ ಶೈವಶಾಸ್ತ್ರಕ್ಕೆ ಇರುವ ವೈಶಿಷ್ಟ್ಯವನ್ನು ಉಪದೇಶಿಸುತ್ತಾರೆ–

ಪಾಂಚರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯ ಚ ತಥಾ ಮುನೇ ।
ವೇದೈಕದೇಶವರ್ತಿತ್ವಂ ಶೈವಂ ವೇದಮಯಂ ಮತಂ

(ಸಿ. ಶಿ. ೫–೬)

ಅರ್ಥ : ಮುನೇ=ಮಹರ್ಷಿಯೇ, ಪಾಂಚರಾತ್ರಸ್ಯ=ಪಾಂಚರಾತ್ರದ, ಸಾಂಖ್ಯಸ್ಯ=ಸಾಂಖ್ಯಶಾಸ್ತ್ರದ, ಚ=ಮತ್ತು, ಯೋಗಸ್ಯ=ಯೋಗಶಾಸ್ತ್ರದ, ವೇದೈಕ ದೇಶವರ್ತಿತ್ವಂ=ವೇದದ ಒಂದು ಭಾಗದಲ್ಲಿ ಇರುವಿಕೆಯು, ಮತಂ=ಸಮ್ಮತವಾಗಿದೆ. ಆದರೆ, ಶೈವಂ=ಶೈವಸಿದ್ಧಾಂತವು, ವೇದಮಯಂ=ವೇದಮಯವಾಗಿರುವುದಾಗಿ, ಮತಂ=ಸಮ್ಮತವಾಗಿದೆ.

ಎಲೈ ಅಗಸ್ತನೇ ! ಈ ಪಾಂಚರಾತ್ರ, ಸಾಂಖ್ಯ ಮತ್ತು ಯೋಗ ಶಾಸ್ತ್ರಗಳು ವೇದದ ಒಂದೊಂದು ಭಾಗಕ್ಕೆ ಸಮ್ಮತವಾಗಿವೆ. ಆದರೆ ಶೈವಸಿದ್ಧಾಂತವು ಸಂಪೂರ್ಣ ವೇದ ಭಾಗಕ್ಕೆಲ್ಲ ಸಮ್ಮತವಾಗಿದೆ. ಇದೇ ಸಾಂಖ್ಯಾದಿ ದರ್ಶನಗಳಿಗೆ ಮತ್ತು ಶೈವದರ್ಶನಕ್ಕೆ ಇರುವ ಬಹು ಮೂಲ್ಯವಾದ ವ್ಯತ್ಯಾಸವು.

ವೇದೈಕದೇಶವರ್ತಿಭ್ಯಃ ಸಾಂಖ್ಯಾದಿಭ್ಯೋ ಮಹಾಮುನೇ ।
ಸರ್ವವೇದಾನುಸಾರಿತ್ವಾಚ್ಛೈವತಂತ್ರಂ ವಿಶಿಷ್ಯತೇ

(ಸಿ. ಶಿ. ೫–೭)

ಅರ್ಥ : ಮಹಾಮುನೇ=ಮಹರ್ಷಿಯೇ ! ವೇದೈಕದೇಶವರ್ತಿಭ್ಯ=ವೇದದ ಒಂದು ಭಾಗದಲ್ಲಿರುವ, ಸಾಂಖ್ಯಾದಿಭ್ಯ=ಸಾಂಖ್ಯಾದಿಶಾಸ್ತ್ರಗಳಿಗಿಂತ, ಸರ್ವವೇದಾನು ಸಾರಿತ್ವಾತ್=ಸಮಸ್ತ ವೇದಭಾಗವನ್ನು ಅನುಸರಿಸುತ್ತಿರುವ, ಶೈವತಂತ್ರಂ=ಶೈವ ಸಿದ್ಧಾಂತವು, ವಿಶಿಷ್ಯತೇ=ಸರ್ವೋತ್ಕೃಷ್ಟವಾಗಿ ಇರುತ್ತದೆ.

ಹೇ ಅಗಸ್ತ್ಯನೇ ! ವೇದದ ಒಂದು ಭಾಗವನ್ನೇ ಪ್ರಮಾಣವಾಗಿ ನಂಬಿ ವೇದೈಕ ದೇಶಿಗಳೆನಿಸಿಕೊಳ್ಳುವ ಸಾಂಖ್ಯಾದಿಶಾಸ್ತ್ರಗಳಿಗಿಂತಲೂ ಸಂಪೂರ್ಣ ವೇದಭಾಗವನ್ನೇ ಪ್ರಮಾಣವಾಗಿ ನಂಬಿರುವ, ಅಂತೆಯೇ, ವೇದಮಯವೆನಿಸಿರುವ ಶೈವಸಿದ್ಧಾಂತವು ವಿಶೇಷ ಮಹತ್ವವುಳ್ಳದ್ದಾಗಿದೆ.

ಈ ಶೈವತಂತ್ರವು ಸಾಕ್ಷಾತ್ ಶಿವನಿಂದಲೇ ಬೋಧಿಸಲ್ಪಟ್ಟಿರುವುದರಿಂದ ಇದಕ್ಕೆ ಹೆಚ್ಚಿನ ಪ್ರಾಮಾಣ್ಯವಿದೆ ಎಂಬುದನ್ನು ತಿಳಿಸುತ್ತಾರೆ–

ಶೈವತಂತ್ರಮಿತಿ ಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಂ ।
ಸರ್ವವೇದಾರ್ಥರೂಪತ್ವಾತ್ ಪ್ರಮಾಣಂ ವೇದವತ್ಸದಾ

(ಸಿ. ಶಿ. ೫–೮)

ಅರ್ಥ : ಶಿವೋದಿತಂ=ಶಿವಪ್ರಣೀತವಾದ, ಶೈವತಂತ್ರಂ=ಶೈವಶಾಸ್ತ್ರವು, ಸಿದ್ಧಾಂತಾಖ್ಯಂ=ಸಿದ್ಧಾಂತಶಾಸ್ತ್ರವೆಂಬ ಹೆಸರಿನಿಂದ, ಪ್ರೋಕ್ತಂ=ಹೇಳಿಸಿಕೊಳ್ಳುವುದು. ಈ ಶಾಸ್ತ್ರವು, ಸರ್ವವೇದಾರ್ಥರೂಪತ್ವಾತ್=ಸಮಸ್ತ ವೇದದ ಅರ್ಥಮಯ ವಾಗಿರುವುದರಿಂದ, ವೇದವತ್=ವೇದದಂತೆ, ಸದಾ–ಯಾವಾಗಲೂ, ಪ್ರಮಾಣಂ= ಪ್ರಮಾಣಭೂತವಾಗಿರುವುದಾಗಿದೆ.

ಹೇ ಮುನಿಶ್ರೇಷ್ಠನೇ ! ಶಿವನಿಂದ ಉಪದೇಶಿಸಲ್ಪಟ್ಟ ಶೈವಶಾಸ್ತ್ರವು 'ಸಿದ್ಧಾಂತ ಶಾಸ್ತ್ರ'ವೆಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಇದು ಸಮಸ್ತ ವೇದದ ಅರ್ಥವನ್ನೇ

ಪ್ರಧಾನವಾಗಿ ಇಟ್ಟುಕೊಂಡಿರುವುದರಿಂದ ಇದಾದರೂ ವೇದದಷ್ಟೇ ಪ್ರಾಮಾಣಿಕ ವಾಗಿರುತ್ತದೆ.

ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ

(ಸಿ. ಶಿ. ೫–೯)

ಅರ್ಥ : ಪರಮಾತ್ಮನಾ=ಮಹಾನ್ ಆತ್ಮನಾದ, ಶಿವೇನ=ಶಿವನಿಂದ, ಶೈವಂ= ಶೈವವೆಂತಲೂ, ಪಾಶುಪತಂ=ಪಾಶುಪತವೆಂತಲೂ, ಸೋಮಂ= ಸೋಮವೆಂತಲೂ, ಚ=ಮತ್ತು, ಲಾಕುಲಂ=ಲಾಕುಲವೆಂತಲೂ, ಭೇದಕ=ಭೇದದಿಂದ, ಆಗಮಾಃ= ಆಗಮಗಳು, ಬಹುಧಾ=ಬಹಳವಿಧವಾಗಿ, ಪ್ರೋಕ್ತಾಃ= ಹೇಳಲ್ಪಟ್ಟಿವೆ.

ಪರಮಾತ್ಮನು ಶೈವಾಗಮ, ಪಾಶುಪತಾಗಮ, ಸೋಮಾಗಮ, ಮತ್ತು ಲಾಕುಲಾಗಮವೆಂಬ ಹೆಸರಿನ ಅನೇಕ ಆಗಮಶಾಸ್ತ್ರಗಳನ್ನು ಉಪದೇಶಿಸಿದ್ದಾನೆ.

ತೇಷು ಶೈವಂ ಚತುರ್ಭೇದಂ ತಂತ್ರಂ ಸರ್ವವಿನಿಶ್ಚಿತಂ ।
ವಾಮಂ ಚ ದಕ್ಷಿಣಂ ಚೈವ ಮಿಶ್ರಂ ಸಿದ್ಧಾಂತಸಂಜ್ಞಕಂ

(ಸಿ. ಶಿ. ೫–೧೦)

ಅರ್ಥ: ತೇಷು=ಅವುಗಳಲ್ಲಿ, ಶೈವಂ ತಂತ್ರಂ=ಶೈವಾಗಮವು, ವಾಮಂ= ವಾಮ ವೆಂತಲೂ, ಚ=ಮತ್ತು ದಕ್ಷಿಣಂ=ದಕ್ಷಿಣವೆಂತಲೂ ಮಿಶ್ರಂ=ಮಿಶ್ರವೆಂತಲೂ, ಚೈವ =ಅದರಂತೆ, ಸಿದ್ಧಾಂತ ಸಂಜ್ಞಕಂ=ಸಿದ್ಧಾಂತವೆಂಬ ಹೆಸರುಳ್ಳದ್ದಾಗಿ, ಚತುರ್ಭೇದಂ ನಾಲ್ಕು=ಪ್ರಕಾರವಾಗಿರುತ್ತದೆಂಬುದು, ಸರ್ವನಿಶ್ಚಿತಂ=ಎಲ್ಲರಿಂದಲೂ ನಿಶ್ಚಯಿಸಲ್ಪ ಟ್ಟಿದೆ.

ಪೂರ್ವೋಕ್ತಗಳಾದ ಆಗಮಗಳಲ್ಲಿರುವ ಶೈವಾಗಮವು ವಾಮಶೈವ, ದಕ್ಷಿಣಶೈವ, ಮಿಶ್ರಶೈವ ಮತ್ತು ಸಿದ್ಧಾಂತಶೈವವೆಂಬ ಹೆಸರಿನಿಂದ ನಾಲ್ಕು ಪ್ರಕಾರವಾಗಿ ತಂತ್ರಜ್ಞರಿಂದ ವಿಭಾಗಿಸಲ್ಪಟ್ಟಿರುತ್ತದೆ.

ಶಕ್ತಿಪ್ರಧಾನಂ ವಾಮಾಖ್ಯಂ ದಕ್ಷಿಣಂ ಭೈರವಾತ್ಮಕಂ ।
ಸಪ್ತಮಾತೃಪರಂ ಮಿಶ್ರಂ ಸಿದ್ಧಾಥಂ ವೇದಸಮ್ಮತಂ

(ಸಿ. ಶಿ. ೫–೧೧)

ಅರ್ಥ : ವಾಮಾಖ್ಯಂ=ವಾಮವೆಂಬ ಹೆಸರಿನ ಶೈವಾಗಮವು, ಶಕ್ತಿ ಪ್ರಧಾನಂ= ಶಕ್ತಿಯ ಉಪಾಸನೆಯೇ ಪ್ರಧಾನವಾದದ್ದು, ದಕ್ಷಿಣಂ=ದಕ್ಷಿಣಶೈವವು, ಭೈರವಾತ್ಮಕಂ= ಭೈರವನ ಉಪಾಸನೆಯೇ ಪ್ರಧಾನವಾಗಿ ಉಳ್ಳದ್ದು ಮಿಶ್ರಂ=ಮಿಶ್ರ ಶೈವವು, ಸಪ್ತಮಾತೃಪರಂ=ಸಪ್ತಮಾತೃಕೆಯರ ಉಪಾಸನವೇ ಪ್ರಧಾನವಾಗಿ ಉಳ್ಳದ್ದು ಸಿದ್ಧಾಂತಂ=ಸಿದ್ಧಾಂತ ಶೈವವು ಮಾತ್ರ, ವೇದ ಸಮ್ಮತಂ= ವೇದಸಮ್ಮತವಾಗಿದೆ.

ಶಕ್ತಿಯ ಆರಾಧನೆಯನ್ನೇ ಪ್ರಧಾನವಾಗಿ ಇಟ್ಟುಕೊಂಡ ಶೈವವು ವಾಮಶೈವವೆನಿಸಿ ಕೊಳ್ಳುವುದು. ಭೈರವನನ್ನು ಮುಖ್ಯವಾಗಿ ಆರಾಧಿಸುತ್ತಿರುವ ಶೈವ ಸಂಪ್ರದಾಯವನ್ನು ದಕ್ಷಿಣಶೈವವೆಂದು ಕರೆಯುವರು. ಸಪ್ತಮಾತೃಕಾದೇವಿಯರ ಪೂಜೆಯನ್ನೇ ಪ್ರಧಾನ ವಾಗಿ ಇಟ್ಟುಕೊಂಡಿರುವ ಶೈವವನ್ನು ಮಿಶ್ರಶೈವವೆನ್ನುತ್ತಾರೆ. ಸಿದ್ಧಾಂತಶೈವಾಗಮವು ಮಾತ್ರ ವೇದಾರ್ಥವನ್ನು ಪ್ರಧಾನವಾಗಿ ಇಟ್ಟುಕೊಂಡಿರುತ್ತದೆ. ಇಲ್ಲಿಯ ವಾಮ, ದಕ್ಷಿಣ

ಮತ್ತು ಮಿಶ್ರಶೈವಾಗಮಗಳು ವೇದ ಸಮ್ಮತಗಳಾದವುಗಳಲ್ಲ ; ಆದರೆ, ಶೈವ ಸಿದ್ಧಾಂತವು ಮಾತ್ರ ವೇದದಂತೆ ಪ್ರಮಾಣಭೂತವಾದದ್ದೆಂದು ತಿಳಿದುಕೊಳ್ಳಬೇಕು.

ಸಿದ್ಧಾಂತವೆಂಬ ಶೈವಶಾಸ್ತ್ರವು ವೇದಸಮ್ಮತವು ಹೇಗೆ ? ಎಂಬ ವಿಚಾರವನ್ನು ಇನ್ನು ವ್ಯಕ್ತಪಡಿಸುತ್ತಾರೆ–

ವೇದಧರ್ಮಾಭಿದಾಯಿತ್ವಾತ್ ಸಿದ್ಧಾಂತಾಖ್ಯಃ ಶಿವಾಗಮಃ ।
ವೇದಬಾಹ್ಯವಿರೋಧಿತ್ವಾದ್ವೇದಸಂಮ್ಮತ ಉಚ್ಯತೇ

(ಸಿ. ಶಿ. ೫–೧೨)

ಅರ್ಥ : ಸಿದ್ಧಾಂತಾಖ್ಯಃ=ಸಿದ್ಧಾಂತವೆಂಬ ಹೆಸರಿನ, ಶಿವಾಗಮಃ=ಶಿವಾಗಮವು, ವೇದಧರ್ಮಾಭಿದಾಯಿತ್ವಾತ್ =ವೇದೋಕ್ತವಾದ ಧರ್ಮವನ್ನು ಪ್ರತಿಪಾದಿಸುತ್ತಿರುವುದರಿಂದ, ವೇದಬಾಹ್ಯ ವಿರೋಧಿತ್ವಾತ್=ವೇದಬಾಹ್ಯಗಳಾದ ಚಾರ್ವಾಕಾಧಿಗಳನ್ನು ವಿರೋಧಿಸುತ್ತಿರುವುದರಿಂದ, ವೇದಸಮ್ಮತಃ= ವೇದಸಮ್ಮತವೆಂದು ಉಚ್ಯತೇ= ಹೇಳಲ್ಪಡುತ್ತದೆ.

ತಾತ್ಪರ್ಯ : ಸಿದ್ಧಾಂತವೆಂಬ ಹೆಸರಿನ ಶಿವಾಗಮಶಾಸ್ತ್ರವು ವೇದೋಕ್ತಗಳಾದ ಭಸ್ಮಧಾರಣ ರುದ್ರಾಕ್ಷಧಾರಣ ಮತ್ತು ಲಿಂಗಧಾರಣಾದಿ ಧರ್ಮಗಳನ್ನು ಪ್ರತಿಪಾದಿಸುವುದರಿಂದ ಮತ್ತು ವೇದಬಾಹ್ಯಗಳಾದ ಜೈನ, ಚಾರ್ವಾಕ ಹಾಗೂ ಬೌದ್ಧಾದಿ ಧರ್ಮಗಳನ್ನು ಖಂಡಿಸುವುದರಿಂದ ಸಿದ್ಧಾಂತಶೈವವನ್ನು ವೇದಸಮ್ಮತವೆಂಬುದಾಗಿ ಕರೆಯುತ್ತಾರೆ.

ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ

(ಸಿ. ಶಿ. ೫–೧೩)

ಅರ್ಥ : ವೇದಸಿದ್ಧಾಂತಯೋಃ=ವೇದ ಮತ್ತು ಸಿದ್ಧಾಂತಶಾಸ್ತ್ರಗಳಲ್ಲಿ, ಏಕಾರ್ಥ ಪ್ರತಿಪಾದನಾತ್=ಒಂದೇ ವಿಷಯವು ಪ್ರತಿಪಾದಿಸಲ್ಪಟ್ಟಿರುವುದರಿಂದ, ಪಂಡಿತೈಃ= ಪಂಡಿತರಿಂದ, ಏತಯೋಃ=ಇವರೆಡರ, ಪ್ರಾಮಾಣ್ಯಂ=ಪ್ರಾಮಾಣ್ಯವು, ಸದಾ=ಯಾವಾಗಲೂ, ಸದೃಶಂ=ಸಮಾನವಾದುದು, (ಎಂದು) ಜ್ಞೇಯಂ= ತಿಳಿಯಲ್ಪಡಬೇಕು.

"ಸರ್ವವೇದೇಷು ಯದ್ದೃಷ್ಟಂ ತತ್ಸರ್ವಂತು ಶಿವಾಗಮೇ" ಎನ್ನುವ ವೀರಾಗಮದ ವಚನದಂತೆ ವೇದಶಾಸ್ತ್ರ ಮತ್ತು ಸಿದ್ಧಾಂತ ಶೈವಶಾಸ್ತ್ರಗಳು ಒಂದೇ ವಿಷಯವನ್ನು ಪ್ರತಿಪಾದಿಸುತ್ತಿರುವುದರಿಂದ ಪಂಡಿತರು ಇವೆರಡರ ಪ್ರಾಮಾಣ್ಯವನ್ನು ಸಮಾನವಾಗಿಯೇ ತಿಳಿದುಕೊಳ್ಳಬೇಕು.

ವೇದಕ್ಕೆ ಸಮಾನವಾದ ಸಿದ್ಧಾಂತವೆಂಬ ಹೆಸರಿನ ಶೈವತಂತ್ರದಲ್ಲಿ ಏನು ಪ್ರತಿಪಾದಿಸಲ್ಪಟ್ಟಿದೆ ? ಎಂಬುದನ್ನು ತಿಳಿಯಪಡಿಸುತ್ತಾರೆ–

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ

(ಸಿ. ಶಿ. ೫–೧೪)

ಅರ್ಥ : ಶಿವೋದಿತೇ=ಶಿವನಿಂದ ಉಪದೇಶಿಸಲ್ಪಟ್ಟ, ಕಾಮಿಕಾದ್ಯೇ= ಕಾಮಿಕಾದಿ ವಾತುಲಾಂತಗಳಾದ, ಸಿದ್ಧಾಂತಾಖ್ಯೇ=ಸಿದ್ಧಾಂತವೆಂಬ ಹೆಸರಿನ,

ಮಹಾತಂತ್ರೇ=ಮಹಾತಂತ್ರದ, ಉತ್ತರೇ ಭಾಗೇ=ಉತ್ತರಭಾಗದಲ್ಲಿ, ಪರಂ= ಶ್ರೇಷ್ಠವಾದ, ವೀರಶೈವಮತಂ=ವೀರಶೈವಮತವು, ನಿರ್ದಿಷ್ಟಂ= ಹೇಳಲ್ಪಟ್ಟಿದೆ.

ಪರಶಿವನಿಂದ ಉಪದೇಶಿಸಲ್ಪಟ್ಟ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳಿಗೆ ಸಿದ್ಧಾಂತಾಗಮಗಳೆಂದು ಹೆಸರು. ಈ ಸಿದ್ಧಾಂತಾಗಮಗಳ ಕೊನೆಯ ಭಾಗದಲ್ಲಿ ವೀರಶೈವ ಸಿದ್ಧಾಂತವು ಹೇಳಲ್ಪಟ್ಟಿರುತ್ತದೆ.

ವೇದಾಗಮ ಸಮ್ಮತವಾದ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಪೂರ್ವದಲ್ಲಿ ವೀರಶೈವ ಶಬ್ದದ ಅರ್ಥವನ್ನು ವಿವರಿಸುತ್ತಾರೆ–

ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ

(ಸಿ. ಶಿ. ೫–೧೬)

ಅರ್ಥ : ವೀಶಬ್ದೇನ=ವೀ ಶಬ್ದದಿಂದ, ಶಿವಜೀವೈಕ್ಯಬೋಧಿಕಾ=ಶಿವ ಮತ್ತು ಜೀವರ ಏಕತ್ವವನ್ನು ಬೋಧಿಸುವ, ವಿದ್ಯಾ=ವಿದ್ಯೆಯು, ಉಚ್ಯತೇ=ಹೇಳಲ್ಪಡುತ್ತದೆ. ತಸ್ಯಾಂ=ಆ ವಿದ್ಯೆಯಲ್ಲಿ, ಯೇ=ಯಾವ, ಶೈವಾಃ=ಶಿವಭಕ್ತರು, ರಮಂತೇ=ಆನಂದ ಪಡುತ್ತಾರೆಯೋ, ತೇ=ಅವರು, ವೀರಶೈವಾಃ=ವೀರಶೈವರೆಂದು, ಮತಾಃ=ಹೇಳಿಸಿ ಕೊಳ್ಳುವರು.

'ವೀರಶೈವ' ಶಬ್ದದಲ್ಲಿಯ 'ವೀ' ಎಂದರೇ ಲಿಂಗಾಂಗ ಸಾಮರಸ್ಯ ಬೋಧಕ ವಾದ ವಿದ್ಯೆ ಎಂದರ್ಥವು. ಅದರಂತೆ 'ರ' ಎಂದರೇ ಆ ವಿದ್ಯೆಯಲ್ಲಿ ರಮಿಸುವುದು ಎಂದರ್ಥವು; ಹೀಗೆ ಶಿವ–ಜೀವರ ಅಥವಾ ಲಿಂಗಾಂಗಗಳ ಸಾಮರಸ್ಯವನ್ನು ಬೋಧಿಸುವ ವಿದ್ಯೆಯಲ್ಲಿ ಯಾವ ಶಿವಭಕ್ತರು ರಮಿಸುತ್ತಾರೆಯೋ ಅವರನ್ನು ವೀರಶೈವರೆಂದು ಕರೆಯುತ್ತಾರೆ.

ವೇದಾಂತಜನ್ಯಂ ಯಜ್‌ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ

(ಸಿ. ಶಿ. ೫–೧೮)

ಅರ್ಥ : ವೇದಾಂತಜನ್ಯಂ= ಉಪನಿಷತ್ತಿನಿಂದ ಉತ್ಪನ್ನವಾದ, ಯತ್=ಯಾವ, ಜ್ಞಾನಂ=ಜ್ಞಾನವಿದೆಯೋ, ಅದು, ವಿದ್ಯೇತಿ=ವಿದ್ಯೆ ಎಂದು, ಪರಿಕೀರ್ತ್ಯತೇ= ಹೇಳಲ್ಪ ಡುತ್ತದೆ. ವಿದ್ಯಾಯಾಂ=ಆ ವಿದ್ಯೆಯಲ್ಲಿ ಯಃ=ಯಾವನು, ರಮತೇ=ಆನಂದಿ ಸುತ್ತಾನೆಯೋ, ಸಃ=ಅವನು, ವೀರಃ ಇತಿ=ವೀರನೆಂದು, ಅಭಿದೀಯತೇ=ಹೇಳಿಸಿ ಕೊಳ್ಳುವನು.

'ವೇದಾಂತವಾಕ್ಯಜಾ ವಿದ್ಯಾ' ಎಂಬ ಸೂತಸಂಹಿತೆಯ ವಚನದಂತೆ ಉಪನಿಷತ್ತು ಗಳ ಅಧ್ಯಯನದಿಂದ ಪ್ರಾಪ್ತವಾಗುವ ಶಿವ–ಜೀವರ ಐಕ್ಯ ಬೋಧಕ ಜ್ಞಾನಕ್ಕೆ ವಿದ್ಯೆ ಎಂದು ಕರೆಯುತ್ತಾರೆ. ಅಂತಪ್ಪ ವಿದ್ಯೆಯಲ್ಲಿ ಯಾವನು ರಮಿಸುವನೋ ಅವನೇ ವೀರನು.

ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿಸ್ಮೃತಾಃ

(ಸಿ. ಶಿ. ೫–೧೫)

ಅರ್ಥ : ಶಿವರೂಪಾಯಾಂ=ಶಿವರೂಪವಾದ, ವಿದ್ಯಾಯಾಂ=ವಿದ್ಯೆಯಲ್ಲಿ ಯೇ=ಯಾರು, ವಿಶೇಷತಃ=ವಿಶೇಷವಾಗಿ, ರಮಂತೇ=ರಮಿಸುತ್ತಾರೆಯೋ, ತಸ್ಮಾತ್ =ಆದ್ದರಿಂದ, ಏತೇ=ಈ, ಮಹಾಭಾಗಾಃ=ಭಾಗ್ಯಶಾಲಿಗಳು, ವೀರಶೈವಾಃ=ವೀರ ಶೈವರು, ಇತಿ=ಹೀಗೆ, ಸ್ಮೃತಾಃ=ಸ್ಮರಿಸಲ್ಪಡುತ್ತಾರೆ.

ಶಿವಸ್ವರೂಪವಾದ ವಿದ್ಯೆಯಲ್ಲಿ ಯಾರು ಅತಿಯಾದ ಪ್ರೀತಿ ಯನ್ನಿಟ್ಟಿರುವರೋ ಅಂತಹ ಭಾಗ್ಯಶಾಲಿಗಳನ್ನು ವೀರಶೈವರೆಂದು ಕರೆಯುತ್ತಾರೆ.

ವೀರಶೈವ ಶಬ್ದವನ್ನು ನಿರ್ವಚನ ಮಾಡಿದ ಶ್ರೀ ರೇಣುಕ ಭಗವಾತ್ಪದರು ಇನ್ನು ವೀರಮಾಹೇಶ್ವರ ಶಬ್ದದ ನಿರ್ವಚನವನ್ನು ಮಾಡುತ್ತಾರೆ–

ವಿದ್ಯಾಯಾಂ ರಮತೇ ಯಸ್ಮಾನ್ಮಾಯಾಂ ಹೇಯಾಂ ಶ್ವವದ್ರಹೇತ್ ।
ಅನೇನೈವ ನಿರುಕ್ತೇನ ವೀರಮಾಹೇಶ್ವರಃ ಸ್ಮೃತಃ

(ಸಿ. ಶಿ. ೫–೧೭)

ಅರ್ಥ : ಯಸ್ಮಾತ್ =ಯಾವ ಕಾರಣದ ದೆಸೆಯಿಂದ, ವಿದ್ಯಾಯಾಂ=ವಿದ್ಯೆಯಲ್ಲಿ ರಮತೇ=ಆನಂದ ಹೊಂದುತ್ತಾನೆಯೋ, ಹೇಯಾಂ=ಹೇಯವಾದ, ಮಾಯಾಂ= ಮಾಯೆಯನ್ನು ಶ್ವವತ್=ನಾಯಿಯಂತೆ, ರಹೇತ್=ತ್ಯಾಗಮಾಡುವನೋ, ಅನೇನೈವ =ಇದೇ, ನಿರುಕ್ತೇನ=ನಿರ್ವವಚನದಿಂದ, ವೀರಮಾಹೇಶ್ವರಃ= ವೀರಮಾಹೇಶ್ವರ ನೆಂದು, ಸ್ಮೃತಃ=ಸ್ಮರಿಸಲ್ಪಡುತ್ತಾನೆ.

ಶಿವ–ಜೀವೈಕ್ಯ ಬೋಧಕವಾದ ವಿದ್ಯೆಯಲ್ಲಿ ಆನಂದ ಪಡುವವನೂ, ನಾನು ನನ್ನದೆಂಬ ಮೋಹರೂಪವಾದ ಮಾಯೆಯನ್ನು ನಾಯಿಯಂತೆ ತಿರಸ್ಕರಿಸಿ ದವನೂ ಆದ ವ್ಯಕ್ತಿಯನ್ನು ವೀರಮಾಹೇಶ್ವರನೆಂದು ಕರೆಯುತ್ತಾರೆ. ಇದರಿಂದ ವೀರಮಾಹೇಶ್ವರನಲ್ಲಿ ವೈರಾಗ್ಯಾದಿಗುಣಗಳು ಇರುವುದಾಗಿ ಕಂಡುಬರುತ್ತದೆ.

ವೀರಶೈವ ಮತ್ತು ವೀರಮಾಹೇಶ್ವರದ ವೈಲಕ್ಷಣ್ಯದ ಕಾರಣವನ್ನು ನಿರೂಪಿಸು ತ್ತಾರೆ–

ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಂತರ್ಬಹಿಃ ಕ್ರಮಾತ್ ।
ಶಿವೋ ಮಹೇಶ್ವರಶ್ಚೇತಿ ನಾತ್ಯಂತಮಿಹಭಿದ್ಯತೇ ॥
ಯಥಾ ಯಥಾ ನ ಭಿದ್ಯಂತೇ ಶೈವಾ ಮಾಹೇಶ್ವರಾ ಅಪಿ

(ಸಿ. ಶಿ. ೫–೧೯)

ಅರ್ಥ: ಶೈವೈಃ=ವೀರ ವಿಶೇಷಣವುಳ್ಳ ಶೈವರಿಂದ, ಚ=ಮತ್ತು, ಮಾಹೇಶ್ವರೈಃ= ವೀರ ವಿಶೇಷಣವುಳ್ಳ ಮಾಹೇಶ್ವರರಿಂದ ಮಾಡಲ್ಪಡುವ, ಕಾರ್ಯಂ=ಕ್ರಿಯೆಯು, ಕ್ರಮಾತ್=ಕ್ರಮವಾಗಿ, ಅಂತಃ=ಅಂತರಂಗದ್ದು ಬಹಿಃ= ಬಹಿರಂಗದ್ದೆಂದು ತಿಳಿದು ಕೊಳ್ಳಬೇಕು. ಶಿವಃ=ಶಿವನು, ಚ=ಮತ್ತು, ಮಹೇಶ್ವರಃ=ಮಹೇಶ್ವರನು, ಇವರೀರ್ವರೂ, ಯಥಾ=ಯಾವ ಪ್ರಕಾರವಾಗಿ, ಅತ್ಯಂತಂ= ಅತ್ಯಂತವಾಗಿ, ನ ಭಿದ್ಯತೇ=ಭೇದಹೊಂದುವುದಿಲ್ಲವೋ, ತಥಾ=ಅದರಂತೆ, ಶೈವಾಃ= ವೀರಶೈವರು, ಅಪಿ=ಮತ್ತು, ಮಾಹೇಶ್ವರಾಃ=ವೀರ ಮಾಹೇಶ್ವರರು, ನ ಭಿದ್ಯಂತೇ= ಪರಸ್ಪರವಾಗಿ ಭಿನ್ನರಾಗಿರುವುದಿಲ್ಲ.

ಅಂತರಂಗದಲ್ಲಿ ಶಿವಲಿಂಗಾರ್ಚನೆಯನ್ನು ಮಾಡುವವರನ್ನು ವೀರಶೈವ ರೆಂತಲೂ, ಬಹಿರಂಗದಲ್ಲಿ ಶಿವಲಿಂಗಪೂಜೆಯನ್ನು ಮಾಡುವವರನ್ನು ವೀರಮಾಹೇಶ್ವರ

ರೆಂತಲೂ ಕರೆಯುತ್ತಾರೆ. ಶಿವನು ನಿಷ್ಕಲನು, ಮಹೇಶ್ವರನು, ಸಕಲನು; ಆದರೂ 'ಶಿವಶ್ಶೂಲೀ ಮಹೇಶ್ವರಃ' ಎಂದು ಶಿವನ ಎರಡೂ ನಾಮಗಳು ಪರ್ಯಾಯ ವಾಚಕಗಳಾಗಿ ಪರಿಗಣಿಸಲ್ಪಟ್ಟಿರುವುದರಿಂದ ಶಿವನಿಗೂ ಮಹೇಶ್ವರನಿಗೂ ಹೇಗೆ ಭೇದವಿರುವುದಿಲ್ಲವೋ ಅದರಂತೆ ವೀರಶೈವರಿಗೂ ಮತ್ತು ವೀರ ಮಾಹೇಶ್ವರರಿಗೂ ವಿಶೇಷವಾದ ಭೇದವಿಲ್ಲವೆಂದು ತಿಳಿದುಕೊಳ್ಳಬೇಕು.

ಶಿವಾಶ್ರಿತೇಷು ತೇ ಶೈವಾ ಜ್ಞಾನಯಜ್ಞರತಾ ನರಾಃ ।
ಮಾಹೇಶ್ವರಾಃ ಸಮಾಖ್ಯಾತಾಃ ಕರ್ಮಯಜ್ಞರತಾ ಭುವಿ ॥
ತಸ್ಮಾದಭ್ಯಂತರೇ ಕುರ್ಯುಃ ಶೈವಾ ಮಾಹೇಶ್ವರಾ ಬಹಿಃ

(ಸಿ. ಶಿ. ೫–೨೦)

ಅರ್ಥ : ಶಿವಾಶ್ರಿತೇಷು=ಶಿವನನ್ನು ಆಶ್ರಯಿಸಿರುವ ಮಾನವರಲ್ಲಿ, ನರಾಃ= ಯಾವ ಮನುಷ್ಯರು, ಜ್ಞಾನಯಜ್ಞರತಾಃ=ಜ್ಞಾನಯಜ್ಞದಲ್ಲಿ ತತ್ಪರರೋ, ತೇ =ಅವರು, ಶೈವಾಃ=ವೀರಶೈವರೆನಿಸಿಕೊಳ್ಳುವರು; ಕರ್ಮಯಜ್ಞರತಾಃ=ಕರ್ಮಯಜ್ಞದಲ್ಲಿ ತತ್ಪರರಾದವರು, ಮಾಹೇಶ್ವರಾಃ=ಮಾಹೇಶ್ವರರೆಂದು, ಸಮಾಖ್ಯಾತಾಃ= ಪ್ರಸಿದ್ಧರಾಗಿರುವರು. ತಸ್ಮಾತ್=ಆ ಕಾರಣದಿಂದ, ಶೈವಾಃ= ವೀರಶೈವರು, ಅಭ್ಯಂತರೇ=ಅಂತರಂಗದಲ್ಲಿ ಮಾಹೇಶ್ವರಾಃ= ಮಾಹೇಶ್ವರರು, ಬಹಿಃ=ಬಹಿರಂಗದಲ್ಲಿ, ಕುರ್ಯುಃ=ಕರ್ಮಗಳನ್ನು ಮಾಡಬೇಕು.

ಯಾವ ಶಿವಭಕ್ತನು ಹೃದಯಕಮಲದ ಮಧ್ಯದಲ್ಲಿ ಜ್ಞಾನಲಿಂಗವನ್ನು ಆರ್ಚಿಸುವುದರಲ್ಲಿ ಆಸಕ್ತನಾಗಿರುವನೋ ಅವನಿಗೆ ವೀರಶೈವನೆಂತಲೂ, ಇನ್ನು ಕರಕಮಲದಲ್ಲಿ ಇಷ್ಟಲಿಂಗ ಪೂಜೆಯನ್ನು ಮಾಡುವುದರಲ್ಲಿ ಆಸ್ತಕನಾದವನಿಗೆ ವೀರಮಾಹೇಶ್ವರನೆಂತಲೂ ಕರೆಯುತ್ತಾರೆ. ಆದ್ದರಿಂದ ವೀರಶೈವರು ಜ್ಞಾನಕಾಂಡ ಪ್ರತಿಪಾದಕಗಳಾದ ಪ್ರಾಣಲಿಂಗಿ, ಶರಣ ಮತ್ತು ಐಕ್ಯರೆಂಬ ಮೂರು ಸ್ಥಲಗಳ ಧರ್ಮಗಳನ್ನು ಅಂತರಂಗದಲ್ಲಿ ಆಚರಿಸುವವರು. ಇನ್ನು ವೀರಮಾಹೇಶ್ವರರು ಕರ್ಮಕಾಂಡ ಪ್ರಧಾನಗಳಾದ ಭಕ್ತ, ಮಾಹೇಶ್ವರ ಮತ್ತು ಪ್ರಸಾದಿಯೆಂಬ ಮೂರು ಸ್ಥಲಗಳ ಧರ್ಮಗಳನ್ನು ಆಚರಿಸುವರು.

**ವಿಶೇಷ ವಿಚಾರ :**

ಜ್ಞಾನಂ ಪ್ರಧಾನಂ ತು ಕರ್ಮಹೀನಂ ।
ಕರ್ಮಪ್ರಧಾನಂ ನ ತು ಚಿದ್ವಿಹೀನಂ ।
ತಸ್ಮಾತ್ ದ್ವಯೋರೇವ ಭವೇತ್ಪ್ರಸಿದ್ಧಿಃ ।
ನಹ್ಯೇಕಪಕ್ಷೋ ವಿಹಗಃ ಪ್ರಯಾತಿ ॥

ಎನ್ನುವ ವಚನದಂತೆ ವೀರಶೈವ ಸಿದ್ಧಾಂತದಲ್ಲಿ ಮೋಕ್ಷ ಪ್ರಾಪ್ತಿಗೆ ಕೇವಲ ಕರ್ಮವಾಗಲಿ, ಕೇವಲ ಜ್ಞಾನವಾಗಲಿ ಕಾರಣವೆಂಬುದಾಗಿ ಹೇಳುವುದಿಲ್ಲ; ಒಂದೇ ರೆಕ್ಕೆಯುಳ್ಳ ಪಕ್ಷಿಯು ಗಂತವ್ಯ ಸ್ಥಾನಕ್ಕೆ ಹೋಗಲು ಅಸಮರ್ಥವಾಗುವಂತೆ, ಕರ್ಮಹೀನವಾದ ಜ್ಞಾನವಾಗಲಿ ಮತ್ತು ಜ್ಞಾನಹೀನವಾದ ಕರ್ಮವಾಗಲಿ ಮೋಕ್ಷ ಸಾಧನವಾಗದ ಕಾರಣ ಅವೆರಡೂ ಅಂಧಪಂಗುವಿನಂತೆ ಒಂದನ್ನೊಂದು ಅಪೇಕ್ಷಿಸುತ್ತವೆ. ಆದ್ದರಿಂದ ಅಂತರಂಗದ ಜ್ಞಾನಮಾರ್ಗದಲ್ಲಿ ಆಸಕ್ತರಾದ ವೀರಶೈವರಾದರೂ ಬಹಿರಂಗ ಕ್ರಿಯೆಯಾದ ಇಷ್ಟಲಿಂಗ ಪೂಜೆಯನ್ನು ಮಾಡಲೇಬೇಕು.

ಅದರಂತೆ ಬಹಿರಂಗದ ಇಷ್ಟಲಿಂಗ ಪೂಜೆಯಲ್ಲಿ ತತ್ಪರರಾದ ವೀರಮಾಹೇಶ್ವರರಾದರೂ ಅಂತರಂಗದ ಜ್ಞಾನಕಾಂಡದಲ್ಲಿಯೂ ತತ್ಪರರಾಗ ಬೇಕೆಂಬುದು ಸಿದ್ಧಾಂತವು.

ವೀರಶೈವಾಸ್ತು ಷಡ್ಭೇದಾಃ ಸ್ಥಲಧರ್ಮವಿಭೇದತಃ ।
ಭಕ್ತಾದಿವ್ಯವಹಾರೇಣ ಪ್ರೋಚ್ಯಂತೇ ಶಾಸ್ತ್ರಪಾರಗೈಃ

(ಸಿ. ಶಿ. ೫–೨೧)

ಅರ್ಥ : ಸ್ಥಲಧರ್ಮವಿಭೇದತಃ=ಸ್ಥಲಧರ್ಮಗಳ ಭೇದದಿಂದ, ಭಕ್ತಾದಿ ವ್ಯವಹಾರೇಣ=ಭಕ್ತಾದಿ ವ್ಯವಹಾರದಿಂದ, ವೀರಶೈವಾಃ=ವೀರಶೈವರು, ಶಾಸ್ತ್ರ ಪಾರಗೈಃ=ಶಾಸ್ತ್ರಜ್ಞರಿಂದ, ಷಡ್ಭೇದಾಃ=ಆರು ಭೇದಗಳಾಗಿ ಪ್ರೋಚ್ಯಂತೇ=ಹೇಳಲ್ಪಡುತ್ತಾರೆ.

ಭಕ್ತ–ಮಾಹೇಶ್ವರಾದಿ ಸ್ಥಲಧರ್ಮಗಳ ಭೇದದಿಂದ ವೀರಶೈವರು ಆರು ಪ್ರಕಾರವಾಗಿ ವಿಂಗಡಿಸಲ್ಪಡುತ್ತಾರೆ.

ಶಾಸ್ತ್ರಂ ತು ವೀರಶೈವಾನಾಂ ಷಡ್ವಿಧಂ ಸ್ಥಲಭೇದತಃ ।
ಧರ್ಮಭೇದಸಮಾಯೋಗಾದಧಿಕಾರಿವಿಭೇದತಃ

(ಸಿ. ಶಿ. ೫–೨೨)

ಅರ್ಥ : ವೀರಶೈವಾನಾಂ=ವೀರಶೈವರ, ಶಾಸ್ತ್ರ=ಶಾಸ್ತ್ರವು, ಸ್ಥಲಭೇದತಃ= ಸ್ಥಲಭೇದದಿಂದ, ಧರ್ಮಭೇದಸಮಾಯೋಗಾತ್=ಆಯಾ ಸ್ಥಲಗಳ ಧರ್ಮಭೇದದಿಂದ, ಅಧಿಕಾರಿವಿಭೇದತಃ=ಅಧಿಕಾರಿಗಳ ಭೇದದಿಂದ, ಷಡ್ವಿಧಃ=ಆರು ಪ್ರಕಾರವಾಗಿರುತ್ತದೆ.

ವೀರಶೈವ ಶಾಸ್ತ್ರವು ಭಕ್ತಾದಿ ಸ್ಥಲಗಳ ಮತ್ತು ಆಯಾ ಸ್ಥಲಗಳಲ್ಲಿ ಅನುಷ್ಠಿಸಬೇಕಾದ ಆಚಾರಗಳ ಹಾಗೂ ಆಯಾ ಆಚರಣೆಗಳನ್ನು ಆಚರಿಸುವ ಅಧಿಕಾರಿಗಳ ಭೇದದಿಂದ ಆರು ಪ್ರಕಾರವಾಗಿರುತ್ತದೆ.

ವಿಶೇಷ ವಿಚಾರ : ಪ್ರತಿಯೊಂದು ಶಾಸ್ತ್ರಕ್ಕೆ ಅಧಿಕಾರಿ, ಸಂಬಂಧ, ವಿಷಯ ಮತ್ತು ಪ್ರಯೋಜನಗಳೆಂಬ ಅನುಬಂಧ ಚತುಷ್ಟಯಗಳು ನಿರೂಪಿಸಲ್ಪಡುತ್ತವೆ. ಅದರಂತೆ ಈ ವೀರಶೈವ ಷಟ್‌ಸ್ಥಲ ಸಿದ್ಧಾಂತವೆಂಬ ಶಾಸ್ತ್ರಕ್ಕೆ ಶಿವದೀಕ್ಷಾ ಸಂಪನ್ನನಾದ ಮುಮುಕ್ಷುವೇ ಅಧಿಕಾರಿಯು. ಲಿಂಗಾಂಗಸಾಮರಸ್ಯವಾದ ಮುಕ್ತಿಯೇ ಪ್ರಯೋಜನವು. ನೂರೊಂದು ಸ್ಥಲಗಳಿಂದ ಪ್ರತಿಪಾದ್ಯವಾದ ಶಾಸ್ತ್ರವೇ ವಿಷಯವು. ಇನ್ನು ಈ ಗ್ರಂಥಕ್ಕೂ ವಿಷಯಕ್ಕೂ ಪ್ರತಿಪಾದ್ಯ ಪ್ರತಿಪಾದಕ ಭಾವಸಂಬಂಧವು. ಹೀಗೆ ಈ ಶಾಸ್ತ್ರಕ್ಕಾದರೂ ಅನುಬಂಧ ಚತುಷ್ಟಯಗಳಿರುತ್ತವೆ–ಎಂಬುದಾಗಿ ತಿಳಿದುಕೊಳ್ಳಬೇಕು.

ಇನ್ನು ಮುಂದೆ ಭಕ್ತಾದಿ ಸ್ಥಲಗಳ ಕ್ರಮವನ್ನು ನಿರೂಪಿಸುತ್ತಾರೆ–

ಆದೌ ಭಕ್ತಸ್ಥಲಂ ಪ್ರೋಕ್ತಂ ತತೋ ಮಾಹೇಶ್ವರಸ್ಥಲಂ ।
ಪ್ರಸಾದಿಸ್ಥಲಮನ್ಯತ್ತು ಪ್ರಾಣಲಿಂಗಿಸ್ಥಲಂ ತತಃ ।
ಶರಣಸ್ಥಲಮಾಖ್ಯಾತಂ ಷಷ್ಠಮೈಕ್ಯಸ್ಥಲಂ ಮತಂ

(ಸಿ. ಶಿ. ೫–೨೩)

ಅರ್ಥ : ಆದೌ=ಮೊದಲಿನದು, ಭಕ್ತಸ್ಥಲಂ=ಭಕ್ತಸ್ಥಲವು, ಪ್ರೋಕ್ತಂ= ಹೇಳಲ್ಪಟ್ಟಿದೆ, ತತಃ=ಅನಂತರ, ಮಾಹೇಶ್ವರಸ್ಥಲಂ=ಮಾಹೇಶ್ವರಸ್ಥಲವು, ಅನ್ಯತ್= ಮತ್ತೊಂದು, ಪ್ರಸಾದಿಸ್ಥಲಂ=ಪ್ರಸಾದಿಸ್ಥಲವು, ತತಃ=ಅನಂತರ, ಪ್ರಾಣಲಿಂಗಿಸ್ಥಲಂ=

ಪ್ರಾಣಲಿಂಗಿಸ್ಥಲವು, ಅನಂತರ, ಶರಣಸ್ಥಲಮಾಖ್ಯಾತಂ= ಶರಣಸ್ಥಲವು ಹೇಳಲ್ಪಟ್ಟಿದೆ, ಷಷ್ಠಂ=ಆರನೆಯದು, ಐಕ್ಯಸ್ಥಲಂ=ಐಕ್ಯಸ್ಥಲವು, ಮತಂ= ಸಮ್ಮತವಾಗಿದೆ.

ವೀರಶೈವ ಶಾಸ್ತ್ರಸಮ್ಮತಗಳಾದ ಷಟ್‌ಸ್ಥಲಗಳಲ್ಲಿ ಮೊದಲನೆಯದು ಭಕ್ತಸ್ಥಲವು, ಎರಡನೆಯದು ಮಾಹೇಶ್ವರಸ್ಥಲವು, ಮೂರನೆಯದು ಪ್ರಸಾದಿಸ್ಥಲವು, ನಾಲ್ಕನೆಯದು ಪ್ರಾಣಲಿಂಗಿಸ್ಥಲವು, ಐದನೆಯದು ಶರಣಸ್ಥಲ ಮತ್ತು ಆರನೆಯದು ಐಕ್ಯಸ್ಥಲವು; ಹೀಗೆ ಸ್ಥಲತತ್ತ್ವವು ಆರು ಪ್ರಕಾರವಾಗಿರುತ್ತದೆ.

ಈ ಷಟ್‌ಸ್ಥಲಗಳಲ್ಲಿ ಮೊದಲಿನದಾದ ಭಕ್ತಸ್ಥಲದ ಸ್ವರೂಪವನ್ನೂ ಮತ್ತು ಅದರ ಅವಾಂತರ ಭೇದಗಳನ್ನೂ ನಿರೂಪಿಸುತ್ತಾರೆ–

ಭಕ್ತಸ್ಥಲಂ ಪ್ರವಕ್ಷ್ಯಾಮಿ ಪ್ರಥಮಂ ಕಲಶೋದ್ಭವ ।
ತದವಾಂತರಭೇದಾಂಶ್ಚ ಸಮಾಹಿತಮನಾಃ ಶೃಣು

(ಸಿ. ಶಿ. ೫–೨೪)

ಅರ್ಥ : ಕಲಶೋದ್ಭವ=ಹೇ ಅಗಸ್ತ್ಯನೇ ! ಪ್ರಥಮಂ=ಮೊದಲಿಗೆ, ಭಕ್ತಸ್ಥಲಂ= ಭಕ್ತಸ್ಥಲವನ್ನು, ಪ್ರವಕ್ಷ್ಯಾಮಿ=ಹೇಳುತ್ತೇನೆ, ತದವಾಂತರಭೇದಾನ್=ಅದರ ಅವಾಂತರ ಭೇದಗಳನ್ನು, ಸಮಾಹಿತಮನಾಃ=ಸಮಾಧಾನ ಚಿತ್ತನಾಗಿ, ಶೃಣು=ಕೇಳು.

ಎಲೈ ಅಗಸ್ತ್ಯ ಮಹರ್ಷಿಯೇ ! ಮೊದಲನೆ ಭಕ್ತಸ್ಥಲವನ್ನೂ ಮತ್ತು ಅದರ ಅವಾಂತರಭೇದಗಳನ್ನೂ ಹೇಳುತ್ತೇನೆ. ನೀನು ಶಾಂತಚಿತ್ತನಾಗಿ ಕೇಳುವವನಾಗು.

ಶಿವೇ ಭಕ್ತಿಃ ಸಮುತ್ಪನ್ನಾ ಯಸ್ಯಾಸೌ ಭಕ್ತ ಉಚ್ಯತೇ ।
ತಸ್ಯಾನುಷ್ಠೇಯಧರ್ಮಾಣಾಮುಕ್ತಿರ್ಭಕ್ತಸ್ಥಲಂ ಮತಂ

(ಸಿ. ಶಿ. ೫–೨೫)

ಅರ್ಥ : ಯಸ್ಯ=ಯಾವನಿಗೆ, ಶಿವೇ=ಶಿವನಲ್ಲಿ, ಭಕ್ತಿಃ=ಭಕ್ತಿಯು, ಸಮುತ್ಪನ್ನಾ= ಉತ್ಪನ್ನವಾಗಿರುತ್ತದೆಯೋ, ಅಸೌ=ಅವನು, ಭಕ್ತಃ=ಭಕ್ತನೆಂದು, ಉಚ್ಯತೇ= ಹೇಳಲ್ಪಡುತ್ತಾನೆ, ತಸ್ಯ=ಅವನ, ಅನುಷ್ಠೇಯಧರ್ಮಾಣಾಂ=ಅನುಷ್ಠಾನದ ಯೋಗ್ಯವಾದ, ಉಕ್ತಿಃ=ಹೇಳುವಿಕೆಯು, ಭಕ್ತಸ್ಥಲಂ ಮತಂ=ಭಕ್ತಸ್ಥಲವೆಂದು ಸಮ್ಮತವಾಗಿದೆ.

ಶಿವನ ಬಗ್ಗೆ ಯಾರಲ್ಲಿ ಅತ್ಯಂತ ಭಕ್ತಿಯು ಉತ್ಪನ್ನವಾಗುತ್ತದೆಯೋ ಅವನನ್ನು ಭಕ್ತನೆನ್ನುವರು. ಆ ಭಕ್ತನು ಆಚರಿಸಬೇಕಾದ ಧರ್ಮಗಳನ್ನು ಪ್ರತಿಪಾದಿಸುವ ಸ್ಥಲವೇ ಭಕ್ತ ಸ್ಥಲವು.

ಭಕ್ತಸ್ಥಲದ ಸ್ವರೂಪವನ್ನು ವಿವರಿಸಿದ ಶ್ರೀ ರೇಣುಕ ಭಗವತ್ಪಾದರು ಇನ್ನು ಆ ಭಕ್ತಸ್ಥಲದ ಹದಿನೈದು ಅವಾಂತರ ಸ್ಥಲಗಳನ್ನು ನಾಮತಃ ನಿರ್ದೇಶಿಸುತ್ತಾರೆ–

ಅವಾಂತರಸ್ಥಲಾನ್ಯತ್ರ ಪ್ರಾಹುಃ ಪಂಚದಶೋತ್ತಮಾಃ ।
ಪಿಂಡತಾ ಪಿಂಡವಿಜ್ಞಾನಂ ಸಂಸಾರಗುಣಹೇಯತಾ

ದೀಕ್ಷಾ ಲಿಂಗಧೃತಿಶ್ಚೈವ ವಿಭೂತೇರಪಿಧಾರಣಂ ।
ರುದ್ರಾಕ್ಷ ಧಾರಣಂ ಚೈವ ಪಂಚಾಕ್ಷರ ಜಪಸ್ತಥಾ

ಭಕ್ತಮಾರ್ಗಕ್ರಿಯಾಚೈವ ಗುರೋರ್ಲಿಂಗಸ್ಯ ಚಾರ್ಚನಂ ।
ಜಂಗಮಸ್ಯ ತಥಾ ಹ್ಯೇಷಾಂ ಪ್ರಸಾದಸ್ವೀಕೃತಿಸ್ತಥಾ

ಅತ್ರ ದಾನತ್ರಯಂ ಪ್ರೋಕ್ತಂ ಸೋಪಾಧಿ ನಿರುಪಾಧಿಕಂ ।
ಸಹಜಂ ಚೇತಿ ನಿರ್ದಿಷ್ಟಂ ಸಮಸ್ತಾಗಮಪಾರಗೈಃ ॥
ಏತಾನಿ ಶಿವಭಕ್ತಸ್ಯ ಕರ್ತವ್ಯಾನಿ ಪ್ರಯತ್ನತಃ

(ಸಿ. ಶಿ. ೫.೨೬–೨೮)

ಅರ್ಥ : ಅತ್ರ=ಈ ಭಕ್ತಸ್ಥಲದಲ್ಲಿ, ಪಂಚದಶ=ಹದಿನೈದು, ಅವಾಂತರ ಸ್ಥಲಾನಿ=ಅವಾಂತರಸ್ಥಲಗಳಿವೆಯೆಂದು, ಉತ್ತಮಾಃ=ಶ್ರೇಷ್ಠರಾದ ಜನರು, ಪ್ರಾಹುಃ= ಹೇಳಿದ್ದಾರೆ. ಅವು ಯಾವುವೆಂದರೆ, ಪಿಂಡತಾ=ಪಿಂಡಸ್ಥಲವು, ಪಿಂಡ ವಿಜ್ಞಾನಂ= ಪಿಂಡಜ್ಞಾನಸ್ಥಲವು, ಸಂಸಾರಗುಣಹೇಯತಾ=ಸಂಸಾರಹೇಯಸ್ಥಲವು, ದೀಕ್ಷಾ=ಗುರು ಕಾರಣ್ಯಸ್ಥಲವು, ಲಿಂಗಧೃತಿಃ=ಲಿಂಗಧಾರಣಸ್ಥಲವು, ವಿಭೂತೇರಪಿಧಾರಣಂ=ವಿಭೂತಿ ಧಾರಣಸ್ಥಲವು, ಚ=ಮತ್ತು ರುದ್ರಾಕ್ಷಧಾರಣಂ=ರುದ್ರಾಕ್ಷ ಧಾರಣಸ್ಥಲವು, ತಥಾ= ಅದರಂತೆ, ಪಂಚಾಕ್ಷರಜಪಃ=ಪಂಚಾಕ್ಷರಜಪಸ್ಥಲವು, ಚ=ಮತ್ತು ಭಕ್ತಮಾರ್ಗ ಕ್ರಿಯಾ=ಭಕ್ತಮಾರ್ಗಕ್ರಿಯಾಸ್ಥಲವು, ಗುರೋರ್ಲಿಂಗಸ್ಯ ಚಾರ್ಚನಂ=ಉಭಯ ಸ್ಥಲವು, ತಥಾ=ಅದರಂತೆ, ಜಂಗಮಸ್ಯ (ಚ ಅರ್ಚನಂ)=ತ್ರಿವಿಧ ಸಂಪತ್ತಿಸ್ಥಲವು, ತಥಾ=ಅದರಂತೆ, ಪ್ರಸಾದಸ್ಯ ಸ್ವೀಕೃತಿಃ= ಪ್ರಸಾದಸ್ವೀಕೃತಿ ಸ್ಥಲವು, ಅತ್ರ=ಇಲ್ಲಿ , ದಾನತ್ರಯಂ=ಮೂರು ವಿಧವಾದ ದಾನವು, ಪ್ರೋಕ್ತಂ= ಹೇಳಲ್ಪಟ್ಟಿದೆ ; ಹೇಗೆಂದರೆ, ಸೋಪಾಧಿ=ಸೋಪಾಧಿ ದಾನಸ್ಥಲ, ನಿರುಪಾಧಿಕಂ= ನಿರುಪಾಧಿ ದಾನಸ್ಥಲ, ಚ= ಮತ್ತು, ಸಹಜಂ=ಸಹಜದಾನಸ್ಥಲ ಎಂಬುದಾಗಿ ಸಮಸ್ತಾಗಮಪಾರಗೈಃ= ಎಲ್ಲ ಶಾಸ್ತ್ರ ಗಳನ್ನೂ ಬಲ್ಲ ಪಂಡಿತರಿಂದ, ನಿರ್ದಿಷ್ಟಂ=ಹೇಳಲ್ಪಟ್ಟಿದೆ. ಏತಾನಿ=ಇವುಗಳು, ಶಿವಭಕ್ತಸ್ಯ=ಶಿವಭಕ್ತನಾದವನಿಗೆ, ಪ್ರಯತ್ನತಃ=ಪ್ರಯತ್ನಪೂರ್ವಕವಾಗಿ, ಕರ್ತವ್ಯಾನಿ= ಕರ್ತವ್ಯಗಳಾಗಿವೆ.

ಈ ಭಕ್ತಸ್ಥಲದಲ್ಲಿ ಪಿಂಡಸ್ಥಲವನ್ನೇ ಮೊದಲುಗೊಂಡು ಸಹಜದಾನ ಪರ್ಯಂತ ಗಳಾದ ಹದಿನೈದು ಅವಾಂತರ ಸ್ಥಲಗಳು ಮಹಾನುಭಾವರಿಂದ ನಿರೂಪಿಸಲ್ಪಟ್ಟಿವೆ. ಆದ್ದರಿಂದ ಭಕ್ತಸ್ಥಲದ ಪರಿಪೂರ್ಣ ಸ್ಥಿತಿಯನ್ನು ಪ್ರಾಪ್ತಿಮಾಡಿ ಕೊಳ್ಳುವ ಅಪೇಕ್ಷೆಯುಳ್ಳ ಶಿವಭಕ್ತನು ಈ ಹದಿನೈದು ಸ್ಥಲಗಳಲ್ಲಿ ಉಕ್ತವಾಗಿರುವ ಆಚಾರ ವಿಚಾರಗಳನ್ನು ಪ್ರಯತ್ನಪೂರ್ವಕವಾಗಿ ಪರಿಪಾಲಿಸಬೇಕು.

ಸಿದ್ಧಾಂತ ಶಿಖಾಮಣಿಯಲ್ಲಿಯ ಷಟ್‌ಸ್ಥಲಾಂತರ್ಗತಗಳಾದ ನೂರೊಂದು ಸ್ಥಲಗಳ ಉಪದೇಶಕ್ಕೆ ಮುನ್ನ ಇರುವ ಅಂಶಗಳನ್ನೊಳಗೊಂಡ ವಿಷಯವನ್ನು 'ಪೂರ್ವ ಪೀಠಿಕಾ' ಎಂಬ ಶಿರೋನಾಮೆಯಡಿಯಲ್ಲಿ ನಿರೂಪಿಸಲಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ
ಪೂರ್ವಪೀಠಿಕಾ ಭಾಗ ಪಂಚಮ ಪರಿಚ್ಛೇದದಲ್ಲಿಯ
''ಶಿವಾದ್ವೈತ ಸಿದ್ಧಾಂತೋಪದೇಶ''ವು ಪೂರ್ಣವಾದುದು.

■■

# ಪಿಂಡಸ್ಥಲ

ಶ್ರೀ ಸಿದ್ಧಾಂತಶಿಖಾಮಣಿಯು ವೀರಶೈವ ಷಟ್‌ಸ್ಥಲ ಮಾರ್ಗದ ನೂರೊಂದು ಸೋಪಾನಗಳನ್ನು ನಿರೂಪಿಸುವ ಪ್ರಾಚೀನವಾದ ಏಕೈಕ ಸಂಸ್ಕೃತ ಗ್ರಂಥವಾಗಿದೆ. ವೀರಶೈವ ಮಹಾಮತಸ್ಥಾಪನಾಚಾರ್ಯರಲ್ಲೊಬ್ಬರಾದ ಶ್ರೀಜಗದ್ಗುರು ರೇಣುಕ ಭಗವತ್ಪಾದರಿಂದ, ಸಪ್ತಸಾಗರಗಳನ್ನೇ ತನ್ನುದರದಲ್ಲಿ ಜೀರ್ಣಿಸಿ ಮಹಾಮಹಿಮನೆನಿಸಿ ಕೊಂಡ, ಶ್ರೀ ಅಗಸ್ತ್ಯಮಹರ್ಷಿಗೆ ಉಪದೇಶಿಸಲ್ಪಟ್ಟ ಈ ಷಟ್‌ಸ್ಥಲ ಸಿದ್ಧಾಂತವು, ಶ್ರೀಶಿವಯೋಗಿ ಶಿವಾಚಾರ್ಯರಿಂದ ಸಂಗ್ರಹಿಸಲ್ಪಟ್ಟಿದೆ.

ತೆಲುಗುದೇಶದ ಕೊಲ್ಲೀ ಪಾಕಿ ಕ್ಷೇತ್ರದ ಶ್ರೀ ಸೋಮೇಶ್ವರ ಮಹಾಲಿಂಗದಿಂದ ಶಿವನ ಅಣತಿಯ ಮೇರೆಗೆ ದಿವ್ಯ ದೇಹಧಾರಿಯಾಗಿ ಲೋಕೋದ್ಧಾರಕ್ಕಾಗಿ ಅವತರಿಸಿದ ಶ್ರೀಜಗದ್ಗುರು ರೇಣುಕಭಗವತ್ಪಾದರು, ಆಕಾಶ ಮಾರ್ಗವಾಗಿ ಸಂಚರಿಸುತ್ತಾ, ಮಲಯಾ–ಚಲಕ್ಕೆ ಬರಲು, ಅಲ್ಲಿಯೇ ವಾಸಿಸುತ್ತಿರುವ ಅಗಸ್ತ್ಯ ಮಹರ್ಷಿಗಳು, ಧರ್ಮಪತ್ನಿಯಾದ ಲೋಪಮುದ್ರೆಯಿಂದೊಡಗೂಡಿ, ಪೂಜ್ಯಪಾದರನ್ನು ಆದರದಿಂದ ಬರಮಾಡಿಕೊಂಡು, ಉನ್ನತಾಸನದ ಮೇಲೆ ಕೂಡ್ರಿಸಿ, ಪಾದ್ಯಾದಿಗಳಿಂದ ಪಾದಾರವಿಂದಂಗಳನ್ನು ಪೂಜಿಸಿ, ಕರಗಳನ್ನು ಜೋಡಿಸಿ ಕುಳಿತುಕೊಂಡಾಗ, ಶ್ರೀ ಭಗವತ್ಪಾದರು ತಪೋವಿಷಯಕವಾಗಿ ಕುಶಲ ಪ್ರಶ್ನೆಗಳನ್ನು ಕೇಳುತ್ತಾರೆ.' ಆಗ ಅಗಸ್ತ್ಯನು, ''ಹೇ, ಭಗವನ್ ! ತಮ್ಮ ಅನುಗ್ರಹದಿಂದ ನನ್ನ ತಪಸ್ಸಿನಲ್ಲಿ ಯಾವ ವಿಘ್ನಗಳೂ ಇಲ್ಲ; ಆದರೆ ಸಕಲ ವೇದಾಗಮಗಳನ್ನೂ ಓದಿದ ನನ್ನ ಮನಸ್ಸಿನಲ್ಲಿ ಒಂದು ಸಂಶಯ ಭೂತವಡಗಿದೆ; ಅದೇನೆಂದರೆ, ವೇದಗಳಲ್ಲಿ ''ದ್ವಾಸುಪರ್ಣಾ ಸಯುಜಾ ಸಖಾಯಾ'' (ಮುಂಡ. ಉ. ೩–೧–೧) ಮುಂತಾದ ದ್ವೈತಮಂತ್ರಗಳೂ, ''ಏಕಮೇವಾದ್ವಿತೀಯಂ ಬ್ರಹ್ಮ'' (ಛಾಂ. ಉ. ೬–೨–೧) ಮುಂತಾದ ಅದ್ವೈತಮಂತ್ರಗಳೂ ಪರಸ್ಪರ ವಿರುದ್ಧಗಳಾಗಿ ಕಂಡು ಬರುತ್ತವೆ. ಇದಲ್ಲದೆ ದ್ವೈತವಾದಿಗಳು ದ್ವೈತಪರವಾದ ಮಂತ್ರಗಳೇ ಸತ್ಯವಾದವುಗಳು; ಆದರೆ ಅದ್ವೈತಬೋಧಕ ಮಂತ್ರಗಳು, ಸೇನಾಪತಿಗೆ ಅವನ ಶೌರ್ಯಾದಿಗಳನ್ನು ನೋಡಿ, ನೀನೇ ರಾಜ–ಎಂದು ಹೇಳುವಂತೆ, ಜೀವಾತ್ಮನಿಗೆ ಪರಮಾತ್ಮನೆಂದು ಹೇಳುವ ಮಂತ್ರಗಳು ಕೇವಲ ಉಪಚಾರಾರ್ಥಗಳೇ ವಿನಾ, ಸತ್ಯವಾದುವುಗಳಲ್ಲವೆಂದು ಹೇಳುತ್ತಾರೆ. ಅದರಂತೆ ಅದ್ವೈತವಾದಿಗಳು ಅದ್ವೈತಪರವಾದ ಮಂತ್ರಗಳೇ ಸತ್ಯವಾದವುಗಳು; ದ್ವೈತ ಮಂತ್ರಗಳು ಮಾತ್ರ ಲೋಕಪ್ರಸಿದ್ಧವಾದ ದ್ವೈತವನ್ನು ಅನುವಾದಿಸುತ್ತವೆಯೇ ವಿನಾ ಅಪೂರ್ವಾರ್ಥವನ್ನು ಬೋಧಿಸದ ಕಾರಣ, ಅವುಗಳಿಗೆ ಪ್ರಾಮಾಣಿಕತೆ ಇಲ್ಲವೆಂದು ಹೇಳುತ್ತಾರೆ. ಇಂತಹ ಪ್ರಸಂಗದಲ್ಲಿ ಇವುಗಳ ಮರ್ಮವನ್ನರಿಯದೇ ವಿಮೂಢನಾದ ನನಗೆ ಮಾರ್ಗ ತೋರಿಸಬೇಕೆಂದು–

ಉಕ್ತ್ವಾಭವಾನ್ ಸಕಲಲೋಕಮಹೋಪಕಾರಮ್ ।
ಸಿದ್ಧಾಂತಸಂಗ್ರಹಮನಾದೃತಬಾಹ್ಯತಂತ್ರಮ್ ।
ಸದ್ಯಃ ಕೃತಾರ್ಥಯಿತುಮರ್ಹತಿ ದಿವ್ಯಯೋಗಿನ್ ।
ನಾನಾಗಮಶ್ರವಣವರ್ತಿತಸಂಶಯಂ ಮಾಮ್ ॥

(ಸಿ. ಶಿ. ೪–೫೩)

ಈ ರೀತಿಯಾಗಿ ಪ್ರಾರ್ಥಿಸಿಕೊಳ್ಳುತ್ತಾನೆ. ಆಗ ಶ್ರೀರೇಣುಕ ಭಗವತ್ಪಾದರು–

ಅಗಸ್ತ್ಯಮುನಿಶಾರ್ದೂಲ ಸಮಸ್ತಾಗಮಪಾರಗ ।
ಶಿವಜ್ಞಾನಕರಂ ವಕ್ಷ್ಯೇ ಸಿದ್ಧಾಂತಂ ಶೃಣು ಸಾದರಮ್ ॥

(ಸಿ. ಶಿ. ೫–೨)

ಸಕಲಶಾಸ್ತ್ರಗಳನ್ನೋದಿದ ಹೇ ಅಗಸ್ತ್ಯನೇ! ನಿನ್ನ ಸಂದೇಹವನ್ನು ದೂರೀಕರಿಸುವ, ಶಿವಜ್ಞಾನವನ್ನುಂಟುಮಾಡುವ ಸಿದ್ಧಾಂತ ತತ್ತ್ವಗಳನ್ನು ಹೇಳುತ್ತೇನೆ ; ಆಲಿಸುವವನಾಗು.

ನಿನಗೆ ಸಂದೇಹವನ್ನು ಉಂಟುಮಾಡಿದ ದ್ವೈತ ಹಾಗೂ ಅದ್ವೈತ ಮಂತ್ರಗಳಿಗೆ ವೇದವೇ ಪ್ರಮಾಣವಾದಕಾರಣ ಒಂದನ್ನು ಅಲ್ಲಗಳೆದು ಮತ್ತೊಂದನ್ನು ಪ್ರತಿಷ್ಠಾಪಿಸುವುದು ಶಾಸ್ತ್ರಸಮ್ಮತವಾದುದಲ್ಲ. ಇದು ಕಾರಣ ಉಭಯಸಮ್ಮತವಾದ ವೀರಶೈವ ಷಟ್‌ಸ್ಥಲಸಿದ್ಧಾಂತವು ಸರ್ವಾದರಣೀಯವಾಗಿದೆ.

ಸರ್ವ ಶ್ರುತಿಗಳ ಸಮನ್ವಯಾತ್ಮಕವಾದ ಈ ಸಿದ್ಧಾಂತದ ಮುಕ್ತಿಮಾರ್ಗದಲ್ಲಿ ಮುಖ್ಯವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂಬ ಆರು ಸೋಪಾನಗಳುಂಟು. ಇವುಗಳಲ್ಲಿ ಭಕ್ತ ಹಾಗೂ ಮಹೇಶ ಸ್ಥಲದ ಸಾಧಕನು ಆರಾಧ್ಯನಾದ ಪರಮಾತ್ಮನನ್ನು ತನಗಿಂತ ಭಿನ್ನವಾಗಿ ತಿಳಿದು ಶ್ರದ್ಧೆ ಹಾಗೂ ನಿಷ್ಠೆಗಳಿಂದ ಪೂಜಿಸುತ್ತಾನೆ; ಆದ್ದರಿಂದ ಈ ಎರಡೂ ಸ್ಥಲಗಳಲ್ಲಿ ಜೀವ–ಪರಮರ ಭೇದ ಬೋಧಿಸುವ ದ್ವೈತಶ್ರುತಿಗಳು ಸಾರ್ಥಕಗಳಾಗುತ್ತವೆ. ಮುಂದೆ ಇವನ ಸಾಧನೆ ಬೆಳೆಯಲಾಗಿ ಅವಧಾನ ಹಾಗೂ ಅನುಭವಭಕ್ತಿಗಳಿಂದ ಪ್ರಸಾದಿ ಮತ್ತು ಪ್ರಾಣಲಿಂಗಿ ಸ್ಥಲಕ್ಕೆ ಏರಿದ ಈ ಸಾಧಕನು, ಜೀವ–ಪರಮಾತ್ಮರಲ್ಲಿ ಅತ್ಯಂತ ಭೇದವನ್ನಾಗಲೀ, ಅತ್ಯಂತ ಅಭೇದವನ್ನಾಗಲೀ ಅನುಭವಿಸದೇ, ಭೇದಾಭೇದಗಳನ್ನನುಭವಿಸುತ್ತಾನೆ. ಮುಂದೆ ಆನಂದ ಹಾಗೂ ಸಮರಸ ಭಕ್ತಿಗಳ ಪ್ರಭಾವದಿಂದ ಭಾವವಿಕಾಸವಾಗಿ, ಶರಣ ಮತ್ತು ಐಕ್ಯಸ್ಥಲವನ್ನು ಮುಟ್ಟಿದ ಸಾಧಕನು ಪರಮಾತ್ಮನ ಜೊತೆಗೆ ತನ್ನನ್ನು ಅತ್ಯಂತ ಅಭಿನ್ನನನ್ನಾಗಿ ತಿಳಿಯುತ್ತಾನೆ. ಹೀಗೆ ಈ ಷಟ್‌ಸ್ಥಲ ಮಾರ್ಗದಲ್ಲಿ ಕ್ರಮವಾಗಿ ಸಾಧಕನ ಭಾವ ವಿಕಾಸವಾಗಿ, ಭೇದ–ಭೇದಾಭೇದ–ಅಭೇದವನ್ನನುಭವಿಸುವುದರಿಂದ, ಸರ್ವ ಶ್ರುತಿಗಳ ಸಮನ್ವಯಾತ್ಮಕವಾದ ಈ ಸಿದ್ಧಾಂತವು ಉಳಿದೆಲ್ಲ ಸಿದ್ಧಾಂತಗಳ ಶಿಖಾಮಣಿಯಾಗಿದೆ ;– ಎಂದು ಪ್ರತಿಪಾದಿಸಿದಾಗ, ಅಗಸ್ತ್ಯನು, ''ಹೇ ಭಗವನ್ ! ಈ ಷಟ್‌ಸ್ಥಲ ಮಾರ್ಗವನ್ನು ಕೂಲಂಕಷವಾಗಿ ಬೋಧಿಸಬೇಕೆಂದು ಬೇಡಿಕೊಂಡಾಗ, ಶ್ರೀರೇಣುಕ ಭಗವತ್ಪಾದರು–

ಭಕ್ತಸ್ಥಲಂಪ್ರವಕ್ಷ್ಯಾಮಿ ಪ್ರಥಮಂ ಕಲಶೋದ್ಭವ ।
ತದವಾಂತರಭೇದಾಂಶ್ಚ ಸಮಾಹಿತಮನಾಃ ಶೃಣು ॥

(ಸಿ. ಶಿ. ೫–೨೫)

''ಹೇ ಅಗಸ್ತ್ಯನೇ ! ಮೊದಲನೆಯದಾದ ಭಕ್ತಸ್ಥಲವನ್ನೂ ಹಾಗೂ ಅದರ ಅವಾಂತರಸ್ಥಲಗಳಾದ ಪಿಂಡಸ್ಥಲಾದಿ ಸಹಜದಾನಾಂತಗಳಾದ ಹದಿನೈದು ಸ್ಥಲಗಳ ಸ್ವರೂಪವನ್ನೂ ವಿವರಿಸುತ್ತೇವೆ, ಕೇಳು'' ಎಂದು ಶ್ರೀ ರೇಣುಕ ಭಗವತ್ಪಾದರು ಬಹು ವಿಸ್ತಾರವಾಗಿ ತಾತ್ತ್ವಿಕದೃಷ್ಟಿಯಿಂದ ಉಪದೇಶಿಸಿದ್ದಾರೆ. ಇದರಲ್ಲಿ ಮೊದಲನೇ ಸ್ಥಲವೇ ಪಿಂಡಸ್ಥಲ.

ಪಿಂಡಾಂಡ ಮತ್ತು ಬ್ರಹ್ಮಾಂಡಗಳೆಂಬ ಶಬ್ದಗಳು ದಾರ್ಶನಿಕ ಪ್ರಪಂಚದಲ್ಲಿ ಬಹಳಷ್ಟು ಬಳಕೆಯಲ್ಲಿ ಬರುವುದುಂಟು. ಪಿಂಡಾಂಡವೆಂದರೆ ಶರೀರ ; ಬ್ರಹ್ಮಾಂಡವೆಂದರೆ ಜಗತ್ತು. ಇವು ಇವೆರಡರ ಸಾಮಾನ್ಯವಾದ ಅರ್ಥಗಳು. ಪ್ರಕೃತವಾದ ಪಿಂಡಸ್ಥಲದಲ್ಲಿ ಬರುವ ''ಪಿಂಡ'' ಶಬ್ದಕ್ಕೆ ತನ್ನದೇ ಆದ ಒಂದು ವಿಶೇಷಾರ್ಥ ಉಂಟು. ಅದನ್ನೇ ಶ್ರೀಜಗದ್ಗುರು ರೇಣುಕ ಭಗವತ್ಪಾದರು–

ಬಹುಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ ।
ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ (ಸಿ. ಶಿ. ೫–೩೧)

ಅನೇಕ ಜನ್ಮಜನ್ಮಾಂತರಗಳಲ್ಲಿ ಮಾಡಿದ ಪುಣ್ಯದ ಪ್ರಭಾವದಿಂದ ಪಾಪವೆಲ್ಲ ನಶಿಸಿ ನಿರ್ಮಲಗಳಾದ ಮನೋಬುದ್ಧಿಗಳುಳ್ಳ ಜೀವಾತ್ಮನೇ ''ಪಿಂಡ'' ನೆನಿಸುವನೆಂದು ಉಪದೇಶಿಸಿದ್ದಾರೆ.

ಪುಣ್ಯ, ಪಾಪ, ಪೂರ್ವಜನ್ಮ ಮತ್ತು ಪುನರ್ಜನ್ಮಗಳು ಕಣ್ಣಿಗೆ ಕಾಣುವ ವಸ್ತುಗಳಲ್ಲ; ಅವುಗಳನ್ನು ಶಾಸ್ತ್ರಾನುಭವಗಳಿಂದಲೇ ಅರಿಯಬೇಕು ; ಅಂತೆಯೇ ''ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ'' (ಗೀತಾ. ೧೬–೨೪) ಎಂದು ಭಗವಂತನು ಗೀತೆಯಲ್ಲಿ ಉಪದೇಶಿಸಿದ್ದಾನೆ. ಲೌಕಿಕ ಜೀವನದಲ್ಲಿಯೂ ಪ್ರತ್ಯಕ್ಷವಾಗಿ ಅಗೋಚರವಾದದ್ದನ್ನು ಅನುಮಾನ ಹಾಗೂ ಶಬ್ದಪ್ರಮಾಣಗಳಿಂದ ಅರಿಯುವಂತೆ, ಪುಣ್ಯ, ಪಾಪ ಹಾಗೂ ಜನ್ಮಾಂತರಗಳನ್ನು ಅರಿಯಬೇಕಾದರೆ ಶಾಸ್ತ್ರಗಳಿಗೆ ಶರಣಾಗತರಾಗಬೇಕಾಗುವುದು.

ಭಾರತೀಯ ಶಾಸ್ತ್ರಜ್ಞರು ಜನ್ಮಗಳ ಸಂಖ್ಯೆಯನ್ನು ಒಂದಲ್ಲ ಎರಡಲ್ಲ ೮೪ ಲಕ್ಷ ಪ್ರಕಾರವಾಗಿ ಪರಿಗಣಿಸಿದ್ದಾರೆ. ಅವುಗಳಲ್ಲಿ ಉದ್ಭಿಜ ೨೧ ಲಕ್ಷ, ಸ್ವೇದಜ ೨೧ ಲಕ್ಷ, ಅಂಡಜ ೨೧ ಲಕ್ಷ ಹಾಗೂ ಜರಾಯುಜ ೨೧ ಲಕ್ಷಗಳೆಂದು, ಮನನಶೀಲರಾದ ಮುನಿಗಳ ಮನೀಷೆ. ಇದೇ ಮಾತನ್ನು ಅಕ್ಕನ ಅನುಭಾವದ ನುಡಿಯಲ್ಲಿ ಕೇಳುವದಾದರೆ–

''ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ;
ಎಂಬತ್ತುನಾಲ್ಕು ಲಕ್ಷಯೋನಿಯೊಳಗೆ ಬಂದೆ ಬಂದೆ !
ಬಾರದ ಭವಂಗಳನುಂಡೆನುಂಡೆ !
ಶುಭಾಶುಭಂಗಳ ಕಂಡೆ ಕಂಡೆ !
ಹಿಂದಣ ಜನ್ಮಗಳೇನಾದರೂ ಆಗಲಿ ;
ಮುಂದೆ ನೀ ಕರುಣಿಸಾ ಚೆನ್ನಮಲ್ಲಿಕಾರ್ಜುನಾ !''

''ಪಾಪಾನುಗುಣದಿಂದ ಗಿಡಮರ ಕ್ರಿಮಿಗಳ ರೂಪಾಗಿ, ಕೀಟ ಪತಂಗಾದಿಯಾಗಿ, ಆ ಪಕ್ಷಿಕುಲವಾಗಿ, ಮೃಗಜಾತಿಯಾಗಿ, ಮೇಲಾಗಿ ಪಶುರೂಪಾಗಿ, ಬಹುಬಾಧೆಗಲಿಸಿ''

ಎಂದು ಶ್ರೀ ನಿಜಗುಣ ಶಿವಯೋಗಿಗಳು ನುಡಿದಂತೆ, ಮನುಷ್ಯನು ತಾನೇ ಮಾಡಿದ ಪರವಧುವಿನ ಕೂಟ, ಅನ್ಯರ ವಿತ್ತಾಪಹರಣ, ಅಭಕ್ಷ್ಯಸೇವನೆ, ಹಿಂಸೆಗಳೆಂಬ ಶಾರೀರಿಕ ಪಾಪಗಳಿಂದ, ಪುಸಿ, ಅನುಚಿತತೆ, ನಿಷ್ಠುರತ್ವ, ಪೈಶೂನ್ಯ (ಚಾಡಿ ಹೇಳುವುದು) ಗಳೆಂಬ ವಾಣಿಯ ದೋಷಗಳಿಂದ ಮತ್ತು ಜನರೊಲಿಯದ ಕಾರ್ಯದೆರಕ, ಅನಿಷ್ಟಚಿಂತನೆ, ಅನ್ಯಧನ-ಸತಿಯರಾಕಾಂಕ್ಷೆಗಳೆಂಬ ಮಾನಸಿಕ ದುರಿತಗಳಿಂದ ಹೀನ-ಹೀನಗಳಾದ ಯೋನಿಗಳಲ್ಲಿ ಜನ್ಮತಾಳಿ, ಆಯಾ ಜನ್ಮಗಳಲ್ಲಿ ಅನುಭವಿಸಬೇಕಾದ ಅತಿಯಾದ ಪಾಪಂಗಳನ್ನನುಭವಿಸಿ ಅವಶಿಷ್ಟಗಳಾದ ಪುಣ್ಯಪಾಪಗಳು ಸಮಾನವಾದಾಗ ''ಉಭಾಭ್ಯಾಂ ಪುಣ್ಯ-ಪಾಪಾಭ್ಯಾಂ ಮಾನುಷ್ಯಂ ಲಭ್ಯತೇಽವಶಃ'' (೧-೪೧, ಪು.೪೦) ಎಂಬ ನೈಷ್ಕರ್ಮ್ಯಸಿದ್ಧಿಯ ವಚನಾನುಸಾರವಾಗಿ ಪುನಃ ಮನುಷ್ಯನಾಗಿ ಜನ್ಮತಾಳುತ್ತಾನೆ.

ಎಲ್ಲ ಜನ್ಮಗಳಲ್ಲಿ ಮನುಷ್ಯಜನ್ಮವು ಶ್ರೇಷ್ಠವಾದದ್ದು; ಅಂತೆಯೇ ಶ್ರೀ ನಿಜಗುಣರು- '' ನರಜನ್ಮದಿಂದಿಹದೊಳು ಮಿಗಿಲುಂಟೆ '' ಎಂದು ಇದರ ಮಹತಿ ಯನ್ನು ಕೊಂಡಾಡಿದ್ದಾರೆ. ಇದೆಲ್ಲಕ್ಕೆ ಕಾರಣ ಮನುಷ್ಯನಲ್ಲಿರುವ ಕರ್ತೃತ್ವಶಕ್ತಿಯೇ. ಮನುಷ್ಯನು ಸತ್ಕರ್ಮಗಳನ್ನು ಮಾಡಿ ಸ್ವರ್ಗಕ್ಕೂ ಹೋಗಬಹುದು. ಜ್ಞಾನವನ್ನು ಸಂಪಾದಿಸಿ ಮುಕ್ತನಾಗಲೂಬಹುದು. ಅದರಂತೆ ದುಷ್ಕರ್ಮಗಳನ್ನಾಚರಿಸಿ ಪುನಃ ಹೀನಯೋನಿಗಳಿಗೆ ಹಿಂತಿರುಗಲೂಬಹುದು. ಅನೇಕಸಾರೆ ಅನಂತಹೀನ ಯೋನಿಗಳಲ್ಲಿ ತಿರುಗಿ, ದೈವಯೋಗದಿಂದ ಮನುಷ್ಯಜನ್ಮಕ್ಕೆ ಬಂದ ಜೀವಿಯು ಪುನಃ ದುರಿತಕರ್ಮ ಗಳನ್ನಾಚರಿಸಿ ಅಧೋಗತಿಗೆ ಹೋಗುವುದು ಸರಿಯಲ್ಲ; ಅಂತೆಯೇ ''ದುರಿತಕರ್ಮವ ನೊಲ್ಲದಿರು ಪುಣ್ಯವನೇ ಮಾಡು'' ಎಂದು ಶ್ರೀ ನಿಜಗುಣರು ಉಪದೇಶಿಸಿದ್ದಾರೆ.

''ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಮ್'' ಪರರಿಗೆ ಉಪಕರಿ ಸುವುದೇ ಪುಣ್ಯ, ಪರರನ್ನು ಪೀಡಿಸುವುದೇ ಪಾಪವೆಂದು ಶ್ರೀ ವ್ಯಾಸಮಹರ್ಷಿಗಳು ಪುಣ್ಯ-ಪಾಪಗಳ ಅರ್ಥವನ್ನು ಅರ್ಥವತ್ತಾಗಿ ಅರುಹಿದ್ದಾರೆ. ಅರಿಯಲು ಈ ಮಾತು ಸುಲಭವಾದರೂ, ಆಚರಿಸಲು ಅಷ್ಟೇ ಕಠಿಣವಾಗಿದೆ. ಅಂತೆಯೇ ಜ್ಞಾನಿಗಳು ಹೀಗೆ ಹೇಳಿದ್ದಾರೆ-

''ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।
ಪಾಪಸ್ಯ ಫಲಂ ನೇಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥''

ಪುಣ್ಯದ ಫಲವಾದ ಸುಖವನ್ನು ಪಡೆಯಲು ಎಲ್ಲರೂ ಹಾತೊರೆಯುತ್ತಾರೆ ; ಆದರೆ ಪುಣ್ಯಕರ್ಮಗಳನ್ನು ಮಾಡಲು ಹಿಂಜರಿಯುವರು ; ಅದರಂತೆ, ಪಾಪದ ಫಲವಾದ ದುಃಖವನ್ನು ಕನಸಿನಲ್ಲಿಯೂ ಅಪೇಕ್ಷಿಸಲಾರರು, ಪಾಪವನ್ನು ಮಾತ್ರ ಹಗಲಿರುಳೂ ಪ್ರಯತ್ನಪೂರ್ವಕವಾಗಿ ಆಚರಿಸುತ್ತಾರೆ. ಹೀಗಿರುವಾಗ ಮನುಷ್ಯನಿಗೆ ಸುಖಸಿಗುವು ದೆಂತು ? ಆದ್ದರಿಂದಲೇ ಬಹುಪಾಲು ಜನರು ಸದಾ ದುಃಖಿಗಳಾಗಿಯೇ ಕಾಲಕಳೆಯು ತ್ತಿದ್ದಾರೆ. ಬಹುಕಾಲ ದುಃಖಸಾಗರದಲ್ಲಿ ಮುಳುಗಿದ ಇವರಿಗೆ ''ದುಃಖವನ್ನೇ ಸುಖ ವೆಂಬರು ಅವಿವೇಕಿಗಳು'' ಎಂಬ ನಿಜಗುಣರ ನುಡಿಯಂತೆ ಅವಿವೇಕಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಜೀವಿಗಳ ಈ ಅವಿವೇಕವನ್ನು ದೂರೀಕರಿಸುವುದೇ ಶಾಸ್ತ್ರಗಳ ಪ್ರಯೋಜನವು.

ನಾವು ಆಚರಿಸುವ ಪುಣ್ಯಕರ್ಮಗಳಲ್ಲಿ ಸಕಾಮಪುಣ್ಯವೆಂತಲೂ, ನಿಷ್ಕಾಮ ಪುಣ್ಯವೆಂತಲೂ ಎರಡು ವಿಧ. ಇವುಗಳಲ್ಲಿ ನಿಷ್ಕಾಮಪುಣ್ಯದಿಂದಲೇ ಅಂತಃಕರಣದ ಶುದ್ಧಿಯಾಗುವ ಕಾರಣ, ಅಂತಃಶೌಚವೇ ಮುಕ್ತಿಗೆ ಮೂಲವಾದ್ದರಿಂದ, ಮುಮುಕ್ಷುವು ಅದನ್ನೇ ಆಚರಿಸಬೇಕು. ದೇಹದ ಸ್ವಚ್ಛತೆ, ಸುಂದರತೆಗಳು ಲೋಕದ ಜನರ ಪ್ರೇಮ ವನ್ನು ಸಂಪಾದಿಸಲು ಕಾರಣಗಳಾದರೆ, ಅಂತರಂಗದ ಸ್ವಚ್ಛತೆ–ಸುಂದರತೆಗಳು ದೇವರ ಪ್ರೇಮಸಂಪಾದನೆಗೆ ಮೂಲಗಳಾಗಿವೆ. ಅಂತೆಯೇ ಅಣ್ಣನವರು–

''ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ''

ಈ ವಚನದಲ್ಲಿ ಅಂತರಂಗ, ಬಹಿರಂಗಗಳೆರಡರ ಶುದ್ಧಿಯು ಶಿವನೊಲುಮೆಗೆ ಕಾರಣ ವೆಂದು ಸೂಚಿಸಿದ್ದಾರೆ.

ಗಿಡಗಳಲ್ಲಿಯ ಫಲಗಳು ಪಕ್ವಗಳಾದರೆ ಪಕ್ಷಿಗಳು ತಾವಾಗಿಯೇ ಬರುವಂತೆ, ವೇದಪ್ರಿಯನಲ್ಲದ, ನಾದಪ್ರಿಯನಲ್ಲದ, ಭಕ್ತಿಪ್ರಿಯನಾದ ಶಿವನು ಪರಿಪಕ್ವವಾದ ಅಂತಃಕರಣವುಳ್ಳ ಭಕ್ತರ ಕರೆಗೆ ಮಾರುಹೋಗುತ್ತಾನೆ. ''ನಂಬಿ ಕರೆದರೆ ಓ ಎನ್ನನೇ ಶಿವನು ? ನಂಬರು, ನಚ್ಚರು ಬರಿದೆ ಕರೆವರು, ನಂಬಲರಿಯರೀ ಲೋಕದ ಮನುಜರು'' ಎಂದು ಅಣ್ಣನವರು ಪರಿಪಕ್ವ ಹೃದಯವಿಲ್ಲದ ಭಕ್ತರ ಭಕ್ತಿಯನ್ನು ವಿಡಂಬಿಸಿದ್ದಾರೆ. ''ಹೇ ಶಿವನೆ ! ನಿನ್ನ ವಾಸ್ತವಿಕವಾದ ವಾಸಸ್ಥಾನವಾವುದು?'' ಎಂದು ಪಾರ್ವತಿಯು ಪ್ರಶ್ನಿಸಿ ದಾಗ, ''ಮದ್ಭಕ್ತಾ ಯತ್ರ ಗಾಯಂತಿ ತತ್ರತಿಷ್ಠಾಮಿ ಪಾರ್ವತೀ''– ನನ್ನನ್ನು ಸ್ಮರಿಸುವ ಭಕ್ತರ ಹೃದಯದಲ್ಲಿಯೇ ನನ್ನ ವಾಸವೆಂದು ಶಿವನು ಉತ್ತರಿಸಿದ್ದಾನೆ.

ಬಿತ್ತಿದ ಬೀಜವು ಸರಿಯಾಗಿ ಮೊಳೆತು ಫಲನೀಡಬೇಕಾದರೆ ಕ್ಷೇತ್ರವು ಸ್ವಚ್ಛವೂ, ಯೋಗ್ಯವೂ ಆಗಿರುವಂತೆ, ಭಕ್ತಿಯೆಂಬ ಬೆಳೆಯು ಬೆಳೆದು, ಮುಕ್ತಿಯೆಂಬ ಫಲವಾಗ ಬೇಕಾದರೆ, ಅಂತಃಕರಣವೆಂಬ ಕ್ಷೇತ್ರದ ಶುದ್ಧಿ ಅವಶ್ಯಕ. ನೂರೊಂದು ಅಂತಸ್ತಿನ ಮಹಲನ್ನು ಕಟ್ಟಲು ಭದ್ರವಾದ ನೆಲಗಟ್ಟುಬೇಕಾಗುವಂತೆ, ವೀರಶೈವರ ನೂರೊಂದು ಅಂತಸ್ತಿನ ಮುಕ್ತಿಮಂದಿರ ಕಟ್ಟಲು ಈ ಪಿಂಡಸ್ಥಲವು ನೆಲಗಟ್ಟಿನ ಪಾತ್ರವಹಿಸುತ್ತದೆ.

ಶ್ರೀಜಗದ್ಗುರುಗಳ ಆದೇಶದಂತೆ ಪಾಪ–ಪಂಜರದಿಂದ ಹೊರಬರದ ಮಾನವನು ಪಿಂಡನೆಂದೆನಿಸಿಕೊಳ್ಳನು. ಜಾಲಿಯ ಗಿಡಕ್ಕೆ ನೇತಾಡುವ ಕೆಲ ಹುಳುಗಳು ತಮ್ಮ ಮೈ ಸುತ್ತಲೂ ಜಾಲಿಯ ಮುಳ್ಳನ್ನೇ ಹೆಣೆದುಕೊಂಡು ಅದರ ಮಧ್ಯದಲ್ಲಿ ವಾಸಿಸುವಂತೆ, ಜೀವಾತ್ಮನಾದರೂ ತಾನು ಮಾಡಿದ ಪಾಪವೆಂಬ ಪಂಜರದಲ್ಲಿ ತಾನೇ ಸಿಲುಕಿದ್ದಾನೆ. ಆದಕಾರಣ ಅದರಿಂದ ದೂರಾಗಲು ತಾನೇ ಪ್ರಯತ್ನಿಸಬೇಕಾಗುವುದು. ಪಾಪದ ಕ್ಷಯವು ಎರಡು ವಿಧವಾಗಿದೆ. ಮೊದಲನೆಯದು ಅದರ ಫಲವಾದ ದುಃಖ

ವನ್ನನುಭವಿಸುವುದು. ಎರಡನೆಯದು ಪುಣ್ಯಕರ್ಮವನ್ನು ಮಾಡುವುದು. ಪಾಪವನ್ನು ಅನುಭವಿಸಿಯೇ ತೀರಿಸಬೇಕಾದರೆ ಅನಂತಕಾಲಗಳು ಬೇಕಾಗುವವು ; ಇದೂ ಅಲ್ಲದೆ ಪಾಪದ ಫಲವನ್ನು ಅನುಭವಿಸುತ್ತ ಅದರ ವಾಸನಾಬಲದಿಂದ ಪುನಃ ಪಾಪಕರ್ಮ ಗಳನ್ನು ಮಾಡುವುದರಿಂದ ಪಾಪದಿಂದ ನಿವೃತ್ತಿ ಹೊಂದುವುದು ಬಹುಕಷ್ಟ ; ಇದನ್ನೇ ಸುಭಾಷಿತಕಾರರು ಹೀಗೆ ಹೇಳಿರುವರು–

ಅದತ್ತದೋಷೇಣ ಭವೇದ್ದರಿದ್ರಃ। ದಾರಿದ್ರ್ಯದೋಷೇಣ ಕರೋತಿ ಪಾಪಮ್।
ಪಾಪಾದವಶ್ಯಂ ನರಕಂ ಪ್ರಯಾತಿ। ಪುನರ್ದರಿದ್ರೋ ಪುನರೇವ ಪಾಪೀ ॥

ಪಾಪವನ್ನು ನಾಶಗೊಳಿಸುವ ಎರಡನೇ ಉಪಾಯವಾದ ಪುಣ್ಯಕರ್ಮಗಳನ್ನಾ ಚರಿಸಿದರೆ ಮನುಷ್ಯನು ಪಾಪ ಪಂಜರದಿಂದ ಸಹಜವಾಗಿ ಮುಕ್ತನಾಗುವನು. ಇದೇ ಅಭಿಪ್ರಾಯ ದಿಂದಲೇ ಶ್ರೀಭಗವತ್ಪಾದರು ''ಬಹುಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ'' ಎಂದಿದ್ದಾರೆ.

ಪಾಪಪ್ರಭಂಜಕಗಳಾದ ಪುಣ್ಯಕರ್ಮಗಳಾದರೋ ಯಜ್ಞ, ದಾನ, ಜಪ, ತಪಸ್ಸು ಗಳೆಂದು ಬಹುವಿಧಗಳಾಗಿವೆ. ಸ್ವೇಚ್ಛಾಪ್ರವೃತ್ತಿಗಳಿಂದ ಶಾಸ್ತ್ರಗಳಲ್ಲಿ ಶ್ರದ್ಧೆ ಇಲ್ಲದ ಇಂದಿನ ಈ ಕಲಿಕಾಲದಲ್ಲಿ ಯಜ್ಞ, ದಾನ, ತಪಸ್ಸುಗಳನ್ನಾಚರಿಸುವುದು ಅಸಾಧ್ಯವಾದ ಮಾತು. ಇಂದಿನ ಜನಗಳಿಗೆ ಅಲ್ಪಶ್ರಮದಿಂದ ಮಹಾಫಲದ ಪ್ರಾಪ್ತಿಯಾಗ ಬೇಕು. ಅಂತಹದು ದೇವರ ನಾಮಸ್ಮರಣೆಯೊಂದೆ ; ಅಂತೆಯೇ ''ಕಲೌ ನಾಮ ಸಂಕೀರ್ತನಮ್'' ಎಂದಿದ್ದಾರೆ. ನಾಮಸ್ಮರಣದ ಮಹಿಮೆ ಅದ್ಭುತವಾಗಿದೆ. ಅರಳೆಯ ಮಹಾಪರ್ವತವನ್ನು ಅಗ್ನಿಯ ಒಂದು ಕಣವು ಸಾವಕಾಶವಾಗಿ ದಹಿಸಿ ಭಸ್ಮಮಾಡುವಂತೆ ಅನಂತಕಾಲದಿಂದ ಸಂಗ್ರಹಿತವಾದ ಪಾಪವೆಂಬ ಪರ್ವತವು ನಾಮಸ್ಮರಣೆ ಎಂಬ ಅಗ್ನಿಯ ಸಂಪರ್ಕವಾದಾಗ ಸಹಜವಾಗಿ ದಹಿಸಿಹೋಗುವುದು.

ಎಲ್ಲರಿಗೂ ತಿಳಿದಂತೆ ಮಹಾಪಾಪಿಯಾದ ಬೇಡನು ನಾರದಮಹರ್ಷಿಗಳಿಂದ ''ರಾಮ'' ಮಂತ್ರವನ್ನು ಪಡೆದು ಅದು ಸರಿಯಾಗಿ ಅನ್ನಲು ಬಾರದೇ ಇದ್ದಾಗ ''ಮರಾ'' ''ಮರಾ'' ಎಂದು ವಿಪರೀತವಾಗಿಯೇ ನುಡಿದು ಪಾಪನಿರ್ಮುಕ್ತನಾಗಿ ಆದಿ ಕವಿ ವಾಲ್ಮೀಕಿ ಎಂದೆನಿಸಿಕೊಂಡದ್ದು ನಾಮಜಪದ ಅದ್ಭುತ ಪವಾಡವಾಗಿದೆ. ಭೂಮಿ ಯಲ್ಲಿ ಬಿತ್ತಿದ ಬೀಜವು ಹೇಗೆ ಬಿದ್ದರೂ ಅದರ ಮೊಳಕೆಯು ಮೇಲ್ಮುಖವಾಗಿಯೇ ಬರುವಂತೆ ಶ್ರದ್ಧೆಯೊಂದಿದ್ದರೆ ಸಾಕು, ಮಂತ್ರವನ್ನು ಹೇಗೆ ಜಪಿಸಿದರೂ ಸಿದ್ಧಿಸುತ್ತದೆ. ಅಂತೆಯೇ ತುಲಸೀದಾಸರು–

ಉಲಟಾನಾಮ ಜಪತ ಜಗಜಾನಾ।
ವಾಲ್ಮೀಕೀ ಭಯೋ ಬ್ರಹ್ಮಸಮಾನಾ ॥

ಎಂದಿದ್ದಾರೆ.

ಶಿವಧ್ಯಾನ ಶಿವಚಿಂತನೆ ಇಲ್ಲದ ನರನು ಶೆಗಣಿಯಲ್ಲಿ ಸಾವಿರ ಹುಳುವಿದ್ದಂತೆ. ''ಇದ್ದರೇನೋ ಶಿವಶಿವಾ ಸತ್ತರೇನೋ ಶಿವಶಿವಾ'' ಎಂಬ ವಚನದಲ್ಲಿ ಅಣ್ಣನವರು ಶಿವನಾಮವನ್ನು ಜಪಿಸದ ಮನುಷ್ಯನನ್ನು ಶೆಗಣಿಯ ಹುಳುವೆಂದು ಹೀಯಾಳಿಸಿದ್ದಾರೆ.

''ವಾಯುಗುಣವನ್ನು ಸರ್ಪ ಬಲ್ಲುದು,
ಮಧುರ ಗುಣವನ್ನು ಇರುವೆ ಬಲ್ಲುದು,
ವೇಳೆ ಗುಣವನು ಕೋಳಿ ಬಲ್ಲುದು,
ಗೋತ್ರ ಗುಣವನು ಕಾಗೆ ಬಲ್ಲುದು,
ಮನುಷ್ಯ ಜನ್ಮದಲ್ಲಿ ಬಂದು ಶಿವಜ್ಞಾನವಿಲ್ಲದಿರ್ದೊಡೆ
ಆ ಕಾಗೆ ಕೋಳಿಗಿಂತ ಕರಕಷ್ಟ, ಕಾಣಾ ಕಲಿದೇವರ ದೇವ''

ಎಂಬ ಈ ವಚನದಲ್ಲಿ ಶರಣರು ಶಿವಚಿಂತನೆ ಮಾಡದವನನ್ನು ಕಾಗೆ ಕೋಳಿಗಿಂತ ಕಡೆಗಣಿಸಿ ನುಡಿದಿದ್ದಾರೆ. ಪಶುಪಕ್ಷಿಗಳಲ್ಲಿ ನಿಸರ್ಗದತ್ತಗಳಾದ ಕೆಲವು ಗುಣಗಳುಂಟು. ಆದರೆ ಅವು ಮನುಷ್ಯನಲ್ಲಿ ಇಲ್ಲ. ವಾಯುವಿನ ಸೂಕ್ಷ್ಮವಾದ ಶುದ್ಧಾಶುದ್ಧತೆಯನ್ನು ಸರ್ಪಬಲ್ಲುದೇ ವಿನಾ ಅನ್ಯರಾರೂ ಅರಿಯರು. ಮಧುರತೆಯನ್ನರಿಯುವುದು ಇರುವೆಯ ಸ್ವಾಭಾವಿಕವಾದ ಗುಣ. ಮರದ ಬುಡವನ್ನು ಮೂಸಿಸಿ ಟೊಂಗೆಯಲ್ಲಿ ಪಕ್ವವಾದ ಹಣ್ಣನ್ನರಿತು ನೇರವಾಗಿ ಅದೇ ಹಣ್ಣಿಗೆ ಇರುವೆಗಳು ಸಾಲುಗಟ್ಟುತ್ತವೆ. ಮನುಷ್ಯ ನಾದರೋ ಹಣ್ಣನ್ನು ಕಡಿದು ಹುಳಿಯೆಂದು ಉಗುಳುವುದನ್ನು ನೋಡುತ್ತೇವೆ.

ಒಂದು ಊರಿನಲ್ಲಿ ಸುಶಿಕ್ಷಿತರಾದ ದಂಪತಿಗಳು ವಾಸಿಸುತ್ತಿದ್ದರು. ಕಲಿತ ಹೆಣ್ಣುಮಕ್ಕಳು ನಿತ್ಯೋಪಯೋಗಿ ಪದಾರ್ಥಗಳನ್ನು ಡಬ್ಬಿಗಳಲ್ಲಿ ಹಾಕಿ ಅದರ ಮೇಲೆ ಪದಾರ್ಥಗಳ ಹೆಸರು ಬರೆಯುವಂತೆ ಇವರಾದರೂ ಬರೆದಿದ್ದರು. ಮಳೆಗಾಲದ ದಿನ ಮನೆಯಲ್ಲಿ ಇರುವೆಗಳ ಸಂಖ್ಯೆ ಬೆಳೆಯಿತು. ಎಲ್ಲ ಇರುವೆಗಳೂ ಸಾಲುಸಾಲಾಗಿ ಸಕ್ಕರೆಯ ಡಬ್ಬಿಗೆ ಹೋಗತೊಡಗಿದವು. ಇರುವೆಯ ಕಾಟಕ್ಕೆ ಬೇಸತ್ತ ಹೆಣ್ಣುಮಗಳು ಸಕ್ಕರೆಯ ಡಬ್ಬಿಯನ್ನು ಸ್ಥಳಾಂತರಿಸಿ ಎಲ್ಲಿ ಇಟ್ಟರೂ ಇರುವೆಗಳ ಕಾಟ ತಪ್ಪಲಿಲ್ಲ, ಆಗ ಆ ಕಲಿತ ಹೆಣ್ಣುಮಗಳು ಇರುವೆಗಳಿಗೆ ಮೋಸಗೊಳಿಸಬೇಕೆಂದು, ಖಾರದಪುಡಿ ಎಂದು ಬರೆದ ಡಬ್ಬಿಯಲ್ಲಿ ಸಕ್ಕರೆಯನ್ನು ಹಾಗೂ ಸಕ್ಕರೆ ಎಂದು ಬರೆದ ಡಬ್ಬಿಯಲ್ಲಿ ಖಾರದಪುಡಿಯನ್ನು ಹಾಕಿ ಇಟ್ಟಳು. ಗಂಡ ಆಫೀಸಿನಿಂದ ಬಂದೊಡನೆ ಚಹಾ ಮಾಡಿಕೊಡುವುದು ಹೆಂಡತಿಯ ಕರ್ತವ್ಯವಾಗಿತ್ತು. ಆದರೆ ಅಂದು ಸಾಯಂಕಾಲ, ತಲೆನೋವಿನಿಂದ ಬಳಲಿದವಳಾಗಿ ಹೆಂಡತಿ ಮಲಗಿದ್ದನ್ನು ನೋಡಿದ ಗಂಡ ಇಂದು ತಾನೇ ಚಹಾ ಮಾಡಬೇಕೆಂದು ಅಡಿಗೆ ಮನೆಗೆ ಹೋಗಿ ಒಲೆಯಮೇಲೆ ನೀರನ್ನು ಕುದಿಯಲು ಇಟ್ಟು, ಡಬ್ಬಿಗಳ ಮೇಲೆ ಬರೆದ ಹೆಸರುಗಳನ್ನು ನೋಡಿ ಮೊದಲು ಚಹಾಪುಡಿಯನ್ನು ಹಾಕಿದ, ನಂತರ ಸಕ್ಕರೆ ಎಂದು ಬರೆದ ಡಬ್ಬಿಯನ್ನು ಕೈಯಲ್ಲಿ ತೆಗೆದುಕೊಂಡು ಇನ್ನೇನು ಡಬ್ಬಿಯನ್ನು ತೆರೆದು ಸಕ್ಕರೆಯನ್ನು ಹಾಕಬೇಕನ್ನುವದರೊಳಗೆ ವಿದ್ಯುದ್ದೀಪಗಳು ಮಾಯ ವಾದವು. ಆಗ ಕತ್ತಲಲ್ಲಿಯೇ ಡಬ್ಬಿಯ ಮುಚ್ಚಳವನ್ನು ತೆರೆದು ಖಾರದ ಪುಡಿಯನ್ನೇ ಬೀಸಿದ ಸಕ್ಕರೆ ಎಂದು ತಿಳಿದು ಹಾಕಿ ಚಹಾ ತಯಾರಿಸುವಷ್ಟರಲ್ಲಿ ದೀಪಗಳು ಪುನಃ ಪ್ರಜ್ವಲಿಸಿದವು. ಚಹಾದ ಬಣ್ಣವನ್ನು ನೋಡಿ ಇಂದು ನಾನು ನಿನಗಿಂತ ಉತ್ತಮವಾಗಿ ಚಹಾ ತಯಾರಿಸಿದ್ದೇನೆ ಎಂದು ಹೆಮ್ಮೆಯಿಂದ ಹೆಂಡತಿಗೆ ಒಂದು ಕಪ್ಪು ತಾನೊಂದು ಕಪ್ಪು ತೆಗೆದುಕೊಂಡು ಬಾಯಿಗೆ ಹಚ್ಚಿದಾಗ ನಾಲಿಗೆ ಚುರ್ ಎಂದಿತು. ಆಗ ಹೆಂಡತಿಯು, ''ಅಯ್ಯೋ, ಮೋಸವಾಯಿತು, ನಾನು ಇರುವೆಗೆ ಮೋಸಮಾಡಬೇಕೆಂದು ಸಕ್ಕರೆ

ಎಂದು ಬರೆದ ಡಬ್ಬಿಯಲ್ಲಿ ಖಾರದ ಪುಡಿ ಹಾಕಿದ್ದೆ, ಆದರೆ ನೀವೇ ಮೋಸಹೊಂದಿದಿರಲ್ಲಾ'' ಎಂದು ಹೆಂಡತಿ ಅಡಿಗೆ ಮನೆಯಲ್ಲಿ ಬಂದು ನೋಡುತ್ತಾಳೆ, ಖಾರದಪುಡಿ ಎಂದು ಬರೆದ ಡಬ್ಬಿಯಲ್ಲಿ ಸಕ್ಕರೆ ಇರುವುದನ್ನು ಅರಿತು ಇರುವೆಗಳು ಅತ್ತಕಡೆ ಸಾಲುಗಟ್ಟಿದ್ದವು. ಆಗ ಹೆಂಡತಿಯು, ''ಏನ್ರೀ, ಇರುವೆಗಿರುವ ಬುದ್ಧಿ ನಿಮಗಿಲ್ಲವಲ್ಲಾ'' ಎಂದು ನಗೆಯಾಡಿ ದಳು. ಇದರಿಂದ ತಿಳಿಯುವುದೇನೆಂದರೆ ಇರುವೆಗಿರುವ ಮಧುರ ಗುಣದ ಜ್ಞಾನ ಮನುಷ್ಯನಿಗಿರುವುದಿಲ್ಲ.

ಅದೇ ತೆರನಾಗಿ ನಿಸರ್ಗದ ವಾತಾವರಣದಿಂದ ಬ್ರಾಹ್ಮೀಮುಹೂರ್ತವನ್ನು ಕೋಳಿ ತಿಳಿದಷ್ಟು ಮನುಷ್ಯ ತಿಳಿಯನು. ಕೋಳಿಗಳೆಂದರೆ ಪ್ರಾಚೀನ ಕಾಲದ ಅಲಾರಾಮು ಗಡಿಯಾರಗಳು. ಹಳ್ಳಿಯ ರೈತರೆಲ್ಲ ಕೋಳಿ ಕೂಗಿದೊಡನೆ ಇನ್ನು ಬೆಳಗಾಗುವ ವೇಳೆ ಸಮೀಪಿಸಿದೆ ಎಂದು ಎದ್ದು ತಮ್ಮ ಉದ್ಯೋಗಕ್ಕೆ ತೊಡಗುತ್ತಿದ್ದರು. ಗಡಿಯಾರವನ್ನು ನೋಡದೆ ವೇಳೆಯನ್ನು ಗುರುತಿಸುವುದು ಮನುಷ್ಯನಿಗೆ ಎಂದಿಗೂ ಸಾಧ್ಯವಿಲ್ಲ. ಅದರಂತೆ ತನ್ನ ಬಂಧು ಬಳಗವನ್ನು ಪ್ರೀತಿಸುವುದು ಕಾಗೆಯ ಸ್ವಾಭಾವಿಕವಾದ ಗುಣವಾಗಿದೆ. ಅಂತೆಯೇ ''ಕಾಗೆ ಒಂದಗುಳ ಕಂಡರೆ ಕರೆಯದೇ ತನ್ನ ಬಂಧು ಬಳಗವನ್ನು'' ಎಂದು ಅಣ್ಣನವರು ನುಡಿದಿದ್ದಾರೆ. ಮನುಷ್ಯನು ಮಾತ್ರ ಮಹಾಸ್ವಾರ್ಥಿಯಾಗಿದ್ದಾನೆ. ಮೊದಲು ತನ್ನ ಹೊಟ್ಟೆ ತುಂಬಿದ ಬಳಿಕ ತನ್ನವರತ್ತ ಲಕ್ಷ್ಯವಹಿಸುತ್ತಾನೆ. ಪಶುಪಕ್ಷಿಗಳಿಗಿರುವ ಒಂದು ಗುಣವಾದರೂ ಮನುಷ್ಯನಲ್ಲಿ ಇಲ್ಲದ ಕಾರಣ, ಎಲ್ಲ ಪ್ರಾಣಿಗಳಲ್ಲಿ ಶ್ರೇಷ್ಠ-ಶ್ರೇಷ್ಠನೆಂದೆನಿಸಿಕೊಳ್ಳುವ ಮನುಷ್ಯನಲ್ಲಿರುವ ಶ್ರೇಷ್ಠವಾದ ಗುಣವೆಂದರೆ ಪಶುಪಕ್ಷಿಗಳಿಗೆ ಮಾಡಲು ಬಾರದೇ ಇರುವ ಶಿವಧ್ಯಾನ ಶಿವಜ್ಞಾನಗಳೇ. ಒಂದು ವೇಳೆ ಅದನ್ನು ಮನುಷ್ಯ ಮಾಡದೇ ಹೋದರೆ ಆ ಕಾಗೆ, ಕೋಳಿಗಳಿಗಿಂತ ಈತನ ಜೀವನವು ಹೇಯವಾದದ್ದೆಂದು ''ರಜಕರತ್ನ'' ಮಡಿವಾಳ ಮಾಚಿದೇವನ ಅಭಿಪ್ರಾಯವಾಗಿದೆ.

''ಇಳೆ ನಿಮ್ಮದಾನ, ಬೆಳೆ ನಿಮ್ಮ ದಾನ ;
ಸುಳಿದು ಸೂಸುವ ಗಾಳಿ ನಿಮ್ಮ ದಾನ,
ನಿಮ್ಮದಾನವನುಂಡು ಅನ್ಯರನು ಹೊಗಳುವ,
ಕುನ್ನಿಗಳನೇನೆಂಬೆ ರಾಮನಾಥ''

ಎಂಬ ಶ್ರೀ ದೇವರ ದಾಸಿಮಾರ್ಯರ ವಚನವನ್ನು ನೋಡಿದಾಗ, ಎಲ್ಲ ಪದಾರ್ಥಗಳೂ ಪರಮಾತ್ಮನವೆಂದ ಬಳಿಕ ಆತನಿಗೆ ಪದಾರ್ಥಗಳ ಹಸಿವೆ ಇಲ್ಲ ; ಇಷ್ಟೆಲ್ಲವನ್ನು ಕೊಟ್ಟ ಅವನ ಹೆಸರನ್ನು ಭಕ್ತಿಯಿಂದ ಒಂದು ಸಾರೆಯಾದರೂ ನುಡಿದರೆ ಸಾಕು ಮತ್ತೇನೆಲ್ಲವನ್ನೂ ಕೊಟ್ಟುಬಿಡುತ್ತಾನೆ.

ಓರ್ವ ಗೃಹಸ್ಥನು ಮರಣೋನ್ಮುಖನಾಗುವ ಸಮಯದಲ್ಲಿ ಆತನ ಮಕ್ಕಳು ಅವನ ಹತ್ತಿರಕ್ಕೆ ಬಂದು, ''ಅಪ್ಪಾ ಅಂತ್ಯಕಾಲದಲ್ಲಿ ನಮಗೇನು ಹೇಳುತ್ತಿ '' ಎಂದು ಪ್ರೇಮದಿಂದ ಕೇಳಿದಾಗ, ''ಮಕ್ಕಳಿರಾ ! ಅಂಗೈಯಷ್ಟು ಹೊಲ ಹಸನಾದರೆ ಮುಂಗೈ ತುಂಬ ಜೋಳ'', ಆದ್ದರಿಂದ ಹೊಲವನ್ನು ಹಸನ ಮಾಡಿರಿ ಎಂಬರ್ಥದಲ್ಲಿ ''ಹರಗಿರಿ''

ಎಂದು ಹೇಳಿ ಪ್ರಾಣಬಿಟ್ಟನಂತೆ. ಅಂತ್ಯಕಾಲದಲ್ಲಿ ಈತನು ಹರನೆಂಬ ತನ್ನ ನಾಮವನ್ನು ನುಡಿದಿದ್ದಾನೆಂದು ಶಿವನು ಗಣಪದವಿಯನ್ನು ಕೊಟ್ಟನೆಂದು ಶ್ರೀ ನಿಜಗುಣರು–

ಮರಣಗಾಲದಲ್ಲಿ ಹೊಲದ । ಹರಗಣೆನುತ ಕಳವಳಿಸಿದ ॥
ನರನಿಗಭವನೊಲಿದು ಸಾರ । ತರದ ಸೊಗಸು ಗೈದನಾಗಿ ॥

ಎಂದು ಕೈವಲ್ಯ ಪದ್ಧತಿಯ ನೀತಿಕ್ರಿಯಾಸ್ಥಲದಲ್ಲಿ ಬಹು ಸುಂದರವಾಗಿ ನಿರೂಪಿಸಿದ್ದಾರೆ. ಶಿವನಾಮ ಮಹಿಮೆಯನ್ನು ಅವರ ನುಡಿಯಲ್ಲಿಯೇ ನೋಡುವುದಾದರೆ–

''ಹರನಾಮುವನು ಬಿಡದೆ ಜಪಿಸಬಲ್ಲವರ
ಭವ–ಮರಣ–ಮಾಯಾ–ಕರ್ಮಮಲಪಾಶ ಬಂಧ
ಬಹು ದುರಿತ ಸಂಸಾರ ಸಂತಾಪ ಸಂಚಯವಳಿದು
ವರಭೋಗ ಮೋಕ್ಷವಹುದು''

ಎಂದು ಹರನಾಮವು ಮನುಷ್ಯನ ಮನೋರಥಗಳನ್ನೆಲ್ಲ ಮೈಗೂಡಿಸುವ ಮಹಾಕಲ್ಪ ವೃಕ್ಷ ವೆಂಬುದಾಗಿ ಅರುಹಿದ್ದಾರೆ.

''ವಿದ್ಯಾಸು ಶ್ರುತಿರುತ್ಕೃಷ್ಟಾತತ್ರೈಕಾದಶನೀ ಶ್ರುತೌ ।
ತತ್ರ ಪಂಚಾಕ್ಷರೀ ಮಂತ್ರಃ ತತ್ರ ಶಿವೇತ್ಯಕ್ಷರದ್ವಯಂ ॥

ಹದಿನಾಲ್ಕು ವಿದ್ಯೆಗಳಲ್ಲಿ ವೇದಗಳು ಶ್ರೇಷ್ಠವಾದವುಗಳು. ಚತುರ್ವಿಧ ವೇದಗಳಲ್ಲಿ ಏಕಾದಶ ಅನುವಾಕಗಳುಳ್ಳ ಶ್ರೀರುದ್ರವು ಬಹು ಶ್ರೇಷ್ಠವಾಗಿದೆ. ಶ್ರೀರುದ್ರಕ್ಕಿಂತಲೂ ಪಂಚಾಕ್ಷರಿ ಮಹಾಮಂತ್ರವು ಉತ್ಕೃಷ್ಟವಾಗಿದೆ. ಅದರಲ್ಲಿಯೂ ''ಶಿವ'' ಎಂಬ ಎರಡಕ್ಷರಗಳು ಸರ್ವೋತ್ಕೃಷ್ಟಗಳಾಗಿವೆ. ಇದು ಕಾರಣ ವೇದವನ್ನಾಗಲಿ, ಶ್ರೀರುದ್ರ ವನ್ನಾಗಲಿ, ಪಂಚಾಕ್ಷರಿಯನ್ನಾಗಲಿ ಅಭ್ಯಸಿಸಲವಕಾಶವಿಲ್ಲದಿದ್ದರೆ ಅಂತ್ಯಕ್ಷಣದಲ್ಲಿ ''ಶಿವ'' ಎಂಬ ಎರಡಕ್ಷರಗಳನ್ನು ನಾಲಿಗೆಯಿಂದ ನುಡಿದರೆ ಸಾಕು ಜೀವನವೆಲ್ಲ ಪಾವನ ವಾಗುವುದು.

ಶತಕೋಟಿ ಪಾಪಗಳನ್ನಾಚರಿಸಿದ ಶ್ವೇತನೆಂಬ ಮಹಾಪಾತಕಿಯು ''ಶಿವನಿ'' ಎಂಬ ನಾಮದ ವೇಶ್ಯೆಯಲ್ಲಿ ಅನುರಕ್ತನಾಗಿ ದಿನಾಲು ಅವಳ ಮುಡಿಗೋಸುಗ ಮಲ್ಲಿಗೆ–ಜಾಜಿ ಮುಂತಾದ ಪುಷ್ಪಗಳನ್ನು ತರುತ್ತಿದ್ದನು. ಒಮ್ಮೆ ಅನ್ಯರ ತೋಟವನ್ನು ಕಳ್ಳತನದಿಂದ ಪ್ರವೇಶಿಸಿ ಹೂಗಳನ್ನು ಹರಿದು ಬೇಲಿಯನ್ನು ಜಿಗಿದು ಬರುವಾಗ ಕಾಲು ತಪ್ಪಿ ಧೊಪ್ಪನೇ ನೆಲಕ್ಕುರುಳಿದನು. ಆಗ ಕೈಯಲ್ಲಿಯ ಹೂಗಳೆಲ್ಲ ಜಾರಿ ಕೆಳಕ್ಕೆ ಬೀಳಲು ಹೌಹಾರಿದ ಶ್ವೇತನು ಈ ಹೂಗಳೆಲ್ಲ ''ಶಿವನಿಗೆ'' ಮುಟ್ಟಲಿ ಎಂದು ನುಡಿದು ಪ್ರಾಣ ಬಿಟ್ಟನು. ಜೀವನದುದ್ದಕ್ಕೂ ಪಾಪವನ್ನೇ ಮಾಡಿದ ಇವನ ಪ್ರಾಣವನ್ನು ತೆಗೆದುಕೊಂಡು ನರಕಯಾತನೆ ಕೊಡುವ ಉದ್ದೇಶದಿಂದ ಕರಾಳರಾದ ಯಮದೂತರು ಒಂದು ಕಡೆಯಿಂದ ಬಂದರೆ, ಮತ್ತೊಂದು ಕಡೆಯಿಂದ ಇವನು ಅಂತ್ಯಕಾಲದಲ್ಲಿ ಶಿವನಾಮ ವನ್ನು ನುಡಿದ ಫಲವಾಗಿ ಗಣಪದವಿಯನ್ನೀಯಲು ಶಿವದೂತರು ಬರುತ್ತಾರೆ. ಶ್ವೇತನ ಪ್ರಾಣದ ಬಗ್ಗೆ ಈರ್ವರಲ್ಲಿ ಅನೇಕ ವಾದ–ವಿವಾದಗಳಾಗಿ ಕೊನೆಗೆ ಶಿವದೂತರು ಹೇಳುತ್ತಾರೆ. ''ಈತನು ಅಗಣಿತ ಪಾಪಗಳನ್ನು ಮಾಡಿರುವುದು ಸತ್ಯವಾದರೂ,

ಮರಣಕಾಲದಲ್ಲಿ ಪರಮಪಾವನವಾದ ಶಿವನ ನಾಮವನ್ನುಚ್ಚರಿಸಿರುವುದರಿಂದ "ಕುಂಬಾರಗೆ ವರುಷ, ದೊಣ್ಣೆಗೆ ನಿಮಿಷ ?" ಎಂಬ ಗಾದೆಯ ಮಾತಿನಂತೆ ಇವನ ಜನ್ಮ–ಜನ್ಮಾಂತರ ಪಾಪಗಳೆಲ್ಲ ಶಿವ ಎಂಬ ಎರಡಕ್ಷರದಿಂದ ದಹಿಸಿ ಹೋಗಿವೆ" ಎಂದು ಯಮದೂತರಿಗೆ ತಿಳಿಸಿ ಶಿವದೂತರು ಶ್ವೇತನಿಗೆ ಪರಶಿವನ ಅಪ್ಪಣೆಯ ಮೇರೆಗೆ ಗಣಪದವಿಯನ್ನಿತ್ತರಂತೆ.

ಶ್ವೇತನು ಅಂತ್ಯಕಾಲದಲ್ಲಿ ಭಕ್ತಿಯಿಂದ ಶಿವನಾಮವನ್ನು ಸ್ಮರಿಸದಿದ್ದರೂ ಆತನು ನುಡಿದ "ಶಿವನಿಗೆ" ಎಂಬ ವೇಶ್ಯೆಯ ಹೆಸರಿನಲ್ಲಿ "ಶಿವ" ಶಬ್ದವಿರುವುದರಿಂದ ಪಾಪ ನಿರ್ಮುಕ್ತನಾದನೆಂದ ಬಳಿಕ ಭಕ್ತಿಯಿಂದ ಜಪಿಸಿದರೆ ಹೇಗೆ ತಾನೇ ಪಾಪಗಳು ದೂರವಾಗುವದಿಲ್ಲವೆಂಬುದು ಶ್ರೀನಿಜಗುಣರ ನಿಜಾಭಿಪ್ರಾಯವಾಗಿದೆ.

"ಏಕಂ ಸದ್ವಿಪ್ರಾಬಹುಧಾವದಂತಿ" "ದೇವನೊಬ್ಬ ನಾಮ ಹಲವು" ಮುಂತಾದ ನುಡಿಮುತ್ತುಗಳ ಪ್ರಮಾಣದಿಂದ ಶಿವ, ಕೃಷ್ಣ ಹರಿ, ನಾರಾಯಣ, ರಾಮ, ಗೋವಿಂದ, ಅಲ್ಲಾ, ಗಾಡ್ ಮುಂತಾದ ನಾಮಗಳು ಅನೇಕವಿದ್ದರೂ ದೇವರು ಮಾತ್ರ ಒಬ್ಬನೇ ಆಗಿದ್ದಾನೆ. ಅದನ್ನೇ ಸಂಸ್ಕೃತ ಕವಿಯ ದೃಷ್ಟಿಯಲ್ಲಿ ನೋಡುವುದಾದರೆ–

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ ।
ಸೋಽಯಂ ವೋ ವಿದಧಾತುವಾಂಛಿತಫಲಂ ತ್ರೈಲೋಕ್ಯನಾಥೋ ವಿಭುಃ ॥

ಒಬ್ಬನೇ ಆದ ದೇವನಿಗೆ ಹೆಸರುಗಳನೇಕವಿರಲು ಕಾರಣ, ವಿಭಿನ್ನ ಸಂಪ್ರದಾಯಗಳೇ, ಶೈವರು ಶಿವನೆಂದರೆ, ವೇದಾಂತಿಗಳು ಬ್ರಹ್ಮನೆಂತಲೂ, ಬೌದ್ಧರು ಬುದ್ಧನೆಂತಲೂ, ನೈಯಾಯಿಕರು ಕರ್ತನೆಂತಲೂ, ಜೈನರು ಅರ್ಹನ್ ಎಂತಲೂ ಮೀಮಾಂಸಕರು ಕರ್ಮವೆಂತಲೂ ಕರೆಯುತ್ತಾರೆ.

ಒಟ್ಟಿನಲ್ಲಿ ಯಾರು ಯಾವದೇ ಸಂಪ್ರದಾಯದವರಿದ್ದರೂ ತಮ್ಮ ಸಂಪ್ರದಾಯಾನುಸಾರವಾಗಿ ಭಗವನ್ನಾಮವನ್ನು ಜಪಿಸಿ ಜನ್ಮ–ಜನ್ಮಾಂತರದ ಪಾಪರಾಶಿಯನ್ನು ಕ್ಷಯಿಸಿಕೊಂಡು ಮನೋಬುದ್ಧಿಗಳನ್ನು ಪರಿಶುದ್ಧಿಗೊಳಿಸಿಕೊಂಡಾಗ "ಪಿಂಡ" ಎಂದೆನಿಸಿಕೊಂಡು, ವೀರಶೈವ ಸಿದ್ಧಾಂತರೀತ್ಯಾ ಷಟ್‌ಸ್ಥಲ ಮಾರ್ಗದಲ್ಲಿ ನಡೆಯಲು ಅರ್ಹನಾಗುತ್ತಾನೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)

■■

ಆಶೀರ್ವಚನ-೨

ಶಿವಶಕ್ತಿಸಮುತ್ಪನ್ನೇ ಪ್ರಪಂಚೇಽಸ್ಮಿನ್ ವಿಶಿಷ್ಯತೇ ।
ಪುಣ್ಯಾಧಿಕಃ ಕ್ಷೀಣಪಾಪಃ ಶುದ್ಧಾತ್ಮಾ ಪಿಂಡನಾಮಕಃ

(ಸಿ. ಶಿ. ೫–೩೨)

ಈ ಸಚರಾಚರ ಪ್ರಪಂಚವು ಶಿವ–ಶಕ್ತಿಯರ ವಿಲಾಸವು, ವೀರಶೈವ ದಾರ್ಶನಿಕ ದೃಷ್ಟಿ–ಯಲ್ಲಿ ಪ್ರಪಂಚವು ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧ ವಿದ್ಯಾ ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಮಹಾನ್, ಅಹಂಕಾರ, ಮನ, ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥಾ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿಗಳೆಂಬ ಮೂವತ್ತಾರು ತತ್ತ್ವಗಳಿಂದೊಡಗೂಡಿದೆ. ಈ ತಾತ್ವಿಕ ಸೃಷ್ಟಿಗೆ ವಿಮರ್ಶಶಕ್ತಿಯಿಂದೊಡಗೂಡಿದ ಪರಶಿವನೇ ಮೂಲಕಾರಣನು. ''ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ'' ಎಂಬ ಆಗಮೋಕ್ತಿಯಂತೆ ಶಕ್ತಿರಹಿತನಾದ ಶಿವನಿಂದ ಈ ಜಗವು ಜನಿಸದು. ಶಿವ–ಶಕ್ತಿಯರು ಚಂದ್ರ–ಚಂದ್ರಿಕೆಯಂತೆ ಬೇರ್ಪಡಿಸಬಾರದ ಅವಿನಾಭಾವ ಸಂಬಂಧದಿಂದ ಸದಾ ಸಂಯುಕ್ತರಾಗಿಯೇ ಇರುತ್ತಾರೆ. ಶಿವ–ಶಕ್ತಿಯರ ಈ ಸಂಬಂಧವನ್ನು ಶ್ರೀ ನಿಜಗುಣರು,

''ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸು ।
ಮಂಗಳೊಳು ಕಂಪು ಬೆರೆದಂತೆ । ಪರಮನೊಳು
ಪಿಂಗದಗಸುತೆಗೆ ನತನಪ್ಪೆ ॥

ಎಂಬ ನುಡಿಯಲ್ಲಿ ಬಹು ಸ್ವಾರಸ್ಯವಾಗಿ ಹೇಳಿದ್ದಾರೆ.

ಕವಿಕುಲಗುರು ಕಾಳಿದಾಸನಾದರೂ–

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥

ರಘುವಂಶ ಕಾವ್ಯದ ಮಂಗಳಶ್ಲೋಕದಲ್ಲಿ ಶಿವ–ಶಕ್ತಿಯರ ಸಂಬಂಧವನ್ನು ಶಬ್ದ ಮತ್ತು ಅರ್ಥಕ್ಕೆ ಇರುವ ತೆರನಾದದ್ದೆಂದು ಬಹು ಅರ್ಥವತ್ತಾಗಿ ಸೂಚಿಸಿದ್ದಾನೆ.

ಶಿವನು ಸಚ್ಚಿದಾನಂದ ಸ್ವರೂಪನು ; ಅಂದರೆ ನಾನು ಇದ್ದೇನೆ, ನಾನು ಪ್ರಕಾಶಮಾನನಾಗಿದ್ದೇನೆ– ನಾನು ಆನಂದಿಸುತ್ತಿದ್ದೇನೆ ಎಂಬ ಅನುಭವದ ಎಚ್ಚರದಿಂದ ಕೂಡಿರುವನು. ಈ ಅರಿವೇ ವಿಮರ್ಶ ಶಕ್ತಿಯು ಅದು ಇಲ್ಲದಿದ್ದರೆ ಶಿವನೂ ಜಡನೆನಿಸಿಕೊಳ್ಳಬೇಕಾಗಿತ್ತು, ಇದೇ ಮಾತನ್ನು ಶ್ರೀಜಗದ್ಗುರು ಭಗವತ್ಪಾದರು ಇಪ್ಪತ್ತನೇ ಪರಿಚ್ಛೇದದ ''ಭಾಜನಸ್ಥಲ''ದಲ್ಲಿ–

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥

(ಸಿ. ಶಿ. ೨೦–೩೨)

ವಿಶ್ವದ ವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯು ಚಂದ್ರನಲ್ಲಿ ಸ್ಥಿರವಾಗಿರುವಂತೆ, ಪ್ರಕಾಶರೂಪವಾದ ವಿಮರ್ಶ ಎಂಬ ಶಕ್ತಿಯು ಪರಶಿವ ಬ್ರಹ್ಮದಲ್ಲಿ ಸ್ಥಿರವಾಗಿರುವುದೆಂದು ಉಪದೇಶಿಸಿದ್ದಾರೆ.

ಯಾವುದೊಂದು ಕಾರ್ಯ ಜನಿಸಬೇಕಾದರೆ ಉಪಾದಾನ ಹಾಗೂ ನಿಮಿತ್ತಗಳೆಂಬ ಎರಡು ಕಾರಣಗಳು ಬೇಕು. ಮಡಕೆ ತಯಾರಾಗಲು ಮಣ್ಣು ಉಪಾದಾನ ಕಾರಣ, ಕುಂಬಾರ ನಿಮಿತ್ತ ಕಾರಣ ಹೇಗೋ ಹಾಗೆ ಈ ಜಗದುತ್ಪತ್ತಿಗೆ ಶಕ್ತಿಯು ಉಪಾದಾನ ಕಾರಣ, ಶಿವನು ನಿಮಿತ್ತಕಾರಣನಾಗಿದ್ದಾನೆ. ಲೋಕದಲ್ಲಿ ಉಪಾದಾನ ನಿಮಿತ್ತ ಕಾರಣಗಳು ಪರಸ್ಪರ ಭಿನ್ನಗಳಾಗಿರುತ್ತವೆ. ಆದರೆ ಜಗದುಪಾದಾನನಿಮಿತ್ತಕಾರಣರಾದ ಶಿವ–ಶಕ್ತಿಯರು ಜೇಡರಹುಳದಂತೆ ಪರಸ್ಪರ ಅಭಿನ್ನರೆಂಬುದೇ ವೈಶಿಷ್ಟ್ಯ. ಜೇಡರ ಹುಳುವು ತನ್ನ ಬಲೆಯನ್ನು ರಚಿಸುವಾಗ ಹೊರಗಿನಿಂದ ಯಾವ ಪದಾರ್ಥವನ್ನು ತರದೇ ತನ್ನದೇ ಆದ ಚೇತನಾಂಶದಿಂದ ನಿಮಿತ್ತಕಾರಣವಾಗಿ, ಶರೀರಾಂಶದಿಂದ ಉಪಾದಾನ ಕಾರಣವಾಗುವಂತೆ, ಜಗದುತ್ಪತ್ತಿಗೆ ಶಿವಾಂಶವು ನಿಮಿತ್ತ ಕಾರಣ, ಶಕ್ತ್ಯಂಶವು ಉಪಾದಾನವಾಗುವುದರಿಂದ, ಶಿವನು ಅಭಿನ್ನನಿಮಿತ್ತೋಪಾದಾನ ಕಾರಣನಾಗಿದ್ದಾನೆ.

ಹೀಗೆ ಈ ಜಗತ್ತಿಗೆ ಶಕ್ತಿಯು ಉಪಾದಾನ ಕಾರಣವಾದ್ದರಿಂದ, ಅದರಿಂದ ಉತ್ಪನ್ನವಾದ ಜಗತ್ತಿನ ಎಲ್ಲಾ ಪದಾರ್ಥಗಳಲ್ಲಿ ಒಂದಿಲ್ಲೊಂದು ಪ್ರಕಾರದ ಶಕ್ತಿ ಇದ್ದೇ ಇದೆ. ಜೀವಾತ್ಮರಲ್ಲಿ ಅಲ್ಪಜ್ಞತ್ವ ಅಲ್ಪಕರ್ತೃತ್ವಶಕ್ತಿ, ಆಕಾಶದಲ್ಲಿ ವ್ಯಾಪನಶಕ್ತಿ, ವಾಯುವಿನಲ್ಲಿ ಸ್ಪಂದನಶಕ್ತಿ, ಅಗ್ನಿಯಲ್ಲಿ ಜ್ವಲನಶಕ್ತಿ, ನೀರಿನಲ್ಲಿ ಪಿಂಡೀಕರಣಶಕ್ತಿ, ಪೃಥ್ವಿಯಲ್ಲಿ ಧಾರಣ– ಗುರುತ್ವಾಕರ್ಷಣಶಕ್ತಿ, ಗಿಡ–ಬಳ್ಳಿಗಳಲ್ಲಿ ಭೂಮಿಯ ನೀರನ್ನು ಆಕರ್ಷಿಸುವ ಶಕ್ತಿ, ವನಸ್ಪತಿಗಳಲ್ಲಿ ರೋಗ ನಿವಾರಣಶಕ್ತಿ, ಸೂರ್ಯಕಾಂತಮಣಿಯಲ್ಲಿ ಅಗ್ನಿಯನ್ನು ಪ್ರಕಟಿಸುವ ಶಕ್ತಿ, ಚಂದ್ರಕಾಂತಮಣಿಯಲ್ಲಿ ಜಲಪ್ರಕಟನಶಕ್ತಿ, ಇದರಂತೆ ಎಲ್ಲ ಪದಾರ್ಥಗಳಲ್ಲಿ ಒಂದಿಲ್ಲೊಂದು ಅಸಾಧಾರಣಶಕ್ತಿ ಇದ್ದೇ ಇದೆ. ಇದರಿಂದ ಶಕ್ತಿಯು ಜಗದುಪಾದಾನ ಕಾರಣವೆಂಬುದು ಬಾಲಕರಿಗೂ ಬೋಧವಾಗುವುದು.

ಇಂತು ಶಿವ–ಶಕ್ತಿಯರ ವಿಲಾಸವಾಗಿ ವಿಕಾಸಗೊಂಡ ವಿಶ್ವದಲ್ಲಿ ಸ್ವಕರ್ಮಾನುಸಾರವಾಗಿ ಬಾಳಿ ಬದುಕುವ ಜೀವಿಗಳದೆಷ್ಟೋ ಇವೆ. ಇಂಥವರಲ್ಲಿ ತಾನು ಮಾಡಿದ ಯಜ್ಞ, ದಾನ, ಜಪ–ತಪಾದಿಗಳಿಂದ ಅತ್ಯಧಿಕ ಪುಣ್ಯವನ್ನು ಸಂಪಾದಿಸಿ, ಪಾಪದ ರಾಶಿಯನ್ನು ನಾಶಗೊಳಿಸಿಕೊಂಡ, ಅಂತೆಯೇ ''ಪಿಂಡ''ನೆಂದು ಕರೆಯಲ್ಪಡುವ ಪರಿಶುದ್ಧಾಂತಃಕರಣದ ಜೀವನು ಆಕಾಶದಲ್ಲಿಯ ಲಕ್ಷಾಂತರ ನಕ್ಷತ್ರಗಳ ಮಧ್ಯೆ ಪರಿಶೋಭಿಸುವ ಪರಿಪೂರ್ಣ ಚಂದ್ರನಂತೆ ವಿಶಿಷ್ಟನಾಗಿ ತೋರುತ್ತಾನೆ. ಇವನಲ್ಲಿ ಮಾನವತೆಯ ಉತ್ಕೃಷ್ಟ ಲಕ್ಷಣಗಳು ನೆಲೆಗೊಂಡಿರುವುದರಿಂದ ಮನುಷ್ಯತ್ವವುಳ್ಳ ಶ್ರೇಷ್ಠ ಮನುಷ್ಯನೆನಿಸಿಕೊಳ್ಳುವನು.

ದುರ್ಲಭಂ ತ್ರಯಮೇವೈತತ್ ದೈವಾನುಗ್ರಹಹೇತುಕಮ್ ।
ಮನುಷ್ಯತ್ವಂ ಮುಮುಕ್ಷುತ್ವಂ ಮಹಾಜನಸಮಾಶ್ರಯಃ ॥

ಎಂಬ ಸುಭಾಷಿತದಲ್ಲಿ ಹೇಳಿದ ಮನುಷ್ಯತ್ವ , ಮುಮುಕ್ಷುತ್ವ, ಮಹಾತ್ಮರ ಸಂಗಗಳೆಂಬ ದುರ್ಲಭಗಳಾದ ಮೂರು ವಸ್ತುಗಳಲ್ಲಿ ಮನುಷ್ಯತ್ವಕ್ಕೆ ಆದ್ಯತೆ ಕೊಟ್ಟಿದ್ದಾರೆ.

ಮನುಷ್ಯ ದೇಹವಿದ್ದ ಮಾತ್ರಕ್ಕೆ ಆತ ಮನುಷ್ಯನೆನಿಸಿಕೊಳ್ಳಲಾರ ; ಉತ್ತಮ ಶೀಲ–ಸ್ವಭಾವಗಳಿಂದ ಮನುಷ್ಯನೆನಿಸುವನು. ಅದಿಲ್ಲದಿದ್ದರೆ ''ಮನುಷ್ಯರೂಪೇಣ ಮೃಗಾಶ್ಚರಂತಿ'' ಮನುಷ್ಯ ದೇಹಧಾರಿ ಮೃಗವೆನಿಸಿಕೊಳ್ಳುತ್ತಾನೆ.

ಒಬ್ಬ ಅಗಸ ಹುಲಿಯ ಚರ್ಮವನ್ನು ತನ್ನ ಕತ್ತೆಗೆ ಹೊದಿಸಿ ರಾತ್ರಿಯಾದೊಡನೆ ಹೆರವರ ಹೊಲದಲ್ಲಿ ಮೆಯ್ಯಲು ಬಿಡುತ್ತಿದ್ದ. ರಾತ್ರಿಯೊಳು ಹೊಲಗಾಯುವ ಜನರು ಹುಲಿಯೆಂದು ಹೆದರಿ ಹೊಲಗಾಯುವುದು ಬಿಟ್ಟು ಮನೆಗೆ ಓಡಿ ಬರುತ್ತಿದ್ದರು. ಕತ್ತೆ ಮಾತ್ರ ಹೊಟ್ಟೆ ತುಂಬ ಪೈರು ತಿಂದು ಬೆಳಗಾಗುವುದರೊಳಗೆ ಒಡೆಯನ ಮನೆ ಸೇರುತ್ತಿತ್ತು. ಕತ್ತೆಯ ಈ ದೈನಂದಿನ ಕೃತಿಯಿಂದ ಊರಿನ ಅನೇಕ ಹೊಲಗಳು ಹಾಳಾದವು. ಹಾಳಾದ ಹೊಲಗಳ ಹಿರಿಯರೆಲ್ಲ ಕೂಡಿ–ಹುಲಿಯು ಮಾಂಸಾಹಾರಿ, ಅದು ಜೋಳ, ಹಾಗೂ ದಂಟುಗಳನ್ನೆಂದೂ ತಿನ್ನಲಾರದು ; ಆದರೆ ಈ ಹುಲಿಯು ಇಲ್ಲಿಯವೆರೆಗೆ ದಂಟು, ಜೋಳವನ್ನೇ ತಿಂದಿದೆಯೇ ವಿನಾ ಯಾವುದೇ ಪ್ರಾಣಿಯನ್ನಾಗಲಿ, ಮನುಷ್ಯನನ್ನಾಗಲಿ ಹಿಂಸಿಸಿಲ್ಲವೆಂದ ಬಳಿಕ ಇದರಲ್ಲೇನೋ ಮೋಸವಿದೆ. ಹೀಗೆ ವಿಚಾರಿಸಿದ ಅವರೆಲ್ಲರೂ ಪರೀಕ್ಷಿಸುವುದಕ್ಕೋಸ್ಕರ ಅನೇಕ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಕೈಯಲ್ಲಿ ಕೈದೀವಿಗೆಗಳನ್ನು ಹಿಡಿದುಕೊಂಡು ಹುಲಿಯು ಮೇಯುತ್ತಿದ್ದ ಹೊಲಕ್ಕೆ ಹೋಗಿ ಏಕಕಾಲದಲ್ಲಿಯೇ ಎಲ್ಲರೂ ಹುಲಿಯ ಮೇಲೆ ಪ್ರಹಾರ ಮಾಡಿದರು. ಈ ಪೆಟ್ಟಿನ ಪ್ರಸಂಗದಲ್ಲಿ ಮೇಲಿನ ಚರ್ಮ ಕಳಚಿ ಕತ್ತೆ ಪ್ರಕಟವಾಯಿತು. ಆಗ ಎಲ್ಲರೂ ಇಷ್ಟುದಿನದ, ತಮ್ಮ ಅವಿವೇಕತನವನ್ನು ತಾವೇ ಹೀಯಾಳಿಸಿಕೊಂಡು ಅಗಸನಿಗೆ ಶಿಕ್ಷೆ ವಿಧಿಸಿದರು.

ಇಂದಿನ ದೂಷಿತ ವಾತಾವರಣದಲ್ಲಿ ಇಂತಹ ಮೃಗಗಳೇ ಅಧಿಕವಾಗಿವೆ. ಅಡವಿಯಲ್ಲಿರುವವು ಕಾಡುಮೃಗಗಳಾದರೆ ಮನುಷ್ಯದೇಹಧಾರಿಯಾಗಿಯೂ ಮನುಷ್ಯತ್ವ ದ್ಯೋತಕಗಳಾದ ಜ್ಞಾನ, ದಾನ, ಮತ್ತು ತಪಸ್ಸು ಮುಂತಾದ ಸದ್ಗುಣಗಳಿಲ್ಲದ ಮನುಷ್ಯರಿಗೆ ಅಣ್ಣನವರು;

''ಕಾಡುಮೃಗವೊಂದಾಗಿರಲಾಗದೇ ದೇವಾ ?
ಊರ ಮೃಗವೊಂದಾಗಿರಲಾಗದೇ ಗುರುವೆ ? ''

ಎಂದು ಹೀಯಾಳಿಸಿದ್ದಾರೆ.

''ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ'' (ಗೀತಾ. ೨೧೩)

ಸಾವಿರಕ್ಕೆ ಒಬ್ಬನಂತೆ ಮನುಷ್ಯತ್ವವನ್ನು ಸಂಪಾದಿಸಲು ಪ್ರಯತ್ನಿಸುತ್ತಾರೆ ಎಂಬ ಗೀತೆಯ ಭಗವಂತನ ವಾಣಿಯಾದರೂ ಪಿಂಡಸ್ಥಲದ ಅಧಿಕಾರಿಗಳ ಅಲ್ಪತೆಯನ್ನು ಸೂಚಿಸುತ್ತಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೬ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)

■■

## ಆಶೀರ್ವಚನ -೩

ಏಕ ಏವ ಶಿವಸ್ಸಾಕ್ಷಾಚ್ಚಿದಾನಂದಮಯೋ ವಿಭುಃ ।
ನಿರ್ವಿಕಲ್ಪೋನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ

ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವನಾಮಕಃ ।
ದೇವತಿರ್ಯಙ್ಮನುಷ್ಯಾದಿಜಾತಿಭೇದೇ ವ್ಯವಸ್ಥಿತಃ

ಮಾಯಿೊ ಮಾಹೇಶ್ವರಸ್ತೇಷಾಂ ಪ್ರೇರಕೋ ಹೃದಿಸಂಸ್ಥಿತಃ ।
ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥಾಽನಲಃ ।
ಬೀಜೇ ಯಥಾಽಂಕುರಃ ಸಿದ್ಧಃ ತಥಾಽತ್ಮನಿ ಶಿವಃ ಸ್ಥಿತಃ (ಸಿ. ಶಿ. ೩೩–೩೫)

ಪರಶಿವನು ವಿಶ್ವಾತ್ಮನೆಂತಲೂ, ವಿಶ್ವೋತ್ತೀರ್ಣನೆಂತಲೂ ಉಭಯ ಸ್ವರೂಪವುಳ್ಳವನು. ಅವನು ವಿಶ್ವಾತ್ಮನಾಗಿ ಆವಿರ್ಭವಿಸುವ ಮೊದಲು ಸಚ್ಚಿದಾನಂದ ಸ್ವರೂಪನಾಗಿ, ನಿರ್ಗುಣ ನಿರಾಕಾರನಾಗಿ, ವಿಕಲ್ಪರಹಿತನಾಗಿ; ಸರ್ವತ್ರ ವ್ಯಾಪಕರೂಪದಿಂದ ಏನೊಂದಿಲ್ಲದೆ ತನ್ನಲ್ಲಿಯೂ ಭೇದವಿಲ್ಲದೆ ತಾನೇ ತಾನಾಗಿರುತ್ತಾನೆ. ಶ್ರೀ ರೇಣುಕ ಭಗವತ್ಪಾದರು ಉಪದೇಶಿಸಿದ ಶಿವನ ಈ ವಿಶ್ವೋತ್ತೀರ್ಣ ಸ್ಥಿತಿಯನ್ನು ಶ್ರೀ ಪ್ರಭುದೇವರು ತಮ್ಮ ಅನುಭವವಾಣಿಯಲ್ಲಿ ಹೀಗೆ ಹೇಳಿದ್ದಾರೆ–

''ಆದಿ ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು,
ಸಚರಾಚರವೆಲ್ಲ ರಚನೆಗೆ ಬಾರದಂದು,
ಗುಹೇಶ್ವರ ! ನೀನೊಬ್ಬನೇ ಇದ್ದೆಯಲ್ಲ ಇಲ್ಲದಂತೆ ''

''ಏಕ ಏವ ಶಿವಃ'' ಎಂಬ ಶ್ರೀ ಭಗವತ್ಪಾದರ ಉಪದೇಶವು ''ಏಕಮೇವಾದ್ವಿತೀಯಂ ಬ್ರಹ್ಮ'' (ಛಾ. ಉ. ೬–೨–೧) ಎಂಬ ಶ್ರುತಿಯ ಸಾರ ಸರ್ವಸ್ವವಾಗಿದೆ. ಜಗತ್ತಿನ ಪದಾರ್ಥಗಳಲ್ಲಿ ಸ್ವಗತ, ಸಜಾತೀಯ, ವಿಜಾತೀಯಗಳೆಂಬ ತ್ರಿವಿಧ ಭೇದಗಳುಂಟು. ಉದಾಹರಣವಾಗಿ ಮನುಷ್ಯನಿಗೂ ಮತ್ತು ಪಶುಗಳಿಗೂ ಇರುವುದು ವಿಜಾತೀಯ ಭೇದ: ಯಾಕೆಂದರೆ ಮನುಷ್ಯನಲ್ಲಿ ಮನುಷ್ಯತ್ವ ಜಾತಿ ಇದ್ದರೆ, ಪಶುಗಳಲ್ಲಿ ಪಶುತ್ವ ಜಾತಿ ಇರುತ್ತದೆ. ಇದೇ ವಿಜಾತೀಯಭೇದ. ದೇವದತ್ತ, ಯಜ್ಞದತ್ತರು ಪರಸ್ಪರ ಭಿನ್ನರಾಗಿರುವರು. ಮನುಷ್ಯ ಮನುಷ್ಯರಲ್ಲಿ ಸಾಜಾತ್ಯವಿದ್ದ ಕಾರಣ ಇದು ಸಜಾತೀಯ ಭೇದವೆನಿಸುವುದು. ಇನ್ನು ಒಬ್ಬನ ಶರೀರದಲ್ಲಿಯೇ ಇರುವ ಕೈ, ಕಾಲು ಮುಂತಾದ ಅವಯವಗಳ ಭೇದವು ಸ್ವಗತ ಭೇದವೆನಿಸುವದು. ಇಂತಹ ಭೇದಗಳು ವಿಶ್ವೋತ್ತೀರ್ಣ ಶಿವನಲ್ಲಿ ಇಲ್ಲವೆಂಬುದೇ ಭಗವತ್ಪಾದರ ಆಶಯವು.

ಈ ಪ್ರಪಂಚವು ಅಭಿವ್ಯಕ್ತವಾಗದಿರುವಾಗ ಶಿವನಿಗನ್ಯವಾದ ಬೇರೊಂದು ಪದಾರ್ಥವಿಲ್ಲದ ಕಾರಣ ವಿಜಾತೀಯ ಭೇದವಿಲ್ಲ, ಶಿವನಂತಹ ಮತ್ತೊಬ್ಬ ಶಿವನಿಲ್ಲದ ಕಾರಣ ಸಜಾತೀಯ ಭೇದವಿಲ್ಲ, ನಮ್ಮಂತೆ ಶಿವನಿಗೆ ಹಸ್ತ–ಪಾದಾದ್ಯವಯವಗಳಿಲ್ಲದ

ಕಾರಣ ಅವನಲ್ಲಿ ಸ್ವಗತ ಭೇದವೂ ಇಲ್ಲ. ಹೀಗೆ ತ್ರಿವಿಧ ಭೇದರಹಿತನಾದ ಶಿವನು ಹೇಗೆ ಇದ್ದಾನೆ ? ಎಂದಾಗ ''ಸಾಕ್ಷಾತ್ ಚಿದಾನಂದ ಮಯಃ'' ಎಂದು ಉಪದೇಶಿಸಿದ್ದಾರೆ.

ಸಂಸ್ಕೃತದಲ್ಲಿ ''ಮಯಟ್'' ಪ್ರತ್ಯಯವು ವಿಕಾರ, ಪ್ರಾಚುರ್ಯ ಮತ್ತು ಸ್ವಾರ್ಥ (ಸ್ವರೂಪಾರ್ಥ) ಗಳೆಂದು ಮೂರು ಬಗೆಯಾಗಿ ಅರ್ಥಯಿಸಲ್ಪಡುತ್ತದೆ. ''ಮೃಣ್ಮಯೋ ಘಟಃ'' ಎಂಬಲ್ಲಿ ಮಡಿಕೆಯು ಮಣ್ಣಿನ ವಿಕಾರವೆಂದು ಅರ್ಥಮಾಡುವರು. ''ವಿಪ್ರಮಯೋ ಗ್ರಾಮಃ'' ಎಂಬಲ್ಲಿ ಅಧಿಕ ಬ್ರಾಹ್ಮಣರುಳ್ಳ ಗ್ರಾಮವೆಂದು ಪ್ರಾಚುರ್ಯಾರ್ಥವನ್ನು ಹೇಳುವರು. ಬ್ರಾಹ್ಮಣರೇ ಅಧಿಕವಾಗಿದ್ದರೂ ಉಳಿದ ಜಾತಿಯ ಜನರು ಅಲ್ಪಮಟ್ಟಿಗೆ ಇದ್ದಾರೆ ಎಂಬುದು ಪ್ರಾಚುರ್ಯಾರ್ಥದ ಶಬ್ದದ ತಾತ್ಪರ್ಯವು. ಆದರೆ ''ಸಚ್ಚಿದಾನಂದಮಯಃ'' ಎಂಬಲ್ಲಿ ''ಚಿದೇವ ಚಿನ್ಮಯಮ್'' ಎಂಬಂತೆ ಸ್ವರೂಪಾರ್ಥವನ್ನೇ ಸ್ವೀಕರಿಸಬೇಕಾಗುವುದು. ಯಾಕಂದರೆ ಶಿವನು, ಮಣ್ಣಿನಿಂದ ಮಡಿಕೆಯಾದಂತೆ ಸತ್ತು, ಚಿತ್ತು, ಮತ್ತು ಆನಂದಗಳಿಂದ ಉತ್ಪನ್ನನಾಗಿಲ್ಲ–ವಾದ್ದರಿಂದ, ಸಚ್ಚಿದಾನಂದಗಳ ವಿಕಾರನೂ ಅಲ್ಲ. ಗ್ರಾಮದಲ್ಲಿ ಬ್ರಾಹ್ಮಣರು ಅಧಿಕವಾಗಿದ್ದು ಉಳಿದ ಜಾತಿಯ ಜನರು ಅಲ್ಪಪ್ರಮಾಣದಲ್ಲಿ ಇರುವಂತೆ, ಶಿವನಲ್ಲಿ ಸತ್ತು, ಚಿತ್ತು ಆನಂದಗಳು ಅಧಿಕವಾಗಿದ್ದು ಬೇರೆ ಗುಣಗಳು ಅಲ್ಪಪ್ರಮಾಣದಲ್ಲಿ ಇವೆ ಎಂದು ಹೇಳಲವಕಾಶವಿಲ್ಲದ ಕಾರಣ, ಸಚ್ಚಿದಾನಂದಗಳ ಪ್ರಾಚುರ್ಯ ಉಳ್ಳವನೂ ಶಿವನಲ್ಲ; ಇಂತು ಹಾಲಿನಲ್ಲಿ ತೋರುವ ಶುಭ್ರತ್ವ, ಮಧುರತ್ವ, ದ್ರವತ್ವಗಳು ಹಾಲಿನ ಸ್ವರೂಪಗಳಾಗಿರುವಂತೆ ಸಚ್ಚಿದಾನಂದತ್ವಗಳು ಶಿವನ ಸ್ವರೂಪಗಳಾಗಿವೆ.

ಹೀಗೆ ಸಚ್ಚಿದಾನಂದಸ್ವರೂಪನಾದ ಶಿವನು ''ವಿಭುಃ'' ಅಂದರೆ ವ್ಯಾಪಕನಾಗಿದ್ದಾನೆ. ''ಸರ್ವಮೂರ್ತದ್ರವ್ಯಸಂಯೋಗಿತ್ವಂ ವಿಭುತ್ವಮ್'' ಪ್ರಪಂಚದ ಚರಾಚರ ವಸ್ತುಗಳೊಂದಿಗೆ ಸಂಯೋಗವುಳ್ಳದ್ದೇ ವಿಭು ಎಂದು ನೈಯಾಯಿಕರು ಅರ್ಥ ಮಾಡಿದ್ದಾರೆ. ಪಂಚಮಹಾಭೂತಗಳಲ್ಲಿ ನೆಲ, ಜಲ, ಅಗ್ನಿ ಮತ್ತು ವಾಯುಗಳಿಗಿಂತ ಆಕಾಶವು ಬಹು ವಿಶಾಲವಾಗಿದೆ. ''ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದ ಸ್ಯಾಮೃತಂ ದಿವಿ'' ಎಂಬ ವೇದ ಮಂತ್ರವು ಆಕಾಶವೇ ಮೊದಲುಗೊಂಡು ಅಖಿಲ ಭುವನ ಬ್ರಹ್ಮಾಂಡಗಳು ಆ ಪರಶಿವನ ಒಂದು ಭಾಗದಲ್ಲಿವೆ. ಉಳಿದ ಮೂರು ಭಾಗಗಳು ಅಮೃತ ಸ್ವರೂಪಗಳಾಗಿವೆ ಎಂದು ಹೇಳುವುದರಿಂದ ಜಗತ್ತಿಗೆಲ್ಲ ಅವಕಾಶ ಕೊಟ್ಟದ್ದು ಆಕಾಶ. ಆ ಆಕಾಶಕ್ಕೂ ಅವಕಾಶಕೊಟ್ಟ ಪರಮಾತ್ಮನು ಅದಕ್ಕಿಂತಲೂ ವ್ಯಾಪಕನಾಗಿದ್ದಾನೆ ; ಅಂತೆಯೇ ಶ್ರುತಿಯಾದರೂ ''ಆಕಾಶವತ್ ಸರ್ವಗತಶ್ಚ ನಿತ್ಯಃ'' ಎಂದು ಪರಮಾತ್ಮನ ವ್ಯಾಪಕತೆಯನ್ನು ಆಕಾಶದ ದೃಷ್ಟಾಂತದಿಂದ ತಿಳಿಸಿದೆ.

ವಯಸ್ಸಿನಲ್ಲಿ ಸಣ್ಣವಳಾದರೂ ಜ್ಞಾನದಿಂದ ಹಿರಿತನವನ್ನು ಹೊಂದಿದ ಅಕ್ಕನು–

ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯಾ ?
ನೀನು ಬಹಿರಂಗ ವ್ಯವಹಾರ ದೂರಸ್ಥನು.
ಅಂತರಂಗದಲ್ಲಿ ಧ್ಯಾನವ ಮಾಡಿ ಒಲಿಸುವೆನೆ ಅಯ್ಯಾ ?
ನೀನು ವಾಙ್ಮನಾತೀತನು.

ಜಪಸ್ತೋತ್ರದಿಂದ ಒಲಿಸುವೆನೆ ಅಯ್ಯಾ ?
ನೀನು ಮತಿಗತೀತನು.
ಹೃದಯಕಮಲದಲ್ಲಿಂಬಿಟ್ಟು ಕೊಂಬೆನೆ ಅಯ್ಯಾ ?
ನೀನು ಸರ್ವಾಂಗ ಪರಿಪೂರ್ಣನು !

ಎಂದು ತಾನು ಅನುಭವಿಸಿದ ಶಿವನ ವ್ಯಾಪಕತೆಯನ್ನು ಅನುಭಾವದ ನುಡಿಯಲ್ಲಿ ವ್ಯಕ್ತಗೊಳಿಸಿದ್ದಾಳೆ. ಇನ್ನುಳಿದ ಶರಣರು ಶಿವನ ಈ ಸ್ವರೂಪಕ್ಕೆ ಶೂನ್ಯ, ಸರ್ವಶೂನ್ಯ, ನಿರಾಲಂಬ, ಚಿದ್ಬಯಲು, ಚಿದಾಕಾಶಗಳೆಂದು ಕೊಂಡಾಡಿದ್ದಾರೆ. ಈ ಚಿದ್ಬಯಲಿನ ಅರಿವು ಜಡಬುದ್ಧಿಗಳಿಗೆ ನಿಲುಕದು. ಅದಕ್ಕೆಂದೇ ಶ್ರೀ ದಾಸಿಮಾರ್ಯರು–

''ಆಡಬಾರದ ಬಯಲು, ನೋಡಬಾರದ ಬಯಲು,
ನುಡಿಯಬಾರದ ಬಯಲು, ಹಿಡಿಯಬಾರದ ಬಯಲು,
ಈ ಒಡಲಿಲ್ಲದ ಬಯಲೊಳಗೆ ಅಡಗಿದ್ದ ಭೇದವ
ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ ?''

ಎಂದು ಚಿದಾಕಾಶನಾದ ಪರಮಾತ್ಮನ ಸೂಕ್ಷ್ಮತೆಯನ್ನು ವಿವರಿಸಿದ್ದಾರೆ.

ಜಗದಗಲ, ಮುಗಿಲಗಲವಾಗಿರುವ ಅವನು ನಿರ್ವಿಕಲ್ಪನೂ ಆಗಿರುವನು. ವಿಕಲ್ಪವು ಮನಸ್ಸಿನ ಒಂದು ವೃತ್ತಿಯು. ಮಹರ್ಷಿ ಪತಂಜಲಿಯು ''ಶಬ್ದಜ್ಞಾನಾನುಪಾತಿ ವಸ್ತುಶೂನ್ಯೋ ವಿಕಲ್ಪಃ'' ಎಂದು ಈ ವೃತ್ತಿಯ ಲಕ್ಷಣವನ್ನು ಯೋಗಸೂತ್ರದಲ್ಲಿ ಪ್ರತಿಪಾದಿಸಿದ್ದಾರೆ. ಶಾಬ್ದಿಕ ವ್ಯವಹಾರಕ್ಕೆ ಮಾತ್ರ ಕಾರಣವಾಗಿ ಅಸ್ತಿತ್ವರಹಿತವಾದ ವಸ್ತುವಿಷಯಕ ಮಾನಸಿಕ ವೃತ್ತಿಯೇ ವಿಕಲ್ಪವು. ಬಂಜೆಯ ಮಗ, ಆಕಾಶ ಕುಸುಮ, ಮೊಲದ ಕೋಡು ಮುಂತಾದ ಅಲೀಕ ಪದಾರ್ಥಗಳು ವಿಕಲ್ಪವೃತ್ತಿಯ ವಿಷಯ ಗಳಾಗಿವೆ. ಶಾಸ್ತ್ರಗಳು ಪರಮ್ಮಾತನನ್ನು ವಾಣೀ–ಮನಗಳಿಗೆ ಅಗೋಚರನೆಂದು ಹೇಳಿರು ವುದರಿಂದ, ಆಕಾಶ ಕುಸುಮಾದಿಗಳಂತೆ ಶಿವನ ಅಸ್ತಿತ್ವವಾದರೂ ಅಲ್ಲಗಳೆಯಲ್ಪಟ್ಟೀ– ತೆಂದು ಶ್ರೀ ರೇಣುಕ ಭಗವತ್ಪಾದರು ''ನಿರ್ವಿಕಲ್ಪಃ'' ಅಂದರೆ ವಿಕಲ್ಪಾತ್ಮಕವಾದ ವೃತ್ತಿಗೂ ವಿಷಯನಲ್ಲವೆಂದು ಬೋಧಿಸಿದ್ದಾರೆ.

ಒಂದು ವೇಳೆ ಶಿವನ ಅಸ್ತಿತ್ವವಿದ್ದರೆ ತೋರಬಾರದೇಕೆ ? ಎಂಬ ಶಂಕೆ ಬಂದಾಗ ''ನಿರಾಕಾರಃ'' ಎಂದಿದ್ದಾರೆ. ಅವಯವವುಳ್ಳದ್ದು ಸಾಕಾರವೆನಿಸುವುದು. ಅವಯ ಗಳಾದರೋ ಜನ್ಯಪದಾರ್ಥಗಳಿಗಿರುವವು. ಶಿವನು ಅನಾದಿ, ಅನಂತನಾದಕಾರಣ ಅವನಿಗೆ ಜನನವಿಲ್ಲ, ಅಂತೆಯೇ ನಿರವಯವನೂ ನಿರಾಕಾರನೂ ಆಗಿರುವನು. ಆಕಾರವಿಲ್ಲದಿದ್ದರೂ ಅವನ ಚೆಲುವು ಅಸೀಮವಾದುದು. ಆದ್ದರಿಂದಲೇ ಅಕ್ಕನು ''ಸಾವಿಲ್ಲದ ಕೇಡಿಲ್ಲದ, ರೂಪಿಲ್ಲದ ಚೆಲುವಂಗಾನೊಲಿದೆನವ್ವಾ'' ಹೀಗೆ ನಿರಾಕಾರದ ಸೌಂದರ್ಯವನ್ನು ಮೆಚ್ಚಿಕೊಂಡಿದ್ದಾಳೆ. ರೂಪಿನ ಚೆಲುವು ಚರ್ಮಚಕ್ಷುವಿಗೆ ವೇದ್ಯ ವಾದರೆ ರೂಪಿಲ್ಲದ ಚೆಲುವು ಅರುವಿನ ನೇತ್ರಕ್ಕೆ ಗೋಚರ. ಕ್ಷಣಿಕವಾದ ರಕ್ತಮಾಂಸಾದಿ ಗಳಿಂದೊಡಗೂಡಿದ ದೇಹದ ಸೌಂದರ್ಯಕ್ಕೆ ಮಾರುಹೋಗುವ ಮರುಳು ಮಾನವರಿಗೆ ಒಮ್ಮೆಯಾದರೂ ಭಗವಂತನ ಸೌಂದರ್ಯದ ಅರಿವಾದರೆ ಅವರೆಂದೂ ಸಂಸಾರದತ್ತ ಹೊರಳಿ ನೋಡಲಾರರು.

ಒಮ್ಮೆ ಶ್ರೀ ರಾಮಾನುಜಾಚಾರ್ಯರು ಕಾವೇರಿಯಲ್ಲಿ ಮಿಂದು ಮಡಿ ನೀರನ್ನು ಕಮಂಡಲದಲ್ಲಿ ತುಂಬಿಕೊಂಡು ಅರಳಿದ ಕಮಲಗಳನ್ನು ಒಂದು ಬುಟ್ಟಿಯಲ್ಲಿ ಇಟ್ಟು ಕೊಂಡು ಶ್ರೀ ರಂಗನಾಥಸ್ವಾಮಿಯ ಮಧ್ಯಾಹ್ನದ ಪೂಜೆಗೆಂದು ಹೊರಟಾಗ ನದಿಯ ಉಸುಕಿನ ಪ್ರದೇಶದಲ್ಲಿ ವಿಚಿತ್ರವಾದ ಘಟನೆಯೊಂದನ್ನು ಕಂಡರು. ಒಬ್ಬ ತರುಣನಾದ ಬೇಡನು ಅದೇ ಆಗ ಲಗ್ನವಾದ ಬಹು ಸುಂದರಳಾದ ಹೆಂಡತಿಯನ್ನು ಕರೆದುಕೊಂಡು ನದಿಯನ್ನು ದಾಟಿ ಉಸುಕಿನ ಪ್ರದೇಶದಲ್ಲಿ ಬಂದಾಗ, ಮಧ್ಯಾಹ್ನದ ಬಿಸಿಲಿನಿಂದ ಕಾಯ್ದ ಉಸುಕಿನಲ್ಲಿ ಕೋಮಲಗಳಾದ ತನ್ನ ಹೆಂಡತಿಯ ಪಾದಗಳು ಸುಡಬಾರದೆಂದು ತನ್ನ ತಲೆಯಮೇಲೆ ಹೊತ್ತ ಬುಟ್ಟಿಯಿಂದ ಒಂದೊಂದು ಕಮಲಗಳನ್ನಿಡುತ್ತ ಆತ ಮುಂದೆ ಹೋಗುತ್ತಿದ್ದ. ಅವನ ಹೆಂಡತಿಯು ಆ ಕಮಲಗಳ ಮೇಲೆ ತನ್ನ ಕಾಲುಗಳನ್ನಿಡುತ್ತ ಮುನ್ನಡೆಯುತ್ತಿದ್ದಳು. ಈ ದೃಶ್ಯವನ್ನು ಕಣ್ಣಾರೆ ಕಂಡ ಶ್ರೀ ರಾಮಾನುಜಾಚಾರ್ಯರ ಹೃದಯವು ಗದಗದನೆ ನಡುಗಿತು. ''ಅಬ್ಬಾ ! ಇದೆಂತಹ ಮೋಹ ! ಭಗವಂತನ ಮಸ್ತಕವನ್ನೇರುವ ಈ ಸುಂದರ ಸುಕೋಮಲ ಪುಷ್ಪಗಳನ್ನು ಹೆಂಡತಿಯ ಕಾಲುಕೆಳಗೆ ಹಾಕಿ ತುಳಿಸುತ್ತ ಹೊರಟಿರುವನಲ್ಲ! ಆದ್ದರಿಂದಲೇ ಜ್ಞಾನಿಗಳು– ''ಅವರವರಿಗೆ ಅವರವರ ಮನವೊಲಿದುದೇ ಬ್ರಹ್ಮ; ಬಲಿದ ಲೌಕಿಕನಿಗೆ ಸತೀ–ಪುತ್ರಾದಿಗಳೇ ಬ್ರಹ್ಮ'' ಎಂದು ಹೇಳಿದ್ದಾರೆಂದು ಮನದಲ್ಲಿಯೇ ವಿಚಾರಿಸಿ, ತಡೆಯದಾಗದೇ ಬೇಡನ ಸಮೀಪಕ್ಕೆ ಹೋಗಿ, ''ಅಯ್ಯಾ ! ಇದೇನು ಅಕಾರ್ಯವನ್ನು ಮಾಡುತ್ತಿರುವೆ ? ಭಗವಂತನ ಮಸ್ತಕದ ಮೇಲೆ ಏರಿಸುವ ಪುಷ್ಪಗಳನ್ನು ಹೆಂಡತಿಯ ಕಾಲ ಕೆಳಗೆ ಹಾಕಿ ತುಳಿಸುವೆಯಲ್ಲಾ? '' ಎಂದಾಗ.

ಬೇಡ : ಸ್ವಾಮಿ ! ಕಲ್ಲು–ಕಟ್ಟಿಗೆಗಳಿಂದ ನಾವೇ ನಿರ್ಮಿಸಿದ ನಿರ್ಜೀವಿಗಳಾದ, ದೇವರೆಂದು ಹೆಸರಿಟ್ಟ, ಆ ಜಡವಸ್ತುಗಳ ಮೇಲೆ ಈ ಅರಳಿದ ಪುಷ್ಪಗಳನ್ನೇರಿಸು–ವದಕ್ಕಿಂತ ಸೌಂದರ್ಯವೇ ಸಾಕಾರವಾಗಿ ಬಂದಂತಿರುವ ಸಜೀವವಾದ ಈ ಪ್ರೇಮದೇವತೆಯ ಪಾದಾರವಿಂದಕ್ಕರ್ಪಿಸುವುದು ಶ್ರೇಷ್ಠವಲ್ಲವೆ ?

ಆಚಾರ್ಯರು : ಅಯ್ಯಾ ! ಮಂತ್ರಸಂಸ್ಕಾರಗಳಿಂದ ಪ್ರಾಣ ಪ್ರತಿಷ್ಠಾಪನೆ ಮಾಡಿದ ದೇವತಾ ವಿಗ್ರಹಗಳಿಗೆ ಜಡಗಳೆಂತಲೂ, ನಿರ್ಜೀವಗಳೆಂತಲೂ ತಿರಸ್ಕರಿಸಿ ನುಡಿಯಬಾರದು. ನೋಡಲು ವಿಗ್ರಹಗಳು ಜಡವಾಗಿ ತೋರಿದರೂ, ತಿಲದ ಮರೆಯ ತೈಲದಂತೆ, ನೆಲದ ಮರೆಯ ನಿಧಾನದಂತೆ, ಅಪಾರ ರೂಪರಾಶಿಯಾದ ಅವ್ಯಕ್ತಶಕ್ತಿಯು ಅವುಗಳಲ್ಲಿ ಅಡಗಿರುತ್ತದೆ.

ಬೇಡ : ಸ್ವಾಮೀ ! ಕಾಣುವ ಸೌಂದರ್ಯವನ್ನು ಬಿಟ್ಟು, ಕಾಣದ ಸೌಂದರ್ಯವನ್ನರಸುವುದೇಕೆ ?

ಆಚಾರ್ಯರು : ಅಯ್ಯಾ ! ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುಬಿನ ತಡಿಕೆಯಾದ ಈ ದೇಹಸೌಂದರ್ಯ ಶಾಶ್ವತವಾದದ್ದಲ್ಲ ; ಆದರೆ ಭಾವಗಮ್ಯವಾದ ಭಗವಂತನ ಸೌಂದರ್ಯ ಆದೆಂದಿಗೂ ನಶಿಸದು.

ಬೇಡ : ಸ್ವಾಮಿ ! ಆ ನಿಮ್ಮ ಭಗವಂತನ ಸೌಂದರ್ಯ ನನ್ನ ಹೆಂಡತಿಯ ದೇಹಸೌಂದರ್ಯದಷ್ಟು ಆಕರ್ಷಣೀಯವಾಗಿದೆಯಾ ?

ಆಚಾರ್ಯರು : ಅಯ್ಯಾ ! ಸೌಂದರ್ಯಾರಾಧಕನಾದ ನೀನು ಒಮ್ಮೆ ಭಗವಂತನ ಸೌಂದರ್ಯವನ್ನು ನೋಡಿದೆಯಾದರೆ ಸೂರ್ಯಪ್ರಕಾಶದ ಮುಂದೆ ಚಂದ್ರನ ಬೆಳಕು ಕಳೆಗುಂದುವಂತೆ ನಿನ್ನ ಈ ಹೆಂಡತಿಯ ಸೌಂದರ್ಯ ತಿರಸ್ಕೃತವಾಗುತ್ತದೆ.

ಬೇಡ : ಸ್ವಾಮಿ ! ಅದನ್ನು ತಾವು ನನಗೆ ತೋರಿಸುವಿರಾ ?

ಆಚಾರ್ಯರು : ನೀನು ನನ್ನ ಜೊತೆ ರಂಗನಾಥನ ಮಂದಿರಕ್ಕೆ ಬಂದರೆ ತೋರಿಸ ಬಹುದು.

ಈ ಸಂಭಾಷಣೆಯ ನಂತರ ತಮ್ಮ ಜೊತೆಗೆ ಬಂದ ಬೇಡನನ್ನು ಆಚಾರ್ಯರು ಮಂದಿರಕ್ಕೆ ಕರೆದೊಯ್ದು ಭಗವಂತನನ್ನು ಅನನ್ಯವಾಗಿ ಪ್ರಾರ್ಥಿಸಿ, ಹೇ ಭಗವನ್ ! ಈ ಬೇಡನಿಗೆ ನಿನ್ನ ಅಪಾರ ರೂಪರಾಶಿಯನ್ನು ತೋರಿಸಿ, ಇವನಲ್ಲಿಯ ನಶ್ವರ ಸೌಂದರ್ಯದ ವ್ಯಾಮೋಹವನ್ನು ನಾಶಗೊಳಿಸೆಂದು ವಿನಂತಿಸಿಕೊಂಡಾಗ, ಆಚಾರ್ಯರ ಭಕ್ತಿಗೆ ಮೆಚ್ಚಿದ ಭಗವಂತನು ತನ್ನ ದಿವ್ಯ ಸ್ವರೂಪವನ್ನು ಬೇಡನಿಗೆ ತೋರಿಸಲು, ಆ ರೂಪರಾಶಿಯಲ್ಲಿ ತಲ್ಲೀನನಾದ ಅವನು, ಹೆಂಡತಿಯನ್ನಷ್ಟೇ ಅಲ್ಲ, ತನ್ನನ್ನೇ ತಾನು ಮರೆತು ಹೋದನು. ಕೊನೆಗೆ ಆ ಬೇಡನು ತನ್ನ ಆಯುಷ್ಯದವರೆಗೆ ದೇವರ ಸೇವೆಯಲ್ಲಿದ್ದು ಅಂತ್ಯಕಾಲದಲ್ಲಿ ದೇವರ ಸಾನ್ನಿಧ್ಯವನ್ನು ಪಡೆದನು. ಅಂದಿನಿಂದ ಇಂದಿನವರೆಗೆ ಆ ಬೇಡನ ಸವಿನೆನಪಿಗಾಗಿ ಶ್ರೀರಂಗಂ ದೇವಸ್ಥಾನದಲ್ಲಿ ಭಗವಂತನ ಶೋಭಾಯಾತ್ರೆಯು ಹೊರಟಾಗ ಬೇಡನ ಮೂರ್ತಿಯನ್ನೂ ಮುಂದೆ ಮುಂದೆ ಮೆರೆಸುವುದುಂಟು.

ದೇವರ ಸಾಕಾರ ಸೌಂದರ್ಯವೇ ಅಪ್ರತಿಮವಾಗಿರುವಾಗ, ನಿರಾಕಾರದ ಸೌಂದರ್ಯದ ಬಗ್ಗೆ ಹೇಳುವುದೇನಿದೆ ? ಇದು ಕಾರಣ, ಮನುಷ್ಯನು ಕ್ರಮವಾಗಿ ಪ್ರಾಪಂಚಿಕ ಸೌಂದರ್ಯವನ್ನು ತ್ಯಜಿಸಿ, ಭಗವಂತನ ಸಾಕಾರಮೂರ್ತಿಗೆ ಮಾರು ಹೋಗಬೇಕು. ಮುಂದೆ ಸಾಧನೆ ಬೆಳೆದಂತೆ ದೇವರ ಸಾಕಾರ ಸ್ವರೂಪವನ್ನುಳಿದು ನಿರಾಕಾರದಲ್ಲಿ ಮನವ ಲಯಗೊಳಿಸಬೇಕು.

ಪರಶಿವನು ನಿರಾಕಾರನಾದಂತೆ ನಿರ್ಗುಣನೂ ಆಗಿರುವನು. ಆದ್ದರಿಂದಲೇ ಶ್ರೀ ಭಗವತ್ಪಾದರು ''ನಿರ್ಗುಣಃ'' ಎಂದಿದ್ದಾರೆ. ಸತ್ತ್ವ, ರಜಸ್, ತಮಸ್‌ಗಳೆಂದು ಪ್ರಾಕೃತಿಕ ಗುಣಗಳು ಲೋಕಪ್ರಸಿದ್ಧಗಳಾಗಿವೆ. ಸುಖವನ್ನುಂಟು ಮಾಡಿ ಸತ್ತ್ವ ಗುಣವು, ಕ್ರಿಯಾಸಕ್ತಿಯನ್ನು ಹುಟ್ಟಿಸಿ ರಜೋಗುಣವು ಮತ್ತು ನಿದ್ರಾ-ಆಲಸ್ಯಗಳ ಮುಖಾಂತರ ವಾಗಿ ತಮೋಗುಣವು ಹೀಗೆ ಈ ಮೂರು ಗುಣಗಳು ಜೀವಿಗಳನ್ನು ಬಂಧಿಸುತ್ತವೆ.

ಸತ್ತ್ವಂ ರಜಸ್ತಮ ಗುಣಾಃ ಪ್ರಕೃತಿಸಂಭವಾಃ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯವಮ್ ॥

(ಗೀತಾ ೧೪-೫)

ಗೀತೆಯ ಈ ಸಂದೇಶವಾದರೂ ಅದನ್ನೇ ಉಪದೇಶಿಸುತ್ತಿದೆ. ಶಿವನು ಸದಾ ಮುಕ್ತನಾದ್ದರಿಂದ ಅವನಿಗೆ ಈ ಗುಣಗಳ ಸಂಬಂಧವಿಲ್ಲ, ಅಂತೆಯೇ ನಿರ್ಗುಣನೆನಿಸಿದ್ದಾನೆ.

ಹೀಗೆ ನಿರಾಕಾರ ನಿರ್ಗುಣನಾದ್ದರಿಂದಲೇ ನಿಷ್ಪ್ರಪಂಚಕನೂ ಹೌದು. ಪಿಂಡಾಂಡ, ಬ್ರಹ್ಮಾಂಡರೂಪವಾದ ವ್ಯಷ್ಟಿ ಸಮಷ್ಟಿ ಪ್ರಪಂಚವು ನಾಮರೂಪದಲ್ಲಿ ರೂಪಗೊಳ್ಳುವ ಮುನ್ನ ಶಿವನು ತಾನೇ ತಾನಾಗಿರುತ್ತಾನೆ. ಇದೇ ನಿಷ್ಪ್ರಪಂಚ ಸ್ಥಿತಿಯು. ಇದನ್ನೇ ಅಂಬಿಗರ ಚೌಡಯ್ಯನ ಅನುಭಾವದ ನುಡಿಯಲ್ಲಿ ಕೇಳುವದಾದರೆ–

''ಅಸುರ ಮಾಲೆಗಳಿಲ್ಲ, ತ್ರಿಶೂಲಡಮರುಗವಿಲ್ಲ,
ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ,
ವೃಷಭವಾಹನವಿಲ್ಲ, ಋಷಿಯ ಮಗಳೊಡನಿರ್ದಾತನಲ್ಲ,
ಎಸಗುವ ಸಂಸಾರದ ಕುರುಹಿಲ್ಲದಾತಂಗೆ
ಹೆಸರಾವುದೆಂದ ನಮ್ಮ ಅಂಬಿಗರ ಚೌಡಯ್ಯ''

ಸೃಷ್ಟಿಯ ಪೂರ್ಣ ವಿಕಸಿತರೂಪಕ್ಕೆ ಪ್ರಪಂಚವೆನ್ನುವರು. ಅದು ವಿಕಸಿತವಾಗದ ಮೊದಲಿನ ಶಿವನ ಸ್ಥಿತಿಯೇ ನಿಷ್ಪ್ರಪಂಚ ಸ್ಥಿತಿಯು.

''ಏನೊಂದು ತೋರದಜ್ಞಾನವಲ್ಲದ ಸಚ್ಚಿ। ದಾನಂದಾದ್ವಯನಿತ್ಯ
ಪರಿಪೂರ್ಣ ॥ ಮಾನವಿದೂರನಕಲ್ಪಿತನವಿಕೃತಿ। ತಾನೇಕನಚಲನಾ
ಪರಮಾತ್ಮ'' (ಪರ. ಬೋ. ೧–೫–೧)

ಹೀಗೆ ಪರಮಾನುಭವ ಬೋಧೆಯಲ್ಲಿ ಶ್ರೀ ಮನ್ನಿಜಗುಣರು, ಶ್ರೀ ರೇಣುಕ ಭಗವತ್ಪಾದರಿಂದುಕ್ತವಾದ ಪರಶಿವ ಸ್ವರೂಪವನ್ನೇ, ನಿಜಾನುಭವದ ನುಡಿಯಲ್ಲಿ ಶಾಸ್ತ್ರೀಯವಾಗಿ ವಿವೇಚಿಸಿದ್ದಾರೆ.

ಸಕ್ಕರೆಯ ಮಧುರತೆಯು ಸರ್ವರಿಗೂ ಒಂದೇ ತೆರನಾಗಿ ಅನುಭವವಾಗುವಂತೆ, ಪರಮ–ತತ್ತ್ವದ ಅನುಭವವು ಎಲ್ಲ ಜ್ಞಾನಿಗಳಿಗೂ ಒಂದೇ ರೂಪವಾಗಿರುತ್ತದೆ. ಏಕರೂಪವಾದ ಮೇಘಜಲವು ಭೂಮಿಗೆ ಬಿದ್ದನಂತರ ವಿಭಿನ್ನ ನಾಮಗಳಿಂದ ಹೊಳೆ–ಹಳ್ಳಗಳಾಗಿ ಹರಿಯುವಂತೆ, ಏಕರೂಪವಾದ ಪರಮತತ್ತ್ವದ ಕಾರ್ಯವಾದ ಈ ಪ್ರಪಂಚದ ನಿರೂಪಣೆಯು ಭಿನ್ನ–ಭಿನ್ನವಾದ್ದರಿಂದ ಭಾರತೀಯ ದರ್ಶನಗಳು ವಿಭಿನ್ನಗಳಾಗಿವೆ.

ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವನಾಮಕಃ।
ದೇವತಿರ್ಯಙ್ಮನುಷ್ಯಾದಿಜಾತಿಭೇದೇ ವ್ಯವಸ್ಥಿತಃ।
ಮಾಯೀ ಮಾಹೇಶ್ವರಸ್ತೇಷಾಂ ಪ್ರೇರಕೋ ಹೃದಿ ಸಂಸ್ಥಿತಃ ॥
ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥಾಽನಲಃ।
ಬೀಜೇ ಯಥಾಽಂಕುರಃ ಸಿದ್ಧಃ ತಥಾಽತ್ಮನಿ ಶಿವಃ ಸ್ಥಿತಃ ॥ (ಸಿ. ಶಿ. ೫ ೩೪–೩೫)

ಜಗತ್ತಿನಲ್ಲಿ ಒಂಟಿಗನಾಗಿ ಬಹುಕಾಲದವರೆಗೆ ಸುಮ್ಮನೇ ಕುಳಿತು ಕಾಲಕಳೆಯುವುದು ಬಹು ಕಠಿಣವಾದ ಕೆಲಸ. ಆದ್ದರಿಂದಲೇ ''ಏಕಾಕೀ ನೈವರಮತೇ'' ಎಂದಿದೆ ಶ್ರುತಿಯು. ವಿಮರ್ಶ ಶಕ್ತಿಯಿಂದೊಡಗೂಡಿದ ಪರಶಿವನು ಅನಂತ ಕಾಲದವರೆಗೆ ತಾನೊರ್ವನೇ

ಇದ್ದು ಬೇಸರಿಸಿ ತಾನೇ ಪೂಜ್ಯನೂ, ಪೂಜಕನೂ ಆಗಬೇಕೆಂದೆನಿಸಿ ''ಏಕೋಽಹಂ ಬಹುಸ್ಯಾಂ ಪ್ರಜಾಯೇಯ'' (ಬೃ. ಉ. ೧–೨–೫) ಎಂದು ಸಂಕಲ್ಪ ಮಾಡಿದೊಡನೆ ಪರಶಿವನಲ್ಲಿ ಅವಿನಾಭಾವಸಂಬಂಧಿನಿಯಾದ ವಿಮರ್ಶ ಶಕ್ತಿಯು ತನ್ನ ಅಂಶಗಳಾದ ಅನಂತ ಅವಿದ್ಯಾ ಶಕ್ತಿಗಳನ್ನು ಪ್ರಕಟಗೊಳಿಸುವುದು. ಈ ಅನಾದಿ ಅವಿದ್ಯಾ ಶಕ್ತಿಯೊಡನೆ ಸಂಬಂಧವಾದ ಪರಶಿವನ ಅಂಶವೇ ಜೀವಾತ್ಮನೆನಿಸುತ್ತಾನೆ. ''ಅಂಶತ್ವಂ ನಾಮ ಅನಾವಿಷ್ಕೃತ–ಅಖಿಲಶಕ್ತಿಮತ್ತ್ವಮ್'' ಎಂಬ ಪ್ರಮಾಣದಂತೆ ಪರಿಪೂರ್ಣ ವಸ್ತುವಿನ ಶಕ್ತಿಗಳ ಸಂಕುಚಿತ ಸ್ವರೂಪವೇ ಅಂಶವು. ಅಂತೆಯೇ ಶಿವನ ಸ್ವಾಭಾವಿಕಗಳಾದ ಸರ್ವಜ್ಞತ್ವ, ಸರ್ವಕರ್ತೃತ್ವ, ಪರಿಪೂರ್ಣತ್ವ, ನಿತ್ಯತ್ವ ಮತ್ತು ವ್ಯಾಪಕತ್ವ ಧರ್ಮಗಳು ಅನಾದ್ಯವಿದ್ಯೆಯ ಸಂಬಂಧವಾದಾಗ ಸಂಕುಚಿತಗಳಾಗಿ ಅಲ್ಪಜ್ಞತ್ವ, ಅಪರಿಪೂರ್ಣತ್ವ, ಅನಿತ್ಯತ್ವ ಮತ್ತು ಅವ್ಯಾಪಕತ್ವಗಳಾಗಿ ಪರಿಣಮಿಸುತ್ತವೆ. ಆದ್ದರಿಂದ ಶಿವಾಂಶನಾದ ಜೀವನು ಅಲ್ಪಜ್ಞ ಅಲ್ಪಕರ್ತೃತ್ವ, ಹಾಗೂ ಅಲ್ಪಕರ್ತನೆಂಬುದಾಗಿ ಕರೆಯಿಸಿಕೊಳ್ಳುವನು.

ಜೀವಾತ್ಮನ ಈ ಸಂಕುಚಿತ ಶಕ್ತಿಗಳೇ ವೀರಶೈವ ಸಿದ್ಧಾಂತದಲ್ಲಿ ಕಲಾ, ವಿದ್ಯಾ, ರಾಗ, ಕಾಲ ಮತ್ತು ನಿಯತಿಗಳೆಂಬ ಹೆಸರಿನಲ್ಲಿ ಪಂಚಕಂಚುಕಗಳೆಂದು ಪ್ರಸಿದ್ಧಗಳಾಗಿವೆ. ಜೀವಾತ್ಮನು ಪರಶಿವನ ಅಂಶವೆಂಬುದು ''ಅಂಶೋ ನಾನಾವ್ಯಪದೇಶಾತ್'' (ಬ್ರ. ಸೂ. ೨–೩–೪೩) ''ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ'' (ಗೀತಾ, ೧೫–೭) ಎಂದು ಬ್ರಹ್ಮಸೂತ್ರ, ಭಗವದ್ಗೀತಾದಿಗಳಲ್ಲಿಯೂ ಸಮರ್ಥಿಸಲ್ಪಟ್ಟಿದೆ.

ವಿಮರ್ಶಶಕ್ತಿಯ ಅಂಶಗಳಾದ ಅವಿದ್ಯೆಗಳು ಅನಂತಗಳಾದ ಕಾರಣ ಪರಶಿವಾಂಶರಾದ ಜೀವಾತ್ಮರಾದರೂ ಅನಂತರಾಗಿದ್ದಾರೆ. ''ಆತ್ಮಾ ವೈ ಜಾಯತೇ ಪುತ್ರಃ'' ಎನ್ನುವ ಪ್ರಮಾಣದಂತೆ, ಗಂಡನೇ ಹೆಂಡತಿಯ ಸಂಪರ್ಕದಿಂದ ಮಗನಾಗಿ ಜನಿಸುತ್ತಾನೆಂಬುದು ಲೋಕಾನುಭವ ಸಿದ್ಧವಾಗಿದೆ. ಮಗನ ಉತ್ಪತ್ತಿಗೆ ಮಾಧ್ಯಮಳಾದ ತಾಯಿಯು, ಮಗುವಿಗೆ ತಂದೆಯ ಜ್ಞಾನಮಾಡಿಕೊಡಲೂ ಹೇಗೆ ಕಾರಣಳಾಗಿದ್ದಾಳೆಯೋ, ಅದರಂತೆ ವಿಮರ್ಶ ಶಕ್ತಿಯು ಅವಿದ್ಯಾಶಕ್ತಿಯ ರೂಪತಾಳಿ ಪರಮಾತ್ಮನನ್ನು ಜೀವಾತ್ಮನನ್ನಾಗಿ ಮಾಡುವಳು. ಪುನಃ ಅವಳೇ ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಹಾಗೂ ಸಮರಸವೆಂಬ ಕ್ರಮಿಕ–ವಿಕಸಿತಗಳಾದ ಭಕ್ತಿಯ ರೂಪಗಳನ್ನು ತಾಳಿ ಜೀವಾತ್ಮನನ್ನು ಪರಮಾತ್ಮರೂಪದಲ್ಲಿ ಅಭೇದ ಮಾಡಿ ಮುಕ್ತಿಯನ್ನೈದಿಸುತ್ತಾಳೆ. ಆದ್ದರಿಂದಲೇ ಶ್ರೀ ಮಾಯಿ ದೇವರು–

''ತಸ್ಮಾತ್ ಸವಾಸನಾ ಶಕ್ತಿರ್ಭಕ್ತಿರ್ನಿರ್ವಾಸನಾ ಮತಾ''
''ಶಕ್ತಿಃ ಪ್ರವೃತ್ತಿರಾಖ್ಯಾತಾ ನಿವೃತ್ತಿರ್ಭಕ್ತಿರೀರಿತಾ''
''ಅಧೋ ಮುಖೀ ಭವೇಚ್ಛಕ್ತಿರ್ಭಕ್ತಿರೂರ್ಧ್ವಮುಖೀ ಭವೇತ್''

ಮುಂತಾಗಿ ಅನುಭವಸೂತ್ರದ ಎರಡನೇ ಅಧಿಕರಣದಲ್ಲಿ ಶಕ್ತಿಯು ಸವಾಸನಳೆಂದೂ, ಭಕ್ತಿಯು ವಾಸನಾರಹಿತವೆಂದೂ, ಶಕ್ತಿಯು ಪ್ರವೃತ್ತಿಪರಳೆಂದೂ, ಭಕ್ತಿಯು ನಿವೃತ್ತಿ

ಪರವೆಂದೂ, ಶಕ್ತಿಯು ಅಧೋಮುಖವಾದದ್ದೆಂದೂ, ಭಕ್ತಿಯು ಊರ್ಧ್ವಮುಖ ವಾದದ್ದೆಂದೂ ಹೀಗೆ–ಭಕ್ತಿ–ಶಕ್ತಿಗಳ ಸ್ವರೂಪವನ್ನು ವಿವೇಚಿಸಿ, ಭಕ್ತಿರೂಪವನ್ನು ತಾಳಿದ ಶಕ್ತಿಯು ಜೀವಾತ್ಮನನ್ನು ಮುಕ್ತಿಪಥದತ್ತ ಕರೆದೊಯ್ಯುತ್ತಾಳೆಂದು ಬಹುಸ್ವಾರಸ್ಯವಾಗಿ ಪ್ರತಿಪಾದಿಸಿದ್ದಾರೆ.

ಇಂತು ಜೀವನ ಜನನಕ್ಕೆ ಕಾರಣಳಾದ ಶಕ್ತಿಯು ತಾಯಿಯಂತೆ ಪುನಃ ಆತನ ಉನ್ನತಿಗೂ ಕಾರಣಳಾಗಿದ್ದಾಳೆಂದು ವೀರಶೈವ ಸಿದ್ಧಾಂತದಲ್ಲಿ ಅಂಗೀಕೃತವಾದ ಶಕ್ತಿಯ ವೈಶಿಷ್ಟ್ಯವಾಗಿದೆ. ಪರಶಿವಾಂಶರಾದ ಜೀವಾತ್ಮರು ಪ್ರತಿಯೊಂದು ಶರೀರದಲ್ಲಿ ಒಬ್ಬೊಬ್ಬರಂತೆ ಭಿನ್ನ–ಭಿನ್ನರಾಗಿದ್ದಾರೆ. ಅಂತೆಯೇ ಎಷ್ಟು ಶರೀರಗಳೋ ಅಷ್ಟು ಜೀವಾತ್ಮರು.

ಶಾಸ್ತ್ರಕಾರರು ಶರೀರಗಳನ್ನು ೮೪ ಲಕ್ಷ ಪ್ರಕಾರವಾಗಿ ವರ್ಣಿಸಿರುವರು. ಸ್ಕಾಂದ ಪುರಾಣದಲ್ಲಿ–

ದೇವಾಃ ಷೋಡಶಲಕ್ಷಾಣಿ ನವಲಕ್ಷಾಣಿ ಮಾನುಷಾಃ ।
ದಶಭಿರ್ದಶಭಿಸ್ತ್ವಜ್ಜಲಜಾ ವಿಹಗಾ ಮೃಗಾಃ ॥
ಸರೀಸೃಪಾಸ್ತು ಲಕ್ಷಾಣಿ ಏಕಾದಶ ಚರೇತರಾ ಃ ।
ಅಷ್ಟೌ ಚ ದಶಲಕ್ಷಾಣಿ ಸಪ್ತ ಜನ್ಮಾನ್ಯಮೂನಿ ವೈ ॥

ದೇವತೆಗಳಲ್ಲಿ ೧೬ ಲಕ್ಷ, ಮಾನವರಲ್ಲಿ ೯ ಲಕ್ಷ, ನೀರಿನಲ್ಲಿರುವ ಪ್ರಾಣಿಗಳಲ್ಲಿ ೧೦ ಲಕ್ಷ, ಪಕ್ಷಿಗಳಲ್ಲಿ ೧೦ ಲಕ್ಷ, ಚತುಷ್ಪಾದ ಪಶುಗಳಲ್ಲಿ ೧೦ ಲಕ್ಷ, ಸರ್ಪಗಳಲ್ಲಿ ೧೧ ಲಕ್ಷ, ಗಿಡ–ಮರಾದಿ ಸ್ಥಾವರಗಳಲ್ಲಿ ೧೮ ಲಕ್ಷ–ಹೀಗೆ ಒಟ್ಟಿನಲ್ಲಿ ೮೪ ಲಕ್ಷ ಪ್ರಕಾರಗಳಾದ ಶರೀರಗಳು ಪರಿಗಣಿಸಲ್ಪಟ್ಟಿವೆ.

''ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ–
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥'' (ಗೀತಾ. ೨–೨೨)

ಎನ್ನುವ ಗೀತೋಕ್ತಿಯಂತೆ ಶರೀರಗಳೆಂದರೆ ಉಡುವ ಬಟ್ಟೆಗಳಿದ್ದಂತೆ. ಬಹುದಿನಗಳ ಬಳಕೆಯಿಂದ ಜೀರ್ಣ–ಶೀರ್ಣಗಳಾದ ಬಟ್ಟೆಗಳನ್ನು ಬಿಟ್ಟು, ನೂತನ ವಸ್ತ್ರಗಳನ್ನು ಧರಿಸುವಂತೆ, ಜೀವಾತ್ಮನು ತಾನು ಮಾಡಿದ ಕರ್ಮಾನುರೂಪವಾಗಿ ದೇವ, ಮಾನವ, ಪಶು, ಪಕ್ಷಿ ಮುಂತಾದ ಶರೀರಗಳನ್ನು ಧರಿಸಿ ಸಂಚರಿಸುತ್ತಾನೆ.

ಪರಶಿವನ ವಿನೋದಕ್ಕಾಗಿ ಸೃಷ್ಟಿಗೊಂಡ ಜೀವಿಗಳು ಸ್ವಕೃತ ಕರ್ಮಾನುಸಾರ ವಾಗಿ ನಾನಾವಿಧ ಜನ್ಮಗಳನ್ನು ತಾಳುತ್ತ ಭವಾರಣ್ಯದಲ್ಲಿ ಕಷ್ಟಪಡುವುದನ್ನು ಕಂಡು ಕರುಣಾಸಾಗರನಾದ ಶಿವನು ಜೀವಾತ್ಮರ ಹೃದಯಲ್ಲಿ ವಾಸಿಸುವವನಾಗಿ ಸನ್ಮಾರ್ಗದಲ್ಲಿ ಪ್ರೇರಿಸುವನು. ಅದಕ್ಕೋಸ್ಕರವಾಗಿ ಶ್ರೀ ಭಗವತ್ಪಾದರು ''ಮಾಯಾ ಮಹೇಶ್ವರ ಸ್ತೇಷಾಂ ಪ್ರೇರಕೋ ಹೃದಿಸಂಸ್ಥಿತಃ'' ಎಂದು ಉಪದೇಶಿಸಿದ್ದಾರೆ. ಚಂದ್ರಕಾಂತ ಮಣಿಯಲ್ಲಿ ನೀರಡಗಿದಂತೆ, ಸೂರ್ಯಕಾಂತಮಣಿಯಲ್ಲಿ ಅಗ್ನಿ ಅಡಗಿದಂತೆ, ಬೀಜದಲ್ಲಿ

ಮೊಳಕೆಯಡಗಿರುವಂತೆ, ಪ್ರತಿಯೊಬ್ಬನ ಹೃದಯದಲ್ಲಿ ಪರಮಾತ್ಮನು ಪ್ರೇರಕ ರೂಪನಾಗಿ ಅಡಗಿರುವನು.

ಶಿವನು ವ್ಯಾಪಕನು, ಜೀವಾತ್ಮರು ಪರಿಚ್ಛಿನ್ನರು, ವ್ಯಾಪಕವಾದ ಆಕಾಶವು ಘಟ, ಮಠಾದಿ ಎಲ್ಲ ಪರಿಚ್ಛಿನ್ನವಸ್ತುಗಳಲ್ಲಿರುವಂತೆ, ವ್ಯಾಪಕನಾದ ಶಿವನು ಸರ್ವಜೀವಾತ್ಮರ ಹೃದಯಲ್ಲಿ ನೊರೆವಾಲೊಳಗಿನ ತುಪ್ಪವು ಕಂಪಿಲ್ಲದಿರುವಂತೆ ಹುದುಗಿಕೊಂಡಿದ್ದಾನೆ. ಇದೇ ಮಾತನ್ನೇ ಅಣ್ಣನವರು ತಮ್ಮ ಅನುಭವದ ನುಡಿಯಲ್ಲಿ– ''ಕರಿಯು ಕನ್ನಡಿಯೊಳಡಗಿದಂತಯ್ಯಾ ; ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ !'' ಹೀಗೆ ನುಡಿದಿದ್ದಾರೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
(ಗೀತಾ. ೧೮–೬೧)

ಇಂತೆಂದು ಭಗವಂತನಾದರೂ ಗೀತೆಯಲ್ಲಿ ಇದೇ ಮಾತನ್ನೇ ವಿವರಿಸಿದ್ದಾನೆ. ಕಾರು, ಬಸ್ಸು ಮುಂತಾದ ಯಾಂತ್ರಿಕ ವಾಹನಗಳಲ್ಲಿ ಚಾಲಕನು ಕುಳಿತು ಅವುಗಳನ್ನು ನಡೆಸುವಂತೆ ಶರೀರವೆಂಬ ಯಂತ್ರವು ಹೃದಯಸ್ಥಿತನಾದ ಪರಮಾತ್ಮನ ಪ್ರೇರಣೆಯಿಂದಲೇ ಚಲಿಸುವುದು. ಗಾಡಿಯಲ್ಲಿ ಕುಳಿತು ಚಾಲಕನನ್ನು ಆ ಜಡವಾದ ಗಾಡಿಯು ಅರಿಯದಿರುವಂತೆ ದೇಹಾತ್ಮ ಬುದ್ಧಿಯುಳ್ಳ ಈ ಜೀವಾತ್ಮರಾದರೂ ಹೃದಯಸ್ಥನಾದ ಪರಮಾತ್ಮನನ್ನರಿಯರು.

ಮರ–ಮರಗಳ ಮಥನದಿಂದ ಅಗ್ನಿಯು ಪ್ರಾದುರ್ಭವಿಸುವಂತೆ, ಹಾಲನ್ನು ಕಾಯಿಸಿ, ಹೆಪ್ಪಿಟ್ಟು, ಹೊಸೆದು ಬಂದ ಬೆಣ್ಣೆಯನ್ನು ಕಾಯಿಸಿದಾಗ ತುಪ್ಪದ ಕಂಪಿನ ಅರಿವಾಗುವಂತೆ, ಬಾಹ್ಯವೃತ್ತಿಗಳನ್ನೆಲ್ಲ ಅಲ್ಲಗಳೆದು ಅಂತರ್ಮುಖನಾಗಿ ಸಾಧನೆ ಮಾಡಿದಾಗ ಹೃದಯಸ್ಥನಾದ ಶಿವನ ಸಾನ್ನಿಧ್ಯದ ಅರಿವಾಗುವುದು.

''ಪರಾಂಚಿ ಖಾನಿ ವ್ಯತೃಣಸ್ಸ್ವಯಂಭೂ–
ಸ್ತಸ್ಮಾತ್ಪರಾಙ್ಪಶ್ಯತಿ ನಾಂತರಾತ್ಮನ್ ।'' (ಕಠ. ೨–೪–೧)

ಎನ್ನುವ ಶ್ರುತಿವಚನದಂತೆ, ಬ್ರಹ್ಮನು ಜಗತ್ತನ್ನು ಸೃಜಿಸುವಾಗ ಎಲ್ಲಾ ಪ್ರಾಣಿಗಳ ಇಂದ್ರಿಯಗಳನ್ನು ಬಹಿರ್ಮುಖವಾಗಿ ಸೃಜಿಸಿದ್ದಾನೆ. ಅಂತೆಯೇ ಮನುಷ್ಯನ ಪಂಚ ಜ್ಞಾನೇಂದ್ರಿಯಗಳಾಗಲಿ, ಪಂಚಕರ್ಮೇಂದ್ರಿಯಗಳಾಗಲಿ, ಅಂತರಂಗದಲ್ಲಿಯ ಅಂತಃಕರಣವಾಗಲಿ, ಹೊರಗಣ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಮುಂತಾದ ವಿಷಯಗಳ ಸುಖವನ್ನನುಭವಿಸಲು ಹಾತೊರೆಯುತ್ತವೆಯೇ ವಿನಾ, ಅಂತರಂಗದಲ್ಲಡಗಿದ ಪರಮಾತ್ಮ ತತ್ತ್ವವನ್ನರಿಯಲಾರವು. ಆಂತರಿಕ ಪರಮಾತ್ಮ ತತ್ತ್ವವನ್ನನುಭವಿಸಲು ಪರಿಶ್ರಮಿಸಿದ ಶ್ರೀ ಷಣ್ಮುಖಸ್ವಾಮಿಗಳು ಹೀಗೆ ನುಡಿದಿದ್ದಾರೆ–

''ಮನವೆಂಬ ಮರ್ಕಟವು ತನುವೆಂಬ ವೃಕ್ಷವನೇರಿ,
ಇಂದ್ರಿಯಂಗಳೆಂಬ ಶಾಖೆ ಶಾಖೆಗೆ ಹಾರಿ,
ವಿಷಯಂಗಳೆಂಬ ಫಲಂಗಳಂ ಅನುಭವಿಸಿ,

ಭವದತ್ತ ಮುಖವಾಗಿ ಹರಿಯುತ್ತಿದೆ ನೋಡಾ,
ಮನವೆಂಬ ಮರ್ಕಟವ ನಿಮ್ಮ ನೆನಹೆಂಬ ಪಾಶದಲ್ಲಿ ಕಟ್ಟಿ,
ಉಳುಹಿಕೊಳ್ಳಯ್ಯಾ ಅಖಂಡೇಶ್ವರಾ''

ಸಕಲೇಂದ್ರಿಯಗಳ ವ್ಯವಹಾರಕ್ಕೆ ಮನವೇ ಮೂಲಕಾರಣ, ಮನಸ್ಸು ಇಂದ್ರಿಯಗಳ ಅಧ್ಯಕ್ಷನೆನಿಸಿಕೊಂಡಿದೆ. ಮನದ ಸಮಸ್ತ ವ್ಯವಹಾರಕ್ಕೆ ಸಾಕ್ಷಿಯಾದ ಪರಮಾತ್ಮನು ಪ್ರತಿಕ್ಷಣದಲ್ಲಿಯೂ ಯೋಗ್ಯವಿಚಾರಗಳ ಮೂಲಕ ಎಚ್ಚರಗೊಳಿಸುತ್ತಾನೆ. ಸಾಕ್ಷಿಯ ಆ ಅಂತರ್ವಾಣಿಯನ್ನು ಆಲಿಸಿ ಎಚ್ಚರಾಗುವ ಜನ ವಿರಳ. ಬ್ರಾಹ್ಮೀ ಮುಹೂರ್ತದಲ್ಲಿ ಏಳಬೇಕೆಂದು ರಾತ್ರಿ ಅಲಾರಾಮ್ ಗಡಿಯಾರವನ್ನು ಇಟ್ಟು ಮಲಗಿಕೊಂಡಾಗ ಸಮಯಕ್ಕೆ ಸರಿಯಾಗಿ ಗಡಿಯಾರದ ಘಂಟೆ ಬಾರಿಸಿದಾಗ ತತ್‌ಕ್ಷಣದಲ್ಲಿಯೇ ಕೆಲವರು ಎದ್ದು ಕಾರ್ಯಕ್ಕೆ ತೊಡಗಿದರೆ, ಇನ್ನು ಕೆಲವರು ಕೇಳಿಯೂ ಸುಮ್ಮನೆ ಮಲಗುತ್ತಾರೆ. ಮತ್ತೆ ಕೆಲವರಿಗೆ ಗಾಢವಾದ ನಿದ್ರೆಯ ಪರಿಣಾಮವಾಗಿ ಘಂಟೆಯ ಧ್ವನಿಯು ಹೇಗೆ ಕೇಳಿಸುವುದಿಲ್ಲವೋ ಅದರಂತೆ, ಮನುಷ್ಯರು ಅನುಚಿತ ಕಾರ್ಯದಲ್ಲಿ ಪ್ರವೃತ್ತರಾದಾಗ, ಇದು ಯೋಗ್ಯವಲ್ಲವೆಂದು ಹೃದಯದಲ್ಲಿ ಆವಿರ್ಭವಿಸಿದ ಪರಮಾತ್ಮನ ಅಂತರ್ವಾಣಿಯನ್ನು ಕೇಳಿದಾಕ್ಷಣ ತಿಳಿದು ಸುಧಾರಿಸುವವರು ಕೆಲವುರಾದರೆ, ಮತ್ತೆ ಕೆಲವರು ಕೇಳಿಯೂ ಕೇಳದಂತೆ ನೀಚಕಾರ್ಯದಿಂದ ನಿವೃತ್ತರಾಗುವುದಿಲ್ಲ. ಮತ್ತೆ ಕೆಲವರಾದರೋ ಅಜ್ಞಾನಾಂಧಕಾರವೆಂಬ ಗಾಢನಿದ್ರೆಯಲ್ಲಿ ಮುಳುಗಿರುವ ಕಾರಣ ಅವರಿಗೆ ಆ ವಾಣಿಯು ಕೇಳಿಸುವುದೇ ಇಲ್ಲ.

ತಂದೆಯಾದವನು ತಪ್ಪಿ ನಡೆಯುವ ಮಗನಿಗೆ ದಾರಿತೋರಿಸುವಂತೆ, ಜಗತ್ಪಿತನಾದ ಶಿವನು ಪ್ರತಿಯೊಬ್ಬರಿಗೂ ಅಂತರ್ವಾಣಿಯಿಂದ ಹಿತೋಪದೇಶವನ್ನು ಮಾಡುವನು. ಅದು ಹೇಗೆಂದರೆ–ಒಬ್ಬ ಮನುಷ್ಯನು ಜೀವನೋಪಯೋಗಿ ಸಾಮಗ್ರಿಗಳನ್ನು ಖರೀದಿಸುವುದಕ್ಕಾಗಿ ಪೇಟೆಗೆ ಹೋದಾಗ ಅಂಗಡಿಯಲ್ಲಿ ಹತ್ತು ರೂಪಾಯಿಗಳ ಸಾಮಗ್ರಿಗಳನ್ನು ಖರೀದಿಸಿ ಅಂಗಡಿಕಾರನಿಗೆ ಇಪ್ಪತ್ತು ರೂಪಾಯಿಯ ನೋಟನ್ನು ಕೊಟ್ಟನು. ಅಂಗಡಿಕಾರನು ಹತ್ತು ರೂಪಾಯಿಗಳನ್ನು ಮರಳಿ ಕೊಡುವುದನ್ನು ಮರೆತು ವ್ಯಾಪಾರದ ಗಡಿಬಿಡಿಯಲ್ಲಿ ಹದಿನೈದು ರೂಪಾಯಿಗಳನ್ನು ಕೊಡುತ್ತಾನೆ. ಅದನ್ನು ತೆಗೆದುಕೊಂಡವನ ಮನಸ್ಸಿನಲ್ಲಿ ತತ್‌ಕ್ಷಣವೇ ಐದು ರೂಪಾಯಿಗಳು ಹೆಚ್ಚಿಗೆ ಬಂದದ್ದು ತಿಳಿಯುತ್ತದೆಯಲ್ಲದೇ ಅವುಗಳನ್ನು ಮರಳಿ ಕೊಡು ಎಂಬ ಧ್ವನಿಯು ಅಂತರಂಗದಲ್ಲಿ ಮೂಡುತ್ತದೆ. ಅದೇ ಈಶ್ವರನ ವಾಣಿಯು. ಲೋಭಿ ಮನುಷ್ಯನು ಆ ವಾಣಿಯನ್ನು ಕೇಳಿಯೂ ಕೇಳದಂತೆ ತಿರಸ್ಕರಿಸುತ್ತಾನೆ. ಹೀಗೆ ಅನೇಕ ಘಟನೆಗಳು ಘಟಿಸಿದಾಗೆಲ್ಲ ಬರುವ ಈಶ್ವರನ ವಾಣಿಯನ್ನು ಲೆಕ್ಕಿಸದೆ ವ್ಯಕ್ತಿಯು ಪಾಪಿಯಾಗಿ ಅಧೋಗತಿಗೆ ಇಳಿಯುತ್ತಾನೆ. ಆ ವಾಣಿಯನ್ನು ಕೇಳಿ ಜೀವನವನ್ನು ಪರಿಮಾರ್ಜಿಸಿಕೊಂಡವನು ಈಶ್ವರನಂತೆ ಜಗದ್ವಂದ್ಯನಾಗುತ್ತಾನೆ.

ಅಂತರಂಗದಲ್ಲಿ ಒಡಮೂಡಿದ ಅಂತರ್ವಾಣಿಯನ್ನು ನಾವು ಕೇಳಿದ್ದರೆ ಈಗ ಗುರುಗಳಿಂದ ಪುನಃ ಪುರಾಣ ಪುಣ್ಯಕಥೆಗಳನ್ನು ಕೇಳುವ ಅಥವಾ ಸನ್ಮಾರ್ಗಬೋಧಕ

ಪುಸ್ತಕಗಳನ್ನು ಓದುವ ಅವಶ್ಯಕತೆ ಇರಲಿಲ್ಲ. ಅದಕ್ಕೋಸ್ಕರವಾಗಿ ಮನುಷ್ಯನನ್ನು ಸುಧಾರಿಸುವುದಕ್ಕಾಗಿ ಅನೇಕ ಸತ್ಸಂಗಗಳು ನಡೆಯುವವಲ್ಲದೇ ಅನೇಕ ಸದ್ಗ್ರಂಥಗಳ ರಚನೆಗಳೂ ಆಗುತ್ತಿವೆ. ತನ್ನ ಕಲ್ಯಾಣವನ್ನು ಬಯಸುವ ಮನುಷ್ಯನು ಶಿವನ ಅಂತರ್ವಾಣಿಯತ್ತ ಲಕ್ಷ್ಯವಹಿಸುವುದು ಆದ್ಯಕರ್ತವ್ಯವಾಗಿದೆ.

ಜೀವಾತ್ಮನ ಹೃದಯದಲ್ಲಿ ಶಿವನು ವಾಸಿಸಿದರೆ ಜೀವನು ಅನುಭವಿಸುವ ಸುಖ–ದುಃಖಾದಿಗಳು ಈಶ್ವರನಿಗೂ ಆಗಬೇಕಾದೀತಲ್ಲ ? ಎಂಬ ಪ್ರಶ್ನೆಗೆ ಅವಕಾಶ ವಿಲ್ಲ. ಏಕೆಂದರೆ–

''ಜೀವತ್ವಂ ದುಃಖಸರ್ವಸ್ವಂ ತದಿದಂ ಮಲಕಲ್ಪಿತಮ್'' ಎಂದು ಶ್ರೀ ರೇಣುಕ ಭಗವತ್ಪಾದರು ೧೮ ನೇ ಪರಿಚ್ಛೇದದ ಆತ್ಮಸ್ಥಲದಲ್ಲಿ ಜೀವತ್ವ ಮತ್ತು ದುಃಖ ಭೋಕ್ತೃತ್ವಗಳು ಆಣವಾದಿ ಮಲತ್ರಯಗಳ ಕಾರ್ಯಗಳಾದ ಕಾರಣ, ಅವು ಮಲತ್ರಯಾವೃತ ಜೀವಾತ್ಮನಿಗೆ ಸಂಭವಿಸುವವೇ ವಿನಾ ಅವುಗಳ ಲೇಶವೂ ಇಲ್ಲದ ಈಶ್ವರನಿಗೆ ಸಂಭವಿಸಲಾರವು ; ಎಂದು ಅಪ್ಪಣೆಕೊಡಿಸಿರುತ್ತಾರೆ.

ಶಿವನ ಇಚ್ಛಾಶಕ್ತಿಯ ಸಂಕೋಚವೇ ಆಣವಮಲ, ಜ್ಞಾನಶಕ್ತಿಯ ಸಂಕೋಚವೇ ಮಾಯೀಯ ಮಲ ಮತ್ತು ಕ್ರಿಯಾಶಕ್ತಿಯ ಸಂಕೋಚವೇ ಕಾರ್ಮಿಕಮಲಗಳೆನಿಸುವವು. ಆಣವಮಲದ ಆವರಣದಿಂದ ಜೀವಾತ್ಮನು ತನ್ನ ವ್ಯಾಪಕತೆಯನ್ನು ಮರೆತು ಕೇವಲ ಶರೀರವಾಸಿಯಾದ ತನ್ನನ್ನು ಅಲ್ಪನೆಂದು ತಿಳಿದುಕೊಳ್ಳುತ್ತಾನೆ. ಮಾಯೀಯ ಮಲದ ಆವರಣದಿಂದ ತನ್ನ ದೇಹ ಹಾಗೂ ದೇಹಕ್ಕೆ ಸಂಬಂಧಪಟ್ಟ ಸತೀ–ಪುತ್ರಾದಿಗಳಲ್ಲಿ ನಾನು, ನನ್ನದೆಂಬ ಅಭಿಮಾನ ಉಳ್ಳವನಾಗುವನು. ಅದರಂತೆ ಕಾರ್ಮಿಕಮಲದ ಆವರಣದಿಂದ ಕರ್ಮಗಳ ವಾಸನಾನುರೂಪವಾಗಿ ಪುಣ್ಯ–ಪಾಪಗಳನ್ನು ಸಂಪಾದಿ ಸುತ್ತಾನೆ. ಸುಖ–ದುಃಖಗಳು ಪುಣ್ಯ–ಪಾಪಗಳ ಫಲಗಳಾದಕಾರಣ ಕರ್ತೃತ್ವ ಭಾವನೆ ಯಿಂದ ಕರ್ಮಮಾಡಿದ ಜೀವಾತ್ಮನಿಗೆ ಫಲಭೋಗವಾಗುವುದೇ ವಿನಾ ಸಾಕ್ಷಿಯಾದ ಮಲತ್ರಯರಹಿತನಾದ ಶಿವನಿಗೆ ಸುಖ–ದುಃಖಗಳ ಭೋಗವಾಗಲಾರದು. ಆದ್ದರಿಂದ–''ಏತೇಷಾಂ ದೇಹಿನಾಂ ಸಾಕ್ಷೀ ಪ್ರೇರಕಃ ಪರಮೇಶ್ವರಃ'' ಎಂದು ಶ್ರೀ ಭಗವತ್ಪಾದರು ಸಾಕ್ಷಿಯೆಂತಲೂ, ಪ್ರೇರಕನೆಂತಲೂ ಉಪದೇಶಿಸಿದ್ದಾರೆ. ಇದೂ ಅಲ್ಲದೆ–

''ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋऽಭಿಚಾಕಶೀತಿ ॥

(ಶ್ವೇ. ಉ. ೪–೬)

ಎಂದು ಶ್ವೇತಾಶ್ವರೋಪನಿಷತ್ತು–ಒಂದು ಗಿಡದಲ್ಲಿ ಎರಡು ಪಕ್ಷಿಗಳಿವೆ, ಎರಡೂ ಪರಸ್ಪರ ಗೆಳೆಯರಾಗಿವೆ ಅವುಗಳಲ್ಲಿ ಒಂದು ಪಕ್ಷಿಯು ಫಲಗಳನ್ನು ತಿನ್ನುತ್ತಿದೆ. ಮತ್ತೊಂದು ಫಲಗಳನ್ನು ಪ್ರಕಾಶಿಸುತ್ತ ಸಾಕ್ಷಿಯಾಗಿ ಕುಳಿತಿದೆ–ಎಂದು ಜೀವಾತ್ಮ ಪರಮಾತ್ಮರನ್ನು ಪಕ್ಷಿಗಳ ರೂಪದಲ್ಲಿ ವರ್ಣಿಸಿ, ಜೀವನನ್ನು ಭೋಕ್ತೃವನ್ನಾಗಿಯೂ, ಶಿವನನ್ನು ಸಾಕ್ಷಿಯನ್ನಾಗಿಯೂ ನಿರೂಪಿಸಿದೆ.

''ಈಶಕಾರ್ಯಂ ಜೀವಭೋಗ್ಯಂ ಜಗತ್ ದ್ವಾಭ್ಯಾಂ ಸಮನ್ವಿತಮ್ ।
ಪಿತೃಜನ್ಯಾ ಭರ್ತೃಭೋಗ್ಯಾ ಯಥಾ ಯೋಷಿತ್ತಥೇಷ್ಯತಾಮ್ ॥''
(ಪಂಚದಶಿ ೪–೧೮)

ತಂದೆಯಿಂದ ಜನಿಸಿದ ಮಗಳು ಅಳಿಯನಿಗೆ ಭೋಗ್ಯಳೇ ವಿನಾ, ತಂದೆಯಿಂದ ಹೇಗೆ ಭೋಗಿಸಲನರ್ಹಳೋ, ಅದರಂತೆ ಜೀವಾತ್ಮನ ಕರ್ಮಾನುಸಾರವಾಗಿ ಈಶ್ವರನಿಂದ ಸೃಷ್ಟಿಗೊಂಡ ಈ ಪ್ರಪಂಚವು ಜೀವಾತ್ಮರಿಗೆ ಸುಖ–ದುಃಖಗಳ ಭೋಗ ಕೊಡುವುದಲ್ಲದೇ ಈಶ್ವರನಿಗೆ ಕೊಡದು ಎಂದು ಶ್ರೀ ವಿದ್ಯಾರಣ್ಯಸ್ವಾಮಿಗಳು ಪಂಚದಶಿಯಲ್ಲಿ ಲೌಕಿಕ ದೃಷ್ಟಾಂತದಿಂದ ಅದೇ ಮಾತನ್ನೇ ಹೃದಯಂಗಮವಾಗಿ ಹೇಳಿದ್ದಾರೆ. ಆದ್ದರಿಂದ ಜೀವಾತ್ಮರ ಹೃದಯಸ್ಥನಾಗಿ ಪ್ರೇರಕನಾದ ಶಿವನಿಗೆ ಜೀವಾತ್ಮರ ಸುಖ– ದುಃಖಗಳ ಸಂಪರ್ಕವು ತ್ರಿಕಾಲದಲ್ಲಿಯೂ ಇಲ್ಲವೆಂಬುದು ಶಾಸ್ತ್ರಸಮ್ಮತವಾದದ್ದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೭ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)

■■

## ಆಶೀರ್ವಚನ-೪

ಆತ್ಮತ್ವಮೀಶ್ವರತ್ವಂ ಚ ಬ್ರಹ್ಮಣ್ಯೇಕತ್ರ ಕಲ್ಪಿತಮ್ ।
ಬಿಂಬತ್ವಂ ಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಮ್

ಗುಣತ್ರಯವಿಭೇದೇನ ಪರತತ್ತ್ವೇ ಚಿದಾತ್ಮನಿ ।
ಭೋಕ್ತೃತ್ವಂ ಚೈವ ಭೋಜ್ಯತ್ವಂ ಪ್ರೇರಕತ್ವಂಚ ಕಲ್ಪಿತಮ್

ಗುಣತ್ರಯಾತ್ಮಿಕಾ ಶಕ್ತಿಬ್ರರ್ಹ್ಮನಿಷ್ಠಾ ಸನಾತನೀ ।
ತದ್ವೈಷಮ್ಯಾತ್ಸಮುತ್ಪನ್ನಾ ತಸ್ಮಿನ್ವಸ್ತುತ್ರಯಾಭಿಧಾ

ಕಿಂಚಿತ್ಸತ್ತ್ವರಜೋರೂಪಂ ಭೋಕ್ತೃ ಸಂಜ್ಞಕಮುಚ್ಯತೇ ।
ಅತ್ಯಂತತಾಮಸೋಪಾಧಿರ್ಭೋಜ್ಯಮಿತ್ಯಭಿಧೀಯತೇ

ಪರತತ್ತ್ವಮಯೋಪಾಧಿಬ್ರಹ್ಮಚೈತನ್ಯಮೀಶ್ವರಃ ।
ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಮ್

(ಸಿ. ಶಿ. ೫.೩೭–೪೦)

ಜಗತ್ತನ್ನೆಲ್ಲ ಬೆಳಗುವ ಸೂರ್ಯನು ಒಬ್ಬನಾದರೂ ಕನ್ನಡಿಗಳಲ್ಲಿ ಪ್ರತಿಬಿಂಬಿತನಾಗಲು, ಎಷ್ಟು ಕನ್ನಡಿಗಳೋ ಅಷ್ಟು ಪ್ರಕಾರವಾಗಿ ತೋರುತ್ತಾನೆ ; ಹೀಗಿದ್ದರೂ ಆತನ ಏಕತ್ವಕ್ಕೆ ಕುಂದುಬಾರದು. ಅದರಂತೆ ಸರ್ವಜ್ಞತ್ವ, ಸರ್ವಕರ್ತೃತ್ವಾದಿ ಅನೇಕ ಕಲ್ಯಾಣಗುಣ ಗಣಸಮನ್ವಿತನಾದ ಪರಶಿವನು ಸ್ವಕೀಯ ವಿಮರ್ಶ ಶಕ್ತಿಯ ಅಂಶಗಳಾದ ಅನಂತ ಅವಿದ್ಯೆಗಳಲ್ಲಿ ಪ್ರತಿಬಿಂಬಿತನಾಗಿ ಜೀವಾತ್ಮನೆಂದೂ, ಶುದ್ಧ ಸತ್ತ್ವಗುಣ ಪ್ರಧಾನವಾದ ಮಾಯೆಯಲ್ಲಿ ಪ್ರತಿಬಿಂಬಿತನಾಗಿ ಈಶ್ವರನೆಂದೂ, ತೋರಿದರೂ ಇದರಿಂದ ಮೂಲ ತತ್ತ್ವದ ಅಖಂಡತ್ವಕ್ಕೆ ಚ್ಯುತಿಬಾರದು.

ಸೂರ್ಯನಿಗೆ ಜಗತ್ತನ್ನೆಲ್ಲ ಬೆಳಗುವ ಮಹಾಪ್ರಕಾಶವಿದ್ದರೆ ಕನ್ನಡಿಯಲ್ಲಿ ಮೂಡಿದ ಆತನ ಪ್ರತಿಬಿಂಬಕ್ಕೆ ಕೋಣೆಯ ಕತ್ತಲೆಯನ್ನಾದರೂ ಕಳೆಯುವ ಸಾಮರ್ಥ್ಯ ವಿರುವಂತೆ, ಶಿವನಲ್ಲಿ ಸರ್ವಜ್ಞತ್ವಾದಿ ಗುಣಗಳಿದ್ದರೆ ಆತನ ಪ್ರತಿಬಿಂಬವಾದ ಜೀವಾತ್ಮನಲ್ಲಿ ಸಂಕುಚಿತ ಶಕ್ತಿಗಳಾದ ಅಲ್ಪಜ್ಞತ್ವಾದಿಗಳಿರುತ್ತವೆ.

ಬಿಂಬ ಪ್ರತಿಬಿಂಬಗಳಲ್ಲಿ ಅತ್ಯಂತ ಭೇದವಾಗಲಿ, ಅತ್ಯಂತ ಅಭೇದವಾಗಲಿ ಇರುವುದಿಲ್ಲ; ಕಿಂತು ಅವುಗಳಲ್ಲಿ ಭೇದಾಭೇದಗಳನ್ನು ಹೇಳಬೇಕಾಗುವುದು. ವ್ಯಕ್ತಿಯು ಪೂರ್ವಮುಖವಾಗಿದ್ದರೆ, ಅವನ ಪ್ರತಿಬಿಂಬವು ಪಶ್ಚಿಮಮುಖವಾಗಿ ತೋರುವುದು. ಬಿಂಬವು ಹೊರಗೆ ಇದ್ದರೆ, ಪ್ರತಿಬಿಂಬವು ಕನ್ನಡಿಯೊಳಗೆ ತೋರುವುದು. ಹೀಗೆ ಪರಾಙ್ಮುಖತ್ವ, ದರ್ಪಣಸ್ಥಿತತ್ವಾದಿ ಧರ್ಮಗಳಿಂದ ಭೇದ ತೋರಿದರೂ, ಬಿಂಬ–ಪ್ರತಿಬಿಂಬಗಳಲ್ಲಿ ಸಮಾನರೂಪ ಇರುವುದರಿಂದ, ಬಿಂಬವಿಲ್ಲದೇ ಪ್ರತಿಬಿಂಬ ತೋರ

ದಿರುವುದರಿಂದ ಮತ್ತು ಪ್ರತಿಬಿಂಬಕ್ಕೆ ಕಾರಣವಾದ ಕನ್ನಡಿ ಮುಂತಾದ ಉಪಾಧಿಗಳು ನಾಶವಾದಾಗ ಪ್ರತಿಬಿಂಬಕ್ಕೆ ಸ್ವತಂತ್ರಸ್ಥಿತಿ ಇಲ್ಲದಿರುವುದರಿಂದ, ಪ್ರತಿಬಿಂಬವು ಬಿಂಬರೂಪವೆಂದೇ ಅನುಭವಕ್ಕೆ ಬರುವುದು. ಆದ್ದರಿಂದ ಇವೆರಡರಲ್ಲಿ ಭೇದವೂ ಇದೆ ಮತ್ತು ಅಭೇದವೂ ಇದೆ. ಅದರಂತೆ ಜೀವ ಹಾಗೂ ಈಶ್ವರರಲ್ಲಿ ಸಂಸಾರದಶೆಯಲ್ಲಿ ಭೇದವನ್ನೂ, ಮುಕ್ತಾವಸ್ಥೆಯಲ್ಲಿ ಅಭೇದವನ್ನೂ ಅಂಗೀಕರಿಸಿ, ಇವರೀರ್ವರಲ್ಲಿ ಭೇದಾಭೇದವನ್ನು ಹೇಳುವ ವೀರಶೈವ ಸಿದ್ಧಾಂತಕ್ಕೆ ಈ ಬಿಂಬ– ಪ್ರತಿಬಿಂಬವಾದವು ಸಾಧಕವೇ ವಿನಾ ಬಾಧಕವಾಗಲಾರದು.

ಸಾಮಾನ್ಯವಾಗಿ ದಾರ್ಶನಿಕ ಪ್ರಪಂಚದಲ್ಲಿ ಜೀವ, ಈಶ್ವರ ಮತ್ತು ಜಗತ್ತು ಎನ್ನುವ ಮೂರು ಪದಾರ್ಥಗಳು ವಿಚಾರಣೀಯವಾಗಿರುತ್ತವೆ. ಭಾರತೀಯ ತತ್ತ್ವ–ಜ್ಞಾನಿಗಳು ಇವುಗಳ ಸ್ವರೂಪಾದಿ ವಿಚಾರದಲ್ಲಿ ಏಕಾಭಿಪ್ರಾಯವನ್ನು ಹೊಂದಿದ್ದರೂ, ತಮ್ಮದೇ ಆದ ಒಂದು ಚಿಂತನದ ವೈಶಿಷ್ಟ್ಯವನ್ನು ಬಹು ಸುಂದರವಾಗಿ ನಿರೂಪಿಸಿರು–ವರು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ।
ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್ ॥ (ಶ್ವೇ. ಉ ೧–೧೨)

ಎನ್ನುವ ಶ್ರುತಿಪ್ರಮಾಣಾನುಸಾರವಾಗಿ ಜೀವಾತ್ಮನಿಗೆ ಭೋಕ್ತೃವೆಂತಲೂ, ಜಗತ್ತಿಗೆ ಭೋಗ್ಯವೆಂತಲೂ ಮತ್ತು ಈಶ್ವರನಿಗೆ ಪ್ರೇರಕನೆಂತಲೂ ಹೇಳಿ, ಈ ಮೂರು ರೂಪವನ್ನು ತಾಳಿದ ವಸ್ತು ಒಂದೇ ಎಂಬ ನಿಗೂಢ ತತ್ತ್ವವನ್ನಿಲ್ಲಿ ಉಪದೇಶಿಸಿದ್ದಾರೆ.

ಗೌರೀ ಹುಣ್ಣಿಮೆಯಲ್ಲಿ ಸಕ್ಕರೆಯಿಂದ ತಯಾರಿಸಿದ ನಾನಾ ಪ್ರಕಾರದ ಗೊಂಬೆಗಳನ್ನು ಆರತಿಯ ತಾಟಿನಲ್ಲಿ ಇಟ್ಟುಕೊಂಡು ಗೌರವ್ವನಿಗೆ ಬೆಳಗುವುದು ಕರ್ನಾಟಕದಲ್ಲಿ ವಾಡಿಕೆಯಾಗಿದೆ. ಸಕ್ಕರೆಯ ಮೂರ್ತಿಗಳಲ್ಲಿ ಶಿವ, ಗಣಪತಿ, ಮಂಗ, ಮೀನು, ಮರ, ಒಕ್ಕಲಿಗ ಮತ್ತು ಗುಡಿ ಹೀಗೆ ಅನೇಕ ಪ್ರಕಾರಗಳಿರುತ್ತವೆ. ಅವುಗಳನ್ನು ಖರೀದಿಸುವ ಚಿಕ್ಕಮಕ್ಕಳ ದೃಷ್ಟಿಯಲ್ಲಿ ಭೇದ ತೋರಿದರೂ, ಮಾರಾಟ ಮಾಡುವ ಅಂಗಡಿಕಾರನ ವಿಚಾರದಲ್ಲಿ ಅವೆಲ್ಲ ಸಕ್ಕರೆಯೆ ; ಅಂತೆಯೇ ಯಾವ ಮೂರ್ತಿಯನ್ನು ಖರೀದಿಸಿದರೂ ಒಂದೇ ಬೆಲೆಗೆ ತೂಗಿಕೊಡುತ್ತಾನೆ. ಅದರಂತೆ ''ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ'' ಎಂಬ ಶ್ರುತಿವಚನದಂತೆ ಜ್ಞಾನಿಗಳಿಗೆ ಸರ್ವವೂ ಶಿವಮಯವಾಗಿ ತೋರಿದರೂ, ಅಜ್ಞರಾದ ಜೀವಿಗಳಿಗೆ ಜೀವನೆಂತಲೂ, ಜಗತ್ತೆಂತಲೂ ಮತ್ತು ಈಶ್ವರನೆಂತಲೂ ಭಿನ್ನವಾಗಿ ತೋರುವುದು.

ಸೃಷ್ಟಿಯೆಂಬುದು ಪರಶಿವನು ತನ್ನ ವಿನೋದಕ್ಕಾಗಿ ರಚಿಸಿದ ಒಂದು ಲೀಲಾ ಜಾಲವು. ಈ ಲೀಲೆಯಲ್ಲಿ ಶಿವನು ಜೀವನಾಗಿಯೂ, ಜಗತ್ತಾಗಿಯೂ ಮತ್ತು ಆ ಜೀವ–ಜಗತ್ತುಗಳ ಪ್ರೇರಕನಾಗಿಯೂ ಮೈದಾಳುತ್ತಾನೆ. ಶಿವನ ಈ ತ್ರಿವಿಧ ಲೀಲೆಗೆ ಅವನಲ್ಲಿಯ ತ್ರಿಗುಣಾತ್ಮಕ ಶಕ್ತಿಯೇ ಕಾರಣವು. ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ಇರುವ ವಿಮರ್ಶ ಶಕ್ತಿಗೆ ''ಅವಿಭಾಗ ಪರಾಮರ್ಶ'' ''ವಿಭಾಗ

ಪರಾಮರ್ಶ''ಗಳೆಂದು ಎರಡು ಅವಸ್ಥೆಗಳುಂಟು. ಇವುಗಳಲ್ಲಿ ಮೊದಲಿನದು ಜಗದುತ್ಪತ್ತಿಯ ಪೂರ್ವದ್ದು; ಎರಡನೆಯದು ಜಗದುತ್ಪತ್ತಿ ಕಾಲದ್ದು.

ನವಿಲಿನ ತತ್ತಿಯ ರಸದಲ್ಲಿ ಮುಂದಾಗುವ ಪಕ್ಷಿಯ ವಿಚಿತ್ರವಾದ ಗರಿಗಳ ಬಣ್ಣಗಳು ಹಾಗೂ ಶರೀರದ ಅವಯವಗಳು ರಸರೂಪವಾಗಿರುವಂತೆ ವಿಮರ್ಶ ಶಕ್ತಿಯ ಅವಿಭಾಗ ಪರಾಮರ್ಶ ದೆಶೆಯಲ್ಲಿ ವಿಚಿತ್ರವಾಗಿ ತೋರುವ ಈ ವಿಶ್ವವು ಏಕರೂಪವಾಗಿ ಅಡಗಿರುತ್ತದೆ. ಅಂತೆಯೇ ''ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವ ವೈಚಿತ್ರ್ಯಕಾರಿಣೀ'' ಎಂದು ಭಗವತ್ಪಾದರು ಇಪ್ಪತ್ತನೇ ಪರಿಚ್ಛೇದದ ಭಾಜನ ಸ್ಥಲದಲ್ಲಿ ಉಪದೇಶಿಸಿದ್ದಾರೆ.

ಶಿವನಲ್ಲಿ ಜಗದ್ರಚನೆಯ ಇಚ್ಛೆಯು ಜಾಗ್ರತವಾದಾಗ ವಿಮರ್ಶ ಶಕ್ತಿಯು ವಿಭಾಗ ಪರಾಮರ್ಶ ಅವಸ್ಥೆಯನ್ನು ತಾಳುತ್ತದೆ. ಆಗ ಸತ್ತ್ವ, ರಜಸ್ ಮತ್ತು ತಮಸ್‌ಗಳ ಸಾಮ್ಯಾವಸ್ಥೆಯಾದ ಪ್ರಕೃತಿ ತತ್ತ್ವದ ಪ್ರಾದುರ್ಭಾವವಾಗುವುದು. ಈ ಮೂರು ಗುಣಗಳು ಸಾಮ್ಯಾವಸ್ಥೆಯಲ್ಲಿದ್ದಾಗ ಜಗವು ಜನಿಸದು. ಇವುಗಳ ವೈಷಮ್ಯವು ವಿಶ್ವದ ವೈಚಿತ್ರ್ಯಕ್ಕೆ ಮೂಲವು. ಮೂರರಲ್ಲಿ ಯಾವುದಾರೊಂದು ಗುಣವು ಉತ್ಕೃಷ್ಟವಾಗಿದ್ದು ಉಳಿದೆರಡು ಗುಣಗಳು ಅದರ ಅಧೀನವಾಗಿರುವ ಸ್ಥಿತಿಯೇ ವೈಷಮ್ಯವು. ಇದನ್ನೇ—

ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।
ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ (ಗೀತಾ, ೧೪–೧೦)

ಎಂದು ಭಗವಂತನು ಗೀತೆಯಲ್ಲಿಯೂ ಉಪದೇಶಿಸಿದ್ದಾನೆ.

ಈ ತ್ರಿವಿಧ ಗುಣಗಳಲ್ಲಿ ರಜೋಗುಣದ ಮಿಶ್ರಣದಿಂದ ದೂಷಿತವಾದ ಸತ್ತ್ವ ಗುಣೋಪಾಧಿಯಾದ ಅವಿದ್ಯೆಯಲ್ಲಿರುವ ಶಿವಾಂಶವೇ ಭೋಕ್ತೃವಾದ ಜೀವನೆಂತಲೂ, ತಮೋಗುಣಪ್ರಧಾನವಾದ ಪ್ರಕೃತಿಯಿಂದ ಕೂಡಿದ ಶಿವನೇ ಭೋಜ್ಯವಾದ ಜಗತ್ತೆಂತಲೂ ಮತ್ತು ಶುದ್ಧ ಸತ್ತ್ವಗುಣೋಪಾಧಿಯಾದ ಮಾಯೆಯಿಂದೊಡಗೂಡಿದ ಪರಶಿವಚೈತನ್ಯವೇ ಪ್ರೇರಕನಾದ ಈಶ್ವರನೆಂತಲೂ ಕರೆಯಲ್ಪಡುತ್ತದೆ. ನಿಸ್ತರಂಗ ಅಂಬುಧಿಯಲ್ಲಿ ವಾಯುಪ್ರಕೋಪದಿಂದ ತರಂಗಗಳುದ್ಭವಿಸುವಂತೆ ಪ್ರಶಾಂತ ಸುಖಸಾಗರನಾದ ಪರಶಿವನಲ್ಲಿ ಗುಣತ್ರಯಗಳ ಸಂಬಂಧದಿಂದ ಭೋಕ್ತೃ, ಭೋಜ್ಯ ಮತ್ತು ಪ್ರೇರಕಗಳೆಂಬ ವಸ್ತುತ್ರಯಗಳು ಪ್ರಾದುರ್ಭವಿಸುತ್ತವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೮ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)

■■

ಅತ್ರ ಪ್ರೇರಯಿತಾ ಶಂಭುಶ್ಶುದ್ಧೋಪಾದಿರ್ಮಹೇಶ್ವರಃ ।
ಸಮ್ಮಿಶ್ರೋಪಾಧಯಸ್ಸರ್ವೇ ಭೋಕ್ತಾರಃ ಪಶವಃ ಸ್ಮೃತಾಃ ।
ಭೋಜ್ಯಮವ್ಯಕ್ತಮಿತ್ಯುಕ್ತಂ ಶುದ್ಧತಾಮಸರೂಪಕಂ ॥

ಸರ್ವಜ್ಞಃ ಪ್ರೇರಕಶ್ಶಂಭುಃ ಕಿಂಚಿಜ್ಞೋ ಜೀವ ಉಚ್ಯತೇ ।
ಅತ್ಯಂತಗೂಢಚೈತನ್ಯಂ ಜಡಮವ್ಯಕ್ತಮುಚ್ಯತೇ ।

ಉಪಾಧಿಃ ಪುನರಾಖ್ಯಾತಶ್ಶುದ್ಧಾಶುದ್ಧ ವಿಭೇದತಃ ।
ಶುದ್ಧೋಪಾಧಿಃ ಪರಾ ಮಾಯಾಸ್ವಾಶ್ರಯಾಽ ಮೋಹಕಾರಿಣೀ ॥

ಅಶುದ್ಧೋಪಾಧಿರಪ್ಯೇವಮವಿದ್ಯಾಽಽಶ್ರಯಮೋಹಿನೀ ।
ಅವಿದ್ಯಾಶಕ್ತಿಭೇದೇನ ಜೀವಾ ಬಹುವಿಧಾಃ ಸ್ಮೃತಾಃ ॥ (ಸಿ. ಶಿ. ೫. ೪೧–೪೪)

ಶಾಸ್ತ್ರೋಪದೇಶವು ವಿಧಿಮುಖವೆಂತಲೂ, ನಿಷೇಧಮುಖವೆಂತಲೂ ಎರಡು ವಿಧ ವಾಗಿದೆ. ಅದ್ವೈತ ವೇದಾಂತಿಗಳು "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ", "ನೇಹ ನಾನಾಸ್ತಿಕಿಂಚನ" ಮುಂತಾದ ಪ್ರಮಾಣ ವಚನಗಳಿಂದ ಪ್ರಪಂಚ ವೆಲ್ಲವನ್ನೂ ಸುಳ್ಳೆಂದು ನಿರಾಕರಿಸಿ, ನಿಷೇಧ ಮುಖ ಉಪದೇಶದಿಂದ ಪರಮತತ್ತ್ವವನ್ನು ತಿಳಿಸುತ್ತಾರೆ; ಆದರೆ ಶಿವಾದ್ವೈತಿಗಳು (ವೀರಶೈವರು) "ಜೀವಃ ಸತ್ಯಂ ಜಗತ್ ಸತ್ಯಂ ಶಿವಃ ಸತ್ಯಂ ಸ್ವಭಾವತಃ" "ಸರ್ವಂ ಲಿಂಗಮಯಂ ಜಗತ್" ಎನ್ನುವ ಪ್ರಮಾಣ ಗಳಿಂದ ಸರ್ವತ್ರ ಶಿವತತ್ತ್ವವನ್ನು ತೋರಿಸಿ, ವಿಧಿಮುಖ ಉಪದೇಶದಿಂದ ಪರತತ್ತ್ವದ ತಿಳುವಳಿಕೆಯನ್ನುಂಟುಮಾಡುತ್ತಾರೆ.

ಪ್ರಕೃತದಲ್ಲಿ ಶ್ರೀ ರೇಣುಕ ಭಗವತ್ಪಾದರಾದರೂ ಭೋಕ್ತೃ, ಭೋಜ್ಯ ಮತ್ತು ಪ್ರೇರಕನಾದವನು ಒಬ್ಬನೇ ಎಂಬ ವಿಧಿಮುಖ ಉಪದೇಶದಿಂದಲೇ ಶ್ರೀ ಅಗಸ್ತ್ಯ ಮಹರ್ಷಿಗೆ ಸರ್ವತ್ರ ಶಿವದೃಷ್ಟಿಯನ್ನು ತಂದುಕೊಟ್ಟಿದ್ದಾರೆ. "ಶಿವತತ್ತ್ವಾತ್ ಸಮುತ್ಪನ್ನಂ ಶಿವ ಏವ ಚರಾಚರಮ್" ಶಿವನಿಂದ ಹುಟ್ಟಿದ್ದೆಲ್ಲ ಶಿವಸ್ವರೂಪವೇ– ಎಂಬುದು ಶಿವಾಚಾರ್ಯರ ಸಿದ್ಧಾಂತವು........ಈ ಶಿವದೃಷ್ಟಿಯನ್ನು ಸಾಧಿಸಿಕೊಂಡ ಅಣ್ಣನವರಾದರೂ–

"ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ,
ಸಕಲ ವಿಸ್ತಾರದ ರೂಹು ನೀನೇ ದೇವಾ,
ವಿಶ್ವತಶ್ಚಕ್ಷು ನೀನೇ ದೇವಾ,
ವಿಶ್ವತೋಮುಖ ನೀನೇ ದೇವಾ,
ವಿಶ್ವತೋ ಬಾಹು ನೀನೇ ದೇವಾ,
ವಿಶ್ವತಃಪಾದ ನೀನೇ ದೇವಾ ಕೂಡಲಸಂಗಮದೇವಾ"

ಇಂತೆನ್ನುವ ಅನುಭವದ ನುಡಿಯಲ್ಲಿ ತಮ್ಮ ಶಿವಾನುಭವವನ್ನು ಪ್ರಕಟಪಡಿಸಿದ್ದಾರೆ.

ನಿಷೇಧಮುಖ ಹಾಗೂ ವಿಧಿಮುಖ ಉಪದೇಶಗಳ ಪ್ರಯೋಜನವು ಒಂದೇ ಆಗಿದ್ದರೂ, ನಿಷೇಧಮುಖಕ್ಕಿಂತ ವೀರಶೈವಾಭಿಮತ ವಿಧಿಮುಖ ಉಪದೇಶವು ಹೆಚ್ಚು ಲೋಕೋಪಯೋಗಿಯಾಗುವುದು. ನಿಷೇಧಮುಖ ಉಪದೇಶದಿಂದ ಶರೀರಾದಿ ಸಕಲ ಪ್ರಪಂಚದಲ್ಲಿ ಮಿಥ್ಯಾತ್ವ ಬುದ್ಧಿಯುಂಟಾಗಿ ಮನುಷ್ಯನು ತಾನು ಮಾಡುತ್ತಿರುವ ವ್ಯವಸಾಯ, ವ್ಯಾಪಾರಾದಿ ವ್ಯವಹಾರಗಳಲ್ಲಿ ಅನಾಸ್ಥೆಯುಳ್ಳವನಾಗಿ, ಅತ್ತಕಡೆ ನಿರ್ಲಕ್ಷ್ಯ ವಹಿಸಿದನೆಂದರೆ ಸಾಂಸಾರಿಕ ಜೀವನವೇ ಅಸ್ತವ್ಯಸ್ತವಾಗುವ ಸಂಭವವುಂಟು; ಆದರೆ ವಿಧಿಮುಖ ಉಪದೇಶದಲ್ಲಿ ಸರ್ವತ್ರ ಶಿವದರ್ಶನವಾಗುವ ಕಾರಣ, ಯಾವುದ ರಲ್ಲಿಯೂ ಅನಾಸ್ಥೆಯುಂಟಾಗದಿರುವುದರಿಂದ, ''ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್'' ನಾನು ಮಾಡುವುದೆಲ್ಲವೂ ನಿನ್ನ ಪೂಜೆ ಯೆನ್ನುವ ಭಾವನೆ ಮೂಡುವುದರಿಂದ ಎಲ್ಲ ವ್ಯವಹಾರಗಳೂ ಬಹು ಸುಂದರವಾಗಿ ಹಾಗೂ ಆಸ್ಥೆಯಿಂದ ಮಾಡಲ್ಪಡುವುದರಿಂದ, ಲೌಕಿಕ ಜೀವನವಾದರೂ ಸ್ವಾರಸ್ಯವಾಗಿ ಸಾಗುವುದು. ಅದಕ್ಕೆಂದೇ ವೀರಶೈವ ಶರಣರು ''ಕಾಯಕವೇ ಕೈಲಾಸ'' ಎಂದು ನಂಬಿ ಆಚರಿಸಿ ಮಾಡುವ ಉದ್ಯೋಗದಲ್ಲೆಲ್ಲ ಮುಕ್ತಿಸುಖವನ್ನು ಅನುಭವಿಸಿದ್ದಾರೆ.

ಶುದ್ಧ ಸತ್ತ್ವಗುಣೋಪಾಧಿಯಿಂದ ಮಹೇಶ್ವರನೆನಿಸಿದ ಪರಮಾತ್ಮನು ಪ್ರೇರಕ ನಾದರೆ, ಮಿಶ್ರೋಪಾಧಿಕರಾದ ಜೀವಾತ್ಮರು ಕರ್ಮಫಲವನ್ನು ಭೋಗಿಸುವ ಪಶು ಗಳೆಂದು ಕರೆಯಿಸಿಕೊಳ್ಳುವರು. ''ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'' (ಗೀತಾ ೩–೫) ಎನ್ನುವ ಗೀತೋಕ್ತಿಯಂತೆ ಪ್ರತಿಯೊಬ್ಬ ಮನುಷ್ಯನೂ ಸದಾ ಒಂದಿ ಲ್ಲೊಂದು ವಿಹಿತ ಇಲ್ಲವೇ ನಿಷಿದ್ಧ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ತಾನು ಮಾಡಿದ ಕರ್ಮಫಲ ಭೋಗಕ್ಕೆ ತಾನೇ ಬಾಧ್ಯಸ್ಥನು; ಅಂತೆಯೇ ''ಮಾಡಿದವನುಣ್ಣು ವನು ಮಣೆಯಂಥ ಕಡುಬು'' ಎಂಬ ಲೋಕೋಕ್ತಿಯು ಪ್ರಸಿದ್ಧವಾಗಿದೆ. ''ಸುಖ ದುಃಖಾನ್ಯತರಸಾಕ್ಷಾತ್ಕಾರೋ ಭೋಗಃ'' ಸುಖ–ದುಃಖಗಳ ಅನುಭವವೇ ಭೋಗವು. ಇವು ಮನಸ್ಸಿನ ವಿಷಯಗಳು. ಸುಖ–ದುಃಖಗಳ ಭೋಗೋತ್ಪತ್ತಿಗೆ ಮುಖ್ಯವಾಗಿ ಶಬ್ದಾದಿ ವಿಷಯಗಳೇ ಕಾರಣಗಳು. ಇವುಗಳು ಸಾಕ್ಷಾತ್ ಮನಸ್ಸಿಗೆ ಸಂಬಂಧ ಗಳಾಗದೇ, ಆಯಾ ಇಂದ್ರಿಯಗಳ ಮುಖಾಂತರವಾಗಿ ಅಂದರೆ ನೇತ್ರವು ರೂಪ ದಿಂದಲೂ, ಶ್ರೋತ್ರವು ಶಬ್ದದಿಂದಲೂ, ಚರ್ಮವು ಸ್ಪರ್ಶದಿಂದಲೂ, ರಸನೆಯು ರಸ ದಿಂದಲೂ ಮತ್ತು ಘ್ರಾಣವು ಗಂಧದಿಂದಲೂ ಮನಸ್ಸನ್ನು ತೃಪ್ತಿಪಡಿಸುತ್ತವೆ.

''ಆಪಾತರಮ್ಯಾ ವಿಷಯಾಃ ಪರ್ಯಂತಪರಿತಾಪಿನಃ'' ಆರಂಭದಲ್ಲಿ ಸುಖ ವನ್ನುಂಟುಮಾಡಿದರೂ ಅಂತ್ಯದಲ್ಲಿ ದುಃಖವನ್ನೈದಿಸುವುದೇ ವಿಷಯಗಳ ಸ್ವಭಾವವು. ವಿಷಯಗಳಿಂದ ಪ್ರಾಪ್ತವಾಗುವ ಸಾಸುವೆಕಾಳಿನಷ್ಟು ಸುಖಕ್ಕಾಗಿ ಸಾಗರದಷ್ಟು ದುಃಖ ವನ್ನನುಭವಿಸಿಯೂ, ಅದರಿಂದ ವಿಮುಖರಾಗದೇ ಪುನಃ ವಿಷಯದತ್ತ ಹರಿಯುವ ಮನಸ್ಸಿನ ವೃತ್ತಿಯನ್ನು ಶ್ರೀ ಭಗವತ್ಪಾದರು ಪಶುವೃತ್ತಿಯೆಂದೂ, ಇಂತಹ ಭವಿಗಳಾದ (ಆತ್ಮಜ್ಞಾನಶೂನ್ಯರಾದ) ಜೀವಾತ್ಮರನ್ನು ಪಶುಗಳೆಂದೂ ಸಂಬೋಧಿಸಿದ್ದಾರೆ.

ಆಹಾರನಿದ್ರಾಭಯಮೈಥುನಂ ಚ
ಸಾಮಾನ್ಯಮೇತತ್ ಪಶುಭಿರ್ನರಾಣಾಮ್ ।
ಜ್ಞಾನಂ ಹಿ ತೇಷಾಮಧಿಕೋ ವಿಶೇಷಃ
ಜ್ಞಾನೇನ ಹೀನಾಃ ಪಶುಭಿಃ ಸಮಾನಾಃ ॥

ಉಣ್ಣುವುದು, ನಿದ್ರಿಸುವುದು, ಅಂಜುವುದು ಮತ್ತು ಸಂತಾನೋತ್ಪತ್ತಿ ಮಾಡುವುದು ಇವು ಪಶು ಹಾಗೂ ಮನುಷ್ಯರಲ್ಲಿ ಇರುವ ಸಮಾನ ಧರ್ಮಗಳಾಗಿವೆ. ಆತ್ಮ-ಪರಮಾತ್ಮರ ಜ್ಞಾನವೆಂಬುದು ಮಾತ್ರ ಮನುಷ್ಯರಲ್ಲಿ ಇರಬೇಕಾದ ವಿಶೇಷ ಗುಣ. ಅದು ಇರದಿದ್ದರೆ ಮನುಷ್ಯನನ್ನಾದರೂ ಪಶುವೆಂದೇ ಭಾವಿಸಬೇಕೆಂಬುದು ಸುಭಾಷಿತಕಾರರ ಅಭಿಪ್ರಾಯವಾಗಿದೆ.

ನಾಲ್ಕು ಕಾಲಿನ ಪಶುಗಳಿಗೆ ಹಗ್ಗಗಳಿಂದ ಕಟ್ಟಿರುವುದನ್ನು ನಾವು ಕಾಣುತ್ತೇವೆ; ಆದರೆ ಎರಡು ಕಾಲಿನ ಪಶುಗಳನ್ನು ಕಟ್ಟುವ ಹಗ್ಗ ಯಾವುದು ? ಎನ್ನುವ ಪ್ರಶ್ನೆಗೆ ಶ್ರೀನಿಜಗುಣ ಶಿವಯೋಗಿಗಳು ಬಹು ಅರ್ಥಗರ್ಭಿತವಾದ ಉತ್ತರವನ್ನಿತ್ತಿದ್ದಾರೆ- ''ಮಮಕಾರದಿಂದ ಮಿಕ್ಕಿನ ಬಂಧಮುಂಟೆ'' ಎಂದು. ಹೊಲ, ಮನೆ, ಮಠ, ಹೆಂಡಿರು, ಮಕ್ಕಳು, ಧನ ಮತ್ತು ಕನಕ ಮುಂತಾದ ಸಾಂಸಾರಿಕ ವಸ್ತುಗಳಲ್ಲಿರುವ ನನ್ನದೆಂಬ ಭಾವನೆಯಷ್ಟು ಬಿಗಿಯಾದ ಹಗ್ಗ ಮತ್ತೊಂದಿಲ್ಲ. ಈ ವಸ್ತುಗಳಿಂದುಂಟಾಗುವ ಮನುಷ್ಯರ ಬಂಧನಕ್ಕೆ ಸಂಬಂಧವೆನ್ನುವರು. ''ಸಮ್ಯಕ್ ಬಂಧಃ=ಸಂಬಂಧಃ'' ಬಹು ಸದೃಢವಾಗಿ ಕಟ್ಟಿದ್ದು ಎಂದರ್ಥ. ಅಪರಿಚಿತ ವ್ಯಕ್ತಿಗಳು ಮನೆಗೆ ಬಂದಾಗ ಇವರು ಯಾರು ? ಎಂದು ಪ್ರಶ್ನಿಸಿದರೆ, ನಮ್ಮ ಸಂಬಂಧಿಕರು ಎನ್ನುವ ವಾಡಿಕೆ ಇದೆ. ಆದ್ದರಿಂದ ಗಂಡ-ಹೆಂಡತಿ, ತಂದೆ-ಮಕ್ಕಳು, ಅತ್ತೆ-ಸೊಸೆ, ಮಾವ-ಅಳಿಯ ಇವರಲ್ಲಿರುವ ಲೌಕಿಕ ಸಂಬಂಧಗಳು ಈ ಜನ್ಮದಲ್ಲಿ ಬಿಡಿಸಿಕೊಳ್ಳಲು ಬಾರದ ಬಂಧನಗಳು.

ಆಕಾಶದಲ್ಲಿ ಬಹುದೂರ ಹಾರಾಡುವ ಪಟವು ಸೂತ್ರವನ್ನೆಳೆದಾಗ ನಮ್ಮಲ್ಲಿಗೆ ಮರಳಿ ಬರುವಂತೆ, ತನ್ನ ಮನೆಯನ್ನು ಬಿಟ್ಟು ಬಹುದೂರದ ದೇಶ-ವಿದೇಶಗಳಿಗೆ ಹೋಗಿದ್ದರೂ, ಅಲ್ಲಿಯ ಕಾರ್ಯ ಮುಗಿದಬಳಿಕ ಮನುಷ್ಯನು ಮರಳಿ ತನ್ನ ಮನೆಗೆಯೇ ಬರುತ್ತಾನೆ. ಸಂಸ್ಕೃತದಲ್ಲಿ ಮನೆಗೆ ''ಗೃಹ'' ಎನ್ನುವರು. ''ಗೃಹಾತೀತ ಗೃಹಂಃ'' ಎಷ್ಟೇ ದೂರ ಹೋದರೂ ಮನುಷ್ಯನನ್ನು ತನ್ನತ್ತ ಎಳೆದು ತರುವ ಶಕ್ತಿ ಅದರಲ್ಲಿದೆ.

ರಾವಣನ ಸಂಹಾರವಾದ ಬಳಿಕ ಲಂಕೆ ರಾಮಚಂದ್ರನ ಸ್ವಾಧೀನವಾಯಿತು. ಲಂಕೆ ಸಾಮಾನ್ಯ ಪಟ್ಟಣವಲ್ಲ; ಅದು ಶ್ರೀಲಂಕೆ, ಸ್ವರ್ಣನಗರ, ಆ ವೈಭವವನ್ನು ಕಂಡ ಲಕ್ಷ್ಮಣನು-ಅಣ್ಣಾ! ನಾವು ಇಲ್ಲಿಯೇ ಇದ್ದು ಬಿಡೋಣ, ಆ ಹಾಳು ಅಯೋಧ್ಯೆಯಲ್ಲಿ ಏನಿದೆ ? ಎಂದಾಗ ಶ್ರೀರಾಮಚಂದ್ರನು ''ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ''. ಹೆತ್ತ ತಾಯಿ, ಹುಟ್ಟಿದ ಭೂಮಿ ಇವು ಸ್ವರ್ಗಕ್ಕಿಂತಲೂ ಶ್ರೇಷ್ಠವೆಂದು ಉಪದೇಶಿಸಿ ಮರಳಿ ಅಯೋಧ್ಯೆಗೆ ಕರೆತಂದನು. ಅವತಾರಿ ಎನಿಸಿದ ಶ್ರೀರಾಮ ಚಂದ್ರನೇ ನನ್ನ ಊರು, ನನ್ನ ಮನೆ ಎಂದು ಮರಳಿ ಬರುವಾಗ ಉಳಿದವರ ಪಾಡೇನು ?

ಹೀಗೆ ಮನುಷ್ಯನು ಎಷ್ಟು ವಸ್ತು ಹಾಗೂ ವ್ಯಕ್ತಿಗಳ ಜೊತೆ ಸಂಬಂಧ ಮಾಡುವನೋ ಅವೆಲ್ಲವುಗಳೂ ಇವನ ಕೊರಳಿಗೆ ಹಗ್ಗವನ್ನು ಕಟ್ಟುತ್ತವೆ. ಒಂದೇ ಹಗ್ಗದಿಂದ ಕಟ್ಟಲ್ಪಟ್ಟ ಪಶುವಿಗೆ ಅದರಿಂದ ಬಿಡಿಸಿಕೊಳ್ಳುವುದಾಗದಿರುವಾಗ, ಕಣ್ಣಿಗೆ ಕಾಣದಿರುವ ಅಹಂ ಮಮಕಾರಗಳೆಂಬ ಅನಂತ ಹಗ್ಗಗಳಿಂದ ಕಟ್ಟಲ್ಪಟ್ಟ ಈ ಮನುಷ್ಯ ಪಶುವಿಗೆ ಮುಕ್ತಿಯೆಂಬುದು ಮನದ ಮಂಡಿಗೆಯೇ ಸರಿ.

ಒಮ್ಮೆ ಗುರು–ಶಿಷ್ಯರಿಬ್ಬರು ನದಿಗೆ ಸ್ನಾನಕ್ಕೆ ಹೋದಾಗ ಒಕ್ಕಲಿಗನೋರ್ವನು ಬಹು ಸುಂದರವಾದ ಒಂದು ಎತ್ತನ್ನು ಅದೇ ಆಗ ಪೇಟೆಯಿಂದ ಖರೀದಿಸಿಕೊಂಡು ಅದರ ಕೊರಳಿಗೆ ಹಗ್ಗವನ್ನು ಬಿಗಿಯಾಗಿ ಕಟ್ಟಿ, ತಾನು ಮುಂದಾಗಿ ಅದನ್ನು ಹಿಡಿದುಕೊಂಡು ಹೊರಟಿದ್ದನು. ಎತ್ತು ಅವನನ್ನು ಹಿಂಬಾಲಿಸುತ್ತಿತ್ತು. ಆ ದೃಶ್ಯವನ್ನು ನೋಡಿ ಗುರುಗಳು ಶಿಷ್ಯನಿಗೆ ಪ್ರಶ್ನೆ ಮಾಡಿದರು–ಎತ್ತು ಹಾಗೂ ಒಕ್ಕಲಿಗ ಇವರಿಬ್ಬರೊಳಗೆ ಯಾರ ಕೊರಳಿಗೆ ಹಗ್ಗವು ಕಟ್ಟಲ್ಪಟ್ಟಿದೆ ? ಎಂದು. ಆಗ ಶಿಷ್ಯನು ಗುರುಗಳೇ ! ನಿಮ್ಮ ದೃಷ್ಟಿಯು ಮಂದವಾಗಿದೆಯೇನು ? ಎತ್ತಿನ ಕೊರಳಲ್ಲಿಯ ಹಗ್ಗವು ಕಾಣುವುದಿಲ್ಲವೇ ? ಇದೂ ಅಲ್ಲದೆ ಪಶುಗಳೇ ಕಟ್ಟಲ್ಪಡುತ್ತಿವೆಯೇ ವಿನಾ ಮನುಷ್ಯರೆಂದಾದರೂ ಹಗ್ಗದಿಂದ ಕಟ್ಟಲ್ಪಡುತ್ತಾರೆಯೇ ? ಹಗ್ಗವನ್ನು ಹಿಡಿದ ಒಕ್ಕಲಿಗ ಮುಂದೆ–ಮುಂದೆ ಹೊರಟಿರುವನು. ಆದರಿಂದ ಕಟ್ಟಲ್ಪಟ್ಟ ಎತ್ತು ಹಿಂದೆ–ಹಿಂದೆ ಹೋಗುತ್ತಿದೆ ನೋಡಿರಿ ಎಂದ. ಆಗ ಗುರುಗಳು ಇವನಿಗೆ ಈಗಲೇ ಶಾಸ್ತ್ರಜ್ಞಾನ ಮಾಡಿಕೊಡಬೇಕೆಂದು ಒಕ್ಕಲಿಗನನ್ನು ಕರೆದು, ತಮ್ಮಾ! ಈ ಎತ್ತು ಯಾರದು ? ಎಂದು ಪ್ರಶ್ನಿಸಿದರು. ಸ್ವಾಮಿ ! ಇದು ನನ್ನದು, ಈಗ ತಾನೇ ಐದು ಸಾವಿರ ರೂಪಾಯಿ ಕೊಟ್ಟು ತಂದಿರುವೆನು ಎಂದ. ಆಗ ಗುರುಗಳು ನೋಡುವ ನೆಪದಲ್ಲಿ ಎತ್ತಿನ ಕೊರಳ ಹಗ್ಗವನ್ನು ಬಿಚ್ಚಿಬಿಟ್ಟರು. ಬಿಡುಗಡೆ ಹೊಂದಿದ ಎತ್ತು ಸಂಸ್ಕಾರ ಬಲದಿಂದ ತನ್ನ ಮೊದಲಿನ ಮನೆಯ ಕಡೆಗೆ ಓಡಹತ್ತಿತು. ಇದನ್ನು ನೋಡಿದ ಒಕ್ಕಲಿಗನು ಬೆಚ್ಚಿಬಿದ್ದು ಅದನ್ನು ಹಿಡಿಯುವುದಕ್ಕಾಗಿ ಓಡಿ ಹೊರಟ. ಎತ್ತು ಮುಂದೆ ಓಡುತ್ತಿದೆ, ಒಕ್ಕಲಿಗ ಹಿಂದೆ ಓಡುತ್ತಿದ್ದಾನೆ. ಆಗ ಗುರುಗಳು ನೋಡು ಈಗ ಮುಂದೆ ಯಾರು ಇದ್ದಾರೆ ? ಹಿಂದೆ ಯಾರು ಇದ್ದಾರೆ ? ಯಾರ ಕೊರಳಲ್ಲಿ ಹಗ್ಗವಿದೆ ? ಎಂಬುದಾಗಿ ಪ್ರಶ್ನಿಸಿದಾಗ, ಗುರುಗಳೇ ! ಒಕ್ಕಲಿಗನ ಕೊರಳಲ್ಲಿ ಹಗ್ಗವೇನೋ ಇಲ್ಲ ಆದರೆ ಆತ ಎತ್ತಿನ ಹಿಂದೆ ಯಾಕೆ ಓಡುತ್ತಿದ್ದಾನೆ ? ಶಿಷ್ಯನ ಈ ಆಶ್ಚರ್ಯಕರವಾದ ಪ್ರಶ್ನೆಯನ್ನು ಕೇಳಿ, ನೋಡು ಇದೇ ಮಮಕಾರವೆಂಬ ಹಗ್ಗವೆಂದು ಶಿಷ್ಯನನ್ನು ಎಚ್ಚರಿಸಿದರು.

ಆಣವ–ಮಾಯೀಯ ಮತ್ತು ಕಾರ್ಮಿಕಗಳೆಂಬ ತ್ರಿವಿಧ ಪಾಶಗಳಿಂದ ಬಂಧಿತನಾದ ಜೀವಾತ್ಮನು ಸಾಂಸಾರಿಕ ವಿಷಯಗಳಲ್ಲಿ ವ್ಯಾಮೋಹಿಯಾದ್ದರಿಂದಲೇ ಶ್ರೀ ರೇಣುಕ ಭಗವತ್ಪಾದರು ಮನುಷ್ಯನನ್ನು ಪಶುವೆಂದು ಕರೆದಿದ್ದಾರೆ. ವೀರಶೈವ ಸಿದ್ಧಾಂತದಲ್ಲಿ ಇರುವೆ ಮೊದಲುಗೊಂಡು ಚತುರ್ಮುಖ ಬ್ರಹ್ಮ ಪರ್ಯಂತಗಳಾದ ಸಕಲ ಜೀವರಾಶಿಗಳೂ ಪಶುಗಳೆಂತಲೂ, ಶಿವನು ಪತಿಯೆಂದಲೂ ಒಡಂಬಡಲಾಗಿದೆ. ಆದ್ದರಿಂದಲೇ ಶಿವಸಹಸ್ರನಾಮದಲ್ಲಿ ಶಿವನಿಗೆ ''ಪಶುಪತಿ'' ಎನ್ನುವ ನಾಮವು ಪ್ರಸಿದ್ಧವಾಗಿದೆ. ನೇಪಾಳದೇಶದಲ್ಲಿ ಶಿವನು ಪಶುಪತಿ ಎಂತಲೇ ಸ್ತುತಿಗೊಳ್ಳುತ್ತಲಿದ್ದಾನೆ.

ಭಕ್ತಿಭಂಡಾರಿ ಬಸವಣ್ಣನವರು–

"ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ
ಪಶುವೇನ ಬಲ್ಲುದು ? ಹಸುರೆಂದೆಳಸುವುದು
ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬ ಉದಕವನೆರೆದು
ನೋಡಿ ಸಲಹಯ್ಯಾ ಕೂಡಲಸಂಗಮದೇವಾ"

"ಬಡಪಶು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ ಬೇರೆ
ಗತಿಯುಂಟೇ ಶಿವಶಿವಾ ! ಹೋದಹೆನಯ್ಯಾ !! ನಿಮ್ಮ
ಮನದತ್ತಲೆನ್ನ ತೆಗೆಯಯ್ಯಾ, ಪಶುವಾನು ಪಶುಪತಿ ನೀನು !
ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ,
ಒಡೆಯ, ನಿಮ್ಮ ಬಯ್ಕದಂತೆ ಮಾಡು ಕೂಡಲಸಂಗಮದೇವಾ."

ಮುಂತಾದ ತಮ್ಮ ವಚನಗಳಲ್ಲಿ ವೀರಶೈವರ ಈ ಪಾಶುಪತ ಸಿದ್ಧಾಂತವನ್ನು ಅಜ್ಞರಿಗೂ ತಿಳಿಯುವಂತೆ ತಿಳಿಯಾಗಿ ತಿಳಿಸಿದ್ದಾರೆ.

ಕಾಯಿಪಲ್ಲೆಯ ಮಾರುಕಟ್ಟೆಯೊಳಗೆ ಬಾಗವಾನರ ಬಡಿಗೆಯ ಏಟನ್ನು ತಿಂದರೂ ಬುಟ್ಟಿಯೊಳಗೆ ಮತ್ತೆ ಮತ್ತೆ ಬಾಯಿ ಹಾಕುವ ಗೂಳಿ, ಆಕಳು ಮುಂತಾದ ಪಶುಗಳಂತೆ ಶಬ್ದ, ಸ್ಪರ್ಶಾದಿ ವಿಷಯಗಳ ಭೋಗಕ್ಕಾಗಿ ಜನನ–ಮರಣಗಳೆಂಬ ಅನೇಕ ಪೆಟ್ಟುಗಳನ್ನು ತಿಂದರೂ, ಪುನಃ ಪುನಃ ಅತ್ತಲೇ ಮುಖವಾಗಿರುವ ಮನುಷ್ಯರ ಪಶುವೃತ್ತಿಯನ್ನು ಕಂಡ ಶ್ರೀ ನಿಜಗುಣ ಶಿವಯೋಗಿಗಳು–

"ಅನಿಮಿತ್ತ ವೈರಿಗಳೆನಿಪ ಕಾಮಾದಿಗಳಿಗೆ ! ತನುವನೇಕವ–
ನಿತ್ತೆ ಭವಭವಂಗಳಲಿ !! ನಿನಗೊಂದು ದೇಹವಿದನು ತೊಟ್ಟು
ತಪವಾಂತು ! ಘನಶಂಭುಲಿಂಗವಾಗಿರಲೊಲ್ಲೆ ಮನುಜ !!"

(ಕೈ.ಜಿ.ಸ್ಥ–೫)

ಎಂಬುದಾಗಿ ಸುಹೃತ್ಸಮ್ಮಿತೋಪದೇಶದಿಂದ 'ಪಡೆವೆ ನೀನೆಂದಿಗೆ ಪರಮುಕ್ತಿ ಸುಖವನ್ನು ?' ಎಂದು ಪ್ರಶ್ನಿಸಿದ್ದಾರೆ. ಅದಕ್ಕಾಗಿಯೇ ಅಕ್ಕನು ತಾನು ನಡೆದ ಶಿವಪಥದಲ್ಲಿ ಅಡ್ಡಬರುವ ಅರಿಷಡ್ವರ್ಗಗಳನ್ನು "ಕಾಮವೇ ನೀನು ನಿಲ್ಲು ನಿಲ್ಲು, ಕ್ರೋಧವೇ ನೀನು ನಿಲ್ಲು ನಿಲ್ಲು, ಮದವೇ ನೀನು ನಿಲ್ಲು, ನಿಲ್ಲು, ಮತ್ಸರವೇ ನೀನು ನಿಲ್ಲು ನಿಲ್ಲು...........ಇಂತೆಂದು ಅವುಗಳನ್ನು ದಾಟಿ ಮುನ್ನಡೆದು ಮುಕ್ತಿಯನ್ನೈದಿದ್ದಾಳೆ.

ಮದನಾರಿಯಾದ ಮಹಾದೇವನ ದಯವಿಲ್ಲದೇ ಭೋಕ್ತೃವಾಗಿ ಪಶುವೆನಿಸಿಕೊಂಡ ಜೀವಾತ್ಮನಿಗೆ ಭೋಗಾಸಕ್ತಿಯು ನಿವೃತ್ತಿಯಾಗದು. ಅಂತೆಯೇ ಭಕ್ತನಾದವನು ಘ್ರಾಣ, ರಸನ, ನೇತ್ರ, ತ್ವಚ, ಶ್ರೋತ್ರಗಳೆಂಬ ಪಂಚ ಜ್ಞಾನೇಂದ್ರಿಯಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳನ್ನು ಭಾವಿಸಿ, ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದಗಳೆಂಬ ಪಂಚ ವಿಷಯಗಳನ್ನು

ತತ್ತಲ್ಲಿಂಗಾರ್ಪಿತವ ಮಾಡಿ, ಪ್ರಸಾದ ಬುದ್ಧಿಯಿಂದ ಸೇವಿಸಿ, ಪ್ರಸನ್ನ ಮನಸ್ಕನಾಗಿ ಪರಮಾತ್ಮನ ಪಾವನ ಕೃಪೆಯನ್ನು ಪಡೆದು ಧನ್ಯನಾಗುತ್ತಾನೆ.

ಮೇಲೆ ಹೇಳಿದ ಪ್ರಕಾರ ಪರಶಿವ ತತ್ತ್ವವೇ ಶುದ್ಧೋಪಾಧಿಯಿಂದ ಮಹೇಶ್ವರ ಮತ್ತು ಮಿಶ್ರೋಪಾಧಿಯಿಂದ ಪಶುವಾದ ಜೀವಾತ್ಮನೆನಿಸಿಕೊಂಡಂತೆ, ಕೇವಲ ತಮೋ ಗುಣದ ಉಪಾಧಿಯಿಂದ ಕೂಡಿದ್ದಾಗಿ ಭೋಜ್ಯವಾದ ಈ ಜಗದ್ರೂಪವಾಗಿ ಪರಿಣಮಿ ಸುತ್ತದೆ. ಇಲ್ಲಿ ಹೇಳುವ ಈ ಪರಿಣಾಮವಾದವು ಸಾಂಖ್ಯಸಮ್ಮತವಾದ ವಿಕೃತ ಪರಿಣಾಮ ವಾದವಲ್ಲ; ಆದರೆ ಕಾಂಚನವೇ ಕಟಕವಾದಂತೆ, ಮಣ್ಣೇ ಮಡಿಕೆಯಾದಂತೆ, ಅವಿಕೃತ ಪರಿಣಾಮವಾದವೆಂದರಿಯಬೇಕು.

ಜೀವ, ಜಗತ್ತು ಮತ್ತು ಈಶ್ವರನೆಂಬ ಪರಮಾತ್ಮನ ತ್ರಿವಿಧರೂಪಗಳಲ್ಲಿ ಪ್ರೇರಕ ನಾದ ಪರಮೇಶ್ವರನು ಸರ್ವವನ್ನರಿಯುವುದರಿಂದ ಸರ್ವಜ್ಞನೆಂತಲೂ, ಸಂಕುಚಿತ ಜ್ಞಾನವುಳ್ಳ ಜೀವಾತ್ಮನು ಅಲ್ಪಜ್ಞನೆಂತಲೂ ಹಾಗೂ ಏನನ್ನೂ ಅರಿಯದ ಜಗತ್ತು ಜಡ ವೆಂತಲೂ ಕರೆಯಿಸಿಕೊಂಡಿವೆ. ''ಸ್ವಪರಜ್ಞಪ್ತಿಶೂನ್ಯತ್ವಂ ಜಡತ್ವಮ್'', ತನ್ನ ಹಾಗೂ ಅನ್ಯದರ ಅರಿವಿಲ್ಲದ ವಸ್ತುಗಳೇ ಜಡವಾದವುಗಳು. ಪೃಥ್ವಿ, ಅಪ್ಪು, ತೇಜಸ್, ವಾಯು ಹಾಗೂ ಆಕಾಶವೆಂಬ ಪಂಚಮಹಾಭೂತಗಳೂ ಮತ್ತು ಅವುಗಳಿಂದುತ್ಪನ್ನವಾದ ಭೌತಿಕ ಪ್ರಪಂಚವೆಲ್ಲ ಸ್ವಪರಜ್ಞಾನಶೂನ್ಯವಾದ್ದರಿಂದ ಜಡವಾಗಿದೆ. ಜಡಗಳಲ್ಲಿಯೂ ಗೂಢಚೈತನ್ಯವಡಗಿದೆ ಎಂಬುದು ಶ್ರೀಭಗವತ್ಪಾದರ ಹೃದ್ಗತಾಭಿಪ್ರಾಯವಾಗಿದೆ.

ಬಲ್ಬಿನ ಗಾಜು ಒಳಗಿನ ದೀಪಕ್ಕೆ ಆವರಣವಾಗಿದ್ದರೂ, ದೀಪದ ಪ್ರಭೆಗೆ ಹೇಗೆ ಪ್ರತಿಬಂಧಕವಲ್ಲವೋ, ಹಾಗೆಯೇ ಈಶ್ವರನಿಗೆ ಉಪಾಧಿಯಾದ ಪರಾಮಾಯೆಯು ಗಾಜಿನಂತೆ ಪರಿಶುದ್ಧವಾದ್ದರಿಂದ ಶಿವನನ್ನು ಆವರಿಸಿದರೂ ಸ್ವಸ್ವರೂಪದ ಆವರಣ ವಾಗದ ಕಾರಣ, ಈಶ್ವರನಿಗೆ ಮಾಯಾಮೋಹಗಳಿರುವುದಿಲ್ಲ; ಆದರೆ ಜೀವಾತ್ಮನಿಗೆ ಉಪಾಧಿಯಾದ ಅವಿದ್ಯೆಯು ಮಲಿನವಾದ್ದರಿಂದ ಸ್ವಸ್ವರೂಪದ ವಿಸ್ಮೃತಿಯಾಗಿ ಜೀವಾತ್ಮನು ಮಾಯಾ ಮೋಹದಲ್ಲಿ ಬಂಧಿತನಾಗಿದ್ದಾನೆ. ಜೀವೋಪಾಧಿಯಾದ ಅವಿದ್ಯೆಯು ಅನಂತ ರೂಪತಾಳಿರುವುದರಿಂದ ಈ ಜೀವಿಗಳಾದರೂ ಅನಂತರಾಗಿದ್ದಾರೆ. ಈ ಅನಂತ ಜೀವಾತ್ಮರ ಮೋಹವನ್ನು ನಿರಸನಮಾಡಿ ಇವರನ್ನು ಪುನಃ ಮೂಲ ತತ್ತ್ವವಾದ ಪರಶಿವನಲ್ಲಿ ಐಕ್ಯ ಹೊಂದಿಸುವುದೇ ಶಾಸ್ತ್ರಗಳ ಪ್ರಯೋಜನವಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ಜುಲೈ ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)

■■

ಆಶೀರ್ವಚನ-೬

ಮಾಯಾಶಕ್ತಿವಶಾದೀಶೋ ನಾನಾಮೂರ್ತಿಧರಃ ಪ್ರಭುಃ ।
ಸರ್ವಜ್ಞಃ ಸರ್ವಕರ್ತಾ ಚ ನಿತ್ಯಮುಕ್ತೋ ಮಹೇಶ್ವರಃ ॥

ಕಿಂಚಿತ್ಕರ್ತಾಚ ಕಿಂಚಿಜ್ಞೋ ಬದ್ಧೋಽನಾದಿಶರೀರವಾನ್ ।
ಅವಿದ್ಯಾಮೋಹಿತಾ ಜೀವಾ ಬ್ರಹ್ಮೈಕ್ಯಜ್ಞಾನವರ್ಜಿತಾಃ ॥

ಪರಿಭ್ರಮಂತಿ ಸಂಸಾರೇ ನಿಜಕರ್ಮಾನುಸಾರತಃ ।
ದೇವತಿರ್ಯಙ್ಮನುಷ್ಯಾದಿನಾನಾಯೋನಿವಿಭೇದತಃ ॥

ಚಕ್ರನೇಮಿಕ್ರಮೇಣೈವ ಭ್ರಮಂತಿ ಹಿ ಶರೀರಿಣಃ ।
ಜಾತ್ಯಾಯುರ್ಭೋಗವೈಷಮ್ಯಕಾರಣಂ ಕರ್ಮ ಕೇವಲಮ್ ।

(ಸಿ. ಶಿ. ೫. ೪೫–೪೮)

ವೀರಶೈವದಾರ್ಶನಿಕ ಸಿದ್ಧಾಂತವು, ಶಕ್ತಿವಿಶಿಷ್ಟಾದ್ವೈತವೆಂಬುದಾಗಿ ಪ್ರಸಿದ್ಧವಿದೆ. ಇಲ್ಲಿ ಈಶ್ವರನು ಶಕ್ತಿಸಂಪನ್ನನಾದರೆ ಜೀವಾತ್ಮನೂ ಶಕ್ತಿಯುಕ್ತನೇ. ಆದರೆ ಉಭಯ ಶಕ್ತಿಗಳಲ್ಲಿ ತಾರತಮ್ಯವಿರುವಕಾರಣ ಓರ್ವನು ಈಶ್ವರನೆಂತಲೂ, ಮತ್ತೋರ್ವನು ಜೀವಾತ್ಮನೆಂತಲೂ ಕರೆಯಿಸಿಕೊಳ್ಳುವರು. ಈಶ್ವರೋಪಾಧಿಯಾದ ಮಾಯಾ ಶಕ್ತಿಯು ಶುದ್ಧ ಸತ್ತ್ವಗುಣ ಉಳ್ಳದ್ದಾದ್ದರಿಂದ ಮಹೇಶ್ವರನು ನಿತ್ಯಮುಕ್ತನೂ, ಸರ್ವವನ್ನರಿಯುವವನೂ ಆಗಿರುವನು.

ಶರೀರದ ಆಪಾದಮಸ್ತಕದಲ್ಲಾಗುವ ಎಲ್ಲ ವ್ಯವಹಾರಗಳೂ ಆ ಶರೀರಾಧಿಷ್ಠಾತೃವಾದ ಜೀವಾತ್ಮನಿಗೆ ಅರಿವಾಗುವಂತೆ, ಸಮಷ್ಟಿಶರೀರಾಭಿಮಾನಿಯಾಗಿ ''ವಿರಾಟ್'' ಎಂದೆನಿಸಿಕೊಂಡ ಪರಮಾತ್ಮನು ಸಕಲ ಜೀವರಾಶಿಗಳ ಶರೀರದಲ್ಲಾಗುವ ಸಮಸ್ತ ವ್ಯವಹಾರಗಳನ್ನೂ ಅರಿಯುವವನಾಗಿದ್ದಾನೆ; ಅಂತೆಯೇ ಮಂದಿರ, ಮಸ್ಜಿದ, ಗಿರಿಜಾ ಘರಗಳಲ್ಲಿ ಒಂದೇ ಸಮಯಕ್ಕೆ ಲಕ್ಷಾಂತರ ಜನರು ತಮ್ಮ ತಮ್ಮ ಮನೋಬಯಕೆಗಳನ್ನು ನಿವೇದಿಸಿಕೊಂಡಾಗ, ಭಕ್ತಿಪ್ರಿಯನಾದ ಭಗವಂತನು ಭಕ್ತರ ಭಕ್ತಿಗನುಸಾರವಾಗಿ ಫಲಗಳನ್ನಿತ್ತು ಅನುಗ್ರಹಿಸುವುದನ್ನು ನಾವೆಲ್ಲ ಅನುಭವಿಸುತ್ತೇವೆ.

ಇದೂ ಅಲ್ಲದೆ ಮಂದಿರಾದಿಗಳಿಗೆ ಹೋದ ಭಕ್ತರು ಎತ್ತರದ ಧ್ವನಿಯಲ್ಲಿಯೇ ಬೇಡಿಕೊಳ್ಳುವ ಅವಶ್ಯಕತೆಯೂ ಇಲ್ಲ, ಸೂಕ್ಷ್ಮಾತಿಸೂಕ್ಷ್ಮಗ್ರಾಹಿಯಾದ ಪರಮಾತ್ಮನು ಮನದಲ್ಲಿಯೇ ಬೇಡಿಕೊಂಡ ನಮ್ಮ ಬೇಡಿಕೆಗಳನ್ನು ಪೂರೈಸುವನು. ಆದ್ದರಿಂದಲೇ–

''ಮುಲ್ಲಾ ಹೋಕೇ ಭಾಂಗಪುಕಾರೇ ।
ಅಲ್ಲಾ ತೋ ಕ್ಯಾ ಬಹರಾ ಹೈ ।
ಮುಂಗೀ ಕೇ ಪಾವು ಮೇ ।
ಘುಂಗರು ಬಜೇ ತೋ ಓಭೀ ಅಲ್ಲಾ ಸುನತಾ ಹೈ ॥

ಹೇ ಮುಲ್ಲಾ! ಕಿವಿಯೊಳಗೆ ಬೆರಳಿಟ್ಟು, ಈ ಎತ್ತರದ ಧ್ವನಿಯೊಳಗೆ ದೇವರನ್ನು ಪ್ರಾರ್ಥಿಸುವೆ ಏಕೆ ? ಆತನು ಕಿವುಡನೆಂದು ತಿಳಿದಿರುವೆಯಾ ? ಇರುವೆಗಳ ಕಾಲೊಳಗಿನ ಗೆಜ್ಜೆಗಳ ಶಬ್ದವೂ ಅವನಿಗೆ ಕೇಳುತ್ತದೆಯೆಂಬುದಾಗಿ ಶ್ರೀ ಕಬೀರದಾಸರು ಪರಮಾತ್ಮನ ಸೂಕ್ಷ್ಮಶ್ರವಣಶಕ್ತಿಯನ್ನು ಪ್ರತಿಪಾದಿಸಿ ಈಶ್ವರನ ಸರ್ವಜ್ಞತ್ವವನ್ನು ಸಮರ್ಥಿಸಿದ್ದಾರೆ.

ಯಾವುದೊಂದು ಕಾರ್ಯವೂ ಕರ್ತನಿಲ್ಲದೇ ಆಗದು. ಕಾರ್ಯಪ್ರಾರಂಭಿಸುವ ಮೊದಲು ಕರ್ತೃವಿಗೆ ಕಾರ್ಯದ ಪೂರ್ಣ ತಿಳುವಳಿಕೆ ಬೇಕಾಗುವುದು. ಅದಕ್ಕೆಂದೇ "ಜಾನಾತಿ ಇಚ್ಛತಿ ಯತತೇ ಕರೋತಿ" ಮೊದಲು ತಿಳುವಳಿಕೆ, ಅನಂತರ ಮಾಡುವ ಇಚ್ಛೆ, ತದನಂತರ ಪ್ರಯತ್ನ, ಆಮೇಲೆ ಕಾರ್ಯಪ್ರವೃತ್ತಿ–ಎಂಬುದು ಲೋಕಪ್ರಸಿದ್ಧವಾದ ನ್ಯಾಯ. ಈ ಜಗತ್ತಾದರೂ ಒಂದು ಕಾರ್ಯವಾದ್ದರಿಂದ, ಇದಕ್ಕಾದರೂ ಕರ್ತನೋರ್ವನು ಬೇಕಲ್ಲವೆ ? ವಿಶಾಲವಾದ ಈ ವಿಶ್ವರಚನೆಯು ಎಂತಪ್ಪ ಮಾನವರಿಂದ ರಚಿಸಲಸಾಧ್ಯವಾದ್ದರಿಂದ ಈಶ್ವರನಿಂದಲೇ ರಚಿತವಾಗಿರಬೇಕು, ಅವನಾದರೂ ಸರ್ವಜ್ಞನಿರಲೇಬೇಕೆಂಬ ಅನುಮಾನ ಪ್ರಮಾಣದಿಂದ ಈಶ್ವರನ ಸರ್ವಜ್ಞತ್ವವು ಸಿದ್ಧಿಸುವುದು.

"ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ" ಎನ್ನುವ ಸರ್ವಜ್ಞನ ನುಡಿಯು ಜೀವಿಗಳಾದರೂ ಎಲ್ಲವನ್ನರಿಯರು, ಎಲ್ಲವನ್ನರಿತವರು ಬಹಳಿಲ್ಲ; ಅಂದರೆ ಓರ್ವನೇ ಇರುವನು; ಅವನೇ ಪರಮಾತ್ಮನೆನ್ನುವುದನ್ನು ಬಹು ಗೂಢವಾಗಿ ಬೋಧಿಸಿದೆ. "ಭಿನ್ನ ರುಚಿರ್ಹಿಲೋಕಃ" ಎಂಬ ಉಕ್ತಿಯಂತೆ ಜಗತ್ತಿನ ಜನರಿಂದ ಶಿವ, ವಿಷ್ಣು ನಾರಾಯಣ, ವಿಠ್ಠಲ, ಕೃಷ್ಣ ಅಲ್ಲಾ ಮುಂತಾದ ವಿಭಿನ್ನರೂಪಗಳಲ್ಲಿ ಶಿವನು ಉಪಾಸನಾಸಕ್ತನಾದ್ದರಿಂದ, "ಉಪಾಸನಾರ್ಥಂ, ಬ್ರಹ್ಮಣೋ ರೂಪಕಲ್ಪನಾ" ಇಂತೆಂಬ ವಚನದಂತೆ ತನ್ನ ಮಾಯಾಶಕ್ತಿಯ ಸಾಮರ್ಥ್ಯದಿಂದ ಮಹೇಶ್ವರನು ಅನೇಕ ಸಾಕಾರ ಸ್ವರೂಪಗಳನ್ನು ಧರಿಸುತ್ತಾನೆ. ಅಂತೆಯೇ ಶ್ರೀ ಅಣ್ಣನವರು–

ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ।
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ।
ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೆ,
ಕೂಡಲ ಸಂಗಮದೇವಯ್ಯಾ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ ॥

ಈ ಅನುಭಾವ ವಚನದಲ್ಲಿ ಶಿವನು ಭಕ್ತರ ಉಪಾಸನೆಗಾಗಿ ಸಾಕಾರವಾಗಿ ಮೈದಾಳಿದ ವಿಷಯವನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ.

ಒಬ್ಬನೇ ಆದ ಪರಮಾತ್ಮನು ಈ ರೀತಿಯಾಗಿ ವಿಭಿನ್ನರೂಪವನ್ನು ತಾಳಿದ ಮರ್ಮ ವನ್ನರಿಯದ ಫಲವಾಗಿಯೇ ಇಂದು ಧರ್ಮ–ಧರ್ಮದ ಅನುಯಾಯಿಗಳಲ್ಲಿ ಪರಸ್ಪರ ವಾದ ದ್ವೇಷ, ಮತ್ಸರ ಮತ್ತು ಅಸೂಯೆಗಳು ತಲೆಯೆತ್ತಿವೆ. ಧರ್ಮಗಳಿಗೆ ಅಂಟಿಕೊಂಡ ಕಲಹವೆಂಬ ಈ ಕಲಂಕವನ್ನು ಕಳೆಯುವುದಕ್ಕಾಗಿಯೇ ಶ್ರೀ ರೇಣುಕ ಭಗವತ್ಪಾದರು ಪರಮಾತ್ಮನ ಅಗಣಿತ ಸಾಮರ್ಥ್ಯ ಹಾಗೂ ಅವನ ಅನಂತಸ್ವರೂಪಗಳ ಬಗ್ಗೆ ತಮ್ಮ ಅಮೃತೋಪದೇಶದಿಂದ ಅರುಹನ್ನುಂಟು ಮಾಡಿದ್ದಾರೆ.

ಇನ್ನು ಜೀವಾತ್ಮರಾದರೋ ಅನಾದಿಯಾದ ಅವಿದ್ಯೆಯ ಸಂಬಂಧದಿಂದ ಮೋಹಾವೃತರಾಗಿ ''ಶಿವೋऽಹಂ'' ''ಅಹಂ ಬ್ರಹ್ಮಾಸ್ಮಿ'' ತಾವು ಪರಮಾತ್ಮ ಸ್ವರೂಪರು ಎಂಬ ಶಿವ–ಜೀವೈಕ್ಯಜ್ಞಾನಶೂನ್ಯರಾಗಿ ಜನನ–ಮರಣಾತ್ಮಕ ಸಂಸಾರ ದಲ್ಲಿ ಸಂಚರಿಸುತ್ತಿರುತ್ತಾರೆ. ಜೀವಾತ್ಮರ ಈ ಭೋಗವೈಷಮ್ಯಕ್ಕೆ ಅವರವರ ಕರ್ಮಗಳೇ ಕಾರಣಗಳು.

ನಾವು ಮಾಡುವ ಪುಣ್ಯ–ಪಾಪಗಳೆಂಬ ಕರ್ಮಗಳನ್ನು ದಾರ್ಶನಿಕರು, ಸಂಚಿತ, ಪ್ರಾರಬ್ಧ ಮತ್ತು ಆಗಾಮಿಗಳೆಂದು ಮೂರು ವಿಧವಾಗಿ ವಿಂಗಡಿಸಿದ್ದಾರೆ. ಜನ್ಮ–ಜನ್ಮಾಂತರಗಳಿಂದ ಸಂಗ್ರಹಿತವಾದದ್ದು ''ಸಂಚಿತ''. ಸದ್ಯಃ ಮಾಡಿದರೂ ಕಾಲಾಂತರ ದಲ್ಲಿ ಫಲ ಕೊಡುವುದು ''ಆಗಾಮಿ'' ಮತ್ತು ಈಗ ಅನುಭವಿಸುವ ಸುಖದುಃಖಗಳಿಗೆ ಕಾರಣವಾದದ್ದು ''ಪ್ರಾರಬ್ಧ'' ಕರ್ಮವು. ಹೊಲದಲ್ಲಿ ಅಧಿಕವಾಗಿ ಬೆಳೆದ ಜೋಳ, ಗೋಧಿ ಮುಂತಾದ ಧಾನ್ಯಗಳನ್ನು ಒಕ್ಕಲಿಗರು ಕಣಜ (ಹಗೆ)ಗಳಲ್ಲಿ ಹಾಕಿ ಸಂರಕ್ಷಿಸು ತ್ತಾರೆ. ಪುನಃ ತಮ್ಮ ಉಪಜೀವನಕ್ಕೆ ಬೇಕಾದಾಗ ಕಣಜದಲ್ಲಿಯ ಧಾನ್ಯಗಳನ್ನು ಸ್ವಲ್ಪ, ಸ್ವಲ್ಪ ಹೊರತೆಗೆದು ಅವುಗಳಿಂದ ಜೀವನ ಸಾಗಿಸುತ್ತಾರೆ. ಮುಂದಿನ ಉಪಜೀವನಕ್ಕಾಗಿ ಕೆಲವು ಬೀಜಗಳನ್ನು ಹದನ ಮಾಡಿದ ಹೊಲದಲ್ಲಿ ಬಿತ್ತುವರು. ಈ ಮೂರು ವಿಧ ಬೀಜ ಗಳಲ್ಲಿ ಕಣಜದಲ್ಲಿಯ ಕಾಳುಗಳಂತೆ ಸಂಚಿತ ಕರ್ಮ; ಉಪಜೀವನಕ್ಕಾಗಿ ಕಣಜದಿಂದ ಹೊರತೆಗೆದ ಕಾಳುಗಳಂತೆ ಪ್ರಾರಬ್ಧಕರ್ಮ; ಇನ್ನು ಮುಂದಿನ ಉಪಜೀವನಕ್ಕಾಗಿ ಹೊಲದಲ್ಲಿ ಬಿತ್ತಿದ ಬೀಜಗಳಂತೆ ಇರುವದು ಆಗಾಮಿ ಕರ್ಮವೆಂದು ತಿಳಿಯಬೇಕು.

ಬಿತ್ತುವುದು, ಸಂಗ್ರಹಿಸುವುದು ಹಾಗೂ ಭುಂಜಿಸುವುದು ಇವು ಚಕ್ರದಂತೆ ಸದಾ ಸಾಗುವಂತೆ, ಜೀವಾತ್ಮರಾದರೂ ಸಂಚಿತ, ಆಗಾಮಿ ಮತ್ತು ಪ್ರಾರಬ್ಧಗಳೆಂಬ ಕರ್ಮ ಚಕ್ರದಲ್ಲಿ ಸದಾ ತಿರುಗುತ್ತಿರುತ್ತಾರೆ. ಆದ್ದರಿಂದ ಸುಭಾಷಿತಕಾರರು–

''ಸುಖಸ್ಯ ದುಃಖಸ್ಯ ನ ಕೋऽಪಿ ದಾತಾ
ಪರೋ ದದಾತೀತ ಕುಬುದ್ಧಿರೇಷಾ ।
ಅಹಂ ಕರೋಮಿತಿ ವೃಥಾಭಿಮಾನಃ
ಸ್ವಕರ್ಮಸೂತ್ರಗ್ರಥಿತೋ ಹಿ ಲೋಕಃ ॥''

ಈ ಶ್ಲೋಕದಲ್ಲಿ ನಾವು ಅನುಭವಿಸುವ ಸುಖ–ದುಃಖಗಳಿಗೆ ನಮ್ಮ ಪ್ರಾರಬ್ಧ ಕರ್ಮ ವಲ್ಲದೇ ಈಶ್ವರನು ಹೊಣೆಯಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ''ವೈಷಮ್ಯ ನೈರ್ಘೃಣ್ಯೇನ ಸಾಪೇಕ್ಷತ್ವಾತ್ತಥಾಹಿ ದರ್ಶಯತಿ' (ಬ್ರ.ಸೂ. ೨–೧–೩೪) ಈ ಸೂತ್ರ ದಲ್ಲಿ ವ್ಯಾಸಮಹರ್ಷಿಗಳಾದರೂ ಜಗತ್ತಿನ ವಿಷಮತೆಗೆ ಪ್ರಾಣಿಗಳ ಕರ್ಮವೇ ಕಾರಣ ವೆಂದು ತಿಳಿಸಿ, ಈಶ್ವರನಲ್ಲಿ ಪಕ್ಷಪಾತ ನಿರ್ದಯೆಗಳೆಂಬ ದೋಷಗಳು ಇಲ್ಲವೆನ್ನುವುದನ್ನು ಸೂಚಿಸಿದ್ದಾರೆ.

ಸಮತ್ವ ಹಾಗೂ ದಯಾಭರಿತನಾದ ಪರಮಾತ್ಮನೇ ಜಗತ್ತನ್ನು ನಿರ್ಮಿಸಿದ್ದರೂ, ಪ್ರಾಣಿಗಳ ಕರ್ಮಾನುಗುಣವಾಗಿ ಬಡವ, ಬಲ್ಲಿದ, ಕುರೂಪಿ, ಸುರೂಪಿ, ವಿದ್ವಾನ್, ಮೂರ್ಖಮಾನವ, ದಾನವ ಮುಂತಾದ ವೈಷಮ್ಯಗಳುಂಟಾಗಿವೆ.

ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸ್ವರ್ಗಕರ್ಮಣಿ ।
ಪ್ರದಾನಕಾರಣೀಭೂತಾ ಯತೋ ವೈಸೃಜ್ಯಶಕ್ತಯಃ ॥

ಇಂತೆಂಬ ಪೌರಾಣಿಕ ವಚನಗಳಲ್ಲಿ ಹಾಗೂ ''ಪುಣ್ಯಃ ಪುಣ್ಯೇನ ಕರ್ಮಣಾ ಭವತಿ, ಪಾಪಃ ಪಾಪೇನ ಕರ್ಮಣಾ ಭವತಿ'' ಎನ್ನುವ ಶ್ರುತಿವಚನದಲ್ಲಿಯೂ ಜಗತ್ಸೃಷ್ಟಿಗೆ ಈಶ್ವರನು ನಿಮಿತ್ತಕಾರಣನೆಂದೇ ಹೇಳಲ್ಪಟ್ಟಿದೆ. ಆದ್ದರಿಂದ ಶ್ರೀ ರೇಣುಕ ಭಗವತ್ಪಾದರು–''ಜಾತ್ಯಾಯುರ್ಭೋಗವೈಷಮ್ಯ ಕಾರಣಂ ಕರ್ಮಕೇವಲಮ್'' ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಒಂದು ಊರಿನಲ್ಲಿ ಒಂದು ಧನಾಢ್ಯಮನೆತನ. ಮನೆಯಲ್ಲಿ ಗಂಡಹೆಂಡತಿ ಹಾಗೂ ಒಬ್ಬನೇ ಮಗ. ಶಾಸ್ತ್ರಸಂಸ್ಕಾರ ರಹಿತರಾದ ಇವರು ಧನದಿಂದ ಶ್ರೀಮಂತರಾಗಿದ್ದರೇ ವಿನಾ ದಾನ–ಧರ್ಮಾದಿಗಳೆಂಬ ಸದ್ಗುಣಭರಿತವಾದ ಹೃದಯ ಸಿರಿವಂತಿಕೆ ಇವರಿಗಿರ ಲಿಲ್ಲ, ತರುಣನಾದ ಮಗನಿಗೆ ಕನ್ಯೆಯನ್ನು ಹುಡುಕುತ್ತಿರಲು, ತಮ್ಮಷ್ಟೇ ಶ್ರೀಮಂತನಾದ ಮನೆತನದ ಕನ್ಯೆಯೊಂದು ಒಪ್ಪಿಗೆಯಾಯಿತು. ಸಂಪತ್ತಿನಲ್ಲಿ ಉಭಯ ಮನೆತನಗಳೂ ಸಮಾನವಾಗಿದ್ದರೂ, ಸಂಸ್ಕಾರದಲ್ಲಿ ತೀರ ವಿಪರೀತ. ಕನ್ಯೆಯ ಮನೆತನದ ತಂದೆ–ತಾಯಿಗಳು ಧಾರ್ಮಿಕರಾದ್ದರಿಂದ ಮನೆಯ ಮಕ್ಕಳಲ್ಲೆಲ್ಲ ದಾನ–ಧರ್ಮಾದಿ ಸಾತ್ವಿಕ ಗುಣಗಳು ಸ್ವಾಭಾವಿಕ ಗುಣಗಳಾಗಿದ್ದವು. ಅಂತೂ ಸುಸಂಸ್ಕೃತವಾದ ಆ ಕನ್ಯೆ ಲಗ್ನದ ನಂತರ ಈ ಅಸಂಸ್ಕಾರಿಗಳ ಮನೆಯನ್ನು ಪ್ರವೇಶಿಸಿದ್ದಾಯಿತು.

''ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಮ್'' ಎಂಬ ಗೀತೋಕ್ತಿಯಂತೆ ಅತಿಥಿ ಸತ್ಕಾರವಿಲ್ಲದೇ ಸೇವಿಸುವ ಅನ್ನವು ಪಾಪರೂಪವಾದದ್ದೆಂದು ಅರಿತಿದ್ದ ಸೊಸೆ, ಅತ್ತೆಯ ಮನೆಯಲ್ಲಿ ಅನಿವಾರ್ಯವಾಗಿ ಕಾಲಕಳೆಯಬೇಕಾಯಿತು. ಈಕೆಯ ಅತ್ತೆಮಾವಂದಿರ ಭಯದಿಂದ ಭಿಕ್ಷುಕರೊಬ್ಬರೂ ಇವರ ಮನೆಯ ಮುಂದೆ ಹಾಯುತ್ತಿರಲಿಲ್ಲ.

ಒಮ್ಮೆ ಬಹುದೂರದ ಅತಿಥಿಯೋರ್ವನು ಇವರ ಮನೆಯ ಮುಂದೆ ಬಂದು ''ಭವತಿ ಭಿಕ್ಷಾಂ ದೇಹಿ'' ಎಂದು ಪ್ರಾರ್ಥಿಸಿದನು. ಅತಿಥಿಯ ಆರ್ತಧ್ವನಿಯನ್ನು ಕೇಳಿದ ಕೂಡಲೇ ಸುಸಂಸ್ಕೃತ ಸೊಸೆಯ ಹೃದಯ ಕರಗಿ ನೀರಾಯಿತು. ಏನಾದರೂ ಸ್ವಲ್ಪ ನೀಡಬೇಕೆಂದರೆ ಅತ್ತೆ ಅಡುಗೆಯ ಮನೆಯಲ್ಲಿಯೇ ಇದ್ದಾಳೆ. ಇನ್ನೇನು ಮಾಡುವುದೆಂದು ಯೋಚಿಸಿದ ಸೊಸೆಯು ಬಾಗಿಲಿಗೆ ಬಂದು, ಸ್ವಾಮಿ ! ನಮ್ಮ ಮನೆಯೊಳಗೆ ನಿಮಗೆ ನೀಡಬೇಕಾದ ಬಿಸಿ ಪದಾರ್ಥವೇನೂ ಇಲ್ಲ, ತಂಗುಳ ಅಡುಗೆ ಇದೆ, ಆದ್ದರಿಂದ ಕ್ಷಮಿಸಿ ಮುಂದೆ ದಯಮಾಡಿಸಿರಿ.

ಅತಿಥಿ :– ಅಮ್ಮಾ ! ತಂಗುಳವನ್ನೇ ಸ್ವಲ್ಪ ನೀಡಿ ಕಳಿಸಿರಿ.

ಸೊಸೆ :– ಅದಾದರೂ ಮುಗಿಯಬಂದಿದೆ.

ಅತಿಥಿ :– ಹಾಗಾದರೆ ಅದೆಲ್ಲ ಮುಗಿದ ಬಳಿಕ ನೀವೇನು ಮಾಡುವಿರಿ ?

ಸೊಸೆ :– ನಾವೂ ನಿಮ್ಮಂತೆ ಜೋಳಿಗೆ ಹಿಡಿದು ಹೊರಡುತ್ತೇವೆ.

ಇವರೀರ್ವರ ಈ ಸಂಭಾಷಣೆಯನ್ನು ಕೇಳಿದ ಅತ್ತೆ ಕಿಡಿ ಕಿಡಿಯಾಗಿ ಬಾಗಿಲಿಗೆ ಬಂದು ಬಾಯಿಗೆ ಬಂದಂತೆ ಸೊಸೆ ಹಾಗೂ ಅತಿಥಿಗೆ ಬೈದು ಸೊಸೆಯನ್ನು ಒಳಗೆ ಕರೆತಂದಳು. ಅಷ್ಟರಲ್ಲಿ ಅಂಗಡಿಯಿಂದ ಮಾವ ಬಂದೇಬಿಟ್ಟ. ಆಗ ಅತ್ತೆ ತನ್ನ ಗಂಡನಿಗೆ ಏನ್ರಿ ! ಎಂತಹ ಅನಾಡ್ಯ ಸೊಸೆ ನಮ್ಮ ಹಣೆಬರಹಕ್ಕೆ ದೊರೆತಿದ್ದಾಳೆ ? ಇವಳು ನಮ್ಮ ಮನೆತನದ ಮರ್ಯಾದೆಯನ್ನು ಮಧ್ಯಾಹ್ನದಲ್ಲಿಯೇ ಮಾರಿಬಿಡುತ್ತಾಳೆ. ಭಿಕ್ಷೆಗೆ ಬಂದ ಭಿಕ್ಷುಕರನ್ನು ನಮ್ಮ ಮನೆತನದ ಪದ್ಧತಿಯಂತೆ ಬೈದು ಕಳಿಸುವುದನ್ನು ಬಿಟ್ಟು, ಓಣಿಯ ಜನರೆಲ್ಲ ಕೇಳುವಂತೆ– ನಮ್ಮ ಮನೆಯಲ್ಲಿ ನಿಮಗೆ ನೀಡುವ ಬಿಸಿ ಪದಾರ್ಥವಿಲ್ಲ, ತಂಗಳ ಅನ್ನವಿದೆ, ಆದಾದರೂ ಮುಗಿಯುತ್ತ ಬಂದಿದೆ, ಅದು ತೀರಿದ ನಂತರ ನಾವೂ ನಿಮ್ಮಂತೆ ಭಿಕ್ಷೆಗೆ ಹೊರಡುತ್ತೇವೆ–ಎಂದು ಹೇಳಿ ನಮ್ಮ ಮನೆತನದ ಮರ್ಯಾದೆಯನ್ನು ಹಾಳು ಮಾಡಿದ್ದಾಳೆ. ಇವಳನ್ನು ಒದ್ದು ಹೊರಗೆ ಹಾಕಿರಿ. ನನ್ನ ಮಗನಿಗೆ ಮತ್ತೊಂದು ಮದುವೆ ಮಾಡುತ್ತೇನೆ ಎಂದು ಗದ್ದರಿಸಿದಳು.

ಅಲ್ಪಸ್ವಲ್ಪ ಅರಿವು ಉಳ್ಳ ಮಾವ, ಹೆಂಡತಿಯ ಮಾತಿಗೆ ಒಮ್ಮೆಲೇ ದುಡುಕದೇ ಸುಶಿಕ್ಷಿತಳಾದ ಸೊಸೆ ಹೀಗೇಕೆ ನುಡಿದಿರಬೇಕು ? ಇಂತೆಂದು ಮನದಲ್ಲಿ ಯೋಚಿಸಿ, ಸೊಸೆಯನ್ನು ಹತ್ತಿರ ಕರೆದು, ಅಮ್ಮಾ ! ನಮ್ಮ ಮನೆಯಲ್ಲಿ ನಾವಾಗಲಿ, ನೀನಾಗಲಿ ಎಂದೂ ತಂಗಳು ಅನ್ನವನ್ನು ಉಂಡಿಲ್ಲ, ಹೀಗಿರುವಾಗ ನೀನು ಭಿಕ್ಷುಕನಿಗೆ ಹಾಗೇಕೆ ಹೇಳಿದೆ ? ಎಂದು ಕೇಳಲು, ಆಗ, ಸೊಸೆಯು–ಮಾವನವರೇ ನಾನು ಹೇಳಿದ ಅಡುಗೆ ಗಡಿಗೆಯಲ್ಲಿ ಮಾಡಿದ್ದಲ್ಲ, ನಮ್ಮ ಕರ್ಮವೆಂಬ ಅಡುಗೆಯ ಮಾತು. ಹಿಂದಣ ಜನ್ಮದಲ್ಲಿ ಅನೇಕ ಪುಣ್ಯ ಕರ್ಮಗಳನ್ನು ಮಾಡಿದ್ದರಿಂದಲೇ ಈಗ ನೀವು ಸಿರಿವಂತರ ಮನೆಯಲ್ಲಿ ಜನಿಸಿದ್ದೀರಿ. ಸದ್ಯಃ ನೀವು ಅನುಭವಿಸುವ ಸುಖ ಹಿಂದಣ ಜನ್ಮದಲ್ಲಿ ಮಾಡಿದ್ದೆಂದಬಳಿಕ ಅದು ತಂಗುಳದ್ದಾಗಲಿಲ್ಲವೇ ? ಆದೂ ಅಲ್ಲದೇ ''ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು'' ಎನ್ನುವ ಗಾದೆಯ ಮಾತಿನಂತೆ ಪುನಃ ಪುಣ್ಯ ಕರ್ಮವನ್ನು ಮಾಡದೇ ಪೂರ್ವದ ಕರ್ಮವನ್ನೇ ಉಣ್ಣುತ್ತ ಕುಳಿತರೆ, ಅದು ಮುಗಿದ ಬಳಿಕ ನಾವಾದರೂ ಭಿಕ್ಷೆ ಬೇಡಲೇಬೇಕಾಗುವುದು. ಅಂತೆಯೇ ''ಹಿಂದಿನ ಕರ್ಮವನ್ನು ಇಂದುಂಡುಣ್ಣಬೇಕಾತ್ಮ ಇಂದಿನ ಕರ್ಮವನು ಮುಂದುಂಡುಣ್ಣಬೇಕಾತ್ಮ'' ಎಂದು ಜ್ಞಾನಿಗಳು ನುಡಿದಿಲ್ಲವೆ ? ಎಂಬುದಾಗಿ ತಾತ್ವಿಕ ರೀತಿಯಿಂದ ತಂಗುಳ ಅಡುಗೆಯೆಂದರೆ ಏನು ಎಂಬುದನ್ನು ಸೊಸೆ ಯಿಂದ ತಿಳಿದ ಮಾವನಿಗೆ ಔದಾರ್ಯ ಮೊಳೆಯಿತು. ಆಗ ಕೋಟಿ ಕೋಲಿಯ ಕೀಲಿ ಯನ್ನು ಸೊಸೆಯ ಕೈಗಿತ್ತು ಇಂದಿನಿಂದ ದಾನ–ಧರ್ಮಾದಿಗಳನ್ನು ಮಾಡೆಂದು ಹೇಳಿದನು.

ಮಾವನ ಹೇಳಿಕೆಯಂತೆ ಕೋಲಿಯ ಬೀಗವನ್ನು ತೆಗೆದು ನೋಡಿದಾಗ ಅಲ್ಲಿ ಹುಳುಹತ್ತಿದ ಗೋಧಿ–ಕಡಲೆಗಳೇ ಇದ್ದವು. ಆಗ ಸೊಸೆಯು ಮಾವನಿಗೆ ಇನ್ನೂ ಪೂರ್ಣ ಅರಿವಾಗಿಲ್ಲ, ಅವನಿಗೆ ಅರಿವು ಮಾಡಿಕೊಡಬೇಕೆಂದು ಅವೇ ಗೋಧಿಯನ್ನು ಬೀಸಿ ಚಪಾತಿಯನ್ನು ಹಾಗೂ ಕಡಲೆಗಳನ್ನೂ ಬೀಸಿ ಆದರಿಂದ ಹಿಟ್ಟಿನ ಪಲ್ಲೆಯನ್ನು ಮಾಡಿ ಊಟಕ್ಕೆ ನೀಡಿದಳು. ಅದನ್ನು ಉಣ್ಣುವಾಗ ಮಾವನು–ತಂಗೀ ! ಇಂದು ಅಡುಗೆ

ಯಾಕೋ ಬಾಯಿಯೊಳಗೆ ಮುಗ್ಗಸು–ಮುಗ್ಗಸು ಹತ್ತುತ್ತಿದೆಯಲ್ಲಾ ? ಎಂದನು. ಆಗ ಸೊಸೆಯು "ಮಾವನವರೆ, ನೀವು ನೀಡಿದಂತಹ ಪದಾರ್ಥಗಳೇ ನಿಮಗೆ ಮುಂದಿನ ಜನ್ಮದಲ್ಲಿ ಉಣ್ಣಲು ದೊರೆಯುವವಾದ್ದರಿಂದ ಈಗಿನಿಂದಲೇ ಹುಳುಕು ಪದಾರ್ಥವನ್ನು ಉಣ್ಣುವ ರೂಢಿಯಾಗಲೆಂದು ನೀವು ನೀಡಲು ಕೊಟ್ಟ ಗೋಧಿ ಹಾಗೂ ಕಡಲೆ ಗಳಿಂದಲೇ ಇಂದು ಅಡುಗೆಯನ್ನು ಮಾಡಿರುವೆನೆ"ಂದು ಹೇಳಿದಳು. ಸೊಸೆಯ ಈ ಮಾತನ್ನು ಕೇಳಿದಾಗ ಮಾವನಿಗೆ ಪೂರ್ಣ ಅರಿವಾಯಿತು. ಅಂದಿನಿಂದ ಮನೆಯವರೆಲ್ಲ ಸುಸಂಸ್ಕೃತರಾಗಿ ತಮ್ಮ ಮುಂದಿನ ಸುಖಕ್ಕಾಗಿ ದಾನ ಧರ್ಮಗಳನ್ನು ಮಾಡ ತೊಡಗಿದರು.

ಇದೆಲ್ಲವನ್ನೂ ಪರ್ಯಾಲೋಚಿಸಿದಾಗ ಜಗದ ವಿಷಮತೆಗೆ ನಮ್ಮ ನಮ್ಮ ಕರ್ಮ ಗಳೇ ಕಾರಣಗಳಾದ್ದರಿಂದ ಈಶ್ವರನಿಗೆ ವೈಷಮ್ಯ ನಿರ್ದಯತೆಗಳೆಂಬ ದೋಷಗಳಿಲ್ಲ, ಅಂತೆಯೇ "ನಾ ಮಾಡಿದ ಕರ್ಮಬಲವಂತವಾದರೆ ನೀ ಮಾಡುವುದೇನೋ ಹರಿಯೇ" ಎಂದು ದಾಸರು ಹಾಡಿ ಹರಿಸಿದ್ದಾರೆ. ಬ್ರಹ್ಮಸೂತ್ರದ ಶಾಂಕರ ಭಾಷ್ಯೆಯಲ್ಲಿ ಶ್ರೀ ಶಂಕರಾಚಾರ್ಯರು "ಈಶ್ವರಃ ಪರ್ಜನ್ಯವತ್ ದ್ರಷ್ಟವ್ಯಃ" ಎಂಬುದಾಗಿ ಸಮರ್ಥಿಸಿದ್ದಾರೆ. ಒಕ್ಕಲಿಗನು ಹೊಲದಲ್ಲಿ ಕಬ್ಬು, ಗೋಧಿ, ಮೆಣಸಿನ ಬೀಜ ಮುಂತಾದ ಪದಾರ್ಥಗಳನ್ನು ಬಿತ್ತುತ್ತಾನೆ. ಮಳೆಯಾದೊಡನೆ ಎಲ್ಲ ಬೀಜಗಳೂ ಮೊಳೆತು ಬೆಳೆದು ಫಲಭೂತಗಳಾದಾಗ ಎಲ್ಲವುಗಳಲ್ಲಿ ವಿಭಿನ್ನ ರಸಗಳ ಅನುಭವ ವಾಗುವುದು. ಮಳೆಯ ನೀರು ಒಂದೇ ಆಗಿದ್ದರೂ ಆಯಾ ವಸ್ತುಗಳಲ್ಲಿ ರಸಭೇದ ವಾಗಲು ತತ್ತತ್ ಬೀಜಗಳೇ ಹೇಗೆ ಕಾರಣಗಳೋ ಅದರಂತೆ ಜಗತ್ಕರ್ತನಾದ ಶಿವನು ಪ್ರಾಣಿಗಳ ಅದೃಷ್ಟಾನುಸಾರವಾಗಿ ರಚಿಸುವುದರಿಂದ ಅವನಲ್ಲಿ ವೈಷಮ್ಯವಿಲ್ಲ.

ಇಂದಿನ ವಿಜ್ಞಾನ ಯುಗದಲ್ಲಿ ವಿದ್ಯುಚ್ಛಕ್ತಿಯು–ರೇಡಿಯೋದಿಂದ ಸುಮಧುರ ಸಂಗೀತವನ್ನು, ಬಲ್ಬಿನಿಂದ ಬೆಳಕನ್ನು, ಪಂಖಾದಿಂದ ತಂಪಾದ ಗಾಳಿಯನ್ನು, ಗಿರಣಿ ಗಳಿಂದ ಹಿಟ್ಟು ಬೀಸುವುದನ್ನು, ಪ್ರೆಸ್ಸಿನಿಂದ ಪುಸ್ತಕ ಮುದ್ರಿಸುವುದನ್ನು ಹೀಗೆ ಅನಂತ ಕಾರ್ಯಗಳನ್ನು ಮಾಡುವುದನ್ನು ನಾವು ನೋಡುತ್ತೇವೆ. ಎಲ್ಲಕ್ಕೂ ಚಾಲನೆಯುಂಟು. ಮಾಡುವ ವಿದ್ಯುಚ್ಛಕ್ತಿಯು ಒಂದೇ ಆದರೂ ಯಂತ್ರಗಳ ಭೇದದಿಂದ ವಿಭಿನ್ನ ಕ್ರಿಯೆ ಗಳಾಗುವಂತೆ ಚಾಲಕನಾದ ಪರಮಾತ್ಮನೋರ್ವನಾದರೂ ಪ್ರಾಣಿಗಳ ಕರ್ಮ ರೂಪ ಗಳಾದ ಯಂತ್ರಗಳು ವಿಭಿನ್ನಗಳಾದ್ದರಿಂದ, ಜಗತ್ತಿನಲ್ಲಿ ವೈವಿಧ್ಯವುಂಟಾಗಿದೆ ಎಂದು ಅರಿಯಬೇಕು.

ನಮ್ಮ ವೈಷಮ್ಯಕ್ಕೆ ನಮ್ಮ ಕರ್ಮಗಳೇ ಕಾರಣಗಳೆಂದಾಗ ಪುನಃ ಈಶ್ವರನ ಅವಶ್ಯಕತೆ ಏಕೆ ? ಎನ್ನುವ ಪ್ರಶ್ನೆಯು ಸಮಂಜಸವಲ್ಲ, ಯಾಕೆಂದರೆ ನಾವು ಮಾಡಿದ ಕರ್ಮಗಳು ಜಡಗಳಾದ್ದರಿಂದ ಸ್ವತಃ ಅವುಗಳಿಗೆ ಫಲವನ್ನು ಕೊಡುವ ಸಾಮರ್ಥ್ಯವಿಲ್ಲ, ಅಂಗಡಿಕಾರನು ನಾವು ಕೊಟ್ಟ ಹಣಕ್ಕೆ ಬರುವ ಪದಾರ್ಥಗಳನ್ನು ತೂಗಿ ಕೊಡುವಂತೆ, ಪ್ರಾಣಿಗಳ ಕರ್ಮಗಳನ್ನು ಪರೀಕ್ಷಿಸಿ ಅದಕ್ಕೆ ಯೋಗ್ಯವಾದ ಫಲವನ್ನು ಕೊಡುವುದಕ್ಕಾಗಿ ಈಶ್ವರನು ಅಂಗಡಿಕಾರನಂತೆ ಮಧ್ಯಸ್ಥನಾಗಿದ್ದಾನೆ. ಒಂದು ವೇಳೆ ಸರ್ವಜ್ಞನಾದ

ಈಶ್ವರನು ಇರದೇ ಹೋಗಿದ್ದರೆ ಒಡೆಯನಿಲ್ಲದ ಅಂಗಡಿಯಂತೆ ಜಗವೆಲ್ಲ ವ್ಯವಸ್ಥಾಶೂನ್ಯವಾಗುತ್ತಿತ್ತು.

''ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ''

(ಗೀತಾ ೪–೩೭)

ಎಂಬ ಗೀತೋಕ್ತಿಯಂತೆ ಆತ್ಮಜ್ಞಾನವನ್ನು ಹೊಂದಿರುವವನು ಸಂಚಿತ ಹಾಗೂ ಆಗಾಮಿ ಕರ್ಮಗಳಿಂದ ಮುಕ್ತನಾದರೂ, ''ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ'' ಎನ್ನುವ ಮಹಾಭಾರತದ ವಚನದಂತೆ ಪ್ರಾರಬ್ಧ ಕರ್ಮವನ್ನು ಭೋಗಿಸಿಯೇ ತೀರಿಸಬೇಕಾಗುವುದು. ಪ್ರಾರಬ್ಧಕರ್ಮದ ದೃಷ್ಟಿಯಲ್ಲಿ ಜ್ಞಾನಿ–ಅಜ್ಞಾನಿಗಳ ತಾರತಮ್ಯ ವಿರುವುದಿಲ್ಲ. ಆದ್ದರಿಂದಲೇ ಶ್ರೀನಿಜಗುಣರು–

ಭಾಪು ವಿಧಿ ಬಲ್ಲಿದರು ಬೇರಾರುಂಟು ।
ರೂಪುಗೆಡಿಸಿದೆ ಮಹಾಮಹಿಮರೆಲ್ಲರನು ॥ ಪ ॥

ಹರಿಯನೀರ್ಕೈದು ಪರಿಭವದೊಳಗೆ ಬಳಲಿಸಿದೆ ।
ಸರಸಿಜೋದ್ಭವನ ನಡುದಲೆಯೊಂದನಳಿದೆ ॥
ಸುರುಚಿರ ಸುಧಾಕರನ ತನುಗುಂದಿಸಿದೆ, ದೇವ– ।
ವರನ ಮೈಯೊಳು ಲಜ್ಜೆವನೆಯನೊಂದಿಸಿದೆ ॥ ೧ ॥

ವೇದವನು ವಾಜಿಯೆನಿಸಿದೆ ಬಾದರಾಯಣನ ।
ವಾದದೊಳು ತೋಳ ತೊಲಗಿಸಿದೆ ದಿನಮಣಿಗೆ ।
ಬಾಧೆವಡಿಸಿದೆ ರಾಹುವಿಂದೆ ಫಣಿ ಗಜ ಪಕ್ಷಿ – ।
ಗಾದ ಸಾಹಸ ಕೆಡಿಸಿ ಸೆರೆಯೊಳೊಂದಿಸಿದೆ ॥ ೨ ॥

ಏಳು ಧರಣಿಯನಾಳುವರಸನಂ ಪೊಲೆಯನಿಗೆ– ।
ಯಾಳು ಮಾಡಿದೆ ಪಂಚಸಾರ್ವಭೌಮರಿಗೆ ।
ಬಾಳದರಿಕೆಯನಿತ್ತೆ ಶಂಭುಲಿಂಗೈಕ್ಯರೊಳು ।
ಕೀಲಿಸಿದೆ ಪ್ರಾರಬ್ಧ ಭೋಗ ನೀತಿಯನು ॥ ೩ ॥

(ಕೈ. ನೀ. ಸ್ಥ ೧೦)

ಭೃಗುಋಷಿಯ ಶಾಪದಿಂದ ಹರಿಗಾದ ಹತ್ತು ಅವತಾರಗಳು, ಶಿವನಿಂದ ಬ್ರಹ್ಮನ ನಡುದಲೆಯ ಛೇದನ, ಗುರುಪತ್ನಿ ತಾರೆಯ ಗಮನದಿಂದ ಚಂದ್ರನಿಗಾದ ಕ್ಷಯ ರೋಗ, ಅಹಲ್ಯಾಗಮನದ ಫಲವಾಗಿ ಗೌತಮ ಋಷಿಯ ಶಾಪದಿಂದ ದೇವೇಂದ್ರನ ಶರೀರವೆಲ್ಲ ಯೋನಿಚಿಹ್ನಾಂಕಿತವಾದದ್ದು, ತ್ರಿಪುರ ಸಂಸಾರ ಲೀಲೆಯಲ್ಲಿ ವೇದಗಳು ಪರಮಾತ್ಮನ ರಥಾಶ್ವಗಳಾದದ್ದು, ಹರಿಯೇ ಸರ್ವೋತ್ತಮನೆಂದು ಕಾಶಿ–ವಿಶ್ವನಾಥ ಮಂದಿರದಲ್ಲಿ ಹರಿ–ಹರರ ಭೇದ ಮಾಡಿದ ವ್ಯಾಸನ ಬಾಹುಬಂಧನವಾದದ್ದು, ನಿತ್ಯ ಮುಕ್ತನೂ, ಪ್ರಕಾಶ ರೂಪನೂ ಆದ ಸೂರ್ಯನಾರಾಯಣನಿಗೆ ಆ ರಾಹುವಿನಿಂದ ಗ್ರಹಣವಾಗುವುದು, ಸ್ವತಂತ್ರಗಳೂ ಬಲಶಾಲಿಗಳೂ ಆದ ಹಾವು, ಆನೆ ಮತ್ತು ಪಕ್ಷಿ ಮುಂತಾದವುಗಳಿಗೆ ಹಾವಾಡಿಗ ಹಾಗೂ ಸರ್ಕಸ್ಸಿನವರಿಂದ ಬಂಧನಕ್ಕೊಳಗಾಗುವುದು;

ಸಪ್ತದ್ವೀಪಕ್ಕೆ ಚಕ್ರವರ್ತಿಯಾದ ಹರಿಶ್ಚಂದ್ರನು ಹೊಲೆಯನಿಗೆ ಆಳಾಗಿದ್ದು, ಮಹಾಬುದ್ಧಿವಂತರೂ, ಬಲಶಾಲಿಗಳೂ ಮತ್ತು ದೈವೀಕೃಪಾ ಸಂಪನ್ನರೂ ಆದ ಪಾಂಡವರು ವನವಾಸ ಹಾಗೂ ಅಜ್ಞಾತವಾಸಗಳನ್ನನುಭವಿಸಿದ್ದು–ಹೀಗೆ ಇವೆಲ್ಲವೂ ಪ್ರಾರಬ್ಧ ಕರ್ಮದ ಫಲಗಳೆಂದೇ ಅರುಹಿ, ಇದರಿಂದ ತಪ್ಪಿಸಿಕೊಳ್ಳುವುದು ಆರಿಂದಲೂ ಅಸಾಧ್ಯವೆಂಬುದಾಗಿ ತಿಳಿಸಿದ್ದಾರೆ.

ಈ ಪ್ರಾರಬ್ಧಕರ್ಮಕ್ಕೆ ಲೌಕಿಕ ಭಾಷೆಯಲ್ಲಿ ದೈವ, ಹಣೆಬರಹ ಮುಂತಾಗಿ ಹೇಳುವುದುಂಟು. ಈ ಬರಹವು ಹರಿ–ಹರ–ಬ್ರಹ್ಮಾದಿಗಳಿಂದಲೂ ಕೆಡಿಸಲಸಾಧ್ಯವು; ಅಂತೆಯೇ ಸುಭಾಷಿತಕಾರರು–

ಹರಿಣಾಪಿ ಹರೇಣಾಪಿ ಬ್ರಹ್ಮಣಾಪಿ ಸುರೈರಪಿ ।
ಲಲಾಟಲಿಖಿತಾ ರೇಖಾ ಪರಿಮಾರ್ಷ್ಟುಂ ನ ಶಕ್ಯತೇ ॥

ಎಂಬುದಾಗಿ ನುಡಿದಿದ್ದಾರೆ. ಇದಲ್ಲದೇ ಇನ್ನೋರ್ವ ಕವಿಯು,

''ಸ್ವಯಂ ಮಹೇಶಃ ಶ್ವಶುರೋ ನಗೇಶಃ ।
ಸಖಾ ಧನೇಶಸ್ತನಯೋ ಗಣೇಶಃ ।
ತಥಾಪಿ ಭಿಕ್ಷಾಟನಮೇವ ಶಂಭೋ–
ರ್ಬಲೀಯಸೀ ಕೇವಲಮೀಶ್ವರೇಚ್ಛಾ ॥

ಸ್ವಯಂ ಅನಂತೈಶ್ವರ್ಯಶಾಲಿಯಾಗಿದ್ದರೂ, ಸಾಕ್ಷಾತ್ ಪರ್ವತಾಧೀಶ್ವರನಾದ ಹಿಮವಂತ ಮಹಾರಾಜನೇ ಮಾವನಾಗಿದ್ದರೂ, ಧನಾಧಿಪತಿಯಾದ ಕುಬೇರನೇ ಪರಮಮಿತ್ರನಾಗಿದ್ದರೂ, ಸಾಕ್ಷಾತ್ ಗಣೇಶನೇ ತನ್ನ ಪುತ್ರನಾಗಿದ್ದರೂ, ಆ ಪರಮಾತ್ಮನಿಗೆ ಬ್ರಹ್ಮ ಕಪಾಲವಿಡಿದು ಭಿಕ್ಷೆಬೇಡುವುದು ತಪ್ಪಲಿಲ್ಲವೆಂದ ಬಳಿಕ, ಪ್ರಾರಬ್ಧಕರ್ಮವು ಯಾರನ್ನೂ ಬಿಡಲಾರದೆಂದು ಬಹು ರೋಚಕವಾಗಿ ಹೇಳಿದ್ದಾನೆ.

ಒಮ್ಮೆ ಓರ್ವ ದೈವಜ್ಞನು ಸಮುದ್ರತೀರದಲ್ಲಿ ಸಂಚರಿಸುವಾಗ ತಲೆಬುರುಡೆಯೊಂದನ್ನು ಕಂಡು, ಇದು ಯಾರದಿರಬಹುದೆಂದು ಪರೀಕ್ಷಿಸುವುದಕ್ಕಾಗಿ ಸಮೀಪಕ್ಕೆ ಹೋದಾಗ,

''ಜನ್ಮಪ್ರಭೃತಿ ದಾರಿದ್ರ್ಯಮಟನಂ ಪೃಥಿವೀತಲೇ ।
ಸಮುದ್ರತೀರೇ ಮರಣಂ ಕಿಂಚಿದಗ್ರೇ ಭವಿಷ್ಯತಿ ॥''

ಈತನು ಜನ್ಮದಿಂದಲೇ ದರಿದ್ರನು, ಜೀವನವನ್ನೆಲ್ಲ ಸಂಚರಿಸುವುದರಲ್ಲಿಯೇ ಕಳೆಯುವನು, ಸಮುದ್ರ ದಡದಲ್ಲಿ ಮಡಿಯುವನು, ಇಷ್ಟಾದರೂ ಇನ್ನೂ ಸ್ವಲ್ಪ ಆಗುವುದಿದೆ–ಎಂಬುದಾಗಿ ಬರೆದಿರುವ ಅದರ ಹಣೆಬರಹವನ್ನು ಜ್ಯೋತಿಷ್ಯಶಾಸ್ತ್ರದಿಂದ ಅರಿವು ಮಾಡಿಕೊಂಡು, ಸಮುದ್ರದಂಡೆಯಲ್ಲಿ ಸತ್ತದ್ದು ನಿಜವಾದ್ದರಿಂದ ಇದರ ಗತಿಯು ಇನ್ನೇನಾಗುವುದಿದೆ ಪರೀಕ್ಷಿಸಬೇಕೆಂದು ಯೋಚಿಸಿ, ಆ ತಲೆಬುರುಡೆಯನ್ನು ತನ್ನ ಜೋಳಿಗೆಯಲ್ಲಿ ಹಾಕಿಕೊಂಡು ಊರಿನತ್ತ ಹೊರಟನು.

ದಾರಿಯೊಳಗೆ ಗೃಹಸ್ಥನೋರ್ವನು ಭೆಟ್ಟಿಯಾದಾಗ ಅವನ ಕೈಯಲ್ಲಿ ಆ ತಲೆ ಬುರುಡೆಯನ್ನು ಕೊಟ್ಟು, ಇದನ್ನು ನಿಮ್ಮ ಮನೆಯೊಳಗೆ ಭದ್ರವಾಗಿ ಯಾರಿಗೂ ತಿಳಿಯದಹಾಗೆ ಬಚ್ಚಿಡು, ನಾನು ಮೂರು ದಿನಗಳನಂತರ ಬಂದು ತೆಗೆದುಕೊಂಡು ಹೋಗುವೆನೆಂದು ಹೇಳಿ ದೈವಜ್ಞನು ಹೊರಟುಹೋದನು.

ದೈವಜ್ಞನ ಮಾತಿಗೆ ಮರ್ಯಾದೆಕೊಟ್ಟು ಗೃಹಸ್ಥನು ಅದನ್ನು ಮನೆಗೆ ತೆಗೆದು ಕೊಂಡು ಹೋಗಿ ಒಂದು ಪೆಟ್ಟಿಗೆಯಲ್ಲಿ ಇಟ್ಟು ಭದ್ರವಾದ ಬೀಗವನ್ನು ಹಾಕಿ ಅದರ ಕೈಯನ್ನು ತನ್ನ ಹತ್ತಿರ ಇಟ್ಟುಕೊಂಡ. ಪೆಟ್ಟಿಗೆಯ ಕೈಯನ್ನು ದಿನದಂತೆ ಮನೆಯಲ್ಲಿಡುವು ದನ್ನು ಬಿಟ್ಟು ತನ್ನ ಜೊತೆ ತೆಗೆದುಕೊಂಡು ಹೋಗಬೇಕಾದರೆ ಇದರಲ್ಲಿ ಏನೋ ಬೆಲೆಬಾಳುವ ವಸ್ತುವನ್ನು ಇಟ್ಟಿರಬಹುದು ಎಂದು ಹೆಂಡತಿಯು ಯೋಚಿಸಿದಳು. ಮರುದಿವಸ ಏನನ್ನೂ ಹೇಳದೇ, ಅದನ್ನು ನೀನು ನೋಡಬಾರದು ಎಂಬುದಾಗಿ ಹೆಂಡತಿಗೆ ಹೇಳಿ ಹೊರಟುಹೋದ.

ನಿಷೇಧಕ್ಕೆ ಅಪೇಕ್ಷೆಯು ಹೆಚ್ಚುವಂತೆ ಹೆಂಡತಿಗೆ ನೋಡುವ ಕುತೂಹಲ ಕೆರಳಿತು. ಅದೇನಿದ್ದರೂ ನೋಡಲೇಬೇಕೆಂದು ಮಾರನೇ ದಿವಸ ಗಂಡನು ಆಫೀಸಿಗೆ ಹೋದಾಗ ಪೆಟ್ಟಿಗೆಯ ಬೀಗವನ್ನು ಮುರಿದು ನೋಡುತ್ತಾಳೆ, ಹೆಣದ ತಲೆಬುರುಡೆ, ಅಯ್ಯೋ ! ನನ್ನ ಗಂಡನಿಗೆ ಹುಚ್ಚು ಹಿಡಿದಿರಬಹುದೇನು ? ಶ್ಮಶಾನದಲ್ಲಿಯ ತಲೆಬರುಡೆಯನ್ನು ಮನೆಯೊಳಗೆ, ಅದರಲ್ಲಿಯೂ ಪೆಟ್ಟಿಗೆಯೊಳಗೆ ಇಡಬೇಕಾದರೆ, ಇದರಲ್ಲಿ ಏನಾದರೂ ರಹಸ್ಯವಿರಬಹುದೆಂದು ವಿಚಾರಿಸಿ, ಯಾರಿಂದಲಾದರೂ ಕೇಳಿ ತಿಳಿಯೋಣವೆಂದು ಮನೆ ಹೊರಗೆ ಬರಲು, ಮಗ್ಗಲು ಮನೆಯ ಮುದುಕಿ ಬಾಗಿಲಲ್ಲಿಯೇ ಕುಳಿತಿತ್ತು, ಆಗ ಆ ಹೆಣ್ಣುಮಗಳು–ನಾನು ಈ ಮನೆಗೆ ಸೊಸೆಯಾಗಿ ಬಂದು ಒಂದು ವರ್ಷವಾಗಿದೆ, ನನಗೆ ನನ್ನ ಗಂಡನ ಸ್ವಭಾವದ ಪೂರ್ಣ ಅರಿವಾಗಿಲ್ಲ, ಈ ಅಜ್ಜಿಯು ಬಾಲ್ಯದಿಂದಲೇ ನನ್ನ ಗಂಡನ ಸ್ವಭಾವವನ್ನು ಬಲ್ಲವಳು. ಆದ್ದರಿಂದ ಇವಳನ್ನೇ ಕೇಳಬೇಕೆಂದು ಯೋಚಿಸಿ, ಮುದುಕಿಯನ್ನು ಮನೆಯೊಳಗೆ ಕರೆದೊಯ್ದು ಆ ತಲೆಬರುಡೆಯನ್ನು ತೋರಿಸಿ, ಇದರ ರಹಸ್ಯವೇನಿರಬಹುದು ? ಎಂದು ಪ್ರಶ್ನಿಸಿದಳು.

ಜಗಳವಿಲ್ಲದೆಡೆ ಜಗಳಹಚ್ಚುವುದು ಮುದುಕಿಯ ಸ್ವಭಾವವಾಗಿತ್ತು, ಇವರ ಸರಸ ಜೀವನವನ್ನು ವಿರಸ ಮಾಡಲು ಇದೇ ಯೋಗ್ಯಸಮಯವೆಂದು ಭಾವಿಸಿದ ಮುದುಕಿಯು, ''ತಂಗೀ ! ನಿನ್ನನ್ನು ಮದುವೆಯಾಗುವ ಪೂರ್ವದಲ್ಲಿ ನಿನ್ನ ಗಂಡ ಮತ್ತೋರ್ವಳನ್ನು ಮದುವೆಯಾಗಿದ್ದ. ಮದುವೆಯಾದ ಮೂರು ತಿಂಗಳಲ್ಲಿಯೇ ಆಕೆ ಮಡಿದು ಹೋದಳು. ಆಕೆ ಮಡಿದರೂ ಅವಳ ಮೇಲಿನ ಪ್ರೇಮ ಕಡಿಮೆಯಾಗದ್ದರಿಂದ ಇಲ್ಲಿಯವರೆಗೆ ಬೇರೆಕಡೆ ತೆಗೆದಿಟ್ಟಿದ್ದ ಅವಳ ತಲೆಬುರುಡೆಯನ್ನು ಸದ್ಯಃ ಮನೆಯಲ್ಲಿ ತಂದಿರಿಸಿದ್ದಾನೆ'' ಎಂಬುದಾಗಿ ಮಾತ್ಸರ್ಯ ಬೀಜವನ್ನು ಬಿತ್ತಿದಳು.

ಇಷ್ಟನ್ನು ಹೇಳಿ ಮುದುಕಿಯು ಹೊರಟುಹೋದೊಡನೆ ಸವತಿಯ ಮಾತ್ಸರ್ಯದ ಕ್ರೋಧಾಗ್ನಿಯಲ್ಲಿ ತಪ್ತಳಾದ ಆ ಹೆಣ್ಣುಮಗಳು ಸಿಟ್ಟಿನ ಭರದಲ್ಲಿ ತಲೆಬುರುಡೆಯನ್ನು ಒರಳೊಳಗೆ ಹಾಕಿ ಒಣಕೆ ಪೆಟ್ಟುಕೊಟ್ಟು ಅದನ್ನು ಚೂರ್ಣ–ಚೂರ್ಣಮಾಡಿ ಅರಿವೆ

ಯಲ್ಲಿ ಗಂಟುಕಟ್ಟಿ ಮೂಲೆಯಲ್ಲಿ ಎಸೆದು ತಾನೊಂದು ಮೂಲೆಯಲ್ಲಿ ತಲೆಗೆ ಬಟ್ಟೆಯನ್ನು ಬಿಗಿದು ಮಲಗಿಕೊಂಡಳು.

ಗಂಡನು ಆಫೀಸಿನಿಂದ ಬಂದು ನೋಡುತ್ತಾನೆ ಮನೆಯ ವಾತಾವರಣವೆಲ್ಲ ಬದಲಾಗಿತ್ತು, ಏನು ಆಗಿರಬಹುದೆಂದು ವಿಚಾರಿಸಲು, ಹೆಂಡತಿಯ ಸಮೀಪಕ್ಕೆ ಹೋಗಿ, ಏನೇ ! ಏನಾಗಿದೆ ? ಹೀಗೇಕೆ ಮಲಗಿರುವೆ ? ಏಳು ಚಹಾ ಮಾಡಿಕೊಡು ಎಂದು ಪ್ರೇಮದ ಧ್ವನಿಯಲ್ಲಿ ಎಬ್ಬಿಸಿದ. ಆಗ ಹೆಂಡತಿಯು ಇನ್ನು ಮೇಲೆ ನಾನೇನನ್ನೂ ಮಾಡುವುದಿಲ್ಲ, ನಿಮ್ಮ ಮನೆಯಲ್ಲಿಯೂ ಇರುವುದಿಲ್ಲ, ಆ ನಿಮ್ಮ ಪ್ರೇಮದ ಮಡದಿ ಯಿಂದಲೇ ಮಾಡಿಸಿಕೊಳ್ಳಿರಿ ಎಂದು ಅಳತೊಡಗಿದಳು.

ಹೆಂಡತಿಯ ಈ ಧ್ವನಿಯನ್ನು ಕೇಳಿ ಏನೋ ಅನಾಹುತವಾಗಿದೆಯೆಂದು ಪೆಟ್ಟಿಗೆಯ ಕಡೆಗೆ ಹೋಗಿ ನೋಡಲು ಪೆಟ್ಟಿಗೆಯ ಬೀಗ ಮುರಿದಿದೆ. ಒಳಗಿನ ತಲೆಬುರುಡೆ ಪುಡಿಯಾಗಿ ಮೂಲೆಯಲ್ಲಿ ಬಿದ್ದಿದೆ. ನೋಡಿ ಗಂಡನು ''ಅಯ್ಯೋ ! ದೈವಜ್ಞನೇ, ನನ್ನ ಸಂಸಾರವನ್ನು ಕೆಡಿಸಬೇಕೆಂದು ಈ ತಲೆ ಬರುಡೆಯನ್ನು ನನ್ನ ಕೈಗಿತ್ತೆಯಾ ?'' ಎಂದು ಗೋಳಾಡುತ್ತಿರುವಲ್ಲಿ ಮೂರು ದಿನವಾಗಿದೆ. ಅದರ ಗತಿ ಏನಾಗಿರ ಬಹುದೆಂದು ವಿಚಾರಿಸಲು ದೈವಜ್ಞ ಬಂದೇ ಬಿಟ್ಟನು. ನಡೆದ ಪ್ರಸಂಗವೆಲ್ಲವನ್ನೂ ತಿಳಿದು ಆಶ್ಚರ್ಯಚಕಿತನಾದ ದೈವಜ್ಞನು, ಅಯ್ಯೋ, ತಲೆಬರುಡೆಯೇ ಈ ಹೆಣ್ಣುಮಗಳ ಕೈಯಿಂದ ಚೂರ್ಣವಾಗುವಷ್ಟು ಉಳಿದಿತ್ತೇ ! ನಿನ್ನ ಹಣೆಬರಹ–ಎಂದು ಚಿಂತಿಸಿ ದಂಪತಿಗಳಿಗೆ ಸತ್ಯಸಂಗತಿಯನ್ನು ತಿಳುಹಿಸಿ ವಿರಸವಾದ ಅವರ ಸಂಬಂಧವನ್ನು ಸರಸ ಗೊಳಿಸಿದನು.

ಹೀಗೆ ಪ್ರಾರಬ್ಧ ಕರ್ಮದಿಂದಲೇ ತಯಾರಾದ ಶರೀರವು ಸತ್ಕರ್ಮಾಧೀನ ವಾದ್ದರಿಂದ ಪ್ರಾಣಹೋದರೂ ಅದಕ್ಕೆ ಆಗುವ ಗತಿಗಳು ತಪ್ಪುವುದಿಲ್ಲವೆಂದ ಬಳಿಕ, ಜೀವಂತವಿರುವಾಗ ಯಾರಿಂದ ತಪ್ಪಿಸಲು ಸಾಧ್ಯ ? ಈ ಅಪರಿಹಾರ್ಯವಾದ ಪ್ರಾರಬ್ಧ ಕರ್ಮದ ಫಲವಾಗಿ, ಜೀವಾತ್ಮರೆಲ್ಲರೂ ತರ–ತಮಭಾವದಿಂದ ಜೀವನ ಸಾಗಿಸು ತ್ತಿದ್ದಾರೆ. ಈ ತರ–ತಮದ ಹೊಣೆಯು ಜೀವಾತ್ಮರ ಮೇಲಿದೆಯಲ್ಲದೆ ಸಾಕ್ಷಿಯಾದ ಪರಮಾತ್ಮನು ಇದಕ್ಕೆ ಬಾಧ್ಯಸ್ಥನಲ್ಲ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೦ ಜುಲೈ ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)



## ಆಶೀರ್ವಚನ-೭

ಏತೇಷಾಂ ದೇಹಿನಾಂ ಸಾಕ್ಷೀ ಪ್ರೇರಕಃ ಪರಮೇಶ್ವರಃ ।
ಸಂಸಾರೇ ಭ್ರಮತಾಂ ನಿತ್ಯಂ ಕರ್ಮಯಂತ್ರನಿಯಂತ್ರಣೇ ॥

ದೇಹಿನಾಂ ಪ್ರೇರಕಃ ಶುಂಭುರ್ಹಿತಮಾರ್ಗೋಪದೇಶಕಃ ।
ಪುನರಾವೃತ್ತಿರಹಿತಮೋಕ್ಷಮಾರ್ಗೋಪದೇಶಕಃ ॥

ಸ್ವಕರ್ಮಪರಿಪಾಕೇನ ಪ್ರಕ್ಷೀಣಮಲವಾಸನಃ ।
ಶಿವಪ್ರಸಾದಾಜೀವೋಽಯಂ ಜಾಯತೇ ಶುದ್ಧಮಾನಸಃ ॥

ಶುದ್ಧಾಂತಃಕರಣೇ ಜೀವೇ ಶುದ್ಧ ಕರ್ಮವಿಪಾಕತಃ ।
ಜಾಯತೇ ಶಿವಕಾರುಣ್ಯಾತ್ ಪ್ರಸ್ಫುಟಾ ಭಕ್ತಿರೈಶ್ವರೀ ।
ಜಂತುರಂತ್ಯಶರೀರೋಽಸೌ ಪಿಂಡಶಬ್ದಾಭಿಧೇಯಕಃ ॥ (ಸಿ. ಶಿ. ೫. ೪೯-೫೨)

ಸಂಸಾರದಲ್ಲಿ ಸಂಚರಿಸುವ ಜೀವಾತ್ಮರು ಧರಿಸಿರುವ ದೇಹಗಳು ಕರ್ಮಫಲವನ್ನನು ಭವಿಸುವ ಸಾಧನಗಳು. ಅದಕ್ಕೆಂದೇ ''ಭೋಗಾಯತನಮ್ ಶರೀರಮ್'' ಎಂದಿದ್ದಾರೆ. ಮನೋಬುದ್ಧಿಗಳಿಂದ ಕೂಡಿದ ಜೀವಾತ್ಮನೇ ಸುಖದುಃಖಗಳನ್ನು ಭೋಗಿಸಿದರೂ, ಸ್ಥೂಲ ವಿಷಯಗಳ ಭೋಗವನ್ನು ಸೂಕ್ಷ್ಮ ಶರೀರಕ್ಕೆ ತಲುಪಿಸುವುದಕ್ಕಾಗಿ ಸ್ಥೂಲ ಶರೀರದ ಆವಶ್ಯಕತೆ ಇದೆ. ಈ ಸ್ಥೂಲ-ಸೂಕ್ಷ್ಮಶರೀರಗಳೆರಡೂ ಅಂಧ-ಪಂಗುವಿನಂತೆ ಪರಸ್ಪರ ತಾದಾತ್ಮ್ಯವಾಗಿ ವ್ಯವಹರಿಸುತ್ತವೆ.

ದಾವಾಗ್ನಿಯಿಂದ ಉರಿಯುತ್ತಿರುವ ಅಡವಿಯೊಳಗೆ ಓರ್ವ ಕುರುಡ ಮತ್ತು ಓರ್ವ ಕುಂಟ ಇವರೀರ್ವರೂ ಸಿಕ್ಕುಬಿದ್ದಿದ್ದಾರೆ. ಕುರುಡನಿಗೆ ಕಾಲುಗಳಿವೆ, ಓಡಿ ಹೋಗುವ ಸಾಮರ್ಥ್ಯವಿದೆ. ಆದರೆ ಕಣ್ಣುಗಳಿಲ್ಲದಿರುವುದರಿಂದ ಓಡಿಹೋಗಬೇಕಾದ ಮಾರ್ಗ ಕಾಣಲಾರದು. ಹೆಳವನಿಗೆ ಕಣ್ಣುಗಳಿವೆ, ದಾರಿಕಾಣುತ್ತಿದೆ; ಆದರೆ ಕಾಲುಗಳಿಲ್ಲದ್ದರಿಂದ ಓಡಿಹೋಗಿ ತನ್ನನ್ನು ದಾವಾಗ್ನಿಯಿಂದ ರಕ್ಷಿಸಿಕೊಳ್ಳಲಸಮರ್ಥನಾಗಿದ್ದಾನೆ. ಈ ಸ್ಥಿತಿಯಲ್ಲಿ ಸಮೀಪಸ್ಥರಾದ ಇವರೀರ್ವರೂ ಪರಸ್ಪರ ಒಪ್ಪಂದ ಮಾಡಿಕೊಂಡು ಕಾಲುಳ್ಳ ಕುರುಡನ ಮೇಲೆ ಕಣ್ಣುಳ್ಳ ಕುಂಟನು ಕೂಡ್ರುವನು. ಮೇಲೆ ಕುಳಿತ ಕುಂಟನು ದಾರಿ ಹೇಳುತ್ತಿದ್ದನು. ಅವನು ಹೇಳಿದಂತೆ ಅವನನ್ನು ಹೊತ್ತುಕೊಂಡು ಕಾಲುಳ್ಳ ಕುರುಡ ನಡೆಯುತ್ತಿದ್ದನು. ಭಯಾನಕವಾದ ಆ ದಾವಾಗ್ನಿಯಿಂದ ಪಾರಾಗುವುದಕ್ಕಾಗಿ ಭಯಗೊಂಡು ಬಹು ಶೀಘ್ರವಾಗಿ ಸಾಗಿರುವ ಅವರಿಬ್ಬರಲ್ಲಿ ನಡೆಯುತ್ತಿರುವ ಕುರುಡನಿಗೆ ನಾನೇ ಹೋಗುತ್ತೇನೆಂಬಂತೆಯೂ, ಮೇಲೆ ಕುಳಿತು ಮಾರ್ಗನಿರ್ದೇಶಿಸುವ ಕುಂಟನಿಗೆ ತಾನೇ ಹೋಗುತ್ತೇನೆಂಬಂತೆಯೂ ಭ್ರಮಾತ್ಮಕ ತಾದಾತ್ಮ್ಯವಾದಂತೆ ನಮ್ಮ ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳ ಸಂಬಂಧವಾಗಿದೆ.

ಸೂಕ್ಷ್ಮಶರೀರಕ್ಕೆ ಕಣ್ಣಿದ್ದ ಕುಂಟನಂತೆ ಅರಿವು ಇದೆ. ಆದರೆ ತಾನೊಂದೇ ಹೋಗಲರಿಯದು ಮತ್ತು ಸುಖದುಃಖಗಳನ್ನು ಭೋಗಿಸಲರಿಯದು. ಸ್ಥೂಲಶರೀರವು

ಕಾಲಿದ್ದ ಕುರುಡನಂತೆ ಹೋಗಬಹುದು; ಆದರೆ ಅರಿಯಲರಿಯದು ಹಾಗೂ ಭೋಗಿಸಲರಿಯದು. ಕುಂಟ ಕುರುಡರಿಬ್ಬರೂ ಕೂಡಿ ಅರಣ್ಯವ ದಾಟಿದಂತೆ ಸ್ಥೂಲ ಶರೀರ ಹಾಗೂ ಸೂಕ್ಷ್ಮಶರೀರಗಳೆರಡೂ, ಪರಸ್ಪರ ತಾದಾತ್ಮ್ಯ ಹೊಂದಿದಾಗ ಜೀವಾತ್ಮನಿಗೆ ಸುಖದುಃಖಗಳ ಭೋಗವಾಗುವುದು; ಅಂತೆಯೇ ಬೈದ ಬೈಗುಳಗಳು ಶರೀರಕ್ಕೆ ಬಡೆಯದೇ ಮನಸ್ಸಿಗೆ ತಾಗಿದಾಗ, ಸ್ಥೂಲಶರೀರವು ಬೈದವನನ್ನು ಬಡಿಯಲು ಮುಂದೆ ಹೋಗುವುದು. ಬಡೆದ ಪೆಟ್ಟು ಮನಸ್ಸಿಗೆ ತಾಗದೇ ಸ್ಥೂಲಶರೀರಕ್ಕೆ ತಾಗಿದಾಗ ಮನಸ್ಸು ಕ್ರುದ್ಧವಾಗಿ ವಾಣಿಯ ಮುಖಾಂತರ ಬಯ್ಯಲು ಪ್ರಾರಂಭಿಸುವುದು. ಈ ಅನುಭವದಿಂದ ವಿಚಾರ ಮಾಡಿದಾಗ ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳೆರಡೂ, ಕೂಡಿದ್ದಾಗ ಅವೆರಡರ ಅಭಿಮಾನಿಯಾದ ಜೀವಾತ್ಮನು ''ದೇಹೀ'' ಎನಿಸಿ, ಪ್ರಾರಬ್ಧ ಕರ್ಮಾನುಸಾರವಾಗಿ ಸುಖ–ದುಃಖಗಳನ್ನು ಭೋಗಿಸುತ್ತ ಸಂಚರಿಸುತ್ತಿರುತ್ತಾನೆ. ಹೀಗೆ ಸಂಚರಿಸುವ ಜೀವಾತ್ಮರ ಕರ್ಮಯಂತ್ರಗಳ ಸಂಚಾಲಕನಾದ ಪರಮೇಶ್ವರನು ಸಾಕ್ಷಿ ಯಂತೆ ವ್ಯವಹರಿಸುತ್ತಾನೆ.

ಸಾಮಾನ್ಯವಾಗಿ ಲೋಕದಲ್ಲಿ ಕೋರ್ಟು–ಕಚೇರಿಗಳಲ್ಲಿ ''ಸಾಕ್ಷೀ'' ಶಬ್ದದ ಬಳಕೆ ಬಹಳಷ್ಟು ಆಗುವುದು. ವಾದಿ–ಪ್ರತಿವಾದಿಗಳ ಮಧ್ಯದಲ್ಲಿಯಾರೊಬ್ಬರ ಪಕ್ಷಕ್ಕೆ ಅಂಟಿ ಕೊಳ್ಳದೇ ನಿಷ್ಪಕ್ಷಭಾವದಿಂದ ಅವರಿಬ್ಬರಲ್ಲಿ ನಡೆದ ಘಟನೆಗಳ ಬಗ್ಗೆ ಕೋರ್ಟಿನಲ್ಲಿ ನ್ಯಾಯಾಧೀಶರಿಗೆ ಅರಿವು ಮಾಡಿಕೊಡುವ ವ್ಯಕ್ತಿಗೆ ''ಸಾಕ್ಷಿ'' ಎನ್ನುವರು. ಈ ಸಾಕ್ಷಿಗಳ ಹೇಳಿಕೆಯ ಆಧಾರದಿಂದಲೇ ನ್ಯಾಯನಿರ್ಣಯವಾಗುವುದು. ಇಂದಿನಕಾಲದಲ್ಲಿ ಕೋರ್ಟುಗಳಲ್ಲಿ ಸಾಕ್ಷಿ ಹೇಳುವ ವ್ಯಕ್ತಿಗಳು, ಯಾರು ಹಣವನ್ನು ಕೊಡುವರೋ ಅವರಂತೆ ಹೇಳುವವರಾದ್ದರಿಂದ ಆ ವ್ಯಕ್ತಿಗಳು ನಿಜವಾಗಿ ಸಾಕ್ಷೀ ಎಂದು ಕರೆಯಿಸಿ ಕೊಳ್ಳಲು ಯೋಗ್ಯರಲ್ಲ. ಆದ್ದರಿಂದ ''ರಾಗದ್ವೇಷಶೂನ್ಯತ್ವೇ ಸತಿ ಚೇತನತ್ವಮ್ ಸಾಕ್ಷಿತ್ವಮ್'' ಎಂಬುದಾಗಿ ಶಾಸ್ತ್ರಜ್ಞರು ಸಾಕ್ಷಿ ಶಬ್ದದ ಲಕ್ಷಣವನ್ನು ಬರೆದಿದ್ದಾರೆ.

ರಾಗ–ದ್ವೇಷರಹಿತ ಚೇತನವ್ಯಕ್ತಿಯೇ ಸಾಕ್ಷಿಯು. ಕೇವಲ ರಾಗ–ದ್ವೇಷರಹಿತ ವಾದದ್ದೇ ಸಾಕ್ಷಿ ಎಂದರೆ ಇಬ್ಬರು ಜಗಳವಾಡುತ್ತಿರುವಾಗ ಭೂಮಿ, ಗಿಡ, ಕಲ್ಲು ಮುಂತಾದ ಅಚೇತನ ಪದಾರ್ಥಗಳು ಸಾಕಷ್ಟಿರುತ್ತವೆ ಮತ್ತು ಅವುಗಳಿಗೆ ಯಾರ ಬಗ್ಗೆಯೂ ರಾಗವಾಗಲೀ, ದ್ವೇಷವಾಗಲೀ ಇರುವುದಿಲ್ಲ. ಅಂತೆಯೇ ಅವುಗಳಿಗೆ ಸಾಕ್ಷಿ ಎನ್ನಬೇಕಾದೀತು. ಇನ್ನು ಚೇತನವ್ಯಕ್ತಿಯೇ ಸಾಕ್ಷಿ ಎಂದು ಇಷ್ಟನ್ನು ಮಾತ್ರ ಲಕ್ಷಣ ಹೇಳಿದರೆ, ರಾಗ–ದ್ವೇಷಯುಕ್ತನಾದ ವ್ಯಕ್ತಿಯೂ ಸಾಕ್ಷಿಯೆಂದೆನಿಸಿಕೊಳ್ಳಬೇಕಾದೀತು. ಆದ್ದರಿಂದ ರಾಗದ್ವೇಷಶೂನ್ಯನೂ, ಚೇತನನೂ ಆದ ವ್ಯಕ್ತಿಯೇ ಸಾಕ್ಷಿಯೆಂಬುದು ಅವ್ಯಾಪ್ತಿ ಅತಿವ್ಯಾಪ್ತಿ ಮತ್ತು ಅಸಂಭವಗಳೆಂಬ ದೋಷರಹಿತವಾದ ಲಕ್ಷಣವಾಗಿದೆ.

ಈಶ್ವರನು ರಾಗ–ದ್ವೇಷ ಶೂನ್ಯನೂ, ಚೇತನನೂ ಇರುವುದರಿಂದ ಸಾಕ್ಷಿ ಎನ್ನುವ ಪದಕ್ಕೆ ಯೋಗ್ಯನಾಗಿರುವನು.

''ತೋಡಿರ್ದ ಬಾವಿಗೆ ಕೂಡಿರ್ದ ಜಲ ಸಾಕ್ಷಿ।
ಮಾಡಿದ್ದಕ್ಕೆಲ್ಲ ಮನ ಸಾಕ್ಷಿ। ಸರ್ವಕು
ಮೃಡನೇ ತಾ ಸಾಕ್ಷಿ ಸರ್ವಜ್ಞ ॥

ಎನ್ನುವ ಈ ವಚನದಲ್ಲಿ ಸರ್ವಜ್ಞ ಕವಿಯು ಈಶ್ವರನು ಜೀವಿಗಳ ಎಲ್ಲ ವ್ಯವಹಾರಕ್ಕೆ ಸಾಕ್ಷಿ ಎನ್ನುವುದನ್ನು ನಿರೂಪಿಸಿದ್ದಾನೆ. ವಾದಿ-ಪ್ರತಿವಾದಿಗಳ ನಡುವೆ ಮಧ್ಯಸ್ಥನಾದವನು ಸಾಕ್ಷಿಯಾಗುವಂತೆ, ಜೀವಾತ್ಮ ಹಾಗೂ ಅವನು ಮಾಡಿದ ಕರ್ಮ, ಇವೆರಡರ ನಡುವೆ ಮಧ್ಯಸ್ಥಿಕೆಯನ್ನು ವಹಿಸಿ, ನಿಷ್ಪಕ್ಷ ಭಾವದಿಂದ ಫಲಭೋಗವನ್ನುಂಟು ಮಾಡಲು ಪರಮಾತ್ಮನು ಸಾಕ್ಷಿಯ ಪಾತ್ರವನ್ನು ನಿರ್ವಹಿಸುತ್ತಾನೆ.

ಲೋಕದೊಳಗೆ ಇಬ್ಬರ ಜಗಳದಲ್ಲಿ ಮಧ್ಯಸ್ಥಿಕೆಯನ್ನು ವಹಿಸುವ ವ್ಯಕ್ತಿಯು ಪ್ರಸಂಗಾನುಸಾರವಾಗಿ ಇಬ್ಬರಿಗೂ ಹಿತವಾದ ಮಾರ್ಗೋಪದೇಶವನ್ನು ಮಾಡುವಂತೆ, ಈಶ್ವರನು ಹೃದಯದಲ್ಲಿ ನಿವಾಸಿಸುವವನಾಗಿ ಅಧೋಮುಖವಾಗಿ ಪ್ರವರ್ತಿಸುವ ಜೀವಾತ್ಮನನ್ನು ತನ್ನ ಅಂತರ್ವಾಣಿಯಿಂದ ಎಚ್ಚರಿಸಿದರೂ, ಈತನಿಗೆ ಅರಿವಾಗದೇ ಹೋದಾಗ, ''ಸಾಕ್ಷಾತ್ ಭರ್ಗೋ ನರಾಕೃತಿಃ'' ಎಂಬ ಪ್ರಮಾಣವಚನದಂತೆ, ತಾನೇ ಗುರುವಾಗಿ ಭೂಲೋಕಕ್ಕೆ ಅವತರಿಸಿ ಶಾಸ್ತ್ರಪ್ರವಚನಗಳ ಮೂಲಕ ಪುನರಾವೃತ್ತಿರಹಿತ ವಾದ ಮೋಕ್ಷಮಾರ್ಗವನ್ನು ಉಪದೇಶಿಸುತ್ತಾನೆ.''

''ಸ ಏಷಃ ಪೂರ್ವೇಷಾಮಪಿ ಗುರುಃ ಕಾಲೇನಾನವಚೇದಾತ್'' (ಯೋ. ಸೂ. ೧-೨೭) ಈ ಸೂತ್ರದಲ್ಲಿ ಪತಂಜಲಿ ಮಹರ್ಷಿಗಳು ಈಶ್ವರನನ್ನೇ ಆದಿ ಗುರುವನ್ನಾಗಿ ಒಡಂಬಟ್ಟಿದ್ದಾರೆ. ವೀರಶೈವರ ಗುರುಪರಂಪರೆಯಾದರೂ ಶಿವನಿಂದಲೇ ಪ್ರಾರಂಭ ವಾಗಿದೆ. ವೀರಶೈವ ಧರ್ಮಸಂಸ್ಥಾಪಕರಾದ ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯರೆಂಬ ಪಂಚಾಚಾರ್ಯರು ಸದಾಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಗಳೆಂಬ ಪಂಚಮುಖಗಳಿಂದ ಪ್ರತಿಯುಗದಲ್ಲಿಯೂ ಅವತರಿಸಿ, ಧರ್ಮತತ್ತ್ವಗಳನ್ನು ಪ್ರತಿಷ್ಠಾಪಿಸಿದ್ದಾರೆ. ಈ ಆಚಾರ್ಯರು ತತ್ತ್ವಪ್ರಚಾರಕ್ಕಾಗಿ ಬಾಳೆಹಳ್ಳಿ, ಉಜ್ಜಯಿನಿ, ಕೇದಾರ, ಶ್ರೀಶೈಲ ಮತ್ತು ಕಾಶಿಗಳೆಂಬ ಪವಿತ್ರಕ್ಷೇತ್ರಗಳಲ್ಲಿ ಪಂಚಮಹಾಪೀಠಗಳನ್ನು ಸಂಸ್ಥಾಪಿಸಿ ಆದಿಯೊಳಗೆ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಮತ್ತು ದೂರ್ವಾಸರೆಂಬ ಮಹರ್ಷಿಗಳಿಗೆ ಧರ್ಮಬೋಧೆಯನ್ನು ಮಾಡಿದ್ದು ಶಿವಾಗಮಗಳಲ್ಲಿ ಸುಪ್ರಸಿದ್ಧವಾಗಿದೆ.

ಊರಿನ ಹವ್ಯ-ಕವ್ಯಾದಿ ಧಾರ್ಮಿಕ ಕಾರ್ಯಕ್ರಮಗಳನ್ನು ನಿರ್ವಹಿಸಿಕೊಂಡು ಹೋಗುವುದು ಆ ಊರಿನ ಹಿರೇಮಠದ ಸ್ವಾಮಿಗಳ ಕರ್ತವ್ಯವಾಗಿದೆ. ಆ ಹಿರೇಮಠದ ಸ್ವಾಮಿಗಳಿಗೆ ಮೇಲ್ವಿಚಾರಕರಾಗಿಯೂ, ಗುರುಗಳಾಗಿಯೂ ಇರುವವರು ಪಟ್ಟಾಧಿಕಾರಿ ಗಳು. ಆ ಪಟ್ಟಾಧಿಕಾರಿಗಳ ಮೇಲ್ವಿಚಾರಕರಾಗಿ ಮತ್ತು ಗುರುಗಳಾಗಿರುವವರು ಪಂಚ ಜಗದ್ಗುರುಗಳು. ಆ ಪಂಚ ಜಗದ್ಗುರುಗಳ ಆವಿರ್ಭಾವಕ್ಕೆ ಶಿವನೇ ಮೂಲಕಾರಣನಾದ್ದ ರಿಂದ, ಶಿವನಿಗೆ ಆದಿಗುರು ಎಂದು ಕರೆಯುವ ಪತಂಜಲಿ ಮಹರ್ಷಿಗಳ ಅಭಿಪ್ರಾಯವು ವೀರಶೈವರಿಗಾದರೂ ಸಮ್ಮತವಾಗಿದೆ.

ಇದೂ ಅಲ್ಲದೆ, ವೀರಶೈವ ಸಿದ್ಧಾಂತಬೋಧಕಗಳಾದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳು ಸಾಕ್ಷಾತ್ ಶಿವನಿಂದ ಪಾರ್ವತಿಗೆ ಉಪದೇಶಿಸಲ್ಪಟ್ಟಿವೆ. ಆ ಆಗಮಗಳ ಉತ್ತರಭಾಗದಲ್ಲಿ ಉಕ್ತಗಳಾದ ವೀರಶೈವ ತತ್ತ್ವಗಳು ಪುನಃ ಆಚಾರ್ಯರಿಂದ ಮಹರ್ಷಿಗಳಿಗೆ, ಮಹರ್ಷಿಗಳಿಂದ ಪುನಃ ಜನತೆಗೆ ಪ್ರಾಪ್ತವಾದ ಕಾರಣ, ಈ ಜ್ಞಾನಪರಂಪರೆಗಾದರೂ ಜ್ಞಾನನಿಧಿಯಾದ ಪರಮಾತ್ಮನೇ ಮೂಲನಾದ್ದರಿಂದ, ಅನಾದಿಕಾಲದಿಂದ ಜೀವಾತ್ಮರ ಕಲ್ಯಾಣಕ್ಕಾಗಿ ಪರಮಾತ್ಮನ ಜ್ಞಾನಗಂಗಾಧಾರೆಯು ಅಖಂಡವಾಗಿ ಹರಿಯುತ್ತಿರುವುದರಿಂದ ಪರಮಾತ್ಮನೇ ಆದಿಗುರು. ಗುರುರೂಪ ಧರಿಸಿದ ಪರಮಾತ್ಮನು ಶಿಕ್ಷಾ, ದೀಕ್ಷಾ ಹಾಗೂ ಜ್ಞಾನೋಪದೇಶಗಳಿಂದ ಮೋಕ್ಷ ಮಾರ್ಗವನ್ನು ತೋರಿಸಿ ಜೀವಾತ್ಮರನ್ನು ಅನುಗ್ರಹಿಸುತ್ತಾನೆ; ಅಂತೆಯೇ ಶ್ರೀ ರೇಣುಕ ಭಗವತ್ಪಾದರು– ''ಪುನರಾವೃತ್ತಿರಹಿತಮೋಕ್ಷ ಮಾರ್ಗೋಪದೇಶಕಃ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಈ ಶಿವಾನುಗ್ರಹಕ್ಕೆ ವೀರಶೈವ ದರ್ಶನದಲ್ಲಿ ''ಶಕ್ತಿಪಾತ''ವೆಂದು ಕರೆಯುವರು. ಶಿವನ ಅನುಗ್ರಹಾತ್ಮಕವಾದ ಈ ಶಕ್ತಿಪಾತವು ಸರ್ವರಿಗೂ ಸುಲಭವಾಗಿ ದೊರೆಯಲಾರದು. ಅನೇಕ ಜನ್ಮಗಳಲ್ಲಿ ನಿತ್ಯ, ನೈಮಿತ್ತಿಕ ಹಾಗೂ ಪ್ರಾಯಶ್ಚಿತ್ತಗಳೆಂಬ ಕರ್ಮಾನುಷ್ಠಾನದಿಂದ ಕರ್ಮವೆಲ್ಲ ಪರಿಪಾಕಗೊಂಡು ಮಲತ್ರಯಗಳ ವಾಸನೆಯು ಕ್ಷಯಿಸಿದಾಗ ಶಿವಾನುಗ್ರಹವಾಗುವುದೆಂಬುದು ಆಚಾರ್ಯರ ಅಭಿಪ್ರಾಯವು. ಈ ಪೂರ್ವದಲ್ಲಿ ಹೇಳಿದ, ಜೀವಾತ್ಮನಿಗೆ ಆವರಣಗಳಾದ ಆಣವಾದಿ ಮಲತ್ರಯಗಳು–

''ಮಲೋಽಪ್ಯಾಮಶ್ಚ ಪಕ್ವಶ್ಚ ಭವೇತ್ ಸಂಸಾರಕಾರಣಮ್'' (ಶಿವ. ಪು. ೭–೧–೩೧–೭೨.) ಎನ್ನುವ ವ್ಯಾಸವಚನದಂತೆ, ''ಆಮಮಲ'' ''ಪಕ್ವಮಲ''ವೆಂದು ಮಲವು ಎರಡುವಿಧ. ಇವುಗಳಲ್ಲಿ ತಪಸ್ಸಿನಿಂದ ಕ್ಷೀಣವಾದದ್ದು ಪಕ್ವಮಲವು, ಅದಕ್ಕೆ ವಿಪರೀತವಾದದ್ದೇ. ಆಮಮಲವು. ತಪಸ್ಸಿನಿಂದ ಪ್ರಕ್ಷೀಣವಾದ ಮಲಗಳ ವಾಸನೆಯುಳ್ಳ ಜೀವಾತ್ಮನೇ ಶಿವಾನುಗ್ರಹಕ್ಕೆ ಅಧಿಕಾರಿಯು. ಅದನ್ನೇ ಶ್ರೀ ಮರಿತೋಂಟದಾರ್ಯರು–

''ತಪಸ್ತಪ್ತಾ ತನುರ್ಯಸ್ಯ ಸ ತಪ್ತತನುರುಚ್ಯತೇ ।
ಪರಿಪಕ್ವೋ ವಿಮೋಕ್ಷಾಯ ಸೋಽಶ್ನುತೇ ಲಿಂಗಧಾರಣಮ್ ॥
ನ ಕರೋತಿ ತಪಃ ಪೂರ್ವ ಸೋಽತಪ್ತತನುರುಚ್ಯತೇ ।
ಅಪಕ್ವೋಽಯಂ ವಿಮೋಕ್ಷಾಯ ನಾಶ್ನುತೇ ಲಿಂಗಧಾರಣಮ್ ॥''

(ವೀರಶೈವಾನಂದಚಂದ್ರಿಕಾ ಪು. ೭೮)

ತಪಸ್ಸಿನಿಂದ ಮಲಗಳ ವಾಸನೆಗಳನ್ನು ಕ್ಷಯಿಸಿದವನಿಗೆ ''ತಪ್ತತನು''ವೆಂತಲೂ; ಆದಿಲ್ಲದವನಿಗೆ ''ಅತಪ್ತತನು''ವೆಂತಲೂ ಹೇಳಿ ತಪ್ತತನುವುಳ್ಳವನು ಮಾತ್ರ ಶಿವಾನುಗ್ರಹಕ್ಕೆ ಅಧಿಕಾರಿಯೆಂಬುದಾಗಿ ಸೂಚಿಸಿದ್ದಾರೆ. ಆದ್ದರಿಂದ ಶ್ರೀ ರೇಣುಕ ಭಗವತ್ಪಾದರಾದರೂ–

ಸ್ವಕರ್ಮಪರಿಪಾಕೇನ ಪ್ರಕ್ಷೀಣಮಲವಾಸನಃ ।
ಶಿವಪ್ರಸಾದಾಜ್ಜೀವೋಽಯಂ ಜಾಯತೇ ಶುದ್ಧ ಮಾನಸಃ ॥

ಮನಸ್ಸಿನ ಶುದ್ಧತೆಗೆ ಪರಮಾತ್ಮನ ಅನುಗ್ರಹವೇ ಮೂಲವು. ಪರಮಾತ್ಮನ ಅನುಗ್ರಹಕ್ಕೆ ಮಲತ್ರಯಗಳ ವಾಸನಾಕ್ಷಯವೇ ಮೂಲವು. ಈ ವಾಸನಾಕ್ಷಯಕ್ಕೆ ಜನ್ಮಜನ್ಮಾಂತರ ಗಳಲ್ಲಿ ಮಾಡಿದ ತಪಸ್ಸೇ ಕಾರಣವು. ಈ ತೆರನಾದ ಮನಃಶುದ್ಧಿಯ ಪರಂಪರೆಯನ್ನು ಬಹು ಸೂಕ್ಷ್ಮವಾಗಿ ಸೂತ್ರರೂಪದಿಂದ ಉಪದೇಶಿಸಿದ್ದಾರೆ.

ಕರ್ಮವಿಪಾಕದಿಂದ ಪರಿಶುದ್ಧಾಂತಃಕರಣವುಳ್ಳ ಜೀವಾತ್ಮನಲ್ಲಿ ಶಿವನ ಕರುಣೆ ಯಿಂದಲೇ ಶಿವಭಕ್ತಿಯು ಅಂಕುರಿಸುವುದು. ಶಿವಭಕ್ತಿ ಮತ್ತು ಶಿವಾನುಗ್ರಹಗಳು ಬೀಜಾಂಕುರದಂತೆ ಒಂದನ್ನೊಂದು ಸಾಪೇಕ್ಷಿಸುತ್ತವೆ. ಅದೇ ಮಾತನ್ನೇ ಶ್ರೀ ಭಗವತ್ಪಾದರು–

ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವ ।
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರದಃ ॥

ಇಂತೆಂದೇ ೯ನೇ ಪರಿಚ್ಛೇದದ ಭಕ್ತಮಾರ್ಗಕ್ರಿಯಾಸ್ಥಲದಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಈ ಉಪದೇಶದಲ್ಲಿ ಹುದುಗಿದ ರಹಸ್ಯವೇನೆಂದರೆ, ಶಿವನ ಅನುಗ್ರಹವಾದ ನಂತರವೇ ನಾನು ಶಿವನನ್ನು ಪೂಜಿಸುತ್ತೇನೆಂದು ಭಕ್ತನಾಗಲೀ, ನನ್ನನ್ನು ಪೂಜಿಸಿದ ನಂತರವೇ ಅನುಗ್ರಹಿಸುತ್ತೇನೆಂದು ಶಿವನಾಗಲೀ ಹಠ ಹಿಡಿದು ಕಾರ್ಯ ಸಾಧಿಸರು. ಬಹುದಿನಗಳವರೆಗೆ ಲಗ್ನ ಮಾಡದಿರುವುದಕ್ಕೆ ಒಬ್ಬ ಹುಡುಗನಿಗೆ ಹುಚ್ಚು ಹಿಡಿಯಿ ತಂತೆ. ಕನ್ಯೆಯನ್ನು ಕೊಡದವರು ಈತನ ಹುಚ್ಚು ಕಡಿಮೆಯಾದ ಮೇಲೆ ಕನ್ಯೆಯನ್ನು ಕೊಡುವೆವೆಂದೂ, ನೀವು ಕನ್ಯೆಯನ್ನು ಕೊಟ್ಟೊಡನೆ ಇವನ ಹುಚ್ಚು ಬಿಟ್ಟೋಡುವ ದೆಂದೂ, ಕನ್ಯೆ ಹಾಗೂ ವರನ ಪಕ್ಷದವರು ವಾದಿಸುತ್ತ ಕುಳಿತರೆ ಪ್ರಯೋಜನವಿಲ್ಲ, ಇಬ್ಬರಲ್ಲಿ ಯಾರಾದರೊಬ್ಬರು ಮೊದಲು ಸೋಲಲೇ ಬೇಕಾಗುವುದು.

ಕನ್ಯೆ ಹಾಗೂ ವರನ ಪಕ್ಷದಲ್ಲಿ ಮೊದಲು ಯಾರು ಸೋಲಬೇಕೆಂಬ ಪ್ರಶ್ನೆ ಬಂದಾಗ ಹೆಣ್ಣಿಗಾಗಿ ಹುಚ್ಚು ಹಿಡಿದವನಿಗೆ ಹೆಣ್ಣೇ ಔಷಧಿಯಾದ್ದರಿಂದ ಹೆಣ್ಣಿನ ಪಕ್ಷದವರು ತಮ್ಮ ಹಠವನ್ನು ಬಿಟ್ಟು, ಕನ್ಯೆಯನ್ನು ಕೊಟ್ಟು, ಹುಡುಗನ ಹುಚ್ಚು ಬಿಡಿಸುವುದರ ಜೊತೆಗೆ ಮಗಳ ಸೌಭಾಗ್ಯಕ್ಕೆ ಕಾರಣವಾಗುವಂತೆ, ಜೀವಾತ್ಮ–ಪರಮಾತ್ಮರಲ್ಲಿ ಜೀವಾತ್ಮನೇ ಸೋಲಬೇಕಾಗುವುದು. ಯಾಕೆಂದರೆ, ಜೀವಾತ್ಮನು ಭಕ್ತಿಯನ್ನು ಮಾಡದಿದ್ದರೆ ಈಶ್ವರನಿಗೆ ಯಾವ ಅನಿಷ್ಟವೂ ಇಲ್ಲ. ಆದರೆ ಈಶ್ವರನ ಅನುಗ್ರಹ ವಿರದಿರೆ ಜೀವಾತ್ಮರಿಗೆ ಸಂಸಾರದಿಂದ ಪಾರಾಗುವುದು ಅಸಾಧ್ಯವು. ಆದಕ್ಕೋಸ್ಕರವಾಗಿ ಭವಚಕ್ರದಲ್ಲಿ ತಿರುಗುತ್ತಿರುವ ತಮ್ಮ ಕಲ್ಯಾಣಕ್ಕಾಗಿ ಭಕ್ತವತ್ಸಲ ನಾದ ಭಗವಂತನಲ್ಲಿ ಭಕ್ತಿಯುಳ್ಳವರಾಗಿ ಭವದಿಂದ ಪಾರಾಗುವುದು ಬುದ್ಧಿಜೀವಿಗಳ ಪರಮ ಕರ್ತವ್ಯವಾಗಿದೆ.

ಹೀಗೆ ಪರಿಶುದ್ಧಾಂತಃಕರಣನಾಗಿ ''ಪಿಂಡ''ನೆಂದೆನಿಸಿಕೊಂಡ ಜೀವಾತ್ಮನಿಗೆ ಮುಂದಿನ ಪಿಂಡಜ್ಞಾನಾದಿ ಸ್ಥಲಗಳ ಸ್ಥಿತಿಯು ಪ್ರಾಪ್ತವಾಗಿ, ಐಕ್ಯವನ್ನು ಅವನು ಹೊಂದುವನಾದ್ದರಿಂದ ಅವನಿಗೆ ಪುನಃ ಶರೀರಾಂತರ ಪ್ರಾಪ್ತಿರೂಪವಾದ ಸಂಸಾರ

ವಿರುವುದಿಲ್ಲವೆಂದು ಶ್ರೀ ಭಗವತ್ಪಾದರು ಈ ಪಿಂಡಸ್ಥಲದ ಸಾಧಕನಿಗೆ ''ಅಂತ್ಯಶರೀರಿ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಆದ್ದರಿಂದ ತನ್ನ ಆತ್ಮಕಲ್ಯಾಣವನ್ನು ಬಯಸುವ ಪ್ರತಿಯೊಬ್ಬ ಮನುಷ್ಯನೂ ತನ್ನ ಇಷ್ಟದೇವತೆಯಲ್ಲಿ ಭಕ್ತಿಯನ್ನರ್ಪಿಸಿ ಮುಕ್ತಿಯ ಮಾರ್ಗದಲ್ಲಿ ಮುನ್ನಡೆಯುವ ಯೋಗ್ಯತೆಯನ್ನು ತಂದುಕೊಡುವ ಅಂತಃಕರಣದ ಪರಿಶುದ್ಧತೆಯನ್ನು ಸಂಪಾದಿಸಿಕೊಂಡು ತನ್ನ ಮನುಷ್ಯಜನ್ಮದ ಸಾರ್ಥಕತೆಯನ್ನು ಮಾಡಿಕೊಳ್ಳಬೇಕು ಎಂಬುವುದರೊಂದಿಗೆ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ಪಿಂಡಸ್ಥಲವು ಪೂರ್ಣವಾದುದು

ದಿನಾಂಕ ೨೧ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)

■■

ಆಶೀರ್ವಚನ-೧

# ಪಿಂಡಜ್ಞಾನಸ್ಥಲ

ವೀರಶೈವ ಮಹಾಮತಸ್ಥಾಪನಾಚಾರ್ಯರಾದ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರಿಂದ ಶ್ರೀ ಅಗಸ್ತ್ಯಮಹರ್ಷಿಗೆ ಉಪದೇಶಿಸಲ್ಪಟ್ಟ, ಷಟ್‌ಸ್ಥಲ ಬೋಧಾತ್ಮಕ ವಾದ ಶ್ರೀ ಸಿದ್ಧಾಂತಶಿಖಾಮಣಿಯ ನೂರೊಂದು ಸ್ಥಲಗಳಲ್ಲಿ ಕ್ರಮ ಪ್ರಾಪ್ತ ವಾದ ಎರಡನೇ ಸ್ಥಲವೇ ''ಪಿಂಡಜ್ಞಾನಸ್ಥಲ''ವು.

ಹೊಲದ ಸ್ವಚ್ಛತೆ ಬಿತ್ತಿದ ಬೀಜದ ಮೊಳಕೆಗೆ ಸಹಾಯಕವಾಗುವಂತೆ, ಅಂತಃಕರಣದ ಪರಿಶುದ್ಧರೂಪವಾದ ಪಿಂಡಸ್ಥಲ ಸ್ಥಿತಿಯು, ಮುಂದಿನ ಪಿಂಡಜ್ಞಾನಾದಿ ಅವಸ್ಥೆಗಳ ಪ್ರಾಪ್ತಿಗೆ ಮೂಲವಾಗಿದೆ. ಅಂತೆಯೇ ''ಅನೇಕ ಜನ್ಮಭಾಜನಾತ್ ಸ್ವವಿಚಾರಂ ಚಿಕೀರ್ಷತಿ'' ಎಂದು ಶ್ರೀ ವಿದ್ಯಾರಣ್ಯಸ್ವಾಮಿಗಳು ಪ್ರತಿಪಾದಿಸಿದ್ದಾರೆ.

ವೇದಾಂತಶಾಸ್ತ್ರದಲ್ಲಿಯಾದರೂ ''ಅಧಿಕಾರೀ ತು ವಿಧಿವದಧೀತ ವೇದ ವೇದಾಂಗತ್ವೇನಾಪಾತತೋऽಧಿಗತಾಖಿಲವೇದಾರ್ಥೋऽಸ್ಮಿನ್ ಜನ್ಮನಿ ಜನ್ಮಾಂತರೇ ವಾ ಕಾಮ್ಯ–ನಿಷಿದ್ಧವರ್ಜನಪುರಃಸರಂ ನಿತ್ಯನೈಮಿತ್ತಿಕ ಪ್ರಾಯಶ್ಚಿತ್ತೋಪಾಸನಾನು ಷ್ಠಾನೇನ ನಿರ್ಗತನಿಖಿಲಕಲ್ಮಷತಯಾ ನಿತಾಂತ ನಿರ್ಮಲಸ್ವಾಂತಃಸಾಧನಚತುಷ್ಟಯ ಸಂಪನ್ನಃ ಪ್ರಮಾತಾ'' (ವೇದಾಂತಸಾರ ಪು. ೫) ಎಂದು ಸದಾನಂದಯೋಗೀಂದ್ರರು ವೇದಾಂತಶಾಸ್ತ್ರದ ಅಧಿಕಾರಿಯ ಲಕ್ಷಣವನ್ನು ನಿರೂಪಿಸುವಾಗ–ವಿವೇಕ, ವೈರಾಗ್ಯ, ಶಮಾದಿ ಷಟ್ಕ ಹಾಗೂ ಮುಮುಕ್ಷುತ್ವಗಳೆಂಬ ಸಾಧನಚತುಷ್ಟಯಗಳ ಪ್ರಾಪ್ತಿಗೆ, ಜನ್ಮ ಜನ್ಮಾಂತರದಲ್ಲಿ ನಿಷ್ಕಾಮಭಾವದಿಂದ ಆಚರಿಸಿದ, ನಿತ್ಯನೈಮಿತ್ತಿಕ ಕರ್ಮಗಳ ಪುಣ್ಯ ಪ್ರಭಾವದಿಂದ ಪ್ರಾಪ್ತವಾದ ನಿರ್ಮಲಾಂತಃಕರಣವೇ ಕಾರಣವೆಂದು ಹೇಳಿದ್ದಾರೆ.

ಅಂತಃಕರಣದ ಪರಿಶುದ್ಧತೆಯ ನಂತರ ವೇದಾಂತಶಾಸ್ತ್ರದ ಅಧಿಕಾರಿಯಲ್ಲಿ ಪ್ರಾಪ್ತವಾದ ''ವಿವೇಕ''ವು ನಿತ್ಯಾನಿತ್ಯವಸ್ತುವಿಷಯಕವಾಗಿದ್ದರೆ, ವೀರಶೈವ ಸಿದ್ಧಾಂತ ದಲ್ಲಿ ಪರಿಶುದ್ಧಾಂತಃಕರಣೆಯಾದ ಪಿಂಡನೆಂಬ ಜೀವಾತ್ಮನಿಗೆ ಪ್ರಾಪ್ತವಾದ ''ಪಿಂಡಜ್ಞಾನ'' ರೂಪ ವಿವೇಕವು, ಆತ್ಮಾನಾತ್ಮಗಳ ವಿಷಯಕವಾದದ್ದೆಂಬುದು ಗಮನಾರ್ಹ ವಿಷಯ. ಇದನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಶರೀರಾತ್ಮವಿವೇಕೇನ ಪಿಂಡಜ್ಞಾನೀ ಸ ಕಥ್ಯತೇ ।
ಶರೀರಮೇವ ಚಾರ್ವಾಕೈರಾತ್ಮೇತಿ ಪರಿಕೀರ್ತ್ಯತೇ ॥

ಇಂದ್ರಿಯಾಣಾಂ ತಥಾತ್ಮತ್ವಮಪರೈಃ ಪರಿಭಾಷ್ಯತೇ ।
ಬುದ್ಧಿ ತತ್ತ್ವಗತೈರ್ಬೌದ್ಧೈರ್ಬುದ್ಧಿರಾತ್ಮೇತಿ ಗೀಯತೇ ॥ (ಸಿ. ಶಿ. ೫.೫೩–೫೪)

ಎಂದು ವೀರಶೈವಾಭಿಮತ. ವಿವೇಕದ ಸ್ವರೂಪವನ್ನು ಹಾಗೂ ಆತ್ಮಸ್ವರೂಪ-ವಿಷಯಕಗಳಾದ ಭಾರತೀಯ ದಾರ್ಶನಿಕರ ವಿಭಿನ್ನ ಪಕ್ಷಗಳನ್ನು ಸೂತ್ರರೂಪವಾಗಿ ಉಪದೇಶಿಸಿದ್ದಾರೆ.

ಭಾರತೀಯ ದರ್ಶನಗಳಲ್ಲಿ ವೈದಿಕ ಮತ್ತು ಅವೈದಿಕಗಳೆಂದು ಎರಡು ವಿಧ. ವೇದಾಗಮಗಳನ್ನು ಮನ್ನಿಸಿ ತದಧೀನವಾಗಿ ನಡೆಯುವವುಗಳು ವೈದಿಕಗಳು. ವೇದಾಗಮಗಳನ್ನು ಮನ್ನಿಸದೇ ಸ್ವತಂತ್ರವಾಗಿರುವ ಮತಗಳೇ ಅವೈದಿಕ ಮತಗಳು. ಅವೈದಿಕ ಮತಗಳು ಚಾರ್ವಾಕ, ಜೈನ ಮತ್ತು ಬೌದ್ಧಗಳೆಂದು ಮೂರು ವಿಧಗಳು. ವೈದಿಕ ಮತಗಳು ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವ ಹಾಗೂ ಉತ್ತರ ಮೀಮಾಂಸೆಗಳೆಂದು ಆರು ವಿಧಗಳಾಗಿವೆ. ಉತ್ತರಮೀಮಾಂಸೆ ಎಂದು ಹೇಳಿಸಿ ಕೊಳ್ಳುವ ವೇದಾಂತ ದರ್ಶನವಾದರೂ ಶಕ್ತಿವಿಶಿಷ್ಟಾದ್ವೈತ, ಶಾಂಕರ, ರಾಮಾನುಜ, ಮಧ್ವ, ನಿಂಬಾರ್ಕ, ಗೌಡೀಯ, ವಲ್ಲಭ ಮತ್ತು ರಾಮಾನಂದಗಳೆಂದು ಎಂಟು ಶಾಖೆಗಳುಳ್ಳದ್ದಾಗಿದೆ.

ಈ ಎಲ್ಲ ವೈದಿಕ ದರ್ಶನಗಳಲ್ಲಿ ಅದ್ವೈತ, ದ್ವೈತಾದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತ ಗಳು ಸನಾತನಗಳಾಗಿವೆ.

ಭಾರತೀಯ ದರ್ಶನಗಳ ಪಂಕ್ತಿಯಲ್ಲಿ ಪ್ರಥಮವಾಗಿ ಪರಿಗಣಿಸಲ್ಪಡುವ, ಆದರೆ ಉಳಿದೆಲ್ಲ ದರ್ಶನಗಳಿಗೆ ಪ್ರತಿಪಕ್ಷವಾಗಿರುವುದೇ, ''ಚಾರ್ವಾಕ'' ದರ್ಶನವು. ಇದು ಉಪನಿಷತ್ತುಗಳ ಕಾಲದಲ್ಲಿಯೇ ಪ್ರಚಾರದಲ್ಲಿತ್ತೆಂಬುದು ''ಯೇ ಯಂ ಪ್ರೇತೇ ವಿಚಿಕಿತ್ಸಾ ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ'' ಮುಂತಾದ ಶ್ರುತಿವಾಕ್ಯಗಳಿಂದ ತಿಳಿದು ಬರುತ್ತದೆ.

ಬಹು ಪ್ರಾಚೀನಕಾಲದಲ್ಲಿ ಜನರು ಇಹಲೋಕಕ್ಕಿಂತ ಪಾರಲೌಕಿಕ ಜೀವನದ ಬಗ್ಗೆ ಬಹು ಚಿಂತಿಸುವವರಾಗಿದ್ದರು. ಅದಕ್ಕಾಗಿ ಯಜ್ಞ, ಯಾಗ, ದಾನ, ತಪಸ್ಸು ಮುಂತಾದ ವ್ರತಗಳನ್ನಾಚರಿಸುವುದರಲ್ಲಿಯೇ ಕಾಲ ಕಳೆಯುವವರಾಗಿ, ಐಹಿಕ-ಜೀವನವನ್ನೇ ತಿರಸ್ಕರಿಸುತ್ತಿದ್ದರು. ಭೌತಿಕವಾದಿಗಳಾದ ಚಾರ್ವಾಕರು ಇದನ್ನು ಸಹಿಸದೇ, ಹೀಗೆಯೇ ಬಿಟ್ಟರೆ ಐಹಿಕ-ಜೀವನವೇ ಅಸ್ತವ್ಯಸ್ತವಾಗುವದೆಂಬ ಭಯ ದಿಂದ, ವೈದಿಕರಿಂದ ಅಂಗೀಕರಿಸಲ್ಪಟ್ಟ, ಪುಣ್ಯ, ಪಾಪ, ದೇವರು, ಪರಲೋಕ, ಜನ್ಮಾಂತರ ಮತ್ತು ದೇಹಭಿನ್ನ ಆತ್ಮ ಮುಂತಾದ ವಿಷಯಗಳನ್ನು ಅತಿ ಕಠೋರವಾಗಿ ಖಂಡಿಸತೊಡಗಿದರು.

ಬುದ್ಧಿರಹಿತರಾದ ಜನಸಾಮಾನ್ಯರಿಗೆ ಇವರ ಮಾತುಗಳು ಬಹು ಹೃದಯಂಗಮ ವಾಗಿ ಕಂಡವಲ್ಲದೇ, ಲೋಕದಲ್ಲಿ ಇವರ ಅನುಯಾಯಿಗಳ ಸಂಖ್ಯೆ ದಿನದಿನಕ್ಕೆ ಹೆಚ್ಚ ತೊಡಗಿತು. ಅಂದಿನಿಂದ ಈ ದರ್ಶನಕ್ಕೆ ''ಲೋಕಾಯತ''ವೆಂಬ ಹೆಸರು ಪ್ರಸಿದ್ಧ ವಾಯಿತು.

ಚಾರ್ವಾಕ ದರ್ಶನದ ಮೂಲ ಪ್ರವರ್ತಕರಾರು ? ಅದರ ಗ್ರಂಥಗಳಾವುವು ? ಎಂಬ ಪ್ರಶ್ನೆಗಳಿಗೆ ನಿಶ್ಚಯಾತ್ಮಕವಾದ ಉತ್ತರಗಳು ದೊರೆಯವು. ಆದರೂ ದೇವತೆಗಳ ಗುರುವಾದ ಬೃಹಸ್ಪತಿಯು ರಾಕ್ಷಸರನ್ನು ವಂಚಿಸುವುದಕ್ಕಾಗಿ ಈ ಶಾಸ್ತ್ರವನ್ನು ಬರೆದನೆಂದು ಪೌರಾಣಿಕ ವಾರ್ತೆಯುಂಟು. ಕೆಲವರು ಈ ಪೌರಾಣಿಕ ವಾರ್ತೆಯನ್ನು ನಂಬದವರಾಗಿ, ಆ ಹೆಸರಿನ ಬೇರೊಬ್ಬ ವ್ಯಕ್ತಿ ಇರಬಹುದೆಂದು ಅಭಿಪ್ರಾಯ ಪಡುತ್ತಾರೆ. ಈ ದರ್ಶನದ ವಿಷಯ ನಿರೂಪಕಗಳಾದ ಸ್ವತಂತ್ರ ಗ್ರಂಥಗಳು ದೊರೆಯ ಲಾರವು. ಆದರೂ ವೈದಿಕ ದರ್ಶನಕಾರರು ತಮ್ಮ ತಮ್ಮ ದರ್ಶನಗಳಲ್ಲಿ ಪೂರ್ವಪಕ್ಷ ರೂಪವಾಗಿ ಇದರ ಕೆಲವು ಸಿದ್ಧಾಂತಗಳನ್ನು ಮಂಡಿಸಿ ಖಂಡಿಸಿರುವುದರಿಂದ ಈ ದರ್ಶನದ ಸ್ವರೂಪ ಪರಿಚಯವಾಗುವುದು.

ಚಾರು=ಸುಂದರವಾದ, ವಾಕ್=ವಾಣಿಯು, ಯಸ್ಯ=ಯಾರದಿರುವುದೋ, ಸಃ=ಅವನು ''ಚಾರ್ವಾಕಃ'' ಸುಂದರವಾದ ವಾಣಿಯುಳ್ಳವನು—ಎಂಬ ವ್ಯುತ್ಪತ್ತಿಯ ಮೇರೆಗೆ ;

ಯಾವಜ್ಜೀವೇತ್ ಸುಖಂ ಜೀವೇತ್
ಋಣಂ ಕೃತ್ವಾ ಘೃತಂ ಪಿಬೇತ್ ।
ಭಸ್ಮೀ ಭೂತಸ್ಯ ದೇಹಸ್ಯ
ಪುನರಾಗಮನಂ ಕುತಃ ॥

ಎಂಬ ಪ್ರಮಾಣಕ್ಕನುಸಾರವಾಗಿ ದೇಹವಿರುವವರೆಗೆ ಸುಳ್ಳು, ಕಳ್ಳತನ, ಮೋಸ, ವಂಚನೆ ಇವುಗಳಲ್ಲಿ ಯಾವುದರಿಂದಾಗಲೀ ಧನವನ್ನು ಸಂಪಾದಿಸಿ, ಉಂಡುಟ್ಟು ಸುಖಿಸುವುದೇ ಮಾನವನ ಕರ್ತವ್ಯವಾಗಿದೆ. ಬಿದ್ದು ಹೋದ ದೇಹವು ಉರಿಯುವ ಅಗ್ನಿ ಯಲ್ಲಿ ಸುಟ್ಟು ಭಸ್ಮವಾದ ಬಳಿಕ ಅಥವಾ ಮಣ್ಣಿನೊಳಗೆ ಕೂಡಿ ಮಣ್ಣಾದ ಬಳಿಕ ಮರಳಿ ಬರಲಾರದು. ಆದ್ದರಿಂದ ಕ್ಲೇಶಪಡದೇ ಸುಖಮಯವಾಗಿ ದೇಹಯಾತ್ರೆಯನ್ನು ನಡೆಸು ವುದೇ ಸ್ವರ್ಗ—ಎಂಬಂಥ ವಾಕ್ಯಗಳು ಯಾರಿಗೆ ತಾನೇ ಪ್ರಿಯಗಳಾಗಿ ಪರಿಣಮಿಸ ಲಿಕ್ಕಿಲ್ಲ? ಇಂತಹ ಪ್ರಿಯಕರಗಳಾದ ಸುಂದರ ವಾಕ್ಯಗಳಿಂದ ತನ್ನ ಸಿದ್ಧಾಂತವನ್ನು ಪ್ರತಿಪಾದಿಸುವ ದರ್ಶನವೇ ಚಾರ್ವಾಕ ದರ್ಶನವು.

ಈ ದರ್ಶನದ ರಮಣೀಯಕವಾದ ಸಿದ್ಧಾಂತವನ್ನು ಅವರ ರಮಣೀಯಗಳಾದ ನುಡಿಗಳಿಂದಲೇ ಆಲಿಸೋಣ—ಜಗತ್ತಿನಲ್ಲಿ ಪೃಥ್ವಿ, ಅಪ್ಪು, ತೇಜಸ್ ಮತ್ತು ವಾಯು ಗಳೆಂಬ ನಾಲ್ಕೇ ಭೂತಗಳಿರುವವು. ಚರಾಚರಪ್ರಪಂಚವೆಲ್ಲ ಈ ನಾಲ್ಕರ ವಿಕಾರ. ನಾಲ್ಕು ಭೂತಗಳ ಮಿಶ್ರಣದಿಂದ ನಿರ್ಮಿತವಾದೀ ಶರೀರವೇ ಆತ್ಮನಲ್ಲದೇ ಬೇರೆ ಆತ್ಮ ಎಂಬುದೇ ಇಲ್ಲ, ಕಾಮವೇ ಪರಮ ಪುರುಷಾರ್ಥ. ಅರ್ಥವು ಕಾಮದ ಸಹಕಾರಿ ಯಾದ್ದರಿಂದ ಅದನ್ನು ಸಂಪಾದಿಸಬೇಕು. ಮರಣವೇ ಮೋಕ್ಷವಲ್ಲದೇ ಮತ್ತೊಂದಿಲ್ಲ.

ಕೆಲವು ದಾರ್ಶನಿಕರು ಶರೀರಕ್ಕಿಂತ ಆತ್ಮವು ಭಿನ್ನವಾಗಿದೆ ಎಂದು ಹೇಳುವ ಮಾತು ಮೂಢ ಜನರನ್ನು ಮೋಸಗೊಳಿಸುವುದಾಗಿದೆ. ಒಂದು ವೇಳೆ ಶರೀರಕ್ಕಿಂತ

ಆತ್ಮನು ಭಿನ್ನನೇ ಆಗಿದ್ದರೆ, ರಾಜಭಟರು ಅಪರಾಧಿಯನ್ನು ಎಳೆದುಕೊಂಡು ಹೋಗುವಾಗ ಆರ್ತ ಸ್ವರದಿಂದ ಅಳುತ್ತಿರುವ ಅಪರಾಧಿಯನ್ನು ನಾವು ಕಣ್ಣಿನಿಂದ ಹೇಗೆ ಕಾಣುತ್ತೇವೆಯೋ, ಹಾಗೆ ಶರೀರಾತಿರಿಕ್ತವಾದ ಜೀವಾತ್ಮನನ್ನು ಯಮಭಟರು ಎಳೆದುಕೊಂಡು ಹೋಗುವುದನ್ನು ಕಾಣಬಹುದಾಗಿತ್ತು; ಹಾಗೆ ಇದುವರೆಗೆ ಯಾರೂ ನೋಡಿಲ್ಲವಾದ್ದರಿಂದ ದೇಹವೇ ಆತ್ಮವಲ್ಲದೇ ಮತ್ತೊಂದಿಲ್ಲ.

ದೇಹದಲ್ಲಿ ತೋರುವ ಚೈತನ್ಯಶಕ್ತಿಯಾದರೂ ಭೌತಿಕವಾದದ್ದೇ. ವೀಳ್ಯದೆಲೆ, ಅಡಿಕೆ, ಸುಣ್ಣ ಮತ್ತು ಕಾಚು ಈ ನಾಲ್ಕು ಪದಾರ್ಥಗಳು ಬೇರೆ ಬೇರೆ ಬಣ್ಣದವುಗಳಿದ್ದರೂ, ಅವುಗಳನ್ನು ಕೂಡಿಸಿ ಬಾಯಿಯಲ್ಲಿ ಹಾಕಿ ಜಗಿದಾಗ ತಾಂಬೂಲ ರಸವು ಕೆಂಪು ಬಣ್ಣವನ್ನು ಹೊಂದುವಂತೆ, ಭೂಮ್ಯಾದಿ ನಾಲ್ಕು ಭೂತಗಳು ಒತ್ತಟ್ಟಿಗೆ ಮಿಶ್ರಣಹೊಂದಿ ಪಿಂಡೀಕೃತವಾದಾಗ ಚೈತನ್ಯ ಶಕ್ತಿಯು ತಾನಾಗಿಯೇ ಉದಿಸುವುದು. ಈ ಭೌತಿಕ ಶಕ್ತಿಯೇ ಆತ್ಮ ಮನಸ್ಸು, ಸುಖ, ದುಃಖ, ಇಚ್ಛೆ, ಕಾಮ ಮತ್ತು ಕ್ರೋಧ ಹೀಗೆ ಅನೇಕ ರೂಪಗಳನ್ನು ಹೊಂದುವುದು.

''ಸಂಯೋಗೋ ವಿಪ್ರಯೋಗಾಂತಃ'' ಕೂಡಿದ್ದು ಒಂದಿಲ್ಲೊಂದುದಿನ ಅಗಲಲೇಬೇಕು. ಶರೀರರೂಪವಾಗಿ ಕೂಡಿದ ಭೂತಗಳು ಒಂದಕ್ಕೊಂದು ಅಗಲಿದಾಗ ಶರೀರದಲ್ಲಿಯ ಚೈತನ್ಯಶಕ್ತಿಯೂ ಅಗಲಿ, ಜೀವನು ಮೃತನೆನಿಸಿಕೊಳ್ಳುವನು. ಈ ರೀತಿಯಾಗಿ ಅನಾಯಾಸವಾಗಿ ಆಗುವ ದೇಹವಿಯೋಗವೇ ಮೋಕ್ಷವಾದ ಕಾರಣ, ಅದಕ್ಕಾಗಿ ಅನೇಕ ವ್ರತಾದಿಗಳನ್ನು ಆಚರಿಸಿ ಶ್ರಮಪಡಬೇಕಾಗಿಲ್ಲ.

ವೇದಾನುಯಾಯಿಗಳು–ಯಜ್ಞ, ದಾನ, ತಪಸ್ಸು, ಮುಂತಾದ ವೇದವಿಹಿತ ಕರ್ಮಗಳನ್ನು ಆಚರಿಸುವುದರಿಂದ ''ಅದೃಷ್ಟ'' (ಅಪೂರ್ವ) ಜನಿಸುವುದು. ಅದೇ ದೇಹಾವಸಾನದಲ್ಲಿ ಕಾರ್ಯದ ಅವ್ಯವಹಿತ ಪೂರ್ವವೃತ್ತಿಯಾಗಿ ಸ್ವರ್ಗಾದಿ ಫಲಗಳನ್ನು ಕೊಡುವುದೆಂದು ಹೇಳುವರು. ಆದರೆ ''ನ ದೃಷ್ಟಂ ಅದೃಷ್ಟಮ್'' ಎಂಬ ವ್ಯುತ್ಪತ್ತಿಯ ಮೇರೆಗೆ ಆ ಶಬ್ದದ ಅರ್ಥವೇ ಹೇಳುವಂತೆ ಅದನ್ನು ನೋಡಿದವರಾರೂ ಇಲ್ಲ. ನೋಡಿದ್ದರೆ ಅದಕ್ಕೆ ಅದೃಷ್ಟವೆನ್ನಲಾಗದು. ಹೀಗೆ ಕಾಣದಿರುವುದಕ್ಕೆ ಕೈಮಾಡುವುದು ಕಷ್ಟವನ್ನು ಕರೆತಂದಂತೆ.

ಕಾರಣವಿಲ್ಲದೇ ಕಾರ್ಯ ಜನಿಸದು; ಆದ್ದರಿಂದ ನಾನಾ ವಿಧಗಳಾದ ಸುಖ–ದುಃಖಗಳನ್ನು ನಾವು ಪ್ರತ್ಯಕ್ಷವಾಗಿ ಅನುಭವಿಸುತ್ತಿರುವಾಗ, ಈ ಸುಖ–ದುಃಖಗಳ ಉತ್ಪತ್ತಿಗೆ ಕಾರಣಗಳಾದ ಪುಣ್ಯ–ಪಾಪಗಳೆಂಬ ಅದೃಷ್ಟವನ್ನು ಕಲ್ಪಿಸಬೇಕಾಗುತ್ತದೆ ಎಂಬ ವಾದವಾದರೂ ಉಚಿತವಲ್ಲ. ನಾವು ಅನುಭವಿಸುವ ಸುಖ–ದುಃಖಗಳು ಕಾರಣಾಂತರದಿಂದ ಉತ್ಪನ್ನಗಳಾಗದೇ, ಬಕಪಕ್ಷಿಯಲ್ಲಿ ಬಿಳಿಯಬಣ್ಣ, ಕಾಗೆಯಲ್ಲಿ ಕಪ್ಪು ಬಣ್ಣ, ಹಾವುಗಳಲ್ಲಿ ಕಣ್ಣಿನಿಂದ ಕೇಳುವ ಶಕ್ತಿ ಮುಂತಾದವುಗಳು ಯಾವ ವಿಶೇಷ ಕಾರಣದಿಂದಾಗದೇ ಹೇಗೆ ಸ್ವಾಭಾವಿಕಗಳಾಗಿರುವವೋ, ಹಾಗೆ ಸ್ವಾಭಾವಿಕಗಳೆಂದೇ ತಿಳಿದುಕೊಳ್ಳಬೇಕು. ಒಂದು ವೇಳೆ ಒಂದೊಂದಕ್ಕೆ ಒಂದೊಂದು ಅದೃಷ್ಟ ವಿಶೇಷವನ್ನು

ಕಲ್ಪಿಸುತ್ತಾ ಹೋದರೆ, ಕೊನೆ–ಮೊದಲಿಲ್ಲದಂತಾಗಿ ಅನವಸ್ಥಾದೋಷ ಪ್ರಾಪ್ತವಾಗುವುದು. ಆದ್ದರಿಂದ ವೇದಗಳಲ್ಲಿ ಹೇಳಲ್ಪಟ್ಟ ಯಜ್ಞ–ದಾನಾದಿ ವಿಹಿತ ಕರ್ಮಗಳ ಅನುಷ್ಠಾನದಿಂದ ಕಲ್ಪಿಸಲ್ಪಡುವ ಪುಣ್ಯವಾಗಲಿ, ಸುರಾಪಾನಾದಿ ನಿಷಿದ್ಧಕರ್ಮಗಳಾಚರಣೆಗಳಿಂದ ಕಲ್ಪಿಸಲ್ಪಡುವ ಪಾಪಗಳಾಗಲಿ ಸುಳ್ಳು ಕಲ್ಪನೆಗಳೇ ಹೊರತು ವಾಸ್ತವವಲ್ಲ. ಈ ಸುಳ್ಳುಕಲ್ಪನೆಗಳಿಂದ ಜನರನ್ನು ವಂಚಿಸುವುದು ಸಮಂಜಸವೂ ಅಲ್ಲ.

ಎಲ್ಲರೂ ಅನುಭವಿಸುತ್ತಿರುವ ಸುಖ–ದುಃಖಗಳಿಗೆ ಕಾರಣವಾದ ಈ ಲೋಕವನ್ನು ಬಿಟ್ಟರೆ ಬೇರೊಂದು ಲೋಕವಿಲ್ಲ. ವಂಚಕರಾದ ವೈದಿಕರು–ಜ್ಯೋತಿಷ್ಟೋಮಾದಿ ಯಾಗಗಳನ್ನಾಚರಿಸಿದವನು ದೇಹಾವಸಾನದನಂತರ ದೇವಯಾನದಿಂದ ಸ್ವರ್ಗವನ್ನೇರಿ ದೇವತೆಗಳೊಡನೆ ಅಮೃತವನ್ನು ಸವಿದು ಸುಖಿಸುವನೆಂದೂ, ಸುರಾಪಾನ–ಪರಸ್ತ್ರೀ ಗಮನಾದಿ ಪಾಪಕರ್ಮಗಳನ್ನಾಚರಿಸಿದವನು ನರಕ ಲೋಕವನ್ನು ಸೇರಿ ಅಲ್ಲಿ ನಾನಾವಿಧ ಹಿಂಸೆಗೊಳಗಾಗುವನೆಂದೂ ಹೇಳುವರು–ಇದೂ ಸರಿಯಲ್ಲ. ಮೃಷ್ಟಾನ್ನ ಭೋಜನ, ಮನೋಹರವಸ್ತ್ರಾಭರಣ, ಸುಗಂಧದ್ರವ್ಯಲೇಪನ ಮತ್ತು ವನಿತಾಜನ ಭೋಗಗಳಿಂದ ಸಿಗುವ ಸುಖವೇ ಸ್ವರ್ಗವು. ಶತ್ರುಹಿಂಸೆ, ರೋಗಾದಿಗಳಿಂದ ನರಳುವುದು, ಮನೆ–ಮಠಗಳಿಲ್ಲದೆ ಮಳೆ–ಗಾಳಿಗಳಲ್ಲಿ ತಿರುಗಾಡುವುದು, ಅನ್ನ–ಬಟ್ಟೆಗಳಿಲ್ಲದೇ ಪರಿತಪಿಸುವುದು ಇವೇ ನರಕವು. ಇದೂ ಅಲ್ಲದೇ ವೈದಿಕರು ಯಜ್ಞದ ಹೆಸರಿನಲ್ಲಿ ಹೋತು ಮುಂತಾದ ಪ್ರಾಣಿಗಳನ್ನು ಕೊಂದು ತಮ್ಮ ಮಾಂಸ ತಿನ್ನುವ ಅಭಿಲಾಷೆಯನ್ನು ಈಡೇರಿಸಿಕೊಳ್ಳುವರು. ''ಯಾಜ್ಞಿಕೀ ಹಿಂಸಾ ಹಿಂಸಾ ನ ಭವತಿ'' ಯಜ್ಞದಲ್ಲಿ ಮಾಡಿದ ಹಿಂಸೆಯು ಹಿಂಸೆಯಲ್ಲವೆಂದು ಹೇಳುವುದಲ್ಲದೇ, ಯಜ್ಞದಲ್ಲಿ ಸತ್ತ ಹೋತಿಗೆ ಸ್ವರ್ಗ ಸಿಗುವುದೆಂದೂ ಹೇಳುವರು. ಯಜ್ಞದಲ್ಲಿ ಸತ್ತ ಹೋತಿಗೆ ಇಷ್ಟು ಸುಲಭವಾಗಿ ಸ್ವರ್ಗ ಸಿಗುವುದಾದರೆ ಆ ಯಜ್ಞದಲ್ಲಿ ಹೋತಿನ ಬದಲು ನಿಮ್ಮ ತಂದೆಯನ್ನೇ ಕೊಂದು ಸ್ವರ್ಗಕ್ಕೆ ಏಕೆ ಕಳಿಸಬಾರದು ? ಈ ಎಲ್ಲ ದೃಷ್ಟಿಯಿಂದ ನೋಡಲಾಗಿ ಇವೆಲ್ಲವುಗಳೂ ಕಾಲ್ಪನಿಕಗಳೇ.

ಈ ವೈದಿಕರು ಕಾಶೀ ಗೋಕರ್ಣ ಮುಂತಾದ ಪ್ರದೇಶಗಳಲ್ಲಿರುವ ನದಿ ಹಾಗೂ ಸಮುದ್ರದ ನೀರುಗಳಿಗೆ ತೀರ್ಥವೆಂದು ಕರೆಯುವರಲ್ಲದೇ, ಅವುಗಳಲ್ಲಿ ಸ್ನಾನ ಮಾಡಿದರೆ ಪಾಪನಾಶವಾಗಿ ಮೋಕ್ಷಸಿಗುವುದೆಂದು ಹೇಳುತ್ತಾರೆ. ಅದು ನಿಜವಾಗಿದ್ದರೆ ಮನುಷ್ಯರಿಗಿಂತಲೂ ಮೀನ–ಮೊಸಳೆಗಳಿಗೇನೇ ಮೋಕ್ಷವಾಗಬೇಕಾದೀತು. ಉಗುರು, ಕೂದಲುಗಳನ್ನು ಕತ್ತರಿಸದೇ ಬೆಳೆಸಿದರೆ ಬ್ರಹ್ಮಚಾರಿ ಎಂದು ಹೇಳುವರು; ಹಾಗಾದರೆ ಕರಡಿಯೇ ಶ್ರೇಷ್ಠಬ್ರಹ್ಮಚಾರಿಯಾಗಬೇಕಾದೀತು. ಧಗಧಗಿಸುವ ಉರಿಯಲ್ಲಿ ಪತಿಯೊಡನೆ ಸಹಗಮನ ಮಾಡುವ ಸ್ತ್ರೀಯನ್ನು ಪತಿವ್ರತೆ ಎಂಬರು; ಹಾಗಾದರೆ ದೀಪಕ್ಕೆ ಮೈಸುಟ್ಟುಕೊಂಡು ಸಾಯುವ ದೀಪದ ಹುಳುವನ್ನು ಪತಿವ್ರತೆ ಎನ್ನಬೇಕಾದೀತು. ಸ್ತ್ರೀಯ ಸಂಗವನ್ನು ಮಾಡದಿರುವವನೇ ಬ್ರಹ್ಮಚಾರಿ ಎಂಬರು; ಅಂತಾದೊಡೆ ಆವೆಯಾದರೂ ಬ್ರಹ್ಮಚಾರಿಯಾಗಬೇಕಾದೀತು. ವಾಯು–ಆಹಾರಿಯೇ ಯೋಗಿ

ಎಂಬರು; ಹಾಗಾದರೆ ಸರ್ಪವೂ ಯೋಗಿ ಎನಿಸಿಕೊಳ್ಳಬೇಕಾದೀತು. ಹಣ್ಣುಗಳನ್ನೇ ತಿನ್ನುವವನಿಗೆ ತಪಸ್ವಿ ಎನ್ನುವರು. ಅದು ನಿಜವಾದರೆ ಅಡವಿಯಲ್ಲಿರುವ ಕಪಿಗಳನ್ನೆಲ್ಲ ತಪಸ್ವಿಗಳೆನ್ನಬೇಕಾಗುವುದು. ಆದ್ದರಿಂದ ಎಲ್ಲ ನಿಯಮ ವ್ರತ–ಉಪವಾಸ ಮುಂತಾದವುಗಳು ಶರೀರಕ್ಕೆ ಆಯಾಸವನ್ನುಂಟುಮಾಡುವುದರಿಂದ ನಿಷ್ಪ್ರಯೋಜಕಗಳೇ ಹೊರತು ತಿಲಮಾತ್ರವೂ ಫಲದಾಯಕಗಳಲ್ಲ.

ಇದಲ್ಲದೇ ಈ ಕಪಟ ವೈದಿಕರು ಹೇಳುವಂತೆ, ಆತ್ಮನು ಶರೀರ, ಇಂದ್ರಿಯ, ಮನಸ್ಸು, ಬುದ್ಧಿ ಹಾಗೂ ಪ್ರಾಣಾದಿಗಳಿಂದ ಭಿನ್ನನೇ ಆಗಿದ್ದರೆ, ಆ ಬೇರೆಯಾದ ಆತ್ಮನು ತಾನು ಹಿಂದಿನ ಜನ್ಮದಲ್ಲಿ ಯಾವ ಶರೀರದಲ್ಲಿ ವಾಸಿಸಿದ್ದನು ? ಅಲ್ಲಿ ಯಾವ ಯಾವ ಕಾರ್ಯಗಳನ್ನು ಮಾಡಿದ್ದನು ? ಮುಂತಾದವುಗಳ ಸ್ಮೃತಿಯು ಮುಂದಿನ ಜನ್ಮಗಳಲ್ಲಿ ಏಕೆ ಬರುವುದಿಲ್ಲ ? ಮತ್ತು ತನ್ನ ದೇಹತ್ಯಾಗದನಂತರ ಸ್ವರ್ಗಾದಿಗಳಿಗೆ ತಾನುಹೋಗಿ ಪುಣ್ಯ ವಿರುವವರೆಗೆ ಅಲ್ಲಿಯ ಸುಖವನ್ನು ಅನುಭವಿಸಿ, ''ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'' ಎಂಬ ಪ್ರಮಾಣಾನುಸಾರವಾಗಿ ಭೂಮಿಗಿಳಿದು ಮನುಷ್ಯ ದೇಹವನ್ನು ಪ್ರವೇಶಿಸಿದನಂತರ ನಾನು ಸ್ವರ್ಗದಲ್ಲಿ ರಂಭಾ, ಮೇನಕಾ, ತಿಲೋತ್ತಮಾ ಮುಂತಾದ ಅಪ್ಸರೆಯರೊಡಗೂಡಿ ಸ್ವರ್ಗಸುಖವನ್ನು ಅನುಭವಿಸಿ ಬಂದಿರುವೆನೆಂಬ ಸ್ಮರಣೆ ಯಾದರೂ ಬರಬಹುದಾಗಿತ್ತು! ಆದರೆ ಅದೂ ಬರುವುದಿಲ್ಲ, ಆದುದರಿಂದ ದೇಹವೇ ಆತ್ಮವಲ್ಲದೇ ಬೇರೊಬ್ಬ ಆತ್ಮನಿಲ್ಲ.

ಜಗತ್ತಿನಲ್ಲಿಯ ಪ್ರತಿಯೊಬ್ಬ ಮನುಷ್ಯನೂ 'ಅಹಂ ಗೌರಃ' ನಾನು ಬೆಳ್ಳಗಿದ್ದೇನೆ, ''ಅಹಂ ಸ್ಥೂಲಃ'' ನಾನು ದಷ್ಟಪುಷ್ಟನಾಗಿದ್ದೇನೆ, ''ಅಹಂ ಕೃಶಃ'' ನಾನು ಸೊರಗಿದ್ದೇನೆ ಮುಂತಾದ ಅನುಭವ ವಾಕ್ಯಗಳಿಂದ ಶರೀರವೇ ತಾನೆಂಬುದನ್ನು ಖಚಿತಪಡಿಸಿ ಕೊಳ್ಳುತ್ತಾನೆ. ಶರೀರವೇ ತಾನಾದ್ದರಿಂದ ಮನುಷ್ಯನು ಯಾವಾಗಲೂ ಉತ್ತಮ ಪದಾರ್ಥಗಳನ್ನು ಭುಂಜಿಸುವುದು, ಉತ್ತಮ ವಸ್ತ್ರಾಭರಣಗಳಿಂದ ಅಲಂಕರಿಸುವುದು, ಪುನಃ ಪುನಃ ಕನ್ನಡಿಯ ಮುಂದೆ ನಿಂತು ತನ್ನ ಸ್ವರೂಪವನ್ನು ನೋಡಿ ಹರ್ಷಿತ ನಾಗುವುದು, ರೋಗಾದಿಗಳು ಬಂದೊದಗಿದಾಗ ಔಷಧ ಸೇವನೆಯಿಂದ ಆರೋಗ್ಯ ವನ್ನು ಸುಧಾರಿಸಿಕೊಳ್ಳುವುದು–ಇವೇ ಮುಂತಾದ ವ್ಯವಹಾರಗಳಲ್ಲಿಯೇ ಕಾಲಯಾಪನ ಮಾಡುತ್ತಾನೆ.

ಪೂರ್ವಕಾಲದಲ್ಲಿ ದೇವತೆಗಳ–ಒಡೆಯನಾದ ಇಂದ್ರನು ಹಾಗೂ ರಾಕ್ಷಸಾಧಿಪ ನಾದ ವಿರೋಚನ ಇವರೀರ್ವರೂ– ''ಆತ್ಮಜ್ಞಾನಿಯು ಶೋಕ–ಮೋಹ ರಹಿತ ನಾಗುವನು, ಆತ್ಮನನ್ನು ತಿಳಿದುಕೊಂಡರೆ ಎಲ್ಲ ಕಾಮನೆಗಳೂ ಪೂರ್ಣಗೊಳ್ಳುವುವು'' ಎಂಬ ಆತ್ಮಜ್ಞಾನದ ಮಹತಿಯನ್ನು ಕೇಳಿ ತಾವೂ ಅದನ್ನು ತಿಳಿದು ತಮ್ಮೆಲ್ಲ ಮನೋರಥ ಗಳನ್ನು ಪೂರ್ಣಗೊಳಿಸಿಕೊಳ್ಳಬೇಕೆಂದು ಬ್ರಹ್ಮನೆಡೆಗೆ ಬಂದರು. ಅಲ್ಲಿ ಮೂವತ್ತೆರಡು ವರ್ಷ ಬ್ರಹ್ಮಚರ್ಯಪಾಲನೆ ಮಾಡಿಕೊಂಡು ಪ್ರಜಾಪತಿಯ ಸೇವೆ ಮಾಡಿದಾಗ, ನೀವು ಬಂದ ಕಾರಣವೇನೆಂದು ಪ್ರಜಾಪತಿಯು ಪ್ರಶ್ನಿಸಿದನು. ಆತ್ಮಜ್ಞಾನಕ್ಕೆಂದು ಈರ್ವರೂ

ಪ್ರಾರ್ಥಿಸಿಕೊಂಡಾಗ– ''ಪ್ರಜಾಪತಿರುವಾಚ–ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽ ವೇಕ್ಷೇಥಾಮಿತಿ ತೌ ಹ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽವೇಕ್ಷಾಂಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ ||.....ಏಷ ಆತ್ಮೇತಿ ಹೋವಾಚೈತದಮೃತಮಭಯಮೇತತ್ ಬ್ರಹ್ಮೇತಿ ತೌ ಹ ಶಾಂತ ಹೃದಯೌ ಪ್ರವವ್ರಜತುಃ'' (ಛಾಂ. ಉ. ೮–೮–೨–೩) ನೀವೀರ್ವರೂ ಉತ್ತಮ ವಸ್ತ್ರಾಭರಣಗಳಿಂದ ಅಲಂಕೃತರಾಗಿ ನೀರುತುಂಬಿದ ರಂಜಣಿಗೆಯೊಳಗೆ ನೋಡಿ ಕೊಳ್ಳಿರಿ. ಅದರಲ್ಲೇನು ಕಾಣುವುದೋ ಅದೇ ಆತ್ಮ ಅದೇ ಬ್ರಹ್ಮ ಹಾಗೂ ಅಮೃತ ಸ್ವರೂಪವೆಂದು ಹೇಳಲು, ಅದರಂತೆ ನೀರಿನ ರಂಜಣಿಗೆಯೊಳಗೆ ನೋಡಿ ತಮ್ಮ ಶರೀರದ ಛಾಯೆಯನ್ನೇ ಕಂಡು ಅದೇ ಆತ್ಮವೆಂದು ತಿಳಿದ ಅವರಿಬ್ಬರೂ ಶಾಂತ ಹೃದಯರಾಗಿ ತಮ್ಮ ಸ್ಥಾನಕ್ಕೆ ತೆರಳಿದರು.

ಈ ರೀತಿಯಾಗಿ ಛಾಂದೋಗ್ಯ ಉಪನಿಷತ್ತಿನ ಎಂಟನೇ ಅಧ್ಯಾಯದ ಎಂಟನೇ ಖಂಡದಲ್ಲಿ ಪ್ರಜಾಪತಿಯು ಇಂದ್ರ–ವಿರೋಚನರಿಗೆ ದೇಹವೇ ಆತ್ಮವೆಂದು ಉಪದೇಶಿಸಿದ್ದರಿಂದ ದೇಹಾತಿರಿಕ್ತವಾದ ಆತ್ಮನ ಅಸ್ತಿತ್ವವು ಅಸತ್ಯವಾದುದು. ''ಅಸ್ಥೂಲಂ, ಅನಣು, ಅಹ್ರಸ್ವಂ, ಅದೀರ್ಘಂ, ಅಲೋಹಿತಂ, ಅಚ್ಛಾಯಂ.....'' (ಬೃ. ಉ.) ಆತ್ಮನು ಸ್ಥೂಲನಲ್ಲ, ಅಣುವಲ್ಲ, ಹ್ರಸ್ವನಲ್ಲ, ದೀರ್ಘನಲ್ಲ, ಕೆಂಪಲ್ಲ ನೆರಳಿಲ್ಲ–ಮುಂತಾಗಿ ದೇಹಾತಿರಿಕ್ತನಾದ ಆತ್ಮನನ್ನು ವರ್ಣಿಸುವ ಬೃಹದಾರಣ್ಯಕ ಶ್ರುತಿ ಯಾದರೂ, ಅಹಂ ಗೌರಃ=ನಾನು ಶುಭ್ರನಾಗಿದ್ದೇನೆ. ''ಅಹಂ ಸ್ಥೂಲಃ''=ನಾನು ದಷ್ಟಪುಷ್ಟನಾಗಿದ್ದೇನೆ ಎಂಬ ಪ್ರಬಲವಾದ ಪ್ರತ್ಯಕ್ಷಾನುಭವಕ್ಕೆ ವಿರೋಧವಾಗಿರುವುದ ರಿಂದ ಸ್ವೀಕಾರಾರ್ಹವಾಗಿರುವುದಿಲ್ಲ.

ಇದೂ ಅಲ್ಲದೇ ''ಅಪಾಣಿಪಾದೋ ಜವನೋ ಗ್ರಹೀತಾಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ'' (ಶ್ವೇ. ಉ. ೩–೧೯) ಎಂಬ ಶ್ರುತಿವಾಕ್ಯದಲ್ಲಿ ದೇಹಾತಿರಿಕ್ತವಾದ ಆತ್ಮವನ್ನು ವರ್ಣಿಸುವಾಗ, ''ಕಾಲಿಲ್ಲದಿದ್ದರೂ ಬಹು ವೇಗದಿಂದ ನಡೆಯುತ್ತದೆ; ಕೈಯಿಲ್ಲದಿದ್ದರೂ ಕೊಟ್ಟದ್ದನ್ನೆಲ್ಲ ತೆಗೆದುಕೊಳ್ಳುತ್ತದೆ; ಕಣ್ಣಿಲ್ಲದಿದ್ದರೂ ಎಲ್ಲವನ್ನೂ ನೋಡುತ್ತದೆ; ಕಿವಿಯಿಲ್ಲದಿದ್ದರೂ ಎಲ್ಲವನ್ನೂ ಕೇಳುತ್ತದೆ–ಹೀಗೆ ಲೋಕ ವಿರುದ್ಧವಾದ ಅಲ್ಲಸಲ್ಲದ ನುಡಿಗಳನ್ನು ಪ್ರಯೋಗಿಸುವುದರಿಂದ ಹೇಗೆ ತಾನೇ ಅಂತಹ ಆತ್ಮನನ್ನು ನಂಬಬಹುದು ?

ಇದಲ್ಲದೇ ದೇಹಾತಿರಿಕ್ತವಾದ ಆತ್ಮನನ್ನೊಪ್ಪುವ ವಂಚಕರಾದ ಈ ವೈದಿಕರು ಸತ್ತು ಹೋದ ಪಿತೃಗಳ ತೃಪ್ತಿಗಾಗಿ ಅಸಂಬದ್ಧವಾದ ಶ್ರಾದ್ಧಕರ್ಮವನ್ನು ಮಾಡಲು ಹೇಳು ವರು, ಅದು ನಿಜವಾಗಿದ್ದರೆ ಇಲ್ಲಿ ಒಬ್ಬ ಬ್ರಾಹ್ಮಣನು ಕಂಠಪೂರ್ತಿ ಮೃಷ್ಟಾನ್ನ ಭೋಜನ ಮಾಡಿದರೆ, ಇನ್ನೂ ಜೀವಂತನಾಗಿರುವ ತನ್ನ ತಂದೆಯ ಹೊಟ್ಟೆಯು ತುಂಬಬೇಕಾಗು ವುದು ಹಾಗೂ ಉರಿಯುತ್ತಿರುವ ದೀಪಕ್ಕೆ ಹಾಕಿದ ತುಪ್ಪ ಅಥವಾ ಎಣ್ಣೆಯಿಂದ ನಂದಿ ಹೋದ ದೀಪವಾದರೂ ಉರಿಯಬೇಕಾದೀತು. ಆದ್ದರಿಂದ ಪಾಂಡವರು ಅರಗಿನ ಮನೆ

ಯಲ್ಲಿ ಸುಟ್ಟುಹೋದರೆಂಬ ಸಮಾಚಾರವನ್ನು ಕೇಳಿ ಧೃತರಾಷ್ಟ್ರನು ಆ ಪಾಂಡವರನ್ನುದ್ದೇಶಿಸಿ ಮಾಡಿದ ಶ್ರಾದ್ಧವು ಹೇಗೆ ವ್ಯರ್ಥವಾಯಿತೋ ಹಾಗೆ ಸತ್ತು ಹೋಗಿರುವ ಪಿತೃಗಳನ್ನುದ್ದೇಶಿಸಿ ತಮ್ಮ ಮನೆಗಳಲ್ಲಿ ಮಾಡಿದ ಶ್ರಾದ್ಧವೂ ಸಹ ವ್ಯರ್ಥವೇ ಹೊರತು ಪಿತೃಗಳಿಗೆಂದೂ ಮುಟ್ಟಲಾರದು. ಇದರಂತೆ ''ಯಾಗತ್ ಸ್ವರ್ಗೋ ಭವತಿ'' ಎಂಬ ವಾಕ್ಯವನ್ನು ನಂಬಿ ಅಸಂಖ್ಯ ದ್ರವ್ಯವನ್ನು ಖರ್ಚುಮಾಡಿ ತುಪ್ಪ, ಚಂದನದ ಕಟ್ಟಿಗೆ, ರೇಷ್ಮೆವಸ್ತ್ರ ಮುಂತಾದ ಪದಾರ್ಥಗಳನ್ನು ಬೆಂಕಿಯಲ್ಲಿ ಹಾಕುವುದರಿಂದ ಬೂದಿಯೇ ಅದರ ಫಲವಲ್ಲದೇ ಇಲ್ಲದ ಸ್ವರ್ಗ ಅದೆಂದಿಗೂ ಸಿಗಲಾರದು.

ಇದೂ ಅಲ್ಲದೆ ಈ ವಂಚಕರಾದ ವೈದಿಕರು ದುಡಿಯದೇ ಸೈಗಳ್ಳರಾಗಿ ತಮ್ಮ ಉದರ ಪೋಷಣೆಯನ್ನು ಮಾಡಿಕೊಳ್ಳುವುದಕ್ಕೋಸ್ಕರ ಕಲ್ಲು, ಮಣ್ಣು, ಕಟ್ಟಿಗೆ, ಬೆಳ್ಳಿ, ಬಂಗಾರ ಮುಂತಾದವುಗಳಲ್ಲಿ ವಿಗ್ರಹಗಳನ್ನು ರಚಿಸಿ ಅವುಗಳಿಗೆ ಶಿವ, ವಿಷ್ಣು, ಶಕ್ತಿ ಮೊದಲಾದ ಹೆಸರುಗಳನ್ನಿಟ್ಟು, ಮಂದಿರಗಳಲ್ಲಿ ಪ್ರತಿಷ್ಠಾಪಿಸಿ ಮುಗ್ಧ ಜನರನ್ನು ಮೋಸಗೊಳಿಸುತ್ತಿದ್ದಾರೆ. ಕಾರಣ ವಿಚಾರವಾದಿಗಳು ಇದಾವುದಕ್ಕೂ ಆಸ್ಪದ ಕೊಡಬಾರದು.

''ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾಃ ಸ್ತ್ರೀಸುತಾದಯಃ'' ಎಂಬ ಪ್ರಮಾಣಾನುಸಾರವಾಗಿ ಇದು ಪಾಪಕಾರ್ಯ, ಇದು ಪುಣ್ಯ ಕಾರ್ಯ ಎಂಬ ವಿವೇಚನೆಯನ್ನು ಮಾಡದೇ ಎಂಥ ಕಾರ್ಯವನ್ನಾದರೂ ಮಾಡಿ ತಮ್ಮ ತಮ್ಮ ಹೆಂಡತಿ ಮಕ್ಕಳನ್ನು ರಕ್ಷಿಸಿಕೊಳ್ಳಬೇಕೆಂಬುದು ನೀತಿ. ಆದ್ದರಿಂದ ದೇಹವಿರುವವರೆಗೆ ದುಃಖವನ್ನನುಭವಿಸದೇ ಸುಖವನ್ನನಭವಿಸುವುದೇ ಮನುಷ್ಯನ ಮುಖ್ಯಧ್ಯೇಯವಾದ್ದರಿಂದ, ಸಾಲವನ್ನು ಮಾಡಿದರೂ ಚಿಂತೆಯಿಲ್ಲ ; ಇನ್ನಾವ ಅಕಾರ್ಯಗಳನ್ನು ಮಾಡಿದರೂ ಚಿಂತೆಯಿಲ್ಲ; ಸುಖವನ್ನನುಭವಿಸುತ್ತಿರಬೇಕು. ಈ ಶರೀರವನ್ನು ತ್ಯಾಗಮಾಡಿದ ಮೇಲೆ ಸುಖವಿಲ್ಲ ; ದುಃಖವಿಲ್ಲ ; ಅಂತೆಯೇ ಇದಕ್ಕೆ ''ಭೋಗಾಯತನಂ'' ಎಂದಿದ್ದಾರೆ. ಈ ಶರೀರವೇ ಸುಖವನ್ನಾಗಲಿ ದುಃಖವನ್ನಾಗಲಿ ಅನುಭವಿಸಬೇಕೇ ಹೊರತು ಶರೀರಕ್ಕಿಂತ ಬೇರೊಬ್ಬ ಆತ್ಮನಿಲ್ಲವಾದ್ದರಿಂದ ದೇಹವು ಬಿದ್ದ ಮೇಲೆ ಅದನ್ನು ಶ್ಮಶಾನಕ್ಕೆ ಹೊತ್ತುಕೊಂಡು ಹೋಗಿ ಸುಟ್ಟುಬಿಡುತ್ತಾರೆ ಅಥವಾ ಭೂಮಿಯಲ್ಲಿ ಹೂಳುತ್ತಾರೆ. ಆಮೇಲೆ ಅದು ತಿರುಗಿ ಹುಟ್ಟುವುದೆಂತು ? ಆದ್ದರಿಂದ ಮರಣವೇ ಮೋಕ್ಷ. ಅದು ಅನಾಯಾಸವಾಗಿ ಎಲ್ಲರಿಗೂ ದೊರೆಯುವಂತಹದು. ಹೀಗಿದ್ದರೂ ಇದನ್ನು ಬಿಟ್ಟು ಶಕ್ತಿಶೂನ್ಯರೂ, ಬುದ್ಧಿಹೀನರೂ, ದುರ್ಬಲರೂ ಆದ ವಂಚಕ ವೈದಿಕರು ತಮ್ಮ ಹೊಟ್ಟೆ ಹೊರೆಯುವದಕ್ಕಾಗಿ ಇಲ್ಲದ ಸಲ್ಲದವುಗಳನ್ನೆಲ್ಲಾ ಕಲ್ಪಿಸಿಕೊಂಡು, ಜೀವಿಸಿರುವವರೆಗೆ ಅಗ್ನಿಹೋತ್ರವನ್ನು ಮಾಡಬೇಕೆಂದೂ, ಸಾಂಗ ವೇದಾಧ್ಯಯನವನ್ನು ಮಾಡಬೇಕೆಂದೂ, ಸಂನ್ಯಾಸ ವ್ರತವನ್ನು ಅನುಷ್ಠಿಸಬೇಕೆಂದೂ, ಹಣೆಯಲ್ಲಿ ಬೂದಿಯನ್ನೂ ಬಿಳಿಮಣ್ಣನ್ನೂ, ಕಂಠದಲ್ಲಿ ರುದ್ರಾಕ್ಷಿ ತುಲಸಿಮಣಿಗಳನ್ನೂ ಧರಿಸಬೇಕೆಂದೂ ಮಿಥ್ಯಾಲಾಪವನ್ನೆಸಗುತ್ತಲಿರುತ್ತಾರೆ. ಕಾರಣ ಇವೆಲ್ಲ ವ್ಯರ್ಥ ನಿಯಮಗಳಲ್ಲದೇ ಫಲಕಾರಿ ನಿಯಮಗಳಲ್ಲವೆಂದು ಸರ್ವರೂ ತಿಳಿದುಕೊಳ್ಳಬೇಕು.

ಹೀಗೆ, ದೇಹವೇ ಆತ್ಮವೆಂದು ತಿಳಿದಿರುವ ತಿಳಿಗೇಡಿಗಳಾದ ಚಾರ್ವಾಕರ ಸಿದ್ಧಾಂತದ ಈ ಮಾತುಗಳನ್ನು ಕೇಳಿದಾಗ ಎಂತಹ ಆಸ್ತಿಕನ ಮನಸ್ಸೂ ಸಂದೇಹ ಗೊಳ್ಳದಿರಲಾರದು. ಆಪಾತತಃ ಕೇಳಲು ರಮಣೀಯವಾದವುಗಳೇ ವಿನಾ ಇವರ ಮಾತುಗಳು ಸೈದ್ಧಾಂತಿಕವಾದವುಗಳಲ್ಲ. ಈ ಚಾರ್ವಾಕ ಸಿದ್ಧಾಂತದಲ್ಲಿಯೇ ಕೆಲಜನರು ಶರೀರವೆಂದರೆ ಇಂದ್ರಿಯಗಳ ಸಮೂಹವಲ್ಲದೇ ಮತ್ತೇನಿಲ್ಲ. ಗಿಡದಲ್ಲಿಯ ಬೊಡ್ಡೆ, ಬೇರು, ಟೊಂಗೆ, ಎಲೆ, ಕಾಯಿ ಮುಂತಾದ ಅವಯವಗಳನ್ನು ಕಡಿದು ಬಿಡಿ ಬಿಡಿ ಮಾಡಿ ಇಟ್ಟಾಗ ಗಿಡವೆಂಬುದು ಹುಡುಕಿದರೂ ಸಿಗದಿರುವಂತೆ ; ಕೈ, ಕಾಲು, ಕಣ್ಣು ಕಿವಿ ಮೊದಲಾದ ಅವಯವಗಳನ್ನು ಬೇರ್ಪಡಿಸಿದಾಗ ಶರೀರವೆನ್ನುವದು ಸಿಗಲಾರದು. ಆದ್ದರಿಂದ ನಾನು ಹೋಗುತ್ತೇನೆ, ನಾನು ಕೊಡುತ್ತೇನೆ, ನಾನು ಕೇಳುತ್ತೇನೆ ಎಂದು ವ್ಯವಹರಿಸುವಾಗ ಇಂದ್ರಿಯಗಳಲ್ಲಿಯೇ ''ನಾನು'' ಎಂಬ ಶಬ್ದ ಪ್ರಯೋಗವಾಗುವುದ ರಿಂದ ಇಂದ್ರಿಯಗಳೇ ಆತ್ಮವೆಂದು ತಮ್ಮ ಪಕ್ಷವನ್ನು ಪ್ರತಿಷ್ಠಾಪಿಸುತ್ತಾರೆ. ಇವರಲ್ಲಿಯೂ ಒಂದೊಂದು ಇಂದ್ರಿಯ ಆತ್ಮವೆನ್ನುವದೊಂದು ಪಕ್ಷವಾದರೆ, ಇಂದ್ರಿಯಗಳ ಸಮೂಹವೇ ಆತ್ಮವೆನ್ನುವುದು ಮತ್ತೊಂದು ಪಕ್ಷವಾಗಿದೆ.

ನಮ್ಮ ಶರೀರದಲ್ಲಿ ಶ್ರೋತ್ರ, ತ್ವಕ್, ನೇತ್ರ, ರಸನ ಮತ್ತು ಘ್ರಾಣಗಳೆಂಬ ಪಂಚ ಜ್ಞಾನೇಂದ್ರಿಯಗಳು, ವಾಕ್, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಪಂಚ ಕರ್ಮೇಂದ್ರಿಯಗಳು; ಅದರಂತೆ ಮನಸ್ಸೆಂಬ ಅಂತರಿಂದ್ರಿಯ–ಹೀಗೆ ಹನ್ನೊಂದು ಇಂದ್ರಿಯಗಳು ಪ್ರಸಿದ್ಧಗಳಾಗಿವೆ. ಮೃತವಾದ ಶರೀರವು ಯಥಾವತ್ ಪೂರ್ವದಂತೆ ತೋರುತ್ತಿದ್ದರೂ ಅದರಿಂದ ನೋಡುವ, ಕೇಳುವ ಯಾವುದೇ ಜ್ಞಾನ ವ್ಯವಹಾರವೂ ಆಗದಿರುವುದರಿಂದ ಈ ಜಡವಾದ ಶರೀರವು ಆತ್ಮವಾಗಲಾರದು. ಆದ್ದರಿಂದ ನೋಡುವ, ಕೇಳುವ ಜ್ಞಾನ ವ್ಯವಹಾರಕ್ಕೆ ಸಾಧನಗಳಾದ ಜ್ಞಾನೇಂದ್ರಿಯಗಳೇ ಆತ್ಮವು. ಇವುಗಳಲ್ಲಿಯೂ ಎಲ್ಲಕ್ಕಿಂತ ಹೆಚ್ಚು ಸುಖವಾದ ನೇತ್ರವೇ ಶ್ರೇಷ್ಠವಾದ್ದರಿಂದ, ಅದೇ ಜ್ಞಾತೃ ರೂಪವಾದ ಆತ್ಮವು. ಇನ್ನು ಅದಿಲ್ಲದಿದ್ದಾಗ ಶ್ರೋತ್ರ, ತ್ವಕ್, ರಸನ ಹಾಗೂ ಘ್ರಾಣೇಂದ್ರಿಯಗಳನ್ನು ಕ್ರಮವಾಗಿ ಒಂದಿಲ್ಲದಿದ್ದಾಗ ಮತ್ತೊಂದನ್ನು ಆತ್ಮವನ್ನಾಗಿ ತಿಳಿದುಕೊಳ್ಳಬೇಕು. ವಾಕ್, ಪಾಣಿ ಮುಂತಾದ ಪಂಚ ಕರ್ಮೇಂದ್ರಿಯಗಳಲ್ಲಿ ಜ್ಞಾತೃತ್ವ ಶಕ್ತಿ ಇಲ್ಲವಾದ್ದರಿಂದ ಶರೀರದಂತೆ ಅವುಗಳೂ ಜಡಗಳಾದ್ದರಿಂದ ಆತ್ಮವಾಗಲಾರವು.

ಈ ಇಂದ್ರಿಯಾತ್ಮವಾದಿಗಳಲ್ಲಿಯೇ ಬೇರೊಬ್ಬರು–ಒಂದೊಂದು ಇಂದ್ರಿಯ ಗಳೂ ಆತ್ಮವಲ್ಲ, ಕಿಂತು ಪಂಚಜ್ಞಾನೇಂದ್ರಿಯಗಳ ಸಮೂಹವೇ ಆತ್ಮವೆಂದು ಸ್ವಕೀಯ ವಾದ ವಿಲಕ್ಷಣಪಕ್ಷವನ್ನು ಪ್ರತಿಪಾದಿಸುವರು. ಇದರಲ್ಲಿಯೇ ಮತ್ತೋರ್ವರು– ಜ್ಞಾನೇಂದ್ರಿಯ ಹಾಗೂ ಕರ್ಮೇಂದ್ರಿಯಗಳ ತತ್ತತ್ ವಿಷಯಗ್ರಹಣರೂಪವಾದ ವ್ಯವಹಾರಕ್ಕೆ ಪ್ರೇರಕವಾಗಿಯೂ, ಇಂದ್ರಿಯಾಧ್ಯಕ್ಷವಾಗಿಯೂ ಇರುವ ಅಂತರಿಂದ್ರಿಯ ವಾದ ಮನಸ್ಸೇ ಆತ್ಮವಲ್ಲದೇ ಮತ್ತಾವ ಇಂದ್ರಿಯಗಳೂ ಆತ್ಮವಾಗಲಾರವು. ಮನಸ್ಸು ನೇತ್ರದ ಜೊತೆಗೆ ಕೂಡಿಕೊಂಡಿರುವಾಗ ಮಾತ್ರ ನಮಗೆ ರೂಪದ ಜ್ಞಾನವಾಗುವುದು.

ಅಂತೆಯೇ–ಈ ಮಾರ್ಗದಿಂದ ಒಬ್ಬ ಮಹಾತ್ಮರು ಹೋದರೆ ? ಎಂದು ದಾರಿಯಲ್ಲಿ ಕುಳಿತವನನ್ನು ಕೇಳಲು, ನಾನು ಲಕ್ಷ್ಯ ಕೊಡಲಿಲ್ಲಸ್ವಾಮಿ ಎಂದು ಉತ್ತರಿಸುತ್ತಾನೆ. ಕಣ್ಣು ನೋಡಿದ್ದರೂ ಮನಸ್ಸು ಬೇರೆ ವಿಷಯದಲ್ಲಿ ಆಸಕ್ತವಾದಾಗ ನಮಗೆ ರೂಪದ ಜ್ಞಾನವಾಗಲಾರದು. ಅದರಂತೆ ಪ್ರವಚನವನ್ನು ಕೇಳುತ್ತ ಕುಳಿತಾಗ ನಮ್ಮ ಮನಸ್ಸು ಅಂಗಡಿಯ ವ್ಯವಹಾರದ ಕಡೆಗೆ ಹರಿದುಹೋದರೆ ಒಂದು ತಾಸು ಕುಳಿತು ಕೇಳಿದ ಪ್ರವಚನದ ಒಂದೂ ಶಬ್ದದ ಅರ್ಥ ನಮಗಾಗುವುದಿಲ್ಲ. ಇದರಿಂದ ಜ್ಞಾನೇಂದ್ರಿಯ ಗಳಿಗಿಂತಲೂ ಮನಸ್ಸಿನಲ್ಲಿ ಹೆಚ್ಚು ಜ್ಞಾತೃತ್ವವಿರುವುದರಿಂದ ಮನಸ್ಸೇ ಆತ್ಮವೆಂಬ ಸಿದ್ಧಾಂತವನ್ನು ಸಾಧಿಸುವರು.

ಈ ಇಂದ್ರಿಯಾತ್ಮವಾದಿಗಳಿಗಿಂತ ವಿಲಕ್ಷಣವಾದ ಇನ್ನೋರ್ವ ದಾರ್ಶನಿಕರು ಜ್ಞಾನೇಂದ್ರಿಯ, ಕರ್ಮೇಂದ್ರಿಯ ಹಾಗೂ ಮಾನಸಿಕ ವ್ಯವಹಾರಕ್ಕೆಲ್ಲ ಸ್ಫೂರ್ತಿ ದಾಯಕವಾದ ಪ್ರಾಣಶಕ್ತಿಯೇ ಆತ್ಮವೆಂದು ನಿರೂಪಿಸುವರು. ಯೋಗಾಭ್ಯಾಸದ ಸಾಧನೆಯಿಂದ ಅಮನಸ್ಕ ಅವಸ್ಥೆಯನ್ನು ಸಾಧಿಸಿ ಧ್ಯಾನಾಸಕ್ತರಾದ ಯೋಗಿಗಳಲ್ಲಿ ಮನಸ್ಸು ಇಲ್ಲವಾಗಿದ್ದರೂ, ಪ್ರಾಣವು ಮಾತ್ರ ಜಾಗ್ರತವಾಗಿದ್ದು ಯೋಗಿಯ ಶರೀರವನ್ನು ಪಶು ಪಕ್ಷಿಗಳಿಂದ ರಕ್ಷಿಸುತ್ತದೆ. ಪ್ರಾಣವುಳ್ಳ ಶರೀರವು ಎಲ್ಲಿಯೇ ಬಿದ್ದಿದ್ದರೂ ಆ ಶರೀರದ ಸಮೀಪಕ್ಕೆ ಮಾಂಸಭಕ್ಷಕಗಳಾದ ಕಾಗೆ, ಹದ್ದು, ಮುಂತಾದ ಪಕ್ಷಿಗಳು ಬರಲಾರವು ; ಆದರೆ ಪ್ರಾಣಹೋಗಿದ್ದರೆ ಆ ಶರೀರವನ್ನು ನಾಯಿ, ನರಿ, ಹದ್ದು, ಕಾಗೆ ಮುಂತಾದ ಪಶು–ಪಕ್ಷಿಗಳು ಹರಿದು ತಿಂದುಬಿಡುತ್ತವೆ ; ಆದ್ದರಿಂದ ಪ್ರಾಣವೇ ಆತ್ಮವಲ್ಲದೇ ಮನಸ್ಸು ಆತ್ಮವಾಗಲಾರದು.

ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಾಣವೇ ಸರ್ವಶ್ರೇಷ್ಠವೆಂಬ ಬಗ್ಗೆ ಬಹು ಸುಂದರವಾದ ದೃಷ್ಟಾಂತವೊಂದುಂಟು–ಪ್ರಜಾಪತಿಯು ಶರೀರವನ್ನು ರಚಿಸಿ ಇಂದ್ರಿಯ, ಮನಸ್ಸು ಹಾಗೂ ಪ್ರಾಣಗಳನ್ನು ಅದರಲ್ಲಿ ತುಂಬಿ ಭೂಲೋಕಕ್ಕೆ ಕಳುಹಿಸಿದಾಗ, ಶರೀರದಲ್ಲಿರುವ ಇಂದ್ರಿಯ, ಮನಸ್ಸು ಹಾಗೂ ಪ್ರಾಣಗಳು ಪರಸ್ಪರ ವಾಗಿ ಕೂಡಿ ಬಾಳದೇ ''ಅಹಂ ಶ್ರೇಯಾನಸ್ಮಿ ಅಹಂ ಶ್ರೇಯಾನಸ್ಮಿ'' ನಾನು ಶ್ರೇಷ್ಠನು; ನಾನು ಶ್ರೇಷ್ಠನೆಂದು ಕಲಹಮಾಡಿ ತಮ್ಮೊಳಗೆ ಶ್ರೇಷ್ಠತ್ವದ ನಿರ್ಣಯವಾಗದಿದ್ದಾಗ, ಪ್ರಾಣವು ತನ್ನ ತಂದೆಯಾದ ಪ್ರಜಾಪತಿಯನ್ನು ಪ್ರಶ್ನಿಸುತ್ತದೆ– ''ತೇ ಹ ಪ್ರಾಣಾಃ ಪ್ರಜಾಪತಿಮಪೀರಮೇ ತ್ಯೋಚುರ್ಭಗವನ್ ಕೋ ನಃ ಶ್ರೇಷ್ಠ ಇತಿ ತಾನ್ ಹೋವಾಚ ಯಸ್ಮಿನ್ ವ ಉತ್ಕ್ರಾಂತೇ ಶರೀರಂ ಪಾಪಿಷ್ಠತರಮಿವ ದೃಶ್ಯತೇ ಸ ವಃ ಶ್ರೇಷ್ಠ ಇತಿ'' (ಛಾ. ಉ. ೫/೧/೭) ಹೇ ಭಗವನ್ ! ನಮ್ಮೆಲ್ಲರಲ್ಲಿ ಶ್ರೇಷ್ಠರು ಯಾರು ? ಎಂದು. ಆಗ ಪ್ರಜಾಪತಿಯು, ನಿಮ್ಮೊಳಗೆ ಯಾರು ಶರೀರವನ್ನು ಬಿಟ್ಟು ಹೋದಾಗ ಈ ಶರೀರವು ಸರ್ವಥಾ ಕ್ರಿಯಾಶೂನ್ಯವಾಗಿ ಅಮಂಗಲರೂಪದಿಂದ ತೋರುವುದೋ ಅವರೇ ಶ್ರೇಷ್ಠರೆಂದು ತಿಳಿದುಕೊಳ್ಳಬೇಕು ಎಂದು ಉತ್ತರಿಸಿದನು.

ಪ್ರಜಾಪತಿಯ ಹೇಳಿಕೆಯಂತೆ ಮೊದಲು ವಾಗಿಂದ್ರಿಯವು ಶರೀರವನ್ನು ಬಿಟ್ಟು ಹೋಗಿ ಒಂದು ವರ್ಷದನಂತರ ಬಂದು ನಾನಿಲ್ಲದೇ ಶರೀರದ ವ್ಯವಹಾರ ನಡೆಯಿತೇ? ಎಂದು ಕೇಳಿತು. ಅಹುದು ; ವಾಣಿ ಇಲ್ಲದಿದ್ದರೂ ಮೂಕನಂತೆ ಕಣ್ಣಿನಿಂದ ನೋಡುತ್ತ ಪ್ರಾಣದಿಂದ ಜೀವಿಸುತ್ತ ಮನಸ್ಸಿನಿಂದ ಚಿಂತಿಸುತ್ತ ಹೀಗೆ ಎಲ್ಲ ವ್ಯವಹಾರಗಳೂ ನಡೆದವು–ಎಂದು ಉಳಿದ ಇಂದ್ರಿಯಗಳು ಹೇಳಿದ ಮಾತನ್ನು ಕೇಳಿ, ನಾನಿಲ್ಲದಿದ್ದರೂ ಯಾವ ವ್ಯವಹಾರವೂ ನಿಲ್ಲಲಿಲ್ಲವೆಂದು ನಾಚಿಕೊಂಡ ವಾಗಿಂದ್ರಿಯವು ಪುನಃ ತನ್ನ ಸ್ಥಾನವನ್ನು ಪಡೆಯಿತು.

ಇದೇ ಪ್ರಕಾರ ಕಣ್ಣು ಹೋದಾಗ ಕುರುಡನಾದರೂ ವ್ಯವಹಾರ ಸಂಪೂರ್ಣ ನಿಲ್ಲಲಿಲ್ಲ. ಅದರಂತೆ ಕಿವಿ ಮತ್ತು ಮನಸ್ಸುಗಳು ಕ್ರಮವಾಗಿ ಹೋದರೂ ಕಿವುಡನಂತೆ ಹಾಗೂ ವಿಕಸಿತವಾದ ಮನಃಶೂನ್ಯರಾದ ಬಾಲಕರಂತೆ ವ್ಯವಹಾರವೆಲ್ಲ ಸ್ವಲ್ಪ ಅಸ್ತವ್ಯಸ್ತವಾದರೂ ಪೂರ್ಣವಾಗಿ ನಿಲ್ಲಲಿಲ್ಲ. ಆಗ ಅವೆಲ್ಲವುಗಳೂ ಮರಳಿ ತಮ್ಮ ತಮ್ಮ ಸ್ಥಾನವನ್ನು ಸ್ವೀಕರಿಸಿದನಂತರ ಕೊನೆಯದಾಗಿ ಪ್ರಾಣವು ದೇಹವನ್ನು ಬಿಟ್ಟು ಹೊರಡಲು ತಯಾರಾದಾಗ ಕಣ್ಣುನೋಡುವುದನ್ನು, ಕಿವಿಯು ಕೇಳುವುದನ್ನೂ, ಬಾಯಿ ಮಾತಾಡುವುದನ್ನೂ ಮತ್ತು ಮನಸ್ಸು ಚಿಂತಿಸುವುದನ್ನೂ ಬಿಟ್ಟು ನಿಸ್ತೇಜಗಳಾಗಿ ಪ್ರಾಣವನ್ನೇ ಹಿಂಬಾಲಿಸತೊಡಗಿದವು. ಆಗ ಶರೀರವು ಸರ್ವಥಾ ಚೇಷ್ಟಾಶೂನ್ಯವಾಗಿ ಅಮಂಗಲವಾಗುತ್ತಿರುವುದನ್ನು ನೋಡಿ ಪ್ರಾಣದ ಮಹತಿಯನ್ನು ಅರಿತ ಸಕಲೇಂದ್ರಿಯ ಗಳೂ ''ತ್ವಂ ನಃ ಶ್ರೇಷ್ಠೋಽಸಿ ಮೋತ್ಕ್ರಾಮಿತಿ'' ನೀನು ನಮ್ಮೆಲ್ಲರಲ್ಲಿ ಶ್ರೇಷ್ಠನಾಗಿರುವಿ; ಕಾರಣ ಶರೀರವನ್ನು ಬಿಟ್ಟು ನೀನು ಉತ್ಕ್ರಮಿಸಬೇಡ. ನೀನು ಹೋದರೆ ನಮ್ಮ ಅಸ್ತಿತ್ವವೇ ಉಳಿಯಲಾರದು–ಎಂದು ಪ್ರಾರ್ಥಿಸಿಕೊಂಡವು.

ಹೀಗೆ ಛಾಂದೋಗ್ಯ ಶ್ರುತಿಯಲ್ಲಿ ಬಂದಿರುವ ಈ ರೋಚಕವಾದ ದೃಷ್ಟಾಂತವನ್ನು ಅನುಭವದ ಒರೆಗಲ್ಲಿಗೆ ತಿಕ್ಕಿ ನೋಡಿದಾಗ, ಇಂದ್ರಿಯಗಳಿಗಿಂತಲೂ ಪ್ರಾಣವೇ ಶ್ರೇಷ್ಠವಾದ್ದರಿಂದ ಹಾಗೂ ಅದಿಲ್ಲವಾದರೆ ನೋಡುವ, ಕೇಳುವ, ಕೊಡುವ, ಕೊಂಬುವ ಸಕಲ ವ್ಯವಹಾರಗಳೂ ನಿಂತುಹೋಗುವುದು ಸರ್ವಾನುಭವಸಿದ್ಧವಾಗಿದೆ. ಇನ್ನು ಸಕಲೇಂದ್ರಿಯಗಳೂ ತಮ್ಮ ತಮ್ಮ ವ್ಯಾಪಾರ ಬಿಟ್ಟು ಲಯವಾಗಿರುವ ಸುಷುಪ್ತಿ (ಗಾಢನಿದ್ರೆ)ಯಲ್ಲಿ ಪ್ರಾಣವಾಯುವು ಮಾತ್ರ ಸದಾ ಸಂಚರಿಸುತ್ತ ಜಾಗ್ರತವಾಗಿರು ತ್ತದೆ; ಆದ್ದರಿಂದ ''ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಽಂತರಾತ್ಮಾ ಪ್ರಾಣಮಯಃ । ತೇನೈಷ ಪೂರ್ಣಃ ಸ ವಾ ಏಷ ಪುರುಷವಿಧ ಏವ ।'' (ತೈತ್ತಿ. ಉ. ೨–೨) ಎಂಬ ತೈತ್ತಿರೀಯ ಶ್ರುತಿ ಪ್ರಮಾಣಾನುಸಾರವಾಗಿ ಪ್ರಾಣವೇ ಆತ್ಮವೆಂಬ ದಾರ್ಶನಿಕ ಪಕ್ಷವೊಂದು ತಲೆದೋರುವುದು.

ಮತ್ತೋರ್ವರು–ಅಪಂಚೀಕೃತಪಂಚಮಹಾಭೂತಗಳ ಸಮಷ್ಟಿ ರಜೋಗುಣ ದಿಂದ ಉತ್ಪನ್ನವಾದ ಪ್ರಾಣವಾಯುವು ಕ್ರಿಯಾಪ್ರಧಾನವಾದದ್ದೇ ವಿನಾ ಜ್ಞಾನ ಪ್ರಧಾನವಾದದ್ದಲ್ಲ; ಅಂತೆಯೇ ಇದು ಜಡರೂಪವಾಗಿದೆ. ಇದು ಜಡವಾದ್ದರಿಂದಲೇ

ರಾತ್ರಿಯೊಳಗೆ ಮಲಗಿಕೊಂಡ ಒಬ್ಬ ಹೆಣ್ಣುಮಗಳ ಮೂಗಿನಲ್ಲಿಯ ಲಕ್ಷಾಂತರ ಬೆಲೆ ಬಾಳುವ ವಜ್ರದ ಮೂಗುತಿಯನ್ನು ಕಳ್ಳನು ಕದ್ದೊಯ್ಯುವಾಗ ಮೂಗಿನಲ್ಲಿಯೇ ಸಂಚರಿಸುತ್ತಿದ್ದ ಪ್ರಾಣವಾಯುವು ಆ ಸಮಯದಲ್ಲಿ ಕಳ್ಳನಿಗೆ ಪ್ರತಿಬಂಧ ಮಾಡುವ ದಾಗಲೀ, ಮಾಲಕನನ್ನು ಎಬ್ಬಿಸುವುದನ್ನಾಗಲೀ ಅಥವಾ ಮಾಲಕನು ಎದ್ದ ಬಳಿಕ ಇಂಥವನೇ ಕಳವು ಮಾಡಿದ್ದಾನೆ ಎಂದು ಹೇಳುವುದನ್ನಾಗಲೀ ಮಾಡಲಾರದು. ಅದಕ್ಕೋಸ್ಕರ ಈ ಜಡವಾದ ಪ್ರಾಣವು ಆತ್ಮವಲ್ಲ. ಇದೂ ಅಲ್ಲದೇ ಹಠಯೋಗದಲ್ಲಿ ಯೋಗಿಗಳು ತಮ್ಮ ಯೋಗಸಾಮರ್ಥ್ಯದಿಂದ ಪ್ರಾಣಾಯಾಮ ಪ್ರಕ್ರಿಯೆಯ ಮೂಲಕ ಪ್ರಾಣವಾಯುವನ್ನು ನಿಯಮನಮಾಡಿ ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುತ್ತಾರೆ. ಹೀಗೆ ಮತ್ತೊಬ್ಬರ ಅಧೀನವಾಗಿರುವುದು ಎಂದಿಗೂ ಆತ್ಮವಾಗಲಾರದೆಂದು ನಿರ್ಣಯಿಸಿ ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಮನಸ್ಸು ಹಾಗೂ ಪ್ರಾಣಗಳ ವ್ಯವಹಾರಕ್ಕೆ ನಿರ್ಣಯವನ್ನು ಕೊಡುವುದು ಜ್ಞಾನರೂಪವಾದ ಬುದ್ಧಿಯಾದ್ದರಿಂದ ''ಅನ್ಯೋಽಂತರ ಆತ್ಮಾವಿಜ್ಞಾನ ಮಯಃ'' (ತೈತ್ತಿ.ಉ. ೨–೪) ಎಂಬ ಶ್ರುತಿಯಲ್ಲಿಯೂ ವಿಜ್ಞಾನವೇ ಆತ್ಮವೆಂದು ಹೇಳಿದ ಕಾರಣ ವಿಜ್ಞಾನರೂಪವಾದ ಬುದ್ಧಿಯೇ ಆತ್ಮವೆನ್ನುವರು.

ಬುದ್ಧಿಯೇ ಆತ್ಮವೆಂದು ಹೇಳುವ ಸಿದ್ಧಾಂತಕ್ಕೆ ಬೌದ್ಧಸಿದ್ಧಾಂತವೆನ್ನುವರು. ಅಂತೆಯೇ ''ಬುದ್ಧಿ ತತ್ತ್ವಗತೈರ್ಬೌದ್ಧೈರ್ಬುದ್ಧಿರಾತ್ಮೇತಿ ಗೀಯತೇ'' ಎಂದು ಶ್ರೀ ಭಗವತ್ಪಾದರು ಉಪದೇಶಿಸಿದ್ದಾರೆ. ಈ ಉಪದೇಶವನ್ನು ಕೇಳಿದಾಗ ಆಲೋಚಕರ ಮನಸ್ಸಿನಲ್ಲಿ ಸಂಶಯಬರುವುದೇನೆಂದರೆ, ಸುಮಾರು ಎರಡೂವರೆ ಸಾವಿರ ವರ್ಷಗಳ ಪೂರ್ವದಲ್ಲಿ ಆಗಿಹೋದ ಶುದ್ಧೋದನನ ಮಗನಾದ ಸಿದ್ಧಾರ್ಥನು ಸಂಸಾರದ ಅಸಾರತೆಯನ್ನರಿತು ವೈರಾಗ್ಯದಿಂದ ಗೃಹತ್ಯಾಗ ಮಾಡಿ ಬೋಧಿವೃಕ್ಷದ ಕೆಳಗೆ ತಪಸ್ಸನ್ನಾಚರಿಸಿ ತತ್ತ್ವಜ್ಞಾನವನ್ನು ಪ್ರಾಪ್ತ ಮಾಡಿಕೊಂಡು ಬೌದ್ಧಮತವನ್ನು ಪ್ರಚಾರ ಮಾಡಿದ್ದಾನೆ. ಅಂದಾಗ ಶ್ರೀ ರೇಣುಕ ಭಗವತ್ಪಾದರು ಗೌತಮಬುದ್ಧನ ತರುವಾಯ ಅವತರಿಸಿರಬಹುದೇನು ? ಎಂದು ಆದರೆ ಇದು ಸರಿಯಲ್ಲ ;

ವಿಜ್ಞಾನರೂಪವಾದ ಬುದ್ಧಿಯು ಆತ್ಮವೆಂಬ ಸಿದ್ಧಾಂತವು ಗೌತಮ ಬುದ್ಧನಿಂದ ಸ್ಥಾಪಿತವಾದದ್ದಲ್ಲ, ಅತಿ ಪ್ರಾಚೀನಗಳಾದ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ವಿಜ್ಞಾನಾತ್ಮವಾದವು ಗೌತಮಬುದ್ಧನಿಂದ ಅಂಗೀಕರಿಸಲ್ಪಟ್ಟು ಪ್ರಚಾರಿತವಾದ್ದರಿಂದ ಬೌದ್ಧಮತವೆಂದು ಅವನ ಹೆಸರಿನಿಂದಲೇ ಪ್ರಸಿದ್ಧವಾಯಿತು. ಆದ್ದರಿಂದ ಶ್ರೀ ರೇಣುಕ ಭಗವತ್ಪಾದರು ಅತಿ ಪ್ರಾಚೀನವಾದ ಉಪನಿಷತ್ಪ್ರತಿಪಾದಿತ ವಿಜ್ಞಾನಾತ್ಮವಾದವನ್ನೇ ನಿರಾಕರಿಸಿದ್ದಾರೆಂದು ತಿಳಿದುಕೊಳ್ಳಬೇಕು.

ಇನ್ನು ಶ್ರೀ ರೇಣುಕಾಗಸ್ತ್ಯ ಸಂವಾದಾತ್ಮಕವಾದ ಶ್ರೀ ಸಿದ್ಧಾಂತ ಶಿಖಾಮಣಿಯು ಸುಮಾರು ಎಂಟನೇ ಶತಮಾನದಲ್ಲಿ ಆಗಿಹೋದ ಶ್ರೀ ಶಿವಯೋಗಿ ಶಿವಾಚಾರ್ಯ ರಿಂದ ವಿರಚಿಸಲ್ಪಟ್ಟಿದೆ. ಇವರು ''ಬೌದ್ಧಾದಿ ಪ್ರತಿ ಸಿದ್ಧಾಂತ ಮಹಾಧ್ವಾಂತಾಂಶು

ಮಾಲಿನಾ''–ಬೌದ್ಧವೇ ಮೊದಲಾದ ಪ್ರತಿಪಕ್ಷಸಿದ್ಧಾಂತಗಳೆಂಬ ಕತ್ತಲೆಯನ್ನು ಹೊಡೆದೋಡಿಸುವುದಕ್ಕೆ ಸೂರ್ಯನೋಪಾದಿಯಾಗಿದ್ದೇನೆ–ಎಂದು ತಮ್ಮ ಬಗ್ಗೆ ತಾವೇ ಗ್ರಂಥಾರಂಭದಲ್ಲಿ ಹೇಳಿರುವುದರಿಂದ ಗ್ರಂಥಕಾರನ ಕಾಲಮಾನವು ಗೌತಮ ಬುದ್ಧನ ತರುವಾಯದ್ದೆಂದು ಹೇಳಬಹುದು. ಈ ಕಾಲಮಾನದ ಬಗ್ಗೆ ನಾವು ಬರೆದ ''ಸಿದ್ಧಾಂತ ಶಿಖಾಮಣಿ ಸಮಯ ಸಮೀಕ್ಷಾ'' ಎಂಬ ಸಂಸ್ಕೃತ ಲೇಖನವನ್ನು ಜಿಜ್ಞಾಸುಗಳು ಅವಲೋಕಿಸಬಹುದು.

ಪ್ರಕೃತದಲ್ಲಿ ಗೌತಮಬುದ್ಧನಿಂದ ಹೇಳಲ್ಪಟ್ಟ ಬೌದ್ಧಸಿದ್ಧಾಂತವನ್ನು ಸಂಕ್ಷೇಪವಾಗಿ ಆಲೋಚಿಸೋಣ. ಈ ಸಿದ್ಧಾಂತದಲ್ಲಿ ಪ್ರಪಂಚವನ್ನು ''ಬಾಹ್ಯಸಮುದಾಯ'' ಮತ್ತು ''ಆಭ್ಯಂತರಸಮುದಾಯ''ವೆಂದು ವಿಭಾಗಿಸಿರುವರು. ಭೂಮಿ, ಬೆಟ್ಟ, ನದಿ, ಸಮುದ್ರ ಮುಂತಾದ ಪದಾರ್ಥಗಳೆಲ್ಲ ಬಾಹ್ಯಸಮುದಾಯವು. ಇದರಂತೆ ಅಂತರಂಗದಲ್ಲಿ ಪ್ರತೀತಿಯಾಗುತ್ತಿರುವ ಸುಖ, ದುಃಖ, ರಾಗ, ದ್ವೇಷ, ಕಾಮ, ಕ್ರೋಧ ಮುಂತಾದವುಗಳು ಆಭ್ಯಂತರ ಸಮುದಾಯವು. ಇವೆರಡರಲ್ಲಿ ಬಾಹ್ಯಸಮುದಾಯವು, ಖರ, ಸ್ನಿಗ್ಧ, ಉಷ್ಣ ಮತ್ತು ಈರಣವೆಂಬ ನಾಲ್ಕುವಿಧ ಪರಮಾಣುಗಳ ಪುಂಜದಿಂದ ಉತ್ಪನ್ನವಾಗುವುದು. ಇನ್ನು ಆಭ್ಯಂತರ ಸಮುದಾಯವು ರೂಪಸ್ಕಂದ, ವಿಜ್ಞಾನಸ್ಕಂದ, ವೇದನಾಸ್ಕಂದ, ಸಂಜ್ಞಾಸ್ಕಂದ ಹಾಗೂ ಸಂಸ್ಕಾರಸ್ಕಂದಗಳೆಂಬ ಪಂಚಸ್ಕಂದಗಳಿಂದ ಉತ್ಪನ್ನವಾಗುವುದು. ಕಿವಿ, ಚರ್ಮ, ಕಣ್ಣು, ನಾಲಿಗೆ ಮತ್ತು ಮೂಗು ಎಂಬ ಜ್ಞಾನೇಂದ್ರಿಯಗಳಿಗೆ ಗೋಚರವಾಗುತ್ತಿರುವ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳಿಗೆ ರೂಪಸ್ಕಂದವೆಂದು ಹೆಸರು. ಈ ಶಬ್ದ, ಸ್ಪರ್ಶಾದಿಗಳು ಹೊರಗೆ ಅಭಿವ್ಯಕ್ತವಾಗುವುದಕ್ಕೆ ವಿಜ್ಞಾನ ಸ್ಕಂದವೆನ್ನುವರು. ಈ ಶಬ್ದ–ಸ್ಪರ್ಶಾದಿಗಳಿಂದುಂಟಾಗುವ ಸುಖ, ದುಃಖ, ರಾಗ, ದ್ವೇಷಾದಿಗಳ ಅನುಭವಕ್ಕೆ ವೇದನಾಸ್ಕಂದವೆಂಬರು. ದೇವದತ್ತ, ಯಜ್ಞದತ್ತ ಮುಂತಾದ ಹೆಸರುಗಳಿಗೆ ಸಂಜ್ಞಾಸ್ಕಂದವೆಂದೂ, ಇವುಗಳಿಂದುಂಟಾಗುವ ವಾಸನೆಗಳಿಗೆ ಸಂಸ್ಕಾರಸ್ಕಂದವೆಂದೂ ಹೇಳುತ್ತಾರೆ. ಈ ಐದು ಸ್ಕಂದಗಳು ಒಟ್ಟಿಗೆ ಸೇರಿ ಆಂತರ ಸಮುದಾಯವೆನಿಸುತ್ತದೆ.

ಕ್ಷಣಾದೂರ್ಧ್ವಂನ ತಿಷ್ಠಂತಿ ಶರೀರೇಂದ್ರಿಯಬುದ್ಧಯಃ ।
ದೀಪಾರ್ಚಿರಿವ ವರ್ತಂತೇ ಸ್ಕಂದಾಃ ಕ್ಷಣವಿಲಂಬಿನಃ ॥

ಎಂಬ ಪ್ರಮಾಣಾನುಸಾರವಾಗಿ ಶರೀರ, ಇಂದ್ರಿಯ, ಬುದ್ಧಿ, ಪ್ರಾಣ ಮುಂತಾದವುಗಳೆಲ್ಲ ಒಂದು ಕ್ಷಣದವರೆಗೆ ಇದ್ದು ಮರುಕ್ಷಣದಲ್ಲಿ ಇಲ್ಲದಂತಾಗುವುವು. ಈ ಕ್ಷಣಿಕಗಳಾದ ವಸ್ತುಗಳ ಜ್ಞಾನವಾದರೂ ದೀಪದ ಜ್ವಾಲೆಯಂತೆ ಕ್ಷಣಮಾತ್ರ ಸ್ಥಾಯಿಯಾಗಿರುವುದು. ಹೀಗೆ ಈ ಕ್ಷಣಿಕ ವಿಜ್ಞಾನ ಸಂತತಿಯೇ ಆತ್ಮವೆಂಬುದು ಈ ಸಿದ್ಧಾಂತದ ರಾದ್ಧಾಂತ.

ಅಧಿಕಾರಾನುಗುಣ್ಯೇನ ಬೌದ್ಧಶಾಸ್ತ್ರಂ ಚತುರ್ವಿಧಂ ।
ಪ್ರತ್ಯಕ್ಷಗಮ್ಯಂ ಬಾಹ್ಯಾರ್ಥಮಿತಿ ಸೌತ್ರಾಂತಿಕೋಽಬ್ರವೀತ್ ॥

ಬುದ್ಧ್ಯಾಕಾರಾನುಮೇಯಾರ್ಥೋ ಬಾಹ್ಯೋ ವೈಭಾಷಿಕೋದಿತಃ ।
ಬುದ್ಧಿಮಾತ್ರಂ ವದಂತ್ಯತ್ರ ಯೋಗಾಚಾರೋ ನ ಚಾಪರಂ ।
ನ ಸನ್ನಾಸನ್ನಸದಸನ್ನ ಚೋಭಾಭ್ಯಾಂ ವಿಲಕ್ಷಣಂ ।
ಚತುಷ್ಕೋಟಿವಿನಿರ್ಮುಕ್ತಂ ತತ್ತ್ವಂ ಮಾಧ್ಯಮಿಕಾ ವಿದುಃ ॥

ಎಂದು ಬೌದ್ಧಗ್ರಂಥಗಳಲ್ಲಿ ಅಧಿಕಾರಿಗಳ ಭೇದದಿಂದ ಈ ಶಾಸ್ತ್ರವನ್ನು ಚತುರ್ವಿಧವಾಗಿ ವಿಂಗಡಿಸಿದ್ದಾರೆ. ಭಗವಾನ್ ಬುದ್ಧನ ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ ಮತ್ತು ಮಾಧ್ಯಮಿಕರೆಂಬ ನಾಲ್ಕುಜನ ಶಿಷ್ಯರು ಈ ನಾಲ್ಕು ಶಾಖೆ ಗಳನ್ನುಂಟುಮಾಡಿರುವರು.

ಇವರಲ್ಲಿ ಸೌತ್ರಾಂತಿಕನು–ಜಗತ್ತಿನ ಪ್ರತ್ಯಕ್ಷ ಪ್ರತೀತಿಯಾಗುವುದರಿಂದ ಬಾಹ್ಯದಲ್ಲಿ ಪ್ರಪಂಚವಿದೆ ಎಂದು ಹೇಳುವನು. ವೈಭಾಷಿಕನು ಜಗತ್ತು ಹೊರಗೆ ಪ್ರತ್ಯಕ್ಷವಾಗಿ ತೋರುವುದಿಲ್ಲ, ಆದರೆ ಬುದ್ಧಿಯೊಳಗೆ ಅನುಭವಕ್ಕೆ ಬರುವುದರಿಂದ ಹೊರಗೆ ಪ್ರಪಂಚವಿದೆ ಎಂದು ಅನುಮಾನ ಮಾಡಬೇಕಾಗುವುದು ಎಂದು ಅಭಿಪ್ರಾಯಪಡುತ್ತಾನೆ. ಯೋಗಾಚಾರನು–ಜಗತ್ತು ಪ್ರತ್ಯಕ್ಷವಾಗಿಯಾಗಲಿ, ಅನುಮಾನರೂಪದಿಂದಾಗಲಿ ಹೊರಗೆ ಇಲ್ಲವೇ ಇಲ್ಲ ; ಕೇವಲ ಬುದ್ಧಿಯಲ್ಲಿ ಮಾತ್ರವಿದೆ ಎಂಬ ಪಕ್ಷವನ್ನು ಉಪಸ್ಥಾಪಿಸುತ್ತಾನೆ. ಇನ್ನು ಮಾಧ್ಯಮಿಕನು–ಜಗತ್ತು ಹೊರಗಾಗಲಿ, ಒಳಗಾಗಲಿ, ಸದ್ರೂಪವಾಗಲಿ, ಅಸದ್ರೂಪವಾಗಲಿ ಇಲ್ಲವೇ ಇಲ್ಲ; ''ಸರ್ವಂ ಶೂನ್ಯಂ'' ಎಲ್ಲವೂ ಶೂನ್ಯವಾಗಿದೆ ಎಂದು ಹೇಳುವನು.

ಈ ನಾಲ್ಕು ಪಂಗಡಗಳಲ್ಲಿ ವೈಭಾಷಿಕರೂ, ಸೌತ್ರಾಂತಿಕರೂ ಒಳಹೊರಗಿನ ಸರ್ವವಸ್ತುಗಳನ್ನೂ ಒಪ್ಪಿ ಅವುಗಳಿಗೆ ಕ್ಷಣಿಕತ್ವವನ್ನು ಉಪದೇಶ ಮಾಡಿ ವಿರಕ್ತರಾಗಿರುವರು, ಕ್ಷಣಿಕವೆಂದರೆ ಪ್ರತಿಕ್ಷಣದಲ್ಲೂ ಪ್ರತಿವಸ್ತುವೂ ಹುಟ್ಟಿ ವಿನಾಶವಾಗುವುದೆಂದರ್ಥವು. ಯೋಗಾಚಾರರು ''ಪ್ರತಿಮಾವನಿತಾ ನ್ಯಾಯ'' ದಿಂದ ಬಾಹ್ಯ ವಸ್ತುಗಳೆಲ್ಲವನ್ನೂ ವಿಜ್ಞಾನವೆಂಬ ಮನಸ್ಸಿನಲ್ಲಿ ಸೇರಿಸಿ ಮನೋನಿಯಮನದಿಂದ ವೈರಾಗ್ಯೋಪದೇಶ ಮಾಡಿರುವರು. ಇವರ ಸಿದ್ಧಾಂತದಲ್ಲಿ ಭೂತಭೌತಿಕಗಳೆಂಬ ಬಾಹ್ಯವಸ್ತುಗಳಿಲ್ಲ, ಮಾಧ್ಯಮಿಕ ಮತವಾದರೋ–ಯಾವುದನ್ನೂ ಒಪ್ಪದೆ, ಸರ್ವ ಶೂನ್ಯವಾದುದರಿಂದ ಬಾಹ್ಯವೂ ಬೇಡ, ಆಂತರವೂ ಬೇಡವೆಂದು ಮಧ್ಯಸ್ಥಾವಸ್ಥೆಯಲ್ಲಿರುವುದು. ಈ ನಾಲ್ಕು ಮತಗಳಲ್ಲಿ ಮಾಧ್ಯಮಿಕರು ಸುಷುಪ್ತ್ಯವಸ್ಥೆಯೆಂಬ ಗಾಢನಿದ್ರಾವಸ್ಥೆ ಯನ್ನು ನೋಡಿ ಸರ್ವಶೂನ್ಯವಾದದಿಂದ ಪರಮವಿರಕ್ತಿಯನ್ನು ತಳೆದಿರುವರು. ಉಳಿದ ಮೂರು ಮತದವರು ಸ್ವಪ್ನಾವಸ್ಥೆಯನ್ನು ನೋಡಿ ಜಾಗ್ರದವಸ್ಥೆಯನ್ನು ಅದಕ್ಕೆ ಹೋಲಿಸಿ ವೈರಾಗ್ಯವನ್ನು ಉಪದೇಶಿಸಿರುವರು.

ಈ ನಾಲ್ಕು ಸಂಪ್ರದಾಯದಲ್ಲಿ ಮಾಧ್ಯಮಿಕ ಸಿದ್ಧಾಂತಿಗಳು ಪ್ರಪಂಚವನ್ನು ಒಳಗೂ ಹೊರಗೂ ನಿರಾಕರಿಸಿ ಶೂನ್ಯವಾದವನ್ನು ನಿರೂಪಿಸಿರುವುದರಿಂದ ಇವರಲ್ಲಿ ನಿರ್ವಾಣಪ್ರಾಪ್ತಿಯ ಯೋಗ್ಯತೆ ಅಧಿಕವಾಗಿರುವುದರಿಂದ ಈ ಮಾರ್ಗವನ್ನು

''ಮಹಾಯಾನ''ವೆಂದು ಕರೆದರು. ಇನ್ನು ಸೌತ್ರಾಂತಿಕ, ವೈಭಾಷಿಕ ಮತ್ತು ಯೋಗಾಚಾರ ಸಂಪ್ರದಾಯದವರಲ್ಲಿ ಕೆಲವರು ಪ್ರಪಂಚವನ್ನು ಹೊರಗಿದೆಯೆಂದೂ, ಮತ್ತೆ ಕೆಲವರು ಒಳಗಿದೆಯೆಂದೂ, ಬೇರೊಬ್ಬರು ಕೇವಲ ಜ್ಞಾನರೂಪವಾಗಿದೆಯೆಂದೂ ಪ್ರಪಂಚದ ಅಸ್ತಿತ್ವವನ್ನು ಕ್ಷಣಿಕವಾಗಿಯಾದರೂ ಒಪ್ಪಿರುವುದರಿಂದ ಇವರನ್ನು ಕನಿಷ್ಠಾಧಿ ಕಾರಿಗಳನ್ನಾಗಿ ತಿಳಿದು ಈ ಮಾರ್ಗಕ್ಕೆ ''ಹೀನಯಾನ'' ಎಂದು ಕರೆದಿದ್ದಾರೆ.

ಒಟ್ಟಿನಲ್ಲಿ ಪ್ರಪಂಚದ ಅಸ್ತಿತ್ವ–ನಾಸ್ತಿತ್ವದ ಬಗ್ಗೆ ಬೌದ್ಧಸಂಪ್ರದಾಯದಲ್ಲಿ ಮತಭೇದವಿದ್ದರೂ, ಕ್ಷಣಿಕ ವಿಜ್ಞಾನರೂಪವಾದ ಬುದ್ಧಿಯು ಆತ್ಮವೆಂಬ ಬಗ್ಗೆ ವೈಮತ್ಯವಿಲ್ಲ. ಆದ್ದರಿಂದ ಬೌದ್ಧಸಿದ್ಧಾಂತದಲ್ಲಿ ಬುದ್ಧಿಯೇ ಆತ್ಮವೆಂಬುದು ನಿರ್ಣೀತವಾದ ವಿಷಯ.

**ಓಂ ಶಾಂತಿಃ ಶಾಂತಿಃ ಶಾಂತಿಃ**

**ದಿನಾಂಕ ೨೨ ಜುಲೈ, ೧೯೯೦**
**(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪೂರ)**



## ಆಶೀರ್ವಚನ-೨

ನೇಂದ್ರಿಯಾಣಾಂ ನ ದೇಹಸ್ಯ ನ ಬುದ್ಧೇರಾತ್ಮತಾ ಭವೇತ್ ।
ಅಹಂ ಪ್ರತ್ಯಯವೇದ್ಯತ್ವಾದನುಭೂತಸ್ಮೃತೇರಪಿ ॥

ಶರೀರೇಂದ್ರಿಯಬುದ್ಧಿಭ್ಯೋ ವ್ಯತಿರಿಕ್ತಃ ಸನಾತನಃ ।
ಆತ್ಮಸ್ಥಿತಿವಿವೇಕೀ ಯಃ ಪಿಂಡಜ್ಞಾನೀ ಸ ಕಥ್ಯತೇ ॥ (ಸಿ. ಶಿ. ೫. ೫೫–೫೬)

ಭಾರತೀಯ ಅವೈದಿಕ ಸಿದ್ಧಾಂತಿಗಳು ಆತ್ಮನ ಬಗ್ಗೆ ಅದೆಷ್ಟು ಆಳವಾಗಿ ಆಲೋಚಿಸಿದ್ದಾರೆ ಎಂಬ ವಿಷಯವನ್ನು ಅವರವರ ಸಿದ್ಧಾಂತಾನುಸಾರವಾಗಿಯೇ ಸೂಕ್ಷ್ಮವಾಗಿ ಪರ್ಯಾಲೋಚಿಸಿದ್ದಾಯಿತು. ಆದರೆ ಇವರೆಲ್ಲರೂ ಹೇಳಿದ ಶರೀರ, ಇಂದ್ರಿಯ, ಪ್ರಾಣ, ಮನಸ್ಸು ಹಾಗೂ ಬುದ್ಧಿಗಳು ವಾಸ್ತವಿಕವಾದ ಆತ್ಮಗಳಲ್ಲ; ಕಿಂತು ''ನಾನು'' ಎಂಬ ಅನುಭವಾತ್ಮಕ ಜ್ಞಾನಕ್ಕೆ ವಿಷಯವಾಗಿ, ಶರೀರಾದಿಗಳಿಗಿಂತ ವಿಲಕ್ಷಣವಾದ ಸನಾತನ ತತ್ತ್ವವೇ ಆತ್ಮವು; ಅದನ್ನು ತಿಳಿದವನೇ ಪಿಂಡಜ್ಞಾನಿಯು ಎಂದು ಶ್ರೀ ರೇಣುಕ ಭಗವತ್ಪಾದರು ಸದ್ಯಃ ಪೂರ್ವೋಕ್ತ ಮತಗಳನ್ನು ನಿರಾಕರಿಸಿ ಯಥಾರ್ಥವಾದ ಆತ್ಮನ ಅರಿವು ಮಾಡಿಕೊಡಲು ''ನೇಂದ್ರಿಯಾಣಾಂ ನ ದೇಹಸ್ಯ'' ಎಂದು ಉಪದೇಶವನ್ನು ಪ್ರಾರಂಭಿಸಿದ್ದಾರೆ.

ಜಗತ್ತಿನಲ್ಲಿ ''ಅಹಂ''–''ಮಮ'', ನಾನು–ನನ್ನದು ಎಂದು ಎರಡೇ ಎರಡು ವಸ್ತುಗಳಿರುವವು. ಇವುಗಳಲ್ಲಿ ನಾನು ಎನ್ನುವುದೇ ಆತ್ಮ ಪದಾರ್ಥವು, ನನ್ನದೆಂಬುವುದೇ ಅನಾತ್ಮಪದಾರ್ಥವು. ಹೀಗೆ ''ನಾ'' ಮತ್ತು ''ನನ್ನ''ದೆಂಬ ಅನುಭವದ ಅಳತೆಗೋಲಿನಿಂದಲೇ ಆತ್ಮಾನಾತ್ಮಗಳನ್ನು ಅಳೆದು ಅರಿಯಬೇಕು. ಒಂದು ಜ್ಯೋತಿಯನ್ನು ಹಚ್ಚಿದಾಗ ಆ ಜ್ಯೋತಿಯು ಒಂದೇ ಸ್ಥಾನದಲ್ಲಿ ಇದ್ದರೂ ಅದರ ಪ್ರಭೆಯು ಸುತ್ತಲೂ ಹರಡಿರುವಂತೆ, ನಾನೆಂಬ ಆತ್ಮ ತತ್ತ್ವವು ಶರೀರದೊಳಗಿದ್ದರೂ ಅದಕ್ಕೆ ಸಂಬಂಧವಾದ ನನ್ನದೆಂಬ ಅನಂತ ಪದಾರ್ಥಗಳು ದೀಪದ ಪ್ರಭೆಯಂತೆ ಬಹು ದೂರ ದೂರವಾಗಿ ಹರಡಿರುತ್ತವೆ.

ಅನಾದಿಕಾಲದಿಂದ ಆವೃತ್ತವಾದ ಅವಿವೇಕದ ಮೂಲಕವಾಗಿ ಮನುಷ್ಯನು ನಿಜವಾದ ಆತ್ಮತತ್ತ್ವನ್ನರಿಯದೇ ಶರೀರಾದಿ ಅನಾತ್ಮ ಪದಾರ್ಥಗಳೇ ತಾನೆಂದು ತಿಳಿದು ತನ್ನ ನಿಜಸ್ವರೂಪವನ್ನೇ ಮರೆತ ಕಾರಣ, ಮರ್ತ್ಯಲೋಕದ ಜನನ–ಮರಣ ಚಕ್ರದಲ್ಲಿ ಸಿಲುಕಿ ಪರಿತಪಿಸುತ್ತಲಿದ್ದಾನೆ. ಆದ್ದರಿಂದಲೇ ''ಅರಿದೊಡೆ ಶರಣ, ಮರೆದೊಡೆ ಮಾನವ'' ಎಂದಿದ್ದಾರೆ ಅನುಭವಿಗಳು. ನಿಜವರಿತ ನಿಜಗುಣರಾದರೂ ''ಆರು ನಾನೆಂದು ವಿಚಾರಿಸು'' ಎಂದಿರುವರು. ತನ್ನ ತಾನರಿತವನು ಮಹಾಂತನಲ್ಲದೇ ತನ್ನಂ

ಮರೆತು ಎಲ್ಲವನ್ನರಿತರೂ ಅವನೆಂದಿಗೂ ಮಹಾಂತನಾಗಲಾರ. ಅಂತೆಯೇ ಅನುಭವಿಯಾದ ಸರ್ವಜ್ಞನು–

ತನ್ನ ತಾನರಿತವಂಗೆ ಭಿನ್ನಭಾವನೆಯಿಲ್ಲ।
ತನ್ನವರಿಲ್ಲ ಪರರಿಲ್ಲ ತ್ರೈಭುವನ।
ತನ್ನೊಳಗಿಹುದು ಸರ್ವಜ್ಞ॥

ಹೀಗೆ ಆತ್ಮಜ್ಞಾನದ ಮಹತಿಯನ್ನು ಕೊಂಡಾಡಿದ್ದಾನೆ.

ಈ ಜ್ಞಾನವು ಮನುಷ್ಯಮಾತ್ರರಿಗೆ ಸಾಧ್ಯವಾದ್ದರಿಂದ ಮನುಷ್ಯ ಜನ್ಮಕ್ಕೆ ಬಂದು ಇದನ್ನು ಸಂಪಾದಿಸದಿದ್ದರೆ ಮಹದನರ್ಥವಾಗುವುದೆಂದು–

ಇಹ ಚೇದವೇದೀದಥ ಸತ್ಯಮಸ್ತಿ
ನ ಚೇದಿಹಾವೇದೀನ್ಮಹತೀ ವಿನಷ್ಟಿಃ।

(ಕೇನ. ಉ. ೨–೫)

ಹೀಗೆ ಉಪನಿಷತ್ತು ನಮ್ಮನ್ನು ಎಚ್ಚರಗೊಳಿಸುತ್ತಿದೆ.

''ನರದೇಹ ಪರಮಪಾವನ
ಪಾವುನೀ ನ ಸಾಧೇ ಬ್ರಹ್ಮಜ್ಞಾನ
ಲಾಂಡಾ ಗಾರ್ದಭ ಜಾನ
ಪುಚ್ಛ ಹೀನ ದೋ ಪಾಯೀ.''

ಎಂದು ಮಹಾರಾಷ್ಟ್ರದ ಶ್ರೇಷ್ಠ ಸಂತರಾದ ಶ್ರೀ ತುಕಾರಾಮ ಮಹಾರಾಜರು ಆತ್ಮಜ್ಞಾನ ಮಾಡಿಕೊಳ್ಳದೇ ವ್ಯರ್ಥವಾಗಿ ಜನ್ಮವನ್ನು ಹಾಳುಮಾಡಿಕೊಳ್ಳುವ ಮನುಷ್ಯನನ್ನು ಬಾಲವಿಲ್ಲದ ಎರಡು ಕಾಲಿನ ಕತ್ತೆಯೆಂದು ಹೀಯಾಳಿಸಿದ್ದಾರೆ.

ಜಗತ್ತಿನ ಸಕಲ ಪದಾರ್ಥಗಳಿಗಿಂತ ತನಗೆ ಅತಿ ಸಮೀಪವಾಗಿಯೂ ತನ್ನ ಸ್ವರೂಪವೇ ಆಗಿರುವ ಆತ್ಮತತ್ತ್ವವನ್ನು ಅರಿಯುವುದು ಸುಲಭವಲ್ಲ. ಬೆಲೆಬಾಳುವ ರತ್ನವನ್ನು ರತ್ನದ ವ್ಯಾಪಾರಿಯು ತನ್ನ ಮನೆಯ ಅತಿ ಒಳಗಿನ ರೂಮಿನೊಳಗೆ ಬಹುಭದ್ರವಾದ ಪೆಟ್ಟಿಗೆಯೊಳಗೆ ಹಾಕಿಟ್ಟಿರುವಂತೆ, ಪರಮಾತ್ಮನಾದರೂ ನಮ್ಮ ಆತ್ಮವೆಂಬ ದಿವ್ಯಜ್ಞಾನ ರತ್ನವನ್ನು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಹಾಗೂ ಆನಂದಮಯಗಳೆಂಬ ಪಂಚಕೋಶದೊಳಗೆ ಹುದುಗಿಸಿಟ್ಟಿದ್ದಾನೆ. ಈ ಆತ್ಮನನ್ನು ಅರಿಯಲು ಹೊರಟ ಚಾರ್ವಾಕಾದಿ ಕೆಲ ದಾರ್ಶನಿಕರು ಆತ್ಮನ ಆವರಣಗಳಾದ ಶರೀರ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ ಹಾಗೂ ಸುಷುಪ್ತಿಯ ಆನಂದಗಳನ್ನೇ ಆತ್ಮವನ್ನಾಗಿ ಅರಿತರೇ ವಿನಾ, ನಿಜವಾದ ಆತ್ಮವನ್ನರಿಯಲಿಲ್ಲ. ಆದ್ದರಿಂದ ಅವರು ಪಿಂಡಜ್ಞಾನಿಗಳೇ ಅಲ್ಲ. ಅಂತೆಯೇ–

''ಪಿಂಡ ಪಿಂಡವೆಂದೆನು,
ತನು ಪಿಂಡವೇ ? ಮನ ಪಿಂಡವೇ ?
ವಾಯು ಪಿಂಡವೇ ? ಅಲ್ಲ;
ಆದಿ ಪಿಂಡವಿಡಿದುಬಂದ ಜ್ಞಾನಪಿಂಡವೇ ಪಿಂಡ.
ಅದನರಿಯಲಿಲ್ಲ,
ಅದು ಕ್ಷೀರದೊಳಗಣ ಆಜ್ಯದಂತೆ, ಪಾಷಾಣದೊಳಗಣ
ಪಾವಕದಂತೆ ಅಡಗಿರ್ಪುದಾಗಿ
ಅಂತಪ್ಪ ನಿರ್ಮಲ ಪಿಂಡ ನಿಮ್ಮ ಶರಣಂಗಾಯಿತ್ತು
ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ ||''

ಎಂಬ ವಚನದಲ್ಲಿ ಶ್ರೀ ಸ್ವತಂತ್ರ ಸಿದ್ಧಲಿಂಗೇಶ್ವರರು ಪಿಂಡವೆಂಬ ಶಬ್ದದ ಅರ್ಥವು ಶರೀರಾದಿಗಳಲ್ಲವೆಂದಲ್ಲಗಳೆದು, ಜ್ಞಾನರೂಪನಾದ ಆತ್ಮನೇ ಪಿಂಡವೆಂದು, ಅದನ್ನು ಬಲ್ಲವನೇ ಪಿಂಡಜ್ಞಾನಿಯೆಂದೂ ತಿಳಿಸಿ, ಆ ಆತ್ಮವು ಹಾಲಿನೊಳಗಣ ತುಪ್ಪದಂತೆ, ಪಾಷಾಣದೊಳಗಿನ ಪಾವಕದಂತೆ ಅಡಗಿದೆ ಎಂದು ಸೂಚಿಸಿದ್ದಾರೆ.

ಕಲ್ಲು-ಕಲ್ಲು ಮಥಿಸದೇ ಅಗ್ನಿ ಆವಿರ್ಭವಿಸದಂತೆ, ಹಾಲನ್ನು ಹೆಪ್ಪಿಟ್ಟು, ಹೊಸೆದು, ಬೆಣ್ಣೆಯಂ ಕಾಯಿಸದೇ ತುಪ್ಪ ಹೊರಬರದಂತೆ, ಶರೀರಾದಿಗಳಲ್ಲಿ ಅನಾದಿತ್ವದ ನಿಶ್ಚಯವಾಗದೇ ಆತ್ಮನ ಅರಿವಾಗದು. ಆದ್ದರಿಂದ ಶರೀರಾದಿಗಳು ಆತ್ಮ ಗಳೋ ಅನಾತ್ಮಗಳೋ ಎಂಬುದನ್ನು ಪರ್ಯಾಲೋಚಿಸೋಣ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಆತ್ಮಾನಾತ್ಮಗಳನ್ನು ಗುರುತಿಸುವುದ ಕ್ಕಾಗಿ ''ಅಹಂ ಪ್ರತ್ಯಯವೇದ್ಯತ್ವಾದನುಭೂತಸ್ಮೃತೇರಪಿ'' ಎಂಬ ಅನುಭವಾತ್ಮಕ ಅಸಾಧಾರಣ ಒರೆಗಲ್ಲೊಂದನ್ನು ನಮ್ಮ ಕೈಗೆ ಇತ್ತಿದ್ದಾರೆ. ಅದರಿಂದಲೇ ಆತ್ಮವನ್ನು ಗುರುತಿಸಬಹುದಾಗಿದೆ. ಯಾವುದು ಅಹಂ-ನಾನು ಎಂಬ ಜ್ಞಾನಕ್ಕೆ ವಿಷಯವಾಗಿರು ವುದೋ ಹಾಗೂ ಯಾವುದಕ್ಕೆ ಪೂರ್ವಾನುಭವಗಳ ಸ್ಮರಣೆಯುಂಟಾಗುವುದೋ ಅದೇ ಆತ್ಮವೆಂಬುವುದೇ ಒರೆಗಲ್ಲು.

ಲೋಕದಲ್ಲಿ ವಿಷಯಾಸಕ್ತರಾದ ಅನೇಕ ಪಾಮರ ಜೀವಿಗಳಿಗೆ, ಹೊಲ, ಮನೆ, ಧನ ಮತ್ತು ದನ-ಕುರಿಗಳು ಪ್ರಾಪ್ತವಾದಾಗ ಹಾಗೂ ಅಭಿವೃದ್ಧಿ ಹೊಂದಿದಾಗ ಅತ್ಯಂತ ಆನಂದ ಪ್ರಾಪ್ತವಾಗುವುದು. ಅದರಂತೆ ಅವುಗಳು ಹ್ರಾಸಗೊಂಡಾಗ ಅತ್ಯಂತ ದುಃಖ ಪ್ರಾಪ್ತವಾಗುವುದರಿಂದ, ಧನ, ಕನಕ, ಕ್ಷೇತ್ರಾದಿಗಳೇ ಆತ್ಮವೆಂದು ತಿಳಿದಿರುತ್ತಾರೆ. ಆದರೆ ಇದು ಸಮಂಜಸವಲ್ಲ. ಧನ-ಕನಕಾದಿಗಳು ಜಡಗಳಾಗಿರುವವಲ್ಲದೇ, ಜೀವಿಯು ನನ್ನ ಹೊಲ, ನನ್ನ ಮನೆಯೆನ್ನುವನೇ ವಿನಾ ನಾನು ಹೊಲ, ನಾನು ಮನೆ ಎಂದು ವ್ಯವಹರಿಸುವುದಿಲ್ಲ. ಆತ್ಮನು ಚೇತನನಾಗಿದ್ದು ''ನಾನು'' ಎಂಬ ಜ್ಞಾನಕ್ಕೆ ವಿಷಯವಾದ್ದರಿಂದ ಇವ್ಯಾವುವೂ ಆತ್ಮವಾಗಲಾರವು.

ಇನ್ನು ಶರೀರದಲ್ಲಿ ನಾನು ಕೃಶನಾಗಿದ್ದೇನೆ; ನಾನು ಸ್ಥೂಲನಾಗಿದ್ದೇನೆ–ಎಂದು ವ್ಯವಹಾರವಾಗುವುದರಿಂದ ಮತ್ತು ಚಲನ–ವಲನರೂಪವಾದ ಚೇತನತ್ವವು ಕಂಡು ಬರುವುದರಿಂದ ಶರೀರವೇ ಆತ್ಮವೆಂಬುದು ಚಾರ್ವಾಕರ ಅಭಿಪ್ರಾಯ. ಆದರೆ ಇದಾದರೂ ಯುಕ್ತಿಯುಕ್ತವಾದದ್ದಲ್ಲ. ಏಕೆಂದರೆ, ಲೋಕದಲ್ಲಿ ಎಂತಹ ಮೂಢ ನಾದರೂ ''ನನ್ನ ಶರೀರ''ವೆನ್ನುವನೇ ವಿನಾ ''ನಾನು ಶರೀರ''ವೆಂದೆನ್ನಲಾರ. ಶರೀರವು ನನ್ನದೆಂದಾದಾಗ, ನನ್ನ ಮನೆ, ನನ್ನ ಹೊಲವೆನ್ನುವಾಗ, ನಾನು ಎಂಬುವವನು ಆ ಹೊಲ, ಆ ಮನೆಗಳಿಗಿಂತ ಬೇರೆಯಾಗಿರುವಂತೆ, ನನ್ನ ಶರೀರವೆಂದಾದಾಗ ಶರೀರ ಕ್ಕಿಂತಲೂ ''ನಾನು'' ಎನ್ನುವವನು ಭಿನ್ನವಾಗಿರಲೇಬೇಕು. ಇಲ್ಲವಾದರೆ ಬಾಲ್ಯದಲ್ಲಿ ತಂದೆ–ತಾಯಿಗಳನ್ನು ನೋಡಿದ ನಾನು ಈ ಮೊಮ್ಮಕ್ಕಳನ್ನು ಕಾಣುತ್ತಿರುವೆನು–ಎಂಬ ಪ್ರತ್ಯಭಿಜ್ಞಾನಾತ್ಮಕಸ್ಮರಣೆಯೇ ಸಂಗತವಾಗಲಾರದು. ಬಾಲ್ಯದಲ್ಲಿದ್ದ ಶರೀರವೇ ಮುಪ್ಪಿ ನಲ್ಲಿ ಇದೆ ಎಂದು ಹೇಳುವುದೂ ಸರಿಯಲ್ಲ. ಅವುಗಳಲ್ಲಿರುವ ತಾರತಮ್ಯ ಪರಿಣಾಮಗಳ ಮೂಲಕ ಭಿನ್ನಗಳೇ ಆಗಿರುತ್ತವೆ. ಹೂವಿನ ಮಾಲೆಯಲ್ಲಿ ಹೂವುಗಳು ಭಿನ್ನ–ಭಿನ್ನವಾಗಿ ದ್ದರೂ ಅವೆಲ್ಲವುಗಳನ್ನು ಜೋಡಿಸಿರುವ ದಾರವು ಒಂದೇ ಹೇಗಿರುವುದೋ ಅದರಂತೆ ಬಾಲ್ಯ, ಯೌವನ, ಮುಪ್ಪುಗಳಲ್ಲಿ ಪರಿಣಾಮಹೊಂದಿದ ಶರೀರಗಳು ಭಿನ್ನಗಳಾಗಿ ದ್ದರೂ, ಆ ಮೂರೂ ಶರೀರಗಳಲ್ಲಿ–ಅನುಸ್ಯೂತವಾಗಿ ಇರುವ ಅಹಂ 'ನಾನು' ಎನ್ನುವ ಆತ್ಮನು ಆ ಶರೀರಕ್ಕಿಂತ ವಿಲಕ್ಷಣವಾಗಿರುವನೆಂದೇ ನಿಶ್ಚಯಿಸಬೇಕು.

ಓರ್ವ ಪುರುಷನು ಸ್ವಪ್ನದಲ್ಲಿ ತಾನು ಸ್ತ್ರೀಶರೀರವನ್ನು ಧರಿಸಿ, ಅಲ್ಲಿ ಸ್ತ್ರೀಯಂತೆಯೇ ವ್ಯವಹರಿಸಿ, ಪುನಃ ಎಚ್ಚರಗೊಂಡಾಗ ನಾನು ಸ್ತ್ರೀ ಅಲ್ಲ, ಪುರುಷನೇ ಇದ್ದೇನೆ ಎನ್ನುವನು. ಸ್ವಪ್ನದಲ್ಲಿಯ ಸ್ತ್ರೀಶರೀರ ಮತ್ತು ಜಾಗ್ರತದಲ್ಲಿಯ ಪುರುಷ ಶರೀರ ಗಳು ಭಿನ್ನಗಳಾಗಿದ್ದರೂ ಅವೆರೆಡರಲ್ಲಿಯೂ ಅಭಿಮಾನವನ್ನು ತಾಳುವ ಜೀವಾತ್ಮನು ಅವೆರಡಕ್ಕಿಂತಲೂ ಭಿನ್ನನಾಗಿರುವನೆನ್ನುವುದು ಸರ್ವಾನುಭವದ ವಿಷಯವಾಗಿದೆ. ಆದ್ದರಿಂದ ದೇವರ ದಾಸಿಮಾರ್ಯರು–

''ಮೊಲೆ–ಮುಡಿ ಬಂದರೆ ಹೆಣ್ಣೆಂಬರು
ಗಡ್ಡ–ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥ.''

ಎಂದು ಸ್ತ್ರೀತ್ವ, ಪುರುಷತ್ವಗಳು ಶರೀರಧರ್ಮಗಳೇ ವಿನಾ ಆತ್ಮಧರ್ಮಗಳಲ್ಲ ವೆಂದೂ, ಆತ್ಮನು ಅವೆರಡಕ್ಕಿಂತಲೂ ಭಿನ್ನನೆಂದೂ ಪ್ರತಿಪಾದಿಸಿದ್ದಾರೆ.

ಇನ್ನು ಯೋಗಸಿದ್ಧಿಯನ್ನು ಪಡೆದ ಓರ್ವ ಯೋಗಿಯು ತನ್ನ ಯೋಗ ಮಹಿಮೆ ಯಿಂದ ಕಾಯವ್ಯೂಹ, ಏಕಕಾಲದಲ್ಲಿಯೇ ಅನೇಕ ಶರೀರಗಳನ್ನು ಧರಿಸಿ ಎಲ್ಲ ಶರೀರ ಗಳಿಂದ ಸುಖ–ದುಃಖಗಳನ್ನನುಭವಿಸುತ್ತಾ ಲೀಲಾನುಭವಮಾಡುತ್ತಿದ್ದರೂ, ಕೃತ್ರಿಮ ಗಳಾದ ಆ ಎಲ್ಲ ಶರೀರಗಳಿಗೆ ತಾನೋರ್ವನೇ ನಿಯಾಮಕನಾಗಿ, ಅವೆಲ್ಲವುಗಳೂ

ತನ್ನವುಗಳೆಂದು ಅಭಿಮಾನಪಡುವುದರಿಂದ ''ಅಹಂ''—ನಾನು ಎಂಬ ಪ್ರತೀತಿಯು ದೇಹಭಿನ್ನವಾದ ಆತ್ಮನನ್ನವಲಂಬಿಸಿರುವುದು ತಿಳಿದುಬರುವುದು.

ಚಾರ್ವಾಕರ ಹೇಳಿಕೆಯಂತೆ ದೇಹವೇ ಆತ್ಮವು, ಪೂರ್ವಜನ್ಮ–ಪುನರ್ಜನ್ಮಗಳಿಲ್ಲ ವೆನ್ನುವದಾದರೆ ಅದೇ ಆಗ ಹುಟ್ಟಿದ ಕೂಸಿಗೆ ತಾಯಿಯು ಬಾಯಲ್ಲಿ ತನ್ನ ಮೊಲೆಯನ್ನಿಟ್ಟಾಗ ಇದನ್ನು ಚೀಪಬೇಕೆನ್ನುವ ತಿಳುವಳಿಕೆಯುಂಟಾಗದಿರಬೇಕಾದೀತು. ಲೋಕದಲ್ಲಿ ಕಾರ್ಯಪ್ರವೃತ್ತಿಗೆ ಇಷ್ಟಸಾಧನ ಜ್ಞಾನವು ಕಾರಣವಾಗಿರುವುದರಿಂದ ಅನೇಕ ಜನ್ಮಗಳಲ್ಲಿ ಸ್ತನ್ಯಪಾನ ಮಾಡಿದ ಸಂಸ್ಕಾರ ಮೂಲಕವಾಗಿಯೇ ಕೂಸು ಈ ಜನ್ಮದಲ್ಲಿ ಸ್ತನ್ಯಪಾನಪ್ರವೃತ್ತವಾಗುವುದೆಂದು ತಿಳಿದುಬರುವುದರಿಂದ ದೇಹಾತಿರಿಕ್ತವಾದ ಆತ್ಮನ ಅಸ್ತಿತ್ವದ ಅರಿವಾಗುವುದು.

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ–
ನ್ಯನ್ಯಾನಿ ಸಂಯಾತಿ ನವಾನಿ ದೇಹೀ (ಗೀತಾ ೨–೨೨)

ಮನುಷ್ಯನು ತಾನು ಧರಿಸಿದ ವಸ್ತ್ರಗಳು ಜೀರ್ಣಗಳಾದಾಗ ಅವುಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಧರಿಸುವಂತೆ ಜೀವಾತ್ಮನಾದರೂ ಜೀರ್ಣಗಳಾದ ಶರೀರಗಳನ್ನು ಬಿಟ್ಟು ಹೊಸ ಶರೀರಗಳನ್ನು ಧರಿಸುವನೆಂದು ಗೀತೆಯಲ್ಲಿ ಶ್ರೀಭಗವಂತನು ಬೋಧಿಸಿರು ವುದನ್ನು ನೋಡಿದರೆ, ಈ ದೇಹವು ಆತ್ಮನ ವಾಸಸ್ಥಾನವೆಂದು ತಿಳಿದುಬರುವುದರಿಂದ ಅದು ಆತ್ಮವೆಂದಿಗೂ ಆಗಲಾರದು.

ಮೃತವಾದ ದೇಹದಿಂದ ಹೊರಹೋಗುವ ಜೀವಾತ್ಮನು ಯಾರ ಕಣ್ಣಿಗೂ ಕಾಣದಿರುವುದರಿಂದ ಅದನ್ನು ಹೇಗೆ ಒಪ್ಪಬೇಕು ? ಎಂದು ಸಂದೇಹಿಸುವುದು ಸರಿಯಲ್ಲ, ಏನೆಂದರೆ, ಪದಾರ್ಥಜ್ಞಾನಕ್ಕೆ ಪ್ರತ್ಯಕ್ಷಪ್ರಮಾಣ ಒಂದೇ ಪಾತ್ರವಹಿಸದು; ಆದ್ದರಿಂದ ಅನುಮಾನ ಮತ್ತು ಶಬ್ದಪ್ರಮಾಣಗಳನ್ನಂಗಿಕರಿಸಬೇಕಾಗುವುದು.

''ರೇ ರೇಽನುಮಾನಂ ಯದಿ ಸಪ್ರಮಾಣಂ
ಚಕ್ಷುಸ್ತಮಸ್ತೀತಿ ಕಿಮತ್ರಮಾನಮ್ ।
ಭವಾದೃಶೇ ದೂರವಿದೇಶಮಾಗತೇ
ಚರಂತು ವೈಧವ್ಯವಿಧಾನಮಂಗನಾಃ ॥''

ಪ್ರತ್ಯಕ್ಷ ಜ್ಞಾನಕ್ಕೆ ಕರಣಗಳಾದ ಕಣ್ಣುಗಳೇ ಯಾರಿಗೂ ಪ್ರತ್ಯಕ್ಷವಾಗುವುದಿಲ್ಲ, ಕಣ್ಣುಗಳು ತನಗಿಂತ ಭಿನ್ನಗಳಾದ ವಸ್ತುಗಳನ್ನು ನೋಡುವವಲ್ಲದೇ ತಮ್ಮನ್ನೇ ತಾವು ನೋಡಲರಿಯವು. ವಸ್ತುಗಳು ಪ್ರತ್ಯಕ್ಷವಾಗುವುದರಿಂದ ಕಣ್ಣುಗಳ ಅಸ್ತಿತ್ವದ ಅನುಮಾನ ವಾಗುವುದು; ಆದ್ದರಿಂದ ಪ್ರತ್ಯಕ್ಷ ಪ್ರಮಾಣ ಒಂದನ್ನೇ ಅಂಗೀಕರಿಸುವ ಚಾರ್ವಾಕ ರಾದರೂ ಅನಿವಾರ್ಯವಾಗಿ ಅನುಮಾನವನ್ನು ಸ್ವೀಕರಿಸಲೇಬೇಕಾಗುವುದು. ಅನು ಮಾನವನ್ನು ಅಂಗೀಕರಿಸದಿದ್ದರೆ ಚಾರ್ವಾಕನೊಬ್ಬನು ವ್ಯಾಪಾರಕ್ಕೆಂದು ಬಹುದೂರ

ದೇಶಕ್ಕೆ ಹೋದಾಗ ಅವನ ಹೆಂಡತಿಯು ಗಂಡನು ಪ್ರತ್ಯಕ್ಷವಿಲ್ಲದ್ದನ್ನು ನೋಡಿ ಗಂಡ ಸತ್ತುಹೋದನೆಂದು ತಿಳಿದು ತಾಳಿ–ಕುಂಕುಮಗಳನ್ನು ತೆಗೆದುಹಾಕಿ ವಿಧವೆಯಾಗಬೇಕಾದೀತು. ಆದರೆ ಗಂಡನು ಬರೆದ ಪತ್ರಗಳನ್ನು ಓದಿ ಆತನು ಸ್ವಸ್ಥನಿರುವ ಬಗ್ಗೆ ಅನುಮಾನ ಮೂಡುವುದು ಲೋಕಪ್ರಸಿದ್ಧವಾಗಿದೆ. ಆದ್ದರಿಂದ ಲೌಕಿಕ ಹಾಗೂ ಶಾಸ್ತ್ರೀಯ ವ್ಯವಹಾರವು ಪ್ರತ್ಯಕ್ಷದಿಂದ ಮಾತ್ರ ನಿರ್ವಾಹವಾಗದ ಕಾರಣ ಅನುಮಾನ ಮತ್ತುಶಬ್ದ ಪ್ರಮಾಣಗಳನ್ನೂ ಸ್ವೀಕರಿಸಲೇಬೇಕಾಗುವುದು.

ಜೀವಾತ್ಮನಿರುವವರೆಗೆ ಎಲ್ಲ ವ್ಯವಹಾರವನ್ನೂ ಮಾಡುತ್ತಿರುವ ಶರೀರವು ಜೀವಾತ್ಮನ ವಿಯೋಗವಾದೊಡನೆ ಜಡವಾಗಿ ಬೀಳುವುದನ್ನು ಕಂಡು, ಬಸ್ಸು, ಕಾರು ಮುಂತಾದ ವಾಹನಗಳ ಚಾಲಕನಂತೆ ದೇಹಚಾಲಕನಾದ ಚೇತನರೂಪನಾದ ಜೀವಾತ್ಮನೊಬ್ಬನಿದ್ದಾನೆಂದು ಅನುಮಾನಿಸಬೇಕಾಗುವುದು. ಶ್ರುತಿಗಳಲ್ಲಿ ಆ ಆತ್ಮತತ್ತ್ವವು ಜನ್ಮ, ಜರಾ, ರೋಗ, ಮರಣ ಮುಂತಾದ ಧರ್ಮರಹಿತವಾಗಿ, ಪರಮ ಪವಿತ್ರವಾಗಿರುವದೆಂದು ವರ್ಣಿಸಲ್ಪಟ್ಟಿರುವುದರಿಂದ; ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆಯಾಗಿರುವ; ಅಂತೆಯೇ ಅಪವಿತ್ರವಾಗಿರುವ ದೇಹವದೆಂತು ಆತ್ಮವಾದೀತು ? ಆದ್ದರಿಂದಲೇ ಶ್ರೀ ನಿಜಗುಣರು–

ಅಜ್ಞಾನಿಯಲ್ಲವೇ ನೀನು ಜೀವನೇ ?
ಸುಜ್ಞಾನಿಯಂದು ನುಡಿದರೆ ॥ ಪ ॥
ಚೈತನ್ಯರೂಪನಾಗಿರ್ದು ಜಡಪಂಚ ।
ಭೂತ ದೇಹವಿದ ನೀನೆಂಬೆ ॥
ಪೂತ ನಿರ್ಮಲ ನಿಜತತ್ತ್ವಮಯನಾಗಿ ।
ಸೂತಕಾದಿ ವಿಧಿವಿಡಿದಿರ್ಪೆ ॥ ೧ ॥

(ಕೈ. ನಿ. ೬)

ಈ ರೀತಿಯಾಗಿ ದೇಹಾತಿರಿಕ್ತವಾದ ತನ್ನ ಚಿದ್ರೂಪವನ್ನು ಮರೆತು ಪಂಚಭೂತವಿಕಾರವಾದ ಶರೀರವೇ ತಾನೆಂದು ನಂಬಿದ ಜೀವಾತ್ಮನಿಗೆ ''ಅಜ್ಞಾನಿ'' ಎಂದು ಕರೆದಿರುವರು. ಶ್ರೀ ನಿಜಗುಣರೇ ಪರಮಾನುಭವ ಬೋಧೆಯಲ್ಲಿ–

ತನು ರುಜೆಯಾಗರವತಿದುಃಖಸಾಗರ
ವನುತಾಪಕ್ಲೇಶಾದಿಗಳ ಗೊತ್ತು। ತನುಮೂಲವದರಿಂ
ದಖಿಳ ದುಃಖವೆಲ್ಲಕ್ಕೆ। ತನುಭಾವವಳಿಯೆ ದುಃಖದ ಕೇಡು ॥

(೧–೨೦–೫)

ಈ ತೆರನಾಗಿ ಶರೀರವನ್ನು ರೋಗದ ತವರುಮನೆಯನ್ನಾಗಿ ತಿಳುಹಿದ್ದಾರೆ. ಇದು ಶತಶಃ ಸತ್ಯವಾದ ಮಾತು. ಜನ್ಮದಿಂದ ಮೊದಲುಗೊಂಡು ಮರಣ ಪರ್ಯಂತರವಾಗಿ ಶರೀರವು ಒಂದಿಲ್ಲೊಂದು ರೋಗಗ್ರಸ್ತವಾಗಿ ಬಳಲುತ್ತಲೇ ಇರುವುದು. ಶರೀರಕ್ಕೆ ಪ್ರಾಪ್ತವಾಗುವ ರೋಗಗಳಲ್ಲಿ ಧಾತುಜನ್ಯಗಳೆಂತಲೂ, ಕರ್ಮಜನ್ಯಗಳೆಂತಲೂ ಎರಡು

ವಿಧ. ದೇಹದಲ್ಲಿಯ ವಾತ, ಪಿತ್ತ ಹಾಗೂ ಕಫಗಳೆಂಬ ತ್ರಿವಿಧ ಧಾತುಗಳ ವ್ಯತ್ಯಯ ದಿಂದ ಉಂಟಾಗುವ ರೋಗಗಳೇ ಧಾತುಜನ್ಯ ರೋಗಗಳು. ಆಯುರ್ವೇದ ಶಾಸ್ತ್ರದಲ್ಲಿ ವಾತದಿಂದ ೮೧, ಪಿತ್ತದಿಂದ ೬೪ ಹಾಗೂ ಕಫದಿಂದ ೨೧೫ ಹೀಗೆ ಒಟ್ಟಾರೆ ೩೬೦ ರೋಗಗಳು ಪ್ರತಿಪಾದಿಸಲ್ಪಟ್ಟಿವೆ. ಇನ್ನು ''ಗಹನಾ ಕರ್ಮಣೋ ಗತಿಃ'' ಎಂಬ ಉಕ್ತಿ ಯಂತೆ ಕರ್ಮಜನ್ಯಗಳಾದ ರೋಗಗಳಾದರೊ ಅಗಣಿತಗಳು. ಹೊಲದಲ್ಲಿಯ ಕಸವನ್ನು ತೆಗೆದುಹಾಕಿದಂತೆಲ್ಲ ಪುನಃ ಪುನಃ ಪ್ರಾದುರ್ಭವಿಸುವಂತೆ, ಔಷಧೋಪಚಾರದಿಂದ ಕೆಲವು ಸಮಯದವರೆಗೆ ಕಾಣದಾದರೂ ಕಾಲಾಂತರದಲ್ಲಿ ಕಾಲು ಕೆದರಿ ನಿಲ್ಲುವದು ರೋಗಗಳ ಸ್ವಭಾವ. ಇಂತು ರೋಗದ ತವರಾದ ತನುವು ತಾನೆನ್ನುವುದು ತಿಳಿಗೇಡಿತನ ವಲ್ಲದೇ ಮತ್ತೇನು ?

ದೇಹಾತ್ಮಬುದ್ಧಿಜಂ ಪಾಪಂ ನ ತದ್ಗೋವಧಕೋಟಿಭಿಃ ।
ಆತ್ಮಾಹಂ ಬುದ್ಧಿಜಂ ಪುಣ್ಯಂ ನ ಭೂತೋ ನ ಭವಿಷ್ಯತಿ ॥

ದೇಹವೇ ತಾನೆಂದು ಧೃಢವಾಗಿ ನಂಬಿ ವ್ಯವಹರಿಸುವ ಮನುಷ್ಯನಿಗೆ ಒಂದು ಕೋಟಿ ಗೋವುಗಳನ್ನು ಕೊಂದಷ್ಟು ಪಾಪ ಬರುವದೆಂದೂ, ಚಿದ್ರೂಪವಾದ ಆತ್ಮವೇ ನಾನೆಂದು ತಿಳಿದರೆ ಬರುವಷ್ಟು ಪುಣ್ಯ ಮತ್ತಾವುದರಿಂದಲೂ ಉದಿಸದೆಂದೂ ಶಾಸ್ತ್ರಗಳ ಪ್ರಮಾಣವಿರುವುದರಿಂದ, ಆ ದೇಹಾತ್ಮ ಬುದ್ಧಿಯಿಂದುತ್ಪನ್ನವಾದ ಪಾಪವನ್ನು ದಾನ–ಧರ್ಮಾದಿಯಿಂದುದಿಸಿದ ಅಲ್ಪ ಪುಣ್ಯದಿಂದ ನಾಶಗೊಳಿಸುವುದು ಅದೆಂದಿಗೂ ಸಾಧ್ಯವಾಗದು. ಈ ವಿಷಯವಾಗಿ ಛಾಂದೋಗ್ಯ ಶ್ರುತಿಯ ಚತುರ್ಥ ಅಧ್ಯಾಯದಲ್ಲಿ ಬಹು ಸುಂದರವಾದ ಒಂದು ದೃಷ್ಟಾಂತ ಉಂಟು–

ಪೂರ್ವಕಾಲದಲ್ಲಿ ''ಜಾನುಶ್ರುತಿ'' ಎಂಬ ಹೆಸರಿನ ಚಕ್ರವರ್ತಿಯು ಬಹು ಧಾರ್ಮಿಕನಾಗಿ ರಾಜ್ಯ ಪರಿಪಾಲಿಸುತ್ತಿದ್ದನು. ಅವನು ಅರವಟ್ಟಿಗೆ, ಅನ್ನಛತ್ರ, ಕೆರೆ–ಭಾವಿಗಳನ್ನು ಕಟ್ಟಿಸುವದು, ಯಜ್ಞದಲ್ಲಿ ಭೂ, ಹಿರಣ್ಯ, ವಸ್ತ್ರಾದಿಗಳ ದಾನಾದಿ ಯಿಂದ ಮಹಾಪುಣ್ಯಾತ್ಮನೆನಿಸಿದ್ದನು. ಈತನ ಪುಣ್ಯಮಯ ಧವಲಕೀರ್ತಿಯು ದಶ–ದಿಶೆಗಳಲ್ಲಿ ಹರಡಿತ್ತು.

ಒಂದು ದಿನ ರಾತ್ರಿಯೊಳು ಅಂತಃಪುರದ ಮೇಲ್ಮಾಳಿಗೆಯ ಮೇಲೆ ಧರ್ಮಪತ್ನೀ ಸಮೇತನಾಗಿ ಧಾರ್ಮಿಕ ಚರ್ಚೆಯನ್ನು ಮಾಡುತ್ತ ವಿಶ್ರಮಿಸುತ್ತಿರುವಾಗ, ಎರಡು ಹಂಸ ಪಕ್ಷಿಗಳು ಆಕಾಶದಲ್ಲಿ ಇವರ ಅಂತಃಪುರದ ಮೇಲಿಂದಲೇ ಹಾರಿ ಹೊರಟಿದ್ದವು. ಆಗ ಹೆಣ್ಣು ಪಕ್ಷಿಯು ತನ್ನ ಗಂಡನಿಗೆ ಹೇಳುವುದು–ಅದೋ ನೋಡಿ ಜಾನುಶ್ರುತಿ ಮಹಾರಾಜರು ಧರ್ಮಪತ್ನೀಸಮೇತರಾಗಿ ಮಂಡಿಸಿದ್ದಾರೆ. ತೇಜೋಮಯವಾದ ಅವರ ಪುಣ್ಯಪುಂಜವು ಆಕಾಶ ಮಂಡಲವನ್ನು ವ್ಯಾಪಿಸಿದೆ. ನಾವು ಸ್ವಲ್ಪು ಅವರ ಅಂತಪುರದ ಮಾಳಿಗೆಯನ್ನು ಬಿಟ್ಟು, ದೂರದಲ್ಲಿ ಹಾರಿಹೋಗೋಣ; ಇಲ್ಲವಾದರೆ ಅವರ ಅಗಾಧವಾದ ಪುಣ್ಯ ತೇಜದಲ್ಲಿ ದಹಿಸಿ ಹೋದೆವು. ಹೆಣ್ಣುಪಕ್ಷಿಯ ಈ ಮಾತನ್ನು ಕೇಳಿ ಗಂಡು ಪಕ್ಷಿಯು ಇದೇನು ಹೇಳುವೆ ? ಮಹಾಮಹಿಮನಾದ ''ರೈಕ್ವ''ನ ಪುಣ್ಯದ

ಮುಂದೆ ಈ ಜಾನುಶ್ರುತಿಯ ಪುಣ್ಯವು ಸಾಗರದ ಮುಂದೆ ಸಾಸುವೆ ಕಾಳಿನಷ್ಟಾಗುವುದು, ಆದ್ದರಿಂದ ಏನೂ ಆಗಲಾರದು ನಡೆ–ಎಂದು ರಾಜನ ಮೇಲೆಯೇ ಹಾರಿಹೋದವು.

ಪಕ್ಷಿಗಳ ಸಂವಾದವನ್ನು ಕೇಳಿ ಚಕಿತನಾದ ಜಾನುಶ್ರುತಿಗೆ ಬೆಳಗಾಗುವವರೆಗೆ ನಿದ್ರೆಯೇ ಬರಲಿಲ್ಲ, ರೈಕ್ವನೆಂದರೆ ಯಾರಿರಬಹುದು ? ಅವನೆಷ್ಟು ಸಿರಿವಂತನಾಗಿರ ಬಹುದು ? ಯಾವ ದಾನ–ಧರ್ಮಾದಿಗಳಿಂದ ಸಮುದ್ರದಂತೆ ಅಗಾಧವಾದ ಪುಣ್ಯ ವನ್ನು ಸಂಪಾದಿಸಿರಬಹುದು ?

ಇಂತಹ ವಿಚಾರ ತರಂಗಗಳು ಇಡೀ ರಾತ್ರಿ ರಾಜನ ಹೃದಯಕ್ಕೆ ಅಪ್ಪಳಿಸುತ್ತಿದ್ದವು.

ಬೆಳಗಾದೊಡನೆ ಭಟರನ್ನು ಕರೆಯಿಸಿ ಈ ಭೂಮಂಡಲದಲ್ಲಿ ''ರೈಕ್ವ''ನೆಂಬು ವನು ಎಲ್ಲಿದ್ದರೂ, ಹೇಗಿದ್ದರೂ ಹುಡುಕಿ, ಅವನು ಬರುವಂತಿದ್ದರೆ ಮರ್ಯಾದೆಯಿಂದ ಕರೆತನ್ನಿರೆಂದು ಆಜ್ಞಾಪಿಸಿ ಅವಲೋಕನಕ್ಕೆ ಅನುಮತಿಯಿನಿತ್ತನು. ರಾಜಾಜ್ಞೆಯಂತೆ ದೊಡ್ಡ ದೊಡ್ಡ ಗ್ರಾಮ ಪಟ್ಟಣಗಳಲ್ಲೆಲ್ಲ ಹುಡುಕುತ್ತ ಕೊನೆಗೆ ಅತಿ ಚಿಕ್ಕದಾದ ಒಂದು ಗ್ರಾಮದ ಪ್ರಾಂಗಣದಲ್ಲಿ ಚಕ್ಕಡಿಯ ಕೆಳಗೆ ದಿಗಂಬರನಾಗಿ ಹುಡಿಯಲ್ಲಿ ಹೊರಳಾಡು ತ್ತಿರುವ ರೈಕ್ವನನ್ನು ಕಂಡು–''ವೀರನಾದರೆ ವೈರಿಗಳ ಕಾಟ ಬಹಳವಯ್ಯಾ, ದಾನಶೂರ ನಾದರೆ ಯಾಚಕರ ಕಾಟ ಬಹಳವಯ್ಯಾ, ಅತಿರೂಪನಾದರೆ ಅಂಗನೆಯರ ಕಾಟ ಬಹಳವಯ್ಯಾ'' ಎಂಬ ಶಿವಯೋಗಿ ಸಿದ್ಧರಾಮೇಶ್ವರರ ಅನುಭವದ ನುಡಿಯಂತೆ ಅತಿ ದಾನದ ಪರಿಣಾಮವಾಗಿ ರೈಕ್ವನಿಗೆ ಈ ದಾರಿದ್ರ್ಯ ಸ್ಥಿತಿಯು ಬಂದಿರಬಹುದೇನು ? ಆದ್ದರಿಂದಲೇ ''ಅತಿ ಸರ್ವತ್ರ ವರ್ಜಯೇತ್'' ಎಂದು ನೀತಿಯುಂಟು. ಇಂತೆಲ್ಲ ಮನದಲ್ಲಿಯೇ ಆಲೋಚಿಸಿ ರೈಕ್ವನನ್ನು ಪ್ರಶ್ನಿಸುವರು.

ಭಟರು : ಸ್ವಾಮೀ ! ರೈಕ್ವನೆಂದರೇ ತಾವೇ ಏನು ?

ರೈಕ್ವ : ಜನರು ಈ ಶರೀರಕ್ಕೆ ರೈಕ್ವ ಎನ್ನುತ್ತಾರೆ.

ಭಟರು : ಅಂದರೆ ಶರೀರಕ್ಕಿಂತ ನೀವು ಬೇರೆ ಇರುವಿರೇನು ?

ರೈಕ್ವ : ಅಹುದು. ಭೂಮಿ, ಜಲ, ಅಗ್ನಿ, ವಾಯು, ನಭವನೆಲ್ಲವನು ಮೀರಿ ದವನು ನಾನು.

ಭಟರು : ಸ್ವಾಮಿ ! ನಮ್ಮ ಅರಸು ಜಾನುಶ್ರುತಿಯು ತಮ್ಮನ್ನು ಅರಮನೆಗೆ ಕರೆತನ್ನಿರೆಂದು ನಮ್ಮನ್ನು ಕಳಿಸಿರುವರು. ಕೃಪೆಮಾಡಿ ಈ ರಥದಲ್ಲಿ ಆರೂಢರಾಗಿರಿ.

ರೈಕ್ವ : ನಿಮ್ಮ ರಾಜನ ಹತ್ತಿರ ನನಗಾವ ಪ್ರಯೋಜನವೂ ಇಲ್ಲ. ಒಂದು ವೇಳೆ ನಿಮ್ಮ ರಾಜನಿಗೆ ನನ್ನಿಂದ ಏನಾದರೂ ಆಗಬೇಕಾಗಿದ್ದರೆ ಅವನನ್ನೇ ಇಲ್ಲಿ ಬರಹೇಳಿರಿ.

ರೈಕ್ವನ ಈ ಸೊಕ್ಕಿನ ನುಡಿಗಳನ್ನು ಕೇಳಿ ಭಟರು–ಅಕಿಂಚನನಾದ ಇವನ ಈ ಅಹಂಕಾರಕ್ಕೆ ಕಾರಣವಾದದ್ದು ಇವನಲ್ಲಿ ಯಾವ ಬಾಹ್ಯ ಸಂಪತ್ತೂ ನಮಗೆ ತೋರ ಲೊಲ್ಲದು. ಏನಾದರಾಗಲಿ, ಮಹಾರಾಜರು ಅಪೇಕ್ಷಿಸಿದ ವ್ಯಕ್ತಿಯು ದೊರಕಿದ್ದಾನೆ. ಈ

ವಿಷಯವನ್ನು ಮಹಾರಾಜರಿಗೆ ಅರಿಕೆ ಮಾಡಿಕೊಳ್ಳೋಣವೆಂದು ಪರಸ್ಪರ ವಿಚಾರಿಸಿ ಕೊಂಡು ಮರಳಿಬಂದು ನಡೆದ ಪ್ರಸಂಗವನ್ನೆಲ್ಲ ರಾಜನಿಗೆ ಅರಿಕೆ ಮಾಡಿಕೊಂಡರು.

ರೈಕ್ವನ ವಿಚಿತ್ರವಾದ ಸ್ಥಿತಿಯನ್ನೂ, ಅವನ ಗರ್ವದ ಮಾತುಗಳನ್ನೂ ಕೇಳಿದ ಜಾನುಶ್ರುತಿಯು ಏನೂ ಇಲ್ಲದವನಲ್ಲಿ ಈ ಸ್ವಾಭಿಮಾನವಿರಬೇಕಾದರೆ ನಮ್ಮಲ್ಲಿರುವದ ಕ್ಕಿಂತಲೂ ವಿಶಿಷ್ಟವಾದದ್ದೇನಾದರೂ ಇರಲೇಬೇಕೆಂದು ವಿಚಾರಿಸಿ, ರೈಕ್ವನಿದ್ದಲ್ಲಿಗೆ ತಾನೇ ಭಯ–ಭಕ್ತಿಯಿಂದೊಡಗೂಡಿ ಬಂದು ತಾನು ತಂದ ಅಪಾರ ಸಂಪತ್ತನ್ನು ಅವನ ಪಾದಕಾಣಿಕೆಯಾಗಿ ಅರ್ಪಿಸಿ ವಿನಂತಿಸಿಕೊಳ್ಳುವನು.

ರಾಜಾ : ಸ್ವಾಮೀ ! ಎರಡು ಹಂಸಪಕ್ಷಿಗಳು ತಮ್ಮ ಅಪಾರವಾದ ಪುಣ್ಯರಾಶಿಯ ಬಗ್ಗೆ ಕೊಂಡಾಡಿದ್ದನ್ನು ಕಿವಿಯಾರೆ ಕೇಳಿ ಚಕಿತನಾಗಿದ್ದೇನೆ. ಕಾರಣ ಅಂತಹ ಅಕ್ಷಯ ವಾದ ಪುಣ್ಯ ಸಂಪಾದಿಸಲು ತಾವು ಮಾಡಿದ ಪುಣ್ಯಕಾರ್ಯಗಳಾವವು ?

ರೈಕ್ವ : ಹೇ ರಾಜನ್ ! ನನ್ನನ್ನು ನೋಡುವುದರಿಂದಲೇ ನಾನು ಯಾರಿಗಾದರೂ ಏನನ್ನೂ ಕೊಡಲು ಅಸಮರ್ಥನೆಂಬುವುದು ಸರ್ವರಿಗೂ ಸಹಜವಾಗಿ ತಿಳಿದು ಬರುವುದು. ಆದ್ದರಿಂದ ನಾನು ಸಂಪಾದಿಸಿದ ಪುಣ್ಯ ಯಾವುದನ್ನಾದರೂ ದಾನವಾಗಿ ಕೊಟ್ಟು ಸಂಪಾದಿಸಿದ್ದಲ್ಲ.

ರಾಜಾ : ಸ್ವಾಮಿ ! ಹಾಗಾದರೆ ಯಾವುದರಿಂದ ನನಗಿಂತಲೂ ಹೆಚ್ಚಿನ ಪುಣ್ಯ ಸಂಪಾದಿಸಿರುವಿರಿ ?

ರೈಕ್ವ : ಹೇ ರಾಜನ್ ! ಶರೀರದಲ್ಲಿ ನಾನೆಂಬ ಭಾವನೆ ದೃಢವಾದಾಗ ಕೋಟಿ ಗೋವುಗಳನ್ನು ಕೊಂದ ಪಾಪ ಬರುವದೆಂಬ ಶಾಸ್ತ್ರ ಪ್ರಮಾಣವಿದೆ. ಹೀಗಿರುವಾಗ ಅದನ್ನು ನಾಶಗೊಳಿಸಲು ಅದೆಷ್ಟು ದಾನ–ಧರ್ಮಾದಿಗಳನ್ನು ಮಾಡಿದರೂ ತೀರದು.

ರಾಜಾ : ಸ್ವಾಮಿ ! ದಾನ–ಧರ್ಮಾದಿಗಳನ್ನು ಬಿಟ್ಟರೆ ಪುಣ್ಯ ಸಂಪಾದನೆಗೆ ಇರುವ ಬೇರೊಂದು ಮಾರ್ಗವಾವುದು ?

ರೈಕ್ವ : ಅದೇ ಆತ್ಮಜ್ಞಾನದ ಮಾರ್ಗ.

ಹೀಗೆ ರೈಕ್ವನಿಂದ ಆತ್ಮಜ್ಞಾನದ ಮಹತಿಯನ್ನು ತಿಳಿದ ಜಾನುಶ್ರುತಿಯು ವಿಧಿವತ್ತಾಗಿ ರೈಕ್ವನ ಶಿಷ್ಯತ್ವವನ್ನು ಗ್ರಹಿಸಿ ಶರೀರಾದಿಗಳಿಂದ ವಿಲಕ್ಷಣವಾದ ಆತ್ಮಜ್ಞಾನವನ್ನು ಸಂಪಾದಿಸಿ ಲೋಕೋತ್ತರವಾದ ಕೀರ್ತಿಶಾಲಿಯಾದನು; ಆದ್ದರಿಂದಲೇ ಶ್ರೀನಿಜಗುಣರು– ''ದೇಹವಿದನು ಅನ್ಯದೇಹದಂದದಿ ಕಾಣಲರಿಯದ ಮೋಹಿತಂಗೆ ನಿಜಾನಂದವಹುದೆ ಕೋಟಿ ಜನ್ಮದೊಳು ಉಗ್ರತಾಪಸನಾಗಿ'' ಎಂಬುದಾಗಿ, ಘೋರ ತಪಸ್ವಿಯಾಗಿದ್ದರೂ ದೇಹಾತ್ಮ ಬುದ್ಧಿಯನ್ನು ತ್ಯಜಿಸದೇ ಆತ್ಮಾನುಭೂತಿಯುಂಟಾಗದೆಂದು ಸ್ಪಷ್ಟವಾಗಿ ಹೇಳಿರುವರು.

ಇನ್ನು ಪೂರ್ವದಲ್ಲಿ ಪ್ರಜಾಪತಿಯು ಆತ್ಮಜ್ಞಾನಕ್ಕಾಗಿ ಆಗಮಿಸಿದ ಇಂದ್ರ ಮತ್ತು ವಿರೋಚನರಿಗೆ ನೀರು ತುಂಬಿದ ರಂಜಣಿಗೆಯಲ್ಲಿ ನೋಡಿರಿ ಎಂದಾಗ ಅವರೀರ್ವರೂ

ಆದರಲ್ಲಿ ಕಂಡ ದೇಹವೇ ಆತ್ಮವೆಂದು ತಿಳಿದು ಹೋದರೂ, ತನ್ನ ಸ್ಥಾನಕ್ಕೆ ಹೋದ ಇಂದ್ರನು ನಶ್ವರವಾದ ಈ ಶರೀರವು ಅದು ಹೇಗೆ ಆತ್ಮವಾದೀತು ? ಎಂದು ಸಂಶಯ ಗ್ರಸ್ತನಾಗಿ ಪುನಃ ಪ್ರಜಾಪತಿಯ ಬಳಿಗೆ ಬಂದು ಬೇಡಿಕೊಂಡಾಗ, ಪ್ರಜಾಪತಿಯು– ಕಾಣುವುದು ಆತ್ಮವಲ್ಲ, ನೋಡುವುದು ಆತ್ಮವೆಂದು ತಿಳಿ; ಇಂತೆಂದು ಉಪದೇಶಿಸಿದನು. ಆಗ ಇಂದ್ರನು ನೋಡುವುದು ಕಣ್ಣು; ಹಾಗಾದರೆ ಕಣ್ಣೇ ಆತ್ಮವಾಗಿರಬೇಕೆಂದು ನಿಶ್ಚಯಿಸಿ ಮರಳಿದನು.

ಕಾಲಾಂತರದಲ್ಲಿ ಕಣ್ಣು ಯಾವಾಗಲೂ ಎಲ್ಲವನ್ನೂ ನೋಡಲರಿಯದೆಂದಾಗ ಅದು ಹೇಗೆ ಆತ್ಮವಾದೀತು ? ಎಂಬ ಸಂಶಯವುಳ್ಳವನಾಗಿ ಪುನಃ ಪ್ರಜಾಪತಿಯಲ್ಲಿಗೆ ಬಂದು ತನ್ನ ಸಂಶಯವನ್ನು ಕೇಳಿಕೊಂಡಾಗ ಪ್ರಜಾಪತಿಯು–ಕಣ್ಣನ್ನು ನೋಡುವದಾವುದೋ ಅದು ಆತ್ಮವೆಂದು ತಿಳಿ ಎಂದು ಉಪದೇಶಿಸಿದನು. ಆಗ ಇಂದ್ರನು ಕಣ್ಣಿನಲ್ಲಿ ಬಿದ್ದ ಸೂಕ್ಷ್ಮ ಕಸ–ಕಡ್ಡಿಗಳ ಜ್ಞಾನವು ಕಣ್ಣಿಗಾಗದೇ ಮನಸ್ಸಿಗಾಗುವುದರಿಂದ ಮನಸ್ಸೇ ಆತ್ಮವಿರಬಹುದೆಂದು ನಿಶ್ಚಯಿಸಿ ಹೊರಟುಹೋದನು.

ಕೆಲವು ದಿನಗಳನಂತರ ಸಂಕಲ್ಪ–ವಿಕಲ್ಪಾತ್ಮಕವಾದ ಮನಸ್ಸು ಆತ್ಮ ಹೇಗಾದೀತು? ಎಂಬುವ ಸಂಶಯದಿಂದ ಪೀಡಿತನಾದ ಇಂದ್ರನು ಪುನಃ ಪ್ರಜಾಪತಿಯ ಬಳಿ ಬಂದು, ಸ್ವಾಮಿನ್ ! ಮನಸ್ಸು ಚಂಚಲವಾದ್ದರಿಂದ ಅದರ ಚಾಂಚಲ್ಯ ಅದಕ್ಕೇ ತಿಳಿಯದಿರುವಾಗ ಅದು ಆತ್ಮ ಹೇಗೆ ? ಎಂದು ಕೇಳಲು, ಆಗ ಪ್ರಜಾಪತಿಯು–ಎಲೈ ಇಂದ್ರನೇ ಮನಸ್ಸಿನ ಚಾಂಚಲ್ಯವನ್ನರಿಯುವುದಾವುದೋ ಅದು ಆತ್ಮವೆಂದು ತಿಳಿ–ಎಂದು ಉಪದೇಶಿಸಿ ಬೀಳ್ಕೊಟ್ಟನು. ಆಗ ಇಂದ್ರನು ಮನಸ್ಸನ್ನು ನೋಡುವುದು ಬುದ್ಧಿಯಾದ್ದರಿಂದ ಬುದ್ಧಿಯೇ ಆತ್ಮವೆಂದು ನಿಶ್ಚಯಿಸಿ ನಿಶ್ಚಿಂತನಾಗಿ ಸ್ವಸ್ಥಾನಕ್ಕೆ ತೆರಳಿದನು.

ಅಂತರ್ಮುಖನಾಗಿ ವಿಚಾರಿಸುವ ಇಂದ್ರನಿಗೆ ಗಾಢನಿದ್ರೆಯೊಳಗೆ ಬುದ್ಧಿಯು ಇಲ್ಲವಾಗುವುದರಿಂದ ಅದು ಹೇಗೆ ಆತ್ಮವಾದೀತು ? ಇಂತೆಂದು ಪುನಃ ಸಂಶಯ ಪ್ರಾಪ್ತವಾಗಿ ಪ್ರಜಾಪತಿಯ ಹತ್ತಿರ ವಿನಂತಿಸಿಕೊಂಡಾಗ ಪ್ರಜಾಪತಿಯು ಬುದ್ಧಿಯ ಅಸ್ತಿತ್ವ, ನಾಸ್ತಿಕತ್ವಕ್ಕೆ ಸಾಕ್ಷಿಯಾದದ್ದೇ ಆತ್ಮವೆಂದು ತಿಳಿ ಎಂಬುದಾಗಿ ಉಪದೇಶಿಸಿದನು. ಆಗ ನಿಜವಾದ ಆತ್ಮದ ಅರಿವಾದ ನಿಜಾನಂದವನ್ನು ಪಡೆದನು. ಅಂತೆಯೇ–

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥

(ಗೀತಾ ೩–೪೨)

ಗೀತೆಯಲ್ಲಿ ಭಗವಂತನು ಶರೀರಕ್ಕಿಂತ ಇಂದ್ರಿಯಗಳು, ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ ಹಾಗೂ ಬುದ್ಧಿಗಿಂತ ಆತ್ಮವು ಆಂತರಿಕವಾಗಿದೆ ಎಂಬುದಾಗಿ ಉಪದೇಶಿಸಿದ್ದಾನೆ.

ಅಂತರ್ಗತವಾದ ಆತ್ಮತತ್ತ್ವವನ್ನರಿಯುವದು ಅಂತರ್ಮುಖವೃತ್ತಿಯುಳ್ಳವರಿಗೆ ಸಾಧ್ಯವೇ ವಿನಾ ಬಹಿರ್ಮುಖಿಗಳಾದ ಲೌಕಿಕರಿಗೆ ಅದೆಂದಿಗೂ ಸಾಧ್ಯವಾಗದು. ಆದ್ದರಿಂದ ಅಕ್ಕನು–

ಹಗಲು ನಾಲ್ಕುಜಾವ ಅಶನಕ್ಕೆ ಕುದಿವರು
ಇರುಳು ನಾಲ್ಕುಜಾವ ವ್ಯಸನಕ್ಕೆ ಕುದಿವರು
ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ
ತಮ್ಮೊಳಗಿರ್ದ ಮಹಾಘನವನರಿಯರು ಚೆನ್ನಮಲ್ಲಿಕಾರ್ಜುನಾ.

ಅಶನ–ವ್ಯಸನಕ್ಕಾಗಿ ಪರಿತಪಿಸುವ ಪಾಮರಜೀವಿಗಳು ನೀರಲ್ಲಿಯೇ ನಿಂತು ನೀರಡಿಸಿ ಸತ್ತ ಅಗಸನಂತೆ. ನಮ್ಮಲ್ಲಿಯೇ ಇರುವ ಆತ್ಮವನ್ನರಿಯದೇ ದೇಹವೇ ತಾವೆಂದು ನಂಬಿ, ಈ ಭವಚಕ್ರದಲ್ಲಿ ತಿರುಗುತ್ತಿದ್ದಾರೆಂದು ಬದ್ಧ ಜೀವಿಗಳಿಗಾಗಿ ಬಹುವಾಗಿ ಮರುಗಿದ್ದಾಳೆ.

ಮಾಂಸದ ತುಣುಕನ್ನು ಬಾಯಲ್ಲಿ ಕಚ್ಚಿಕೊಂಡು ಬಾಂದಳದಲ್ಲಿ ಹಾರಾಡುವ ಕಾಗೆಯನ್ನು ಮಾಂಸದಾಶೆಗಾಗಿ ನೂರಾರು ಕಾಗೆಗಳು ಕುಕ್ಕಿ ಕುಕ್ಕಿ ಪೀಡಿಸುವಂತೆ ಶರೀರವೇ ನಾನೆಂಬ ಮೋಹರೂಪ ಮಾಂಸವನ್ನು ಬಾಯಲ್ಲಿ ಕಚ್ಚಿಕೊಂಡು ತಿರುಗಾಡುವ ಪಾಮರ ಜೀವಿಗೆ ಹೆಂಡರು, ಮಕ್ಕಳೆಂಬ ಕಾಗೆಗಳು ದಿನವಿಡೀ ಪೀಡಿಸುತ್ತಿರುವರು. ಬಾಯಲ್ಲಿಯ ಮಾಂಸದ ಮುದ್ದೆಯನ್ನು ಬಿಡದೇ ಕಾಗೆಗೆ ಕಾಟ ತಪ್ಪದಿರುವಂತೆ ದೇಹಾತ್ಮ ಬುದ್ಧಿಯನ್ನು ತ್ಯಾಗಮಾಡದೇ ಜೀವಾತ್ಮನಿಗೆ ಐಹಿಕ ದುಃಖದಿಂದ ವಿಶ್ರಾಂತಿ ಸಿಗದು.

ಈ ಎಲ್ಲ ದೃಷ್ಟಿಯಿಂದ ವಿಚಾರಿಸಲಾಗಿ ಶರೀರವೇ ಆತ್ಮ, ಮರಣವೇ ಮೋಕ್ಷ, ಸಾಲಮಾಡಿಯಾದರೂ ಸುಖವಾಗಿ ಜೀವಿಸಬೇಕು, ಋಣಾನುಸಂಬಂಧವೇ ಇಲ್ಲವೆನ್ನುವ ಚಾರ್ವಾಕ ಸಿದ್ಧಾಂತಿಗಳ ಮಾತುಗಳು ಕೇಳಲು ರೋಚಕಗಳೇ ವಿನಾ ಶಾಸ್ತ್ರ ಸಮ್ಮತವಾದವುಗಳಲ್ಲವೆನ್ನುವುದು ತಿಳಿದುಬರುವದು. ಹಿಂದೆ ಮಾಡಿದ, ಇಂದು ಮಾಡುತ್ತಿರುವ ಹಾಗೂ ಮುಂದೆ ಮಾಡಲಿರುವ ಎಲ್ಲ ಕರ್ಮಗಳ ಫಲಗಳನ್ನು ನಾವೇ ಅನುಭವಿಸಬೇಕಲ್ಲದೇ ಮತ್ತಾರೂ ಇದರಲ್ಲಿ ಪಾಲುದಾರರಾಗರು.

ಒಮ್ಮೆ ಒಬ್ಬ ಕಳ್ಳನು ಒಬ್ಬ ಸಿರಿವಂತನಾದ ಒಕ್ಕಲಿಗನ ಮನೆಯೊಳಗೆ ಹೊಕ್ಕು ಮಧ್ಯರಾತ್ರಿಯಲ್ಲಿ ಬೆಲೆ ಬಾಳುವ ಬಂಗಾರದ ಆಭರಣಗಳೆಲ್ಲವನ್ನೂ ದೊಡ್ಡದೊಂದು ಗಂಟಿನಲ್ಲಿ ಕಟ್ಟಿಕೊಂಡು ಅವಸರದಲ್ಲಿ ಹೋಗುವಾಗ ಹಕ್ಕೆಯಲ್ಲಿ ಮಲಗಿದ ಎಮ್ಮೆಯ ಬೆನ್ನ ಮೇಲೆ ಕಾಲಿಟ್ಟನು. ಗಾಬರಿಗೊಂಡು ಎಮ್ಮೆ ದಿಗ್ಗನೇ ಎದ್ದು ನಿಂತಾಗ ಕಳ್ಳ ಒಂದು ಕಡೆ, ಗಂಟೊಂದು ಕಡೆ ಇದ್ದವು. ಆಗ ಎಮ್ಮೆಯು ''ಅಷ್ಟಕ್ಕೆ ಇಷ್ಟಾದರೆ, ಇಷ್ಟಕ್ಕೆ ಎಷ್ಟು ?'' ಎಂದಿತು. ಎಮ್ಮೆಯ ಈ ಮಾತನ್ನು ಕೇಳಿದ ಕಳ್ಳನು ಹಾಗೆಂದರೆ ಏನು ಎಂದು ಪ್ರಶ್ನಿಸಿದಾಗ, ಪೂರ್ವಜನ್ಮದಲ್ಲಿ ನಾನು ಇವನ ಮನೆಯಲ್ಲಿ ಆಳುಮಗನಾಗಿದ್ದೆ. ಒಮ್ಮೆ ಬೇಸಗೆಯ ದಿವಸ ಮನೆಯಲ್ಲಿ ಯಾರೂ ಇಲ್ಲದಾಗ ಕದ್ದು ಮಜ್ಜಿಗೆ ಕುಡಿದಿದ್ದರಿಂದ ಅವರ ಋಣವನ್ನು ತೀರಿಸುವುದಕ್ಕಾಗಿ ಈಗ ಎಮ್ಮೆಯಾಗಿ ಹುಟ್ಟಿ ಬಂದಿರುವೆನು, ನೀನಾದರೋ ಇಷ್ಟೊಂದು ಸಂಪತ್ತನ್ನು ಅಪಹರಿಸಿ ಹೊರಟಿರುವೆ, ಮುಂದೆ ನಿನ್ನ ಗತಿ ಏನಾಗುವುದು

ಸ್ವಲ್ಪ ವಿಚಾರಿಸು–ಎಂದಿತು. ಎಮ್ಮೆಯ ಅನುಭವಪೂರ್ಣವಾದ ಉಪದೇಶವನ್ನು ಕೇಳಿದ ಕಳ್ಳನು ಎಲ್ಲವನ್ನೂ ಅಲ್ಲಿಯೇ ಬಿಟ್ಟು, ಬರಿಗೈಯಿಂದ ಹೊರಟು ಹೋದನು.

ಕಥೆಗಳು ಕಾಲ್ಪನಿಕಗಳಾದರೂ ಅವುಗಳಲ್ಲಡಗಿದ ತತ್ತ್ವವು ಬಹುಮಾರ್ಮಿಕ ವಾಗಿರುವುದು. ಆದ್ದರಿಂದ ಋಣಾನುಸಂಬಂಧವಿಲ್ಲವೆಂಬ ಚಾರ್ವಾಕರ ನುಡಿಗೆ ಮಾರುಹೋಗಿ ಯಾರೂ ಮನಬಂದಂತೆ ವರ್ತಿಸಕೂಡದು. ಶರೀರಾತಿರಿಕ್ತನಾದ ಜೀವಾತ್ಮನು ಲೋಕಾಂತರ ಜನ್ಮಾಂತರಗಳಿಗಾಗಿ ಸಂಚರಿಸುವನಾದ್ದರಿಂದ ಶ್ರೇಷ್ಠಗಳಾದ ಕರ್ಮಗಳನ್ನೇ ಮಾಡಿ, ತನ್ನ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳಬೇಕು.

ನಾನು ಕೇಳುತ್ತೇನೆ, ನಾನು ನೋಡುತ್ತೇನೆ ಮುಂತಾದ ವ್ಯವಹಾರದಲ್ಲಿ ನೋಡು ವುದು–ಕೇಳುವುದು ಇಂದ್ರಿಯಗಳ ಧರ್ಮವಾದರೂ, ಈ ಇಂದ್ರಿಯಗಳ ಜೊತೆಗೆ ನಾನು ಎಂಬ ಶಬ್ದವನ್ನು ಕೂಡಿಸಿ ವ್ಯವಹರಿಸುವುದರಿಂದ ಅವುಗಳೇ ಆತ್ಮವೆಂಬ ಭ್ರಮೆ ಉಂಟಾಗುವದು ಸಹಜವಾಗಿದೆ. ಕಿವಿಯಲ್ಲಿ ದೋಷ ಉಂಟಾಗಿ ಕೇಳದಿದ್ದಾಗ ನನ್ನ ಕಿವಿ ಕೇಳಲೊಲ್ಲದು ಎನ್ನುತ್ತಾನೆ. ಮೊದಲು ನಾನು ಕೇಳುತ್ತೇನೆ ಎನ್ನುವಾಗ ಕಿವಿಯೇ ತಾನಾಗಿ ವ್ಯವಹರಿಸಿದವನು ಮತ್ತೊಮ್ಮೆ ''ನನ್ನ ಕಿವಿ'' ಎಂದು ಕಿವಿಗಿಂತಲೂ ತಾನು ಬೇರೆ ಎಂಬುದನ್ನು ತೋರಿಸುತ್ತಾನೆ. ಇದರಂತೆ ನನ್ನ ಕಾಲು, ನನ್ನ ಕೈ, ನನ್ನ ಕಣ್ಣು ನನ್ನ ಕಿವಿ, ನನ್ನ ನಾಲಿಗೆ, ನನ್ನ ಮೂಗು, ನನ್ನ ಬಾಯಿ ಮುಂತಾಗಿ ಸಕಲ ಜ್ಞಾನೇಂದ್ರಿಯ ಹಾಗೂ ಕರ್ಮೇಂದ್ರಿಯ ಹಾಗೂ ಕರ್ಮೇಂದ್ರಿಯಗಳಲ್ಲಿ ನನ್ನದೆಂದು ವ್ಯವಹರಿಸುವುದರಿಂದ ಅವುಗಳು ಆತ್ಮವಾಗಲಾರವು.

ಇನ್ನು ಇಂದ್ರಿಯಾಧ್ಯಕ್ಷನಾದ ಮನಸ್ಸಾದರೂ ಆತ್ಮವಾಗಲಾರದು, ಯಾಕೆಂದರೆ ''ಅಹಂ ಸುಖೀ'' ''ಅಹಂ ದುಃಖೀ'' ನಾನು ಸುಖಿಯಾಗಿದ್ದೇನೆ, ನಾನು ದುಃಖಿಯಾಗಿ ದ್ದೇನೆ ಎಂದು ಅನ್ನುವಾಗ, ಮನಸ್ಸಿನ ಧರ್ಮಗಳಾದ ಸುಖ–ದುಃಖಗಳನ್ನು ತನ್ನಲ್ಲಿ ಆರೋಪಿಸಿಕೊಂಡು ತಾನೇ ಮನಸ್ಸೆಂಬುವಂತೆ ತೋರುವುದರಿಂದ ಅಹಂ ಪ್ರತ್ಯಯಕ್ಕೆ ವೇದ್ಯವಾದ ಮನಸ್ಸೇ ಆತ್ಮನೆಂದು ಕೆಲವರು ಹೇಳುವರು; ಆದರೆ ನನ್ನ ಮನಸ್ಸು ಚಂಚಲವಾಗಿದೆ ಎಂದು ಮತ್ತೊಂದು ಸಮಯದಲ್ಲಿ ತಾನೇ ವ್ಯವಹರಿಸುವುದರಿಂದ ಮನಸ್ಸಿನ ಚಂಚಲತೆಯನ್ನು ಅರಿಯುವ ತಾನು ಮನಸ್ಸಿಗಿಂತಲೂ ಭಿನ್ನನಾದ್ದರಿಂದ ಮನಸ್ಸೂ ಆತ್ಮವಾಗಲಾರದು.

ಅದರಂತೆ ಜಾಗ್ರತ್ ಹಾಗೂ ಸ್ವಪ್ನದ ಸರ್ವವ್ಯವಹಾರಗಳಲ್ಲಿ ನಿರ್ಣಯವನ್ನು ಕೊಟ್ಟು ನಾನೆಂದು ಅಭಿಮಾನಿಸುವ ಬುದ್ಧಿಯೇ ಆತ್ಮವೆಂಬುವದೂ ಸರಿಯಲ್ಲ. ಗಾಢ ವಾದ ನಿದ್ರೆಯಲ್ಲಿ ಬುದ್ಧಿವೃತ್ತಿಯು ಅಡಗಿಹೋಗಿರುತ್ತದೆ. ಆದರೂ ಅಲ್ಲಿ ಆತ್ಮನ ಅಸ್ತಿತ್ವ ವಿದೆ. ಅಂತೆಯೇ ಎದ್ದ ಬಳಿಕ ''ಸುಖೇನ ಸುಪ್ತೋಽಹಂ ನ ಕಿಂಚಿದವೇದಿಷಮ್'' ನಾನು ಸುಖವಾಗಿ ಮಲಗಿದ್ದೆ, ಏನನ್ನೂ ತಿಳಿಯಲಿಲ್ಲವೆಂದು ಸುಷುಪ್ತಿಯಲ್ಲಿ ಅನುಭವಿಸಿದ ಸುಖ ಹಾಗೂ ಅಜ್ಞಾನದ ಅನುಭವ ಮಾಡಿದವನ ಬುದ್ಧಿಗಿಂತಲೂ ವಿಲಕ್ಷಣವಾದವನು ಇರಲೇಬೇಕು. ಇದೂ ಅಲ್ಲದೇ ಒಮ್ಮೊಮ್ಮೆ ನನ್ನ ಬುದ್ಧಿ ಸ್ಥಿರವಾಗಿಲ್ಲವೆನ್ನುವದರಿಂದಲೂ

ಬುದ್ಧಿಯ ಅಸ್ಥಿರತೆಯನ್ನು ಅರಿಯುವವನು ಅದಕ್ಕಿಂತಲೂ ಭಿನ್ನನಿರಲೇಬೇಕು. ಅವನೇ ಆತ್ಮನು ಅದರಿಂದಲೇ ಶ್ರೀ ಶಂಕರಾಚಾರ್ಯರು–

ನ ಭೂಮಿರ್ನತೋಯಂ ನ ತೇಜೋ ನ ವಾಯು–
ರ್ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ ।
ಅನೈಕಾಂತಿಕತ್ವಾತ್ ಸುಷುಪ್ತ್ಯೇಕಸಿದ್ಧ–
ಸ್ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥

(ದಶಶ್ಲೋಕಿ ೧)

ಇದೊಂದೇ ಶ್ಲೋಕದಲ್ಲಿ ಪಂಚಮಹಾಭೂತ ಹಾಗೂ ಅವುಗಳಿಂದ ಉತ್ಪನ್ನವಾದ ಶರೀರ, ಇಂದ್ರಿಯ, ಮನಸ್ಸು ಹಾಗೂ ಬುದ್ಧಿಗಳೆಂಬ ಭೌತಿಕ ಪದಾರ್ಥಗಳು ಆತ್ಮವಾಗ ಲಾರವು; ಯಾಕೆಂದರೆ ಅವೆಲ್ಲವುಗಳು ಉತ್ಪತ್ತಿ–ವಿನಾಶಧರ್ಮ ಉಳ್ಳವುಗಳು, ಆತ್ಮ ನಾದರೋ ಅವೆಲ್ಲಕ್ಕೂ ಸಾಕ್ಷಿಯಾಗಿ ತದ್ವಿಲಕ್ಷಣನಾಗಿ ಏನೊಂದೂ ಇಲ್ಲದ ಸುಷುಪ್ತಿ ಯಲ್ಲಿ ತಾನೋರ್ವನೇ ಇರುವನೆಂಬುದನ್ನು ತಿಳಿಸಿ ಚಾರ್ವಾಕಾದಿ ಬೌದ್ಧಪರ್ಯಂತ ಗಳಾದ ಸಕಲ ಅನಾತ್ಮವಾದಿಗಳ ಮತಗಳನ್ನು ಖಂಡಿಸಿ ನಿಜವಾದ ಆತ್ಮದ ಅರಿವು ಸರ್ವರ ಅನುಭವಕ್ಕೆ ಬರುವಂತೆ ಉಪದೇಶಿಸಿದ್ದಾರೆ.

ನೆಲದ ಮರೆಯ ನಿಧಾನದ ಅರಿವಾಗದೇ ಕೇವಲ ಅದರಮೇಲೆ ಸಂಚರಿಸುತ್ತಿದ್ದ ಮಾತ್ರದಿಂದ ಆ ವ್ಯಕ್ತಿಯ ದಾರಿದ್ರ್ಯ ದೂರಾಗದಂತೆ ಅಂತರ್ಗತವಾದ ಆತ್ಮನ ಅಸ್ತಿತ್ವ ಮಾತ್ರದಿಂದ ಯಾವ ಪ್ರಯೋಜನವೂ ಆಗಲಾರದು; ಆದರೆ ಆ ಅಸ್ತಿತ್ವದ ಅರಿವಾಗ ಬೇಕು. ಅಂತೆಯೇ ಶ್ರೀ ಭಗವತ್ಪಾದರು– ''ಆತ್ಮಸ್ಥಿತಿವಿವೇಕೀ ಯಃ ಪಿಂಡಜ್ಞಾನೀ ಸ ಕಥ್ಯತೇ'' ಶರೀರಾದಿಗಳಿಂದತಿರಿಕ್ತವಾದ ಆತ್ಮನ ಅಸ್ತಿತ್ವದ ಅರಿವು ಉಳ್ಳವನೇ ''ಪಿಂಡಜ್ಞಾನಿ'' ಎಂಬುದಾಗಿ ಉಪದೇಶಿಸಿದ್ದಾರೆ.

ಓರ್ವ ಭಿಕ್ಷುಕನು ಬಹುದಿನಗಳಿಂದ ಒಂದು ಮಂದಿರದ ಮಹಾದ್ವಾರದಲ್ಲಿ ತನ್ನ ದೊಂದು ಸ್ಥಾನಮಾಡಿಕೊಂಡು ಭಿಕ್ಷಾವೃತ್ತಿಯಿಂದ ಜೀವನ ಸಾಗಿಸಿದ್ದನು. ಭಿಕ್ಷುಕರು ಬಹು ಬುದ್ಧಿವಂತರು. ಮಠ, ಮಂದಿರ, ಮಸ್ಜೀದ ಮುಂತಾದ ಧಾರ್ಮಿಕ ಸ್ಥಾನ ಗಳಲ್ಲಿಯೇ ಭಿಕ್ಷೆ ಬೇಡುವರೇ ವಿನಾ ಸಿನೀಮಾ, ನಾಟಕ, ಸರ್ಕಸ್ಸ್ ಮುಂತಾದ ಮನೋರಂಜಕ ಸ್ಥಾನಗಳಲ್ಲಿ ಹುಡುಕಿದರೂ ಒಬ್ಬ ಭಿಕ್ಷುಕ ಸಿಗುವುದಿಲ್ಲ, ಮಂದಿರಕ್ಕೆ ಬರುವವರೆಲ್ಲ ಧಾರ್ಮಿಕ ಮನೋಭಾವನೆಯುಳ್ಳವರಿರುತ್ತಾರೆ. ಅಸಹಾಯಕರಾದ ದರಿದ್ರರಿಗೆ ಏನಾದರೂ ಕೊಡಬೇಕೆಂಬ ಭಾವನೆ ಈ ವ್ಯಕ್ತಿಗಳಲ್ಲಿ ಸಹಜವಾಗಿ ಇರುವಂತೆ ಮನೋರಂಜಕ ಸ್ಥಾನಗಳಿಗೆ ಹೋಗುವ ಜನರಲ್ಲಿ ಈ ಭಾವನೆ ಇರುವದು ಸುಲಭವಲ್ಲ ವಾದ್ದರಿಂದ ಬುದ್ಧಿವಂತರಾದ ಭಿಕ್ಷುಕರು ಮಂದಿರಗಳ ಮಹಾದ್ವಾರದಲ್ಲಿ ನಿಂತು ಭಾವುಕರಾಗಿ ಬಂದ ಧನಿಕರಿಂದ ಧನವನ್ನು ಪಡೆದು ತಮ್ಮ ಜೀವನ ಸಾಗಿಸುವರು.

ಇದೇ ರೀತಿಯಾಗಿ ಆ ಭಿಕ್ಷುಕನಾದರೂ ಬೆಳಗಿನಿಂದ ಸಾಯಂಕಾಲದವರೆಗೆ ''ಅಪ್ಪಾ ! ಐದು ಪೈಸೆ ಕೊಡಿರಿ, ಅಪ್ಪಾ ! ಐದು ಪೈಸೆ ಕೊಡಿರಿ'' ಎಂದು ಚೀರಾಡಿ

ಚೀರಾಡಿ ಬಾಯಿ ಒಣಗಿಸಿಕೊಂಡು ಭಿಕ್ಷೆ ಬೇಡುತ್ತಿದ್ದನು. ಆರಾದರೇನು ? ಹುಟ್ಟಿದವರೆಲ್ಲ ಒಂದು ದಿನ ಜಗದ್ಭಕ್ಷಕನಾದ ಯಮನ ಬಾಯ ತುತ್ತಾಗುವಂತೆ ಈ ಭಿಕ್ಷುಕನಾದರೂ ಯಮಸದನವನ್ನೈದಿದ. ಇವನವರೆನ್ನುವರಾರೂ ಇಲ್ಲದ ಕಾರಣ ಇವನ ಹೆಣ ಒಂದು ದಿನದವರೆಗೆ ಬಿದ್ದಿತು. ಆಗ ಮಂದಿರಕ್ಕೆ ಬರುವ ಜನರೆಲ್ಲ ಅಯ್ಯೋ ಪಾಪ ! ಭಿಕ್ಷುಕ ಸತ್ತು ಹೋಗಿದ್ದಾನಲ್ಲ, ಈತನ ಸಂಬಂಧಿಕರಾರೂ ಇಲ್ಲವಾದ್ದರಿಂದ ನಾವೇ ಶವ ಸಂಸ್ಕಾರ ಮಾಡೋಣವೆಂದು ಕೆಲವು ಜನ ವಿಚಾರಿಸಿ ತಮ್ಮೊಳಗೆ ಹಣವನ್ನು ಕೂಡಿಸಿ ಕುಷ್ಠರೋಗಿಯಾದ ಆತನ ಶವವನ್ನು ಅಗ್ನಿಯಲ್ಲಿ ದಹಿಸಿದರು.

ಮಹಾರೋಗಗ್ರಸ್ತನಾದ ಇವನು ಸುಮಾರು ಮೂವತ್ತು ವರ್ಷ ಒಂದೇ ಸ್ಥಾನದಲ್ಲಿ ಕುಳಿತು ಭಿಕ್ಷೆ ಬೇಡಿದ್ದರಿಂದ, ಅವನು ಕುಳಿತ ಸ್ಥಾನದ ಶುದ್ಧಿಯಾಗಬೇಕಾದರೆ ಆ ಸ್ಥಾನದ ಮಣ್ಣನ್ನು ಸ್ವಲ್ಪ ಕೆದರಿ ತೆಗೆದು ಅದಕ್ಕೆ ಎಣ್ಣೆಯನ್ನು ಹಾಕಿ ಸುಡಬೇಕೆಂದು ಜನರೆಲ್ಲ ಆಲೋಚಿಸಿ ಸಲಿಕೆಗಳಿಂದ ಒಂದು ಫೂಟು ಮಣ್ಣನ್ನು ಕೆದರಿದರು. ಆ ಮಣ್ಣು ಕೆದರುವದರೊಳಗೆ ಒಂದು ಬೃಹದಾಕಾರದ ತಾಮ್ರದ ಪಾತ್ರೆ ಕೈಗೆ ಸಿಕ್ಕಿತು. ಪಾತ್ರೆಯ ಬಾಯಿಯನ್ನು ತೆಗೆದು ನೋಡುತ್ತಾರೆ ಅಪಾರವಾದ ಸ್ವರ್ಣನಿಧಿ. ಆಗ ಎಲ್ಲರೂ ಭಿಕ್ಷುಕನು ಮೂವತ್ತುವರ್ಷ ಇದೇ ಸ್ಥಾನದಲ್ಲಿ ಕುಳಿತಿದ್ದರೂ ಈ ನಿಧಿಯ ಅರಿವಾಗದ ಕಾರಣ ದರಿದ್ರನಾಗಿಯೇ ಹೆರವರಿಗೆ ಕೈಚಾಚಿ ಜೀವಿಸಿದನಲ್ಲ! ಎಂದು ಮರುಗಿದರಂತೆ.

ಇದೇ ಪ್ರಕಾರವಾಗಿ ಪ್ರತಿಯೊಬ್ಬ ಜೀವಾತ್ಮನೂ ಸುಖಸ್ವರೂಪವಾದ ತನ್ನ ಆತ್ಮವನ್ನರಿಯದ ಮೂಲಕವಾಗಿ ಹೆಂಡರು, ಮಕ್ಕಳು, ಹೊಲ, ಮನೆ ಮುಂತಾದ ವಸ್ತುಗಳಲ್ಲಿ ಸುಖವಿರುವುದೆಂಬ ಭ್ರಮೆಯಿಂದ ಅವರತ್ತ ಕೈಚಾಚಿ ಸುಖದ ಭಿಕ್ಷೆಯನ್ನು ಬೇಡುತ್ತ ಕೊನೆಯವರೆಗೆ ದರಿದ್ರನಾಗಿಯೇ ಜೀವನ ಸಾಗಿಸುತ್ತಾನೆ; ಆದ್ದರಿಂದ ಆತ್ಮಜ್ಞಾನಿಯಾದ ಅಲ್ಲಮ ಪ್ರಭುಗಳು–

''ಹೇಮ ನಿನ್ನದಲ್ಲ, ಭೂಮಿ ನಿನ್ನದಲ್ಲ
ಕಾಮಿನಿ ನಿನ್ನವಳಲ್ಲ, ಇವೆಲ್ಲ ಜಗಕಿಕ್ಕಿದ ವಿಧಿ
ನಿನ್ನದೆಂಬುದು ಜ್ಞಾನರತ್ನ, ಅದನ್ನು ಧರಿಸಿದೆಯಾದೊಡೆ
ನಿನ್ನಂತಹ ಸಿರಿವಂತರಿಲ್ಲ ಕಾಣಾ ಗುಹೇಶ್ವರ ।''

ಈ ರೀತಿಯಾಗಿ ಆತ್ಮಜ್ಞಾನದ ಮಹತಿಯನ್ನು ಕೊಂಡಾಡಿದ್ದಾರೆ.

''ಜ್ಞಾನಕಿ ಪಂಥಾ ಕೃಪಾಣಕಿ ಧಾರಾ'' ಎಂಬ ವಚನದಂತೆ ಆತ್ಮಜ್ಞಾನದ ಮಾರ್ಗ ಖಡ್ಗದ ಧಾರೆ ಇದ್ದಂತೆ. ಹದನವಾದ ಖಡ್ಗವು ತಾನು ಸೋಂಕಿದ ಪದಾರ್ಥವನ್ನು ಇಬ್ಭಾಗಮಾಡುವಂತೆ; ಈ ''ಪಿಂಡಜ್ಞಾನ''ವೆಂಬ ವಿವೇಕವು ಶರೀರಾದಿ ಅನಾತ್ಮ ಪದಾರ್ಥಗಳಿಂದ ಆತ್ಮವನ್ನು ಭಿನ್ನಪಡಿಸಿ ತೋರಿಸುವುದು. ಈ ಪಿಂಡಜ್ಞಾನ ಸ್ಥಿತಿಯು ಬಹಿರ್ಮುಖ ಜೀವಿಗಳಿಗೆಂದೂ ದೊರೆಯದು. ಅಂತೆಯೇ–

ಪರಾಂಚಿ ಖಾನಿ ವ್ಯತೃಣತ್ಸ್ವಯಂಭೂ-
ಸ್ತಸ್ಮಾತ್ಪರಾಙ್ಪಶ್ಯತಿ ನಾಂತರಾತ್ಮನ್ ।
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷ-
ದಾವೃತ್ತಚಕ್ಷುರಮೃತತ್ವ ಮಿಚ್ಛನ್ ॥ (ಕಠ ೨-೪-೧)

ಕಠೋಪನಿಷತ್ತಿನಲ್ಲಿ-ಪ್ರಜಾಪತಿಯು ನಮ್ಮ ಸಕಲೇಂದ್ರಿಯಗಳನ್ನು ಬಹಿರ್ಮುಖವಾಗಿ ಸೃಜಿಸಿರುವುದರಿಂದ ನಮ್ಮ ಎಲ್ಲ ಇಂದ್ರಿಯಗಳ ಪ್ರವೃತ್ತಿಯು ಹೊರಮುಖವಾಗಿಯೇ ಇರುತ್ತದೆ. ತುಂಬಿ ಹರಿಯುತ್ತಿರುವ ಪ್ರವಾಹದೊಳಗೆ ಗಿಡ-ಗಂಟೆ ಮೊದಲಾದ ಜಡ ಪದಾರ್ಥಗಳು ಪ್ರವಾಹದತ್ತ ಹರಿಯುತ್ತಿದ್ದರೂ ಚೇತನಗಳಾದ ಮೀನುಗಳು ಪ್ರವಾಹಕ್ಕೆ ಪ್ರತಿಯಾಗಿ ಈಜುತ್ತಿರುವಂತೆ ದೇಹಾತ್ಮಬುದ್ಧಿಯುಳ್ಳ ಜಡಜೀವಿಗಳು ಇಂದ್ರಿಯದತ್ತ ಬಹಿರ್ಮುಖವಾಗಿ ಹೋಗುತ್ತಿದ್ದರೂ, ಧೀರನಾದ ವ್ಯಕ್ತಿಯೊಬ್ಬನು ಮಾತ್ರ ಸಾಮಾನ್ಯವಾದ ಲೋಕ ಪ್ರವೃತ್ತಿಗೆ ವಿರುದ್ಧವಾಗಿ ಸಕಲೇಂದ್ರಿಯಗಳಲ್ಲಿ ವಿಹರಿಸುವ ಮನವಂ ತಡೆದು ಅಂತರ್ಮುಖವಾಗಿ ಪ್ರವೃತ್ತಿಸಿ ಆತ್ಮನನ್ನರಿಯುವನೆಂದು ಯಮಧರ್ಮನು ಆತ್ಮಜಿಜ್ಞಾಸುವಾದ ನಚಿಕೇತನಿಗೆ ಉಪದೇಶಿಸಿದ್ದಾನೆ.

ವಿಕಾರಹೇತೌ ಸತಿ ವಿಕ್ರಿಯಂತೇ
ಯೇಷಾಂ ನ ಚೇತಾಂಸಿ ತ ಏವ ಧೀರಾಃ ।

ಮನಸ್ಸನ್ನು ವಿಕೃತಗೊಳಿಸುವ ವಿಷಯಗಳು ಎದುರಿನಲ್ಲಿದ್ದರೂ, ಅವುಗಳನ್ನು ನೋಡಿಯೂ ಯಾರ ಮನಸ್ಸು ವಿಕಾರಹೊಂದುವುದಿಲ್ಲವೋ ಅವರೇ ಧೀರರು; ಎನ್ನುವ ಕಾಳಿದಾಸನ ವಚನದಂತೆ ಧೀರ ಸ್ವಭಾವದ ವ್ಯಕ್ತಿಗಳೇ ಅಂತರ್ಮುಖಿಗಳಾಗಲರ್ಹರು.

ಓರ್ವ ಬ್ರಹ್ಮಜ್ಞಾನಿಯ ಬಳಿ ಈರ್ವರು ಯುವಕರು ಆತ್ಮಜಿಜ್ಞಾಸುಗಳಾಗಿ ಆಗಮಿಸಿ, ಆತ್ಮೋಪದೇಶಕ್ಕಾಗಿ ಪ್ರಾರ್ಥಿಸಿಕೊಂಡರು. ಆಗ ಗುರುಗಳು ಇವರಲ್ಲಿಯ ಯೋಗ್ಯತೆಯನ್ನರಿತು ಉಪದೇಶಿಸಬೇಕೆಂದು ಇಬ್ಬರ ಕೈಯಲ್ಲಿ ಎರಡು ಪಾರಿವಾಳ ಪಕ್ಷಿಗಳನ್ನು ಕೊಟ್ಟು ''ಇವುಗಳನ್ನು ಯಾರೂ ಇಲ್ಲದ ಸ್ಥಳದಲ್ಲಿ ಯಾರಿಗೂ ಕಾಣದ ಹಾಗೆ ಯಾರಿಗೂ ತಿಳಿಯದಂತೆ ಕೊಂದು ತೆಗೆದುಕೊಂಡು ಬನ್ನಿರಿ; ಆನಂತರ ಆತ್ಮೋಪದೇಶವನ್ನು ಮಾಡುವೆವು'' ಎಂದು ಹೇಳಿ ಕಳುಹಿಸಿದರು.

ಗುರುಗಳ ಆದೇಶದಂತೆ ಓರ್ವನು ಊರಹೊರಗೆ ನಿರ್ಜನ ಪ್ರದೇಶಕ್ಕೆ ಹೋಗಿ ಯಾರೂ ಇಲ್ಲದ್ದನ್ನರಿತು ಪಾರಿವಾಳದ ಕತ್ತನ್ನು ಒತ್ತಿ ಸತ್ತ ಪಕ್ಷಿಯನ್ನು ಗುರುಪಾದಕ್ಕೆ ಪಾದಕಾಣಿಕೆಯನ್ನರ್ಪಿಸಿ ಆತ್ಮಜ್ಞಾನೋಪದೇಶವನ್ನು ಮಾಡಲು ಬೇಡಿಕೊಂಡನು. ಆಗ ಗುರುಗಳು ಈತನ ಈ ಮೂರ್ಖ ವ್ಯವಹಾರವನ್ನು ಕಂಡು ಜ್ಞಾನಕ್ಕೆ ಅಪಾತ್ರನೆಂಬುದನ್ನು ಮನದಲ್ಲಿಯೇ ಯೋಚಿಸಿ, ಸ್ವಲ್ಪ ತಡೆ, ಆತನೂ ಬರಲಿ, ಇಬ್ಬರಿಗೂ ಒಂದೇ ಸಮಯದಲ್ಲಿ ಉಪದೇಶಿಸುವೆವೆಂದು ಉತ್ತರಿಸಿದರು.

ಮತ್ತೋರ್ವ ಶಿಷ್ಯನು ಮರುದಿವಸ ಪ್ರಾತಃಕಾಲದಲ್ಲಿ ಸಜೀವ ಪಕ್ಷಿಯನ್ನು ಗುರುಗಳಿಗೆ ಅರ್ಪಿಸಿ-ಗುರುದೇವಾ ತಾವು ಆಜ್ಞಾಪಿಸಿದಂತೆ ಪಕ್ಷಿಯನ್ನು ಕೊಲ್ಲಲು

ಸಾಕಷ್ಟು ಪ್ರಯತ್ನಿಸಿ ವಿಫಲನಾಗಿ ಬಂದಿರುವೆನು. ಕಾರಣ ಆತ್ಮಜ್ಞಾನೋಪದೇಶವನ್ನು ಮಾಡುವದು, ಬಿಡುವದು ತಮ್ಮನ್ನೇ ಅವಲಂಬಿಸಿದೆ–ಎಂದು ನುಡಿದು ಪಕ್ಷಿಯನ್ನು ಗುರುಗಳಿಗೆ ಸಮರ್ಪಿಸಿ ನಿಂತುಕೊಂಡನು. ಈತನ ಬುದ್ಧಿ ವೈಭವವನ್ನರಿತ ಗುರುಗಳು ಕ್ಷಣಕಾಲ ಮೌನವಾಗಿ ಈತನೋರ್ವನೇ ಜ್ಞಾನೋಪದೇಶಕ್ಕೆ ಅಧಿಕಾರಿ ಎಂಬುದನ್ನು ಮನದಲ್ಲಿಯೇ ನಿಶ್ಚಯಿಸಿ ವಿಚಾರಿಸುತ್ತಾರೆ.

ಗುರು : ನೀನು ನಾವು ಹೇಳಿದ ರೀತಿಯಲ್ಲಿ ಈ ಪಕ್ಷಿಯನ್ನು ಅದೇಕೆ ಕೊಲ್ಲಲಿಲ್ಲ ?

ಶಿಷ್ಯ : ಯಾರೂ ಇಲ್ಲದ ಸ್ಥಳದಲ್ಲಿ ಯಾರೂ ನೋಡದಂತೆ ಮತ್ತು ಯಾರೂ ಅರಿಯದ ಹಾಗೆ ಅದು ಹೇಗೆ ಕೊಲ್ಲಬೇಕು ಗುರುವೇ ?

ಗುರು : ನೀನು ಕೊಲ್ಲಲು ಪ್ರಯತ್ನಿಸಿದ ಪ್ರಕಾರವನ್ನು ವಿವರಿಸು.

ಶಿಷ್ಯ : ಗುರುದೇವಾ ! ತಮ್ಮ ಆಜ್ಞೆಯಂತೆ ಇದನ್ನು ತೆಗೆದುಕೊಂಡು ಹೊರಟ ನಾನು ಹಗಲಿನಲ್ಲಿ ಕೊಂದರೆ ಎಲ್ಲಿಯಾದರೂ ಯಾರಾದರೂ ನೋಡಬಹುದೆಂದು ವಿಚಾರಿಸಿ ರಾತ್ರಿಯಾಗುವವರೆಗೆ ತಡೆದನು. ರಾತ್ರಿಯಾದೊಡನೆ ಒಂದು ರೂಮಿ ನೊಳಕ್ಕೆ ಪ್ರವೇಶಿಸಿ ಕಿಡಿಕಿ–ಬಾಗಿಲುಗಳನ್ನು ಮುಚ್ಚಿ ಇನ್ನೇನು ಕೊಲ್ಲಬೇಕೆನ್ನುವದ ರೊಳಗೆ ಅಲ್ಲಿ ನೋಡುವವರು ಇನ್ನಾರೂ ಇರದಿದ್ದರೂ ಪ್ರಜ್ವಲಿಸುವ ಪ್ರದೀಪದ ಪ್ರಭೆ ಯೊಳಗೆ ನನ್ನ ಕಣ್ಣುಗಳೇ ಆ ಪಕ್ಷಿಯನ್ನು ನೋಡುವದನ್ನು ಕಂಡು, ನನ್ನ ಕಣ್ಣಿಗೂ ಕಾಣಬಾರದೆಂದು ದೀಪವನ್ನು ಆರಿಸಿದೆನು.

ಕತ್ತಲೆಯೊಳಗೆ ನನ್ನ ಕಣ್ಣುಗಳು ಏನನ್ನು ನೋಡದಿದ್ದರೂ ಆ ಪಕ್ಷಿಯ ಕಣ್ಣುಗಳು ಕತ್ತಲಲ್ಲಿಯೂ ದೀಪದಂತೆ ಹೊಳೆಯುವುದನ್ನು ಕಂಡೆನು. ಮನುಷ್ಯನಿಗೆ ಪದಾರ್ಥ ಗಳನ್ನು ನೋಡಲು ಪ್ರಕಾಶದ ಅವಶ್ಯಕತೆ ಇರುತ್ತದೆ. ಆದರೆ ಪರಮಾತ್ಮನು ಕತ್ತಲಲ್ಲಿ ಪ್ರಕಾಶದ ಅಪೇಕ್ಷೆ ಇಲ್ಲದೇ ನೋಡುವ ಶಕ್ತಿಯನ್ನು ಪಶು ಪಕ್ಷಿಗಳಿಗೆ ಕೊಟ್ಟಿರುವನೆನ್ನು ವದರ ಅರಿವಾಗಿ ಅದರ ಕಣ್ಣಿಗೂ ಕಾಣಬಾರದೆಂದು ಒಂದು ವಸ್ತ್ರದಿಂದ ಪಕ್ಷಿಯ ಕಣ್ಣು ಗಳನ್ನು ಕಟ್ಟಿದೆನು. ಆಗ ಕತ್ತಲಲ್ಲಿ ಪಕ್ಷಿಯನ್ನು ನೋಡಲಾರೆ, ಪಕ್ಷಿಯು ನನ್ನನ್ನು ನೋಡ ಲಾರದು. ನಮ್ಮಿಬ್ಬರನ್ನು ನೋಡುವವರಾರೂ ಇಲ್ಲದ ಕಾರಣ ಇನ್ನೇನು ಪಕ್ಷಿಯ ಕತ್ತನ್ನು ಹಿಚುಕಬೇಕೆನ್ನುವದರೊಳಗೆ, ನಾನು ಇದನ್ನು ಕೊಲ್ಲುತ್ತಿದ್ದೇನೆ ಎಂಬ ಅರಿವು ಅಂತರಂಗ ದಲ್ಲಿ ಮೂಡಿತು. ಇಲ್ಲಿ ಅನ್ಯರಾರೂ ಅರಿಯುವವರಿಲ್ಲದಿದ್ದರೂ ನನ್ನ ಮನಸ್ಸಾದರೂ ಅರಿಯುತ್ತಿದೆಯಲ್ಲಾ ಎಂಬುದಾಗಿ ಯೋಚಿಸಿ, ನನ್ನ ಮನವನ್ನೂ ಅರಿಯದ ಹಾಗೆ ಕೊಲ್ಲಲು ಪ್ರಯತ್ನಪಟ್ಟು ವಿಫಲನಾದೆ. ಅಂತೆಯೇ ''ಮನವರಿಯದ ಕಳ್ಳತನ ವಿಲ್ಲವಲ್ಲಾ'' ಎಂದಿಲ್ಲವೇ ಜ್ಞಾನಿಗಳು ? ಕಣ್ಣಿಗೆ ಪಟ್ಟಿಯನ್ನು ಕಟ್ಟಿ ಕಾಣದಂತೆ ಮಾಡ ಬಹುದು. ಆದರೆ ಮನಸ್ಸಿಗೆ ಪಟ್ಟಿಯನ್ನು ಕಟ್ಟುವುದು ಅಸಾಧ್ಯ ಗುರುಗಳೇ. ಆದ್ದರಿಂದ ಬೆಳಗಾಗುವವರೆಗೆ ಪ್ರಯತ್ನಿಸಿ ನಿಷ್ಫಲವಾಗಿ ಬಂದಿರುವೆನೆಂಬುದಾಗಿ ಶಿಷ್ಯನು ನಿವೇದಿಸಿ ಕೊಂಡನು.

ಶಿಷ್ಯನ ಈ ಅಂತರ್ಮುಖ ಸ್ಥಿತಿಯನ್ನು ಅರಿತು ಗುರುಗಳು ಸಂತುಷ್ಟಚಿತ್ತರಾಗಿ, ಶರೀರ–ಇಂದ್ರಿಯಗಳನ್ನು ದಾಟಿ ಮನಸ್ಸಿನ ಪರ್ಯಂತವಾಗಿ ಅಂತರ್ಮುಖ ಪ್ರಯಾಣ ವನ್ನು ಮಾಡಿದ ಶಿಷ್ಯನಿಗೆ ಬುದ್ಧಿ ತತ್ತ್ವ ದಾಚೆಗಿರುವ ಆತ್ಮನ ಅರಿವನ್ನು ಮಾಡಿಕೊಟ್ಟು ಕೃತಾರ್ಥನನ್ನಾಗಿ ಮಾಡಿದರು. ಆದ್ದರಿಂದ ಆತ್ಮದ ಅರಿವನ್ನು ಮಾಡಿಕೊಳ್ಳುವವನಿಗೆ ಧೀರವಾದ ಮನೋವೃತ್ತಿಯು ಬೇಕಾಗುವುದು.

ಯಾವುದೇ ಕ್ರಿಯೆಯನ್ನು ಮಾಡಲು ಜ್ಞಾನವು ಪರಮಾಶ್ಯಕವಾದದ್ದು. ವೀರಶೈವ ಸಿದ್ಧಾಂತದಲ್ಲಿ ಗುರುಕರುಣೆಯಿಂದ ಪ್ರಾಪ್ತವಾಗುವ ಇಷ್ಟಲಿಂಗವು ತನ್ನ ಅರಿವು ರೂಪ ವಾದ ಆತ್ಮನ ಕುರುಹಾದ್ದರಿಂದ, ಯಾವನಿಗೆ ಆತನ ಅರಿವಾಗುವುದೋ ಅವನೇ ಆ ಕುರುಹನ್ನು ತನ್ನಾತ್ಮದ ಪ್ರತೀಕವನ್ನಾಗಿ ಬಹು ಪ್ರೇಮದಿಂದ ಪೂಜಿಸುವನು; ಆದ್ದರಿಂದ ಶ್ರೀ ಭಗವತ್ಪಾದರು ಲಿಂಗಧಾರಣಸ್ಥಲವನ್ನು ಪ್ರತಿಪಾದಿಸುವದಕ್ಕಿಂತ ಮೊದಲು ''ಪಿಂಡಜ್ಞಾನಸ್ಥಲ''ವನ್ನು ಉಪದೇಶಿಸಿದ್ದಾರೆ.

ಈ ಪಿಂಡಜ್ಞಾನಸ್ಥಲದ ಅರಿವಿಲ್ಲದ ವೀರಶೈವರನೇಕರು ಗುರುಕರುಣಿಸಿದ ಇಷ್ಟ ಲಿಂಗವನ್ನು ತನ್ನಾತ್ಮದ ಪ್ರತೀಕವೆಂಬುದಾಗಿ ತಿಳಿಯದೇ, ಅದೊಂದು ಕಲ್ಲೆಂದು ತಿಳಿದು, ಅದರಲ್ಲಿ ಪ್ರೇಮವಿಲ್ಲದವರಾಗಿ ಜಗುಲಿಯ ಮೇಲೋ, ಮನೆಯ ಗೂಟಗಳಿಗೋ ನೇತುಹಾಕಿ ಆತ್ಮವಿಲ್ಲದ ಪ್ರೇತದಂತೆ ತಿರುಗಾಡುತ್ತಾರೆ. ಕಾರಣ ಇಷ್ಟಲಿಂಗ ಪೂಜಕನಾದ ಪ್ರತಿಯೊಬ್ಬ ವೀರಶೈವನೂ ಇಷ್ಟಲಿಂಗವನ್ನು ತನ್ನಾತ್ಮದ ಕುರುಹನ್ನಾಗಿ ಅರಿತು ಪೂಜಿಸ ಬೇಕೆ ವಿನಾ ಅರಿವಿಲ್ಲದೇ ಎಂದೂ ಪೂಜಿಸಬಾರದು. ಅರಿವಿಲ್ಲದ ಭಕ್ತನ ಪ್ರೇಮ ಅನಂತ ಅನರ್ಥವನ್ನುಂಟುಮಾಡುವುದು. ಪಂಚತಂತ್ರದಲ್ಲಿ ಬಹು ಸುಂದರ ಹಾಗೂ ಮಾರ್ಮಿಕ ದೃಷ್ಟಾಂತ ಉಂಟು.

ರಾಜನೋರ್ವನು ತನ್ನ ವಿನೋದಕ್ಕಾಗಿ ಮಂಗವನ್ನು ಸಲಹಿದ್ದನು. ರಾಜನ ನೆಚ್ಚಿನ ಆ ಮಂಗಕ್ಕೆ ಅರಮನೆಯಲ್ಲೆಲ್ಲಿಯೂ ಪ್ರತಿಬಂಧಕವೇ ಇರಲಿಲ್ಲ. ರಾಜನು ಊಟ ಮಾಡುವಾಗ ಉಣ್ಣುವುದು, ಮಲಗುವಾಗ ಮಲಗುವುದು, ವಿಹರಿಸುವಾಗ ವಿಹರಿಸು ವುದು ಮಂಗನ ದೈನಂದಿನ ಕೃತ್ಯವಾಗಿತ್ತು. ರಾಜನು ನಿದ್ರಿಸುವಾಗ ಅಂಗರಕ್ಷಕನಂತೆ ತಾನು ಎಚ್ಚರಾಗಿದ್ದು ರಾಜನ ದೇಹದ ಸಂರಕ್ಷಣೆ ಮಾಡುತ್ತಿತ್ತು. ಹೀಗೆ ಅನೇಕ ದಿನಗಳು ಗತಿಸಿದಂತೆ ರಾಜ ಮತ್ತು ಮಂಗನಲ್ಲಿಯ ಪ್ರೇಮ ಪರಸ್ಪರವಾಗಿ ಬೆಳೆಯತೊಡಗಿತು.

ಒಂದು ದಿವಸ ಪಕ್ವಾನ್ನ ಭೋಜನ ಮಾಡಿದ ರಾಜನು ತನ್ನ ಅಂತಃಪುರದಲ್ಲಿ ಮಧ್ಯಾಹ್ನದ ವಿಶ್ರಾಂತಿಯನ್ನು ಪಡೆಯುತ್ತಿದ್ದನು. ಪ್ರತಿನಿತ್ಯದಂತೆ ಮಂಗವಾದರೂ ಅದು ರಾಜನ ಅಂಗರಕ್ಷಕನಾಗಿ ಹಾಸಿಗೆಯ ಮಗ್ಗುಲಲ್ಲಿಯೇ ಕುಳಿತಿತ್ತು. ಆ ಸಮಯದಲ್ಲಿ ಎಲ್ಲಿಂದಲೋ ಒಂದು ನೊಣ ಹಾರಿಬಂದು ರಾಜನ ಬಾಯಿಯ ಮೇಲೆ ಕುಳಿತು ಕೊಂಡಿತು. ರಾಜನ ನಿದ್ರೆಯು ಭಂಗವಾಗಬಾರದೆಂದು ಮಂಗವು ತನ್ನ ಕೈಯಿಂದ ನೊಣವನ್ನು ಹಾರಿಸಿತು. ಹಾರಿ ಹೋದ ನೊಣವು ಪುನಃ ರಾಜನ ಬಾಯಿಯ ಮೇಲೆ ಬಂದು ಕುಳಿತುಕೊಂಡಿತು. ಹೀಗೆ ಅನೇಕ ವೇಳೆ ನೊಣವನ್ನು ಹಾರಿಸಿ ಬೇಸತ್ತು ಮಂಗಕ್ಕೆ ಎಲ್ಲಿಲ್ಲದ ಕೋಪ ಬಂದಿತು.

ಕ್ರೋಧವು ಮನುಷ್ಯನ ಬುದ್ಧಿಯಲ್ಲಿಯ ವಿವೇಕಶಕ್ತಿಯನ್ನು ಹಾಳು ಮಾಡುತ್ತದೆ. ಕ್ರೋಧಕ್ಕೆ ಶಾಸ್ತ್ರಕಾರರು ಚಾಂಡಾಲನೆಂದು ಕರೆದಿರುವರು. ಶರೀರದಲ್ಲಿ ಕ್ರೋಧದ ಆವೇಶವಾದಾಗ ಹಿಂಸಾತ್ಮಕ ಮನೋವೃತ್ತಿಯು ಜಾಗ್ರತವಾಗುತ್ತದೆ. ಕ್ರೋಧಾವಿಷ್ಟ ನಾದ ಮನುಷ್ಯನ ಸಂತುಲನೆ ಉಳಿಯದಿರುವಾಗ ಮಂಗನ ಪಾಡೇನು ? ಕ್ರುದ್ಧವಾದ ಮಂಗವು ನೊಣದ ಜೀವವನ್ನೇ ಸಮಾಪ್ತಿ ಮಾಡಬೇಕೆಂದು ಅತ್ತಲಿತ್ತ ನೋಡುತ್ತಿರು ವಾಗ ರಾಜನ ಮಗ್ಗುಲಲ್ಲಿಯೇ ಇರುವ ನೀಳವಾದ ಖಡ್ಗವನ್ನು ಕಂಡಿತು. ಒರೆಯಿಂದ ಥಳ–ಥಳಿಸುವ ಖಡ್ಗವನ್ನು ಹಿರಿದು, ರಾಜನ ಬಾಯಿಯ ಮೇಲೆ ಕುಳಿತ ನೊಣವನ್ನು ಮೃತ್ಯುವಿಗೆ ತುತ್ತು ಮಾಡುವ ಉದ್ದೇಶದಿಂದ ಬಹು ಜೋರಾಗಿ ಖಡ್ಗವನ್ನಪ್ಪಳಿಸಿತು. ತತ್‌ಕ್ಷಣದಲ್ಲಿ ನೊಣವು ಹಾರಿಹೋಗಿ ಶಸ್ತ್ರದ ಪೆಟ್ಟು, ರಾಜನ ಬಾಯಿಗೆ ಬಿದ್ದು ರಾಜನ ಬಾಯಿಯು ಕತ್ತರಿಸಿ ಹೋಯಿತಲ್ಲದೇ ಕ್ಷಣಾರ್ಧದಲ್ಲಿ ರಾಜನು ಮೃತ್ಯುವನ್ನಪ್ಪಿದನು.

ಮಂಗನಲ್ಲಿ ರಾಜನ ಬಗ್ಗೆ ಅನನ್ಯ ಪ್ರೇಮ ಭಾವನೆ ಇದ್ದರೂ ಅದರಲ್ಲಿ ವಿವೇಕ ವಿಲ್ಲದ ಕಾರಣ ರಾಜನನ್ನು ರಕ್ಷಿಸಹೋಗಿ ಅವನನ್ನೇ ಕೊಂದುಹಾಕಿ ಮಹದನರ್ಥ ವನ್ನುಂಟು ಮಾಡಿದಂತೆ, ತನ್ನೊಳಗಿನ ಆತ್ಮದ ಅರಿವಿಲ್ಲದವನ ಕೈಯಲ್ಲಿ ಇಷ್ಟಲಿಂಗವೆಂಬ ಕುರುಹನ್ನು ಕೊಟ್ಟಾಗ, ಅದು ಕಲ್ಲೆಂದು ಬಿಸಾಡುವನಲ್ಲದೇ, ನನ್ನಾತ್ಮದ ಪ್ರತೀಕವೆಂದು ಅನನ್ಯಪ್ರೇಮ ಲಕ್ಷಣಾತ್ಮಕ ಭಕ್ತಿಯಿಂದ ಪೂಜಿಸಲಾರ. ಅದಕ್ಕೋಸ್ಕರವಾಗಿ, ಶ್ರೀ ಭಗವತ್ಪಾದರು ಉಪದೇಶಿಸಿದ ಈ ಪಿಂಡಜ್ಞಾನವನ್ನು ಸರ್ವರೂ ಸಂಪಾದಿಸಲೇ ಬೇಕು.

ಇಂದಿನ ವಿಜ್ಞಾನಯುಗದಲ್ಲಿ ಚಂದ್ರಲೋಕ, ಮಂಗಳಲೋಕ, ಮತ್ತಿನ್ನಾವ ಲೋಕಗಳಿಗೋ ಹೋಗಿ ಭೌತಿಕಪದಾರ್ಥಗಳನ್ನು ಹುಡುಕುತ್ತಿರುವ ವಿಜ್ಞಾನಿಗಳು ತಮ್ಮನ್ನು ತಾವರಿಯದವರಾಗಿ ಮತ್ತಷ್ಟು ದುಃಖವನ್ನನುಭವಿಸುವುದನ್ನೇ ನೋಡುತ್ತೇ ವಲ್ಲದೇ ಸುಖಿಗಳಾದವರನ್ನು ಕಾಣೆವು. ''ಏನಾದರೂ ಸಾಧಿಸಬಹುದು; ಮತ್ತೇನಾದ ರೆಯೂ ಸಾಧಿಸಬಹುದಯ್ಯಾ ! ತಾನಾರೆಂಬುದ ಸಾಧಿಸಬಹುದೇ ?'' ಎಂದು ನುಡಿದ ಅಣ್ಣನವರಾದರೂ, ತನಗನ್ಯವಾದದ್ದನ್ನು ಎಷ್ಟೇ ದೂರವಿದ್ದರೂ ಹುಡುಕಬಹುದು, ಆದರೆ ತನ್ನ ತಾನರಿಯುವುದು ಸುಲಭವಲ್ಲವೆನ್ನುವುದನ್ನು ಎತ್ತಿ ತೋರಿಸಿದ್ದಾರೆ. ಆದುದ ರಿಂದಲೇ–

ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ.
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ.
ಶರೀರದೊಳಗಾತ್ಮನನಾರು ಕಾಣದಂತಿರಿಸಿದೆ.
ನೀನು ಬೆರಸಿದ ಭೇದಕ್ಕೆ ಬೆರಗಾದೆನಯ್ಯಾ ರಾಮನಾಥಾ !

ಎನ್ನುವ ವಚನದಲ್ಲಿ ದೇಹದೊಳಡಗಿದ ಆತ್ಮವನ್ನು ಅರಿತ ಶ್ರೀ ದಾಸಿಮಾರ್ಯರು ಆಶ್ಚರ್ಯವನ್ನು ವ್ಯಕ್ತಗೊಳಿಸಿದ್ದಾರೆ. ಅದರಂತೆಯೇ–

ಎನ್ನ ತನುವಿನ ಮರೆಯಲಿರ್ದ
ಚಿನುಮಯನ ಅರಸುವ ಬನ್ನಿರೇ.
ಎನ್ನ ಮನದ ಮರೆಯಲಿರ್ದ
ಮಹಾ ಘನವಸ್ತುವ ಹುಡುಕುವ ಬನ್ನಿರೇ.
ಎನ್ನ ಪ್ರಾಣದ ಮರೆಯಲ್ಲಿರ್ದ
ಪರಬ್ರಹ್ಮವೆಂಬ ಅಖಂಡೇಶ್ವರನ ನೋಡುವ ಬನ್ನಿರೇ.

ಇಂತೆಂಬುದಾಗಿ ಶ್ರೀ ಷಣ್ಮುಖಸ್ವಾಮಿಗಳು, ಶರೀರಾದಿಗಳಲ್ಲಿ ಆತ್ಮತ್ವ ಬುದ್ಧಿಯಿಂದ ಭ್ರಮಿಸುವ ಜೀವಿಗಳನ್ನು ಆತ್ಮಜಿಜ್ಞಾಸೆಗಾಗಿ ಆಹ್ವಾನಿಸಿದ್ದಾರೆ.

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥

(ಗೀತಾ ೧೩-೧)

ಹೀಗೆ ಗೀತೆಯ ಹದಿಮೂರನೇ ಅಧ್ಯಾಯದಲ್ಲಿ ಶ್ರೀ ಭಗವಂತನು ಶರೀರಕ್ಕೆ ಕ್ಷೇತ್ರವೆಂತಲೂ, ಅದನ್ನರಿಯುವ ಆತ್ಮನಿಗೆ ಕ್ಷೇತ್ರಜ್ಞನೆಂತಲೂ ಕರೆದು, ಬಹು ವಿಸ್ತಾರವಾಗಿ ಕ್ಷೇತ್ರ ಹಾಗೂ ಕ್ಷೇತ್ರಜ್ಞನ ಸ್ವರೂಪ ವಿವೇಚನೆಯನ್ನು ಮಾಡಿ, ಆತ್ಮಾನಾತ್ಮ ವಿವೇಕವನ್ನು ಬೋಧಿಸಿದ್ದಾನೆ. ಆತ್ಮಜ್ಞಾನಿಯಾದ ಅಲ್ಲಮಪ್ರಭುದೇವರಾದರೂ–

ಅಪರಿಮಿತದ ಕತ್ತಲೆಯೊಳಗೆ ವಿಪರೀತದ ಬೆಳಕನಿಕ್ಕಿದವರಾರೇ ?
ಬೆಳಗೂ ಅದೆ, ಕತ್ತಲೆಯೂ ಅದೆ ! ಅದೇನು ಚೋದ್ಯವೋ ?
ಒಂದಕ್ಕೊಂದಂಜದು. ಆನೆಯೂ, ಸಿಂಹವೂ ಒಂದಾಗಿ ಉಂಬುದ
ಕಂಡು ಬೆರಗಾದೆನು ಕಾಣಾ ಗುಹೇಶ್ವರಾ !

ಇಂತೆಂದು ಬೆಡಗಿನ ವಚನದಲ್ಲಿ ಜಡಗಳಾದ ಶರೀರಾದಿಗಳನ್ನು ಕತ್ತಲೆಗೆ ಹೋಲಿಸಿ, ಆತ್ಮನನ್ನು ಪ್ರಕಾಶಕ್ಕೆ ಉಪಮಿಸಿ, ಪರಸ್ಪರ ವಿರುದ್ಧ ಸ್ವಭಾವದ ಬೆಳಕು ಕತ್ತಲೆಗಳು ಒಂದೆಡೆ ಕೂಡಿರದಿದ್ದರೂ ಈ ಆತ್ಮಾನಾತ್ಮಗಳು ಕೂಡಿರುವುದನ್ನು ಕಂಡು ತಮ್ಮ ಚಕಿತತೆಯನ್ನು ವ್ಯಕ್ತಗೊಳಿಸಿದ್ದಾರೆ.

ಈ ರೀತಿಯಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರನ್ನೇ ಮೊದಲುಗೊಂಡು ಸಕಲ ಶರಣರ ಅನುಭವದ ನುಡಿಗಳನ್ನೂ ಪರ್ಯಾಲೋಚಿಸಿದಾಗ, ನನ್ನದೆನ್ನುವದೆಲ್ಲವೂ ಅನಾತ್ಮ ಪದಾರ್ಥವು; ನಾನೆನ್ನುವುದು ಮಾತ್ರ ಆತ್ಮವು. ಇದೇ ಒಂದು ಯುಕ್ತಿಯಿಂದ ನನ್ನದೆನ್ನುವದನ್ನು ಬೇರ್ಪಡಿಸುತ್ತಾ ಬಂದಾಗ, ಕೊನೆಗೆ ಅಹಂಕಾರವು ಅಡ್ಡ ಬರುವುದು. ಇದು ನನ್ನದೆನ್ನಿಸಿಕೊಳ್ಳದೇ 'ನಾನು' ಎನಿಸಿಕೊಳ್ಳುವದಾದ್ದರಿಂದ ಆತ್ಮವೂ ಅಹಂ ಪ್ರತ್ಯಯಕ್ಕೆ ವೇದ್ಯವು. ಅದರಂತೆ ಅಹಂಕಾರವೂ ಅಹಂ ಪ್ರತ್ಯಯಕ್ಕೆ ವೇದ್ಯವಾದ ಕಾರಣ ಇವೆರಡರ ಸಾರ್ಥಕ್ಯವನ್ನರಿಯುವುದಕ್ಕೆ ''ಹೃದಯಗ್ರಂಥಿ''ಯ ಭೇದವೆನ್ನುವರು. ಶ್ರೀ ನಿಜಗುಣ ಶಿವಯೋಗಿಗಳು ಕೈವಲ್ಯಪದ್ಧತಿಯ ಜ್ಞಾನಪ್ರತಿಪಾದನಸ್ಥಲದಲ್ಲಿ–

ಜ್ಞಾನವೈರಾಗ್ಯೋಪರತಿಗಳೆಂಬವನೆ ಸಂ।
ಧಾನಿಸುತ್ತಿರೆ ಭೋಗಮೋಕ್ಷವಾಂಛಿತರು ॥ ಪ ॥

ಶ್ರವಣಾದಿಗಳು ಬೀಜಮಾತ್ಮಹಂಕೃತಿಗಳ।
ವಿವರಣವದು ರೂಪ ಮರಳಿ ಸಂಸ್ಕೃತಿಯ ॥
ನಿವಹ ಸಾಕ್ಷಿತ್ವವೇ ಕಾರ್ಯವಹುದೆಂದು ಬ।
ಲ್ಲವರು ಭಾವಿಸುವುದರಿವಿಗೆ ನಿಜವೆಂದು ॥ ೧ ॥

ಈ ಪದ್ಯದಲ್ಲಿ ಜ್ಞಾನ, ವೈರಾಗ್ಯ ಮತ್ತು ಉಪರತಿಗಳ ಸ್ವರೂಪವನ್ನು ವಿವೇಚಿಸುವ ಪ್ರಸಂಗದಲ್ಲಿ ಶ್ರವಣ, ಮನನ ಹಾಗೂ ನಿಧಿದ್ಯಾಸಗಳು ಜ್ಞಾನೋದಯಕ್ಕೆ ಬೀಜ ವೆಂತಲೂ, ಪ್ರತ್ಯಗಾತ್ಮ ಮತ್ತು ಅಹಂಕಾರ ಇವೆರಡನ್ನು ವಿವೇಕದಿಂದ ಪೃಥಕ್ಕರಿಸುವುದು ಮೊಳಕೆಯೆಂತಲೂ, ಆ ಬಳಿಕ ದೇಹಾದಿ ಅಹಂಕಾರ ಪರ್ಯಂತಗಳಾದ ಸಕಲ ಅನಾತ್ಮ ಪದಾರ್ಥಕ್ಕೆ ತಾನು ಸಾಕ್ಷಿರೂಪದಿಂದಿರುವುದು ಜ್ಞಾನದ ಫಲವೆಂತಲೂ ಉಪದೇಶಿಸಿದ್ದಾರೆ.

ಆತ್ಮ–ಅಹಂಕಾರಗಳು ಅತ್ಯಂತ ನಿಕಟವರ್ತಿಗಳಾದ್ದರಿಂದ ಅಹಂಕಾರದ ಕರ್ತೃತ್ವ, ಭೋಕ್ತೃತ್ವ ಧರ್ಮಗಳು ಆತ್ಮನಲ್ಲಿ, ಆತ್ಮನ ಅರಿಯುವ ಚೇತನ ಧರ್ಮವು ಜಡವಾದ ಅಹಂಕಾರದಲ್ಲಿ–ಹೀಗೆ ಪರಸ್ಪರವಾಗಿ ಕಾಯ್ದ ಕಬ್ಬಿಣ ಗುಂಡಿನಂತೆ ತೋರು ತ್ತದೆ. ಸುಡುವ ಗುಣ ಅಗ್ನಿಯದು; ಗುಂಡು, ಚೌಕು ಆಕಾರವು ಕಬ್ಬಿಣದ್ದು ಹೇಗೋ ಹಾಗೆ, ಕರ್ತೃಕತ್ವಗಳು ಅಹಂಕಾರದ್ದು; ಚೇತನತ್ವವು ಆತ್ಮನದೆಂದು ಬೇರ್ಪಡಿಸಿ ತಿಳಿಯುವುದೇ ಆತ್ಮ–ಅಹಂಕಾರಗಳ ವಿವರಣವೆನಿಸುವುದು.

ಇದೂ ಅಲ್ಲದೆ ಜಾಗ್ರತ, ಸ್ವಪ್ನಗಳಲ್ಲಿ ''ನಾನು'' ''ನಾನು'' ಎಂದು ಅಭಿಮಾನಿ ಸುವ ಅಹಂಕಾರವು ಸುಷುಪ್ತಿಯಲ್ಲಿ ಇರುವುದಿಲ್ಲ; ಆದರೆ ಅಲ್ಲಿ ಆತ್ಮ ಮಾತ್ರವಿರುವುದ ರಿಂದ, ಅದೇ ತನ್ನ ನಿಜರೂಪವೆಂದು ವಿವೇಕ ಮೂಲಕವಾಗಿ ತಿಳಿದು, ಶರೀರವೇ ಮೊದಲುಗೊಂಡು ಅಹಂಕಾರ ಪರ್ಯಂತಗಳಾದ ಸಕಲ ಪದಾರ್ಥಗಳೂ ಅನಾತ್ಮ ಗಳೆಂದು ನಿಶ್ಚಯಿಸಿ, ತಾನು ಅವುಗಳ ಎಲ್ಲ ವ್ಯವಹಾರವನ್ನರಿವ ''ಸಾಕ್ಷಿ'' ಸ್ವರೂಪ ನೆಂದು ತಿಳಿಯುವುದೇ ''ಪಿಂಡಜ್ಞಾನ''ವು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೩ ಜುಲೈ, ೧೯೬೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)



ಆಶೀರ್ವಚನ - ೩

ನಶ್ವರಾಣಿ ಶರೀರಾಣಿ ನಾನಾರೂಪಾಣಿ ಕರ್ಮಣಾ ।
ಆಶ್ರಿತೋ ನಿತ್ಯ ಏವಾಸಾವಿತಿ ಜಂತೋರ್ವಿವೇಕಿತಾ ॥ ೫ ॥
ಶರೀರಾತ್ಪೃಥಗಾತ್ಮಾನಮಾತ್ಮನಃ ಪೃಥಗೀಶ್ವರಮ್ ।
ಪ್ರೇರಕಂ ಯೋ ವಿಜಾನಾತಿ ಪಿಂಡನಾತಿ ಪಿಂಡಜ್ಞಾನೀ ಸ ಕಥ್ಯತೇ ॥

(ಸಿ. ಶಿ. ೫.೫೭-೫೮)

ಇದು ಆತ್ಮ ಇದು ಅನಾತ್ಮವೆಂಬುದಾಗಿ ವಿಚಾರಿಸಿ, ಅವೆರಡನ್ನೂ ಪೃಥಕ್ಕರಿಸಿದ ಮಾತ್ರಕ್ಕೆ ಪೂರ್ಣ ವಿವೇಕವೆನಿಸಲಾರದು; ಅಂತೆಯೇ ಶ್ರೀ ಭಗವತ್ಪಾದರು ಅನಾತ್ಮಗಳಾದ ಶರೀರಾದಿಗಳು ನಶ್ವರಗಳೆಂತಲೂ, ಅವುಗಳಿಂದ ಭಿನ್ನವಾದ ಆತ್ಮತತ್ತ್ವವು ನಿತ್ಯವೆಂತಲೂ ಸದ್ಯಃ ನಿತ್ಯಾನಿತ್ಯ ವಿವೇಕವನ್ನು ಬೋಧಿಸುತ್ತಲಿದ್ದಾರೆ.

''ಯದ್ದೃಷ್ಟಂ ತನ್ನಷ್ಟಂ'' ಕಾಣುವದೆಲ್ಲವೂ ನಾಶವಾಗುವುದೆಂಬುದೊಂದು ನಿಯಮ. ಉತ್ಪತ್ತಿಯ ಪೂರ್ವದಲ್ಲಿ ತೋರದಿರುವ, ನಾಶದ ನಂತರದಲ್ಲಿ ಕಾಣದಾಗುವ, ಇವೆರಡರ ಮಧ್ಯದಲ್ಲಿ ಕೆಲಕಾಲ ತೋರುತ್ತಿರುವ ಶರೀರವು ಅನಿತ್ಯವಾದದ್ದು. ಮೂರೂ ಕಾಲದಲ್ಲಿ ಸದಾ ಬೆಳಗುತ್ತಿರುವ ಆತ್ಮವು ನಿತ್ಯವು; ಆದುದರಿಂದಲೇ ನೈಯಾಯಿಕರು ''ಪ್ರಾಗಭಾವ-ಪ್ರಧ್ವಂಸಾ ಭಾವಾಪ್ರತಿಯೋಗಿತ್ವಂ ನಿತ್ಯತ್ವಮ್'' ಉತ್ಪತ್ತಿ, ವಿನಾಶ ರಹಿತವಾದದ್ದು ನಿತ್ಯವೆಂತಲೂ, ತದ್ವಿಪರೀತವಾದದ್ದು ಅನಿತ್ಯವೆಂತಲೂ ನಿತ್ಯಾನಿತ್ಯಗಳ ಲಕ್ಷಣವನ್ನು ಹೇಳಿರುವರು.

ಈ ಲಕ್ಷಣದಿಂದ ವಿಚಾರಿಸಿದಾಗ ''ಜಾಯತೇ, ಅಸ್ತಿ ವಿವರ್ಧತೇ, ಪರಿಣಮತೇ, ಅಪಕ್ಷೀಯತೇ, ವಿನಶ್ಯತಿ''-ಹುಟ್ಟುವದು, ಇರುವದು, ಬೆಳೆಯುವದು, ಪರಿಣಾಮ ಹೊಂದುವುದು, ಕ್ಷಯಿಸುವುದು ಮತ್ತು ನಾಶ ಹೊಂದುವದು- ಹೀಗೆ ಷಡ್ಭಾವ ವಿಕಾರದಿಂದ ಕೂಡಿದ ನಮ್ಮ ಶರೀರಗಳು ಅದೆಂತು ಶಾಶ್ವತಗಳಾಗುವವು ? ಆದಕ್ಕೆಂತಲೇ ಶ್ರೀ ಭಗವತ್ಪಾದರು ''ನಶ್ವರಾಣಿ ಶರೀರಾಣಿ'' ಎಂಬುದಾಗಿ ಉಪದೇಶಿಸಿರುವರು. ಮೂಢರಾದ ಜೀವಿಗಳು ಶರೀರದಲ್ಲಾಗುವ ಈ ಪರಿಣಾಮಗಳನ್ನು ನೋಡಿಯೂ, ಅನುಭವಿಸಿಯೂ ಪುನಃ ಅವುಗಳಲ್ಲಿಯೇ ಆಸಕ್ತರಾಗುವರು; ಅಂತೆಯೇ ಜಗತ್ತಿನಲ್ಲಿ ಆಶ್ಚರ್ಯವಾದ ಸಂಗತಿ ಯಾವುದು ? ಎಂದು ಕೇಳಿದ ಯಕ್ಷನ ಪ್ರಶ್ನೆಗೆ ಉತ್ತರವಾಗಿ ಶ್ರೀ ಧರ್ಮರಾಜನು-

ಅಹನ್ಯಹನಿ ಭೂತಾನಿ ಪ್ರವಿಶಂತಿ ಯಮಾಲಯಂ ।
ಶೇಷಾಶ್ಚ ಸ್ಥಾತುಮಿಚ್ಛಂತಿ ಕಿಮಾಶ್ಚರ್ಯಮತಃ ಪರಮ್ ॥

ಪ್ರತಿದಿವಸ ಅನೇಕ ಜೀವಿಗಳು ಈ ಶರೀರವನ್ನು ಬಿಟ್ಟು, ಯಮಸದನಕ್ಕೆ ಹೋಗುವದನ್ನು ನೋಡಿಯೂ, ತಾವು ಮಾತ್ರ ಸಾಯಲಾರೆವೆಂಬ ಬುದ್ಧಿಯಿಂದ ಉಳಿದವರು ಜೀವಿಸುತ್ತಿರುವಲ್ಲ; ಇದಕ್ಕಿಂತಲೂ ಆಶ್ಚರ್ಯವಾದ ಸಂಗತಿ ಮತ್ತಾವುದೂ ಇಲ್ಲದೆಂಬುದಾಗಿ ಹೇಳಿದ್ದಾನೆ.

ಸತ್ತವರ ಶರೀರವನ್ನು ಸುಡಲೋ, ಹುಗಿಯಲೋ ಶ್ಮಶಾನಕ್ಕೆ ಹೋದ ಜನರೆಲ್ಲ– ''ನೀರಮೇಲಣ ಗುರುಳಿ ನಿಜವಲ್ಲೋ ಹರಿಯೆ''; ''ಹೇಳದೆ ಕೇಳದೆ ಬರುವದು ಮರಣ, ಕಾಲನ ಪಾಶದ ಕಂಠಾಭರಣ'' ಮುಂತಾದ ಅನುಭವಿಗಳ ನುಡಿಗಳನ್ನು ಪರಸ್ಪರವಾಗಿ ಚರ್ಚಿಸಿ, ಕ್ಷಣಕಾಲ ಕ್ಷಣಿಕವಾದ ಶ್ಮಶಾನ ವೈರಾಗ್ಯ ಭರಿತರಾಗುವರು. ಅಂತ್ಯಕ್ರಿಯೆಯನ್ನು ಮುಗಿಸಿ ಮನೆಗೆ ಮರಳಿದೊಡನೆ, ಒಂದು ಹೆಣಕ್ಕೆ ಹತ್ತುನಾಯಿಗಳು ಜಗಳವಾಡುವಂತೆ, ಸತ್ತವರ ಸ್ಥಾವರ ಹಾಗೂ ಜಂಗಮ ಆಸ್ತಿಯನ್ನು ಹಂಚಿಕೊಳ್ಳಲು ಕಲಹ ಮಾಡುವ ಪಾಮರ ಜೀವಿಗಳನ್ನು ನೋಡಿದಾಗ ಜ್ಞಾನಿಗಳಿಗೆ ಆಶ್ಚರ್ಯ ವಾಗದಿದ್ದೀತೆ ? ಅಂಥದೊಂದು ಪ್ರಸಂಗವನ್ನು ಕಣ್ಣಾರೆ ಕಂಡ ಪ್ರಭುದೇವರು–

ಸಂಸಾರವೆಂಬ ಹೆಣ ಬಿದ್ದರೆ
ತಿನಬಂದ ನಾಯ ಜಗಳವ ನೋಡಿರೇ !
ನಾಯ ಜಗಳವ ನೋಡಿ ಹೆಣನೆದ್ದು ನಗುತ್ತಿದೆ.
ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರೇ !

ಇಂತೆಂಬ ತಮ್ಮ ಬೆಡಗಿನ ವಚನದಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾರೆ. ನಿತ್ಯಾನಿತ್ಯ ವಿವೇಕಸಂಪನ್ನರಾಗಿ, ನಿಜಾನುಭವವನ್ನು ಹೊಂದಿದ ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿಯ ಜೀವ ಸಂಭೋದನ ಸ್ಥಲದಲ್ಲಿ–

ಪಡೆದವರು, ಒಡನಾಡಿಗಳು, ಮಡದಿ–ತನುಜರು, ಬಂಧುಗಳೆಲ್ಲರು ತಮ್ಮಿದಿರೊಳು ಅಳಿಯುವುದನ್ನು ಕಂಡು ಹಾಗೂ ಬಲಿ, ವಾಲಿ, ಕರ್ಣ, ಕೌರವ, ರಾಮ, ರಾವಣ, ನಳ, ನಹುಷ, ರಘು, ಭೀಮ, ಬಲಭದ್ರ, ಸಗರ, ಕಲಿಪಾರ್ಥ, ಕೀಚಕ, ಶಿಶುಪಾಲ, ದಶರಥ, ಈ ಎಲ್ಲ ಅತಿರಥ ಮಹಾರಥರ ಹಾನಿಯ ಕಥೆಯನ್ನು ಕೇಳಿಯೂ, ಸೊಡರಿನ ಸುಡುವತನವನ್ನರಿಯದೇ ಮುದ್ದಿಡಲು ಹೋದ ಪತಂಗದಂತೆ, ನಿತ್ಯಾನಿತ್ಯ ವಿವೇಕ ರಹಿತರು ನಾಶಹೊಂದುವರೇ ವಿನಾ, ವಿವೇಕವುಳ್ಳ ವಿಬುಧರು ಅದೆಂದಿಗೂ ಅನರ್ಥವನ್ನೈದಲಾರರೆಂದು ಬಹು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ.

ಅಲ್ಲದೆ ''ಶೀರ್ಯತೇ ಇತಿ ಶರೀರಮ್'' ಎನ್ನುವ ''ಶರೀರ'' ಶಬ್ದದ ವ್ಯುತ್ಪತ್ತಿಯೇ ಹೇಳುವಂತೆ, ಸೀಳಿಹೋಗುವುದೇ ಶರೀರವೆಂದಾಗ, ಅದೆಂದೂ ನಿತ್ಯವಾಗದು. ಆದುದರಿಂದಲೇ ''ಅಂತವಂತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ'' (ಗೀತಾ, ೨–೧೮) ಎಂಬುದಾಗಿ ಭಗವಂತನು ಗೀತೆಯಲ್ಲಿ ದೇಹಗಳಿಗೆ ಅನಿತ್ಯತ್ವವನ್ನೇ ಪ್ರತಿಪಾದಿಸಿದ್ದಾನೆ. ''ದಿಹ– ಉಪಚಯೇ'' ಎನ್ನುವ ಧಾತುವಿನಿಂದ ದೇಹ ಶಬ್ದವು ಉತ್ಪನ್ನವಾಗಿದೆ. ಈ ಶಬ್ದದ ಪ್ರಕಾರ– ದೇಹವೆಂದರೆ ಅನೇಕ ಪದಾರ್ಥಗಳ ಮೊತ್ತ ಇಲ್ಲಿರುವ ಪದಾರ್ಥಗಳು ಬಹು ಬೆಲೆ ಬಾಳುವವೇನಲ್ಲ; ದೇಹದಲ್ಲಿಯ ಪದಾರ್ಥಗಳನ್ನು ಶರಣನೋರ್ವನು ಹೀಗೆ ಪರಿಗಣಿಸಿದ್ದಾನೆ–

''ಎಲುಬಿನ ಪಂಜರ, ನರಗಳ ಜಾಳಿಗೆ, ಅಮೇಧ್ಯದ ಹುತ್ತ, ಮೂತ್ರ ಬಾವಿ, ಶ್ಲೇಷ್ಮದ ಕೆಸರು, ಕೀವಿನ ಸೋನೆ, ನೆತ್ತರ ಮಡು, ನಾಡಿಗಳ ಸುತ್ತುವಳಿ, ನೆರವಿನ ನೆಣಜಂತ್ರ, ಮಾಂಸದ ಪುಟ್ಟಿಯ ತೆಪ್ಪ, ಕಿಸುಕುಳದ ಹೇಸಿಕೆ, ಅತಿಹೇಯದ ಮಲಿನ,

ಅಸ್ಥಿ, ರೋಮ, ತೊಗಲ ಪಾಕುಳ, ಕ್ರಿಮಿಯ ಸಂಕುಳ, ಉತ್ಪತ್ತಿ–ಸ್ಥಿತಿ–ಲಯದ ಬೀಜ, ರೇತರಜಸ್ಸಿನಿಂದ ಜನಿತ, ವ್ಯಾಧಿಯ ತವರುಮನೆ, ವಿಷಯದ ಭಯ, ದುಃಖದಾಗರ, ಮೋಹದ ಬಲೆ, ತೋರಿ ಕೆಡುವ ತನು ಇದು ನೀನೆಂದು ನಿನ್ನದೆಂದು, ಮಾಡಬಾರದ ಪಾಪವ ಮಾಡಿ ಮುಚ್ಚಿ ಹೂಸಿ, ಹೊದಿಸಿ ಈ ದೇಹಂಗೊಂಡು ಮರುಗವೆ. ಅಘೋರ ನರಕದಲ್ಲಿಕ್ಕುವಾಗ ಅಡ್ಡ ಬಪ್ಪುವರಾರೋ ? ಅಹಂ–ಮಮತೆಯ ಬಿಟ್ಟು, ಸೋಽಹಂ ಬ್ರಹ್ಮಾಸ್ಮಿ ಎಂದು ಕೇಡಿಲ್ಲದ ಪದವಿಯ ಮಾಡಿಕೊಳ್ಳಾ ಮರುಳೇ ! ಬೇಡ ಕೆಡುವೆ, ನಿನ್ನ ನೀ ತಿಳಿದು ನೋಡಾ ಚಿಮ್ಮಲಿಗೆಯ ಚೆನ್ನರಾಮಾ'' ಎಂದು. ವಿಷ್ಣು ಪುರಾಣದಲ್ಲಿ–

ಅಮೇಧ್ಯಪೂರ್ಣಂ ಕ್ರಿಮಿಜಂತುಸಂಕುಲಂ
ಸ್ವಭಾವದುರ್ಗಂಧಮಶೌಚಮಧ್ರುವಮ್ ।
ಕಲೇವರಂ ಮೂತ್ರ ಪುರೀಷಭಾಜನಂ
ರಮಂತಿ ಮೂರ್ಖಾ ವಿರಮಂತಿ ಪಂಡಿತಾಃ ॥

ಅಮೇಧ್ಯದಿಂದ ತುಂಬಿದ, ಹುಳುಗಳ ಸಮೂಹ ಉಳ್ಳ, ಸಹಜವಾಗಿ ನಾರುತ್ತಿರುವ, ಪವಿತ್ರವಲ್ಲದ, ಕೆಡುತ್ತಿರುವ, ಮಲ–ಮೂತ್ರಗಳಿಗೆ ಪಾತ್ರವೆನಿಸಿದ ಶರೀರದಲ್ಲಿ ಅಜ್ಞಾನಿಗಳು ಆನಂದಪಡುವರಲ್ಲದೇ, ಪಂಡಿತರು ಪಡರೆಂಬುದನ್ನು ತಿಳಿಸಿ, ಪಂಡಿತರ ವೈರಾಗ್ಯಕ್ಕೆ ಕಾರಣವಾದವು ಶರೀರದಲ್ಲಿಯ ಅರುಚಿ ಪದಾರ್ಥಗಳೇ–ಎಂದು ಬಹು ಸ್ವಾರಸ್ಯವಾಗಿ ವರ್ಣಿತವಾಗಿದೆ.

ಮನೆಯೊಳಗಿನ ಕಸ–ಕಡ್ಡಿಗಳನ್ನು ಕೂಡಿಸಿ ಗುಂಪೆಹಾಕಿದ ತಿಪ್ಪೆಯ ಮೇಲೆ ಆಕರ್ಷಣೀಯವಾದ ರೇಷ್ಮೆಯ ವಸ್ತ್ರವನ್ನು ಮುಚ್ಚಿದಾಗ ಇದರಲ್ಲಿ ಏನೋ ಅಮೂಲ್ಯವಾದ ವಸ್ತುವಿರಬಹುದೆಂದು ಜನರ ಚಿತ್ತವು ಆಕರ್ಷಿತವಾಗುವಂತೆ, ರಕ್ತ, ಮಾಂಸ, ಮಲ, ಮೂತ್ರಗಳಿರುವ ಈ ದೇಹವೆಂಬ ತಿಪ್ಪೆಯ ಮೇಲೆ ಸುಂದರವಾದ ಚರ್ಮವೆಂಬ ರೇಷ್ಮೆಯ ವಸ್ತ್ರವನ್ನು ಭಗವಂತನು ಹೊಚ್ಚಿರುವುದರಿಂದ ಮೂಢರಾದ ಪಾಮರ ಜೀವಿಗಳು ಶರೀರವನ್ನು ಮೋಹಿಸುತ್ತಿದ್ದಾರೆ.

ಯದಿ ನಾಮಾಸ್ಯ ಕಾಯಸ್ಯ ಯದಂತಸ್ತದ್ಬಹಿರ್ಭವೇತ್ ।
ದಂಡಮಾದಾಯ ಲೋಕೋಽಯಂ ಶುನಃಕಾಕಾಂಶ್ಚವಾರಯೇತ್ ॥

ಎನ್ನುವ ಸುಭಾಷಿತದಂತೆ ದೇಹದೊಳಗಿನ ರಕ್ತ ಮಾಂಸಾದಿಗಳೆಲ್ಲ ಹೊರಗಾಗಿ, ಹೊರಗಿನ ಚರ್ಮವು ಒಳಗಾಗಿದ್ದರೆ ಪ್ರತಿಯೊಬ್ಬ ಮನುಷ್ಯನೂ ಬೇರೆ ವ್ಯವಹಾರವನ್ನು ಬಿಟ್ಟು, ತನ್ನ ಶರೀರದ ರಕ್ತ–ಮಾಂಸಕ್ಕಾಗಿ ಬರುತ್ತಿರುವ ನಾಯಿ, ಕಾಗೆ ಮುಂತಾದವುಗಳನ್ನು ಕಾಯುವುದಕ್ಕಾಗಿ ಸದಾಕಾಲದಲ್ಲಿ ಬಡಿಗೆಯನ್ನು ಹಿಡಿದು ಕೂಡ್ರಬೇಕಾಗುತ್ತಿತ್ತು. ಇದರ ಮೇಲೆ ಚರ್ಮದ ಹೊದಿಕೆಯನ್ನು ಹೊಚ್ಚಿ, ಪರಮೋಪಕಾರವನ್ನು ಮಾಡಿದ ಪರಮಾತ್ಮನನ್ನೇ ಮರೆತು, ಆ ಚರ್ಮಕ್ಕಾಗಿ ಸಂಚರಿಸುವ ಜೀವಿಗಳನ್ನು ನೋಡಿದರೆ ಮೋಹದ ಪರಾಕಾಷ್ಠೆಯ ಅರಿವಾಗುವುದು

ನಾನು–ನನ್ನದೆಂಬ ಮೋಹದಿಂದ ಅದೆಷ್ಟು ಉತ್ತಮೋತ್ತಮ ಪದಾರ್ಥಗಳನ್ನು ಉಣಬಡಿಸಿ, ಪುಷ್ಟಿಗೊಳಿಸಿದರೂ ಈ ದೇಹವು ಕೊನೆಗೊಂದು ದಿನ ಕೆಡುವುದರಲ್ಲಿ

ಸಂದೇಹವಿಲ್ಲ. ಪ್ರಾತಃಕಾಲದಲ್ಲಿ ಮಾಡಿದನ್ನು ಸಾಯಂಕಾಲಕ್ಕೆ ಹಳಸಿ ನಾರುತ್ತಿರುವಾಗ, ಅದೇ ಅನ್ನರಸದಿಂದ ತಯಾರಾದ ಅನ್ನಮಯ ಕೋಶವೆಂದು ಕರೆಯಿಸಿಕೊಳ್ಳುವ ಈ ದೇಹವಾದರೂ ವಿಕೃತಿ ಹೊಂದದಿರದು.

ಓರ್ವ ಹೆಣ್ಣುಮಗಳು, ಗಂಡನ ಮನೆಗೆ ಹೋದ ತನ್ನ ಮಗಳು ನಾಲ್ಕು ತಿಂಗಳ ಗರ್ಭಿಣಿ ಇರುವಳೆಂಬ ಸುದ್ದಿಯನ್ನು ಕೇಳಿ ಹರ್ಷಿತಳಾಗಿ ಆಲೋಚಿಸುತ್ತಾಳೆ–ಪ್ರಥಮ ಗರ್ಭಿಣಿಯಾದ ಮಗಳು ಇನ್ನು ನಾಲ್ಕೈದು ತಿಂಗಳಿಗೆ ಹೆರಿಗೆಗಾಗಿ ನನ್ನ ಮನೆಗೆ ಬರುವಳು, ಅವಳ ಹೆರಿಗೆಯ ಸುಶ್ರೂಷೆಯನ್ನು ಬಹಳ ಒಳ್ಳೆಯ ರೀತಿಯಾಗಿ ಮಾಡಬೇಕು. ಸದ್ಯಃ ವೈಶಾಖಮಾಸ; ಮಾವಿನಹಣ್ಣಿನ ಸುಗ್ಗಿ ಇದು. ನನ್ನ ಮಗಳಿಗೆ ಚಿಕ್ಕಂದಿನಿಂದಲೇ ಮಾವಿನ ಹಣ್ಣೆಂದರೆ ಪಂಚಪ್ರಾಣ, ಸದ್ಯಃ ಮನೆಯಲ್ಲಿ ನಮ್ಮ ಗಿಡದ ಕಾಯಿಗಳನ್ನೇ ಹರಿದು ಹಣ್ಣಿಗೆ ಹಾಕಿದ್ದಾರೆ; ಮನೆಯಲ್ಲಿಯ ಮಕ್ಕಳು ಸೊಸೆಯಂದಿರು ಎಲ್ಲವನ್ನೂ ತಿಂದು ಮುಗಿಸುವರು. ಆದರೆ ನನ್ನ ಮಗಳಿಗೆ ಮಾತ್ರ ಇವರಾರು ಉಳಿಸರು. ಆದುದರಿಂದ ಈಗಲೇ ಕೆಲವು ಹಣ್ಣುಗಳನ್ನು ಯಾರಿಗೂ ತಿಳಿಯದ ಹಾಗೆ ತೆಗೆದಿಟ್ಟರೆ ಉತ್ತಮವಾಗುವುದೆಂದು ವಿಚಾರಿಸಿ ತಾನು ಮಲಗುವ ಮಹಡಿಯ ಮೇಲೆ ಒಂದು ಕಬ್ಬಿಣದ ಪೆಟ್ಟಿಗೆಯಲ್ಲಿ ಕೆಲವು ಹಣ್ಣುಗಳನ್ನಿರಿಸಿ ಭದ್ರವಾದ ಕೀಲಿಯನ್ನು ಹಾಕಿದಳು.

ಕಾಲಾನಂತರದಲ್ಲಿ ನವಮಾಸ ತುಂಬಿದ ಮಗಳು ಹೆರಿಗೆಗಾಗಿ ತವರೂರಿಗೆ ಬರುತ್ತಾಳೆ. ತುಂಬು ಗರ್ಭಿಣಿಯಾದ ಮಗಳನ್ನು ನೋಡಿದಾಕ್ಷಣ ತಾಯಿಗೆ ಹಿಡಿಸ ಲಾರದಷ್ಟು ಸಂತೋಷ. ಯಾವಾಗ ಮಗಳಿಗೆ ಮಾವಿನ ಹಣ್ಣನ್ನು ತಿನ್ನಿಸುವೆನೋ ? ಎನ್ನುವ ತವಕ ತಾಯಿಯಲ್ಲಿ ತಾಂಡವವಾಡುತ್ತಿತ್ತು. ನಾಲ್ಕಾರು ದಿನ ಕಳೆದ ಬಳಿಕ ಮನೆಯಲ್ಲಿ ಎಲ್ಲರೂ ತಮ್ಮ ತಮ್ಮ ಕಾರ್ಯದಲ್ಲಿ ವ್ಯಸ್ತರಾದದ್ದನ್ನು ಅರಿತು, ತಾಯಿಯು ತನ್ನ ಮಗಳನ್ನು ಮಹಡಿಯ ಮೇಲೆ ಕರೆದೊಯ್ದು, ನಾಲ್ಕು ತಿಂಗಳ ಮೊದಲೇ ಮುಚ್ಚಿಟ್ಟಿದ್ದ ಹಣ್ಣಿನ ಪೆಟ್ಟಿಗೆಯನ್ನು ತೆಗೆಯುತ್ತಾಳೆ. ಆಶ್ಚರ್ಯ ! ಹಣ್ಣುಗಳೆಲ್ಲ ಕೊಳೆತು, ಸೋರಿ, ಒಣಗಿ ಹೋಗಿವೆ. ಆ ದೃಶ್ಯವನ್ನು ಕಂಡು ಮಗಳು ಕೇಳುತ್ತಾಳೆ–ಅಮ್ಮ ಇದೇನು ? ಆಗ ತಾಯಿಯು ತಾನು ಮಾಡಿದ ಕೃತ್ಯವನ್ನು ವಿವರಿಸಲು, ''ಅಮ್ಮ ಹಣ್ಣುಗಳು ಇಷ್ಟು ದಿನ ತಡೆಯುವವೇ ? ಎಷ್ಟು ಭದ್ರವಾಗಿಟ್ಟರೂ ಅವು ಪರಿಣಾಮ ಹೊಂದುವುದನ್ನು ಆದೆಂದು ಬಿಡಲಾರವು. ಇದು ನಿನಗೆ ತಿಳಿಯದೇನಮ್ಮ ? ಎಂದು ತಾಯಿಗೆ ಬುದ್ಧಿ ಹೇಳಿದಳು.

ಪ್ರಕೃತಿಯ ನಿಯಮದಂತೆ ಪರಿಣಾಮ ಹೊಂದಲಿರುವ ಪದಾರ್ಥಗಳ ಪರಿಣಾಮವನ್ನು ಅದಾರಿಂದಲೂ ತಡೆಯಲಾಗದು. ''ಕುಂಬಳ ಕಾಯಿಗೆ ಕಬ್ಬುನದ ಕಟ್ಟಕೊಟ್ಟರೆ ಕೊಳೆಯುವುದಲ್ಲದೇ ಬಲು ಹಾಗಬಲ್ಲುದೆ ?'' ಎಂಬುದಾಗಿ ಅಣ್ಣನವ ರಾದರೂ ಇದನ್ನೇ ಪ್ರಶ್ನಿಸಿದ್ದಾರೆ. ಏನನ್ನಾದರೂ ಪರಿವರ್ತಿಸಬಹುದು; ಸ್ವಭಾವವನ್ನು ಪರಿವರ್ತಿಸುವದು ಸುಲಭವಲ್ಲ. ಅದಕ್ಕೆಂದೇ ''ಸ್ವಭಾವೋ ದುರತಿಕ್ರಮಃ'' ಎಂದಿದ್ದಾರೆ. ನಾಯಿಯ ಬಾಲವನ್ನು ಯತ್ನ ಪೂರ್ವಕವಾಗಿ ನೆಟ್ಟಗೆ ಮಾಡಿದರೂ ಆ ಯತ್ನ ತಪ್ಪಿದೊಡನೆ ಅದು ಪುನಃ ಡೊಂಕಾಗುವಂತೆ; ಅದೆಷ್ಟು ಸುಗಂಧ ದ್ರವ್ಯಗಳಿಂದ ಸಂಸ್ಕರಿಸಿದರೂ ಈ ದೇಹವು ತನ್ನ ದುರ್ಗಂಧ ಸ್ವಭಾವವನ್ನು ಬಿಡಲಾರದು. ಅದನ್ನೇ

ಜ್ಞಾನಿಗಳು–

ಕಾಯಃ ಸ್ರಗ್ಗಂಧಧೂಪಾದ್ಯೈರ್ಯತ್ನೇನಾಪಿ ಸುಸಂಸ್ಕೃತಃ ।
ನ ಜಹಾತಿ ಸ್ವಕಂ ಭಾವಂ ಶ್ವಪುಚ್ಛ ಇವ ನಾಮಿತಃ ॥

ಇಂತೆಂಬುದಾಗಿ ವಿವರಿಸಿದ್ದಾರೆ.

ತಾಯಿಯ ಒಡಲಿನಿಂದ ಭೂದೇವಿಯ ಮಡಿಲಿಗೆ ಬಂದು, ಬಾಲಕನೆನಿಸಿ ಕ್ರೀಡಾಸಕ್ತನಾಗಿ, ತರುಣನೆನಿಸಿ ತರುಣಿಯರಲ್ಲಿ ಅನುರಕ್ತನಾಗಿ, ವೃದ್ಧನೆನಿಸಿ ಚಿಂತೆಯೊಳು ಮಗ್ನನಾಗಿ ಕೊನೆಗೊಂದು ದಿನ ಮೃತ್ಯುವಿಗೆ ತುತ್ತಾಗಿ ಭೂಗರ್ಭದಲ್ಲಿ ಅಡಗಿ ಅಥವಾ ಅಗ್ನಿಯಲ್ಲಿ ದಹಿಸಿ ಇಲ್ಲದಂತಾಗುವುದು ದೇಹದ ಸ್ವಭಾವ. ಅಂತೆಯೇ ''ದಿಹ್ಯತೇ ಇತಿ ದೇಹಃ'' ಎಂದು ದೇಹ ಶಬ್ದದ ವ್ಯುತ್ಪತ್ತಿಯುಂಟು. ದೇಹವು ಪ್ರಾಣವಿರುವವರೆಗೆ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತಾಪತ್ರಯಗಳಲ್ಲಿ ಅರ್ಥಾತ್ ಚಿಂತಾಗ್ನಿಯಲ್ಲಿ ಬೆಂದು ಬೆಂಡಾಗಿ ಪ್ರಾಣಾಂತ್ಯದಲ್ಲಿ ಚಿತಾಗ್ನಿಯೊಳು ದಹಿಸಿ ಹೋಗುವುದು. ಆದೇ ಆಗ ಜನಿಸಿದ ಕೂಸಿನ ಶರೀರವನ್ನು ಹಾಗೂ ಜರಾಜೀರ್ಣವಾಗಿ ಮೃತ್ಯುವಿಗೆ ತುತ್ತಾಗುತ್ತಿರುವ ಮುಪ್ಪಿನ ಶರೀರವನ್ನು ಹೋಲಿಸಿ ನೋಡಿದಾಗ ತಾಪತ್ರಯದಲ್ಲಿ ದೇಹವು ದಗ್ಧವಾದದ್ದು ಸರ್ವರಿಗೂ ಅನುಭವಗಮ್ಯವಾಗುವುದು.

ಶರೀರದ ಷಡ್ಭಾವ ವಿಕಾರಗಳಲ್ಲಿ ಕೊನೆಯ ವಿಕಾರವೇ ಮೃತ್ಯುವು. ''ಮರಣಂ ಪ್ರಕೃತಿಃ ಶರೀರಿಣಾಂ ವಿಕೃತಿರ್ಜೀವನಮುಚ್ಯತೇ'' ಎನ್ನುವ ಉಕ್ತಿಯಂತೆ ಮನುಷ್ಯನು ಸಾಯುವವುದೇನಾಶ್ಚರ್ಯವಲ್ಲ, ಅವನು ಇಷ್ಟು ದಿನ ಜೀವಿಸಿಕೊಂಡಿದ್ದುದೇ ಪರಮಾಶ್ಚರ್ಯವು. ಒಂದು ರಬ್ಬರಿನ ಬಲೂನಿನೊಳಗೆ ಹವೆಯನ್ನು ತುಂಬಿ ಮಕ್ಕಳು ಆಡುತ್ತಿರುವಾಗ ಅದಕ್ಕೆ ಪೆಟ್ಟುತಗುಲಿ ಒಂದು ಚಿಕ್ಕದಾದ ರಂಧ್ರ ಬಿದ್ದದ್ದಾದರೆ ಕ್ಷಣಾರ್ಧದಲ್ಲಿಯೇ ಹವೆಯಲ್ಲ ಹೊರಹೋಗುವುದು; ಆದರೆ ಈ ಶರೀರವೆಂಬ ತೊಗಲಿನ ಬಲೂನಿನಲ್ಲಿ ಒಂಭತ್ತು ಛಿದ್ರಗಳಿದ್ದರೂ ಇದರಲ್ಲಿಯ ಪ್ರಾಣವಾಯುವು ಪೂರ್ಣ ಹೊರಹೋಗದಿರುವುದು ಆಶ್ಚರ್ಯವಲ್ಲವೇ ? ಅಂತೂ ಎಷ್ಟು ದಿನಗಳಾದರೂ ಕೊನೆಗೊಂದು ದಿನ ಹೋಗಲೇಬೇಕು. ಹೋಗೇ ಹೋಗುತ್ತದೆ. ಅದಕ್ಕೆಂತಲೇ ''ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ'' ಎಂದು ಶ್ರೀ ರೇಣುಕಗೀತೆ ಮತ್ತು ಶ್ರೀ ಭಗವದ್ಗೀತೆಗಳು ಸಾರಿ ಹೇಳುತ್ತಿವೆ.

ಮರ್ತ್ಯಲೋಕದೊಳು ಜನಿಸಿದವರಲ್ಲಿ ಮೃತ್ಯು ಮುಟ್ಟದೇ ಉಳಿದವರಾರು ? ಕಾಲನ ಈ ಕಟ್ಟಳೆಯ ಕಂಡ ಪ್ರಭುದೇವರು ಬೆರಗಾಗಿ ಹೀಗೆ ನುಡಿದಿದ್ದಾರೆ–

''ಹುಲಿಯ ಬೆನ್ನಿನಲ್ಲಿ ಒಂದು ಹುಲ್ಲೇ ಹೋಗಿ
ಮೇದು ಬಂದೆನೆಂದರೆ, ಇದ ಕಂಡು ಬೆರಗಾದೆ !
ರಕ್ಕಸಿಯ ಮನೆಗೆ ಹೋಗಿ ನಿದ್ರೆಗೆಯ್ದು
ಬಂದೆನೆಂದರೆ, ಇದ ಕಂಡು ಬೆರಗಾದೆ !
ಜವನ ಮನೆಗೆ ಹೋಗಿ ಸಾಯದೆ
ಬದುಕಿ ಬಂದೆನೆಂದರೆ, ಇದಕಂಡು ಬೆರಗಾದೆ ಗುಹೇಶ್ವರಾ !''

ನಮ್ಮ ಜೀವನದಲ್ಲಿ ಎಲ್ಲವೂ ಅನಿಶ್ಚಿತ, ಮರಣಮಾತ್ರ ಸುನಿಶ್ಚಿತ. ''ಸಂಯೋಗೋ ವಿಪ್ರಯೋಗಾಂತಃ'' ಎನ್ನುವ ನಿಯಮದಂತೆ, ಪಂಚಮಹಾಭೂತಗಳ ಬೆಸುಗೆಯಿಂದಾದ ದೇಹ ಆ ಬೆಸುಗೆ ತಪ್ಪಿದೊಡೆ ಪಂಚತ್ವವನ್ನು ಹೊಂದುವುದು.

ಜಗದ ಜೀವಿಗಳೆಲ್ಲ ಕಾಲನ ಕವಲಗಳು. ಆದ್ದರಿಂದಲೇ ''ಕಾಲೋಜಗದ್ಭಕ್ಷಕಃ'' ಎಂದಿದ್ದಾರೆ ಜ್ಞಾನಿಗಳು.

ಚಲತೀ ಚಾಕೀ ದೇಖಿಕೇ ದಿಯಾ ಕಬೀರಾ ರೋಯ ।
ದೋ ಪಾಟನಕೇ ಬೀಚಮೇ ಸಾಬುತ ಬಚಾ ನ ಕೋಯ ॥

ಹಿಟ್ಟಿನ ಗಿರಣಿಯ ಕಲ್ಲುಗಳ ಮಧ್ಯದಲ್ಲಿ ಸಿಲುಕಿ ಧಾನ್ಯಗಳು ಪುಡಿ ಪುಡಿಯಾಗುವಂತೆ, ಕಾಲಚಕ್ರದಲ್ಲಿ ಸಿಲುಕಿ ಜೀವಿಗಳಾರೂ ಸುರಕ್ಷಿತವಾಗಿ ಉಳಿಯರೆಂಬ ಈ ಪದ್ಯದಲ್ಲಿ ಶ್ರೀ ಕಬೀರದಾಸರು ಮೃತ್ಯುವಿನ ಜಗದ್ಭಕ್ಷಕ ಸ್ಥಿತಿಯನ್ನು ಸಜೀವವಾಗಿ ಚಿತ್ರಿಸಿದ್ದಾರೆ.

ಮೃತ್ಯುವೆಂಬುವುದು ಜನಿಸಿದ ಐವತ್ತು ವರ್ಷಕ್ಕೋ ನೂರು ವರ್ಷಕ್ಕೋ ಬರುವದೆಂಬುದು ಜನಸಾಮಾನ್ಯರ ನಂಬಿಕೆ; ಆದರೆ ದೇಹದ ಜೊತೆಗೆ ಅದರ ನೆರಳು ಬೆನ್ನಟ್ಟುವಂತೆ, ಜನ್ಮದಿನದಿಂದಲೇ ಮೃತ್ಯುವು ಜೀವಿಯನ್ನು ಬೆನ್ನಟ್ಟುವುದು. ರಥಕ್ಕೆ ಎರಡು ಗಾಲಿಗಳಿರುವಂತೆ ಜೀವನವೆಂಬ ರಥಕ್ಕೆ ಜನನ ಮರಣಗಳೇ ಗಾಲಿಗಳು. ಆಯುಷ್ಯ ಗತಿಸಿದಂತೆಲ್ಲ ಬಾಲಕನು ಬೆಳೆಯುತ್ತಿದ್ದಾನೆಂದು ಭಾವಿಸುವುದು ಮೂಢತನ. ಬಾಲಕನು ಒಂದು ವರ್ಷದವನಾದರೆ ಒಂದು ವರ್ಷ ಸತ್ತನೆಂದು ತಿಳಿಯಬೇಕು.

ಮಕ್ಕಳ ಹುಟ್ಟು ಹಬ್ಬವನ್ನಾಚರಿಸುವಾಗ, ಎಷ್ಟು ವರ್ಷದ ಮಗುವಿರುವುದೋ ಅಷ್ಟು ಮೇಣಬತ್ತಿಗಳನ್ನು ಹಚ್ಚಿ ಮಿಠಾಯಿಯ ಮೇಲೆ ಇರಿಸಿ, ಆ ಮಗುವಿನಿಂದ ಊದಿಸಿ, ಆರಿಸುತ್ತಾರೆ. ಈ ಕ್ರಿಯೆಯನ್ನು ನೋಡಿದಾಗ ಆಯುಷ್ಯದ ಅಷ್ಟು ವರ್ಷಗಳು ಗತಿಸಿದವೆಂದು ತಿಳಿದುಬರುವುದು; ಆದರೆ ಈ ಹುಟ್ಟುಹಬ್ಬಗಳ ಅಬ್ಬರದಲ್ಲಿ ಮಗನ ಆಯುಃಕ್ಷೀಣತೆಯನ್ನರಿಯದೆ ಆನಂದಿತರಾಗುವ ತಂದೆ-ತಾಯಿಗಳನ್ನು ನೋಡಿದರೆ ಜ್ಞಾನಿಗಳಿಗೆ ಸೋಜಿಗವಾಗುವುದು. ಅದಕ್ಕೋಸ್ಕರವಾಗಿ- ''ಆಯುಃಕ್ಷೀಣಂ ನ ಜಾನಂತಿ ತಸ್ಮಾಜ್ಜಾಗ್ರತ ಜಾಗ್ರತ'' ಎಂದು ಜ್ಞಾನಿಗಳು ಅಜ್ಞಾನಿಗಳನ್ನು ಮೋಹನಿದ್ರೆಯಿಂದ ಎಚ್ಚರಿಸಿದ್ದಾರೆ.

ನಶ್ವರವಾದ ಈ ಶರೀರದೊಳಗೆ ಶಾಶ್ವತವಾದುದೊಂದು ಆತ್ಮತತ್ತ್ವವಿದೆ. ಅದರ ಅರಿವಾದಾಗ ದೇಹದ ಮರಣವು ಮಹಾನವಮಿ ಎನಿಸುವುದು. ಅರಿವಿಲ್ಲದ ಜ್ಞಾನಿಗಳಿಗೊದಗುವ ಮರಣವು ಮನ್ಮಥಪೌರ್ಣಿಮೆಯಾಗಿ ಪರಿಣಮಿಸುವುದು. ಅದನ್ನೇ ''ಗತಾಸೂನಗತಾಸೂಂಶ್ಚ ನಾಽನುಶೋಚಂತಿ ಪಂಡಿತಾಃ'' (ಗೀತಾ, ೨/೧೨); ನಿತ್ಯಾನಿತ್ಯ ವಿವೇಕವುಳ್ಳ ಪಂಡಿತರು ಸತ್ತವರ ಬಗ್ಗೆಯಾಗಲಿ, ಇದ್ದವರ ಬಗ್ಗೆಯಾಗಲಿ ಚಿಂತಿಸುವುದಿಲ್ಲವೆಂದು ಗೀತೆಯಲ್ಲಿ ಭಗವಂತನಾದರೂ ಉಪದೇಶಿಸಿದ್ದಾನೆ. ನಿತ್ಯಾನಿತ್ಯ ವಸ್ತುಗಳ ವಿವೇಕವಾಗದೇ ಮೃತ್ಯುವಿನ ಭಯ ದೂರಾಗದು.

ಗೌತಮಿ ಎಂಬ ಹೆಸರಿನ ಓರ್ವ ಮಹಿಳೆಯು ಸುಖಮಯವಾದ ದಾಂಪತ್ಯ ಜೀವನವನ್ನು ಸಾಗಿಸಿ ಕಾಲಾಂತರದಲ್ಲಿ ಈಶ್ವರಾನುಗ್ರಹದಿಂದ ಪುತ್ರರತ್ನವನ್ನು

ಪಡೆದಳು. ಕೂಸು ಬಿದಿಗೆಯ ಚಂದ್ರನಂತೆ ಬೆಳೆದು ನಾಲ್ಕಾರು ವರ್ಷದ್ದಾಗಿರಬಹುದು; ಅಕಸ್ಮಾತ್ ವಿಷಮಜ್ವರ ಪೀಡಿತವಾಗಿ ಅಸುವನ್ನು ನೀಗಿತು. ಅಮೃತಮಯವಾದ ಗೌತಮಿಯ ಜೀವನದಲ್ಲಿ ಹಾಲಾಹಲವನ್ನು ಹಿಂಡಿದಂತಾಯಿತು. ಸತ್ತಮಗನ ಶವ ಸಂಸ್ಕಾರಮಾಡದೇ ಯಾರಿಂದಲಾದರೂ ಮಗನ ಪ್ರಾಣ ಮರಳಿ ಬರಬಹುದೇ ? ಎಂದು ಹಲುಬುತ್ತ ಅಲೆಯುತ್ತಿದ್ದಾಗ ತನ್ನ ಗ್ರಾಮದ ಸಮೀಪದಲ್ಲಿಯೇ ಭಗವಾನ್ ಬುದ್ಧನು ಬಂದಿರುವನು, ಅವನು ಮಹಾ ಸಾಮರ್ಥ್ಯಶಾಲಿಯು, ಅವನಿಂದ ಸತ್ತಮಗ ಬದುಕಬಲ್ಲನು–ಎನ್ನುವ ವಿಚಾರವು ಮತ್ತೋರ್ವನಿಂದ ತಿಳಿದಾಗ, ಗೌತಮಿಯು ತನ್ನ ಮಗನ ಶವವನ್ನು ತೆಗೆದುಕೊಂಡು ಹೋಗಿ, ಬುದ್ಧನ ಪಾದಕ್ಕರ್ಪಿಸಿ ಪ್ರಾಣಭಿಕ್ಷೆಯನ್ನು ಬೇಡಿದಳು.

ಮರಣದ ಸುನಿಶ್ಚಿತತೆಯನ್ನು ಮನಗಂಡ ಬುದ್ಧನು ಈಕೆಯನ್ನು ಜ್ಞಾನಬೋಧೆ ಯಿಂದ ಎಚ್ಚರಗೊಳಿಸಬೇಕೆಂದು, ''ಅಮ್ಮಾ! ಊರಿನೊಳಗೆ ಹೋಗಿ ''ಸಾವು ಇಲ್ಲದ ಮನೆಯ ಸಾಸುವೆ'' ತೆಗೆದುಕೊಂಡು ಬಾ; ಅದರಿಂದ ನಿನ್ನ ಮಗನನ್ನ ಬದುಕಿಸುವೆನು'' ಎಂದನು. ಆಗ ಗೌತಮಿಯು ಊರಿಗೆ ಧಾವಿಸಿ ಬಂದು, ಪ್ರತಿಯೊಂದು ಮನೆಯ ಬಾಗಿಲಿಗೆ ಹೋಗಿ, ಸಾವಿಲ್ಲದ ಮನೆಯ ಸಾಸುವೆಯನ್ನು ಕೇಳಿದಾಗ, ಎಲ್ಲರ ಮನೆಯಲ್ಲಿ ಸತ್ತವರನ್ನು ಸ್ಮರಿಸಿ ಕಣ್ಣೀರಿಡುವುದನ್ನು ಕಂಡಳು. ಪ್ರತಿಯೊಂದು ಮನೆಯ ಬಾಗಿಲಲ್ಲಿ ಈ ದೃಶ್ಯವನ್ನು ಕಂಡಾಗ ಮೃತ್ಯು ಮುಟ್ಟದ ಮನೆಯೇ ಇಲ್ಲವೆನ್ನುವುದನ್ನು ಅನುಭವಿಸಿ, ಮಗನ ಮರಣದ ಚಿಂತೆಯನ್ನು ಮರೆತು ಶವಸಂಸ್ಕಾರ ಮಾಡಿ ಬುದ್ಧನಿಂದ ದೀಕ್ಷೆಯನ್ನು ಹೊಂದಿ ಭಿಕ್ಷುಕಿಯಾದಳು.

ದೇಹಾತ್ಮ ಬುದ್ಧಿಯವರಿಗೆ ಮರಣಭಯ ಎಂದೂ ತಪ್ಪದು; ಆದ್ದರಿಂದ ಶ್ರೀ ಭಗವತ್ಪಾದರು ನಿತ್ಯವಾದ ಆತ್ಮನ ಅರಿವನ್ನು ಮಾಡಿಕೊಡುತ್ತಲಿದ್ದಾರೆ. ''ನ ಹನ್ಯತೇ ಹನ್ಯಮಾನೇ ಶರೀರೇ'' (ಗೀತಾ ೨–೨೦); ''ನೈವಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿಪಾವಕಃ'' (ಗೀತಾ ೨–೨೩) ಎನ್ನುವ ಗೀತೋಕ್ತಿಗಳಾದರೂ ಆತ್ಮನ ನಿತ್ಯತ್ವವನ್ನೇ ಪ್ರತಿಪಾದಿಸುವವು. ಭೌತಿಕ ವಸ್ತುಗಳ ಮೇಲೆ ಪಂಚಮಹಾಭೂತಗಳ ಪರಿಣಾಮ ವಾಗುವುದಲ್ಲದೇ ಅಭೌತಿಕವಾದ ಆತ್ಮನ ಮೇಲೆ ಅವುಗಳ ಯಾವ ಪರಿಣಾಮವೂ ಆಗದು.

ಭೂಮಿಯಲ್ಲಡಗಿ ಕಾಣದಿರುವ ಬೇರುಗಳ ಮೇಲೆ ಕಾಣುವ ವಿಶಾಲವಾದ ವಟವೃಕ್ಷವಿರುವಂತೆ, ಕಾಣದಿರುವ ಆತ್ಮನ ಮೇಲೆ ಕಾಣುವ ಶರೀರಾದಿ ಪ್ರಪಂಚ ವಿರುವುದು. ಗಿಡಕ್ಕೆ ಬೇರಿನ ಸಂಬಂಧ ತಪ್ಪಿದಾಗ ಅದು ಒಣಗಿ ಹೋಗುವಂತೆ, ಸರ್ವಗಂಧನಾದ ಆತ್ಮನ ಸಂಬಂಧ ತಪ್ಪಿದೊಡನೆ ದೇಹವು ದುರ್ಗಂಧವಾಗಿ ನಾರತೊಡಗುವುದು. ಆದ್ದರಿಂದ ದೃಶ್ಯವಾದ ಜಗತ್ತಿನಿಂದ ದೃಷ್ಟಿಯನ್ನು ಹೊರಳಿಸಿ ಅದೃಶ್ಯವಾದ ಆತ್ಮವನ್ನರಿಯುವದು ಮನುಷ್ಯನ ಮುಖ್ಯ ಕರ್ತವ್ಯವಾಗಿದೆ. ಅದಕ್ಕಾಗಿ ಶ್ರೀ ಯಾಜ್ಞವಲ್ಕ್ಯ ಮಹರ್ಷಿಗಳು– ''ಆತ್ಮನಸ್ತು ಕಾಮಾಯ ಸರ್ವಂಪ್ರಿಯಂ ಭವತಿ ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ವಿದಿತಮ್ ॥

(ಬೃ,ಉ. ೪–೫–೬) ಎಂಬುದಾಗಿ ಆತ್ಮಜಿಜ್ಞಾಸುವಾದ ಮೈತ್ರೇಯಿಗೆ ಪರಮ ಪ್ರೇಮಾಸ್ಪದ ವಾದ ಆತ್ಮವೇ ದರ್ಶನ, ಶ್ರವಣ, ಮನನ ಹಾಗೂ ನಿಧಿಧ್ಯಾಸನಾರ್ಹವೆಂದು ಉಪದೇಶಿಸಿದ್ದಾರೆ.

ಲೋಕದಲ್ಲಿ ಸಾಮಾನ್ಯವಾಗಿ ಎಲ್ಲರೂ ಹಣದ ಮೇಲೆ ಪ್ರೇಮಿಗಳಾಗಿರುತ್ತಾರೆ. ಅದಕ್ಕೆಂದೇ ''ಅರ್ಥಾಃ ಬಹಿಶ್ಚರಾಃ ಪ್ರಾಣಾಃ''; ದುಡ್ಡೆಂದರೆ ದೇಹದ ಹೊರಗೆ ಸುಳಿವ ಪ್ರಾಣವಿದ್ದಂತೆಂದು ಅನುಭವಿಕರು ನುಡಿದಿದ್ದಾರೆ. ಹಣದ ಮೇಲೆ ಲೋಭಿಯಾಗಿ ಕಷ್ಟಪಟ್ಟು ಸಂಪಾದಿಸಿದ್ದರೂ ಮನೆಯಲ್ಲಿ ಹೆಂಡರು ಮಕ್ಕಳು ರೋಗಿಗಳಾಗಿ ಬಳಲುವಾಗ ಹಣವನ್ನು ಧಾರಾಳವಾಗಿ ಖರ್ಚುಮಾಡಿ ಅವರ ಪ್ರಾಣ ಉಳಿಸಲು ಪ್ರಯತ್ನಿಸುತ್ತಾನೆ. ಆಗ ಈತನ ಪ್ರೇಮವು ಹಣದಿಂದ ಕಡಿಮೆಯಾಗಿ ಹೆಂಡರು ಮಕ್ಕಳನ್ನು ಆಶ್ರಯಿಸುತ್ತದೆ.

ಮನೆಯೊಳಗೆ ಎಲ್ಲರೂ ಮಲಗಿಕೊಂಡಾಗ ಅಕಸ್ಮಾತ್ ಮನೆಗೆ ಬೆಂಕಿ ತಗುಲಿ ಮನೆಯು ಸುಡಲು ಪ್ರಾರಂಭಿಸಿದಾಗ ಎಲ್ಲರನ್ನೂ ಬಿಟ್ಟು ತಾನು ಉಳಿದರೆ ಸಾಕೆಂದು ಹೊರಗೆ ಓಡಿಬರುವುದನ್ನು ನೋಡುತ್ತೇವೆ. ಇದರಿಂದ ಮಕ್ಕಳಾದಿಗಳಿಗಿಂತ ತನ್ನ ಶರೀರವೇ ತನಗೆ ಪ್ರೇಮವೆಂಬುದು ತಿಳಿಯುವುದು. ತನ್ನ ಶರೀರದ ಮೇಲೆ ಯಾರಾದರೂ ಹೊಡೆಯಲು ಬಂದಾಗ ಅಶಕ್ತನಾದ ಮನುಷ್ಯನು ಹೊಡೆಯುವವರಿಗೆ ಬೆನ್ನು ಕೊಟ್ಟು, ತನ್ನ ಕಣ್ಣು ಮುಂತಾದ ಸೂಕ್ಷ್ಮ ಅವಯವಗಳಿಗೆ ಪೆಟ್ಟು ತಗಲಬಾರ ದೆಂದು ಕೈಗಳಿಂದ ಮುಚ್ಚಿಕೊಳ್ಳುತ್ತಾನೆ. ಆಗ ದೇಹಕ್ಕಿಂತಲೂ ಈತನು ಇಂದ್ರಿಯಗಳ ಮೇಲೆ ಹೆಚ್ಚು ಪ್ರೇಮವುಳ್ಳವನೆಂಬುದೇ ಅನುಭವಕ್ಕೆ ಬರುವುದು.

ಅಕಸ್ಮಾತ್ ಕಣ್ಣು, ಕೈ, ಕಾಲು ಮುಂತಾದ ಅವಯವಗಳಿಗೆ ಅಸಾಧ್ಯ ರೋಗ ಬಂದೊದಗಿದಾಗ ಈ ಕೈ ಕಾಲುಗಳನ್ನು ಕತ್ತರಿಸಿದರೆ ನೀನು ಉಳಿಯುವೆ, ಇಲ್ಲವಾದರೆ ಸಾಯುವೆ ಎಂದು ವೈದ್ಯರು ಹೇಳಿದಾಗ, ಕೈ–ಕಾಲುಗಳು ಹೋದರೂ ಚಿಂತೆ ಇಲ್ಲ ನನ್ನ ಪ್ರಾಣ ಉಳಿದರೆ ಸಾಕು ಎಂದು ಕೈಕಾಲುಗಳನ್ನು ಕತ್ತರಿಸಿಕೊಳ್ಳಲು ತಯಾರಾಗುವನು. ಇದರಿಂದ ಇಂದ್ರಿಯಗಳಿಗಿಂತಲೂ ಪ್ರಾಣವೇ ಪ್ರೇಮಾಸ್ಪದವಾದದ್ದೆಂದು ತಿಳಿಯು ವದು. ಮತ್ತೆ ಕೆಲವರು ಜೀವನದಲ್ಲಿ ಅನೇಕ ಕಷ್ಟಗಳನ್ನನುಭವಿಸಿ ಜೀವನವೇ ಬೇಸರ ವಾಗಿ ನೇಣುಹಾಕಿಕೊಂಡೋ, ಕೆರೆ–ಬಾವಿಗಳಲ್ಲಿ ಬಿದ್ದೋ ತಮ್ಮ ಪ್ರಾಣವನ್ನು ನೀಗುವರು. ಇದರಿಂದ ಪ್ರಾಣಕ್ಕಿಂತಲೂ ಪ್ರಿಯವಾದದ್ದು ಆತ್ಮವೇ ಅನ್ನುವದು ಸರ್ವಾನುಭವಸಿದ್ಧವು. ಅಂತೆಯೇ ಶ್ರೀ ವಿದ್ಯಾರಣ್ಯಸ್ವಾಮಿಗಳು–

ವಿತ್ತಾತ್ಪುತ್ರಃ ಪ್ರಿಯಃ ಪುತ್ರಾತ್ಪಿಂಡಮ್ । ಪಿಂಡಾತ್ ತಥೇಂದ್ರಿಯಾಣಿ
ಇಂದ್ರಿಯೇಭ್ಯಃ
ಪ್ರಿಯಾಃ ಪ್ರಾಣಾಃ । ಪ್ರಾಣಾದಾತ್ಮ ವರಪ್ರಿಯಃ ॥

ಹೀಗೆ ಪಂಚದಶಿಯಲ್ಲಿ ವಿತ್ತ, ಪುತ್ರ, ಪಿಂಡ, ಇಂದ್ರಿಯ ಮತ್ತು ಪ್ರಾಣ ಇವುಗಳಲ್ಲಿ ಉತ್ತರೋತ್ತರವಾಗಿ ಪ್ರೇಮವು ಬೆಳೆಯುತ್ತಾ ಹೋಗಿ, ಕೊನೆಗೆ ಆತ್ಮವೇ ಪರಮ ಪ್ರೇಮಾಸ್ಪದವಾದದ್ದೆಂದು ನಿದರ್ಶಿಸಿದ್ದಾರೆ. ಆದ್ದರಿಂದ ಶರೀರಗಳು ಅನಿತ್ಯವಾದವು

ಗಳು. ಪರಮಪ್ರೇಮಾಸ್ಪದವಾದ ಆತ್ಮವು ಮಾತ್ರ ನಿತ್ಯವಾದದ್ದೆಂದರಿಯುವವನೇ ಪಿಂಡಜ್ಞಾನಿಯು.

ಶ್ರೀ ರೇಣುಕ ಭಗವತ್ಪಾದರ ದೃಷ್ಟಿಯಲ್ಲಿ ಶರೀರ ಆತ್ಮಗಳಲ್ಲಿ ನಿತ್ಯಾನಿತ್ಯ ವಿವೇಕ ಮೂಡಿದ ಮಾತ್ರಕ್ಕೇ ಅವನು ಪಿಂಡಜ್ಞಾನಿಯಾಗಲಾರನು. ಅದಕ್ಕೋಸ್ಕರವಾಗಿ ಶ್ರೀ ಭಗವತ್ಪಾದರು–

ಶರೀರತ್ಪೃಥಗಾತ್ಮಾನಮಾತ್ಮನ್ಯಃ ಪೃಥಗೀಶ್ವರಮ್ ।
ಪ್ರೇರಕಂ ಯೋ ವಿಜಾನಾತಿ ಪಿಂಡಜ್ಞಾನೀ ಸ ಕಥ್ಯತೇ ॥ (ಸಿ. ಶಿ. ೫.೫೮)

ಇಂತೆಂಬುದಾಗಿ ಉಪದೇಶಿಸಿರುವರು. ಶರೀರಕ್ಕಿಂತಲೂ ಆತ್ಮವು ಭಿನ್ನವಾಗಿರುವಂತೆ, ಆ ಎಲ್ಲ ಜೀವಾತ್ಮರಿಗಿಂತ ಪರಮಾತ್ಮನು ಭಿನ್ನನಾಗಿಯೂ, ಸರ್ವರಿಗೆ ಪ್ರೇರಕನಾಗಿಯೂ ಇರುವನೆಂಬ ತಿಳಿವಳಿಕೆಯೇ ಪಿಂಡಜ್ಞಾನದ ಪರಿಪೂರ್ಣಸ್ಥಿತಿಯು. ಹೀಗೆ ಆತ್ಮ–ಪರಮಾತ್ಮರ ಯಥಾರ್ಥ ಸ್ವರೂಪವನ್ನು ಭಿನ್ನ–ಭಿನ್ನವಾಗಿ ತಿಳಿಯುವುದಕ್ಕೆ ವೇದಾಂತ ಸಿದ್ಧಾಂತದಲ್ಲಿ ''ತತ್'' ಹಾಗೂ ''ತ್ವಂ''ಪದದ ಶೋಧವೆಂದು ಕರೆಯುವರು. ಇದರಿಂದ ವೇದಾಂತಸಮ್ಮತವಾದ ''ತತ್ತ್ವಂ ಪದಾರ್ಥಶೋಧನೇ,'' ವೀರಶೈವ ಸಿದ್ಧಾಂತ ಸಮ್ಮತವಾದ ''ಪಿಂಡಜ್ಞಾನ'' ಇವೆರಡೂ ಒಂದೇ ಅರ್ಥದ ಪರ್ಯಾಯ ಶಬ್ದಗಳೆಂಬುದು ತಿಳಿದು ಬರುವುದು; ಆದರೆ ವೇದಾಂತವು ಅದ್ವೈತ ಬೋಧಕ ವಾದ್ದರಿಂದ ಆತ್ಮವು ಸದಾ ಪರಮಾತ್ಮ ಸ್ವರೂಪವೆಂದೇ ಹೇಳುವುದು. ವೀರಶೈವ ಸಿದ್ಧಾಂತವು ಭೇದಾಭೇದ ಪ್ರತಿಪಾದಕವಾದ್ದರಿಂದ, ಜೀವಾತ್ಮನು ಸಂಸಾರ ದೆಶೆಯಲ್ಲಿ ಪರಮಾತ್ಮನಿಗಿಂತ ವಾಸ್ತವಿಕವಾಗಿ ಭಿನ್ನವಾಗಿರುವನೆಂದು ಬೋಧಿಸುವುದು.

ಐಕ್ಯಸ್ಥಲದಲ್ಲಿ ಅಭೇದ ಹೊಂದುವ ಈ ಜೀವಾತ್ಮನು ಭಕ್ತಸ್ಥಲದ ಅವಾಂತರ ಸ್ಥಲವಾದ ಪಿಂಡಜ್ಞಾನಸ್ಥಲದಲ್ಲಿ ಪರಮಾತ್ಮನನ್ನು ಭಕ್ತಿಯಿಂದ ಪೂಜಿಸುವವನಾದ್ದರಿಂದ, ಪೂಜ್ಯ–ಪೂಜಕರಲ್ಲಿ ಭೇದವಿಲ್ಲದೇ ಸ್ವಾರಸ್ಯ ಬಾರದ್ದರಿಂದ, ಪಿಂಡಜ್ಞಾನಸ್ಥಲದ ಸಾಧಕನು ಪರಮಾತ್ಮನನ್ನು ತನಗಿಂತಲೂ ಭಿನ್ನನನ್ನಾಗಿಯೂ, ತನ್ನ ಸರ್ವ ವ್ಯವಹಾರ ಗಳಲ್ಲಿ ಆ ಪರಮಾತ್ಮನೇ ಪ್ರೇರಕನಾಗಿರುವನೆಂದೂ ತಿಳಿದು, ಸಕಲ ಜೀವಿಗಳಿಗಿಂತ ವಿಲಕ್ಷಣವಾದ ವ್ಯಕ್ತಿತ್ವ ಉಳ್ಳವನಾಗಿ ವೈಶಿಷ್ಟ್ಯವಾದ ಜೀವನವನ್ನು ಸಾಗಿಸುತ್ತಾ ವಿವೇಕದ ಬಲದಿಂದ ವೈರಾಗ್ಯವನ್ನು ಸಾಧಿಸಿಕೊಳ್ಳುವನು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ಪಿಂಡಜ್ಞಾನ ಸ್ಥಲವು ಪೂರ್ಣವಾದುದು

ದಿನಾಂಕ ೨೪ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ, ಸೋಲಾಪುರ)



ಆಶೀರ್ವಚನ-೧

# ಸಂಸಾರಹೇಯಸ್ಥಲ

ನಿರಸ್ತಹೃತ್ಕಲಂಕಸ್ಯ ನಿತ್ಯಾನಿತ್ಯವಿವೇಕಿನಃ ।
ಸಂಸಾರಹೇಯತಾಬುದ್ಧಿರ್ಜಾಯತೇ ವಾಸನಾಬಲಾತ್ (ಸಿ. ಶಿ. ೫.೫೭)

ಹೃದಯದ ಕಶ್ಮಲತೆಯಿಲ್ಲದ ವಿವೇಕಿಗೆ ಉತ್ತಮ ಸಂಸ್ಕಾರಗಳ ಮೂಲಕವಾಗಿ ಸಂಸಾರದಲ್ಲಿ ವೈರಾಗ್ಯಬುದ್ಧಿಯು ಉತ್ಪನ್ನವಾಗುತ್ತದೆ.

ಅಧಿಕಾರಿ, ಸಂಬಂಧ, ವಿಷಯ ಮತ್ತು ಪ್ರಯೋಜನಗಳೆಂಬ ಅನುಬಂಧ ಚತುಷ್ಟಯಗಳಲ್ಲಿ ಅಧಿಕಾರಿಯ ಪಾತ್ರವು ಪ್ರಮುಖವಾದುದು. ಪ್ರಯೋಜನಗಳ ಭೇದದಿಂದ ಅಧಿಕಾರಿಗಳಲ್ಲಿ ಭೇದವಾಗುತ್ತದೆ.

ಜ್ಯೋತಿಷ್ಟೋಮೇ ಸ್ವರ್ಗಕಾಮೋ ವಿವಾಹೇ ಪುತ್ರಕಾಮವಾನ್ ।
ವಾಣಿಜ್ಯೇ ಲೋಭವಾನ್ ಮೋಕ್ಷೇ ಮುಮುಕ್ಷುರಧಿಕಾರವಾನ್ ॥

ಎನ್ನುವ ಬೋಧಸಾರದ ವಚನದಂತೆ, ಸ್ವರ್ಗದ ಅಪೇಕ್ಷೆಯುಳ್ಳವನು ಜ್ಯೋತಿಷ್ಟೋಮ ಯಾಗಕ್ಕೆ ಅಧಿಕಾರಿಯು, ಸಂತಾನಾಪೇಕ್ಷಿಯು ವಿವಾಹಕ್ಕೆ ಅಧಿಕಾರಿಯು, ಧನಲೋಭ ವುಳ್ಳವನು ವ್ಯಾಪಾರಕ್ಕೆ ಅಧಿಕಾರಿಯು, ಅದರಂತೆ ಮುಕ್ತಿಯ ಅಭಿಲಾಷೆಯುಳ್ಳವನು ಮೋಕ್ಷಕ್ಕಧಿಕಾರಿಯು.

ಈ ಮೋಕ್ಷಾಧಿಕಾರಿಯಲ್ಲಿಯೂ ಮುಮುಕ್ಷುತ್ವವೇ ಅಲ್ಲದೇ, ವಿವೇಕ, ವೈರಾಗ್ಯ ಹಾಗೂ ಶಮ–ದಮಾದಿ ಸಾಧನಗಳು ಅತ್ಯಾವಶ್ಯಕವಾದವುಗಳು. ಅವಿಲ್ಲವಾದರೆ, ಪ್ರಯೋಜನದ ಪ್ರಾಪ್ತಿಯಾಗಲಾರದು. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

''ಸುಮ್ಮನಾಗದು ವಿಧಿಯೊಳೊಂದದೆ ಮುಕ್ತಿ ॥ ಪ ॥
ಇದು ನಿತ್ಯವಿದನಿತ್ಯವೆಂಬುದನರಿಯದೆ ।
ಹೃದಯದ ಭೋಗೇಚ್ಛೆ ದೊರೆಯದೇ ॥
ಒದವಿ ಶಮಾದಿಸಾಧನವಾರು ನೆರೆಯದೇ ।
ಸದುಗತಿಯಾಶೆಯೊಳುರಿಯದೇ ॥ ೧ ॥

(ಕೈ. ಪ. ಜ್ಞಾ. ಸ್ಥಲ ೨)

ಎಂಬುದಾಗಿ ಉಪದೇಶಿಸಿದ್ದಾರೆ.

ಮುಕ್ತಿಯೆಂಬುದು ಅಪೇಕ್ಷಿಸಿದ ಮಾತ್ರಕ್ಕೇ ಸುಲಭವಾಗಿ ಕೈಸೇರುವ ಸಾಮಾನ್ಯ ಫಲವಲ್ಲ. ಆದ್ದರಿಂದಲೇ ''ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್'' ಎಂಬುದಾಗಿ ಉಪನಿಷತ್ತು ಮುಕ್ತಿಯ ದುಷ್ಪ್ರಾಪ್ತಿಯ ಬಗ್ಗೆ ಬಹುಕಾಲದಿಂದ ಎಚ್ಚರಿಸುತ್ತ ಬಂದಿದೆ.

ಮಿಠಾಯಿ ಅಂಗಡಿಯಲ್ಲಿಯ ಮಿಠಾಯಿಗಳನ್ನು ತಿನ್ನುವ ಅಧಿಕಾರಿ ಯಾರು ? ಎಂಬುದಾಗಿ ವಿಚಾರಮಾಡಲು, ತಿನ್ನುವ ಅಭಿಲಾಷೆಯ ಜೊತೆಗೆ ಅವುಗಳನ್ನು

ಖರೀದಿಸುವ ಹಣವುಳ್ಳವನು ಹೇಗೆ ಅಧಿಕಾರಿಯೆನಿಸಿಕೊಳ್ಳುವನೋ, ಅದರಂತೆ ಸರ್ವ ದುಃಖಗಳ ನಿವೃತ್ತಿ, ಪರಮಾನಂದಪ್ರಾಪ್ತಿರೂಪವಾದ ಲಿಂಗಾಂಗಸಾಮರಸ್ಯಾತ್ಮಕ ಮೋಕ್ಷವನ್ನು ಪಡೆಯಬೇಕಾದರೆ ಸಾಧಕನು ಮೋಕ್ಷಾಭಿಲಾಷೆಯ ಜೊತೆಗೆ ವಿವೇಕ, ವೈರಾಗ್ಯ ಹಾಗೂ ಶಮ–ದಮಾದಿ ಸಾಧನಗಳಿಂದ ಯುಕ್ತನಾಗಿರಬೇಕು ; ಅಂದಾಗಲೇ ಆತ ನಿಜವಾದ ಮೋಕ್ಷಾಧಿಕಾರಿಯೆನಿಸಿಕೊಳ್ಳುವನು.

ಈ ಸಾಧನ ಚತುಷ್ಟಯಗಳಲ್ಲಿ ಮೊದಲನೆಯದಾದ ವಿವೇಕದ್ರ ಸ್ವರೂಪದ ಬಗ್ಗೆ ''ಸಿದ್ಧಾಂತಶಿಖಾಮಣಿ ಪ್ರವಚನಪ್ರಭೆ'' ಕಿರಣ ಎರಡರಲ್ಲಿ ವಿಸ್ತೃತವಾಗಿ ವಿಚಾರ ಮಾಡ ಲಾಗಿದೆ. ಸದ್ಯಃ ಈ ಸಂಸಾರಹೇಯಸ್ಥಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಶ್ರೀ ಅಗಸ್ತ್ಯಮಹರ್ಷಿಗಳನ್ನು ಕುರಿತು ವೈರಾಗ್ಯದ ಬಗ್ಗೆ ಉಪದೇಶವನ್ನು ಪ್ರಾರಂಭಿಸಿದ್ದಾರೆ.

ಹೇ ಅಗಸ್ತ್ಯನೇ ! ಜನ್ಮಜನ್ಮಾಂತರಗಳಿಂದ ನಿಷ್ಕಾಮ ಕರ್ಮಗಳನ್ನಾಚರಿಸಿ ಹೃದಯದ ಕಲ್ಮಷತೆಯನ್ನು ಕಳೆದುಕೊಂಡು ಆತ್ಮಾನಾತ್ಮ ಹಾಗೂ ನಿತ್ಯಾನಿತ್ಯ ವಸ್ತುಗಳ ಸಾರತೆಯನ್ನು ವಿಚಾರಮಾಡಿ ವಿವೇಕಿಯಾದ ಸಾಧಕನಿಗೆ ಶುಭ ಸಂಸ್ಕಾರಗಳ ಮೂಲಕವಾಗಿ ಸಂಸಾರದಲ್ಲಿ ಹೇಯಬುದ್ಧಿಯು ಪ್ರಾದುರ್ಭವಿಸುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಈ ಪ್ರಸಾದವಾಣಿಯ ಬಗ್ಗೆ ಅದೆಷ್ಟು ಜನ ಹೇಳಿದರೂ ಪುನಃ ಹೊಸತನ ಕಂಡುಬರುವುದು. ಸಂಸಾರಹೇಯಸ್ಥಲದಲ್ಲಿ ಶ್ರೀ ಭಗವತ್ಪಾದರು ಶ್ರೀ ಅಗಸ್ತ್ಯರನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರಿಗೆ ಸಂಸಾರ ಹಾಗೂ ಅದರ ಬಗ್ಗೆ ಉಂಟಾಗುವ ಹೇಯ ಭಾವನೆಯ ಬಗ್ಗೆ ಉಪದೇಶಿಸಿದ್ದಾರೆ. ಇಲ್ಲಿ ಪ್ರಮುಖವಾಗಿ ವಿಚಾರ ಮಾಡುವ ವಿಷಯಗಳು ಎರಡೇ ಎರಡು ; ಮೊದಲನೆಯದು ಸಂಸಾರವೆಂದರೇನು ? ಎರಡನೆಯದು ಅದರ ಬಗ್ಗೆ ಹೇಯ ಭಾವನೆಯುಂಟಾಗಲು ಕಾರಣವೇನು ?

ಸಂಸಾರದ ಬಗ್ಗೆ ಜ್ಞಾನಿಗಳು– ''ಸಂಸಾರವೆಂಬ ಹಗೆಯಯ್ಯ ತಂದೆ'', ''ಸಂಸಾರ ಸಾಗರದೊಳಗೆ ಬಿದ್ದೆ'', ''ಸಂಸಾರವೆಂಬ ಮಹಾವ್ಯಾಧಿ'', ''ಸಂಸಾರವೆಂಬ ವಿಷಯ ವೃಕ್ಷಕ್ಕೆ ಪಂಚೇಂದ್ರಿಯಂಗಳೇ ಶಾಖೆಗಳು'', ''ಸಂಸಾರವೆಂಬ ಹೆಣ ಬಿದ್ದರೆ ತಿನಬಂದ ನಾಯ ಜಗಳ ನೋಡಿರೆ'', ''ಸಂಸಾರವೆಂಬುದೊಂದು ಗಾಳಿಯ ಸೊಡರು'', ''ವಿಷಮ ಸಂಸಾರವನ್ನು ಕನಸೆಂದರಿ'', ''ಯಾರಿಗೆ, ಯಾರಿಲ್ಲ, ಎರವಿನ ಸಂಸಾರ ನೀರಮೇಲಿನ ಗುರುಳಿ ನಿಜವಲ್ಲೋ ಹರಿಯೇ'', ''ಸಂಸಾರವೆಂಬ ಘೋರಾರಣ್ಯದೊಳಗೊಬ್ಬಳು'', ''ಗಂಧರ್ವ ನಗರಾಕಾರಃ ಸಂಸಾರಃ ಕ್ಷಣಭಂಗುರಃ'' ಈ ರೀತಿಯಾಗಿ ಹಗೆ, ಸಾಗರ, ಮಹಾವ್ಯಾಧಿ, ವಿಷವೃಕ್ಷ, ಹೆಣ, ಗಾಳಿಯ ದೀಪ, ಕನಸು, ನೀರಿನ ಗುರುಳಿ, ಘೋರಾರಣ್ಯ ಮತ್ತು ಗಂಧರ್ವನಗರಗಳ ಉಪಮೆಗಳನ್ನು ಕೊಟ್ಟು ಸಂಸಾರವು ನಿಃಸಾರವೂ, ದುಃಖಮಯವೂ ಹಾಗೂ ಕ್ಷಣಿಕವೂ ಎಂಬುದನ್ನು ತಮ್ಮ ಅನುಭವಕ್ಕೆ ಬಂದ ರೀತಿಯಲ್ಲಿ ಉಪದೇಶಿಸಿದ್ದಾರೆ.

ಈ ಎಲ್ಲ ಉಕ್ತಿಗಳನ್ನೂ ಪರ್ಯಾಲೋಚಿಸಿದಾಗ ಸಂಸಾರದ ಬಗ್ಗೆ ಉಪಮೆಗಳ ಅರಿವಾಗುವುದೇ ವಿನಹ ಸಂಸಾರವೆಂದರೇನು ? ಎನ್ನುವ ಪ್ರಶ್ನೆಗೆ ಸಮಾಧಾನ

ದೊರೆಯಲಿಲ್ಲ. ಲೋಕದಲ್ಲಿ ಜಗತ್ತು ಮತ್ತು ಸಂಸಾರವೆಂಬ ಶಬ್ದಗಳು ಒಂದೇ ಅರ್ಥದ ಪರ್ಯಾಯ ಶಬ್ದಗಳಾಗಿ ವ್ಯವಹರಿಸಲ್ಪಡುತ್ತವೆ. ಸಾಮಾನ್ಯ ದೃಷ್ಟಿಯಲ್ಲಿ ಅವೆರಡೂ ಒಂದಾಗಿ ತೋರಿದರೂ, ಅವುಗಳನ್ನು ಪರ್ಯಾಲೋಚಿಸಿದಾಗ ಅವುಗಳ ಸೂಕ್ಷ್ಮ ಭೇದವು ದೃಷ್ಟಿಗೆ ಗೋಚರಿಸುವುದು.

ವಾಸ್ತವಿಕವಾಗಿ ಜಗತ್ತೇ ಬೇರೆ, ಸಂಸಾರವೇ ಬೇರೆ ಇವುಗಳಲ್ಲಿ ಪರಮಾತ್ಮನಿಂದ ನಿರ್ಮಿತವಾದದ್ದು ''ಜಗತ್ತು'', ಜೀವಾತ್ಮನಿಂದ ಕಲ್ಪಿತವಾದದ್ದು ''ಸಂಸಾರವು''. ಶ್ರೀ ವಿದ್ಯಾರಣ್ಯಸ್ವಾಮಿಗಳು ಪಂಚದಶಿಯ ಚಿತ್ರದೀಪ ಪ್ರಕರಣದಲ್ಲಿ–

ಈಕ್ಷಣಾದಿಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ ।
ಜಾಗ್ರದಾದಿವಿಮೋಕ್ಷಾಂತಃ ಸಂಸಾರೋ ಜೀವಕಲ್ಪಿತಃ ॥

ಈ ರೀತಿಯಾಗಿ ''ಜಗತ್ತು'' ಹಾಗೂ ''ಸಂಸಾರ''ಗಳ ಭೇದವನ್ನು ಸ್ಪಷ್ಟಪಡಿಸಿದ್ದಾರೆ. ಮಾಯಾಶಕ್ತಿಯಿಂದ ಯುಕ್ತನಾದ ಪರಮಾತ್ಮನು ಸರ್ವಜ್ಞನೂ, ಸರ್ವಕರ್ತನೂ ಆಗಿರುವುದರಿಂದ ಅವನು ಈ ಭೂತ–ಭೌತಿಕ ಜಗತ್ತನ್ನು ನಿರ್ಮಿಸಿದ್ದಾನೆ. ಅವಿದ್ಯಾ ಮೋಹಿತನಾದ ಜೀವಾತ್ಮನಿಗೆ ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯವಿಲ್ಲದ ಕಾರಣ, ಈಶ ನಿರ್ಮಿತಗಳಾದ ಪದಾರ್ಥಗಳನ್ನೇ ತನ್ನ ಕರ್ಮ ಹಾಗೂ ಸಾಮರ್ಥ್ಯಕ್ಕನುಸಾರವಾಗಿ ಸಂಗ್ರಹಿಸಿ, ಆ ಪದಾರ್ಥಗಳಲ್ಲಿ ಇವು ನನ್ನವೆಂಬ ಮೋಹವನ್ನು ತಾಳುತ್ತಾನೆ ; ಈ ಮೋಹವೇ ''ಸಂಸಾರ''ವೆನಿಸಿಕೊಳ್ಳುವುದು.

ಕಾ ಬುದ್ಧಿಃ ಕೋಽಯಮಾಭಾಸಃ ಕೋ ವಾತ್ಮಾ ತ್ರಿಜಗತ್ಕಥಮ್ ? ।
ಇತ್ಯನಿರ್ಣಯತೋ ಮೋಹಃ ಸೋಽಯಂ ಸಂಸಾರ ಇಷ್ಯತೇ ॥

ಬುದ್ಧಿಯೆಂದರೇನು ? ಆಭಾಸವೆಂದರೆ ಯಾವುದು ? ಆತ್ಮನೆಂದರೆ ಯಾರು ? ಸ್ವರ್ಗ–ಮರ್ತ್ಯ–ಪಾತಾಳಗಳೆಂಬ ತ್ರಿಲೋಕಗಳು ಹೇಗೆ ಜನಿಸಿದವು ? ಇತ್ಯಾದಿಗಳ ವಿವೇಕವಿಲ್ಲದಿರುವುದಕ್ಕೆ ಮೋಹವೆನ್ನುತ್ತಾರೆ ; ಆ ಮೋಹವೇ ''ಸಂಸಾರ''ವೆಂಬುದಾಗಿ ವಾಸಿಷ್ಠ ಗ್ರಂಥದಲ್ಲಿ ಪ್ರತಿಪಾದಿಸಲಾಗಿದೆ.

ಪರಮಾತ್ಮನು ಪಂಚಮಹಾಭೂತಗಳನ್ನು ನಿರ್ಮಿಸಿದರೆ, ಜೀವಾತ್ಮನು ಅವುಗಳಿಂದ ಮನೆ, ಕೆರೆ, ಭಾವಿ ಮುಂತಾದವುಗಳನ್ನು ನಿರ್ಮಿಸಿಕೊಂಡು, ಅವುಗಳಲ್ಲಿ ನನ್ನದೆಂಬ ಅಭಿಮಾನವನ್ನು ತಾಳುತ್ತಾನೆ. ಪರಮಾತ್ಮನು ಹೆಣ್ಣು ಹಾಗೂ ಗಂಡು ಪ್ರಾಣಿಗಳನ್ನು ನಿರ್ಮಿಸಿದರೆ, ಜೀವಾತ್ಮನು ಅವುಗಳನ್ನು ಪರಸ್ಪರ ದಂಪತಿಗಳನ್ನಾಗಿ ಮಾಡುತ್ತಾನೆ. ಹೀಗೆ ಕೆಲವೇ ವಸ್ತುಗಳ ವಿಷಯಕವಾಗಿ ಜೀವಾತ್ಮರಲ್ಲಿರುವ ನಾನು, ನನ್ನದೆಂಬ ಈ ಅನಾದಿ ಮೋಹ ಮಮಕಾರವೇ ಸಂಸಾರವು. ''ಸಂಸರತೀತಿ ಸಂಸಾರಃ'' ಎನ್ನುವ ವ್ಯುತ್ಪತ್ತಿಯ ಮೇರೆಗೆ ಜೀವಾತ್ಮನಿಗೆ ಆಶೆ ತೋರಿಸಿ ಸದಾಕಾಲದಲ್ಲಿ ಆತನನ್ನು ತಿರುಗುವಂತೆ ಮಾಡಿದೆ ಈ ಮೋಹರೂಪವಾದ ಸಂಸಾರವು.

ಈ ರೀತಿಯಾಗಿ ''ತದೈಕ್ಷತ ಬಹು ಸ್ಯಾಂ ಪ್ರಜಾಯೇಯ''

(ಛಾಂ. ಉ. ೬–೨– ೩)

ಎನ್ನುವಂತೆ ಈಶ್ವರನ ಸತ್ಯಸಂಕಲ್ಪದಿಂದ ರಚಿತವಾದದ್ದು ''ಜಗತ್ತು''; ಮತ್ತು ಜಾಗ್ರದವಸ್ಥೆಯಿಂದ ಮುಕ್ತಿ ಹೊಂದುವವರೆಗೆ ಜೀವಾತ್ಮನ ಅವಿದ್ಯೆಯಿಂದ ಕಲ್ಪಿತವಾದ

ನಾನು, ನನ್ನದೆಂಬ ಅಭಿಮಾನವೇ ''ಸಂಸಾರ''ವು. ಜೀವಾತ್ಮನ ಈ ಸಂಸಾರವು ಅವಿದ್ಯಾ ಕಲ್ಪಿತವಾಗಿರುವುದರಿಂದ, ಅದು ತತ್ತ್ವಜ್ಞಾನದಿಂದ ನಿವೃತ್ತವಾಗುವುದು ; ಆದರೆ ಜಗತ್ತು ಶಿವ ಸ್ವರೂಪವಾದ್ದರಿಂದ ಅದು ಜ್ಞಾನದಿಂದ ನಿವೃತ್ತವಾಗಲಾರದು.

ಜಗತ್ತಿನ ಉತ್ಪತ್ತಿಗೆ ಪರಶಿವನು ನಿಮಿತ್ತಕಾರಣನು ಹಾಗೂ ಅವನಲ್ಲಿ ಅವಿನಾಭಾವ ಸಂಬಂಧಿನಿಯಾದ ಶಕ್ತಿಯು ಉಪಾದಾನ ಕಾರಣವಾಗಿರುವುದು ; ಆದರೆ ಜೀವಾತ್ಮನ ಸಂಸಾರವು ಕಲ್ಪಿತವಾಗಿರುವುದರಿಂದ, ಇದಕ್ಕೆ ಉಪಾದಾನ ಕಾರಣವಿಲ್ಲ. ಆದರೆ ಜೀವಾತ್ಮನಲ್ಲಿಯ ಅವಿದ್ಯಾಶಕ್ತಿಯು ಮಾತ್ರ ನಿಮಿತ್ತ ಕಾರಣವಾಗಿರುವುದು. ಹೀಗೆ ಉತ್ಪತ್ತಿಯ ಭೇದವನ್ನವಲೋಕಿಸಿದಾಗಲೂ, ಜಗತ್ತು ಹಾಗೂ ಸಂಸಾರಗಳಲ್ಲಿಯ ಭೇದವು ಸ್ಪಷ್ಟವಾಗಿ ತೋರುವುದು.

ಜೀವಾತ್ಮನಿಗೆ ಜ್ಞಾನೋದಯವಾಗಲು ಆತನ ಸಂಸಾರವು ಬಾಧಿತಗೊಂಡರೂ, ಈಶ ನಿರ್ಮಿತವಾದ ಜಗತ್ತಿಗೆ ಅದಾವ ಬಾಧೆಯೂ ಆಗಲಾರದು. ಆದರೆ ಜಗತ್ತಿನ ಲಯವು ಈಶ್ವರನ ತಿರೋಧಾನ ಶಕ್ತಿಯಿಂದ ಮಾತ್ರ ಆಗಲು ಸಾಧ್ಯ. ಸಂಸಾರವೇ ಸುಖ–ದುಃಖಗಳಿಂದ ಕೂಡಿಕೊಂಡಿರುವುದು. ಜಗತ್ತು ಸುಖ–ದುಃಖಗಳಿಂದ ಮಿಶ್ರಿತ ವಾದದ್ದಲ್ಲ ; ಅಂತೆಯೇ ಜೀವನ್ಮುಕ್ತರು ಸಂಸಾರವನ್ನು ಕಳೆದುಕೊಂಡು ಜಗತ್ತಿನಲ್ಲಿ ವಾಸಿಸುತ್ತಿದ್ದರೂ, ಸುಖ–ದುಃಖಗಳ ಲೇಪವಿಲ್ಲದೇ ಜೀವಿಸುತ್ತಿರುತ್ತಾರೆ.

ಹೀಗೆ ಜಗತ್ತು ಮತ್ತು ಸಂಸಾರಗಳ ಬಗ್ಗೆ ಕೂಲಂಕಷವಾಗಿ ವಿಚಾರಮಾಡಿದ ವೀರಶೈವ ಆಚಾರ್ಯರು, ಜಗತ್ತನ್ನು ಸತ್ಯವೆಂಬುದಾಗಿ ಸ್ವೀಕರಿಸಿ, ಸಂಸಾರವನ್ನು ತುಚ್ಛವಾದುದನ್ನಾಗಿಯೂ, ಹೇಯವಾದುದನ್ನಾಗಿಯೂ ಉಪದೇಶಿಸಿದ್ದಾರೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–''ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ'', ''ತಥಾ ಶಿವಾತ್ಸಮುತ್ಪನ್ನಂ ಶಿವ ಏವ ಚರಾಚರಮ್'', ''ತಸ್ಮಾಚ್ಛಿವ ಮಯಂ ಸರ್ವಂ ಜಗದೇತಚ್ಚರಾಚರಮ್'', ''ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ'' ಇತ್ಯಾದಿಯಾಗಿ, ಸಿದ್ಧಾಂತ ಶಿಖಾಮಣಿಯ ಶಿವಜಗನ್ಮಯ ಸ್ಥಲದಲ್ಲಿ, ಶಿವ–ಶಕ್ತಿಯರ ವಿಲಾಸವಾದ ಈ ಜಗತ್ತು ಶಿವ–ಶಕ್ತಿಯರಂತೆ ಸತ್ಯವಾದ ದ್ದೆಂದು ಅಪ್ಪಣೆಕೊಡಿಸಿದ್ದಾರೆ. ತಂತುಗಳಿಂದ ನಿರ್ಮಿತವಾದ ವಸ್ತುವು ಹೇಗೇ ತಂತು ಮಯವೋ, ಮಣ್ಣಿನಿಂದ ನಿರ್ಮಿತವಾದ ಕೊಡವು ಹೇಗೆ ಮೃದ್ರೂಪವಾದುದೋ, ಹಾಗೆಯೇ ಶಿವ–ಶಕ್ತಿಯರಿಂದುತ್ಪನ್ನವಾದ ಜಗತ್ತಾದರೂ ಶಿವ–ಶಕ್ತಿಯರ ಸ್ವರೂಪ ವಾದದ್ದು; ಆದ್ದರಿಂದ ಅದೆಂದಿಗೂ ಸುಳ್ಳಾಗಲಾರದು. ಈ ಜಗತ್ತಿಗೆ ಸುಳ್ಳೆಂದು ಹೇಳಿದ ಅದೆಷ್ಟೋ ವ್ಯಕ್ತಿಗಳು ಹಾಗೂ ಅವರ ಸಾಹಿತ್ಯವೆಲ್ಲ ಕಾಲಗರ್ಭದಲ್ಲಿ ಸುಳ್ಳಾಗಿ ಹೋಗಿವೆಯೇ ವಿನಹ, ಜಗತ್ತು ಮಾತ್ರ ಅಂದಿನಿಂದ ಇಂದಿನವರೆಗೆ ಯಥಾವತ್ತಾಗಿಯೇ ಕಂಗೊಳಿಸುತ್ತಿದೆ. ಅಂತೆಯೇ ಶ್ರೀ ಪತಿ ಪಂಡಿತಾರಾಧ್ಯರು–

''ಜೀವಃ ಸತ್ಯಂ ಜಗತ್ಸತ್ಯಂ ಶಿವಃ ಸತ್ಯಂ ಸ್ವಭಾವತಃ ।
ತಯೋರಭೇದಃ ಸತ್ಯಂ ವಾ ಕ್ರಿಮಿಭ್ರಮರಯೋರಿವ ॥

(೨–೩–೪೦)

ಎಂಬುದಾಗಿ ಶ್ರೀಕರ ಭಾಷ್ಯದಲ್ಲಿ ಜಗತ್ತಿನ ಸತ್ಯತ್ವವನ್ನು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ.

ಇನ್ನು ಜಗತ್ತನ್ನು ಸುಳ್ಳೆಂದು ಹೇಳುವ ಅದ್ವೈತ ವೇದಾಂತಿಗಳ ಅಭಿಪ್ರಾಯವಾದರೂ, ಜೀವಾತ್ಮನ ಮನೋಮಯ ಸಂಸಾರವನ್ನು ಅಲ್ಲಗಳೆಯುವದರಲ್ಲಿಯೇ ಪರ್ಯವಸಾನ ಹೊಂದುವುದಾಗಿ ತಿಳಿಯಬೇಕು. ಆದ್ದರಿಂದ ಶ್ರೀ ವಿದ್ಯಾರಣ್ಯಸ್ವಾಮಿಗಳು ಪಂಚದಶಿಯಲ್ಲಿ- ಈಶ ಸೃಷ್ಟಿಯು ಸುಖ–ದುಃಖಕ್ಕೆ ಹೇತುವಾದದ್ದಲ್ಲ ; ಕಿಂತು ಜೀವ ಸೃಷ್ಟಿಯೇ ಸುಖ–ದುಃಖಕ್ಕೆ ಕಾರಣವಾದದ್ದೆಂಬುದಾಗಿ ಅನೇಕ ದೃಷ್ಟಾಂತಗಳ ಮೂಲಕವಾಗಿ ಪ್ರತಿಪಾದಿಸಿದ್ದಾರೆ. ಅದಕ್ಕೋಸ್ಕರವಾಗಿ, ಕಾಣುವ ಜಗತ್ತು ಸತ್ಯ–ಶಿವ– ಸುಂದರವಾದದ್ದು ; ಮನೋಮಯವಾದ ಜೀವಾತ್ಮನ ಸಂಸಾರವು ಅಮಂಗಲವಾದದ್ದು ; ಅಂತೆಯೇ ಅದು ಹೇಯವೆಂಬುದಾಗಿ ತಿಳಿಯಬೇಕು.

ಮನೋಮಯವಾದ ಜೀವಾತ್ಮರ ಸಂಸಾರವು ''ಪಿಂಡೇ ಪಿಂಡೇ ಮತಿರ್ಭಿನ್ನಾ'' ಎನ್ನುವ ಉಕ್ತಿಯಂತೆ, ಎಷ್ಟು ಶರೀರಗಳೋ ಅಷ್ಟೂ ಮನಸ್ಸುಗಳಾಗಿರುವುದರಿಂದ, ಪ್ರತಿಯೊಬ್ಬ ಜೀವಾತ್ಮನ ಸಂಸಾರವೂ ಭಿನ್ನ–ಭಿನ್ನವಾಗಿಯೇ ಇರುತ್ತದೆ. ಆದ್ದರಿಂದ ಜಗತ್ತಿನಲ್ಲಿ ಏಕರೂಪತೆ ಇದ್ದರೂ, ಸಂಸಾರದಲ್ಲಿ ಏಕರೂಪತೆ ಕಂಡುಬರುವುದಿಲ್ಲ, ಪ್ರತಿಯೊಬ್ಬ ಜೀವಾತ್ಮನೂ ನಿರ್ಮೋಹಿಯಾಗಿ ಮೋಕ್ಷವನ್ನು ಪಡೆಯುವವರೆಗೆ ಅವರವರ ಸಂಸಾರವು ಅವರನ್ನು ಅವರು ಹೋದೆಡೆಯಲ್ಲೆಲ್ಲ ಹಿಂಬಾಲಿಸುತ್ತಿರುತ್ತದೆ. ಆದ್ದರಿಂದ ಶ್ರೀದೇವಿ ಕಾಲೋತ್ತರದಲ್ಲಿ, ''ಚಿತ್ತೇ ಚಲತಿ ಸಂಸಾರೋ ನಿಶ್ಚಲೇ ಮೋಕ್ಷ ಏವ ಹಿ''–ಸಂಸಾರದ ಮೂಲವು ಮನಸ್ಸೆಂಬುದಾಗಿ ಹೇಳಲ್ಪಟ್ಟಿದೆ.

ಶ್ರೀ ಶಂಕರಾಚಾರ್ಯರು ವಿವೇಕಚೂಡಾಮಣಿಯಲ್ಲಿ ''ಸಂಸಾರ ವೃಕ್ಷಕ್ಕೆ ಅಜ್ಞಾನವೇ ಬೀಜವು, ದೇಹವೇ ನಾನೆಂಬ ಭಾವನೆಯೇ ಅಂಕುರವು, ಪುನಃ ಪುನಃ ಶಬ್ದಾದಿ ವಿಷಯಗಳನ್ನು ಭೋಗಿಸಬೇಕೆನ್ನುವ ಇಚ್ಛಾರೂಪವಾದ ರಾಗವೇ ಚಿಗುರೆಲೆಗಳು, ಜೀವಾತ್ಮನು ಮಾಡುವ ಕರ್ಮಗಳೇ ಜಲಧಾರೆಯು, ಶರೀರವೇ ಬೊಡ್ಡೆಯು, ಪ್ರಾಣಗಳೇ ಟೊಂಗೆಗಳು, ಇಂದ್ರಿಯಗಳ ಸಮೂಹವೇ ಗೊಂಚಲುಗಳು, ಶಬ್ದಾದಿ ವಿಷಯಗಳೇ ಪುಷ್ಪಗಳು, ದುಃಖವೇ ಫಲವು ಮತ್ತು ಆ ಫಲವನ್ನು ಭೋಗಿಸುವ ಜೀವಾತ್ಮನೇ ಪಕ್ಷಿ'' ಎಂಬುದಾಗಿ ಸಂಸಾರ ವೃಕ್ಷದ ವಿಶ್ಲೇಷಣೆಯನ್ನು ಮಾಡಿದ್ದಾರೆ.

ಸಂಸಾರದಲ್ಲಿ ಮೊದಮೊದಲು ಸುಖದಾಭಾಸವಾಗಿ ಕೊನೆಗೆ ದುಃಖವೇ ಕೈಸೇರುವುದು. ಇದು ಸರ್ವಾನುಭವ ಸಿದ್ಧವಾದುದು. ಆದುದರಿಂದ–

ಜನ್ಮ ದುಃಖಂ ಜರಾದುಃಖಂ ಜಾಯಾದುಃಖಂ ಪುನಃ ಪುನಃ ।
ಸಂಸಾರ ಸಾಗರೋ ದುಃಖಂ ತಸ್ಮಾಜ್ಜಾಗ್ರತ ಜಾಗ್ರತ ॥

ಎಂಬುದಾಗಿ ಜ್ಞಾನಿಗಳು ಮೋಹದ ಮುಸುಕಿನಲ್ಲಿ ನಿದ್ರೆಗೈಯುತ್ತಿರುವ ಜೀವಿಗಳನ್ನು ಎಚ್ಚರಿಸಿದ್ದಾರೆ. ಜನನ, ಜರಾ, ಮರಣ, ಜಾಯಾ ಮತ್ತು ಪುತ್ರ ಇವೆಲ್ಲವುಗಳೂ ದುಃಖದಾಯಿಗಳಾದ ಜೀವಾತ್ಮನ ಸಂಸಾರ ಸಾಮಗ್ರಿಗಳು. ಮನದ ಕಶ್ಮಲತೆಯುಳ್ಳ ಜೀವಿಗಳಿಗೆ ಈ ಸಾಮಗ್ರಿಗಳಿಂದ ಕ್ಷಣಿಕವಾದ ಸುಖದ ಪ್ರಾಪ್ತಿಯಾದರೂ, ನಿರ್ಮಲಾಂತಃಕರಣವುಳ್ಳ ಸಾಧಕರಿಗೆ ಅವುಗಳ ಯಥಾರ್ಥರೂಪದ ಅರಿವಾಗಿ ಅವುಗಳಲ್ಲಿ ಹೇಯ ಬುದ್ಧಿಯು ಪ್ರಾದುರ್ಭವಿಸುತ್ತದೆ.

ಸಂಸಾರದ ಬಗ್ಗೆ ಉಂಟಾದ ಈ ಹೇಯಭಾವನೆಯನ್ನೇ ವೈರಾಗ್ಯವೆನ್ನುವರು. ''ತ್ಯಾಗಾಜ್ಜಗತಿ ಪೂಜ್ಯಂತೇ ಪಶು-ಪಾಷಾಣ ಪಾದಪಾಃ'', ''ವಿರತಿ ವಜ್ರದಿ ಮೋಹ ಗಿರಿಯ ನುಗ್ಗೊಡೆಯುವುದೇ ಚಂದಮಮು'', ''ವೈರಾಗ್ಯಮೇವಾಭಯಮ್'' ಮೊದಲಾದ ಉಕ್ತಿಗಳನ್ನು ನೋಡಿದಾಗ, ತ್ಯಾಗ, ವಿರತಿ, ವಿರಾಗ ಮತ್ತು ವೈರಾಗ್ಯ ಇವೆಲ್ಲವುಗಳೂ ಪರ್ಯಾಯ ಶಬ್ದಗಳಂತೆ ತೋರುತ್ತವೆ- ಆದರೂ ತ್ಯಾಗಕ್ಕಿಂತ ವಿರತಿ, ವಿರಾಗ ಮತ್ತು ವೈರಾಗ್ಯ ಶಬ್ದಗಳು ಬಹಳ ಅರ್ಥಗರ್ಭಿತಗಳಾದವುಗಳು. ಕೇವಲ ಶಾರೀರಿಕವಾಗಿ ವಸ್ತು ಅಥವಾ ವ್ಯಕ್ತಿಗಳನ್ನು ಬಿಟ್ಟಿರುವದು ತ್ಯಾಗವು ; ಮಾನಸಿಕವಾಗಿ ಬಿಟ್ಟಿರುವುದು ವಿರತಿ ಅಥವಾ ವೈರಾಗ್ಯವು.

ವೈರಾಗ್ಯಂ ದ್ವಿವಿಧಂ ಸೂಕ್ಷ್ಮಂ ತದ್ಭೇದಮವಧಾರಯ ।
ಜಿಜ್ಞಾಸಾ ಮುಖ್ಯಮೇಕಂ ಸ್ಯಾಜ್ಜಿಹಾಸಾಮುಖ್ಯಮೇವ ಚ ॥

ಎಂದು ಬೋಧಸಾರ ಗ್ರಂಥದಲ್ಲಿ ಜಿಹಾಸಾ ವೈರಾಗ್ಯ ಮತ್ತು ಜಿಜ್ಞಾಸಾ ವೈರಾಗ್ಯ ವೆಂಬುದಾಗಿ ವೈರಾಗ್ಯದ ದ್ವೈವಿಧ್ಯವನ್ನು ಪ್ರತಿಪಾದಿಸಿರುತ್ತಾರೆ.

ರಾಜ್ಯಭ್ರಷ್ಟಾ ದೀರ್ಘರೋಗಾಃ ಪರಾಧೀನಾ ಹತಶ್ರಿಯಃ ।
ಯೇ ವಿರಕ್ತಾಸ್ತ್ವಪಸ್ಯಂತಿ ಜಿಹಾಸಾ ಮುಖ್ಯಮೇವ ತತ್ ॥

ರಾಜ್ಯದ ಚ್ಯುತಿಯಿಂದ, ದೀರ್ಘಕಾಲೀನ ರೋಗದಿಂದ, ಪರಾಧೀನತೆಯಿಂದ ಮತ್ತು ಸಂಪತ್ತೆಲ್ಲವೂ ನಾಶವಾಗುವುದರಿಂದ ವಿರಕ್ತಿ ಭಾವನೆಯುಂಟಾಗಿ, ಅರಣ್ಯದಲ್ಲಿ ಹೋಗಿ ತಪಸ್ಸನ್ನಾಚರಿಸುವುದು ಜಿಹಾಸಾ ವೈರಾಗ್ಯವೆನಿಸುವುದು. ಇದನ್ನು ಅಭಾವ ವೈರಾಗ್ಯ ವೆಂತಲೂ ಕರೆಯುತ್ತಾರೆ ; ಆದರೆ ಇದು ಅಧಮ ವೈರಾಗ್ಯವು ; ಯಾಕೆಂದರೆ ಇವನಲ್ಲಿ ಭೋಗವಾಸನೆಯು ಸಂಪೂರ್ಣವಾಗಿ ನಿವೃತ್ತಿಯಾಗದಿರುವ ಕಾರಣ, ಜನ್ಮಾಂತರದಲ್ಲಿ ಈತನು ಪುನಃ ಭೋಗಾಸಕ್ತನಾಗುವನು. ಇನ್ನು

ಆಧಿವ್ಯಾಧಿಭಯೋದ್ವೇಗಪಾರತಂತ್ರ್ಯಾದಿವರ್ಜಿತಾಃ ।
ಯೇ ಧೀರಾ ಮುಕ್ತಿಮಿಚ್ಛಂತಿ ಶೃಣು ತೇಷಾಮಯಂ ಕ್ರಮಃ ॥
ಕಾಮಧೇನುರ್ಗೃಹೇ ಯೇಷಾಂ ನಿವಾಸೋ ನಂದನೇ ವನೇ ।
ಕಾಶ್ಯಪಾದ್ಯಾಸ್ತ್ವಪಸ್ಯಂತಿ ಜಿಜ್ಞಾಸಾ ಮುಖ್ಯಮೇವ ತತ್ ॥

ಆಧಿ-ವ್ಯಾಧಿ-ಭಯ-ಉದ್ವೇಗ-ಪರತಂತ್ರತೆ ಮುಂತಾದ ಯಾವ ತೊಂದರೆಯೂ ಇಲ್ಲದಿದ್ದರೂ, ಕಾಮಧೇನುವಿನ ಸನ್ನಿಧಿ, ನಂದನವನ ನಿವಾಸ ಮುಂತಾದ ಸುಖ ಸಾಮ್ರಾಜ್ಯವಿದ್ದಾಗಲೂ, ಯಾರು ಮುಕ್ತಿಗಾಗಿ ತಪಸ್ಸನ್ನಾಚರಿಸು ತ್ತಾರೋ, ಅವರಲ್ಲಿಯ ಈ ವೈರಾಗ್ಯವನ್ನು ಜಿಜ್ಞಾಸಾ ವೈರಾಗ್ಯವೆನ್ನುವರು. ಈ ಎರಡೂ ವೈರಾಗ್ಯಕ್ಕಿಂತಲೂ ಉತ್ಕೃಷ್ಟವಾದ ಮತ್ತೊಂದು ವೈರಾಗ್ಯವಿದೆ. ಅದನ್ನು ಸಹಜ ವೈರಾಗ್ಯವೆನ್ನುತ್ತಾರೆ.

''ಸರ್ವಪರಿಗ್ರಹಭೋಗತಃ ಕಸ್ಯ ಸುಖಂ ನ ಕರೋತಿ ವಿರಾಗಃ ?'' ಎನ್ನುವ ಉಕ್ತಿಯಂತೆ, ನಿಜವಾದ ವೈರಾಗ್ಯವೇ ಸುಖದಾಯಿಯಾಗಿದೆ. ಶ್ರೀ ನಿಜಗುಣ ಶಿವಯೋಗಿಗಳು-

ವನಿತಾದಿ ದೋಷದರುಶನವೇ ನಿಮಿತ್ತವಾ ।
ವನುವಿಂದವನು ಬಿಡುವುದು ರೂಪು ಬಳಿಕಾ ॥
ಮನವತ್ತಲೆರಗದಾ ನಿಷ್ಠೆಯದು ಕಾರ್ಯವೆಂ ।
ದೆನುತೆ ಬರೆವುದು ವಿರಾಗತೆಗೆ ನೆಲೆಯೆಂದು ॥

(ಕೈ.ಪ.ಜ್ಞಾ.ಸ್ಥ ೩–೨)

ಇಹಲೋಕದ ಸತಿ, ಪುತ್ರ, ಧನಾದಿಗಳಲ್ಲಿ ಅನಿತ್ಯ, ಅಶುಚಿ, ದುಃಖ–ದೋಷಾದಿಗಳನ್ನು ಕಾಣುವದು ವೈರಾಗ್ಯಕ್ಕೆ ''ಬೀಜ''ವೆಂಬುದಾಗಿಯೂ, ಬಳಿಕ ಯಾವುದಾದರೊಂದು ನಿಮಿತ್ತದಿಂದ ಆ ವಿಷಯಗಳನ್ನು ತ್ಯಾಗಮಾಡುವದು ''ರೂಪು''ವೆಂಬುದಾಗಿಯೂ, ಬಿಟ್ಟ ವಿಷಯಗಳತ್ತ ಪುನಃ ಮನವು ತಿರುಗದಂತೆ ಮಾಡುವದೇ ''ಕಾರ್ಯ''ವೆಂತಲೂ ಹೇಳಿ, ವೈರಾಗ್ಯದ ಬೀಜ, ರೂಪು ಮತ್ತು ಕಾರ್ಯಗಳ ಬಗ್ಗೆ ಸೂಕ್ಷ್ಮವಾಗಿ ನಿರೂಪಿಸಿದ್ದಾರೆ. ಇದು ಐಹಿಕ ಹಾಗೂ ಪಾರಲೌಕಿಕ ವಿಷಯಗಳ ಬಗ್ಗೆ ಕಾರ್ಯಸ್ವರೂಪವನ್ನು ತಾಳಿದಾಗಲೇ ಪೂರ್ಣತ್ವವನ್ನು ಪಡೆಯುವುದು. ಆದ್ದರಿಂದಲೇ ''ಇಹಾಮುತ್ರ ಫಲಭೋಗ ವಿರಾಗಃ'' ಎಂಬುದಾಗಿ ವೈರಾಗ್ಯಕ್ಕೆ ಲಕ್ಷಣವನ್ನು ಬರೆದಿದ್ದಾರೆ.

ಈ ರೀತಿಯಾಗಿ ಸಂಸಾರವೆಂದರೇನು ? ಹಾಗೂ ಅದರ ಬಗ್ಗೆ ಉಂಟಾಗುವ ಹೇಯಬುದ್ಧಿಯೆಂಬ ವೈರಾಗ್ಯವೆಂದರೇನು ? ಎನ್ನುವ ಬಹು ಮುಖ್ಯಗಳಾದ ಎರಡು ಪ್ರಶ್ನೆಗಳ ಸಾಮಾನ್ಯವಾದ ಸಮಾಧಾನವನ್ನು ಸಮೀಕ್ಷಿಸಿದ್ದಾಯಿತು. ಇನ್ನು ಇವುಗಳ ಬಗ್ಗೆ ಕೂಲಂಕಷವಾಗಿ ವಿಚಾರಿಸೋಣ.

ಓಂ ಶಾಂತಿಃ ಶಾಂತಿಃ ಶಾಂತಿಃ

ಸಂಸಾರ ಹೇಯಸ್ಥಲ

ದಿನಾಂಕ ೨೫ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ-೨

ಐಹಿಕೇ ಕ್ಷಣಿಕೇ ಸೌಖ್ಯೇ ಪುತ್ರದಾರಾದಿಸಂಭವೇ ।
ಕ್ಷಯಿತ್ವಾದಿಯುತೇ ಸ್ವರ್ಗೇ ಕಸ್ಯ ವಾಂಛಾ ವಿವೇಕಿನಃ ? (ಸಿ. ಶಿ. ೫.೫೮)

ಇಹಲೋಕದಲ್ಲಿ ಸತಿ–ಸುತಾದಿಗಳಿಂದ ಉಂಟಾಗುವ ಸುಖವು ಕ್ಷಣಿಕವಾಗಿರುವುದರಿಂದ ಮತ್ತು ಪಾರಲೌಕಿಕ ಸ್ವರ್ಗಾದಿ ಸುಖವು ಕ್ಷಯ–ಪತನಾದಿಗಳಿಂದ ಕೂಡಿರುವುದರಿಂದ, ವಿವೇಕಿಯಾದವನು ಈ ಎರಡೂ ಲೋಕಗಳ ಸುಖಗಳಲ್ಲಿ ಅಭಿಲಾಷೆಯುಳ್ಳವನಾಗವುದಿಲ್ಲ.

ಸಾಂಸಾರಿಕ ಸುಖವು ಐಹಿಕವೆಂಬುದಾಗಿಯೂ, ಪಾರಲೌಕಿಕವೆಂಬುದಾಗಿಯೂ ಎರಡು ವಿಧವಾಗಿದೆ. ಇಹಲೋಕದಲ್ಲಿ ಹೆಂಡರು, ಮಕ್ಕಳು, ಹೊಲ, ಮನೆ, ಧನ, ಕನಕ ಮುಂತಾದ ವಿಷಯಗಳ ಸಂಪರ್ಕದಿಂದ ಉಂಟಾಗುವ ಮಾನಸಿಕ ತೋಷವನ್ನು ಐಹಿಕ ಸುಖವೆಂತಲೂ, ಸ್ವರ್ಗಾದಿಗಳಲ್ಲಿ ಅಮೃತಪಾನ, ಅಪ್ಸರಸ್ತ್ರೀಯರ ಭೋಗ ಮತ್ತು ನಂದನವನ ವಿಹಾರಾದಿಗಳಿಂದುಂಟಾಗುವ ಕ್ಷಣಿಕ ತೃಪ್ತಿಯನ್ನು ಪಾರಲೌಕಿಕ ಸುಖವೆಂತಲೂ ಕರೆಯುವದುಂಟು. ಈ ಉಭಯ ವಿಧ ಸುಖಗಳಿಗೆ ಸುಮಧುರವಾದ ಶಬ್ದ, ಅನುಕೂಲವಾದ ವಸ್ತು ಇಲ್ಲವೇ ವ್ಯಕ್ತಿಯ ಸ್ಪರ್ಶ, ರಮಣೀಯವಾದ ರೂಪ, ಜಿಹ್ವಾಪೇಕ್ಷಿತ ರಸ ಮತ್ತು ಘ್ರಾಣಾಭೀಷ್ಟಗಳಾದ ಗಂಧಗಳೆಂಬ ಪಂಚವಿಷಯಗಳೇ ನಿಮಿತ್ತಗಳಾಗಿರುತ್ತವೆ.

''ಐಹಿಕೇ ಕ್ಷಣಿಕೇ ಸೌಖ್ಯೇ'' ಎನ್ನುವ ಶ್ರೀ ಜ॥ ರೇಣುಕ ಭಗವತ್ಪಾದರ ಉಪದೇಶದಂತೆ, ವೈಷಯಿಕ ಸುಖವು ಯಾರಿಗೂ ಸಂಪೂರ್ಣ ತೃಪ್ತಿಯನ್ನು ಕೊಟ್ಟಿಲ್ಲ, ಕೊಡುವದೂ ಇಲ್ಲ, ಅದರಲ್ಲಿ ಕೊಡುವ ಸಾಮರ್ಥ್ಯವಾದರೂ ಇರುವುದಿಲ್ಲ. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

''ಪಡೆವೆಡೆಯೊಳು ಮೊದಲತ್ಯಾಯಾಸ ।
ನಡುವಿನಿತಿಹುದಲೆ ಸುಖದಾಭಾಸ ॥
ಕಡೆಯೊಳು ಹೇಸಿಗೆ ಮುಸುಗುತ್ತಿಹುದು ।
ಸಿಡಿಮಿಡಿಯಾಗಳೆ ಮನಸಿಂಗಹುದು ॥''

(ಪಾ. ಗೀತೆ ೭–೪)

ಎಂಬುದಾಗಿ ಪಾರಮಾರ್ಥ ಗೀತೆಯಲ್ಲಿ ವೈಷಯಿಕ ಸುಖದ ಕ್ಷಣಿಕತ್ವದ ಸುಂದರವಾದ ಸಜೀವ ಚಿತ್ರವನ್ನು ಚಿತ್ರಿಸಿದ್ದಾರೆ.

ಪ್ರಾಸಂಗಿಕವಾಗಿ ''ಸುಖ'', ''ದುಃಖ'' ಹಾಗೂ ''ಆನಂದ'' ಶಬ್ದಗಳ ಗೂಢಾರ್ಥವನ್ನಿಲ್ಲಿ ಪರ್ಯಾಲೋಚಿಸೋಣ. ನಾವೆಲ್ಲ ತಿಳಿದಂತೆ ಸುಖ ಹಾಗೂ ದುಃಖ ಇವೆರಡೂ ಬಹಳ ಭಿನ್ನ ಪದಾರ್ಥಗಳೇನಲ್ಲ. ಇವೆರಡೂ ಒಂದೇ ನಾಣ್ಯದ ಎರಡು

ಮುಖಗಳಿದ್ದಂತೆ. ನಾವು ಸದ್ಯಃ ಅನುಭವಿಸುತ್ತಿರುವ ಸುಖವು ಕಾಲಾಂತರದಲ್ಲಿ ದುಃಖ ರೂಪವಾಗಿಯೂ, ದುಃಖವು ಸುಖರೂಪವಾಗಿಯೂ ಪರಿವರ್ತಿಸುವುದನ್ನು ಕಾಣುತ್ತಲಿದ್ದೇವೆ. ಆದ್ದರಿಂದ ಇವೆರಡರಲ್ಲಿ ಇರುವ ಭೇದವು ವಿರೋಧ ಪ್ರಯುಕ್ತ ವಾದದ್ದಲ್ಲ; ಕಿಂತು, ಪರಿಮಾಣ ಪ್ರಯುಕ್ತವಾದದ್ದು. ಕಡಿಮೆ ಪ್ರಮಾಣದ ಸುಖವನ್ನು ದುಃಖ ವೆಂತಲೂ, ಕಡಿಮೆ ಪ್ರಮಾಣದ ದುಃಖವನ್ನು ಸುಖವೆಂತಲೂ ನಾವು ವ್ಯವಹರಿಸುತ್ತೇವೆ.

ಸಂಸಾರದಲ್ಲಿ ಕೇವಲ ದುಃಖಾನುಭೂತಿಯೇ ಇದ್ದಿದ್ದರೆ, ಇಲ್ಲಿ ಯಾರೂ ಇರಲಪೇಕ್ಷಿಸುತ್ತಿದ್ದಿಲ್ಲ. ಆಶ್ಚರ್ಯದ ಸಂಗತಿಯೆಂದರೆ, ದುಃಖವೇ ಸುಖವೆಂಬ ತೆಳುವಾದ ಕವಚವನ್ನು ಹೊದ್ದು ಜೀವಿಗಳ ಎದುರು ಬಂದಾಗ ಅದರ ವಾಸ್ತವಿಕತೆಯನ್ನು ತಿಳಿಯದೇ ಅವರು ನಿತ್ಯಸುಖವಾದ ಮೋಕ್ಷವನ್ನು–

''ಭುಕ್ತಿಸುಖವು ಸಂಸಾರದೊಳುಂಟು ।
ಮುಕ್ತಿಯನ್ನೈದಲದರೊಳೇನುಂಟು ॥
ಕಲ್ಮರನಂತಿರೆ ನಿದ್ರಿತನಂತೆ ।
ಪಾಳ್ಮನೆಯೊಳಗಣ ದೀವಿಗೆಯಂತೆ ॥
ಎನಗದು ಬೇಡಿಹಪರವೇ ಸಾಕು ।
ಎನಗದರಿಂ ಸತ್ಕರ್ಮವೇ ಬೇಕು ॥

(ಪಾ. ಗೀತೆ ೭–೧)

ಈ ತೆರನಾದ ಕಲ್ಲು, ಮರ, ನಿದ್ರಿತ ಪುರುಷ ಹಾಗೂ ಹಾಳು ಮನೆಯ ದೀವಿಗೆಯಂತೆ ನಿಷ್ಪ್ರಯೋಜನವೆಂಬುದಾಗಿ ತಿರಸ್ಕರಿಸಿ ಸಂಸಾರದ ಮುಕ್ತಿಸುಖವನ್ನೇ ಅಪ್ಪಿಕೊಳ್ಳುತ್ತಾರೆ.

ನಾವು ದುಃಖದಲ್ಲಿಯೇ ನಿಂತಿದ್ದರೂ, ನಮ್ಮ ಲಕ್ಷ್ಯವು ಮುಂಬರುವ ಸುಖದ ಕಾಲ್ಪನಿಕ ಸಮುದ್ರದಲ್ಲಿ ಮುಳುಗಿರುತ್ತದೆ ; ಅಂತೆಯೇ ಆಗಿನ ದುಃಖದ ಅರಿವಾಗದೇ ಹೋಗುವುದು. ಇದರಿಂದ ಸುಖವು ಕೇವಲ ಭವಿಷ್ಯತ್ತಿನ ಆಶೆಯೇ ವಿನಹ ವಾಸ್ತವಿಕತೆ ಅದರಲ್ಲಿ ಇರುವುದಿಲ್ಲ. ಆದರೆ ಮನುಷ್ಯನಲ್ಲಿಯ ಸುಖದ ಆಶೆಯು ಅವನನ್ನು ಸದಾಕಾಲದಲ್ಲಿ ತಿರುಗಿಸುತ್ತಿರುತ್ತದೆ. ಸುಖದ ಪ್ರತಿದ್ವಂದ್ವಿ ದುಃಖ, ದುಃಖದ ಪ್ರತಿದ್ವಂದ್ವಿ ಸುಖ. ಆದರೆ ಆನಂದಕ್ಕೆ ಪ್ರತಿದ್ವಂದ್ವಿಯಾದದ್ದು ಅದಾವುದೂ ಇಲ್ಲದ ಕಾರಣ, ಆನಂದವು ಪ್ರತಿದ್ವಂದ್ವಿರಹಿತವಾದುದು. ಅಂತೆಯೇ ದ್ವಂದ್ವಾತೀತವಾದ ಆತ್ಮಾನುಭೂತಿಯೇ ಆನಂದವು. ಆದ್ದರಿಂದ ಶ್ರುತಿಗಳು ಆತ್ಮನನ್ನು ''ಆನಂದಘನಃ'' ಎಂಬುದಾಗಿ ವರ್ಣಿಸುತ್ತವೆ.

ಸಾಂಸಾರಿಕಗಳಾದ ಸುಖ–ದುಃಖಗಳು ತಮ್ಮ ಸೀಮೆಯನ್ನು ಮೀರಿದವೆಂದರೆ ಅಪಾಯಕಾರಿಗಳಾಗುವವು. ಅದರಲ್ಲಿಯೂ ದುಃಖಾಘಾತಕ್ಕಿಂತ ಸುಖದ ಆಘಾತವು ಹೆಚ್ಚು ಪ್ರಾಣಾಂತಕಾರಿಯೇ ಸರಿ.

ಆಫೀಸಿನಲ್ಲಿ ಕೆಲಸ ಮಾಡುವ ಸಿಪಾಯಿಯೋರ್ವನಿಗೆ ಲಾಟ್ರಿ ಹತ್ತಿದೆ. ಒಂದು ಲಕ್ಷ ರೂಪಾಯಿಗಳ ಬಹುಮಾನವದು. ಆತನು ಆಫೀಸಿನಲ್ಲಿದ್ದಾಗ ಮನೆಗೆ ಸುದ್ದಿ ತಿಳಿಯಿತು. ಹೆಂಡತಿ ಗಾಬರಿಯಾಗಿ ಸಮೀಪದ ಮಂದಿರಕ್ಕೆ ಓಡಿ ಹೋದಳು. ಅಲ್ಲಿಯ

ಪೂಜಾರಿಯನ್ನು ಭೆಟ್ಟಿಯಾಗಿ 'ಹೇಗಾದರೂ ಮಾಡಿ ನನ್ನ ಗಂಡನ ಪ್ರಾಣವನ್ನು ಉಳಿಸಿಕೊಳ್ಳಿ. ಆತನಿಗೆ ಒಂದು ಲಕ್ಷ ರೂಪಾಯಿಯ ಲಾಟ್ರಿ ದೊರೆತಿದೆ. ನಾವು ಬಡವರು. ನನ್ನ ಗಂಡ ತನ್ನ ಜೀವನದಲ್ಲಿ ಒಂದು ಸಾವಿರ ರೂಪಾಯಿಗಳನ್ನೂ ಕಂಡವನಲ್ಲ. ಈಗ ಒಂದು ಲಕ್ಷದ ಸುದ್ದಿಯನ್ನು ಕೇಳಿದೊಡನೆ ಆನಂದಾತಿರೇಕವಾಗಿ ಹುಚ್ಚನಾದರೂ ಆಗಬಹುದು; ಇಲ್ಲವೇ ಹೃದಯದ ಗಾಳಿ ನಿಂತಾದರೂ ಹೋಗಬಹುದು. ಅದಕ್ಕಾಗಿ ಏನಾದರೊಂದು ಉಪಾಯವನ್ನು ಹೇಳಿ' ಎಂಬುದಾಗಿ ಪ್ರಾರ್ಥಿಸಿದಳು.

ಆಗ ಪೂಜಾರಿ ಹೇಳಿದ–'ಹೇದರಬೇಡ ನಿನ್ನ ಗಂಡ ಮನೆಗೆ ಬಂದೊಡನೆ ನನ್ನನ್ನು ಕರೆ, ನಾನು ಆತನಿಗೆ ದೊರೆತ ಹಣದ ಬಗ್ಗೆ ಸ್ವಲ್ಪು ಸ್ವಲ್ಪು ಹೇಳಿ ಈತನನ್ನು ಉಳಿಸಿಕೊಡುವೆ.' ಆಫೀಸಿನಿಂದ ಗಂಡ ಮನೆಗೆ ಬಂದ. ಅಷ್ಟರೊಳಗೆ ಪೂಜಾರಿಯೂ ಮನೆಗೆ ಬಂದಿದ್ದಾನೆ. ಪೂಜಾರಿ ಹೇಳಿದ–ಏನಯ್ಯಾ ನಿನಗೆ ತಿಳಿದಿದೆಯಾ ? ನಿನಗೆ ಇಪ್ಪತ್ತೈದು ಸಾವಿರ ರೂಪಾಯಿಗಳ ಲಾಟ್ರಿ ದೊರೆತಿದೆ. ಪೂಜಾರಿ ವಿಚಾರಿಸಿದ್ದಾನೆ– ಒಮ್ಮೆಲೇ ಒಂದು ಲಕ್ಷವೆಂದರೆ ಈತನಿಗೆ ಹೃದಯಾಘಾತವಾಗಬಹುದು ; ಆದರೆ ಇಪ್ಪತ್ತೈದು, ಐವತ್ತು ಹೀಗೆ ಕ್ರಮಶಃ ಹೆಚ್ಚು ಹೆಚ್ಚುಮಾಡುತ್ತ ಹೋದರೆ ಇವನಿಗೆ ಅಪಾಯವಾಗಲಾರದೆಂದು.

ಪೂಜಾರಿಯ ಈ ಮಾತನ್ನು ಕೇಳಿದೊಡನೆ ಸಿಪಾಯಿಯು 'ಏನು ? ನನಗೆ ಇಪ್ಪತ್ತೈದು ಸಾವಿರ ರೂಪಾಯಿಗಳು ದೊರೆತಿವೆಯಾ ? ಇದು ಸತ್ಯವೇ ? ನಿಜವಾಗಿಯೂ ನನಗೆ ಅಷ್ಟು ಹಣ ದೊರೆತಿದ್ದರೆ ನಿಮಗೆ ಅದರಲ್ಲಿ ಅರ್ಧ ಪಾಲನ್ನು ಕೊಡುತ್ತೇನೆ ಎಂದ. ಈ ಮಾತನ್ನು ಕೇಳಿದೊಡನೆ ಪೂಜಾರಿಯು 'ಏನು ? ನನಗೆ ಅರ್ಧಪಾಲು ದೊರೆಯುವುದೇ' ? ಎಂದು ನುಡಿದವನೇ ಹೃದಯಾಘಾತದಿಂದ ಕ್ಷಣದಲ್ಲಿಯೇ ಅಸುನೀಗಿದ. ಪೂಜಾರಿಯು ಬಂದದ್ದು ಸಿಪಾಯಿಯ ಪ್ರಾಣ ಉಳಿಸಲು. ಆದರೆ ಮಂದಿರದಲ್ಲಿ ಪೈಸೆಗಳ ಎಣಿಕೆ ಮಾಡಿದ ಈತನಿಗೆ ಎಂದೂ ಕಲ್ಪಿಸದೇ ಇದ್ದ ಹನ್ನೆರಡುವರೆ ಸಾವಿರ ರೂಪಾಯಿಗಳು ತನಗೆ ಸಿಗುವುದಾಗಿ ಆಕಸ್ಮಾತ್ ತಿಳಿದೊಡನೆ ಸುಖಾತಿರೇಕವಾಗಿ ಹೃದಯಾಘಾತವಾಯಿತು.

ಇಲ್ಲಿ ಆಶ್ಚರ್ಯಕರ ಘಟನೆ ಏನೆಂದರೆ, ಎಂತಹ ದುಃಖ ಬಂದರೂ ಮುಂಬರುವ ಸುಖದ ಆಶೆ ಇರುವುದರಿಂದ, ಜೀವಿಯು ಜೀವಿಸಿರಬಹುದು ; ಆದರೆ ಸುಖವೇ ಅಧಿಕವಾಗಿ ಬಂದರೆ ಅದನ್ನು ಸಹಿಸುವದಾಗಲಾರದೇ ಪ್ರಾಣ ಬಿಡುತ್ತಾನೆ. ಆದ್ದರಿಂದ ದುಃಖಾಧಿಕ್ಯಕ್ಕಿಂತಲೂ ಸುಖಾಧಿಕ್ಯವೇ ಹೆಚ್ಚು ಅಪಾಯಕಾರಿಯು.

ಸುಖವಾದರೂ ಶಾಂತಿಯಲ್ಲ ; ಅದೊಂದು ಪ್ರೀತಿಕರವಾದ ಅಶಾಂತಿಯು. ಸಂಗೀತಗಾರನು ತಂಬೂರಿಯನ್ನು ಸುಮಧುರವಾಗಿ ನುಡಿಸುತ್ತಾನೆ, ಸುಶ್ರಾವ್ಯ ಕಂಠದಿಂದ ಸಂಗೀತವನ್ನು ಹಾಡುತ್ತಿರುತ್ತಾನೆ. ಕೇಳುವವರಿಗೆ ಮೊದಮೊದಲು ಅದು ಪ್ರೀತಿಕರವಾಗಿ ತೋರುತ್ತದೆ. ತಿಳಿದು ನೋಡಿದರೆ ಅದೊಂದು ಗದ್ದಲವೇ ಸರಿ. ಎಷ್ಟು ಕಾಲದವರೆಗೆ ಅದನ್ನು ಸಹಿಸಬಹುದು ? ತಾಸು, ಎರಡು ತಾಸುಗಳಾದರೆ ಬೇಸರವಾಗುವದು. ಮೊದಮೊದಲು ಗೋಣುಹಾಕುತ್ತ ತಾಳ ಬಾರಿಸುವ ವ್ಯಕ್ತಿಯೇ ಬಹಳ ಸಮಯ

ವಾದರೆ, ಬೇಸರಗೊಂಡು ಅಲ್ಲಿಂದ ಎದ್ದು ಹೋಗುತ್ತಾನೆ. ಆದ್ದರಿಂದ ಪ್ರೀತಿಕರ ಅಶಾಂತಿಯೇ ಸುಖ, ಅಪ್ರೀತಿಕರ ಅಶಾಂತಿಯೇ ದುಃಖ.

ಸುಖ–ದುಃಖಗಳು ಹೊರಗಿನ ಯಾವುದೇ ವಸ್ತು ಇಲ್ಲವೇ ವ್ಯಕ್ತಿಗಳನ್ನು ನಿಮಿತ್ತ ಮಾಡಿಕೊಂಡು ತೋರುತ್ತವೆ. ಆನಂದವು ತನ್ನಾತ್ಮಸ್ವರೂಪವಾದದ್ದರಿಂದ, ಅದರ ಪ್ರಾಪ್ತಿಗಾಗಿ ಅನ್ಯವನ್ನಪೇಕ್ಷಿಸಬೇಕಿಲ್ಲ. ಆದರೆ ಮೋಹಾಕ್ರಾಂತರಾದ ಜೀವಿಗಳು ತಮ್ಮತ್ತ ಹೊರಳಿ ನೋಡದೇ ಅನ್ಯವನ್ನು ನೋಡಿ ದುಃಖಭಾಜನರಾಗುತ್ತಿದ್ದಾರೆ.

ಭಗವಂತ ಜಗತ್ತೆಲ್ಲವನ್ನೂ ಸೃಷ್ಟಿಸಿದ, ಎಂಭತ್ತುಮೂರುಲಕ್ಷ ತೊಂಬತ್ತೊಂಬತ್ತು ಸಾವಿರದ ಒಂಬತ್ತು ನೂರಾ ತೊಂಬತ್ತೊಂಬತ್ತು ಪ್ರಾಣಿಗಳನ್ನೂ ಸೃಜಿಸಿದ ನಂತರ, ಮನುಷ್ಯನನ್ನು ನಿರ್ಮಿಸಿದಾಗ ಬಹಳ ತೊಂದರೆಗೀಡಾದನು. ಮನುಷ್ಯರು ಹಗಲು–ರಾತ್ರಿಗಳೆನ್ನದೇ ತಮ್ಮ ಅನೇಕ ಸಮಸ್ಯೆಗಳ ಪರಿಹಾರಕ್ಕಾಗಿ ದೇವರ ಬಾಗಿಲಲ್ಲಿ ಕಾಯತೊಡಗಿದರು. ಇವರ ಕಾಟಕ್ಕಾಗಿ ಬೇಸತ್ತು ಭಗವಂತನು ದೇವತೆಗಳ ಸಭೆಯನ್ನು ಕರೆದು ವಿಚಾರಿಸಿದ– ಈ ಮೂರ್ಖ ಮನುಷ್ಯರು ನನಗೆ ಹಗಲಿ ನಲ್ಲಿಯಾಗಲಿ, ರಾತ್ರಿಯಲ್ಲಾಗಲಿ ವಿಶ್ರಾಂತಿಗಾಗಿ ಅವಕಾಶವನ್ನೇ ಕೊಡಲೊಲ್ಲರು. ಇವರ ಕಾಟದಿಂದ ಉಳಿಯುವ ಉಪಾಯವನ್ನು ಹೇಳಿ ಎಂದು. ಆಗ ಒಬ್ಬ ದೇವತೆ ಹೇಳಿದ–''ನೀವು ಹಿಮಾಲಯದ ತುದಿಯ ಮೇಲೆ ಹೋಗಿ ಕುಳಿತುಕೊಳ್ಳಿ''.

ಭಗವಂತ ಹೇಳಿದ–ಹಿಮಾಲಯದ ಶಿಖರದ ಮೇಲೆ ಕುಳಿತು ಆದೆಷ್ಟು ದಿವಸ ಉಳಿಯಬಹುದು ? ಇಂದಿಲ್ಲ ನಾಳೆ ತೇನಸಿಂಗ್, ಹಿಲೇರಿಯಂತಹ ಪರ್ವತಾರೋಹಿ ಗಳು ಆ ಶಿಖರವನ್ನು ತಲುಪಬಲ್ಲರು.

ಮತ್ತೊಬ್ಬ ಹೇಳಿದ–ಚಂದ್ರನ ಮೇಲೆ ಹೋಗಿ ಕುಳಿತುಕೊಳ್ಳಿರಿ, ಚಂದ್ರನಾ ದರೂ ಬಹಳ ದೂರನಲ್ಲ, ರಾಕೆಟ್ ಯುಗವಾದ ಇಂದು ಅಂತರಿಕ್ಷ ಯಾತ್ರಿಗಳು ಇಂದಿಲ್ಲ ನಾಳೆ ಅಲ್ಲಿಗೂ ಬಂದೇಬಿಡುತ್ತಾರೆ ಎಂಬುದಾಗಿ ಭಗವಂತ ಉತ್ತರಿಸಿದ.

ಆಗ ಅನುಭವಿ ವೃದ್ಧ ದೇವನೊಬ್ಬ ಹೇಳಿದ–ಓಹೋ ! ಯಾರೂ ಎಂದೂ ಬಾರದ ಸ್ಥಾನ ಒಂದೇ ಇದೆ. ಅದುವೇ ಮನುಷ್ಯನ ಹೃದಯವು. ಮನುಷ್ಯನು ಪರ್ವತದ ಶಿಖರ, ಚಂದ್ರ, ಸೂರ್ಯ, ಮಂಗಳ ಮುಂತಾದ ಹಲವು ಕಡೆಯಲ್ಲಿ ಹೋಗುವ ಉಪಾಯಗಳನ್ನು ಹುಡುಕಿದ್ದಾನೆ, ಹುಡುಕುತ್ತಲೂ ಇದ್ದಾನೆ. ಆದರೆ, ತನ್ನ ಅಂತರಂಗದತ್ತ ಎಂದೂ ಹೋಗಲಾರನು. ಭಗವಂತನು ಆ ಅನುಭವಿ ದೇವತೆಯ ಮಾತನ್ನು ನಂಬಿ ಅಂದಿನಿಂದ ತನ್ನತ್ತ ಧಾವಿಸಿ ಬರುತ್ತಿರುವ ಮನುಷ್ಯರ ಹೃದಯ ಗದ್ದುಗೆಯನ್ನೇರಿ ಜನಗಳ ಕಾಟ ತಪ್ಪಿದವನಾಗಿ ನಿಶ್ಚಿಂತನಾಗಿದ್ದಾನೆ.

ಹೀಗೆ ತನ್ನಂತರಂಗದಲ್ಲಿರುವ ಆ ಆನಂದಸ್ವರೂಪವನ್ನು ಮರೆತ ಜೀವಿಗಳು ಕ್ಷಣಿಕ ಸುಖದ ಪ್ರಾಪ್ತಿಗಾಗಿ ಹೆಂಡರು, ಮಕ್ಕಳು, ಸಂಪತ್ತುಗಳ ಆಶ್ರಯ ಪಡೆದು, ಕೊನೆಗೆ ಅವು ಕೈಬಿಟ್ಟು ಹೋದಾಗ ದುಃಖಿಯಾಗುತ್ತಾರೆ. ಅದಕ್ಕಾಗಿ ಆನಂದಾವಾಪ್ತಿಗೋಸ್ಕರ, ಮತ್ತೊಂದನ್ನಪೇಕ್ಷಿಸದೇ, ತನ್ನ ಹೃದಯವನ್ನು ಪರಿಶೋಧಿಸಿಕೊಂಡು ತನ್ನನ್ನೇ ತಾನು ನೋಡಬೇಕು.

ಒಬ್ಬ ತರುಣ ಸಂನ್ಯಾಸಿಯು ಜಗತ್ತೆಲ್ಲವನ್ನೂ ಸುತ್ತಾಡಿ ತನ್ನ ದೇಶಕ್ಕೆ ಮರಳಿ ಬಂದಿದ್ದಾನೆ. ಆ ದೇಶದ ರಾಜನು ಈತನ ಬಾಲ್ಯ ಸ್ನೇಹಿತನು. ಮೈಮೇಲಿನ ವಸ್ತ್ರಗಳೆಲ್ಲ ಹರಿದು ಅರ್ಧ ನಗ್ನನಾದ ಸಂನ್ಯಾಸಿಯು ರಾಜನ ಭೆಟ್ಟಿಗಾಗಿ ಹೋದನು. ಬಹುದಿನಗಳ ತರುವಾಯ ತನ್ನ ಗೆಳೆಯನನ್ನು ಕಂಡ ರಾಜನು, ಆತನನ್ನು ಬಿಗಿದಪ್ಪಿಕೊಂಡನು. ಆಸನದ ಮೇಲೆ ಕೂಡ್ರಿಸಿ, ನಮಸ್ಕರಿಸಿ, ಕೇಳಿದ–ಜಗತ್ತೆಲ್ಲವನ್ನೂ ತಿರುಗಿ ಬಂದಿರುವೆ ; ನನಗಾಗಿ ಏನನ್ನಾದರೂ ತಂದಿರುವೆಯಾ ? ಎಂದು. ಯಾರಲ್ಲಿ ಎಲ್ಲವೂ ಇದೆಯೋ ಅವರ ಮನಸ್ಸಿನಲ್ಲಿ ಇನ್ನೂ ಏನನ್ನಾದರೂ ಪಡೆಯಬೇಕೆನ್ನುವ ಆಶೆ ಇರುವದು ಸಹಜ. ಏನೂ ಇಲ್ಲದ ಫಕೀರನನ್ನು ಚಕ್ರವರ್ತಿ ಕೇಳುತ್ತಾನೆ, ನನಗಾಗಿ ಏನನ್ನಾದರೂ ತಂದಿರುವೆಯಾ ? ಎಂದು. ''ನೀನು ಭೆಟ್ಟಿಯಾದೊಡನೆ ಏನನ್ನಾದರೂ ಕೇಳುವೆ ಎಂಬುದು ನನಗೆ ಗೊತ್ತಿತ್ತು ; ಅಂತೆಯೇ ನಿನಗಾಗಿ ಒಂದು ಅಪೂರ್ವ ವಸ್ತುವನ್ನು ತಂದಿರುವೆ'' ಎಂದು ಸಂನ್ಯಾಸಿ ಹೇಳಿದನು.

ರಾಜನು ಆಶಾಭರಿತವಾದ ದೃಷ್ಟಿಯಿಂದ ನೋಡಿದ, ಸಂನ್ಯಾಸಿಯ ಕೈಯಲ್ಲಿ ಏನೂ ಇಲ್ಲ. ಆಗ ಕೇಳಿದ, ''ನನಗಾಗಿ ಏನನ್ನು ತಂದಿರುವೆ ?'' ''ನಾನು ಜಗತ್ತಿನ ದೊಡ್ಡ ದೊಡ್ಡ ನಗರಗಳಲ್ಲಿ ಹುಡುಕಾಡಿ, ನಿನ್ನಲ್ಲಿ ಇಲ್ಲದಿರುವ ಒಂದು ಅದ್ಭುತವಾದ ವಸ್ತುವನ್ನು ತಂದಿರುವೆ'' ಎಂದ ಸನ್ಯಾಸಿಯು. ರಾಜನು ಆಶ್ಚರ್ಯಚಕಿತನಾಗಿ ಎದ್ದು ನಿಂತು–''ಏನು ? ನನ್ನಲ್ಲಿ ಇಲ್ಲದಿರುವ ವಸ್ತುವನ್ನು ತಂದಿರುವೆಯಾ ? ತೋರಿಸು ಅದಾವುದಿದೆ ?'' ಆಗ ಸನ್ಯಾಸಿಯು, ಜೋಳಿಗೆಯಲ್ಲಿ ಕೈಹಾಕಿ, ಚಿಕ್ಕದಾದ ಕನ್ನಡಿಯೊಂದನ್ನು ತೆಗೆದು ರಾಜನ ಕೈಗಿತ್ತ. ರಾಜನು ಕ್ರೋಧಿತನಾಗಿ, ''ಇದೇನು ನನ್ನಲ್ಲಿ ಕನ್ನಡಿಗಳಿಲ್ಲವೇ ? ನಿನಗೆ ಬುದ್ಧಿ ಭ್ರಮೆಯಾಗಿದೆಯಾ ? ನಮ್ಮ ಅರಮನೆಯಲ್ಲಿಯ ನಿಲುಗನ್ನಡಿಗಳನ್ನು ನೀನು ನೋಡಿಲ್ಲವೇ ?'' ಎಂದನು.

ರಾಜನ ಆಕ್ರೋಶವನ್ನು ಶಾಂತಗೊಳಿಸುತ್ತ ''ಹೇ ರಾಜನ್ ! ಈ ಕನ್ನಡಿ ಸಾಧಾರಣವಾದದ್ದಲ್ಲ. ಇದರಲ್ಲಿ ಇಣುಕಿದರೆ ನೀನು ನಿನ್ನನ್ನೇ ನೋಡುವೆ. ಏಕಾಂತ ಸ್ಥಾನ ದಲ್ಲಿ ಇದರ ಮೇಲಿನ ಕಾಗದವನ್ನು ಹರಿದು ಪರೀಕ್ಷಿಸು'' ಎಂಬುದಾಗಿ ಹೇಳಿ ಸಂನ್ಯಾಸಿ ಹೊರಟು ಹೋದನು. ಉತ್ಸುಕನಾದ ರಾಜನು ತನ್ನ ಅಂತಃಪುರದಲ್ಲಿ ಕನ್ನಡಿಯ ಕಾಗದ ವನ್ನು ಹರಿದು ನೋಡಿದಾಗ ಆ ಕನ್ನಡಿಯ ಮೇಲೆ ''ಎಲ್ಲ ಕನ್ನಡಿಗಳೂ ವ್ಯರ್ಥವಾದವು ಗಳು, ಒಂದೇ ಕನ್ನಡಿಯು ಸಾರ್ಥಕವಾದದ್ದು. ಅದೇ ನಿನ್ನ ಮನವೆಂಬ ಕನ್ನಡಿಯು. ಅದರ ಮೇಲಿನ ಧೂಳನ್ನು ಒರೆಸು, ಅದರಲ್ಲಿ ನೀನು ನಿನ್ನನ್ನೇ ಕಾಣುವಿ. ನಿನ್ನನ್ನು ನೀನು ನೋಡಿದೆಯೆಂದರೆ ನೀನು ಎಲ್ಲವನ್ನೂ ನೋಡಿದಂತೆ'' ಎಂಬುದಾಗಿ ಬರೆದಿತ್ತು. ರಾಜನಿಗೆ ಸಂನ್ಯಾಸಿಯ ಅಭಿಪ್ರಾಯದ ಅರಿವಾಯಿತು.

ಆತ್ಮಾನಂದದ ಅರಿವನ್ನು ಮಾಡಿಕೊಳ್ಳಲು ಬಂದ ಮನುಷ್ಯನು, ''ದಾರೇಷಣ'' ''ವಿತ್ತೇಷಣ'' ಮತ್ತು ''ಲೋಕೇಷಣ''ಗಳೆಂಬ ಈಷಣತ್ರಯಗಳ ಸುಳಿವಿಗೆ ಬಿದ್ದು, ತನ್ನನ್ನು ತಾನು ನೋಡದೇ ಅನ್ಯಾಸಕ್ತನಾಗಿ, ಸತೀ–ಸುತಾದಿಗಳಿಂದ ಪ್ರಾಪ್ತವಾಗುವ ಅಲ್ಪ ಸುಖದ ಭಿಕ್ಷೆಗಾಗಿ, ಅವರೆದುರು ಕೈಚಾಚಿ ನಿಂತಿದ್ದಾನೆ. ಆನಂದದ ಸಾಮ್ರಾಟನಾದ ಜೀವನಿಗೆ, ಆಣವಾದಿ ಮಲತ್ರಯಗಳ ಆವರಣದಿಂದ ಪ್ರಾಪ್ತವಾದ ಈ ಭಿಕ್ಷಾ

ವೃತ್ತಿಯನ್ನು ತೊಲಗಿಸುವದಕ್ಕಾಗಿ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಸತೀ–ಸುತಾದಿಗಳಿಂದ ಪ್ರಾಪ್ತವಾಗುವ ಕ್ಷಣಿಕ ಸುಖದ ಪರಿಜ್ಞಾನವನ್ನು ಮಾಡಿ ಕೊಡುತ್ತಲಿದ್ದಾರೆ.

ಮಾತಾಪಿತೃಸಹಸ್ರಾಣಿ ಪುತ್ರದಾರಾಶತಾನಿ ಚ ।
ತವಾನಂತಾನಿ ಯಾತಾನಿ ಕಸ್ಯ ತೇ ? ಕಸ್ಯ ವಾ ಭವಾನ್ ? ॥

ಎನ್ನುವ ವಚನದಂತೆ, ಅನಂತ ಜನ್ಮಗಳಲ್ಲಿ, ತಂದೆ–ತಾಯಿ, ಸತೀ–ಸುತ, ಬಂಧು–ಬಳಗವನ್ನು ಬದಲಿಸುತ್ತ ಬಂದಿರುವ ಜೀವಾತ್ಮನು, ಯಾರನ್ನು ತನ್ನವರನ್ನಾಗಿ ನಂಬಬೇಕು ? ಹೀಗಿದ್ದರೂ ಮೋಹಾಸಕ್ತರಾದ ಜೀವಾತ್ಮರು ವಿವೇಕಶೂನ್ಯರಾಗಿ ಸತೀ–ಸುತಾದಿಗಳ ಸುಖದತ್ತ ಧಾವಿಸುತ್ತಲಿದ್ದಾರೆ. ಇದನ್ನು ಕಂಡೇ ಶ್ರೀ ನಿಜಗುಣ ಶಿವಯೋಗಿಗಳು–

''ಮನುಜ ನೀನೆಡೆವಿಡದನುದಿನವೆಳಸುವ ।
ವನಿತೆಯೊಳೆಣಿಸಲೊಂದಿನಿಸು ಲೇಸಿಹುದೆ ? ॥''

ಎಂಬುದಾಗಿ ಪ್ರಶ್ನಿಸಿ, ಈ ರೀತಿಯಾಗಿ ಪ್ರಸ್ತಾಪಿಸಿದ್ದಾರೆ–ಮಾಂಸಗ್ರಂಥಿಗಳಾದ ಕುಚಗಳನ್ನೂ, ತುರುಬಿನ ಕೂದಲನ್ನೂ, ದೇಹದ ಎಲುವು–ಮಾಂಸಗಳನ್ನೂ ಮುಚ್ಚಿರುವ ಹಸಿಯ ತೊಗಲನ್ನೂ, ಅನೇಕ ಸ್ಥಾನಗಳಲ್ಲಿಯ ನರನಾಡಿಗಳನ್ನೂ, ಇಂದ್ರಿಯಗಳ ಮುಖಾಂತರ ಶ್ರಮಿಸುವ ಮಲ–ಮೂತ್ರ–ರಕ್ತಾದಿಗಳನ್ನೂ, ಪ್ರಾಯದಲ್ಲಿ ದೊರೆಯುವ ಅಲ್ಪ ಸುಖವನ್ನೂ, ಮನದ ಕಪಟವನ್ನೂ, ಪ್ರಾಪ್ತಿಗಾಗಿ ಪಡುವ ಪರಿಶ್ರಮವನ್ನೂ, ಕೊನೆಗಾಗುವ ತಿರಸ್ಕಾರವನ್ನೂ ಲೆಕ್ಕಿಸದೆ, ಪಾಮರರು, ವನಿತೆಯರ ಅಲ್ಪ ರಂಜನೆಗಾಗಿ ಮರುಳಾಗುವರು.

ಬೇಡಿದ ಪದಾರ್ಥಗಳನ್ನು ಕೊಟ್ಟು, ತನ್ನಿಷ್ಟಾರ್ಥವನ್ನು ಪೂರ್ತಿಗೊಳಿಸುವ ಪತಿಯು ಮಗ್ಗಲಲ್ಲಿರಲು, ಮತ್ತೋರ್ವನ ರತಿಗಾಗಿ ಹಗಲಿರುಳು ಹಂಬಲಿಸುವ ವನಿತೆಯರನ್ನು ನಂಬಲಾಗದು. ಸುಳಿಗಾಳಿ, ಸುರಚಾಪ, ಕನಸು, ನೀರಿನ ಲಿಪಿ ಮತ್ತು ಕೋಲ್ಮಿಂಚು ಇವುಗಳಿಗಿಂತಲೂ ವಿಷಯ ಸುಖವು ಅತಿ ಕ್ಷಣಿಕವಾದದ್ದು. ಇದೆಲ್ಲವನ್ನೂ ಕೂಲಂಕಷವಾಗಿ ವಿಚಾರಿಸಿ, ''ಬಾಲೆಯರ ಸಿಂಗರವನ್ನೇ ಕಂಡು ಮನದಲ್ಲಿ ಸೋಲದಾತನೇ ವಿರತನು'' ಎಂಬುದಾಗಿ, ಶ್ರೀ ನಿಜಗುಣ ಶಿವಯೋಗಿಗಳು, ಜೀವಾತ್ಮನಿಗೆ ಸಂಬೋಧಿಸಿ ಎಚ್ಚರಗೊಳಿಸಿದ್ದಾರೆ.

ಕ್ರಿಮಿಭಿಸ್ತುದ್ಯಮಾನಸ್ಯ ಕುಷ್ಟಿನಃ ಪಾಮನಸ್ಯ ಚ ।
ಕಂಡೂಯನಾಗ್ನಿ ತಾಪಾಭ್ಯಾಂ ಯತ್ಸುಖಂ ಸ್ತ್ರೀಷು ತದ್ವಿದುಃ ॥
ಮಲಮೂತ್ರವಿಸರ್ಗಾತ್ತು ಸುಖಂ ಭವತಿ ಯಾದೃಶಮ್ ।
ತಾದೃಶಂ ಸ್ತ್ರೀಷು ವಿಜ್ಞೇಯಂ ಮೂಢೈಃ ಕಲ್ಪಿತಮನ್ಯಥಾ ॥

(ಶಿವಧರ್ಮೋತ್ತರ)

ಕುಷ್ಠರೋಗಿಯು ರೋಗಾಣುಗಳ ಕಡಿತದಿಂದ ಪೀಡಿತನಾಗಿ ತುರಿಕೆಯನ್ನು ತಾಳಲಾರದೆ ಅದರ ತುರಿಸುವಿಕೆಯಿಂದ, ಚಳಿಯಿಂದ ಬಾಧೆಗೊಂಡ ವ್ಯಕ್ತಿಯು ಅಗ್ನಿಯ ಸಮೀಪಕ್ಕೆ ಹೋಗುವುದರಿಂದ ಮತ್ತು ಮಲಮೂತ್ರಗಳ ತೀವ್ರವಾದ ವೇಗದಿಂದ ಬಳಲಿದ

ವ್ಯಕ್ತಿಯು ಅವುಗಳ ತ್ಯಾಗದಿಂದ, ಯಾವ ಮಾನಸಿಕ ಸಂತೋಷವನ್ನು ಪಡೆಯು ವನೋ, ಅದಕ್ಕಿಂತಲೂ ಹೆಚ್ಚಿನದಾದ ಸುಖವನ್ನು ಸ್ತ್ರೀಸಂಗದಿಂದ ಮನುಷ್ಯ ಪಡೆಯ ಲಾರನು. ಆದರೂ, ಕೇತಕೀ ಹೂವನ್ನು ಕಮಲವೆಂದು ಭ್ರಮಿಸಿ, ಅದರಲ್ಲಿ ಸಿಲುಕಿ ಕೊಂಡ ಭ್ರಮರವು, ಕಣ್ಣುತುಂಬ ಪರಾಗ ಬಿದ್ದು, ಕುರುಡಾಗಿ ಹಾರಲು ಹೋಗಿ ಪಂಖ ಗಳೆಲ್ಲ ಕತ್ತರಿಸಿ ಅಲ್ಲಿಯೇ ಸತ್ತು ಹೋಗುವಂತೆ, ಪಾಮರ ಜೀವಿಗಳು, ಸ್ತ್ರೀ ಮೊದಲಾದ ವಿಷಯ ಭೋಗದಲ್ಲಿ ಆಸಕ್ತರಾಗಿ, ತಮ್ಮ ಅಸುಗಳನ್ನು ಆಹುತಿ ಮಾಡುತ್ತಿದ್ದರೆಂದು ಶಿವಧರ್ಮೋತ್ತರ ಗ್ರಂಥದಲ್ಲಿ ಬಹು ಸುಂದರವಾಗಿ ವಿವೇಚಿಸಿದ್ದಾರೆ. ಅಂತೆಯೇ ಶರಣರು–

ಹೆಣ್ಣಿಗಾಗಿ ಸತ್ತವರು ಕೋಟಿ,
ಮಣ್ಣಿಗಾಗಿ ಸತ್ತವರು ಕೋಟಿ,
ಹೊನ್ನಿಗಾಗಿ ಸತ್ತವರು ಕೋಟಿ,
ನಿನಗಾಗಿ ಸತ್ತವರನೊಬ್ಬರನೂ ಕಾಣೆ.''

ಎಂಬುದಾಗಿ ಅದೇ ಮಾತನ್ನೇ ಸ್ಪಷ್ಟಪಡಿಸಿದ್ದಾರೆ.

ಅಂತಕಃ ಪವನೋ ಮೃತ್ಯುಃ ಪಾತಾಲಂ ವಡವಾನಲಃ ।
ಕ್ಷುರಧಾರಾ ವಿಷಂ ಸರ್ಪಃ ಸರ್ವಮಿತ್ಯೇಕತಃ ಸ್ತ್ರಿಯಃ ॥

(ಯೋಗಶಾಸ್ತ್ರ)

ಅಂದರೆ ಯಮನಲ್ಲಿಯ ನಿಷ್ಕರುಣತೆ, ಗಾಳಿಯಲ್ಲಿಯ ಉಲ್ಲೋಲ ಕಲ್ಲೋಲನ ಶಕ್ತಿ, ಮೃತ್ಯುವಿನಲ್ಲಿಯ ನಿರ್ದಯೆ, ಪಾತಾಳದಲ್ಲಿಯ ಪ್ರಚ್ಛನ್ನತೆ, ವಡವಾಗ್ನಿಯಲ್ಲಿಯ ಪ್ರಳಯಶಕ್ತಿ, ಖಡ್ಗದಲ್ಲಿಯ ತೀಕ್ಷ್ಣತೆ, ವಿಷದಲ್ಲಿಯ ಪ್ರಾಣಹರಣ ಶಕ್ತಿ ಮತ್ತು ಸರ್ಪ ದಲ್ಲಿಯ ವಿಷ, ಇವೆಲ್ಲ ಶಕ್ತಿಗಳೂ ಒಬ್ಬ ಸ್ತ್ರೀಯಲ್ಲಿಯೇ ಇರುವವೆಂಬುದಾಗಿ ಯೋಗ ಶಾಸ್ತ್ರದಲ್ಲಿ ಪ್ರತಿಪಾದಿಸಿದ್ದಾರೆ.

ಸತಿಯಿಂದ ಪ್ರಾಪ್ತವಾಗುವ ಈ ಐಹಿಕ ಸುಖದ ಬಗ್ಗೆ ಈ ವರೆಗೆ ಪರ್ಯಾ ಲೋಚಿಸಿದ ಮಹಾನುಭಾವಿಗಳ ಅನುಭವೋಕ್ತಿಗಳನ್ನು ಮನವರಿಕೆ ಮಾಡಿಕೊಂಡು, ವಿವೇಕಿಯು ಕ್ರಮವಾಗಿ ಅವುಗಳಲ್ಲಿಯ ದೋಷವನ್ನು ಕಂಡು, ಅವುಗಳಿಂದ ದೂರ ವಿರಲು ಪ್ರಯತ್ನಿಸಬೇಕು.

ಸತಿಯು ದುಃಖದಾಯಿನಿಯಾದಂತೆ, ಸುತನಾದರೂ ದುಃಖದಾಯಿಯೇ. ಲೋಕದ ಜನರು ಪುತ್ರನ ವಾಸ್ತವಿಕತೆಯನ್ನರಿಯದೆ, ಪುತ್ರನಿಗಾಗಿ ಹಗಲಿರುಳೂ ಹಲುಬುತ್ತಾರೆ. ಲಗ್ನದ ನಂತರ ಬೇಗನೇ ಸಂತತಿಯುಂಟಾಗದಿದ್ದರೆ ಮನೆಯವರು, ಓಣಿಯವರು, ಊರಿನವರೆಲ್ಲ ನಾನಾತರಹದ ಸಂದೇಹಗಳನ್ನು ಮಾಡುತ್ತ, ವಿಚಿತ್ರ ವಾಗಿ ಮಾತನಾಡತೊಡಗಲು, ನೂತನ ದಂಪತಿಗಳಿಗೆ ಸುತನ ಚಿಂತೆ ಪ್ರಾರಂಭ ವಾಗುತ್ತದೆ. ಸುತನು ಹುಟ್ಟಿ ಅದೇಕ್ಷಣದಲ್ಲಿ ಸತ್ತರೂ ಚಿಂತೆಯಿಲ್ಲ ; ಆದರೆ ತಾನು ''ಬಂಜೆ''ಯೆಂಬ ಬಹುಭಾರದ ಶಬ್ದವನ್ನು ಹೊರಬಾರದೆಂದು ಹೆಣ್ಣುಮಗಳು, ಹಲವಾರು ವ್ರತಗಳನ್ನು ಕಷ್ಟಪಟ್ಟು ಆಚರಿಸುತ್ತಾಳೆ. ದೈವಾನುಕೂಲದಿಂದ

ಗರ್ಭಧಾರಣೆಯಾಗಲು, ಅದು ಕೆಡದಿರಲೆಂಬ ಕಡುಚಿಂತೆ ಪ್ರಾರಂಭವಾಗುವುದು. ಮುಂದೆ ಗರ್ಭದ ಅವಧಿಯು ಪೂರ್ಣವಾಗಲು, ಸುಖ ಪ್ರಸವವಾಗಲೆಂಬ ಚಿಂತೆಯು. ಅದಾದ ನಂತರ ಜನಿಸಿದ ಶಿಶುವಿಗೆ ಬಾಲಗ್ರಹಾದಿಗಳು ಆಗಬಾರದೆಂಬ ಚಿಂತೆ, ಮುಂದೆ ಬಾಲ್ಯಾವಸ್ಥೆಯಲ್ಲಿ ಸುತನ ತುಂಟಾಟತನದ ಚಿಂತೆ, ಅದು ತಾರುಣ್ಯಾವಸ್ಥೆಗೆ ಬಂದಾಗ ನೈತಿಕವಾಗಿ ಪತಿತನಾದಾನೆಂಬ ಚಿಂತೆಯು, ನಂತರ ವಿವಾಹಮಾಡುವ ಚಿಂತೆ, ಬುದ್ಧಿ ಹೇಳಿ ಬಾಳುವೆಗೆ ಹಚ್ಚುವ ಚಿಂತೆ, ಇಷ್ಟೆಲ್ಲ ಮನಸ್ಸಿಗೆ ಅನುಕೂಲವಾಗಿಯೇ ಆದರೂ ದೈವಾಧೀನನಾಗಿ ಅಳಿದುಹೋಗಲು, ಮರೆಯಲಾಗದ ಮರಣದ ಚಿಂತೆಯು; ಈ ತೆರನಾಗಿ ಸುತನು ಹುಟ್ಟುವ ಪೂರ್ವದಲ್ಲಿಯೇ ಚಿಂತೆ ಕೊಡಲು ಪ್ರಾರಂಭಿಸಿದನು, ಕೊನೆಗೆ ಸತ್ತು ಹೋದರೂ ಚಿಂತೆಯನ್ನು ಕೊಟ್ಟೇಹೋಗುತ್ತಾನೆ. ಅಂತೆಯೇ ಈ ತೆರನಾದ ಪುತ್ರ ದುಃಖವನ್ನನುಭವಿಸಿದ ಕವಿಯೋರ್ವನು–

''ಪುತ್ರವ್ಯಾಜಮುಪಾಗತೋ ರಿಪುರಯಂ ಮಾ ಕಸ್ಯ ಚಿಜ್ಜಾಯತಾಯ್' ಪುತ್ರನ ರೂಪದಲ್ಲಿ ಬಂದ ಇವನೋರ್ವ ಶತ್ರುವೇ ಆಗಿದ್ದಾನೆ. ಕಾರಣ ಇಂತಹ ಮಗನು ಯಾರಿಗೂ ಹುಟ್ಟಬಾರದೆಂಬುದಾಗಿ ನೊಂದು ನುಡಿದಿದ್ದಾನೆ.

ಅದನ್ನೇ ಮತ್ತೋರ್ವ ಕವಿಯು–

ಜಾಯಮಾನೋ ಹರೇದ್ಭಾರ್ಯಾಂ ವರ್ಧಮಾನೋಹರೇದ್ಧನಮ್ ।
ಮ್ರಿಯಮಾಣೋ ಹರೇತ್ಪ್ರಾಣಾನ್ ನಾಸ್ತಿ ಪುತ್ರಸಮೋ ರಿಪುಃ ॥

ಪುತ್ರನು ಶತ್ರುವೆಂಬುದಾಗಿ ಸಯುಕ್ತಿಕವಾಗಿ ಸಮರ್ಥಿಸಿದ್ದಾನೆ. ಪ್ರಸವ ಕಾಲದಲ್ಲಿ ಅದೆಷ್ಟೋ ತಾಯಂದಿರು ಅಸುನೀಗುವದುಂಟು. ಆದ್ದರಿಂದ ಹುಟ್ಟುವಾಗ ತಾಯಿಯ ಪ್ರಾಣವನ್ನೂ, ಬೆಳೆಯುವಾಗ ತಂದೆಯ ಧನವನ್ನೂ ಮತ್ತು ತಾನು ಸಾಯುವಾಗ ತಂದೆ–ತಾಯಿಗಳ ಪ್ರಾಣವನ್ನೇ ಹರಣಮಾಡುವ ಸುತನು ನಿಜವಾಗಿಯೂ ಶತ್ರುವೇ ಸರಿ.

ಅಜಾತಮೃತಮೂರ್ಖೇಭ್ಯೋ ಮೃತಾಜಾತೌ ಸುತೌ ವರೌ ।
ಯಸ್ತಾವದಲ್ಪದುಃಖಾಯ ಯಾವಜ್ಜೀವಂ ಜಡೋ ದಹೇತ್ ॥

ಹುಟ್ಟದೇ ಇರುವ, ಹುಟ್ಟಿ ಸತ್ತವ ಮತ್ತು ಹುಟ್ಟಿ ಮೂರ್ಖನಾಗಿರುವ ಹೀಗೆ ಮೂರು ವಿಧವಾದ ಮಕ್ಕಳು ದುಃಖದಾಯಿಯಾಗಿರುತ್ತಾರೆ. ಇವರಲ್ಲಿ ಹುಟ್ಟದಿರುವ ಮತ್ತು ಹುಟ್ಟಿ ಸತ್ತ ಮಕ್ಕಳು ಒಂದು ಕ್ಷಣಕಾಲ ದುಃಖವನ್ನು ಕೊಟ್ಟರೆ, ಹುಟ್ಟಿ ಮೂರ್ಖನಾಗಿರುವ ಮಗನು ಜೀವನದುದ್ದಕ್ಕೂ ದುಃಖದಾಯಿಯಾಗಿರುತ್ತಾನೆ.

ಮಕ್ಕಳಿಲ್ಲದ ದಂಪತಿಗಳೀರ್ವರು ರಾತ್ರಿ ಪಲ್ಲಂಗದ ಮೇಲೆ ಮಲಗಿಕೊಂಡು ಮಕ್ಕಳ ವಿಷಯವಾಗಿಯೇ ಪರಸ್ಪರರು ಚರ್ಚಿಸುತ್ತಿದ್ದರು.

ಹೆಂಡತಿ :– ಏರ್ರೀ ! ದೇವರ ದಯದಿಂದ ನಮಗೋರ್ವ ಮಗನಾದರೆ ಆತನನ್ನು ಎಲ್ಲಿ ಮಲಗಿಸುವುದು ?

ಗಂಡ :– ನಾವೀರ್ವರೂ ಸ್ವಲ್ಪು ಸರಿದುಕೊಂಡರೆ ನಮ್ಮೀರ್ವರ ಮಧ್ಯದಲ್ಲಿ ಮಗುವಿಗೆ ಸ್ಥಾನವಾಗುವುದು.

ಹೆಂಡತಿ :– ಒಂದು ವೇಳೆ ಅವಳಿ–ಜವಳಿ (ಎರಡು) ಮಕ್ಕಳಾದರೆ ಹೇಗೆ ?

ಗಂಡ :– ನೀನಷ್ಟು ಆಚೆ ಸರಿ, ನಾನಷ್ಟು ಈಚೆ ಸರಿಯುತ್ತೇನೆ. ಆಗ ಈರ್ವರು ಮಕ್ಕಳಿಗೂ ಜಾಗ ಆಗುವದು ಎಂದ.

ವ್ಯಕ್ತಿಯು ಅವುಗಳ ತ್ಯಾಗದಿಂದ, ಯಾವ ಮಾನಸಿಕ ಸಂತೋಷವನ್ನು ಪಡೆಯು ವನೋ, ಅದಕ್ಕಿಂತಲೂ ಹೆಚ್ಚಿನದಾದ ಸುಖವನ್ನು ಸ್ತ್ರೀಸಂಗದಿಂದ ಮನುಷ್ಯ ಪಡೆಯ ಲಾರನು. ಆದರೂ, ಕೇತಕೀ ಹೂವನ್ನು ಕಮಲವೆಂದು ಭ್ರಮಿಸಿ, ಅದರಲ್ಲಿ ಸಿಲುಕಿ ಕೊಂಡ ಭ್ರಮರವು, ಕಣ್ಣುತುಂಬ ಪರಾಗ ಬಿದ್ದು, ಕುರುಡಾಗಿ ಹಾರಲು ಹೋಗಿ ಪಂಖ ಗಳೆಲ್ಲ ಕತ್ತರಿಸಿ ಅಲ್ಲಿಯೇ ಸತ್ತು ಹೋಗುವಂತೆ, ಪಾಮರ ಜೀವಿಗಳು, ಸ್ತ್ರೀ ಮೊದಲಾದ ವಿಷಯ ಭೋಗದಲ್ಲಿ ಆಸಕ್ತರಾಗಿ, ತಮ್ಮ ಅಸುಗಳನ್ನು ಆಹುತಿ ಮಾಡುತ್ತಿದ್ದರೆಂದು ಶಿವಧರ್ಮೋತ್ತರ ಗ್ರಂಥದಲ್ಲಿ ಬಹು ಸುಂದರವಾಗಿ ವಿವೇಚಿಸಿದ್ದಾರೆ. ಅಂತೆಯೇ ಶರಣರು–

ಹೆಣ್ಣಿಗಾಗಿ ಸತ್ತವರು ಕೋಟಿ,
ಮಣ್ಣಿಗಾಗಿ ಸತ್ತವರು ಕೋಟಿ,
ಹೊನ್ನಿಗಾಗಿ ಸತ್ತವರು ಕೋಟಿ,
ನಿನಗಾಗಿ ಸತ್ತವರನೊಬ್ಬರನೂ ಕಾಣೆ.''

ಎಂಬುದಾಗಿ ಅದೇ ಮಾತನ್ನೇ ಸ್ಪಷ್ಟಪಡಿಸಿದ್ದಾರೆ.

ಅಂತಕಃ ಪವನೋ ಮೃತ್ಯುಃ ಪಾತಾಲಂ ವಡವಾನಲಃ ।
ಕ್ಷುರಧಾರಾ ವಿಷಂ ಸರ್ಪಃ ಸರ್ವಮಿತ್ಯೇಕತಃ ಸ್ತ್ರಿಯಃ ॥

(ಯೋಗಶಾಸ್ತ್ರ)

ಅಂದರೆ ಯಮನಲ್ಲಿಯ ನಿಷ್ಕರುಣತೆ, ಗಾಳಿಯಲ್ಲಿಯ ಉಲ್ಲೋಲ ಕಲ್ಲೋಲನ ಶಕ್ತಿ, ಮೃತ್ಯುವಿನಲ್ಲಿಯ ನಿರ್ದಯೆ, ಪಾತಾಳದಲ್ಲಿಯ ಪ್ರಚ್ಛನ್ನತೆ, ವಡವಾಗ್ನಿಯಲ್ಲಿಯ ಪ್ರಳಯಶಕ್ತಿ, ಖಡ್ಗದಲ್ಲಿಯ ತೀಕ್ಷ್ಣತೆ, ವಿಷದಲ್ಲಿಯ ಪ್ರಾಣಹರಣ ಶಕ್ತಿ ಮತ್ತು ಸರ್ಪ ದಲ್ಲಿಯ ವಿಷ, ಇವೆಲ್ಲ ಶಕ್ತಿಗಳೂ ಒಬ್ಬ ಸ್ತ್ರೀಯಲ್ಲಿಯೇ ಇರುವವೆಂಬುದಾಗಿ ಯೋಗ ಶಾಸ್ತ್ರದಲ್ಲಿ ಪ್ರತಿಪಾದಿಸಿದ್ದಾರೆ.

ಸತಿಯಿಂದ ಪ್ರಾಪ್ತವಾಗುವ ಈ ಐಹಿಕ ಸುಖದ ಬಗ್ಗೆ ಈ ವರೆಗೆ ಪರ್ಯಾ ಲೋಚಿಸಿದ ಮಹಾನುಭಾವಿಗಳ ಅನುಭವೋಕ್ತಿಗಳನ್ನು ಮನವರಿಕೆ ಮಾಡಿಕೊಂಡು, ವಿವೇಕಿಯು ಕ್ರಮವಾಗಿ ಅವುಗಳಲ್ಲಿಯ ದೋಷವನ್ನು ಕಂಡು, ಅವುಗಳಿಂದ ದೂರ ವಿರಲು ಪ್ರಯತ್ನಿಸಬೇಕು.

ಸತಿಯು ದುಃಖದಾಯಿನಿಯಾದಂತೆ, ಸುತನಾದರೂ ದುಃಖದಾಯಿಯೇ. ಲೋಕದ ಜನರು ಪುತ್ರನ ವಾಸ್ತವಿಕತೆಯನ್ನರಿಯದೆ, ಪುತ್ರನಿಗಾಗಿ ಹಗಲಿರುಳೂ ಹಲುಬುತ್ತಾರೆ. ಲಗ್ನದ ನಂತರ ಬೇಗನೇ ಸಂತತಿಯುಂಟಾಗದಿದ್ದರೆ ಮನೆಯವರು, ಓಣಿಯವರು, ಊರಿನವರೆಲ್ಲ ನಾನಾತರಹದ ಸಂದೇಹಗಳನ್ನು ಮಾಡುತ್ತ, ವಿಚಿತ್ರ ವಾಗಿ ಮಾತನಾಡತೊಡಗಲು, ನೂತನ ದಂಪತಿಗಳಿಗೆ ಸುತನ ಚಿಂತೆ ಪ್ರಾರಂಭ ವಾಗುತ್ತದೆ. ಸುತನು ಹುಟ್ಟಿ ಅದೇಕ್ಷಣದಲ್ಲಿ ಸತ್ತರೂ ಚಿಂತೆಯಿಲ್ಲ ; ಆದರೆ ತಾನು ''ಬಂಜೆ''ಯೆಂಬ ಬಹುಭಾರದ ಶಬ್ದವನ್ನು ಹೊರಬಾರದೆಂದು ಹೆಣ್ಣುಮಗಳು, ಹಲವಾರು ವ್ರತಗಳನ್ನು ಕಷ್ಟಪಟ್ಟು ಆಚರಿಸುತ್ತಾಳೆ. ದೈವಾನುಕೂಲದಿಂದ

ಗರ್ಭಧಾರಣೆಯಾಗಲು, ಅದು ಕೆಡದಿರಲೆಂಬ ಕಡುಚಿಂತೆ ಪ್ರಾರಂಭವಾಗುವುದು. ಮುಂದೆ ಗರ್ಭದ ಅವಧಿಯು ಪೂರ್ಣವಾಗಲು, ಸುಖ ಪ್ರಸವವಾಗಲೆಂಬ ಚಿಂತೆಯು. ಅದಾದ ನಂತರ ಜನಿಸಿದ ಶಿಶುವಿಗೆ ಬಾಲಗ್ರಹಾದಿಗಳು ಆಗಬಾರದೆಂಬ ಚಿಂತೆ, ಮುಂದೆ ಬಾಲ್ಯಾವಸ್ಥೆಯಲ್ಲಿ ಸುತನ ತುಂಟಾಟತನದ ಚಿಂತೆ, ಅದು ತಾರುಣ್ಯಾವಸ್ಥೆಗೆ ಬಂದಾಗ ನೈತಿಕವಾಗಿ ಪತಿತನಾದಾನೆಂಬ ಚಿಂತೆಯು, ನಂತರ ವಿವಾಹಮಾಡುವ ಚಿಂತೆ, ಬುದ್ಧಿ ಹೇಳಿ ಬಾಳುವೆಗೆ ಹಚ್ಚುವ ಚಿಂತೆ, ಇಷ್ಟೆಲ್ಲ ಮನಸ್ಸಿಗೆ ಅನುಕೂಲವಾಗಿಯೇ ಆದರೂ ದೈವಾಧೀನನಾಗಿ ಅಳಿದುಹೋಗಲು, ಮರೆಯಲಾಗದ ಮರಣದ ಚಿಂತೆಯು; ಈ ತೆರನಾಗಿ ಸುತನು ಹುಟ್ಟುವ ಪೂರ್ವದಲ್ಲಿಯೇ ಚಿಂತೆ ಕೊಡಲು ಪ್ರಾರಂಭಿಸಿದನು, ಕೊನೆಗೆ ಸತ್ತು ಹೋದರೂ ಚಿಂತೆಯನ್ನು ಕೊಟ್ಟೇಹೋಗುತ್ತಾನೆ. ಅಂತೆಯೇ ಈ ತೆರನಾದ ಪುತ್ರ ದುಃಖವನ್ನನುಭವಿಸಿದ ಕವಿಯೋರ್ವನು–

''ಪುತ್ರವ್ಯಾಜಮುಪಾಗತೋ ರಿಪುರಯಂ ಮಾ ಕಸ್ಯ ಚಿಜ್ಜಾಯತಾಯ್'' ಪುತ್ರನ ರೂಪದಲ್ಲಿ ಬಂದ ಇವನೋರ್ವ ಶತ್ರುವೇ ಆಗಿದ್ದಾನೆ. ಕಾರಣ ಇಂತಹ ಮಗನು ಯಾರಿಗೂ ಹುಟ್ಟಬಾರದೆಂಬುದಾಗಿ ನೊಂದು ನುಡಿದಿದ್ದಾನೆ.

ಅದನ್ನೇ ಮತ್ತೋರ್ವ ಕವಿಯು–

ಜಾಯಮಾನೋ ಹರೇದ್ಭಾರ್ಯಾಂ ವರ್ಧಮಾನೋಹರೇದ್ಧನಮ್ ।
ಮ್ರಿಯಮಾಣೋ ಹರೇತ್ಪ್ರಾಣಾನ್ ನಾಸ್ತಿ ಪುತ್ರಸಮೋ ರಿಪುಃ ॥

ಪುತ್ರನು ಶತ್ರುವೆಂಬುದಾಗಿ ಸಯುಕ್ತಿಕವಾಗಿ ಸಮರ್ಥಿಸಿದ್ದಾನೆ. ಪ್ರಸವ ಕಾಲದಲ್ಲಿ ಅದೆಷ್ಟೋ ತಾಯಂದಿರು ಅಸುನೀಗುವದುಂಟು. ಆದ್ದರಿಂದ ಹುಟ್ಟುವಾಗ ತಾಯಿಯ ಪ್ರಾಣವನ್ನೂ, ಬೆಳೆಯುವಾಗ ತಂದೆಯ ಧನವನ್ನೂ ಮತ್ತು ತಾನು ಸಾಯುವಾಗ ತಂದೆ–ತಾಯಿಗಳ ಪ್ರಾಣವನ್ನೇ ಹರಣಮಾಡುವ ಸುತನು ನಿಜವಾಗಿಯೂ ಶತ್ರುವೇ ಸರಿ.

ಅಜಾತಮೃತಮೂರ್ಖೇಭ್ಯೋ ಮೃತಾಜಾತೌ ಸುತೌ ವರೌ ।
ಯಸ್ತಾವದಲ್ಪದುಃಖಾಯ ಯಾವಜ್ಜೀವಂ ಜಡೋ ದಹೇತ್ ॥

ಹುಟ್ಟದೇ ಇರುವ, ಹುಟ್ಟಿ ಸತ್ತವ ಮತ್ತು ಹುಟ್ಟಿ ಮೂರ್ಖನಾಗಿರುವ ಹೀಗೆ ಮೂರು ವಿಧವಾದ ಮಕ್ಕಳು ದುಃಖದಾಯಿಯಾಗಿರುತ್ತಾರೆ. ಇವರಲ್ಲಿ ಹುಟ್ಟದಿರುವ ಮತ್ತು ಹುಟ್ಟಿ ಸತ್ತ ಮಕ್ಕಳು ಒಂದು ಕ್ಷಣಕಾಲ ದುಃಖವನ್ನು ಕೊಟ್ಟರೆ, ಹುಟ್ಟಿ ಮೂರ್ಖನಾಗಿರುವ ಮಗನು ಜೀವನದುದ್ದಕ್ಕೂ ದುಃಖದಾಯಿಯಾಗಿರುತ್ತಾನೆ.

ಮಕ್ಕಳಿಲ್ಲದ ದಂಪತಿಗಳೀರ್ವರು ರಾತ್ರಿ ಪಲ್ಲಂಗದ ಮೇಲೆ ಮಲಗಿಕೊಂಡು ಮಕ್ಕಳ ವಿಷಯವಾಗಿಯೇ ಪರಸ್ಪರರು ಚರ್ಚಿಸುತ್ತಿದ್ದರು.

ಹೆಂಡತಿ :– ಏವ್ರೀ ! ದೇವರ ದಯದಿಂದ ನಮಗೋರ್ವ ಮಗನಾದರೆ ಆತನನ್ನು ಎಲ್ಲಿ ಮಲಗಿಸುವುದು ?

ಗಂಡ :– ನಾವೀರ್ವರೂ ಸ್ವಲ್ಪು ಸರಿದುಕೊಂಡರೆ ನಮ್ಮೀರ್ವರ ಮಧ್ಯದಲ್ಲಿ ಮಗುವಿಗೆ ಸ್ಥಾನವಾಗುವುದು.

ಹೆಂಡತಿ :– ಒಂದು ವೇಳೆ ಅವಳಿ–ಜವಳಿ (ಎರಡು) ಮಕ್ಕಳಾದರೆ ಹೇಗೆ ?

ಗಂಡ :– ನೀನಷ್ಟು ಆಚೆ ಸರಿ, ನಾನಷ್ಟು ಈಚೆ ಸರಿಯುತ್ತೇನೆ. ಆಗ ಈರ್ವರು ಮಕ್ಕಳಿಗೂ ಜಾಗ ಆಗುವದು ಎಂದ.

ಹೀಗೆ ಈರ್ವರೂ ಆಲೋಚಿಸುತ್ತ ಸ್ವಲ್ಪು ಸರಿದಾಗ, ಇಬ್ಬರೂ ಪಲ್ಲಂಗದ ಕೆಳಗೆ ಬಿದ್ದು ತಲೆ ಒಡೆದುಕೊಂಡರಂತೆ. ಆಗ ಅವರೀರ್ವರು ವಿಚಾರಿಸುತ್ತಾರೆ, ಮಕ್ಕಳು ಹುಟ್ಟುವ ಮೊದಲೇ ನಮ್ಮಿಬ್ಬರ ತಲೆ ಒಡೆದಿದ್ದಾರೆ, ಇನ್ನು ಹುಟ್ಟಿದ ಬಳಿಕ ಏನು ಮಾಡುವರೋ ? ಎಂದು ಯೋಚಿಸಿ ಮಕ್ಕಳ ಚಿಂತೆಯನ್ನೇ ಬಿಟ್ಟರಂತೆ.

ಗೃಹಸ್ಥ ಜೀವನಕ್ಕೆ ಮಕ್ಕಳು ಬೇಕು. ಆದರೆ ಸದಾಚಾರ ಸಂಪನ್ನರಾದ, ದೇಶಾಭಿಮಾನಿಗಳಾದ, ಆತ್ಮಜ್ಞಾನಸಂಪನ್ನರಾದ ಮಕ್ಕಳಿದ್ದರೆ, ಆ ಗೃಹಸ್ಥಾಶ್ರಮವು ಧನ್ಯವಾದುದು. ಇದಕ್ಕೆ ವಿಪರೀತವಾಗಿದ್ದರೆ ಅಂತಹ ಗೃಹಸ್ಥಾಶ್ರಮಕ್ಕೆ ಧಿಃಕಾರವೆಂಬುದಾಗಿ ನುಡಿದಿದ್ದಾರೆ. ಅಂತೆಯೇ ವಿವೇಕಿಯು ಇದರ ಮರ್ಮವನ್ನರಿತು ಸತೀ–ಸುತಾದಿಗಳಿಂದ ಕೂಡಿಕೊಂಡಿದ್ದರೂ, ಅವರಲ್ಲಿ ಅತ್ಯಾಸಕ್ತನಾಗಿ ಮೋಹಿಯೆಂದೆನಿಸಿಕೊಳ್ಳದೇ, ಕೆಸರಿನಲ್ಲಿಯ ಕಮಲದಂತೆ ನಿರ್ಮೋಹಿಯಾಗಿ ಜೀವನ ಸಾಗಿಸಬೇಕೆಂಬುದೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಅಭಿಪ್ರಾಯವಾಗಿದೆ.

ಪುತ್ರದಾರಾದಿಗಳಿಂದ ದೊರೆಯುವ ಐಹಿಕ ಸುಖವು ಹೇಗೆ ಕ್ಷಣಿಕವಾದದ್ದೋ, ಅದರಂತೆ ಸ್ವರ್ಗಾದಿ ಲೋಕಗಳ ಪಾರಲೌಕಿಕ ಸುಖವಾದರೂ ದೋಷಯುಕ್ತವೂ, ಕ್ಷಣಿಕವೂ ಆಗಿದೆ. ಆದುದರಿಂದಲೇ ಶ್ರೀ ರೇಣುಕ ಭಗವತ್ಪಾದರು, ''ಕ್ಷಯಿತ್ವಾದಿಯತೇ ಸ್ವರ್ಗೇ ಕಸ್ಯ ವಾಂಛಾ ವಿವೇಕಿನಃ ?'' ಎಂದಿದ್ದಾರೆ. ಕರ್ಮಭೂಮಿಯಾದ ಈ ಮರ್ತ್ಯಲೋಕವನ್ನು ಬಿಟ್ಟರೆ, ಉಳಿದೆಲ್ಲ ಲೋಕಗಳೂ ಭೋಗ್ಯಲೋಕಗಳಾಗಿರುತ್ತವೆ. ದುಡಿದು ಹಣ ಸಂಪಾದಿಸಿದ ವ್ಯಕ್ತಿಯು ಆ ಹಣವನ್ನು ತೆಗೆದುಕೊಂಡು, ಹೋಟೆಲ್ ಮುಂತಾದ ಭೋಗ್ಯ ಸ್ಥಾನಗಳಿಗೆ ಹೋಗಿ, ಹಣ ತೀರುವವರೆಗೆ ಅಲ್ಲಿಯ ಪದಾರ್ಥಗಳನ್ನು ಉಪಭೋಗಿಸಿ, ಮರಳಿ ಮನೆಗೆ ಬರುವಂತೆ, ತಾನು ಮಾಡಿದ ಯಜ್ಞ–ದಾನ–ತಪಸ್ಸುಗಳ ಪುಣ್ಯದ ಫಲವಾಗಿ ಸ್ವರ್ಗಾದಿ ಭೋಗ್ಯಗಳಿಗೆ ಜೀವಾತ್ಮನು ಹೋಗಿ, ಅಲ್ಲಿಯ ದಿವ್ಯಭೋಗಗಳನ್ನು ಅನುಭವಿಸಿ, ಪುಣ್ಯತೀರಿದೊಡನೆ, ಮತ್ತೆ ಮರ್ತ್ಯಕ್ಕೆ ಬರಬೇಕಾಗುತ್ತದೆ. ಅಂತೆಯೇ, ಗೀತೆಯಲ್ಲಿ ಭಗವಂತನು–''ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ಶಂತಿ'' ಎಂಬುದಾಗಿ ನುಡಿದ್ದಾನೆ. ಈ ರೀತಿಯಾಗಿ ಸ್ವರ್ಗಾದಿ ಸುಖಗಳು, ''ಕ್ಷಯ'' ಮತ್ತು ''ಪತನ''ವೆಂಬ ದೋಷದಿಂದ ದೂಷಿತವಾಗಿರುವುದರಿಂದ, ವಿವೇಕಿಯಾದವನು–

ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೆ ।
ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ ॥

ಎನ್ನುವ ಉಪನಿಷತ್ತಿನ ವಚನವನ್ನು ಸ್ವಾನುಭವದಿಂದ ವಿಚಾರಿಸಿ, ಐಹಿಕಗಳಾದ ಸತೀ–ಸುತಾದಿಗಳಿಂದ ಪ್ರಾಪ್ತವಾಗುವ ಸುಖವು ಹೇಗೆ ಹೇಯವಾದದ್ದೋ, ಅದರಂತೆ, ಪಾರಲೌಕಿಕವಾದ ಸ್ವರ್ಗಾದಿಸುಖವಾದರೂ ದೋಷಯುಕ್ತವಾದ್ದರಿಂದ, ಹೇಯವೆಂಬುದಾಗಿ ವಿಚಾರಿಸಿ, ಅವುಗಳತ್ತ ಮನಸ್ಸನ್ನು ಹರಿಯಗೊಡದೇ, ಉಭಯ ಲೋಕಗಳ ಸುಖಗಳಲ್ಲಿ ನಿಃಸ್ಪೃಹನಾಗಿ, ವೈರಾಗ್ಯಮಯವಾದ ಜೀವನವನ್ನು ಸಾಗಿಸುತ್ತಾನೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೬ ಜುಲೈ, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

ಆಶೀರ್ವಚನ-೩

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ಜಂತುರ್ಮರಣಜನ್ಮಾಭ್ಯಾಂ ಪರಿಭ್ರಮತಿ ಚಕ್ರವತ್ (ಸಿ. ಶಿ. ೫.೫೯)

ಹುಟ್ಟಿದವನಿಗೆ ಮರಣವೆಂಬುದು ನಿಯತವಾದುದು. ಮೃತನಾದವನಿಗೆ ಜನನವೂ ನಿಶ್ಚಿತವು. ಆದ್ದರಿಂದ ಜೀವಾತ್ಮನು ಈ ಹುಟ್ಟು-ಸಾವುಗಳ ಅಧೀನನಾಗಿ ಚಕ್ರದಂತೆ ಸುತ್ತುತ್ತಿರುವನು.

''ಮರಣಂ ಪ್ರಕೃತಿಃ ಶರೀರಿಣಾಂ ವಿಕೃತಿರ್ಜೀವನಮುಚ್ಯತೇ'' ಎಂಬ ವಚನಾನು ಸಾರವಾಗಿ, ಹುಟ್ಟಿದವನು ಸಾಯುವುದು, ಸತ್ತವನು ಪುನಃ ಹುಟ್ಟುವುದು-ಇದು ನೈಸರ್ಗಿಕವಾದುದು. ಅಂತೆಯೇ ಶಾಸ್ತ್ರಕಾರರು-ಅಸ್ತಿ, ಜಾಯತೇ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ ಮತ್ತು ವಿನಶ್ಯತಿ ಎನ್ನುವ ಷಡ್ಭಾವ ವಿಕಾರಗಳನ್ನು ದೇಹಕ್ಕಾಗಿ ನಿರೂಪಿಸಿದ್ದಾರೆ.

ಶರೀರವು, ತಾಯಿಯ ಗರ್ಭದಲ್ಲಿ ಬೆಳೆಯುತ್ತಿದ್ದಾಗ ಅಸ್ತಿ ಎಂತಲೂ, ಅದು ಪ್ರಸವವಾದಾಗ ಜಾಯತೇ ಎಂತಲೂ, ಪುನಃ ಕ್ಷೀರ-ಅನ್ನಾದಿಗಳಿಂದ ಬೆಳೆಯುತ್ತಿ ರುವಾಗ ವರ್ಧತೇ ಎಂಬುದಾಗಿಯೂ, ಬೆಳವಣಿಗೆಯು ಪರಿಪೂರ್ಣ ಸ್ಥಿತಿಗೆ ಬಂದ ಸ್ವಲ್ಪ ಕಾಲದನಂತರ ಅಲ್ಪ-ಸ್ವಲ್ಪು ಪ್ರಕೃತಿ ಹೊಂದಿದಾಗ, ವಿಪರಿಣಮತೇ ಎಂತಲೂ, ನಂತರ ವಯಸ್ಸು ಇಳಿಮುಖವಾದಂತೆಲ್ಲ ದೇಹ ಮತ್ತು ಇಂದ್ರಿಯಗಳಲ್ಲಿ ಶಿಥಿಲತೆಯು ಪ್ರಾರಂಭವಾಗಲು, ಅಪಕ್ಷೀಯತೇ ಎಂದೂ, ಕೊನೆಗೆ ಪ್ರಾಣಹೋಗಿ, ದೇಹವು ಪಂಚ ಭೂತಗಳಲ್ಲಿ ವಿಲೀನಗೊಂಡು, ಕಣ್ಮರೆಯಾದಾಗ ವಿನಶ್ಯತಿ ಎಂಬುದಾಗಿಯೂ ಹೇಳಿಸಿಕೊಳ್ಳುವುದು.

ಈ ಷಡ್‌ಭಾವ ವಿಕಾರಗಳು ಶರೀರದ ಸ್ವಾಭಾವಿಕಗಳಾದ ಧರ್ಮಗಳಾದ್ದರಿಂದ, ಇವುಗಳಿಂದ ತಪ್ಪಿಸಿಕೊಳ್ಳುವುದು ಯಾರಿಂದಲೂ ಸಾಧ್ಯವಿಲ್ಲ. ಅಂತೆಯೇ

''ಹುಲಿಯ ಬೆನ್ನಿನಲ್ಲಿ ಒಂದು ಹುಲ್ಲೆ ಹೋಗಿ
ಮೇದು ಬಂದೆನೆಂದರೆ, ಇದಕಂಡು ಬೆರಗಾದೆ !
ರಕ್ಕಸಿಯ ಮನೆಗೆ ಹೋಗಿ ನಿದ್ರೆಗೈದು ಬಂದೆನೆಂದರೆ,
ಇದಕಂಡು ಬೆರಗಾದೆ ! ಜವನನ ಮನೆಗೆ ಹೋಗಿ
ಸಾಯದೇ ಬದುಕಿ ಬಂದೆನೆಂದರೆ, ಇದ ಕಂಡು ಬೆರಗಾದೆ ಗೋಹೇಶ್ವರಾ !''

ಎಂಬುದಾಗಿ ಶ್ರೀ ಪ್ರಭುದೇವರು, ಹುಟ್ಟಿದವನಿಗೆ ಸಾವು ತಪ್ಪುವುದಿಲ್ಲವೆಂಬ ಮಾತನ್ನು, ಅನೇಕ ಉದಾಹರಣೆಗಳಿಂದ ಸಿದ್ಧಪಡಿಸಿದ್ದಾರೆ.

ನೀರಮೇಲಿನ ಗುರುಳಿಯು ಕೆಲಕಾಲ ಒಡೆಯದೇ ಹಾಗೇ ಉಳಿದಾಗ ನೋಡುವ ವರಿಗೆ ಆಶ್ಚರ್ಯವಾಗಿ ತೋರುವಂತೆ, ಎರಡು ಕಣ್ಣು, ಎರಡು ಕಿವಿ, ಎರಡೂ ಮೂಗಿನ

ಸೊಳ್ಳೆ, ಒಂದು ಬಾಯಿ, ಒಂದು ಮೂತ್ರದ್ವಾರ ಹಾಗೂ ಮತ್ತೊಂದು ಮಲದ್ವಾರಗಳೆಂಬ ನವದ್ವಾರಗಳುಳ್ಳ ಈ ದೇಹದಲ್ಲಿ, ಅತಿ ಚಂಚಲವಾದ ಪ್ರಾಣವಾಯುವು, ದಿನಕ್ಕೊಮ್ಮೆ ಇಪ್ಪತ್ತೊಂದು ಸಾವಿರದ ಆರನೂರು ಸಾರೆ ಹೊರಹೋಗಿ, ಪುನಃ ಒಳ ಬಂದು, ನಮ್ಮ ಬದುಕಿಗೆ ನಿಮಿತ್ತವಾಗಿರುವುದನ್ನು ನೋಡಿದರೆ, ಆಲೋಚಕರಿಗೆ ಪರಮಾಶ್ಚರ್ಯವಾಗಿ ತೋರುವುದು. ಆದುದರಿಂದ ಮನುಷ್ಯನ ಮರಣವನ್ನು ನೋಡಿ ಆಶ್ಚರ್ಯಪಡುವುದಕ್ಕಿಂತ, ಇಷ್ಟು ದಿವಸ ಈತನು ಹೇಗೆ ಬದುಕಿದನು ? ಎಂಬುದರ ಬಗ್ಗೆಯೇ ಆಶ್ಚರ್ಯಪಡಬೇಕಾಗಿದೆ.

ಜನನ–ಮರಣಗಳು ಶರೀರದ ಸ್ವಭಾವಗಳಾದ್ದರಿಂದ, ''ಸ್ವಭಾವೋ ದುರತಿಕ್ರಮಃ'' ಎಂಬ ವಚನದಂತೆ, ಅದನ್ನು ಬದಲಿಸಲಾಗುವುದಿಲ್ಲ. ಓರ್ವ ಋಷಿಯು ಪ್ರಾತಃಕಾಲದಲ್ಲಿ ಸ್ನಾನ–ಸಂಧ್ಯಾದಿಗಳನ್ನು ಮುಗಿಸಿ, ಸೂರ್ಯ ನಾರಾಯಣನಿಗೆ ಅರ್ಘ್ಯವನ್ನು ಕೊಡುವ ಸಮಯದಲ್ಲಿ, ಆಕಾಶದಿಂದ ಇಲಿಯೊಂದು ಅವನ ಅಂಗೈಯೊಳಗೆ ಬಿದ್ದಿತು . ಅದನ್ನು ನೋಡಿ ಆಶ್ಚರ್ಯಚಕಿತನಾದ ಋಷಿಯು, ಇದು ಎಲ್ಲಿಂದ ಬಂದಿತು? ಎಂದು ಮೇಲಕ್ಕೆ ನೋಡಲಾಗಿ, ಆಕಾಶದಲ್ಲಿ ಒಂದು ಹದ್ದು ಹಾರಾಡುತ್ತಿತ್ತು. ಆಗ ಋಷಿಯು ಓಹೋ ! ಈ ಅಲ್ಪ ಪ್ರಾಣಿಯನ್ನು ಈ ಹದ್ದು ತಿನ್ನಲು ತೆಗೆದುಕೊಂಡು ಹೊರಟಂತೆ ತೋರುತ್ತದೆ ; ಇದಕ್ಕೆ ಅಭಯದಾನ ಮಾಡಬೇಕೆಂದು ಯೋಚಿಸಿ, ಕರುಣಾಶಾಲಿಯಾದ ಋಷಿಯು ತನ್ನ ತಪಃಪ್ರಭಾವದಿಂದ ಇಲಿಯನ್ನು ಒಂದು ಹೆಣ್ಣುಕೂಸನ್ನಾಗಿ ಪರಿವರ್ತಿಸಿದನು.

ಋಷಿಯ ಆಶ್ರಮದಲ್ಲಿ ಕೂಸು ಬೆಳೆದು ದೊಡ್ಡವಳಾದಳು. ಸಾಕು ಮಗಳು ವಯಸ್ಸಿಗೆ ಬಂದಾಗ, ಯೋಗ್ಯ ತೇಜಸ್ವಿಯೊಡನೆ ಅವಳ ಲಗ್ನ ಮಾಡಬೇಕೆಂದು ಯೋಚಿಸಿದ ಋಷಿಯು, ಸೂರ್ಯನಾರಾಯಣನನ್ನು ಆಹ್ವಾನಿಸಿ ಮಗಳಿಗೆ ವರನನ್ನು ತೋರಿಸಿದರು. ಆಗ ಆ ಕನ್ಯೆಯು ಸೂರ್ಯನನ್ನು ನೋಡಿ ಕಣ್ಣುಮುಚ್ಚಿಕೊಂಡು, ಅಪ್ಪಾ ! ಇವನನ್ನು ನೋಡಿದೊಡನೆ ಕಣ್ಣು ಕುಕ್ಕುತ್ತವೆ. ಅಲ್ಲದೆ ಇವನು ಬಹಳ ಉಷ್ಣ ಶರೀರಿಯು. ನನಗೆ ಇವನ ತಾಪವನ್ನು ತಡೆಯಲಾಗದು. ಕಾರಣ ಶೀತಲ ಸ್ವಭಾವದವನೂ, ಸೂರ್ಯನಿಗಿಂತಲೂ ಶೂರನೂ ಆದ ವರನನ್ನು ಕರೆಯಿಸು ಎಂದಳು.

ಆಗ ಬಹು ಆಲೋಚಿಸಿದ ಋಷಿಯು ಸೂರ್ಯನ ತೇಜಸ್ಸನ್ನು ಮುಚ್ಚಿ ಹಾಕುವ ಸಾಮರ್ಥ್ಯವುಳ್ಳ, ಶೀತಲಸ್ವಭಾವದ ಮೇಘರಾಜನನ್ನು ಆಹ್ವಾನಿಸಿ ಮಗಳಿಗೆ ವರನನ್ನು ನಿರೀಕ್ಷಿಸುವುದಕ್ಕಾಗಿ ನಿರೂಪಿಸಿದನು. ಕಪ್ಪಾದ ಮೈಬಣ್ಣ, ಮೈತುಂಬ ನೀರು ಸುರಿಸುತ್ತ ನಿಂತಿರುವ ಮೇಘರಾಜನನ್ನು ನೋಡಿ, ಕನ್ಯೆಯು ಅಪ್ಪಾ ! ಈತನು ಸ್ಫುರದ್ರೂಪಿಯಾದ ವರನಲ್ಲ, ಅಲ್ಲದೇ ಇವನ ಮೈಯಿಂದ ಯಾವಾಗಲೂ ನೀರು ಸುರಿಯುತ್ತಿರುತ್ತದೆ. ಕಾರಣ ಈತನಾದರೂ ನನಗೆ ಅಭೀಷ್ಟನಲ್ಲ ಎಂದು ಹೇಳಿದಳು.

ಮಗಳ ಮಾತನ್ನು ಕೇಳಿ ನಿರುಪಾಯನಾದ ಋಷಿಯು, ಆಕಾಶದಲ್ಲಿಯ ಮೋಡಗಳನ್ನು ಉಲ್ಲೋಲ–ಕಲ್ಲೋಲಮಾಡುವ ಸಾಮರ್ಥ್ಯವುಳ್ಳ ವಾಯುದೇವನನ್ನು ಆಹ್ವಾನಿಸಿದನು. ವಾಯುದೇವನನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ ಕನ್ಯೆಯು, ಅಪ್ಪಾ ! ಇವನಿಗೆ

ಸ್ಥೂಲಶರೀರವೇ ಇಲ್ಲ. ಅಲ್ಲದೇ ಈತನು ಬಹಳ ಚಂಚಲನು, ಒಂದು ಸ್ಥಾನದಲ್ಲಿ ಎಂದೂ ಇರಲಾರ. ಕಾರಣ ಒಂದೇ ಸ್ಥಾನದಲ್ಲಿ ಶಾಶ್ವತನಾಗಿರುವ ಪರಾಕ್ರಮಶಾಲಿ ಯಾದ ವರನನ್ನು ಕರೆಯಿಸು ಎಂದಳು.

ನಂತರ ಋಷಿಯು ವಾಯುವನ್ನೂ ತಡೆಯುವ ಸಾಮರ್ಥ್ಯವುಳ್ಳ ಪರ್ವತ ರಾಜನನ್ನು ಆಹ್ವಾನಿಸಿ, ಮಗಳಿಗೆ ತೋರಿಸಿದನು. ಆಗ ಕನ್ಯೆಯು, ಅಪ್ಪಾ ! ಈತನು ಬಹು ಒರಟಾಗಿಯೂ, ಕುರುಪಿಯೂ ಆಗಿದ್ದಾನೆ. ಇವನು ದೂರದಿಂದ ನೋಡಿದಾಗ ಸುಂದರನಾಗಿ ಕಾಣುತ್ತಾನೆ ; ಆದರೆ ಸಮೀಪಕ್ಕೆ ಹೋದಾಗ ಈತನನ್ನು ನೋಡಲಾಗು ವುದಿಲ್ಲ. ಕಾರಣ ಮತ್ತೊಬ್ಬ ಬಲಶಾಲಿಯಾದ ವರನನ್ನು ಕರೆಯಿಸು ಎಂದಳು.

ಕೊನೆಗೆ ಋಷಿಯು ಪರ್ವತ ಶ್ರೇಣಿಗಳನ್ನೇ ಕೆದರಿ ಹಾಕುವ ಸಾಮರ್ಥ್ಯವುಳ್ಳ ಒಂದು ಹೆಗ್ಗಣವನ್ನು ಕರೆದು ತೋರಿಸಿದನು. ಹೆಗ್ಗಣವನ್ನು ನೋಡಿದೊಡನೆ ಆ ಕನ್ಯೆಯು ತನ್ನ ಒಪ್ಪಿಗೆಯನ್ನು ತೋರಿಸಿ, ತಲೆ ತಗ್ಗಿಸಿ, ಸುಮ್ಮನೇ ನಿಂತಳು. ಮಗಳು ಮಾತನಾಡದೇ ಸುಮ್ಮನಿದ್ದುದನ್ನು ನೋಡಿ, ''ಮೌನಂ ಸಮ್ಮತಿಲಕ್ಷಣಂ'' ಎಂಬ ಮರ್ಮವನ್ನರಿತ ಋಷಿಯು, ಎಷ್ಟು ಪ್ರಯತ್ನಿಸಿದರೂ ಇವಳು ತನ್ನ ಮೊದಲಿನ ಜಾತಿಯ ಸ್ವಭಾವವನ್ನು ಬಿಡಲಿಲ್ಲಾ–ಎಂದು ಯೋಚಿಸಿ, ನಿರುಪಾಯನಾಗಿ, ಕೊನೆಗೆ ಅವಳನ್ನು ಮೊದಲಿನಂತೆ ಇಲಿಯನ್ನಾಗಿ ಮಾಡಿ, ಹೆಗ್ಗಣದ ಜೊತೆಗೆ ಕಳಿಸಿಕೊಟ್ಟನು. ಆ ಸಮಯದಲ್ಲಿ ಅವನೇ ಹೇಳಿದ ಒಂದು ಶ್ಲೋಕವು ಈ ತೆರನಾಗಿದೆ–

ಸೂರ್ಯಂ ಭರ್ತಾರಮುತ್ಸೃಜ್ಯ ಪರ್ಜನ್ಯಂ ಮಾರುತಂ ಗಿರಿಮ್ ।
ಸ್ವಜಾತಿಂ ಮೂಷಿಕಾ ಪ್ರಾಪ್ತಾ ಸ್ವಜಾತಿರ್ದುರತಿಕ್ರಮಃ ॥

ಸೂರ್ಯ, ಮೇಘ, ಮಾರುತ ಮತ್ತು ಗಿರಿ ಇವೆಲ್ಲವುಗಳನ್ನೂ ಬಿಟ್ಟು, ಇಲಿಯು ತನ್ನ ಜಾತಿಯ ಹೆಗ್ಗಣವನ್ನೇ ಒಪ್ಪಿಕೊಂಡಿತು. ಇದಕ್ಕೆ ಕಾರಣವೇನೆಂದರೆ, ಆವದಕ್ಕಾವುದು ಸ್ವಭಾವವೋ, ಅದನೆಂದಿಗೂ ಬದಲಿಸಲಿಕ್ಕಾಗದು. ಅದರಂತೆ, ಜನ್ಮತಾಳಿದ ಶರೀರಕ್ಕೆ ಮರಣವು ಸ್ವಭಾವವಾದ್ದರಿಂದ, ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ.

ಎಷ್ಟೋ ಜನ ತಪಸ್ವಿಗಳ ಹಾಗೂ ಮಹಾನುಭಾವರ ಚರಿತ್ರೆಗಳಲ್ಲಿ, ಅವರು ತಮ್ಮ ತಪಃಪ್ರಭಾವದಿಂದ ಸತ್ತ ಮನುಷ್ಯ ಹಾಗೂ ಪ್ರಾಣಿಗಳನ್ನು ಬದುಕಿಸಿದರೆಂಬ ಪವಾಡಗಳನ್ನು ಕೇಳುತ್ತೇವೆ. ಆದರೆ ಸತ್ತವರನ್ನು ಬದುಕಿಸುವ ಸಾಮರ್ಥ್ಯವುಳ್ಳ ಆ ಮಹಿಮಾಶಾಲಿಗಳೂ ಸತ್ತುಹೋದರಲ್ಲಾ ಇದೊಂದು ಆಶ್ಚರ್ಯವಲ್ಲವೇ ? ಅಂತೆಯೇ–

ಜಾತಸ್ಯ ಹಿ ಧ್ರುವೋಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥

(ಗೀತಾ ; ೨–೨೭)

ಎಂಬುದಾಗಿ, ಗೀತೆಯಲ್ಲಿ ಭಗವಂತನಾದರೂ, ಹುಟ್ಟಿದವನಿಗೆ ಸಾವು ಕಟ್ಟಿಟ್ಟದ್ದೆಂದೂ, ಈ ಅಪರಿಹಾರ್ಯವಾದ ವಿಷಯಕ್ಕಾಗಿ ನೀನು ಚಿಂತಿಸಬೇಡವೆಂಬುದಾಗಿಯೂ, ಅರ್ಜುನನಿಗೆ ಉಪದೇಶಿಸಿದ್ದಾನೆ.

ಇನ್ನು ತಪಸ್ಸು ಹಾಗೂ ಯೋಗಸಾಧನೆಗಳ ಮೂಲಕ ಮಾರ್ಕಂಡೇಯ, ಮಾರುತಿ, ವ್ಯಾಸ, ಬಲಿ ಮತ್ತು ಅಶ್ವತ್ಥಾಮಾದಿಗಳಂತೆ ಚಿರಂಜೀವಿಗಳಾಗಬಹುದೇ ವಿನಹ, ಅಮರರಾಗಲು ಬರುವುದಿಲ್ಲ. ಈ ಚಿರಜೀವನವಾದರೂ, ಅತಿ ಹೆಚ್ಚು ಅಂದರೆ ನಾಲ್ಕು ಯುಗ ಪರ್ಯಂತವಾಗಿರುವದೆಂಬುದು ಶಾಸ್ತ್ರಸಮ್ಮತವಾಗಿದೆ. ಈ ಎಲ್ಲ ದೃಷ್ಟಿಯಿಂದ ನೋಡಲಾಗಿ, ''ಜಾತಸ್ಯ ಹಿ ಧ್ರುವೋ ಮೃತ್ಯುಃ'' ಎಂಬ ಶ್ರೀ ರೇಣುಕ ಭಗವತ್ಪಾದರ ಉಪದೇಶವು ಸರ್ವಾನುಭವ ಸಿದ್ಧವಾದುದು.

ಹುಟ್ಟಿದವರು ಸಾಯುವದನ್ನು ಪ್ರತ್ಯಕ್ಷವಾಗಿ ನೋಡುತ್ತೇವೆ ಹಾಗೂ ಹಿಂದಿನವರು ಸತ್ತುಹೋದ ಸುದ್ದಿಯನ್ನು ಕೇಳುತ್ತಲಿದ್ದೇವೆ. ಈ ಕಾರಣದಿಂದ, ಹುಟ್ಟಿದವನು ಸಾಯುತ್ತಾನೆ ಎಂಬ ವಿಷಯವು ನಮಗೆಲ್ಲ ಮನವರಿಕೆಯಾಗುತ್ತದೆ. ಆದರೆ ''ಧ್ರುವಂ ಜನ್ಮ ಮೃತಸ್ಯಚ'' ಸತ್ತವನು ಅವಶ್ಯವಾಗಿ ಹುಟ್ಟುತ್ತಾನೆ–ಎಂಬುದನ್ನು ನಾವು ಹೇಗೆ ನಂಬಬೇಕು ? ಹಿಂದೆ ಸತ್ತವನೇ ಇಂದು ಹುಟ್ಟಿಬಂದಿರುವದಾಗಿ ಯಾರಿಗೂ ಪ್ರತ್ಯಕ್ಷ ವಾಗಿ ಕಂಡುಬರುವದಿಲ್ಲವಲ್ಲಾ ? ಎಂಬ ಸಂಶಯವು ಬಂದೊದಗಿದಾಗ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ''ಜಂತುರ್ಮರಣ ಜನ್ಮಾಭ್ಯಾಂ ಪರಿಭ್ರಮತಿ ಚಕ್ರವತ್'' ಎಂಬುದಾಗಿ, ಒಂದು ಚಕ್ರದ ದೃಷ್ಟಾಂತದ ಮೂಲಕವಾಗಿ ಸಮಾಧಾನವನ್ನು ಉಪದೇಶಿಸಿದ್ದಾರೆ. ಚಕ್ರದಲ್ಲಿರುವ ಅರಗಳು (ಹಲ್ಲುಗಳು) ಕ್ರಮಶಃ ಮೇಲಿನಿಂದ ಕೆಳಗೆ ಹಾಗೂ ಕೆಳಗಿನಿಂದ ಮೇಲೆ ತಿರುಗುತ್ತಿರುವಂತೆ, ಜೀವಿಗಳಾದರೂ, ಜನನ ಮತ್ತು ಮರಣರೂಪವಾದ ಚಕ್ರದಲ್ಲಿ, ಪುನಃ ಪುನಃ ಆವೃತ್ತಿಯನ್ನು ಪಡೆಯುತ್ತಲಿರುತ್ತಾರೆ.

ಅದನ್ನೇ ಶ್ರೀ ಶಂಕರಾಚಾರ್ಯರು–

ಪುನರಪಿ ಜನನಂ ಪುನರಪಿ ಮರಣಂ
ಪುನರಪಿ ಜನನೀ ಜಠರೇ ಶಯನಮ್ ।
ಇಹ ಸಂಸಾರೇ ಖಲು ದುಸ್ತಾರ್ತೇ
ಕೃಪಯಾಽಪಾರೇ ಪಾಹಿ ಮುರಾರೇ ॥

(ಭಜಗೋವಿಂದ ; ೨೧)

ಇಂತೆಂದು, ಹುಟ್ಟು–ಸಾವುಗಳ ಚಕ್ರವನ್ನು ತಿಳಿಯಪಡಿಸಿದ್ದಾರೆ.

ಜೀವನವು ಒಂದು ಪುನರುಕ್ತಿಯು. ಈ ಜನ್ಮದಲ್ಲಿ ನಾವು ಹೇಗೆ ದಿನಾಲು ನೋಡಿದ್ದನ್ನೇ ನೋಡುತ್ತ, ಕೇಳಿದ್ದನ್ನೇ ಕೇಳುತ್ತ, ಉಂಡದ್ದನ್ನೇ ಉಣ್ಣುತ್ತಾ ಮತ್ತು ಮುಟ್ಟಿದ್ದನ್ನೇ ಮುಟ್ಟುತ್ತ ಕಾಲಕಳೆಯುತ್ತೇವೆಯೋ, ಇದರಂತೆ ಹಿಂದಿನ ಅನೇಕ ಜನ್ಮಗಳಲ್ಲಿ ಅವನ್ನೇ ಮಾಡುತ್ತ ಬಂದಿದ್ದೇವೆ. ಮುಂದೆಯಾದರೂ ಅವುಗಳ ಸಂಸ್ಕಾರ ಮೂಲಕವಾಗಿ ಅವುಗಳನ್ನೇ ಮಾಡುವೆವು.

ಭಾವಿಯಲ್ಲಿ ನೀರು ಜಗ್ಗಲು ಮಾಡಿದ ಮೊಟ್ಟೆಯು ಅದೆಷ್ಟು ಸಾರೆ ಭಾವಿ ಯೊಳಗೆ ಮುಳುಗಿ ಮೇಲೆಬಂದರೂ ಮತ್ತೆ ಖಾಲಿ ಆಗುವಂತೆ, ಮನುಷ್ಯನು ಒಂದಲ್ಲ ಎರಡಲ್ಲ, ಧರೆಯನೆಲ್ಲವನು ಸಣ್ಣಿಸಿ ಧೂಳಿಮಾಡಲು ಎನಿತು ಪರಮಾಣುಗಳೋ,

ಅನಿತು ದೇಹವನ್ನು, ಒಂದೊಂದು ಯೋನಿಯಲ್ಲಿ ಧರಿಸುತ್ತ ಸುತ್ತಾಡಿದರೂ, ಕೊನೆಗೆ ಬರಿಗೈಯಿಂದಲೇ ಹೋಗುತ್ತಾನೆ. ಆದ್ದರಿಂದ ಕಬೀರದಾಸರು ''ಮುಠ್ಠೀಬಾಂಧಕೇ ಆಯಾಥಾ ಹಾಥ ಪಸಾರಕೇ ಜಾಯೇಗಾ'' ಎಂದಿದ್ದಾರೆ. ಕನ್ನಡದ ಸಂತರು ''ಬರುವಾಗ ಬತ್ತಲೆ, ಹೋಗುವಾಗ ಬತ್ತಲೆ, ಬಂದು ಹೋಗುವ ನಡುವೆ ಬರೀ ಕತ್ತಲೆ'' ಎಂಬುದಾಗಿ, ಮನುಷ್ಯನು ನಿರರ್ಥಕವಾಗಿ ಹಾಳುಮಾಡಿಕೊಳ್ಳುತ್ತಿರುವ ಜೀವನದ ಬಗ್ಗೆ ಬಹು ಮಾರ್ಮಿಕವಾಗಿ ಹಾಡಿದ್ದಾರೆ.

''ಏಕೇನ ಜನ್ಮನಾ ಮುಕ್ತಿಃ ವೀರಾಣಾಂ ತು ಮಹೇಶ್ವರಿ'' ''ವೀರಶೈವರಿಗೆ ಒಂದೇ ಜನ್ಮದಲ್ಲಿ ಮುಕ್ತಿಯು ಲಭಿಸುತ್ತದೆ. ಆದ್ದರಿಂದ, ಇವರಿಗೆ ಪುನರ್ಜನ್ಮವಿರುವುದಿಲ್ಲ'' ವೆಂಬ ಆಗಮ ವಾಕ್ಯಕ್ಕೂ, ''ಧ್ರುವಂ ಜನ್ಮಮೃತಸ್ಯ ಚ'' ಸತ್ತವನು ಅವಶ್ಯವಾಗಿ ಹುಟ್ಟುತ್ತಾನೆಂಬ ವೀರಶೈವ ಧರ್ಮ ಗ್ರಂಥವಾದ ಈ ಸಿದ್ಧಾಂತ ಶಿಖಾಮಣಿಯಲ್ಲಿಯ ಶ್ರೀಜಗದ್ಗುರು ರೇಣುಕ ಭಗವತ್ಪಾದರ ಉಪದೇಶಕ್ಕೂ ವಿರೋಧವಾಗುತ್ತಿದೆಯಲ್ಲ ? ಎಂಬ ಸಂದೇಹವು ಆಲೋಚಕರ ಮನಸ್ಸಿನಲ್ಲಿ ಹೊಳೆಯುವದು ಸಹಜ. ಆದರೆ ಅದರ ಗೂಢಾಭಿಪ್ರಾಯವು ಹೀಗಿದೆ–

ವೀರಶೈವರಿಗೆ ಪುನರ್ಜನ್ಮವಿಲ್ಲವೆಂಬ ಆಗಮದ ಮಾತು ಶತಶಃ ಸತ್ಯವಾದದ್ದು. ಆದರೆ ವೀರಶೈವರೆಂದು ಯಾರನ್ನು ಕರೆಯಬೇಕು ? ಇದೊಂದು ಜಟಿಲವಾದ ಪ್ರಶ್ನೆಯು. ನಾವು ಸಾಮಾನ್ಯವಾಗಿ ಲಿಂಗಧಾರಿಗಳ ಉದರಲ್ಲಿ ಜನಿಸಿದವರಿಗೆಲ್ಲ ವೀರ ಶೈವರು ಎಂದು ವ್ಯಾವಹಾರಿಕವಾಗಿ ಕರೆಯುತ್ತ ಬಂದಿದ್ದೇವೆ. ಇದು ವೀರಶೈವರ ವ್ಯಾವಹಾರಿಕವಾದ ಪರಿಭಾಷೆಯೇ ವಿನಹ, ತಾತ್ತ್ವಿಕ ಪರಿಭಾಷೆಯಲ್ಲ. ಶೂರರ ಉದರದಿಂದ ಜನಿಸಿದವರೆಲ್ಲರೂ ಶೂರರೇ ಆಗುತ್ತಾರೆಂಬ ನಿಯಮವಿಲ್ಲ. ಶೂರತನವು ತನ್ನ ವ್ಯಕ್ತಿಗತವಾದ ಸಾಧನೆಯ ಪ್ರತಿಫಲವು. ಅದಕ್ಕಾಗಿ ಲಿಂಗವನ್ನು ಧರಿಸಲಿ, ಧರಿಸದೇ ಇರಲಿ, ವೀರಶೈವ ಧರ್ಮಾಚರಣೆಯನ್ನು ಮಾಡಲಿ, ಮಾಡದೇ ಇರಲಿ, ಲಿಂಗವಂತರ ಉದರದಿಂದ ಹುಟ್ಟಿದ ಮಾತ್ರಕ್ಕೆ ಅವನನ್ನು ವೀರಶೈವನೆಂದು ಕರೆಯುವದು ಶುದ್ಧ ತಪ್ಪು. ಅಂತೆಯೇ ಶ್ರೀಜಗದ್ಗುರು ರೇಣುಕ ಭಗವತ್ಪಾದರು–

ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿನೀ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥

(ಸಿ. ಶಿ. ೫ –೧೬)

ಶಿವ ಹಾಗೂ ಜೀವರ ಐಕ್ಯಬೋಧಕವಾದ ಲಿಂಗಾಂಗಸಾಮರಸ್ಯದ ತತ್ತ್ವ ಜ್ಞಾನವನ್ನು ಪಡೆದು, ಆ ಜ್ಞಾನಾನಂದದಲ್ಲಿಯೇ ರಮಿಸುತ್ತಿರುವ ಶಿವಭಕ್ತರೇ ವೀರಶೈವರೆಂಬುದಾಗಿ, ವೀರಶೈವ ಶಬ್ದದ ಯಥಾರ್ಥವಾದ ತಾತ್ತ್ವಿಕ ಪರಿಭಾಷೆಯನ್ನು ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರುವಿನಿಂದ ದೀಕ್ಷೆಯನ್ನು ಪಡೆದು, ವೀರಶೈವಕ್ಕೆ ಅಂಗಗಳಾದ ಅಷ್ಟಾವರಣ ಮತ್ತು ಪ್ರಾಣದೋಪಾದಿಯಲ್ಲಿರುವ ಪಂಚಾಚಾರಗಳಲ್ಲಿ ನಿಷ್ಠೆಯುಳ್ಳ ವನಾಗಿ, ಅವುಗಳನ್ನು ಪರಿಪಾಲಿಸುತ್ತ, ಆತ್ಮಸ್ವರೂಪವಾದ ಷಟ್‌ಸ್ಥಲಮಾರ್ಗದಲ್ಲಿ ಮುನ್ನಡೆದು, ಲಿಂಗಾಂಗ ಸಾಮರಸ್ಯ ರೂಪವಾದ ತತ್ತ್ವಜ್ಞಾನವನ್ನು ಪಡೆದು,

ಅದರಲ್ಲಿಯೇ ತಲ್ಲೀನವಾದ ಚಿತ್ತವುಳ್ಳವನೇ ವೀರಶೈವನು. ಇಂತಹ ವೀರಶೈವನಿಗೆ ಒಂದೇ ಜನ್ಮದಲ್ಲಿ ಮುಕ್ತಿಯಾಗುವ ಕಾರಣ, ಇವನಿಗೆ ಪುನರ್ಜನ್ಮವಿಲ್ಲವೆಂಬುದು ಆಗಮದ ಅಭಿಪ್ರಾಯವು. ಶ್ರೀರೇಣುಕ ಭಗವತ್ಪಾದರಾದರೂ ಅದನ್ನೇ ಸಮರ್ಥಿಸಿ, ಅದಕ್ಕೆ ವಿಪರೀತವಾಗಿ ಯಾವ ಧರ್ಮಾಚರಣೆಯನ್ನು ಮಾಡದೇ, ಕೇವಲ ವೀರಶೈವರ ಉದರದಲ್ಲಿ ಜನಿಸಿದ ಮಾತ್ರಕ್ಕೆ ಅವನಿಗೆ ಪುನರ್ಜನ್ಮ ತಪ್ಪಲಾರದು ಎಂಬ ಅಭಿಪ್ರಾಯ ವನ್ನು ವ್ಯಕ್ತಪಡಿಸಿರುವುದರಿಂದ, ಆಗಮದ ವಾಕ್ಯಕ್ಕೂ, ಶ್ರೀ ರೇಣುಕರ ಉಪದೇಶಕ್ಕೂ, ಪರಸ್ಪರ ವಿರೋಧವಿಲ್ಲವೆಂಬುದನ್ನು ಸುಜ್ಞರು ಮನವರಿಕೆ ಮಾಡಿಕೊಳ್ಳಬೇಕು.

ಸತ್ತವರೆಲ್ಲರೂ ಮರಳಿ ಬಾರದ ಮೋಕ್ಷವನ್ನು ಪಡೆಯುವದಾಗಿದ್ದರೆ, ಅದೊಂದು ಸಹಜವಾದ ಮಾರ್ಗವಾಗಿ, ಅದಕ್ಕೋಸ್ಕರವಾಗಿ ಮಾಡುತ್ತಿರುವ ಸಾಧಕರ ಪರಿಶ್ರಮವು ವ್ಯರ್ಥವಾಗುತ್ತಿತ್ತು. ಕಾರಣ, ಲಿಂಗಾಂಗಸಾಮರಸ್ಯ ಬೋಧಕ ತತ್ತ್ವಜ್ಞಾನವನ್ನು ಪಡೆದು, ಪರಮಾತ್ಮನಲ್ಲಿ ಸಮರಸವಾಗುವವರೆಗೆ, ಈ ಪುನರ್ಜನ್ಮವು ಅದಾರಿಗೂ ತಪ್ಪಿದ್ದಲ್ಲ. ಅದನ್ನೇ ಜ್ಞಾನನಿಧಿಯಾದ ಶ್ರೀ ಚೆನ್ನಬಸವಣ್ಣನವರು–

''ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ
ಠಾವಿನ್ನೆಲ್ಲಿಹುದೋ ? ಮೇಘ ಜಲವೆಲ್ಲ ಮುತ್ತಾದೊಡೆ,
ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಹುದೋ ?
ಕಷ್ಟಜೀವಿ ಮನುಜರೆಲ್ಲ ನೆಟ್ಟನೇ ಶಿವಜ್ಞಾನಿಗಳಾದೊಡೆ,
ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ ?''

ಸಾಕ್ಷಿ: ''ಗುರುಭಕ್ತಿಂ ಪರಿತ್ಯಜ್ಯ ಸದ್ಯೋಽಪಿ ನರಕಂ ವ್ರಜೇತ್'' ಇಂತೆಂದುದಾಗಿ ನಮ್ಮ ಕೂಡಲ ಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ'' ಎಂದು ಹೇಳಿರುವ ತಮ್ಮ ಅನುಭಾವದ ನುಡಿಯಲ್ಲಿ, ಶ್ರೀ ರೇಣುಕ ಭಗವತ್ಪಾದರ ಉಕ್ತಿಯೇ ವ್ಯಕ್ತವಾಗಿ ತೋರುತ್ತಿದೆ.

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥

(ಗೀತಾ : ೭–೩)

ಈ ಗೀತೋಕ್ತಿಯಲ್ಲಾದರೂ, ಭಗವಂತನು, ಸಾವಿರಕ್ಕೊಬ್ಬರು ಸನ್ಮಾರ್ಗದಲ್ಲಿ ಪ್ರವೃತ್ತ ರಾಗುತ್ತಾರೆ, ಹೀಗೆ ಸನ್ಮಾರ್ಗಪ್ರವೃತ್ತರಾದ ಸಾವಿರ ಜನರಲ್ಲೊಬ್ಬನು ಯಥಾರ್ಥ ತತ್ತ್ವ ವನ್ನು ತಿಳಿದು ಮುಕ್ತನಾಗುತ್ತಾನೆಂದು ತಿಳಿದು, ಮುಕ್ತಿಯ ದುರ್ಲಭತೆಯನ್ನು ಅರುಹಿ ದ್ದಾನೆ. ''ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್'' ಎನ್ನುವ ಉಪನಿಷದ್ವಾಕ್ಯವಾದರೂ, ಸತ್ತವರೆಲ್ಲ ಕೈವಲ್ಯವನ್ನೈದಲಾರರು– ಎಂಬ ಅಭಿಪ್ರಾಯವನ್ನು ವ್ಯಕ್ತಿಪಡಿಸುತ್ತದೆ. ಆದ್ದ ರಿಂದ, ಶ್ರೀಷಣ್ಮುಖಸ್ವಾಮಿಗಳು–

ಸತ್ತುಹೋಗುವವರೆಲ್ಲ ಸ್ವರ್ಗಪದಸ್ಥರೇ ? ಅಲ್ಲಲ್ಲ,
ಕೈದುವ ಪಿಡಿದವರೆಲ್ಲ ಮಹಾಕಲಿಗಳೇ ? ಅಲ್ಲಲ್ಲ,

ಲಿಂಗವ ಧರಿಸುವವರೆಲ್ಲ ಲಿಂಗ ಪ್ರಾಣಿಗಳೇ ? ಅಲ್ಲಲ್ಲ

.................................................................

ಈ ತೆರನಾಗಿ ಅನೇಕ ಯುಕ್ತಿ-ದೃಷ್ಟಾಂತಗಳ ಮೂಲಕ, ದೇಹವನ್ನು ತ್ಯಜಿಸಿದವರೆಲ್ಲ ಸದ್ಗತಿಗೆ ಪಾತ್ರರಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಹಾಗಾದರೆ ಸತ್ತು ಸದ್ಗತಿಯನ್ನು ಪಡೆಯದಿರುವವರ ಗತಿ ಏನು ? ಎಂದಾಗ, ''ಧ್ರುವಂ ಜನ್ಮ ಮೃತಸ್ಯ ಚ'' ಎಂದಿದ್ದಾರೆ, ಶ್ರೀ ಜ|| ರೇಣುಕ ಭಗವತ್ಪಾದರು. ''ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವ ಜಾಯತೇ ಪುನಃ'' (ಕಠ. ೧-೬). ಹೊಲದಲ್ಲಿಯ ಪೈರು ಮಳೆಗಾಲದಲ್ಲಿ ಹಚ್ಚಗೆ ಕಂಗೊಳಿಸುತ್ತದೆ. ಬೇಸಗೆ ಬಂದಾಗ ಅದೇ ಒಣಗಿ ಪುನಃ ಭೂಮಿಯಲ್ಲಿ ಬರಿದಾಗುತ್ತದೆ. ಮಳೆಗಾಲ ಬಂದಾಗ ಪುನಃ ಬೆಳೆದು ನಿಲ್ಲುವಂತೆ, ಪ್ರಾರಬ್ಧ ಕರ್ಮ ಮುಗಿಯುವವರೆಗೆ, ಶರೀರ ಧರಿಸಿದ ಜೀವಿಗಳು, ಆ ಕರ್ಮವು ತೀರಿದೊಡನೆ, ಆ ಶರೀರವನ್ನು ಬಿಟ್ಟು, ವಿಶಿಷ್ಟಗಳಾದ ಪುಣ್ಯ-ಪಾಪಗಳ ಫಲವಾಗಿ, ಸ್ವರ್ಗ-ನರಕಾದಿಗಳಿಗೆ ಹೋಗಿ, ಅಲ್ಲಿಯ ಭೋಗ ಮುಗಿದ ನಂತರ, ''ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'' (ಗೀತಾ ; ೯-೨೧) ಎನ್ನುವ ಪ್ರಮಾಣದಂತೆ, ಹೊಸ ಪ್ರಾರಬ್ಧದಿಂದ ಹೊಸ ಶರೀರವನ್ನು ಧರಿಸಿಕೊಂಡು, ಕರ್ಮಭೂಮಿಯಲ್ಲಿ ಕಂಗೊಳಿಸುತ್ತಾರೆ. ಆದಕಾರಣ, ಸತ್ತ ಮಾತ್ರಕ್ಕೆ ಅವನ ಜೀವನವು ಸಮಾಪ್ತವಾಗಲಾರದು.

ಇದೂ ಅಲ್ಲದೇ, ಮನೆಯಲ್ಲಿ ಹುಟ್ಟಿದ ಮಕ್ಕಳಿಗೆ ಹಿಂದೆ ಸತ್ತುಹೋದ ತಂದೆ, ತಾಯಿ, ಅಜ್ಜ ಮತ್ತು ಅಮ್ಮ ಮುಂತಾದವರ ಹೆಸರುಗಳನ್ನು ಇಡುವುದು ಲೋಕದ ರೂಢಿಯಾಗಿದೆ. ಇದರಿಂದ ತಿಳಿದುಬರುವದೇನೆಂದರೆ-

''ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ''

(ಗೀತಾ; ೨-೨೨)

ಎನ್ನುವ ಗೀತೋಕ್ತಿಯಂತೆ ಜೀರ್ಣ-ಶೀರ್ಣಗಳಾದ ಬಟ್ಟೆಗಳನ್ನು ಬಿಟ್ಟು, ಹೊಸ ಬಟ್ಟೆಗಳನ್ನು ನಾವು ಧರಿಸುವಂತೆ, ಜೀವಾತ್ಮನು ಜೀರ್ಣವಾದ ತನ್ನ ಶರೀರವನ್ನು ತ್ಯಜಿಸಿ, ಪುನಃ ಹೊಸ ಶರೀರವನ್ನು ಧರಿಸಿ, ತನ್ನ ಪೂರ್ವದ ವಾಸನಾನುಸಾರವಾಗಿ ಅದೇ ಮನೆಯಲ್ಲಿ ಜನಿಸುತ್ತಾನೆಂಬುದು ಗೂಢ ರಹಸ್ಯವಾಗಿದೆ. ಒಟ್ಟಾರೆ ಅದೇ ಮನೆಯಲ್ಲಿಯೇ ಆಗಲಿ, ಬೇರೆಡೆಯಲ್ಲಿಯೇ ಆಗಲಿ, ಆತ್ಮಜ್ಞಾನ ಶೂನ್ಯವಾದ ಜೀವಾತ್ಮನಿಗೆ ಜನ್ಮವು ತಪ್ಪದು.

ಓರ್ವ ಹಳ್ಳಿಯ ಮನುಷ್ಯನು ಮುಂಬಯಿ ಪಟ್ಟಣವನ್ನು ನೋಡುವ ಬಯಕೆಯಿಂದ, ತಾನೋರ್ವನೇ ರೈಲು ಮುಖಾಂತರ ಮುಂಬಯಿಗೆ ಬಂದು ತಲುಪಿದನು. ಸ್ಟೇಷನ್ನಿನಿಂದ ಹೊರಗೆ ಬಂದಾಗ, ಎದುರಿಗೆ ನಾಲ್ಕು ರಸ್ತೆಗಳ ಒಂದು ಕೂಟವು

ಕಾಣಿಸಿತು. ಈತ ಅಲ್ಲಿಗೆ ಹೋಗಿ ಕ್ಷಣಕಾಲ ಕುಳಿತು, ಊರಿನ ಗಗನಚುಂಬಿಗಳಾದ ಮಹಡಿಯ ಮಹಲುಗಳನ್ನು ವೀಕ್ಷಿಸತೊಡಗಿದನು. ಅವನ ದೃಷ್ಟಿಗೆ ಸೋಜಿಗವಾದ ಒಂದು ಸನ್ನಿವೇಶ ಕಂಡದ್ದೆಂದರೆ, ರಸ್ತೆಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಹೋಗುವ ಹಾಗೂ ಬರುವ ಜನಸ್ತೋಮವು. ಇದನ್ನು ನೋಡಿ ಮನದಲ್ಲಿ ಯೋಚಿಸತೊಡಗಿದ.... ಇವರಿಗೆಲ್ಲ ಏನಾಗಿದೆ ? ಯಾಕೆ ಊರನ್ನು ಬಿಟ್ಟು ಹೊರಟಿದ್ದಾರೆ ? ನೋಡೋಣ. ಒಂದು ವೇಳೆ ಎಲ್ಲರೂ ಹೋಗಿ ಊರು ಖಾಲಿಯಾದರೆ, ಈ ಊರಿಗೆ ನಾನೋರ್ವನೆ ಒಡೆಯನಾಗುವದಿಲ್ಲವೆ ?

ಹೀಗೆ ಯೋಚಿಸುತ್ತ ಮಧ್ಯರಾತ್ರಿಯವರೆಗೆ ಎಚ್ಚರವಾಗಿಯೇ ಇದ್ದನು. ಮಧ್ಯರಾತ್ರಿಯ ವೇಳೆಗೆ ವಾಹನಗಳ ಹಾಗೂ ಜನರ ಓಡಾಟವು ಕಡಿಮೆಯಾಯಿತು. ಪಟ್ಟಣವೆಲ್ಲ ನಿರ್ಜನವೂ ನಿಶ್ಯಬ್ದವೂ ಆದಾಗ, ಈ ಊರೆಲ್ಲ ಖಾಲಿಯಾಯಿತೆಂದು ತಿಳಿದುಕೊಂಡನು. ಅಷ್ಟರಲ್ಲಿ ದಿನವಿಡೀ ನೋಡಿ ದಣಿದ ಇವನಿಗೂ ನಿದ್ರೆ ಆವರಿಸಿತು, ಕುಳಿತಲ್ಲಿಯೇ ನಿದ್ರೆಹೋದ. ನಸುಕಿನ ಐದು ಘಂಟೆಯ ಸಮಯಕ್ಕೆ ಪುನಃ ವಾಹನಗಳ ಹಾಗೂ ಜನರ ಓಡಾಟದ ಗದ್ದಲವನ್ನು ಕೇಳಿ ಎಚ್ಚರಗೊಂಡನಲ್ಲದೇ ಅಚ್ಚರಿಯೂಗೊಂಡನು. ಇದೇನು ? ನಿನ್ನೆ ರಾತ್ರಿಯಲ್ಲಿಯೇ ಈ ಜನರೆಲ್ಲ ನಾಲ್ಕು ರಸ್ತೆಗಳಿಂದ ಊರುಬಿಟ್ಟು ಹೋಗಿದ್ದರು. ಈಗ ಮತ್ತೆ ಎಲ್ಲಿಂದ ಬಂದರು ? ಹೀಗೆ ಯೋಚಿಸುತ್ತ, ದಾರಿಯಲ್ಲಿ ಹೊರಟ ಒಬ್ಬ ವಯೋವೃದ್ಧನ ಬಳಿಗೆ ಹೋಗಿ ವಿಚಾರಿಸಿದ–ಅಜ್ಜಾ ! ಈ ಊರಿನ ಜನರೆಲ್ಲ ನಿನ್ನೆ ಊರನ್ನು ಖಾಲಿಮಾಡಿ ಹೋಗಿದ್ದರು ; ಆದರೆ ಬೆಳಗಾಗುವದರೊಳಗಾಗಿ ಈ ಜನರು ಎಲ್ಲಿಂದ ಬಂದರು ?

ಮುದುಕ ಹೇಳಿದ–ಹುಚ್ಚಪ್ಪಾ ! ಈ ಜನರು ಊರನ್ನು ಬಿಟ್ಟು ಬೇರೆ ಊರಿಗೆ ಹೋಗಿಯೇ ಇಲ್ಲ. ಇವರೆಲ್ಲ ಇಲ್ಲಿಯೇ ಮನೆಯಿಂದ ಅಂಗಡಿಗೆ, ಅಂಗಡಿಯಿಂದ ಮನೆಗೆ, ಮರಳಿ–ಮರಳಿ–ತಿರುಗುತ್ತಿರುತ್ತಾರೆ ಎಂದು ಹೇಳಿ ಪರಿಸ್ಥಿತಿಯ ವಾಸ್ತವಿಕತೆಯನ್ನು ತಿಳಿಸಿಕೊಟ್ಟನಂತೆ. ಅದರಂತೆ ಮರ್ತ್ಯಲೋಕದಲ್ಲಿ ಮೃತ್ಯುವನ್ನೈದಿದ ಮನುಜರೆಲ್ಲ ಅತ್ತಲೇ ಹೋಗುವುದಿಲ್ಲ. ತಮ್ಮ ಕರ್ಮಾನುಸಾರವಾಗಿ ಪುನಃ ಕರ್ಮಭೂಮಿಗೆ ಆಗಮಿಸುತ್ತಾರೆ. ಅದಕ್ಕಾಗಿಯೇ ಮುಕ್ತರಾಗುವವರೆಗೆ ಈ ಜನನ ಮರಣಗಳು ತಪ್ಪಲಾರವೆನ್ನುವುದೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದ ಗೂಢಾಭಿಪ್ರಾಯವಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೭ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ -೪

ಮತ್ಸ್ಯಕೂರ್ಮವರಾಹಾಂಗ್ಯೈರ್ನಸಿಂಹಮನುಜಾದಿಭಿಃ।
ಜಾತೇನ ನಿಧನಂ ಪ್ರಾಪ್ತಂ ವಿಷ್ಣುನಾಪಿ ಮಹಾತ್ಮನಾ (ಸಿ. ಶಿ. ೫.೬೦)

ಮಹಾಮಹಿಮನಾದ ವಿಷ್ಣು ಪರಮಾತ್ಮನೂ ಮತ್ಸ್ಯ, ಕೂರ್ಮ, ಮುಂತಾದ ಪ್ರಸಿದ್ಧಗವಾದ ಅವತಾರಗಳಲ್ಲಿ ಮರಣವನ್ನು ಹೊಂದಿದ್ದಾನೆಂದ ಬಳಿಕ ಉಳಿದವರು ಮರಣಹೊಂದುವುದರಲ್ಲಿ ಆಶ್ಚರ್ಯವೇನಿದೆ ?

ಜನನ–ಮರಣಗಳು ಕೇವಲ ಪಶು, ಪಕ್ಷಿ ಮತ್ತು ಮನುಷ್ಯಾದಿಗಳಿಗಷ್ಟೇ ಅಲ್ಲ, ಜಗತ್ಕಲ್ಯಾಣಕ್ಕಾಗಿ ದಿವ್ಯದೇಹವನ್ನು ಧರಿಸಿ, ಭೂಲೋಕದಲ್ಲಿ ಅವತರಿಸಿದ ಅವತಾರಿಗಳಿಗೂ ತಪ್ಪಿಲ್ಲವೆಂಬ ವಿಷಯವನ್ನು, ಶ್ರೀ ಜಗದ್ಗುರು ಭಗವತ್ಪಾದರು ಶ್ರೀ ಅಗಸ್ತ್ಯರನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತಮಾನವರಿಗೆ ಉಪದೇಶಿಸಿದ್ದಾರೆ.

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

(ಗೀತಾ, ೪–೭,೮)

ಈ ಗೀತೋಕ್ತಿಯಂತೆ, ಜಗತ್ತಿನಲ್ಲಿ ಧರ್ಮದ ಗ್ಲಾನಿಯಾದಾಗ ಹಾಗೂ ದುಷ್ಟರ ಉಪಟಳವು ಹೆಚ್ಚಿದಾಗ, ದುಷ್ಟರ ಸಂಹಾರ, ಶಿಷ್ಟರ ಪರಿಪಾಲನೆ ಮತ್ತು ಧರ್ಮದ ಪುನಃಪ್ರತಿಷ್ಠಾಪನೆಗಾಗಿ, ಜಗದ್ರಕ್ಷಕನಾದ ವಿಷ್ಣು ಭಗವಂತನು ಭೂಲೋಕದಲ್ಲಿ ದೇಶ, ಕಾಲ, ಪರಿಸ್ಥಿತಿಗಳಿಗನುಗುಣವಾದ ದೇಹವನ್ನು ಧರಿಸಿಕೊಂಡು ಅವತರಿಸುತ್ತಾನೆ.

ವಿಷ್ಣು ಭಗವಂತನ ಅನೇಕ ಅವತಾರಗಳಲ್ಲಿ ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಬಲರಾಮ, ಕೃಷ್ಣ, ಮತ್ತು ಕಲ್ಕಿ ಎಂಬ ಹತ್ತು ಅವತಾರಗಳು ಪ್ರಸಿದ್ಧವಾಗಿವೆ. ವ್ಯಾಸಮಹರ್ಷಿಗಳು ಭಗವಂತನ ಈ ಪ್ರತಿಯೊಂದು ಅವತಾರಗಳ ಪ್ರಯೋಜನ ಹಾಗೂ ಪರಿಸ್ಥಿತಿಯನ್ನು ಭಕ್ತರಿಗೆ ತಿಳಿಸುವುದಕ್ಕಾಗಿ, ಒಂದೊಂದು ಪುರಾಣವನ್ನೇ ರಚಿಸಿದ್ದಾರೆ. ಆದರೆ ಶ್ರೀ ರಾಮಾವತಾರಕ್ಕಾಗಿ ಶ್ರೀ ವಾಲ್ಮೀಕಿಯ ರಾಮಾಯಣ ಮತ್ತು ಕೃಷ್ಣಾವತಾರದ ಮಹಿಮೆಯನ್ನು ತಿಳಿಸುವುದಕ್ಕಾಗಿ ಶ್ರೀ ಮಹಾಭಾರತಗಳೆಂಬ ಎರಡು ಇತಿಹಾಸ ಗ್ರಂಥಗಳೂ ಪ್ರಸಿದ್ಧವಾಗಿವೆ. ಈ ದಶಾವತಾರಗಳ ಪ್ರಯೋಜನವನ್ನು ಸಂಕ್ಷೇಪವಾಗಿ ಪರ್ಯಾಲೋಚಿಸೋಣ.

ದೇವಾಸುರರ ಸಂಗ್ರಾಮ ಸಮಯದಲ್ಲಿ, ಒಮ್ಮೆ ಅಸುರರು ತಮ್ಮ ರಕ್ಷಣೆಗಾಗಿ ಭೃಗುಋಷಿಗಳ ಆಶ್ರಮಕ್ಕೆ ಬಂದು ಶರಣಾಗತರಾದರು. ಆಶ್ರಮದಲ್ಲಿ ಋಷಿಗಳು ಇರಲಿಲ್ಲ. ಋಷಿಪತ್ನಿಯು ರಾಕ್ಷಸರಿಗೆ ಆಶ್ರಯಕೊಟ್ಟಳು. ಆಗ ಹರಿಯು ಆಶ್ರಮದಲ್ಲಿ ನುಗ್ಗಿ ರಾಕ್ಷಸರ ಸಂಹಾರಕ್ಕೆ ಮುಂದಾಗಲು, ಋಷಿ ಪತ್ನಿಯು ನನಗೆ ಶರಣುಹೊಕ್ಕವರನ್ನು

ಕೊಲ್ಲಬೇಡ. ಋಷಿಗಳಿಲ್ಲದ ಆಶ್ರಮದಲ್ಲಿ ಪ್ರವೇಶಿಸಬೇಡವೆಂದು ಹೇಳಿದರೂ ಅತ್ತ ಲಕ್ಷ್ಯಗೊಡದೇ, ಹರಿಯು ಮೊದಲು ತನ್ನ ಚಕ್ರಕ್ಕೆ ಭೃಗುಪತ್ನಿಯನ್ನೇ ಆಹುತಿ ಕೊಟ್ಟು, ನಂತರ ರಾಕ್ಷಸರನ್ನು ಸಂಹಾರಮಾಡಿ ಹೊರಟುಹೋದನು.

ಋಷಿಗಳು ಆಶ್ರಮಕ್ಕೆ ಬಂದು, ನಡೆದ ಸಂಗತಿಯನ್ನೆಲ್ಲ ಜ್ಞಾನದೃಷ್ಟಿಯಿಂದ ತಿಳಿದು, ಹರಿಯ ಅತ್ಯಾಚಾರದ ಮೇಲೆ ಕ್ರುದ್ಧರಾಗಿ–ಎಲೈ ಹರಿಯೆ ! ಒಡೆಯರಿಲ್ಲದ ಆಶ್ರಮದಲ್ಲಿ ನುಗ್ಗಿ, ನಿರಪರಾಧಿನಿಯಾದ ನನ್ನ ಹೆಂಡತಿಯನ್ನು ಕೊಂದದ್ದಕ್ಕಾಗಿ, ನೀನು ಭೂಲೋಕದಲ್ಲಿ ಕೋಟಿ ಜನ್ಮಗಳನ್ನು ತಾಳು. ಅಲ್ಲದೇ ಆ ಎಲ್ಲ ಜನ್ಮಗಳಲ್ಲಿ ನಿನಗೆ ಸ್ತ್ರೀಯ ವಿಯೋಗವಾಗಲಿ ಮತ್ತು ಜಗತ್ತಿನಲ್ಲಿ ನಿನ್ನನ್ನು ಪೂಜಿಸುವವರೆಲ್ಲ ಪಾಖಂಡಿಗಳಾಗಲಿ ಎಂದು ಶಾಪವಿತ್ತರು.

ಈ ಶಾಪವನ್ನು ತಿಳಿದ ವಿಷ್ಣುವು ಭಯಗ್ರಸ್ತನಾಗಿ, ಕಾಂಚಿ ಪಟ್ಟಣಕ್ಕೆ ಹೋಗಿ, ಅಲ್ಲಿಯ ಶ್ರೀಮಹಾದೇವ(ಏಕಾಮ್ರೇಶ್ವರ)ನನ್ನು ಭಕ್ತಿಯಿಂದ ಆರಾಧಿಸಲಾಗಿ, ಪರಮಾತ್ಮನು ಪ್ರಕಟನಾಗಿ, ಹೇ ಹರಿಯೆ ! ನನ್ನ ಭಕ್ತರು ಕೊಟ್ಟ ಶಾಪವನ್ನು ಅವರೇ ಅನ್ಯಥಾ ಮಾಡಬಲ್ಲರೇ ವಿನಹ, ನನ್ನಿಂದ ಏನೂ ಆಗದು ಎಂದು ನುಡಿದು, ಇತ್ತ, ಭೃಗುಋಷಿಯ ಮನಸ್ಸಿನಲ್ಲಿ ಪ್ರಕಟನಾಗಿ–

ವಿಮೋಚಯ ಹರಿಂ ಶಾಪಾದ್ ಭೃಗೋ ಬಹುಜನಿಪ್ರದಾತ್ ॥
ಮದರ್ಚನಾರತಂ ವಿದ್ಧಿ ಭಕ್ತಂ ಚ ಮುನಿಸತ್ತಮ ॥
ದಶಸ್ತು ಜನ್ಮ ತದ್ವಿಷ್ಣೋರೇಕಸ್ಮಿಂಸ್ತತ್ರ ಜನ್ಮನಿ ।
ಸ್ತ್ರೀಯಾ ವಿಮುಕ್ತೋತಿಚಿರಂ ದುಃಖೀಭವತು ನಾನ್ಯತಃ ॥

(ಕ್ರಿಯಾಸಾರ ಪು. ೩೯೮)

ಹೇ ಭೃಗುಋಷಿಯೆ ! ನನ್ನ ಭಕ್ತನಾಗಿ ನನ್ನನ್ನು ಪೂಜಿಸಿದ ವಿಷ್ಣುವಿಗೆ ಕೋಟಿ ಜನ್ಮಗಳ ಬದಲಾಗಿ ಹತ್ತು ಜನ್ಮಗಳನ್ನು ತಾಳುವಂತೆ ಮತ್ತು ಅವುಗಳಲ್ಲಿ ಒಂದು ಜನ್ಮದಲ್ಲಿ ಮಾತ್ರ ಸ್ತ್ರೀ ವಿಯೋಗದಿಂದ ಅತಿ ದುಃಖಿಯಾಗುವಂತೆ, ನಿನ್ನ ಶಾಪವನ್ನು ಸಂಕೋಚಗೊಳಿಸು–ಎಂದು ಆಜ್ಞಾಪಿಸಿದನು.

ಪರಮಾತ್ಮನ ಆಜ್ಞೆಯ ಪ್ರಕಾರ, ಭೃಗುಋಷಿಯ ಶಾಪವು ಸಂಕೋಚಗೊಂಡಾಗ, ಹರ್ಷಿತನಾದ ಹರಿಯು, ಪರಮಾತ್ಮನನ್ನು ಕುರಿತು–

ತದಾ ಪುನರುಮಾಕಾಂತಂ ರಮಾಕಾಂತಃ ಪ್ರಣಮ್ಯ ತಂ ।
ಪ್ರಾರ್ಥಯಾಮಾಸ ಭಗವನ್ ದಶಸ್ವಪಿ ಚ ಜನ್ಮಸು ॥
ಮಮಾಜ್ಞಾನನಿವೃತ್ತ್ಯರ್ಥಂ ನಿಗ್ರಹಾನುಗ್ರಹೌ ಕುರು ॥
ತ್ವಮೇವ ದೇವದೇವೇಶ ದಯಾಲೋ ಭಕ್ತವತ್ಸಲ ॥

(ಕ್ರಿಯಾಸಾರ ಪುಟ ೩೯೮)

ಹೇ ಮಹಾದೇವನೇ ! ಭಕ್ತವತ್ಸಲನಾದ ನೀನು ಹತ್ತು ಜನ್ಮಗಳಲ್ಲಿಯೂ ನನ್ನ ಅಜ್ಞಾನ ನಿವಾರಣೆಗಾಗಿ ನಿಗ್ರಹ ಹಾಗೂ ಅನುಗ್ರಹಗಳನ್ನು ಮಾಡಿ, ನನ್ನನ್ನು ಉದ್ಧರಿಸುವವನಾಗು–ಎಂಬುದಾಗಿ ಪ್ರಾರ್ಥಿಸಿದನು. ಹರಿಯ ಈ ಪ್ರಾರ್ಥನಾನುಸಾರವಾಗಿ

ಪರಮಾತ್ಮನು, ಐದು ಅವತಾರಗಳನ್ನು ನಿಗ್ರಹಿಸುವವನಾಗಿ ಮತ್ತು ಐದು ಅವತಾರಗಳನ್ನು ಅನುಗ್ರಹಿಸುವವನಾಗಿ, ಲೋಕಕಲ್ಯಾಣವನ್ನುಂಟುಮಾಡಿದ್ದಾನೆ. ಅವುಗಳನ್ನು ಯಥಾಕ್ರಮವಾಗಿ, ವಿವೇಚಿಸೋಣ.

(೧) ಮತ್ಸ್ಯಾವತಾರ ನಿಗ್ರಹ :

ಪೂರ್ವಕಾಲದಲ್ಲಿ ಈ ಜಗವೆಲ್ಲ ಜಲಮಯವಾಗಿದ್ದಾಗ, ಸೋಮಕನೆಂಬ ದೈತ್ಯನು ಬ್ರಹ್ಮನಿಂದ ವೇದಗಳನ್ನು ಕಸಿದುಕೊಂಡು ಸಮುದ್ರದಲ್ಲಿ ಅಡಗಿಕೊಂಡನು. ವೇದಗಳೆಲ್ಲ ರಾಕ್ಷಸರ ಸ್ವಾಧೀನವಾದಾಗ, ಯಜ್ಞಯಾಗಾದಿ ಕ್ರಿಯೆಗಳೆಲ್ಲ ನಿಂತು ಹೋಗಿ, ದೇವತೆಗಳಿಗೆ ಹವಿಸ್ಸೇ ಸಿಗದ ಪ್ರಸಂಗ ಬಂದೊದಗಿದಾಗ, ದೇವತೆಗಳು ಜಗದ್ರಕ್ಷಕನಾದ ವಿಷ್ಣುವನ್ನು ಪ್ರಾರ್ಥಿಸಲು, ವಿಷ್ಣುವು, ತನ್ನ ಮೊದಲನೇ ಜನ್ಮವಾದ ಮಹಾಮತ್ಸ್ಯರೂಪವನ್ನು ಪಡೆದು, ಸಮುದ್ರದಲ್ಲಿ ಪ್ರವೇಶಿಸಿ, ಸೋಮಕನನ್ನು ಸಂಹರಿಸಿ, ಅವನ ವಶದಲ್ಲಿದ್ದ ವೇದಗಳನ್ನು ಬ್ರಹ್ಮನಿಗೆ ಒಪ್ಪಿಸಿದನು.

ಸೋಮಕನನ್ನು ಸಂಹರಿಸಿದ ಅಹಂಕಾರದಲ್ಲಿ ಕೊಬ್ಬಿದ ಆ ಮತ್ಸ್ಯನು ಸಮುದ್ರವನ್ನೆಲ್ಲ ಭೇದಿಸುತ್ತ ಎಲ್ಲ ಪ್ರಾಣಿಗಳನ್ನೂ ಭಕ್ಷಿಸತೊಡಗಿದನು. ಮಹಾಮತ್ಸ್ಯದ ಈ ಸಂಹಾರ ಕೃತ್ಯವನ್ನು ನೋಡಿ ಭಯಗ್ರಸ್ತರಾದ ದೇವತೆಗಳು, ಜಗತ್ಕಲ್ಯಾಣಕಾರಿಯಾದ ಪರಮಾತ್ಮನನ್ನು ಪ್ರಾರ್ಥಿಸಲು, ಪರಶಿವನು ತನ್ನೋರ್ವ ಗಣನನ್ನು ಕರೆದು, ಮಹಾಮತ್ಸ್ಯಾವತಾರಿಯಾದ ವಿಷ್ಣುವನ್ನು ನಿಗ್ರಹಿಸಲು ಆಜ್ಞಾಪಿಸಿದನು. ಆಗ ಶಿವಗಣನು ಒಬ್ಬ ಮಹಾ ನಾವಿಕನ ರೂಪವನ್ನು ಧರಿಸಿ, ಮತ್ಸ್ಯವನ್ನು ಜಾಲದಲ್ಲಿ ಹಿಡಿದು, ಅದರ ಎರಡೂ ಕಣ್ಣುಗಳನ್ನು ಕಿತ್ತು ಪರಮಾತ್ಮನಿಗೆ ಒಪ್ಪಿಸಿದನು. ಪರಮಾತ್ಮನಾದರೂ ಎಲ್ಲ ದೇವತೆಗಳ ಪ್ರಾರ್ಥನಾನುಸಾರವಾಗಿ, ತನ್ನ ಕೊರಳಿನ, ರುಂಡಮಾಲೆಯಲ್ಲಿ ಮತ್ಸ್ಯದ ಕಣ್ಣುಗಳನ್ನು ಆಭರಣಗಳನ್ನಾಗಿ ಮಾಡಿಕೊಂಡನು.

ಆಗ ನಿರಹಂಕಾರಿಯಾದ ವಿಷ್ಣುವು, ಪ್ರಮಾದದಿಂದ ನಿರಪರಾಧಿ ಪ್ರಾಣಿಗಳನ್ನು ಹಿಂಸಿಸಿದ ದೋಷನಿವೃತ್ತಿಗಾಗಿ, ಮತ್ಸ್ಯರೂಪದಲ್ಲಿಯೇ ಕಾಂಚೀಕ್ಷೇತ್ರದ ಮಹಾದೇವನನ್ನು ಪೂಜಿಸಿ, ದೋಷಮುಕ್ತನಾಗುವದರ ಜೊತೆಗೆ, ಹೇ ಪರಮಾತ್ಮನೇ ! ಯಾವನನ್ನ ಭಕ್ತರು ಮತ್ಸ್ಯರೂಪದಲ್ಲಿ ಪೂಜಿಸುವರೋ, ಅವರವರಿಗೆ ಅವರವರ ಇಷ್ಟಾರ್ಥವನ್ನು ದಯಪಾಲಿಸುವವನಾಗು–ಎಂದು ಪ್ರಾರ್ಥಿಸಿ, ತನ್ನ ಅವತಾರವನ್ನು ಸಮಾಪ್ತಿ ಮಾಡಿಕೊಂಡು, ವೈಕುಂಠವನ್ನು ಸೇರಿದನು.

(೨) ಕೂರ್ಮಾವತಾರ ನಿಗ್ರಹ :

ಪೂರ್ವದಲ್ಲಿ ದುರ್ವಾಸಮಹರ್ಷಿಗಳ ಶಾಪದಿಂದ, ಸಮುದ್ರದ ಪಾಲಾದ ಸಂಪತ್ತನ್ನು, ಪುನಃ ಪಡೆಯುವದಕ್ಕಾಗಿ, ದೇವತೆಗಳು, ಅಸುರರನ್ನು ಕೂಡಿಕೊಂಡು, ಮಂದರ ಪರ್ವತವನ್ನೇ ಕಡಗೋಲನ್ನಾಗಿ ಮಾಡಿ, ವಾಸುಕಿ ಸರ್ಪವನ್ನೇ ಹಗ್ಗವನ್ನಾಗಿ ಮಾಡಿ, ಕ್ಷೀರಸಮುದ್ರವನ್ನು ಕಡೆಯತೊಡಗಲು, ಮಂದರಪರ್ವತವು ಸಮುದ್ರದಲ್ಲಿ ಮುಳುಗಿ ಹೋಯಿತು. ಆಗ ಶ್ರೀ ವಿಷ್ಣುವು ತಾನು ಕೂರ್ಮ (ಆಮೆ)ದ ರೂಪವನ್ನು ತಾಳಿ, ಸಮುದ್ರದಡಿಯಲ್ಲಿ ಕುಳಿತು, ಅದು ಸಮುದ್ರದಲ್ಲಿ ಮುಳುಗದ ಹಾಗೆ ತನ್ನ ಬೆನ್ನ ಮೇಲೆ ಅದನ್ನು ಇರಿಸಿಕೊಂಡು, ಕ್ಷೀರಸಾಗರದ ಮಂಥನಕ್ಕೆ ಅನುವು ಮಾಡಿಕೊಟ್ಟನು.

ಹೀಗೆ ದೇವಾಸುರರು ಸಮುದ್ರಮಂಥನ ಮಾಡುವಾಗ, ಅದರಿಂದ ದೊರೆತ ಅಮೃತವನ್ನು ಪಾನಮಾಡಿದ ಕೂರ್ಮರೂಪದ ವಿಷ್ಣುವು, ಗರ್ವದಿಂದ ಮೋಹಿತನಾಗಿ, ದೇವಾಸುರರಿಗೆಲ್ಲ ತೊಂದರೆಯನ್ನು ಮಾಡತೊಡಗಿದನು. ಆಗ ದೇವಾಸುರರು ತಮ್ಮ ರಕ್ಷಣೆಗಾಗಿ ಪರಮಾತ್ಮನನ್ನು ಪ್ರಾರ್ಥಿಸಲು, ಪರಮಾತ್ಮನು, ಗಣಾಧ್ಯಕ್ಷನಾದ ಗಣಪತಿಗೆ ಆಜ್ಞಾಪಿಸಿದನು. ಪರಮಾತ್ಮನ ಆಜ್ಞೆಯಂತೆ ವಿಘ್ನೇಶ್ವರನು, ತನ್ನ ಸೊಂಡಿಲಿನಿಂದ ಕೂರ್ಮವನ್ನು ನೆಲಕ್ಕಪ್ಪಳಿಸಿ, ಅದರ ಬೆನ್ನೆಲುಬನ್ನು ಪರಮಾತ್ಮನಿಗೆ ತಂದೊಪ್ಪಿಸಿದನು. ಪರಮಾತ್ಮನಾದರೋ, ಎಲ್ಲ ದೇವತೆಗಳ ಅಪೇಕ್ಷೆಯಂತೆ ಕೂರ್ಮನ ಬೆನ್ನೆಲುವನ್ನು, ತನ್ನ ಕೊರಳಿನ ರುಂಡ ಮಾಲೆಯಲ್ಲಿ ಆಭರಣವನ್ನಾಗಿ ಮಾಡಿಕೊಂಡನು. ವಿಷ್ಣುವಾದರೂ ಅಹಂಕಾರ ಶೂನ್ಯನಾಗಿ ಪರಮಾತ್ಮನನ್ನು ಪೂಜಿಸಿ, ಶಿವನ ಈ ನಿಗ್ರಹವನ್ನು ಅನುಗ್ರಹ ವನ್ನಾಗಿ ಭಾವಿಸಿ ನಿಷ್ಕಲ್ಮಷನಾಗಿ ಪುನಃ ವೈಕುಂಠ ಧಾಮವನ್ನು ಸೇರಿದನು.

(೩) ವರಾಹಾವತಾರ ನಿಗ್ರಹ :

ಪೂರ್ವಕಾಲದಲ್ಲಿ ಹಿರಣ್ಯಾಕ್ಷನೆಂಬ ರಾಕ್ಷಸನು, ದೇವತೆಗಳನ್ನು ಪೀಡಿಸುವದರ ಜೊತೆಗೆ, ಈ ಪೃಥ್ವಿಯನ್ನೇ ಸಮುದ್ರದ ತಳದಲ್ಲಿ ಇರಿಸಿದ್ದನು. ಆಗ ಇವನ ಈ ಉಪಟಳ ದಿಂದ ಬೇಸತ್ತ ದೇವತೆಗಳು, ವಿಷ್ಣು ಪರಮಾತ್ಮನನ್ನು ಪ್ರಾರ್ಥಿಸಲು, ಶ್ರೀ ವಿಷ್ಣುವು ವರಾಹರೂಪವನ್ನು ತಾಳಿ, ಹಿರಣ್ಯಾಕ್ಷನನ್ನು ಸಂಹರಿಸಿ, ಭೂಮಾತೆಯನ್ನು ಉದ್ಧರಿ ಸಿದನು. ಹಿರಣ್ಯಾಕ್ಷನನ್ನು ಸಂಹರಿಸಿದ ಅಹಂಕಾರದಿಂದ ಕೊಬ್ಬಿದ ವರಾಹವು, ಸಮುದ್ರ ವನ್ನು ಉಲ್ಲೋಲಗೊಳಿಸುವುದರ ಜೊತೆಗೆ, ಸಪ್ತಪರ್ವತಗಳನ್ನೂ ಕಿತ್ತೆಸೆಯತೊಡಗಿತು. ಹೀಗೆ ವರಾಹಾವತಾರದಿಂದಲೂ ಜಗತ್ತಿಗೆ ತೊಂದರೆ ಬಂದೊದಗಿದಾಗ, ದೇವತೆಗಳೆಲ್ಲ ಪುನಃ ಪರಮಾತ್ಮನನ್ನು ಪ್ರಾರ್ಥಿಸಿದರು. ಆಗ ಪರಮಾತ್ಮನು ತನ್ನ ಪುತ್ರನಾದ ಷಣ್ಮುಖನಿಗೆ ಆಜ್ಞಾಪಿಸಲು ಷಣ್ಮುಖನು ಪರಶಿವನ ಆಜ್ಞೆಯಂತೆ ಪರ್ವತಾಕಾರದ ಆ ವರಾಹದ ಕೋಡುಗಳನ್ನು ಹಿಡಿದು, ಚಕ್ರಾಕಾರವಾಗಿ ಜೋರಾಗಿ ತಿರುಗಿಸಿ, ನೆಲಕ್ಕೆ ಅಪ್ಪಳಿಸಿ, ಅದರ ಒಂದು ಕೋಡನ್ನು ಕಿತ್ತು ತಂದು ಪರಮಾತ್ಮನಿಗೆ ಒಪ್ಪಿಸಿದನು. ವರಾಹದ ಆ ಕೋಡನ್ನು ಪರಮಾತ್ಮನು ತನ್ನ ಆಭರಣವನ್ನಾಗಿ ಮಾಡಿಕೊಂಡನು. ಶ್ರೀ ವಿಷ್ಣು ವಾದರೂ ಮೋಹರಹಿತನಾಗಿ ಪುನಃ ಪರಮಾತ್ಮನನ್ನು ಪೂಜಿಸಿ, ವೈಕುಂಠ ಧಾಮವನ್ನು ಸೇರಿದನು.

(೪) ನರಸಿಂಹಾವತಾರ ನಿಗ್ರಹ :

ಹಿರಣ್ಯಕಶಿಪು ಎಂಬ ಅಸುರನು ತಾನು ದಾನವ, ಮಾನವ, ದೇವತೆ, ಪಶು ಇವಾವುದರಿಂದಲೂ ಮತ್ತು ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ, ಸಾಯದೇ ಇರುವ ವರವನ್ನು ಪಡೆದು, ಆ ವರದ ಕೊಬ್ಬಿನಲ್ಲಿ, ಎಲ್ಲರಿಗೂ ತೊಂದರೆ ಕೊಡುವದರ ಜೊತೆಗೆ, ಹರಿಭಕ್ತನಾದ ತನ್ನ ಮಗ ಪ್ರಹ್ಲಾದನಿಗೂ ಹರಿಯ ಮೇಲಿನ ದ್ವೇಷದಿಂದ ಚಿತ್ರಹಿಂಸೆಗಳನ್ನು ಕೊಟ್ಟೂ, ಸಫಲನಾಗಲಿಲ್ಲ. ಆಗ ಆಶ್ಚರ್ಯಚಕಿತನಾದ ಹಿರಣ್ಯ ಕಶಿಪುವು ನೀನು ಧ್ಯಾನಿಸುವ ಹರಿಯು ಎಲ್ಲಿದ್ದಾನೆ ? ಎಂದು ಪ್ರಶ್ನಿಸಿದಾಗ, ಪ್ರಹ್ಲಾ ದನು–ಸರ್ವತ್ರ ಇರುವನೆಂದು ಉತ್ತರಿಸಿದನು. ಹಾಗಾದರೆ ಈ ಕಂಬದಲ್ಲಿ ಇರುವ ನೇನು ? ಎಂದು ಪ್ರಶ್ನಿಸಿ, ತನ್ನ ಗದೆಯಿಂದ ಆ ಕಂಬಕ್ಕೆ ಅಪ್ಪಳಿಸಿದಾಗ, ಭಕ್ತರಕ್ಷಕನಾದ

ಹರಿಯು, ನೃಸಿಂಹಾವತಾರವನ್ನು ಧರಿಸಿ, ಹಿರಣ್ಯಕಶಿಪುವಿನ ವಕ್ಷಸ್ಥಲವನ್ನು ಭೇದಿಸಿ, ಕ್ರೋಧಾವೇಶದಲ್ಲಿ ರಕ್ತಪಾನವನ್ನು ಮಾಡಿ, ಉನ್ಮತ್ತನಾದ ನೃಸಿಂಹ ಭಗವಂತನು ಅಸುರ ಸೈನ್ಯವನ್ನೆಲ್ಲ ಸಂಹರಿಸಿ, ಪುನಃ ಜಗತ್ತಿನ ಸಂಹಾರದಲ್ಲಿ ಉದ್ಯುಕ್ತನಾದನು. ಆಗ ಈತನ ಅತಿಕ್ರಮವನ್ನು ಕಂಡ ದೇವತೆಗಳು, ಪರಮಾತ್ಮನನ್ನು ಪ್ರಾರ್ಥಿಸಲಾಗಿ, ಪರಮಾತ್ಮ ತನ್ನ ರೌದ್ರರೂಪವಾದ ಶ್ರೀ ವೀರಭದ್ರನಿಗೆ ನೃಸಿಂಹನ ಸಂಹಾರಕ್ಕಾಗಿ ಆಜ್ಞಾಪಿಸಿದನು. ಪರಮಾತ್ಮನ ಆಜ್ಞೆಯಂತೆ ಶ್ರೀ ವೀರಭದ್ರನು ಶರಭ ರೂಪವನ್ನು ಧರಿಸಿ, ಆ ನೃಸಿಂಹನನ್ನು ಸೀಳಿ, ಅವನ ಮೈಮೇಲಿನ ಚರ್ಮವನ್ನು ಸುಲಿದು, ಪರಮಾತ್ಮನಿಗೆ ತಂದೊಪ್ಪಿ ಸಿದನು. ಅಂದಿನಿಂದ ಪರಮಾತ್ಮನು ನೃಸಿಂಹಾಂಬರಧರನೆಂದು ಪ್ರಸಿದ್ಧಿಯನ್ನು ಪಡೆ ದನು. ಆಗ ಹರಿಯಾದರೂ ಅಹಂಕಾರ ಶೂನ್ಯನಾಗಿ, ಪರಮಾತ್ಮನ ಆರಾಧನೆಯಿಂದ ತನ್ನೆಲ್ಲ ಪಾಪಗಳನ್ನೂ ಕಳೆದುಕೊಂಡು ಪುನಃ ವೈಕುಂಠವಾಸಿಯಾದನು.

(ಆ) ವಾಮನಾವತಾರ ನಿಗ್ರಹ :

ಬಲಿ ಚಕ್ರವರ್ತಿಯು ಇಂದ್ರ ಪದವಿಯ ಪ್ರಾಪ್ತಿಗಾಗಿ ಅಶ್ವಮೇಧ ಯಾಗಗಳನ್ನು ಮಾಡುತ್ತ, ಕೊನೆಯದಾದ ನೂರನೇ ಯಾಗವನ್ನು ಪ್ರಾರಂಭಿಸಿದಾಗ, ಬಲಿಯು ಸ್ವರ್ಗಾಧಿಪತಿಯಾಗುವನೆಂಬ ಭಯದಿಂದ, ಇಂದ್ರಾದಿ ದೇವತೆಗಳೆಲ್ಲ ಆತನ ನಿಗ್ರಹ ಕ್ಕಾಗಿ ಹರಿಯನ್ನು ಪ್ರಾರ್ಥಿಸಲಾಗಿ, ಹರಿಯು ಕಾಶ್ಯಪ ಋಷಿಗೆ ವಾಮನ (ಚಿಕ್ಕ) ಶರೀರದ ಮಗನಾಗಿ ಜನಿಸಿ, ಬ್ರಾಹ್ಮಣ ವಟುವೇಷದಲ್ಲಿ ಭಿಕ್ಷೆಬೇಡುವದಕ್ಕಾಗಿ, ತಂದೆ ತಾಯಿಗಳ ಆಜ್ಞೆಯನ್ನು ಪಡೆದು, ಬಲಿ ಚಕ್ರವರ್ತಿಯ ಯಜ್ಞಮಂಟಪಕ್ಕೆ ದಯಮಾಡಿಸಿ ದನು. ಚಿಕ್ಕಶರೀರದ ಬ್ರಾಹ್ಮಣ ಬಾಲಕನು ಭಿಕ್ಷೆಗಾಗಿ ತನ್ನಲ್ಲಿಗೆ ಬಂದದ್ದನ್ನು ನೋಡಿದ ಬಲಿಗೆ ಬಲು ಹರ್ಷವಾಯಿತು. ಹಾಗೂ ಏನು ಬೇಕೆಂದು ವಿನಯದಿಂದ ಪ್ರಶ್ನಿಸಿದನು.

ಆಗ ವಾಮನ ವೇಷಧಾರಿ ಪರಮಾತ್ಮನು, ತನಗೆ ಮೂರು ಪಾದ ಭೂದಾನ ಮಾಡುವಂತೆ ಕೇಳಿಕೊಂಡನು. ಹಾಗೇ ಆಗಲೆಂದು ಬಲಿಯು ದಾನ ಮಾಡಲುದ್ಯುಕ್ತ ನಾದಾಗ, ವಾಮನನು ತನ್ನ ವಾಮನರೂಪವನ್ನು ತ್ಯಜಿಸಿ, ತ್ರಿವಿಕ್ರಮರೂಪವನ್ನು ಧರಿಸಿ, ಒಂದು ಪಾದದಿಂದ ಭೂಮಂಡಲವೆಲ್ಲವನ್ನೂ, ಎರಡನೇ ಪಾದದಿಂದ ಸಂಪೂರ್ಣ ಸ್ವರ್ಗಾದಿಲೋಕಗಳನ್ನೂ ವ್ಯಾಪಿಸಿ, ಮೂರನೇ ಪಾದವನ್ನು ಎಲ್ಲಿ ಇಡ ಬೇಕು ? ಎಂದು ಬಲಿಯನ್ನು ಪ್ರಶ್ನಿಸಿದಾಗ, ಬಲಿಯು ತನ್ನ ಮಸ್ತಕವನ್ನೇ ಅರ್ಪಿಸಿದನು. ತ್ರಿವಿಕ್ರಮನು ತನ್ನ ಮೂರನೇ ಪಾದದಿಂದ ಬಲಿಯನ್ನು ಪಾತಾಳಕ್ಕೆ ಒತ್ತಿ, ಇಂದ್ರನನ್ನು ಪುನಃ ಸ್ವರ್ಗಾಧಿಪತಿಯನ್ನಾಗಿ ಮಾಡಿದ್ದಲ್ಲದೇ, ತಾನು ಇನ್ನೂ ಬೆಳೆಯಬೇಕೆನ್ನುವ ಅಹಂಕಾರದಲ್ಲಿ, ಬ್ರಹ್ಮಾಂಡವೇ ಬಿರಿದು ಹೋಗುವಂತೆ ಬೆಳೆಯತೊಡಗಿದನು. ತ್ರಿವಿಕ್ರಮನ ಈ ಬೆಳವಣಿಗೆಯನ್ನು ಕಂಡು ಭಯಗ್ರಸ್ತರಾದ ದೇವತೆಗಳು, ಈ ವಾರ್ತೆ ಯನ್ನು ಪರಮಾತ್ಮನಿಗೆ ತಿಳಿಯಪಡಿಸಲು, ಪರಮಾತ್ಮನು ತ್ರಿವಿಕ್ರಮನ ನಿಗ್ರಹಕ್ಕಾಗಿ ಭೈರವನಿಗೆ ಆದೇಶವಿತ್ತನು. ಆಗ ಭೈರವನು ತ್ರಿವಿಕ್ರಮನಿಗಿಂತಲೂ ವಿಶಾಲವಾದ ಶರೀರವನ್ನು ಧರಿಸಿ, ಆತನನ್ನು ಸಂಹರಿಸಿ, ತ್ರಿವಿಕ್ರಮನ ಚರ್ಮವನ್ನು ಸುಲಿದು, ತಾನು ತೊಡುವ ವಸ್ತ್ರವನ್ನಾಗಿ ಮಾಡಿಕೊಂಡನು ಹಾಗೂ ಅವನ ಎಲುಬುಗಳನ್ನು ತನ್ನ ಕೈಯೊಳಗೆ ಶಸ್ತ್ರಗಳಂತೆ ಧರಿಸಿಕೊಂಡು, ಪರಮಾತ್ಮನ ಸನ್ನಿಧಿಗೆ ಬಂದು, ಕರ್ತವ್ಯ

ಪಾಲನೆಯ ಬಗ್ಗೆ ನಿವೇದಿಸಿಕೊಂಡನು. ಆ ದೇವತೆಗಳೆಲ್ಲ ನಿರಾತಂಕರಾದರಲ್ಲದೇ, ನಿರಹಂಕಾರಿಯಾದ ಹರಿಯೂ ಪರಮಾತ್ಮನನ್ನು ಪೂಜಿಸಿ, ವೈಕುಂಠ ಧಾಮವನ್ನು ಹೊಂದಿದವನಾದನು.

ಹೀಗೆ ಹರಿಯ ಮೇಲಿನ ಈ ಐದು ಅವತಾರಗಳಲ್ಲಿ, ಪರಮಾತ್ಮನು ತನ್ನ ಗಣರಿಂದ ಹರಿಯನ್ನು ನಿಗ್ರಹಿಸಿ ಲೋಕಕಲ್ಯಾಣವನ್ನುಂಟುಮಾಡಿದನು.

**(೬) ಪರಶುರಾಮಾವತಾರಾನುಗ್ರಹ :**

ಭೃಗುಋಷಿಯಿಂದ ತಪ್ತನಾದ ಪುರುಷೋತ್ತಮನು, ಜಮದಗ್ನಿಋಷಿಯ ಮಗ ನಾಗಿ ಜನಿಸಿದನು. ಆತನ ಹೆಸರು ಜಾಮದಗ್ನ್ಯರಾಮ ಎಂದಾಯಿತು. ಜಾಮದಗ್ನ್ಯ ರಾಮನು ಒಂದುಸಾರೆ ತಂದೆಯ ಆದೇಶದ ಮೇರೆಗೆ, ತಾಯಿಯಾದ ರೇಣುಕಾ ದೇವಿಯ ಶಿರಚ್ಛೇದನವನ್ನು ಮಾಡಿದನು. ತನ್ನ ಮಗನ ವಚನಪರಿಪಾಲನೆಯಿಂದ ಸಂತುಷ್ಟನಾದ ಜಮದಗ್ನಿಯು, ನಿನಗೆ ಬೇಕಾದ ವರವನ್ನು ಬೇಡಿಕೊ ಎನ್ನಲು, ಮೊದಲನೆಯ ದಾಗಿ ತಾಯಿಯು ಪುನಃ ಜೀವಂತವಾಗಬೇಕು ; ಎರಡನೆಯದಾಗಿ ನಿನ್ನ ಸಿಟ್ಟು ಶಾಂತ ವಾಗಬೇಕು ; ಮೂರನೆಯದಾಗಿ, ನನಗೆ ಶಿವಪೂಜೆಯಲ್ಲಿ ಅನುರಕ್ತಿ ಯುಂಟಾಗ ಬೇಕು–ಹೀಗೆ ಮೂರು ವರಗಳನ್ನು ಬೇಡಿಕೊಂಡನು. ಜಮದಗ್ನಿಯು ತಥಾಸ್ತು ಎನ್ನಲು, ರೇಣುಕಾದೇವಿಯು ಜೀವಂತವಾದಳು ; ಜಮದಗ್ನಿಯ ಸಿಟ್ಟು ಮಾಯ ವಾಯಿತು ಹಾಗೂ ಶಿವಪೂಜೆಯಲ್ಲಿ ಅನುರಕ್ತಿಯುಂಟಾದ ಜಾಮದಗ್ನ್ಯ ರಾಮನು ತಪಸ್ಸಿಗಾಗಿ ಅರಣ್ಯಕ್ಕೆ ಹೋದನು.

ಕೆಲವು ದಿನಗಳ ನಂತರ ಕೃತವೀರ್ಯನ ಮಗನಾದ ಕಾರ್ತವೀರ್ಯಾರ್ಜುನನು, ಜಮದಗ್ನಿಯ ಆಶ್ರಮಕ್ಕೆ ಬಂದು, ಅಲ್ಲಿ ಕಾಮಧೇನುವಿನ ಅನುಗ್ರಹ ಪ್ರಾಪ್ತವಾದ ರಾಜೋಚಿತ ಸತ್ಕಾರವನ್ನು ಪಡೆದು, ಆ ಧೇನುವಿನ ಮೇಲೆ ಲುಬ್ಧನಾಗಿ, ರಾಜನು ಆ ಕಾಮಧೇನುವನ್ನು ತನಗೆ ಕೊಡುವಂತೆ ಕೇಳಿಕೊಂಡನು. ಋಷಿಗಳು ಕೊಡಲು ಒಪ್ಪದಿದ್ದಾಗ, ಕೋಪಶೂನ್ಯರಾದ ಋಷಿಗಳ ಶಿರಚ್ಛೇದವನ್ನು ಮಾಡಿ, ಕಾರ್ತ ವೀರ್ಯಾರ್ಜುನನು ಕಾಮಧೇನುವನ್ನು ತೆಗೆದುಕೊಂಡುಹೋದನು. ಋಷಿಗಳ ಶಿರ ಚ್ಛೇದನವಾದದ್ದನ್ನು ನೋಡಿ, ಪತಿವ್ರತೆಯಾದ ರೇಣುಕಾದೇವಿಯು ಅಗ್ನಿಯನ್ನು ಪ್ರವೇಶಿಸಿದಳು.

ಅದೇ ಸಮಯಕ್ಕೆ ಬಹುದೊಡ್ಡ ಮಳೆಯಾದಕಾರಣ, ಚಿತಾಗ್ನಿಯು ಶಾಂತ ವಾಗಲು, ರೇಣುಕಾದೇವಿಯ ವಸ್ತ್ರಗಳು ಮಾತ್ರ ಸುಟ್ಟು, ಶರೀರದಲ್ಲಿ ಸ್ವಲ್ಪ ಗಾಯ ವಾಗಿ, ಆಕೆಯು ದಿಗಂಬರಳಾಗಿ ಜೀವಂತ ಉಳಿದಳು. ಇವಳ ಈ ಅವಸ್ಥೆಯನ್ನು ಕಂಡ ಸ್ಮಶಾನದಲ್ಲಿಯ ಚಂಡಾಲರು, ಆಕೆಗೆ ಮರ್ಯಾದೆಯನ್ನು ಮುಚ್ಚಿಕೊಳ್ಳುವುದಕ್ಕಾಗಿ ಬೇವಿನಗಿಡದ ತೊಪ್ಪಲವನ್ನು ಕೊಟ್ಟರು. ಅದರಿಂದ ತನ್ನ ಮರ್ಯಾದೆಯನ್ನು ಮುಚ್ಚಿ ಕೊಂಡ ಶ್ರೀರೇಣುಕಾದೇವಿಯು, ತನ್ನ ಶರೀರದ ಘಾಯಗಳು ಮಾಯುವವರೆಗೆ ಚಂಡಾಲರ ಶ್ರೇಣಿಯಲ್ಲಿಯೇ ಉಳಿದುಕೊಂಡಳು.

ಅಡವಿಗೆ ತಪಸ್ಸಿಗೆ ಹೋದ ಜಾಮದಗ್ನ್ಯರಾಮನಿಗೆ ಈ ವಿಷಯ ತಿಳಿದು, ಆಶ್ರಮಕ್ಕೆ ಬಂದು ನೋಡಿ, ಶುದ್ಧನಾಗಿ, ಪುನಃ ಅರಣ್ಯಕ್ಕೆ ಹೋಗಿ, ಪರಮಾತ್ಮನನ್ನು

ಕುರಿತು, ಘೋರ ತಪಸ್ಸನ್ನಾಚರಿಸಿದನು. ಈತನ ತಪಸ್ಸಿಗೆ ಸಂತುಷ್ಟನಾದ ಶಿವನು, ತನ್ನ ಅನುಗ್ರಹದಿಂದ ಪರಶುವನ್ನು (ಕೊಡಲಿಯನ್ನು) ಆಶೀರ್ವದಿಸಿದನು. ಪರಮಾತ್ಮನ ಅನುಗ್ರಹದಿಂದ ಪ್ರಾಪ್ತವಾದ ಪರಶುವನ್ನು ಧರಿಸಿದ ಕಾರಣದಿಂದಲೇ ಜಾಮದಗ್ನ್ಯ ರಾಮನಿಗೆ ಪರಶುರಾಮನೆಂಬ ಹೆಸರು ಪ್ರಾಪ್ತವಾಯಿತು.

ಪರಶಿವನಿಂದ ಅನುಗ್ರಹೀತವಾದ ಪರಶುವಿನಿಂದಲೇ, ಶ್ರೀ ಪರಶುರಾಮನು ಕಾರ್ತ್ಯವೀರ್ಯಾರ್ಜುನನನ್ನು ಸಂಹರಿಸುವುದರ ಜೊತೆಗೆ, ಇಪ್ಪತ್ತೊಂದುಸಾರೆ ಭೂ ಪ್ರದಕ್ಷಿಣೆಯನ್ನು ಮಾಡಿ, ಸಮಸ್ತ ಕ್ಷತ್ರಿಯ ಕುಲವನ್ನೇ ಸಂಹಾರ ಮಾಡಿದನು. ನಂತರ ತಾಯಿಯಾದ ಶ್ರೀ ರೇಣುಕಾದೇವಿಯ ಸೇವೆಯನ್ನು ಮಾಡಿ, ಆಕೆಯ ಮನಸ್ಸಿಗೆ ಸಂತೋಷವನ್ನುಂಟುಮಾಡಿದನು.

ಹೀಗೆ ಪರಮಾತ್ಮನ ಅನುಗ್ರಹದಿಂದ ಕ್ಷತ್ರಿಯರನ್ನು ಸಂಹರಿಸಿದ ನಂತರ, ತನ್ನ ವಶಕ್ಕೆ ಬಂದ ಭೂಮಿಯನ್ನೆಲ್ಲ ಕಶ್ಯಪ ಋಷಿಗೆ ದಾನಮಾಡಿ, ಋಷಿಯ ಆದೇಶದಂತೆ ಕಲ್ಪಾಂತರದವರೆಗೆ ಮಹೇಂದ್ರ ಪರ್ವತದಲ್ಲಿ ವಾಸಗೈದು, ನಂತರ ಶ್ರೀ ವಿಷ್ಣುವು ಪರಶುರಾಮಾವತಾರವನ್ನು ಪೂರ್ಣಗೊಳಿಸಿ ವೈಕುಂಠ ಧಾಮವನ್ನೈದಿದನು.

(೭) ರಾಮಾವತಾರಾನುಗ್ರಹ :

ಪೂರ್ವಕಾಲದಲ್ಲಿ ದಶರಥ ಮಹಾರಾಜನು, ಸಂತಾನ ಲಾಭಕ್ಕಾಗಿ ವಸಿಷ್ಠಾದಿ ಮಹರ್ಷಿಗಳಿಂದ ಕೂಡಿಕೊಂಡು, ಪುತ್ರಕಾಮೇಷ್ಟಿಯನ್ನು ಮಾಡಿದನು. ಆಗ ಕೌಸಲ್ಯೆಯ ಮಗನಾಗಿ ಶ್ರೀ ವಿಷ್ಣುವು ರಾಮಚಂದ್ರನೆಂಬ ಹೆಸರಿನಿಂದ ಜನಿಸಿದನು. ಸೀತಾ ಸ್ವಯಂವರದ ನಂತರ ತಂದೆಯ ವಚನಪರಿಪಾಲನೆಗಾಗಿ ಶ್ರೀರಾಮಚಂದ್ರನು, ಸೀತಾ–ಲಕ್ಷ್ಮಣರೊಡಗೂಡಿ ವನವಾಸಕ್ಕೆ ತೆರಳುತ್ತಾನೆ. ಅಲ್ಲಿ ರಾವಣನಿಂದ ಸೀತಾ ಪಹರಣವಾದಾಗ, ಶೋಕಸಂತಪ್ತನಾದ ಶ್ರೀರಾಮನು, ಲಕ್ಷ್ಮಣನೊಡಗೂಡಿ, ಅಗಸ್ತ್ಯರ ಆಶ್ರಮಕ್ಕೆ ಬಂದು, ಅವರಿಂದ ರಾವಣನನ್ನು ಜಯಿಸಲೋಸುಗ ಉಪಾಯವನ್ನು ಕೇಳ ಲಾಗಿ, ಅಗಸ್ತ್ಯರು, ಶ್ರೀರಾಮನಿಗೆ ಶಿವಾರಾಧನೆಯನ್ನು ಉಪದೇಶಿಸಿದರು. ಅಗಸ್ತ್ಯರ ಆದೇಶದಂತೆ ಶ್ರೀರಾಮನು ಶಿವನನ್ನು ಆರಾಧಿಸಿ, ಅವನಿಂದ ಅಮೋಘವಾದ ಅಸ್ತ್ರವನ್ನು ಪಡೆದು, ರಾವಣನನ್ನು ಸಂಹರಿಸಿ, ಅಗ್ನಿ ಪರಿಶುದ್ಧಳಾದ ಸೀತೆಯನ್ನು ಕರೆದುಕೊಂಡು ಅಯೋಧ್ಯೆಗೆ ಆಗಮಿಸಿ ಪಟ್ಟಾಭಿಷಿಕ್ತನಾದನಂತರ, ಕೆಲವು ಕಾಲದ ಮೇಲೆ ಪುನಃ ಲೋಕಾಪವಾದ ಭಯದಿಂದ ಸೀತಾದೇವಿಯನ್ನು ಅರಣ್ಯಕ್ಕೆ ಕಳಿಸಿದನು. ಸೀತಾದೇವಿ ಯಾದರೂ, ಅತ್ಯಂತ ದುಃಖಿತಳಾಗಿ, ಲವ–ಕುಶರ ಜನ್ಮದ ನಂತರ, ಭೂಗರ್ಭವನ್ನು ಸೇರಿದಳು. ಹೀಗೆ ಸೀತಾದೇವಿಯ ವಿಯೋಗ ತಪ್ತನಾದ ಶ್ರೀರಾಮ ಚಂದ್ರನಾದರೂ, ಕೊನೆಗೆ ಪರಮಾತ್ಮನನ್ನು ಪೂಜಿಸಿ, ಅವನ ಅನುಗ್ರಹದಿಂದ, ತನ್ನ ತಮ್ಮಂದಿರೆಲ್ಲರನ್ನು ಕರೆದುಕೊಂಡು, ಸರಯೂ ನದಿಯನ್ನು ಪ್ರವೇಶಿಸಿ, ತನ್ನ ಮೂಲ ಸ್ಥಾನವಾದ ಕ್ಷೀರಾಬ್ಧಿಯನ್ನು ಸೇರಿದನು.

(೮) ಬಲರಾಮಾವತಾರಾನುಗ್ರಹ :

ದ್ವಾಪರಯುಗದಲ್ಲಿ ಆ ವಿಷ್ಣು ಪರಮಾತ್ಮನೇ ವಸುದೇವನ ಪತ್ನಿಯಾದ ರೋಹಿಣಿಯ ಉದರದಿಂದ ಬಲರಾಮನೆಂಬ ಹೆಸರಿನಿಂದ ಜನಿಸಿದನು. ತನ್ನ

ಅವತಾರದ ಮುಖ್ಯ ಉದ್ದೇಶವಾದ ರಾಕ್ಷಸರ ಸಂಹಾರವನ್ನು ಮಾಡಿ, ತನ್ನ ಕೃತ್ಯವನ್ನೆಲ್ಲ ಪೂರೈಸಿ, ಕೊನೆಗೆ ಶ್ರೀ ಮಹಾದೇವನನ್ನು ಅತ್ಯಂತ ಭಯ ಭಕ್ತಿಯಿಂದ ಆರಾಧಿಸಿ, ಪರಮಾತ್ಮನ ಅಪಾರವಾದ ಅನುಗ್ರಹವನ್ನು ಪಡೆದು, ಯೋಗಮಾರ್ಗದಿಂದ ವೈಕುಂಠ ಧಾಮವನ್ನು ಸೇರಿದನು.

(೯) ಶ್ರೀಕೃಷ್ಣಾವತಾರಾನುಗ್ರಹ :

ಶ್ರೀ ಭೃಗು ಶಾಪದಿಂದ ನಿಯಂತ್ರಿಸಲ್ಪಟ್ಟಂತಹ ಶ್ರೀ ವಿಷ್ಣು ಪರಮಾತ್ಮನು, ಪುನಃ ವಸುದೇವ ದೇವಕಿಯರ ಮಗನಾಗಿ ಶ್ರೀಕೃಷ್ಣನೆಂಬ ಹೆಸರಿನಿಂದ ಜನ್ಮ ತಾಳಿದನು. ಬಾಲ್ಯದಲ್ಲಿ ಸಾಂದೀಪನಿ ಋಷಿಗಳಿಂದ ಸಕಲವಿದ್ಯೆಗಳನ್ನೂ ಕಲಿತ ಶ್ರೀಕೃಷ್ಣನು, ಐಶ್ವರ್ಯ, ಧರ್ಮ, ಯಶಸ್, ಶೋಭಾ, ಜ್ಞಾನ ಮತ್ತು ವೈರಾಗ್ಯಗಳೆಂಬ ಷಡ್ಗುಣೈಶ್ವರ್ಯ ಸಂಪನ್ನನಾಗಿ, ಪೂರ್ಣಪುರುಷನೆನಿಸಿಕೊಂಡನು.

ಲೋಕ ಕಂಟಕರಾದ ಕೌರವರನ್ನೂ ಹಾಗೂ ಶಿಶುಪಾಲಾದಿಗಳನ್ನೂ ಸಂಹರಿಸಿ, ಭೂಭಾರವನ್ನು ಇಳಿಸಿ ಪಾಂಡವರಿಗೆ ಗೀತೆಯ ಉಪದೇಶವನ್ನು ಮಾಡಿ, ಕೊನೆಗೆ ತಾನೂ ಮಹಾಶಿವಭಕ್ತನಾದ ಉಪಮನ್ಯು ಋಷಿಗಳಿಂದ ಶಿವದೀಕ್ಷೆಯನ್ನು ಪಡೆದು, ಬಹುಕಾಲದವರೆಗೆ ಶ್ರೀ ಮಹಾದೇವನನ್ನು ಆರಾಧಿಸಿ, ಅವನ ಅನುಗ್ರಹವನ್ನು ಪಡೆದು, ಕೊನೆಗೆ ತನ್ನ ಅವತಾರವನ್ನು ಮುಗಿಸಿ, ವೈಕುಂಠ ಧಾಮವನ್ನೈದಿದನು.

(೧೦) ಕಲ್ಕ್ಯವತಾರಾನುಗ್ರಹ :

ಕಲಿಯುಗದ ಅಂತ್ಯದಲ್ಲಿ, ವಿಷ್ಣು ಭಗವಂತನು ''ಕಲ್ಕಿ'' ಎಂಬ ಹೆಸರಿನಿಂದ ಅವತರಿಸಿ, ಶಿವನಿಂದ ಸಕಲ ಶಾಸ್ತ್ರಗಳನ್ನೂ ಅಭ್ಯಸಿಸಿ, ಶ್ರೀ ಶಂಕರನಿಂದ ಪ್ರಾಪ್ತವಾದ ಕುದುರೆಯನ್ನೇರಿ, ಆತನಿಂದಲೇ ಪ್ರಾಪ್ತವಾದ ಖಡ್ಗದಿಂದ, ಅನ್ಯಾಯ–ಅಧರ್ಮದಲ್ಲಿ ಪ್ರವೃತ್ತರಾದ ಎಲ್ಲರನ್ನೂ ಸಂಹರಿಸಿ, ಉತ್ತಮವಾದ ಹೊಸ ಸಂತಾನವನ್ನು ಹುಟ್ಟಿಸಿ, ತನ್ನ ಅವತಾರವನ್ನು ಮುಗಿಸಿ, ಶ್ರೀ ವಿಷ್ಣು ಪರಮಾತ್ಮನು, ಪರಮಾತ್ಮನ ಅನುಗ್ರಹದಿಂದ ಪುನಃ ವೈಕುಂಠ ಧಾಮವನ್ನು ಸೇರಿದನು.

ಈ ರೀತಿಯಾಗಿ ಭೃಗುಶಾಪದಿಂದ ತಪ್ತನಾದ ಶ್ರೀ ವಿಷ್ಣು ಪರಮಾತ್ಮನು, ಹತ್ತು ಅವತಾರಗಳನ್ನು ಧರಿಸಿ, ಐದು ಅವತಾರಗಳಲ್ಲಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ. ವಿಷ್ಣುವಿನ ಈ ದಶಾವತಾರದ ವಿಷಯವು ಶಿವಪುರಾಣದ ಶಂಕರ ಸಂಹಿತೆಯಲ್ಲಿ ವಿಸ್ತಾರವಾಗಿ ಉದಾಹರಿಸಲ್ಪಟ್ಟಿದೆ. ಅದನ್ನೇ ಶ್ರೀ ನೀಲಕಂಠ ಶಿವಾಚಾರ್ಯರು, ಕ್ರಿಯಾಸಾರದ ಹದಿನಾಲ್ಕನೇ ಉಪದೇಶದಲ್ಲಿ ವರ್ಣಿಸಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ, ಭಗವಂತನೇ ದಿವ್ಯದೇಹವನ್ನು ಧರಿಸಿಬಂದರೂ, ಅವನಿಗೂ ಅಂತ್ಯವಿದೆ ಎಂದ ಬಳಿಕ, ಸ್ವಕೃತ ಕರ್ಮಗಳ ಭೋಗಕ್ಕಾಗಿ, ಭೂಲೋಕದಲ್ಲಿ ಜನಿಸಿದ ಸಾಮಾನ್ಯ ಜೀವಿಗಳು, ಅದೆಂತು ಉಳಿಯುವರೆಂಬುದೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದ ಪರಮ ತಾತ್ಪರ್ಯವಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೮ ಜುಲೈ, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

ಆಶೀರ್ವಚನ-೫

ಭೂತ್ವಾ ಕರ್ಮವಶಾಜ್ಜಂತುರ್ಬ್ರಾಹ್ಮಣಾದಿಷು ಜಾತಿಷು ।
ತಾಪತ್ರಯಮಹಾವಹ್ನಿಸಂತಾಪಾದ್ದಹ್ಯತೇ ಭೃಶಮ್ (ಸಿ. ಶಿ. ೫.೬೧)

ಜೀವಾತ್ಮನು ತನ್ನ ಅನಾದಿ ಕರ್ಮದ ದೆಸೆಯಿಂದ, ಬ್ರಾಹ್ಮಣ–ಕ್ಷತ್ರಿಯಾದಿ ನಾನಾ ಜಾತಿಗಳಲ್ಲಿ ಜನ್ಮತಾಳಿ, ಆಧ್ಯಾತ್ಮಿಕಾದಿ ತಾಪತ್ರಯಗಳೆಂಬ ಬೆಂಕಿಯ ಬೇಗೆಯಲ್ಲಿ ಬಲವಾಗಿ ಬೆಂದುಹೋಗುವವನು.

ಕರ್ಮಮೂಲೇನ ದುಃಖೇನ ಪೀಡ್ಯಮಾನಸ್ಯ ದೇಹಿನಃ ।
ಆಧ್ಯಾತ್ಮಿಕಾದಿನಾ ನಿತ್ಯಂ ಕುತ್ರ ವಿಶ್ರಾಂತಿರಾಪ್ಯತೇ (ಸಿ. ಶಿ. ೫.೬೨)

ಅನಾದಿ ಕರ್ಮದ ಮೂಲಕವಾಗಿ ಪ್ರಾಪ್ತವಾಗುವ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ಮೂರು ಪ್ರಕಾರದ ದುಃಖದಿಂದ, ಸದಾಕಾಲದಲ್ಲಿ ಪೀಡಿಸಲ್ಪಡುತ್ತಿರುವ ಜೀವಾತ್ಮನಿಗೆ, ಆ ದುಃಖದಿಂದ ವಿಶ್ರಾಂತಿ ಎಂಬುದೇ ದೊರೆಯುವುದಿಲ್ಲ.

''ಸ್ವಕರ್ಮಸೂತ್ರಗ್ರಥಿತೋ ಹಿ ಲೋಕಃ'' ಎನ್ನುವ ಉಕ್ತಿಯಂತೆ, ಜಗತ್ತಿನ ಜೀವಿಗಳೆಲ್ಲ, ತಾವೇ ಮಾಡಿದ ಕರ್ಮವೆಂಬ ಜಾಲದಲ್ಲಿ ಸಿಲುಕಿ ಕರ್ಮದ ಪರಾಧೀನರಾಗಿ, ಅನಿಚ್ಛೆಯಿಂದ ದುಃಖವನ್ನನುಭವಿಸುವುದನ್ನು ನಾವು ನೋಡುತ್ತಲಿದ್ದೇವೆ. ಕರ್ಮದ ಫಲಗಳಾದ ಸುಖ–ದುಃಖಗಳು ನಮ್ಮ ಮನಸ್ಸಿಗೆ ಪ್ರತ್ಯಕ್ಷಗಳಾದರೂ, ಕರ್ಮಗಳು ಮಾತ್ರ ಅಪ್ರತ್ಯಕ್ಷಗಳೇ ಆಗಿವೆ. ಅಂತೆಯೇ ಪುಣ್ಯ–ಪಾಪಗಳೆಂಬ ಕರ್ಮಗಳನ್ನು ಶಾಸ್ತ್ರದಲ್ಲಿ, ಅದೃಷ್ಟವೆಂಬುದಾಗಿ ಕರೆದಿದ್ದಾರೆ. ಆ ಅದೃಷ್ಟಗಳು ದೃಷ್ಟಿಗೋಚರಗಳಾಗದಿದ್ದರೂ, ಸುಖ–ದುಃಖಗಳ ಆಧಾರದಿಂದ ಅನುಮೇಯಗಳಾಗಿರುತ್ತವೆ.

''ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ,
ಕುದುರೆ ನೀನ್ ಅವನು ಪೇಳ್ದಂತೆ
ಮದುವೆಗೋ ಮಸಣಕೋ
ಹೋಗೆಂದ ಕಡೆ ಹೋಗು ಮಂಕುತಿಮ್ಮ''

ಎಂಬ ಡಿ.ವಿ.ಜಿ. ಯವರ ಪದ್ಯವಾದರೂ, ಮನುಷ್ಯ ಜೀವನವು ಕರ್ಮಾಧೀನವಾದದ್ದೆಂಬುದನ್ನು ಬಲವಾಗಿ ಸಮರ್ಥಿಸುತ್ತದೆ.

''ಸತ್ಯಂ ವದ, ಧರ್ಮಂ ಚರ''–ಸತ್ಯವನ್ನೇ ನುಡಿ ಮತ್ತು ಧರ್ಮದಿಂದ ನಡೆ ಎನ್ನುವಂತೆ, ವೇದವಿಹಿತ ಕರ್ಮಗಳನ್ನಾಚರಿಸುವುದರಿಂದ, ಸುಕೃತ (ಪುಣ್ಯ)ದ ಉತ್ಪತ್ತಿಯೂ ಹಾಗೂ ''ನ ಕಲಂಜಂ ಭಕ್ಷಯೇತ್'', ''ಸುರಾಂ ನ ಪಿಬೇತ್'', ''ಮಾ ಹಿಂಸ್ಯಾತ್ ಸರ್ವಭೂತಾನಿ'', ''ಸ್ವಾಧ್ಯಾಯಾನ್ಮಾಪ್ರಮದಃ''–ಮಾಂಸವನ್ನು ಭಕ್ಷಿಸಬೇಡ, ಮದ್ಯಪಾನವನ್ನು ಮಾಡಬೇಡ, ಯಾವ ಪ್ರಾಣಿಯನ್ನೂ ಹಿಂಸಿಸಬೇಡ ಮತ್ತು

ಸ್ವಾಧ್ಯಾಯದಿಂದ ವಿರತನಾಗಬೇಡ–ಎಂಬ ವೇದ ನಿಷಿದ್ಧಗಳಾದ ಕರ್ಮಗಳನ್ನಾಚರಿಸು ವುದರಿಂದ, ದುಷ್ಕೃತ (ಪಾಪ)ದ ಉತ್ಪತ್ತಿಯೂ ಆಗುತ್ತದೆ.

ಪೂರ್ವೋಕ್ತಗಳಾದ ವಿಹಿತ–ನಿಷಿದ್ಧ ಕರ್ಮಗಳಲ್ಲಿ ವಿಹಿತಕರ್ಮವು ''ನಿತ್ಯ'', ''ನೈಮಿತ್ತಿಕ, ''ಕಾಮ್ಯ'' ಮತ್ತು ''ಪ್ರಾಯಶ್ಚಿತ್ತ''ವೆಂಬ ಭೇದದಿಂದ ನಾಲ್ಕು ವಿಧವಾಗಿದೆ.

ನಿತ್ಯಕರ್ಮ–

ನಿತ್ಯಂ ಸದಾ ಯಾವದಾಯುರ್ನ ಕದಾಚಿದತಿಕ್ರಮೇತ್ ।
ಉಪೇತ್ಯಾತಿಕ್ರಮೇ ದೋಷಃ ಶ್ರುತೇರತ್ಯಾಗದರ್ಶನಾತ್ ॥
ಫಲಾಶ್ರುತೇರ್ವೀಪ್ಸಯಾ ಚ ತನ್ನಿತ್ಯಮಿಹ ಕೀರ್ತಿತಮ್ ॥

(ಶ್ಲೋಕವಾರ್ತಿಕ ; ಪುಟ ೪೭೫)

ಎನ್ನುವ ಮಿಮಾಂಸಾ ಶಾಸ್ತ್ರದ ವಚನಾನುಸಾರವಾಗಿ, ಯಾವ ಕರ್ಮವನ್ನು ಆಚರಿಸುವುದರಿಂದ, ಪುಣ್ಯದ ಪ್ರಾಪ್ತಿಯಾಗುವುದಿಲ್ಲವೋ ಹಾಗೂ ಮಾಡದಿದ್ದರೆ ಪ್ರತ್ಯವಾಯ ಅಂದರೆ ಪಾಪದ ಪ್ರಾಪ್ತಿಯಾಗುವದೋ, ಅದನ್ನು ''ನಿತ್ಯಕರ್ಮ'' ವೆನ್ನುವುದು. ವೀರಶೈವರಿಗೆ ಪ್ರತಿನಿತ್ಯ ಮಾಡುವ ಇಷ್ಟಲಿಂಗಾರ್ಚನೆಯೇ ನಿತ್ಯ ಕರ್ಮವು ; ಅನ್ಯ ಮತಸ್ಥರಿಗೆ ಸಂಧ್ಯಾವಂದನೆಯು ನಿತ್ಯ ಕರ್ಮವಾಗಿದೆ.

ವೀರಶೈವನು ದೀಕ್ಷೆಯನ್ನು ಹೊಂದಿದನಂತರ, ತನ್ನ ಜೀವಮಾನವಿರುವವರೆಗೆ, ಎಂದೂ ತಪ್ಪದಂತೆ ನಿತ್ಯಕರ್ಮವಾದ ಇಷ್ಟಲಿಂಗಾರ್ಚನೆಯನ್ನು ಮಾಡಲೇಬೇಕು. ಒಂದುವೇಳೆ, ಪ್ರಮಾದದಿಂದ ತಪ್ಪಿಸಿದರೆ, ಅದೇ ಪಾಪೋತ್ಪತ್ತಿಗೆ ಕಾರಣವಾಗಿ, ಜೀವಾತ್ಮನು ನರಕಭಾಜನನಾಗುತ್ತಾನೆ.

ನಿತ್ಯಕರ್ಮವನ್ನು ಮಾಡದಿರುವುದು ಅಭಾವವು. ಈ ಅಭಾವದಿಂದ ಭಾವರೂಪ ವಾದ ಪಾಪದ ಉತ್ಪತ್ತಿಯು ಹೇಗಾಗುವುದು ? ಎಂಬ ಪ್ರಶ್ನೆಯನ್ನು ಕೆಲವರು ಮಾಡುವ ದುಂಟು. ಇದಕ್ಕೆ ಸಮಾಧಾನವೇನೆಂದರೆ– ಮನೆಯ ಮಾಲಿಕನು ಯಾವ ಸಮಯದಲ್ಲಿ ಯಾವ ಕಾರ್ಯವನ್ನು ಮಾಡಲು ಆಜ್ಞಾಪಿಸಿರುವನೋ, ಆ ಸಮಯದಲ್ಲಿ, ಸೇವಕನು ಆ ಕಾರ್‍ಯವನ್ನು ಮಾಡದೇ ಸುಮ್ಮನೇ ಕುಳಿತರೆ, ಇಲ್ಲವೇ ಬೇರೆ ಕಾರ್‍ಯವನ್ನು ಮಾಡು ತ್ತಿದ್ದರೆ, ಅವನಿಗೆ, ''ನಾನು ಹೇಳಿದ ಕಾರ್ಯವನ್ನು ಸಮಯಾನುಸಾರವಾಗಿ ಮಾಡ ಲಿಲ್ಲವೇ'' ಎಂದು ಕ್ರುದ್ಧನಾದ ಮಾಲಿಕನಿಂದ ಶಿಕ್ಷೆಯಾಗುವಂತೆ, ''ಅಹರಹಃ ಸಂಧ್ಯಾಮುಪಾಸೀತ'' ಪ್ರತಿದಿವಸ ಸಂಧ್ಯಾ ಸಮಯದಲ್ಲಿ ದೇವಾರ್ಚನೆ, ಮಂತ್ರಜಪ ರೂಪವಾದ ನಿತ್ಯಕರ್ಮವನ್ನು ಮಾಡಲೇಬೇಕು–ಎನ್ನುವ ವೇದದ ಆಜ್ಞೆಯನ್ನು ಮೀರಿ, ಸಂಧ್ಯಾ ಸಮಯದಲ್ಲಿ ಸುಮ್ಮನೇ ಕುಳಿತಿದ್ದರೂ, ಬೇರೆ ಯಾವುದೇ ಕರ್ಮದಲ್ಲಿ ಆಸಕ್ತ ನಾಗಿದ್ದರೂ, ಅದರಿಂದ ಪಾಪೋತ್ಪತ್ತಿಯಾಗಿ, ಜೀವಿಯು ನರಕಭಾಜನನಾಗುತ್ತಾನೆ.

ಆದ್ದರಿಂದ, ನಿತ್ಯಕರ್ಮವನ್ನು ಮಾಡದಿದ್ದಾಗ ಉಂಟಾಗುವ ಪಾಪವು, ಮಾಡಿದರೆ ಆಗಲಾರದು ; ಇದೇ ನಿತ್ಯಕರ್ಮದ ಫಲವೆಂದರಿತ ವೀರಶೈವರು ಇಷ್ಟ ಲಿಂಗಾರ್ಚನೆಯನ್ನು ತಪ್ಪಿಸಕೂಡದು.

**ನೈಮಿತ್ತಿಕ ಕರ್ಮ :**

ನಿಮಿತ್ತ ಬಂದಾಗ ಮಾಡುವ ಕರ್ಮಗಳಿಗೆ ನೈಮಿತ್ತಿಕ ಕರ್ಮಗಳೆನ್ನುವರು. ಮಹಾತ್ಮರ ಜಯಂತಿ–ಪುಣ್ಯತಿಥಿಗಳನ್ನಾಚರಿಸುವುದು, ಗ್ರಹಣ ಬಂದಾಗ ಪವಿತ್ರ ನದಿಗಳಲ್ಲಿ ಸ್ನಾನ–ದಾನಾದಿಗಳನ್ನು ಮಾಡುವುದು, ಇವೆಲ್ಲ ನೈಮಿತ್ತಿಕ ಕರ್ಮಗಳು. ನಿತ್ಯ ಕರ್ಮದಂತೆ ನೈಮಿತ್ತಿಕ ಕರ್ಮಕ್ಕೂ ವಿಶೇಷ ಫಲವಿರುವುದಿಲ್ಲ. ಇದನ್ನು ಮಾಡದಿದ್ದಾಗ ದೋಷೋತ್ಪತ್ತಿಯಾಗುತ್ತದೆ. ಆದರೆ, ತನ್ನ ಜೀವನವಿರುವವರೆಗೆ, ಪ್ರತಿದಿವಸ ತಪ್ಪದೇ ಮಾಡಬೇಕಾದದ್ದು ನಿತ್ಯಕರ್ಮವು ಮತ್ತು ನಿಮಿತ್ತ ಬಂದಾಗ ಮಾತ್ರ ತಪ್ಪದೇ ಮಾಡಬೇಕಾದದ್ದು ನೈಮಿತ್ತಿಕ ಕರ್ಮವು–ಇದೇ ಇವೆರಡರಲ್ಲಿರುವ ಸೂಕ್ಷ್ಮ ಭೇದವು.

**ಕಾಮ್ಯ ಕರ್ಮ :**

''ಫಲಕಾಮನಾಧೀನ–ಕರ್ತವ್ಯತಾಕತ್ವಂ ಕಾಮ್ಯತ್ವಮ್'' ಇಹ ಲೌಕಿಕ ಇಲ್ಲವೇ ಪಾರಲೌಕಿಕವಾದ ಯಾವುದೇ ಫಲವನ್ನು ಉದ್ದೇಶಿಸಿ ಮಾಡುವ ಕರ್ಮವನ್ನು, ಕಾಮ್ಯ ಕರ್ಮವೆನ್ನುತ್ತಾರೆ. ಜಗತ್ತಿನಲ್ಲಿ ದುರ್ಭಿಕ್ಷೆಯಾದಾಗ ಮಳೆಗಾಗಿ, ಸಂತಾನವಿಲ್ಲದಿದ್ದಾಗ ಸಂತಾನಕ್ಕಾಗಿ ಮತ್ತು ಯುದ್ಧದಲ್ಲಿ ಶತ್ರುಗಳ ಪರಾಜಯಕ್ಕಾಗಿ ಮಾಡುವ ಯಜ್ಞಾದಿ ಕ್ರಿಯೆಗಳು, ಇಹಲೋಕದ ಕಾಮ್ಯಕರ್ಮಗಳು. ಅದರಂತೆ ಸ್ವರ್ಗಾದಿ ಊರ್ಧ್ವ ಲೋಕದ ಪ್ರಾಪ್ತಿಯ ಕಾಮನೆಯಿಂದ ಮಾಡುವ ಯಜ್ಞಾದಿ ಕರ್ಮಗಳು, ಪಾರಲೌಕಿಕ ಕಾಮ್ಯ ಕರ್ಮಗಳೆನಿಸಿಕೊಳ್ಳುತ್ತವೆ.

**ಪ್ರಾಯಶ್ಚಿತ್ತ ಕರ್ಮ :**

ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ ।
ತಪೋನಿಶ್ಚಯಸಂಯುಕ್ತಂ ಪ್ರಾಯಶ್ಚಿತ್ತಮಿತಿ ಸ್ಮೃಶಮ್ ॥

(ನ್ಯಾಯಕೋಶ ; ಪುಟ–೫೬೨)

ಎಂಬ ಶಾಸ್ತ್ರ ಪ್ರಮಾಣ್ಯದಂತೆ, ''ಪ್ರಾಯಃ'' ಎಂದರೆ ತಪಸ್ಸು, ''ಚಿತ್ತ'' ಎಂದರೆ ಶೋಧನೆ ; ಹೀಗೆ ತಪಸ್ಸಿನ ಮೂಲಕ ತಾನು ಮಾಡಿದ ದೋಷಗಳನ್ನು ದೂರೀಕರಿಸುವ ಕರ್ಮಕ್ಕೆ ''ಪ್ರಾಯಶ್ಚಿತ್ತ ಕರ್ಮ''ವೆನ್ನುವರು. ಮನುಷ್ಯನು ಅರಿತೋ ಅರಿಯದೆಯೋ ಅನೇಕ ದೋಷಗಳನ್ನು ಮಾಡುವದುಂಟು. ಹಾಗೆ ಮಾಡಿದ ದೋಷಗಳ ಅರಿವಾದಾಗ, ಅವುಗಳ ನಿವಾರಣೆಗಾಗಿ, ಶಾಸ್ತ್ರಗಳಲ್ಲಿ ಪ್ರತಿಪಾದಿತಗಳಾದ ಕರ್ಮಗಳೇ ಪ್ರಾಯಶ್ಚಿತ್ತ ಕರ್ಮಗಳು.

ವೀರಶೈವ ಧರ್ಮದಲ್ಲಿ ಇಷ್ಟಲಿಂಗವನ್ನು ದೇಹದಿಂದ ಅಗಲಿಸಕೂಡದು ಮತ್ತು ಗುರುಮಂತ್ರವನ್ನು ಯಾರಿಗೂ ಹೇಳಕೂಡದು ಎಂಬ ಮುಂತಾದ ನಿಯಮಗಳಿವೆ. ಪ್ರಮಾದ ವಶದಿಂದ ಇಷ್ಟಲಿಂಗವು ದೇಹದಿಂದ ಕಳಚಿದರೆ, ಪ್ರಾಣವನ್ನೇ ತ್ಯಾಗಮಾಡಬೇಕೆಂದು ಕಠೋರವಾದ ಪ್ರಾಯಶ್ಚಿತ್ತಕರ್ಮವು ಉಪದಿಷ್ಟವಾಗಿದೆ.

ಸದ್ಯದ ಲಿಂಗವಂತರು ಪ್ರಾಚೀನವಾದ, ಈ ಕಠೋರವಾದ ಈ ಕಟ್ಟಳೆಗೆ ಅಂಜಿ, ಲಿಂಗವನ್ನು ಕಟ್ಟಿಕೊಳ್ಳುವುದೇ ಬೇಡವೆಂಬ ಭಾವನೆಗೆ ಬಂದಿದ್ದಾರೆ. ಆದಕಾರಣ, ಕಾಲಮಾನಕ್ಕನುಸಾರವಾಗಿ, ಧರ್ಮದ ನಿಯಮಗಳನ್ನು ಸಡಿಲಿಸಬೇಕಾಗುತ್ತದೆ.

ಆದ್ದರಿಂದ ಆಕಸ್ಮಾತ್ ಪ್ರಮಾದದಿಂದ, ಇಷ್ಟಲಿಂಗವು ದೇಹದಿಂದ ಕಳಚಿದರೆ ಮತ್ತು ಗುರು ಮಂತ್ರವನ್ನು ಯಾರಿಗಾದರೂ ಹೇಳಿದರೆ, ಇವುಗಳ ಪ್ರಾಯಶ್ಚಿತ್ತಕ್ಕಾಗಿ, ಮತ್ತೊಮ್ಮೆ ಗುರುವಿನಿಂದ ಸಂಸ್ಕಾರವನ್ನು ಪಡೆದು, ಮಂತ್ರೋಪದೇಶವನ್ನು ಪಡೆಯಬೇಕಾಗುವುದು. ಇದು ಸುಲಭ ಹಾಗೂ ಕಾಲೋಚಿತವಾದ ಪ್ರಾಯಶ್ಚಿತ್ತ ಕರ್ಮವು.

ಹೀಗೆ ಶಾಸ್ತ್ರೋಕ್ತಗಳಾದ ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ ಹಾಗೂ ನಿಷಿದ್ಧ ಗಳೆಂಬ ಪಂಚವಿಧ ಕರ್ಮಗಳಲ್ಲಿ, ಕಾಮ್ಯ ಮತ್ತು ನಿಷಿದ್ಧ ಕರ್ಮಗಳನ್ನು ತ್ಯಾಗಮಾಡಿ, ನಿತ್ಯ–ನೈಮಿತ್ತಿಕಗಳನ್ನು ತಪ್ಪದೇ ಆಚರಿಸಿ, ಕದಾಚಿತ್ ಪ್ರಮಾದದಿಂದ ದೋಷ ಗಳುಂಟಾದಾಗ, ಪ್ರಾಯಶ್ಚಿತ್ತ ಕರ್ಮಗಳನ್ನಾಚರಿಸುವವನು ನಿಷ್ಕಾಮ ಕರ್ಮಯೋಗಿ ಯೆನಿಸುವನು. ಈತನಿಗೆ ನಿಷ್ಕಾಮ ಪುಣ್ಯದ ಪ್ರಭಾವದಿಂದ, ವಿವೇಕವು ಉತ್ಪನ್ನವಾಗಿ, ಐಹಿಕ ಹಾಗೂ ಪಾರಲೌಕಿಕ ಸುಖದಲ್ಲಿ ನಿಸ್ಪೃಹ ಭಾವನೆಯುಂಟಾಗಿ, ಲಿಂಗಾಂಗ ಸಾಮರಸ್ಯವಾದ ಆತ್ಮಜ್ಞಾನದ ಫಲದಿಂದ, ಸಂಚಿತವೆಲ್ಲವೂ ದಹಿಸಿ, ಐಕ್ಯಸ್ಥ ಸ್ಥಿತಿಯು ಪ್ರಾಪ್ತವಾಗುತ್ತದೆ.''

ಇನ್ನು, ನಿತ್ಯಾದಿ ತ್ರಿವಿಧ ಕರ್ಮಗಳನ್ನು ತಿರಸ್ಕರಿಸಿ, ಕಾಮ್ಯ ಮತ್ತು ನಿಷಿದ್ಧ ಕರ್ಮ ಗಳನ್ನೇ ಯಥೇಷ್ಟವಾಗಿ ಆಚರಿಸಿದ ಮನುಷ್ಯನು, ''ಸಕಾಮ ಕರ್ಮಿ'' ಎನಿಸಿ, ಆ ಕರ್ಮ ಜನ್ಯಗಳಾದ ಪುಣ್ಯ–ಪಾಪಗಳ ಫಲದಿಂದ ಉತ್ಕೃಷ್ಟ ಇಲ್ಲವೇ ನಿಕೃಷ್ಟಗಳಾದ ಜನ್ಮ ಗಳನ್ನು ಪಡೆಯುತ್ತ, ಸದಾ ಸಂಸಾರದಲ್ಲಿ ತ್ರಿತಾಪ ಸಂತಪ್ತನಾಗಿ ತಿರುಗುತ್ತಿರುತ್ತಾನೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಭೂತ್ವಾ ಕರ್ಮವಶಾಜ್ಜಂತುರ್ಬ್ರಾಹ್ಮಣಾದಿಷು ಜಾತಿಷು ।
ತಾಪತ್ರಯಮಹಾವಹ್ನಿ ಸಂತಾಪಾದ್ದಹ್ಯತೇ ಭೃಶಮ್ ॥

ಎಂದು ಅಪ್ಪಣೆ ಕೊಡಿಸಿದ್ದಾರೆ.

ಜೀವಾತ್ಮರ ಈ ಸಕಾಮ ಕರ್ಮವು ''ಸಂಚಿತ'', ''ಪ್ರಾರಬ್ಧ'' ಮತ್ತು ''ಕ್ರಿಯ–ಮಾಣ'' ಇಲ್ಲವೇ ''ಆಗಾಮಿ'' ಎಂಬುದಾಗಿ ಮೂರು ವಿಧವಾಗಿರುತ್ತದೆ.

ಇವುಗಳಲ್ಲಿ ಹಿಂದಿನ ಅನೇಕ ಜನ್ಮ–ಜನ್ಮಾಂತರಗಳಲ್ಲಿ ಮಾಡಲ್ಪಟ್ಟ, ಸದ್ಯಃ ಫಲೋನ್ಮುಖವಾಗದೇ ಕೇವಲ ಸಂಸ್ಕಾರರೂಪದಿಂದ ಸಂಗ್ರಹವಾಗಿರುವ ಪುಣ್ಯ–ಪಾಪ ಗಳನ್ನು ''ಸಂಚಿತಕರ್ಮ'' ವೆನ್ನುತ್ತಾರೆ.

ಈ ಸಂಚಿತ ಕರ್ಮದಲ್ಲಿಯೇ ಕೆಲವು ಕರ್ಮಗಳು ಪರಿಪಕ್ವಗೊಂಡು, ಸದ್ಯದ ನಮ್ಮ ಜನ್ಮಕ್ಕೆ ಕಾರಣಗಳಾಗಿ, ಸುಖ–ದುಃಖಗಳೆಂಬ ಫಲಗಳನ್ನು ಯಾವಾಗ ಕೊಡಲು ಪ್ರಾರಂಭಿಸಿರುವವೋ, ಅವನ್ನು ''ಪ್ರಾರಬ್ಧಕರ್ಮ''ವೆನ್ನುವರು.

ಸದ್ಯಃ ಪ್ರಾರಬ್ಧ ಕರ್ಮವನ್ನು ಅನುಭವಿಸುತ್ತ ಮಾಡಲ್ಪಡುವ ಕರ್ಮಗಳು, ಸಂಚಿತದಲ್ಲಿ ಕೂಡಿಕೊಂಡು, ಕಾಲಾಂತರದಲ್ಲಿ ಫಲಕಾರಿಗಳಾಗುವುದರಿಂದ ಅವುಗಳನ್ನು ''ಆಗಾಮಿ'' ಇಲ್ಲವೇ ''ಕ್ರಿಯಮಾಣ'' ಕರ್ಮಗಳೆಂದು ಕರೆಯುತ್ತಾರೆ.

ಇಲ್ಲಿ ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕಾದ ಕರ್ಮದ ರಹಸ್ಯವಿದೆ ; ಅದೇನೆಂದರೆ– ''ಕ್ಲೇಶಮೂಲಃ ಕರ್ಮಾಶಯೋ ದೃಷ್ಟಾದೃಷ್ಟಜನ್ಮ ವೇದನೀಯಃ'' (ಯೋಗ ಸೂ. ೨–೧೨) ಯೋಗಸೂತ್ರದಲ್ಲಿ, ಪತಂಜಲಿ ಮಹರ್ಷಿಗಳು–ಅವಿದ್ಯಾದಿ ಕ್ಲೇಶಾದಿಗಳಿಂದ ಪ್ರವೃತ್ತನಾದ ಜೀವಾತ್ಮನಿಂದ, ಈ ಜನ್ಮದಲ್ಲಿ ಮಾಡಲ್ಪಡುತ್ತಿರುವ ಕರ್ಮಗಳಲ್ಲಿ, ''ದೃಷ್ಟಜನ್ಮವೇದನೀಯ'' ಮತ್ತು''ಅದೃಷ್ಟಜನ್ಮವೇದನೀಯ''ವೆಂದು ಎರಡು ಭಾಗಗಳನ್ನು ಮಾಡಿದ್ದಾರೆ.

ಇವುಗಳಲ್ಲಿ ಅತ್ಯುಗ್ರವಾಗಿ ಆಚರಿಸಲ್ಪಟ್ಟ ಜಪ, ತಪ ಹಾಗೂ ಸಮಾಧಿ ಸಾಧನೆ ಗಳಿಂದ, ಇಲ್ಲವೇ ಈಶ್ವರ, ದೇವತಾ, ಮಹರ್ಷಿ ಮತ್ತು ಮಹಾನುಭಾವರ ಆರಾಧನೆ ಯಿಂದ, ಪ್ರಾಪ್ತವಾದ ಅತ್ಯುಗ್ರ ಪುಣ್ಯವು, ಸದ್ಯಃ ಪರಿಪಕ್ವಗೊಂಡು ಇದೇ ಜನ್ಮದಲ್ಲಿಯೇ ಫಲವನ್ನು ಕೊಡುತ್ತದೆ. ಅದರಂತೆ ದುರ್ಬಲರನ್ನು ಪೀಡಿಸುವುದು, ವಿಶ್ವಾಸಘಾತ ಮಾಡುವುದು ಮತ್ತು ಮಹಾನುಭಾವಿಗಳಾದ ತಪಸ್ವಿಗಳಿಗೆ ಪುನಃ ಕ್ಲೇಶ ಕೊಡುವುದೇ ಮುಂತಾದ ಉಗ್ರ ಪಾಪ ಕರ್ಮಗಳು, ಸದ್ಯಃ ಪರಿಪಕ್ವಗೊಂಡು, ಇದೇ ಜನ್ಮದಲ್ಲಿಯೇ ತಮ್ಮ ಫಲವನ್ನು ಕೊಡುತ್ತವೆ.

ಶಿಲಾದಮುನಿಯ ಮಗನಾದ ನಂದೀಶ್ವರ ಕುಮಾರನು, ಅತ್ಯುಗ್ರವಾದ ಶಿವ ಪೂಜೆಯನ್ನು ಮಾಡಿ, ಅದರ ಫಲದಿಂದ ತತ್‌ಕ್ಷಣದಲ್ಲಿಯೇ ಮನುಷ್ಯ ದೇಹವನ್ನು ತ್ಯಜಿಸಿ, ದೇವತಾ ಶರೀರವನ್ನು ಧರಿಸಿ, ದೇವಲೋಕಕ್ಕೆ ಪ್ರಯಾಣ ಮಾಡಿದನು ಮತ್ತು ನಹುಷನೆಂಬ ರಾಜನು ಅತ್ಯುಗ್ರವಾದ ಪುಣ್ಯದ ಪ್ರಭಾವದಿಂದ, ಇಂದ್ರ ಪದವಿಯನ್ನು ಪಡೆದು, ಇಂದ್ರಲೋಕಕ್ಕೆ ಹೋಗುವಾಗ, ಸಪ್ತರ್ಷಿಗಳು ಆತನು ಕುಳಿತ ಮೇರೆಣಯನ್ನು ಹೊತ್ತು ಹೋಗುತ್ತಿದ್ದರು. ಅತಿ ಶೀಘ್ರವಾಗಿ ಇಂದ್ರಲೋಕಕ್ಕೆ ಹೋಗುವ ಅಭಿಲಾಷೆ ಯಲ್ಲಿ, ನಹುಷನು, ಅಗಸ್ತ್ಯ ಮಹರ್ಷಿಗಳಿಗೆ, ತನ್ನ ಕಾಲಿನಿಂದ ಒದ್ದು, ''ಸರ್ಪ–ಸರ್ಪ'' ಬೇಗ ಬೇಗನೇ ನಡೆ–ಎಂದು ಆಜ್ಞಾಪಿಸಿದನು. ಅಹಂಕಾರದಲ್ಲಿ ಶಿಷ್ಟಾಚಾರವನ್ನು ಮರೆತು ತಪಸ್ವಿಗಳಿಗೆ ಒದ್ದಾಗ, ಕ್ರುದ್ಧನಾದ ಅಗಸ್ತ್ಯನು, ''ಸರ್ಪೋ ಭವ'' ನೀನು ಸರ್ಪವಾಗು ಎಂದು ಶಪಿಸಿದ. ತತ್‌ಕ್ಷಣದಲ್ಲಿಯೇ ಆ ಉಗ್ರವಾದ ಪಾಪದ ಫಲವಾಗಿ, ನಹುಷನು, ಸರ್ಪವಾಗಿ ಭೂಮಿಗೆ ಬಿದ್ದನು. ಈ ಎರಡು ಘಟನೆ ಗಳು, ಉಗ್ರವಾದ ಪುಣ್ಯ ಮತ್ತು ಪಾಪಗಳು, ಇದೇ ಜನ್ಮದಲ್ಲಿಯೇ ಫಲವನ್ನು ಕೊಡುವು ದಾಗಿ ತಿಳಿಸುತ್ತವೆ. ಆದ್ದರಿಂದ ಶ್ರೀ ಪತಂಜಲಿ ಮಹರ್ಷಿಗಳು, ಈ ಕರ್ಮಗಳನ್ನು ''ದೃಷ್ಟಜನ್ಮವೇದನೀಯ''ವೆಂದು ಕರೆದಿದ್ದಾರೆ.

ಇನ್ನು, ಯಾವ ಆಗಾಮಿ ಕರ್ಮಗಳು ಸಂಚಿತ ಕರ್ಮದಲ್ಲಿ ಕೂಡಿಕೊಂಡು ಕಾಲಾಂತರದಲ್ಲಿ ಅಂದರೆ ಮುಂದಿನ ಜನ್ಮದಲ್ಲಿ ಸುಖ–ದುಃಖಗಳನ್ನು ಕೊಡುತ್ತವೆಯೋ, ಅವುಗಳನ್ನು ''ಅದೃಷ್ಟ ಜನ್ಮವೇದನೀಯ''ಗಳೆಂದು ಕರೆಯುವರು.

ರೈತನು ಹೊಲದಲ್ಲಿ ಬೆಳೆದ ಜೋಳವನ್ನು ಹಗೆಯಲ್ಲಿ ಸಂಗ್ರಹಿಸಿ ಸಂರಕ್ಷಿಸುತ್ತಾನೆ. ತನಗೆ ಊಟಕ್ಕೆ ಬೇಕಾದಾಗ, ಆ ಹಗೆಯಿಂದಲೇ ಸ್ವಲ್ಪ ತೆಗೆದುಕೊಂಡು, ಬಿಸಿ ರೊಟ್ಟಿ ಯನ್ನು ಮಾಡಿಕೊಂಡು ಉಣ್ಣುತ್ತಾನೆ. ಹೀಗೆ ಕೇವಲ ಉಣ್ಣುತ್ತ ಕೂಡ್ರುದೇ, ಮತ್ತೆ ಹೊಲ

ದಲ್ಲಿ ಜೋಳವನ್ನು ಬಿತ್ತುತ್ತಾನೆ. ಇವುಗಳಲ್ಲಿ ಹಗೆಯಲ್ಲಿ ಸಂಗ್ರಹಿಸಿದ ಜೋಳದಂತೆ ಸಂಚಿತ ಕರ್ಮವು ; ಹಗೆಯಿಂದಲೇ ತೆಗೆದು ಬೀಸಿ ರೊಟ್ಟಿಯಾಗಿ ಉಣ್ಣಲು ತಯಾರಾದ ಜೋಳದಂತೆ ಪ್ರಾರಬ್ಧ ಕರ್ಮವು ಮತ್ತು ಹೊಲದಲ್ಲಿ ಬಿತ್ತಿದ ಬೀಜದಂತೆ ಆಗಾಮಿ ಕರ್ಮವೆಂದು ಯುಕ್ತಿಯಿಂದ ಈ ಸಂಚಿತ, ಪ್ರಾರಬ್ಧ ಮತ್ತು ಆಗಾಮಿ ಕರ್ಮಗಳ ಸ್ವರೂಪವನ್ನು ತಿಳಿದುಕೊಳ್ಳಬೇಕು.

''ಸತಿ ಮೂಲೇ ಸದ್ವಿಪಾಕೋ ಜಾತ್ಯಾಯುರ್ಭೋಗಾಃ'' (ಯೋಗ ಸೂ. ೨-೧೩) ಅನಾದಿಯಾದ ಅವಿದ್ಯಾ ಮೂಲಕವಾಗಿ, ಜೀವಾತ್ಮನಿಂದ ಸಂಗ್ರಹೀತ ಗಳಾದ ಸಂಚಿತ ಕರ್ಮಗಳಲ್ಲಿ, ಪರಿಪಕ್ವಗಳಾಗಿ ಫಲೋನ್ಮುಖಗಳಾದ ಪುಣ್ಯ-ಪಾಪ ಗಳಿಂದಲೇ ಜೀವಾತ್ಮನಿಗೆ ಜಾತಿ, ಆಯು ಮತ್ತು ಭೋಗಗಳು ಉತ್ಪನ್ನವಾಗುತ್ತವೆ ಎಂಬ ತತ್ತ್ವವನ್ನು ಅತೀಂದ್ರಿಯ ಸಾಮರ್ಥ್ಯಶಾಲಿಗಳಾದ ಪತಂಜಲಿ ಮಹರ್ಷಿಗಳಾದರೂ ಪ್ರತಿಪಾದಿಸಿದ್ದಾರೆ.

ಇವುಗಳಲ್ಲಿ ''ಜಾತಿ'' ಯೆಂದರೆ ಜನ್ಮ, ''ಆಯುಃ'' ಅಂದರೆ ಜೀವನದ ಕಾಲ ಮತ್ತು''ಭೋಗ''ವೆಂದರೆ ಸುಖ-ದುಃಖಗಳ ಸಾಕ್ಷಾತ್ಕಾರವು. ಪ್ರಾಣಿಗಳಿಗೆ ತಮ್ಮ ತಮ್ಮ ಕರ್ಮಾನುಸಾರವಾಗಿ ಪ್ರಾಪ್ತವಾಗುವ ಜನ್ಮವು, ಉತ್ತಮ, ಮಧ್ಯಮ ಮತ್ತು ಅಧಮ ರೂಪವೆಂದು ಮೂರು ವಿಧವಾಗಿದೆ. ಇವುಗಳಲ್ಲಿ ''ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮಾನುಷ್ಯಲೋಕಮ್'' (ಪ್ರಶ್ನೋಪನಿಷತ್ ; ೩-೭) ಎನ್ನುವ ಉಪನಿಷತ್ಪ್ರಮಾಣದಂತೆ, ಪುಣ್ಯಾಧಿಕ್ಯದಿಂದ ಉತ್ತಮವಾದ ದೇವತಾ ಜನ್ಮವು, ಪುಣ್ಯ-ಪಾಪಗಳ ಸಾಮ್ಯದಿಂದ ಮಧ್ಯಮವಾದ ಮನುಷ್ಯಜನ್ಮವು ಹಾಗೂ ಪಾಪಾಧಿಕ್ಯದಿಂದ ಕನಿಷ್ಠಗಳಾದ ಪಶು-ಪಕ್ಷ್ಯಾದಿ ಜನ್ಮಗಳು ದೊರೆಯುತ್ತವೆ. ಅದನ್ನೇ ಶ್ರೀ ನಿಜಗುಣ ಶಿವಯೋಗಿಗಳು –

ಪಾಪಾನುಗುಣದಿಂದೆ ಗಿಡ ಮರ ಕ್ರಿಮಿಗಳ ।  
ರೂಪಾಗಿ ಕೀಟಪತಂಗಾದಿಯಾಗಿ ॥  
ಆ ಪಕ್ಷಿಕುಲವಾಗಿ ಮೃಗಜಾತಿಯಾಗಿ ಮೇ ।  
ಲಾ ಪಶುರೂಪಾಗಿ ಬಹು ಬಾಧೆಗಲಸಿ ॥ ೧ ॥

ಭೂತಪಂಚಕದ ರೂಪಾಗಿಯೋಷಧಿಯಾಗಿ ।  
ಧಾತುಸಪ್ತಕದ ರೂಪಾಗಿ ತಂದೆಯೊಳು ॥  
ಮಾತೆಯ ಸೂತಕ ರುಧಿರ ರೂಪಾಗಿ ಮತ್ತೀ ।  
ತನುವಾಗುವಚ್ಚರಿಯನು ಕೇಳಿ ॥ ೨ ॥

ಬಾಲಕ ತರುಣ ಜರಾ ಜೀರ್ಣ ರೂಪಾಗಿ ।  
ಮೇಲೆ ನರಕಿಯಾಗಿ ಬಳಿಕೀ ಕ್ರಮದೊಳು ॥  
ತಾಳಲಾರೆನು ತನುವನು ಶಂಭುಲಿಂಗವೇ ।  
ಪಾಲಿಸೆಂದೆರಗಿ ಬಿನ್ನೈಪೆ ಭೀತಿಯೊಳು ॥ ೩ ॥

(ಕೈ.ಪ.ಜೀ ಸ್ಥ. ೩)

ಇಂತೆಂಬುದಾಗಿ ಜೀವಿಗಳ ಜನ್ಮಶ್ರೇಣಿಯು ಕರ್ಮಾಧೀನವೆಂಬುದನ್ನು ಬಹು ಮಾರ್ಮಿಕವಾಗಿ ಉಪದೇಶಿಸಿದ್ದಾರೆ.

ಬೀಜಾಂಕುರ ನ್ಯಾಯದಂತೆ, ಕರ್ಮದಿಂದ ದೇಹ ಮತ್ತು ದೇಹದಿಂದ ಕರ್ಮ– ಇದೊಂದು ಅನಾದಿಪರಂಪರೆಯು. ಜಗತ್ತಿನಲ್ಲಿ ಒಬ್ಬ ಅಧಿಕಾರಿಯು ಕರ್ತವ್ಯನಿಷ್ಠನಾಗಿ, ತನ್ನ ಅಧಿಕಾರದ ಸದುಪಯೋಗವನ್ನು ಮಾಡಿದಾಗ, ಪದೋನ್ನತಿ (ಪ್ರಮೋಶನ್) ಯಾಗುವಂತೆ ಮತ್ತು ತನ್ನ ಅಧಿಕಾರದ ದುರುಪಯೋಗವನ್ನು ಮಾಡಿ ಮನಬಂದಂತೆ ನಡೆಯುವವನಿಗೆ ಪದಾವನತಿಯು ಆಗುವಂತೆ, ಮನುಷ್ಯನು ನಿಷ್ಕಾಮ ಕರ್ಮಗಳ ನ್ನಾಚರಿಸಿ, ಆತ್ಮಜ್ಞಾನವನ್ನು ಸಂಪಾದಿಸಿದಾಗ, ಭಗವತ್ಸ್ವರೂಪವಾದ ಮುಕ್ತಿಯನ್ನೂ ಮತ್ತು ತನ್ನ ಮನುಷ್ಯತ್ವವನ್ನು ಬಿಟ್ಟು ಮನಬಂದಂತೆ ನಡೆದಾಗ, ಪಶುಪಕ್ಷ್ಯಾದಿ ಹೀನ ಯೋನಿಯನ್ನೂ ಪಡೆಯುತ್ತಾನೆ. ಆದ್ದರಿಂದ ನಮ್ಮ ಹೀನ ಮತ್ತು ಉತ್ತಮಗಳಾದ ಜನ್ಮಗಳಿಗೆ ನಾವು ಮಾಡಿದ ಕರ್ಮಗಳೇ ಕಾರಣಗಳು. ಅಂತೆಯೇ

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಂ ॥
(ಕಠೋಪನಿಷತ್; ೨–೨–೭)

ಎಂದು ಉಪನಿಷತ್ತಾದರೂ ಈ ಮಾತನ್ನು ಸಮರ್ಥಿಸುತ್ತದೆ.

ಪ್ರಾಕೃತವಾದ ಬ್ರಹ್ಮಸೃಷ್ಟಿಯಲ್ಲಿ ಜನಿಸಿದ ಮನುಷ್ಯರನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂದು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ. ವೀರಶೈವರು ಈ ನಾಲ್ಕೂ ಭೇದಗಳಲ್ಲಿ ಯಾವುದರಲ್ಲಿಯೂ ಅಂತರ್ಗತರಾಗುವುದಿಲ್ಲ; ಯಾಕೆಂದರೆ ಈ ವರ್ಣಾಶ್ರಮಗಳಿಂದ ಕೂಡಿದ, ಬ್ರಹ್ಮಸೃಷ್ಟಿಯಾಗುವ ಪೂರ್ವದಲ್ಲಿ, ಶಿವನಿಂದ ನಿರ್ಮಿತವಾದ ಅಪ್ರಾಕೃತ ಸೃಷ್ಟಿಯಲ್ಲಿ ಉತ್ಪನ್ನವಾದ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಪಂಚ ಶಿವಗಣರಿಂದ ವೀರಶೈವರ ಸೃಷ್ಟಿಯಾಗಿದೆ. ಹೀಗೆ ಬ್ರಹ್ಮ ಸೃಷ್ಟಿಯ ವರ್ಣಾಶ್ರಮಗಳು ಸೃಷ್ಟಿಯಾಗುವ ಪೂರ್ವದಲ್ಲಿಯೇ ಶಿವಗಣದಿಂದ ಉತ್ಪನ್ನ ರಾದ ವೀರಶೈವರನ್ನು ಅತಿವರ್ಣಾಶ್ರಮಿಗಳು ಎಂದು ಕರೆದಿದ್ದಾರೆ.

ಕಾಲಾಂತರದಲ್ಲಿ ಬ್ರಾಹ್ಮಣಾದಿ ವರ್ಣಗಳ ಪ್ರಭಾವವು ವೀರಶೈವರ ಮೇಲೆಯೂ ಬಿದ್ದು, ಇವರಲ್ಲಿಯೂ ಜಂಗಮ, ಗೌಡ, ಬಣಜಿಗ ಮತ್ತು ಒಕ್ಕಲಿಗ ಮುಂತಾದ ಪ್ರಭೇದಗಳಾಗಿ ಜಂಗಮರು ಬ್ರಾಹ್ಮಣರೆಂದೂ, ಗೌಡರು ಕ್ಷತ್ರಿಯರೆಂದೂ, ಬಣಜಿ ಗರು ವೈಶ್ಯರೆಂದೂ ಮತ್ತು ಒಕ್ಕಲಿಗ ಮುಂತಾದವರು ಶೂದ್ರರೆಂತಲೂ ಕರೆಯುವ ಪರಿ ಪಾಟಿಯು ಬೆಳೆದುಬಂದಿತು.

ಅನಾದಿ ಕಾಲದಿಂದ ಜಂಗಮರು ಮತ್ತು ಬ್ರಾಹ್ಮಣರು ತಮ್ಮಲ್ಲಿಯ ತ್ಯಾಗ, ತಪಸ್ಸು ಮತ್ತು ಶಾಸ್ತ್ರಾಧ್ಯಯನ ಮುಂತಾದ ಉತ್ಕೃಷ್ಟ ಗುಣಗಳಿಂದ, ಜನರಿಗೆ ಸನ್ಮಾರ್ಗೋಪದೇಶ ಮಾಡುತ್ತ, ಸಮಾಜದ ಉಳಿದೆಲ್ಲ ವರ್ಣದವರಿಂದ ಪೂಜ್ಯತೆ ಯನ್ನು ಪಡೆದು ಶ್ರೇಷ್ಠರೆನಿಸಿಕೊಂಡಿದ್ದಾರೆ. ಇದಕ್ಕೆ ಅಪವಾದವಾಗಿ ಅದೆಷ್ಟೋ ಜನ ಜಂಗಮರು ಹಾಗೂ ಬ್ರಾಹ್ಮಣರು ತಮ್ಮ ಕರ್ತವ್ಯ ಭ್ರಷ್ಟರಾಗಿ, ತಮ್ಮ ಬಗ್ಗೆ

ಜನರಲ್ಲಿರುವ ಪೂಜ್ಯತೆಯನ್ನು ಕಳೆದುಕೊಂಡಿರುವುದನ್ನು ಸದ್ಯಃ ಸಮಾಜದಲ್ಲಿ ಕಾಣುತ್ತೇವೆ. ಇದೂ ಅಲ್ಲದೆ, ಜಂಗಮ ಹಾಗೂ ಬ್ರಾಹ್ಮಣೇತರರಾದ ಅನೇಕ ವ್ಯಕ್ತಿಗಳು, ಜಂಗಮ ಮತ್ತು ಬ್ರಾಹ್ಮಣ ರಲ್ಲಿ ಇರಬೇಕಾದ ತ್ಯಾಗ, ತಪಸ್ಸು, ಜ್ಞಾನ ಮುಂತಾದ ಉತ್ಕೃಷ್ಟ ಗುಣಗಳನ್ನು ಸಂಪಾದಿಸಿ, ಜಗತ್ತಿನಲ್ಲಿ ಪೂಜೆಗೊಳ್ಳುತ್ತಿರುವದನ್ನೂ ನೋಡುತ್ತಲಿದ್ದೇವೆ.

ಇವೆಲ್ಲವನ್ನೂ ಪರ್ಯಾಲೋಚಿಸಿದಾಗ, ''ಗುಣಾಃ ಪೂಜಾಸ್ಥಾನಂ ಗುಣೆಷು ನ ಚ ಲಿಂಗಂ ನ ಚ ವಯಃ'' ಎನ್ನುವ ವಚನದಂತೆ, ಮನುಷ್ಯನ ಉತ್ಕೃಷ್ಟಗುಣಗಳು ಪೂಜ್ಯ ವಲ್ಲದೇ, ಶರೀರಾದಿಗಳು ಪೂಜ್ಯವಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ. ಅಂತೆಯೇ, ಸಮಾಜದಲ್ಲಿಯ ಈ ಜಾತಿಯ ವಿಷಬೀಜವನ್ನು ಸಂಹಾರಮಾಡಲು ಜನಿಸಿದ ಶ್ರೀ ಬಸವೇಶ್ವರರು, ತಾವು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದರೂ, ತಮ್ಮ ಜನನದ ಜಾತಿಯ ಅಭಿಮಾನವನ್ನು ಪಡೆಯದೇ, ಎಲ್ಲ ಜಾತಿಗಳನ್ನೂ ಬದಿಗಿರಿಸಿ, ''ಭಕ್ತ'' ಮತ್ತು''ಭವಿ'' ಎಂಬ ಎರಡೇ ಜಾತಿಗಳನ್ನು ಮಾಡಿದರು.

''ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ'' (ಗೀತಾ ೪–೧೩) ಎನ್ನುವ ಗೀತಾವಚನವಾದರೂ, ಬ್ರಾಹ್ಮಣಾದಿ ಜಾತಿಗಳಿಗೆ, ಶರೀರವೇ ಪ್ರಧಾನ ವಾದದ್ದಲ್ಲ ; ಆದರೆ ಗುಣ ಹಾಗೂ ಕರ್ಮಗಳು ಪ್ರಧಾನವಾದವುಗಳೆಂಬ ವಾಸ್ತವಿಕ ವಾದ ತತ್ತ್ವವನ್ನು ಪ್ರತಿಪಾದಿಸುತ್ತದೆ.

ಆದ್ದರಿಂದ, ಯಾರಲ್ಲಿ ಸತ್ತ್ವ ಗುಣವು ಪ್ರಬಲವಾಗಿದ್ದು, ಶಮ–ದಮಾದಿ ಸದ್ಗುಣ ವಿಶಿಷ್ಟನಾಗಿ ಆತ್ಮಜ್ಞಾನವನ್ನು ಸಂಪಾದಿಸಿ, ತಾನು ಸಂಪಾದಿಸಿದ ಆ ಜ್ಞಾನವನ್ನು ಜಗತ್ತಿಗೂ ಬೋಧಿಸಿ, ಬ್ರಹ್ಮಜ್ಞಾನಿ ಎನಸಿಕೊಳ್ಳುವನೋ, ಅವನೇ ಬ್ರಾಹ್ಮಣನು ಈ ಗುಣಗಳು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನಲ್ಲಿ ಇರದಿದ್ದರೆ ಅವನು ವಾಸ್ತವಿಕವಾದ ಬ್ರಾಹ್ಮಣನಲ್ಲ.

ಅದರಂತೆಯೇ ''ಜಂಗಮ'' ಶಬ್ದವಾದರೂ ಜ್ಞಾನವಾಚಕವೇ ಆಗಿದೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಜಾನಂತ್ಯತಿಶಯಾದ್ಯೇ ತು ಶಿವಂ ವಿಶ್ವ ಪ್ರಕಾಶಕಮ್ ।
ಸ್ವಸ್ವರೂಪತಯಾ ತೇ ತು ಜಂಗಮಾ ಇತಿ ಕೀರ್ತಿತಾಃ ॥

(ಸಿ.ಶಿ. ೧೧–೩೭)

ಜಗತ್ಪ್ರಕಾಶಕನಾದ ಪರಮಾತ್ಮನನ್ನು, ತನ್ನಾತ್ಮ ಸ್ವರೂಪವನ್ನಾಗಿ ತಿಳಿದುಕೊಂಡ ಆತ್ಮ ಜ್ಞಾನಿಗಳೇ ಜಂಗಮರೆಂದು ಜಂಗಮ ಮಾಹಾತ್ಮ್ಯಸ್ಥಲದಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಕಾರಣ, ಸತ್ತ್ವಗುಣಿಗಳಾಗಿ ಶಿವಜ್ಞಾನವನ್ನು ಪಡೆದು, ಆ ಜ್ಞಾನವನ್ನು ಜಗತ್ತಿನ ಜನರಿಗೆಲ್ಲ ಬೋಧಿಸುವುದಕ್ಕಾಗಿ, ಸದಾ ಸಂಚಾರ ಮಾಡುತ್ತಿರುವ ಮಹಾನುಭಾವರೇ ವಾಸ್ತವಿಕವಾದ ಜಂಗಮರೆನಿಸುವರು. ಇನ್ನು ಜಂಗಮ ಜಾತಿಯಲ್ಲಿ ಜನಿಸಿದವರಲ್ಲಿ ಒಂದು ವೇಳೆ ಈ ಗುಣಗಳಿರದಿದ್ದರೆ, ಅವರು ಜಾತಿಜಂಗಮರಾಗಬಹುದೇ ವಿನಹ, ತಾತ್ತ್ವಿಕ ವಾದ ಜಂಗಮರಾಗಲಾರರು.

ಇನ್ನು ಸತ್ತ್ವವು ಗೌಣವಾಗಿ, ರಜೋಗುಣ ಪ್ರಧಾನವಾಗಿದ್ದು, ಶರೀರದಲ್ಲಿ ಶಕ್ತಿಯನ್ನು ಸಂಪಾದಿಸಿ, ಅದರ ಬಲದಿಂದ ತನ್ನ ಗ್ರಾಮ, ಪ್ರಾಂತ, ದೇಶ ಹಾಗೂ ರಾಷ್ಟ್ರಗಳ ಸಂರಕ್ಷಣೆಯನ್ನು ಯಾರು ಮಾಡುವರೋ ಅವರನ್ನು ಕ್ಷತ್ರಿಯರೆನ್ನುತ್ತಾರೆ.

ಅದರಂತೆ ತಮೋಗುಣವು ಗೌಣವಾಗಿ, ರಜೋಗುಣವು ಪ್ರಧಾನವಾಗಿದ್ದು, ವ್ಯಾಪಾರದ ಮಾಧ್ಯಮದಿಂದ, ಜನಸಾಮಾನ್ಯರಿಗೆ ಸಕಲ ಉಪಭೋಗ್ಯ ಪದಾರ್ಥಗಳು, ಯೋಗ್ಯ ಬೆಲೆಗೆ ಸಿಗುವಂತೆ ಪ್ರಯತ್ನಿಸುವ ಸ್ವಭಾವದ ವ್ಯಕ್ತಿಗಳನ್ನು ವೈಶ್ಯರೆನ್ನುತ್ತಾರೆ.

ಇನ್ನು ಯಾರಲ್ಲಿ ರಜೋಗುಣವು. ಗೌಣವಾಗಿದ್ದು ತಮೋಗುಣವೇ ಪ್ರಧಾನವಾಗಿರುತ್ತದೆಯೋ ಹಾಗೂ ಬುದ್ಧಿಯಲ್ಲಿ ವಿಚಾರಶಕ್ತಿ ಇಲ್ಲದಿರುವುದರಿಂದ ಸ್ವಯಂ ಕಾರ್ಯ ಮಾಡುವ ಸಾಮರ್ಥ್ಯವಿಲ್ಲದೇ ಅನ್ಯರು ಹೇಳಿದ್ದನ್ನು ಮಾತ್ರ ಮಾಡುತ್ತ, ಸೇವಾವೃತ್ತಿಯಲ್ಲಿ ಇರುತ್ತಾರೆಯೋ ಅವರನ್ನು ಶೂದ್ರರೆನ್ನಬೇಕು.

ಹೀಗೆ ಜಂಗಮ–ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಜಾತಿಗಳು ಗುಣ ಮತ್ತು ಕರ್ಮ ಪ್ರಧಾನಗಳಾದ್ದರಿಂದ, ಈ ಗುಣ–ಕರ್ಮಗಳು ಜೀವಾತ್ಮನ ಪುಣ್ಯ–ಪಾಪಾದಿಗಳ ಮೂಲಕ ಪ್ರಾಪ್ತವಾಗುವದರಿಂದ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಜೀವಾತ್ಮನ ಉತ್ಕೃಷ್ಟ ಇಲ್ಲವೇ ನಿಕೃಷ್ಟ ಜನ್ಮಗಳ ಪ್ರಾಪ್ತಿಗೆ, ಆತನ ಕರ್ಮಗಳೇ ಕಾರಣವೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಇನ್ನು ಜೀವಾತ್ಮನು ತಾನು ಆಶ್ರಯಿಸಿದ ಭೋಗಾಯತನವಾದ ಶರೀರದಲ್ಲಿ ಎಷ್ಟು ದಿನವಿರಬೇಕೆಂಬ ಆಯಷ್ಯವಾದರೂ, ಆತನ ಪ್ರಾರಬ್ಧ ಕರ್ಮವನ್ನೇ ಅವಲಂಬಿಸಿರುತ್ತದೆ. ಪ್ರಾರಬ್ಧಕರ್ಮ ಮುಗಿಯುವವರೆಗೆ ಜೀವಾತ್ಮನಿಗೆ, ದೇಹವಿಯೋಗರೂಪವಾದ ಮರಣವು ಉಂಟಾಗಲಾರದು. ಅಂತೆಯೇ–

ಆಯುಃ ಕರ್ಮ ಚ ವಿತ್ತಂ ಚ ವಿದ್ಯಾ ನಿಧನಮೇವ ಚ ।
ಪಂಚೈ ತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ॥

ಜೀವಾತ್ಮನು ಎಷ್ಟು ದಿವಸ ಬದುಕಬೇಕು ? ಯಾವ ಉದ್ಯೋಗವನ್ನು ಮಾಡಬೇಕು ? ಎಷ್ಟು ಸಂಪತ್ತು ಮತ್ತು ವಿದ್ಯೆಯನ್ನು ಸಂಪಾದಿಸಬೇಕು ? ಹಾಗೂ ಎಂದು ಸಾಯಬೇಕು? ಈ ಐದು ವಿಷಯಗಳು ಅವನ ಕರ್ಮಾನುಸಾರವಾಗಿ ಮೊದಲೇ ನಿಶ್ಚಿತಗಳಾಗಿರುತ್ತವೆ–ಎಂಬ ವಿಷಯವನ್ನು ಜ್ಞಾನಿಗಳು ಪ್ರತಿಪಾದಿಸಿದ್ದಾರೆ.

ಜಗತ್ತಿನಲ್ಲಿ ಜನಿಸಿದ ಜೀವಾತ್ಮನಿಗೆ ಕಾಲಕಾಲಕ್ಕೆ ದೊರೆಯುವ ಸುಖ –ದುಃಖಗಳಾದರೂ, ಅವನೇ ಮಾಡಿದ ಪೂರ್ವಕರ್ಮಗಳ ಫಲಗಳು. ಆದ್ದರಿಂದಲೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಕರ್ಮಮೂಲೇನ ದುಃಖೇನ ಪೀಡ್ಯಮಾನಸ್ಯ ದೇಹಿನಃ ।
ಅಧ್ಯಾತ್ಮಿಕಾದಿನಾ ನಿತ್ಯಂ ಕುತ್ರ ವಿಶ್ರಾಂತಿರಾಪ್ಯತೇ ? ॥ (ಸಿ. ಶಿ. ೫.೬೨)

ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ವೇಗವಾಗಿ ಗೋಡೆಗೆ ಬಡಿದ ಚೆಂಡು, ಗೋಡೆಗೆ ತಾಕಿ ಮರಳಿ ನಮ್ಮ ಕಡೆಗೇನೆ ಬರುವಂತೆ, ಆಕಾಶದಲ್ಲಿ ಒಗೆದ ಧೂಳಿ, ಇಲ್ಲವೇ ಪುಷ್ಪಗಳು, ಮರಳಿ ನಮ್ಮ ತಲೆಯ ಮೇಲೆಯೇ ಬೀಳುವಂತೆ, ನಾವು ಮಾಡಿದ ಸುಕೃತ ಇಲ್ಲವೇ ದುಷ್ಕೃತಗಳು ಕಾಲಾಂತರ ದಲ್ಲಿ ನಮಗೆ ಶುಭ ಹಾಗೂ ಅಶುಭ ಫಲಗಳನ್ನು ಕೊಟ್ಟೇ ತೀರುತ್ತವೆ. ಆದಕಾರಣ, ನಾವು ಯಾರನ್ನಾದರೂ ವಂಚಿಸುತ್ತಿದ್ದರೆ, ಯಾರನ್ನಾದರೂ ಪೀಡಿಸುತ್ತಿದ್ದರೆ, ನಮ್ಮನ್ನೇ ವಂಚಿಸಿಕೊಳ್ಳುತ್ತಿದ್ದೇವೆ ಎಂಬುದನ್ನು ಪ್ರತಿಯೊಬ್ಬರೂ ನಿಶ್ಚಯವಾಗಿ ತಿಳಿದುಕೊಳ್ಳ ಬೇಕು. ಆದ್ದರಿಂದ ವ್ಯಾಸಮಹರ್ಷಿಗಳು–

ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ।
ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥

ಯಾವ ವ್ಯವಹಾರದಿಂದ ನಿನ್ನ ಮನಸ್ಸಿಗೆ ದುಃಖ ಉಂಟಾಗುವದೋ, ಅದನ್ನು ನೀನು ಅನ್ಯರಿಗಾದರೂ ಮಾಡಬೇಡ. ಇದೇ ಧರ್ಮದ ಸರ್ವಸ್ವವೆಂಬುದನ್ನು ಪ್ರತಿಪಾದಿಸಿ ದ್ದಾರೆ. ನಮಗೆ ಯಾರಾದರೂ ಬಿರುನುಡಿಗಳನ್ನು ನುಡಿದರೆ, ಇಲ್ಲವೇ ಬಡಿದರೆ, ನಮ್ಮ ಮನಸಿಗೆ ನೋವಾಗುವುದನ್ನು ಅನುಭವಿಸಿದ ನಾವು, ನಮ್ಮಿಂದ ಈ ವ್ಯವಹಾರವು ಯಾರಿಗಾದರೂ ಘಟಿಸಿದರೆ, ಅವರಿಗಾದರೂ ನಮ್ಮಂತೆಯೇ ನೋವಾಗುವದನ್ನು ಅರಿತು, ನಮ್ಮಿಂದ ಅನ್ಯರಿಗೆ ದುಃಖದಾಯಕ ವ್ಯವಹಾರವು ನಡೆಯದಂತೆ ನೋಡಿಕೊಳ್ಳಬೇಕೆನ್ನುವುದೇ ಶ್ರೀ ವ್ಯಾಸಮಹರ್ಷಿಗಳ ತಾತ್ಪರ್ಯವಾಗಿದೆ.

''ತನ್ನಂತೆ ಪರರ ಬಗೆದೊಡೆ ಕೈಲಾಸ ನೆರೆಮನೆಯಕ್ಕು ಸರ್ವಜ್ಞ'' ಎನ್ನುವ ಸರ್ವಜ್ಞನ ನುಡಿಯಾದರೂ ಇದೇ ತತ್ತ್ವವನ್ನೇ ಸಾರುತ್ತಿದೆ. ಆದರೆ, ಜಗತ್ತಿನ ಅದೆಷ್ಟೋ ಜೀವಿಗಳು, ಧರ್ಮದ ಈ ಹಿತನುಡಿಗಳನ್ನು ಹಿಂದುಳಿಸಿ, ಮನಬಂದಂತೆ ದುಷ್ಕೃತ್ಯಗಳನ್ನೆಸಗಿ, ಅವುಗಳ ಫಲವಾಗಿ ಅನೇಕ ಜನ್ಮಗಳನ್ನು ತಾಳುತ್ತಾ, ಪ್ರತಿಯೊಂದು ಜನ್ಮದಲ್ಲಿ ಆಧ್ಯಾತ್ಮಿಕ, ಆಧಿದೈವಿಕ ಹಾಗೂ ಆಧಿಭೌತಿಕಗಳೆಂಬ ದುಃಖತ್ರಯಗಳನ್ನು ಅನುಭವಿ ಸುತ್ತ, ವಿಶ್ರಾಂತಿ ಎಂಬುವುದೇ ಇಲ್ಲದೇ, ದುಃಖಸಾಗರವಾದ ಸಂಸಾರದಲ್ಲಿ ಸಂಚರಿಸುತ್ತಲಿದ್ದಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೯ ಜುಲೈ, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ಆಶೀರ್ವಚನ - ೬

ಆಧ್ಯಾತ್ಮಿಕಂ ತು ಪ್ರಥಮಂ ದ್ವಿತೀಯಂ ಚಾಧಿಭೌತಿಕಮ್
ಆಧಿದೈವಿಕಮನ್ಯಚ್ಚ ದುಃಖತ್ರಯಮಿದಂ ಸ್ಮೃತಮ್ (ಸಿ. ಶಿ. ೫.೬೩)

ಶಾಸ್ತ್ರದಲ್ಲಿ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂದು ಮೂರು ವಿಧಗಳಾದ ದುಃಖಗಳು ಪ್ರತಿಪಾದಿಸಲ್ಪಟ್ಟಿವೆ.

ಆಧ್ಯಾತ್ಮಿಕಂ ದ್ವಿಧಾ ಪ್ರೋಕ್ತಂ ಬಾಹ್ಯಾಭ್ಯಂತರಭೇದತಃ ।
ವಾತಪಿತ್ತಾದಿಜಂ ದುಃಖಂ ಬಾಹ್ಯಮಾಧ್ಯಾತ್ಮಿಕಂ ಮತಮ್ ।
ರಾಗದ್ವೇಷಾದಿಸಂಪನ್ನಮಾಂತರಂ ಪರಿಕೀರ್ತ್ಯತೇ (ಸಿ. ಶಿ. ೫.೬೪)

ಆಧ್ಯಾತ್ಮಿಕ ದುಃಖವು ಬಾಹ್ಯ ಮತ್ತು ಅಭ್ಯಂತರವೆಂದು ಎರಡು ಪ್ರಕಾರವಾಗಿದೆ. ಇವುಗಳಲ್ಲಿ ಶರೀರದಲ್ಲಿಯ ವಾತ, ಪಿತ್ತ ಮತ್ತು ಕಫಗಳ ವ್ಯತ್ಯಾಸದಿಂದ ಉತ್ಪನ್ನವಾದ ಜ್ವರಾದಿಗಳ ಸಂತಾಪವು ಬಾಹ್ಯ ಆಧ್ಯಾತ್ಮಿಕ ದುಃಖವೆಂದೂ, ರಾಗ ದ್ವೇಷಾದಿಗಳಿಂದ ಉತ್ಪನ್ನವಾದ ಸಂತಾಪವು ಅಂತರ ಆಧ್ಯಾತ್ಮಿಕ ದುಃಖವೆಂಬುದಾಗಿಯೂ ಹೇಳಲ್ಪಡುತ್ತದೆ.

ಆಧಿಭೌತಿಕಮೇತದ್ಧಿ ದುಃಖಂ ರಾಜಾದಿಭೂತಜಮ್ ।
ಆಧಿದೈವಿಕಮಾಖ್ಯಾತಂ ಗ್ರಹಯಕ್ಷಾದಿಸಂಭವಮ್ (ಸಿ. ಶಿ. ೫.೬೫)

ರಾಜ, ಕಳ್ಳ, ಸಿಂಹ, ಸರ್ಪ ಮೊದಲಾದವುಗಳಿಂದ ಉಂಟಾಗುವ ದುಃಖವು ಆಧಿಭೌತಿಕ ತಾಪವೆನಿಸಿಕೊಳ್ಳುತ್ತದೆ. ಅದರಂತೆ ಭೂತಬೇತಾಳಾದಿಗಳಿಂದ ಉತ್ಪನ್ನ ವಾಗುವ ದುಃಖವು ಆಧಿದೈವಿಕ ದುಃಖವೆಂದು ಕರೆಯಲ್ಪಡುತ್ತದೆ.

''ಅನುಕೂಲವೇದನೀಯಂ, ಸುಖಂ'' ''ಪ್ರತಿಕೂಲವೇದನೀಯಂ ದುಃಖಂ'' ಎನ್ನುವ ಶಾಸ್ತ್ರೋಕ್ತಿಗನುಸಾರವಾಗಿ, ಅನುಕೂಲವಾಗಿ ತೋರುವದೆಲ್ಲವೂ ದುಃಖವು. ಈ ಜಗತ್ತಿನಲ್ಲಿ ಅನುಕೂಲಕ್ಕಿಂತಲೂ ಪ್ರತಿಕೂಲಗಳೇ ವಿಪುಲಗಳಾಗಿರುವವು. ಅಂತೆಯೇ ''ಸಂಸಾರಸಾಗರಂ ದುಃಖಂ'' ಎಂದಿದ್ದಾರೆ ಜ್ಞಾನಿಗಳು. ದುಃಖದಾಯಕ ಸಾಮಗ್ರಿಗಳು ಒಂದೇ ! ಎರಡೇ ! ಹೇಳಲಸಾಧ್ಯಗಳಾಗಿವೆ. ಅಂತೆಯೇ ಶ್ರೀ ನಿಜಗುಣ ಶಿವಯೋಗಿ ಗಳು– ''ನೂರು ಸಾವಿರ ಕೋಟಿಯುಂಟು ಶಂಕರಾ'' ಎಂದಿದ್ದಾರೆ. ಹೀಗೆ ಅಗಣಿತ ವಾಗಿ ತೋರುವ ದುಃಖಗಳನ್ನು, ಶ್ರೀ ಜ॥ ರೇಣುಕ ಭಗವತ್ಪಾದರು ಮುಖ್ಯವಾಗಿ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂದು ಮೂರು ಭಾಗಗಳಲ್ಲಿ ವಿಂಗಡಿಸಿ ದ್ದಾರೆ.

''ಆತ್ಮಾನಂ ಅಧಿಕೃತ್ಯ ಭವತೀತಿ ಆಧ್ಯಾತ್ಮಿಕಮ್'' ಅಂದರೆ ಶರೀರ ಹಾಗೂ ಮನಸ್ಸಿನ ನಿಮಿತ್ತದಿಂದ ಉಂಟಾಗುವ ದುಃಖವನ್ನು ಆಧ್ಯಾತ್ಮಿಕ ದುಃಖವೆನ್ನುವರು. ''ಭೂತಾನಿ ಅಧಿಕೃತ್ಯ ಜಾಯತ ಇತಿ ಆಧಿಭೌತಿಕಮ್'' ಅಂದರೆ ರಾಜ, ಕಳ್ಳ, ಹುಲಿ,

ಸರ್ಪ ಮುಂತಾದ ಪ್ರಾಣಿಗಳಿಂದ ಸಂಭವಿಸುವ ದುಃಖವನ್ನು ಆಧಿಭೌತಿಕ ದುಃಖವೆನ್ನು ತ್ತಾರೆ. ಅದರಂತೆ ''ದೇವಾನ್ ಅಧಿಕೃತ್ಯ ಜಾಯತ ಇತಿ ಆಧಿದೈವಿಕಮ್'' ಅಗ್ನಿ, ವಾಯು, ಯಕ್ಷಾದಿಗಳಿಂದ ಉಂಟಾಗುವ ದುಃಖವನ್ನು ಆಧಿದೈವಿಕ ದುಃಖವೆನ್ನುತ್ತಾರೆ.

ಸುಖ-ದುಃಖಗಳು ಮನಸ್ಸಿನ ಅಸಾಧಾರಣ ಧರ್ಮಗಳಾದ್ದರಿಂದ, ಯಾವುದೇ ನಿಮಿತ್ತದಿಂದ ದುಃಖವುಂಟಾದರೂ ಅದರ ಸಂವೇದನೆಯು ಮನಸ್ಸಿನಲ್ಲಿಯೇ ಉಂಟಾ ಗುತ್ತದೆ ; ಅಂದರೆ ಕೆಲವು ದುಃಖಗಳು ಮನೋಮಾತ್ರದಿಂದ ಉಂಟಾಗುತ್ತವೆ ; ಅವು ಗಳನ್ನು ಕೇವಲ ಮಾನಸಿಕಗಳೆನ್ನಬಹುದು. ಇನ್ನು ಕೆಲವು ಬಾಹ್ಯ ನಿಮಿತ್ತಗಳನ್ನಪೇಕ್ಷಿಸಿ ಮನಸ್ಸಿನಲ್ಲಿ ಉಂಟಾಗುತ್ತವೆ; ಈ ದುಃಖಗಳನ್ನು ಬಾಹ್ಯದುಃಖಗಳೆನ್ನಬಹುದು.

ಪ್ರಧಾನಗಳಾದ ಈ ಮೂರು ದುಃಖಗಳಲ್ಲಿ ಮೊದಲಿನದಾದ ಆಧ್ಯಾತ್ಮಿಕ ದುಃಖವು ಬಾಹ್ಯ ಆಧ್ಯಾತ್ಮಿಕ ದುಃಖ ಮತ್ತು ಆಂತರ ಆಧ್ಯಾತ್ಮಿಕ ದುಃಖವೆಂದು ಎರಡು ವಿಧವಾಗಿರುತ್ತದೆ. ''ವಾತಪಿತ್ತಾದಿಜಂ ದುಃಖಂ ಬಾಹ್ಯಮಾಧ್ಯಾತ್ಮಿಕಂ ಮತಮ್'' ಎನ್ನುವ ಶ್ರೀ ಜ. ರೇಣುಕಭಗವತ್ಪಾದರ ಆದೇಶದಂತೆ, ಸ್ಥೂಲ ಶರೀರದಲ್ಲಿಯ ವಾತ, ಪಿತ್ತ ಹಾಗೂ ಕಫಗಳ ವ್ಯತ್ಯಾಸದಿಂದ ಬರುವ ಜ್ವರಾದಿಗಳಿಂದುಂಟಾಗುವ ದುಃಖವನ್ನು ಬಾಹ್ಯ ಆಧ್ಯಾತ್ಮಿಕ ದುಃಖವೆನ್ನುವರು. ಶ್ರೀ ನಿಜಗುಣ ಶಿವಯೋಗಿಗಳು-

ತನು ರುಜೆಯಾಗರವತಿದುಃಖಸಾಗರ ।
ವನುತಾಪ ಕ್ಲೇಷಾದಿಗಳ ಗೊತ್ತು ॥
ತನುಮೂಲವದರಿಂದಖಿಳ ದುಃಖವೆಲ್ಲಕ್ಕೆ ।
ತನುಭಾವವಳಿಯೆ ದುಃಖದ ಕೇಡು ॥

(ಪರಮಾನುವವ ಬೋಧೆ ; ೧-೨೦-೫)

ಎನ್ನುವ ಪದ್ಯದಲ್ಲಿ, ರೋಗಗಳ ತವರುಮನೆಯಾದ ಶರೀರವು ದುಃಖಹೇತು ವೆಂಬುದನ್ನು ಬಹು ಸುಂದರವಾಗಿ ಪ್ರತಿಪಾದಿಸಿದ್ದಾರೆ. ಆಯುರ್ವೇದ ಶಾಸ್ತ್ರದಲ್ಲಿ ವಾತ, ಪಿತ್ತ ಹಾಗೂ ಕಫಗಳ ವ್ಯತ್ಯಾಸದಿಂದ ಉಂಟಾಗುವ ರೋಗಗಳನ್ನು ಧಾತುಜನ್ಯ ಗಳೆಂದು ಕರೆಯುತ್ತಾರೆ. ಇವುಗಳಲ್ಲಿ ವಾತ ಪ್ರಕೋಪದಿಂದ ೮೧, ಪಿತ್ತ ಪ್ರಕೋಪದಿಂದ ೬೪ ಹಾಗೂ ಕಫ ಪ್ರಕೋಪದಿಂದ ೨೧೫- ಹೀಗೆ ಒಟ್ಟಾರೆ ೩೬೦ ರೋಗಗಳು ಪ್ರತಿಪಾದಿಸಲ್ಪಟ್ಟಿರುತ್ತವೆ. ಇನ್ನು ಕರ್ಮಜನ್ಯಗಳಾದವು ೫ ರೋಗಗಳು ; ಈ ತೆರನಾಗಿ ಒಂದು ವರ್ಷದ ೩೬೫ ದಿವಸಕ್ಕೆ ೩೬೫ ರೋಗಗಳಿರುವಾಗ, ಮನುಷ್ಯನು ಶರೀರ ಧರಿಸಿಕೊಂಡು ನಿರೋಗಿಯಾಗಿರುವದು ಬಹು ಕಷ್ಟ ಸಾಧ್ಯವಾದದ್ದು. ತೋಟದಲ್ಲಿ ಒಂದಿಲ್ಲೊಂದು ಬಗೆಯ ಕಾಯಿ ಪಲ್ಲೆಯ ಬೆಳೆಯು ಬೆಳೆಯುತ್ತಿರುವಂತೆ, ಶರೀರದಲ್ಲಿ ಒಂದಿಲ್ಲೊಂದು ರೋಗವು ಇದ್ದೇ ಇರುತ್ತದೆ.

ಹೀಗೆ ರೋಗದಾಗರವಾದ ಶರೀರವನ್ನಾಶ್ರಯಿಸಿದ ಜೀವಾತ್ಮನಿಗೆ ಸುಖದ ಪ್ರಾಪ್ತಿ ಯಾಗಲಾರದೆಂದು ವಿಚಾರಿಸಿದ ನ್ಯಾಯಶಾಸ್ತ್ರ ಪ್ರಣೇತನಾದ ಗೌತಮ ಋಷಿಯು, ಇಪ್ಪತ್ತೊಂದು ಪ್ರಕಾರದ ದುಃಖಗಳಲ್ಲಿ ಶರೀರವನ್ನೇ ಪ್ರಥಮವಾಗಿ ಪರಿಗಣಿಸಿದ್ದಾನೆ. ಸುಖ-ದುಃಖಗಳ ಭೋಗ ಸಾಧನವಾದ ಶರೀರವಿರುವವರಿಗೆ ದುಃಖದ ಅಭಾವವಾಗು

ವದು ಸುಲಭದ ಮಾತಲ್ಲ ; ಆದ್ದರಿಂದ ಒಂದಿಲ್ಲೊಂದು ಬಗೆಯ ರೋಗಾಶ್ರಯವಾದ ಶರೀರವು, ಬಾಹ್ಯವಾದ ಆಧ್ಯಾತ್ಮಿಕ ದುಃಖಕ್ಕೆ ಕಾರಣವಾಗಿರುತ್ತದೆ.

ಇನ್ನು ''ರಾಗದ್ವೇಷಾದಿಸಂಪನ್ನಮಾಂತರಂ ಪರಿಕೀರ್ತ್ಯತೇ'' ಎನ್ನುವ ಶ್ರೀ ಭಗವತ್ಪಾದರ ಉಪದೇಶದಲ್ಲಿ, ಆಂತರ ಆಧ್ಯಾತ್ಮಿಕ ದುಃಖವು ಅತಿ ಸೂಕ್ಷ್ಮವಾಗಿ ನಿರೂಪಿಸಲ್ಪಟ್ಟಿದೆ. ಶಾರೀರಿಕಗಳಾದ ಜ್ವರಾದಿಗಳು ಹೇಗೆ ದುಃಖ ಕಾರಣಗಳೋ, ಹಾಗೆಯೇ ಮನಸ್ಸಿನ ರೋಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಭಯ, ಈರ್ಷ್ಯಾ, ದ್ವೇಷ, ವಿಷಾದ ಮತ್ತು ಸಂಶಯಗಳಿಂದ ಮನುಷ್ಯನು ದಿನಂಪ್ರತಿ ದುಃಖ ವನ್ನನುಭವಿಸುತ್ತಾನೆ.

ಶರೀರದಲ್ಲಿ ಜ್ವರಾದಿರೋಗಗಳು ಸಂಭವಿಸಿದಾಗ, ಜೀವಾತ್ಮರು ಆ ರೋಗಗಳ ನಿವೃತ್ತಿಗಾಗಿ ಔಷಧಗಳ ಸೇವನೆಯನ್ನೂ ಹಾಗೂ ಯೋಗ್ಯವಾದ ಪಥ್ಯವನ್ನೂ ಪರಿಶೀಲಿಸುವದನ್ನು ನಾವು ನೋಡುತ್ತೇವೆ. ಆದರೆ ಮನಸ್ಸಿನಲ್ಲಿಯ ಈ ಕಾಮಾದಿಗಳೇ ವ್ಯಾಧಿಗಳೆಂಬ ಅರಿವಾಗದಿರುವದರಿಂದ, ಅವುಗಳ ಚಿಕಿತ್ಸೆಯನ್ನು ಮಾಡಿಕೊಳ್ಳದೇ, ಅದೆಷ್ಟೋ ಜೀವಿಗಳು ತಮ್ಮ ಜೀವನವನ್ನೇ ಅವುಗಳಿಗೆ ಬಲಿಮಾಡಿಕೊಳ್ಳುತ್ತಾರೆ. ''ಹೆಣ್ಣಿಗಾಗಿ ಸತ್ತವರು ಕೋಟಿ, ಹೊನ್ನಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ'' ಎಂಬ ಶರಣರ ಅನುಭವದ ನುಡಿಯು ಈ ಮಾತನ್ನು ಸಮರ್ಥಿಸುತ್ತದೆ. ಇದನ್ನೆಲ್ಲ ಸೂಕ್ಷ್ಮವಾಗಿ ವಿಚಾರಿಸಿದಾಗ, ಮನಸ್ಸಿನ ರೋಗಗಳಾದ ಕಾಮ, ಕ್ರೋಧಾದಿಗಳ ಉಲ್ಬಣಸ್ಥಿತಿಯು ದೃಷ್ಟಿಗೋಚರವಾಗುವದು. ಆದಕಾರಣ, ಆಂತರಿಕ ರೋಗ ಗಳಾದ ಈ ಕಾಮಾದಿಗಳ ಸ್ವರೂಪವನ್ನು ಪರೀಕ್ಷಿಸಿ, ನಂತರ ಅವುಗಳ ಪ್ರಶಮನೋಪಾಯಗಳನ್ನು ವಿಚಾರಿಸೋಣ.

ಕಾಮ– ಮನಸ್ಸಿನ ರೋಗಗಳಲ್ಲಿ ಅತಿ ಪ್ರಬಲವಾದ ಹಾಗೂ ಉಳಿದೆಲ್ಲ ಮಾನಸಿಕ ರೋಗಗಳಿಗೆ ಕಾರಣವಾದ ರೋಗವೇ ಕಾಮವು. ಕಾಮಶಬ್ದದ ಸಾಮಾನ್ಯಾರ್ಥವು ''ಇಚ್ಛಾ'' ಎಂದಾಗುವದು. ಅದನ್ನೇ ವೈಶೇಷಿಕ ಶಾಸ್ತ್ರ ಪ್ರಶಸ್ತ ಪಾದ ಭಾಷ್ಯದಲ್ಲಿ ಶ್ರೀ ಪ್ರಶಸ್ತಪಾದಾಚಾರ್ಯರು, ''ಕಾಮೋಭಿಲಾಷಃ, ರಾಗಃ, ಸಂಕಲ್ಪಃ, ಕಾರುಣ್ಯಂ, ವೈರಾಗ್ಯಮುಪಧಾ–ಭಾವ ಇತ್ಯೇವಮಾದಯ ಇಚ್ಛಾಭೇದಾಃ'' (ಪ್ರ.ಪಾ. ಭಾಷ್ಯ ಪುಟ ೬೩೫)– ಹೀಗೆ ಕಾಮ, ಅಭಿಲಾಷ, ರಾಗ, ಸಂಕಲ್ಪ, ಕಾರುಣ್ಯ, ವೈರಾಗ್ಯ, ಉಪಧಾ ಮತ್ತು ಭಾವ ಇವುಗಳು ಇಚ್ಛೆಯ ಪ್ರಭೇದಗಳೆಂದು ತಿಳಿಸಿ, ಅವುಗಳಲ್ಲಿ ಕಾಮವನ್ನೂ ಗ್ರಹಿಸಿರುವದರಿಂದ, ಕಾಮವಾದರೂ ಒಂದು ತರಹದ ಇಚ್ಛೆ ಎಂಬುದು ಸ್ಪಷ್ಟವಾಗುವದು.

''ಮೈಥುನೇಚ್ಛಾ ಕಾಮಃ'' ಎನ್ನುವ ಪ್ರಶಸ್ತಪಾದಾಚಾರ್ಯರ ವಚನಾನು ಸಾರವಾಗಿ, ಯಾವ ವಿಶೇಷಣವೂ ಇಲ್ಲದಿರುವ ಕಾಮ ಶಬ್ದದಿಂದ –ಮೈಥುನ (ಸ್ತ್ರೀಸಂಗ)ದ ಅಪೇಕ್ಷೆ ಎಂಬ ಅರ್ಥವು ಪ್ರತೀತವಾಗುವದು.

ನ ರಾತ್ರೌ ವಿಂದತೇ ನಿದ್ರಾಂ ಕಾಮಾಗ್ನಿ ಪರಿಪೀಡಿತಃ |
ದಿವಾ ಪಿ ಚ ಕುತಃ ಸೌಖ್ಯಮರ್ಥೋಪಾರ್ಜನಚಿಂತಯಾ ? ||

ಎನ್ನುವ ಶಿವಧರ್ಮೋತ್ತರದ ವಚನಾನುಸಾರವಾಗಿ, ಸ್ತ್ರೀಸಂಗವನ್ನು ಮಾಡ ಬೇಕೆನ್ನುವ ಉತ್ಕಟ ಅಪೇಕ್ಷೆಯುಳ್ಳ ಮನುಷ್ಯನಿಗೆ, ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ, ಮಾನಸಿಕ ಶಾಂತಿಯು ದೊರೆಯಲಾರದು. ಈ ಬಯಕೆಯು ಮನುಷ್ಯನ ವಿವೇಕವನ್ನು ಹಾಳುಮಾಡಿ, ಅವನಿಂದ ಮಹದನರ್ಥವನ್ನು ಮಾಡಿಸುತ್ತದೆ.

ಅಹಲ್ಯಾಯೈ ಜಾರಃ ಸುರಪತಿರಭೂದಾತ್ಮತನಯಾಂ ।
ಪ್ರಜಾನಾಥೋಽಯಾಸೀದಭಜತ ಗುರೋರಿಂದುರಬಲಾಮ್ ।
ಇತಿ ಪ್ರಾಯಃ ಕೋ ವಾ ನ ಪದಮಪಥೇ ಕಾರ್ಯತಮಯಾ ।
ಶ್ರಮೋ ಮದ್ಬಾಣಾನಾಂ ಕ ಇವ ಭುವನೋನ್ಮಾಥವಿಧಿಷು ॥

(ಪ್ರಬೋಧ ಚಂದ್ರೋದಯ ; ೧-೧೪)

ದೇವೇಂದ್ರನು ಅಹಲ್ಯೆಯನ್ನೂ, ಬ್ರಹ್ಮನು ತನ್ನ ಮಗಳಾದ ಶಾರದೆಯನ್ನೂ ಮತ್ತು ಚಂದ್ರನು ತನ್ನ ಗುರುಪತ್ನಿಯನ್ನೂ ಮೋಹಿಸಿದ್ದು ನನ್ನ ಬಾಣಗಳ ಪ್ರಭಾವ ದಿಂದಲೇ-ಎನ್ನುವ ಮನ್ಮಥನ ಪೌರುಷದ ವಾಣಿಯನ್ನು ಕೇಳಿದಾಗ, ಕಾಮನ ಅನರ್ಥ ಕಾರಿತ್ವವು ಕಂಡುಬರುತ್ತದೆ.

ತರಗೆಲೆ, ನೀರು ಹಾಗೂ ವಾಯುಗಳನ್ನೇ ಆಹಾರವಾಗಿ ಮಾಡಿಕೊಂಡು, ಯೋಗಸಾಧನೆಯಲ್ಲಿ ಆಸಕ್ತರಾದ ವಿಶ್ವಾಮಿತ್ರ, ಪರಾಶರಾದಿ ಋಷಿಗಳೂ ಸಹ ಮೋಹಾಸಕ್ತರಾಗಿ, ಸ್ತ್ರೀಪಾಶದಲ್ಲಿ ಬದ್ಧರಾದರೆಂಬ ಪುರಾಣಪ್ರಸಿದ್ಧವಾದ ವಿಷಯ ವನ್ನವಲೋಕಿಸಿದಾಗ, ಕಾಮದ ಪ್ರಾಬಲ್ಯವು ಕಂಡುಬರುವದು. ಕವಿಕುಲ ಗುರುವಾದ ಕಾಳಿದಾಸನು ತನ್ನ ಅಮೂಲ್ಯ ಕೃತಿಯಾದ ಮೇಘದೂತ ಕಾವ್ಯದಲ್ಲಿ ''ಕಾಮಾರ್ತಾ ಹಿ ಪ್ರಕೃತಿಕೃಪಣಾಶ್ಚೇತನಾಚೇತನೇಷು'' ಎಂಬ ಪದ್ಯದಲ್ಲಿ-ಪತ್ನಿಯ ವಿರಹತಾಪದಲ್ಲಿ ತಪ್ತನಾದ ಯಕ್ಷನು, ಒಬ್ಬ ಜಾಣ ವ್ಯಕ್ತಿಯಿಂದ ತನ್ನ ಹೆಂಡತಿಗೆ ಕಳುಹಿಸಬೇಕಾದ ಸಂದೇಶವನ್ನು, ಅಚೇತನವಾದ ಮೇಘದಿಂದ ಕಳುಹಿಸುವದನ್ನು ನೋಡಿ, ಕಾಮಾಂಧ ನಾದವನಿಗೆ ಚೇತನ-ಅಚೇತನಗಳ ಪರಿಕಲ್ಪನೆಯೂ ಇರುವುದಿಲ್ಲವೆಂಬ ಬಹು ಮಾರ್ಮಿಕವಾದ ರಹಸ್ಯವನ್ನು ತಿಳಿಯಪಡಿಸಿದ್ದಾನೆ.

''ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ'' ಎನ್ನುವ ಅನುಭವಿಕರ ನುಡಿಯು, ಕಾಮವು ವಿದ್ವಾಂಸರನ್ನೂ ಸಹ ವಿಧ್ವಂಸಗೊಳಿಸುವದೆಂಬುದನ್ನು ಖಚಿತ ಪಡಿಸುತ್ತದೆ. ದಿಲ್ಲಿಯ ಬಾದಶಹನಲ್ಲಿ ಶ್ರೀ ಜಗನ್ನಾಥನೆಂಬ ಬ್ರಾಹ್ಮಣ ಪಂಡಿತನು ಆಸ್ಥಾನ ವಿದ್ವಾಂಸನಾಗಿದ್ದನು. ಪಂಡಿತಾಗ್ರಗಣ್ಯನಾದ ಜಗನ್ನಾಥನು ಆಶುಕವಿಯೂ, ರಾಜನ ಪ್ರೀತಿಯ ಕವಿಯೂ ಆಗಿದ್ದನು. ಒಂದು ಸಾರೆ ಆಸ್ಥಾನದಲ್ಲಿ ರಾಜನೊಡನೆ ಶ್ರೀ ಜಗನ್ನಾಥನು ಚರ್ಚಿಸುತ್ತ ಕುಳಿತಿದ್ದಾಗ, ''ಲವಂಗಿ'' ಎನ್ನುವ ಓರ್ವ ಮುಸಲ್ಮಾನ ತರುಣಿಯು, ಬಂಗಾರದ ಬಿಂದಿಗೆಯಲ್ಲಿ ತಣ್ಣೀರನ್ನು ತುಂಬಿ ತಂದು ರಾಜನಿಗೆ ಹಾಗೂ ಅಲ್ಲಿಯ ಇನ್ನಿತರರಿಗೆ ಕುಡಿಸಿ, ಖಾಲಿಯಾದ ಕೊಡವನ್ನು ತುಂಬಿದ ಕೊಡದಂತೆ ತಲೆಯಮೇಲಿರಿಸಿಕೊಂಡು ಹೋಗುವದನ್ನು ನೋಡಿದ ರಾಜನು, ಜಗನ್ನಾಥನತ್ತ ಹೊರಳಿ ಹೇಳುತ್ತಾನೆ- ಹೇ ಕವಿಶ್ರೇಷ್ಠನೇ ! ಈ ಲವಂಗಿಯು ಖಾಲಿಯಾದ ಕೊಡವನ್ನು

ತುಂಬಿದ ಕೊಡದಂತೆ ತಲೆಯಮೇಲೆ ಇರಿಸಿಕೊಂಡು ಹೊರಟಿದ್ದಾಳೆ ; ಕಾರಣ ಈ ಕೊಡದಲ್ಲಿ ಏನು ತುಂಬಿದೆ ? ವರ್ಣಿಸು– ಎಂದನು. ಆಶುಕವಿಯಾದ ಜಗನ್ನಾಥನು ತತ್‌ಕ್ಷಣದಲ್ಲಿಯೇ ಪದ್ಯವನ್ನು ರಚಿಸಿ ಹೇಳಿದ–

ಇಯಂ ಸುಸ್ತನೀ ಮಸ್ತಕನ್ಯಸ್ತಕುಂಭಾ ।
ಕುಸುಂಭಾರುಣಂ ಚಾರು ಚೇಲಂ ವಸಾನಾ ।
ಸಮಸ್ತಸ್ಯ ಲೋಕಸ್ಯ ಚೇತಃ ಪ್ರವೃತ್ತಿಂ
ಗೃಹೀತ್ವಾ ಘಟೇ ನ್ಯಸ್ಯ ಯಾತೀವ ಭಾತಿ ॥

ಹೇ ಮಹಾರಾಜನೇ ! ಸುಂದರ ಸ್ತನಗಳಿಂದ ಶುಶೋಭಿತಳಾದ, ಹಳದೀ ಬಣ್ಣದ ಸೀರೆಯನ್ನುಟ್ಟ ಇವಳ ತಲೆಯಮೇಲಿನ ಕೊಡವು, ನೀರಿನಿಂದ ಖಾಲಿ ಆಗಿದ್ದರೂ, ಸಭ್ಯರ ಮನೋವೃತ್ತಿಗಳನ್ನು ತನ್ನಲ್ಲಿ ತುಂಬಿಕೊಂಡಿದೆ. ಅರ್ಥಾತ್, ಎಲ್ಲರೂ ಅವಳತ್ತ ಆಕರ್ಷಿತರಾಗಿರುವುದರಿಂದ, ಎಲ್ಲರ ಮನಸ್ಸನ್ನೂ ಆ ಕೊಡದಲ್ಲಿ ತುಂಬಿಕೊಂಡು ಹೊರಟಿದ್ದಾಳೆ.

ಕವಿಯ ಅದ್ಭುತವಾದ ಈ ಕಲ್ಪನಾಶಕ್ತಿಗೆ ಮಾರುಹೋದ ಮಹಾರಾಜನು ಸಂತುಷ್ಟನಾಗಿ, ನಿನಗೆ ಏನು ಬೇಕು ? ಬೇಡು –ಎಂದಾಗ, ಕವಿಯಾದರೂ ಅವಳಿಂದ ಆಕರ್ಷಿತನಾಗಿರುವದರಿಂದ, ತನ್ನ ಅಭಿಪ್ರಾಯವನ್ನು ಮತ್ತೊಂದು ಪದ್ಯದಲ್ಲಿ ಹೀಗೆ ವರ್ಣಿಸಿದನು.

ನ ಯಾಚೇ ಗಜಾಲಿಂ ನ ವಾ ವಾಜಿರಾಜಂ
ನ ವಿತ್ತೇಷು ಚಿತ್ತಂ ಮದೀಯಂ ಕದಾಚಿತ್ ।
ಇಯಂ ಸುಸ್ತನೀ ಮಸ್ತಕನ್ಯಸ್ತಕುಂಭಾ
ಲವಂಗೀ ಕುರಂಗೀದೃಗಂಗೀಕರೋತು ॥

ಹೇ ರಾಜನ್ ! ನನಗೆ ನಿನ್ನಲ್ಲಿಯ ಆನೆಗಳಾಗಲಿ, ಕುದುರೆಗಳಾಗಲಿ ಬೇಕಾಗಿಲ್ಲ, ಸಂಪತ್ತಿನ ಅಪೇಕ್ಷೆಯಂತೂ ನನಗೆ ಇಲ್ಲವೇ ಇಲ್ಲ. ಆದರೆ, ಮಸ್ತಕದ ಮೇಲೆ ಕುಂಭವನ್ನಿಟ್ಟು ಕೊಂಡು ಚಿಗರಿಯ ದೃಷ್ಟಿಯಂತೆ ವಿಲೋಲ ದೃಷ್ಟಿಯನ್ನು ಬೀರುತ್ತಹೋಗುತ್ತಿರುವ ಈ ಲವಂಗಿಯನ್ನು ಮಾತ್ರ ಅನುಗ್ರಹಿಸಿದರೆ ಸಾಕು.

ಶ್ರೀ ಜಗನ್ನಾಥನ ಈ ಕುತ್ಸಿತ ಅಭಿಲಾಷೆಯನ್ನು ಕೇಳಿದ ರಾಜನು, ಹೇ ಬ್ರಾಹ್ಮಣೋತ್ತಮನೆ ! ಇವಳು ಮುಸಲ್ಮಾನ ಜಾತಿಯವಳು, ನಿನಗೆ ಯೋಗ್ಯಳಲ್ಲ, ಕಾರಣ ಬೇರೆ ಏನನ್ನಾದರೂ ಬೇಡು– ಎಂದಾಗ, ಲವಂಗಿಯಲ್ಲಿ ಆಸಕ್ತನಾದ ಜಗನ್ನಾಥನು ತನ್ನ ಕುಲ, ಗೋತ್ರ, ಪಾಂಡಿತ್ಯ ಎಲ್ಲವನ್ನೂ ಮರೆತು, ಪುನಃ ಅವಳೇ ಬೇಕು–ಎಂಬ ಅಭಿಪ್ರಾಯ ವನ್ನು ಮತ್ತೊಂದು ಪದ್ಯದಲ್ಲಿ ಹೀಗೆ ವರ್ಣಿಸಿದ್ದಾನೆ–

ಯವನೀ ನವನೀತಕೋಮಾಲಾಂಗೀ
ಶಯನೀಯೇ ಯದಿ ಲಭ್ಯತೇ ಕದಾಚಿತ್ ।
ಅವನೀತಲಮೇವ ಸಾಧು ಮನ್ಯೇ
ನವನೀ ಮಾಘವನೀ ವಿನೋದಹೇತುಃ ॥

ಹೇ ರಾಜನ್ ! ನವನೀತ ಕೋಮಲಾಂಗಿಯಾದ ಈ ಲವಂಗಿಯು, ಮುಸಲ್ಮಾನ ಕನ್ಯೆಯಾಗಿದ್ದರೂ, ಅದಾವ ದೋಷವಿಲ್ಲ, ಅವಳ ಪ್ರಾಪ್ತಿಯಿಂದ ನನಗಾಗುವ ಆನಂದವು ಇಂದ್ರನ ನಂದನವನದಲ್ಲಿಯೂ ದೊರೆಯಲಾರದು. ಈ ತೆರನಾಗಿ ಹೇಳಿ ರಾಜನಿಂದ ಲವಂಗಿಯನ್ನು ಪಡೆದ ಜಗನ್ನಾಥನು, ಅವಳೊಡನೆ ವಿವಾಹಿತನಾದಾಗ, ಬ್ರಾಹ್ಮಣ ಸಮಾಜವು ಆತನನ್ನು ಬಹಿಷ್ಕರಿಸಿತು. ಅನೇಕ ಸದ್ಗುಣಗಳಿದ್ದರೂ, ಕಾಮಾಸಕ್ತಿ ಎಂಬ ದುರ್ಗುಣದ ಪ್ರಭಾವದಿಂದ, ಸಮಾಜ, ಪಂಡಿತರು, ರಾಜರು ಹಾಗೂ ಸಂತರು ಇವರೆಲ್ಲರಿಂದ ತಿರಸ್ಕೃತನಾಗಿ, ದಿಕ್ಕು ತೋಚದೇ ಗಾಬರಿಯಾಗಿ, ಕಾಮಾಂಧತೆ ತೊಲಗಿದಾಗ, ಪಶ್ಚಾತ್ತಾಪಗೊಂಡ ಶ್ರೀ ಜಗನ್ನಾಥನು, ಅನ್ಯರಾರಲ್ಲಿಯೂ ಶರಣಾಗತಿ ದೊರೆಯದಿದ್ದಾಗ, ಅಗತಿಕ ಗತಿಕನಾಗಿ ಕಾಶಿಗೆ ಬಂದು, ಪಾಪನಾಶಿನಿಯಾದ ಗಂಗಾದೇವಿಗೆ ಶರಣಾಗತನಾಗಿ, ''ಗಂಗಾಲಹರೀ'' ಎಂಬ ಭಕ್ತಿ ಕಾವ್ಯವನ್ನು ಬರೆದು, ದೋಷಮುಕ್ತನಾದನೆಂಬ ಕಥೆಯು ಪಂಡಿತಸಮಾಜದಲ್ಲಿ ಸುಪ್ರಸಿದ್ಧವಾಗಿದೆ.

ಸ್ತ್ರೀಸಂಗಾಸಕ್ತಿ ಎಂಬ ಕಾಮವು ಮನುಷ್ಯರ ವಿವೇಕವನ್ನು ಹಾಳುಮಾಡಿ, ಸರ್ವನಾಶಕ್ಕೆ ಕಾರಣವಾಗುವದರಿಂದ, ವಿವೇಕಿಯಾದವನು, ಅದರಿಂದ ದೂರವಿರಲು ಪ್ರಯತ್ನಿಸಬೇಕು. ಅಂತೆಯೇ, ಶ್ರೀ ನಿಜಗುಣ ಶಿವಯೋಗಿಗಳು ಜೀವ ಸಂಭೋದನ ಸ್ಥಲದಲ್ಲಿ–ಎಲೈ ಜೀವನೇ ! ಈ ಕಾಮವು ನಿನ್ನ ಸುಗುಣ ಸಂತತಿಯನ್ನು ನಿಗಮಾದಿ ವಿಧಿಯನು, ಮಿಗೆ ತಪವನು, ತನಗಹ ಸಿದ್ಧಿಗಳನು, ಜಗದ ಪೂಜ್ಯತೆಯನು, ಸುಂದರ ವಾದ ಶರೀರವನು, ಹಿರಿಯರ ಒಲವನು, ರಾಜರ ಮನ್ನಣೆಯನು, ತನಗೆ ಮುಂದೊದಗುವ ಮುನಿ–ದೇವ–ಗಣಪದವಿಯನು, ರುದ್ರೇಶ್ವರ ಸದಾಶಿವ ಭಾವನೆಯನು ಮತ್ತು ಘನ ಶಂಭುಲಿಂಗವಾಗಿಹ ಮುಕ್ತಿ ಸುಖವನು ಕೆಡಿಸುವದರಿಂದ, ಅದನ್ನು ಬಿಡಬೇಕೆಂಬು ದಾಗಿ, ಬಹು ಹೃದಯಂಗಮವಾಗಿ ತಿಳಿಯಪಡಿಸಿದ್ದಾರೆ.

''ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ'' ಎನ್ನುವ ಯಯಾತಿ ಮಹಾರಾಜನ ಅನುಭವದ ನುಡಿಯಂತೆ, ಸ್ತ್ರೀಸಂಗವನ್ನು ಮಾಡಿ, ಆ ಅಭಿಲಾಷೆಯನ್ನು ತೃಪ್ತಿಪಡಿಸುವದು ಯಾರಿಂದಲೂ ಸಾಧ್ಯವಿಲ್ಲ. ಅಗ್ನಿಯಲ್ಲಿ ತುಪ್ಪವನ್ನು ಸುರಿದಂತೆ, ಅದರ ಜ್ವಾಲೆಗಳು ಪ್ರಜ್ವಲಗೊಳ್ಳುವಂತೆ, ಕಾಮದ ಉಪಭೋಗದಿಂದ ಕಾಮದ ಸಂತೃಪ್ತಿಯಾಗದೇ, ಅದು ಮತ್ತಷ್ಟು ಪ್ರಬಲಗೊಳ್ಳುವದು. ಆದಕಾರಣ, ಶಮೆ, ದಮೆಗಳೆಂಬ ಅಂತರಿಂದ್ರಿಯ ಮತ್ತು ಬಹಿರಿಂದ್ರಿಯಗಳ ನಿಗ್ರಹಗಳಿಂದ ಕಾಮವನ್ನು ನಿಗ್ರಹಿಸಬೇಕು.

ಮೈಥುನದ ಇಚ್ಛೆಯು ಕಾಮವೆನಿಸಿಕೊಂಡಂತೆ, ಉಳಿದ ವಿಷಯಗಳ ಇಚ್ಛೆಗಳು ವಿಭಿನ್ನನಾಮಗಳನ್ನು ಪಡೆಯುತ್ತವೆ.

**ಅಭಿಲಾಷೆ :** ''ಅಭ್ಯವಹಾರೇಚ್ಛಾಽಭಿಲಾಷಃ'' ಅಭಿಲಾಷೆಯು ಇಚ್ಛೆಯ ಒಂದು ರೂಪವು. ಊಟಮಾಡಬೇಕೆನ್ನುವ ಇಚ್ಛೆಗೆ ಅಭಿಲಾಷೆಯನ್ನುತ್ತಾರೆ. ಅಂತೆಯೇ ಊಟದ ವಿಷಯವಾಗಿ ಕೇಳುವಾಗ, ನಿಮಗೆ ಯಾವ ಪದಾರ್ಥದ ಅಭಿಲಾಷೆ ಇದೆ ? ಎಂಬುದಾಗಿ ಕೇಳುವ ಪರಿಪಾಟಿಯುಂಟು.

**ರಾಗ :** ''ಪುನಃ ಪುನರ್ವಿಷಯಾನುರಂಜನೇಚ್ಛಾ ರಾಗಃ'' ಶಬ್ದ, ಸ್ಪರ್ಶ, ರೂಪ,

ರಸ ಮತ್ತು ಗಂಧಗಳೆಂಬ ಪಂಚವಿಷಯಗಳನ್ನು ಪುನಃ ಪುನಃ ಭೋಗಿಸಬೇಕೆಂಬ ಪ್ರಬಲವಾದ ಮಾನಸಿಕ ವೃತ್ತಿಗೆ ರಾಗವೆನ್ನುತ್ತಾರೆ. ಇದಾದರೂ ಇಚ್ಛೆಯ ಇನ್ನೊಂದು ರೂಪವಾಗಿದೆ.

ಸಂಕಲ್ಪ : ''ಆಸನ್ನಕ್ರಿಯೇಚ್ಛಾ ಸಂಕಲ್ಪಃ'' ಭವಿಷ್ಯ ಕಾರ್ಯಗಳನ್ನು ಸಂಪಾದಿಸುವ ಇಚ್ಛೆಯೇ ಸಂಕಲ್ಪವು. ಮನುಷ್ಯನು ಯಾವುದೇ ಕಾರ್ಯವನ್ನು ಪ್ರಾರಂಭಿಸುವ ಮೊದಲು, ಮನಸ್ಸಿನಲ್ಲಿ ಸಂಕಲ್ಪವನ್ನು ಮಾಡುತ್ತಾನೆ. ಮುಂದೆ ಸಂಕಲ್ಪಾನುಸಾರವಾಗಿ ಕಾರ್ಯಮಾಡುವದರಿಂದ, ಆಗಾಮಿ ಕರ್ಮಗಳ ಕರ್ತೃತ್ವ ಅಪೇಕ್ಷೆಯೇ ಸಂಕಲ್ಪವೆನಿಸಿ ಕೊಳ್ಳುವದು.

ಕಾರುಣ್ಯಂ : ''ಸ್ವಾರ್ಥಮನಪೇಕ್ಷ್ಯ ಪರದುಃಖಪ್ರಹಾಣೇಚ್ಛಾ ಕಾರುಣ್ಯಮ್''– ತನ್ನ ಯಾವುದೇ ಸ್ವಾರ್ಥವಿಲ್ಲದೇ, ಪರರ ದುಃಖವನ್ನು ದೂರ ಮಾಡಬೇಕೆನ್ನುವ ಬಯಕೆಯನ್ನು ಕಾರುಣ್ಯವೆನ್ನುತ್ತಾರೆ. ಇದಾದರೂ ಇಚ್ಛೆಯ ಒಂದು ರೂಪವಾಗಿದೆ.

ವೈರಾಗ್ಯಂ : ''ಮೋಕ್ಷದರ್ಶನಾದ್ ವಿಷಯತ್ಯಾಗೇಚ್ಛಾ ವೈರಾಗ್ಯಂ'' ಶಬ್ದಾದಿ ವಿಷಯಗಳಲ್ಲಿಯ ದೋಷವನ್ನು ಅರಿತು, ಅವುಗಳನ್ನು ತ್ಯಜಿಸಬೇಕೆನ್ನುವ ಅಪೇಕ್ಷೆಯನ್ನು ವೈರಾಗ್ಯವೆನ್ನುತ್ತಾರೆ.

ಉಪಧಾ : ''ಪರವಂಚನೇಚ್ಛಾ ಉಪಧಾ'' ಅನ್ಯರನ್ನು ಮೋಸಗೊಳಿಸಬೇಕೆಂಬ ಬಯಕೆಯನ್ನು ''ಉಪಧಾ'' ಎನ್ನುತ್ತಾರೆ.

ಭಾವ : ''ಅಂತರ್ನಿಗೂಢೇಚ್ಛಾ ಭಾವಃ'' ಅತಿಗೂಢವಾದ ಇಚ್ಛೆಯನ್ನು ಭಾವವೆನ್ನುತ್ತಾರೆ. ಹೀಗೆ ಇಚ್ಛೆಯು, ಕಾಮ, ಅಭಿಲಾಷೆ, ರಾಗ, ಸಂಕಲ್ಪ, ಕಾರುಣ್ಯ, ವೈರಾಗ್ಯ, ಉಪಧಾ ಮತ್ತು ಭಾವ ಮುಂತಾದ ರೂಪಗಳನ್ನು ತಾಳುತ್ತದೆ. ಇವುಗಳಲ್ಲಿ ವೈರಾಗ್ಯವೊಂದನ್ನು ಬಿಟ್ಟರೆ, ಉಳಿದವುಗಳೆಲ್ಲ ಮನುಷ್ಯನಿಗೆ ನಾನಾ ವಿಧವಾದ ದುಃಖವನ್ನೇ ಕೊಡುತ್ತವೆ. ಅಂತೆಯೇ ಶ್ರೀಪತಂಜಲಿ ಮಹರ್ಷಿಗಳು– ''ಯೋಗ ಶ್ಚಿತ್ತವೃತ್ತಿನಿರೋಧಃ'' (೧–೨) ಎಂಬುದಾಗಿ, ಈ ಕಷ್ಟದಾಯಕಗಳಾದ ಇಚ್ಛಾರೂಪ ಚಿತ್ತವೃತ್ತಿಗಳ ನಿರೋಧವನ್ನು ಯೋಗವೆಂದು ಕರೆದಿದ್ದಾರೆ. ಇಚ್ಛೆಗಳಲ್ಲಿ ಕಾಮರೂಪ ವಾದದ್ದು ಮಹಾಭಯಾನಕವಾದ್ದರಿಂದ, ಜೀವಾತ್ಮನ ಸರ್ವನಾಶಕ್ಕೆ ಕಾರಣ ವಾಗಿರುತ್ತದೆ.

ಇದೂ ಅಲ್ಲದೇ ಮುಂದಿನ ಕ್ರೋಧಾದಿ ವೃತ್ತಿಗಳಿಗೆ ಮೈಥುನೇಚ್ಛಾ ರೂಪವಾದ ಕಾಮವೇ ಮೂಲವಾದ್ದರಿಂದ, ಇದರ ವಿಜಯದಿಂದ, ಅಂತರ ಆಧ್ಯಾತ್ಮಿಕ ದುಃಖ ನಿವೃತ್ತಿಯಾಗುವುದರಲ್ಲಿ ಸಂದೇಹವಿಲ್ಲ.

ಇನ್ನು ಅಂತರ ಆಧ್ಯಾತ್ಮಿಕ ದುಃಖಕ್ಕೆ ಕಾರಣವಾದ ಕ್ರೋಧದ ಬಗ್ಗೆ ವಿಚಾರಿಸೋಣ. ''ಕಾಮಾತ್ ಕ್ರೋಧೋಽಭಿಜಾಯತೇ'' (ಗೀತಾ ೨–೬೨) ಎನ್ನುವ ಗೀತೋಕ್ತಿಯಂತೆ, ಕಾಮದಲ್ಲಿ ಪ್ರತಿಬಂಧಕ ಬಂದಾಗ, ಕ್ರೋಧವು ಪ್ರಾದುರ್ಭ ವಿಸುತ್ತದೆ ಅಥವಾ ಕಾಮವೇ ಕ್ರೋಧದಲ್ಲಿ ಪರಿವರ್ತಿಸುತ್ತದೆ. ಕ್ರೋಧ, ದ್ರೋಹ, ಮನ್ಯು, ಅಕ್ಷಮಾ ಮತ್ತು ಅಮರ್ಷ ಇವುಗಳು ಕ್ರೋಧದ ಅನೇಕ ಮುಖಗಳು.

ದ್ವೇಷ : ''ಪ್ರಜ್ವಲನಾತ್ಮಕೋ ದ್ವೇಷಃ'' ಯಾವ ಭಾವ ಒಡಮೂಡಿದಾಗ, ಮನುಷ್ಯನು, ಸಂತಪ್ತನಾದಂತೆ ತೋರುತ್ತಾನೆಯೋ, ಆ ವೃತ್ತಿಯನ್ನೇ ದ್ವೇಷವೆನ್ನುವರು. ತನಗೆ ಅನಪೇಕ್ಷಿತವಾದ ಘಟನೆ ಇಲ್ಲವೇ ವ್ಯಕ್ತಿಯ ಸ್ಮೃತಿಯುಂಟಾದಾಗ ಈ ದ್ವೇಷವು ಉಂಟಾಗುತ್ತದೆ.

ಕ್ರೋಧ : ''ಶರೀರೇಂದ್ರಿಯಾದಿವಿಕಾರಹೇತುಃ ಕ್ಷಣಮಾತ್ರಭಾವೀ ದ್ವೇಷಃ ಕ್ರೋಧಃ'' ಕಣ್ಣುಗಳು ಕೆಂಪಗಾಗುವದು,ತುಟಿಯನ್ನು ಕಡಿಯುವದು, ಶರೀರವೆಲ್ಲ ತಪ್ತವಾಗಿ ಕಂಪಿಸುವದು– ಈ ಎಲ್ಲ ವಿಕಾರಗಳಿಂದ ಕೂಡಿ, ಕ್ಷಣಮಾತ್ರ ತೋರುವ ಮಾನಸಿಕ ಜ್ವಲನವೃತ್ತಿಯೇ ಕ್ರೋಧವು. ಈ ಅವಸ್ಥೆ ಬಂದಾಗ, ಮನುಷ್ಯನು, ರಾಕ್ಷಸ ನಂತೆ ವರ್ತಿಸುತ್ತಾನೆ. ಕೃದ್ಧಾವಸ್ಥೆಯಲ್ಲಿ ಶರೀರದಲ್ಲೆಲ್ಲ ಹಿಂಸಾವೃತ್ತಿಯು ವ್ಯಾಪ್ತವಾಗಿರು ತ್ತದೆ. ಕ್ರೋಧಿಯ ಎದುರಿಗೆ ದುರ್ಬಲರಿದ್ದರೆ, ಅವರನ್ನು ಹಿಂಸಿಸುತ್ತಾನೆ. ಒಂದುವೇಳೆ, ಪ್ರತಿಪಕ್ಷಿಗಳು ಪ್ರಬಲರಿದ್ದರೆ ತನ್ನನ್ನೇ ತಾನು ಹಿಂಸಿಸಿಕೊಳ್ಳುತ್ತಾನೆ. ಶ್ರೀ ನರಹರಿಯು–

ರುಧಿರಂ ಪಿಬತಿ ಸ್ವೇಯಂ ದಿವಾ ತಮಸಿ ನೃತ್ಯತಿ ।
ಭೀಷಯತ್ಯಾತ್ಮನಾತ್ಮಾನಂ ಕ್ರೂರಃ ಕ್ರೋಧೀ ನ ರಾಕ್ಷಸಃ ॥

(ಬೋಧಸಾರ, ಪುಟ ೨೨)

ಕ್ರೋಧಾಂಧನಾದ ವ್ಯಕ್ತಿಯು, ಹಗಲಿನಲ್ಲಿಯೇ ಕತ್ತಲನ್ನನುಭವಿಸುವವನಾಗಿ, ತನ್ನ ರಕ್ತವನ್ನು ತಾನೇ ಕುಡಿಯುತ್ತ, ರಾಕ್ಷಸನಿಗಿಂತಲೂ ಕ್ರೂರನಾಗಿ ವರ್ತಿಸುತ್ತಾನೆಂಬು ದಾಗಿ ಕ್ರೋಧಿಯ ಅವಸ್ಥೆಯನ್ನು ವರ್ಣಿಸುತ್ತಾನೆ.

ಹಿಂಸಾದಿ ಅನೇಕ ಪಾಪಪ್ರವೃತ್ತಿಗಳಿಗೆ ಕಾರಣವಾದ ಕ್ರೋಧವನ್ನು, ಶಾಸ್ತ್ರ ಕಾರರು, ಮಹಾಚಂಡಾಲನೆಂದು ಕರೆದಿದ್ದಾರೆ. ಕ್ರೋಧವೃತ್ತಿಯು ಬಂದಾಗ, ಮನುಷ್ಯನು, ಗುರು– ಹಿರಿಯರನ್ನೂ ಸಹ ತಿರಸ್ಕರಿಸಿ ಮಾತನಾಡುತ್ತಾನೆ. ತನ್ನ ಮನೆಗೆ ಹತ್ತಿದ ಬೆಂಕಿಯು ತನ್ನ ಮನೆಯನ್ನು ಸುಟ್ಟು, ನಂತರ ನೆರಮನೆಯನ್ನೂ ಸುಡುವಂತೆ, ಕ್ರೋಧಾಗ್ನಿಯು ಯಾವ ಶರೀರದಲ್ಲಿ ಪ್ರಾದುರ್ಭವಿಸುವದೋ ಆ ಶರೀರದ ರಕ್ತ ಮಾಂಸಾದಿಗಳನ್ನು ಸುಟ್ಟು, ನಂತರ ಮತ್ತೊಬ್ಬರ ಮೇಲೆ ಪ್ರಹಾರಮಾಡುವದು. ಅಂತೆಯೇ ''ಸಿಟ್ಟು ತನ್ನ ವೈರಿ ಶಾಂತಿ ಪರರ ವೈರಿ'' ಎಂದಿದ್ದಾರೆ ಅನುಭವಿಕರು.

ಅಂಧೀಕರೋಮಿ ಭುವನಂ ಬಧಿರೀಕರೋಮಿ
ಧೀರಂ ಸಚೇತನಮಚೇತನತಾಂ ನಯಾಮಿ ।
ಕೃತ್ಯಂ ನ ಪಶ್ಯತಿ ನ ಯೇನ ಹಿತಂ ಶೃಣೋತಿ
ಧೀಮಾನಧೀತಮಪಿ ನ ಪ್ರತಿಸಂದಧಾತಿ

(ಪ್ರಬೋಧಚಂದ್ರೋದಯ ; ೨–೨೮)

ಕ್ರೋಧಾಕ್ರಾಂತನಾದ ವ್ಯಕ್ತಿಯು ಕಣ್ಣಿದ್ದೂ ಕುರುಡನಂತೆಯೂ, ಕಿವಿಗಳಿದ್ದೂ ಕಿವುಡನಂತೆಯೂ, ಸಚೇತನನು ಅಚೇತನನಂತೆಯೂ, ಬುದ್ಧಿವಂತನು ಬುದ್ಧಿಹೀನ ನಂತೆಯೂ ವರ್ತಿಸುತ್ತಾನೆಂದು, ಪ್ರಬೋಧಚಂದ್ರೋದಯ ನಾಟಕದಲ್ಲಿ ಕ್ರೋಧಾ ವೇಶದ ಸಜೀವ ಚಿತ್ರವನ್ನು, ಬೋಧಿಸಿದ್ದಾರೆ.

ದ್ರೋಹ : ''ಅಲಕ್ಷಿತವಿಕಾರಶ್ಚಿರಾನುಬದ್ಧಾರಕಾರಾವಸಾನೋ ದ್ವೇಷೋ ದ್ರೋಹಃ'' ಸದ್ಯಃ ಶರೀರದಲ್ಲಿ ಯಾವದೇ ವಿಕಾರವು ತೋರದೇ, ಬಹುದಿನಗಳ ನಂತರ, ಪ್ರತೀಕಾರ ಕಂಡುಬಂದರೆ, ಅಂತಹ ದ್ವೇಷವನ್ನು ದ್ರೋಹವೆನ್ನುತ್ತಾರೆ. ಅಪಕಾರ ಮಾಡಿದವನಿಗೆ ಪ್ರತ್ಯಪಕಾರ ಮಾಡುವವರೆಗೆ ಸಮಯ ಕಾಯ್ದು, ಪ್ರಸಂಗ ಬಂದೊದಗಿದಾಗ, ಸೇಡನ್ನು ತೀರಿಸಿಕೊಳ್ಳುವ ಮನೋವೃತ್ತಿಯೇ ದ್ರೋಹವು. ಇದು ದ್ವೇಷದ ಒಂದು ಅವಾಂತರಭೇದವು.

ಮನ್ಯು : ''ಅಪಕೃತಸ್ಯ ಪ್ರತ್ಯಪಕಾರಾಸಮರ್ಥಸ್ಯಾಂತರ್ನಿಗೂಢೋ ಮನ್ಯುಃ'' ಅಪಕಾರ ಮಾಡಿದವನಿಗೆ ಪ್ರತಿಯಾಗಿ ಅಪಕಾರಮಾಡುವ ಸಾಮರ್ಥ್ಯವಿಲ್ಲದಿರುವ ವ್ಯಕ್ತಿಯಲ್ಲಿ, ಗುಪ್ತವಾಗಿರುವ ದ್ವೇಷವನ್ನೇ ಮನ್ಯುವೆನ್ನುವರು. ಇದಾದರೂ ದ್ವೇಷದ ಒಂದು ಶಾಖೆಯು. ಈ ಮನ್ಯುವಿನಿಂದ ಆಕ್ರಾಂತನಾದ ವ್ಯಕ್ತಿಯು, ತನ್ನೊಳಗೆ ಸದಾ ಸಂತಾಪಗೊಳ್ಳುತ್ತಿರುತ್ತಾನೆ.

ಅಕ್ಷಮಾ : ''ಪರಗುಣದ್ವೇಷೋಽಕ್ಷಮಾ'' ಅನ್ಯರ ಉತ್ಕೃಷ್ಟಗಳಾದ ಗುಣಗಳು ತನ್ನಲ್ಲಿಲ್ಲದಿರುವಾಗ, ಆ ಗುಣಗಳ ಬಗ್ಗೆ ಉಂಟಾಗುವ ದ್ವೇಷವನ್ನು ಅಕ್ಷಮಾ ಎನ್ನುತ್ತಾರೆ. ಇದನ್ನೇ ಅಸಹನೀಯತೆ ಎಂಬುದಾಗಿಯೂ ಕರೆಯುವುದುಂಟು. ಇದಾದರೂ ದ್ವೇಷದ ಒಂದು ವಿಭಾಗವು.

ಅಮರ್ಷ : ''ಸ್ವಗುಣಪರಿಭವಸಮುತ್ಥೋ ದ್ವೇಷೋಽಮರ್ಷಃ'' ತನ್ನ ಗುಣಗಳ ಪರಾಜಯದಿಂದುಂಟಾದ ದ್ವೇಷವನ್ನು ''ಅಮರ್ಷ''ವೆನ್ನುವರು. ಇದಾದರೂ ದ್ವೇಷದ ಅವಾಂತರಭೇದವು.

ಹೀಗೆ ಕ್ರೋಧ, ದ್ರೋಹ, ಮನ್ಯು, ಅಕ್ಷಮಾ ಮತ್ತು ಅಮರ್ಷ ಇವುಗಳು ದ್ವೇಷದ ವಿಭಿನ್ನಸ್ವರೂಪಗಳು. ಇವುಗಳಾದರೂ ಮನುಷ್ಯನಿಗೆ ವಿವಿಧ ದುಃಖವನ್ನುಂಟು ಮಾಡುವುದರಿಂದ, ಇವೆಲ್ಲವುಗಳೂ ಅಂತರ ಆಧ್ಯಾತ್ಮಿಕ ದುಃಖಕ್ಕೆ ಕಾರಣಗಳಾಗಿರುತ್ತವೆ.

ಲೋಭ : ''ಧರ್ಮವಿರೋಧೇನ ಪರದ್ರವ್ಯಜಿಘೃಕ್ಷಾ ಲೋಭಃ'' ಧರ್ಮದ ವಿರುದ್ಧ ವಾಗಿ ಪರರ ದ್ರವ್ಯವನ್ನು ಪಡೆಯಬೇಕೆನ್ನುವ ಬಯಕೆಯನ್ನು ಲೋಭವೆನ್ನುತ್ತಾರೆ.

ತ್ರಿವಿಧಂ ನರಕಸ್ಯೈತದ್ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥

(ಗೀತಾ : ೧೬–೨೧)

ಎಂಬ ಗೀತೋಕ್ತಿಯಂತೆ, ಕಾಮ, ಕ್ರೋಧ, ಮತ್ತು ಲೋಭ ಈ ಮೂರೂ ನರಕ ದ್ವಾರಗಳೆನಿಸಿಕೊಂಡಿವೆ. ಕಾಮಾಂಧ ಮತ್ತು ಕ್ರೋಧಾಂಧನಾದ ವ್ಯಕ್ತಿಯು, ಅಧರ್ಮ ದಲ್ಲಿ ಪ್ರವೃತ್ತನಾಗುವಂತೆ, ಲೋಭಾವಿಷ್ಟನಾದವನೂ ಸಹ ಅನ್ಯಾಯಮಾರ್ಗದಲ್ಲಿ ನಡೆದು ನರಕಭಾಜನನಾಗುತ್ತಾನೆ. ಚೇಳು, ಹಾವು ಮುಂತಾದ ವಿಷಜಂತುಗಳು ಕಚ್ಚಿದರೆ, ಕೆಲವು ಕಾಲ ದುಃಖಿತನಾಗಿ, ವಿಷ ಇಳಿದ ನಂತರ ಮನುಷ್ಯನು ಮೊದಲಿನ ಅವಸ್ಥೆಗೆ ಬರುತ್ತಾನೆ. ಆದರೆ ಲೋಭದಿಂದ ಕಚ್ಚಲ್ಪಟ್ಟ ಮನುಷ್ಯನ ಲೋಭದ ನಂಜು ಕಡಿಮೆಯಾಗುವದರ ಬದಲಾಗಿ, ಬೆಳೆಯುತ್ತಲೇ ಹೋಗುತ್ತದೆ. ಆದ್ದರಿಂದ, ಲೋಭದ

ನಂಜು ಸರ್ಪಾದಿಗಳ ವಿಷಕ್ಕಿಂತಲೂ ಘನಘೋರವಾದುದು. ಅಂತೆಯೇ ತುಲಸೀ ದಾಸರು, ''ಲೋಭ ಪಾಪಕಾ ಬಾಪ ಬಖಾನಾ'' ಲೋಭವು ಪಾಪದ ತಂದೆ– ಎಂದು ಉಪಮಿಸಿದ್ದಾರೆ. ಲೋಭಿಗೆ ಎಷ್ಟೇ ಸಂಪತ್ತು ಪ್ರಾಪ್ತವಾದರೂ ತೃಪ್ತಿಯಾಗುವುದಿಲ್ಲ. ಅದನ್ನೇ ನರಹರಿಯು ಹೀಗೆ ಹೇಳಿದ್ದಾನೆ.–

ಮೇರವೋ ಘೃತಬಿಂದ್ವಾಭಾ ದುರಾಶಾದಾವಪಾವಕೇ ।
ಕಥಂ ಸಹಸ್ರಲಕ್ಷಾದ್ಯೈಸ್ತರ್ಹಿ ತೃಪ್ಯತು ಲೋಭವಾನ್ ? ॥

(ಬೋಧಸಾರ : ಪುಟ ೨೩)

ದುರಾಶಾ ಎಂಬ ದಾವಾಗ್ನಿಯಲ್ಲಿ ಬಂಗಾರದ ಪರ್ವತಗಳೂ ತುಪ್ಪದ ಒಂದು ಹನಿಯಂತೆ ಕಂಡುಬರುವಾಗ, ಸಾವಿರ ಇಲ್ಲವೇ ಲಕ್ಷರೂಪಾಯಿಗಳಿಂದ ಲೋಭಿಯು ಅದೆಂದಿಗೂ ಸಂತೃಪ್ತನಾಗಲಾರನು. ಅದಕ್ಕಾಗಿಯೇ, ಶ್ರೀ ನಿಜಗುಣರು, ''ಕಡು ಲೋಭದಿಂದ ದುರ್ಗುಣವನ್ಯಮುಂಟೆ ?'' ಎಂದಿದ್ದಾರೆ.

ಸಂಪಾದಿಸಿದ ಧನವನ್ನು ತಾನು ಉಪಯೋಗಿಸದೇ, ಸತ್ಪಾತ್ರದಲ್ಲಿ ದಾನವನ್ನೂ ಮಾಡದೆ, ಸರ್ಪಾದಿಗಳಂತೆ ಕೇವಲ ಅದರ ರಕ್ಷಣೆಯಲ್ಲಿ ಕಾಲ ಕಳೆದು, ಸತ್ತನಂತರ, ಆ ಧನದ ಉತ್ತರಾಧಿಕಾರಿಗಳಾದವರು, ಈತನ ಬಾಯಿಯೊಳಗೆ ಒಂದು ಚೂರು ಬಂಗಾರ ವನ್ನೂ ಸಹ ಹಾಕದೇ, ಮಣ್ಣನ್ನೇ ಹಾಕುತ್ತಾರೆ. ಆದ್ದರಿಂದ ಸರ್ವಜ್ಞನು–

''ಉಣ್ಣದೊಡವೆಯ ಗಳಿಸಿ ಮಣ್ಣೊಳಗೆ ಬಚ್ಚಿಟ್ಟು,
ಚನ್ನಾಗಿ ನೆಲವ ಸವಿಸಿದವನ ಬಾಯೊಳಗೆ
ಮಣ್ಣು ಕಾಣಯ್ಯ ಸರ್ವಜ್ಞ''

ಎಂಬುದಾಗಿ ಸುಂದರವಾದ ನಿರ್ಣಯವನ್ನು ಕೊಟ್ಟಿದ್ದಾನೆ.

ಲೋಹಾರ್ಗಲೋ ಭದ್ರಹರೋ ಲೋಲಾತಂಕೋ ಭಯಪ್ರದಃ ।
ಲುನಾತ್ಯುಭೌ ಚ ಯಲ್ಲೋಕೌ ತೇನ ಲೋಭಃ ಪ್ರಕೀರ್ತಿತಃ ॥

(ಬೋಧಸಾರ, ಪುಟ ೨೬)

ಈ ಶ್ಲೋಕದಲ್ಲಿ ಲೋಭ ಶಬ್ದದ ತಾತ್ತ್ವಿಕವಾದ ಅಕ್ಷರಾರ್ಥವನ್ನು ಈ ನರಹರಿಯು ಬಹು ಸುಂದರವಾಗಿ ವರ್ಣಿಸಿದ್ದಾನೆ. ''ಲೋಭ'' ಈ ಶಬ್ದದಲ್ಲಿ– ''ಲೋ'' ಮತ್ತು ''ಭ'' ಎಂಬ ಎರಡು ಅಕ್ಷರಗಳಿವೆ. ಇವುಗಳಲ್ಲಿ ಲೋ=ಲೋಹಾರ್ಗಲ, ಅಂದರೆ ಕಬ್ಬಿಣದ ಸರಪಳಿ, ಭ=ಭದ್ರಹರ, ಸುಖನಾಶಕ ; ತಾತ್ಪರ್ಯವೇನೆಂದರೆ, ಕಬ್ಬಿಣದ ಸರಪಳಿ ಯಿಂದ ಕಟ್ಟಿದ ವಸ್ತುವು ಅತ್ತಿತ್ತ ಸರಿದಾಡದಿರುವಂತೆ, ಲೋಭಿಯ ಬುದ್ಧಿಯು ಯಾವ ಪದಾರ್ಥದಲ್ಲಿ ಆಸಕ್ತವಾಗಿರುತ್ತದೆಯೋ, ಆ ಪದಾರ್ಥವನ್ನು ಬಿಟ್ಟು ಕದಲುವುದೇ ಇಲ್ಲ. ಆದ್ದರಿಂದ, ''ಲೋ'' ಎಂಬ ಶಬ್ದಕ್ಕೆ ಲೋಹದ ಸರಪಳಿ ಎಂಬ ಅರ್ಥವನ್ನು ಮಾಡಿದ್ದಾರೆ. ಅದರಂತೆ, ಲೋಭಿಯ ಬುದ್ಧಿಯು ಯಾವಾಗಲೂ ಅತೃಪ್ತವಾಗಿರುವದ ರಿಂದ, ಅದಕ್ಕೆ ಸುಖವಾಗಲಿ, ಸಂತೋಷವಾಗಲಿ ಉಂಟಾಗದ ಕಾರಣ, 'ಭ' ಶಬ್ದದ ಅರ್ಥವನ್ನು 'ಭದ್ರಹರ' ಅಂದರೆ ಸುಖನಾಶಕವೆಂದು ಮಾಡಿದ್ದಾರೆ. ಹೀಗೆ, ಮನುಷ್ಯನ ಬುದ್ಧಿಯನ್ನು, ಧನ ಮುಂತಾದ ಪದಾರ್ಥಗಳಲ್ಲಿ ಬಿಗಿಯಾಗಿ ಕಟ್ಟಿಹಾಕಿ, ಆ ವ್ಯಕ್ತಿಯ ಸಂತೋಷ ಹಾಗೂ ಸಮಾಧಾನಗಳನ್ನು ಹಾಳು ಮಾಡುವ ದುರ್ಗುಣವೇ ಲೋಭವು.

ಲೋಭ ಶಬ್ದದ ಎರಡನೇ ಅರ್ಥವು ಈ ಪ್ರಕಾರವಾಗಿದೆ– ಲೋ= ಲೋಲಾತಂಕಃ, ಅಂದರೆ ಚಂಚಲತಾರೂಪವಾದ ರೋಗವು. ಭ=ಭಯಪ್ರದಃ, ಅಂದರೆ ಹೆದರಿಕೆಯನ್ನುಂಟುಮಾಡುವದು. ತಾತ್ಪರ್ಯವೇನೆಂದರೆ– ಮನುಷ್ಯನಲ್ಲಿ ಚಂಚಲತೆಯನ್ನು ಹಾಗೂ ಭಯವನ್ನು ಹುಟ್ಟಿಸುವ ಸ್ವಭಾವವನ್ನು ಲೋಭವೆಂದು ಕರೆಯುತ್ತಾರೆ. ಲೋಭಿಯಾದವನು ಒಂದು ಸ್ಥಾನದಲ್ಲಿ ಶಾಂತವಾಗಿ ಕ್ಷಣಕಾಲವೂ ಕುಳಿತುಕೊಳ್ಳಲಾರನು ಮತ್ತು ಲೋಭಿಯು ತನ್ನಲ್ಲಿಯ ಧನಾದಿಗಳನ್ನು ಯಾರಾದರೂ ಕಸಿದುಕೊಂಡು ಹೋದಾರೆಂದು ಸದಾ ಭೀತಿಯುಳ್ಳವನಾಗಿರುತ್ತಾನೆ. ಹೀಗೆ ಮನುಷ್ಯನಲ್ಲಿ ತೋರುವ ಚಂಚಲತೆ ಹಾಗೂ ಭಯಗಳು ಲೋಭದ ಪರಿಣಾಮಗಳು.

ಲೋಭ ಶಬ್ದದ ಮೂರನೇ ಅರ್ಥವೇನೆಂದರೆ– ''ಉಭೌ ಲೋಕೌಲೂನಾತೀತಿ ಲೋಭಃ'' ಇಹಪರಗಳನ್ನು ಹಾಳುಮಾಡುವ ದುರ್ಗುಣವೇ ಲೋಭವು. ಲೋಭಿಯು ದಾನ–ಧರ್ಮಾದಿಗಳನ್ನು ಮಾಡದಿರುವದರಿಂದ ಪುಣ್ಯವು ಉತ್ಪನ್ನವಾಗದ ಕಾರಣ, ಅವನಿಗೆ, ಪಾರಲೌಕಿಕ ಸುಖದ ಪ್ರಾಪ್ತಿಯಾಗಲಾರದು. ಅದರಂತೆ, ತಾನು ಸಂಪಾದಿಸಿದ ಸಂಪತ್ತಿನ ಉಪಯೋಗವನ್ನು ತನ್ನ ಉಪಯೋಗಕ್ಕಾಗಿಯೂ ವಿನಿಯೋಗಿಸದೇ, ಧನವಿದ್ದೂ ದರಿದ್ರನಂತೆ ಕಾಲ ಕಳೆದು, ದುಃಖವನ್ನೇ ಅನುಭವಿಸುತ್ತಾನೆ. ಹೀಗೆ, ಲೋಭವು ಮನುಷ್ಯನಿಗೆ ಇಹದಲ್ಲಿ ಹಾಗೂ ಪರದಲ್ಲಿ ಸುಖವನ್ನು ಕೊಡದೇ ದುಃಖವನ್ನೇ ಕೊಡುವದರಿಂದ, ಅದನ್ನು ಉಭಯ ಲೋಕ ವಿನಾಶಕವೆಂದು ಕರೆದಿದ್ದಾರೆ. ಈ ಪ್ರಕಾರವಾಗಿ, ಶ್ರೀ ನರಹರಿಸ್ವಾಮಿಯು ''ಲೋಭ''ವೆಂಬ ಎರಡಕ್ಷರದ ಅರ್ಥವನ್ನು ಮೂರು ವಿಧವಾಗಿ ವರ್ಣಿಸಿದ್ದಾನೆ.

''ಅತಿಯಾಸೆ ಗತಿಕೆಡಿಸೀತು'' ಎನ್ನುವ ಉಕ್ತಿಯಂತೆ, ಲೋಭಿಯು, ತನ್ನ ಸಂಪತ್ತಿನಲ್ಲಿ ಸ್ವಲ್ಪೂ ಹಾಳಾಗಬಾರದೆಂದು ಯೋಚಿಸಿ, ಕೊನೆಗೊಮ್ಮೆ ತನಗೆ ತಿಳಿಯದಂತೆ, ತನ್ನ ಹಾನಿಯನ್ನು ತಾನೇ ಮಾಡಿಕೊಳ್ಳುತ್ತಾನೆ.

ಒಂದು ಊರಿನಲ್ಲಿ ಅತಿ ಲೋಭಿಗಳಾದ ದಂಪತಿಗಳಿರುತ್ತಿದ್ದರು. ಅವರಿಗೆ ಈರ್ವರು ಮಕ್ಕಳಿದ್ದರು. ಒಕ್ಕಲುತನ ಅವರ ನಿತ್ಯವ್ಯವಸಾಯವಾಗಿತ್ತು, ಹೆಂಡತಿಯು ಮನೆಯ ವ್ಯವಹಾರದಲ್ಲಿ ಲೋಭದಿಂದ ಉಳಿತಾಯ ಮಾಡುತ್ತಿದ್ದರೆ, ಗಂಡನು ಹೊಲಗೆಲಸದಲ್ಲಿ ಉಳಿತಾಯ ಮಾಡುತ್ತಿದ್ದನು. ಒಮ್ಮೆ ಗಂಡನು ಹೊಲಕ್ಕೆ ಹೋದಾಗ ಹೆಂಡತಿಯು ತನ್ನ ಎರಡು ಮಕ್ಕಳ ತಲೆಯಲ್ಲಿ ಬಹಳಷ್ಟು ಕೂದಲು ಬೆಳದುದನ್ನು ನೋಡಿ ಇವರೀರ್ವರ ಕ್ಷೌರವನ್ನು ಮಾಡಿಸಬೇಕೆಂದು ಯೋಚಿಸಿ, ಒಬ್ಬ ಕ್ಷೌರಿಕನನ್ನು ಕರೆದು, ಕ್ಷೌರದ ಧಾರಣೆಯನ್ನು ಕೇಳಿದಳು. ಆ ಕ್ಷೌರಿಕನು, ಅಮ್ಮಾ ! ಒಂದು ರೂಪಾಯಿಗೆ ಮೂರು ತಲೆಗಳನ್ನು ಬೋಳಿಸುತ್ತೇನೆ ಎಂದನು. ಆತನ ಮಾತನ್ನು ಕೇಳಿದ ಹೆಣ್ಣು ಮಗಳು ಮನದಲ್ಲಿ ವಿಚಾರಿಸುತ್ತಾಳೆ– ನನ್ನ ಎರಡೂ ಮಕ್ಕಳ ಕ್ಷೌರ ಆಗುವದರೊಳಗಾಗಿ ಗಂಡನು ಹೊಲದಿಂದ ಬರಬಹುದೆಂದು. ಅವನ ತಲೆಯೂ ಬೆಳೆದು ನಿಂತಿದೆ. ಹೀಗೆ ಮನೆಯಲ್ಲಿ ಮೂರು ತಲೆಗಳ ಕ್ಷೌರ ಆಗುವದು, ಆಗ ಕ್ಷೌರಿಕನಿಗೆ ಒಂದು ರೂಪಾಯಿ ಕೊಟ್ಟು ಕಳಿಸಿದರಾಯಿತು.

ಹೀಗೆ ವಿಚಾರಿಸಿದ ಹೆಣ್ಣು ಮಗಳು ಮಕ್ಕಳನ್ನು ಕ್ಷೌರಕ್ಕೆ ಕೂಡ್ರಿಸುತ್ತಾಳೆ. ಅತಿ ಚತುರನಾದ ಕ್ಷೌರಿಕನು ಹತ್ತು ನಿಮಿಷದಲ್ಲಿ ಎರಡೂ ಹುಡುಗರ ತಲೆಯನ್ನು ಚನ್ನಾಗಿ ಗಾಂಧಿ ಕಟಿಂಗ್ ಮಾಡಿ, ಅಮ್ಮಾ ! ನನ್ನ ಕಾರ್ಯ ಮುಗಿಯಿತು. ನನಗೆ ಒಂದು ರೂಪಾಯಿಯನ್ನು ಕೊಡಿ ಎಂದು ಕೇಳಿದನು.

ಏನಯ್ಯಾ ! ಮೂರು ತಲೆಗಳಿಗೆ ಒಂದು ರೂಪಾಯಿ ಎಂದು ಹೇಳಿದ್ದೆ, ಈಗ ಎರಡೇ ತಲೆಗಳ ಕ್ಷೌರವನ್ನು ಮಾಡಿ ಒಂದು ರೂಪಾಯಿಯನ್ನು ಕೇಳುವೆಯಲ್ಲಾ ! ಇದೇನು ನ್ಯಾಯವೇ ? ಎಂದು ಆ ಹೆಣ್ಣುಮಗಳು ಸ್ವಲ್ಪ ಗಡುಸಾಗಿಯೇ ನುಡಿದಳು.

ಆಗ ಕ್ಷೌರಿಕನು, ಅಮ್ಮಾ ! ನಾನೇನು ಮಾಡಲಿ ? ನೀವೇ ಎರಡೇ ತಲೆಗಳನ್ನು ಕೊಟ್ಟಿರುವಿರಿ. ಈಗಾದರೂ ಏನಾಗಿದೆ ? ಇನ್ನೊಂದು ತಲೆ ಇದ್ದರೆ ತಂದುಕೊಡಿ, ಅದೊಂದನ್ನು ಬೋಳಿಸಿ ಹೋಗುತ್ತೇನೆ ಎಂದನು. ಕ್ಷೌರಿಕನ ಈ ಮಾತನ್ನು ಕೇಳಿದ ಹೆಣ್ಣು ಮಗಳು ಯೋಚಿಸುತ್ತಾಳೆ–ಗಂಡನಾದರೋ ಹೊಲದಿಂದ ಬರಲಿಲ್ಲ, ಕ್ಷೌರಿಕನಿಗೆ ಇನ್ನೊಂದು ತಲೆಯನ್ನು ಕೊಡದೇ ರೂಪಾಯಿಯನ್ನು ಕೊಟ್ಟರೆ ಹಾನಿಯಾಗುವುದು. ಗಂಡ ಬರುವವರೆಗೆ ಈತನು ಕುಳಿತುಕೊಳ್ಳಲಾರನು. ಈಗ ಏನು ಮಾಡುವದು ? ಎಂಬುದಾಗಿ ಬಹಳಷ್ಟು ಯೋಚಿಸಿ, ಕೊನೆಗೆ ಹಣದಲ್ಲಿ ಅತಿ ಲೋಭಿಯಾದ ಅವಳು ತನ್ನ ತಲೆಯನ್ನೇ ಬೋಳಿಸಿಕೊಂಡು ಕ್ಷೌರಿಕನಿಗೆ ಒಂದು ರೂಪಾಯಿ ಕೊಟ್ಟು ಕಳುಹಿಸಿದಳು.

ಹೊಲದಿಂದ ಮರಳಿದ ಗಂಡನು ಮನೆಯಲ್ಲಿ ತಲೆ ಬೋಳಿಸಿಕೊಂಡು ಕುಳಿತ ಹೆಂಡತಿಗೆ ಹೀಗೇಕೆ ಆಗಿರುವೆ ? ಎಂದು ಕೇಳಿದಾಗ, ಕ್ಷೌರದ ಹಣದಲ್ಲಿ ಉಳಿತಾಯ ಮಾಡಿದ್ದೇನೆಂದು ತನ್ನ ಮೂರ್ಖತನವನ್ನು ವ್ಯಕ್ತಪಡಿಸುತ್ತಾಳೆ.

ಹೆಂಡತಿಯ ಈ ವ್ಯವಹಾರವನ್ನು ಕಂಡು ಸಂತುಷ್ಟನಾದ ಗಂಡನು, ನೋಡು ! ನೀನು ಮನೆಯಲ್ಲಿ ಉಳಿತಾಯ ಮಾಡಿದರೆ, ಇಂದು, ನಾನೂ ಹೊಲದಲ್ಲಿ ಉಳಿತಾಯ ಮಾಡಿದ್ದೇನೆ ಎಂದನು. ನೀವು ಹೊಲದಲ್ಲಿ ಹೇಗೆ ಉಳಿತಾಯ ಮಾಡಿದ್ದೀರಿ ? ಎಂದು ಹೆಂಡತಿಯು ಕೇಳಿದಾಗ, ಹೇಳುತ್ತಾನೆ–ಇಂದು ಜೋಳವನ್ನು ಕೊಯ್ಯುವದಕ್ಕಾಗಿ ಆಳುಗಳನ್ನು ಕರೆದುಕೊಂಡು ಹೊಲಕ್ಕೆ ಹೋಗಿದ್ದೆನು. ಸಾಯಂಕಾಲ ನಾಲ್ಕು ಗಂಟೆಯವರೆಗೆ ಜೋಳವನ್ನು ಕೊಯ್ದರೆ ಒಬ್ಬರಿಗೆ ಒಂದು ರೂಪಾಯಿ ಕೂಲಿ ಎಂದು ನಿರ್ಣಯಿಸಿದ್ದೆನು. ಆದರೆ, ಮಧ್ಯಾಹ್ನ ಮೂರು ಗಂಟೆಯ ಒಳಗಾಗಿ ಜೋಳ ಹೊಯ್ಯುವದು ಮುಗಿಯಿತು. ಆಗ ಕೂಲಿಕಾರರು ನಮ್ಮ ಕಾರ್ಯ ಮುಗಿದಿದೆ, ನಮಗೆ ಕೂಲಿಯನ್ನು ಕೊಡಿರಿ–ಎಂದಾಗ, ಇನ್ನೂ ಒಂದು ತಾಸು ಸಮಯವಿದೆ, ಆ ಸಮಯ ಮುಗಿಯುವವರೆಗೆ ಕೂಲಿಯನ್ನು ಕೊಡುವುದಿಲ್ಲವೆಂದಾಗ, ಆಳುಗಳು, ಹಾಗಾದರೆ ಅಲ್ಲಿಯವರೆಗೆ ನಮಗೆ ಏನಾದರೂ ಕೆಲಸವನ್ನು ಕೊಡಿ ಎಂದು ಕೇಳಿದರು. ಆಗ ಹೊಲದಲ್ಲಿ ಮತ್ತಾವ ಕೆಲಸವಿಲ್ಲದಕಾರಣ, ಜೋಳ ಕೊಯ್ಯುವ ಕೂಲಿಯಲ್ಲಿಯೇ ಹೊಲದಲ್ಲಿಯ ತೊಗರಿಯನ್ನೂ ಕೊಯ್ಸಿಸಿ ಬಂದಿದ್ದೇನೆ–ಎಂದು ಬಹು ಸಂತೋಷ ದಿಂದ ಹೇಳಿದನು.

ಇಲ್ಲಿ ಇವರೀರ್ವರ ವ್ಯವಹಾರವನ್ನೂ ನೋಡಿದಾಗ, ಹೆಂಡತಿಯು ಕ್ಷೌರಿಕನ ಹಣದಲ್ಲಿ ಉಳಿತಾಯ ಮಾಡಲು ಹೋಗಿ ತನ್ನ ತಲೆಯನ್ನೇ ಬೋಳಿಸಿಕೊಂಡು ಅಮಂಗಲಳಾದಳು. ಅದರಂತೆ ಗಂಡನು ಕೂಲಿಕಾರರ ಒಂದು ತಾಸಿನ ಕೂಲಿಯಲ್ಲಿ ಉಳಿತಾಯ ಮಾಡಲು ಹೋಗಿ ಜೋಳದ ಜೊತೆಗೆ ಇನ್ನೂ ಪಕ್ವವಾಗದಿರುವ ತೊಗರಿಯ ಪೈರನ್ನೂ ಕೊಯ್ಸಿಸಿ, ಮಹಾನ್ ನಷ್ಟವನ್ನು ಮಾಡಿಕೊಂಡನು. ಇದರಂತೆ, ಲೋಭಿಯು, ಸರ್ವತ್ರ ಉಳಿಮೆಯನ್ನು ಮಾಡಲು ಹೋಗಿ ಕೊನೆಗೊಮ್ಮೆ ತನ್ನ ಸರ್ವನಾಶವನ್ನು ಮಾಡಿಕೊಳ್ಳುತ್ತಾನೆ.

ಜಗತ್ತಿನಲ್ಲಿ ಪ್ರತಿಯೊಂದು ವ್ಯವಹಾರಕ್ಕೂ ಹಣವೇ ಪ್ರಧಾನವಾದ್ದರಿಂದ, ಅದಿಲ್ಲದೇ ಯಾವ ವ್ಯವಹಾರವೂ ನಡೆಯಲಾರದು. ಆದಕಾರಣ, ಕೇವಲ ಹಣದ ಅಪೇಕ್ಷೆಗೆ ಲೋಭವೆನ್ನುವದಿಲ್ಲ. ಕಿಂತು, ತನ್ನ ನಿತ್ಯವ್ಯವಹಾರಕ್ಕೆ ಪರ್ಯಾಪ್ತವಾದ ಹಣವಿದ್ದರೂ, ಇನ್ನೂ ಪಡೆಯಬೇಕೆನ್ನುವ ಬಯಕೆಯಿಂದ ನ್ಯಾಯ–ನೀತಿ–ಧರ್ಮಗಳನ್ನು ಉಲ್ಲಂಘಿಸಿ, ಅರ್ಥಪಿಪಾಸೆಯು ಬೆಳೆಯುತ್ತಿದ್ದರೆ, ಅದನ್ನು ಲೋಭವೆನ್ನುತ್ತಾರೆ. ಈ ಲೋಭವು ಮನುಷ್ಯನ ಸುಖ–ಶಾಂತಿಗಳನ್ನು ಕೆಡಿಸಿ, ಸದಾ ದುಃಖಿಯನ್ನಾಗಿ ಮಾಡುವದರಿಂದ, ಲೋಭವಾದರೂ, ಕಾಮ–ಕ್ರೋಧಾದಿಗಳಂತೆ, ಅಂತರ ಆಧ್ಯಾತ್ಮಿಕ ದುಃಖಕ್ಕೆ ಕಾರಣವಾಗಿರುತ್ತದೆ. ಆದಕಾರಣ, ಸಂತೋಷಪರವಾದ ವೃತ್ತಿಯಿಂದ, ಈ ಲೋಭವೆಂಬ ದುರ್ಗುಣವನ್ನು ಗೆಲ್ಲಬೇಕು. ಅಂತೆಯೇ, ''ದೊರೆಯಲೇನದರೊಳು ಪರಿಣತೆ ತಳೆವುದೇ ಚಂದಮಮಮ'' ಎಂಬುದಾಗಿ, ಶ್ರೀ ನಿಜಗುಣ ಶಿವಯೋಗಿಗಳು, ಲೋಭ ವಿಜಯದ ಮರ್ಮವನ್ನು ತಿಳಿಸಿದ್ದಾರೆ.

ಮೋಹ : ''ಹಾನೋಪಾದಾನಾಸಾಮರ್ಥ್ಯಂ ಮೋಹಃ'' ಕಾರ್ಯ–ಅಕಾರ್ಯ, ಹಿತ–ಅಹಿತ, ಸಾರ–ಅಸಾರ ಮುಂತಾದವುಗಳಲ್ಲಿ ಯಾವದನ್ನು ಗ್ರಹಿಸಬೇಕು ? ಎನ್ನುವುದರ ವಿಚಾರವಿಲ್ಲದಿರುವಿಕೆಯೇ ಮೋಹವು. ಮಾ+ಊಹಃ=ಮೋಹಃ ಎನ್ನುವ ಶಬ್ದದ ಪದಚ್ಛೇದವಾದರೂ ಇದೇ ಅರ್ಥವನ್ನು ಪ್ರತಿಪಾದಿಸುತ್ತದೆ.

ಲೋಭದ ಪ್ರಗಾಢವಾದ ಅವಸ್ಥೆಯೇ ಮೋಹವು. ಮೋಹವು ಪಾಶವಿದ್ದಂತೆ. ಇದರಲ್ಲಿ ಸಿಲುಕಿದವರಾರೂ ಸಜೀವರಾಗಿ ಉಳಿಯಲಾರರು ಹೊನ್ನು ಹೆಣ್ಣು ಹಾಗೂ ಮಣ್ಣುಗಳೆಂಬ ಮೋಹಪಾಶದಲ್ಲಿ ಸಿಲುಕಿದ ಅದೆಷ್ಟೋ ಜೀವಾತ್ಮರು, ತಮ್ಮ ಅನೇಕ ಜನ್ಮಗಳನ್ನು ಹಾಳುಮಾಡಿಕೊಂಡಿದ್ದಾರೆ. ಅನಿತ್ಯ, ಅಶುಚಿ ಮತ್ತು ದುಃಖರೂಪವಾದ ಸಂಸಾರದಲ್ಲಿ ನಿತ್ಯ, ಶುಚಿ ಹಾಗೂ ಸುಖ ಬುದ್ಧಿಯನ್ನುಂಟುಮಾಡುವದು ಮೋಹದ ಮಹಿಮೆಯು. ಆದ್ದರಿಂದ ಶ್ರೀ ನಿಜಗುಣ ಶಿವಯೋಗಿಗಳು– ಸೊಡರಿನ ಸುಡುವ ತನವನ್ನರಿಯದೇ, ದೀಪದ ಜ್ವಾಲೆಯನ್ನು ಮೋಹಿಸಹೋಗಿ ಸುಟ್ಟುಹೋಗುವ ದೀಪದ ಹುಳದಂತೆ, ವಿಷಯ ವ್ಯಾಮೋಹದಲ್ಲಿ ಅಸುವ ನೀಗುವ ಜೀವಿಗಳನ್ನುದ್ದೇಶಿಸಿ– ''ಕಂಡು ಕೇಳಿ ಮತ್ತೆ ಮೋಹಿಪರೆ ಭೂಮಂಡಲದ ಭೋಗಪೂಗವನತಿಗಳೆಯದೇ'' ಎಂದು ಜೀವಾತ್ಮನನ್ನು ಮೋಹನಿದ್ರೆಯಿಂದ ಎಚ್ಚರಿಸಿದ್ದಾರೆ.

ಅಸ್ಮಿನ್ ಮಹಾಮೋಹಮಯೇ ಕಟಾಹೇ
ಸೂರ್ಯಾಗ್ನಿನಾ ರಾತ್ರಿ ದಿವೇಂಧನೇನ ।
ಮಾಸರ್ತುದರ್ವೀಪರಿಘಟ್ಟನೇನ
ಭೂತಾನಿ ಕಾಲಃ ಪಚತೀತಿ ವಾರ್ತಾ ॥

ಜಗತ್ತಿನಲ್ಲಿ ವಿಶೇಷವಾದ ವಾರ್ತೆ ಏನಿದೆ ? ಎಂದು ಯಕ್ಷನು ಧರ್ಮ ರಾಜನಿಗೆ ಪ್ರಶ್ನಿಸಿದಾಗ, ರಾಜನು ಉತ್ತರಿಸಿದ ಶ್ಲೋಕವಿದು. ತಾತ್ಪರ್ಯವೇನೆಂದರೆ–ಮಹಾ ಮೋಹವೆಂಬುದೊಂದು ಎಣ್ಣೆ ತುಂಬಿದ ಕಡಾಯಿಯು. ಸೂರ್ಯನೇ ಆ ಕಡಾಯಿಯನ್ನು ಕಾಯಿಸುವ ಅಗ್ನಿಯು. ಹಗಲು, ರಾತ್ರಿಗಳೇ ಕಟ್ಟಿಗೆಗಳು. ವಾರ, ಪಕ್ಷ, ಮಾಸ, ಋತುಗಳೆಂಬುವುಗಳೇ ತಿರುಗಿಸುವ ಹುಟ್ಟುಗಳು. ಇಷ್ಟೆಲ್ಲ ಸಾಮಗ್ರಿಗಳನ್ನು ತೆಗೆದುಕೊಂಡು, ಮೃತ್ಯುವೆಂಬ ಅಡಿಗೆ ಭಟ್ಟನು, ಎಲ್ಲ ಜೀವರಾಶಿಗಳನ್ನೂ, ಪ್ರತಿದಿವಸ ಕರಿಯುತ್ತಿದ್ದಾನೆ (ಬೇಯಿಸುತ್ತಿದ್ದಾನೆ)–ಇದೇ ವಿಶೇಷವಾದ ವಾರ್ತೆಯು–ಎಂಬುದಾಗಿ ಧರ್ಮರಾಜನು ಯಕ್ಷನಿಗೆ ಸಮರ್ಪಕವಾದ ಉತ್ತರವನ್ನು ಕೊಟ್ಟಿದ್ದಾನೆ. ಅಂದರೆ, ಮೋಹವಶರಾದ ಅನೇಕ ಜೀವಿಗಳು ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಿದ್ದಾರೆ.

ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

ಅಳಿ ಮೀನು ಗಜ ಪತಂಗ ಮೃಗವೆಂಬಿ । ವಳಿವ ಪೊಂದೊಂದರೊಳು ।
ಬಳಸಿದೈದಿಂದ್ರಿಯದ ಗುಣದೊಳು । ಸುಳಿಯಲೆಂತುಳಿವೆ ನೀನು ॥

(ತೈ ಪ. ಜೀ. ಸ್ಥ.೧೬–೧)

ಶಬ್ದಕ್ಕಾಗಿ ಮೃಗ, ಸ್ಪರ್ಶನಕ್ಕಾಗಿ ಗಜ, ರೂಪಕ್ಕಾಗಿ ಪತಂಗ, ರಸಕ್ಕಾಗಿ ಮೀನು ಮತ್ತು ಗಂಧಕ್ಕಾಗಿ ಭ್ರಮರಗಳು–ಹೀಗೆ ಒಂದೊಂದು ವಿಷಯದ ಮೋಹದಲ್ಲಿ ಇವುಗಳು ತಮ್ಮ ಪ್ರಾಣವನ್ನೇ ಹಾಳುಮಾಡಿಕೊಳ್ಳುತ್ತಿರುವಾಗ, ಐದು ವಿಷಯಗಳ ವ್ಯಾಮೋಹಿಯಾದ ಜೀವಾತ್ಮನು ಅದೆಂತು ಉಳಿಯುವನೆಂದು ಆಶ್ಚರ್ಯವನ್ನು ವ್ಯಕ್ತ ಮಾಡಿದ್ದಾರೆ. ಹೀಗೆ ಮೋಹದ ಮಹಾಮಹಿಮೆಯನ್ನು ಕೂಲಂಕಷವಾಗಿ ವಿಚಾರಿಸಿದ ವಿವೇಕಿಯು, ''ವಿರತ ವಜ್ರದಿ ಮೋಹಗಿರಿಯ ನುಗ್ಗೊಡೆವುದೇ ಚಂದಮಮ'' ಎಂದು, ನಿರ್ಮೋಹಿಯಾದ ಈ ನಿಜಗುಣರು ತಿಳಿಸಿದ ಮೋಹವಿಜಯದ ಉಪಾಯ ವನ್ನರಿತು, ವಿರತಿಯಿಂದ ಜೀವನ ಸಾಗಿಸಿದವನೇ ಈ ಮೋಹರೂಪವಾದ ಆಂತರ ಆಧ್ಯಾತ್ಮಿಕ ದುಃಖದಿಂದ ದೂರಾಗಬಲ್ಲನು.

ಈ ತೆರನಾಗಿ ಕಾಮ, ಕ್ರೋಧ, ಲೋಭ ಮತ್ತು ಮೋಹಗಳ ಹೊರತಾಗಿ ಅನಿಷ್ಟ ಪ್ರಾಪ್ತಿಯಾದಾಗ, ಅದರಿಂದ ಪಾರಾಗುವ ಉಪಾಯ ತೋಚದಿರುವಾಗ, ಉಂಟಾಗುವ ಮಾನಸಿಕ ಕಂಪನರೂಪವಾದ ''ಭಯ'', ಪರರ ಸಂಪತ್ತನ್ನು ಸಹನ ಮಾಡದಿರುವಿಕೆ ಎಂಬ ''ಈರ್ಷ್ಯೆ'', ಸ್ತ್ರೀ ಪುತ್ರಾದಿ ಸ್ನೇಹಾಸ್ಪದರಾದ ವ್ಯಕ್ತಿ ಅಲ್ಲವೇ ವಸ್ತುಗಳ ಅಗಲುವಿಕೆಯಿಂದುಂಟಾದ ಮನಸ್ಸಿನ ವ್ಯಾಕುಲೀ ಭಾವರೂಪವಾದ ''ವಿಷಾದ'' ಮತ್ತು ಅನಿಶ್ಚಿತ ಜ್ಞಾನರೂಪವಾದ ''ಸಂಶಯ''–ಇವುಗಳೂ ಕೂಡ ಆಂತರ ಆಧ್ಯಾತ್ಮಿಕ ದುಃಖಕ್ಕೆ ಕಾರಣಗಳಾಗುತ್ತವೆ. ಬಾಹ್ಯ ಮತ್ತು ಅಭ್ಯಂತರವೆಂದು ಎರಡು ವಿಧವಾಗಿ

ವಿಭಾಗಿಸಲ್ಪಟ್ಟು ಆಧ್ಯಾತ್ಮಿಕ ದುಃಖವನ್ನು ''ಆಧಿ–ವ್ಯಾಧಿ'' ಗಳೆಂಬುದಾಗಿಯೂ ಕರೆಯುತ್ತಾರೆ. ಇವುಗಳಲ್ಲಿ ಶಾರೀರಿಕ ದುಃಖವನ್ನು ''ವ್ಯಾಧಿ'' ಎಂಬುದಾಗಿಯೂ ಮತ್ತು ಮಾನಸಿಕವಾದ ದುಃಖವನ್ನು ''ಆಧಿ''ಎಂದೂ ಕರೆದಿದ್ದಾರೆ.

ಇಲ್ಲಿಯವರೆಗೆ ಆಧ್ಯಾತ್ಮಿಕ ದುಃಖವೆಂದರೇನು? ಅದು ಎಷ್ಟು ಪ್ರಕಾರವಾಗಿರುತ್ತದೆ? ಅದರ ನಿವಾರಣೋಪಾಯವೇನು? ಎಂಬುದರ ಬಗ್ಗೆ ಸವಿಸ್ತಾರವಾಗಿ ವಿಚಾರ ಮಾಡಿದ್ದಾಯಿತು. ಈಗ ಆ ಎರಡನೇ ತಾಪವಾದ ಆಧಿಭೌತಿಕ ದುಃಖದ ಬಗ್ಗೆ ವಿಚಾರಿಸೋಣ.

''ಭೂತಾನಿ ಅಧಿಕೃತ್ಯ ಜಾಯಮಾನಂ ದುಃಖಂ ಆಧಿಭೌತಿಕಮ್'' ಅಂದರೆ ಜರಾಯುಜಗಳಾದ ರಾಜ, ಕಳ್ಳ, ಸಿಂಹ, ಹುಲಿ, ಕೋಣಗಳಿಂದ, ಅಂಡಜಗಳಾದ– ಪಕ್ಷಿ, ಸರ್ಪ, ಮೊಸಳೆ, ಮೀನು ಮುಂತಾದವುಗಳಿಂದ, ಸ್ವೇದಜಗಳಾದ–ಹೇನು, ಕೂರಿ, ತಗಣೆಗಳಿಂದ ಹಾಗೂ ಉದ್ಭಿಜಗಳಾದ–ಗಿಡ, ಕಲ್ಲು ಮುಂತಾದವುಗಳಿಂದ– ಹೀಗೆ ನಾಲ್ಕೂ ಪ್ರಕಾರದ ಚರಾಚರಾತ್ಮಕ ಜೀವಜಂತುಗಳಿಂದ ಉಂಟಾಗುವ ದುಃಖವನ್ನು ಆಧಿಭೌತಿಕ ದುಃಖವೆನ್ನುವರು.

ಅದರಂತೆ, ''ದೇವಾನ್ ಅಧಿಕೃತ್ಯ ಜಾಯಮಾನಂ ದುಃಖಂ ಆಧಿದೈವಿಕಂ'' ಅಂದರೆ, ಯಕ್ಷ–ರಾಕ್ಷಸರಿಂದ ಹಾಗೂ ಬಿರುಗಾಳಿ, ಅತಿವೃಷ್ಟಿ, ಬಿಸಿಲಿನ ಬೇಗೆ, ಛಳಿಯ ಬಾಧೆ ಇತ್ಯಾದಿ ದೈವೀ ಅಥವಾ ಪ್ರಕೃತಿಯ ವಿಕೋಪದಿಂದ ಉಂಟಾಗುವ ದುಃಖಕ್ಕೆ ಆಧಿದೈವಿಕ ದುಃಖವೆನ್ನುತ್ತಾರೆ.

ಈ ಆಧಿಭೌತಿಕ ಹಾಗೂ ಆಧಿದೈವಿಕಗಳಾದ ದುಃಖದ್ವಯಗಳ ಸ್ವರೂಪವನ್ನು ಶ್ರೀಜಗದ್ಗುರು ರೇಣುಕಭಗವತ್ಪಾದರು ಸಂಕ್ಷೇಪವಾಗಿ ಹೀಗೆ ವರ್ಣಿಸಿದ್ದಾರೆ.

ಆಧಿಭೌತಿಕಮೇತದ್ಧಿ ದುಃಖಂ ರಾಜಾದಿಭೂತಜಮ್ ।
ಆಧಿದೈವಿಕಮಾಖ್ಯಾತಂ ಗ್ರಹಯಕ್ಷಾದಿಸಂಭವಮ್ ॥ (ಸಿ. ಶಿ. ೫.೬೫)

ಜಗತ್ತಿನಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬ ಜೀವಿಗೆ ಈ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ದುಃಖತ್ರಯಗಳು ಸದಾ ಸಂತಾಪವನ್ನು ಕೊಡುತ್ತಿರುವದರಿಂದ, ಇವುಗಳು ತಾಪತ್ರಯಗಳೆಂತಲೂ ಕರೆಯಿಸಿಕೊಳ್ಳುತ್ತವೆ. ಈ ತಾಪತ್ರಯಗಳ ನಿವಾರಣೆಗಾಗಿ ಶಾಸ್ತ್ರದಲ್ಲಿ ಮಣಿ, ಮಂತ್ರ ಹಾಗೂ ಔಷಧಗಳು ಪ್ರತಿಪಾದಿಸಲ್ಪಟ್ಟಿವೆ. ಆದರೂ ಈ ಉಪಾಯಗಳಿಂದ ಆ ತಾಪತ್ರಯಗಳು ಆತ್ಯಂತಿಕವಾಗಿ ನಿವೃತ್ತಿಹೊಂದದೇ, ತಾತ್ಕಾಲಿಕವಾಗಿ ಪರಿಹಾರ ಹೊಂದುವವು. ಆದ್ದರಿಂದ ಇವುಗಳ ಆತ್ಯಂತಿಕ ನಿವೃತ್ತಿಯು ಆತ್ಮಜ್ಞಾನದಿಂದ ಮಾತ್ರ ಸಾಧ್ಯವೆಂದು ವಿಚಾರಿಸಿದ ಕಪಿಲಾದಿ ಮಹರ್ಷಿಗಳು, ಸಾಂಖ್ಯಾದಿ ಶಾಸ್ತ್ರಗಳನ್ನು ರಚಿಸಿದ್ದಾರೆ.

ಆದರಂತೆ ವೀರಶೈವ ಆಚಾರ್ಯರಾದರೂ ಈ ದುಃಖತ್ರಯಗಳ ಸಂತಾಪದಿಂದ ಸಂಸಾರದಲ್ಲಿ ಹೇಯಬುದ್ಧಿಯುಂಟಾದ ಸಾಧಕನಿಗೆ ದೀಕ್ಷೆಯನ್ನು ಮಾಡಿ, ಇಷ್ಟ, ಪ್ರಾಣ ಹಾಗೂ ಭಾವಲಿಂಗಗಳ ಉಪಾಸನಾಮಾರ್ಗವನ್ನು ತಿಳಿಸಿ, ಷಟ್‌ಸ್ಥಲಾತ್ಮಕವಾದ

ಆಧ್ಯಾತ್ಮಿಕ ಮಾರ್ಗದಲ್ಲಿ ಆತನನ್ನು ಮುನ್ನಡಿ ಇಡಿಸಿ, ಅವನಿಗೆ ದುಃಖಗಳ ಅತ್ಯಂತಿಕ ನಿವೃತ್ತಿರೂಪವಾದ ಮುಕ್ತಿಮಾರ್ಗವನ್ನು ಉಪದೇಶಿಸಿದ್ದಾರೆ.

ಲೋಕದಲ್ಲಿಯ ಜನರು ಈ ದುಃಖತ್ರಯಗಳಿಂದ ಸಂತಪ್ತರಾದಾಗ ಅವುಗಳ ನಿವೃತ್ತಿಗಾಗಿ ಮದ್ಯಪಾನಮಾಡುವದು, ಮನೋರಂಜನ ಕ್ಷೇತ್ರಗಳಾದ ಸಿನೇಮಾ ನಾಟಕಗಳಿಗೆ ಹೋಗುವದು, ಈ ಎಲ್ಲ ವ್ಯವಹಾರಗಳನ್ನು ನಾವು ನೋಡುತ್ತೇವೆ. ಆದರೆ ಈ ಉಪಾಯಗಳಿಂದ ಕೆಲಕಾಲ ದುಃಖದ ಮರವೆಯಾಗುತ್ತದೇ ವಿನಹ ಅವುಗಳ ಆತ್ಯಂತಿಕ ನಿವೃತ್ತಿಯಾಗುವದಿಲ್ಲ. ದುಃಖಗಳನ್ನು ಮರೆಯುವ ಉಪಾಯಗಳನ್ನು ಹುಡುಕುವದಕ್ಕಿಂತ ದುಃಖಗಳ ಯಥಾರ್ಥಸ್ವರೂಪವನ್ನು ಅರಿತು, ಅವುಗಳಿಂದ ದೂರಾಗುವ ಉಪಾಯಗಳನ್ನು ಹುಡುಕುವದೇ ಶ್ರೇಷ್ಠವಾದ ಮಾರ್ಗವು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೦ ಜುಲೈ, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ - ೭

ದುಃಖೈರೇತೈರುಪೇತಸ್ಯ ಕರ್ಮಬದ್ಧಸ್ಯ ದೇಹಿನಃ ।
ಸ್ವರ್ಗೇ ವಾ ಯದಿ ವಾ ಭೂಮೌ ಸುಖಲೇಶೋ ನ ವಿದ್ಯತೇ (ಸಿ. ಶಿ. ೫.೬೬)

ಆಧ್ಯಾತ್ಮಿಕ, ಆಧಿಭೌತಿಕ ಹಾಗೂ ಆಧಿದೈವಿಕಗಳೆಂಬ ದುಖತ್ರಯಗಳಿಂದ ಕೂಡಿದ ಮತ್ತು ಪುಣ್ಯ–ಪಾಪವೆಂಬ ಕರ್ಮಪಾಶದಿಂದ ಬಂಧಿತನಾದ ಜೀವನಿಗೆ ಸ್ವರ್ಗದಲ್ಲೇ ಆಗಲಿ, ಭೂಮಿಯಲ್ಲಿಯೇ ಆಗಲಿ ಸುಖವೆಂಬುದು ಲೇಶಮಾತ್ರವೂ ಇರುವದಿಲ್ಲ.

ತಟಿತ್ಸು ವೀಚಿಮಾಲಾಸು ಪ್ರದೀಪಸ್ಯ ಪ್ರಭಾಸು ಚ ।
ಸಂಪತ್ಸು ಕರ್ಮಮೂಲಾಸು ಕಸ್ಯ ವಾ ಸ್ಥಿರತಾ ಮತಿಃ ? (ಸಿ. ಶಿ. ೫.೬೭)

ಮಿಂಚಿನ ಬಳ್ಳಿಗಳಲ್ಲಿಯೂ, ತೆರೆಗಳ ಸಾಲುಗಳಲ್ಲಿಯೂ ಮತ್ತು ದೀಪಜ್ವಾಲೆ ಗಳಲ್ಲಿಯೂ ಅವು ಶಾಶ್ವತವಾದವುಗಳೆಂಬ ಬುದ್ಧಿಯು ಹೇಗಿರುವದಿಲ್ಲವೊ, ಅದ ರಂತೆಯೇ, ಪ್ರಾರಬ್ಧಕರ್ಮವಶಾತ್ ಪ್ರಾಪ್ತವಾದ ಸಂಪತ್ತುಗಳಲ್ಲಿಯೂ ಸಹ, ಇವು ಸ್ಥಿರ ವಾದವುಗಳೆಂಬ ಬುದ್ಧಿಯು ವಿವೇಕಿಗಳಿಗೆಂದಿಗೂ ಉಂಟಾಗಲಾರದು.

ಕರ್ಮವೆಂಬ ಪಾಶದಿಂದ ಕಟ್ಟಲ್ಪಟ್ಟು ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕ ಗಳೆಂಬ ದುಃಖತ್ರಯಗಳಿಂದ ಕೂಡಿದ ಜೀವಾತ್ಮನು, ಸ್ವರ್ಗಕ್ಕೇ ಹೋಗಿರಲಿ ಅಥವಾ ಭೂಲೋಕದಲ್ಲಿಯಾದರೂ ಇರಲಿ, ಅವನಿಗೆ ತಿಲಮಾತ್ರವಾದರೂ ಆತ್ಮಸುಖವು ಅನುಭವಕ್ಕೆ ಬರಲಾರದು.

ಹಗ್ಗವನ್ನು ಕಟ್ಟಿ ಭಾವಿಯಲ್ಲಿ ಬಿಟ್ಟ ಕೊಡವು, ಹಗ್ಗವನ್ನು ಜಗ್ಗಿದಾಗ ಮೇಲಕ್ಕೆ ಹಾಗೂ ಹಗ್ಗವನ್ನು ಸಡಿಲುಬಿಟ್ಟಾಗ ಕೆಳಗೆ ಸರಿಯುವಂತೆ, ನಾವು ಮಾಡಿದ ಪುಣ್ಯ ಪಾಪಗಳೆಂಬ ಕರ್ಮರೂಪವಾದ ಹಗ್ಗವು ನಮ್ಮನ್ನು ಕಟ್ಟಿರುವದರಿಂದ, ಅದು ಯಾವ ಕಡೆಗೆ ಎಳೆದುಕೊಂಡು ಹೋಗುವದೋ, ಎಲ್ಲಿ ಉಣಿಸುವದೋ, ಎಲ್ಲಿ ಇರಿಸುವದೋ ಅಲ್ಲಿ, ಈ ದೇಹಧಾರಿಯಾದ ಜೀವಾತ್ಮನು, ಹೋಗಿ, ಉಂಡು, ವಾಸಿಸುತ್ತಾನೆ.

ಭೂಲೋಕದಲ್ಲಿ ಬಾಲ್ಯ, ಯೌವನ, ಮುಪ್ಪು ಮತ್ತು ಮರಣಗಳೆಂಬ ನಾಲ್ಕು ಅವಸ್ಥೆಗಳು ಪ್ರತಿಯೊಬ್ಬರಿಗೆ ಬರುವದುಂಟು. ವಿಚಾರಮಾಡಿದಾಗ ಈ ನಾಲ್ಕು ವಿಧವಾದ ಅವಸ್ಥೆಗಳಲ್ಲಿ ಸುಖಕ್ಕಿಂತಲೂ ದುಃಖವೇ ಅಧಿಕವಾಗಿ ತೋರುತ್ತದೆ.

ಜನಿಸುವಾಗ ಕೂಸು ಅಳುತ್ತಲೇ ಭೂಮಿಗೆ ಬೀಳುವದರಿಂದ, ಜನನವೂ ಒಂದು ಮಹಾ ದುಃಖವೇ. ಜನನದ ನಂತರ ಬಾಲಕ ಬಾಲಕಿಯರಿಗೆ ಕರ್ಣವೇಧ (ಕಿವಿಚುಚ್ಚುವದು)ದಿಂದ, ಮುಂದೆ ಶಾಲೆಗೆ ಹೋದಾಗ ಅಧ್ಯಯನಕ್ಕಾಗಿ ಗುರುಗಳಿಂದ ಹೊಡಿಸಿಕೊಳ್ಳುವದರಿಂದ, ಹೀಗೆ ಬಾಲ್ಯಕಾಲವೆಲ್ಲ ಪರಾಧೀನತೆಯಲ್ಲಿ ದುಃಖಮಯ ವಾಗಿಯೇ ವ್ಯಯವಾಗುತ್ತದೆ.

ಅಂತೆಯೇ ಶಿವಧರ್ಮೋತ್ತರದಲ್ಲಿ–

ಕೌಮಾರೇ ಕರ್ಣವೇಧೇನ ಮಾತಾಪಿತ್ರೋಶ್ಚ ತಾಡನಾತ್ ।
ಅಕ್ಷರಾಧ್ಯಯನಾದ್ಯೈಶ್ಚ ದುಃಖಂ ಸ್ಯಾದ್ಗುರುಶಾಸನಾತ್ ॥

ಎಂದು ಬಾಲ್ಯಾವಸ್ಥೆಯ ದುಃಖವನ್ನು ವರ್ಣಿಸಲಾಗಿದೆ.

ಇನ್ನು ಮನುಷ್ಯನು ತಾರುಣ್ಯಾವಸ್ಥೆಗೆ ಬಂದಾಗ ಮನಸ್ಸಿನಲ್ಲಿ ಉತ್ಪನ್ನಗಳಾದ ಕಾಮ, ರಾಗಾದಿ ವೃತ್ತಿಗಳಿಂದ ಸಂತಪ್ತನಾಗಿ, ರಾತ್ರಿಯಲ್ಲಿ ಸುಖವಾಗಿ ನಿದ್ರಿಸಲಾರ ಮತ್ತು ಹಗಲಿನಲ್ಲಿ ಕುಟುಂಬ ಸಂರಕ್ಷಣೆಗೆ ಬೇಕಾಗುವ ಹಣವನ್ನು ಹೇಗೆ ಸಂಪಾದಿಸ ಬೇಕು ? ಎನ್ನುವ ಚಿಂತೆಯಲ್ಲಿಯೇ ಕಾಲ ಕಳೆಯಬೇಕಾಗುವದು. ಹೀಗೆ ಮನುಷ್ಯನಿಗೆ ಪ್ರಾಪ್ತವಾದ ತಾರುಣ್ಯಾವಸ್ಥೆಯಾದರೂ ದಾರುಣ ದುಃಖದಾಯಕವೇ ಆಗಿದೆ.

ಅದರಂತೆ ವೃದ್ಧಾವಸ್ಥೆಯ ದುಃಖವಾದರೂ ಅವರ್ಣನೀಯವಾದುದು. ಮನೆಗೆ ಹತ್ತಿದ ಬೆಂಕಿಯು ಮನೆಯೊಳಗಿನ ಸಕಲ ಸಾಮಗ್ರಿಗಳನ್ನು ಸುಟ್ಟು ಭಸ್ಮಮಾಡುವಂತೆ, ವೃದ್ಧಾಪ್ಯವೆಂಬ ಅಗ್ನಿಯು, ಶರೀರವೆಂಬ ಮನೆಯನ್ನು ಪ್ರವೇಶಿಸಿ, ನೋಡುವ, ಕೇಳುವ, ಮುಟ್ಟುವ, ಮೂಸಿಸುವ, ಹೋಗುವ, ಬರುವ ಮತ್ತು ಆಲೋಚಿಸುವ ಮುಂತಾದ ಸಾಮರ್ಥ್ಯಗಳನ್ನು ಸುಟ್ಟುಹಾಕಿ, ಶರೀರವನ್ನು ನಿರುಪಯುಕ್ತವನ್ನಾಗಿ ಮಾಡುತ್ತದೆ.

ಬಾಯೊಳಗಿನ ಹಲ್ಲುಗಳೆಲ್ಲ ಹೋಗಿ. ವಾಣಿಯು ಕುಂಠಿತವಾಗಿ, ಇಂದ್ರಿಯಗಳೆಲ್ಲ ದುರ್ಬಲವಾಗಿರುವದನ್ನು ನೋಡಿದರೆ, ಈ ಮುಪ್ಪಿನ ಮನುಷ್ಯನಿಗೆ ಮತ್ತೆ ಬಾಲ್ಯತನ ವನ್ನು ತಂದುಕೊಟ್ಟಂತೆ ತೋರುತ್ತದೆ. ಅಂತೆಯೇ ವೃದ್ಧಾವಸ್ಥೆಯಲ್ಲಿ ಮುದುಕರ ಸ್ವಭಾವವಾದರೂ ಬಾಲಕರಂತೆಯೇ ಆಗುತ್ತದೆ. ತನ್ನೆಲ್ಲ ಶಕ್ತಿಯನ್ನೂ ಹಾಳುಮಾಡಿ ಕೊಂಡ ಮುದುಕನ ಮಾತನ್ನು ಯಾರೂ ಕೇಳುವುದಿಲ್ಲ, ಹೆಂಡತಿಯೂ ಸರಿಯಾಗಿ ಸೇವೆಮಾಡುವುದಿಲ್ಲ, ಇಷ್ಟೇ ಅಲ್ಲ, ಮಕ್ಕಳೂ ಸಹ ಶತ್ರುಗಳಾಗುತ್ತಾರೆ. ಇದೆಲ್ಲವನ್ನೂ ಸುಭಾಷಿತಕಾರನು ಹೀಗೆ ವರ್ಣಿಸಿದ್ದಾನೆ–

ಗಾತ್ರಂ ಸಂಕುಚಿತಂ ಗತಿರ್ವಿಗಲಿತಾ ಭ್ರಷ್ಟಾ ಚ ದಂತಾವಲಿಃ ।
ದೃಷ್ಟಿರ್ನಶ್ಯತಿ ವರ್ಧತೇ ಬಧಿರತಾ ವಕ್ತ್ರಂ ಚ ಲಾಲಾಯತೇ ।
ವಾಕ್ಯಂ ನಾದ್ರಿಯತೇ ಚ ಬಾಂಧವಜನೈರ್ಭಾರ್ಯಾ ನ ಶುಶ್ರೂಷತೇ
ಹಾ ಕಷ್ಟಂ ಪುರುಷಸ್ಯ ಜೀರ್ಣವಯಸಃ ಪುತ್ರೋऽಪ್ಯಮಿತ್ರಾಯತೇ ॥

ಈ ತೆರನಾಗಿ ಮುಪ್ಪಿನಲ್ಲಿಯೂ ಸುಖ ಸಿಗಲಿಲ್ಲವೆಂದಾಗ, ಮರಣದಲ್ಲಿ ಸುಖ ಸಿಗುವದೆಂತು ? ಅಂತೆಯೇ ಶ್ರೀಜಗದ್ಗುರು ರೇಣುಕ ಭಗವತ್ಪಾದರು, ಕರ್ಮಬದ್ಧನಾದ ಜೀವಾತ್ಮನು ಭೂಲೋಕದಲ್ಲಿ ಜನ್ಮದಿಂದ ಮರಣದವರೆಗೆ ದುಃಖವನ್ನೇ ಅನುಭವಿಸು ವವನಾದ್ದರಿಂದ, ಇವನಿಗೆ ಸುಖವೆಂತು ಸಿಕ್ಕೀತು ? ಎಂದು ಅಚ್ಚರಿಗೊಂಡಿದ್ದಾರೆ.

ಏನೋ ಪುಣ್ಯವಿಶೇಷದಿಂದ ಸ್ವರ್ಗಕ್ಕೆ ಹೋದರೂ, ನಿಶ್ಚಿಂತನಾಗಿ ಅಲ್ಲಿಯ ಸುಖವನ್ನು ಅನುಭವಿಸಲಾರನು. ಏಕೆಂದರೆ, ಪುಣ್ಯ ತೀರಿದ ಬಳಿಕ ಈ ಲೋಕವನ್ನು

ಬಿಟ್ಟು ಹೋಗಬೇಕಲ್ಲ ? ಎನ್ನುವ ಚಿಂತೆಯನ್ನು ಮೊದಲೇ ಮಾಡುತ್ತ, ಇದಿರಿಗಿರುವ ಸುಖಾನುಭೂತಿಯನ್ನು ಮಾಡುವದಿಲ್ಲ. ಹೀಗೆ ಸ್ವರ್ಗದಲ್ಲಿಯಾದರೂ ಜೀವಾತ್ಮನಿಗೆ ಸುಖ ದೊರೆಯುವದು ದುಸ್ತರವಾದುದು.

ಗತಸಾರೇಽತ್ರ ಸಂಸಾರೇ ಸುಖಭ್ರಾಂತಿಃ ಶರೀರಿಣಾಮ್ ।
ಲಾಲಾಪಾನಮಿವಾಂಗುಷ್ಠೇ ಬಾಲಾನಾಂ ಸ್ತನ್ಯವಿಭ್ರಮಃ ॥

ಎನ್ನುವ ಸುಭಾಷಿತದಂತೆ, ರಸರಹಿತವಾದ ತನ್ನ ಬೆರಳನ್ನು ತಾಯಿಯ ಮೊಲೆ ಎಂದು ಭ್ರಮಿಸಿ ಚೀಪುವ ಕೂಸಿನಂತೆ, ಸುಖರಹಿತವಾದ ಸಂಸಾರದಲ್ಲಿ ಭ್ರಮೆಯಿಂದ ಸುಖಬುದ್ಧಿಯುಂಟಾಗಿ, ಜೀವಿಗಳೆಲ್ಲ ದುಃಖವನ್ನೇ ಅನುಭವಿಸುತ್ತಿದ್ದಾರೆ.

ಇನ್ನು ಜಗತ್ತಿನಲ್ಲಿಯ ಸಕಲ ಸುಖ–ಸೌವಿಧ್ಯಗಳು ಧನದಿಂದಲೇ ಪ್ರಾಪ್ತವಾಗುವವೆಂದರಿತು, ಧನಲೋಲುಪರಾಗಿ ತಿರುಗುತ್ತಿರುವ ಜೀವಿಗಳನ್ನುದ್ದೇಶಿಸಿ, ಶ್ರೀ ರೇಣುಕ ಭಗವತ್ಪಾದರು–

ತಟಿತ್ಸು ವೀಚಿಮಾಲಾಸು ಪ್ರದೀಪಸ್ಯ ಪ್ರಭಾಸು ಚ ।
ಸಂಪತ್ಸು ಕರ್ಮಮೂಲಾಸು ಕಸ್ಯ ವಾ ಸ್ಥಿರತಾ ಮತಿಃ ? ॥ (ಸಿ. ಶಿ. ೫.೬೭)

ಎಂಬುದಾಗಿ ಉಪದೇಶಿಸಿದ್ದಾರೆ.

ನೀರಿನ ತರಂಗಗಳು ಮತ್ತು ದೀಪದ ಜ್ವಾಲೆಗಳು ಸ್ಥಿರವಾಗಿ ನಿಲ್ಲದೇ ಕ್ಷಣಕಾಲದಲ್ಲಿ ಮುಂದೆ ಹರಿದು ಹೋಗುವಂತೆ ಸುಕೃತ ವಿಶೇಷದಿಂದ ಪ್ರಾಪ್ತವಾದ ಸಂಪತ್ತಾದರೂ, ಯಾರಲ್ಲಿಯೂ ಸ್ಥಿರವಾಗಿ ನಿಲ್ಲುವುದೇ ಇಲ್ಲ. ಹರಿಯುವ ನೀರಿನಲ್ಲಿರುವ ಕಮಲದ ಮೇಲೆ ನಿಂತಿರುವ ಲಕ್ಷ್ಮಿಯ ಚಿತ್ರವನ್ನು ನೋಡಿದರೆ, ಲಕ್ಷ್ಮಿಯ ಚಂಚಲ ಸ್ವಭಾವವು ಅನುಭವಗಮ್ಯವಾಗುವದು.

ಬಹು ಪರಿಶ್ರಮದಿಂದ ಧನವನ್ನು ಗಳಿಸಿದರೆ, ಮೊದಲು ಅಣ್ಣ ತಮ್ಮಂದಿರ ಕಾಟವು, ಎರಡನೆಯದಾಗಿ ಕಳ್ಳರ ಮತ್ತು ರಾಜರ ಭಯವು, ಮೂರನೆಯದು ಅಗ್ನಿಯ ಭಯವು ಇನ್ನು ಯಾರಿಗೂ ದೊರೆಯದಂತೆ ಭೂಮಿಯಲ್ಲಿ ಹುಗಿದಿಟ್ಟರೆ, ಯಕ್ಷಾದಿ ದೈವೀಶಕ್ತಿಗಳು ಅಪಹರಿಸುವವು. ಒಂದು ವೇಳೆ, ಇವೆಲ್ಲವುಗಳಿಂದ ಧನವು ರಕ್ಷಿತವಾದರೆ, ಕೊನೆಗೆ ಮಕ್ಕಳೇ ದುರಾಚಾರಿಗಳಾಗಿ, ಧನವನ್ನು ಮನಬಂದಂತೆ ಹಾಳು ಮಾಡುತ್ತಾರೆ. ಈ ತೆರನಾಗಿ, ಚಂಚಲವಾದ ಈ ಸಂಪತ್ತು ಸುಖಕ್ಕಿಂತಲೂ ದುಃಖವನ್ನೇ ಉಂಟುಮಾಡುತ್ತದೆ.

ಬಧಿರಯತಿ ಕರ್ಣವಿವರಂ ವಾಚಂ
ಮೂಕಯತಿ ನಯನಮಂಧಯತಿ ।
ವಿಕೃತಯತಿ ಗಾತ್ರಯಷ್ಟಿಂ
ಸಂಪದ್ರೋಗೋಽಯಮದ್ಭುತೋ ರಾಜನ್ ॥

ಎನ್ನುವ ಸುಭಾಷಿತದಂತೆ, ಸಂಪತ್ತೆಂಬ ರೋಗವು, ಮಹಾ ಅದ್ಭುತವಾದದ್ದು. ಈ ರೋಗಾಕ್ರಾಂತನಾದ ಮನುಷ್ಯನು, ಕಿವಿಗಳಿದ್ದೂ ಕಿವುಡನಂತೆ, ಬಾಯಿ ಇದ್ದೂ ಮೂಕ

ನಂತೆ; ವಿನಯಾದಿ ಗುಣಗಳಿಲ್ಲದೇ ಅಹಂಕಾರದಿಂದ ಸೆಟೆದು ನಡೆಯುತ್ತಾನೆ. ಅವನ ಈ ರೋಗಕ್ಕೆ ತಕ್ಕ ಔಷಧವೆಂದರೆ ಬಡತನ ಒಂದೇ. ಆದ್ದರಿಂದ ಶ್ರೀ ಬಸವಣ್ಣನವರು--

''ಹಾವು ತಿಂದವರ ನುಡಿಸಬಹುದು ;
ಗರ ಹೊಡೆದವರ ನುಡಿಸಬಹುದು ;
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ !
ಬಡತನವೆಂಬ ಮಂತ್ರವಾದಿ ಹೋಗಲು
ಒಡನೆ ನುಡಿದರು ಕೂಡಲಸಂಗಮದೇವ !''

ಈ ವಚನದಲ್ಲಿ, ಸಂಪದ್ರೋಗದ ವಿಕಾರವನ್ನೂ ಹಾಗೂ ಅದರ ಪರಿಹಾರದ ಉಪಾಯ ವನ್ನೂ ಬಹು ಅನುಭವಪೂರ್ವಕವಾಗಿ ವರ್ಣಿಸಿದ್ದಾರೆ.

ಶ್ರೀ ನಿಜಗುಣ ಶಿವಯೋಗಿಗಳಾದರೂ–ಸಂಪತ್ತೆಂದರೆ ವಿಷಮಿಶ್ರಿತವಾದ ಜೇನು ತುಪ್ಪವಿದ್ದಂತೆ. ವಿಷಮಿಶ್ರಿತ ಜೇನುತುಪ್ಪವು, ಮೊದಲು ನಾಲಿಗೆಗೆ ಮಧುರವಾಗಿ ತೋರಿದರೂ, ಕೊನೆಗೆ ಪ್ರಾಣವನ್ನೇ ಅಪಹರಿಸುವಂತೆ ಸಂಪತ್ತಾದರೂ ಮೊದ ಮೊದಲು ಸ್ವಲ್ಪ ಸುಖವನ್ನು ಕೊಟ್ಟಂತೆ ಮಾಡಿ, ನಂತರ ಅನೇಕ ಚಿಂತೆಗಳನ್ನು ತಂದೊಡ್ಡಿ ಜೀವಿಗಳ ಪ್ರಾಣವನ್ನು ತೆಗೆದುಕೊಳ್ಳುತ್ತದೆ. ಆದಕಾರಣ, ಅಸ್ಥಿರವಾದ ಸಂಪತ್ತನ್ನು ಕೂಡಿಡುವ ಹವ್ಯಾಸಕ್ಕೆ ಹೋಗದೇ, ದುಡಿಮೆಯಿಂದ ಬಂದ ಸಂಪತ್ತನ್ನು , ಕೈಲಾದಮಟ್ಟಿಗೆ ಸತ್ಪಾತ್ರದಲ್ಲಿ ಸವಿಸಿ, ತಾನೂ ಉಂಡು, ನಿಶ್ಚಿಂತನಾಗಿ ಭಗವದ್ಭಜ ನೆಯಲ್ಲಿ ಆಸಕ್ತನಾಗಬೇಕೆಂದು, ಜೀವಿಗಳನ್ನುದ್ದೇಶಿಸಿದ್ದಾರೆ.

ಮಾತರಂ ಪಿತರಂ ಪುತ್ರಂ ಭ್ರಾತರಂ ವಾ ಸುಹೃತ್ತಮಮ್ ।
ಲೋಭಾವಿಷ್ಟೋ ನರೋ ಹಂತಿ ಸ್ವಾಮಿನಂ ವಾ ಸಹೋದರಮ್ ॥

ಧನದ ಲೋಭಿಯು, ಹಣದ ದುರಾಶೆಯಿಂದ, ತಂದೆ, ತಾಯಿ, ಮಗ, ಅಣ್ಣ ತಮ್ಮ ಗೆಳೆಯ ಹಾಗೂ ಒಡೆಯ ಇವರ ಪ್ರಾಣವನ್ನು ತೆಗೆದುಕೊಳ್ಳುವಲ್ಲಿ ಹಿಂಜರಿಯುವ ದಿಲ್ಲ. ಹೀಗೆ ಲೋಭದಿಂದ ಕ್ರೋಧವು ಉತ್ಪನ್ನವಾಗುತ್ತದೆ. ಕ್ರೋಧವು ಅತಿರೇಕ ವಾದಾಗ ದ್ರೋಹವು ಬೆಳೆಯುತ್ತದೆ. ದ್ರೋಹದ ಪರಿಣಾಮವಾಗಿ ಶಾಸ್ತ್ರಜ್ಞನಾದ ಮನುಷ್ಯನೂ ಸಹ ನರಕಭಾಜನನಾಗುತ್ತಾನೆ. ಸಂಪತ್ತಿನ ವಾಸ್ತವಿಕತೆಯನ್ನರಿತ ಅಣ್ಣನವರು--

''ಸಂಸಾರವೆಂಬುದೊಂದು ಗಾಳಿಯ ಸೊಡರು,
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ !
ಇದ ನೆಚ್ಚಿ ಕೆಡಬೇಡ ಸಿರಿಯೆಂಬುದ !
ಮರೆಯದೇ ಪೂಜಿಸು ಕೂಡಲಸಂಗಮದೇವನ''

ಎಂದು ಜೀವಿಗಳನ್ನು ಸಂಪತ್ತಿನ ಮೋಹದಿಂದ ಎಚ್ಚರಗೊಳಿಸಿದ್ದಾರೆ.

ಶ್ರೀ ಸಮರ್ಥ ರಾಮದಾಸರ ಹೇಳಿಕೆಯಂತೆ–ಶ್ರೀ ಶಿವಾಜಿಮಹಾರಾಜರು ಬಡತನದಿಂದ ಬಳಲುತ್ತಿರುವ ತುಕಾರಾಮನ ಮನೆಗೆ, ಸಾಕಷ್ಟು ಸಂಪತ್ತನ್ನು ಕೊಟ್ಟು ಕಳಿಸಿದರು. ಮನೆಯಲ್ಲಿ ತುಕಾರಾಮನಿರಲಿಲ್ಲ. ತುಕಾರಾಮನ ಹೆಂಡತಿಯು ರಾಜರು

ಕಳಿಸಿದ ಸಂಪತ್ತೆಲ್ಲವನ್ನೂ ಆದರದಿಂದ ಸ್ವೀಕರಿಸಿ, ಗಂಡ ಬರುವದರೊಳಗಾಗಿ ಹೊಸಬಟ್ಟೆಯನ್ನುಟ್ಟು, ಆಭರಣಗಳಿಂದ ಅಲಂಕೃತಳಾಗಿ ನಿಂತಿದ್ದಳು. ಮನೆಗೆ ಬಂದು ನೋಡಿದ ತುಕಾರಾಮನು ಆಶ್ಚರ್ಯಚಕಿತನಾಗಿ, ಹೆಂಡತಿಯನ್ನು ಕರೆದು, ಜೀಜಾ! ಪಾಂಡುರಂಗನ ಭಕ್ತರಾದ ನಮಗೆ, ಈ ರಾಜಸ ವೇಷ ಸಲ್ಲದು, ಎಂದು ತಿಳಿಹೇಳಿ, ಆ ಎಲ್ಲ ಸಂಪತ್ತನ್ನೂ ಮನೆಯಿಂದ ಹೊರಗಿರಿಸಿ, ಪಾಂಡುರಂಗನ ಬಳಿ ಹೋಗಿ, '' ನ ಲಘೇ ಧನ ಮುಕ್ತಿ ಸಂಪದಾ ಸಂತ ಸಂಗದೇಹೀ ಸದಾ'' ಹೇ ಪಾಂಡುರಂಗಾ ನನಗೆ ಸಂಪತ್ತಾಗಲೀ, ಮುಕ್ತಿಯಾಗಲೀ, ಏನೂ ಬೇಡ ; ಆದರೆ ಸತ್ಪುರುಷರ ಸಹವಾಸವನ್ನು ಮಾತ್ರ ಕರುಣಿಸು–ಎಂದು ಬೇಡಿಕೊಂಡನಂತೆ.

ಹೀಗೆ ಅನೇಕ ಶರಣರ–ಸಂತರ ಜೀವನ ಚರಿತ್ರೆಗಳನ್ನು ಅವಲೋಕಿಸಿದಾಗ, ಸಂಪತ್ತಿನಲ್ಲಿ ಸ್ಥಿರಬುದ್ಧಿಯನ್ನು ತಾಳದೇ, ಭಗವದ್ಭಕ್ತಿಯಲ್ಲಿ ಆಸಕ್ತರಾಗಿರುವದನ್ನು ಕಾಣುತ್ತೇವೆ. ಕಾರಣ, ಶ್ರೀ ರೇಣುಕ ಭಗವತ್ಪಾದರ ಉಪದೇಶದಂತೆ, ಕರ್ಮಮೂಲ ಗಳಾದ ಸಂಪತ್ತಿನಲ್ಲಿ ಸ್ಥಿರಬುದ್ಧಿಯನ್ನು ತ್ಯಾಗಮಾಡಿ, ವಿವೇಕ ಸಂಪನ್ನರಾಗಿ, ಭಗವಂತ ನಲ್ಲಿಯೇ ಸ್ಥಿರಬುದ್ಧಿಯನ್ನು ತಾಳುವದೇ, ಪ್ರತಿಯೊಬ್ಬರ ಕರ್ತವ್ಯವಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೧ ಜುಲೈ, ೧೯೮೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ-೮

ಮಲಕೋಶೇ ಶರೀರೇಽಸ್ಮಿನ್ ಮಹಾದುಃಖವಿವರ್ಧನೇ ।
ತಡಿದಂಕುರಸಂಕಾಶೇ ಕೋ ವಾ ಮೋದೇತ ಪಂಡಿತಃ ? (ಸಿ. ಶಿ. ೫.೭೮)

ಮಲ-ಮೂತ್ರಾದಿಗಳಿಗಾಶ್ರಯವಾದ, ತಾಪತ್ರಯಗಳನ್ನು ವಿವರ್ಧಿಸುವ ಮತ್ತು ಮಿಂಚಿನಂತೆ ಕ್ಷಣಕಾಲ ತೋರಿ ಇಲ್ಲದಂತಾಗುವ ಈ ಶರೀರದಲ್ಲಿ, ಯಾವ ವಿವೇಕಿಯೂ ಪ್ರೀತಿಪಡಲಾರನು.

ನಿತ್ಯಾನಂದಚಿದಾಕಾರಮಾತ್ಮತತ್ತ್ವಂ ವಿಹಾಯ ಕಃ ।
ವಿವೇಕೀ ರಮತೇ ದೇಹೇ ನಶ್ವರೇ ದುಃಖಭಾಜನೇ ? (ಸಿ. ಶಿ. ೫.೬೯)

ಶಾಶ್ವತವೂ ಆನಂದಸ್ವರೂಪವೂ ಆದ ಆತ್ಮತತ್ತ್ವವು ಶರೀರದಲ್ಲಿ ಇರುತ್ತದೆ. ಅದೇ ಪರಮಪ್ರೇಮಕ್ಕೆ ಆಸ್ಪದವಾದುದು. ಅಂತಹ ಆತ್ಮತತ್ತ್ವವನ್ನು ಮರೆತು, ಯಾವ ವಿವೇಕಿಯೂ, ದುಃಖಾಶ್ರಯವಾದ ಶರೀರದಲ್ಲಿ ಆನಂದವನ್ನು ಪಡೆಯಲಾರನು.

ಯುಗ-ಯುಗಾಂತರ, ಕಲ್ಪ-ಕಲ್ಪಾಂತರಗಳಿಂದ ಒಂದಲ್ಲ ಎರಡಲ್ಲ, ೮೪ ಲಕ್ಷ ಪ್ರಕಾರಗಳಾದ ಶರೀರಗಳಲ್ಲಿ ವಾಸಮಾಡಿ, ದೇಹಾಭಿಮಾನವನ್ನು ಪಡೆದು, ತನ್ನಂತರಂಗದ ಆತ್ಮಜ್ಯೋತಿಯನ್ನರಿಯದೇ, ಸಂಸಾರ ಚಕ್ರದಲ್ಲಿ ತಿರುಗುತ್ತಿರುವ ಜೀವಾತ್ಮನನ್ನುದ್ದೇಶಿಸಿ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶರೀರದ ವಾಸ್ತವಿಕತೆಯನ್ನು ಇಲ್ಲಿ ಉಪದೇಶಿಸುತ್ತಲಿದ್ದಾರೆ- ''ಮಲಕೋಶೇ ಶರೀರೇಽಸ್ಮಿನ್'' ಎಂಬುದಾಗಿ.

ಸಾಮಾನ್ಯವಾಗಿ, ಸಿರಿವಂತರು, ಮನೆಯಲ್ಲಿ, ಕಬ್ಬಿಣದ ತಿಜೋರಿಗಳಲ್ಲಿ, ಬೆಲೆಬಾಳುವ ಮುತ್ತು, ರತ್ನ, ವಜ್ರ ಮತ್ತು ವೈಢೂರ್ಯಾದಿ ಸಾಮಗ್ರಿಗಳನ್ನು ಇಟ್ಟಿರುವದನ್ನು ನೋಡುತ್ತೇವೆ. ಆದರೆ, ನಮ್ಮ ಶರೀರವೆಂಬ ಖಜಾನೆಯಲ್ಲಿ ಏನು ತುಂಬಿದೆ? ಎಂದು ವಿಚಾರಿಸಿ ನೋಡಲಾಗಿ, ವಿವೇಕಿಗಳಿಗೆ, ಬಹುವಿಧ ದುರ್ಗಂಧಗಳಿಂದ ಕೂಡಿದ, ಮಲಿನ ಪದಾರ್ಥಗಳೇ ದೃಷ್ಟಿಗೋಚರವಾಗುವವು.

''ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ,
ಎಲುವಿನ ತಡಿಕೆ, ಕೀವಿನ ಹಡಿಕೆ,
ಸುಡಲೀ ದೇಹವ, ಒಡಲವಿಡಿದು.
ಚೆನ್ನಮಲ್ಲಿಕಾರ್ಜುನನರಿ ಮರುಳೆ.''

ಎಂದು, ತನ್ನ ದೇಹಕ್ಕಾಗಿ ಆತುರನಾಗಿ ಆಗಮಿಸಿದ ಕಾಮಾಂಧನಾದ ಕೌಶಿಕನಿಗೆ ತಿಳಿಹೇಳಿದ್ದಾಳೆ.

ಶರೀರದಲ್ಲಿ ಸ್ವಾಭಾವಿಕಗಳಾದ ಸೌಂದರ್ಯ ಹಾಗೂ ಸುಗಂಧಗಳಿದ್ದರೆ, ಪ್ರತಿಯೊಬ್ಬರೂ, ದಿನಾಲು, ಶರೀರಕ್ಕೆ ಸುಗಂಧದ್ರವ್ಯಗಳನ್ನು ಹಚ್ಚಿಕೊಳ್ಳುವದು, ನಾನಾ ವರ್ಣದ ಬೆಲೆಬಾಳುವ ವಸ್ತ್ರಗಳನ್ನು ಹೊದ್ದುಕೊಳ್ಳುವದು ಮತ್ತು ಬಂಗಾರದ

ಆಭರಣಗಳಿಂದ ಅಲಂಕರಿಸಿಕೊಳ್ಳುವದು–ಇವೇ ಮುಂತಾದ ಶರೀರಸಂಸ್ಕಾರದ ವ್ಯವಹಾರದಲ್ಲಿ ತೊಡಗುತ್ತಿರಲಿಲ್ಲ. ಆದ್ದರಿಂದ ಮನುಷ್ಯನು ತನ್ನ ಅಮಂಗಲವಾದ ದಿಗಂಬರ ದೇಹವನ್ನು, ವಸ್ತ್ರ ಹಾಗೂ ಭೂಷಣಗಳಿಂದ ಮುಚ್ಚುತ್ತಾನಲ್ಲದೇ, ತನ್ನ ದೇಹದ ದುರ್ಗಂಧವು ಅನ್ಯರಿಗೆ ಗುರುತಾಗಬಾರದೆಂಬ ಉದ್ದೇಶದಿಂದಲೇ, ಸ್ನೋ, ಚಂದನ, ಪೌಡರ್ ಮುಂತಾದ ಸುಗಂಧ ದ್ರವ್ಯಗಳನ್ನು ಶರೀರಕ್ಕೆ ಹಚ್ಚಿಕೊಳ್ಳುತ್ತಾನೆ.

ಇಷ್ಟೆಲ್ಲ ಸಂಸ್ಕಾರವನ್ನು ಮಾಡಿದರೂ ನಾಯಿಯ ಬಾಲವು ಅದೆಷ್ಟು ಪ್ರಯತ್ನಿಸಿದರೂ ಪುನಃ ಡೊಂಕೇ ಆಗುವಂತೆ, ಮಲಗಿ ಏಳುವದರೊಳಗಾಗಿ, ಮನುಷ್ಯನ ಕಣ್ಣು ಕಿವಿ, ಬಾಯಿ ಮುಂತಾದ ನವದ್ವಾರಗಳೆಲ್ಲ ದುರ್ಗಂಧವನ್ನು ಹೊರಸೂಸಲು ಪ್ರಾರಂಭಿಸುತ್ತವೆ.

ಶರೀರಕ್ಕೆ ಅಸಾಧ್ಯವಾದ ಅರ್ಧಾಂಗವಾಯು ಮುಂತಾದ ರೋಗಗಳು ಇಲ್ಲವೇ ಮುಪ್ಪು ಆವರಿಸಿ, ತನ್ನ ದೇಹವನ್ನು, ಆಗ, ತಾನು ಸ್ವಚ್ಛಮಾಡಿಕೊಳ್ಳಲು ಅಸಮರ್ಥರಾದ ಪ್ರತಿಯೊಬ್ಬರಿಗೆ, ಶರೀರದ ಅಮಂಗಲತೆ ಮತ್ತು ಅಪವಿತ್ರತೆಗಳು, ಅನುಭವ ಗಮ್ಯಗಳಾಗುತ್ತವೆ. ಅಂತೆಯೇ, ಮೈತ್ರೇಯ್ಯುಪನಿಷತ್ತಿನಲ್ಲಿ–''ಭಗವಾನ್ ಶರೀರಮಿದಂ ಮೈಥುನಾದೇವೋದ್ಭೂತಂ ಸಂವಿದಪೇತಂ ನಿರಯ ಇವ ಮೂತ್ರದ್ವಾರೇಣ ನಿಷ್ಕ್ರಾಂತಮಸ್ಥಿ ಭಿಶ್ಚಿತಂ ಮಾಂಸೇ ನಾನುಲಿಪ್ತಂ ಚರ್ಮಣಾವಬದ್ಧಂ ವಿಣ್ಮೂತ್ರವಾತಪಿತ್ತ ಕಫಮಜ್ಜಾಮೇದೋವ ಸಾಭಿರನ್ಯೈಶ್ಚ ಮಲೈರ್ಬಹುಭಿಃ ಪರಿಪೂರ್ಣಮೇತಾದೃಶೇ ಶರೀರೇ ವರ್ತಮಾನಸ್ಯ ಭಗವಂಸ್ತ್ವಂನೋ ಗತಿರಿತಿ'' (೧–೩) ಶರೀರವೆಂದರೆ ದಂಪತಿಗಳ ಮೈಥುನದ ಮಲಿನದಿಂದ ಉದ್ಭವಿಸಿ, ಮೂತ್ರದ್ವಾರದಿಂದ ಹೊರಬಂದು, ಎಲುವಿನಿಂದ ಸ್ಥಿರಗೊಂಡು, ಮಾಂಸದಿಂದ ಲಿಪ್ತವಾಗಿ, ಚರ್ಮದಿಂದ ಹೊದಿಸಲ್ಪಟ್ಟಿದ್ದಾಗಿ, ಮಲ, ಮೂತ್ರ, ವಾತ, ಪಿತ್ತ ಕಫ ಮತ್ತು ಮಜ್ಜಾ ಮುಂತಾದ ಅನೇಕ ಮಲಿನ ಪದಾರ್ಥಗಳಿಂದ ಕೂಡಿದ ಅಪವಿತ್ರವಾದ ಒಂದು ಪದಾರ್ಥವು. ಇಂತಹ ಈ ಶರೀರವೇ ನಾನೆಂದು ಅಭಿಮಾನಿಸುವ ಜೀವಾತ್ಮನಿಗೆ ಭಗವಂತನ ಪ್ರಾಪ್ತಿಯು ಅದೆಂದಿಗೂ ಆಗದೆಂದು ಉಪದೇಶಿಸಲ್ಪಟ್ಟಿದೆ.

ಸ್ಪೃಷ್ಟ್ವಾ ಸ್ವದೇಹಸ್ರೋತಾಂಸಿ ಮೃತ್ತೋಯೈಃ ಶೋಧ್ಯತೇ ಕರಃ ।
ತಥಾಪ್ಯಶುಚಿಭಾಂಡಸ್ಯ ನ ವಿರಜ್ಯಂತಿ ಕಿಂ ಜನಾಃ ? ॥

ಮನುಷ್ಯನು ಶೌಚಾದಿ ಕ್ರಿಯೆಗಳಿಗೆ ಹೋಗಿಬಂದರೆ, ಮಲ–ಮೂತ್ರ ತಾಗಿದ ಕೈಯನ್ನು, ಮಣ್ಣು ಹಚ್ಚಿ, ನೀರಿನಿಂದ ತೊಳೆದು ಶುದ್ಧಿಮಾಡಿಕೊಳ್ಳುತ್ತಾನೆ. ಇಂತಹ ಅನೇಕ ಮಲಿನತೆಯ ಭಾಂಡವಾದ, ಶರೀರದಿಂದ ಮನುಷ್ಯನು ಅದೇಕೋ ! ವಿರತಿಯನ್ನು ಹೊಂದುವದಿಲ್ಲವೆಂದು ಅನುಭವಿಗಳು ಅಚ್ಚರಿಗೊಳ್ಳುತ್ತಲಿದ್ದಾರೆ.

ಒಂದು ಊರಿನಲ್ಲಿ, ತಾರುಣ್ಯಾವಸ್ಥೆಯಲ್ಲಿಯೇ ವಿಧವೆಯಾದ ಓರ್ವ ಬ್ರಾಹ್ಮಣ ಹೆಣ್ಣುಮಗಳಿದ್ದಳು. ಮನೆಯಲ್ಲಿ ತಾನೋರ್ವಳೇ ಭಗವಂತನ ಚಿಂತನೆಯಲ್ಲಿ ಕಾಲಹರಣ ಮಾಡುತ್ತಿದ್ದಳು. ಆ ಊರಿನ ಓರ್ವ ಕಾಮಾಂಧನು, ಅಸಹಾಯಕಳಾದ ಈ ಅಬಲೆಯನ್ನು ತನ್ನ ಕಾಮಜ್ವಾಲೆಗೆ ಆಹುತಿಮಾಡಿಕೊಳ್ಳುವದಾಗಿ ಹೊಂಚುಹಾಕಿ,

ಒಂದು ದಿನ ಸಾಯಂಕಾಲ, ಅವಳ ಮನೆಗೆ ಬಂದನು. ಎಂದೂ ಬಾರದ ಆ ದುಷ್ಟ ವ್ಯಕ್ತಿಯು ತನ್ನ ಮನೆಗೆ ಅದೇಕೆ ಬಂದನೋ ? ಎಂದು ಮೊದಲು ಗಾಬರಿಗೊಂಡರೂ, ಹೆದರದೇ, ಆ ಹೆಣ್ಣು ಮಗಳು, ಆತನೊಡನೆ, ಶಿಷ್ಟಾಚಾರದ ಮಾತುಗಳನ್ನು ಆಡಲು ಆರಂಭಿಸಿದಳು. ಈ ದುಷ್ಟ ಮನುಷ್ಯನು, ಲಾವಣ್ಯಯುಕ್ತವಾದ ಆ ಬ್ರಾಹ್ಮಣಿಯ ಶರೀರವನ್ನು ನೋಡುತ್ತಿದ್ದಂತೆಯೆ, ಕಾಮವು ನೆತ್ತಿಗೇರಿ ಅವಳ ಶರೀರದತ್ತ ಕೈಚಾಚಿದನು.

ಧರ್ಮಿಷ್ಟಳಾದ ಹೆಣ್ಣುಮಗಳು, ಯುಕ್ತಿಯಿಂದ ತನ್ನ ಪಾತಿವ್ರತ್ಯ ಧರ್ಮವನ್ನು ಉಳಿಸಿಕೊಳ್ಳುವದಕ್ಕಾಗಿ ನುಡಿಯುತ್ತಾಳೆ– ಓ ಪ್ರಿಯನೇ ! ನಿನ್ನ ಅಭಿಲಾಷೆಯ ಅರಿವು ನನಗಾಗಿದೆ. ಅರಸುವ ಬಳ್ಳಿಯು ಕಾಲಿಗೆ ತೊಡಗಿದಂತೆ, ಭಗವಂತನು ನಿನ್ನನ್ನು ನನ್ನಲ್ಲಿಗೆ ಕಳಿಸಿ, ನಿನ್ನ ಹಾಗೂ ನನ್ನ ಇಬ್ಬರ ಮನೋರಥವನ್ನು ಪೂರ್ಣಮಾಡಿದ್ದಾನೆ. ಆದರೆ, ಪ್ರಕೃತಿಯ ಧರ್ಮದಂತೆ ಇಂದು ನಾನು ಅಪವಿತ್ರಳಿದ್ದೇನೆ, ನಾಳೆ ನೀವು ಇದೇ ಸಮಯಕ್ಕೆ ಸರಿಯಾಗಿ ಬನ್ನಿರಿ, ಎಂದು ವಿನಯವಾಗಿ ನುಡಿದಳು.

ಬ್ರಾಹ್ಮಣಿಯ ಮಾತನ್ನು ಕೇಳಿದ ಆ ವ್ಯಕ್ತಿಯು, ನಾಳಿನ ದಿನವನ್ನು ನೆನೆಯುತ್ತ ಮನೆಗೆ ಹೋದನು. ಇಂದು ಹೇಗೋ ಸುಳ್ಳು ಹೇಳಿ ಉಳಿದೆ ; ಆದರೆ ನಾಳೆ ಇವನಿಂದ ಪಾರಾಗುವದು ಹೇಗೆ ? ಎಂದು ರಾತ್ರಿಯಲ್ಲಾ ವಿಚಾರಿಸಿದ ಹೆಣ್ಣುಮಗಳಿಗೆ, ಒಂದು ಸೂಕ್ತವಾದ ವಿಚಾರ ಹೊಳೆಯಿತು. ಅದೇನೆಂದರೆ, ನನ್ನ ಶರೀರದ ಸೌಂದರ್ಯವೇ ಪರಪುರುಷರ ಚಿತ್ತಾಕರ್ಷಣಕ್ಕೆ ಕಾರಣವಾಗಿದೆ. ಶರೀರದಲ್ಲಿಯ ಮಲ, ಮೂತ್ರ, ರಕ್ತ ಮತ್ತು ಮಾಂಸಾದಿಗಳೇ ಶರೀರ ಸೌಂದರ್ಯಕ್ಕೆ ಕಾರಣವಲ್ಲವೇ ? ಎಂದು ವಿಚಾರಿಸಿದ ಅವಳು, ರಾತ್ರಿಯಲ್ಲಿ ಬಹು ತೀಕ್ಷ್ಣವಾದ ಜುಲಾಬಿನ ಔಷಧವನ್ನು ಸೇವಿಸಿ ಮಲಗಿದಳು.

ಬೆಳಗಾಗುವದರೊಳಗಾಗಿ ಶೌಚಕ್ರಿಯೆಯು ಪ್ರಾರಂಭವಾಯಿತು. ಆ ಬ್ರಾಹ್ಮಣಿಯು ಮನೆಯ ಹಿತ್ತಲದಲ್ಲಿ ಒಂದು ಮಣ್ಣಿನ ಹರವಿಯನ್ನು ಹುಗಿದು, ಅದರಲ್ಲಿಯೇ ಶೌಚಕ್ಕೆ ಹೋಗಿ ಬರುತ್ತಿದ್ದಳು. ಬೆಳಗಿನಜಾವದಲ್ಲಿ ಪ್ರಾರಂಭವಾದ ಈ ಕ್ರಿಯೆಯು, ಸಾಯಂಕಾಲದವರೆಗೆ ಅವ್ಯಾಹತವಾಗಿ ನಡೆದೇ ಇತ್ತು. ಶರೀರದಲ್ಲಿಯ ಮಲವೆಲ್ಲ ಹೊರಹೋಗಿ ರಕ್ತಭೇದಿಯಾಗಿ ಅವಳ ಶರೀರವೆಲ್ಲ ನಿಃಶಕ್ತವೂ, ನಿಃಸ್ತೇಜವೂ ಆಯಿತಲ್ಲದೇ, ಕಣ್ಣುಗಳು ಒಳಸೇರಿದ್ದವು ; ತುಂಬಿದ ಗಲ್ಲಗಳೆಲ್ಲ ಗುಳಿಬಿದ್ದವು ; ಶರೀರದ ರಕ್ತಮಾಂಸವೆಲ್ಲ ಹೋಗಿ, ಅವಳ ಶರೀರವು, ಎಲುಬಿನ ಪಂಜರವಾಗಿ, ನೋಡುವವರಿಗೆ ಭಯಾನಕವಾಗಿ ತೋರುತ್ತಿತ್ತು. ಈ ರೀತಿಯಾದ ಸ್ಥಿತಿಯಲ್ಲಿ ಆ ಹೆಣ್ಣು ಮಗಳು ನಿಶ್ಶಕ್ತಳಾಗಿ, ಒಂದು ಹೊರಸಿನ ಮೇಲೆ ಮಲಗಿದಳು.

ನಿನ್ನೆಯಿಂದಲೇ ಮನಸ್ಸಿನಲ್ಲಿ ನೂರಾರು ಮಂಡಿಗೆಗಳನ್ನು ಮಾಡುತ್ತಿದ್ದ ಆ ವ್ಯಕ್ತಿಯು, ಕಾಮನ ಔತಣಕ್ಕಾಗಿ, ರಾತ್ರಿ ಈ ಬ್ರಾಹ್ಮಣಿಯ ಮನೆಗೆ ಬಂದು, ಅವಳ ಈ ಸ್ಥಿತಿಯನ್ನು ನೋಡಿ, ಅಚ್ಚರಿಗೊಂಡು ಕೇಳಿದ.....ನಿನ್ನೆ ನಾನು ನೋಡಿದ ನಿನ್ನ ದೇಹದ ಸೌಂದರ್ಯವೆಲ್ಲ ಎಲ್ಲಿ ಹೋಯಿತು ? ಎಂದು. ಆಗ ಪವಿತ್ರ ಮನದ ಬ್ರಾಹ್ಮಣಿಯು ಹೇಳುತ್ತಾಳೆ–ತಾವು ನಿನ್ನೆ ಕಂಡ ಆ ಸೌಂದರ್ಯವನ್ನು ಹಿತ್ತಲದಲ್ಲಿ ಒಂದು ಹರವಿಯಲ್ಲಿ ಹಾಕಿ ಮುಚ್ಚಿ ಇಟ್ಟಿದ್ದೇನೆ, ಹೋಗಿ ನೋಡಿರಿ ಎಂದಳು.

ಬಂದ ವ್ಯಕ್ತಿಯು ಆತುರದಲ್ಲಿ ಓಡಿಹೋಗಿ ಗಡಿಗೆಯ ಮೇಲೆ ಮುಚ್ಚಿದ ಮುಚ್ಚಳಗಳನ್ನು ತೆಗೆದಾಗ ಒಳಗಿನ ದುರ್ಗಂಧವನ್ನು ಸಹಿಸುವದಾಗದೇ ಓಡಿ ಬಂದನು. ಆಗ ಆ ಹೆಣ್ಣುಮಗಳು ತಿಳಿಹೇಳುತ್ತಾಳೆ– ಅಣ್ಣಾ! ನೀನು ಆ ಗಡಿಗೆಯಲ್ಲಿ ನೋಡಿಬಂದ ಆ ಹೊಲಸೇ, ಈ ಚರ್ಮದ ಗಡಿಗೆ (ಶರೀರ)ಯಲ್ಲಿ ಇದ್ದಾಗ, ಇದು ಸುಂದರವಾಗಿ ಕಾಣುತ್ತಿತ್ತು, ವಾಸ್ತವಿಕವಾಗಿ ಈ ಶರೀರದಲ್ಲಿ ತೋರುವ ಸೌಂದರ್ಯವು ಮಾಯಿಕ ವಾದದ್ದು ಮತ್ತು ಕ್ಷಣಿಕವಾದದ್ದು. ಇಂತಹ ಕ್ಷಣಿಕ ಸೌಂದರ್ಯಕ್ಕೆ ಮಾರುಹೋಗಿ, ನಿನ್ನ ಧರ್ಮವನ್ನು ಹಾಳುಮಾಡಿಕೊಳ್ಳಬೇಡ– ಎಂದು ಬುದ್ಧಿಯನ್ನು ಹೇಳಿ, ತನ್ನ ಧರ್ಮ ವನ್ನು ಕಾಪಾಡಿಕೊಂಡದ್ದಲ್ಲದೆ, ಆತನನ್ನು ಧರ್ಮಜ್ಞನನ್ನಾಗಿ ಮಾಡಿ ಕಳಿಸಿದಳು.

ಈ ಶರೀರವು ತಾನು ಅಮಂಗಲವೂ, ದುರ್ಗಂಧವೂ ಇರುವುದಲ್ಲದೇ, ಇದರ ಸಂಬಂಧವನ್ನು ಮಾಡಿದ ಎಲ್ಲ ಸುಗಂಧ ಪದಾರ್ಥಗಳನ್ನೂ ದುರ್ಗಂಧಯುಕ್ತವನ್ನಾಗಿ ಮಾಡುತ್ತದೆ. ಪ್ರತಿದಿವಸ ಮನೆಯಲ್ಲಿ ತಯಾರಿಸಿದ ಪಕ್ವಾನ್ನಗಳು, ಈ ಶರೀರದ ಸಂಬಂಧ ಮಾಡುವದಕ್ಕಿಂತ ಮೊದಲು, ನೋಡಲು ಸುಂದರಗಳೂ, ಸುಗಂಧಗಳೂ ಆಗಿರುತ್ತವೆ. ಆದರೆ, ಆ ಪದಾರ್ಥಗಳು, ಮನುಷ್ಯನ ಉದರವನ್ನು ಪ್ರವೇಶಿಸಿ, ಹೊರಬಂದಾಗ, ಅಮಂಗಲವೂ ಮತ್ತು ದುರ್ಗಂಧವೂ ಆಗಿ ತೋರುತ್ತವೆ. ಪ್ರತಿದಿವಸ ಪ್ರತಿಯೊಬ್ಬರೂ ಅನುಭವಿಸುವ ಈ ಪ್ರಸಂಗವನ್ನು ನೋಡಿಕೊಂಡು ಶರೀರದ ಅಪವಿತ್ರತೆಯ ಬಗ್ಗೆ ಊಹಿಸಬೇಕಾಗಿದೆ.

ಇದೂ ಅಲ್ಲದೇ, ಯಾರಾದರೂ ಮನೆಯೊಳಗೆ ಇಲ್ಲವೇ ಶರೀರದೊಳಗೆ, ಒಂದು ಭೂತ ಪ್ರವೇಶಿಸಿತೆಂದರೆ, ಆ ಮನೆಯಲ್ಲಿಯಾಗಲಿ, ಶರೀರದಲ್ಲಿಯಾಗಲಿ ಸುಖಶಾಂತಿ–ಗಳು ಹಾಳಾಗಿಹೋಗುತ್ತವೆ ; ಆದರೆ ಐದು ಭೂತಗಳ ನಿವಾಸ ಸ್ಥಾನವಾದ ಈ ಶರೀರ ದಿಂದ, ಆ ದಾರಿಗೆ ತಾನೇ ಹೇಗೆ ಸುಖ ಸಿಕ್ಕೀತು ? ಅಂತೆಯೇ ಶ್ರೀ ನರಹರಿ ಸ್ವಾಮಿಯು– ''ಪಂಚಭೂತನಿವಾಸೋಽಯಂ ಕಥಂ ತತ್ರ ಸುಖೀಭವೇತ್'' (ಬೋಧ ಸಾರ ; ಪುಟ ೧೭) ಎಂದು ಅಚ್ಚರಿಯನ್ನು ವ್ಯಕ್ತಪಡಿಸಿದ್ದಾರೆ.

ಮಳೆಗಾಲದಲ್ಲಿ, ಕೋಲ್ಮಿಂಚುಗಳು, ಆಕಾಶದಲ್ಲಿ ಮಿಂಚಿ, ಕ್ಷಣಕಾಲದಲ್ಲಿ ಕಣ್ಮರೆ ಯಾಗುವಂತೆ, ಈ ಶರೀರವಾದರೂ, ಪ್ರಾರಬ್ಧ ಕರ್ಮವಿರುವವರೆಗೆ ತೋರಿ, ಮತ್ತೆ ಕಣ್ಮರೆಯಾಗಿಬಿಡುತ್ತದೆ. ಇದೆಲ್ಲವನ್ನೂ ಪರ್ಯಾಲೋಚಿಸಿದ ವಿವೇಕಿಯು, ಶರೀರದಲ್ಲಿ ನಾನು ಮತ್ತು ನನ್ನದೆಂಬ ಮೋಹವನ್ನು ತ್ಯಜಿಸಬೇಕೆಂಬುದಾಗಿ ಶ್ರೀಜಗದ್ಗುರು ರೇಣುಕ ಭಗವತ್ಪಾದರು ಉಪದೇಶಿಸಿದ್ದಾರೆ.

ತೋರುವ ಶರೀರವು ನಶ್ವರವೂ, ಅಮಂಗಲವೂ ಇದೆ ಎಂದಾಗ, ಮನುಷ್ಯನು ಯಾವುದನ್ನು ನಂಬಬೇಕು? ಎನ್ನುವ ಜಿಜ್ಞಾಸೆಯುಂಟಾದಾಗ, ಶ್ರೀಜಗದ್ಗುರು ರೇಣುಕ ಭಗವತ್ಪಾದರು......

ನಿತ್ಯಾನಂದಚಿದಾಕಾರಮಾತ್ಮತತ್ತ್ವಂ ವಿಹಾಯ ಕಃ ।
ವಿವೇಕೀ ರಮತೇ ದೇಹೇ ನಶ್ವರೇ ದುಃಖಭಾಜನೇ ? ॥

ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಅನಿತ್ಯ, ಅಶುಚಿ ಮತ್ತು ದುಃಖರೂಪವಾದ ಈ ಶರೀರದಲ್ಲಿ, ನಿತ್ಯ, ಶುಚಿ ಮತ್ತು ಆನಂದರೂಪವಾದ ಆತ್ಮತತ್ತ್ವವಿದೆ. ನಿತ್ಯಾನಿತ್ಯ ವಸ್ತುಗಳ ವಿವೇಕಿಯಾದವನು, ಅನಿತ್ಯಾದಿ ಧರ್ಮಗಳಿಂದ ಕೂಡಿದ ಶರೀರದಿಂದ, ತನ್ನ ಮನೋವೃತ್ತಿಯನ್ನು ಪರಾವರ್ತಿಸಿಕೊಂಡು, ಸಚ್ಚಿದಾನಂದಸ್ವರೂಪವಾದ ಆತ್ಮಚಿಂತನೆಯಲ್ಲಿ ತೊಡಗಿಸಿ, ನಿತ್ಯಸುಖಿಯಾಗಿ ಬಾಳುತ್ತಾನೆ. ಆತ್ಮವಿಷಯಕವಾದ ಈ ನಿತ್ಯ ಸುಖಾನುಭವವೇ ಮುಕ್ತಿಯು. ಜೀವನ್ಮುಕ್ತಿಯ ವಿಲಕ್ಷಣವಾದ ಈ ಆನಂದವನ್ನು ಪಡೆಯಬೇಕಾದರೆ ಪ್ರತಿಯೊಬ್ಬರೂ ದೇಹಾಭಿಮಾನವನ್ನು ತ್ಯಜಿಸಲೇಬೇಕಾಗುವದು. ಆದ್ದರಿಂದ, ಶ್ರೀ ನಿಜಗುಣ ಶಿವಯೋಗಿಗಳು ''ಪಡೆವೆ ನೀನೆಂದಿಗೆ ಪರಮುಕ್ತಿಸುಖವನು। ಕೆಡುವ ಕಾಯದ ಮೋಹವನು ಮಾಣೆ ಮನುಜ॥'' (ಕೈ ಪ. ಜೀ. ಸ್ಥ. ೫) ಎಂಬುದಾಗಿ, ದೇಹಾಭಿಮಾನಿಯಾದ ಜೀವನನ್ನು ಎಚ್ಚರಗೊಳಿಸಿದ್ದಾರೆ.

ದೇಹವು ಅಮಂಗಲವೂ, ನಶ್ವರವೂ ಮತ್ತು ದುಃಖಭಾಜನವೂ ಇದೆ– ಎಂದು ತಿಳಿದು, ದೇಹವನ್ನೇ ತ್ಯಾಗಮಾಡುವದು ಬುದ್ಧಿವಂತಿಕೆಯಲ್ಲ; ಆದರೆ, ದೇಹಾಭಿಮಾನವನ್ನು ತ್ಯಾಗಮಾಡುವದು ಮಹತ್ವದ್ದಾಗಿದೆ. ಪರಮಾತ್ಮನು, ಈ ಅಮಂಗಲವಾದ ದೇಹವನ್ನು, ಮಂಗಲಮಯನಾದ ಆತ್ಮನನ್ನು ತಿಳಿದುಕೊಳ್ಳುವದಕ್ಕಾಗಿ ದಯಪಾಲಿಸಿದ್ದಾನೆ. ಅದಕ್ಕಾಗಿ ಅಣ್ಣನವರು–

''ಕೂಡಲಸಂಗಮದೇವರನ್ನು ಒಲಿಸ ಬಂದ ಪ್ರಸಾದಕಾಯವನ್ನು ಕೆಡಲಾಗದು'' ಎಂದಿದ್ದಾರೆ.

ಜೀವಿಸಿರುವವರೆಗೆ ದೇಹವನ್ನು ಆರೋಗ್ಯವನ್ನಾಗಿಟ್ಟುಕೊಂಡು ಅದರ ಕುರೂಪ–ಸುರೂಪತೆಯ ಬಗ್ಗೆ ಅಹಂಕರಿಸದೇ, ದೇಹಾದಿಗಳಿಗೆ ಅಧಿಷ್ಠಾನವೂ, ಆನಂದಸ್ವರೂಪವೂ ಆದ ಆತ್ಮತತ್ತ್ವವನ್ನು ಅರಿತು, ಅದರ ಚಿಂತನೆಯಲ್ಲಿಯೇ, ತನ್ನ ಹೆಚ್ಚಿನ ಆಯುಷ್ಯವನ್ನು ಕಳೆಯುವದೇ ಮನುಷ್ಯನ ಮುಖ್ಯವಾದ ಗುರಿ–ಎಂಬ ತತ್ತ್ವವನ್ನು, ಶ್ರೀ ಭಗವತ್ಪಾದರು ಇಲ್ಲಿ ಉಪದೇಶಿಸಿದ್ದಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ - ೯

ವಿವೇಕೀ ಶುದ್ಧಹೃದಯೋ ನಿಶ್ಚಿತಾತ್ಮಸುಖೋದಯಃ ।
ದುಃಖಹೇತೌ ಶರೀರೇಽಸ್ಮಿನ್ ಕಲತ್ರೇ ಚ ಸುತೇಷು ಚ ॥ ೧೪ ॥

ಸುಹೃತ್ಸು ಬಂಧುವರ್ಗೇಷು ಧನೇಷು ಕುಲಪದ್ಧತೌ ।
ಅನಿತ್ಯಬುದ್ಧ್ಯಾಸರ್ವತ್ರ ವೈರಾಗ್ಯಂ ಪರಮಶ್ನುತೇ (ಸಿ. ಶಿ. ೫.೨೦-೨೧)

ನಿರ್ಮಲಾಂತಃಕರಣನೂ, ಶಾಸ್ತ್ರೋಪದೇಶ-ಸ್ವಾನುಭವಗಳಿಂದ ನಿಶ್ಚ ಯಿಸಲ್ಪಟ್ಟ ಆತ್ಮಸುಖಸ್ಫುರಣವುಳ್ಳವನೂ ಆದ ನಿತ್ಯಾನಿತ್ಯ ವಿವೇಕಿಯು, ಪೂರ್ವೋಕ್ತ ದುಃಖಗಳಿಗೆ ಕಾರಣಗಳಾದ ಶರೀರ, ಹೆಂಡತಿ, ಮಕ್ಕಳು, ಸ್ನೇಹಿತರು, ನೆಂಟರು, ದುಡ್ಡು, ಜಾತಿ ಮುಂತಾದವುಗಳಲ್ಲಿ ಅನಿತ್ಯ ಬುದ್ಧಿಯುಳ್ಳವನಾಗಿ, ಅವುಗಳಲ್ಲೆಲ್ಲಾ ಮಹಾವೈರಾಗ್ಯ ವನ್ನೇ ಹೊಂದುವನು.

ತನ್ನಾತ್ಮವೊಂದನ್ನುಳಿದು, ಶರೀರವೇ ಮೊದಲುಗೊಂಡು, ಜಗತ್ತಿನ ಸಕಲ ಪದಾರ್ಥಗಳೂ, ಜೀವಾತ್ಮನಿಗೆ ದುಃಖದಾಯಕಗಳೇ ಎಂಬ, ಬಹು ಮಾರ್ಮಿಕವಾದ ತತ್ತ್ವವನ್ನು, ಶ್ರೀ ಜ. ರೇಣುಕ ಭಗವತ್ಪಾದರು ಇಲ್ಲಿ ಉಪದೇಶಿಸಿದ್ದಾರೆ.

''ದುಃಖವನ್ನೇ ಸುಖವೆಂಬರು ಅವಿವೇಕಿಗಳು'' ಎನ್ನುವ ಶ್ರೀ ನಿಜಗುಣ ಶಿವಯೋಗಿಗಳ ವಚನದಂತೆ, ಅವಿವೇಕದ ಮಾಹಾತ್ಮ್ಯದಿಂದ, ಅಜ್ಞಜೀವಿಗಳಿಗೆಲ್ಲ ದುಃಖ ದಾಯಕಗಳಾದ ಶರೀರ, ಹೆಂಡತಿ, ಮಕ್ಕಳು, ಸಂಪತ್ತು, ಜಾತಿ ಮುಂತಾದವು ಗಳಲ್ಲಿ, ಸುಖದ ಭ್ರಾಂತಿಯಾಗಿರುವದರಿಂದ, ತಮ್ಮ ಅಮೂಲ್ಯವಾದ ಜೀವನವನ್ನೇ, ಅವುಗಳಿ ಗಾಗಿ ಧಾರೆಯೆರೆಯುತ್ತಲಿದ್ದಾರೆ. ಬೇವಿನಗಿಡದಲ್ಲಿಯ ಹುಳಕ್ಕೆ, ಬಹುದಿನಗಳ ಸಂಸ್ಕಾರ ದಿಂದ ಅದರ ವಿಷರಸವೇ ಸಿಹಿಯಾಗಿ ಮಾರ್ಪಡುವಂತೆ, ಅನೇಕ ಜನ್ಮಗಳಲ್ಲಿ ಅನವರತ ವಾಗಿ ಸೇವಿಸಿದ ಹೆಂಡರು ಮತ್ತು ಮಕ್ಕಳು, ಧನ-ಕನಕಾದಿಗಳೆಂಬ ವಿಷಯಗಳಲ್ಲಿಯ ಕ್ಷಣಿಕ ಸುಖವನ್ನೇ ಶಾಶ್ವತವಾದ ಸುಖವೆಂದು ಅರಿತ ಜೀವಿಗಳು, ಪುನಃ ಪುನಃ ಅವುಗಳತ್ತಲೇ ಹೋಗುತ್ತಿರುವರು.

ಹೆಂಡರು- ಮಕ್ಕಳು ಮುಂತಾದವರಿಂದ ದೊರೆಯುವ ಸುಖವು, ನಿಜವಾಗಿ ಅವರಲ್ಲಿಯೇ ಇದ್ದಿದ್ದರೆ, ಕಾಲಾಂತರದಲ್ಲಿ ಅವರೊಡನೆ ಜಗಳವಾಡಿ ದುಃಖ ಹೊಂದುವ ಪ್ರಸಂಗಗಳೇ ಬರುತ್ತಿರಲಿಲ್ಲ, ಆದ್ದರಿಂದ, ವಿಷಯಗಳ ಪ್ರಥಮ ಪ್ರಾಪ್ತಿಯಾದಾಗ, ಮನಸ್ಸಿನ ವ್ಯಾಕುಲತೆಯು ತೊಲಗಿ, ಕ್ಷಣಕಾಲ ಶಾಂತಿ ದೊರೆತಾಗ, ಆ ಶಾಂತವಾದ ಮನಸ್ಸಿನಲ್ಲಿ, ಸುಖರೂಪನಾದ ಆತ್ಮನ ಪ್ರತಿಬಿಂಬವು ಬೀಳುವದರಿಂದ, ಆ ಕಾಲದಲ್ಲಿ ಆತ್ಮಸುಖದ ಅನುಭವವಾಗುತ್ತಿದ್ದರೂ, ಮಧ್ಯದಲ್ಲಿ ವಿಷಯಗಳು ನಿಮಿತ್ತಗಳಾದ್ದರಿಂದ, ಅವುಗಳಿಂದಲೇ ಸುಖವುಂಟಾಯಿತೆಂಬ ಭ್ರಮೆಯು, ಜೀವಿಗಳಿಗೆ ಉಂಟಾಗುತ್ತದೆ. ಅದಕ್ಕಾಗಿ, ವಿಷಯಗಳ ನಿಮಿತ್ತದಿಂದ ದೊರೆಯುವ ಸುಖವಾದರೂ ಆತ್ಮಸುಖವೆಂದೇ ಅರಿಯಬೇಕು. ಅಂತೆಯೇ ಒರ್ವ ಹಿಂದೀ ಕವಿಯು-

''ತಾರೀಖ ತುಮ್ಹೆ ಬತಲಾಯೇಗಿ
ದುನಿಯಾ ಮೇ ಸುಖಕಾ ನಾಮ ನಹೀ ||
ಜಿಸ ದಿಲಮೇ ಖ಼ೌಸ ಕಾ ಸಿಕ್ಕಾ ಹೈ
ಉಸ ದಿಲಕೋ ಆರಾಮ ನಹಿ ||''

ಸಂಸಾರದಲ್ಲಿ ಸುಖವಿದೆ ಎಂಬ ಭ್ರಾಂತಿಯಿಂದ ಜೀವನದ ಕೊನೆಯುಸಿರಿನವರೆಗೆ ಪ್ರಯತ್ನಿಸಿ ನಿರಾಶರಾಗಿ ಸಾಯುತ್ತಿದ್ದಾಗ. ಆ ಅಂತಿಮ ಸಮಯವು, ''ಸಂಸಾರದಲ್ಲಿ ಸುಖವಿಲ್ಲ'' ಎನ್ನುವ ಮಾರ್ಮಿಕವಾದ ಮಾತನ್ನು ಹೇಳುತ್ತದೆಯಂತೆ, ಆದರೆ ಮನುಷ್ಯನ ಮನಸ್ಸಿನಲ್ಲಿ ದುರಾಶೆ ಎಂಬುದು ವಾಸಮಾಡಿರುವದರಿಂದ ವಿಚಾರಕ್ಕಾಸ್ಪದವನ್ನು ಕೊಡದೇ, ಈತನನ್ನು ಅವಿಶ್ರಾಂತವಾಗಿ ಪ್ರಯತ್ನಿಸಹಚ್ಚುತ್ತದೆ.

ಮೀನುಗಳನ್ನು ಹಿಡಿಯುವ ಮೀನುಗಾರನು, ಜಾಲದ ಕೆಲವು ಭಾಗಗಳಲ್ಲಿ ತಿನ್ನುವ ಪದಾರ್ಥಗಳಿಂದ ಲೇಪಿತಗಳಾದ ಕಬ್ಬಿಣದ ಕೊಕ್ಕೆ ಮೊಳೆಗಳನ್ನು ಜೋತುಬಿಟ್ಟಾಗ, ಆ ಪದಾರ್ಥಗಳ ಆಶೆಯಿಂದ, ತಿನ್ನಲು ಬಾಯಿಹಾಕಿದ ಮೀನುಗಳು, ಆ ಮೊಳೆಗಳಿಗೆ ಸಿಕ್ಕಿಬೀಳುವಂತೆ, ದುಃಖಮಯಗಳಾದ ಸಕಲ ವಿಷಯಗಳ ಮೇಲೆ, ಸೂಕ್ಷ್ಮವಾಗಿರುವ ಸುಖದ ಪರದೆ ಇರುವದರಿಂದ, ಆ ಅಲ್ಪ ಸುಖಕ್ಕಾಗಿ ಧಾವಿಸಿ ಹೋದ ಜೀವಿಗಳೆಲ್ಲ, ಈ ದುಃಖ ಸಾಗರದಲ್ಲಿ ಸಿಕ್ಕಿ ಬಿದ್ದಿದ್ದಾರೆ.

''ಸ್ವಾರಥಲಾಗಿ ಕರಹಿ ಸಬ ಪ್ರೀತಿ ಸುರನರಕಿ ಯಹ ಹೈ ರೀತಿ''

ಎನ್ನುವ ತುಲಸಿದಾಸರ ಅನುಭವದ ನುಡಿಯನ್ನು ಕೇಳಿದಾಗ–ಜಗತ್ತೆಲ್ಲವೂ ಸ್ವಾರ್ಥಪೂರ್ಣವಾಗಿದೆ ; ಗಂಡ–ಹೆಂಡತಿ, ತಂದೆ–ಮಕ್ಕಳು, ಬಂಧು–ಬಳಗ, ಇವರಲ್ಲಿಯ ಪರಸ್ಪರವಾದ ಪ್ರೀತಿಯ ವ್ಯವಹಾರವು, ತಮ್ಮ ತಮ್ಮ ಸ್ವಾರ್ಥಕ್ಕಾಗಿಯೇ– ಎನ್ನುವದು ಸರ್ವಾನುಭವಸಿದ್ಧವಾದುದು. ಇದೇ ಮಾತನ್ನೇ ಯಾಜ್ಞವಲ್ಕ್ಯಮಹರ್ಷಿಗಳು, ಪತ್ನಿಯಾದ ಮೈತ್ರಾದೇವಿಗೆ, ''ನ ವಾ ಅರೇಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ । ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ'' ಇಂತೆಂಬುದಾಗಿ, ಪರಿಪರಿಯಾಗಿ ಉಪದೇಶಿಸಿದ್ದಾರೆ. ಜಗತ್ತಿನಲ್ಲಿಯ ಈ ತತ್ತ್ವವನ್ನು ಕಂಡ ಶ್ರೀ ಶಂಕರಾಚಾರ್ಯರಾದರೂ–

ಕಾ ತೇ ಕಾಂತಾ ? ಕಸ್ತೇ ಪುತ್ರಃ ? ಸಂಸಾರೋಽಯಮತೀವ ವಿಚಿತ್ರಃ ।
ಕಸ್ಯ ತ್ವಂ ಕಃ ? ಕುತ ಆಯಾತಃ ? ತತ್ತ್ವಂ ಚಿಂತಯ ತದಿಹ ಭ್ರಾಂತಃ ||
(ಭಜಗೋವಿಂದಮ್, ಶ್ಲೋ. ೮)

ಎಂಬ ಮೋಹಮುದ್ಗರದ ಈ ಪದ್ಯದಲ್ಲಿ–ಹೆಂಡರು, ಮಕ್ಕಳು ಮುಂತಾದವರು, ವಾಸ್ತವಿಕವಾಗಿ, ಒಬ್ಬರನ್ನೊಬ್ಬರು ಪ್ರೀತಿಸಲಾರರು ; ಆದ್ದರಿಂದ, ಈ ಸಂಸಾರವು ವಿಚಿತ್ರವಾದುದೆಂದು ತಿಳಿದು, ನೀನಾರು ? ಎಲ್ಲಿಂದ ಬಂದೆ ? ಎಂಬುದನ್ನು ಚಿಂತಿಸು– ಎಂದು ಮನುಷ್ಯರನ್ನು ಎಚ್ಚರಿಸಿದ್ದಾರೆ.

ವಿಷಯ ಭೋಗಿಯಾದರೆ ರೋಗದ ಭಯ, ಉತ್ತಮ ಕುಲದಲ್ಲಿ ಜನಿಸಿದರೆ ಆಚಾರ ತಪ್ಪಿ ಕುಲದಿಂದ ಚ್ಯುತನಾದೇನೆಂಬ ಭಯ, ಸಾಕಷ್ಟು ಸಂಪತ್ತನ್ನು ಗಳಿಸಿದ್ದರೆ,

ರಾಜರ (ಸರ್ಕಾರದ) ಭಯ, ಮೌನಿಯಾಗಿ ಕುಳಿತರೆ ಜನರು ತನ್ನನ್ನು ದೀನನ್ನಾಗಿ ತಿಳಿದುಕೊಂಡಾರೆಂಬ ಭಯ, ಬಲಿಷ್ಠನಾದರೆ ಶತ್ರುಗಳ ಭಯ, ರೂಪವಂತನಾದರೆ ಅಂಗನೆಯರ ಭಯ, ಶಾಸ್ತ್ರಗಳಲ್ಲಿ ಪಂಡಿತನಾದರೆ ಪ್ರತಿವಾದಿಗಳ ಭಯ, ಗುಣವಂತ ನಾದರೆ ದುರ್ಗುಣಿಗಳ ಭಯ, ಶರೀರಕ್ಕೆ ಮೃತ್ಯುವಿನ ಭಯ– ಹೀಗೆ ಪ್ರತಿಯೊಂದರಲ್ಲಿ ಒಂದಿಲ್ಲೊಂದು ತರಹದ ಭಯ ಹಾಗೂ ದುಃಖಗಳು ಇರುವದರಿಂದ, ಕ್ಷಣಿಕಗಳಾದ ಆ ವಸ್ತುಗಳಲ್ಲಿಯೇ ಆಸಕ್ತನಾಗಿ, ದುಃಖಿಯಾಗಿ, ಕಾಲ ಕಳೆಯುವದಕ್ಕಿಂತ, ಭಯರಹಿತ ವಾದ ಸಕಲ ವಿಷಯ ವಿರಕ್ತಿಯನ್ನು ಹೊಂದಿ ಸುಖಿಸುವದೇ ಶ್ರೇಷ್ಠವೆಂಬ ಶ್ರೀ ಭರ್ತೃ ಹರಿಯ ವೈರಾಗ್ಯಶತಕದ ಉಪದೇಶವು ಬಹು ಹೃದಯಂಗಮವಾಗಿದೆ.

''ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ'' ಎನ್ನುವ ಉಪ ನಿಷತ್ಪ್ರಮಾಣದಂತೆ, ಯಾವದು ಎಲ್ಲಕ್ಕಿಂತಲೂ ದೊಡ್ಡದಿರುವದೋ, ಅದೇ ಸುಖ ಮಯವಾದದ್ದು. ಉಳಿದ ಅಲ್ಪ ಪದಾರ್ಥಗಳೆಲ್ಲ ದುಃಖಪೂರ್ಣಗಳಾಗಿವೆ. ಜಗತ್ತಿನಲ್ಲಿ ಎಲ್ಲಕ್ಕೂ ದೊಡ್ಡ ವಸ್ತುವೆಂದರೆ ಪರಮಾತ್ಮನೊಬ್ಬನೆ. ಕಾರಣ, ವಿವೇಕಿಯಾದವನು, ಸಂಸಾರದ ಅಲ್ಪ ಪದಾರ್ಥಗಳಾದ ಹಾಗೂ ದುಃಖ–ಭಯಗಳಿಂದ ಕೂಡಿದ ಶರೀರ, ಕುಲ, ಹೆಂಡರು, ಮಕ್ಕಳು, ಬಂಧು, ಬಳಗ ಸಂಪತ್ತು ಮುಂತಾದವುಗಳಲ್ಲಿ ವೈರಾಗ್ಯವನ್ನು ಹೊಂದಿ, ಪರಮಾತ್ಮನಲ್ಲಿ ಏಕನಿಷ್ಠೆಯುಳ್ಳವನಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ಆಶೀರ್ವಚನ - ೧೦

ವಿವೇಕಿನೋ ವಿರಕ್ತಸ್ಯ ವಿಷಯೇಷ್ವಾತ್ಮರಾಗಿಣಃ।
ಸಂಸಾರದುಃಖವಿಚ್ಛೇದಹೇತೌ ಬುದ್ಧಿಃ ಪ್ರವರ್ತತೇ (ಸಿ. ಶಿ. ೫.೭೨)

ಅನಿತ್ಯಗಳಾದ ಶಬ್ದ-ಸ್ಪರ್ಶಾದಿ ವಿಷಯಗಳಲ್ಲಿ ವೈರಾಗ್ಯವನ್ನು ಹೊಂದಿದ ವಿವೇಕಿಯು, ನಿತ್ಯವಸ್ತುವಾದ ತನ್ನ ಆತ್ಮದಲ್ಲಿ ಆನಂದ ಪಡೆದವನಾಗಿ, ಈ ಸಂಸಾರ ದುಃಖವನ್ನು ಕತ್ತರಿಸಿಹಾಕುವ ಉಪಾಯವನ್ನು ಹುಡುಕುವದರಲ್ಲಿ ಪ್ರವೃತ್ತನಾಗುತ್ತಾನೆ.

ನಿತ್ಯಾನಿತ್ಯವಿವೇಕಿನಃ ಸುಕೃತಿನಃ ಶುದ್ಧಾಶಯಸ್ಯಾತ್ಮನೋ
ಬ್ರಹ್ಮೋಪೇಂದ್ರ ಮಹೇಂದ್ರಮುಖ್ಯವಿಭವೇಷ್ವಸ್ಥಾಯಿತಾಂ ಪಶ್ಯತಃ।
ನಿತ್ಯಾನಂದಪದೇ ನಿರಾಕೃತಜಗತ್ಸಂರದುಃಖೋದಯೇ
ಸಾಂಬೇ ಚಂದ್ರಶಿರೋಮಣೌ ಸಮುದಯೇದ್ಭಕ್ತಿರ್ಭವ ಧ್ವಂಸಿನೀ (ಸಿ. ಶಿ. ೫.೭೩)

ನಿತ್ಯಾನಿತ್ಯವಿವೇಕಿಯೂ, ವೇದಾಗಮೋಕ್ತ ಸತ್ಕರ್ಮಪರಾಯಣನೂ, ನಿರ್ಮಲಾಂತಃ ಕರಣನೂ, ಬ್ರಹ್ಮ-ವಿಷ್ಣು-ಮಹೇಂದ್ರ ಮೊದಲಾದ ದೇವತೆಗಳ ವೈಭವಗಳನ್ನೂ ಸಹ ಕ್ಷಣಿಕಗಳೆಂದು ಕಾಣುವವನೂ ಆದ ಪಿಂಡಜ್ಞಾನಿಗೆ, ಸಚ್ಚಿದಾನಂದ ನಿತ್ಯಪರಿಪೂರ್ಣ ನಾಗಿಯೂ, ಜಗತ್ತಿನ ಸಂಸಾರ ದುಃಖೋತ್ಪತ್ತಿಯನ್ನು ನಿರಾಕರಿಸವವ ನಾಗಿಯೂ, ಚಂದ್ರಧರಾದಿ ನಾನಾಲೀಲಾಮೂರ್ತಿಗಳನ್ನು ಧರಿಸಿದವನಾಗಿಯೂ ಇರುವ ಮಹಾಲಿಂಗದಲ್ಲಿ, ಭವವಿನಾಶಕವಾದ ಭಕ್ತಿಯು ಸಂಭವಿಸುವದು. ಈ ಭಕ್ತಿಯೇ ಸಂಸಾರ ವಿನಾಶಕವಾದುದು.

ಸಂಸಾರದಲ್ಲಿಯ ಪ್ರತಿಯೊಬ್ಬ ಜೀವಿಯೂ, ತಾನು ಸುಖವಾಗಿಯೇ ಇರ ಬೇಕೆಂದು ಬಯಸುತ್ತಾನೆ. ಆದರೆ ಸುಖದ ಅಮೋಘವಾದ ಸಾಧನವನ್ನರಿಯದೇ, ಪುನಃ ಪುನಃ ದುಃಖವನ್ನೇ ಅನುಭವಿಸುತ್ತಿರುತ್ತಾನೆ. ಹೀಗೆ ಶಬ್ದ-ಸ್ಪರ್ಶ-ರೂಪ-ರಸ ಮತ್ತು ಗಂಧಗಳೆಂಬ ವಿಷಯಗಳನ್ನು, ಸುಖದಾಸೆಗಾಗಿ, ಅನೇಕಸಾರೆ ಅನುಭವಿಸಿ, ಕೊನೆಗೆ ದುಃಖವೇ ದೊರೆತಾಗ, ಜೀವಾತ್ಮನಿಗೆ, ತನ್ನಲ್ಲಿ ಉದಯವಾದ ನಿತ್ಯಾನಿತ್ಯವಿವೇಕದ ಬಲದಿಂದ, ವಿಷಯಗಳಲ್ಲಿ ದೋಷ ದರ್ಶನವಾಗಿ, ವಿರಕ್ತಿಭಾವನೆಯು ಪ್ರಾದುರ್ಭ ವಿಸುತ್ತದೆ. ಈ ವಿರಕ್ತಿಯೇ ಶಾಶ್ವತವಾದ ವಿರಕ್ತಿಯು.

ಅನೇಕಸಾರೆ ಪುರಾಣಾದಿಗಳನ್ನು ಕೇಳುವಾಗ, ಹೆರಿಗೆ (ಪ್ರಸವ) ಯಾಗುವಾಗ ಮತ್ತು ಶವಸಂಸ್ಕಾರಕ್ಕಾಗಿ ಶ್ಮಶಾನಕ್ಕೆ ಹೋದಾಗ, ಆಗಿನ ಪರಿಸ್ಥಿತಿಯನ್ನು ಕಂಡು, ಎಲ್ಲರಿಗೂ ವೈರಾಗ್ಯಭಾವನೆಯು ಒಡಮೂಡುತ್ತದೆ. ಆದರೆ, ಪ್ರಕೃತಪ್ರಸಂಗವು ಕಣ್ಮರೆ ಯಾದಾಗ, ಈ ಪುರಾಣ, ಪ್ರಸೂತಿ ಮತ್ತು ಶ್ಮಶಾನ ವೈರಾಗ್ಯಗಳು ಪಲಾಯಿತ ಗಳಾಗುತ್ತವೆ. ಆದ್ದರಿಂದ ವಿವೇಕವಿಲ್ಲದೇ ಉಂಟಾದ ಈ ವೈರಾಗ್ಯಗಳನ್ನು ಕ್ಷಣಿಕ ವೈರಾಗ್ಯ ವೆಂದು ಕರೆಯುತ್ತಾರೆ.

ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–ವಿಷಯಗಳಲ್ಲಿ ವಿರಕ್ತನಾಗಿ, ಆತ್ಮಾನಂದವನ್ನು ಅನುಭವಿಸುತ್ತಿರುವ ವಿವೇಕಿಯು, ಸಂಸಾರದಿಂದ ಪಾರಾಗುವ ಉಪಾಯವನ್ನು ಹುಡುಕುತ್ತಾನೆ ; ಆದರೆ ಅನ್ಯರು ಮಾತ್ರ ದುಃಖದಲ್ಲಿಯೇ ಸುಖಬುದ್ಧಿಯುಳ್ಳವರಾಗಿ, ಸಂಸಾರಚಕ್ರದಲ್ಲಿ ತಿರುಗುತ್ತಿರುತ್ತಾರೆ– ಎಂಬುದಾಗಿ ಉಪದೇಶಿಸಿದ್ದಾರೆ.

ಈ ಸಂಸಾರ ಸಾಗರದಿಂದ ಪಾರಾಗುವ ಅನೇಕ ಉಪಾಯಗಳಲ್ಲಿ, ಭಕ್ತಿಯು ಸರ್ವಶ್ರೇಷ್ಠವಾಗಿದೆ. ಅಂತೆಯೇ ''ಮೋಕ್ಷಕಾರಣಸಾಮಗ್ರ್ಯಾಂ ಭಕ್ತಿರೇವ ಗರೀಯಸೀ'' ಎಂದಿದ್ದಾರೆ. ''ಪೂಜ್ಯೇಷು ಅನುರಾಗೋ ಭಕ್ತಿಃ'' ಎಂಬ ವಚನಾನುಸಾರವಾಗಿ, ದೊಡ್ಡವರಲ್ಲಿಯ ಪ್ರೇಮವೇ ''ಭಕ್ತಿ'' ಎನಿಸಿಕೊಳ್ಳುತ್ತದೆ. ಲೋಕದಲ್ಲಿ ಪ್ರತಿಯೊಬ್ಬರೂ ಒಂದಿಲ್ಲೊಂದು ಪ್ರಸಂಗದಲ್ಲಿ, ಒಬ್ಬರನ್ನೊಬ್ಬರು ಪ್ರೀತಿಸುತ್ತಿರುತ್ತಾರೆ. ಈ ಪ್ರೀತಿಯು ಸ್ವಾರ್ಥಪೂರ್ಣವೂ, ಕ್ಷಣಿಕವೂ ಆಗಿರುತ್ತದೆ. ಆದರೆ, ಈ ಲೌಕಿಕವಸ್ತು ಮತ್ತು ವ್ಯಕ್ತಿಗಳ ಮೇಲಿನ ಪ್ರೇಮವು ತೊಲಗಿ, ಜಗತ್ಕಲ್ಯಾಣಕರನೂ, ಸಂಸಾರ ದುಃಖದೂರನೂ, ಚಂದ್ರಧರನೂ, ಪಾರ್ವತೀ ಪತಿಯೂ ಆದ ಪರಮೇಶ್ವರನಲ್ಲಿ, ಪ್ರೇಮವು ಪ್ರಾದುರ್ಭವಿಸಿದರೆ, ಅದನ್ನು ಭಕ್ತಿ ಎನ್ನುತ್ತಾರೆ. ''ಭಕ್ತಿರ್ಭವಧ್ವಂಸಿನೀ'' ಎನ್ನುವ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ, ಪರಮಾತ್ಮನಲ್ಲಿಯ ಅನುರಾಗ ರೂಪವಾದ ಈ ಭಕ್ತಿಯೇ, ಭವವನ್ನೂ ಧ್ವಂಸಮಾಡುತ್ತದೆ ; ಅಂದರೆ ಹುಟ್ಟು, ಸಾವು ಗಳೆಂಬ ಚಕ್ರದಿಂದ ಶಿವಭಕ್ತನು ಸಹಜವಾಗಿ ಪಾರಾಗುತ್ತಾನೆ.

ನಾವು ಯಾರನ್ನು ಪ್ರೀತಿಸುತ್ತೇವೆಯೋ, ಅವರು, ತಮ್ಮಲ್ಲಿರುವದನ್ನೇ ನಮಗೆ ಹಂಚಿಕೊಡುತ್ತಾರೆಯೇ ಹೊರತು, ತಮ್ಮಲ್ಲಿ ಇಲ್ಲದ್ದನ್ನು, ಅವರೆಂದಿಗೂ ಕೊಡರು. ಈ ಕಾರಣದಿಂದ ಜಗತ್ತಿನ ಅಜ್ಞಾನಿ ಜೀವಿಗಳೆಲ್ಲ ಸದಾ ದುಃಖವನ್ನೇ ಅನುಭವಿಸುತ್ತಿರುವದರಿಂದ, ಅವರನ್ನು ಪ್ರೀತಿಸಿದವರೆಲ್ಲ ದುಃಖವನ್ನೇ ಹೊಂದುತ್ತಿದ್ದಾರೆ. ಒಬ್ಬ ಮನುಷ್ಯನು ತನ್ನ ವಯೋಮಾನದಲ್ಲಿ, ಅನೇಕರನ್ನು ಪ್ರೀತಿಸಿ, ಎಲ್ಲರಿಂದಲೂ ದುಃಖವನ್ನೇ ಪಡೆದು, ತನ್ನ ಕೊನೆಯುಸಿರಿನಲ್ಲಿ ನಿರಾಶನಾಗಿ, ದುಃಖದಿಂದಲೇ ಪ್ರಾಣಬಿಡುವದನ್ನು ಕಾಣುತ್ತೇವೆ.

ಇದೆಲ್ಲವನ್ನೂ ಅರಿತ ವಿವೇಕಿಗಳು, ಸಂಸಾರ ದುಃಖರಹಿತನಾದ ಪರಮಾತ್ಮನಲ್ಲಿ ಅನುರಾಗಿಗಳಾಗಿ, ನಮ್ಮ ಜೀವನದುದ್ದಕ್ಕೂ ಅವನನ್ನೇ ಪ್ರೀತಿಸಿ, ಕೊನೆಗೆ ಅವನನ್ನೇ ನೆನೆಸುತ್ತ ''ಅಂತೇ ಯಾ ಮತಿಃ ಸಾ ಗತಿಃ'' ಎನ್ನುವ ಪ್ರಮಾಣವಾಕ್ಯದಂತೆ ಪರಮಾತ್ಮನಲ್ಲಿಯೇ ಲೀನರಾಗುತ್ತಾರೆ. ಇಂತಹ ದೇವಭಕ್ತರಿಗೆ, ದಾರುಣವಾದ ಮರಣವೂ ದುಃಖವನ್ನು ಕೊಡಲಾರದು. ಅಂತೆಯೇ ಶಿವಶರಣರು–''ಮರಣವೇ ಮಹಾನವಮಿ'' ಎಂದು ಉದ್ಗಾರವನ್ನು ತೆಗೆದಿದ್ದಾರೆ.

ಅಕ್ಕಮಹಾದೇವಿ, ಮೀರಾಬಾಯಿಯಂತಹ ಭಾರತದ ಆದರ್ಶ ಮಹಿಳೆಯರು, ''ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'' ಎನ್ನುವ ಸಾಮಾಜಿಕ ಕಟ್ಟಳೆಯನ್ನು ಕಿತ್ತೊಗೆದು, ತಂದೆ–ತಾಯಿ, ಅಣ್ಣ–ತಮ್ಮ ಗಂಡ–ಮೈದುನ–ಇವರಾರ ಆಶ್ರಯವನ್ನೂ ಪಡೆಯದೇ–

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ ॥

''ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ನೀನಲ್ಲದೇ ಮತ್ತಾರೂ ಇಲ್ಲ'' ಎಂಬುದಾಗಿ ತಿಳಿದು, ಸರ್ವತೋಮುಖವಾಗಿ, ಪರಮಾತ್ಮನನ್ನೇ ಆಶ್ರಯಿಸಿದರು. ತಮ್ಮ ಜೀವನದುದ್ದಕ್ಕೂ ಭಗವಂತನನ್ನೇ ಸ್ಮರಿಸಿ, ಕೊನೆಗೆ ಭಗವಂತ ನಲ್ಲಿ ಲೀನರಾದ ಇವರಿಗೆ, ಜೀವನದಲ್ಲಿ ದುಃಖದ ದರ್ಶನವೇ ಆಗಲಿಲ್ಲ.

ಮನೆ–ಮಾರುಗಳನ್ನು ತೊರೆದು, ಅಶನ–ವ್ಯಸನವಿಲ್ಲದೇ, ಶ್ರೀ ಅಕ್ಕಮಹಾದೇವಿಯು, ಈ ಭಕ್ತಿಯ ಮಾರ್ಗದಲ್ಲಿ ಅನೇಕ ದುಃಖವನ್ನನುಭವಿಸಿದಳಲ್ಲಾ ? ಎನ್ನುವ ಶಂಕೆಯು ಓದುಗರ ಮನದಲ್ಲಿ ಮೊಳೆಯುವದು ಸಹಜ. ಆದರೆ –

''ಹಸಿವಾದೊಡೆ ಭಿಕ್ಷಾನ್ನಗಳುಂಟು ;
ತೃಷೆಯಾದೊಡೆ ಕೆರೆಭಾವಿ ಹಳ್ಳಗಳುಂಟು ;
ಶಯನಕ್ಕೆ ಹಾಳುದೇಗುಲ ಉಂಟು ;
ಆತ್ಮಸಂಗಾತಕ್ಕೆ ನೀನೆನಗುಂಟು ಚನ್ನಮಲ್ಲಿಕಾರ್ಜುನಾ !

ಎನ್ನುವ ಅಕ್ಕನ ಈ ದಿಟ್ಟ ವಚನವನ್ನು ನೋಡಿದರೆ, ಅಗ್ನಿಯು ಸುವರ್ಣದಲ್ಲಿಯ ಕಾಳಿಕೆಯನ್ನು ತೊಲಗಿಸಿ ಪರಿಶುದ್ಧಗೊಳಿಸುವಂತೆ, ಶರಣರ ಪಾರಮಾರ್ಥಿಕ ಜೀವನದಲ್ಲಿ ಬಂದೊದಗುವ ಲೌಕಿಕ ತೊಂದರೆಗಳು, ಅವರನ್ನು ಮತ್ತಷ್ಟು ಪರಿಶುದ್ಧರನ್ನಾಗಿ ಮಾಡುತ್ತವೆ–ಎಂಬುದು ತಿಳಿದುಬರುತ್ತದೆ. ಅಂತೆಯೇ, ಅವರು ಧೈರ್ಯಶಾಲಿಗಳಾಗಿ, ಎಲ್ಲವನ್ನೂ ಸಹರ್ಷವಾಗಿಯೇ ಎದುರಿಸಿದ್ದಾರೆ.

ಲೌಕಿಕ ಪ್ರೇಮದಲ್ಲಿ ಮೊದಮೊದಲು ಸುಖದ ಆಭಾಸವಾಗಿ, ಕೊನೆಕೊನೆಗೆ ದುಃಖವೇ ಕೈಸೇರುವದು. ಆದರೆ, ಪಾರಮಾರ್ಥಿಕ ಪ್ರೇಮದಲ್ಲಿ, ಮೊದಲು ದುಃಖದ ಆಭಾಸವಾದರೂ, ಕೊನೆಗೆ, ಅದೆಂದೂ ಸವೆಯದ ಸಾರ ಸುಖದ ಪ್ರಾಪ್ತಿಯಾಗುತ್ತದೆ.

ವೀರಶೈವ ಸಿದ್ಧಾಂತದಲ್ಲಿ, ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸಗಳೆಂಬ ಭಕ್ತಿಯ ಕ್ರಮಿಕ ವಿಕಾಸವೇ, ಮುಕ್ತಿಯ ಆರು ಸೋಪಾನಗಳಾಗಿ ಮಾರ್ಪಟ್ಟಿವೆ. ಸಾಧಕನು, ಬ್ರಹ್ಮ ಇಂದ್ರ ಮೊದಲಾದ ದೇವತೆಗಳ ಐಶ್ವರ್ಯಗಳ ಅಸ್ಥಿರತೆಯನ್ನು ಕಂಡುಕೊಂಡು, ಮುಕ್ತಿಸೋಪಾನಗಳಾದ ಆರುವಿಧ ಭಕ್ತಿಗಳನ್ನು ಅವಲಂಬಿಸಿ, ತನ್ನ ಜನನ–ಮರಣಾತ್ಮಕವಾದ ಸಂಸಾರದಿಂದ ಪಾರಾಗಲು ಪ್ರಯತ್ನಿಸಬೇಕು.

ಈ ತೆರನಾಗಿ, ತಾನಲ್ಲದಲ್ಲಿ ತಾನೆಂಬ, ತನ್ನದಲ್ಲವುಗಳಲ್ಲಿ ತನ್ನದೆಂಬ ಮಿಥ್ಯಾಭಿಮಾನರೂಪವಾದ ಸಂಸಾರದಲ್ಲಿ ಹೇಯಬುದ್ಧಿಯುಂಟಾದ ಸಾಧಕನೇ, ಗುರುಕಾರುಣ್ಯವನ್ನು ಪಡೆಯಲು ಅರ್ಹನಾಗುವನಾದ್ದರಿಂದ, ಈ ಸಂಸಾರ ಹೇಯಸ್ಥಲದಲ್ಲಿ ನಿರೂಪಿತ

ವಾದ ಎಲ್ಲ ವಿಷಯಗಳನ್ನೂ, ಪ್ರತಿಯೊಬ್ಬ ವೀರಶೈವನೂ, ಪರ್ಯಾಲೋಚಿಸಿ, ತನ್ನ ಆತ್ಮಕಲ್ಯಾಣಕ್ಕಾಗಿ ಪ್ರಯತ್ನಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಆಗಷ್ಟ್, ೧೯೬೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

ಇಂತು ''ಶ್ರೀ ಸಿದ್ಧಾಂತಶಿಖಾಮಣಿ–ಪ್ರವಚನಪ್ರಭೆ'' ಗ್ರಂಥದ ಪಂಚಮ ಪರಿಚ್ಛೇದವು ಪೂರ್ಣವಾದುದು.



# ಷಷ್ಠ ಪರಿಚ್ಛೇದ

**ಆಶೀರ್ವಚನ -೧**

## ಗುರುಕಾರುಣ್ಯಸ್ಥಲ

ತತೋ ವಿವೇಕಸಂಪನ್ನೋ ವಿರಾಗೀ ಶುದ್ಧ ಮಾನಸಃ ।
ಜಿಜ್ಞಾಸುಃ ಸರ್ವಸಂಸಾರದೋಷಧ್ವಂಸಕರಂ ಶಿವಮ್ ॥
ಉಪೈತಿ ಲೋಕವಿಖ್ಯಾತಂ ಲೋಭಮೋಹವಿವರ್ಜಿತಮ್ ।
ಆತ್ಮತತ್ತ್ವವಿಚಾರಜ್ಞಂ ವಿಮುಕ್ತವಿಷಯಭ್ರಮಮ್ ॥
ಶಿವಸಿದ್ಧಾಂ ತತತ್ತ್ವಜ್ಞಂ ಛಿನ್ನಸಂದೇಹವಿಭ್ರಮಮ್ ।
ಸರ್ವತಂತ್ರ ಪ್ರಯೋಗಜ್ಞಂ ಧಾರ್ಮಿಕಂ ಸತ್ಯವಾದಿನಮ್ ॥
ಕುಲಕ್ರಮಾಗತಾಚಾರಂ ಕುಮಾರ್ಗಾಚಾರವರ್ಜಿತಮ್ ।
ಶಿವಧ್ಯಾನಪರಂ ಶಾಂತಂ ಶಿವತತ್ತ್ವವಿವೇಕಿನಮ್ ॥
ಭಸ್ಮೋದ್ಧೂಲನನಿಷ್ಣಾತಂ ಭಸ್ಮತತ್ತ್ವವಿವೇಕಿನಮ್ ।
ತ್ರಿಪುಂಡ್ರಧಾರಣೋತ್ಕಂಠಂ ಧೃತರುದ್ರಾಕ್ಷಮಾಲಿಕಮ್ ॥
ಲಿಂಗಧಾರಣಸಂಯುಕ್ತಂ ಲಿಂಗಪೂಜಾಪರಾಯಣಮ್ ।
ಲಿಂಗಾಂಗಯೋಗತತ್ತ್ವಜ್ಞಂ ನಿರೂಢಾದ್ವೈತವಾಸನಮ್ ।
ಲಿಂಗಾಂಗಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಮ್ ॥ (ಸಿ. ಶಿ. ೬.೧–೬)

ಸಂಸಾರದಲ್ಲಿ ಪರಿತ್ಯಾಗಬುದ್ಧಿಯುಂಟಾದನಂತರ, ಪವಿತ್ರವಾದ, ಮನಸ್ಸುಳ್ಳವನೂ ದೇಹಾತ್ಮವಿವೇಕಸಂಪನ್ನನೂ, ಸಂಸಾರ ವಿರತನೂ ಆದ ಮುಮುಕ್ಷುವು, ಸಾಂಸಾರಿಕ ಗಳಾದ ಸಕಲ ದುಃಖಗಳನ್ನೂ ಪರಿಹರಿಸತಕ್ಕ ಪರಶಿವ ಮಹಾಲಿಂಗವನ್ನು ಅರಿಯಲಿಚ್ಛೆ ಯುಳ್ಳವನಾಗಿ, ಅಂಥ ಪರಬ್ರಹ್ಮ ಸ್ವರೂಪವನ್ನು ಉಪದೇಶಿಸುವವನೂ, ಲೋಕ ಪ್ರಸಿದ್ಧನೂ, ಧನಾದಿ ಲೋಭದಿಂದಲೂ, ಅಜ್ಞಾನದಿಂದಲೂ ರಹಿತನಾದವನೂ, ಶಿವಾಗಮಸಿದ್ಧಾಂತ ಶಾಸ್ತ್ರವನ್ನು ಬಲ್ಲವನೂ, ಯಾವುದೊಂದು ಸಂಶಯವು ಇಲ್ಲದ ವನೂ, ಸಕಲ ಶಿವಾಗಮಗಳ ಪ್ರಯೋಗಗಳನ್ನು ಬಲ್ಲವನೂ, ಶಿವಧರ್ಮನಿಷ್ಠನೂ, ಸತ್ಯವನ್ನೇ ನುಡಿಯತಕ್ಕವನೂ, ಗುರುವಂಶಾನುಗತ ಆಚಾರದಲ್ಲಿ ತತ್ಪರನಾದವನೂ, ದುರಾಚಾರಗಳಿಲ್ಲದವನೂ, ಶಿವಲಿಂಗಧ್ಯಾನದಲ್ಲಿ ಆಸಕ್ತನಾದವನೂ, ರಾಗದ್ವೇಷಾದಿ ಗಳಿಲ್ಲದವನೂ, ಪರಶಿವಲಿಂಗಸ್ವರೂಪವನ್ನು ಅರಿತವನೂ, ಭಸ್ಮೋದ್ಧೂಳನ ಮಾಡುವುದರಲ್ಲಿ ಕುಶಲಿಯೂ, ಭಸ್ಮಸ್ವರೂಪವನ್ನು ಅರಿತವನೂ, ಭಸ್ಮತ್ರಿಪುಂಡ್ರ ಧರಿಸುವಲ್ಲಿ ಕುತೂಹಲವುಳ್ಳವನೂ, ರುದ್ರಾಕ್ಷಮಾಲೆಯನ್ನು ಧರಿಸಿದವನೂ, ಬಾಹ್ಯಾಂತರ್ಲಿಂಗ ಧಾರಣೆಯನ್ನು ಹೊಂದಿದವನೂ, ಉಭಯ ಲಿಂಗಪೂಜಾಸಕ್ತನೂ,

ಲಿಂಗಾಂಗ ಸಾಮರಸ್ಯ ಸ್ವರೂಪವನ್ನು ಅರಿತವನೂ, ಸರ್ವತ್ರ ಬಲಿತ ಶಿವಭಾವನೆಯುಳ್ಳವನೂ, ಅಂಗ-ಲಿಂಗಸ್ಥಲಗಳೆಂದು ನಿರೂಪಿತವಾಗಿರುವ ನೂರೊಂದು ಸ್ಥಲಗಳ ಲಕ್ಷಣವನ್ನೆಲ್ಲಾ ಅರಿತವನೂ ಆದ ಶ್ರೀಗುರುವಿನ ಬಳಿಗೆ, ಕಾಣಿಕೆ ಸಮೇತನಾಗಿ ಹೋಗಬೇಕು.

''ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ
ಶ್ರೋತ್ರಿಯಂ ಬ್ರಹ್ಮನಿಷ್ಠಮ್'' (ಮುಂಡ. ಉ. ೨/೧೨)

ಎನ್ನುವ ಮುಂಡಕೋಪನಿಷತ್ತಿನ ಪ್ರಮಾಣದಂತೆ, ಪ್ರತಿಯೊಬ್ಬ ಜಿಜ್ಞಾಸುವೂ ಪರಮಾತ್ಮ ತತ್ತ್ವವನ್ನು ತಿಳಿದುಕೊಳ್ಳುವದಕ್ಕಾಗಿ, ಆ ತತ್ತ್ವವನ್ನು, ಯಥಾರ್ಥವಾಗಿ ತಿಳಿದಿರುವ ಸದ್ಗುರುಗಳನ್ನೇ ಆಶ್ರಯಿಸಬೇಕಾಗುವುದು. ಅದಕ್ಕಾಗಿಯೇ, ''ಗುರುವಿಲ್ಲದಂತಪ್ಪ ಪುರುಷರ್ಗೆ ಮುಕ್ತಿಸಮನಿಸದು'' ಎಂದಿದ್ದಾರೆ. ಶ್ರೀ ನಿಜಗುಣ ಶಿವಯೋಗಿಗಳು. ಹಾಗಾದರೆ, ಆಶ್ರಯಿಸುವ ಶಿಷ್ಯ ಮತ್ತು ಆಶ್ರಯಣೀಯನಾದ ಗುರು- ಇವರೀರ್ವರ ಲಕ್ಷಣವು ಹೇಗಿರಬೇಕೆಂಬ ವಿಚಾರ ಬಂದೊದಗಿದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಮೊದಲು ಶಿಷ್ಯನ ಲಕ್ಷಣವನ್ನೂ, ನಂತರ ಗುರುವಿನ ಲಕ್ಷಣವನ್ನೂ, ಅಗಸ್ತ್ಯರಿಗೆ ಬಹು ಸುಂದರವಾಗಿ ಉಪದೇಶಿಸಿದ್ದಾರೆ.

ಶಿಷ್ಯಲಕ್ಷಣ : ಪರಿಶುದ್ಧ ಮನಸ್ಕನೂ, ನಿತ್ಯಾನಿತ್ಯವಿವೇಕಿಯೂ, ಇಹ ಮತ್ತು ಪರಲೋಕದ ಸುಖಗಳಲ್ಲಿ ನಿಸ್ಪೃಹನೂ ಆಗಿ ಸಂಸಾರದ ಸಕಲ ದೋಷಗಳನ್ನು ದೂರ ಮಾಡುವ ಆ ಮಹಾಲಿಂಗ ತತ್ತ್ವವನ್ನು ತಿಳಿದುಕೊಳ್ಳಬೇಕೆನ್ನುವ ಉತ್ಕಟವಾದ ಬಯಕೆಯುಳ್ಳವನೇ ಯೋಗ್ಯ ಶಿಷ್ಯನೆನಿಸುವನು. ಅಂತೆಯೇ ಶ್ರೀ ಜ. ರೇಣುಕಭಗವತ್ಪಾದರು, ಸಿದ್ಧಾಂತ ಶಿಖಾಮಣಿಯ ಪಿಂಡಸ್ಥಲದಲ್ಲಿ ಮನಃಶುದ್ಧಿಯ ಉಪಾಯವನ್ನೂ, ಪಿಂಡಜ್ಞಾನ ಸ್ಥಲದಲ್ಲಿ ನಿತ್ಯಾನಿತ್ಯ ಆತ್ಮಾನಾತ್ಮಗಳ ಯಥಾರ್ಥ ವಿವೇಕವನ್ನೂ ಮತ್ತು ಸಂಸಾರ ಹೇಯ ಸ್ಥಲದಲ್ಲಿ ವೈರಾಗ್ಯವನ್ನೂ, ಕ್ರಮವಾಗಿ ಬೋಧಿಸಿದ್ದಾರೆ. ಆದಕಾರಣ, ಈ ವೈರಾಗ್ಯಾದಿ ಉತ್ಕೃಷ್ಟಗಳಾದ ಗುಣಗಳುಳ್ಳವನೇ ಶಿಷ್ಯಪದವಾಚ್ಯನು.

ಗುರುದೇವತಾಭಕ್ತಿವರವೇದ ವಿಧಿ ನಿಷ್ಠೆ।
ವಿರತಿ ಮುಂತಾದ ನವ ಸುಚಾರಿತ್ರಂಗಳಿರಲವನೆ
ಶಿಷ್ಯನೆನಿಸುವನು॥ (ಅನುಭವಸಾರ ೧-೩-೨)

ಈ ತೆರನಾಗಿ, ಶ್ರೀ ನಿಜಗುಣ ಶಿವಯೋಗಿಗಳಾದರೂ, ಸುಶಿಷ್ಯನ ಲಕ್ಷಣವನ್ನು ತಿಳಿಸುತ್ತ ಅವನಲ್ಲಿ- (೧) ಪರಶಿವಬ್ರಹ್ಮವೇ ನಿತ್ಯವಾದದ್ದು ಉಳಿದೆಲ್ಲವೂ ಅನಿತ್ಯವಾದುದು- ಎನ್ನುವ ವಿವೇಕವು, (೨) ಇಹಲೋಕದಲ್ಲಿಯ ಸ್ರಕ್-ಚಂದನ-ವನಿತಾದಿ ವಿಷಯಗಳು ಕರ್ಮಾಧೀನಗಳಾದ್ದರಿಂದ, ಹೇಗೆ ಅನಿತ್ಯವಾದವುಗಳೆನಿಸಿಕೊಳ್ಳುವವೋ, ಅದರಂತೆ ಯಜ್ಞಾದಿ ಕರ್ಮಗಳ ಫಲವಾಗಿ, ಪ್ರಾಪ್ತವಾಗುವ ಸ್ವರ್ಗಾದಿಲೋಕಗಳಲ್ಲಿಯ ಅಮೃತ ಪಾನ, ಅಪ್ಸರಸ್ತ್ರೀಯರ ಭೋಗ ಮತ್ತು ನಂದನವನ ವಿಹಾರಾದಿಗಳಾದರೂ, ಶಾಶ್ವತಗಳಾಗಿರದೇ, ಅನಿತ್ಯಗಳೆಂದು ತಿಳಿದು, ಈ ಉಭಯಲೋಕಗಳ ಭೋಗದಿಂದ ಉಂಟಾಗುವ ವಿರತಿ ಎಂಬ ವೈರಾಗ್ಯವು, (೩) ಪರಮಾತ್ಮ ತತ್ತ್ವದ ಶ್ರವಣ, ಮನನ

ಮತ್ತು ನಿಧಿಧ್ಯಾಸದ ಹೊರತಾಗಿ, ಅನ್ಯ ವಿಷಯಗಳತ್ತ ಅಂತರಿಂದ್ರಿಯವಾದ ಮನವು ಹರಿದು ಹೋಗದಿರುವ ಶಮೆಯು, (೪) ಪಂಚ ಜ್ಞಾನೇಂದ್ರಿಯ ಮತ್ತು ಪಂಚ ಕರ್ಮೇಂದ್ರಿಯಗಳಾದರೂ ಅನಾತ್ಮ ವಿಷಯಗಳತ್ತ ಧಾವಿಸದಂತೆ, ಅವುಗಳನ್ನು ನಿಗ್ರಹ ಮಾಡುವ ಸಾಮರ್ಥ್ಯರೂಪವಾದ ದಮೆಯು, (೫) ದೋಷದರ್ಶನದಿಂದ ಪರಿತ್ಯಕ್ತ ಗಳಾದ ಶಬ್ದಾದಿ ವಿಷಯಗಳತ್ತ ಪುನಃ ಮನವಾಗಲಿ, ಬಹಿರಿಂದ್ರಿಯಗಳಾಗಲಿ ಎಳಸದಂತೆ ಜಾಗರೂಕವಾಗಿರುವ ಉಪರತಿಯು, (೬) ಸುಖ–ದುಃಖ, ಹಸಿವೆ–ತೃಷೆ, ಜಯ–ಪರಾಜಯಗಳೆಂಬ ದ್ವಂದ್ವಗಳನ್ನು ಸಹಿಸುವ ಸ್ವಭಾವರೂಪವಾದ ತಿತಿಕ್ಷೆಯು, (೭) ಲಕ್ಷ್ಯವಾದ ಪರಮ ತತ್ತ್ವದ ಚಿಂತನೆಯಲ್ಲಿ ಮನಸ್ಸಿನ ಏಕಾಗ್ರರೂಪವಾದ ಸಮಾಧಾನವು. (೮) ಗುರು ಮತ್ತು ಶಾಸ್ತ್ರಗಳ ವಚನಗಳಲ್ಲಿ ನಿಷ್ಠಾರೂಪವಾದ ಶ್ರದ್ಧೆಯು, (೯) ಅಗ್ನಿ ಇಲ್ಲವೇ ನೀರಿನಲ್ಲಿ ಬಿದ್ದ ಮನುಷ್ಯನು ತನ್ನ ಪ್ರಾಣವನ್ನು ಉಳಿಸಿಕೊಳ್ಳುವ ತೀವ್ರವಾದ ಅಭಿಲಾಷೆಯುಳ್ಳವನಾಗಿರುವಂತೆ, ಈ ಸಂಸಾರತಾಪದಿಂದ ದೂರನಾಗಿ ಮೋಕ್ಷವನ್ನು ಪಡೆಯಬೇಕೆಂಬ ಉತ್ಕಟವಾದ ಬಯಕೆರೂಪವಾದ ಮುಮುಕ್ಷುತ್ವವು– ಹೀಗೆ ಈ ೯ ಪ್ರಕಾರದ ಸುಲಕ್ಷಣಗಳು ಇರಬೇಕೆಂಬುದಾಗಿ ಸ್ಪಷ್ಟಪಡಿಸಿದ್ದಾರೆ.

''ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ
ಭೂತ್ವಾಽತ್ಮನ್ಯೇವಾತ್ಮಾನಂ ಪಶ್ಯತಿ....'' (ಬೃಹದಾರಣ್ಯಕ ೪–೪–೨೩)

ಎನ್ನುವ ಶ್ರುತಿವಾಕ್ಯವಾದರೂ ಅದನ್ನೇ ಸಮರ್ಥಿಸುತ್ತದೆ.

ಈ ೯ ಗುಣಗಳಲ್ಲಿ ಮೊದಮೊದಲಿನ ಗುಣಗಳು ಉತ್ತರೋತ್ತರಗಳಾದ ಗುಣಗಳಿಗೆ ಕಾರಣಗಳಾಗಿರುತ್ತವೆ. ಅಂದರೆ ನಿತ್ಯಾನಿತ್ಯವಸ್ತು ವಿವೇಕದಿಂದಲೇ, ಇಹಪರಗಳ ಸುಖ ಭೋಗದಲ್ಲಿ ವೈರಾಗ್ಯವು ಪ್ರಾದುರ್ಭವಿಸುತ್ತದೆ. ಈ ವೈರಾಗ್ಯ ಭಾವನೆಯಿಂದಲೇ ಶಮ–ದಮಾದಿ ಷಟ್ಕಗಳು ಪ್ರಾಪ್ತವಾಗುತ್ತವೆ. ಈ ಶಮಾದಿಷಟ್ಕ ಸಂಪತ್ತಿಗಳ ಫಲವಾಗಿಯೇ ಮುಮುಕ್ಷುತ್ವವು ಜಾಗ್ರತವಾಗುತ್ತದೆ. ಇಂತಹ ದೈವೀಗುಣಗಳ ಆಗರವಾದ ವ್ಯಕ್ತಿಯೇ ಶಿಷ್ಯನಾಗಬಲ್ಲನು.

ಶಿಷ್ಯನ ಯೋಗ್ಯತೆಯ ಬಗ್ಗೆ ಸುದೀರ್ಘವಾಗಿ ವಿಚಾರಮಾಡಿದ ಶ್ರೀ ನಿಜಗುಣರು– ಗುರುಭಕ್ತಿ, ನಿರಹಮ್ಮು ನಿರಪೇಕ್ಷೆ, ಸೈರಣೆ, ಕರುಣೆ, ಅನುಕೂಲತೆ, ಸುರಸತೆ, ಸುಸ್ಥಿರ ಬುದ್ಧಿ ಸದ್ಗುಣ, ಪರಹಿತತೆ, ಅಮಳತೆ, ಅಚಲತೆ, ಶಾಂತತ, ಉರುದಯಾನ್ವಿತತೆ, ಶುಚಿತ್ವ, ಧೀರತ್ವ, ಅವಿಕಾರತ್ವ, ಪರಮವಿರಕ್ತತೆ, ಮೃದುವಾಣಿ, ಸಾತ್ವಿಕತೆ, ಅನುಪಮಾ ನಂದತ್ವ, ಮದ–ಮತ್ಸರಾದಿ ವಿದೂರತೆ ಮತ್ತು ಆತ್ಮರತಿತ್ವ ಮುಂತಾದ ಸದ್ಗುಣಗಳು ಶಿಷ್ಯನಲ್ಲಿ ಇರಬೇಕಾದವುಗಳೆಂದು, ಪರಮಾನುಭವ ಬೋಧೆಯ ೬ ನೇ ಸಂಧಿಯಲ್ಲಿ ಬಹುವಿಸ್ತಾರವಾಗಿ ವರ್ಣಿಸಿದ್ದಾರೆ.

ಮೇಲೆ ವರ್ಣಿಸಿದ ಈ ಎಲ್ಲ ಗುಣಗಳಲ್ಲಿ ವಿರತಿಯೊಂದಿದ್ದರೂ, ಸುಶಿಷ್ಯನಾಗ ಬಲ್ಲನು. ಅಂತೆಯೇ, ''ಪರಮ ವಿರಕ್ತಿಯೊಂದನ್ನೇ ಪರೀಕ್ಷಿಸುವನು ಗುರು ಶಿಷ್ಯರೊಳು'' ಎಂದಿದ್ದಾರೆ ನಿಜಗುಣರು. ದೀಪವು ಬಂದರೆ, ಅದರ ಪ್ರಭೆಯೂ ಬರುವಂತೆ, ವಿರತಿ ಯೊಂದಿದ್ದರೆ, ಉಳಿದೆಲ್ಲ ಸದ್ಗುಣಗಳೂ ತಾವಾಗಿಯೇ ಬರುತ್ತವೆ. ಆದ್ದರಿಂದ, ಗುರು ಕಾರುಣ್ಯವನ್ನು ಪಡೆಯಲು ವೈರಾಗ್ಯವೇ ಪರಮ ಸಾಧನವು.

ವಾಜಶ್ರವಸನ ಮಗನಾದ ನಚಿಕೇತನು ''ಮೃತ್ಯವೇ ತ್ವಾ ದದಾಮಿ'' ಎನ್ನುವ ತಂದೆಯ ವಚನವನ್ನು ಕೇಳಿ, ಯಮನ ಪಟ್ಟಣಕ್ಕೆ ಹೋಗುತ್ತಾನೆ. ಯಮಲೋಕದಲ್ಲಿ ಯಮನಿಲ್ಲದ ಕಾರಣ, ಮೂರು ದಿನಗಳ ಪರ್ಯಂತವಾಗಿ, ಬಾಗಿಲ ಹೊರಗೆಯೇ ಕುಳಿತು, ಯಮನ ದಾರಿಯನ್ನು ಕಾಯುತ್ತಾನೆ. ತನ್ನ ಲೋಕಕ್ಕೆ ಮರಳಿ ಬಂದ ಮೃತ್ಯು ದೇವನು, ಆತಿಥ್ಯವನ್ನು ಸ್ವೀಕರಿಸದೇ ಕುಳಿತಿರುವ ನಚಿಕೇತನ ವಿಷಯವನ್ನು ತಿಳಿದು, ಸಖೇದಾಶ್ಚರ್ಯವುಳ್ಳವನಾಗಿ, ನಚಿಕೇತನ ಬಳಿ ಬಂದು–

ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ
ಮೇಽನಶ್ನನ್ ಬ್ರಹ್ಮನ್ನತಿಥಿರ್ನಮಸ್ಯಃ ।
ನಮಸ್ತೇಽಸ್ತು ಬ್ರಹ್ಮನ್ಸ್ವಸ್ತಿ ಮೇಽಸ್ತು
ತಸ್ಮಾತ್ಪ್ರತಿ ತ್ರೀನ್ವರಾನ್ವೃಣೀಷ್ವ ॥

''ಹೇ ಅತಿಥಿಯಾದ ಬ್ರಾಹ್ಮಣೋತ್ತಮನೆ ! ನಮ್ಮಿಂದ ಯಾವ ಆತಿಥ್ಯವನ್ನೂ ಸ್ವಿಕರಿಸದೇ, ಮೂರು ರಾತ್ರಿಗಳನ್ನು, ನಮ್ಮ ಮನೆಯ ಬಾಗಿಲಲ್ಲಿಯೇ ಕಳೆದಕಾರಣ, ನಮಗೊದಗಿದ ದುರಿತದ ಶಾಂತಿಗಾಗಿ, ನೀನು ಪ್ರಸನ್ನನಾಗಿ, ನಿನಗೆ ಬೇಕಾದ ಮೂರು ವರಗಳನ್ನು ಬೇಡುವವನಾಗು, ನಿನಗೆ ನಮಸ್ಕಾರಗಳು'' ಎಂಬುದಾಗಿ ಕೇಳಿಕೊಂಡನು.

ಮೃತ್ಯುದೇವನ ವಚನವನ್ನು ಕೇಳಿ ಸಂತುಷ್ಟನಾದ ನಚಿಕೇತನು– (೧) ನಿನ್ನಿಂದ ಬೀಳ್ಕೊಡಲ್ಪಟ್ಟ ನಾನು, ಮರಳಿ ಮನೆಗೆ ಹೋದರೆ, ನನ್ನ ತಂದೆಯು ನನ್ನನ್ನು ಗುರುತಿಸ ಬೇಕು. ಇದು ಮೊದಲನೇ ವರವು (೨) ಸ್ವರ್ಗ ಲೋಕವನ್ನು ಪ್ರಾಪ್ತಿಮಾಡಿಕೊಳ್ಳಲು ಯಾವ ಅಗ್ನಿಯಲ್ಲಿ ಹೇಗೆ ಹವನವನ್ನು ಮಾಡಬೇಕು ? ಇದನ್ನು ನನಗೆ ತಿಳಿಸುವ ವನಾಗು; ಇದು ನನ್ನ ಎರಡನೇ ವರವು. ಈ ತೆರನಾಗಿ ಬೇಡಿಕೊಂಡ ನಚಿಕೇತನ ಅಭೀಷ್ಟೆಗೆ ಸಂತುಷ್ಟನಾದ ಯಮನು, 'ತಥಾಸ್ತು' ಎಂಬುದಾಗಿ ನುಡಿದನಲ್ಲದೆ, ಸ್ವರ್ಗ ಪ್ರಾಪ್ತಿಯ ಅಗ್ನಿ ವಿದ್ಯೆಯನ್ನು ನಚಿಕೇತನಿಗೆ ತಿಳಿಸಿ, ಆ ಅಗ್ನಿಗೆ ''ನಚಿಕೇತಾಗ್ನಿ'' ಎಂಬುದಾಗಿ ನಾಮಕರಣ ಮಾಡುತ್ತಾನೆ.

ಇನ್ನು ಮೂರನೇ ವರವನ್ನು ಬೇಡಿಕೋ–ಎಂದಾಗ ನಚಿಕೇತನು–

ಯೇಯಂ ಪ್ರೇತೇ ವಿಚಿಕಿತ್ಸಾ
ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।
ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಂ
ವರಾಣಾಮೇಷ ವರಸ್ತೃತೀಯಃ ॥ (ಕಠ. ಉ. ೧–೧–೨೦)

ಹೇ ಮೃತ್ಯುದೇವನೇ ! ಮೃತ ಮನುಷ್ಯನನ್ನು ಕುರಿತು ಜಗತ್ತಿನಲ್ಲಿ ಒಂದು ಸಂದೇಹವಿದೆ; ಅದೇನೆಂದರೆ ಮರಣಾನಂತರ ಶರೀರ–ಇಂದ್ರಿಯ–ಮನಸ್ ಹಾಗೂ ಬುದ್ಧಿಗಳಿಂದ ವಿಲಕ್ಷಣವಾದ ಒಂದು ಆತ್ಮತತ್ತ್ವವು ಇರುತ್ತದೆಂಬುದಾಗಿ ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಇಲ್ಲವೆಂಬುದಾಗಿ ಹೇಳುತ್ತಾರೆ. ಇದರ ತತ್ತ್ವಾರ್ಥವನ್ನು ನನಗೆ ತಿಳಿಸುವ ದಾಗಬೇಕು. ಇದೇ ನನ್ನ ಮೂರನೇ ಬೇಡಿಕೆಯು–ಎಂಬುದಾಗಿ ಕೇಳಿಕೊಂಡನು.

ಮೃತ್ಯುವಿನ ಮುಖದಿಂದ ಪಾರಾಗಿ ಅಮೃತತ್ತ್ವವನ್ನು ಪಡೆಯುವ ಸಾಧನರೂಪವಾದ ಈ ಮೂರನೇ ಬೇಡಿಕೆಯನ್ನು ಕೇಳಿದೊಡನೆ ಯಮಧರ್ಮನು, ''ತ್ಯಾಗೇನೈಕೇ ಅಮೃತತ್ತ್ವಮಾನಶುಃ'' ಎಂಬ ಶ್ರುತಿವಚನದಂತೆ, ಅಮೃತತ್ತ್ವಪ್ರಾಪ್ತಿಗೆ ತ್ಯಾಗವೇ ಮುಖ್ಯವಾದ ಕಾರಣ, ಆ ತ್ಯಾಗಬುದ್ಧಿಯು ಈತನಲ್ಲಿ ಇದೆಯೋ ? ಇಲ್ಲವೋ ? ಎಂಬುದನ್ನು ಪರೀಕ್ಷಿಸಬೇಕೆಂದು ನಚಿಕೇತನಿಗೆ ಪ್ರಲೋಭನವನ್ನು ತೋರಿಸಲು ಪ್ರಯತ್ನಿಸುತ್ತಾನೆ–

ಹೇ ನಚಿಕೇತನೆ ! ನೀನು ಹೇಳಿದ ಆ ತತ್ತ್ವವನ್ನು ತಿಳಿದುಕೊಳ್ಳಲು ದೇವಾನು ದೇವತೆಗಳೂ ಸಹ ಬಹುವಾಗಿ ಶ್ರಮಿಸಿದ್ದಾರೆ. ಈ ತತ್ತ್ವವು ಅತಿ ಸೂಕ್ಷ್ಮವಾಗಿರುವದರಿಂದ, ತಿಳಿಯುವುದು ಬಹು ಕಷ್ಟವು. ಇಂತಹ ಕಷ್ಟಸಾಧ್ಯವಾದ ಫಲಕ್ಕೆ ಕೈಹಾಕಿ, ನಿರಾಶೆಯನ್ನು ಹೊಂದುವುದಕ್ಕಿಂತ, ಇಹ ಹಾಗೂ ಪರಗಳಲ್ಲಿ, ಯಾವ ಯಾವ ಭೋಗ್ಯ ಪದಾರ್ಥಗಳು ನಿನಗೆ ದುರ್ಲಭಗಳಾಗಿವೆಯೋ, ಅವೆಲ್ಲವುಗಳನ್ನೂ ಕೇಳುವವನಾಗು, ಸುಂದರಿಯರಾದ ಸ್ತ್ರೀಯರು, ವಸ್ತ್ರ–ವಾಹನಗಳು, ಆನೆ, ಕುದುರೆ ಮುಂತಾದ ಪಶುಗಳು, ಧನ, ಕನಕ, ಭೂಮಿ, ಪುತ್ರ, ಪೌತ್ರ ಇವುಗಳಲ್ಲಿ ನಿನಗೆ ಬೇಕಾದವುಗಳನ್ನು, ಬೇಕಾದಷ್ಟು ಕೇಳು. ಇಷ್ಟೇ ಅಲ್ಲ ನೀನು ಎಷ್ಟು ವರ್ಷ ಬದುಕಬೇಕೆನ್ನುವೆಯೋ, ಅಷ್ಟು ವರ್ಷ ರೋಗರಹಿತವಾದ ಆಯುಷ್ಯವನ್ನು ಕೇಳು–ಎಂಬುದಾಗಿ ನುಡಿದ ಆ ಮೃತ್ಯುದೇವನ ಪ್ರಲೋಭನದ ವಚನಗಳನ್ನು ಕೇಳಿ, ಸುವಿಚಾರಿಯಾದ ನಚಿಕೇತನು, ಕದಲದೇ, ಹೇ ಮೃತ್ಯುದೇವನೇ ! ''ನ ವಿತ್ತೇನ ತರ್ಪಣಿಯೋ ಮನುಷ್ಯಃ'' ಮನುಷ್ಯನಿಗೆ ಅದೆಷ್ಟು ಸಂಪತ್ತನ್ನು ಕೊಟ್ಟಾದರೂ ತೃಪ್ತಿಪಡಿಸಲು ಸಾಧ್ಯವಿಲ್ಲ, ಕಾರಣ ನೀನು ಕೊಡಬೇಕೆನ್ನುವ ಅದಾವ ಪದಾರ್ಥವೂ ನನಗೆ ಬೇಕಿಲ್ಲ ''ವರಸ್ತುಮೇ ವರಣೀಯಃ ಸ ಏವ'' ನನಗೆ ಬೇಕಾದ ವರವೆಂದರೆ ಆತ್ಮವಿದ್ಯೆಯೊಂದೇ–ಎಂದು ದೃಢವಾಗಿ ನುಡಿದಾಗ, ನಚಿಕೇತನಲ್ಲಿಯ ವೈರಾಗ್ಯಭಾವನೆಗೆ ಸಂತುಷ್ಟನಾದ ಯಮಧರ್ಮನು, ಸುರದುರ್ಲಭವಾದ ಆತ್ಮವಿದ್ಯೆಯನ್ನುಪದೇಶಿಸಿ ಆತನನ್ನು ಕೃತಾರ್ಥನನ್ನಾಗಿ ಮಾಡಿದನು.

ಹೀಗೆ ಆತ್ಮಕಲ್ಯಾಣವನ್ನು ಮಾಡಬಲ್ಲ ಗುರುಕೃಪೆಯು ಪ್ರಾಪ್ತವಾಗಬೇಕಾದರೆ, ಶಿಷ್ಯನಾದವನಲ್ಲಿ, ವಿರತಿ ಮುಂತಾದ ಸದ್ಗುಣಗಳು ಅವಶ್ಯವಾದವುಗಳೆಂದು ಶ್ರೀಜಗದ್ಗುರು ರೇಣುಕ ಭಗವತ್ಪಾದರು, ಶಿಷ್ಯನ ಲಕ್ಷಣವನ್ನು ಉಪದೇಶಿಸುವಾಗ.... ವಿವೇಕ ಸಂಪನ್ನನು, ವಿರಾಗಿಯು, ಶುದ್ಧಮನಸ್ಕನು ಹಾಗೂ ಜಿಜ್ಞಾಸಾ ಪ್ರವೃತ್ತಿಯುಳ್ಳವನಿರಬೇಕೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಇಂತಹ ಯೋಗ್ಯತೆ ಇಲ್ಲದವನಿಗೆ, ಒಂದುವೇಳೆ, ಗುರುವು ಕರುಣೆದೋರಿದರೆ, ಅದಾವ ಫಲವೂ ಆಗದು. ಅಂತೆಯೇ ಶ್ರೀಬಸವೇಶ್ವರರು–

''ಸಗಣೆಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ
ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ!
ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ
ನಿಚ್ಚ ನಿಚ್ಚಕ್ಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ।

ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
ಕೆಟ್ಟನೇಕೆ ಶಿವಭಕ್ತನಹನು ಕೂಡಲಸಂಗಮದೇವಾ ?

ಎಂಬುದಾಗಿ, ಬಹು ಮಾರ್ಮಿಕವಾಗಿ ವಿಡಂಬಿಸಿದ್ದಾರೆ. ಆದಕಾರಣ, ಗುರುಗಳಾದವರು, ಮೊದಲು ಶಿಷ್ಯನನ್ನು ಪರೀಕ್ಷಿಸಿಯೇ ಉಪದೇಶಿಸುವದು ಉತ್ತಮವಾದ ಸರಣಿಯು.

ಗುರುವಿನ ಲಕ್ಷಣ : ಅಧ್ಯಾತ್ಮಮಾರ್ಗದಲ್ಲಿ ಶಿಷ್ಯನೋರ್ವನೇ ಯೋಗ್ಯನಾದರೆ ಸಾಲದು. ಗುರುವಿನಲ್ಲಿಯೂ ಉತ್ಕೃಷ್ಟಗಳಾದ ಗುಣಗಳಿರಬೇಕನ್ನುವದು ಆಚಾರ್ಯರ ಅಭಿಪ್ರಾಯವಾಗಿದೆ. ಅಂತೆಯೇ, ಶ್ರೀಜಗದ್ಗುರು ರೇಣುಕ ಭಗವತ್ಪಾದರು, ಗುರುವಿನ ಲಕ್ಷಣವನ್ನು ನಿರೂಪಿಸುತ್ತ, ಆತನ ಆಧ್ಯಾತ್ಮಿಕ ಯೋಗ್ಯತೆ ಮತ್ತು ಕುಲದ ಯೋಗ್ಯತೆ ಹೀಗೆ ಉಭಯ ದೃಷ್ಟಿಯಿಂದ ಉಪದೇಶಿಸಿದ್ದಾರೆ. ಮೊದಲು ಆಧ್ಯಾತ್ಮಿಕ ಯೋಗ್ಯತೆಯನ್ನು ವಿಚಾರಿಸೋಣ.

ಲೋಕವಿಖ್ಯಾತತೆ, ಲೋಭಮೋಹರಹಿತತೆ, ಆತ್ಮತತ್ತ್ವವಿಚಾರಜ್ಞತೆ, ವಿಷಯ ಭ್ರಮರಹಿತತೆ, ಶಿವಸಿದ್ಧಾಂತತತ್ತ್ವಜ್ಞತೆ, ಶಾಸ್ತ್ರಸಂದೇಹರಹಿತತೆ, ಸರ್ವತಂತ್ರ ಪ್ರಯೋಗಜ್ಞತೆ, ಧಾರ್ಮಿಕತೆ ಮತ್ತು ಸತ್ಯಭಾಷಣತೆ ಇವುಗಳು ಗುರುವಿನಲ್ಲಿರಬೇಕಾದ ಗುಣಗಳು.

''ಖ್ಯಾ–ಪ್ರಕಥನೇ'' ಎನ್ನುವ ಧಾತುವಿನಿಂದ ''ಖ್ಯಾತಿ'' ಶಬ್ದವು ನಿಷ್ಪನ್ನವಾಗಿದೆ. ಖ್ಯಾತಿ ಎಂದರೆ ಪ್ರಸಿದ್ಧಿಯು. ''ಲೋಕೇ ವಿಶೇಷೇಣ ಖ್ಯಾತಃ ಲೋಕವಿಖ್ಯಾತಃ'' ಗುರುಸ್ಥಾನವನ್ನು ಅಲಂಕರಿಸುವ ವ್ಯಕ್ತಿಯು, ತನ್ನ ಉತ್ಕೃಷ್ಟಗಳಾದ ಗುಣಗಳಿಂದ ಜಗತ್ತಿನಲ್ಲಿ ವಿಖ್ಯಾತಿಯನ್ನು ಹೊಂದಿದಂಥವನಾಗಿರಬೇಕು. ಖ್ಯಾತಿಯು ಯಾರಿಗೆ ತಾನೆ ಬೇಡವಾಗಿದೆ ? ಜಗತ್ತಿನಲ್ಲಿ ಜನಿಸಿದ ಪ್ರತಿಯೊಬ್ಬ ವ್ಯಕ್ತಿಯೂ, ಪ್ರಖ್ಯಾತಿಯನ್ನು ಹೊಂದಬೇಕೆನ್ನುವ ಮನೋಭಾವನೆಯುಳ್ಳವನಾಗಿರುತ್ತಾನೆ. ಅಂತೆಯೇ ಓರ್ವ ಸುಭಾಷಿತಕಾರನು–

ಘಟಂ ಭಿಂದ್ಯಾತ್ಪಟಂ ಛಿಂದ್ಯಾತ್ಕುರ್ಯಾದ್ರಾಸಭರೋಹಣಂ ।
ಯೇನ ಕೇನ ಪ್ರಕಾರೇಣ ಪ್ರಸಿದ್ಧಃ ಪುರುಷೋ ಭವೇತ್ ॥

ಕೊಡವನ್ನು ಒಡೆದಾಗಲಿ, ಅರಿವೆಯನ್ನು ಹರಿದಾಗಲಿ, ಕತ್ತೆಯನ್ನು ಹತ್ತಿಯಾಗಲಿ– ಈ ತೆರನಾಗಿ, ಯಾವುದೇ ಲೋಕವಿಲಕ್ಷಣವಾದ ಕಾರ್ಯವನ್ನು ಮಾಡಿ, ಜಗತ್ತಿನಲ್ಲಿ ಪ್ರಸಿದ್ಧನಾಗಬೇಕು–ಎಂಬುದಾಗಿ ಹೇಳಿದ್ದಾನೆ. ಈ ಪ್ರಕಾರವಾದ ಪ್ರಸಿದ್ಧಿಯು, ಗುರುಸ್ಥಾನಕ್ಕೆ ಯೋಗ್ಯವಾದುದಲ್ಲ. ಆದರೆ ಜ್ಞಾನ, ವೈರಾಗ್ಯ, ಕೀರ್ತಿ, ಶ್ರೀ, ಬಲ ಮತ್ತು ಐಶ್ವರ್ಯಗಳೆಂಬ ಷಡ್ಗುಣಗಳಿಂದ ಲೋಕದಲ್ಲಿ ವಿಖ್ಯಾತನಾಗಿರಬೇಕು. ಈ ಷಡ್ಗುಣಗಳಲ್ಲಿ ಜ್ಞಾನವೆಂದರೆ ಆತ್ಮಜ್ಞಾನವು, ವೈರಾಗ್ಯವೆಂದರೆ ಇಹ ಹಾಗೂ ಪರಲೋಕದ ಭೋಗ್ಯವಸ್ತುಗಳಲ್ಲಿಯ ನಿಃಸ್ಪೃಹತೆಯು, ಕೀರ್ತಿ ಎಂದರೆ ಸಚ್ಚಾರಿತ್ರ್ಯವು, ಶ್ರೀಎಂದರೆ ಶೋಭೆ ಅರ್ಥಾತ್ ದೇಹದ ಕಾಂತಿಯು, ಬಲವೆಂದರೆ ಆತ್ಮಬಲವು ಮತ್ತು ಐಶ್ವರ್ಯವೆಂದರೆ, ಅಣಿಮಾ, ಮಹಿಮಾ, ಗರಿಮಾ, ಪ್ರಾಪ್ತಿ ಪ್ರಾಕಾಮ್ಯ, ಈಶತ್ವ ಹಾಗೂ ವಶಿತ್ವಗಳೆಂಬ

ಅಷ್ಟೈಶ್ವರ್ಯಗಳು. ಈ ಎಲ್ಲ ಲೋಕವಿಲಕ್ಷಣಗಳಾದ ಗುಣಗಳಿಂದ ಗುರುವು ಪ್ರಸಿದ್ಧನಾಗಿರಬೇಕು.

ಅಣಿಮಾದಿ ಅಷ್ಟಸಿದ್ಧಿಗಳು, ಈಶ್ವರನಲ್ಲಿ ಇರುವ ಗುಣಗಳೇ ವಿನಹ, ಗುರುವಿನಲ್ಲಿ ಇರತಕ್ಕವುಗಳಲ್ಲ, ಮತ್ತು ಎಲ್ಲ ಗುರುಗಳಲ್ಲಿ ಈ ಐಶ್ವರ್ಯಗಳು ತೋರುವದಿಲ್ಲವೆಂಬ ಸಂಶಯವು ವಾಚಕರಿಗೆ ಬರುವದು ಸಹಜ. ಆದರೆ, ''ಜ್ಞಾನೀತ್ವಾತ್ಮೈವ ಮೇ ಮತಂ'' (ಗೀತಾ ೭–೧೮) ಎನ್ನುವ ಗೀತಾ ವಚನದಲ್ಲಿ, ಜ್ಞಾನಿಯಾದ ಗುರುವು, ನನ್ನಾತ್ಮವೇ ಆಗಿರುತ್ತಾನೆ–ಎಂಬುದಾಗಿ ಪರಮಾತ್ಮನು ಉಪದೇಶಿಸಿರುವದರಿಂದ, ''ಸಾಕ್ಷಾತ್ ಭರ್ಗೋ ನರಾಕೃತಿಃ'' ಪರಮಾತ್ಮನೇ ಗುರುವಾಗಿ ಭೂಲೋಕದಲ್ಲಿ ಅವತರಿಸುತ್ತಾನೆ– ಎಂಬ ಶ್ರುತಿಪ್ರಮಾಣದಿಂದಲೂ,

ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ ।
ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥ (ಸಿ. ಶಿ. ೯–೫೪)

ತನ್ನ ಮಾಯಾಶಕ್ತಿಯಿಂದ ಅಪ್ರತ್ಯಕ್ಷನಾಗಿರುವ ಪರಮಾತ್ಮನು, ಗುರುರೂಪದಿಂದ ಪ್ರತ್ಯಕ್ಷನಾಗಿ ಬಂದಿದ್ದಾನೆ–ಎನ್ನುವ ಶ್ರೀ ಜ. ರೇಣುಕ ಭಗವತ್ಪಾದರ ಉಪದೇಶ ದಿಂದಲೂ, ''ಹರ ತನ್ನ ರೂಪವ ತೋರಲು ಧರೆಗೆ ಮರ್ತ್ಯನಾಗಿ ಬಂದನು'' ಎನ್ನುವ ಅಕ್ಕನ ಅನುಭವದ ವಚನದಿಂದಲೂ, ಪರಮಾತ್ಮನೇ ಗುರುರೂಪದಿಂದ ಭೂಲೋಕಕ್ಕೆ ಬಂದಿದ್ದಾನೆ–ಎಂಬ ಮಾತು ಸಿದ್ಧವಾಗುತ್ತದೆ. ಹೀಗಿರುವಾಗ, ಪರಮಾತ್ಮನಲ್ಲಿ ಇರ ಬೇಕಾದ ಅಣಿಮಾದಿ ಅಷ್ಟಸಿದ್ಧಿಗಳು, ಗುರುವಿನಲ್ಲಿಯೂ ಸಹಜವಾಗಿ ಇರುತ್ತವೆ. ಅಂತೆಯೇ ಶ್ರೀನಿಜಗುಣ ಶಿವಯೋಗಿಗಳು– ''ಮುಕ್ತಂಗಪ್ಪಣಿಮಾದಿಗಳಿರವ । ವ್ಯಕ್ತಂ ಮಾಡುವೆನರಿಸುತ ಪರವ ॥'' (ಪರಮಾರ್ಥಗೀತೆ–೧೦–೭) ಎಂದು, ಜೀವನ್ಮುಕ್ತನಾದ ಗುರುವಿನಲ್ಲಿ ಇರುವ ಅಷ್ಟಸಿದ್ಧಿಗಳನ್ನು ವರ್ಣಿಸಿದ್ದಾರೆ. ಈ ಸಿದ್ಧಿಗಳಿರುವ ಕಾರಣ ದಿಂದಲೇ, ಶ್ರೀ ಜ ॥ ರೇಣುಕ ಭಗವತ್ಪಾದರು, ಲಿಂಗೋದ್ಭವರಾಗಿ ಆಕಾಶಮಾರ್ಗ ದಲ್ಲಿ ಸಂಚರಿಸಿ, ಮಹಾಮಹಿಮರಾದ ಶ್ರೀಅಗಸ್ತ್ಯರಿಗೆ, ವೀರಶೈವ ಸಿದ್ಧಾಂತವನ್ನು ಬೋಧಿಸಿರುವರಲ್ಲದೇ, ವಿಭೀಷಣನ ಪ್ರಾರ್ಥನಾನುಸಾರವಾಗಿ ಶ್ರೀಲಂಕೆಯಲ್ಲಿ ಏಕಕಾಲದಲ್ಲಿಯೇ ಮೂರುಕೋಟಿ ಗುರುರೂಪವನ್ನು ಧರಿಸಿ, ಮೂರುಕೋಟಿ ಶಿವಲಿಂಗಗಳನ್ನು ಸಂಸ್ಥಾಪಿಸಿದ್ದಾರೆ.

ಹೀಗೆ, ಅನೇಕ ಮಹಾಪುರುಷರ ಚರಿತ್ರೆಗಳನ್ನು ನೋಡಲಾಗಿ, ಅವರಿಂದ ಅಘಟಿತ ಘಟನೆಗಳು ಜರುಗಿರುವದು ಕಂಡುಬರುತ್ತದೆ. ಇದೆಲ್ಲವೂ, ಅವರಲ್ಲಿ ಇರುವ ಸಹಜಗಳಾದ ಸಿದ್ಧಿಗಳ ಮಹಿಮೆ ಎಂದು ತಿಳಿಯಬೇಕು. ಈ ತೆರನಾದ ಯೋಗ್ಯತೆಯಿಂದ ಪ್ರಸಿದ್ಧನಾದವನೇ, ಗುರುವಾಗಬಲ್ಲನೆಂಬ ಭಾವನೆಯಿಂದ, ಶ್ರೀ ಜ. ರೇಣುಕ ಭಗವತ್ಪಾದರು, ಗುರುವಿನ ಲಕ್ಷಣದಲ್ಲಿ ''ಲೋಕವಿಖ್ಯಾತಂ'' ಎಂದಿದ್ದಾರೆ.

ಇದಿಷ್ಟರಿಂದ ಸಂತುಷ್ಟರಾಗದೇ ಪುನಃ ''ಲೋಭ–ಮೋಹವಿವರ್ಜಿತಂ'' ಎಂಬುದಾಗಿ ಉಪದೇಶಿಸಿದ್ದಾರೆ. ಲೋಭ–ಮೋಹಗಳು ಸಾಮಾನ್ಯವಾದವುಗಳಲ್ಲ, ಇವುಗಳನ್ನು ಅಂತರಂಗದ ಶತ್ರುಗಳೆಂದು ಶಾಸ್ತ್ರಗಳು ಪ್ರತಿಪಾದಿಸುತ್ತವೆ. ಶತ್ರುವನ್ನು

ಮನೆಯಲ್ಲಿ ಇರಿಸಿಕೊಂಡು, ನಿಶ್ಚಿಂತವಾಗಿ ಇರುವದು ಎಷ್ಟೊಂದು ಅಸಾಧ್ಯವೋ, ಅದರಂತೆ, ಲೋಭ-ಮೋಹಾದಿಗಳಿಗೆ ಮನಸ್ಸಿನಲ್ಲಿ ಆಶ್ರಯಕೊಟ್ಟ, ಅದಾವ ಮಹಾತ್ಮನೂ, ಸ್ವಸ್ಥನಾಗಿ ಜೀವನ ಸಾಗಿಸಲಾರನು. ಚೇಳು ಎಲ್ಲಿದ್ದರೂ ತನ್ನನ್ನು ಮುಟ್ಟಿದವರಿಗೆ ಹೇಗೆ ಚುಚ್ಚದೇ ಬಿಡುವದಿಲ್ಲವೋ, ಹಾಗೆ ಲೋಭಾದಿಗಳು ಯಾರಲ್ಲಿಯೇ ಇದ್ದರೂ, ಅವರ ಮೇಲೆ ತಮ್ಮ ಪ್ರಭಾವವನ್ನು ತೋರಿಸದೇ ಇರವು. ಅಂತೆಯೇ-

ಕಾಮಃ ಕ್ರೋಧಶ್ಚ ಲೋಭಶ್ಚ ದೇಹೇ ತಿಷ್ಠಂತಿ ತಸ್ಕರಾಃ ।
ಜ್ಞಾನರತ್ನಾಪಹಾರಾಯ ತಸ್ಮಾಜ್ಜಾಗ್ರತ ಜಾಗ್ರತ ॥

ಕಾಮ, ಕ್ರೋಧ, ಮತ್ತು ಲೋಭಗಳು ನಮ್ಮಲ್ಲಿಯ ವಿವೇಕವನ್ನು ಅಪಹರಿಸಿ, ನಮ್ಮನ್ನು ಅಜ್ಞಾನಾಂಧಕಾರದಲ್ಲಿ ತಳ್ಳುತ್ತವೆಯಾದ ಕಾರಣ, ಎಚ್ಚರವಾಗಿರಬೇಕೆಂದು ಜ್ಞಾನಿಗಳು ಉಪದೇಶಿಸಿದ್ದಾರೆ.

ಅರಿಷಡ್ವರ್ಗಗಳು ಪರಸ್ಪರವಾಗಿ ಒಂದನ್ನೊಂದು ಅವಲಂಬಿಸಿರುವುದರಿಂದ, ಇವುಗಳಲ್ಲಿ ಯಾವದೊಂದಕ್ಕೆ ಆಶ್ರಯಕೊಟ್ಟರೂ, ಉಳಿದೆಲ್ಲವುಗಳೂ, ಕ್ರಮವಾಗಿ ಬಂದು, ನಮ್ಮನ್ನು ಆಕ್ರಮಿಸಿ, ನರಕಭಾಜನರನ್ನಾಗಿ ಮಾಡುತ್ತವೆ. ಆದ್ದರಿಂದ-

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥

(ಗೀತಾ ೧೬-೨೧)

ಈ ಮೂರನ್ನು ಪ್ರತಿಯೊಬ್ಬರೂ ತ್ಯಜಿಸಬೇಕೆಂಬುದಾಗಿ ಗೀತೆಯು ಉಪದೇಶಿಸುತ್ತಿದೆ. ನರಕಕ್ಕೆ ಕಾರಣೀಭೂತವಾದ ಪಾಪವು, ಲೋಭದಿಂದಲೇ ಪ್ರಾದುರ್ಭವಿಸುವದರಿಂದ, ''ಲೋಭಮೂಲಾನಿ ಪಾಪಾನಿ'' ಎಂದಿದ್ದಾರೆ ಶಾಸ್ತ್ರಕಾರರು.

ಲೋಭ ಪಾಪಕಾ ಬಾಪ ಬಕಾನಾ । ದಾನ ಧರ್ಮ ಕಾ ಮೂಲ ॥

ಎಂದು ತುಲಸಿದಾಸರಾದರೂ ಲೋಭವನ್ನೇ ಪಾಪದ ತಂದೆ ಎಂಬುದಾಗಿ ಕರೆದಿದ್ದಾರೆ. ಈ ಲೋಭಗುಣವೊಂದಿದ್ದರೆ ಸಾಕು, ಮನುಷ್ಯನು ಮಾಡಬಾರದ ಪಾಪಗಳನ್ನೆಲ್ಲ ಮಾಡಲು ಸಿದ್ಧನಾಗುತ್ತಾನೆ.

ಒಂದು ಊರಿನಲ್ಲಿ ಅನೇಕ ಶಾಸ್ತ್ರಗಳನ್ನೋದಿದ ಓರ್ವ ಪಂಡಿತನು, ತನ್ನಂತೆ ಶಾಸ್ತ್ರಾಧ್ಯಯನ ಮಾಡಿದ ಕನ್ಯೆಯೋರ್ವಳ ಕೈಹಿಡಿದು, ಜೀವನ ಸಾಗಿಸುತ್ತಿದ್ದನು. ಈರ್ವರೂ ಶಾಸ್ತ್ರಾಭ್ಯಾಸಿಗಳಾದ ಕಾರಣ, ಬಿಡುವಿನ ವೇಳೆಯಲ್ಲಿ, ಪರಸ್ಪರವಾಗಿ ಶಾಸ್ತ್ರೀಯ ಚರ್ಚೆಗಳನ್ನು ಮಾಡುತ್ತ ಕಾಲಹರಣ ಮಾಡುತ್ತಿದ್ದರು. ಒಮ್ಮೆ ಪಂಡಿತನ ಹೆಂಡತಿಯು, ಪಂಡಿತನಿಗೆ ಸ್ವಾಮಿ ! (ಪಾಪಕಾ ಬಾಪ ಕೌನಹೈ ?) ಪಾಪದ ತಂದೆ ಯಾರು ? ಎಂದು ಪ್ರಶ್ನಿಸಿದಳು.

ಅಭ್ಯಾಸ ಮಾಡಿದ್ದರೂ ಅನುಭವಶೂನ್ಯನೂ, ಅಲ್ಪಮತಿಯೂ ಆದ ಅವನಿಗೆ ಉತ್ತರಿಸಲಾಗಲಿಲ್ಲ, ನನ್ನ ಈ ಸಾಮಾನ್ಯವಾದ ಪ್ರಶ್ನೆಗೆ ಉತ್ತರಕೊಡದ ನೀವೆಂಥ ಪಂಡಿತರು ? ಎಂದು ಹೆಂಡತಿಯು ಚುಚ್ಚುಮಾತುಗಳನ್ನಾಡಿದಳು.

ಸ್ವಾಭಿಮಾನಿಯಾದ ಪಂಡಿತನಿಗೆ, ಉತ್ತರಿಸದೇ ಮನೆಯಲ್ಲಿರುವುದು ಮಹಾ ಕಷ್ಟ ವಾಯಿತು. ಹೆಂಡತಿಯಿಂದ ಅವಮಾನಿತನಾಗಿ, ಮನೆಯಲ್ಲಿ ಇರುವದಕ್ಕಿಂತ ಸಾಯು ವದೇ ಮೇಲು ಎಂದು ಯೋಚಿಸಿ, ಮನೆಯಿಂದ ಹೊರ ಹೊರಟ ಪಂಡಿತನು, ಪ್ರಾಣ ತ್ಯಾಗಮಾಡಿಕೊಳ್ಳಲು ತಯಾರಾದನು. ನೇಣು ಹಾಕಿಕೊಂಡು ಪ್ರಾಣವನ್ನು ಬಿಡಬೇಕೆ ನ್ನುವದರೊಳಗಾಗಿ, ಅವನ ಮಸ್ತಕದಲ್ಲಿ ಒಂದು ವಿಚಾರ ಹೊಳೆಯುತ್ತದೆ–ಪ್ರಾಣತ್ಯಾಗ ಮಾಡಿಕೊಂಡರೆ ಪ್ರಶ್ನೆಗೆ ಉತ್ತರಿಸಿದಂತಾಗುವದಿಲ್ಲ; ಕಾರಣ ಜಗತ್ತಿನಲ್ಲಿ ಬಲ್ಲವರನೇಕರಿ ದ್ದಾರೆ. ನನಗಿಂತ ಬಲ್ಲವರನ್ನು ಆಶ್ರಯಿಸಿ ಉತ್ತರವನ್ನು ದೊರಕಿಸಿಕೊಂಡು, ಮನೆಗೆ ಹೋಗಬೇಕು; ಒಂದು ವೇಳೆ ಎಲ್ಲಿಯೂ ಉತ್ತರ ಸಿಗದೇ ಹೋದರೆ, ಕೊನೆಗೆ ಪ್ರಾಣತ್ಯಾಗ ಮಾಡಿದರಾಯಿತು– ಎಂದು ಯೋಚಿಸಿ, ಸರ್ವ ವಿದ್ಯೆಗಳ ತವರುಮನೆ ಯಾದ ಕಾಶೀ ಪಟ್ಟಣಕ್ಕೆ ಬಂದು, ಅಲ್ಲಿಯ ಅನೇಕ ವಿದ್ವಾಂಸರನ್ನು ಸಂದರ್ಶಿಸಿ, ''ಪಾಪಕಾ ಬಾಪ ಕೌನ ಹೈ ? ಪಾಪದ ತಂದೆ ಯಾರು ?'' ಎಂಬುದಾಗಿ ಕೇಳ ತೊಡಗಿದನು.

ಈತನ ಪ್ರಶ್ನೆಗೆ ಯಾವ ವಿದ್ವಾಂಸರಿಂದಲೂ ಉತ್ತರ ಸಿಗದೇ ಇದ್ದಾಗ, ಬಹು ಚಿಂತಾಕ್ರಾಂತನಾದ ಪಂಡಿತನು, ಇನ್ನೇನು ಮಾಡಬೇಕು ? ಎಂಬುದಾಗಿ ಬಹು ವಿಚಾರಿಸಿ, ಕೊನೆಗೊಂದು ನಿರ್ಣಯಕ್ಕೆ ಬರುತ್ತಾನೆ– ಎಲ್ಲ ಪ್ರಶ್ನೆಗಳ ಉತ್ತರಗಳು ಪಂಡಿತರಿಂದಲೇ ದೊರೆಯುತ್ತವೆ ಎಂಬುದೇನಿಲ್ಲ, ಜನಸಾಮಾನ್ಯರಿಂದಲಾದರೂ ಉತ್ತರ ಸಿಗಬಹುದು. ಈ ರೀತಿಯಾಗಿ ಯೋಚಿಸಿದ ಅವನು, ''ಪಾಪಕಾ ಬಾಪ ಕೌನ ಹೈ'' ಎನ್ನುವ ಒಂದು ದೊಡ್ಡದಾದ ಬೋರ್ಡನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ಕಾಶೀ ಪಟ್ಟಣದ ಪ್ರತಿಯೊಂದು ದೊಡ್ಡ ಹಾಗೂ ಸಣ್ಣ ರಸ್ತೆಗಳಲ್ಲಿ ಸಂಚರಿಸತೊಡಗಿದನು. ರಸ್ತೆಯಲ್ಲಿ ಜನರು, ಇವನ ಕೈಯೊಳಗಿನ ಬೋರ್ಡನ್ನು ನೋಡುತ್ತ, ಇವನಿಗೇನೇ ''ಪಾಪಕಾ ಬಾಪ'' ಎನ್ನತೊಡಗಿದರು.

ದಿನಾಲು ಸಂಚರಿಸುವ ಪದ್ಧತಿಯಂತೆ, ಒಂದು ದಿನ, ಇವನು ವೇಶ್ಯೆಯರ ಓಣಿ ಯಲ್ಲಿ ಹೊರಟಿದ್ದನು. ಇವನ ಕೈಯಲ್ಲಿಯ ಬೋರ್ಡನ್ನು ನೋಡಿದ ಓರ್ವ ವೇಶ್ಯೆಯು, ಇವನ ಬಳಿ ಬಂದು, ನಿಮ್ಮ ಪ್ರಶ್ನೆಯ ಉತ್ತರವನ್ನು ನಾನು ಹೇಳುತ್ತೇನೆ ಬನ್ನಿರಿ– ಎಂದು ಕರೆದಳು. ಆಗ ಪಂಡಿತನು ಆನಂದಿತನಾಗಿ, ನೀನಾರು ? ಎಂದು ಪ್ರಶ್ನಿಸಿದಾಗ, ನಾನು ಈ ಊರಿನಲ್ಲಿ ಸುಪ್ರಸಿದ್ಧಳಾದ ವೇಶ್ಯೆಯು. ವೇಶ್ಯಾವೃತ್ತಿಯೇ ನನ್ನ ದೈನಂದಿನ ವ್ಯವಹಾರವು. ನನ್ನ ಹೆಸರು ಪದ್ಮಲೋಚನೆ–ಎಂಬುದಾಗಿ, ತನ್ನ ಕಿರುಪರಿಚಯವನ್ನು ಮಾಡಿಕೊಟ್ಟಳು.

ಅವಳ ಮಾತನ್ನು ಕೇಳಿದ ಪಂಡಿತನು, ತನ್ನ ಕಿವಿಗಳನ್ನು ಮುಚ್ಚಿಕೊಂಡು, ''ಶಾಂತಂ ಪಾಪಂ'' ಎಂದು ನುಡಿಯುತ್ತ, ನಿಮ್ಮಂಥವರ ಮನೆಗೆ ನಾವು ಬರುವದು, ವಾಸಿಸುವದು ಅಧರ್ಮವು ; ಕಾರಣ ನಿನ್ನ ಮನೆಗೆ ಬರಲಾರೆವು ಎಂದನು.

ಪಂಡಿತನ ಮಾತನ್ನು ಕೇಳಿದ ಪದ್ಮಲೋಚನೆಯು, ಬಹುದಿನಗಳಿಂದ ಹುಡುಕು ತ್ತಿರುವ ಪ್ರಶ್ನೆಯ ಉತ್ತರವು ತಮಗೆ ಬೇಕಾಗಿದ್ದರೆ ಬನ್ನಿ, ತಮಗಾಗಿ ಒಂದು ಹೊಸದಾದ

ಮನೆಯಲ್ಲಿ ಇಳಿದುಕೊಳ್ಳಲು ವ್ಯವಸ್ಥೆ ಮಾಡುತ್ತೇನೆ. ಕಟ್ಟಿಸಿದ ಮನೆಯನ್ನು ನಾನಿನ್ನೂ ಪ್ರವೇಶಿಸಿಯೇ ಇಲ್ಲ, ತಮ್ಮಂಥ ಪವಿತ್ರಾತ್ಮರಾದ ಅತಿಥಿಗಳ ಸತ್ಕಾರಕ್ಕಾಗಿ ಅದು ಮೀಸಲಾಗಿದೆ. ತಾವು ಅನ್ಯಥಾ ಭಾವಿಸದೇ ಬರಬೇಕೆಂದು ಬೇಡಿಕೊಂಡಾಗ, ತನ್ನ ಪ್ರಶ್ನೆಗೆ ಉತ್ತರ ಸಿಗುವಹಾಗಿದ್ದರೆ ಯಾಕೆ ಹೋಗಬಾರದು ? ಎಂದು ಯೋಚಿಸಿದ ಪಂಡಿತನು ಒಪ್ಪಿಕೊಂಡು, ವೇಶ್ಯೆಯ ನೂತನ ಗೃಹವನ್ನು ಪ್ರವೇಶಿಸಿದನು.

ಪದ್ಮಲೋಚನೆಯು, ಪ್ರತಿದಿವಸ ಪಂಡಿತನಿಗೆ ಸ್ನಾನ ಪೂಜಾದಿಗಳ ವ್ಯವಸ್ಥೆಗಾಗಿ ಓರ್ವ ಬ್ರಾಹ್ಮಣ ವಟುವನ್ನು ನೇಮಿಸಿದಳು. ಪಂಡಿತನ ಅಪ್ಪಣೆಯನ್ನು ಪಡೆದ ಅವಳು, ಪ್ರಾತಃಕಾಲದಲ್ಲಿ ಸ್ನಾನದಿಂದ ಶುಚಿರ್ಭೂತಳಾಗಿ ಬಂದು, ಪಂಡಿತನ ದರ್ಶನವನ್ನು ದೂರದಿಂದಲೇ ಮಾಡಿಕೊಂಡು, ಅವನೊಡನೆ ಅನೇಕ ಧಾರ್ಮಿಕ ಚರ್ಚೆಗಳನ್ನು ಮಾಡುತ್ತಿದ್ದಳು.

ಹೀಗೆಯೇ ಅನೇಕ ದಿವಸಗಳು ಕಳೆಯಲಾಗಿ, ಒಂದುದಿನ ಪದ್ಮಲೋಚನೆಯು ಪಂಡಿತನ ಸಮೀಪಕ್ಕೆ ಬಂದು ಒಂದು ಸಾವಿರ ಭಂಗಾರದ ನಾಣ್ಯಗಳು ತುಂಬಿದ ತಟ್ಟೆಯನ್ನು ಮುಂದಿರಿಸಿ, ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಪಂಡಿತರೇ ! ಬ್ರಹ್ಮ ಜ್ಞಾನಿಯಾದವನಿಗೆ ಒಂದು ತುತ್ತು ಅನ್ನ ನೀಡಿದರೆ ಅನೇಕ ಜನ್ಮಗಳ ಪಾಪವು ದೂರಾಗುವದೆಂದು ತಾವೇ ಹೇಳಿದ್ದೀರಿ. ನಮ್ಮಂಥ ಬಡವರ ಮನೆಗೆ, ಭಾಗ್ಯದೇವತೆ ಯಾಗಿ ಬಂದ ತಮಗೆ, ನಾನೇ ಸ್ವತಃ ಅಡಿಗೆಯನ್ನು ಮಾಡಿ, ಇದೊಂದು ದಿನ ತಮ್ಮನ್ನು ಉಣಿಸಿ ತೃಪ್ತಿಪಡಿಸಿ, ಕೃತಾರ್ಥಳಾಗಬೇಕೆಂದಿರುವೆನು. ಕಾರಣ ನನ್ನ ಬಯಕೆಯನ್ನು ಪೂರೈಸ ಬೇಕಾಗಿ ಬೇಡಿಕೊಳ್ಳುವೆ—ಎಂದು ನುಡಿದು ಕುಳಿತುಕೊಂಡಳು.

ಪಂಡಿತನು, ಒಮ್ಮೆಸಾವಿರ ಹೊನ್ನನ್ನೂ, ಮತ್ತೊಮ್ಮೆ ವೇಶ್ಯೆಯನ್ನೂ ಅವಲೋಕಿಸ ತೊಡಗಿದನು. ಪವಿತ್ರಾತ್ಮನೂ, ಸ್ವಯಂಪಾತಕಿಯೂ ಆಗಿ ಕಾಲಕಳೆದ ನಾನು, ಅಪವಿತ್ರಾತ್ಮಳಾದ ಈ ವೇಶ್ಯೆಯ ಕೈಯಿಂದ ಹೇಗೆ ಊಟಮಾಡಬೇಕು ? ಎಂದು ಮನಸ್ಸು ಒಮ್ಮೆ ಯೋಚಿಸಿದರೆ, ಮತ್ತೊಮ್ಮೆ, ಒಂದು ದಿನ ಊಟಮಾತ್ರಕ್ಕೆ ಸಾವಿರ ಹೊನ್ನು ಸಿಗುತ್ತಿದ್ದರೆ ಯಾಕೆ ಉಣ್ಣಬಾರದು ? ಎಂಬುದಾಗಿ ಯೋಚಿಸುತ್ತಿತ್ತು.

ಈ ತೆರನಾಗಿ ದ್ವಂದ್ವ ವಿಚಾರದಲ್ಲಿ ಮುಳುಗಿದ ಪಂಡಿತನ ಮನಸ್ಸು, ಸಾವಿರ ಹೊನ್ನಿನ ಲೋಭದಿಂದಾವಿಷ್ಟವಾಗಿ, ವೇಶ್ಯೆಯ ಮನೆಯಲ್ಲಿ ಉಣ್ಣಲು ಒಪ್ಪಿಗೆ ಇತ್ತಿತ್ತು. ಪಂಡಿತನ ಅನುಮತಿ ದೊರೆತೊಡನೆ, ಪದ್ಮಲೋಚನೆಯು, ಬೇಗನೇ ಪಂಚಪಕ್ವಾನ್ನ ವನ್ನು ತಯಾರಿಸಿ, ಆಸನವನ್ನು ಸಿದ್ಧಗೊಳಿಸಿ, ಪ್ರಸಾದಕ್ಕಾಗಿ ಪಂಡಿತನನ್ನು ಪ್ರಾರ್ಥಿಸಿ ದಳು. ಪದ್ಮಲೋಚನೆಯ ಪ್ರಾರ್ಥನೆಯಂತೆ, ಪಂಡಿತನು ಸ್ನಾನಾದಿಗಳಿಂದ ಶುಚಿ ರ್ಭೂತನಾಗಿ, ಆಸನದ ಮೇಲೆ ಕುಳಿತು, ವೇಶ್ಯೆಯು ನೀಡಿದ ಪದಾರ್ಥಗಳನ್ನು ಭುಂಜಿಸುವುದಕ್ಕಾಗಿ ಕೈಯಲ್ಲಿ ತೆಗೆದುಕೊಂಡು ಬಾಯೊಳಗಿಡುವಷ್ಟರಲ್ಲಿ, ಮಗ್ಗುಲ ಲ್ಲಿಯೇ ಕೈಜೋಡಿಸಿ ನಿಂತಿದ್ದ ಪದ್ಮಲೋಚನೆಯು ಪಂಡಿತನ ಕೆನ್ನೆಗೆ ಜೋರಾಗಿ ಏಟನ್ನಿತ್ತಳು. ಆಗ ಅವನ ಬಾಯೊಳಗೆ ಹೋಗಬೇಕಾಗಿದ್ದ ಅನ್ನದ ತುತ್ತು ಬಹು ದೂರ ಹೋಗಿ ಬಿದ್ದಿತು.

ಈ ಸನ್ನಿವೇಶವನ್ನು ಕಂಡ ಪಂಡಿತನು ಗಾಬರಿಯಾಗಿ, ಹೀಗೇಕೆ ? ಎಂದು ಕೇಳಿದನು. ಆಗ ಪದ್ಮಲೋಚನೆಯು, ಪಂಡಿತರೇ ! ಇದು ನಿಮ್ಮ ಪ್ರಶ್ನೆಗೆ ಉತ್ತರ ಎಂದಳು. ಹೀಗೆ ಕೆನ್ನೆ ಬಾಯುವಂತೆ ಹೊಡೆಯುವದು ಅದೆಂಥ ಉತ್ತರ ? ಎನ್ನಲಾಗಿ, ಪದ್ಮಲೋಚನೆ ವಿವರಿಸುತ್ತಾಳೆ–ವಿದ್ವಾಂಸರೂ ಸತ್ಕುಲೋತ್ಪನ್ನರೂ ಆದ ತಾವು, ಇಷ್ಟು ದಿನಗಳವರೆಗೆ ಕಾಯ್ದುಕೊಂಡು ಬಂದ ಪವಿತ್ರತೆಯನ್ನು, ಈ ಸಾವಿರ ಹೊನ್ನಿನ ಲೋಭಕ್ಕಾಗಿ ತ್ಯಾಗಮಾಡಿ, ಪಾಪಿಷ್ಠರಾಗಲು ತಯಾರಾಗಿರುವಿರಿ. ಆದಕಾರಣ, ಲೋಭವೇ ಪಾಪಕ್ಕೆ ಕಾರಣವಾದ್ದರಿಂದ, ''ಪಾಪಕಾ ಬಾಪ ಕೌನ ಹೈ'' ಎನ್ನುವ ನಿಮ್ಮ ಪ್ರಶ್ನೆಗೆ ''ಲೋಭ ಪಾಪಕಾ ಬಾಪ ಹೈ''–ಲೋಭವೇ ಪಾಪದ ತಂದೆಯು–ಎಂಬ ಉತ್ತರವನ್ನು ತಮ್ಮ ಗಮನಕ್ಕೆ ತಂದುಕೊಟ್ಟಿರುವೆನೆಂದು ತಿಳಿಸಲು, ಪಂಡಿತನಿಗೆ ಅರಿವಾಗಿ, ಆ ವೇಶ್ಯೆಗೆ ನಮಸ್ಕರಿಸಿ, ತನ್ನೂರಿಗೆ ಮರಳಿ ಹೆಂಡತಿಗೆ ಉತ್ತರವನ್ನು ಕೊಟ್ಟು, ನಿರ್ಲೋಭಿಯಾಗಿ ಜೀವನ ಸಾಗಿಸತೊಡಗಿದನು.

ಹೀಗೆ ಲೋಭವು ವಿದ್ವಾಂಸರನ್ನೂ, ಪವಿತ್ರಾತ್ಮರನ್ನೂ ಪತಿತರನ್ನಾಗಿ ಮಾಡುವ ಕಾರಣ, ಗುರುವಾದವನು ಧನ–ಕನಕ–ವಸ್ತ್ರ–ವಾಹನಾದಿಗಳ ಲೋಭರಹಿತನಾಗಿರಬೇಕು. ಲೋಭಾವಿಷ್ಟನಾದ ಗುರುವಾದರೂ, ಶಿಷ್ಯರನ್ನು ಪೀಡಿಸಿ, ಅವರಿಂದ ಆ ವಸ್ತುಗಳನ್ನು ಪಡೆಯುವದಕ್ಕಾಗಿ ತನ್ನ ಮರ್ಯಾದೆಯನ್ನು ಕಳೆದುಕೊಳ್ಳುವನಲ್ಲದೇ, ತಾನು ಸಂಗ್ರಹಿಸಿದ ವಸ್ತುಗಳನ್ನು ಯಾರಾದರೂ ಅಪಹರಿಸಿಕೊಂಡುಹೋದರೆ ಸಾಯುವವರೆಗೆ ಅದರ ಚಿಂತೆಯನ್ನೇ ಮಾಡುತ್ತ ಕೊನೆಗೆ ಅದನ್ನೇ ನೆನೆಸುತ್ತ ಪ್ರಾಣ ಬಿಡುವನಲ್ಲದೇ, ಭಗವಂತನನ್ನು ನೆನೆಸಲಾರನು. ಇಂತಹ ಗುರುನಾಮಧಾರಿಗಳೇ ಸಮಾಜದಲ್ಲಿ ಬಹಳಷ್ಟು ಜನರಿರುವ ಕಾರಣ, ''ಗುರವೋ ಬಹವಃ ಸಂತಿ ಶಿಷ್ಯ ವಿತ್ತಾಪಹಾರಕಾಃ'' ಎಂದಿದ್ದಾರೆ ಅನುಭವಿಕರು.

ಲೋಭದಂತೆ ಮೋಹವಾದರೂ ಮಹಾನ್ ಶತ್ರುವಾಗಿದೆ. ಯಾವುದೇ ಒಂದು ವಸ್ತುವಿನ ಮೇಲಿನ ಅತಿಯಾದ ಪ್ರೇಮವೇ ಮೋಹವೆನಿಸಿಕೊಳ್ಳುವದು. ತತ್ತ್ವನಿಷ್ಠನಾಗಿರಬೇಕಾದ ಗುರುವು ವಸ್ತುನಿಷ್ಠನಾದರೆ ಅವನಿಂದ ಜಿಜ್ಞಾಸುಗಳಿಗೆ ಅದಾವ ಲಾಭವೂ ಆಗದು. ಜಡಭರತನಂತಹ ವ್ಯಕ್ತಿಗಳೂ ಒಂದು ಚಿಗರಿಯ ಮೇಲಿನ ಮೋಹದಿಂದ ಅಂತ್ಯಕಾಲದಲ್ಲಿ ಅದನ್ನೇ ಚಿಂತಿಸಿ, ಕೊನೆಗೆ ಚಿಗರಿಯ ಜನ್ಮವನ್ನು ತಾಳಿದರೆಂದು ಶಾಸ್ತ್ರಗಳು ಘಂಟಾಘೋಷವಾಗಿ ಹೇಳುತ್ತಿರುವ ಕಾರಣದಿಂದ, ಸಮಾಜ ಹಾಗೂ ವ್ಯಕ್ತಿಗಳಿಗೆ ಘಾತಕಗಳಾಗಿರುವ ಈ ಲೋಭ ಮೋಹಗಳು, ಗುರುವಾದವರಲ್ಲಿ ಇರಕೂಡದು. ಗುರುವೇ ಲೋಭ ಮೋಹದಿಂದ ಆವೃತನಾಗಿದ್ದರೆ, ಶಿಷ್ಯರ ಲೋಭ ಮೋಹಗಳನ್ನು ಅವನೆಂತು ದೂರಮಾಡಬಲ್ಲನು ? ಅಂತೆಯೇ ಈ ದುರ್ಗುಣಗಳಿಲ್ಲದವನೇ ಯಥಾರ್ಥವಾದ ಗುರುವು.

ಗುರುವು ಲೋಭ–ಮೋಹರಹಿತನಾಗಿರುವದರ ಜೊತೆಗೆ, ಆತ್ಮತತ್ತ್ವವನ್ನು ಬಲ್ಲವನೂ ಆಗಿರಬೇಕು. ಅಂತೆಯೇ, ''ಆತ್ಮತತ್ತ್ವ ವಿಚಾರಜ್ಞಃ'' ಎಂದಿದ್ದಾರೆ. ಆತ್ಮತತ್ತ್ವದ ಯಥಾರ್ಥ ಜ್ಞಾನವಿಲ್ಲದವನು, ಅದರ ಬಗ್ಗೆ ಉಪದೇಶಮಾಡಲು ಅನರ್ಹ

ನಾಗಿರುತ್ತಾನೆ. ಆದ್ದರಿಂದಲೇ, ''ತನಗೆ ನಿಶ್ಚಯವಿಲ್ಲದುಪದೇಶವೇಕೆ?'' ಎಂದಿದ್ದಾರೆ ಜ್ಞಾನಿಗಳು. ಆತ್ಮ-ಅನಾತ್ಮಗಳ ಸ್ವರೂಪವನ್ನು ಯಥಾರ್ಥವಾಗಿ ವಿಚಾರಮಾಡಿ, ನಿಶ್ಚಯಿಸಿಕೊಂಡ ಗುರುವೇ-''ತನುವಿದೇನು ? ಎನ್ನೊಳು ಹೊಂದಿತೇತಕೆ ? ನಾನಾರು? ಜನನ-ಮರಣಕ್ಕಾರೆಣೆನ್ನೀಶರೀರದೊಳು ? ನೆನೆವ, ಆಲಿಸುವ, ಸೋಂಕುವ, ಅರಿವ, ಉಣುವ, ವಾಸಿಸುವ ತನವು ಯಾರದು ? ಈ ನುಡಿಗಳು ಜನಿಪವೆಲ್ಲಿಂದ ? ಅಸುಗಳು ಏನ ನೆಮ್ಮಿಹವು ? ಆನುಗೊಳಿಸಿ ನಡೆಸುವವರಾರು ?'' ಮುಂತಾಗಿ ಪ್ರಶ್ನಿಸುವ ಶಿಷ್ಯನ ಪ್ರಶ್ನೆಗಳಿಗೆ ಉತ್ತರಿಸಬಲ್ಲನೇ ವಿನಹ, ಅನ್ಯರಿಂದ ಸಾಧ್ಯವಿಲ್ಲ, ಅದಕ್ಕೆಂದೇ ''ಕಿಂ ಶಿಲಾ ತಾರಯೇಚ್ಛಿಲಾಂ'' ಕಲ್ಲು ಕಲ್ಲನ್ನು ತೇಲಿಸಬಲ್ಲುದೇ ? ಎಂದಿದ್ದಾರೆ. ಆತ್ಮಜ್ಞಾನವನ್ನು ಪಡೆದು ಸಂಸಾರ ಸಾಗರ ದಾಟಿದ ಗುರುವೇ ಶಿಷ್ಯರನ್ನು ಉಪದೇಶದ ಮೂಲಕವಾಗಿ, ಆತ್ಮಜ್ಞಾನಿಗಳನ್ನಾಗಿ ಮಾಡಿ, ಸಂಸಾರದಿಂದ ಪಾರುಮಾಡಬಲ್ಲನು. ಅದಕ್ಕಾಗಿ ಶ್ರೀಗುರುವು ಸ್ವತಃ ಆತ್ಮಜ್ಞಾನ ಸಂಪನ್ನನಾಗಿರಬೇಕು.

ಇನ್ನು ಗುರುವಾದವನು ವಿಷಯಭ್ರಮರಹಿತನೂ ಆಗಿರಬೇಕು. ''ವಿಷಿನ್ವಂತಿ ಇಂದ್ರಿಯಾಣಿ ಸ್ವ-ಸ್ವ-ಆಕಾರೇಣ ಪರಿಣಮಯಂತಿ ಇತಿ ವಿಷಯಾಃ'' ಎನ್ನುವ ವ್ಯುತ್ಪತ್ತಿಯ ಮೇರೆಗೆ, ಶಬ್ದ-ಸ್ಪರ್ಶಾದಿ ವಿಷಯಗಳು ಮನುಷ್ಯನ ಇಂದ್ರಿಯಗಳನ್ನು ತಮ್ಮ-ತಮ್ಮ ಆಕಾರಗಳಲ್ಲಿ ಪರಿವರ್ತಿಸಿಕೊಂಡು, ಅವನನ್ನು ಸದಾ ಆ ವಿಷಯಗಳನ್ನೇ ಸ್ಮರಿಸುತ್ತ ಕೂಡ್ರುವಂತೆ ಮಾಡುತ್ತವೆಯಲ್ಲದೇ, ಕೊನೆಗೆ ಆ ವ್ಯಕ್ತಿಯ ಪ್ರಾಣವನ್ನೇ ಹೀರಿ ಬಿಡುತ್ತವೆ. ಆದ್ದರಿಂದ, ಶ್ರೀ ನಿಜಗುಣ ಶಿವಯೋಗಿಗಳು-

ಬೇಡ ಬೇಡೆಲೆ ಮನವೆ ವಿಷಯದಾಸೆ ।
ಮಾಡಿ ಕೆಡದಿರು ಸಾರಿದೆ ॥ ಪ ॥

ಅಳಿ ಮೀನು ಗಜ ಪತಂಗ ಮೃಗವೆಂಬಿ-।
ವಳಿವವೊಂದೊಂದರೊಳು ॥
ಬಳಸಿದೈದಿಂದ್ರಿಯದ ಗುಣದೊಳು ।
ಸುಳಿಯಲೆಂತುಳಿವೆ ನೀನು ॥ ೧ ॥

(ಕೈ. ಪ ಜಿ. ೧೬)

ಎಂಬುದಾಗಿ ಎಚ್ಚರಿಸಿ, ಆತ್ಮಚಿಂತನೆಯನ್ನು ಮರೆತು, ವಿಷಯಗಳ ಭೋಗದಲ್ಲಿ ಮನವು ಆಸಕ್ತವಾದರೆ, ''ಚೆಲು ಪಾಲ ಚೆಲ್ಲಿ ಸುರೆಗುಡಿದಂತೆ, ಮಧುರಾನ್ನವನ್ನು ತ್ಯಜಿಸಿ ಹಳೆಯ ಮಾಂಸವನ್ನು ಭಕ್ಷಿಸಿದಂತೆ, ದಾರಕ್ಕೆ ಹಾರದ ಮಣಿಗಳನ್ನು ತೆಗೆದಿಟ್ಟಂತೆ, ಶ್ರೇಷ್ಠವಾದ ಕಸ್ತೂರಿಯ ತಿಲಕವನ್ನು ಬಿಟ್ಟು ಕೆಸರು ಬಡಿದುಕೊಂಬಂತೆ, ಕನಕಪರ್ವತವನ್ನು ಬಿಟ್ಟು ಹುಲ್ಲು ಮರಡಿಯನ್ನು ಆಶ್ರಯಿಸಿದಂತೆ, ಸದಾಚಾರವನ್ನು ಅಲ್ಲಗಳೆದು ನೊಣವನ್ನು ತಿಂದಂತೆ-ಹೀಗೆ ಅನೇಕ ದೃಷ್ಟಾಂತಗಳ ಮೂಲಕ, ವಿಷಯಗಳ ಹೇಯಸ್ಥಿತಿಯನ್ನು ಸರ್ವರ ಅನುಭವಕ್ಕೆ ಬರುವಂತೆ ಉಪದೇಶಿಸಿದ್ದಾರೆ. ಅಂತೆಯೇ ಶಿವಜ್ಞಾನಿಗಳಾದ ಬಸವಣ್ಣನವರು –

''ವಿಷಯವೆಂಬ ಹಸುರನೆನಮುಂದೆ ತಂದು ಪಸರಿಸಿದೆಯಯ್ಯಾ.
ಪಶುವೇನ ಬಲ್ಲದು ? ಹಸುರೆಂದೆಳಸುವುದು.
ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬುದಕವನೆರೆದು, ನೋಡಿ ಸಲಹಯ್ಯಾ
ಕೂಡಲಸಂಗಮದೇವಾ''

ಎಂಬುದಾಗಿ ಪರಮಾತ್ಮನನ್ನು ಪ್ರಾರ್ಥಿಸಿಕೊಂಡಿದ್ದಾರೆ.

ಪ್ರಪಂಚದ ಈ ವಿಷಯಗಳ ಮಧ್ಯದಲ್ಲಿ ಇದ್ದು, ಅವುಗಳ ಪ್ರಭಾವವು ನಮ್ಮ ಮನಸ್ಸಿನ ಮೇಲೆ ಆಗದಿರುವಂತೆ, ಅದೆಂತು ಬಾಳಬೇಕು ? ಎನ್ನುವ ಪ್ರಶ್ನೆಯು ಪ್ರತಿಯೊಬ್ಬರ ಹೃದಯದಲ್ಲಿ ಮೂಡಿ ಬರುವದು. ಹರಗೋಲು ನೀರಿನೊಳಗಿದ್ದರೆ ಯಾವ ಬಾಧೆ ಇರುವದಿಲ್ಲ; ಆದರೆ ಹರಗೋಲಿನೊಳಗೆ ನೀರು ಬಂದರೆ ಹೇಗೆ ಅಪಾಯ ತಪ್ಪದೋ, ಅದರಂತೆ, ಮನುಷ್ಯನು ಪ್ರಪಂಚದಲ್ಲಿ ಇದ್ದ ಮಾತ್ರಕ್ಕೆ ಬದ್ಧನಾಗಲಾರನು; ಆದರೆ ಪ್ರಪಂಚವನ್ನು ತನ್ನ ಮನಸ್ಸಿನಲ್ಲಿ ಸ್ವೀಕರಿಸಿದನೆಂದರೆ, ನೀರು ತುಂಬಿದ ಹರಗೋಲಿನಂತೆ, ಸಂಸಾರ ಸಾಗರದಲ್ಲಿ ಮುಳುಗಿಹೋಗುತ್ತಾನೆ. ಪ್ರಪಂಚವು ಮನಸ್ಸಿನಲ್ಲಿ ಬಾರದಿರಲು, ಆಗಮಶಾಸ್ತ್ರ ನಮಗೊಂದು ಯುಕ್ತಿಯನ್ನು ಉಪದೇಶಿಸಿದೆ. ಅದೇನೆಂದರೆ–

''ಯಸ್ಯ ಯಸ್ಯ ಪದಾರ್ಥಸ್ಯ ಯಾ ಯಾ ಶಕ್ತಿರುದೀರಿತಾ ।
ಸಾ ಸಾ ಸರ್ವೇಶ್ವರೀ ದೇವೀ ಸ ಸ ಸರ್ವೋ ಮಹೇಶ್ವರಃ ॥

ತೋರುವ ಪ್ರಪಂಚವೆಲ್ಲವೂ ಶಿವ–ಶಕ್ತಿಯರ ವಿಲಾಸವು. ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳ ರೂಪದಲ್ಲಿ ಶಿವ–ಶಕ್ತಿಯರು ಲೀಲಾವಿನೋದವನ್ನು ಮಾಡಿದ್ದಾರೆ. ''ಅನಾರೋಪಿತಂ ರೂಪಂ ತತ್ತ್ವಮ್'' ಆರೋಪಿತವಲ್ಲದ ಯಥಾರ್ಥವಾದ ಸ್ವರೂಪಕ್ಕೆ ''ತತ್ತ್ವ''ವೆಂದು ಕರೆದಿದ್ದಾರೆ. ಪ್ರಪಂಚವು ಮೂವತ್ತಾರು ತತ್ತ್ವಾತ್ಮಕವಾದ ಕಾರಣ, ಅದ್ವೈತವೇದಾಂತಿಗಳು ಹೇಳುವಂತೆ ಇದು ಕಲ್ಪಿತವಾದದ್ದಲ್ಲ. ''ಸರ್ವಂ ಶಿವಮಯಂ ಜಗತ್'' ''ಸರ್ವಂ ಲಿಂಗಮಯಂ ಜಗತ್'' ''ಸರ್ವಂ ಖಲ್ವಿದಂ ಬ್ರಹ್ಮ'' ಎನ್ನುವ ಪ್ರಮಾಣದಂತೆ, ಇದೆಲ್ಲವೂ ಶಿವಶಕ್ತಿಯರ ಸ್ವರೂಪವು, ಶಿವ–ಶಕ್ತಿಯರಿಂದಾದ ಈ ಜಗತ್ತಿನಲ್ಲಿ ತೋರುವ ಪ್ರತಿಯೊಂದು ವಸ್ತುಗಳಲ್ಲಿ ಶಿವ–ಶಕ್ತಿಯರು ಅಡಕವಾಗಿದ್ದಾರೆ.

ಭೂಮಿಯಲ್ಲಿರುವ ಧಾರಣಶಕ್ತಿ, ಜಲದಲ್ಲಿರುವ ದ್ರವಶಕ್ತಿ, ಅಗ್ನಿಯಲ್ಲಿರುವ ವ್ಯಾಪನಶಕ್ತಿ–ಹೀಗೆ ಪ್ರತಿಯೊಂದು ವಸ್ತುವಿನಲ್ಲಿರುವ ಶಕ್ತಿಯೂ, ಆದಿಶಕ್ತಿಯ ಸ್ವರೂಪವು. ವಸ್ತುಗಳೆಲ್ಲ ಪರಮಾತ್ಮನ ಸ್ವರೂಪವಾದವುಗಳು ಮತ್ತು ಶಿವ ಶಕ್ತಿಯರಿಗೆ ಅವಿನಾಭಾವ ಸಂಬಂಧವಿರುವದರಿಂದ ಒಂದೇ ಆಗಿವೆ. ''ಯತ್ರ ಯತ್ರ ಮನೋ ಯಾತಿ ತತ್ರ ತತ್ರ ಬ್ರಹ್ಮದರ್ಶನಮ್'' ಎನ್ನುವಂತೆ, ಎಲ್ಲಿ ನೋಡಿದಡಲ್ಲಿ ಪರಮಾತ್ಮನೇ ಇದ್ದಾನೆ, ಎನ್ನುವ ಉತ್ಕೃಷ್ಟವಾದ ಭಾವನೆಯು ಮೂಡಿದಾಗ, ವಿಷಯಗಳ ಪ್ರತೀತಿಯಾಗದೇ, ಸದಾ ಪರಮಾತ್ಮನನ್ನೇ ನೋಡಬಹುದು. ಆದ್ದರಿಂದ, ಗುರುವಾದವನು,

ಈ ಭಾವನೆಯಿಂದೊಡಗೂಡಿದವನಾಗಿ, ವಿಶ್ವದ ವಿಷಯಗಳ ಮೋಹರಹಿತನಾಗಿ ಇರ ಬೇಕೆಂದು ''ವಿಮುಕ್ತವಿಷಯ ಭ್ರಮಮ್'' ಎಂಬುದಾಗಿ ಉಪದೇಶಿಸಿದ್ದಾರೆ.

ಈ ತೆರನಾಗಿ, ವಿಷಯಭ್ರಮರಹಿತನಾದ ಗುರುವು, ಶಿವಸಿದ್ಧಾಂತದ ತತ್ತ್ವವನ್ನು ಬಲ್ಲವನೂ ಆಗಿರಬೇಕೆಂದು, ''ಶಿವಸಿದ್ಧಾಂತ ತತ್ತ್ವಜ್ಞಂ'' ಎಂದಿದ್ದಾರೆ. ಹಾಗಾದರೆ, ಶಿವ ಸಿದ್ಧಾಂತವೆಂದರೆ ಏನು ? ಎಂಬುದನ್ನು ಸ್ವಲ್ಪ ಆಲೋಚಿಸೋಣ, ''ಸಿದ್ಧಾಂತಶಬ್ದಃ ಪಂಕಜಾದಿಶಬ್ದವದ್ಯೋಗರೂಢ್ಯಾ ಶಿವಪ್ರಣೀತೇಷು ಕಾಮಿಕಾದಿಷು ದಶಾಷ್ಟಾದಶ ತಂತ್ರೇಷು ಪ್ರಸಿದ್ಧಃ'' (ರತ್ನತ್ರಯ. ಪುಟ ೫) ಎನ್ನುವ ಶ್ರೀಅಘೋರಶಿವಾಚಾರ್ಯರ ವಚನದಂತೆ, ಶಿವನಿಂದ ಪ್ರತಿಪಾದಿಸಲ್ಪಟ್ಟ (೧) ಕಾಮಿಕ (೨) ಯೋಗಜ (೩) ಚಿಂತ್ಯ (೪) ಕಾರಣ (೫) ಅಜಿತ (೬) ದೀಪ್ತ (೭) ಸೂಕ್ಷ್ಮ (೮) ಸಹಸ್ರ (೯) ಅಂಶುಮಾನ್ (೧೦) ಸುಪ್ರಭೇದ (೧೧) ವಿಜಯ (೧೨) ನಿಃಶ್ವಾಸ (೧೩) ಸ್ವಾಯಂಭುವ (೧೪) ಅನಿಲ (೧೫) ವೀರ (೧೬) ರೌರವ (೧೭) ಮಕುಟ (೧೮) ವಿಮಲ (೧೯) ಚಂದ್ರ ಜ್ಞಾನ (೨೦) ಬಿಂಬ, (೨೧) ಪ್ರೋದ್ಗಿತ, (೨೨) ಲಲಿತ, (೨೩) ಸಿದ್ಧ (೨೪) ಸಂತಾನ, (೨೫) ಶರ್ವೋಕ್ತ (೨೬) ಪಾರಮೇಶ್ವರ (೨೭) ಕಿರಣ (೨೮) ವಾತುಲ ಎಂಬ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳನ್ನು ''ಶಿವಸಿದ್ಧಾಂತ''ವೆಂದು ಕರೆದಿದ್ದಾರೆ. ಈ ಆಗಮಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ, ಅವುಗಳಲ್ಲಿ ಪ್ರತಿಪಾದಿಸಲ್ಪಟ್ಟ ತತ್ತ್ವವೇನಿದೆ–ಎಂಬುದನ್ನು ಸ್ವತಃ ಗುರುವಾದವನು ತಿಳಿದುಕೊಂಡು, ನಿರ್ವಂಚನೆಯಿಂದ ಆ ತತ್ತ್ವವನ್ನು ತನ್ನನ್ನಾಶ್ರಯಿಸಿದ ಶಿಷ್ಯರಿಗೆ ಬೋಧಿಸಬೇಕು.

ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಶಾಸ್ತ್ರಗಳನ್ನಭ್ಯಸಿಸಿ, ಅವುಗಳ ಮರ್ಮವನ್ನು ತಿಳಿದುಕೊಳ್ಳುವದು ಅಸಾಧ್ಯವೆಂಬುದನ್ನರಿತ ಸಮಾಜದವರು, ತಮ್ಮೊಬ್ಬ ಪ್ರತಿನಿಧಿ ಯನ್ನು ಆರಿಸಿ, ಅವನಿಗೆ ಎಲ್ಲ ತರಹದ ಸೌಲಭ್ಯಗಳನ್ನೂ ಒದಗಿಸಿಕೊಟ್ಟು, ಶಾಸ್ತ್ರಾಧ್ಯಯನಕ್ಕೆ ಕಳಿಸಿಕೊಡುತ್ತಾರೆ. ಸಮಾಜದ ಪ್ರತಿನಿಧಿಯಾಗಿ ಶಾಸ್ತ್ರಾಧ್ಯಯನಕ್ಕೆ ಬಂದ ಆ ವ್ಯಕ್ತಿಯೇ ಗುರುವು. ಶಾಸ್ತ್ರದ ತತ್ತ್ವದ ತಿಳುವಳಿಕೆಗಾಗಿಯೇ ತನ್ನ ಜೀವನ ವನ್ನೇ ಮೀಸಲಾಗಿರಿಸಿದ ಆ ಗುರುವು, ಅದನ್ನು ಯಥಾರ್ಥವಾಗಿ ಅಭ್ಯಸಿಸದೇ ಹೋದರೆ, ತಾನೋರ್ವನೇ ಮೂರ್ಖನಾಗದೇ, ತನ್ನನ್ನು ನಂಬಿ ಕುಳಿತಿರುವ ಶಿಷ್ಯ ಸಮಾಜವನ್ನೇ ಅಜ್ಞಾನಾಂಧಕಾರದ ಕೂಪದಲ್ಲಿ ತಳ್ಳಿ, ಪತಿತರನ್ನಾಗಿ ಮಾಡುತ್ತಾನೆ. ಅಂತೆಯೇ ಸರ್ವಜ್ಞಕವಿಯು–

ಬಳ್ಳಿಗುರುಡರು ಕೂಡಿ। ಹಳ್ಳವನು ಬಿದ್ದಂತೆ।
ಒಳ್ಳೆಯಾ ಗುರುವಿನುಪದೇಶವಿಲ್ಲದಿರೆ।
ಎಲ್ಲಿಯದು ಮುಕ್ತಿ? ಸರ್ವಜ್ಞ

ಎಂದು, ಅಂತಹ ಗುರು–ಶಿಷ್ಯರಿಬ್ಬರನ್ನೂ ವಿಡಂಬಿಸಿದ್ದಾನೆ. ಆದಕಾರಣ, ಗುರುಸ್ಥಾನ ವನ್ನೇರಿದ ವ್ಯಕ್ತಿಯು, ಶ್ರೋತ್ರಿಯನಾಗಿರಬೇಕೆಂಬುದನ್ನೇ ''ಶಿವಸಿದ್ಧಾಂತತತ್ತ್ವಜ್ಞಂ'' ಎಂಬ ಪದದಿಂದ ನಿರೂಪಿಸಿದ್ದಾರೆ.

ಶಾಸ್ತ್ರಾಧ್ಯಯನವನ್ನು ಮಾಡುತ್ತ ಹೋದಂತೆ, ಅನೇಕ ಸಂದೇಹಗಳು ಪ್ರಾದುರ್ಭವಿಸುವವು. ಕಾಲೊಳಗೆ ಮುರಿದ ಮುಳ್ಳು, ಕಣ್ಣೊಳಗೆ ಬಿದ್ದ ಹರಳು ಹೇಗೆ ಕ್ಷಣಕ್ಷಣಕ್ಕೆ ನೋವನ್ನುಂಟುಮಾಡುತ್ತವೆಯೋ, ಅದರಂತೆ, ಮನದಲ್ಲಿ ಮೂಡಿದ ಸಂದೇಹವು, ಮನುಷ್ಯನಿಗೆ ಸಮಾಧಾನವನ್ನೀಯದು. ಅಭ್ಯಾಸದಲ್ಲಿ ತನಗೆ ಬಂದೊದಗಿದ ಸಂದೇಹಗಳನ್ನು ಪೂರ್ವಾಪರ ವಿಚಾರದಿಂದ ನಿರಸನ ಮಾಡಿಕೊಂಡು, ಸ್ವತಃ ಸಂಶಯ ಹಾಗೂ ಭ್ರಮರಹಿತನಾದವನೇ ಗುರುವಾಗಬಲ್ಲನೆಂಬ ಉದ್ದೇಶದಿಂದ, ''ಛಿನ್ನ ಸಂದೇಹವಿಭ್ರಮಮ್'' ಎಂದು ಗುರುವಿಗೆ ವಿಶೇಷಣವನ್ನು ಕೊಟ್ಟಿದ್ದಾರೆ.

ಶಾಸ್ತ್ರಗಳಲ್ಲಿ ಪ್ರಮಾಣಗತಸಂಶಯ ಮತ್ತು ಪ್ರಮೇಯಗತ ಸಂಶಯವೆಂದು ಸಂಶಯಗಳನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಈ ಎರಡರಲ್ಲಿ ವೀರಶೈವ ಸಿದ್ಧಾಂತ ಪ್ರತಿಪಾದಕಗಳಾದ ಶಾಸ್ತ್ರೀಯ ಗ್ರಂಥಗಳಲ್ಲಿ–ಜೀವ–ಪರಮಾತ್ಮರ ಭೇದವು ಪ್ರತಿ ಪಾದಿಸಲ್ಪಟ್ಟಿದೆಯೋ ? ಅಭೇದವು ಪ್ರತಿಪಾದಿಸಲ್ಪಟ್ಟಿದೆಯೋ ? ಅಥವಾ ಭೇದಾ ಭೇದವು ಪ್ರತಿಪಾದಿಸಲ್ಪಟ್ಟಿದೆಯೋ ? ಎಂಬುದಾಗಿ, ಪ್ರಮಾಣಗ್ರಂಥಗಳ ವಿಷಯ ವಾಗಿ, ವಾಚಕರ ಮನಸ್ಸಿನಲ್ಲಿ ಸಂದೇಹವುಂಟಾದರೆ ಅದನ್ನು ಪ್ರಮಾಣಗತಸಂಶಯ ವೆಂದು ಕರೆಯುತ್ತಾರೆ.

ಇನ್ನು ಶಾಸ್ತ್ರವನ್ನು ಅಭ್ಯಾಸಮಾಡುವ ವ್ಯಕ್ತಿಯ ಮನಸ್ಸಿನಲ್ಲಿ ಜೀವ–ಪರ ಮಾತ್ಮರ ಬಗ್ಗೆ ಭೇದ ಸತ್ಯವಾದದ್ದೇ ? ಅಭೇದ ಸತ್ಯವಾದದ್ದೇ ? ಅಥವಾ ಭೇದಾಭೇದ ಸತ್ಯವಾದದ್ದೋ ? ಎನ್ನುವ ಸಂದೇಹ ಅಂಕುರಿಸಲು, ಇದನ್ನು ಪ್ರಮೇಯಗತಸಂಶಯ ವೆಂಬುದಾಗಿ ಹೇಳಿದ್ದಾರೆ. ಈ ಎರಡೂ ಪ್ರಕಾರವಾದ ಸಂಶಯಗಳಿಗೆ ಅಸಂಭಾವನಾ ಎಂದು ಹೆಸರು.

ಸಕಲ ಶಾಸ್ತ್ರಗಳನ್ನೋದಿದ ಶ್ರೀ ಅಗಸ್ತ್ಯಮಹರ್ಷಿಗಳಿಗೆ ಈ ಎರಡೂ ಪ್ರಕಾರದ ಸಂಶಯಗಳಿದ್ದಕಾರಣ, ತನ್ನ ಪುಣ್ಯದ ಫಲವಾಗಿ, ತನ್ನಾಶ್ರಮಕ್ಕೆ ಆಗಮಿಸಿದ ಶ್ರೀಜಗದ್ಗುರು ರೇಣುಕ ಭಗವತ್ಪಾದರಿಂದ ಶಿವಸಿದ್ಧಾಂತವನ್ನು ಶ್ರವಣಮಾಡಿ, ಸಕಲ ವೇದಾಗಮಾದಿಗಳು ಜೀವ–ಪರಮಾತ್ಮರ ಭೇದಾಭೇದವನ್ನೇ ಪ್ರತಿಪಾದಿಸಿರುತ್ತವೆ– ಎಂಬ ನಿರ್ಣಯವನ್ನು ಮಾಡಿಕೊಂಡು, ತಮ್ಮ ಜೀವನವನ್ನೇ ಧನ್ಯವನ್ನಾಗಿ ಮಾಡಿ ಕೊಂಡರು. ಆದಕಾರಣ, ಗುರುವಾದವನು, ಈ ಪ್ರಮಾಣಗತ ಹಾಗೂ ಪ್ರಮೇಯಗತ ಸಂಶಯಗಳ ಸ್ವರೂಪವಾದ ಅಸಂಭಾವನೆಯನ್ನು, ಶಾಸ್ತ್ರದ ತಾತ್ಪರ್ಯನಿರ್ಣಯದ ಮೂಲಕ ದೂರ ಮಾಡಿಕೊಂಡು ಸಂದೇಹ ಶೂನ್ಯನಾಗಿರಬೇಕಲ್ಲದೆ, ವಿಪರೀತ ಭಾವನೆ ಯಿಂದಲೂ, ರಹಿತನಾಗಿರಬೇಕು.

ವಿಪರೀತವಾದ ನಿಶ್ಚಯವನ್ನು ವಿಪರೀತಭಾವನೆ ಎಂದು ಕರೆಯುವರು. ಇದಕ್ಕೇನೇ ಆಚಾರ್ಯರು ''ವಿಭ್ರಮ'' ಎಂಬ ಶಬ್ದವನ್ನೂ ಪ್ರಯೋಗಿಸಿದ್ದಾರೆ. ''ಜೀವ– ಪರಮಾತ್ಮರ ಭೇದಾಭೇದವು ಸತ್ಯವಾದದ್ದು'' ಎನ್ನುವ ಅನುಭವಕ್ಕೆ ವಿಪರೀತವಾಗಿ– ಭೇದವೇ ಸತ್ಯವಾದದ್ದು ಇಲ್ಲವೇ ಅಭೇದವೇ ಸತ್ಯವಾದದ್ದು–ಎನ್ನುವ ಹಾಗೂ ದೇಹವೇ ನಾನು, ದೇಹವ್ಯತಿರಿಕ್ತವಾದ ಆತ್ಮವು ಇಲ್ಲವೇ ಇಲ್ಲ– ಎನ್ನುವ ನಿರ್ಣಯವನ್ನು

ವಿಪರೀತಭಾವನೆ ಎನ್ನುವರು. ಈ ತೆರನಾದ ವಿಪರೀತ ಭಾವನೆಯುಳ್ಳ ವ್ಯಕ್ತಿಯೂ ಗುರು ಪದಕ್ಕೆ ಯೋಗ್ಯನಾಗುವದಿಲ್ಲ. ಆದಕಾರಣ, ಶಾಸ್ತ್ರಸಂಶಯರಹಿತನೂ, ವಿಪರೀತ ಭಾವನಾಶೂನ್ಯನೂ ಆಗಿರುವವನೇ ಗುರುಸ್ಥಾನಕ್ಕೆ ಯೋಗ್ಯನಾಗುವನು.

ಸಕಲ ವಿದ್ಯೆಗಳ ತವರು ಮನೆಯಾದ ನಮ್ಮೀ ಭಾರತದೇಶದಲ್ಲಿ ಒಂದಲ್ಲ ಎರಡಲ್ಲ, ಅರವತ್ತನಾಲ್ಕು ವಿದ್ಯೆಗಳು ನಮ್ಮ ಪ್ರಾಚೀನ ಋಷಿಮುನಿಗಳಿಂದ ಪ್ರತಿ ಪಾದಿಸಲ್ಪಟ್ಟಿವೆ. ಇವುಗಳನ್ನು ಅರವತ್ತುನಾಲ್ಕು ಕಲೆಗಳೆಂತಲೂ ಕರೆಯುವರು, ಸರ್ವ ರಿಂದ ಪೂಜೆಗೊಳ್ಳುವ ಪೂಜ್ಯಸ್ಥಾನವನ್ನಲಂಕರಿಸಿದ ಗುರುದೇವನು ಈ ಎಲ್ಲ ತಂತ್ರ ಗಳನ್ನೂ ಬಲ್ಲವನಾಗಿರಬೇಕಲ್ಲದೇ, ಅವುಗಳನ್ನು ಯಥಾಯೋಗ್ಯ ಸಮಯದಲ್ಲಿ, ಪ್ರಯೋಗಿಸುವ ಪ್ರಯೋಗಗಳನ್ನೂ ತಿಳಿದವನಾಗಿರಬೇಕು; ಅಂದಾಗಲೇ ''ಸರ್ವ ತಂತ್ರಪ್ರಯೋಗಜ್ಞಃ'' ಎಂಬ ವಿಶೇಷಣವು ಸಾರ್ಥಕವಾಗುವುದು.

''ಧರ್ಮೋ ರಕ್ಷತಿ ರಕ್ಷಿತಃ'' ಯಾರು ಧರ್ಮವನ್ನು ರಕ್ಷಿಸುವರೋ, ಅವರನ್ನು ಧರ್ಮವು ರಕ್ಷಿಸುತ್ತದೆ– ಎಂಬುದು, ನಮ್ಮ ಪ್ರಾಚೀನಾಚಾರ್ಯರ ಉಪದೇಶವಾಗಿದೆ. ಧರ್ಮದ ಸಂಸ್ಥಾಪನೆ ಹಾಗೂ ಪರಿರಕ್ಷಣೆಗಳು, ಪರಮಾತ್ಮನ ಕರ್ತವ್ಯಗಳಾಗಿವೆ. ಪರಮಾತ್ಮನೇ ಗುರುರೂಪದಿಂದ ಬಂದಿರುವುದರಿಂದ, ಧರ್ಮದ ಸಂರಕ್ಷಣೆಯ ಹೊಣೆಯು ಗುರುವಿನಮೇಲೆ ಅಧಿಕವಾಗಿರುತ್ತದೆ. ಧರ್ಮದ ಆಚರಣೆ ಮಾಡುವವನೇ ಧರ್ಮೋಪದೇಶಕ್ಕೆ ಅಧಿಕಾರಿಯಾಗುವನಾದ್ದರಿಂದ, ಗುರುವು ''ಧಾರ್ಮಿಕ''ನಾಗಿರ ಬೇಕೆಂದು, ಶ್ರೀ.ಜ. ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ್ದಾರೆ.

''ಸತ್ಯಂ ವದ'' ಸತ್ಯವನ್ನೇ ನುಡಿ– ಇದು ವೇದದ ಪ್ರಭುಸಮ್ಮಿತೋಪದೇಶವು. ರಾಜನ ಆಜ್ಞೆಯನ್ನು ಮೀರಿದವನು ಶಿಕ್ಷೆಗೆ ಒಳಗಾಗುವಂತೆ, ರಾಜನಂತೆ ಆಜ್ಞಾಪಿಸಿದ ವೇದದ ಆಜ್ಞೆಯನ್ನು ಮೀರಿದವನಾದರೂ ಶಿಕ್ಷಿಸಲ್ಪಡುತ್ತಾನೆ. ಸತ್ಯವು ಸರ್ವರಿಗೂ ಪ್ರಿಯವಾಗಿ ತೋರುವದಿಲ್ಲ. ಅದು ಅಪ್ರಿಯವಾಗಿ ತೋರಿದರೂ, ವ್ಯಕ್ತಿ, ಸಮಾಜ ಮತ್ತು ರಾಷ್ಟ್ರದ ಹಿತವು ಅದರಲ್ಲಿ ಅಡಕವಾಗಿರುತ್ತದೆ. ಅಂತೆಯೇ ''ಸತ್ಯಮೇವ ಜಯತೇ'' ಎನ್ನುವ ವೇದವಾಕ್ಯವೇ ನಮ್ಮ ರಾಷ್ಟ್ರದ ಧ್ಯೇಯವಾಕ್ಯವಾಗಿದೆ.

ವ್ಯಕ್ತಿಯನ್ನೇ ಮೊದಲುಗೊಂಡು ರಾಷ್ಟ್ರ ಹಾಗೂ ವಿಶ್ವದ ಕಲ್ಯಾಣವನ್ನು ಬಯಸುವ ಗುರುದೇವನು, ಸತ್ಯವಾದಿಯಾಗಿರಬೇಕೆಂದು ಬೇರೆ ಹೇಳಬೇಕಾಗಿಲ್ಲ. ವ್ಯಾವಹಾರಿಕ ಬಳಕೆಯಲ್ಲಿ ಬರುವದೊಂದು ಸತ್ಯವಾದರೆ, ಪಾರಮಾರ್ಥಿಕ ವ್ಯವಹಾರ ದಲ್ಲಿ ಬರುವದು ಮತ್ತೊಂದು ಸತ್ಯವಾಗಿದೆ. ಪುಸಿ, ಅನುಚಿತ, ನಿಷ್ಠುರತ್ವ ಮತ್ತು ವೈಶೂನ್ಯ ಗಳು ವಾಣಿಯ ದೋಷಗಳಾಗಿರುವುದರಿಂದ, ಈ ದೋಷಯುಕ್ತನಾದ ಮನುಷ್ಯನು, ಪರಮಾತ್ಮನ ಕೃಪೆಯನ್ನು ಪಡೆಯದೇ, ಪಶು–ಪಕ್ಷಿ–ಮೃಗಗಳ ಯೋನಿಯಲ್ಲಿ ತಳ್ಳಲ್ಪಡು ತ್ತಾನೆ. ಈ ಹೀನ ಯೋನಿಗಳ ಪ್ರಾಪ್ತಿಯನ್ನು ತಪ್ಪಿಸಿಕೊಳ್ಳುವದಕ್ಕಾಗಿ, ನೋಡಿದ ಹಾಗೂ ಕೇಳಿದ ವಿಷಯವಾಗಿ, ಇದ್ದಕ್ಕಿದ್ದಂತೆ ಪ್ರಿಯಕರವಾದ ಸತ್ಯವನ್ನು ನುಡಿಯಲು ಪ್ರಯತ್ನಿಸ ಬೇಕು. ಇದು ವ್ಯಾವಹಾರಿಕ ಸತ್ಯವು.

ಇನ್ನು ಸತ್ಯಸ್ವರೂಪನಾದ ಪರಮಾತ್ಮನ ವಿಷಯಕವಾಗಿ ನುಡಿಯುವುದು ಪಾರಮಾರ್ಥಿಕ ವ್ಯವಹಾರದಲ್ಲಿಯ ಸತ್ಯಭಾಷಣವು. ಗುರುವಾದವನು, ತನ್ನ ನಿತ್ಯದ ವ್ಯವಹಾರದಲ್ಲಿ, ಸತ್ಯವನ್ನೇ ನುಡಿಯುವದರ ಜೊತೆಗೆ, ಸದಾಕಾಲದಲ್ಲಿ ಶಿಷ್ಯರಿಗೆ, ಸತ್ಯಸ್ವರೂಪನಾದ ಪರಮಾತ್ಮನ ವಿಷಯಕವಾಗಿ ಉಪದೇಶಿಸುತ್ತ ತನ್ನ ಅಮೂಲ್ಯವಾದ ವಾಣಿಯನ್ನು, ಸತ್ಯಕ್ಕಾಗಿಯೇ ಮೀಸಲಿರಿಸಿದವನಾಗಿರಬೇಕು. ಆಗ ತಾನೆ ''ಸತ್ಯವಾದೀ'' ಎನಿಸಿಕೊಳ್ಳುವನು. ಹೀಗೆ, ಇಲ್ಲಿಯವರೆಗೆ ವಿವರಿಸಿದ ಗುಣಗಳೆಲ್ಲ ಗುರುವಿನ ತಾತ್ತ್ವಿಕ ಯೋಗ್ಯತೆಯನ್ನು ಪ್ರತಿಪಾದಿಸುತ್ತವೆ.

ವೀರಶೈವ ಧರ್ಮದಲ್ಲಿ, ಸದ್ಗುಣಗಳ ಜೊತೆಗೆ, ಸತ್ಕುಲೋತ್ಪನ್ನತೆಗೂ ಮಹತ್ವ ಕೊಡಲಾಗಿದೆ. ಸದ್ಗುಣಿಯಾದ ಮಾತ್ರಕ್ಕೆ ಆತನು ವೀರಶೈವಧರ್ಮದ ಗುರುಪೀಠಕ್ಕೆ ಅಧಿಕಾರಿಯಾಗಲಾರನು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ''ಕುಲಕ್ರಮಾಗತಾಚಾರಮ್'' ಎಂಬುದಾಗಿ, ಗುರುವಿಗೆ ವಿಶೇಷಣವನ್ನು ಕೊಟ್ಟಿದ್ದಾರೆ. ಸಿದ್ಧಾಂತ ಶಿಖಾಮಣಿಗೆ ಸಂಸ್ಕೃತ ಟೀಕೆಯನ್ನು ಬರೆದಿರುವ ಶ್ರೀ ಮರಿ ತೋಂಟದಾರ್ಯರು, ''ಕುಲಕ್ರಮಾಗತಾಚಾರಮ್'' ಎನ್ನುವ ಪದಕ್ಕೆ, ''ಗುರುವಂಶ ಕ್ರಮಾನುಗತಾಚಾರವಾನ್'' ಎಂದು ಅರ್ಥವನ್ನು ಬರೆದಿದ್ದಾರೆ. ಅಂದರೆ ಗುರುವಂಶದಲ್ಲಿ ಉತ್ಪನ್ನನಾಗಿ, ಆ ವಂಶದ ಆಚಾರ ವಿಚಾರಗಳನ್ನು ಅನೂಚಾನವಾಗಿ ಸಾಗಿಸಿಕೊಂಡು ಬಂದವನೇ ಗುರುಸ್ಥಾನಕ್ಕೆ ಯೋಗ್ಯನಾಗುವನು. ಶ್ರೀ ನೀಲಕಂಠಶಿವಾಚಾರ್ಯರಾದರೂ–

ಮಠಸ್ಥಲಸಮುತ್ಪನ್ನಃ ಶಾಂತಃ ಶೈವಾಗಮಾರ್ಥವಿತ್ ।
ಅನೂಚಾನಃ ಪ್ರಸನ್ನಾತ್ಮಾ ಶಿವದೀಕ್ಷಾಭಿಷೇಚಿತಃ ॥

(ಕ್ರಿಯಾಸಾರ, ೨೫ನೇ ಉಪದೇಶ)

ಎಂದು, ಗುರುಸ್ಥಾನದಲ್ಲಿ ಅಭಿಷಿಕ್ತನಾಗಲು, ಮಠಸ್ಥಲ ಸಮುತ್ಪನ್ನನಾಗಿರಬೇಕೆಂಬುದಾಗಿ ಪ್ರತಿಪಾದಿಸಿದ್ದಾರೆ. ವೀರಶೈವರಲ್ಲಿ ಹಿರೇಮಠ, ಪುರಾಣಮಠ, ಸ್ಥಾವರಮಠ ಮುಂತಾದ ಉಪನಾಮಗಳು (ಅಡ್ಡಹೆಸರುಗಳು) ಜಂಗಮವಂಶದವರಿಗೆ ಮೀಸಲಾಗಿವೆ. ಇದರಿಂದ ತಿಳಿದುಬರುವದೇನೆಂದರೆ, ಜಂಗಮವಂಶದಲ್ಲಿ ಉತ್ಪನ್ನರಾದವರೇ ವೀರಶೈವರ ಗುರುಪೀಠಗಳಿಗೆ ಅಧಿಕಾರಿಗಳಾಗಬಲ್ಲರು.

ಜಂಗಮ ಶಬ್ದದ ತಾತ್ತ್ವಿಕಾರ್ಥವಾದರೂ ''ಶಿವಜ್ಞಾನಿ'' ಎಂದಾಗುವುದು. ಜಂಗಮರು ತತ್ತ್ವಜ್ಞಾನದ ಪರಂಪರೆಯನ್ನು ಕಾಪಾಡಿಕೊಂಡು ಬಂದ ಕಾರಣ, ಆ ವಂಶದಲ್ಲಿ ಉತ್ಪನ್ನರಾದವರೇ ಗುರುಗಳಾಗಬಲ್ಲರು. ಇದರ ಬಗ್ಗೆ ಇನ್ನಷ್ಟು ಕೂಲಂಕಷವಾಗಿ ವಿಚಾರ ಮಾಡುವುದಾದರೆ, ಜಂಗಮವಂಶದಲ್ಲಿ ಹುಟ್ಟಿದಮಾತ್ರಕ್ಕೆ ಗುರುಸ್ಥಾನದ ಯೋಗ್ಯತೆ ಬರುತ್ತದೆಂದರ್ಥವಲ್ಲ; ಈ ವರೆಗೆ ಹೇಳಿದ ಹಾಗೂ ಇನ್ನೂ ಹೇಳಲಿರುವ ಸದ್ಗುಣಗಳ ಜೊತೆಗೆ ಜಂಗಮ ವಂಶೋತ್ಪನ್ನನಾಗಿದ್ದರೆ ''ಸೋನೆ ಮೆ ಸುಗಂಧ'' ಅಂದರೆ ಸುವರ್ಣದಲ್ಲಿ ಸುಗಂಧ ಬೆರೆಸಿದಂತಾಗುತ್ತದೆ.

ಸತ್ಕುಲದಲ್ಲಿ ಸದಾಚಾರವೆನ್ನುವುದು ದಿನನಿತ್ಯದ ವ್ಯವಹಾರವಾದಕಾರಣ, ಅಲ್ಲಿ ಜನ್ಮವೆತ್ತಪ್ರತಿಯೊಬ್ಬ ವ್ಯಕ್ತಿಗೆ, ಸದಾಚಾರವು ರಕ್ತಗತವಾಗಿರುತ್ತದೆ. ಆದ್ದರಿಂದ, ಅವರಿಗೆ

ಆಚಾರದ ಬಗ್ಗೆ ಪುನಃ ಕಲಿಸುವ ಅವಶ್ಯಕತೆ ಇರುವುದಿಲ್ಲ. ಇದೊಂದು ಕಾರಣದಿಂದಲೇ ಜಂಗಮವಂಶಕ್ಕೆ ಮಹತ್ವಬಂದಿದೆ. ಅದು ಅನಾದಿ ಕಾಲದಿಂದ ಇಂದಿನವರೆಗೆ ಅನೂಚಾನವಾಗಿ ಸಾಗಿಬಂದಿದೆ.

ಇದರಿಂದ ಬರುವ ನಿರ್ಣಯವೇನೆಂದರೆ, ಜಂಗಮ ಕುಲೋತ್ಪನ್ನನಿದ್ದು ಉಳಿದೆಲ್ಲ ಉತ್ಕೃಷ್ಟಗುಣಗಳುಳ್ಳವನೇ ವೀರಶೈವ ಧರ್ಮದ ಗುರುವಾಗುವನು.

ಈತನು ದುರ್ನಡತೆ ರಹಿತನಾದವನಾಗಿ, ಸದಾಕಾಲದಲ್ಲಿ ಶಿವಧ್ಯಾನ, ಶಿವತತ್ತ್ವ ಚಿಂತನೆಗಳನ್ನು ಮಾಡುತ್ತ ಭಸ್ಮದ ತತ್ತ್ವವನ್ನು ತಿಳಿದು, ಅದರ ಉದ್ಧೂಲನ ಮತ್ತು ಸದಾ ತ್ರಿಪುಂಡ್ರಧಾರಣಮಾಡಿಕೊಂಡವನಾಗಿ, ಶರೀರದ ಮೇಲೆ, ಶಾಸ್ತ್ರಪದ್ಧತಿಯಂತೆ ಇಷ್ಟ ಲಿಂಗ ಹಾಗೂ ರುದ್ರಾಕ್ಷಗಳನ್ನು ಧರಿಸಿಕೊಂಡು, ಇಷ್ಟ–ಪ್ರಾಣ–ಭಾವಲಿಂಗಗಳ ಪೂಜೆ ಯಲ್ಲಿ ಪರಾಯಣನಾಗಿರಬೇಕು. ಇದೂ ಅಲ್ಲದೇ, ಲಿಂಗಾಂಗಯೋಗವೆಂಬ ಶಿವ–ಜೀವರ ಐಕ್ಯ ಬೋಧನೆಯ ತತ್ತ್ವವನ್ನು ತಿಳಿದುಕೊಂಡು, ಅದರಲ್ಲಿಯೇ ದತ್ತಚಿತ್ತನಾಗಿರ ಬೇಕಲ್ಲದೇ, ಅಂಗದ ೪೪ ಹಾಗೂ ಲಿಂಗದ ೫೭ ಸ್ಥಲಗಳ ಭೇದವನ್ನು ಚನ್ನಾಗಿ ಅರಿತವನಾಗಿ, ಸದಾಕಾಲದಲ್ಲಿ ಮಂಗಲ ವಚನಗಳನ್ನು ನುಡಿಯುವ, ಈ ಮಹಾ ಪುರುಷನೇ ವೀರಶೈವ ಧರ್ಮದಲ್ಲಿ ಸದ್ಗುರುವೆನಿಸಿಕೊಳ್ಳುತ್ತಾನೆ.

ಈ ತೆರನಾದ ಸರ್ವ ಲಕ್ಷಣಸಂಪನ್ನನಾದ ಸದ್ಗುರುವೇ ಶ್ರೀ ನಿಜಗುಣ ಶಿವಯೋಗಿಗಳ ದೃಷ್ಟಿಯಲ್ಲಿ ''ವಿಹಿತ ಗುರು'' ಎನಿಸಿಕೊಳ್ಳುವನು.

ಶ್ರೀ ನಿಜಗುಣ ಶಿವಯೋಗಿಗಳ ಸಾಹಿತ್ಯವನ್ನವಲೋಕಿಸಿದಾಗ ಅವರು ಗುರು ಗಳಲ್ಲಿ(೧) ಬೋಧಕಗುರು, (೨) ವೇದಕಗುರು, (೩) ನಿಷಿದ್ಧಗುರು (೪) ಕಾಮ್ಯಗುರು, (೫) ಸೂಚಕಗುರು, (೬) ವಾಚಕಗುರು, (೭) ಕಾರಕಗುರು (೮) ವಿಹಿತಗುರು– ಎಂದು ೮ ಶ್ರೇಣಿಗಳನ್ನು ಮಾಡಿರುವುದು ಕಂಡುಬರುತ್ತದೆ.

ವಾಸ್ತವಿಕವಾಗಿ ಗುರುಗಳು ಎಂಟು ಪ್ರಕಾರವಾಗಿರದೆ, ಎಂಟು ಪ್ರಕಾರದ ಶಿಷ್ಯರ ಯೋಗ್ಯತೆಗೆ ತಕ್ಕಂತೆ ಉಪದೇಶಿಸುವುದರಿಂದ, ಎಂಟು ವಿಧ ಗುರುಗಳೆಂದು ಕರೆಯಲ್ಪಡುತ್ತಾರೆ. ಇದರಲ್ಲಿ ಶಾಸ್ತ್ರದ ಶಬ್ದಾರ್ಥಗಳನ್ನು ಬೋಧಿಸುವಾತನು ಬೋಧಕ ಗುರುವು. ತತ್ತ್ವದರ್ಶನವನ್ನು ಮಾಡಿಸುವವನು ವೇದಕಗುರುವು. ಆಕರ್ಷಣ–ವಶೀಕರಣ ವಿದ್ಯೆಯನ್ನು ಉಪದೇಶಿಸಿ, ಇಹಲೋಕದಲ್ಲಿ ಸುಖವನ್ನು, ಪರಲೋಕದಲ್ಲಿ ದುಃಖವನ್ನೀವಾತನೇ ನಿಷಿದ್ಧಗುರುವು. ಪುಣ್ಯಾದಿ ಕಾಮ್ಯ ಕರ್ಮಗಳನ್ನು ಉಪದೇಶಿಸಿ ಇಹ–ಪರಗಳೆರಡರಲ್ಲಿ ಸುಖಪ್ರದಾತನೇ ಕಾಮ್ಯಗುರುವು. ಇನ್ನು ವಿವೇಕವನ್ನು ಬೋಧಿಸಿ, ಶಮ–ದಮಾದಿ ಷಟ್ಕ ಸಂಪತ್ತಿಯನ್ನು ಶಿಷ್ಯನ ಹೃದಯದಲ್ಲಿ ಉತ್ಪನ್ನ ಮಾಡುವವನೇ ಸೂಚಕಗುರುವು. ಶಿವ ಮತ್ತು ಜೀವ ಇವರೀರ್ವರ ಐಕ್ಯಜ್ಞಾನವನ್ನು ಬೋಧಿಸುವವನೇ ಕಾರಕಗುರುವು. ಇನ್ನು ಕೊನೆಯದಾಗಿ ಶಿಷ್ಯನ ಸಂಶಯ, ವಿಪರೀತ ಭಾವನೆಗಳನ್ನು ದೂರಗೊಳಿಸಿ, ನಿತ್ಯವಾದ ಮುಕ್ತಿಪ್ರದಾಯಕನೇ ವಿಹಿತಗುರುವೆಂದು ಹೇಳಿಸಿಕೊಳ್ಳುವನು.

ಕರುಣ ಸತ್ಕಲೆ ಶಾಸ್ತ್ರಪರಿಣತೆ ನಿರಾಶೆ ಸೌಂ।
ದರತೆ ಸುಮುಖತ್ವ ಸುಗುಣ
ಸುಜ್ಞಾನಂಗಳಿರಲವನೆ ಸೇವ್ಯಗುರುವಕ್ಕು ॥

(ಅನುಭವಸಾರ, ೧-೩-೧)

ಎಂಬ ಈ ವಚನದಲ್ಲಿ ಶ್ರೀ ನಿಜಗುಣ ಶಿವಯೋಗಿಗಳು ಶಿಷ್ಯರಿಂದ ಸೇವಿಸಲು ಯೋಗ್ಯವಾದ ಗುರುವಿನ ಲಕ್ಷಣವನ್ನು ನಿರೂಪಿಸಿದ್ದಾರೆ. ಆದಕಾರಣ ''ಪಾನೀ ಪೀನಾ ಛಾನಕೇ'', ''ಗುರು ಕರನಾ ಪಹಚಾನಕೆ'' ''ನೀರನ್ನು ಸೋಸಿ ಕುಡಿಯಬೇಕು, ಗುರುವನ್ನು ಅರಿತು ಮಾಡಿಕೋಳ್ಳಬೇಕು'' ಎನ್ನುವ ಅನುಭವಿಕರ ವಚನದಂತೆ ಈ ಮೊದಲು ಹೇಳಿದ ಸಕಲ ಲಕ್ಷಣಗಳು ಇದ್ದರೂ, ದಯಾದಿ ಗುಣಗಳಿರದಿದ್ದರೆ, ಆತನು ಸೇವ್ಯನಾಗಲಾರನಾದ್ದರಿಂದ, ತಾನು ಆಶ್ರಯಿಸಬೇಕೆನ್ನುವ ಗುರುವಿನಲ್ಲಿ ದಯಾದಿ ಭಾವನೆಗಳು ಇವೆಯೋ ಇಲ್ಲವೋ ಎಂಬುದನ್ನು ಪರೀಕ್ಷೆಮಾಡಿ, ತನ್ನ ಜೀವನದ ಕಲ್ಯಾಣಕ್ಕಾಗಿ ಗುರುವಿಗೆ ತ್ರಿಕರಣ ಪೂರ್ವಕವಾಗಿ ಶರಣಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

## ಗುರುಕಾರುಣ್ಯಸ್ಥಲ

ದಿನಾಂಕ ೪ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ -೨

ಸೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿಭಯಾನ್ವಿತಃ ।
ಷಣ್ಮಾಸಾನ್ ವತ್ಸರಂ ವಾಪಿ ಯಾವದೇಷ ಪ್ರಸೀದತಿ (ಸಿ. ಶಿ. ೬.೭)

ಆತ್ಮಕಲ್ಯಾಣಕ್ಕಾಗಿ ಗುರುವಿನ ಬಳಿಗೆ ಹೋದ ಶಿಷ್ಯನು ಅತ್ಯಂತ ಭಯ-ಭಕ್ತಿಗಳಿಂದ ಕೂಡಿಕೊಂಡು, ಆರು ತಿಂಗಳೋ ಅಥವಾ ವರ್ಷವೊ ಇಲ್ಲವೇ, ಆತನು ಪ್ರಸನ್ನನಾಗುವವರೆಗೆ ಸೇವಿಸುತ್ತಿರಬೇಕು

ಪ್ರಸನ್ನಂ ಪರಮಾಚಾರ್ಯಂ ಭುಕ್ತಿಮುಕ್ತಿಪ್ರದಾಯಕಮ್ ।
ಪ್ರಾರ್ಥಯೇದಗ್ರತಃ ಶಿಷ್ಯಃ ಪ್ರಾಂಜಲಿರ್ವಿನಯಾನ್ವಿತಃ ॥

ಭೋ ಕಲ್ಯಾಣ ಮಹಾಭಾಗ ಶಿವಜ್ಞಾನಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷ ಮಾಂ ಭವರೋಗಿಣಮ್ (ಸಿ. ಶಿ. ೬.೮೯)

ತಾನು ಮಾಡಿದ ಸೇವೆಯಿಂದ ಗುರುವು ಪ್ರಸನ್ನನಾದುದನ್ನು ತಿಳಿದು, ಭುಕ್ತಿ-ಮುಕ್ತಿ ಮಾರ್ಗದರ್ಶಕನಾದ ಆ ಪರಮಾಚಾರ್ಯನನ್ನು ಕುರಿತು ಶಿಷ್ಯನು, ಕೈಜೋಡಿಸಿ ನಿಂತುಕೊಂಡು, ಹೀಗೆ ಪ್ರಾರ್ಥಿಸಬೇಕು-ಎಲೈ ಮಂಗಳಾತ್ಮಕನೇ ! ಶ್ರೇಷ್ಠವಾದ ಶಿವ ಜ್ಞಾನದ ಸಾಗರನೇ ! ಸಂಸಾರರೋಗದಿಂದ ನೊಂದು, ಬಂದು ನಿನ್ನನ್ನು ಮೊರೆ ಹೊಕ್ಕಿರುವ ನನ್ನನ್ನು ಈ ಭವಬಾಧೆಯಿಂದ ತಪ್ಪಿಸಿ, ರಕ್ಷಿಸುವಂಥವನಾಗು.

ಗುರುಶುಷ್ರೂಷಯಾ ವಿದ್ಯಾ ಪುಷ್ಕಲೇನ ಧನೇನ ವಾ ।
ಅಥವಾ ವಿದ್ಯಾಯಾ ವಿದ್ಯಾ ಚತುರ್ಥಂ ನಾಸ್ತಿಸಾಧನಮ್ ॥

ಲೋಕದಲ್ಲಿ ಸಾಮಾನ್ಯವಾಗಿ ಜ್ಞಾನಪ್ರಾಪ್ತಿ ಮಾಡಿಕೊಳ್ಳಲು, ಸೇವೆ, ಹೇರಳವಾಗಿ ಧನವನ್ನು ಭಕ್ತಿಯಿಂದ ಸಮರ್ಪಿಸುವುದು ಮತ್ತು ವಿದ್ಯೆಯ ವಿನಿಮಯ-ಎಂಬುದಾಗಿ ಮೂರು ಉಪಾಯಗಳು ಪ್ರತಿಪಾದಿಸಲ್ಪಟ್ಟಿರುತ್ತವೆ. ಗುರುವು ಗೃಹಸ್ಥನಾಗಿದ್ದರೆ, ಆತನ ಸಾಂಸಾರಿಕ ಜೀವನಕ್ಕೆ, ಹಣದ ಅವಶ್ಯಕತೆ ಇರುವ ಕಾರಣ, ಧನಿಕನಾದ ಶಿಷ್ಯನು, ಹೇರಳವಾಗಿ ಧನವನ್ನು ಕೊಟ್ಟು, ಗುರುವಿಗೆ ಸಂತೃಪ್ತಿಯನ್ನು ಮಾಡಿ, ಆತನ ಕರುಣೆಯನ್ನು ಹೊಂದಿ, ಜ್ಞಾನವನ್ನು ಸಂಪಾದಿಸಬಹುದು. ಅಥವಾ, ಗುರುವು ಗೃಹಸ್ಥನಲ್ಲದಿದ್ದರೂ, ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳನ್ನು ಮಾಡುವ ಅಭಿಲಾಷೆಯುಳ್ಳವನಾಗಿದ್ದರೆ, ಅವನಿಗಾದರೂ ಹಣದ ಅಭೀಪ್ಸೆ ಇರುವ ಕಾರಣ, ಅವನಿಗೆ ಸಾಕಷ್ಟು ಧನವನ್ನು ಕೊಟ್ಟು, ಸಾಮಾಜಿಕ ಮತ್ತು ಧಾರ್ಮಿಕ ಸೇವೆಯಲ್ಲಿ ಸಹಭಾಗಿಯಾಗಿ, ಗುರು ಕರುಣೆಯನ್ನು ಪಡೆಯಬಹುದಾಗಿದೆ.

ಇನ್ನು ಜಗತ್ತಿನಲ್ಲಿ ಅನೇಕ ವಿದ್ಯೆಗಳಿರುವದರಿಂದ, ತನಗೆ ಬಾರದ ವಿದ್ಯೆಯು, ಶಿಷ್ಯನಿಗೆ ಬರುತ್ತಿದ್ದರೆ, ತನ್ನ ವಿದ್ಯೆಯನ್ನು ಕೊಟ್ಟು, ಶಿಷ್ಯನ ವಿದ್ಯೆಯನ್ನು ಗ್ರಹಿಸುವುದು, ವಿದ್ಯಾವಿನಿಮಯದ ಪದ್ಧತಿಯು. ಈ ಎರಡೂ ಉಪಾಯಗಳಿಗಿಂತ, ಗುರುಸೇವೆಯನ್ನು

ಮಾಡಿ ಗುರುವಿನ ಕೃಪೆಯನ್ನು ಸಂಪಾದಿಸುವುದು ಸರ್ವೋತ್ಕೃಷ್ಟವಾದದ್ದು. ಅದಕ್ಕಾಗಿಯೇ, ಶ್ರೀಜಗದ್ಗುರು ರೇಣುಕ ಭಗವತ್ಪಾದರು, ''ಸೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿಭಯಾನ್ವಿತಃ '' ಎಂದು ಅಪ್ಪಣೆ ಕೊಟ್ಟಿದ್ದಾರೆ.

ಬೇಡಿದವರಿಗೆ ಬೇಡಿದ್ದನ್ನು ಕೊಡುವ ಸಾಮರ್ಥ್ಯವುಳ್ಳ, ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಸದ್ಗುರುವಿಗೆ, ಶಿಷ್ಯನ ಈ ಕ್ಷಣಿಕವಾದ ಧನದ ಅಭೀಪ್ಸೆಯಾಗಲಿ, ಸಕಲ ವಿದ್ಯೆಗಳ ಸಾಗರನಾದ ಅವನಿಗೆ, ಶಿಷ್ಯನಲ್ಲಿಯ ವಿದ್ಯೆಯ ಅಪೇಕ್ಷೆಯಾಗಲಿ, ಇಲ್ಲದಿರುವ ಕಾರಣ, ಹೇರಳವಾಗಿ ಧನವನ್ನು ಕೊಟ್ಟು, ಇಲ್ಲವೇ ವಿದ್ಯೆಯ ವಿನಿಮಯದಿಂದ, ಶ್ರೀಸದ್ಗುರುವಿನ ಕರುಣೆಯನ್ನು ಪಡೆಯುವುದು ಅಸಾಧ್ಯವಾದಕಾರಣ ಶಿಷ್ಯನು ಸೇವಾವೃತ್ತಿಯನ್ನೇ ಆಶ್ರಯಿಸಬೇಕು. ಅಂತೆಯೇ ಸದ್ಗುರುಸೇವೆಯ ಮಹತ್ವವನ್ನರಿತ ಸರ್ವಜ್ಞನು–

ಎತ್ತಾಗಿ ತೊತ್ತಾಗಿ । ಹಿತ್ತಲದ ಗಿಡವಾಗಿ ।
ಮತ್ತೆ ಪಾದದಾ–ಕೆರವಾಗಿ ಗುರುವಿನಾ ।
ಹತ್ತಿಲಿರು ಎಂದ ಸರ್ವಜ್ಞ ॥

ಎಂದು ಬಹು ಮಾರ್ಮಿಕವಾಗಿ ಉಪದೇಶಿಸಿದ್ದಾನೆ.

''ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ'' ಸೇವಾ ರೂಪವಾದ–ಧರ್ಮವು ಅತ್ಯಂತ ಗಹನ ಮತ್ತು ಯೋಗಿಗಳಿಗೂ ಅಗಮ್ಯವಾದದ್ದೆಂದು ಹೇಳಿರುವ ಕಾರಣ, ಸೇವೆಯ ಮಹತ್ವವನ್ನು ವರ್ಣಿಸಲಶಕ್ಯವಾಗಿದೆ. ಗುರುಭಕ್ತಿಸಂಪನ್ನರಾದ ಶ್ರೀ ನಿಜಗುಣ ಶಿವಯೋಗಿಗಳು, ಗುರುಸೇವೆಯನ್ನು, ಆಪ್ತ, ಅಂಗ, ಸ್ಥಾನ ಮತ್ತು ಸದ್ಭಾವವೆಂದು ನಾಲ್ಕು ತೆರನಾಗಿ ವರ್ಣಿಸಿದ್ದಾರೆ.

ದೇಹದ ನೆರಳು ಸದಾ ದೇಹವನ್ನು ಅನುಸರಿಸುವಂತೆ, ಶಿಷ್ಯನಾದವನು ಗುರುವಿನ ನೆರಳಿನೋಪಾದಿಯಲ್ಲಿ ಆತನ ಮನಸ್ಸಿಗೆ ಪ್ರತಿಕೂಲನಾಗದಂತೆ, ಸದಾಕಾಲದಲ್ಲಿ ಅನುಕೂಲನಾಗಿ ನಡೆದುಕೊಳ್ಳುವದೇ ಆಪ್ತಸೇವೆಯು.

ಸಂತಾನದ ಪ್ರಾಪ್ತಿಗಾಗಿ, ಕುಲಗುರುಗಳಾದ ವಶಿಷ್ಠಮಹರ್ಷಿಗಳ ಆಶ್ರಮಕ್ಕೆ ಧರ್ಮಪತ್ನಿಯಾದ ಸುದಕ್ಷಿಣಾದೇವಿಯಿಂದೊಡಗೂಡಿ ಬಂದಿರುವ ದಿಲೀಪ ಮಹಾರಾಜನಿಗೆ, ವಶಿಷ್ಠ ಮಹರ್ಷಿಗಳು, ಕಾಮಧೇನುವಿನ ಸಂತಾನವಾದ ನಂದಿನಿಯ ಆಪ್ತ ಸೇವೆಗಾಗಿ, ದಂಪತಿಗಳಿಗೆ ಆಜ್ಞಾಪಿಸಲಾಗಿ, ಆಶ್ರಮದ ಸೀಮೆಯವರೆಗೆ ಸುದಕ್ಷಿಣಾದೇವಿಯು ನಂದಿನಿಯನ್ನು ಹಿಂಬಾಲಿಸಿ ಹಿಂತಿರುಗಿದನಂತರ, ದಿಲೀಪಮಹಾರಾಜನು ಅಡವಿಯಲ್ಲಿ ಸಾಯಂಕಾಲದವರೆಗೆ, ನಂದಿನಿಯನ್ನು, ಅನುಸರಿಸಿ ರಕ್ಷಿಸುತ್ತಿದ್ದನು. ದಿನಾಲು ದಿಲೀಪ ಮಹಾರಾಜನು ಅಡವಿಯಲ್ಲಿ ಗೋವಿನ ಆಪ್ತ ಸೇವೆಯನ್ನು ಮಾಡಿದ ವಿಧಾನವನ್ನು ಕವಿಕುಲಗುರುವಾದ ಕಾಲಿದಾಸನು–

ಸ್ಥಿತಃ ಸ್ಥಿತಾಮುಚ್ಚಲಿತಃ ಪ್ರಯಾತಾಂ
ನಿಷೇದುಷೀಮಾಸನಬಂಧಧೀರಃ ।
ಜಲಾಭಿಲಾಷೀ ಜಲಮಾದದಾನಾಂ
ಛಾಯೇವ ತಾಂ ಭೂಪತಿರನ್ವಗಚ್ಛತ್ ॥

ಹೀಗೆ ವರ್ಣಿಸಿದ್ದಾನೆ. ಅಂದರೆ ನಂದಿನಿಯು ನಿಂತರೆ ತಾನೂ ನಿಲ್ಲುತ್ತಿದ್ದನು. ಅದು ಹೊರಟರೆ ತಾನೂ ಹೋಗುತ್ತಿದ್ದನು. ಅದು ವಿಶ್ರಾಂತಿಗಾಗಿ ಮಲಗಿದರೆ ತಾನೂ ಕುಳಿತು ಕೊಳ್ಳುತ್ತಿದ್ದನು. ಅದು ನೀರನ್ನು ಕುಡಿದರೆ ತಾನೂ ನೀರು ಕುಡಿಯುತ್ತಿದ್ದನು. ಒಟ್ಟಿನಲ್ಲಿ ಅದರ ನೆರಳಿನೋಪಾದಿಯಲ್ಲಿ ಮಹಾರಾಜನು ನಂದಿನಿಯನ್ನು ಅನುಸರಿಸುತ್ತಿದ್ದನು. ಈ ರೀತಿಯಾಗಿ ಶ್ರೀಸದ್ಗುರುವಿನ ಮನೋವೃತ್ತಿಗೆ ಕಿಂಚಿತ್ತೂ ವಿಪರೀತವಾಗದಂತೆ, ಸದಾ ಕಾಲದಲ್ಲಿ ನಡೆದುಕೊಳ್ಳುವುದು ಗುರುವಿನ ಆಪ್ತಸೇವೆಯು.

ಅಂಗವೆಂದರೆ ಕರಚರಣಾದ್ಯವಯವಗಳು. ನಾವು ನಮ್ಮ ಶರೀರ ಮತ್ತು ಶರೀರದ ಅವಯವಗಳಲ್ಲಿ, ಅದೆಷ್ಟು ಪ್ರೇಮವುಳ್ಳವರಾಗಿರುತ್ತೇವೆಯೋ ಅದರಂತೆ, ಶ್ರೀಸದ್ಗುರು ವಿನ ಪಾದಾದಿ ಅವಯವಗಳಲ್ಲಿ ಅತ್ಯಂತ ಪ್ರೇಮವುಳ್ಳವರಾಗಿ, ಪಾದಗಳನ್ನು ಪ್ರಕ್ಷಾಳನ ಮಾಡುವದು, ಸ್ನಾನಮಾಡಿಸುವದು, ಶರೀರದಲ್ಲಿ ಏನಾದರೂ ವೇದನೆ, ವ್ಯಾಧಿ ಗಳಾದರೆ ಶರೀರದ ಸಂವಾಹನಾದಿಗಳಿಂದ ಉಪಚರಿಸುವುದು–ಹೀಗೆ ಶ್ರೀಗುರುವಿನ ಪಾದಾದಿ ಪ್ರತಿಯೊಂದು ಅವಯವಗಳನ್ನೂ ಕಾಳಜಿ ಪೂರ್ವಕವಾಗಿ ಸೇವೆಗೈಯುವದೇ ಅಂಗಸೇವೆಯು.

''ಗುರುಚರಣವ ಪೂಜಿಸಿ ಎನ್ನ ಹಸ್ತಂಗಳು ಪರುಷವಾದವು.
ಗುರುಚರಣವ ನೋಡಿ ಎನ್ನ ಕಂಗಳು ಪರುಷವಾದವು.
ಗುರುಚರಣವ ಹಾಡಿ ಹರಸಿ ಎನ್ನ ಜಿಹ್ವೆ ಪರುಷವಾಯಿತ್ತು
ಗುರುಚರಣವ ನೆನೆದು ಎನ್ನ ಮನ ಪರುಷವಾಯಿತ್ತು
ಗುರುಚರಣವ ಧ್ಯಾನಿಸಿ ಎನ್ನ ಭಾವ ಪರುಷವಾಯಿತ್ತು
ನೋಡಾ ಅಖಂಡೇಶ್ವರಾ''
''ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ,
ಆ ತೃಣವನಾ ಕೆಂಡ ನುಂಗಿದಂತೆ,
ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ,
ಆತನೆ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ''

ಎನ್ನುವ ಶ್ರೀ ಷಣ್ಮುಖಸ್ವಾಮಿ ಹಾಗೂ ಶ್ರೀ ದೇವರದಾಸಿಮಾರ್ಯರ ಈ ವಚನಗಳಲ್ಲಿ ಶ್ರೀಗುರುವಿನ ಪಾದಾದಿ ಅಂಗಗಳ ಸೇವೆಯ ಫಲವು ಸುಸ್ಪಷ್ಟವಾಗಿ ಪ್ರತಿಪಾದಿ ಸಲ್ಪಟ್ಟಿದೆ. ಶರಣರ ನಂತರ ಶಿವಯೋಗಿಗಳ ಮತ್ತು ಆಚಾರ್ಯರ ಈ ಅನುಭವದ ನುಡಿಗಳ ಮೇಲೆ ವಿಶ್ವಾಸವಿಟ್ಟು, ಪ್ರತಿಯೊಬ್ಬರೂ ಗುರುಚರಣವನ್ನು ಸೇವಿಸಿ, ಆ ಲಿಂಗ ಸೇವೆಯ ಫಲವಾದ ತಮ್ಮ ಶರೀರದ ಶುದ್ಧೀಕರಣವನ್ನು ಮಾಡಿಕೊಂಡು, ಶಿವಕೃಪೆಯ ಪ್ರಾಪ್ತಿಗಾಗಿ ಪ್ರಯತ್ನಿಸಬೇಕು.

ಅಗ್ನಿಯ ಸ್ಪರ್ಶವನ್ನು ಮಾಡಿದ ತೃಣವು ಅಗ್ನಿಯಾಗುವಂತೆ, ವರಪುಣ್ಯಮಯ ಗಾತ್ರನಾದ ಶ್ರೀಗುರುವಿನ ಚರಣವನ್ನು ಮುಟ್ಟಿ ಸೇವಿಸಿದರೆ, ಶಿಷ್ಯನ ಜನ್ಮಜನ್ಮಾಂತರದ ಪಾಪಗಳೆಲ್ಲ ದಹಿಸಿಹೋಗಿ, ಶ್ರೀಗುರುವಿನಂತೆ ಪುಣ್ಯಮಯ ದೇಹಿಯಾಗುತ್ತಾನೆ. ತಾನು ಅನೇಕ ಜನ್ಮಗಳಲ್ಲಿ ಜಪ–ತಪಾದಿಗಳಿಂದ ದೂರೀಕರಿಸಿಕೊಳ್ಳಬೇಕಾದ ಪಾಪರಾಶಿಯು,

ಅರಳೆಯ ದಿಂಡನ್ನು ಅಗ್ನಿಕಣವು ಪೊಕ್ಕಂತೆ, ಕ್ಷಣಾರ್ಧದಲ್ಲಿ ಗುರುಚರಣ ಸ್ಪರ್ಶದಿಂದ ಭಸ್ಮವಾಗಿಹೋಗುತ್ತದೆ. ನಿಷ್ಠಾಪೂರ್ಣವಾದ ಅಂಗಸೇವೆಯಿಂದ ಶ್ರೀಗುರುವಿನ ಮನಸ್ಸು ಕರಗಿ ಶಿಷ್ಯನು, ಶೀಘ್ರವಾಗಿ ಗುರುಕೃಪೆಯನ್ನು ಪಡೆಯಬಲ್ಲನು.

ನಾವು ನಮ್ಮ ಹೊಲ ಹಾಗೂ ಮನೆಗಳ ಮೇಲೆ ಪ್ರೇಮವಿಟ್ಟು ಅವುಗಳನ್ನು ಹೇಗೆ ಕಾಪಾಡಿಕೊಳ್ಳುತ್ತೇವೆಯೋ, ಅದರಂತೆ, ಶ್ರೀಗುರುಗಳ ಸನ್ನಿಧಾನಕ್ಕೆ ಹೋದಾಗ, ಅವರ ಮನೆ, ಮಠ, ಹೊಲ, ತೋಟ ಮುಂತಾದ ಸ್ಥಾನಗಳಲ್ಲಿಯ ಯಥಾಯೋಗ್ಯಗಳಾದ ಸಂರಕ್ಷಣಾ ಕಾರ್ಯದಲ್ಲಿ ತತ್ಪರತೆಯಿಂದ ಸೇವೆ ಮಾಡುವದು, ಪ್ರತಿದಿವಸ ಶ್ರೀಗುರುವಿನ ಮಠವನ್ನು ಕಸ ಗುಡಿಸಿ ಸ್ವಚ್ಛಗೊಳಿಸುವದು, ಪರ್ವಕಾಲಗಳು ಬಂದಾಗ ಅದಕ್ಕೆ ಬಣ್ಣ-ಸುಣ್ಣಗಳನ್ನು ಹಚ್ಚಿ ಅಲಂಕರಿಸುವದು, ಮಠದ ಪ್ರಾಂಗಣವನ್ನು ಸ್ವಚ್ಛವಾಗಿರಿಸಿ ಛಳಿಹೊಡೆದು ರಂಗವಲ್ಲಿಯನ್ನು ಹಾಕಿ ಸುಶೋಭಿತವನ್ನಾಗಿ ಮಾಡುವದು, ಅದರಂತೆ ಶ್ರೀಗುರುವಿನ ಹೊಲ ಅಥವಾ ತೋಟದಲ್ಲಿ ಯಥೋಚಿತಗಳಾದ ರಂಟೆಹೊಡೆಯುವದು, ಹರಗುವದು, ಬಿತ್ತುವದು, ಹೊಲದಲ್ಲಿ ಬಂದ ಬೆಳೆಯು ಪಶು-ಮನುಷ್ಯಾದಿಗಳಿಂದ ಹಾಳಾಗದಂತೆ ಹಗಲು ರಾತ್ರಿಗಳಲ್ಲಿ ಹೊಲದಲ್ಲಿಯೇ ಇದ್ದು ಸಂರಕ್ಷಿಸುವದು, ಇವೇ ಮುಂತಾದ ಸೇವೆಗಳಿಗೆ ಗುರುವಿನ ಸ್ಥಾನಸೇವೆ ಎನ್ನುವರು.

ಹಿಂದೆ ಧೌಮ್ಯ ಋಷಿಗಳ ಆಶ್ರಮದಲ್ಲಿ, ಆರುಣಿ ಎಂಬ ವಿದ್ಯಾರ್ಥಿಯು, ಗುರು ಸೇವಾ ವ್ರತವನ್ನು ಕೈಗೊಂಡು ವಿದ್ಯಾಧ್ಯಯನವನ್ನು ಮಾಡುತ್ತಿದ್ದನು. ಒಂದು ದಿವಸ ಅಡವಿಯಿಂದ ಕಟ್ಟಿಗೆಗಳನ್ನು ತೆಗೆದು ಬರುವಾಗ, ಆಶ್ರಮದ ಗದ್ದೆಯ ಒಡ್ಡು ಒಡೆದು, ನೀರೆಲ್ಲ ಹರಿದು ಹೋಗುವದನ್ನು ನೋಡಿ, ಮನದಲ್ಲಿ ವಿಚಾರಿಸುತ್ತಾನೆ-ನಾನು ಸದ್ಯ : ಈ ಒಡ್ಡನ್ನು ಸರಿಪಡಿಸುತ್ತ ನಿಂತರೆ ಆಶ್ರಮದಲ್ಲಿ ಕಟ್ಟಿಗೆಗಳಿಲ್ಲದಿರುವದರಿಂದ ಅಡಿಗೆಗೆ, ತೊಂದರೆಯಾಗುವದು. ಆದ್ದರಿಂದ ಕಟ್ಟಿಗೆಯನ್ನು ಒಗೆದು ಬಂದು ಸರಿಪಡಿಸಬೇಕು. ಹೀಗೆ ವಿಚಾರ ಮಾಡಿದ ಆರುಣಿಯು, ಬೇಗನೇ ಆಶ್ರಮಕ್ಕೆ ಬಂದು, ಕಟ್ಟಿಗೆಯ ಹೊರೆಯನ್ನು ಒಗೆದು ಗುರುಗಳಿಗೆ ಹೇಳುತ್ತಾನೆ-ಗುರುಗಳೇ ! ಗದ್ದೆಯ ಒಡ್ಡು ಒಡೆದು ನೀರು ಹರಿದು ಹೋಗುತ್ತಿದೆ. ನಾನು ಹೋಗಿ ಅದನ್ನು ಸರಿಪಡಿಸಿ ಬರುತ್ತೇನೆ. ಆರುಣಿಯ ಈ ಮಾತನ್ನು ಕೇಳಿದ ಗುರುಗಳು, ತಥಾಸ್ತು ಎಂದು ಅಪ್ಪಣೆ ಇತ್ತರು. ಗುರುಗಳ ಅಪ್ಪಣೆಯಂತೆ ಆರುಣಿಯು ಹೊಲಕ್ಕೆ ಬಂದು ಹರಿದು ಹೋಗುವ ನೀರನ್ನು ತಡೆಯುವದಕ್ಕಾಗಿ ಬಹಳಷ್ಟು ಶ್ರಮಿಸಿದನು. ಆದರೂ ನೀರು ಬಂದಾಗಲಿಲ್ಲ, ನಾನು ದಿನವಿಡೀ ಇದನ್ನೇ ಮಾಡುತ್ತ ಕುಳಿತರೆ ಇಂದಿನ ಅಭ್ಯಾಸದಲ್ಲಿ ಅನುಪಸ್ಥಿತಿಯಾಗುವುದು. ಏನುಮಾಡಲಿ ? ಎಂದು ಪುನಃ ಮನದಲ್ಲಿಯೇ ವಿಚಾರಿಸಿ, ಕೊನೆಗೊಂದು ನಿರ್ಣಯವನ್ನು ಕೈಗೊಳ್ಳುತ್ತಾನೆ-ಗುರುಸೇವೆಗಿಂತ ಅಭ್ಯಾಸ ಹೆಚ್ಚಿನದಲ್ಲ, ಈಗ ನಾನು ಹೇಗಾದರೂ ಮಾಡಿ ಹರಿದುಹೋಗುತ್ತಿರುವ ಈ ನೀರನ್ನು ತಡೆಯಲೇಬೇಕು. ಎಂದು ಸಾಕಷ್ಟು ಪ್ರಯತ್ನಿಸಿ, ಕೊನೆಗೆ ಒಡ್ಡು ಒಡೆದ ಸ್ಥಾನದಲ್ಲಿ ತಾನೇ ಮಲಗಿಕೊಂಡನು. ಸಾಯಂಕಾಲವಾದರೂ ಎದ್ದು ಹೋಗಲು ವಿಚಾರಿಸಲೇ ಇಲ್ಲ,

ಆಶ್ರಮದಲ್ಲಿ ಸಾಯಂಕಾಲ ದೀಪ ಹಚ್ಚುವ ಸೇವೆ ಆರುಣಿಯದೇ ಆಗಿತ್ತು. ಆಶ್ರಮದಲ್ಲೆಲ್ಲ ಕತ್ತಲೆ ಆವರಿಸಲು, ಗುರುಗಳು ಆರುಣಿ ಎಲ್ಲಿದ್ದಾನೆ ? ಇನ್ನೂ ದೀಪ ವನ್ನೇಕೆ ಹಚ್ಚಿಲ್ಲ? ಎಂದು ಉಳಿದ ಶಿಷ್ಯರನ್ನು ಕೇಳಿದರು. ಆಗ ಎಲ್ಲರೂ–ಗುರುಗಳೇ ! ಮಧ್ಯಾಹ್ನದಲ್ಲಿ ಗದ್ದೆಯ ಒಡ್ಡನ್ನು ಸರಿಪಡಿಸಲು ಹೋದವನು ಇನ್ನೂ ಬಂದೆ ಇಲ್ಲ ಎಂದರು. ಆಗ ಋಷಿಗಳು, ಹಾಗಾದರೆ ಅವನಿಗೆ ಏನೋ ದುರ್ಘಟನೆಯು ಸಂಭವಿಸಿರ ಬಹುದು ; ಅಲ್ಲಿಗೆ ಹೋಗಿ ನೋಡೋಣ ನಡೆಯಿರಿ–ಎಂದು ಹೇಳಿ, ಕೈಯಲ್ಲಿ ಕಂದೀಲು ಹಿಡಿದುಕೊಂಡು, ಶಿಷ್ಯರೊಡಗೂಡಿ, ಹೊಲದಬಳಿ ಬಂದು, ಆರುಣೀ ऽ ऽ ऽ ! ಎಂದು ಏರು ಧ್ವನಿಯಿಂದ ಕೂಗಿದರು. ಗಗನವ್ಯಾಪಿಯಾದ ಗುರುಗಳ ಈ ಧ್ವನಿಯು ಆರುಣಿಯ ಕಿವಿಗೆ ತಲುಪಿತು. ಆಗ ಆರುಣಿಯು ಅರ್ಧ ಮೂರ್ಛಿತ ಅವಸ್ಥೆಯಲ್ಲಿಯೇ, ಕಿರುಧ್ವನಿಯಲ್ಲಿ ಓಽ ! ಎಂಬುದಾಗಿ ಉತ್ತರಿಸಿದನು.

ಆರುಣಿಯ ಈ ಕಿರುಧ್ವನಿಯು ನಿಶ್ಯಬ್ದ ವಾತಾವರಣದಲ್ಲಿ, ಎಲ್ಲರಿಗೂ ಕೇಳಿತು. ಆ ಧ್ವನಿಯತ್ತ ಓಡಿ ಬಂದು ನೋಡುತ್ತಾರೆ. ಹರಿಯುವ ನೀರಿಗೆ ಅಡ್ಡಲಾಗಿ ಮಲಗಿದ್ದಾನೆ. ಅವನ ಮೈಮೇಲಿಂದ ನೀರು ಹರಿದುಹೋಗುತ್ತಿತ್ತು ; ಶೀತವು ಅವನನ್ನು ಮೂರ್ಛಿತ ಗೊಳಿಸಿತ್ತು. ಅವನ ಸ್ಥಿತಿಯನ್ನು ನೋಡಿ ಕರುಣಾದ್ರ್ರಹೃದಯರಾದ ಗುರುಗಳು, ಓಡಿ ಬಂದು, ಅವನನ್ನು ಎಬ್ಬಿಸಿ, ಆಶ್ರಮಕ್ಕೆ ತಂದು ಉಪಚರಿಸುತ್ತಾರೆ. ಎಚ್ಚರಗೊಂಡ ಆರುಣಿಯು, ಅಯ್ಯೋ ನಾನು ಇಲ್ಲಿಗೆ ಹೇಗೆ ಬಂದೆ ? ಗದ್ದೆಯ ಗತಿ ಏನಾಗಿರಬಹುದು ? ಎಂದು ನುಡಿಯಲು, ಅಲ್ಲಿಯೇ ಇದ್ದ ಗುರುಗಳು, ಆರುಣಿ ! ಏನೂ ಚಿಂತಿಸಬೇಡ. ನಿನ್ನಲ್ಲಿಯ ಗುರುಭಕ್ತಿಯು ಅದ್ವಿತೀಯವಾದದ್ದು. ನಿನ್ನ ಕೀರ್ತಿಯು ಆ ಚಂದ್ರಾರ್ಕ ವಾಗಲಿ, ಎಂದು ಮನದುಂಬಿ ಹರಸಿದರು. ಈ ಪ್ರಕಾರವಾಗಿ ಗುರುವಿನ ಸ್ಥಾನಾದಿಗಳಲ್ಲಿ ಸೇವೆಯನ್ನು ಮಾಡುವುದೇ ಸ್ಥಾನ ಸೇವೆಯು.

''ಭಾವೋ ಮಾನಸಚೇಷ್ಟಾತ್ಮಾ ಪರಿಪೂರ್ಣಃ ಶಿವಾಶ್ರಯ ಃ''

(ಸಿ. ಶಿ. ೧೬–೬೭)

ಸಂಪೂರ್ಣವಾಗಿ ಶಿವನನ್ನೇ ಆಶ್ರಯಿಸಿದ ಮನಸ್ಸಿನ ವ್ಯವಹಾರವನ್ನು ''ಭಾವ'' ವೆನ್ನುವರು. ಆದಕಾರಣ, ಶಿಷ್ಯನಲ್ಲಿರುವ–''ಶ್ರೀಗುರುವು ಸಾಕ್ಷಾತ್ ಮಾತನಾಡುವ ಪರಮಾತ್ಮನೆಂಬ ಅಚಲವಾದ ವಿಶ್ವಾಸವೇ'' ಸದ್‌ಭಾವವೆನಿಸುವದು.

ಮನುಷ್ಯನ ಜೀವನದಲ್ಲಿ ಭಾವನೆಗೆ ಪ್ರಾಶಸ್ತ್ಯವಿದೆ. ನಾವು ಯಾವ ಕಾರ್ಯ ಮಾಡುತ್ತಲಿದ್ದೇವೆ ? ಎನ್ನುವದಕ್ಕಿಂತ, ಯಾವ ಭಾವನೆಯಿಂದ ಮಾಡುತ್ತಲಿದ್ದೇವೆ ? ಎನ್ನುವದು ಬಹು ಮುಖ್ಯವಾದುದು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಭಾವನಾವಿಹಿತಂ ಕರ್ಮ ಪಾವನಾದಪಿ ಪಾವನಮ್ ।
ತಸ್ಮಾದ್ಭಾವನಯಾ ಯುಕ್ತಂ ಪರಧರ್ಮಂ ಸಮಾಚಾರೇತ್ ॥

(ಸಿ. ಶಿ. ೧೬–೬೮)

ಭಾವನಾ ಮೂಲಕವಾಗಿ ಮಾಡಿದ ಕರ್ಮವೇ ಪಾವನವೂ, ಪುಣ್ಯಪ್ರದವೂ ಆದು ದೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಭಾವನಾಶೂನ್ಯವಾದ ಪೂಜಾದಿ ಕ್ರಿಯೆಗಳು ಯಾಂತ್ರಿಕವಾಗುತ್ತವೆ. ಭಾವವಿಲ್ಲದ ಯಂತ್ರದ ಪುತ್ಥಳಿಯೊಂದು, ಕೈಯಲ್ಲಿ ಜಪಮಣಿ ಯನ್ನು ಹಿಡಿದು, ವಿದ್ಯುತ್ತಿನ ಸಹಾಯದಿಂದ, ಬಾಯಿಂದ ಮಂತ್ರವನ್ನು ಪಠಿಸುತ್ತ ಕೈಯೊಳಗಿನ ರುದ್ರಾಕ್ಷಿಗಳನ್ನು ಎಣಿಸಿದ ಮಾತ್ರಕ್ಕೆ, ಅದಕ್ಕೆ ಹೇಗೆ ಯಾವ ಫಲವೂ ದೊರೆಯುವದಿಲ್ಲವೋ. ಅದರಂತೆ, ಭಾವನಾರಹಿತನಾದ ವ್ಯಕ್ತಿಯು, ಅದೆಷ್ಟು ಕಾಲ ಜಪಿಸಿದರೂ, ಪೂಜಿಸಿದರೂ, ಯಾವ ಪ್ರಯೋಜನವೂ ಆಗಲಾರದು.

ಭಾವನೆಯೇ ಇಲ್ಲದೆ, ಗುರುವಿನ ಭಯಮಾತ್ರದಿಂದ, ಆತನ ಆಪ್ತ, ಅಂಗ ಮತ್ತು ಸ್ಥಾನ ಸೇವೆಯನ್ನು ಮಾಡುವ ಶಿಷ್ಯರು ಹೇರಳವಾಗಿ ದೊರೆಯಬಹುದು; ಆದರೆ ಶ್ರೀಗುರುವೇ ಪರಮಾತ್ಮನೆಂಬ ಅಚಲ ವಿಶ್ವಾಸಾತ್ಮಕವಾದ ಸದ್‌ಭಾವದಿಂದ ಸೇವಿಸುವದು ಬಹಳ ವಿರಳ. ಸರ್ವಜ್ಞ ಮಹಾಕವಿಯು–

ದರುಶನಗಳಾರರಿಂ। ಪುರುಷರಾ ಮೂವರಿಂ।
ಪರತತ್ವದಿರವು ಬೇರೆಂದು ತೋರಿದಾ।
ಗುರು ತಾನೆ ಹರನು ಸರ್ವಜ್ಞ॥

ನಂಬುವದು ! ನಿನಗೇಕೆ। ಹಂಬಲವು ಪರಶಿವನ ?।
ನಂಬಿ ಗುರುದೈವವನಗಸ್ತ್ಯಮುನಿಯು ತಾ।
ನಂಬುಧಿಯ ಸವಿದ ಸರ್ವಜ್ಞ॥

ಪರಮನಾ ರೂಪದಲಿ। ನೆರವೀಯಲರಿಯದಲೆ।
ನರನಾಗಿ ಬಂದು–ವರವೀವ ಗುರುವಿಂಗೆ।
ಸರಿಯಾರ ಕಾಣೆ ಸರ್ವಜ್ಞ॥

ಸುರತರುವು ಮರವಲ್ಲ। ಸುರಭಿಯೊಂದಾವಲ್ಲ।
ಪರುಷ ಪಾಷಾಣ–ದೊಳಗಲ್ಲ ಗುರುರಾಯ।
ನರರೊಳಗೆ ಅಲ್ಲ ಸರ್ವಜ್ಞ! ॥

ಈ ತನ್ನ ಸ್ವಾನುಭಾವದ ನುಡಿಗಳಲ್ಲಿ, ಗುರುವಿನ ಬಗ್ಗೆ ಇರಬೇಕಾದ ಸದ್ಭಾವನೆ ಯನ್ನು ಉಪದೇಶಿಸಿರುವನಲ್ಲದೇ, ಶ್ರೀಗುರುವಿನಲ್ಲಿಟ್ಟ ಸದ್ಭಾವನಾ ಭಕ್ತಿಯಿಂದಲೇ, ಶ್ರೀ ಅಗಸ್ತ್ಯ ಮಹರ್ಷಿಯು, ಅಂಬುಧಿಯನ್ನು ಪಾನಮಾಡಿದುದಾಗಿ ಉದಾಹರಿಸಿದ್ದಾನೆ. ಶ್ರೀಷಣ್ಮುಖಸ್ವಾಮಿಗಳಾದರೂ–

''ಗುರುವೇ ಪರತತ್ವವು ತಾನೆ ನೋಡಾ !
ಗುರುವೇ ಪರವಸ್ತುವು ತಾನೆ ನೋಡಾ !
ಗುರುವೇ ಪರಬ್ರಹ್ಮವು ತಾನೆ ನೋಡಾ !
ಗುರುವೇ ಪರಶಿವನು ತಾನೆ ನೋಡಾ !
ಗುರುವಿನಿಂದ ಪರವಿಲ್ಲವೆಂದು
ಸಕಲಶ್ರುತಿಗಳು ಹೊಗಳುತಿಪ್ಪವು ನೋಡಾ !

ಇಂತಪ್ಪ ಶ್ರೀಗುರುವಿಂಗೆ ನಮೋ ನಮ :
ಎಂಬೆನಯ್ಯಾ ಅಖಂಡೇಶ್ವರಾ''

ಎಂಬೀ ತಮ್ಮ ವಚನದಲ್ಲಿ ಶ್ರೀಗುರುವಿನ ವಿಷಯಕವಾದ ತಮ್ಮಲ್ಲಿರುವ ಸದ್ ಭಾವನೆಯನ್ನು ವಿವರಿಸಿದ್ದಾರೆ.

ಒಂದಾನೊಂದು ಸಮಯದಲ್ಲಿ ಗುರು–ಶಿಷ್ಯರೀರ್ವರು ಸಂಚರಿಸುತ್ತ ಸಾಯಂಕಾಲದ ಸಮಯಕ್ಕೆ, ಒಂದು ದಟ್ಟ ಅಡವಿಯನ್ನು ತಲಪುತ್ತಾರೆ. ರಾತ್ರಿಯಲ್ಲಿ ಯಾವುದಾದರೊಂದು ಊರಿನಲ್ಲಿ ವಾಸಿಸಬೇಕೆಂದಿದ್ದರೂ, ಹೊತ್ತು ಮುಳುಗುವದ ರೊಳಗಾಗಿ ಯಾವ ಊರೂ ಬಾರದ್ದರಿಂದ ಅನಿವಾರ್ಯವಾಗಿ ಅಂದಿನ ರಾತ್ರಿಯನ್ನು ಅಡವಿಯಲ್ಲಿಯೇ ಕಳೆಯುವ ಪ್ರಸಂಗ ಬಂದೊದಗಿತು. ನಿರ್ಜನವೂ, ಅನೇಕ ಕಾಡು ಮೃಗಗಳಿಂದ ತುಂಬಿದುದೂ ಆದ ಆ ಅಡವಿಯಿಂದ ಸುರಕ್ಷಿತವಾಗಿ ಪಾರಾಗಬೇಕಾದರೆ ಇಬ್ಬರೂ ಏಕಕಾಲದಲ್ಲಿ ನಿದ್ರಿಸಬಾರದು–ಎಂಬುದಾಗಿ ನಿರ್ಣಯಿಸಿಕೊಂಡು, ಮೊದಲು ಗುರುಗಳು, ಅಲ್ಲಿಯೇ ಒಂದು ಗಿಡದಡಿಯಲ್ಲಿ ತರಗೆಲೆಗಳ ಮೇಲೆ ಪವಡಿಸುತ್ತಾರೆ. ಗುರುಗಳು ನಿದ್ರಿಸುವ ಸಮಯದಲ್ಲಿ ಅವರ ಶರೀರಕ್ಕೆ ಯಾವುದೇ ಪ್ರಾಣಿಗಳಿಂದ ಅಪಾಯವಾಗದಂತೆ ಶಿಷ್ಯನು ಕಾಯುತ್ತ ಜಾಗ್ರತನಾಗಿಯೇ ಕೂಡ್ರುತ್ತಾನೆ.

ನಾಲ್ಕು ಘಂಟೆಗಳವರೆಗೆ ನಿಶ್ಚಿಂತವಾಗಿ ನಿದ್ರಿಸಿದ ಗುರುಗಳು, ನಿದ್ರೆ ಮುಗಿದೆದ್ದು ಎಚ್ಚರವಾಗಿಯೇ, ಶಿಷ್ಯನಮೇಲೆ ದಯತೋರಿ, ಮಲಗಲು ಅಪ್ಪಣೆ ಕೊಡುತ್ತಾರೆ. ಗುರುವಿನಾಣತಿಯ ಮೇರೆಗೆ ಶಿಷ್ಯನು ವಿಶ್ರಾಂತಿಗೈಯಲು ಗುರುಗಳು ಎಚ್ಚರವಾಗಿದ್ದು ಶಿಷ್ಯನ ದೇಹದ ರಕ್ಷಣೆಯಲ್ಲಿ ತತ್ಪರರಾಗುತ್ತಾರೆ.

ಶಿಷ್ಯನು ಮಲಗಿದ ಒಂದು ಘಂಟೆಯ ನಂತರ ಒಂದು ಕಾಳಸರ್ಪವು ಶಿಷ್ಯನತ್ತ ಭೋರ್ಗರೆಯುತ್ತ ಬರುವ ದೃಶ್ಯವನ್ನು ಗುರುಗಳು ನೋಡಿ, ಹಾರಿ, ಹಾವಿನತ್ತ ಧಾವಿಸಿ, ಶಿಷ್ಯನ ರಕ್ಷಣೆಯಲ್ಲಿ ತೊಡಗುತ್ತಾರೆ. ಆಗ ಆ ಹಾವು ಗುರುಗಳಿಗೆ ಹೇಳಿದ್ದೇನೆಂದರೇ– ಗುರುದೇವಾ ! ತಾವು ನನಗೆ ಅಡ್ಡಬರಬೇಡಿ, ಈ ನಿಮ್ಮ ಶಿಷ್ಯನಿಗೂ ನನಗೂ ಏಳು ಜನ್ಮಗಳಿಂದ ವೈರವು ಬೆಳೆದುಬಂದಿದೆ, ಒಮ್ಮೆ ಇವನು ನನಗೆ ಸರ್ಪವಾಗಿ ಕಚ್ಚಿದರೆ, ಮತ್ತೊಮ್ಮೆ ನಾನು ಸರ್ಪವಾಗಿ ಇವನನ್ನು ಕಚ್ಚಿದ್ದೇನೆ. ಈ ಹಿಂದಿನ ಜನ್ಮದಲ್ಲಿ ನಾನು ಮನುಷ್ಯನಾಗಿದ್ದಾಗ, ಸರ್ಪ ಯೋನಿಯಲ್ಲಿದ್ದ ಇವನು ನನ್ನನ್ನು ಕಚ್ಚಿ ರಕ್ತಹೀರಿದ್ದಾನೆ. ಆದಕಾರಣ, ಇವನ ರಕ್ತವನ್ನಾದರೂ ನಾನು ಹೀರಿ ಆ ಸೇಡನ್ನು ತೀರಿಸಿಕೊಳ್ಳದೇ ಬಿಡುವುದಿಲ್ಲ.

ಸರ್ಪದ ಈ ವಿಚಿತ್ರವಾದ ಮಾತನ್ನು ಕೇಳಿ ಗುರುಗಳು, ಎಲೈ ಉರಗವೆ ! ದ್ವೇಷಕ್ಕೆ ದ್ವೇಷ ಬೆಳೆಯುತ್ತ ಹೋದರೆ, ಅದೆಂದಿಗೂ ಶಾಂತವಾಗದು. ಏಳು ಜನ್ಮ ಗಳಿಂದ ಬಂದಿರುವ ನಿಮ್ಮೀರ್ವರ ದ್ವೇಷವು, ಇದೇ ರೀತಿಯಾಗಿ ಹೋದರೆ, ಏಳು ಸಾವಿರ ವರ್ಷ ಕಳೆದರೂ ತೀರಲಾರದು. ಇಲ್ಲಿಯವರೆಗೆ ಆದದ್ದು ಆಗಿಹೋಗಿದೆ; ಈಗ ಗುರುಗಳ ಸನ್ನಿಧಿಯಲ್ಲಿ ದ್ವೇಷವನ್ನು ಮರೆಯುವವನಾಗು– ಎಂಬುದಾಗಿ ಉಪದೇಶಿ ಸಿದರು.

ಗುರುಗಳ ಈ ಉಪದೇಶವನ್ನು ಕೇಳಿದ ಸರ್ಪವು, ಗುರುದೇವಾ ! ತಾವು ಏನೇ ಹೇಳಿದರೂ ಈತನ ಗಂಟಲದ ಒಂದು ಹನಿಯಾದರೂ ರಕ್ತವು ನನ್ನ ನಾಲಿಗೆಗೆ ತಗುಲದೆ ನನಗೆ ಸಮಾಧಾನವಾಗಲಾರದು. ಇದೊಂದು ಸಾರೆ ರಕ್ತ ಹೀರಲು ಒಪ್ಪಿಗೆ ಕೊಡಿರಿ, ಮುಂದೆ ತಾವು ಹೇಳಿದಂತೆ ಕೇಳುತ್ತೇನೆ ಎಂದಿತು. ಆಗ ಗುರುಗಳು ಶಿಷ್ಯನ ಪ್ರಾಣ ರಕ್ಷಣೆಯೂ ಆಗಿರಬೇಕು ಮತ್ತು ಸರ್ಪಕ್ಕೆ ಶಿಷ್ಯನ ಗಂಟಲ ರಕ್ತವೂ ದೊರೆಯಬೇಕು. ಇಂತಹ ಏನಾದರೊಂದು ಉಪಾಯವನ್ನು ಮಾಡಬೇಕೆಂದು ಯೋಚಿಸಿ, ಸರ್ಪಕ್ಕೆ ಹೇಳುತ್ತಾರೆ–

ಎಲೈ ಭುಜಂಗನೇ ! ನನ್ನ ಶಿಷ್ಯನ ಗಂಟಲಿನ ಬಿಸಿರಕ್ತವನ್ನು ಆಯುಧದಿಂದ ಇರಿದು ನಾನೇ ತೆಗೆದುಕೊಡುತ್ತೇನೆ; ಇದಕ್ಕೆ ಒಪ್ಪುವೆಯಾ ? ಎಂದು ಕೇಳಿದರು. ಆ ಮಾತಿಗೆ ಸರ್ಪವು ಒಪ್ಪಿಗೆ ಇತ್ತಕೂಡಲೇ, ಗಾಢ ನಿದ್ರೆಯಲ್ಲಿರುವ ಶಿಷ್ಯನ ಎದೆಯಮೇಲೆ ಕುಳಿತು ತಮ್ಮಲ್ಲಿರುವ ಸಣ್ಣ ಚಾಕುವಿನಿಂದ ಅವನ ಗಂಟಲವನ್ನು ಸ್ವಲ್ಪು ಕೊಯ್ಯಬೇಕೆನ್ನು ವದರೊಳಗೆ ಶಿಷ್ಯನು ಎಚ್ಚರಾಗಿ ತನ್ನ ಎದೆಯ ಮೇಲೆ ಯಾರು ಕುಳಿತಿದ್ದಾರೆಂದು ಕ್ರುದ್ಧನಾಗಿ ಕಣ್ತೆರೆದು ನೋಡಿ, ಗುರುಗಳೇ ಕೈಯೊಳಗೆ ಚಾಕು ಹಿಡಿದುಕೊಂಡು ಕುಳಿತಿರುವದನ್ನು ಕಣ್ಣಾರೆ ಕಂಡ ಶಿಷ್ಯನು, ಶಾಂತಮನಸ್ಕನಾಗಿ, ಏನನ್ನೂ ನುಡಿಯದೇ ಪುನಃ ಕಣ್ಣು ಮುಚ್ಚಿ ಮಲಗಿಕೊಂಡನು.

ಗುರುಗಳು ಶಿಷ್ಯನ ಗಂಟಲನ್ನು ಸ್ವಲ್ಪು ಕೊಯ್ದು, ರಕ್ತವನ್ನು ತೆಗೆದು ಸರ್ಪಕ್ಕೆ ಅರ್ಪಿಸಲಾಗಿ, ದ್ವೇಷವನ್ನು ಮರೆತು, ಸರ್ಪವು ಸಂತೋಷದಿಂದ ಹೊರಟು ಹೋಯಿತು. ಸರ್ಪ ಹೋದನಂತರ ಗುರುಗಳು ಶಿಷ್ಯನನ್ನು ಕೇಳುತ್ತಾರೆ–ಎಲೈ ಶಿಷ್ಯ ಶಿರೋಮಣಿಯೇ ! ನಾವು ನಿನ್ನ ಎದೆಯಮೇಲೆ ಕುಳಿತು ಗಂಟಲಿನ ರಕ್ತ ತೆಗೆಯುವಾಗ, ಎಚ್ಚರಗೊಂಡ ನೀನು, ನನ್ನ ಕೈಯಲ್ಲಿಯ ಆಯುಧವನ್ನು ಕಂಡೂ, ಪ್ರತಿಯಾಗಿ ಏನನ್ನೂ ಕೇಳದೇ, ಪುನಃ ಕಣ್ಣು ಮುಚ್ಚಿ ನಿಶ್ಚಿಂತನಂತೆ ಮಲಗಿಕೊಂಡೆಯಲ್ಲಾ ? ನಿನಗೆ ಆ ದೃಶ್ಯವನ್ನು ನೋಡಿ ಭಯವಾಗಲಿ, ನಮ್ಮ ಮೇಲೆ ಅವಿಶ್ವಾಸವಾಗಲಿ ಆಗಲಿಲ್ಲವೆ ?

ಗುರುಗಳ ಈ ಮಾತನ್ನು ಕೇಳಿದ ಶಿಷ್ಯನು–ಗುರುದೇವಾ ! ನನ್ನ ರಕ್ಷಣೆಯ ಭಾರ ವನ್ನು ತಮ್ಮ ಮೇಲೆ ಹಾಕಿ ಮಲಗಿಕೊಂಡ ನನ್ನ ಗಂಟಲಿನ ರಕ್ತವನ್ನು ತಾವು ತೆಗೆಯು ವುದು ನನಗೆ ತಿಳಿದರೂ,

ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥

ಎನ್ನುವ ವಚನದಂತೆ, ನನ್ನ ಸರ್ವಸ್ವವೆಲ್ಲವೂ ತಾವೇ ಆದಕಾರಣ, ತಮ್ಮಿಂದ ಅದಾವ ಕಾಲಕ್ಕೂ ಅಹಿತವಾಗುವುದೇ ಇಲ್ಲವೆಂಬ ನಿಶ್ಚಯವಿದ್ದ ಕಾರಣ, ನಾನು ನಿಶ್ಚಿಂತನಾದೆ, ಎಂಬುದಾಗಿ ಉತ್ತರಿಸಿದನು. ಈ ರೀತಿಯಾಗಿ, ಗುರುವೇ ಪರಮಾತ್ಮನು, ಅವನೇ ನನ್ನ ಹಿತಚಿಂತಕನು. ಎನ್ನುವ ಉನ್ನತವಾದ ಭಾವನೆಯೇ ಸದ್ಭಾವನೆಯು. ಅಂತೆಯೇ ಶ್ರೀ ಬಸವೇಶ್ವರರು–

ತಂದೆ ನೀನು, ತಾಯಿ ನೀನು; ಬಂಧು ನೀನು, ಬಳಗ ನೀನು;
ನೀನಲ್ಲದೇ ಮತ್ತಾರೂ ಇಲ್ಲವಯ್ಯಾ !
ಕೂಡಲ ಸಂಗಮದೇವಾ, ಹಾಲಲದ್ದು, ನೀರಲದ್ದು !

ಎನ್ನುವ ಈ ವಚನದಲ್ಲಿ ಕೂಡಲಸಂಗಮ ಕ್ಷೇತ್ರಾಧಿಪತಿಗಳೂ, ತಮ್ಮ ದೀಕ್ಷಾ ಗುರುಗಳೂ ಆದ ಶ್ರೀ ಜಾತವೇದಮುನಿ ಶಿವಾಚಾರ್ಯರ ಬಗ್ಗೆ, ತಮ್ಮ ಸದ್ಭಾವನೆಯನ್ನು ವ್ಯಕ್ತ ಮಾಡಿದ್ದಾರೆ.

''ಗುರುವಿನಿಂದ ಉಪದೇಶವ ಪಡೆದು, ಗುರುಪುತ್ರನೆನಿಸಿಕೊಂಡು,
ಬಳಿಕ ಪೂರ್ವದ ತಂದೆ ತಾಯಿಯೆಂದು, ಬಂಧುಬಳಗವೆಂದು,
ಮಲ ಸಂಬಂಧವ ನೆನೆಯಲಾಗದು ಕಾಣಿರೋ !
ನೆನೆದಿರಿಯಾದರೆ ಶಿವದ್ರೋಹ ತಪ್ಪದಯ್ಯಾ !
ಇನ್ನು ನಿಮಗೆ ತಾಯಿ ತಂದೆಯ ಹೇಳಿಹೆ ಕೇಳಿ.
ಗುರುವೇ ತಾಯಿ, ಗುರುವೇ ತಂದೆ, ಗುರುವೇ ಬಂಧು.
ಗುರುವಿನಿಂದ ಪರವಿನ್ನಾರೂ ಇಲ್ಲವೆಂದು ನಂಬಬಲ್ಲರೆ,
ಶಿಷ್ಯನೆಂಬೆನಯ್ಯಾ ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ.''

ಎಂದ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ವಚನವು, ''ತಂದೆ ನೀನು ತಾಯಿ ನೀನು'' ಎನ್ನುವ ಬಸವೇಶ್ವರರ ವಚನವು, ಗುರುಸ್ತುತಿಪರವಾದದ್ದೆಂಬುದಕ್ಕೆ ಪ್ರಮಾಣವಾಗಿದೆ.

ಈ ಪ್ರಕಾರವಾಗಿ, ಗುರುವೇ ತನ್ನ ಸರ್ವಸ್ವವೆಂದು ನಂಬಿ, ಗುರುಸೇವೆಯನ್ನು ಮಾಡುವುದಕ್ಕೆ, ಸದ್ಭಾವಸೇವೆಯೆಂದು ಶ್ರೀ ನಿಜಗುಣ ಶಿವಯೋಗಿಗಳು, ಗುರುಸೇವೆಯ ನಾಲ್ಕು ವಿಧಾನಗಳನ್ನು ಬಹುರಹಸ್ಯವಾಗಿ ನಿರೂಪಿಸಿದ್ದಾರೆ. ಆದಕಾರಣ, ಶಿಷ್ಯನಾದವನು, ಗುರುಸ್ಥಾನದಲ್ಲಿ, ಕೇವಲ ಕತ್ತೆಯಂತೆ ಕೆಲಸ ಮಾಡಿದರೆ ಸೇವೆಯೆನಿಸಿಕೊಳ್ಳಲಾರದು. ಆ ಕೆಲಸದ ಜೊತೆಗೆ, ಗುರು ಹಾಗೂ ಗುರುವಿನ ಸ್ಥಾನದ ಬಗ್ಗೆ ಅತ್ಯಂತ ಪೂಜ್ಯಭಾವನೆಯುಳ್ಳವನಾಗಿರಬೇಕೆಂಬುದೇ ಶ್ರೀ ನಿಜಗುಣರ ಉಪದೇಶದ ತಾತ್ಪರ್ಯವಾಗಿದೆ.

ಈ ಗುರುಸೇವೆಯನ್ನು ಎಷ್ಟುದಿವಸ ಮಾಡಬೇಕು ? ಎಂಬ ವಿಚಾರವು ಶಿಷ್ಯರಾದವರಲ್ಲಿ ಬರುವದು ಸಹಜ. ಅದಕ್ಕಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು– ''ಷಣ್ಮಾಸಾನ್ ವತ್ಸರಂ ವಾಪಿ ಯಾವದೇಷ ಪ್ರಸೀದತಿ'' ಆರು ತಿಂಗಳಾಗಲಿ, ವರ್ಷವಾಗಲಿ ಅಥವಾ ಕಾಲದ ಗಣನೆಯನ್ನು ಮಾಡದೇ, ಅವನು ಪ್ರಸನ್ನನಾಗುವವರೆಗೆ, ಸದ್ಭಾವದಿಂದ ಸೇವಿಸಬೇಕೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಸೇವೆಯಿಂದ ಸಂತುಷ್ಟನಾದ ಶ್ರೀಗುರುವಿನ ಸಂತೋಷಪರವಾದ ಅವಲೋಕನವೇ ಕರುಣೆ ಅಥವಾ ಒಲವು ಎನಿಸಿಕೊಳ್ಳುವುದು.

''ಗುರುವರನೊಲಹಲ್ಲದವನೇನನೋದಲು।
ದೊರೆಯಲರಿಯದು ಸಮ್ಯಗ್‌ಜ್ಞಾನ ॥''

(ಪರಮಾನುಭವಬೋಧೆ ೬–೪ ನೇ ಸೂತ್ರ)

ಎನ್ನುವ ಶ್ರೀ ನಿಜಗುಣ ಶಿವಯೋಗಿಗಳ ವಚನದಂತೆ, ಗುರುಸನ್ನಿಧಿಯಲ್ಲಿ ಅಭ್ಯಾಸ ಮಾಡಿದ ವಿದ್ಯೆಯು ಫಲಕಾರಿಯಾಗಬೇಕಾದರೆ, ಗುರುವರನೊಲುಮೆಯೇ ಮುಖ್ಯವಾದದ್ದು.

ಪ್ರಾಚೀನ ಕಾಲದಲ್ಲಿ ರಾಜ–ಮಹಾರಾಜರ ಮಕ್ಕಳು ಸರ್ವವಿಧವಿದ್ಯಾಧ್ಯಯನಕ್ಕಾಗಿ, ಋಷಿಗಳ ಆಶ್ರಮಕ್ಕೆ ಹೋಗುತ್ತಿದ್ದರು. ಆಶ್ರಮದಲ್ಲಿ ಚತುರ್ವಿಧವಾದ ಸೇವೆಯನ್ನು ಮಾಡಿ, ಗುರುಕೃಪೆ ಸಂಪಾದಿಸಿ, ವಿದ್ಯಾಧ್ಯಯನ ಮಾಡುವುದು ಒಂದು ಪದ್ಧತಿಯಾಗಿತ್ತು. ಒಮ್ಮೆ ಓರ್ವ ಚಕ್ರವರ್ತಿಯ ಮಗನು ತಂದೆಯಿಂದ ಆಜ್ಞಪ್ತನಾಗಿ, ವಿದ್ಯಾಧ್ಯಯನಾರ್ಥವಾಗಿ, ಋಷಿಗಳ ಆಶ್ರಮಕ್ಕೆ ಬರುತ್ತಾನೆ. ಆಶ್ರಮದಲ್ಲಿ ಗುರುಸೇವೆಯನ್ನು ಮಾಡುವುದು ತನ್ನಿಂದ ಆಗುವದಿಲ್ಲವೆಂದಾಗ, ತಂದೆಯು ಒಬ್ಬ ಸೇವಕನನ್ನು ಜೊತೆಗೆ ಕಳಿಸಿಕೊಡುತ್ತಾನೆ. ಸೇವಕನಿಂದೊಡಗೂಡಿದ ರಾಜಕುಮಾರನು, ಆಶ್ರಮದಲ್ಲಿ ಆಶ್ರಯವನ್ನು ಪಡೆದು ವಿದ್ಯಾಧರ್ಮವನ್ನು ಪ್ರಾರಂಭಿಸುತ್ತಾನೆ. ಜೊತೆಗೆ ಬಂದ ಸೇವಕನು, ರಾಜಕುಮಾರನ ಪರವಾಗಿ ಗುರುಸೇವೆಯನ್ನು ಮಾಡುತ್ತಿದ್ದನಲ್ಲದೇ, ರಾಜಕುಮಾರನ ಸೇವೆಯನ್ನೂ ಮಾಡುತ್ತಿದ್ದನು.

ಆಕಳು ನಮ್ಮದಾಗಿದ್ದರೂ, ಅದರ ಪಾದದಡಿಯಲ್ಲಿ ಕುಳಿತಾಗ ಅದರ ಅಮೃತ (ಹಾಲಿನ) ಪ್ರಾಪ್ತಿಯಾಗುವುದಲ್ಲದೇ, ಬೆನ್ನ ಮೇಲೆ ಕುಳಿತರೇ ಆಗುವುದಿಲ್ಲ. ಅದರಂತೆ, ತಾನು ಎಷ್ಟೇ ಶ್ರೀಮಂತನಾಗಿದ್ದರೂ, ತಾನು ಸೇವೆಯನ್ನು ಮಾಡದೇ, ಆಳಿನಿಂದ ಮಾಡಿಸಿದರೆ ಅದರ ಫಲವು, ಆಳಿಗಾದೀತಲ್ಲದೇ, ಮಾಲಿಕನಿಗಾಗದು. ಜಗತ್ತಿನಲ್ಲಿ ಕೆಲ ವ್ಯವಹಾರಗಳನ್ನು ಪ್ರತಿಯೊಬ್ಬರೂ, ಯಾರೇ ಇದ್ದರೂ, ಸ್ವತಃ ಮಾಡಲೇಬೇಕಾಗುತ್ತದೆ. ಅಂತೆಯೇ–

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು,
ತಾ ಮಾಡಬೇಕಲ್ಲದೇ ಅನ್ಯರಿಂದ ಮಾಡಿಸಬಹುದೇ ?
ಸತಿಯರ ಸಂಗವನು, ಅತಿಶಯದ ಗ್ರಾಸವನು,
ಪೃಥ್ವಿಗೀಶ್ವರನ ಪೂಜೆಯನು, ಅರಿವುಳ್ಳಡೆ
ಹೆರರ ಕೈಯಿಂದ ಮಾಡಿಸುವರೇ ರಾಮನಾಥಾ ?

ಈ ವಚನದಲ್ಲಿ ಭಕ್ತಿಭಂಡಾರಿ ಬಸವಣ್ಣನವರು ಮತ್ತು ದೇವರದಾಸಿಮಾರ್ಯರು, ತಾನು ಉಣಬೇಕಾದ ಊಟವನ್ನು, ತಾನು ಮಾಡಬೇಕಾದ ಸತಿಯರ ಸಂಗವನು, ಸ್ವತಃ ಹೇಗೆ, ತಾನೇ ಮಾಡುತ್ತಾನೆಯೋ, ಅದರಂತೆ ತಾನು ಮಾಡಬೇಕಾದ ಈಶ್ವರನ ಪೂಜೆ ಹಾಗೂ ಗುರುಸೇವೆಗಳನ್ನು, ತಾನೇ ಮಾಡಬೇಕಲ್ಲದೇ, ಅನ್ಯರಿಂದ ಮಾಡಿಸುವುದು ಅಪಚಾರವೆಂದು, ಬಹುಮಾರ್ಮಿಕವಾಗಿ ಸರ್ವರಿಗೂ ಅನುಭವಕ್ಕೆ ಬರುವ ರೀತಿಯಲ್ಲಿ ಉಪದೇಶಿಸಿದ್ದಾರೆ.

ರಾಜಕುಮಾರನ ಜೊತೆಗೆ ಬಂದ ಸೇವಕನು, ತಾನು ಮಾಡುವ ಸೇವಾ ಕಾರ್ಯದಲ್ಲಿ ಅವಕಾಶ ದೊರೆತಾಗಲೆಲ್ಲ, ಎಲ್ಲಕ್ಕೂ ಹಿಂದುಗಡೆ ಕುಳಿತು, ತಾನೂ ಗುರುಗಳ ಪಾಠವನ್ನು ಶ್ರವಣಮಾಡುತ್ತಿದ್ದನು. ಈ ಸೇವಕನು ಮಾಡುವ ಭಾವಪೂರ್ಣವಾದ ಸೇವೆಯನ್ನೂ ಮತ್ತು ಈತನಲ್ಲಿರುವ ಜ್ಞಾನಪಿಪಾಸೆಯನ್ನೂ ಅರಿತ ಗುರುಗಳು, ಮನದಲ್ಲಿಯೇ ಸಂತುಷ್ಟರಾಗಿ ಆಶೀರ್ವದಿಸಿದರು. ಹೀಗೆಯೇ ಹನ್ನೆರಡು ವರ್ಷಗಳು ಗತಿಸಿದವು. ರಾಜಕುಮಾರನು ಅಭ್ಯಸಿಸಬೇಕಾದ ಸಕಲ ವಿದ್ಯೆಗಳ ಅಧ್ಯಯನವೂ ಪೂರ್ಣವಾಯಿತು.

ಕಿಂಕರ ವೃತ್ತಿಯಿಂದ ಸೇವೆಯನ್ನು ಮಾಡದೆ, ಅಹಂಕಾರದಿಂದ ಅಧ್ಯಯನ ಮಾಡಿದ ರಾಜಕುಮಾರನು, ಗುರುಗಳ ಅಪ್ಪಣೆಯನ್ನು ಪಡೆದು ತನ್ನ ರಾಜ್ಯಕ್ಕೆ ಹಿಂತಿರುಗಿ, ತಂದೆಯಿಂದ ಪಟ್ಟಾಭಿಷಿಕ್ತನಾಗಿ, ರಾಜ್ಯವಾಳತೊಡಗಿದನು. ಕಾಲಾಂತರದಲ್ಲಿ ಅನಾವೃಷ್ಟಿಯಿಂದ ಪ್ರಜೆಗಳೆಲ್ಲ ಬಹು ತೊಂದರೆಗೀಡಾಗುವ ಪ್ರಸಂಗವು ಬಂದೊದಗಿತು. ಆಗ ರಾಜನು, ಗುರುಗಳಲ್ಲಿ ತಾನು ಅಭ್ಯಸಿಸಿದ ಪರ್ಜನ್ಯಯಾಗವನ್ನು ಮಾಡಿ ಸುಭಿಕ್ಷೆಯನ್ನುಂಟುಮಾಡುವದಕ್ಕಾಗಿ ಯಜ್ಞವನ್ನು ಪ್ರಾರಂಭಿಸಿದನು. ವಿಧ್ಯುಕ್ತವಾಗಿ ಯಜ್ಞ ಪೂರ್ಣಗೊಂಡು ಪೂರ್ಣಾಹುತಿಯಾದೊಡನೆ, ಆಕಾಶದಲ್ಲೆಲ್ಲ ಕಾರ್ಮೋಡಗಳು ಕವಿದು, ಗುಡುಗು–ಮಿಂಚುಗಳು ಪ್ರಾರಂಭವಾದವು. ಇದೇ ತೆರನಾದ ವಾತಾವರಣವು ಒಂದು ಸಪ್ತಾಹದವರೆಗಿದ್ದರೂ ಒಂದು ಹನಿಯೂ ಮಳೆಯಾಗಲಿಲ್ಲ.

ಈ ದೃಶ್ಯವನ್ನು ಕಂಡು ಜನರೆಲ್ಲ ಚಕಿತರಾದರು. ರಾಜನಾದರೂ ಅಚ್ಚರಿಗೊಂಡು, ತಾನು ಮಾಡುವ ಯಜ್ಞದ ವಿಧಾನದಲ್ಲಿ ಏನಾದರೂ ತಪ್ಪಿದೆಯಾ ? ಎಂದು ಬಹುವಾಗಿ ಆಲೋಚಿಸತೊಡಗಿದನು. ಯಾವ ವಿಚಾರವೂ ಹೊಳೆಯದೇ ಎಲ್ಲರೂ ದಿಙ್ಮೂಢರಾದಾಗ, ರಾಜಕುಮಾರನ ಜೊತೆಗೆ ಗುರುಸೇವೆಗಾಗಿ ಹೋದ ಸೇವಕನು, ರಾಜನಲ್ಲಿಗೆ ಬಂದು, ಪ್ರಭುಗಳೆ ! ತಾವು ಅನುಮತಿ ಕೊಟ್ಟರೆ, ನಾನೊಮ್ಮೆ ಯಾಗ ಮಾಡುತ್ತೇನೆ. ಗುರುಸೇವೆಯಲ್ಲಿ ಅವಕಾಶ ದೊರೆತಾಗಲೆಲ್ಲ, ನಾನೂ ಪರ್ಜನ್ಯಯಾಗದ ಮಂತ್ರಗಳನ್ನು ಅಭ್ಯಸಿಸಿದ್ದೇನೆ ಎಂದನು.

ಆಗ ರಾಜನು ಇವನ ಹಸ್ತಗುಣವನ್ನು ಪರೀಕ್ಷಿಸುವದಕ್ಕಾಗಿ ಅಪ್ಪಣೆ ಕೊಟ್ಟನು. ಯಜ್ಞವು ಪುನಃ ಪ್ರಾರಂಭವಾಗಿ ಶಾಸ್ತ್ರೋಕ್ತ ಪದ್ಧತಿಯಂತೆ ನಡೆದು, ಕೊನೆಯದಿನ ಆ ಸೇವಕನು ಶ್ರದ್ಧೆಯಿಂದ ಗುರುಗಳನ್ನು ಸ್ಮರಿಸಿ ಪೂರ್ಣಾಹುತಿಯನ್ನು ಮಾಡುವದೊಂದೇ ತಡ, ಜಲಭರಿತಗಳಾದ ಮೋಡಗಳೆಲ್ಲ ಏಕಕಾಲದಲ್ಲಿ ಆಕಾಶದಿಂದ ಕಳಚಿ ಬಿದ್ದಂತೆ ಮಳೆಯು ಪ್ರಾರಂಭವಾಗಿ, ಕೆರೆ–ಭಾವಿ–ಹಳ್ಳ–ಹೊಳೆಗಳೆಲ್ಲ ತುಂಬಿ ಹರಿಯತೊಡಗಿದವು.

ಇದನ್ನು ನೋಡಿದ ರಾಜನು, ಇದೇನಾಶ್ಚರ್ಯ ! ನಾನು ಮಾಡಿದ ಯಜ್ಞದಿಂದ ಮಳೆಯಾಗಲಿಲ್ಲ, ಆದರೆ, ಸೇವಕನು ಮಾಡಿದ ಯಾಗದಿಂದ ಮಳೆಯಾಗಲು ಕಾರಣವೇನು ? ಇದರ ರಹಸ್ಯವನ್ನು ಗುರುಗಳಿಂದ ತಿಳಿಯಲೇಬೇಕು ಎಂದು ವಿಚಾರಮಾಡಿ, ಸೇವಕನಿಂದೊಡಗೂಡಿ, ಗುರುಗಳ ಆಶ್ರಮಕ್ಕೆ ಬಂದು, ಆದ ಪ್ರಸಂಗವನ್ನೆಲ್ಲ ವಿವರಿಸಿ,

ನಾನು ಪೂರ್ಣಾಹುತಿ ಹಾಕಿದಾಗ, ಆಕಾಶದಲ್ಲಿ ಮೋಡಗಳೆಲ್ಲ ನೀರಿನಿಂದ ತುಂಬಿ ಕೊಂಡಿದ್ದರೂ, ಒಂದು ಹನಿಯೂ ಮಳೆ ಬಾರದಿರಲು ಕಾರಣವೇನು ? ಎಂಬುದಾಗಿ ಪ್ರಶ್ನಿಸಿದನು.

ಆಗ ಗುರುಗಳು, ಮಹಾರಾಜನೇ ! ನೀನು ನಮ್ಮ ಸನ್ನಿಧಿಯಲ್ಲಿದ್ದಾಗ, ಶಾಸ್ತ್ರಗಳ ಅಧ್ಯಯನವನ್ನು ಮಾಡಿರುವೆಯೇ ವಿನಹ, ಸೇವೆಯನ್ನು ಮಾಡಲಿಲ್ಲ, ಸೇವಾಭಾವ ಶೂನ್ಯನಾದ ನಿನಗೆ, ಗುರುಕರುಣೆಯಾಗದ್ದರಿಂದ, ನಿನ್ನ ವಿದ್ಯೆಯು ಫಲಕಾರಿಯಾಗಲಿಲ್ಲ. ಆದರೆ, ಈ ನಿನ್ನ ಸೇವಕನು, ತ್ರಿಕರಣ ಪೂರ್ವಕವಾಗಿ ಗುರುಸೇವೆಯನ್ನು ಮಾಡಿ, ಬಿಡುವಿನ ವೇಳೆಯಲ್ಲಿ, ಅಭ್ಯಾಸ ಮಾಡಿರುವ ಕಾರಣ, ಇವನಿಗೆ ಗುರುಕೃಪೆಯಾಗಿದೆ, ಅಂತೆಯೇ ಇವನ ವಿದ್ಯೆಯು ಫಲಕಾರಿಯಾಗಿದೆ ಎಂಬುದಾಗಿ ವಿದ್ಯಾಫಲದ ರಹಸ್ಯ ವನ್ನು ವಿವರಿಸಿದರು.

ಮಹಾರಾಜನು, ಸೇವಾಧರ್ಮದ ಮಹತ್ವವನ್ನರಿತು, ಪುನಃ ಹನ್ನೆರಡು ವರ್ಷ ಗುರುಸೇವೆಯನ್ನು ಮಾಡಿ, ಗುರುಕೃಪೆಯನ್ನು ಪಡೆದು, ಸಫಲವಿದ್ಯೆಯುಳ್ಳವನಾಗಿ ತನ್ನ ರಾಜ್ಯಕ್ಕೆ ಮರಳಿದನು.

ಮಹಾಭಾರತದ ಕರ್ಣನು, ಸಕಲ ಶಸ್ತ್ರ ವಿದ್ಯೆಯನ್ನು ಅಭ್ಯಾಸ ಮಾಡಿದ್ದರೂ, ಶಸ್ತ್ರವಿದ್ಯಾ ಗುರುವಾದ ಶ್ರೀ ಪರಶುರಾಮನಿಂದ ಅಭಿಶಪ್ತನಾದ ಕಾರಣ, ಗುರುಕೃಪೆ ಇಲ್ಲದ ಅವನ ವಿದ್ಯೆಯು, ಯುದ್ಧಪ್ರಸಂಗದಲ್ಲಿ ನಿಷ್ಫಲವಾಗಿ, ಸೋಲಿಗೆ ಕಾರಣ ವಾಯಿತು. ಆದಕಾರಣ, ಸಫಲವಿದ್ಯಾ ಪ್ರಾಪ್ತಿಯ ಮನೋಭಾವನೆಯುಳ್ಳ ಶಿಷ್ಯನು, ಮೊದಲು ಗುರುಕೃಪೆಗಾಗಿ ಸೇವೆಯನ್ನು ಮಾಡಿ ಗುರುವನ್ನು ಸಂತೋಷಗೊಳಿಸಿ, ವಿದ್ಯೆ ಯನ್ನು ಸಂಪಾದಿಸಬೇಕು. ಈ ತೆರನಾದ ಸೇವೆಯಿಂದ ವಿದ್ಯೆಯನ್ನು ಸಂಪಾದಿಸಿದವರಲ್ಲಿ, ಉಪಮನ್ಯು, ಸತ್ಯಕಾಮ ಮುಂತಾದವರ ಚರಿತ್ರೆಗಳು ಸುಪ್ರಸಿದ್ಧಗಳಾಗಿವೆ.

''ಸಮಯ ಏವ ಕರೋತಿ ಬಲಾಬಲಂ'' ಕಾಲವು ಮನುಷ್ಯನನ್ನು ಸಬಲ ನನ್ನಾಗಿಯೂ, ನಿರ್ಬಲನನ್ನಾಗಿಯೂ ಮಾಡಬಲ್ಲುದೆಂಬ ವಾಕ್ಯದಂತೆ, ಯುಗಮಾನಕ್ಕ ನುಸಾರವಾಗಿ, ಗುರು–ಶಿಷ್ಯರ ಆ ಪ್ರಾಚೀನವಾದ ಸಂಬಂಧವು, ಸಡಿಲಾಗುತ್ತ ಹೊರಟಿದೆ. ಆ ಪವಿತ್ರವಾದ ಸಂಬಂಧದ ಹ್ರಾಸು ಹೇಗೆ ಆಗುತ್ತಲಿದೆ ಎಂಬ ವಿಷಯವನ್ನು ಶ್ರೀ ಪ್ರಭುದೇವರು–

ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ,
ಆಗಲಿ ಮಹಾಪ್ರಸಾದವೆಂದೆನಯ್ಯಾ !
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ,
ಆಗಲಿ ಮಹಾಪ್ರಸಾದವೆಂದೆನಯ್ಯಾ !
ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ,
ಆಗಲಿ ಮಹಾಪ್ರಸಾದವೆಂದೆನಯ್ಯಾ !
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ,

ಆಗಲಿ ಮಹಾಪ್ರಸಾದವೆಂದೆನಯ್ಯಾ !
ಗುಹೇಶ್ವರಾ, ನಿಮ್ಮ ಕಾಲದ ಕಟ್ಟಳೆಯ
ಕಲಿತನಕ್ಕೆ ನಾನು ಬೆರಗಾದೆನು.

ಎನ್ನುವ ತಮ್ಮಯ ಈ ವಚನದಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾರೆ. ಇಂದಿನ ವಿದ್ಯಾರ್ಥಿಗಳೆಲ್ಲ ಗುರುಗಳಲ್ಲಿ ಭಯ–ಭಕ್ತಿರಹಿತರಾಗಿ, ಅನುಶಾಸನ ಶೂನ್ಯರಾಗಿ, ಉದ್ಧಂಡತನದಿಂದ ಬೆಳೆಯುತ್ತಲಿದ್ದಾರೆ. ಸದ್ಯದ ಪರಿಸ್ಥಿತಿಯಲ್ಲಿ ಶಿಕ್ಷಣದ ಸೌಲಭ್ಯಗಳು ಸಾಕಷ್ಟು ಬೆಳೆದಿವೆ. ಆದರೂ, ತಾವು ಕಲಿತ ವಿದ್ಯೆಯಲ್ಲಿ ಪಾರಂಗತರಾಗಿ, ನಿರ್ವಂಚನೆಯಿಂದ ಕಲಿಸುವ ಯೋಗ್ಯತೆಯುಳ್ಳವರು ಅದೆಷ್ಟು ಜನರಿದ್ದಾರೆ ? ತಾವು ವಿದ್ಯಾರ್ಥಿ ಜೀವನದಲ್ಲಿ ಸರಿಯಾಗಿ ಶ್ರದ್ಧೆಯಿಂದ ಕಲಿಯದ ಕಾರಣ, ಕಲಿಸುವ ಯೋಗ್ಯತೆಯೂ ಬರಲಾರದು. ಪರೀಕ್ಷೆಯಲ್ಲಿ ಹೇಗೋ ಪಾಸಾಗಿ ಪ್ರಮಾಣಪತ್ರವನ್ನು ಪಡೆದು, ಪ್ರಾಧ್ಯಾಪಕರಾದವರೇ ಬಹಳ. ಹೀಗೆ ಅಧಃಪತನವಾಗುತ್ತಿರುವ ಈ ಶಿಕ್ಷಣ ಮಟ್ಟವನ್ನು ಸುಧಾರಿಸಬೇಕಾದರೆ, ನಾವು ಪುನಃ ಪ್ರಾಚೀನವಾದ ಪ್ರಣಾಳಿಕೆಯನ್ನೇ ಆಶ್ರಯಿಸಬೇಕು; ಅಂದಾಗಲೇ ಭಾರತೀಯ ಪ್ರಾಚೀನ ಹಾಗೂ ಅರ್ವಾಚೀನ ವಿದ್ಯೆಗಳ ಪರಿರಕ್ಷಣೆಯಾಗಿ, ಸಮಾಜಕ್ಕೆ ಅವುಗಳ ಫಲ ತಟ್ಟಬಹುದು. ಇದಕ್ಕಾಗಿ ಸರ್ಕಾರ, ಸಮಾಜದ ಮುಖ್ಯಸ್ಥರು ಮತ್ತು ಧರ್ಮಗುರುಗಳು ಒಮ್ಮತದಿಂದ ವಿಚಾರಿಸಬೇಕು.

ಇನ್ನು ಪ್ರಕೃತವಾದ ವಿಷಯದತ್ತ ಬರೋಣ.

''ಅರಲುಗೊಂಡ ಕೆರೆಗೆ ತೆರೆಬಂದು ಹಾಯ್ದಂತೆ,
ಬರಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ.
ಇದೇ ಎನಗೆ ಇಹದ ಸುಖ, ಪರದ ಗತಿ ನಡೆದು ಬಂದಾಯಿತ್ತೆನಗೆ.
ಚೆನ್ನಮಲ್ಲಿಕಾರ್ಜುನನೆಂಬ ಗುರುಪಾದವ ಕಂಡು ಧನ್ಯಳಾದೆನು''

ಎನ್ನುವ ಅಕ್ಕನಲ್ಲಿರುವ ಮನೋಭಾವನೆಯು, ಪ್ರತಿಯೊಬ್ಬ ವ್ಯಕ್ತಿಯಲ್ಲಿ ಮೂಡಿದಾಗ, ಅವರೆಲ್ಲ ಗುರುಕರುಣೆಗೆ ಪಾತ್ರರಾಗಬಲ್ಲರು.

ಗುರುಸೇವೆಯಲ್ಲಿ ತತ್ಪರನಾದ ಶಿಷ್ಯನು–

ಶರೀರಮಿಂದ್ರಿಯಂ ಪ್ರಾಣಮಥನಂ ಸ್ವಜನಬಾಂಧವಾನ್ ।
ಆತ್ಮದಾರಾದಿಕಂ ಸರ್ವಂ ಸದ್ಗುರುಭ್ಯೋ ನಿವೇದಯೇತ್ ॥

(ಗುರುಗೀತಾ–೪೦)

ತನುಮನೋ ಧನ ಧಾನ್ಯ ವನಿತೆ ವಾಹನ ವಸ್ತ್ರ
ವೆನಿಸುವಖಿಳ ವಸ್ತುಚಯವನು ।
ಇನಿತು ವಂಚಿಸದೆ ಸದ್ಗುರುವಿನೊಳರ್ಪಿತ–
ವೆನಿಪನು ಪರಶಿಷ್ಯನರಿಯಲ್ಕೆ ॥

(ಪರಮಾನುಭವಬೋಧೆ, ೬–೩–೮)

ಎನ್ನುವ ಗುರುಗೀತಾ ಮತ್ತು ಶ್ರೀ ನಿಜಗುಣರ ವಚನದಂತೆ, ತನ್ನ ಸರ್ವಸ್ವವೆಲ್ಲವನ್ನು ಗುರುವಿಗೆ ಸಮರ್ಪಿಸಿ, ಅವುಗಳಲ್ಲಿ ತನ್ನವೆನ್ನುವ ಭಾವನೆ ಇಲ್ಲದವನಾಗಿ, ತತ್ಪರತೆ ಯಿಂದ ಸೇವೆಗೈದಾಗಲೇ, ಭುಕ್ತಿ ಮುಕ್ತಿ ಪ್ರದಾಯಕನಾದ ಶ್ರೀ ಸದ್ಗುರುವು ಪ್ರಸನ್ನ ನಾಗಿ, ತನ್ನಲ್ಲಿರುವ ದಿವ್ಯಜ್ಞಾನವನ್ನು ಶಿಷ್ಯನಿಗೆ ಧಾರೆಯೆರೆಯುತ್ತಾನೆ. ಅಂತೆಯೇ ಗೀತೆಯಲ್ಲಿ–

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನನಿಸ್ತತ್ತ್ವದರ್ಶಿನಃ ।

(ಗೀತಾ, ೪–೩೪)

ಎಂಬುದಾಗಿ, ಜ್ಞಾನಪಿಪಾಸುವಾದ ಶಿಷ್ಯನು ಗುರುವಿನ ಬಳಿಗೆ ಹೋಗಿ, ಮೊದಲು–

ಎರಡು ಪದವೆರಡು ಕರವೆರಡು ಭುಜವೆದೆ ನೊಸಲು ।
ವೆರಡು ನೆಲ ಸೋಂಕಲಷ್ಟಾಂಗದಿಂ ನಮಿಸಿ ॥

ಎಂಬ ಶ್ರೀನಿಜಗುಣರ ನುಡಿಯಂತೆ, ತನ್ನ ಅಂಹಕಾರ ನಿರಸನರೂಪವಾದ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕು. ನಂತರ ಎದ್ದು–

ವ್ಯತ್ಯಸ್ತಪಾಣಿನಾ ಕಾರ್ಯಮುಪಸಂಗ್ರಹಣಂ ಗುರೋಃ ।
ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ಚ ದಕ್ಷಿಣ ಃ ॥

(ಮನುಸ್ಮೃತಿ, ೨–೭೨)

ಎನ್ನುವ ಮನುವಿನ ವಚನದಂತೆ, ತನ್ನ ಬಲಗೈಯ್ಯನ್ನು, ಗುರುವಿನ ಬಲಪಾದದ ಅಡಿ ಯಲ್ಲಿ, ಎಡಗೈಯನ್ನು ಎಡಪಾದದ ಅಡಿಯಲ್ಲಿ ಅಂಗೈ ಮೇಲಾಗುವಂತೆ ಇರಿಸಿ, ಗುರು ವಿನ ಪಾದದ ಮೇಲ್ಭಾಗಕ್ಕೆ ತನ್ನ ಹಣೆಯನ್ನು ಹಚ್ಚಿ, ಭಕ್ತಿ ಪುರಸ್ಸರವಾಗಿ ನಮಸ್ಕರಿಸಬೇಕು.

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ತಸ್ಯ ವರ್ಧಂತೇ ಆಯುಃ ಪ್ರಜ್ಞಾ ಯಶೋ ಬಲಂ ॥

(ಆಪಸ್ತಂಭ)

ಎಂಬ ಪ್ರಮಾಣವಚನದಂತೆ, ಆ ರೀತಿಯಾಗಿ ಶ್ರದ್ಧೆಯಿಂದ ಪ್ರತಿನಿತ್ಯ ನಮಸ್ಕರಿಸುವ ವನಿಗೆ ಆಯುಷ್ಯ, ಬುದ್ಧಿ, ಕೀರ್ತಿ ಮತ್ತು ದೈಹಿಕ ಹಾಗೂ ಆತ್ಮಿಕ ಬಲಗಳು ಸಹಜವಾಗಿ ಬೆಳೆಯುತ್ತವೆ. ಇದೂ ಅಲ್ಲದೇ ಶ್ರೀಗುರುವಿನ ಎರಡೂ ಪಾದಗಳಾದರೂ, ಜ್ಞಾನ–ಕ್ರಿಯೆಗಳ ಪ್ರತೀಕಗಳು. ಅಂತೆಯೇ ''ಜ್ಞಾನಕ್ರಿಯಾಲಕ್ಷಣಂ ಸ್ವಾತಂತ್ರ್ಯಂ ಚರ್ಯತೇ ಪ್ರಾಪ್ಯತೇ ಬುಧ್ಯತೇ ಚಾಭ್ಯಾಂ ವಿಶ್ವಮಿತಿ ಚರಣೌ'' ಎನ್ನುವ ವ್ಯುತ್ಪತ್ತಿಯ ಮೇರೆಗೆ, ಅವುಗಳನ್ನು ಸೇವಿಸುವ ಜಗತ್ತಿನ ಪ್ರತಿಯೊಬ್ಬ ಮನುಷ್ಯನೂ, ಉತ್ತಮವಾದ ಆಚರಣೆ ಮತ್ತು ಶ್ರೇಷ್ಠವಾದ ಆತ್ಮಜ್ಞಾನವನ್ನು ಪಡೆದುಕೊಳ್ಳುತ್ತಾನೆ. ನಾವು ಸಮರ್ಪಿಸುವ ಅದಾವ ಪದಾರ್ಥಕ್ಕಿಂತಲೂ ನಮ್ಮ ಮಸ್ತಕವನ್ನೊಂದನ್ನೇ ಭಕ್ತಿಯಿಂದ ಸಮರ್ಪಿಸಿದರೆ ಸಾಕು, ಅದಿಷ್ಟರಿಂದಲೇ ಗುರುವು ಸಂತುಷ್ಟನಾಗಿ ಆಶೀರ್ವದಿಸುತ್ತಾನೆ.

ಹಗ್ಗವನ್ನು ಕಟ್ಟಿ ಭಾವಿಯೊಳಗೆ ಬಿಟ್ಟ ಕೊಡವು ಎಲ್ಲಿಯವರೆಗೆ ತನ್ನ ಮುಖವನ್ನು ಕೆಳಗೆ ಮಾಡಿ ಬಾಗುವುದಿಲ್ಲವೋ, ಅಲ್ಲಿಯವರೆಗೆ, ಅದರ ಉದರದಲ್ಲಿ ನೀರು ಒಳ ಹೋಗದಿರುವಂತೆ ವಿನಯದಿಂದ ಬಾಗದಿರುವ ಮನುಷ್ಯನಾದರೂ, ಗುರುವಿನಲ್ಲಿರುವ ಜ್ಞಾನಾಮೃತವನ್ನು ತನ್ನ ಮಸ್ತಕದಲ್ಲಿ ತುಂಬಿಕೊಳ್ಳಲಾರನು.

ಅಶೋಕ ಚಕ್ರವರ್ತಿಯು ಕಲಿಂಗದ ಕಾಳಗದಲ್ಲಿ, ಪ್ರಾಣಹಿಂಸೆಯಿಂದಾದ ರಕ್ತದ ಹೊಳೆಯನ್ನು ಕಂಡು, ಕರುಣಾರ್ದ್ರಹೃದಯನಾಗಿ, ಆಂದಿನ ಕಾಲದಲ್ಲಿ ಪ್ರಖ್ಯಾತ ವಾಗಿದ್ದ ಬೌದ್ಧ ಧರ್ಮವನ್ನು ಸ್ವೀಕರಿಸಿ, ಶಾಂತಿಯುತವಾದ ಜೀವನವನ್ನು ಸಾಗಿಸು ತ್ತಿದ್ದನು. ಧರ್ಮಪ್ರಚಾರಕರಾದ ಮಹಾತ್ಮರಲ್ಲಿ ಅತ್ಯಂತ ಶ್ರದ್ಧೆಯುಳ್ಳವನಾಗಿ ನಡೆದು ಕೊಳ್ಳುತ್ತಿದ್ದನು. ತಾನು ಹೋಗುವ ದಾರಿಯಲ್ಲಿ ಯಾರೇ ಮಹಾತ್ಮರು ಬಂದರೂ, ತನ್ನ ವಾಹನದಿಂದ ಇಳಿದು, ಅವರ ಪಾದಕ್ಕೆ ತನ್ನ ಹಣೆ ಹಚ್ಚಿ ನಮಸ್ಕರಿಸುತ್ತಿದ್ದನು.

ಒಂದು ದಿನ ಮಂತ್ರಿಯೊಡಗೂಡಿ ರಾಜಬೀದಿಯಲ್ಲಿ ಹೋಗುತ್ತಿರುವಾಗ, ಮಹಾತ್ಮರೋರ್ವರು ಎದುರಾಗಿ ಬರುವುದನ್ನು ನೋಡಿ, ಕುದುರೆಯಿಂದ ಇಳಿದು, ಪಾದತ್ರಾಣಗಳನ್ನು ಕಳೆದು, ಮಸ್ತಕದ ಮೇಲಿನ ಮಕುಟವನ್ನು ಭೂಮಿಯಮೇಲಿರಿಸಿ–

''ಕುರ್ಯಾದ್ದಂಡನಮಸ್ಕಾರಂ ನಿರ್ಲಜ್ಜೋ ಗುರುಸನ್ನಿಧೌ''

(ಚಂ.ಜ್ಞಾ.ಅ.ಕ್ರಿ. ೨–೩೩)

ಎಂಬ ಚಂದ್ರಜ್ಞಾನ ಆಗಮದ ವಚನದಂತೆ, ಯಾವ ನಾಚಿಕೆಯೂ ಇಲ್ಲದೆ, ಸಾಷ್ಟಾಂಗ ನಮಸ್ಕಾರವನ್ನು ಹಾಕಿದನು. ರಾಜನ ಈ ವಿಚಿತ್ರವಾದ ವ್ಯವಹಾರವನ್ನು ಕಂಡ ಮಂತ್ರಿಯು, ಆಶ್ಚರ್ಯಚಕಿತನಾಗಿ, ತನಗೆ ನಮಸ್ಕರಿಸುವ ಅಭಿಲಾಷೆ ಇರದಿದ್ದರೂ, ರಾಜನಿಗೆ ಹೆದರಿ ಕೇವಲ ಕೈಜೋಡಿಸಿ ನಮಸ್ಕರಿಸಿದನು.

ಅರಮನೆಗೆ ಬಂದನಂತರ ಮಂತ್ರಿಯು–''ಮಹಾರಾಜರೇ ತಾವು ಚಕ್ರವರ್ತಿ ಗಳು, ತಮ್ಮಂಥವರು ದಾರಿಯಲ್ಲಿ ಮಹಾತ್ಮರನ್ನು ಕಂಡು ನಮಸ್ಕರಿಸಬಾರದು. ಇದು ಸಿಂಹಾಸನದ ಅಗೌರವ. ಬರಿಗಾಲಿನಿಂದ ನಡೆದು ಧೂಳಿದೂಷಿತವಾದ ಅವರ ಪಾದಕ್ಕೆ ಮಣಿಖಚಿತ ಮಕುಟವನ್ನು ಧರಿಸಬಲ್ಲ ಮಸ್ತಕವನ್ನು ಹಚ್ಚಿ ನಮಸ್ಕರಿಸುವುದೇ ? ಎಂದು ತನ್ನ ವ್ಯಗ್ರತೆಯನ್ನು ವ್ಯಕ್ತ ಮಾಡಿದನು.

ಮಂತ್ರಿಯ ಈ ವಿಚಾರವನ್ನು ಕೇಳಿದ ರಾಜನು, ''ಮಂತ್ರಿವರ್ಯಾ ! ಈಗ ಉತ್ತರಿಸಲು ಅವಕಾಶವಿಲ್ಲ, ಸಮಯ ಬಂದಾಗ ಉತ್ತರಿಸುವೆನು'' ಎಂದು ಹೇಳಿ ಅನ್ಯ ಕಾರ್ಯದಲ್ಲಿ ಆಸಕ್ತನಾದನು. ಈ ಘಟನೆಯು ನಡೆದು ನಾಲ್ಕಾರು ವರ್ಷಗಳು ಗತಿಸಿರಬಹುದು. ಒಂದು ದಿನ ಮಹಾರಾಜನು ಮಂತ್ರಿಗಳನ್ನು ಬರಮಾಡಿಕೊಂಡು, ಸೀಲುಹಾಕಿ ಬಂದು ಮಾಡಿದ ಒಂದು ದೊಡ್ಡ ಕಟ್ಟಿಗೆಯ ಪೆಟ್ಟಿಗೆಯನ್ನು ತೋರಿಸಿ ಹೇಳುತ್ತಾನೆ–''ಇದನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋಗಿ ಇದರಲ್ಲಿಯ ವಸ್ತುಗಳನ್ನು ಮಾರಿಕೊಂಡು ಬನ್ನಿರಿ'' ಎಂದು.

ರಾಜನ ಅಪ್ಪಣೆಯ ಮೇರೆಗೆ ಮಂತ್ರಿಯು ಆ ಪೆಟ್ಟಿಗೆಯನ್ನು ಸೇವಕರ ಸಹಾಯದಿಂದ ಮಾರುಕಟ್ಟೆಗೆ ತೆಗೆದೊಯ್ದು ಒಡೆದು ನೋಡಲು ಅದರ ತುಂಬೆಲ್ಲ ವಿಭಿನ್ನ ಪ್ರಾಣಿಗಳ ಮಸ್ತಕಗಳೇ ಇದ್ದವು. ಆಶ್ಚರ್ಯಗೊಂಡ ಮಂತ್ರಿಯು, ಇಂಥ ಹೀನ ಕಾರ್ಯವನ್ನು ಮಹಾರಾಜರು ನನಗೇಕೆ ಹಚ್ಚಿರಬೇಕು ? ಎಂದು ಬಹುವಾಗಿ ವಿಚಾರಿಸಿಯೂ, ಕಾರಣ ದೊರೆಯದವನಾಗಿ, ಬಂದ ಕಾರ್ಯವನ್ನು ಮಾಡಿಕೊಂಡು ಹೋಗಬೇಕೆಂದು ಅವುಗಳನ್ನು ಮಾರಲು ಪ್ರಾರಂಭಿಸಿದನು. ಮಾರುಕಟ್ಟೆಯ ಜನರೆಲ್ಲ ತಮಗೆ ಬೇಕಾದ ಪ್ರಾಣಿಯ ರುಂಡವನ್ನು ಹಣ ಕೊಟ್ಟು ಖರೀದಿಸತೊಡಗಿದರು. ಮಾರಾಟ ನಡೆದ ಕೆಲ ಕಾಲದಲ್ಲಿಯೇ ಪೆಟ್ಟಿಗೆಯು ರಿಕ್ತವಾಗತೊಡಗಿತು. ಪೆಟ್ಟಿಗೆಯ ತಳದಲ್ಲಿ ಮನುಷ್ಯನ ರುಂಡವೊಂದು ಮಂತ್ರಿಗೆ ದೃಷ್ಟಿಗೋಚರವಾಯಿತು. ಚಕಿತಗೊಂಡ ಮಂತ್ರಿಯು, ಅದನ್ನೂ ಮಾರಾಟಕ್ಕೆ ಹಿಡಿದಾಗ ಯಾರೂ ಖರೀದಿಸಲಿಲ್ಲ. ನಿರುಪಾಯನಾಗಿ ಮಂತ್ರಿಯು, ಮರಳಿ ಬಂದು, ಎಲ್ಲ ಪ್ರಾಣಿಗಳ ರುಂಡಗಳೂ ಮಾರಾಟವಾಗಿ ಮನುಷ್ಯನ ರುಂಡಮಾತ್ರ ಉಳಿದದ್ದನ್ನು ರಾಜನಿಗೆ ನಿವೇದಿಸಿಕೊಂಡನು.

ಆಗ ಮಹಾರಾಜನು–''ಮಂತ್ರಿಗಳೇ ಈ ರುಂಡವನ್ನು ಯಾರೂ ಹಣಕೊಟ್ಟು ತೆಗೆದುಕೊಳ್ಳದಿದ್ದಾಗ, ಪುಕ್ಕಟೆಯಾಗಿ ಕೊಟ್ಟು ಬನ್ನಿರಿ'' ಎಂದು ಆಜ್ಞಾಪಿಸಿದನು. ರಾಜನ ಅಪ್ಪಣೆಯಂತೆ ಮಂತ್ರಿಯು ಪುನಃ ಮಾರುಕಟ್ಟೆಗೆ ಬಂದು, ನಿಃಶುಲ್ಕವಾಗಿ ಕೊಡುವದಾಗಿ ಘೋಷಿಸಿದರೂ, ಯಾರೂ ತೆಗೆದುಕೊಳ್ಳದೆ ಇದ್ದಾಗ, ಮರಳಿ ಬಂದು ರಾಜರಿಗೆ ತಿಳಿಸಿದನು. ಆಗ ಮಹಾರಾಜನು ನೋಡಿ, ಮಂತ್ರಿಗಳೇ, ಜಗತ್ತಿನ ಜನರು ಎಲ್ಲ ಪ್ರಾಣಿಗಳನ್ನೂ ಹಣಕೊಟ್ಟು ಖರೀದಿಸಿದರು; ಆದರೆ ಮನುಷ್ಯನ ರುಂಡವನ್ನು ಪುಕ್ಕಟೆಯಾಗಿ ಕೊಡುವುದಾಗಿ ಹೇಳಿದರೂ ಅದನ್ನು ತೆಗೆದುಕೊಂಡು ಹೋದರೆ ನಮಗೆ ಮೈಲಿಗೆಯಲ್ಲದೆ ಇನ್ನೇನೂ ಸಿಗುವಂತಿಲ್ಲವೆಂದು ವಿಚಾರಿಸಿ, ಯಾರೂ ತೆಗೆದುಕೊಳ್ಳಲಿಲ್ಲ. ಇಂತಹ ನಿರುಪ ಯುಕ್ತವಾದ ಮಸ್ತಕವನ್ನು, ಗುರುವಿನ ಪಾದಕ್ಕೆ ಅರ್ಪಿಸಿದರೆ, ಜನ್ಮ ಕಲ್ಯಾಣವಾಗುತ್ತಿರು ವಾಗ ಏಕೆ ಅರ್ಪಿಸಬಾರದು ? ಎಂದು ಪ್ರಶ್ನಿಸಿದನು. ಆಗ ಮಂತ್ರಿಯು ಮೊದಲಿನ ಘಟನೆಯನ್ನು ಸ್ಮರಿಸಿ, ಲಜ್ಜಾನ್ವಿತನಾಗಿ ಮೌನಿಯಾದನು.

ಹೀಗೆ ಮನುಷ್ಯನ ಮಸ್ತಕವು ಗುರುಪಾದಕ್ಕೆ ಮಾತ್ರ ಸಲ್ಲುವ ಕಾರಣ, ಅದನ್ನು ಶ್ರದ್ಧೆಯಿಂದ ಅರ್ಪಿಸಿ, ವಿನಯಪೂರ್ವಕವಾಗಿ ಗುರುಗಳಿಗೆ ಪ್ರಶ್ನೆಯನ್ನು ಕೇಳಬೇಕು. ಒಂದು ವೇಳೆ ಆ ಪ್ರಶ್ನೆಗೆ ಗುರುಗಳು ಉತ್ತರಿಸದಿದ್ದರೆ, ನಮಸ್ಕಾರ ಮಾತ್ರದಿಂದ ಸಂತುಷ್ಟರಾಗಿಲ್ಲವೆಂಬುದನ್ನು ತಿಳಿದು, ಆಮೇಲೆ ಸೇವೆಯನ್ನು ಪ್ರಾರಂಭಿಸಬೇಕು. ಸೇವೆಯಿಂದ ಸಂತುಷ್ಟನಾದಾಗ–

ಪ್ರಸನ್ನಂ ಪರಮಾಚಾರ್ಯಂ ಭುಕ್ತಿಮುಕ್ತಿಪ್ರದಾಯಕಮ್ ।
ಪ್ರಾರ್ಥಯೇದಗ್ರತಃ ಶಿಷ್ಯಃ ಪ್ರಾಂಜಲಿರ್ವಿನಯಾನ್ವಿತಃ ॥

ಭೋಕಲ್ಯಾಣ ಮಹಾಭಾಗ ಶಿವಜ್ಞಾನಮಹೋದದೇ ।
ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷ ಮಾಂ ಭವರೋಗಿಣಮ್ ॥

(ಸಿ. ಶಿ. ೬.೮–೯)

ಎನ್ನುವ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಆದೇಶದಂತೆ, ಕಲ್ಯಾಣ ಕೈವಲ್ಯ ಪ್ರದಾಯಕನಾದ ಜಗದ್ಗುರುವಿನ ಎದುರುಗಡೆ ಕೈಜೋಡಿಸಿ–ಹೇ ಶಿವಜ್ಞಾನ ಸಾಗರನಾದ ಮಹಾಚಾರ್ಯನೇ ! ಭವರೋಗಿಯಾಗಿ ತಮ್ಮ ಪಾದದಡಿಯಲ್ಲಿ ಬಂದ ನನ್ನನ್ನು ಕಾಪಾಡಿರೆಂದು ಪ್ರಾರ್ಥಿಸಬೇಕು.

ಜೀವಾತ್ಮರಿಗೆ ಭೋಗೈಶ್ವರ್ಯವು ಈಶ್ವರನ ಆರಾಧನೆಯಿಂದ ಮತ್ತು ಕೈವಲ್ಯ ಪ್ರಾಪ್ತಿಯು ಗುರುವಿನ ಜ್ಞಾನೋಪದೇಶದಿಂದ ದೊರೆಯುತ್ತವೆ. ಹೀಗಿರುವಾಗ, ಕಲ್ಯಾಣ–ಕೈವಲ್ಯಗಳು ಓರ್ವ ಗುರುವಿನಿಂದಲೇ ದೊರೆಯುವುದು ಹೇಗೆ ಸಾಧ್ಯ ? ಎನ್ನುವ ಸಂಶಯವು ಪ್ರಾದುರ್ಭವಿಸುವುದು ಸಹಜ ಆದರೆ–

ಯಂ ಯಂ ಲೋಕಂ ಮನಸಾ ಸಂಶಿಭಾತಿ ।
ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।
ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ ।
ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ ॥

ಎನ್ನುವ ಶ್ರುತಿಯಲ್ಲಿ, ಆತ್ಮಜ್ಞನಾದ ಶ್ರೀಸದ್ಗುರುವನ್ನು ಅರ್ಚಿಸಿದವನು, ಏನನ್ನು ಅಪೇಕ್ಷಿಸುವನೋ, ಅವೆಲ್ಲವೂ ಪ್ರಾಪ್ತವಾಗುವುದೆಂದು ಹೇಳಿರುವುದರಿಂದ, ಈಶ್ವರನ ವಿಶಿಷ್ಟವಾದ ಅವತಾರವೇ ಗುರುವಾದ ಕಾರಣ, ಗುರುವಿಗೆ ಈಶ್ವರನಲ್ಲಿರುವ ಐಶ್ವರ್ಯಪ್ರದವಾದ ಸಾಮರ್ಥ್ಯವಿರುವುದರ ಜೊತೆಗೆ, ಜ್ಞಾನೋಪದೇಶದ ಮೂಲಕ ಮುಕ್ತಿಪ್ರದಾತೃತ್ವವೂ ಇದೆ. ಆದಕಾರಣ, ಗುರುವಿನ ಸೇವೆಯಿಂದ ಉಭಯ ವಿಧ ಲಾಭವೂ ದೊರೆಯುವುದರಲ್ಲಿ ಸಂದೇಹವಿಲ್ಲ. ಅಂತೆಯೇ ಶ್ರೀಕಂಠಶಿವಾಚಾರ್ಯರು ಬ್ರಹ್ಮಸೂತ್ರಭಾಷ್ಯದ ಆರಂಭದಲ್ಲಿ– ''ಕೈವಲ್ಯ ಕಲ್ಪತರುವೆ ಕಲ್ಯಾಣಗುರವೇ ನಮಃ'' ಎಂಬುದಾಗಿ ಗುರುಸ್ತುತಿಯನ್ನು ಮಾಡಿದ್ದಾರೆ.

ಗುರುರ್ವಿಷ್ಣುಃ ಸತ್ವಮಯೋ ರಾಜಸಶ್ಚತುರಾನನಃ ।
ತಾಮಸೋ ರುದ್ರರೂಪೇಣ ಸೃಜತ್ಯವತಿ ಹಂತಿ ಚ ॥ (ಗುರುಗೀತಾ–೧೬೪)

ಗುರುವಿನ ಸಾಮರ್ಥ್ಯವನ್ನು ವರ್ಣಿಸುವ ಈ ಗುರುಗೀತಾವಚನವು, ಗುರುವಿನಲ್ಲಿ ಬ್ರಹ್ಮ ವಿಷ್ಣುಮತ್ತು ರುದ್ರರಲ್ಲಿರುವ ಸೃಜನ, ಪಾಲನ ಮತ್ತುಸಂಹಾರ ಸಾಮರ್ಥ್ಯಗಳು ಇರುವುದಾಗಿ ವರ್ಣಿಸಿರುವ ಕಾರಣ, ಈ ತ್ರಿಮೂರ್ತಿಗಳಿಗಿಂತಲೂ ಗುರುವು ಶ್ರೇಷ್ಠ ನಾಗಿದ್ದಾನೆ. ಅಂತೆಯೇ–

ಮುನಿಭಿಃ ಪನ್ನಗೈರ್ವಾಪಿ ಸುರೈರ್ವಾ ಶಾಪಿತೋ ಯದಿ ।
ಕಾಲಮೃತ್ಯುಭಯಾದ್ವಾಪಿ ಗುರುಃ ಸಂತ್ರಾತಿ ಪಾರ್ವತಿ ॥

(ಗುರುಗೀತಾ–೧೪೧)

ಎಂಬುದಾಗಿ, ಶ್ರೀ ಪರಮಾತ್ಮನೇ ಪಾರ್ವತಿಗೆ ಗುರುಮಹಿಮೆಯನ್ನು ವರ್ಣಿಸಿದ್ದಾನೆ. ಆದಕಾರಣ, ಗುರುವಿನಲ್ಲಿ ಭೋಗ–ಮೋಕ್ಷಗಳೆಂಬ ಉಭಯ ವಿಧ ಫಲಗಳನ್ನು ಕೊಡುವ ಸಾಮರ್ಥ್ಯವಿರುವ ಕಾರಣ, ಶಿಷ್ಯನಾದವನು–

ಪೃಷ್ಠತಃ ಸೇವಯೇದರ್ಕಂ ಜಠರೇಣ ಹುತಾಶನಮ್ ।
ಸ್ವಾಮಿನಂ ಸರ್ವಭಾವೇನ ಪರಲೋಕಮಮಾಯಯಾ ॥

ಎನ್ನುವ ಸುಭಾಷಿತದಂತೆ, ಸೂರ್ಯನ ಬಿಸಿಲನ್ನು ಬೆನ್ನಿನಿಂದ ಸೇವಿಸಬೇಕು; ಛಳಿಗಾಲದಲ್ಲಿ ಅಗ್ನಿಯ ಸೇವನೆಯನ್ನು ಎದುರುಗಡೆಯಿಂದ ಮಾಡಬೇಕು; ಆದರೆ ಸದ್ಗುರುವನ್ನು ಸರ್ವತೋಮುಖೇನ ಸೇವಿಸಬೇಕು. ಈ ಸರ್ವತೋಮುಖವಾದ ಸದ್ಗುರು ಸೇವೆಯನ್ನು ಶಿಷ್ಯನಾದವನು ಶ್ರದ್ಧೆಯಿಂದ ಮಾಡಿ ತನ್ನ ಆತ್ಮಕಲ್ಯಾಣವನ್ನು ಸಂಪಾದಿಸಿಕೊಳ್ಳಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೫ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

■■

■■

ಆಶೀರ್ವಚನ-೩

ಇತಿ ಶುದ್ಧೇನ ಶಿಷ್ಯೇಣ ಪ್ರಾರ್ಥಿತಃ ಪರಮೋ ಗುರುಃ ।
ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಮ್ (ಸಿ. ಶಿ. ೬.೧೦)

ಹೀಗೆ ಪರಿಪಕ್ವಮನಸ್ಕನಾದ ಶಿಷ್ಯನಿಂದ ಪ್ರಾರ್ಥಿಸಲ್ಪಟ್ಟ ಪರಮಾಚಾರ್ಯನು, ಶಿಷ್ಯನಲ್ಲಿ ಪರಮಾತ್ಮನ ಅನುಗ್ರಹರೂಪವಾದ ಶಕ್ತಿಪಾತವು ಆಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಿ, ಒಂದುವೇಳೆ ಆ ಚಿಹ್ನಗಳು ಕಂಡುಬಂದರೆ, ಶ್ರೀಗುರುವು ಶಿಷ್ಯನನ್ನು ದೀಕ್ಷಾಸಂಪನ್ನನನ್ನಾಗಿ ಮಾಡಬೇಕು.

ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಮ್ ।
ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ (ಸಿ. ಶಿ. ೬.೧೧)

ಯಾವ ಸಂಸ್ಕಾರದಿಂದ, ಪರಶಿವಲಿಂಗದ ಜ್ಞಾನವುಂಟಾಗುವದೋ, ಯಾವುದರಿಂದ ಮಲ, ಮಾಯಾ, ಕರ್ಮಬಂಧನವು ಕ್ಷಯಿಸಿಹೋಗುತ್ತದೆಯೋ, ಅಂಥ ಜ್ಞಾನ-ಕ್ರಿಯಾ ತ್ಮಕವಾದ ಶಕ್ತಿಯೇ ದೀಕ್ಷೆ ಎಂದು ವಿದ್ವಾಂಸರಿಂದ ಹೇಳಲ್ಪಟ್ಟಿದೆ.

ಸಾ ದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮವಿಶಾರದೈಃ ।
ವೇಧಾರೂಪಾ ಕ್ರಿಯಾರೂಪಾ ಮಂತ್ರರೂಪಾ ಚ ತಾಪಸ (ಸಿ. ಶಿ. ೬.೧೨)

ಹೇ ಅಗಸ್ತ್ಯಮಹರ್ಷಿಯೆ, ಶಿವಾಗಮಗಳನ್ನು ಬಲ್ಲಂತಹ ಜ್ಞಾನಿಗಳು ಆ ದೀಕ್ಷೆಯನ್ನು, ವೇಧಾ, ಕ್ರಿಯಾ ಮತ್ತು ಮಂತ್ರ ದೀಕ್ಷೆ ಎಂಬುದಾಗಿ ಮೂರು ಪ್ರಕಾರವಾಗಿ ಪ್ರತಿಪಾದಿಸಿದ್ದಾರೆ.

ಗುರೋರಾಲೋಕಮಾತ್ರೇಣ ಹಸ್ತಮಸ್ತಕಯೋಗತಃ
ಯಃ ಶಿವತ್ವಸಮಾವೇಶೋ ವೇಧಾದೀಕ್ಷೇತಿ ಸಾ ಮತಾ ।
ಮಂತ್ರ ದೀಕ್ಷೇತಿ ಸಾ ಪ್ರೋಕ್ತಾ ಮಂತ್ರಮಾತ್ರೋಪದೇಶಿನೀ
(ಸಿ. ಶಿ. ೬.೧೩-೧೪)

ಶ್ರೀಗುರುವು ತನ್ನ ಕೃಪಾದೃಷ್ಟಿಯಿಂದ ಶಿಷ್ಯನನ್ನು ನೋಡಿ, ತನ್ನ ಶಿವಹಸ್ತವನ್ನು ಶಿಷ್ಯನ ಮಸ್ತಕದಲ್ಲಿ ಸಂಯೋಜಿಸಿದ ಮಾತ್ರದಿಂದಲೇ, ಶಿಷ್ಯನಿಗೆ ಚಿನ್ಮಯಜ್ಞಾನವಾಗುವದೋ, ಅಂಥ ದೀಕ್ಷೆಯೇ ವೇಧಾದೀಕ್ಷೆಯು, ಇನ್ನು ಸೋಽಹಂ ಎಂಬ ಪ್ರಣವಮಂತ್ರ ಸ್ವರೂಪನಾದ ಆತ್ಮನಿಗೆ ಪಂಚಾಕ್ಷರಿ ಮಂತ್ರವನ್ನುಪದೇಶಿಸುವುದೇ ಮಂತ್ರದೀಕ್ಷೆಯು.

ಆಪ್ತ, ಅಂಗ, ಸ್ಥಾನ ಮತ್ತು ಸದ್ಭಾವಗಳಿಂದ ಚತುರ್ವಿಧ ಸೇವೆಯನ್ನು ಮಾಡಿದ ಶಿಷ್ಯನು, ಗುರುವಿನ ಅನುಗ್ರಹಕ್ಕಾಗಿ, ಗುರುಸಮ್ಮುಖದಲ್ಲಿ ನಿಂತು ಪ್ರಾರ್ಥಿಸಿಕೊಂಡಾಗ, ಅವನಿಗೆ ದೀಕ್ಷಾರೂಪವಾದ ಅನುಗ್ರಹವನ್ನು ಮಾಡುವ ಪೂರ್ವದಲ್ಲಿ, ದೀಕ್ಷಾಗ್ರಹಣ ಯೋಗ್ಯತೆಯ ರೂಪವಾದ ಶಕ್ತಿಪಾತವು, ಅವನಿಗೆ ಆಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಬೇಕು.

''ಮೋಕ್ಷದ ಲವಲವಿಕೆ, ಸಂಸಾರದಲ್ಲಿ ಜಿಗುಪ್ಸೆ, ಶಿವಭಕ್ತರುಗಳಲ್ಲಿ ಭಕ್ತಿ, ಶ್ರೀಗುರೂಪಾಸ್ತಿ ಶಿವಾಗಮಂಗಳಲ್ಲಿ ವಿಶ್ವಾಸ ಮೊದಲಾದ ಚಿಹ್ನಗಳುಳ್ಳುದೇ ಶಕ್ತಿಪಾತವು'' (ವಿವೇಕಚಿಂತಾಮಣಿ) ಎಂಬ ಶ್ರೀ ನಿಜಗುಣ ಶಿವಯೋಗಿಗಳ ವಚನ ದಂತೆ, ಶಿಷ್ಯನಲ್ಲಿ ಈ ಎಲ್ಲ ಲಕ್ಷಣಗಳೂ ಕಂಡುಬಂದರೆ, ಅವನಿಗೆ ಶಕ್ತಿಪಾತವಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕು. ಇದಕ್ಕೇನೆ ಶಿವಾನುಗ್ರಹವೆನ್ನುವರು. ಈ ಶಿವಾನು ಗ್ರಹ ರೂಪವಾದ ಶಕ್ತಿಪಾತವು, ಜನ್ಮ-ಜನ್ಮಾಂತರಗಳಲ್ಲಿ ಆಚರಿಸಿದ ನಿತ್ಯ, ನೈಮಿತ್ತಿಕ ಮತ್ತು ಪ್ರಾಯಶ್ಚಿತ್ತಗಳೆಂಬ ಕರ್ಮಾನುಷ್ಠಾನದಿಂದ ಪರಿಪಕ್ವವಾದ ಮಲತ್ರಯ ಉಳ್ಳವರಿಗೆ ಮಾತ್ರ ಸಾಧ್ಯವು. ''ಮಲೋಪ್ಯಾಮಶ್ಚ ಪಕ್ವಶ್ಚ ಭವೇತ್ ಸಂಸಾರ ಕಾರಣಮ್''(ಶಿವ. ೭/೧/೩೧/೭೨) ಎನ್ನುವ ಶಿವಪುರಾಣದ ವ್ಯಾಸ ವಚನದಂತೆ, ಜೀವಾತ್ಮರಲ್ಲಿರುವ ಆಣವ, ಮಾಯಿಕ ಮತ್ತು ಕಾರ್ಮಿಕಗಳೆಂಬ ಮಲತ್ರಯಗಳು, ಆಮ ಮತ್ತು ಪಕ್ವಭೇದದಿಂದ ಎರಡು ವಿಧವಾಗಿರುತ್ತವೆ. ತಪಸ್ಸಿನಿಂದ ಪ್ರಕ್ಷೀಣವಾದ ಮಲ ವನ್ನು ಪಕ್ವಮಲವೆಂತಲೂ ಮತ್ತು ಅದಕ್ಕೆ ವಿಪರೀತವಾದುದನ್ನು ಅಪಕ್ವ ಇಲ್ಲವೇ ಆಮಮಲವೆಂತಲೂ ಕರೆಯುವರು. ಅನೇಕ ಜನ್ಮಗಳ ತಪಸ್ಸಿನಿಂದ ಪರಿಪಕ್ವವಾದ ಮಲ ವುಳ್ಳ ಸಾಧಕನೇ ಶಿವಾನುಗ್ರಹವನ್ನು ಪಡೆಯುವನೆಂಬ ವಿಷಯವನ್ನು ಶ್ರೀ ಜ. ರೇಣುಕ ಭಗವತ್ಪಾದರು–

ಸ್ವಕರ್ಮಪರಿಪಾಕೇನ ಪ್ರಕ್ಷೀಣಮಲವಾಸನಃ ।
ಶಿವಪ್ರಸಾದಾಜ್ಜೀವೋಽಯಂ ಜಾಯತೇ ಶುದ್ಧಮಾನಸಃ ॥
ಶುದ್ಧಾಂತಃಕರಣೇ ಜೀವೇ ಶುದ್ಧಕರ್ಮವಿಪಾಕತಃ ।
ಜಾಯತೇ ಶಿವಕಾರುಣ್ಯಾತ್ ಪ್ರಸ್ಫುಟಾ ಭಕ್ತಿರೈಶ್ವರೀ (ಸಿ. ಶಿ. ೫.೪೯, ೫೦)

ಈ ರೀತಿ ಉಪದೇಶಿಸಿದ್ದಾರೆ. ಶ್ರೀ ಮರಿತೋಂಟದಾರ್ಯರು–

ತಪಸ್ತಪ್ತಾತನುರ್ಯಸ್ಯ ಸ ತಪ್ತತನುರುಚ್ಯತೇ ।
ಪರಿಪಕ್ವೋ ವಿಮೋಕ್ಷಾಯ ಸೋಽಶ್ನುತೇ ಲಿಂಗಧಾರಣಮ್ ॥
ನ ಕರೋತಿ ತಪಃ ಪೂರ್ವಂ ಸೋಽತಪ್ತತನುರುಚ್ಯತೇ ।
ಅಪಕ್ವೋಽಯಂ ವಿಮೋಕ್ಷಾಯ ನಾಶ್ನುತೇ ಲಿಂಗಧಾರಣಮ್ ॥

(ವೀರಶೈವಾನಂದಚಂದ್ರಿಕಾ–ಪುಟ ೭೮)

ಎನ್ನುವ ಪ್ರಮಾಣವಚನದಲ್ಲಿ, ತಪಸ್ಸಿನಿಂದ ಪಕ್ವವಾದ ಮಲವುಳ್ಳವನಿಗೆ ತಪ್ತತನು ವೆಂದೂ, ಅದಿಲ್ಲದವನಿಗೆ ಅತಪ್ತ ತನುವೆಂಬುದಾಗಿಯೂ ಹೇಳಿ, ಇವರೀರ್ವರಲ್ಲಿ ತಪ್ತ ತನುವುಳ್ಳವನೇ ದೀಕ್ಷೆಗೆ ಅಧಿಕಾರಿ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಸಮೇ ಕರ್ಮಣಿ ಸಂಜಾತೇ ತತ್ಕಾಲಂ ಯೋಗ್ಯತಾವಶಾತ್ ।
ತೀವ್ರಶಕ್ತಿನಿಪಾತೇನ ಗುರುಣಾ ದೀಕ್ಷಿತೋ ಯದಾ ॥
ಸರ್ವಜ್ಞಃ ಸ ಶಿವೋ ಯದ್ವತ್ ಕಿಂಚಿಜ್ಜತ್ವವಿವರ್ಜಿತಃ ।

(ಕಿರಣಾಗಮ)

ಕಿರಣಾಗಮದ ಈ ವಚನದಲ್ಲಿ ಶಕ್ತಿಪಾತಕ್ಕೆ ಕರ್ಮಸಾಮ್ಯವೂ ಕಾರಣವೆಂಬುದು ತಿಳಿದುಬರುತ್ತದೆ. ಕರ್ಮಸಾಮ್ಯವೆಂದರೆ ''ವಿರುದ್ಧಯೋಃ ಕರ್ಮಣೋಃ ಸಮಬಲಯೋರನ್ಯೋನ್ಯಪ್ರತಿಬಂಧೇ ಕರ್ಮಸಾಮ್ಯಮ್'' ಎಂಬ ಶೈವಪರಿಭಾಷೆಯ ಟಿಪ್ಪಣಿಕಾರನಾದ ಶ್ರೀ ಶಿವದೃಷ್ಟಿಯ ವಚನದಂತೆ, ಪರಸ್ಪರ ವಿರುದ್ಧಗಳಾದ ಪುಣ್ಯ–ಪಾಪಗಳು ಸಮಬಲಗಳಾಗಿ ಪರಸ್ಪರ ಪ್ರತಿಬಂಧಕಗಳಾದಾಗ ಕರ್ಮಸಾಮ್ಯವಾಗುತ್ತದೆ. ಸಾಮಾನ್ಯವಾಗಿ ಸಕಲ ಜೀವಿಗಳ ಕಾರ್ಯಗಳು ವಿಷಮವಾಗಿಯೇ ಇರುತ್ತವೆ. ಹೀಗಾಗಿ ಈ ಸ್ಥಿತಿಯು ಸಹಜವಾಗಿ ಸರ್ವರಿಗೂ ಬರಲಾರದು.

ಶರೀರದಲ್ಲಿಯ ವಾತ, ಪಿತ್ತ ಮತ್ತು ಕಫಗಳೆಂಬ ಧಾತುಗಳು ವಿಷಮವಾಗಿದ್ದಾಗ, ಪ್ರಾಣಿಗಳು, ಒಂದಿಲ್ಲೊಂದು ತರಹದ ರೋಗದಿಂದ ಪೀಡಿತರಾಗಿರುತ್ತಾರೆ. ಆದರೆ ಅದೇ ಧಾತುಗಳು, ಸಮತೆಯನ್ನು ಹೊಂದಿರುವಾಗ, ಶರೀರವು ಹೇಗೆ ಸ್ವಸ್ಥವಾಗಿರುತ್ತದೆಯೋ, ಅದರಂತೆ, ಮನುಷ್ಯನ ಪುಣ್ಯ–ಪಾಪಗಳು, ವಿಷಮಾವಸ್ಥೆಯಲ್ಲಿದ್ದಾಗ, ಅವನ ಅಂತಃಕರಣವು, ಯಾವುದೊಂದು ಉಪದ್ರವದಿಂದ ಕೂಡಿದುದಾಗಿ ಶಾಂತಿಯನ್ನು ಹೊಂದಲಾರದು. ಅವೇ ಪುಣ್ಯ–ಪಾಪಗಳೇ, ಸಮತೆಯನ್ನು ಹೊಂದಿದಾಗ, ಜೀವಿಯ ಅಂತಃಕರಣವು, ನಿರುಪದ್ರವದಿಂದ ಯುಕ್ತವಾಗುತ್ತದೆ. ಇಂತಹ ನಿರುಪದ್ರವಯುಕ್ತವಾದ ಅಂತಃಕರಣವೇ ಶಿವಾನುಗ್ರಹರೂಪವಾದ ಶಕ್ತಿಪಾತವನ್ನು ಪಡೆಯಲು ಸಮರ್ಥವಾಗುತ್ತದೆಂಬುದೇ ಕಿರಣಾಗಮದ ತಾತ್ಪರ್ಯವು.

ರೋಗಪೀಡಿತನಾಗಿ ಅಶಕ್ತನಾದ ಮನುಷ್ಯನು, ಔಷಧಿಯ ಸಾಮರ್ಥ್ಯದಿಂದ ಬಲಶಾಲಿಯಾಗುವಂತೆ, ಅವನ ಈ ಅನುಗ್ರಹರೂಪವಾದ ಶಕ್ತಿಪಾತದಿಂದ, ಜೀವಿಗಳಿಗೆ ದೃಕ್–ಕ್ರಿಯಾತ್ಮಕವಾದ ಐಶ್ವರ್ಯವು ದೊರೆತು, ಮೋಕ್ಷ ಹೊಂದುವ ಅಧಿಕಾರವು ಪ್ರಾಪ್ತವಾಗುತ್ತದೆ. ಅದಿಲ್ಲದಿದ್ದಾಗ ಕೇವಲ ಕರ್ಮಾನುಸಾರವಾಗಿ ಭೋಗಗಳನ್ನು ಉಪಭೋಗಿಸಿ ಸಂಸಾರಿ ಎಂದೆನಿಸಿಕೊಳ್ಳುತ್ತಾರೆ. ಆದ್ದರಿಂದ ಗುರುಗಳಾದವರು, ಶಿಷ್ಯನಿಗೆ ಶಿವದೀಕ್ಷೆಯನ್ನು ಕೊಡುವ ಪೂರ್ವದಲ್ಲಿ,

ವೈರಾಗ್ಯಂ ಜಾಯತೇ ಕ್ಷಿಪ್ರಂ ಸಂಸಾರಾತ್ ದುಃಖಸಾಗರಾತ್ ।
ದಿದೃಕ್ಷಾ ಜಾಯತೇ ಶಂಭೋಃ ಪಾದಪಂಕಜಯೋರಪಿ ॥
ಕದಾ ದ್ರಕ್ಷ್ಯಾಮಿ ದೇವೇಶಂ ಮೋಕ್ಷೇಽಹಂ ಬಂಧತಃ ಕದಾ ।
ಕೋ ವಾ ದರ್ಶಯಿತಾ ಶಂಭೋರಿತಿ ಸಂಜಾಯತೇ ಮತಿಃ ॥
ಏವಂ ಸಂಸಾರತೋ ಭೀತಮನುಗೃಹ್ಣಾತಿ ಚೇಶ್ವರಃ ।

(ಪೌಷ್ಕರಾಗಮ)

ಈ ಪೌಷ್ಕರಾಗಮದ ವಚನದಂತೆ, ಸಂಸಾರದಲ್ಲಿಯ ತೀವ್ರ ವೈರಾಗ್ಯ, ಪರಮಾತ್ಮನನ್ನು ಕಾಣುವ ಉತ್ಕಟವಾದ ಬಯಕೆ ಮತ್ತು ಈ ಮಾರ್ಗವನ್ನು ನನಗೆ ಯಾರು ತೋರಿಸಿಯಾರು ? ಎನ್ನುವ ತೀವ್ರ ಜಿಜ್ಞಾಸಾ ರೂಪಗಳಾದ ಶಿವಾನುಗ್ರಹದ ಶಕ್ತಿಪಾತದ ಲಕ್ಷಣಗಳನ್ನು, ಶಿಷ್ಯನಲ್ಲಿ ಪರೀಕ್ಷಿಸಿ, ಅನಂತರ ದೀಕ್ಷೆಯನ್ನು ಮಾಡಬೇಕು. ಒಂದು ವೇಳೆ ಶಿಷ್ಯನನ್ನು ಪರೀಕ್ಷಿಸದೇ ದೀಕ್ಷೆಯನ್ನು ಕೊಟ್ಟರೆ, ಅವನ ಗುಣ–ಶೀಲ–ಸ್ವಭಾವಗಳಲ್ಲಿ

ಅದಾವ ಬದಲಾವಣೆಯೂ ತೋರದೆ, ಮೊದಲಿನಂತೆಯೇ ಇರುವುದನ್ನು ಕಾಣಬಹುದು. ಅಂತೆಯೇ ಶ್ರೀ ಚೆನ್ನಬಸವಣ್ಣನವರು–

ಕಬ್ಬುನದ ಶುನಕನ ತಂದು ಪರುಷವ ಮುಟ್ಟಿಸಲೊಡನೆ
ಹೊನ್ನ ಶುನಕನಪ್ಪುದಲ್ಲದೆ ಪರುಷವಾಗಲರಿಯದು ನೋಡಾ !
ಲೋಕದ ಮಾನವನ ತಂದು ಭಕ್ತನ ಮಾಡಿದೊಡೆ
ವೇಷಲಾಂಛನಿಯಹನಲ್ಲದೆ ಭಕ್ತನಾಗಲರಿಯ ನೋಡಾ !
ಇದು ಕಾರಣ, ಕೂಡಲ ಚೆನ್ನ ಸಂಗಮದೇವಯ್ಯ !
ಮಜ್ಜನಕ್ಕೆರೆವ ಭವಿಗಳನೆಂತು ಭಕ್ತರೆಂಬೆನಯ್ಯಾ ?

ಈ ತೆರನಾಗಿ, ಅಯೋಗ್ಯ ಶಿಷ್ಯನಿಗೆ ಮಾಡಿದ ದೀಕ್ಷೆಯು ನಿಷ್ಫಲವೆಂಬುದಾಗಿ ತಿಳಿಯಪಡಿಸಿದ್ದಾರೆ. ಶ್ರೀ ದೇವರದಾಸಿಮಾರ್ಯರೂ ಸಹ–

''ಹೊಲಬನರಿಯದ ಗುರುವು ಸುಲಭನಲ್ಲದ ಶಿಷ್ಯನ
ಕೆಲಬಲನ ನೋಡಿ ವಿಚಾರಿಸಿ ಮಾಡಿದುಪದೇಶ,
ಅಂಧಕನ ಕಯ್ಯ ಅಂಧಕ ಹಿಡಿದಂತೆ ಕಾಣಾ ರಾಮನಾಥಾ !''

ಎಂಬ ತಮ್ಮೀ ವಚನದಲ್ಲಿ, ಅಯೋಗ್ಯರಾದ ಗುರು–ಶಿಷ್ಯರಿಬ್ಬರನ್ನೂ ತೆಗಳಿ, ಕುರುಡನ ಕೈಯನ್ನು ಕುರುಡನು ಹಿಡಿದಂತೆ–ಎಂಬುದಾಗಿ ವಿಡಂಬಿಸಿದ್ದಾರೆ. ಆದಕಾರಣ, ಶಿಷ್ಯನ ಯೋಗ್ಯತೆಯನ್ನರಿಯದೇ, ಅದೆಂದಿಗೂ ದೀಕ್ಷೆಯನ್ನೀಯಬಾರದು.

**ದೀಕ್ಷಾವಿಚಾರ :**

ಇನ್ನು ದೀಕ್ಷೆಯೆಂದರೆ ಏನು? ಎಂಬ ಜಿಜ್ಞಾಸೆಯುಂಟಾದಾಗ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಮ್ ।
ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥ (ಸಿ. ಶಿ. ೬.೧೧)

ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಮಲತ್ರಯಗಳನ್ನು ನಾಶಗೊಳಿಸುವಂಥ ಹಾಗೂ ಶಿವಜ್ಞಾನವನ್ನು ಉಂಟುಮಾಡುವ ದಿವ್ಯವಾದ ಸಂಸ್ಕಾರವೇ ದೀಕ್ಷೆಯು. ಜಗತ್ತಿನ ಜೀವಿಗಳೆಲ್ಲ ಮೂರು ಮಲಗಳೆಂಬ ಪಾಶದಿಂದ ಕಟ್ಟಲ್ಪಟ್ಟವರಾಗಿ ಪಶುಗಳೆನಿಸಿಕೊಳ್ಳುತ್ತಿದ್ದಾರೆ. ಪರಶಿವನ ನೈಸರ್ಗಿಕಗಳಾದ ಇಚ್ಛಾ, ಜ್ಞಾನ ಮತ್ತು ಕ್ರಿಯಾಶಕ್ತಿಗಳ ಸಂಕೋಚವನ್ನು ವೀರಶೈವ ಸಿದ್ಧಾಂತದಲ್ಲಿ ''ಮಲ''ವೆಂದು ಕರೆದಿದ್ದಾರೆ. ಆ ಮಲವು ಆಣವಮಲ, ಮಾಯೀಯಮಲ ಮತ್ತು ಕಾರ್ಮಿಕಮಲವೆಂದು ಮೂರು ವಿಧವಾಗಿದೆ. ಇವುಗಳಲ್ಲಿ ಪರಶಿವನ ಇಚ್ಛಾಶಕ್ತಿಯ ಸಂಕೋಚವೇ ಆಣವ ಮಲವು. ಈ ಆಣವಮಲದ ಆವರಣದಿಂದ ಜೀವಾತ್ಮನು ತನ್ನ ವಿಭೂ ರೂಪವನ್ನು ಮರೆತು, ತಾನು ಅಪೂರ್ಣನೆಂಬ ಭಾವನೆಯುಳ್ಳವನಾಗುತ್ತಾನೆ. ಅಂತೆಯೇ, ಕ್ಷೇಮರಾಜಾ ಚಾರ್ಯನು, ''ಅಪೂರ್ಣಂ ಮನ್ಯತಾರೂಪಮಾಣವಂ ಮಲಮ್'' ಎಂಬುದಾಗಿ ಆಣವ ಮಲದ ಲಕ್ಷಣವನ್ನು ನಿರೂಪಿಸಿದ್ದಾನೆ.

ಇನ್ನು, ಪರಶಿವನಲ್ಲಿಯ ಜ್ಞಾನಶಕ್ತಿಯು ಸಂಕೋಚಗೊಂಡಾಗ ''ಮಾಯೀಯ ಮಲ''ವೆನಿಸಿಕೊಳ್ಳುವದು. ಈ ಸಂಕುಚಿತ ಜ್ಞಾನರೂಪವಾದ ಮಾಯಾಮಲದಿಂದ ಆವೃತನಾದ ಜೀವಾತ್ಮನು, ತನ್ನನ್ನು ಪರಶಿವನಿಂದ ಭಿನ್ನನನ್ನಾಗಿ ತಿಳಿಯುವನಲ್ಲದೇ, ದೇಹಾದಿಯೇ ತಾನೆಂತಲೂ; ಸತೀ, ಪುತ್ರ, ಗೃಹಾದಿಗಳೆಲ್ಲ ತನ್ನದೆಂತಲೂ ಭಾವನೆಯನ್ನು ಹೊಂದಿ, ಭೇದ ಬುದ್ಧಿಯಿಂದ ವ್ಯವಹರಿಸುತ್ತಾನೆ. ಅಂತೆಯೇ ''ಭಿನ್ನವೇದ್ಯ ಪ್ರಥಾರೂಪಂ ಮಾಯೀಯಂ ಮಲಮ್'' ಎಂದು ಶ್ರೀ ಕ್ಷೇಮರಾಜನು ಇದರ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ. ಇದರಂತೆ, ಪರಶಿವನ ಕ್ರಿಯಾಶಕ್ತಿಯ ಸಂಕೋಚವೇ ಕಾರ್ಮಿಕ ಮಲವು. ಇದು ಶುಭಾಶುಭ ವಾಸನಾರೂಪವಾದದ್ದು. ಈ ವಾಸನಾಬಲದಿಂದಲೇ, ಜೀವಾತ್ಮನು, ಶುಭಾಶುಭ ಕರ್ಮಗಳನ್ನು ಮಾಡುವವನಾಗಿ, ಆ ಕರ್ಮಫಲಗಳಾದ ಸುಖ–ದುಃಖಗಳನ್ನು ದೇವ–ತಿರ್ಯಕ್–ಮನುಷ್ಯಾದಿ ಯೋನಿಗಳಲ್ಲಿ ಅನುಭವಿಸುತ್ತ ಸಂಸಾರಚಕ್ರದಲ್ಲಿ ತಿರುಗುತ್ತಿರುತ್ತಾನೆ. ಆದ್ದರಿಂದ, ''ಶುಭಾಶುಭಾನುಷ್ಠಾನಮಯಂ ಕಾರ್ಮಮಲಮ್'' ಎಂಬುದಾಗಿ ಕಾರ್ಮಿಕಮಲದ ಲಕ್ಷಣವನ್ನು ಈ ಕ್ಷೇಮರಾಜನು ಹೇಳಿದ್ದಾನೆ. ಹೀಗೆ, ಆಣವಮಲವು ಜೀವನಲ್ಲಿ ಅಣುಭಾವನೆಯನ್ನೂ, ಮಾಯೀಯಮಲವು ಭೇದಜ್ಞಾನವನ್ನೂ ಹಾಗೂ ದೇಹಾದಿಗಳಲ್ಲಿ ಅಹಂ ಮತ್ತು ಗೃಹಾದಿಗಳಲ್ಲಿ ಮಮತ್ವವನ್ನೂ ಉಂಟುಮಾಡಿದರೆ, ಕಾರ್ಮ ಮಲವು ಶುಭಾಶುಭಕರ್ಮಗಳಲ್ಲಿ ಪ್ರವೃತ್ತಿದ್ವಾರಾ ಜೀವಾತ್ಮನನ್ನು ಬಂಧಿತನನ್ನಾಗಿ ಮಾಡುತ್ತದೆ.

ಈ ಮೂರೂ ಮಲಗಳು ಅನಾದಿಗಳಾದ್ದರಿಂದ, ಜೀವಭಾವವಾದರೂ ಅನಾದಿಯಾಗಿದೆ. ಜೀವನ ಈ ಅನಾದಿಮಲಗಳನ್ನು ನಿವೃತ್ತಿ ಮಾಡಿ, ಶಿವಜ್ಞಾನವನ್ನು ಉಂಟುಮಾಡುವ ಸಂಸ್ಕಾರವೇ ದೀಕ್ಷೆಯು. ಸೂರ್ಯಕಿರಣದಲ್ಲಿ ದಾಹ ಶಕ್ತಿಯ ಜೊತೆಗೆ ಪ್ರಕಾಶಕಶಕ್ತಿಯೂ ಇರುವಂತೆ, ದೀಕ್ಷೆಯಲ್ಲಿ ಮಲನಾಶಕತ್ವವೂ, ಜ್ಞಾನಪ್ರಕಾಶಕತ್ವವೂ ಇರುತ್ತವೆ. ಶ್ರೀ ಸದ್ಗುರುವಿನಿಂದ ದೊರೆಯುವ ದೀಕ್ಷಾ ಸಂಸ್ಕಾರದಿಂದ ಪರಿಶುದ್ಧನಾದ ಜೀವಾತ್ಮನೇ ಪರಮಾತ್ಮನ ಪ್ರೇಮಕ್ಕೆ ಪಾತ್ರನಾಗುತ್ತಾನೆ. ಮನೆಯಲ್ಲಿ ಪರಿಶುದ್ಧವಾದ ವಸ್ತ್ರವನ್ನು ಧರಿಸಿದ ತಂದೆಯ ಹತ್ತಿರ ಧೂಲಿಧೂಸರಿತವಾದ ಬಟ್ಟೆಯುಳ್ಳ ಮಗುವು, ಅಪ್ಪಾ ! ಎಂದು ತಬ್ಬಿಕೊಳ್ಳಲು ಬಂದಾಗ, ತಂದೆಯು ಆ ಮಗುವನ್ನು ಅಪ್ಪಿ ಮುದ್ದಾಡದೇ ಬೆದರಿಸಿ ತಾಯಿಯ ಬಳಿಗೆ ಕಳಿಸಿಕೊಡುತ್ತಾನೆ. ಆಗ ತಾಯಿಯು ಅದೆಷ್ಟೇ ಹೊಲಸಾಗಿದ್ದರೂ, ಮಗುವನ್ನು ಎತ್ತಿಕೊಂಡು, ಅವನ ಮಲಿನ ಬಟ್ಟೆಗಳನ್ನೆಲ್ಲ ಕಳೆದು, ಸ್ನಾನಮಾಡಿಸಿ, ಹೊಸ ಬಟ್ಟೆಯನ್ನು ಉಡಿಸಿ, ತಂದೆಯ ಬಳಿಗೆ ಕಳಿಸಿದಾಗ, ತಂದೆಯು ಮಗನನ್ನು ಎತ್ತಿಕೊಂಡು ಪ್ರೀತಿಸುವಂತೆ, ಗುರುವಿನಿಂದ ದೀಕ್ಷೆಯನ್ನು ಹೊಂದಿ ಮಲತ್ರಯರಹಿತನಾದ ಜೀವಾತ್ಮನು ಪರಮಾತ್ಮನ ಪ್ರೇಮಕ್ಕೆ ಪಾತ್ರನಾಗುತ್ತಾನೆ. ಅಂತೆಯೇ ಶಿವಭಕ್ತರಿಗೆಲ್ಲ ಶಿವದೀಕ್ಷೆಯು ಅತ್ಯಾವಶ್ಯಕವಾದುದು.

**ವೇಧಾದೀಕ್ಷೆ :**

ದೀಕ್ಷೆಯು ವೇಧಾದೀಕ್ಷೆ, ಮಂತ್ರದೀಕ್ಷೆ ಮತ್ತು ಕ್ರಿಯಾದೀಕ್ಷೆ ಎಂದು ಮೂರು ವಿಧವಾಗಿದೆ. ಪ್ರತಿಯೊಬ್ಬ ಜೀವಾತ್ಮನಿಗೆ ಕಾರಣ, ಸೂಕ್ಷ್ಮ ಹಾಗೂ ಸ್ಥೂಲಗಳೆಂದು

ಮೂರು ಶರೀರಗಳಿರುತ್ತವೆ. ಈ ಮೂರು ಶರೀರಗಳಿಗೆ ವೀರಶೈವಸಿದ್ಧಾಂತದಲ್ಲಿ ಯೋಗಾಂಗ, ಭೋಗಾಂಗ ಮತ್ತುತ್ಯಾಗಾಂಗಗಳೆಂದು ಹೆಸರು. ಇವುಗಳಲ್ಲಿ ಕ್ರಮವಾಗಿ ಆಣವ, ಮಾಯೀಯ ಹಾಗೂ ಕಾರ್ಮಿಕಗಳೆಂಬ ಮಲತ್ರಯಗಳು ಇರುವುದರಿಂದ, ಅವುಗಳ ನಿವಾರಣೆಗಾಗಿ ಮೂರು ದೀಕ್ಷೆಗಳು ನಿರೂಪಿಸಲ್ಪಟ್ಟಿವೆ.

ಗುರೋರಾಲೋಕಮಾತ್ರೇಣ ಹಸ್ತಮಸ್ತಕಯೋಗತಃ ।
ಯಃ ಶಿವತ್ವಸಮಾವೇಶೋ ವೇಧಾದೀಕ್ಷೇತಿ ಸಾ ಮತಾ ॥

ಎನ್ನುವ ಶ್ರೀ ಜಗದ್ಗುರು ರೇಣುಕಾಚಾರ್ಯರ ಆದೇಶದಂತೆ, ಸದ್ಗುರುವು ತನ್ನ ಅಮೃತ ಹಸ್ತವನ್ನು ಶಿಷ್ಯನ ಮಸ್ತಕದ ಮೇಲೆ ಇರಿಸಿ, ಕೃಪಾಪೂರ್ಣವಾದ ದೃಷ್ಟಿಯಿಂದ ಅವಲೋಕಿಸುತ್ತಾನೆ. ಮೀನು ಇಲ್ಲವೇ ಸರ್ಪಗಳು ತಾವಿಟ್ಟ ತತ್ತಿಯನ್ನು ಪ್ರೇಮದೃಷ್ಟಿ ಯಿಂದ ಹೊರಳಿ ನೋಡಿದೊಡನೆ, ತಾವಿಟ್ಟ ತತ್ತಿಗಳೆಲ್ಲ ಒಡೆದು ಮರಿಗಳು ಹೊರ ಬೀಳುವಂತೆ, ಸದ್ಗುರುವಿನ ಆ ಅಮೃತಹಸ್ತ ಸ್ಪರ್ಶ ಹಾಗೂ ಕೃಪಾಪೂರ್ಣ ದೃಷ್ಟಿಯ ಅವಲೋಕನದಿಂದ, ಶಿಷ್ಯನಲ್ಲಿಯ ಅಪೂರ್ಣತ್ವಪ್ರಾಪಕವಾದ ಆಣವ ಮಲವು ನಿವೃತ್ತಿಯಾಗಿ, ''ಶಿವೋಽಹಂ'' ಎನ್ನುವ ಉತ್ಕೃಷ್ಟ ಭಾವನೆಯು ಉದಯವಾಗುತ್ತದೆ. ಈ ಭಾವನೆಯನ್ನು ''ಭಾವಲಿಂಗ'' ಎನ್ನುತ್ತಾರೆ. ತನ್ನ ಚಿತ್ಕಳೆಯ ರೂಪವಾದ ಈ ಭಾವಲಿಂಗದ ಅರಿವಾದಾಗ, ಶಿಷ್ಯನಲ್ಲಿ ಶಿವತ್ವ ಸಮಾವೇಶವಾಯಿತೆಂದು ತಿಳಿಯಬೇಕು. ಪರಶಿವನೊಡನೆ ಸಾಕ್ಷಾತ್ ಯೋಗ ಅಥವಾ ತಾದಾತ್ಮ್ಯ ಸಂಬಂಧವನ್ನು ಮಾಡಿಕೊಳ್ಳುವ ಯೋಗ್ಯತೆಯುಳ್ಳ ಅಂಗವನ್ನು ಯೋಗಾಂಗವೆನ್ನುವರು. ಮನುಷ್ಯನ ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳ ಸಂಸ್ಕಾರಕ್ಕಿಂತಲೂ, ಕಾರಣ ಶರೀರವೆನಿಸಿಕೊಂಡ ಯೋಗಾಂಗಸಂಸ್ಕಾರವು ಬಹು ಮಹತ್ವಪೂರ್ಣವಾದುದು .

ಈ ಸಂಸ್ಕಾರದಿಂದ ಜೀವನ ಸಂಕುಚಿತ ಭಾವನೆಗಳೆಲ್ಲ ನಿವೃತ್ತಗಳಾಗಿ, ನಿರಹಂಕಾರದ ಸ್ಥಿತಿಯೂ, ಸರ್ವತ್ರ ಸಮದೃಷ್ಟಿಯೂ ಅಳವಡಲು ಪ್ರಾರಂಭವಾ ಗುತ್ತದೆ. ಡಾ|| ಜ.ಚ.ನಿ. ಯವರು ಯೋಗಾಂಗ ಸಂಸ್ಕಾರರೂಪವಾದ ಈ ವೇಧಾದೀಕ್ಷೆ ಯಲ್ಲಿ–ಏಕಾಗ್ರಚಿತ್ತತೆ, ದೃಢವ್ರತತೆ, ಪಂಚೇಂದ್ರಿಯಾರ್ಪಿತತೆ, ಅಹಿಂಸಾ, ಲಿಂಗನಿಷ್ಠಾ ಮನೋಲಯ ಮತ್ತು ಸದ್ಯೋನ್ಮುಕ್ತಿಗಳೆಂಬ ಏಳು ಉಪಸಂಸ್ಕಾರಗಳನ್ನು ಪ್ರತಿಪಾದಿ ಸಿದ್ದಾರೆ. ಹಲವು ಬಗೆಯಲ್ಲಿ ಹರಿದು ಹೋಗುವ ಚಿತ್ತವನ್ನು, ಚಿನ್ಮಯ ಲಿಂಗವೊಂದ ರಲ್ಲಿಯೇ ಚೆನ್ನಾಗಿ ನೆಲೆನಿಲ್ಲುವಂತೆ ಉಪದೇಶಿಸುವುದೇ ಏಕಾಗ್ರಚಿತ್ತ ಸಂಸ್ಕಾರವು. ಹಿಡಿದ ನೇಮಾದಿಗಳನ್ನು ಎಂದೆಂದೂ ಬಿಡದಿರೆಂದು ಶ್ರೀಗುರು ಶಿಷ್ಯನಿಗೆ ಬೋಧಿಸು ವುದೇ ದೃಢವ್ರತ ಸಂಸ್ಕಾರವು. ಈ ದೃಢವ್ರತದ ಸ್ಥಿತಿಯನ್ನು ಶ್ರೀ ಬಸವಣ್ಣನವರು–

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ.
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ.
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ.
ಛಲಬೇಕು ಶರಣಂಗೆ ಲಿಂಗ ಜಂಗಮ ಒಂದೆ ಎಂಬ.

ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ.
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ.

ತಮ್ಮ ಈ ಅನುಭವದ ನುಡಿಯಲ್ಲಿ ಬಹು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ವ್ರತವನ್ನು ಪರಿಪಾಲಿಸುವ ಭಕ್ತನಿಗೆ ಹೆಜ್ಜೆಹೆಜ್ಜೆಗೆ ವಿಘ್ನಗಳು ಬಂದೊದಗುವವಲ್ಲದೆ, ದೇವರಾದರೂ ಪರೀಕ್ಷಿಸುವುದುಂಟು. ಅಂತೆಯೇ ಬಸವಣ್ಣನವರು–

ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದರೆ
ನುಗ್ಗು ಮಾಡುವ, ನುಸಿಯ ಮಾಡುವ,
ಮಸಿಯ ಮಾಡುವ, ಕೂಡಲಸಂಗಮದೇವರ
ನೆರೆನಂಬಿದನಾದರೆ ಕಡೆಗೆ ತನ್ನಂತೆ ಮಾಡುವ.

ಈ ವಚನದಲ್ಲಿ ಭಕ್ತಿಪಥದಲ್ಲಿ ನಡೆಯುವ ಭಕ್ತನನ್ನು ಪರಮಾತ್ಮನು ಪರೀಕ್ಷಿಸುವ ಪದ್ಧತಿಯನ್ನು ವಿವರಿಸಿ, ಅದರಲ್ಲಿ ಉತ್ತೀರ್ಣರಾದವರನ್ನು ತನ್ನಂತೆ ಮಾಡಿಕೊಳ್ಳುವ ಧೃಢವ್ರತದ ಫಲವನ್ನೂ ಪ್ರತಿಪಾದಿಸಿದ್ದಾರೆ. ಆದಕಾರಣ, ಸಾಧಕನು ಧೃತಿಗೆಡದೆ, ವ್ರತಗೆಡದೆ, ನಿಷ್ಠೆಯಿಂದ ಮುನ್ನಡಿ ಇಟ್ಟರೆ, ಮುಕ್ತಿಯು ಕರತಲಾಮಲಕವಾಗುತ್ತದೆ.

ಮೂರನೆ ಸಂಸ್ಕಾರವೇ ''ಪಂಚೇಂದ್ರಿಯಾರ್ಪಿತ'' ಸಂಸ್ಕಾರವು. ಐದು ಜ್ಞಾನೇಂದ್ರಿಯಗಳು ಹಾಗೂ ಐದು ಕರ್ಮೇಂದ್ರಿಯಗಳು ಸ್ವಾಭಾವಿಕವಾಗಿ ತಮ್ಮತಮ್ಮ ವಿಷಯಗಳತ್ತ ಹರಿಯುತ್ತವೆ. ವಿಷಯದತ್ತ ಹರಿಯುವ ಈ ಇಂದ್ರಿಯಗಳನ್ನು ಪರಮಾತ್ಮನಿಗೆ ಅರ್ಪಿಸಿ, ಅವುಗಳಲ್ಲಿ ಈಶಭಾವನೆಯನ್ನು ಬೆಳೆಸಿಕೊಳ್ಳುವುದೇ ಪಂಚೇಂದ್ರಿಯಾರ್ಪಿತ ಸಂಸ್ಕಾರವು. ಇಂದ್ರಿಯಗಳು ಪರಮಾತ್ಮನಿಗೆ ಅರ್ಪಿತ ಗಳಾಗಬೇಕಾದರೆ ತಮ್ಮ ತಮ್ಮ ವಿಷಯಗಳನ್ನು ತತ್ತದಧಿಷ್ಠಾತೃ ಲಿಂಗಗಳಿಗೆ ಅರ್ಪಿಸ ಬೇಕಾಗುವುದು. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಶ್ರೋತ್ರ–ವಾಕ್ ಇಂದ್ರಿಯ ಗಳಿಗೆ ಪ್ರಸಾದಲಿಂಗವನ್ನೂ, ತ್ವಕ್–ಪಾಣಿ ಇಂದ್ರಿಯಗಳಿಗೆ ಜಂಗಮಲಿಂಗವನ್ನೂ, ನೇತ್ರ–ಪಾದ–ಇಂದ್ರಿಯಗಳಿಗೆ ಶಿವಲಿಂಗವನ್ನೂ, ಜಿಹ್ವೆ–ಗುಹ್ಯಗಳಿಗೆ ಗುರುಲಿಂಗ ವನ್ನೂ ಮತ್ತು ಘ್ರಾಣ–ಗುದ ಇಂದ್ರಿಯಗಳಿಗೆ ಆಚಾರಲಿಂಗವನ್ನೂ, ಅಧಿಷ್ಠಾತೃ ವನ್ನಾಗಿ ಸ್ವೀಕರಿಸಿದ್ದಾರೆ. ಆದಕಾರಣ ಶಿಷ್ಯನು, ಸದ್ಗುರುಗಳ ಉಪದೇಶದಂತೆ ಕೇಳುವ–ನುಡಿವ ವ್ಯಾಪಾರವನ್ನು ಪ್ರಸಾದಲಿಂಗಕ್ಕೆ, ಮುಟ್ಟುವ–ಹಿಡಿವ ಪದಾರ್ಥವನ್ನು ಜಂಗಮಲಿಂಗಕ್ಕೆ, ನೋಡುವ–ನಡೆವ ವ್ಯವಹಾರಗಳನ್ನು ಶಿವಲಿಂಗಕ್ಕೆ, ಸವಿವ–ಸೊಗಸುವ ಧರ್ಮಗಳನ್ನು ಗುರುಲಿಂಗಕ್ಕೆ, ಆದರಂತೆ, ಮೂಸಿಸುವ–ತ್ಯಜಿಸುವ ಗುಣ ಗಳನ್ನು ಆಚಾರಲಿಂಗಕ್ಕೆ ಅರ್ಪಿಸುವುದೇ ಪಂಚೇಂದ್ರಿಯಾರ್ಪಿತ ಸಂಸ್ಕಾರವು.

ಪಂಚೇಂದ್ರಿಯಗಳ ವಿಷಯಗಳನ್ನು ಲಿಂಗಾರ್ಪಿತಮಾಡಿದಾಗ, ಆ ವಿಷಯಗಳು ಪ್ರಸಾದಗಳಾಗಿ ಪರಿಣಮಿಸುತ್ತವೆ. ಹಾಗೆ ಮಾಡದಿದ್ದಾಗ, ಆ ವಿಷಯಗಳೇ ವಿಷಯ ಗಳಾಗಿ, ನಾಯಿಯ ಕೈಯಲ್ಲಿ ಸಿಕ್ಕ ಮೊಲದಂತೆ, ಜೀವಾತ್ಮನ ಪ್ರಾಣವನ್ನೇ ಹೀರಿ, ಪುನಃ ಪುನಃ ಭವಚಕ್ರದಲ್ಲಿ ತಿರುಗುವಂತೆ ಮಾಡುತ್ತವೆ. ಆದಕಾರಣ, ಮೋಕ್ಷಾಪೇಕ್ಷೆಯುಳ್ಳ ಪ್ರತಿಯೊಬ್ಬ ಸಾಧಕನಿಗೆ, ಈ ಪಂಚೇಂದ್ರಿಯಾರ್ಪಿತ ಸಂಸ್ಕಾರವು ಪ್ರಮುಖವಾದುದು.

ಗುರುಗಳು ವೇಧಾದೀಕ್ಷೆಯನ್ನು ಮಾಡುವಾಗ, ವಿಷಯಗಳನ್ನು ಲಿಂಗಾರ್ಪಿತಗಳನ್ನಾಗಿ ಮಾಡಿ, ಲಿಂಗಭೋಗಿಯಾಗಿ ಜೀವಿಸುವ ವಿಧಾನವನ್ನು ತಿಳಿಸಿಕೊಡುತ್ತಾರೆ.

ನಾಲ್ಕನೆಯದು ಅಹಿಂಸಾ ಸಂಸ್ಕಾರವು. ಪಾತಂಜಲ ಯೋಗಸೂತ್ರ, ವ್ಯಾಸಭಾಷ್ಯದಲ್ಲಿ ''ತತ್ರಾऽಹಿಂಸಾ ಸರ್ವಥಾ ಸರ್ವದಾ ಸರ್ವಭೂತಾನಾಮನ ಭಿದ್ರೋಹಃ'' (೨/೩೦) ಅಂದರೆ, ಎಂದೂ, ಯಾವ ರೀತಿಯಾಗಿಯೂ, ಯಾವುದೇ ಪ್ರಾಣಿಗೆ ದ್ರೋಹವನ್ನು ಮಾಡದಿರುವುದೇ ಅಹಿಂಸೆ–ಎಂದು ಅಹಿಂಸೆಯ ಲಕ್ಷಣವನ್ನು ಹೇಳಿದ್ದಾರೆ. ಯೋಗಸೂತ್ರದ ವೃತ್ತಿಕಾರನಾದ ಭೋಜದೇವನು–''ತತ್ರ ಪ್ರಾಣ ವಿಯೋಗ ಪ್ರಯೋಜನಂ ವ್ಯಾಪಾರೋ ಹಿಂಸಾ, ಸಾ ಚ ಸರ್ವಾನರ್ಥಹೇತುಃ ತದಭಾವೋऽಹಿಂಸಾ'' (ಯೋ. ಸೂ. ವೃ. ೨/೩೦) ಅಂದರೆ, ಸರ್ವಾನರ್ಥಕ್ಕೆ ಕಾರಣೀಭೂತವಾದ ಪ್ರಾಣಿಯ ಪ್ರಾಣವನ್ನು ವಿಯೋಗ ಮಾಡುವ ಉದ್ಯೋಗವೇ ಹಿಂಸೆ; ಹಾಗೆ ಮಾಡದಿರುವುದೇ ಅಹಿಂಸೆ– ಎಂಬುದಾಗಿ ಹಿಂಸೆಯ ಸ್ಥೂಲ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ. ಆದ್ದರಿಂದ, ಯೋಗಶಾಸ್ತ್ರದ ಪ್ರಕಾರವಾಗಿ, ಯಜ್ಞ–ಯಾಗಾದಿಗಳಲ್ಲಿ ಮಾಡುವ ಪ್ರಾಣಿವಧೆಯಾದರೂ ಅಹಿಂಸೆಯಲ್ಲಿಯೇ ಗಣನೆಯಾಗುತ್ತದೆ. ಯಜ್ಞ ಮಾಡಿ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವ ವ್ಯಕ್ತಿಯಾದರೂ, ತಾನು ಮಾಡಿದ ಹಿಂಸೆಯ ಫಲವಾದ ದುಃಖವನ್ನು ಅವಶ್ಯವಾಗಿ ಅನುಭವಿಸಬೇಕಾಗುವದು. ಅಂತೆಯೇ ಭಗವಂತನು ಗೀತೆಯಲ್ಲಿ ''ಯಜ್ಞಾನಾಂ ಜಪಯಜ್ಞೋऽಸ್ಮಿ'' (ಗೀತಾ : ೧೦–೨೫) ಎಂಬುದಾಗಿ, ಸರ್ವವಿಧ ದೋಷ ರಹಿತವಾದ ಜಪಯಜ್ಞಕ್ಕೇನೇ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾನೆ.

ಯೋಗಸೂತ್ರದ ವ್ಯಾಸಭಾಷ್ಯದಲ್ಲಿ ೮೧ ಪ್ರಕಾರದ ಹಿಂಸೆಯನ್ನು ಹೇಳಿ, ಅವೆಲ್ಲವುಗಳ ರಾಹಿತ್ಯವೇ ನಿಜವಾದ ಅಹಿಂಸೆ–ಎಂದು ಹೇಳಿ, ಬಹುಸೂಕ್ಷ್ಮವಾಗಿ ಅಹಿಂಸಾತತ್ತ್ವದ ಮಹತ್ವವನ್ನು ತಿಳಿಯಪಡಿಸಿದ್ದಾರೆ. ಮೊದಲು ಹಿಂಸೆಯು ಕೃತ, ಕಾರಿತ ಮತ್ತು ಅನುಮೋದಿತವೆಂದು ಮೂರು ಪ್ರಕಾರವಾಗುತ್ತದೆ. ಅಂದರೆ– ತಾನೇ ಮಾಡಿದ್ದು, ತಾನು ಅನ್ಯರಿಂದ ಮಾಡಿಸಿದ್ದು ಮತ್ತು ಬೇರೆಯವರು ಮಾಡುತ್ತಿದ್ದರೆ ಅದಕ್ಕೆ ತಾನು ಅನುಮೋದಿಸುವುದು. ಇವು ಮೂರೂ ಸಹ ಪುನಃ ಮಾಂಸಾದಿಗಳ ಲೋಭದಿಂದ, ಅಪಕಾರದ ಸೇಡಿನ ಕ್ರೋಧದಿಂದ ಮತ್ತು ಯಜ್ಞದಲ್ಲಿ ಹಿಂಸಿಸಿದರೆ ಧರ್ಮವಾಗುವದೆಂಬ ಮೋಹದಿಂದ–ಹೀಗೆ ಒಂದೊಂದೂ ಮೂರು ಮೂರು ಪ್ರಕಾರವಾಗಿ ಒಟ್ಟು ೯ (ಒಂಭತ್ತು) ವಿಧವಾದ ಹಿಂಸೆಯಾಗುತ್ತವೆ. ಈ ಹಿಂಸೆಗೆ ಕಾರಣಗಳಾದ ಈ ಲೋಭ ಮತ್ತು ಮೋಹಗಳು, ಪುನಃ ಒಂದೊಂದು ಮೃದು, ಮಧ್ಯ ಮತ್ತು ಅಧಿಮಾತ್ರವೆಂಬ ಭೇದದಿಂದ ಮೂರು–ಮೂರು ಪ್ರಕಾರವಾಗಿ, (೨೭) (ಇಪ್ಪತ್ತೇಳು) ಪ್ರಕಾರವಾದ ಹಿಂಸೆಯಾಗುವುದು. ಮತ್ತೆ ಈ ಮೃದು, ಮಧ್ಯ ಹಾಗೂ ಅಧಿಮಾತ್ರಗಳು ಒಂದೊಂದೂ ಪುನಃ ಮೃದುಮೃದು, ಮಧ್ಯಮೃದು, ತೀವ್ರಮೃದುವೆಂದೂ, ಮೃದುಮಧ್ಯ, ಮಧ್ಯಮಧ್ಯ, ಮಧ್ಯತೀವ್ರವೆಂದೂ, ಅದರಂತೆ ಮೃದುತೀವ್ರ, ಮಧ್ಯತೀವ್ರ ಹಾಗೂ ಅಧಿಮಾತ್ರತೀವ್ರವೆಂದೂ–ಈ ಪ್ರಕಾರವಾಗಿ ಒಟ್ಟಾರೆ ಎಂಭತ್ತೊಂದು ಪ್ರಕಾರವಾದ ಹಿಂಸೆಯಾಗುತ್ತದೆ. ಇದು ಕೇವಲ ಶರೀರದಿಂದಾಗುವ ಹಿಂಸೆಯು.

ಇದರಂತೆ ವಾಣಿ ಹಾಗೂ ಮನಸ್ಸಿನಿಂದಲೂ ಹಿಂಸೆಗಳಾಗುತ್ತವೆ. ಇದೆಲ್ಲವನ್ನೂ ಲೆಕ್ಕ ಹಾಕಲು ಅಸಂಖ್ಯಾತಗಳಾಗುತ್ತವೆ. ಈ ಸರ್ವವಿಧಗಳಾದ ಹಿಂಸೆಗಳಿಂದ ರಹಿತ ವಾಗಿರುವುದೇ ನಿಜವಾದ ಅಹಿಂಸೆಯು.

ಶಾರೀರಿಕ ಹಾಗೂ ವಾಚಿಕ ಹಿಂಸೆಗಳಿಗೆ ಮಾನಸಿಕ ಹಿಂಸೆಯೇ ಕಾರಣ ವಾದ್ದರಿಂದ, ಸರ್ವವಿಧ ಅನರ್ಥಕ್ಕೆ ಬೀಜಭೂತವಾದ ಮನಸ್ಸಿನಲ್ಲಿ ಉಂಟಾಗುವ ಈ ಹಿಂಸಾಭಾವನೆಗಳನ್ನು ತಡೆದು ಜೀವಿಸುವಂತೆ, ಶ್ರೀಸದ್ಗುರುವು ಉಪದೇಶಿಸುತ್ತಾನೆ. ಸಕಲ ಜೀವಿಗಳಲ್ಲಿ ಶಿವನೇ ಇರುವುದರಿಂದ, ಯಾರನ್ನು ಯಾರು ಹಿಂಸಿಸಬಲ್ಲರು ? ಅಂತೆಯೇ ''ನಾನೊಂದು ಸುರಗಿಯನೇನೆಂದು ಹಿಡಿವೆನು ? ಏನ ಕಿತ್ತೇನನಿರಿವೆನು ? ಜಗವೆಲ್ಲ ನೀನಾಗಿದ್ದ ಕಾಣಾ ರಾಮನಾಥಾ'' ಎಂಬುದಾಗಿ, ಸರ್ವತ್ರ ಶಿವಭಾವನೆಯನ್ನು ಕಂಡ ಶ್ರೀ ದಾಸಿಮಾರ್ಯರು, ತಮ್ಮಲ್ಲಿ ಉದಯವಾದ ಅಹಿಂಸೆಯ ಸ್ವರೂಪವನ್ನು ತಿಳಿಯಪಡಿಸಿದ್ದಾರೆ. ಇಂತಹ ಉಪದೇಶದ ವಚನಗಳಿಂದ, ಶ್ರೀಗುರುವು, ಶಿಷ್ಯನಿಗೆ ಎಂದೂ, ಯಾವ ಕಾಲಕ್ಕೂ, ಯಾರ ಬಗ್ಗೆಯೂ, ತನ್ನಲ್ಲಿ ಹಿಂಸಾಮನೋಭಾವನೆಯ ಉದಯವಾಗದಿರಲೆಂದು ಉಪದೇಶಿಸುತ್ತಾನೆ. ಇದುವೇ ಅಹಿಂಸಾಸಂಸ್ಕಾರವು.

ವೇಧಾದೀಕ್ಷೆಯ ಐದನೇ ಅವಾಂತರಸಂಸ್ಕಾರವೇ ಲಿಂಗನಿಷ್ಠಾ ಸಂಸ್ಕಾರವು, ಭಕ್ತಿಯ ಅಚಲವಾದ ಭಾವನೆಗಳಿಗೆ ನಿಷ್ಠೆ ಎನ್ನುವರು. ತನ್ನ ಇಷ್ಟ, ಪ್ರಾಣ ಹಾಗೂ ಭಾವಲಿಂಗಗಳಲ್ಲಿ ಅಚಲಭಾವನೆಯು ಒಡಮೂಡುವಂತೆ ಉಪದೇಶಿಸುವುದೇ ಲಿಂಗನಿಷ್ಠಾಸಂಸ್ಕಾರವು. ಇದನ್ನೇ ಶ್ರೀಜಗದ್ಗುರು ರೇಣುಕ ಭಗವತ್ಪಾದರು–

ಅಪಗಚ್ಛತು ಸರ್ವಸ್ವಂ ಶಿರಚ್ಛೇದನಮಸ್ತು ವಾ ।
ಮಾಹೇಶ್ವರೋ ನ ಮುಂಚೇತ್ತು ಲಿಂಗಪೂಜಾಮಹಾವ್ರತಮ್ ॥

(ಸಿ. ಶಿ. ೧೦–೨೨)

ತನ್ನ ಸರ್ವಸ್ವವೇ ನಷ್ಟವಾಗಲೀ, ಶಿರಚ್ಛೇದನವೇ ಆಗಲಿ, ಲಿಂಗಪೂಜಾ ರೂಪವಾದ ಮಹಾವ್ರತವನ್ನು ಬಿಡಲಾರೆನೆಂಬ ಭಾವನೆಯೇ ಲಿಂಗನಿಷ್ಠೆ ಎಂಬುದಾಗಿ ಉಪದೇಶಿಸಿದ್ದಾರೆ. ಡಾ. ಜ. ಚ. ನಿ. ಯವರು ''ಲಿಂಗಭಕ್ತಿ ಲಿಂಗ ಸೇವೆ, ಲಿಂಗಪೂಜೆ, ಲಿಂಗಧ್ಯಾನಗಳು ಅದೆಷ್ಟೋ ಕಷ್ಟವೆನಿಸಿದರೂ ಕೈಬಿಡದಿರುವುದೇ ಲಿಂಗನಿಷ್ಠೆ. ಅನ್ಯರು ಲಿಂಗದಲ್ಲಿ ಅನಾದರ ಅಳವಡುವಂತೆ ಅನೇಕ ಮಾತುಗಳನ್ನು ಆಡಿದರೂ, ಅದನ್ನು ಕೇಳದಂತೆ ಕೈಗೊಂಡ ಲಿಂಗವ್ರತವನ್ನು ಕಡೆಗಣಿಸದಿರುವುದೇ ಲಿಂಗನಿಷ್ಠೆ. ಕಾಯಕ ದಿಂದಾಗಲಿ, ಕಾಯಿಲೆಯಿಂದಾಗಲಿ ಕಾಯ ಕಂದಿದ್ದರೂ, ಸಕಲ್ಪದಿಂದಾಗಲಿ, ವಿಕಲ್ಪ ದಿಂದಾಗಲಿ ಮನ ಕುಂದಿದ್ದರೂ, ಕಾಲ ಕಾಲಕ್ಕೆ ಮಾಡುವ ಲಿಂಗಪೂಜಾದಿಗಳಲ್ಲಿ ಬೇಸರಿಸದೆ, ಬಿಡದಂತೆ ಮಾಡುವುದೇ ಲಿಂಗನಿಷ್ಠೆ. ಬಡತನ ಬಂದೊದಗಿದರೂ, ಬಂಧುಗಳು ಬಿಟ್ಟುಹೋದರೂ, ಲಿಂಗವೇ ಪರಮ ಸಂಪತ್ತೆಂದೂ, ಲಿಂಗವೇ ಪರಮಾಪ್ತಬಂಧುವೆಂದೂ, ಭಾವಿಸುವುದೇ ಲಿಂಗನಿಷ್ಠೆ'' (ಸಂಸ್ಕಾರ ಪುಟ ೧೨೦)– ಮುಂತಾಗಿ ಲಿಂಗ ನಿಷ್ಠೆಯ ಅನೇಕ ಮುಖಗಳನ್ನು ತಿಳಿಯಪಡಿಸಿದ್ದಾರೆ. ಹೀಗೆ ಅನೇಕ ವಿಧವಾದ ಉಪದೇಶದ ಮೂಲಕ, ಇಷ್ಟದಲ್ಲಿ ನಿಷ್ಠೆ ಕರಿಗೊಳ್ಳುವಂತೆ ಶ್ರೀ ಸದ್ಗುರುವು ಉಪದೇಶಿಸುತ್ತಾನೆ. ಇದುವೇ ಲಿಂಗನಿಷ್ಠಾ ಸಂಸ್ಕಾರವು.

ವೇಧಾದೀಕ್ಷೆಯ ೬ ನೇ ಸಂಸ್ಕಾರವೇ ಮನೋಲಯದೀಕ್ಷೆಯು. ''ಸಂಕಲ್ಪವಿಕಲ್ಪಾತ್ಮಕಂ ಮನಃ'' ಎನ್ನುವ ವಚನದಂತೆ, ಸ್ವಭಾವತಃ ಸಂಕಲ್ಪ ವಿಕಲ್ಪದಿಂದ ಕೂಡಿ ಚಂಚಲಾತ್ಮಕವಾದುದೇ ಮನಸ್ಸು; ತನ್ನ ಸ್ವಭಾವವನ್ನು ಬಿಟ್ಟು, ಮಹಾಲಿಂಗದ ಧ್ಯಾನದಲ್ಲಿ ಲೀನವಾಗುವ ಉಪಾಯಗಳನ್ನು ತಿಳಿಸಿ, ಮನಸ್ಸಿಗೆ ಸಂಸ್ಕಾರ ಕೊಡುವುದೇ ಮನೋಲಯದೀಕ್ಷೆಯು.

''ಸಕಲೇಂದ್ರಿಯಂಗಳಲ್ಲಿ ವಿಕರಿಸುವ ಮನವ ಸೆಳೆದು
ನಿಂದಾತನೇ ಸುಖಿ. ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳು
ಮನಗೊಂಡು ಸುಳಿವಾತ ದುಃಖಿ. ಮನವು ಬಹಿರ್ಮುಖವಾಗಲು
ಮಾಯಾಪ್ರಪಂಚಿ ; ಮನವು ಅಂತರ್ಮುಖವಾಗಲು ಅವಿರಳಜ್ಞಾನಿ ;
ಮನವು ಮಹದಲ್ಲಿ ನಿಂದಿರಲಾತ ಮುಕ್ತ;
ಮನೋಲಯವಾದಡೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯನು''

ಎನ್ನುವ ಆದಯ್ಯನ ಈ ವಚನವು ಮನೋಲಯ ಸಂಸ್ಕಾರದ ಮಹತ್ವವನ್ನು ಎತ್ತಿ ತೋರುತ್ತದೆ.

ಮನವು ಅಂತರ್ಮುಖವಾದರೆ ಮಹದೇವನನ್ನು ಕಾಣಬಹುದು. ಅದು ಬಹಿರ್ಮುಖವಾದರೆ ಸಂಸಾರವು. ಆದ್ದರಿಂದ ಅನೇಕ ಋಷಿಮುನಿಗಳು ಈ ಮನಸ್ಸನ್ನು ಅಂತರ್ಮುಖ ಮಾಡುವದಕ್ಕಾಗಿಯೇ ತಮ್ಮ ಜೀವನವನ್ನೇ ಮುಡುಪಾಗಿರಿಸಿದ್ದಾರೆ. ಚಂಚಲವಾದ ಮನಸ್ಸಿನ ನಿಗ್ರಹಕ್ಕಾಗಿ ಶ್ರೀಕೃಷ್ಣನು ಗೀತೆಯಲ್ಲಿ–

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥

(ಗೀತಾ, ೬–೩೫)

ಎಂದು ಅಭ್ಯಾಸ ಹಾಗೂ ವೈರಾಗ್ಯಗಳೆಂಬ ಎರಡು ಅಮೋಘಗಳಾದ ಉಪಾಯಗಳನ್ನು ಪ್ರತಿಪಾದಿಸಿದ್ದಾನೆ. ''ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ'' ಎಂಬ ವಚನದಂತೆ, ನಮ್ಮ ಬಂಧನ ಹಾಗೂ ಮುಕ್ತಿಗಳಿಗೆ ಮನಸ್ಸೇ ಕಾರಣವಾದ್ದರಿಂದ, ಅದರ ನಿಗ್ರಹವು ಮನುಷ್ಯನಿಗೆ ಚಿರಸುಖದಾಯಿಯಾಗಿದೆ. ಪ್ರತಿದಿನವೂ ನಾವು ಗಾಢವಾದ ನಿದ್ರೆಯನ್ನು ಅನುಭವಿಸುತ್ತೇವೆ. ಈ ಗಾಢನಿದ್ರೆಯಲ್ಲಿ ಎಲ್ಲರೂ ಸುಖಿಗಳಾಗಿಯೇ ಇರುತ್ತಾರೆ. ಅಂತೆಯೇ ರಾಜ, ಬುದ್ಧಿವಂತ, ಮೂರ್ಖ ಈ ಯಾರೇ ಆದರೂ, ಸರ್ವವಿಧ ವ್ಯವಹಾರವನ್ನೂ ಮುಗಿಸಿದನಂತರ, ನಿದ್ರೆಗಾಗಿ ಹಾತೊರೆಯುತ್ತಾರೆ. ಇದರ ರಹಸ್ಯವೇನು ? ನಿಜವಾದ ಸುಖಶಾಂತಿಗಳು ಈ ಜಾಗ್ರತ್ ಪ್ರಪಂಚದಲ್ಲಿಯೇ ದೊರೆಯುತ್ತಿದ್ದಿದ್ದರೆ, ನಿದ್ರೆಮಾಡುವದೇಕೆ ? ಇದೆಲ್ಲವನ್ನೂ ಪರ್ಯಾಲೋಚಿಸಿದಾಗ, ಬಹಿರ್ಮುಖದಲ್ಲಿ, ಜಾಗ್ರತ್–ಸ್ವಪ್ನಗಳಲ್ಲಿ, ಸುಖ–ದುಃಖಗಳನ್ನು ಅನುಭವಿಸಿ ಬೇಸತ್ತು, ಆನಂದಾನುಭವಕ್ಕಾಗಿ ಮನಸ್ಸು ಅಪೇಕ್ಷಿಸಿದಾಗ, ಮನುಷ್ಯನು ಮಲಗುತ್ತಾನೆ. ಆ ಸುಷುಪ್ತಿಯ ಅವಸ್ಥೆಯಲ್ಲಿ, ಬಾಹ್ಯ ಪ್ರಪಂಚದ ಅದಾವ ಸಾಮಗ್ರಿಯೂ ಇಲ್ಲ; ಆದರೂ ನಮಗೆ ಆನಂದದ ಪ್ರಾಪ್ತಿಯಾಗುತ್ತದೆ. ಇದಕ್ಕೆ ಕಾರಣವೇನೆಂದರೆ ಮನಸ್ಸಿನ ವಿಲಯವೇ !

ಮನಸ್ಸಿನ ವಿಲಯವಾದಾಗಲೇ ಮಹಾನಂದದ ಪ್ರಾಪ್ತಿಯಾಗುವದೆಂಬುದನ್ನು ನಮಗೆ ತಿಳಿಸುವುದಕ್ಕಾಗಿಯೇ, ಪರಮಾತ್ಮನು, ಮನುಷ್ಯರಿಗೆ, ಈ ಸುಷುಪ್ತಿ ಅವಸ್ಥೆಯನ್ನು ದಯಪಾಲಿಸಿದ್ದಾನೆ. ಈ ಅವಸ್ಥೆಯು ಕರ್ಮಾಧೀನವಾದ್ದರಿಂದ, ನಮಗೆ ಬೇಕಾದಾಗ ಆನಂದವನ್ನು ಅನುಭವಿಸಲಾರೆವು. ಅಂತೆಯೇ, ಪ್ರಯತ್ನಪೂರ್ವಕವಾಗಿ ಮನೋಬಲ ವನ್ನೂ ಸಾಧಿಸಬೇಕು. ಇದುವೇ ಪುರುಷಾರ್ಥವು. ಶ್ರೀಗುರುವಿನ ಮಾರ್ಗೋಪದೇಶ ದಂತೆ, ಅಭ್ಯಾಸ ಹಾಗೂ ವೈರಾಗ್ಯಗಳ ಬಲದಿಂದ, ಮನಸ್ಸನ್ನು ಅಂತರ್ಮುಖ ವನ್ನಾಗಿರಿಸಿಕೊಳ್ಳುವುದೇ ಮನೋಲಯ ದೀಕ್ಷೆಯು.

ವೇಧಾದೀಕ್ಷೆಯ ಏಳನೇ ಹಾಗೂ ಕೊನೆಯ ಸಂಸ್ಕಾರವೇ ಸದ್ಯೋಮುಕ್ತಿ ಸಂಸ್ಕಾರವು. ಜೀವನ್ಮುಕ್ತಿಯ ಸ್ವರೂಪವನ್ನು ತಿಳಿಸಿ, ಶಿಷ್ಯನು ಆ ಸ್ಥಿತಿಯಲ್ಲಿ ಉಳಿಯುವಂತೆ ಉಪದೇಶಿಸುವುದೇ ಸದ್ಯೋನ್ಮುಕ್ತಿ ಸಂಸ್ಕಾರವು. ಜೀವನ್ಮುಕ್ತಿಯ ವಿಲಕ್ಷಣವಾದ ಈ ಆನಂದವನ್ನು ಅನುಭವಿಸುವುದೇ ಪರಮಪುರುಷಾರ್ಥವು. ಈ ಪುರುಷಾರ್ಥದ ಪ್ರಾಪ್ತಿಗೆ, ಈ ಪೂರ್ವದಲ್ಲಿ ಹೇಳಿದ, ಮನೋಲಯ ಸಂಸ್ಕಾರವೇ ಮೂಲವಾದುದು. ಮನೋಲಯವನ್ನು ಸಾಧಿಸಿದವನಿಗೆ, ಜೀವನ್ಮುಕ್ತಿಗಾಗಿ ಪರಿಶ್ರಮಿಸುವ ಆವಶ್ಯಕತೆ ಇಲ್ಲ, ಅದು ತಾನಾಗಿಯೇ ಸಿದ್ಧಿಸುತ್ತದೆ.

''ಪಶ್ಚಿಮಗಿರಿಯ ಚಿತ್‌ಸೂರ್ಯ ಉದಯವಾದುದ ಕಂಡೆ,
ಸುತ್ತಮುತ್ತಲಿನ ಕತ್ತಲೆಯೆಲ್ಲ ಅತ್ತಿತ್ತ ಹರಿದು
ಹೋದುದ ಕಂಡೆ, ಹತ್ತು ದಿಕ್ಕಿನ ತೊರೆ ಒಳಗೆಲ್ಲ
ಬೆಳಕಿನ ಮೊತ್ತವೇ ತುಂಬಿದುದ ಕಂಡೆ.
ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಿ,
ಅಚ್ಚ ಹೊಸ ಗಂಧವು ದೆಸೆದೆಸೆಗೆ ಎಸೆದುದ ಕಂಡೆ.
ಇಂತಿದರ ಕೌಶಲವ ಕಂಡು ಬೆರಗಾದೆನಯ್ಯಾ ಅಖಂಡೇಶ್ವರ !''.

ಎನ್ನುವ ಈ ವಚನದಲ್ಲಿ ಶ್ರೀ ಷಣ್ಮುಖಸ್ವಾಮಿಗಳು, ತಾವು ಅನುಭವಿಸಿದ ಸದ್ಯೋ ಮುಕ್ತಿಯ ಅನುಭವವನ್ನು ಬಹು ಸುಂದರವಾಗಿ ಚಿತ್ರಿಸಿದ್ದಾರೆ. ಈ ಅನುಭವವು ನಮಗೆ ಬಂದಾಗಲೇ ನಾವು ಜೀವನ್ಮುಕ್ತರು. ಇದಿಲ್ಲದೇ ಜೀವನದ ಸಾಫಲ್ಯವಿಲ್ಲ.

ಈ ರೀತಿಯಾದ ಈ ಏಳು ಸಂಸ್ಕಾರಗಳು ಜ್ಞಾನಪ್ರಧಾನಗಳಾದ್ದರಿಂದ, ವೇಧಾದೀಕ್ಷೆಯ ಅಂಗಗಳೆನಿಸಿಕೊಳ್ಳುತ್ತವೆ. ಈ ಎಲ್ಲ ಸಂಸ್ಕಾರಗಳೂ ಅಳವಟ್ಟಾಗ, ವೇಧಾದೀಕ್ಷೆಯು ಪೂರ್ಣವಾಗುತ್ತದೆ. ಶಿಷ್ಯನ ಆಣವಮಲವು ನಿವೃತ್ತಿಯಾಗಿ, ಆತನ ಸಂಕುಚಿತ ಭಾವನೆಗಳೆಲ್ಲ ತೊಲಗಿ–

ಶಿವಾತ್ಮಕಮಿದಂ ಸರ್ವಂ ಶಿವಾದನ್ಯನ್ನ ವಿದ್ಯತೇ ।
ಶಿವೋऽಹಮಿತಿ ಯಾ ಬುದ್ಧಿಸ್ತದೇವ ಜ್ಞಾನಮುತ್ತಮಮ್ ॥

(ಸಿ. ಶಿ. ೧೬–೩೧)

ಈ ಜಗವೆಲ್ಲ ಶಿವಸ್ವರೂಪವಾದುದು, ಶಿವನ ಹೊರತು ಅನ್ಯ ಪದಾರ್ಥಗಳೇ ಇಲ್ಲ ಮತ್ತು ನಾನಾದರೂ ಶಿವಸ್ವರೂಪನೇ ಆಗಿದ್ದೇನೆ–ಎನ್ನುವ ಉತ್ತಮವಾದ ಮನೋ

ಭಾವನೆಯುಳ್ಳವನಾಗುತ್ತಾನೆ. ಹೀಗೆ ಶಿಷ್ಯನ ಆಣವಮಲನಿವಾರಕವೂ, ಭಾವ ಲಿಂಗದ ಸ್ವರೂಪವನ್ನು ತಿಳಿಯಪಡಿಸುವದೂ ಆದ ಸಂಸ್ಕಾರವೇ ವೇಧಾದೀಕ್ಷೆಯು.

ಮಂತ್ರದೀಕ್ಷೆ :

''ಮಾಂತ್ರೀ ದೀಕ್ಷೇತಿ ಸಾ ಪ್ರೋಕ್ತಾ ಮಂತ್ರಮಾತ್ರೋಪದೇಶಿನೀ'' ಎನ್ನುವ ಶ್ರೀ ಜ. ರೇಣುಕ ಭಗವತ್ಪಾದರ ಆದೇಶದಂತೆ, ಮಂತ್ರೋಪದೇಶ ಪ್ರಧಾನವಾದ ದೀಕ್ಷೆಯೇ ಮಂತ್ರದೀಕ್ಷೆಯು. ಈ ಮಂತ್ರದೀಕ್ಷೆಯಾದರೂ, ಏಳು ಅವಾಂತರ ಸಂಸ್ಕಾರ ಗಳಿಂದೊಡಗೂಡಿದೆ. ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ವಿಚಾರಿಸೋಣ.

(೧) ಸಮಯ ಸಂಸ್ಕಾರ : ''ಸಮಯಾಃ ಶಪಥಾಚಾರಕಾಲಸಿದ್ಧಾಂತ ಸಂವಿದಃ'' ಎಂಬ ಅಮರಸಿಂಹನ ವಚನದಂತೆ, ಸಮಯ ಶಬ್ದಕ್ಕೆ , ಕಾಲ, ಶಪಥ, ಸಿದ್ಧಾಂತಗಳೆಂಬ ಅನೇಕ ಅರ್ಥಗಳುಂಟು. ಪ್ರಕೃತದಲ್ಲಿ, ಸಮಯ ಶಬ್ದಕ್ಕೆ ಕಾಲ ಮತ್ತು ಆಚಾರವೆಂಬ ಎರಡರ್ಥಗಳನ್ನು ಸ್ವೀಕರಿಸಲಾಗಿದೆ. ಮಂತ್ರದೀಕ್ಷೆಯನ್ನು ಮಾಡುವಾಗ, ದೀಕ್ಷೆ ಹೊಂದುವವನ ವಯಸ್ಸನ್ನು ಗಮನಿಸಬೇಕು. ೮ ವರ್ಷದ ಕೆಳಗಿನ ಚಿಕ್ಕಮಕ್ಕಳಿಗಾಗಲಿ, ೮೦ ವರ್ಷ ಮೇಲ್ಪಟ್ಟ ವಯಸ್ಸಿನ, ಕಿವಿಕೇಳದೇ, ಕಣ್ಣು ಕಾಣದೇ, ಮೂಲೆಗುಂಪಾದ ಮುದುಕರಿಗಾಗಲೀ, ಈ ದೀಕ್ಷೆಯು ಫಲಿಸಲಾರದು. ಮಂತ್ರಾರ್ಥವನ್ನು ಅರಿತು ಕೊಳ್ಳುವ ಬೌದ್ಧಿಕ ಸಾಮರ್ಥ್ಯದ ಜೊತೆಗೆ, ಈ ಬಗ್ಗೆ ಆಸಕ್ತಿಯನ್ನೂ ಉಳ್ಳ ಯೋಗ್ಯ ಸಮಯವನ್ನು ಪರೀಕ್ಷಿಸಿ, ಮಂತ್ರವನ್ನುಪದೇಶಿಸುವುದೇ ಸಮಯ ಸಂಸ್ಕಾರವು.

ಸಮಯದ ಇನ್ನೊಂದರ್ಥವು ಆಚಾರವು. ಅಂಗ ಸಂಬಂಧಿಗಳಾದ ತಂದೆ, ತಾಯಿ, ಬಂಧು ಮತ್ತು ಬಳಗ ಮುಂತಾದವರಲ್ಲಿ ವ್ಯಾಮೋಹವನ್ನು ಬಿಟ್ಟು, ಮಂತ್ರಸಂಸ್ಕಾರ ಹೊಂದಿದ ಬಂಧು ಬಳಗವೇ ನನ್ನ ಬಳಗವೆಂಬ ಭಾವನೆಯಿಂದ ಲಿಂಗಾಚಾರದಲ್ಲಿ ಆಸಕ್ತಿಯುಳ್ಳವನಿಗೆ ಮಾತ್ರ, ಮಂತ್ರದೀಕ್ಷೆಯನ್ನೀಯಬೇಕು– ಇದಾದರೂ ಸಮಯ ಸಂಸ್ಕಾರವೆನಿಸಿಕೊಳ್ಳುವುದು.

(೨) ನಿಸ್ಸಂಸಾರ ಸಂಸ್ಕಾರ : ತನ್ನ ತನು–ಕರಣಾದಿಗಳ ಮೇಲಿನ ವ್ಯಾಮೋಹವನ್ನು ತ್ಯಜಿಸುವುದೇ ನಿಸ್ಸಂಸಾರವು ; ಸಂಸಾರದಲ್ಲಿ ಆಸಕ್ತಿಯುಳ್ಳವನಿಂದ ಮಂತ್ರಜಪ ನಡೆಯದು. ಅಂತೆಯೇ ಶ್ರೀಗುರುವು, ಮಂತ್ರೋಪದೇಶದ ಪೂರ್ವದಲ್ಲಿ, ಸಂಸಾರದ ವ್ಯಾಮೋಹವನ್ನು ಬಿಡಿಸುವುದಕ್ಕಾಗಿ, ಮಾಡುವ ಉಪದೇಶವೇ ನಿಸ್ಸಂಸಾರ ಸಂಸ್ಕಾರ ವೆನಿಸುವುದು.

(೩) ನಿರ್ವಾಣ ಸಂಸ್ಕಾರ : ನಿರ್ವಾಣವೆಂದರೆ ಮುಕ್ತಿಯು. ಹಸಿವೆ–ತೃಷೆ, ಸುಖ–ದುಃಖ ಮತ್ತು ಜನನ–ಮರಣಗಳೆಂಬ ಷಡೂರ್ಮಿಗಳ ಅಭಿಮಾನವನ್ನು ತ್ಯಾಗಮಾಡುವಂತೆ ಉಪದೇಶಿಸಿ, ಸಂಸ್ಕಾರಮಾಡುವುದೇ ನಿರ್ವಾಣ ಸಂಸ್ಕಾರವು.

(೪) ತತ್ತ್ವ ಸಂಸ್ಕಾರ : ''ಅನಾರೋಪಿತರೂಪಂ ತತ್ತ್ವಂ'' ಎಂಬ ಪ್ರಮಾಣ ವಚನದಂತೆ, ಆರೋಪಿತವಲ್ಲದ ಸತ್ಯಸ್ವರೂಪವನ್ನು ತತ್ತ್ವವೆನ್ನುತ್ತಾರೆ. ಈ ಜಗತ್ತಿನ ಉತ್ಪತ್ತಿ ಸ್ಥಿತಿ ಮತ್ತು ಸಂಹಾರಗಳಿಗೆ ಕಾರಣನಾದ, ಸತ್ತು, ಚಿತ್ತು ಹಾಗೂ ಆನಂದ ರೂಪನಾದ ಪರಮಾತ್ಮನೇ ತತ್ತ್ವನು. ಅವನು ಮಂತ್ರ ಸ್ವರೂಪನು ; ಆ ಪರಮಾತ್ಮ ಸ್ವರೂಪವೇ ನಿನ್ನಾತ್ಮ ರೂಪವೆಂದು ಬೋಧಿಸುವುದೇ ತತ್ತ್ವಸಂಸ್ಕಾರವು.

(೫) ಆಧ್ಯಾತ್ಮ ಸಂಸ್ಕಾರ: ಆತ್ಮ–ಪರಮಾತ್ಮರ ಐಕ್ಯ ಬೋಧೆಯೇ ಆಧ್ಯಾತ್ಮ ಸಂಸ್ಕಾರವು. ''ನಮಃ ಶಿವಾಯ'' ಎಂಬ ಈ ಪಂಚಾಕ್ಷರ ಮಂತ್ರವು ''ತತ್ತ್ವಮಸಿ'' ಮಹಾಕಾವ್ಯದಂತೆ, ಜೀವ–ಪರಮರ ವಾಕ್ಯವನ್ನೇ ಬೋಧಿಸುತ್ತದೆ. ಇದರಲ್ಲಿ''ನಮಃ'' ಎಂದರೆ ಜೀವಾತ್ಮನು. ''ಶಿವ'' ಎಂದರೆ ಪರಮಾತ್ಮನು. 'ಆಯ'' ಎಂದರೆ ಇವರೀರ್ವರ ಐಕ್ಯವು. ಈ ತೆರನಾಗಿ ಮಂತ್ರೋಪದೇಶದ ಪೂರ್ವದಲ್ಲಿ ಶ್ರೀಗುರುವು ಶಿಷ್ಯನಿಗೆ, ಮಂತ್ರದ ವಾಸ್ತವಿಕತೆಯನ್ನು ತಿಳಿಸಿ ಪರಮಾತ್ಮನೊಡನೆ ಐಕ್ಯ ಬೋಧೆಯನ್ನು ಮಾಡುವುದೇ ಆಧ್ಯಾತ್ಮಸಂಸ್ಕಾರವು.

(೬) ಅನುಗ್ರಹ ಸಂಸ್ಕಾರ : ಶ್ರೀ ಗುರುವಿನ ಕೃಪೆಯೇ ಅನುಗ್ರಹವು. ಕರುವನ್ನು ತಂದೊಡನೆ, ಅದಕ್ಕೆ ತೃಪ್ತಿಪಡಿಸಬೇಕೆಂಬ ಭಾವವು ಆಕಳಲ್ಲಿ ಬಂದೊಡನೆ, ಅದು ತೊರೆ ಬಿಡುವಂತೆ, ಶಿಷ್ಯನನ್ನು ಕಂಡೊಡನೆ, ಅವನಿಗೆ ಬೋಧಿಸಬೇಕೆಂಬ ಪ್ರೇಮೋತ್ಸಾಹಗಳು ಶ್ರೀಗುರುವಿನ ಮನದಲ್ಲಿ ತುಂಬಿರುವುದೇ ಅನುಗ್ರಹವು. ಈ ಅನುಗ್ರಹವು– ಕಾಯಾನುಗ್ರಹ, ಕರುಣಾನುಗ್ರಹ ಮತ್ತು ಪ್ರಾಣಾನುಗ್ರಹವೆಂದು ಮೂರು ವಿಧ ವಾಗಿದೆ. ಈ ತ್ರಿವಿಧಾನುಗ್ರಹವನ್ನು ಪಡೆಯಬೇಕಾದರೆ, ಶಿಷ್ಯನು ತನ್ನ ಶರೀರ, ಇಂದ್ರಿಯ ಮತ್ತು ಪ್ರಾಣಗಳನ್ನು ಶ್ರೀಗುರುವಿಗೆ ಸಮರ್ಪಿಸಬೇಕಾಗುವುದು. ಈ ಅನುಗ್ರಹವೇ ಮಂತ್ರಸಿದ್ಧಿಗೆ ಕಾರಣವಾದ್ದರಿಂದ, ತನ್ನ ಪರಿಶುದ್ಧ ತ್ರಿಕರಣಗಳನ್ನು ಶ್ರೀಗುರುವಿಗೆ ಸಮರ್ಪಿಸಿ, ಗುರುಕೃಪೆಯನ್ನು ಸಂಪಾದಿಸುವುದೇ ಅನುಗ್ರಹ ಸಂಸ್ಕಾರವು.

(೭) ಸತ್ಯಶುದ್ಧ ಸಂಸ್ಕಾರ : ಮಂತ್ರಜಪಕ್ಕೆ ಮುಖ್ಯವಾದವುಗಳೆಂದರೆ–ವಾಣಿ ಮತ್ತು ಮನಸ್ಸು. ಸತ್ಯವ ನುಡಿಯದ ವಾಣಿ ಮತ್ತು ಪರಿಶುದ್ಧವಲ್ಲದ ಮನಗಳೆರಡೂ ಕೂಡಿ, ಅದೆಷ್ಟು ದಿವಸ ಜಪಿಸಿದರೂ, ಮಂತ್ರಸಿದ್ಧಿಯಾಗಲಾರದು. ಆದಕಾರಣ, ಮಂತ್ರಸಿದ್ಧಿಯನ್ನು ಪಡೆಯುವ ಪೂರ್ವದಲ್ಲಿ, ವಾಣಿಯಲ್ಲಿ ಸತ್ಯತೆಯನ್ನೂ, ಮನದಲ್ಲಿ ಪರಿಶುದ್ಧತೆಯನ್ನೂ ಅಳವಡಿಸಿಕೊಳ್ಳಬೇಕಾಗುವುದು. ಈ ವಾಣಿ–ಮನಗಳ ಪರಿ ಶುದ್ಧತೆಯ ಉಪಾಯವನ್ನು ಬೋಧಿಸಿ ಅವೆರಡನ್ನು ಸಂಸ್ಕರಿಸುವುದೇ ಸತ್ಯ–ಶುದ್ಧ ಸಂಸ್ಕಾರವು.

ಹೀಗೆ, ಈ ಏಳು ಅವಾಂತರ ಸಂಸ್ಕಾರಗಳಿಂದ ಕೂಡಿದ ದೀಕ್ಷೆಯೇ ಮಂತ್ರ ದೀಕ್ಷೆಯು. ಈ ದೀಕ್ಷೆಯಿಂದ ಶಿಷ್ಯನ ಸೂಕ್ಷ್ಮಶರೀರ(ಮನ)ದಲ್ಲಿಯ ಮಾಯಾ ಮಲವು ನಿವೃತ್ತವಾಗಿ ಪ್ರಾಣ ಲಿಂಗವು ಅಳವಡುತ್ತದೆ. ಈ ತೆರನಾದ ಮಂತ್ರ ದೀಕ್ಷೆಯನ್ನು ಭೋಗಾಂಗ ಸಂಸ್ಕಾರವೆಂತಲೂ ಕರೆಯುತ್ತಾರೆ. ಈ ಸಂಸ್ಕಾರದಿಂದ ಮನ– ಬುದ್ಧಿಗಳು ಸುಸಂಸ್ಕೃತಗಳಾಗಿ, ಜೀವಾತ್ಮನು ಪರಿಶುದ್ಧನಾಗುತ್ತಾನೆ. ವೀರಶೈವರಿಗೆ ಈ ದೀಕ್ಷೆಯು ಅತ್ಯಾವಶ್ಯಕವಾದುದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಆಗಷ್ಟ್, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ-೪

ಕುಂಡಮಂಡಲಿಕೋಪೇತಾ ಕ್ರಿಯಾದೀಕ್ಷಾ ಕ್ರಿಯೋತ್ತರಾ ।
ಶುಭಮಾಸೇ ಶುಭತಿಥೌ ಶುಭಕಾಲೇ ಶುಭೇಽಹನಿ

ವಿಭೂತಿಂ ಶಿವಭಕ್ತೇಭ್ಯೋ ದತ್ವಾ ತಾಂಬೂಲಪೂರ್ವಕಮ್ ।
ಯಥಾವಿಧಿ ಯಥಾಯೋಗಂ ಶಿಷ್ಯಮಾನೀಯ ದೇಶಿಕಃ

ಸ್ನಾತಂ ಶುಕ್ಲಾಂಬರಧರಂ ದಂತಧಾವನಪೂರ್ವಕಮ್ ।
ಮಂಡಲೇ ಸ್ಥಾಪಯೇಚ್ಛಿಷ್ಯಂ ಪ್ರಾಙ್ಮುಖಂ ತಮುದಙ್ಮುಖಃ

ಶಿವಸ್ಯ ನಾಮ ಸಂಕೀರ್ತಿಂ ಚಿಂತಾಮಪಿ ಚ ಕಾರಯೇತ್ ।

(ಸಿ. ಶಿ. ೬.೧೫-೧೭)

ಹೋಮಕುಂಡ ಮತ್ತು ಸ್ವಸ್ತಿಕಮಂಡಲಗಳನ್ನು ತಯಾರಿಸಿ, ಕ್ರಿಯಾಪ್ರಧಾನವಾಗಿ ಮಾಡುವ ದೀಕ್ಷೆಯನ್ನು ಕ್ರಿಯಾದೀಕ್ಷೆ ಎನ್ನುತ್ತಾರೆ. ಈ ದೀಕ್ಷೆಯನ್ನು, ರಾಜಯೋಗದ ಪವಿತ್ರ ತಿಂಗಳಲ್ಲಿ, ಒಂದು ಶುಭ ಮುಹೂರ್ತವನ್ನು ನೋಡಿ, ಅಂದು ತನ್ನ ಸಮೀಪದ ಶಿವಭಕ್ತರಿಗೆ ತಾಂಬೂಲ ಭಸ್ಮಗಳನ್ನು ಕೊಟ್ಟು, ಆಮಂತ್ರಿಸಬೇಕು. ದೀಕ್ಷೆಯ ಸಮಯದಲ್ಲಿ ಸ್ನಾನಾದಿಗಳಿಂದ ಪರಿಶುದ್ಧನಾದ ಶಿಷ್ಯನನ್ನು, ಸ್ವಸ್ತಿಕ ಮಂಡಲದ ಮೇಲೆ, ಪೂರ್ವಾಭಿಮುಖವಾಗಿ ಕೂಡ್ರಿಸಿ, ಶ್ರೀಗುರುವು, ತಾನು ಉತ್ತಾರಾಭಿಮುಖವಾಗಿ ಕುಳಿತು, ಶಿಷ್ಯನಿಂದ ಶಿವನಾಮಸ್ಮರಣೆಯನ್ನು ಮಾಡಿಸಬೇಕು.

ಕಾರಣ ಹಾಗೂ ಸೂಕ್ಷ್ಮಶರೀರಗಳ ಸಂಸ್ಕಾರಗಳ ನಂತರ, ಸದ್ಯಃ ಸ್ಥೂಲಶರೀರಕ್ಕೆ ಸಂಸ್ಕಾರ ಮಾಡುವುದಕ್ಕಾಗಿ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಕ್ರಿಯಾದೀಕ್ಷೆಯ ವಿಧಾನವನ್ನು ವಿವರಿಸತೊಡಗಿದ್ದಾರೆ. ''ಶರೀರಮಾದ್ಯಂ ಖಲು ಧರ್ಮಸಾಧನಮ್'' ಎನ್ನುವ ಕಾಲಿದಾಸನ ಉಕ್ತಿಯಂತೆ, ಲೌಕಿಕ ಜೀವನದಂತೆ, ಪಾರಮಾರ್ಥಿಕ ಜೀವನಕ್ಕೆ, ಸ್ಥೂಲಶರೀರವು ಅತ್ಯಾವಶ್ಯಕವಾದುದು. ನಾವು ಹಿಂದೆ ಮಾಡಿದ ಕರ್ಮದ ಫಲವಾಗಿಯೆ, ನಮಗೆ ಸ್ಥೂಲ ಶರೀರದ ಪ್ರಾಪ್ತಿಯಾಗುತ್ತದೆ. ಅಂತೆಯೇ, ಇದು ಕಾರ್ಮಮಲಯುಕ್ತವಾದದ್ದು. ಮಲಯುಕ್ತವಾದ ದೇಹವು ಅಮಲವಾದ ಲಿಂಗಪೂಜೆಗೆ ಸಾಧನವಾಗಲಾರದು. ಆದ್ದರಿಂದ, ದೇಹವಾದರೂ ನಿರ್ಮಲವಾಗಬೇಕು. ಶರೀರದ ಕಾರ್ಮಮಲವು ನೀರಿನಿಂದ ತೊಳೆದು ಕಳೆಯುವಂತಹದಲ್ಲ. ಅದರ ನಿವಾರಣೆಗಾಗಿ ಕ್ರಿಯಾದೀಕ್ಷೆಯೇ ಅಮೋಘ ಸಾಧನ.

### ಕ್ರಿಯಾದೀಕ್ಷೆ :

ಕ್ರಿಯಾಪ್ರಧಾನವಾದ ದೀಕ್ಷೆಯೇ ಕ್ರಿಯಾದೀಕ್ಷೆಯು. ಈ ದೀಕ್ಷೆಯನ್ನು ಮಾಡಬೇಕಾದರೂ ಶುಭಮಾಸದಲ್ಲಿ, ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕರಣಗಳೆಂಬ ಪಂಚಾಂಗ ಪರಿಶುದ್ಧವಾದ ಮುಹೂರ್ತವನ್ನು ನೋಡಿಕೊಂಡು ಮಾಡಬೇಕು. ದೀಕ್ಷೆಯ

ಮೊದಲನೇ ದಿನದಂದು, ತನ್ನ ಗ್ರಾಮದ ದೀಕ್ಷಾ ಹೊಂದಿದ ಎಲ್ಲ ಶಿವಭಕ್ತರಿಗೆ, ತಾಂಬೂಲ ಹಾಗೂ ಭಸ್ಮಗಳನ್ನು ಕೊಟ್ಟು, ಆಮಂತ್ರಿಸಬೇಕು. ಬಂದ ಶಿವಭಕ್ತರನ್ನೆಲ್ಲ ಆದರಪೂರ್ವಕವಾಗಿ ಬರಮಾಡಿಕೊಂಡು, ಉಚಿತ ಆಸನದಲ್ಲಿ ಕೂಡ್ರಿಸಿ, ಅವರೆಲ್ಲರ ಸಮ್ಮುಖದಲ್ಲಿ ಶಿಷ್ಯನನ್ನು ಸಂಸ್ಕರಿಸಬೇಕು.

ಪ್ರಾತಃಕಾಲದಲ್ಲಿ ಶಾಸ್ತ್ರೋಕ್ತ ಪದ್ಧತಿಯಂತೆ, ಉತ್ತರಾಣಿಯ ಬೇರು ಇಲ್ಲವೇ ಬೇವಿನ ಕಡ್ಡಿಗಳಿಂದ ಶಿಷ್ಯನಿಗೆ ಹಲ್ಲನ್ನು ಉಜ್ಜಿಕೊಳ್ಳಲು ತಿಳಿಸಬೇಕು. ನಂತರ ಪರಿಶುದ್ಧ ಜಲದಿಂದ ಸ್ನಾನಮಾಡಿಸಿ, ಶುಭ್ರಗಳಾದ ಬಟ್ಟೆಗಳನ್ನು ತೊಡಿಸಿ, ಸ್ವಸ್ತಿಕಮಂಡಲದಲ್ಲಿ ಕೂಡ್ರಿಸಿ, ಆಜನ್ಮಪರ್ಯಂತರವಾಗಿ ಶಿವಪೂಜೆಯನ್ನು ಮಾಡುತ್ತೇನೆಂಬ ಸಂಕಲ್ಪವನ್ನು ಶಿಷ್ಯನಿಂದ ಮಾಡಿಸಿ, ಅದರ ದ್ಯೋತಕವಾಗಿ, ಆತನ ಬಲಗೈಗೆ ಕಂಕಣವನ್ನು ಕಟ್ಟಬೇಕು. ಕಂಕಣಬದ್ಧನಾಗಿ ಸ್ವಸ್ತಿಕಾಸನದಲ್ಲಿ ಪೂರ್ವಾಭಿಮುಖವಾಗಿ ಕುಳಿತ ಶಿಷ್ಯನಿಗೆ, ಮನಸ್ಸಿನಲ್ಲಿ ಅನವರತನಾಗಿ (ಎಲ್ಲ ಕ್ರಿಯೆಯು ಮುಗಿಯುವವರೆಗೆ) ಶಿವನಾಮವನ್ನು ಸ್ಮರಿಸುತ್ತ ಕೂಡ್ರುವಂತೆ ತಿಳಿಸಬೇಕು. ವೇಧಾ ಮತ್ತು ಮಂತ್ರದೀಕ್ಷೆಗಳಿಗೆ ಅವಾಂತರ ಸಂಸ್ಕಾರ ಗಳಿರುವಂತೆ ಕ್ರಿಯಾದೀಕ್ಷೆಯಲ್ಲೂ ಸಹ ಏಳು ಅವಾಂತರ ಸಂಸ್ಕಾರಗಳು ನಿರೂಪಿ ಸಲ್ಪಟ್ಟಿವೆ.

(೧) ಆಜ್ಞಾ ಸಂಸ್ಕಾರ : ದೀಕ್ಷೆಗಾಗಿ ಶರಣಾಗತನಾದ ಶಿಷ್ಯನಿಗೆ ಶ್ರೀ ಗುರುವು ದೀಕ್ಷೆಯನ್ನು ಮಾಡುವ ಪೂರ್ವದಲ್ಲಿ, ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯಾದಿ ದಶವಿಧ ಧರ್ಮಗಳ ಮರ್ಮವನ್ನು ತಿಳಿಯಪಡಿಸಿ, ಅವುಗಳನ್ನು ತನ್ನ ನಿತ್ಯಜೀವನದಲ್ಲಿ ತಪ್ಪದಹಾಗೆ ಪರಿಪಾಲಿಸಿಕೊಂಡು ಹೋಗಲು ಆಜ್ಞಾಪಿಸುತ್ತಾನೆ. ಈ ಆಜ್ಞೆಯೇ ಆಜ್ಞಾ ಸಂಸ್ಕಾರವೆನಿಸಿಕೊಳ್ಳುವುದು.

(೨) ಉಪಮಾ ಸಂಸ್ಕಾರ : ಶ್ರೀ ಗುರುವು ತಾನು ಮಾಡಿದ ಆಜ್ಞೆಯಂತೆ ಶಿಷ್ಯನು ನಡೆದುಕೊಳ್ಳುವುದಕ್ಕಾಗಿ, ಆ ಮಾರ್ಗದಲ್ಲಿ ನಡೆದು ಕೀರ್ತಿಶಾಲಿಗಳಾದ ಅನೇಕ ಆಚಾರ್ಯರ, ಶರಣರ ಮತ್ತು ಸಂತರ ಚರಿತ್ರೆಗಳನ್ನು ತಿಳಿಯಪಡಿಸಿ, ಶಿಷ್ಯನ ಹೃದಯ ದಲ್ಲಿ ತನ್ನ ಉಪದೇಶವನ್ನು ದೃಢಗೊಳಿಸುವಂತೆ ಮಾಡಿದ ಸಂಸ್ಕಾರವನ್ನು ಉಪಮಾ ಸಂಸ್ಕಾರವೆನ್ನುವರು.

(೩) ಸ್ವಸ್ತಿಕಾರೋಹಣ ಸಂಸ್ಕಾರ : ಸ್ವಸ್ತಿಕವು ಒಂದು ಆಸನದ ಹೆಸರು. ಈ ಆಸನದ ಮೇಲೆ ಕುಳಿತರೆ ಶರೀರಕ್ಕೆ ಬೇಗನೆ ಆಯಾಸವಾಗುವುದಿಲ್ಲ. ಶಿವಪೂಜಾದಿಗಳಿಗೆ ಆಯಾಸವಿಲ್ಲದೇ ಬಹಳ ವೇಳೆಯವರೆಗೆ ಕೂಡ್ರಬೇಕಾದರೆ, ಈ ಆಸನವು ಸುಗಮ ವಾದುದು. ಶಿವಪೂಜಕರ ಶರೀರದ ಸ್ವಾಸ್ಥ್ಯ ಹಾಗೂ ಮಾನಸಿಕ ಸ್ವಾಸ್ಥ್ಯವನ್ನು ಉಂಟು ಮಾಡುವ ಆಸನವೇ ಸ್ವಸ್ತಿಕಾಸನವು. ಸ್ವಸ್ತಿಕಾಸನದ ಪದ್ಧತಿಯನ್ನು ತಿಳಿಸಿ, ಶಿವಪೂಜೆಗೆ ಕೂಡ್ರುವ ವಿಧಾನವನ್ನು ಹೇಳಿಕೊಡುವುದೇ ಸ್ವಸ್ತಿಕಾರೋಹಣ ಸಂಸ್ಕಾರವು. ಇದೇ ಮಾತನ್ನೇ ಶ್ರೀಜಗದ್ಗುರು ರೇಣುಕ ಭಗವತ್ಪಾದರು, ''ಮಂಡಲೇ ಸ್ಥಾಪಯೇತ್ ಶಿಷ್ಯಂ'' ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಇನ್ನು ನಾವು ಕೂಡ್ರುವ ಸ್ಥಾನವಾದರೂ ಸ್ವಸ್ತಿಯಾಗಿರಬೇಕು. ಅಂತೆಯೇ ಪೂಜಾಸ್ಥಾನವನ್ನು ಗೋಮಯದಿಂದ ಸಾರಿಸಿ, ಇಲ್ಲವೇ ಗೋಮೂತ್ರವನ್ನು ಚಿಮುಕಿಸಿ

ತೊಳೆದು, ರಂಗವಲ್ಲಿಯನ್ನು ಹಾಕಿದ ಪವಿತ್ರಸ್ಥಾನದಲ್ಲಿ ದರ್ಭಾಸನ ಅಥವಾ ಕಂಬಲಾಸನವನ್ನು ತರಿಸಿ, ಅದರಮೇಲೆ ಕುಳಿತುಕೊಂಡು ಪೂಜೆಮಾಡುವಂತೆ ಶಿಷ್ಯನಿಗೆ ಬೋಧಿಸಿ, ಸಂಸ್ಕರಿಸುವುದು ಸ್ವಸ್ತಿಕಾರೋಹಣ ಸಂಸ್ಕಾರವೆನಿಸುವುದು.

(೪) ಕಲಶಾಭಿಷೇಕ ಸಂಸ್ಕಾರ : ಪವಿತ್ರವಾದ ನೀರು ತುಂಬಿದ ಕೊಡವನ್ನು ಕಲಶ ವೆಂದು ಕರೆಯುತ್ತಾರೆ. ತಂಪಾದ ಕಲಶೋದಕದ ಅಭಿಷೇಕದಿಂದ ಶರೀರದ ಉಷ್ಣತೆಯು ಅಳಿದು, ಶೀತಲತೆಯು ಉಂಟಾಗುವಂತೆ, ಶ್ರೀಸದ್ಗುರುವು ತನ್ನ ಸದ್ಭಾವನಾರೂಪ ಕಲಶದಲ್ಲಿ ತುಂಬಿದ ಕರುಣಾರೂಪದ ಜಲದಿಂದ, ಶಿಷ್ಯನ ಬುದ್ಧಿರೂಪ ಮಸ್ತಕದ ಮೇಲೆ ಅಭಿಷೇಕಗೊಳಿಸಿ, ಆತನ ಹೃದಯದ ಬೇಗೆಗಳನ್ನು ಶಾಂತಗೊಳಿಸಿ, ಅವನನ್ನು ಪವಿತ್ರನನ್ನಾಗಿ ಮಾಡುವ ಸಂಸ್ಕಾರವೇ ಕಲಶಾಭಿಷೇಕ ಸಂಸ್ಕಾರವು.

(೫) ವಿಭೂತಿಪಟ್ಟ ಸಂಸ್ಕಾರ : ಆಸನಾಸೀನನಾಗಿ ಅಭಿಷಿಕ್ತನಾದ ಶಿಷ್ಯನಿಗೆ, ಆರೋಗ್ಯವರ್ಧಕವೂ, ಐಶ್ವರ್ಯಪ್ರದಾಯಕವೂ ಆದ ಪರಮಾತ್ಮನ ಮೈಬೆಳಗೆನಿಸಿದ ಪವಿತ್ರವಾದ ಭಸ್ಮದಿಂದ, ವೀರಶೈವ ಶಾಸ್ತ್ರೋಕ್ತ ಪದ್ಧತಿಯಂತೆ, ಮಸ್ತಕಾದಿ ಸರ್ವಾವ ಯವಗಳಲ್ಲಿ ತ್ರಿಪುಂಡ್ರಧಾರಣೆಯನ್ನು ಮಾಡುವುದೇ ವಿಭೂತಿಪಟ್ಟ ಸಂಸ್ಕಾರವು.

(೬) ಆಯತ ಸಂಸ್ಕಾರ : ಪಂಚಸೂತ್ರ ಪ್ರಕ್ರಿಯೆಯಿಂದ ನಿರ್ಮಿತವಾದ ಶಿಲಾಮಯ ಶಿವಲಿಂಗಕ್ಕೆ, ಮಂತ್ರಸಂಸ್ಕಾರವನ್ನು ಕೊಟ್ಟು, ಅದರ ಮೊದಲಿನ ಶಿಲಾತ್ವ ವನ್ನು ನಿರಾಕರಿಸಿ, ಶಿವಕಲೆಯನ್ನು ತುಂಬಿ ಶಿಷ್ಯನ ಶರೀರದ ಮೇಲೆ, ಇಷ್ಟಲಿಂಗವನ್ನು ನೆಲೆಗೊಳಿಸುವುದೇ ಆಯತ ಸಂಸ್ಕಾರವು.

(೭) ಸ್ವಾಯತ ಸಂಸ್ಕಾರವು : ಸದ್ಗುರುವಿನಿಂದ ಪ್ರಾಪ್ತವಾದ ಇಷ್ಟಲಿಂಗವು ಕೇವಲ ಶಿಲಾಲಿಂಗವಲ್ಲ, ಅದು ತನ್ನದೇ ಆದ ಆತ್ಮದ ಪ್ರತೀಕವೆಂಬ ಭಾವನೆಯು ಶಿಷ್ಯನಲ್ಲಿ ಒಡಮೂಡುವಂತೆ ಉಪದೇಶಿಸಿ, ಇಷ್ಟಲಿಂಗದಲ್ಲಿ ಆತ್ಮ ಸ್ವರೂಪವನ್ನು ಅನುಭವಿಸು ವಂತೆ, ಶಿಷ್ಯನ ಮನಸ್ಸಿನಲ್ಲಿ ಸಂಸ್ಕಾರಮಾಡುವುದೇ ಸ್ವಾಯತ ಸಂಸ್ಕಾರವು.

ಹೀಗೆ ಈ ಏಳು ಅವಾಂತರ ಸಂಸ್ಕಾರಗಳಿಂದ ಕೂಡಿದ ದೀಕ್ಷೆಯನ್ನು ಕ್ರಿಯಾದೀಕ್ಷೆ ಯೆನ್ನುತ್ತಾರೆ. ಈ ದೀಕ್ಷೆಯಿಂದ ಶಿಷ್ಯನ ಕಾರ್ಮಿಕಮಲವು ನಿವೃತ್ತವಾಗಿ, ಪರಿಶುದ್ಧವಾದ ದೇಹಿಯಾಗಿ ತನ್ನ ಪೂರ್ವದ ಮಾಂಸಪಿಂಡತ್ವವನ್ನು ಕಳೆದುಕೊಂಡು, ಸದ್ಯಃ ಮಂತ್ರ ಪಿಂಡನೆನಿಸಿಕೊಳ್ಳುತ್ತಾನೆ.

ಈ ಪ್ರಕಾರವಾದ ಈ ಕ್ರಿಯಾದೀಕ್ಷೆಯನ್ನು, ಶುಭ ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕರಣಗಳಿಂದ ಕೂಡಿದ ಪವಿತ್ರಮಾಸದಲ್ಲಿ, ಶಿವಭಕ್ತರೆಲ್ಲರನ್ನೂ ತನ್ನ ಮನೆಗೆ ಆದರದಿಂದ ಬರಮಾಡಿಕೊಂಡು, ವೀರಶೈವ ತಂತ್ರೋಕ್ತ ಪದ್ಧತಿಯಂತೆ ತನ್ನ ಮನೆಯ ಗುರುಗಳಿಂದ ಮಾಡಿಸಿಕೊಂಡು ಧನ್ಯನಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಆಗಷ್ಟ್, ೧೯೬೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ವಿಭೂತಿಪಟ್ಟಂ ಕೃತ್ವಾಗ್ರೇ ಯಥಾಸ್ಥಾನಂ ಯಥಾವಿಧಿ
ಪಂಚಬ್ರಹ್ಮಮಯೈಸ್ತತ್ರ ಸ್ಥಾಪಿತೈಃ ಕಲಶೋದಕೈಃ ॥
ಆಚಾರ್ಯಃ ಸಮಮೃತ್ವಿಗ್ಭಿಸ್ತ್ರಿವಾರಮಭಿಷೇಚಯೇತ್
ಅಭಿಷಿಚ್ಯ ಗುರುಃ ಶಿಷ್ಯಮಾಸೀನಂ ಪುರತಃ ಶುಚಿಮ್ ।
ತತಃ ಪಂಚಾಕ್ಷರೀಂ ಶೈವೀಂ ಸಂಸಾರಭಯತಾರಿಣೀಮ್
ತಸ್ಯ ದಕ್ಷಿಣಕರ್ಣೇ ತು ನಿಗೂಢಮಪಿ ಕೀರ್ತಯೇತ್ ।
ಛಂದೋರೂಪಮೃಷಿಂ ಚಾಸ್ಯ ದೇವತಾಂ ನ್ಯಾಸಪದ್ಧತಿಮ್

(ಸಿ. ಶಿ. ೬.೧೮-೨೧)

ಸ್ವಸ್ತಿಕಾಸನದಲ್ಲಿ ಕುಳಿತ ಶಿಷ್ಯನಿಗೆ, ಶಾಸ್ತ್ರೋಕ್ತ ಪದ್ಧತಿಯಂತೆ, ತ್ರಿಪುಂಡ್ರವನ್ನು ಧರಿಸಿ, ಪಂಚಾಚಾರ್ಯರ ಪ್ರತೀಕವಾಗಿ ಪಂಚಕಲಶಗಳನ್ನು ಸ್ಥಾಪಿಸಿ, ಋತ್ವಿಜರಿಂದ ಕೂಡಿದ ಆಚಾರ್ಯನು, ಪವಿತ್ರ ಕಲಶೋದಕದಿಂದ ಅಭಿಷೇಕವನ್ನು ಮಾಡಿ, ಸಂಸಾರ ಭಯವನ್ನು ದೂರಮಾಡುವ ಶಿವಪಂಚಾಕ್ಷರೀ ಮಹಾಮಂತ್ರವನ್ನು ಶಿಷ್ಯನ ಬಲಗಿವಿ ಯಲ್ಲಿ ಅತ್ಯಂತ ಗೂಢವಾಗಿ ಉಪದೇಶಿಸಿ, ಆ ಮಂತ್ರದ ಛಂದಸ್ಸು, ದೇವತಾ ಮತ್ತು ನ್ಯಾಸಪದ್ಧತಿಯನ್ನು ಕಲಿಸಿಕೊಡಬೇಕು.

ವೀರಶೈವ ಸಿದ್ಧಾಂತದಲ್ಲಿ ಪ್ರತಿಯೊಂದು ಧಾರ್ಮಿಕ ವ್ಯವಹಾರಕ್ಕೆ ಶ್ರೀಗುರುವೇ ಮುಖ್ಯನಾಗಿರುತ್ತಾನೆ. ವೀರಶೈವ ಗುರುಪರಂಪರೆಯಲ್ಲಿ ಭುವನ ಪ್ರಸಿದ್ಧರಾದ ಶ್ರೀ ಜ. ರೇವಣಸಿದ್ಧ, ಶ್ರೀ ಜ. ಮರುಳಸಿದ್ಧ, ಶ್ರೀ ಜ. ಏಕೋರಾಮಾರಾಧ್ಯ, ಶ್ರೀ ಜ. ಪಂಡಿತಾರಾಧ್ಯ ಮತ್ತು ಶ್ರೀ ಜ. ವಿಶ್ವಾರಾಧ್ಯರು ಯುಗದ ಆದಿಯಲ್ಲಿ ಪರಶಿವನ ಅಪ್ಪಣೆಯ ಮೇರೆಗೆ ವೀರಶೈವ ಸಿದ್ಧಾಂತವನ್ನು ಸಂಸ್ಥಾಪಿಸಲು ಅವತರಿಸಿ, ರಂಭಾಪುರಿ (ಬಾಳೆಹೊನ್ನೂರು), ಉಜ್ಜಯಿನಿ, ಕೇದಾರ, ಶ್ರೀಶೈಲ ಮತ್ತು ಕಾಶೀ ಕ್ಷೇತ್ರಗಳಲ್ಲಿ ಕ್ರಮವಾಗಿ–ವೀರಸಿಂಹಾಸನ, ಸದ್ಧರ್ಮಸಿಂಹಾಸನ, ವೈರಾಗ್ಯಸಿಂಹಾಸನ, ಸೂರ್ಯ ಸಿಂಹಾಸನ ಮತ್ತು ಜ್ಞಾನಸಿಂಹಾಸನ, ಐದು ಪೀಠಗಳನ್ನು ಸ್ಥಾಪಿಸಿ, ಜಗತ್ಪ್ರಸಿದ್ಧ ರಾದ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಹಾಗೂ ದುರ್ವಾಸ ಮಹರ್ಷಿಗಳಿಗೆ ವೀರಶೈವ ಸಿದ್ಧಾಂತವನ್ನು ಉಪದೇಶಿಸಿದ ವಿಷಯ ಸುಪ್ರಸಿದ್ಧವಾಗಿದೆ. ಈ ಪಂಚಪೀಠಾಧೀಶ್ವರರು, ಪ್ರತಿಯೊಂದು ಯುಗದ ಆದಿಯಲ್ಲಿ ಅವತರಿಸುತ್ತಾರೆಂದು ಆಗಮಶಾಸ್ತ್ರಗಳು ಘಂಟಾಘೋಷವಾಗಿ ತಿಳಿಯಪಡಿಸುತ್ತವೆ. ಪ್ರತಿಯೊಂದು ಯುಗ ದಲ್ಲಿ ಇವರ ಹೆಸರುಗಳು ಭಿನ್ನ ಭಿನ್ನವಾಗಿರುತ್ತವೆ. ಕೃತಯುಗದಲ್ಲಿ– ಏಕಾಕ್ಷರ ಶಿವಾ ಚಾರ್ಯ, ದ್ವ್ಯಕ್ಷರ ಶಿವಾಚಾರ್ಯ, ತ್ರ್ಯಕ್ಷರ ಶಿವಾಚಾರ್ಯ, ಚತುರಕ್ಷರ ಶಿವಾ ಚಾರ್ಯ ಮತ್ತು ಪಂಚಾಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ– ಏಕವಕ್ತ್ರ ಶಿವಾ

ಚಾರ್ಯ, ದ್ವಿವಕ್ತ್ರ ಶಿವಾಚಾರ್ಯ, ತ್ರಿವಕ್ತ್ರ ಶಿವಾಚಾರ್ಯ, ಚತುರ್ವಕ್ತ್ರ ಶಿವಾಚಾರ್ಯ ಮತ್ತು ಪಂಚವಕ್ತ್ರಶಿವಾಚಾರ್ಯ. ದ್ವಾಪರ ಯುಗದಲ್ಲಿ– ರೇಣುಕ ಶಿವಾಚಾರ್ಯ, ದಾರುಕ ಶಿವಾಚಾರ್ಯ, ಘಂಟಾಕರ್ಣ ಶಿವಾಚಾರ್ಯ, ಧೇನುಕರ್ಣ ಶಿವಾಚಾರ್ಯ ಮತ್ತು ವಿಶ್ವಕರ್ಣ ಶಿವಾಚಾರ್ಯ. ಕಲಿಯುಗದಲ್ಲಿ - ರೇವಣಸಿದ್ಧ ಶಿವಾಚಾರ್ಯ, ಮರುಳಸಿದ್ಧ ಶಿವಾಚಾರ್ಯ, ಏಕೋ ರಾಮಾರಾಧ್ಯ ಶಿವಾಚಾರ್ಯ, ಪಂಡಿತಾರಾಧ್ಯ ಶಿವಾಚಾರ್ಯ ಹಾಗೂ ವಿಶ್ವಾರಾಧ್ಯ ಶಿವಾ ಚಾರ್ಯ– ಈ ತೆರನಾಗಿ, ಯುಗಭೇದದಿಂದ, ಈ ಪಂಚಾಚಾರ್ಯರ ಹೆಸರುಗಳು ಭಿನ್ನವಾಗಿರುತ್ತವೆ.

ಈ ಪಂಚಾಚಾರ್ಯರ ಐದೂ ಪೀಠಗಳು ಅತ್ಯಂತ ಪ್ರಾಚೀನವಾಗಿದ್ದು ಇವು ಸಮಸ್ತವೀರಶೈವರಿಗೆ ಮುಖ್ಯ ಗುರುಪೀಠಗಳಾಗಿರುತ್ತವೆ. ವೀರ, ನಂದಿ, ಭೃಂಗಿ, ವೃಷಭ ಹಾಗೂ ಸ್ಕಂದಗೋತ್ರದ ವೀರಶೈವರೆಲ್ಲ ಈ ಪೀಠಗಳ ಶಿಷ್ಯರಾಗಿರುತ್ತಾರೆ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ತಮಿಳುನಾಡು ಮುಂತಾದ ಪ್ರದೇಶಗಳಲ್ಲಿ ಈ ಪಂಚಪೀಠಗಳ ಶಾಖಾಮಠಗಳಿದ್ದು, ಆ ಮಠಗಳ ಅಧಿಪತಿಗಳಾದ ಪಟ್ಟಾಧ್ಯಕ್ಷರು, ಮೂಲಪೀಠಗಳ ಆಚಾರ್ಯರ ಆಜ್ಞೆಯಂತೆ ಆ ಪೀಠಪರಂಪರೆಯ ಶಿಷ್ಯರಿಗೆಲ್ಲ ದೀಕ್ಷಾದಿ ಧಾರ್ಮಿಕ ಸಂಸ್ಕಾರಗಳನ್ನು ಮಾಡುತ್ತಾರೆ. ಪ್ರತಿಯೊಬ್ಬ ವೀರಶೈವನೂ ತನ್ನ ಧರ್ಮದ ಮೂಲ ಗುರುಗಳಾದ ಪಂಚಾಚಾರ್ಯರನ್ನು ಬರಮಾಡಿಕೊಂಡು, ಅವರ ಸಮ್ಮುಖದಲ್ಲಿ ತಮ್ಮ ಗೋತ್ರದ ಗುರುಗಳಾದ ಪಟ್ಟಾಧ್ಯಕ್ಷರಿಂದ ದೀಕ್ಷೆಯನ್ನು ಪಡೆದುಕೊಳ್ಳಬೇಕು. ಆದರೆ ಪಂಚಪೀಠದ ಆಚಾರ್ಯರನ್ನು ಪ್ರತಿಯೊಂದು ಧಾರ್ಮಿಕ ವಿಧಿಯಲ್ಲಿ ಬರಮಾಡಿ ಕೊಳ್ಳುವುದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಅಂತೆಯೇ ದೀಕ್ಷಾದಿ ಕಾರ್ಯಗಳನ್ನು ಮಾಡುವಾಗ ಆ ಪಂಚಾರ್ಯರ ಪ್ರತೀಕವಾಗಿ ಪಂಚಕಲಶಗಳನ್ನು ಸ್ಥಾಪಿಸಿ, ಅವುಗಳಲ್ಲಿ ಭಾವನಾಪೂರ್ವಕವಾಗಿ ಆಚಾರ್ಯರನ್ನು ಆಹ್ವಾನಿಸಿ ಕಲಶ ಸನ್ನಿಹಿತರಾದ ಪಂಚಾಚಾರ್ಯರ ಸಮ್ಮುಖದಲ್ಲಿ ದೀಕ್ಷಾ ವಿಧಾನವನ್ನು ಪ್ರಾರಂಭಿಸಬೇಕು.

ಸ್ವಸ್ತಿಕಾಸನದಲ್ಲಿ ಶಿಷ್ಯನು ಕುಳಿತ ನಂತರ, ಅವನ ಹಣೆ, ತಲೆ, ಎರಡೂ ಕಿವಿಗಳು ಎರಡೂ ಹೆಗಲುಗಳು, ಕೊರಳು, ಎದೆ, ಹೊಕ್ಕಳು, ಬೆನ್ನು, ಎರಡೂ ತೋಳುಗಳು, ಎರಡೂ ಮುಂಗೈಗಳು, ಹಿಂಗೊರಳು– ಈ ಹದಿನೈದು ಸ್ಥಾನದಲ್ಲಿ ಶಾಸ್ತ್ರೋಕ್ತ ಪದ್ಧತಿಯಂತೆ ತ್ರಿಪುಂಡ್ರವನ್ನು ಧರಿಸಿದನಂತರ, ವೈದಿಕ ವಿಧಿಯನ್ನು ಮಾಡುವ ಶಾಸ್ತ್ರಿಗಳಿಂದ ಕೂಡಿಕೊಂಡು, ಪಟ್ಟಾಧ್ಯಕ್ಷರು, ಪಂಚಬ್ರಹ್ಮರೂಪಗಳಾದ ಪಂಚಕಲಶ ಗಳಲ್ಲಿಯ ಪವಿತ್ರಜಲದಿಂದ, ಶಿಷ್ಯನಿಗೆ ಮೂರು ಸಾರೆ ಅಭಿಷೇಕ ಮಾಡಿ, ಆತನ ಶರೀರವನ್ನು ಶುದ್ಧೀಕರಿಸಿ, ಪವಿತ್ರನಾದ ಆ ಶಿಷ್ಯನನ್ನು ತನ್ನ ಬಳಿಗೆ ಕರೆದು, ಸಂಸಾರ ಭಯವನ್ನು ದೂರಮಾಡುವ ಸಾಮರ್ಥ್ಯವುಳ್ಳ ಪಂಚಾಕ್ಷರೀ ಮಹಾಮಂತ್ರವನ್ನು, ಅವನ ಬಲಗಿವಿಯಲ್ಲಿ ಅತ್ಯಂತ ಗೂಢವಾಗಿ ಉಪದೇಶಿಸಿ, ಆ ಮಂತ್ರದ ಋಷಿ, ಛಂದಸ್ಸು, ದೇವತಾ ಹಾಗೂ ನ್ಯಾಸದ ವಿಧಾನಗಳನ್ನು ತಿಳಿಸಿ, ಈ ಮಂತ್ರವನ್ನು ದಿನಾಲು ತಪ್ಪದೇ ಜಪಿಸುವಂತೆ ಆಜ್ಞಾಪಿಸುತ್ತಾರೆ. ಇಷ್ಟೆಲ್ಲ ವಿಧಿ ವಿಧಾನಗಳಾದಾಗ ಕ್ರಿಯಾ ದೀಕ್ಷೆಯು ಪೂರ್ಣವಾಗುತ್ತದೆ.

ಈ ರೀತಿಯಾಗಿ ಸದ್ಗುರುಗಳಿಂದ ವೇಧಾ, ಮಂತ್ರ ಹಾಗೂ ಕ್ರಿಯಾದೀಕ್ಷೆಯನ್ನು ಹೊಂದಿದ ವೀರಶೈವನು, ಗುರುವಿನ ಆಜ್ಞೆಯಂತೆ ಶಿವಪೂಜೆ, ಶಿವಧ್ಯಾನ, ಶಿವಪಂಚಾಕ್ಷರೀ ಮಂತ್ರದ ಜಪವನ್ನು ನಿತ್ಯ ಮಾಡುವವನಾಗಿ, ಶಿವಸಾಯುಜ್ಯವನ್ನೇ ಪಡಿಯುತ್ತಾನೆ. ಈ ತೆರನಾದ ಸದ್ಗತಿಯು ನಮಗೆ ಸಿಗಬೇಕಾದರೆ ನಾವು ಮೊದಲು ನಮ್ಮ ಕುಲಗುರುಗಳಿಗೆ ಶರಣಾಗಿ, ಅವರ ಸೇವೆಯನ್ನು ಮಾಡಿ, ಅವರ ಅನುಗ್ರಹವನ್ನು ಸಂಪಾದಿಸುವುದು ಅವಶ್ಯವಾಗಿದೆ. ಅದು ಪ್ರತಿಯೊಬ್ಬ ವೀರಶೈವನ ಆದ್ಯ ಕರ್ತವ್ಯವಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

# ಲಿಂಗಧಾರಣಸ್ಥಲ

ಸ್ಫಾಟಿಕಂ ಶೈಲಜಂ ವಾಪಿ ಚಂದ್ರಕಾಂತಮಯಂ ತು ವಾ ।
ಬಾಣಂ ವಾ ಸೂರ್ಯಕಾಂತಂ ವಾ ಲಿಂಗಮೇಕಂ ಸಮಾಹರೇತ್ ॥ ೧ ॥

ಸದ್ಗುರುಗಳು ಶಿಷ್ಯನಿಗೆ ಲಿಂಗದೀಕ್ಷೆಯನ್ನು ಅನುಗ್ರಹಿಸಬೇಕಾದರೆ ಸ್ಫಟಿಕ, ಶ್ರೀಶೈಲ ಪರ್ವತದಶಿಲೆ, ಚಂದ್ರಕಾಂತಶಿಲೆ, ಸೂರ್ಯಕಾಂತಶಿಲೆ, ಇವುಗಳಲ್ಲಿ ಯಾವದಾದರೊಂದು ಶಿಲೆಯಿಂದ ನಿರ್ಮಿತವಾದ ಪಂಚಸೂತ್ರ ಲಿಂಗವನ್ನು ಅಥವಾ ನರ್ಮದಾ ನದಿಯಲ್ಲಿ ಪ್ರಾಕೃತಿಕವಾಗಿ ತಯಾರಾದ ನರ್ಮದಾ ಬಾಣ ಲಿಂಗವನ್ನಾಗಲಿ ತೆಗೆದು ಕೊಳ್ಳಬೇಕು.

ಸದ್ಗುರುವಿನಿಂದ ಇಷ್ಟದ ಪ್ರಾಪ್ತಿ :

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮನಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಈ ಪೂರ್ವದಲ್ಲಿ ಗುರುಕಾರುಣ್ಯವನ್ನು ತಿಳಿಯಪಡಿಸಿ ಸದ್ಯಃ ಲಿಂಗಧಾರಣ ವಿಷಯವಾಗಿ ಅಪ್ಪಣೆ ಕೊಡಿಸುತ್ತಿದ್ದಾರೆ.

ಭಾರತೀಯರಿಗೆ ಗುರು, ದೇವತೆ ಮತ್ತು ಶಾಸ್ತ್ರ ಇವು ಮೂರೂ ಶ್ರದ್ಧೆಯ ವಿಷಯಗಳಾಗಿವೆ. ''ಶಾಸ್ತ್ರೀತಿ ಶಾಸ್ತ್ರಂ'' ಎಂಬ ವ್ಯುತ್ಪತ್ತಿಯ ಮೇರೆಗೆ ಮಾನವನ ಐಹಿಕ ಹಾಗೂ ಪಾರಲೌಕಿಕ ಜೀವನವನ್ನು ನಿಯಮಿಸುವ ಅಥವಾ ರೂಪಗೊಳಿಸುವ ಅತ್ಯಮೂಲ್ಯ ಸಾಹಿತ್ಯವೇ ಶಾಸ್ತ್ರವು. ಭಾರತೀಯ ಪ್ರಾಚೀನ ಸಾಹಿತ್ಯವಾದ ವೇದಾಗಮಗಳೂ, ಆದಿ ಗುರುವಾದ ಭಗವಂತನಿಂದ ಹಾಗೂ ಅವುಗಳನ್ನು ಆಧಾರವಾಗಿ ಇಟ್ಟುಕೊಂಡು ರಚಿಸಲ್ಪಟ್ಟ ಆಧುನಿಕ ಶಾಸ್ತ್ರಗಳೂ, ಭಗವಂತನ ಸಗುಣ ಸಾಕಾರ ಸ್ವರೂಪವಾದ ಸದ್ಗುರುಗಳಿಂದ ರಚಿಸಲ್ಪಟ್ಟಿರುತ್ತವೆ. ಆದಕಾರಣ ಮನುಷ್ಯನು ತನ್ನ ಜೀವನವನ್ನು ಸರ್ವಾಂಗ ಸುಂದರವಾಗಿ ರೂಪಿಸಿಕೊಳ್ಳಬೇಕಾದರೆ, ಗುರು–ದೇವರಲ್ಲಿ ಶ್ರದ್ಧೆಯನ್ನಿಟ್ಟು, ಅವರಿಂದ ಉಪದೇಶಿಸಲ್ಪಟ್ಟ ಶಾಸ್ತ್ರಗಳಲ್ಲಿ ವಿಶ್ವಾಸವನ್ನಿಟ್ಟು, ಆ ಶಾಸ್ತ್ರವಿಹಿತ ಮಾರ್ಗದಲ್ಲಿಯೇ ನಡೆಯಬೇಕು. ''ತಸ್ಮಾತ್ ಶಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತಾ'' (ಗೀತಾ ೧೬–೨೪) ಎಂಬ ಪ್ರಮಾಣಾನುಸಾರವಾಗಿ ಮನುಷ್ಯನ ಕರ್ತವ್ಯ ಕರ್ಮಗಳಿಗೆ ಶಾಸ್ತ್ರಗಳೇ ಪ್ರಮಾಣಗಳು.

ದುರಿತಕರ್ಮವನೊಲ್ಲದಿರು ಪುಣ್ಯವನೇ ಮಾಡು ।
ಹರನಡಿವಿಡಿ ಶಾಂತರೊಡನಾಡು ॥

ಕರುಣವಿರಲಿ ಜೀವರೊಳು ನೀತಿವಿದನಾಗು ।
ಪೊರೆ ಪೊರ್ದಿದರನೆಂದು ಬೆಸಸುವ ॥

ನಿಂದಿಸಿ ನುಡಿಯದಿರಾರನು ಮನಸಿಗೆ ।
ಬಂದಂತೆ ನಡೆಯದಿರಿಹದಲ್ಲಿ ॥

ಕುಂದುವಡೆಯದಿರು ಕಾಮಾದಿಗಳನು ಜಯಿ ।
ಸೆಂದು ಕೈವಿಡಿದನುಗ್ರಹಿಸುವ ॥

ಭವಮಾಲೆಗಲಸು ಪುಸಿಯದಿರೆಡರು ಬಂದು ।
ಕವಿಯಲಂಜದಿರು ಸಂಪದದೊಳು ॥

ತವೆ ಮದವಳಿದಿರು ತತ್ತ್ವ ಸಂತತಿಯನು ।
ವಿವರಿಸಿ ನೋಡೆಂದು ತಿಳುಪುವ ॥

(ಕೈ. ಪ. ೧–೩)

ಹೀಗೆ ಶ್ರೀಮನ್ನಿಜಗುಣ ಶಿವಯೋಗಿಗಳು ಉಪದೇಶಿಸಿದ ಪ್ರಕಾರ ಶಾಸ್ತ್ರ ನಿಷಿದ್ಧಾಚರಣೆಗಳನ್ನು ತ್ಯಜಿಸಿ ವಿಹಿತಮಾರ್ಗದಲ್ಲಿ ನಡೆದದ್ದಾದರೆ ಮನುಷ್ಯನಿಗೆ ಗುರುಕರುಣೆ–ಶಿವಕರುಣೆಗಳು ಸಹಜವಾಗಿ ಪ್ರಾಪ್ತವಾಗುವವು. ''ನ ಗುರೋರಧಿಕಂ'' ಎಂಬ ಪ್ರಮಾಣಾನುಸಾರವಾಗಿ, ಹಿಂದೂ ಸಂಸ್ಕೃತಿಯ ಸಕಲ ಮತಗಳಲ್ಲಿ ದೇವರಿಗಿಂತಲೂ ಗುರುವಿಗೆ ಹೆಚ್ಚಿನ ಸ್ಥಾನವಿದೆ. ದೇವರ ಅನುಗ್ರಹವನ್ನು ಪಡೆಯಬೇಕಾದರೆ ಗುರುವಿನ ಅನುಗ್ರಹವೇ ಮೂಲವು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರೂ ''ಗುರು ಭಕ್ತಿವಿಹೀನಸ್ಯ ಶಿವಭಕ್ತಿರ್ನಜಾಯತೇ'' (ಸಿ.ಶಿ. ೧೧–೨೪) ಎಂಬುದಾಗಿ ಗುರುಭಕ್ತಿಗೆ ಆದ್ಯತೆಯನ್ನು ಕೊಟ್ಟಿದ್ದಾರೆ. ಕೂಡಲಸಂಗಮ ಕ್ಷೇತ್ರದ ಶ್ರೀ ಜಾತವೇದ ಮುನಿ ಶಿವಾಚಾರ್ಯರಿಂದ ಲಿಂಗದೀಕ್ಷೆಯನ್ನು ಹೊಂದಿ ಶಿವಾನುಗ್ರಹವನ್ನು ಪಡೆದು ಭಕ್ತಿಭಂಡಾರಿ ಎನಿಸಿದ ಶ್ರೀ ಬಸವಣ್ಣನವರಾದರೂ ತಮ್ಮ ಅನುಭವದ ವಚನದಲ್ಲಿ ''ಶಿವ ಪಥವನರಿವಡೆ ಗುರುಪಥವೇ ಮೊದಲು'' ಎಂಬುದಾಗಿ ನುಡಿದಿದ್ದಾರೆ.

ಮನುಷ್ಯ ಜೀವನದ ಲಕ್ಷ್ಯಗಳೆಂದರೆ ಭೋಗ–ಮೋಕ್ಷಗಳು. ಈಶ್ವರನು ತನ್ನನ್ನು ಆರಾಧಿಸುವ ಭಕ್ತರಿಗೆ ಉತ್ತಮೋತ್ತಮ ಭೋಗಫಲಗಳನ್ನು ದಯಪಾಲಿಸುವನೇ ವಿನಹ ಮೋಕ್ಷವನ್ನನುಗ್ರಹಿಸನು; ಆದರೆ ಸದ್ಗುರುಗಳು ಭೋಗ–ಮೋಕ್ಷಗಳೆರಡನ್ನೂ ಅನುಗ್ರಹಿಸುವ ಸಾಮರ್ಥ್ಯವುಳ್ಳವರಾಗಿದ್ದಾರೆ. ಅಂತೆಯೇ ''ಆತ್ಮಜ್ಞಂ ಹ್ಯರ್ಚಯೇದ್ಭೂತಿ ಕಾಮಃ'' ಎಂದು ಶ್ರುತಿಯ ಆದೇಶವಿದೆ. ಈಶ್ವರಾರಾಧನೆಯನ್ನು ಮಾಡಿ ಈಶ್ವರನಿಗಿಂತ ಭಿನ್ನಗಳಾದ ಭೋಗಫಲಗಳನ್ನು ಪಡೆಯುವದಕ್ಕಿಂತ ಸದ್ಗುರುಗಳನ್ನು ಆರಾಧಿಸಿ ಈಶ್ವರನನ್ನೇ ಪ್ರಾಪ್ತಿ ಮಾಡಿಕೊಳ್ಳುವುದು ಶ್ರೇಷ್ಠವು. ಯಾಕೆಂದರೆ ಈಶ್ವರನೇ ನಮಗೆ ಪ್ರಾಪ್ತವಾದಾಗ ಐಹಿಕ ಸುಖಸಾಧನೆಗಳ ಕೊರತೆಯಾಗದೇ ಕೊನೆಗೆ ಶಿವಸ್ವರೂಪರೇ ಆಗುವ ಮುಕ್ತಿ ಸುಖವೂ ಸಹ ದೊರೆಯುವದು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ರೀಗುರುವಿನ ಅನುಗ್ರಹದ ಫಲವೇ ಶಿವನ ಪ್ರಾಪ್ತಿ–ಎಂಬುದನ್ನು ಜಗತ್ತಿಗೆ ತಿಳಿಯಪಡಿಸುವದಕ್ಕಾಗಿ ಗುರುಕಾರುಣ್ಯಸ್ಥಲದ ನಂತರ ಲಿಂಗಧಾರಣಸ್ಥಲವನ್ನು ಉಪದೇಶಿಸಿದ್ದಾರೆ.

ಶಿವನ ಲಿಂಗೋದ್ಭವ ಲೀಲೆ–

ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಂ ॥

(ಸಿ. ಶಿ. ೬–೩೬)

ಎಂಬ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಆದೇಶದಂತೆ, 'ಲಿಂಗ' ಶಬ್ದದ ಅರ್ಥವು ಬಹು ವಿಶಾಲವಾಗಿದೆ. ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ಕಾರಣೀಭೂತವಾದ ಪರಮತತ್ವವೇ ಲಿಂಗವು. ಇದು ಪರಶಿವನ ನಿರ್ಗುಣ ನಿರಾಕಾರದ ಪ್ರತೀಕವು. ''ಅಣೋರಣೀಯಾನ್, ಮಹತೋ ಮಹೀಯಾನ್'' ಎಂಬ ಶ್ರುತಿ ಪ್ರಮಾಣದಂತೆ ಲಿಂಗಮೂರ್ತಿಯು ಅಣುವಿಗಿಂತ ಅಣುವಾಗಿಯೂ, ಮಹತ್ತಿಗಿಂತ ಮಹತ್ತಾಗಿಯೂ ಇದೆ. ಶಿವಪುರಾಣ, ಲಿಂಗಪುರಾಣ ಮತ್ತು ಸ್ಕಂದಪುರಾಣಗಳಲ್ಲಿ, ಪರಶಿವನು ವಿರಾಟ್ ಲಿಂಗರೂಪದಲ್ಲಿ ಅವತರಿಸಿದ ಲೀಲೆಯು ಬಹು ವಿಸ್ತಾರವಾಗಿದೆ. ಇದು ಶಿವನ ಇಪ್ಪತ್ತೈದನೇ ಲೀಲೆ ಎಂಬುದಾಗಿ ವಾತುಲ ಶುದ್ಧಾಗಮ (೧-೧೩೪)ದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಪ್ರಪಂಚವೆಲ್ಲ ಪ್ರಳಯಸಮುದ್ರದಲ್ಲಿ ಮುಳುಗಿದಾಗ ಬ್ರಹ್ಮ ಹಾಗೂ ವಿಷ್ಣು ಇವರಲ್ಲಿ-ನಾನು ಶ್ರೇಷ್ಠ, ನಾನು ಶ್ರೇಷ್ಠ-ಎಂಬುದಾಗಿ ಕಲಹ ಪ್ರಾರಂಭವಾಯಿತು. ಈ ಕಲಹವನ್ನು ಇತ್ಯರ್ಥಗೊಳಿಸುವದಕ್ಕಾಗಿ ಅವರೀರ್ವರ ಮಧ್ಯದಲ್ಲಿ ಪರಶಿವನು ವಿರಾಟ್ ಜ್ಯೋತಿರ್ಲಿಂಗದ ರೂಪದಲ್ಲಿ ಅವತರಿಸಿ ಅಶರೀರವಾಣಿಯಿಂದ ಹೇಳಿದ್ದೇನೆಂದರೆ-''ಈ ಲಿಂಗದ ಆದಿ-ಅಂತ್ಯಗಳನ್ನು ಅರಿತುಕೊಂಡು ಬನ್ನಿರಿ''. ಆ ಆದೇಶದಂತೆ ಬ್ರಹ್ಮನು ಲಿಂಗದ ಮಸ್ತಕವನ್ನರಿಯಲು ಹಂಸನಾಗಿ ಆಕಾಶದೆಡೆಗೆ ಹಾರಿದನು. ವಿಷ್ಣುವು ಶ್ವೇತವರಾಹ (ಬಿಳಿಹಂದಿ)ನಾಗಿ ಪಾತಾಳಕ್ಕಿಳಿದನು. ಹೀಗೆ ಈರ್ವರೂ ಸಹಸ್ರ ವರ್ಷ ಪರ್ಯಂತವಾಗಿ ತಮ್ಮ ಮಾರ್ಗದಲ್ಲಿ ಕ್ರಮಿಸಿಯೂ, ಆದಿ-ಅಂತ್ಯಗಳನ್ನು ಕಾಣದೇ ನಿರಾಶರಾಗಿ ಹಿಂತಿರುಗಿದರು. ಆದರೆ ಬ್ರಹ್ಮನು 'ಲಿಂಗಮಸ್ತಕವನ್ನು ಕಂಡು ಬಂದೆ' ಎಂದು ಸುಳ್ಳು ಸಾಧಿಸುವದಕ್ಕಾಗಿ ಕೇತಕಿ ಹಾಗೂ ಕಾಮಧೇನುಗಳನ್ನು ಸಾಕ್ಷಿಯಾಗಿ ತಂದಿದ್ದನು. ಕೇತಕಿಯು ಸುಳ್ಳು ಸಾಕ್ಷಿಯನ್ನು ಹೇಳಿದ್ದರಿಂದ, ನೀನು ಲಿಂಗ ಪೂಜೆಗೆ ಅನರ್ಹನೆಂದು ಪರಶಿವನು ಶಾಪವಿತ್ತನು. ಅದರಂತೆ ಬ್ರಹ್ಮನ ಪರವಾಗಿ ಸಾಕ್ಷಿ ಹೇಳಲು ಬಂದ ಕಾಮಧೇನುವು ಮಸ್ತಕದಿಂದ ಸುಳ್ಳನ್ನು ಹೇಳಿದರೂ, ಬಾಲವನ್ನು ಅಲ್ಲಾಡಿಸಿ, ಬ್ರಹ್ಮನು ಲಿಂಗಮಸ್ತಕವನ್ನು ನೋಡಿಲ್ಲ ವೆಂದು ಸತ್ಯವನ್ನು ನುಡಿದದ್ದಕ್ಕಾಗಿ, ಪರಮಾತ್ಮನು-ಸುಳ್ಳು ಹೇಳಿದ ನಿನ್ನ ಮಸ್ತಕದ ಪೂಜೆಗೆ ಫಲವಿಲ್ಲ, ಸತ್ಯನುಡಿದ ಪುಚ್ಛ (ಬಾಲ)ದ ಪೂಜೆಗೆ ಫಲ ಪ್ರಾಪ್ತಿ-ಎಂದು ಆದೇಶವಿತ್ತು, ಸುಳ್ಳು ಹೇಳಿದ ಬ್ರಹ್ಮನ ಪೂಜೆಯು ಆಗಬಾರದೆಂದು ಶಾಪವಿತ್ತನಲ್ಲದೆ, ಪಾದವನ್ನು ಕಾಣಲಿಲ್ಲವೆಂದು ಸತ್ಯನುಡಿದ ವಿಷ್ಣುವಿಗೆ, ನೀನು ಜಗತ್ಪೂಜ್ಯನಾಗೆಂದು ಆಶೀರ್ವದಿಸಿದನು. ಅಂತೆಯೇ ಲೋಕದಲ್ಲಿ ಬ್ರಹ್ಮದೇವಾಲಯಗಳು ಬಹಳ ವಿರಳ. ಲೋಕದ ಜನರಾದರೂ ಗೋವಿನ ಮಸ್ತಕಕ್ಕಿಂತಲೂ ಅದರ ಪುಚ್ಛವನ್ನೇ ಪೂಜಿಸುತ್ತಿದ್ದಾರೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ಅತಿ ವೇಗವಾಗಿ ಚಲಿಸುವ ವಸ್ತುವೆಂದರೆ ಪ್ರಕಾಶವು. ಇದು ಒಂದು ಸೆಕೆಂಡಿಗೆ ೧ ಲಕ್ಷ ೩೦ ಸಾವಿರ ಮೈಲುಗಳ ವೇಗದಲ್ಲಿ ಚಲಿಸುವುದಾಗಿ ವಿಜ್ಞಾನಿಗಳ ಹೇಳಿಕೆ. ಇಷ್ಟು ವೇಗದಿಂದ ಚಲಿಸಿದ ಸೂರ್ಯನ ಪ್ರಕಾಶವು ಭೂಮಿಗೆ ಬರಲು ಒಂಭತ್ತುವರೆ ಮಿನಿಟುಗಳು ತಗುಲುವವು. ಆದರೆ ನಾವು

ಆಕಾಶದಲ್ಲಿ ಕಾಣುವ ಅನಂತ ನಕ್ಷತ್ರಗಳಾದರೂ ಈ ಸೂರ್ಯನಿಗಿಂತಲೂ ಬೃಹದಾಕಾರವಾಗಿವೆ. ಅವುಗಳ ಪ್ರಕಾಶವಾದರೂ ಅಷ್ಟೇ ವೇಗದಿಂದ ಸಹಸ್ರಾರು ವರ್ಷಗಳಿಂದ ಭೂಮಿಯತ್ತ ಧಾವಿಸುತ್ತಿದ್ದರೂ, ಅವುಗಳ ಪ್ರಕಾಶ ಇನ್ನೂ ಭೂಮಿಯನ್ನು ತಲುಪಿರುವುದಿಲ್ಲವೆಂಬುದಾಗಿ ವಿಜ್ಞಾನಿಗಳು ಹೇಳುತ್ತಾರೆ. ಇದರಿಂದ ವಿಶ್ವವು ಎಷ್ಟು ವಿಶಾಲವಾಗಿದೆ ಎಂಬುದು ತಿಳಿದುಬರುತ್ತದೆ. ಕಾರ್ಯಭೂತವಾದ ಈ ವಿಶ್ವವೇ ಇಷ್ಟು ವಿಶಾಲವಾದ ಇದರ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣೀಭೂತವಾದ ಆ ಲಿಂಗತತ್ತ್ವವು ಅದೆಷ್ಟು ವಿಶಾಲವಾಗಿರಲಿಕ್ಕಿಲ್ಲ! ಅಂತಹ ಲಿಂಗತತ್ತ್ವದ ಪಾದ–ಮಸ್ತಕಗಳನ್ನು ಅರಿಯಲು ವಿಷ್ಣು–ಬ್ರಹ್ಮರು, ಸಹಸ್ರಾರು ವರ್ಷ ಅತಿವೇಗವಾಗಿ ಪ್ರಯಾಣ ಮಾಡಿದರೂ ಕಾಣಲಾಗಲಿಲ್ಲವೆಂಬ ಪುರಾಣದ ಮಾತುಗಳು ಇಂದಿನ ವಿಜ್ಞಾನ ಯುಗದಲ್ಲಿ ಕಾಲ್ಪನಿಕಗಳೆಂದು ಪರಿಗಣಿಸಲ್ಪಡದೇ ವೈಜ್ಞಾನಿಕಗಳೆಂದೇ ತಿಳಿಯಲ್ಪಡುತ್ತವೆ.

**ದೇವ-ದಾನವಾದಿಗಳು ಲಿಂಗಪೂಜಕರು :**

ಹೀಗೆ ಪ್ರಪಂಚದ ಆದಿಯಲ್ಲಿ ಪರಶಿವನು ಲಿಂಗರೂಪದಲ್ಲಿ ಅವತರಿಸಿರುವುದರಿಂದ ಲಿಂಗದ ಇತಿಹಾಸವು ಪ್ರಪಂಚದಷ್ಟೇ ಪ್ರಾಚೀನವಾದುದು. ಸೃಷ್ಟಿಯ ಆದಿಯಿಂದ ಇಂದಿನವರೆಗೆ ಲಿಂಗಪೂಜೆಯು ಅವ್ಯಾಹತವಾಗಿ ಸಾಗಿಬಂದಿದೆ. ಪ್ರಪಂಚದ ಮೂಲತತ್ತ್ವವು ಲಿಂಗವೆಂಬುದನ್ನರಿತ ದೇವ, ದಾನವ, ಯಕ್ಷ, ರಾಕ್ಷಸ, ಗಂಧರ್ವ, ನಾಗ ಮತ್ತು ಮನುಷ್ಯಾದಿಗಳು ಯುಗ–ಯುಗಗಳಲ್ಲಿ ವಿವಿಧ ದ್ರವ್ಯಗಳಿಂದ ಲಿಂಗವನ್ನು ನಿರ್ಮಿಸಿ ಪೂಜಿಸಿದ ವಿಷಯವು ಶೈವಪುರಾಣಗಳಲ್ಲಿ ಹೇರಳವಾಗಿ ಹೇಳಲ್ಪಟ್ಟಿದೆ.

ಲಿಂಗಪುರಾಣ ಪೂರ್ವಭಾಗದ ೭೪ನೇ ಅಧ್ಯಾಯದಲ್ಲಿ–ವಿಷ್ಣುವು ಇಂದ್ರನೀಲಮಣಿಯ ಲಿಂಗವನ್ನೂ, ಇಂದ್ರನು ಪದ್ಮರಾಗ ಮಣಿಯ ಲಿಂಗವನ್ನೂ, ವಿಶ್ರವನ ಮಗನು ಸ್ವರ್ಣಲಿಂಗವನ್ನೂ, ವಿಶ್ವೇದೇವತೆಗಳು ಬೆಳ್ಳಿಯ ಲಿಂಗವನ್ನೂ, ಅಷ್ಟವಸುಗಳು ಚಂದ್ರಕಾಂತ ಮಣಿಯ ಲಿಂಗವನ್ನೂ, ಅಶ್ವಿನೀ ಕುಮಾರರು ಪಾರ್ಥಿವ ಲಿಂಗವನ್ನೂ, ವರುಣನು ಸ್ಫಟಿಕ ಲಿಂಗವನ್ನೂ, ಸೂರ್ಯನು ತಾಮ್ರ ಲಿಂಗವನ್ನೂ, ಚಂದ್ರನು ಮುತ್ತಿನ ಲಿಂಗವನ್ನೂ, ಅನಂತಾದಿ ನಾಗಗಳು ಹವಳದ ಲಿಂಗವನ್ನೂ, ದೈತ್ಯರು ಅಯಸ್ಕಾಂತದ ಲಿಂಗವನ್ನೂ, ರಾಕ್ಷಸರು ಲೋಹಮಯ ಲಿಂಗವನ್ನೂ, ಮಯಾಸುರನು ಮರಕತಮಣಿಯ ಲಿಂಗವನ್ನೂ, ಲಕ್ಷ್ಮಿಯು ಬಿಲ್ವವೃಕ್ಷದ ಲಿಂಗವನ್ನೂ, ಮುನಿಗಣರು ದರ್ಭೆಯ ಲಿಂಗವನ್ನೂ, ಸರಸ್ವತಿಯು ರತ್ನಲಿಂಗವನ್ನೂ, ದುರ್ಗೆಯು ಹೇಮಲಿಂಗವನ್ನೂ ಮತ್ತು ಪಿಶಾಚಿಗಳು ಶೀಸದ ಲಿಂಗವನ್ನೂ ಹೀಗೆ ಅವರವರ ಯೋಗ್ಯತೆಗೆ ಅನುಸಾರವಾಗಿ ನಾನಾ ವಿಧ ದ್ರವ್ಯಗಳಿಂದ ಶಿವಲಿಂಗಗಳನ್ನು ನಿರ್ಮಿಸಿ ಪೂಜೆ ಮಾಡಿ ತಮ್ಮ ಅಭೀಷ್ಟವನ್ನು ಪ್ರಾಪ್ತಿ ಮಾಡಿಕೊಂಡ ವಿಷಯವು ಬಹು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ.

**ಲಿಂಗನಿರ್ಮಾಣದ ದ್ರವ್ಯಗಳು :**

ಇದರಂತೆ ಗರುಡಪುರಾಣದಲ್ಲಿ ಪುಷ್ಪ, ಗೋಮಯಂ ಉಪ್ಪು, ಭಸ್ಮ, ಬೆಲ್ಲ, ಸಕ್ಕರೆ, ಧಾನ್ಯ, ಫಲ, ಕರಿಕೆ, ಕರ್ಪೂರ, ಬೆಣ್ಣೆ ಅಯಸ್ಕಾಂತ, ಸ್ಫಟಿಕ, ವೈಢೂರ್ಯ

ಮುಂತಾದ ಮೂವತ್ತಾರು ದ್ರವ್ಯಗಳಿಂದ ಶಿವಲಿಂಗವನ್ನು ನಿರ್ಮಿಸಿ ಪೂಜಿಸುವ ವಿಷಯವು ಪ್ರತಿಪಾದಿತವಾಗಿರುವುದಾಗಿ ಶ್ರೀ ರಾಮದಾಸಗೌಡರು (ಶಿವಾಂಕ ಪುಟ ೧೫೦) ವಿಸ್ತೃತವಾಗಿ ನಿರೂಪಿಸಿದ್ದಾರೆ.

ಹೀಗೆ ಅನೇಕ ವಿಧಗಳಾದ ಲಿಂಗಗಳನ್ನು ಲಿಂಗಪುರಾಣದಲ್ಲಿ–''ಷಡ್ವಿಧಂ ಲಿಂಗ ಮಿತ್ಯಾಹುರ್ದ್ರವ್ಯಾಣಾಂ ಚ ಪ್ರಭೇದತಃ'' (೭೪–೧೩) ಎಂದು ಹೇಳಿ, ಶೈಲಜ, ರತ್ನಜ, ಧಾತುಜ, ದಾರುಜ, ಮೃಣ್ಮಯ ಮತ್ತು ಕ್ಷಣಿಕ ಎಂಬುದಾಗಿ ಆರು ಪ್ರಕಾರವಾಗಿ ವಿಂಗಡಿಸಿದ್ದಾರೆ. ಈ ಎಲ್ಲ ವಿಶ್ಲೇಷಣೆಯನ್ನು ನೋಡಿದಾಗ ಲಿಂಗವಾಗದ ಪದಾರ್ಥವೇ ಜಗತ್ತಿನಲ್ಲಿ ಇರುವುದಿಲ್ಲ. ಅಂತೆಯೇ ''ಸರ್ವಂ ಲಿಂಗಮಯಂ ಜಗತ್'' ಎಂದಿದ್ದಾರೆ ಹಿರಿಯರು.

**ಇಷ್ಟಲಿಂಗ ನಿರ್ಮಾಣಕ್ಕೆ ಉಪಯೋಗಿಸುವ ವಿಭಿನ್ನ ಶಿಲೆಗಳು :**

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಷ್ಟಲಿಂಗ ನಿರ್ಮಾಣಕ್ಕೆ ಸ್ಫಟಿಕ, ಶೈಲಜ, ಬಾಣ, ಚಂದ್ರಕಾಂತ ಮತ್ತು ಸೂರ್ಯಕಾಂತಗಳೆಂಬ ವಿಶಿಷ್ಟ ಶಿಲೆಗಳ ಉಲ್ಲೇಖ ವನ್ನು ಮಾಡಿದ್ದಾರೆ. ಈ ಶಿಲೆಗಳು ಭೌತಿಕವಾಗಿಯೂ ವಿಲಕ್ಷಣ ಶಕ್ತಿಯುಳ್ಳವುಗಳಾಗಿವೆ. ಚಂದ್ರಕಾಂತ ಮತ್ತು ಸೂರ್ಯಕಾಂತ ಶಿಲೆಗಳು ಆಕರ್ಷಣ ಶಕ್ತಿಯುಳ್ಳ ಆಯಸ್ಕಾಂತ ಶಿಲೆಯ ಜಾತಿಗೆ ಸೇರಿದವುಗಳಾಗಿವೆ. ಚಂದ್ರಕಾಂತ ಶಿಲೆಯು ಚಂದ್ರನ ಕಿರಣಸ್ಪರ್ಶ ದಿಂದ ಜಲವನ್ನು ಹೊರಹೊಮ್ಮಿಸಿದರೆ, ಸೂರ್ಯಕಾಂತ ಶಿಲೆಯು ಸೂರ್ಯ ಕಿರಣದ ಸ್ಪರ್ಶದಿಂದ ಅಗ್ನಿಯನ್ನು ಹೊರಚೆಲ್ಲುವುದು. ಪ್ರಾಚೀನ ಸಂಸ್ಕೃತ ಕವಿಗಳು ತಮ್ಮ ಸಾಹಿತ್ಯದಲ್ಲಿ ಇವುಗಳ ವರ್ಣನೆಯನ್ನು ಮಾಡಿದ್ದುಂಟು. ಇಂದು ಇಂತಹ ಉತ್ಕೃಷ್ಟ ಶಿಲೆಗಳ ಅಭಾವವಿದೆ. ಸ್ಫಟಿಕ, ಶೈಲಜ ಮತ್ತು ಬಾಣಲಿಂಗಗಳು ಇಂದು ಹೇರಳವಾಗಿ ದೊರೆಯುವದುಂಟು. ವೀರಶೈವ ಸಂಸ್ಕೃತಿಯಲ್ಲಿ ಶೈಲಜ ಲಿಂಗಗಳ ಉಪಯೋಗವು ಬಹಳಷ್ಟಿದೆ.

''ಶೈಲಜಂ ಸರ್ವಸಿದ್ಧಿದಂ''; ''ಶೈಲಜಂ ಚೋತ್ತಮಂ ಪ್ರೋಕ್ತಂ ಮಧ್ಯಮಂ ಚೈವ ಧಾತುಜಂ'' (ಲಿಂಗಪುರಾಣ ಪೂರ್ವಭಾಗ ೭೪ ಅಧ್ಯಾಯ ೧೭–೧೮) ''ಶ್ರೀ ಶೈಲಜಂ'' ಮಹಾದೇವಿ ಹ್ಯೈಹಿಕಾಮುಷ್ಮಿಕಪ್ರದಂ । ಸರ್ವೋತ್ತಮೋತ್ತಮಂ ಲಿಂಗಂ ಸರ್ವಾಭೀಷ್ಟಾರ್ಥದಾಯಕಂ'' (ಪಾರಮೇಶ್ವರ ತಂತ್ರ–ದ್ವಿ. ಪಟಲ ೧೧)–ಹೀಗೆ ಲಿಂಗಪುರಾಣ ಮತ್ತು ಪಾರಮೇಶ್ವರ ತಂತ್ರ ಮತ್ತು ವೀರಶೈವ ಧರ್ಮ ಶಿರೋಮಣಿ ಮುಂತಾದ ಗ್ರಂಥಗಳಲ್ಲಿ ಶ್ರೀಶೈಲಪರ್ವತದ ಶಿಲೆಯಿಂದ ನಿರ್ಮಿತಗಳಾದ ಲಿಂಗಗಳು ಉತ್ಕೃಷ್ಟಗಳೆಂದು ಪ್ರತಿಪಾದಿಸಲ್ಪಟ್ಟಿದೆ.

**ಶಿಲೆಯ ಉತ್ಕೃಷ್ಟತೆ :**

ಜಗದ್ವ್ಯಾಪಿಯೂ ಜಗದಂತರ್ಯಾಮಿಯೂ ಆದ ಪರಶಿವತತ್ತ್ವವು ಜಡ– ಚೇತನಗಳೆರಡರಲ್ಲಿಯೂ ಸಮಾನವಾಗಿ ವ್ಯಾಪಿಸಿಕೊಂಡಿರುವುದರಿಂದ, ಚೇತನಗಳಲ್ಲಿ ಪೂಜೆಯನ್ನು ವಿಧಿಸದೇ ಜಡ ದ್ರವ್ಯಗಳಾದ ಶಿಲೆ ಮುಂತಾದವುಗಳಿಂದ ನಿರ್ಮಿಸಿದ

ಶಿವಲಿಂಗವನ್ನು ಪೂಜಿಸಲು ವಿಧಿಸಿದ ರಹಸ್ಯವೇನಿರಬಹುದು ? ಎಂಬ ಜಿಜ್ಞಾಸೆಯು ವಿಚಾರಕರ ಮನದಲ್ಲಿ ಸುಳಿಯದಿರದು. ಆದಕಾರಣ ಆಚಾರ್ಯರ ಉಕ್ತಿಯ ರಹಸ್ಯ ವನ್ನಿಲ್ಲಿ ಆಲೋಚಿಸೋಣ–

ನ ದ್ವಿಷಂತಿ ನ ಯಾಚಂತೇ ಪರನಿಂದಾಂ ನ ಕುರ್ವತೇ ।
ಅನಾಹೂತಾ ನ ಚಾಯಾಂತಿ ತೇನಾಶ್ಮಾನೋಽಪಿ ದೇವತಾ ಃ ॥

(ಸುಭಾಷಿತರತ್ನಭಾಂಡಾಗಾರ–ಪುಟ ೧೫೫)

ಈ ಸುಭಾಷಿತದಲ್ಲಿ ಕವಿಯು ಶಿಲೆಯಲ್ಲಿಯ ಉತ್ಕೃಷ್ಟ ಗುಣಗಳನ್ನು ಎತ್ತಿತೋರಿಸಿದ್ದಾನೆ. ಅವು ಯಾವುವೆಂದರೆ–ಶಿಲೆಗಳು ಪರಸ್ಪರ ದ್ವೇಷಿಸುವದಿಲ್ಲ, ಅನ್ಯರಿಗೆ ಏನನ್ನೂ ಬೇಡುವದಿಲ್ಲ, ಪರರ ನಿಂದೆಯನ್ನು ಮಾಡುವದಿಲ್ಲ ಮತ್ತು ಕರೆದುಕೊಂಡು ಹೋಗದೇ ಯಾರ ಮನೆಗಾದರೂ ತಾವಾಗಿಯೇ ಹೋಗುವದಿಲ್ಲ. ಈ ಗುಣಗಳು ಶಿಲೆಗಳಲ್ಲಿ ಇರುವದರಿಂದ ಶಿಲೆಗಳು ಜಗತ್ತಿನಲ್ಲಿ ದೇವರಾಗಿ ಪೂಜೆಗೊಳ್ಳುತ್ತಲಿವೆ. ಈ ಎಲ್ಲ ಗುಣಗಳೂ ಎಲ್ಲ ಶಿಲೆಗಳಲ್ಲಿ ಸಹಜವಾಗಿ ಇರುವಂತೆ, ಎಲ್ಲ ಮನುಷ್ಯರಲ್ಲಿ ಇರುವದಿಲ್ಲ. ಮನುಷ್ಯನು ಅನ್ಯರನ್ನು ದ್ವೇಷಿಸುತ್ತಾನೆ, ಪರರನ್ನು ಬೇಡಿಕೊಳ್ಳುತ್ತಾನೆ. ಪರನಿಂದೆಯನ್ನು ಮಾಡುತ್ತಾನೆ. ಅಲ್ಲದೇ ಕರೆಯದೇ ಇರುವ ಸ್ಥಾನಗಳಿಗೆ ತಾನಾಗಿಯೇ ಹೋಗುತ್ತಾನೆ. ಈ ದುರ್ಗುಣಗಳ ಕಾರಣದಿಂದಲೇ ಎಲ್ಲ ಮನುಷ್ಯರೂ ಜಗತ್ತಿನಲ್ಲಿ ಪೂಜ್ಯ ರಾಗಿರುವದಿಲ್ಲ. ಅಂತೆಯೇ–''ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ'' ಎಂಬ ಕವಿವಾಣಿ ಪ್ರಸಿದ್ಧವಿದೆ. ಅಂದರೆ ಪುರುಷ, ಸ್ತ್ರೀ ಮತ್ತು ನಪುಂಸಕ ಗಳೆಂಬ ಲಿಂಗಗಳಾಗಲೀ, ಹಿರಿಯ–ಕಿರಿಯ ವಯಸ್ಸುಗಳಾಗಲೀ ಪೂಜಾರ್ಹತೆಯನ್ನು ವ್ಯಕ್ತಗೊಳಿಸಲಾರವು. ಆದರೆ ಸದ್ಗುಣಗಳೇ ಪೂಜನೀಯವಾದವುಗಳು. ಸದ್ಗುಣಗಳು ಪುರುಷನಲ್ಲಿ ಒಡಮೂಡಿದಾಗ ಆತನು ಪೂಜ್ಯನಾಗಿಯೂ, ಸ್ತ್ರೀಯಲ್ಲಿ ಕಂಗೊಳಿಸಿದಾಗ ಅವಳು ಪೂಜ್ಯಳಾಗಿಯೂ, ಇಲ್ಲವೇ ಯಾವದಾದರೊಂದು ಜಡಪದಾರ್ಥದಲ್ಲಿ ಕಂಡಾಗ ಅದು ಪೂಜ್ಯವಾಗಿಯೂ ತೋರುತ್ತದೆ. ಸಾಮಾನ್ಯವಾಗಿ ''ಲಕ್ಷಕೊಬ್ಬ ಭಕ್ತ ಕೋಟಿಗೊಬ್ಬ ಶರಣ'' ಎಂಬ ಅನುಭವಿಕರ ವಚನಾನುಸಾರವಾಗಿ, ಮನುಷ್ಯ ಜಾತಿಯಲ್ಲಿ ಅವಗುಣಿಗಳೇ ಬಹಳ ; ಗುಣವಂತರು ಸಿಗುವುದು ಲಕ್ಷಕ್ಕೋ ಕೋಟಿಗೋ ಒಬ್ಬರು. ಅಂತಹ ವ್ಯಕ್ತಿಗಳಾದರೂ ಜಗತ್ತಿನಲ್ಲಿ ಪೂಜ್ಯರೇ ಆಗಿದ್ದಾರೆ ಅದರಂತೆ ಮತ್ತೋರ್ವ ಸುಭಾಷಿತಕಾರನು–

ತ್ಯಾಗ ಏಕೋ ಗುಣಃ ಶ್ಲಾಘ್ಯಃ ಕಿಮನ್ಯೈರ್ಗುಣರಾಶಿಭಿಃ ।
ತ್ಯಾಗಾಜ್ಜಗತಿ ಪೂಜ್ಯಂತೇ ಪಶುಪಾಷಾಣಪಾದಪಾಃ ॥

(ಸುಭಾಷಿತರತ್ನಭಾಂಡಾಗಾರ–ಪುಟ ೭೧)

ಸರ್ವಶ್ರೇಷ್ಠವಾದ ತ್ಯಾಗಗುಣವಿರುವ ಕಾರಣದಿಂದಲೇ ಜಗತ್ತಿನಲ್ಲಿ ಗೋ, ಮುಂತಾದ ಪಶುಗಳೂ, ಶಿಲಾನಿರ್ಮಿತ ವಿಗ್ರಹಗಳೂ ಹಾಗೂ ಬಿಲ್ವ ಮುಂತಾದ ಗಿಡಗಳೂ ಪೂಜನೀಯಗಳಾಗಿವೆ. ಗೋ ವೃಕ್ಷ ಮುಂತಾದವುಗಳ ಜೀವನವು ಸ್ವಾರ್ಥಕ್ಕಿಂತಲೂ ಪರೋಪಕಾರ ಪ್ರಧಾನವಾದುದು. ಅಂತೆಯೇ–

ರವಿಶ್ಚಂದ್ರೋ ಘನಾ ವೃಕ್ಷಾ ನದೀ ಗಾವಶ್ಚ ಸಜ್ಜನಾ ಃ।
ಏತೇ ಪರೋಪಕಾರಾಯ ಯುಗೇ ದೇವೇನ ನಿರ್ಮಿತಾ ಃ॥

ಎಂಬೀ ಸುಭಾಷಿತದಲ್ಲಿ, ಸೂರ್ಯ, ಚಂದ್ರ, ಮೋಡ, ಗಿಡ, ನದೀ, ಗೋವು ಮತ್ತು ಸಜ್ಜನರು ಇವರೆಲ್ಲ ಪರೋಪಕಾರಿಗಳೆಂಬ ಮಾಲಿಕೆಯಲ್ಲಿ ಗಣಿಸಲ್ಪಟ್ಟಿದ್ದಾರೆ. ಒಬ್ಬ ಸತ್ಪುರುಷನಿಗೆ ಅರ್ಪಿಸಬೇಕಾದ ಶ್ರದ್ಧೆಯನ್ನು ರವಿ, ವೃಕ್ಷ ಮುಂತಾದವುಗಳಿಗೂ ಅರ್ಪಿಸ ಬೇಕೆಂಬುದೇ ಕವಿಯ ತಾತ್ಪರ್ಯವು.

ಅಂತೆಯೇ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಪ್ರಕೃತಿಯನ್ನೇ ಪರಮಾತ್ಮನೆಂದು ಪೂಜಿಸುವ ಪದ್ಧತಿಯೂ ರೂಢಿಯಲ್ಲಿದೆ. ಇದರ ರಹಸ್ಯಾರ್ಥವನ್ನು ತಿಳಿಯದ ಅನೇಕ ಜನ ಅವೈಜ್ಞಾನಿಕರು ಈ ಪ್ರಕೃತಿ ಪೂಜೆಯನ್ನು ಮೂಢನಂಬಿಕೆ ಎಂಬುದಾಗಿ ಕಡೆಗಣಿ ಸುತ್ತಲಿದ್ದಾರೆ. ತನಗಾಗುವ ನೋವುಗಳನ್ನು ಮೌನವಾಗಿ ಅನುಭವಿಸಿ ಮನುಷ್ಯನಿ ಗಾಗಿಯೇ ತನ್ನ ಜೀವನವನ್ನು ಅರ್ಪಣ ಮಾಡುವ ಪಶು–ವೃಕ್ಷ–ಪಾಷಾಣಗಳಿಂದಲೂ ಮನುಷ್ಯನು ತಿಳಿದುಕೊಳ್ಳುವದು ಬಹಳವಿದೆ. ಅಂತೆಯೇ–

ಇಟ್ಟರೆ ಸೆಗಣಿಯಾದೆ, ತಟ್ಟಿದರೆ ಕುರುಳಾದೆ
ಸುಟ್ಟರೆ ನೊಸಲಿಗೆ ವಿಭೂತಿಯಾದೆ
ತಟ್ಟದೇ ಹಾಕಿದರೆ ಮೇಲ್ಗೊಬ್ಬರವಾದೆ
ನೀನಾರಿಗಾದೆಯೋ ಎಲೆ ಮಾನವಾ ? ॥

ಎಂಬುದಾಗಿ ಒಂದು ನೊಂದ ಗೋವು ಮನುಷ್ಯ ಸಮಾಜಕ್ಕೆ ಬಿಡಿಸಲಾರದ ಪ್ರಶ್ನೆ ಯನ್ನು ಹಾಕಿದ್ದನ್ನು ನೋಡಿದರೆ ಮೈನಡುಗುತ್ತದೆ. ಆದಕಾರಣ ಪ್ರಕೃತಿಯ ಜಡ ವಸ್ತು ಗಳಾದ ಶಿಲೆಗಳಿಂದ ನಿರ್ಮಿಸಲ್ಪಟ್ಟ ಶಿವಲಿಂಗಗಳನ್ನು ಪೂಜಿಸಿ ಮನುಷ್ಯನು ಅವು ಗಳಲ್ಲಿಯ ಉತ್ಕೃಷ್ಟ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ತಾನೂ ಪೂಜ್ಯತೆಯನ್ನು ಹೊಂದಲೆಂಬುದೇ ಶಿಲಾನಿರ್ಮಿತ ಲಿಂಗಗಳ ಪೂಜೆಯ ರಹಸ್ಯಾರ್ಥವು.

ಇನ್ನು ''ಅತ್ಯಂತಗೂಢಚೈತನ್ಯಂ ಜಡಮವ್ಯಕ್ತಮುಚ್ಯತೇ'' (ಸಿ. ಶಿ. ೫–೬೯) ಎಂಬ ಆಚಾರ್ಯರ ಉಕ್ತಿಯನ್ನವಲೋಕಿಸಿದಾಗ ಜಗತ್ತಿನಲ್ಲಿ ಜಡವೆನ್ನುವ ಪದಾರ್ಥವೇ ಇರುವದಿಲ್ಲ, ಗೂಢವಾದ ಚೈತನ್ಯಕ್ಕೆ ಲೋಕದ ಜನರು ಜಡವೆಂದು ಕರೆದಿದ್ದಾರೆ. ಮೊದಲು ನಾವು ಗಿಡಬಳ್ಳಿಗಳನ್ನು ಜಡವೆಂದು ಭಾವಿಸುತ್ತಿದ್ದೆವು. ಆದರೆ ಅವುಗಳೂ ಮನುಷ್ಯರಂತೆ ಉಸಿರಾಡುತ್ತವೆ–ಎಂಬುದನ್ನು ವಿಜ್ಞಾನಿಗಳು ಗುರುತಿಸಿದರು. ವಿಜ್ಞಾನದ ವಿಕಾಸವಾದಂತೇ ಗಿಡ–ಬಳ್ಳಿಗಳು ಶ್ವಾಸೋಚ್ಛ್ವಾಸವನ್ನು ಮಾಡುವದಷ್ಟೇ ಅಲ್ಲ ಮನುಷ್ಯನಿಗಿರುವಂತೆ ಅವುಗಳಿಗೂ ಮನಸ್ಸಿದೆ, ಅವುಗಳಿಗೂ ನೋವು–ನಲಿವುಗಳ ಅರಿವಾಗುತ್ತದೆ ಎಂಬುದನ್ನೂ ಗುರುತಿಸಿದ್ದಾರೆ. ಇನ್ನೂ ಸ್ವಲ್ಪ ಮುಂದೆ ಹೋಗಿ ಹೇಳುವದಾದರೆ ಮನುಷ್ಯನ ಮನಸ್ಸಿಗಿಂತಲೂ ಗಿಡ–ಬಳ್ಳಿಗಳ ಮನಸ್ಸು ಅತೀ ಕೋಮಲವಾಗಿದೆ. ಒಬ್ಬ ಮನುಷ್ಯನನ್ನು ಯಾರಾದರೂ ಹೊಡೆಯುತ್ತಿದ್ದರೆ ಮಗ್ಗುಲಲ್ಲಿಯ ಶತ್ರು ಭಾವನೆಯ ಮತ್ತೋರ್ವನು ಸಂತೋಷವನ್ನನುಭವಿಸುತ್ತಾನೆ. ಆದರೆ ಅಡವಿಯಲ್ಲಿಯ ಯಾವದೇ ಗಿಡವನ್ನು ಓರ್ವನು ಕೊಡಲಿಯಿಂದ ಕಡಿಯುತ್ತಿರು

ವಾಗ ಸುತ್ತುಮುತ್ತಲಿನ ಎಲ್ಲ ಗಿಡಗಳೂ ಕಡಿಸಿಕೊಳ್ಳುವ ಗಿಡದಷ್ಟೇ ಸಮಾನವಾದ ನೋವನ್ನು ಅನುಭವಿಸುತ್ತವೆ ಎಂಬುದನ್ನು ಸೂಕ್ಷ್ಮವಾದ ವೈಜ್ಞಾನಿಕ ಪರೀಕ್ಷೆಯಿಂದ ಇಂದು ವಿಜ್ಞಾನಿಗಳು ತಿಳಿದುಕೊಂಡಿದ್ದಾರೆ. ಆದ್ದರಿಂದ ಇಂದು ಗಿಡ–ಬಳ್ಳಿಗಳನ್ನು ಯಾರಾದರೂ ಜಡಪದಾರ್ಥಗಳು ಅಂದರೆ ಅವರನ್ನು ಅವೈಜ್ಞಾನಿಕರೆಂದೇ ಕರೆಯ ಬೇಕಾಗುವದು. ತಮ್ಮ ನೋವು–ನಲಿವುಗಳನ್ನು ತಪಸ್ವಿಗಳಂತೆ ಮೌನವಾಗಿ ಅನು ಭವಿಸುತ್ತಿರುವ ಗಿಡ–ಬಳ್ಳಿಗಳಿಂದಲೂ ಮನುಷ್ಯನು ಬಹಳಷ್ಟು ಕಲಿಯಬೇಕಾಗಿದೆ.

ಗಿಡ–ಬಳ್ಳಿಗಳು ಚೇತನಗಳಾಗಿರಬಹುದು. ಆದರೆ ಕಲ್ಲು–ಮಣ್ಣುಗಳಾದರೋ ಜಡಗಳೇ ಎಂದು ಯಾರಾದರೂ ಹೇಳಿದರೆ ಅವರು ತಮ್ಮ ಅಜ್ಞಾನವನ್ನೇ ಪ್ರದರ್ಶಿಸಿ ದಂತಾಗುತ್ತದೆ. ''ಸ್ವಪರಜ್ಞಪ್ತಿಶೂನ್ಯತ್ವಂ ಜಡತ್ವಮ್'' ''ತನ್ನ ಹಾಗೂ ಅನ್ಯದರ ಜ್ಞಾನ ವಿಲ್ಲದ್ದು ಜಡ'' ಎಂಬುದಾಗಿ ಶಾಸ್ತ್ರಕಾರರು ಸ್ಥೂಲದೃಷ್ಟಿಯಿಂದ ಜಡದ ಪರಿಭಾಷೆ ಯನ್ನು ಮಾಡಿದ್ದಾರೆ. ಕಾಷ್ಠ ಮೌನವನ್ನಾಚರಿಸುವ ಒಬ್ಬ ದಿವ್ಯಯೋಗಿಯು ತನಗಿರುವ ತನ್ನ ಹಾಗೂ ಅನ್ಯವಸ್ತುಗಳ ಅರಿವನ್ನು ತನ್ನ ವಾಣಿಯಿಂದ ಅಭಿವ್ಯಕ್ತಮಾಡದೆ. ಸುಮ್ಮನಿರುವದನ್ನು ನೋಡಿ, ಇವನು ಜಡಬುದ್ಧಿಯುಳ್ಳವನು ಎಂದು ಹೇಳುವದು ಎಷ್ಟು ಅಪರಾಧವೆನಿಸುವದೋ, ಕಲ್ಲು–ಮಣ್ಣುಗಳಿಗೆ ಜಡವೆನ್ನುವದಾದರೂ ಅಷ್ಟೇ ಅಪರಾಧವಾದದ್ದು. ಅವುಗಳಿಗೆ ತನ್ನ ಹಾಗೂ ಅನ್ಯದರ ತಿಳುವಳಿಕೆ ಇಲ್ಲ ಎನ್ನುವದಕ್ಕೆ ಏನು ಪ್ರಮಾಣ ? ನಾವು ಎಷ್ಟೇ ಮಲೀನತೆಯನ್ನು ಅವುಗಳ ಮೇಲೆ ಮಾಡಿದಾಗ, ಅವುಗಳನ್ನು ಕಡಿದಾಗ, ಕತ್ತರಿಸಿದಾಗ ನಮಗೆ ಪ್ರತೀಕಾರ ಮಾಡದದ್ದರಿಂದ ಅವುಗಳನ್ನು ಜಡವೆನ್ನುವದು ತಪ್ಪು. ಯಾಕೆಂದರೆ ಅದು ಅವುಗಳ ಸಹನಶೀಲತೆಯ ಪರಾಕಾಷ್ಠೆಯ ಅವಸ್ಥೆಯಾಗಿದೆ. ಅಂತೆಯೇ ಸರ್ವತ್ರ ಚೇತನವನ್ನು ಸಾಕ್ಷಾತ್ಕರಿಸಿಕೊಂಡ ಮಹರ್ಷಿಗಳು ''ಸರ್ವಂ ಖಲ್ವಿದಂ ಬ್ರಹ್ಮ'' ''ಯತ್ ಸಾಕ್ಷಾದಪರೋಕ್ಷಾದ್ಬ್ರಹ್ಮ'' ಎಂಬುದಾಗಿ ಸರ್ವವನ್ನೂ ಚೇತನವನ್ನಾಗಿ ಹೇಳಿದ್ದಾರೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪ ꞉ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥

(ಸಿ. ಶಿ. ೧೦–೬೬)

ಹೀಗೆ ಸಿದ್ಧಾಂತ ಶಿಖಾಮಣಿಯ ಶಿವಜಗನ್ಮಯಸ್ಥಲದಲ್ಲಿ ಪೃಥಿವ್ಯಾದಿ ಪಂಚ ಮಹಾ ಭೂತಗಳನ್ನು ಪರಮಾತ್ಮನನ್ನಾಗಿಯೇ ಪ್ರತಿಪಾದಿಸಿದ್ದಾರೆ.

ಶ್ರೀ ಮಹಾತ್ಮಾ ಬಸವೇಶ್ವರರಾದರೂ–

ಎತ್ತೆತ್ತನೋಡಿದಡತ್ತತ್ತನೀನೇ ದೇವಾ !
ಸಕಲ ವಿಸ್ತಾರದ ರೂಹು ನೀನೇ ದೇವ !
ವಿಶ್ವತಶ್ಚಕ್ಷು ನೀನೇ ದೇವ !
ವಿಶ್ವತೋ ಮುಖ ನೀನೇ ದೇವ !
ವಿಶ್ವತೋ ಬಾಹು ನೀನೇ ದೇವ !
ವಿಶ್ವತೋ ಪಾದ ನೀನೇ ದೇವ ಕೂಡಲಸಂಗಮದೇವ !

ಈ ವಚನದಲ್ಲಿ ಸರ್ವತ್ರಚೇತನಾಸ್ತಿತ್ವವನ್ನೇ ವ್ಯಕ್ತಪಡಿಸಿದ್ದಾರೆ. ಜಗತ್ತಿನ ಕಣ ಕಣಗಳಲ್ಲಿಯೂ ಅಡಗಿರುವ ಚೇತನಶಕ್ತಿಯನ್ನು ಅನುಭವಿಸದಿರುವ ವ್ಯಕ್ತಿಯೇ ಜಡನಲ್ಲದೇ, ಕಲ್ಲು–ಮಣ್ಣುಗಳು ಜಡಗಳಲ್ಲ. ಆದ್ದರಿಂದ ಕಲ್ಲು–ಮಣ್ಣುಗಳಲ್ಲಿಯೂ ಗೂಢ ಚೈತನ್ಯವಿರುವದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ್ದಾರೆ. ಹೀಗೆ ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ಒರೆಗಲ್ಲಿಗೆ ತಿಕ್ಕಿ ನೋಡಿದಾಗ ಜಗವಿದೆಲ್ಲವೂ ಜಂಗಮವೇ ಅರ್ಥಾತ್ ಚೇತನವೇ ಆಗಿದೆ. ಶಿಲೆಗಳಲ್ಲಡಗಿದ ಈ ಸುಪ್ತಚೇತನದ ಮಹಿಮೆಯನ್ನು ಜಗತ್ತಿಗೆ ತಿಳಿಸುವದಕ್ಕಾಗಿಯೇ–

ಮಾಘಕೃಷ್ಣಚತುರ್ದಶ್ಯಾಮಾದಿದೇವೋ ಮಹಾನಿಶಿ ।
ಶಿವಲಿಂಗತಯೋದ್ಭೂತಃ ಸೂರ್ಯಕೋಟಿಸಮಪ್ರಭಃ ॥

ಎಂಬ ಪ್ರಮಾಣ ವಚನಾನುಸಾರವಾಗಿ ಮಹಾಶಿವರಾತ್ರಿ ದಿವಸ ಜ್ಯೋತಿರ್ಲಿಂಗಗಳ ರೂಪದಲ್ಲಿ ಪರಶಿವನು ಭೂಲೋಕದಲ್ಲಿ ಅವತರಿಸಿದ್ದಾನೆ.

ಶಾಸ್ತ್ರಗಳಲ್ಲಿ ಪೃಥ್ವೀ, ಅಪ್ಪು, ತೇಜಸ್, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಆತ್ಮರೆಂದು ಪರಮಾತ್ಮನ ಅಷ್ಟಮೂರ್ತಿತ್ವದ ವರ್ಣನೆಯು ಬರುತ್ತದೆ. ಅಂದರೆ ಇವೆಲ್ಲವೂ ಪರಮಾತ್ಮರೂಪವೇ ಎಂದರ್ಥ. ಅಂತೆಯೇ ಇವೆಲ್ಲವನ್ನೂ ದೇವರೆಂದು ಪೂಜಿಸುವದೇ ಭಾರತೀಯ ಸಂಸ್ಕೃತಿಯು. ಇವುಗಳಲ್ಲಿರುವ ಪರೋಪಕಾರ ಗುಣದಿಂದಲೇ ಇವು ದೇವರೆಂದು ಪೂಜೆಗೊಳ್ಳುವವು. ಇವುಗಳನ್ನು ಪೂಜಿಸಿ ಇವುಗಳಲ್ಲಿಯ ತ್ಯಾಗ ಹಾಗೂ ಪರೋಪಕಾರದ ಗುಣಗಳನ್ನು ಮನುಷ್ಯನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲೆಂಬುದೇ ಇವುಗಳ ಪೂಜೆಯ ರಹಸ್ಯವು, ಅಂತೆಯೇ ಪ್ರಾಚೀನ ಮಹರ್ಷಿಗಳು ಕಂಚಿಯಲ್ಲಿ ಪೃಥ್ವೀಲಿಂಗ, ಜಂಬುಕೇಶ್ವರದಲ್ಲಿ ಅಪ್‌ಲಿಂಗ, ಅರುಣಾಚಲದಲ್ಲಿ ರಜೋಲಿಂಗ, ಕಾಳಹಸ್ತಿಯಲ್ಲಿ ವಾಯುಲಿಂಗ, ಚಿದಂಬರದಲ್ಲಿ ಆಕಾಶಲಿಂಗ– ಹೀಗೆ ಪೂಜ್ಯಗಳಾದ ಪರಮಾತ್ಮನ ಅಷ್ಟಮೂರ್ತಿತ್ವದಲ್ಲಿ ಬರುವ ಪಂಚಮಹಾಭೂತಗಳ ಹೆಸರಿನ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿ ಪಂಚ ಮಹಾಭೂತಗಳೂ ಸಹ ಪೂಜ್ಯಗಳೆಂದೇ ತಿಳಿಯಪಡಿಸಿದ್ದಾರೆ.

ಜಗತ್ತಿನ ಯಾವುದೇ ಸಂಪ್ರದಾಯದ ದೇವತಾ ವಿಗ್ರಹಗಳು ಉತ್ಕೃಷ್ಟಗಳಾದ ಶಿಲೆ ಇಲ್ಲವೇ ಕಾಷ್ಠಗಳಿಂದಲೇ ನಿರ್ಮಿತವಾದದ್ದನ್ನು ಕಾಣುತ್ತೇವೆ. ಸಂಪ್ರದಾಯಕ್ಕನುಸಾರವಾಗಿ ಮೂರ್ತಿಗಳ ಆಕಾರಗಳು ಭಿನ್ನವಾಗಿರಬಹುದು; ಆದರೆ ಅವುಗಳ ಮೂಲಭೂತಗಳಾದ ಶಿಲೆಗಳು ಒಂದೇ ಆಗಿರುತ್ತವೆ. ಹೀಗೆ ಸಾಮಾನ್ಯತಃ ಜಡಗಳಂತೆ ತೋರಿದರೂ ಉತ್ಕೃಷ್ಟ ಗುಣಗಳನ್ನು ಹೊಂದಿದ ಶಿಲೆಯ ಗುಣಗಳನ್ನು ಮನುಷ್ಯನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಪಟ್ಟಾಗಲೇ ಈತನು ಮಹಾದೇವನಾಗಬಲ್ಲನು. ಇದರ ರಹಸ್ಯಾರ್ಥವನ್ನು ಬಲ್ಲಿದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ರೇಷ್ಠಗಳಾದ ಶಿಲೆಗಳನ್ನೇ ಇಷ್ಟಲಿಂಗ ನಿರ್ಮಾಣಕ್ಕಾಗಿ ಉಪಯೋಗಿಸಬೇಕೆಂಬುದಾಗಿ ಆದೇಶವಿತ್ತಿದ್ದಾರೆ.

ಸ್ಥಾವರಲಿಂಗ ಹಾಗೂ ಇಷ್ಟಲಿಂಗಗಳ ಭೇದ :

ದೇವಾಲಯಗಳಲ್ಲಿ ಪ್ರತಿಷ್ಠಾಪಿತವಾದದ್ದು ಸ್ಥಾವರಲಿಂಗ; ದೇಹದ ಮೇಲೆ ಧರಿಸಲ್ಪಟ್ಟಿದ್ದು ಇಷ್ಟಲಿಂಗವೆಂಬುದು ಇವೆರಡರ ಸಾಮಾನ್ಯವಾದ ಪರಿಭಾಷೆಯು. ಅತಿ ಪ್ರಾಚೀನವಾದ ಶೈವಸಂಸ್ಕೃತಿಯಲ್ಲಿ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವ ಪದ್ಧತಿಯು ರೂಢಿಯಲ್ಲಿ ಬಂದಿದೆ. ಪರಿಶುದ್ಧವಾದ ಸ್ಥಾನದಲ್ಲಿ ವಿಶಾಲವಾದ ದೇವಾಲಯಗಳನ್ನು ನಿರ್ಮಿಸಿ ಅವುಗಳಲ್ಲಿ ಸ್ಥಾಪಿತಗಳಾದ ಬೃಹದಾಕಾರದ ಶಿವಲಿಂಗಗಳಿಗೆ ಸ್ಥಾವರಲಿಂಗ ಗಳೆಂದು ಕರೆಯುತ್ತಾರೆ. ಈ ಲಿಂಗಗಳು ದೇವಸ್ಥಾನದ ಪರಿಮಾಣಕ್ಕನುಗುಣವಾಗಿ ಕೆಲವು ಕಡೆ ಅತಿ ವಿಶಾಲ ಕಾಯಗಳಾಗಿಯೂ, ಮತ್ತೆ ಕೆಲವು ಕಡೆ ಅಲ್ಪ ಕಾಯ ಗಳಾಗಿಯೂ ಇರುವದನ್ನು ನೋಡುತ್ತೇವೆ. ಸ್ಥಾವರಲಿಂಗಗಳ ಪರಿಮಾಣವು ಇಷ್ಟೇ ಎಂಬುದಾಗಿ ನಿಶ್ಚಿತವಿರುವದಿಲ್ಲ. ಆದರೆ ದೇಹದ ಮೇಲೆ ಧರಿಸಲ್ಪಡುವ ಇಷ್ಟಲಿಂಗಕ್ಕೆ ಅಂಗುಷ್ಠ ಮಾತ್ರವೆಂದು ಪರಿಮಿತಿಗೊಳಿಸಿದ್ದಾರೆ. ವೀರಶೈವರಿಗೆ ಇಷ್ಟಲಿಂಗ ಪೂಜೆ ಯಂತೆ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಪೂಜೆಯೂ ವಿಹಿತವಾಗಿದೆ. ಸಾಧಕನನ್ನು ಸ್ಥೂಲದಿಂದ ಸೂಕ್ಷ್ಮತತ್ತ್ವದಕಡೆಗೆ ಕರೆದೊಯ್ಯಬೇಕೆಂಬ ಉದ್ದೇಶದಿಂದ ವೀರಶೈವ ಆಚಾರ್ಯರು ಹೃದಯದಾಕಾಶದಲ್ಲಿರುವ ಪ್ರಾಣಲಿಂಗದ ಪ್ರತೀಕವಾಗಿಯೇ ಬಾಹ್ಯದಲ್ಲಿ ಇಷ್ಟಲಿಂಗವನ್ನು ಕಲ್ಪಿಸಿದ್ದಾರೆ.

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ
ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ||
ಹೃದಾ ಮನೀಷಾ ಮನಸಾಭಿಕ್ಲೃಪ್ತೋ
ಯ ಏತದ್ ವಿದುರಮೃತಾಸ್ತೇ ಭವಂತಿ ||

(ಶ್ವೇತಾಶ್ವತರೋಪನಿಷತ್ ೩-೧೩)

ಈ ಉಪನಿಷತ್ ಮಂತ್ರದಲ್ಲಿ ಪರಮಾತ್ಮನು ಪ್ರತಿಯೊಬ್ಬ ಜೀವಿಯ ಹೃದಯಾಕಾಶ ದಲ್ಲಿ ಅಂಗುಷ್ಠ ಪರಿಮಾಣದಲ್ಲಿ ನಿವಾಸಿಸುತ್ತಿದ್ದಾನೆ-ಎಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಜೀವಿಗಳ ಹೃದಯದಲ್ಲಿ ಪರಮಾತ್ಮನ ನಿವಾಸವಿದೆ ಎಂಬ ವಿಷಯವಾಗಿ-

ಸಮಸ್ತಜಗದಾತ್ಮಾಽಪಿ ಶಂಕರಃ ಪರಮೇಶ್ವರಃ |
ಭಕ್ತಾನಾಂ ಹೃದಯಾಂಭೋಜೇ ವಿಶೇಷೇಣ ವಿರಾಜತೇ ||

(ಸಿ. ಶಿ. ೧೦-೬೭)

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ||

(ಗೀತಾ ೧೮-೬೧)

ಹೀಗೆ ಸಿದ್ಧಾಂತಶಿಖಾಮಣಿ ಮತ್ತು ಗೀತಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಅಂತರಂಗದಲ್ಲಿರುವ ಆ ಪರಮ ತತ್ತ್ವವನ್ನು ಸಾಕ್ಷಾತ್ಕಾರಮಾಡಿಕೊಳ್ಳುವದೇ ಮನುಷ್ಯ ಜನ್ಮದ ಗುರಿಯು. ಈ ಸೂಕ್ಷ್ಮ ಆತ್ಮ ತತ್ತ್ವದ ಉಪಾಸನೆಯು ಸರ್ವರಿಗೂ ಸುಲಭ ಸಾಧ್ಯವಾಗದ ಕಾರಣ ಅದೇ ಆಕಾರದ ಸ್ಥೂಲಲಿಂಗದ ಕಲ್ಪನೆಯನ್ನು ವೀರಶೈವ ಆಚಾರ್ಯರು ಮಾಡಿ ಅದನ್ನು ಇಷ್ಟಲಿಂಗವೆಂಬುದಾಗಿ ಕರೆದಿದ್ದಾರೆ.

**ಇಷ್ಟಲಿಂಗ ಪರಿಮಾಣ :**

ಹೃದಯಾಕಾಶವನ್ನೇ ಮೂಲವಾಗಿ ಇಟ್ಟುಕೊಂಡು ನಿರ್ಮಿತವಾದ ಇಷ್ಟಲಿಂಗವಾದರೂ ಹೃದಯಾಕಾಶದ ಪರಿಮಾಣದಷ್ಟೇ ಇರಬೇಕು. ''ಅಂಗುಷ್ಠ ಮಾತ್ರಃ ಪುರುಷೋಽಂತರಾತ್ಮಾ'' ಎಂಬ ಶ್ವೇತಾಶ್ವತರೋಪನಿಷತ್ತು ಹೃದಯಾಕಾಶವು ಅಂಗುಷ್ಠ ಪರಿಮಾಣದ್ದಿರುವದಾಗಿ ಸಾರಿದೆ. ಅಂತೆಯೇ ಶ್ರೀ ಅಪ್ಪಯ್ಯ ದೀಕ್ಷಿತರಾದರೂ ''ಮನುಷ್ಯಹೃದಯಾಬ್ಜಕೋಶಾನಾಮಂಗುಷ್ಠಪರಿಮಾಣತ್ವಾತ್'' (ಪಂಚರತ್ನಸ್ತುತಿ ಪುಟ ೧೩) ಹೀಗೆ ಹೃದಯಾಕಾಶದ ಪರಿಮಾಣವನ್ನು ಅಂಗುಷ್ಠ ಗಾತ್ರದಷ್ಟೇ ಎಂಬುದಾಗಿ ನಿರೂಪಿಸಿದ್ದಾರೆ. ಆದಕಾರಣ ವೀರಶೈವರ ಈ ಇಷ್ಟಲಿಂಗವಾದರೂ ಅಂಗುಷ್ಠ ಪರಿಮಾಣದ್ದೇ ಇರಬೇಕು. ಕಾಂತಿಯಿಂದ ಆವೃತವಾದ ಅಂಗುಷ್ಠ ಪರಿಮಾಣದ ಈ ಇಷ್ಟಲಿಂಗವು ಮಾನವನ ಹೃದಯಕೋಶದ ಆಕಾರವನ್ನೇ ಹೋಲುತ್ತದೆ.

**ಪಂಚಸೂತ್ರಲಿಂಗ :**

ಶ್ರೀಶೈಲ ಶಿಲೆಯಿಂದ ನಿರ್ಮಿತವಾದ ಲಿಂಗವು ಕಂತೆಯ ಆವರವಣವನ್ನು ಹೊಂದುವ ಪೂರ್ವದಲ್ಲಿ ಪಂಚಸೂತ್ರಾತ್ಮಕವಾಗಿರುತ್ತದೆ. ಪಂಚಸೂತ್ರದ ಅರ್ಥವು ಭೌತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಎರಡು ವಿಧವಾಗಿರುತ್ತದೆ.

ಲಿಂಗವೃತ್ತಸಮಂ ಪೀಠಂ ದೈರ್ಘ್ಯಂ ವಿಸ್ತಾರ ಏವ ಚ ।
ತದರ್ಧಂ ಗೋಮುಖಂ ಚೈವ ಪ್ರೋಕ್ತಂ ಲಿಂಗಸ್ಯ ಲಕ್ಷಣಂ ॥
(ಕ್ರಿಯಾಸಾರ ಭಾಗ ೩ ಪುಟ ೪೧)

ಶ್ರೀ ನೀಲಕಂಠ ಶಿವಾಚಾರ್ಯರ ಈ ಉಕ್ತಿಗನುಸಾರವಾಗಿ ಲಿಂಗವನ್ನು ನಿರ್ಮಿಸುವಾಗ ಬಾಣದ ಸುತ್ತಳತೆಯಷ್ಟೇ ಪೀಠದ ಉದ್ದ-ಅಗಲಗಳು ಇರಬೇಕು ಹಾಗೂ ಅದರ ಅರ್ಧಭಾಗ ಗೋಮುಖವಿರಬೇಕು. ಅಂದರೆ (೧) ಬಾಣದ ಸುತ್ತಳತೆ (೨) ಪೀಠದ ಕೆಳಭಾಗ (೩) ಪೀಠದ ಮೇಲ್ಭಾಗ (೪) ಪೀಠದ ಎತ್ತರ ಇವು ನಾಲ್ಕೂ ಸಮಾನ ಅಳತೆಯವಿರಬೇಕು. (೫) ಗೋಮುಖವು ಮಾತ್ರ ಬಾಣದ ಸುತ್ತಳತೆಯ ಅರ್ಧದಷ್ಟಿರಬೇಕು. ಹೀಗೆ ಇದು ಈ ಅಳತೆಯಿಂದ ಕೂಡಿದ್ದೇ ಪಂಚಸೂತ್ರ ಲಿಂಗವು. ಇಷ್ಟಲಿಂಗಕ್ಕೆ ಉಪಯೋಗಿಸುವ ಈ ಪಂಚಸೂತ್ರ ಲಿಂಗವು ಅಂಗುಷ್ಠ ಪರಿಮಾಣಕ್ಕಿಂತ ಚಿಕ್ಕದಾಗಿರಬೇಕು. ಏಕೆಂದರೆ ಮುಂದೆ ಕಂತೆಯ ಆವರಣ ಬಂದ ನಂತರ ಅದು ಅಂಗುಷ್ಠ ಪರಿಮಾಣದ್ದಾಗಬೇಕಾಗುವದು.

ಕಂತೆಯಿಂದ ಆವೃತವಾದ ಲಿಂಗವು ಹೇಗೆ ಹೃದಯದ ಆಕೃತಿಯನ್ನು ಹೋಲುತ್ತದೆಯೋ ಅದರಂತೆ ಈ ಪಂಚಸೂತ್ರ ಲಿಂಗವಾದರೂ ಹೃದಯದ ಐದು ಭಾಗಗಳ ಸಮ್ಮಿಲನರೂಪವೇ ಆಗಿದೆ ಎಂಬ ವೈಜ್ಞಾನಿಕ ವಿಚಾರವನ್ನು ಶ್ರೀ ಜಿ.ಟಿ. ಅಕ್ಕುಲಯ್ಯ ದೀಕ್ಷಿತರು ''ಇಷ್ಟಲಿಂಗ ವಿಜ್ಞಾನ'' ಎಂಬ ಪುಸ್ತಕದಲ್ಲಿ ಬಹು ಸ್ವಾರಸ್ಯವಾಗಿ ಪ್ರತಿಪಾದಿಸಿದ್ದಾರೆ. ಅವರ ವಿಚಾರದಂತೆ ತಾರ, ದಂಡ, ಕುಂಡಲಿ, ಅರ್ಧಚಂದ್ರ, ಮತ್ತು ಬಿಂದು ಇವುಗಳೇ ಪಂಚಸೂತ್ರಗಳು. ಇವುಗಳಲ್ಲಿ ತಾರವು ಗುಂಡಾಗಿಯೂ, ದಂಡವು ಸರಳ ರೇಖೆಯಂತೆಯೂ, ಕುಂಡಲಿಯು ಸರ್ಪಾಕಾರವಾಗಿಯೂ, ಅರ್ಧಚಂದ್ರವು ಅರ್ಧ

ಚಂದ್ರಾಕಾರವಾಗಿಯೂ ಮತ್ತು ಬಿಂದುವು ಪೂರ್ಣಾಕಾರವಾಗಿಯೂ ಇರುತ್ತವೆ ಇವುಗಳನ್ನು ಮೇಳವಿಸಲಾಗಿ ಪಂಚಸೂತ್ರದ ಪೀಠಿಕಾಲಿಂಗವು ತಯಾರಾಗುತ್ತದೆ. ಈ ಪಂಚಸೂತ್ರಗಳು ಹೃದಯದ ಐದು ಅವಯವಗಳ ಆಕಾರಕ್ಕೆ ಸಮಾನವಾಗಿರುತ್ತವೆ. ಹೃದಯದಲ್ಲಿ ತ್ರಿಪಿಧಾನ, ಹೃದಯ ಕುಡ್ಯ, ಶಿರಗಳು, ಅರ್ಧಚಂದ್ರಪಿಧಾನಗಳು ಮತ್ತು ರಕ್ತಬಿಂದುಗಳೆಂಬ ಐದು ಅವಯವಗಳಿರುತ್ತವೆ. ಇವು ಕ್ರಮವಾಗಿ ತಾರ, ದಂಡ, ಕುಂಡಲಿ, ಅರ್ಧಚಂದ್ರ ಮತ್ತು ಬಿಂದುವಿನ ಆಕೃತಿಯನ್ನು ಹೋಲುವವುಗಳಾಗಿರುತ್ತವೆ. ಹೀಗೆ ಪಂಚಸೂತ್ರ ಲಿಂಗದ ಕಲ್ಪನೆಗೆ ಮನುಷ್ಯನ ಹೃದಯವೇ ಮೂಲವು.

ಮೂಲಂ ವಿದ್ಯಾ ಶಿವಃ ಶೈವಸೂತ್ರಂ ಪಂಚಾಕ್ಷರಸ್ತಥಾ ।
ಏತಾನಿ ನಾಮಧೇಯಾನಿ ಕೀರ್ತಿತಾನಿಮಹಾಮನೋಃ ॥

(ಸಿ. ಶಿ. ೮–೨೩)

ಇಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪಂಚಾಕ್ಷರ ಮಹಾಮಂತ್ರಕ್ಕೆ ಮೂಲ, ವಿದ್ಯಾ, ಶಿವಃ, ಶೈವಸೂತ್ರ ಮತ್ತು ಪಂಚಾಕ್ಷರ ಎಂಬ ಐದು ಹೆಸರುಗಳು ಇರುವುದಾಗಿ ತಿಳಿಯಪಡಿಸಿದ್ದಾರೆ. ಈ ಒಂದೊಂದು ಹೆಸರಿನ ಅರ್ಥವು ಬಹುಮಾರ್ಮಿಕವಾಗಿದೆ. ಅದನ್ನು ಪಂಚಾಕ್ಷರ ಜಪಸ್ಥಲದಲ್ಲಿ ವಿವೇಚಿಸಿದ್ದೇವೆ. ಇಲ್ಲಿ ಮುಖ್ಯವಾಗಿ ''ಶೈವಸೂತ್ರ'' ಎಂಬ ನಾಮವನ್ನು ವಿಚಾರಿಸೋಣ. ''ಸೂಚನಾತ್ ಸೂತ್ರಂ'' ಎಂಬ ವ್ಯುತ್ಪತ್ತಿಯ ಮೇರೆಗೆ ಶಿವಸಂಬಂಧಿಯಾದ ಸಕಲ ತತ್ತ್ವವನ್ನೂ ''ನಮಃ ಶಿವಾಯ'' ಎಂಬ ಐದು ಅಕ್ಷರಗಳು ಸೂಚಿಸುವದರಿಂದ ಈ ಪಂಚಾಕ್ಷರವನ್ನು ಶೈವಸೂತ್ರವೆಂದು ಕರೆದಿದ್ದಾರೆ. ದೇವನಾಗರಿ ಲಿಪಿಯ ಈ ಐದು ಅಕ್ಷರಗಳು ಪೂರ್ವದಲ್ಲಿ ಹೇಳಿದ ತಾರ, ದಂಡ, ಕುಂಡಲಿ, ಅರ್ಧಚಂದ್ರ ಮತ್ತು ಬಿಂದುವಿನ ಆಕೃತಿಗೆ ಸಮಾನವಾದ ಆಕಾರವುಳ್ಳವು ಗಳಾಗಿವೆ ಅಂತೆಯೇ,

ನಕಾರಸ್ತಾರಕಸ್ಥಾನಂ ಮಕಾರೋ ದಂಡಮುಚ್ಯತೇ ।
ಶಿಕಾರಃ ಕುಂಡಲಾಕಾರೋ ವಾಕಾರಶ್ಚಾರ್ಧಚಂದ್ರಕಃ ॥
ಯಕಾರೋ ಬಿಂದುರೂಪೋಽಯಮೋಂಕಾರಃ ಪಂಚವರ್ಣಕಃ ॥

(ಶಿವತತ್ತ್ವರತ್ನಾಕರ, ಕಲ್ಲೋಲ, ೧, ತರಂಗ, ೫–೨೦–೨೧ ಶ್ಲೋ)

ನಕಾರಶ್ಚಾದಿಪೀಠಂ ಚ ಮಕಾರೋ ಮಧ್ಯಮೇವ ಚ ॥
ಶಿಕಾರೋ ವರ್ತುಲಂ ಜ್ಞೈವ ವಾಕಾರೋ ಗೋಮುಖಂ ತಥಾ ॥
ಯಕಾರೋ ಬಿಂದುರೇವಂ ಸ್ಯಾತ್ ಪ್ರಣವೋ ಲಿಂಗಮುಚ್ಯತೇ ॥

(ಶಿವತತ್ತ್ವ ರತ್ನಾಕರ, ಕಲ್ಲೋಲ–೧, ತರಂಗ–೪, ಶ್ಲೋ ೩೯–೪೦)

ಈ ರೀತಿಯಾಗಿ ಕೆಳದಿ ಬಸವಭೂಪಾಲನು ಪಂಚಾಕ್ಷರಗಳಿಗೆ ಮತ್ತು ತಾರಾದಿ ಪಂಚಾವಯವಗಳಿಗೆ ಆಕೃತಿ ಸಾಮ್ಯವನ್ನು ಹೇಳಿ ಪಂಚಾಕ್ಷರಗಳೆಂಬ ಪಂಚಸೂತ್ರ ಗಳಿಂದಲೇ ಈ ಪಂಚಸೂತ್ರ ಲಿಂಗವು ನಿರ್ಮಾಣವಾಗಿದೆ ಎಂಬುದಾಗಿ ತಿಳಿಯ ಪಡಿಸಿದ್ದಾನೆ. ಇದೇ ಪ್ರಕಾರ–

ಪ್ರಥಮಂ ತಾರಕರೂಪಂ ದ್ವಿತೀಯಂ ದಂಡ ಉಚ್ಯತೇ ।
ತೃತೀಯಂ ಕುಂಡಲಾಕಾರಂ ಚತುರ್ಥಂ ಚಾರ್ಧಚಂದ್ರಕಂ ॥
ಪಂಚಮಂ ಬಿಂದುಸಂಯುಕ್ತಂ ಪ್ರಣವಂ ಪಂಚಬ್ರಹ್ಮರಾಟ್ ।

ಎಂಬ ಕಾಮಿಕಾಗಮದ ಉಕ್ತಿಯಾದರೂ ಅದೇ ಮಾತನ್ನೇ ಸಮರ್ಥಿಸುತ್ತದೆ. ಹೀಗೆ ಪಂಚಾಕ್ಷರಗಳೇ ಪಂಚಸೂತ್ರಗಳು; ಇವುಗಳ ಮೇಳನದಿಂದ ತಯಾರಾದ ಲಿಂಗವೇ ಪಂಚಸೂತ್ರಲಿಂಗವು. ಪಂಚಾಕ್ಷರ ಮಹಾಮಂತ್ರವು ಪರಶಿವನ ಸೂಚಕವಾಗಿರುವಂತೆ ಈ ಪಂಚಸೂತ್ರಲಿಂಗವಾದರೂ ''ಸೂಚನಾತ್ಪರಮೇಶಸ್ಯ ಲಿಂಗಂ ಸೂತ್ರಮಿತೀರತಮ್'' ಎಂಬ ಕಿರಣಾಗಮದ ವಾಕ್ಯದಂತೆ ಪರಶಿವ ಸೂಚಕವಾಗಿದೆ. ಅದೇ ಪ್ರಕಾರ ಸಕಲ ವರ್ಣಸಮಾಮ್ನಾಯಕ್ಕೆ ಮೂಲವಾದ ಓಂಕಾರವಾದರೂ ಇವೇ ತಾರ–ದಂಡಾದಿ ಪಂಚ ಅವಯವಗಳ ಸ್ವರೂಪವಾದ ಕಾರಣ, ಓಂಕಾರ, ಪಂಚಾಕ್ಷರ ಮತ್ತು ಪಂಚಸೂತ್ರಲಿಂಗ ಇವುಗಳು ಮನುಷ್ಯನ ಹೃದಯಕೋಶದಲ್ಲಿಯ ಅವಯವಗಳ ಸಂಯುಕ್ತ ಸ್ವರೂಪವೆಂಬುದು ತಿಳಿದುಬರುತ್ತದೆ. ಅತಿಸೂಕ್ಷ್ಮವಾದ ಮತ್ತು ತನ್ನ ಹೃದಯಸ್ಥವಾದ ಪ್ರಾಣಲಿಂಗಸ್ವರೂಪವನ್ನು ಅರಿಯಬೇಕಾದರೆ ಹೃದಯದ ಅವಯವಗಳ ಸದೃಶವಾದ ಅವಯವಗಳಿಂದ ನಿರ್ಮಿತಗಳಾದ ಪ್ರಣವ, ಪಂಚಾಕ್ಷರ ಮತ್ತು ಪಂಚ ಸೂತ್ರಗಳಿಂದ ನಿರ್ಮಿತವಾದ ಇಷ್ಟಲಿಂಗದ ಉಪಾಸನೆಯು ಬಹಿರಂಗದಲ್ಲಿ ಅತ್ಯಾವಶ್ಯಕವೆಂಬುದು ತಿಳಿದುಬರುತ್ತದೆ. ಆದ್ದರಿಂದ ವೀರಶೈವ ಆಚಾರ್ಯರು ಶಿಷ್ಯನಿಗೆ ಲಿಂಗದೀಕ್ಷೆಯನ್ನು ಅನುಗ್ರಹಿಸುವಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ ನರ್ಮದಾ ಬಾಣಲಿಂಗವನ್ನಾಗಲಿ, ಇಲ್ಲವೇ ಸೂರ್ಯಕಾಂತ, ಚಂದ್ರಕಾಂತ, ಸ್ಫಟಿಕ ಅಥವಾ ಶ್ರೀಶೈಲ ಪರ್ವತದ ಉತ್ಕೃಷ್ಟ ಶಿಲೆಯಲ್ಲಿ ಪಂಚಸೂತ್ರ ಪ್ರಮಾಣಾನುಸಾರವಾಗಿ ನಿರ್ಮಿಸಿದ ಯಾವದಾದರೊಂದು ಶಿವಲಿಂಗವನ್ನು ತೆಗೆದುಕೊಳ್ಳಬೇಕು.

ಇಂದಿನ ಪರಿಸ್ಥಿತಿಯಲ್ಲಿ ಸೂರ್ಯಕಾಂತ, ಚಂದ್ರಕಾಂತ, ಸ್ಫಟಿಕ ನಿರ್ಮಿತ ಶಿವಲಿಂಗಗಳು ದೊರೆಯುವುದು ವಿರಳವಾದ್ದರಿಂದ ಶ್ರೀ ಗುರುಗಳು ಲಿಂಗದೀಕ್ಷಾ ಕಾಲದಲ್ಲಿ ನರ್ಮದಾ ಬಾಣಲಿಂಗಗಳನ್ನೋ ಅಥವಾ ಶ್ರೀಶೈಲ ಶಿಲೆಯ ಪಂಚಸೂತ್ರ ಲಿಂಗಗಳನ್ನೋ ಉಪಯೋಗಿಸುವುದುಂಟು ಆದರೂ ನರ್ಮದಾ ಬಾಣಗಳಿಗಿಂತಲೂ ಶಿಲೆಯಿಂದ ನಿರ್ಮಿಸಿದ ಪಂಚಸೂತ್ರ ಲಿಂಗಗಳ ಬಳಕೆಯೇ ಬಹಳ ಕಂಡುಬರುತ್ತದೆ. ಒಟ್ಟಿನಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ ಲಿಂಗಗಳಲ್ಲಿ ಯಾವದಾದರೊಂದು ಲಿಂಗವಿದ್ದರೆ ಸಾಕು. ಅದರಲ್ಲಿ ಯಾವ ಭೇದ ಭಾವನೆಯು ಇರುವದಿಲ್ಲ. ಲಿಂಗಪೂಜೆಯಲ್ಲಿ ಲಿಂಗ ನಿರ್ಮಿತ ದ್ರವ್ಯಕ್ಕಿಂತ ಸಾಧಕನ ಭಕ್ತಿಯು ಪ್ರಧಾನವಾದದ್ದು. ಆದ ಕಾರಣ, ಉಪಾಸಕರು ಯಾವ ಭೇದವನ್ನೂ ಮಾಡಬಾರದು.

ಓಂ ಶಾಂತಿಃ ಶಾಂತಿಃ ಶಾಂತಿಃ

## ಲಿಂಗಧಾರಣಸ್ಥಲ

ದಿನಾಂಕ ೬ ಆಗಷ್ಟ್, ೧೯೬೦

(ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

ಆಶೀರ್ವಚನ-೨

ಸರ್ವಲಕ್ಷಣಸಂಪನ್ನೇ ತಸ್ಮಿಲ್ಲಿಂಗೇ ವಿಶೋಧಿತೇ ।
ಪೀಠಸ್ಥಿತೇಽಭಿಷಿಕ್ತೇ ಚ ಗಂಧಪುಷ್ಪಾದಿಪೂಜಿತೇ
ಮಂತ್ರಪೂತೇ ಕಲಾಂ ಶೈವೀಂ ಯೋಜಯೇದ್ವಿಧಿನಾ ಗುರುಃ ।
ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್
ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ
ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ (ಸಿ. ಶಿ. ೬.೨೨-೨೪)

ಶಿಲ್ಪ ಶಾಸ್ತ್ರದಲ್ಲಿ ಹೇಳಿದ ಲಕ್ಷಣಗಳಿಂದ ಯುಕ್ತವೂ ಪಂಚಗವ್ಯಾದಿಗಳಿಂದ ಪರಿಶುದ್ಧವೂ, ಹಸ್ತಪೀಠದಲ್ಲಿರಿಸಿ ಅಭಿಷಿಕ್ತವೂ, ಉಪಚಾರಗಳಿಂದ ಪೂಜಿತವೂ, ಮಂತ್ರ ಸಂಸ್ಕೃತವೂ ಆದ ಶಿವಲಿಂಗದಲ್ಲಿ ಶಿವಕಲೆ ಹಾಗೂ ಶಿಷ್ಯನ ಪ್ರಾಣವನ್ನು ಸಂಬಂಧಗೊಳಿಸಿದ ಆ ಲಿಂಗವನ್ನು ಪುನಃ ಶಿಷ್ಯನ ಪ್ರಾಣದಲ್ಲಿ ತಾದಾತ್ಮ್ಯಗೊಳಿಸಿ ಅಂದರೆ ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ತಾದಾತ್ಮ್ಯ ಬೋಧನೆಯನ್ನು ಮಾಡಿ ಸದ್ಗುರುಗಳು ಆ ಶಿವಲಿಂಗವನ್ನು ಶಿಷ್ಯನ ಹಸ್ತದಲ್ಲಿ ಇರಿಸಬೇಕು.

ಪಂಚಸೂತ್ರ ಲಿಂಗ ಪರೀಕ್ಷೆ :

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ದೀಕ್ಷಾ ವಿಧಾನದಲ್ಲಿ ಮಾಡಲ್ಪಡುವ ಲಿಂಗ ಸಂಸ್ಕಾರವನ್ನು ಬಹುಮಾರ್ಮಿಕವಾಗಿ ಉಪದೇಶಿಸಿದ್ದಾರೆ. ಅಂಗದಲ್ಲಿಯೇ ಆಗಲಿ ಶಿಲಾಲಿಂಗಗಳಲ್ಲಿಯೇ ಆಗಲಿ ಭಗವಂತನ ಆವಿಷ್ಕಾರವಾಗಲು ಸಂಸ್ಕಾರವು ಬಹು ಮುಖ್ಯವಾದದ್ದು. ಸದ್ಗುರುಗಳು ಶಿಷ್ಯನಿಗೆ ಲಿಂಗದೀಕ್ಷೆಯನ್ನು ಅನುಗ್ರಹಿಸುವ ಪೂರ್ವದಲ್ಲಿ ಶಿಷ್ಯನಿಗೆ ಕೊಡಬೇಕಾದ ಶೈಲಜಲಿಂಗವು ಆಗಮಶಾಸ್ತ್ರೋಕ್ತ ವಿಧಿಯ ಪ್ರಕಾರ ರಚಿತವಾಗಿದೆಯೋ, ಇಲ್ಲವೋ ಎಂಬುದನ್ನು ಪರೀಕ್ಷಿಸಬೇಕು. ಯಾಕೆಂದರೆ-

ಲಿಂಗಾಧಿಕ್ಯೇ ಭವೇನ್ಮೃತ್ಯುಃ ಶಕ್ತ್ಯಾಧಿಕ್ಯೇ ಧನಕ್ಷಯಃ ।
ಲಿಂಗಶಕ್ತ್ಯೋಃ ಸಮತ್ವಂಹಿ ಭೋಗಮೋಕ್ಷ ಫಲಪ್ರದಂ ॥
(ಕ್ರಿಯಾಸಾರ ಭಾಗ ೩ ಪು. ೪೧)

ಅಂದರೆ ಪಂಚಸೂತ್ರ ಲಿಂಗದಲ್ಲಿ ಮೇಲಿನ ಬಾಣದ ಸುತ್ತಳತೆಯ ಪ್ರಮಾಣದಷ್ಟೇ ಕೆಳಗಿನ ಪೀಠದ ಉದ್ದಗಲಗಳಿರಬೇಕೆಂಬುದು ಶಾಸ್ತ್ರ ಪ್ರಮಾಣ. ಈ ಆಗಮ ಶಾಸ್ತ್ರ ವಿಧಾನದಲ್ಲಿ ತಪ್ಪಿದರೆ ಅರ್ಥಾತ್ ಪೀಠದ ಅಳತೆಗಿಂತ ಬಾಣದ ಅಳತೆಯು ಅಧಿಕವಾಗಿದ್ದರೆ ಸಾಧಕನಿಗೆ ಅಪಮೃತ್ಯುವು ಹಾಗೂ ಪೀಠವಾದ ಶಕ್ತಿಯ ಭಾಗವು ಅಧಿಕವಾಗಿದ್ದರೆ ಧನಕ್ಷಯವು ಆಗುವದಾಗಿ ಶ್ರೀ ನೀಲಕಂಠ ಶಿವಾಚಾರ್ಯರು ಪ್ರತಿಪಾದಿಸಿದ್ದಾರೆ. ಕಾರಣ ಲಿಂಗ ಹಾಗೂ ಶಕ್ತಿ ಭಾಗದ ಅಳತೆಯು ಸಮಾನವಾಗಿದ್ದರೆ ಮಾತ್ರ ಆ ಲಿಂಗಪೂಜಕನಿಗೆ ಭೋಗ-ಮೋಕ್ಷಗಳು ಸಿದ್ಧಿಸುವವು. ಆದ್ದರಿಂದ ಸದ್ಗುರುಗಳು ಶಿಷ್ಯನ

ಕಲ್ಯಾಣಕ್ಕಾಗಿ ತಾವು ಅನುಗ್ರಹಿಸುವ ಲಿಂಗವು ಪಂಚಸೂತ್ರ ವಿಧಾನದಿಂದ ನಿರ್ಮಿತ ವಾಗಿದೆಯೋ ಇಲ್ಲವೋ ಎಂಬುದನ್ನು ಮೊದಲು ಅವಶ್ಯವಾಗಿ ನೋಡಬೇಕೆಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ''ಸರ್ವಲಕ್ಷಣ ಸಂಪನ್ನೇ ತಸ್ಮಿಲ್ಲಿಂಗೇ ವಿಶೋಧಿತೇ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಶಿವಲಿಂಗ ಸಂಸ್ಕಾರ :

ಹೀಗೆ ಲಿಂಗ ಪರೀಕ್ಷೆಯ ನಂತರ ಆ ಲಿಂಗದ ಶಿಲಾತ್ವವನ್ನು ದೂರೀಕರಿಸುವದ ಕ್ಕಾಗಿ ಜಲಾಧಿವಾಸ ಮತ್ತು ಧಾನ್ಯಾಧಿವಾಸಗಳನ್ನು ಆಚರಿಸಬೇಕು. ಅದು ಹೇಗೆಂದರೆ ಗುರುಕಲಶಕ್ಕೆ ಪಶ್ಚಿಮದ ಕಡೆ ಒಂದು ಪೂರ್ಣಕುಂಭವನ್ನಿಟ್ಟು, ದರ್ಭೆಯೊಡನೆ ಹೊಸ ವಸ್ತ್ರದಲ್ಲಿ ಶಿವಲಿಂಗವನ್ನು ಸುತ್ತಿ ಅದನ್ನು ಆ ಕುಂಭದಲ್ಲಿರಿಸಿ ನಮಕ ಚಮಕ ಮತ್ತು ಪುರುಷ ಸೂಕ್ತಾತ್ಮಕವಾದ ಶ್ರೀರುದ್ರವನ್ನು ಪಠಿಸುತ್ತ ಜಲಾಧಿವಾಸವನ್ನು ಮಾಡಬೇಕು ನಂತರ ''ಉತ್ತಿಷ್ಠ ಬ್ರಹ್ಮಣಸ್ಪತೆ'' ಎಂಬ ಮಂತ್ರವನ್ನುಚ್ಚರಿಸುತ್ತ ಶಿವಲಿಂಗವನ್ನು ಜಲ ದಿಂದ ಮೇಲಕ್ಕೆ ಎತ್ತಿ ಸುತ್ತಿದ ವಸ್ತ್ರವನ್ನು ಬಿಚ್ಚಿ ''ಅಪೋಹಿಷ್ಠಾ'' ಎಂಬ ಮಂತ್ರದಿಂದ ಅಭಿಷೇಕವನ್ನು ಮಾಡಿ ಅಷ್ಟ ವಿಧಾರ್ಚನೆಯಿಂದ ಪೂಜಿಸಬೇಕು. ನಂತರ ಗುರು ಕಲಶದ ಈಶಾನ್ಯ ದಿಕ್ಕಿನಲ್ಲಿ ಅಕ್ಕಿ ತುಂಬಿದ ಒಂದು ತಟ್ಟೆಯನ್ನಿಟ್ಟು ಅದರಲ್ಲಿ ಅಷ್ಟದಳ ಪದ್ಮವನ್ನು ಬರೆದು, ಅದರ ಮೇಲೆ ಶಿವಲಿಂಗವನ್ನು ಶಯನ ಮಾಡಿಸಿ, ಸೀತ್ಕಾರ ಪ್ರಾಣಾಯಾಮವನ್ನು ಗೈದು, ಒಂದು ಸಹಸ್ರ ಶಿವಪಂಚಾಕ್ಷರಿ ಜಪ ಮುಗಿಯುವ ತನಕ ಧಾನ್ಯಾಧಿವಾಸವನ್ನಾಚರಿಸಬೇಕು. ನಂತರ ''ಉತ್ತಿಷ್ಠ ಬ್ರಹ್ಮಣ ಸ್ಪತೇ'' ಎಂಬ ಮಂತ್ರ ವನ್ನುಚ್ಚರಿಸುತ್ತ ಶಿವಲಿಂಗವನ್ನು ಧಾನ್ಯದಿಂದ ಎತ್ತಿಕೊಂಡು ಪಂಚಗವ್ಯ ಪಂಚಾಮೃತ ಗಳಿಂದ ವಿಧ್ಯುಕ್ತವಾದ ಅಭಿಷೇಕವನ್ನು ಮಾಡಿ ಷೋಡಶೋಪಚಾರಗಳಿಂದ ಪೂಜಿಸ ಬೇಕು. ಈ ಪ್ರಕಾರ ಶಿವಲಿಂಗದ ಶಿಲಾತ್ವದೋಷವನ್ನು ದೂರಗೊಳಿಸಿದ ನಂತರ ಅದರಲ್ಲಿ ಶಿವಕಲೆಯನ್ನು ಆವಾಹನ ಮಾಡಲೋಸುಗ ಶಿವಲಿಂಗದ ಅಧಃಪಟ್ಟಿಕಾ (ಕೆಳಗಡೆಯ ಪೀಠ ಪ್ರದೇಶ)ದಲ್ಲಿ ಬುವನಾಧ್ವನ್ಯಾಸವನ್ನೂ, ಅಧಃ ಪಂಕಜ (ಕೆಳ ಗಡೆಯ ಪೀಠದ ಮೇಲ್ಭಾಗದ ಕೆಳಗಡೆ ಮುಖವಾಗಿರುವ ಪದ್ಮ)ದಲ್ಲಿ ಪದಧ್ವನ್ಯಾಸ ವನ್ನು, ಮಧ್ಯ ಭಾಗದಲ್ಲಿ ವರ್ಣಾಧ್ವನ್ಯಾಸವನ್ನೂ, ಊರ್ಧ್ವಪಂಕಜ (ಮೇಲ್ಭಾಗದ ಪೀಠದ ಕೆಳಗೆ ಮೇಲು ಮುಖವಾಗಿರುವ ಪದ್ಮ)ದಲ್ಲಿ ಕಲಾಧ್ವನ್ಯಾಸವನ್ನು ಊರ್ಧ್ವ ಪೀಠದಲ್ಲಿ ತತ್ತ್ವಾಧ್ವನ್ಯಾಸವನ್ನು, ಆಜ್ಯ ಪ್ರಧಾರಿಕಾ ಭಾಗ (ಬಾಣವನ್ನು ಸೇರಿಸುವ ಭಾಗ)ದಲ್ಲಿ ಮಂತ್ರಾಧ್ವನ್ಯಾಸವನ್ನೂ. ತಚ್ಛಿವಲಿಂಗದ ಮಸ್ತಕ ಪಂಚಕ (ಸದ್ಯೋಜಾತಾದಿ ಮುಖ)ದಲ್ಲಿ, ಹೃದಯಾದಿಸ್ಥಾನಗಳಲ್ಲಿ ಅಷ್ಟತ್ರಿಂಶತ್ (೩೮) ಕಲಾನ್ಯಾಸಗೈದು ಶುದ್ಧಗೊಳಿಸಿದ ಮೇಲೆ ಅಕ್ಕಿ ತುಂಬಿದ ತಟ್ಟೆಯಲ್ಲಿ ಪ್ರಣವ ಪೀಠವನ್ನು ಬರೆದು ಅದರಲ್ಲಿ ಶಿವಲಿಂಗವನ್ನಿರಿಸಿ ವಸ್ತ್ರವನ್ನು ಮುಚ್ಚಬೇಕು.

ಈ ರೀತಿಯಾಗಿ ಜಲಾಧಿವಾಸ, ಧಾನ್ಯಾಧಿವಾಸ ಹಾಗೂ ಷಡಧ್ವಗಳ ಮೂಲಕ ಶಿವಲಿಂಗದಲ್ಲಿಯ ಶಿಲಾತ್ವವನ್ನು ದೂರೀಕರಿಸಿದ ನಂತರ ಶಿಷ್ಯನ ಮಸ್ತಕದಲ್ಲಿಯ ಚಿತ್ಕಳೆ ಶಿವಕಲೆ)ಯನ್ನು ಆಕರ್ಷಿಸಿ ಆ ಶಿವಲಿಂಗದಲ್ಲಿ ಸಂಬಂಧಗೊಳಿಸಬೇಕು. ಶಿಷ್ಯನ

ಮಸ್ತಕದಲ್ಲಿಯ ಶಿವಕಲೆಯನ್ನು ಆಕರ್ಷಿಸುವ ವಿಧಾನವನ್ನು ಸಿದ್ಧಾಂತ ಶಿಖಾಮಣಿಯ ಸಂಸ್ಕೃತ ವ್ಯಾಖ್ಯಾನಕಾರರಾದ ಶ್ರೀ ಮರಿತೋಂಟದಾರ್ಯರು ಬಹುಸುಂದರವಾಗಿ ವಿವರಿಸಿದ್ದಾರೆ. ಅದು ಹೇಗೆಂದರೆ–

**ಲಿಂಗದಲ್ಲಿ ಶಿವಕಲಾ ಸಂಯೋಜನೆ :**

ಸಮ್ಮುಖದಲ್ಲಿ ಕುಳಿತಿರುವ ಶಿಷ್ಯನ ಮಸ್ತಕದ ಮೇಲೆ ಸದ್ಗುರುಗಳು ಶ್ರೀಗಂಧ ದಿಂದ ಪಂಚದಳ ಕಮಲವನ್ನು ಬರೆದು ಅದರ ಒಂದೊಂದು ದಳದಲ್ಲಿ ನಕಾರಾತಿ ಯಕಾರಾಂತ ಪಂಚಾಕ್ಷರ ಮಹಾಮಂತ್ರವನ್ನು ಬರೆದು ಮಧ್ಯದಲ್ಲಿ ಓಂಕಾರವನ್ನು ಲಿಖಿಸಿ, ಪೂಜಿಸಿ ಅದರ ಮೇಲೆ ತಮ್ಮ ಅಮೃತ ಹಸ್ತವನ್ನಿರಿಸಿ–

ನಿತ್ಯಾನಂದಸ್ವರೂಪಾಂ ನಿರುಪಮವಿಭವಾಂ ನಿಷ್ಕಲಾಂ ನಿರ್ವಿಶೇಷಾಂ ।
ನಿರ್ವ್ಯಾಜೇನೋರ್ಧ್ವಮಾಯಾ ವಿರಚಿತವಪುಷಂ ವಿಶ್ವವಂದ್ಯಾಂ ಪರಾಂತಾಂ ॥

ಆಧಾರಮಾದಿಶಕ್ತಿಂ ಗುಣಗಣನಮಿತಾಂ ದೇವದೇವೀಂ ಶಿವಾಖ್ಯಾಂ ।
ವಂದೇ ಹೃತ್ಪದ್ಮಪೀಠೇ ಪರಮಶಿವಪದಾಂ ಶ್ರೀಮತೀಮೂರ್ಧ್ವ ಸಂಜ್ಞಾಂ ॥

ನಿತ್ಯಾನಂದಸ್ವರೂಪಳೂ, ನಿರುಪಮಳೂ, ನಿಷ್ಕಲಳೂ, ಊರ್ಧ್ವಮಾಯೆಯಿಂದ ಸಹಜ ವಾಗಿ ಶರೀರವನ್ನು ಧರಿಸಿಕೊಂಡವಳೂ, ವಿಶ್ವವಂದ್ಯಳು, ಶ್ರೇಷ್ಠಳೂ, ಸಮಸ್ತಭುವನ ಬ್ರಹ್ಮಾಂಡಗಳಿಗೆ ಆಧಾರಳೂ, ಆದಿಶಕ್ತಿ ಸ್ವರೂಪಳೂ, ಸದ್ಗುಣನಮಿತಳೂ ದೇವತೆ ಗಳಿಗೆಲ್ಲ ದೇವತೆಯಾದವಳೂ, ''ಶಿವೆ'' ಎಂಬ ನಾಮಾಂಕಿತಳೂ, ಪರಮ ಮಂಗಲ ಸ್ವರೂಪಳೂ, ಜ್ಞಾನಾದಿ ಷಡ್ಗುಣೈಶ್ವರ್ಯಸಂಪನ್ನಳೂ, ಊರ್ಧ್ವ ಮಾಯೆ ಎಂಬ ಸಂಜ್ಞೆಯುಳ್ಳವಳೂ ಆದ ಆ ಮಹಾದೇವಿಯನ್ನು ಹೃತ್ಕಮಲದಲ್ಲಿ ನಮಿಸುತ್ತೇನೆ. ಈ ರೀತಿಯಾಗಿ ಶಿವಕಲೆಯನ್ನು ತಮ್ಮ ಹೃದಯಕಮಲದಲ್ಲಿ ಅನನ್ಯ ಭಕ್ತಿಯಿಂದ ಧ್ಯಾನ ಮಾಡಬೇಕು. ಹೀಗೆ ಏಕಾಗ್ರ ಮನಸ್ಸಿನಿಂದ ಧ್ಯಾನಾಸಕ್ತನಾದ ಸದ್ಗುರುವಿಗೆ ಶಿಷ್ಯನ ಮಸ್ತಕದಲ್ಲಿ ''ಶಾಂತ್ಯತೀತೋತ್ತರಾ'' ಎಂಬ ಶಿವಕಲೆಯು ಅರ್ಥಾತ್ ಚಿತ್ಕಲೆಯು ಪ್ರಕಟವಾಗುವದು. ಆಗ ಶ್ರೀಗುರುಗಳು ''ಕ್ರೋಂ'' ಎಂಬ ಬೀಜಾಕ್ಷರವನ್ನು ಪಠಿಸುತ್ತಾ ಪ್ರಬಲವಾದ ಮಾನಸಿಕ ಸಂಕಲ್ಪಶಕ್ತಿ ಪುರಃಸರವಾಗಿ ಅಂಕುಶ ಮುದ್ರೆಯಿಂದ ಆ ಶಿವಕಲೆಯನ್ನು ಆಕರ್ಷಣಪೂರ್ವಕವಾಗಿ ಆವಾಹಿಸಿ ಈ ಮೊದಲೇ ಪರಿಶುದ್ಧ ಗೊಳಿಸಿದ ಶಿವಲಿಂಗದಲ್ಲಿ ಸ್ಥಾಪಿಸಿ ಆ ಲಿಂಗವನ್ನು ತನ್ನ ವಾಮಹಸ್ತಪೀಠದಲ್ಲಿ ಇರಿಸಿ ಕೊಂಡು ವಿಧ್ಯುಕ್ತವಾಗಿ ಪೂಜಿಸಬೇಕು. ಹೀಗೆ ಶಿವಕಲೆಯಿಂದ ಕೂಡಿದ ಆ ಶಿವಲಿಂಗದಲ್ಲಿಯೇ ಶಿಷ್ಯನ ಜೀವ ಕಲಾರೂಪವಾದ ಪ್ರಾಣಶಕ್ತಿಯನ್ನು ಸಹ ಆಕರ್ಷಿಸಿ ಸಂಬಂಧಗೊಳಿಸಿ ಈ ರೀತಿಯಾಗಿ ಶಿವಕಲೆಯಿಂದ ಪ್ರಪೂರ್ಣವಾದ ಆ ಇಷ್ಟಲಿಂಗವನ್ನು ಪುನಃ ಶಿಷ್ಯನ ಪ್ರಾಣದೊಂದಿಗೆ ಸಮರಸಗೊಳಿಸಿ ಸದ್ಗುರುಗಳು ಆ ಇಷ್ಟಲಿಂಗವನ್ನು ಶಿಷ್ಯನ ವಾಮ (ಎಡ) ಹಸ್ತದಲ್ಲಿ ವಾಮ ಗೋಮುಖವಾಗಿ ಇರಿಸಿ ಆತನಿಗೆ ಈ ಪ್ರಾಣಲಿಂಗದ ಮಹತಿಯ ಬಗ್ಗೆ ಉಪದೇಶಿಸಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಉಪದೇಶಿಸಿದ ಇಷ್ಟಲಿಂಗದಲ್ಲಿ ಶಿವಕಲೆ ಹಾಗೂ ಜೀವಕಲೆಯನ್ನು ಸಂಬಂಧಗೊಳಿಸುವ ಈ ಉಪದೇಶವನ್ನು ಕೇಳಿದಾಗ

ಅದೆಷ್ಟು ವೈಜ್ಞಾನಿಕವೂ, ಯೌಗಿಕವೂ ಮತ್ತು ವ್ಯಾವಹಾರಿಕವೂ ಆಗಿದೆ ಎಂಬುದು ಸೂಕ್ಷ್ಮಾಲೋಚಕರಿಗೆ ಹೊಳೆಯದೇ ಇರದು.

ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ಮನುಷ್ಯ ಜನ್ಮವು ಅತೀ ಶ್ರೇಷ್ಠವಾದದ್ದು. ''ಯಥಾ ಬ್ರಹ್ಮಾಂಡಃ ತಥಾ ಪಿಂಡಾಂಡಃ'' ಎನ್ನುವ ಉಕ್ತಿಗನುಸಾರವಾಗಿ ಬ್ರಹ್ಮಾಂಡ ದೊಳಗಿನ ಸಕಲ ತತ್ತ್ವಗಳನ್ನು ಅತಿ ಸೂಕ್ಷ್ಮವಾಗಿ ಆ ಮನುಷ್ಯ ಪಿಂಡದಲ್ಲಿಯೇ ಇರಿಸಿ ದ್ದಾನೆ ಪರಮಾತ್ಮನು. ಆದಕಾರಣ ಶ್ರೇಷ್ಠ ಸಾಧಕನು ಈ ಶರೀರದಲ್ಲಿಯೇ ಸಕಲವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಅಂತೆಯೇ ಇದರ ಮರ್ಮವನ್ನರಿತು ಇದರಿಂದ ತತ್ತ್ವಸಾಕ್ಷಾ ತ್ಕಾರ ಮಾಡಿಕೊಂಡ ಶ್ರೀಮನ್ನಿಜಗುಣ ಶಿವಯೋಗಿಗಳು ''ನರಜನ್ಮದಿಂದಿಹದೊಳು ಮಿಗಿಲುಂಟೆ'' (ಕೈ. ಪ. ನೀತಿಕ್ರಿಯಾಚರ್ಯಸ್ಥಲ ೧) ಎಂಬುದಾಗಿ ಅದರ ಮಹತಿ ಯನ್ನು ಕೊಂಡಾಡಿದ್ದಾರೆ. ಪ್ರಪಂಚದ ತುಂಬೆಲ್ಲ ಶಿವ ಹಾಗೂ ಶಿವಕಲೆಯು ವ್ಯಾಪ್ತ ವಾಗಿರುವಂತೆ ಮನುಷ್ಯನ ಶರೀರದಲ್ಲಿಯೇ ಅವು ವ್ಯಾಪ್ತವಾಗಿರುತ್ತವೆ. ಯೋಗಶಾಸ್ತ್ರದ ಪ್ರಕಾರ ಆಧಾರ, ಸ್ವಾಧಿಷ್ಠಾನ ಮಣಿಪೂರಕ, ಅನಾಹತ, ವಿಶುದ್ಧಿ ಮತ್ತು ಆಜ್ಞಾ ಎಂಬ ಷಟ್‌ಚಕ್ರಗಳು ಮನುಷ್ಯನ ಗುದ, ಗುಹ್ಯ, ನಾಭಿ, ಹೃದಯ, ಕಂಠ ಮತ್ತು ಭ್ರೂಮಧ್ಯಗಳಿಂದ ಆರು ಮುಖ್ಯ ಕೇಂದ್ರಗಳಲ್ಲಿ ಇರುತ್ತವೆ. ಈ ಪ್ರತಿಯೊಂದು ಚಕ್ರ ಗಳಲ್ಲಿ ವಿವಿಧ ಕಲಾ ಪ್ರಪೂರ್ಣನಾದ ಶಿವನು ಲಿಂಗಮೂರ್ತಿಯಾಗಿ ವಿವಿಧ ಹೆಸರು ಗಳಿಂದ ನಿವಾಸಿಸಿದ್ದಾನೆ. ಹೇಗೆಂದರೆ ನಿವೃತ್ತಿಕಲಾಯುಕ್ತವಾದ ಆಚಾರಲಿಂಗವು ಆಧಾರ ಚಕ್ರದಲ್ಲಿ, ಪ್ರತಿಷ್ಠಾ ಕಲಾಯುಕ್ತವಾದ ಗುರುಲಿಂಗವು ಸ್ವಾಧಿಷ್ಠಾನ ಚಕ್ರದಲ್ಲಿ, ವಿದ್ಯಾಕಲಾಯುಕ್ತವಾದ ಶಿವಲಿಂಗವು ಮಣಿಪೂರಕ ಚಕ್ರದಲ್ಲಿ, ಶಾಂತಿ ಕಲಾಯುಕ್ತವಾದ ಜಂಗಮಲಿಂಗವು ಅನಾಹತ ಚಕ್ರದಲ್ಲಿ, ಶಾಂತ್ಯತೀತ ಕಲಾಯುಕ್ತವಾದ ಪ್ರಸಾದ ಲಿಂಗವು ವಿಶುದ್ಧ ಚಕ್ರದಲ್ಲಿ ಮತ್ತು ಶಾಂತ್ಯತೀತೋತ್ತರಾಕಲಾಯುಕ್ತವಾದ ಮಹಾ ಲಿಂಗವು ಆಜ್ಞಾಚಕ್ರದಲ್ಲಿ ಹೀಗೆ ವೀರಶೈವ ಶಿವಯೋಗಿಗಳು ವರ್ಣಿಸಿದ್ದಾರೆ.

ಶಿವಯೋಗ ಸಾಮರ್ಥ್ಯವನ್ನು ಸಂಪಾದಿಸಿದ ಸದ್ಗುರುವು ಶಿಷ್ಯನ ಮಸ್ತಕದ ಮೇಲೆ ತಮ್ಮ ಅಮೃತ ಹಸ್ತವನ್ನಿರಿಸಿದಾಗ ಶಿಷ್ಯನ ಶರೀರದಲ್ಲಿಯ ಆಧಾರಾದಿ ಚಕ್ರಗಳು ಜಾಗ್ರತಗೊಂಡು ಅಧೋಮುಖವಾದ ಶಕ್ತಿಯು ಊರ್ಧ್ವಮುಖವಾಗುವದು. ಹೀಗೆ ಎಲ್ಲ ಚಕ್ರಗಳಲ್ಲಿಯ ಶಕ್ತಿಗಳು ಊರ್ಧ್ವಮುಖವಾದಂತೆ ಆಜ್ಞಾಚಕ್ರದಲ್ಲಿಯ ಶಾಂತ್ಯ ತೀತೋತ್ತರಾ ಕಲಾರೂಪವಾದ ಪರಾಶಕ್ತಿಯು ಅಥವಾ ಶಿವಕಲೆಯು ಊರ್ಧ್ವ ಮುಖವಾಗಿ ಬ್ರಹ್ಮರಂಧ್ರ ಮತ್ತು ಪಶ್ಚಿಮಚಕ್ರಗಳತ್ತ ಪ್ರವಹಿಸುತ್ತಿರಲು ಸದ್ಗುರುಗಳು ಪಶ್ಚಿಮ ಚಕ್ರದಲ್ಲಿಯ ಆ ಶಿಷ್ಯನ ಚಿತ್ಕಳೆಯನ್ನು ಅಂಕುಶ ಮುದ್ರೆಯಿಂದ ಆಹ್ವಾನಿಸಿ ಶಿಷ್ಯನ ಇಷ್ಟಲಿಂಗದಲ್ಲಿ ಸ್ಥಾಪಿಸುತ್ತಾರೆ. ಅದೇ ಪ್ರಕಾರ ಶಿಷ್ಯನ ಪ್ರಾಣವನ್ನೂ ಆಕರ್ಷಿಸಿ ಇಷ್ಟಲಿಂಗದಲ್ಲಿರಿಸಿ ಹೀಗೆ ಶಿವಕಲೆ–ಜೀವಕಲೆಯಿಂದ ಕೂಡಿದ ಇಷ್ಟಲಿಂಗವನ್ನು ಶಿಷ್ಯನ ಪ್ರಾಣದ ಜೊತೆಗೆ ತಾದಾತ್ಮ್ಯವನ್ನು ಮಾಡಿ ಶಿಷ್ಯನಿಗೆ ದಯಪಾಲಿಸುತ್ತಾರೆ.

**ಸಂಸ್ಕಾರವಿಶೇಷದಿಂದ ಚೇತನಾಭಿವ್ಯಕ್ತಿ :**

ಈ ರೀತಿಯಾಗಿ ಗುರುಕರುಣೆಯಿಂದ ಪ್ರಾಪ್ತವಾದ ಈ ಇಷ್ಟಲಿಂಗವು ಸಾಧಕನ ಆತ್ಮ ಮತ್ತು ಪ್ರಾಣರೂಪವಾದದ್ದು. ಸದ್ಗುರುಗಳು ಮಾಡಿದ ವಿಶಿಷ್ಟ ಸಂಸ್ಕಾರ

ವಿಶೇಷದಿಂದ ಸದ್ಯಃ ಅದೊಂದು ಜಡವಸ್ತುವಲ್ಲ ಚೇತನಮೂರ್ತಿಯು ಜಡವನ್ನು ಚೇತನ ಗೊಳಿಸುವ ಸಾಮರ್ಥ್ಯವು ಸಂಸ್ಕಾರದಲ್ಲಿರುತ್ತದೆ ಎಂಬ ವಿಷಯವು ಶಾಸ್ತ್ರ ಸಮ್ಮತವೂ ಸರ್ವಾನುಭವಸಿದ್ಧವೂ ಆಗಿರುತ್ತದೆ. ಅದು ಹೇಗೆಂದರೆ–

''ತಸ್ಮಾದ್ವಾ ಏತಸ್ಮಾದಾತ್ಮನಃ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾಓಷಧಯಃ । ಓಷಧಿಭ್ಯೋಽನ್ನಂ । ಅನ್ನಾತ್ಪುರುಷಃ । ಸ ವಾ ಏಷ ಪುರುಷೋಽನ್ನರಸಮಯಃ'' (ತೈತ್ತಿರಿಯೋಪನಿಷತ್ ೨–೧) ಈ ಉಪನಿಷತ್ತಿನಲ್ಲಿ ಚಿದ್ರೂಪವಾದ ಪರಮಾತ್ಮ ತತ್ತ್ವ ದಿಂದ ಸಾಮಾನ್ಯತಃ ಜಡಗಳೆಂದೆನಿಸುವ ಪಂಚಮಹಾಭೂತಗಳೂ, ಅವುಗಳಿಂದ ವನಸ್ಪತಿಗಳು, ನಂತರ ಅನ್ನ ಹಾಗೂ ಅನ್ನದಿಂದ ಜೀವಿಗಳು ಪ್ರಾದುರ್ಭವಿಸಿದವೆಂದು ಪ್ರತಿಪಾದಿಸಲ್ಪಟ್ಟಿದೆ. ಇಲ್ಲಿ ಪ್ರಾಕೃತಿಕವಾಗಿ ಚೇತನದಿಂದ ಜಡ, ಜಡದಿಂದ ಪುನಃ ಚೇತನವು ಪ್ರಾದುರ್ಭವಿಸಿರುವದನ್ನು ಕಾಣುತ್ತೇವೆ. ಶ್ರೀಮನ್ನಿಜಗುಣ ಶಿವಯೋಗಿ ಗಳಾದರೂ ಜೀವಿಯು ತಾನು ಮಾಡಿದ ದುರಿತ ಕರ್ಮಕ್ಕನುಸಾರವಾಗಿ ಜಡಯೋನಿ ಗಳಲ್ಲಿಯೂ ಪುನಃ ಅಲ್ಲಿಂದ ಮರಳಿ ಚೇತನ ಯೋನಿಗೂ ಬರುತ್ತಾನೆಂಬುದನ್ನು–

''ನಿದ್ರೆಬಾರದಿದೆನ್ನ ಪರಿಭವ ದುಃಖ ಸ ।
ಮುದ್ರವೆನಿಸುವ ಸಾಯಸವ ನೆನೆನೆನೆದು ॥

ಪಾಪಾನುಗುಣದಿಂದ ಗಿಡ ಮರ ಕ್ರಿಮಿಗಳ ।
ರೂಪಾಗಿ ಕೀಟ ಪತಂಗಾದಿಯಾಗಿ ॥

ಆ ಪಕ್ಷಿಕುಲವಾಗಿ ಮೃಗಜಾತಿಯಾಗಿ ಮೇ ।
ಲಾ ಪಶುರೂಪಾಗಿ ಬಹುಬಾಧೆಗಲಸಿ ॥ ೧ ॥

ಭೂತ ಪಂಚಕದ ರೂಪಾಗಿ ಯೋಷಧಿಯಾಗಿ ।
ಧಾತುಸಪ್ತಕದ ರೂಪಾಗಿ ತಂದೆಯೊಳು ॥

ಮಾತೆಯ ಸೂತಕ ರುಧಿರರೂಪಾಗಿ ಮತ್ತೀತನು
ವಾಗುವಚ್ಚರಿಯನು ಕೇಳಿ ॥ ೨ ॥

ಬಾಲಕ ತರುಣ ಜರಾ ಜೀರ್ಣರೂಪಾಗಿ ।
ಮೇಲೆ ನರಕಿಯಾಗಿ ಬಳಿಕೀ ಕ್ರಮದೊಳು ॥

ತಾಳಲಾರೆನು ತನುವನು ಶಂಭುಲಿಂಗವೇ
ಪಾಲಿಸೆಂದರಗಿ ಬಿನ್ನೈಪೆ ಭೀತಿಯೊಳು ॥ ೩ ॥

ಹೀಗೆ ಬಹು ಮಾರ್ಮಿಕವಾಗಿ ಉಪದೇಶಿಸಿದ್ದಾರೆ–

ಪ್ರಕೃತಿಯು ತನ್ನದೇ ಆದ ಪ್ರಾಕೃತಿಕ ಸಂಸ್ಕಾರದಿಂದ ಜಡವನ್ನು ಚೇತನವನ್ನಾಗಿ ಪರಿವರ್ತಿಸುತ್ತದೆ. ನಮ್ಮೆಲ್ಲರ ಸ್ಥೂಲಶರೀರವು ಅನ್ನಮಯವೆಂಬುದು ಸರ್ವಾನುಭವ ಸಿದ್ಧವಾದದ್ದು. ಮಾತಾ–ಪಿತೃಗಳು ಭುಂಜಿಸಿದ ಅನ್ನವೇ ಸಪ್ತ ಧಾತುಗಳ ರೂಪದಲ್ಲಿ

ಪರಿವರ್ತನೆಯನ್ನು ಹೊಂದುತ್ತದೆ. ಭುಂಜಿಸಿದ ಅನ್ನವು ಒಂದು ದಿವಸಕ್ಕೆ ರಸ ಸ್ವರೂಪ ವನ್ನು ತಾಳುತ್ತದೆ. ಈ ರಸವೇ ಐದು ದಿನಗಳವರೆಗೆ ಪಕ್ವವಾದಾಗ ರಕ್ತಗತವಾಗುತ್ತದೆ. ರಕ್ತವು ಐದು ದಿನಗಳವರೆಗೆ ಪಕ್ವವಾದಾಗ ಮಾಂಸವಾಗುವುದು. ಮಾಂಸವು ಐದು ದಿನಗಳಲ್ಲಿ ಪಕ್ವವಾಗಿ ಮೇಧಸ್ಸ್ ಎನಿಸುವುದು, ಮೇಧಸ್ಸು ಐದು ದಿನಗಳಲ್ಲಿ ಪಕ್ವವಾಗಿ ಅಸ್ಥಿ (ಎಲಬು)ಯಾಗುವುದು. ಈ ಅಸ್ಥಿಯು ಐದು ದಿನಗಳವರೆಗೆ ಪಕ್ವವಾಗಿ ಮಜ್ಜಾ ಎನಿಸುವುದು. ಕೊನೆಗೆ ಈ ಮಜ್ಜೆಯು ಐದು ದಿನಗಳವರೆಗೆ ಪಕ್ವವಾದ ಬಳಿಕ ವೀರ್ಯವಾಗುವುದು. ಇದು ಒಂಭತ್ತು ದಿನಗಳವರೆಗೆ ಪಕ್ವವಾದಾಗ ಒಂದು ಪರಿಪೂರ್ಣ ಸ್ಥಿತಿಯನ್ನು ತಲುಪುತ್ತದೆ. ಹೀಗೆ ನಾವು ಇಂದು ಭುಂಜಿಸಿದ ಅನ್ನವು ಪ್ರತಿಕ್ಷಣದಲ್ಲಿ ಪ್ರಾಕೃತಿಕ ಸಂಸ್ಕಾರವನ್ನು ಹೊಂದುತ್ತ ನಲ್ವತ್ತನೇ ದಿವಸಕ್ಕೆ ಪರಿಪಕ್ವವಾದ ವೀರ್ಯವಾಗುತ್ತದೆ. ಈ ವೀರ್ಯ ಕಣಗಳಲ್ಲಿಯೇ ಭಾವಿ ಪ್ರಜೆಯು ಅತಿ ಸೂಕ್ಷ್ಮ ಜೀವಿಗಳ ರೂಪದಲ್ಲಿ ನಿವಾಸಿಸಿರುತ್ತದೆ. ಬಾಲ್ಯದಿಂದ ತಯಾರಾಗುತ್ತಿರುವ ಈ ವೀರ್ಯವು ಇಪ್ಪತ್ತುಮೂರು ವರ್ಷಗಳಲ್ಲಿ ಒಂದು ಪರಿಪೂರ್ಣ ರೂಪವನ್ನು ತಾಳುತ್ತದೆ. ಇದೇ ಪ್ರಕಾರ ಹೆಣ್ಣು ಮಕ್ಕಳ ಶರೀರದಲ್ಲಿಯೂ ಸಪ್ತಮ ಧಾತುವು ಸೂತಕ ರುಧಿರವೆಂದು ಕರೆಯಿಸಿಕೊಳ್ಳುವುದು. ಇದು ಅವರ ಹದಿನೆಂಟರಿಂದ ಇಪ್ಪತ್ತು ವರ್ಷಗಳಲ್ಲಿ ಪೂರ್ಣಸ್ಥಿತಿಯನ್ನು ತಲಪುವುದು. ಹೀಗೆ ಪರಿಪೂರ್ಣಾವಸ್ಥೆಯನ್ನು ತಲುಪಿದ ಮಾತಾ ಪಿತೃಗಳ ರೇತೋರುಧಿರಗಳ ಸಂಮಿಶ್ರಣವೇ ಮಾತೆಯ ಉದರದಲ್ಲಿ ಶಿಶುವಾಗಿ ಪರಿಣಮಿಸುತ್ತದೆ. ಹೀಗೆ ಅನ್ನದಿಂದ ಜೀವನು ತಯಾರಾಗುವ ವಿಷಯವು ಚ್ಛಾಂದೋಗ್ಯ ಉಪನಿಷತ್ತಿನ ಐದನೇ ಅಧ್ಯಾಯದ ಮೂರನೇ ಖಂಡದಿಂದ ಒಂಬತ್ತನೇ ಖಂಡದವರೆಗೆ ಬಹು ಸುಂದರವಾದ ಕಥೆಯ ಮೂಲಕ ತಿಳಿಸಲ್ಪಟ್ಟಿದೆ. ಅದೆಂತೆಂದರೆ–

ಅರುಣಿ ಮಹರ್ಷಿಯ ಮಗನಾದ ಶ್ವೇತಕೇತುವು ಒಂದಾನೊಂದು ದಿನ ಪಾಂಚಾಲದೇಶದ ಜೈಬಲಿ ರಾಜನ ಸಭೆಗೆ ಆಗಮಿಸಿದನು. ಆ ಸಭೆಯಲ್ಲಿ ಜೈಬಲಿ ಪ್ರವಾಹಣನು ಶ್ವೇತಕೇತುವಿಗೆ– ''ನೀನು ನಿನ್ನ ತಂದೆಯಿಂದ ಜ್ಞಾನಾರ್ಜನೆಯನ್ನು ಮಾಡಿರುವೆಯಾ ?'' ಎಂಬುದಾಗಿ ಪ್ರಶ್ನಿಸಿದನು. ಆಗ ಶ್ವೇತಕೇತುವು 'ಹಾ ಮಾಡಿ ರುವೆ' ನೆಂಬುದಾಗಿ ಉತ್ತರಿಸಿದನು. ಆಗ ಜೈಬಲಿಯು ಸ್ವೇತಕೇತುವನ್ನು ಕುರಿತು– (೧) ಈ ಲೋಕವನ್ನು ತ್ಯಜಿಸಿದ ಜೀವಿಗಳು ಎಲ್ಲಿಗೆ ಹೋಗುತ್ತಾರೆ ? (೨) ಮರಳಿ ಈ ಲೋಕಕ್ಕೆ ಹೇಗೆ ಬರುತ್ತಾರೆ ? (೩) ದೇವಯಾನ ಮತ್ತು ಪಿತೃಯಾನಮಾರ್ಗಗಳು ಎಲ್ಲಿಂದ ಭಿನ್ನಗಳಾಗುತ್ತವೆ ? (೪) ಪಿತೃಲೋಕವು ಇನ್ನೂ ತುಂಬಿಲ್ಲವೇಕೆ ? (೫) ಐದನೇ ಆಹುತಿಯಲ್ಲಿ ಪುರುಷನ ಉತ್ಪತ್ತಿಯು ಹೇಗಾಗುವದು ? ಹೀಗೆ ಐದು ಪ್ರಶ್ನೆಗಳನ್ನು ಕೇಳಿದರೂ ಶ್ವೇತಕೇತುವು ಒಂದಕ್ಕೂ ಉತ್ತರಿಸಲಿಲ್ಲ. ತಂದೆಯಿಂದ ಜ್ಞಾನಾರ್ಜನೆಯನ್ನು ಮಾಡಿ ಬಂದಿದ್ದೇನೆ ಎಂದು ಜಂಬಕೊಚ್ಚಿದ ಶ್ವೇತಕೇತುವು ಮುಖಭಂಗಿತನಾಗಿ ಮರಳಿ ತಂದೆಯ ಸಮೀಪಕ್ಕೆ ಬಂದು ರಾಜನ ಆಸ್ಥಾನದಲ್ಲಿ ನಡೆದ ವಿಷಯವನ್ನೆಲ್ಲ ತಂದೆಗೆ ತಿಳಿಯಪಡಿಸಿ, ಆ ಪ್ರಶ್ನೆಯ ಉತ್ತರವನ್ನು ಅರುಣಿ ಮಹರ್ಷಿಯನ್ನು ಕೇಳಲಾಗಿ ಮಹರ್ಷಿಯೂ ಸಹ ಉತ್ತರಿಸದಾದನು. ಆಗ ಕೆರಳಿದ ಜಿಜ್ಞಾಸೆಯುಳ್ಳ ಗೌತಮ ಗೋತ್ರೋತ್ಪನ್ನನಾದ ಅರುಣಿ ಮಹರ್ಷಿಯು ಸ್ವತಃ ಜೈಬಲಿರಾಜನ ಆಸ್ಥಾನಕ್ಕೆ

ಬರುತ್ತಾನೆ. ರಾಜನು ಅತಿಥಿಯಾದ ಮಹರ್ಷಿಗೆ ಪೂಜಾದಿಗಳಿಂದ ಸತ್ಕರಿಸಿ ತಮಗೆ ಯಾವ ಸಂಪತ್ತು ಬೇಕು ? ಎಂಬುದಾಗಿ ಪ್ರಶ್ನಿಸಿದನು. ಆಗ ಮಹರ್ಷಿಯು ಹೇ ರಾಜನ್ ! ನನಗೆ ಯಾವ ಭೌತಿಕ ಸಂಪತ್ತೂ ಬೇಕಾಗಿರುವದಿಲ್ಲ ನನ್ನ ಮಗನಿಗೆ ಕೇಳಿದ ಪ್ರಶ್ನೆಗಳ ಉತ್ತರವನ್ನು ಕೊಟ್ಟರೆ ಸಾಕು. ಅದೇ ನನ್ನ ದಕ್ಷಿಣಾ ಸಂಪತ್ತು ಎಂಬುದಾಗಿ ನಿವೇದಿಸಿಕೊಂಡನು.

ಮಹರ್ಷಿಯು ಪ್ರಾರ್ಥನಾನುಸಾರವಾಗಿ ಜೈಬಲಿ ಪ್ರವಾಹಣನು ಮೊದಲು ಪಂಚಾಗ್ನಿ ವಿದ್ಯೆಯನ್ನು ತಿಳಿಸಿ ಪಂಚಮಾಗ್ನಿಯಲ್ಲಿ ಹೋಮ ಮಾಡಿದಾಗ ಪುರುಷನ ಉತ್ಪತ್ತಿಯಾಗುವುದನ್ನು ತಿಳಿಯಪಡಿಸುತ್ತಾನೆ. ಹೇಗೆಂದರೆ– ಹೇ ಗೌತಮನೇ ! ದ್ಯುಲೋಕ ವೆಂಬ ಅಗ್ನಿಯಲ್ಲಿ ಪ್ರಥಮವಾಗಿ ದೇವತೆಗಳು ''ಶ್ರದ್ಧೆ'' ಎಂಬ ಹವಿಷ್ಷನ್ನು ಹೋಮ ಮಾಡಲಾಗಿ ಸೋಮನೆಂಬ ರಾಜನ ಉತ್ಪತ್ತಿಯಾಯಿತು. ಮುಂದೆ ಪರ್ಜನ್ಯವೆಂಬ ಅಗ್ನಿಯಲ್ಲಿ ದೇವಗಣರು ಸೋಮನ ಆಹುತಿ ಮಾಡಲಾಗಿ ವರ್ಷಾ ಅಥವಾ ವೃಷ್ಟಿ (ಮಳೆ)ಯು ಉತ್ಪನ್ನವಾಯಿತು. ನಂತರ ಪೃಥ್ವಿ ಎಂಬ ಅಗ್ನಿಯಲ್ಲಿ ವೃಷ್ಟಿಯನ್ನು ಆಹುತಿ ಮಾಡಲಾಗಿ ಅನ್ನದ ಉತ್ಪತ್ತಿಯಾಯಿತು. ಆಮೇಲೆ ಪುರುಷನ ಜಠರಾಗ್ನಿ ಎಂಬ ಅಗ್ನಿಯಲ್ಲಿ ಅನ್ನವನ್ನು ಹೋಮ ಮಾಡಲಾಗಿ ವೀರ್ಯವು ಉತ್ಪನ್ನವಾಯಿತು. ನಂತರ ಸ್ತ್ರೀ ಎಂಬ ಅಗ್ನಿಯಲ್ಲಿ ವೀರ್ಯದ ಹವನ ಮಾಡಲಾಗಿ ಗರ್ಭವು ಉತ್ಪನ್ನವಾಯಿತು. ಗರ್ಭದ ಪರಿಪೂರ್ಣ ಅವಸ್ಥೆಯ ನಂತರ ಜೀವಿಯು ಪ್ರಾದುರ್ಭವಿಸುತ್ತಾನೆ. ಹೀಗೆ ''ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ'' ಅಂದರೆ ಐದನೇ ಆಹುತಿಯಲ್ಲಿ ಪುರುಷನ ಉತ್ಪತ್ತಿ ಹೇಗಾಯಿತು ಎಂಬುದನ್ನು ತಿಳಿಯಪಡಿಸಿದನು.

ಇದೇ ಪ್ರಕಾರ ಈ ಲೋಕವನ್ನು ತ್ಯಜಿಸಿದ ಜೀವಿಗಳು ತಮ್ಮ ಕರ್ಮಾನುಸಾರ ವಾಗಿ ಬ್ರಹ್ಮಲೋಕಕ್ಕೋ ಪಿತೃಲೋಕಕ್ಕೋ ತೆರಳುವ ವಿಷಯವನ್ನು, ಪಿತೃಲೋಕಕ್ಕೆ ಹೋದವರು ತಾವು ತೆರಳಿದ ಧೂಮಾದಿಮಾರ್ಗದಿಂದಲೇ ಮರಳಿಬರುವದನ್ನು, ಅರ್ಚಿರಾದಿ ಮಾರ್ಗದಿಂದ ದೇವಯಾನ ಮತ್ತು ಧೂಮಾದಿ ಮಾರ್ಗದಿಂದ ಪಿತೃಯಾನದ ಮಾರ್ಗಗಳು ಭಿನ್ನವಾಗುವ ವಿಷಯವನ್ನು, ಬಹಳಷ್ಟು ಕ್ಷುದ್ರ ಜೀವಿಗಳು ಪುನರಪಿ ಜನನಂ ಪುನರಪಿ ಮರಣಂ ಎಂಬ ಚಕ್ರದಲ್ಲಿ ಸದಾ ತಿರುಗುತ್ತಿರುವುದರಿಂದ ಪಿತೃ ಲೋಕವು ತುಂಬಿಲ್ಲವೆಂಬುದಾಗಿಯೂ ಸಕಲ ಪ್ರಶ್ನೆಗಳಿಗೆ ರಾಜನು ಉತ್ತರವನ್ನಿತ್ತು ಗೌತಮನ ಮನಸ್ಸಿಗೆ ಸಮಾಧಾನವನ್ನುಂಟುಮಾಡಿ ಕಳುಹಿಸಿಕೊಟ್ಟನು.

ಇಲ್ಲಿ ನಮಗೆ ಪ್ರಸ್ತುತವಾದ ವಿಷಯವೇನೆಂದರೆ ಜೀವಿಗಳು ಭಕ್ಷಿಸಿದ ಅನ್ನವೇ ಸಂಸ್ಕಾರವನ್ನು ಹೊಂದುತ್ತ ಪುರುಷರೂಪವನ್ನು ತಾಳುತ್ತದೆ ಎಂಬುದು ಉಪನಿಷತ್ಪ್ರ ಮಾಣದಿಂದ ಸಿದ್ಧವಾಯಿತು. ಇದೇ ಪ್ರಕಾರ ತೈತ್ತಿರೀ ಶ್ರುತಿಯ ಭೃಗುವಲ್ಲಿಯ ಎರಡನೇ ಅನುವಾಕದಲ್ಲಿಯ– ''ಅನ್ನಂ ಬ್ರಹ್ಮೇತಿ ವ್ಯಜಾನಾತ್। ಅನ್ನಾದೇವ ಖಲ್ವಿಮಾನಿ ಭೂತಾನಿ ಜಾಯಂತೇ॥ ಅನ್ನೇನ ಜಾತಾನಿ ಜೀವಂತಿ। ಅನ್ನಂ ಪ್ರಯಂತ್ಯಭಿ ಸಂವಿಶಂತೀತಿ॥'' ಈ ಮಂತ್ರವಾದರೂ ಅದೇ ಮಾತನ್ನು ಧೃಡಪಡಿಸಿ ಕೊನೆಗೆ ಅನ್ನವನ್ನೇ ಬ್ರಹ್ಮವೆಂಬುದಾಗಿ ತಿಳಿಯಪಡಿಸಿದೆ.

ಅನ್ನರಸದಿಂದಲೇ ಉಂಟಾಗುವ ಶುಕ್ರಶೋಣಿತಗಳು ಪ್ರಜೋತ್ಪತ್ತಿಗೆ ಕಾರಣವಾಗಿರುವುದರಿಂದ ''ಅನ್ನಂ ವೈ ಪ್ರಜಾಪತಿಸ್ತತೋಹ ವೈ ತದ್ರೇತಸ್ತಸ್ಮಾದಿಯಾಃ ಪ್ರಜಾಯಂತ ಇತಿ'' (ಪ್ರಶ್ನೋಪನಿಷತ್ ೧–೧೪) ಈ ಮಂತ್ರವು ಅನ್ನಕ್ಕೆ ''ಪ್ರಜಾಪತಿ'' ಎಂಬ ಸಂಜ್ಞೆಯನ್ನು ಕೊಟ್ಟಿರುತ್ತದೆ.

ಹೀಗೆ ಅನ್ನದಿಂದ ಪ್ರಜೋತ್ಪತ್ತಿಯ ಈ ಸುದೀರ್ಘ ವಿಚಾರದಿಂದ ಜಡವಸ್ತುವಿಗೆ ಯೋಗ್ಯ ಸಂಸ್ಕಾರವನ್ನು ಕೊಟ್ಟಾಗ ಅದು ಚೇತನವಾಗಿ ಪರಿವರ್ತನೆಯನ್ನು ಹೊಂದುತ್ತದೆ ಅಥವಾ ಸುಪ್ತವಾದ ಚೇತನವು ಸಂಸ್ಕಾರದಿಂದ ಪ್ರಕಟವಾಗುತ್ತದೆಂಬ ವಿಷಯವು ಸರ್ವರಿಗೂ ಮನವರಿಕೆಯಾದಂತಾಯಿತು. ಇದೇ ಪ್ರಕಾರ ಶಿವಯೋಗ ಸಾಮರ್ಥ್ಯವನ್ನು ಹೊಂದಿದ ಸುಯೋಗ್ಯ ಸದ್ಗುರುಗಳಿಂದ ಶಾಸ್ತ್ರೋಕ್ತ ವಿಧಿಯ ಪ್ರಕಾರ ಸಂಸ್ಕರಿಸಲ್ಪಟ್ಟ ಶೈಲಜ ಶಿವಲಿಂಗದಲ್ಲಿ ಶಿಷ್ಯನ ಮಸ್ತಕದಲ್ಲಿಯ ಚಿತ್ಕಳೆಯು ವ್ಯಕ್ತವಾಗುತ್ತದೆಂಬಲ್ಲಿ ಸಂದೇಹವಿಲ್ಲ.

**ಇಷ್ಟಲಿಂಗದಲ್ಲಿ ಶಿಷ್ಯನ ಪ್ರಾಣಸಂಯೋಜನೆ :**

ಇನ್ನು ಶಿವಕಲಾಯುಕ್ತವಾದ ಶಿವಲಿಂಗದಲ್ಲಿ ಸದ್ಗುರುಗಳು ಶಿಷ್ಯನ ಪ್ರಾಣವನ್ನು ಸಹ ಆಕರ್ಷಿಸಿ ಅದರಲ್ಲಿ ಸಂಸ್ಥಾಪಿಸಿ ಹೀಗೆ ಶಿವಕಲೆ–ಜೀವಕಲೆ ಭರಿತವಾದ ಶಿವಲಿಂಗವನ್ನು ಶಿಷ್ಯನ ಪ್ರಾಣದೊಂದಿಗೆ ತಾದಾತ್ಮ್ಯವನ್ನು ಮಾಡಿ ಶಿಷ್ಯನ ಹಸ್ತದಲ್ಲಿ ಇರಿಸಬೇಕು ಎಂಬುದಾಗಿಯೂ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ್ದಾರೆ. ಇದರ ರಹಸ್ಯಾರ್ಥವನ್ನಿಲ್ಲಿ ವಿಚಾರಿಸೋಣ–

ವೀರಶೈವ ಧರ್ಮದಲ್ಲಿ ಮಾಡಲ್ಪಡುವ ಲಿಂಗದೀಕ್ಷೆಯೆಂದರೆ ಅಂಗ–ಲಿಂಗಗಳ ವಿವಾಹವೇ ಸರಿ. ಪ್ರಪಂಚದ ವನಿತಾದಿ ವ್ಯಾಮೋಹದಿಂದ ದೂರನಾಗಲು ತನ್ನನ್ನೇ ಲಿಂಗದ ಸತಿಯನ್ನಾಗಿ ಭಾವಿಸುವದೊಂದು ಮಹಾಮಾರ್ಗ– ವೀರಶೈವ ಆಚಾರ್ಯರು ಕಲ್ಪಿಸಿದ ಇದೊಂದು ಶ್ರೇಷ್ಠ ಮಾರ್ಗ.

ಅಂಗ ಲಿಂಗೀ ಜ್ಞಾನರೂಪಃ ಸತೀಜ್ಞೇಯಃ ಶಿವಃ ಪತಿಃ ।
ಯತ್ಸೌಖ್ಯಂ ತತ್ಸಮಾವೇಶೇ ತದ್ವಾನ್ ಶರಣನಾಮವಾನ್ ॥

(ಸಿ. ಶಿ. ೧೩–೨)

ಎಂಬ ಭಗವತ್ಪಾದರ ಉಪದೇಶದಂತೆ ಸಾಧಕನು ಶರಣಸ್ಥಲವನ್ನು ತಲುಪಿದಾಗ ಅಂಗ–ಲಿಂಗಗಳಲ್ಲಿಯ ಸತಿ–ಪತಿ ಭಾವವು ಪರಿಪೂರ್ಣಾವಸ್ಥೆಯನ್ನು ಹೊಂದುವದು. ''ಯಥಾ ಸ್ತ್ರೀಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದನಾಂತರಂ ಏವಮೇವಾಯಂ ಪುರುಷಃ ಪ್ರಜ್ಞಾನೇನಾತ್ಮನಾ ಸಂಪರಿಷ್ವಕ್ತೋ ನ ಭಾಗ್ಯಂ ಕಿಂಚನ ವೇದನಾಂತರಂ'' ಎಂಬ ಉಪನಿಷತ್ ಮಂತ್ರವಾದರೂ ಲೌಕಿಕ ಸತಿಪತಿಗಳು ರತಿಸುಖದ ಪರಾಕಾಷ್ಠೆಯಲ್ಲಿ ಕ್ಷಣಕಾಲ ಅಭಿನ್ನರಾಗಿರುವಂತೆ ಶ್ರೇಷ್ಠ ಸಾಧಕರು ಉಪಾಸನೆಯ ಪರಾಕಾಷ್ಠೆಯನ್ನು ತಲುಪಿದಾಗ ಉಪಾಸ್ಯದೊಂದಿಗೆ ಅನಂತ ಕಾಲದವರೆಗೆ ಸಮರಸರಾಗುತ್ತಾರೆಂಬುದನ್ನು ಪ್ರತಿಪಾದಿಸಿದೆ. ತನ್ನ ಇಷ್ಟದೇವತೆಯನ್ನು ಪತಿಯನ್ನಾಗಿ ಭಾವಿಸಿ ತನ್ನನ್ನು ಸತಿಯನ್ನಾಗಿ ತಿಳಿದು ಅಲೌಕಿಕ ಸತಿ–ಪತಿ ಭಾವದಿಂದ ಇಷ್ಟವನ್ನಾರಾಧಿಸುವ

ಪದ್ಧತಿಯು ಉಪನಿಷತ್ಕಾಲದಿಂದಲೂ ಪ್ರಸಿದ್ಧವಾಗಿದೆ ಎಂಬುದು ತಿಳಿದುಬರುತ್ತದೆ. ವೀರಶೈವ ಸಿದ್ಧಾಂತದಲ್ಲಿ ಆಚಾರ್ಯರು ಇದನ್ನು ಬಹಳಷ್ಟು ರೂಢಿಯಲ್ಲಿ ತಂದಿದ್ದಾರೆ. ಅಂತೆಯೇ ಸದ್ಗುರುಗಳಿಂದ ಲಿಂಗದೀಕ್ಷೆಯನ್ನು ಹೊಂದಿ ಭಕ್ತ, ಮಹೇಶ, ಪ್ರಸಾದಿ ಮತ್ತು ಪ್ರಾಣಲಿಂಗಿ ಸ್ಥಲಗಳನ್ನು ದಾಟಿ ಶರಣಸ್ಥಲವನ್ನು ತಲುಪಿದ ಅಕ್ಕಮಹಾದೇವಿ, ಗಣದಾಸಿ ವೀರಣ್ಣ, ಷಣ್ಮುಖಸ್ವಾಮಿ ಮತ್ತು ಉರುಲಿಂಗದೇವ ಮುಂತಾದ ಶರಣರನೇಕರು ತಮ್ಮ ಅನುಭಾವದ ವಚನಗಳಲ್ಲಿ–

''ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು.
ಕುಲ ಸೀಮೆ ಇಲ್ಲದ ನಿಸ್ಸೀಮ ಚೆಲುವಂಗೆ ನಾನೊಲಿದೆ.
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ.
ಈ ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು''.

''ನಮ್ಮ ಗಣಂಗಳ ಸಹಾಯದಿಂದ ಏನೇನು ಫಲ ಪದವಿ ಎಂದೊಡೆ, ಅಷ್ಟಾವರಣಂಗಳು ಸಾಧ್ಯವಾದವು. ಸಾಧ್ಯವಾದ ಕಾರಣ, ಶ್ರೀಗುರುವು ಎನ್ನ ಕರಸ್ಥಲಕ್ಕೆ ಲಿಂಗವ ಕೊಟ್ಟ. ಎಂದೆಂದಿಗೂ ಸತಿ–ಪತಿ ಭಾವ ತಪ್ಪಬೇಡೆಂದು ಗಣಸಾಕ್ಷಿಯಂ ಮಾಡಿ, ನೀನು ಅಂಗವಾಗಿ ಲಿಂಗವೇ ಪ್ರಾಣವಾಗಿರಿ ಎಂದು ಇಬ್ಬರಿಗೂ ಆಜ್ಞೆಯ ಮಾಡಿದ ಕಾರಣ, ಎನ್ನಂಗವೇ ನಿನ್ನಂಗ, ನಿನ್ನಂಗವೇ ಎನ್ನ ಪ್ರಾಣ, ಎನ್ನ ಪ್ರಾಣವೇ ನಿನ್ನ ಪ್ರಾಣ........ ಶಾಂತ ಕೂಡಲಸಂಗಮದೇವ.''

''ಎಲೆ ಶಿವನೇ, ನೀನು ಎನ್ನ ಮೆಚ್ಚಿ ಕೈವಿಡಿದ ಕಾರಣ, ಎಮ್ಮವರು ಸಕಲ ಗಣಂಗಳ ಸಾಕ್ಷಿಯ ಮಾಡಿ ನಿನಗೆ ಎನ್ನ ಮದುವೆಯ ಮಾಡಿ ಕೊಟ್ಟರು........... ಅಖಂಡೇಶ್ವರಾ''.

''ನಲ್ಲನನೊಲ್ಲೆನೆಂದು ಮುನಿದು ನಾನಗಲಲು, ಅಗಲುವ ಠಾವೆಲ್ಲಾ ತಾನೆಲಗವ್ವಾ! ನಲ್ಲ ನಿಲ್ಲದೆಡೆ ಇಲ್ಲ, ಅಗಲಿಕೆಗಿಂಬಿಲ್ಲ, ಮುನಿದು ನಾನೇನಾಗುವೆನು ? ಶರಣುಗತಿ ಹೊಗುವೆನು ಉರುಲಿಂಗದೇವನ.''

ಈ ರೀತಿಯಾಗಿ ತಮ್ಮ ಇಷ್ಟಲಿಂಗವನ್ನೇ ಪತಿಯನ್ನಾಗಿ ಭಾವಿಸಿ ಕೊಂಡಾಡಿದ್ದಾರೆ.

ಹೀಗೆ ಸಾಧಕ ಹಾಗೂ ಇಷ್ಟಲಿಂಗದಲ್ಲಿ ಸತಿ–ಪತಿ ಭಾವವಳವಟ್ಟಾಗ ಸಾಧಕನ ಪ್ರಾಣ ಇಷ್ಟಲಿಂಗದಲ್ಲಿ, ಶಿವಕಲಾಯುಕ್ತವಾದ ಇಷ್ಟಲಿಂಗವು ಸಾಧಕನ ಪ್ರಾಣದಲ್ಲಿ ಸಮರಸವಾಗುವದುಂಟು.

ಲೌಕಿಕ ವಿವಾಹ ಸಂಸ್ಕಾರವಾದರೂ ಸತಿ–ಪತಿಗಳ ಪರಸ್ಪರ ಪ್ರಾಣಗಳನ್ನು ಸಮರಸಗೊಳಿಸುವುದು. ಹೇಗೆಂದರೆ–ಎಲ್ಲಿಯೋ ಜನಿಸಿದ ಪರಸ್ಪರ ಪರಿಚಯವೇ ಇಲ್ಲದ ವರ ಹಾಗೂ ಕನ್ಯಾ ಇವರೀರ್ವರನ್ನು ಒಂದೆಡೆ ತಂದು ಗುರು–ಹಿರಿಯರ ಸಾಕ್ಷಿಯಲ್ಲಿ ಕನ್ಯಾದಾನ, ವರಪ್ರತಿಜ್ಞೆ, ವಧೂವರರ ಸಂಕಲ್ಪ, ಅಕ್ಷತಾರೋಪಣ, ಪರಸ್ಪರ ಮಾಲ್ಯಾರ್ಪಣ, ಮಾಂಗಲ್ಯಧಾರಣ, ಬ್ರಹ್ಮಬಂಧನ, ಉಮಾ–ಮಾಹೇಶ್ವರ ಪೂಜೆ, ಪಾಣಿಗ್ರಹಣ, ಸಪ್ತಪದೀ, ಪಂಚಕಲಶ ತೀರ್ಥ ಪ್ರೋಕ್ಷಣ ಮತ್ತು ನಾಕಬಲಿ ಮುಂತಾದ

ವಿಧಾನಗಳು ಶಾಸ್ತ್ರೋಕ್ತಪದ್ಧತಿಯಿಂದ ನೆರವೇರಿದ ಬಳಿಕ ಕನ್ಯೆಯು ವರನ ಗೃಹವನ್ನು ಪ್ರವೇಶಿಸುತ್ತಾಳೆ.

ಈ ವಿವಾಹ ಸಂಸ್ಕಾರವಾಗುವ ಪೂರ್ವದಲ್ಲಿ ಪರಸ್ಪರ ಎಂದೂ ಪರಿಚಯವೇ ಇಲ್ಲದ ವರ–ಕನ್ಯೆಯರು ಸಂಸ್ಕಾರ ಮಹಾತ್ಮ್ಯದಿಂದ ದಂಪತಿಗಳಾಗುತ್ತಾರೆ. ಈ ಸಂಸ್ಕಾರವು ಅವರೀರ್ವರ ದೇಹಗಳನ್ನಷ್ಟೇ ಒಂದು ಗೂಡಿಸುವದಿಲ್ಲ ಕಿಂತು ಪರಸ್ಪರರ ಪ್ರಾಣ, ಮನಸ್ಸುಗಳನ್ನೂ ಒಂದುಗೂಡಿಸುತ್ತದೆ. ಅಂತೆಯೇ ಪತಿಯ ಪ್ರಾಣದಲ್ಲಿ ಪತ್ನಿಯ ಪ್ರಾಣವು, ಪತ್ನಿಯ ಪ್ರಾಣದಲ್ಲಿ ಪತಿಯ ಪ್ರಾಣವು, ಇದೇ ಪ್ರಕಾರ ಪತಿಯ ಮನಸ್ಸಿನಲ್ಲಿ ಪತ್ನಿಯ ಮನಸ್ಸು, ಪತ್ನಿಯ ಮನಸ್ಸಿನಲ್ಲಿ ಪತಿಯ ಮನಸ್ಸು ಪರಸ್ಪರ ಸಮರಸಗೊಂಡು ಬಾಹ್ಯನೋಟದಲ್ಲಿ ಎರಡು ದೇಹಗಳಾಗಿ ಕಂಡರೂ ಒಂದೇ ಪ್ರಾಣ ಒಂದೇ ಮನಸ್ಸಾಗಿ ಜೀವಿಸುತ್ತಾರೆ. ಲೌಕಿಕ ಇಲ್ಲವೇ ಆಧ್ಯಾತ್ಮಿಕವಾದ ಯಾವುದೇ ಗುರಿಯನ್ನು ಸಾಧಿಸಬೇಕಾದರೆ ಪರಸ್ಪರರು ವಿಚಾರಿಸಿಕೊಂಡು ಒಮ್ಮತದಿಂದ ಒಂದು ನಿರ್ಣಯಕ್ಕೆ ಬಂದು ಕಾರ್ಯ ಸಾಧಿಸುತ್ತಾರೆ. ಗುರು–ಹಿರಿಯರು ಕಲ್ಪಿಸಿಕೊಟ್ಟ ಈ ಸಂಬಂಧವನ್ನು ಈ ಜನ್ಮವಿರುವವರೆಗೆ ಪರಿಪಾಲಿಸುತ್ತಾರೆ. ಹಾಲು–ಜೇನಿನಂತೆ ಸಮರಸವಾಗಿ ಬಾಳುತ್ತಾರೆ. ಇದುವೇ ನಿಜವಾದ ಬದುಕು. ಸಸಾರವಾದ ಜೀವನ. ಇದಕ್ಕೆ ವಿಪರೀತವಾದ ದಂಪತಿಗಳಲ್ಲಿ ವೈಮನಸ್ಯವುಂಟಾದರೆ ಅದುವೇ ಕಗ್ಗಂಟಿನ ದುಃಖದಾಯಿ ಸಂಸಾರವು.

ಅನ್ಯೋನ್ಯವಾಗಿ ಪ್ರೇಮದಿಂದ ಬಾಳುವ ದಂಪತಿಗಳು ತಾವು ಎಂದೂ ಪರಸ್ಪರ ಅಗಲಬಾರದೆಂದೇ ಯೋಚಿಸುತ್ತಿರುತ್ತಾರೆ. ಇಷ್ಟೇ ಅಲ್ಲ, ಭಾರತೀಯ ಪತಿವ್ರತೆಯು ಮುಂದಿನ ಅನೇಕ ಜನ್ಮಗಳಲ್ಲಿ ಈತನೇ ನನಗೆ ಪತಿಯಾಗಿ ದೊರಕಬೇಕೆಂಬ ತನ್ನ ಮುಗ್ಧ ಭಾವವನ್ನು ಭಗವಂತನಿಗೆ ನಿವೇದಿಸಿಕೊಳ್ಳುತ್ತಾಳೆ.

ಎರಡು ಜೀವಿಗಳ ಈ ಲೌಕಿಕ ಜೀವನವು ಇಷ್ಟೊಂದು ಸಮರಸವಾಗಲು ಸಾಮಾನ್ಯವಾಗಿ ಪರಸ್ಪರರಲ್ಲಿರುವ ಪ್ರಬಲವಾದ ವಿಷಯವಾಸನೆ ಹಾಗೂ ಸಂತಾನಾಪೇಕ್ಷೆಯು. ಸಂತಾನ ಪ್ರಾಪ್ತಿಯ ಪೂರ್ವದಲ್ಲಿ ಪರಸ್ಪರ ಪ್ರಾಣ–ಮನಸ್ಸುಗಳು ತಾದಾತ್ಮ್ಯಗೊಂಡಂತೆ ಸಂತಾನೋತ್ಪತ್ತಿಯ ನಂತರ ಅವರೀರ್ವರ ಪ್ರಾಣ–ಮನಸ್ಸುಗಳು ಸಂತತಿಯ ಪ್ರಾಣ–ಮನಗಳೊಂದಿಗೆ ತಾದಾತ್ಮ್ಯವನ್ನು ಹೊಂದುತ್ತವೆ ಇದು ಸರ್ವಾನುಭವಸಿದ್ಧವಾದ ವಿಷಯ ಆದರೂ ಇದಕ್ಕೊಂದು ದೃಷ್ಟಾಂತವನ್ನು ನಿರೂಪಿಸೋಣ.

ಗ್ರಾಮೀಣ ಪ್ರದೇಶದಲ್ಲೊಂದು ಬಡ ಕುಟುಂಬ, ಕೃಷಿ ಕಾಯಕವೇ ಅವರ ಜೀವನೋಪಾಯ. ದಂಪತಿಗಳಿಗೆ ಓರ್ವನೇ ಗಂಡು ಸಂತಾನ. ಈರ್ವರೂ ಮಗನನ್ನು ಬಹು ವಾತ್ಸಲ್ಯದಿಂದ ಬೆಳೆಸಿದರು. ತಂದೆ–ತಾಯಿಗಳ ಜೊತೆ ಕೃಷಿ ಕಾಯಕದಲ್ಲಿ ಮನಸಾರೆ ದುಡಿದು ''ನೇಗಿಲಯೋಗಿ'' ಎನಿಸಿಕೊಂಡ. ಮಗನು ತಾರುಣ್ಯದಲ್ಲಿ ಪಾದಾರ್ಪಣಮಾಡಿದ್ದನ್ನು ಗಮನಿಸಿದ ತಂದೆ–ತಾಯಿಗಳು ತಮ್ಮಂತೆ ಆತನನ್ನೂ ಗೃಹಸ್ಥನನ್ನಾಗಿ ಮಾಡಲು ಸುಯೋಗ್ಯ ಕನ್ಯೆಯನ್ನು ಹುಡುಕಿ ವಿವಾಹಕಾರ್ಯವನ್ನು

ಗುರು ಹಿರಿಯರು ನೆರೆದು ನೆರವೇರಿಸಿದರು. ನೂತನ ದಂಪತಿಗಳು ಭಕ್ತಿತತ್ಪರರಾಗಿಯೂ ಕೃಷಿ ಕಾಯಕ ನಿಷ್ಠರಾಗಿಯೂ ಕಾಲ ಕಳೆಯುತ್ತಿರಲು ಬಹುಕಾಲದ ನಂತರ ಒಂದು ಗಂಡು ಮಗುವಿನ ತಂದೆ–ತಾಯಿಗಳಾದರು. ದಂಪತಿಗಳು ಯಾವ ಕಾರ್ಯದಲ್ಲಿ ನಿರತರಾಗಿದ್ದರೂ ಮನಸ್ಸು ಮಾತ್ರ ಮಗುವಿನ ಮೇಲೆಯೇ. ಅದು ಸ್ವಲ್ಪು ಅತ್ತರೆ ಸಾಕು ಕೈಕೆಲಸವನ್ನು ತತ್‌ಕ್ಷಣ ಬದಿಗಿರಿಸಿ ಈರ್ವರೂ ಮಗುವಿನತ್ತ ಧಾವಿಸುತ್ತಿದ್ದರು. ಹೊಲದಲ್ಲಿಯೇ ಮನೆ, ಮನೆಯಲ್ಲಿ ವಯೋವೃದ್ಧರಾದ ಮಗುವಿನ ಅಜ್ಜ–ಅಜ್ಜಿಯರು ಮೊಮ್ಮಗನನ್ನು ಆಡಿಸುತ್ತ ಮನೆಯ ಪಡಸಾಲೆಯಲ್ಲಿ ಕುಳಿತಿದ್ದಾರೆ. ಮಗುವಿನ ತಾಯಿ ಪಾಕಶಾಲೆಯಲ್ಲಿ ಪಾಕ ನಿರತಳಾಗಿದ್ದಾಳೆ. ಮಗುವಿನ ತಂದೆ ಹೊಲದಲ್ಲಿ ಕಾರ್ಯಾಸಕ್ತನಾಗಿದ್ದಾನೆ.

ಬೇಸಿಗೆಯ ಕಾಲವಾದ್ದರಿಂದ ಪ್ರಾತಃಕಾಲವು ಕ್ರಮಿಸುತ್ತಿದ್ದಂತೆ ಸೂರ್ಯನ ತೇಜವು ಪ್ರಖರವಾಗತೊಡಗಿತು. ಮಗುವಿನ ತಂದೆ ಸೂರ್ಯೋದಯದ ಪೂರ್ವದಲ್ಲಿಯೇ ಹೊಲದಲ್ಲಿ ಕಾರ್ಯಾಸಕ್ತನಾಗಿದ್ದನು. ದುಡಿಯುವ ಆವೇಶದಲ್ಲಿ ಹಸಿವೆ–ನೀರಡಿಕೆಗಳನ್ನು ಲೆಕ್ಕಿಸದೇ ಬೇಸಿಗೆಯ ತಾಪವನ್ನು ಅನುಲಕ್ಷಿಸದೇ ದುಡಿಯುತ್ತಲೇ ಇದ್ದ. ಮೊಮ್ಮಗನನ್ನು ಆಡಿಸುತ್ತ ಕುಳಿತ ಅಜ್ಜನು ಹೊಲದಲ್ಲಿ ದುಡಿಯುತ್ತಿದ್ದ ತನ್ನ ಮಗನನ್ನು ಬಿಸಿಲು ತಗ್ಗುವವರೆಗೆ ವಿಶ್ರಾಂತಿಗಾಗಿ ಹಾಗೂ ಊಟಕ್ಕಾಗಿ ಕರೆಯುತ್ತಿದ್ದ ; ತಂದೆಯ ಕರೆಗೆ ಲಕ್ಷ್ಯಗೊಡದೇ ಮಗನು ದುಡಿಯುತ್ತಲೇ ಇದ್ದ.

ತಾನು ನೆರಳಲ್ಲಿ ಕುಳಿತಿದ್ದರೂ ತನ್ನದೇ ಆದ ರಕ್ತದ ಕುಡಿಯು ಬಿಸಿಲಿನಲ್ಲಿ ಪರಿತಪಿಸುವದನ್ನು ನೋಡಿ ಮುದುಕನಿಗೆ ಸಹಿಸಲಾಗಲಿಲ್ಲ. ಮಗನನ್ನು ಕರೆದು ಕರೆದು ಬೇಸತ್ತು ಮಗನ ನೋವಿನಿಂದ ತನಗಾಗುವ ಸಂತಾಪವನ್ನು ತಾಳಲಾರದೇ ಮಗನಿಗೆ ಬುದ್ಧಿಗಲಿಸುವದಕ್ಕೋಸ್ಕರವಾಗಿ ತನ್ನ ತೊಡೆಯ ಮೇಲೆ ಆಡುತ್ತಿರುವ ತಿಳು ಚರ್ಮದ ಎಳೆಗೂಸನ್ನು ಬಿಸಿಲಿನಿಂದ ಕಾಯ್ದ ಹೆಂಟೆಯ ಹೊಲದಲ್ಲಿ ಇರಿಸಿದನು. ಕಾಯ್ದ ಕಬ್ಬಿಣದಿಂದ ಬರೆಕೊಟ್ಟಂತಾಯಿತು ಕೂಸಿಗೆ. ತಾಪವನ್ನು ಸಹಿಸದ ಕೂಸು ಚಿಟ್ಟನೇ ಚೀರಿತು. ಮಗುವಿನ ಈ ಆರ್ತ ಧ್ವನಿಯು ಆತನ ತಂದೆಗೆ ಸಿಡಿಲು ಬಡಿದಂತಾಯಿತು. ತನ್ನ ಕೈಕೆಲಸವನ್ನು ಅಲ್ಲಿಯೇ ನಿಲ್ಲಿಸಿ ಓಡಿಬಂದು ಮಗುವನ್ನು ಎತ್ತಿಕೊಂಡು ಸಾಂತ್ವನಗೊಳಿಸುತ್ತ ತನ್ನ ತಂದೆಯ ಅನುಚಿತ ಕಾರ್ಯಕ್ಕಾಗಿ ರೇಗಿದ– ''ಮುದುಕನಾಗಿರುವೆ ತಿಳಿಯುವದಿಲ್ಲವೆ ? ಕೂಸನ್ನು ಬಿಸಿಲಿನಲ್ಲಿ ಹಾಕುವರೇ ?''.

ಅನುಭವಿಕನಾದ ಮುದುಕನು ಆಗ ಮಗನಿಗೆ– ''ನಿನ್ನ ಮಗನ ಪ್ರಾಣದೊಂದಿಗೆ ನಿನ್ನ ಪ್ರಾಣಗಳು ತಾದಾತ್ಮ್ಯಹೊಂದಿರುವಂತೆ ನನ್ನ ಪ್ರಾಣಗಳು ನಿನ್ನ ಪ್ರಾಣದೊಂದಿಗೆ ತಾದಾತ್ಮ್ಯ ಹೊಂದಿವೆ. ನೀನು ಬಿಸಿಲಿನಲ್ಲಿ ಅನುಭವಿಸುತ್ತಿರುವ ಕಷ್ಟವನ್ನು ನಾನು ತಡೆಯದಾದೆ. ನಾನು ಕರೆದರೂ ನನ್ನ ಶಬ್ದಕ್ಕೆ ನೀನು ಲಕ್ಷ್ಯಕೊಡಲಿಲ್ಲ. ಆಗ ನನಗಾಗುವ ವೇದನೆಯನ್ನು ನಿನ್ನ ಅನುಭವಕ್ಕೆ ತರಲೋಸುಗ ನಿನ್ನ ಮಗನನ್ನು ಬಿಸಿಲಿನಲ್ಲಿ ತಂದು ಹಾಕಿದೆ ತಿಳಿಯಿತೇ'' ಆಗ ಮಗನಿಗೆ ತಂದೆಯ ಅಂತರಂಗದ ಅರಿವಾಯಿತು. ನೋಡಿದಿರಾ ತಂದೆ–ಮಕ್ಕಳ ಪರಸ್ಪರ ಪ್ರಾಣತಾದಾತ್ಮ್ಯವನ್ನು.

ವಿವಾಹ ಸಂಸ್ಕಾರವು ಲೌಕಿಕವಾದ್ದರಿಂದ ಈ ಪ್ರೇಮ ತಾದಾತ್ಮ್ಯವು ಸೀಮಿತ ವಾದದ್ದು. ಆದರೆ ದೀಕ್ಷಾ ಸಂಸ್ಕಾರವು ಆಧ್ಯಾತ್ಮಿಕವಾದ್ದರಿಂದ ತನ್ನ ಲಿಂಗದೊಡನೆ ಸಾಧಕನು ತಾದಾತ್ಮ್ಯವನ್ನು ಹೊಂದಿದರೆ ಇಡೀ ವಿಶ್ವದೊಂದಿಗೆ ತಾದಾತ್ಮ್ಯವನ್ನು ಹೊಂದಿದಂತೆ, ಅಂತೆಯೇ ಲಿಂಗಭಕ್ತನು ವಿಶ್ವಕುಟುಂಬಿಯಾಗುತ್ತಾನೆ.

ವಿವಾಹ ಸಂಸ್ಕಾರವು ಸತಿ–ಪತಿಗಳ ಪ್ರಾಣಗಳನ್ನು ಪರಸ್ಪರ ತಾದಾತ್ಮ್ಯಗೊಳಿಸು ವಂತೆ ಏಕಾಗ್ರಚಿತ್ತತೆ ಧೃಢವ್ರತತೆ, ಪಂಚೇಂದ್ರಿಯಾರ್ಪಿತತೆ, ಅಹಿಂಸಾ, ಲಿಂಗನಿಷ್ಠಾ, ಮನೋಲಯ ಮತ್ತುಸದ್ಯೋನ್ಮುಕ್ತಿಗಳೆಂಬೇಳು ವೇಧಾದೀಕ್ಷೇಯ ; ಸಮಯ ಸಂಸ್ಕಾರ, ನಿಃಸಾರಸಂಸ್ಕಾರ, ನಿರ್ವಾಣ ಸಂಸ್ಕಾರ, ತತ್ತ್ವ, ಸಂಸ್ಕಾರ, ಆಧ್ಯಾತ್ಮ ಸಂಸ್ಕಾರ, ಅನುಗ್ರಹ ಸಂಸ್ಕಾರ ಮತ್ತು ಸತ್ಯ ಶುದ್ಧ ಸಂಸ್ಕಾರಗಳೆಂಬೇಳು ಮಂತ್ರದೀಕ್ಷೆಯ ಹಾಗೂ ಆ ಸಂಸ್ಕಾರ, ಉಪಮಾ ಸಂಸ್ಕಾರ, ಸ್ವಸ್ತಿಕಾರೋಹಣ ಸಂಸ್ಕಾರ, ಕಲಶಾಭಿಷೇಕ ಸಂಸ್ಕಾರ, ವಿಭೂತಿ ಪಟ್ಟ ಸಂಸ್ಕಾರ, ಆಯತ್ತ ಸಂಸ್ಕಾರ ಮತ್ತು ಸ್ವಾಯತ್ತ ಸಂಸ್ಕಾರಗಳೆಂಬೇಳು ಕ್ರಿಯಾದೀಕ್ಷೆ ಹೀಗೆ ಒಟ್ಟು ಮೂರು ವಿಧ ದೀಕ್ಷೆಗಳಲ್ಲಿಯ ಇಪ್ಪತ್ತೊಂದು ಪ್ರಕಾರದ ಅವಾಂತರ ಸಂಸ್ಕಾರಗಳ ಮೂಲಕವಾಗಿ ಸದ್ಗುರುಗಳು ಶಿಷ್ಯನ ಚಿತ್ಕಳೆ ಹಾಗೂ ಪ್ರಾಣಗಳನ್ನು ಆಕರ್ಷಿಸಿ ಇಷ್ಟಲಿಂಗದಲ್ಲಿ ಮತ್ತು ಆ ಇಷ್ಟಲಿಂಗವನ್ನು ಶಿಷ್ಯನ ಪ್ರಾಣದಲ್ಲಿ ಸಮರಸ ಗೊಳಿಸಿ ಶಿಷ್ಯನ ಹಸ್ತಪೀಠದಲ್ಲಿ ಇರಿಸುತ್ತಾನೆ. (ಈ ಇಪ್ಪತ್ತೊಂದು ಸಂಸ್ಕಾರಗಳ ವಿಶ್ಲೇಷಣೆ ಯನ್ನು ೮ನೇ ಕಿರಣವಾದ ಗುರುಕಾರುಣ್ಯಸ್ಥಲದಲ್ಲಿ ಮಾಡಲಾಗಿದೆ. ಜಿಜ್ಞಾಸುಗಳು ಅವಲೋಕಿಸಬೇಕು.)

ಇಲ್ಲಿ ಗಮನಿಸಬೇಕಾದ ಮಹತ್ತ್ವದ ವಿಷಯವೇನೆಂದರೆ–ವಿವಾಹ ಸಂಸ್ಕಾರದಲ್ಲಿ ವರ ಕನ್ಯೆಯರ ಪ್ರಾಣಗಳು ಪರಸ್ಪರ ಸಮರಸಗೊಳ್ಳಲು ವಿವಾಹವಿಧಿಯ ಕೇವಲ ಅವಾಂತರ ಸಂಸ್ಕಾರಗಳೇ ಕಾರಣಗಳಲ್ಲ, ಅದರ ಜೊತೆಗೆ ಅವರೀರ್ವರಲ್ಲಿರುವ ಪ್ರಬಲವಾದ ವಿಷಯಾಸಕ್ತಿ ಹಾಗೂ ಸಂತಾನಾಪೇಕ್ಷೆಗಳು ಕಾರಣವಾಗಿರುವಂತೆ ದೀಕ್ಷೆ ಯನ್ನು ಪಡೆಯುವ ಶಿಷ್ಯನಲ್ಲಿ ಸಂಸಾರ ವಿಷಯ ವಿಮುಖತೆ, ಪ್ರಬಲವಾದ ಲಿಂಗಭಕ್ತಿ ಹಾಗೂ ಸಾಯುಜ್ಯ ಸಂತಾನಾಪೇಕ್ಷೆಗಳೆಂಬ ಅರ್ಹತೆಗಳು ಇದ್ದಾಗ ಮಾತ್ರ ಸದ್ಗುರುಗಳು ಮಾಡುವ ಸಂಸ್ಕಾರ ಸಮಯದಲ್ಲಿ ಆತನು ಲಿಂಗಪ್ರಾಣಿಯಾಗುತ್ತಾನೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಲಿಂಗಧಾರಣ ಸ್ಥಲವನ್ನು ಉಪದೇಶಿಸುವ ಪೂರ್ವದಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸ್ಕಾರಹೇಯಸ್ಥಲ ಮತ್ತು ಗುರುಕಾರುಣ್ಯಸ್ಥಲಗಳಲ್ಲಿ ಗುರುವಿನ ಅನುಗ್ರಹಗಳಲ್ಲಿ ಗುರುವಿನ ಅನುಗ್ರಹದಿಂದ ಲಿಂಗದೀಕ್ಷೆಯನ್ನು ಪಡೆಯುವ ಅಭಿಲಾಷೆಯುಳ್ಳ ಶಿಷ್ಯನಲ್ಲಿ ಇರಬೇಕಾದ ಯೋಗ್ಯತೆಯ ಬಗ್ಗೆ ಉಪದೇಶವಿತ್ತಿದ್ದಾರೆ. ಹೀಗೆ ಯೋಗ್ಯತಾ ಸಂಪನ್ನನಾದ ಶಿಷ್ಯನಿಗೆ ಲಿಂಗದೀಕ್ಷೆಯನ್ನು ಮಾಡಿದಾಗ ಮಾತ್ರ ಆತನು ಲಿಂಗಪ್ರಾಣಿ ಹಾಗೂ ಪ್ರಾಣಲಿಂಗಿಯಾಗಬಲ್ಲನು. ಸಾಮಾನ್ಯತಃ ಲಿಂಗ ಧರಿಸಿದವರೆಲ್ಲ ಲಿಂಗಪ್ರಾಣಿಗಳಾಗರು. ಅಂತೆಯೇ–

"ಸತ್ತುಹೋಗುವವರೆಲ್ಲ ಸ್ವರ್ಗಪದಸ್ಥರೇ ? ಅಲ್ಲಲ್ಲ, ಕೈದುವ ಪಿಡಿದವರೆಲ್ಲ ಮಹಾಕಲಿಗಳೇ ? ಅಲ್ಲಲ್ಲ, ಲಿಂಗವ ಧರಿಸುವವರೆಲ್ಲ ಲಿಂಗಪ್ರಾಣಿಗಳೇ ? ಅಲ್ಲಲ್ಲ,

ಅದೇನು ಕಾರಣವೆಂದಡೆ; ಕಪಿಯ ಕೈಯಲ್ಲಿ ರತ್ನವ ಕೊಟ್ಟಡೆ ಅದು ಹಣ್ಣೆಂದು ಕಡಿದು ನೋಡಿ, ಕಲ್ಲೆಂದು ಬಿಸುಟುವುದಲ್ಲದೆ, ಆ ರತ್ನದ ದಿವ್ಯ ಬೆಳಗನರಿವುದೇ ಅಯ್ಯಾ ? ಇಂತೀ ದೃಷ್ಟದಂತೆ, ಮಡ್ಡ ಜೀವಿಗಳ ಕೈಯಲ್ಲಿ ದೊಡ್ಡಲಿಂಗವಿರ್ದಡೇನು ? ಆ ಲಿಂಗದಲ್ಲಿ ಮಹಾಘನ ಪರಮ ಕಳೆಯನರಿಯದ ಬಳಿಕ ಅದು ಒಡ್ಡು ಕಲ್ಲಿನಂತೆ ಕಂಡೆಯಾ ಅಖಂಡೇಶ್ವರಾ''.

ಹೀಗೆ ಶ್ರೀ ಷಣ್ಮುಖಸ್ವಾಮಿಗಳು ಸ್ಪಷ್ಟವಾಗಿ ವಿವರಿಸಿದ್ದಾರೆ.

ಯೋಗ್ಯತೆ ಇಲ್ಲದ ಸಾಧಕನಿಗೆ ತನ್ನ ಹಸ್ತದ ಲಿಂಗವಾದರೂ ಶಿಲೆಯಾಗಿಯೇ ತೋರುವುದು. ಅಂತೆಯೇ–ಹಂದಿಯ ಕೈಯಲ್ಲಿಯ ಚಂದ್ರಾಯುಧ, ಅಂಧಕನ ಕೈಯಲ್ಲಿಯ ದರ್ಪಣ, ಮರ್ಕಟನ ಕೈಯಲ್ಲಿಯ ಮಾಣಿಕ್ಯವಿದ್ದಂತೆ ಶಿವತತ್ತ್ವವನರಿಯದ ಹಾಗೂ ಅದರ ಅನುರಾಗವಿಲ್ಲದವನ ಕೈಯಲ್ಲಿಯ ಲಿಂಗವಾದರೂ ನಿಷ್ಪ್ರಯೋಜನ ಎಂಬುದಾಗಿ ಅಣ್ಣನವರು ಬಹುವಾಗಿ ವಿಡಂಬಿಸಿದ್ದಾರೆ.

''ಶ್ರೀ ಗುರುವು ಎನ್ನ ಕರಸ್ಥಲಕ್ಕೆ ಲಿಂಗವಕೊಟ್ಟ– ಎಂದೆಂದಿಗೂ ಸತಿ–ಪತಿ ಭಾವ ತಪ್ಪಬೇಡೆಂದು, ಗಣಸಾಕ್ಷಿಯಂ ಮಾಡಿ, ನೀನು ಅಂಗವಾಗಿ, ಲಿಂಗಪ್ರಾಣ ವಾಗಿರಿ ಎಂದು ಇಬ್ಬರಿಗೂ ಆಜ್ಞೆಯ ಮಾಡಿದ ಕಾರಣ ಎನ್ನಂಗವೇ ನಿನ್ನಂಗ, ನಿನ್ನಂಗವೇ ಎನ್ನ ಪ್ರಾಣ, ಎನ್ನ ಪ್ರಾಣವೇ ನಿನ್ನ ಪ್ರಾಣ, ನಿನ್ನ ಪ್ರಾಣವೇ ಎನ್ನ ಪ್ರಾಣವಾದ ಮೇಲೆ, ಎನ್ನ ಮಾನಾಪಮಾನ ನಿನ್ನದಯ್ಯಾ, ಎನ್ನ ಹಾನಿ ವೃದ್ಧಿ ನಿಮ್ಮದಯ್ಯ........ ಶಾಂತ ಕೂಡಲಸಂಗಮದೇವ''.

ಎಂಬ ಈ ವಚನದಲ್ಲಿ ಗಣದಾಸಿ ವೀರಣ್ಣನೆಂಬ ಶರಣನು ಸುಯೋಗ್ಯ ಶಿಷ್ಯನಿಗೆ ಸದ್ಗುರುಗಳು ಲಿಂಗದೀಕ್ಷೆಯನ್ನು ಮಾಡಿದರೆ ಆತನು ಲಿಂಗಪ್ರಾಣಿಯಾಗುತ್ತಾನೆ ಎಂಬುದಕ್ಕೆ ತಮ್ಮನ್ನೇ ಉದಾಹರಿಸಿಕೊಂಡಿದ್ದಾರೆ.

ಪ್ರಾಚೀನ ಕಾಲದ ಋಷಿಮುನಿಗಳು ಕಲ್ಪಿಸಿದ ವಿವಾಹ ಸಂಸ್ಕಾರಗಳ ಪರಿಪೂರ್ಣ ತಿಳುವಳಿಕೆ ಇಲ್ಲದ ಇಂದಿನ ಸಮಾಜದಲ್ಲಿ ಬಹಳಷ್ಟು ಜನ ದಂಪತಿಗಳ ಜೀವನದಲ್ಲಿ ಹೊಂದಾಣಿಕೆಯು ಕಾಣದಾಗಿರುವಂತೆ ಕಾಲದ ಪ್ರಭಾವವೋ, ಪ್ರಚಾರದ ಅಭಾವವೋ, ಯೋಗ್ಯತೆಯ ಶೂನ್ಯತೆಯೋ, ಅಂತೂ ವೀರಶೈವರ ಲಿಂಗ ಭಕ್ತಿ ಕಡಿಮೆ ಯಾಗುತ್ತಿರುವುದು ಖೇದದ ಸಂಗತಿ. ಹಿಂದೊಮ್ಮೆ ಭಕ್ತಿಯಲ್ಲಿ ವೀರರಾದ್ದರಿಂದ ವೀರಶೈವರೆನಿಸಿಕೊಂಡ ನಾವು ಆ ವೀರತನವನ್ನು ಕಳೆದುಕೊಳ್ಳುವದು ಬೇಡ. ನಮ್ಮ ನಿಜವಾದ ಸಂಪತ್ತೇ ಲಿಂಗ, ತಾಯಿಯ ಗರ್ಭದಲ್ಲಿ ಸಂಗಾತಿಯಾಗಿ ಭೂಗರ್ಭಕ್ಕೆ ಹೋಗುವಾಗಲೂ ಸಹಚಾರಿಯಾದ ಲಿಂಗವೇ ನಿಜವಾದ ಸಖ ; ಇದರ ಮರ್ಮವನ್ನು ಪ್ರತಿಯೊಬ್ಬ ವೀರಶೈವನು ತಿಳಿದುಕೊಳ್ಳಬೇಕು. ಒಂದು ವೇಳೆ ಯೋಗ್ಯತೆ ಇಲ್ಲದೇ ಇಷ್ಟ ಲಿಂಗವು ಪ್ರಾಪ್ತವಾಗಿದ್ದರೆ ಕ್ರಮವಾಗಿ ಭಕ್ತಿಯನ್ನು ಬೆಳೆಸಿಕೊಳ್ಳುತ್ತ ಲಿಂಗಪ್ರಾಣಿ ಯಾಗಲು ಪ್ರಯತ್ನಿಸಬೇಕು.

ಆ ಶಿಲಾಲಿಂಗದಲ್ಲಿ ಚಿತ್ಕಳೆ ಪ್ರತಿಷ್ಠಾಪಿಸುವ ಈ ಶಾಸ್ತ್ರೀಯ ಸಂಸ್ಕಾರ ವಿಶೇಷವು ಜನಸಾಮಾನ್ಯರಿಗೆ ಮನವರಿಕೆಯಾಗಬೇಕೆಂಬ ಉದ್ದೇಶದಿಂದ ಜೋಳ ಮುಂತಾದ ಜಡ

ಪದಾರ್ಥಗಳ ಸಂಸ್ಕಾರದಿಂದ ಚೇತನ ಪುರುಷನಾಗುವ ವಿಷಯವನ್ನು ಲಿಂಗಪ್ರಾಣ ಹಾಗೂ ಸಾಧಕನ ಪ್ರಾಣವು ಇಷ್ಟಲಿಂಗದಲ್ಲಿ ಇಷ್ಟಲಿಂಗವು ಸಾಧಕನ ಪ್ರಾಣದಲ್ಲಿ ಹೇಗೆ ಸಮರಸವಾಗಬಲ್ಲದೆಂಬುದನ್ನು ತಿಳಿಸಲು ಲೌಕಿಕ ವಿವಾಹ ಸಂಬಂಧವನ್ನು ವಿಶೇಷವಾಗಿ ನಿರೂಪಿಸಲಾಗಿದೆ. ಕಾರಣ ಪ್ರೌಢಜಿಜ್ಞಾಸುಗಳು ಇದು ವಿಷಯಾಂತರವೆಂದು ತಿಳಿದು ಕೊಳ್ಳಬಾರದು. ಅತಿಗೂಢವಾದ ಶಾಸ್ತ್ರೀಯ ವಿಷಯಗಳನ್ನು ಜನಸಾಮಾನ್ಯರಿಗೆ ತಿಳಿಸುವುದೇ ನಮ್ಮ ಉದ್ದೇಶವಾದ್ದರಿಂದ ಅವರಿಗಿರುವ ಲೌಕಿಕ ಉದಾಹರಣೆಗಳಿಂದಲೇ ತಿಳಿಸಬೇಕಾಗುವುದು.

ಶಿವಕಳೆ ಹಾಗೂ ಜೀವಕಳೆಯಿಂದ ಕೂಡಿದ ತನ್ನ ಇಷ್ಟಲಿಂಗವನ್ನು ಪ್ರತಿಯೊಬ್ಬ ಸಾಧಕನು ಅವಧಾನ ಪೂರ್ವಕವಾಗಿ ದೇಹದ ಮೇಲೆ ಸದಾ ಧರಿಸಿಕೊಂಡಿರಬೇಕು. ಲಗ್ನವಾದುದಕ್ಕೆ ಸತಿಯ ಕೊರಳಲ್ಲಿಯ ಮಾಂಗಲ್ಯವೇ ಕುರುಹಾಗಿರುವಂತೆ ಗುರುಕರುಣೆ ಯನ್ನು ಪಡೆದುದಕ್ಕೆ ಇಷ್ಟಲಿಂಗವೇ ಸಾಕ್ಷಿ, ಅಂತೆಯೇ–

''ಗುರುಕರುಣವ ಪಡೆದುದಕ್ಕೆ ಚಿಹ್ನವಾವುದೆಂದಡೆ, ಅಂಗದ ಮೇಲೆ ಲಿಂಗ ಸ್ವಾಯತ್ತವಾಗಿರಬೇಕು. ಅಂಗದ ಮೇಲೆ ಲಿಂಗ ಸ್ವಾಯತ್ತವಿಲ್ಲದೆ ಬರಿದೆ ಗುರುಕರುಣ ವಾಯಿತ್ತೆಂದಡೆ ಅದೆಂತೋ ? ಲಿಂಗವಿಹೀನನಾಗಿ ಗುರುಕರುಣವುಂಟೆ ? ಇಲ್ಲ, ಆ ಮಾತ ಕೇಳಲಾಗದು. ಇದು ಕಾರಣ ಲಿಂಗಧಾರಣವುಳ್ಳುದೇ ಸದಾಚಾರ, ಇಲ್ಲದಿರೆ ಅನಾಚಾರವೆಂಬೆನಯ್ಯಾ ತೆಲುಗೇಶ್ವರಾ''.

ಈ ವಚನದಲ್ಲಿ ತೆಲುಗು ಬೊಮ್ಮಯ್ಯನವರು ಸ್ಪಷ್ಟಪಡಿಸಿದ್ದಾರೆ. ಕಾರಣ ಪ್ರತಿಯೊಬ್ಬ ವೀರಶೈವನು ತಮ್ಮ ತಮ್ಮ ಗೋತ್ರ ಸೂತ್ರಗಳಿಗೆ ಅನ್ವಯಿಸುವ ಸದ್ಗುರು ಗಳಿಂದ ಅವಶ್ಯವಾಗಿ ಲಿಂಗದೀಕ್ಷೆಯನ್ನು ಪಡೆದು ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಆದೇಶದಂತೆ ಲಿಂಗ ಪ್ರಾಣಿಗಳಾಗಲು ಪ್ರಯತ್ನಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ಆಶೀರ್ವಚನ-೩

ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ।
ಕದಾಚಿತ್ಕುತ್ರಚಿದ್ವಾಪಿ ನ ವಿಯೋಜಯ ದೇಹತಃ

ಯದಿ ಪ್ರಮಾದಾತ್ಪತಿತೇ ಲಿಂಗೇ ದೇಹಾನ್ಮಹೀತಲೇ
ಪ್ರಾಣಾನ್ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷ ಸಂಪದಃ

ಇತಿ ಸಂಬೋಧಿತಃ ಶಿಷ್ಯೋ ಗುರುಣಾ ಶಾಸ್ತ್ರವೇದಿನಾ ।
ಧಾರಯೇಚ್ಛಾಂಕರಂ ಲಿಂಗಂ ಶರೀರೇ ಪ್ರಾಣಯೋಗತಃ (ಸಿ. ಶಿ. ೬.೨೫-೨೭)

ಎಲೈ ಶಿಷ್ಯನೇ ! ನಿನ್ನ ಪ್ರಾಣಸಂಬಂಧವಾದ ಈ ಇಷ್ಟಲಿಂಗವನ್ನು ಪ್ರಾಣದೋಪಾದಿಯಲ್ಲಿ ಕಾಳಜಿ ಪೂರ್ವಕವಾಗಿ ಧರಿಸಿಕೋ ಎಂದೂ ದೇಹದಿಂದ ಅಗಲಿಸ ಬೇಡ. ಪ್ರಮಾದವಶದಿಂದ ಇದು ಶರೀರದಿಂದ ಕಳಚಿದ್ದೇ ಆದರೆ ಮೋಕ್ಷ ಪ್ರಾಪ್ತಿಗಾಗಿ ಪ್ರಾಣವನ್ನೇ ತ್ಯಾಗಮಾಡು. ಹೀಗೆ ಶಾಸ್ತ್ರಜ್ಞನಾದ ಸದ್ಗುರುವಿನಿಂದ ಉಪದೇಶಿಸಲ್ಪಟ್ಟ ಸಚ್ಛಿಷ್ಯನು ದೀಕ್ಷಾ ವಿಧಾನ ಪೂರ್ವಕವಾಗಿ ಪ್ರಾಪ್ತವಾದ ಇಷ್ಟಲಿಂಗವನ್ನು ಪ್ರಾಣವಿರುವವರೆಗೂ ದೇಹದ ಮೇಲೆ ಧರಿಸಬೇಕು.

ವೀರಶೈವರ ಹೆಗ್ಗುರುತು ಮತ್ತು ರಕ್ಷಾಕವಚವು ಇಷ್ಟಲಿಂಗವು :

ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ
ವಿನ್ಯಸ್ಯ ತಲ್ಲೀನಮನಃ ಪ್ರಚಾರಃ ।
ಬಾಹ್ಯಕ್ರಿಯಾಸಂಕುಲ ನಿಷ್ಪೃಹಾತ್ಮಾ
ಸಂಪೂಜಯತ್ಯಂಗ ಸ ವೀರಶೈವಃ ॥

ಎನ್ನುವ ಈ ಸ್ಕಂದಪುರಾಣೋಕ್ತಿಯಂತೆ ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡು ಪ್ರತಿನಿತ್ಯ ಅದನ್ನು ಅನನ್ಯ ಭಕ್ತಿಯಿಂದ ಪೂಜಿಸುವವನೇ ವೀರಶೈವನು. ಇವನ ಅಂತರಂಗ ಸಾಧನೆ ಹಾಗೂ ಬಹಿರಂಗ ಪೂಜೆಗೆ ''ಇಷ್ಟಲಿಂಗ''ವೇ ಹೆಗ್ಗುರುತು. ತನ್ನ ದೇಹವನ್ನು ಮಹಾದೇವನಿಗೆ ಅರ್ಪಿಸಿಕೊಳ್ಳುವ ಇದೊಂದು ಮಹಾವ್ರತ. ಇದು ಇಂದು ನಿನ್ನೆಯದಲ್ಲ, ವೇದ, ಆಗಮ ಹಾಗೂ ಪುರಾಣ ಪ್ರಸಿದ್ಧವಾದದ್ದು. ತನಗೆ ಅತಿಪ್ರಿಯವೂ ಪೂಜ್ಯವೂ ಆದ ವಸ್ತುವನ್ನು ತನ್ನ ಮಸ್ತಕದ ಮೇಲೆ ಧರಿಸಿಕೊಳ್ಳುವದೊಂದು ಮನುಷ್ಯನ ಸಹಜ ಸ್ವಭಾವ.

ಕಶ್ಯಪಾತ್ರಿ ಭರದ್ವಾಜ ಗೌತಮಾದ್ಯಾಮಹರ್ಷಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

ಎಂಬ ಲಿಂಗಪುರಾಣದ ವಚನಾನುಸಾರವಾಗಿ ಅತಿ ಪ್ರಾಚೀನ ಕಾಲದ ವೀರಶೈವರು ಇಷ್ಟಲಿಂಗವನ್ನು ಸದಾ ಉತ್ತಮಾಂಗ (ಶಿರ)ದಲ್ಲಿ ಧರಿಸುತ್ತಿದ್ದರು. ಅಂತೆಯೇ ಇದಕ್ಕೆ ''ಶಿರೋವ್ರತ''ವೆಂತಲೂ ಕರೆಯುವುದುಂಟು. ಮಹಾವ್ರತ, ಪಾಶುಪತವ್ರತ, ಶಿರೋ

ವ್ರತ, ಅತ್ಯಾಶ್ರಮವ್ರತ ಮತ್ತು ಶಾಂಭವವ್ರತ ಇವೆಲ್ಲವುಗಳು ವೀರಶೈವ ಶಬ್ದದ ಪರ್ಯಾಯಗಳೆಂದು ಅನೇಕ ಆಧಾರ ಪುರಃಸರವಾಗಿ ಪಂಡಿತಾಗ್ರಗಣ್ಯರಾದ ಉಮಚಿಗಿ ಶಂಕರಶಾಸ್ತ್ರಿಗಳು ಸಿದ್ಧಾಂತಶಿಖೋಪನಿಷತ್ತಿನ ವೀರಶೈವ ಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ ।
ಶವಸ್ಯೋಪರಿ ಲಿಂಗಂ ಚ ಧ್ರಿಯತೇ ಚ ಪುರಾತನೈಃ ॥
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವನಂ ।

(ಸ್ಕಂದ ಪು. ಕೇದಾರ ಖಂಡ, ೭.೪೧–೪೨)

ಲಿಂಗಧಾರಿಗಳಾಗಿಯೇ ಜನಿಸಿ, ಲಿಂಗಧಾರಿಗಳಾಗಿಯೇ ಜೀವಿಸಿ ಕೊನೆಗೆ ಲಿಂಗಧಾರಿಗಳಾಗಿಯೇ ಐಕ್ಯರಾಗುವ ಇವರು ಬಹು ವಿಚಿತ್ರರಾಗಿರುತ್ತಾರೆ ಎಂಬುದಾಗಿ ಶ್ರೀ ವ್ಯಾಸ ಮಹರ್ಷಿಯು ವೀರಶೈವರ ಈ ಲಿಂಗವ್ರತವು ಜನಸಾಮಾನ್ಯರಿಗೆ ಅಚ್ಚರಿಯನ್ನುಂಟು ಮಾಡುವದಾಗಿ ಪ್ರತಿಪಾದಿಸಿದ್ದಾರೆ.

ಇಂತಹ ವೀರವ್ರತಗಳ ಸಂತಾನವಾದ ನಾವಾದರೂ ಆ ವ್ರತವನ್ನು ಪರಿಪಾಲನೆ ಮಾಡಿದಾಗ ಮಾತ್ರ ನಿಜವಾಗಿಯೂ ವೀರಶೈವರಾಗಬಲ್ಲೆವು. ವೀರಶೈವ ಆಚಾರ್ಯರು ಈ ಮಾರ್ಗದಲ್ಲಿ ಸಾಧನೆಯನ್ನು ಮಾಡುವ ಸಾಧಕನ ರಕ್ಷಣೆಗಾಗಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರಗಳೆಂಬ ಎಂಟು ರಕ್ಷಾಕವಚಗಳನ್ನು ಪ್ರತಿಪಾದಿಸಿದ್ದಾರೆ. ಕಾಮ–ಕ್ರೋಧಾದಿಗಳೆಂಬ ಅಂತರಂಗ ಶತ್ರುಗಳಿಂದ ನಮ್ಮನ್ನು ರಕ್ಷಿಸುವ ನಿಜವಾದ ಕವಚಗಳಿವು. ಇಂದಿನ ಬಹಳಷ್ಟು ವೀರಶೈವರು ಬೇಲಿ ಇಲ್ಲದ ತೋಟವು ಪಶುಗಳಿಂದಾಕ್ರಾಂತವಾಗಿ ಹಾಳಾಗುವಂತೆ ಈ ರಕ್ಷಾ ಕವಚಗಳೊಂದೂ ಇಲ್ಲದೇ ಧರ್ಮಬಾಹಿರರಾಗಿ ವಿಷಯಗಳೆಂಬ ವ್ಯಾಘ್ರಗಳಿಗೆ ತುತ್ತಾಗುತ್ತಿದ್ದಾರೆ. ಬಂದೂಕಿಲ್ಲದೇ ಅದರ ಲೈಸನ್ಸನ್ನು ತೆಗೆದುಕೊಂಡು ಬೇಟೆಗೆ ಹೋದ ಬೇಟೆಗಾರನಂತಾಗಿದೆ ನಮ್ಮೆಲ್ಲರ ಬಾಳು.

ಬೇಟೆಗಾರನೊಬ್ಬ ಕ್ರೂರ ಮೃಗಗಳ ಬಂದೂಕನ್ನು ತೆಗೆದುಕೊಂಡು ಘೋರಾರಣ್ಯದಲ್ಲಿ ಬೇಟೆಗೆ ಹೋದ. ಬೇಟೆಯಾಡಿದ ಪ್ರಾಣಿಗಳನ್ನು ಹೊತ್ತು ತರಲು ಎತ್ತಿನ ಗಾಡಿಯನ್ನು, ಒಬ್ಬ ಸೇವಕನನ್ನೂ ಜೊತೆಗೆ ತೆಗೆದುಕೊಂಡಿದ್ದ, ಸೇವಕ ಗಾಡಿಯನ್ನು ನಡೆಸುತ್ತ ಅರಣ್ಯದಲ್ಲಿ ಪ್ರವೇಶಿಸುವಂತೆ ಬೇಟೆಗಾರ ಬಂಡಿಯಿಂದಿಳಿದು ಭಾರವಾದ ಬಂದೂಕನ್ನು ಹೆಗಲಿಗೆ ಹಾಕಿಕೊಂಡು ಬೇಟೆಯನರಸುತ್ತ ಹೊರಟ. ಬಹುದೂರ ಕ್ರಮಿಸಿದರೂ ಬೇಟೆಯೊಂದೂ ಕಾಣಲಿಲ್ಲ, ಬೇಟೆಗಾರನಿಗೆ ಬಂದೂಕಿನ ಭಾರ ಸಹಿಸಲಾಗಲಿಲ್ಲ, ಬೇಟೆ ಕಂಡಾಗ ತೆಗೆದುಕೊಂಡರಾಯಿತು ಎಂದು ವಿಚಾರಿಸಿ ಬಂದೂಕನ್ನೂ ಎತ್ತಿನ ಗಾಡಿಯಲ್ಲಿ ಇರಿಸಿ ಬರಿಗೈಯಿಂದ ಅಡವಿಯ ಮಧ್ಯವನ್ನು ಪ್ರವೇಶಿಸಿದ. ಗಾಡಿಗೂ ಇವನಿಗೂ ಮೂರು ಫರ್ಲಾಂಗಿನಷ್ಟು ಅಂತರವಾಗಿದೆ. ಇವನು ಅತ್ತಿತ್ತ ನೋಡುತ್ತ ಮುಂದೆ ಕ್ರಮಿಸುತ್ತಿದ್ದಂತೆ ಇವನಿಗೆ ಎದುರಾಗಿ ಹಸಿದ ಹುಲಿಯೊಂದು ತನ್ನ ಆಹಾರವನ್ನು ಹುಡುಕುತ್ತ ಬರುತ್ತಿತ್ತು, ಬಂದೂಕಿಲ್ಲದ ಬೇಟೆಗಾರನನ್ನು ಕಂಡ ಹುಲಿಗೆ ಅಪಾರ

ಸಂತೋಷ. ಔತಣವು ತನ್ನನ್ನೇ ಅರಸುತ್ತ ಬರುತ್ತಿರುವಂತೆ ಭಾಸವಾಯಿತು. ಹಸಿದ ಹುಲಿಗೆ ಬೇಟೆಗಾರ ಬೆದರಿದ, ಹಿಂತಿರುಗಿ ನೋಡಿದ ಬಹುದೂರದ ಬಂಡಿಯಲ್ಲಿ ಬಂದೂಕಿದೆ ಈಗ ಹೋಗಿ ತರುವಷ್ಟು ಅವಕಾಶವೇ ಇಲ್ಲ, ಮರಣವನ್ನು ಮುಂದೆಯೇ ಕಂಡು ಕಕ್ಕಾಬಿಕ್ಕಿಯಾದ. ಭಯದಲ್ಲಿ ಬುದ್ಧಿ ಮಂಕಾಯಿತು. ಕ್ಷಣಕಾಲ ದಿಗ್‌ಭ್ರಾಂತನಾದ ''ಧೈರ್ಯಂ ಸರ್ವಾರ್ಥ ಸಾಧನಂ'' ಮತ್ತೆ ಚೇತರಿಸಿಕೊಂಡ. ಪ್ರಾಣದುಳುಮೆಗೆ ಬುದ್ಧಿ ವಿಚಾರಿಸುತ್ತಿರುವಂತೆ ತನಗೆ ತಿಳಿಯದೆ ಕೈ ಜೇಬಿನಲ್ಲಿ ಹೋಗಿತ್ತು, ತನಗೆ ತಗುಲಿದ ಕಾಗದವನ್ನು ಹೊರತಂದಿತು. ಇದೇನೆಂದು ಬಿಚ್ಚಿ ನೋಡಿದ. ''ಬಂದೂಕಿನ ಲೈಸನ್ಸ'' ಅಚ್ಚರಿ ! ಆನಂದ !! ನನ್ನ ಪ್ರಾಣ ಉಳಿಯಿತು ಎಂದು ಸಂತೋಷಪಟ್ಟ. ಧೈರ್ಯ ತಾಳಿ ಹುಲಿಗೆ ಎಚ್ಚರಿಕೆಯನ್ನಿತ್ತ ''ನಾನೊಬ್ಬ ಪ್ರಸಿದ್ಧ ಬೇಟೆಗಾರ. ನಿನ್ನಂತಹ ಸಹಸ್ರಾರು ಹುಲಿಗಳನ್ನು ನನ್ನ ಒಂದೇ ಬಂದೂಕಿನಿಂದ ಯಮಸದನಕ್ಕಟ್ಟಿದ್ದೇನೆ. ಜೋಕೆ ನನ್ನತ್ತ ಧಾವಿಸಬೇಡ. ಆ ಬಂದೂಕು ಅಗೋ ನೋಡು ಆ ಗಾಡಿಯಲ್ಲಿ ಬರುತ್ತಿದೆ'' ಎಂದು. ಹಸಿದ ಹುಲಿಗೆ ಆಯುಧ ರಹಿತನಾದ ಇವನ ಯಾವ ಶಬ್ದವೂ ಕೇಳಿಸಲಿಲ್ಲ, ಅದು ಇವನ ಸಮೀಪವೇ ಧಾವಿಸಿತು. ಉಪಾಯಗಾಣದ ಬೇಟೆಗಾರ ಇದಕ್ಕೆ ನನ್ನ ಮಾತಿನ ಮೇಲೆ ವಿಶ್ವಾವಿದ್ದಂತೆ ತೋರುವದಿಲ್ಲ, ಲೈಸನ್ಸನ್ನೇ ಪ್ರತ್ಯಕ್ಷವಾಗಿ ತೋರಿಸಬೇಕೆಂದು ಕಾಗದವನ್ನು ಮುಂದೆ ಚಾಚಿದ. ಹಸಿವೆಯಿಂದ ಕೆರಳಿದ ಹುಲಿಯು ಕಾಗದವನ್ನೇನು ಮಾಡೀತು. ತತ್‌ಕ್ಷಣದಲ್ಲಿಯೇ ಅವನ ಎದೆಯ ಮೇಲೆ ಹಾರಿ ಗುಂಡಿಗೆಯ ಬಿಸಿ ರಕ್ತವನ್ನುಂಡು ಸಂತೃಪ್ತವಾಯಿತು. ಬುದ್ಧಿಹೀನನಾದ ಬೇಡ ಬೇಟೆಯಾಡಲು ಬಂದು ತಾನೇ ಹುಲಿಗೆ ಬೇಟೆಯಾದ.

ಹಾಗೆ ಸಂಸಾರವೆಂಬ ಘೋರಾರಣ್ಯದಲ್ಲಿ ಅರಿಷಡ್ವರ್ಗಗಳ ಬೇಟೆಯಾಡಲು ವೀರಶೈವ ಆಚಾರ್ಯರು ಇಷ್ಟಲಿಂಗವೆಂಬ ಬಂದೂಕನ್ನು ಸಾಧಕನ ಕೈಗೆ ಇತ್ತಿದ್ದಾರೆ. ಅದನ್ನು ಸದಾ ತನ್ನ ಹತ್ತಿರ ಇರಿಸಿಕೊಂಡು ಗುರಿಯನ್ನು ಸಾಧಿಸುತ್ತಿರುವ ಶ್ರೇಷ್ಠ ಸಾಧಕನನ್ನು ಅರಿಷಡ್ವರ್ಗಗಳು ಮುಟ್ಟಲಾರವು. ಇಷ್ಟಲಿಂಗವಿಲ್ಲದೇ ವೀರಶೈವರೆಂದು ಹೇಳಿಕೊಳ್ಳುವ ನಾವಿಂದು ಬಂದೂಕಿಲ್ಲದ ಲೈಸನ್ಸಧಾರಿ ಬೇಟೆಗಾರನಾದಂತಾಗಿದ್ದೇವೆ. ಸದಾ ಬಹಿರ್ಮುಖಿಗಳಾಗಿ ಪೂಜಾ, ಧ್ಯಾನ ಶೂನ್ಯರಾಗಿ ಭವದತ್ತ ಮುಖವಾಗಿ ಹರಿಯುತ್ತಿದ್ದೇವೆ. ಅಂತೆಯೇ ದೀಕ್ಷಾ ಸಂಸ್ಕಾರ ಮಾಡುವಾಗ ಲಿಂಗದ ಮಹತಿಯನ್ನರುಹಿ ''ಇದು ನಿನ್ನ ಪ್ರಾಣವಿದ್ದಂತೆ ಈ ಇಷ್ಟಲಿಂಗವನ್ನೆಂದೂ ದೇಹದಿಂದ ಅಗಲಿಸಬೇಡ'' ಎಂಬುದಾಗಿ ಸದ್ಗುರುಗಳು ಶಿಷ್ಯನಿಗೆ ಉಪದೇಶ ಮಾಡಬೇಕು ಎಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಎಂದೋ ಆದೇಶವಿತ್ತಿದ್ದಾರೆ ಅವರ ಆದೇಶದ ಪರಿಪಾಲನೆಯನ್ನು ಮಾಡಿದಾಗಲೇ ನಮ್ಮ ರಕ್ಷಣೆ.

**ಇಷ್ಟಲಿಂಗಧಾರಣೆ ಹಾಗೂ ಪೂಜೆಗಳು ವೀರಶೈವರ ನಿತ್ಯ ಕರ್ಮವು :**

''ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್'' ಎಂಬ ವೇದ ಮಂತ್ರದಲ್ಲಿ ಅಗ್ನಿಹೋತ್ರ (ಪ್ರತಿನಿತ್ಯ ಮಾಡುವ ಹೋಮ)ವು ನಿತ್ಯಕರ್ಮವು ಅದನ್ನು ಜೀವನ ಇರುವವರೆಗೆ ಪರಿಪಾಲಿಸಬೇಕೆಂಬುದಾಗಿ ವೇದದ ಆದೇಶವಿದೆ. ಅಗ್ನಿಯೇ ದೇವರೆಂದು ಪೂಜಿಸುವವರಿಗೆ ಅಗ್ನಿ ಹೋತ್ರವು ನಿತ್ಯಕರ್ಮವಾಗಿರುವಂತೆ—

ಲಿಂಗಸ್ಯಧಾರಣಂ ಯಸ್ಯ ಸ್ಥೂಲದೇಹೇ ನ ವಿದ್ಯತೇ ।
ತದ್ದೇಹಂ ನಿಷ್ಫಲಂ ಜ್ಞೇಯಂ ಜೀವತ್ಯಕ್ತ ಶರೀರವತ್ ॥
ತಸ್ಮಾತ್ತದ್ಧಾರಣಂ ಪ್ರೋಕ್ತಂ ಯಾವಜ್ಜೀವಾಗ್ನಿ ಹೋತ್ರವತ್ ।

(ಸಿದ್ಧಾಂತ ಶಿಖೋಪನಿಷತ್ ವೀ. ಭಾಷ್ಯ ಪುಟ ೨೯)

ಈ ಪ್ರಮಾಣ ವಚನಗಳಿಂದ ಇಷ್ಟಲಿಂಗಧಾರಣೆ ಹಾಗೂ ಅದರ ಪೂಜೆಯು ವೀರಶೈವರ ನಿತ್ಯಕರ್ಮವಾಗಿದೆ. ತನ್ನ ಜೀವಮಾನ ಇರುವವರೆಗೆ ತಪ್ಪದೇ ಮಾಡ ಬೇಕಾದ ಕರ್ಮವು ನಿತ್ಯಕರ್ಮವು.

ನಿತ್ಯಂ ಸದಾ ಯಾವದಾಯುರ್ನಕದಾಚಿದತಿಕ್ರಮೇತ್ ।
ಉಪೇತ್ಯಾತಿಕ್ರಮೇ ದೋಷಶ್ರುತೇರ ತ್ಯಾಗದರ್ಶನಾತ್ ॥
ಫಲಾಶ್ರುತೇರ್ವೀಪ್ಸಯಾ ಚ ತನ್ನಿತ್ಯಮಿಹ ಕೀರ್ತಿತಂ ।

(ನ್ಯಾಯಕೋಶ ಪುಟ ೪೧೭–೪೧೮)

ಉಕ್ತ ಲಕ್ಷಣದ ಪ್ರಕಾರ ನಿತ್ಯಕರ್ಮವನ್ನು ಅನುಷ್ಠಿಸಿದರೆ ವಿಶೇಷ ಪುಣ್ಯವಿಲ್ಲ ಆದರೆ ಮಾಡದಿದ್ದರೆ ದುರಿತಪ್ರಾಪ್ತಿಯಾಗುವದು. ಕಾರಣ ಈ ಕ್ರಿಯಾಲೋಪದಿಂದ ಬರಬಹು ದಾದ ದುರಿತವನ್ನು ತಡೆಗಟ್ಟುವುದೇ ನಿತ್ಯ ಕರ್ಮದ ಪ್ರಯೋಜನವು. ವೀರಶೈವ ನಾದವನು ಇಷ್ಟಲಿಂಗವನ್ನು ಜೀವನ ಪರ್ಯಂತ ದೇಹದ ಮೇಲೆ ಧರಿಸದಿದ್ದರೆ–

ಭಕ್ತಸ್ಯಾಬಿಧ್ರುತೋ ಲಿಂಗಂ ಯಾವತ್ಪ್ರಾಣವಿಧಾರಣಂ ।
ಶ್ವಮಾಂಸಭಕ್ಷಣಂ ತಾವದನ್ನೇನ ರಚಿತಂ ಭವೇತ್ ॥

(ಸಿದ್ಧಾಂತಶಿಖೋಪನಿಷತ್ ವೀ. ಭಾಷ್ಯ ಪುಟ ೨೯)

ಎಂಬ ಪ್ರಮಾಣಾನುಸಾರವಾಗಿ ಲಿಂಗವಿರಹಿತನಾಗಿ ಅವನು ಭುಂಜಿಸಿದ ಅನ್ನವು ನಾಯಿಯ ಮಾಂಸವಿದ್ದಂತೆ ಎಂಬುದಾಗಿ ಶ್ವಮಾಂಸ ಭಕ್ಷಣದ ದೋಷವನ್ನು ಕಲ್ಪಿಸಿದ ಕಾರಣ ಈ ದುರಿತನಿವೃತ್ತಿಗಾಗಿ ವೀರಶೈವನು ತನ್ನ ನಿತ್ಯಕರ್ಮವಾದ ಇಷ್ಟಲಿಂಗ ಧಾರಣೆಯನ್ನು ಅವಶ್ಯವಾಗಿ ಮಾಡಲೇಬೇಕು.

ಆತ್ಯಾಶ್ರಮಿತ್ವಾತ್ ಗಣವಂಶಜಾ ನಾಂ ।
ಲಿಂಗಾಂಗ ಸಂಗಿನಾಂ ತತ್ರಾಜನ್ಮಾಂತ ದೀಕ್ಷಾ ॥

(ಸಿದ್ಧಾಂತಶಿಖೋಪನಿಷತ್ ಶ್ಲೋಕ ೧೨)

ಎಂಬ ಉಪನಿಷನ್ಮಂತ್ರವಾದರೂ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಪಂಚಗಣರ ವಂಶದಲ್ಲಿ ಜನಿಸಿದ, ಅತ್ಯಾಶ್ರಮಿಗಳೆಂದೆನಿಸಿಕೊಂಡ ಮತ್ತು ಲಿಂಗಾಂಗ ಸಂಗಿಗಳಾದ ವೀರಶೈವರಿಗೆ ದೀಕ್ಷಾ ಕಾಲದಲ್ಲಿ ಗುರುಗಳು ಶಿಷ್ಯನಿಂದ, ''ನಾನು ನನ್ನ ಪ್ರಾಣ ಇರುವವರೆಗೆ ತಮ್ಮಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ಧರಿಸಿಕೊಂಡಿರುತ್ತೇನೆ'' ಎಂಬುದಾಗಿ ಪ್ರತಿಜ್ಞ ವಚನವನ್ನು ಸ್ವೀಕರಿಸಿಕೊಂಡಿರುವುದರಿಂದ ಗುರುವಿಗೆ ಕೊಟ್ಟ ವಚನವನ್ನು ಪರಿಪಾಲಿಸುವುದಕ್ಕಾಗಿ ಲಿಂಗಧಾರಿಯಾಗ್ಗಿರಬೇಕೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿಸಿದೆ.

ವೀರಶೈವರು ಪ್ರಾಯಶ್ಚಿತ್ತವರ್ಜಿತರು :

ಗುರುಗಳ ಆದೇಶದಂತೆ ಶಾಸ್ತ್ರೋಕ್ತ ವಿಧಿಗನುಸಾರವಾಗಿ ಇಷ್ಟಲಿಂಗವನ್ನು ಧರಿಸಿದ್ದರೂ ಆಕಸ್ಮಾತ್ ಅದು ದೇಹದಿಂದ ಜಾರಿಬಿದ್ದರೆ ಅದಕ್ಕೆ ಪ್ರಾಯಶ್ಚಿತ್ತವೇನು ? ಎಂಬ ಜಿಜ್ಞಾಸೆಯುಂಟಾದಾಗ–

ಯದಿ ಪ್ರಮಾದಾತ್ಪತಿತೇ ಲಿಂಗೇ ದೇಹಾನ್ಮಹೀತಲೇ ।
ಪ್ರಾಣಾನ್‌ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ॥ ೬ ॥

ಅಂದರೆ ಪ್ರಮಾದದಿಂದ ಲಿಂಗ ಕಳಚಿದ್ದೇ ಆದರೆ ಪ್ರಾಣವನ್ನೇ ತ್ಯಜಿಸಬೇಕೆಂಬ ಕಠೋರ ನಿಯಮವನ್ನೇ ಶ್ರೀ ರೇಣುಕ ಭಗವತ್ಪಾದರು ಆದೇಶವಿತ್ತಿದ್ದಾರೆ. ಇದು ಕೇವಲ ಗುರುವಾಜ್ಞೆಯಷ್ಟೇ ಅಲ್ಲ–

ಯಲ್ಲಿಂಗಂ ಗುರುಣಾದತ್ತಂ ಪ್ರಾಣಲಿಂಗಂ ತದೇವಹಿ ।
ಮಧ್ಯೇ ನಷ್ಟೇ ಪ್ರಮಾದೇನ ದೇಹಂ ತ್ಯಕ್ತ್ವಾ ಶಿವಂ ವ್ರಜೇತ್ ॥
(ಪಾರಮೇಶ್ವರತಂತ್ರ ಪಟಲ ೨. ೧೦೨–೧೦೩ ಶ್ಲೋಕ)

''ಗತೇ ಲಿಂಗೇ ತ್ಯಜೇತ್ ಪ್ರಾಣಂ ವೀರಶೈವಃ ಸ ಏವ ಹಿ''
(ಪರಮರಹಸ್ಯ–೩–೨)

ವೀರಶೈವ ಕ್ರಮಃ ಪ್ರೋಕ್ತಃ ಪ್ರಾಯಶ್ಚಿತ್ತವಿವರ್ಜಿತಃ ।
ಪ್ರಾಣಲಿಂಗೇ ವ್ರತೇ ಲುಪ್ತೇ ಹಸ್ತಖಡ್ಗಾದವಂಚಯನ್ ॥
ಮುಖಂ ಪಂಕಜವಚ್ಛಿಂದ್ಯಾದ್ವೀರ ಭೃತ್ಯಸ್ಯ ಲಕ್ಷಣಂ ।
(ವಾತುಲ ಶುದ್ಧಾಖ್ಯ ತಂತ್ರ ಪಟಲ ೧೦; ೫೧–೫೨)

ಈ ಎಲ್ಲ ಆಗಮ ಪ್ರಾಮಾಣ್ಯದಿಂದ ಶಿವನ ಅಪ್ಪಣೆಯೂ ಇದೆ ಎಂಬುದು ತಿಳಿದು ಬರುತ್ತದೆ. ಆದ್ದರಿಂದ ವೀರಶೈವರಿಗೆ ಪ್ರಾಣತ್ಯಾಗದ ಹೊರತು ಬೇರೊಂದು ಪ್ರಾಯಶ್ಚಿತ್ತವಿಲ್ಲ.

ವೀರಶೈವರು ವೀರವ್ರತಿಗಳು :

ಲಿಂಗಧಾರಣ ವ್ರತವನ್ನು ಪರಿಪಾಲಿಸಬೇಕಾದರೆ ಬಹಳಷ್ಟು ಧೀರ–ಶೂರ ನಾಗಿರಬೇಕು. ಪ್ರಾಣಗಳ್ಳರಷು ಪರಿಪಾಲಿಸುವ ವ್ರತವಿದಲ್ಲ. ಇದನ್ನು ನಿಷ್ಠೆಯಿಂದ ಪರಿಪಾಲಿಸಿದವನೇ ನಿಜವಾದ ವೀರಶೈವನು. ಅಂತೆಯೇ–

ಇಷ್ಟಲಿಂಗವಿಯೋಗೇ ವಾ ವ್ರತಾನಾಂ ವಾ ಪರಿಚ್ಯುತಾ ।
ತೃಣವತ್ ಪ್ರಾಣಸಂತ್ಯಾಗ ಇತಿ ವೀರವ್ರತಂ ಮತಂ ॥

ಭಕ್ತ್ಯುತ್ಸಾಸವಿಶೇಷೋಽಪಿ ವೀರತ್ವಮಿತಿ ಕಥ್ಯತೇ ।
ವೀರವ್ರತಸಮಾಯೋಗಾದ್ ವೀರಶೈವಂ ಪ್ರಕೀರ್ತಿತಂ ॥
(ಚಂದ್ರಜ್ಞಾನಾಗಮ, ಕ್ರಿಯಾಪಾದ ೧೦; ೩೩–೩೪)

ಇಷ್ಟಲಿಂಗ ವಿಯೋಗವಾದರೆ ತೃಣದಂತೆ ಪ್ರಾಣವನ್ನೇ ತ್ಯಜಿಸುತ್ತೇನೆ ಎಂಬ ಭಕ್ತಿಯ ಪರಾಕಾಷ್ಠೆಗೆ ''ವೀರವ್ರತ''ವೆನ್ನುವರು. ಈ ವೀರವ್ರತವುಳ್ಳ ಶಿವಭಕ್ತನೇ ''ವೀರ ಶೈವ''ನು.

ವಿಶಿಷ್ಟ ಈರ್ಯತೆ ಯಸ್ಮಾದ್ ವೀರ ಇತ್ಯಭಿಧೀಯತೇ ।
ಶಿವೇನ ಸಹ ಸಂಬಂಧಂ ಶೈವಮಿತ್ಯಾದೃತಂ ಬುಧೈಃ ॥

ಉಭಯೋಃ ಸಂಪುಟೀಭಾವಾದ್ ವೀರಶೈವ ಮಿತಿ ಸ್ಮೃತಂ ।
ಶಿವಾಯಾರ್ಪಿತ ಜೀವತ್ವಾದ್ ವೀರತಂತ್ರಸಮುದ್ಭವಾತ್ ।
ವೀರಶೈವ ಸಮಾಯೋಗಾತ್ ವೀರಶೈವಮಿತಿಸ್ಮೃತಂ ॥

(ವಾತುಲ ಶುದ್ಧಾಖ್ಯ ತಂತ್ರ ೧೦; ೨೭–೨೯)

ಶಿವನಿಗೆ ತನ್ನನ್ನೇ ಅರ್ಪಿಸುವ ವಿಶಿಷ್ಟ ಗುಣವುಳ್ಳವನಾದ್ದರಿಂದ ''ವೀರ''ನೆಂತಲೂ ಇಷ್ಟಲಿಂಗಧಾರಣೆಯ ಮೂಲಕ ಶಿವನೊಡನೆ ನಿತ್ಯ ಸಂಬಂಧವನ್ನು ಸ್ಥಾಪಿಸಿಕೊಂಡಿರುವುದರಿಂದ ''ಶೈವ''ನೆಂತಲೂ, ಅವೆರಡನ್ನು ಸಂಪುಟಗೊಳಿಸಲಾಗಿ ''ವೀರಶೈವ'' ಶಬ್ದವು ಪ್ರಾದುರ್ಭವಿಸುವದರಿಂದ ಈ ಯೋಗ್ಯತಾ ಸಂಪನ್ನನೇ ವೀರಶೈವನು''.

ವಿಶಬ್ದೋ ವಾ ವಿಕಲ್ಪಾರ್ಥೋ ರ ಶಬ್ದೋ ರಹಿತಾರ್ಥಕಃ ।
ವಿಕಲ್ಪರಹಿತಂ ಶೈವಂ ವೀರಶೈವಂ ಪ್ರಚಕ್ಷತೇ ॥

(ಕ್ರಿಯಾಸಾರ–ಉಪದೇಶ–೧; ಶ್ಲೋಕ ೩, ಪುಟ ೧೧)

ಇಷ್ಟಲಿಂಗ ವಿಯೋಗವಾದಾಗ ವ್ರತಗಳಲ್ಲಿ ಚ್ಯುತಿ ಬಂದಾಗ ಪೂರ್ವೋಕ್ತ ಪ್ರಕಾರ ಪ್ರಾಣವನ್ನು ತ್ಯಜಿಸಬೇಕೋ ? ಬೇಡವೇ ? ಎಂಬ ವಿಕಲ್ಪವನ್ನು ಮಾಡದೇ ನಿಶ್ಚಯವಾಗಿ ಗುರು ಮತ್ತು ಶಿವನ ಶಾಸನವನ್ನು ಪರಿಪಾಲಿಸುವವನೇ ''ವೀರಶೈವ''ನು.

ಹೀಗೆ ''ವೀರಶೈವ'' ಶಬ್ದದ ವ್ಯುತ್ಪತ್ತಿಯನ್ನು ಪ್ರತಿಪಾದಿಸುವ ಆಗಮಶಾಸ್ತ್ರವನ್ನವಲೋಕಿಸಿದಾಗ ನಿಜವಾಗಿಯೂ ಲಿಂಗಧಾರಣ ವ್ರತವು ಹೇಡಿಗಳಿಂದ ಆಚರಿಸಲು ಯೋಗ್ಯವಾದದ್ದಲ್ಲ. ಇದು ಛಲವುಳ್ಳವರ ವ್ರತ ಅಂತೆಯೇ–

''ಛಲವಿರಬೇಕು ಶಿವಭಕ್ತಿಯ ಮಾಡುವಲ್ಲಿ, ಹಿಡಿದು ಬಿಡೆನೆಂಬ
ಛಲವಿರಬೇಕು ನಿತ್ಯನೇಮದಲ್ಲಿ, ಹಿಡಿದು ಬಿಡೆನೆಂಬ
ಛಲವಿರಬೇಕು ಶೀಲ ವ್ರತದಲ್ಲಿ ಹಿಡಿದು ಬಿಡೆನೆಂಬ
ಛಲವಿರಬೇಕು ನಮ್ಮ ಅಖಂಡೇಶ್ವರ ಲಿಂಗವ ಕೂಡಿ,
ಎಂದಿಗೂ ಅಗಲಬಾರದೆಂಬ ನೈಷ್ಠೆಯಲ್ಲಿ''

ಎಂಬುದಾಗಿ ಶ್ರೀ ಷಣ್ಮುಖಸ್ವಾಮಿಗಳು ಛಲದ ಸ್ವರೂಪವನ್ನು ವಿವರಿಸಿದ್ದಾರೆ.

''ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ'' ಎಂದು ಅಣ್ಣನವರಾದರೂ ಶಿವಾನುಗ್ರಹಕ್ಕೆ ಛಲವೇ ಮುಖ್ಯವೆಂಬುದನ್ನು ಎತ್ತಿ ತೋರಿಸಿದ್ದಾರೆ. ಶ್ರೀ ಮನ್ನಿಜಗುಣ ಶಿವಯೋಗಿಗಳೂ ಸಹ ಪಿಡಿದ ನೇಮವನೆಡೆಬಿಡದತಿ ಛಲವನು'' ನೀನೇ ಕರುಣಿಸೆಂದು ಶಂಭುಲಿಂಗನನ್ನು ಪ್ರಾರ್ಥಿಸಿದ್ದಾರೆ.

ಪ್ರಾಣ ತ್ಯಜಿಸಬೇಕೆಂಬುದರ ರಹಸ್ಯಾರ್ಥವೇನು ?

ಮಹಾರಾಷ್ಟ್ರದ ವೀರಶೈವ ಮಹಾಶಿವಯೋಗಿಗಳಾದ ಶ್ರೀ ಮನ್ಮಥಸ್ವಾಮಿಗಳೂ ಸಹ ತಮ್ಮ ಪರಮ ರಹಸ್ಯ ಗ್ರಂಥದ–

"ಲಿಂಗ ಹಾಚೀ ಜಯಾಚಾಪ್ರಾಣ। ತೋ ಹರವತಾಚಿ ಸೋಡಿ
ಪ್ರಾಣ। ಐಸೀ ಹೇ ವೀರಶೈವ ಲಕ್ಷಣ। ಜಾಣ ದೇವಿ ಸಾಚ ಪೈ॥
(ಪರಮ ರಹಸ್ಯ ೩-೫)

ಈ ಮರಾಠಿ ಪದ್ಯದಲ್ಲಿ ಲಿಂಗವೇ ತನ್ನ ಪ್ರಾಣವೆಂದು ತಿಳಿದು ವೀರಶೈವನು ಆ ಲಿಂಗ ಕಳಚಿದರೆ ಪ್ರಾಣವನ್ನೇ ತ್ಯಾಗಮಾಡಬೇಕೆಂಬುದಾಗಿ ಪ್ರತಿಪಾದಿಸಿದ್ದಾರೆ.

ನಮ್ಮ ಧರ್ಮದ ಪ್ರಾಚೀನ ಆಚಾರ್ಯರ ಹಾಗೂ ಸಂತರ ವಚನಗಳನ್ನವಲೋಕಿಸಿದಾಗ ಇಷ್ಟಲಿಂಗವನ್ನೆಂದೂ ಅಗಲಬಾರದೆಂಬುದೇ ಅದರ ಹೃದ್ಗತಾಭಿಪ್ರಾಯವಾಗಿದೆ.

ಅಕಸ್ಮಾತ್ ಲಿಂಗಕಳಚಿದರೆ ಬಲಾತ್ಕಾರವಾಗಿ ಪ್ರಾಣತ್ಯಜಿಸುವದು ಆತ್ಮಹತ್ಯೆಯಲ್ಲವೇ ? ಎಂಬ ಜಿಜ್ಞಾಸೆ ಪ್ರಾದುರ್ಭವಿಸುವದು ಸಹಜ. ಆದರೆ ಶಿವಾದೇಶ-ಗುರು ಆದೇಶವಾದ ಕಾರಣ ಧರ್ಮಶಾಸ್ತ್ರದ ಪ್ರಕಾರ ಅದು ಆತ್ಮಹತ್ಯೆಯೂ ಅಲ್ಲ, ಆದರಿಂದ ಯಾವ ದೋಷವೂ ಇಲ್ಲ. ಸಂಸಾರಕ್ಕಾಗಿ ಸಾಯುವವರಿಗೆ ದೋಷವುಂಟಲ್ಲದೇ ಪರಮಾತ್ಮನಿಗಾಗಿ ಸಾಯುವವರಿಗೆ ದೋಷವಿಲ್ಲ. "ಅಂತೇ ಯಾ ಮತಿಃ ಸಾ ಗತಿಃ" ಎಂಬ ವಚನಾನುಸಾರವಾಗಿ ಲಿಂಗದ ವಿಯೋಗವನ್ನು ತಾಳದೇ ಲಿಂಗಧ್ಯಾನಾಸಕ್ತನಾಗಿ ಪ್ರಾಣದ ಭಯವಿಲ್ಲದೆ ಪ್ರಾಣಾರ್ಪಣ ಮಾಡಿದರೆ ಆತನು ಲಿಂಗರೂಪನೇ ಆಗುತ್ತಾನೆ. ದುರ್ಗತಿಗೆ ಸಾವು ಮುಖ್ಯವಲ್ಲ ಸಾಯುವಾಗಿನ ಭಾವನೆಯು ಮುಖ್ಯ.

ಮತ್ತೊಂದು ವಿಚಾರವೆಂದರೆ ದೇವರಿಗಾಗಿ ಸಾಯಲು ಸನ್ನದ್ಧನಾದರೇ ದೇವರು ಅವನನ್ನು ಸಾಯಗೊಡುವನೇ ? ತನ್ನ ಪ್ರೇಮದ ಮಲ್ಲಯ್ಯನಿಗಾಗಿ ಶ್ರೀಶೈಲದ ಕಮರಿಕೊಳ್ಳದಲ್ಲಿ ಹಾರಿದ ಶ್ರೀ ಸಿದ್ಧರಾಮೇಶ್ವರರು ಸತ್ತರೇ ? ಗೋಪಾಲಕೃಷ್ಣನ ಧ್ಯಾನಾಸಕ್ತಳಾದ ಮೀರಾ ವಿಷಪಾನವನ್ನು ಮಾಡಿ ಮರಣವನ್ನು ಅಪ್ಪಿದಳೇ ? ಹರಿಯ ಧ್ಯಾನಾಸಕ್ತನಾದ ಪ್ರಹ್ಲಾದನು ತಂದೆಯ ವಿಚಿತ್ರ ಹಿಂಸೆಗಳಿಂದ ಸಾವನ್ನಪ್ಪಿದನೆ ? ಅಂತೆಯೇ-

"ಹೆಣ್ಣಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ, ಹೊನ್ನಿಗಾಗಿ ಸತ್ತವರು ಕೋಟಿ ಕೋಟಿ ಗುಹೇಶ್ವರಾ ನಿನಗಾಗಿ ಸತ್ತವರನೊಬ್ಬರನ್ನು ಕಾಣೆ" ಎಂದಿದ್ದಾರೆ. ಪ್ರಭುದೇವರು. ದೇವರಿಗಾಗಿ ಸಾಯಲುದ್ಯುಕ್ತನಾದರೆ ಸಾಯಗೊಡುವದಿಲ್ಲವೆಂಬುದೇ ಅವರ ತಾತ್ಪರ್ಯ.

ಇನ್ನು ದೇವರಿಗಾಗಿಯಾಗಲಿ ದೇವರ ಧ್ಯಾನದಲ್ಲಾಗಲಿ ಆವೇಶಗೊಂಡು ಪ್ರಾಣತ್ಯಾಗಮಾಡಿದರೆ ಸದ್ಗತಿಯಾದೀತೇ ವಿನಃ ದುರ್ಗತಿಯಾಗಲಾರದು. ಇದಕ್ಕೊಂದು ರಾಮಾಯಣದ ಮಾರ್ಮಿಕ ಕಥೆ ಇದೆ-

ಸೀತಾದೇವಿಯ ವಿಮೋಚನೆಗಾಗಿ ರಾಮ-ರಾವಣರ ಯುದ್ಧವಾಯಿತಷ್ಟೇ, ಈ ಕಾಳಗದಲ್ಲಿ ಅಸಂಖ್ಯಾತ ರಾವಣನ ಸೈನಿಕರು ಹಾಗೂ ರಾಮನ ಕಪಿಸೈನಿಕರು ಮರಣವನ್ನಪ್ಪಿದರು. ಕೊನೆಗೆ ರಾವಣನೂ ಮಡಿದ. ಸೀತೆಯ ಪ್ರಾಪ್ತಿಯ ನಂತರ ಪ್ರಶಾಂತವಾದ ಮನಸ್ಸಿನಿಂದ ಶ್ರೀರಾಮನು ವಿಚಾರಿಸಿದ್ದೇನೆಂದರೆ ಒಬ್ಬ ಅಪರಾಧಿಯನ್ನು

ಕೊಲ್ಲಲು ಮಾಡಿದ ಈ ಯುದ್ಧದಲ್ಲಿ ಅಸಂಖ್ಯಾತ ಕಪಿಗಳು ಹಾಗೂ ರಾಕ್ಷಸರು ಅಸುಗಳನ್ನು ಕಳೆದುಕೊಂಡಿದ್ದಾರೆ. ಕಾರಣ ಇವರೆಲ್ಲರನ್ನು ಜೀವಿತಗೊಳಿಸಬೇಕು.'' ಹೀಗೆ ದಯಾಪರನಾಗಿ ವಿಚಾರಿಸಿದ ಶ್ರೀರಾಮನು ದೇವೇಂದ್ರನಿಗೆ ನಿವೇದಿಸಿಕೊಂಡು ಎರಡೂ ಸೈನ್ಯಗಳ ಶವರಾಶಿಯ ಮೇಲೆ ಅಮೃತವೃಷ್ಟಿಯನ್ನು ಮಾಡಿಸಿದನು. ಆಗ ಕಪಿಗಳೆಲ್ಲ ಜೀವಿತಗಳಾದವು. ಆದರೆ ರಾಕ್ಷಸರೊಬ್ಬರೂ ಪುನರ್ಜೀವಿಗಳಾಗಲಿಲ್ಲ ಅದನ್ನೇ ತುಲಸೀದಾಸರು–

''ಸುಧಾ ವೃಷ್ಟಿಭಯಿ ದುಯಿದಲ ವೂಪರ ।
ಜಿಯೇ ಭಾಲುಕಪಿ ನಹಿ ರಜನೀಚರ ॥''

ಈ ರೀತಿಯಾಗಿ ಹೇಳಿದ್ದಾರೆ. ರಾಕ್ಷಸರೊಬ್ಬರೂ ಜೀವಿತವಾಗದಿರುವದನ್ನು ಕಂಡು ಆಶ್ಚರ್ಯಕ್ಕೊಳಗಾದ ಶ್ರೀರಾಮನು ದೇವೇಂದ್ರನಿಗೆ ಪ್ರಶ್ನಿಸಿದ ಈ ಪಕ್ಷಪಾತವೇಕೆ ? ಎಂದು. ಆಗ ದೇವೆಂದ್ರ ಉತ್ತರಿಸಿದ ''ಪ್ರಭು ಇದು ನನ್ನ ಪಕ್ಷಪಾತವಲ್ಲ, ರಾಕ್ಷಸರೆಲ್ಲ ನಿನಗೆ ಎದುರಾಗಿ ನಿಂತು ನಿನ್ನನ್ನೇ ನೋಡುತ್ತ ವೈರದಲ್ಲಿ ನಿನ್ನ ನಾಮವನ್ನೇ ಉಚ್ಚರಿಸುತ್ತ ಅಸುವನ್ನೀಗಿದ ಕಾರಣ ಅವರು ಮರಣ ಕಾಲದಲ್ಲಿ ರಾಮ ಬುದ್ಧಿಯವರಾದ್ದರಿಂದ ಅವರೆಲ್ಲರೂ ನಿನ್ನ ಸ್ವರೂಪದಲ್ಲಿ ಸಮರಸರಾಗಿ ಸದ್ಗತಿಯನ್ನು ಹೊಂದಿದ್ದಾರೆ'' ಎಂದು. ಹೀಗೆ ಪ್ರೇಮಭಾವದಲ್ಲಿಯೇ ಆಗಲಿ ವೈರಭಾವದಲ್ಲಿಯೇ ಆಗಲಿ ದೇವರಿಗಾಗಿ ದೇವರ ಧ್ಯಾನಾಸಕ್ತರಾಗಿ ಪ್ರಾಣ ತ್ಯಾಗಮಾಡಿದರೆ ಅವರಿಗೆ ಸದ್ಗತಿಯೇ ಉಂಟಾಗುತ್ತದೆ. ಆದ್ದರಿಂದ ಪ್ರಾಣಲಿಂಗೀ ಲಿಂಗಪ್ರಾಣಿಯಾದ ವೀರಶೈವನು ಲಿಂಗಕಳಚಿದ ಕಾರಣಕ್ಕಾಗಿ ಒಂದು ವೇಳೆ ಹಠಾತ್ತಾಗಿ ಲಿಂಗಪ್ರೇಮದಲ್ಲಿ ಪ್ರಾಣ ತ್ಯಜಿಸಿದರೂ ದುರ್ಗತಿಯಾಗ ಲಾರದು ಎಂಬುದೇ ಪೂಜ್ಯಪಾದ ಶ್ರೀ ರೇಣುಕ ಭಗವತ್ಪಾದರ ಆದೇಶದ ಅಭಿಪ್ರಾಯವು.

ಇನ್ನು ಭಗವತ್ಪಾದರ ಈ ಉಪದೇಶದ ವ್ಯಾವಹಾರಿಕ ಪಕ್ಷವನ್ನು ಆಲೋಚಿ ಸೋಣ. ಮನುಷ್ಯನು ಸಾಮಾಜಿಕ ಪ್ರಾಣಿ. ಸಮಾಜದಲ್ಲಿ ಬದುಕಲು ಇವನಿಗೆ ಸತಿ, ಸುತ ಮತ್ತು ಸಂಪತ್ತುಗಳು ಅತ್ಯಾವಶ್ಯಕವಾದವುಗಳು. ತನ್ನನ್ನು ತಾನು ಪ್ರೀತಿಸುತ್ತಿರು ವಂತೆ ತನ್ನ ವಸ್ತು ಹಾಗೂ ವ್ಯಕ್ತಿಗಳನ್ನೂ ಮನುಷ್ಯ ಪ್ರೀತಿಸುವದುಂಟು. ಕೆಲವೊಂದು ವಿಷಯೀ ಹಾಗೂ ಪಾಮರ ಜೀವಿಗಳು ತಮ್ಮ ಪ್ರಾಣಕ್ಕಿಂತಲೂ ಅಧಿಕವಾಗಿ ಸತಿ–ಸುತ–ಕನಕಾದಿಗಳನ್ನು ಪ್ರೀತಿಸುತ್ತಾರೆ. ಇಂಥವರನ್ನು ನೋಡಿಯೇ ಸರ್ಪ ಭೂಷಣಶಿವಯೋಗಿಗಳು– ''ಬಲಿದ ಲೌಕಿಕನಿಗೆ ಸತಿ–ಪುತ್ರಾದಿಗಳೇ ಬ್ರಹ್ಮ'' ಎಂದಿದ್ದಾರೆ. ಯಾವುದನ್ನು ಮನುಷ್ಯನು ಅತಿಯಾಗಿ ಪ್ರೀತಿಸುತ್ತಾನೆಯೋ ಅವನ ಪ್ರಾಣಗಳು ಅದರೊಂದಿಗೆ ತಾದಾತ್ಮ್ಯವನ್ನು ಹೊಂದುತ್ತವೆ. ಕೃಪಣನೊಬ್ಬನ ಅತಿ ಪರಿಶ್ರಮದಿಂದ ಗಳಿಸಿದ ಲಕ್ಷಾಂತರ ರೂಪಾಯಿಗಳನ್ನು ಒಂದು ರಾತ್ರಿಯಲ್ಲಿ ಕಳ್ಳನು ಅಪಹರಿಸಿಕೊಂಡು ಹೋದರೆ ಹೃದಯಾಘಾತದಿಂದ ಕೃಪಣನು ಸಾಯುವದಿಲ್ಲವೇ ? ಇಂತಹ ಸನ್ನಿವೇಶಗಳಲ್ಲಿ ಅದೆಷ್ಟು ಜನ ಪ್ರಾಣ ಕಳೆದುಕೊಂಡಿಲ್ಲ ? ಅತಿ ಪ್ರೇಮದ ಮಡದಿಯು ಅಕಸ್ಮಾತ್ ಮರಣವನ್ನಪ್ಪಿದಾಗ ಹೆಂಡತಿಯ ವಿಯೋಗದಲ್ಲಿ ಮರಣ

ಹೊಂದಿದವರಿಲ್ಲವೇ ? ಪ್ರೇಮದ ಮಕ್ಕಳ ಪ್ರಾಣ ಹೋದಾಗ ಪ್ರಾಣ ಕಳೆದುಕೊಂಡ ತಂದೆತಾಯಿಗಳಳದೆಷ್ಟಿಲ್ಲ ? ಇವರಿಗೇನಾದರೂ ಪ್ರಾಣ ಕಳೆದುಕೊಳ್ಳಲು ಶಾಸ್ತ್ರದ ಆದೇಶವಿದೆಯೋ ? ಆದರೂ ಮನುಷ್ಯನಲ್ಲಿರುವ ವಸ್ತುಗಳ ಮೇಲಿನ ಅತಿಯಾದ ಪ್ರೇಮವೇ ಅವುಗಳ ಅಗಲುವಿಕೆಯಲ್ಲಿ ಅವನ ಪ್ರಾಣಹಾನಿಗೆ ಕಾರಣವಾಗುತ್ತದೆ.

ಸತಿ, ಸುತ, ವಸ್ತ್ರ ಮತ್ತುವಾಹನಾದಿಗಳ ಮೇಲೆ ಇರುವಷ್ಟು ಪ್ರೇಮವು ಲಿಂಗದ ಮೇಲೆ ಇದ್ದದ್ದೇ ಆಗಿದ್ದರೆ ಲಿಂಗ ಕಳೆದುಹೋದಾಗ ನೀನು ಪ್ರಾಣ ಬಿಡಬೇಕೆಂದು ಹೇಳಬೇಕಾದೀತೇ ! ಪ್ರಾರಬ್ಧಾನುಸಾರವಾಗಿ ಪ್ರಾಪ್ತವಾಗಿ ಒಂದಲ್ಲೊಂದು ದಿನ ಅಗಲಿ ಹೋಗುವ ಸಾಂಸಾರಿಕ ಅನಿತ್ಯ ವಸ್ತುಗಳನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸಿ ಸಂಸಾರಚಕ್ರದಲ್ಲಿ ತೊಳಲಾಡುವುದಕ್ಕಿಂತ ನಿತ್ಯ–ಸತ್ಯಸ್ವರೂಪವಾದ ಲಿಂಗತತ್ತ್ವವನ್ನು ಪ್ರೀತಿಸಿ ಲಿಂಗಸ್ವರೂಪನೇ ನೀನಾಗೆಂಬುದೇ ಶ್ರೀ ರೇಣುಕ ಭಗವತ್ಪಾದರ ಹೃದ್ಗತಾಭಿ ಪ್ರಾಯವಾಗಿರಬೇಕಲ್ಲವೇ

ಶಾಸ್ತ್ರನಿಯಮದ ವಿಪರೀತಾರ್ಥ ಪರಿಹಾರ :

''ಪ್ರಾಣಾನ್ ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ'' ಲಿಂಗವು ದೇಹ ದಿಂದ ಅಗಲಿದರೆ ಪ್ರಾಣವನ್ನೇ ತ್ಯಾಗಮಾಡಬೇಕು ಎಂದು ಆಜ್ಞಾಪಿಸಿದ ಆಚಾರ್ಯರ ಆದೇಶದ ಮುಖ್ಯ ತಾತ್ಪರ್ಯವು ಶಿಷ್ಯನ ಪ್ರಾಣ ಹರಣವಾಗಬೇಕೆಂಬುದಲ್ಲ; ಆದರೆ ''ಯಾಜ್ಞಿಕೀ ಹಿಂಸಾ ಹಿಂಸಾ ನ ಭವತಿ'' ಯಜ್ಞದಲ್ಲಿ ಮಾಡಿದ ಪ್ರಾಣಿ ಹಿಂಸೆಯು ಹಿಂಸೆಯಾಗುವದಿಲ್ಲವೆಂದು ಆಜ್ಞಾಪಿಸಿದ ವೇದವು ಮನುಷ್ಯನನ್ನ ಹಿಂಸೆಯಲ್ಲಿ ಪ್ರವರ್ತಿಸುತ್ತದೆ ಎಂದು ತಿಳಿದುಕೊಳ್ಳುವದು ಸರಿಯಲ್ಲ, ಸ್ವಾಭಾವಿಕವಾದ ಮನುಷ್ಯನ ಹಿಂಸಾಪ್ರವೃತ್ತಿಯನ್ನು ತಡೆಗಟ್ಟುವದಕ್ಕಾಗಿ ಯಜ್ಞವನ್ನು ವಿಧಿಸಿದೆ. ಹೀಗೆ ಯಜ್ಞದ ಹಿಂಸೆಯು ಹಿಂಸೆಯಲ್ಲವೆಂದು ಹೇಳಿದ ವೇದದ ತಾತ್ಪರ್ಯವು ಹಿಂಸೆಯ ನಿರೋಧಕ್ಕಾಗಿ ಇರುವಂತೆ ಇಷ್ಟಲಿಂಗದ ವಿಯೋಗವಾದಾಗ ಪ್ರಾಣತ್ಯಾಗ ಮಾಡಬೇಕೆಂಬುದರ ತಾತ್ಪರ್ಯವು ಇಷ್ಟಲಿಂಗವನ್ನು ಅಷ್ಟೊಂದು ಜಾಗರೂಕವಾಗಿ ಧರಿಸಿಕೊಂಡಿರ ಬೇಕೆಂಬುದಾಗಿದೆ ಎಂದು ಸರ್ವರೂ ತಿಳಿದುಕೊಳ್ಳಬೇಕು.

ಇದೊಂದು ವೀರಶೈವರ ಅತಿ ಕಠಿಣವಾದ ವೀರವ್ರತವು. ಇದರ ಈ ಕಠಿಣ ನಿಯಮವನ್ನು ತಿಳಿದೋ ಏನೋ ಈಗಿನ ಬಹಳಷ್ಟು ಜನ ವೀರಶೈವರು ಈ ಇಷ್ಟಲಿಂಗವನ್ನು ಧರಿಸುವದೂ ಬೇಡ ಅದು ವಿಯೋಗವಾದಾಗ ಪ್ರಾಣ ತ್ಯಾಗ ಮಾಡುವದೂ ಬೇಡವೆಂಬ ಭಾವನೆಯಿಂದ ಇಷ್ಟಲಿಂಗದ ಬಗ್ಗೆ ಉದಾಸೀನ ಭಾವನೆಯನ್ನು ತಾಳಿದ್ದಾರೆಯೋ ಏನೋ ತಿಳಿಯದಾಗಿದೆ.

ಇನ್ನು ಶಾಸ್ತ್ರದ ನಿಯಮಗಳು ಸಮಾಜದ ಹಿತಕ್ಕಾಗಿಯೇ ಇದ್ದರೂ ಅವುಗಳ ಮರ್ಮವನ್ನರಿಯದ ಅಜ್ಞ ಜೀವಿಗಳು ಒಮ್ಮೊಮ್ಮೆ ಅವುಗಳನ್ನು ಅಪಾರ್ಥವಾಗಿಯೇ ಪರಿಗ್ರಹಿಸುತ್ತಾರೆ. ಪ್ರಾಚೀನ ಆಚಾರ್ಯರ ಆದೇಶದಂತೇ ಅನೇಕ ಜನ ಮಹನೀಯರು ಲಿಂಗಪ್ರಾಣಿಗಳಾಗಿ ಬದುಕಿರಬಹುದು. ಅಕಸ್ಮಾತ್ ಆ ಲಿಂಗವು ದೇಹದಿಂದ ಜಾರಿ ಬಿದ್ದಾಗ ಅದರ ಮೇಲಿನ ಅತಿಯಾದ ಮಮತೆಯಿಂದ ಆಚಾರ್ಯೋಪದೇಶದಂತೆ

ಅವರ ಪ್ರಾಣಪಕ್ಷಿಯಾದರೂ ಹಾರಿಹೋಗಿರಬೇಕು. ಪರಂತು ಈ ಸ್ಥಿತಿಯು ಸಮಸ್ತ ಲಿಂಗಧಾರಿಗಳೆಲ್ಲರಿಗೂ ಸಹಜವಾಗಿ ಪ್ರಾಪ್ತವಾಗುವಂತಹದಲ್ಲ. ಇಂತಹ ಪ್ರಸಂಗದಲ್ಲಿ ಇಷ್ಟಲಿಂಗದಲ್ಲಿ ಅಷ್ಟೊಂದು ಮಮತೆ ಬೆಳೆಯದಿರುವ ಸಾಧಕನ ಇಷ್ಟಲಿಂಗವು ದೇಹದಿಂದ ಜಾರಿಬಿದ್ದರೆ ಸಹಜವಾಗಿ ಪ್ರಾಣಹೋಗದೇ ಇದ್ದಾಗ ಲೋಕಾಪವಾದ ಕ್ಕಂಜಿ ಕೆಲ ಜನರು ಇಚ್ಛೆ ಇಲ್ಲದೇ ಆತ್ಮಹತ್ಯಾದಿಗಳನ್ನು ಮಾಡಿಕೊಳ್ಳಲಾರಂಭಿಸಿರ ಬಹುದು. ಪತ್ನಿಯು ಪತಿಯ ಮೇಲೆ ಅತ್ಯಂತ ಆಸಕ್ತಳಾಗಿದ್ದರೆ ಪತಿಯ ಪ್ರಾಣವಿಯೋಗ ವಾದೊಡನೇ ಪತ್ನಿಯ ಪ್ರಾಣವಾದರೂ ವಿಯೋಗವಾಗುವದು ಒಂದು ಸಹಜ ನಿಯಮ. ಪ್ರಾಚೀನ ಕಾಲದಲ್ಲಿ ಇಂತಹ ಅನೇಕ ಘಟನೆಗಳು ಆಗಿರಬಹುದು. ಮುಂದೆ ಕಾಲಾಂತರದಲ್ಲಿ ಪತಿಯ ಮೇಲೆ ಅಷ್ಟೊಂದು ಆಸಕ್ತಿ ಇಲ್ಲದ ಪತ್ನಿಯು ಪತಿಯ ಮರಣದ ನಂತರ ಜೀವಂತವಾಗಿ ಉಳಿದರೆ ಲೋಕಾಪವಾದ ಬಂದೀತೆಂಬ ಭಯದಿಂದ ಇಚ್ಛೆ ಇರದಿದ್ದರೂ ಪತ್ನಿಯು ಗಂಡನ ಜತೆಯಲ್ಲಿ ಹಾರಿಕೊಂಡು ಪ್ರಾಣತ್ಯಾಗ ಮಾಡುವ ರೂಢಿಯು ಕಾಲಾಂತರದಲ್ಲಿ ಬೆಳೆಯಿತು. ಮುಂದೆ ಅದೇ ಒಂದು ಹೇಯ ''ಸತೀ ಪದ್ಧತಿ''ಯಾಗಿ ಬೆಳೆದುಬಂದಿತು. ''ಗತಾನುಗತಿಕೋ ಲೋಕೋ ನ ಲೋಕಃ ಪಾರ ಮಾರ್ಥಿಕಃ'' ಎಂಬ ವಾಕ್ಯದಂತೆ ಸಮಾಜವು ಯಾವಾಗಲೂ ಶಾಸ್ತ್ರದ ನಿಯಮಗಳನ್ನು ಅಂಧ ಪರಂಪರೆಯಲ್ಲಿ ಬೆಳೆಸುತ್ತ ಬರುತ್ತದೆ. ಅಂತೆಯೇ ಸಮಾಜವನ್ನು ಮೇಲಿಂದ ಮೇಲೆ ಎಚ್ಚರಗೊಳಿಸಬೇಕಾಗುತ್ತದೆ.

ಸತೀಪದ್ಧತಿಯ ಅನಿಷ್ಟ ಪರಂಪರೆಯನ್ನು ನಿಲ್ಲಿಸಲು ರಾಜಾರಾಮ ಮೋಹನ ರಾಯರಂಥವರು ಬಹಳಷ್ಟು ಶ್ರಮಿಸಿದರು. ಅಂತೆಯೇ ಗಂಡ ಸತ್ತಾಗ ಸಾಯಲಿಚ್ಛೆ ಇಲ್ಲದ ಸತಿಯನ್ನು ಬಲಾತ್ಕಾರವಾಗಿ ಚಿತೆಯಲ್ಲಿ ಹಾಕುವ ಅಸಾಮಾಜಿಕ ತತ್ತ್ವಗಳು ಈಗ ಬಹಳಷ್ಟು ಕಡಿಮೆಯಾಗಿವೆ. ಸಂಪೂರ್ಣ ನಿರ್ಮೂಲನಗೊಂಡಿದೆ ಅಂದರೂ ಅಡ್ಡಿ ಇಲ್ಲ.

ದ್ವಾವಿಮೌ ಪುರುಷೌ ಲೋಕೆ ಸೂರ್ಯಮಂಡಲಭೇದಿನೌ ।
ಪರಿವ್ರಾಡ್ಯೋಗಯುಕ್ತಶ್ಚ ರಣೇಚ್ಛಾಭಿಮುಖೇ ಹತಃ ॥

ಎಂಬ ಪ್ರಮಾಣವಾಕ್ಯದಂತೆ ದೇಶದ ರಕ್ಷಣೆಗಾಗಿ ಕಾದಾಡುತ್ತಿರುವ ಸೈನಿಕನು ತನ್ನ ಪ್ರಾಣಭಯವಿಲ್ಲದೆ ಶತ್ರುವಿಗೆ ಎದುರಾಗಿ ಕಾದಾಡುತ್ತ ಧೈರ್ಯವಾಗಿಯೇ ಪ್ರಾಣ ತ್ಯಾಗವನ್ನು ಮಾಡಿದರೆ ಆ ವೀರ ಸೈನಿಕರಿಗೆ ಸದ್ಗತಿಯೇ ಪ್ರಾಪ್ತವಾಗುತ್ತದೆ. ಆದರೆ ತನ್ನ ಪ್ರಾಣವನ್ನುಳಿಸಿಕೊಳ್ಳುವದಕ್ಕಾಗಿ ದೇಶಾಭಿಮಾನವನ್ನು ತ್ಯಾಗಮಾಡಿ ಶತ್ರುಗಳಿಗೆ ಬೆನ್ನು ತೋರಿಸಿ ಓಡಿಹೋಗುವಾಗ ಒಂದು ವೇಳೆ ಶತ್ರುಗಳಿಂದ ಆಹತನಾಗಿ ರಣರಂಗದಲ್ಲಿ ಮಡಿದರೂ ಸದ್ಗತಿಯ ಬದಲಾಗಿ ಅವನಿಗೆ ದುರ್ಗತಿಯೇ ಪ್ರಾಪ್ತವಾಗುತ್ತದೆ.

ಅದರಂತೆ ಇಷ್ಟಲಿಂಗ ಕಳೆದಾಗ ಲಿಂಗದಲ್ಲಿಯ ಅತ್ಯಾಸಕ್ತಿಯಿಂದ ಸಾಧಕನ ಪ್ರಾಣವು ಸಹಜವಾಗಿಯೇ ಹೋಗಲಿ ಅಥವಾ ವೀರವ್ರತವನ್ನು ಪರಿಪಾಲಿಸುವ ಸಂತೋಷದಲ್ಲಿ ಪ್ರಾಣದ ಭಯವಿಲ್ಲದೇ ತಾನಾಗಿಯೇ ಪ್ರಾಣಾರ್ಪಣೆ ಮಾಡಲಿ ಇವೆರಡರಲ್ಲಿ ಯಾವ ದೋಷವೂ ಇರುವುದಿಲ್ಲ. ಅವನಿಗೆ ಸದ್ಗತಿಯೇ ಪ್ರಾಪ್ತ

ವಾಗುವುದು. ಆದರೆ ನಮ್ಮ ಪೂರ್ವಜರು ಇಷ್ಟಲಿಂಗ ವಿಯೋಗವಾದಾಗ ಪ್ರಾಣವನ್ನು ಕಳೆದುಕೊಂಡಿದ್ದಾರೆ. ಈಗ ನಾನು ಪ್ರಾಣ ಕಳೆದುಕೊಳ್ಳದಿದ್ದರೆ ಜನಾಪವಾದಕ್ಕೆ ಗುರಿಯಾಗುವೆನಲ್ಲಾ ? ಎಂಬ ಅಪವಾದದ ಭಯದಿಂದ ಪ್ರಾಣದಲ್ಲಿ ಅತಿಯಾದ ಮಮತೆ ಇದ್ದರೂ ಬಲಾತ್ಕಾರವಾಗಿ ಪ್ರಾಣವನ್ನು ತ್ಯಜಿಸಿದರೆ; ಅಥವಾ ಸಮಾಜದವರೇ ಅವನನ್ನು ಒತ್ತಾಯಪೂರ್ವಕವಾಗಿ ಕೊಂದರೆ ಆ ರೀತಿ ಸತ್ತವನಿಗೂ ಹಾಗೂ ಕೊಂದವರಿಗೂ ದುರ್ಗತಿಯೇ ಪ್ರಾಪ್ತವಾಗುತ್ತದೆ.

**ಶರಣರ ವಿಚಾರ ಹಾಗೂ ಅದರ ಪರಿಣಾಮ :**

ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಉಪದೇಶದ ಮರ್ಮ ವನ್ನರಿಯದೇ ಇಷ್ಟಲಿಂಗ ವಿಯೋಗವಾದಾಗ ಪ್ರೇಮವಿಲ್ಲದ ಪ್ರಾಣಾರ್ಪಣೆಯನ್ನು ಮಾಡುವ ಹಾಗೂ ಬಲಪೂರ್ವಕವಾಗಿ ಮಾಡಿಸುವ ಅಜ್ಞ ಜನರ ಅಂಧ ಶ್ರದ್ಧೆಯ ರೂಢಿವಾದವನ್ನು ತಪ್ಪಿಸುವದಕ್ಕಾಗಿ ಅನೇಕ ಶರಣರು ಶ್ರಮಿಸಿದ್ದಾರೆ. ಅದಕ್ಕಾಗಿಯೇ–

''ಅಂಗದ ಮೇಲಣ ಲಿಂಗ ಹಿಂಗಿತ್ತೆಂದು
ಆತ್ಮಘಾತವ ಮಾಡಿಕೊಳ್ಳಬೇಕೆಂಬರು ಅಜ್ಞಾನಿಗಳು.
ಅಂಗವಾವುದು ಲಿಂಗವಾವುದೆಂದರಿಯರು.
ಅಂಗವೇ ಆತ್ಮ ಲಿಂಗವೇ ಅರಿವು''

''ಇಷ್ಟಲಿಂಗವನು ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೋ !
ಇಷ್ಟಲಿಂಗ ಹೋದರೆ ಪ್ರಾಣಲಿಂಗ ಹೋಗದು ನೋಡಾ;''

''ಅಂಗದೊಳಗೆ ಮಹಾಲಿಂಗವಿರಲು ಕೈಯಲಿಂಗವ ಬಿದ್ದಿತೆಂದು
ನೆಲದೊಳಂಗವ ಹೂಣುವರು ಭಂಗಪಡುವರಲ್ಲಾ''.

ಇಂತಹ ಅನೇಕ ವೈಚಾರಿಕ ವಚನಗಳಿಂದ ಚೆನ್ನಬಸವಣ್ಣ ಮತ್ತು ಪ್ರಭುದೇವ ಮುಂತಾದವರು ಸಮಾಜವನ್ನು ಎಚ್ಚರಿಸಿದ್ದಾರೆ.

ಶರಣರ ಈ ಎಚ್ಚರಿಕೆಯನ್ನು ಕೇಳಿ ಅಂದಿನ ಜನ ಕೆಲವರೆಚ್ಚರಾಗಿರಬಹುದು ಆದರೆ ಈಗ ಮಾತ್ರ ಸಮಸ್ತರೂ ಎಚ್ಚರಾದಂತೆ ತೋರುತ್ತದೆ. ಅಂತೆಯೇ ಆ ಇಷ್ಟ ಲಿಂಗವು ಅಕಸ್ಮಾತ್ ಕಳಚಿ ಬೀಳುವದೊತ್ತಟ್ಟಿಗಿರಲಿ ತಾವೇ ಸ್ವತಃ ತೆಗೆದು ಅಡಕಲ ಗಡಿಗೆಯಲ್ಲಿಯೇ ದೇವರ ಜಗುಲಿಯ ಮೇಲೆಯೋ ಅಥವಾ ಮನೆಯ ಗೂಟಗಳಿಗೋ ನೇತು ಹಾಕುತ್ತಿದ್ದಾರೆ.

**ವೈಚಾರಿಕತೆ ಇರಲಿ ನಾಸ್ತಿಕತೆ ಬೇಡ :**

ಮನುಷ್ಯನು ಧರ್ಮಮಾರ್ಗದಲ್ಲಿ ನಡೆಯಬೇಕಾದರೆ ಶಸ್ತ್ರ ಇಲ್ಲವೇ ಶಾಸ್ತ್ರದ ಭಯ ಅವಶ್ಯವಾಗಿ ಬೇಕು. ಇವೆರಡರ ಭಯ ತಪ್ಪಿದ ಮನುಷ್ಯನು ನಾಸ್ತಿಕನೂ ಉಂಚ್ಛೃಖಲನೂ ಆಗುತ್ತಾನೆ. ಇಂದಿನ ಸಮಾಜಕ್ಕೆ ಸರಕಾರದ ಶಸ್ತ್ರ ಭಯವೂ ಇಲ್ಲ ಧರ್ಮದ ಶಾಸ್ತ್ರಭಯವೂ ಇರುವದಿಲ್ಲ. ಹೀಗಾಗಿ ಸಾಮಾಜಿಕ ಸ್ವಾಸ್ಥ್ಯವು ಹಾಳಾಗುತ್ತ

ನಡೆದಿದೆ. ಇದೊಂದು ಮನುಷ್ಯನ ವಿನಾಶದ ಮಾರ್ಗ ಅಂಧ ಶ್ರದ್ಧೆಯನ್ನು ಕಳೆದುಕೊಳ್ಳಬೇಕೇನೋ ನಿಜ, ಆದರೆ ಬಹಳಷ್ಟು ವೈಚಾರಿಕತೆಯನ್ನು ಬೆಳೆಯಿಸಿ ಕೊಂಡು ನಾಸ್ತಿಕರಾಗುವದೊಂದು ಮಹಾನ್ ಅಪರಾಧ.

ಬಂಗಾರದ ವ್ಯಾಪಾರಿಯೋರ್ವನು ಅಂಗಡಿಯಲ್ಲಿ ಒರೆಗಲ್ಲನ್ನು ಮುಂದಿಟ್ಟು ಕೊಂಡು, ಜನರು ತಂದು ಕೊಟ್ಟ ಬಂಗಾರದ ಆಭರಣಗಳನ್ನು ಆ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸುತ್ತಿದ್ದ. ಇದು ಅವನ ನಿತ್ಯ ವ್ಯವಹಾರ ಸುಮಾರು ಇಪ್ಪತ್ತು ವರ್ಷಗಳ ಪ್ರಬಲ ಸಂಸ್ಕಾರ ಅವನಿಗೆ ಯಾರೇ ವಸ್ತುಗಳನ್ನು ತಂದುಕೊಟ್ಟೊಡನೆ ಒರೆಗಲ್ಲಿಗೆ ತಿಕ್ಕಲು ಧಾವಿಸುತ್ತಿತ್ತು- ಅವನ ಕೈ ವೈಶಾಖಮಾಸ, ಲಗ್ನದ ಗಲಭೆ. ಬಂಗಾರವನ್ನು ಕೊಡುವ ಕೊಂಡುಕೊಳ್ಳುವ ಭರಾಟೆ ಅಂಗಡಿಯಲ್ಲಿ ನಡೆದಿತ್ತು, ಈ ಸ್ವರ್ಣ ವ್ಯಾಪಾರಿಯ ಮಿತ್ರನೊಬ್ಬ ತೋಟಿಗನಿದ್ದ, ಹೊಸದಾಗಿ ಅನೇಕ ಹೂವುಗಳನ್ನು ತನ್ನ ತೋಟದಲ್ಲಿ ಬೆಳೆಸಿದ್ದ. ಮಿತ್ರನ ನೆನಪಾಗಿ ಭೆಟ್ಟಿಯಾಗಲು ಒಂದು ಬಂಗಾರ ವರ್ಣದ ಗುಲಾಬಿ ಹೂವನ್ನು ತೆಗೆದುಕೊಂಡು ಮಿತ್ರನಲ್ಲಿಗೆ ಬಂದ. ಮಿತ್ರನಾದರೋ ಗಿರಾಕಿಗಳ ಬಂಗಾರದ ಪರೀಕ್ಷಣೆಯಲ್ಲಿ ಅತ್ಯಂತ ವ್ಯಸ್ತನಾಗಿದ್ದ. ಆ ಗದ್ದಲದಲ್ಲಿಯೇ ಈ ತೋಟಿಗ ಅವನ ಕೈಗೆ ಈ ಗುಲಾಬಿ ಹೂವನ್ನಿತ್ತು ಇದು ಹೇಗೆ ಇದೆ ನೋಡಿ ಎಂದ. ಹೂವನ್ನು ಕೈಗೆ ತೆಗೆದುಕೊಂಡ ವ್ಯಾಪಾರಿ ಅದನ್ನು ಪರೀಕ್ಷಿಸಲು ಮೂಗಿನಕಡೆಗೆ ಒಯ್ಯದೇ ಒರೆಗಲ್ಲಿನ ಕಡೆಗೆ ಒಯ್ದು, ತಿಕ್ಕಿ ನೋಡುವ ಬಲವಾದ ಸಂಸ್ಕಾರವುಳ್ಳ ಕೈ ಆ ಹೂವನ್ನೂ ತಿಕ್ಕೇ ಬಿಟ್ಟಿತು. ಆಗ ಹೂವಿನ ಸೌಂದರ್ಯ ಹಾಗೂ ಸುಗಂಧಗಳೆರಡೂ ನಷ್ಟಗಳಾಗಿ ಹೂವೇ ಇಲ್ಲದಂತಾಯಿತು. ಇದು ಹೂವನ್ನು ಪರೀಕ್ಷಿಸುವ ಪದ್ಧತಿಯೇ ? ಅಂತೆಯೇ ಡಿ. ವಿ. ಜಿ. ಯವರು–

''ಕುಸುಮ ಸಖನೇಂ ನೀನು ? ಹಿಸುಕದೆಯೆ ಮೂಸದನು ।
ಹಿಸುಕೆ ಕಟುಕಂಪು ; ನರಲೋಕವದರವೋಲೇ ॥
ಗಸಿಯ ಕಲಕದೆ ಕೊಳದ ಮೇಲ್ತೆಳಿಯ ಕುಡಿದು ನಡೆ ।
ಹಸನು ಹಗುರದ ಬಾಳು–ಮಂಕುತಿಮ್ಮ ॥''

(ಮಂಕುತಿಮ್ಮನ ಕಗ್ಗ–೭೨)

ಎಂದು ಬದುಕುವ ಪದ್ಧತಿಯನ್ನು ಬಹುಸ್ವಾರಸ್ಯವಾಗಿ ತಿಳಿಯಪಡಿಸಿದ್ದಾರೆ.

ಆದ್ದರಿಂದ ಎಲ್ಲವನ್ನು ತರ್ಕದ ಒರೆಗಲ್ಲಿಗೆ ತಿಕ್ಕಿ ನೋಡುವದು ಸರಿಯಲ್ಲ. ''ನೈಷಾ ತರ್ಕೇಣ ಮತಿರಾಪನೇಯಾ'' ಎಂದಿದೆ ಶ್ರುತಿಯು. ಭಕ್ತಸ್ಥಲದ ಸಾಧಕನಿಗೆ ತರ್ಕ ಪಕ್ಷಕ್ಕಿಂತಲೂ ಭಾವಪಕ್ಷ ಪ್ರಧಾನವಾದದ್ದು. ಭಾವಾನುಕೂಲ ತರ್ಕಗಳು ಗ್ರಾಹ್ಯಗಳೇ ವಿನಹ ಭಾವವನ್ನು ಹಾಳುಮಾಡುವ ಕುತರ್ಕಗಳು ಗ್ರಾಹ್ಯಗಳಲ್ಲ. ''ಇಷ್ಟಲಿಂಗ ವಿಯೋಗವಾದಾಗ ಪ್ರಾಯಶ್ಚಿತ್ತವಿಲ್ಲದೇ ಪ್ರಾಣವನ್ನೇ ತ್ಯಾಗಮಾಡಬೇಕೆಂಬ'' ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಆದೇಶವನ್ನು ಪ್ರಾಣತ್ಯಾಗ ಮಾಡುವದು ಆತ್ಮಘಾತವಲ್ಲವೇ ? ಹೀಗೆ ಮಾಡುವುದು ಯೋಗ್ಯವೇ ? ಮುಂತಾದ ಸುತೀಕ್ಷ್ಣ ಒರೆಗಲ್ಲಿಗೆ ತಿಕ್ಕಿನೋಡುವದೆಂದರೆ ಸುಂದರವೂ–ಸುಗಂಧಭರಿತವೂ ಆದ ಗುಲಾಬಿ

ಹೂವನ್ನು ತಿಕ್ಕಿ ಪರೀಕ್ಷಿಸಿದಂತಾಗುತ್ತದೆ. ಇದರಿಂದ ಹೂವಿನ ವಿನಾಶವಲ್ಲದೇ ಬೇರಾವ ಪ್ರಯೋಜನವು ಪ್ರಾಪ್ತವಾಗದಂತೆ ಆಚಾರ್ಯೋಕ್ತಿಯ ಅವಹೇಳನವೇ ಪ್ರಾಪ್ತ ವಾಗುವುದು. ಹೂವಿಗೆ ಯಾವುದೇ ಹಿಂಸೆಯನ್ನು ಕೊಡದೇ ಘ್ರಾಣೇಂದ್ರಿಯಕ್ಕೆ ಸಂಪರ್ಕಿಸಿ ಕಣ್ಣುಗಳನ್ನು ಮುಚ್ಚಿ ಏಕಾಗ್ರ ಮನಸ್ಸಿನಿಂದ ಆಘ್ರಾಣಿಸಿದರೆ ಮಹಾನ್ ಪ್ರಾಕೃತಿಕ ಸುಗಂಧವು ಪ್ರಾಪ್ತವಾಗುವಂತೆ, ಮೇಲೆ ಹೇಳಿದ ಆಚಾರ್ಯರ ಆದೇಶ ವೆಂಬ ಪುಷ್ಪವನ್ನು ಭಾವದಿಂದ ಪರೀಕ್ಷಿಸಲಾಗಿ ಇಷ್ಟಲಿಂಗದಲ್ಲಿ ಅತ್ಯಂತ ನಿಷ್ಠೆ ಇರಬೇಕೆಂಬ ಅಮೂಲ್ಯ ಸುಗಂಧವು ಪ್ರಾಪ್ತವಾಗುವದು. ಈ ಸುಗಂಧವನ್ನು ಸವಿದು ಬದುಕುವದೇ ವೀರಶೈವಾನುಯಾಯಿ ಭಕ್ತಭ್ರಮರಗಳ ಆದ್ಯ ಕರ್ತವ್ಯವು.

ಪ್ರಾಣವಿದ್ದ ಪ್ರೇತಗಳು :

ಹೀಗೆ ಉಪದೇಶಿಸಿದ ಆ ಮಹಾಚಾರ್ಯರ ಉಪದೇಶವನ್ನರಿಯದೇ ಇಷ್ಟಲಿಂಗ ವಿರಹಿಗಳಾಗಿ ತಿರುಗುವ ಜನರಿಗೆ ಶ್ರೀ ಮನ್ಮಥ ಶಿವಯೋಗಿಗಳು ಪಿಶಾಚಿಗಳೆಂದು ಕರೆದಿದ್ದಾರೆ–

ಜಯಾ ಚಾ ಪ್ರಾಣಲಿಂಗೀ ಭರಲಾ । ತೋ ಕೈಸಾ ಆಸೇ ಹೇಹೀ ವುರಲಾ ।
ಲಿಂಗ ಗೇಲಿಯಾ ದೇಹೀ ಸಂಚರಲಾ । ಪಿಶಾಚವತ ಜಾಣಿಜೇ ॥

(ಪರಮರಹಸ್ಯ ೩–೧೪)

ಇಷ್ಟಲಿಂಗವೇ ವೀರಶೈವರ ಪ್ರಾಣವಾಯುವು. ಪ್ರಾಣವಾಯುವಿಲ್ಲದ ದೇಹಕ್ಕೆ ಪ್ರೇತ ವೆಂದು ಕರೆಯುವಂತೆ ದೇಹದ ಮೇಲೆ ಇಷ್ಟಲಿಂಗವಿಲ್ಲದ ವ್ಯಕ್ತಿಯು ಪ್ರೇತನಾಗುವು ದಿಲ್ಲವೇ ? ಇಂದಿನ ಪರಿಸ್ಥಿತಿಯಲ್ಲಿ ಇಂತಹ ಪ್ರೇತ–ಪಿಶಾಚಿಗಳೆಷ್ಟಿಲ್ಲ? ಪಿಶಾಚಿಗಳಿರುವ ಸ್ಥಾನಕ್ಕೆ ಶ್ಮಶಾನವೆಂದು ಕರೆಯುವರು. ಇಂತಹ ಅಸಂಸ್ಕೃತ ಜನರಿರುವ ಮನೆಗಳೆಂದರೆ ಅವು ಶ್ಮಶಾನವಿದ್ದಂತೆ. ಅಂತೆಯೇ ತುಕಾರಾಮರು ''ಶ್ಮಶಾನ ತೇ ಭೂಮೀ ಪ್ರೇತರೂಪ ಜನ ಶ್ರದ್ಧಾಭಕ್ತಿವಿಹೀನ'' ಎಂದು ದೇವಭಕ್ತಿ ಇಲ್ಲದೇ ಕೇವಲ ವಿಷಯಾಸಕ್ತರಾದ ಅಸಂಸ್ಕೃತ ಜನರನ್ನು ನೋಡಿ ನೊಂದು ನುಡಿದಿದ್ದಾರೆ.

ಕಲಿತವರೆಂಬ ಅಭಿಮಾನದಲ್ಲಿ ಸಂಸ್ಕಾರಹೀನರಾಗಿ ಕುತರ್ಕಗಳನ್ನೇ ಮಾಡುತ್ತ ಕತ್ತಲೆಯತ್ತ ನಡೆದಿರುವ ಇಂದಿನ ವೀರಶೈವ ಸಮಾಜ ಎಚ್ಚರಾಗಬೇಕಾಗಿದೆ. ಸಾಕ್ಷರ ರಾದ ನಾವು ವಾಮಮಾರ್ಗಿಗಳಾಗಿ ರಾಕ್ಷಸಾಭಿದಾನವನ್ನು ಹೊಂದುತ್ತಿದ್ದೇವೆ. ಧರ್ಮಾ ಚರಣೆಗಳು ಮಾನವನ ಜೀವನವನ್ನು ಉಜ್ವಲಗೊಳಿಸುತ್ತವೆ. ಕಾರಣ ಧರ್ಮಬಾಹಿರ ರಾಗಬಾರದು. ಪತಿಯ ದ್ಯೋತಕವಾದ ಮಾಂಗಲ್ಯದ ಚಿಹ್ನೆಗಳಾದ ಮಂಗಳಸೂತ್ರ, ಮುತ್ತಿನ ನತ್ತು ಮತ್ತು ಕುಂಕುಮದ ಶೃಂಗಾರವಿಲ್ಲದ ಆ ಹೆಣ್ಣುಮಗಳು ಮುತ್ತೈದೆಯಾಗ ಬಲ್ಲಳೇ ? ವಸ್ತ್ರವಿಹೀನವಾದ ಬೆತ್ತಲೆಯ ದೇಹಕ್ಕೆ ಬಂಗಾರದ ಆಭರಣಗಳಿಂದ ಅಲಂಕರಿಸಿದರೂ ಅದು ಅಮಂಗಲವಾಗಿಯೇ ತೋರುವಂತೆ; ಲಿಂಗಭಕ್ತಿ ಇಲ್ಲದ ಭೌತಿಕ ಆಡಂಬರದ ಬಾಳು ಅಮಂಗಲವೆಂದೇ ತಿಳಿದುಕೊಳ್ಳಬೇಕು.

ಇಷ್ಟಲಿಂಗ ವಿಯೋಗದಲ್ಲಿ ಪ್ರಾಯಶ್ಚಿತ್ತ ವಿಚಾರ :

ಇನ್ನೂ ಈ ವೀರವ್ರತಕ್ಕೆ ವಿಕಲ್ಪವಾಗಿ

ಶುದ್ಧಶೈವೋ ವಿಶೇಷೇಣ ಮಂತ್ರಯಂತ್ರ ಪ್ರಚಾರಣಾತ್ ॥
ಶುದ್ಧೋ ಭವತಿ ಲೋಪೇಷು ಪ್ರಾಯಶ್ಚಿತ್ತ ವಿಧಾನತಃ ।
ಸ್ವೇಷ್ಟಲಿಂಗೇ ಪರಿಭ್ರಷ್ಟೇ ನಷ್ಟೇ ದಗ್ಧೇ ಹೃತೇಽಪಿವಾ ।
ನೀತೇ ವಾಮೂಷಿಕಾದ್ಯೈಶ್ಚ ಕಾಕಕೌಲೇಯ ವಾನರೈಃ ।
ಜಪ್ತ್ವಾ ಲಕ್ಷಮ ಘೋರಸ್ಯ ವಿಧಿನಾ ಲಿಂಗಕಾಂತರಂ ॥
ಪ್ರತಿಷ್ಠಾಪ್ಯ ನಯೇತ್ ಶುದ್ಧಿಂ ಪಿಂಡಿಕಾಯಾಂ ತಥೈವಚ ।

(ವಾತುಲಶುದ್ಧಾಗಮ ಪಟಲ ; ೧೦ ; ೫೭–೬೦)

ವಾತುಲಶುದ್ಧಾಗಮದ ಈ ಶ್ಲೋಕಗಳಲ್ಲಿ ಇಷ್ಟಲಿಂಗ ವಿಯೋಗವಾದಾಗ ಪ್ರಾಯಶ್ಚಿತ್ತ ವಿಧಾನವನ್ನು ತಿಳಿಸಲಾಗಿದೆ.

ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ ।
ತಪೋ ನಿಶ್ಚಯ ಸಂಯುಕ್ತಂ ಪ್ರಾಯಶ್ಚಿತ್ತ ಮಿತಿ ಸ್ಮೃತಂ ॥

(ನ್ಯಾಯಕೋಶ, ಪುಟ ೫೯೨)

ಹೀಗೆ ಅಂಗಿರಃ ಸ್ಮೃತಿಯಲ್ಲಿ ಪ್ರಾಯಶ್ಚಿತ್ತ ಕರ್ಮದ ಲಕ್ಷಣವು ಪ್ರತಿಪಾದಿಸಲ್ಪಟ್ಟಿದೆ. ''ಪ್ರಾಯಃ'' ಅಂದರೆ ತಪಸ್ಸು, ''ಚಿತ್ತಂ'' ಅಂದರೆ ನಿಶ್ಚಯ ಇವೆರಡರಿಂದ ಕೂಡಿದ್ದೇ ''ಪ್ರಾಯಶ್ಚಿತ್ತ''ವು. ಯಾವುದೇ ಶಾಸ್ತ್ರನಿಷಿದ್ಧ ವ್ಯವಹಾರವು ಸಂಭವಿಸಿದಾಗ ಅದರ ದೋಷ ನಿವೃತ್ತಿಗಾಗಿ ನಿಶ್ಚಯಿಸಲ್ಪಟ್ಟ ತಪಸ್ಸೇ ಪ್ರಾಯಶ್ಚಿತ್ತ ಕರ್ಮವು. ಈ ವಿಭಿನ್ನ ದೋಷಗಳ ನಿವೃತ್ತಿಗಾಗಿ ವಿಭಿನ್ನ ಪ್ರಕಾರದ ಪ್ರಾಯಶ್ಚಿತ್ತ ಕರ್ಮಗಳು ಪ್ರತಿ ಪಾದಿಸಲ್ಪಟ್ಟಿವೆ.

ಪ್ರಕೃತದಲ್ಲಿ ಸಾಧಕನ ಇಷ್ಟಲಿಂಗವು ದೇಹದಿಂದ ಚ್ಯುತವಾದರೆ, ನಷ್ಟವಾದರೆ, ದಗ್ಧವಾದರೆ, ಅಪಹರಿಸಲ್ಪಟ್ಟರೆ ಅಥವಾ ಇಲಿ, ಕಾಗೆ, ನಾಯಿ ಮತ್ತು ಮಂಗಗಳಿಂದ ಒಯ್ಯಲ್ಪಟ್ಟರೆ ''ಓಂ ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ। ಸರ್ವೇಭ್ಯಸ್ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯ ॥'' ಎಂಬ ಈ ಅಘೋರಮಂತ್ರವನ್ನು ಒಂದು ಲಕ್ಷ ಜಪ ಮಾಡಿ ಪುನಃ ಸದ್ಗುರುಗಳಿಂದ ಬೇರೊಂದು ಲಿಂಗವನ್ನು ಸಂಸ್ಕಾರ ಪೂರ್ವಕವಾಗಿ ಪಡೆಯಬೇಕೆಂಬುದಾಗಿ ವಾತುಲ ಶುದ್ಧಾಗಮ ದಲ್ಲಿ ಪ್ರಾಯಶ್ಚಿತ್ತ ಕರ್ಮವು ನಿರೂಪಿಸಲ್ಪಟ್ಟಿದೆ. ಲಿಂಗಪುರಾಣದ ಪೂರ್ವಭಾಗದ ೧೫ನೇ ಅಧ್ಯಾಯದ ತುಂಬೆಲ್ಲಾ ಯಾವ ಯಾವ ಪ್ರಾಯಶ್ಚಿತ್ತಗಳಲ್ಲಿ ಈ ಅಘೋರ ಮಂತ್ರವನ್ನು ಎಷ್ಟುಸಾರೆ ಜಪಿಸಬೇಕೆಂಬುದು ಬಹು ವಿಸ್ತಾರವಾಗಿ ತಿಳಿಸಲಾಗಿದೆ. ಅದರಲ್ಲಿ ''ದೇವ ಪ್ರಚ್ಯಾವಕಶ್ಚೈವ ಲಿಂಗಪ್ರಧ್ವಂಸಕಸ್ತಥಾ'' (ಲಿಂ.ಪು. ಪೂರ್ವಾರ್ಧ ೧೫–೨೯) ಹೀಗೆ ಲಿಂಗಪ್ರಧ್ವಂಸಕನೂ ಅಘೋರ ಮಂತ್ರವನ್ನು ಜಪಿಸಿ ದೋಷಮುಕ್ತ ನಾಗಬೇಕೆಂಬುದಾಗಿ ಪ್ರತಿಪಾದಿಸಲಾಗಿದೆ. ಅಂತೆಯೇ ಪುಷ್ಪದಂತನು– ''ಅಘೋರಾ ನ್ನಾಪರೋ ಮಂತ್ರೋ'' (ಮಹಿಮ್ನಃ ೩೫) ಪ್ರಾಯಶ್ಚಿತ್ತ ಕರ್ಮದಲ್ಲಿ ಜಪಿಸಲು

ಅಘೋರ ಮಂತ್ರಕ್ಕಿಂತಲೂ ಶ್ರೇಷ್ಠವಾದ ಮಂತ್ರ ಮತ್ತೊಂದಿಲ್ಲವೆಂದು ಹೇಳಿದ್ದಾನೆ. ಪಂಚಾಕ್ಷರ ಮಹಾಮಂತ್ರವು ಸಪ್ತಕೋಟಿ ಮಂತ್ರಗಳಲ್ಲಿ ಶ್ರೇಷ್ಠವಾದದ್ದೇನೋ ನಿಜ. ಆದರೆ ಅದು ನಿತ್ಯಕರ್ಮವಾದ ಇಷ್ಟಲಿಂಗಪೂಜೆಯಲ್ಲಿ ಜಪಿಸಲ್ಪಡುವಂತಹದು ಈ ಅಘೋರ ಮಂತ್ರವು ಪ್ರಾಯಶ್ಚಿತ್ತ ಕರ್ಮದಲ್ಲಿ ಶ್ರೇಷ್ಠವಾದದ್ದೆಂಬ ತಾತ್ಪರ್ಯವು.

ಹೀಗೆ ಒಂದು ಲಕ್ಷ ಅಘೋರ ಮಂತ್ರವನ್ನು ಜಪಿಸಿ ಪರಿಶುದ್ಧನಾಗಿ ಬೇರೊಂದು ಇಷ್ಟಲಿಂಗವನ್ನು ಸದ್ಗುರುಗಳಿಂದ ಪಡೆದ ವ್ಯಕ್ತಿಗೆ ಈ ವಾತುಲಾಗಮವು "ಶುದ್ಧಶೈವ" ಎಂಬ ಶಬ್ದವನ್ನು ಪ್ರಯೋಗಿಸಿದೆ. ವೀರಶೈವನಿಗೆ ಮಾತ್ರ ಆಗಮಗಳಲ್ಲಿ ಪ್ರಾಯಶ್ಚಿತ್ತ ಕರ್ಮಗಳನ್ನೇ ಹೇಳಲ್ಪಟ್ಟಿರುವದಿಲ್ಲ. ಅರ್ಥಾತ್ ಇವರು ಎಂದೂ ಪ್ರಮಾದವನ್ನೇ ಮಾಡಬಾರದೆಂಬುದೇ ಅಭಿಪ್ರಾಯವು. ಇಂದಿನ ಪರಿಸ್ಥಿತಿಯಲ್ಲಿ ಆ ವೀರವ್ರತವನ್ನು ಪರಿಪಾಲಿಸುವ ಸಾಮರ್ಥ್ಯವು ಸಾಧಕರಲ್ಲಿ ಇರದ ಕಾರಣ ತಮ್ಮಿಂದ ಇಷ್ಟಲಿಂಗ ವಿಯೋಗ ಅಥವಾ ವ್ರತಗಳ ಲೋಪಗಳುಂಟಾದಾಗ ಸದ್ಗುರುಗಳಲ್ಲಿಗೆ ಹೋಗಿ ತನ್ನ ಅಪರಾಧವನ್ನು ಅವರಿಗೆ ನಿವೇದಿಸಿಕೊಂಡು ಅವರು ಉಪದೇಶಿಸಿದ ಮಾರ್ಗದಲ್ಲಿ ನಡೆಯುವದು ಸೂಕ್ತವಾದದ್ದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ-೪

ಲಿಂಗಸ್ಯ ಧಾರಣಂ ಪುಣ್ಯಂ ಸರ್ವಪಾಪಪ್ರಣಾಶನಂ ।
ಆದೃತಂ ಮುನಿಭಿಃ ಸರ್ವೈರಾಗಮಾರ್ಥ ವಿಶಾರದೈಃ

ಲಿಂಗಧಾರಣಮಾಖ್ಯಾತಂ ದ್ವಿಧಾ ಸರ್ವಾರ್ಥಸಾಧಕಂ ।
ಬಾಹ್ಯಾಭ್ಯಂತರಂಚೇತಿ ಮುನಿಭಿರ್ಮೋಕ್ಷಕಾಂಕ್ಷಿಭಿಃ (ಸಿ. ಶಿ. ೬.೨೮-೨೯)

ನಮ್ಮ ಭಾಗ್ಯದ ಶಿಲ್ಪಿಗಳು ನಾವೆ :

ಮನುಷ್ಯನು ತನ್ನ ಸಕಲ ಪಾಪಗಳನ್ನು ದೂರೀಕರಿಸಿಕೊಂಡು ಪುಣ್ಯ ಜೀವಿಯಾಗಲು ಲಿಂಗಧಾರಣವೇ ಅಮೋಘ ಸಾಧನವೆಂಬುದನ್ನು ಪೂಜ್ಯಪಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜಗತ್ತಿಗೆ ಉಪದೇಶವಿತ್ತಿದ್ದಾರೆ. ಜೀವಿಗಳ ಪುಣ್ಯ-ಪಾಪಗಳೇ ಜಗತ್ತಿನ ವೈಷಮ್ಯಕ್ಕೆ ಕಾರಣಗಳಾಗಿವೆ. ಪ್ರತಿಯೊಬ್ಬ ಮನುಷ್ಯನು ಸದಾ ಸುಖಿಯಾಗಿರಲು ಅಪೇಕ್ಷಿಸುತ್ತಾನೆ. ಆದರೆ ಸುಖಸಾಧನೀ ಭೂತಗಳಾದ ಉತ್ತಮ ಕರ್ಮಗಳನ್ನು ಮಾಡಲು ಅಪೇಕ್ಷಿಸುವದಿಲ್ಲ. ಅಂತೆಯೇ ''ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ'' ಎಂದಿದ್ದಾರೆ ಅನುಭವಿಕರು. ನಮ್ಮ ಭಾಗ್ಯದ ಶಿಲ್ಪಿಗಳು ನಾವೇ ಆದಕಾರಣ ಉತ್ಕೃಷ್ಟ ಕರ್ಮಗಳಿಂದ ಭಾಗ್ಯವನ್ನು ರೂಪಿಸಿಕೊಳ್ಳಬೇಕು. ವಾಕ್, ಪಾಣಿ, ಪಾದ, ಉಪಸ್ಥ ಮತ್ತು ಪಾಯುಗಳು ಪಂಚಕರ್ಮೇಂದ್ರಿಯಗಳೆಂದು ಕರೆಯಿಸಿಕೊಳ್ಳುತ್ತವೆ. ಮನುಷ್ಯನ ಶುಭ ಹಾಗೂ ಅಶುಭಕರ್ಮಗಳಿಗೆ ಇವುಗಳೇ ಮೂಲ. ಇವುಗಳಲ್ಲಿಯೂ ಹಸ್ತಕ್ಕೆ ಪ್ರಾಧಾನ್ಯತೆ ಇದೆ. ಅಂತೆಯೇ ''ಅಯಂ ಮೇಹಸ್ತೋ ಭಗವಾನ್'' ಎಂದು ಒಳ್ಳೆ ಕರ್ಮಗಳನ್ನು ಮಾಡುವ ಹಸ್ತಕ್ಕೆ ವೇದವು ದೇವತ್ವವನ್ನು ಕಲ್ಪಿಸಿದೆ. ಕರಾಗ್ರೇ ವಸತೇ ಲಕ್ಷ್ಮೀ ಕರಮಧ್ಯೇಚ ಸರಸ್ವತೀ । ಕರಮೂಲೇತು ಗೋವಿಂದಃ ಪ್ರಭಾತೇ ಕರದರ್ಶನಂ ॥ ಎಂಬ ಸುಭಾಷಿತವೂ ಇದೆ. ಆದ್ದರಿಂದ ಪ್ರಾತಃಕಾಲ ಕರದರ್ಶನಮಾಡುವದು ಭಾರತೀಯ ಸಂಸ್ಕೃತಿ ಅಂತೆಯೇ-

''ಹೊಯ್ದರೆ ಹೊಯ್ಗಳು ಕಯ್ಯಮೇಲೆ !
ಬಯ್ದರೆ ಬಯ್ಗಳು ಕಯ್ಯಮೇಲೆ !
ಹಿಂದಣ ಜನನವೇನಾದೊಡಾಗಲಿ,
ಇಂದಿನ ಭೋಗವು ಕಯ್ಯಮೇಲೆ !
ಕೂಡಲಸಂಗಮದೇವಯ್ಯಾ,
ನಿಮ್ಮ ಪೂಜಿಸಿದ ಫಲ ಕಯ್ಯಮೇಲೆ !

ಎಂದು ನುಡಿದ ಅಣ್ಣನವರು ಹಸ್ತ ಮಹತಿಯನ್ನು ಜಗತ್ತಿಗರುಹಿದ್ದಾರೆ. ಕಾರಣ ಪ್ರತಿಯೊಬ್ಬರು ತನ್ನ ಅಮೂಲ್ಯ ಹಸ್ತಗಳಿಂದ ತನಗೆ ಹಾಗೂ ಜಗತ್ತಿಗೆ ಹಿತವಾಗುವ ಕಾರ್ಯಗಳನ್ನೇ ಮಾಡಬೇಕು.

ಯಾವಚ್ಚ ಪಾತಕಂ ದೇಹೇ ತಾವತ್ಸಿದ್ಧಿರ್ನಜಾಯತೇ ।
ಗತೇಚ ಪಾತಕೇ ತಸ್ಯ ಸರ್ವಂ ಚ ಸಫಲಂ ಭವೇತ್ ॥
(ಶಿವಪುರಾಣ, ರುದ್ರ ಸಂ. ಸೃಷ್ಟಿಖಂಡ, ೧೨–೨೦)

ಶಿವ ಮಹಾಪುರಾಣದ ಈ ವಚನದಂತೆ ಮನುಷ್ಯನಲ್ಲಿಯ ಪಾಪವು ದೂರಾಗದೇ ಅವನ ಯಾವ ಕಾರ್ಯವೂ ಸಫಲವಾಗಲಾರದು. ಕಾರಣ ಪಾತಕ ನಿವೃತ್ತಿಯ ಉಪಾಯ ವನ್ನರಿಯಬೇಕಾದುದು ಆದ್ಯ ಕರ್ತವ್ಯ.

ಪರಮಾತ್ಮನು ಪಾಪನಾಶಕನು :

ಮನುಷ್ಯನ ಅಂತರಂಗ ಬಹಿರಂಗಗಳೆರಡೂ ಮಲೀನಗಳಾಗಿವೆ. ಆಗುತ್ತಲೂ ಇವೆ. ಪ್ರಕೃತಿ ಹಾಗೂ ಪರಮಾತ್ಮನಲ್ಲಿ ಈ ಮಲೀನತೆಯನ್ನು ದೂರ ಮಾಡುವ ಸಹಜ ಸಾಮರ್ಥ್ಯವಿದೆ. ಭೂಮಿಗೆ ಕೊಳೆತುನಾರುವ ಗೊಬ್ಬರವನ್ನು ಹಾಗೂ ಕೊಳೆಯಾದ ನೀರನ್ನು ಹಾಕಿದರೂ ಅದು ನಮಗೆ ಸುಗಂಧಭರಿತವಾದ ಪುಷ್ಪಗಳನ್ನು ಸುಮಧುರ ರಸಭರಿತವಾದ ಫಲಗಳನ್ನು ಕೊಡುತ್ತದೆ. ನಾವು ಅಂಗಾರಾಮ್ಲವಾಯುವನ್ನು ಕೊಟ್ಟರೆ ವೃಕ್ಷಗಳು ಅದನ್ನು ಪ್ರಾಣವಾಯುವನ್ನಾಗಿ ಮಾಡಿ ಮರಳಿ ಸಮರ್ಪಿಸುತ್ತವೆ. ನಾವು ಮಾಡಿದ ಕೊಳೆಯನ್ನೆಲ್ಲ ನೀರು ನಿರ್ಮಲಗೊಳಿಸುವದು, ಅಗ್ನಿ ಭಸ್ಮಗೊಳಿಸುವದು, ಸೂರ್ಯ–ಚಂದ್ರಾದಿಗಳು ಕತ್ತಲೆಯನ್ನು ಕತ್ತರಿಸಿ ಪ್ರಕಾಶವನ್ನೀಯುವರು ಹೀಗೆ ಪರಮಾತ್ಮನ ಅಷ್ಟ ತನುಗಳೆನಿಸಿದ ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಆತ್ಮ ಇವುಗಳಲ್ಲಿ ಮೊದಲಿನ ಏಳು ತನುಗಳು ಮನುಷ್ಯನ ಹೊರಗಿನ ಮಲೀನತೆಯನ್ನು ದೂರಮಾಡಿದರೆ ; ಆತ್ಮರೂಪವಾದ ಲಿಂಗಮೂರ್ತಿಯು ಮನದ ಮಲೀನತೆಯಾದ ಪಾಪವನ್ನು ಪರಿಹರಿಸುತ್ತದೆ. ಅಗ್ನಿಯ ಸ್ಪರ್ಶದಿಂದ ವಸ್ತುಗಳು ದಹಿಸಿಹೋಗುವಂತೆ ಶಿವನ ದರ್ಶನ ಸ್ಪರ್ಶನದಿಂದ ಸಮಸ್ತ ಪಾಪವೆಲ್ಲ ದೂರಾಗಿ ಪುಣ್ಯದ ಪುಂಜವೇ ಆಗುತ್ತಾನೆ– ಈ ವಿಷಯದ ಹೃದಯಂಗಮತೆಗಾಗಿ ಒಂದು ಕಥೆಯನ್ನಿಲ್ಲಿ ನಿರೂಪಿಸೋಣ.

ಒಂದು ಊರಿನ ಕಡುಪಾಪಿಯೋರ್ವನ ಆಯುಷ್ಯವು ತೀರಿಹೋಗಿತ್ತು. ಯಮನ ಆದೇಶವನ್ನು ಹೊತ್ತ ದೂತರು ಅವನ ಪ್ರಾಣವನ್ನೊಯ್ಯಲು ಭೂಮಿಗಿಳಿದು ಬಂದರು. ಬೇಸಿಗೆಯ ಕಾಲ, ಮಧ್ಯರಾತ್ರಿಯ ಸಮಯ, ಅಂಗಳದಲ್ಲಿ ಹೊರಸಿನ ಮೇಲೆ ಹಾಯಾಗಿ ಮಲಗಿದ್ದಾನೆ. ಅವನ ಸ್ಥೂಲ–ಸೂಕ್ಷ್ಮ ದೇಹಗಳು ಪಾಪದ ಪುಂಜವೇ ಆಗಿದ್ದವು. ಕೊಳಚೆಯನ್ನು ಮುಟ್ಟಲು ಮನುಷ್ಯರು ಹಿಂಜರಿಯುವಂತೆ ಯಮದೂತರಿಗೆ ಇವನನ್ನು ಮುಟ್ಟುವ ಇಚ್ಛೆಯಾಗಲಿಲ್ಲ, ಯಮನ ಆದೇಶವಿದೆ ಇವನನ್ನು ಹೇಗೆ ತೆಗೆದುಕೊಂಡು ಒಯ್ಯುವದು ? ಎಂದು ವಿಚಾರಿಸಿದರು. ಯೋಚನೆ ಹೊಳೆಯಿತು. ನಾಲ್ವರೂ ಹೊರಸಿನ ಕಾಲನ್ನು ಹಿಡಿದು ಹೊರಸು ಸಹಿತವಾಗಿಯೇ ಹೊತ್ತುಕೊಂಡು ಹೋಗಿ ಯಮಧರ್ಮನ ಮುಂದಿರಿಸಿದರು. ತಂಗಾಳಿಯಲ್ಲಿ ಹಾಯಾಗಿ ನಿದ್ರಿಸುತ್ತಿದ್ದ ಅವನಿಗೆ ಎಚ್ಚರವೇ ಇಲ್ಲ, ಇದನ್ನು ಕಂಡು ಕ್ರುದ್ಧನಾದ ಯಮಧರ್ಮ ಗರ್ಜಿಸಿದ. ಗರ್ಜನೆಯ ಧ್ವನಿ ಕೇಳಿ ಬೆಚ್ಚನೇ ಬೆದರಿ ಎದ್ದು ಕುಳಿತ ಈತ. ಭೂಲೋಕದಲ್ಲಿ ಯಾವ ಯಾವ

ಪಾಪವನ್ನೆಸಗಿರುವೆ ಎಂಬುದು ಯಮನ ಪ್ರಶ್ನೆ. ಮಾಡದೇ ಇರುವ ಪಾಪ ಒಂದೂ ಇಲ್ಲ ಎಂದು ಸಮಾಧಾನವಾಗಿಯೇ ಉತ್ತರಿಸಿದ ಪಾಪಿ. ಉದ್ದಂಡತನದಿಂದ ಉತ್ತರಿಸಿದ್ದನ್ನು ಕೇಳಿ ಇವನನ್ನು ರೌರವ ನರಕದಲ್ಲಿ ಹಾಕಿರೆಂದು ಆಯಿತು ಯಮನ ಆಜ್ಞೆ. ಆಗ ಬುದ್ಧಿವಂತನಾದ ಪಾಪಿಯು ಈಗ ಧೈರ್ಯ ಬಿಡಬಾರದೆಂದು ಯೋಚಿಸಿ–

ಪಾಪಿ : ನನ್ನನ್ನು ನರಕದಲ್ಲಿ ಹಾಕುವವರು ನೀವು ಯಾರು ? ಧೈರ್ಯ ವಾಗಿಯೇ ಪ್ರಶ್ನಿಸಿದ.

ಯಮ : ನಾನು ಯಮಧರ್ಮ. ಪ್ರಾಣಿಗಳಿಗೆ ಕರ್ಮಾನುಸಾರವಾಗಿ ತಕ್ಕ ಶಿಕ್ಷೆಯನ್ನು ಕೊಡುವ ಸರ್ವಾಧಿಕಾರಿ.

ಪಾಪಿ : ಯಮದೇವರು ನೀವೇನೋ ! ಪಾಂಡವರಲ್ಲೊಬ್ಬನಾದ ಧರ್ಮ ರಾಜನು ನಿಮ್ಮ ಮಂತ್ರಪಠಣದಿಂದ ಜನಿಸಿದನಂತೆ ಅಹುದೇ ?

ಯಮ : ಅಹುದು ಅವನಿಂದೇನಾಗಬೇಕಾಗಿದೆ ?

ಪಾಪಿ : ಏನೂ ಇಲ್ಲ, ಅವರ ಕೀರ್ತಿಯನ್ನು ಬಹಳಷ್ಟು ಕೇಳಿದ್ದೇನೆ. ಕಣ್ಣಾರೆ ಕಾಣುವ ತುಂಬಾ ಆಸೆಯಾಗಿದೆ.

ಯಮ : ಆತನು ಸ್ವರ್ಗದಲ್ಲಿದ್ದಾನೆ. ನಿನ್ನಂತಹ ಕಡುಪಾಪಿಗೆ ಅಲ್ಲಿ ಪ್ರವೇಶವಿಲ್ಲ.

ಪಾಪಿ : ಪಾಪಿಯಾದ ಧರ್ಮರಾಜನನ್ನು ನರಕದಲ್ಲಿ ಇಡುವ ಬದಲು ಸ್ವರ್ಗಕ್ಕೆ ಕಳಿಸಿರುವಿರಾ ? ನಿಮ್ಮ ಮಂತ್ರಸಂಜಾತನಲ್ಲವೇ ? ಭೂಲೋಕದಲ್ಲಿ ನಡೆಯುತ್ತಿರುವ ಈ ಪಕ್ಷಪಾತವೆಂಬ ಪಿಡುಗು ಯಮಲೋಕವನ್ನೂ ಆವರಿಸಿತೇ.

ಯಮ : ಏ ಮುಚ್ಚು ಬಾಯ್, ಅನಧಿಕಾರ ಚೇಷ್ಟೆಯನ್ನು ಮಾಡುತ್ತಿರುವೆ.

ಎಚ್ಚರಿಕೆಯಿಂದ ವಹಿಸಿ ಮಾತನಾಡು ಧರ್ಮರಾಜನು ಮಾಡಿದ ಪಾಪವೇನು ?

ಪಾಪಿ : ಎಲ್ಲವನ್ನೂ ತಿಳಿದು ಜ್ಞಾನಿಯಾಗಿಯೂ ಅವನು ಮಾಡಿದಂತಹ ಪಾಪ ವನ್ನು ಮತ್ತಾವ ಜ್ಞಾನಿಯೂ ಮಾಡಲಾರ. ಅವನ ಪಾಪಕೃತ್ಯ, ನಿಮಗೆ ತಿಳಿದಿಲ್ಲವೆ ? ನನ್ನಿಂದ ಕೇಳಬೇಕೆನ್ನುವಿರಾ ? ಪಗಡಿಯ ಆಟದಲ್ಲಿ ಹೆಂಡತಿಯನ್ನು ಪಣಕ್ಕಿಡುವುದು ಅಧರ್ಮವಲ್ಲವೆ ? ಯುದ್ಧಭೂಮಿಯಲ್ಲಿ ಕಪಟನಾಟಕ ಸೂತ್ರಧಾರಿಯಾದ ಕೃಷ್ಣನ ಮಾತನ್ನು ಕೇಳಿ ಅಶ್ವತ್ಥಾಮನು ಹತನಾದನೆಂದು ಸುಳ್ಳು ಹೇಳಿ ದ್ರೋಣಾಚಾರ್ಯರ ಮರಣಕ್ಕೆ ಕಾರಣವಾಗಲಿಲ್ಲವೇ ? ಹೀಗೆ ಅರಿತೂ ಪಾಪವನ್ನು ಮಾಡಿದ ಮಹಾಪಾಪಿ ಯನ್ನು ಅನಂತಕಾಲ ನರಕದಲ್ಲಿ ಇಡುವ ಬದಲು ಅವನನ್ನು ಸ್ವರ್ಗದಲ್ಲಿರಿಸಿದ ಕಡುಪಾಪಿಯಾದ ನಿಮ್ಮನ್ನೂ ನರಕದಲ್ಲಿ ಇಡಬೇಕಾದೀತು ಜೋಕೆ.

ಪಾಪಿಯು ಧೈರ್ಯವಾಗಿ ನುಡಿದ ಸತ್ಯವಾದ ಮಾತುಗಳನ್ನು ಕೇಳಿ ಯಮನ ಹೃದಯ ನಡುಗಿತು. ಅಪರಾಧಿಯಾದ ನನಗೆ ಇವನನ್ನು ಶಿಕ್ಷಿಸುವ ಅಧಿಕಾರ ತನಗಿಲ್ಲವೆಂಬ ಅರಿವಾಯಿತು. ಉಪಾಯಗಾಣದ ಯಮನು ಮರುಕದ ಧ್ವನಿಯಲ್ಲಿ ದೂತರಿಗೆ ಆದೇಶವಿತ್ತ ''ಇವನನ್ನು ಬ್ರಹ್ಮಲೋಕಕ್ಕೆ ತೆಗೆದುಕೊಂಡು ಹೋಗಿ, ಸೃಷ್ಟಿಕರ್ತನೇ ಇವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಲಿ''. ಯಮನ ಆದೇಶದಂತೆ ದೂತರು

ಹೊರಸು ಸಹಿತವಾಗಿಯೇ ಇವನನ್ನು ಬ್ರಹ್ಮಲೋಕಕ್ಕೆ ಕರೆದೊಯ್ದರು. ಪದ್ಮಾಸನನಾಗಿ ನಾಲ್ಕೂ ವೇದಗಳನ್ನು ಕೈಯಲ್ಲಿ ಪಿಡಿದು ತನ್ನ ನಾಲ್ಕೂ ಮುಖಗಳಿಂದ ಓದುತ್ತ ಅಧ್ಯಯನಮಗ್ನರಾಗಿದ್ದರು ಬ್ರಹ್ಮದೇವರು. ಯಮದೂತರು ಪಾಪಿಯನ್ನು ಬ್ರಹ್ಮನ ಮುಂದೆ ನಿಲ್ಲಿಸಿ ನಿವೇದಿಸಿಕೊಂಡರು.

ದೂತರು : ಪ್ರಭು ನಾವು ಯಮಲೋಕದಿಂದ ಬಂದಿದ್ದೇವೆ. ಇವನೋರ್ವ ಭೂಲೋಕದ ಕಡು ಪಾಪಿ. ಇವನು ಮಾಡದಿರುವ ಪಾಪಗಳೇ ಇಲ್ಲ. ಪಾಪದ ಶಿಕ್ಷೆಯನ್ನು ವಿಧಿಸಲು ಯಮಲೋಕಕ್ಕೆ ಕರೆದೊಯ್ದೆವು. ಯಮನು ನರಕಕ್ಕೆ ಒಯ್ಯಲು ಆಜ್ಞಾಪಿಸಿದ ಕೂಡಲೇ ಈ ಪಾಪಿಯು– ''ನಿಮ್ಮ ಮಗನಾದ ಧರ್ಮರಾಜನು ಭೂಲೋಕದಲ್ಲಿ ಜೂಜಾಡಿ ಸುಳ್ಳುಹೇಳಿ ಮಹಾಪಾಪವನ್ನೆಸಗಿದ್ದಾನೆ. ಅವನನ್ನು ಸ್ವರ್ಗಕ್ಕೆ ಕಳಿಸಿ ನನ್ನನ್ನು ನರಕಕ್ಕೆ ಕಳಿಸುವಿರಾ ?'' ಎಂದು ಯಮನಿಗೆ ಮರು ಉತ್ತರವನ್ನಿತ್ತ, ತಾನು ಮಾಡಿದ ಅಪರಾಧದ ಅರಿವಾದ ಯಮನು– ''ಈತನಿಗೆ ಶಿಕ್ಷಿಸುವ ನೈತಿಕ ಅಧಿಕಾರವನ್ನು ನಾನು ಕಳೆದುಕೊಂಡಿದ್ದೇನೆ ಕಾರಣ ಸೃಷ್ಟಿಕರ್ತನಾದ ಬ್ರಹ್ಮನೇ ಇವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಲೆಂದು'' ತಮ್ಮ ಬಳಿಗೆ ಕಳಿಸಿದ್ದಾರೆ.

ಆಗ ಬ್ರಹ್ಮನು ಇವನ ಉದ್ಧಟತನವನ್ನು ಕೇಳಿ ಕ್ರುದ್ಧನಾಗಿ ಬ್ರಹ್ಮಲೋಕವೇ ನಡುಗುವಂತೆ ಗರ್ಜಿಸಿ ನುಡಿದ.

ಬ್ರಹ್ಮ : ಎಲೌ ಪಾತಕಿಯೇ ! ನೀನು ಮಾಡಿದ ಪಾಪದ ಅರಿವಿಲ್ಲದೇ ಮನಬಂದಂತೆ ಮಾತನಾಡುವೆಯಾ ! ಇಗೋ ಈತನನ್ನು ಸಹಸ್ರ ಸಹಸ್ರ ವರ್ಷದ ಪರ್ಯಂತರ ರೌರವ ನರಕದಲ್ಲಿಡಿ.

ಪಾಪಿ : ನನ್ನನ್ನು ನರಕಕ್ಕೆ ಕಳಿಸುವವರು ನೀವ್ಯಾರು ಸ್ವಾಮಿ ? ತಮ್ಮ ಪರಿಚಯವನ್ನು ಮಾಡಿಕೊಡಬಾರದೇ ? (ವ್ಯಂಗ್ಯವಾಗಿ ನುಡಿದ).

ಬ್ರಹ್ಮ : ಹುಂ ! ನನ್ನ ಪರಿಚಯ ನಿನಗಿಲ್ಲವೇ ? ಅಂತೆಯೇ ಹೀಗೆ ವಿನಯ ಶೂನ್ಯನಾಗಿ ವರ್ತಿಸುವೆಯಾ ? ಪರಶಿವನ ಚೊಚ್ಚಲು ಮಗ ನಾನು. (ಯೋ ಬ್ರಹ್ಮಾಣಂಯಂ ವಿದಧಾತಿ ಪೂರ್ವಂ) ನಾಲ್ಕೂ ವೇದಗಳು ಮುಖೋದ್ಗತಗಳೆನಗೆ. ಅಂತೆಯೇ ನಾನು ಚತುರ್ವೇದಿ. ಈ ಸೃಷ್ಟಿಯ ಆದಿಕರ್ತನು ತಿಳಿಯಿತೇ.

ಪಾಪಿ : ಮಹಾನ್ ಸಂತೋಷ ಸ್ವಾಮಿ ತಮ್ಮ ಬಗ್ಗೆ ಪುರಾಣಗಳಲ್ಲಿ ಬಹಳ ಕೇಳಿದ್ದೆ. ಆದರೆ ನೋಡುವ ಸೌಭಾಗ್ಯ ದೊರೆತಿರಲಿಲ್ಲ. ಇಂದು ತಮ್ಮನ್ನು ಕಂಡು ಧನ್ಯನಾದೆ. ದಯಾಳುಗಳಾದ ತಾವು ನನ್ನ ಪಾಪವನ್ನು ಮನ್ನಿಸಿ ಇದೊಂದು ಸಾರೆ ಕ್ಷಮಿಸಿಬಿಡಿ.

ಬ್ರಹ್ಮ : ಛೆ ! ಇದೆಂದಿಗೂ ಸಾಧ್ಯವಿಲ್ಲ.....ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲೇ ಬೇಕು. ಇವನನ್ನು ಎಳೆದೊಯ್ಯಿರಿ.

ಆಗ ಪಾಪಿಯು ಆಲೋಚಿಸತೊಡಗಿದ. ಬ್ರಹ್ಮನ ದೋಷಗಳು ಏನಾದರೂ ಇರುವವೇ ಎಂದು. ಥಟ್ಟನೇ ಮನದಲ್ಲಿ ಯೋಚನೆ ಹೊಳೆಯಿತು. ನಾನು ಇಲ್ಲಿಂದಲೂ ಪಾರಾದೆನೆಂಬ ಧೈರ್ಯ ಬಂದಿತು. ಧೈರ್ಯವಾಗಿಯೇ ನುಡಿದ.

ಪಾಪಿ : ಪೂಜ್ಯರೇ ! ಶಿವನ ಪ್ರಥಮ ಪುತ್ರರಾಗಿಯೂ ಚತುರ್ವೇದಿಯಾಗಿಯೂ, ಜಗತ್ತಿನ ಆದಿಕರ್ತರಾಗಿಯೂ ಯಾರೂ ಮಾಡದ ಮಹಾನ್ ಅಪರಾಧವನ್ನು ನೀವು ಮಾಡಿಲ್ಲವೇ ? ಸರಸ್ವತಿಯು ನಿಮ್ಮ ಮಗಳಲ್ಲವೆ ? ''ಮಗಳನ್ನು ಮದುವೆಯಾದ ಮಹಾ ಪಾಪಿಗಳು ಭೂಲೋಕದಲ್ಲಿ ಒಬ್ಬರೂ ಇಲ್ಲ'' ವೇದಗಳನ್ನು ಕೈಯಲ್ಲಿ ಹಿಡಿದುಕೊಂಡು ''ಧರ್ಮಂ ಚರ'' ಎಂದು ಜಗತ್ತಿಗೆ ಉಪದೇಶಿಸುತ್ತ ಸ್ವತಃ ಅಧರ್ಮವನ್ನೇ ಆಚರಿಸಿದ ನಿಮ್ಮಂತಹ ದೋಷಿಗಳು ಯಾರಾದರೂ ಇರುವರೆ ? ಅದರ ಪ್ರಾಯಶ್ಚಿತ್ತವನ್ನಾದರೂ ಮಾಡಿಕೊಂಡಿರುವಿರಾ ? ಸ್ವತಃ ಪಾಪಿಯಾದ ನಿಮಗೆ ನನ್ನನ್ನು ಶಿಕ್ಷಿಸುವ ಅಧಿಕಾರವೆಲ್ಲಿದೆ ? ನಡೆಯಿರಿ ನೀವೂ ನನ್ನ ಜೊತೆಗೆ ನರಕಕ್ಕೆ.

ಪಾಪಿಯ ಸತ್ಯವಾದ ನುಡಿಗಳನ್ನು ಕೇಳಿ ಬ್ರಹ್ಮ ಬೆಚ್ಚಿದ. ಮನುಷ್ಯರು ಬಹಳಷ್ಟು ಬುದ್ಧಿವಂತರಾಗಿದ್ದಾರೆ. ದೇವತೆಗಳ ತಪ್ಪನ್ನೂ ಹೊರಹಾಕುತ್ತಿದ್ದಾರೆ. ಇನ್ನು ಮಾಡುವದಾದರೂ ಏನು ? ಇವನು ನುಡಿದಂತೆ ಪಾಪ ಮಾಡಿದ ನನಗೆ ಪಾಪಿಯನ್ನು ಶಿಕ್ಷಿಸುವ ನೈತಿಕ ಅಧಿಕಾರವಿಲ್ಲ, ಇನ್ನೇನಾದರೂ ಅನಧಿಕಾರ ಚೇಷ್ಟೆ ಮಾಡಲು ಹೋದರೆ ಇದ್ದ ಅಧಿಕಾರವನ್ನೂ ಕಳೆದುಕೊಳ್ಳುವ ವೇಳೆ ಬಂದೀತು ! ಎಂದು ಮನದಲ್ಲಿಯೇ ವಿಚಾರಿಸಿದ ಬ್ರಹ್ಮನು ಇವನನ್ನು ಶಿವನಲ್ಲಿಗೆ ಕರೆದೊಯ್ಯಿರಿ ಎಂಬುದಾಗಿ ದೂತರಿಗೆ ಆಜ್ಞಾಪಿಸಿದ.

ಬ್ರಹ್ಮನ ಆದೇಶದಂತೆ ಪಾಪಿಯನ್ನು ಹೊರಸು ಸಹಿತವಾಗಿಯೇ ಶಿವಲೋಕಕ್ಕೆ ಕರೆದೊಯ್ದರು. ಕೈಲಾಸದಲ್ಲಿ ಮಂಗಲಮಯನಾದ ಶಿವನು ಧ್ಯಾನ ನಿಮಗ್ನನಾಗಿದ್ದ. ಸತ್ಯಂ ಶಿವಂ ಸುಂದರಂ ಆದ ಶಿವನ ಆ ಭವ್ಯರೂಪವನ್ನು ಕಣ್ಣಾರೆ ಕಂಡು ಸಂತೋಷಪಟ್ಟ ಪಾಪಿ. ತನ್ನ ಜೀವನವೇ ಸಾರ್ಥಕವೆಂದು ಭಾವಿಸಿದ. ಪಾಪದ ಶಿಕ್ಷೆಯಿಂದ ಮುಕ್ತನಾದೆನೆಂಬ ಧೈರ್ಯ ಬಂದಿತು. ಅಷ್ಟರಲ್ಲಿ ಯಮದೂತರು ಶಿವಸ್ತುತಿಯನ್ನು ಮಾಡಿ ಶಿವನನ್ನು ಎಚ್ಚರಿಸಿದರು. ಪ್ರಸನ್ನ ಮುದ್ರೆಯಲ್ಲಿ ಕಣ್ಣನ್ನರಳಿಸಿ ಕೇಳಿದ ಏನು ಸಮಾಚಾರ ? ಎಂದು. ದೂತರು ಭೂಲೋಕ, ಯಮಲೋಕ ಮತ್ತು ಬ್ರಹ್ಮಲೋಕದ ಇವನ ಇತಿಹಾಸವನ್ನರುಹಿದರು. ಪಾಪಿಯ ವ್ಯವಹಾರವನ್ನು ಕೇಳಿ ಕ್ರುದ್ಧನಾದ ಶಿವನು ಗರ್ಜಿಸಿ ಕೇಳಿದ.

ಶಿವ : ನೀನು ಮಾಡಿದ ಅಪರಾಧಗಳೇನು ?

ಪಾಪಿ : ಸ್ವಾಮಿ ! ನಾನು ಸಕಲ ಅಪರಾಧಗಳನ್ನು ಮಾಡಿರುವೆನು.

ಶಿವ : ಇವನು ಮಾಡಿದ ಅಪರಾಧವನ್ನು ಸ್ವತಃ ಒಪ್ಪಿರುವ ಕಾರಣ ಇವನನ್ನು ಘೋರ ನರಕದಲ್ಲಿ ಹಾಕಿರಿ.

ದೂತರು : ಪ್ರಭು ತಮ್ಮ ಆಜ್ಞೆಯಂತೆ ಮಾಡುತ್ತೇವೆ. (ಪಾಪಿಯನ್ನು ಎಳೆದೊಯ್ಯಲು ಉದ್ಯುಕ್ತರಾಗುತ್ತಾರೆ.)

ಪಾಪಿ : ಸ್ವಾಮಿ ನನ್ನನ್ನು ಘೋರ ನರಕಕ್ಕೆ ಕಳಿಸುವ ತಾವ್ಯಾರು ?

ಶಿವ : ನಾನು ಪರಶಿವ. ತ್ರಿಮೂರ್ತಿಗಳ ಮೂಲಕಾರಣ ನಾನು.

ಪಾಪಿ : ಸ್ವಾಮಿ ತಾವು ಅಸಲಿ ಶಿವನೋ ನಕಲಿ ಶಿವನೋ ?

ಶಿವ : ಏನು ಹೀಗೆ ನುಡಿಯುತ್ತಿರುವೆ ? ನನ್ನ ವಾಸ್ತವಿಕತೆ ನಿನಗೆ ತಿಳಿದಿಲ್ಲವೇ ?

ಪಾಪಿ : ತಾವು ಅಸಲಿ ಶಿವನೇ ಆಗಿದ್ದರೆ ನನ್ನನ್ನು ನರಕಕ್ಕೆ ಕಳಿಸಬಹುದೆ ? ಏಕೆಂದರೆ ಭೂಲೋಕದಲ್ಲಿ ನಮ್ಮ ಅಜ್ಜಿ ಹೇಳುತ್ತಿದ್ದಳು– ''ಶಿವದರ್ಶನ ಸ್ಪರ್ಶನಗಳಾದರೆ ಪಾಪಗಳೆಲ್ಲ ದಹಿಸಿ ಹೋಗುತ್ತವೆ'' ಎಂದು. ಕಾರಣ ಇಂದು ತಮ್ಮ ಪುರಾಣ–ಪುಣ್ಯ ಕಥೆಗಳೆಲ್ಲ ವ್ಯರ್ಥವಾಗುವುದಿಲ್ಲವೆ ?

ಪಾಪಿಯ ಈ ಯುಕ್ತಸಂಗತಗಳಾದ ಮಾತುಗಳನ್ನಾಲಿಸಿದ ಶಿವನು ಸಂತುಷ್ಟ ಚಿತ್ತನಾಗಿ ಅವನಿಗೆ ಆಶೀರ್ವದಿಸಿ ಪಾಪ ಮುಕ್ತನನ್ನಾಗಿ ಮಾಡಿ ಸಾಯುಜ್ಯ ಮುಕ್ತಿಯನ್ನಿತ್ತು ಅನುಗ್ರಹಿಸಿದನು. ಅಂತೆಯೇ ಶಿವನಿಗೆ ಪತಿತಪಾವನೆಂದು ಕರೆದಿದ್ದಾರೆ.

**ಲಿಂಗಧಾರಣೆಯು ಪುಣ್ಯಪ್ರದವು :**

ಹೀಗೆ ಪತಿತ ಪಾವನನಾದ ಪರಶಿವನ ಇಪ್ಪತ್ತೈದು ಲೀಲಾ ವಿಗ್ರಹಗಳುಂಟು ಅವುಗಳಲ್ಲಿ

ಲಿಂಗೋದ್ಭವಸ್ವರೂಪಂತು ಪಂಚವಿಂಶಂ ಪ್ರಕೀರ್ತಿತಂ ।
ಏತೇ ಮಹೇಶರೂಪಾಃ ಸ್ಯುಮೂರ್ತಿರ್ತಿಭೇದಾಃ ಪ್ರಕೀರ್ತಿತಾಃ ॥

(ವಾತುಲ ಶುದ್ಧಾಖ್ಯ ತಂತ್ರ ೧–೧೩೪)

ಈ ಆಗಮ ವಾಕ್ಯದಂತೆ ಲಿಂಗೋದ್ಭವ (ಲಿಂಗರೂಪದಿಂದ ಅವತರಿಸಿದ) ಲೀಲೆಯು ಇಪ್ಪತ್ತೈದನೆಯದು. ಲಿಂಗಪುರಾಣದ ಪೂರ್ವಭಾಗದ ಎಪ್ಪತ್ತಾರನೆ ಅಧ್ಯಾಯದಲ್ಲಿ ಪರಮಾತ್ಮನ ಎಲ್ಲ ಲೀಲಾವಿಗ್ರಹಗಳನ್ನು ಸ್ಥಾಪಿಸುವ ಹಾಗೂ ಪೂಜಿಸುವ ವಿಧಾನವು ವಿಸ್ತಾರವಾಗಿ ಹೇಳಲ್ಪಟ್ಟಿದೆ ಆದರೂ ಪರಮಾತ್ಮನನ್ನು ಲಿಂಗರೂಪದಲ್ಲಿ ಧರಿಸುವ ಪೂಜಿಸುವ ರೂಢಿಯೇ ಅಧಿಕವಾಗಿದೆ. ಲಿಂಗಸ್ವರೂಪ ಪರಶಿವನ ನಿರ್ಗುಣ ನಿರಾಕಾರದ ಪ್ರತೀಕವಾದ ಕಾರಣ ಲಿಂಗಪೂಜೆಯೇ ಪ್ರಶಸ್ತವಾದದ್ದು, ಅಂತೆಯೇ ಸಕಲ ದೋಷಗಳ ನಿವೃತ್ತಿಗಾಗಿ ಉತ್ಕೃಷ್ಟ ಪುಣ್ಯದ ಪ್ರಾಪ್ತಿಗಾಗಿ ಪರಮಾತ್ಮನ ನಿರ್ಗುಣ ನಿರಾಕಾರದ ಪ್ರತೀಕವಾದ ಲಿಂಗವನ್ನು ದೇಹದ ಮೇಲೆ ಧರಿಸಬೇಕೆಂಬ ಆಶಯದಿಂದ ''ಲಿಂಗಸ್ಯ ಧಾರಣಂ ಪುಣ್ಯಃ ಸರ್ವ ಪಾಪ ಪ್ರಣಾಶನಂ'' ಎಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

**ಲಿಂಗಸಂಬಂಧದಿಂದ ಭೂಮಿಪಾವನ :**

ಭೂಮಿಗೆ ಲಿಂಗಧರಿಸುವದೊಂದು ಪ್ರಾಚೀನ ಶೈವ ಸಂಸ್ಕೃತಿಯುಂಟು. ಲಿಂಗಸಂಬಂಧವನ್ನು ಹೊಂದಿದ ಆ ಪ್ರದೇಶಗಳು ಇಂದಿಗೂ ಕ್ಷೇತ್ರಗಳೆಂದು ಕರೆಯಿಸಿಕೊಳ್ಳುತ್ತವೆ. ಸೋಮನಾಥನಿಂದ ಸೌರಾಷ್ಟ್ರ, ಮಲ್ಲಿಕಾರ್ಜುನನಿಂದ ಶ್ರೀಶೈಲ, ಮಹಾಕಾಲನಿಂದ ಉಜ್ಜಯಿನೀ, ಓಂಕಾರೇಶ್ವರನಿಂದ ಅಮಲೇಶ್ವರ, ವೈದ್ಯನಾಥನಿಂದ ಪರಳಿ, ಭೀಮಶಂಕರನಿಂದ ಡಾಕಿನಿ, ರಾಮೇಶ್ವರನಿಂದ ಸೇತುಬಂಧ, ನಾಗೇಶನಿಂದ ದಾರುಕಾವನ, ವಿಶ್ವೇಶ್ವರನಿಂದ ವಾರಾಣಸಿ, ತ್ರ್ಯಂಬಕನಿಂದ ಗೌತಮೀತಟ,

ಕೇದಾರೇಶ್ವರನಿಂದ ಹಿಮಾಲಯ, ಘಶೃಣೇಶ್ವರನಿಂದ ಶಿವಾಲಯ, ಅಮರನಾಥನಿಂದ ಕಾಶ್ಮೀರ, ಪೃಥ್ವಿಲಿಂಗದಿಂದ ಶಿವಕಾಂಚಿ, ಜಲಲಿಂಗದಿಂದ ಜಂಬುನಾಥ, ತೇಜೋಲಿಂಗ ದಿಂದ ಅರುಣಾಚಲ, ವಾಯುಲಿಂಗದಿಂದ ಕಾಳಹಸ್ತಿ ಮತ್ತು ಆಕಾಶಲಿಂಗದಿಂದ ಚಿದಂಬರ ಹೀಗೆ ಅನಂತ ಶಿವಕ್ಷೇತ್ರಗಳು ಭಾರತದಲ್ಲಿ ಇರುವವಷ್ಟೇ ಅಲ್ಲ, ವಿದೇಶ ಗಳಲ್ಲಿಯೂ ಶಿವಕ್ಷೇತ್ರಗಳಿರುವದಾಗಿ ಇತಿಹಾಸ ಪ್ರಮಾಣವಿದೆ.

ಈ ಕ್ಷೇತ್ರಗಳಲ್ಲಿರುವ ಶಿವಲಿಂಗ ದರ್ಶನಕ್ಕಾಗಿ ಲಕ್ಷಾಂತರ ಜನರು ಇಂದಿಗೂ ಯಾತ್ರೆಗೈಯ್ಯುತ್ತಲಿದ್ದಾರೆ. ಈ ಜ್ಯೋತಿರ್ಲಿಂಗಗಳ ದರ್ಶನದಿಂದ ಸಪ್ತ ಜನ್ಮಗಳ ಪಾಪಗಳು ಪರಿಹಾರವಾಗುವವೆಂದು ಋಷಿಗಳ ಅನುಭವದ ನುಡಿಯುಂಟು. ಲಿಂಗದ ಮಹಿಮೆ ಸಾಮಾನ್ಯರಿಗೆ ಹೊಳೆಯದು. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

''ಆವಮತದವರರಿವರಾಗಮವನುಳಿದು ಪರಿ ।
ಭಾವಿಸಲು ಸಕಲ ಜಗದಾದಿ ಲಿಂಗವನು ॥'' (ಕೈ.ಪ. ೪–೩೪)

ಎಂಬುದಾಗಿ ಪ್ರತಿಪಾದಿಸಿದ್ದಾರೆ. ಲಿಂಗಾಷ್ಟಕದ ನುಡಿಯಲ್ಲಿಯೇ ಲಿಂಗದ ಮಹಿಮೆ ಯನ್ನು ಕೇಳುವದಾದರೆ ಇಗೋ ಕೇಳಿ–

''ಜನ್ಮಜದುಃಖವಿನಾಶಕಲಿಂಗಂ,
ಕಾಮದಹಂಕರುಣಾಕರಲಿಂಗಂ,
ರಾವಣದರ್ಪನಿವಾರಕಲಿಂಗಂ,
ದಕ್ಷಕುಯಜ್ಞವಿನಾಶಕಲಿಂಗಂ,
ದಿನಕರಕೋಟಿವಿಭಾಸುರಲಿಂಗಂ,
ಸರ್ವಸಮುದ್ಭವ ಕಾರಣಲಿಂಗಂ,
ಸಂಚಿತಪಾಪವಿನಾಶಕಲಿಂಗಂ,
ಅಷ್ಟದರಿದ್ರವಿನಾಶಕಲಿಂಗಂ,
ಕೇಳಿದಿರಾ ಲಿಂಗಮಹಿಮೆಯನ್ನು ! ಅರಿವು ಮೂಡಿತೇ ಮನದಲ್ಲಿ !

ದೇಹವೇ ದೇವಾಲಯ :

ಭೂಮಿಯನ್ನು ಪಾವನ ಕ್ಷೇತ್ರವನ್ನಾಗಿ ಮಾಡಿದ ಆ ಲಿಂಗ ನಿಮ್ಮ ದೇಹದ ಮೇಲೆ ಬಂದರೆ ದೇಹವು ದೇವಾಲಯವಾಗುವದಿಲ್ಲವೇ ? ನಿಜವಾಗಿಯೂ ಲಿಂಗಧಾರಿಯಾದ ಲಿಂಗಭಕ್ತನ ದೇಹವು ಸುಳಿದಾಡುವ ದೇವಾಲಯವಿದ್ದಂತೆ. ತನ್ನ ದೇಹವನ್ನೇ ದೇವಾಲಯವನ್ನು ಮಾಡಿಕೊಂಡವನಿಗೆ ಅನ್ಯ ದೇವಾಲಯಗಳಿಗೆ ಹೋಗುವ ಪ್ರಸಂಗವಾದರೂ ಏಕೆ ಬಂದೀತು ? ವೀರಶೈವ ಆಚಾರ್ಯರಾದ ಜಾತವೇದಮುನಿ ಗಳಿಂದ ಇಷ್ಟಲಿಂಗ ದೀಕ್ಷೆಯನ್ನು ಹೊಂದಿ ತನ್ನ ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಂಡ ಮಹಾ ಅನುಭಾವಿ ಬಸವಣ್ಣನವರು–

''ಉಳ್ಳವರು ಶಿವಾಲಯವ ಮಾಡುವರು. ನಾನೇನು ಮಾಡುವೆ ?
ಬಡವನಯ್ಯಾ. ಎನ್ನ ಕಾಲೇ ಕಂಭ, ದೇಹವೇ ದೇಗುಲ,

ಶಿರ ಹೊನ್ನ ಕಳಸವಯ್ಯ. ಕೂಡಲಸಂಗಮದೇವ ಕೇಳಯ್ಯಾ :
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲಾ !

ಹೀಗೆ ಜಗತ್ತಿಗೆ ಅಮರ ಸಂದೇಶವನ್ನಿತ್ತಿದ್ದಾರೆ. ಇದೇ ಪ್ರಕಾರ–

''ಕಾಲೇ ಕಂಭಗಳಾದವೆನ್ನ ! ದೇಹವೇ ದೇಗುಲವಾಯಿತ್ತಯ್ಯಾ !
ಎನ್ನ ನಾಲಿಗೆಯೇ ಘಂಟೆ, ಶಿರ ಸುವರ್ಣದ ಕಳಶ–ಇದೇನಯ್ಯಾ?
ಶಿರವೇ ಲಿಂಗಕ್ಕೆ ಸಿಂಹಾಸನವಾಗಿದ್ದಿತಯ್ಯಾ. ಗುಹೇಶ್ವರ,
ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ ಪಲ್ಲಟವಾಗದಂತಿದ್ದೆನಯ್ಯಾ ॥

ಎಂಬ ಶ್ರೀ ಪ್ರಭುದೇವರ ಅನುಭಾವ ವಚನದಲ್ಲಿಯೂ ಅದನ್ನೇ ಕಾಣುತ್ತೇವೆ. ಆಚಾರ್ಯರ ಆದೇಶದಂತೆ ನಡೆದುಕೊಂಡ ಪ್ರತಿಯೊಬ್ಬ ಸಾಧಕನಿಗೆ ಬರಬಹುದಾದ ಅನುಭವವೇ ಇದು. ''ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ'' (ಗೀತಾ ೧೩–೧) ಎಂಬ ಗೀತಾ ಸಂದೇಶವಾದರೂ ದೇಹವನ್ನೇ ಕ್ಷೇತ್ರವನ್ನಾಗಿ ಮಾಡಿಕೊಳ್ಳಲು ಆದೇಶವಿತ್ತಿದೆ.

ವೀರಶೈವರಿಗೆ ಪ್ರಾಪ್ತವಾದ ಈ ಲಿಂಗಧಾರಣ ಸೌಭಾಗ್ಯವು ಅವರ ಅನೇಕ ಜನ್ಮಗಳ ಪುಣ್ಯವಿಶೇಷವೆಂದೇ ಭಾವಿಸಬೇಕು. ಲಿಂಗಧಾರಿಯ ಭಾವವು ಪರಿಶುದ್ಧವಾದ ಕಾರಣ ಅವನು ಕಾಮ–ಕ್ರೋಧಾದಿಗಳಿಂದ ನಿರ್ಮುಕ್ತನಾಗಿ ಸಕಲ ಪಾಪಗಳನ್ನು ಕಳೆದುಕೊಂಡು ಪುಣ್ಯಪುಂಜನಾಗುತ್ತಾನೆ.

ಲಿಂಗ ತನವಿಂಗೆ ಶೃಂಗಾರವಪ್ಪ ತೆರನಾವುದೆಂದೊಡೆ :
ಕಾಮ–ಕ್ರೋಧ ಲೋಭ ಮೋಹಾದಿಗಳಲ್ಲಿ ತೆರಪುಗೊಡದಿಪ್ಪುದು.
ಲಿಂಗವೇ ಅಂಗವಾಗಿ ಧ್ಯಾನ ಧಾರಣ ನಿಜಸಮಾಧಿ ನಿವಾಸನಾಗಿ,
ನಿಶ್ಚಯ ನಿಜತತ್ತ್ವವಾಗಿ ನಿಂದುದೇ ಆಭರಣವೆಂದನಂಬಿಗ ಚೌಡಯ್ಯಾ''

ಶ್ರೀ ಅಂಬಿಗ ಚೌಡಯ್ಯನು ಲಿಂಗದೇಹಿಗೆ ಕಾಮ–ಕ್ರೋಧಾದಿ ಸಾಹಿತ್ಯವೇ ಆಭರಣವೆಂಬುದಾಗಿ ಪ್ರತಿಪಾದಿಸಿ ಲಿಂಗಧಾರಿಯ ಮಹತಿಯನ್ನು ಕೊಂಡಾಡಿದ್ದಾನೆ. ''ಕೋಪಿ ಮಜ್ಜನವನೆರೆದರೆ ರಕ್ತದ ಧಾರೆ'' ಎಂಬುದಾಗಿ ಅಕ್ಕನಾದರೂ ಲಿಂಗಧಾರಿಯು ಕೋಪಿಷ್ಠನಾಗಿರಬಾರದೆಂದು ಬಹುಮಾರ್ಮಿಕವಾಗಿ ತಿಳಿಯಪಡಿಸಿದ್ದಾಳೆ. ಕಾಮ–ಕ್ರೋಧ–ಲೋಭಗಳೇ ಪಾಪಕ್ಕೆ ಮೂಲ, ನರಕದ ಮಹಾದ್ವಾರಗಳು. ಅವುಗಳಿಂದ ಮುಕ್ತನಾಗಲು ಲಿಂಗಧಾರಣೆ ಹಾಗೂ ಲಿಂಗಪೂಜೆಗಳು ಸುಲಭೋಪಾಯಗಳು. ಅಂತೆಯೇ ಲಿಂಗಧಾರಣೆಯು ಪುಣ್ಯದಾಯಕವೂ ಪಾಪಪ್ರಣಾಶಕವೂ ಆಗಿದೆ.

### ಲಿಂಗಪೂಜಕ ಮಹರ್ಷಿಗಳು :

ಈ ಲಿಂಗದ ಮಹತಿಯನ್ನರಿತ ಆಗಮಶಾಸ್ತ್ರವಿಶಾರದರಾದ ಅನೇಕ ಮಹರ್ಷಿಗಳು ಲಿಂಗಧಾರಿಗಳಾಗಿ ಲಿಂಗಪೂಜೆಯನ್ನು ಗೈದಿದ್ದಾರೆ. ''ವಸಿಷ್ಠ ಕುಂಭೋದ್ಭವ ಗೌತಮಾದಿ ಮುನೀಂದ್ರವಂದ್ಯಾಯ ಮುನೀಶ್ವರಾಯ'' ಎಂಬ ಪಂಚಾಕ್ಷರ ಸ್ತುತಿಯಲ್ಲಿ ಲಿಂಗಧಾರಿಗಳಾಗಿ ಲಿಂಗಪೂಜೆಯನ್ನು ಗೈದ ಮಹರ್ಷಿಗಳ ಹೆಸರುಗಳು

ಉಲ್ಲೇಖಿಸಲ್ಪಟ್ಟಿವೆ. ಶ್ರೀಮರಿತೋಂಟದಾರ್ಯರು ''ವೀರಶೈವಾನಂದ ಚಂದ್ರಿಕೆ''ಯ ವಾದ ಕಾಂಡದ ಇಪ್ಪತ್ತನಾಲ್ಕನೇ ಪ್ರಕರಣ ಪುಟ ೪೫೯ರಲ್ಲಿ–

''ನೀಲ, ಮಹೇಶ್ವರ, ಘಂಟಾಸಿದ್ಧ, ಸಾರಂಗ, ವೃದ್ಧ ಅಗಸ್ತ್ಯ, ತ್ರಿಶಿಖ, ಅಷ್ಟ ಜಟಾ, ಪಂಚವರ್ಣಕ ಮತ್ತು ಸಿದ್ಧಶಾಸನ ಇವರು ರೇಣುಕಾಚಾರ್ಯರ ಶಿಷ್ಯಪರಂಪರೆಯಲ್ಲಿ ಬರುವ ಮಹರ್ಷಿಗಳೆಂದೂ,

ಚಾಳವಾಂಡ, ಮಹಾತಪಾ, ಜ್ಯೋತಿರ್ಮೂರ್ತಿ, ಚಿಕ್ಕ, ವ್ಯಾಘ್ರಕಂಥ, ಬೃಹದ್ವಧ, ನಾರಕಂಥ, ಮತ್ಸ್ಯಕಂಥ, ಏಕಾದಶಶಿಖ, ಮಲ್ಲಿಕಾರ್ಜುನ ಇವರುಗಳು ದಾರುಕಾಚಾರ್ಯರ ಶಿಷ್ಯಪರಂಪರೆಯಲ್ಲಿ ಬರುವ ಮಹರ್ಷಿಗಳೆಂದೂ ಹೀಗೆಯೇ ಉಳಿದ ಆಚಾರ್ಯರ ಶಿಷ್ಯಪರಂಪರೆಯಲ್ಲಿ ಬರುವ ಅನೇಕ ಋಷಿಗಳ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಈ ತಮ್ಮ ಉಲ್ಲೇಖನಕ್ಕೆ ಆಗಮಗಳೇ ಪ್ರಮಾಣವೆಂಬುದಾಗಿಯೂ ಸ್ಪಷ್ಟಪಡಿಸಿದ್ದಾರೆ. ಅಂದ ಬಳಿಕ ಇವರೆಲ್ಲರೂ ಲಿಂಗದೀಕ್ಷೆಯನ್ನು ಹೊಂದಿ ಇಷ್ಟ ಲಿಂಗಧಾರಿಗಳಾಗಿ ಇಷ್ಟಲಿಂಗ ಪೂಜಕರಾಗಿದ್ದರೆಂಬುದು ತಿಳಿದುಬರುತ್ತದೆ. ಈ ಎಲ್ಲ ಮಹರ್ಷಿಗಳ ಚರಿತ್ರೆಗಳು ಆಕರ ಗ್ರಂಥಗಳಾದ ಪುರಾಣಗಳಲ್ಲಿ ಇರಲೇಬೇಕು ಅಂದಾಗ ಈ ಇಷ್ಟಲಿಂಗಧಾರಣೆಯ ವೀರಶೈವ ಸಿದ್ಧಾಂತವು ಎಷ್ಟು ಪ್ರಾಚೀನವಾದದ್ದೆಂಬುದು ಐತಿಹಾಸಿಕ ದೃಷ್ಟಿಕೋನದವರಿಗೆ ಸುಸ್ಪಷ್ಟವಾಗುವದು.

ಇಂತಹ ಪರಾತ್ಪರವಾದ ಲಿಂಗದ ಧಾರಣೆಯು ಬಾಹ್ಯವೆಂತಲೂ ಅಭ್ಯಂತರವೆಂತಲೂ ಎರಡು ವಿಧವಾಗಿದೆ ಎಂಬುದಾಗಿ ಶ್ರೀ ಜಗದ್ಗುರು ರೇಣುಕರು ಆದೇಶವಿತ್ತಿದ್ದಾರೆ. ಮನುಷ್ಯನ ಅಂತರಂಗದ ಪಾವಿತ್ರ್ಯಕ್ಕೆ ಅಂತರ್ಲಿಂಗಧಾರಣೆ ಮತ್ತು ಬಹಿರಂಗ ಪಾವಿತ್ರ್ಯಕ್ಕೆ ಬಹಿರ್ಲಿಂಗ ಧಾರಣೆಗಳು ಅತ್ಯಾವಶ್ಯಕವಾಗಿವೆ. ಈ ಉಭಯ ವಿಧ ಲಿಂಗಧಾರಣೆಯಿಂದ ಮನುಷ್ಯನ ಸಾಧನೆಯು ಪರಿಪೂರ್ಣವಾಗುವದಲ್ಲದೆ, ಸಕಲ ಮನೋರಥಗಳೂ ಸಿದ್ಧಿಸುವವು ಕಾರಣ, ಪ್ರತಿಯೊಬ್ಬ ವೀರಶೈವನು ಬಹಿರ್ಲಿಂಗ ಧಾರಿಯೂ ಅಂತರ್ಲಿಂಗಾನುಸಂಧಾನಿಯೂ ಆಗಿರಬೇಕೆಂಬುದೇ ಪೂಜ್ಯಪಾದರ ಆಶಯವಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ಆಗಸ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ಆಶೀರ್ವಚನ-೫

ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವಕಾರಣಂ ।
ಯತ್ತಸ್ಯ ಧಾರಣಂ ಚಿತ್ತೇ ತದಾಂತರಮುದಾಹೃತಂ (ಸಿ. ಶಿ. ೬.೩೦)

ಸರ್ವಕಾರಣವೂ, ಚಿದ್ರೂಪವೂ, ಶಿವಸ್ವರೂಪವೂ ಆದ ಶ್ರೇಷ್ಠಲಿಂಗವನ್ನು ಚಿತ್ತದಲ್ಲಿ ಚಿಂತಿಸುವದೇ ಅಂತರ್ಲಿಂಗಧಾರಣೆ ಎನಿಸುವುದು.

ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಂ ।
ನಿರಸ್ತವಿಶ್ವಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಂ

ಸತ್ತಾನಂದ ಪರಿಸ್ಫೂರ್ತಿ–ಸಮುಲ್ಲಾಸಕಲಾಮಯಂ ।
ಅಪ್ರಮೇಯಮನಿರ್ದೇಶ್ಯಂ ಮುಮುಕ್ಷುಭಿಕರುಪಾಸಿತಂ

ಪರಂ ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಂ ।
ತದೇವ ಸರ್ವಭೂತಾನಾಮಂತಸ್ತ್ರಿಸ್ಥಾನಗೋಚರಂ (ಸಿ. ಶಿ. ೬.೩೧–೩೩)

ಪರಬ್ರಹ್ಮವೆಂದು ಕರೆಯಿಸಿಕೊಳ್ಳುವ ಮಹಾಲಿಂಗವು ಸರ್ವಶ್ರೇಷ್ಠವಾದ ತತ್ತ್ವವು. ಅದೇ ವಿಶ್ವಕ್ಕೆ ಕಾರಣೀಭೂತವಾದದ್ದು. ವಿಶ್ವಕ್ಕೆ ಕಾರಣವಾದರೂ ವಿಶ್ವದ ಕಾಲುಷ್ಯಕ್ಕೆ ಅಂಟಿಕೊಂಡಿಲ್ಲ. ಅಂತೆಯೇ ಅದು ನಿರಾಕಾರವೂ ನಿರ್ವಿಕಲ್ಪವೂ ಆಗಿದೆ. ಸಚ್ಚಿದಾನಂದಗಳ ಸಮುಲ್ಲಾಸರೂಪವಾದ ಕಲಾಶಕ್ತಿಯಿಂದ ಯುಕ್ತವಾಗಿದೆ. ಬಾಹ್ಯ ಪ್ರಮಾಣಗಳಿಗೆ ಅಗಮ್ಯವೂ ಅನಿರ್ದೇಶವೂ ಆಗಿದೆ. ಆದರೂ ಮುಮುಕ್ಷುಗಳಿಂದ ಉಪಾಸಿಸಲರ್ಹವಾಗಿದೆ. ಹೀಗೆ ಪ್ರಪಂಚಾತೀತವೂ ಅವ್ಯಯವೂ ಆದ ಆ ಮಹಾಲಿಂಗವೇ ಸಾಧಕರ ಅಂತರಂಗದ ಮೂರು ಮುಖ್ಯ ಕೇಂದ್ರಗಳಲ್ಲಿ ಭಾವಗಮ್ಯವಾಗಿ ತೋರುವದು.

ಮೂಲಾಧಾರೇಚ ಹೃದಯೇ ಭ್ರೂಮಧ್ಯೇ ಸರ್ವಯೋಗಿನಾಂ ।
ಜ್ಯೋತಿರ್ಲಿಂಗಂ ಸದಾಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ (ಸಿ. ಶಿ. ೬.೩೪)

ನಿಗಮಾಗಮಗಳಲ್ಲಿ ಬ್ರಹ್ಮವೆಂದು ಕರೆಯಿಸಿಕೊಳ್ಳುವ ಆ ಜ್ಯೋತಿರ್ಲಿಂಗವು ಸರ್ವಯೋಗಿಗಳ ಮೂಲಾಧಾರ, ಹೃದಯ ಮತ್ತು ಭ್ರೂಮಧ್ಯಗಳೆಂಬ ಮುಖ್ಯವಾದ ಮೂರು ಕೇಂದ್ರಗಳಲ್ಲಿ ಯಾವಾಗಲೂ ಪ್ರಕಾಶಮಾನವಾಗಿರುತ್ತದೆ.

ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮಸನಾತನಂ ।
ಉಪಾಸನಾರ್ಥಮಂತಃಸ್ಥಂ ಪರಿಚ್ಛಿನ್ನಂ ಸ್ವಮಾಯಯಾ (ಸಿ. ಶಿ. ೬.೩೫)

ಅಪರಿಚ್ಛಿನ್ನವೂ, ಅವ್ಯಕ್ತವೂ, ಸನಾತನವೂ ಬ್ರಹ್ಮವೆಂದು ಕರೆಯಿಸಿಕೊಳ್ಳುವ ಆ ಲಿಂಗತತ್ತ್ವವು ಉಪಾಸನೆಯ ಅನುಕೂಲತೆಗಾಗಿ ಅಂತರಂಗದ ಮೂರು ಸ್ಥಾನಗಳಲ್ಲಿ ತನ್ನ ಮಾಯಾಶಕ್ತಿಯಿಂದ ಪರಿಚ್ಛಿನ್ನಗೊಂಡಿದೆ.

**ಅಂತರ್ಲಿಂಗದ ಸೂಕ್ಷ್ಮ ಸ್ವರೂಪ :**

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅತಿ ಸೂಕ್ಷ್ಮವೂ, ಯೋಗಾಭ್ಯಾಸ ಗಮ್ಯವೂ ಆದ ಅಂತರ್ಲಿಂಗದ ಸ್ವರೂಪವನ್ನಿಲ್ಲಿ ವಿವರಿಸಿದ್ದಾರೆ. ಪ್ರತಿಯೊಂದು ಸ್ಥೂಲದ ಉತ್ಪತ್ತಿಗೆ ಸೂಕ್ಷ್ಮವೇ ಮೂಲಕಾರಣವಾಗಿರುತ್ತದೆ. ಶಿವಾದಿ ಭೂಮ್ಯಂತ ಗಳಾದ ಮೂವತ್ತಾರು ತತ್ತ್ವಗಳು ಅವರೋಹಣ ಕ್ರಮದಲ್ಲಿ ಸ್ಥೂಲ-ಸ್ಥೂಲಗಳಾಗಿ ಬರುತ್ತವೆ. ಮುಂದೆ ಆರೋಹಣ ಕ್ರಮದಲ್ಲಿ ವಿಚಾರಿಸುತ್ತ ನಡೆದರೆ ಸೂಕ್ಷ್ಮ-ಸೂಕ್ಷ್ಮ ತತ್ತ್ವಗಳ ಉಪಲಬ್ಧಿಯಾಗುತ್ತದೆ. ಮೂವತ್ತಾರು ತತ್ತ್ವಗಳಲ್ಲಿ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಪಂಚತನ್ಮಾತ್ರೆಗಳಿಂದ ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿಗಳೆಂಬ ಪಂಚತತ್ತ್ವಗಳ ಉತ್ಪತ್ತಿಯು ವೇದಾಗಮಪ್ರಮಾಣಪ್ರಸಿದ್ಧವಾಗಿದೆ. ಇವುಗಳಲ್ಲಿ ಪೃಥ್ವಿಗಿಂತಲೂ ಜಲವು, ಜಲಕ್ಕಿಂತಲೂ ಅಗ್ನಿಯು, ಅಗ್ನಿಗಿಂತಲೂ ವಾಯು, ವಾಯುವಿಗಿಂತಲೂ ಆಕಾಶವು ಹೀಗೆ ಉತ್ತರೋತ್ತರವಾಗಿ ತತ್ತ್ವಗಳು ಸೂಕ್ಷ್ಮ ಗಳಾಗಿ ಇರುವದು ತಿಳಿದುಬರುತ್ತಿದೆ. ಇದೇ ಪ್ರಕಾರ ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಮನಸ್ಸು, ಅಹಂಕಾರ, ಬುದ್ಧಿ, ಪ್ರಕೃತಿ, ಪುರುಷ, ನಿಯತಿ, ಕಾಲ, ರಾಗ, ವಿದ್ಯಾ, ಕಲಾ, ಮಾಯಾ, ಶುದ್ಧ ವಿದ್ಯಾ, ಈಶ್ವರ, ಸದಾಶಿವ, ಶಕ್ತಿ ಮತ್ತು ಶಿವ ಎಂಬ ತತ್ತ್ವಗಳು ಉತ್ತರೋತ್ತರ ಸೂಕ್ಷ್ಮಾತಿಸೂಕ್ಷ್ಮಗಳಾಗುತ್ತ ಹೋಗುತ್ತವೆ. ಈ ಮೂವತ್ತಾರು ತತ್ತ್ವಗಳಲ್ಲಿ ಅತಿ ಸೂಕ್ಷ್ಮವಾದ ತತ್ತ್ವವೇ ಶಿವತತ್ತ್ವವು. ಇದಕ್ಕಿಂತಲೂ ಸೂಕ್ಷ್ಮಾತಿಸೂಕ್ಷ್ಮವಾದದ್ದು ಚಿಚ್ಛಕ್ತಿವಿಶಿಷ್ಟವಾದ ಪರಶಿವ ತತ್ತ್ವವು. ಎಲ್ಲ ಜೀವಿಗಳ ಆತ್ಮವೇ ಇದು. ಈ ಪರಮ ತತ್ತ್ವದ ಅರಿವಿಲ್ಲದ ಕಾರಣ ಜೀವಿಗಳು ಜನನ-ಮರಣ ಸಂಸಾರದಲ್ಲಿ ತಿರುಗುತ್ತಿರುತ್ತಾರೆ. ಇದರ ಅರಿವೆ ಮುಕ್ತಿಗೆ ಮೂಲವು. ಜಗನ್ಮೂಲ ಕಾರಣವೂ ಪರಶಿವಾಭಿದವೂ ಆದ ಆ ತತ್ತ್ವವೇ ಅಂತರ್ಲಿಂಗವು. ಅದರ ಚಿಂತನವೇ ಅಂತರ್ಲಿಂಗ ಧಾರಣೆಯು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅದರ ಸ್ವರೂಪವನ್ನು ಹೀಗೆ ವರ್ಣಿಸಿದ್ದಾರೆ-''ಚಿದ್ರೂಪಂ'' ಅದೊಂದು ಮಹಾ ಬೆಳಗು, ಉಪಾಧಿ ರಹಿತವಾದ ಅಖಂಡ ಬೆಳಗು. ''ಯದ್ಭಾಸಾ ಭಾಸತೇ ವಿಶ್ವಂ'' ಸೂರ್ಯ ನಿಗೂ ಬೆಳಕನ್ನೀಯುವ ಚಿತ್ಸೂರ್ಯವದು. ಅದರ ಪ್ರಕಾಶವನ್ನು ಭೌತಿಕ ದೃಷ್ಟಿಯಿಂದ ನೋಡಲಾಗುವದೂ ಇಲ್ಲ, ವಾಣಿಯಿಂದ ವರ್ಣಿಸಲೂ ಸಾಧ್ಯವಿಲ್ಲ ಅಂತೆಯೇ.

''ಮಾತು ಮನಂಗಳಿಂದತ್ತತ್ತ ಮೀರಿದ ಸಾತಿಶಯದ ನಿರುಪಾಧಿಕ ನಿರ್ಮಲ ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ'' ಎಂದಿದ್ದಾರೆ. ಆ ಬೆಳಗನು ಒಳಗಣ್ಣಿನಿಂದ ಕಂಡ ನಿಜಾನುಭವಿ ನಿಜಗುಣ ಶಿವಯೋಗಿಗಳು.

ಅದು ಜಗತ್ತಿಗೆ ಮೂಲಕಾರಣವಾಗಿದ್ದರೂ ಜಗತ್ತಿನ ಕಾಲುಷ್ಯ ಅದನ್ನು ಸೋಂಕಿಸ ಲಾರದು. ಆದ್ದರಿಂದ ''ನಿರಸ್ತ ವಿಶ್ವಕಾಲುಷ್ಯಂ'' ಎಂದಿರುವರು. ಪಂಚತತ್ತ್ವಗಳ ಲ್ಲೊಂದಾದ ಆಕಾಶವೇ ಕಲುಷಿತವಾಗಲಾರದೆಂದ ಬಳಿಕ ಪರಶಿವತತ್ತ್ವವು ಕಲುಷಿತ ವಾದೀತೆ ? ಅಂತೆಯೇ ''ಆಕಾಶವತ್ ಸರ್ವಗತಶ್ಚ ನಿತ್ಯಃ'' ಎಂಬುದಾಗಿ ಜನ ಸಾಮಾನ್ಯರಿಗೆ ಅನುಭವಕ್ಕೆ ಬರುವ ರೀತಿಯಲ್ಲಿ ಶ್ರುತಿಮಾತೆಯಾದರೂ ಉಪದೇಶ

ವಿತ್ತಿದೆ. ಇದು ನಿರ್ಗುಣ ನಿರಾಕಾರವಾಗಿರುವುದರಿಂದ ''ನಿಷ್ಕಲಂ'' ಮತ್ತು ''ನಿರ್ವಿಕಲ್ಪಕಂ''ವೆಂತಲೂ ಕರೆಯಲ್ಪಟ್ಟಿದೆ. ನಿರ್ಗುಣ ನಿರಾಕಾರವಾಗಿದ್ದರೂ ಈ ಪರ ಶಿವತ್ತ್ವವು ಅದ್ವೈತ ವೇದಾಂತಿಗಳು ಅಂಗೀಕರಿಸಿರುವ ಬ್ರಹ್ಮದಂತೆ ನಿರ್ವಿಶೇಷವಾದದ್ದಲ್ಲ. ಆದರೆ ಸಚ್ಚಿದಾನಂದ ಸ್ವರೂಪಿಣಿಯಾದ ಚಿಚ್ಛಕ್ತಿ ಅಥವಾ ಶಾಂತ್ಯತೀತೋತ್ತರ ನಾಮಕ ಕಲಾಯುಕ್ತವಾಗಿರುವುದರಿಂದ ''ಸತ್ತಾನಂದ ಪರಿಸ್ಫೂರ್ತಿ ಸಮುಲ್ಲಾಸಕಲಾಮಯಂ'' ಎಂದಿದ್ದಾರೆ. ಅಂತೆಯೇ ನಿರ್ಗುಣ ನಿರಾಕಾರವಾದರೂ ಸವಿಶೇಷವೆಂದೇ ಭಾವಿಸಬೇಕು. ಸಚ್ಚಿದಾನಂದ ಸ್ವರೂಪವಾದ ಪರಶಿವಬ್ರಹ್ಮಕ್ಕೆ ''ಅಸ್ಮಿ'', ''ಪ್ರಕಾಶೇ'', ''ನಂದಾಮಿ'' ಅಂದರೆ ನಾನಿದ್ದೇನೆ, ಜ್ಞಾನಿಯಾಗಿದ್ದೇನೆ ಹಾಗೂ ಆನಂದರೂಪವಾಗಿದ್ದೇನೆ ಎಂಬ ಬೋಧೆಯನ್ನು ಬ್ರಹ್ಮದಲ್ಲಿ ಸ್ವೀಕರಿಸಿದರೆ ಬ್ರಹ್ಮದ ನಿರ್ವಿಶೇಷತ್ವವು ಸಿದ್ಧಿಸುವದಿಲ್ಲ. ಆ ಬೋಧವನ್ನು ಒಪ್ಪದಿದ್ದರೆ ಪ್ರಕಾಶಮಾನವಾದ ಸ್ಫಟಿಕಕ್ಕೆ ತನ್ನ ಪ್ರಕಾಶದ ಅರಿವಿಲ್ಲದಿರುವಂತೆ ಪರಶಿವಬ್ರಹ್ಮಕ್ಕೆ ತನ್ನ ಸ್ವರೂಪದ ಬೋಧೆ ಇಲ್ಲದಿರುವದರಿಂದ ಸ್ಫಟಿಕದಂತೆ ಜಡವಾಗಬೇಕಾದೀತು. ಆದ್ದರಿಂದ ಸಚ್ಚಿದಾನಂದ ಸ್ವರೂಪವಾದ ಪರಶಿವಬ್ರಹ್ಮದಲ್ಲಿ ಸಚ್ಚಿದಾನಂದರೂಪಿಣಿಯಾದ ವಿಮರ್ಶಶಕ್ತಿ ಎಂಬ ಪರ್ಯಾಯ ನಾಮವುಳ್ಳ ಶಾಂತ್ಯತೀತೋತ್ತರ ಕಲೆಯನ್ನು ವೀರಶೈವಾಚಾರ್ಯರು ಸ್ವೀಕರಿಸಿದ್ದಾರೆ.

ಸಾಮಾನ್ಯವಾಗಿ ಜಗತ್ತಿನಲ್ಲಿ ಪ್ರಮಾತೃ, ಪ್ರಮಾಣ ಮತ್ತು ಪ್ರಮೇಯಗಳೆಂಬ ತ್ರಿಪುಟಿಗಳಿಂದಲೇ ವ್ಯವಹಾರವಾಗುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಮ್ಯವಾದದ್ದು ಪ್ರಮೇಯವೆನಿಸುವದು. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಪ್ರಮೇಯಗಳ ಜ್ಞಾನಕ್ಕೆ ಕಿವಿ, ಚರ್ಮ, ಕಣ್ಣು, ನಾಲಿಗೆ ಹಾಗೂ ಮೂಗು ಈ ಪ್ರತ್ಯಕ್ಷ ಪ್ರಮಾಣಗಳು ಅಸಾಧಾರಣ ಕಾರಣಗಳಾಗಿರುತ್ತವೆ. ಈ ಪ್ರಮಾಣಗಳು ಶಬ್ದಾದಿಗಳನ್ನರಿತಂತೆ ಕ್ರಮವಾಗಿ ತಮಗೆ ಆಶ್ರಯಗಳಾದ ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ ಮತ್ತು ಆಚಾರಲಿಂಗಗಳನ್ನು ಅರಿಯವು. ಅದರಂತೆ ಇಂದ್ರಿಯಾಧ್ಯಕ್ಷವಾದ ಮಲಿನ ಮನಸ್ಸಾದರೂ ತನ್ನಾಶ್ರಯವಾದ ಮಹಾಲಿಂಗವನ್ನು ತಿಳಿಯಲಾರದು. ಆದ್ದರಿಂದಲೇ ಸಾಮಾನ್ಯವಾಗಿ ''ಅಪ್ರಮೇಯಂ'' ಎಂದಿರುವರು. ಹೀಗೆ ಪ್ರಮಾಣಾಗಮ್ಯವಾಗಿರುವುದರಿಂದಲೇ ''ಅನಿರ್ದೇಶ್ಯ''ವೂ ಆಗಿದೆ. ಅವ್ಯಯವೂ, ಪ್ರಪಂಚಾತೀತವೂ, ಪರಬ್ರಹ್ಮ ಸ್ವರೂಪವೂ ಆದ ಮಹಾಲಿಂಗವು ಸರ್ವರಿಗೂ ಅಗಮ್ಯ-ಅಗೋಚರವೇ ಆಗಿದ್ದ ಪಕ್ಷದಲ್ಲಿ ಶಾಸ್ತ್ರಗಳಲ್ಲಿ ಇದರ ಚರ್ಚೆಯೇ ನಿಷ್ಫಲವಾದೀತೆಂಬುದಾಗಿ ವಿಚಾರಿಸಿ ''ಮುಮುಕ್ಷುಭಿರುಪಾಸಿತಂ'' ಎಂದಿದ್ದಾರೆ.

**ಅಂತರ್ಲಿಂಗಾಭಿವ್ಯಕ್ತಿಯ ಕೇಂದ್ರಗಳು :**

''ಮೋಕ್ತುಮಿಚ್ಛುರ್ಮುಮುಕ್ಷುಃ'' ಎಂಬ ವ್ಯುತ್ಪತ್ತಿಯ ಮೇರೆಗೆ ಮುಕ್ತಿಯ ತೀವ್ರ ಅಪೇಕ್ಷೆಯುಳ್ಳ ಸಾಧಕನಿಗೆ ''ಮುಮುಕ್ಷು''ವೆಂದು ಕರೆದಿರುವರು. ಪ್ರಪಂಚದ ಉಳಿದಾವ ಬಯಕೆ ಇಲ್ಲದ ಆತ್ಮತತ್ವದ ಬಯಕೆಯೇ ಮುಮುಕ್ಷುತ್ವದ ಲಕ್ಷಣವು. ವಿವೇಕ, ವೈರಾಗ್ಯ ಮತ್ತು ಶಮಾದಿಷಟ್ಕ ಸಂಪತ್ತಿಯ ಪ್ರಾಪ್ತಿಯ ನಂತರ ಸಾಧಕನಲ್ಲಿ

ಮೂಡಿಬರುವ ಮಹೋನ್ನತ ಭಾವನೆ ಇದು. ಈ ಭಾವನೆಯುಳ್ಳವನಿಗೆ ಮಾತ್ರ ಪರಶಿವಬ್ರಹ್ಮೋಪಾಸನೆಯು ಸಾಧ್ಯ. ಪರಶಿವಬ್ರಹ್ಮವು ಸರ್ವವ್ಯಾಪಕವಾಗಿದ್ದರೂ ಉಪಾಸಕರಿಗೆ ಮೂಲಾಧಾರ, ಹೃದಯ ಮತ್ತು ಭ್ರೂಮಧ್ಯಗಳೆಂಬ ಮುಖ್ಯ ಕೇಂದ್ರಗಳಲ್ಲಿ ಜ್ಯೋತಿರ್ಲಿಂಗರೂಪವಾಗಿ ಅನುಭವಗಮ್ಯವಾಗುವದು.

ಆಕಾಶಮಂಡಲದಲ್ಲಿಯ ಸೂರ್ಯನು ಮೇಘಗಳಿಂದ ಆವೃತನಾದಾಗ ಅವನ ಪ್ರಖರ ಪ್ರಕಾಶವು ಕಾಣದಿರುವಂತೆ ಶರೀರದ ಮೂಲಾಧಾರಾದಿ ಆಯಾಸ್ಥಾನಗಳಲ್ಲಿಯ ಜ್ಯೋತಿರ್ಲಿಂಗಗಳ ಪ್ರಕಾಶವು ರಜ–ತಮಗಳ ಮಾಲಿನ್ಯದಿಂದ ಆವೃತವಾಗಿರುವುದರಿಂದ ಸಹಜವಾಗಿ ಸರ್ವರಿಗೂ ತೋರಲಾರದು. ಪ್ರಚಂಡ ಮಾರುತವು ಮೋಡಗಳನ್ನು ಚದುರಿಸಿ ಸೂರ್ಯಪ್ರಕಾಶವನ್ನು ಪ್ರಕಟಗೊಳಿಸುವಂತೆ ಯೋಗಸಾಧಕನು ಮಾಡುವ ಪ್ರಾಣಾಯಾಮದಿಂದ ಚಕ್ರಗಳಲ್ಲಿ ಆವೃತವಾದ ಮಾಲಿನ್ಯವು ದೂರಾಗುವುದು. ಅಂತೆಯೇ ''ತತಃಕ್ಷೀಯತೇ ಪ್ರಕಾಶಾವರಣಂ'' (ಯೋ. ಸೂ. ೨–೫೨) ಎಂದಿದ್ದಾರೆ ಮಹರ್ಷಿ ಪತಂಜಲಿಗಳು. ಹೀಗೆ ಪ್ರಾಣಾಯಾಮ ಪುರಃಸರವಾಗಿ ಏಕಾಗ್ರ ಮನಸ್ಸಿನಿಂದ ಮೂಲಾಧಾರಾದಿ ಕೇಂದ್ರಗಳಲ್ಲಿ ಧ್ಯಾನಮಗ್ನರಾದಾಗ ಅಂತರ್ಲಿಂಗದ ಜ್ಯೋತಿಯನ್ನು ಅನುಭವಿಸಲು ಸಾಧ್ಯ.

ಇದರ ಅನುಭವಕ್ಕಾಗಿ ಏಕಾಂತತೆ ಹಾಗೂ ಏಕಾಗ್ರತೆಗಳು ಪರಮಾವಶ್ಯಕಗಳು. ನಿರ್ಜನ ಪ್ರದೇಶದಲ್ಲಿ ಏಕಾಂತತೆ ಪ್ರಾಪ್ತವಾಗಬಹುದು. ಆದರೆ ಏಕಾಗ್ರತೆಗೆ ಮನಸ್ಸಿನ ಸಂಕಲ್ಪವಿಕಲ್ಪಗಳೆಲ್ಲ ಅಡಗಬೇಕಾಗುವವು. ಸಮುದ್ರದ ತೆರೆಗಳಡಗುವದು ಎಷ್ಟು ಕಠಿಣವೋ ಮನದ ಸಂಕಲ್ಪಗಳ ತೊಲಗುವಿಕೆಯು ಅಷ್ಟೇ ಕಠಿಣತರವಾದದ್ದು. ಆದ್ದರಿಂದ ಸುಮ್ಮನೇ ಕುಳಿತುಕೊಳ್ಳುವಷ್ಟು ಕಷ್ಟಕರ ಕೆಲಸ ಮತ್ತೊಂದಿಲ್ಲ. ಒಂದಿಲ್ಲೊಂದು ಕಾರ್ಯ ಮಾಡುತ್ತ ಮನುಷ್ಯ ಬೇಕಾದಷ್ಟು ಸಮಯ ಕಳೆಯಬಹುದು. ಆದರೆ ನಿಮಿಷಾರ್ಧ ಸುಮ್ಮನೇ ಕೂಡ್ರುವುದಾಗದು. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

''ತಡೆವುದಾಗದು ತನಗಗಣಿತ ವಿಷಯದೊ । ಳೆಡೆಯಾಡುವತಿ ಚಪಲತೆಯ ಚಿತ್ತವನು ॥'' (ಕೈ.ಪ.ನೀ. ೬) ಎಂದಿದ್ದಾರೆ.

ಮನದ ನಿಗ್ರಹಕ್ಕಾಗಿ ಆತ್ಮಲಿಂಗದ ಅರಿವಿಗಾಗಿ ಅದೆಷ್ಟು ಜನರು ಪರಿಶ್ರಮಿಸುತ್ತಿದ್ದಾರೆ ? ''ಕಶ್ಚಿತ್ ಧೀರಃ ಪ್ರತ್ಯಗಾತ್ಮಾನ ಮೈಕ್ಷತ್ ವ್ಯಾವೃತ್ತ ಚಕ್ಷುರಮೃತತ್ತ್ವಮಿಚ್ಛನ್'' ''ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತೆ ಸಿದ್ಧಯೇ'' (ಗೀತಾ ೭–೩) ಮುಂತಾದ ಶ್ರುತಿ–ಸ್ಮೃತಿಗಳಲ್ಲಿ ಸಾವಿರಕ್ಕೋ ಲಕ್ಷಕ್ಕೋ ಒಬ್ಬರೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಮನಸ್ಸನ್ನು ಯಾವುದೇ ಚಕ್ರದಲ್ಲಿ ಕೇಂದ್ರೀಕರಿಸಬೇಕಾದರೆ ಮೊದಲು ಆಸನವು ಸುಸ್ಥಿರವಾಗಿರಬೇಕು ಬೆನ್ನುಮೂಳೆಯನ್ನು ಬಗ್ಗಿಸದೇ ನೀಟಾಗಿ ಶಿಲಾ ವಿಗ್ರಹದಂತೆ ನಿಷ್ಕಂಪವಾಗಿ ಕೂಡ್ರಲು ಅಭ್ಯಸಿಸಬೇಕು. ಸ್ಥಿರವಾದ ದೇಹದಲ್ಲಿಯೇ ಮನಸ್ಸಾದರೂ ಸ್ಥಿರಗೊಳ್ಳುವದು. ಹಿಮಾಲಯದಲ್ಲಿ ಧ್ಯಾನಮಗ್ನನಾಗಿ ಕುಳಿತ ಶಿವನ ಸಾಕಾರ ಚಿತ್ರಗಳನ್ನು ಅದೆಷ್ಟೋ ನೋಡುತ್ತೇವೆ. ಆ ಚಿತ್ರ ಜಗತ್ತಿಗೆ ಕೊಡುವ ಸಂದೇಶವೇನು ?

ಅಂತರಂಗದ ಮಂಗಲಮಯವಾದ ಶಿವತತ್ತ್ವವನ್ನು ಅನುಭವಿಸಬೇಕಾದರೆ ನೀವಾದರೂ ಹೀಗೆ ಸಾಧಿಸಬೇಕೆಂಬುದೇ ಅಲ್ಲವೇ ? ತನ್ನ ಸೂಕ್ಷ್ಮ ತತ್ತ್ವದ ಚಿಂತನೆಯ ಪ್ರಾತ್ಯಕ್ಷಿಕ ಪ್ರಯೋಗವನ್ನು ಶಿವನು ತಾನೇ ತೋರಿಸುತ್ತಿದ್ದಾನೆ. ಕಪಿಲ ವಸ್ತುವಿನ (ನೇಪಾಲ) ಮಹಾರಾಜ ಶುದ್ಧೋದನನ ಮಗನಾದ ಸಿದ್ಧಾರ್ಥನು ನಲವತ್ತೆರಡು ವರ್ಷ ಸತತವಾಗಿ ಪ್ರಯತ್ನಿಸಿ ಮನಸ್ಸನ್ನು ಏಕಾಗ್ರಗೊಳಿಸಿದ. ಅದರಿಂದ ಅಂತರಂಗದ ಆ ಜ್ಯೋತಿರ್ಲಿಂಗವನ್ನರಿತ. ಆಗ ಬುದ್ಧನೆಂದೆನಿಸಿಕೊಂಡ.

ಧರ್ಮ, ಸಂಪ್ರದಾಯ, ಜಾತಿ ಮುಂತಾದವುಗಳ ಭೇದಗಳು ಬಹಿರ್ಮುಖವಾದಾಗ ತೋರುವವು. ಆದರೆ ಅಂತರಂಗವನ್ನು ಪ್ರವೇಶಿಸಿದಾಗ ಸರ್ವರಿಗೂ ಆಗುವ ಅನುಭವವೊಂದೇ. ಬಾಹ್ಯದಲ್ಲಿಯ ಕಲಹಗಳೆಲ್ಲ ದೂರವಾಗಬೇಕಾದರೆ ಅಂತರಂಗ ಪ್ರವೃತ್ತಿಯು ಅವಶ್ಯಕ. ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಮತ್ತು ಶಿವಯೋಗಗಳು ಬಹಿರ್ಮುಖನಾದ ಜೀವನನ್ನು ಅಂತರಂಗದತ್ತ ಕರೆದೊಯ್ಯಲು ಪ್ರಯತ್ನಿಸುತ್ತಿವೆ. ಯಾವುದೇ ಮಾರ್ಗದಿಂದ ಮನುಷ್ಯನು ಒಳಗೆ ಪ್ರವೇಶಿಸಿದರೆ ಸಾಕು. ಹೊರಗಿನ ಉಪದ್ರವವೆಲ್ಲ ಶಾಂತವಾಗುವವು. ಆದ್ದರಿಂದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಬಹಿರ್ಲಿಂಗ ಧಾರಣೆಯ ಸ್ವರೂಪವನ್ನು ತಿಳಿಸುವ ಮುನ್ನ ಸಮಸ್ತ ಮಾನವ ಕುಲವನ್ನೇ ಉದ್ಧಾರ ಮಾಡುವ ಉದ್ದೇಶದಿಂದ ಅಂತರ್ಲಿಂಗದ ಸ್ವರೂಪ ಹಾಗೂ ಅದರ ಉಪಾಸನಾ ಪದ್ಧತಿಯನ್ನು ಅಗಸ್ತ್ಯ ಮಹರ್ಷಿಯನ್ನು ಕುರಿತು ಅಪ್ಪಣೆಕೊಡಿಸಿದ್ದಾರೆ.

**ಅಪರಿಚ್ಛಿನ್ನವು ಪರಿಚ್ಛಿನ್ನವಾದ ಕಾರಣ :**

ಅಪರಿಚ್ಛಿನ್ನವೂ ಅವ್ಯಕ್ತವೂ, ಸನಾತನ ಬ್ರಹ್ಮವೆಂದು ಕರೆಯಿಸಿಕೊಳ್ಳುವ ಆ ಲಿಂಗತತ್ತ್ವವು ''ಲಿಂಗಮಧ್ಯೇ ಜಗತ್ ಸರ್ವಂ'' ಎಂಬ ಉಕ್ತಿಯಂತೆ ಜಗತ್ತಿನ ಕಣ–ಕಣಗಳ ಒಳಹೊರಗೂ ತುಂಬಿಕೊಂಡಿರುವಾಗ ಶರೀರದ ಮೂಲಾಧಾರ, ಹೃದಯ ಮತ್ತು ಭ್ರೂಮಧ್ಯಗಳಲ್ಲಿಯೇ ಜ್ಯೋತಿರ್ಲಿಂಗಗಳ ಸಾಕ್ಷಾತ್ಕಾರವಾಗುವದೆಂದು ಹೇಳಿದ್ದರ ತಾತ್ಪರ್ಯವೇನು ? ಆ ಅಖಂಡ ತತ್ತ್ವವು ಹೀಗೆ ಖಂಡವಾಗಿ ತೋರಿದುದರ ಕಾರಣವಾದರೂ ಏನು ? ಎಂಬ ಜಿಜ್ಞಾಸೆಯುಂಟಾದಾಗ ಪೂಜ್ಯಪಾದರು ''ಉಪಾಸನಾರ್ಥಮಂತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಆ ಲಿಂಗತತ್ತ್ವವು ವಾಸ್ತವಿಕವಾಗಿ ಸರ್ವವ್ಯಾಪಕವೇ ಆಗಿದೆ ಆದರೂ ಉಪಾಸನೆ ಮಾಡುವ ನಾವೆಲ್ಲರೂ ''ತದಂಶೋ ಜೀವನಾಮಕಃ'' (ಸಿ.ಶಿ. ೫–೩೪) ಎಂಬ ಪ್ರಮಾಣದಂತೆ ಅವನ ಅಂಶರೂಪರಾಗಿರುವುದರಿಂದ ಚಿಕ್ಕವರಾದ ನಮ್ಮ ಪೂಜಾವಿಧಾನಕ್ಕೆ ಅನುಕೂಲವಾಗುವದಕ್ಕಾಗಿ ಪರಶಿವಲಿಂಗವು ತನ್ನ ಮಾಯಾಶಕ್ತಿಯಿಂದ ಸಣ್ಣವನಾಗಿ ತೋರಿದ್ದಾನೆ. ''ಅಣೋರಣೀಯಾನ್ ಮಹತೋಮಹೀಯಾನ್'' ಅಣುವಿಗಿಂತಲೂ ಅಣು, ಮಹತ್ತಿಗಿಂತಲೂ ಮಹದ್ರೂಪವಲ್ಲವೇ ಆತನದು. ಮಕ್ಕಳ ಪ್ರೇಮಕ್ಕಾಗಿ ತಂದೆ–ತಾಯಿಗಳು ಮಕ್ಕಳಂತೆ ಆಟವಾಡುವುದಿಲ್ಲವೆ ? ಅದರಂತೆ ವ್ಯಾಪಕವಾದ ಲಿಂಗ ತತ್ವವು ತನ್ನ ಮಕ್ಕಳ ಅನುಕೂಲಕ್ಕಾಗಿ ಸಣ್ಣದಾಗಿ ತೋರುತ್ತದೆ.

ಒಂದು ಊರಿನಲ್ಲಿ ಜಿಲ್ಲಾಧಿಕಾರಿಯೋರ್ವನು ಗೃಹಸ್ಥ ಜೀವಿಯಾಗಿ ಜೀವನ ಸಾಗಿಸುತ್ತಲಿದ್ದ. ಬಹು ದಿನಗಳವರೆಗೆ ಮಕ್ಕಳಾಗಲಿಲ್ಲ. ಎಲ್ಲದರ ಇಲ್ಲದಿರುವಿಕೆಯನ್ನು ಸಹನಮಾಡಿಕೊಳ್ಳುವ ಗೃಹಸ್ಥರಿಗೆ ಮಕ್ಕಳಿಲ್ಲದಿರುವಿಕೆಯು ಸಹನೆಯಾಗುವದಿಲ್ಲ ಅದೊಂದಿಲ್ಲದಿದ್ದರೆ ಅವರ ಜೀವನವೇ ಶೂನ್ಯ. ಮುಂದೆಲ್ಲ ಕಾರ್ಗತ್ತಲು. ಅಡಿ ಇಡಲು ಭಯ. ಅಂತೆಯೇ ಆ ಕತ್ತಲನ್ನು ದೂರಮಾಡಲು ಒಂದಾದರೂ ವಂಶದೀಪ ಬೇಕೇ ಬೇಕು. ಸತ್ಪುತ್ರರಿರುವ ಮನೆ ಝಗಝಗಿಸುವ ದೀಪಗಳಿಂದ ಅಲಂಕೃತವಾದಂತೆ. ಮಕ್ಕಳಿಲ್ಲದ ವಿದ್ಯುದ್ದೀಪಗಳಿಂದ ಅಲಂಕೃತವಾದ ಮನೆಯು ಕಾರ್ಗತ್ತಲೆಯ ಕಾರಾಗೃಹ ವಿದ್ದಂತೆ. ಈ ವಂಶದೀಪದ ಅಭಾವದಿಂದ ದಂಪತಿಗಳು ಬಹಳಷ್ಟು ಚಿಂತಾಕ್ರಾಂತ ರಾದರು. ವೈದ್ಯಕೀಯ ಚಿಕಿತ್ಸಾ ಪ್ರಭಾವವೋ ದೇವತಾರಾಧನೆಯ ಫಲವೋ ಅಂತೂ ಹನ್ನೆರಡು ವರ್ಷಗಳ ನಂತರ ಗಂಡು ಸಂತಾನವಾಯಿತು.

ತಂದೆ-ತಾಯಿಗಳಿಗೆ ಹಿಡಿಸಲಾರದಷ್ಟು ಸಂತೋಷ. ಊರಿಗೆಲ್ಲ ಔತಣ. ಸಂತ-ಮಹಾಂತರಿಗೆಲ್ಲ ಆತಿಥ್ಯ. ಅದೊಂದು ಜೀವನದ ನಿತ್ಯೋತ್ಸವ. ಅವರಿಗೆ ಮಗುವು ಬಿದಿಗೆಯ ಚಂದ್ರನಂತೆ ಬೆಳೆಯತೊಡಗಿತು. ಕೈಕಾಲು ಬಿಚ್ಚಿ ಆಡತೊಡಗಿತು ತೊದಲು ನುಡಿಗಳಿಂದ ತಂದೆ-ತಾಯಿಗಳನ್ನು ಮುಗ್ಧಗೊಳಿಸಿತು. ವೇದದ ''ತತ್ತ್ವಮಸಿ'' ಮುಂತಾದ ಮಹಾ ವಾಕ್ಯಗಳನ್ನು ಕೇಳಿ ಮುಮುಕ್ಷುಗಳು ಪರಮಾತ್ಮನೊಂದಿಗೆ ಅಭಿನ್ನತೆಯ ಆನಂದವನ್ನು ಅನುಭವಿಸುವಂತೆ ಗೃಹಸ್ಥರು ಮಕ್ಕಳ ತೊದಲು ನುಡಿಗಳಿಂದ ಆನಂದ ಪಡುತ್ತಾರೆ. ಆ ಪುಟ್ಟ ಮಕ್ಕಳು ದೇವರಿಗಿಂತ ಪ್ರಿಯ ಅವರಿಗೆ.

''ಆಡಿ ಬಾ ನನ ಕಂದ ಅಂಗಾಲ ತೊಳೆದೇನ
ಟೆಂಗೀನಕಾಯಿ ತಿಳಿನೀರ ತಕ್ಕೊಂಡು
ಬಂಗಾರದ ಮುಖವ ತೊಳೆದೇನ''

ಜಾನಪದದ ಈ ಪದ್ಯದಲ್ಲಿ ಮಗುವಿನ ಬಗ್ಗೆ ಇರುವ ತಾಯಿಯ ವಾತ್ಸಲ್ಯವು ಹೇಳಲಸದಳವೇ ? ಕೂಸು ಬೆಳೆದು ಮನೆ ತುಂಬ ಅಡ್ಡಾಡತೊಡಗಿತು. ಮಗುವಿನ ಬಾಯಿ ತುಂಬ ಹಲ್ಲುಗಳು ಬಂದಿವೆ. ಅದು ಆನಂದದಲ್ಲಿ ನಕ್ಕಾಗ ಶರತ್ಕಾಲದ ಬೆಳದಿಂಗಳ ಆನಂದವನ್ನು ಅನುಭವಿಸಿದಂತಾಗುತ್ತಿತ್ತು ದಂಪತಿಗಳಿಗೆ. ಹೆಂಡತಿಯು ಮನೆಗೆಲಸಕ್ಕೆಲ್ಲ ಆಳನ್ನು ನೇಮಿಸಿ ಸದಾ ಮಗುವಿನೊಡನೆ ಆಡುತ್ತ ಸಂತೋಷದಲ್ಲಿ ಕಾಲ ಕಳೆಯುತ್ತಿದ್ದಳು. ಗಂಡನಾದರೋ ಪ್ರತಿ ದಿನ ಎಂಟು ತಾಸು ತನ್ನ ನೌಕರಿಗಾಗಿ ಮನೆಬಿಟ್ಟು ಹೋಗಲೇಬೇಕು. ಮಗುವನ್ನು ಬಿಟ್ಟು ಹೋಗುವ ಮನಸ್ಸಿಲ್ಲ. ಆದರೆ ಅನಿವಾರ್ಯ. ಹೋಗುವಾಗ ಮನೆಯ ಅಂಗಳದವರೆಗೆ ಕೂಸನ್ನು ಮುದ್ದಾಡುತ್ತ ಹೊತ್ತು ತರುತ್ತಿದ್ದ. ಪುನಃ ಹೆಂಡತಿಯ ಕೈಗೊಪ್ಪಿಸಿ ಮನೆ ಮರೆಯಾಗುವವರೆಗೆ ಮರಳಿ ಮರಳಿ ನೋಡುತ್ತ ಮನಸ್ಸಿಲ್ಲದ ಮನಸ್ಸಿನಿಂದ ಹೋಗುತ್ತಿದ್ದ. ಮಗುವನ್ನು ತನ್ನ ಜೊತೆಗೆ ಒಯ್ಯುವದು ಅಸಾಧ್ಯವಾದ ಕಾರಣ, ತನ್ನ ಮನಸ್ಸನ್ನೇ ಮಗುವಿನ ಬಳಿ ಬಿಟ್ಟು ಹೋಗುತ್ತಿದ್ದ. ಎಲ್ಲಿ ಕುಳಿತರೂ ಮಗುವಿನ ಸ್ವಪ್ನವೇ ಅವನಿಗೆ. ಒಮ್ಮೊಮ್ಮೆ ದೇವರಿಗೆ ಶಪಿಸುತ್ತಿದ್ದ-''ಹೇ ದೇವರೇ ನನ್ನನ್ನು ಹೆಣ್ಣಾಗಿ ಹುಟ್ಟಿಸಿದ್ದರೆ ಮಗುವಿನ ಪರಿಪೂರ್ಣ ಆನಂದವನ್ನು ಪಡೆಯಬಹುದಾಗಿತ್ತಲ್ಲಾ'' ಎಂದು.

ಮಗು ಸದಾ ಹಸನ್ಮುಖವಾಗಿರಬೇಕು. ಅದು ಎಂದೂ ಅಳಬಾರದೆಂದು ಹೆಂಡತಿಗೆ ಆದೇಶವಿತ್ತಿದ್ದ. ಅದು ಬೇಡಿದ ಪದಾರ್ಥವನ್ನು ತತ್‌ಕ್ಷಣ ತಂದು ಕೊಡುವುದಾಗಿ ಆದೇಶವಿತ್ತು ತನ್ನ ಸಂಬಳ–ಗಿಂಬಳ (ಲಂಚ) ದ ಹಣವನ್ನೆಲ್ಲ ಹೆಂಡತಿಗೆ ಒಪ್ಪಿಸುತ್ತಿದ್ದ. ಕಂಡದ್ದನ್ನು ಬೇಡುವುದು ಮಗುವಿನ ಸ್ವಭಾವ. ಬೇಡಿದ್ದನ್ನೆಲ್ಲ ಈರ್ವರೂ ಒದಗಿಸುತ್ತಿದ್ದರು. ಸಾಯಂಕಾಲದ ಸಮಯ. ಗಂಡ ಇನ್ನೂ ಆಫೀಸಿನಿಂದ ಬಂದಿಲ್ಲ. ಹೆಂಡತಿ ಮಗುವನ್ನು ಆಡಿಸುತ್ತ ಅಂಗಳದಲ್ಲಿ ನಿಂತಿದ್ದಾಳೆ. ಅಷ್ಟರಲ್ಲಿ ಅಗಸನೋರ್ವನು ತನ್ನ ಕತ್ತೆಯ ಮೇಲೆ ಅರಿವೆಯ ಗಂಟನ್ನು ಇಟ್ಟುಕೊಂಡು ತನ್ನ ಮಗನೊಂದಿಗೆ ತಾನೂ ಕತ್ತೆಯ ಮೇಲೆ ಕುಳಿತು ಹೊರಟಿದ್ದ. ಈ ದೃಶ್ಯವನ್ನು ನೋಡಿತು ಮಗು. ಅದರ ಮನಸ್ಸಿಗೆ ಸಂತೋಷವಾಯಿತು. ತನಗೂ ಅದರ ಮೇಲೆ ಕೂಡ್ರಬೇಕೆನ್ನಿಸಿತು ಅಳುವ ಧ್ವನಿಯಲ್ಲಿಯೇ ಕೇಳಿತು ಅವ್ವಾಽಽಽ! ಅದರ ಮೇಲೆ ಕೂಡ್ರಿಸು ಎಂದು ಮಗು ! ಅದು ಕತ್ತೆ, ಅದರ ಮೇಲೆ ಕೂಡ್ರಬಾರದೆಂದು ಬೇಕಾದಷ್ಟು ತಿಳಿಹೇಳಿದರೂ ಮಗುವಿನ ಅಳು ನಿಲ್ಲಲಿಲ್ಲ. ಬಾಲಹಠ, ಸ್ತ್ರೀಹಠ ಹಾಗೂ ರಾಜಹಠಗಳು ಸಾಮಾನ್ಯವಾದವುಗಳಲ್ಲ. ಅಳುವ ಮಗುವನ್ನು ಸುಮ್ಮನಾಗಿಸಲು ಏನೆಲ್ಲ ಕೊಟ್ಟು, ಸಮಾಧಾನ ಮಾಡಲು ಪ್ರಯತ್ನ ಪಟ್ಟ, ತಾಯಿ ವಿಫಲಳಾದಳು. ಗಂಡ ಬರುವ ವೇಳೆಯಾಯಿತು. ಆತ ಮಗುವಿನ ಅಳುವಿಕೆಯನ್ನು ಎಂದೂ ಕೇಳಿಯೇ ಇಲ್ಲ, ಇನ್ನು ನನ್ನ ಗತಿ ಏನು ? ಎಂದು ಚಿಂತಿಸುತ್ತ ಮಗುವನ್ನು ಒಳಗೆ ಕರೆದುಕೊಂಡು ಬಂದಳು. ಮಗುವಿನ ಬಾಯಿ ಸನಾದಿಯಂತೆ ಊದುತ್ತಲೇ ಇತ್ತು, ಅಷ್ಟರಲ್ಲಿ ಗಂಡ ಬಂದೇಬಿಟ್ಟ. ಮಗುವಿನ ಅಳುವ ಧ್ವನಿ ಕೇಳಿ ಕೆಂಡವಾದ. ಏಕೆ ಅಳುತ್ತಿದೆ ಎಂದು ಗದರಿಸಿದ.

ಹೆಂಡತಿ : ಸ್ವಾಮಿ ! ಈ ಬಾಲಕನ ಬೇಡಿಕೆ ಬಹು ವಿಚಿತ್ರವಾಗಿದೆ. ಮಕ್ಕಳ ಎಲ್ಲ ಬಯಕೆಗಳನ್ನು ಪೂರ್ಣಗೊಳಿಸುವುದು ಯಾರಿಂದಲೂ ಸಾಧ್ಯವಿಲ್ಲ. ಯೋಗ್ಯಾ ಯೋಗ್ಯತೆಯನ್ನು ವಿಚಾರಿಸದೇ ಬೇಡುತ್ತವೆ ಮಕ್ಕಳು. ಇಂದು ಸಾಯಂಕಾಲ ನಾನು ಅಂಗಳದಲ್ಲಿ ಆಡಿಸುತ್ತಿರುವಾಗ ಅಗಸನೋರ್ವನು ಕತ್ತೆಯ ಮೇಲೆ ತನ್ನ ಮಗನೊಂದಿಗೆ ಹೋಗುವದನ್ನು ನೋಡಿತು. ತನಗೂ ಅದು ಬೇಕು ಎಂದು ಅಳತೊಡಗಿದೆ. ನಿಮ್ಮಂತಹ ದೊಡ್ಡ ಅಧಿಕಾರಿಯ ಮಗನನ್ನು ಕತ್ತೆಯ ಮೇಲೆ ಹೇಗೆ ಕೂಡ್ರಿಸುವದು ? ನೀವೇ ಹೇಳಿ.

ಗಂಡ : ಹಾಗಾದರೆ ಈಗ ಏನು ಮಾಡುವದು ?

ಹೆಂಡತಿ : ನನಗೇನು ತಿಳಿಯದು ಸ್ವಾಮಿ ನೀವೇ ಹೇಳಿ.

ಗಂಡ : ನೀನು ಹೋಗಿ ಎಲ್ಲಿಂದಲಾದರೂ ಒಂದು ಕತ್ತೆಯನ್ನು ತೆಗೆದುಕೊಂಡು ಬಾ. ಅದರ ಮೇಲೆ ಕೂಡ್ರಿಸಿ ಸಂತೋಷಪಡಿಸೋಣ.

ಹೆಂಡತಿ : ಈ ಕಾರ್ಯ ನನ್ನಿಂದಾಗದು. ನೀವೇ ಬೇಕಾದರೆ ತೆಗೆದುಕೊಂಡು ಬನ್ನಿ.

ಗಂಡ : ನಾನು ಈ ಊರಿನ ಮೇಲಾಧಿಕಾರಿ. ಕತ್ತೆಯನ್ನು ತರುವಾಗ ಯಾರಾದರೂ ನೋಡಿದರೆ ಏನಂದಾರು ?

ಹೆಂಡತಿ : ಸ್ವಾಮಿ, ನೀವು ತಂದರೆ ನೀವು ಓರ್ವರೇ ಅಪವಾದಕ್ಕೆ ಗುರಿಯಾಗುತ್ತೀರಿ. ಒಂದು ವೇಳೆ ನಾನು ತಂದರೆ ''ಇಗೋ ಸಾಹೇಬರ ಹೆಂಡತಿಯು ಕತ್ತೆಯನ್ನು

ಒಯ್ಯುತ್ತಿದ್ದಾಳೆ'' ಎಂದು ಜನರು ಇಬ್ಬರನ್ನೂ ಆಡಿಕೊಳ್ಳುತ್ತಾರೆ. ಕಾರಣ ನಾನು ತೆಗೆದುಕೊಂಡು ಬಂದರೂ ನಿಮ್ಮ ಹೆಸರು ಬಂದೇ ಬರುತ್ತದೆ. ಆದರೆ ನೀವು ತೆಗೆದುಕೊಂಡು ಬಂದರೆ ನಾನೋರ್ವಳಾದರೂ ಲೋಕಾಪವಾದದಿಂದ ಉಳಿಯಬಹು ದಲ್ಲವೇ ?

ಗಂಡ : ನೀನು ಹೇಳುವದೇನೋ ನಿಜ. ಆದರೆ ಇಬ್ಬರೂ ಲೋಕಾಪವಾದದಿಂದ ಉಳಿದಿರಬೇಕು. ಮಗುವಿಗೆ ಸಮಾಧಾನವಾಗಿರಬೇಕು. ಅಂತಹ ಉಪಾಯವೇನಾ ದರೂ ಇದ್ದರೆ ವಿಚಾರಮಾಡು.

ಹೆಂಡತಿ : (ಮನಸ್ಸಿನಲ್ಲಿ ಸಾಕಷ್ಟು ಯೋಚಿಸಿ ಗಂಡನ ಸಮೀಪಕ್ಕೆ ಹೋಗಿ ಮಗುವಿಗೆ ಕೇಳದಹಾಗೆ ಕದ್ದು ಕಿವಿಯಲ್ಲಿ ಹೇಳುತ್ತಾಳೆ).

ಸ್ವಾಮಿ ! ನೀವೇ ಯಾಕೆ ಆಗಬಾರದು.

ಗಂಡ : ನಾನು ಕತ್ತೆ ಆಗುವದು ಹೇಗೆ ?

ಹೆಂಡತಿ : ನೀವು ಮುಖಕ್ಕೆ ಒಂದು ಬಟ್ಟೆಯನ್ನು ಕಟ್ಟಿಕೊಂಡು ಅಂಬೆಗಾಲಿನಿಂದ ನಡೆಯುತ್ತ ಅಡಿಗೆಮನೆಯಿಂದ ಬನ್ನಿರಿ ಮುಂದಿನ ನಾಟಕವನ್ನು ನಾನು ಮಾಡುತ್ತೇನೆ.

ಹೆಂಡತಿಯ ಯುಕ್ತಿಗೆ ಒಪ್ಪಿಗೆಯನ್ನು ಕೊಟ್ಟ ಸಾಹೇಬರು ತಮ್ಮ ಮುಖವನ್ನು ಮುಚ್ಚಿಕೊಂಡು ಅಂಬೇಗಾಲಿನಿಂದ ನಡೆಯುತ್ತ ಬರತೊಡಗಿದರು. ಹೆಂಡತಿ ಅಳುವ ಮಗುವನ್ನೆತ್ತಿಕೊಂಡು ಪಡಸಾಲೆಯಲ್ಲಿ ನಿಂತಿದ್ದಾಳೆ. ಪಶುವಿನಂತೆ ಬರುವ ಗಂಡನನ್ನು ತೋರಿಸುತ್ತ ಹೇಳುತ್ತಾಳೆ– ''ಮಗು ಇಗೋ ನೋಡು ನೀನು ಅಪೇಕ್ಷಿಸಿದ ಕತ್ತೆ ಬರುತ್ತಿದೆ'' ಹೆಂಡತಿಯ ಬಾಯಿಯಿಂದ ಕತ್ತೆ ಎಂದು ಅನಿಸಿಕೊಂಡದ್ದು ಇದು ಮೊದಲನೇ ಸಲ. ಎಲ್ಲಿಲ್ಲದ ಕೋಪ ಆವರಿಸಿತು. ಈಗ ಕೋಪ ತಾಳಿದರೆ ನಾಟಕವೇ ಕೆಟ್ಟು ಹೋಗುತ್ತದೆ ಎಂದು ವಿಚಾರಿಸಿದ ಗಂಡ ನಿರುಪಾಯನಾಗಿ ಮುನ್ನಡೆಯುತ್ತ ಬಂದ.

ತಾಯಿ ಮಗುವನ್ನು ನಕಲಿ ಕತ್ತೆಯ ಮೇಲೆ ಕೂಡ್ರಿಸಿದಳು. ಮಗುವಿಗೆ ಸಮಾಧಾನವಾಯಿತು. ಒಂದು ಕ್ಷಣ ನಕ್ಕು ಸಂತೋಷವನ್ನು ವ್ಯಕ್ತಮಾಡಿತು. ಮರು ಕ್ಷಣದಲ್ಲಿಯೇ ಪುನಃ ಅಳತೊಡಗಿತು. ಯಾಕೆ ಮಗು ಅಳುತ್ತಿರುವೆ ? ಏನು ಬೇಕು? ತಾಯಿ ಪ್ರಶ್ನಿಸಿದಳು. ಅವ್ವಾ ! ''ನೀನೂ ಇದರ ಮೇಲೆ ಕೂಡ್ರು'' ಎಂದಿತು ಅಳುವ ಧ್ವನಿಯಲ್ಲಿಯೇ. ಗಂಡನ ಒಪ್ಪಿಗೆ ಇಲ್ಲದೇ ಗಂಡನ ಮೇಲೆ ಕೂಡ್ರುವದು ಹೇಗೆ ? ಎಂದು ಮನದಲ್ಲಿಯೇ ವಿಚಾರಿಸಿ, ಮಗು ! ಈ ಕತ್ತೆಗೆ ನಮ್ಮಿಬ್ಬರ ಭಾರವನ್ನು ಹೊರುವ ಸಾಮರ್ಥ್ಯವಿಲ್ಲ, ಆದಕಾರಣ ನೀನೋರ್ವನೇ ನಡೆ ಎಂದಳು. ಮಗುವಿಗೆ ಸಮಾಧಾನ ವಾಗಲಿಲ್ಲ ಪುನಃ ಅಳತೊಡಗಿತು. ಆಗ ಗಂಡನು ಹೂಂ ! ಎಂಬ ಧ್ವನಿಯಿಂದಲೇ ಕೂಡ್ರಲು ಹೆಂಡತಿಗೆ ಒಪ್ಪಿಗೆಯನ್ನಿತ್ತ, ಹೆಂಡತಿಯೂ ಕುಳಿತಳು. ಈರ್ವರ ಭಾರವನ್ನು ಹೊತ್ತು ನಡೆಯಿತು ಕತ್ತೆ. ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ ಮಗು ಮತ್ತೆ ಅಳತೊಡಗಿತು. ತಾಯಿ ಕೇಳಿದಳು– ''ಯಾಕೆ ಮಗು ? ಅಳುತ್ತೀಯಾ'' ಎಂದು. ಇದು ಸುಮ್ಮನೇ ನಡೆದಿದೆ ಧ್ವನಿಯನ್ನೇ ಮಾಡಲೊಲ್ಲದು. ಆಗ ಗಂಡನ ಮೇಲೆ ಕುಳಿತ

ಹೆಂಡತಿ ಸ್ವಲ್ಪ ಬಾಗಿ ಗಂಡನ ಕಿವಿಯಲ್ಲಿ ಮೇಲು ಧ್ವನಿಯಲ್ಲಿ ನುಡಿಯುತ್ತಾಳೆ– ರ್ರೀಽಽಽ ! ''ನಿಮ್ಮ ಕತ್ತೆಯ ಪಾತ್ರ ಪೂರ್ಣವಾಗಿಲ್ಲ ಸ್ವಲ್ಪ ಕತ್ತೆಯಂತೆ ಧ್ವನಿಮಾಡಿ'' ಹೆಂಡತಿಯು ಹೇಳಿದಂತೆ ಮಗುವಿನ ಸಂತೋಷಕ್ಕಾಗಿ ಸಾಹೇಬರು ಕತ್ತೆಯ ಹೇಕಾರವನ್ನೂ ಮಾಡಿದರು. ಮಗುವಿಗೆ ಸಮಾಧಾನವಾಯಿತು. ಸಾಹೇಬರು ಕತ್ತೆಯ ಪಾತ್ರ ಮುಗಿಯಿತು.

ಈ ಕಥೆಯ ತಾತ್ಪರ್ಯವೇನೆಂದರೆ ಓರ್ವ ಸರ್ವೋಚ್ಚ ಅಧಿಕಾರಿಯು ತನ್ನ ಮಗನ ಸಂತೋಷಕ್ಕಾಗಿ ತನ್ನ ಅಧಿಕಾರ, ಅಂತಸ್ತು ಠೀವಿಗಳನ್ನೆಲ್ಲ ಬದಿಗಿರಿಸಿ, ತಾನು ವಾಸ್ತವಿಕವಾಗಿ ಕತ್ತೆಯಲ್ಲದಿದ್ದರೂ ಹೆಂಡತಿಯ ಸಲಹೆಯಂತೆ ಕತ್ತೆಯ ಅಭಿನಯ ಮಾಡಿರುವಂತೆ ಜಗದಗಲ ಮುಗಿಲಗಲವಾದ ಜಗತ್ತಿನ ಪಿತೃವಾದ ಆ ಪರಶಿವಲಿಂಗವು ತನ್ನ ಅಂಶರೇ ಆದ ಅಲ್ಪಬುದ್ಧಿಯ ಜೀವಿಗಳ ಉಪಾಸನೆಯ ಸೌಕರ್ಯಕ್ಕಾಗಿ ತನ್ನ ಮಾಯಾಶಕ್ತಿಯ ಸಹಯೋಗದಿಂದ ಪರಿಚ್ಛಿನ್ನನಾಗಿ ಪ್ರತಿಯೊಬ್ಬ ಜೀವಿಗಳ ಅಂತರಂಗ ದಲ್ಲಿ ಸೂಕ್ಷ್ಮವಾದ ಜ್ಯೋತಿರ್ಲಿಂಗದ ರೂಪದಲ್ಲಿ ನಿವಾಸಿಸುತ್ತಿದ್ದಾನೆ. ಆದ್ದರಿಂದ ''ಉಪಾಸನಾರ್ಥಮಂತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ'' ಎಂದಿದ್ದಾರೆ ಭಗವತ್ಪಾದ ರೇಣುಕಾಚಾರ್ಯರು.

ಅಂತರಂಗದಲ್ಲಿ ಜ್ಯೋತಿರ್ಲಿಂಗವನ್ನು ಕಂಡವರಿಗೆ ಜಗವೆಲ್ಲ ಲಿಂಗಮಯ ವಾಗಿಯೇ ತೋರುವದು. ದೃಷ್ಟಿಯನ್ನು ಬದಲಿಸಿಕೊಳ್ಳಬೇಕೆ ವಿನಹ ಸೃಷ್ಟಿಯನ್ನಲ್ಲ. ಸೃಷ್ಟಿಯಲ್ಲಿ ಸದಾಶಿವನು ಯಾವಾಗಲೂ ಇದ್ದಾನೆ. ಅವನನ್ನರಿಯಲು ಸೂಕ್ಷ್ಮ ದೃಷ್ಟಿಯ ಅವಶ್ಯಕತೆ ಇದೆ. ಬಾಹ್ಯ ಶುಚಿತ್ವಕ್ಕಿಂತಲೂ ಅಂತರಂಗದ ಶುಚಿ ಮಹತ್ವಪೂರ್ಣ ವಾದದ್ದು. ಅಂತಃ ಶುಚಿಯ ಬಾಹ್ಯ ಕ್ರಿಯೆಗಳೆಲ್ಲ ಶುಚಿಗಳೇ ಆಗುತ್ತವೆ. ಈ ರಹಸ್ಯವನ್ನು ಜಗತ್ತಿಗೆ ತೋರಿಸಿ ಕೊಡುವದಕ್ಕಾಗಿ ಪೂಜ್ಯಪಾದ ಶ್ರೀ ರೇಣುಕ ಭಗವತ್ಪಾದರು ಅಂತರ್ಲಿಂಗ ಧಾರಣೆಯನ್ನು ಮೊದಲು ಉಪದೇಶಿಸಿದ್ದಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ಆಶೀರ್ವಚನ-೬

ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಂ (ಸಿ. ಶಿ. ೬.೩೬)

ಸಚರಾಚರಾತ್ಮಕವಾದ ಈ ವಿಶ್ವದ ಉತ್ಪತ್ತಿ ಹಾಗೂ ಲಯಗಳಿಗೆ ಕಾರಣೀಭೂತವಾದ ಶಾಶ್ವತವಾದ ಬ್ರಹ್ಮತತ್ತ್ವವೇ ಲಿಂಗವೆಂದೆನಿಸಿಕೊಳ್ಳುವುದು.

ತಸ್ಮಾಲ್ಲಿಂಗಮಿತಿ ಖ್ಯಾತಂ ಸತ್ತಾನಂದಚಿದಾತ್ಮಕಂ ।
ಬೃಹತ್ತ್ವಾದ್ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಂ ॥ (ಸಿ. ಶಿ. ೬.೩೭)

ಲಿಂಗವೆಂದು ಪ್ರಸಿದ್ಧಿಯನ್ನು ಪಡೆದ, ಸಚ್ಚಿದಾನಂದ ಸ್ವರೂಪವಾದ ಆ ಪರಮ ತತ್ತ್ವವು ಈ ವಿಶ್ವಕ್ಕಿಂತಲೂ ಬೃಹದಾಕಾರವಾಗಿರುವುದರಿಂದ ಮತ್ತು ಈ ವಿಶ್ವಕ್ಕೆ ಮಹಾಪೋಷಕ ವಾಗಿರುವುದರಿಂದ ಇದಕ್ಕೆ ಬ್ರಹ್ಮವೆಂಬುದಾಗಿ ಕರೆಯುತ್ತಾರೆ.

ಆಧಾರೇ ಹೃದಯೇ ವಾಪಿ ಭ್ರೂಮಧ್ಯೇ ವಾ ನಿರಂತರಂ ।
ಜ್ಯೋತಿರ್ಲಿಂಗಾನುಸಂಧಾನಮಾಂತರಂ ಲಿಂಗಧಾರಣಂ ॥ (ಸಿ. ಶಿ. ೬.೩೮)

ಅಂತರಂಗದ ಮೂಲಾಧಾರ, ಅನಾಹತ ಮತ್ತು ಆಜ್ಞಾಚಕ್ರಗಳಲ್ಲಿ ಜ್ಯೋತಿರ್ಲಿಂಗದ ಅನುಸಂಧಾನವನ್ನು ಮಾಡುವದೇ ಅಂತರಂಗದ ಲಿಂಗಧಾರಣೆ ಎಂಬುದಾಗಿ ಕರೆಯಿಸಿಕೊಳ್ಳುವದು.

ಆಧಾರೇ ಕನಕ ಪ್ರಖ್ಯಂ ಹೃದಯೇ ವಿದ್ರುಮಪ್ರಭಂ ।
ಭ್ರೂಮಧ್ಯೇ ಸ್ಫಟಿಕಚ್ಛಾಯಂ ಲಿಂಗಂ ಯೋಗೀ ವಿಭಾವಯೇತ್॥(ಸಿ. ಶಿ. ೬.೩೯)

ಶಿವಯೋಗಿಯು ಅಂತರ್ಲಿಂಗಾನುಸಂಧಾನವನ್ನು ಮಾಡುವಾಗ ಆಧಾರಚಕ್ರದಲ್ಲಿ ಸ್ವರ್ಣವರ್ಣದ, ಹೃದಯದ ಅನಾಹತಚಕ್ರದಲ್ಲಿ ಹವಳದ ಕಾಂತಿಯ ಮತ್ತು ಭ್ರೂಮಧ್ಯದ ಆಜ್ಞಾಚಕ್ರದಲ್ಲಿ ಸ್ಫಟಿಕವರ್ಣದ ಲಿಂಗವನ್ನು ಭಾವಿಸಬೇಕು.

ನಿರುಪಾಧಿಕಮಾಖ್ಯಾತಂ ಲಿಂಗಸ್ಯಾಂತರ ಧಾರಣಂ ।
ವಿಶಿಷ್ಟಂ ಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರಣಾತ್ ॥ (ಸಿ. ಶಿ. ೬.೪೦)

ಅಂತರಂಗದಲ್ಲಿಯ ಈ ಲಿಂಗಾನುಸಂಧಾನವು ನಿರುಪಾಧಿಕ ಲಿಂಗಧಾರಣೆಯೆಂತಲೂ ಕರೆಯಲ್ಪಡುವದು. ಇದು ಬಾಹ್ಯಲಿಂಗಧಾರಣೆಗಿಂತಲೂ ಕೋಟಿಪಾಲು ಮಿಗಿಲಾದುದು.

ಲಿಂಗವು ಬ್ರಹ್ಮ ಶಬ್ದ ವಾಚ್ಯವು :

ಅಂತರ್ಲಿಂಗದ ಅತಿ ಸೂಕ್ಷ್ಮಸ್ವರೂಪವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ ವಿಸ್ತೃತಗೊಳಿಸುತ್ತಿದ್ದಾರೆ–ಮನುಷ್ಯನ ಆಧಾರಾದಿ ಚಕ್ರಗಳಲ್ಲಿ ಪ್ರಕಾಶಮಾನವಾಗಿ ತೋರಿದ ಮಾತ್ರಕ್ಕೆ ಅದೊಂದು ಪರಿಚ್ಛಿನ್ನ ವಸ್ತುವೆಂದು ಭಾವಿಸಕೂಡದು. ಅದು ಜಗತ್ತಿನ ಉತ್ಪತ್ತಿ–ಲಯಗಳಿಗೆ ಮೂಲಕಾರಣವಾದದ್ದು ಅದು

ವಿಶ್ವಾತ್ಮಕವೂ ವಿಶ್ವೋತ್ತೀರ್ಣವೂ ಅಹುದು. ಅಂತೆಯೇ– ''ಸ ಭೂಮಿಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಂ'' ಎಂದಿದೆ ಪುರುಷಸೂಕ್ತ ''ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ'' ಪ್ರಪಂಚದ ಒಳ ಹೊರಗೆಲ್ಲ ಪೂರ್ಣವಾಗಿ ತುಂಬಿ ಕೊಂಡಿದೆ. ಎಲ್ಲ ತತ್ತ್ವಗಳಿಗಿಂತ ಬೃಹದಾಕಾರವಾಗಿರುವದರಿಂದಲೂ ಎಲ್ಲದರ ಪರಿ ಪೋಷಕವಾಗಿರುವುದರಿಂದಲೂ ಆ ಲಿಂಗತತ್ತ್ವಕ್ಕೆ ಉಪನಿಷತ್ತುಗಳು ''ಬ್ರಹ್ಮ''ವೆಂದು ಸಂಬೋಧಿಸಿವೆ.

ಆನಂದಸ್ವರೂಪವಾದ ಅಂತರ್ಲಿಂಗದ ಪೋಷಣೆ ಇಲ್ಲದೆ ಜೀವಿ ಬದುಕಲಾರ, ಜಾಗ್ರತ್–ಸ್ವಪ್ನಗಳಲ್ಲಿ ವಿಷಯ ಸುಖಕ್ಕಾಗಿ ಪರಿಶ್ರಮಿಸಿ ದಣಿದ ಜೀವಿಯು ಸುಷುಪ್ತಿಯನ್ನಪೇಕ್ಷಿಸುತ್ತಾನೆ. ಅಲ್ಲಿ ಯಾವ ವಿಷಯವಿಲ್ಲದಿದ್ದರೂ ಆನಂದವಾಗಿರುತ್ತಾನೆ. ಸುಷುಪ್ತಿಯ ಎಂಟು ತಾಸಿನ ಆನಂದವು ಇವನಿಗೆ ಹದಿನಾರು ತಾಸು ದುಡಿಯುವ ಉತ್ಸಾಹವನ್ನೊದಗಿಸುತ್ತದೆ. ಒಂದೆರಡು ದಿನ ನಿದ್ರಾನಂದ ಪ್ರಾಪ್ತವಾಗದಿದ್ದರೆ ಇವನ ಸ್ಥಿತಿ ಬಹಳಷ್ಟು ಚಿಂತಾಜನಕವಾಗುತ್ತದೆ. ಅನ್ನ–ನೀರುಗಳಿಲ್ಲದೇ ಕೆಲವು ದಿನ ಬದುಕಬಹುದು. ಆದರೆ ನಿದ್ರೆ ಇಲ್ಲದಿರೆ ಬದುಕಲಾರ. ಅಂತೆಯೇ ನಿದ್ರೆಯಲ್ಲಿ ದೊರೆಯುವ ಆತ್ಮಾನಂದವೇ ಜೀವಿಯ ಪೋಷಕ ತತ್ತ್ವವು. ಯಾವ ತತ್ತ್ವದಿಂದ ಪೋಷಿತವಾಗುತ್ತೇವೆಯೋ ಆ ತತ್ತ್ವದ ಅರಿವು ಸರ್ವರಿಗೂ ಇರುವದಿಲ್ಲ, ಮೂರ್ಛಿತ ನಾದ ಮನುಷ್ಯನಿಗೆ ನಳಿಕೆಯ ಮುಖಾಂತರ ಹಾಲು ಹಾಗೂ ಹಣ್ಣಿನ ರಸವನ್ನು ಹಾಕುವದನ್ನು ದವಾಖಾನೆಗಳಲ್ಲಿ ನೋಡುತ್ತೇವೆ. ಕೆಲವೊಂದು ಜನ ಸುದೀರ್ಘಕಾಲ ಮೂರ್ಛಿತರಾಗಿದ್ದು ಕೊನೆಗೆ ಮೂರ್ಛಾವಸ್ಥೆಯಲ್ಲಿಯೇ ಪ್ರಾಣಬಿಡುವುದುಂಟು. ಆಸ್ಪತ್ರೆಯಲ್ಲಿ ನಾಲ್ಕಾರು ವರ್ಷ ಫಲಗಳ ರಸದಿಂದ ಜೀವಿಸಿದ್ದರೂ ಮೂರ್ಛಿತನಾದ ವ್ಯಕ್ತಿಗೆ ನಾನು ಯಾವುದರಿಂದ ಬದುಕಿದ್ದೇನೆಂಬ ಅರಿವಿಲ್ಲದಿರುವಂತೆ ನಮ್ಮೆಲ್ಲರ ಜೀವನವಾಗಿದೆ. ಯಾವ ತತ್ತ್ವದಿಂದ ಬದುಕಿದ್ದೇವೆಯೋ ಅದರ ಅರಿವಿಲ್ಲದವರೆಲ್ಲ ಮೂರ್ಛಿತರಿದ್ದಂತೆಯೇ ಸರಿ. ಭೂಮಿಯಲ್ಲಿ ಹುಗಿದ ಹೊನ್ನಿನ ರಾಶಿಯ ಮೇಲೆ ಕುಳಿತು ಐದಹತ್ತು ಪೈಸೆಗಳ ಭಿಕ್ಷೆ ಬೇಡುತ್ತಿರುವ ಭಿಕ್ಷುಕನ ಪಾಡಾಗಿದೆ ಅಜ್ಞರ ಜೀವನ. ಈ ಅಜ್ಞಾನ ದಾರಿದ್ರ್ಯವನ್ನು ಹೋಗಲಾಡಿಸಿ ಅಂತರಂಗದ ಲಿಂಗದ ಸುಜ್ಞಾನ ಬೆಳಕನ್ನಿಲ್ಲಿ ಭಗವತ್ಪಾದ ರೇಣುಕಾಚಾರ್ಯರು ತಿಳಿಸಿಕೊಡಲೆತ್ನಿಸಿ ಆಧಾರ, ಹೃದಯ ಮತ್ತು ಭ್ರೂ ಮಧ್ಯದಲ್ಲಿ ಜ್ಯೋತಿರ್ಲಿಂಗದ ಅನುಸಂಧಾನದ ವಿಧಾನವನ್ನು ''ಜ್ಯೋತಿರ್ಲಿಂಗಾನು ಸಂಧಾನಮಾಂತರಂ ಲಿಂಗಧಾರಣಂ'' ಎಂಬುದಾಗಿ ಉಪದೇಶಿಸಿದ್ದಾರೆ.

''ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ ತಸ್ಮಾತ್ ಪರಾಙ ಪಶ್ಯತಿನಾಂತ ರಾತ್ಮನ್'' ಎಂಬ ಉಪನಿಷತ್ ಮಂತ್ರದಂತೆ ಸೃಷ್ಟಿಕರ್ತನಾದ ಬ್ರಹ್ಮನು ನಮ್ಮೆಲ್ಲರ ಇಂದ್ರಿಯಗಳನ್ನು ಬಹಿರ್ಮುಖವಾಗಿ ಮಾಡಿರುವ ಕಾರಣ ನಾವೆಲ್ಲ ಸದಾ ಹೊರ ಗಡೆಯೇ ನೋಡುತ್ತೇವೆ. ಅಲ್ಲದೇ ಒಳಗಡೆ ನೋಡುವ ಅಭ್ಯಾಸವಿಲ್ಲ, ಕಣ್ಣುಕಿವಿಗಳನ್ನು ಮುಚ್ಚಿಕೊಂಡು ಕುಳಿತರೂ ಅಂತರಂಗದ ಮನವು ಹೊರಗಿನ ವಿಷಯಗಳನ್ನೇ ಚಿಂತಿಸು ವುದು. ಸದ್ಯಃ ವಿಷಯ ಚಿಂತನೆಯನ್ನು ಬಿಡಿಸಿ ಮನಸ್ಸಿಗೆ ಅಂತರ್ಲಿಂಗದ ಧ್ಯಾನಾಭ್ಯಾಸ ವನ್ನು ಮಾಡಿಸಬೇಕು.

ಆಧಾರಾದಿಗಳಲ್ಲಿಯ ವಿಭಿನ್ನವರ್ಣದ ಲಿಂಗಗಳು :

ಧ್ಯಾನದ ವಿಧಾನವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಆಧಾರೇ ಕನಕ ಪ್ರಖ್ಯಂ ಹೃದಯೇ ವಿದ್ರುಮ ಪ್ರಭಂ ।
ಭ್ರೂಮಧ್ಯೇ ಸ್ಫಟಿಕಾಚ್ಛಾಯಂ ಲಿಂಗಂ ಯೋಗೀ ವಿಭಾವಯೇತ್ ॥

(ಸಿ. ಶಿ. ೬.೩೯)

ಈ ಶ್ಲೋಕದಲ್ಲಿ ಶರೀರದ ಮುಖ್ಯ ಕೇಂದ್ರಗಳಾದ ಮೂಲಾಧಾರ, ಹೃದಯ ಮತ್ತು ಭ್ರೂ ಮಧ್ಯಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಆಯಾ ಸ್ಥಾನದಲ್ಲಿ ಕನಕ ಹವಳ ಮತ್ತು ಸ್ಫಟಿಕ ಪ್ರಭೆಯ ಲಿಂಗಗಳನ್ನು ಅನುಸಂಧಾನಿಸಬೇಕೆಂಬುದಾಗಿ ತಿಳಿಸಿದ್ದಾರೆ.

ಧ್ಯಾನೋಪಯೋಗಿ ಮುದ್ರೆಗಳು :

ಧ್ಯಾನಮಾಡಲು ಮುದ್ರೆಗಳು ಪರಮಾವಶ್ಯಕಗಳು. ಮೇಲೆ ಹೇಳಿದ ಮೂರು ಕೇಂದ್ರಗಳಲ್ಲಿ ಮನಸ್ಸನ್ನು ಏಕಾಗ್ರಗೊಳಿಸಲು ''ಶಕ್ತಿ ಸಂಚಾಲಿನೀ ಮುದ್ರಾ'',– ''ಶಾಂಭವೀ ಮುದ್ರಾ'' ಮತ್ತು ''ಉನ್ಮನೀ ಮುದ್ರೆ''ಗಳನ್ನು ಸಾಧಿಸಬೇಕೆಂಬುದಾಗಿ ಯೋಗಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಮಹಾಯೋಗೀಶ್ವರರಾದ ಋಷೀಕೇಶದ ಯೋಗನಿಕೇತನದ ಸ್ವಾಮಿ ಯೋಗೇಶ್ವರಾನಂದ ಸರಸ್ವತಿಯವರು ಪ್ರಾಚೀನ ಗ್ರಂಥಾಧಾರದಿಂದಲೂ ತಮ್ಮ ಅನುಭವದಿಂದಲೂ ''ಬಹಿರಂಗ ಯೋಗ'' ಎಂಬ ಪುಸ್ತಕದ ಪುಟ ೪೨೭ ರಿಂದ ೪೩೫ ರ ವರೆಗೆ (೧) ಮಹಾಮುದ್ರಾ, (೨) ಮಹಾಬಂಧ, (೩) ಮಹಾವೇಧ, (೪) ಖೇಚರೀ ಮುದ್ರಾ, (೫) ವಿಪರೀತ ಕರಣೀ ಮುದ್ರಾ, (೬) ವಜ್ರೋಲಿ ಮುದ್ರಾ, (೭) ಶಕ್ತಿ ಸಂಚಾಲಿನೀ ಮುದ್ರಾ, (೮) ಯೋನಿ ಮುದ್ರಾ, (೯) ಉನ್ಮನೀ ಮುದ್ರಾ, (೧೦) ಶಾಂಭವೀ ಮುದ್ರಾ, (೧೧) ಕಾಕೀ ಮುದ್ರಾ, (೧೨) ಅಶ್ವಿನೀ ಮುದ್ರಾ, (೧೩) ತ್ರಿಬಂಧ ಮುದ್ರಾ, (೧೪) ಮಾತಂಗಿನೀ ಮುದ್ರಾ ಹಾಗೂ (೧೫) ಯೋಗ ಮುದ್ರಾ ಎಂಬುದಾಗಿ ಹದಿನೈದು ಮುದ್ರೆಗಳ ಲಕ್ಷಣ, ಸಾಧನಾಕ್ರಮ ಮತ್ತು ಲಾಭಗಳ ಬಗ್ಗೆ ವಿಸ್ತೃತಪಡಿಸಿದ್ದಾರೆ.

ಶ್ರೀಮನ್ನಿಜಗುಣ ಶಿವಯೋಗಿಗಳೂ ಸಹ–

''ಚಲಿಸದಾಸನ ಮುದ್ರೆಯ । ಮೊದಲಲ್ಲಿ । ಸಲೆಸಾಂಗವೆನಿಸಿ ನಿಲಿಸಿ ॥ ಬಳಿಕ ॥ ಲಲನೆಯಾಲಿಂಗನವನು । ಮಾಡುವಿನಿ । ಗಲೆಯ ಮೋಹವನೆಸಗದೆ । ಶಿವನೇ ॥

(ಕೈ. ಪ. ಯೋಗ ೧೬–೨)

ಹಠಯೋಗವನ್ನು ಪ್ರತಿಪಾದಿಸುವಾಗ ಅಂತರಂಗದ ಅನುಸಂಧಾನವೆಂಬ ಯೋಗಾಭ್ಯಾಸಿಗೆ ಆಸನ ಮತ್ತು ಮುದ್ರೆಗಳು ಅವಶ್ಯಕವೆನ್ನುವದನ್ನು ಸಾಂಕೇತಿಕವಾಗಿ ತಿಳಿಯಪಡಿಸಿದ್ದಾರೆ. ಶಿವಯೋಗವನ್ನು ಸಾಧಿಸುವವರಿಗೆ ಮಂತ್ರಯೋಗ, ಲಯ ಯೋಗ, ಹಠಯೋಗ ಮತ್ತು ರಾಜಯೋಗಗಳ ಪ್ರಕ್ರಿಯೆಗಳನ್ನು ತಿಳಿದುಕೊಳ್ಳುವದು ಆವಶ್ಯಕವೆಂದೇ ಶ್ರೀ ನಿಜಗುಣಶಿವಯೋಗಿಗಳು ಶಿವಯೋಗವನ್ನು ಪ್ರತಿಪಾದಿಸುವ ಪೂರ್ವದಲ್ಲಿ ಉಳಿದೆಲ್ಲ ಯೋಗಗಳನ್ನು ತಿಳಿಯಪಡಿಸಿದ್ದಾರೆ. ಈ ಯೋಗಗಳು ಪರಸ್ಪರ ಪೂರಕಗಳಾಗಿವೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ''ಆಧಾರೇ ಕನಕ ಪ್ರಖ್ಯಂ ಲಿಂಗಂ ಯೋಗೀ ವಿಭಾವಯೇತ್'' ಎಂದು ಆದೇಶವಿತ್ತಂತೆ ಶಿವಯೋಗ ಸಾಧಕನು ಆಧಾರ ಚಕ್ರದಲ್ಲಿ ಕನಕ (ಸ್ವರ್ಣ) ವರ್ಣದ ಲಿಂಗವನ್ನು ಭಾವಿಸಬೇಕು. ಸಾಧಕನ ಪ್ರಥಮಾವಸ್ಥೆಯಲ್ಲಿ ಕನಕವರ್ಣದ ಲಿಂಗವು ಗೋಚರವಾಗದ ಕಾರಣ ಆ ವರ್ಣದ ಭಾವನೆಯನ್ನು ಮಾಡಬೇಕೆಂದಿದ್ದಾರೆ. ಗುರು ಆದೇಶದಂತೆ ಸಾಧಕನು ಭಾವಿಸಲು ಗುರುವು ಅನುಭವಿಸಿದ ತತ್ತ್ವವನ್ನೇ ಶಿಷ್ಯನು ಭಾವನಾ ಸಾಮರ್ಥ್ಯದಿಂದ ಕಾಲಾಂತರ ದಲ್ಲಿ ಅನುಭವಿಸಲು ಸಾಧ್ಯ. ಅಂತೆಯೇ ಅನುಭವಿಯಾದ ಸದ್ಗುರುವಿನ ಮಾರ್ಗದರ್ಶನ ಬೇಕು.

ಮನುಷ್ಯ ದೇಹವು ತೊಂಭತ್ತಾರು ಅಂಗುಲ ಉದ್ದವಿದೆ. ಮೂಲಾಧಾರ ಚಕ್ರವಿರುವ ಸ್ಥಾನವೇ ಶರೀರದ ಮಧ್ಯ ಬಿಂದುವು. ಇದು ಗುದದಿಂದ (ಮಲ ವಿಸರ್ಜನೇಂದ್ರಿಯ) ಎರಡು ಅಂಗುಲದ ಮೇಲೆ ಹಾಗೂ ಗುಹ್ಯ (ಜನನೇಂದ್ರಿಯ)ದಿಂದ ಎರಡು ಅಂಗುಲ ಕೆಳಗೆ ಹೀಗೆ ಈ ಎರಡು ಇಂದ್ರಿಯಗಳ ಮಧ್ಯದಲ್ಲಿ ಒಂದು ಅಂಗುಲ ಪರಿಮಿತ ಪ್ರದೇಶದಲ್ಲಿ ಆಧಾರ ಚಕ್ರವಿರುತ್ತದೆ ಎಂಬುದಾಗಿ ಶಿವಯೋಗಸಿದ್ಧರು ಸಾಧಕರಿಗಾಗಿ ಸ್ಥೂಲತಃ ಸ್ಥಾನ ನಿರ್ದೇಶನವನ್ನು ಮಾಡಿದ್ದಾರೆ. ಇಲ್ಲಿಯ ಜ್ಯೋತಿರ್ಲಿಂಗ ವನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಸಾಧಕನು ಸುಖಕರವೂ ಸ್ಥಿರವೂ ಆದ ''ಸುಖಾಸನ''ದಲ್ಲಿ ಕುಳಿತು ನಂತರ ಪ್ರಾಣಾಯಾಮವನ್ನು ಮಾಡಿ ''ಶಕ್ತಿ ಸಂಚಾಲಿನೀ'' ಮುದ್ರೆಯ ಸಹಾಯದಿಂದ ಧ್ಯಾನವನ್ನು ಪ್ರಾರಂಭಿಸಬೇಕು. ''ನಾಸಾಗ್ರದಲ್ಲಿ ಪನ್ನೆರಡು ವರದಶಕವೆಂಟಾರು ಚತುರಂಗುಲದ ಮಿತಿಯೊಳಿರಿಸಿ ದೃಷ್ಟಿಯನ್ನು ಚಲಿಸದೇ ನಿರೀಕ್ಷಿಸಲು'' (ಕೈ. ಪ ಯೋ. ೧೯–೨) ಎಂದು ಶ್ರೀ ನಿಜಗುಣ ಶಿವಯೋಗಿಗಳು ತಿಳಿಸಿದಂತೆ ನಾಲ್ಕು, ಎಂಟು, ಹತ್ತು ಮತ್ತು ಹನ್ನೆರಡು ಅಂಗುಲದವರೆಗೆ ದೃಷ್ಟಿಯನ್ನು ನಾಸಾಗ್ರದಲ್ಲಿ ಹೊರಗಿಟ್ಟು ನೇತ್ರಗಳನ್ನು ಅರ್ಧ ನಿಮೀಲಿತ ಸ್ಥಿತಿಯಲ್ಲಿರಿಸಬೇಕು. ನಂತರ ಮನೋವೃತ್ತಿಯನ್ನು ಮೂಲಾಧಾರ ಚಕ್ರದಲ್ಲಿ ಸ್ಥಿರವಾಗಿ ನೆಲೆಗೊಳಿಸುವದೇ ''ಶಕ್ತಿ ಸಂಚಾಲಿನೀ'' ಮುದ್ರೆಯು. ಈ ಮುದ್ರೆಯ ಸಹಾಯದಿಂದ ಆಧಾರಚಕ್ರದಲ್ಲಿ ಸ್ವರ್ಣವರ್ಣದ ಜ್ಯೋತಿರ್ಲಿಂಗವನ್ನು ಪರಿಭಾವಿಸುವದೊಂದು ಅಂತರ್ಲಿಂಗ ಧಾರಣೆಯು. ಪೂರ್ವೋಕ್ತವಾದ ಮುದ್ರೆಯು ಕುಂಡಲಿನೀ ಶಕ್ತಿಯನ್ನು ಜಾಗ್ರತಗೊಳಿಸು ವಲ್ಲಿ ಸಹಾಯಕವಾಗಿರುವದರಿಂದ ಇದಕ್ಕೆ ''ಶಕ್ತಿಚಾಲಿನೀ'' ಇಲ್ಲವೇ ''ಶಕ್ತಿ ಸಂಚಾಲಿನೀ'' ಮುದ್ರೆ ಎಂದು ಕರೆಯುತ್ತಾರೆ. ಹಠಯೋಗಿಗಳು ಪ್ರಾಣಾಯಾಮ ವಿಶೇಷದಿಂದ ಆ ಶಕ್ತಿಯನ್ನು ಜಾಗ್ರತಗೊಳಿಸುತ್ತಾರೆ. ಆದರೆ ಇದು ಅಲ್ಪ ಪ್ರಕೃತಿಯ ವರಿಗೆ ಅಸಾಧ್ಯವಾದ ಮಾತು. ರಾಜಯೋಗಿಗಳು ಮತ್ತು ಶಿವಯೋಗಿಗಳು ಸುದೃಢ ವಾದ ಮನೋಬಲದಲ್ಲಿ ಈ ಮುದ್ರೆಗಳ ಮುಖಾಂತರ ಶಕ್ತಿಯನ್ನು ಜಾಗ್ರತಗೊಳಿಸು ತ್ತಾರೆ. ಇದಕ್ಕಾದರೂ ಮನೋವೃತ್ತಿಯ ಪ್ರಬಲವಾದ ಏಕಾಗ್ರತೆಬೇಕಾಗುವದು. ಏಕಾಗ್ರವಾದ ಮನೋಬಲದಿಂದ ಎಲ್ಲ ಚಕ್ರಗಳನ್ನು ಭೇದಿಸಲು ಬರುತ್ತದೆ. ಅತಿ ಚಪಲವಾದ ಮನಸ್ಸಿನವರಿಗೆ ಈ ಮುದ್ರಾ ಸಾಧನೆಯೂ ಸಾಧಿಸುವುದಿಲ್ಲ.

ಇನ್ನು ''ಹೃದಯೇ ವಿದ್ರುಮ ಪ್ರಭಂ'' ಎಂದು ಉಪದೇಶಿಸಿದ ಪೂಜ್ಯಪಾದರ ಆದೇಶದಂತೆ ಹೃದಯದಲ್ಲಿ ಹವಳ-ವರ್ಣದ ಜ್ಯೋತಿರ್ಲಿಂಗವನ್ನು ಭಾವಿಸಲು ''ಶಾಂಭವೀ'' ಮುದ್ರೆಯನ್ನು ಸಾಧಿಸಬೇಕಾಗುವದು. ಪೂರ್ವದಲ್ಲಿ ಹೇಳಿದಂತೆ ಸುಖಾಸನದಲ್ಲಿ ಕುಳಿತು ಪ್ರಾಣಾಯಾಮವನ್ನು ಮಾಡಿ ''ಬಳಿಕ ಶಾಂಭವೀ ಮುದ್ರೆಯಿಂದ ಲೋಚನಂಗಳನೊಯ್ಯನರೆ ಮುಚ್ಚಿ'' (ಕೈ. ಪ. ಯೋ. ೨೭-೩) ಎಂಬ ಶ್ರೀ ನಿಜಗುಣರ ನುಡಿಯಂತೆ ಕಣ್ಣುಗಳನ್ನು ಅರ್ಧಮುಚ್ಚಿ ನಾಶಿಕಾಗ್ರದಲ್ಲಿ ದೃಷ್ಟಿಯನ್ನು ಹರಿಸಿ ಹೊರಗೆ ಬೇರಾವ ವಸ್ತುಗಳನ್ನು ನೋಡದೇ ಮನೋವೃತ್ತಿಯನ್ನು ಹೃದಯ ಕಮಲದಲ್ಲಿ ಇರಿಸುವದೇ ''ಶಾಂಭವೀ'' ಮುದ್ರೆಯು ಈ ಮುದ್ರೆಯ ಸಹಾಯದಿಂದ ಹೃದಯ ಕಮಲದಲ್ಲಿ ಹವಳವರ್ಣದ ಜ್ಯೋತಿರ್ಲಿಂಗವನ್ನು ಅನುಸಂಧಾನಿಸಲು ಅನುಕೂಲವಾಗುವದು. ಈ ರೀತಿ ಹೃದಯ ಕಮಲದಲ್ಲಿ ಜ್ಯೋತಿರ್ಲಿಂಗದ ಅನುಸಂಧಾನ ಮಾಡುವುದಕ್ಕೆ ಅಂತರ್ಲಿಂಗಧಾರಣೆಯೆಂದು ಕರೆಯುವರು.

ಇದರಂತೆ ''ಭ್ರೂಮಧ್ಯೇ ಸ್ಫಟಿಕಚ್ಛಾಯಂ'' ಎಂಬ ಶ್ರೀ ರೇಣುಕ ಭಗವತ್ಪಾದರ ಆದೇಶದಂತೆ ಭ್ರೂಮಧ್ಯದಲ್ಲಿ ಶುಭ್ರವರ್ಣದ ಜ್ಯೋತಿರ್ಲಿಂಗದ ಅನುಸಂಧಾನ ಮಾಡಲು ''ಉನ್ಮನೀ'' ಮುದ್ರೆಯನ್ನು ಸಾಧಿಸಬೇಕು. ಇಲ್ಲಿಯೂ ಸಹ ಮೊದಲಿನಂತೆ ಸುಖಾಸನದಲ್ಲಿ ಕುಳಿತು ಪ್ರಾಣಾಯಾಮವನ್ನು ಮಾಡಿ ಅರ್ಧ ನಿಮೀಲಿತ ನೇತ್ರದಿಂದ ದೃಷ್ಟಿಯನ್ನು ನಾಸಾಗ್ರದಲ್ಲಿ ಇರಿಸಿ ಅಲ್ಲಿ ಬಾಹ್ಯವಸ್ತುಗಳನ್ನು ಲಕ್ಷಿಸದೇ ಮನೋವೃತ್ತಿಯನ್ನು ಭ್ರೂಮಧ್ಯದ ಆಜ್ಞಾಚಕ್ರದಲ್ಲಿ ದೃಢಗೊಳಿಸುವದೇ ''ಉನ್ಮನೀ'' ಮುದ್ರೆಯು. ಈ ಮುದ್ರೆಯ ಸಹಾಯದಿಂದ ಭ್ರೂಮಧ್ಯದಲ್ಲಿರುವ ಸ್ಫಟಿಕದಂತೆ ಶುಭ್ರ ಬೆಳಗಿನ ಜ್ಯೋತಿರ್ಲಿಂಗವನ್ನು ಅನುಸಂಧಾನಿಸಬಹುದು. ಅಂತೆಯೇ- ''ಮೇಲೆ ಕವಿವ ಬೆಳಗನುನ್ಮನಿಯೆಂಬ ಸುಖಸುಪ್ತಿ ಯಚ್ಚಳಿಯದೆ ಗುರು ಶಂಭುಲಿಂಗವೆನಿಸಿ'' (ಕೈ. ಪ. ಯೋ. ೨೭-೩) ಎಂಬುದಾಗಿ ಉನ್ಮನೀ ಮುದ್ರೆಯಿಂದ ತಮಗಾದ ಅಂತರ್ಜ್ಯೋತಿಯ ಅನುಭವವನ್ನು ಶ್ರೀ ನಿಜಗುಣ ಶಿವಯೋಗಿಗಳು ವ್ಯಕ್ತಪಡಿಸಿದ್ದಾರೆ.

ಸಾಧನೆಯನ್ನು ಮಾಡದೇ ಇರುವ ಸಾಮಾನ್ಯ ಜನರಿಗೆ ಮುದ್ರಾಸಾಧನೆಯ ವಿಷಯವು ಕಠಿಣವಾಗಿ ತೋರಬಹುದು. ಏಕೆಂದರೆ ''ಅಂತರ್ಲಕ್ಷ್ಯಂ ಬಹಿರ್ದೃಷ್ಟಿರ್ನಿಮೇಷೋನ್ಮೇಷವರ್ಜಿತಾ'' ಎಂಬ ಹಠಯೋಗ ಪ್ರದೀಪಿಕೆಯ ವಾಕ್ಯದಂತೆ ರೆಪ್ಪೆಗಳನ್ನು ಬಡಿಯದೇ ಅರ್ಧ ನಿಮೀಲಿತ ನೇತ್ರದಲ್ಲಿ ದೃಷ್ಟಿಯನ್ನು ವರಗಿಸಿ ಮನೋವೃತ್ತಿಯನ್ನು ಅಂತರಂಗದಲ್ಲಿ ಸ್ಥಿರಗೊಳಿಸುವದು ಹೇಗೆ ? ದೃಷ್ಟಿ ಹೊರಮುಖವಾದೊಡನೆ ಮನಸ್ಸೂ ಸಹ ಹೊರಮುಖವಾಗುವದಿಲ್ಲವೇ ? ಎಂಬ ಸಂದೇಹ ಬರುವುದು ಸಹಜ. ಸ್ಥಾಮಾನ್ಯ ಜನರಿಗೂ ಸಹ ಮುದ್ರಾಸಾಧನೆಯು ಸಹಜವಾಗಿಯೇ ಪ್ರಾಪ್ತವಾಗಿರುತ್ತದೆ. ಅದು ಹೆಲ್ಗೆಂದರೆ- ತನ್ನ ಅತಿ ಪ್ರೀತಿಯ ಸತಿ-ಸುತಾದಿಗಳನ್ನೋ, ಹೊಲ-ಮನೆಗಳನ್ನೋ ಬಿಟ್ಟು ಯಾತ್ರಾರ್ಥಿಯಾಗಿ ಇಲ್ಲವೇ ವ್ಯಾಪಾರಕ್ಕಾಗಿ ಬಹುದೂರದ ದೇಶಕ್ಕೆ ಹೋದ ಗೃಹಸ್ಥನೋರ್ವನಿಗೆ ತನ್ನ ಪ್ರಿಯವಸ್ತುಗಳ ನೆನಪಾದೊಡನೆ ತಾನು ಎಷ್ಟೇ ದೂರ ವಿದ್ದರೂ ಏಕಾಗ್ರವಾದ ಮನೋವೃತ್ತಿಗಳಿಂದ ತನ್ಮಯನಾಗಿ ಅವುಗಳನ್ನು ಧ್ಯಾನಿಸುತ್ತಿರುತ್ತಾನೆ. ಆಗ ಅವನ ಕಣ್ಣುಗಳು ತೆರೆದಿದ್ದರೂ ಎದುರಿನದನ್ನು ನೋಡಲಾರ. ಕಣ್ಣುಗಳನ್ನು

ಪಿಳುಕಿಸಲಾರ. ಈ ಸ್ತಬ್ಧಸ್ಥಿತಿಯ ಅನುಭವವು ಸರ್ವರಿಗೂ ಒಂದಿಲ್ಲೊಂದುಸಾರೆ ಬಂದೇ ಬಂದಿರುತ್ತದೆ. ಇಂತಹ ಸ್ಥಿತಿಯು ಬರಲು ಕಾರಣ ವಸ್ತುಗಳ ಮೇಲಿನ ಅತ್ಯಾಸಕ್ತಿಯೇ. ಈ ಆಸಕ್ತಿಯು ಅಂತರಂಗದ ಆತ್ಮತತ್ತ್ವದಲ್ಲಿ ಬೆಳೆದಾಗ ಮುದ್ರಾಸಾಧನೆಯು ಬಹಳ ಸುಲಭ.

ಇನ್ನು ಕೆಲವು ಜನರಿಗೆ ಅರೆಗಣ್ಣಿನಿಂದ ನಿದ್ರಿಸುವ ಪರಿಪಾಠ ಇರುತ್ತದೆ. ನಿರ್ನಿಮೇಷವಾಗಿ ಕಣ್ಣುಗಳು ಅರ್ಧ ಮುಚ್ಚಿರುತ್ತವೆ. ಹೊರಗಿನಿಂದ ಯಾರಾದರೂ ಬಂದು ನೋಡಿದರೆ ಅರೆಗಣ್ಣಿನಿಂದ ನೋಡುತ್ತಿರುವಂತೆ ಕಾಣುತ್ತಿದ್ದರೂ ಆತನಿಗೆ ಹೊರಗಿನ ಯಾವ ವಸ್ತುಗಳೂ ಕಾಣುತ್ತಿಲ್ಲ, ಅವನು ಗಾಢನಿದ್ರೆಯಲ್ಲಿರುತ್ತಾನೆ. ನಿದ್ರಿಸುವವನ ಮನಸ್ಸು ವಿಕಲ್ಪಗಳನ್ನೆಲ್ಲ ಕಳೆದುಕೊಂಡು ತನ್ನ ಮೂಲ ಕಾರಣದಲ್ಲಿ ಸಹಜವಾಗಿ ಲೀನವಾಗಿರುವಂತೆ ಮುದ್ರಾಯೋಗವನ್ನು ಪ್ರಯತ್ನ ಪೂರ್ವಕವಾಗಿ ಸಾಧಿಸಿದ ಸಾಧಕನ ಮನೋವೃತ್ತಿಯು ಅಂತರಂಗದ ಜ್ಯೋತಿರ್ಲಿಂಗದಲ್ಲಿ ಲೀನ ವಾಗಿರುವುದರಿಂದ ಅರ್ಧ ನಿಮೀಲಿತ ನೇತ್ರದಿಂದ ಬಹಿರ್ದೃಷ್ಟಿ ಇದ್ದರೂ ರೆಪ್ಪೆ ಬಡಿಯುವದಿಲ್ಲ, ಹೊರಗಿನದೇನನ್ನೂ ನೋಡುವುದಿಲ್ಲ. ಅದರಂತೆ ಮುದ್ರಾಸಾಧನೆ ಯನ್ನು ಮಾಡಿದವರ ದೃಷ್ಟಿ ಬಹಿರಂಗದಲ್ಲಿ ಇದ್ದರೂ ಮನೋವೃತ್ತಿಯು ಮಾತ್ರ ಅಂತರಂಗದ ಜ್ಯೋತಿರ್ಲಿಂಗಗಳಲ್ಲಿಯೇ ಲೀನವಾಗಿರುತ್ತದೆ.

ಮನುಷ್ಯನ ಭಾವನೆಯಲ್ಲಿ ಅಪಾರ ಸಾಮರ್ಥ್ಯವಡಗಿದೆ. ''ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ'' ನಾವು ಭಾವಿಸಿದಂತೆ ನಮಗೆ ಸಿದ್ಧಿಗಳು ದೊರೆಯುವುವು. ಕಾರಣ ಮೂಲಾಚಾರ್ಯರು ಉಪದೇಶಿಸಿದ ರೀತಿಯಲ್ಲಿ ಆಯಾ ಕೇಂದ್ರಗಳಲ್ಲಿ ಆಯಾ ವರ್ಣದ ಜ್ಯೋತಿರ್ಲಿಂಗಗಳನ್ನು ಭಾವಿಸಿ, ದೃಢ ಮನಸ್ಸಿನಿಂದ ನಿರಂತರ ಧ್ಯಾನಾಸಕ್ತ ರಾದರೆ ನಾವು ಭಾವಿಸಿದ ವರ್ಣದ ಜ್ಯೋತಿರ್ಲಿಂಗಗಳನ್ನು ಅಂತರಂಗದಲ್ಲಿ ಅನುಭವಿಸಬಹುದು.

**ಇಷ್ಟಲಿಂಗವು ಅಂತರ್ಲಿಂಗೋಪಾಸನೆಗೆ ಸಹಾಯಕವು :**

ಇನ್ನು ಹೊರಗಿನ ಆಲಂಬವಿಲ್ಲದೇ ಬಹಿರ್ದೃಷ್ಟಿಯನ್ನಿರಿಸಿ ಅಂತರ್ಲಕ್ಷ್ಯದಲ್ಲಿ ಕೂಡುವದು ಪ್ರಬಲ ಸಾಧನೆ ಇಲ್ಲದೇ ಅಸಾಧ್ಯವು. ಅಂತೆಯೇ ವೀರಶೈವ ಆಚಾರ್ಯರು ಅಂತರಂಗದ ಜ್ಯೋತಿರ್ಲಿಂಗದ ಆಕೃತಿಯಂತಿರುವ ಇಷ್ಟಲಿಂಗವನ್ನು ಕರಸ್ಥಲದಲ್ಲಿ ದಯಪಾಲಿಸಿದ್ದಾರೆ. ಇದು ನಮ್ಮ ಪಶ್ಚಿಮ ಚಕ್ರದ ಚಿತ್ಕಳೆಯಿಂದ ಕೂಡಿಕೊಂಡಿರುವುದರಿಂದ ಇದರ ಮುಖಾಂತರವೇ ಅಂತರಂಗದಲ್ಲಿ ಪ್ರವೇಶಿಸಲು ಬರುತ್ತದೆ. ಅಂತೆಯೇ ''ಕರಪೀಠದಿಷ್ಟವೆನಿಸುವ ಶಂಭುಲಿಂಗವು ಗುರುಮತದೊಳಾವ ದೆಸೆಯಿಂದ ಬಂದುದು'' (ಕೈ. ಪ. ಯೋ. ೨೫-೩) ಎಂದು ಪ್ರಶ್ನಿಸಿದ ನಿಜಗುಣರು ಅಂತರಂಗದ ಅರುವಿನ ಕುರುಹಾಗಿ ಬಂದ ಇಷ್ಟಲಿಂಗವು ಪುನಃ ಆ ಅರುಹನ್ನು ತಲುಪಲು ಮಾಧ್ಯಮವೆಂಬುದನ್ನು ಸೂತ್ರರೂಪವಾಗಿ ತಿಳಿಯಪಡಿಸಿದ್ದಾರೆ.

ಆದ್ದರಿಂದ ವೀರಶೈವ ಸಾಧಕರು ಇಷ್ಟಲಿಂಗವನ್ನು ಎಡಹಸ್ತಪೀಠದಲ್ಲಿಟ್ಟು, ಹಸ್ತ ಪೀಠವು ನಾಶಿಕಾಗ್ರಕ್ಕೆ ಸಮಬರುವ ರೀತಿಯಲ್ಲಿರಿಸಿ; ದೃಷ್ಟಿಯಿಂದ ಇಷ್ಟಲಿಂಗವನ್ನು

ಹನ್ನೆರಡು ಅಂಗುಲ ದೂರದಲ್ಲಿ ಹಿಡಿದು ಸ್ವಲ್ಪು ಹೊತ್ತು ತ್ರಾಟಕವನ್ನು ಮಾಡಿ ನಂತರ ಸಂಕಲ್ಪ ಬಲದಿಂದ ಮೂಲಾಧಾರ, ಹೃದಯ ಹಾಗೂ ಭ್ರೂಮಧ್ಯಗಳಲ್ಲಿ ತನಗೆ ಇಷ್ಟ ಬಂದ ಯಾವುದೇ ಚಕ್ರದಲ್ಲಿ ಮನಸ್ಸನ್ನು ನೆಲೆಗೊಳಿಸಿ ಅನುಸಂಧಾನ ಮಾಡ ತೊಡಗಿದರೆ ಸಾಧಕನ ಸಾಧನೆಗೆ ತಕ್ಕಂತೆ ಅನುಭವಗಳು ಬರತೊಡಗುವವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಉಪದೇಶಿಸಿದ ಈ ಅಂತರ್ಲಿಂಗಾನು ಸಂಧಾನವನ್ನು ಬಹು ಜನ ಶರಣರು ಸಾಧಿಸಿ, ಅಂತರ್ಲಿಂಗಗಳ ಜ್ಯೋತಿಯನ್ನು ಸಾಕ್ಷಾತ್ಕರಿಸಿಕೊಂಡು–

''ಗುದ ಲಿಂಗ ನಾಭಿಕಮಲದಿಂದ ಮೇಲೆ ಷಡಂಗುಲವನ್ನೊತ್ತಿದರೆ, ಕಣ್ಣಿಲ್ಲದೇ ಕಾಣಬಹುದು ಲಿಂಗ ಪ್ರಕಾಶವ ..........ಗುಹೇಶ್ವರಾ''

''ಪರುಷದ ಗಿರಿಯಲ್ಲಿ ಚಿಂತಾಮಣಿ ರತ್ನವ ಕಂಡೆನಯ್ಯಾ ಅನಂತ ಕೋಟಿ ಸೋಮ ಸೂರ್ಯರ ಬೆಳಗು ನೋಡಾ !............ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ''.

''ಪಶ್ಚಿಮದ ಕದವ ತೆಗೆದು ಬಚ್ಚ ಬರಿಯ ಬೆಳಗ ನೋಡಲೊಲ್ಲದೇ, ಕತ್ತಲೆಯ ಬಾಗಿಲಿಗೆ ನುಗ್ಗಿ ಕಣ್ಣುಗಾಣದ ಅಂಧಕರಂತೆ ಜಾರಿ ಜಾರಿ ಎಡವಿಬಿದ್ದು ಕರ್ಮಕ್ಕೆ ಗುರಿಯಾಗುವ ಮರ್ತ್ಯದ ಮನುಜರಿರಾ, ನೀವು ಕೇಳಿರೋ ಹೇಳಿಹೆನು.......... ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣಾ''.

ಈ ತಮ್ಮ ಅನುಭವ ನುಡಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಅಂತರಂಗದ ಈ ಜ್ಯೋತಿರ್ಲಿಂಗಗಳು ಸ್ವಯಂ ಪ್ರಕಾಶಮಾನಗಳಾಗಿರುವುದ ರಿಂದ, ಪ್ರದೀಪ ಪ್ರಕಾಶಕ್ಕೆ ಎಣ್ಣೆ ಬತ್ತಿ ಮತ್ತು ಪಣತಿಗಳೆಂಬ ಉಪಾಧಿಗಳು ಬೇಕಾಗುವಂತೆ ಈ ಜ್ಯೋತಿರ್ಲಿಂಗಗಳಿಗೆ ಯಾವ ಉಪಾಧಿಗಳ ಅವಶ್ಯಕತೆ ಇಲ್ಲ. ಆದ್ದರಿಂದ ''ನಿರುಪಾಧಿಕಮಾಖ್ಯಾತಂ ಲಿಂಗಸ್ಯಾಂತರ ಧಾರಣಂ'' ಎಂಬ ಪೂಜ್ಯರ ಆದೇಶದಂತೆ ಈ ಅಂತರ್ಲಿಂಗಗಳು ನಿರುಪಾಧಿಕಗಳೆಂದು ಕರೆಯಿಸಿಕೊಳ್ಳುತ್ತವೆ. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳೂ– ''ಸಾತಿಶಯದ ನಿರುಪಾಧಿಕ ನಿರ್ಮಲ ಜ್ಯೋತಿ ಬೆಳಗುತಿದೆ'' ಎಂದಿದ್ದಾರೆ.

ಈ ಲಿಂಗಧಾರಣೆಯು ಬಹು ವಿಶಿಷ್ಟವಾದದ್ದು. ಬಾಹ್ಯ ಲಿಂಗಧಾರಣೆಗಿಂತಲೂ ಕೋಟಿಪಾಲು ಮಿಗಿಲಾದದ್ದು. ಬಾಹ್ಯಲಿಂಗ ಧಾರಣೆಯ ಫಲವೇ ಅಂತರ್ಲಿಂಗ ಧಾರಣೆಯು. ಕಾರಣ ಪ್ರತಿಯೊಬ್ಬರೂ ಸದ್ಗುರುಗಳು ಮಾರ್ಗದರ್ಶನದಲ್ಲಿ ಈ ಬಹು ಮಹತ್ತ್ವಪೂರ್ಣವಾದ ಅಂತರ್ಲಿಂಗಾನುಸಂಧಾನವನ್ನು ಮಾಡಿ ಜನನ–ಮರಣ ದುಃಖದಿಂದ ದೂರಾಗಲು ಪ್ರಯತ್ನಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಆಗಷ್ಟ್, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

## ಆಶೀರ್ವಚನ-೭

ಯೇ ಧಾರಯಂತಿ ಹೃದಯೇ ಲಿಂಗಂ ಚಿದ್ರೂಪಮೈಶ್ವರಂ ।
ನ ತೇಷಾಂ ಪುನರಾವೃತ್ತಿರ್ಘೋರಸಂಸಾರ ಮಂಡಲೇ ॥ (ಸಿ. ಶಿ. ೬.೪೧)

ಹೃದಯ ಕಮಲದಲ್ಲಿ ಚಿದ್ರೂಪವಾದ ಶಿವಲಿಂಗವನ್ನು ಧರಿಸಿದವರಿಗೆ ಈ ಘೋರ ಸಂಸಾರದಲ್ಲಿ ಪುನರ್ಜನ್ಮವಿರುವುದಿಲ್ಲ.

ಅಂತರ್ಲಿಂಗಾನುಸಂಧಾನಮಾತ್ಮವಿದ್ಯಾಪರಿಶ್ರಮಃ ।
ಗೂರೂಪಾಸನ ಶಕ್ತಿಶ್ಚ ಕಾರಣಂ ಮೋಕ್ಷಸಂಪದಾಂ ॥ (ಸಿ. ಶಿ. ೬.೪೨)

ಹೃದಯಕಮಲದಲ್ಲಿ ಅಂತರ್ಲಿಂಗಾನುಸಂಧಾನವನ್ನು ಮಾಡುವದು, ಆತ್ಮವಿದ್ಯೆಯಲ್ಲಿ ಶ್ರಮಿಸುವದು ಮತ್ತು ಗುರುಸೇವೆಯನ್ನು ಮಾಡುವದು ಇವು ಮೂರು ಮುಕ್ತಿಯ ಕಾರಣಗಳಾಗಿರುತ್ತವೆ.

ವೈರಾಗ್ಯಜ್ಞಾನ ಯುಕ್ತಾನಾಂ ಯೋಗಿನಾಂ ಸ್ಥಿರಚೇತಸಾಂ ।
ಅಂತರ್ಲಿಂಗಾನುಸಂಧಾನೇ ರುಚಿರ್ಬಾಹ್ಯೇ ನ ಜಾಯತೇ ॥ (ಸಿ. ಶಿ. ೬.೪೩)

ವೈರಾಗ್ಯದಿಂದಲೂ ಜ್ಞಾನದಿಂದಲೂ ಪರಿಪೂರ್ಣರಾದ ಅಂತೆಯೇ ಸ್ಥಿರವಾದ ಮನಸ್ಸುಳ್ಳ ಯೋಗಿಗಳಿಗೆ ಅಂತರ್ಲಿಂಗಾನುಸಂಧಾನದಲ್ಲಿ ವಿಶೇಷವಾದ ಪ್ರೀತಿ ಇರುತ್ತದೆಯೇ ವಿನಾಹ ಬಾಹ್ಯಲಿಂಗಧಾರಣೆಯಲ್ಲಿ ಅಷ್ಟೊಂದು ಪ್ರೀತಿ ಇರುವದಿಲ್ಲ.

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ವಾಸವಾದ್ಯಶ್ಚ ಲೋಕಪಾಃ ।
ಮುನಯಃ ಸಿದ್ಧಗಂಧರ್ವಾ ದಾನವಾ ಮಾನವಾಸ್ತಥಾ ॥

ಸರ್ವೇ ಸುಜ್ಞಾನಯೋಗೇನ ಸರ್ವಕಾರಣ ಕಾರಣಂ ।
ಪಶ್ಯಂತಿ ಹೃದಯೇ ಲಿಂಗಂ ಪರಮಾನಂದಲಕ್ಷಣಂ ॥ (ಸಿ. ಶಿ. ೬.೪೪-೪೫)

ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿಗಳು, ಇಂದ್ರ ಮೊದಲಾದ ದಿಕ್ಪಾಲಕರು, ಸಕಲ ಮುನಿಗಳು, ಸಿದ್ಧರೂ, ಗಂಧರ್ವರೂ ದಾನವರು ಮತ್ತು ಮಾನವರು ಹೀಗೆ ಇವರೆಲ್ಲರೂ ಶ್ರೇಷ್ಠವಾದ ಜ್ಞಾನಯುಕ್ತರಾಗಿರುವುದರಿಂದ ಎಲ್ಲ ಕಾರಣಗಳಿಗೆ ಕಾರಣ ರೂಪವಾದ ಪರಮಾನಂದ ಸ್ವರೂಪವಾದ ಲಿಂಗವನ್ನು ಹೃದಯದಲ್ಲಿ ಸಾಕ್ಷಾತ್ಕಾರ ಮಾಡಿ ಕೊಂಡಿದ್ದಾರೆ.

ತಸ್ಮಾತ್ಸರ್ವಪ್ರಯತ್ನೇನ ಶಾಂಕರಂ ಲಿಂಗಮುತ್ತಮಂ ।
ಅಂತರ್ವಿಭಾವಯೇದ್ವಿದ್ವಾನಶೇಷಕ್ಲೇಶಮುಕ್ತಯೇ ॥ (ಸಿ. ಶಿ. ೬.೪೬)

ವಿದ್ವಾಂಸನಾದವನು ತನ್ನ ಪಂಚಕ್ಲೇಶಗಳ ವಿಮುಕ್ತಿಗಾಗಿ ಸರ್ವವಿಧಗಳಾದ ಪ್ರಯತ್ನದಿಂದ ಶಿವಲಿಂಗವನ್ನು ಅಂತರಂಗದಲ್ಲಿ ಪರಿಭಾವಿಸಬೇಕು.

**ಅಂತರ್ಲಿಂಗೋಪಾಸನೆಯು ಸಂಸಾರ ನಾಶಕವು :**

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸಂಸಾರದ ಸಕಲ ಜೀವಿಗಳೆಲ್ಲ ಈ ಜನನ–ಮರಣದ ಆವೃತ್ತಿಯಿಂದ ಮುಕ್ತರಾಗಲೆಂಬ ಕಾರುಣ್ಯದಿಂದ ಅಂತರ್ಲಿಂಗಾನುಸಂಧಾನವನ್ನು ಉಪದೇಶಿಸಿದ್ದಾರೆ.

ಜನಸಾಮಾನ್ಯರು ತಿಳಿದುಕೊಂಡಂತೆ ಹೊರಗೆ ತೋರುವ ಜಗತ್ತು ಸಂಸಾರವಲ್ಲ ಇದು ದುಃಖದಾಯಿಯೂ ಅಲ್ಲ, ಅಹಂಕಾರ–ಮಮಕಾರಗಳೇ ಸಂಸಾರ; ಇದರಿಂದಲೇ ಜನನಾದಿ ದುಃಖಪರಂಪರೆ. (ಈ ವಿಷಯವನ್ನು ಸಂಸಾರ ಹೇಯಸ್ಥಲದಲ್ಲಿ (ಕಿರಣ–೩) ವಿಸ್ತಾರವಾಗಿ ನಿರೂಪಿಸಲಾಗಿದೆ.)

''ಸಸ್ಯಮಿವ ಜಾಯತೇ ಮರ್ತ್ಯಃ ಸಸ್ಯಮಿವ ಪಚ್ಯತೇ ಪುನಃ'' ಎಂಬ ಉಪನಿಷದ್ವಾಕ್ಯದಂತೆ ನಮ್ಮ ಹುಟ್ಟು–ಸಾವುಗಳಿಗೆ ನಿರ್ದಿಷ್ಟ ಸಂಖ್ಯೆ ಇದೆಯೇ ? ಇದ್ದರೂ ಅದನ್ನು ಎಣಿಸಲು ಸಾಧ್ಯವೇ ? ''ಧರೆಯನೆಲ್ಲವನು ಸಣ್ಣಿಸಿ ಧೂಳಿ ಮಾಡಲಾ। ಪರಮಾಣುಗಳೆನಿತನಿತು ದೇಹವನು ॥ ಧರಿಸುತೊಂದೊಂದು ಜೀವರ ಬಸುರೊಳು ಬಂದು ।'' (ಕೈ.ಪ.ಜೀ. ೨–೧) ಎಂಬುದಾಗಿ ಶ್ರೀ ನಿಜಗುಣ ಶಿವಯೋಗಿಗಳು ಎಣಿಸುವ ಅಸಾಧ್ಯತೆಯನ್ನೇ ಸಾಂಕೇತಿಕವಾಗಿ ತಿಳಿಯಪಡಿಸಿ ವ್ಯರ್ಥ ಕಾಲಹರಣ ಮಾಡಬೇಡಿರೆಂಬುದಾಗಿ ಎಚ್ಚರಿಕೆಯನ್ನಿತ್ತಿದ್ದಾರೆ.

ಜನ್ಮ ದುಃಖಂ ಜರಾದುಃಖಂ ಜಾಯಾದುಃಖಂ ಪುನಃ ಪುನಃ ।
ಸಂಸಾರ ಸಾಗರಂ ದುಃಖಂ ತಸ್ಮಾಜ್ಜಾಗ್ರತ ಜಾಗ್ರತ ॥

ಸಂಸಾರದ ಮೋಹನಿದ್ರೆಯಲ್ಲಿ ತನ್ನನ್ನೇ ಮರೆತು ಹಲವು ದುಃಖಗಳನ್ನನುಭವಿಸುವ ಕಷ್ಟಜೀವಿಗಳನ್ನು ನೋಡಿ ಜ್ಞಾನಿಯು ಎಬ್ಬಿಸುತ್ತಿದ್ದಾನೆ. ''ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ'' ಈ ಉಪನಿಷತ್ತು ನಮ್ಮನ್ನು ಅನಾದಿಕಾಲದಿಂದ ಎಚ್ಚರಿಸುತ್ತಲೇ ಇದೆ. ಆದರೆ ಎದ್ದವರೆಷ್ಟು ? ''ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್'' ಎಂಬ ಶ್ರುತಿಯಂತೆ ಯಾರೋ ಒಬ್ಬರು. ಉಳಿದ ಅನಂತ ಕೋಟಿ ಜೀವಿಗಳು ಘೋರ ಸಂಸಾರ ಮಂಡಲದಲ್ಲಿ ಸುತ್ತುತ್ತಲಿದ್ದಾರೆ. ಈ ಪಿಷ್ಟಪೇಷಣವು ಮುಗಿಯುವದಾದರೂ ಎಂದು ? ಎಂಬುದಾಗಿ ಭಯಗೊಂಡ ಜೀವಿಗಳಿಗೆ– ''ನ ತೇಷಾಂ ಪುನರಾವೃತ್ತಿರ್ಘೋರ ಸಂಸಾರ ಮಂಡಲೇ'' ಹೃದಯ ಕಮಲದಲ್ಲಿ ಚಿದ್ರೂಪವಾದ ಜ್ಯೋತಿರ್ಲಿಂಗವನ್ನು ಧರಿಸಿದವರಿಗೆ ಪುನರಾವೃತ್ತಿ ಇಲ್ಲವೆಂದು ಪೂಜ್ಯಪಾದ ರೇಣುಕರು ಅಭಯವನ್ನಿತ್ತಿದ್ದಾರೆ.

**ಮೋಕ್ಷಸಂಪತ್ತು :**

ಮುಕ್ತಿ ಎಂಬುದೊಂದು ಅಮೂಲ್ಯ ಸಂಪತ್ತು, ಅಕ್ಷಯವಾದ ಸಂಪತ್ತು, ಇದಿಲ್ಲದ ಭೌತಿಕವಾದ ಸಂಪತ್ತು ''ಹೆಣಕೆ ಮಾಡಿದ ಶೃಂಗಾರ''. ''ಆತ್ಮಶ್ರೀ''ವುಳ್ಳವನು ಭೌತಿಕವಾಗಿ ದರಿದ್ರನಂತೆ ತೋರಿದರೂ ಅವನೊಬ್ಬ ಆಗರ್ಭ ಶ್ರೀಮಂತ. ಬಟ್ಟೆ ಇಲ್ಲದೇ ದಿಗಂಬರನಾಗಿ ಒಂದು ಮುರಿದ ಚಕ್ಕಡಿಯ ಕೆಳಗೆ ಧೂಳಿಯಲ್ಲಿಯೇ ಕುಳಿತ ರೈಕ್ವನ ಹತ್ತಿರ ಚಕ್ರವರ್ತಿಯಾದ ಜಾನುಶೃತಿಯು ಜ್ಞಾನ ಭಿಕ್ಷೆಗಾಗಿ ಬರಲಿಲ್ಲವೇ ? ಈ ಅಮೂಲ್ಯ ಸಂಪತ್ತಿನ ಮಹತ್ವ ಹಾಗೂ ಪ್ರಾಪ್ತಿಯ ಮಾರ್ಗವನ್ನರಿಯದ ನಮಗೆಲ್ಲ–

ಅಂತರ್ಲಿಂಗಾನುಸಂಧಾನಮಾತ್ಮವಿದ್ಯಾ ಪರಿಶ್ರಮಃ।
ಗುರೂಪಾಸನ ಶಕ್ತಿಶ್ಚ ಕಾರಣಂ ಮೋಕ್ಷಸಂಪದಾಂ ॥ (ಸಿ. ಶಿ. ೬.೪೨)

ಎಂಬುದಾಗಿ ಪೂಜ್ಯಪಾದರು ಅಂತರ್ಲಿಂಗಾನುಸಂಧಾನ, ಆತ್ಮವಿದ್ಯೆಯ ಪರಿಶ್ರಮ ಹಾಗೂ ಗುರುಸೇವೆ ಇವು ಮೂರು ಮೋಕ್ಷಸಂಪತ್ತಿನ ಪ್ರಾಪ್ತಿಗೆ ಮೂಲ ಕಾರಣಗಳೆಂಬುದಾಗಿ ಆದೇಶವಿತ್ತಿದ್ದಾರೆ.

ಹಗಲಿರುಳು ಹೆಣಗಾಡಿ ವಿಪದ್ರೂಪವಾದ ಸಂಸಾರ ಸಂಪತ್ತನ್ನು ಪ್ರಾಪ್ತಿಮಾಡಿಕೊಳ್ಳುತ್ತಿರುವ ನಾವು ಮೋಕ್ಷ ಸಂಪತ್ತಿಗಾಗಿ ಸ್ವಲ್ಪಾದರೂ ಶ್ರಮಿಸಿದ್ದೇವೆಯೇ ? ಎಂದು ನಮ್ಮಾತ್ಮನನ್ನು ನಾವೇ ಪ್ರಶ್ನಿಸಿಕೊಂಡಾಗ ಬರುವ ಉತ್ತರವೇನು ? ಉತ್ತರಿಸಲ ಸಮರ್ಥವಾದ ನಮ್ಮ ಜೀವನ ಜೀವನವಲ್ಲ ಇದೊಂದು ಉಪಜೀವನ; ಭೂಮಿಗೆ ಭಾರವಾದ ಜೀವನ, ಮನುಷ್ಯರೂಪದ ಮೃಗಜೀವನ ''ತೇ ಮರ್ತ್ಯ ಲೋಕೇ ಭುವಿಭಾರ ಭೂತಾ ಮನುಷ್ಯರೂಪೇಣ ಮೃಗಾಶ್ಚರಂತಿ'' ಎಂದಿದ್ದಾನೆ ನೊಂದ ಕವಿಯೋರ್ವ. ಅಡವಿಯಲ್ಲಿಂದು ಕ್ರೂರಮೃಗಗಳ ಸಂಖ್ಯೆ ಕಡಿಮೆಯಾಗಹತ್ತಿವೆ. ಇದಕ್ಕೆ ಕಾರಣ ಅವೆಲ್ಲ ಮನುಷ್ಯ ರೂಪವನ್ನು ಧರಿಸಿ ಊರನ್ನು ಸೇರಿವೆ ಎಂಬುದೊಂದು ಕವಿಯ ಕಲ್ಪನೆ ಇಂದು ಸತ್ಯವಾಗಿಯೇ ತೋರುತ್ತಿದೆ.

ಸದ್ಗುರುವಾದ ಅನಿಮಿಷಯೋಗಿಯ ಅನುಗ್ರಹಕ್ಕೆ ಪಾತ್ರನಾಗಿ ಆತ್ಮವಿದ್ಯೆಯನ್ನು ಸಂಪಾದಿಸಿ ಅಂತರ್ಲಿಂಗಾನುಸಂಧಾನವನ್ನು ಮಾಡಿ ಅನುಭವಿಗಳಾದ ಶ್ರೀ ಅಲ್ಲಮ ಪ್ರಭುಗಳು–

''ಹೇಮ ನಿನ್ನದಲ್ಲ ಭೂಮಿ ನಿನ್ನದಲ್ಲ ಕಾಮಿನಿ ನಿನ್ನವಳಲ್ಲ
ಇವೆಲ್ಲ ಜಗಕ್ಕಿಕ್ಕಿದ ವಿಧಿ; ನಿನ್ನದೆಂಬುದು ಜ್ಞಾನರತ್ನ
ಅಂತಪ್ಪ ರತ್ನವನು ಧರಿಸಿದೆಯಾದೊಡೆ
ನಿನ್ನಂತಹ ಸಿರಿವಂತರಿಲ್ಲ ಕಾಣಾ ಗುಹೇಶ್ವರಾ''.

ಎಂದು ನುಡಿದ ನುಡಿಯ ಮರ್ಮವನ್ನು ತಿಳಿದವರೆಷ್ಟು ಜನ ? ಅಂದು ನುಡಿದ ಆಚಾರ್ಯರ ನುಡಿಯ ಅರಿವಿಲ್ಲ; ಇಂದು ನುಡಿದ ಶರಣರ ನುಡಿಯ ಪರವೆ ನಮಗಿಲ್ಲವೆಂದಾಗಿ ಆ ಮುಕ್ತಿಸಂಪತ್ತಿನ ಪ್ರಾಪ್ತಿಯಾಗುವದಾದರೂ ಹೇಗೆ ?

ಲೌಕಿಕ ಸಂಪತ್ತನ್ನು ಪ್ರಾಪ್ತಿಮಾಡಿಕೊಳ್ಳಬೇಕಾದರೆ ಎಂಟು ತಾಸುಗಳ ಪರಿಶ್ರಮ ಅನಿವಾರ್ಯ, ಪ್ರತಿಯೊಂದು ಕ್ಷೇತ್ರದಲ್ಲಿ ಪ್ರಾಯಃ ಎಂಟು ತಾಸಿನ ದುಡಿಮೆಯ ನಿಯಮವಿದೆ. ಅದಷ್ಟರಿಂದ ಸಾಲದ ಎಷ್ಟೋ ಜನ ಓವರ್ ಡ್ಯೂಟಿಯನ್ನೂ ಮಾಡುವದುಂಟು. ಇಷ್ಟಾದರೂ ಕೊನೆಗೆ ದೊರೆಯುವುದಾದರೂ ಏನು ? ನಿರಾಶೆಯೇ ಅಲ್ಲವೇ ? ಆಯುಷ್ಯದುದ್ದಕ್ಕೂ ದುಡಿದು ಸಂಪಾದಿಸಿ ಸಾವನ್ನಪ್ಪಿಕೊಳ್ಳುತ್ತಿರುವ ಶತಾಯುಷಿಯಾದ ಮುದುಕನು ಮುಗುಳು ನಗೆಯಿಂದ ಸಾಯುವದನ್ನು ನೋಡಿರುವಿರಾ ? ಇದಕ್ಕೆ ಕಾರಣ ತಾನು ಸಂಪಾದಿಸಿದುದೆಲ್ಲ ಇಲ್ಲಿಯೇ ಉಳಿಯಿತು. ತಾನು ಮಾತ್ರ ರಿಕ್ತನಾಗಿಯೇ ಹೊರಟಿರುವೆನೆಂಬ ಭಾವನೆಯೇ ಅಲ್ಲವೆ ? ಅಂತೆಯೇ ಕಬೀರನು–

''ಮುಠೀಬಾಂಧಕೇ ಆಯಾಥಾ। ಹಾಥ ಪಸಾರಕೇ ಜಾಯೇಗಾ ॥''

ಎಂದು ಹೋಗುವಾಗ ಜೀವನು ಖಾಲೀ ಕೈಯಿಂದಲೇ ಹೋಗುವನೆಂಬುದನ್ನು ಸರ್ವಾನುಭವಸಿದ್ಧವಾದ ತೆರೆದ ಕೈಯನ್ನು ಉದಾಹರಿಸಿದ್ದಾನೆ. ಕೂಸಿನ ಜನನವಾದಾಗ ಅದರ ಮುಷ್ಠಿ ಬಂದಾಗಿರುತ್ತದೆ. ಮರಣದ ನಂತರ ಅದು ತೆಗೆದುಬಿಡುತ್ತದೆ. ಆಗ ಮುಚ್ಚಲು ಎಷ್ಟು ಪ್ರಯತ್ನಿಸಿದರೂ ಅದು ಮುಚ್ಚುವದಿಲ್ಲ. ಈ ತೆರೆದ ಕೈಗಳು– ''ಇಷ್ಟುದಿನ ಸಂಸಾರಕ್ಕಾಗಿ ಪರಿಶ್ರಮ ಪಟ್ಟ ಜೀವನು ತನಗಾಗಿ ಏನನ್ನೂ ಸಂಪಾದಿಸದೇ ಹೊರಟಿದ್ದಾನೆಂಬ'' ಸಂಕೇತವನ್ನು ತೋರಿಸುತ್ತವೆ.

**ಸಮಯದ ಉಳಿತಾಯ ಹಾಗೂ ಸಾಧನೆ :**

ಕೆಲವು ಜನರು ಹೀಗೆ ಹೇಳುವುದುಂಟು–ಮೋಕ್ಷ ಸಂಪತ್ತನ್ನು ಪ್ರಾಪ್ತಿ ಮಾಡಿಕೊಳ್ಳುವ ಬಯಕೆ ನಮಗೆ ಇದೆ. ಆದರೆ ಈ ಸಂಸಾರ ಜಂಜಡದಲ್ಲಿ ಗುರುಸೇವೆ ಯನ್ನು ಮಾಡಲು, ಆತ್ಮವಿದ್ಯೆಯನ್ನು ಸಂಪಾದಿಸಲು ಹಾಗೂ ಅಂತರ್ಲಿಂಗಾನುಸಂಧಾನ ವನ್ನು ಮಾಡಲು ನಮಗೆ ಸಮಯವೇ ದೊರೆಯುವುದಿಲ್ಲ, ಏನು ಮಾಡುವುದು ? ಎಂದು.

ಸಾಧನೆಯನ್ನು ಮಾಡಲು ಸಮಯವಿಲ್ಲವೆನ್ನುವದು ಮೈಗಳ್ಳರ ಮಾತೇ ವಿನಹ ಸಾಧಕರ ಮಾತಲ್ಲ, ನಾವು ಎಷ್ಟು ಸಮಯವನ್ನು ವ್ಯರ್ಥವಾಗಿ ಕಳೆಯುತ್ತೇವೆ ಎಂಬ ಕಲ್ಪನೆಯೇ ನಮಗಿಲ್ಲ, ಒಂದು ದಿವಸಕ್ಕೆ ಇಪ್ಪತ್ತುನಾಲ್ಕು ತಾಸುಗಳಿರುವವಲ್ಲವೆ ? ನಮ್ಮ ಉಪಜೀವನದ ದುಡಿಮೆಗಾಗಿ ಎಂಟು ತಾಸು ಕಳೆಯೋಣ. ಈ ದುಡಿಮೆಯ ದಣಿವನ್ನು ನಿವಾರಿಸಿಕೊಳ್ಳಲು ಎಂಟು ತಾಸು ನಿದ್ರಿಸೋಣ. ಇಲ್ಲಿಗೆ ಹದಿನಾರು ತಾಸುಗಳಾದವು. ಇನ್ನು ಎರಡು ಸಮಯ ಊಟಮಾಡಲು ಒಂದು ತಾಸು, ಮನೆ ಬಳಕೆಯ ಸಾಮಗ್ರಿಗಳನ್ನು ತರಲು ಒಂದು ತಾಸು, ಆರೋಗ್ಯ ಕಾಪಾಡಿಕೊಳ್ಳಲು ವಾಯುವಿಹಾರಕ್ಕಾಗಿ ಒಂದು ತಾಸು. ಹೀಗೆ ಒಟ್ಟು ಅನಿವಾರ್ಯ ಜೀವನಕ್ಕೆ ಒಂದು ದಿವಸಕ್ಕೆ ಹತ್ತೊಂಬತ್ತುತಾಸುಗಳು ಬೇಕಾಗುವವು. ಇಷ್ಟಾದರೂ ಇನ್ನೂ ಐದು ತಾಸುಗಳ ಅವಕಾಶವಿದೆ. ಒಂದು ವೇಳೆ ನೀವು ಮನೋರಂಜನೆಯ ಪ್ರಿಯರಾಗಿದ್ದರೆ ಮೂರು ತಾಸುಗಳು ಚಲನಚಿತ್ರಕ್ಕಾಗಿಯೋ ನಾಟಕಗಳಿಗಾಗಿಯೋ ಉಳಿಯುವುದಿಲ್ಲವೇ ? ಈ ಸಮಯ ಪ್ರಜ್ಞೆ ನಮಗಿದೆಯೇ ? ಒಬ್ಬ ಮನುಷ್ಯನು ಪ್ರಾತಃಕಾಲ ಒಂದು ತಾಸು ಹಾಗೂ ಸಾಯಂಕಾಲ ಒಂದು ತಾಸು ಹೀಗೆ ದಿವಸಕ್ಕೆ ಕನಿಷ್ಟ ಎರಡು ತಾಸುಗಳನ್ನು ತನ್ನ ಸಲುವಾಗಿ ಕಾಯ್ದಿರಿಸಿಕೊಂಡು ತಪ್ಪದೇ ಸದ್ಗುರುಗಳ ಸೇವೆ, ಆತ್ಮವಿದ್ಯೆಯ ಸ್ವಾಧ್ಯಾಯ ಹಾಗೂ ಅಂತರ್ಲಿಂಗಾನುಸಂಧಾನ ಇವುಗಳನ್ನು ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರ ಆದೇಶದಂತೆ ಮಾಡಿದ್ದೇ ಆದರೆ ಅವನಿಗೆ ಮೋಕ್ಷಸಂಪತ್ತುಕರತಲಾಮಲಕವಾಗುತ್ತದೆ.

ಪ್ರತಿಯೊಬ್ಬ ಸಾಮಾನ್ಯ ಜೀವಿಗೆ ಎರಡು ತಾಸುಗಳ ಸಮಯ ತಾನಾಗಿಯೇ ದೊರೆಯುತ್ತದೆ. ಇನ್ನು ವಿಶೇಷ ಸಾಧನೆಯನ್ನು ಮಾಡಬೇಕೆನ್ನುವ ಶ್ರೇಷ್ಠ ಸಾಧಕನಿಗೆ ಒಂದು ದಿವಸಕ್ಕೆ ಆರು ತಾಸುಗಳ ಅವಕಾಶ ದೊರೆತೇ ದೊರೆಯುತ್ತದೆ. ಈ ಸಮಯದ ಸದುಪಯೋಗವನ್ನು ಮಾಡಿಕೊಳ್ಳಲು ಒಂದು ತಾಸು ಗುರುಸೇವೆ, ಒಂದು ತಾಸು

ಆತ್ಮವಿದ್ಯೆಗಾಗಿ ಸ್ವಾಧ್ಯಾಯ ಹಾಗೂ ಒಂದು ತಾಸು ಅಂತರ್ಲಿಂಗಾನುಸಂಧಾನರೂಪ ವಾದ ಧ್ಯಾನ ಹೀಗೆ ಪ್ರಾತಃಕಾಲ ಮತ್ತು ಸಾಯಂಕಾಲ ಮಾಡಿದ್ದೇ ಆದರೆ ಅವನೊಬ್ಬ ಆದರ್ಶಸಾಧಕನಾಗಿ ಮೋಕ್ಷಶ್ರೀಯನ್ನು ಸಹಜವಾಗಿ ಪಡೆಯಬಲ್ಲ. ಗೃಹಸ್ಥರಾದವರಿಗೆ ಪ್ರತಿನಿತ್ಯ ಗುರುಸೇವೆಯನ್ನು ಶಾರೀರಿಕವಾಗಿ ಮಾಡುವದು ಸಾಧ್ಯವಾಗದು. ಆದ್ದರಿಂದ ದಿವಸದ ಎರಡು ತಾಸುಗಳು ತನ್ನ ದುಡಿಮೆಯ ಫಲವಾದ ಸಂಪತ್ತನ್ನು ತನ್ನ ಜೀವನದ ಕಲ್ಯಾಣ ಮಾರ್ಗವನ್ನು ತೋರಿಸಿದ ಸದ್ಗುರುಗಳಿಗೆ ಸಮರ್ಪಿಸಬೇಕು. ಧನವನ್ನು ಸಮರ್ಪಿಸುವದಾಗದಿದ್ದರೆ ಸದ್ಗುರುಗಳ ಬಗ್ಗೆ ಮನಸ್ಸಿನಲ್ಲಿ ಶುಭಚಿಂತನೆಯನ್ನಾದರೂ ತಪ್ಪದೇ ಮಾಡಬೇಕು. ಹೀಗೆ ತನು–ಮನ–ಧನ ಇವುಗಳಲ್ಲಿ ಯಾವುದಾದರೊಂದರಿಂದ ಪ್ರತಿನಿತ್ಯ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಪ್ರತಿಯೊಬ್ಬರು ಗುರುಸೇವೆಯನ್ನು ಅವಶ್ಯವಾಗಿ ಮಾಡಲೇಬೇಕು.

ಹೀಗೆ ನಮಗೆ ದೊರೆತ ಸಮಯದ ಸದುಪಯೋಗವನ್ನು ಮಾಡಿಕೊಳ್ಳಲು ಪ್ರತಿಯೊಬ್ಬರೂ ಪ್ರಯತ್ನಿಸಬೇಕು. ಸಮಯದಷ್ಟು ಅಮೂಲ್ಯವಾದ ವಸ್ತು ಪ್ರಪಂಚ ದಲ್ಲಿ ಮತ್ತೊಂದಿಲ್ಲ.

ಆಯುಷಃ ಕ್ಷಣ ಏಕೋಽಪಿ ನಲಭ್ಯಃ ಸ್ವರ್ಣಕೋಟಿಭಿಃ ।
ಸ ಏವ ವ್ಯರ್ಥತಾಂ ನೀತಃ ಕಾನು ಹಾನಿಸ್ತತೋಽಧಿಕಾ ॥

ಒಂದು ಕೋಟಿ ಸ್ವರ್ಣ ನಾಣ್ಯಗಳನ್ನು ಕೊಟ್ಟರೂ ಒಂದು ಕ್ಷಣ ಆಯುಷ್ಯ ದೊರೆಯು ವದಿಲ್ಲ. ಅದನ್ನೇ ವ್ಯರ್ಥಮಾಡಿಕೊಂಡ ಮನುಷ್ಯನಿಗೆ ತುಂಬಲಾರದಷ್ಟು ನಷ್ಟ ಸಂಭವಿಸುವದು ಎಂಬುದಾಗಿ ಸುಭಾಷಿತ ಎಚ್ಚರಿಕೆ ನೀಡಿದೆ. ನಮ್ಮ ಜೀವನದ ಅಮೂಲ್ಯ ಸಮಯವನ್ನು ಕೇವಲ ಉಪಜೀವನಕ್ಕಾಗಿಯೇ ಹಾಳು ಮಾಡುವುದು ಬೇಡ. ಅದಕ್ಕಾಗಿ ಮೋಕ್ಷಾಪೇಕ್ಷಿಯಾದ ಪ್ರತಿಯೊಬ್ಬರೂ ತಮಗೆ ಸಾಧ್ಯವಾದ ರೀತಿಯಲ್ಲಿ ಗುರುಸೇವೆ, ಸ್ವಾಧ್ಯಾಯ ಮತ್ತು ಅಂತರ್ಲಿಂಗಾನುಸಂಧಾನಗಳನ್ನು ಅವಶ್ಯವಾಗಿ ಮಾಡಬೇಕು.

ವೈರಾಗ್ಯಭರಿತರೂ, ಜ್ಞಾನಸಂಪನ್ನರೂ ಆದ ಸ್ಥಿರಬುದ್ಧಿಯ ಶಿವಯೋಗಿಗಳಿಗೆ ಅಂತರ್ಲಿಂಗಾನುಸಂಧಾನದಲ್ಲಿಯೇ ಅಧಿಕವಾದ ಆಸಕ್ತಿ ಇರುವುದರಿಂದ ಅವರು ಬಾಹ್ಯ ಲಿಂಗಾರ್ಚನೆಗಿಂತಲೂ ಅಂತರ್ಲಿಂಗಾನುಸಂಧಾನದಲ್ಲಿಯೇ ಹೆಚ್ಚಿನ ಕಾಲವನ್ನು ಕಳೆಯುತ್ತಾರೆ.

ದೇವತೆಗಳು–ಮುನಿಗಳು ಅಂತರ್ಲಿಂಗೋಪಾಸಕರು :

ಇನ್ನು ಈ ಅಂತರ್ಲಿಂಗಾನುಸಂಧಾನವನ್ನು ಯಾರು ಯಾರು ಮಾಡಿದ್ದಾರೆ ? ಎಂಬ ಜಿಜ್ಞಾಸೆಯುಂಟಾದಾಗ ಪರಶಿವನ ಪ್ರಥಮ ಪುತ್ರನಾದ ಬ್ರಹ್ಮನನ್ನೇ ಮೊದಲು ಮಾಡಿಕೊಂಡು ಮನುಷ್ಯಪರ್ಯಂತವಾಗಿ ಸಕಲರೂ ಮಾಡಿರುವರೆಂಬ ವಿಷಯವನ್ನು ''ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ....'' ಮುಂತಾಗಿ ಉಪದೇಶಿಸಿದ್ದಾರೆ.

ಈ ವಿಶ್ವದ ಉತ್ಪತ್ತಿ, ಪಾಲನೆ ಮತ್ತು ಸಂಹಾರಗಳಿಗೆ ಬ್ರಹ್ಮ ವಿಷ್ಣು ಹಾಗೂ ರುದ್ರರೆಂಬ ತ್ರಿಮೂರ್ತಿಗಳಿರುವರು. ಇವರು ಮೂಲ ಪರಶಿವ ತತ್ತ್ವದ ವಿಶಿಷ್ಟ ಅಂಶಗಳು. ಇವರಾದರೂ ಆ ಮೂಲ ಲಿಂಗತತ್ತ್ವವನ್ನು ಹೃದಯದಲ್ಲಿ ಧ್ಯಾನಿಸಿ

ಸಾಕ್ಷಾತ್ಕರಿಸಿಕೊಂಡಿದ್ದಾರೆ. ಇದೇ ಪ್ರಕಾರ ''ವಾಸವಾದ್ಯಾಶ್ಚಲೋಕಪಾಃ'' ಅಂದರೆ ಇಂದ್ರ, ಅಗ್ನಿ, ಯಮ, ನೈರುತ, ವರುಣ, ವಾಯು, ಕುಬೇರ ಮತ್ತು ಈಶ್ವರರೆಂಬ ಅಷ್ಟದಿಕ್ಪಾಲಕರು ಕ್ರಮವಾಗಿ ಪೂರ್ವ, ಆಗ್ನೇಯ, ದಕ್ಷಿಣ, ನೈಋತ್ಯ, ಪಶ್ಚಿಮ, ವಾಯುವ್ಯ, ಉತ್ತರ ಮತ್ತು ಈಶಾನ್ಯ ದಿಕ್ಕುಗಳಿಗೆ ಅಧಿಪತಿಗಳಾಗಿರುತ್ತಾರೆ. ಇವರಿಗೆ ಐರಾವತ, ಟಗರು, ಕೋಣ, ಮನುಷ್ಯ, ಮಕರ, ಜಿಂಕೆ, ಕುದುರೆ ಹಾಗೂ ನಂದಿಗಳು ಕ್ರಮವಾಗಿ ವಾಹನಗಳಿರುತ್ತವೆ. ಇವರು ಎಂಟು ದಿಕ್ಕುಗಳಲ್ಲಿ ನಿವಾಸಿಸಿ ಲೋಕಗಳನ್ನು ರಕ್ಷಿಸುವ ಕಾರಣ ಇವರಿಗೆ ಲೋಕಪಾಲರೆಂತಲೂ ದಿಕ್‌ಪಾಲಕರೆಂತಲೂ ಕರೆಯುತ್ತಾರೆ.

ಇಂದ್ರೋ ವಹ್ನಿಃ ಪಿತೃಪ್ಪತಿರ್ನೈಋತೋ ವರುಣೋ ಮರುತ್ ।
ಕುಬೇರ ಈಶಃ ಪತಯಃ ಪೂರ್ವಾದೀನಾಂ ದಿಶಾಂ ಕ್ರಮಾತ್ ॥

(ಅಮರ ೧-೩-೨)

ಹೀಗೆ ಅಮರಸಿಂಹನು ಕೋಶದಲ್ಲಿ ದಿಕ್ಪಾಲಕರ ಹೆಸರನ್ನು ಅವರ ದಿಕ್ಕುಗಳನ್ನು ಸೂಚಿಸಿದ್ದಾರೆ. ಈ ಲೋಕಪಾಲರೂ ಅಂತರ್ಲಿಂಗಾನುಸಂಧಾನವನ್ನು ಮಾಡಿ ಲಿಂಗ ತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ.

ಇದರಂತೆ ''ಮುನಯಃ'' ಅನೇಕ ಮಹರ್ಷಿಗಳು ಅರ್ಥಾತ್-ಕಶ್ಯಪ್, ಅತ್ರಿ, ವಸಿಷ್ಠ, ಗೌತಮ, ಭಾಗುರಿ, ಗುರು, ಕಣ್ವ, ಬೃಹಸ್ಪತಿ, ಶಕ್ತಿ, ಮುನಿ, ಜಮದಗ್ನಿ, ಪರಾಶರ, ಮಾರ್ಕಂಡೇಯ, ಶಿಲಾದ, ದಧೀಚಿ, ಉಪಮನ್ಯು, ಭಾರದ್ವಾಜ, ಅಗಸ್ತ್ಯ, ಚ್ಯವನ, ಗರ್ಗ ಮತ್ತು ವ್ಯಾಸ ಮುಂತಾದ ಅನೇಕ ಮುನಿಗಳು ಶಿವೋಪಾಸಕರೆಂಬುದು ಶಿವ ಪುರಾಣದಿಂದ ತಿಳಿದುಬರುತ್ತದೆ. ಕಾರಣ ಇವರೆಲ್ಲರೂ ಲಿಂಗಮೂರ್ತಿಯಾದ ಶಿವನನ್ನು ತಮ್ಮ ಹೃದಯದಲ್ಲಿ ಸಾಕ್ಷಾತ್ಕಾರಿಸಿಕೊಂಡಿದ್ದಾರೆ.

ಹೀಗೆಯೇ ''ಸಿದ್ಧಗಂಧರ್ವಾಃ'' ಅಂದರೆ ದೇವಯೋನಿ ವಿಶೇಷರು ಅರ್ಥಾತ್-

''ವಿದ್ಯಾಧರೋಽಪ್ಸರೋ ಯಕ್ಷ-ರಕ್ಷೋ ಗಂಧರ್ವ ಕಿನ್ನರಾಃ ।
ಪಿಶಾಚೋ ಗುಹ್ಯಕಃ ಸಿದ್ಧೋ ಭೂತೋಽಮೀ ದೇವಯೋನಯಃ ॥

(ಅಮರ ೧-೧-೧೧)

ಎಂಬ ಅಮರಸಿಂಹನ ವಾಕ್ಯದಂತೆ ವಿದ್ಯಾಧರ, ಅಪ್ಸರಸ್, ಯಕ್ಷ, ರಕ್ಷ, ಗಂಧರ್ವ, ಕಿನ್ನರ, ಪಿಶಾಚ, ಗುಹ್ಯಕ, ಸಿದ್ಧ ಮತ್ತು ಭೂತ ಇವರೆಲ್ಲ ದೇವಯೋನಿ ವಿಶೇಷರು ಅಂದರೇ ದೇವತೆಗಳಲ್ಲಿಯ ಪ್ರಕಾರಗಳು ಇವರಾದರೂ ಅಂತರ್ಲಿಂಗಾನುಸಂಧಾನವನ್ನು ಮಾಡಿ ಲಿಂಗತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ.

ಮತ್ತೆ ''ದಾನವಾಃ'' ಅಂದರೆ ಬಾಣ, ರಾವಣ, ಹಿರಣ್ಯಕಶಿಪು ಹಿರಣ್ಯಾಕ್ಷ ಮತ್ತು ಭಸ್ಮಾಸುರ ಮುಂತಾದ ದಾನವರ ಶಿವಭಕ್ತಿ ಲೋಕಪ್ರಸಿದ್ಧವಾಗಿದೆ. ಇವರೆಲ್ಲ ಬಾಹ್ಯದಲ್ಲಿ ಲಿಂಗಮೂರ್ತಿಯಾದ ಶಿವನನ್ನು ಪೂಜಿಸಿರುವರಲ್ಲದೇ ಅಂತರಂಗದಲ್ಲಿಯೂ ಸಾಕ್ಷಾತ್ಕರಿಸಿಕೊಂಡಿದ್ದಾರೆ.

ಇದೇ ಪ್ರಕಾರ ಅನೇಕ ಜನ ಮನುಷ್ಯರೂ ಸಾಧನಾಮಾರ್ಗದಲ್ಲಿ ಪ್ರವೃತ್ತರಾಗಿ ಅಂತರ್ಲಿಂಗವನ್ನು ಪ್ರತ್ಯಕ್ಷ ಮಾಡಿಕೊಂಡದ್ದುಂಟು. ಒಟ್ಟಿನಲ್ಲಿ ಹೇಳುವದಾದರೆ ಶಿವನು ದೇವಾಧಿದೇವನೂ ಮಹಾದೇವನೂ ಆಗಿದ್ದಾನೆ. ಶಿವನ ಲಿಂಗಮೂರ್ತಿಯು ಸರ್ವರ ಆತ್ಮವೂ ಆತ್ಮಲಿಂಗವೂ ಆಗಿರುವುದರಿಂದ ಸುಜ್ಞಾನ ಸಂಪನ್ನನಾದ ಜಗದಾದಿ ಪುತ್ರನಾದ ಬ್ರಹ್ಮನಿಂದ ಮನುಷ್ಯರವರೆಗೆ ಎಲ್ಲರೂ ಅಂತರ್ಲಿಂಗೋಪಾಸನೆಯನ್ನು ಮಾಡಿದ ವಿಷಯವು ತಿಳಿದುಬರುತ್ತದೆ. ಈ ಅಂತರ್ಲಿಂಗವು ಸರ್ವರಿಗೂ ಪೂಜ್ಯವೆಂಬ ವಿಷಯವು–

ವಿಷ್ಣು ಬ್ರಹ್ಮ ಸುರೇಂದ್ರ ಚಂದ್ರರವಿಭಿಃ ಸದ್ಭೂತಿಮದ್ಭಿಃಪರೈಃ
ದೇವಾದ್ಯೈಃ ಪರಮಂತ್ರವಿದ್ಭಿರಖಿಲೈಃ ಸದ್ಭಕ್ತಿಮದ್ಭಿರ್ನರೈಃ ।
ಸದ್ಭಿಃ ಸತ್ಪಥವರ್ತಿಭಿಃ ಮನುಮುನಿವ್ರಾತೈಃ ಉಪಾಸ್ಯಂಮಹತ್
ಶ್ರೀಲಿಂಗಂ ಶಿವತತ್ತ್ವಮುಖ್ಯನಿಲಯಂ ಹೃದ್ಯಂ ಪ್ರಪದ್ಯೇಽನಿಶಮ್ ॥

(ವಾತುಲ ಶುದ್ಧಾಗಮ, ಪಟಲ ೯, ೧ ಶ್ಲೋ)

ವಾತುಲಶುದ್ಧಾಗಮದ ಈ ಶ್ಲೋಕದಿಂದ ಪರಿಪುಷ್ಟವಾಗುತ್ತದೆ.

ಈ ಅಂತರ್ಲಿಂಗಾನುಸಂಧಾನದಿಂದ ಅವಿದ್ಯಾದಿ ಪಂಚ ಕ್ಲೇಶಗಳ ನಿವೃತ್ತಿಯಾಗಿ ಶಾಶ್ವತ ಸುಖಪ್ರಾಪ್ತಿಯಾಗುವ ಕಾರಣ ''ಅಂತರ್ವಿಭಾವಯೇದ್ವಿದ್ವಾನ ಶೇಷಕ್ಲೇಶ ಮುಕ್ತಯೇ'' ಎಂಬ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಆದೇಶದಂತೆ ಸುಜ್ಞಾನ ಸಂಪನ್ನರು ಅಂತರ್ಲಿಂಗಾನುಸಂಧಾನವನ್ನು ಅವಶ್ಯವಾಗಿ ಮಾಡಿ ಜೀವನವನ್ನು ಸಫಲಗೊಳಿಸಿಕೊಳ್ಳಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ-೮

ಅಂತರ್ಧಾರಯಿತುಂ ಲಿಂಗಮಶಕ್ತಃ ಶಕ್ತಏವ ವಾ ।
ಬಾಹ್ಯಂ ಚ ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್ (ಸಿ. ಶಿ. ೬.೪೭)

ಅಂತರಂಗದಲ್ಲಿ ಜ್ಯೋತಿರ್ಲಿಂಗವನ್ನು ಧರಿಸುವ ಸಾಮರ್ಥ್ಯವಿರಲಿ, ಇಲ್ಲದಿರಲಿ, ಬಾಹ್ಯ ಲಿಂಗವನ್ನು ಮಾತ್ರ ಸರ್ವರೂ ಧರಿಸಲೇಬೇಕು. ಯಾಕಂದರೆ ಈ ಬಾಹ್ಯಲಿಂಗವಾದರೂ ಅದರ ಸ್ವರೂಪವೇ ಆಗಿರುತ್ತದೆ.

ಲಿಂಗಂತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ ।
ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇ ತನೌ ॥ (ಸಿ. ಶಿ. ೬.೪೮)

ಸ್ಥೂಲ, ಸೂಕ್ಷ್ಮ ಮತ್ತು ಪರಾತ್ಪರವೆಂಬುದಾಗಿ ಲಿಂಗವು ಮೂರು ವಿಧವಾಗಿರುತ್ತದೆ. ಇವುಗಳಲ್ಲಿ ಶರೀರದ ಮೇಲೆ ಧರಿಸಲ್ಪಡುವ ಇಷ್ಟಲಿಂಗವೇ ಸ್ಥೂಲವಾದದ್ದು.

ಪ್ರಾಣಲಿಂಗಮಿದಂ ಸೂಕ್ಷ್ಮಂ ಯದಂತರ್ಭಾವನಾಮಯಂ ।
ಪರಾತ್ಪರಂತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ।
ಭಾವನಾತೀತಮವ್ಯಕ್ತಂ ಪರಬ್ರಹ್ಮಶಿವಾಭಿಧಂ ॥ (ಸಿ. ಶಿ. ೬.೪೯)

ಬಾಹ್ಯೇಂದ್ರಿಯಗಳಿಗೆ ಹಾಗೂ ಭಾವನೆಗೆ ನಿಲುಕದೆ ಇರುವ ಪರಶಿವ ಬ್ರಹ್ಮವೇ ತೃಪ್ತಿಲಿಂಗ ಅಥವಾ ಭಾವಲಿಂಗವೆಂದು ಹೇಳಲ್ಪಡುತ್ತದೆ.

### ಇಷ್ಟಲಿಂಗಧಾರಣೆಯ ಅವಶ್ಯಕತೆ :

ಪೂಜ್ಯಪಾದ ಶ್ರೀ ರೇಣುಕ ಭಗವತ್ಪಾದರು ಇಲ್ಲಿಯವರೆಗೆ ಮಹಾಮಹಿಮಾ ಶಾಲಿಯಾದ ಅಗಸ್ತ್ಯಮಹರ್ಷಿಯನ್ನು ಕುರಿತು ಅಂತರ್ಲಿಂಗದ ಸ್ವರೂಪ. ಅದರ ಧಾರಣೆ ಹಾಗೂ ಹೇಗೆ ಅನುಸಂಧಾನ ಮಾಡಬೇಕೆಂಬ ವಿಷಯವನ್ನು ಕೂಲಂಕುಷವಾಗಿ ಉಪದೇಶಿಸಿ; ಇನ್ನು ತ್ರಿವಿಧ ಲಿಂಗಗಳ ಸ್ವರೂಪ ಮತ್ತು ಬಾಹ್ಯ ಲಿಂಗಧಾರಣೆಯ ಅವಶ್ಯಕತೆಯನ್ನು ತಿಳಿಯಪಡಿಸುವದಾಗಿ ವಿಚಾರಿಸಿ–

ಅಂತರ್ಧಾರಯಿತುಂ ಲಿಂಗಮಶಕ್ತಃ ಶಕ್ತ ಏವ ವಾ ।
ಬಾಹ್ಯಂತು ಧಾರಯೇತ್ ಲಿಂಗಂ ತದ್ರೂಪಮಿತಿ ನಿಶ್ಚಯಾತ್ ॥ (ಸಿ. ಶಿ. ೬.೪೭)

ಅಂತರ್ಲಿಂಗವನ್ನು ಧರಿಸುವ ಸಾಮರ್ಥ್ಯವಿರಲಿ, ಇಲ್ಲದೇ ಇರಲಿ, ಎಲ್ಲರೂ ಬಾಹ್ಯ ಲಿಂಗವನ್ನು ಧರಿಸಲೇಬೇಕೆಂಬುದಾಗಿ ಆದೇಶವಿತ್ತಿದ್ದಾರೆ.

ಶಿವನಿಗಿಂತಲೂ ಗುರುಶ್ರೇಷ್ಠವೆಂದು ಭಾವಿಸುವುದು ಭಾರತೀಯ ಸಂಸ್ಕೃತಿ. ಅದರಲ್ಲಿ ವೀರಶೈವರಂತೂ ಅಷ್ಟಾವರಣಗಳಲ್ಲಿ ಗುರುವಿಗೆ ಪ್ರಥಮ ಸ್ಥಾನವನ್ನು ಕೊಟ್ಟಿದ್ದಾರೆ. ಅವನ ಆದೇಶ ಶಿರಸಾ ಪರಿಗ್ರಾಹ್ಯ.

''ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್ ವ್ಯಾವೃತ್ತ ಚಕ್ಷುಃ ಅಮೃತತ್ವಮಿಚ್ಛನ್''

ಎಂಬ ಶ್ರುತಿ ಪ್ರಮಾಣದಂತೆ ಹೃದಯ ಗುಹೆಯನ್ನು ಹೊಕ್ಕು ಜ್ಯೋತಿರ್ಲಿಂಗವನ್ನು ಸಂದರ್ಶಿಸುವದು ಧೀರರ ಕಾರ್ಯ. ''ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ'' (ಕುಮಾರ ಸಂಭವ) ಮನಸ್ಸನ್ನು ವಿಕೃತಗೊಳಿಸುವ ವಿಷಯಗಳು ಎದುರಿನಲ್ಲಿದ್ದರೂ ಯಾರ ಮನಸ್ಸು ವಿಕಾರಹೊಂದುವುದಿಲ್ಲವೋ ಅವರೇ ''ಧೀರ''ರೆಂದು ಕಾಳಿದಾಸನು ನುಡಿದಿದ್ದಾನೆ. ಕಾರಣ ಜಗತ್ತಿನ ಸಮಸ್ತರೂ ಇಂತಹ ಧೈರ್ಯಶಾಲಿಗಳಾಗಿರುವುದಿಲ್ಲ. ಬಹಿರ್ಮುಖ ವೃತ್ತಿಯ ಜನರಿಗೆ ಬಹಿರಂಗದಲ್ಲಿಯೇ ಭಗವಂತನನ್ನು ತೋರಿಸಬೇಕು. ಅಂತೆಯೇ ವೀರಶೈವ ಆಚಾರ್ಯರು ಆ ಅಂತರಂಗದ ಆತ್ಮಲಿಂಗದ ಕುರುಹಾದ ಇಷ್ಟಲಿಂಗವನ್ನು ನಮ್ಮ ಹಸ್ತಕಮಲಕ್ಕೆ ತಂದೊಪ್ಪಿಸಿದ್ದಾರೆ. ಅಂತರಂಗದ ಜ್ಯೋತಿರ್ಲಿಂಗಾನುಸಂಧಾನವನ್ನು ಮಾಡುವ ಸಾಮರ್ಥ್ಯ ಬಂದೊಡನೇ ಬಾಹ್ಯಲಿಂಗವನ್ನು ತಿರಸ್ಕರಿಸಬಾರದು.

ಪ್ರಾಥಮಿಕ ಶಾಲೆಯಲ್ಲಿ ಮಕ್ಕಳಿಗೆ ಮೂಲಾಕ್ಷರಗಳ ಅಭ್ಯಾಸವನ್ನು ಮಾಡಿಸುತ್ತಾರೆ. ಮಗುವು ಒಂದು ವರ್ಷ ಪರ್ಯಂತರ ಚರ್ವಿತಚರ್ವಣದಂತೆ ಆ ಅಕ್ಷರಗಳನ್ನೇ ಮನನ ಮಾಡುತ್ತದೆ. ಮುಂದೆ ಪ್ರಾಥಮಿಕ–ಮಾಧ್ಯಮಿಕಾದಿ ಶಿಕ್ಷಣವನ್ನು ಮುಗಿಸುತ್ತ ವಿಶ್ವವಿದ್ಯಾಲಯದ ಮಟ್ಟದವರೆಗೆ ಅಭ್ಯಾಸ ಮಾಡಿ ಎಂ. ಎ. ಪದವೀಧರನಾಗುವನು. ಈಗ ಒಂದು ಭಾಷೆಯ ಮೇಲೆ ಪೂರ್ಣಪ್ರಭುತ್ವವನ್ನು ಸಂಪಾದಿಸಿದ್ದಾನೆ. ಅನೇಕ ಗ್ರಂಥಗಳನ್ನು ರಚಿಸುವ ಸಾಮರ್ಥ್ಯವನ್ನೂ ಹೊಂದಿದ್ದಾನೆ. ಆದರೂ ಪ್ರಾಥಮಿಕದಲ್ಲಿ ಅಭ್ಯಸಿಸಿದ ಮೂಲಾಕ್ಷರಗಳನ್ನು ತ್ಯಾಗಮಾಡಲು ಬರುವದೇ ? ತ್ಯಾಗ ಮಾಡಿದರೆ ಸಾಹಿತ್ಯ ರಚನೆಯನ್ನು ಮಾಡಬಲ್ಲನೇ ? ಅದರಂತೆ ಸಾಧನೆಯ ಪ್ರಥಮ ಹಂತದಲ್ಲಿ ಪ್ರಾಪ್ತವಾದ ಇಷ್ಟಲಿಂಗವನ್ನು ಅಂತರ್ಲಿಂಗಾನುಸಂಧಾನಮಾಡುವ ಸಾಮರ್ಥ್ಯಪ್ರಾಪ್ತವಾದರೂ ತ್ಯಾಗಮಾಡುವದು ಯೋಗ್ಯವಲ್ಲ ತ್ಯಾಗಮಾಡಬಾರದೆಂಬುದೇ ಗುರುವಿನ ಆದೇಶ.

ಇಲ್ಲಿರುವ ಶಾಸ್ತ್ರೀಯ ರಹಸ್ಯಾರ್ಥವೇನಂದರೆ ಇಷ್ಟಲಿಂಗಧಾರಣೆ ಹಾಗೂ ಅದರ ಅರ್ಚನೆಯು ವೀರಶೈವರ ''ನಿತ್ಯಕರ್ಮ''ವು ಯಾವಜ್ಜೀವಂ ಮಾಡುವ ಕರ್ಮವೇ ನಿತ್ಯಕರ್ಮವು. ''ಅಕರಣೇ ಪ್ರತ್ಯವಾಯಃ'' ಈ ನಿತ್ಯಕರ್ಮವನ್ನು ಮಾಡದಿದ್ದರೆ ದುರಿತ ಪ್ರಾಪ್ತಿಯಾಗುವದು. ಸದ್ಗುರುಗಳು ದೀಕ್ಷೆಯನ್ನು ಮಾಡುವಾಗ ''ಶರೀರದಲ್ಲಿ ಪ್ರಾಣ ಇರುವವರೆಗೆ ಲಿಂಗಧಾರಣೆ ಹಾಗೂ ಲಿಂಗಪೂಜೆಯನ್ನು ಬಿಡಬಾರದೆಂದು'' ಆಜ್ಞಾಪಿಸುತ್ತಾರೆ. ಗುರುಗಳ ಆಜ್ಞೆಯಂತೆ ಶಿಷ್ಯನೂ ಸಹ ಬಿಡುವದಿಲ್ಲವೆಂದು ಸಂಕಲ್ಪ ಮಾಡುತ್ತಾನೆ. ಈ ಇಷ್ಟಲಿಂಗ ಪೂಜೆಯ ಫಲವೇ ಅಂತರ್ಲಿಂಗಾನುಸಂಧಾನವು. ಫಲಪ್ರಾಪ್ತಿಯಾದರೂ ತಾನು ಮಾಡಿದ ಸಂಕಲ್ಪದ ಪೂರ್ತಿಗಾಗಿ ನಿತ್ಯ ಕರ್ಮವಾದ ಇಷ್ಟ ಲಿಂಗಧಾರಣೆ ಹಾಗೂ ಪೂಜೆಯನ್ನು ಬಿಡಬಾರದು. ಶ್ರೀ ಉದಯನಾಚಾರ್ಯರು ಈ ವಿಷಯದಲ್ಲಿ ಮೀಮಾಂಸಾ ಶಾಸ್ತ್ರದ ದೃಷ್ಟಾಂತವನ್ನು ಉದಾಹರಿಸಿದ್ದಾರೆ– ''ತತ್ತ್ವಜ್ಞಾನಮೇವ ನಿಃಶ್ರೇಯಸಹೇತುಃ, ಕರ್ಮಾಣಿ ತ್ವನುತ್ಪನ್ನ ಜ್ಞಾನಸ್ಯ ಜ್ಞಾನಾರ್ಥಿ ನಸ್ತತ್ಪ್ರತಿಬಂಧಕಾಧರ್ಮನಿವಾರಣದ್ವಾರೇಣ ಪ್ರಾಯಶ್ಚಿತ್ತವದುಪಯುಜ್ಯಂತೇ । ಉತ್ಪನ್ನ ಜ್ಞಾನಸ್ಯ ತ್ವಂತರಾಲಬದ್ಧವೃಷ್ಟೇಃ ಕಾರೀರಿ ಪರಿಸಮಾಪ್ತಿವತ್ ಪ್ರಾರಬ್ಧಾಶ್ರಮ ಧರ್ಮ ಪಾಲನಂ ಲೋಕ ಸಂಗ್ರಹಾರ್ಥ ಮಿತಿ ಯುಕ್ತಮುತ್ಪಶ್ಯಾಮಃ'' (ಕಿರಣಾವಲೀ ಪುಟ. ೧೩೨)

ತಾತ್ಪರ್ಯವೇನೆಂದರೆ ಅನಾವೃಷ್ಟಿಯಾದಾಗ ಮಳೆಯ ಪ್ರಾಪ್ತಿಗಾಗಿ ''ಕಾರೀರಿ'' ಯಾಗವನ್ನು ಮಾಡಬೇಕೆಂದು ಮೀಮಾಂಸಾಶಾಸ್ತ್ರದ ವಿಧಾನವಿದೆ. ಮಳೆಯ ಪ್ರಾಪ್ತಿಗಾಗಿ ಒಂದು ವಾರ ಕಾರೀರಿ ಯಾಗವನ್ನು ಮಾಡುತ್ತೇವೆ ಎಂದು ಸಂಕಲ್ಪಮಾಡಿ ಯಾಗವನ್ನು ಪ್ರಾರಂಭಿಸುತ್ತಾರೆ. ಯಾಗ ಪ್ರಾರಂಭವಾದ ಮೂರನೇ ದಿವಸಕ್ಕೆ ಯಥೇಷ್ಟ ಮಳೆಯು ಪ್ರಾಪ್ತವಾಯಿತೆಂದರೆ ಮುಂದೆ ಉಳಿದ ನಾಲ್ಕು ದಿನ ಯಾಗಮಾಡಬೇಕೋ ? ಅಥವಾ ಮಳೆಯು ಬಂದ ದಿನವೇ ಸಮಾಪ್ತಿಮಾಡಬೇಕೋ ? ಎಂಬ ಸಂದೇಹ ಪ್ರಾಪ್ತವಾಗುತ್ತದೆ. ಆಗ ಮಧ್ಯದಲ್ಲಿ ಫಲಪ್ರಾಪ್ತವಾದರೂ ಮಾಡಿದ ಸಂಕಲ್ಪದ ಪೂರ್ತಿಗಾಗಿ ಮುಂದಿನ ನಾಲ್ಕುದಿನ ಯಾಗವನ್ನು ಮಾಡಲೇಬೇಕು ಇಲ್ಲವಾದರೆ ಸಂಕಲ್ಪದ ಚ್ಯುತಿಯಿಂದ ದುರಿತ ಪ್ರಾಪ್ತವಾಗುವುದು ಎಂಬುದಾಗಿ ಶಾಸ್ತ್ರಾದೇಶವಿದೆ. ಅದರಂತೆ ಅಂತಃಕರಣ ಶುದ್ಧಿದ್ವಾರಾ ಆತ್ಮಸಾಕ್ಷಾತ್ಕಾರವೇ ನಿತ್ಯ ಕರ್ಮದ ಪ್ರಯೋಜನವು. ಓರ್ವ ವ್ಯಕ್ತಿಯು ಆತ್ಮಸಾಕ್ಷಾತ್ಕಾರಕ್ಕಾಗಿ ಯಾವಜ್ಜೀವನವೂ ಈ ನಿತ್ಯಕರ್ಮವನ್ನು ಮಾಡುತ್ತೇನೆಂದು ಸಂಕಲ್ಪಮಾಡಿ ಕರ್ಮವನ್ನು ಪ್ರಾರಂಬಿಸುತ್ತಾನೆ. ಆವನಿಗೆ ವಯಸ್ಸಿನ ಐವತ್ತು ವರ್ಷಕ್ಕೆ ಜ್ಞಾನೋದಯವಾಯಿತೆಂದರೆ ಮುಂದೆ ಬದುಕಿರುವವರೆಗೆ ಕರ್ಮವನ್ನು ಮಾಡಬೇಕೋ ಬೇಡವೋ ಎಂಬ ಸಂಶಯ ಬಂದರೆ ಫಲಪ್ರಾಪ್ತಿಯಾಗಿದ್ದರೂ ಸಂಕಲ್ಪದ ಪೂರ್ತಿಗಾಗಿ ಕರ್ಮವನ್ನು ಮಾಡಲೇಬೇಕೆಂದು ಉಪದೇಶಿಸಿದ್ದಾರೆ. ಹಾಗಾದರೆ ಜ್ಞಾನಿಯು ಮಾಡುವ ಕರ್ಮದ ಪ್ರಯೋಜನವೇನು ಅಂದರೆ ಲೋಕ ಸಂಗ್ರಹವೇ ಫಲವೆಂಬುದಾಗಿ ತಿಳಿಯಪಡಿಸಿದ್ದಾರೆ.

ಅದರಂತೆ ಇಷ್ಟಲಿಂಗಪೂಜೆ ಎಂಬ ನಿತ್ಯಕತರ್ಮದ ಫಲವಾದ ಅಂತರ್ಲಿಂಗ ಧಾರಣೆಯ ಸಾಮರ್ಥ್ಯವನ್ನು ಸಂಪಾದಿಸಿದ ಶಿವಯೋಗಿಗಳು ಲೋಕ ಸಂಗ್ರಹಾರ್ಥ ವಾಗಿಯೂ ಹಾಗೂ ತಾವು ಮಾಡಿದ ಯಾವಜ್ಜೀವ ಲಿಂಗಧಾರಣೆಯ ಸಂಕಲ್ಪದ ಪೂರ್ತಿಗಾಗಿಯೂ ಇಷ್ಟಲಿಂಗವನ್ನು ಅವಶ್ಯವಾಗಿ ಧರಿಸಲೇಬೇಕು. ಅಂತೆಯೇ–

''ಅರಿವನರಿದಿಹೆನೆಂದು ಕ್ರಿಯೆಯ ಬಿಡಬಹುದೇ ? ಮಧುರಕ್ಕೆ ಮಧುರ ಒದಗಲಾಗಿ ಆ ಸವಿಗೆ ಸವಿ ಕೊರತೆಯುಂಟೇ ?''

ಎಂಬ ಬಹು ಮಾರ್ಮಿಕವಾಗಿ ಮಡಿವಾಳ ಮಾಚಿದೇವರು ಇಷ್ಟಲಿಂಗ ಪೂಜೆಯನ್ನು ಸಮರ್ಥಿಸಿದ್ದಾರೆ.

ಇನ್ನು ಅಂತರ್ಲಿಂಗಧಾರಣೆಯ ಸಾಮರ್ಥ್ಯವಿಲ್ಲದ ಪ್ರಾಥಮಿಕ ಹಂತದ ಸಾಧಕರು ಆ ಯೋಗ್ಯತೆಯ ಪ್ರಾಪ್ತಿಗಾಗಿ ಇಷ್ಟಲಿಂಗವನ್ನು ಧರಿಸಿ, ಆರಾಧಿಸಿ ಅದರ ಸಾಮರ್ಥ್ಯದಿಂದಲೇ ಅಂತರ್ಲಿಂಗವನ್ನು ಧರಿಸಬೇಕು. ನಿರ್ಗುಣಾರಾಧನೆಗೆ ಸಗುಣವೇ ಅವಲಂಬನವು.

**ಸೂಕ್ಷ್ಮದ ಆರಾಧನೆಗೆ ಸ್ಥೂಲದ ಅವಶ್ಯಕತೆ :**

ಆಲಂಬನಂ ವಿನಾತಸ್ಯ ಪದಮುಚ್ಚೈಃ ಸುದುಷ್ಕರಂ ।
ನಿರ್ಗುಣಪ್ರಾಪ್ತಯೇ ನೃಣಾಂ ಪ್ರತಿಮಾಲಂಬನಂ ಕೃತಂ ॥

(ಶಿವಪು.ವಿದ್ಯೇ.ಸ. ಅಧ್ಯಾಯ ೧೨–೬೪)

ಶಿವಮಹಾಪುರಾಣದ ಈ ಉಕ್ತಿಯಂತೆ ಬಾಹ್ಯದಲ್ಲಿಯ ಭಗವದಾಕೃತಿಯೇ ಅಂತರಂಗದ ಭಗವತತ್ತ್ವವನ್ನು ಅರಿಯುವ ಸಾಧನವು. ಜಾಗ್ರತದಲ್ಲಿ ಅನುಭವಿಸಿದ ವಿಷಯಗಳೇ ಸ್ವಪ್ನಾನುಭವಕ್ಕೆ ಕಾರಣವಾಗುವಂತೆ ಬಾಹ್ಯಲಿಂಗಧಾರಣೆ ಹಾಗೂ ಅರ್ಚನೆಗಳು ಅಂತರಂಗದ ಲಿಂಗಾರ್ಚನೆಗೆ ಸಹಾಯಕವಾಗುವವು.

''ಎಳ್ಳಿಂಗೆ ಪರಿಮಳ ಕಟ್ಟಿದಲ್ಲದೆ, ಎಣ್ಣೆಗೆ ಪರಿಮಳ ವೇಧಿಸದು,
ದೇಹದಲ್ಲಿ ಇಷ್ಟಲಿಂಗ ಸ್ಥಾಪಿಸಿದಲ್ಲದೇ, ಪ್ರಾಣಲಿಂಗ ಸಂಬಂಧವಾಗದು'';
''ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವಿಲ್ಲದಿದ್ದರೆ ಜ್ಞಾನಯೋಗದ ಕೂಟ
ಸಾಧ್ಯವಾಗದು'';
''ಸಾಕಾರವಿಡಿದು ಅರ್ಚನೆ ಪೂಜನೆಯ ಮಾಡಬೇಕಲ್ಲದೆ
ನಿರಾಕಾರ ನಂಬಲಾಗದು'' ।
''ಸತಿ ಸಂಗತಿ ಸುಖವೆಂದರಿದೊಡೇನು, ಗಣಸಾಕ್ಷಿಯಾಗಿ
ವಿವಾಹವಾಗದನ್ನಕ್ಕರ ?
ಕಣ್ಣು ಕಾಂಬುದೆಂದಡೆ, ಕತ್ತಲೆಯಲ್ಲಿ ಕಾಂಬುದೇ ದೀಪವಿಲ್ಲದನ್ನಕ್ಕರ ?
ಸೂರ್ಯನ ಪ್ರಕಾಶದಿಂದ ಕಂಡು ತಾನೆ ಕಂಡೆನೆಂಬ ಜಗದ
ನಾಣ್ನುಡಿಯಂತಾಯಿತ್ತು
ಅಂಗವ ಬಿಟ್ಟು ಆತ್ಮನುಂಟೆ ? ಶಕ್ತಿಯ ಬಿಟ್ಟು ಶಿವನುಂಟೆ ? ಇದು ಕಾರಣ
ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯವಿರಲು,
ಇಷ್ಟ ಪ್ರಾಣ ಭಾವವೆಂಬ ತ್ರಿವಿಧ ಲಿಂಗ ಸಂಬಂಧ ಬೇಡವೆಂದರೆ,
ಅಸಂಖ್ಯಾತ ಪ್ರಮಥ ಗಣಂಗಳೊಪ್ಪುವರೇ ?
ಕೂಡಲ ಚೆನ್ನ ಸಂಗಯ್ಯನಲ್ಲಿ ಇಷ್ಟಲಿಂಗ ಸಂಬಂಧವಿಲ್ಲದವರ
ಮುಖವ ನೋಡಲಾಗದಯ್ಯಾ ಪ್ರಭುವೇ''.

ಇವೇ ಮುಂತಾದ ಪ್ರಭುದೇವ, ಉರುಲಿಂಗಪೆದ್ದಿ ಮತ್ತು ಶ್ರೀ ಚೆನ್ನಬಸವಣ್ಣ ಮುಂತಾದ ಶರಣರ ವಚನಗಳಾದರೂ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಅಭಿಪ್ರಾಯವನ್ನೇ ಅನೇಕ ದೃಷ್ಟಾಂತಗಳಿಂದ ಜನಸಾಮಾನ್ಯರಿಗೂ ತಿಳಿಯುವ ಹಾಗೆ ಸ್ಪಷ್ಟಪಡಿಸಿವೆ. ಆದಕಾರಣ ವೀರಶೈವರು ಇಷ್ಟಲಿಂಗವನ್ನು ಚಿಕ್ಕದನ್ನಾಗಿ ಭಾವಿಸದೇ ''ತದ್ರೂಪಮಿತಿ ನಿಶ್ಚಯಾತ್'' ಎಂಬ ಶ್ರೀ ರೇಣುಕ ಭಗವತ್ಪಾದರ ಆದೇಶದಂತೆ ಅಂತರಂಗದ ಜ್ಯೋತಿರ್ಲಿಂಗವೇ ಇದೆಂದು ದೃಢವಾಗಿ ನಂಬಿ ಧರಿಸಬೇಕು.

ಪ್ರಾಣಲಿಂಗ ಮತ್ತು ಭಾವಲಿಂಗಗಳ ಸ್ವರೂಪ :

ಜೀವಾತ್ಮನಿಗೆ ಸ್ಥೂಲ–ಸೂಕ್ಷ್ಮ ಮತ್ತು ಕಾರಣಗಳೆಂಬ ಮೂರು ಶರೀರಗಳಿರುವ ಕಾರಣ ಇವನು ಧರಿಸಬೇಕಾದ ಲಿಂಗವಾದರೂ ಸ್ಥೂಲ, ಸೂಕ್ಷ್ಮ ಮತ್ತು ಪರಾತ್ಪರವೆಂದು ಮೂರು ಬಗೆಯಾಗಿ ಉಪದೇಶಿಸಿದ್ದಾರೆ. ಸ್ಥೂಲ ಶರೀರದ ಮೇಲೆ ಧರಿಸಲ್ಪಡುವ ಇಷ್ಟಲಿಂಗವು ಸ್ಥೂಲವಾದದ್ದು. ಇದು ನಮ್ಮ ಹಸ್ತಕಮಲದಲ್ಲಿ ಪೂಜಿಸಲ್ಪಟ್ಟು ಗಾತ್ರದಲ್ಲಿ ಚಿಕ್ಕದಾಗಿ ತೋರಿದರೂ ವಿಶ್ವವೆಂಬ ಮಹಾವೃಕ್ಷವನ್ನು ತನ್ನೊಳಗಡಗಿಸಿಕೊಂಡ ಬೀಜ ದಂತಿದೆ. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

''ಪರತರ ಶಿವಲಿಂಗವೆಳಸಿ ನಿನಗಾಗಿ। ಕರಕಂಜದೊಳು ಕಾಣಿಸಿತು
ಯೋಗಿ ಯಜಿಸು ॥
ತರು ವಿಸ್ತಾರವನೊಳಕೊಂಡಿರ್ದ ಬೀಜದ । ಪರಿಯಂತರಾರಧ್ವಗಳಿ
ಗಿಂಬುವಡೆದ ॥ ಪರಬೊಮ್ಮದಾಶ್ರಯವಾಗಿಹ ನಿಜ ಶಕ್ತಿ।
ವೆರಸಿ ತನಗೆ ತಾನಾಧಾರವಾಗಿರ್ಪ''

(ಕೈ.ಪ.ಯೋ. ೩೧–೨)

ಈ ರೀತಿಯಾಗಿ ಇಷ್ಟಲಿಂಗದ ಘನತೆಯನ್ನು ಬಹುವಾಗಿ ಕೊಂಡಾಡಿದ್ದಾರೆ.

ಇಷ್ಟಲಿಂಗದ ವಿಷಯವಾಗಿ ಮೊದಲನೇ ಆಶೀರ್ವಚನದಲ್ಲಿ ಸಾಕಷ್ಟು ತಿಳಿಸಲಾಗಿದೆ.

ಇನ್ನು ''ಪ್ರಾಣಲಿಂಗಮಿದಂ ಸೂಕ್ಷ್ಮಂ ಯದಂತರ್ಭಾವನಾಮಯಂ'' ಎಂಬ ಶ್ರೀ ಭಗವತ್ಪಾದರ ಉಪದೇಶದಂತೆ ಅಂತರಂಗದಲ್ಲಿ ಭಾವಗಮ್ಯವಾಗಿ ಸೂಕ್ಷ್ಮವಾಗಿ ತೋರುವದೇ ''ಪ್ರಾಣಲಿಂಗ''ವು. ಇದರ ಸ್ಪಷ್ಟವಾದ ಸ್ವರೂಪವನ್ನು ಶ್ರೀ ಜಗದ್ಗುರು ರೇಣುಕರೇ–

ಪ್ರಾಣಾಪಾನ ಸಮಾಘಾತಾತ್ ಕಂದಮಧ್ಯಾದ್ಯದುತ್ಥಿತಂ।
ಪ್ರಾಣಲಿಂಗಂ ತದಾಖ್ಯಾತಂ ಪ್ರಾಣಾಪಾನನಿರೋಧಿಭಿಃ ॥

(ಸಿ.ಶಿ. ೧೨–೬)

ಹೀಗೆ ತಿಳಿಯಪಡಿಸಿದ್ದಾರೆ. ಪ್ರಾಣಾಯಾಮ ವಿಶೇಷದಿಂದ ಪ್ರಾಣ ಹಾಗೂ ಅಪಾನ ವಾಯುಗಳ ಸಂಘಟನೆಯಾದಾಗ ಕಂದಮಧ್ಯದಿಂದ ಒಂದು ಜ್ಯೋತಿಯು ಪ್ರಾದುರ್ಭವಿಸುವದು. ಮುಂದೆ ಅದು ಸುಷುಮ್ನಾಮಾರ್ಗದಿಂದ ಊರ್ಧ್ವ ಮುಖವಾಗಿ ಪ್ರವಹಿಸಿ ಹೃದಯ ಕಮಲದ ಅನಾಹತ ಚಕ್ರದಲ್ಲಿ ಅಂಗುಷ್ಠಪರಿಮಾಣ ಹಾಗೂ ವಿದ್ರುಮ ವರ್ಣದಲ್ಲಿ ಸ್ಥಿರಗೊಳ್ಳುವದು. ಯೋಗಾಭ್ಯಾಸಿಗಳಿಗೆ ಹೃದಯ ಕಮಲದಲ್ಲಿ ಹವಳದ ವರ್ಣದಿಂದ ತೋರುವ ಈ ಜ್ಯೋತಿಯೇ ''ಪ್ರಾಣಲಿಂಗ''ವು. ಸೂರ್ಯೋದಯವಾಗಲು ಮಂಜಿನ ಕಣಗಳು ಆ ಪ್ರಕಾಶದಲ್ಲಿ ಲೀನವಾಗುವಂತೆ ಹೃದಯದ ಈ ಜ್ಯೋತಿಯಲ್ಲಿ ಪ್ರಾಣವಾಯುವು ಲಯವಾಗುವದರಿಂದ ಈ ಜ್ಯೋತಿಗೆ ''ಪ್ರಾಣಲಿಂಗ''ವೆಂಬ ನಾಮವು–

ಮೂಲ ಲಿಂಗನಾಭಿ ಹೃದಯ ಕಂಠಕೂರ್ಚಗೋತ್ರ ಮೊತ್ತ।
ಜಾಲದಂಬುಜಾಕ್ಷರಾದಿ ದೈವ ಮಂತ್ರಶಕ್ತಿಯ ॥
ಮೇಳದೊಡನೆ ಕೆಂಪು ಮಿಂಚು ರನ್ನ ಚಿನ್ನ ಸೊಡರು ಚಂಚ।
ಲಾಲತಾಗ್ನಿ ದೀಪ್ತಿರೂಪದೋರ್ಪ ದಿವ್ಯಬಿಂದುವೆ ॥

(ಕೈ.ಪ.ಯೋ. ೩೨–೨)

ಹೀಗೆ ಶ್ರೀ ನಿಜಗುಣ ಶಿವಯೋಗಿಗಳಾದರೂ ಪ್ರಾಣಲಿಂಗದ ಪ್ರಕಾಶವನ್ನು ವರ್ಣಿಸಿದ್ದಾರೆ. ಅಲ್ಲದೇ ಹಲವು ಛಿದ್ರದ ಘಟದೊಳಗಿನ ಪ್ರಕಾಶವೇ ಘಟದ ಹೊರ–ಒಳಗೆ ಪ್ರಕಾಶಿಸುವಂತೆ ನಮ್ಮಂತರಂಗದ ಈ ಪ್ರಕಾಶವು ಒಳಗೆ ಪ್ರಕಾಶಿಸುವು

ದರ ಜೊತೆಗೆ ಇಂದ್ರಿಯಗಳೆಂಬ ಛಿದ್ರಗಳ ಮುಖಾಂತರ ಹೊರಗಿನ ಶಬ್ದಾದಿ ವಿಷಯ ಗಳನ್ನೂ ಪ್ರಕಾಶಿಸುತ್ತದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಹೃದಯ ಪ್ರಕಾಶವು ಜಾಗ್ರತ ದಲ್ಲಿ ಹೊರಗಿನ ಪದಾರ್ಥಗಳನ್ನು ಪ್ರಕಾಶ ಮಾಡುವಂತೆ ಒಳಗೆ ಸ್ವಪ್ನ ಪದಾರ್ಥಗಳನ್ನು ಪ್ರಕಾಶಗೊಳಿಸುತ್ತದೆ. ''ಅತ್ರಾऽಯಂ ಪುರುಷಃ ಸ್ವಯಂಜ್ಯೋತಿಃ'' ಎಂಬ ಉಪನಿಷತ್ ಮಂತ್ರವಾದರೂ ಆತ್ಮನ ಸ್ವಯಂಪ್ರಕಾಶತೆಯನ್ನು ತಿಳಿಸಿ ಈ ಪ್ರಕಾಶದ ಅನುಭವವು ಸ್ವಪ್ನಾವಸ್ಥೆಯಲ್ಲಿ ಸರ್ವರಿಗೂ ಆಗುವದಾಗಿ ತಿಳಿಸಲು ''ಅತ್ರ'' ಎಂಬ ಶಬ್ದ ಸಂಕೇತವಿದೆ. ಅಂತೆಯೇ ಶ್ರೀ ಭಗವತ್ಪಾದ ಶಂಕರಾಚಾರ್ಯರು ಅತ್ರ ಎಂಬ ಶಬ್ದಕ್ಕೆ ''ಸ್ವಪ್ನಾವಸ್ಥಾಮ ಧಿಕೃತ್ಯ ಇದಮಾಮ್ನಾಯತೇ'' ಎಂದಿದ್ದಾರೆ.

ಜಾಗ್ರತದಲ್ಲಿ ಸೂರ್ಯ–ಚಂದ್ರಾದಿಗಳ ಬೆಳಕಿನಲ್ಲಿ ವ್ಯವಹರಿಸುತ್ತೇವೆ ಆದರೆ ಸ್ವಪ್ನದಲ್ಲಿ ''ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ'' (ಶ್ವೇ.ಉ. ೬–೧೪) ಎಂಬ ಶ್ರುತಿ ಪ್ರಮಾಣ ಹಾಗೂ ಸ್ವಾನುಭವದಿಂದ ವಿಚಾರಿಸಲು ಅಲ್ಲಿ ಸೂರ್ಯ, ಚಂದ್ರ, ಅಗ್ನಿ ಮುಂತಾದ ಯಾವ ಪ್ರಕಾಶವೂ ಇರುವುದಿಲ್ಲ. ಆದರೂ ಪ್ರಕಾಶವಿದೆ ಪದಾರ್ಥಗಳು ತೋರುತ್ತವೆ ಅಂದ ಬಳಿಕ ಅದು ನಮ್ಮದೇ ಆದ ನಿರುಪಾಧಿಕ ಪ್ರಕಾಶವು ಈ ಪ್ರಕಾಶವೇ ''ಪ್ರಾಣಲಿಂಗ''ವು ನಮ್ಮ ಚಿದ್ರೂಪದ ಅರಿವೇ ಪ್ರಾಣಲಿಂಗವೆಂಬ ತಾತ್ಪರ್ಯವು. ಇನ್ನು–

> ಕ್ರಿಯಾಯಥಾಲಯಂ ಪ್ರಾಪ್ತ ತಥಾ ಭಾವೋऽಪಿ ಲೀಯತೇ ।
> ಯತ್ರ ತದ್ದೇಶಿಕೈರುಕ್ತಂ ಭಾವಲಿಂಗಮಿತಿ ಸ್ಫುಟಂ ॥
>
> (ಸಿ.ಶಿ. ೧೫.೩೭)

ಎಂಬ ಲಕ್ಷಣದಂತೆ ''ಶಿವೋಹಂ'' ಭಾವವೂ ಎಲ್ಲಿ ಲಯವಾಗುವದೋ ಅದೇ ಭಾವ ಲಿಂಗವು. ಸಾಧಕನು ಶುದ್ಧವಾದ ಬುದ್ಧಿವೃತ್ತಿಯಿಂದ ''ಶಿವೋಹಂ'' ''ಶಿವೋऽಹಂ'' ಎಂದು ಅನುಸಂಧಾನಿಸುತ್ತ ಕುಳಿತಿರುವಾಗ ಈ ಬುದ್ಧಿ ವೃತ್ತಿಯೂ ಲಯವಾಗಿ ಧ್ಯಾತೃ–ಧ್ಯೇಯಗಳ ಭೇದವಳಿದು ಧ್ಯೇಯ ಒಂದೇ ತಾನೇ ತಾನಾಗಿ ಉಳಿಯುತ್ತದೆ. ಈ ಶಿವೋऽಹಂ ಭಾವನಾತ್ಮಕ ಬುದ್ಧಿ ವೃತ್ತಿಯ ಲಯಕ್ಕೆ ಅಧಿಷ್ಠಾನವಾದದ್ದೇ ಭಾವಲಿಂಗವು. ಅದನ್ನೇ–

> ಮಂದರಾಚಲದ ಚಲನೆಯಿಂದ । ಸದಾ ।
> ಸಿಂಧುವಿನಂತೆ ಬುದ್ಧಿವೃತ್ತಿ॥
> ಯೊಂದಿಲ್ಲದಿಹ ಕಾಲದೊಳು ನಿತ್ಯ । ಬೋಧಾ ।
> ನಂದ ಮುದ್ರೆಯೊಡೆಯದಿರ್ಪ ॥
>
> (ಕೈ.ಪ.ಯೋ. ೩೩–೮)

ಹೀಗೆ ನಿಜಗುಣ ಶಿವಯೋಗಿಗಳಾದರೂ ವರ್ಣಿಸಿದ್ದಾರೆ. ಹೀಗೆ ಭಾವನಾತೀತವಾದ ಅವ್ಯಕ್ತವಾದ ಪರಾತ್ಪರವಾದ ಪರಶಿವಬ್ರಹ್ಮವೇ ''ಭಾವಲಿಂಗ''ವು. ಅದಕ್ಕೆ ''ತೃಪ್ತಿಲಿಂಗ'' ವೆಂತಲೂ ಕರೆಯುತ್ತಾರೆ. ಈ ಭಾವಲಿಂಗದ ಅನುಸಂಧಾನದಿಂದ ಪ್ರಾಪ್ತವಾದ ತೃಪ್ತಿಯು

ಸಂಸಾರದ ಯಾವ ವಿಷಯ ಭೋಗದಿಂದಲೂ ಪ್ರಾಪ್ತವಾಗಲಾರದು ಅಂತೆಯೇ ಪರಮ ಸಂತೃಪ್ತಿದಾಯಕವಾದ ಈ ಲಿಂಗಕ್ಕೆ ''ತೃಪ್ತಿಲಿಂಗ''ವೆಂದು ಕರೆದಿದ್ದಾರೆ. ಪ್ರತಿಯೊಬ್ಬ ಸಾಧಕನು ತನ್ನ ಯೋಗ್ಯತೆಗೆ ಅನುಸಾರವಾಗಿ ಇಷ್ಟ, ಪ್ರಾಣ ಹಾಗೂ ಭಾವಲಿಂಗಗಳನ್ನು ಪ್ರತಿ ದಿವಸ ತಪ್ಪದೇ ಆರಾಧಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೬ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

■■

ಆಶೀರ್ವಚನ-೯

ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಂ ।
ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ ॥ (ಸಿ. ಶಿ. ೬.೫೦)

ಸರ್ವಾನಿಷ್ಟಗಳನ್ನು ಪರಿಹರಿಸಿ ಇಷ್ಟಾರ್ಥಪ್ರದಾಯಕವಾದ ಈ ಲಿಂಗಕ್ಕೆ ಇಷ್ಟಲಿಂಗವೆಂದು ಕರೆಯುತ್ತಾರೆ. ಕಾರಣ ವಿವೇಕಿಗಳು ಸಾವಧಾನಪೂರ್ವಕವಾಗಿ ಶರೀರದ ಮೇಲೆ ಯಾವಾಗಲೂ ಈ ಇಷ್ಟಲಿಂಗವನ್ನು ಧರಿಸಬೇಕು.

ಮೂರ್ಧ್ನಿವಾ ಕಂಠದೇಶೇ ವಾ ಕಕ್ಷೇ ವಕ್ಷಸ್ಥಲೇಽಪಿ ವಾ ।
ಕುಕ್ಷೌ ಹಸ್ತಸ್ಥಲೇ ವಾಪಿ ಧಾರಯೇಲ್ಲಿಂಗಮೈಶ್ವರಂ ॥ (ಸಿ. ಶಿ. ೬.೫೧)

ಈ ಇಷ್ಟಲಿಂಗವನ್ನು ಮಸ್ತಕ, ಕಂಠ, ಬಗಲು,ಎದೆ, ಹೊಟ್ಟೆ ಅಥವಾ ಅಂಗೈ ಇವುಗಳಲ್ಲಿ ತನಗೆ ಅನುಕೂಲವೆನಿಸಿದ ಯಾವುದೇ ಒಂದು ಸ್ಥಾನದಲ್ಲಿ ಧರಿಸಬೇಕು.

ನಾಭೇರಧಸ್ತಾಲ್ಲಿಂಗಸ್ಯ ಧಾರಣಂ ಪಾಪಕಾರಣಂ ।
ಜಟಾಗ್ರೇ ತ್ರಿಕಭಾಗೇ ಚ ಮಲಸ್ಥಾನೇ ನ ಧಾರಯೇತ್ ॥ (ಸಿ. ಶಿ. ೬.೫೨)

ನಾಭಿಸ್ಥಾನಕ್ಕಿಂತ ಕೆಳಗಡೆ ಇಷ್ಟಲಿಂಗವನ್ನು ಧರಿಸಕೊಡದು. ಒಂದು ವೇಳೆ ಧರಿಸಿದ್ದೇ ಆದರೆ ಶಾಸ್ತ್ರದ ಮರ್ಯಾದೆಯನ್ನು ಉಲ್ಲಂಘಿಸಿದ ಕಾರಣ ಪಾಪವೇ ಪ್ರಾಪ್ತವಾಗುವದು. ಅದರಂತೆ ಜಡೆಯ ತುದಿಯಲ್ಲಿ, ಬೆನ್ನಿನ ಮೇಲೆ ಹಾಗೂ ಮಲಸ್ಥಾನದಲ್ಲಿ ಇಷ್ಟಲಿಂಗವನ್ನು ಧರಿಸಬಾರದು.

ಇಷ್ಟಲಿಂಗವು ಅನಿಷ್ಟಪರಿಹಾರಕವು :

ಇಷ್ಟ ಮತ್ತು ಅನಿಷ್ಟ ಶಬ್ದಗಳು ಲೋಕದಲ್ಲಿ ಪ್ರಸಿದ್ಧವಾದವುಗಳು. ಅಪೇಕ್ಷಿತವಾದದ್ದು ಇಷ್ಟ ಹಾಗೂ ಅನಪೇಕ್ಷಿತವಾದದ್ದು ಅನಿಷ್ಟ. ಸಾಮಾನ್ಯತಃ ಸರ್ವರೂ ಅಪೇಕ್ಷಿಸುವದು ಸುಖವನ್ನೇ ಆದಕಾರಣ ಸುಖ ಮತ್ತು ಸುಖಕ್ಕೆ ಸಾಧನವಾದದ್ದೆಲ್ಲವೂ ಇಷ್ಟವೆಂತಲೂ; ದುಃಖ ಮತ್ತು ದುಃಖಕ್ಕೆ ಸಾಧನವಾದದ್ದೆಲ್ಲವೂ ಅನಿಷ್ಟವೆಂತಲೂ ಹೇಳಬಹುದು. ಆಧ್ಯಾತ್ಮಿಕ, ಆಧಿಭೌತಿಕ ಹಾಗೂ ಆಧಿದೈವಿಕಗಳೆಂದು ಅನಿಷ್ಟಗಳು ಮುಖ್ಯವಾಗಿ ಮೂರು ಪ್ರಕಾರವಾಗಿವೆ. ಇವುಗಳೇ ಶಾಖೋಪಶಾಖೆಯ ಮುಖಾಂತರ ಅನಂತಗಳಾಗಿವೆ ''ನೂರುಸಾಸಿರ ಕೋಟಿ'' ಎಂದಿದ್ದಾರೆ ಶ್ರೀ ನಿಜಗುಣರು. ಈ ಅನಿಷ್ಟಗಳಿಗೆ ಕಾರಣವೇನೆಂದು ವಿಚಾರಿಸಲಾಗಿ ವಿದ್ವಾಂಸರು ಭಿನ್ನ ಭಿನ್ನ ಕಾರಣಗಳನ್ನು ಹೇಳುತ್ತಾರೆ.

ವೈದ್ಯಾ ವದಂತಿ ಕಫಪಿತ್ಥಮರುದ್ವಿಕಾರಾನ್ ।
ಜ್ಯೋತಿರ್ವಿದೋ ಗ್ರಹಗತಿಂ ಪರಿವರ್ತಯಂತಿ ।
ಭೂತಾಭಿಷಂಗ ಇತಿ ಭೂತವಿದೋ ವದಂತಿ
ಪ್ರಾಚೀನ ಕರ್ಮ ಬಲವಾನ್ ಮುನಯೋ ವಂದತಿ ॥

(ಸುಭಾಷಿತರತ್ನ ಭಾಂಡಾಗಾರ ಪುಟ ೧೮೩)

ಶಾರೀರಿಕ ಮತ್ತು ಮಾನಸಿಕ ಪೀಡೆಗೊಳಗಾದ ಮನುಷ್ಯನು ವೈದ್ಯರಲ್ಲಿಗೆ ಹೋದರೆ; ಅವರು ವಾತ-ಪಿತ್ಥ ಮತ್ತು ಕಫಗಳೆಂಬ ತ್ರಿದೋಷಗಳ ವಿಕಾರವೆಂತಲೂ, ಜ್ಯೋತಿರ್ವಿದರ ಬಳಿಗೆ ಹೋಗಲು ; ಗ್ರಹಗತಿ ಚೆನ್ನಾಗಿಲ್ಲವೆಂತಲೂ ಹಾಗೂ ತಾಂತ್ರಿಕರ ಬಳಿ ಸಾರಲು ; ಭೂತಾವೇಶವೆಂಬುದಾಗಿಯೂ ಹೇಳಿ ತಮತಮಗೆ ತಿಳಿದ ದೃಷ್ಟಿಯಲ್ಲಿ ಔಷಧ, ನವರತ್ನ ಮತ್ತು ಮಂತ್ರಸಿದ್ಧಗಳಾದ ಯಂತ್ರಗಳಿಂದ ಉಪಚರಿಸಿ ಉಪಶಮನ ಮಾಡಲು ಪ್ರಯತ್ನಿಸುತ್ತಾರೆ.

ಇಲ್ಲಿ ಔಷಧದಿಂದ ರೋಗವೆಂಬ ಅನಿಷ್ಟವು, ನವರತ್ನಗಳ ಧಾರಣೆ ಹಾಗೂ ನವಗ್ರಹಗಳ ಜಪಗಳಿಂದ ಗ್ರಹದಶೆ ಎಂಬ ಅನಿಷ್ಟವು ಹಾಗೂ ಯಂತ್ರಗಳಿಂದ ಭೂತಾವೇಶವೆಂಬ ಅನಿಷ್ಟವೂ ನಿವೃತ್ತಿಯಾಗುತ್ತಿರುವುದು ಆಯಾ ಉಪಚಾರವನ್ನು ಹೊಂದಿದವರಿಗೆ ಅನುಭವವೇದ್ಯವೇ ಸರಿ. ಈ ಮಣಿ-ಮಂತ್ರ ಹಾಗೂ ಔಷಧಿಗಳೆಂಬ ಉಪಚಾರಗಳಿಂದ ಆಯಾ ಅನಿಷ್ಟಗಳು ನಿವೃತ್ತಿಯಾಗಬಲ್ಲವೇ ವಿನಹ ಸರ್ವಾನಿಷ್ಟಗಳು ನಿವೃತ್ತಿಯಾಗಲಾರವು. ಸಹಸ್ರಾರು ಮಣ್ಣಿನ ಕೊಡಗಳಿಗೆ ಒಂದೇ ದೊಣ್ಣೆಯಪೆಟ್ಟು ಎಂಬಂತೆ ಮನುಷ್ಯನ ಸರ್ವವಿಧ ಅನಿಷ್ಟಗಳನ್ನು ದೂರಮಾಡಿ ಸರ್ವಾಭೀಷ್ಟಗಳನ್ನು ಪ್ರಾಪ್ತಿಮಾಡಿಕೊಡುವ ಏಕಮೇವ ಸಾಧನವೆಂದರೆ ಅನನ್ಯವಾದ ಭಗವದ್ಭಕ್ತಿಯು. ಈ ಭಗವದ್ಭಕ್ತಿಯನ್ನರ್ಪಿಸಲು ಸಾಧಕನು ಹಲವು ಹನ್ನೆರಡುಕಡೆ ಅಲೆಯಬಾರದೆಂದೇ ಸದ್ಗುರುಗಳು ದೀಕ್ಷಾ ಸಂಸ್ಕಾರವನ್ನು ಮಾಡಿ ಶಿಷ್ಯನ ಹಸ್ತದಲ್ಲಿ ಸಾಕ್ಷಾತ್ ಭಗವತ್ ಸ್ವರೂಪವಾದ ಶಿವಲಿಂಗವನ್ನು ಅನುಗ್ರಹಿಸುತ್ತಾರೆ. ಇದುವೇ ಇಷ್ಟಲಿಂಗ.

''ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಂ'' ಎಂಬ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ ಸಾಧಕನ ಅನಿಷ್ಟಗಳನ್ನೆಲ್ಲ ದೂರ ಮಾಡಿ ಸರ್ವಾಭೀಷ್ಟಗಳನ್ನೇ ಪ್ರಾಪ್ತಿಮಾಡಿಕೊಡುವ ಸಾಮರ್ಥ್ಯ ಇದರಲ್ಲಿದೆ. ಅಂತೆಯೇ ಮಗ್ಗೆಯ ಮಾಯಿದೇವರು-

ಇಷ್ಟಾವಾಪ್ತಿಕರಂ ಸಾಕ್ಷಾದನಿಷ್ಟ ಪರಿಹಾರಕಂ ।
ಇಷ್ಟಿಃ ಪೂಜಾ ತಯಾ ನಿತ್ಯಮಿಷ್ಟಂ ಪೂಜಿತಮಾದರಾತ್ ॥
ಇಷ್ಟಲಿಂಗಮಿತಿ ಪ್ರೋಕ್ತಮಾಚಾರ್ಯೈರ್ಲಿಂಗಪೂಜಕೈಃ ।
ಇಷ್ಟಮರ್ಥಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ ॥

(ಅನುಭವ ಸೂತ್ರ ೩-೯-೧೦)

ಎಂಬುದಾಗಿ ''ಇಷ್ಟಲಿಂಗದ'' ಬಹು ಸುಂದರ ವಿಶ್ಲೇಷಣೆಯನ್ನು ಮಾಡಿದ್ದಾರೆ.

ಪ್ರತಿನಿತ್ಯ ಅತ್ಯಂತ ಆದರದಿಂದ ಪೂಜಿಸಲ್ಪಡುವ ಅಂತೆಯೇ ಸರ್ವಾನಿಷ್ಟಗಳನ್ನು ದೂರಮಾಡಿ ಸಕಲಾಭೀಷ್ಟಗಳನ್ನು ಪ್ರಾಪ್ತಿಮಾಡಿ ಕೊಡುವ ಲಿಂಗವೇ ಇಷ್ಟಲಿಂಗವು. ಈ ಇಷ್ಟಲಿಂಗಪೂಜಕನು ತನ್ನ ಮನೋಬಯಕೆಗಳನ್ನು ಇಷ್ಟಲಿಂಗಕ್ಕೆ ನಿವೇದಿಸಿಕೊಳ್ಳಬೇಕೇ ವಿನಹ ಅನ್ಯರಿಗೆ ಏನನ್ನೂ ಕೈ ಚಾಚಿ ಬೇಡಕೂಡದು. ಬೇಡಿದ್ದೇ ಆದರೆ ಇಷ್ಟಲಿಂಗದ ಮಹತಿಯೇ ಅವನಿಗೆ ತಿಳಿದಿಲ್ಲವೆಂದರ್ಥ. ಅಂಥವರನ್ನು ಕುರಿತು ಶ್ರೀ ಪ್ರಭುದೇವರು-

''ಜಗದ ಕರ್ತನ ಕೈಯಲ್ಲಿ ಹಿಡಿದುಕೊಂಡು ಮನೆ ಮನೆ ತಪ್ಪದೆ
ತಿರುಗುವ ತುಡುಗುಣಿಯಂತೆ, ಕಾಡಲಾಗದು ಭಕ್ತನ,
ಬೇಡಲಾಗದು ಭವಿಯ ಕಾಡಿಬೇಡಿ ಒಡಲಹೊರೆದಡೆ,
ಬೇಂಟೆಯ ಶ್ವಾನ ಮೊಲಕ್ಕೆ ಬಾಯ್ದೆಗೆದಂತೆ ಗುಹೇಶ್ವರಾ.''

ಎಂಬುದಾಗಿ ಬಹುವಾಗಿ ವಿಡಂಬಿಸಿದ್ದಾರೆ. ನೋಡಿದಿರಾ ! ಸದ್ಗುರುವಿನ ಆದೇಶದಂತೆ ಇಷ್ಟಲಿಂಗದಲ್ಲಿ ನಿಷ್ಠೆಯನ್ನು ಬೆಳೆಯಿಸಿಕೊಂಡ ಶರಣರ ಧೈರ್ಯವನ್ನು. ಆದ್ದರಿಂದ ಇಷ್ಟ ಲಿಂಗವು ಚಿಂತಿತಾರ್ಥಪ್ರದಾಯಕ ಚಿಂತಾಮಣಿಯು. ಇದರಲ್ಲಿ ನಿಷ್ಠೆಬೆಳೆದ ಸಾಧಕನಿಗೆ ಅಭೀಪ್ಸಸಾಧನೆಗಾಗಿ ಬೇರೆಡೆಗೆ ಹೋಗುವ ಅವಶ್ಯಕತೆ ಇರುವದಿಲ್ಲ. ಅಂತೆಯೇ–

''ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ''

ಎಂಬ ಪೂಜ್ಯರ ಆದೇಶದಂತೆ ಇಷ್ಟಲಿಂಗದ ಮರ್ಮವನ್ನು ತಿಳಿದ ಬುದ್ಧಿವಂತನು ಅದನ್ನು ಅವಧಾನ ಪೂರ್ವಕವಾಗಿ ಶರೀರದ ಮೇಲೆ ಧರಿಸಬೇಕು.

**ಅವಧಾನದ ಲಿಂಗಧಾರಣೆ :**

ಇಷ್ಟಲಿಂಗವನ್ನು ಧರಿಸಿದ ಜನರು ಹೇರಳವಾಗಿ ದೊರೆಯಬಹುದು. ಆದರೆ ಅವಧಾನ ಪೂರ್ವಕವಾಗಿ ಧರಿಸಿದವರೆಷ್ಟು ಜನ ? ''ಅವಧಾನ''ವೆಂಬುದು ಒಂದು ಭಕ್ತಿವಿಶೇಷ. ಪರಿಪೂರ್ಣ ಎಚ್ಚರಿಕೆಯ ಸಂಕೇತ. ತನ್ನಲ್ಲಿರುವ ವಸ್ತುವಿನ ಬಗ್ಗೆ ಅವಧಾನ ತಪ್ಪಿದಾಗ ಆ ವಸ್ತು ಇದ್ದೂ ಇಲ್ಲದಂತೆ ''ಬಗಲ ಮೇ ಬಚ್ಚಾ ಶಹರ ಮೇ ಡಿಂಡೋರಾ'' ಎಂಬ ಹಿಂದೀ ನಾಡು ನುಡಿಯಂತೆ ಅವನ ಬಾಳುವೆಯಾಗುತ್ತದೆ.

ಒಮ್ಮೆ ಓರ್ವ ಹೆಣ್ಣುಮಗಳು ಚಿಕ್ಕ ಮಗುವನ್ನು ಕರೆದುಕೊಂಡು ಜಾತ್ರೆಗೆ ಹೋಗಿದ್ದಳು. ಜಾತ್ರೆಗಳಲ್ಲಿ ದೇವರ ದರ್ಶನಕ್ಕಿಂತಲೂ ಕೊಡುವ–ಕೊಂಡುಕೊಳ್ಳುವ ವ್ಯವಹಾರದ ಗದ್ದಲವೇ ಬಹಳ. ಮಕ್ಕಳಿಗಂತೂ ಕಂಡದ್ದನ್ನು ಕೊಂಡುಕೊಳ್ಳುವ ಬಯಕೆ. ತಾಯಿಯು ಮಗುವಿನೊಂದಿಗೆ ದೇವರ ದರ್ಶನ ಪಡೆದು ಬಜಾರದಲ್ಲಿ ಬಂದಳು. ಹಾವಾಡಿಗನೊಬ್ಬ ಹಾವುಗಳನ್ನು ಆಡಿಸುತ್ತಿದ್ದ. ನೋಡಲು ಜನಸಮೂಹ ಸುತ್ತಲೂ ನೆರೆದಿದೆ. ಮಗುವಿಗೆ ನೋಡುವ ಆತುರ ಸಹಜವಾಗಿ ಕಾಣದಾದಾಗ ಅಳತೊಡಗಿತು. ಮಗುವನ್ನು ಬಗಲಲ್ಲಿ ಎತ್ತಿಕೊಂಡು ತೋರಿಸಲು ಪ್ರಯತ್ನಿಸಿದಳು ತಾಯಿ. ಆದರೂ ಸರಿಯಾಗಿ ಕಾಣದಾಯಿತು. ಕೊನೆಗೆ ಹೆಗಲಮೇಲೆ ಹೊತ್ತುಕೊಂಡಳು ಆಗ ಮಗುವಿಗೆ ಸರಿಯಾಗಿ ಕಾಣತೊಡಗಿತು. ಮಗು ಸಂತೋಷದಲ್ಲಿ ಆಟವನ್ನು ನೋಡಲಾರಂಭಿಸಿತು. ನೋಡುತ್ತಿದ್ದಂತೆಯೇ ನಿದ್ರೆ ಆವರಿಸಿತು ಮಗುವಿಗೆ. ಅದು ತಾಯಿ ತಲೆಯನ್ನು ಹಿಡಿದುಕೊಂಡು ಅಲ್ಲಿಯೇ ನಿದ್ರಿಸಹತ್ತಿತು. ಮಗುವನ್ನು ಹೊತ್ತ ತಾಯಿಯೂ ಆಟನೋಡುವುದರಲ್ಲಿ ಮೈಮರೆತಳು ಆಟದ ಭರದಲ್ಲಿ ಹೊತ್ತ ಮಗುವನ್ನೇ ಮರೆತಳು. ಆಟಮುಗಿದೊಡನೇ ಮಗುವನ್ನು ಹುಡುಕಲಾರಂಭಿಸಿದಳು ಜಾತ್ರೆಯ ತುಂಬೆಲ್ಲ ಹುಡುಕುತ್ತಾಳೆ ಮಗುವೆಲ್ಲಿಯೂ ಕಾಣಲಿಲ್ಲ. ನಿದ್ರೆಯಿಂದ ಆವೃತವಾದ ಮಗುವು ಸದ್ದು–ಗದ್ದಲವಿಲ್ಲದೇ ತಾಯಿಯ ಹೆಗಲಮೇಲೆ ಹಾಯಾಗಿ ನಿದ್ರಿಸುತ್ತದೆ. ಹುಡುಕಿ ಹುಡಕಿ ಬೇಸತ್ತ ತಾಯಿ ಮನೆಯ ಮಾರ್ಗ ಹಿಡಿದಳು. ಮಗುವನ್ನು ಕಳೆದುಕೊಂಡು ಅತಿ

ದುಃಖಿಯಾದಳು. ಚಿಂತೆಯಲ್ಲಿಯೇ ಮಾರ್ಗಕ್ರಮಿಸಿ ಮನೆಯನ್ನು ತಲುಪಿದಳು. ಅವಸರದಲ್ಲಿ ಮನೆಯೊಳಗೆ ಪ್ರವೇಶಿಸಿದಳು. ಮನೆಯ ಮುಂಬಾಗಿಲ ಚೌಕಟ್ಟು ಮಗುವಿನ ಹಣೆಗೆ ಬಲವಾಗಿ ಪೆಟ್ಟುಕೊಟ್ಟಿತು. ಗಾಯಗೊಂಡ ಶಿಶು ಚಿಟ್ಟನೇ ಚೀರಿತು. ಮಗುವಿನ ಧ್ವನಿಯನ್ನು ಕೇಳಿ ತಾಯಿ ಎಚ್ಚರಗೊಂಡಳು. ಸಿಕ್ಕಿತೆಂಬ ಉತ್ಸಾಹದಲ್ಲಿ ಸಂತೋಷಪಟ್ಟಳು.

ಮಗುವನ್ನು ಹೊತ್ತುಕೊಂಡಿದ್ದರೂ ಆಕೆಗೆ ಎಚ್ಚರಿಕೆ ಇರಲಿಲ್ಲ. ಇಲ್ಲಿ ''ಧಾರಣೆ'' ಇತ್ತು ಆದರೆ ''ಅವಧಾರಣೆ'' ಇರಲಿಲ್ಲ. ಹೀಗೆ ವಸ್ತುವನ್ನು ತನ್ನ ಕೈಯಲ್ಲಿಯೇ ಹಿಡಿದುಕೊಂಡು ಗಾಬರಿಯಲ್ಲಿ ಬೇರೆಡೆಗೆ ಹುಡುಕುವ ಸನ್ನಿವೇಶಗಳು ಒಂದಿಲ್ಲೊಂದು ಸಾರೆ ಸರ್ವರಿಗೂ ಆಗಿಯೇ ಇರುತ್ತವೆ. ಮರವೆ ಎಂಬುದು ಮನುಷ್ಯ ಬುದ್ಧಿಯ ಸಹಜ ಸ್ವಭಾವ. ಧರಿಸಿದ ವಸ್ತುವಿನ ಅವಧಾರಣೆ ತಪ್ಪಿದರೆ ಅದರ ಪ್ರಯೋಜನ ಲಭಿಸದು. ಎಚ್ಚರದಪ್ಪಿದಾಗಲೇ ಮನುಷ್ಯನಿಂದ ಪ್ರಮಾದಗಳು ಸಂಭವಿಸುತ್ತವೆ. ತನ್ನ ಶರೀರದ ಮೇಲೆ ಇಷ್ಟಲಿಂಗವಿದೆ ಎಂಬ ಎಚ್ಚರಿಕೆ ಸರ್ವದಾ ಇದ್ದದ್ದಾದರೆ ; ಅವನಿಂದ ನಿಷಿದ್ಧ ಕಾರ್ಯಗಳು ಸಂಭವಿಸಲಾರವು. ಮನುಷ್ಯನು ಯಾವುದೇ ತಪ್ಪು ವ್ಯವಹಾರವನ್ನು ಮಾಡಬೇಕಾದರೆ ಯಾರಿಗೂ ತಿಳಿಯದಹಾಗೆ ಮಾಡಲು ಪ್ರಯತ್ನಿಸುತ್ತಾನೆ. ಜನಸಾಮಾನ್ಯರಿಗೆ ಅಂಜುವ ಮನುಷ್ಯನು ದೇವರಿಗೆ ಅಂಜುವದಿಲ್ಲವೇ ? ತನ್ನ ದೇಹದ ಮೇಲೆ ದೇವರಿದ್ದಾನೆಂಬ ಸಂಪೂರ್ಣ ತಿಳುವಳಿಕೆಯುಳ್ಳ ಮನುಷ್ಯನು ತನ್ನಿಂದ ಅಪರಾಧಗಳಾಗದಂತೆ ಎಚ್ಚರಿಕೆಯನ್ನು ವಹಿಸುತ್ತಾನೆ. ದೇವಾಲಯದಂತೆ ದೇಹವನ್ನು ಪವಿತ್ರವಾಗಿಡಲು ಪ್ರಯತ್ನಿಸುತ್ತಾನೆ. ದೇಹದ ಮೇಲೆ ಇಷ್ಟಲಿಂಗವನ್ನು ಅವಧಾನಪೂರ್ವಕವಾಗಿ ಧರಿಸಲು ಆಜ್ಞಾಪಿಸಿದ ಪೂಜ್ಯಪಾದರ ಆದೇಶದ ತಾತ್ಪರ್ಯವಾದರೂ ಇದೇ ಆಗಿದೆ.

**ಇಷ್ಟಲಿಂಗಧರಿಸುವ ಸ್ಥಾನಗಳು :**

ಹಾಗಾದರೆ ಇಷ್ಟಲಿಂಗವನ್ನು ದೇಹದಲ್ಲಿ ಎಲ್ಲಿಯಾದರೂ ಧರಿಸಬಹುದೇ ಅಥವಾ ವಿಶೇಷ ಸ್ಥಾನಗಳಿವೆಯೇ ? ಎಂಬ ಜಿಜ್ಞಾಸೆಯುಂಟಾದಾಗ ''ಮೂರ್ಧ್ನಿವಾ ಕಂಠದೇಶೇವಾ.....'' ಮುಂತಾಗಿ ಪೂಜ್ಯರು ಮಸ್ತಕ, ಕಂಠ, ಬಗಲು, ಎದೆ, ಹೊಟ್ಟೆ ಅಥವಾ ಅಂಗೈ ಹೀಗೆ ನಾಭಿಯಿಂದ ಮೇಲ್ಭಾಗದ ಸ್ಥಾನಗಳನ್ನು ನಿರ್ದೇಶಿಸಿದ್ದಾರೆ. ಇವುಗಳಲ್ಲಿ ತನಗೆ ಅನುಕೂಲವೆನಿಸಿದ ಯಾವುದೊಂದು ಸ್ಥಾನದಲ್ಲಿ ಇಷ್ಟಲಿಂಗವನ್ನು ಧರಿಸಬೇಕು. ನಾಭಿಯ ಕೆಳಗೆ ಮಲಸ್ಥಾನಗಳಲ್ಲಿಯೇ ಆಗಲಿ ಬೆನ್ನಿನ ಮೇಲಾಗಲಿ ಮತ್ತು ಜಡೆಯ ಅಗ್ರಭಾಗದಲ್ಲಿ ಇಷ್ಟಲಿಂಗವನ್ನು ಧರಿಸಬಾರದು.

ಶೀರ್ಷೇ ಕಂಠೆ ವಕ್ಷಸಿ ಕಕ್ಷದೇಶೇ
ನಾಭೌ ಹಸ್ತೇ ಸರ್ವದಾ ಪ್ರಾಣಲಿಂಗಂ ಧಾರ್ಯಂ ।
ಯಥಾಸಂಪ್ರದಾಯಂ ಪುರಸ್ತಾತ್
ಗುರೋರ್ವಿದಿತ್ವಾ ಹೃದಯಂ ಮುಖ್ಯಮುಕ್ತಂ ॥

(ಸಿದ್ಧಾಂತ ಶಿಖೋಪನಿಷತ್–೧೬)

ಮೂರ್ಧ್ನಿ ಕಂಠೇ ಭುಜೇ ಹಸ್ತೇ ಹೃತ್‌ಸ್ಥಲೇ ನಾಭಿಮಂಡಲೇ ।
ಏತೇಷಾ ಮೇಕದೇಶೇತು ಧಾರಯೇತ್ ಶಿವಲಿಂಗಕಮ್ ॥

(ವಾತುಲಶುದ್ಧಾಗಮ ೧೦–೩೬)

ಲಿಂಗಂ ವಸ್ತ್ರೇಣ ವೇಷ್ಟಿತಂ ಮಸ್ತಕೇ ಕಂದರೇ ಕಕ್ಷೇ ವಕ್ಷಸ್ಯಥ ಕರಸ್ಥಲೇ ।
ನಾಭೇರಧಸ್ತಾತ್ ಸತತಂ ಪ್ರಮಾದಾನ್ನೈವ ಧಾರಯ ॥

(ಸ್ಕಂದ ಪುರಾಣ)

ಹೀಗೆ ಉಪನಿಷತ್, ಆಗಮ ಹಾಗೂ ಶೈವಪುರಾಣಗಳಲ್ಲಿಯೂ ಇಷ್ಟಲಿಂಗದ ಸ್ವರೂಪ ಮತ್ತುಧಾರಣೆಯ ವಿಧಾನಗಳೆಲ್ಲಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿವೆ.

**ಕರಡಿಗೆ ಮತ್ತು ಶಿವದಾರಗಳು :**

ಈ ಇಷ್ಟಲಿಂಗವನ್ನಿಡುವ ಕರಡಿಗೆ ಹಾಗೂ ಶಿವದಾರಗಳ ವಿಷಯವಾಗಿಯೂ ಪಾರಮೇಶ್ವರಾಗಮದ ಎರಡನೇ ಪಟಲದಲ್ಲಿವಿಸ್ತಾರವಾಗಿ ತಿಳಿಯಪಡಿಸಲಾಗಿದೆ–

ಸೌವರ್ಣಮುತ್ತಮಂ ದೇವಿ ಯದಿಶಕ್ತಿಸ್ತಥಾ ಚರೇತ್ ।
ರಾಜತಂ ಪಿತ್ತಲಂ ತಾಮ್ರಂ ನೈವ ಕಾಂಸ್ಯೇನ ಕಾರಯೇತ್ ॥

ಸೀಸೇನ ತ್ರಪುರಾಣಾ ದೇವಿ ತಾಂತವೀ ಪಾಟಿಕಾಪಿ ವಾ ।
ಏತೇಷ್ವವ್ಯತಮಂ ನಿತ್ಯಂ ನಾನ್ಯತ್ ಕುರ್ಯಾ ದನಾಪದಿ ॥

ಪರಿತ್ಯಜ್ಯಾಪಿ ಯತ್ನೇನ ಪ್ರಾಣಮಾನಧನಾದಿಕಂ ।
ಸಂರಕ್ಷಣೀಯಂ ಗಿರಿಜೇ ಲಿಂಗಮೇವ ನ ಸಂಶಯಃ ॥

(ಪಾರಮೇಶ್ವರ ತಂತ್ರ, ೨–೩೪–೩೭)

ಅಂದರೆ ಇಷ್ಟಲಿಂಗವನ್ನಿಡುವ ಸಜ್ಜಿಕೆ (ಕರಡಿಗೆ)ಯು ಸ್ವರ್ಣದಿದ್ದರೆ ಸರ್ವೋತ್ತಮವು. ಅದಿಲ್ಲದಿದ್ದರೆ ಬೆಳ್ಳಿ, ಹಿತ್ತಾಳೆ, ತಾಮ್ರ ಮತ್ತು ಸೀಸು ಮುಂತಾದ ಉತ್ತಮವಾದ ಧಾತುಗಳಿಂದ ನಿರ್ಮಿತವಾಗಿರಬೇಕು. ''ಪಂಚಸೂತ್ರ ಪ್ರಮಾಣೇನ ಸಜ್ಜಿಕಾಲಿಂಗ ರೂಪಿಣೇ.....ಭೋಗಮೋಕ್ಷೈಕಸಾಧಿನೀ । ಭೋಗ ಸ್ವರ್ಗಾಪವರ್ಗಾಯ ಮಮ ನಂದೀಶ್ವರಾಕೃತಿಃ'' (ಪಾ. ತ. ೨–೩೮, ೩೯) ಮುಂತಾದ ಆಗಮದ ಪ್ರಮಾಣದಂತೆ ಆ ಕರಡಿಗೆಯು ಇಷ್ಟಲಿಂಗ, ನಂದಿ, ಹತ್ತಿಯಕಾಯಿ, ಮಾವಿನಕಾಯಿ, ಬಿಲ್ವಫಲ ಮತ್ತು ಮೋದಕಾಕಾರಗಳಲ್ಲಿಇದ್ದರೆ ಭೋಗ–ಮೋಕ್ಷ ಫಲಪ್ರದಗಳೆಂದು ತಿಳಿಸಲಾಗಿದೆ. ಇನ್ನು ಆ ಕರಡಿಗೆಯನ್ನು ಕಟ್ಟಿಕೊಳ್ಳುವ ಸೂತ್ರವಾದರೂ ಕರಡಿಗೆಯನ್ನು ನಿರ್ಮಿಸಿದ ಧಾತುವಿನಿಂದಲೇ ನಿರ್ಮಿಸಿರಬೇಕು. ಇಲ್ಲವಾದರೆ ನೂಲಿನಿಂದಾದರೂ ಶಿವದಾರವನ್ನು ನಿರ್ಮಿಸಿಕೊಳ್ಳಬೇಕು. ಆ ಶಿವದಾರವಾದರೂ–

ಶುಕ್ಲೋ ಜ್ಞಾನಪ್ರದಸ್ತತ್ರ ರಕ್ತೋ ವಶ್ಯಕರೋ ಗುಣಃ ।
ಶ್ಯಾಮಃ ಶತ್ರುಭಯಂಕರಃ ಪೀತಃ ಪುತ್ರಪ್ರದಾಯಕಃ ॥

ಚಿತ್ರೋ ವಿಚಿತ್ರಫಲದಃ ಸುದೃಢಚ್ಛೇದವರ್ಜಿತಃ ।
ಅಗ್ರಂಥಿರ್ಋಜುರೂಪಃ ಸ್ಯಾದಾನಾಭ್ಯಾಕಂಠ ಮಧ್ಯತಃ ॥
ಯಾವದಿಚ್ಛಂ ಭವೇದ್ದೇವಿ ! ಸಜ್ಜಿಕಾಗುಣ ಉತ್ತಮಃ ।
ತಾವದೇವ ಪ್ರಕುರ್ವೀತ ಸಜ್ಜಿಕಾಗುಣವಿಮೋಕ್ಷ್ವರೀ ॥

(ಪಾರಮೇಶ್ವರ ತಂತ್ರ ೨; ೪೯–೫೦)

ಈ ಆಗಮ ಪ್ರಮಾಣದಂತೆ ಬಿಳಿಯದಾಗಿದ್ದರೆ ಜ್ಞಾನಪ್ರದ, ಕೆಂಪು ವಶೀಕಾರಕ, ಕಪ್ಪು ಶತ್ರುಭಯಾನಕ, ಹಳದಿ ಪುತ್ರದಾಯಕ ಮತ್ತು ನಾನಾ ಬಣ್ಣಗಳಿಂದ ಕೂಡಿದ್ದು ನಾನಾ ಫಲಪ್ರದವೆಂದು ತಿಳಿಯಬೇಕು. ಇದರಲ್ಲಿ ತಮಗೆ ಅಪೇಕ್ಷಿತವಾದ ಯಾವದಾದ ರೊಂದು, ಬಣ್ಣದ ಶಿವದಾರವನ್ನು ತೆಗೆದುಕೊಂಡು ಮೂವತ್ತಾರು ಎಳೆಗಳಿಂದ ಶಿವದಾರವನ್ನು ನಿರ್ಮಿಸಬೇಕು. ಮೂವತ್ತಾರು ಸಂಖ್ಯೆಯ ರಹಸ್ಯವನ್ನು–

ಜ್ಞಾನಕರ್ಮಸಮುಚ್ಚಿತ್ಯ ಶ್ರೀಗುರುಲಿಂಗಜಂಗಮಾಃ ।
ಷಡ್ವಿಧಾ ಷಟ್‌ಸ್ಥಲೈರುಕ್ತಾಃ ಷಟ್‌ತ್ರಿಂಶತ್ತತ್ತ್ವತೋ ಮತಾಃ ।
ಅತೋ ದ್ವಾಭ್ಯಾಂ ಸಮುಚ್ಚಿತ್ಯ ತ್ರಿರಾವೃತ್ಯ ಪ್ರಕಲ್ಪಯೇತ್ ।
ಷಟ್‌ಸೂತ್ರಂ ತಚ್ಛಿವಂ ಪ್ರೋಕ್ತಂ ರುದ್ರಗ್ರಂಥಿಸಮಾಯುತಂ ॥
ಅಪ್ರಮತ್ತೇನ ತದ್ಧಾರ್ಯಂ ಶಿವಸಜ್ಜಿಕಯಾ ಸದಾ ।

(ಇಷ್ಟಲಿಂಗ ವಿಜ್ಞಾನ ಪುಟ ೮೨)

ಹೀಗೆ ಶ್ರೀ ಜಿ. ಟಿ. ಅಕ್ಕುಲಯ್ಯ ದೀಕ್ಷಿತರು ವಾತುಲಾಗಮದ ಪ್ರಮಾಣದಿಂದ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ–ವೀರಶೈವ ಸಿದ್ಧಾಂತದಲ್ಲಿ ಗುರು, ಲಿಂಗ ಮತ್ತು ಜಂಗಮ ಈ ಮೂವರು ಪೂಜ್ಯರು ಹಾಗೂ ಜ್ಞಾನ–ಕರ್ಮಗಳೆರಡು ಮುಕ್ತಿಯ ಸಾಧನಗಳು ಷಟ್‌ಸ್ಥಲವು ಮುಕ್ತಿಯ ಸೋಪಾನವು ಹೀಗೆ ಗುರುಲಿಂಗಜಂಗಮರನ್ನು ಜ್ಞಾನಕರ್ಮಗಳಿಂದ ಗುಣಿಸಿ ಬಂದ ಮೊತ್ತವನ್ನು ಷಟ್‌ಸ್ಥಲದಿಂದ ಗುಣಿಸಲಾಗಿ (೩x೨=೬; ೬x೬=೩೬) ಮೂವತ್ತಾರು ಸಂಖ್ಯೆಯು ಬರುತ್ತದೆ. ಗುರುಲಿಂಗ ಜಂಗಮರನ್ನು ಜ್ಞಾನ–ಕರ್ಮಗಳಿಂದಾರಾಧಿಸಿ ಷಟ್‌ಸ್ಥಲದಲ್ಲಿ ನಡೆದು ಸಾಯುಜ್ಯವನ್ನು ಪಡೆಯುವ ದೃಢಸಂಕಲ್ಪವೆಂಬ ಸೂತ್ರದಿಂದ ಇಷ್ಟಲಿಂಗವನ್ನು ಧರಿಸಿಕೊಂಡಿದ್ದೇ ನೆಂಬುದರ ಪ್ರತೀಕವಾಗಿಯೇ ಶಿವದಾರದಲ್ಲಿಯ ಮೂವತ್ತಾರು ಎಳೆಗಳನ್ನಿರಿಸುವುದು. ಇದಲ್ಲದೆ ಶಿವಾದಿಭೂಮ್ಯಂತಗಳಾದ ಮೂವತ್ತಾರೂ ತತ್ತ್ವಗಳ ಪ್ರತೀಕವಾಗಿಯಾದರೂ ಹೇಳಬಹುದು.

ಇನ್ನು ಕೆಲವರು ಅರವತ್ತುಮೂರು ಎಳೆಗಳಿರಬೇಕೆಂಬುದಾಗಿಯೂ ಹೇಳುವ ದುಂಟು. ಇದು ಪುರಾತನರ ಪ್ರತೀಕವೆಂದು ಭಾವಿಸಬಹುದು. ಈ ರೀತಿಯಾಗಿ ವೀರಶೈವರ ಅನೇಕ ಆಚರಣೆಗಳು ತತ್ತ್ವಪ್ರಧಾನಗಳಾಗಿವೆಯಲ್ಲದೇ ಭೌತಿಕ ಫಲಪ್ರದಾಯಕಗಳೂ ಆಗಿರುತ್ತವೆ.

ಆದಕಾರಣ ಸಕಲ ವೀರಶೈವರು ಸದ್ಗುರುಗಳ ಆದೇಶದಂತೆ ಇಷ್ಟಾರ್ಥ ಪ್ರದಾಯಕವಾದ ಇಷ್ಟಲಿಂಗವನ್ನು ಯಾವುದೇ ಧಾತುನಿರ್ಮಿತವಾದ ಕರಡಿಗೆಯಲ್ಲಿ ಇಟ್ಟು, ತನಗೆ ಅಪೇಕ್ಷಿತವಾದ ಬಣ್ಣದ ಶಿವದಾರದಿಂದ ಸಂಬಂಧಗೊಳಿಸಿಯಾಗಲಿ ಅಥವಾ ಕೇವಲ ವಿಶಾಲವಾದ ವಸ್ತ್ರದಲ್ಲಿ ಸುತ್ತಿಯಾಗಲಿ ನಾಭಿಸ್ಥಾನದಿಂದ ಮೇಲೆ ಕಂಠ ಮುಂತಾದ ಸ್ಥಾನಗಳಲ್ಲಿ ಅವಧಾನಪೂರ್ವಕವಾಗಿ ಸದಾ ಅಗಲದಂತೆ ಧರಿಸಿಕೊಂಡು ಮುಂದೆ ಹೇಳುವ ರೀತಿಯಲ್ಲಿ ಭಕ್ತಿಯಿಂದ ಪೂಜಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೭ ಆಗಷ್ಟ್, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



## ಆಶೀರ್ವಚನ-೧೦

ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋರಮಂ ।
ಅರ್ಚಯೇದ್ಗಂಧ ಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥ (ಸಿ. ಶಿ. ೬.೫೩)

ಇಷ್ಟಲಿಂಗಧಾರಕನು ಯಾವಾಗಲೂ ಪವಿತ್ರನಾಗಿರುತ್ತಾನೆ. ಆದ ಕಾರಣ ಮನೋಹರವಾದ ತನ್ನ ಇಷ್ಟಲಿಂಗವನ್ನು ವಾಮಹಸ್ತ ಪೀಠದಲ್ಲಿ ಇರಿಸಿಕೊಂಡು ಏಕಾಗ್ರವಾದ ಮನಸ್ಸಿನಿಂದ ಗಂಧ-ಪುಷ್ಪಾದಿ ಉಪಚಾರದಿಂದ ಪೂಜಿಸಬೇಕು.

ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ವರಂ ।
ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರಂತರಂ ॥ (ಸಿ. ಶಿ. ೬.೫೪)

ಮೋಕ್ಷಾಪೇಕ್ಷಿಗಳಾದ ಸಮಸ್ತ ವೀರಶೈವರಿಗೆ ಬಾಹ್ಯ ಪೀಠದಲ್ಲಿ ಇರಿಸಿ ಪೂಜಿಸುವದಕ್ಕಿಂತಲೂ ತಮ್ಮ ವಾಮಹಸ್ತಪೀಠದಲ್ಲಿ ಇರಿಸಿ ಇಷ್ಟಲಿಂಗವನ್ನು ಪೂಜಿಸುವದೇ ಶ್ರೇಷ್ಠವಾದದ್ದು.

ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ ।
ಧಾರಯಂತಿ ಸದಾಲಿಂಗಮುತ್ತಮಾಂಗೇ ವಿಶೇಷತಃ ॥ (ಸಿ. ಶಿ. ೬.೫೫)

ಬ್ರಹ್ಮಾದಿದೇವತೆಗಳು ಮತ್ತು ಗೌತಮಾದಿ ಮಹರ್ಷಿಗಳು ವಿಶೇಷವಾಗಿ ತಮ್ಮ ಮಸ್ತಕದಲ್ಲಿಯೇ ಇಷ್ಟಲಿಂಗವನ್ನು ಧರಿಸುತ್ತಾರೆ.

ಲಕ್ಷ್ಮ್ಯಾದಿ ಶಕ್ತಯಃ ಸರ್ವಾಃ ಶಿವಭಾವವಿಭಾವಿತಾಃ ।
ಧಾರಯಂತ್ಯಲಿಕಾಗ್ರೇಷು ಶಿವಲಿಂಗಮಹರ್ನಿಶಂ ॥ (ಸಿ. ಶಿ. ೬.೫೬)

ಶಿವಧ್ಯಾನ ತತ್ಪರರಾದ ಲಕ್ಷ್ಮಿಯೇ ಮೊದಲಾದ ಎಲ್ಲ ಶಕ್ತಿ ದೇವತೆಗಳು ಹಗಲಿರುಳು ಹಣೆಯ ಮೇಲ್ಭಾಗದಲ್ಲಿ ಶಿವಲಿಂಗವನ್ನು ಧರಿಸುತ್ತಾರೆ.

### ಇಷ್ಟಲಿಂಗಧಾರಿಯು ಸದಾ ಪರಿಶುದ್ಧನು :

ಪವಿತ್ರವಾದ ಶಿವಲಿಂಗದ ಸಂಪರ್ಕದಿಂದ ಅಪವಿತ್ರವಾದ ಶರೀರವೂ ಪವಿತ್ರವಾಗಿ ಪರಿಣಮಿಸುತ್ತದೆಂಬ ದಿವ್ಯ ಸಂದೇಶವನ್ನು ಜಗತ್ತಿಗೆ ತಿಳಿಯಪಡಿಸುವುದಕ್ಕಾಗಿ ಪೂಜ್ಯಪಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ''ಲಿಂಗಧಾರೀ ಸದಾಶುದ್ಧೋ'' ಎಂಬುದಾಗಿ ಉಪದೇಶಿಸಿದ್ದಾರೆ.

''ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ'' (ಋಗ್ವೇದ ೯-೮೩-೧) ಎಂಬ ಋಗ್ವೇದ ಮಂತ್ರದಲ್ಲಿ ಪರಶಿವನಿಗೆ ''ಪವಿತ್ರ''ವೆಂಬ ಅನ್ವರ್ಥಕ ನಾಮವು ಹೇಳಲ್ಪಟ್ಟಿದೆ, ಆತನ ಸಂಪರ್ಕದಿಂದ ಅಮಂಗಲವು ಮಂಗಲವಾಗಿಯೂ, ಅಪವಿತ್ರವು ಪವಿತ್ರವಾಗಿಯೂ, ಅಶುದ್ಧವು ಶುದ್ಧವಾಗಿಯೂ ಪರಿಣಮಿಸುತ್ತದೆ. ಶ್ರೇಷ್ಠ ವಸ್ತುವಿನ ಸಂಪರ್ಕದಿಂದ ಕನಿಷ್ಠವೂ ಶ್ರೇಷ್ಠದ ಮಹತಿಯನ್ನು ಪಡೆಯುವದನ್ನು ಲೋಕದಲ್ಲಿ ಕಾಣುತ್ತೇವೆ.

ಹಾಲಿನ ಸಂಪರ್ಕವನ್ನು ಪಡೆದ ನೀರು, ಹೂವಿನೊಡನೆ ಬೆರೆತ ದಾರ ಮತ್ತು ಧಾನ್ಯದೊಡನೆ ಬೆರೆತ ಹರಳು ಮುಂತಾದ ಮೂಲ್ಯಹೀನ ಪದಾರ್ಥಗಳು ಬಹು ಮೂಲ್ಯವನ್ನು ಪಡೆಯುತ್ತಿರುವುದು ಇಂದಿನ ಲೋಕಾನುಭವವಲ್ಲವೇ ? ಅದರಂತೆ ಸ್ವಭಾವತಃ ಅಪವಿತ್ರವಾದ ದೇಹವು ಪವಿತ್ರವಾದ ಇಷ್ಟಲಿಂಗದ ಸಂಪರ್ಕದಿಂದ ಪವಿತ್ರವಾಗಿ ಪರಿಣಮಿಸುವ ಕಾರಣ ಈತನಿಗೆ ಯಾವ ಸೂತಕಗಳೂ ಸ್ಪರ್ಶಿಸವು. ಆದ್ದರಿಂದ ಲಿಂಗಧಾರಿಯು ಸದಾ ಶುದ್ಧನೇ ಆಗಿರುತ್ತಾನೆ.

ಅತ್ಯಾಶ್ರಮಿ ತ್ವಾತ್ ಗಣವಂಶಜಾನಾಂ
ಲಿಂಗಾಂಗ ಸಂಗಿನಾಂ ತತ್ರಾಜನ್ಮಾಂತ ದೀಕ್ಷಾ ।
ಯಥಾ ಗಂಗಾ ಶಿವ ಸಂಗಾತ್ತಥೈವ
ನ ಸೂತಕಂ ವಾ ನಾಪ್ಯಶುಚಿತ್ವಮೇಷಾಂ ॥

(ಸಿದ್ಧಾಂತ ಶಿಖೋಪನಿಷತ್ ೧೨)

ಗಚ್ಛಂ ಶ್ರಿಷ್ಯನ್ನಿ ಮಿಷನ್ನು ನ್ಮಿಷನ್ವಾ ।
ಸ್ವಪನ್ ಜಾಗ್ರನ್ ಲಿಂಗಧಾರೀ ಶುಚಿಃ ಸ್ಯಾತ್ ॥

(ಸಿದ್ಧಾಂತ ಶಿಖೋಪನಿಷತ್ ೧೪)

ಸಿದ್ಧಾಂತ ಶಿಖೋಪನಿಷತ್ತಿನ ಈ ಮಂತ್ರಗಳು ಸಹ ಲಿಂಗಧಾರಿಗೆ ಸೂತಕಗಳಾಗಲಿ ಅಶುಚಿತ್ವಗಳಾಗಲಿ ಇರುವದಿಲ್ಲವೆಂಬುದನ್ನು ಸ್ಪಷ್ಟಪಡಿಸಿರುತ್ತವೆ.

ಆದ್ದರಿಂದ ಲೋಕದ ರೂಢಿಯಂತೆ ಜನನ, ಮರಣ ಮತ್ತು ರಜಃ ಸೂತಕಗಳು ಪ್ರಾಪ್ತವಾದರೂ ವೀರಶೈವ ಸ್ತ್ರೀ–ಪುರುಷರಿಗೆ ಇಷ್ಟಲಿಂಗ ಪೂಜೆಗೆ ಬಾಧಕಗಳಾಗ ಲಾರವು. ಜನಸಾಮಾನ್ಯರಿಗಾಗಿ ಧರ್ಮಶಾಸ್ತ್ರದಲ್ಲಿ ಜನನಕ್ಕೆ ಹನ್ನೆರಡು ದಿನ, ಮರಣಕ್ಕೆ ಹದಿಮೂರು ದಿನ ಹಾಗೂ ರಜೋದರ್ಶನಕ್ಕೆ ನಾಲ್ಕು ದಿನ ಹೀಗೆ ಸೂತಕಗಳನ್ನು ವಿಧಿಸಲಾಗಿದೆ. ಈ ಸೂತಕ ಪ್ರಾಪ್ತವಾದ ಸೂತಕಿಗಳು ದೇವರ ಪೂಜಾದಿ ವ್ಯವಹಾರ ಗಳನ್ನು ಮಾಡಬಾರದೆಂಬ ನಿಯಮವಿದೆ. ಆದರೆ ಇಷ್ಟಲಿಂಗ ಧಾರಣೆ ಮತ್ತು ಅದರ ಪೂಜಾದಿಗಳು ವೀರಶೈವರ ನಿತ್ಯಕರ್ಮಗಳಾದ್ದರಿಂದ ಅವುಗಳಿಗೆ ಲೋಪ ಬರಬಾರ ದೆಂಬ ಉದ್ದೇಶದಿಂದ ಧರ್ಮಶಾಸ್ತ್ರದ ಸಾಮಾನ್ಯ ನಿಯಮದಂತೆ ಸೂತಕಗಳೂ ಪ್ರಾಪ್ತ ವಾದರೂ ಸ್ನಾನಾದಿಗಳಿಂದ ಶುಚಿರ್ಭೂತರಾಗಿ ಶ್ರೀ ಗುರು–ಜಂಗಮರ ಧೂಳ ಪಾದೋದಕವನ್ನು ಪ್ರೋಕ್ಷಿಸಿಕೊಂಡು ಇಷ್ಟಲಿಂಗ ಪೂಜೆಯನ್ನು ಮಾಡಬಹುದೆಂದು ವೀರಶೈವಾಚಾರ್ಯರು ವಿಶೇಷ ನಿಯಮವನ್ನು ವಿಧಿಸಿದ್ದಾರೆ. ಪಂಚ ಸೂತಕಗಳು ವೀರಶೈವರಿಗೆ ಹೇಗೆ ಸಂಪರ್ಕಿಸುವದಿಲ್ಲವೆಂಬ ವಿಷಯದ ಶಾಸ್ತ್ರೀಯವಾದ ಸಮಾಲೋಚನೆಯನ್ನು ''ಭಕ್ತಮಾರ್ಗಕ್ರಿಯಾಸ್ಥಲ''ದಲ್ಲಿ ವಿಶೇಷವಾಗಿ ವಿಶದಪಡಿಸ ಲಾಗಿದೆ.

ಹೀಗೆ ಸದಾ ಶುದ್ಧನಾದ ಇಷ್ಟಲಿಂಗಧಾರಿಯು ''ಅರ್ಚಯೇದ್ಗಂಧ ಪುಷ್ಪಾದ್ಯೈಃ ಕರಪೀಠೇ ಸಮಾಹಿತಃ'' ಎಂಬ ಪೂಜ್ಯರ ಅಪ್ಪಣೆಯಂತೆ ಇಷ್ಟಲಿಂಗವನ್ನು ವಾಮಹಸ್ತ ಪೀಠದಲ್ಲಿ ಇರಿಸಿಕೊಂಡು ತನಗೆ ಶಕ್ಯವಾದ ಉಪಚಾರಗಳಿಂದ ಮನಃಪೂರ್ವಕವಾಗಿ ಪೂಜಿಸಬೇಕು.

**ಇಷ್ಟಲಿಂಗ ಪೂಜಾವಿಧಾನ :**

ಇಷ್ಟಲಿಂಗ ಪೂಜಕನು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಶ್ವೇತ ಕಂಬಲಾಸನದ ಮೇಲೆ ಪೂರ್ವ ಇಲ್ಲವೇ ಉತ್ತರಾಭಿಮುಖವಾಗಿ ಕುಳಿತು–

ಕರಸ್ಥಲಗತಂ ಲಿಂಗಂ ವಾಮತಃಕೃತಗೋಮುಖಂ ।
ಕನಿಷ್ಠಾನಾಮಿಕಾಗ್ರಾಭ್ಯಾಂ ಶಿವಲಿಂಗಂ ಚ ಗೋಮುಖಂ ॥
ಅಂಗುಷ್ಠಗ್ರೇಣ ಚೈವಂ ಹಿ ಸಂಸ್ಪೃಶೇದರ್ಚನಾ ವಿಧೌ ।
ಭಾವಪ್ರಾಣೇಷ್ಟಲಿಂಗಾನಿ ಪೂಜಯೇದೇಕ ಭಾವತಃ ॥
ಪೃಥಗ್ಭಾವಂ ನ ಕುರ್ವೀತ ಪ್ರಾಣಲಿಂಗ ಪರೋಯತಃ ।

(ಸೂಕ್ಷ್ಮತಂತ್ರ ಪಟಲ ೬; ೫೩–೫೫)

ಎನ್ನುವ ಸೂಕ್ಷ್ಮಾಗಮ ಪ್ರಮಾಣದಂತೆ ವಾಮಹಸ್ತ ಪೀಠದಲ್ಲಿ ಇಷ್ಟಲಿಂಗವನ್ನು ಅಂಗುಷ್ಠದ ಕಡೆಗೆ ಗೋಮುಖಮಾಡಿ ಕನಿಷ್ಠಕಾ ಮತ್ತು ಅನಾಮಿಕೆಗಳಿಂದ ಲಿಂಗದ ಮಸ್ತಕ ಹಾಗೂ ಅಂಗುಷ್ಠದಿಂದ ಗೋಮುಖವು ಸ್ಪರ್ಶವಾಗುವಂತೆ ಹಿಡಿದುಕೊಂಡು ತನ್ನ ದೃಷ್ಟಿಗೆ ನೇರವಾಗಿ ಹನ್ನೆರಡು ಅಂಗುಲ ಅಂತರದಲ್ಲಿ ಲಿಂಗಹಸ್ತವನ್ನಿರಿಸಿ, ಮೊದಲು ಶಾಂಭವಿ ಮುದ್ರೆಯಿಂದ ಅಂದರೆ ದೃಷ್ಟಿಯನ್ನು ಇಷ್ಟಲಿಂಗದಲ್ಲಿಟ್ಟು ಅಂತರಂಗದಲ್ಲಿ ಮನೋವೃತ್ತಿಯಿಂದ ಪ್ರಾಣಲಿಂಗ ಹಾಗೂ ಭಾವಲಿಂಗಗಳನ್ನು ಅನುಲಕ್ಷಿಸಿ ಅರ್ಥಾನುಸಂಧಾನ ಪೂರ್ವಕ ಪಂಚಾಕ್ಷರಿ ಮಹಾಮಂತ್ರವನ್ನು ಜಪಿಸಬೇಕು. ಸಾಧಕನನಿರ್ನಿಮೇಷ ದೃಷ್ಟಿಯ ಸಂಬಂಧದಿಂದ ಇಷ್ಟಲಿಂಗ ಕಾಂತಿಯಿಂದಾವಿರ್ಭವಿಸಿದ ಸೂಕ್ಷ್ಮವಾದ ವಿದ್ಯುತ್ತವಾಮಹಸ್ತದ ಅಂಗುಷ್ಠ ಹಾಗೂ ಅನಾಮಿಕಾಂಗುಲಿಗಳ ಮೂಲಕ ಹೃದಯ ಮತ್ತು ಬ್ರಹ್ಮರಂಧ್ರದವರೆಗೆ ಹರಿದು ಅಲ್ಲಿಯ ಚಕ್ರಗಳನ್ನೂ ಜಾಗ್ರತಗೊಳಿಸಿ ಪ್ರಾಣ ಲಿಂಗ ಮತ್ತು ಭಾವಲಿಂಗಗಳ ಅನುಸಂಧಾನದ ಯೋಗ್ಯತೆಯನ್ನುಂಟು ಮಾಡುವದರಿಂದ ಸಾಧಕನ ಬುದ್ಧಿ, ಮನಸ್ಸು, ಮತ್ತು ದೃಷ್ಟಿಗಳು ಏಕಕಾಲದಲ್ಲಿ ತ್ರಿಲಿಂಗಾನುಸಂಧಾನದಲ್ಲಿ ತತ್ಪರಗಳಾಗುತ್ತವೆ. ಹೀಗೆ ''ರುದ್ರೋ ಭೂತ್ವಾ ರುದ್ರಮರ್ಚಯೇತ್'' ಎಂಬ ಪ್ರಮಾಣದಂತೆ ಸಾಧಕನು ಲಿಂಗ ತತ್ತ್ವದಲ್ಲಿ ತನ್ಮಯನಾಗಿ ಆಗಮೋಕ್ತಗಳಾದ ಪಂಚ, ಅಷ್ಟ, ಷೋಡಶ ಮತ್ತು ಷಟ್‌ತ್ರಿಂಶದಾದಿ ಉಪಚಾರಗಳಿಂದ ಇಷ್ಟಲಿಂಗವನ್ನು ಅರ್ಚಿಸಬೇಕು.

ಶ್ರೀಮನ್ನಿಜಗುಣ ಶಿವಯೋಗಿಗಳು ಈ ಇಷ್ಟಲಿಂಗಪೂಜಾ ವಿಧಾನವನ್ನು ಬಹು ಹೃದಯಂಗಮವಾಗಿ ವಿವರಿಸಿದ್ದಾರೆ. ಅದೆಂತೆಂದೊಡೆ–

''ಆವ ಪುಣ್ಯವೋ ಲಿಂಗಪೂಜಾ ವಿಧಿಯನುಭಾವವಹುದು ನರಜನ್ಮದೊಳು ।
ಸಾವಿರ ಮುಖದೊಳರಸಿನೋಡಿ ನಿಗಮಾಗಮಾವಳಿ ಗಾಣದ ಸಾಧ್ಯವಿದು ॥ಪ॥

ಮೊದಲು ಲಿಂಗದ ಕಳೆಯನ್ನು ಭಾವಿಸುವ ರತಿ । ಹೃದಯದೊಳೊಡಗೂಡಿ ನೆನೆವರತಿ ॥
ಸದಮಳ ಲೋಚನದೊಳು ನಿಟ್ಟಿಸುವರತಿ । ಯೊದವಿಕರದೊಳಿಂ ಬಿಡುವರತಿ ॥ ೧ ॥

ಹರುಷ ರಸದೊಳು ಮಜ್ಜನವೆರೆವಿಂಪು। ಪರಮ ವಸ್ತ್ರಗಂಧಾಕ್ಷತೆಗೊಡುವಿಂಪು ॥
ಪರಿಮಳವೆಸೆವಲರನು ಸಿಂಗರಿಸುವಿಂಪು। ವರ ಧೂಪಾರತಿಗಳ ನೆತ್ತುವಿಂಪು ॥೨ ॥

ರಸಮೊಸರುವ ಸವಿಗಳನೂಡುವನುರಾಗ। ವೆಸೆವ ತಾಂಬೂಲವನು ನೀಡುವನು ರಾಗ ॥ ಮಿಸುನಿಯ ಛತ್ರಚಾಮರವನಿಕ್ಕುವನುರಾಗ । ವೊಸೆದು ದರ್ಪಣವನು ವಿಡಿವನುರಾಗ ॥೩॥

ಕೊಡೆ ಬಿಜ್ಜಣಿಗೆಯ ನೋಡಿ ಬೀಸುವಲೇಸು। ನಾಡೆ ನಮಿಸಿ ಲಲ್ಲೆಗರೆವಲೇಸು ॥ ಮಾಡುವ ತನುಪುಳಕದೊಳು ಪಾಡುವಲೇಸು । ನೋಡುತಾನಂದಾಶ್ರು ಸುರಿವ ಲೇಸು ॥ ೪ ॥

ಹಿಂಗದೆ ಪುಷ್ಪಾಂಜಲಿಗೈಯುವತಿ ಸುಖ। ಸಿಂಗರವೆನಿಸಿ ಬಣ್ಣಿಸುವ ಸುಖ।
ಮಂಗಳಮಯ ಶಂಭುವೆನಿಸಿ ರಾಜಿಪಸುಖ। ಲಿಂಗಪೂಜಾ ಸಂಭ್ರಮದ ಸುಖ ॥ ೫ ॥

(ಕೈ. ಪ. ನೀತಿ ೨೫)

ಶ್ರೀ ನಿಜಗುಣ ಶಿವಯೋಗಿಗಳ ದೃಷ್ಟಿಯಲ್ಲಿ ಇಷ್ಟಲಿಂಗ ಪೂಜೆಯೊಂದು ಬಹುಜನ್ಮಗಳ ಪುಣ್ಯದ ಫಲ. ಅಂತೆಯೇ ನರಜನ್ಮದಲ್ಲಿ ಇದು ದೊರೆತದ್ದು ''ಆವಪುಣ್ಯವೋ'' ಎಂದಿದ್ದಾರೆ. ''ಜಗದಗಲ ಮಿಗೆಯಗಲ''ವಾದ ಆ ತತ್ತ್ವವು ಕರಸ್ಥಲದಲ್ಲಿ ಚುಳುಕಾಗುವುದು ಸಹಜವೇ ? ಸದ್ಗುರುವಿನ ಅಪಾರ ಕರುಣೆಗೆ ಪಾತ್ರನಾಗಬೇಕು. ಸಾಂಸಾರಿಕ ಪದಾರ್ಥಗಳು ಕರಗತಗಳಾದಾಗ ಮೂಢರು ಉಬ್ಬಿ–ಕೊಬ್ಬಿ ನಲಿದಾಡಿದರೆ : ಆ ಜಗದಾದಿ ಲಿಂಗವನ್ನು ಇಷ್ಟ ಲಿಂಗರೂಪದಲ್ಲಿ ಕರಗತ ಮಾಡಿಕೊಂಡಾಗ ಸಂತರು, ಶರಣರು ಮತ್ತು ಶಿವಯೋಗಿಗಳು ನಲಿದಾಡುತ್ತಾರೆ. ''ಇಷ್ಟ ಪ್ರಾಣಸ್ತಥಾ ಭಾವಂ ತ್ರಿಧಾ ಏಕಂ ವರಾನನೆ'' ಎಂಬುದಾಗಿ ತ್ರಿವಿಧವೂ ಏಕೀಭವಿಸಿ ಲಿಂಗರೂಪವಾಗಿ ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತ್ತೈದಾನೆ. ಆಹಾ ಎನ್ನ ಪುಣ್ಯವೇ ! ಆಹಾ ಎನ್ನ ಭಾಗ್ಯವೇ ! ಆಹಾ ಎನ್ನ ಸತ್ಯವೇ ! ಆಹಾ ಎನ್ನ ನಿತ್ಯವೇ ! ಶಿವಶಿವಾ ! ಮಹಾದೇವ ಮಹಾದೇವ, ನೀನೇ ಬಲ್ಲೆ ಉರುಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ !!'' ನೋಡಿದಿರಾ ಉರುಲಿಂಗ ಪೆದ್ದಿಯ ಆನಂದವನ್ನು.

ಇಲ್ಲಿ ಮಜ್ಜನ, ವಸ್ತ್ರ, ಶ್ರೀಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ಛತ್ರ, ಚಾಮರ, ದರ್ಪಣ, ವ್ಯಜನ, ನಮಸ್ಕಾರ ಮುಂತಾದ ಉಪಚಾರ ಗಳಿಂದ ಇಷ್ಟಲಿಂಗವನ್ನು ಪೂಜಿಸಿ ನಮಸ್ಕರಿಸಿ ಪುಷ್ಪಾಂಜಲಿಯನ್ನರ್ಪಿಸಿ ಸ್ತುತಿಸುವದಾಗಿ ಶ್ರೀ ನಿಜಗುಣರು ನಿರೂಪಿಸಿರುತ್ತಾರೆ.

ನಾವು ಮಾಡುವ ಈ ಉಪಚಾರಗಳು ಶಿವನಿಗೆ ಮಹಾಸಂತೋಷವನ್ನುಂಟು ಮಾಡುತ್ತವೆ. ಜಗತ್ತಿನಲ್ಲಿ ಉಪಚಾರದಿಂದ ಸಂತುಷ್ಟನಾದ ವ್ಯಾಪಾರಿಯು ಒಂದು ಮುಷ್ಟಿಧಾನ್ಯವನ್ನು, ರಾಜನು ಒಂದು ಗ್ರಾಮವನ್ನು ಕೊಡುತ್ತಾನೆ ಎಂಬ ಸುಭಾಷಿತ ವುಂಟು. ಇನ್ನು ಶಿವನೇ ಸಂತುಷ್ಟನಾದರೆ ಕೇಳುವದೇನು ! ಸದ್ಗತಿಯೇ ಅದರ ಮಹಾಫಲ ಅಂತೆಯೇ ಶ್ರೀ ನಿಜಗುಣರು–

ಶಲಭಜಾಬಲಾನೆ ಪಂದಿ । ಮೊಲ ನಿ ರುಂಪೆ ಹದ್ದು ಹಕ್ಕಿ ॥
ಗಳನು ಶಂಭುಲಿಂಗವ ಮರ । ಕುಲಕೆ ಮಿಗಿಲೆನಿಸಿದನಾಗಿ ॥

(ಕೈ.ಪ.ನೀ.೧೩–೫)

ಈ ಪದ್ಯದಲ್ಲಿ ಜೇಡರಹುಳ, ನಾಯಿ, ಆನೆ, ಹಂದಿ, ಮೊಲ, ಇರುವೆ ಮತ್ತು ಹದ್ದು ಮುಂತಾದ ಹಕ್ಕಿಗಳು ಮಾಡಿದ ಉಪಚಾರದಿಂದ ಸಂತುಷ್ಟನಾಗಿ ಅವುಗಳಿಗೆಲ್ಲ ಶಿವನು ಸದ್ಗತಿಯನ್ನಿತ್ತಿರುವನೆಂಬುದನ್ನು ಪ್ರತಿಪಾದಿಸಿ ಶಿವನಿಂದ ಮುಕ್ತಿಯನ್ನು ಪಡೆಯುವದು ಬಹಳ ಸುಲಭವಾದದ್ದೆಂಬುದಾಗಿ ತಿಳಿಯಪಡಿಸಿದ್ದಾರೆ. ಇದರ ಸಂದರ್ಭವೇನೆಂದರೆ–

ಅರಣ್ಯದ ಸರೋವರದ ದಂಡೆಯಲ್ಲಿ ಒಂದು ಹಾಳು ದೇವಾಲಯವಿತ್ತು ಅಲ್ಲಿಯ ಶಿವಲಿಂಗವನ್ನು ಪೂಜಿಸುವವರು ಯಾರೂ ಇರಲಿಲ್ಲ. ಆ ದೇವಸ್ಥಾನದಲ್ಲಿ ಒಂದು ಜೇಡರ ಹುಳುವು ದಿನಾಲು ಲಿಂಗದ ಮಸ್ತಕದ ಮೇಲೆ ತನ್ನ ಎಳೆಗಳಿಂದ ನೆರಳನ್ನು ಮಾಡುತ್ತಿತ್ತು ಆನೆಯು ಸರೋವರದಲ್ಲಿಯ ನೀರು ಮತ್ತು ಕಮಲಗಳನ್ನು ಸೊಂಡಿಲಲ್ಲಿ ತುಂಬಿ ತಂದು ಲಿಂಗದ ಮೇಲೆ ಸುರಿಯುತ್ತಿತ್ತು, ಇರುವೆಯು ಸಿಹಿ ಪದಾರ್ಥಗಳನ್ನು ತಂದಿಡುತ್ತಿತ್ತು ಹದ್ದು ಮುಂತಾದ ಪಕ್ಷಿಗಳು ತಮ್ಮ ತಮ್ಮ ಆಹಾರಗಳನ್ನು ಆ ಲಿಂಗದ ಮೇಲೆ ತಂದಿಟ್ಟು ಕುಕ್ಕಿ ಕುಕ್ಕಿ ತಿನ್ನುತ್ತಿದ್ದವು. ಇನ್ನು ಮೊಲ ಹಾಗೂ ಹಂದಿಗಳನ್ನು ನಾಯಿಯು ಬೆನ್ನಟ್ಟಿಕೊಂಡು ಬಂದಾಗ ಅವೆರಡು ತಮ್ಮ ಪ್ರಾಣ ಉಳಿಸಿಕೊಳ್ಳುವದಕ್ಕಾಗಿ ಲಿಂಗದ ಸುತ್ತಲೂ ಓಡಾಡುತ್ತಿದ್ದವು. ಹೀಗೆ ಈ ಪಶು ಪಕ್ಷಿಗಳು ಮಾಡುವ ತಮ್ಮ ನಿತ್ಯ ವ್ಯವಹಾರ ವನ್ನು ಕಂಡ ಶಿವನು ಇವುಗಳು ತನಗೆ ಅಭಿಷೇಕ, ವಸ್ತ್ರ, ಪುಷ್ಪ, ನೈವೇದ್ಯ ಮತ್ತು ಪ್ರದಕ್ಷಿಣೆ ಮುಂತಾದ ಉಪಚಾರಗಳಿಂದ ಪೂಜೆಮಾಡುತ್ತಿವೆ ಎಂದು ಭಾವಿಸಿ ಅವೆಲ್ಲವುಗಳಿಗೆ ಸದ್ಗತಿಯನ್ನು ಕೊಟ್ಟನೆಂಬುದನ್ನು ಶ್ರೀ ನಿಜಗುಣ ಶಿವಯೋಗಿಗಳು ಪ್ರತಿಪಾದಿಸಿದ್ದಾರೆ. ಪಶುಗಳ ನಿತ್ಯವ್ಯವಹಾರವನ್ನು ತನ್ನ ಉಪಚಾರವೆಂದು ಭಾವಿಸುವ ಶಿವನು ನಾವು ಅರಿತು ಆಚರಿಸುವ ಉಪಚಾರದಿಂದ ಎಷ್ಟು ಸಂತುಷ್ಟನಾಗಲಿಕ್ಕಿಲ್ಲ ? ಅಂತೆಯೇ ಉಪಚಾರ ಗಳನ್ನರ್ಪಿಸುವಾಗ ರೋಮಾಂಚನವಾಗಬೇಕೆಂಬುದಾಗಿಯೂ, ಆನಂದಾಶ್ರುಗಳು ಸುರಿಯಬೇಕೆಂಬುದಾಗಿಯೂ, ತಿಳಿಸಿದ್ದಾರೆ ಈ ಭಾವೋನ್ಮಾದ ಬಾರದಿದ್ದರೆ ಆ ಪೂಜೆ ಪೂಜೆಯಲ್ಲ ಅದೊಂದು ಯಾಂತ್ರಿಕ ಕ್ರಿಯೆ. ಆದ್ದರಿಂದ ಉಪಚಾರಗಳನ್ನರ್ಪಿಸುವಾಗ ಭಾವಪೂರ್ಣವಾಗಿ ಅರ್ಪಿಸಬೇಕು.

ಇದೂ ಅಲ್ಲದೇ ವೈದಿಕ ಶಿವಪೂಜಾವಿಧಿಗಳಲ್ಲಿ ಪಾದ್ಯಾದಿ ಐವತ್ತೆರಡು ಅಭಿಷೇಕದ ಸಾಮಗ್ರಿಗಳು ಪ್ರತಿಪಾದಿಸಲ್ಪಟ್ಟಿವೆ. ಈ ಉಪಚಾರಗಳನ್ನು ಅರ್ಪಿಸುವಾಗ ಮೂಕವಾಗಿ ಅರ್ಪಿಸದೇ ಆಯಾ ವೈದಿಕ ಇಲ್ಲವೇ ಪೌರಾಣಿಕ ಮಂತ್ರಗಳನ್ನು ಭಾವಪೂರ್ಣವಾಗಿ ಪಠಿಸುತ್ತಿರಬೇಕು. ಅಂದಾಗಲೇ ತ್ರಿಕರಣ ಪೂಜೆಯು ಸಂಭವಿಸುವದು. ''ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ವಾ ರುದ್ರಾಧ್ಯಾಯಾದಿ ಕಾ ಭ್ಯಾಸೋ'' (ಸಿ. ಶಿ. ೯–೨೩) ಎಂಬ ಶ್ರೀ ರೇಣುಕರ ಉಕ್ತಿಯಂತೆ ತನಗೆ ಅನುಕೂಲಗಳಾದ ಸಾಮಗ್ರಿ ಗಳಿಂದ; ಏನೂ ದೊರೆಯದಿದ್ದರೆ ಕೇವಲ ಜಲಧಾರೆಯಿಂದಲೇ ಆಗಲಿ ಇಷ್ಟಲಿಂಗಕ್ಕೆ ಪ್ರತಿನಿತ್ಯ ರುದ್ರಾಭಿಷೇಕವನ್ನು ಮಾಡಬೇಕು. ''ಜಲಧಾರಾ ಪ್ರಿಯಃ ಶಿವಃ'' ಶಿವನಿಗೆ

ಯಾವ ಉಪಚಾರವಿರದಿದ್ದರೂ ಜಲಧಾರೆಯೊಂದಿದ್ದರೆ ಸಾಕು ಪ್ರಸನ್ನನಾಗುತ್ತಾನೆ. ಧಾರಾಪಾತ್ರೆಯ ಜಲವು ಅಖಂಡವಾಗಿ ಲಿಂಗಮಸ್ತಕಕ್ಕೆ ಸಂಬಂಧವಾಗಿರುವಂತೆ ಪೂಜಕನ ಮನೋವೃತ್ತಿಯೂ ಪೂಜಾಸಮಯದಲ್ಲಿ ಅಖಂಡವಾಗಿ ಲಿಂಗ ಸಂಬಂಧವಾಗಿರಬೇಕು.

''ರುತ್=ದುಃಖಂ, ದ್ರಾವಯತೀತಿ=ರುದ್ರಃ'' ಎಂಬ ವ್ಯುತ್ಪತ್ತಿಯ ಮೇರೆಗೆ ಪ್ರತಿನಿತ್ಯ ಶ್ರೀರುದ್ರದ ಪಠಣದಿಂದ ಮನುಷ್ಯನ ಸಕಲ ವಿಧಗಳಾದ ಪೀಡೆಗಳು ನಿವೃತ್ತಗಳಾಗಿ ಮನೆ–ಮನಗಳೆರಡಲ್ಲಿಯೂ ಶಾಂತಿಯು ಲಭಿಸುವದು. ಶ್ರೀರುದ್ರದ ವಿಶೇಷ ಮಹತ್ವವನ್ನು ''ಭಕ್ತಮಾರ್ಗಕ್ರಿಯಾಸ್ಥಲ''ದಲ್ಲಿ ಪ್ರತಿಪಾದಿಸಲಾಗಿದೆ. ಶ್ರೀರುದ್ರವನ್ನು ಪಠಿಸುವದು ಪ್ರತಿದಿವಸ ಆಗದಿದ್ದರೂ ಶ್ರಾವಣ–ಶಿವರಾತ್ರಿ ಮುಂತಾದ ವಿಶಿಷ್ಟ ಪರ್ವಗಳಲ್ಲಿಯಾದರೂ ಅವಶ್ಯವಾಗಿ ಪಠಣಮಾಡುತ್ತ ಇಷ್ಟಲಿಂಗಕ್ಕೆ ಅಭಿಷೇಕವನ್ನು ಮಾಡಬೇಕು. ಒಂದು ವೇಳೆ ಶ್ರೀರುದ್ರವನ್ನಾಗಲಿ ಇತರ ವೈದಿಕ ಇಲ್ಲವೇ ಪೌರಾಣಿಕ ಮಂತ್ರಗಳನ್ನು ಪಠಿಸುವದು ಯಾರಿಗೆ ಸಾಧ್ಯವಾಗುವದಿಲ್ಲವೋ ಅವರು ಎಲ್ಲ ವಿಧ ಉಪಚಾರಗಳಿಗೆ ಓಂಕಾರವನ್ನಾಗಲಿ ಶ್ರೀ ಪಂಚಾಕ್ಷರ ಮಹಾಮಂತ್ರವನ್ನಾಗಲಿ ಮನಸ್ಸಿನಲ್ಲಿ ಪಠಿಸುತ್ತ ಅಭಿಷೇಕದ ಸಾಮಗ್ರಿಗಳಿಂದ ಇಷ್ಟಲಿಂಗಕ್ಕೆ ಅಭಿಷೇಕ ಮಾಡಬೇಕು.

ಲಿಂಗಾಭಿಷೇಕದ ನಂತರ ಮಡಿವಸ್ತ್ರದಿಂದ ಇಷ್ಟಲಿಂಗವನ್ನು ವರೆಸಿ ಭಸ್ಮ ಗಂಧ, ಅಕ್ಷತೆ, ಬಿಲ್ವದಳ, ಪುಷ್ಪಾದಿಗಳಿಂದ ಮನಮುಟ್ಟಿ ಪೂಜಿಸಿ ಧೂಪ–ದೀಪಗಳನ್ನು ಬೆಳಗಿ ತಾನು ಭುಂಜಿಸುವ ಅನ್ನವನ್ನು ಲಿಂಗಕ್ಕೆ ನೈವೇದ್ಯ ಮಾಡಿ ತಾಂಬೂಲಾದಿಗಳಂ ಅರ್ಪಿಸಿ ಪ್ರದಕ್ಷಿಣೆ ಮತ್ತು ಪ್ರಣಾಮಗಳನ್ನರ್ಪಿಸಬೇಕು.

ಪದಾತ್ಪದಾಂತರಂ ಗಚ್ಛೇತ್ ಕರೌ ಚಲನವರ್ಜಿತೌ ।
ಸ್ತುತಿರ್ವಾಚಾ ಹೃದಿಧ್ಯಾನಂ ಚತುರಂಗಂ ಪ್ರದಕ್ಷಿಣಂ ॥
ಆಸನ್ನ ಪ್ರಸವಾ ನಾರೀತೈಲಪೂರ್ಣಂ ಯಥಾ ಘಟಂ ।
ವಹಂತೀ ಶನಕೈರ್ಯಾತಿ ತಥಾ ಕುರ್ಯಾತ್ ಪ್ರದಕ್ಷಿಣಂ ॥

(ಕ್ರಿಯಾಸಾರ ೧೪ ಉಪದೇಶ ಪುಟ ೩೦೧ ಶಿವಾರ್ಚನಾ ಚಂದ್ರಿಕಾ ಪುಟ ೧೦೦)

ಎಂಬ ಶ್ರೀ ನೀಲಕಂಠ ಶಿವಾಚಾರ್ಯ ಮತ್ತು ಶ್ರೀ ಅಪ್ಪಯ್ಯ ದೀಕ್ಷಿತರ ಪ್ರತಿಪಾದನೆಯಂತೆ ಪೂಜಾ ಫಲ ಪ್ರಾಪ್ತಿಗಾಗಿ ಪ್ರದಕ್ಷಿಣೆಯ ವಿಧಾನವಿದೆ. ಕೈಗಳನ್ನು ಅಲ್ಲಾಡಿಸದೆ ವಾಣಿಯಿಂದ ಭಗವಂತನ ನಾಮವನ್ನು ಪಠಿಸುತ್ತ ಹೃದಯದಲ್ಲಿ ಧ್ಯಾನವಂಗೈಯುತ್ತ ದಿನ ತುಂಬಿದ ಗರ್ಭಿಣಿ ಹೆಣ್ಣುಮಗಳು ಎಣ್ಣೆ ತುಂಬಿದ ಕೊಡವನ್ನು ಹೊತ್ತು ಸಾವಕಾಶವಾಗಿ ಹೋಗುವಂತೆ, ಒಂದೊಂದೇ ಹೆಜ್ಜೆಯನ್ನು ಇಡುತ್ತ ದೇವರನ್ನು ಸುತ್ತುವರೆಯುವದಕ್ಕೆ ಪ್ರದಕ್ಷಿಣೆ ಎಂದು ಕರೆಯುತ್ತಾರೆ. ಈ ಪ್ರದಕ್ಷಿಣೆಯು ಸವ್ಯ, ಅಪಸವ್ಯ ಮತ್ತು ಸವ್ಯಾಪಸವ್ಯವೆಂದು ಮೂರು ವಿಧವಾಗಿದೆ. ದೇವರನ್ನು ಬಲಭಾಗದಲ್ಲಿ ಮಾಡಿಕೊಂಡು ಸುತ್ತುವರೆದರೆ ಸವ್ಯವೆಂದು ಎಡಭಾಗದಲ್ಲಿ ಮಾಡಿಕೊಂಡು ಸುತ್ತುವರೆದರೆ ಅಪಸವ್ಯವೆಂದು ಮತ್ತು ಉಭಯ ವಿಧದಿಂದ ಕೂಡಿದ್ದು ಸವ್ಯಾಪಸವ್ಯವೆಂದು ಕರೆಯಲ್ಪಡುತ್ತದೆ. ಈ ಪ್ರತಿಯೊಂದು ಪ್ರದಕ್ಷಿಣೆಗಳನ್ನು ಪೂರ್ವ ದಿಕ್ಕಿನಿಂದ ಪೂರ್ವದಿಕ್ಕಿನ ಪರ್ಯಂತರವಾಗಿ

ಮಾಡಬೇಕು. ''ತತ್ರ ಸವ್ಯಂ ಬ್ರಹ್ಮಚಾರಿಣಾಮಪಸವ್ಯಂ ಯತೀನಾಂ ಸವ್ಯಾಪಸವ್ಯಂ ಗೃಹೀ ವನಸ್ಥಯೋರಿತಿ ಕಶ್ಚನ ಪಕ್ಷಃ। ಸವ್ಯಂ ಸಾಧಾರಣಮಪ ಸವ್ಯಂ ಯತೀನಾ ಮೇವ ಸವ್ಯಾಪಸವ್ಯಂ ದೀಕ್ಷಿತಾನಾಮೇವೇತ್ಯಪರಃ ಪಕ್ಷಃ'' (ಕ್ರಿಯಾಸಾರ ೧೪ ಉಪದೇಶ ಪುಟ ೩೦೧ ಶಿವಾರ್ಚನಾ ಚಂದ್ರಿಕಾ ಪುಟ ೧೦೦) ಬ್ರಹ್ಮಚಾರಿಗಳು ಬಲಭಾಗದಿಂದ, ಸನ್ಯಾಸಿಗಳು ಎಡಭಾಗದಿಂದ ಮತ್ತು ಗೃಹಸ್ಥ–ವಾನಪ್ರಸ್ಥರು ಅರ್ಧ ಬಲಕ್ಕೆ ಅರ್ಧ ಎಡಕ್ಕೆ ಹೀಗೆ ಉಭಯ ವಿಧಯುಕ್ತವಾಗಿ ಪ್ರದಕ್ಷಿಣೆಯನ್ನು ಮಾಡಬೇಕೆಂತಲೂ ಅಥವಾ ಬಲಪ್ರದಕ್ಷಿಣೆಯು ಸರ್ವಸಾಮಾನ್ಯವಾದದ್ದೆಂದೂ ಎಡಪ್ರದಕ್ಷಿಣೆಯು ಸನ್ಯಾಸಿಗಳಿಗೆ ಮೀಸಲಾದದ್ದೆಂದೂ ಗುರು ದೀಕ್ಷೆಯನ್ನು ಹೊಂದಿದವರಿಗೆ ಉಭಯ ವಿಧಯುಕ್ತವಾದ ಪ್ರದಕ್ಷಿಣೆಯ ವಿಧಾನವಿದೆ ಎಂಬುದಾಗಿ ಶ್ರೀ ನೀಲಕಂಠ ಶಿವಾಚಾರ್ಯರು ಮತ್ತು ಶ್ರೀ ಅಪ್ಪಯ್ಯ ದೀಕ್ಷಿತರು ತಿಳಿಸಿರುತ್ತಾರೆ. ಒಟ್ಟಿನಲ್ಲಿ ಬಲಭಾಗದಿಂದ ಪ್ರದಕ್ಷಿಣೆಯನ್ನು ಯಾರು ಹಾಕಿದರೂ ದೋಷವಿರುವದಿಲ್ಲ.

ಇನ್ನು ''ಪ್ರಣಾಮಶ್ಚತುರ್ವಿಧಃ। ಅಷ್ಟಾಂಗಃ ಪಂಚಾಂಗಸ್ತ್ರ್ಯಂಗ ಏಕಾಂಗಶ್ಚ''। (ಕ್ರಿಯಾಸಾರ ೧೪ ಉಪದೇಶ ಪುಟ ೩೧೦; ಶಿವಾರ್ಚನಾ ಚಂದ್ರಿಕಾ–ಪುಟ ೧೦೦) ಎಂಬ ಶ್ರೀ ನೀಲಕಂಠ ಶಿವಾಚಾರ್ಯರ ಮತ್ತು ದೀಕ್ಷಿತರ ವಚನದಂತೆ ಅಷ್ಟಾಂಗ, ಪಂಚಾಂಗ, ತ್ರ್ಯಂಗ ಮತ್ತು ಏಕಾಂಗವೆಂದು ನಮಸ್ಕಾರವು ನಾಲ್ಕು ಪ್ರಕಾರವಾಗಿರುತ್ತದೆ. ಎರಡು ಪಾದ, ಎರಡು ಮೊಳಕಾಲು, ಎರಡು ಕೈ, ಎದೆ ಹಾಗೂ ಮಸ್ತಕ ಈ ಎಂಟೂ ಅಂಗಗಳು ಭೂಮಿಗೆ ತಗಲುವಂತೆ ದಂಡವತ್ ಪ್ರಣಾಮವನ್ನು ಮಾಡುವದು ಅಷ್ಟಾಂಗ ಇಲ್ಲವೇ ಸಾಷ್ಟಾಂಗ ನಮಸ್ಕಾರವು. ಎರಡು ಮೊಳಕಾಲು, ಎರಡು ಹಸ್ತತಲ ಮತ್ತು ಹಣೆ ಈ ಐದು ಅಂಗಗಳು ಭೂಮಿಗೆ ಸ್ಪರ್ಶವಾಗುವಂತೆ ಮಾಡುವ ನಮಸ್ಕಾರವು ಪಂಚಾಂಗ ನಮಸ್ಕಾರವು. ಮೊಳಕಾಲನ್ನು ಊರಿ ಎರಡೂ ಹಸ್ತಗಳನ್ನು ಮಸ್ತಕದ ಮೇಲೆ ಜೋಡಿಸಿ ಮಾಡುವ ನಮಸ್ಕಾರವು ಸಹ ಪಂಚಾಂಗ ನಮಸ್ಕಾರವೆಂದು ಕರೆಯಲ್ಪಡುತ್ತಿದೆ ಎದ್ದುನಿಂತು ತನ್ನ ಎರಡೂ ಕೈಗಳನ್ನು ಜೋಡಿಸಿ ಮಸ್ತಕದ ಮೇಲೆ ಹಿಡಿದು ಮಾಡುವ ನಮಸ್ಕಾರವು ತ್ರ್ಯಂಗ ನಮಸ್ಕಾರವು. ಅದರಂತೆ ಕೇವಲ ಮಸ್ತಕ ಒಂದನ್ನೇ ಬಾಗಿಸಿ ನಮಸ್ಕರಿಸುವದು ಏಕಾಂಗ ನಮಸ್ಕಾರವು. ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದ ೧೪ನೇ ಉಪದೇಶದಲ್ಲಿ ಮತ್ತು ಶ್ರೀ ಅಪ್ಪಯ್ಯ ದೀಕ್ಷಿತರು ಶಿವಾರ್ಚನಾ ಚಂದ್ರಿಕೆಯ ಪ್ರಣಾಮ ವಿಧಿಯಲ್ಲಿ ಈ ನಮಸ್ಕಾರಗಳ ಭೇದಗಳನ್ನು ನಿರೂಪಿಸಿರುತ್ತಾರೆ.

ಇಷ್ಟಲಿಂಗ ಪೂಜಕನು ಇಲ್ಲಿ ಪ್ರತಿಪಾದಿಸಿದ ಪ್ರಕಾರ ತನ್ನ ಇಷ್ಟಲಿಂಗಕ್ಕೆ ಪ್ರದಕ್ಷಿಣೆ ಮಾಡಬೇಕಾದರೆ ಎದ್ದುನಿಂತು ಸುತ್ತುವರಿಯಲಾಗದು. ಕಾರಣ ಬಲಹಸ್ತವನ್ನು ಅಂಕುಶ ಮುದ್ರೆಯಲ್ಲಿ (ಅಂಗುಷ್ಟವನ್ನು ಊರ್ಧ್ವಮುಖವಾಗಿ ಹಿಡಿದ ಮುಷ್ಟಿ) ಹಿಡಿದು ವಾಮ ಹಸ್ತದಲ್ಲಿಯ ಇಷ್ಟಲಿಂಗದ ಸುತ್ತಲೂ ಬಲಮುಖವಾಗಿ ತಿರುಗಿಸಿ ಅಂಕುಶಮುದ್ರೆಯ ಅಂಗುಷ್ಟವನ್ನು ಭ್ರೂಮಧ್ಯಕ್ಕೆ ತಾಗಿಸಿ ತುಂಬಿದ ಮನಸ್ಸಿನಿಂದ ಮಾಡುವ ಪ್ರಣಾಮವೇ ಇಷ್ಟಲಿಂಗದ ಪ್ರದಕ್ಷಿಣೆಯು. ಇದರಂತೆ ಇಷ್ಟಲಿಂಗಕ್ಕೆ ಅಷ್ಟಾಂಗ, ಪಂಚಾಂಗ ಮತ್ತು ತ್ರ್ಯಂಗ ನಮಸ್ಕಾರಗಳು ಸಂಭವಿಸಲಾರವು. ಕೇವಲ ಪ್ರಗಾಢ ಶ್ರದ್ಧೆಯಿಂದ ಮಸ್ತಕವನ್ನು ಬಗ್ಗಿಸಿ ಏಕಾಂಗ ನಮಸ್ಕಾರವನ್ನು ಮಾಡಬೇಕು.

ಕೊನೆಯದಾಗಿ ಮನೆಯಲ್ಲಿ ಗುರು–ಜಂಗಮರಿದ್ದರೆ ಅವರ ಪಾದೋದಕ ಪ್ರಸಾದಗಳನ್ನು, ಅವರಿಲ್ಲದಿದ್ದರೆ ಲಿಂಗೋದಕ ಲಿಂಗ ಪ್ರಸಾದಗಳನ್ನು ಸ್ವೀಕರಿಸಬೇಕು. ಈ ಲಿಂಗೋದಕ–ಲಿಂಗಪ್ರಸಾದಗಳನ್ನು ಸ್ವೀಕರಿಸುವಾಗ ಗುರು–ಜಂಗಮರ ಪಾದೋದಕ–ಪ್ರಸಾದಗಳನ್ನೂ ಭಾವದಲ್ಲಿ ಸಂಬಂಧಮಾಡಿಕೊಂಡು ಸ್ವೀಕರಿಸಬೇಕು. ಇದಕ್ಕೆ ಸಂಬಂಧಾಚಾರವೆಂದು ಕರೆಯುತ್ತಾರೆ.

ಹೀಗೆ ಎಲ್ಲ ಪೂಜಾವಿಧಾನದ ನಂತರ ಆ ಇಷ್ಟಲಿಂಗವನ್ನು ಕೊನೆಗೊಮ್ಮೆ ಶಾಂಭವಿ ಮುದ್ರೆಯಿಂದ ನಿರೀಕ್ಷಿಸಿ ಮನೋವೃತ್ತಿಯಿಂದ ಪ್ರಾಣ ಹಾಗೂ ಭಾವಲಿಂಗಗಳನ್ನು ಅನುಸಂಧಾನಿಸಿ ಸಜ್ಜಿಕೆಯಲ್ಲಿ ಇಷ್ಟಲಿಂಗವನ್ನು ಇರಿಸಿ ಹೃದಯದ ಮೇಲೆ ಧರಿಸಿಕೊಳ್ಳಬೇಕು. ಹೀಗೆ ಶಿವಪೂಜೆಯಾದನಂತರ ಕೆಲವು ಕಾಲವಾದರೂ ಧರ್ಮಗ್ರಂಥದ ಸ್ವಾಧ್ಯಾಯ ಇಲ್ಲವೇ ಪಾರಾಯಣವನ್ನು ಮಾಡಬೇಕು. ಕಾರಣ ವೀರಶೈವರಿಗೆ ''ಸಿದ್ಧಾಂತ ಶಿಖಾಮಣಿ''ಯೇ ಧರ್ಮ ಗ್ರಂಥವಾದ್ದರಿಂದ ಪ್ರತಿಯೊಬ್ಬ ವೀರಶೈವರು ಈ ಗ್ರಂಥದ ಪಾರಾಯಣ ಹಾಗೂ ಸ್ವಾಧ್ಯಾಯಗಳನ್ನು ಅವಶ್ಯವಾಗಿ ಮಾಡಬೇಕು. ಈ ತೆರನಾದ ಇಷ್ಟಲಿಂಗ ಪೂಜೆಯನ್ನು ಒಂದು ದಿವಸಕ್ಕೆ ಎಷ್ಟು ಸಾರೆ ಮಾಡಬೇಕು ? ಎಂಬ ಜಿಜ್ಞಾಸೆಯುಂಟಾದಾಗ–

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಪಿ ಶಾಂಕರಿ ।
ಪೂಜಯೇನ್ನಿಯತಂ ಲಿಂಗಂ ಪ್ರಾಣಲಿಂಗಪರಾಯಣಃ ॥
ಏವಂ ಯಃ ಕುರುತೇ ಭಕ್ತ್ಯಾ ನಿತ್ಯಮಾಪ್ರಾಣಸಂಚರಾತ್ ।
ವೀರಶೈವಃ ಸ ವಿಜ್ಞೇಯಃ ಸರ್ವಶೈವೋತ್ತಮೋತ್ತಮಃ ॥

(ಸೂಕ್ಷ್ಮತಂತ್ರ ೬–೬೨, ೬೩)

ಹೀಗೆ ಸೂಕ್ಷ್ಮಾಗಮವು–ಪ್ರತಿದಿವಸ ಮೂರು ಸಾರೆ, ಎರಡುಸಾರೆ ಇಲ್ಲವೇ ಒಂದು ಸಾರೆಯಾದರೂ ಅವಶ್ಯವಾಗಿ ಮಾಡಲೇಬೇಕು. ಅಂದಾಗಲೇ ಅವನು ವೀರಶೈವನು ಎಂಬುದಾಗಿ ಪ್ರತಿಪಾದಿಸಿದೆ.

ಮಹಾರಾಷ್ಟ್ರದ ಸಂತ ಶಿರೋಮಣಿ ಶ್ರೀಮನ್ಮಥ ಸ್ವಾಮಿಗಳು–

ಪಹಲೀ ಪೂಜಾ ಅರುಣೋದಯೀ ಕರೀ । ಪ್ರಹರದಿನ ಆಲಿಯಾ ದೂಸರೀ ॥
ದೋನ ಪ್ರಹರಾ ತೀ ತಿಸರೀ । ಚೌಥೀ ತಿಸರೇ ಪ್ರಹರೀ ಕೀ ॥
ಪಾಂಚವೀ ಸಾಯಂಕಾಳೀ ಕರೀ । ಸಹಾವೀ ಪೂಜಾ ಮಧ್ಯರಾತ್ರೀ ।
ಕರಾವಯಾ ಆಳಸ ಸಕರೀ । ಲಿಂಗ ಪೂಜೇಸೀ ॥
ಸಹಾ ಪೂಜಾ ನಘಡತೀ ಜರೀ । ತರೀ ತ್ರಿಕಾಳ ಲಿಂಗ ನಿಷ್ಠಾ ಧರೀ ।
ತ್ರಿಕಾಳಹೀ ನ ಘಡತೀ ತರೀ । ತೋ ಪಶು ಜಡಜೀವ ॥

(ಪರಮ ರಹಸ್ಯ ೩; ೩೪–೩೫)

ಹೀಗೆ ಪ್ರತಿ ದಿವಸ ಆರುವೇಳೆ ಇಷ್ಟಲಿಂಗಾರ್ಚನೆಯನ್ನು ಮಾಡಬೇಕೆಂಬುದಾಗಿ ತಿಳಿಸಿದ್ದಾರೆ. ಅವರ ಪ್ರಕಾರ ಅರುಣೋದಯದ ಸಮಯದಲ್ಲಿ ಮೊದಲನೇ ಪೂಜೆ,

ಮುಂದೆ ಸೂರ್ಯೋದಯದಿಂದ ಒಂದೊಂದು ಪ್ರಹರಕ್ಕೆ ಒಂದೊಂದು ಪೂಜೆಯನ್ನೂ ಹೇಳಿದ್ದಾರೆ. ಒಂದು ಪ್ರಹರವೆಂದರೆ ಏಳೂವರೆ ಘಳಿಗೆ ಅಥವಾ ಮೂರು ತಾಸುಗಳು. ಆ ಪ್ರಕಾರ ಎರಡನೇ ಪೂಜೆಯು ಮುಂಜಾನೆ ಒಂಭತ್ತು ಘಂಟೆಗೆ, ಮೂರನೇ ಪೂಜೆ ಮಧ್ಯಾಹ್ನ ಹನ್ನೆರಡು ಘಂಟೆಗೆ, ನಾಲ್ಕನೆಯ ಪೂಜೆ ಸಾಯಂಕಾಲ ಮೂರು ಘಂಟೆಗೆ, ಐದನೆಯ ಪೂಜೆ ಸಾಯಂಕಾಲ ಆರು ಘಂಟೆಗೆ ಮತ್ತು ಕೊನೆಯದಾಗಿ ಆರನೆಯ ಪೂಜೆಯನ್ನು ರಾತ್ರಿ ಹನ್ನೆರಡು ಘಂಟೆಗೆ ಮಾಡಬೇಕೆಂಬುದಾಗಿ ತಿಳಿಸಿದ್ದಾರೆ.

ಈ ರೀತಿಯಾಗಿ ಆರು ವೇಳೆಯಾಗದಿದ್ದರೆ ಅರುಣೋದಯ, ಮಧ್ಯಾಹ್ನ ಹನ್ನೆರಡು ಹಾಗೂ ಸಾಯಂಕಾಲ ಆರು ಘಂಟೆ ಹೀಗೆ ಮೂರು ವೇಳೆಯಂತೂ ಅವಶ್ಯವಾಗಿ ಮಾಡಲೇಬೇಕೆಂಬುದಾಗಿ ನಿರೂಪಿಸಿದ್ದಾರೆ. ಇದನ್ನೆಲ್ಲ ನೋಡಿದಾಗ ಇಷ್ಟಲಿಂಗ ಪೂಜೆಯೆಂದರೆ ನಿರುದ್ಯೋಗಿಗಳ ಕೆಲಸವೇನೋ ಎಂಬ ವಿಚಾರ ಸಹಜವಾಗಿ ಮೂಡಿ ಬರಬಹುದು. ಆದರೆ ಆಗಮ ಹಾಗೂ ಸಂತರ ವಚನದ ಅಭಿಪ್ರಾಯವನ್ನು ತಿಳಿದುಕೊಳ್ಳುವದು ಅತ್ಯಾವಶ್ಯಕ.

ಮನುಷ್ಯನು ತನ್ನ ಉದ್ಯೋಗ ವ್ಯವಹಾರಗಳಿಗಿಂತ ಬಹಳಷ್ಟು ಸಮಯವನ್ನು ಆಟದ ವಾರ್ತೆಯಲ್ಲಿಯೋ, ತನಗೆ ಸಂಬಂಧವಿಲ್ಲದ ದೇಶ–ವಿದೇಶಗಳ ಸುದ್ದಿಯ ಶ್ರವಣದಲ್ಲೋ, ಪರನಿಂದೆ ಮುಂತಾದ ನಿಷಿದ್ಧ ವ್ಯವಹಾರದಲ್ಲೋ ಅಥವಾ ಮನೋರಂಜನೆಗಾಗಿ ಚಲನ ಚಿತ್ರಾದಿಗಳನ್ನು ನೋಡುವುದರಲ್ಲೋ ಕಳೆಯುತ್ತಾನೆ. ಇದು ಸರ್ವಾನುಭವಸಿದ್ಧ. ಸಮಯದಷ್ಟು ಬೆಲೆಬಾಳುವ ವಸ್ತು ಜಗತ್ತಿನಲ್ಲಿ ಬೇರೊಂದಿಲ್ಲ. ಕಾರಣ ತನ್ನ ನಿತ್ಯಜೀವನಕ್ಕೆ ಬೇಕಾಗುವ ಸಮಯವನ್ನು ಹೊರತುಪಡಿಸಿ ಉಳಿದ ಸಮಯವನ್ನೆಲ್ಲ ಲಿಂಗಪೂಜೆ, ಲಿಂಗಧ್ಯಾನ, ಲಿಂಗಸಾಹಿತ್ಯಾಧ್ಯಯನ, ತದ್ವಿಷಯಕ ಪರಸ್ಪರ ಚರ್ಚೆ ಇವುಗಳಲ್ಲಿಯೇ ಕಳೆಯಬೇಕು. ಅಂದಾಗಲೇ ಮನುಷ್ಯನ ಜೀವನದಲ್ಲಿ ಸುಧಾರಣೆಯು ಕಂಡುಬರುತ್ತದೆ.

ಲೋಕದ ನಿಯಮವಾದರೂ ೫೮ ವರ್ಷಕ್ಕೆ ಮನುಷ್ಯನನ್ನು ವ್ಯವಹಾರದಿಂದ ಹೊರದೂಡುತ್ತದೆ. ತನ್ನ ಉದ್ಯೋಗದಿಂದ ನಿವೃತ್ತಿಯನ್ನು ಪಡೆದ ಮನುಷ್ಯನು ಉಳಿದ ಆಯುಷ್ಯವನ್ನು ''ವಾರ್ಧಕೆ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ'' (ರಘುವಂಶ) ಈ ಕಾಳಿದಾಸನ ಉಕ್ತಿಯಂತೆ ತನ್ನ ಮನೋವೃತ್ತಿಗಳನ್ನೆಲ್ಲ ನಿರೋಧಿಸಿ ಕೊಂಡು ಮೌನವನ್ನು ಸಾಧಿಸಿ, ಯೋಗಾಭ್ಯಾಸದಲ್ಲಿ ನಿರತನಾಗಿ ಕೊನೆಗೆ ಯೋಗಿಯಾಗಿ ದೇಹವನ್ನು ತ್ಯಜಿಸಬೇಕೆಂಬುದು ಜೀವನದ ಕ್ರಮವು. ಈ ಕ್ರಮವನ್ನು ನಾವು ಪಾಲಿಸದ ಕಾರಣದಿಂದಲೇ ಜೀವನದ ಕೊನೆಯುಸಿರಿನವರೆಗೆ ಅನಂತ ಕಷ್ಟಪರಂಪರೆಗಳನ್ನು ಅನುಭವಿಸುತ್ತಲಿದ್ದೇವೆ. ಅಂತೆಯೇ ''ಕ್ರಮ ತಪ್ಪಿ ನಡೆವುದರಿಂ ಕಷ್ಟಮುಂಟೆ'' (ಕೈ.ಪ.ನೀ.೧–೪) ಎಂದಿದ್ದಾರೆ ಶ್ರೀ ನಿಜಗುಣರು.

ಆದ್ದರಿಂದ ನಮ್ಮ ಜೀವನ ಸೌಖ್ಯಕ್ಕೆ ಊಟ ಉಡುಪುಗಳು ಎಷ್ಟು ಅವಶ್ಯಕಗಳೋ ಅದಕ್ಕಿಂತಲೂ ಹೆಚ್ಚು ಪೂಜೆ ಧ್ಯಾನಾದಿಗಳು ಅವಶ್ಯಕಗಳಾಗಿವೆ. ಅಂತೆಯೇ ಮಹಾತ್ಮಾ ಗಾಂಧೀಜೀಯವರು ''ಊಟವಿಲ್ಲದೇ ಒಂದು ದಿನ ಇರಬಹುದು ಆದರೆ ಪ್ರಾರ್ಥನೆ

ಇಲ್ಲದೇ ಇರಲಾರೆ'' ಎಂದಿದ್ದಾರೆ. ಆದರೆ ನಮಗೆ ಪ್ರಾರ್ಥನೆ ಪೂಜೆಗಳು ಇರದಿದ್ದರೂ ಚಿಂತಿಯಿಲ್ಲ ಚಹಾ–ಊಟಗಳು ಮೊದಲು ಬೇಕು. ಅಂದಾಗ ನಮ್ಮ ಜೀವನದ ಅಧಃಪತನವಾಗದಿದ್ದೀತೇ ? ಇದೆಲ್ಲವನ್ನು ಪರ್ಯಾಲೋಚಿಸಿಕೊಂಡು ನಮ್ಮ ನಮ್ಮ ಉದ್ಯೋಗ–ವ್ಯವಹಾರಗಳಿಗೆ ಲೋಪಬಾರದಂತೆ ಸಮಯ ಸಾಧಿಸಿಕೊಂಡು ಇಷ್ಟಲಿಂಗಾರ್ಚನೆ, ಜಪ, ಧ್ಯಾನಾದಿಗಳನ್ನು ಸಾಧಿಸಿ ನಮ್ಮ ಜೀವನವನ್ನು ನಾವೇ ಪಾವನ ಮಾಡಿಕೊಳ್ಳಬೇಕಾಗಿದೆ.

**ಶರಣರ ದೃಷ್ಟಿಯಲ್ಲಿ ಇಷ್ಟಲಿಂಗ ಪೂಜೆ :**

ವೀರಶೈವ ಶರಣರೆಲ್ಲ ಇಷ್ಟಲಿಂಗದಲ್ಲಿ ಅತ್ಯಂತ ನಿಷ್ಠೆಯುಳ್ಳವರು. ಅದರ ಪೂಜೆಯಲ್ಲಿ ಅವರಿಗೆ ಬೇಸರಿಕೆ ಎಂಬುದೇ ಇಲ್ಲ. ''ವಾರವೆಂದರಿಯೆ, ದಿನವೆಂದರಿಯೆ, ಏನೆಂದರಿಯೆನಯ್ಯಾ ! ಇರುಳೆಂದರಿಯೇ, ಹಗಲೆಂದರಿಯೆ, ಏನೆಂದರಿಯೆನಯ್ಯ, ನಿಮ್ಮವ ಪೂಜಿಸಿ ಎನ್ನವ ಮರೆದೆ ಕೂಡಲಸಂಗಮದೇವಾ'' ಈ ವಚನದಲ್ಲಿ ಬಸವಣ್ಣನವರ ಲಿಂಗಪೂಜಾನಿಷ್ಠೆ ವ್ಯಕ್ತವಾಗುತ್ತದೆ. ಪೂಜೆಯಲ್ಲಿ ಅವರು ತಮ್ಮನ್ನು ತಮ್ಮತನವೆಲ್ಲವನ್ನು ಮರೆಯುತ್ತಿದ್ದರು. ಇದುವೇ ಸಮರಸ ಪೂಜೆ. ಈ ಪೂಜೆಯನ್ನು ಸದಾ ಸರ್ವದಾ ಮಾಡುವ ಬಯಕೆ ಅವರಿಗೆ. ಆದರೂ ಬಿಜ್ಜಳನ ಮಂತ್ರಿಯಾಗಿದ್ದರಿಂದ ಅವರ ಬಹಳಷ್ಟು ಸಮಯ ರಾಜಕೀಯ ರಂಗದಲ್ಲಿ ವ್ಯಯವಾಗುತ್ತಿತ್ತು, ಅದು ಅನಿವಾರ್ಯ, ಮಾಡಲೇಬೇಕು, ಅಂತೆಯೇ ಬಾಹ್ಯ ವ್ಯವಹಾರದಿಂದ ಬೇಸತ್ತು–

> ''ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿವರಿವುತ್ತ
> ಸುರಿಯುತ್ತ ಎಂದಿಪ್ಪೆನೋ ? ನೋಟವೇ ಪ್ರಾಣವಾಗಿ ಎಂದಿಪ್ಪೆನೋ ?
> ಕೂಟವೇ ಪ್ರಾಣವಾಗಿ ಎಂದಿಪ್ಪೆನೋ ? ಎನ್ನಂಗ ವಿಕಾರದ ಸಂಗವಳಿದು,
> ಕೂಡಲಸಂಗಯ್ಯ, ಲಿಂಗಯ್ಯ, ಲಿಂಗ ಲಿಂಗ ಲಿಂಗವೆನ್ನುತ್ತ?''

ಹೀಗೆ ನೊಂದು ನುಡಿದಿರಬಹುದು. ಲೌಕಿಕ ವ್ಯವಹಾರ ಬಹು ವಿಚಿತ್ರವಾದದ್ದು. ಬೆಳೆಸದೇ ಸಮಾಧಾನವಿಲ್ಲ, ಬೆಳೆಸಿದರೆ ತೃಪ್ತಿ ಇಲ್ಲ, ಅಂತೂ ಕೊನೆಗೊಮ್ಮೆ ಎಲ್ಲರಿಗೂ ತಮ್ಮ ಲೌಕಿಕ ವ್ಯವಹಾರದಿಂದ ಬೇಸರಿಕೆ ಬಂದೇ ಬರುತ್ತದೆ. ಅದು ಬಂದಾಗಲೇ ಅಧ್ಯಾತ್ಮಿಕ ಪ್ರವೃತ್ತಿ ಎರಡನ್ನೂ ಕೂಡಿಸಿಕೊಂಡು ಹೋಗಬೇಕಾದರೆ ''ಜಾಣನು ಲೌಕಿಕ ಪಾರಮಾರ್ಥವೆರಡನು ಮಾಣದೆ ಕೂಡಿ ನಡೆಸುತಿಹನು'' ಎಂಬ ನಿಜಗುಣರ ನುಡಿಯಂತೆ ಬಹುಜಾಣ್ಮೆ ಬೇಕು. ನಮ್ಮ ಶರಣರೆಲ್ಲ ಅಂತಹ ಜಾಣ್ಮೆಯುಳ್ಳವರೇ.

> ''ಮೊಟ್ಟೆ ಮೊಟ್ಟೆ ಪತ್ರಿ ಪುಷ್ಪವ ತಂದು ವಟವಟ ಲಿಂಗವ
> ಪೂಜಿಸಿದಡೇನು ತನು–ಮನದ ಕೆಟ್ಟತನವ ಹಿಂಗದನ್ನಕ್ಕರ ?
> ಹುಸಿ ಕಳವು ಪರದಾರ.ವ್ಯಾಪಾರದಲ್ಲಿ ಹರದಾಡುವ ಮರುಳು ಬುದ್ಧಿಯ
> ದುರಾಚಾರಿಗಳಿಗೆ ದೂರವಾಗಿರ್ಪನು ನೋಡಾ ನಮ್ಮ ಅಖಂಡೇಶ್ವರನು.''

ಎಂಬ ವಚನದಲ್ಲಿ ಶ್ರೀ ಷಣ್ಮುಖಸ್ವಾಮಿಗಳು ಇಷ್ಟಲಿಂಗ ಪೂಜಕನು ತನ್ನ ಎಲ್ಲ

ಅವಗುಣಗಳನ್ನು ಕಳೆದುಕೊಂಡು ಪೂಜೆ ಮಾಡಬೇಕು ಇಲ್ಲವಾದರೆ ಪೂಜೆ ನಿಷ್ಫಲವೆಂದು ತಿಳಿಸಿದರೆ–

''ಪರುಷದ ಪರ್ವತದಲ್ಲಿ ಕಬ್ಬಿಣ ಉಂಟೇ ಅಯ್ಯಾ ?
ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವಾತಂಗೆ
ಅವಗುಣ ಉಂಟೇ ಅಯ್ಯಾ ? ಇದ ಕಾರಣವಾಗಿ
ಭಕ್ತಕಾಯ ಮಮಕಾರವಯ್ಯಾ ಕೂಡಲ ಚೆನ್ನಸಂಗಮದೇವಾ''

ಎಂಬ ಈ ವಚನದಲ್ಲಿ ಶ್ರೀ ಚೆನ್ನಬಸವಣ್ಣನವರು–ಪರುಷದ ಸಂಗದಿಂದ ಕಬ್ಬಿಣವು ಹೇಮವಾಗುವಂತೆ ಅನಾಚಾರಿ ಅವಗುಣಿಯೂ ಸಹ ಇಷ್ಟಲಿಂಗವನ್ನು ಪೂಜಿಸಿದರೆ ಆ ಪೂಜಾ ಫಲದಿಂದ ಅವನ ಅವಗುಣಗಳೆಲ್ಲ ದೂರವಾಗುತ್ತವೆ ಎಂಬುದನ್ನು ತಿಳಿಸುತ್ತಾರೆ.

ಒಂದು ವೇಳೆ ''ಸಜ್ಜನನಾಗಿ ಮಜ್ಜನಕ್ಕೆರೆವೆ ಶಾಂತನಾಗಿ ಪೂಜೆಯ ಮಾಡುವೆ. ಸಮರತಿಯಿಂದ ನಿಮ್ಮ ಹಾಡುವೆ'' ಎಂಬ ಅಕ್ಕನ ವಚನದಂತೆ ಸಕಲ ಅವಗುಣಗಳನ್ನು ತ್ಯಜಿಸಿ ಇಷ್ಟಲಿಂಗವನ್ನು ಪೂಜಿಸಿದರೆ ಸರ್ವೋತ್ತಮ ಆದರೆ ಇದು ಸರ್ವರಿಗೂ ಸಾಧ್ಯವಾಗದು. ಕಾರಣ ಕೆಲವೊಂದು ಅವಗುಣಗಳಿದ್ದರೂ ಇಷ್ಟವನ್ನು ಪೂಜಿಸಲು ಪ್ರಾರಂಭಿಸಿದರೆ ಕಾಲಾಂತರದಲ್ಲಿ ತನಗೆ ವಿವೇಕವಾಗಿ ತಾನು ಮಾಡುವ ಹೀನಕೃತಿಗೆ ತಾನೇ ಹೇಯಪಡುತ್ತಾನೆ.

ಆಧ್ಯಾತ್ಮದತ್ತ ಹರಿಯದೇ ಸದಾ ಸಂಸಾರದಲ್ಲಿ ಬೆರೆತು ದೇವರನ್ನೇ ಮರೆತವರನ್ನು ಕುರಿತು–

''ಹೆಣ್ಣ ಕಂಡು ಹೆಚ್ಚಿ ಹೆಕ್ಕಳಬಡುವಂತೆ, ಕಣ್ಣಿಟ್ಟು ನೋಡಿದಿರಾ
ಶಿವಲಿಂಗ ದೇವನ ? ಕರಣದಿಚ್ಛೆಗೆ ಹರಿದು, ನರಕದಲ್ಲಿ ನೆರೆದು,
ಬರುದೊರೆವೋಗದೆ, ಮರೆಯದೆ ಪೂಜಿಸು ನಮ್ಮ ರಾಮನಾಥನ.''

ಎಂದು ದೇವರ ದಾಸಿಮಾರ್ಯರ ಸಂದೇಶವಿದು. ಸಂಸಾರದ ಮೇಲೆ ಮಾಡುವ ಪ್ರೇಮದ ಅರ್ಧದಷ್ಟು ಪ್ರೇಮವನ್ನು ದೇವರ ಮೇಲೆ ಮಾಡಿದರೆ ದೇವರು ಆ ಭಕ್ತನನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ''ನನ್ನ ದೇಹದ ಮೇಲೆ ಇರುವ ಪ್ರೇಮದ ಅರ್ಧ ಪ್ರೇಮವನ್ನು ರಾಮನ ಮೇಲೆ ಮಾಡಿದ್ದರೆ ''ಕಾಮ''ದ ಬದಲು ''ರಾಮ'' ದೊರೆಯುತ್ತಿದ್ದನಲ್ಲಾ ಎಂಬ ರತ್ನಾವಲಿಯ ಮಾತನ್ನು ಕೇಳಿ ತುಲಸಿಯು ಜಗತ್ಪ್ರಸಿದ್ಧ ತುಲಸೀದಾಸನನಾಗಲಿಲ್ಲವೇ ? ಆದ್ದರಿಂದ ಸಾಧಕನು ಇಷ್ಟಲಿಂಗ ಪೂಜೆಯಲ್ಲಿ ಪ್ರೇಮವನ್ನು ಬೆಳೆಯಿಸಿಕೊಳ್ಳಬೇಕು. ಸತಿಯರ ಸಂಗಕ್ಕಾಗಿ ಅತಿಶಯದ ಗ್ರಾಸದ ಭೋಜನಕ್ಕಾಗಿ ಯಾರ ಪ್ರೇರಣೆಯೂ ಇಲ್ಲದೆ ಮನುಷ್ಯನ ಸ್ವಾಭಾವಿಕ ಪ್ರವೃತ್ತಿ ಇರುವಂತೆ ಇಷ್ಟಲಿಂಗ ಪೂಜೆಯಲ್ಲಿಯೂ ಸಹಜಪ್ರವೃತ್ತಿ ಬರಬೇಕೆಂಬುದಾಗಿಯೂ ಶ್ರೀ ದಾಸಿಮಾರ್ಯರು ಮಾರ್ಮಿಕವಾಗಿ ಉಪದೇಶಿಸಿದ್ದಾರೆ.

ಎಲ್ಲ ಶರಣರಲ್ಲಿ ಶ್ರೀ ಪ್ರಭುದೇವರು ಬಹು ವಿಚಿತ್ರವಾದ ವ್ಯಕ್ತಿಯಾಗಿದ್ದಾರೆ. ಅಂತರ್ಲಿಂಗಾನುಸಂಧಾನದಲ್ಲಿ ಪ್ರಬಲ ಆಸಕ್ತಿ ಇವರಿಗೆ.

ಅಂತೆಯೇ–

''ಹೊಟ್ಟೆಯ ಮೇಲೆ ಕಟ್ಟೋಗರದ ಮೂಟೆಯ ಕಟ್ಟಿದರೇನು ?
ಹಸಿವು ಹೋಹುದೇ ? ಅಂಗದಮೇಲೆ ಲಿಂಗ ಸ್ವಾಯತವಾದರೇನು ?
ಭಕ್ತನಾಗಬಲ್ಲನೇ ? ಇಟ್ಟ ಕಲ್ಲು ಮೆಳೆಯಮೇಲೆ ಸಿಕ್ಕಿದಡೆ, ಆ ಕಲ್ಲು
ಲಿಂಗವೇ ? ಆ ಮೆಳೆ ಭಕ್ತನೇ ? ಇಟ್ಟಾತ ಗುರುವೇ ? ಇಂತಪ್ಪವರ ಕಂಡಡೆ
ನಾಚುವೆನಯ್ಯಾ ಗುಹೇಶ್ವರಾ !''

''ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲುಕುಟಿಕಂಗೆ ಹುಟ್ಟಿದ ಮೂರುತಿ,
ಮಂತ್ರಕ್ಕೆ ಲಿಂಗವಾಯಿತ್ತಲ್ಲಾ! ಈ ಮೂವರಿಗೆ ಹುಟ್ಟಿದ ಮಗನ
ಲಿಂಗವೆಂದು ಕೈವಿಡಿವ ಅಚ್ಚ ವ್ರತಗೇಡಿಗಳನೇನೆಂಬೆ ಗುಹೇಶ್ವರಾ ?''

ಇವೇ ಮುಂತಾದ ಇವರ ಕಟುವಾದ ವಚನಗಳು ವೀರಶೈವ ಸಿದ್ಧಾಂತಕ್ಕೆ ಆಪಾತತಃ ವಿರೋಧವಾಗಿ ತೋರಬಹುದು. ಆದರೆ ಪ್ರಭುದೇವರ ದೃಷ್ಟಿ ಬಾಹ್ಯಕ್ಕಿಂತಲೂ ಅಂತರಂಗದಲ್ಲಿ ಹೆಚ್ಚು ಬೆಳವಣಿಗೆಯಾಗಿದೆ. ಸಾಧನೆಮಾಡಿದಂತೆ ಸಾಧಕನಿಗೆ ಪ್ರಗತಿ ಯಾಗಬೇಕು. ಪ್ರಾಥಮಿಕದಲ್ಲಿ ಅಭ್ಯಾಸ ಮಾಡಿದ ಮೂಲಾಕ್ಷರಗಳೇ ಸಮಸ್ತವಾಙ್ಮಯಕ್ಕೆ ಮೂಲಗಳಾಗಿದ್ದರೂ ಜೀವನದುದ್ದಕ್ಕೂ ಅವುಗಳನ್ನೇ ತೀಡುತ್ತ ಕೂಡ್ರುವದು ವಿದ್ಯಾರ್ಥಿಯ ಲಕ್ಷಣವಲ್ಲ, ಅವುಗಳನ್ನು ಮನನ ಮಾಡಿಕೊಂಡು ಅವುಗಳ ಆಧಾರ ದಿಂದಲೇ ಮುಂದಿನ ವಾಙ್ಮಯವನ್ನು ಅಭ್ಯಸಿಸಬೇಕು ಅಂದಾಗಲೇ ಮೂಲಾಕ್ಷರಗಳ ಅಭ್ಯಾಸದ ಪ್ರಯೋಜನವು ಸಿದ್ಧಿಸುವದು. ಅದರಂತೆ ಅಂತರಂಗದ ಅರಿವನ್ನು ಅರಿಯಲು ಸದ್ಗುರುಗಳು ಇಷ್ಟಲಿಂಗವೆಂಬ ಕುರುಹನ್ನು ದಯಪಾಲಿಸುತ್ತಾರೆ. ಜೀವನದುದ್ದಕ್ಕೂ ಮೂಲಾಕ್ಷರಗಳನ್ನೇ ತೀಡುತ್ತ ಕುಳಿತಂತೆ ಇಷ್ಟಲಿಂಗದ ಪೂಜೆಯನ್ನೇ ಮಾಡುತ್ತ ಕಾಲಕಳೆಯುವದು ಪ್ರಗತಿಯ ಲಕ್ಷಣವಲ್ಲ ಅದರ ಜೊತೆಗೆ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಅನುಸಂಧಾನವನ್ನು ಬೆಳೆಯಿಸಿಕೊಳ್ಳಬೇಕೆಂಬುದೇ ಪ್ರಭುದೇವರ ತಾತ್ಪರ್ಯ. ಈ ಅಂತರಂಗದ ಭಾವ ಬಲವಾಗಿ ಬೆಳೆದಾಗ ಬಾಹ್ಯ ಉಪಚಾರಗಳಿಂದ ಇಷ್ಟಲಿಂಗವನ್ನು ಪೂಜಿಸುವ ಸಾಧಕನು ಮೈಮರೆತು ಬಿಡುತ್ತಾನೆ. ಆಗ ಉಪಚಾರ ಪೂಜೆ ನಿಂತು ಹೋಗುವದು.

''ಅಗ್ಘವಣಿಯ ತಂದು ಮಜ್ಜನವ ಮರೆದವನ,
ಪುಷ್ಪವ ತಂದು ಪೂಜೆಯ ಮರೆದವನ,
ಜಾಗರವ ತಂದು ಅರ್ಪಿತವ ಮರೆದವನ,
ಲಿಂಗವಕಂಡು ತನ್ನ ಮರೆದವನ ಮಹಾಘನ
ಒಳಕೊಂಡಿತ್ತು ಗುಹೇಶ್ವರಾ.''

ಈ ವಚನದಲ್ಲಿ ಶ್ರೀ ಪ್ರಭುದೇವರು ಅಂತರಂಗವಳವಟ್ಟ ಸಾಧಕನ ಸ್ಥಿತಿಯನ್ನು ಬಹು ಸುಂದರವಾಗಿ ಚಿತ್ರಿಸಿದ್ದಾರೆ. ಕಲ್ಲಿನ ಗೊಂಬೆ ಮತ್ತು ಉಪ್ಪಿನ ಗೊಂಬೆಗಳೆರಡೂ ಸಮುದ್ರನಾಥನ ಪೂಜೆಗೆ ಸಕಲ ಉಪಚಾರಗಳನ್ನು ತೆಗೆದುಕೊಂಡು ಹೋದವಂತೆ ಸಮುದ್ರದಲ್ಲಿಳಿದು ಕಣ್ಣುಮುಚ್ಚಿಕೊಂಡು ಎರಡೂ ಪೂಜೆ ಮಾಡಲಾರಂಭಿಸಿದವು. ಕಲ್ಲಿನ

ಗೊಂಬೆ ತನ್ನ ಪೂಜೆ ಮುಗಿದ ಬಳಿಕ ತನ್ನ ಮಿತ್ರನಾದ ಉಪ್ಪಿನ ಗೊಂಬೆಯತ್ತ ತಿರುಗಿ–''ನಿನ್ನ ಪೂಜೆ ಮುಗಿಯಿತೇ'' ಎಂದು ನೋಡಿತು. ಆಶ್ಚರ್ಯ ! ಪರಮಾಶ್ಚರ್ಯ !! ಪತ್ರ–ಪುಷ್ಪಾದಿ ಸಾಮಗ್ರಿಗಳೆಲ್ಲ ಸಮುದ್ರದ ಮೇಲೆ ತೇಲುತ್ತಿವೆ. ಆದರೆ ಮಿತ್ರನಾದ ಆ ಉಪ್ಪಿನ ಗೊಂಬೆಯೇ ಇರಲಿಲ್ಲ, ಮಿತ್ರ ಕಳೆದುಹೋದನಲ್ಲಾ ಎಂದು ಅಳತೊಡಗಿತು. ಮಿತ್ರ ಕಳೆದುಹೋಗಲಿಲ್ಲ ತನ್ನ ಮೂಲದಲ್ಲಿ ತಾನು ಲೀನವಾಯಿತು. ಅದರಂತೆ ಉಪಚಾರಗಳಿಂದ ಪೂಜೆಮಾಡುವ ಸಾಧಕನು ಇಷ್ಟಲಿಂಗವನ್ನ ನೋಡಿ ಪ್ರಾಣ–ಭಾವಲಿಂಗಗಳ ಅರಿವಾಗಿ ಕ್ಷಣ ಕಾಲವಾದರೂ ತನ್ನ ಶರೀರವನ್ನು ಮರೆತು ಅದರಲ್ಲಿ ಬೆರೆಯಬೇಕು.

ವೈರಾಗ್ಯ ಜ್ಞಾನಯುಕ್ತಾನಾಂ ಯೋಗಿನಾಂ ಸ್ಥಿರಚೇತಸಾಂ ।
ಅಂತರ್ಲಿಂಗಾನುಸಂಧಾನೇ ರುಚಿರ್ಬಾಹ್ಯೇ ನ ಜಾಯತೇ ॥

(ಸಿ. ಶಿ. ೬.೪೩)

ವೈರಾಗ್ಯ ಭರಿತರೂ, ಯೋಗಿಗಳೂ, ಸ್ಥಿರಮನಸ್ಕರೂ, ಆದ ಜ್ಞಾನಿಗಳಿಗೆ ಬಾಹ್ಯಲಿಂಗಾನು ಸಂಧಾನಕ್ಕಿಂತಲೂ ಅಂತರ್ಲಿಂಗಾನುಸಂಧಾನದಲ್ಲಿ ಅಧಿಕವಾದ ಅಭಿರುಚಿ ಇರುತ್ತದೆ ಎಂಬ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ ವೈರಾಗ್ಯದಲ್ಲಿ ಪ್ರಸಿದ್ಧರಾದ ಶ್ರೀ ಅಲ್ಲಮ ಪ್ರಭುಗಳಿಗೆ ಅಂತರಂಗದಲ್ಲಿ ಅತ್ಯಂತ ಆಸಕ್ತಿ ಇದೆ ಅಂತೆಯೇ ಸಾಮಾನ್ಯ ಜನರನ್ನು ಬಹಿರಂಗದಿಂದ ಅಂತರಂಗಕ್ಕೆ ಪ್ರೇರೇಪಿಸುವದಕ್ಕಾಗಿ ಇಂತಹ ವಚನಗಳನ್ನು ಹೇಳಿದ್ದಾರೆ. ಇವರ ವಚನಗಳು ವೀರಶೈವ ಸಿದ್ಧಾಂತಕ್ಕಾಗಲಿ ಆಚಾರ್ಯರ ಆದೇಶಕ್ಕಾಗಲಿ ವಿರುದ್ಧವಾದವುಗಳಲ್ಲವೆಂಬುದನ್ನು ಸರ್ವರೂ ಭಾವಿಸಬೇಕು.

ನುಲಿಯ ಚಂದಯ್ಯನು ಲಿಂಗ ಕಳಚಿಬಿದ್ದಾಗ ಮಾಚಯ್ಯ ಹಾಗೂ ಚಂದಯ್ಯ ಕೂಡಿಕೊಂಡು ಅದರ ನಿರ್ಣಯಕ್ಕಾಗಿ ಅನುಭವ ಮಂಟಪಕ್ಕೆ ಬಂದಾಗ ಶ್ರೀ ಪ್ರಭುದೇವರು–''ಅಂಗವುಳ್ಳನ್ನಬರ ಲಿಂಗಪೂಜೆಯೇ ಬೇಕು ಲಿಂಗವೆಂಬ ಮೂರ್ತಿ ಯುಳ್ಳನ್ನ ಬರ ಸಂದಿಲ್ಲದೆ ಅರ್ಪಿಸಬೇಕು''; ''ಹಿಡಿದ ವ್ರತ ನಿಯಮಂಗಳಲ್ಲಿ ಬಿಡುಗಡೆ ಇಲ್ಲದಿರಬೇಕು''; ''ಕಣ್ಣ ಕಂಡಲ್ಲದೇ ಮನ ನೆನೆಯದು'', ''ಅಂಗದ ಲಿಂಗವೇ ಮನದ ಲಿಂಗ, ಮನದಲಿಂಗವೇ ಭಾವದಲಿಂಗ, ಭಾವದ ಲಿಂಗವೇ ಜಂಗಮ ದಾಸೋಹ'';

''ಪರುಷವಾದರೂ ಒಂದರಲ್ಲಿ ಇರಿಸಿರಬೇಕು. ರತ್ನ ವಿಶೇಷವಾದರೂ
ಕುಂದಣದಲ್ಲಿ ಬಂಧಿಸಿ ಸಂದಿರಬೇಕು ಲಿಂಗವ ಹಿಡಿದಲ್ಲಿ
ಪೂಜಿಸುವ ಅಂಗವಿರಬೇಕು. ಇದು ಕಾರಣ ಗುಹೇಶ್ವರಲಿಂಗವನರಿದು
ಮರೆಯಲಿಲ್ಲ ಕಾಣಾ ಚಂದಯ್ಯಾ.''

ಇವೇ ಮುಂತಾದ ವಚನಗಳಲ್ಲಿ ಇಷ್ಟಲಿಂಗ ಧರಿಸುವ ಹಾಗೂ ಪೂಜಿಸುವ ಬಗ್ಗೆ ತಮ್ಮ ಸ್ಪಷ್ಟವಾದ ನಿರ್ಣಯವನ್ನು ಹೇಳಿರುವರಲ್ಲದೇ ತಾವು ಗುಹೇಶ್ವರ ಲಿಂಗವನ್ನು ಅರಿತಿದ್ದರೂ ಬಾಹ್ಯ ಇಷ್ಟಲಿಂಗವನ್ನು ಮರೆತಿಲ್ಲವೆಂದು ತಮ್ಮನ್ನೇ ಉದಾಹರಿಸಿ ಕೊಂಡಿದ್ದಾರೆ.

ಹೀಗೆ ಆಚಾರ್ಯರ ಉಪದೇಶದಲ್ಲಿ ಹಾಗೂ ಶರಣರ ಸಂದೇಶದಲ್ಲಿ ಇಷ್ಟಲಿಂಗ ಧಾರಣೆ ಹಾಗೂ ಪೂಜೆಯಿಂದ ಮನುಷ್ಯನ ಲೌಕಿಕ ಮತ್ತು ಆಧ್ಯಾತ್ಮಿಕ ಪ್ರಗತಿಯು ಹೇಳಲ್ಪಟ್ಟಿರುವುದರಿಂದ ಪ್ರತಿಯೊಬ್ಬ ವೀರಶೈವರು ಇಷ್ಟಲಿಂಗವನ್ನು ಧರಿಸಿಕೊಂಡು ಅದನ್ನು ಮರೆಯದೇ ಪ್ರತಿನಿತ್ಯ ಪೂಜಿಸಬೇಕು.

**ಇಷ್ಟಲಿಂಗಪೂಜೆಯಿಂದ ಶಾರೀರಿಕ ಹಾಗೂ ಮಾನಸಿಕ ಆರೋಗ್ಯ :**

ಈ ತೆರನಾದ ಇಷ್ಟಲಿಂಗಪೂಜೆಯಿಂದ ಆಧ್ಯಾತ್ಮಿಕ ಪ್ರಗತಿಯ ಜೊತೆಗೆ ಮನುಷ್ಯನ ಶಾರೀರಿಕ ಹಾಗೂ ಮಾನಸಿಕ ಸ್ವಾಸ್ಥ್ಯವು ಸುಧಾರಣೆಯಾಗಿ ಜೀವನವೆಲ್ಲ ಆನಂದಮಯ ವಾಗುತ್ತದೆ.

''ಧಾರಯೇತ್ ಸತತಂ ರತ್ನಂ ಸಿದ್ಧಮಂತ್ರ ಮಹೌಷಧೀಃ''

(ಅಷ್ಟಾಂಗಹೃದಯ, ಸೂತ್ರಸ್ಥಾನ, ದಿನಚರ್ಯಾಧ್ಯಾಯ)

ಹೀಗೆ ಆಯುರ್ವೇದ ಶಾಸ್ತ್ರದಲ್ಲಿ ಮನುಷ್ಯನ ಆರೋಗ್ಯ ಲಾಭಕ್ಕಾಗಿ, ಮಣಿ, ಮಂತ್ರ ಹಾಗೂ ಔಷಧಗಳನ್ನು ಧರಿಸಬೇಕೆಂಬುದಾಗಿ ಹೇಳಲಾಗಿದೆ. ಸೂರ್ಯಕಾಂತ, ಚಂದ್ರಕಾಂತ, ಸ್ಫಟಿಕ ಹಾಗೂ ಶ್ರೀಶೈಲ ಪರ್ವತದ ಉತ್ಕೃಷ್ಟ ಶಿಲಾಖಂಡಗಳು ರತ್ನಗಳಲ್ಲಿಯೇ ಪರಿಗಣಿಸಲ್ಪಡುತ್ತವೆ. ಆದ್ದರಿಂದ ವೀರಶೈವರ ಇಷ್ಟಲಿಂಗವು ಮೇಲೆ ಹೇಳಿದ ಯಾವದೊಂದು ಶಿಲೆಯಿಂದ ನಿರ್ಮಿತವಾಗಿರುವುದರಿಂದ ಭೌತಿಕ ದೃಷ್ಟಿಯಿಂದ ನೋಡಿದರೆ ಇದೊಂದು ದಿವ್ಯ ರತ್ನವೇ ಸರಿ. ಇನ್ನು ಇಷ್ಟಲಿಂಗಕ್ಕೆ ಮೇಲೆ ಲೇಪಿಸಲು ನಿರ್ಮಿಸಿದ ಕಂಥೆಯು ಭಲ್ಲಾತಕೀ (ಗೇರೆಣ್ಣೆ) ಯಿಂದ ತಯಾರಿಸಲ್ಪಟ್ಟಿ ರುತ್ತದೆ. ''ಅಯಸ್ಕಾಂತ ಭಲ್ಲಾತಕೀ.................ಇತ್ಯೇನಾನಿ ರಸಾಯನಾನಿ'' (ವೈದ್ಯ ಶತಶ್ಲೋಕಿ ಪುಟ ೧೯) ಎಂಬ ಉಕ್ತಿಯಲ್ಲಿ ಆಯಸ್ಕಾಂತ ಹಾಗೂ ಗೇರೆಣ್ಣೆಗಳು ರಸಾಯನ ಔಷಧಗಳೆಂದು ಪ್ರತಿಪಾದಿಸಲ್ಪಟ್ಟಿವೆ.

ಗೇರೆಣ್ಣೆಯನ್ನು ಶುದ್ಧಗೊಳಿಸಿ ಶೂಲ, ಮೂಲವ್ಯಾಧಿ ಮತ್ತು ಅತಿಸಾರ ಮುಂತಾದ ರೋಗಗಳಿಗೆ ಉಪಯೋಗಿಸುವ ವಿಧಾನವು 'ಗುಣ ಭೂಷಣ' ವೈದ್ಯನಿಘಂಟುವಿನಿಂದ ತಿಳಿದುಬರುತ್ತದೆ. ಚರಕಸಂಹಿತೆ ಚಿಕಿತ್ಸಾಸ್ಥಾನ ೧ನೇ ಅಧ್ಯಾಯದಲ್ಲಿ ಭಲ್ಲಾತಕೀ ಅಂದರೇ ಗೇರೆಣ್ಣೆಯನ್ನು ಶುದ್ಧಗೊಳಿಸಿ ಯೋಗ್ಯ ರೀತಿಯಿಂದ ಉಪಯೋಗಿಸಿದರೆ ಅಮೃತ ಸದೃಶವಾಗುತ್ತದೆ ಎಂಬುದನ್ನು ತಿಳಿಸಿ ಆದರಿಂದ ಭಲ್ಲಾತಕಘೃತ, ಭಲ್ಲಾತಕಕ್ಷೀರ, ಭಲ್ಲಾತಕ ಕ್ಷೌದ್ರ, ಭಲ್ಲಾತಕಗುಡ, ಭಲ್ಲಾತಕಯೂಷ, ಭಲ್ಲಾತಕ ತೈಲ, ಭಲ್ಲಾತಕಪಲಲ, ಭಲ್ಲಾತಕ ಸಕ್ತು, ಭಲ್ಲಾತಕ ಲವಣ ಮತ್ತು ಭಲ್ಲಾತಕ ತರ್ಪಣವೆಂಬ ಹತ್ತು ವಿಧವಾದ ಔಷಧವನ್ನು ತಯಾರಿಸಿ ಉಪಯೋಗಿಸುವ ರೀತಿಯನ್ನು ತಿಳಿಸಲಾಗಿದೆ ಎಂಬ ವಿಷಯವನ್ನು ಶ್ರೀ ಜಿ. ಟಿ. ಅಕ್ಕುಲಯ್ಯ ದೀಕ್ಷಿತರು ''ಇಷ್ಟಲಿಂಗ ವಿಜ್ಞಾನ'' ಪುಟ ೭೫–೭೬ ರಲ್ಲಿ ವಿಶದಪಡಿಸಿದ್ದಾರೆ.

ಇಷ್ಟಲಿಂಗ ಪೂಜೆಯಲ್ಲಿ ಹೇಳಿದ ಪಿಷ್ಟಾದಿ ಲೇಪನಗಳು ಪಂಚಾಮೃತಾದಿ ಅಭಿಷೇಕಗಳು ಕಥೆಯಲ್ಲಿ ಉಪಯೋಗಿಸಲ್ಪಟ್ಟ ಗೇರೆಣ್ಣೆಯನ್ನು ಆಯುರ್ವೇದ ಪದ್ಧತಿ ಯಂತೆ ಸಹಜವಾಗಿ ಪ್ರತಿದಿವಸ ಶುದ್ಧಗೊಳಿಸುತ್ತವೆ. ಹೀಗೆ ಪೂಜಿಸಲ್ಪಟ್ಟ ಇಷ್ಟಲಿಂಗದ ಅಭಿಷೇಕೋದಕ ಪ್ರೋಕ್ಷಣ ಹಾಗೂ ಲಿಂಗೋದಕವನ್ನು ಪ್ರತಿದಿನ ಪ್ರಾಶನ

ಮಾಡುವುದರಿಂದ ಶಾರೀರಿಕ ರೋಗಗಳೆಲ್ಲ ಸಹಜವಾಗಿ ನಿವೃತ್ತಿಯಾಗಿ ಉತ್ತಮ ಆರೋಗ್ಯ ಲಾಭವು ಪ್ರಾಪ್ತವಾಗುವದು.

ಹೀಗೆ ಇಷ್ಟಲಿಂಗದಲ್ಲಿರುವ ಕಾಂತಶಿಲೆ ''ಮಣಿ''ಯಾಗಿಯೂ, ಲಿಂಗದ ಕಂಥೆಯು ಔಷಧವಾಗಿಯೂ, ಜಪಿಸುವ ಪಂಚಾಕ್ಷರಿಯು ಮಹಾಮಂತ್ರವಾಗಿಯೂ ಇರುವುದರಿಂದ ಮನುಷ್ಯನ ಆಯುರಾರೋಗ್ಯಭಾಗ್ಯ ಪ್ರಾಪ್ತಿಗಾಗಿ ಬೇಕಾಗುವ ಮಣಿ-ಮಂತ್ರ-ಔಷಧಿಗಳು ಇಷ್ಟಲಿಂಗದ ಧಾರಣೆ, ಪೂಜೆ ಹಾಗೂ ಅನುಸಂಧಾನಗಳಿಂದ ಸಹಜವಾಗಿ ಪ್ರಾಪ್ತವಾಗುವುದರಿಂದ ಇಷ್ಟಲಿಂಗವು ಮಾನವನ ಸರ್ವಾಭೀಷ್ಟವನ್ನು ಪ್ರಾಪ್ತಮಾಡಿ ಕೊಡುವ ಚಿಂತಾಮಣಿಯಾಗಿದೆ ಎಂಬುದು ಆಯುರ್ವೇದ ಶಾಸ್ತ್ರದಿಂದಲೂ ಸಿದ್ಧವಾಗುವುದರಿಂದ ಇಷ್ಟಲಿಂಗಧಾರಣೆ ಪೂಜಾದಿಗಳು ಕೇವಲ ಸಾಂಪ್ರದಾಯಕಗಳಲ್ಲ ವೈಜ್ಞಾನಿಕಗಳೂ ಆಗಿವೆ. ಇದರ ರಹಸ್ಯಾರ್ಥವನ್ನು ತಿಳಿದುಕೊಳ್ಳದ ಕಾರಣ ವೀರಶೈವ ಸಮಾಜ ಇಂದು ತನ್ನ ಸ್ವಾಸ್ಥ್ಯವನ್ನು ಕಳೆದುಕೊಳ್ಳುತ್ತಲಿದೆ. ಇನ್ನಾದರೂ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದ ರಹಸ್ಯಾರ್ಥವನ್ನು ತಿಳಿದು ಇಷ್ಟಾರ್ಥ ಪ್ರದಾಯಕವಾದ ಇಷ್ಟಲಿಂಗವನ್ನು ಧರಿಸಿ, ವಿಧ್ಯುಕ್ತವಾಗಿ ಪೂಜಿಸಿ ಶಾರೀರಿಕ-ಮಾನಸಿಕ ಸ್ವಾಸ್ಥ್ಯವನ್ನು ಪಡೆಯಲು ಪ್ರಯತ್ನಿಸಬೇಕು.

''ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ವರಂ'' ಎಂಬ ಆಚಾರ್ಯೋಕ್ತಿಯಂತೆ ವೀರಶೈವರು ಇಷ್ಟಲಿಂಗವನ್ನು ಬಾಹ್ಯಪೀಠದಲ್ಲಿ ಇಟ್ಟು, ಪೂಜಿಸುವುದಕ್ಕಿಂತಲೂ ಹಸ್ತಪೀಠದಲ್ಲಿರಿಸಿ ಪೂಜಿಸುವದೇ ಲೇಸು.

**ದೇವತೆಗಳು ಮುನಿಗಳು ಲಿಂಗಧಾರಿಗಳು :**

ಈ ಇಷ್ಟಲಿಂಗಧಾರಣೆ ಹಾಗೂ ಪೂಜಾದಿಗಳು ಕೇವಲ ಮನುಷ್ಯ ಸಮಾಜಕ್ಕೆ ಸೀಮಿತವಾದವುಗಳಲ್ಲ ಬ್ರಹ್ಮಾದಿದೇವತೆಗಳೂ, ಗೌತಮಾದಿ ಮಹರ್ಷಿಗಳೂ ಮತ್ತು ಲಕ್ಷ್ಮ್ಯಾದಿ ಶಕ್ತಿದೇವತೆಗಳೂ, ತಮ್ಮ ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿದ್ದಾರೆ ಎಂಬ ವಿಷಯವನ್ನು ''ಬ್ರಹ್ಮವಿಷ್ಣ್ವಾದ್ವಯೋ ದೇವಾ'' ಎಂಬುದಾಗಿ ಪೂಜ್ಯರು ಸ್ಪಷ್ಟಪಡಿಸಿದ್ದಾರೆ. ಅದರ ಸಂಕೇತವಾಗಿ ಇಂದಿಗೂ ಸಹ ವಿಷ್ಣುವಿನ ಅವತಾರ ವಿಶೇಷವಾದ ಪಂಢರಪುರದ ವಿಠ್ಠಲನ ಮಸ್ತಕದಲ್ಲಿ ಹಾಗೂ ಕೊಲ್ಹಾಪುರದ ಮಹಾಲಕ್ಷ್ಮಿ ಮತ್ತು ತುಳಜಾಪುರದ ಅಂಬಾಭವಾನಿಯರ ವಿಗ್ರಹಗಳ ಮಸ್ತಕದಲ್ಲಿ ಶಿವಲಿಂಗಗಳನ್ನು ಕಾಣುತ್ತೇವೆ. ಇನ್ನು ಲಿಂಗಾಷ್ಟಕದಲ್ಲಿ ಬರುವ ಬ್ರಹ್ಮಮುರಾರಿಸುರಾರ್ಚಿತಲಿಂಗಂ, ದೇವಮುನಿ ಪ್ರವರಾರ್ಚಿತಲಿಂಗಂ, ಸಿದ್ಧಸುರಾಸುರವಂದಿತಲಿಂಗಂ, ದೇವಗಣಾವಲಿ ಸೇವಿತಲಿಂಗಂ, ಸುರಗುರು ಸುರವರ ಪೂಜಿತಲಿಂಗಂ ಮುಂತಾದ ವಾಕ್ಯಗಳನ್ನು ನೋಡಿದರೆ ಸಕಲ ದೇವತೆಗಳು ಲಿಂಗ ಪೂಜಕರಿದ್ದಾರೆಂಬುದು ತಿಳಿದುಬರುತ್ತದೆ.

ಇಂದ್ರನೀಲಮಯಂ ಲಿಂಗಂ ವಿಷ್ಣುನಾ ಪೂಜಿತಂ ಸದಾ ।
ಪದ್ಮರಾಗಮಯಂ ಶಕ್ರೋ ಹೈಮಂ ವಿಶ್ರಾವಸಃ ಸುತಃ ॥
ವಿಶ್ವೇದೇವಾಸ್ತಥಾ ರೌಪ್ಯಂ ವಸವಃ ಕಾಂತಿಕಂ ಶುಭಮ್ ।
..........................................................................
ಲಕ್ಷ್ಮಿವೃಕ್ಷಮಯಂ ಲಕ್ಷ್ಮೀರ್ಗುಹೋ ವೈ ಗೋಮಯಾತ್ಮಕಂ ।
..........................................................................

ಸರಸ್ವತೀ ಚ ರತ್ನೇನ ಕೃತಂ ರುದ್ರಸ್ಯ ವಾಗ್ಭವಾ
ದುರ್ಗಾ ಹೈಮಂ ಮಹಾದೇವಂ ಸವೇದಿಕ ಮನುತ್ತಮಮ್ ॥
ಬಹುನಾತ್ರ ಕಿಮುಕ್ತೇನ ಚರಾಚರಮಿದಂ ಜಗತ್ ।
ಶಿವಲಿಂಗಂ ಸಮಭ್ಯರ್ಚ್ಯ ಸ್ಥಿತಮತ್ರ ನ ಸಂಶಯಃ ॥

(ಲಿಂಗಪುರಾಣ ಪೂರ್ವಭಾಗ, ಅಧ್ಯಾಯ ೭೪ ಶ್ಲೋಕ ೨–೧೨)

ಲಿಂಗಮಹಾಪುರಾಣದ ಈ ಶ್ಲೋಕಗಳಿಂದ ವಿಷ್ಣು ಮುಂತಾದ ದೇವತೆಗಳು ಮತ್ತು ಲಕ್ಷ್ಮೀ ಮುಂತಾದ ಶಕ್ತಿಯರು ಲಿಂಗಪೂಜಕರೆಂಬುದು ಸ್ಪಷ್ಟವಾಗುತ್ತದೆ. ಲಿಂಗಭಕ್ತರಾದ ಇವರೆಲ್ಲ ಆ ಲಿಂಗಮೂರ್ತಿಯನ್ನು ಪೂಜೆಯ ನಂತರ ಮಸ್ತಕದಲ್ಲಿ ಧರಿಸುತ್ತಾರೆ.

ಕಶ್ಯಪಾತ್ರಿ ಭರದ್ವಾಜ ಗೌತಮಾದ್ಯಾ ಮಹರ್ಷಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

(ಲಿಂಗಪುರಾಣ)

ಈ ಲಿಂಗ ಪುರಾಣದ ಆಧಾರದಿಂದ ಇಷ್ಟಲಿಂಗವನ್ನು ಮಸ್ತಕದಲ್ಲಿ ಧರಿಸುವ ಪದ್ಧತಿಯು ಅತೀ ಪ್ರಾಚೀನವಾದುದೆಂದು ತಿಳಿದುಬರುತ್ತದೆ. ಇದು ಲಿಂಗದಲ್ಲಿಯ ನಿರತಿಶಯ ಪ್ರೇಮವನ್ನು ವ್ಯಕ್ತಮಾಡುತ್ತದೆ.

ಹೀಗೆ ದೇವಾನುದೇವತೆಗಳಿಂದಲೂ ತಪಸ್ವಿಗಳಾದ ಮಹರ್ಷಿಗಳಿಂದಲೂ ಧರಿಸಿ ಪೂಜಿಸಲ್ಪಟ್ಟ ಈ ಇಷ್ಟಲಿಂಗವನ್ನು ಪ್ರತಿಯೊಬ್ಬರೂ ಶ್ರೀ ರೇಣುಕ ಭಗವತ್ಪಾದರು ಉಪದೇಶಿಸಿದ ರೀತಿಯಲ್ಲಿ ಶರೀರದ ನಾಭಿಪ್ರದೇಶದ ಮೇಲ್ಭಾಗದಲ್ಲಿ ಕಂಠ ಮುಂತಾದ ನಿರ್ದಿಷ್ಟ ಸ್ಥಾನದಲ್ಲಿ ಭಕ್ತಿಯಿಂದ ಧರಿಸಿ ವಿಧ್ಯುಕ್ತ ಉಪಚಾರಗಳಿಂದ ಪ್ರತಿದಿವಸ ಅರ್ಚಿಸಿ ಲಿಂಗೋದಕವನ್ನು ಸ್ವೀಕರಿಸಿ ಆರೋಗ್ಯಭಾಗ್ಯವನ್ನು ಪಡೆದು ಧನ್ಯರಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೮ ಆಗಷ್ಟ್, ೧೯೯೦
(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)



ಆಶೀರ್ವಚನ-೧೧

ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

ಋಗಿತ್ಯಾಹ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ ॥ (ಸಿ. ಶಿ. ೫೭-೫೮)

''ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ'' ಎಂಬ ಋಗ್ವೇದದ ಮಂತ್ರವು ಲಿಂಗ ಧಾರಣೆಯನ್ನು ಬೋಧಿಸಿರುವ ಕಾರಣ ದೋಷ ರಹಿತವೂ ಪವಿತ್ರವೂ ಆದ ಇಷ್ಟಲಿಂಗ ವನ್ನು ದೇಹದ ಮೇಲೆ ಧರಿಸಬೇಕು.

ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ ।
ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಶ್ಶುಚಿಃ (ಸಿ. ಶಿ. ೬.೫೯)

ಇಷ್ಟಲಿಂಗ ರೂಪವಾದ ಬ್ರಹ್ಮಕ್ಕೆ ಅಧಿಪತಿಯಾದದ್ದು ಪರಶಿವಬ್ರಹ್ಮ ಅಂತೆಯೇ ಅದಕ್ಕೆ ''ಬ್ರಹ್ಮಣಸ್ಪತಿಃ'' ಎಂಬುದಾಗಿ ಹೇಳಲಾಗಿದೆ. ಅದು ಪವಿತ್ರವಾಗಿರುವುದರಿಂದ ಅದರ ಸಂಪರ್ಕದಿಂದ ಶರೀರವು ಶುಚಿಯಾಗುತ್ತದೆ. ಅಂತೆಯೇ ಅದನ್ನು ದೇಹದ ಮೇಲೆ ಧರಿಸಬೇಕು.

ಅತಪ್ತತನುರಜ್ಞೋ ವೈ ಆಮಃ ಸಂಸ್ಕಾರವರ್ಜಿತಃ ।
ದೀಕ್ಷಯಾ ರಹಿತಃ ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಂ ॥ (ಸಿ. ಶಿ. ೬.೬೦)

ಶಿವನಿಗಾಗಿ ತಪಸ್ಸನ್ನಾಚರಿಸದವನೂ ಅಪರಿಪಕ್ವಾಂತಃಕರಣವುಳ್ಳವನೂ, ಶಿವ ಸಂಸ್ಕಾರ ಹೀನನೂ, ಆತ್ಮಾನಾತ್ಮ-ನಿತ್ಯಾನಿತ್ಯ ವಿವೇಕ ಶೂನ್ಯನೂ ಮತ್ತು ಗುರುಕಾರುಣ್ಯ ವಿಲ್ಲದವನೂ ಆದ ವ್ಯಕ್ತಿಯು ಶ್ರೇಷ್ಠವಾದ ಶಿವಲಿಂಗವನ್ನು ಸ್ವತಃ ತಾನೇ ತೆಗೆದುಕೊಂಡು ಧರಿಸಿಕೊಳ್ಳಬಾರದು.

ಅಘೋರಾऽಪಾಪಕಾಶೀತಿ ಯಾತೇ ರುದ್ರ ಶಿವಾತನೂಃ ।
ಯಜುಷಾ ಗೀಯತೇ ಯಸ್ಮಾತ್ತಸ್ಮಾಚ್ಛೈವೋऽಘ ವರ್ಜಿತಃ (ಸಿ. ಶಿ. ೬.೬೧)

''ಯಾತೇ ರುದ್ರಶಿವಾತನೂರಘೋರಾऽಪಾಪಕಾಶಿನೀ'' ಎಂಬ ಯಜುರ್ವೇದ ಮಂತ್ರದಲ್ಲಿ ಶಿವಶಕ್ತಿಯರ ದೇಹವಾದ ಲಿಂಗವು ಶಾಂತವೂ ಮಂಗಲಮಯವೂ ಪಾಪ ರಹಿತರಾದ ಭಕ್ತರಲ್ಲಿ ಇಷ್ಟಲಿಂಗರೂಪದಿಂದ ಪ್ರಕಾಶಿಸುವಂತಹದೂ ಎಂಬುದಾಗಿ ಹೇಳಲ್ಪಟ್ಟಿರುವುದರಿಂದ ಇಷ್ಟಲಿಂಗಧಾರಿಯಾದ ವೀರಶೈವನು ಪಾಪವರ್ಜಿತ ನಾಗಿರುತ್ತಾನೆ.

ಯೋ ಲಿಂಗಧಾರೀ ನಿಯತಾಂತರಾತ್ಮಾ ನಿತ್ಯಂ ಶಿವಾರಾಧನ ಬದ್ಧ ಚಿತ್ತಃ ।
ಸ ಧಾರಯೇತ್ಸರ್ವ ಮಲಾಪಹತ್ಯೈ ಭಸ್ಮಾಮಲಂ ಚಾರು ಯಥಾ ಪ್ರಯೋಗಂ ॥
(ಸಿ. ಶಿ. ೬.೬೨)

ಸಂಯತವಾದ ಮನಸ್ಸುಳ್ಳ ಸದಾಶಿವನ ಪೂಜೆಯಲ್ಲಿ ಆಸಕ್ತನಾದ ಲಿಂಗಧಾರಿಯಾದ ವೀರಶೈವನು ತನ್ನ ಸರ್ವ ದೋಷಗಳ ನಿವೃತ್ತಿಗಾಗಿ ಶಾಸ್ತ್ರೋಕ್ತ ಪದ್ಧತಿಯಂತೆ ನಿರ್ಮಲವಾದ ಭಸ್ಮವನ್ನು ಸುಂದರವಾಗಿ ಧರಿಸಿಕೊಳ್ಳಬೇಕು.

ವೀರಶೈವ ಮೂಲ ಸ್ತ್ರೋತ್ರಗಳು ವೇದಾಗಮಗಳು :

ವೀರಶೈವ ಧರ್ಮದಲ್ಲಿ ಆಚರಿಸಲ್ಪಡುತ್ತಿರುವ ಇಷ್ಟಲಿಂಗಧಾರಣೆ ಹಾಗೂ ಅದರ ಪೂಜಾದಿಗಳನ್ನು ಪ್ರತಿಪಾದಿಸುವ ಅತ್ಯಂತ ಪ್ರಾಚೀನವಾದ ಸಾಹಿತ್ಯ ಯಾವುದು ? ಎಂದಿನಿಂದ ಇದು ಪ್ರಾರಂಭವಾಯಿತು ? ಎಂಬ ವಿಷಯದಲ್ಲಿ ನಿಷ್ಪಕ್ಷ ಬುದ್ಧಿ ಇಲ್ಲದ ಪರಿಪಕ್ವ ಜ್ಞಾನವಿರದ ವೇದಾಗಮಗಳನ್ನು ಕಣ್ಣಿನಿಂದಲೂ ಸಹ ನೋಡದೇ ಇರುವ ಆದರೂ ತಮ್ಮನ್ನು ತಾವೇ ವಿದ್ವಾಂಸರೆಂದು ತಿಳಿದುಕೊಂಡು ಬಹಳಷ್ಟು ಜನ ಪ್ರವಚನ ಕಾರರು ಏನೇನೋ ತಪ್ಪು ಮಾತುಗಳನ್ನು ಹೇಳಿ ಸಮಾಜವನ್ನು ಭ್ರಾಂತಗೊಳಿಸುತ್ತ ಲಿದ್ದಾರಲ್ಲದೇ ಅಸತ್ಯ ಸಾಧನೆಗಾಗಿ ಶಾರದೆಯ ದುರುಪಯೋಗವನ್ನು ಮಾಡಿಕೊಂಡು ಹೇರಳವಾದ ಸುಳ್ಳುಸಾಹಿತ್ಯವನ್ನೇ ರಚಿಸಿ, ತಾವು ಅಸತ್ಯ ಮಾರ್ಗದಲ್ಲಿ ನಡೆಯುವುದರ ಜೊತೆಗೆ ಬಹಳಷ್ಟು ಜನರನ್ನು ಅಸತ್ಯ ಮಾರ್ಗದಲ್ಲಿ ನಡೆಸುತ್ತಲಿದ್ದಾರೆ. ಕಾರಣ ಜನಸಾಮಾನ್ಯರು ಈ ವಿಷಯದಲ್ಲಿ ಜಾಗರೂಕರಾಗಿರಬೇಕು.

ಭಾರತೀಯ ಸಂಸ್ಕೃತಿಗೆ ಮೂಲ ಸಾಹಿತ್ಯ ಸಂಪತ್ತೆಂದರೆ ವೇದಾಗಮಗಳು ಇವೆರಡೂ ಜಗತ್ತಿನ ಆದಿ ಗುರುವಾದ ಶಿವನಿಂದಲೇ ಪ್ರಾಪ್ತವಾಗಿವೆ–

ಸದ್ಯೋಜಾತೇನ ಋಗ್ವೇದಂ ವಾಮದೇವೇನ ಯಾಜುಷಂ ।
ಅಘೋರೇಣ ತಥಾಸಾಮ ಪುರುಷೇಣತ್ವಥರ್ವಣಂ ॥

ಈಶಾನೇನ ಮುಖೇನೈವ ಕಾಮಿಕಾದ್ಯಾಗಮಾಸ್ತಥಾ ।
ಜನಯಾಮಾಸ ವಿಶ್ವೇಶಃ ಸರ್ವಸಿದ್ಧಿ ಪ್ರದಾಯಕಃ ॥

(ಬ್ರ.ಸೂ. ಶ್ರೀಕರಭಾಷ್ಯ ೧–೧–೩)

ಶಿವನ ಸದ್ಯೋಜಾತ ಮುಖದಿಂದ ಋಗ್ವೇದ, ವಾಮದೇವ ಮುಖದಿಂದ ಯಜುರ್ವೇದ, ಅಘೋರ ಮುಖದಿಂದ ಸಾಮವೇದ, ತತ್ಪುರುಷ ಮುಖದಿಂದ ಅಥರ್ವಣವೇದ ಹಾಗೂ ಈಶಾನ ಮುಖದಿಂದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳು ಪ್ರಾದುರ್ಭೂತಗಳಾದವೆಂದು ಅನೇಕ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ.

ಭಾರತೀಯ ಎಲ್ಲ ಧರ್ಮ–ದರ್ಶನಗಳಿಗೆ ಈ ವೇದಾಗಮಗಳೇ ಮೂಲ ಸ್ರೋತಗಳು. ಪ್ರಾಚೀನಾಚಾರ್ಯರಲ್ಲಿ ಕೆಲವರು ವೇದಗಳನ್ನೇ ಪ್ರಧಾನವಾಗಿ ಇಟ್ಟುಕೊಂಡು ತಮ್ಮ ಧರ್ಮ ಗ್ರಂಥಗಳನ್ನು ನಿರ್ಮಾಣ ಮಾಡಿದರೆ ಮತ್ತೆ ಕೆಲವರು ಆಗಮಗಳನ್ನೇ ಮುಖ್ಯ ಮಾಡಿಕೊಂಡು ಧರ್ಮಗ್ರಂಥಗಳನ್ನು ರಚಿಸಿರುವದುಂಟು. ಆದರೆ ವೀರಶೈವ ಮಹಾ ಮತಸ್ಥಾಪನಾಚಾರ್ಯರಾದ ಪಂಚಾಚಾರ್ಯರಲ್ಲೊಬ್ಬರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ರೀ ಅಗಸ್ತ್ಯ ಮಹರ್ಷಿಯನ್ನು ಕುರಿತು

ಗ್ರಂಥಾರಂಭದಲ್ಲಿ–

ವೇದಧರ್ಮಾಭಿಧಾಯಿತ್ವಾತ್ ಸಿದ್ಧಾಂತಾಖ್ಯಃ ಶಿವಾಗಮಃ।
ವೇದಬಾಹ್ಯವಿರೋಧಿತ್ವಾದ್ವೇದ ಸಂಮತ ಉಚ್ಯತೇ ॥

ವೇದ ಸಿದ್ಧಾಂತಯೋರೈಕ್ಯಮೇಕಾರ್ಥ ಪ್ರತಿಪಾದನಾತ್।
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ ॥

(ಸಿ. ಶಿ. ೫–೧೨, ೧೩)

ಅಂದರೆ ನಾಲ್ಕು ವೇದಗಳಾಗಲಿ ಸಿದ್ಧಾಂತವೆಂಬ ಹೆಸರಿನ ಇಪ್ಪತ್ತೆಂಟು ಶಿವಾಗಮಗಳಾಗಲಿ, ಪ್ರತಿಪಾದಿಸುವ ಮೂಲತತ್ತ್ವವು ಒಂದೇ ಆಗಿರುವುದರಿಂದ ವಿದ್ವಾಂಸರು ಎರಡನ್ನೂ ಸಮಾನಗಳಾದ ಪ್ರಾಮಾಣ್ಯ ಗ್ರಂಥಗಳೆಂದು ಸ್ವೀಕರಿಸಬೇಕು ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಅಲ್ಲದೇ–

ಮದದ್ವೈತಪರಂ ಶಾಸ್ತ್ರಂ ವೇದವೇದಾಂತ ಸಮ್ಮತಂ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ ॥

(ಸಿ. ಶಿ. ೩–೭೦)

ಅಂದರೆ ಹೇ ರೇಣುಕಗಣಾಧೀಶ್ವರನೇ ! ವೇದ–ಆಗಮ–ಉಪನಿಷತ್ ಸಮ್ಮತವಾದ ಶಿವಾದ್ವೈತ (ವೀರಶೈವ) ಸಿದ್ಧಾಂತವನ್ನು ಭೂಲೋಕದಲ್ಲಿ ಪ್ರತಿಷ್ಠಾಪಿಸು ಎಂಬುದಾಗಿ ಅವರಿಗೆ ಶಿವನ ಆದೇಶವಿದ್ದ ಕಾರಣದಿಂದಲೂ, ಪೂಜ್ಯರಾದ ಶ್ರೀ ರೇಣುಕ ಭಗವತ್ಪಾದರು ವೇದಾಗಮಸಮ್ಮತವಾದ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಆದ್ದರಿಂದ ವೀರಶೈವ ಸಿದ್ಧಾಂತದ ಮೂಲ ಸ್ರೋತಗಳೆಂದರೆ ವೇದಾಗಮಗಳೇ.

**ಸಿದ್ಧಾಂತ ಶಿಖಾಮಣಿಯ ಮೂಲ ಸ್ರೋತಗಳು ವೇದಾಗಮ ಪುರಾಣಗಳು :**

ಈ ವೇದಾಗಮಗಳನ್ನೇ ಆಧಾರವಾಗಿ ಇಟ್ಟು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಶ್ರೀ ಅಗಸ್ತ್ಯ ಮಹರ್ಷಿಗೆ ವೀರಶೈವ ಸಿದ್ಧಾಂತವನ್ನು ಉಪದೇಶಿಸಿದರು. ಮುಂದೆ ಕಾಲಾಂತರ (ಸುಮಾರು ಕ್ರಿ. ಶ. ೮)ದಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರೆಂಬ ಮೂರ್ಧನ್ಯ ವಿದ್ವಾಂಸರು ವೇದಾಗಮ ಸಮ್ಮತವಾದ ಆ ರೇಣುಕಾಗಸ್ತ್ಯ ಸಂವಾದವನ್ನು ಇನ್ನೂ ಹೃದಯಂಗಮವಾಗಿ ಜನರಿಗೆ ಬೋಧೆಮಾಡುವದಕ್ಕಾಗಿ ವ್ಯಾಸ ಪ್ರಣೀತಗಳಾದ ವೇದಾಗಮಗಳ ಅರ್ಥವನ್ನು ಉಪಬೃಂಹಿಸುವ ಶೈವಪುರಾಣಗಳನ್ನೂ ಬಳಸಿಕೊಂಡು ಈ ಸಿದ್ಧಾಂತ ಶಿಖಾಮಣಿಯನ್ನು ರಚಿಸಿರುತ್ತಾರೆ.

ಸಮಗ್ರ ವೀರಶೈವ ಸಿದ್ಧಾಂತಗಳನ್ನೊಳಗೊಂಡ, ಉಪಲಬ್ಧವಿರುವ ಗ್ರಂಥಗಳಲ್ಲಿಯೇ ಅತಿ ಪ್ರಾಚೀನವಾದ ವೀರಶೈವ ಏಕೈಕ ಧರ್ಮಗ್ರಂಥವೆಂದರೆ ''ಸಿದ್ಧಾಂತ ಶಿಖಾಮಣಿ''ಯು. ಅಂತೆಯೇ ''ಸರ್ವಸ್ವಂ ವೀರಶೈವಾನಾಂ ಸಕಲಾರ್ಥ ಪ್ರಕಾಶಕಂ'' (ಸಿ. ಶಿ. ೧–೨೭) ಎಂಬ ವಿಶೇಷಗಳು ಇದಕ್ಕೆ ಪ್ರಾಪ್ತವಾಗಿವೆ. ಈ ಗ್ರಂಥಕ್ಕೆ ಮೂಲ

ಆಕರಗಳೆಂದರೆ ವೇದ, ಆಗಮ ಮತ್ತು ಶೈವಪುರಾಣಗಳೆಂಬುದು–

ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಂ ।
ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿತು ॥
ವೇದಮಾರ್ಗಾವಿರೋಧೇನ ವಿಶಿಷ್ಟಾಚಾರಸಿದ್ಧಯೇ ।
ಅಸನ್ಮಾರ್ಗನಿರಾಸಾಯ ಪ್ರಮೋದಾಯ ವಿವೇಕಿನಾಂ ॥

(ಸಿ. ಶಿ. ೧–೨೫, ೨೬)

ಎಂಬ ಶ್ರೀ ಶಿವಯೋಗಿ ಶಿವಾಚಾರ್ಯರ ಈ ಪ್ರತಿಜ್ಞಾವಾಕ್ಯಗಳಿಂದ ತಿಳಿದುಬರುತ್ತದೆ.

ಹೀಗೆ ವೀರಶೈವ ಧರ್ಮದ ಪೂರ್ವಾಪರ ಐತಿಹ್ಯವನ್ನವಲೋಕಿಸಿದ್ದಾದರೆ, ವೀರಶೈವ ಧರ್ಮದರ್ಶನಗಳು ''ಪುರಾದೇವೇನ ಕಥಿತಂ ದೇವ್ಯೈತನ್ನಂದನಾಯಚ'' (ಸಿ. ಶಿ. ೧–೨೮) ಈ ವಾಕ್ಯ ಪ್ರಮಾಣದಂತೆ ಆದಿಯಲ್ಲಿ ಶಿವನಿಂದ ಪಾರ್ವತಿ ಹಾಗೂ ವೀರ ನಂದ್ಯಾದಿಗಣಪುಂಗವರಿಗೆಲ್ಲ ಉಪದೇಶಿಸಲ್ಪಟ್ಟವು.

ತತ್ಸಂಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ ।
ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃ ಕ್ಷಿತೌ ॥

(ಸಿ. ಶಿ. ೧–೨೯)

ಮುಂದೆ ಆ ಶಿವಗಣರಲ್ಲಿಯೇ ಅತ್ಯಂತ ಪ್ರಸಿದ್ಧರಾದ ಶ್ರೀ ರೇಣುಕ ಗಣಾಧೀಶ್ವರರು ವೀರಶೈವ ಸಿದ್ಧಾಂತವೆಂಬ ಜ್ಞಾನಗಂಗೆಯನ್ನು ಪರಶಿವನ ಅಪ್ಪಣೆಯ ಮೇರೆಗೆ ಭೂಲೋಕದವರೆಗೆ ತೆಗೆದುಕೊಂಡು ಬಂದು ಪ್ರಥಮವಾಗಿ ಶ್ರೀ ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದರು–ಭಗೀರಥನನ್ನು ನಿಮಿತ್ತ ಮಾಡಿಕೊಂಡು ದೇವಲೋಕದಿಂದ ಆಗಮಿಸಿದ ಗಂಗೆಯು ಸಗರನ ಮಕ್ಕಳನ್ನು ಉದ್ಧಾರಮಾಡಿ ಅಂದಿನಿಂದ ಇಂದಿನವರೆಗೆ ಅವಿಚ್ಛಿನ್ನ ಧಾರೆಯಿಂದ ಪ್ರವಹಿಸುತ್ತ ತನ್ನಲ್ಲಿ ಮಿಂದವರನ್ನೆಲ್ಲ ಪಾವನಗೊಳಿಸುತ್ತಿರುವಂತೆ ಅಗಸ್ತ್ಯರನ್ನು ನಿಮಿತ್ತಮಾಡಿಕೊಂಡು ಶ್ರೀ ಜಗದ್ಗುರು ರೇಣುಕ ಭಗವತ್ಪಾದರಿಂದ ಭೂಲೋಕಕ್ಕೆ ಬಂದ ವೀರಶೈವ ಸಿದ್ಧಾಂತವೆಂಬ ಜ್ಞಾನಗಂಗೆಯು ಅನಾದಿಕಾಲದಿಂದ ಇಂದಿನವರೆಗೆ ಅವಿಚ್ಛಿನ್ನ ಧಾರೆಯಿಂದ ಪ್ರವಹಿಸುತ್ತಿದೆ. ಈ ಪ್ರವಾಹದಲ್ಲಿ ಅನೇಕ ಮಹರ್ಷಿಗಳು ಮಿಂದು ತಮ್ಮ ಪುರಾಣಾದಿ ಕೃತಿಗಳಲ್ಲಿ ವೀರಶೈವ ಧರ್ಮದ ತತ್ತ್ವಗಳನ್ನು ಪ್ರಸಂಗಾನುಸಾರವಾಗಿ ಪ್ರತಿಪಾದಿಸಿದ್ದಾರೆ. ಆಮೇಲೆ ಶ್ರೀ ದೇವರ ದಾಸಿಮಾರ್ಯ ಹಾಗೂ ಅವರ ನಂತರದಲ್ಲಿ ಆಗಿಹೋದ ಶ್ರೀ ಬಸವೇಶ್ವರ, ಅಕ್ಕಮಹಾದೇವಿ ಮುಂತಾದ ಶರಣರು ಇದೇ ಮಹಾ ಪ್ರವಾಹದಲ್ಲಿ ಮಿಂದು ಮಡಿಯಾಗಿ ವೇದ, ಆಗಮ, ಪುರಾಣ ಮತ್ತು ಸಿದ್ಧಾಂತ ಶಿಖಾಮಣಿಯಲ್ಲಿಯ ಸಂಸ್ಕೃತ ಭಾಷೆಯ ವೀರಶೈವ ಸಿದ್ಧಾಂತವನ್ನು ತಾವು ಉಂಡು ಜೀರ್ಣಿಸಿಕೊಂಡು ಅದನ್ನೇ ಜನಸಾಮಾನ್ಯರಿಗೆ ತಿಳಿಸಲೋಸುಗ ಜನರಾಡುವ ಭಾಷೆಯಲ್ಲಿ ವಚನರೂಪವಾಗಿ ಬರೆದಿಟ್ಟಿದ್ದಾರೆ. ಕರ್ನಾಟಕದಲ್ಲಿ ಇದೊಂದು ವಿಪುಲವಾದ ಸಾಹಿತ್ಯವಾಗಿದೆ. ಶರಣರ ವಚನಗಳಿಗೆ ಸಂಸ್ಕೃತ ಸಾಹಿತ್ಯವು ಆಧಾರವಾಗಿತ್ತೆಂಬ ಬಗ್ಗೆ ಅವರ ವಚನಗಳಲ್ಲಿ ಬರುವ ಸಂಸ್ಕೃತ ಶ್ಲೋಕಗಳೇ ಪ್ರತ್ಯಕ್ಷ ಪ್ರಮಾಣಗಳು. ಇಂದು ನೂತನವಾಗಿ ವೀರಶೈವ ಸಾಹಿತ್ಯವನ್ನು ರಚನೆ

ಮಾಡುವವರಿಗೆ ವೇದಾಗಮಗಳನ್ನೇ ಮೊದಲು ಮಾಡಿಕೊಂಡು ವಚನ ಸಾಹಿತ್ಯದವರೆಗೆ ಇರುವ ಸಮಸ್ತ ವಾಙ್ಮಯ ಮೂಲ ಆಕಾರವಾಗಿರುವುದು. ಇದೊಂದು ಹೀಗೆಯೇ ನಡೆಯುವ ಅವಿಚ್ಛಿನ್ನ ಪರಂಪರೆಯು ಪ್ರಾಚೀನ ವೀರಶೈವ ಸಂಸ್ಕೃತ ಸಾಹಿತ್ಯವನ್ನು ಓದದೇ ಕೇವಲ ವಚನಗಳನ್ನು ಓದಿ ಅವುಗಳ ಅರ್ಥವನ್ನು ಮಾಡಲು ಹೊರಟರೆ ಅಪಾರ್ಥವಾಗದೆ ಇರದು.

ಹೀಗೆ ಕೂಲಂಕುಷವಾಗಿ ವಿಚಾರಮಾಡಿದರೆ ಶರಣರ ವಚನಗಳಿಗೆ ವೇದ, ಆಗಮ, ಪುರಾಣ ಮತ್ತು ಸಿದ್ಧಾಂತ ಶಿಖಾಮಣಿಗಳು ಮೂಲ ಆಕರಗಳು. ಸಿದ್ಧಾಂತ ಶಿಖಾಮಣಿಗೆ ವೇದ, ಆಗಮ ಹಾಗೂ ಶೈವ ಪುರಾಣಗಳು ಮೂಲ ಆಕರಗಳು. ಶೈವ ಪುರಾಣಗಳಿಗೆ ವೇದಾಗಮಗಳು ಮೂಲ ಆಕರಗಳು. ಈ ರೀತಿಯಾಗಿ ವೀರಶೈವ ಜ್ಞಾನ ಪರಂಪರೆಯನ್ನು ವಿಚಾರ ಮಾಡಲಾಗಿ ವೇದಾಗಮಗಳೇ ಸರ್ವಕ್ಕೂ ಮೂಲ ಕಾರಣಗಳೆಂಬುದು ಸ್ಪಷ್ಟವಾಗುತ್ತದೆ.

ಅಂತೆಯೇ ಸಿದ್ಧಾಂತ ಶಿಖಾಮಣಿ ಗ್ರಂಥಕಾರರಾದ ಶ್ರೀ ಶಿವಯೋಗಿ ಶಿವಾಚಾರ್ಯರು ವೀರಶೈವರ ಈ ಇಷ್ಟಲಿಂಗಧಾರಣ ಸಿದ್ಧಾಂತವು ವೇದಾಗಮ ಪುರಾಣ ಪ್ರಸಿದ್ಧವಾದದ್ದು ಎಂಬುದನ್ನು–

ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥ (ಸಿ. ಶಿ. ೬.೫೭)

ಈ ಶ್ಲೋಕದಲ್ಲಿ ಸಾಮಾನ್ಯವಾಗಿ ತಿಳಿಸಿ ಮುಂದಿನ ಶ್ಲೋಕಗಳಲ್ಲಿ ವೇದಗಳ ಹೆಸರು ಮತ್ತು ಅವುಗಳ ಮಂತ್ರಗಳನ್ನು ಹಾಗೂ ವೇದದ ಮಂತ್ರಾರ್ಥವನ್ನು ಉಪಬ್ರಂಹಿಸುವ ಪುರಾಣ ವಾಕ್ಯಗಳನ್ನು ಉದಾಹರಿಸಿ ಸ್ಪಷ್ಟವಾಗಿ ಸಮರ್ಥಿಸಿದ್ದಾರೆ. ಸದ್ಯಃ ಇಷ್ಟಲಿಂಗಧಾರಣ ಪರಗಳಾದ ವೇದ, ಶಾಸ್ತ್ರ, ಪುರಾಣ ಹಾಗೂ ಆಗಮಗಳ ವಾಕ್ಯಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸೋಣ.

**ವೇದಗಳು ಮತ್ತು ವೇದಸಮ್ಮತ ಲಿಂಗಧಾರಣೆ :**

''ವಿದ್'' ಎಂಬ ಧಾತುವಿನಿಂದ ''ವೇದ'' ಶಬ್ದವು ನಿಷ್ಪನ್ನವಾಗಿದೆ. ''ವೇದ'' ಅಂದರೆ ''ತಿಳಿ'' ಎಂದರ್ಥ. ಲೌಕಿಕ ಹಾಗೂ ಪಾರಲೌಕಿಕ ಸಕಲ ವ್ಯವಹಾರಗಳನ್ನು ತಿಳಿಯಪಡಿಸುವ ಅಪಾರ ಜ್ಞಾನರಾಶಿಯೇ ವೇದವು. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದವೆಂಬುದಾಗಿ ವೇದಗಳು ನಾಲ್ಕು ಪ್ರಕಾರಗಳಾಗಿರುತ್ತವೆ. ಇವುಗಳಲ್ಲಿ ಮೊದಲಿನ ಮೂರು ವೇದಗಳಿಗೆ ''ತ್ರಯೀ'' ಎಂತಲೂ ಕರೆಯುತ್ತಾರೆ. ಈ ವೇದಗಳಲ್ಲಿ ಸಂಹಿತಾ, ಬ್ರಾಹ್ಮಣ, ಅರಣ್ಯಕ ಮತ್ತು ಉಪನಿಷತ್ ಎಂಬುದಾಗಿ ಭಾಗಗಳಿವೆ. ಋಗ್ವೇದದಲ್ಲಿ ಇಪ್ಪತ್ತೊಂದು ಶಾಖೆಗಳು, ಶುಕ್ಲ–ಕೃಷ್ಣ ಯಜುರ್ವೇದಗಳಲ್ಲಿ ಒಟ್ಟು ಒಂದನೂರಾ ಒಂದು ಶಾಖೆಗಳು ಸಾಮವೇದದಲ್ಲಿ ಒಂದು ಸಾವಿರದ ಶಾಖೆಗಳು ಮತ್ತು ಅಥರ್ವಣವೇದದಲ್ಲಿ ಒಂಭತ್ತು ಶಾಖೆಗಳು ಹೀಗೆ ಒಟ್ಟು ಒಂದು ಸಾವಿರದಾ ಒಂದುನೂರಾ ಮೂವತ್ತೊಂದು ಶಾಖೆಗಳಿರುವದಾಗಿ ವೇದ ವಿದ್ವಾಂಸರ ಹೇಳಿಕೆ. ಒಂದೊಂದು ಶಾಖೆಗೆ ಒಂದೊಂದು ಉಪನಿಷತ್ತಿನಂತೆ ೧೧೩೧

ಉಪನಿಷತ್ತುಗಳಿರುವದಾಗಿಯೂ ತಿಳಿದುಬರುತ್ತದೆ. ಇವುಗಳಲ್ಲಿ ಅನೇಕ ಉಪನಿಷತ್ತುಗಳು ಪ್ರಕಟವಾಗಿದ್ದರೂ ಇನ್ನೂ ಪ್ರಕಟವಾಗಬೇಕಾದ ಉಪನಿಷತ್ತುಗಳು ಬಹಳ ಇವೆ.

ವೇದಗಳ ಅನೇಕ ಮಂತ್ರಗಳಿಗೆ ವೀರಶೈವ ಮಹಾಮತಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ವೀರಶೈವ ಸಿದ್ಧಾಂತ ಪರಗಳಾದ ಭಾಷ್ಯಗಳನ್ನು ಬರೆದಿರುವದಾಗಿ ಶ್ರೀ ವೃಷಭ ಪಂಡಿತಾರಾಧ್ಯರಿಂದ ಬರೆಯಲ್ಪಟ್ಟ ಮಹಾನಾರಾಯಣೋಪನಿಷತ್ತಿನ ಹನ್ನೊಂದನೇ ಅನುವಾದ– ''ರೇವಣಸಿದ್ಧ ಮರುಳಸಿದ್ಧೈಕೋರಾಮಸಿದ್ಧ ಪಂಡಿತಾರಾಧ್ಯಾದಯಃ ಸಹಸ್ರಶೀರ್ಷಂ ದೇವಮಿತ್ಯಾದಿ ಪರಶಿವಧರ್ಮ ಪ್ರತಿಪಾದಕ ವಾಕ್ಯಾನಾಂ ನಾರಾಯಣಾತ್ಮಕ ವಿಷ್ಣುಪ್ರತಿಪಾದಕತ್ವೇಽಪಿ ಏತದನು ವಾಕಸ್ಯ ಪರಶಿವತ್ವೇ ನ ಕಶ್ಚಿದಪಿ ದೋಷಃ। ಶಿವಸ್ಯ ಶಕ್ತಿರ್ವಿನಿಯೋಗಕಾಲೇ ಚತುರ್ವಿಧಾಽಭೂಚ್ಛಿವ ಸತ್ಪ್ರಸಾದಾತ್ । ಭೋಗೆ ಭವಾನೀ ಪುರುಷೇಷು ವಿಷ್ಣುಃ ಕ್ರೋಧೇಚ ಕಾಲೀ ಸಮರೇ ಚ ದುರ್ಗಾ ॥ ಇತಿ ಶ್ರುತೌ.........ಶಿವಸ್ಯ ಶಕ್ತತ್ವೇನ ವಿಷ್ಣೋಃ ಶಕ್ತಿತ್ವೇನ ಸ್ಪಷ್ಟಮುಪದಿಷ್ಟತ್ವಾತ್, ಶಕ್ತಿ ಶಕ್ತಿ ಮತ್ತೋರರಭೇದ ನಿಯಮಾತ್ ಶಕ್ತಧರ್ಮಾಃ ಶಕ್ತೌ ಸಂಭವಂತೀತಿ ನ್ಯಾಯಾತ್........ಶಕ್ತ ಶಕ್ತಿತ್ವೇನ ತಯೋರಭೇದ ವ್ಯಪದೇಶಾಚ್ಚ'' ಇತಿ ವದಂತಿ। ಈ ಭಾಷ್ಯಖಂಡದಿಂದ ತಿಳಿದು ಬರುತ್ತದೆ. ಹೀಗೆ ಅನೇಕ ಕಡೆ ಆಚಾರ್ಯರ ಹೆಸರುಗಳು ದೊರೆಯುತ್ತವೆ. ಆದರೆ ಸಂಪೂರ್ಣ ಭಾಷ್ಯಗಳು ದೊರೆತಿಲ್ಲ ಆ ದಿಶೆಯಲ್ಲಿ ಇನ್ನೂ ಸಂಶೋಧನೆಗಳು ನಡೆಯಬೇಕಾದುದು ಅತ್ಯಾವಶ್ಯಕ.

ಇನ್ನು ಮೈಸೂರ ದೊಡ್ಡಕೆರೆಯ ಹೊಸಮಠದ ಶ್ರೀ ಶಿವಪೂಜಾ ಶಿವಲಿಂಗ ಶಿವಯೋಗೀಂದ್ರ ಮಹಾಸ್ವಾಮಿಗಳು ವೇದಮಂತ್ರಗಳಿಗೆ ವೀರಶೈವ ಸಿದ್ಧಾಂತ ಪರವಾದ ಭಾಷ್ಯವನ್ನು ಬರೆದಿದ್ದಾರೆ. ಅದು ''ಶ್ರುತಿಸಾರ ಭಾಷ್ಯಂ'' ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಈ ಪುಸ್ತಕವು ೧೯೧೩ರಲ್ಲಿ ಪ್ರಥಮವಾಗಿ ಮೈಸೂರಿನಿಂದ ಮುದ್ರಣ ಗೊಂಡಿದೆ. ವೇದ, ವೇದಾಂತ, ಆಗಮ, ತರ್ಕ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಪರಿಣತರಾದ ಇವರು ನಾಲ್ಕೂ ವೇದದ ಸುಮಾರು ೭೫ ಮುಖ್ಯ ಮಂತ್ರಗಳ ಮೇಲೆ ಇಷ್ಟಲಿಂಗ ಧಾರಣ, ಲಿಂಗಾಂಗ ಸಾಮರಸ್ಯ, ಶಕ್ತಿವಿಶಿಷ್ಟಾದ್ವೈತ, ಶಿವಜಗನ್ಮಯತ್ವ ಹಾಗೂ ಅಷ್ಟ ಮೂರ್ತಿ ಸ್ವರೂಪ ಪರವಾದ ಭಾಷ್ಯವನ್ನು ರಚಿಸಿರುತ್ತಾರೆ.

ಅದೇ ಪ್ರಕಾರ ಶ್ರೀ ನಂದಿಕೇಶ್ವರ ಶಿವಾಚಾರ್ಯರೆಂಬ ಉದ್ದಾಮ ವಿದ್ವಾಂಸರು ''ಲಿಂಗಧಾರಣ ಚಂದ್ರಿಕಾ'' ಎಂಬ ಗ್ರಂಥವನ್ನು ರಚಿಸಿರುತ್ತಾರೆ. ಇದರಲ್ಲಿ ಅಂತರ್ಲಿಂಗ ಧಾರಣೆ ಹಾಗೂ ಬಹಿರ್ಲಿಂಗ ಧಾರಣೆಗಳು ವೈದಿಕಗಳೆಂಬುದನ್ನು ವೇದಮಂತ್ರ ಹಾಗೂ ಪುರಾಣಗಳ ಉಪಬೃಂಹಣ ವಾಕ್ಯಗಳಿಂದಲೂ ಶಾಸ್ತ್ರೀಯವಾಗಿ ಸಿದ್ಧಮಾಡಿದ್ದಾರೆ. ಈ ಗ್ರಂಥಕ್ಕೆ ಕಾಶಿಯಲ್ಲಿ ಸಾಕ್ಷಾತ್ ವಿಶ್ವನಾಥನೆಂದು ಪಂಡಿತರಲ್ಲಿ ಮನ್ನಣೆಯನ್ನು ಪಡೆದ ಮಹಾಮಹೋಪಾಧ್ಯಾಯ ಪಂ. ಶಿವಕುಮಾರ ಶಾಸ್ತ್ರಿಗಳು ''ಶರತ್'' ಎಂಬ ಸಂಸ್ಕೃತ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದು ೧೯೦೫ ನೇ ಇಸ್ವಿಯಲ್ಲಿ ಕಾಶೀ ಜಂಗಮವಾಡಿಮಠ ಪ್ರಥಮವಾಗಿ ಮುದ್ರಣಗೊಂಡಿತ್ತು, ಆಸ್ಥಾನ ವಿದ್ವಾನ್ ಪಂಡಿತರತ್ನಂ ಶಿರ್ಶಿ ಗುರುಶಾಂತ ಶಾಸ್ತ್ರಿಗಳು ಅದನ್ನೇ ಕನ್ನಡಕ್ಕೆ ಅನುವಾದಿಸಿ ೧೯೪೧ ರಲ್ಲಿ ಬೆಂಗಳೂರಿನಲ್ಲಿ

ಮುದ್ರಿಸಿದ್ದರು. ಸದ್ಯಃ ಪುನಃ ಕಾಶೀ ಜಂಗಮವಾಡಿ ಮಠದಿಂದಲೇ ೧೯೮೮ ರಲ್ಲಿ ದ್ವಿತೀಯ ಮುದ್ರಣ ವಾಗಿದೆ. ಶಿರ್ಶಿ ಗುರುಶಾಂತ ಶಾಸ್ತ್ರಿಗಳ ಕನ್ನಡ ವ್ಯಾಖ್ಯಾನವನ್ನೇ ಹಿಂದೀ ಭಾಷೆಗೆ ಅನುವಾದಿಸಿ ಇದರಲ್ಲಿ ಅಳವಡಿಸಲಾಗಿದೆ. ಲಿಂಗಧಾರಣೆಯ ವಿಷಯದಲ್ಲಿ ಸದ್ಯಃ ಉಪಲಬ್ಧವಿರುವ ಗ್ರಂಥಗಳಲ್ಲಿ ಇದೊಂದು ಅಮೂಲ್ಯ ಕೃತಿಯಾಗಿದೆ.

ಇದರಂತೆ ಶ್ರೀ ಭವಾನಿಶಂಕರರಾಧ್ಯರಿಂದ ವಿರಚಿತವಾದ ''ಲಿಂಗಧಾರಣ ದೀಪಿಕಾ'' ಎಂಬ ಗ್ರಂಥವಾದರೂ ವೈದಿಕಮಂತ್ರಗಳಿಂದ ಲಿಂಗಧಾರಣ ಸಿದ್ಧಾಂತವನ್ನು ಸಮರ್ಥಿಸುವ ಶ್ರೇಷ್ಠ ಕೃತಿ ಎಂಬುದು ಪಂ. ಕಾಶೀನಾಥ ಶಾಸ್ತ್ರಿಗಳ ''ವೀರಶೈವರತ್ನ'' ದಿಂದ ತಿಳಿದುಬರುತ್ತದೆ.

ಇದೇ ಪ್ರಕಾರ ಆರಾಧ್ಯ ವೀರೇಶ್ವರಶಾಸ್ತ್ರಿ ಊರ್ಫ ಹುಚ್ಚವೀರಶಾಸ್ತ್ರಿಗಳಿಂದ ವಿರಚಿತವಾದ ''ವೀರಶೈವಾನ್ವಯಚಂದ್ರಿಕಾ'' ಎಂಬ ಗ್ರಂಥವು ೧೯೮೦ ನೇ ಇಸ್ವಿಯಲ್ಲಿ ಬೆಂಗಳೂರಿನಿಂದ ಪ್ರಕಾಶಿತವಾಗಿದೆ. ಇದರಲ್ಲಿಯೂ ವೇದಮಂತ್ರಗಳ ಆಧಾರದಿಂದ ಲಿಂಗಧಾರಣ ಸಿದ್ಧಾಂತವನ್ನು ಸಮರ್ಥಿಸಲಾಗಿದೆ.

ಹಾಗೆಯೇ ಆಂಧ್ರಪ್ರದೇಶದ ಇವಟೂರಿ ನಂದಿಕೇಶ್ವರಶಾಸ್ತ್ರಿಗಳೆಂಬ ಪ್ರಕಾಂಡ ಪಂಡಿತರು ''ಶ್ರೀ ವೀರಶೈವಾಷ್ಟಾವರಣ ಪ್ರಮಾಣಾಷ್ಟಕಾ ಭರಣಂ'' ಎಂಬ ಗ್ರಂಥವನ್ನು ರಚಿಸಿರುತ್ತಾರೆ. ಇದರಲ್ಲಿಯೂ ''ಶಿವಲಿಂಗ ಪ್ರಕರಣ''ದಲ್ಲಿ ವೇದ, ಸ್ಮೃತಿ, ಪುರಾಣ, ಆಗಮ ಇತಿಹಾಸ ಮತ್ತು ಕಲ್ಪಸೂತ್ರ ಮುಂತಾದ ಎಂಟು ಪ್ರಮಾಣಗಳಿಂದ ಇಷ್ಟಲಿಂಗಧಾರಣ ಸಿದ್ಧಾಂತವನ್ನು ಬಹು ಸ್ವಾರಸ್ಯವಾಗಿ ಪ್ರತಿಪಾದಿಸಿದ್ದಾರೆ. ಇದು ಸಂಸ್ಕೃತ ಗ್ರಂಥವಾದರೂ ತೆಲುಗು ಲಿಪಿಯಲ್ಲಿದೆ. ಅದನ್ನು ದೇವನಾಗರಿ ಲಿಪಿಯಲ್ಲಿ ಪರಿವರ್ತಿಸಿ ಮುದ್ರಿಸುವ ಯೋಜನೆಯನ್ನು ಹಾಕಿಕೊಂಡಿದ್ದೇವೆ.

ಹೀಗೆ ಅನೇಕ ಜನ ಪ್ರಾಚೀನ ವಿದ್ವಾಂಸರು ವೇದದ ಮಂತ್ರಗಳಿಂದ ಇಷ್ಟಲಿಂಗ ಧಾರಣೆಯನ್ನು ಶಾಸ್ತ್ರೀಯ ತರ್ಕ–ವಿತರ್ಕಗಳಿಂದ ಬಹು ಮನೋಹರವಾಗಿ ಪ್ರತಿಪಾದಿಸಿದ್ದಾರೆ. ಅವುಗಳು ಪಂಡಿತ ವೇದ್ಯಗಳೇ ವಿನಹ ಜನ ಸಾಮಾನ್ಯರಿಗೆ ತಿಳಿಯ ಲಾರವು. ಪಾಂಡಿತ್ಯ ಪ್ರತಿಭೆಯುಳ್ಳವರು ವಿಶೇಷವಾದ ಬುದ್ಧಿಯ ವ್ಯಾಯಾಮವನ್ನು ಅಪೇಕ್ಷಿಸುವವರು ಆ ಗ್ರಂಥಗಳನ್ನು ಅವಶ್ಯವಾಗಿ ಅವಲೋಕಿಸಿ ಮನಸ್ಸಿನ ಸಂದೇಹ ಗಳನ್ನು ದೂರ ಮಾಡಿಕೊಳ್ಳಬೇಕು.

ಪ್ರಸ್ತುತ ಇಲ್ಲಿ ಕೆಲವೊಂದು ವೇದಮಂತ್ರಗಳನ್ನು ಹಾಗೂ ಅವುಗಳ ಭಾಷ್ಯಾನು ಸಾರಿ ಅರ್ಥಗಳನ್ನು ದಿಗ್ದರ್ಶಿಸಲಾಗುವುದು–

''ನಿಧನ ಪತಯೇ ನಮಃ। ನಿಧನ ಪತಾಂತಿಕಾಯ ನಮಃ।..........ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ'' (ತೈ. ಉ. ೪–೧೬–೩೩, ೩೪) ಈ ಶ್ರುತಿಯಲ್ಲಿಯ ''ಪಾಣಿಮಂತ್ರಂ'' ಎಂಬ ಶಬ್ದಕ್ಕೆ ''ಇಷ್ಟಲಿಂಗ'' ವೆಂದರ್ಥವಾಗುವದು. ಅದು ಹೇಗೆಂದರೆ–ವೇದದ ಅರ್ಥವನ್ನು ಅಜ್ಞ ಜನರು ತಮ್ಮ ಮನಸ್ಸಿಗೆ ಬಂದಂತೆ ಮಾಡಬಾರದೆಂದು ತಿಳಿದು ವೇದಗಳನ್ನು ಸಂಹಿತೆ, ಬ್ರಾಹ್ಮಣ, ಅರಣ್ಯಕ ಮತ್ತು

ಉಪನಿಷದ್ರೂಪದಲ್ಲಿ ವಿಂಗಡಿಸಿದ ಕೃಷ್ಣದ್ವೈಪಾರಾಯನ ವ್ಯಾಸರೇ ಪುರಾಣಗಳಲ್ಲಿ ಪ್ರಸಂಗಾನುಸಾರವಾಗಿ ಅವುಗಳ ಅರ್ಥವನ್ನು ಸ್ಪಷ್ಟಪಡಿಸಿದ್ದಾರೆ. ಪ್ರಕೃತದಲ್ಲಿ ''ಪಾಣಿಮಂತ್ರಂ'' ಎಂಬ ಶಬ್ದದ ಅರ್ಥವನ್ನು–

ಮನನಾತ್ ತ್ರಾಯತೇ ಸ್ಮಾತ್ತಸ್ಮಾನ್ಮಂತ್ರೋऽಯಮೀರಿತಃ।
ವಾಚ್ಯವಾಚಕ ರೂಪೇಣ ದ್ವಿಧಾ ಮಂತ್ರಃ ಪ್ರಕೀರ್ತಿತಃ॥
ವಾಚಕೋ ವರ್ಣರೂಪಃಸ್ಯಾತ್ ವಾಚ್ಯಶ್ಚ ಪರಮಃ ಶಿವಃ।
ಮನುದೇವತಯೋರೈಕ್ಯಂ ತಸ್ಮಾದಾಹುರ್ಮಹರ್ಷಯಃ॥

(ಸ್ಕಂದಪುರಾಣ)

ಈ ರೀತಿಯಾಗಿ ಹೇಳಿದ್ದಾರೆ. ತಾತ್ಪರ್ಯವೇನೆಂದರೆ ''ಮನನಾತ್ ತ್ರಾಯತೇ ಇತಿ=ಮಂತ್ರಂ, ''ಪಾಣೌ ಮಂತ್ರಂ ಪಾಣಿಮಂತ್ರಂ'' ಎಂಬ ವ್ಯುತ್ಪತ್ತಿಯ ಮೇರೆಗೆ ಹಸ್ತಪೀಠದಲ್ಲಿ ಇರಿಸಿ ಮನನಮಾಡುವದರಿಂದ ರಕ್ಷಿಸುವ ಮಂತ್ರವೇ ಪಾಣಿಮಂತ್ರವು. ಮಂತ್ರವು ವಾಚ್ಯ ಮತ್ತು ವಾಚಕ ಭೇದದಿಂದ ಎರಡು ಬಗೆಯಾಗಿದೆ. ''ಓಂ ನಮಃ ಶಿವಾಯ'' ಎಂಬುದೇ ವಾಚಕವು. ಪರಶಿವನೇ ವಾಚ್ಯನು. ವಾಚಕವಾದ ಮಂತ್ರವು ಮುಖದಲ್ಲಿ ಇದ್ದರೆ ವಾಚ್ಯನಾದ ಪರಶಿವನು ಇಷ್ಟಲಿಂಗರೂಪದಲ್ಲಿ ಹಸ್ತಪೀಠದಲ್ಲಿ ಇರುತ್ತಾನೆ. ಷಡಕ್ಷರದ ಮಂತ್ರಕ್ಕೂ ಇಷ್ಟಲಿಂಗಕ್ಕೂ ಭೇದವಿರುವದಿಲ್ಲ. ಸಿದ್ಧಾಂತ ಸಾರಾವಳಿಯ–

ನಮಃ ಪೀಠಮಿತಿ ಪ್ರೋಕ್ತಂ ಶಿಕಾರಂ ಮಧ್ಯಮೀರಿತಂ।
ವಾಕಾರಂ ಗೋಮುಖಂ ವೃತ್ತಂ ಯಕಾರಂ ಗೋಳಕಂ ಸ್ಮೃತಂ॥
ಓಂಕಾರ ಲಿಂಗಮಾಖ್ಯಾತಂ ಷಡ್ವರ್ಣಂ ಲಿಂಗಮುಚ್ಯತೇ॥

ಈ ಶ್ಲೋಕದಲ್ಲಿ ''ನಮಃ'' ಎಂಬೆರಡಕ್ಷರಗಳೇ ಪೀಠ, ''ಶಿ'' ಎಂಬ ಅಕ್ಷರವೇ ಮಧ್ಯ ಭಾಗ, ''ವಾ'' ಅಕ್ಷರವೇ ಗೋಮುಖ, ''ಯ'' ಅಕ್ಷರವೇ ಗೋಲಕ, ''ಓಂ'' ಎಂಬ ಅಕ್ಷರವೇ ಲಿಂಗ ಹೀಗೆ ಪೀಠ, ಮಧ್ಯ, ಗೋಮುಖ, ವೃತ್ತ ಗೋಲಕಗಳೆಂಬ ಐದು ಸೂತ್ರಗಳಿಂದೊಡಗೂಡಿದ ಲಿಂಗಕ್ಕೂ ವರ್ಣಮಯವಾದ ಪಂಚಾಕ್ಷರಿ ಮಹಾ ಮಂತ್ರಕ್ಕೂ ಅಭೇದವನ್ನಂಗೀಕಾರ ಮಾಡಿದ್ದಾರೆ.

ಹೀಗೆ ವಾಚಕರೂಪವಾದ ''ಓಂ ನಮಃ ಶಿವಾಯ'' ಎಂಬ ಮಂತ್ರವನ್ನು ಬಾಯಲ್ಲಿ ಪಠಿಸುವಂತೆ ವಾಚ್ಯರೂಪವಾದ ಮಂತ್ರ (ಇಷ್ಟಲಿಂಗ)ವನ್ನು ಪಾಣಿ ಅಂದರೆ ಹಸ್ತಪೀಠದಲ್ಲಿ ಇರಿಸಿ ಮನನಮಾಡಿದರೆ ಸಾಧಕನ ಮನೋಬುದ್ಧಿಗಳ ರಕ್ಷಣೆಯಾಗುವ ಕಾರಣ ಇಷ್ಟಲಿಂಗಕ್ಕೆ ವೇದವು ''ಪಾಣಿಮಂತ್ರಂ'' ಎಂಬ ಶಬ್ದ ಪ್ರಯೋಗವನ್ನು ಮಾಡಿದೆ.

ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ।
ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ॥
ಪಾಣೌ ಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ ಗುರುಃ ಶಿವಂ।
ಯೇನಸ್ತವತಿ ತನ್ಮಂತ್ರಂ ಪಾಣಿಮಂತ್ರಂ ವದಂತಿಹಿ॥
(ಲಿಂಗಪುರಾಣ, ಉತ್ತರಭಾಗ, ೨೧ನೇ ಅಧ್ಯಾಯ ೧೦೩–೧೧೪)

ಲಿಂಗ ಪುರಾಣಗಳ ಈ ಶ್ಲೋಕಗಳಲ್ಲಿಯೂ ದೀಕ್ಷಾ ಕಾಲದಲ್ಲಿ ಸದ್ಗುರುವಿನಿಂದ ಶಿಷ್ಯನ ಪಾಣಿತಲ (ಹಸ್ತಪೀಠ)ಕ್ಕೆ ಪ್ರಾಪ್ತವಾದ ಇಷ್ಟಲಿಂಗವೇ ಪಾಣಿಮಂತ್ರ ಎಂಬುದನ್ನು ಸ್ಪಷ್ಟ ಪಡಿಸಲಾಗಿದೆ. ಕಾಂಚೀ ಪಟ್ಟಣ ನಿವಾಸಿ ಅಷ್ಟಾದಶ ಪುರಾಣೋದ್ಧಾರಕ ಪುವ್ವಾಡ ವ್ಯಂಕಟರಾಮ ಇವರು ೧೮೭೬ ನೇ ಇಸ್ವಿಯಲ್ಲಿ ಮುದ್ರಿಸಿದ ''ಲಿಂಗಪುರಾಣ''ದಲ್ಲಿ ಈ ಶ್ಲೋಕಗಳು ದೊರೆಯುತ್ತವೆ. ಇದೇ ಪ್ರಕಾರ–

ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ। (ಋಗ್ವೇದ ಅಷ್ಟಕ ೮. ಅಧ್ಯಾಯ ೧, ವರ್ಗ ೨೫) ಈ ಋಗ್ವೇದ ಮಂತ್ರವಾದರೂ ಹಸ್ತಪೀಠದ ಇಷ್ಟಲಿಂಗವನ್ನು ಪ್ರತಿಪಾದಿಸುತ್ತದೆ. ಈ ಮಂತ್ರದ ಅರ್ಥವನ್ನು ಲಿಂಗಧಾರಣ ಚಂದ್ರಿಕೆಯಲ್ಲಿ ಪಂ. ಶಿವಕುಮಾರ ಶಾಸ್ತ್ರಿಗಳು ''ಅಯಂಭಗವಾನ್–ಲಿಂಗರೂಪಃ ಸದಾಶಿವಃ, ಮೇಹಸ್ತಃ, ಮಮಹಸ್ತಗತ ಇತ್ಯರ್ಥಃ। ಅಯಮೇವ ಸದಾಶಿವಃ ಮೇ ಭಗವತ್ತರಃ ಮಮಸರ್ವೈಶ್ವರ್ಯವತ್ತರಃ।'' ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಅಂದರೆ ಲಿಂಗರೂಪವಾದೀ ಸದಾಶಿವನು ನನ್ನ ಹಸ್ತವನ್ನು ಹೊಂದಿರುವನು, ಈ ಶಿವಲಿಂಗ ಮೂರ್ತಿಯೇ ನನಗೆ ಅತಿಶಯವಾದ ಐಶ್ವರ್ಯವನ್ನು ಕೊಡುವವನು ಎಂದರ್ಥ ವಾಗುವದು. ''ಅಯಂ ಮೇ ಹಸ್ತೋ ಭಗವಾನ್'' ಎಂಬ ಮಂತ್ರದಲ್ಲಿ ಬಂದಿರುವ ಭಗವಾನ್ ಎಂಬ ಶಬ್ದಕ್ಕೆ ''ಇಷ್ಟಲಿಂಗ'' ಎಂದರ್ಥವು. ಹೇಗೆಂದರೆ– ಭಗವತ್ಪಾದವು ಇತರ ದೇವತಾ ಸಾಧಾರಣ ಶಬ್ದವಾಗಿದ್ದರೂ ಭಗವತ್ಪದದ ಸಮೀಪದಲ್ಲಿ ''ಹಸ್ತ'' ಶಬ್ದವು ಪ್ರಯುಕ್ತವಾಗಿರುವುದರಿಂದ ಹಸ್ತದಲ್ಲಿ ನಾರಾಯಣಾದಿ ಇತರ ದೇವತಾ ವಿಗ್ರಹಗಳನ್ನು ಹಿಡಿದುಕೊಂಡು ಪೂಜೆ ಮಾಡುವ ವಿಧಾನವಾಗಲಿ ಪ್ರಮಾಣವಾಗಲಿ ಕಂಡು ಬರುವದಿಲ್ಲ. ಈ ಶಿವಲಿಂಗವನ್ನೇ ಹಸ್ತಪೀಠದಲ್ಲಿ ಇರಿಸಿ ಪೂಜಿಸುವ ರೂಢಿಯೂ ಪ್ರಮಾಣವೂ ಇರುವುದರಿಂದ ಇಲ್ಲಿ ಹಸ್ತ ಶಬ್ದದ ಸಮೀಪದಲ್ಲಿ ಪ್ರಯುಕ್ತವಾದ ಭಗವತ್ ಶಬ್ದಕ್ಕೆ ಇಷ್ಟಲಿಂಗವೆಂದೇ ಅರ್ಥ ಮಾಡಬೇಕು.

ಇಲ್ಲಿ ಆಧಾರಾಧೇಯ ಭಾವದಿಂದ ಹಸ್ತಕ್ಕೂ ಇಷ್ಟಲಿಂಗಕ್ಕೂ ಸ್ವಾಭಾವಿಕವಾಗಿ ಭೇದವಿದ್ದರೂ ಆ ಲಿಂಗವು ದೇಹವಿರುವವರೆಗೆ ಎಂದೂ ಅಗಲಬಾರದೆಂಬ ನಿತ್ಯ ಸಂಬಂಧವನ್ನು ತೋರಿಸುವದಕ್ಕಾಗಿ ''ಹಸ್ತೋ ಭಗವಾನ್'' ಹಸ್ತವೇ ದೇವರೆಂದು ಅಭೇದವನ್ನು ಬೋಧಿಸಲಾಗಿದೆ. ದೀಕ್ಷಾ ಪೂರ್ವಕವಾಗಿ ಸದ್ಗುರುವಿನಿಂದ ಪ್ರಾಪ್ತವಾದ ಇಷ್ಟಲಿಂಗವು ದೇಹದಿಂದ ಅಗಲಬಾರದೆಂಬ ಕಠೋರ ನಿಯಮವನ್ನು ಆಚಾರ್ಯರು ವಿಧಿಸಿದ್ದಾರೆ. ಅಲ್ಲದೆ–

ಭೂಮೌ ಪ್ರತಿಷ್ಠಿತಂ ಲಿಂಗಂ ಪುನರ್ನೋತ್ಪಾಟ್ಯತೇ ಯಥಾ।
ದೇಹೇ ಪ್ರತಿಷ್ಠಿತಂ ಲಿಂಗ ಮಂತೇಽ ಪಿ ನ ವಿಭಜ್ಯತೇ॥

(ವಾತುಲಾಗಮ)

ಈ ಆಗಮ ವಾಕ್ಯವಾದರೂ–ಭೂಮಿಯ ಮೇಲೆ ಪ್ರತಿಷ್ಠಾಪಿಸಿದ ಲಿಂಗವನ್ನು ಹೇಗೆ ಕಿತ್ತಬಾರದೋ ಅದರಂತೆ ದೇಹದ ಮೇಲೆ ಧರಿಸಿದ ಇಷ್ಟಲಿಂಗವನ್ನಾದರೂ ಅಂತ್ಯಕಾಲ ದಲ್ಲಿಯೂ ಅಗಲಿಸಬಾರದೆಂಬ ಸಂದೇಶವನ್ನು ಕೊಡುತ್ತಿದೆ. ಹೀಗೆ ವೀರಶೈವನು ನಿತ್ಯ

ಲಿಂಗ ಸಂಬಂಧಿಯಂಬುವದನ್ನು ಪ್ರತಿಪಾದಿಸುವದಕ್ಕಾಗಿ ವೇದಮಂತ್ರವು ''ಹಸ್ತಗತಃ ಭಗವಾನ್'' ಎಂದು ಹಸ್ತಕ್ಕೂ ಇಷ್ಟಲಿಂಗಕ್ಕೂ ಭೇದವನ್ನು ನಿರೂಪಿಸದೇ ''ಹಸ್ತೋ ಭಗವಾನ್'' ಎಂಬ ಅಭೇದವನ್ನೇ ಹೇಳಿದೆ ಎಂಬ ರಹಸ್ಯಾರ್ಥವನ್ನಿಲ್ಲಿ ತಿಳಿದು ಕೊಳ್ಳಬೇಕು.

ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ ।
ವಿನ್ಯಸ್ಯ ತಲ್ಲೀನಮನಃ ಪ್ರಚಾರಃ ।
ಬಾಹ್ಯಕ್ರಿಯಾ ಸಂಕುಲನಿಃ ಸ್ಪೃಹಾತ್ಮಾ ।
ಸಂಪೂಜಯತ್ಯಂಗ ಸವೀರಶೈವಃ ॥

(ಸ್ಕಂದಪುರಾಣ, ಶಂಕರ ಸಂಹಿತಾ)

ಈ ಪುರಾಣವಾದರೂ ಹಸ್ತಪೀಠದಲ್ಲಿ ಇಷ್ಟಲಿಂಗವನ್ನು ಇಟ್ಟು ಪೂಜಿಸುವವನೇ ವೀರಶೈವನೆಂಬುದನ್ನು ತಿಳಿಯಪಡಿಸಿರುತ್ತದೆ.

ಇದೇ ಪ್ರಕಾರ ವೇದಾಂತಸಾರೋಪನಿಷತ್, ಭಕ್ತಿಯೋಗೋಪನಿಷತ್, ನಿರ್ಲೇಪೋಪನಿಷತ್, ಚಿದಂಬರೋಪನಿಷತ್, ಸಿದ್ಧಾಂತಶಿಖೋಪನಿಷತ್, ಲಿಂಗ ಧಾರಣೋಪನಿಷತ್, ಪ್ರಸಾದಜಾಬಾಲೋಪನಿಷತ್ ಮತ್ತು ವೀರಲೈಂಗ್ಯೋಪನಿಷತ್ ಮುಂತಾದ ಉಪನಿಷತ್ತುಗಳಲ್ಲಿಯೂ ಇಷ್ಟಲಿಂಗಧಾರಣ ಸಿದ್ಧಾಂತವು ಪ್ರತಿಪಾದಿ ಸಲ್ಪಟ್ಟಿದೆ. ಅಪೇಕ್ಷೆಯುಳ್ಳವರು ಆ ಗ್ರಂಥಗಳನ್ನೇ ಅಭ್ಯಸಿಸಿ ಅವಲೋಕಿಸಬೇಕು.

ಆಗಮಗಳು ಮತ್ತು ತತ್ಪ್ರತಿಪಾದಿತ ಲಿಂಗಧಾರಣೆಯು :

''ಆಪ್ತವಚನಾದಾವಿರ್ಭೂತಮರ್ಥ ವಿಶೇಷ ಸಂವೇದನಮಾಗಮಃ'' ಎಂಬುದು ''ಆಗಮ'' ಶಬ್ದದ ವ್ಯುತ್ಪತ್ತಿಯು. ಯಥಾರ್ಥ ವಕ್ತೃವಿಗೆ ಆಪ್ತಪುರುಷನೆನ್ನುತ್ತಾರೆ. ಅಂತಹ ಆಪ್ತಪುರುಷನಿಂದ ಹೊರಹೊರಟ ವಾಗ್ರೂಪ ಉಪದೇಶವೇ ಆಗಮಶಾಸ್ತ್ರವು.

ಆಗತಂ ಶಿವವಕ್ತ್ರಾತ್ತು ಗತಂಚ ಗಿರಿಜಾಮುಖೇ ।
ಮತಂ ಶ್ರೀ ವಾಸುದೇವೇನ ಆಗಮಸ್ತೇನ ಕೀರ್ತಿತಃ ॥

(ಭಾಸ್ಕರಿ ದ್ವಿ. ಭಾಗ ಪುಟ ೪೫)

ಎನ್ನುವ ವಚನ ಪ್ರಮಾಣದಂತೆ ಪರಮ ಆಪ್ತನಾದ ಪರಶಿವನ ವದನಾರವಿಂದರಿಂದ ಹೊರಹೊಮ್ಮಿ ಶ್ರೀ ಪಾರ್ವತಿಯ ಬುದ್ಧಿಯನ್ನು ಪ್ರವೇಶಿಸುವಾಗ ಅಲ್ಲಿಯೇ ಸಾಕ್ಷಿಯಾಗಿರುವ ವಾಸುದೇವನಿಂದ ಯಾವ ಶಾಸ್ತ್ರವು ಸಮ್ಮತಿಯನ್ನು ಪಡೆಯಿತೋ ಅದುವೇ ಆಗಮಶಾಸ್ತ್ರವೆಂಬ ತಾತ್ಪರ್ಯವು. ಇದು ಆಗಮ ಶಬ್ದದ ರೂಢಾರ್ಥವು. ಇನ್ನು ಯೌಗಿಕಾರ್ಥವನ್ನು ವಿಚಾರಿಸುವುದಾದರೆ– ''ಆಸಮಂತಾದ್ ಅರ್ಥಂ ಗಮಯ ತೀತಿ ಆಗಮಃ'' ಈ ವ್ಯುತ್ಪತ್ತಿಯ ಆಧಾರದಿಂದ ಸಂಪೂರ್ಣ ತತ್ತ್ವವನ್ನು ಬೋಧಿಸುವ ಶಾಸ್ತ್ರವೇ ಆಗಮ ಶಾಸ್ತ್ರವು.

''ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾದ್ ಅಭ್ಯುದಯನಿಃ ಶ್ರೇಯ ಸೋಪಾಯಾಃ ಸ ಆಗಮಃ'' (ಯೋ. ಸೂ. ೧–೭೫ ತತ್ತ್ವವೈಶಾರದೀ) ಅಂದರೆ

ಇಹಲೋಕದ ಏಳ್ಗೆ ಮತ್ತು ಪಾರಲೌಕಿಕ ಮೋಕ್ಷ ಇವೆರಡನ್ನು ಪಡೆಯುವ ಉಪಾಯಗಳು ಯಾವ ಶಾಸ್ತ್ರದಿಂದ ಜನಸಾಮಾನ್ಯರಿಗೆ ಸರಳವಾಗಿ ತಿಳಿಯುವವೋ ಅವೇ ಆಗಮ ಶಾಸ್ತ್ರಗಳೆಂಬುದಾಗಿ ಶ್ರೀ ವಾಚಸ್ಪತಿ ಮಿಶ್ರರು ಆಗಮ ಶಬ್ದದ ವ್ಯುತ್ಪತ್ತಿಯನ್ನು ಪ್ರತಿಪಾದಿಸಿ ವೇದಗಳಿಗಿಂತಲೂ ಆಗಮಗಳು ಸರಳವಾದವುಗಳು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಆಗಮಗಳಿಗೆ ''ತಂತ್ರ''ವೆಂಬ ಪರ್ಯಾಯ ನಾಮವೂ ಇದೆ. ''ತನ್ಯತೇ ವಿಸ್ತಾರ್ಯತೇ ಜ್ಞಾನಮನೇನ'' ಅಂದರೆ ಯಾವುದರ ಅಧ್ಯಯನದಿಂದ ಎಲ್ಲ ವಿಧದ ಜ್ಞಾನ ಪ್ರಾಪ್ತವಾಗುವದೋ ಅದೇ ತಂತ್ರವು. ಇದೇ ಅರ್ಥವನ್ನೇ ಕಾಮಿಕಾಗಮದ–

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

ಈ ಶ್ಲೋಕವು ನಿರೂಪಿಸಿದೆ. ಈ ಆಗಮ ಅಥವಾ ತಂತ್ರಸಾಹಿತ್ಯವಾದರೂ ಶೈವ, ಪಾಶುಪತ, ಸೋಮ ಮತ್ತು ಲಾಕುಲವೆಂಬ ಹೆಸರಿನಿಂದ ಅನೇಕ ವಿಧವಾಗಿದೆ. ಇವುಗಳಲ್ಲಿಯ ಶೈವಾಗಮಗಳೇ ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತವೆಂದು ನಾಲ್ಕು ಪ್ರಕಾರಗಳಿವೆ.

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಂ ॥

(ಸಿ. ಶಿ. ೫–೧೪)

ಎಂಬ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ ಸಿದ್ಧಾಂತಾಗಮ ಗಳೆಂದು ಪ್ರಸಿದ್ಧಗಳಾದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಆಗಮಗಳ ಉತ್ತರ ಭಾಗದಲ್ಲಿ ವೀರಶೈವ ಸಿದ್ಧಾಂತವು ಪ್ರತಿಪಾದಿಸಲ್ಪಟ್ಟಿದೆ. ಹೀಗೆ ವೀರಶೈವ ಧರ್ಮ– ದರ್ಶನಕ್ಕೆ ಆಗಮಗಳೇ ಮೂಲಗಳಾಗಿದ್ದರೂ ಆಗಮ ಸಮ್ಮತವಾದ ವೇದಭಾಗವನ್ನು ವೀರಶೈವರು ಗ್ರಹಿಸುವುದರಿಂದ ವೀರಶೈವ ಧರ್ಮವನ್ನು ತಾಂತ್ರಿಕ–ವೈದಿಕ ಮತವೆಂದು ಕರೆಯುತ್ತಾರೆ.

ವಿಪುಲವಾದ ಈ ಆಗಮ ಸಾಹಿತ್ಯವಾದರೂ ಸಂಪೂರ್ಣವಾಗಿ ದೊರೆತಿರುವುದಿಲ್ಲ. ಆದರೂ ಖಂಡ–ಖಂಡವಾಗಿ ದೊರೆತ ಭಾಗಗಳನ್ನೇ ಅನೇಕ ಸಂಘ ಸಂಸ್ಥೆಯವರು ಪ್ರಕಟಪಡಿಸಿದ್ದಾರೆ. ಪಾಂಡಿಚೇರಿಯಿಂದ ಕೆಲವು ಆಗಮಗಳು ಪ್ರಸಿದ್ಧಗಳಾಗಿವೆ. ವಾರಾಣಸಿ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಿಂದ ''ತ್ರಂತಸಂಗ್ರಹ'' ''ಲುಪ್ತಾಗಮ ಸಂಗ್ರಹ'' ಎಂಬ ಹೆಸರಿನಿಂದ ಸಂಪೂರ್ಣ ಭಾಗಗಳನ್ನು ಹಾಗೂ ಖಂಡ– ಖಂಡವಾಗಿ ದೊರೆತ ಆಗಮಗಳ ಶ್ಲೋಕಗಳನ್ನು ಪ್ರಕಟಪಡಿಸಿದ್ದಾರೆ. ಲಿಂ. ಪಂ. ಕಾಶೀನಾಥ ಶಾಸ್ತ್ರಿಗಳು ಚಂದ್ರಜ್ಞಾನಾಗಮ, ಮಕುಟಾಗಮ, ಸೂಕ್ಷ್ಮಾಗಮ ಮತ್ತು ಕಾರಣಾಗಮಗಳ ಕೆಲಭಾಗಗಳನ್ನು ಪ್ರಕಟಿಸಿದ್ದಾರೆ. ಹುಬ್ಬಳ್ಳಿಯ ಮೂರು ಸಾವಿರ ಮಠದಿಂದಲೂ ''ತಂತ್ರ ಸಂಗ್ರಹ''ವೆಂಬ ಗ್ರಂಥವು ಪ್ರಕಾಶನಗೊಂಡಿದೆ. ಸೊಲ್ಲಾಪುರದ ಶ್ರೀ ವಾರದ ಮಲ್ಲಪ್ಪನವರೂ ಸಹ ''ಪಾರಮೇಶ್ವರಾಗಮ''ವನ್ನು

ಪ್ರಕಾಶನಗೊಳಿಸಿದ್ದಾರೆ. ಇದೂ ಅಲ್ಲದೇ ಮೈಸೂರಿನ ಓ. ಆರ್. ಆಯ್. ನ ನಿರ್ದೇಶಕರಾದ ಡಾ|| ಹೆಚ್. ಪಿ. ಮಲ್ಲೇದೇವರು ಆಗಮ ಸಾಹಿತ್ಯದ ಮೇಲೆ ವಿಶೇಷ ಸಂಶೋಧನೆಯನ್ನು ಮಾಡಿ ಅವುಗಳನ್ನು ಓ. ಆರ್. ಆಯ್. ನ ದಿಂದ ಪ್ರಕಾಶನ ಗೊಳಿಸುವ ಮಹಾತ್ಕಾರ್ಯವನ್ನು ಹಮ್ಮಿಕೊಂಡು ಈಗಾಗಲೇ ವಾತುಲಶುದ್ಧಾಗಮದ ಎರಡು ಭಾಗಗಳನ್ನು ಪ್ರಕಟಿಸಿದ್ದಾರೆ.

ಡಾ. ಜ. ಚ. ನಿ. ಯವರಾದರೂ ಆಗಮ ಸಾಹಿತ್ಯವನ್ನು ಸಾಕಷ್ಟು ಸಂಶೋಧಿಸಿ ಅನೇಕ ಗ್ರಂಥಗಳನ್ನು ಬರೆದಿರುವರಲ್ಲದೇ ತಮಗೆ ದೊರೆತ ''ವಿರಾಗಮ''ದ ತಾಡಓಲೆ ಪ್ರತಿಯನ್ನು ಮುದ್ರಿಸುವ ಕಾರ್ಯವನ್ನು ಹಮ್ಮಿಕೊಂಡಿದ್ದು ಅದು ಪ್ರಕಟವಾಗಿದೆ.

ಹೀಗೆ ಆಗಮ ಸಾಹಿತ್ಯದ ಮೇಲೆ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆದು ಆ ಸಾಹಿತ್ಯವು ಪ್ರಕಾಶನಗೊಂಡು ವಿದ್ವಜ್ಜನರ ಹಸ್ತಗತವಾದರೆ ವೀರಶೈವ ಧರ್ಮದ ಹಿರಿಮೆ–ಗರಿಮೆಗಳು ಹಾಗೂ ಇಷ್ಟಲಿಂಗದ ಪ್ರಾಚೀನ ಇತಿಹಾಸವು ಸರ್ವ ಜನರಿಗೆ ಮನವರಿಕೆಯಾಗುವದು.

ಸದ್ಯಃ ಮುದ್ರಿತವಾಗಿ ದೊರೆತಿರುವ ಆಗಮಗಳ ಆಧಾರದಿಂದ ಇಷ್ಟಲಿಂಗ ಧಾರಣೆಯ ಸಿದ್ಧಾಂತವನ್ನು ನಿರೂಪಿಸೋಣ–

ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥
ಯಸ್ಯ ಭಸ್ಮ ಲಲಾಟೇಽಸ್ತಿ ಕಂಠೇ ಲಿಂಗಂ ಮದಾತ್ಮಕಂ ।
ರುದ್ರಾಕ್ಷಧಾರಣಂ ದೇಹೇ ಸೋಽಹಂ ದೇವಿ ನ ಸಂಶಯಃ ॥

(ಪಾರಮೇಶ್ವರತಂತ್ರ ಪಟಲ ೧ ಶ್ಲೋಕ ೪೨ ೪೮)
(ವಾರದ ಪ್ರಕಾಶನ ಸೊಲ್ಲಾಪುರ. ೧೯೦೪ ಇಸ್ವಿ)

ಈ ಪಾರಮೇಶ್ವರಾಗಮದಲ್ಲಿ ಶಿವನು ಪಾರ್ವತಿಯನ್ನು ಕುರಿತು–ವೀರಶೈವ ಮತಕ್ಕೆ ಸಮಾನವಾದ ಬೇರೊಂದು ಮತವಿಲ್ಲವೆಂದೂ ಹಣೆಯಲ್ಲಿ ಭಸ್ಮ ಮತ್ತು ಕಂಠದಲ್ಲಿ ಇಷ್ಟಲಿಂಗ ಹಾಗೂ ರುದ್ರಾಕ್ಷಿಗಳನ್ನು ಧರಿಸಿದವನು ಸಾಕ್ಷಾತ್ ನನ್ನ ಸ್ವರೂಪನೆಂತಲೂ ಉಪದೇಶಿಸಿದ್ದಾನೆ.

ಗುರಣಾ ದತ್ತಂ ಲಿಂಗಂ ತು ಶಿವಮಂತ್ರೇಣ ಧಾರಯೇತ್ ॥
ಮೂರ್ಧ್ನಿ ಕಂಠೇ ಭುಜೇ ಹಸ್ತೇ ಹೃತ್‌ಸ್ಥಲೇ ನಾಭಿಮಂಡಲೇ ।
ಏತೇಷಾಮೇಕ ದೇಶೇತು ಧಾರಯೇತ್ ಶಿವಲಿಂಗಕಂ ॥

(ವಾತುಲ ಶುದ್ಧಾಗಮ. ಪಟಲ ೧೦, ಶ್ಲೋಕ ೩೫, ೩೬)
ಓ. ಆರ್. ಆಯ್. ಪ್ರಕಾಶನ ಮೈಸೂರು ೧೯೮೩ ಇಸ್ವಿ

ಗುರುಗಳಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ಪಂಚಾಕ್ಷರ ಮಹಾಮಂತ್ರವನ್ನು ಪಠಿಸುತ್ತ ಮಸ್ತಕ, ಕಂಠ, ಹೃದಯ ಇವುಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿ ಧರಿಸಬೇಕೆಂದು ವಾತುಲ ಶುದ್ಧಾಗಮವು ಬೋಧಿಸಿದೆ.

ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ ।
ಇತ್ಯೇವಂ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ॥
ತನುತ್ರಯಗತಾನಾದಿ ಮಲತ್ರಯ ಮಸೌಗುರುಃ ।
ದೀಕ್ಷಾತ್ರಯೇಣ ಸಂದಹ್ಯ ಲಿಂಗತ್ರಯಮುಪಾದಿಶೇತ್ ॥

..............................................................

ಶಿಷ್ಯಪಾಣಿ ತಲೇದತ್ತಾಯ ದೀಕ್ಷಾ ಸಾಕ್ರಿಯಾ ಭವೇತ್ ॥

(ಕಾರಣಾಗಮ, ಉತ್ತರಭಾಗ, ಕ್ರಿಯಾಪಾದ, ಪಟಲ ೧ ಶ್ಲೋ. ೯,೧೦,೧೨)
ಕಾಶೀನಾಥ ಗ್ರಂಥಮಾಲಾ ಮೈಸೂರ ೧೯೫೬ ನೇ ಇಸ್ವಿ

ಅತ್ಯಾಶ್ರಮ, ಪಾಶುಪತ, ಶಾಂಭವವ್ರತ, ಶಿರೋವ್ರತಗಳು ವೀರಶೈವದ ಪರ್ಯಾಯ ನಾಮಗಳು ಈ ಧರ್ಮದಲ್ಲಿ ಸದ್ಗುರುಗಳು ಮೂರು ವಿಧಗಳಾದ ದೀಕ್ಷಾ ಸಂಸ್ಕಾರದಿಂದ ಶಿಷ್ಯನ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಶರೀರದಲ್ಲಿರುವ ಕಾರ್ಮಿಕ, ಮಾಯಾ ಹಾಗೂ ಆಣವ ಮಲಗಳನ್ನು ದೂರಮಾಡಿ ಇಷ್ಟ ಪ್ರಾಣ ಮತ್ತು ಭಾವಲಿಂಗಗಳನ್ನು ದಯಪಾಲಿಸುತ್ತಾರೆ. ಶಿಷ್ಯನ ಹಸ್ತ ತಲದಲ್ಲಿ ಪ್ರಾಪ್ತವಾದ ಲಿಂಗವೇ ಇಷ್ಟಲಿಂಗವೆಂಬ ವಿಷಯವನ್ನು ಕಾರಣಾಗಮವು ಪ್ರತಿಪಾದಿಸುತ್ತಿದೆ.

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಪಿ ಶಾಂಕರಿ ।
ಪೂಜಯೇನ್ನಿಯತಂ ಲಿಂಗಂ ಪ್ರಾಣಲಿಂಗ ಪರಾಯಣಃ ॥
ಏವಂ ಯಃ ಕುರುತೇ ಭಕ್ತ್ಯಾ ನಿತ್ಯಮಾಪ್ರಾಣ ಸಂಚರಾತ್ ।
ವೀರಶೈವಃ ಸ ವಿಜ್ಞೇಯಃ ಸರ್ವಶೈವೋತ್ತಮೋತ್ತಮಃ ॥

(ಸೂಕ್ಷ್ಮತಂತ್ರ ಪಟಲ ೬ ಶ್ಲೋ. ೬೧, ೬೨ ಶಂಕರಪ್ಪ ಅಚ್ಚಪ್ಪ
ಟೊಪ್ಪಿಗಿ ಹುಬ್ಬಳ್ಳಿ ಪ್ರಕಾಶನ–೧೯೧೪ ನೇ ಇಸ್ವಿ)

ಸೂಕ್ಷ್ಮಾಗಮದ ಈ ಶ್ಲೋಕಗಳಲ್ಲಿಯೂ–ಸದ್ಗುರುವಿನಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ತನ್ನ ದೇಹದಲ್ಲಿ ಪ್ರಾಣ ಇರುವವರೆಗೆ ಪ್ರತಿದಿವಸ ಒಂದು ವೇಳೆ, ಎರಡು ವೇಳೆ ಅಥವಾ ಮೂರು ವೇಳೆ ಹೀಗೆ ನಿಯಮಿತವಾಗಿ ಪೂಜಿಸುವವನೇ ವೀರಶೈವನು ಇವನು ಎಲ್ಲ ಶೈವರಲ್ಲಿ ಉತ್ತಮನು ಎಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ.

ಈ ರೀತಿಯಾಗಿ ಇನ್ನು ಅನೇಕ ಆಗಮುಗಳಲ್ಲಿ ವೀರಶೈವರ ಇಷ್ಟಲಿಂಗಧಾರಣೆಯ ವಿಷಯವು ವಿಸ್ತಾರವಾಗಿ ನಿರೂಪಿಸಲಾಗಿದೆ. ಇಲ್ಲಿ ಕೆಲವೇ ಆಗಮ ವಾಕ್ಯಗಳನ್ನು ದಿಗ್ದರ್ಶಿಸಲಾಗಿದೆ.

**ಪುರಾಣಗಳು ಮತ್ತು ಇಷ್ಟಲಿಂಗಧಾರಣೆ :**

ವೇದಾಗಮುಗಳ ನಂತರ ಬರುವ ಪ್ರಾಮಾಣಿಕ ಗ್ರಂಥಗಳೆಂದರೆ ಪುರಾಣಗಳು. ''ಪುರಾ ನವಂ ಭವತೀತಿ ಪುರಾಣಂ'' ಹಳೆಯದಿದ್ದರೂ ಹೊಸದೆನ್ನಿಸುವ ಕಥಾವಸ್ತುವೇ ಪುರಾಣವು, ''ಪುರಾಭವಂ ಪುರಾಣಂ'' ಪೂರ್ವಕಾಲದಲ್ಲಿ ಸಂಭವಿಸಿದ ವೃತ್ತಾಂತ; ಮುಂತಾದ ವ್ಯುತ್ಪತ್ತಿಗಳನ್ನು ಪುರಾಣ ಶಬ್ದಕ್ಕೆ ಮಾಡಲಾಗಿದೆ ''ಇತಿಹಾಸ–ಪುರಾಣ''ಗಳು ಪಂಚಮ ವೇದವೆಂಬ ಪ್ರಸಿದ್ಧಿಯೂ ಇದೆ. ಕೃಷ್ಣದ್ವೈಪಾಯನ ವ್ಯಾಸನಿಂದ ಅನೇಕ

ಪುರಾಣಗಳು ರಚಿಸಲ್ಪಟ್ಟಿವೆ. ಅವುಗಳಲ್ಲಿ ಬ್ರಹ್ಮ, ಪದ್ಮ, ವಿಷ್ಣು, ಶಿವ, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ ಮತ್ತು ಬ್ರಹ್ಮಾಂಡ ಎಂಬ ಹದಿನೆಂಟು ಪುರಾಣಗಳು ಮಹಾ ಪುರಾಣಗಳೆಂದು ಪ್ರಸಿದ್ಧಗಳಾಗಿವೆ.

ಇವುಗಳಲ್ಲಿ ಶಿವಪುರಾಣ, ಲಿಂಗಪುರಾಣ ಮತ್ತು ಸ್ಕಂದಪುರಾಣಗಳಲ್ಲಿ ವೀರಶೈವ ಸಿದ್ಧಾಂತವು ಬಹುಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿದೆ.

ಶಿವಭಕ್ತೋ ವಸೇನ್ನಿತ್ಯಂ ಶಿವಲಿಂಗಂ ಸಮಾಶ್ರಿತಃ
ಸ್ಥಾಣುಲಿಂಗಾಶ್ರಯೇಣೈವ ಸ್ಥಾಣುರ್ಭವತಿ ಭೂಸುರಾಃ
(ಶಿವಪುರಾಣ, ವಿದ್ಯೇಶ್ವರಸಂಹಿತಾ, ಅಧ್ಯಾಯ ೧೬, ಶ್ಲೋ ೧೪೯)

ಶಿವಭಕ್ತನು ಸದಾ ಶಿವಲಿಂಗಧಾರಿಯೇ ಆಗಿರಬೇಕು. ಹೀಗೆ ಶಿವಲಿಂಗವನ್ನು ಧರಿಸಿಕೊಂಡವನು ಸಾಕ್ಷಾತ್ ಶಿವನೇ ಆಗುತ್ತಾನೆ.

ವಿಭೂತ್ಯಭ್ಯರ್ಚನಂ ಕುರ್ಯಾದ್ವಿಭೂತ್ಯಾಚ ನಿವೇದಯೇತ್ ॥
ಪೂಜಾಂ ಕೃತ್ವಾಽಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ ।
(ಶಿವ ವಿ. ಸ. ಅಧ್ಯಾಯ ೧೬ ಶ್ಲೋ ೫೬-೫೭)

ಶಿವಪೂಜಾ ಕಾಲದಲ್ಲಿ ಶಿವಭಕ್ತನು ವಿಭೂತಿಯಿಂದ ತನ್ನ ಅಂಗವನ್ನು ಅಲಂಕರಿಸಿಕೊಂಡು ವಿಭೂತಿಯಿಂದಲೇ ಶಿವಲಿಂಗವನ್ನು ಅರ್ಚಿಸಬೇಕು. ಹೀಗೆ ಪೂಜೆಯಾದ ಬಳಿಕ ಆ ಶಿವಲಿಂಗವನ್ನು ಮಸ್ತಕದಲ್ಲಿ ಧರಿಸಬೇಕು.

ಅರುಣೋದಯರಾಯ ಎಂಬುವವರು ಕಲಕತ್ತೆಯ ವಂಗವಾಸಿ ಮುದ್ರಣಾಲಯ ದಲ್ಲಿ ಶಾ. ಶ. ೧೮೧೨ (೧೮೯೦ನೇ ಇಸ್ವಿ)ಯಲ್ಲಿ ಈ ಶಿವಪುರಾಣವನ್ನು ಮುದ್ರಿಸಿರುತ್ತಾರೆ ಅದರ ಆಧಾರದಿಂದ ಮೇಲಿನ ಶ್ಲೋಕಗಳನ್ನು ಉದಾಹರಿಸಲಾಗಿದೆ.

ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ ।
ದೇಹಸ್ಯೋಪರಿ ಲಿಂಗಂತು ಧ್ರಿಯತೇ ಹಿ ಪುರಾತನೈಃ ॥

ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವಿತಂ ।
(ಸ್ಕಂದಪುರಾಣ, ಕೇದಾರಖಂಡ, ಅಧ್ಯಾಯ ೭ ಶ್ಲೋ ೪೧-೪೨)

ಇಷ್ಟಲಿಂಗಧಾರಿಗಳು ಬಹಳ ವಿಚಿತ್ರರಾಗಿರುತ್ತಾರೆ. ಇವರು ಲಿಂಗದೊಂದಿಗೆ ಜನಿಸಿ ಲಿಂಗದೊಂದಿಗೆ ಮರಣ ಹೊಂದುವರು. ಅರ್ಥಾತ್ ಗರ್ಭದ ೮ನೇ ತಿಂಗಳಲ್ಲಿ ಪ್ರಾಪ್ತವಾದ ಇಷ್ಟಲಿಂಗವನ್ನು ಇವರು ಭೂಗರ್ಭಕ್ಕೆ ಹೋಗುವಾಗಲೂ ಜೊತೆಗೆ ತೆಗೆದುಕೊಂಡೇ ಹೋಗುತ್ತಾರೆ ಎಂಬ ತಾತ್ಪರ್ಯವು.

ಧಾರಯೇದವಧಾನೇನ ಲಿಂಗಂ ಸದ್ಗುರುಣಾರ್ಪಿತಂ ।
ಪ್ರಮಾದಾತ್ ಪತಿತೇ ಲಿಂಗೇ ಪ್ರಾಣಾನಪಿ ಪರಿತ್ಯಜೇತ್ ॥
ಪತಿತೇ ಪ್ರಾಣಲಿಂಗೇ ಯೋ ಧತ್ತೇಪ್ರಾಣಾನ್ನರಾಧಮಃ ।
ಸ ಚಾಂಡಾಲ ಇತಿ ಜ್ಞೇಯಃ ಶಿವದ್ರೋಹೀ ನತಂಸ್ಪೃಶೇತ್ ॥
(ಸ್ಕಂದಪುರಾಣ, ಶಂಕರಸಂಹಿತಾ, ಅಧ್ಯಾಯ ೮೩ ಶ್ಲೋ. ೭೭.೭೮)

ಸದ್ಗುರುಗಳಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ಅವಧಾನಪೂರ್ವಕವಾಗಿ ದೇಹದ ಮೇಲೆ ಧರಿಸಿಕೊಳ್ಳಬೇಕು. ಪ್ರಮಾದದಿಂದ ಲಿಂಗವು ದೇಹವನ್ನು ಅಗಲಿದರೆ ಪ್ರಾಣವನ್ನೇ ತ್ಯಾಗಮಾಡಬೇಕು. ಹಾಗೆ ಪ್ರಾಣತ್ಯಾಗ ಮಾಡದವನು ಶಿವದ್ರೋಹಿಯೂ, ಚಾಂಡಾಲನೂ ಆಗಿರುತ್ತಾನೆ. ಅವನನ್ನು ಯಾರೂ ಮುಟ್ಟಕೂಡದು.

ಉರಸ್ಥಲೇ ಹರಿರ್ಲಿಂಗಂ ಧೃತ್ವಾ ಶಕ್ರಪುರೋಗಮಾಃ ।
ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪಿರೇ ॥

ಲಕ್ಷ್ಮೀ ಸರಸ್ವತೀ ಮುಖ್ಯಾ ದೇವ್ಯೋ ಮಲ್ಲಿಂಗ ಧಾರಣಾತ್ ।
ಧೃತ್ವಾ ನಿಜಾಂಗೇ ತಲ್ಲೀನ ಭಾವಾ ಜಗ್ಮುಃ ಪರಂ ಸುಖಂ ॥

(ಸ್ಕಂದ ಶಂಕರ ಸಂ. ಅಧ್ಯಾಯ ಲ೪, ಶ್ಲೋ. ೪೩–೪೪)

ವಿಷ್ಣು ಇಂದ್ರ ಮೊದಲಾದ ದೇವತೆಗಳು ತಮ್ಮ ಎದೆಯ ಮೇಲೆ ಇಷ್ಟಲಿಂಗವನ್ನು ಧರಿಸಿ ಕೊಂಡು ಲಿಂಗರೂಪಿಯಾದ ನನ್ನನ್ನು ಪೂಜಿಸಿ ತಮ್ಮ ತಮ್ಮ ಪದವಿಗಳನ್ನು ಹೊಂದಿರುತ್ತಾರೆ. ಅದರಂತೆ ಲಕ್ಷ್ಮೀಸರಸ್ವತಿ ಮೊದಲಾದ ದೇವಿಯರೂ ಇಷ್ಟಲಿಂಗವನ್ನು ಧರಿಸಿಕೊಂಡು ಅದರಲ್ಲಿ ತಲ್ಲೀನ ಮನಸ್ಕರಾಗಿ ಪರಮಸುಖವನ್ನು ಹೊಂದಿದ್ದಾರೆ–

ಶ್ರೀ ಖೇಮರಾಜ ಶ್ರೀ ಕೃಷ್ಣದಾಸ ಮುಂಬಯಿ ವಿಕ್ರಮ ಸಂವತ್ ೧೯೬೫ ರಲ್ಲಿ ಈ ಸ್ಕಂದಪುರಾಣವು ಮುದ್ರಿತವಾಗಿದೆ. ಇದು ಅಲ್ಲದೇ ಈ ಸ್ಕಂದ ಪುರಾಣದ ಕೇವಲ ಶಂಕರ ಸಂಹಿತೆಯು ಮದ್ರಾಸ, ಮೈಸೂರ ಮತ್ತು ಸೊಲ್ಲಾಪುರದಿಂದಲೂ ಪ್ರಕಾಶನ ಗೊಂಡಿದೆ. ಈ ಸಂಹಿತೆಯು ೮೧ ರಿಂದ ೮೬ ನೇ ಅಧ್ಯಾಯಗಳಲ್ಲಿ ವೀರಶೈವ ಧರ್ಮದ ತತ್ತ್ವಗಳು ಹೆಚ್ಚಾಗಿ ಪ್ರತಿಪಾದಿಸಲ್ಪಟ್ಟಿವೆ. ''ವೀರಶೈವ'' ಮತ್ತು ''ಇಷ್ಟಲಿಂಗ'' ಈ ಶಬ್ದಗಳನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ.

ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ ।
ಮಾನವಃ ಶಿವಯೋಗೇನ ಶಿವೋ ಭವತಿ ನಿಶ್ಚಯಂ ॥

..............................................................

ಆಚಾರಲಿಂಗಂ ಪ್ರಥಮಂ ಗುರುಲಿಂಗಂ ದ್ವಿತೀಯಕಂ ।
ಶಿವಲಿಂಗಂ ತೃತೀಯಂ ಸ್ಯಾಚ್ಚರಲಿಂಗಂ ಚತುರ್ಥಕಂ ॥
ಪ್ರಸಾದಂ ಪಂಚಮಂ ಲಿಂಗಂ ಮಹಾಲಿಂಗಂತು ಷಷ್ಠಕಂ ।
ಭಕ್ತೋ ಮಾಹೇಶ್ವರಶ್ಚೈವ ಪ್ರಸಾದೀ ಪ್ರಾಣಲಿಂಗಕಃ ॥
ಶರಣ್ಯೈಕಃ ಸ್ಥಲೈಃ ಷಡ್ಭಿಃ ಕ್ರಮಾಲ್ಲಿಂಗಮುದಾಹೃತಮ್ ।

(ಲಿಂಗಪುರಾಣ, ಉತ್ತರಭಾಗ ಅಧ್ಯಾಯ ೨೧ ಶ್ಲೋಕ ೯೩, ೧೨೩)

ಭ್ರಮರದ ನಿರಂತರ ಚಿಂತನೆಯಿಂದ ಕೀಟವು ಭ್ರಮರವಾಗುವಂತೆ ಮಾನವನು ಶಿವಯೋಗದಿಂದ ಅಂದರೆ ಅಂತರಂಗ ಬಹಿರಂಗದಲ್ಲಿ ಲಿಂಗಸಂಬಂಧಿಯಾದರೆ ಶಿವನೇ ಆಗುತ್ತಾನೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಸ್ಥಲದ ಸಾಧಕರಿಗೆ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳು ಉಪಾಸಿಸಲು ಯೋಗ್ಯಗಳಾಗಿರುತ್ತವೆ.

ಲಿಂಗ ಪುರಾಣದ ಈ ವಿಶ್ಲೇಷಣೆಯನ್ನು ನೋಡಿದರೆ ವ್ಯಾಸಮಹರ್ಷಿಯ ಕಾಲದಲ್ಲಿಯೇ ಈ ಧರ್ಮದ ದೀಕ್ಷೆ, ಇಷ್ಟಲಿಂಗಧಾರಣೆ ಹಾಗೂ ಷಟ್‌ಸ್ಥಲ ಉಪಾಸನಾ ಪದ್ಧತಿಯು ಎಷ್ಟೊಂದು ಪ್ರಚಾರದಲ್ಲಿ ಇತ್ತೆಂಬುದು ತಿಳಿದು ಬರುತ್ತದೆ.

ಈ ಲಿಂಗ ಪುರಾಣವು ಪುವ್ವಾಡ ವೆಂಕಟರಾಯ ಇವರಿಂದ ಕಾಂಚೀಪಟ್ಟಣದಲ್ಲಿ ೧೮೭೭ನೇ ಇಸ್ವಿಯಲ್ಲಿ ಪ್ರಕಟವಾಗಿರುತ್ತದೆ. ಹೀಗೆ ವ್ಯಾಸೋಕ್ತ ಅನೇಕ ಪುರಾಣಗಳಲ್ಲಿ ವೀರಶೈವ ಧರ್ಮದ ಮುಖ್ಯ ಚಿಹ್ನೆಯಾದ ಇಷ್ಟಲಿಂಗಧಾರಣೆಯು ಹಾಗೂ ದೀಕ್ಷಾ, ಷಟ್‌ಸ್ಥಲದ ವಿಷಯಗಳು ಚನ್ನಾಗಿ ಪ್ರತಿಪಾದಿಸಲ್ಪಟ್ಟಿವೆ. ಈ ಲಿಂಗಪುರಾಣ, ಸ್ಕಂದ ಪುರಾಣ ಮತ್ತು ಶಿವಪುರಾಣಗಳಲ್ಲಿಯ ಅನೇಕ ಶ್ಲೋಕಗಳನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ ಯಥಾವತ್ ಪ್ರಯೋಗಿಸಿದ್ದಾರೆ.

ಈ ಎಲ್ಲ ಸಮಾಲೋಚನೆಯಿಂದ ವೀರಶೈವರ ಇಷ್ಟಲಿಂಗಧಾರಣ ಸಿದ್ಧಾಂತವು ವೇದ–ಆಗಮ–ಉಪನಿಷತ್–ಪುರಾಣ ಪ್ರಸಿದ್ಧವೆಂಬುದು ಸಾಮಾನ್ಯ ಜನರಿಗೂ ತಿಳಿಯುವಂತಾಗಿದೆ. ಪದವಾಕ್ಯ ಪ್ರಮಾಣಜ್ಞರಾದ ಶ್ರೀ ಮನ್ನಿರಂಜನ ಮರಿ ತೋಂಟದಾರ್ಯರು ''ವೀರಶೈವಾನಂದ ಚಂದ್ರಿಕಾ'' ಗ್ರಂಥದ ವಾದಕಾಂಡದ ತೃತೀಯ ಪ್ರಕರಣದಲ್ಲಿ ವೇದ ಆಗಮ ಪುರಾಣಾದಿ ಪ್ರಮಾಣಗಳಿಂದ ಇಷ್ಟಲಿಂಗಧಾರಣ ಸಿದ್ಧಾಂತವನ್ನು ಬಹು ಸ್ವಾರಸ್ಯವಾಗಿ ಪ್ರತಿಪಾದಿಸಿದ್ದಾರೆ. ಈ ಗ್ರಂಥವು ೧೯೩೭ ನೇ ಇಸ್ವಿಯಲ್ಲಿ ಹುಬ್ಬಳ್ಳಿ ಮೂರುಸಾವಿರಮಠದಿಂದ ಪ್ರಕಾಶನಗೊಂಡಿದೆ ವಿದ್ವಾಂಸರು ಅವಲೋಕಿಸಬೇಕು.

ಉರಿಲಿಂಗ ದೇವರ ಪ್ರಿಯಶಿಷ್ಯನಾದ ಉರಿಲಿಂಗಪೆದ್ದಿಯು ಈ ಇಷ್ಟಲಿಂಗ ಧಾರಣೆಯು ವೇದಾಗಮ ಪ್ರತಿಪಾದಿತವಾದದ್ದು ಎಂಬ ವಿಷಯವನ್ನು–

''ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ'' ಎಂದೆನಿಸುವ ಲಿಂಗವು,

''ಅತ್ಯತಿಷ್ಠದ್ದ ಶಾಂಗುಲಂ'' ಎಂದೆನಿಸುವ ಲಿಂಗವು,
''ಶ್ರುತಿಃ ಚಕಿತಮಭಿಧತ್ತೆ'' ಎಂದೆನಿಸುವ ಲಿಂಗವು,
''ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ'' ಎಂದೆನಿಸುವ ಲಿಂಗವು,
''ಏಕಮೂರ್ತಿಃ ತ್ರಿಧಾಭೇದಂ'' ಎಂದೆನಿಸುವ ಲಿಂಗವು,
ಶ್ರೀಗುರು ಲಿಂಗ ಜಂಗಮರೂಪಾಗಿ, ''ಇಷ್ಟ ಪ್ರಾಣಸ್ತಥಾಭಾವಂ ತ್ರಿಧಾಏಕಂ ವರಾನನೇ'' ಎಂದುದಾಗಿ, ತ್ರಿವಿಧವೂ ಏಕೀ ಭವಿಸಿ, ಲಿಂಗರೂಪಾಗಿ ಎನ್ನಕರ ಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತ್ತೈದಾನೆ.
ಆಹಾ ಎನ್ನ ಪುಣ್ಯವೇ ! ಆಹಾ ಎನ್ನ ಭಾಗ್ಯವೇ ! ಆಹಾ ಎನ್ನ ಸತ್ಯವೆ !
ಆಹಾ ಎನ್ನ ನಿತ್ಯವೇ ! ಶಿವ ಶಿವಾ ! ಮಹಾದೇವ ಮಹಾದೇವ,
ನೀನೇ ಬಲ್ಲೆ ಉರಿಲಿಂಗ ಪೆದ್ದಿ ವಿಶ್ವೇಶ್ವರಾ !!

(ವಚನ ಸಾಹಿತ್ಯ ಸಂಗ್ರಹ ಪು. ೧೩೭) ಬೆಂಗಳೂರು ೧೯೬೫ ಇಸ್ವಿ.

ತನ್ನ ಈ ವಚನದಲ್ಲಿ ವೈದಿಕಮಂತ್ರಗಳನ್ನು ಉದ್ದರಿಸಿ ಸ್ಪಷ್ಟವಾಗಿ ಚಿತ್ರಿಸಿದ್ದಾನೆ. ಕಾರಣ ಇಷ್ಟಲಿಂಗದ ಇತಿಹಾಸವನ್ನು ಪೂರ್ಣ ಅರ್ಥಮಾಡಿಕೊಳ್ಳದೇ ಮನಬಂದಂತೆ ಹೇಳಿ ಜನಸಾಮಾನ್ಯರನ್ನು ಅಜ್ಞಾನದ ಗುಹೆಯಲ್ಲಿ ನೂಕುವದು ಸಾಕ್ಷರರ ಕಾರ್ಯವಲ್ಲ ಕಿಂತು ತದ್ವಿಪರೀತರಾದವರ ಕಾರ್ಯವೆಂದು ತಿಳಿದುಕೊಳ್ಳಬೇಕು.

ಇನ್ನು ಶ್ರೀ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರೇ "ಪವಿತ್ರಂತೇ ವಿತತಂ ಬ್ರಹ್ಮಣಸ್ಪತೆ" ಮತ್ತು "ಅಘೋರಾಽಪಾಪ ಕಾಶೀತಿಯಾತೆ ರುದ್ರಶಿವಾತನೂಃ" ಎಂಬ ಋಗ್ವೇದ ಹಾಗೂ ಯಜುರ್ವೇದ ಮಂತ್ರಗಳನ್ನು ಉದಾಹರಿಸಿ ಇಷ್ಟಲಿಂಗ ಧಾರಣೆಯು ವೈದಿಕವೆಂಬುದನ್ನು ಅಪ್ಪಣೆಕೊಡಿಸಿದ್ದಾರೆ. ಅವರ ಆದೇಶದಂತೆ ಆ ವೇದ ಮಂತ್ರಗಳ ಅರ್ಥವನ್ನು ಇಲ್ಲಿ ವಿಚಾರಿಸೋಣ–

"ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ।
ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ॥
ಅತಪ್ತತನುರ್ನತದಾಮೋ ಅಶ್ನುತೇ ।
ಶ್ರುತಾಸ ಇಂದ್ವಹಂಸ್ತತ್ಸಮಾಶತ ॥

(ಋಗ್ವೇದ ಸಂಹಿತಾ ೯–೮೩–೧)

ಈ ಮಂತ್ರದ ಅರ್ಥವನ್ನು ನಂದಿಕೇಶ್ವರ ಶಿವಾಚಾರ್ಯರು ಈ ರೀತಿ ಮಾಡಿದ್ದಾರೆ. "ಹೇ ಬ್ರಹ್ಮಣಸ್ಪತೇ=ಲಿಂಗರೂಪಶರೀರಾವಚ್ಛೇದೇನ ಶರೀರಿಭಾವೇನಾಧಿಷ್ಠಿತ ಪರಮಶಿವ, ತೇ=ತವ, ತತ್=ಬ್ರಹ್ಮಪದವಾಚ್ಯಲಿಂಗರೂಪಂ ಶರೀರಂ, ಪವಿತ್ರಂ=ಉಕ್ತರೀತ್ಯಾ ಶುಚ್ಯಶುಚಿಕಾಲೇಽಪಿ ಧರ್ತುಂ ಯೋಗ್ಯಂ, ವಿತತಂ=ಇಷ್ಟಾದಿ ಭೇದೇನ, ಭಕ್ತ ಶರೀರಾದಿ ಭೇದೇನ ವಾ, ಬಹುವಿಧಂ, ಪ್ರಭುಃ=ನಿಗ್ರಹಾನುಗ್ರಹಸಮರ್ಥಸ್ತ್ವಂ, ವಿಶ್ವತಃ=ಸಮಸ್ತಾನಿ, (ಸಾರ್ವವಿಭಕ್ತಿಕ ಸ್ತಸಿಲ್) ಗಾತ್ರಾಣಿ=ಭಕ್ತಶರೀ ರಾಣಿ, ಪರ್ಯೇಷಿ=ವ್ಯಾಪ್ನೋಷಿ, ಧಾರ್ಯಮಾಣಃಸನ್ ಲಿಂಗರೂಪ ಶರೀರದ್ವಾರಾ ಭಕ್ತಾಂಗ ಸಂಯುಕ್ತೋಽಸೀತ್ಯರ್ಥಃ ಅತಪ್ತತನೂಃ=ತಪ್ತಾ=ವೇಧಾ=ಮನು–ಕ್ರಿಯಾ ದೀಕ್ಷಾ ತ್ರಯೇಣ ನಿರ್ದಗ್ಧ ಪಾಪಪಂಜರಾ ತನೂರ್ಯಸ್ಯ ಸಾ ನ ಭವತೀತ್ಯಪ್ತನೂಃ ದೀಕ್ಷಾತ್ರಯ ರಹಿತಃ, ಆಮಃ=ಅಪರಿಪಕ್ವಾಂತಃಕರಣಸನ್, ತತ್=ಪರಶಿವಸ್ವರೂಪಂ, ನಾಶ್ನುತೇ।"

(ಲಿಂಗಧಾರಣಚಂದ್ರಿಕಾ ಪುಟ ೧೨೫–೧೨೬, ೧೯೫೦ನೇ ಇಸ್ವಿ).

ಈ ವೇದ ಮಂತ್ರದ ಅರ್ಥವನ್ನು ಸ್ವತಃ ವ್ಯಾಸ ಮಹರ್ಷಿಗಳೇ ಲಿಂಗ ಪುರಾಣದ ಉತ್ತರ ಭಾಗದ ೨೧ ನೇ ಅಧ್ಯಾಯದಲ್ಲಿ–

ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ ॥ ೯೮ ॥

ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಃ ಶುಚಿಃ
ಋಗಿತ್ಯಾಹ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ॥ ೯೯ ॥

ತಸ್ಮಾತ್ ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ।
ಅತಪ್ತತನುರಜ್ಞೋವೈ ಹ್ಯಘೀ ಸಂಸಾರ ಲಕ್ಷಣಃ ॥ ೧೦೦ ॥

ದೀಕ್ಷಯಾ ರಹಿತಃ ಸಾಕ್ಷಾನ್ನಾಪ್ನುಯಾಲ್ಲಿಂಗ ಮುತ್ತಮಂ।
ಯಃ ಕರೋತಿ ತಪಃ ಪೂರ್ವಂ ಸ ತಪ್ತತನುರುಚ್ಯತೇ ॥ ೧೦೧ ॥

ಪರಿಪಕ್ವೋ ವಿಮೋಕ್ಷಾಯ ಸೋಶ್ನುತೇ ಲಿಂಗಧಾರಣಂ।
ನ ಕರೋ ತಪಃ ಪೂರ್ವಂ ಸೋಽತಪ್ತನುರುಚ್ಯತೇ ॥ ೧೦೨ ॥

ಈ ರೀತಿಯಾಗಿ ವಿಶ್ಲೇಷಣ ಮಾಡಿದ್ದಾರೆ.

ಇದರ ತಾತ್ಪರ್ಯವೇನೆಂದರೆ– ''ತಲ್ಲಿಂಗಂ ಬ್ರಹ್ಮಶಾಶ್ವತಂ'' ''ಲಿಂಗಂ ಬ್ರಹ್ಮ ಸನಾತನಂ'' ಮುಂತಾದ ಪ್ರಮಾಣಗಳಿಂದ ಬ್ರಹ್ಮಶಬ್ದವು ಲಿಂಗ ಶಬ್ದದ ಪರ್ಯಾಯ ವೆಂಬುದು ತಿಳಿದು ಬರುತ್ತದೆ. ಬ್ರಹ್ಮಪದವಾಚ್ಯವಾದ ಇಷ್ಟಲಿಂಗದಲ್ಲಿ ಅಧಿಷ್ಠಿತವಾದ ಪರಶಿವ ತತ್ತ್ವವೇ ಬ್ರಹ್ಮಣಸ್ಪತಿಯು ಇದು ಒಂದೇ ಆಗಿದ್ದರೂ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗವೆಂಬ ಅನೇಕ ಹೆಸರುಗಳಿಂದ ಅಥವಾ ಅನೇಕ ಭಕ್ತರಿಂದ ಧರಿಸಲ್ಪಟ್ಟಿರುವದರಿಂದ ಬಹುಪ್ರಕಾರವಾಗಿದೆ. ನಿಗ್ರಹಾನುಗ್ರಹ ಸಮರ್ಥವಾದ ಈ ಲಿಂಗವು ಭಕ್ತರ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರಗಳಲ್ಲಿ ಇಷ್ಟಲಿಂಗ, ಪ್ರಾಣಲಿಂಗ ಮತ್ತು ಭಾವಲಿಂಗಗಳ ರೂಪದಲ್ಲಿ ವ್ಯಾಪಿಸಿಕೊಂಡಿದೆ. ಶಿವದೀಕ್ಷಾ ಸಂಸ್ಕಾರದಿಂದ ಆಣವಾದಿ ಮಲತ್ರಯಗಳನ್ನು ನಾಶಮಾಡಿಕೊಳ್ಳದೇ ಇರುವ ಅಪರಿಪಕ್ವಾಂತಃಕರಣ ವುಳ್ಳವರು ಈ ಲಿಂಗವನ್ನು ಪಡೆಯಲಾರರು. ಇನ್ನು ಶಿವಜ್ಞಾನ ಸಂಪನ್ನರು ಶಿವಲಿಂಗಕ್ಕೆ ಶರಣಾಗತರಾದವರು ಮಾತ್ರ ಇಷ್ಟಲಿಂಗವನ್ನು ಹೊಂದುವರೆಂಬುದು ವೇದಮಂತ್ರ, ಭಾಷ್ಯ ಹಾಗೂ ಪುರಾಣ ವಾಕ್ಯಗಳ ತಾತ್ಪರ್ಯವು.

ಇಲ್ಲಿ ಗಮನಿಸಬೇಕಾದ ಮಹತ್ವದ ಅಂಶವೇನೆಂದರೆ ಪರಶಿವ ಲಿಂಗವು ಸದಾ ಪವಿತ್ರವಾಗಿರುವಂತಹದು. ಅದನ್ನು ಸದ್ಗುರುಗಳಿಂದ ದೀಕ್ಷಾ ಪೂರ್ವಕವಾಗಿಯೇ ಪ್ರಾಪ್ತಮಾಡಿಕೊಳ್ಳಬೇಕು. ಈ ದೀಕ್ಷಾ ಸಂಸ್ಕಾರವಾದರೂ ಪಕ್ವ ಮಲವುಳ್ಳವರಿಗೇನೇ ಸಾಧ್ಯವಾದದ್ದು. ''ಮಲೋಽಪ್ಯಾಮಶ್ಚ ಪಕ್ವಶ್ಚ ಭವೇತ್ ಸಂಸಾರ ಕಾರಣಂ'' (ಶಿವ ಪು. ೭।೧।೩೧।೩೨।) ಈ ಶಿವಪುರಾಣದ ವಚನದಂತೆ ಜೀವನ ಜನನ ಮರಣ ಸಂಸಾರಕ್ಕೆ ಕಾರಣೀಭೂತಗಳಾದ ಆಣವಾದಿ ಮಲತ್ರಯಗಳು ''ಆಮ'' ಮತ್ತು ''ಪಕ್ವ'' ಎಂಬುದಾಗಿ ಎರಡು ವಿಧಗಳಾಗಿವೆ. ಹಿಂದಿನ ಅನೇಕ ಜನ್ಮಗಳ ತಪಸ್ಸಿನಿಂದ ಕ್ಷೀಣವಾದದ್ದು ''ಪಕ್ವ''ವೆಂತಲೂ ಅದಕ್ಕೆ ವಿಪರೀತವಾದದ್ದು ''ಆಮ'' ಎಂತಲೂ ಕರೆಯಲ್ಪಡುತ್ತದೆ ಪಕ್ವಮಲವುಳ್ಳವನೇ ಲಿಂಗಧಾರಣಕ್ಕೆ ಅಧಿಕಾರಿಯು. ಅವನಾದರೂ ಸ್ವತಃ ಧರಿಸಲು ಅನರ್ಹನು. ಗುರುಗಳಿಂದ ದೀಕ್ಷಾ ಪೂರ್ವಕವಾಗಿಯೇ ಇಷ್ಟಲಿಂಗವನ್ನು ಪಡೆಯಬೇಕು.

ಯಥಾ ಮೃಗಪತಿಂ ದೃಷ್ಟ್ವಾ ಭೀತೋ ಯಾತಿ ವನೇ ಗಜಃ।
ಅದೀಕ್ಷಿತೋಽರ್ಚಯೇಲ್ಲಿಂಗಂ ತಥೈವಾಹಂ ಮಹೇಶ್ವರಿ ॥

ಎಂಬ ದೀಕ್ಷಾ ಬೋಧೆಯ ವಾಕ್ಯದಂತೆ ದೀಕ್ಷಾ ಸಂಸ್ಕಾರವಿಲ್ಲದವನು ಇಷ್ಟಲಿಂಗವನ್ನು ಪೂಜಿಸಿದ್ದಾದರೆ ಅದು ನಿಷ್ಫಲವಾಗುತ್ತದೆ. ಸಂತಶಿರೋಮಣಿ ಶ್ರೀಮನ್ಮಥಸ್ವಾಮಿಗಳು ಸಹ–

ಶಿವ ದೀಕ್ಷಾ ಝಾಲಾ ವಿಣ। ಜೋ ಮೂಢಕರೀ ಶಿವಪೂಜನ।
ತೋ ಪಾಮರ ಜೀವ ವ್ಹಣೂನ। ದೇವ ಪೂಜನ ನ ಘೇತಿ ತ್ಯಾಜೇ॥

(ಪರಮ ರಹಸ್ಯ ೭–೯೦, ಪುಟ ೭೮)

ಈ ರೀತಿಯಾಗಿ ಮರಾಠಿಯಲ್ಲಿ ಅದೇ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ. ಆದ್ದರಿಂದ ಇಷ್ಟಲಿಂಗ ಪೂಜೆಯು ಸಫಲವಾಗಬೇಕಾದರೆ ಸದ್ಗುರುಗಳಿಂದ ಶಿವದೀಕ್ಷೆಯನ್ನು ಮಾಡಿಸಿಕೊಂಡು ಪವಿತ್ರವಾದ ಇಷ್ಟಲಿಂಗವನ್ನು ಪಡೆಯಬೇಕು. ಈ ಇಷ್ಟಲಿಂಗ ಸಂಬಂಧವಾಗುವುದರಿಂದ ಶರೀರವಾದರೂ ಪವಿತ್ರವಾಗುತ್ತದೆ. ಇಂತಹ ವ್ಯಕ್ತಿಗೆ ಸೂತಕಗಳು ಸೋಂಕಿಸುವದಿಲ್ಲ ಎಂಬುದು ಈ ''ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ'' ಎಂಬ ಋಗ್ವೇದ ಮಂತ್ರದಿಂದ ಸಿದ್ಧವಾಗುತ್ತದೆ.

ಇನ್ನು ಶ್ರೀ ರೇಣುಕ ಭಗವತ್ಪಾದರು ಉದಾಹರಿಸಿದ ಯಜುರ್ವೇದದ ಮಂತ್ರಾರ್ಥವನ್ನು ಪರ್ಯಾಲೋಚಿಸೋಣ–

''ಯಾತೇ ರುದ್ರ ಶಿವಾತನೂರಘೋರಾऽಪಾಪಕಾಶಿನೀ।
ತಯಾನಸ್ತನುವಾ ಶಂತಮಯಾ ಗಿರಿಶಂತಾऽಭಿಚಾಕಶೀಹಿ॥

(ಯಜುರ್ವೇದೀಯ, ಶ್ರೀರುದ್ರ, ಪ್ರಥಮೋನುವಾಕ)

ಶ್ರೀ ನಂದಿಕೇಶ್ವರ ಶಿವಾಚಾರ್ಯರು ಲಿಂಗಧಾರಣಚಂದ್ರಿಕೆಯಲ್ಲಿ ಈ ಶ್ರುತಿಯ ಅರ್ಥವನ್ನು ಹೀಗೆ ವಿವರಿಸಿದ್ದಾರೆ–

ರುದಂ=ರೋದನಂ ಸಂಸಾರದುಃಖಜನಿತಂ ದ್ರಾವಯತೀತಿ ರುದ್ರಃ। ರುದಮಜ್ಞಾನಂ ದ್ರಾವಯತೀತಿ ರುದ್ರಃ। ಹೇ ರುದ್ರ! ಅಘೋರಾ=ಶಾಂತಾಕಾರಾಶಿವಾ=ಸರ್ವಮಂಗಲಪ್ರದಾ, ಯಾತೇ ತನುಃ=ಲಿಂಗರೂಪಶರೀರಂ, ಸಾ ಅಪಾಪಕಾಶಿನೀ=ಲಿಂಗರೂಪಶರೀರಾವಚ್ಛಿನಃ ಶಿವಃ ಶಮದಮಸಂಪನ್ನಃ ಭಕ್ತಗಾತ್ರೇ ಧಾರ್ಯ ಇತಿ ಪರ್ಯವಸಿತಾರ್ಥಃ (ಲಿಂಗಧಾರಣ ಚಂದ್ರಿಕಾ ಪು. ೧೨೨) ಈ ಮಂತ್ರದ ಅರ್ಥವನ್ನೇ ವ್ಯಾಸಮಹರ್ಷಿಗಳು–

ಯಾತೇ ಶಿವಾ ತನೂರುದ್ರ ಲಿಂಗಂ ಮಂಗಲದಾಯಕಂ।
ಲಿಂಗಂ ಶಿವಾ ತನೂಃ ಪ್ರೋಕ್ತಾ ಮೂರ್ತಿಘೋರಾತನುಃಸ್ಮೃತಾ॥
ಅಪಾಪೇಷುಚ ಭಕ್ತೇಷು ತಯೋರ್ಮಧ್ಯೇಶಿವಾತನೋ।
ಕಾಶತೇ ಪರಮೇಶಸ್ಯ ಶಿಷ್ಯಾಸ್ತೇ ಲಿಂಗಧಾರಿಣಃ॥
ತಯಾ ಶಂತಮಯಾ ಸೌಖ್ಯಕಾರಿಣ್ಯಾ ಲಿಂಗರೂಪಯಾ।
ಅಭಿಚಾಕಶೀಹಿ ತನು ವಾಗಿರಿಶಂ ತಾಭಿರಕ್ಷಮಾಂ॥

(ಲಿಂಗಪುರಾಣ)

ಲಿಂಗಪುರಾಣದಲ್ಲಿ ಈ ರೀತಿಯಾಗಿ ಹೇಳಿದ್ದಾರೆ. ಈ ಶ್ರುತಿ, ಭಾಷ್ಯ ಮತ್ತು ಪುರಾಣವಾಕ್ಯಗಳ ತಾತ್ಪರ್ಯವೇನೆಂದರೆ–

ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ ।
ತತ್ರ ಪಂಚಾಕ್ಷರೀ ತಸ್ಯಾಂ ಶಿವ ಇತ್ಯಕ್ಷರದ್ವಯಂ ॥

ಎಂಬ ಪ್ರಮಾಣದಂತೆ ವೇದಗಳಲ್ಲಿ ಯಜುರ್ವೇದವು, ಅದರಲ್ಲಿ ಶ್ರೀರುದ್ರವು, ಅದರಲ್ಲಿಯೂ ಎಂಟನೇ ಅನುವಾಕ್ಯವು, ಅದರಲ್ಲಿಯೂ ಪಂಚಾಕ್ಷರ ಮಂತ್ರವು ಮತ್ತು ಆ ಮಂತ್ರದಲ್ಲಿಯೂ ''ಶಿವ'' ಎಂಬ ಎರಡಕ್ಷರಗಳು ಹೀಗೆ ಉತ್ತರೋತ್ತರವಾಗಿ ಶ್ರೇಷ್ಠಗಳೆಂದು ಪ್ರತಿಪಾದಿಸಲ್ಪಟ್ಟಿವೆ.

''ರೋದನಂ ದ್ರಾವಯತೀತಿ ರುದ್ರಃ,'' ''ರುದಂ ಅಜ್ಞಾನಂ ದ್ರಾವಯತೀತಿ ವಾ ರುದ್ರಃ'' ಎಂಬ ವ್ಯುತ್ಪತ್ತಿಯ ಮೇರೆಗೆ ಜೀವಿಗಳ ಜನನ ಮರಣರೂಪ ಸಂಸಾರ ದುಃಖವನ್ನಾಗಲಿ ಜೀವನನ್ನು ಆವರಿಸಿದ ಆಣವಾದಿ ಮಲತ್ರಯರೂಪ ಅಜ್ಞಾನವನ್ನಾಗಲಿ ನಾಶಮಾಡುವ ಕಾರಣದಿಂದ ಆ ಶಿವನಿಗೆ ''ರುದ್ರ'' ಎಂಬ ಹೆಸರು ಬಂದಿದೆ.

ಈ ರುದ್ರನಿಗೆ ಘೋರ ಮತ್ತು ಅಘೋರ ಎಂಬ ಎರಡು ಶರೀರಗಳಿವೆ. ''ಲಿಂಗಂ ಶಿವಾ ತನೂಃ ಪ್ರೋಕ್ತಾ ಮೂರ್ತಿಘೋರಾ ತನುಸ್ಮೃತಾ'' ಎಂಬ ವ್ಯಾಸನ ವಚನದಂತೆ ಪರಶಿವನ ಲಿಂಗರೂಪದೇಹವು ಅಘೋರ ಅರ್ಥಾತ್ ಶಾಂತಸ್ವರೂಪವಾದದ್ದು. ಇನ್ನು ಕರಚರಣಾದ್ಯವಯವಗಳಿಂದಲೂ; ಸರ್ಪ, ತ್ರಿಶೂಲ, ವ್ಯಾಘ್ರಾಜಿನಗಳಿಂದಲೂ ಮತ್ತು ಚಂದ್ರ, ಗಂಗೆ, ಗಿರಿಜೆಯರಿಂದಲೂ ಕೂಡಿರುವ ಶರೀರವೇ ಘೋರವಾದದ್ದು ಇದಕ್ಕೆ ''ಬೇರ''ವೆಂತಲೂ ಕರೆಯುತ್ತಾರೆ.

''ಲಿಂಗಂತು ಶಿವಯೋರ್ದೇಹಃ'' ಎಂಬ ವಾಕ್ಯದಂತೆ ವೀರಶೈವರು ಧರಿಸುವ ಇಷ್ಟಲಿಂಗವು ಶಿವ–ಶಕ್ತಿಯರ ಅಭಿನ್ನ ದೇಹವು. ಇದು ಅಘೋರವೂ ಮಂಗಲ ಮಯವೂ ಆಗಿರುತ್ತದೆ. ಮತ್ತು ಇದು ಅಪಾಪಕಾಶಿನಿಯೂ ಆಗಿದೆ. ಅಂದರೆ ''ಅಪಾಪೇಷು ಭಕ್ತೇಷು ಕಾಶತ ಇತಿ ಅಪಾಪಕಾಶೀನಿ'' ಪಾಪರಹಿತರಾದ ಭಕ್ತರ ಶರೀರದ ಮೇಲೆ ಸದಾ ಪ್ರಕಾಶಿಸುವಂತಹುದು. ಪಾಪಾಧಿಕ್ಯವುಳ್ಳವರಿಗೆ ಶಿವನ ಚಿಹ್ನೆಗಳಾದ ಲಿಂಗ, ಭಸ್ಮ ಮತ್ತು ರುದ್ರಾಕ್ಷಿ ಇವುಗಳ ಮೇಲೆ ಸಹಜವಾದ ದ್ವೇಷ ಭಾವನೆಯುಂಟಾಗುತ್ತದೆ ಅದನ್ನೇ–

ಪಾಪಪೂರ್ಣಸ್ಯ ಮರ್ತ್ಯಸ್ಯ ತ್ರಿಪುಂಡ್ರೋದ್ಧೂಲನೇ ಶಿವೇ ।
ರುದ್ರಾಕ್ಷಧಾರಣೇ ದ್ವೇಷಃ ಸ್ವತ ಏವ ಪ್ರಜಾಯತೇ ॥

(ಸಿದ್ಧಾಂತಶಿಖೋಪನಿಷತ್ ಶ್ಲೋ. ೭)

ಈ ರೀತಿಯಾಗಿ ಉಪನಿಷದ್ವಾಕ್ಯವು ಸ್ಪಷ್ಟಪಡಿಸಿರುತ್ತದೆ. ಆದಕಾರಣ ಇಷ್ಟಲಿಂಗವನ್ನು ಧರಿಸಬೇಕಾದರೆ ದೋಷನಿವಾರಕಗಳಾದ ತ್ರಿವಿಧ ದೀಕ್ಷಾ ಸಂಸ್ಕಾರಗಳು ಪರಮಾವಶ್ಯಕ ಗಳಾದವುಗಳು. ಹೀಗೆ ದೀಕ್ಷೆಯಿಂದ ಪರಿಶುದ್ಧರಾದ ಭಕ್ತರ ಸ್ಥೂಲ ದೇಹದ ಮೇಲೆ ಇಷ್ಟ ಲಿಂಗರೂಪವಾಗಿಯೂ ಮತ್ತು ಸೂಕ್ಷ್ಮ ಕಾರಣಶರೀರಗಳ ಮೇಲೆ ಪ್ರಾಣಲಿಂಗ– ಭಾವಲಿಂಗರೂಪವಾಗಿಯೂ ಈ ಲಿಂಗರೂಪವಾದ ರುದ್ರನ ಪ್ರಶಾಂತ ಮೂರ್ತಿಯು ಸದಾ ಪ್ರಕಾಶಮಾನವಾಗಿ ತೋರುತ್ತದೆ ಎಂಬ ತಾತ್ಪರ್ಯವನ್ನೇ ಯಜುರ್ವೇದದ ''ಯಾತೇರುದ್ರ ಶಿವಾತನೂಃ'' ಈ ಮಂತ್ರವು ಬೋಧಿಸಿದೆ.

ಹೀಗೆ ವೇದಾಗಮೋಪನಿಷತ್ಪುರಾಣೇತಿಹಾಸ ಪ್ರಸಿದ್ಧವಾದ ಈ ಇಷ್ಟಲಿಂಗವನ್ನು ಧರಿಸಿದರೆ ''ತಸ್ಮಾಚ್ಛೈವೋಽಘ ವರ್ಜಿತಃ'' ಎಂಬ ಶ್ರೀ ಜಗದ್ಗುರು ಭಗವತ್ಪಾದರ ಉಪದೇಶದಂತೆ ಅಂತರಂಗ–ಬಹಿರಂಗ ಲಿಂಗಧಾರಿಯಾದ ಶಿವಭಕ್ತನು ಸರ್ವವಿಧ ಪಾಪಗಳಿಂದ ಮುಕ್ತನಾಗಿ ಜಗತ್ತಿನಲ್ಲಿ ಸರ್ವೋತ್ಕೃಷ್ಟನಾಗಿ ಶೋಭಿಸುತ್ತಾನೆ.

ಇಲ್ಲಿಯವರೆಗೆ ವೇದಕಾಲದಿಂದ ಹಿಡಿದು ವಚನ ಕಾಲದವರೆಗೆ ಸಕಲ ಪ್ರಮಾಣಗಳಿಂದ ವೀರಶೈವ ಸಿದ್ಧಾಂತದ ಅಂತರ್ಲಿಂಗ ಹಾಗೂ ಬಹಿರ್ಲಿಂಗಗಳ ಸ್ವರೂಪ, ಧಾರಣ ವಿಧಿ ಮತ್ತು ಪೂಜಾ ಪದ್ಧತಿಗಳನ್ನು ಕೂಲಂಕಷವಾಗಿ ವಿಚಾರಿಸಲಾಯಿತು. ಶ್ರದ್ಧಾಳುಗಳಾದ ವೀರಶೈವರು ಈ ಶ್ರೇಷ್ಠ ಧರ್ಮದ ಸ್ವರೂಪವನ್ನು ಅರಿತು ಅವಶ್ಯವಾಗಿ ಆಚರಿಸಬೇಕು ಅಂದಾಗಲೇ ನಾವು ಗ್ರಂಥೋಪದೇಶಕರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಕೃಪೆಗೆ ಪಾತ್ರರಾಗುತ್ತೇವೆ.

ಹೀಗೆ ಲಿಂಗಧಾರಿಯೂ, ಸಂಯಮಚಿತ್ತನೂ, ನಿತ್ಯ ಶಿವಲಿಂಗಾರಾಧಕನೂ ಆದ ವೀರಶೈವನು ಸರ್ವದೋಷನಿವಾರಕವೂ ಲಿಂಗಪೂಜಾ ಅಂಗವೂ ಆದ ಭಸ್ಮಧಾರಣೆಯನ್ನು ಶಾಸ್ತ್ರೋಕ್ತಪದ್ಧತಿಯಿಂದ ಧರಿಸಿಕೊಳ್ಳಬೇಕು.

ಇತಿ ಶ್ರೀ ಶಿವಯೋಗಿ ಶಿವಾಚಾರ್ಯ ಪ್ರಣೀತ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತ ಲಿಂಗಧಾರಣಸ್ಥಲದ ಆಶೀರ್ವಚನವು ಪೂರ್ಣವಾದುದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ಆಗಷ್ಟ್, ೧೯೯೦

(ಸ್ಥಾನ ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪೂರ)

ಇತಿ ಷಷ್ಠ ಪರಿಚ್ಛೇದಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ ಷಷ್ಠಪರಿಚ್ಛೇದವು ಪೂರ್ಣವಾದುದು.



# ಸಪ್ತಮ ಪರಿಚ್ಛೇದ

## ಆಶೀರ್ವಚನ-೧

# ಭಸ್ಮಧಾರಣಸ್ಥಲ

ಭಸ್ಮಧಾರಣಸಂಯುಕ್ತಃ ಪವಿತ್ರೋ ನಿಯತಾಶಯಃ ।
ಶಿವಾಭಿಧಾನಂ ಯತ್ಪ್ರೋಕ್ತಂ ಭಾಸನಾದ್ಭಸಿತಂ ತಥಾ
ಮಹಾಭಸ್ಮೇತಿ ಸಂಚಿಂತ್ಯ ಮಹಾದೇವಂ ಪ್ರಭಾಮಯಂ ।
ವರ್ತಂತೇ ಏ ಮಹಾಭಾಗಾ ಮುಖ್ಯಾಸ್ತೇ ಭಸ್ಮಧಾರಿಣಃ (ಸಿ. ಶಿ. ೭.೧-೨ )

''ಸ ಏಷ ಭಸ್ಮಜ್ಯೋತಿಃ'' ಎಂಬ ಜಾಬಾಲಶ್ರುತಿಯಲ್ಲಿ ಶಿವನಿಗೆ ಭಸ್ಮವೆಂಬ ಹೆಸರು ಪ್ರತಿಪಾದಿಸಲ್ಪಟ್ಟಿದೆ. ಶಿವತತ್ತ್ವವನ್ನು ಭಾಸನಗೊಳಿಸುವುದರಿಂದಲೂ ವಿಭೂತಿಗೆ ಭಸ್ಮವೆಂಬ ಹೆಸರು ಪ್ರಾಪ್ತವಾಗಿದೆ. ಇಂತಹ ಭಸ್ಮವನ್ನು ಯಾರು ಧರಿಸುತ್ತಾರೆಯೋ ಅವರು ಪವಿತ್ರರೂ ಸಂಯತಚಿತ್ತರೂ ಆಗುವರು. ಇನ್ನು ಪ್ರಕಾಶ ಸ್ವರೂಪನಾದ ಪರಮಾತ್ಮನನ್ನು ''ಮಹಾಭಸ್ಮ''ವೆಂದು ಚಿಂತಿಸುವುದು ನಿರುಪಾಧಿಕಭಸ್ಮಧಾರಣೆ ಎನಿಸುವುದು. ಈ ನಿರುಪಾಧಿಕ ಭಸ್ಮವನ್ನು ಧರಿಸುವುದೇ ಮುಖ್ಯವಾದ ಭಸ್ಮಧಾರಣೆಯು. ಇಂತಹ ಭಸ್ಮವನ್ನು ಧರಿಸುವವರೇ ಶ್ರೇಷ್ಠ ಭಸ್ಮಧಾರಕರು.

**ನಿರುಪಾಧಿಕ ಭಸ್ಮಧಾರಣೆ :**

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಲಿಂಗಧಾರಣಸ್ಥಲದ ನಂತರ ಸದ್ಯಃ ಭಸ್ಮಧಾರಣಸ್ಥಲವನ್ನು ಉಪದೇಶಿಸುತ್ತಲಿದ್ದಾರೆ. ಇಷ್ಟಲಿಂಗ ಪೂಜಾರೂಪ ನಿತ್ಯಕರ್ಮಕ್ಕೆ ಭಸ್ಮಧಾರಣೆಯೂ ಒಂದು ಅಂಗವು. ಈ ಭಸ್ಮ ಧಾರಣೆಯು ನಿರುಪಾಧಿಕ ಮತ್ತು ಸೋಪಾಧಿಕವೆಂದು ಎರಡು ಬಗೆಯಾಗಿದೆ. ಇವೆರಡರಲ್ಲಿ ನಿರುಪಾಧಿಕ ಭಸ್ಮಧಾರಣೆಯೇ ಶ್ರೇಷ್ಠತರವಾದದ್ದೆಂದು ತಿಳಿಸಿ; ಅದರ ಸ್ವರೂಪವನ್ನೇ ಪೂಜ್ಯಪಾದರು– ''ಮಹಾಭಸ್ಮೇತಿ ಸಂಚಿತ್ಯ ಮಹಾದೇವಂ ಪ್ರಭಾಮಯಂ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

''ಸ ಏಷ ಭಸ್ಮಜ್ಯೋತಿಃ ಸ ಏಷ ಭಸ್ಮಜ್ಯೋತಿಃ'' ಎನ್ನುವ ಬೃಹಜ್ಜಾಬಾಲ ಶ್ರುತಿ ವಾಕ್ಯದಲ್ಲಿ ಪರಶಿವನನ್ನು ''ಭಸ್ಮಜ್ಯೋತಿ''ಎಂಬುದಾಗಿ ಪ್ರತಿಪಾದಿಸಲಾಗಿದೆ. ಹೀಗೆ ''ಭಸ್ಮಜ್ಯೋತಿ'', ''ಮಹಾಭಸ್ಮ'', ಮುಂತಾಗಿ ಪ್ರತಿಪಾದಿಸಲ್ಪಟ್ಟ ಪ್ರಭಾಮಯ ಪರಶಿವನನ್ನು ಅಂತರಂಗದಲ್ಲಿಸದಾ ಚಿಂತಿಸುವುದೇ ''ನಿರುಪಾಧಿಕ ಭಸ್ಮ'' ಧಾರಣೆಯು.

ಪರಶಿವ ಚೈತನ್ಯವು ಪಿಂಡಾಂಡ–ಬ್ರಹ್ಮಾಂಡಗಳೆರಡರಲ್ಲಿ ಪರಿಪೂರ್ಣವಾಗಿದ್ದರೂ ಅದನ್ನು ಬ್ರಹ್ಮಾಂಡದಲ್ಲರಸುವುದಕ್ಕಿಂತ ಪಿಂಡಾಂಡದಲ್ಲರಸುವುದೇ ಸುಲಭವು ಹಾಗೂ ಶ್ರೇಯಸ್ಕರವು. ಪಿಂಡಾಂಡದಲ್ಲಿಯೂ ''ಹೃದಯ''ವು ಪರಮಾತ್ಮನ ಅಭಿವ್ಯಕ್ತಿಯ ಮುಖ್ಯಕೇಂದ್ರವಾಗಿದೆ. ಅಂತೆಯೇ–

ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥಾಽನಲಃ ।
ಬೀಜೇ ಯಥಾಽಂಕುರಃ ಸಿದ್ಧಸ್ತಥಾಽತ್ಮನಿ ಶಿವಃ ಸ್ಥಿತಃ ॥

(ಸಿ.ಶಿ. ೫–೩೫)

ಅಂದರೆ ಚಂದ್ರಕಾಂತಶಿಲೆಯಲ್ಲಿ ಚಂದ್ರಕಿರಣದಿಂದ ಜಲಾಕರ್ಷಣೆಯ ಶಕ್ತಿಯಡಗಿರುವಂತೆ, ಸೂರ್ಯಕಾಂತಮಣಿಯಲ್ಲಿ ಸೂರ್ಯಕಿರಣದಿಂದ ಅಗ್ನಿಯನ್ನು ಆಕರ್ಷಿಸುವ ಸಾಮರ್ಥ್ಯವಡಕವಾಗಿರುವಂತೆ, ಬೀಜದಲ್ಲಿ ಅಂಕುರವು ಅಡಗಿರುವಂತೆ ಹೃದಯದಲ್ಲಿ ಪರಶಿವನು ನಿವಾಸಿಸುತ್ತಿದ್ದಾನೆ–ಎಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮನಾದ ಅಗಸ್ತ್ಯನನ್ನು ಕುರಿತು ಉಪದೇಶಿಸಿದರೆ; ಭಗವದ್ಗೀತೆಯಲ್ಲಿ–

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥

(ಗೀತಾ ೧೮–೬೧)

''ಹೇ ಅರ್ಜುನ ! ಸರ್ವೇಶ್ವರನು ಸರ್ವಜೀವಿಗಳ ಹೃದಯದಲ್ಲಿ ನಿವಾಸಿಸಿ, ತನ್ನ ಮಾಯಾ ಸಾಮರ್ಥ್ಯದಿಂದ ವಾಹನ ಚಾಲಕನಂತೆ'' ಎಲ್ಲರ ಶರೀರ, ಇಂದ್ರಿಯ ಮನಸ್ಸು ಮತ್ತು ಬುದ್ಧಿಗಳಿಗೆ ಪ್ರೇರಕ ಶಕ್ತಿಯಾಗಿದ್ದಾನೆ''; ಎಂಬುದಾಗಿ ಶ್ರೀಕೃಷ್ಣ ಪರಮಾತ್ಮನು ಅರ್ಜುನನನ್ನು ಕುರಿತು ಉಪದೇಶಿಸಿದ್ದಾನೆ. ಆದ್ದರಿಂದ ಮನುಷ್ಯನ ಹೃದಯವೇ ಭಗವನ್ಮಂದಿರವು. ಸ್ಥೂಲಬುದ್ಧಿಯವರು ಬಾಹ್ಯಮಂದಿರಗಳಲ್ಲಿ ಭಗವಂತನನ್ನರ್ಚಿಸಿದರೆ, ಸೂಕ್ಷ್ಮಬುದ್ಧಿಯವರು ಹೃನ್ಮಂದಿರದಲ್ಲಿ ಅರ್ಚಿಸುತ್ತಾರೆ.

ಹೊರಗಿನ ಮಂದಿರಗಳು ಎಣ್ಣೆ, ಬತ್ತಿ ಮತ್ತು ಪಣತಿಗಳೆಂಬ ಉಪಾಧಿಗಳಿಂದ ಕೂಡಿದ ಜ್ಯೋತಿಯಿಂದ ಬೆಳಗುತ್ತಿದ್ದರೆ, ಹೃದಯಮಂದಿರವು ನಿರುಪಾಧಿಕ ನಿರ್ಮಲ ಜ್ಯೋತಿಯಿಂದ ಝಗಝಗಿಸುತ್ತಿದೆ. ದೀಪಗಳಿಂದ ಅಲಂಕೃತವಾದ ಮಂದಿರದಲ್ಲಿ ಪ್ರವೇಶಿಸಿದ ಅಂಧಕನಿಗೆ ಸರ್ವತ್ರ ಅಂಧಕಾರವೇ ಪ್ರತೀತಿಯಾಗುವಂತೆ, ಆಣವಾದಿ ಮಲತ್ರಯಗಳಿಂದಾವೃತನಾದ ಸಾಮಾನ್ಯ ಜೀವಿಗೆ ಹೃದಯಮಂದಿರವು ಕಾರ್ಗತ್ತಲೆಯಿಂದ ತುಂಬಿದ ಕಾಡ ಗುಹೆಯು.

ಹೊರಗೆ ಕತ್ತಲೆಯು ಆವರಿಸಿದಾಗ ಮನುಷ್ಯನ ಬಾಹ್ಯ ವ್ಯವಹಾರಗಳೆಲ್ಲ ನಿಂತು ಹೋಗುವಂತೆ, ಅಂತರಂಗದ ಅಜ್ಞಾನವೆಂಬ ಕತ್ತಲೆಯಿಂದ ಮನುಷ್ಯನ ಅಂತರಂಗ ಸಾಧನೆಯು ಅನಾದಿಕಾಲದಿಂದ ನಿಂತುಹೋಗಿದೆ. ಹೊರಗೆ ಕತ್ತಲೆಯಾದೊಡನೆ ದೀಪದ ವ್ಯವಸ್ಥೆಗಾಗಿ ಮನುಷ್ಯನು ಪ್ರಯತ್ನಶೀಲನಾಗುವುದನ್ನು ನೋಡುತ್ತೇವೆ; ಆದರೆ ಅಂತರಂಗದ ಅಜ್ಞಾನದಲ್ಲಿ ಅನಾದಿಕಾಲದಿಂದ ಇವನು ಜೀವಿಸುತ್ತಿರುವುದು ಆಶ್ಚರ್ಯವಲ್ಲವೇ? ಇದರಿಂದ ಇವನಿಗೆ ಬಾಹ್ಯವ್ಯವಹಾರದಲ್ಲಿ ಇರುವಷ್ಟು ಆಸಕ್ತಿ ಅಂತರಂಗ ವ್ಯವಹಾರದಲ್ಲಿ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ಅಂತರಂಗದ ಅಜ್ಞಾನವು ಜೀವಾತ್ಮನ ಮುಕ್ತಿಗೆ ಪ್ರತಿಬಂಧಕವಾಗಿದೆಯಲ್ಲದೇ ಸಂಸಾರದ ಭುಕ್ತಿಗೆ ಪ್ರತಿಬಂಧಕವಲ್ಲ. ''ಭುಕ್ತಿ ಸುಖವು ಸಂಸಾರದೊಳುಂಟು ಮುಕ್ತಿಯನರಸಲದ ರೊಳೇನುಂಟು?'' ಎಂಬ ಭಾವನೆಯುಳ್ಳ ಜನರಿಗೆ ಅಂತರಂಗದ ಅಜ್ಞಾನಾಂಧಕಾರ ವನು ಕಳೆದುಕೊಳ್ಳುವ ಅವಶ್ಯಕತೆಯಾದರೂ ಏನು ?

ಭೂಮಿ, ಹೇಮ, ಮತ್ತು ಕಾಮಿನಿಗಳೆಂಬ ಭೋಗಗಳು ಜಗತ್ತಿನ ಮಹಾನ್ ಪ್ರಲೋಭನಗಳು. ಇವೆಲ್ಲ ಜಗಕ್ಕಿಕ್ಕಿದ ವಿಧಿಗಳು. ದೀಪವನ್ನು ಮುದ್ದಿಸ ಹೋಗಿ ಮೈಸುಟ್ಟುಕೊಂಡು ಸಾಯುವ ದೀಪದ ಹುಳದಂತೆ ಆಗಿದೆ, ಸಾಮಾನ್ಯ ಭೋಗಿಗಳ ಬಾಳುವೆ. ಅಂತೆಯೇ ಭರ್ತೃಹರಿಯು–

''ಭೋಗಾ ನ ಭುಕ್ತಾ ವಯಮೇವ ಭುಕ್ತಾಃ'' ಎಂದಿದ್ದಾನೆ.

ಭೋಗಃ ಸುಖೇ ಸ್ತ್ರ್ಯಾದಿಭೃತಾವಹೇಶ್ಚ ಫಣಕಾಯಯೋಃ

(ಅಮರ ೩–೩–೨೩)

ಎಂಬ ಅಮರಸಿಂಹನ ವಾಕ್ಯದಂತೆ, ''ಭೋಗ'' ಪದಕ್ಕೆ ಸ್ರಕ್‌ಚಂದನವನಿತಾದಿ ವಿಷಯದಿಂದ ಪ್ರಾಪ್ತವಾಗುವ ಸುಖ, ಹಾವಿನ ಹೆಡೆ ಮತ್ತು ಹಾವಿನ ಶರೀರ ಎಂಬ ಅರ್ಥಗಳುಂಟು. ವನಿತಾದಿ ವಿಷಯಗಳಿಂದ ಸುಖದ ಜೊತೆಗೆ ದುಃಖಾನುಭವವೂ ಆಗುವದರಿಂದ– ''ಸುಖದುಃಖಾನ್ಯತರಸಾಕ್ಷಾತ್ಕಾರಃ ಭೋಗಃ'' ಸುಖ ಅಥವಾ ದುಃಖದ ಅನುಭವಕ್ಕೆ ಭೋಗವೆಂಬುದಾಗಿ ಶಾಸ್ತ್ರಕಾರರು ಕರೆದಿದ್ದಾರೆ. ಸಂಸಾರದ ವಿಷಯಗಳಲ್ಲಿ ಸುಖಾನುಭವಕ್ಕಿಂತಲೂ ದುಃಖಾನುಭವವೇ ಮಿಗಿಲಾದದ್ದು. ಸಾಸುವೆಯಷ್ಟು ಸುಖ ವಿದ್ದರೆ ಸಾಗರದಷ್ಟು ಮಹಾನ್ ದುಃಖವಿದೆ ; ಅಜ್ಞಜೀವಿಗಳು ಈ ಅಲ್ಪ ಸುಖದಲ್ಲಿ ಕಣ್ಣು ಮುಚ್ಚಿಕೊಂಡು ಮುಂದಿನ ಮಹಾನ್ ದುಃಖವನ್ನೇ ಮರೆತಿದ್ದಾರೆ. ವನಿತಾದಿ ವಿಷಯ ದೊಂದಿಗೆ ಸರಸವಾಡುವುದೆಂದರೆ ಸರ್ಪದ ಶರೀರದ್ದೊಂದಿಗೆ ಕ್ರೀಡಿಸಿದಂತೆ. ಸರ್ಪದ ಶರೀರದೊಂದಿಗೆ ಕ್ರೀಡಿಸುವುದು ಸಾಮಾನ್ಯವೇ ? ಸರ್ವರಿಗೂ ಸಾಧ್ಯವೆ ? ಯೋಗೀಶ್ವರನಾದ ಶಿವ ಮತ್ತು ಯೋಗೇಶ್ವರನಾದ ವಿಷ್ಣು ಇವರೀರ್ವರನ್ನುಳಿದು ಉಳಿದವರಾರೂ ಸಮರ್ಥರಲ್ಲ. ಅಂತೆಯೇ ಓರ್ವನು ಭೋಗಭೂಷಣ (ನಾಗ ಭೂಷಣ)ನಾದರೆ ಮತ್ತೋರ್ವನು ಭೋಗಶಯನ (ಪನ್ನಗಶಯನ)ನು. ಸರ್ಪ ಶರೀರವು ಶಿವನಿಗೆ ಭೂಷಣವಾಗಿದ್ದರೆ, ವಿಷ್ಣುವಿಗೆ ಹಾಸಿಗೆಯಾಗಿದೆ. ಇವರೀರ್ವರೂ ಜಗತ್ತಿಗೊಂದು ಮಹಾನ್ ಸಂದೇಶವನ್ನಿತ್ತಿದ್ದಾರೆ. ಅದೇನಂದರೆ–ಯೋಗವನ್ನರಿಯದ ಭೋಗಿಯು ಮೃತ್ಯುವನ್ನಪ್ಪಿದರೆ ಯೋಗವನ್ನರಿತ ಭೋಗಿಯು ಮೃತ್ಯುಂಜಯನಾಗು ತ್ತಾನೆ. ಅಂತೆಯೇ ಭೋಗಿಯಾಗುವ ಪೂರ್ವದಲ್ಲಿ ಯೋಗಿಯಾಗುವುದು ಪರಮಾ ವಶ್ಯಕವಾದದ್ದು.

ಯೋಗವೆಂದರೆ ಅಚ್ಚುಕಟ್ಟಾಗಿ ಜೀವಿಸುವ ಜೀವನದ ಒಂದು ಕಲೆಯು. ವಿದ್ಯುತ್ತನ್ನು ಬಳಸುವ ಕಲೆಯನ್ನರಿತವನು ಅದರಿಂದ ತನ್ನ ನಿತ್ಯ ವ್ಯವಹಾರವನ್ನೆಲ್ಲ ಮಾಡಿಸಿಕೊಳ್ಳುತ್ತ ಸುಖವಾಗಿ ಕಾಲ ಕಳೆದರೆ ಅದರ ರಹಸ್ಯವನ್ನರಿಯದವನು ಕಾಲನ ಅತಿಥಿಯಾಗುವುದಿಲ್ಲವೇ ? ಅದರಂತೆ ಬದುಕುವ ಕಲೆಯನ್ನರಿತ ಭೋಗಿಯು ಚಿರಂಜೀವಿಯಾದರೆ, ಅದನ್ನರಿಯದವನು ''ಭೋಗೇ ರೋಗಭಯಂ'' ಎಂಬ ಭರ್ತೃ ಹರಿಯ ವಚನದಂತೆ ರೋಗಿಯಾಗಿ ನರಳುತ್ತಾನೆ. ಆದ್ದರಿಂದ–

ಬೇಡ ಬೇಡ ಭೋಗದೊಡನಾಟ ।
ನೋಡು ನಂಜುವೆರಸಿದ ಸವಿಯೂಟ ।
ಕೇಡು ಕಡೆಯೊಳಿಹುದು ಮಾಯೆಯ ಕೈಮಾಟ ॥

(ಕೈ.ಪ.ಜೀ. ೧೭)

ಎಂಬುದಾಗಿ ಶ್ರೀಮನ್ನಿಜಗುಣಶಿವಯೋಗಿಗಳು ಕೇವಲ ಭೋಗಾಸಕ್ತರಾದ ಭೋಗಿಗಳನ್ನು ಎಚ್ಚರಿಸಿದ್ದಾರೆ. ಮಹಾನುಭಾವರ ಈ ನುಡಿಯನ್ನು ಕೇಳಿ ಜಾಗ್ರತರಾಗದಿದ್ದರೆ, ''ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವ, ಉರಿವ ಕೊಳ್ಳಿಯಕೊಂಡು ಮಂಡೆಯ ಸಿಕ್ಕ ಬಿಡಿಸುವ, ಹುಲಿಯ ಮೀಸೆಯ ಹಿಡಿದುಕೊಂಡು ಉಯ್ಯಾಲೆ ಯಾಡುವ, ಸುಣ್ಣದ ಕಲ್ಲು ಮಡಿಲಲ್ಲಿ ಕಟ್ಟಿಕೊಂಡು ಮಡುವಿನಲ್ಲಿ ಬೀಳುವವನ'' ಗತಿಯು ಏನಾಗುವುದೋ ಭೋಗಿಯ ಗತಿಯಾದರೂ ಅದೇ ಆಗುವದು.

''ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ, ಹಾವಿನ ಸಂಗವೇ ಲೇಸು ಕಂಡಯ್ಯಾ'' ಎಂಬ ಅಕ್ಕನ ನುಡಿಯಂತೆ, ಯೋಗಿಯಾಗಿ ಸಂಸಾರದಲ್ಲಿದ್ದರೆ ಭಯವೇನಿಲ್ಲ. ಆದರೆ ನಾವೆಲ್ಲ ಭೋಗಿಗಳಾಗಿಯೇ ಬಹುದಿನ ಬದುಕಬೇಕೆನ್ನುತ್ತೇವೆ. ಅದು ಹೇಗೆ ಸಾಧ್ಯ ? ಪ್ರಜ್ವಲಿಸುವ ಪ್ರದೀಪವನ್ನು ಕತ್ತಲೆಯು ಆವರಿಸದಿರುವಂತೆ ಅಂತರಂಗದ ಆತ್ಮಜ್ಯೋತಿಯ ಚಿಂತನೆಯಲ್ಲಿ ತಲ್ಲೀನನಾದವನಿಗೆ ಜನ್ಮಮರಣದ ಭಯವಿಲ್ಲ. ಅಂತರಂಗದಲ್ಲಿ ಪರಶಿವನ ಚಿಂತನರೂಪವಾದ ಈ ನಿರುಪಾಧಿಕ ಇಲ್ಲವೇ ಮಹಾಭಸ್ಮವನ್ನು ಧರಿಸುವುದರಿಂದ ಯಾವ ಫಲವು ಪ್ರಾಪ್ತವಾಗುವದು? ಎಂಬ ಜನಕನ ಪ್ರಶ್ನೆಗೆ ಯಾಜ್ಞವಲ್ಕ್ಯರು–

''ಅಥ ಜನಕೋ ಹ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಂ ಭಸ್ಮಧಾರಣಾತ್ ಕಿಂ ಫಲಮಶ್ನುತ ಇತಿ, ಸ ಹೋವಾಚ ತದ್ಭಸ್ಮಧಾರಣಾದೇವ ಮುಕ್ತಿರ್ಭವತಿ ತದ್ಭಸ್ಮಧಾರಣಾದೇವ ಸಾಯುಜ್ಯಮಾಪ್ನೋತಿ । ನ ಸ ಪುನರಾವರ್ತತೇ । ಸ ಏಷ ಭಸ್ಮಜ್ಯೋತಿರಿತಿ ವೈ ಯಾಜ್ಞವಲ್ಕ್ಯಃ''

ಜನಕೋ ಹ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಂ ಭಸ್ಮಧಾರಣಾತ್ ಕಿಂ ಫಲಮಶ್ನುತೇ? ನ ವೇತಿ । ತತ್ರ ಪರಮ ಹಂಸಾಃ ಸಂವರ್ತಕಾರುಣಿ ಶ್ವೇತಕೇತು ದುರ್ವಾಸ ಋಭುನಿದಾಘ ಜಡಭರತ ದತ್ತಾತ್ರೇಯರೈವತಕ ಭುಸುಂಡ ಪ್ರಭೃತಯೋಪಿ ವಿಭೂತಿಧಾರಣಾದೇವ ಮುಕ್ತಾಃ ಸ್ಯುಃ ಸ ಏಷಭಸ್ಮಜ್ಯೋತಿರಿತಿ ವೈ ಯಾಜ್ಞವಲ್ಕ್ಯಃ ॥

(ಬೃಹಜ್ಜಾಬಾಲೋಪನಿಷತ್, ೭ ಬ್ರಾಹ್ಮಣ, ೨–೩)

ಈ ರೀತಿಯಾಗಿ ಉತ್ತರಿಸಿದ್ದಾರೆ.

ಜನಕ ಮತ್ತು ಯಾಜ್ಞವಲ್ಕ್ಯರ ಹೆಸರುಗಳನ್ನು ಕೇಳದವರಾರು ? ಸಾಕ್ಷಾತ್ ಸೂರ್ಯಭಗವಂತನ ಉಪಾಸನೆಯಿಂದ ಸಕಲ ಶಾಸ್ತ್ರಗಳಲ್ಲೂ ಬಲ್ಲಿದರಾದವರು ಯಾಜ್ಞವಲ್ಕ್ಯರಾದರೆ, ಸಕಲ ಭೋಗಗಳ ಮಧ್ಯದಲ್ಲಿಯೂ ಯೋಗಜೀವನವನ್ನು ಕಳೆಯುತ್ತಿದ್ದವನು ಜನಕನು. ದೇಹಧಾರಿಯಾಗಿದ್ದರೂ ದೇಹದ ಅಭಿಮಾನವನ್ನು ತ್ಯಾಗ ಮಾಡಿದ್ದರಿಂದ. ಅವನಿಗೆ ವೈದೇಹಜನಕನೆಂಬ ಹೆಸರು ಪ್ರಾಪ್ತವಾಗಿದೆ.

ಆ ವೈದೇಹ ಜನಕನು ಮಹಾನ್ ಜ್ಞಾನಿಯಾದ ಯಾಜ್ಞವಲ್ಕ್ಯರನ್ನು ಕುರಿತು ಪ್ರಶ್ನಿಸುತ್ತಾನೆ– ಈ ಚಿದ್ಭಸ್ಮವನ್ನು ಧರಿಸುವದರಿಂದ ಆಗುವ ಪ್ರಯೋಜನವೇನು ? ಹಾಗೂ ಯಾರು ಯಾರು ಅದನ್ನು ಧರಿಸಿ ಫಲವನ್ನು ಪಡೆದಿದ್ದಾರೆ ? ಆಗ ಯಾಜ್ಞ

ವಲ್ಕ್ಯರು–ಹೇ ರಾಜನ್ ಈ ಅಂತರಂಗದ ಭಸ್ಮ ಧಾರಣೆಯಿಂದ ಸಾಯುಜ್ಯಕೈವಲ್ಯವು ಪ್ರಾಪ್ತವಾಗುತ್ತದೆ. ಈ ಸಂಸಾರದಲ್ಲಿ ಪುನರಾವೃತ್ತಿಯಾಗುವದಿಲ್ಲ. ಈ ಭಸ್ಮವನ್ನು ಧರಿಸಿದ ಸಂವರ್ತಕ, ಅರುಣಿ, ಶ್ವೇತಕೇತು, ದುರ್ವಾಸ, ಋಭು, ನಿದಾಘ, ಜಡಭರತ, ದತ್ತಾತ್ರೇಯ, ರೈವತಕ ಮತ್ತು ಭುಸುಂಡರೇ ಮೊದಲಾದ ಪರಮಹಂಸರು ಮುಕ್ತ ರಾಗಿದ್ದಾರೆ.

ಹೀಗೆ ಬೃಹಜ್ಜಾಬಾಲೋಪನಿಷತ್ತಿನಲ್ಲಿ ಈ ನಿರುಪಾಧಿಕ ಭಸ್ಮದ ಜೊತೆಗೆ ಸೋಪಾಧಿಕ ಭಸ್ಮದ ವಿಧಾನವಾದರೂ ವಿಸ್ತೃತವಾಗಿ ಪ್ರತಿಪಾದಿಸಲ್ಪಟ್ಟಿದೆ. ಈ ನಿರುಪಾಧಿಕ ಭಸ್ಮವನ್ನು–

''ಏಕಂ ಜ್ಞೇಯಂ ಮಹಾಭಸ್ಮ ದ್ವಿತೀಯಂ ಸ್ವಲ್ಪಸಂಜ್ಞಕಂ''

(ಶಿವಪು. ವಿದ್ಯೆ ೨೪–೨)

ಹೀಗೆ ಶಿವಮಹಾಪುರಾಣದಲ್ಲಿ ''ಮಹಾಭಸ್ಮ'' ವೆಂಬುದಾಗಿ ಕರೆದಿದ್ದಾರೆ.

''ತರತಿ ಶೋಕಮಾತ್ಮವಿತ್'' ಎಂಬ ಶ್ರುತಿ ಪ್ರಮಾಣದಂತೆ ಚಿದ್ಭಸ್ಮ, ಮಹಾಭಸ್ಮ ಮತ್ತು ನಿರುಪಾಧಿಕ ಭಸ್ಮವೆಂದು ಕರೆಯಿಸಿಕೊಳ್ಳುವ ಪರಶಿವ ಚೈತನ್ಯವನ್ನು ತನ್ನ ಅಂತರಂಗದಲ್ಲಿ ಸಾಕ್ಷಾತ್ಕಾರ ಮಾಡಿಕೊಂಡವನೇ ಈ ಶೋಕಸಾಗರವನ್ನು ದಾಟಬಲ್ಲನು. ಸಂಸಾರದ ಸಕಲ ದುಃಖಗಳ ನಿವೃತ್ತಿಗೆ ಈ ಚಿದ್ಭ ಸ್ಮವು ದಿವ್ಯೌಷಧವು. ಕಾರಣ ಮನುಷ್ಯ ಜನ್ಮ ಧರಿಸಿದ ಪ್ರತಿಯೊಬ್ಬನೂ ತನ್ನ ಆಯುಷ್ಯವಿರುವುದರೊಳಗಾಗಿ ಇದನ್ನು ಪ್ರಾಪ್ತ ಮಾಡಿಕೊಳ್ಳಬೇಕು. ಇಲ್ಲವಾದರೆ ಯಮಶಿಕ್ಷೆಯು ತಪ್ಪಿದುದಲ್ಲ.

ಒಬ್ಬ ಚಕ್ರವರ್ತಿಯ ಆಸ್ಥಾನಕ್ಕೆ ರತ್ನದ ವ್ಯಾಪಾರಿಯೋರ್ವನು ಬಂದು ಮಹಾ ರಾಜರಿಗೆ ಅತ್ಯಮೂಲ್ಯವಾದ ರತ್ನವಂದನ್ನರ್ಪಿಸಿ ಹೀಗೆ ನಿವೇದಿಸಿ ಕೊಂಡನು–''ಹೇ ರಾಜನ್ ಇದೊಂದು ದಿವ್ಯರತ್ನವು. ಇಂತಹ ಅಮೂಲ್ಯ ರತ್ನಗಳನ್ನು ಧರಿಸುವ ಸಾಮರ್ಥ್ಯವು ಸಾಮಾನ್ಯ ಜನರಿಗೆ ಇರುವುದಿಲ್ಲ. ಅಂತೆಯೇ ತಮ್ಮ ಸನ್ನಿಧಿಗೆ ಬಂದಿ ದ್ದೇನೆ. ಇದನ್ನು ಶ್ರೇಷ್ಠ ರತ್ನ ಪರೀಕ್ಷಕರಿಂದ ಪರೀಕ್ಷಿಸಿ ಇದರ ನಿರ್ದಿಷ್ಟವಾದ ಬೆಲೆಯನ್ನು ಕೊಟ್ಟು ನನ್ನನ್ನು ಅನುಗ್ರಹಿಸಬೇಕು. ಮತ್ತೊಂದು ಮಹತ್ವ ಪೂರ್ಣವಾದ ವಿಷಯ ವೇನಂದರೆ ಇದರ ಬೆಲೆಯ ನಿರ್ಧಾರಣೆಯಲ್ಲಿ ಅನವಧಾನತೆಯಾದರೆ ಇದು ಸಿಡಿದು ಚೂರು–ಚೂರಾಗುತ್ತದೆ. ಕಾರಣ ರತ್ನಕ್ಕೆ ಅಪಮಾನವಾಗದಂತೆ ಇದರ ಬೆಲೆಯನ್ನು ನಿರ್ಧರಿಸಬೇಕು.

ವ್ಯಾಪಾರಿಯ ಈ ಮಾತುಗಳನ್ನು ಕೇಳಿದ ರಾಜನಿಗೆ ಆನಂದವೂ ಆಶ್ಚರ್ಯವೂ ಉಂಟಾಯಿತು. ಆ ಕ್ಷಣದಲ್ಲಿಯೇ ತನ್ನ ರಾಜ್ಯದಲ್ಲಿಯ ಅನೇಕ ರತ್ನಪರೀಕ್ಷಕರನ್ನು ಕರೆಯಿಸಿ ಅವರುಗಳಿಗೆ ಆ ರತ್ನವನ್ನು ಕೊಟ್ಟು ಯೋಗ್ಯ ಬೆಲೆಯನ್ನು ನಿರ್ಧರಿಸಲು ಆಜ್ಞಾಪಿಸಿದನು. ರತ್ನ ಪರೀಕ್ಷಕರೆಲ್ಲ ಅದನ್ನು ಬಹುವಾಗಿ ಪರೀಕ್ಷಿಸಿ ಓರ್ವನು ಹತ್ತು ಸಾವಿರ, ಮತ್ತೋರ್ವನು ಇಪ್ಪತ್ತುಸಾವಿರ, ಇನ್ನೊಬ್ಬನು ಐವತ್ತುಸಾವಿರ ಹೀಗೆ ತಮ–ತಮಗೆ ತಿಳಿದ ರೀತಿಯಲ್ಲಿ ಮೌಲ್ಯ ನಿರ್ಧಾರಣೆ ಮಾಡಿ ಮಹಾರಾಜನಿಗೆ ನಿವೇದಿಸಿಕೊಂಡರಲ್ಲದೇ ತನ್ನದೇ ಮೌಲ್ಯಮಾಪನವು ಸರಿಯಾದದ್ದೆಂದು ಪರಸ್ಪರ

ಕಲಹವನ್ನು ಆರಂಭಿಸಿದರು. ಇದನ್ನು ನೋಡಿ ರಾಜನಿಗೆ ಸಮಾಧಾನವಾಗಲಿಲ್ಲ. ಇವರಾರೂ ಶ್ರೇಷ್ಠ ಪರೀಕ್ಷಕರಲ್ಲವೆಂಬುದನ್ನು ನಿರ್ಧರಿಸಿ ದೇಶದಲ್ಲೆಲ್ಲ ಡಂಗುರ ಸಾರಿಸಿದ–''ಅನುಭವಿಯಾದ ರತ್ನ ಪರೀಕ್ಷಕರಿದ್ದರೆ ಆಸ್ಥಾನಕ್ಕೆ ಬರಬೇಕು. ಅವರಿಗೆ ಯೋಗ್ಯ ಬಹುಮಾನವನ್ನು ಕೊಟ್ಟು ಸತ್ಕರಿಸಲಾಗುವುದೆಂದು.''

ರತ್ನ ಪರೀಕ್ಷಣೆಯ ಸುದ್ದಿಯು ಕರ್ಣೋಪಕರ್ಣಿಕೆಯಾಗಿ ದೇಶದ ತುಂಬೆಲ್ಲ ಬಹುಬೇಗ ಹರಡಿತು. ದೇಶದ ಮೂಲೆ–ಮೂಲೆಗಳಿಂದ ರತ್ನ ಪರೀಕ್ಷಕರು ರಾಜನ ಆಸ್ಥಾನವನ್ನು ತಲುಪಿದರು. ಬಂದ ರತ್ನ ಪರೀಕ್ಷಕರಲ್ಲಿ ಒಬ್ಬೊಬ್ಬರನ್ನೇ ಕರೆದು ನಿನಗೆ ಈ ವಿದ್ಯೆಯನ್ನು ಕಲಿಸಿದ ಗುರು ಯಾರು? ನಿನಗಿರುವ ಅನುಭವ ಎಷ್ಟು ವರ್ಷದ್ದು? ಮುಂತಾಗಿ ಮಹಾರಾಜರು ಪ್ರಶ್ನಿಸತೊಡಗಿದರು. ಕೊನೆಗೆ ಇವರೆಲ್ಲರಿಗೂ ಗುರುವಾದ ಎಂಭತ್ತು ವರ್ಷದ ಅನುಭವವುಳ್ಳ ತೊಂಬತ್ತೊಂಭತ್ತು (೯೯) ವರ್ಷ ವಯಸ್ಸಿನ ವಯೋವೃದ್ಧನೋರ್ವನು ರಾಜನ ಸಮ್ಮುಖಕ್ಕೆ ಬಂದನು. ರಾಜನಿಗೆ ಪರಮಾನಂದ ವಾಯಿತು. ಉಳಿದವರೆಲ್ಲರೂ ಇವನ ಶಿಷ್ಯರೇ ಆದ್ದರಿಂದ ಮಹಾ ಅನುಭವಿಯಾದ ಇವನಿಂದಲೇ ಈ ರತ್ನವನ್ನು ಪರೀಕ್ಷಿಸಬೇಕೆಂದು ವಿಚಾರಿಸಿ ಆ ರತ್ನವನ್ನು ಇವನ ಕೈಗೆ ಕೊಟ್ಟು ಇದನ್ನು ಪರೀಕ್ಷಿಸಿ ಇದರ ಮೌಲ್ಯವನ್ನು ನಿರ್ಧರಿಸಲು ಆಜ್ಞಾಪಿಸಿದನು.

ಆ ರತ್ನವನ್ನು ತನ್ನ ಕೈಗೆ ತೆಗೆದುಕೊಂಡ ಆ ವೃದ್ಧನು–ಹೇ ರಾಜನ್ ಇದನ್ನು ಪರೀಕ್ಷಿಸಲು ಒಂದು ಸಪ್ತಾಹ ಸಮಯ ಬೇಕಾಗುವದು. ಕಾರಣ ತಾವು ನನಗೆ ಸ್ವತಂತ್ರವಾದ ಒಂದು ರೂಮಿನ ವ್ಯವಸ್ಥೆಮಾಡಿರಿ. ಒಂದು ಸಪ್ತಾಹದ ನಂತರ ಇದರ ನಿರ್ದಿಷ್ಟ ಬೆಲೆಯನ್ನು ಪ್ರಸಿದ್ಧ ಪಡಿಸುವೆನೆಂದು ನಿವೇದಿಸಿಕೊಂಡನು. ಅವನ ಅಪೇಕ್ಷೆ ಯಂತೆ ಎಲ್ಲ ವ್ಯವಸ್ಥೆಯೂ ಆಯಿತು. ಜನರಿಗೆಲ್ಲ ಕುತೂಹಲ ಕೆರಳಿತು. ಒಂದು ವಾರದ ಪ್ರತೀಕ್ಷೆಯಲ್ಲಿಯೇ ಎಲ್ಲರೂ ಕಾಲಕಳೆದರು. ನಿರ್ಧರಿಸಿದ ಸಮಯಕ್ಕೆ ಆ ವಯೋ ವೃದ್ಧನು ಆಸ್ಥಾನಕ್ಕೆ ಬಂದು ಹೇ ರಾಜನ್! ಈ ರತ್ನವು ಒಂದು ಕೋಟಿ ರೂಪಾಯಿ ಬೆಲೆ ಬಾಳುವುದು ಎಂಬುದಾಗಿ ಅದರ ಬೆಲೆಯನ್ನು ನಿಶ್ಚಿತವಾಗಿ ನಿರ್ಧರಿಸಿದನು. ಇವನ ಬೆಲೆಯ ನಿರ್ಧಾರಣೆಯನ್ನು ಕೇಳಿ ವ್ಯಾಪಾರಿಯೂ ಸಂತುಷ್ಟನಾದನು. ಆದರೆ ರಾಜನ ಮನಸ್ಸಿನಲ್ಲಿ ಒಂದು ಪ್ರಶ್ನೆ ಪ್ರಾದುರ್ಭವಿಸಿತು–ಇದರಲ್ಲಿರುವ ವೈಶಿಷ್ಟ್ಯವಾದರೂ ಏನು ? ಇಷ್ಟೊಂದು ಹಣವನ್ನು ಯಾಕೆ ಕೊಡಬೇಕು ? ಈ ಪ್ರಶ್ನೆಯನ್ನು ರಾಜನು ಬಹಿರಂಗವಾಗಿ ರತ್ನಪರೀಕ್ಷಕನನ್ನು ಕೇಳಿಯೇ ಬಿಟ್ಟನು.

ಆಗ ಆ ವಯೋವೃದ್ಧನು, ''ಹೇ ರಾಜನ್! ಇದೊಂದು ಸಿದ್ಧರತ್ನವು; ಇದು ಸ್ವಯಂ ಪ್ರಕಾಶಮಾನವಾದದ್ದು. ಈ ರತ್ನವಿರುವ ರೂಮಿನಲ್ಲಿ ದೀಪಹಚ್ಚುವ ಅವಶ್ಯಕತೆ ಇರುವುದಿಲ್ಲ; ಇದರ ಬೆಳಕಿನಿಂದಲೇ ಕತ್ತಲೆಯು ಸರಿಯುವುದು; ಅಲ್ಲದೇ ಇದು ಯಾರಲ್ಲಿ ಇರುವುದೋ ಅವರ ಮನೋರಥಗಳೆಲ್ಲ ಪೂರ್ಣಗೊಳ್ಳುವುವು.'' ಎಂದನು

ರತ್ನದ ಮಹಿಮೆಯನ್ನರಿತ ರಾಜನಿಗೆ ಪರಮ ಸಂತೋಷವಾಯಿತು. ವ್ಯಾಪಾರಿಗೆ ಒಂದು ಕೋಟಿ ರೂಪಾಯಿಗಳನ್ನು ಕೊಟ್ಟು ಕಳುಹಿಸಿದ ರಾಜನ ಮನಸ್ಸಿನಲ್ಲಿ ಈ ರತ್ನ ಪರೀಕ್ಷಕನಿಗೆ ಏನು ಬಹುಮಾನ ಕೊಡಬೇಕು ? ಎಂಬ ಮತ್ತೊಂದು ಪ್ರಶ್ನೆಯು

ಪ್ರಾದುರ್ಭವಿಸಿತು. ಆಸ್ಥಾನ ವಿದ್ವಾಂಸರೆಲ್ಲರನ್ನು ಕೇಳಲಾಗಿ ಸಾವಿರ, ಐದುಸಾವಿರ, ಹತ್ತುಸಾವಿರ ರೂಪಾಯಿ ಮುಂತಾಗಿ ಭಿನ್ನಭಿನ್ನ ಅಭಿಪ್ರಾಯಗಳು ಪ್ರಾಪ್ತವಾದವು, ನಿರ್ದಿಷ್ಟವಾಗದಿದ್ದರಿಂದ ರಾಜನಿಗೆ ಸಮಾಧಾನವಾಗಲಿಲ್ಲ. ಪುನಃ ದೇಶದಲ್ಲಿ ಡಂಗುರ ಸಾರಿಸಿದ 'ರತ್ನ ಪರೀಕ್ಷಕನಿಗೆ ಏನು ಮಾನಧನ ಕೊಡಬೇಕೆಂದು'.

ದೇಶದ ತುಂಬೆಲ್ಲ ಇದೇ ಸುದ್ದಿಯೇ ಸುದ್ದಿ. ತತ್ತ್ವಜ್ಞಾನದ ತಪಸ್ವಿಯೋರ್ವನು ರಾಜರ ಆಸ್ಥಾನದಮುಂದೆ ಹಾದು ಹೊರಟಿದ್ದ. ಈ ಗದ್ದಲವನ್ನು ನೋಡಿ ಕ್ಷಣಕಾಲ ನಿಂತುಕೊಂಡು ಎಲ್ಲವನ್ನೂ ತಿಳಿದುಕೊಂಡು, ರಾಜನಬಳಿಗೆ ಹೋಗಿ ಹೇಳಿದ–ನಾನು ರತ್ನಪರೀಕ್ಷನ ಬೆಲೆ ಕಟ್ಟುತ್ತೇನೆ ಎಂದು. ರಾಜನಿಗೆ ಪರಮ ಸಂತೋಷವಾಯಿತು. ಮನುಷ್ಯರ ಬೆಲೆಯನ್ನು ಮಹಾತ್ಮರೇ ಕಟ್ಟಬಲ್ಲರು ಎಂದು ಆಲೋಚಿಸಿದ ರಾಜನು ಮಹಾತ್ಮರಿಗೆ ವಿನಂತಿಸಿಕೊಂಡ – ಈ ರತ್ನ ಪರೀಕ್ಷಕನಿಗೆ ಏನು ಮಾನಧನ ಕೊಡ ಬೇಕೆಂದು. ಆಗ ಮಹಾತ್ಮರು ಆ ವಯೋವೃದ್ಧನನ್ನು ಆಪಾದ ಮಸ್ತಕ ನಿರೀಕ್ಷಿಸಿ ಅವನನ್ನು ಪ್ರಶ್ನಿಸುತ್ತಾರೆ–

ಮಹಾತ್ಮರು : ಭೋ ಪರೀಕ್ಷಕ ! ನಿನಗೆ ವಯಸ್ಸು ಎಷ್ಟು?

ರತ್ನಪರೀಕ್ಷಕ : ಸ್ವಾಮಿನ್ ! ನನಗೀಗ ೯೯ ವರ್ಷಗಳು ಮುಗಿಯುತ್ತ ಬಂದಿವೆ.

ಮಹಾತ್ಮರು : ರತ್ನ ಪರೀಕ್ಷಣೆಯ ವ್ಯವಹಾರವನ್ನು ಪ್ರಾರಂಭಿಸಿ ಎಷ್ಟು ವರ್ಷಗಳಾದವು?

ರತ್ನಪರೀಕ್ಷಕ : ಸ್ವಾಮಿನ್ ! ೮೦ ವರ್ಷಗಳಾಗಿವೆ.

ಮಹಾತ್ಮರು : ಇಷ್ಟೊಂದು ಸಮಯವನ್ನು ಈ ರತ್ನ ಪರೀಕ್ಷಣೆಗಾಗಿಯೇ ಕಳೆದೆಯಾ?

ರತ್ನಪರೀಕ್ಷಕ : ಅಹುದು ಸ್ವಾಮಿ. (ಅಭಿಮಾನದಿಂದಲೇ ನುಡಿದ)

ಮಹಾತ್ಮರು : ನಿನ್ನ ಅಂತರಂಗದಲ್ಲಿ ಒಂದು ರತ್ನವಿದೆ; ಅದನ್ನು ಕಂಡಿರುವೆಯಾ?

ರತ್ನಪರೀಕ್ಷಕ : ಏನು ಸ್ವಾಮಿ! ರತ್ನಗಳು ತಿಜೋರಿಗಳಲ್ಲಿ ಇರುತ್ತವೆಯೋ ಅಥವಾ ಅಂತರಂಗದಲ್ಲಿ ಇರುತ್ತವೆಯೋ?

ಮಹಾತ್ಮರು : ಅಹುದು ಹೃದಯವೂ ಒಂದು ಖಜಾನೆ; ಅದರಲ್ಲಿ ದಿವ್ಯ ರತ್ನ ವೊಂದಿದೆ. ಅದುವೇ ''ಜ್ಞಾನರತ್ನ'', ''ಪರಮಾತ್ಮರತ್ನ''. ಇದರ ಅರಿವು ನಿನಗಿದೆಯಾ?

ರತ್ನಪರೀಕ್ಷಕ : ಹೇ ಸ್ವಾಮಿನ್ ! ಒಳಗೊಂದು ರತ್ನವಿದೆ ಎಂಬ ಶಬ್ದವನ್ನು ಇಂದೇ ನಿಮ್ಮ ಮುಖದಿಂದಲೇ ಕೇಳುತ್ತಿದ್ದೇನೆ. ಅದನ್ನು ನಾನು ಕಂಡೂ ಇಲ್ಲ, ಅದರ ಅನುಭವವೂ ನನಗಿಲ್ಲ.

ರತ್ನಪರೀಕ್ಷಕನ ಈ ಉತ್ತರವನ್ನು ಕೇಳಿದ ಮಹಾತ್ಮರು ಹೊರಗಿನ ಈ ಕಲ್ಲುಗಳನ್ನೇ ರತ್ನಗಳೆಂದು ತಿಳಿದು ಅವುಗಳ ಪರೀಕ್ಷಣೆಯಲ್ಲಿಯೇ ಅಮೂಲ್ಯವಾದ ಆಯುಷ್ಯವನ್ನು ಕಳೆದು ತನ್ನೊಳಗಿನ ಜ್ಞಾನರತ್ನವನ್ನೇ ಕಡೆಗಣಿಸಿದ ವಯೋವೃದ್ಧ ರತ್ನಪರೀಕ್ಷನ ಬಗ್ಗೆ ಕ್ರುದ್ಧರಾಗಿ ರಾಜನಿಗೆ ಹೇಳುತ್ತಾರೆ–ಹೇ ರಾಜನ್ ! ಮಧ್ಯಾಹ್ನದ ಬಿಸಿಲಿನಲ್ಲಿ ಈತನ

ಕಲಹವನ್ನು ಆರಂಭಿಸಿದರು. ಇದನ್ನು ನೋಡಿ ರಾಜನಿಗೆ ಸಮಾಧಾನವಾಗಲಿಲ್ಲ. ಇವರಾರೂ ಶ್ರೇಷ್ಠ ಪರೀಕ್ಷಕರಲ್ಲವೆಂಬುದನ್ನು ನಿರ್ಧರಿಸಿ ದೇಶದಲ್ಲೆಲ್ಲ ಡಂಗುರ ಸಾರಿಸಿದ–''ಅನುಭವಿಯಾದ ರತ್ನ ಪರೀಕ್ಷಕರಿದ್ದರೆ ಆಸ್ಥಾನಕ್ಕೆ ಬರಬೇಕು. ಅವರಿಗೆ ಯೋಗ್ಯ ಬಹುಮಾನವನ್ನು ಕೊಟ್ಟು ಸತ್ಕರಿಸಲಾಗುವುದೆಂದು.''

ರತ್ನ ಪರೀಕ್ಷಣೆಯ ಸುದ್ದಿಯು ಕರ್ಣೋಪಕರ್ಣಿಕೆಯಾಗಿ ದೇಶದ ತುಂಬೆಲ್ಲ ಬಹುಬೇಗ ಹರಡಿತು. ದೇಶದ ಮೂಲೆ–ಮೂಲೆಗಳಿಂದ ರತ್ನ ಪರೀಕ್ಷಕರು ರಾಜನ ಆಸ್ಥಾನವನ್ನು ತಲುಪಿದರು. ಬಂದ ರತ್ನ ಪರೀಕ್ಷಕರಲ್ಲಿ ಒಬ್ಬೊಬ್ಬರನ್ನೇ ಕರೆದು ನಿನಗೆ ಈ ವಿದ್ಯೆಯನ್ನು ಕಲಿಸಿದ ಗುರು ಯಾರು? ನಿನಗಿರುವ ಅನುಭವ ಎಷ್ಟು ವರ್ಷದ್ದು? ಮುಂತಾಗಿ ಮಹಾರಾಜರು ಪ್ರಶ್ನಿಸತೊಡಗಿದರು. ಕೊನೆಗೆ ಇವರೆಲ್ಲರಿಗೂ ಗುರುವಾದ ಎಂಭತ್ತು ವರ್ಷದ ಅನುಭವವುಳ್ಳ ತೊಂಬತ್ತೊಂಭತ್ತು (೯೯) ವರ್ಷ ವಯಸ್ಸಿನ ವಯೋವೃದ್ಧನೋರ್ವನು ರಾಜನ ಸಮ್ಮುಖಕ್ಕೆ ಬಂದನು. ರಾಜನಿಗೆ ಪರಮಾನಂದ ವಾಯಿತು. ಉಳಿದವರೆಲ್ಲರೂ ಇವನ ಶಿಷ್ಯರೇ ಆದ್ದರಿಂದ ಮಹಾ ಅನುಭವಿಯಾದ ಇವನಿಂದಲೇ ಈ ರತ್ನವನ್ನು ಪರೀಕ್ಷಿಸಬೇಕೆಂದು ವಿಚಾರಿಸಿ ಆ ರತ್ನವನ್ನು ಇವನ ಕೈಗೆ ಕೊಟ್ಟು ಇದನ್ನು ಪರೀಕ್ಷಿಸಿ ಇದರ ಮೌಲ್ಯವನ್ನು ನಿರ್ಧರಿಸಲು ಆಜ್ಞಾಪಿಸಿದನು.

ಆ ರತ್ನವನ್ನು ತನ್ನ ಕೈಗೆ ತೆಗೆದುಕೊಂಡ ಆ ವೃದ್ಧನು–ಹೇ ರಾಜನ್ ಇದನ್ನು ಪರೀಕ್ಷಿಸಲು ಒಂದು ಸಪ್ತಾಹ ಸಮಯ ಬೇಕಾಗುವದು. ಕಾರಣ ತಾವು ನನಗೆ ಸ್ವತಂತ್ರವಾದ ಒಂದು ರೂಮಿನ ವ್ಯವಸ್ಥೆಮಾಡಿರಿ. ಒಂದು ಸಪ್ತಾಹದ ನಂತರ ಇದರ ನಿರ್ದಿಷ್ಟ ಬೆಲೆಯನ್ನು ಪ್ರಸಿದ್ಧ ಪಡಿಸುವೆನೆಂದು ನಿವೇದಿಸಿಕೊಂಡನು. ಅವನ ಅಪೇಕ್ಷೆ ಯಂತೆ ಎಲ್ಲ ವ್ಯವಸ್ಥೆಯೂ ಆಯಿತು. ಜನರಿಗೆಲ್ಲ ಕುತೂಹಲ ಕೆರಳಿತು. ಒಂದು ವಾರದ ಪ್ರತೀಕ್ಷೆಯಲ್ಲಿಯೇ ಎಲ್ಲರೂ ಕಾಲಕಳೆದರು. ನಿರ್ಧರಿಸಿದ ಸಮಯಕ್ಕೆ ಆ ವಯೋ ವೃದ್ಧನು ಆಸ್ಥಾನಕ್ಕೆ ಬಂದು ಹೇ ರಾಜನ್! ಈ ರತ್ನವು ಒಂದು ಕೋಟಿ ರೂಪಾಯಿ ಬೆಲೆ ಬಾಳುವುದು ಎಂಬುದಾಗಿ ಅದರ ಬೆಲೆಯನ್ನು ನಿಶ್ಚಿತವಾಗಿ ನಿರ್ಧರಿಸಿದನು. ಇವನ ಬೆಲೆಯ ನಿರ್ಧಾರಣೆಯನ್ನು ಕೇಳಿ ವ್ಯಾಪಾರಿಯೂ ಸಂತುಷ್ಟನಾದನು. ಆದರೆ ರಾಜನ ಮನಸ್ಸಿನಲ್ಲಿ ಒಂದು ಪ್ರಶ್ನೆ ಪ್ರಾದುರ್ಭವಿಸಿತು–ಇದರಲ್ಲಿರುವ ವೈಶಿಷ್ಟ್ಯವಾದರೂ ಏನು ? ಇಷ್ಟೊಂದು ಹಣವನ್ನು ಯಾಕೆ ಕೊಡಬೇಕು ? ಈ ಪ್ರಶ್ನೆಯನ್ನು ರಾಜನು ಬಹಿರಂಗವಾಗಿ ರತ್ನಪರೀಕ್ಷಕನನ್ನು ಕೇಳಿಯೇ ಬಿಟ್ಟನು.

ಆಗ ಆ ವಯೋವೃದ್ಧನು, ''ಹೇ ರಾಜನ್! ಇದೊಂದು ಸಿದ್ಧರತ್ನವು; ಇದು ಸ್ವಯಂ ಪ್ರಕಾಶಮಾನವಾದದ್ದು. ಈ ರತ್ನವಿರುವ ರೂಮಿನಲ್ಲಿ ದೀಪಹಚ್ಚುವ ಅವಶ್ಯಕತೆ ಇರುವುದಿಲ್ಲ; ಇದರ ಬೆಳಕಿನಿಂದಲೇ ಕತ್ತಲೆಯು ಸರಿಯುವುದು; ಅಲ್ಲದೇ ಇದು ಯಾರಲ್ಲಿ ಇರುವುದೋ ಅವರ ಮನೋರಥಗಳೆಲ್ಲ ಪೂರ್ಣಗೊಳ್ಳುವುವು.'' ಎಂದನು

ರತ್ನದ ಮಹಿಮೆಯನ್ನರಿತ ರಾಜನಿಗೆ ಪರಮ ಸಂತೋಷವಾಯಿತು. ವ್ಯಾಪಾರಿಗೆ ಒಂದು ಕೋಟಿ ರೂಪಾಯಿಗಳನ್ನು ಕೊಟ್ಟು ಕಳುಹಿಸಿದ ರಾಜನ ಮನಸ್ಸಿನಲ್ಲಿ ಈ ರತ್ನ ಪರೀಕ್ಷಕನಿಗೆ ಏನು ಬಹುಮಾನ ಕೊಡಬೇಕು ? ಎಂಬ ಮತ್ತೊಂದು ಪ್ರಶ್ನೆಯು

ಪ್ರಾದುರ್ಭವಿಸಿತು. ಆಸ್ಥಾನ ವಿದ್ವಾಂಸರೆಲ್ಲರನ್ನು ಕೇಳಲಾಗಿ ಸಾವಿರ, ಐದುಸಾವಿರ, ಹತ್ತುಸಾವಿರ ರೂಪಾಯಿ ಮುಂತಾಗಿ ಭಿನ್ನಭಿನ್ನ ಅಭಿಪ್ರಾಯಗಳು ಪ್ರಾಪ್ತವಾದವು, ನಿರ್ದಿಷ್ಟವಾಗದಿದ್ದರಿಂದ ರಾಜನಿಗೆ ಸಮಾಧಾನವಾಗಲಿಲ್ಲ. ಪುನಃ ದೇಶದಲ್ಲಿ ಡಂಗುರ ಸಾರಿಸಿದ 'ರತ್ನ ಪರೀಕ್ಷಕನಿಗೆ ಏನು ಮಾನಧನ ಕೊಡಬೇಕೆಂದು'.

ದೇಶದ ತುಂಬೆಲ್ಲ ಇದೇ ಸುದ್ದಿಯೇ ಸುದ್ದಿ. ತತ್ತ್ವಜ್ಞಾನದ ತಪಸ್ವಿಯೋರ್ವನು ರಾಜರ ಆಸ್ಥಾನದಮುಂದೆ ಹಾದು ಹೊರಟಿದ್ದ. ಈ ಗದ್ದಲವನ್ನು ನೋಡಿ ಕ್ಷಣಕಾಲ ನಿಂತುಕೊಂಡು ಎಲ್ಲವನ್ನೂ ತಿಳಿದುಕೊಂಡು, ರಾಜನಬಳಿಗೆ ಹೋಗಿ ಹೇಳಿದ–ನಾನು ರತ್ನಪರೀಕ್ಷನ ಬೆಲೆ ಕಟ್ಟುತ್ತೇನೆ ಎಂದು. ರಾಜನಿಗೆ ಪರಮ ಸಂತೋಷವಾಯಿತು. ಮನುಷ್ಯರ ಬೆಲೆಯನ್ನು ಮಹಾತ್ಮರೇ ಕಟ್ಟಬಲ್ಲರು ಎಂದು ಆಲೋಚಿಸಿದ ರಾಜನು ಮಹಾತ್ಮರಿಗೆ ವಿನಂತಿಸಿಕೊಂಡ – ಈ ರತ್ನ ಪರೀಕ್ಷಕನಿಗೆ ಏನು ಮಾನಧನ ಕೊಡ ಬೇಕೆಂದು. ಆಗ ಮಹಾತ್ಮರು ಆ ವಯೋವೃದ್ಧನನ್ನು ಆಪಾದ ಮಸ್ತಕ ನಿರೀಕ್ಷಿಸಿ ಅವನನ್ನು ಪ್ರಶ್ನಿಸುತ್ತಾರೆ–

ಮಹಾತ್ಮರು : ಭೋ ಪರೀಕ್ಷಕ ! ನಿನಗೆ ವಯಸ್ಸು ಎಷ್ಟು?

ರತ್ನಪರೀಕ್ಷಕ : ಸ್ವಾಮಿನ್ ! ನನಗೀಗ ೯೯ ವರ್ಷಗಳು ಮುಗಿಯುತ್ತ ಬಂದಿವೆ.

ಮಹಾತ್ಮರು : ರತ್ನ ಪರೀಕ್ಷಣೆಯ ವ್ಯವಹಾರವನ್ನು ಪ್ರಾರಂಭಿಸಿ ಎಷ್ಟು ವರ್ಷಗಳಾದವು?

ರತ್ನಪರೀಕ್ಷಕ : ಸ್ವಾಮಿನ್ ! ೮೦ ವರ್ಷಗಳಾಗಿವೆ.

ಮಹಾತ್ಮರು : ಇಷ್ಟೊಂದು ಸಮಯವನ್ನು ಈ ರತ್ನ ಪರೀಕ್ಷಣೆಗಾಗಿಯೇ ಕಳೆದೆಯಾ?

ರತ್ನಪರೀಕ್ಷಕ : ಅಹುದು ಸ್ವಾಮಿ. (ಅಭಿಮಾನದಿಂದಲೇ ನುಡಿದ)

ಮಹಾತ್ಮರು : ನಿನ್ನ ಅಂತರಂಗದಲ್ಲಿ ಒಂದು ರತ್ನವಿದೆ; ಅದನ್ನು ಕಂಡಿರುವೆಯಾ?

ರತ್ನಪರೀಕ್ಷಕ : ಏನು ಸ್ವಾಮಿ! ರತ್ನಗಳು ತಿಜೋರಿಗಳಲ್ಲಿ ಇರುತ್ತವೆಯೋ ಅಥವಾ ಅಂತರಂಗದಲ್ಲಿ ಇರುತ್ತವೆಯೋ?

ಮಹಾತ್ಮರು : ಅಹುದು ಹೃದಯವೂ ಒಂದು ಖಜಾನೆ; ಅದರಲ್ಲಿ ದಿವ್ಯ ರತ್ನ ವೊಂದಿದೆ. ಅದುವೇ ''ಜ್ಞಾನರತ್ನ'', ''ಪರಮಾತ್ಮರತ್ನ''. ಇದರ ಅರಿವು ನಿನಗಿದೆಯಾ?

ರತ್ನಪರೀಕ್ಷಕ : ಹೇ ಸ್ವಾಮಿನ್ ! ಒಳಗೊಂದು ರತ್ನವಿದೆ ಎಂಬ ಶಬ್ದವನ್ನು ಇಂದೇ ನಿಮ್ಮ ಮುಖದಿಂದಲೇ ಕೇಳುತ್ತಿದ್ದೇನೆ. ಅದನ್ನು ನಾನು ಕಂಡೂ ಇಲ್ಲ, ಅದರ ಅನುಭವವೂ ನನಗಿಲ್ಲ.

ರತ್ನಪರೀಕ್ಷಕನ ಈ ಉತ್ತರವನ್ನು ಕೇಳಿದ ಮಹಾತ್ಮರು ಹೊರಗಿನ ಈ ಕಲ್ಲುಗಳನ್ನೇ ರತ್ನಗಳೆಂದು ತಿಳಿದು ಅವುಗಳ ಪರೀಕ್ಷಣೆಯಲ್ಲಿಯೇ ಅಮೂಲ್ಯವಾದ ಆಯುಷ್ಯವನ್ನು ಕಳೆದು ತನ್ನೊಳಗಿನ ಜ್ಞಾನರತ್ನವನ್ನೇ ಕಡೆಗಣಿಸಿದ ವಯೋವೃದ್ಧ ರತ್ನಪರೀಕ್ಷನ ಬಗ್ಗೆ ಕ್ರುದ್ಧರಾಗಿ ರಾಜನಿಗೆ ಹೇಳುತ್ತಾರೆ–ಹೇ ರಾಜನ್ ! ಮಧ್ಯಾಹ್ನದ ಬಿಸಿಲಿನಲ್ಲಿ ಈತನ

ಮೈಮೇಲಿನ ಬಟ್ಟೆಗಳನ್ನೆಲ್ಲ ಕಳೆಯಿಸಿ ಒಂದು ಸ್ತಂಭಕ್ಕೆ ಕಟ್ಟಿ ಈತನ ಮೇಲೆ ಬಿಸಿನೀರನ್ನು ಹಾಕಿ ಚರ್ಮದ ಚಾಬೂಕದಿಂದ ಬಲವಾಗಿ ಸಾವಿರ ಪೆಟ್ಟುಗಳನ್ನು ಕೊಡಿರಿ–ಇದುವೇ ಇವನಿಗೆ ಕೊಡಬೇಕಾದ ಯೋಗ್ಯ ಬಹುಮಾನ.

ರಾಜ : ಹೇ ಮಹಾತ್ಮನ್ ! ಈತನಿಗೆ ಕೊಡಬೇಕಾದ ಬಹುಮಾನವೇನು? ಎಂಬುದಾಗಿ ನಾವು ಕೇಳಿದರೆ ತಾವು ಶಿಕ್ಷೆಯನ್ನು ವಿಧಿಸುತ್ತಿದ್ದೀರಲ್ಲ? ಇದು ನ್ಯಾಯವೇ ?

ಮಹಾತ್ಮರು : ಹೇ ರಾಜನ್ ! ಅಂತರಂಗದ ಪರಮಾತ್ಮರತ್ನವನ್ನರಿಯದೇ ಆಯುಷ್ಯವನ್ನೆಲ್ಲ ವ್ಯರ್ಥವಾಗಿ ಕಳೆದ ಪ್ರತಿಯೊಬ್ಬ ಮನುಷ್ಯನಿಗೆ ಕೊನೆಯ ಗಳಿಗೆಯಲ್ಲಿ ದೊರೆಯುವ ಬಹುಮಾನವೇ ಇದು. ಜೀವನದಲ್ಲಿ ಏನನ್ನು ಸಂಪಾದಿಸಿದರೂ ಅದೆಲ್ಲ ವನ್ನೂ ಬಂಧುಬಾಂಧವರೆಲ್ಲ ಹಂಚಿಕೊಂಡು, ಮೈಮೇಲಿನ ಬೆಲೆಬಾಳುವ ವಸ್ತ್ರ ವಡವೆ ಗಳನ್ನೆಲ್ಲ ಕಳಚಿಕೊಂಡು ಸಾಧಾರಣವಾದ ಬಟ್ಟೆಯನ್ನು ತೊಡಿಸಿ ಮೃತವಾದ ದೇಹವನ್ನು ಮಣ್ಣಿನಲ್ಲಿಯಾದರೂ ಹುಗಿಯುವರು, ಇಲ್ಲವೇ ಅಗ್ನಿಯಲ್ಲಿಯಾದರೂ ಸುಟ್ಟುಬಿಡುವ ರಲ್ಲವೇ ? ಭೌತಿಕ ಸಂಪತ್ತನ್ನು ಎಷ್ಟೊಂದು ಸಂಪಾದಿಸಿದರೂ ಕೊನೆಗೆ ಲೋಕದ ಜನ ರಿಂದ ದೊರೆಯುವ ಪುರಸ್ಕಾರ ಇದುವೇ ಅಲ್ಲವೇ ? ಆದ್ದರಿಂದ ಈತನಿಗೆ ಇನ್ನೂ ಸ್ವಲ್ಪ ಆಯ್ಯುಷ್ಯವಿದೆ. ಇನ್ನೂ ಮೇಲಾದರೂ ಎಚ್ಚರಾಗಿ ಅಂತರಂಗದ ಪರಮಾತ್ಮರತ್ನವನ್ನು ತಿಳಿದುಕೊಳ್ಳಲೆಂಬ ಉದ್ದೇಶದಿಂದಲೇ ಇವನಿಗೆ ಈ ಶಿಕ್ಷೆಯನ್ನು ವಿಧಿಸಿದ್ದು.

ಮಹಾತ್ಮರ ಈ ಉಪದೇಶವನ್ನು ಕೇಳಿ ಆ ವಯೋವೃದ್ಧನಷ್ಟೇ ಅಲ್ಲ ರಾಜನೇ ಮೊದಲುಗೊಂಡು ಸಕಲ ಪ್ರಜರೆಲ್ಲ ಜಾಗ್ರತರಾಗಿ ಪೂಜ್ಯರಿಂದ ಕೆಲಕಾಲ ಜ್ಞಾನಾಮೃತ ವನ್ನು ಪಾನಮಾಡಿ ಅಂತರಂಗದಲ್ಲಿಯ ಪರಮಾತ್ಮಜ್ಯೋತಿಯನ್ನರಿತು ಕೃತಕೃತ್ಯರಾದರು.

ಪರಮಾತ್ಮನಿಗೆ ಉಪನಿಷತ್ತಿನಲ್ಲಿ ''ಭಸ್ಮಜ್ಯೋತಿ'' ಎಂಬುದಾಗಿ ಕರೆದಿರುವ ಕಾರಣ ಆ ಭಸ್ಮಜ್ಯೋತಿಸ್ವರೂಪನಾದ ಪರಶಿವನನ್ನು ಹೃದಯದಲ್ಲಿ ನಿರಂತರ ಚಿಂತಿಸು ವುದೇ ನಿರುಪಾಧಿಕ ಭಸ್ಮಧಾರಣೆಯು. ಇಂತಹ ನಿರುಪಾಧಿಕ ಭಸ್ಮಧಾರಣೆಯಿಂದ ಸಾಧಕನ ಮಾನಸಿಕ ದುರ್ವಾಸನೆಗಳೆಲ್ಲ ತೊಲಗಿ ಪವಿತ್ರಾತ್ಮನಾಗುತ್ತಾನೆ. ಆದ್ದರಿಂದ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಈ ಭಸ್ಮ ಧಾರಣೆಯ ಸ್ಥಲದ ಪ್ರಾರಂಭದಲ್ಲಿ ಸರ್ವಶ್ರೇಷ್ಠವೂ ಉಪಾಧಿರಹಿತವೂ ಆದ ನಿರುಪಾಧಿಕ ಭಸ್ಮಧಾರಣೆಯ ವಿಧಿಯನ್ನು ತಿಳಿಯಪಡಿಸಿ ಇನ್ನೂ ಮುಂದೆ ಸರ್ವಜನೋಪಯೋಗಿಯಾದ ಶರೀರದ ಮೇಲೆ ಧರಿಸಲ್ಪಡುವ ಸೋಪಾಧಿಕ ಭಸ್ಮದ ಸ್ವರೂಪ, ಮಹತ್ತ್ವ, ಧಾರಣವಿಧಿ ಹಾಗೂ ನಿರ್ಮಾಣ ವಿಧಿಗಳನ್ನು ವಿಸ್ತಾರವಾಗಿ ಉಪದೇಶಿಸಿದ್ದಾರೆ.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೧ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

ಆಶೀರ್ವಚನ-೨

ಶಿವಾಗ್ನ್ಯಾದಿಸಮುತ್ಪನ್ನ ಮಂತ್ರನ್ಯಾಸಾದಿಯೋಗತಃ ||
ತತ್ಸೋಪಾಧಿಕ ಮಿತ್ಯಾಹುರ್ಭಸ್ಮತಂತ್ರ ವಿಶಾರದಾಃ (ಸಿ. ಶಿ. ೭.೩)

ಸದ್ಯೋಜಾತಾದಿ ಮಂತ್ರಗಳಿಂದ ಸುಸಂಸ್ಕೃತವಾದ ಗೋಮಯವನ್ನು ಶಿವಮಂತ್ರ ಸಂಸ್ಕೃತವಾದ ಅಗ್ನಿಯಲ್ಲಿ ದಹಿಸಲ್ಪಟ್ಟು, ನಿರ್ಮಾಣಗೊಳಿಸಿದ ಭಸ್ಮಕ್ಕೆ, ಭಸ್ಮಶಾಸ್ತ್ರ ವಿಶಾರದರು ''ಸೋಪಾಧಿಕ ಭಸ್ಮ'' ವೆಂಬುದಾಗಿ ಕರೆಯುತ್ತಾರೆ.

ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ |
ಏತಾನಿ ಪಂಚ ನಾಮಾನಿ ಹೇತುಬಿಃ ಪಂಚಭಿರ್ಭೃಶಂ (ಸಿ. ಶಿ. ೭.೪)

ಬಹು ಮುಖ್ಯಗಳಾದ ಐದು ಕಾರಣಗಳಿಂದ ಭಸ್ಮಕ್ಕೆ ವಿಭೂತಿ, ಭಸಿತ, ಭಸ್ಮ ಕ್ಷಾರ, ಎಂಬುದಾಗಿ ಐದು ಹೆಸರುಗಳು ಪ್ರಾಪ್ತವಾಗಿರುತ್ತವೆ.

ವಿಭೂತಿರ್ಭೂತಿ ಹೇತುತ್ವಾದ್ಭಸಿತಂ ತತ್ತ್ವಭಾಸನಾತ್ |
ಪಾಪಾನಾಂ ಭರ್ತ್ಸನಾದ್ಭಸ್ಮ ಕ್ಷಾರಣಾತ್ ಕ್ಷಾರಮಾಪದಾಂ
ರಕ್ಷಣಾತ್ಸರ್ವಭೂತೇಭ್ಯೋ ರಕ್ಷೇತಿ ಪರಿಗೀಯತೇ | (ಸಿ. ಶಿ. ೭.೫)

ಅಣಿಮಾದಿ ಅಷ್ಟೈಶ್ವರ್ಯಗಳು ಪ್ರಾಪ್ತವಾಗುವುದರಿಂದ ಇದಕ್ಕೆ ವಿಭೂತಿ, ಶಿವತತ್ತ್ವವನ್ನು ಪ್ರಕಾಶಿಸುವುದರಿಂದ ಭಸಿತ, ತ್ರಿಕರಣಗಳಿಂದುಂಟಾದ ಪಾಪಗಳಿಗೆ ಬೆದರಿಕೆಯನ್ನುಂಟು ಮಾಡುವುದರಿಂದ ಭಸ್ಮ, ತಾಪತ್ರಯಗಳಿಂದ ಪ್ರಾದುರ್ಭವಿಸುವ ವಿಪತ್ತುಗಳನ್ನು ನಾಶಗೊಳಿಸುವುದರಿಂದ ಕ್ಷಾರ ಮತ್ತು ಗ್ರಹಾದಿಗಳ ಭೀತಿಯಿಂದ ರಕ್ಷಿಸುವುದರಿಂದ ರಕ್ಷಾ ಹೀಗೆ ಐದು ಮಹತ್ವ ಪೂರ್ಣಗಳಾದ ಪ್ರಯೋಜನಗಳು ಸಿದ್ಧಿಸುವುದರಿಂದ ವಿಭೂತಿಯ ಈ ಐದು ಹೆಸರುಗಳು ಸಾರ್ಥಕವಾಗಿರುತ್ತವೆ.

**ಸೋಪಾಧಿಕ ಭಸ್ಮ :**

ಶ್ರೀ ಜಗದ್ಗುರು ರೇಣುಕರು ಇಲ್ಲಿಯವರೆಗೆ ಶ್ರೀ ಅಗಸ್ತ್ಯಮಹರ್ಷಿಯನ್ನುದ್ದೇಶಿಸಿ ''ನಿರುಪಾಧಿಕ ಭಸ್ಮ''ದ ಸ್ವರೂಪ ಹಾಗೂ ಮಹತಿಯನ್ನು ತಿಳಿಯಪಡಿಸಿ, ಇನ್ನು ''ಸೋಪಾಧಿಕ ಭಸ್ಮ''ದ ಸ್ವರೂಪ ಮತ್ತು ಅದರ ಪ್ರಯೋಜನವನ್ನು ವಿಶದಪಡಿಸುತ್ತಿದ್ದಾರೆ.

ಪ್ರಕೃತದಲ್ಲಿ ''ನಿರುಪಾಧಿ'' ಮತ್ತು ''ಸೋಪಾಧಿ'' ಎಂಬ ಶಬ್ದಗಳಿಗೆ ''ಉಪಾಧಿ ರಹಿತ'' ಹಾಗೂ ''ಉಪಾಧಿಸಹಿತ'' ಎಂಬುದಾಗಿ ಸಾಮಾನ್ಯಾರ್ಥವಾಗುವದುಂಟು. ಹೊರಗಿನ ಯಾವದೇ ಸಾಮಾಗ್ರಿಯ ಅಪೇಕ್ಷೆ ಇಲ್ಲದೇ ಪರಿಶುದ್ಧವಾದ ಮನಸ್ಸಿನಿಂದ ಪರಶಿವನ ಚಿದ್ರೂಪದ ಚಿಂತನೆಯು ನಿರುಪಾಧಿಕ ಭಸ್ಮಧಾರಣೆಯಾದರೆ, ಗೋಮಯವೆಂಬ ಬಾಹ್ಯ ಉಪಾಧಿಯಿಂದ ನಿರ್ಮಾಣಗೊಳಿಸಲ್ಪಟ್ಟ ವಿಭೂತಿಯನ್ನು ಬಾಹ್ಯ ಅವಯವಗಳಲ್ಲಿ ಶಾಸ್ತ್ರೋಕ್ತ ವಿಧಿಗನುಸಾರವಾಗಿ ಧರಿಸುವುದು, ಸೋಪಾಧಿಕ ಭಸ್ಮ ಧಾರಣೆಯು ಈ ಸೋಪಾಧಿಭಸ್ಮದ ನಿರ್ಮಾಣ ವಿಧಿಯನ್ನು ಮುಂದೆ ಪೂಜ್ಯರೇ ವಿಶದ

ಪಡಿಸುವವರಿರುವುದರಿಂದ ಸದ್ಯಃ ಈ ಸೋಪಾಧಿ ಭಸ್ಮದ ಐದು ಹೆಸರುಗಳ ಮರ್ಮ ವನ್ನವಲೋಕಿಸೋಣ.

ವೀರಶೈವ ಸಿದ್ಧಾಂತದ ಅಷ್ಟಾವರಣಗಳಲ್ಲಿ ''ವಿಭೂತಿ''ಯೂ ಒಂದು ಪ್ರಮುಖ ವಾದ ಆವರಣವು. ''ಆವ್ರಿಯತೇ ದೇಹಾದಿಕಂ ಏನ ತದ್ ಆವರಣಮ್'' ಎಂಬ ವ್ಯುತ್ಪತ್ತಿಯ ಮೇರೆಗೆ ಶರೀರ ಹಾಗೂ ಮನಸ್ಸುಗಳನ್ನು ಸಂರಕ್ಷಿಸುವ ಭದ್ರವಾದ ಕವಚವೇ ಆವರಣವು. ಷಟ್‌ಸ್ಥಲ ಮಾರ್ಗದಲ್ಲಿ ಮುನ್ನಡೆಯುತ್ತಿರುವ ಸಾಧಕನಿಗೆ ಅರಿಷಡ್ವರ್ಗಗಳ ಬಾಧೆಯುಂಟಾಗಬಾರದೆಂಬ ಉದ್ದೇಶದಿಂದ ನಮ್ಮ ಆಚಾರ್ಯರು ನಮಗೆ ಒಂದಲ್ಲ ಎರಡಲ್ಲ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರಗಳೆಂಬ ಎಂಟು ಭದ್ರಗಳಾದ ಕವಚಗಳನ್ನು ಹೊದಿಸಿದ್ದಾರೆ. ಇವುಗಳ ಮರ್ಮವನ್ನರಿಯದ ಇಂದಿನ ಮೂಢ ಜನರು ಒಂದೊಂದು ಆವರಣಗಳನ್ನು ಕಳೆದುಕೊಳ್ಳುತ್ತ ಇಂದಿನ ಕಲಿಕಾಲದಲ್ಲಿ ಸಂಪೂರ್ಣ ನಿರಾವೃತರಾಗಿದ್ದಾರೆ. ಗುರು–ಲಿಂಗ–ಜಂಗಮರಲ್ಲಿ ಶ್ರದ್ಧೆಯಿಲ್ಲ, ವಿಭೂತಿ–ರುದ್ರಾಕ್ಷಿ–ಮಂತ್ರಗಳಲ್ಲಿ ನಿಷ್ಠೆ ಇಲ್ಲ ಮತ್ತು ಪಾದೋದಕ ಪ್ರಸಾಧಗಳಲ್ಲಿ ಅವಧಾನವಿಲ್ಲ. ಹೀಗೆ ಅಷ್ಟಾವರಣ ವಿಹೀನರಾಗಿರುವ ಮತ್ತು ಆಗುತ್ತಿರುವ ಮೂಢರ ಪರಿಸ್ಥಿತಿಯು, ಅತ್ಯಂತ ಶೀತ ಪ್ರದೇಶದಲ್ಲಿ ವಸ್ತ್ರ ವಿಹೀನ ನಾದ ದರಿದ್ರನ ಸ್ಥಿತಿಯಂತೆ ಚಿಂತಾಜನಕವಾಗಿದೆ. ಇದೂ ಅಲ್ಲದೇ ಅಂತ ರಂಗ–ಬಹಿರಂಗಗಳೆರಡರಲ್ಲಿಯೂ ತಾಳ್ಮೆಯನ್ನು ಕಳೆದುಕೊಂಡಿದ್ದಾರೆ, ಕಳೆದುಕೊಳ್ಳು ತ್ತಲೂ ಇದ್ದಾರೆ. ಇಂತಹ ಜನರು ತಮ್ಮ ಜೀವನವನ್ನು ಸಮತೋಲನ ಗೊಳಿಸಬೇಕಾಗಿ ದ್ದಾರೆ ವೀರಶೈವ ಅಷ್ಟಾವರಣದಲ್ಲಿ ನಿಷ್ಠೆಯನ್ನು ವಹಿಸುವದು ಪರಮಾವಶ್ಯಕವಾದುದು.

ಬಹಿರಂಗ ಅಷ್ಟಾವರಣಾಂತರ್ಗತವಾದ ವಿಭೂತಿಯು ಪವಿತ್ರವಾದ ಗೋಮಯದಿಂದ ನಿರ್ಮಿತವಾಗಿರುತ್ತದೆ. ಸರ್ವದೋಷಗಳನ್ನು ದೂರೀಕರಿಸಿ, ಸಕಲೈಶ್ವರ್ಯಗಳನ್ನುಂಟು ಮಾಡುವ ಸಾಮರ್ಥ್ಯವು ಈ ವಿಭೂತಿಯಲ್ಲಿದೆ. ಅಂತೆಯೇ ಇದಕ್ಕೆ (೧) ವಿಭೂತಿ, (೨) ಭಸಿತ, (೩) ಭಸ್ಮ (೪) ಕ್ಷಾರ ಎಂಬ ಸಾರ್ಥಕಗಳಾದ ಪಂಚನಾಮಗಳು ಪ್ರಾಪ್ತವಾಗಿವೆ. ಇವುಗಳ ಒಂದೊಂದುದರ ಮಹಿಮೆಯನ್ನಿಲ್ಲಿ ವಿಚಾರಿ ಸೋಣ.

### (೧) ವಿಭೂತಿ :

''ವಿಭೂತಿರ್ಭೂತಿ ಹೇತುತ್ವಾತ್'' ಎಂಬ ಆಚಾರ್ಯರ ಉಕ್ತಿಗನುಸಾರವಾಗಿ ''ಭೂತಿ''ಗೆ ಕಾರಣವಾದದ್ದು ವಿಭೂತಿಯು ''ಭೂತಿರ್ಭಸ್ಮನಿ ಸಂಪದಿ'' (ಅ. ಕೋಶ. ೩–೬೯) ಎಂಬ ಅಮರಸಿಂಹನ ವಾಕ್ಯದಂತೆ ''ಭೂತಿ'' ಎಂದರೆ ಸಂಪತ್ತು ಎಂಬು ದಾಗಿಯೂ ಅರ್ಥವಾಗುತ್ತದೆ. ಇದು ಭೌತಿಕ ಸಂಪತ್ತೆಂತಲೂ ಮತ್ತು ಜ್ಞಾನ ಸಂಪತ್ತೆಂತಲೂ ಎರಡು ವಿಧ. ಮನುಷ್ಯ ಜೀವನಕ್ಕೆ ಈ ಉಭಯ ವಿಧ ಸಂಪತ್ತುಗಳು ಅತ್ಯಾವಶ್ಯಕವಾದವುಗಳು. ಶಾಸ್ತ್ರೋಕ್ತ ವಿಧಿಯಂತೆ ಶ್ರದ್ಧೆಯಿಂದ ವಿಭೂತಿಯನ್ನು ಪ್ರತಿ ದಿವಸ ಧರಿಸಿದ್ದಾದರೆ ಈ ಉಭಯ ವಿಧ ಸಂಪತ್ತುಗಳು ಸಹಜವಾಗಿ ಪ್ರಾಪ್ತವಾಗುತ್ತವೆ.

ಆಗಮ ಹಾಗೂ ಉಪನಿಷತ್ತುಗಳಲ್ಲಿ ಗೋಮಯ (ಆಕಳ ಶೆಗಣಿ) ದಿಂದ ವಿಭೂತಿಯನ್ನು ತಯಾರಿಸುವ ವಿಧಾನವು ಉಕ್ತವಾಗಿದೆ. ಗೋಮಯದಲ್ಲಿ ಲಕ್ಷ್ಮಿಯ ನಿವಾಸವಿರುತ್ತದೆ. ಲಕ್ಷ್ಮೀ ಸ್ವರೂಪವಾದ ಗೋಮಯದಿಂದ ನಿರ್ಮಿಸಲ್ಪಟ್ಟ ವಿಭೂತಿ ಯನ್ನು ಧರಿಸುವುದರಿಂದ ಭೌತಿಕ ಸಂಪತ್ತು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ.

ಗೋವಿನ ಸಮಸ್ತ ಅವಯವಗಳಲ್ಲಿ ವಿಭಿನ್ನ ದೇವತೆಗಳು ನಿವಾಸ ಮಾಡಿರುವ ದಾಗಿ ಸ್ಕಂದ ಪುರಾಣದ ರೇಖಾಖಂಡ, ಪದ್ಮ ಪುರಾಣದ ಸೃಷ್ಟಿ ಖಂಡ, ಭವಿಷ್ಯ ಪುರಾಣದ ಉತ್ತರಭಾಗ ಮತ್ತು ಮಹಾಭಾರತದಲ್ಲಿ ಸ್ಪಷ್ಟ ಉಲ್ಲೇಖವಿರುತ್ತದೆ. ಅಲ್ಲಿ ಬರುವ ಕಥಾವಸ್ತುವೇನೆಂದರೆ–

ಪ್ರಜರ ಪಾಲನೆಗಾಗಿ ಪ್ರಜಾಪತಿಯು ಗೋವಿನ ಸೃಷ್ಟಿಯನ್ನುಮಾಡಿದನು. ಆಗ ಪರೋಪಕಾರಿಯಾದ ಗೋಮಾತೆಯ ಪವಿತ್ರ ಶರೀರದಲ್ಲಿ ನಿವಾಶಿಸುವ ಇಚ್ಛೆಯು ಎಲ್ಲ ದೇವತೆಗಳಲ್ಲಿ ಪ್ರಾದುರ್ಭವಿಸಿತು. ಅಂತೆಯೇ ಹೃದಯದಲ್ಲಿ ಕಾರ್ತಿಕೇಯ, ಶಿರಸ್ಸಿನಲ್ಲಿ ಬ್ರಹ್ಮಾ, ಹಣೆಯಲ್ಲಿ ಶಿವ, ಎರಡು ಕಣ್ಣುಗಳಲ್ಲಿ ಸೂರ್ಯ ಚಂದ್ರರು, ನಾಲಿಗೆಯಲ್ಲಿ ಸರಸ್ವತಿ, ಹಲ್ಲುಗಳಲ್ಲಿ ಮರುದ್ಗಣರು, ರೋಮ, ಕೂಪಗಳಲ್ಲಿ ಅಸಂಖ್ಯಋಷಿಗಳು, ಬೆನ್ನಿ ನಲ್ಲಿ ಯಮರಾಜ, ಸ್ತನಗಳಲ್ಲಿ ಸಮುದ್ರಾಧಿದೇವತೆಗಳು, ಮೂತ್ರದಲ್ಲಿ ಗಂಗಾ, ಕೊಳಗ ಗಳ ಅಗ್ರಭಾಗದಲ್ಲಿ ಗಂಧರ್ವ ಅಪ್ಸರಸ್ ಹಾಗೂ ನಾಗದೇವತೆಗಳು, ತುಟಿಗಳಲ್ಲಿ ವಸುಗಣರು, ಮುಖದಲ್ಲಿ ಅಗ್ನಿ, ಕುತ್ತಿಗೆಯಲ್ಲಿ ಪಾರ್ವತಿ, ಮೂಗಿನಲ್ಲಿ ಜ್ಯೇಷ್ಠಾದೇವಿ, ನಿತಂಬದಲ್ಲಿ ಪಿತರರು ಮತ್ತು ಬಾಲದಲ್ಲಿ ರಮಾದೇವಿ, ಹೀಗೆ ಸಕಲದೇವತೆಗಳು ತಮಗೆ ದೊರೆತ ಗೋವಿನ ಅಂಗದಲ್ಲಿ ನಿವಾಸಮಾಡಿದರು. ಈ ಸುದ್ದಿಯನ್ನು ಕೇಳಿದ ಲಕ್ಷ್ಮೀದೇವಿಯೂ ಗೋಮಾತೆಯ ಹತ್ತಿರ ಬಂದು ತನಗೂ ಯಾವುದಾದರೊಂದು ಅವಯವದಲ್ಲಿ ಸ್ಥಾನ ಕೊಡಬೇಕಾಗಿ ಬೇಡಿಕೊಂಡಳು. ಎಲ್ಲ ಅವಯವಗಳಲ್ಲಿ ಆಗಲೇ ಸಕಲ ದೇವತೆಗಳು ನಿವಾಸಗೊಂಡಿರುವುದರಿಂದ ನನ್ನ ಯಾವ ಅಂಗದಲ್ಲಿಯೂ ಸ್ಥಾನ ವಿರುವುದಿಲ್ಲ; ಆದರೆ ನೀನು ಅಪೇಕ್ಷೆ ಪಟ್ಟರೆ ಗೋಮಯ (ಶೆಗಣಿ)ದಲ್ಲಿ ನಿವಾಶಿಸ ಬಹುದು ಎಂಬುದಾಗಿ ಗೋಮಾತೆ ಹೇಳಿದಳು– ಆಗ ಸಂತುಷ್ಟಳಾದ ಲಕ್ಷ್ಮೀದೇವಿಯು ಗೋವಿನ ಶಗಣೆಯಲ್ಲಿ ನಿವಾಸಮಾಡಿದಳು. ಹೀಗೆ ಗೋಮಾತೆಯು ಸರ್ವ ದೇವಮಯೀ ಆಗಿದ್ದಾಳೆ. ಅಂತೆಯೇ ವಿಭಿನ್ನ ದೇವೋಪಾಸನೆಯನ್ನು ಮಾಡುವ ಹಿಂದು ಗಳೆಲ್ಲರೂ ಗೋಮಾತೆಯನ್ನು ಆದರದಿಂದ ಪೂಜಿಸುತ್ತಾರೆ.

ಗೋವಿನ ಶೆಗಣೆಯಲ್ಲಿ ಲಕ್ಷ್ಮೀವಾಸವಿದೆ ಎಂಬ ಮಾತು ಕೇವಲ ಪುರಾಣದ ಕಾಲ್ಪನಿಕ ಕಥೆಯಲ್ಲ. ಪ್ರತಿಯೊಬ್ಬ ರೈತನಿಗೆ ಇದರ ಪ್ರತ್ಯಕ್ಷ ಅನುಭವವಿದೆ. ಯಾವ ರೈತನು ಗೋಮಾತೆಯ ಗೋಮಯವನ್ನು ಅಧಿಕ ಪ್ರಮಾಣದಲ್ಲಿ ಸಂಗ್ರಹಿಸಿ ಹೊಲಕ್ಕೆ ಹಾಕುವನೋ ಅವನ ಮನೆಯು ಲಕ್ಷ್ಮೀ ನಿವಾಸವಾಗುವಲ್ಲಿ ಸಂದೇಹವಿಲ್ಲ. ಸುಧಾರಿಸಿದ ಇಂದಿನ ಯುಗದಲ್ಲಿ ರಾಸಾಯನಿಕ ಗೊಬ್ಬರಗಳನ್ನು ಉಪಯೋಗಿಸಿ ಹೆಚ್ಚಿನ ಉತ್ಪಾದನೆ ಯನ್ನು ಮಾಡಿ ಶ್ರೀಮಂತರಾಗುತ್ತಿರಬಹುದು. ಆದರೆ ಈ ರಾಸಾಯನಿಕ ಗೊಬ್ಬರಗಳ ದುಷ್ಪರಿಣಾಮದಿಂದಲೇ ಇಂದು ಬೆಳೆಗಳು ನಾನಾರೋಗಗಳಿಗೆ ತುತ್ತಾಗುತ್ತಿರುತ್ತವೆ.

ಆಕಳ ಶೆಗಣೆಯಲ್ಲಿ ಸ್ವಾಭಾವಿಕ ರೋಗ ನಾಶಕ ಶಕ್ತಿ ಇರುವುದರಿಂದ ಅದರಿಂದ ಬೆಳೆದ ಬೆಳೆಗಳು ರೋಗರಹಿತಗಳಾಗುತ್ತವೆಯಲ್ಲದೇ ಆ ಆಹಾರವನ್ನು ಸೇವಿಸಿದ ಜನರೂ ನೀರೋಗಿಗಳಾಗುತ್ತಾರೆ. ಹೀಗೆ ಭೌತಿಕವಾಗಿ ವಿಚಾರಿಸಿದ್ದಾದರೂ ಗೋವಿನ ಶೆಗಣಿಯಲ್ಲಿ ಲಕ್ಷ್ಮೀನಿವಾಸವಿದ್ದದ್ದು ಸತ್ಯವೆನಿಸುತ್ತದೆ.

ಈ ರೀತಿಯಾಗಿ ಲಕ್ಷ್ಮೀ ನಿವಾಸವಾದ ಗೋಮಯವನ್ನೇ ಸುಸಂಸ್ಕೃತ ಅಗ್ನಿಯಲ್ಲಿ ದಹಿಸಿ ವಿಭೂತಿಯನ್ನು ನಿರ್ಮಾಣ ಗೊಳಿಸುವುದರಿಂದ ; ಅಂತಹ ವಿಭೂತಿಯನ್ನು ಶ್ರದ್ಧೆಯಿಂದ ಧರಿಸಿದಾಗ ಲಕ್ಷ್ಮೀದೇವಿಯ ಅನುಗ್ರಹವು ಅವಶ್ಯವಾಗಿ ಆಗುತ್ತದೆ. ವಿಪರೀತವಾದ ದೈವವನ್ನು ಸರಿಪಡಿಸುವ ಸಾಮರ್ಥ್ಯವು ವಿಭೂತಿಯಲ್ಲಿರುತ್ತದೆ. ಅಂತೆಯೇ ಶ್ರೀನೀಲಕಂಠ ಶಿವಾಚಾರ್ಯರು–

ಏತಾನಿ ತಾನಿ ಶಿವಮಂತ್ರ ಪವಿತ್ರಿ ತಾನಿ
ಭಸ್ಮಾನಿ ಕಾಮದಹನಾಂಗ ವಿಭೂಷಿ ತಾನಿ ।
ತ್ರೈಪುಂಡ್ರಕಾನಿ ರಚಿತಾನಿ ಲಲಾಟಪಟ್ಟೆ
ಲುಂಪಂತಿ ದೈವಲಿಖಿತಾನಿ ದುರಕ್ಷರಾಣಿ ॥

(ಕ್ರಿಯಾಸಾರ. ಉಪದೇಶ ೮ ಪುಟ ೮೧)

"ಪರಮಾತ್ಮನ ಅಂಗಭೂಷಣವಾದ ವಿಭೂತಿಯನ್ನು ಪಂಚಾಕ್ಷರಿ ಮಂತ್ರ ಪುರಃಸರವಾಗಿ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿದ್ದಾದರೆ ಕೆಟ್ಟ ಹಣೆ ಬರಹವು ಅಳುಕಿ ಹೋಗುತ್ತದೆ" ಎಂಬುದಾಗಿ ಹೇಳಿ ವಿಭೂತಿಯ ಮಹತಿಯನ್ನು ಕೊಂಡಾಡಿದ್ದಾರೆ.

ಆದಕಾರಣ ದಾರಿದ್ರ್ಯದಿಂದ ಬಳಲುವ ಮನುಷ್ಯನು ಪ್ರತಿ ದಿವಸ ನಿಷ್ಠೆಯಿಂದ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿದರೆ ಅವನ ಆಲಸ್ಯಾದಿ ದುರ್ಗುಣಗಳೆಲ್ಲ ತೊಲಗಿ ಒಳ್ಳೆಯ ವ್ಯವಸಾಯ ಶೀಲನಾಗಿ ತನ್ಮುಖೇನ ಕ್ರಮಶಃ ಸಂಪತ್ ಶಾಲಿಯಾಗುತ್ತಾನೆ.

ಇನ್ನು ವಿಭೂತಿಯು ಪರಿಪೂರ್ಣತೆಯ ಚಿನ್ಹವೂ ಅಹುದು. ಅನೇಕ ಪರ್ವಗಳಲ್ಲಿ ಪಕ್ವಾನ್ನಗಳನ್ನು ತಯಾರಿಸಿ ಆ ಪಕ್ವಾನ್ನಭರಿತಗಳಾದ ಪಾತ್ರೆಗಳಿಗೆ ವಿಭೂತಿಯ ತ್ರಿಪುಂಡ್ರವನ್ನು ಧರಿಸುವ ಒಂದು ಪ್ರಾಚೀನ ಪದ್ಧತಿಯುಂಟು. ಹೀಗೆ ವಿಭೂತಿ ಪಟ್ಟಿವನ್ನು ಧರಿಸಿರುವ ಪಾತ್ರೆಗಳನ್ನು ದೂರದಿಂದ ಯಾರೇ ನೋಡಿದರೂ ಇದು ಪಕ್ವಾನ್ನದಿಂದ ಭರಿತವಾಗಿದೆ ಎಂಬ ತಿಳುವಳಿಕೆಯುಂಟಾಗುವುದು. ಅದೇ ಪ್ರಕಾರ ಹಣೆಯಲ್ಲಿ ತ್ರಿಪುಂಡ್ರ ಧರಿಸಿದ ವ್ಯಕ್ತಿಯನ್ನು ಕಂಡಾಗ ಅವನ ಪ್ರಸನ್ನ ಮುಖ ಮುದ್ರೆಯನ್ನು ನೋಡಿದರೆ ಇವನು ಊಟದಿಂದಲೋ, ಶಿವಪೂಜೆಯಿಂದಲೋ ಸಂತೃಪ್ತನಾಗಿರುವನೆಂಬುದಾಗಿ ತಿಳಿದುಬರುತ್ತದೆ. ಹೀಗೆ ವಿಭೂತಿಯ ಸಂತೃಪ್ತಿ ಮತ್ತು ಪರಿಪೂರ್ಣತೆಯನ್ನು ಅಭಿವ್ಯಕ್ತಗೊಳಿಸುವ ಬಾಹ್ಯ ಚಿಹ್ನವೂ ಅಹುದು. ಇಂತಹ ವಿಭೂತಿಯನ್ನು ಧರಿಸುವುದರಿಂದ ಮನುಷ್ಯನ ಕ್ಷುದ್ರ ವಾಸನೆಗಳೆಲ್ಲ ದಹಿಸಿ ಆತ್ಮ–ಪರಮಾತ್ಮರ ಐಕ್ಯ ರೂಪವಾದ ದಿವ್ಯಜ್ಞಾನ ಸಂಪತ್ತು ಪ್ರಾಪ್ತವಾಗುತ್ತದೆ.

ಅನೇಕ ಪ್ರಾಚೀನ ಮಹರ್ಷಿಗಳ ಚರಿತ್ರೆಯನ್ನವಲೋಕಿಸಿದಾಗ ಈ ವಿಭೂತಿಯ ಧಾರಣೆಯಿಂದ ಅವರಿಗೆ ಅಣಿಮಾದಿ ಅಷ್ಟ ಐಶ್ವರ್ಯಗಳೂ ಪ್ರಾಪ್ತವಾದದ್ದು ಕಂಡು

ಬರುತ್ತದೆ. ಅಂತೆಯೇ ''ವಿಭೂತಿರ್ಭೂತಿರೈಶ್ವರ್ಯಮಣಿ ಮಾದಿಕಮಷ್ಟಧಾ'' (ಅಮರ. ೧-೫೯) ಎಂದು ಅಮರಸಿಂಹನು ಅಷ್ಟೈಶ್ವರ್ಯಗಳಿಗೆ ''ವಿಭೂತಿ'' ಎಂಬುದಾಗಿ ಕರೆದಿದ್ದಾನೆ.

ಅಣಿಮಾ ಲಘಿಮಾ ಪ್ರಾಪ್ತಿಃ ಪ್ರಾಕಾಮ್ಯಂ ಮಹಿಮಾ ತಥಾ ।
ಈಶಿತಾ ವಸಿತಾ ಚೈವ ತಥಾ ಕಾಮಾವಶಾಯಿಕಾ ॥

ಎಂಬ ಪ್ರಮಾಣ ವಾಕ್ಯದಂತೆ (೧) ''ಅಣಿಮಾ ಅಣೋರ್ಭಾವಃ ಅಣಿಮಾ'' ಅತಿಸೂಕ್ಷ್ಮ ಸ್ವರೂಪವನ್ನು ತಾಳುವುದು. (೨) ಲಘಿಮಾ ''ಲಘೋರ್ಭಾವಃ ಲಘಿಮಾ'' ಅರಳೆಗಿಂತಲೂ ಹಗುರಾಗಿ ಆಕಾಶದಲ್ಲಿ ತೇಲಾಡುವುದು. (೩) ಪ್ರಾಪ್ತಿಃ= ಅತಿದೂರದ ವಸ್ತುಗಳನ್ನು ಕೈಚಾಚಿ ಗ್ರಹಿಸುವುದು. (೪) ಪ್ರಾಕಾಮ್ಯಂ, ಪ್ರಕಾಮಸ್ಯ ಭಾವಃ ಪ್ರಾಕಾಮ್ಯಂ=ಇಚ್ಛಿಸಿದಂತೆ ಸರ್ವವೂ ಸಿದ್ಧಿಸುವಿಕೆ. (೫) ಮಹಿಮಾ, ಮಹತೋ ಭಾವೋಮಹಿಮಾ=ಅತಿವಿಶಾಲ ಸ್ವರೂಪವನ್ನು ತಾಳುವಿಕೆ, (೬) ಈಶಿತಾ, ಈಶಿನೋ ಭಾವ ಈಶಿತಾ=ಪ್ರಭುತ್ವಂ, ಸ್ಥಾವರ ಪದಾರ್ಥಗಳೂ ಆಜ್ಞಾಪರಿಪಾಲಿಸುವಿಕೆ. (೭) ವಶಿತಾ, ವಶಿನೋ ಭಾವಃ ವಶಿತಾ=ಸರ್ವವನ್ನೂ ತನ್ನ ವಶದಲ್ಲಿ ಇರಿಸಿಕೊಳ್ಳುವಿಕೆ. ಈ ವಶೀಕರಣ ಸಾಮರ್ಥ್ಯದಿಂದ ನೀರಿನಲ್ಲಿ ಮುಳಿಗಿ ಏಳುವಂತೆ ಭೂಮಿಯಲ್ಲಿಯೂ ಮುಳುಗಿ ಏಳಬಹುದು. (೮) ಕಾಮಾವಶಾಯಿತಾ, ಕಾಮಾನ್ ಅವಶೇತೇ ಇತಿ ಕಾಮಾವಶಾಯೀ, ಕಾಮಾವಶಾಯಿನೋ ಭಾವಃ ಕಾಮಾವಶಾಯಿತಾ=ಸತ್ಯ ಸಂಕಲ್ಪತ್ವವು. ಇವೇ ಅಣಿಮಾದಿ ಅಷ್ಟೈಶ್ವರ್ಯಗಳು. ವಿಭೂತಿಯಲ್ಲಿ ಅತ್ಯಂತ ನಿಷ್ಠೆ ಯುಳ್ಳವರಿಗೆ ಈ ಅಷ್ಟಸಿದ್ಧಿಗಳು ಸಹಜವಾಗಿ ಪ್ರಾಪ್ತವಾಗುತ್ತವೆ.

ಶ್ರೀ ಜಗದ್ಗುರು ರೇಣುಕರ ಪರಮಶಿಷ್ಯನಾದ ಶ್ರೀ ಅಗಸ್ತ್ಯಮಹರ್ಷಿಯು ವಿಭೂತಿಯ ಮಹಿಮೆಯನ್ನರಿತ ಮಹಾತಪಸ್ವಿಯು. ವಿಭೂತಿಯ ಧಾರಣೆ ಹಾಗೂ ತನ್ನ ತಪಸ್ಸಿನಿಂದ ಇವನು ಅಷ್ಟೈಶ್ವರ್ಯಗಳನ್ನು ಪಡೆದವನಾಗಿದ್ದನು. ಒಂದು ಸಾರೆ ದೇವೇಂದ್ರನ ಜೊತೆಗೆ ವಿಭೂತಿಯ ಮಹಿಮೆಯನ್ನು ಚರ್ಚಿಸುತ್ತ ಕುಳಿತಾಗ ರಾಕ್ಷಸರಿಂದ ಪೀಡಿತನಾದ ವರುಣನು ಭಯಾಕ್ರಾಂತನಾಗಿ ಬಂದು ತನಗೆ ಉಂಟಾದ ವಿಪತ್ತನ್ನು ತಿಳಿಸಿ, ಲೋಕಕಂಟಕರಾದ ರಾಕ್ಷಸರು ಸಮುದ್ರದಲ್ಲಿ ಅಡಗಿಕೊಂಡಿದ್ದಾರೆ ಎಂಬುದಾಗಿ ನಿವೇದಿಸಿಕೊಂಡನು. ಆಗ ರಾಕ್ಷಸರ ಉಪಟಳದಿಂದ ಕ್ರುದ್ಧರಾದ ಅಗಸ್ತ್ಯ ಮಹರ್ಷಿ ಗಳು-

ಸಮುದ್ರ ತೀರಮಾಸಾದ್ಯ ಭಸ್ಮಾದಾಯಾಭಿಮಂತ್ರಿತಂ ।
ಧೃತ್ವಾ ಲಲಾಟೇ ಕರಯೋರಾಲೇಪ್ಯ ಸಹಸಾ ಋಷಿ ಃ ॥
ಅಜುಹಾವಾಂಬುಧಿಂ ಪಾಣಿಂ ಪ್ರಸಾರ್ಯ ಸ ಮಹಾನೃಷಿ ಃ ।
ತದಾನೀಮಾಗತಾಂಬೋದಿಃ ಕರೇ ನೀಹಾರ ಬಿಂದುವತ್ ॥
ಪ್ರಾಶಯಾಮಾಸ ತಂ ಧ್ಯಾತ್ವಾ ಮಹಾದೇವಂ ಋಷೀಶ್ವರಃ ।
ಸಂಹರೇಂದ್ರಾಸುರಾನ್ ಪಾಪಾನ್ ರಾಕ್ಷಸಾನಪಿ ದುರ್ಜನಾನ್ ॥
ಏವಮುಕ್ತ್ವಾ ದದೌ ಭಸ್ಮ ಸುರೇಶಾಯ ಘಟೋದ್ಭವಃ ।

(ಕ್ರಿಯಾಸಾರ, ಉಪದೇಶ ೮, ಪುಟ ೧೩೦-೧೩೧)

ಸಮುದ್ರದ ದಂಡೆಯಲ್ಲಿ ಹೋಗಿ ವಿಭೂತಿಯನ್ನು ಮಂತ್ರ ಪೂರ್ವಕವಾಗಿ ಹಣೆಗೆ ಧರಿಸಿ ಕೊಂಡು, ಅದೇ ವಿಭೂತಿಯನ್ನೇ ತಮ್ಮ ಅಂಗೈಗೆ ಲೇಪಿಸಿಕೊಂಡು ಸಮುದ್ರವನ್ನು ಆಹ್ವಾನಿಸಿದಾಗ ಅಪಾರವಾದ ಸಮುದ್ರದ ನೀರೆಲ್ಲ ಬಂದು ಮಂಜಿನ ಹನಿಯಂತೆ ಅವರ ಅಂಗೈಯಲ್ಲಿ ಪ್ರಾಪ್ತವಾಯಿತು. ಆಗ ಅದನ್ನು ಪಾನಮಾಡಿ, ಅಲ್ಲಿ ಅಡಗಿದ ಎಲ್ಲ ರಾಕ್ಷಸರನ್ನು ದೇವೇಂದ್ರನಿಂದ ಸಂಹಾರ ಮಾಡಿಸಿದರು. ರಾಕ್ಷಸರೆಲ್ಲರೂ ಸಂಹಾರ ಗೊಂಡ ಬಳಿಕ ಮಹರ್ಷಿಗಳು ಸಮುದ್ರದ ನೀರನ್ನು ಪುನಃ ಹೊರಹಾಕಿದರು.

ಕ್ರಿಯಾಸಾರ ಗ್ರಂಥದಲ್ಲಿ ವಿಭೂತಿಯ ಮಹಿಮೆಯನ್ನು ವರ್ಣಿಸುವ ಸಂದರ್ಭ ದಲ್ಲಿ ಶ್ರೀ ನೀಲಕಂಠ ಶಿವಾಚಾರ್ಯರು ಈ ಕಥೆಯನ್ನು ಬಹು ವಿಸ್ತಾರವಾಗಿ ವರ್ಣಿಸಿ ದ್ದಾರೆ. ಇದರಿಂದ ವಿಭೂತಿ ಧಾರಣೆಯ ಫಲವಾಗಿಯೇ ಅಗಸ್ತ್ಯಮಹರ್ಷಿಗಳಿಗೆ ಅನೇಕ ಸಿದ್ಧಿಗಳು ಪ್ರಾಪ್ತವಾಗಿದ್ದವು ಎಂಬುದು ತಿಳಿದುಬರುತ್ತದೆ. ಆದ್ದರಿಂದ ವಿಭೂತಿಯು ಅಷ್ಟೈಶ್ವರ್ಯ ಪ್ರದಾಯಕವೂ ಆಗಿದೆ. ''ವಿಶ್ವಾಸಃ ಫಲದಾಯಕಃ'' ಎಂಬ ಉಕ್ತಿಯಂತೆ ಯಾರು ಎಷ್ಟು ವಿಶ್ವಾಸ ಉಳ್ಳವರೋ ಅವರಿಗೆ ಅಷ್ಟೊಂದು ಫಲಗಳು ಅವಶ್ಯವಾಗಿ ಪ್ರಾಪ್ತವಾಗುತ್ತವೆ. ಈ ವಿಷಯದಲ್ಲಿ ಶುಷ್ಕ ತರ್ಕಕ್ಕೆ ಆಸ್ಪದವಿರುವುದಿಲ್ಲ. ಹೀಗೆ ಶ್ರದ್ಧಾಳುಗಳಾದ ಭಕ್ತರಿಗೆ ಭೂತಿ ಪ್ರದಾಯಕವಾದ್ದರಿಂದ ಇದಕ್ಕೆ ''ವಿಭೂತಿ'' ಎಂಬ ಹೆಸರು ಸಾರ್ಥಕವಾಗಿದೆ.

(೨) ಭಸಿತ :

''ಭಸಿತಂ ತತ್ತ್ವಭಾಸನಾತ್'' ಎನ್ನುವ ಪೂಜ್ಯರ ಉಪದೇಶದಂತೆ ತತ್ತ್ವಭಾಸಕ ವಾದ್ದರಿಂದ ವಿಭೂತಿಗೆ ''ಭಸಿತ''ವೆಂಬುದಾಗಿಯೂ ಕರೆಯುತ್ತಾರೆ. ''ಅನಾರೋಪಿತಂ ರೂಪಂ ತತ್ತ್ವಂ'' ಅಂದರೆ ಕಾಲ್ಪನಿಕವಲ್ಲದ ವಾಸ್ತವಿಕ ಸ್ವರೂಪಕ್ಕೆ ''ತತ್ತ್ವ''ವೆನ್ನುವರು. ವೀರಶೈವ ಸಿದ್ಧಾಂತದಲ್ಲಿ ಈ ಚರಾಚರಾತ್ಮಕವಾದ ಜಗತ್ತು ಶಿವಾದಿಭೂಮ್ಯಂತಗಳಾದ ಮೂವತ್ತಾರು ತತ್ತ್ವಾತ್ಮಕವಾಗಿದೆ. ''ಸರ್ವಂ ಲಿಂಗಮಯಂ'' ಎನ್ನುವ ಈ ಸಿದ್ಧಾಂತ ದಲ್ಲಿ ಕಲ್ಪಿತತತ್ತ್ವಕ್ಕೆ ಅಥವಾ ಮಿಥ್ಯಾತ್ತ್ವಕ್ಕೆ ಅವಕಾಶವಿಲ್ಲ.

ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥

(ಸಿ. ಶಿ. ೧೦–೬೬)

ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ ಈ ಸಿದ್ಧಾಂತದಲ್ಲಿ ಶಿವ ನೋರ್ವನೇ ಮೂವತ್ತಾರು ತತ್ತ್ವಗಳ ರೂಪವನ್ನು ತಾಳಿರುತ್ತಾನೆ. ಆದರಿಂದ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಬುದ್ಧಿ ಅಹಂಕಾರ, ಮನಃ, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿ ಈ ಮೂವತ್ತಾರು ತತ್ತ್ವಗಳು ಶಿವ ಸ್ವರೂಪಗಳೇ ಆಗಿರುತ್ತವೆ. ಇವೆಲ್ಲವುಗಳನ್ನು ಯಥಾರ್ಥವಾಗಿ ತಿಳಿದುಕೊಳ್ಳುವುದೇ ತತ್ತ್ವಜ್ಞಾನವು.

ತತ್ತ್ವಜ್ಞಾನಕ್ಕೆ ಶಾಸ್ತ್ರ ಶ್ರವಣವೇ ಮುಖ್ಯವಾದರೂ ಅದಕ್ಕಿಂತಲೂ ಪೂರ್ವದಲ್ಲಿ ಬೇಕಾಗಿರುವ ಚಿತ್ತ ಶುದ್ಧಿಗೆ ಭಸ್ಮಧಾರಣೆಯು ಕಾರಣವಾಗಿರುತ್ತದೆ. ಅಂತೆಯೇ ಶ್ರೀಮನ್ನಿರಂಜನ ಮರಿತೋಂಟದಾರ್ಯರು–

''ನಿಃಶ್ರೇಯಸ್ಯೈಕಸಾಧನ ಬ್ರಹ್ಮವಿದ್ಯಾಂತರಂಗ ಚಿತ್ತಶುದ್ಧಿ
ಸಂಪಾದಕತ್ವೇನ ವೈದಿಕ ಶಿವಪೂಜಾಂಗತ್ವೇನ ಚ ಭಸ್ಮ
ಧಾರಣಂ ಕರ್ತವ್ಯಮ್''

(ವೀ.ಚಂ. ಪ್ರಕರಣ ೭. ಪುಟ ೧೩೩)

ಮುಕ್ತಿಗೆ ಸಾದನೀಭೂತವಾದ ಬ್ರಹ್ಮವಿದ್ಯೆಯ ಅಂತರಂಗವಾದ ಚಿತ್ತಶುದ್ಧಿ ಕಾರಕವಾದ್ದ ರಿಂದಲೂ, ವೈದಿಕ ಶಿವಪೂಜಾವಿಧಿಯ ಅಂಗವಾದ್ದರಿಂದಲೂ ಭಸ್ಮಧಾರಣೆಯನ್ನು ಮಾಡತಕ್ಕದ್ದು; ಎಂಬುದಾಗಿ ವೀರಶೈವಾನಂದಚಂದ್ರಿಕೆಯಲ್ಲಿ ಪ್ರತಿಪಾದಿಸಿದ್ದಾರೆ. ಬ್ರಹ್ಮಸೂತ್ರದ ಭಾಷ್ಯಕಾರರಾದ ಶ್ರೀಪತಿಪಂಡಿತಾರಾಧ್ಯರೂ ''ಅಥಾತೋ ಬ್ರಹ್ಮ ಜಿಜ್ಞಾಸಾ'' (ಬ್ರ.ಸೂ. ೧–೧–೧.) ಈ ಸೂತ್ರಕ್ಕೆ ಭಾಷ್ಯವನ್ನು ಬರೆಯುವಾಗ ''ಅಥ'' ಶಬ್ದದ ಅರ್ಥವನ್ನು ವಿವರಿಸುತ್ತ–

''ಕಲ್ಯಾಣ ಕೈವಲ್ಯವಿಭೂತಿತ್ರಯ ಪ್ರದಾಯಕಾಷ್ಟಾ
ವರಣ–ಪಂಚಾಚಾರ–ಸದ್ಗುರು ಕರುಣಾಕಟಾಕ್ಷಲಬ್ಧ ಶಕ್ತಿಪಾತಾ
ದ್ಯವಚ್ಛಿನ್ನಪರಶಿವಸ್ಯ ಇಷ್ಟಲಿಂಗಧಾರಣಾತ್ಮಕ ಪಾಶುಪತ
ದೀಕ್ಷಾಽಽನಂತರ್ಯಮಿತ್ಯಥ ಶಬ್ದಾರ್ಥೋ ನಿರ್ಣೀಯತೇ''

ಅಂದರೆ ಅಷ್ಟಾವರಣ–ಪಂಚಾಚಾರ ಬೋಧಕ ಪಾಶುಪತದೀಕ್ಷೆಯಾದನಂತರ ಸಾಧಕನು ಬ್ರಹ್ಮಜ್ಞಾನಕ್ಕೆ ಅಧಿಕಾರಿಯಾಗುತ್ತಾನೆ; ಎಂಬುದಾಗಿ ಪ್ರತಿಪಾದಿಸಿರುತ್ತಾರೆ. ಆದ್ದರಿಂದ ಪ್ರತಿಯೊಬ್ಬ ವೀರಶೈವ ತತ್ತ್ವಜಿಜ್ಞಾಸುವಿಗೆ ಭಸಿತ ದಾರಣೆಯು ಪರಮಾ ವಶ್ಯಕವಾದುದು.

ಇಲ್ಲಿರುವ ರಹಸ್ಯಾರ್ಥವೇನಂದರೆ ಅಂತಃಕರಣದ ಪರಿಶುದ್ಧಿಯಾಗದೇ ತತ್ತ್ವ ಜ್ಞಾನವಾಗಲಾರದು. ಆ ಅಂತಃಕರಣದ ಶುದ್ಧಿಗಾಗಿ ಶಾಸ್ತ್ರಗಳಲ್ಲಿ ತೀರ್ಥಸ್ನಾನ, ಮಂತ್ರ ಜಪ, ತಪಸ್ಸು ಮುಂತಾದ ಅನೇಕ ಸಾಧನೆಗಳು ವಿವರಿಸಲ್ಪಟ್ಟಿವೆ. ಆದರೆ ಇವುಗಳಲ್ಲಿ ಯಾವುದನ್ನೂ ಮಾಡದೇ ಕೇವಲ ಶ್ರದ್ಧೆಯಿಂದ ಭಸಿತವನ್ನು ಧರಿಸಿದ್ದಾದರೆ; ಅಂತಃ ಕರಣದ ಶುದ್ಧಿ ಅಷ್ಟೇ ಅಲ್ಲ ತತ್ತ್ವಜ್ಞಾನವೂ ಪ್ರಾಪ್ತವಾಗಿ ಮೋಕ್ಷವು ಲಭಿಸುತ್ತದೆ. ಅಂತೆಯೇ ಶ್ರೀ ನೀಲಕಂಠಶಿವಾಚಾರ್ಯರು–

ಕಿಂ ಯಜ್ಞೈಃ ಕಿಮನೇಕ ತೀರ್ಥಕಲಹೈ ಃ ಕಿಂ ವೇದಪಾಠಶ್ರಮೈ ಃ
ಕಿಂ ಘೋರೈರ್ವಿವಿಧೈಸ್ತಪೋಭಿರಮಲೈಃ ಕಿಂ ಮಂತ್ರತಂತ್ರೈರ್ಜಪೈಃ ।
ಕಿಂ ಧ್ಯಾನೈ ಃ ಕಿಮನೇಕದಾನನಿಕರೈ ಃ ಕಿಂ ಸಾಂಖ್ಯಯೋಗಭ್ರಮೈ ಃ
ಮೋಕ್ಷಾರ್ಥೀ ಸಿತಭಸ್ಮನಾ ಚ ನಿಪುಣಃ ಕುರ್ಯಾತ್ತ್ರಿಪುಂಡ್ರಂ ಬುಧ ಃ ॥

(ಕ್ರಿಯಾಸಾರ, ಉಪದೇಶ ೮, ಪುಟ ೮೭)

ಕ್ರಿಯಾಸಾರದಲ್ಲಿ ಈ ಮೇಲಿನ ಮತ್ಸ್ಯಪುರಾಣದ ವಚನವನ್ನುದಾಹರಿಸಿ, ಸಾಧಕನು ಯಜ್ಞ, ತೀರ್ಥಸ್ನಾನ, ವೇದಪಠಣ, ಧ್ಯಾನ, ದಾನ, ಸಾಂಖ್ಯಾದಿ ಶಾಸ್ತ್ರಗಳ ಅಧ್ಯಯನ ಇವುಗಳಲ್ಲಿ ಯಾವದನ್ನೂ ಮಾಡದೇ ಕೇವಲ ಪರಿಶುದ್ಧವಾದ ಭಸಿತದ ತ್ರಿಪುಂಡ್ರವನ್ನು ದರಿಸಿದರೆ ಮುಕ್ತಿಶ್ರೀಯೇ ಪ್ರಾಪ್ತವಾಗುತ್ತದೆಂಬುದನ್ನು ನಿರ್ಣೀತ ಮಾಡಿದ್ದಾರೆ. ಇದೂ ಅಲ್ಲದೇ–

ಮುಕ್ತ್ವಾ ತ್ರಿಪುಂಡ್ರಂ ಮೋಕ್ಷಸ್ಯ ಸಾಧನಂ ನಹಿ ವಿದ್ಯತೇ ।
ಯಥಾ ಕೃಶಾನುರಹಿತಸ್ತ್ವಧ್ವರೋ ನ ವಿರಾಜತೇ ॥

(ಕ್ರಿಯಾಸಾರ ಉಪ. ೮. ಪುಟ ೮೫)

ವಾಯವೀಯ ಸಂಹಿತೆಯ ಈ ವಚನದಲ್ಲಿ ''ಅಗ್ನಿ ಇಲ್ಲದೇ ಯಜ್ಞಸಂಭವಿಸದಿರುವಂತೆ ತ್ರಿಪುಂಡ್ರಧಾರಣೆ ಇಲ್ಲದೇ ಮೋಕ್ಷ ಲಭಿಸಲಾರದು ಎಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಅದರಂತೆ

ಆಯುಷ್ಕಾಮೋ ಯಥಾ ರಾಜನ್ ಭೂತಿಕಾಮೋಽಥವಾ ನರಃ ।
ನಿತ್ಯಂ ವೈಧಾರಯೇದ್ಭಸ್ಮ ಮೋಕ್ಷಕಾಮೀ ಚ ವೈ ದ್ವಿಜಃ ॥

(ಕ್ರಿಯಾಸಾರ ಉಪ. ೮, ಪುಟ ೮೯)

ಈ ಶ್ಲೋಕದಲ್ಲಿ ಆಯುಷ್ಯ, ಐಶ್ವರ್ಯಗಳಿಗೆ ಕಾರಣೀಭೂತವಾದ ಭಸಿತವು ಮೋಕ್ಷ ಸಾಧಕವೂ ಆಗಿದೆ. ಆದ್ದರಿಂದ ಮೋಕ್ಷಾಪೇಕ್ಷಿಯು ಭಸಿತವನ್ನು ಧರಿಸಬೇಕೆಂಬುದಾಗಿಯೂ ನಿರೂಪಿಸಲ್ಪಟ್ಟಿದೆ.

ಇನ್ನು ಸತ್ಯ, ಶೌಚ, ಜಪ, ಹೋಮ ಮುಂತಾದ ಅನೇಕ ಸಾಧನೆಗಳನ್ನು ಸಂಪಾದಿಸಿದ್ದರೂ ತ್ರಿಪುಂಡ್ರವನ್ನು ಮಾತ್ರ ದರಿಸದಿದ್ದರೆ ಅವೆಲ್ಲವುಗಳು ನಿರರ್ಥಕಗಳಾಗುತ್ತವೆ ಎಂಬ ಮಾತು–

ಸತ್ಯಂ ಶೌಚಂ ಜಪೋ ಹೋಮಸ್ತೀರ್ಥಂ ದೇವಾದಿಪೂಜನಂ ।
ತಸ್ಯ ವ್ಯರ್ಥಮಿದಂ ಸರ್ವಂ ಯಸ್ತ್ರಿಪುಂಡ್ರಂ ನ ಧಾರಯೇತ್ ॥

ನಾರದೀಯ ಸ್ಮೃತಿಯಲ್ಲಿ ಉಕ್ತವಾಗಿದೆ. ಹೀಗೆ ಈ ಎಲ್ಲ ಪ್ರಮಾಣವಚನಗಳನ್ನು ಪರ್ಯಾಲೋಚಿಸಿದಾಗ ಭಸಿತದ ಧಾರಣೆ ಮಾತ್ರದಿಂದಲೇ ಅಂತಃಕರಣದ ಶುದ್ಧಿಯೂ, ನಿರ್ಮಲ ತತ್ತ್ವಜ್ಞಾನವೂ ಪ್ರಾಪ್ತವಾಗುತ್ತದೆಂಬುದು ಸಿದ್ಧವಾಗುತ್ತದೆ. ಒಲೆಯೊಳಗಿನ ಅಗ್ನಿಯು ಪಾತ್ರೆಯ ಹೊರಬದಿಗೆ ಸಾಕ್ಷಾತ್ ಸಂಬಂಧವಾಗಿದ್ದರೂ ಪರಂಪರೆಯಿಂದ ಪಾತ್ರೆಯೊಳಗಿನ ಅಕ್ಕಿಯನ್ನು ಪಕ್ವಗೊಳಿಸುವಂತೆ ; ಶ್ರದ್ಧಾಳುಗಳಾದ ಸಾಧಕರು ತತ್ತ್ವಜಿಜ್ಞಾಸೆಯಿಂದ ಪ್ರತಿದಿವಸ ತನ್ನ ಬಾಹ್ಯ ಶರೀರದ ಮೇಲೆ ತ್ರಿಪುಂಡ್ರವನ್ನು ಧರಿಸಿದರೂ ಅದು ಅಂತರಂಗವನ್ನು ಪರಿಪಕ್ವಗೊಳಿಸಿ, ನಿರ್ಮಲ ತತ್ತ್ವಜ್ಞಾನವನ್ನುಂಟುಮಾಡುತ್ತದೆ. ಹೀಗೆ ತತ್ತ್ವಜ್ಞಾನಿಯಾದ ಸಾಧಕನು ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳನ್ನು ಶಿವಸ್ವರೂಪಗಳನ್ನಾಗಿ ತಿಳಿದುಕೊಂಡು ಕೈವಲ್ಯವನ್ನು ಹೊಂದುವನು. ಈ ರೀತಿಯಾಗಿ ಸಾಕ್ಷಾತ್ ಅಥವಾ ಪರಂಪರಯಾ ತತ್ತ್ವಜ್ಞಾನಕ್ಕೆ ಕಾರಣೀಭೂತವಾದ ಈ ವಿಭೂತಿಗೆ ''ಭಸಿತ'' ವೆಂಬ ಸಾರ್ಥಕ ನಾಮವು ಪ್ರಾಪ್ತವಾಗಿದೆ.

(೩) ಭಸ್ಮ :

''ಪಾಪಾನಾಂ ಭರ್ತ್ಸನಾದ್ಭಸ್ಮ'' ಎನ್ನುವ ಶ್ರೀ ಜಗದ್ಗುರುರೇಣುಕರ ಉಪದೇಶ ದಂತೆ ಪಾಪಗಳಿಗೆ ಭರ್ತ್ಸನೆ ಅಂದರೆ ಬೆದರಿಕೆಯನ್ನುಂಟು ಮಾಡುವದರಿಂದ ''ಭಸ್ಮ'' ವೆಂಬ ನಾಮವೂ ಪ್ರಾಪ್ತವಾಗಿದೆ. ಬೃಹಜ್ಜಾಬಾಲೋಪನಿಷತ್ತಿನಲ್ಲಿಯೂ ''ಭಸ್ಮಸ ರ್ವಾಘಭಕ್ಷಣಾತ್'' ಸರ್ವ ಪಾಪಗಳನ್ನು ಭಕ್ಷಿಸುವದರಿಂದ ''ಭಸ್ಮ''ವೆಂಬುದಾಗಿಯೂ ಪ್ರತಿಪಾದಿಸಲ್ಪಟ್ಟಿದೆ. ಶಾಸ್ತ್ರನಿಷಿದ್ಧಾಚರಣೆಗಳನ್ನು ಆಚರಿಸಿದಾಗ ಮನುಷ್ಯನಿಗೆ ಪಾಪ ಗಳು ಸಂಭವಿಸುತ್ತವೆ.

ಅಸ್ತ್ರೀ ಪಂಕಂ ಪುಮಾನ್ ಪಾಪ್ಮಾ ಪಾಪಂ ಕಿಲ್ಬಿಷಕಲ್ಮಷಂ ।
ಕಲುಷಂ ವೃಜಿನೈನೋಽಘಮಂಹೋ ದುರಿತದುಷ್ಕೃತಮ್ ॥

(ಅಮರ. ೧–೨೩)

ಈ ಅಮರಸಿಂಹನ ಉಕ್ತಿಯಂತೆ ಪಂಕ, ಪಾಪ್ಮಾ, ಪಾಪ, ಕಿಲ್ಬಿಷ, ಕಲ್ಮಷ, ಕಲುಷ, ವೃಜಿನ, ಏನ, ಅಘ, ಅಂಘ (ಅಂಹ), ದುರಿತ ಮತ್ತು ದುಷ್ಕೃತ ಹೀಗೆ ಇವು ಹನ್ನೆರಡು ಪಾಪದ ಪರ್ಯಾಯ ಶಬ್ದಗಳು. ಈ ಪ್ರತಿಯೊಂದು ಶಬ್ದಗಳ ವ್ಯತ್ಪತ್ತಿಯಲ್ಲಿ ಬಹು ಸ್ವಾರಸ್ಯಾರ್ಥವಡಗಿದೆ.

(೧) ''ಪಚ್ಯತೇ=ವ್ಯಕ್ತೀಭವತಿ, ವಿಸ್ತಾರೋ ಭವತಿ ವಾ ದುಃಖಮನೇನ ಇತಿ ಪಂಕಂ'' ಅಂದರೆ ಯಾವುದರಿಂದ ದುಃಖವು ಅಭಿವ್ಯಕ್ತವಾಗುವುದೋ ಅಥವಾ ವಿಸ್ತಾರ ಗೊಳ್ಳುವದೋ ಆದಕ್ಕೆ ''ಪಂಕ''ವೆನ್ನುವರು.

(೨) ''ಆಪ್ನೋತಿ, ಲೋಕಾನ್ ಇತಿ ಪಾಪ್ಮಾ''ಅಂದರೆ ಜಗತ್ತಿನ ಜನರೆಲ್ಲರಲ್ಲಿ ವ್ಯಾಪಿಸಿಕೊಂಡಿರುವುದರಿಂದ ಇದಕ್ಕೆ ''ಪಾಪ್ಮಾ'' ಎನ್ನುವರು.

(೩) ''ಪಿಬತಿ=ಭಕ್ಷಯತಿ ಕರ್ತಾರಂ ಇತಿ=ಪಾಪಂ'' ಅಂದರೆ ತನ್ನನ್ನು ನಿರ್ಮಾಣ ಮಾಡಿದವನನ್ನೇ ಯಾವುದು ಭಕ್ಷಿಸುತ್ತದೆಯೋ ಅಥವಾ ನಾಶಗೊಳಿಸು ತ್ತದೆಯೋ ಅದಕ್ಕೆ ''ಪಾಪ''ವೆನ್ನುವರು. ಮನುಷ್ಯನು ತಾನು ಮಾಡಿದ ಪಾಪದಿಂದಲೇ ತಾನು ಮಾಡಿದ ಪಾಪದಿಂದಲೇ ತಾನು ನಾಶಹೊಂದುತ್ತಿರುವುದು ಲೋಕಾನುಭವ ಸಿದ್ಧವಾದದ್ದು.

(೪) ''ಕೇಲಯತಿ=ಕ್ರೀಡಯತಿ, ವಿಷಯೇಷು ಇತಿ=ಕಿಲ್ಬಿಷಂ'' ಮನಷ್ಯನನ್ನು ವೈಷಯಿಕ ಕ್ರೀಡೆಯಲ್ಲಿ ಪ್ರವರ್ತಿಸುವುದರಿಂದ ಇದಕ್ಕೆ ''ಕಿಲ್ಬಿಷ'' ವೆಂದು ಕರೆದಿದ್ದಾರೆ. ಪಾಪಿಯಾದ ಮನುಷ್ಯನೇ ಸದಾ ಶಬ್ದ ಸ್ಪರ್ಶಾದಿ ಪಂಚವಿಷಯಗಳಲ್ಲಿ ಲೋಲುಪ್ತ ನಾಗಿರುತ್ತಾನೆ.

(೫) ''ಶುಭಂ ಕರ್ಮ ಸ್ಯುತಿ=ಸಮಾಪ್ತಂ ಕರೋತೀತಿ ಕಲ್ಮಷಂ'' ಶುಭಕರ್ಮ ಗಳನ್ನು ಸಮಾಪ್ತಿಗೊಳಿಸುವುದರಿಂದ ಇದಕ್ಕೆ ''ಕಲ್ಮಷ''ವೆಂಬ ಹೆಸರು, ಪ್ರಾಯಃ ಪಾಪಿ ಯಾದ ಮನುಷ್ಯನಿಂದ ಶುಭಕರ್ಮಗಳೇ ಸಂಭವಿಸುವುದಿಲ್ಲ, ಅವನು ಸದಾ ಅಶುಭ ಕರ್ಮಗಳಲ್ಲಿಯೇ ಪ್ರವೃತ್ತನಾಗಿರುತ್ತಾನೆ.

(೭) "ಕಲಯತಿ=ವಶೀಕರೋತೀತಿ ಕಲುಷಂ" ಜಗತ್ತಿನ ಬಹುಪಾಲು ಜನರನ್ನು ತನ್ನತ್ತ ವಶೀಕರಣ ಮಾಡಿಕೊಳ್ಳುವುದರಿಂದ ಇದಕ್ಕೆ "ಕಲುಷ"ವೆಂಬುದಾಗಿ ಕರೆದಿದ್ದಾರೆ. ನೀರು ಅಧೋಮುಖವಾಗಿ ಪ್ರವೃತ್ತವಾಗುವಂತೆ ಮನುಷ್ಯನು ಸಹಜವಾಗಿ ಪಾಪಾಭಿಮುಖನಾಗಿರುತ್ತಾನೆ.

(೭) ವೃಜ್ಯತೇ ಇತಿ ವೃಜಿನಂ"

(೮) "ಯಾಂತಿ=ಗಚ್ಛಂತಿ, ಅಧಃ ಅನೇನ ಇತಿ ಏನಃ" ಯಾವುದರಿಂದ ಮನುಷ್ಯರು ಅಧೋಮಾರ್ಗಿಗಳಾಗುತ್ತಾರೆಯೋ ಅದಕ್ಕೆ "ಏನಃ" ಎಂಬುದಾಗಿ ಕರೆಯುವರು. ಅಥವಾ "ಏತಿ=ಗಚ್ಛತಿ, ಪ್ರಾಯಶ್ಚಿತ್ತೇನ ಇತಿ=ಏನಃ" ಎನ್ನುವರು. ಮನುಷ್ಯನು ತಾನು ಮಾಡಿದ ಪಾಪಗಳನ್ನು ನಾಶಗೊಳಿಸಬೇಕಾದರೆ ಶಾಸ್ತ್ರೋಕ್ತಗಳಾದ ಸಾಧಾರಣ ಹಾಗೂ ಅಸಾಧಾರಣ ಪ್ರಾಯಶ್ಚಿತ್ತಗಳನ್ನು ಮಾಡಬೇಕಾಗುತ್ತದೆ.

(೯) "ಅಂಘತೇ=ಗಚ್ಛತಿ, ದಾನಾದಿನಾ ಇತಿ ಅಘಂ" ದಾನಾದಿ ಶುಭಕರ್ಮಗಳಿಂದ ನಿವೃತ್ತವಾಗುವದರಿಂದ ಇದಕ್ಕೆ "ಅಘ"ವೆನ್ನುವರು... ಅಂತೆಯೇ ವ್ಯಾಪಾರಾದಿ ವ್ಯವಸಾಯಗಳಲ್ಲಿ ಸುಳ್ಳು ಹಾಗೂ ಕಳ್ಳತನಗಳು ಸಹಜವಾಗಿ ಘಟಿಸುವುದರಿಂದ, ಅದರಿಂದ ಪ್ರಾಪ್ತವಾದ ಧನದಲ್ಲಿ ಅಘ (ಪಾಪ)ದ ಸಂಬಂಧವಾಗಿರುವುದರಿಂದ ಆ ದೋಷ ನಿವೃತ್ತಿಗಾಗಿ ದಶಮಾಂಶ ದಾನಮಾಡುವುದು ಶಾಸ್ತ್ರವಿಹಿತವಾಗಿದೆ.

(೧೦) "ಅಮತಿ=ಗಚ್ಛತಿ ಅಥವಾ ಅಂಹತಿ=ಗಚ್ಛತೀತಿ ಅಂಘಃ (ಅಂಹಃ) ಶುಭಕರ್ಮಗಳಿಂದ ಹೋಗಲಾಡಿಸಲ್ಪಡುವುದರಿಂದ "ಅಂಘಃ"ವೆಂಬುದಾಗಿಯೂ ಕರೆಯುವರು. ದುಷ್ಕರ್ಮದಿಂದ ಬಂದದ್ದು ಶುಭಕರ್ಮದಿಂದ ನಿವೃತ್ತಿಯಾಗಲೇಬೇಕು.

(೧೧) "ದುಷ್ಟಮಿತಂ ಗಮನಂ ಅನೇನ ಇತಿ ದುರಿತಂ"ಮನುಷ್ಯನನ್ನು ದುರ್ಮಾರ್ಗಕ್ಕೆ ಎಳಸುವುದೇ ದುರಿತವು.

(೧೨) "ದುಷ್ಟಂ ಕೃತಂ ಕರಣಂ ಅನೇನ ಇತಿ ದುಷ್ಟಕೃತಂ" ಮನುಷ್ಯನ ಅಂತಃಕರಣ ಹಾಗೂ ಬಹಿಃಕರಣಗಳನ್ನು ದೂಷಿಸುವುದಕ್ಕೆ "ದುಷ್ಕೃತ" ವೆನ್ನುವರು. ಪಾಪಿಯ ಮನಸ್ಸು ಸದಾ ದೂಷಿತವಾದದ್ದನ್ನೇ ಚಿಂತಿಸುವುದು ಹಾಗೂ ಅವನ ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳು ದುರ್ಮಾರ್ಗದಲ್ಲಿಯೇ ಪ್ರವೃತ್ತಗಳಾಗುವವು.

ಈ ರೀತಿಯಾಗಿ ಪಾಪದ ದ್ವಾದಶ ಪರ್ಯಾಯನಾಮಗಳ ವ್ಯುತ್ಪತ್ತಿಯನ್ನವಲೋಕಿಸಿದಾಗ ಪಾಪವೆಂದರೆ ದುಃಖಪ್ರದಾಯಕ, ವಿನಾಶಕ, ವಿಷಯ ಪ್ರವರ್ತಕ, ಶುಭಕರ್ಮನಾಶ, ದುರ್ಮಾರ್ಗಪ್ರವರ್ತಕ ಮತ್ತು ದೋಷಪ್ರದಾಯಕವಾದದ್ದೆಂಬ ಅರ್ಥವಾಯಿತಲ್ಲದೇ ಇದು ಪ್ರಾಯಶ್ಚಿತ್ತದಿಂದಲೂ ಶುಭಕರ್ಮಾನುಷ್ಠಾನದಿಂದಲೂ ನಿವೃತ್ತಿಯಾಗುತ್ತದೆಂಬುದೂ ತಿಳಿದು ಬಂದೀತು.

ಭಗವತ್ಪ್ರದತ್ತಗಳಾದ ಶರೀರ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳ ಮೂಲಕ ಪುಣ್ಯ-ಪಾಪಕರ್ಮಗಳೆರಡೂ ಸಂಭವಿಸುವುದುಂಟು. ಆದರೆ ಪಾಮರ ಜೀವಿಗಳು ಈ ತ್ರಿಕರಣಗಳ ಮೂಲಕ ಸದಾ ಅಶುಭ ಕರ್ಮಗಳನ್ನೇ ಎಸಗುತ್ತಿರುತ್ತಾರೆ. ಶ್ರೀಮನ್ನಿಜಗುಣಶಿವಯೋಗಿಗಳ ಉಕ್ತಿಯಂತೆ ಪರವಧುವಿನ ಕೂಟ, ಅನ್ಯರವಿತ್ತಾಪ

ಹರಣ, ಅಭಕ್ಷ್ಯಸೇವನೆ ಮತ್ತು ಹಿಂಸೆ ಮುಂತಾದವುಗಳು ಶರೀರದ ದುಷ್ಕರ್ಮಗಳು, ಪುಸಿ, ಅನುಚಿತ, ನಿಷ್ಠುರತ್ವ ಮತ್ತು ಪೈಶೂನ್ಯತೆ ಮುಂತಾದವುಗಳು ವಾಣಿಯ ದುಷ್ಕರ್ಮಗಳು ಹಾಗೂ ಜನರೊಲಿಯದ ಕಾರ್ಯದೆರಕ. ಅನಿಷ್ಟ ಚಿಂತನೆ ಮತ್ತು ಅನ್ಯ ಧನ–ಸತಿಯರ ಕಾಂಕ್ಷೆ ಇವುಗಳು ಮಾನಸಿಕ ದುಷ್ಕರ್ಮಗಳು.

ಈ ರೀತಿಯಾಗಿ ಅನವರತ ತ್ರಿಕರಣಗಳಿಂದುಂಟಾದ ಪಾಪಗಳ ಫಲವಾಗಿ ಮನುಷ್ಯನು ಪತಿತನಾಗಿ ಪಾಮರ ಯೋನಿಯಲ್ಲಿ ಜನ್ಮತಾಳಬೇಕಾಗುತ್ತದೆ. ಈ ಪಾಮರ ಜನ್ಮದ ಪ್ರಾಪ್ತಿಯಾಗಬಾರದೆಂಬ ಬಯಕೆ ಇದ್ದರೆ ಸನ್ಮಾರ್ಗದಲ್ಲಿ ಪ್ರವೃತ್ತನಾಗಿ ಶುಭ ಕರ್ಮಗಳನ್ನಾಚರಿಸಬೇಕು. ವಿಭಿನ್ನ ದುಷ್ಕರ್ಮಗಳ ನಿವೃತ್ತಿಗಾಗಿ ಅನೇಕ ಪ್ರಾಯಶ್ಚಿತ್ತ ಕರ್ಮಗಳು ಪ್ರತಿಪಾದಿಸಲ್ಪಟ್ಟಿವೆ. ಅವೆಲ್ಲವುಗಳನ್ನು ಆಚರಿಸುವುದು ಸುಲಭ ಸಾಧ್ಯ ವಾದದ್ದಲ್ಲ. ಅಂತೆಯೇ ಸರ್ವರೂ ಸುಲಭವಾಗಿ ಸಕಲ ಪಾಪಗಳಿಂದ ನಿರ್ಮುಕ್ತರಾಗ ಬೇಕೆಂಬ ಉದ್ದೇಶದಿಂದ ಆಗಮ–ಉಪನಿಷತ್ ಪುರಾಣಾದಿಗಳಲ್ಲಿ ಭಸ್ಮಧಾರಣೆಯು ವಿಧಿಸಲ್ಪಟ್ಟಿದೆ. ಅಂತೆಯೇ ಸರ್ವ ಅಘವನ್ನು ಭಕ್ಷಿಸುವುದೇ ಭಸ್ಮವೆಂಬುದಾಗಿ ಬೃಹಜ್ಜಾ ಬಾಲ ಉಪನಿಷತ್ತಿನ ಸಂದೇಶವಿದೆ.

ಭಸ್ಮನಿಷ್ಠಸ್ಯ ದಹ್ಯಂತೇ ದೋಷಾ ಭಸ್ಮಾಗ್ನಿ ಸಂಗಮಾತ್ ।<br>
ಭಸ್ಮಸ್ನಾನವಿಶುದ್ಧಾತ್ಮಾ ಭಸ್ಮನಿಷ್ಠ ಇತಿ ಸ್ಮೃತಃ ॥

(ಬೃಹಜ್ಜಾ ಉ. ೫–೧೮)

ಈ ಬೃಹಜ್ಜಾಬಾಲೋಪನಿಷತ್ ಪ್ರಮಾಣದಂತೆ ಭಸ್ಮಸ್ನಾನ, ಭಸ್ಮೋದ್ಧೂಲನ ಮತ್ತು ಸರ್ವಾಂಗದಲ್ಲಿ ಭಸ್ಮ ತ್ರಿಪುಂಡ್ರಧಾರಣೆಯಲ್ಲಿ ತಲ್ಲೀನವಾದ ಮನಸ್ಸುಳ್ಳ ಸಾಧಕನು ಭಸ್ಮನಿಷ್ಠನೆನಿಸಿಕೊಳ್ಳುತ್ತಾನೆ. ಹೀಗೆ ಭಸ್ಮನಿಷ್ಠನಾದ ಸಾಧಕನ ಸಕಲ ಪಾಪಗಳು ಭಸ್ಮೀ ಭೂತಗಳಾಗುತ್ತವೆ. ಅದನ್ನೇ ಉಪನಿಷತ್ ಹಾಗೂ ಕ್ರಿಯಾಸಾರದಲ್ಲಿ –

''ಭಸ್ಮ ಮನನಾದೇವ ಕಿಲ್ಬಿಷಾದೀನಿ ನಶ್ಯಂತಿ । ಭಸ್ಮ<br>
ಮನನಾದೇವ ಪಾಪಂ ಭಸ್ಮಸಾತ್‌ಕರೋತಿ । ಭಸ್ಮ ಮನನಾ<br>
ದೇವ ಸಂಸಾರೋತ್ತಾರಣಂ ಕರೋತಿ । ಸ ಏಷ ಭಸ್ಮ<br>
ಜ್ಯೋತಿಃ ॥ ''

(ಕ್ರಿಯಾಸಾರ. ಉಪದೇಶ. ೭, ಪುಟ ೪೪)

ಹೀಗೆ ಭಸ್ಮವೆಂಬುದೊಂದು ದಿವ್ಯಜ್ಯೋತಿಯು ಜ್ಯೋತಿಯ ಸಾನ್ನಿಧ್ಯದಿಂದ ಕತ್ತಲೆಯು ವಿನಾಶಗೊಳ್ಳುವಂತೆ, ಭಸ್ಮ ಜ್ಯೋತಿಯಿಂದ ಸಕಲ ಕಿಲ್ಬಿಷಗಳು ನಾಶವಾಗುತ್ತವೆಂಬುದು ಬಹು ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ.

ಮದ್ಯಂ ಪೀತ್ವಾ ಗುರುದಾರಾಂಶ್ಚಗತ್ವಾ<br>
ಸ್ತೇಯಂ ಕೃತ್ವಾಬ್ರಹ್ಮಹತ್ಯಾಂ ಚ ಕೃತ್ವಾ ।<br>
ಭಸ್ಮಚ್ಛನ್ನೋ ಭಸ್ಮಶಯ್ಯಾಶಯಾನೋ<br>
ರುದ್ರಾಧ್ಯಾಯೀ ಮುಚ್ಯತೇ ಸರ್ವ ಪಾಪೈಃ ॥

(ಶಾತಾತಪಸ್ಮೃತಿ)

ಅಶುಚಿರ್ವಾಪ್ಯನಾಚಾರೋ ಮನಸಾಪಾಪಮಾಚರನ್ ।
ಶುಚಿರೇವ ಭವೇನ್ನಿತ್ಯಂ ತ್ರಿಪುಂಡ್ರಸ್ಯ ಚ ಧಾರಣಾತ್ ॥

(ಸ್ಮೃತಿಸಾರ)

ಮದ್ಯಪಾನ, ಗುರುಪತ್ನೀ ಗಮನ, ಸ್ತೇಯ, ಬ್ರಹ್ಮಹತ್ಯೆ ಇವೇ ಮುಂತಾದ ಅಸಾಧ್ಯ ಪಾಪಗಳನ್ನಾಚರಿಸಿದವನೂ, ಮಾನಸಿಕ ಪಾಪಗಳನ್ನಾಚರಿಸಿದ ಮಹಾನ್ ಅನಾಚಾರಿಯೂ ಸಹ ಭಸ್ಮಧಾರಣೆಯನ್ನು ಮಾಡಿದ ಮಾತ್ರದಿಂದ ಸರ್ವ ಪಾಪವಿ ನಿರ್ಮುಕ್ತನಾಗುವನೆಂಬುದನ್ನು ಸ್ಮೃತಿಗ್ರಂಥಗಳೂ ಅನುಮೋದಿಸುತ್ತವೆ.

ಕಂಠೇ ಚ ಧಾರಣಾತ್ಕಂಠಭಾಗಾದಿಕೃತ ಪಾತಕಂ ।
ಬಾಹ್ವೋರ್ಬಾಹುಕೃತಂ ಪಾಪಂ ವಕ್ಷಸೋ ಮನಸಾಕೃತಂ ॥
ನಾಭ್ಯಾಂ ಪೃಷ್ಠ ಕೃತಂ ಪಾಪಂ ಪೃಷ್ಠೇ ಗುದಕೃತಂ ಹರೇತ್ ।
ಪಾರ್ಶ್ವಯೋರ್ಧಾರಣಾದ್ರಾಮ ಪರಸ್ತ್ರ್ಯಾಲಿಂಗನಾದಿಜಂ ॥
ಭಸ್ಮಾಸನಾ ಭಸ್ಮಶಯ್ಯಾ ಭಸ್ಮೋಧ್ಧೂಲಿತ ವಿಗ್ರಹಾಃ ।
ಭಸ್ಮಸ್ನಾನಾತ್ ಸದಾ ಪಾಪೈರ್ಮುಚ್ಯಂತೇ ನಾತ್ರ ಸಂಶಯಃ ॥

(ಕ್ರಿಯಾಸಾರ. ಉಪ. ೮. ಪುಟ ೮೫)

ಪವಿತ್ರವಾದ ಭಸ್ಮವನ್ನು ಕಂಠದಲ್ಲಿ ಧರಿಸಿದರೆ ಕಂಠದಿಂದ ಜನಿತವಾದ ಪಾಪವು, ಬಾಹುವಿನಲ್ಲಿ ಧರಿಸಿದರೆ ಬಾಹುಜನಿತ ಪಾಪವು ಮತ್ತು ಪಾರ್ಶ್ವದಲ್ಲಿ ಧರಿಸಿದರೆ ಪರಸ್ತ್ರೀ ಆಲಿಂಗನ ಜನ್ಯ ಪಾಪವು, ಹೀಗೆ ಆಯಾ ಅವಯವಗಳಲ್ಲಿ ಭಸ್ಮವನ್ನು ಧರಿಸಿದರೆ ಆಯಾ ಅವಯವಗಳಿಂದ ಜನ್ಯಗಳಾದ ಪಾಪಗಳು ನಾಶವಾಗುತ್ತವೆ ಎಂಬುದನ್ನು ಶಿವಗೀತೆ ಯಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ ಎಂಬುದನ್ನು ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದಲ್ಲಿ ಪ್ರಸ್ತಾಪಿಸಿದ್ದಾರೆ. ಅನೇಕ ಆಕರ ಗ್ರಂಥಗಳಲ್ಲಿ ಭಸ್ಮಮಹಿಮೆಯ ದೃಷ್ಟಾಂತಗಳು ಹೇರಳವಾಗಿ ಹೇಳಲ್ಪಟ್ಟಿವೆ. ವಾಚಕರ ಅವಗಾಹನೆಗಾಗಿ ಒಂದನ್ನಿಲ್ಲಿ ಪ್ರಸ್ತಾಪಿಸೋಣ.

ದ್ರವಿಡ ದೇಶದಲ್ಲಿ ಪಾಮರನಾದ ಓರ್ವ ಬ್ರಾಹ್ಮಣನಿದ್ದನು. ತಾನು ಉನ್ನತ ಕುಲದಲ್ಲಿ ಜನಿಸಿದ್ದರೂ ಆ ಕುಲೋಚಿತಗಳಾದ ಸಂಧ್ಯಾವಂದನೆ, ವೇದಾಧ್ಯಯನ ಮುಂತಾದ ಯಾವುದೊಂದು ಪವಿತ್ರ ಕಾರ್ಯವನ್ನು ಮಾಡದೇ ವಿಷಯ ವ್ಯಸನಿಯಾಗಿ ಮಧ್ಯಪಾನ, ಮಾಂಸಭಕ್ಷಣ, ಮತ್ತು ವೇಶ್ಯಾಗಮನ ಮುಂತಾದ ದುರಾಚಾರದಲ್ಲಿ ಕಾಲಯಾಪನ ಮಾಡತೊಡಗಿದನು. ಇವನ ಹೀನಾಚರಣೆಯನ್ನು ಕಂಡು ಉಳಿದ ಬ್ರಾಹ್ಮಣರೆಲ್ಲ ಇವನಿಗೆ ಕುಲದಿಂದ ಬಹಿಷ್ಕಾರ ಹಾಕಿದರು.

ವಿಷಯ ವ್ಯಸನವು ಮನುಷ್ಯನ ಸದ್ಗುಣ, ತಪಸ್ಸು, ಜಗದ ಪೂಜ್ಯತೆ, ದೇಹದ ಸೊಗಸು, ಹಿರಿಯರ ಒಲವು, ರಾಜರ ಮನ್ನಣೆ, ಲೋಕದ ವಂದನೆ, ಉರುತರ ತೇಜಸ್ಸು, ಮುನಿ–ದೇವ–ಗಣ–ರುದ್ರೇಶ್ವರಾದಿಗಳ ಪದವಿ ಇವೆಲ್ಲವುಗಳನ್ನು ಒಂದು ಕ್ಷಣದಲ್ಲಿ ಹಾಳು ಮಾಡಿಬಿಡುತ್ತದೆ. ಆದರೂ ಮನುಷ್ಯರು ವಿಷಯ ಮೃಗದತ್ತಲೇ ಧಾವಿಸುತ್ತಿರವುದನ್ನು ನೋಡಿದರೆ ವಿವೇಕಿಗಳಿಗೆ ಆಶ್ಚರ್ಯವಾಗದಿರದು.

ಹೀಗೆ ಆ ಬ್ರಾಹ್ಮಣನು ಯಾರ ಬಹಿಷ್ಕಾರಕ್ಕೂ ಬೆದರದೇ ತನ್ನ ಹೀನಾಚರಣೆ ಯನ್ನು ಹಾಗೆಯೇ ಮುಂದುವರಿಸಿದನು. ಅತಿ ವಿಷಯ ವ್ಯಸನಿಯಾದ ಇವನು ಅಲ್ಪ ಕಾಲದಲ್ಲಿಯೇ ದುರ್ಬಲನೂ ತೇಜೋಹೀನನೂ ಆಗಿ ಅಕಾಲಮರಣವನ್ನಪ್ಪಿದನು.

ಇವನ ಮರಣದ ವಾರ್ತೆಯನ್ನು ಕೇಳಿದ ಕೂಡಲೇ ಅವನ ಬಂಧು ಬಾಂಧವರೆಲ್ಲ ಕೂಡಿ ಅವನ ಕಾಲಿಗೆ ಹಗ್ಗವನ್ನು ಕಟ್ಟಿ, ನಾಯಿಯನ್ನು ಎಳೆದುಕೊಂಡು ಹೋಗುವಂತೆ ದರದರನೇ ಎಳೆದೊಯ್ದು ಊರಹೊರಗೆ ಶ್ಮಶಾನದ ಪಕ್ಕದಲ್ಲಿ ಚೆಲ್ಲಿಬಂದರು.

ನಿರಾಶ್ರಿತವಾಗಿ ಬಿದ್ದ ಅವನ ಮೃತದೇಹವನ್ನು ತಿನ್ನಲು ಹದ್ದು, ಕಾಗೆ, ನಾಯಿ ಮುಂತಾದ ಪಶು-ಪಕ್ಷಿಗಳು ಆ ದೇಹದತ್ತ ಧಾವಿಸಿ ಬಂದವು. ಇವನ ಮೃತಾತ್ಮವನ್ನು ಯಮದೂತರು ಯಮನ ಸನ್ನಿಧಾನಕ್ಕೆ ಕರೆದೊಯ್ದರು. ಇವನು ಮಾಡಿದ ಕರ್ಮಾನು ಸಾರವಾಗಿ ಇವನನ್ನು ರೌರವ ನರಕದಲ್ಲಿ ಇಡಬೇಕೆಂಬುದಾಗಿ ಯಮನಿಂದ ನಿರ್ಣಯ ವಾಯಿತು. ಅಷ್ಟರಲ್ಲಿ-

ಲಲಾಟೇ ತಸ್ಯದೋರ್ದ್ವಂದ್ವೇ ವಕ್ಷ್ಯಸ್ಯಪ್ಯಗ್ರಜನ್ಮನಃ ।
ಸಾರಮೇಯಃ ಸಮಾಗತ್ಯ ಭಕ್ಷಿತುಂ ತಂ ದ್ವಿಜಾಧಮಂ ॥
ಚಚಾರ ಭಸ್ಮಲಿಪ್ತಾತ್ಮಪಾದೋಽಯಂ ಬ್ರಾಹ್ಮಣೋತ್ತಮಾ ॥
ತಾವತಾಯಂ ದ್ವಿಜಃ ಶೀಘ್ರಾತ್ ಸದ್ಗತಿಂ ಪ್ರಾಪ್ತವಾನ್ ಖಲು ॥

(ಕ್ರಿಯಾಸಾರ. ಉಪ. ೮. ಪುಟ. ೧೧೮)

ಸಮೀಪದ ಶ್ಮಶಾನದ ಭಸ್ಮದಲ್ಲಿ ಹೊರಳಾಡಿದ ಒಂದು ನಾಯಿಯು ಇವನ ದೇಹವನ್ನು ತಿನ್ನಲು ಅಲ್ಲಿಗೆ ಬಂದು; ಮೃತ ದೇಹದ ಹಣೆ, ತೋಳು, ಎದೆ ಮುಂತಾದ ಅವಯವಗಳ ಮೇಲೆ ತನ್ನ ಕಾಲುಗಳನ್ನಿರಿಸಿದಾಗ ಅದರ ಕಾಲಿಗೆ ಅಂಟಿದ ಚಿತಾಭಸ್ಮವು ಇವನ ದೇಹದ ಮೇಲೆ ಅಂಕಿತವಾಯಿತು. ಅಂತ್ಯ ಸಮಯದಲ್ಲಿ ಶರೀರದ ಮೇಲೆ ಭಸ್ಮವನ್ನು ಕಂಡ ಶಿವನು ಈತನನ್ನು ಯಮಯಾತನೆಯಿಂದ ಪಾರುಮಾಡಿ ಸದ್ಗತಿಯನ್ನು ದಯಪಾಲಿಸಿ ದನು. ಅಂತೆಯೇ ಶ್ರೀ ಮನ್ನಿಜಗುಣ ಶಿವಯೋಗಿಗಳು-

''ದೇಶಕಾಲ ವಸ್ತುಗಳಿಂದೀಶನೊಲಿವನು ಕರ್ಮ ।
ಪಾಶವಳಿದು ನಿಜವಹುದಿಂತು ನೋಡಿದರೆ''

(ಕೈ.ಪ.ನೀ ೧೭)

ನೀತಿಕ್ರಿಯಾಚರ್ಯಸ್ಥಲದ ಈ ಪದ್ಯದಲ್ಲಿ ವಸ್ತುಗಳಿಂದಲೂ ಈಶ ನೊಲಿಯುತ್ತಾನೆ. ಎಂಬುದಕ್ಕೆ ಈ ಭಸ್ಮಧಾರಣೆಯ ಮಹತಿಯನ್ನು ಬೇರೊಂದು ದೃಷ್ಟಾಂತದಿಂದ ತಿಳಿಯ ಪಡಿಸಿದ್ದಾರೆ.

ಹೀಗೆ ಉಪನಿಷತ್, ಪುರಾಣ, ಸ್ಮೃತಿ ಹಾಗೂ ಪ್ರಾಚೀನ ಅನುಭವಿಕರ ಗ್ರಂಥ ಗಳನ್ನು ಪರ್ಯಾಲೋಚಿಸಿದಾಗ ಭಸ್ಮದಲ್ಲಿ ಪಾಪ ಭಕ್ಷಣ ಸಾಮರ್ಥ್ಯವಿದೆ ಎಂಬುದು ಸ್ಪಷ್ಟವಾಗಿ ತೋರುತ್ತದೆ ಅಂತೆಯೇ ''ಪಾಪಾನಾಂ ಭರ್ತ್ಸನಾತ್ ಭಸ್ಮ'' ''ಭಸ್ಮ ಸರ್ವಾಘ ಭಕ್ಷಣಾತ್'' ಎನ್ನು ಭಸ್ಮದ ಪರಿಭಾಷೆಯು ಯಥಾರ್ಥವಾಗಿದೆ.

ಭಸ್ಮದಲ್ಲಿ ಪಾಪನಿವಾರಕ ಸಾಮರ್ಥ್ಯವಿದೆಯೆಂದಬಳಿಕ ಹೊಸ ಹೊಸ ಪಾಪಗಳನ್ನು ಮನಃಪೂರಕವಾಗಿ ಮಾಡಿ ಭಸ್ಮವನ್ನು ಧರಿಸಿಕೊಂಡರಾಯಿತು, ನಾವು ಪಾಪನಿರ್ಮುಕ್ತರಾಗುತ್ತೇವೆಂಬ ಅಪಾರ್ಥವನ್ನು ಯಾರೂ ತಿಳಿದುಕೊಳ್ಳಬಾರದು. ಅರಿತೋ ಅರಿಯದೆಯೋ ಒಮ್ಮೆ ಮಾಡಿದ ಪಾಪದ ಪ್ರಾಯಶ್ಚಿತ್ತಕ್ಕಾಗಿ ಭಸ್ಮವನ್ನು ಧರಿಸಿಕೊಂಡ ಬಳಿಕ ಪುನಃ ತನ್ನಿಂದ ಆ ಪಾಪಕಾರ್ಯಗಳು ಜರುಗದಂತೆ ಎಚ್ಚರಿಕೆಯನ್ನು ವಹಿಸುವುದು ಸಾಧಕನ ಮುಖ್ಯಕರ್ತವ್ಯವು. ಪವಿತ್ರವಾದ ಶಿವನ ಲಾಂಛನವನ್ನು ಧರಿಸಿದ ನಾನು ಅಪವಿತ್ರ ಕಾರ್ಯವನ್ನು ಮಾಡಲಾರೆ ಎಂಬ ದೃಢ ಸಂಕಲ್ಪವನ್ನು ತಾಳಬೇಕು. ಅಂದಾಗಲೇ ಅವನ ಜೀವನವು ಕಲ್ಯಾಣಮಯವಾಗುವದು.

ತ್ರಿಪುಂಡ್ರಸಹಿತೋ ಜೀವಃ ಪೂಜ್ಯಃ ಸರ್ವೈಃ ಸುರಾಸುರೈಃ ।
ಪಾಪಾನ್ವಿತೋಽಪಿ ಶುದ್ಧಾತ್ಮಾ ಕಿಂ ಪುನಃ ಶ್ರದ್ಧಯಾ ಯುತಃ ॥

(ಶಿವ.ಪು. ವಿದ್ಯೇಶ್ವರ ೨೪–೨೫)

ಭಸ್ಮತ್ರಿಪುಂಡ್ರವನ್ನು ಧರಿಸಿ ಪಾಪಾತ್ಮನೂ ಪರಿಶುದ್ಧನಾಗುವನೆಂದ ಬಳಿಕ ಇನ್ನು ಶ್ರದ್ಧೆಯಿಂದ ಧರಿಸಿದರೆ ಮನುಷ್ಯನ ಬಗ್ಗೆ ಏನು ಹೇಳುವದಿದೆ. ಅವನು ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ. ಆದ್ದರಿಂದ ಬೇರಾವ ಯೋಗ್ಯತೆ ಇರದಿದ್ದರೂ ಭಸ್ಮಧಾರಿಮಾತ್ರ ಆಗಬೇಕು. ಇಲ್ಲವಾದರೆ ''ದಿಗ್ಭಸ್ಮರಹಿತಂ ಭಾಲಂ ಧಿಗ್ಗ್ರಾಮಮಶಿವಾಲಯಂ'' (ಶಿವ. ಪು. ವಿ. ೨೪–೨೫) ಶಿವಾಲಯವಿಲ್ಲದ ಗ್ರಾಮಕ್ಕೆ ಧಿಕ್ಕಾರವಿರುವಂತೆ ಭಸ್ಮರಹಿತವಾದ ಹಣೆಗೂ ಧಿಕ್ಕಾರವೆಂಬುದಾಗಿ ಶ್ರೀ ವ್ಯಾಸ ಮಹರ್ಷಿಗಳು ಶಪಿಸಿದ್ದಾರೆ.

(೪) ಕ್ಷಾರ :

ವಿಭೂತಿಯ ನಾಲ್ಕನೆಯ ನಾಮ ''ಕ್ಷಾರ''. ''ಕ್ಷಾರಣಾತ್ ಕ್ಷಾರಮಾಪದಾಂ'' ಎಂಬ ಶ್ರೀ ರೇಣುಕರ ಉಪದೇಶ ಮತ್ತು ''ಕ್ಷಾರಣಾದಾಪದಾಂ ಕ್ಷಾರಂ'' ಎಂಬ ಬೃಹಜ್ಜಾಬಾಲ ಮಂತ್ರದ ಪ್ರಮಾಣಾನುಸಾರವಾಗಿ ವಿಭೂತಿಯ ಧಾರಣೆಯಿಂದ ಅನೇಕ ವಿಪತ್ತುಗಳು ದೂರವಾಗುವದರಿಂದ ಇದಕ್ಕೆ ''ಕ್ಷಾರ''ವೆಂಬ ನಾಮವು ಪ್ರಾಪ್ತವಾಗಿದೆ.

''ಸರ್ವಃ ಸ್ವಾರ್ಥಂ ಸಮೀಹತೇ'' ಎಂಬ ಉಕ್ತಿಯಂತೆ ಜಗತ್ತಿನ ಪ್ರತಿಯೊಬ್ಬ ಮನುಷ್ಯನು ಸ್ವಾರ್ಥಪರಾಯಣನಾಗಿರುತ್ತಾನೆ. ಸಂಪದ್ಭರಿತನಾದ ವ್ಯಕ್ತಿಯ ಸುತ್ತುಮುತ್ತಲು ಸ್ವಾರ್ಥಿಗಳ ಸಂಖ್ಯೆ ಅಸಂಖ್ಯೆ. ಆದರೆ ಆತನಿಗೆ ವಿಪತ್ತುಗಳು ಬಂದೊದಗಿದಾಗ ಅವನ ಸಮೀಪ ಯಾರೂ ಸುಳಿಯರು. ಇದು ಸರ್ವಾನುಭವ ಸಿದ್ಧವಾದದ್ದು.

ಆತುರೇ ವ್ಯಸನೇ ಪ್ರಾಪ್ತೇ ದುರ್ಭಿಕ್ಷೇ ಶತ್ರುಸಂಕಟೇ ।
ರಾಜದ್ವಾರೇ ಶ್ಮಶಾನೇ ಚ ಯಸ್ತಿಷ್ಠತಿ ಸ ಬಾಂಧವಃ ॥

(ಚಾಣಕ್ಯ ನೀತಿ)

ಎಂಬ ಚಾಣಕ್ಯನೀತಿಯಂತೆ ರೋಗಿಯಾದಾಗ, ಪ್ರಿಯಜನರಿಂದ ವಿಮುಕ್ತನಾದಾಗ, ದುಷ್ಕಾಳ ಪ್ರಾಪ್ತವಾದಾಗ, ಶತ್ರುಗಳಿಂದ ಸಂಕಟಗಳು ಬಂದೊದಗಿದಾಗ, ಕೋರ್ಟಿನ ಮುದ್ದತ್ ಇದ್ದಾಗ ಮತ್ತು ಕೊನೆಯದಾಗಿ ಶ್ಮಶಾನಕ್ಕೆ ಹೋಗುವಾಗ ಯಾರು ಸಹಭಾಗಿ

ಯಾಗುವರೋ ಅವರೇ ಬಂಧುಗಳು. ಇಂತಹ ಆಪದ್ಬಾಂಧವರೆಷ್ಟು ಜನ ? ಅಂತೆಯೇ "ತಾಯಿಗಿಂತ ಬಂಧುವಿಲ್ಲ ಉಪ್ಪಿಗಿಂತ ರುಚಿ ಇಲ್ಲ" ಎಂಬ ನಾಡ ನುಡಿಯು ಪ್ರಸಿದ್ಧವಾಯಿತು. ಆದ್ದರಿಂದಲೇ "ಬಂಧುರ್ಮಾತೃಬಾಂಧವಯೋಃ" (ಹೈಮ) ಎಂಬುದಾಗಿ ಕೋಶಕಾರನೂ ಕೂಡಾ ತಾಯಿಯನ್ನೇ ಪ್ರಥಮ ಬಂಧುವನ್ನಾಗಿ ಪರಿಗಣಿಸಿದ್ದಾನೆ.

ಜನ್ಮದಾತೆಯಾದ ತಾಯಿಯು ಆಪದ್ಬಾಂಧವಳೇನೋ ನಿಜ;ಆದರೆ ಸಕಲ ಆಪತ್ತುಗಳಿಂದ ಅವಳೂ ನಮ್ಮನ್ನು ಪಾರುಮಾಡಲಾರಳು. ಅದಕ್ಕೋಸ್ಕರವಾಗಿಯೋ ಅನುಭವಿಗಳು–

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವ ದೇವ ॥

ಈ ರೀತಿಯಾಗಿ ತಮ್ಮ ಇಷ್ಟದೇವರನ್ನೋ ಅಥವಾ ತಮ್ಮ ಸದ್ಗುರುಗಳನ್ನೋ ತಾಯಿಯನ್ನಾಗಿ, ತಂದೆಯನ್ನಾಗಿ, ಬಂಧು–ಬಾಂಧವರನ್ನಾಗಿ ಭಾವಿಸಿ, ಅವರನ್ನೇ ಶರಣುಹೋಗಿದ್ದಾರೆ.

ಬಂಧುಗಳು ಆದವರು ಬಂದುಂಡು ಹೋಗುವರು
ಬಂಧನವ ಕಳೆಯಲರಿಯರು ಗುರುವಿಂದ
ಬಂಧುಗಳುಂಟೇ ಸರ್ವಜ್ಞ

ಸರ್ವಜ್ಞಕವಿಯ ಈ ವಚನವಾದರೂ ಅದನ್ನೇ ನಿರೂಪಿಸುತ್ತದೆ.

ಇದೆಲ್ಲವನ್ನು ಕೂಲಂಕಷವಾಗಿ ವಿಚಾರಿಸದ ಅವಿವೇಕಿಗಳು ವಿಪತ್ತುಗಳು ಬಂದೊದಗಿದಾಗ ಬಂಧುಬಾಂಧವರನ್ನೋ, ಧನ–ಕನಕಾದಿಗಳನ್ನೋ ಆಶ್ರಯಿಸಿ ಮತ್ತಷ್ಟು ವಿಪನ್ನಾವಸ್ಥೆಯನ್ನು ಹೊಂದುತ್ತಿರುವುದನ್ನು ಕಾಣುತ್ತಿರುತ್ತೇವೆ. ಸುವರ್ಣದ ಆಭರಣಗಳಿಗೆ ಆಪದ್ಧನವೆಂಬುದಾಗಿ ಲೋಕರೂಢಿಯುಂಟು. ಅಂತೆಯೇ ಸುಬಾಷಿತಕಾರನು–

ಧನೇನ ನಿಷ್ಕುಲಿನಾಃ ಕುಲಿನಾ ಭವಂತಿ
ಧನೈರಾಪದಂ ಮಾನವಾಃ ನಿಸ್ತರಂತಿ ।
ಧನೇಭ್ಯಃ ಪರೋ ಬಾಂಧವೋ ನಾಸ್ತಿ ಲೋಕೇ
ಧನಾನ್ಯರ್ಜಯಧ್ವಂ ಧನಾನ್ಯರ್ಜಯಧ್ವಂ ॥

(ಸುಭಾಷಿತ)

ಧನದಿಂದಲೇ ಕುಲಹೀನನು ಕುಲವಂತನಾಗುವನು, ಧನದಿಂದಲೇ ಮನುಷ್ಯನು ಸಕಲ ವಿಪತ್ತುಗಳನ್ನು ದಾಟುವನು ಮತ್ತು ಧನವೇ ಪರಮ ಬಂಧುವು. ಆದ್ದರಿಂದ ಧನವನ್ನೇ ಸಂಪಾದಿಸಿರಿ ಎಂಬುದಾಗಿ ಲೋಕಕ್ಕೆ ಸಂದೇಶವಿತ್ತಿದ್ದಾನೆ. ಅದಕ್ಕಾಗಿಯೇ ಜಗತ್ತಿನ ಸಮಸ್ತ ಜನರು ಅರ್ಥಪಿಪಾಸುಗಳಾಗಿ ದರ್ಮಾಽಧರ್ಮವನ್ನು ಪರಿಗಣಿಸದೇ ದ್ರವ್ಯಾರ್ಜನೆಯಲ್ಲಿ ತೊಡಗಿದ್ದಾರೆ.

ಧನವು ಜೀವನದ ಎಲ್ಲ ವ್ಯವಹಾರಕ್ಕೆ ಪ್ರಮುಖ ಮಾಧ್ಯಮವಾದ್ದರಿಂದ ಅದು ಜೀವನಕ್ಕೆ ಅವಶ್ಯಕವಾದದ್ದೇನೋ ನಿಜ; ಆದರೆ ಧನದಿಂದಲೇ ಸಕಲ ವಿಪತ್ತುಗಳನ್ನು ದಾಟಬಲ್ಲೆ ಎಂಬ ಅಭಿಮಾನವನ್ನು ಯಾರೂ ತಾಳಕೂಡದು. ಈ ತಪ್ಪು ಭ್ರಮೆಯಲ್ಲಿಯೇ ಸಿಲುಕಿದ ಅದೆಷ್ಟೋ ಜನರು ಅನ್ಯಾಯದಿಂದ ಅರ್ಥವನ್ನು ಸಂಚಯಿಸಿ ಅನರ್ಥಕ್ಕೊಳಗಾಗಿರುವುದನ್ನು ಕಾಣುತ್ತಲಿದ್ದೇವೆ. ಅಂತೆಯೇ–

''ಅರ್ಥಮನರ್ಥಂ ಭಾವಯ ನಿತ್ಯಮ್'' ಎಂದಿದ್ದಾನೆ ಅನುಭವಿಯಾದ ಸುಭಾಷಿತಕಾರನೋರ್ವನು.

ಧನ–ಕನಕಾದಿಗಳು ಕೆಲವೊಂದು ಐಹಿಕ ವಿಪತ್ತುಗಳ ತಾತ್ಕಾಲಿಕ ಪರಿಹಾರಕ್ಕೆ ಸಾಧನಗಳಾಗಬಹುದಲ್ಲದೇ, ಪಾರಲೌಕಿಕ ವಿಪತ್ತುಗಳನ್ನು ಪರಿಹರಿಸಲಾರವು. ಆದಕ್ಕಾಗಿಯೇ ''ಪರಲೋಕೇ ಧನಂ ಧರ್ಮಃ'' ಎಂದಿದ್ದಾರೆ. ಧರ್ಮವಂತನಾದ ಮನುಷ್ಯನು ಇಹಲೋಕದಲ್ಲಿ ಸಕಲ ವಿಪತ್ತುಗಳನ್ನು ದೂರಮಾಡಿಕೊಳ್ಳಬಲ್ಲನಲ್ಲದೇ, ಪಾರಲೌಕಿಕ ವಿಪತ್ತುಗಳಿಂದಲೂ ಪೀಡಿತನಾಗಲಾರನು.

ಇಷ್ಟದೇವರಲ್ಲಿ ಹಾಗೂ ಇಷ್ಟದೇವರಿಗೆ ಪ್ರಿಯವಾದ ವಸ್ತುಗಳಲ್ಲಿ ನಿಷ್ಠೆಯನ್ನಿಡುವದು ಧಾರ್ಮಿಕನ ಲಕ್ಷಣವು. ವೀರಶೈವ ಸಿದ್ಧಾಂತದಲ್ಲಿ ಪರಶಿವನೇ (ಇಷ್ಟಲಿಂಗವೇ) ಇಷ್ಟದೇವರು. ಶಿವನಿಗೆ ಪ್ರಿಯವಾದ ವಸ್ತುಗಳಲ್ಲಿ ವಿಭೂತಿಯು ಪ್ರಧಾನವಾದದ್ದು. ಅಂತೆಯೇ ಅತ್ಯಾನಂದದಿಂದ ಶಿವನು ಅದನ್ನು ತನ್ನ ಮೈ ತುಂಬ ಬಳಿದುಕೊಳ್ಳುತ್ತಾನೆ. ಹೀಗೆ ಶಿವನಿಗೆ ಪ್ರಿಯವಾದ ವಿಭೂತಿಯನ್ನು ಸಾಧಕನು ತನ್ನಂಗದಲ್ಲಿ ಧರಿಸಿಕೊಂಡಾಗ ಶಿವಾನುಗ್ರಹದಿಂದ ಅವನ ವಿಪತ್ತುಗಳೆಲ್ಲ ದೂರಾಗುವವು. ಅಂತೆಯೇ ಶಿವನು ಪಾರ್ವತಿಯನ್ನು ಕುರಿತು–

ಅಥಾತಃ ಸಂಪ್ರವಕ್ಷ್ಯಾಮಿ ಭಸ್ಮಸ್ನಾನಂ ಸುಲೋಚನೇ ।
ಆಯುಷ್ಯಂ ಬಲಮಾರೋಗ್ಯಂ ಶ್ರೀಃ ಪುಷ್ಟಿರ್ವರ್ಧತೇ ಯಥಾ ॥
ರಕ್ಷಾರ್ಥಂ ಮಂಗಲಾರ್ಥಂಚ ಸರ್ವಸಂಪತ್ಸಮೃದ್ಧಯೇ ।

(ಕ್ರಿಯಾಸಾರ. ಉಪ ೬. ಪುಟ ೧೭)

ಎಲೈ ಪಾರ್ವತಿಯೇ ! ಭಸ್ಮ ಸ್ನಾನದಿಂದ ಆಯುಷ್ಯ, ಬಲ, ಆರೋಗ್ಯ ಮತ್ತು ಸಂಪತ್ತುಗಳು ವೃದ್ಧಿಗೊಳ್ಳುವವಲ್ಲದೇ ದೈಹಿಕ–ಮಾನಸಿಕ ಪುಷ್ಟಿಯು ಪ್ರಾಪ್ತವಾಗಿ ಸಾಧಕನ ರಕ್ಷಣೆಯಾಗುವುದು. ಇದೂ ಅಲ್ಲದೇ ಸಕಲ ಸಂಪತ್ತುಗಳು ಸಂವೃದ್ಧಗಳಾಗಿ, ಅನಂತ ಮಂಗಲ ಪರಂಪರೆಗಳು ದೊರೆಯುವವು ಎಂಬುದಾಗಿ ಬೋಧಾಯನ ಸ್ಮೃತಿಯಲ್ಲಿ ಪ್ರತಿಪಾದಿತವಾದ ಶಿವಪಾರ್ವತಿಯರ ಸಂವಾದವನ್ನೇ ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದಲ್ಲಿ ಉಲ್ಲೇಖಿಸಿದ್ದಾರೆ.

ಹೀಗೆ ಶಿವಾದೇಶಾನುಸಾರವಾಗಿ ಆಯುಷ್ಯ–ಆರೋಗ್ಯ–ಬಲ–ಐಶ್ವರ್ಯಗಳನ್ನು ದಯಪಾಲಿಸುವ ಭಸ್ಮವು ನಿಜವಾಗಿ ಆಪತ್ಬಂಧುವೇ ಸರಿ. ಆದ್ದರಿಂದ ಭಸ್ಮದಲ್ಲಿ ನಿಷ್ಠೆಯನ್ನಿಡಬೇಕಲ್ಲದೇ ಅದರ ಬಗ್ಗೆ ಎಂದೂ ತಿರಸ್ಕಾರವನ್ನು ತಾಳಕೂಡದು. ಅನ್ಯಥಾ ಸರ್ವಾನರ್ಥಗಳೇ ಪ್ರಾಪ್ತವಾಗುವ ಸಂಭವವುಂಟು. ಇದಕ್ಕೊಂದು ಕ್ರಿಯಾಸಾರ ಗ್ರಂಥೋಕ್ತವಾದ ದೃಷ್ಟಾಂತವನ್ನಿಲ್ಲಿ ಉದಾಹರಿಸೋಣ–

ವಂಗದೇಶದಲ್ಲಿ ಭುಜಬಲನೆಂಬ ರಾಜನು ಪ್ರಜಾಪಾಲನೆಯನ್ನು ಮಾಡುತ್ತಿದ್ದನು. ದಾನಶೂರನಾದ ಈತನು ಪ್ರತಿ ದಿನ ಅನೇಕ ಬ್ರಾಹ್ಮಣರಿಗೆ ದಾನಮಾಡುತ್ತಿದ್ದನು. ಒಂದು ಸಾರೆ ವಿದರ್ಭದೇಶದ ಸುಶೀಲನೆಂಬ ಬ್ರಾಹ್ಮಣನು ರಾಜನಲ್ಲಿಗೆ ಭಿಕ್ಷೆಗಾಗಿ ಬಂದನು. ಭಿಕ್ಷೆ ನೀಡುವಾಗ ರಾಜನ ಹಣೆಯಲ್ಲಿ ಭಸ್ಮವಿಲ್ಲದ್ದನ್ನು ನೋಡಿ ಸುಶೀಲನು–''ಹೇ ರಾಜನ್! ಭಸ್ಮಧರಿಸದೇ ಮಾಡಿದ ಶುಭಕರ್ಮಗಳೆಲ್ಲ ನಿಷ್ಫಲಗಳಾಗುವವು. ಭಸ್ಮದಲ್ಲಿ ಅಶ್ರದ್ಧೆಯನ್ನು ಮಾಡಿದರೆ, ಸಂಪತ್ತೆಲ್ಲವೂ ನಾಶವಾಗಿ ದಾರಿದ್ರ್ಯ–ರೋಗಾದಿಗಳು ಪ್ರಾಪ್ತವಾಗುವವಲ್ಲದೇ ಪುತ್ರಾದಿಗಳು ಮೃತರಾಗುವರು'' ಎಂಬುದಾಗಿ ಸದುಪದೇಶವನ್ನು ಮಾಡಿದನು. ಬ್ರಾಹ್ಮಣನ ಈ ಉಪದೇಶವನ್ನು ಕೇಳಿ ರಾಜನು ಪರಿಹಾಸ ಮಾಡುತ್ತ–

ಭವೇಯುರೇತೇ ಯದಿ ವಾ ತದಾ ತ್ವಾ ಪ್ರಾಪ್ಯ ಭೂಸುರ ।
ಭಸ್ಮಾದಾಯ ಚ ಧೃತ್ವೈ ತದ್ದುರಿತಾನಿ ನಿವರ್ತಯೇ ॥

ಹೇ ಭೂಸುರ ! ನೀನು ಹೇಳಿದಂತೆ ಅಂತಹ ಅವಸ್ಥೆಯು ನನಗೆ ಪ್ರಾಪ್ತವಾದಾಗ ನಿನ್ನಲ್ಲಿಗೆ ಬಂದು ನಿನ್ನಿಂದ ಭಸ್ಮವನ್ನು ಪಡೆದು ಪಾಪವನ್ನು ಕಳೆದುಕೊಳ್ಳುವೆನು ಸಧ್ಯಃ ನೀನು ಭಿಕ್ಷೆಯನ್ನು ತೆಗೆದುಕೊಂಡು ಹೋಗು ಎಂಬುದಾಗಿ ಪರಿಹಾಸವನ್ನು ಮಾಡಿದನು.

ರಾಜನ ಈ ಪರಿಹಾಸದ ಮಾತುಗಳನ್ನು ಕೇಳಿ ಸ್ವಾಭಿಮಾನಿಯಾದ ಸುಶೀಲನು ದಾನವನ್ನು ತೆಗೆದುಕೊಳ್ಳದೇ ಹಾಗೆಯೇ ಹಿಂತಿರುಗಿದನು. ಭಸ್ಮಕ್ಕೆ ತಿರಸ್ಕಾರ ಮಾಡಿದ ಘೋರ ದುರಿತದ ಫಲವಾಗಿ ಮುಂದೆ ಅಲ್ಪಕಾಲದಲ್ಲಿಯೇ ಮಹಾಮಾರಿ ಬೇನೆಯಿಂದ ಆಕ್ರಾಂತನಾದನು. ಮಕ್ಕಳೆಲ್ಲರೂ ಅದೇ ಬೇನೆಯಿಂದ ಮಡಿದರು. ರಾಜನ ಈ ವಿಪನ್ನಾವಸ್ಥೆಯನ್ನು ಸಾಧಿಸಿ ಶತೃರಾಜರು ಇವನ ರಾಜ್ಯದ ಮೇಲೆ ದಂಡೆತ್ತಿ ಬಂದರು. ಆಗ ರಾಜನು ತನ್ನ ಪ್ರಾಣವನ್ನು ಉಳಿಸಿಕೊಂಡು ಹೆಂಡತಿಯಿಂದೊಡಗೂಡಿ ಅರಣ್ಯವನ್ನು ಪ್ರವೇಶಿಸಿದನು.

ಅರಣ್ಯ ಮಾರ್ಗದಲ್ಲಿ ಹೋಗುವಾಗ ಬಲಶಾಲಿಯಾದ ಬೇಡನೋರ್ವನು ರಾಜನ ಪತ್ನಿಯನ್ನು ಅಪಹರಿಸಿಕೊಂಡು ಹೋದನು. ಮುಂದೆ ಒಂಟಿಗನಾದ ರಾಜನು ಭ್ರಮಿಷ್ಟನಾಗಿ ತಿರುಗುತ್ತ ಒಂದು ಗ್ರಾಮವನ್ನು ಪ್ರವೇಶಿಸಿದನು. ಇವನ ಈ ದುರವಸ್ಥೆಯನ್ನು ಕಂಡು ಗ್ರಾಮದ ಮಕ್ಕಳೆಲ್ಲ ಇವನಿಗೆ ಹುಚ್ಚನೆಂದು ಅಪಹಾಸ್ಯ ಮಾಡುತ್ತ ಕಲ್ಲುಗಳನ್ನು ಎಸೆಯ ತೊಡಗಿದ್ದರು. ರಾಜನು ಹೊಟ್ಟೆಗೆ ಅನ್ನ–ನೀರುಗಳಿಲ್ಲದೇ ತಿರುಗಾಡ ತೊಡಗಿದನು. ಹಗಲಿನಲ್ಲಿ ಎಲ್ಲಿಯೂ ಭಿಕ್ಷೆ ಸಿಗದ್ದರಿಂದ ಒಂದು ರಾತ್ರಿ ಕಳ್ಳತನಕ್ಕಾಗಿ ಒಂದು ಮನೆಯನ್ನು ಹೊಕ್ಕನು. ಮನೆಯ ಯಜಮಾನರು ಇವನನ್ನು ಬಂಧಿಸಿ ಗ್ರಾಮದ ಮುಖ್ಯಸ್ಥನ ಬಳಿ ಕೊಂಡೊಯ್ದರು. ಆಗ ಗ್ರಾಮಾಧಿಕಾರಿಯು ಈ ಕಳ್ಳನ ಕೈಕಾಲುಗಳ ಬೆರಳುಗಳನ್ನು ಕತ್ತರಿಸಿರೆಂಬುದಾಗಿ ಆಜ್ಞಾಪಿಸಿದನು. ಆಗ ಸೇವಕರು ಇವನನ್ನು ಊರ ಹೊರಗೆ ತೆಗೆದುಕೊಂಡು ಹೋಗಿ ಬೆರಳುಗಳನ್ನು ಕತ್ತರಿಸಿ ಊರ ಸೀಮೆಯಿಂದ ಹೊರ ನೂಕಿದರು.

ಆಗ ರಾಜನು ದಾರಿಗಾಣದೇ ಏಳುತ್ತ–ಬೀಳುತ್ತ ಮತ್ತೊಂದು ಗ್ರಾಮವನ್ನು ಪ್ರವೇಶಿಸಿದನು. ಅತ್ತ ಇವನ ಹೆಂಡತಿಯನ್ನು ಅಪಹರಿಸಿಕೊಂಡು ಹೋದ ಬೇಡನು ಹೇಗೋ ಬೇಡನು ಹೇಗೋ ಹುಲಿಯ ಬಾಯಿಗೆ ತುತ್ತಾದ್ದರಿಂದ ಆ ಮಹಾರಾಣಿಯೂ ಅತ್ತಿತ್ತ ಅಲೆಯುತ್ತ ರಾಜನು ತಲುಪಿದ ಗ್ರಾಮವನ್ನೇ ತಲುಪಿದಳು. ದೈವವಶಾತ್ ಇವರು ಬಂದ ಗ್ರಾಮವು ಆ ಸುಶೀಲ ಬ್ರಾಹ್ಮಣನದಾಗಿತ್ತಲ್ಲದೇ ಈರ್ವರೂ ಒಬ್ಬರನ್ನೊಬ್ಬರು ಪರಿಚಯಿಸಿದ ಸ್ಥಿತಿಯಲ್ಲಿ ಆ ಬ್ರಾಹ್ಮಣನ ಮನೆಯ ಮುಂಭಾಗದಲ್ಲಿ ಬಂದು ಭಿಕ್ಷೆ ಬೇಡತೊಡಗಿದರು.

ಭಿಕ್ಷುಕರ ಧ್ವನಿಯನ್ನು ಕೇಳಿ ಹೊರಗೆ ಬಂದ ಸುಶೀಲನು ರಾಜ–ರಾಣಿಯರನ್ನು ಗುರುತಿಸಿ, ನೀವು ನನ್ನನ್ನು ಗುರುತಿಸುವಿರಾ? ಎಂಬುದಾಗಿ ಪ್ರಶ್ನಿಸಿದನು. ರಾಜ–ರಾಣಿಯರಿಗೆ ಯಾವ ಸ್ಮೃತಿಯೂ ಆಗಲಿಲ್ಲ. ಆಗ ಸುಶೀಲನು "ನೂನಂ ಭಸ್ಮಾವ ಮಾನೇನ ಪ್ರಾಪ್ತೇಽಯಂ ನಿಷ್ಠುರಾದಶಾ" ಹೇ ರಾಜನೇ ನೀನು ಭಸ್ಮವನ್ನು ತಿರಸ್ಕರಿಸಿದ್ದರ ಫಲವೇ ನಿನ್ನ ಈ ದುರವಸ್ಥೆಗೆ ಕಾರಣವಾದದ್ದು ಎಂಬುದಾಗಿ ನುಡಿದನು. ಆಗ ಹಿಂದಿನದೆಲ್ಲವನ್ನೂ ಸ್ಮರಿಸಿಕೊಂಡ ರಾಜನು ಪಶ್ಚಾತ್ತಾಪಗೊಂಡು–

ತದದ್ಯ ಭವತಾ ಸ್ವಾಮಿನ್ ರಕ್ಷಣೀಯೋ ಮಹಾಪದ ಃ।
ದತ್ವಾ ಭಸ್ಮೇತಿ ತಂ ವಿಪ್ರಂ ಪ್ರಣನಾಮ ಮಹೀಪತಿ ಃ॥

ಹೇ ಸ್ವಾಮಿನ್ ! ನಿನಗೆ ಅನಂತ ಪ್ರಣಾಮಗಳು. ನನಗೆ ಬೇಗನೇ ಭಸ್ಮವನ್ನು ದಯಪಾಲಿಸಿ ನನ್ನನ್ನು ಈ ವಿಪತ್ತಿನಿಂದ ರಕ್ಷಿಸಬೇಕೆಂಬುದಾಗಿ ಪ್ರಾರ್ಥಿಸಿಕೊಂಡನು.

ಆಗ ದಯಾಮಯನಾದ ಸುಶೀಲನು ಆಶೀರ್ವಾದಪೂರ್ವಕವಾಗಿ ಭಸ್ಮವನ್ನು ದಯಪಾಲಿಸಿದನು. ರಾಜನು ಆ ಭಸ್ಮವನ್ನು ಧರಿಸಿದಕೂಡಲೇ ಕಡಿದಹೋದ ಕೈ–ಕಾಲುಗಳ ಬೆರಳುಗಳು ಪುನಃ ಪ್ರಾಪ್ತವಾದವು. ಆಗ ಅಲ್ಲಿಯೇ ಇದ್ದ ಮಹಾರಾಣಿಯು ರಾಜನನ್ನು ಗುರುತಿಸಿ ರಾಜನಿಗೆ ನಮಸ್ಕರಿಸಿದಳು. ಈರ್ವರೂ ಭಸ್ಮಧಾರಿಗಳಾಗಿ ಸರ್ವ ವ್ಯಾಧಿಯಿಂದ ವಿನಿರ್ಮುಕ್ತರಾದರು. ಅದೇ ಸಮಯದಲ್ಲಿ ಈ ರಾಜನ ಅಳಿಯನಾದ ವಿದರ್ಭಾಧಿಪತಿ ವಿಚಿತ್ರರಥನೆಂಬ ರಾಜನು ಈ ಸುದ್ದಿ ತಿಳಿದು ಅಲ್ಲಿಗೆ ಬಂದು ರಾಣಿಯರಿಗೆ ರಾಜೋಚಿತಗಳಾದ ಉಡುಪುಗಳನ್ನು ಆಭರಣಗಳನ್ನು ಕೊಟ್ಟನಲ್ಲದೆ, ತನ್ನ ಸೈನ್ಯಬಲವನ್ನೂ ಕೊಡಮಾಡಿದನು.

ನಂತರ ಈ ಭುಜಬಲ ಮಹಾರಾಜನು ಸಕಲ ವಿಪತ್ತುಗಳನ್ನು ದೂರೀಕರಿಸುವ ಭಸ್ಮವನ್ನು ಆಶೀರ್ವಾದವಾಗಿ ಪಡೆದು ಶತ್ರುವಿನಮೇಲೆ ಆಕ್ರಮಣವನ್ನು ಮಾಡಿ ಪುನಃ ತನ್ನ ರಾಜ್ಯವನ್ನು ವಶಪಡಿಸಿಕೊಂಡನು. ಅಂದಿನಿಂದ ರಾಜ–ರಾಣಿಯರಿಬ್ಬರೂ ಭಸ್ಮದಲ್ಲಿ ಅತ್ಯಂತ ನಿಷ್ಠೆಯುಳ್ಳವರಾಗಿ ಸಕಲ ವಿಪತ್ತುಗಳನ್ನು ದೂರಮಾಡಿಕೊಂಡು ಪುನಃ ಪುತ್ರಸೌಭಾಗ್ಯವನ್ನು ಪಡೆದು ಸುಖಮಯವಾದ ಜೀವನವನ್ನು ಸಾಗಿಸತೊಡಗಿದರು.

ಭಸ್ಮವು ಒಂದು ಭೌತಿಕವಾದ ಪದಾರ್ಥವು. ಅದು ನಮ್ಮನ್ನು ಸಕಲ ಆಪತ್ತುಗಳಿಂದ ಹೇಗೆ ರಕ್ಷಿಸಬಲ್ಲದು ? ಎಂಬ ಸಂದೇಹವನ್ನೂ ತಾಳಲಾಗದು. ಸ್ಥೂಲ ದೃಷ್ಟಿಗೆ ಅದೊಂದು ಭೌತಿಕವಸ್ತುವಾಗಿ ತೋರಿದರೂ ತಾತ್ವಿಕವಾಗಿ ಅದು ಪರಶಿವ ಸ್ವರೂಪ

ವಾದದ್ದು. ಅಂತೆಯೇ ''ಭಸ್ಮಯೇ ವಿನಿಂದಂತಿನಿಂದಂತಿ ಶಿವಮೇವ ತೇ''ಭಸ್ಮವನ್ನು ನಿಂದಿಸಿದರೆ ಸಾಕ್ಷಾತ್ ಶಿವನನ್ನೇ ನಿಂದಿಸಿದಂತೆ ಎಂಬ ವಚನದಲ್ಲಿ ಭಸ್ಮಕ್ಕೂ ಶಿವನಿಗೂ ತಾದಾತ್ಮ್ಯವು ಬೋಧಿಸಲ್ಪಟ್ಟಿದೆ. ಆದ್ದರಿಂದ–

ಭಸ್ಮಜ್ಯೋತಿ ಸ್ವರೂಪಾಯ ಶಿವಾಯ ಪರಮಾತ್ಮನೇ ।
ಷಟ್‌ತ್ರಿಂಶತ್ತತ್ತ್ವಬೀಜಾಯ ನಮಃ ಶಾಂತಾಯ ತೇಜಸೇ ॥

ಈ ಭಸ್ಮ ಧ್ಯಾನ ಮಂತ್ರದಲ್ಲಿ–ಮೂವತ್ತಾರು ತತ್ತ್ವಗಳ ಮೂಲವನ್ನೂ, ಪ್ರಶಾಂತನೂ, ಆದ ಆ ಪರಶಿವನೇ ಭಸ್ಮಜ್ಯೋತಿ ಎಂಬುದಾಗಿ ಪ್ರತಿಪಾದಿಸಿದೆ. ಅದೇ ಪ್ರಕಾರ ಶ್ರೀಮನ್ನಿಜಗುಣಶಿವಯೋಗಿಗಳಾದರೂ–

''ಶಿವನ ಮೈ ವೆಳಗು ತಾನಾದ ಭಸಿತವನು''

(ಕೈ.ಪ. ಶಿವಯೋಗ ೧–೧)

ಶಿವನ ದಿವ್ಯದೇಹದ ಪ್ರಕಾಶವೇ ಭಸ್ಮವೆಂದು ನಿರೂಪಿಸಿದ್ದಾರೆ. ಶಿವನ ಪ್ರಕಾಶ ಶಿವನಿಗಿಂತಲೂ ಭಿನ್ನವಾದದ್ದಲ್ಲ. ಹೀಗೆ ಈ ಎಲ್ಲ ಪ್ರಮಾಣಗಳಿಂದ ಭಸ್ಮಕ್ಕೂ ಶಿವನಿಗೂ ಅಭೇದವಿರುವದರಿಂದ ಶಿವನೇ ಭಸ್ಮ ಭಸ್ಮವೇ ಶಿವ ಈ ಭಾವನೆಯನ್ನು ಮಾಡಿಕೊಂಡು ಭಸ್ಮ ಧಾರಣೆಯನ್ನು ಪ್ರತಿನಿತ್ಯ ಮಾಡುತ್ತಿದ್ದರೆ ಬಂದ ಆಪತ್ತುಗಳೆಲ್ಲ ಶಿವನ ಅನುಗ್ರಹದಿಂದ ಪರಿಹರಿಸಲ್ಪಡುವವು. ಹೀಗೆ ಭಸ್ಮವು ಶ್ರದ್ಧಾಳುಗಳ ಆಪತ್ತುಗಳನ್ನು ದೂರ ಮಾಡುವುದರಿಂದ ಇದಕ್ಕೆ ''ಕ್ಷಾರಣಾತ್ ಕ್ಷಾರಮಾಪದಾಂ'' ಎಂದು ಶ್ರೀ ಜ॥ ರೇಣುಕರು ಹಾಗೂ ಉಪನಿಷತ್ತುಗಳು ''ಕ್ಷಾರ'' ವೆಂಬ ಹೆಸರನ್ನು ಕೊಟ್ಟಿದ್ದು ಸಾರ್ಥಕವಾಗಿ ತೋರುತ್ತದೆ.

(೫) ರಕ್ಷಾ:

ಭಸ್ಮದ ಐದನೇ ಹೆಸರು ''ರಕ್ಷಾ'' ''ರಕ್ಷಣಾತ್ ಸರ್ವ ಭೂತೇಭ್ಯೋ ರಕ್ಷೇತಿ ಪರಿಗೀಯತೇ'' ಎಲ್ಲ ಪ್ರಾಣಿಗಳಿಂದ ರಕ್ಷಿಸುವ ಕಾರಣ ಇದಕ್ಕೆ ''ರಕ್ಷಾ'' ಎಂಬುದಾಗಿ ಶ್ರೀ ಜಗದ್ಗುರು ರೇಣುಕರು ಅಪ್ಪಣೆಯನ್ನು ಕೊಡಿಸಿದ್ದಾರೆ. ಬೃಹಜ್ಜಾಬಾಲೋಪನಿಷತ್ತಿನಲ್ಲಿಯೂ ''ಭೂತ- ಪ್ರೇತ-ಪಿಶಾಚ-ಬ್ರಹ್ಮರಾಕ್ಷಸ-ಅಪಸ್ಮಾರ-ಭವಸ್ಮಾರ-ಭವಭೀತೇಭ್ಯೋಽಭಿ ರಕ್ಷಣಾದ್ರಕ್ಷೇತಿ'' ಭೂತ–ಪ್ರೇತ ಪಿಶಾಚಾದಿಗಳಿಂದ ಮತ್ತು ಅನೇಕ ರೋಗಗಳಿಂದ ಸಾಧಕನನ್ನು ರಕ್ಷಿಸುವ ಕಾರಣ ಭಸ್ಮಕ್ಕೆ ''ರಕ್ಷಾ'' ಎಂಬ ಹೆಸರು ಬಂದಿದೆ ಎಂಬುದಾಗಿ ನಿರೂಪಿಸಲಾಗಿದೆ.

''ಶರೀರ ಮಾದ್ಯಂ ಖಲು ಧರ್ಮಸಾಧನಂ'' ಎಂಬ ಮಹಾಕವಿ ಕಾಳಿದಾಸನ ಉಕ್ತಿಯನ್ನು ಧರ್ಮ ಸಾಧನೆಗೆ ಶರೀರವೇ ಮುಖ್ಯವಾದದ್ದು. ಆಯುಷ್ಯವಿರುವವರೆಗೆ ಶರೀರವನ್ನು ರಕ್ಷಿಸಿಕೊಂಡು ಅದರಿಂದ ಅನೇಕ ಮಹತ್ತ್ವಪೂರ್ಣಗಳಾದ ಕಾರ್ಯಗಳನ್ನು ಸಾಧಿಸುವುದು ಮನುಷ್ಯನ ಆದ್ಯ ಕರ್ತವ್ಯವು. ಶರೀರದ ಜೊತೆಗೆ ಮನಸ್ಸು ಹಾಗೂ ಬುದ್ಧಿಗಳ ರಕ್ಷಣೆಯೂ ಅತ್ಯಾವಶ್ಯಕವಾದುದು.

ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತಾಪತ್ರಯಗಳು. ಸದಾಕಾಲದಲ್ಲಿ ನಮ್ಮ ಶರೀರ ಮತ್ತು ಮನೋಬುದ್ಧಿಗಳನ್ನು ಹಾಳುಮಾಡುತ್ತಿರುತ್ತವೆ. ಈ ದುಃಖ

ತ್ರಯಗಳ ನಿವೃತ್ತಿಗಾಗಿ ಶಾಸ್ತ್ರಗಳಲ್ಲಿ ಮಣಿ–ಮಂತ್ರ ಹಾಗೂ ಔಷಧಿಗಳೆಂಬ ಉಪಾಯಗಳು ಪ್ರತಿಪಾದಿಸಲ್ಪಟ್ಟಿವೆ. ಆದರೆ ವೀರಶೈವ ಸಿದ್ಧಾಂತದ ಪ್ರಕಾರ ವಜ್ರ–ವೈಡೂರ್ಯಾದಿ ನವರತ್ನಗಳ, ಬೇರಾವ–ಸಾಮಾನ್ಯ ಮಂತ್ರಗಳ ಮತ್ತು ವಿಭಿನ್ನ ಔಷಧಿಗಳ ಶರಣಾಗತಿಯನ್ನು ಪಡೆಯುವದಕ್ಕಿಂತಲೂ ಇಷ್ಟಲಿಂಗ ಧಾರಣೆ, ಪಂಚಾಕ್ಷರಿ ಮಹಾಮಂತ್ರದ ಜಪ ಹಾಗೂ ಭಸ್ಮಧಾರಣೆ ಇವುಗಳಿಂದಲೇ ತಾಪತ್ರಯಗಳು ನಿವೃತ್ತಗಳಾಗಿ ಸಾಧಕನು ಪರಮ ಕೈವಲ್ಯವನ್ನು ಪಡೆಯಬಲ್ಲನು. ಅಂತೆಯೇ ಶ್ರೀ ನೀಲಕಂಠ ಶಿವಾಚಾರ್ಯರು–

ಶಿವಲಿಂಗಂ ಮಣಿಃ ಸಾಕ್ಷಾನ್ಮಂತ್ರಂ ಪಂಚಾಕ್ಷರಂ ತಥಾ ।
ಭೂತಿರೇವೌಷಧಂ ಪುಂಸಾಂ ಮುಕ್ತಿಸ್ತ್ರೀ ವಶ್ಯಕರ್ಮಣಿ ॥

(ಕ್ರಿಯಾಸಾರ. ಉಪದೇಶ ೮–೨೦೨; ಪುಟ ೭೭)

ಇಷ್ಟಲಿಂಗವನ್ನೇ ''ಮಣಿ''ಯನ್ನಾಗಿಯೂ, ಪಂಚಾಕ್ಷರವನ್ನೇ ''ಮಹಾಮಂತ್ರ''ವನ್ನಾಗಿಯೂ ಮತ್ತು ವಿಭೂತಿಯನ್ನೇ ''ದಿವ್ಯ ಔಷಧಿ''ಯನ್ನಾಗಿಯೂ ಪ್ರತಿಪಾದಿಸಿ; ಇವುಗಳಿಂದಲೇ ಸಾಧಕನ ಸಂರಕ್ಷಣೆಯಾಗಿ ಕೊನೆಗೆ ಕೈವಲ್ಯವು ಲಭಿಸುವುದೆಂದು ತಿಳಿಯಪಡಿಸಿರುವರು. ಆದಕಾರಣ ವೀರಶೈವರು ತಮ್ಮ ಶರೀರ ಮತ್ತು ಮನೋಬುದ್ಧಿಗಳನ್ನು ಈ ತ್ರಿತಾಪಗಳಿಂದ ರಕ್ಷಿಸಿಕೊಳ್ಳಲು ಹಲವು ಹನ್ನೆರಡು ಉಪಾಯಗಳನ್ನು ಮಾಡುವುದಕ್ಕಿಂತಲೂ ಇಷ್ಟಲಿಂಗವನ್ನು ನಿಷ್ಠೆಯಿಂದ ಧರಿಸಿ ಪಂಚಾಕ್ಷರ ಮಂತ್ರ ಪುರಃಸರವಾಗಿ ಭಸ್ಮವನ್ನು ಧರಿಸಿಕೊಂಡರೆ ಸಾಕು. ''ಪರಮಾಸ್ತ್ರಂ ಚ ಶೈವಾನಾಂ ಭಸ್ಮ ತತ್ ಪಾರಮೇಶ್ವರಂ'' ಎಂಬ ವಾಯವೀಯ ವಚನಾನುಸಾರವಾಗಿ ವಿಚಾರಿಸಿದರೆ ಶಿವಭಕ್ತರಾದವರಿಗೆ ಭಸ್ಮವೇ ಒಂದು ಮಹಾನ್ ದಿವ್ಯಾಸ್ತ್ರವು. ಈ ದಿವ್ಯಾಸ್ತ್ರವನ್ನು ಧರಿಸಿದ ಸಾಧಕನಿಗೆ ಭೂತ–ಪ್ರೇತಾದಿಗಳ ಅಸುರ–ರಾಕ್ಷಸಾದಿಗಳ ಮತ್ತು ರೋಗ–ರುಜೆಗಳ ಬಾಧೆಯುಂಟಾಗುವುದಿಲ್ಲ. ಅದನ್ನೇ ದೇವೀಕಾಲೋತ್ತರದಲ್ಲಿ–

ಜ್ವರ ರಕ್ಷಃ ಪಿಶಾಚಾಶ್ಚಾಪ್ಯಸುರಾ ಯಾತುಧಾನಕಾಃ ।
ಕುಮಾರ ಗ್ರಹ ಭೂತಾಶ್ಚ ಕೂಷ್ಮಾಂಡಾ ಡಾಕಿಣೀಗಣಾಃ ॥
ಬ್ರಹ್ಮರಾಕ್ಷಸ ಮುಖ್ಯಾಶ್ಚ ಪೂತನಾಕುಷ್ಠಗುಲ್ಮಶಾಃ ।
ಭಗಂದರಾಣಿ ಸರ್ವಾಣಿ ಹ್ಯಸೀತಿರ್ವಾತರೋಗಶಾಃ ।
ಚತುಃಷಷ್ಟಿಃ ಪಿತ್ತರೋಗಾಃ ಶ್ಲೇಷ್ಮಸಪ್ತತಿ ಪಂಚಶಾಃ ।
ವ್ಯಾಘ್ರಸರ್ಪಭಯಂ ಚೈವಾಪ್ಯನ್ನೇ ದುಷ್ಟ ಮೃಗಾ ಅಪಿ ॥
ಭಸ್ಮಸ್ನಾನೇನ ನಶ್ಯಂತಿ ಸಿಂಹೇನೇವ ಮೃಗಾದಯಃ ।

(ಕ್ರಿಯಾಸಾರ.ಉಪ. ೮, ಪುಟ ೮೪)

ಜ್ವರ, ರಕ್ಷ, ಪಿಶಾಚ, (ದೇವಯೋನಿವಿಶೇಷರು) ಅಸುರ, ಯಾತುಧಾನಕ ಅಂದರೆ ರಾಕ್ಷಸ, ಮನ್ಮಥ, ನವಗ್ರಹ, ಭೂತ ಕುಷ್ಮಾಂಡವೆಂಬ ಹೆಸರಿನ ಒಂದು ತರಹದ ಪಿಶಾಚಿ, ಡಾಕಿಣೀ–ಶಾಕಿಣೀ ಮುಂತಾದ ಸ್ತ್ರೀ ಪಿಶಾಚಿಗಳ ಗುಂಪು, ಬ್ರಹ್ಮರಾಕ್ಷಸ (ಬ್ರಾಹ್ಮಣನಾಗಿದ್ದು ಕೊಲೆ–ದರೋಡೆ ಮುಂತಾದ ಹೀನ ಕಾರ್ಯಗಳನ್ನು ಮಾಡಿ

ದವನು ಮರಣದ ನಂತರ ಬ್ರಹ್ಮರಾಕ್ಷಸನಾಗುತ್ತಾನೆ), ಪೂತನಾ (ಬಾಲಗ್ರಹ), ಕುಷ್ಠ, ಗುಲ್ಮ(ಹೊಟ್ಟೆಯಲ್ಲಿ ಬೆಳೆದ ಗಂಟು), ಭಗಂದರ (ಗುದ ಮತ್ತು ವೃಷಣಗಳ ಮಧ್ಯದಲ್ಲಿ ಹುಣ್ಣಾಗಿ ತೂತು ಬೀಳುವ ಒಂದು ರೋಗ), ಎಂಭತ್ತು ಪ್ರಕಾರದ ವಾತರೋಗ, ಅರವತ್ತು ನಾಲ್ಕು ಪ್ರಕಾರದ ಪಿತ್ತರೋಗ, ಎಪ್ಪತ್ತೈದು ಪ್ರಕಾರದ ಕಫರೋಗ ಮತ್ತು ಹುಲಿ–ಸರ್ಪ ಮುಂತಾದ ದುಷ್ಟ ಮೃಗ ಇವೆಲ್ಲವುಗಳ ಬಾಧೆಯು ಭಸ್ಮಸ್ನಾನ ಮಾತ್ರ ದಿಂದ ನಿವೃತ್ತಿಯಾಗುತ್ತದೆ ಎಂಬುದಾಗಿ ಪ್ರತಿಪಾದಿಸಲಾಗಿದೆ. ಹೀಗೆ ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತ್ರಿತಾಪಗಳ ಪೀಡೆಯಿಂದ ಮನುಷ್ಯನನ್ನು ರಕ್ಷಿಸುವ ಕಾರಣ ಭಸ್ಮಕ್ಕೆ ''ರಕ್ಷಾ'' ಎಂದು ಕರೆಯಲಾಗಿದೆ. ಅದನ್ನೇ ವಿಸ್ತಾರವಾಗಿ ವಿವೇಚಿಸೋಣ.

**ಬಾಹ್ಯ ಆಧ್ಯಾತ್ಮಿಕ ದುಃಖದಿಂದ ರಕ್ಷಣೆ :**

ಆಧ್ಯಾತ್ಮಿಕ ದುಃಖವು ಬಾಹ್ಯ ಮತ್ತು ಅಂತರ ಎಂದು ಎರಡು ವಿಧವಾಗಿರುತ್ತದೆ. ''ವಾತ ಪಿತ್ತಾದಿಜಂ ದುಃಖಂ ಬಾಹ್ಯಮಾಧ್ಯಾತ್ಮಿಕಂ ಮತಂ'' ಎಂಬ ಪೂಜ್ಯ ಶ್ರೀ ಜಗದ್ಗುರು ರೇಣುಕರ ಉಪದೇಶದಂತೆ ವಾತಪಿತ್ತಾದಿ ತ್ರಿದೋಷಗಳ ವಿಕಾರದಿಂದ ಉಂಟಾಗುವ ಶಾರೀರಕ ರೋಗಗಳಿಗೆ ಬಾಹ್ಯ ಆಧ್ಯಾತ್ಮಿಕ ದುಃಖವೆನ್ನುವರು. ಆಯುರ್ವೇದ ಶಾಸ್ತ್ರ ದಲ್ಲಿ ವಾತ ಪ್ರಕೋಪದಿಂದ ೮೧, ಪಿತ್ತ ಪ್ರಕೋಪದಿಂದ ೬೪, ಮತ್ತು ಕಫ ಪ್ರಕೋಪ ದಿಂದ ೨೧೫ ಹೀಗೆ ಒಟ್ಟು ೩೬೦ ಧಾತುಜನ್ಯ ರೋಗಗಳೆಂದು ಹೇಳಲಾಗಿದೆ. ಇವೆಲ್ಲವುಗಳಿಗೆ ಚರಕ, ಸುಶ್ರುತ ಮುಂತಾದ ಮಹರ್ಷಿಗಳು ವನಸ್ಪತಿಗಳ ಔಷಧಗಳನ್ನು ಕಂಡುಹಿಡಿದಿದ್ದಾರೆ. ಇನ್ನು ಭಸ್ಮ ತಂತ್ರವಿಶಾರದರಾದ ಮಹರ್ಷಿಗಳು ಶಾಸ್ತ್ರವಿಧಿ ಯಾದ ಮಂತ್ರ ಸಂಸ್ಕಾರ ಪೂರ್ವಕವಾಗಿ ನಿರ್ಮಿಸಿದ ಭಸ್ಮದಿಂದ ೮೦ ವಾತ ಜನ್ಯ ರೋಗಗಳು, ೬೪ ಪಿತ್ತಜನ್ಯ ರೋಗಗಳು ಮತ್ತು ೨೫ ಕಫ ಜನ್ಯ ರೋಗಗಳು ಹೀಗೆ ಒಟ್ಟು ೨೧೯ ರೋಗಗಳು ನಿವೃತ್ತಿಯಾಗುವುದಾಗಿ ಪ್ರತಿಪಾದಿಸಿದ್ದಾರೆ.

ಆಧುನಿಕ ಔಷಧೋಪಚಾರಗಳ ಮೋಹಜಾಲದಲ್ಲಿ ಸಿಲುಕಿಕೊಂಡು ನಾವಿಂದು ನಮ್ಮ ದೇಶದ ಪ್ರಾಚೀನ ಮಹರ್ಷಿಗಳ ಮಾರ್ಗವನ್ನೇ ಮರೆತಿದ್ದೇವೆ. ಅಂತೆಯೇ ಆ ಪದ್ಧತಿಯು ಇಂದು ಸಂಪೂರ್ಣವಾಗಿ ಹ್ರಾಸವಾಗಿದೆ. ಪಾಶ್ಚಾತ್ಯ ಔಷಧಗಳನ್ನು ಸೇವಿಸಿ ಅನೇಕ ಹಾನಿಗೊಳಗಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಪ್ರಾಚೀನ ಪದ್ಧತಿಯನ್ನು ಪುನರುಜ್ಜೀವನಗೊಳಿಸುವುದು ಪರಮಾವಶ್ಯಕವಾದುದು.

ಪರಿಶುದ್ಧವಾದ ಗೋಮಯದಿಂದ ನಿರ್ಮಿತವಾದ ಭಸ್ಮವನ್ನು ಅನುಪಾನ ಭೇದ ದಿಂದ ಅನೇಕ ರೋಗಗಳ ಮೇಲೆ ಉಪಯೋಗಿಸಬಹುದೆಂದು ವಯೋವೃದ್ಧರೂ ಅನುಭವಿಗಳೂ ಆಯುರ್ವೇದ ವಿಶಾರದರೂ ಆದ ಬನ್ನಿಕೊಪ್ಪದ ಡಾ. ಎಸ್.ಎಫ್. ಹಿರೇಮಠರ ಅಭಿಪ್ರಾಯ. ಅವರು ಪ್ರಯೋಗ ಮಾಡಿ ಅನುಭವಿಸಿದ್ದರಲ್ಲಿ ಕೆಲವು ಗಳನ್ನು ಹೇಳಿದ್ದಾರೆ ಅವುಗಳನ್ನೇ ಸಂಕ್ಷೇಪವಾಗಿ ವಿವರಿಸುತ್ತೇವೆ.

**ಗೋಮೂತ್ರ, ಗೋಮಯ ಹಾಗೂ ಗೋಮಯಭಸ್ಮದ ಉಪಚಾರ :**

ಗೋವಿನ ಹಾಲು, ಮೊಸರು ಮತ್ತು ತುಪ್ಪದಲ್ಲಿ ಅಷ್ಟೇ ಅಲ್ಲ ಅದರ ಸಗಣೆ ಹಾಗೂ ಮೂತ್ರಗಳಲ್ಲಿಯೂ ಪೋಷಕ ಹಾಗೂ ರೋಗ ನಾಶಕ ತತ್ತ್ವಗಳು ಅಡಕಗಳಾಗಿವೆ. ಅಂತೆಯೇ ಹಿಂದೂಸಂಸ್ಕೃತಿಯಲ್ಲಿ ''ಪಂಚಗವ್ಯ'' ಪ್ರಾಶನವು ವಿಹಿತವಾಗಿದೆ.

**(೧) ಗೋಮೂತ್ರ ಚಿಕಿತ್ಸೆ :**

ಗೋಮೂತ್ರವು ತೀಕ್ಷ್ಣ ಕ್ಷಾರ, ಬಿಸಿ, ಮತ್ತು ಸ್ವಲ್ಪ ಮಧುರ ಗುಣವುಳ್ಳದ್ದಾಗಿರುತ್ತದೆ. ಇದು ಪಾಚಕ, ಅಗ್ನಿದೀಪಕ ಹಾಗೂ ಬುದ್ಧಿವರ್ಧಕವಾಗಿರುವುದಲ್ಲದೇ ಕಫ, ವಾಯು, ಕುಷ್ಠ, ಪಾಂಡು, ದಮ್ಮು, ಜ್ವರ, ಕೆಮ್ಮು, ಮಲಬದ್ಧತೆ, ನೇತ್ರರೋಗ ಮತ್ತು ತ್ವಚರೋಗಗಳನ್ನು ನಾಶಗೊಳಿಸುತ್ತದೆ. ನಿರೋಗಿಯೂ ಸಶಕ್ತವೂ ಆದ ಆಕಳ ಮೂತ್ರವನ್ನು ಕರುವನ್ನು ಬಿಟ್ಟು ಹಿಂಡಿಕೊಳ್ಳುವಾಗ ಸಂಗ್ರಹಿಸಿ ಉಪಯೋಗಿಸಬೇಕು.

ಗೋಮೂತ್ರದಲ್ಲಿ ಸಕ್ಕರೆ ಹಾಗೂ ಉಪ್ಪುಗಳನ್ನು ಸಮಭಾಗದಲ್ಲಿ ಅರೆದು ಕೂಡಿಸಿ ಇಲ್ಲವೇ ಸೈಂಧವ ಲವಣ ಮತ್ತು ರಾಗಿಯ ಚೂರ್ಣವನ್ನು ಗೋಮೂತ್ರದಲ್ಲಿ ಬೆರಸಿ ಸೇವಿಸುವುದರಿಂದ ಉದರ ವ್ಯಾಧಿಯು ವಾಸಿಯಾಗುವುದು. ಪ್ರಾತಃಕಾಲ ಹಾಗೂ ಸಾಯಂಕಾಲ ಗೋಮೂತ್ರದಲ್ಲಿ ಅರಿಷಿಣ ಪುಡಿಯನ್ನು ಕೂಡಿಸಿ ಪಾನಮಾಡಿಸಿದರೆ ಮಕ್ಕಳ ಹೊಟ್ಟೆ ರೋಗವು ದೂರಾಗುವುದು.

ಪ್ರತಿದಿವಸ ಪ್ರಾತಃಕಾಲ ತಮ್ಮ ಶಕ್ತ್ಯಾನುಸಾರ ಬಟ್ಟೆಯಲ್ಲಿ ಸೋಸಿದ ಗೋಮೂತ್ರವನ್ನು ೨೧ ಇಲ್ಲವೇ ೪೨ ದಿನಗಳವರೆಗೆ ಸೇವಿಸಿದರೆ ಪಾಂಡುರೋಗವು ಗುಣವಾಗುವುದು. ಬಿಸಿಮಾಡಿದ ಗೋಮೂತ್ರದಿಂದ ಕಿವಿಯನ್ನು ತೊಳೆದರೆ ಕಿವಿ ಸೋರುವಿಕೆ ನಿಲ್ಲುವುದು. ಪ್ರತಿದಿವಸ ೨ ತೊಲ ಗೋಮೂತ್ರ ನೀರಿನಲ್ಲಿ ಬೆರಸಿ ಪಾನ ಮಾಡುವದರಿಂದ ಮೂತ್ರಕೃಚ್ಛವು ಕಡಿಮೆಯಾಗುವುದು. ಗೋಮೂತ್ರದಲ್ಲಿ ಸ್ವಲ್ಪ ಸಕ್ಕರೆಯನ್ನು ಬೆರಸಿ ಸೇವಿಸುವುದರಿಂದ ಕಣ್ಣುಉರಿ, ದಾಹ, ಆಲಸ್ಯ, ಕಬ್ಬ ಮತ್ತು ಊಟದಲ್ಲಿ ಅರುಚಿ ಮುಂತಾದವುಗಳು ಗುಣವಾಗುತ್ತವೆ.

ತಾಜಾ ಗೋಮೂತ್ರವನ್ನು ಬಟ್ಟೆಯಲ್ಲಿ ಸೋಸಿಕೊಂಡು ಅದರಲ್ಲಿ ಒಂದು ಮಾಸಿ ಉಪ್ಪನ್ನು ಸೇರಿಸಿ ಕುಡಿಯುವುದರಿಂದ ಸ್ವಲ್ಪೇ ಸಮಯದಲ್ಲಿ ಭೇದಿಯಾಗಿ ಹೊಟ್ಟೆಯುಬ್ಬುರವು ಕಡಿಮೆಯಾಗುವುದು.

ಮಕ್ಕಳ ಹೊಟ್ಟೆಯು ಉಬ್ಬಿದ್ದರೆ ಒಂದು ವರ್ಷದ ಮಕ್ಕಳಿಗೆ ಒಂದು ಚಮಚೆ ಗೋಮೂತ್ರದಲ್ಲಿ ಸ್ವಲ್ಪು ಉಪ್ಪು ಕೂಡಿಸಿ ಕುಡಿಸಬೇಕು. ೨ ತೊಲಿ ಗೋಮೂತ್ರದಲ್ಲಿ ಕಡಲೆಕಾಳಿನಷ್ಟು ಡಿಕ್ಕಿಮಲಿಯನ್ನು ಕೂಡಿಸಿ ಮಕ್ಕಳಿಗೆ ಪ್ರಾತಃಕಾಲ ೭ ದಿನ ಕುಡಿಸಿದರೆ ಹೊಟ್ಟೆಯ ಕ್ರಿಮಿಗಳೆಲ್ಲ ನಾಶವಾಗುತ್ತವೆ. ಹೊಟ್ಟೆಯ ಯಾವುದೇ ರೋಗಕ್ಕೆ ಗೋಮೂತ್ರವು ರಾಮಬಾಣವಿದ್ದಂತೆ.

ಶರೀರದ ತುಂಬೆಲ್ಲ ತಿಂಡಿ ಬಿಡುತ್ತಿದ್ದರೆ ಕಹಿ ಜೀರಿಗೆಯನ್ನು ಗೋಮೂತ್ರದಲ್ಲಿ ಅರೆದು ಆದರ ಗಂಧವನ್ನು ಮೈತುಂಬ ಹಚ್ಚಿಕೊಂಡು ನಂತರ ಬೇವಿನ ತೊಪ್ಪಲ ಹಾಕಿ

ಕುದಿಸಿದ ನೀರಿನಿಂದ ತೊಳೆಯುತ್ತ ಹೋದರೆ ಶರೀರದ ಚರ್ಮರೋಗವು ಸಂಪೂರ್ಣ ವಾಸಿಯಾಗುವದು. ಹೀಗೆ ಗೋಮೂತ್ರದ ಉಪಚಾರವು ಹೇರಳವಾಗಿದೆ. ಅಂತೆಯೇ ''ಸರ್ವೇಷ್ವಪಿಚ ಮೂತ್ರೇಷು ಗೋಮೂತ್ರಂ ಗುಣತೋಧಿಕಂ,'' ಅಂದರೆ ಎಲ್ಲ ಮೂತ್ರಗಳಲ್ಲಿ ಗೋಮೂತ್ರವೇ ಅಧಿಕ ಗುಣಕಾರಿ ಎಂಬುದಾಗಿ ಹೇಳಲಾಗಿದೆ. ಜಿಜ್ಞಾಸುಗಳು ಇದರ ಪ್ರಯೋಗವನ್ನು ಮಾಡಿಕೊಂಡು ಅನುಭವವನ್ನು ಪಡೆಯಬೇಕು.

**ಗೋಮಯ ಚಿಕಿತ್ಸೆ :**

ಗೋವಿನ ಶಗಣೆಯು ದುರ್ಗಂಧನಾಶಕವೂ, ಶೋಧಕವೂ, ವೀರ್ಯ ವರ್ಧಕವೂ, ಪೋಷಕವೂ, ಕಾಂತಿಪ್ರದವೂ ಮತ್ತು ಮಲ ನಿವಾರಕವೂ ಆಗಿರುತ್ತದೆ. ಅಂತೆಯೇ ಪ್ರಾಚೀನ ಕಾಲದಲ್ಲೂ ಮನೆ ಹಾಗೂ ಅಂಗಳವನ್ನು ಸಂಸ್ಕರಿಸ (ಸಾರಿಸ)ಲು ಗೋವಿನ ಶೆಗಣೆಯನ್ನೇ ಉಪಯೋಗಿಸುತ್ತ ಬಂದಿದ್ದಾರೆ. ಈ ಗೋಮಯವು ರೋಗಗಳ ಚಿಕಿತ್ಸೆಯಲ್ಲಿಯೂ ಉಪಯೋಗಿಸಲ್ಪಡುತ್ತ ಬಂದಿದೆ.

ಗರ್ಭದಲ್ಲಿಯೇ ಶಿಶುವು ಮೃತವಾಗಿದ್ದರೆ ಆಕಳ ಶೆಗಣೆಯ ರಸವನ್ನು ೨ ತೊಲಿ ತೆಗೆದುಕೊಂಡು ಆಕಳ ಹಾಲಿನಲ್ಲಿ ಬೆರಸಿ ಸೇವಿಸಿದರೆ ಮೃತಶಿಶುವು ಅನಾಯಾಸವಾಗಿ ಹೊರಬರುವುದು.

ತಿಂಡಿಯುಕ್ತವಾದ ಚರ್ಮರೋಗವಿದ್ದರೆ ಆಕಳ ಶೆಗಣೆಯನ್ನು ಮೈಗೆ ಹಚ್ಚಿಕೊಂಡು ಬಿಸಿನೀರಿನಿಂದ ಸ್ನಾನಮಾಡುತ್ತ ಹೋದರೆ ಎಂತಹ ಚರ್ಮರೋಗವಾದರೂ ಶೀಘ್ರದಲ್ಲಿಯೇ ವಾಸಿಯಾಗುವುದು. ಆಕಳಿನ ಶೆಗಣಿ ಹಾಗೂ ಮೂತ್ರದಲ್ಲಿ ಮೆಂಥಲ್ (Menthol) ಅಮೋನಿಯಾ (Ammonia) ಫಿನೋಲ್ (Phenol), ಇಂಡೋಲ್ (Indol) ಮತ್ತು ಫಾರ್ಮೇಲಿನ್ (Formalin) ಮುಂತಾದ ತತ್ತ್ವಗಳು ತುಂಬಿಕೊಂಡಿರುವುದರಿಂದ ಇವುಗಳಲ್ಲಿ ರೋಗಾಣುಗಳನ್ನು ನಾಶಮಾಡುವ ಶಕ್ತಿಯು ಸಹಜವಾಗಿದೆ ಎಂದು ವಿಜ್ಞಾನಿಗಳ ಹೇಳಿಕೆ.

ಮುಂದುವರಿದ ಜನಾಂಗವೆಂದು ಹೇಳಿಕೊಳ್ಳುವ ಜನರು ಗೋಮೂತ್ರ ಗೋಮಯಗಳನ್ನು ಹೇಯದೃಷ್ಟಿಯಿಂದ ನೋಡುವ ಕಾರಣದಿಂದ ಅವರಿಗೆ ಇದರ ಲಾಭದ ಅರಿವಾಗಲಾರದು. ಶ್ರದ್ಧಾಳುಗಳು ಪ್ರಯೋಗ ಮೂಲಕವಾಗಿಯೇ ಅನುಭವವನ್ನು ಪಡೆಯಬಹುದು.

**ಗೋಮಯ ಭಸ್ಮಚಿಕಿತ್ಸೆ :**

ಶಾಸ್ತ್ರೋಕ್ತ ವಿಧಿಯಿಂದ ನಿರ್ಮಾಣಗೊಳಿಸಿದ ಪರಿಶುದ್ಧವಾದ ಗೋಮಯ ಭಸ್ಮವು ಒಂದು ಮಹೌಷಧವಿದ್ದಂತೆ. ಅನುಪಾನ ಭೇದದಿಂದ ಸರ್ವರೋಗಗಳಿಗೂ ಇದನ್ನು ಉಪಯೋಗಿಸಬಹುದು.

ವೀಳೇದೆಲೆಯ ರಸ ಮತ್ತು ಬೇವಿನ ತಪ್ಪಲ ರಸದಲ್ಲಿ ಭಸ್ಮದ ಅಂಜನವನ್ನು ತಯಾರಿಸಿ ಕಣ್ಣುಗಳಿಗೆ ಹಚ್ಚಿದರೆ ಹಾವು ಮುಂತಾದ ವಿಷಜಂತುಗಳ ಬಾಧೆಯಿಂದ ಉಂಟಾದ ಪ್ರಜ್ಞಾಹೀನಸ್ಥಿತಿಯು ತೊಲಗಿ ಪ್ರಜ್ಞೆಯು ಪ್ರಾದುರ್ಭವಿಸುವುದು.

ಅಂಟಾಳಕಾಯಿ ಬುರುಗದಲ್ಲಿ ಒಂದು ಗುಂಜಿ ಭಸ್ಮವನ್ನು ಹಾಕಿ ಹೊಟ್ಟೆತುಂಬ ಕುಡಿಸಿದರೆ ವಾಂತಿಯಾಗಿ ಹಾವಿನ ವಿಷ ಬಾಧೆಯು ದೂರಾಗುವುದು. ನಂತರ ಜೇನು ತುಪ್ಪದಲ್ಲಿ ಸ್ವಲ್ಪು ಭಸ್ಮವನ್ನು ಹಾಕಿ ನೆಕ್ಕಿಸಬೇಕು.

ಭಸ್ಮವನ್ನು ಜೇನುತುಪ್ಪದಲ್ಲಿ ಕೂಡಿಸಿ ಲೇಪಿಸಿದರೆ ಎಂತಹ ಗಾಯವಿದ್ದರೂ ವಾಸಿಯಾಗುವುದು. ಅಂತ್ಯಾವಸ್ಥೆಯಲ್ಲಿ ಅತಿ ಸೀತವಾಗಿ ಮೈಯಿಂದ ಬೆವರು ಒಂದೇ ಸಮನೆ ಸುರಿಯುತ್ತಿದ್ದರೆ ಗೋಮಯ ಭಸ್ಮವನ್ನು ಹಚ್ಚಿದರೆ ತತ್‌ಕ್ಷಣ ಪರಿಣಾಮವಾಗುವುದು.

ತಾಯಿಯ ಮೊಲೆ ಹಾಲಿನಲ್ಲಿ ಅಥವಾ ಹಾಗಲತೊಪ್ಪಲ ರಸದಲ್ಲಿ ಒಂದು ಗುಂಜಿಯಷ್ಟು ಭಸ್ಮವನ್ನು ಕಲಸಿ ೩ ಇಲ್ಲವೇ ೭ ದಿನ ನೆಕ್ಕಿಸಿದರೆ ತೀವ್ರ ಬಾಲಗ್ರಹ ವಿದ್ದರೂ ಪರಿಹಾರವಾಗುವುದು.

ಗರ್ಭಪಾತದಿಂದ ನಂಜು ಪ್ರಾಪ್ತವಾಗಿ ಶೀತಾಧಿಕ್ಯದಿಂದ ಹೆಣ್ಣು ಮಕ್ಕಳ ಮೈ ಬೆವರುತ್ತಿದ್ದರೆ ಮೈಗೆಲ್ಲ ಭಸ್ಮವನ್ನೇ ಹಚ್ಚಬೇಕು.

ದಮ್ಮು, ಉಬ್ಬಸ ಮುಂತಾದ ರೋಗಗಳಿದ್ದರೆ ತ್ರಿಕಟು (ಹಿಪ್ಲಿ, ಶುಂಠಿ, ಮೆಣಸು) ವನ್ನು ಸಮಪ್ರಮಾಣದಲ್ಲಿ ಅರೆದು ಒಂದು ಗುಂಜಿ ತ್ರಿಕಟು ಮತ್ತು ಒಂದು ಗುಂಜಿ ಭಸ್ಮ ವನ್ನು ಜೇನುತುಪ್ಪದಲ್ಲಿ ದಿನಾಲು ಮೂರು ವೇಳೆ ೭,೧೪, ೨೮ ಮತ್ತು ೪೪ ದಿನಗಳವರೆಗೆ ಸೇವಿಸಿದರೆ ದಮ್ಮು ರೋಗವು ದೂರವಾಗುವುದು.

ಮೈಲೀ ಬೇನೆಯಿಂದ ಶರೀರದ ಮೇಲೆ ಗಾಯಗಳಾಗಿದ್ದರೆ, ಆಕಳ ಕುಳ್ಳಿನ ಭಸ್ಮವೇ ಒಂದು ದಿವ್ಯೌಷಧವು. ಇದನ್ನು ಹಚ್ಚಿದದರೆ ಎಲ್ಲ ಗಾಯಗಳು ಬೇಗನೇ ಗುಣ ವಾಗುವವು.

ಆಕಳ ತುಪ್ಪದಲ್ಲಿ ಭಸ್ಮವನ್ನು ಕೂಡಿಸಿ ಹಚ್ಚಿದರೆ ಎಲ್ಲ ತರಹದ ಗಾಯಗಳು ವಾಸಿಯಾಗುವವು. ಹೊಟ್ಟೆಯಲ್ಲಿ ಸಣ್ಣ-ಸಣ್ಣ ಹುಳುಗಳಾಗಿದ್ದರೆ ೨ ತೊಲಿ ಶುದ್ಧ ಭಸ್ಮವನ್ನು ೧೦ ತೊಲ ನೀರಿನಲ್ಲಿ ಹಾಕಿ ಪುನಃ ಬಟ್ಟೆಯಿಂದ ಸೋಸಿಕೊಂಡು ಮೂರು ದಿವಸ ಪ್ರಾತಃಕಾಲ ಹಾಗೂ ಸಾಯಂಕಾಲ ಸೇವಿಸುವದರಿಂದ ಕ್ರಿಮಿಗಳೆಲ್ಲ ನಾಶವಾಗುತ್ತವೆ.

ಆಕಳ ಕುಳ್ಳನ್ನು ಹೊಗೆ ಮುಗಿಯುವವರೆಗೆ ಸುಟ್ಟು, ನಂತರ ನೀರು ಹಾಕಿ ಆರಿಸ ಬೇಕು. ಆಮೇಲೆ ಆ ಕರಕವನ್ನು ಆರಿಸಿ ಬಟ್ಟೆಯಲ್ಲಿ ಸೋಸಬೇಕು. ಹೀಗೆ ತಯಾರಿಸಿದ ಭಸ್ಮದಿಂದ ಹಲ್ಲು ಉಜ್ಜಿದರೆ ವಸಡಿನಿಂದ ರಕ್ತ ಸೋರುವಿಕೆ, ಬಾಯಿ ನಾರುವಿಕೆ ಮುಂತಾದ ಹಲ್ಲಿನ ರೋಗಗಳೆಲ್ಲ ವಾಸಿಯಾಗುತ್ತವೆ.

ಗೋಮೂತ್ರ, ಗೋಕ್ಷೀರ, ಗೋದಧಿ ಮತ್ತು ಗೋ ಘೃತದಲ್ಲಿ ಪುಟಕೊಟ್ಟು ನಂತರ ಗಜಪುಟದಲ್ಲಿ ತಯಾರಿಸಿದ ಭಸ್ಮವು ಒಂದು ದಿವ್ಯ ರಸಾಯನವಿದ್ದಂತೆ. ಇದನ್ನು ಎಲ್ಲ ರೋಗಗಳ ಮೇಲೆ ಉಪಯೋಗಿಸಬಹುದು. ಎಂಬುದು ಡಾ|| ಎಸ್.ಎಫ್. ಹಿರೇಮಠ ಬನ್ನಿಕೊಪ್ಪ ಇವರ ಅಭಿಪ್ರಾಯ. ಅವರ ಹೇಳಿಕೆಯಂತೆ ಅದನ್ನು ತಯಾರಿಸುವ ವಿಧಾನ ಇಂತಿದೆ-

ಜವಾರಿ ಚಿತ್ರವರ್ಣದ ಆಕಳ ಕುಳ್ಳನ್ನು ಸುಟ್ಟು ಬೂದಿಯನ್ನು ಮಾಡಿ ಅದನ್ನು ಬಟ್ಟೆಯಲ್ಲಿ ಸೋಸಬೇಕು. ಆಮೇಲೆ ಅದನ್ನು ತೂಕಮಾಡಿ ಅದರ ೫ ಪಟ್ಟು ತೂಕದಷ್ಟು ಗೋಮೂತ್ರವನ್ನು ತೆಗೆದುಕೊಂಡು ಎರಡನ್ನು ಕೂಡಿಸಿ ಒಂದು ಅರೆಯುವ ಕಲ್ಲಿಗೆ ಹಾಕಿ ಆ ಮೂತ್ರವೆಲ್ಲವೂ ಅಟ್ಟಿಸುವವರೆಗೆ ಅದನ್ನು ಸಾವಕಾಶವಾಗಿ ಅರೆಯುತ್ತ ಹೋಗಬೇಕು. ಗೋಮೂತ್ರವೆಲ್ಲವೂ ಅಟ್ಟಿಸಿ ಆ ಭಸ್ಮವು ಗಟ್ಟಿಯಾದಾಗ ಅದರ ೫ ಪಟ್ಟು ತೂಕದಷ್ಟು ಆಕಳ ಹಾಲನ್ನು ಹಾಕಿ ಅರೆಯಬೇಕು. ಇದೇ ಪ್ರಕಾರ ೫ ಪಟ್ಟು ಮೊಸರು ಹಾಗೂ ೫ ಪಟ್ಟು ತುಪ್ಪದಲ್ಲಿಯೂ ಹಾಕಿ ಕ್ರಮವಾಗಿ ಒಂದೊಂದನ್ನಾಗಿಯೇ ಅರೆಯಬೇಕು. ಹೀಗೆ ಇವುಗಳ ಪುಟ ಮುಗಿದನಂತರ ಆ ಭಸ್ಮವನ್ನು ಒಂದು ದೊಡ್ಡ ಪಣತೆಯಲ್ಲಿ ಹಾಕಿ ಅದರ ಮೇಲೊಂದು ಮಣ್ಣಿನ ಪಣತಿಯನ್ನು ಭದ್ರವಾಗಿ ಮುಚ್ಚಿ ಅದರ ಬಾಯಿಗೆ ಹುತ್ತದ ಮಣ್ಣನ್ನು ಕಲಸಿ ಹಚ್ಚಿ ಮೇಲೆ ಬಟ್ಟೆಯನ್ನು ಸುತ್ತಬೇಕು. ಆ ಬಳಿಕ ಉದ್ದ, ಅಗಲ ಎರಡು ಮೊಳ ಚೌಕಾಕಾರದ ತಗ್ಗು ತೆಗೆದು ಅದರ ಸರಿಯಾದ ಅರ್ಧ ಭಾಗವನ್ನು ಆಕಳ ಕುಳ್ಳಿನಿಂದ ಮುಚ್ಚಿ ಅದರ ಮೇಲೆ ಈ ಭಸ್ಮದ ಪಣತಿಯನ್ನು ಇಟ್ಟು, ಪುನಃ ಕುಳ್ಳಿನಿಂದ ತಗ್ಗಿನ ಮೇಲ್ಭಾಗವನ್ನು ಮುಚ್ಚಬೇಕು. ಅನಂತರ ಸಾವಕಾಶ ವಾಗಿ ಅಗ್ನಿಯಿಂದ ಪುಟಕೊಡಬೇಕು ಪುಟವಿಟ್ಟ ಬೆಂಕಿಯು ತಾನಾಗಿಯೇ ಆರಿದ ಬಳಿಕ ಒಳಗಿನ ಪಣತಿಯನ್ನು ತೆಗೆಯಬೇಕು. ಹೀಗೆ ತಯಾರಾದ ಈ ಭಸ್ಮವು ಸರ್ವವಿದ ರೋಗ ಮತ್ತು ಭೂತಪ್ರೇತಾದಿಗಳ ಬಾಧೆಯನ್ನು ನಿವಾರಿಸುವಲ್ಲಿ ದಿವ್ಯೌಷಧವು ಅಪೇಕ್ಷಿತರು ಚೆನ್ನಾಗಿ ಅರಿತು ತಯಾರಿಸಿ ಅನುಭವಿಸಭಹುದು.

ಹೀಗೆ ಈ ಭಸ್ಮವು ನಮ್ಮನ್ನು ಸ್ಥೂಲ ಶರೀರದ ರೋಗಾದಿಗಳೆಂಬ ಬಾಹ್ಯ ಆಧ್ಯಾತ್ಮಿಕ ದುಃಖದಿಂದ ರಕ್ಷಿಸುವ ಕಾರಣ ಇದಕ್ಕೆ ''ಕ್ಷಾರ'' ಎಂಬ ನಾಮವು ಪ್ರಾಪ್ತದದ್ದು ಸಾರ್ಥಕವೇ ಸರಿ.

**ಅಂತರಂಗದ ಆಧ್ಯಾತ್ಮಿಕ ದುಃಖದಿಂದ ರಕ್ಷಣೆ :**

''ರಾಗದ್ವೇಷಾದಿ ಸಂಪನ್ನಮಾಂತರಂ ಪರಿಕೀರ್ತ್ಯತೇ'' ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ ಕಾಮ, ಕ್ರೋಧ, ಲೋಭ, ಮೋಹ, ಭಯ, ಈರ್ಷ್ಯಾ, ದ್ವೇಷ, ವಿಷಾದ ಮತ್ತು ಸಂಶಯಗಳೆಂಬ ಮಾನಸಿಕ ವೃತ್ತಿಗಳಿಂದಲೂ ಮನುಷ್ಯನಿಗೆ ದುಃಖವುಂಟಾಗುವದು. ಇದುವೇ ಅಂತರಂಗದ ಆಧ್ಯಾತ್ಮಿಕ ದುಃಖವು. ''ಯುಧ್ಯ ಸ್ವವಿಗತಜ್ವರಃ'' ಎಂಬ ಗೀತೋಕ್ತಿಯಂತೆ ಈ ಕಾಮ–ಕ್ರೋಧಾದಿಗಳು ಮಾನಸಿಕ ಜ್ವರ ಗಳು. ಸ್ಥೂಲ ಶರೀರದ ಜ್ವರಗಳು ಆ ಶರೀರವನ್ನು ಕ್ಷೀಣಗೊಳಿಸುವಂತೆ ಮಾನಸಿಕ ಜ್ವರಗಳು ಮನುಷ್ಯನ ಮನಸ್ಸು ಹಾಗೂ ಬುದ್ಧಿಗಳ ಬಲವನ್ನು ಹ್ರಾಸಗೊಳಿಸುವವು. ಈ ಮನೋರೋಗಕ್ಕೆ ಬಾಹ್ಯ ಔಷಧಗಳ ಪ್ರಯೋಜನವಾಗುವುದಿಲ್ಲ, ಇದಕ್ಕಾಗಿ ನಿರ್ಮಲ ಜ್ಞಾನವೇ ಬೇಕು. ಬಾಹ್ಯದಲ್ಲಿಯ ಬೆಳಕು ಬಾಹ್ಯ ಕತ್ತಲೆಯನ್ನು ನಿವಾರಿಸುವಂತೆ ಅಂತ ರಂಗದ ಆತ್ಮಜ್ಞಾನದ ಜ್ಯೋತಿಯು ಒಳಗಿನ ಈ ಕಾಮಾದಿ ಕತ್ತಲೆಯನ್ನು ಕಳೆಯುವುದು. ಆತ್ಮಜ್ಞಾನಕ್ಕೆ ಬೇಕಾಗುವ ಅಂತಃಕರಣದ ಶುದ್ಧಿಯು ಭಸ್ಮಧಾರಣೆಯಿಂದಲೇ ಉಂಟಾಗುವ ಕಾರಣ ಭಸ್ಮವು, ಅಂತಃಕರಣದ ಪರಿಶುದ್ಧಿಯ ಮೂಲಕ ಆತ್ಮಜ್ಞಾನಕ್ಕೆ ಕಾರಣವಾಗಿ ಪೂರ್ವೋಕ್ತಗಳಾದ ಕಾಮಾದಿ ತಾಪಗಳಿಂದ ಸಾಧಕನನ್ನು ರಕ್ಷಿಸುತ್ತದೆ.

ಅಂಟಾಳಕಾಯಿ ಬುರುಗದಲ್ಲಿ ಒಂದು ಗುಂಜಿ ಭಸ್ಮವನ್ನು ಹಾಕಿ ಹೊಟ್ಟೆತುಂಬ ಕುಡಿಸಿದರೆ ವಾಂತಿಯಾಗಿ ಹಾವಿನ ವಿಷ ಬಾಧೆಯು ದೂರಾಗುವುದು. ನಂತರ ಜೇನು ತುಪ್ಪದಲ್ಲಿ ಸ್ವಲ್ಪು ಭಸ್ಮವನ್ನು ಹಾಕಿ ನೆಕ್ಕಿಸಬೇಕು.

ಭಸ್ಮವನ್ನು ಜೇನುತುಪ್ಪದಲ್ಲಿ ಕೂಡಿಸಿ ಲೇಪಿಸಿದರೆ ಎಂತಹ ಗಾಯವಿದ್ದರೂ ವಾಸಿಯಾಗುವುದು. ಅಂತ್ಯಾವಸ್ಥೆಯಲ್ಲಿ ಅತಿ ಸೀತವಾಗಿ ಮೈಯಿಂದ ಬೆವರು ಒಂದೇ ಸಮನೆ ಸುರಿಯುತ್ತಿದ್ದರೆ ಗೋಮಯ ಭಸ್ಮವನ್ನು ಹಚ್ಚಿದರೆ ತತ್‌ಕ್ಷಣ ಪರಿಣಾಮವಾಗುವುದು.

ತಾಯಿಯ ಮೊಲೆ ಹಾಲಿನಲ್ಲಿ ಅಥವಾ ಹಾಗಲತೊಪ್ಪಲ ರಸದಲ್ಲಿ ಒಂದು ಗುಂಜಿಯಷ್ಟು ಭಸ್ಮವನ್ನು ಕಲಸಿ ೩ ಇಲ್ಲವೇ ೭ ದಿನ ನೆಕ್ಕಿಸಿದರೆ ತೀವ್ರ ಬಾಲಗ್ರಹ ವಿದ್ದರೂ ಪರಿಹಾರವಾಗುವುದು.

ಗರ್ಭಪಾತದಿಂದ ನಂಜು ಪ್ರಾಪ್ತವಾಗಿ ಶೀತಾಧಿಕ್ಯದಿಂದ ಹೆಣ್ಣು ಮಕ್ಕಳ ಮೈ ಬೆವರುತ್ತಿದ್ದರೆ ಮೈಗೆಲ್ಲ ಭಸ್ಮವನ್ನೇ ಹಚ್ಚಬೇಕು.

ದಮ್ಮು, ಉಬ್ಬಸ ಮುಂತಾದ ರೋಗಗಳಿದ್ದರೆ ತ್ರಿಕಟು (ಹಿಪ್ಲಿ, ಶುಂಠಿ, ಮೆಣಸು) ವನ್ನು ಸಮಪ್ರಮಾಣದಲ್ಲಿ ಅರೆದು ಒಂದು ಗುಂಜಿ ತ್ರಿಕಟು ಮತ್ತು ಒಂದು ಗುಂಜಿ ಭಸ್ಮ ವನ್ನು ಜೇನುತುಪ್ಪದಲ್ಲಿ ದಿನಾಲು ಮೂರು ವೇಳೆ ೭,೧೪, ೨೮ ಮತ್ತು ೪೪ ದಿನಗಳವರೆಗೆ ಸೇವಿಸಿದರೆ ದಮ್ಮು ರೋಗವು ದೂರವಾಗುವುದು.

ಮೈಲೀ ಬೇನೆಯಿಂದ ಶರೀರದ ಮೇಲೆ ಗಾಯಗಳಾಗಿದ್ದರೆ, ಆಕಳ ಕುಳ್ಳಿನ ಭಸ್ಮವೇ ಒಂದು ದಿವ್ಯೌಷಧವು. ಇದನ್ನು ಹಚ್ಚಿದದರೆ ಎಲ್ಲ ಗಾಯಗಳು ಬೇಗನೇ ಗುಣ ವಾಗುವವು.

ಆಕಳ ತುಪ್ಪದಲ್ಲಿ ಭಸ್ಮವನ್ನು ಕೂಡಿಸಿ ಹಚ್ಚಿದರೆ ಎಲ್ಲ ತರಹದ ಗಾಯಗಳು ವಾಸಿ ಯಾಗುವವು. ಹೊಟ್ಟೆಯಲ್ಲಿ ಸಣ್ಣ-ಸಣ್ಣ ಹುಳುಗಳಾಗಿದ್ದರೆ ೨ ತೊಲಿ ಶುದ್ಧ ಭಸ್ಮವನ್ನು ೧೦ ತೊಲ ನೀರಿನಲ್ಲಿ ಹಾಕಿ ಪುನಃ ಬಟ್ಟೆಯಿಂದ ಸೋಸಿಕೊಂಡು ಮೂರು ದಿವಸ ಪ್ರಾತಃಕಾಲ ಹಾಗೂ ಸಾಯಂಕಾಲ ಸೇವಿಸುವದರಿಂದ ಕ್ರಿಮಿಗಳೆಲ್ಲ ನಾಶವಾಗುತ್ತವೆ.

ಆಕಳ ಕುಳ್ಳನ್ನು ಹೊಗೆ ಮುಗಿಯುವವರೆಗೆ ಸುಟ್ಟು ನಂತರ ನೀರು ಹಾಕಿ ಆರಿಸ ಬೇಕು. ಆಮೇಲೆ ಆ ಕರಕವನ್ನು ಆರಿಸಿ ಬಟ್ಟೆಯಲ್ಲಿ ಸೋಸಬೇಕು. ಹೀಗೆ ತಯಾರಿಸಿದ ಭಸ್ಮದಿಂದ ಹಲ್ಲು ಉಜ್ಜಿದರೆ ವಸಡಿನಿಂದ ರಕ್ತ ಸೋರುವಿಕೆ, ಬಾಯಿ ನಾರುವಿಕೆ ಮುಂತಾದ ಹಲ್ಲಿನ ರೋಗಗಳೆಲ್ಲ ವಾಸಿಯಾಗುತ್ತವೆ.

ಗೋಮೂತ್ರ, ಗೋಕ್ಷೀರ, ಗೋದಧಿ ಮತ್ತು ಗೋ ಘೃತದಲ್ಲಿ ಪುಟಕೊಟ್ಟು ನಂತರ ಗಜಪುಟದಲ್ಲಿ ತಯಾರಿಸಿದ ಭಸ್ಮವು ಒಂದು ದಿವ್ಯ ರಸಾಯನವಿದ್ದಂತೆ. ಇದನ್ನು ಎಲ್ಲ ರೋಗಗಳ ಮೇಲೆ ಉಪಯೋಗಿಸಬಹುದು. ಎಂಬುದು ಡಾ|| ಎಸ್.ಎಫ್. ಹಿರೇಮಠ ಬನ್ನಿಕೊಪ್ಪ ಇವರ ಅಭಿಪ್ರಾಯ. ಅವರ ಹೇಳಿಕೆಯಂತೆ ಅದನ್ನು ತಯಾರಿಸುವ ವಿಧಾನ ಇಂತಿದೆ-

ಜವಾರಿ ಚಿತ್ರವರ್ಣದ ಆಕಳ ಕುಳ್ಳನ್ನು ಸುಟ್ಟು ಬೂದಿಯನ್ನು ಮಾಡಿ ಅದನ್ನು ಬಟ್ಟೆಯಲ್ಲಿ ಸೋಸಬೇಕು. ಆಮೇಲೆ ಅದನ್ನು ತೂಕಮಾಡಿ ಅದರ ೫ ಪಟ್ಟು ತೂಕದಷ್ಟು ಗೋಮೂತ್ರವನ್ನು ತೆಗೆದುಕೊಂಡು ಎರಡನ್ನು ಕೂಡಿಸಿ ಒಂದು ಅರೆಯುವ ಕಲ್ಲಿಗೆ ಹಾಕಿ ಆ ಮೂತ್ರವೆಲ್ಲವೂ ಅಟ್ಟಿಸುವವರೆಗೆ ಅದನ್ನು ಸಾವಕಾಶವಾಗಿ ಅರೆಯುತ್ತ ಹೋಗಬೇಕು. ಗೋಮೂತ್ರವೆಲ್ಲವೂ ಅಟ್ಟಸಿ ಆ ಭಸ್ಮವು ಗಟ್ಟಿಯಾದಾಗ ಅದರ ೫ ಪಟ್ಟು ತೂಕದಷ್ಟು ಆಕಳ ಹಾಲನ್ನು ಹಾಕಿ ಅರೆಯಬೇಕು. ಇದೇ ಪ್ರಕಾರ ೫ ಪಟ್ಟು ಮೊಸರು ಹಾಗೂ ೫ ಪಟ್ಟು ತುಪ್ಪದಲ್ಲಿಯೂ ಹಾಕಿ ಕ್ರಮವಾಗಿ ಒಂದೊಂದನ್ನಾಗಿಯೇ ಅರೆಯಬೇಕು. ಹೀಗೆ ಇವುಗಳ ಪುಟ ಮುಗಿದನಂತರ ಆ ಭಸ್ಮವನ್ನು ಒಂದು ದೊಡ್ಡ ಪಣತೆಯಲ್ಲಿ ಹಾಕಿ ಅದರ ಮೇಲೊಂದು ಮಣ್ಣಿನ ಪಣತಿಯನ್ನು ಭದ್ರವಾಗಿ ಮುಚ್ಚಿ ಅದರ ಬಾಯಿಗೆ ಹುತ್ತದ ಮಣ್ಣನ್ನು ಕಲಸಿ ಹಚ್ಚಿ ಮೇಲೆ ಬಟ್ಟೆಯನ್ನು ಸುತ್ತಬೇಕು. ಆ ಬಳಿಕ ಉದ್ದ, ಅಗಲ ಎರಡು ಮೊಳ ಚೌಕಾಕಾರದ ತಗ್ಗು ತೆಗೆದು ಅದರ ಸರಿಯಾದ ಅರ್ಧ ಭಾಗವನ್ನು ಆಕಳ ಕುಳ್ಳಿನಿಂದ ಮುಚ್ಚಿ ಅದರ ಮೇಲೆ ಈ ಭಸ್ಮದ ಪಣತಿಯನ್ನು ಇಟ್ಟು, ಪುನಃ ಕುಳ್ಳಿನಿಂದ ತಗ್ಗಿನ ಮೇಲ್ಭಾಗವನ್ನು ಮುಚ್ಚಬೇಕು. ಅನಂತರ ಸಾವಕಾಶ ವಾಗಿ ಅಗ್ನಿಯಿಂದ ಪುಟಕೊಡಬೇಕು ಪುಟವಿಟ್ಟ ಬೆಂಕಿಯು ತಾನಾಗಿಯೇ ಆರಿದ ಬಳಿಕ ಒಳಗಿನ ಪಣತಿಯನ್ನು ತೆಗೆಯಬೇಕು. ಹೀಗೆ ತಯಾರಾದ ಈ ಭಸ್ಮವು ಸರ್ವವಿದ ರೋಗ ಮತ್ತು ಭೂತಪ್ರೇತಾದಿಗಳ ಬಾಧೆಯನ್ನು ನಿವಾರಿಸುವಲ್ಲಿ ದಿವ್ಯೌಷಧವು ಅಪೇಕ್ಷಿತರು ಚೆನ್ನಾಗಿ ಅರಿತು ತಯಾರಿಸಿ ಅನುಭವಿಸಬಹುದು.

ಹೀಗೆ ಈ ಭಸ್ಮವು ನಮ್ಮನ್ನು ಸ್ಥೂಲ ಶರೀರದ ರೋಗಾದಿಗಳೆಂಬ ಬಾಹ್ಯ ಆಧ್ಯಾತ್ಮಿಕ ದುಃಖದಿಂದ ರಕ್ಷಿಸುವ ಕಾರಣ ಇದಕ್ಕೆ ''ಕ್ಷಾರ'' ಎಂಬ ನಾಮವು ಪ್ರಾಪ್ತವದ್ದು ಸಾರ್ಥಕವೇ ಸರಿ.

**ಅಂತರಂಗದ ಆಧ್ಯಾತ್ಮಿಕ ದುಃಖದಿಂದ ರಕ್ಷಣೆ :**

''ರಾಗದ್ವೇಷಾದಿ ಸಂಪನ್ನಮಾಂತರಂ ಪರಿಕೀರ್ತ್ಯತೇ'' ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ ಕಾಮ, ಕ್ರೋಧ, ಲೋಭ, ಮೋಹ, ಭಯ, ಈರ್ಷ್ಯಾ, ದ್ವೇಷ, ವಿಷಾದ ಮತ್ತು ಸಂಶಯಗಳೆಂಬ ಮಾನಸಿಕ ವೃತ್ತಿಗಳಿಂದಲೂ ಮನುಷ್ಯನಿಗೆ ದುಃಖವುಂಟಾಗುವದು. ಇದುವೇ ಅಂತರಂಗದ ಆಧ್ಯಾತ್ಮಿಕ ದುಃಖವು. ''ಯುದ್ಧ್ಯ ಸ್ವವಿಗತಜ್ವರಃ'' ಎಂಬ ಗೀತೋಕ್ತಿಯಂತೆ ಈ ಕಾಮ–ಕ್ರೋಧಾದಿಗಳು ಮಾನಸಿಕ ಜ್ವರ ಗಳು. ಸ್ಥೂಲ ಶರೀರದ ಜ್ವರಗಳು ಆ ಶರೀರವನ್ನು ಕ್ಷೀಣಗೊಳಿಸುವಂತೆ ಮಾನಸಿಕ ಜ್ವರಗಳು ಮನುಷ್ಯನ ಮನಸ್ಸು ಹಾಗೂ ಬುದ್ಧಿಗಳ ಬಲವನ್ನು ಹ್ರಾಸಗೊಳಿಸುವವು. ಈ ಮನೋರೋಗಕ್ಕೆ ಬಾಹ್ಯ ಔಷಧಗಳ ಪ್ರಯೋಜನವಾಗುವುದಿಲ್ಲ, ಇದಕ್ಕಾಗಿ ನಿರ್ಮಲ ಜ್ಞಾನವೇ ಬೇಕು. ಬಾಹ್ಯದಲ್ಲಿಯ ಬೆಳಕು ಬಾಹ್ಯ ಕತ್ತಲೆಯನ್ನು ನಿವಾರಿಸುವಂತೆ ಅಂತ ರಂಗದ ಆತ್ಮಜ್ಞಾನ ಜ್ಯೋತಿಯು ಒಳಗಿನ ಈ ಕಾಮಾದಿ ಕತ್ತಲೆಯನ್ನು ಕಳೆಯುವುದು. ಆತ್ಮಜ್ಞಾನಕ್ಕೆ ಬೇಕಾಗುವ ಅಂತಃಕರಣದ ಶುದ್ಧಿಯು ಭಸ್ಮಧಾರಣೆಯಿಂದಲೇ ಉಂಟಾಗುವ ಕಾರಣ ಭಸ್ಮವು, ಅಂತಃಕರಣದ ಪರಿಶುದ್ಧಿಯ ಮೂಲಕ ಆತ್ಮಜ್ಞಾನಕ್ಕೆ ಕಾರಣವಾಗಿ ಪೂರ್ವೋಕ್ತಗಳಾದ ಕಾಮಾದಿ ತಾಪಗಳಿಂದ ಸಾಧಕನನ್ನು ರಕ್ಷಿಸುತ್ತದೆ.

ಅಂಟಾಳಕಾಯಿ ಬುರುಗದಲ್ಲಿ ಒಂದು ಗುಂಜಿ ಭಸ್ಮವನ್ನು ಹಾಕಿ ಹೊಟ್ಟೆತುಂಬ ಕುಡಿಸಿದರೆ ವಾಂತಿಯಾಗಿ ಹಾವಿನ ವಿಷ ಬಾಧೆಯು ದೂರಾಗುವುದು. ನಂತರ ಜೇನು ತುಪ್ಪದಲ್ಲಿಸ್ವಲ್ಪು ಭಸ್ಮವನ್ನು ಹಾಕಿ ನೆಕ್ಕಿಸಬೇಕು.

ಭಸ್ಮವನ್ನು ಜೇನುತುಪ್ಪದಲ್ಲಿ ಕೂಡಿಸಿ ಲೇಪಿಸಿದರೆ ಎಂತಹ ಗಾಯವಿದ್ದರೂ ವಾಸಿಯಾಗುವುದು. ಅಂತ್ಯಾವಸ್ಥೆಯಲ್ಲಿ ಅತಿ ಸೀತವಾಗಿ ಮೈಯಿಂದ ಬೆವರು ಒಂದೇ ಸಮನೆ ಸುರಿಯುತ್ತಿದ್ದರೆ ಗೋಮಯ ಭಸ್ಮವನ್ನು ಹಚ್ಚಿದರೆ ತತ್‌ಕ್ಷಣ ಪರಿಣಾಮವಾಗುವುದು.

ತಾಯಿಯ ಮೊಲೆ ಹಾಲಿನಲ್ಲಿ ಅಥವಾ ಹಾಗಲತೊಪ್ಪಲ ರಸದಲ್ಲಿ ಒಂದು ಗುಂಜಿಯಷ್ಟು ಭಸ್ಮವನ್ನು ಕಲಸಿ ೩ ಇಲ್ಲವೇ ೭ ದಿನ ನೆಕ್ಕಿಸಿದರೆ ತೀವ್ರ ಬಾಲಗ್ರಹ ವಿದ್ದರೂ ಪರಿಹಾರವಾಗುವುದು.

ಗರ್ಭಪಾತದಿಂದ ನಂಜು ಪ್ರಾಪ್ತವಾಗಿ ಶೀತಾಧಿಕ್ಯದಿಂದ ಹೆಣ್ಣು ಮಕ್ಕಳ ಮೈ ಬೆವರುತ್ತಿದ್ದರೆ ಮೈಗೆಲ್ಲ ಭಸ್ಮವನ್ನೇ ಹಚ್ಚಬೇಕು.

ದಮ್ಮು, ಉಬ್ಬಸ ಮುಂತಾದ ರೋಗಗಳಿದ್ದರೆ ತ್ರಿಕಟು (ಹಿಪ್ಲಿ, ಶುಂಠಿ, ಮೆಣಸು) ವನ್ನು ಸಮಪ್ರಮಾಣದಲ್ಲಿ ಅರೆದು ಒಂದು ಗುಂಜಿ ತ್ರಿಕಟು ಮತ್ತು ಒಂದು ಗುಂಜಿ ಭಸ್ಮ ವನ್ನು ಜೇನುತುಪ್ಪದಲ್ಲಿ ದಿನಾಲು ಮೂರು ವೇಳೆ ೭,೧೪, ೨೮ ಮತ್ತು ೪೪ ದಿನಗಳವರೆಗೆ ಸೇವಿಸಿದರೆ ದಮ್ಮು ರೋಗವು ದೂರವಾಗುವುದು.

ಮೈಲೀ ಬೇನೆಯಿಂದ ಶರೀರದ ಮೇಲೆ ಗಾಯಗಳಾಗಿದ್ದರೆ, ಆಕಳ ಕುಳ್ಳಿನ ಭಸ್ಮವೇ ಒಂದು ದಿವ್ಯೌಷಧವು. ಇದನ್ನು ಹಚ್ಚಿದದರೆ ಎಲ್ಲ ಗಾಯಗಳು ಬೇಗನೇ ಗುಣ ವಾಗುವವು.

ಆಕಳ ತುಪ್ಪದಲ್ಲಿ ಭಸ್ಮವನ್ನು ಕೂಡಿಸಿ ಹಚ್ಚಿದರೆ ಎಲ್ಲ ತರಹದ ಗಾಯಗಳು ವಾಸಿಯಾಗುವವು. ಹೊಟ್ಟೆಯಲ್ಲಿ ಸಣ್ಣ-ಸಣ್ಣ ಹುಳುಗಳಾಗಿದ್ದರೆ ೨ ತೊಲಿ ಶುದ್ಧ ಭಸ್ಮವನ್ನು ೧೦ ತೊಲ ನೀರಿನಲ್ಲಿ ಹಾಕಿ ಪುನಃ ಬಟ್ಟೆಯಿಂದ ಸೋಸಿಕೊಂಡು ಮೂರು ದಿವಸ ಪ್ರಾತಃಕಾಲ ಹಾಗೂ ಸಾಯಂಕಾಲ ಸೇವಿಸುವದರಿಂದ ಕ್ರಿಮಿಗಳೆಲ್ಲ ನಾಶವಾಗುತ್ತವೆ.

ಆಕಳ ಕುಳ್ಳನ್ನು ಹೊಗೆ ಮುಗಿಯುವವರೆಗೆ ಸುಟ್ಟು, ನಂತರ ನೀರು ಹಾಕಿ ಆರಿಸ ಬೇಕು. ಆಮೇಲೆ ಆ ಕರಕವನ್ನು ಆರಿಸಿ ಬಟ್ಟೆಯಲ್ಲಿ ಸೋಸಬೇಕು. ಹೀಗೆ ತಯಾರಿಸಿದ ಭಸ್ಮದಿಂದ ಹಲ್ಲು ಉಜ್ಜಿದರೆ ವಸಡಿನಿಂದ ರಕ್ತ ಸೋರುವಿಕೆ, ಬಾಯಿ ನಾರುವಿಕೆ ಮುಂತಾದ ಹಲ್ಲಿನ ರೋಗಗಳೆಲ್ಲ ವಾಸಿಯಾಗುತ್ತವೆ.

ಗೋಮೂತ್ರ, ಗೋಕ್ಷೀರ, ಗೋದಧಿ ಮತ್ತು ಗೋ ಘೃತದಲ್ಲಿ ಪುಟಕೊಟ್ಟು ನಂತರ ಗಜಪುಟದಲ್ಲಿ ತಯಾರಿಸಿದ ಭಸ್ಮವು ಒಂದು ದಿವ್ಯ ರಸಾಯನವಿದ್ದಂತೆ. ಇದನ್ನು ಎಲ್ಲ ರೋಗಗಳ ಮೇಲೆ ಉಪಯೋಗಿಸಬಹುದು. ಎಂಬುದು ಡಾ|| ಎಸ್.ಎಫ್. ಹಿರೇಮಠ ಬನ್ನಿಕೊಪ್ಪ ಇವರ ಅಭಿಪ್ರಾಯ. ಅವರ ಹೇಳಿಕೆಯಂತೆ ಅದನ್ನು ತಯಾರಿಸುವ ವಿಧಾನ ಇಂತಿದೆ–

ಜವಾರಿ ಚಿತ್ರವರ್ಣದ ಆಕಳ ಕುಳ್ಳನ್ನು ಸುಟ್ಟು, ಬೂದಿಯನ್ನು ಮಾಡಿ ಅದನ್ನು ಬಟ್ಟೆಯಲ್ಲಿ ಸೋಸಬೇಕು. ಆಮೇಲೆ ಅದನ್ನು ತೂಕಮಾಡಿ ಅದರ ೫ ಪಟ್ಟು ತೂಕದಷ್ಟು ಗೋಮೂತ್ರವನ್ನು ತೆಗೆದುಕೊಂಡು ಎರಡನ್ನು ಕೂಡಿಸಿ ಒಂದು ಅರೆಯುವ ಕಲ್ಲಿಗೆ ಹಾಕಿ ಆ ಮೂತ್ರವೆಲ್ಲವೂ ಅಟ್ಟಿಸುವವರೆಗೆ ಅದನ್ನು ಸಾವಕಾಶವಾಗಿ ಅರೆಯುತ್ತ ಹೋಗಬೇಕು. ಗೋಮೂತ್ರವೆಲ್ಲವೂ ಅಟ್ಟಿಸಿ ಆ ಭಸ್ಮವು ಗಟ್ಟಿಯಾದಾಗ ಅದರ ೫ ಪಟ್ಟು ತೂಕದಷ್ಟು ಆಕಳ ಹಾಲನ್ನು ಹಾಕಿ ಅರೆಯಬೇಕು. ಇದೇ ಪ್ರಕಾರ ೫ ಪಟ್ಟು ಮೊಸರು ಹಾಗೂ ೫ ಪಟ್ಟು ತುಪ್ಪದಲ್ಲಿಯೂ ಹಾಕಿ ಕ್ರಮವಾಗಿ ಒಂದೊಂದನ್ನಾಗಿಯೇ ಅರೆಯಬೇಕು. ಹೀಗೆ ಇವುಗಳ ಪುಟ ಮುಗಿದನಂತರ ಆ ಭಸ್ಮವನ್ನು ಒಂದು ದೊಡ್ಡ ಪಣತೆಯಲ್ಲಿ ಹಾಕಿ ಅದರ ಮೇಲೊಂದು ಮಣ್ಣಿನ ಪಣತಿಯನ್ನು ಭದ್ರವಾಗಿ ಮುಚ್ಚಿ ಅದರ ಬಾಯಿಗೆ ಹುತ್ತದ ಮಣ್ಣನ್ನು ಕಲಸಿ ಹಚ್ಚಿ ಮೇಲೆ ಬಟ್ಟೆಯನ್ನು ಸುತ್ತಬೇಕು. ಆ ಬಳಿಕ ಉದ್ದ, ಅಗಲ ಎರಡು ಮೊಳ ಚೌಕಾಕಾರದ ತಗ್ಗು ತೆಗೆದು ಅದರ ಸರಿಯಾದ ಅರ್ಧ ಭಾಗವನ್ನು ಆಕಳ ಕುಳ್ಳಿನಿಂದ ಮುಚ್ಚಿ ಅದರ ಮೇಲೆ ಈ ಭಸ್ಮದ ಪಣತಿಯನ್ನು ಇಟ್ಟು ಪುನಃ ಕುಳ್ಳಿನಿಂದ ತಗ್ಗಿನ ಮೇಲ್ಭಾಗವನ್ನು ಮುಚ್ಚಬೇಕು. ಅನಂತರ ಸಾವಕಾಶ ವಾಗಿ ಅಗ್ನಿಯಿಂದ ಪುಟಕೊಡಬೇಕು ಪುಟವಿಟ್ಟ ಬೆಂಕಿಯು ತಾನಾಗಿಯೇ ಆರಿದ ಬಳಿಕ ಒಳಗಿನ ಪಣತಿಯನ್ನು ತೆಗೆಯಬೇಕು. ಹೀಗೆ ತಯಾರಾದ ಈ ಭಸ್ಮವು ಸರ್ವವಿದ ರೋಗ ಮತ್ತು ಭೂತಪ್ರೇತಾದಿಗಳ ಬಾಧೆಯನ್ನು ನಿವಾರಿಸುವಲ್ಲಿ ದಿವ್ಯೌಷಧವು ಅಪೇಕ್ಷಿತರು ಚೆನ್ನಾಗಿ ಅರಿತು ತಯಾರಿಸಿ ಅನುಭವಿಸಬಹುದು.

ಹೀಗೆ ಈ ಭಸ್ಮವು ನಮ್ಮನ್ನು ಸ್ಥೂಲ ಶರೀರದ ರೋಗಾದಿಗಳೆಂಬ ಬಾಹ್ಯ ಆಧ್ಯಾತ್ಮಿಕ ದುಃಖದಿಂದ ರಕ್ಷಿಸುವ ಕಾರಣ ಇದಕ್ಕೆ ''ಕ್ಷಾರ'' ಎಂಬ ನಾಮವು ಪ್ರಾಪ್ತದದ್ದು ಸಾರ್ಥಕವೇ ಸರಿ.

**ಅಂತರಂಗದ ಆಧ್ಯಾತ್ಮಿಕ ದುಃಖದಿಂದ ರಕ್ಷಣೆ :**

''ರಾಗದ್ವೇಷಾದಿ ಸಂಪನ್ನಮಾಂತರಂ ಪರಿಕೀರ್ತ್ಯತೇ'' ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ ಕಾಮ, ಕ್ರೋಧ, ಲೋಭ, ಮೋಹ, ಭಯ, ಈರ್ಷ್ಯಾ, ದ್ವೇಷ, ವಿಷಾದ ಮತ್ತು ಸಂಶಯಗಳೆಂಬ ಮಾನಸಿಕ ವೃತ್ತಿಗಳಿಂದಲೂ ಮನುಷ್ಯನಿಗೆ ದುಃಖವುಂಟಾಗುವದು. ಇದುವೇ ಅಂತರಂಗದ ಆಧ್ಯಾತ್ಮಿಕ ದುಃಖವು. ''ಯುಧ್ಯ ಸ್ವವಿಗತಜ್ವರಃ'' ಎಂಬ ಗೀತೋಕ್ತಿಯಂತೆ ಈ ಕಾಮ–ಕ್ರೋಧಾದಿಗಳು ಮಾನಸಿಕ ಜ್ವರ ಗಳು. ಸ್ಥೂಲ ಶರೀರದ ಜ್ವರಗಳು ಆ ಶರೀರವನ್ನು ಕ್ಷೀಣಗೊಳಿಸುವಂತೆ ಮಾನಸಿಕ ಜ್ವರಗಳು ಮನುಷ್ಯನ ಮನಸ್ಸು ಹಾಗೂ ಬುದ್ಧಿಗಳ ಬಲವನ್ನು ಹ್ರಾಸಗೊಳಿಸುವವು. ಈ ಮನೋರೋಗಕ್ಕೆ ಬಾಹ್ಯ ಔಷಧಗಳ ಪ್ರಯೋಜನವಾಗುವುದಿಲ್ಲ, ಇದಕ್ಕಾಗಿ ನಿರ್ಮಲ ಜ್ಞಾನವೇ ಬೇಕು. ಬಾಹ್ಯದಲ್ಲಿಯ ಬೆಳಕು ಬಾಹ್ಯ ಕತ್ತಲೆಯನ್ನು ನಿವಾರಿಸುವಂತೆ ಅಂತ ರಂಗದ ಆತ್ಮಜ್ಞಾನ ಜ್ಯೋತಿಯು ಒಳಗಿನ ಈ ಕಾಮಾದಿ ಕತ್ತಲೆಯನ್ನು ಕಳೆಯುವುದು. ಆತ್ಮಜ್ಞಾನಕ್ಕೆ ಬೇಕಾಗುವ ಅಂತಃಕರಣದ ಶುದ್ಧಿಯು ಭಸ್ಮಧಾರಣೆಯಿಂದಲೇ ಉಂಟಾಗುವ ಕಾರಣ ಭಸ್ಮವು, ಅಂತಃಕರಣದ ಪರಿಶುದ್ಧಿಯ ಮೂಲಕ ಆತ್ಮಜ್ಞಾನಕ್ಕೆ ಕಾರಣವಾಗಿ ಪೂರ್ವೋಕ್ತಗಳಾದ ಕಾಮಾದಿ ತಾಪಗಳಿಂದ ಸಾಧಕನನ್ನು ರಕ್ಷಿಸುತ್ತದೆ.

ಹೀಗೆ ಅಂತರಂಗದ ಆಧ್ಯಾತ್ಮ ದುಃಖದಿಂದಲೂ ಭಸ್ಮವು ನಮ್ಮನ್ನು ರಕ್ಷಿಸುವ ಕಾರಣ ಇದಕ್ಕೆ ''ರಕ್ಷಾ'' ಎಂಬುದಾಗಿ ಕರೆಯಲಾಗಿದೆ.

**ಆದಿಭೌತಿಕ ದುಃಖದಿಂದ ರಕ್ಷಣೆ :**

''ಭೂತಾನಿ ಅಧಿಕೃತ್ಯ ಜಾಯತ ಇತಿ ಆದಿಭೌತಿಕಂ'' ಅಂದರೆ ರಾಜ. ಕಳ್ಳ, ಹುಲಿ, ಸರ್ಪ ಮುಂತಾದ ಪ್ರಾಣಿಗಳಿಂದ ಉಂಟಾದ ದುಃಖಕ್ಕೆ ಆದಿಭೌತಿಕ ದುಃಖವೆನ್ನುವರು. ಅಂತೆಯೇ–''ಆದಿಭೌತಿಕ ಮೇತದ್ಧಿ ದುಃಖಂರಾಜಾದಿಭೂತಜಮ್'' ಎಂಬುದಾಗಿ ಶ್ರೀ ಜಗದ್ಗುರು ರೇಣುಕರು ಆದೇಶವಿತ್ತಿದ್ದಾರೆ.

ಒಂದು ಪ್ರಾಣಿಯು ಮತ್ತೊಂದು ಪ್ರಾಣಿಯನ್ನು ಪೀಡಿಸಬೇಕಾದರೆ ಲೋಭ ಹಾಗೂ ದ್ವೇಷಾದಿಗಳೇ ಕಾರಣಗಳು. ಪ್ರಪಂಚದ ಸಕಲ ಪ್ರಾಣಿಗಳಲ್ಲಿ ಈ ಗುಣಗಳು ಸ್ವಾಭಾವಿಕವಾಗಿರುವುದರಿಂದ ಪರಸ್ಪರ ಪೀಡೆಯು ಅನಾದಿ ಕಾಲದಿಂದಲೂ ಸಾಗಿ ಬಂದಿದೆ.

ಭಸ್ಮಧಾರಿಯಾಗಿ ಸಾತ್ವಿಕ ತಪೋಮಯ ಜೀವನವನ್ನು ಸಾಗಿಸುವ ಸಾಧಕನಲ್ಲಿ ಈ ಗುಣಗಳು ಕ್ಷೀಣಗೊಂಡು ಅಹಿಂಸಾ ಭಾವನೆಯು ಅಳವಟ್ಟಿರುತ್ತವೆ. ''ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ'' (ಯೋಗಸೂತ್ರ ೨–೩೫) ಎಂಬ ಪತಂಜಲಿ ಮಹರ್ಷಿಯ ಸೂತ್ರದಂತೆ ಅಹಿಂಸಾ ಭಾವವಳವಟ್ಟವರ ಸನ್ನಿಧಾನದಲ್ಲಿ ಕ್ರೂರ ಪ್ರಾಣಿಗಳೂ ಸಹ ತಮ್ಮ ವೈರಭಾವವನ್ನು ತ್ಯಾಗಮಾಡುತ್ತವೆ. ಅಂತೆಯೇ ಅನೇಕ ಪ್ರಾಚೀನ ಮಹರ್ಷಿಗಳ ಆಶ್ರಮಗಳಲ್ಲಿ ಪರಸ್ಪರ ವೈರಪ್ರಾಣಿಗಳೂ ಮೈತ್ರೀಭಾವ ದಿಂದ ವ್ಯವಹರಿಸುತ್ತಿದ್ದವೆಂಬುದನ್ನು ಪ್ರಾಚೀನ ಗ್ರಂಥಗಳಿಂದ ತಿಳಿದುಕೊಳ್ಳುತ್ತೇವೆ. ಹೀಗೆ ಸಂಪೂರ್ಣ ಸಾತ್ವಿಕಭಾವವನ್ನು ತಾಳಿದವರಿಗೆ ರಾಜ, ಕಳ್ಳ ಹುಲಿ ಮತ್ತು ಸರ್ಪ ಮುಂತಾದ ಯಾವ ಪ್ರಾಣಿಯಿಂದಲೂ ಪೀಡೆಯುಂಟಾಗದು. ಈ ಯೋಗ್ಯತೆಯ ಮೂಲಕಾರಣವೇ ಭಸ್ಮಧಾರಣೆಯು. ಹೀಗೆ ಭಸ್ಮವು ನಮ್ಮನ್ನು ಆದಿಭೌತಿಕ ದುಃಖ ದಿಂದಲೂ ರಕ್ಷಿಸುತ್ತದೆ.

**ಆದಿದೈವಿಕ ದುಃಖದಿಂದ ರಕ್ಷಣೆ :**

''ದೇವಾನ್ ಅಧಿಕೃತ್ಯ ಜಾಯತ ಇತಿ ಆಧಿದೈವಿಕಮ್'' ಅಂದರೆ ಗ್ರಹ, ಯಕ್ಷ, ಭೂತ, ಪಿಶಾಚಿಗಳಿಂದ ಉತ್ಪನ್ನವಾದ ದುಃಖವೇ ಆಧಿದೈವಿಕ ದುಃಖವು. ಅಂತೆಯೇ ''ಆಧಿದೈವಿಕ ಮಾಖ್ಯಾತಂ ಗ್ರಹ ಯಕ್ಷಾದಿ ಸಂಭವಂ'' ಎಂಬುದಾಗಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಉಪದೇಶವಿದೆ. ಧರ್ಮಭ್ರಷ್ಟರೂ ಆಚಾರ ಹೀನರೂ ಆದ ವ್ಯಕ್ತಿಗಳು ನವಗ್ರಹಗಳ ಹಾಗೂ ಭೂತ–ಪಿಶಾಚಾದಿಗಳ ಪೀಡೆಗೆ ಒಳಗಾಗುತ್ತಾರೆ.

ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ರವಿ, ಸೋಮ, ಮಂಗಳ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು ಮತ್ತು ಕೇತುಗಳೆಂಬ ನವಗ್ರಹಗಳುಂಟು. ಈ ಗ್ರಹಗಳೆಲ್ಲ ಶಿವನ ಅನುಚರರು. ಶಿವನ ಆಜ್ಞಾನುಸಾರವಾಗಿಯೇ ಇವುಗಳು ತಮ್ಮ ವ್ಯವಹಾರವನ್ನು ಮಾಡುತ್ತಿರುತ್ತವೆ. ದೈವೀ ಭಕ್ತಿರಹಿತರಾದ ದುರಾಚಾರಿಗಳಿಗೆ ನಾನಾ ವಿಧ ಪೀಡೆಗಳನ್ನು ಕೊಟ್ಟು, ಅವರನ್ನು ದೈವೀಭಕ್ತರನ್ನಾಗಿ ಮಾಡುವುದೇ ಗ್ರಹಪೀಡೆಯ ಪರಮೋದ್ದೇಶವು.

ಕ್ರೂರ ಸ್ವಭಾವವನ್ನು ತಾಳಿದ ಒಂದೊಂದು ಗ್ರಹಗಳ ಆರಾಧನೆಯನ್ನು ಮಾಡಿ ಆಯಾ ಗ್ರಹಗಳ ಕೃಪೆಯನ್ನು ಪಡೆಯುವುದೊಂದು ಮಾರ್ಗವಾದರೆ, ಸಕಲ ಗ್ರಹಬಲನಾದ ಪರಶಿವನನ್ನು ಆರಾಧಿಸಿ ಸರ್ವಗ್ರಹಗಳ ಪೀಡೆಯಿಂದ ಪಾರಾಗುವುದು ಮತ್ತೊಂದು ಮಾರ್ಗವು. ಇದುವೇ ಶ್ರೇಷ್ಠ ಮಾರ್ಗವು.

ಪರಮ ಪಾವನವಾದ ಪಂಚಾಕ್ಷರಿಮಂತ್ರ, ಪುರಃಸರವಾಗಿ ಭಸ್ಮಧಾರಣೆಯನ್ನು ಮಾಡಿದ ಶಿವಭಕ್ತನ ಮೇಲೆ ಶಿವನ ಅನುಚರರಾದ ನವಗ್ರಹಗಳು ತಮ್ಮ ಕ್ರೂರದೃಷ್ಟಿಯನ್ನು ಬೀರಲಾರವು. ಹೀಗೆ ಭಸ್ಮವು ನಮ್ಮನ್ನು ಗ್ರಹಗಳ ಬಾಧೆಯಿಂದಲೂ ರಕ್ಷಿಸುತ್ತದೆ.

ಅದರಂತೆ ದೇವಯೋನಿ ವಿಶೇಷರಾದ ವಿದ್ಯಾಧರ, ಅಪ್ಸರಸ್, ಯಕ್ಷ, ರಕ್ಷ, ಗಂಧರ್ವ, ಕಿನ್ನರ, ಪಿಶಾಚ, ಗುಹ್ಯಕ, ಸಿದ್ಧ ಮತ್ತು ಭೂತ-ಪ್ರೇತಾದಿಗಳ ಬಾಧೆಯೂ ಭಸ್ಮಧಾರಿಗೆ ಉಂಟಾಗಲಾರದು. ಏಕೆಂದರೆ-

ಶ್ಮಶಾನೇಷ್ವಾಕ್ರೀಡಾ ಸ್ಮರಹರ ಪಿಶಾಚಾಃ ಸಹಚರಃ
ಚಿತಾಭಸ್ಮಲೇಪಃ ಸ್ರಗಪಿ ನೃಕರೋಟೀ ಪರಿಕರಃ ।
ಅಮಂಗಲ್ಯಂ ಶೀಲಂ ತವ ಭವತು ನಾಮ್ಯೈವಮಖಿಲಂ
ತಥಾಪಿ ಸ್ಮರ್ತ್ರೂರ್ಣಾಂ ವರದ ಪರಮಂ ಮಂಗಲಮಸಿ ॥

(ಮಹಿಮ್ನಃ ೨೪)

ಈ ಪದ್ಯದಲ್ಲಿ ಪುಷ್ಪದಂತ ಕವಿಯು ಶಿವಸ್ವರೂಪವನ್ನು ವರ್ಣಿಸುವಾಗ ಭೂತ-ಪ್ರೇತ-ಪಿಶಾಚಿಗಳು ಅವನ ಸಹಚರರೆಂಬುದಾಗಿ ಪ್ರತಿಪಾದಿಸಿದ್ದಾನೆ. ಆದ್ದರಿಂದ ಪಿಶಾಚಾದಿಗಳು ಶಿವನಲ್ಲಿ ಅನನ್ಯ ಪ್ರೇಮ ಲಕ್ಷಣಾತ್ಮಕ ಭಕ್ತಿಯುಳ್ಳವರೆಂಬುದು ಸಿದ್ಧವಾಗುತ್ತದೆ. ಶಿವನಿಗೆ ಅತಿ ಪ್ರಿಯಕರವಾದ ಭಸ್ಮವನ್ನು ಧರಿಸಿದ ಶಿವಭಕ್ತರನ್ನೂ ಆ ಪಿಶಾಚಿಗಳು ಶಿವಸ್ವರೂಪರನ್ನಾಗಿಯೇ ಕಾಣುತ್ತಾರೆ. ಅಂತೆಯೇ ಭಸ್ಮಧಾರಿಗಳಿಗೆ ಪಿಶಾಚಾದಿಗಳ ಬಾಧೆಯು ಉಂಟಾಗಲಾರದು. ಹೀಗೆ ಭಸ್ಮವು ನಮ್ಮನ್ನು ಆದಿದೈವಿಕ ದುಃಖದಿಂದಲೂ ರಕ್ಷಿಸುತ್ತದೆ.

ಈ ರೀತಿಯಾದ ಈ ವಿಸ್ತೃತ ವಿವೇಚನೆಯನ್ನವಲೋಕಿಸಿದಾಗ ಭಸ್ಮ ನಿಷ್ಠರನ್ನು ಭಸ್ಮವು ತ್ರಿವಿಧ ತಾಪಗಳಿಂದ ಸಂರಕ್ಷಿಸುವ ಕಾರಣ ಇದಕ್ಕೆ ''ರಕ್ಷಾ'' ಎಂಬ ನಾಮವು ಸಾರ್ಥಕವಾದುದೆಂಬುದು ಸರ್ವರಿಗೂ ಸಹಜವಾಗಿ ತಿಳಿಯುವಂತಾಗಿದೆ.

ಹೀಗೆ ಶ್ರೀ ಜಗದ್ಗುರು ರೇಣುಕರು ಉಪದೇಶಿಸಿದ ಭಸ್ಮದ ಐದು ಹೆಸರುಗಳಲ್ಲಿ ಅಡಕವಾಗಿರುವ ರಹಸ್ಯಾರ್ಥವನ್ನು ನಾವಿಲ್ಲಿ ವಿಸ್ತಾರವಾಗಿ ತಿಳಿದುಕೊಂಡೆವು. ಇನ್ನು ಮುಂದೆ ಈ ಭಸ್ಮೋತ್ಪತ್ತಿಗೆ ಕಾರಣೀಭೂತಗಳಾದ ನಂದಾ-ಭದ್ರಾ ಮುಂತಾದ ಪಂಚ ಗೋವುಗಳ ಉತ್ಪತ್ತಿ ಹಾಗೂ ಸ್ವರೂಪವನ್ನು ವಿಚಾರಿಸೋಣ.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೨ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

## ಆಶೀರ್ವಚನ-೩

ನಂದಾ ಭದ್ರಾ ಚ ಸುರಭಿಃ ಸುಶೀಲಾ ಸುಮನಾಸ್ತಥಾ ।
ಪಂಚ ಗಾವೋ ವಿಭೋರ್ಜಾತಾಃ ಸದ್ಯೋಜಾತಾದಿ ವಕ್ತ್ರತ : (ಸಿ. ಶಿ. ೭.೬)

ಸದಾಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನಗಳೆಂಬ ಪಂಚ ಮುಖಗಳಿಂದ ಕ್ರಮವಾಗಿ ನಂದಾ, ಭದ್ರಾ, ಸುರಭಿ, ಸುಶೀಲಾ ಮತ್ತು ಸುಮನಾ ಎಂಬ ಹೆಸರಿನ ಐದು ತರಹದ ಗೋವುಗಳು ಪ್ರಾದುರ್ಭವಿಸಿದವು.

ಕಪಿಲಃ ಕೃಷ್ಣಧವಲ ಧೂಮ್ರುರಕ್ತಾಸ್ತಥೈವ ಚ ।
ನಂದಾದೀನಾಂ ಗವಾಂ ವರ್ಣಾಃ ಕ್ರಮೇಣ ಪರಿಕೀರ್ತಿತಾಃ (ಸಿ. ಶಿ. ೭.೭)

ಮೇಲೆ ಹೇಳಿದ ನಂದಾ–ಭದ್ರಾ ಮುಂತಾದ ಪಂಚಗೋವುಗಳು ಕ್ರಮವಾಗಿ ಪಿಂಗಳ, ಕಪ್ಪು, ಬಿಳಿ, ಬೂದಿ ವರ್ಣ ಆದರಂತೆ ಕೆಂಪು ವರ್ಣದವುಗಳು ಇರುತ್ತವೆ.

ಸದ್ಯೋಜಾತಾದ್ವಿಭೂತಿಶ್ಚ ವಾಮಾದ್ಭಸಿತಮೇವ ಚ ।
ಅಘೋರಾದ್ಭಸ್ಮಸಂಜಾತಂ ಕ್ಷಾರಂ ತತ್ಪುರುಷಾತ್ತಥಾ ।
ರಕ್ಷಾ ಚೇಶಾನವಕ್ತ್ರಾಚ್ಚ ನಂದಾದಿ ದ್ವಾರತೋಽಭವತ್ (ಸಿ. ಶಿ. ೭.೮)

ಸದ್ಯೋಜಾತ ಮುಖದಿಂದ ಜನಿಸಿದ ನಂದಾ ಗೋವಿನ ಗೋಮಯದಿಂದ ವಿಭೂತಿಯು, ವಾಮದೇವ ಮುಖದಿಂದ ಪ್ರಾದುರ್ಭವಿಸಿದ ಭದ್ರಾ ಗೋವಿನ ಗೋಮಯದಿಂದ ಭಸಿತವು, ಅಘೋರ ಮುಖ ಸಂಜಾತವಾದ ಸುರಭಿಗೋವಿನ ಗೋಮಯದಿಂದ ಭಸ್ಮವು, ತತ್ಪುರುಷ ಮುಖದಿಂದ ಜನಿಸಿದ ಸುಶೀಲಾಗೋವಿನ ಗೋಮಯದಿಂದ ಕ್ಷಾರವು ಮತ್ತು ಈಶಾನಮುಖ ಪ್ರಾದುರ್ಭೂತವಾದ ಸುಮನಾ ಗೋವಿನ ಗೋಮಯದಿಂದ ರಕ್ಷೆಯು ಉತ್ಪನ್ನವಾಯಿತು.

**ಗೋವುಗಳ ಪ್ರಥಮ ಪ್ರಾದುರ್ಭಾವ :**

ವಿಭೂತಿ, ಭಸಿತ, ಭಸ್ಮ ಕ್ಷಾರ ಮತ್ತು ರಕ್ಷಾ ಎಂಬ ವಿಭೂತಿಯ ಪಂಚ ನಾಮಗಳ ರಹಸ್ಯಾರ್ಥವನ್ನು ಬೋಧಿಸಿದ ಪೂಜ್ಯ ಪಾದರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಇನ್ನು ಮೇಲೆ ಈ ವಿಭೂತಿಯ ನಿರ್ಮಾಣಕ್ಕೆ ಕಾರಣೀಭೂತಗಳಾದ ನಂದಾ–ಭದ್ರಾದಿ ಗೋವುಗಳ ಉತ್ಪತ್ತಿಯ ಕ್ರಮವನ್ನು ಉಪದೇಶಿಸುತ್ತಾರೆ.

ಭಾರತೀಯ ಪ್ರಾಚೀನ ಸಾಹಿತ್ಯದಲ್ಲಿ ಗೋವುಗಳ ಪ್ರಾದುರ್ಭಾವದ ಬಗ್ಗೆ ಬೇರೆ ಬೇರೆ ಕಥೆಗಳು ಕಂಡುಬರುತ್ತವೆ. ಎಲ್ಲವುಗಳ ಮುಖ್ಯ ತಾತ್ಪರ್ಯವು ಗೋ ಮಹಿಮೆಯನ್ನು ಪ್ರತಿಪಾದಿಸುವುದೇ ಆಗಿದೆ. ಪೂಜ್ಯ ಪಾದರಾದ ಶ್ರೀಜಗದ್ಗುರು ರೇಣುಕರು ಪರಮಾತ್ಮನ ಸದ್ಯೋಜಾತಾದಿ ಪಂಚಮುಖಗಳಿಂದ ಪಂಚ ಗೋವುಗಳು ಉತ್ಪನ್ನವಾದವು ಎಂಬುದಾಗಿ ಇಲ್ಲಿ ಉಪದೇಶಿಸಿದ್ದಾರೆ. ಬೃಹಜ್ಜಾಬಾಲೋಪನಿಷತ್ತಿನ ಪ್ರಥಮ ಬ್ರಾಹ್ಮಣದಲ್ಲಿಯೂ ಇದೇ ರೀತಿಯಾಗಿ ನಿರೂಪಿಸಲಾಗಿದೆ. ಕಾರಣ ಅದೇ ವಿಷಯವನ್ನೂ ಇಲ್ಲಿ ಪ್ರಸ್ತಾಪಿಸೋಣ.

ಶಿವನ ಪಂಚಮುಖಗಳು :

ಉಪನಿಷತ್, ಆಗಮ ಹಾಗೂ ಪುರಾಣಾದಿಗಳಲ್ಲಿ ಶಿವನಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನಗಳೆಂಬ ಪಂಚಮುಖಗಳು ಪ್ರತಿಪಾದಿಸಲ್ಪಟ್ಟಿವೆ. ಈ ಪಂಚಮುಖಗಳುಳ್ಳ ಶಿವನಿಗೆ ಸದಾಶಿವನೆಂತಲೂ ಕರೆಯುವರು. ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿತಗಳಾದ ಮೂವತ್ತಾರು ತತ್ತ್ವಗಳಲ್ಲಿ ಮೂರನೇ ತತ್ತ್ವವೇ ಸದಾಶಿವತತ್ತ್ವವು. ಮುಂದೆ ಪ್ರಾದುರ್ಭವಿಸಲಿರುವ ಮೂವತ್ತು ಮೂರು ತತ್ತ್ವಗಳನ್ನು ಗರ್ಭೀಕರಿಸಿಕೊಂಡ ಇದೊಂದು ಮಹಾತತ್ತ್ವವು.

ಸದಾಶಿವನ ಈ ಪಂಚಮುಖಗಳಿಂದಲೇ ಸಮಸ್ತ ಚರಾಚರ ಪ್ರಪಂಚವೆಲ್ಲವು ಪ್ರಾದುರ್ಭವಿಸಿದೆ. ಈ ಪಂಚಮುಖಗಳು ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮತ್ತು ಊರ್ಧ್ವ ದಿಕ್ಕುಗಳ ಅಧಿಷ್ಠಾತೃ ಶಕ್ತಿಗಳು. ಈ ಪಂಚಮುಖಗಳಿಂದಲೇ ವೀರಶೈವ ಮಹಾಮತ ಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಪ್ರಾದುರ್ಭವಿಸಿದರೆಂಬ ವಿಷಯವು ಶಿವಾಗಮಗಳಲ್ಲಿ ಪ್ರತಿಪಾದಿತವಾಗಿದೆ. ಶಿವನ ಈ ಪಂಚ ಮುಖಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳೋಣ.

(೧) ಸದ್ಯೋಜಾತ ಮುಖ ಹಾಗೂ ನಂದಾಗೋವು :

''ಸದ್ಯಃ ಜಾತಃ ಸದ್ಯೋಜಾತಃ'' ಎಂಬ ವ್ಯುತ್ಪತ್ತಿಯಂತೆ ಭಕ್ತರ ಆರ್ತ ಧ್ವನಿಯನ್ನು ಕೇಳಿ ತತ್‌ಕ್ಷಣದಲ್ಲಿಯೇ ಅವರ ರಕ್ಷಣೆಗಾಗಿ ಆವಿರ್ಭವಿಸುವುದರಿಂದ ಶಿವನಿಗೆ ಸದ್ಯೋಜಾತನೆಂಬ ಹೆಸರು ಪ್ರಾಪ್ತವಾಗಿದೆ. ಈ ಸದ್ಯೋಜಾತ ಶಿವನ ಸ್ವರೂಪವನ್ನು ಕುರಿತು–

ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ ।
ಭವೇ ಭವೇ ನಾತಿ ಭವೇ ಭವಸ್ವ ಮಾಂ ಭವೋದ್ಭವಾಯ ನಮಃ ।

(ನಾರಾಯಣೋಪನಿಷತ್ ; ಅನುವಾಕ ೧೭)

ಈ ರೀತಿಯಾಗಿ ಉಪನಿಷತ್ತಿನಲ್ಲಿ ಸ್ತುತಿಯು ಇದೆ. ಇದರ ತಾತ್ಪರ್ಯ ವೇನೆಂದರೆ–ಭಕ್ತರ ಆರ್ತ ಧ್ವನಿಯನ್ನು ಕೇಳಿ ತತ್‌ಕ್ಷಣದಲ್ಲಿ ಆವಿರ್ಭವಿಸುವ ಹೇ ಸದ್ಯೋಜಾತನೇ ! ನಾನು ಪ್ರತಿಯೊಂದು ಜನ್ಮದಲ್ಲಿ ನಿನಗೆ ಶರಣಾಗುತ್ತೇನೆ. ನಿನ್ನನ್ನು ಪೂಜಿಸಲು ಬಾರದಿರುವ ಬೇರಾವ (ಪಶು–ಪಕ್ಷ್ಯಾದಿ) ಜನ್ಮಗಳಲ್ಲಿ ನನ್ನನ್ನು ಹುಟ್ಟಿಸ ಬೇಡ. ಈ ಚರಾಚರ ಭವದ ಉದ್ಭವಕ್ಕೆ ಕಾರಣೀಭೂತನಾದ ನಿನಗೆ ಅನಂತ ನಮಸ್ಕಾರಗಳು ಎಂಬುದಾಗಿ ಋಷಿಯು ಶಿವನ ಸದ್ಯೋಜಾತ ಮೂರ್ತಿಯನ್ನು ಸ್ತುತಿಸಿದ್ದಾನೆ.

ಇಂತಹ ಸದ್ಯೋಜಾತ ಶಿವನ ಪೂರ್ವ ದಿಕ್ಕಿನ ಮುಖವೇ ಸದ್ಯೋಜಾತ ಮುಖವು.

ಸದ್ಯೋಜಾತಾತ್ ಪೃಥಿವೀ । ತಸ್ಯಾಃಸ್ಯಾನ್ನಿವೃತ್ತಿಃ । ತಸ್ಯಾಃ
ಕಪಿಲ ವರ್ಣಾ ನಂದಾ ತದ್ಗೋಮಯೇನ ವಿಭೂತಿರ್ಜಾತಾ ॥

(ಬೃಹಜ್ಜಾ ಉ.೧–೧)

ಎಂಬ ಈ ಬೃಹಜ್ಜಾಬಾಲ ಮಂತ್ರ ಪ್ರಮಾಣದಂತೆ ಶಿವನ ಈ ಅಘೋರ ಮುಖ ಅಗ್ನಿ, ವಿದ್ಯಾಕಲಾ ಹಾಗೂ ರಕ್ತವರ್ಣದ ಸುರಭಿ ಎಂಬ ಗೋವುಗಳು ಉತ್ಪನ್ನಗಳಾದವು.

ಅತ್ಯಂತ ಸುಗಂಧ ಭರಿತವಾದ್ದರಿಂದ ಈ ಗೋವಿಗೆ ಸುರಭಿ ಎಂಬ ಹೆಸರು ಪ್ರಾಪ್ತವಾಗಿದೆ. ಇದರ ಶರೀರದಿಂದಷ್ಟೇ ಅಲ್ಲ ಪಂಚಗವ್ಯ (ಹಾಲು, ಮೊಸರು, ತುಪ್ಪ, ಮೂತ್ರ ಶೆಗಣಿ) ಗಳಲ್ಲಿಯೂ ಸುಗಂಧವು ಪ್ರಪೂರ್ಣವಾದ್ದರಿಂದ ಇದಕ್ಕೆ ಸುರಭಿ ಎಂಬ ಹೆಸರು ಸಾರ್ಥಕವಾಗಿದೆ. ಈ ಸುರಭಿ ಗೋವಿನ ಗೋಮಯದಿಂದ ನಿರ್ಮಿತವಾದದ್ದೇ ಭಸ್ಮವು.

(೪) ತತ್ಪುರುಷಮುಖ ಹಾಗೂ ಸುಶೀಲಾಗೋವು :

''ಸ ಏವ ಪುರುಷ : ತತ್ಪುರುಷಃ'' ಎಂಬ ವ್ಯುತ್ಪತ್ತಿಯ ಮೇರೆಗೆ ಪರಮಾತ್ಮನೋರ್ವನೇ ಪುರುಷ ಪದ ವಾಚ್ಯನಾಗಿದ್ದಾನೆ : ಅರ್ಥಾತ್ ಪುರುಷ ವಿಶೇಷನಾಗಿದ್ದಾನೆ. ಅಂತೆಯೇ ''ಕ್ಲೇಶ ಕರ್ಮ ವಿಪಾಕಾಶಯೈರಪಿ, ರಾಮೃಷ್ಟ : ಪುರುಷ ವಿಶೇಷ ಈಶ್ವರ :'' (ಯೋ. ಸೂ. ೧–೨೪) ಎಂಬುದಾಗಿ ಪತಂಜಲಿ ಮಹರ್ಷಿಗಳು ಕ್ಲೇಶಾದಿಗಳ ಸೋಂಕಿಲ್ಲದ ಪರಮೇಶ್ವರನಿಗೆ ಪುರುಷ ವಿಶೇಷನೆಂದು ಹೇಳಿದ್ದಾರೆ.

ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ॥

(ನಾರಾ. ಉ. ಅನುವಾಕ. ೨೦)

ನಾರಾಯಣೋಪನಿಷತ್ತಿನ ಈ ಮಂತ್ರದಲ್ಲಿ ತತ್ಪುರುಷ ಭಗವಂತನ ಸ್ವರೂಪ ವನ್ನು ತಿಳಿಯಪಡಿಸಿ ಸ್ತುತಿಯು ಮಾಡಲ್ಪಟ್ಟಿದೆ. ಈ ಮಂತ್ರದ ತಾತ್ಪರ್ಯವೇನೆಂದರೆ– ಸಕಲ ದೇವತೆಗಳಲ್ಲಿ ಶಿವನು ಶ್ರೇಷ್ಠನಾದ್ದರಿಂದ ಅವನಿಗೆ ಮಹಾದೇವನೆಂತಲೂ, ತತ್ಪುರುಷ ನೆಂತಲೂ ಕರೆಯುವರು. ಅಂತಹ ಶಿವನನ್ನು ನಾವು ಉಪಾಸಿಸುತ್ತೇವೆ ಮತ್ತು ಧ್ಯಾನಿಸು ತ್ತೇವೆ. ಈ ಉಪಾಸನೆಯಲ್ಲಿ ಶ್ರೀ ರುದ್ರನೇ ನಮ್ಮನ್ನು ಪ್ರೇರಿಸಲಿ : ಎಂಬುದಾಗಿ ಋಷಿಯ ಪ್ರಾರ್ಥನೆ, ಇಂತಹ ತತ್ಪುರುಷ ಶಿವನ ಉತ್ತರ ದಿಕ್ಕಿನ ಮುಖವೇ ತತ್ಪುರುಷ ಮುಖವು.

''ತತ್ಪುರುಷಾದ್ವಾಯುಃ । ತಸ್ಮಾಚ್ಛಾಂತಿಃ । ತಸ್ಯಾಃ ಶ್ವೇತವರ್ಣಾ
ಸುಶೀಲಾ । ತಸ್ಯಾ ಗೋಮಯೇನ ಕ್ಷಾರಂ ಜಾತಂ ॥

( ಬೃಹಜ್ಜಾ. ಉ. ೧–೧)

ಎಂಬ ಈ ಉಪನಿಷತ್ ಮಂತ್ರಪ್ರಮಾಣದಂತೆ ಶಿವನ ಈ ತತ್ಪುರುಷ ಮುಖದಿಂದ ವಾಯುತತ್ತ್ವ, ಶಾಂತಿಕಲಾ ಮತ್ತು ಶ್ವೇತವರ್ಣದ ಸುಶೀಲಾ ಎಂಬ ಗೋವು; ಇವುಗಳು ಉತ್ಪನ್ನಗಳಾದವು. ಈ ಸುಶೀಲಾ ಗೋವಿನ ಗೋಮಯದಿಂದ ಕ್ಷಾರ ಭಸ್ಮವು ನಿರ್ಮಿತ ವಾಗುತ್ತದೆ.

(೫) ಈಶಾನ ಮುಖ ಮತ್ತು ಸುಮನಾಗೋವು :

ಎಲ್ಲರ ಮೇಲೆ ನಿಯಾಮಕನಾದ್ದರಿಂದ ಶಿವನಿಗೆ ''ಈಶಾನಃ'' ಎಂಬ ಹೆಸರು ಪ್ರಾಪ್ತವಾಗಿದೆ. ಶಿವನ ಈ ಈಶಾನ ಸ್ವರೂಪವು ಉಪನಿಷತ್ತಿನಲ್ಲಿ–

''ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು
ಸದಾ ಶಿವೋಮ್ ॥''

(ನಾರಾ. ಉ. ಅನುವಾಕ ೨೧)

ಈ ರೀತಿಯಾಗಿ ಪ್ರತಿಪಾದಿಸಲ್ಪಟ್ಟಿದೆ ಇದರ ತಾತ್ಪರ್ಯವೇನಂದರೆ–ಶಿವನ ಶ್ವಾಸೋಚ್ಛ್ವಾಸದಿಂದ ವೇದಗಳು ಮತ್ತು ಮುಖಾರವಿಂದದಿಂದ ಆಗಮಗಳು ನಿಃಸೃತಗಳಾದ್ದರಿಂದ ನಿಗಮಾದಿ ಸರ್ವ ವಿದ್ಯೆಗಳಿಗೆ ಶಿವನೇ ನಿಯಾಮಕನು. ವಿಷ್ಣುವೇ ಮೊದಲುಗೊಂಡು ಎಲ್ಲ ಪ್ರಾಣಿಗಳ ಒಡೆಯನು ಶಿವನೇ. ''ಬ್ರಾಹ್ಮಣಾನಾಂ ಶಿವೋದೇವಃ ಕ್ಷತ್ರಿಯಾಣಾಂ ತು ಮಾಧವಃ'' ಎಂಬ ಮನುಸ್ಮೃತಿಯ ಪ್ರಮಾಣದಂತೆ ಎಲ್ಲ ಬ್ರಾಹ್ಮಣರಿಗೆ ಶಿವನೇ ಉಪಾಸ್ಯನಾದ್ದರಿಂದ ಶಿವನಿಗೆ ಬ್ರಹ್ಮಾಧಿಪತಿ ಎಂತಲೂ, ಚತುರ್ಮುಖ ಬ್ರಹ್ಮನಿಗೂ ಅಧಿಪತಿಯಾದ್ದರಿಂದ ಬ್ರಹ್ಮಣೋಧಿಪತಿ ಎಂತಲೂ ಕರೆಯಲಾಗಿದೆ. ಅಂತಹ ಓಂಕಾರಸ್ವರೂಪನೂ, ಪರಬ್ರಹ್ಮನೂ ಆದ ಆ ಶಿವನು ನನ್ನ ಮನಸ್ಸಿನಲ್ಲಿ ಸದಾ ನಿವಾಶಿಸಲಿ ಎಂಬುದಾಗಿ ಋಷಿಯು ಪ್ರಾರ್ಥಿಸಿದ್ದಾನೆ. ಇಂತಹ ಈಶಾನ ಶಿವನ ಊರ್ಧ್ವ ದಿಕ್ಕಿನ ಮುಖವೇ ''ಈಶಾನಮುಖ''ವು.

ಈಶಾನಾದಾಕಾಶಂ । ತಸ್ಮಾಚ್ಛಾಂತ್ಯತೀತಾ । ತಸ್ಯಾಶ್ಚಿತ್ರವರ್ಣಾ
ಸುಮನಾಃ । ತದ್ಗೋಮಯೇನ ರಕ್ಷಾ ಜಾತಾ ॥೯

(ಬೃಹಜ್ಜಾ. ಉ. ೧–೧)

ಎಂಬ ಈ ಉಪನಿಷನ್ಮಂತ್ರದಂತೆ ಶಿವನ ಈ ಈಶಾನ ಮುಖದಿಂದ ಆಕಾಶ ತತ್ತ್ವ. ಶಾಂತ್ಯತೀತಕಲೆ ಮತ್ತು ಚಿತ್ರವರ್ಣದ ಸುಮನಾ ಎಂಬ ಹೆಸರಿನ ಗೋವು ; ಇವುಗಳು ಉತ್ಪನ್ನಗಳಾದವು. ''ಶೋಭನಂ ಮನೋ ಯಸ್ಯಾಃ ಸಾ ಸುಮನಾ'' ಎಂಬ ವ್ಯುತ್ಪತ್ತಿಯ ಮೇರೆಗೆ ಅತ್ಯಂತ ಸಾತ್ವಿಕವಾದ ಮನಸ್ಸುಳ್ಳದ್ದರಿಂದ ಇದಕ್ಕೆ ಸುಮನಾ ಎಂಬ ನಾಮವು ಪ್ರಾಪ್ತವಾಗಿದೆ. ಈ ಸುಮನಾ ಗೋವಿನ ಗೋಮಯದಿಂದ ನಿರ್ಮಿತವಾದದ್ದೇ ರಕ್ಷಾ.

ಯದ್ಯದ್ವಿಭೂತಿ ಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂ ಶ ಸಂಭವಂ ॥

(ಗೀತಾ ; ೧೧–೪೧)

ಜಗತ್ತಿನ ಶ್ರೇಷ್ಠ ವಸ್ತುಗಳೆಲ್ಲ ಶಿವನ ವಿಶಿಷ್ಟ ತೇಜಸ್ಸಿನಿಂದ ಉತ್ಪನ್ನಗಳಾಗಿರುತ್ತವೆ: ಎಂಬ ಈ ಗೀತೋಕ್ತಿಯಂತೆ ನಂದಾ, ಭದ್ರಾ, ಸುರಭಿ, ಸುಶೀಲಾ ಮತ್ತು ಸುಮನಾ ಎಂಬ ಈ ಪಂಚ ಗೋವುಗಳು ಜಗತ್ತಿನ ಶ್ರೇಷ್ಠ ವಸ್ತುಗಳಲ್ಲಿ ಪರಿಗಣಿಸಲ್ಪಟ್ಟಿರುವುದರಿಂದ ಇವುಗಳಾದರೂ ಶಿವನ ತೇಜಸ್ಸಂಭೂತಗಳೆಂದು ತಿಳಿಸುವುದಕ್ಕಾಗಿಯೇ ಉಪನಿಷತ್ತಿನಲ್ಲಾಗಲಿ ಸಿದ್ಧಾಂತ ಶಿಖಾಮಣಿಯಲ್ಲಾಗಲಿ ಇವುಗಳ ಉತ್ಪತ್ತಿಯು ಶಿವನ ಪಂಚಮುಖಗಳಿಂದೆಂಬುದಾಗಿ ಪ್ರತಿಪಾದಿಸಲಾಗಿದೆ.

ಉಪನಿಷತ್ ಹಾಗೂ ಸಿದ್ಧಾಂತಶಿಖಾಮಣಿಯ ನಿರೂಪಣೆಯು ಸಮಾನವಾಗಿಯೇ ಇದ್ದರೂ ಗೋವುಗಳ ಬಣ್ಣದ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವು ಕಂಡು

ಬರುತ್ತಿದೆ. ನಂದಾ, ಭದ್ರಾ, ಸುರಭಿ, ಸುಶೀಲಾ ಎಂಬ ಗೋವುಗಳ ಬಣ್ಣಗಳು ಉಪನಿಷತ್ತಿನಲ್ಲಿ ಕ್ರಮವಾಗಿ ಕಪಿಲ (ಕೆಂಪು ಬಿಳಿ ಮಿಶ್ರಿತ ಪಿಂಗಳ ವರ್ಣ). ಕೃಷ್ಣ (ಕಪ್ಪು), ರಕ್ತ (ಕೆಂಪು), ಶ್ವೇತ (ಬಿಳಿ). ಚಿತ್ರ (ನಾನಾ ಬಣ್ಣಮಿಶ್ರಿತ) ಎಂದು ಹೇಳಲ್ಪಟ್ಟಿದ್ದರೆ ಸಿದ್ಧಾಂತ ಶಿಖಾಮಣಿಯಲ್ಲಿ–ಕಪಿಲ, ಕೃಷ್ಣ ಧವಲ, ಧೂಮ್ರ, ಮತ್ತು ರಕ್ತ ಎಂಬುದಾಗಿ ಹೇಳಲ್ಪಟ್ಟಿದೆ.

**ಗೋಮಾತೆ :**

ಸೃಷ್ಟಿಯ ಆದಿಯಲ್ಲಿ ಶಿವನ ಸದ್ಯೋಜಾತಾದಿ ಪಂಚ ಮುಖಗಳಿಂದ ಆವಿರ್ಭವಿಸಿದ ಆ ನಂದಾ–ಭದ್ರ–ಸುರಭಿ–ಸುಶೀಲಾ ಮತ್ತು ಸುಮನಾ ಎಂಬ ಪಂಚ ಗೋವುಗಳ ಸಂತಾನವಾದ ಸದ್ಯದ ಗೋವುಗಳಾದರೂ ಮನುಷ್ಯನ ಸರ್ವವಿಧ ಪಾಲನೆ ಪೋಷಣೆಗೆ ಕಾರಣಗಳಾದ್ದರಿಂದ ಭಾರತೀಯ ಸಂಸ್ಕೃತಿಯಲ್ಲಿ ಗೋವಿಗೆ ಮಾತೃಸ್ಥಾನವು ಪ್ರಾಪ್ತವಾಗಿದೆ. ಅಂತೆಯೇ ಋಗ್ವೇದದಲ್ಲಿ–

''ಗೌರ್ಮಾತಾ ವೃಷಭಃ ಪಿತಾಮೇ ದಿವಂ ಶರ್ಮ ಜಗತೀ ಮೇ ಪ್ರತಿಷ್ಠಾ'' ಗೋವಿಗೆ ಮಾತಾ ಎಂತಲೂ ವೃಷಭನಿಗೆ ಪಿತಾ ಎಂತಲೂ ಕರೆಯಲಾಗಿದೆ.

ಜನ್ಮ ಕೊಟ್ಟ ತಾಯಿಯು ಶಿಶುವಿಗೆ ಆರು ತಿಂಗಳು ಇಲ್ಲವೇ ಒಂದು ವರ್ಷ ತನ್ನ ಮೊಲೆ ಹಾಲನ್ನು ಉಣ್ಣಿಸಬಹುದು : ಆದರೆ ಗೋಮಾತೆಯು ನಮ್ಮ ಜೀವನದುದ್ದಕ್ಕೂ ತನ್ನ ಮೊಲೆ ಹಾಲಿನಿಂದ ನಮ್ಮನ್ನು ರಕ್ಷಿಸುತ್ತಾಳೆ. ಆದ್ದರಿಂದ ಜನ್ಮಮಾತೆಗಿಂತ ಗೋಮಾತೆ ಹೆಚ್ಚಿನವಳು. ಅಂತೆಯೇ ಓರ್ವ ಹಿಂದೀ ಕವಿಯು ತನ್ನ ಹೃದ್ಗತಾಭಿಪ್ರಾಯವನ್ನು–

ಜನನೀ ಜನಕ ದೂಧ ಪಿಲಾತೀ ಕೇವಲ ಸಾಲ–ಛಮಾಹೀಭರ ।
ಗೋಮಾತಾ ಪಯ–ಸುಧಾ ಪಿಲಾಕರ ರಕ್ಷಾ ಆ ಕರತೀ ಜೀವನ ಭರ ॥

(ಗೋ ಅಂಶ ಪುಟ ೫೨೧)

ಈ ರೀತಿಯಾಗಿ ಹೇಳಿದ್ದಾನೆ. ''ತಾಯಿಗಿಂತ ಬಂಧುವಿಲ್ಲ'' ಎಂಬ ಕನ್ನಡ ನಾಡು ನುಡಿಯಂತೆ ಗೋಮಾತೆಯೇ ನಿಜವಾದ ಬಂಧುವು. ಪದ್ಮಪುರಾಣದ ಸೃಷ್ಟಿಖಂಡದಲ್ಲಿ–

ಗಾವೋ ಬಂಧುರ್ಮನುಷ್ಯಾಣಾಂ ಮನುಷ್ಯಾ ಬಾಂಧವಾ ಗವಾಂ ।
ಗೌಶ್ಚ ಯಸ್ಮಿನ್ ಗೃಹೇ ನಾಸ್ತಿ ತದ್ಬಂಧುರಹಿತಂ ಗೃಹಂ ॥

(ಪದ್ಮ ಪು. ಸೃ ೪೮–೧೫೭)

ಹೀಗೆ ಗೋವಿಗೆ ಬಂಧುವೆಂಬುದಾಗಿ ಹೇಳಿ, ಗೋವಿಲ್ಲದ ಮನೆಯು ಬಂಧು ಶೂನ್ಯ ಗೃಹವೆಂಬುದಾಗಿ ಪ್ರತಿಪಾದಿಸಲಾಗಿದೆ.

**ಭೂಲೋಕದ ಅಮೃತ ಗೋಕ್ಷೀರ :**

ಜರಾಯುಜ ಪ್ರಾಣಿಗಳ ಮೂಲ ಆಹಾರವೇ ಹಾಲು. ಮನುಷ್ಯನೂ ಜರಾಯುಜ ಪ್ರಾಣಿಯಾದ್ದರಿಂದ ಮನುಷ್ಯನ ಮೂಲ ಆಹಾರವೇ ಕ್ಷೀರವು. ತಾಯಿಯ ಹಾಲಿನ ನಂತರ ಎಮ್ಮಿ, ಆಡು, ಕುರಿ, ಮತ್ತು ಗೋವು ಇವುಗಳ ಹಾಲನ್ನು ಮನುಷ್ಯನು ಉಪಯೋಗಿಸುವುದುಂಟು. ಆದರೆ ''ಗವ್ಯಂ ದಶ ಗುಣಂ ಪಯಃ'' ಎಂಬ ಚರಕ

ಸಂಹಿತೆಯ ಈ ವಚನದಂತೆ ಎಮ್ಮಿ ಮುಂತಾದ ಉಳಿದ ಪಶುಗಳಿಗಿಂತಲೂ ಗೋಕ್ಷೀರವೇ ಹೆಚ್ಚು ಗುಣಕಾರಿಯು. ಆದ್ದರಿಂದ ಶಿಶುಗಳಿಗೆ ತಾಯಿಯ ಮೊಲೆಹಾಲು ಕಡಿಮೆಯಾದಾಗ ಗೋಕ್ಷೀರವನ್ನೇ ಕೊಡಬೇಕು. ಪೌಡರಿನ ಹಾಲು ಶಿಶುಗಳಿಗೆ ಆರೋಗ್ಯದಾಯಕವಲ್ಲ. ಚಹಾದ ಭಕ್ತರಾದ ಇಂದಿನ ಸಮಾಜಕ್ಕೆ ಗೋವಿನ ಹಾಗೂ ಗೋಕ್ಷೀರದ ಮಹಿಮೆಯು ತಿಳಿಲಸಾಧ್ಯವು.

**ಗೋರಕ್ಷೆ ಜಗದ್ರಕ್ಷೆ :**

ಮಂಗಲಕರವೂ ಮನುಷ್ಯ ಜೀವನದ ಮೂಲಾಧಾರವೂ ಆದ ಗೋರಕ್ಷೆಯು ಪ್ರತಿಯೊಬ್ಬ ಭಾರತೀಯರ ಆದ್ಯ ಕರ್ತವ್ಯವು. ನಮ್ಮ ದೇಶದ ಪ್ರಾಚೀನ ರಾಜ–ಮಹಾರಾಜರಾಗಲಿ, ಋಷಿಮುನಿಗಳಾಗಲಿ ಗೋರಕ್ಷಣೆಗೆ ಅತಿ ಪ್ರಾಮುಖ್ಯತೆಯನ್ನು ಕೊಟ್ಟ ಸಂಗತಿಯು ಪ್ರಾಚೀನ ಸಾಹಿತ್ಯದಿಂದ ತಿಳಿದುಬರುತ್ತದೆ. ಗೋರಕ್ಷಿಸುವ ಋಷಿ ಮುನಿಗಳಿಗೆ ನಮ್ಮ ದೇಶದ ರಾಜರು ಗೋಚರ ಭೂಮಿಯನ್ನು ದಾನಮಾಡಿದ ದಾನ ಶಾಸನಗಳ ಉಲ್ಲೇಖಗಳು ಹೇರಳವಾಗಿವೆ.

ಹಿಂದೂ ಸಂಸ್ಕೃತಿಯ ಎಲ್ಲ ಪೀಠಾಚಾರ್ಯರೂ ಗೋರಕ್ಷಣೆಗೆ ಮಹತ್ತ್ವವನ್ನು ಕೊಟ್ಟಿದ್ದಾರಲ್ಲದೇ ನಮ್ಮ ದೇಶದ ಪ್ರಾಚೀನ ಮುಸಲ್ಮಾನರೂ ಗೋರಕ್ಷಕರಾಗಿದ್ದರು. ಅಕ್ಬರ್ ಬಾದಶಹನು ತನ್ನ ಆಡಳಿತ ಕಾಲದಲ್ಲಿ ಗೋಹತ್ಯೆಯನ್ನು ಸಂಪೂರ್ಣವಾಗಿ ನಿಲ್ಲಿಸಿದ್ದನಲ್ಲದೇ ತನ್ನ ಗೋಶಾಲೆಯಲ್ಲಿ ಅನೇಕ ಎತ್ತು–ಆಕಳುಗಳನ್ನು ಸಾಕಿದ್ದನೆಂಬುದು ಇತಿಹಾಸದಿಂದ ತಿಳಿದುಬರುತ್ತದೆ.

**ಗೋಸೇವೆಯಿಂದ ಇಷ್ಟಾರ್ಥ ಪ್ರಾಪ್ತಿ :**

ಸಕಲ ದೇವತೆಗಳ ಆವಾಸಸ್ಥಾನವಾದ ಗೋಮಾತೆಯ ಸೇವೆಯಿಂದ ಮನುಷ್ಯನ ಸಕಲ ದೋಷಗಳು ನಿವೃತ್ತಗಳಾಗುವವು. ಗೋಸೇವೆಯ ಮಹಿಮೆಯನ್ನು ಮಾನವರಿಗೆ ಅರುಹುವದಕ್ಕಾಗಿ ಮಹಾಮಹಿಮನಾದ ಶ್ರೀಕೃಷ್ಣ ಪರಮಾತ್ಮನು ಗೋಸೇವೆಯನ್ನು ಮಾಡಿ ''ಗೋಪಾಲ'' ನೆನಿಸಿಕೊಂಡರೆ, ಪಶುಗಳ ಮೇಲೆ ಅತ್ಯಂತ ಪ್ರಿಯನಾದ ಶಿವನು ವೃಷಭವನ್ನೇ ತನ್ನ ವಾಹನ ಮಾಡಿಕೊಂಡು ''ಪಶುಪತಿ'' ಎನಿಸಿಕೊಂಡಿದ್ದಾನೆ. ಅಂತೆಯೇ ಪಶುಗಳಲ್ಲಿ ಗೋ–ವೃಷಭಗಳು ಸೇವನೀಯಗಳೂ, ಪೂಜನೀಯಗಳೂ ಆಗಿವೆ.

ಜ್ಯಾಬಾಲನ ಮಗನಾದ ಸತ್ಯಕಾಮ ಜಾಬಾಲಿಯು ಹಾರೀತದ್ರುಮ ಗೌತಮ ಮಹರ್ಷಿಯ ಅಪ್ಪಣೆಯಂತೆ ನಾಲ್ಕನೂರು ಆಕಳುಗಳು ಒಂದು ಸಾವಿರ ಆಗುವವರೆಗೆ ನಿಷ್ಠೆಯಿಂದ ಗೋಸೇವೆಯನ್ನು ಮಾಡಿ ತನ್ನ ಸ್ಥೂಲ ಹಾಗೂ ಸೂಕ್ಷ್ಮ ಪಿಂಡಗಳನ್ನು ಪರಿಶುದ್ಧ ಮಾಡಿಕೊಂಡು ಕೊನೆಗೆ ಗುರೂಪದೇಶದಿಂದ ಶ್ರೇಷ್ಠ ಬ್ರಹ್ಮಜ್ಞಾನಿಯಾಗಿ ಜಾಬಾಲ ಮಹರ್ಷಿ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಗೋಸೇವೆ ಮತ್ತು ಗೋಮಯ ಭಸ್ಮದ ಯಥಾರ್ಥ ತತ್ತ್ವವನ್ನು ತಿಳಿದುಕೊಂಡು ಈತನೇ ಪಿಪ್ಪಲಾದ ಮಹರ್ಷಿಯ ಪುತ್ರನಾದ ಪೈಪ್ಪಲಾದ ಮುನಿಗೆ ಭಸ್ಮಧಾರಣೆಯ ವಿಧಿ ಹಾಗೂ ಅದರ ಧಾರಣೆಯಿಂದ ಜೀವಾತ್ಮನು ಪಶುತ್ವ ಜೀವನವನ್ನು ದಾಟಿ ಪರಶಿವಸ್ವರೂಪನಾಗುವ

ನೆಂಬುದನ್ನು ಬಹು ಸುಂದರವಾಗಿ ಉಪದೇಶಿಸಿದ್ದಾನೆ. ಆತನ ಆ ಉಪದೇಶವೇ ಬೃಹತ್ಜಾಬಾಲೋಪನಿಷತ್ ಎಂಬುದಾಗಿ ಪ್ರಸಿದ್ಧವಿದೆ.

ಇದೇ ಪ್ರಕಾರ ಧೌಮ್ಯಮಹರ್ಷಿಗಳ ಆಶ್ರಮದಲ್ಲಿ ಗೋಸೇವೆಯನ್ನು ಮಾಡಿದ ಉಪಮನ್ಯುವು ಬಹು ಶ್ರೇಷ್ಠ ಮಹರ್ಷಿಯಾದ ಕಥೆಯು ಸುಪ್ರಸಿದ್ಧವಾಗಿದೆ. ಸೂರ್ಯ ವಂಶದ ಚಕ್ರವರ್ತಿಯಾದ ದಿಲೀಪನು ಗೋಸೇವೆಯಿಂದಲೇ ರಘುವೆಂಬ ಹೆಸರಿನ ಸತ್ಪುತ್ರನನ್ನು ಪಡೆದ ಕಥೆಯು ಕಾಳಿದಾಸನ ರಘುವಂಶ ಮಹಾ ಕಾವ್ಯದಲ್ಲಿ ವರ್ಣಿತ ವಾಗಿದೆ.

ಹೀಗೆ ಗೋ ಸೇವೆಯಿಂದ ಮನುಷ್ಯನ ಸಕಲ ಪಾಪಗಳು ನಿವೃತ್ತಿಯಾಗಿ ಬ್ರಹ್ಮ ಚಾರಿಗಳಿಗೆ ಬ್ರಹ್ಮಜ್ಞಾನದ ಯೋಗ್ಯತೆ ಪ್ರಾಪ್ತವಾಗುವುದಲ್ಲದೇ ಗೃಹಸ್ಥರಿಗೆ ಸತ್ಪುತ್ರರು ಲಭಿಸುವರು. ಆದಕಾರಣ ಪ್ರತಿಯೊಂದು ಮನೆಯಲ್ಲಿ ಐದು ಇಲ್ಲವಾದರೆ ಕೊನೆಗೆ ಒಂದನ್ನಾದರು ಗೋವನ್ನು ರಕ್ಷಿಸಿ ಅದರ ಸೇವೆಯನ್ನು ನಿಷ್ಠೆಯಿಂದ ಮಾಡಬೇಕು. ಗೋರಕ್ಷಣೆ ಹಾಗೂ ಉತ್ತಮ ಗೋ ಸೇವೆಯಿಂದ ಹಾಲು, ಮೊಸರು, ಮತ್ತು ತುಪ್ಪ ಮುಂತಾದ ಪೌಷ್ಟಿಕ ಜೀವನಾಂಶಗಳು ಸಹಜವಾಗಿ ದೊರೆಯುವುದರ ಜೊತೆಗೆ ಸರ್ವವಿಧ ರೋಗಾಣುಗಳನ್ನು ನಾಶಗೊಳಿಸುವ ಗೋಮೂತ್ರ–ಗೋಮಯಗಳು ಲಭ್ಯವಾಗುವವು.

ಪೂಜ್ಯಪಾದರಾದ ಶ್ರೀಜಗದ್ಗುರು ರೇಣುಕರ ಉಪದೇಶದಂತೆ ಇಂದು ನಾವು ಕಪಿಲ ವರ್ಣದ ಗೋವನ್ನು ನಂದಾ ಎಂಬುದಾಗಿಯೂ, ಕೃಷ್ಣವರ್ಣದ ಗೋವನ್ನು ಭದ್ರಾ ಎಂಬುದಾಗಿಯೂ, ಧವಲ (ಬಿಳಿ) ವರ್ಣದ ಗೋವನ್ನು ಸುರಭಿ ಎಂಬು ದಾಗಿಯೂ, ಧೂಮ್ರವರ್ಣದ ಗೋವನ್ನು ಸುಶೀಲಾ ಎಂಬುದಾಗಿಯೂ ಮತ್ತು ರಕ್ತವರ್ಣದ ಗೋವನ್ನು ಸುಮನಾ ಎಂಬುದಾಗಿಯೂ ಭಾವಿಸಿ ; ವಿಧಿವತ್ತಾಗಿ ಅವುಗಳ ಸೇವೆಯನ್ನು ಮಾಡಿ ಗೋಮಯವನ್ನು ಸಂಗ್ರಹಿಸಿ; ಅದರಿಂದ ಕ್ರಮವಾಗಿ ವಿಭೂತಿ, ಭಸಿತ, ಭಸ್ಮ, ಕ್ಷಾರ ಹಾಗೂ ರಕ್ಷಾ ಎಂಬ ಹೆಸರಿನ ಪಂಚವಿಧ ವಿಭೂತಿಗಳನ್ನು ನಿರ್ಮಿಸಿ ಕೊಂಡು; ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ ಮತ್ತು ಮೋಕ್ಷ ಕರ್ಮಗಳನ್ನು ಆಚರಿಸುವಾಗ ಅವುಗಳನ್ನು ದೇಹದ ಮೇಲೆ ಧರಿಸಿಕೊಂಡರೆ ಆಯಾ ಕರ್ಮಗಳ ಫಲಗಳು ಯಥಾ ಶೀಘ್ರವಾಗಿ ದೊರೆತು ನಮ್ಮೆಲ್ಲರ ಜೀವನವು ಕಲ್ಯಾಣಮಯ ವಾಗುವುದು.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೩ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

ಆಶೀರ್ವಚನ-೪

ಧಾರಯೇನ್ನಿತ್ಯ ಕಾರ್ಯೇಷು ವಿಭೂತಿಂ ಚ ಪ್ರಯತ್ನತಃ।
ನೈಮಿತ್ತಿಕೇಷು ಭಸಿತಂ ಕ್ಷಾರಂ ಕಾಮ್ಯೇಷು ಸರ್ವದಾ
ಪ್ರಾಯಶ್ಚಿತ್ತೇಷು ಸರ್ವೇಷು ಭಸ್ಮ ನಾಮ ಯಥಾ ವಿಧಿ।
ರಕ್ಷಾ ಚ ಮೋಕ್ಷ ಕಾರ್ಯೇಷು ಪ್ರಯೋಕ್ತವ್ಯಾ ಸದಾ ಬುಧೈಃ

(ಸಿ. ಶಿ. ೭೯-೧೦)

ವಿವೇಕಿಗಳಾದವರು ನಿತ್ಯಕರ್ಮಗಳನ್ನಾಚರಿಸುವಾಗ ವಿಭೂತಿಯನ್ನು, ನೈಮಿತ್ತಿಕ ಕರ್ಮಗಳನ್ನಾಚರಿಸುವಾಗ ಭಸಿತವನ್ನು, ಕಾಮ್ಯಕರ್ಮಗಳನ್ನಾಚರಿಸುವಾಗ ಕ್ಷಾರವನ್ನು, ಪ್ರಾಯಶ್ಚಿತ್ತ ಕರ್ಮಗಳನ್ನು ಮಾಡುವಾಗ ಭಸ್ಮವನ್ನು ಮತ್ತು ಮೋಕ್ಷ ಪ್ರಾಪ್ತಿಯ ನಿಷ್ಕಾಮ ಕರ್ಮಗಳನ್ನಾಚರಿಸುವಾಗ ರಕ್ಷೆಯನ್ನು ಶಾಸ್ತ್ರೋಕ್ತಪದ್ಧತಿಯಂತೆ ಧರಿಸಿಕೊಳ್ಳಬೇಕು.

ನಂದಾದೀನಾಂತು ಯೇ ವರ್ಣಾಃ ಕಪಿಲಾದ್ಯಾಃ ಪ್ರಕೀರ್ತಿತಾ ಃ।
ತ ಏವ ವರ್ಣಾ ವಿಖ್ಯಾತಾ ಭೂತ್ಯಾದೀನಾಂ ಯಥಾಕ್ರಮಂ ॥ ೧೧ ॥

ನಂದಾ, ಭದ್ರಾ, ಸುರಭಿ, ಸುಶೀಲಾ ಮತ್ತು ಸುಮನಾ ಎಂಬ ಗೋವುಗಳ ಬಣ್ಣಗಳು ಕ್ರಮವಾಗಿ ಕಪಿಲ, ಕೃಷ್ಣ, ಧವಲ, ಧೂಮ್ರ ಮತ್ತು ರಕ್ತ ಎಂಬುದಾಗಿ ಹೇಳಲ್ಪಟ್ಟಿವೆ. ಇವುಗಳ ಗೋಮಯದಿಂದ ನಿರ್ಮಿತಗಳಾದ ವಿಭೂತಿ, ಭಸಿತ, ಭಸ್ಮ, ಕ್ಷಾರ ಮತ್ತು ರಕ್ಷಾ ಎಂಬ ಪಂಚವಿಭೂತಿಗಳ ಬಣ್ಣಗಳನ್ನೂ ಆಯಾ ಗೋವುಗಳ ಬಣ್ಣಗಳಿಗೆ ಸಾಮ್ಯವಾಗಿಯೇ ತಿಳಿದುಕೊಳ್ಳಬೇಕು.

ಕರ್ಮಗಳ ವಿಭಾಗ :

ಭಾರತೀಯ ಪ್ರಾಚೀನ ಸಾಹಿತ್ಯವಾದ ವೇದ-ಆಗಮ ಮತ್ತು ಸ್ಮೃತಿ ಗ್ರಂಥಗಳಲ್ಲಿ ನಮ್ಮಿಂದ ಆಚರಿಸಲ್ಪಡುವ ಕರ್ಮಗಳನ್ನು ವಿಹಿತ ಹಾಗೂ ನಿಷಿದ್ಧ ಎಂಬುದಾಗಿ ಎರಡು ಭಾಗದಲ್ಲಿ ವಿಂಗಡಿಸಿದ್ದಾರೆ. ಶಾಸ್ತ್ರಸಮ್ಮತವಾದವುಗಳು ವಿಹಿತ ಕರ್ಮಗಳು. ತದ್ವಿಪರೀತವಾದವುಗಳು ನಿಷಿದ್ಧ ಕರ್ಮಗಳು. ನಿಷಿದ್ಧಮಾರ್ಗ ಪ್ರವೃತ್ತಿಯು ಮನುಷ್ಯನ ಸಹಜ ಸ್ವಭಾವವಾದ್ದರಿಂದ ಈ ಕರ್ಮಗಳು ಅಗಣಿತಗಳಾಗಿವೆ. ವಿಹಿತ ಕರ್ಮವು ಮಾತ್ರ ನಿತ್ಯ, ನೈಮಿತ್ತಿಕ, ಕಾಮ್ಯ ಮತ್ತು ಪ್ರಾಯಶ್ಚಿತ್ತವೆಂಬುದಾಗಿ ನಾಲ್ಕು ಪ್ರಕಾರವಾಗಿದೆ.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಪೂರ್ವೋಕ್ತಗಳಾದ ನಾಲ್ಕು ವಿಹಿತ ಕರ್ಮಗಳ ಜೊತೆಗೆ ಮೋಕ್ಷ ಕರ್ಮ ಒಂದನ್ನು ಸೇರಿಸಿ ವಿಹಿತ ಕರ್ಮಗಳು ಐದು ಎಂಬುದಾಗಿ ಉಪದೇಶಿಸಿದ್ದಾರೆ. ಇಲ್ಲಿ ಮೋಕ್ಷ ಕರ್ಮವೆಂದರೆ ಮುಕ್ತಿಗೆ ಸಾಧನೀಭೂತವಾದ ನಿಷ್ಕಾಮ ಕರ್ಮವೇ ಮೋಕ್ಷ ಕರ್ಮವೆಂದು ಭಾವಿಸಬೇಕು. ಈ ವಿಹಿತ ಕರ್ಮಗಳ ಸಂಪೂರ್ಣ ಫಲಗಳು ನಮಗೆ ದೊರೆಯಬೇಕಾದರೆ ತತ್ತತ್ ಕರ್ಮೋಚಿತ

ಗಳಾದ ಆಚರಣೆಯ ಜೊತೆಗೆ ಪಂಚವಿಧ ವಿಭೂತಿಗಳ ಪ್ರಯೋಗವೂ ಪರಮ ಆವಶ್ಯಕ ವೆಂಬ ರಹಸ್ಯಾರ್ಥವನ್ನಿಲ್ಲಿ ಪೂಜ್ಯರು ನಿರೂಪಿಸಿದ್ದಾರೆ. ಅವುಗಳನ್ನೇ ಕ್ರಮವಾಗಿ ಇಲ್ಲಿ ವಿಚಾರಿಸೋಣ.

**ನಿತ್ಯಕರ್ಮ ಮತ್ತು ವಿಭೂತಿ :**

"ಧಾರಯೇನ್ನಿತ್ಯ ಕಾರ್ಯೇಷು ವಿಭೂತಿಂ ಚ ಪ್ರಯತ್ನತಃ" ಎಂಬ ಆಚಾರ್ಯೋಕ್ತಿಯಂತೆ ನಿತ್ಯಕರ್ಮಗಳನ್ನಾಚರಿಸುವಾಗ ವಿಭೂತಿಯನ್ನು ಧರಿಸಿಕೊಳ್ಳ ಬೇಕು. "ನಿಯಮೇನ ಭವಂ ನಿತ್ಯಂ ; ನಿತ್ಯಂ ಚ ತತ್ ಕರ್ಮ ನಿತ್ಯಕರ್ಮ" ಎಂಬ ವ್ಯುತ್ಪತ್ತಿಯಂತೆ ದೀಕ್ಷೆಯ ನಂತರ ಮರಣ ಪರ್ಯಂತರವಾಗಿ ಪ್ರತಿದಿವಸ ತಪ್ಪದೇ ಆಚರಿಸುವ ಕರ್ಮವೇ ನಿತ್ಯಕರ್ಮವು.

ನಿತ್ಯಂ ಸದಾ ಯಾವದಾಯುರ್ನ ಕದಾಚಿದತಿಕ್ರಮೇತ್ ।
ಉಪೇತ್ಯಾತಿಕ್ರಮೇ ದೋಷಶ್ರುತೇರ ತ್ಯಾಗ ದರ್ಶನಾತ್ ॥
ಫಲಾಶ್ರುತೇರ್ವೀಪ್ಸಯಾ ಚ ತನ್ನಿತ್ಯಮಿಹ ಕೀರ್ತಿತಂ ।

(ಶ್ಲೋಕ ವಾರ್ತಿಕ ; ಪುಟ ೪೭೬)

ಎಂಬ ಈ ಮೀಮಾಂಸಾ ಶಾಸ್ತ್ರದ ಪ್ರಮಾಣದಂತೆ ಆಯುಃಪರ್ಯಂತವಾಗಿ ಪ್ರತಿನಿತ್ಯ ಆಚರಿಸಲೇಬೇಕಾದ, ತಪ್ಪಿದರೆ ದೋಷ ಪ್ರದಾಯಕವಾದ ಮತ್ತು ವಿಶೇಷ ಪುಣ್ಯೋತ್ಪತ್ತಿಗೆ ಕಾರಣೀಭೂತವಲ್ಲದ ಕರ್ಮವೇ ನಿತ್ಯಕರ್ಮವು.

ವೀರಶೈವರಿಗೆ ಇಷ್ಟಲಿಂಗಧಾರಣೆ ಹಾಗೂ ಅದರ ಅರ್ಚನೆಯು ನಿತ್ಯ ಕರ್ಮವು. ಸಾಧಕನು ಇದರಲ್ಲಿ ಪ್ರಮಾದವನ್ನು ಮಾಡಿದರೆ ದೋಷ ಭಾಜನನಾಗುತ್ತಾನೆ. ಅಂತೆಯೇ ಪೂಜ್ಯರು–

ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ।
ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ॥

(ಸಿ. ಶಿ. ೬–೨೫)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ಈ ಇಷ್ಟಲಿಂಗ ಪೂಜೆಯ ಜೊತೆಗೆ ಪಂಚಾಕ್ಷರ ಮಹಾಮಂತ್ರದ ಜಪ, ಶ್ರೀ ರುದ್ರದ ಪಾರಾಯಣ, ಶಿವನಧ್ಯಾನ, ಶಿವಾಗಮ ಮತ್ತು ಸಿದ್ಧಾಂತ ಶಿಖಾಮಣಿ ಗ್ರಂಥದ ಸ್ವಾಧ್ಯಾಯ ಮತ್ತು ಪ್ರಾಣ ಲಿಂಗ–ಭಾವಲಿಂಗಗಳ ಅನುಸಂಧಾನ ಇವೆಲ್ಲವುಗಳು ವೀರಶೈವರ ನಿತ್ಯ ಕರ್ಮಗಳು.

ಇವುಗಳನ್ನು ಪ್ರತಿದಿವಸ ನಿಶ್ಚಿತ ಸಮಯದಲ್ಲಿ ತಪ್ಪದೇ ಆಚರಿಸಲೇಬೇಕು. ಒಂದು ವೇಳೆ ದೀಕ್ಷಾ ಹೊಂದಿದ ಸಾಧಕನು ಪ್ರಮಾದದಿಂದ ಈ ನಿತ್ಯ ಕರ್ಮಗಳನ್ನು ಮಾಡದೇ ಹೋದರೆ ದುರಿತಪ್ರಾಪ್ತಿಯಾಗಿ ಪತಿತವಾಗುವನು. ಈ ಕರ್ಮಾಚರಣೆಯು ನಮ್ಮನ್ನು ಈ ಪತನದಿಂದ ರಕ್ಷಿಸುತ್ತದೆ.

"ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠನ್ನೈಕಮೇನೋ ವ್ಯಪೋಹತಿ"

(ಮನಸ್ಮೃತಿ)

ಎಂಬ ಮನು ಮಹರ್ಷಿಯ ಉಕ್ತಿಯಂತೆ ರಾತ್ರಿಯಲ್ಲಿ ಆದ ದೋಷಗಳು ಪ್ರಾತಃಕಾಲದ ನಿತ್ಯಕರ್ಮದಿಂದ ಹಾಗೂ ಹಗಲಿನಲ್ಲಿ ಆದ ದೋಷಗಳು ಸಾಯಂಕಾಲೀನ ನಿತ್ಯಕರ್ಮ ವನ್ನು ಮಾಡುವುದರಿಂದ ದೂರಾಗುತ್ತವೆ. ಆದ್ದರಿಂದ ಇಷ್ಟಲಿಂಗ ಪೂಜಾದಿ ನಿತ್ಯಕರ್ಮ ಗಳನ್ನು ಮೂರು ಇಲ್ಲವೇ ಎರಡು ವೇಳೆಯಾದರೂ ತಪ್ಪದೇ ಮಾಡಬೇಕು. ಗೃಹಸ್ಥರು ಎರಡು ವೇಳೆ ಮತ್ತು ಬ್ರಹ್ಮಚಾರಿ–ಸನ್ಯಾಸಿಗಳು ಮೂರು ವೇಳೆ ಮಾಡಬೇಕೆಂಬ ಶಾಸ್ತ್ರ ನಿಯಮವಿದೆ.

ಬಾಗಿಲು ಕಿಡಕಿ ಮತ್ತು ಬೆಳಕಿಂಡಿಗಳ ಮುಖಾಂತರ ಧೂಳಿಯ ಕಣಗಳು ಪ್ರತಿಕ್ಷಣ ಮನೆಯೊಳಗೆ ಪ್ರವೇಶಿಸುವಂತೆ ನಮ್ಮ ಕಣ್ಣು–ಕಿವಿ ಮುಂತಾದ ಪಂಚ ಜ್ಞಾನೇಂದ್ರಿಯ ಗಳ ಮುಖಾಂತರ ಅನೇಕ ದುರಿತಗಳು ಸಹಜವಾಗಿ ಸಂಗ್ರಹವಾಗುತ್ತಲೇ ಇರುತ್ತವೆ. ಸಮ್ಮಾರ್ಜನಿ (ಕಸಬರಿಗೆ)ಯಿಂದ ಕಸವನ್ನು ಗುಡಿಸಿ ಮನೆಯನ್ನು ಸ್ವಚ್ಛವಾಗಿರಿಸುವಂತೆ ನಿತ್ಯ ಕರ್ಮದಿಂದ ನಮ್ಮ ದೇಹ–ಮನಗಳನ್ನು ನಿರ್ಮಲಗೊಳಿಸಿಕೊಳ್ಳಬೇಕು.

ಈ ನಿತ್ಯ ಕರ್ಮಗಳನ್ನಾಚರಿಸುವಾಗ ಶಿವನ ಸದ್ಯೋಜಾತ ಮುಖೋದ್ಭೂತವಾದ ನಂದಾ ಎಂಬ ಹೆಸರಿನ ಕಪಿಲ ವರ್ಣದ ಗೋಮಯದಿಂದ ನಿರ್ಮಿತವಾದ ವಿಭೂತಿ ಯನ್ನೇ ಧರಿಸಿಕೊಳ್ಳಬೇಕೆಂಬ ಪೂಜ್ಯ ಜಗದ್ಗುರುಗಳ ಆದೇಶವಿದ್ದ ಕಾರಣ ಈ ಗುರುವಿನ ಆದೇಶದಂತೆ ನಡೆದುಕೊಂಡರೆ ಈ ನಿತ್ಯ ಕರ್ಮವು ಇನ್ನೂ ಹೆಚ್ಚು ಸಾಮರ್ಥ್ಯ ಶಾಲಿಯಾಗಿ ಯಾವ ದುರಿತವೂ ಬಾರದಂತೆ ನಮ್ಮನ್ನು ಕಾಪಾಡುತ್ತದೆ.

**ನೈಮಿತ್ತಿಕ ಕರ್ಮ ಹಾಗೂ ಭಸಿತ :**

''ನಿಮಿತ್ತದಾಗತಂ, ನಿಮಿತ್ತ ಭವಂ ವಾ ನೈಮಿತ್ತಿಕಂ'' ಎಂಬ ವ್ಯುತ್ಪತ್ತಿಯಂತೆ ಯಾವ ದೊಂದು ನಿಮಿತ್ತ ಬಂದಾಗ ಆಚರಿಸಲ್ಪಡುವ ಕರ್ಮವೇ ನೈಮಿತ್ತಿಕ ಕರ್ಮವು. ಮಹಾತ್ಮರ ಜಯಂತಿ ಪುಣ್ಯತಿಥಿಗಳನ್ನಾಚರಿಸುವುದು, ಗ್ರಹಣ–ಸಂಕ್ರಮಣ ಮುಂತಾದ ಪರ್ವಗಳು ಪ್ರಾಪ್ತವಾದಾಗ ಪವಿತ್ರ ನದಿಗಳಲ್ಲಿ ಸ್ನಾನ ಮತ್ತು ಧ್ಯಾನಾದಿಗಳನ್ನು ಮಾಡು ವುದು ಇವೆಲ್ಲ ನೈಮಿತ್ತಿಕ ಕರ್ಮಗಳು. ಇದೂ ಅಲ್ಲದೇ ವೀರಶೈವಾಚಾರ ಕೌಸ್ತುಭ ದಶಕರ್ಮ ಪದ್ಧತಿ ಮತ್ತು ಪೂರ್ವಪ್ರಯೋಗ ರತ್ನ ಮುಂತಾದ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟ ಗರ್ಭಾದಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲವಿಧಿ, ಶಿವದೀಕ್ಷಾ, ವಿವಾಹ ಮತ್ತು ಅಂತ್ಯೇಷ್ಟಿಗಳೆಂಬ ದಶಕರ್ಮಗಳೂ ನೈಮಿತ್ತಿಕ ಕರ್ಮಗಳಾಗಿರುತ್ತವೆ.

ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾ ಮಾನುಷಾಃ ಸ್ಮೃತಾಃ ।
ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ ॥

(ಸಿ. ಶಿ. ೧೦–೩೪)

ಪೂಜ್ಯ ಶ್ರೀ ಜಗದ್ಗುರು ರೇಣುಕರ ಈ ಆದೇಶದಂತೆ ಈ ಹತ್ತು ವಿಧ ಕರ್ಮಗಳಲ್ಲಿ ಸಂಸ್ಕಾರವನ್ನು ಹೊಂದಿದವರು ಶುದ್ಧಮನುಷ್ಯರೆಂತಲೂ ಮತ್ತು ಸಂಸ್ಕಾರಹೀನರು ಪ್ರಾಕೃತರೆಂತಲೂ ಕರೆಯಿಸಿಕೊಳ್ಳುವರು.

**೧) ಗರ್ಭಾದಾನ :**

ಋತುಸ್ನಾನದ ನಂತರ ಶಾಸ್ತ್ರೋಕ್ತ ಮೂಹೂರ್ತದಲ್ಲಿ ಸಮಸ್ತ ವಿದ್ಯಾ ಲಕ್ಷಣ

ಸಂಪೂರ್ಣಾಯುಷ್ಮತ್ ಪುತ್ರಜನನಾರ್ಥವಾಗಿ ಸಕಲ ಧಾರ್ಮಿಕ ಕರ್ಮಗಳನ್ನಾಚರಿಸಿ ಗುರು–ಹಿರಿಯರ ಆಶೀರ್ವಾದವನ್ನು ಪಡೆದು ದಂಪತಿಗಳು ಪರಸ್ಪರ ರಮಿಸುವುದೇ ಗರ್ಭಾದಾನವಿಧಿಯು. ಈ ವಿಧಿಯಲ್ಲಿ ನಿಷ್ಠೆಯುಳ್ಳ ದಂಪತಿಗಳಿಗೆ ಸುಸಂಸ್ಕಾರಿಗಳೂ, ಸದಾಚಾರಿಗಳೂ ಆದ ಪುತ್ರ–ಪುತ್ರಿಯರು ಜನಿಸುವರು.

೨) ಪುಂಸವನ :

ಹೆಣ್ಣು ಮಗಳು ಮೂರು ಇಲ್ಲವೇ ನಾಲ್ಕು ತಿಂಗಳ ಗರ್ಭಿಣಿ ಇದ್ದಾಗ ಗರ್ಭದ ದೋಷ ಪರಿಹಾರಾರ್ಥವಾಗಿ ಮಾಡುವ ಸಂಸ್ಕಾರವೇ ಪುಂಸವನ ಸಂಸ್ಕಾರವು. ಇದೂ ಕೂಡಾ ಭಾವೀ ಸುಸಂತತಿಯ ಉತ್ಪತ್ತಿಗೆ ಕಾರಣವಾಗುವುದು.

೩) ಸೀಮಂತೋನ್ನಯನ :

ಗರ್ಭದ ಆರು ಇಲ್ಲವೇ ಎಂಟನೇ ತಿಂಗಳಲ್ಲಿ ಮಾಡಲ್ಪಡುವ ಕುಬಸದ ಕಾರ್ಯಕ್ಕೆ ಸೀಮಂತೋನ್ನಯನವೆನ್ನುವರು. ಎಂಟು ತಿಂಗಳಲ್ಲಿ ಈ ಕಾರ್ಯವನ್ನು ಮಾಡಿದರೆ ಆಗ ಗರ್ಭಕ್ಕೆ ಲಿಂಗಧಾರಣೆಯನ್ನೂ ಮಾಡುವರು. ಇದರ ರಹಸ್ಯಾರ್ಥವೇನೆಂದರೆ– ಎಂಟನೇ ತಿಂಗಳಲ್ಲಿ ಗರ್ಭದ ಶಿಶುವಿಗೆ ಮುಮೂರ್ಷಾ ಅಂದರೆ ಮರಣದ ಇಚ್ಛೆಯು ತೀವ್ರವಾಗಿರುತ್ತದೆ. ಅಂತೆಯೇ ಎಂಟನೇ ತಿಂಗಳಲ್ಲಿ ಜನಿಸಿದ ಶಿಶುಗಳು ಮರಣ ಹೊಂದುವುದುಂಟು. ಈ ಸಮಯದಲ್ಲಿ ತಾಯಿಯ ಗರ್ಭಕ್ಕೆ ಸಂಸ್ಕಾರಮಾಡಿ ಲಿಂಗ ಧಾರಣೆಯನ್ನು ಮಾಡಿದಾಗ ಗರ್ಭಸ್ಥ ಶಿಶುವಿಗೆ ಶಿವನ ಅನುಗ್ರಹದಿಂದ ಅಭಯವು ಪ್ರಾಪ್ತವಾಗುವುದಲ್ಲದೆ ಅದು ಭವಿಯಾಗಿ ಜನಿಸದೇ ಭಕ್ತನಾಗಿಯೇ ಜನಿಸುತ್ತದೆ. ತಾಯಿಯು ಎಂಟು ತಿಂಗಳು ಗರ್ಭವತಿ ಇದ್ದಾಗ ಆಕೆಯು ಪಡೆದ ಸಂಸ್ಕಾರಗಳೆಲ್ಲ ಗರ್ಭಸ್ಥ ಶಿಶುವಿನ ಮೇಲೆ ಪರಿಣಾಮವನ್ನುಂಟುಮಾಡುತ್ತವೆ ಎಂಬ ಬಗ್ಗೆ ಮಹಾಭಾರತದ ವೀರ ಅಭಿಮನ್ಯುವಿನ ಚರಿತ್ರೆಯೇ ಸಾಕ್ಷಿಯು.

ಇಂದಿನ ವಿಜ್ಞಾನಿಗಳು ಗರ್ಭಸ್ಥ ಶಿಶುವಿನ ಮೇಲೆ ಸಂಸ್ಕಾರ ಮಾಡುವ ಅನೇಕ ವೈಜ್ಞಾನಿಕ ಪರಿಶೋಧನೆಗಳನ್ನು ನಡೆಸಿರುತ್ತಾರೆ. ಇದೆಲ್ಲವನ್ನು ಅವಲೋಕಿಸಿದಾಗ ನಮ್ಮ ಪ್ರಾಚೀನ ಆಚಾರ್ಯರು ಉಪದೇಶಿಸಿದ ಈ ಸಂಸ್ಕಾರ ವಿಧಿಯು ಅದೆಷ್ಟು ವೈಜ್ಞಾನಿಕ ವಾದದ್ದೆಂಬುದು ತಿಳಿದುಬರುತ್ತದೆ.

೪) ಜಾತಕರ್ಮ :

ಶಿಶುವಿನ ಜನನದ ನಂತರ ಐದನೇ ದಿವಸಕ್ಕೆ ಮಾಡುವ ಸಂಸ್ಕಾರವೇ ಜಾತ ಕರ್ಮವು. ಈ ಸಂಸ್ಕಾರದಲ್ಲಿ ಶಿಶುವಿಗೆ ಲಿಂಗಧರಿಸುವುದೇ ಪ್ರಮುಖ ಕಾರ್ಯವು. ತಾಯಿಯ ಗರ್ಭದಲ್ಲಿ ಪರಂಪರೆಯಿಂದ ಸಂಸ್ಕಾರ ಹೊಂದಿದ ಈ ಶಿಶುವಿಗೆ ಸದ್ಯಃ ಸಾಕ್ಷಾತ್ ಲಿಂಗ ಸಂಸ್ಕಾರವಾಗುವುದು.

೫) ನಾಮಕರಣ :

ನಾಮಾಖಿಲಸ್ಯ ವ್ಯವಹಾರಹೇತುಃ ಶುಭಾವಹಂ ಕರ್ಮ ಸುಭಾಗ್ಯಹೇತು ।
ನಾಮ್ನೈವ ಕೀರ್ತಿಂ ಲಭತೇ ಮನುಷ್ಯಸ್ತತಃ ಪ್ರಶಸ್ತಂ ಖಲುನಾಮಕರ್ಮ ॥

ಹೆಸರೇ ವ್ಯವಹಾರಕ್ಕೆ ಮುಖ್ಯವಾದದ್ದು. ಅದು ಮಂಗಳಕರವೂ ಮತ್ತು ಸೌಭಾಗ್ಯ

ದಾಯಕವೂ ಅಹುದು. ಹೆಸರಿನಿಂದಲೇ ಮನುಷ್ಯನು ಕೀರ್ತಿಯನ್ನು ಪಡೆಯುವನಾದ್ದರಿಂದ ನಾಮಕರಣ ಸಂಸ್ಕಾರವು ಅತ್ಯಾವಶ್ಯಕವಾದುದು.

ಈ ಸಂಸ್ಕಾರವನ್ನು ಶಿಶುವಿನ ಜನನದ ಹನ್ನೊಂದು ಇಲ್ಲವೇ ಹನ್ನೆರಡನೇ ದಿನದಂದು ಗುರು–ಹಿರಿಯರು ಕೂಡಿ ನೆರವೇರಿಸುವರು. ಹೆಸರಿನ್ನಿಡುವಾಗ ತಮ್ಮ ಇಷ್ಟ ದೇವರ ಸಂಬಂಧಗಳಾದ ಹೆಸರುಗಳನ್ನೇ ಇಡಬೇಕು. ಏಕೆಂದರೆ ಮಕ್ಕಳನ್ನು ಕರೆಯುವ ನೆಪದಲ್ಲಿ ದೇವರನಾಮಸ್ಮರಣೆಯು ಸಹಜವಾಗಿ ಉಂಟಾಗುವುದು. ಇಲ್ಲಿ ಲಕ್ಷಿಸಬೇಕಾದ ಮತ್ತೊಂದು ವಿಷಯವೇನೆಂದರೆ ಗಂಡು ಶಿಶುಗಳಿಗೆ ಸಮ ಅಕ್ಷರಗಳಲ್ಲಿ ಮತ್ತು ಹೆಣ್ಣು ಶಿಶುಗಳಿಗೆ ವಿಷಮಾಕ್ಷರಗಳಲ್ಲಿ ನಾಮಕರಣ ಮಾಡಬೇಕು. ಕಾರಣ ವೀರಶೈವರು ತಮ್ಮ ಗಂಡು ಶಿಶುಗಳಿಗೆ–ಶಿವ, ರುದ್ರ, ಪಶುಪತಿ, ನೀಲಕಂಠ, ಮಹೇಶ್ವರ, ಮಹಾದೇವ, ಗಂಗಾಧರ, ವಿರೂಪಾಕ್ಷ, ಶಂಭು ಮತ್ತು ಶೂಲಿ ಮುಂತಾದ ಸಮ ಅಕ್ಷರದ ಶಿವನ ಹೆಸರುಗಳನ್ನೇ ಇಡಬೇಕು. ಅದರಂತೆ ಹೆಣ್ಣು ಶಿಶುಗಳಿಗೆ– ಶ್ರೀಗೌರೀ, ರುದ್ರಾಣೀ, ಪಾರ್ವತೀ, ಭ್ರಮರಾಂಬಿಕಾ, ಭವಾನೀ, ಶರ್ವಾಣಿ, ಮೃಡಾಣೀ, ಸರ್ವಮಂಗಳಾ, ಅಪರ್ಣಾ, ಶಾಂಭವೀ, ಗಿರಿಜಾ, ಮತ್ತು ಶಾಂಕರೀ ಮುಂತಾದ ವಿಷಮಾಕ್ಷರಗಳುಳ್ಳ ಪಾರ್ವತಿಯ ಹೆಸರುಗಳನ್ನೇ ಇಡಬೇಕು. ಇದರಂತೆ ಅಶ್ವಿನೀ, ರೋಹಿಣೀ ಮತ್ತು ರೇವತಿ ಮುಂತಾದ ವಿಷಮಾಕ್ಷರಗಳುಳ್ಳ ನಕ್ಷತ್ರಗಳ ಹೆಸರನ್ನಾದರೂ ಇಡಬಹುದು.

(೬) ಅನ್ನಪ್ರಾಶನ :

ಆರು ಅಥವಾ ಎಂಟನೇ ತಿಂಗಳಲ್ಲಿ ಶಿಶುವಿಗೆ ಹಲ್ಲುಗಳು. ಪ್ರಾದುರ್ಭವಿಸಿದ ನಂತರ ಅನ್ನಪ್ರಾಶನವನ್ನು ಮಾಡಿಸುವರು. ನಮ್ಮ ಸ್ಥೂಲ ಶರೀರವು ಅನ್ನಮಯಕೋಶವಾದ್ದರಿಂದ ಇದರ ಬೆಳವಣಿಗೆಗೆ ಅನ್ನ ಪ್ರಾಶನವು ಅವಶ್ಯಕವಾದದ್ದು ''ಅನ್ನಮಯಂ ಹಿ ಸೋಮ್ಯ ಮನಃ'' ಎಂಬ ಉಪನಿಷತ್ ವಾಕ್ಯದಂತೆ ಅನ್ನರಸದ ಅಂತಿಮ ಪರಿಣಾಮವೇ ಮನಸ್ಸಾದ ಕಾರಣ ಮನಸ್ಸಿನ ನೈರ್ಮಲ್ಯಕ್ಕೆ ಸುಸಂಸ್ಕೃತ ಅನ್ನವೇ ಮೂಲವು. ಆದ್ದರಿಂದ ಮಗುವಿಗೆ ಪ್ರಥಮ ಅನ್ನಪ್ರಾಶನ ಮಾಡಿಸುವಾಗ ಸಂಸ್ಕಾರ ಯುಕ್ತವಾದ, ಪವಿತ್ರವಾದ ಮತ್ತು ಸಾತ್ವಿಕವಾದ ಅನ್ನವನ್ನೇ ಕೊಡುತ್ತಾರೆ.

ಮಕ್ಕಳಿಗೆ ಬಾಲ್ಯದಿಂದಲೇ ಸಾತ್ವಿಕವಾದ ಅನ್ನದ ಸೇವನೆಯ ಅಭ್ಯಾಸವಾದರೆ ಅವರು ಮುಂದೆ ತಮ್ಮ ಜೀವನದುದ್ದಕ್ಕೂ ಅದನ್ನು ಕಾಪಾಡಿಕೊಂಡು ಹೋಗುತ್ತಾರೆ. ಹೀಗೆ ಸಾತ್ವಿಕ ಆಹಾರದಲ್ಲಿ ಅಭಿರುಚಿಯನ್ನು ಹುಟ್ಟಿಸಿ ಮಕ್ಕಳ ಜೀವನವನ್ನು ಸಾತ್ವಿಕಗೊಳಿಸುವುದೇ ಈ ಅನ್ನಪ್ರಾಶನ ಸಂಸ್ಕಾರದ ಮೂಲ ಉದ್ದೇಶವು.

(೭) ಚೌಲ ಸಂಸ್ಕಾರ :

ಮೂರನೇ ವರ್ಷದಲ್ಲಿ ಮಗುವಿನ ಕೇಶಖಂಡನ ಮಾಡುವುದೇ ಚೌಲ ಸಂಸ್ಕಾರವು. ಮಗುವಿನ ಮಸ್ತಕವು ಬಹು ಸೂಕ್ಷ್ಮವಾಗಿರುವುದರಿಂದ ಮೂರು ವರ್ಷದ ವರೆಗೆ ಅದನ್ನು ಬಹಳ ಸಂರಕ್ಷಿಸಬೇಕಾಗುತ್ತದೆ. ಅಂತೆಯೇ ತಾಯಂದಿರು ಮಗುವಿನ ಮಸ್ತಕಕ್ಕೆ ಎಣ್ಣೆಯನ್ನು ಉಣಿಸಿ ಉಣಿಸಿ ಅದನ್ನು ಗಟ್ಟಿಗೊಳಿಸುತ್ತಾರೆ. ಇದೂ ಅಲ್ಲದೇ ಮಗುವಿನ ಮಸ್ತಕದಲ್ಲಿಯ ಕೂದಲುಗಳೂ ಅದನ್ನು ರಕ್ಷಿಸುತ್ತವೆ.

ಎರಡು ವರ್ಷದ ನಂತರ ಮಗುವಿನ ಮಸ್ತಕದಲ್ಲಿಯ ಕೂದಲುಗಳನ್ನು ತೆಗೆಯದೇ ಹಾಗೆಯೇ ಬಿಟ್ಟರೆ ಮಗುವಿನ ಶರೀರದ ಬೆಳವಣಿಗೆಗೆ ಅವೇ ಕೂದಲುಗಳೇ ಪ್ರತಿ ಬಂಧಕಗಳಾಗುತ್ತವೆ. ಆದಕಾರಣ ಧರ್ಮಶಾಸ್ತ್ರವು ಮೂರನೇ ವರ್ಷದಲ್ಲಿ ಪ್ರಥಮ ಕೇಶಖಂಡನ ಸಂಸ್ಕಾರವನ್ನು ವಿಧಿಸಿದೆ. ಮೊದಲನೆಯ ಸಾರೆ ಸಂಪೂರ್ಣ ಕೇಶಗಳನ್ನು ತೆಗೆಸಿದನಂತರ ಮುಂದೆ ತನ್ನ ಶಿರಸ್ತ್ರಾಣಕ್ಕೆ ಬೇಕಾಗುವಷ್ಟು ಕೂದಲುಗಳನ್ನು ಉಳಿಸಿ ಕೊಂಡು ಪುನಃ ಪುನಃ ಕತ್ತರಿಸುತ್ತಹೋಗುತ್ತಾನೆ.

(೮) ಶಿವದೀಕ್ಷಾ ಸಂಸ್ಕಾರ :

ಮಗುವಿನ ಎಂಟನೇ ವರ್ಷದಲ್ಲಿ ಶಿವದೀಕ್ಷಾ ಸಂಸ್ಕಾರವು ವಿದಿಸಲ್ಪಟ್ಟಿದೆ. ಈ ಪೂರ್ವದ ಜಾತಕರ್ಮ ಸಂಸ್ಕಾರದಲ್ಲಿ ಲಿಂಗಧಾರಣೆ ಮಾಡುವಾಗ ಮಗುವಿಗೆ ಯಾವ ತಿಳುವಳಿಕೆಯು ಇರುವುದಿಲ್ಲ, ಎಂಟನೇ ವರ್ಷಕ್ಕೆ ಮಗುವಿಗೆ ಪೂರ್ಣ ತಿಳುವಳಿಕೆಯು ಬಂದಿರುವ ಕಾರಣ ; ಈಗ ಮಾಡಿದ ಶಿವದೀಕ್ಷೆ ಹಾಗೂ ಮಂತ್ರೋಪದೇಶಗಳ ಅರಿವು ಆದಕ್ಕಾಗುವುದು. ಅಂತೆಯೇ ಸದ್ಗುರುಗಳು ಎಂಟನೇ ವರ್ಷದಲ್ಲಿ ಮಗುವಿಗೆ ಲಿಂಗ ದೀಕ್ಷೆಯನ್ನು ತಿಳಿಸಿಕೊಡುತ್ತಾರೆ. ಎಂಟು ವರ್ಷದಿಂದಲೇ ಮಕ್ಕಳಿಗೆ ಕರ್ಮಾಧಿಕಾರವು ಪ್ರಾಪ್ತವಾಗುತ್ತದೆ. ಎಂಟು ವರ್ಷದ ಈ ದೃಢವಾದ ಸಂಸ್ಕಾರವು ಎಂಭತ್ತು ವರ್ಷ ದವರೆಗೂ ಅಚ್ಚಳಿಯದೇ ಉಳಿಯುವುದು. ಅಂತೆಯೇ ಪ್ರತಿಯೊಬ್ಬ ವೀರಶೈವರು ತಮ್ಮ ಮಕ್ಕಳಿಗೆ ತಮ್ಮ ಮನೆತನದ ಪರಂಪರೆಯ ಶಿವಾಚಾರ್ಯರಿಂದ ಎಂಟು ವರ್ಷದಲ್ಲಿ ಶಿವದೀಕ್ಷೆಯನ್ನು ಅವಶ್ಯವಾಗಿ ಮಾಡಿಸಬೇಕು.

(೯) ವಿವಾಹ :

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥

(ಮನು. ೩–೨೧)

ಎಂಬ ಮನುಸ್ಮೃತಿಯ ವಾಕ್ಯದಂತೆ ಬ್ರಾಹ್ಮ ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚವೆಂಬುದಾಗಿ ವಿವಾಹವು ಎಂಟು ವಿಧವಾಗಿದೆ. ವರನ ಕುಲಶೀಲಾದಿಗಳನ್ನು ಅರಿತು ವಿದ್ಯುಕ್ತವಾಗಿ ಕನ್ಯಾದಾನ ಮಾಡುವುದು ಬ್ರಾಹ್ಮ ವಿವಾಹವು. ಯಜ್ಞದಲ್ಲಿ ಋತ್ವಿಜವಾಗಿ ಬಂದ ತರುಣನಿಗೆ ಕನ್ಯಾದಾನ ಮಾಡುವುದು ದೈವವಿವಾಹವು. ವರನ ಕಡೆಯಿಂದ ಒಂದು ಜೊತೆ ಎತ್ತುಗಳನ್ನು ಪಡೆದು ಮಗಳನ್ನು ಕೊಡುವುದು ಆರ್ಷವಿವಾಹವು. ಮಹಾಸಭೆಯಲ್ಲಿ ವಧೂ–ವರರಿಂದ ಪ್ರತಿಜ್ಞೆಯನ್ನು ಮಾಡಿಸಿ, ಮದುವೆ ಮಾಡುವುದು ಪ್ರಾಜಾಪತ್ಯ ವಿವಾಹವು. ವರನು ಕನ್ಯಾ ಶುಲ್ಕವನ್ನು ಕೊಟ್ಟು ಮದುವೆಯಾಗುವದು ಅಸುರ ವಿವಾಹವು. ವಧೂ–ವರರು ಪರಸ್ಪರ ಒಪ್ಪಿ ಸಂಯೋಗವಾಗುವದು ಗಾಂಧರ್ವ ವಿವಾಹವು. ಹುಡುಗಿಯನ್ನು ಬಲಾತ್ಕಾರವಾಗಿ ಎತ್ತಿಕೊಂಡು ಹೋಗಿ ಮದುವೆಯಾಗುವುದು ರಾಕ್ಷಸ ವಿವಾಹವು. ಮೈಮರೆತಿರುವ ಕನ್ಯೆಯನ್ನು ಬಲಾತ್ಕಾರವಾಗಿ ಅಪಹರಿಸಿಕೊಂಡು ಹೋಗಿ ಮದುವೆಯಾಗುವುದು ಪೈಶಾಚ ವಿವಾಹವೆನಿಸುವುದು. ಇವುಗಳಲ್ಲಿ ಮೊದಲಿನ ನಾಲ್ಕು ಉತ್ತಮ ವಿವಾಹಗಳು ಮತ್ತು ಕಡೆಯ ನಾಲ್ಕು ವಿವಾಹಗಳು ಕನಿಷ್ಟವಾದವುಗಳು.

"ಪ್ರಜಾತಂತು ಮಾ ವ್ಯವಚ್ಛೇತ್ಸೀ ಹೀ" ಎಂಬ ಉಪನಿಷತ್ತಿನ ಆದೇಶದಂತೆ ಉತ್ತಮ ವಂಶಾಭಿವೃದ್ಧಿಗಾಗಿ ಶ್ರೇಷ್ಠ ವಿಧಿಯಿಂದ ವಿವಾಹವನ್ನು ಮಾಡಿಕೊಳ್ಳುವ ಪದ್ಧತಿಯು ರೂಢಿಯಲ್ಲಿದೆ. ವೀರಶೈವಾಚಾರ ಕೌತ್ತುಭ ಮುಂತಾದ ಗ್ರಂಥಗಳಲ್ಲಿ ವೀರಶೈವ ವಿವಾಹ ವಿಧಿಯು ವಿಸ್ತೃತವಾಗಿ ಪ್ರತಿಪಾದಿಸಲ್ಪಟ್ಟಿದೆ. ಆ ವಿಧಿಗನುಸಾರ ವಾಗಿ ಪ್ರತಿಯೊಬ್ಬ ವೀರಶೈವರು ವಿವಾಹಗಳನ್ನು ನೆರವೇರಿಸಿಕೊಳ್ಳಬೇಕು.

(೧೦) ಅಂತ್ಯೇಷ್ಟಿ :

ಮೃತದೇಹಕ್ಕೆ ಮಾಡುವ ಸಂಸ್ಕಾರವೇ ಅಂತ್ಯೇಷ್ಟಿ ಸಂಸ್ಕಾರವು. ಇದು ಜೀವಾತ್ಮನ ಈ ಜನ್ಮದ ಕೊನೆಯ ಸಂಸ್ಕಾರವು.

ಶರೀರಂ ಪಂಚಭೂತಾಖ್ಯಂ ತತ್ತ್ವಂ ತತ್ತ್ವೇನ ಯೋಜಯೇತ್
ತತ್ರಾಪಿ ಪೃಥಿವೀತತ್ತ್ವೇ ಯೋಜನಂ ಮೋಕ್ಷ ಸಾಧನಂ ॥

(ಪಾರಾಶರಸ್ಮೃತಿ)

ಈ ಸ್ಮೃತಿವಾಕ್ಯದಲ್ಲಿ ಪಾಂಚ ಭೌತಿಕ ದೇಹದ ಆಯಾ ತತ್ತ್ವಾಂಶಗಳನ್ನು ಆಯಾ ತತ್ತ್ವಾಂಶಗಳಲ್ಲಿಯೇ ಸೇರಿಸಬೇಕೆಂಬುದಾಗಿ ತಿಳಿಯಪಡಿಸಿದೆಯಲ್ಲದೇ ವಿಪಕ್ಷದಲ್ಲಿ ಪೃಥ್ವಿತತ್ತ್ವದಲ್ಲಿ ಸೇರಿಸುವುದೇ ಮೋಕ್ಷ ಸಾಧನವೆಂಬುದಾಗಿಯೂ ಪ್ರತಿಪಾದಿಸಲ್ಪಟ್ಟಿದೆ. ಇದೂ ಅಲ್ಲದೇ –

ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ನಹಿ ।
ಜ್ಞಾನಾಗ್ನಿ ದಗ್ಧ ದೇಹಾನಾಂ ನ ಚದಾಹೋ ನ ಚಕ್ರಿಯಾ ॥

ದೀಕ್ಷಾದಗ್ಧರನ್ನು ಪುನಃ ಅಗ್ನಿ ದಗ್ಧರನ್ನಾಗಿ ಮಾಡುವುದು ವಿಹಿತವಲ್ಲವೆಂಬ ಪ್ರಮಾಣ ವಚನದ ಆಧಾರದಿಂದಲೂ ವೀರಶೈವ ಸಿದ್ಧಾಂತದಲ್ಲಿ ಮೃತದೇಹಕ್ಕೆ ದಾಹ ಸಂಸ್ಕಾರ ವನ್ನು ಮಾಡದೇ ಭೂನಿಕ್ಷೇಪವನ್ನೇ ಮಾಡಲಾಗುತ್ತಿದೆ. ಈ ಭೂನಿಕ್ಷೇಪದ ವಿಧಿ–ವಿಧಾನಗಳನ್ನು ವೀರಶೈವ ಅಂತ್ಯೇಷ್ಟಿ ವಿಧಿಯಲ್ಲಿ ವಿಸ್ತೃತ ಪಡಿಸಿದ್ದಾರೆ. ಆ ವಿಧಿಗನುಸಾರ ವಾಗಿಯೇ ವೀರಶೈವರು ರುದ್ರಭೂಮಿಯಲ್ಲಿ ಖನನ ಸಂಸ್ಕಾರವನ್ನು ಮಾಡಬೇಕು.

ಹೀಗೆ ಇಲ್ಲಿಯವರೆಗೆ ಪ್ರತಿಪಾದಿಸಲ್ಪಟ್ಟ ಕರ್ಮಗಳು ಆಯಾ ನಿಮಿತ್ತಗಳು ಪ್ರಾಪ್ತ ವಾದಾಗ ಮಾಡಲ್ಪಡುವುದರಿಂದ ಇವುಗಳಿಗೆ ನೈಮಿತ್ತಿಕ ಕರ್ಮಗಳೆಂಬುದಾಗಿ ಕರೆಯು ತ್ತಾರೆ. "ನೈಮಿತ್ತಿಕೇಷು ಭಸಿತಂ" ಎಂಬ ಶ್ರೀಜಗದ್ಗುರು ರೇಣುಕರ ಆದೇಶದಂತೆ ಈ ನೈಮಿತ್ತಿಕ ಕರ್ಮಗಳನ್ನಾಚರಿಸುವಾಗ ಶಿವನ ವಾಮದೇವ ಮುಖದಿಂದ ಉತ್ಪನ್ನವಾದ ದ್ದೆಂದು ಹೇಳಲಾಗುವ ಕೃಷ್ಣವರ್ಣದ ಭದ್ರಾ ಎಂಬ ಗೋವಿನ ಗೋಮಯದಿಂದ ನಿರ್ಮಿತವಾದ ಭಸಿತವನ್ನು ಅವಶ್ಯವಾಗಿ ಧರಿಸಿಕೊಳ್ಳಬೇಕು. ಅಂದಾಗಲೇನೇ ಆ ಕರ್ಮದ ಫಲವು ಪೂರ್ಣವಾಗಿ ಪ್ರಾಪ್ತವಾಗುವುದು.

ಕಾಮ್ಯಕರ್ಮ ಹಾಗೂ ಕ್ಷಾರ :

ಯತ್ಕಿಂಚಿತ್ ಫಲಮುದ್ದಿಶ್ಯ ಯಜ್ಞದಾನ ಜಪಾದಿಕಂ ।
ಕ್ರಿಯತೇ ಕಾಯಕಂ ಯಚ್ಚ ತತ್ಕಾಮ್ಯಂ ಪರಿಕೀರ್ತಿತಂ ॥

(ಶಬ್ದಕಲ್ಪದ್ರುಮ ; ಪುಟ ೯೨)

ಎಂಬ ಪ್ರಮಾಣ ವಚನದಂತೆ ಯಾವುದೇ ಫಲದ ನಿಮಿತ್ತವಾಗಿ ಮಾಡಲ್ಪಡುವ ಯಜ್ಞ, ದಾನ ಮತ್ತು ಜಪಾದಿ ಕಾಯಿಕ ಕರ್ಮಗಳೇ ಕಾಮ್ಯ ಕರ್ಮಗಳು. ಮನುಷ್ಯನು ಪಶು, ಪುತ್ರ-ಧನಾದಿ ಐಹಿಕ ಹಾಗೂ ಸ್ವರ್ಗಾದಿ ಪಾರಲೌಕಿಕ ಫಲಾಪೇಕ್ಷೆಯುಳ್ಳವನಾಗಿದ್ದಾನೆ "ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ"ಎಂಬ ಸುಭಾಷಿತೋಕ್ತಿಯಂತೆ ಯಾವುದೇ ಫಲಗಳು ಅಪೇಕ್ಷಿಸಿದ ಮಾತ್ರಕ್ಕೆ ದೊರೆಯಲಾರವು. ಅದಕ್ಕೆ ಅನುಕೂಲವಾದ ಕರ್ಮವನ್ನು ಮಾಡಲೇಬೇಕಾಗುವುದು.

"ಕ್ಷಾರಂ ಕಾಮ್ಯೇಷು ಸರ್ವದಾ" ಎಂಬ ಪೂಜ್ಯಪಾದ ಶ್ರೀಜಗದ್ಗುರು ರೇಣುಕರ ಆದೇಶದಂತೆ ಯಾವುದೇ ಕಾಮ್ಯ ಕರ್ಮವು ನಮಗೆ ಶೀಘ್ರ ಫಲಕಾರಿಯಾಗಬೇಕಾಗಿದ್ದರೆ; ಆ ಕರ್ಮವನ್ನಾಚರಿಸುವಾಗ ಕ್ಷಾರ ಎಂಬ ಹೆಸರಿನ ಭಸ್ಮವನ್ನು ಧರಿಸಿಕೊಳ್ಳಬೇಕು. ಶಿವನ ತತ್ಪುರುಷ ಮುಖಸಂಜಾತವಾದ ಧೂಮ್ರ ವರ್ಣದ ಸುಶೀಲಾ ಎಂಬ ಹೆಸರಿನ ಗೋವಿನ ಗೋಮಯದಿಂದ ನಿರ್ಮಿತವಾದದ್ದೇ ಕ್ಷಾರವು ಎಂಬುದಾಗಿ ಈ ಪೂರ್ವದಲ್ಲಿಯೇ ತಿಳಿಸಲಾಗಿದೆ. ಕಾರಣ ಇದರ ರಹಸ್ಯಾರ್ಥವನ್ನರಿತು ಸಾಧಕರು ಆಚರಿಸಿದರೆ ಅಲ್ಪಾಯಾಸದಿಂದಲೇ ಮಹಾಫಲವನ್ನು ಪಡೆದುಕೊಳ್ಳುವರು.

**ಪ್ರಾಯಶ್ಚಿತ್ತ ಕರ್ಮ ಹಾಗೂ ಭಸ್ಮ :**

ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ ।
ತಪೋ ನಿಶ್ಚಯ ಸಂಯುಕ್ತಂ ಪ್ರಾಯಶ್ಚಿತ್ತಮಿತಿ ಸ್ಮೃತಂ ॥

(ಅಂಗಿರಾ ಸ್ಮೃತಿ ; ನ್ಯಾ, ಕೋಶ. ಪುಟ. ೫೯೨)

ಎಂಬ ಸ್ಮೃತಿ ಪ್ರಮಾಣ್ಯದಂತೆ ಪ್ರಾಯಃ ಅಂದರೆ ತಪಸ್ಸು, ಚಿತ್ತವೆಂದರೆ ನಿಶ್ಚಯ; ಹೀಗೆ ನಿಶ್ಚಿತವಾದ ತಪಸ್ಸಿಗೆ ಪ್ರಾಯಶ್ಚಿತ್ತವೆನ್ನುವರು. ಭಿನ್ನ-ಭಿನ್ನ ದುರಿತಗಳ ಶಮನಕ್ಕಾಗಿ ಭಿನ್ನ-ಭಿನ್ನ ತಪಸ್ಸುಗಳು ನಿಶ್ಚಿತಗೊಳಿಸಲ್ಪಟ್ಟಿವೆ. ಸರ್ವವಿಧ ಪಾಪಗಳಿಗೆ ಪ್ರಾಯಶ್ಚಿತ್ತವೇ ಶಮನೌಷಧವು. ಅಂತೆಯೇ ''ಪ್ರಯತತ್ವಾದ್ ವ್ಯಪಜಿತಂ ಅಶುಭಂ ಕರ್ಮ ನಾಶಯತೀತಿ ಪ್ರಾಯಶ್ಚಿತ್ತಂ'' ಎಂಬುದಾಗಿ ಹಾರೀತಸ್ಮೃತಿಯಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ವಿಹಿತಸ್ಯಾನನುಷ್ಠಾನಾನ್ನಿಂದಿತಸ್ಯ ಚ ಸೇವನಾತ್ ।
ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥

(ಶಬ್ದಕಲ್ಪದ್ರುಮ ; ಪುಟ ೩೯೫)

ಈ ಯಾಜ್ಞ್ಯವಲ್ಕ್ಯಸ್ಮೃತಿಯ ವಚನದಂತೆ ವಿಹಿತಕರ್ಮಗಳನ್ನು ಮಾಡದಿರುವುದು, ನಿಷಿದ್ಧಕರ್ಮಗಳನ್ನಾಚರಿಸುವುದು ಮತ್ತು ಇಂದ್ರಿಯಗಳನ್ನು ನಿಗ್ರಹಿಸದೇ ಇರುವುದು ಇವುಗಳ ಮೂಲಕ ಮನುಷ್ಯನು ಪಾಪಿಷ್ಟನಾಗಿ ಪತಿತನಾಗುತ್ತಾನೆ. ಇದನ್ನೇ ಮನು ಮಹರ್ಷಿಯು-

ಶರೀರಜೈಃ ಕರ್ಮದೋಷೈರ್ಯಾತಿ ಸ್ಥಾವರತಾಂ ನರಃ ।
ವಾಚಿಕೈಃ ಪಕ್ಷಿ ಮೃಗತಾಂ ಮನಸ್ಯೈರಂತ್ಯ ಜಾತಿತಾಂ ॥

(ಶಬ್ದಕಲ್ಪದ್ರುಮ ; ಪು ೩೯೫)

ಶಾರೀರಿಕ ಪಾಪದಿಂದ ಸ್ಥಾವರತ್ವವನ್ನು ವಾಚಿಕ ಪಾಪದಿಂದ ಪಕ್ಷಿ ಮತ್ತು ಮೃಗಗಳ ಜನ್ಮವನ್ನು ಅದರಂತೆ ಮಾನಸಿಕ ಪಾಪದಿಂದ ಅತ್ಯಂತ ಹೀನ ಜನ್ಮವನ್ನು ತಾಳುವನೆಂಬುದಾಗಿ ವಿವರಿಸಿದ್ದಾನೆ.

ಮನುಷ್ಯನು ಗುಪ್ತವಾಗಿಯೋ ಪ್ರಕಟವಾಗಿಯೋ ಆಚರಿಸಿದ ಹೀನ ಜನ್ಮ ಪ್ರದಾಯಕಗಳಾದ ದುರಿತಗಳಿಂದ ಪಾರಾಗಲು–

ಶೋಷಣೇನ ಶರೀರಸ್ಯ ತಪಸಾऽಧ್ಯಯನೇನ ಚ ।
ಪಾಪಕೃನ್ಮುಚ್ಯತೇ ಪಾಪಾತ್ ದಾನೇನ ಚ ದಮೇನ ಚ ॥
ಗಂಗಾನ್ಹಿಕಂ ದೇವಪೂಜಾ ವೇದಾಭ್ಯಾಸಃ ಸರಿತ್ಪ್ಲವಃ ।
ನಾಶಯಂತ್ಯಾಶು ಪಾಪಾನಿ ಮಹಾಪಾತಕಜಾನ್ಯಪಿ ॥
ಏತೈರ್ದ್ವಿಜಾತಯಃ ಶೋಧ್ಯಾ ವ್ರತ್ಯೈರಾವಿಷ್ಕೃತೈನಸಃ ।
ಅನಾವಿಷ್ಕೃತ ಪಾಪಾಂಸ್ತು ಮಂತ್ರೈರ್ಹೋಮೈಸ್ತು ಶೋಧಯೇತ್ ।

(ವಾಚಸ್ಪತ್ಯಂ ; ಪುಟ ೪೫೨೭)

ತಪಸ್ಸು ಇಲ್ಲವೇ ಸ್ವಾಧ್ಯಾಯದಿಂದ ಶರೀರವನ್ನು ಕೃಶಗೊಳಿಸುವುದು, ಗಂಗಾ ಮುಂತಾದ ಪವಿತ್ರ ನದಿಗಳಲ್ಲಿ ಸ್ನಾನಮಾಡುವುದು ಮತ್ತು ಹಿರಣ್ಯ ದಾನ, ಗೋದಾನ ಹಾಗೂ ಭೂದಾನಗಳನ್ನು ಮಾಡುವುದು ಇವೇ ಮುಂತಾದ ಪ್ರಾಯಶ್ಚಿತ್ತ ಕರ್ಮಗಳು ಸ್ಮೃತಿಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಪಾಪನಾಶನಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವವರಿಗೆ ಮನುವಿನ ಒಂದು ಗೀತೋಕ್ತಿ ಇದೆ. ಏನೆಂದರೆ–

ಕೃತ್ವಾ ಪಾಪಂ ಹಿ ಸಂತಪ್ಯ ತಸ್ಮಾತ್ ಪಾಪಾತ್ ಪ್ರಮುಚ್ಯತೇ ।
ನೈತತ್ ಕುರ್ಯಾಂ ಪುನರಿತಿ ನಿವೃತ್ಯಾ ಪೂಯತೇ ನರಃ ॥

(ಮನುಸ್ಮೃತಿ)

ಒಮ್ಮೆ ಮಾಡಿದ ಪಾಪವನ್ನು ಮತ್ತೊಮ್ಮೆ ಮಾಡಲಾರೆ ಎಂಬ ದೃಢಸಂಕಲ್ಪ ಪೂರ್ವಕವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡಾಗಲೇ ಆತನು ಪರಿಶುದ್ಧನಾಗಬಲ್ಲನು. ಇಲ್ಲವಾದರೆ ಮತ್ತಷ್ಟು ಪತಿತನಾಗುವನು. ಆದ್ದರಿಂದ ಪಶ್ಚಾತ್ತಾಪಪಟ್ಟೇ ಪ್ರಾಯಶ್ಚಿತ್ತವನ್ನು ಮಾಡಬೇಕಾಗುವುದು.

ಇಲ್ಲಿ ಲಕ್ಷಿಸಬೇಕಾದ ಮತ್ತೊಂದು ಮಾತೇನಂದರೆ ಪ್ರಕಟವಾಗಿ ಮಾಡಿದ ಪಾಪಗಳ ನಿವೃತ್ತಿಗಾಗಿ ಪ್ರಕಟಗಳಾದ ಗಂಗಾಸ್ನಾನ, ದೇವಪೂಜೆ ಮತ್ತು ದಾನಾದಿ ಪ್ರಾಯಶ್ಚಿತ್ತ ಕರ್ಮಗಳನ್ನಾಚರಿಸಬೇಕು. ಇನ್ನು ಗುಪ್ತ ಪಾಪಗಳನ್ನು ಮಾಡಿದ್ದರೆ ಗೋಪನೀಯವಾಗಿ ಮಾನಸಿಕ ಜಪವನ್ನು ಮಾಡಬೇಕು. ಹೀಗೆ ಅನೇಕ ಮಹರ್ಷಿಗಳು ಮನುಷ್ಯರ ಶುದ್ಧಿಗಾಗಿ ಅನೇಕ ವಿಧ ಪ್ರಾಯಶ್ಚಿತ್ತ ಕರ್ಮಗಳನ್ನು ಉಪದೇಶಿಸಿದ್ದಾರೆ.

ವೀರಶೈವ ಸಿದ್ಧಾಂತದಲ್ಲಿ ಈ ಸಾಮಾನ್ಯ ಪ್ರಾಯಶ್ಚಿತ್ತಗಳಲ್ಲದೇ ಇಷ್ಟ ಲಿಂಗ ಧಾರಣೆ ಹಾಗೂ ಅದರ ಪೂಜಾ ವಿಧಿಯಲ್ಲಿ ಅನವಧಾನತೆಯಿಂದ ಅಪರಾಧಗಳು ಜನಿಸಿದರೆ ಆ ದೋಷ ನಿವೃತ್ತಿಗಾಗಿ ಕೆಲವು ವಿಶೇಷ ಪ್ರಾಯಶ್ಚಿತ್ತಗಳು ಕಾರಣಾಗಮದ ಕ್ರಿಯಾಪಾದದ ಪ್ರಾಯಶ್ಚಿತ್ತವಿಧಿ ಕಥನವೆಂಬ ಹತ್ತನೇ ಪಟಲದಲ್ಲಿ ವಿಸ್ತೃತವಾಗಿ ಪ್ರತಿಪಾದಿಸಲ್ಪಟ್ಟಿವೆ. ಆ ಗ್ರಂಥದ ಪ್ರಕಾರ –

ಮೂಲಮಷ್ಟೋತ್ತರಶತಂ ಕಾಲಭಂಗೇಽರ್ಚನಸ್ಯ ತು ।
ಪೂಜಾಯಾಶ್ಚ ಜಪಸ್ಯಾಪಿ ಲೋಪೇ ಮೂಲಂ ಸಹಸ್ರಕಂ ॥
ಅಥ ಲಿಂಗಸ್ಯ ಲೋಪೇತು ಕರ್ತವ್ಯಂ ಶೃಣು ಸುಂದರಿ ।
ಲಿಂಗಸ್ಯಾ ದರ್ಶನೇ ತ್ಯಾಜ್ಯಃ ಪ್ರಾಣಾಃ ಸ್ಯುರ್ಭಕ್ತಿಯೋಗತಃ ॥
ಪ್ರಾಣತ್ಯಾಗೇ ತ್ವ ಶಕ್ತಶ್ಚೇದೇಕ ವಿಂಶದ್ದಿನಾವಧಿ ।
ನಿರಾಹಾರೋ ಜಪನ್ಮೂಲಂ ಲಿಂಗಮನ್ವೇಷಯೇಜ್ಜನ್ಯೈಃ ॥
ತದಾಽಪ್ಯಲಾಭೇ ವಿಸೃಜೇದಸೂನ್ ಸದ್ಭಕ್ತಿಯೋಗತಃ ।
ಪ್ರಾಣತ್ಯಾಗೇ ತ್ವಶಕ್ತಶ್ಚೇಲ್ಲಿಂಗಮನ್ಯದ್ಗುರೋಃ ಕರಾತ್ ॥

(ಕಾ. ಕ್ರಿ.ಪಾ. ಪಟಲ ೧೦ ; ೨೪, ೩೨, ೩೩, ೩೫)

ಪ್ರತಿ ನಿತ್ಯ ಆಚರಿಸುವ ಇಷ್ಟಲಿಂಗಾರ್ಚನೆಯಲ್ಲಿ ಸಮಯ ಭಂಗವಾದರೆ ಅದರ ಪ್ರಾಯಶ್ಚಿತ್ತಕ್ಕಾಗಿ ೧೦೮ ಪಂಚಾಕ್ಷರ ಮಂತ್ರ ಜಪವನ್ನು, ಮತ್ತು ಒಂದು ದಿವಸದ ಪೂಜೆಯೇ ಲೋಪವಾದರೆ ೧೦೦೮ ಪಂಚಾಕ್ಷರ ಜಪವನ್ನು ಮಾಡಬೇಕು. ಇನ್ನು ಪೂಜೆಮಾಡುವಾಗ ಲಿಂಗವು ಪ್ರಮಾದದಿಂದ ಜಾರಿ ಬಿದ್ದರೆ ೧೦೮ ಪಂಚಾಕ್ಷರ ಮಂತ್ರ ವನ್ನು ಜಪಿಸಿ ದೋಷವನ್ನು ದೂರಮಾಡಿಕೊಳ್ಳಬೇಕು. ಇನ್ನು ಇಷ್ಟಲಿಂಗವೇ ಕಳೆದು ಹೋದರೆ ಅದು ಸಿಗುವವರೆಗೆ ಇಲ್ಲವೇ ೨೧ ದಿವಸದವರೆಗೆ ಉಪವಾಸ ವ್ರತವನ್ನು ಆಚರಿಸಬೇಕು. ಒಂದು ವೇಳೆ ಅದು ಸಿಗದೇ ಇದ್ದರೆ ಪ್ರಾಣವನ್ನೇ ತ್ಯಾಗಮಾಡಬೇಕು. ಪ್ರಾಣತ್ಯಾಗ ಮಾಡಲು ಅಸಮರ್ಥನಾಗಿದ್ದರೆ ತನ್ನ ದೀಕ್ಷಾ ಗುರುಗಳಿಗೆ ಶರಣಾಗಿ ಅವರು ಹೇಳಿದ ಪ್ರಾಯಶ್ಚಿತ್ತಗಳನ್ನಾಚರಿಸಿ ಅವರಿಂದ ಮತ್ತೊಂದು ಲಿಂಗವನ್ನು ಪಡೆಯಬೇಕು.

ಇಷ್ಟಲಿಂಗದಲ್ಲಿ ಇಂತಹ ವೀರವ್ರತಧಾರಿಗಳಾದ್ದರಿಂದಲೇ ಇವರಿಗೆ ವೀರಶೈವ ರೆಂಬ ಸಾರ್ಥಕನಾಮವು ಪ್ರಾಪ್ತವಾಗಿದೆ. ಪ್ರಾಣತ್ಯಾಗದಂತಹ ಕಠೋರ ವ್ರತವನ್ನಾ ಚರಿಸಿದ ಅನೇಕ ಮಹಾನುಭಾವರು ಈ ಧರ್ಮದಲ್ಲಿ ಆಗಿ ಹೋಗಿದ್ದಾರೆ. ಇಂದು ಅಂತಹ ಕಠಿಣ ಪ್ರಾಯಶ್ಚಿತ್ತಗಳನ್ನು ಆಚರಿಸುವುದು ಅಸಾಧ್ಯವಾದ ಕಾರಣ ಕಾಲೋಚಿತ ವಾಗಿ ಗುರುಗಳು ಹೇಳಿದ ಪ್ರಾಯಶ್ಚಿತ್ತಗಳನ್ನಾಚರಿಸಿ ಪರಿಶುದ್ಧರಾಗಬೇಕು.

ಹೀಗೆ ಇಲ್ಲಿಯವರೆಗೆ ಪ್ರತಿಪಾದಿಸಲಾದ ಪ್ರತಿಯೊಂದು ಪ್ರಾಯಶ್ಚಿತ್ತ ಕರ್ಮ ಗಳನ್ನಾಚರಿಸುವಾಗ ''ಪ್ರಾಯಶ್ಚಿತ್ತೇಷು ಸರ್ವೇಷು ಭಸ್ಮನಾಮಯಥಾವಿಧಿ'' ಎಂಬ ಶ್ರೀ ಜ ॥ ರೇಣುಕರ ಆದೇಶದಂತೆ ಶಿವನ ಅಘೋರ ಮುಖೋದ್ಭೂತವಾದ ಧವಲ ವರ್ಣದ ಸುರಭಿ ಎಂಬ ಗೋವಿನ ಗೋಮಯದಿಂದ ನಿರ್ಮಿತವಾದ ಭಸ್ಮವನ್ನು ಉಪಯೋಗಿಸಬೇಕು. ಅಂದಾಗಲೇ ಪ್ರಾಯಶ್ಚಿತ್ತ ಕರ್ಮವು ಪೂರ್ಣ ಫಲಕಾರಿ ಯಾಗುವುದು.

**ಮೋಕ್ಷಕರ್ಮ ಹಾಗೂ ರಕ್ಷಾ :**

ಮೋಕ್ಷಕ್ಕೆ ಕಾರಣೀಭೂತವಾದ ಕರ್ಮವೇ ಮೋಕ್ಷ ಕರ್ಮವು. ನಿಷ್ಕಾಮ ಕರ್ಮವು ಅಂತಃಕರಣದ ಪರಿಶುದ್ಧಿಯ ಮೂಲಕ ಮೋಕ್ಷಕ್ಕೆ ಸಾಧನವಾದ ಕಾರಣ ಇದಕ್ಕೆ ಮೋಕ್ಷ ಕರ್ಮವೆನ್ನಬೇಕು.

''ಬಂಧಾಯ ವಿಷಯಾಸಕ್ತಿರ್ಮುಕ್ತ್ಯೆ ನಿರ್ವಿಷಯಂ ಮನಃ'' ಎಂಬ ಉಕ್ತಿಯಂತೆ ಸಾಂಸಾರಿಕ ವಿಷಯಗಳ ಆಸಕ್ತಿಯೇ ಬಂಧನಕ್ಕೆ ಕಾರಣ ಮತ್ತು ವಿಷಯಾಭಿಲಾಷೆ ರಾಹಿತ್ಯವೇ ಮುಕ್ತಿಗೆ ಮೂಲವು. ನಿಷ್ಕಾಮ ಯೋಗಿಯೇ ಸಾಂಸಾರಿಕ ವಿಷಯಗಳ ಅಭಿಲಾಷೆಯಿಂದ ಬಿಡಲ್ಪಡಬಲ್ಲನಲ್ಲದೇ ಅನ್ಯರಿಂದ ಸಾಧ್ಯವಿಲ್ಲ. ಹೀಗೆ ಸರ್ವವಿಧದಿಂದಲೂ ವಿಚಾರಿಸಿದಾಗ ನಿಷ್ಕಾಮ ಕರ್ಮವೇ ಮೋಕ್ಷ ಕರ್ಮವೆನಿಸುವುದು.

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ ॥

(ಗೀತಾ ೨–೪೭)

ಗೀತೆಯ ಈ ಶ್ಲೋಕದಲ್ಲಿ ಭಗವಂತನು ನಿಷ್ಕಾಮ ಕರ್ಮಯೋಗದ ರಹಸ್ಯವನ್ನೇ ಅಡಗಿಸಿಟ್ಟಿದ್ದಾನೆ. ಈ ಶ್ಲೋಕದ ಅಪಾರ್ಥವನ್ನು ಮಾಡುವ ಜನರು ಬಹಳ ಕರ್ಮವನ್ನು ಮಾಡಿ ಫಲವನ್ನು ಬೇಡದಿರುವುದು ಅನ್ಯಾಯವಲ್ಲವೇ? ಅನ್ನುವುದೇ ಅವರ ಅಭಿಪ್ರಾಯ. ಆದರೆ ಕರ್ಮಕ್ಕೆ ಫಲವು ಅವಶ್ಯವಾಗಿ ಇದ್ದೇ ಇರುತ್ತದೆ. ಕರ್ಮವನ್ನು ಮಾಡುವ ಮನುಷ್ಯನ ಬುದ್ಧಿಯು ಫಲದಲ್ಲಿ ಆಸಕ್ತವಾದರೆ ಕರ್ಮವನ್ನು ಮನಃ ಪೂರ್ವಕವಾಗಿ ಮಾಡಲಾರ. ಫಲಾಸಕ್ತಿ ಇಲ್ಲದೇ ಮಾಡಿದ ಕರ್ಮಕ್ಕೆ ಇನ್ನೂ ಹೆಚ್ಚಿನ ಫಲವು ಪ್ರಾಪ್ತವಾಗುವುದು.

ಸಾಂಸಾರಿಕ ಫಲಗಳನ್ನು ಬೇಡದಿರುವ ನಿಷ್ಕಾಮ ಕರ್ಮಯೋಗಿಗೆ ಭಗವಂತನು ತನ್ನ ಸ್ವರೂಪವನ್ನೇ ದಯಪಾಲಿಸುತ್ತಾನೆ. ಅಂತೆಯೇ ಎಲ್ಲ ಕರ್ಮಗಳಲ್ಲಿ ನಿಷ್ಕಾಮ ಕರ್ಮವು ಶ್ರೇಷ್ಠವಾದದ್ದು. ಆದ್ದರಿಂದಲೇ ಇದು ಮೋಕ್ಷಪ್ರದವಾಗಿದೆ.

ಇಂತಹ ಮೋಕ್ಷ ಕರ್ಮವನ್ನಾಚರಿಸುವಾಗ–

''ರಕ್ಷಾ ಚ ಮೋಕ್ಷಕಾರ್ಯೇಷು ಪ್ರಯೋಕ್ತವ್ಯಾಸದಾ ಬುಧೈಃ''

(ಸಿ. ಶಿ. ೭–೧೦)

ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ ಶಿವನ ಈಶಾನ ಮುಖ ಸಂಜಾತ ವಾದ ರಕ್ತವರ್ಣದ ಸುಮನಾ ಎಂಬ ಗೋವಿನ ಗೋಮಯದಿಂದ ನಿರ್ಮಿತವಾದ ''ರಕ್ಷಾ'' ಎಂಬ ಹೆಸರಿನ ವಿಭೂತಿಯನ್ನೇ ಧರಿಸಿಗೊಳ್ಳಬೇಕು.

ಈ ರೀತಿಯಾಗಿ ಪ್ರತಿಯೊಬ್ಬರು ಸದ್ಗುರುವಿನ ಆದೇಶದಂತೆ ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ ಹಾಗೂ ಮೋಕ್ಷ ಕರ್ಮಗಳಲ್ಲಿ ಕ್ರಮವಾಗಿ ವಿಭೂತಿ, ಭಸಿತ, ಕ್ಷಾರ, ಭಸ್ಮ ಮತ್ತು ರಕ್ಷಾ ಇವುಗಳ ಪ್ರಯೋಗವನ್ನು ಮಾಡಿ ಆಯಾ ಕರ್ಮಗಳಲ್ಲಿ ಸಫಲತೆಯನ್ನು ಪಡೆದು ಜೀವನವನ್ನು ಸಾರ್ಥಕಮಾಡಿಕೊಳ್ಳಬೇಕು.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೪ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೫

ಭಸ್ಮೋತ್ಪಾದನಮುದ್ದಿಷ್ಟಂ ಚತುರ್ಧಾ ತಂತ್ರವೇದಿಭಿಃ।
ಕಲ್ಪಂ ಚೈವಾನುಕಲ್ಪಂ ಚ ಉಪಕಲ್ಪಮಕಲ್ಪಕಂ

(ಸಿ. ಶಿ. ೭-೧೨)

ಭಸ್ಮತಂತ್ರವಿಶಾರದರು ಭಸ್ಮದ ನಿರ್ಮಾಣ ವಿಧಿಯನ್ನು ಕಲ್ಪ, ಅನುಕಲ್ಪ, ಉಪಕಲ್ಪ ಮತ್ತುಅಕಲ್ಪವೆಂಬುದಾಗಿ ನಾಲ್ಕು ಪ್ರಕಾರವಾಗಿ ಹೇಳಿರುತ್ತಾರೆ.

ಏಷಾಮಾದಿಮಮುತ್ಕೃಷ್ಟಮನ್ಯತ್ಸರ್ವಮಭಾವತಃ।
ಯಥಾಶಾಸ್ತ್ರೋಕ್ತವಿಧಿನಾ ಗೃಹೀತ್ವಾ ಗೋಮಯಂ ನವಂ

ಸದ್ಯೇನ ವಾಮದೇವೇನ ಕುರ್ಯಾತ್ಪಿಂಡಮನುತ್ತಮಂ।
ಶೋಷಯೇತ್ಪುರುಷೇಣೈವ ದಹೇದ್ಘೋರಾಚ್ಛಿವಾಗ್ನಿನಾ

ಕಲ್ಪಂ ತದ್ಭಸ್ಮ ವಿಜ್ಞೇಯಮನುಕಲ್ಪ ಮಥೋಚ್ಯತೇ.।
ವನೇಷು ಗೋಮಯಂ ಯಚ್ಚ ಶುಷ್ಕಂ ಚೂರ್ಣೀಕೃತಂ ತಥಾ
ದಗ್ಧಂ ಚೈವಾನುಕಲ್ಪಾಖ್ಯಮಾಪಣಾದಿಗತಂ ತು ಯತ್ ।
ವಸ್ತ್ರೇಣೋತ್ತಾರಿತಂ ಭಸ್ಮ ಗೋಮೂತ್ರಾಬದ್ಧಪಿಂಡಕಂ

ದಗ್ಧಂ ಪ್ರಾಗುಕ್ತವಿಧಿನಾ ಭವೇದ್ಭಸ್ಮೋಪಕಲ್ಪಕಂ।
ಅನ್ಯೈರಾಪಾದಿತಂ ಭಸ್ಮ ಅಕಲ್ಪಮಿತಿಕಲ್ಪಿತಂ

(ಸಿ. ಶಿ. ೭.೧೩-೧೭)

ಈ ನಾಲ್ಕು ವಿಧ ಭಸ್ಮಗಳಲ್ಲಿ ಮೊದಲನೇ ಕಲ್ಪ ಭಸ್ಮವೇ ಶ್ರೇಷ್ಠವಾದದ್ದು. ಅದು ದೊರೆಯದೇ ಇದ್ದಾಗ ಉಳಿದ ಮೂರು ವಿಧ ಭಸ್ಮಗಳಲ್ಲಿ ಯಾವದೊಂದನ್ನಾದರೂ ಉಪಯೋಗಿಸಬಹುದು. ಇಲ್ಲಿ ಸದ್ಯೋಜಾತಮಂತ್ರದಿಂದ ನೂತನ ಗೋಮಯವನ್ನು ಹಿಡಿದುಕೊಂಡು, ವಾಮದೇವಮಂತ್ರದಿಂದ ಅದನ್ನು ಉಂಡೆಮಾಡಿ, ತತ್ಪುರುಷ ಮಂತ್ರದಿಂದ ಒಣಗಿಸಿ, ಅಘೋರಮಂತ್ರದಿಂದ ಸುಟ್ಟು ನಂತರ ಈಶಾನ ಮಂತ್ರದಿಂದ ಬಿಲ್ವಾದಿ ಪಾತ್ರೆಗಳಲ್ಲಿ ಸಂಗ್ರಹಿಸಿಕೊಳ್ಳಬೇಕು. ಈ ವಿಧದಿಂದ ತಯಾರಿಸಲ್ಪಟ್ಟ ಭಸ್ಮವೇ ಕಲ್ಪಭಸ್ಮವು.

ಇನ್ನು ಅರಣ್ಯದಲ್ಲಿ ಒಣಗಿಬಿದ್ದಿರುವ ಕಾಕುಳ್ಳನ್ನು ಆರಿಸಿ ತಂದು ಚೂರ್ಣಮಾಡಿ ಮೊದಲಿನಂತೆ ಸುಟ್ಟು ತಯಾರಿಸಿದ ಭಸ್ಮವು ಅನುಕಲ್ಪ ಭಸ್ಮವು. ಅದರಂತೆ ಅಂಗಡಿಯಲ್ಲಿರುವ ಭಸ್ಮವನ್ನು ತಂದು ಚೂರ್ಣಮಾಡಿ ಅದರಲ್ಲಿ ಗೋಮೂತ್ರವನ್ನು ಕಲಸಿ ಉಂಡೆಯನ್ನು ಮಾಡಿ ಒಣಗಿಸಬೇಕು. ನಂತರ ಮೊದಲಿನಂತೆ ಶಿವಾಗ್ನಿಯಲ್ಲಿ ದಹಿಸಿದರೆ ಉಪಕಲ್ಪ ಭಸ್ಮವು ನಿರ್ಮಾಣವಾಗುವುದು. ಇನ್ನು ಮಂತ್ರಜ್ಞಾನ ಶೂನ್ಯರಿಂದ ನಿರ್ಮಿಸಲ್ಪಟ್ಟ ಭಸ್ಮವೇ ಅಕಲ್ಪ ಭಸ್ಮವು.

ಭಸ್ಮ ನಿರ್ಮಾಣ ವಿಧಿ :

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಇಲ್ಲಿಯವರೆಗೆ ನಂದಾದಿ ಪಂಚಗೋವುಗಳ ಉತ್ಪತ್ತಿ, ಪಂಚವಿಧ ಭಸ್ಮಗಳ ಮಹಿಮೆ ಹಾಗೂ ಅವುಗಳ ಪ್ರಯೋಗ ವಿಧಿಯನ್ನು ಬಹು ವಿಸ್ತಾರವಾಗಿ ಉಪದೇಶಿಸಿದರು. ಇನ್ನು ಮೇಲೆ ಆ ಭಸ್ಮವನ್ನು ತಯಾರಿಸುವ ಕಲ್ಪ, ಅನುಕಲ್ಪ, ಉಪಕಲ್ಪ ಮತ್ತು ಅಕಲ್ಪಗಳೆಂಬ ಶಾಸ್ತ್ರೀಯ ನಾಲ್ಕು ವಿಧಾನವನ್ನು ಪ್ರತಿಪಾದಿಸಲಿದ್ದಾರೆ. ಅದನ್ನೇ ಇಲ್ಲಿ ವಿಸ್ತರಿಸೋಣ.

(೧) ಕಲ್ಪ ಭಸ್ಮ :

''ಕಲ್ಪಃ ಶಾಸ್ತ್ರೇ ವಿಧೌ ನ್ಯಾಯೇ'' ಎಂಬ ಮೇದಿನೀಕೋಶದ ಪ್ರಕಾರ ಕಲ್ಪ ವೆಂದರೆ ವೇದದ ಷಡಂಗದಲ್ಲೊಂದಾದ ಶಾಸ್ತ್ರ, ನ್ಯಾಯ ಮತ್ತು ಪದ್ಧತಿ ಮುಂತಾದ ಅರ್ಥಗಳಾಗುತ್ತವೆ. ಪ್ರಕೃತದಲ್ಲಿ ಅತ್ಯುತ್ಕೃಷ್ಟವಾದ ಭಸ್ಮವನ್ನು ನಿರ್ಮಾಣಗೊಳಿಸುವ ಪದ್ಧತಿ ಅಥವಾ ನಿಯಮವೇ ಕಲ್ಪಶಬ್ದಾರ್ಥವು. ಈ ಕಲ್ಪವಿಧಿಯಿಂದ ಭಸ್ಮವನ್ನು ನಿರ್ಮಿಸುವಾಗ ಗೋಮಯ ಗ್ರಹಣ, ಪಿಂಡೀಕರಣ, ಶೋಷಣ, ದಹನ ಮತ್ತು ಸಂಗ್ರಹಣವೆಂಬ ಈ ಪ್ರಮುಖ ಕ್ರಿಯೆಗಳನ್ನು ಶಾಸ್ತ್ರವಿಧಿಗನುಸಾರವಾಗಿ ಮಂತ್ರ ಸಂಸ್ಕಾರ ಪೂರ್ವಕವಾಗಿಯೇ ಮಾಡಬೇಕಾಗುವುದು. ಆ ಪದ್ಧತಿಯನ್ನೇ ಇಲ್ಲಿ ತಿಳಿ ಯೋಣ.

ಗೋಮಯಗ್ರಹಣ :

ಕಲ್ಪಭಸ್ಮವನ್ನು ನಿರ್ಮಿಸಿದಾಗ–

ಉಪೋಷ್ಯ ಚ ಚತುರ್ದಶ್ಯಾಂ ಶುಕ್ಲೇ ಕೃಷ್ಣೇಽಥವಾ ವ್ರತೀ ।
ಪರೇದ್ಯುಃ ಪ್ರಾತರುತ್ಥಾಯ ಶುಚಿರ್ಭೂತ್ವಾ ಸಮಾಹಿತಃ ॥
ಕೃತಸ್ನಾನಃ ಧೌತವಸ್ತ್ರಃ ಪಯೋರ್ಥಂ ಚ ಸೃಜೇಚ್ಚ ಗಾಂ ।

(ಬೃಹಜ್ಜಾ ಉ ೩–೪,೫)

ಈ ಉಪನಿಷನ್ಮಂತ್ರಾನುಸಾರವಾಗಿ ಶುಕ್ಲ ಇಲ್ಲವೇ ಕೃಷ್ಣ ಪಕ್ಷದ ಚತುರ್ದಶಿಯ ದಿನದಂದು ಉಪವಾಸ ವ್ರತವನ್ನಾಚರಿಸಿ ಆಕಳಿಗೂ ಸಹ ಅಂದು ಸ್ನಾನಮಾಡಿಸಿ ಮಂತ್ರ ಸಂಸ್ಕೃತವಾದ ಹುಲ್ಲು ಹಾಗೂ ನೀರುಗಳನ್ನು ಕೊಡಬೇಕು. ಮರುದಿವಸ ಪ್ರಾತಃ ಕಾಲದಲ್ಲಿ ಬೇಗನೇ ಎದ್ದು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಶುಭ್ರವಾದ ಬಟ್ಟೆಗಳನ್ನು ಧರಿಸಿಕೊಂಡು ಹಾಲು ಕುಡಿಯಲು ಕರುವನ್ನು ಬಿಡಬೇಕು.

ಹೀಗೆ ಕರುವಿಗೆ ಕ್ಷೀರಪಾನ ಮಾಡಿಸುವ ಸಂದರ್ಭದಲ್ಲಿ ಗೋಮಯವನ್ನು ''ಅಭೂಮಿ ಪಾತಂ ಗೃಹ್ಣೀಯಾತ್'' ನೆಲಕ್ಕೆ ಬೀಳದ ಹಾಗೆ ಹಿಡಿಯಬೇಕು. ಆಗ ಈ ಪೂರ್ವದಲ್ಲಿ ಹೇಳಲ್ಪಟ್ಟ ''ಸದ್ಯೋಜಾತಂ ಪ್ರಪದ್ಯಾಮಿ'' ........ । ಎಂಬ ಮಂತ್ರ ವನ್ನು ಶ್ರದ್ಧೆಯಿಂದ ಪಠಿಸುತ್ತಿರಬೇಕು.

ಗೋಮಯವನ್ನು ಗ್ರಹಿಸುವಾಗ ಲಕ್ಷಿಸಬೇಕಾದ ಮತ್ತೊಂದು ಮಹತ್ವಪೂರ್ಣ ವಾದ ಮಾತೆಂದರೆ–

''ವಿಕಟಾಂಗಾಮುನ್ಮತ್ತಾಂ ಮಹಾಖಿಲಾಂ ಮಲಿನಾಮ ಶಿವಾದಿ ಚಿಹ್ನಾನ್ವಿತಾಂ ಪುನರ್ಧೇನುಂ ಕೃಶಾಂಗಾಂ ವತ್ಸಹೀನಾ ಮಶಾಂತಾಮದುಗ್ಧ ದೋಹನೀಂ ನಿರಿಂದ್ರಿಯಾಂ ಜಗ್ಧತೃಣಾಂ ಕೇಶ ಚೇಲಾಸ್ಥಿ ಭಕ್ಷಿಣೀಂ ಸಂಧಿನೀಂ ನವಪ್ರಸೂತಾಂ ರೋಗಾರ್ತಾಂಗಾಂ ವಿಹಾಯ ಪ್ರಶಸ್ತಗೋಮಯ ಮಾಹರೇದ್ಗೋಮಯಂ''

(ಬೃಹಜ್ಜಾ ಉ ೩-೧)

ಅಂಗಹೀನವಾದ. ಮದೋನ್ಮತ್ತವಾದ ಜಗಳಮಾಡುವ, ಮಲಿನವಾದ, ಅಶುಭ ಚಿಹ್ನಗಳಿಂದ ಕೂಡಿದ, ಕ್ಷೀಣವಾದ, ಕರುವಿಲ್ಲದ, ಅಶಾಂತ ಮನಸ್ಸಿನ, ಹಿಂಡದಿರುವ, ಕಣ್ಣು ಮುಂತಾದ ಇಂದ್ರಿಯಹೀನವಾದ, ಹುಲ್ಲನ್ನೂ ತಿನ್ನಲು ಅಸಮರ್ಥವಾದ, ಕೂದಲು ಮತ್ತು ಹಳೆಯ ಬಟ್ಟೆಗಳನ್ನು ತಿನ್ನುವ ಸ್ವಭಾವದ ನಾನಾ ವಿಧ ರೋಗದಿಂದ ಪೀಡಿತವಾದ ಮತ್ತು ಅದೇ ಆಗ ಕರು ಹಾಕಿರುವ ಗೋವನ್ನು ಬಿಟ್ಟು ಪ್ರಶಸ್ತವಾದ ಗೋಮಯವನ್ನೇ ಗ್ರಹಿಸಬೇಕು. ಇಲ್ಲವಾದರೆ ಮುಂದೆ ತಯಾರಿಸಲ್ಪಡುವ ಭಸ್ಮವು ಶಕ್ತಿಶೂನ್ಯವಾಗುತ್ತದೆ. ಅಂತೆಯೇ ಶ್ರೀಜಗದ್ಗುರು ರೇಣುಕರು ''ಯಥಾ ಶಾಸ್ತ್ರೋಕ್ತ ವಿಧಿನಾ ಗೃಹೀತ್ವಾ ಗೋಮಯಂ ನವಂ'' ಎಂದು ಸೂತ್ರರೂಪವಾಗಿ ಗೋಮಯ ಗ್ರಹಣ ವಿಧಿಯನ್ನು ಪ್ರತಿಪಾದಿಸಿದ್ದಾರೆ.

**ಪಿಂಡೀಕರಣ :**

''ವಾಮದೇವೇನ ಕುರ್ಯಾತ್ಪಿಂಡ ಮನುತ್ತಮಂ'' ಎನ್ನುವ ಆ ಮಹಾಚಾರ್ಯರ ಆದೇಶದಂತೆ ಪೂರ್ವದಲ್ಲಿ ಗ್ರಹಿಸಿದ ಗೋಮಯವನ್ನು ''ವಾಮದೇವಾಯ ನಮೋ.....'' ಎಂಬ ಮಂತ್ರವನ್ನು ಪಠಿಸುತ್ತ ಗೋಮಯದ ಸಣ್ಣ ಸಣ್ಣ ಉಂಡೆಗಳನ್ನು ಮಾಡಬೇಕು.

**ಶೋಷಣ :**

''ಶೋಷಯೇತ್ಪುರುಷೇಣೈವ'' ಎಂಬ ಪೂಜ್ಯರ ಆದೇಶದಂತೆ ''ತತ್ಪುರುಷಾಯ ವಿದ್ಮಹೇ........'' ಎನ್ನುವ ಮಂತ್ರವನ್ನು ಪಠಿಸುತ್ತ ಆ ಗೋಮಯ ಪಿಂಡಗಳನ್ನು ಒಣಗಿಸಬೇಕು.

**ದಹನ :**

''ಹೀಗೆ ಒಣಗಿದ ಆ ಗೋಮಯ ಪಿಂಡಗಳನ್ನು ಒಂದುಕಡೆ ಶೇಖರಿಸಿ ಒಂದು ತಗ್ಗನ್ನು ತೆಗೆದು, ಅದನ್ನು ಗೋಮಯದಿಂದ ಸಮ್ಮಾರ್ಜನೆಯನ್ನು ಮಾಡಿ, ಅದರಲ್ಲಿ ಗೋಮಯ ಪಿಂಡಗಳನ್ನೆಲ್ಲ ಇರಿಸಿ, ಪೂಜಿಸಿ ನಂತರ ''ದಹೇದ್ಘೋರಾಚ್ಛಿವಾಗ್ನಿನಾ'' ಎಂಬ ಉಪದೇಶದಂತೆ ''ಅಘೋರೇ ಭ್ಯೋಽಥ ಘೋರೇಭ್ಯೋ.....''ಎನ್ನುವ ಅಘೋರ ಮಂತ್ರವನ್ನುಚ್ಚರಿಸುತ್ತ ಅದಕ್ಕೆ ಅಗ್ನಿಯಿಂದ ಪುಟ ಕೊಡಬೇಕು.

**ಸಂಗ್ರಹಣ :**

ಈ ರೀತಿ ದಗ್ಧವಾದ ಆ ಭಸ್ಮವು ಆರುವ ವರೆಗೆ ಕಾದು ಅನಂತರ ''ಈಶಾನಃ ಸರ್ವ ವಿದ್ಯಾನಾಂ....''ಎಂಬ ಈಶಾನ ಮಂತ್ರವನ್ನು ಪಠಿಸುತ್ತ ಬಿಲ್ವ, ರಜತ, ಸ್ವರ್ಣ

ಮುಂತಾದ ಪಾತ್ರೆಗಳಲ್ಲಿ ಸಂಗ್ರಹಿಸಿಕೊಳ್ಳಬೇಕು. ಹೀಗೆ ವಿಧಾನೋಕ್ತವಾಗಿ ನಿರ್ಮಾಣ ಗೊಂಡ ಭಸ್ಮವೇ ''ಕಲ್ಪ ಭಸ್ಮವು'' ಮಂತ್ರ ಸುಸಂಸ್ಕೃತವಾದ ಈ ಭಸ್ಮದಲ್ಲಿ ಅಪಾರ ಸಾಮರ್ಥ್ಯವಡಗಿರುತ್ತದೆ.

(೨) ಅನುಕಲ್ಪ ಭಸ್ಮ :

ಭಸ್ಮವನ್ನು ನಿರ್ಮಿಸುವ ಎರಡನೇ ವಿಧಿಯೇ ಅನುಕಲ್ಪವಿಧಿಯು. ಇಲ್ಲಿಯೂ ಕೂಡ ಮೊದಲಿನಂತೆ ಸಾಧಕನು ಶುಚಿರ್ಭೂತವಾಗಿ–

ವನೇಷು ಗೋಮಯಂ ಯಚ್ಚ ಶುಷ್ಕಂ ಚೂರ್ಣೀಕೃತಂ ತಥಾ ।
ದಗ್ಧಂ ಚೈವಾನುಕಲ್ಪಾಖ್ಯಂ...................................॥

ಎನ್ನುವ ಶ್ರೀ ಜಗದ್ಗುರು ರೇಣುಕರ ಉಪದೇಶದಂತೆ ಅಡವಿಗೆ ಹೋಗಿ ಅಲ್ಲಿ ಬಿದ್ದಿರುವ ಒಣಗಿದ ಗೋಮಯ ಪಿಂಡಗಳನ್ನು ಆರಿಸಿ ತಂದು, ಚೂರ್ಣ ಮಾಡಬೇಕು. ಹೀಗೆ ಚೂರ್ಣವಾದ ಆ ಗೋಮಯವನ್ನು ಪೂರ್ವೋಕ್ತ ವಿಧಿಯಂತೆ ಅಘೋರ ಮಂತ್ರವನ್ನುಚ್ಛರಿಸುತ್ತ ದಹಿಸಿ, ಈಶಾನ ಮಂತ್ರವನ್ನು ಪಠಿಸುತ್ತ ಬಿಲ್ವಾದಿ ಪಾತ್ರೆಗಳಲ್ಲಿ ಅದನ್ನು ಸಂಗ್ರಹಿಸಿಕೊಳ್ಳಬೇಕು. ಇದುವೇ ಅನುಕಲ್ಪ ಭಸ್ಮವು.

ಇಲ್ಲಿ ಗೋಮಯ ಗ್ರಹಣ, ಪಿಂಡೀಕರಣ ಮತ್ತು ಶೋಷಣೆಯಲ್ಲಿ ಉಪ ಯೋಗಿಸಲ್ಪಡುವ ಸದ್ಯೋಜಾತ, ವಾಮದೇವ ಹಾಗೂ ತತ್ಪುರುಷ ಈ ಮೂರು ಮಂತ್ರಗಳ ಸಂಸ್ಕಾರವು ಲೋಪವಾಗುವದು. ಅಂತೆಯೇ ಈ ಭಸ್ಮಕ್ಕೆ ದ್ವಿತೀಯ ಸ್ಥಾನವಿದೆ.

(೩) ಉಪಕಲ್ಪ ಭಸ್ಮ :

ಭಸ್ಮದ ಮೂರನೇ ವಿಧಾನವೇ ಉಪಕಲ್ಪ ವಿಧಿಯು. ಶ್ರೀಮಹಾಚಾರ್ಯರ
..........................ಆಪಣಾದಿಗತಂ ತು ಯತ್ ।
ವಸ್ತ್ರೇಣೋತ್ತಾರಿತಂ ಭಸ್ಮ ಗೋಮೂತ್ರಾಬದ್ಧಪಿಂಡಕಂ ।
ದಗ್ಧಂ ಪ್ರಾಗುಕ್ತ ವಿಧಿನಾ ಭವೇದ್ಭಸ್ಮೋಪಕಲ್ಪಕಂ ॥

ಈ ಉಪದೇಶದ ಪ್ರಕಾರ ಅಂಗಡಿಯಲ್ಲಿ ದೊರೆಯುವ ಭಸ್ಮವನ್ನು ತೆಗೆದುಕೊಂಡು ಅದನ್ನು ಚೂರ್ಣಮಾಡಿ ವಸ್ತ್ರದಲ್ಲಿ ಸೋಸಿಕೊಳ್ಳಬೇಕು. ನಂತರ ಆಕಳು ತನ್ನ ಕರುವಿಗೆ ಮೊಲೆಯನ್ನುಣಿಸುವಾಗ ವಿಸರ್ಜಿಸಿದ ಗೋಮೂತ್ರವನ್ನು ಒಂದು ಪವಿತ್ರ ಪಾತ್ರೆಯಲ್ಲಿ ಸಂಗ್ರಹಿಸಿಕೊಂಡು ಈ ಗೋಮೂತ್ರದಲ್ಲಿ ಆ ಸೋಸಿದ ಭಸ್ಮವನ್ನು ಕಲಸಿ ಪುನಃ ಉಂಡೆಗಳನ್ನು ಮಾಡಿ ವರ್ಣಿಸಿ ನಂತರ ಪೂರ್ವೋಕ್ತವಿಧಿಯಂತೆ ಮಂತ್ರ ಸಂಸ್ಕೃತವಾದ ಅಗ್ನಿಯಲ್ಲಿ ಅಘೋರ ಮಂತ್ರವನ್ನುಚ್ಛರಿಸುತ್ತ ದಹಿಸಬೇಕು. ಆಮೇಲೆ ಮೊದಲಿನಂತೆ ಈಶಾನ ಮಂತ್ರೋಚ್ಚಾರಣ ಪೂರ್ವಕವಾಗಿ ಸಂಗ್ರಹಿಸಿಕೊಳ್ಳಬೇಕು. ಇದುವೇ ಉಪಕಲ್ಪ ವಿಧಿಯು. ಈ ಭಸ್ಮವು ಸಾಕ್ಷಾತ್ ಗೋಮಯ ಪಿಂಡದಿಂದ ನಿರ್ಮಾಣವಾಗದ ಕಾರಣ ಇದಕ್ಕೆ ತೃತೀಯ ಸ್ಥಾನವಿದೆ.

(೪) ಅಕಲ್ಪ ಭಸ್ಮ :

"ಅನ್ಯೈರಾಪಾದಿತಂ ಭಸ್ಮ ಅಕಲ್ಪಮಿತಿ ಕಲ್ಪಿತಂ" ಎನ್ನುವ ಶ್ರೀ ಜ. ರೇಣುಕರ ಉಪದೇಶದಂತೆ ಮಂತ್ರಜ್ಞಾನ ಶೂನ್ಯರಾದ ಸಾಮಾನ್ಯ ವ್ಯಕ್ತಿಗಳು ಹೇಗೋ ತಯಾರಿಸಿದ ಭಸ್ಮವೇ ಅಕಲ್ಪ ಭಸ್ಮವು. ಇದಕ್ಕೆ ಯಾವ ಮಂತ್ರಸಂಸ್ಕಾರವೂ ಆಗದೇ ಇರುವುದರಿಂದ ಇದರ ಸ್ಥಾನವು ನಾಲ್ಕನೆಯದಾಗಿದೆ.

ಈ ನಾಲ್ಕು ವಿಧಗಳಾದ ಭಸ್ಮಗಳಲ್ಲಿ ಮೊದಲಿನ ಕಲ್ಪಭಸ್ಮವೇ ಶ್ರೇಷ್ಠವಾದದ್ದು. ಅದು ದೊರೆಯದೇ ಇದ್ದಾಗ ಉಳಿದ ಈ ಮೂರರಲ್ಲಿ ದೊರೆತ ಯಾವುದಾದರೊಂದು ಭಸ್ಮವನ್ನು ತೆಗೆದುಕೊಂಡು ಉಪಯೋಗಿಸಬಹುದು.

ಪ್ರತಿಯೊಬ್ಬ ಸಾಧಕರು ಇಲ್ಲಿ ಲಕ್ಷಿಸಬೇಕಾದ ವಿಷಯವೇನೆಂದರೆ ತಾನು ಸ್ವತಃ ನಿರ್ಮಿಸಿದ ಭಸ್ಮವೇ ತನಗೆ ಶ್ರೇಷ್ಠವಾದದ್ದು. ಪ್ರಪಂಚದ ಅನೇಕ ವ್ಯವಹಾರಗಳನ್ನು ನಾವು ಸ್ವತಃ ಮಾಡುವಂತೆ ಭಸ್ಮವನ್ನಾದರೂ ಸ್ವತಃ ನಿರ್ಮಾಣ ಮಾಡಿಕೊಳ್ಳಬೇಕು. ಇದರಿಂದ ಪರಿಶುದ್ಧ ಭಸ್ಮವು ದೊರೆಯುವುದಲ್ಲದೇ ಶೀಘ್ರ ಫಲಕಾರಿಯಾಗುವುದು.

ಈ ನಾಲ್ಕು ವಿಧ ಭಸ್ಮಗಳಲ್ಲಿ ಯಾವುದನ್ನಾದರೂ ಉಪಯೋಗಿಸುವ ಪೂರ್ವದಲ್ಲಿ ಅದನ್ನು ಸದ್ಗುರುಗಳಿಂದ ಪುನಃ ಶುದ್ಧಗೊಳಿಸಿಕೊಂಡು ಧರಿಸಬೇಕು. ಇದರಿಂದ ಅವರ ಪವಿತ್ರ ಹಸ್ತಸ್ಪರ್ಶ, ಪಾದೋದಕ ಪ್ರೋಕ್ಷಣ ಮತ್ತು ಮಂತ್ರ ಸಂಸ್ಕಾರದಿಂದ ಭಸ್ಮವು ಮತ್ತಷ್ಟು ಸಾಮರ್ಥ್ಯಶಾಲಿಯಾಗುವುದಲ್ಲದೇ ಅದೊಂದು ಗುರುಗಳ ದಿವ್ಯ ಅನುಗ್ರಹ ವಾಗಿ ಪರಿಣಮಿಸುವುದು. ಕಾರಣ ಪ್ರತಿಯೊಬ್ಬ ವೀರಶೈವರು ಭಸ್ಮ ನಿರ್ಮಾಣದ ಈ ವಿಧಿಯತ್ತ ಲಕ್ಷ್ಯವಹಿಸಿ ಅಂತಹ ಭಸ್ಮವನ್ನೇ ಉಪಯೋಗಿಸಿ ಕೃತಾರ್ಥರಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೫ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೬

ವಿಷ್ವೇಕ ತಮಮಾದಾಯ ಪಾತ್ರೇಷು ಕಲಶಾದಿಷು ।
ತ್ರಿಸಂಧ್ಯಮಾಚರೇತ್ ಸ್ನಾನಂ ಯಥಾ ಸಂಭವಮೇವವಾ

(ಸಿ. ಶಿ. ೭-೧೮)

ಪೂರ್ವದಲ್ಲಿ ಹೇಳಿದ ವಿಭಿನ್ನ ಪಾತ್ರೆಗಳಲ್ಲಿ ಸಂಗ್ರಹಿಸಿರುವ ಕಲ್ಪಾದಿ ಚತುರ್ವಿಧ ಭಸ್ಮಗಳಲ್ಲಿ ಯಾವುದಾದರೊಂದು ಭಸ್ಮವನ್ನು ತೆಗೆದುಕೊಂಡು ಪ್ರಾತಃ, ಮಧ್ಯಾಹ್ನ ಹಾಗೂ ಸಾಯಂಕಾಲ ಹೀಗೆ ಮೂರು ವೇಳೆ ಇಲ್ಲವೇ ತನಗೆ ಅನುಕೂಲವಾದಷ್ಟು ಸಾರೆ ಭಸ್ಮಸ್ನಾನವನ್ನು ಮಾಡಬೇಕು.

ಸ್ನಾನಕಾಲೇ ಕರೌ ಪಾದೌ ಪ್ರಕ್ಷಾಲ್ಯ ವಿಮಲಾಂಭಸಾ ।
ವಾಮಹಸ್ತತಲೇ ಭಸ್ಮ ಕ್ಷಿಪ್ತ್ವಾಽಽಚ್ಛಾದ್ಯಾನ್ಯ ಪಾಣಿನಾ

ಅಷ್ಟಕೃತ್ವಾಽಥ ಮೂಲೇನ ಮೌನೀ ಭಸ್ಮಾಭಿಮಂತ್ರ್ಯಚ ।
ಶಿರ ಈಶಾನ ಮಂತ್ರೇಣ ಪುರುಷೇಣ ಮುಖಂ ತಥಾ

ಹೃತ್ಪ್ರದೇಶಮಘೋರೇಣ ವಾಮದೇವೇನ ಗುಹ್ಯಕಂ ।
ಪಾದೌ ಸದ್ಯೇನ ಸರ್ವಾಂಗಂ ಪ್ರಣವೇನೈವ ಸೇಚಯೇತ್

(ಸಿ. ಶಿ. ೭.೧೯-೨೧)

ಭಸ್ಮಸ್ನಾನವನ್ನು ಮಾಡುವಾಗ ಮೊದಲು ಸ್ವಚ್ಛವಾದ ಜಲದಿಂದ ಕೈ-ಕಾಲುಗಳನ್ನು ತೊಳೆದುಕೊಂಡು ಎಡ ಅಂಗೈಯೊಳಗೆ ಭಸ್ಮವನ್ನಿರಿಸಿ, ಬಲಗೈಯಿಂದ ಅದನ್ನು ಮುಚ್ಚಬೇಕು. ಹೀಗೆ ಎರಡೂ ಕೈಗಳಿಂದ ಮುಚ್ಚಿದ ಭಸ್ಮವನ್ನು ತನ್ನ ಬಲ ತೊಡೆಯ ಮೇಲೆ ಇರಿಸಿಕೊಂಡು ಮೌನವಾಗಿ ಎಂಟುಸಾರೆ ಪಂಚಾಕ್ಷರ ಮಹಾಮಂತ್ರದಿಂದ ಆ ಭಸ್ಮವನ್ನು ಅಭಿಮಂತ್ರಿಸಬೇಕು. ನಂತರ ಈಶಾನ ಮಂತ್ರದಿಂದ ಶಿರಸ್ಸು, ತತ್ಪುರುಷ ಮಂತ್ರದಿಂದ ಮುಖ, ಅಘೋರ ಮಂತ್ರದಿಂದ ಹೃದಯ, ವಾಮದೇವ ಮಂತ್ರದಿಂದ ನಾಭಿ, ಸದ್ಯೋಜಾತ ಮಂತ್ರದಿಂದ ಪಾದ ಹಾಗೂ ಪ್ರಣವದಿಂದ ಸರ್ವಾಂಗವನ್ನು ಭಸ್ಮದಿಂದ ಪ್ರೋಕ್ಷಿಸಿಕೊಳ್ಳಬೇಕು.

ಭಸ್ಮನಾ ವಿಹಿತಂ ಸ್ನಾನಮಿದ ಮಾಗ್ನೇಯ ಮುತ್ತಮಂ ।
ಸ್ನಾನೇಷು ವಾರುಣಾದ್ಯೇಷು ಮುಖ್ಯಮೇತನ್ಮಲಾಪಹಂ

(ಸಿ. ಶಿ. ೭-೨೨)

ಈ ಭಸ್ಮ ಸ್ನಾನದಿಂದ ಸಕಲ ದೋಷಗಳು ಭಸ್ಮವಾಗುವುದರಿಂದ ಜಲ-ವಾಯು ಮುಂತಾದ ಸಪ್ತವಿಧ ಸ್ನಾನಗಳಿಗಿಂತಲೂ ಇದು ಮುಖ್ಯವೂ ಹಾಗೂ ಉತ್ತಮವೂ ಆಗಿದೆ.

ಭಸ್ಮಸ್ನಾನವತಾಂ ಪುಂಸಾಂ ಯಥಾಯೋಗಂ ದಿನೇ ದಿನೇ ।
ವಾರುಣಾದ್ಯೈರಲಂ ಸ್ನಾನೈರ್ಬಾಹ್ಯ ದೋಷಾಪಹಾರಿಭಿಃ

(ಸಿ. ಶಿ. ೭–೨೩)

ಬಾಹ್ಯಾಭ್ಯಂತರ ದೋಷಗಳೆರಡನ್ನೂ ದೂರ ಮಾಡುವ ಜ್ಞಾನಸಾಧನವಾದ ಭಸ್ಮಸ್ನಾನವನ್ನು ಶಾಸ್ತ್ರೋಕ್ತ ವಿಧಿಯಿಂದ ಪ್ರತಿದಿವಸ ಯಾರು ಮಾಡುತ್ತಾರೆಯೋ ಅವರಿಗೆ ಕೇವಲ ಬಾಹ್ಯದೋಷವನ್ನು ದೂರಮಾಡುವ ಜಲಾದಿ ಸ್ನಾನಗಳಿಂದ ಯಾವ ಪ್ರಯೋಜನವೂ ಇರುವುದಿಲ್ಲ.

ಆಗ್ನೇಯಂ ಭಸ್ಮನಾ ಸ್ನಾನಂ ಯತಿಭಿಸ್ತು ವಿಧೀಯತೇ ।
ಆರ್ದ್ರಸ್ನಾನಾತ್ಪರಂ ಭಸ್ಮ ಆರ್ದ್ರೇ ಜಂತುವಧೋ ಧ್ರುವಂ

(ಸಿ. ಶಿ. ೭–೨೪)

ಯತಿಗಳು ಆಗ್ನೇಯ ಸ್ನಾನವಾದ ಭಸ್ಮಸ್ನಾನವನ್ನೇ ಮಾಡುತ್ತಾರೆ. ಜಲಾದಿ ಆರ್ದ್ರಸ್ನಾನ ದಲ್ಲಿ ಜಲಚರ ಜಂತುಗಳ ಹನನವಾಗುವುದರಿಂದ ಈ ಆರ್ದ್ರಸ್ನಾನ ಕ್ಕಿಂತಲೂ ಭಸ್ಮಸ್ನಾನವೇ ಶ್ರೇಷ್ಠವಾದದ್ದು.

ಆರ್ದ್ರಂ ತು ಪ್ರಕೃತಿಂ ವಿದ್ಯಾತ್ ಪ್ರಕೃತಿಂ ಬಂಧನಂ ವಿದುಃ ।
ಪ್ರಕೃತೇಸ್ತು ಪ್ರಹಾಣಾರ್ಥಂ ಭಸ್ಮನಾ ಸ್ನಾನಮಿಷ್ಯತೇ

(ಸಿ. ಶಿ. ೭–೨೫)

ಆರ್ದ್ರವೇ ಪ್ರಕೃತಿಯು. ಈ ಪ್ರಕೃತಿಯು ಬಂಧನಕಾರಿಯಾದ್ದರಿಂದ ಈ ಪ್ರಕೃತಿಯ ವಿನಾಶಕ್ಕಾಗಿ ಭಸ್ಮಸ್ನಾನವು ವಿಧಿಸಲ್ಪಟ್ಟಿದೆ.

ಬ್ರಹ್ಮಾದ್ಯಾ ವಿಬುಧಾಃ ಸರ್ವೇ ಮುನಯೋ ನಾರದಾದಯಃ ।
ಯೋಗಿನಃ ಸನಕಾದ್ಯಾಶ್ಚ ಬಾಣಾದ್ಯಾ ದಾನವಾ ಅಪಿ

ಭಸ್ಮಸ್ನಾನರತಾಃ ಸರ್ವೇ ಶಿವಭಕ್ತಿಪರಾಯಣಾಃ ।
ನಿರ್ಮುಕ್ತದೋಷಕಲಿಲಾ ನಿತ್ಯ ಶುದ್ಧಾ ಭವಂತಿ ಹಿ

(ಸಿ. ಶಿ. ೭.೨೬–೨೭)

ಬ್ರಹ್ಮಾದಿದೇವತೆಗಳು, ನಾರದಾದಿ ಮುನಿಗಳು, ಸನಕಾದಿ ಯೋಗಿಗಳು ಮತ್ತು ಬಾಣಾದಿ ದಾನವರು ಇವರೆಲ್ಲರೂ ಭಸ್ಮಸ್ನಾನ ನಿಷ್ಠರೂ, ಶಿವಭಕ್ತಿಪರಾಯಣರೂ ಆಗಿ ಸಕಲ ದೋಷ ನಿರ್ಮುಕ್ತರಾಗಿ ಪರಿಶುದ್ಧರಾಗಿರುತ್ತಾರೆ.

ಭಸ್ಮಧಾರಣವ್ರತ :

ಭಸ್ಮೋತ್ಪಾದನೆಯ ನಾಲ್ಕು ವಿಧಿಗಳನ್ನು ಉಪದೇಶಿಸಿದ ನಂತರ ಪೂಜ್ಯಪಾದ ರಾದ ಶ್ರೀ ಜಗದ್ಗುರು ರೇಣುಕರು ಭಸ್ಮಧಾರಣೆಯ ವಿಧಿಯನ್ನು ಉಪದೇಶಿಸಲು ಉಪ ಕ್ರಮಿಸಿ ಸದ್ಯಃ ಭಸ್ಮಸ್ನಾನ ಹಾಗೂ ಅದರ ಮಹತ್ವವನ್ನು ಕುರಿತು ತಿಳಿಯಪಡಿಸುತ್ತಾರೆ.

ಪೂಜ್ಯರು ಉಪದೇಶಿಸಿದ ಈ ಭಸ್ಮಧಾರಣ ವಿಧಿಯಲ್ಲಿ ಮುಖ್ಯವಾಗಿ ಭಸ್ಮಸ್ನಾನ, ಭಸ್ಮೋದ್ಧೂಲನ ಮತ್ತು ತ್ರಿಪುಂಡ್ರ ಧಾರಣವೆಂಬುದಾಗಿ ಮೂರು ವಿಷಯಗಳುಂಟು. ಇವುಗಳ ವಿಷಯವಾಗಿ ನಮ್ಮ ಪ್ರಾಚೀನ ಸಾಹಿತ್ಯವಾದ ವೇದ, ಆಗಮ, ಉಪನಿಷತ್

ಹಾಗೂ ಪುರಾಣಾದಿಗಳಲ್ಲಿ ಸಾಕಷ್ಟು ಪ್ರಮಾಣಗಳು ದೊರೆಯುತ್ತವೆ. ಈ ಭಸ್ಮಧಾರಣೆಯ ವಿಧಿಯನ್ನು ನಿರೂಪಿಸುವ ಪೂರ್ವದಲ್ಲಿ ಭಸ್ಮಧಾರಣೆಯ ವ್ರತದ ಬಗ್ಗೆ ಸ್ವಲ್ಪ ವಿಚಾರಿಸೋಣ.

ಭಸ್ಮಧಾರಣೆಯು ವೀರಶೈವರ ಇಷ್ಟಲಿಂಗ ಪೂಜಾ ವ್ರತದ ಒಂದು ಮಹತ್ವ ಪೂರ್ಣವಾದ ಅಂಗವು. ಅನ್ಯಸಿದ್ಧಾಂತಗಳಲ್ಲಿ ಇದೊಂದು ಸ್ವತಂತ್ರವಾದ ವ್ರತವಾಗಿಯೇ ಪರಿಗಣಿಸಲ್ಪಟ್ಟಿದೆ. ಇದಕ್ಕೆ "ಪಾಶುಪತವ್ರತ"ವೆಂತಲೂ ಕರೆಯುವರು.

ಯಾವಚ್ಛರೀರ ಪಾತಂ ವಾ ದ್ವಾದಶಾಬ್ದ ಮಥಾಪಿ ವಾ ।
ತದರ್ಧಂ ವಾ ತದರ್ಧಂ ವಾ ಮಾಸಮೇಕಂ ತಥಾಪಿ ವಾ ॥
ದಿನದ್ವಾದಶಕಂ ವಾಥ ವ್ರತಸಂಕಲ್ಪನಾವಧಿ ।

(ಕ್ರಿಯಾಸಾರ. ಉಪದೇಶ ೬ ಪುಟ ೨೫)

ವಾಯವೀಯ ಸಂಹಿತೆಯ ಈ ವಚನವನ್ನು ಉದಾಹರಿಸುತ್ತ ಶ್ರೀ ನೀಲಕಂಠ ಶಿವಾಚಾರ್ಯರು ಈ ವ್ರತದ ಅವಧಿಯನ್ನು ನಿರೂಪಿಸಿರುತ್ತಾರೆ. ಯಾವುದೇ ವ್ರತವನ್ನು ಪ್ರಾರಂಭಿಸುವಾಗ ಇದನ್ನು ಎಷ್ಟು ದಿನದವರೆಗೆ ಮಾಡಬೇಕು ? ಎಂಬ ಪ್ರಶ್ನೆ ಬರುವುದು ಸಹಜ. ಅದರಂತೆ ಭಸ್ಮಧಾರಣಾರೂಪವಾದ ಈ ವ್ರತವನ್ನು ಎಷ್ಟು ದಿನದವರೆಗೆ ಪರಿಪಾಲಿಸಬೇಕು ಎಂಬ ಪ್ರಶ್ನೆ ಉದ್ಭವಿಸಿದಾಗ ಅದರ ಅವಧಿಯನ್ನು ಹೀಗೆ ಹೇಳಿದ್ದಾರೆ–

(೧) ಶರೀರಪಾತ ಆಗುವವರೆಗೆ, (೨) ಹನ್ನೆರಡು ವರ್ಷ, (೩) ಆರುವರ್ಷ, (೪) ಮೂರು ವರ್ಷ, (೫) ಒಂದು ತಿಂಗಳು, ಅಥವಾ (೬) ಹನ್ನೆರಡು ದಿನ ಹೀಗೆ ಹನ್ನೆರಡು ದಿನದಿಂದ ಪ್ರಾರಂಭಿಸಿ ಆಜನ್ಮ ಪರ್ಯಂತವಾಗಿ ತಮ್ಮ ತಮ್ಮ ಶಕ್ತ್ಯಾನುಸಾರ ಸಂಕಲ್ಪಮಾಡಿ ಆಚರಿಸುವ ಮಹಾವ್ರತವಿದು. ನಾವು ಎಷ್ಟು ದಿನ ಸಂಕಲ್ಪ ಮಾಡುವೆವೋ ಅಷ್ಟು ದಿನ ಪರ್ಯಂತವಾಗಿ ಹಗಲಿರುಳು ಭಸ್ಮವು ದೇಹದ ಮೇಲೆ ಕಾಣುತ್ತಿರಬೇಕು. ಅಂದಾಗಲೇ ಆ ವ್ರತವು ಪೂರ್ಣವಾಗುವುದು.

ಇನ್ನು ವೀರಶೈವರಿಗೆ ಭಸ್ಮಧಾರಣೆಯು ಲಿಂಗಧಾರಣೆಯಷ್ಟೇ ಮಹತ್ವದ್ದಾಗಿರೋಣದರಿಂದ ನಮಗೆಲ್ಲ ಇದು ಆಜನ್ಮ ವ್ರತವೇ. ಅಂತೆಯೇ ವೀರಶೈವರ ದೇಹದ ಮೇಲೆ ಲಿಂಗವು ಸದಾ ಕಂಗೊಳಿಸುವಂತೆ ಹಣೆಯಲ್ಲಿ ಭಸ್ಮವೂ ವಿರಾಜ ಮಾನವಾಗಿರಬೇಕು. ಈ ವ್ರತವನ್ನು ಅಖಂಡವಾಗಿ ಪರಿಪಾಲಿಸುವ ಬಹಳಷ್ಟು ಜನ ಈಗಲೂ ಇದ್ದಾರೆ. ಧರ್ಮದ ಲಾಂಛನಕ್ಕೆ ಲಜ್ಜೆಪಡುವುದು ಧರ್ಮಿಷ್ಟನ ಲಕ್ಷಣವಲ್ಲ, ಆದ ಕಾರಣ ಪ್ರತಿಯೊಬ್ಬ ವೀರಶೈವರು ಭಸ್ಮಧಾರಣೆಯ ಆಜನ್ಮ ವ್ರತವನ್ನೇ ಪರಿಪಾಲಿಸಬೇಕು.

ಭಸ್ಮಧಾರಣವಿಧಿ :

ಸ್ನಾನದಿಂದ ಶುಚಿರ್ಭೂತನಾದ ವೀರಶೈವನು ಶಿವಪೂಜಾ ಗೃಹವನ್ನು ಪ್ರವೇಶಿಸಿ, ಆಸನದ ಮಧ್ಯದಲ್ಲಿ ಪ್ರಣವವನ್ನು ಬರೆದು ನಮಸ್ಕರಿಸಿ ಪೂರ್ವ ಇಲ್ಲವೇ ಉತ್ತರಾಭಿಮುಖವಾಗಿ ಪದ್ಮಾಸನ ಅಥವಾ ಸುಖಾಸನದಲ್ಲಿ ಆಸೀನನಾಗಿ ಸಂಕಲ್ಪ ನ್ಯಾಸಾದಿಗಳನ್ನಾಚರಿಸಬೇಕು.

ಸಂಕಲ್ಪ :

ಅಸ್ಯಶ್ರೀಭಸ್ಮಧಾರಣ ಮಹಾಮಂತ್ರಸ್ಯ ಪಿಪ್ಪಲಾದಋಷಿಃ
(ಶಿರಸಿ) । ದೇವೀ ಗಾಯತ್ರೀ ಛಂದಃ (ಮುಖೇ) । ಕಾಲಾಗ್ನಿ
ರುದ್ರೋ ದೇವತಾ (ಹೃದಯೇ) । ಅಗ್ನಿ ರಿತಿ ಬೀಜಂ (ನಾಭೌ) ।
ಭಸ್ಮೇತಿ ಶಕ್ತಿಃ (ಆಧಾರೇ) । ಶಿವಇತಿ ಕೀಲಕಂ (ಪಾದಯೋಃ) ।
ಮಮದೇಹೇ ಷಡೂರ್ಮ್ಯಾದಿ ಷಡ್ವಿಕಾರ ನಿವೃತ್ಯರ್ಥ್ಯಂ
ಷಟ್‌ಸ್ಥಲ ಬ್ರಹ್ಮ ನಿರ್ಮಾಣ ಸುಖಸಂಪದವಾಪ್ತಯೇ ಚ,
ಭಸ್ಮಸ್ನಾನೋದ್ಧಲನ ಧಾರಣಾನಿ ಕರಿಷ್ಯೇ ॥

ಹೀಗೆ ಸಂಕಲ್ಪವನ್ನು ಮಾಡಿ ನಂತರ ನ್ಯಾಸವನ್ನು ಮಾಡಬೇಕು.

ಕರನ್ಯಾಸಃ :

ಕಾಲಾಯ ನಮಃ–ಅಂಗುಷ್ಠಾಭ್ಯಾಂ ನಮಃ ।
ಕಲ ವಿಕರಣಾಯ ನಮಃ–ತರ್ಜನೀಭ್ಯಾಂ ನಮಃ ।
ಬಲ ವಿಕರಣಾಯ ನಮಃ–ಮಧ್ಯಮಾಭ್ಯಾಂ ನಮಃ ।
ಬಲ ಪ್ರಮಥನಾಯ ನಮಃ–ಅನಾಮಿಕಾಭ್ಯಾಂ ನಮಃ ।
ಸರ್ವಭೂತ ದಮನಾಯ ನಮಃ–ಕನಿಷ್ಠಿಕಾಭ್ಯಾಂ ನಮಃ ।
ಮನೋನ್ಮನಾಯ ನಮಃ–ಕರತಲಕರಪೃಷ್ಠಾಭ್ಯಾಂ ನಮಃ ।

ಅಂಗನ್ಯಾಸಃ :

ಕಾಲಾಯ ನಮಃ–ಹೃದಯಾಯ ನಮಃ ।
ಕಲವಿಕರಣಾಯ ನಮಃ–ಶಿರಸೇ ಸ್ವಾಹಾ ।
ಬಲವಿಕರಣಾಯ ನಮಃ–ಶಿಖಾಯೈ ವಷಟ್ ।
ಬಲ ಪ್ರಮಥನಾಯ ನಮಃ–ಕವಚಾಯ ಹುಂ ।
ಸರ್ವಭೂತದಮನಾಯ ನಮಃ–ನೇತ್ರತ್ರಯಾಯ ವೌಷಟ್ ।
ಮನೋನ್ಮನಾಯ ನಮಃ–ಅಸ್ತ್ರಾಯಫಟ್ ।
ಓಂ ಭೂರ್ಭುವಸ್ಸುವ ರೋಮಿತಿ ದಿಗ್ಬಂಧಃ ।

ಧ್ಯಾನಂ :

ಅಗ್ನೇರ್ವೀರ್ಯಮಹಾವೀರ್ಯಂ ಭುವೋ ವೀರ್ಯಂ ತಥೈವಚ ॥
ಸರ್ವೇಷಾಂ ಜ್ಯೋತಿಷಾಂ ವೀರ್ಯಂ ಭಸ್ಮ ರಕ್ಷತು ಸರ್ವದಾ ।
ಭಸ್ಮಜ್ಯೋತಿಃ ಸ್ವರೂಪಾಯ ಶಿವಾಯ ಪರಮಾತ್ಮನೇ ॥
ಷಟ್ತ್ರಿಂಶತ್ತತ್ತ್ವಬೀಜಾಯ ನಮಃ ಶಾಂತಾಯ ತೇಜಸೇ ।

ಈ ರೀತಿಯಾಗಿ ನ್ಯಾಸ ಮತ್ತು ಧ್ಯಾನಾದಿಗಳನ್ನು ಮಾಡಿದ ನಂತರ ಸಪ್ತ ಸ್ನಾನಗಳಲ್ಲಿ ಶ್ರೇಷ್ಠವಾದ ಭಸ್ಮಸ್ನಾನವನ್ನು ಮಾಡಬೇಕು.

ಸಪ್ತಸ್ನಾನಗಳು :

ಧರ್ಮಶಾಸ್ತ್ರದಲ್ಲಿ ದೇಹ ಹಾಗೂ ಮನಸ್ಸಿನ ಪರಿಶುದ್ಧಿಗಾಗಿ ಕಾಲೋಚಿತ ಗಳಾದ ಮಂತ್ರಸ್ನಾನ, ಭೌಮಸ್ನಾನ, ಆಗ್ನೇಯ ಸ್ನಾನ, ವಾಯವ್ಯಸ್ನಾನ, ದಿವ್ಯಸ್ನಾನ, ವಾರುಣಸ್ನಾನ ಮತ್ತು ಮಾನಸಸ್ನಾನವೆಂಬುದಾಗಿ ಸಪ್ತಸ್ನಾನಗಳು ಪ್ರತಿಪಾದಿಸಲ್ಪಟ್ಟಿವೆ.

(೧) ಮಂತ್ರಸ್ನಾನ :

ಮಂತ್ರ ಪುರಃ ಸರವಾಗಿ ಮಾಡುವಸ್ನಾನವೇ ಮಂತ್ರಸ್ನಾನವು. ಈ ಸ್ನಾನವನ್ನು ಮಾಡುವಾಗ ತನ್ನ ಇಷ್ಟ ಮಂತ್ರವನ್ನು ಶ್ರದ್ಧೆಯಿಂದ ಪಠಿಸುತ್ತ ನೀರಿನ ಕೆಲವು ಹನಿಗಳನ್ನು ಮಸ್ತಕದ ಮೇಲೆ ಪ್ರೋಕ್ಷಿಸಿಕೊಳ್ಳಬೇಕು. ಇದುವೇ ಮಂತ್ರಸ್ನಾನವು.

(೨) ಭೌಮ ಸ್ನಾನ :

ಭೂಮಿ ಸಂಬಂಧವಾದ ಸ್ನಾನವೇ ಭೌಮಸ್ನಾನವು. ಗಂಗಾ ಮುಂತಾದ ಪವಿತ್ರ ನದಿಗಳ ಮಣ್ಣನ್ನು ತೆಗೆದುಕೊಂಡು ಮಸ್ತಕದಮೇಲೆ ಅದರ ತಿಲಕವನ್ನು ಧರಿಸಿಕೊಳ್ಳಬೇಕು. ಈ ರೀತಿ ಪವಿತ್ರವಾದ ಮಣ್ಣಿನ ತಿಲಕ ಧಾರಣೆಯೇ ಭೌಮಸ್ನಾನವು.

(೩) ಆಗ್ನೇಯ ಸ್ನಾನ:

ಅಗ್ನಿ ಸಂಬಂಧವಾದ ಸ್ನಾನವೇ ಆಗ್ನೇಯಸ್ನಾನವು. ಅಗ್ನಿಯಲ್ಲಿ ವಸ್ತು ದಾಹಕ ಶಕ್ತಿ ಇರುವಂತೆ ಭಸ್ಮದಲ್ಲಿ ಸಕಲದೋಷದಾಹಕ ಶಕ್ತಿ ಇರುತ್ತದೆ. ಅಂತೆಯೇ ಭಸ್ಮಕ್ಕೆ ಅಗ್ನಿಶಬ್ದವು ಪ್ರಯುಕ್ತವಾಗಿದೆ. ಆದಕಾರಣ ಮೈತುಂಬ ಭಸ್ಮವನ್ನು ಪ್ರೋಕ್ಷಿಸಿಕೊಳ್ಳುವುದೇ ಆಗ್ನೇಯ ಸ್ನಾನವು.

(೪) ವಾಯವ್ಯ ಸ್ನಾನ :

ವಾಯುಸಂಬಂಧವಾದ ಸ್ನಾನವೇ ವಾಯವ್ಯಸ್ನಾನವು. ಇಲ್ಲಿ ಕೇವಲ ವಾಯುವಿನ ಸ್ಪರ್ಶವೇ ವಾಯವ್ಯಸ್ನಾನವಲ್ಲ. ಕಿಂತು ಗೋಧೂಳಿಮಿಶ್ರತವಾದ ವಾಯುವಿನ ಸ್ಪರ್ಶವಾಗಬೇಕು. ಆಕಳುಗಳು ಸಾಯಂಕಾಲ ಮನೆಗೆ ಬರುವಾಗ ಆಕಾಶದಲ್ಲೆಲ್ಲ ಗೋಧೂಳಿಯು ವ್ಯಾಪ್ತವಾಗುವುದು. ಆ ಸಮಯಕ್ಕೆ ಗೋಧೂಳಿ ಸಮಯವೆನ್ನುವರು. ಈ ಸಮಯದಲ್ಲಿ ಯಾರು ಶ್ರದ್ಧೆಯಿಂದ ಗೋಧೂಳಿಯುಕ್ತವಾದ ವಾಯುವಿನ ಸ್ಪರ್ಶಮಾಡಿಕೊಳ್ಳುವರೋ ಅವರಿಗೆ ವಾಯವ್ಯಸ್ನಾನದ ಫಲವು ಪ್ರಾಪ್ತವಾಗುವುದು.

(೫) ದಿವ್ಯ ಸ್ನಾನ :

''ದಿವಿಭವಂ ದಿವ್ಯಂ'' ಎಂಬ ವ್ಯುತ್ಪತ್ತಿಯ ಮೇರೆಗೆ ಆಕಾಶದಲ್ಲಿಯ ಸೂರ್ಯನ ಕಿರಣಗಳ ಸ್ನಾನಕ್ಕೆ ದಿವ್ಯಸ್ನಾನವೆನ್ನುವರು. ಪ್ರಾತಃಕಾಲ ಹಾಗೂ ಸಾಯಂಕಾಲದ ಹೂಬಿಸಿಲಿನ ಸ್ನಾನವು ಬಹು ಪ್ರಶಸ್ತವಾದುದು. ಹೀಗೆ ಶ್ರದ್ಧೆಯಿಂದ ಹೂ ಬಿಸಿಲಿನ ಸ್ನಾನಮಾಡುವುದೇ ದಿವ್ಯಸ್ನಾನವು.

(೬) ವಾರುಣ ಸ್ನಾನ :

ನೀರಿನಿಂದ ಮಾಡುವ ಸ್ನಾನವೇ ವಾರುಣ ಸ್ನಾನವು. ನಿರೋಗಿಯಾದ ಮನುಷ್ಯನಿಗೆ ತಣ್ಣೀರಿನ ಸ್ನಾನವು ಅದರಲ್ಲಿಯೂ ಹಳ್ಳ–ನದೀ ಮುಂತಾದ ನೀರಿನ ಸ್ನಾನವು ಶ್ರೇಷ್ಠವಾದದ್ದು.

(೭) ಮಾನಸ ಸ್ನಾನ :

ಬಾಹ್ಯ ಯಾವುದೊಂದು ಉಪಕರಣವಿಲ್ಲದೇ ಮನಸ್ಸಿನಲ್ಲಿ ಭಗವಂತನನ್ನು ಸ್ಮರಿಸುವುದೇ ಮಾನಸ ಸ್ನಾನವು.

ಭಸ್ಮಸ್ನಾನದ ವೈಶಿಷ್ಟ್ಯ :

ಈ ಸಪ್ತವಿಧ ಸ್ನಾನಗಳಲ್ಲಿ ಬಾಹ್ಯ ಹಾಗೂ ಅಭ್ಯಂತರ ಸಕಲ ದೋಷಗಳನ್ನು ದೂರಮಾಡುವ ಆಗ್ನೇಯ ಸ್ನಾನವೆಂದು ಪ್ರಸಿದ್ಧವಾದ ಭಸ್ಮಸ್ನಾನವೇ ಮುಖ್ಯವಾದದ್ದು. ಅಂತೆಯೇ ಪೂಜ್ಯಪಾದರಾದ ಶ್ರೀಜಗದ್ಗುರು ರೇಣುಕರು–

ಭಸ್ಮನಾ ವಿಹಿತಂ ಸ್ನಾನಮಿದಮಾಗ್ನೇಯಮುತ್ತಮಂ ।
ಸ್ನಾನೇಷು ವಾರುಣಾದ್ಯೇಷು ಮುಖ್ಯಮೇತನ್ಮಲಾಪಹಂ ॥

(ಸಿ. ಶಿ. ೭–೨೨)

ಎಂಬುದಾಗಿ ಉಪದೇಶಿಸಿದ್ದಾರೆ.

ಜಲಸ್ನಾಕ್ಕೆ ಆರ್ದ್ರಸ್ನಾನವೆಂಬುದಾಗಿಯೂ ಕರೆಯುವರು. ನಮ್ಮೆಲ್ಲರ ಉತ್ಪತ್ತಿಗೆ ಕಾರಣೀಭೂತಗಳಾದ ಶುಕ್ಲಶೋಣಿಗಳು ಜಲಮಯವಾದ್ದರಿಂದ ನಮ್ಮ ಗರ್ಭಾವಾಸ ರೂಪ ಬಂಧನಕ್ಕೆ ಜಲವೇ ಪ್ರಕೃತಿಯು ಅರ್ಥಾತ್ ಕಾರಣವು. ಈ ಪ್ರಕೃತಿಯ ಪ್ರಹಾರಕ್ಕಾಗಿ ಭಸ್ಮಸ್ನಾನವು ವಿಹಿತವಾಗಿದೆ ಎಂಬುದಾಗಿಯೂ–

ಆರ್ದ್ರಂ ತು ಪ್ರಕೃತಿಂ ವಿದ್ಯಾತ್ ಪ್ರಕೃತಿಂ ಬಂಧನಂ ವಿದುಃ ।
ಪ್ರಕೃತೇಸ್ತು ಪ್ರಹಾಣಾರ್ಥಂ ಭಸ್ಮನಾ ಸ್ನಾನಮಿಷ್ಯತೇ ॥

(ಸಿ. ಶಿ. ೭–೨೫)

ಈ ಶ್ಲೋಕದಲ್ಲಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ. ಹೀಗೆ ಭಸ್ಮಸ್ನಾನವು ಜನ್ಮದುಃಖ ವನ್ನೇ ದೂರಮಾಡುವದಾದ್ದರಿಂದ ಯತಿಗಳು ಸದಾ ಭಸ್ಮಸ್ನಾನ ನಿಷ್ಠರಾಗಿರುತ್ತಾರೆ.

ಭಸ್ಮಸ್ನಾನವಿಧಿ :

ಭಸ್ಮಸ್ನಾನವನ್ನು ಮಾಡಲುದ್ಯುಕ್ತನಾದ ಸಾಧಕನು ಶುಚಿರ್ಭೂತನಾಗಿ ಪವಿತ್ರಾಸನ ದಲ್ಲಿ ಕುಳಿತು ಎಡ ಅಂಗೈಯಲ್ಲಿ ಭಸ್ಮವನ್ನು ಇಟ್ಟುಕೊಂಡು ಅದರ ಮೇಲೆ ಬಲಗೈಯನ್ನು ಮುಚ್ಚಿ, ಬಲ ತೊಡೆಯಮೇಲೆ ಇರಿಸಿ, ಎಂಟುಸಾರೆ ಪಂಚಾಕ್ಷರ ಮಹಾಮಂತ್ರದಿಂದ ಅಭಿಮಂತ್ರಿಸಿ, ಈ ಪೂರ್ವದಲ್ಲಿ ಪ್ರತಿಪಾದಿಸಲ್ಪಟ್ಟ ಪಂಚಬ್ರಹ್ಮ ಮಂತ್ರದ ಈಶಾನ ಮಂತ್ರದಿಂದ ಶಿರಸ್ಸು, ತತ್ಪುರುಷ ಮಂತ್ರದಿಂದ ಮುಖ, ಅಘೋರ ಮಂತ್ರದಿಂದ ಹೃದಯ, ವಾಮದೇವ ಮಂತ್ರದಿಂದ ನಾಭಿ, ಸದ್ಯೋಜಾತ ಮಂತ್ರದಿಂದ ಮತ್ತು ಓಂಕಾರದಿಂದ ಸರ್ವಾಂಗದಲ್ಲಿ ಅನಾಮಿಕಾ ಬೆರಳಿನಿಂದ ಭಸ್ಮಧೂಲಿಯನ್ನು ಚಿಮುಕಿಸಿ ಗೊಳ್ಳಬೇಕು. ಇದುವೇ ಭಸ್ಮಸ್ನಾನವು.

ಹೀಗೆ ಭಸ್ಮಸ್ನಾನವನ್ನು ಮಾಡುವಾಗ ಭಸ್ಮದ ಕಣಗಳು ಭೂಮಿಯ ಮೇಲೆ ಬೀಳದಂತೆ ಎಚ್ಚರಿಕೆಯನ್ನು ವಹಿಸಬೇಕು. ಏಕೆಂದರೆ–

ಯಾವಂತಃ ಪತಿತಾ ಭೂಮೌ ಭಸ್ಮನಃ ಪರಮಾಣವಃ ।
ತಾವದ್ವರ್ಷ ಸಹಸ್ರಾಣಿ ರೌರವಂ ನರಕಂ ವ್ರಜೇತ್ ॥
ಇತ್ಯೇವಂ ಭಸ್ಮಪತನೇ ಬಹುದೋಷಸ್ಯ ಕೀರ್ತನಾತ್ ।

(ಕ್ರಿಯಾಸಾರ ೬–೫೫ ಪುಟ ೨೨)

ಎಷ್ಟು ಭಸ್ಮಕಣಗಳು ಪ್ರಮಾದದಿಂದ ಭೂಮಿಯ ಮೇಲೆ ಬೀಳುತ್ತವೆಯೋ ಅಷ್ಟು ಸಹಸ್ರ ವರ್ಷ ಪರ್ಯಂತವಾಗಿ ರೌರವ ನರಕವು ಪ್ರಾಪ್ತವಾಗುತ್ತದೆ ; ಎಂಬು ದಾಗಿ ಶ್ರೀ ನೀಲಕಂಠಶಿವಾಚಾರ್ಯರು ಪುರುಷಾರ್ಥಪ್ರಬೋಧ ಗ್ರಂಥದ ಪ್ರಮಾಣ ವನ್ನು ಉದಾಹರಿಸಿ ನಮ್ಮೆಲ್ಲರನ್ನು ಜಾಗ್ರತಗೊಳಿಸಿದ್ದಾರೆ. ಕಾರಣ ಭಸ್ಮದ ಒಂದು ಕಣವೂ ಭೂಮಿಗೆ ಬೀಳದಂತೆ ಭಸ್ಮಸ್ನಾನವನ್ನಾಚರಿಸಬೇಕು.

ಭಸ್ಮಸ್ನಾನದ ಫಲ :

ಇಷ್ಟೊಂದು ಅವಧಾನ ಪೂರ್ವಕವಾಗಿ ಮಾಡಿದ ಭಸ್ಮಸ್ನಾನದ ಫಲವೇನು ? ಎಂಬ ಪ್ರಶ್ನೆಯು ಉದ್ಭವಿಸುವುದು ಸಹಜ. ಹಿಂದೊಮ್ಮೆ ವೈದೇಹ ಜನಕ ಮಹಾರಾಜನು ಯಾಜ್ಞ್ಯವಲ್ಕ್ಯಮಹರ್ಷಿಗಳನ್ನು ಕುರಿತು ಪ್ರಶ್ನಿಸಿದ್ದನು–

''ಯಾಜ್ಞ್ಯವಲ್ಕ್ಯ ಭಸ್ಮಸ್ನಾನೇನ ಕಿಂ ಜಾಯತ ಇತಿ । ''

ಇದಕ್ಕೆ ಯಾಜ್ಞ್ಯವಲ್ಕ್ಯರು–

''ಯಸ್ಯ ಕಸ್ಯ ಚಿಚ್ಛರೀರೇ ಯಾವಂತೋ
ರೋಮಕೂಪಾಸ್ತಾವಂತಿ ಲಿಂಗಾನಿ ಭೂತ್ವಾ ತಿಷ್ಠಂತಿ ॥ ''

(ಬೃಹಜ್ಜಾಬಾಲ. ೭–೮)

ಹೇ ಜನಕನೇ! ಈ ಭಸ್ಮಸ್ನಾನಮಾಡುವುದರಿಂದ ಶರೀರದ ರೋಮಕೂಪಗಳಲ್ಲೆಲ್ಲ ಪ್ರವೇಶಿಸಿದ ಆ ಭಸ್ಮದ ಕಣಗಳು ಅಷ್ಟೊಂದು ಶಿವಲಿಂಗಗಳಾಗಿ ಪರಿಣಮಿಸುತ್ತವೆ. ಅರ್ಥಾತ್ ಭಸ್ಮಸ್ನಾನವನ್ನು ಮಾಡಿದವನ ಸರ್ವಾಂಗವೆಲ್ಲ ಲಿಂಗಮಯವಾಗುತ್ತದೆ. ಆಗ ಅವನೊಬ್ಬ ಪರಮ ಪವಿತ್ರ ಜೀವಿಯಾಗಿ ಪರಿಣಮಿಸುತ್ತಾನೆ.

ಭಸ್ಮಸ್ನಾನದ ವೈಜ್ಞಾನಿಕಲಾಭ :

ಗೋಮಯದಿಂದ ನಿರ್ಮಿತವಾದ ಭಸ್ಮದಲ್ಲಿ ರೋಗಾಣುಗಳನ್ನು ನಾಶಮಾಡುವ ಸಾಮರ್ಥ್ಯವು ಸಹಜವಾಗಿರುವುದರಿಂದ ಈ ಪರಿಶುದ್ಧ ಭಸ್ಮವನ್ನು ಮೈತುಂಬ ಲೇಪಿಸಿ ಕೊಂಡಾಗ ಇದ್ದ ಚರ್ಮರೋಗದ ಬಾಧೆ ದೂರಾಗುವುದಲ್ಲದೆ ಪುನಃ ಚರ್ಮರೋಗದ ಪ್ರಾದುರ್ಭಾವವೇ ಆಗುವದಿಲ್ಲ.

ಇಂದಿನ ಸುಶಿಕ್ಷಿತ ಸಮಾಜದಲ್ಲಿ ಮುಖ ಹಾಗೂ ಮೈಗೆ ಸುಗಂಧವಾದ ಪೌಡರ ಹಚ್ಚಿಕೊಳ್ಳುವ ಪರಿಪಾಟಿ ಅಧಿಕವಾಗಿ ಬೆಳೆದದ್ದು ಕಂಡುಬರುತ್ತದೆ. ಇನ್ನೂ ಹೆಚ್ಚಿಗೆ ಸುಧಾರಿಸಿದವರೆಂಬ ಭ್ರಮೆಯುಳ್ಳ ಜನರು ತುಟಿ ಹಾಗೂ ಮುಖ–ಮೈಗಳಿಗೆ ನಾಟಕದಲ್ಲಿಯ ಪಾತ್ರಧಾರಿಗಳಂತೆ ಕೆಂಪು ಬಣ್ಣವನ್ನೂ ಬಳೆದುಕೊಳ್ಳುವುದನ್ನು ದೊಡ್ಡ–ದೊಡ್ಡ ಪಟ್ಟಣಗಳಲ್ಲಿ ಕಾಣುತ್ತೇವೆ.

ಇಂತಹ ಆಧುನಿಕ ಆಕರ್ಷಕ ಪ್ರಸಾಧನ ಸಾಮಗ್ರಿಗಳಿಂದ ಕೆಲಸಮಯದವರೆಗೆ ಸುಂದರರಾಗಿಯೂ ಗಂಧರ್ವರಂತೆ ಸುಗಂಧ ಭರಿತರಾಗಿಯೂ ತೋರಬಹುದು ಆದರೆ ಇದರ ದುಷ್ಪರಿಣಾಮವು ಹೇಳತೀರದಷ್ಟು. ಸ್ನೋ, ಪೌಡರ ಮುಂತಾದ ಪ್ರಸಾಧನ ಸಾಮಗ್ರಿಗಳಲ್ಲಿ ಸುಗಂಧದ ಹೊರತಾಗಿ ಮತ್ತಾವ ಪೋಷಕ ಇಲ್ಲವೇ ಸಂರಕ್ಷಕ ತತ್ವಗಳು ಕಂಡು ಬರುವುದಿಲ್ಲ.

ಇವುಗಳನ್ನು ಪ್ರತಿನಿತ್ಯ ಉಪಯೋಗಿಸುತ್ತ ಹೋದರೆ. ''ಚರ್ಮದಕ್ಯಾನ್ಸರ'' ಉಂಟಾಗುವುದೆಂಬ ನಿರ್ಣಯವನ್ನು ಭಾರತೀಯ ಹಾಗೂ ಪಾಶ್ಚಾತ್ಯ ವೈದ್ಯರು ಸಮಾಜಕ್ಕೆ ಕೊಟ್ಟಿದ್ದಾರೆ. ಆದರೆ ಅದರತ್ತ ಲಕ್ಷ್ಯವಹಿಸುವವರಾರು. ? ಆದಕಾರಣ ಪೌಡರಿನ ಸ್ಥಾನದಲ್ಲಿ ಗೋಮಯ ಭಸ್ಮವನ್ನೇ ಉಪಯೋಗಿಸಿದರೆ ಆರ್ಥಿಕ ಉಳಿತಾಯದ ಜೊತೆಗೆ ಉತ್ತಮ ಸ್ವಾಸ್ಥ್ಯವೂ ಲಭಿಸುವುದು. ಈ ಭಸ್ಮದಲ್ಲಿ ಸುಗಂಧದ ಅಪೇಕ್ಷೆ ಇದ್ದರೆ–

ಸಂಯೋಜ್ಯ ಗಂಧಸಲಿಲೈಃ ಕಪಿಲಾಮೂತ್ರಕೇಣ ವಾ ।
ಚಂದ್ರ ಕುಂಕುಮ ಕಾಶ್ಮೀರ ಮುಶೀರಂ ಚಂದನಂ ತಥಾ ॥
ಗುರುತ್ರಿತಯಂ ಚೈವ ಚೂರ್ಣಯಿತ್ವಾ ತು ಸೂಕ್ಷ್ಮತಃ ।
ರಕ್ಷಿಪೇದ್ಭಸ್ಮನಿ ತಚ್ಚೂರ್ಣಮೋಮೀತಿ ಬ್ರಹ್ಮಮಂತ್ರತಃ ॥

(ಬೃಹಜ್ಜಾ. ಉ. ೩–೨೭, ೨೮)

ಈ ಉಪನಿಷದ್ ಮಂತ್ರದಲ್ಲಿ ಹೇಳಲಾದ ಸುಗಂಧಜಲ, ಕಪಿಲಾ ಗೋವಿನ ಮೂತ್ರ, ಕುಂಕುಮ, ಕಾಶ್ಮೀರದ ಉಶೀರ, ಶ್ರೀಗಂಧ ಮತ್ತು ಬಾಳದ ಬೇರು ಮುಂತಾದ ಪ್ರಾಚೀನ ಸುಗಂಧ ದ್ರವ್ಯಗಳನ್ನು ಇಲ್ಲವೇ ಆಧುನಿಕ ಸುಗಂಧ ದ್ರವ್ಯಗಳನ್ನಾದರೂ ಭಸ್ಮದಲ್ಲಿ ಮಿಶ್ರಣ ಮಾಡಿಕೊಳ್ಳಬಹುದು. ಈ ರೀತಿಯಾಗಿ ಸುಗಂಧ ದ್ರವ್ಯಗಳಿಂದ ಯುಕ್ತವಾದ ಈ ಭಸ್ಮವು ಶರೀರದ ಸೌಂದರ್ಯವನ್ನು ವರ್ಧಿಸುವುದರ ಜೊತೆಗೆ ಶಾರೀರಿಕ ಹಾಗೂ ಮಾನಸಿಕ ಆರೋಗ್ಯವನ್ನು ದಯಪಾಲಿಸುವುದು. ಇಷ್ಟುದಿನಗಳವರೆಗೆ ಕೃತ್ರಿಮ ಸ್ನೋ–ಪೌಡರುಗಳನ್ನು ಉಪ ಯೋಗಿಸಿದ ಜನರು ಇನ್ನು ಮೇಲಾದರೂ ಈ ಭಸ್ಮಸ್ನಾನದ ಶ್ರೇಷ್ಠ ವೈಜ್ಞಾನಿಕ ಫಲದ ಅನುಭವವನ್ನು ಮಾಡಿಕೊಳ್ಳಬೇಕು.

### ಭಸ್ಮಸ್ನಾನನಿಷ್ಠ ದೇವ-ದಾನವಾದಿಗಳು :

ದೇವಾಧಿದೇವನಾದ ಮಹಾದೇವನಿಗೆ ಪ್ರಿಯವಾದ ಈ ಭಸ್ಮಸ್ನಾನವು ಅವನ ಭಕ್ತರಾದ ದೇವ ದಾನವರಿಗೂ ಪ್ರಿಯವಾಗಿದೆ ಎಂಬುದನ್ನು ''ಬ್ರಹ್ಮಾದ್ಯಾ ವಿಬುಧಾಃ ಸರ್ವೇ................. ನಿತ್ಯಶುದ್ಧಾ ಭವಂತಿ ಹಿ'' ಪೂರ್ವೋಕ್ತಗಳಾದ ಈ ಎರಡು ಶ್ಲೋಕಗಳಲ್ಲಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ. ಅವರ ಉಪದೇಶಾನುಸಾರವಾಗಿ ಬ್ರಹ್ಮನೇ ಮೊದಲಾದ ಮೂವತ್ತುಮೂರು ಕೋಟಿ ದೇವತೆಗಳು, ನಾರದನೇ ಮೊದಲಾದ ಸಕಲ ಮುನಿಗಳು, ಸನಕ–ಸನಂದಾದಿ ಯೋಗಿಗಳು ಮತ್ತು ಬಾಣಾ ಸುರಾದಿ ದಾನವರು ಇವರೆಲ್ಲರೂ ಶಿವಭಕ್ತಿಪರಾಯಣರಾಗಿ ಹಾಗೂ ಭಸ್ಮಸ್ನಾನ ನಿಷ್ಠರಾಗಿ ಅಂತೆಯೇ ಸಕಲ ದೋಷಶೂನ್ಯರಾಗಿ ಪರಿಶುದ್ಧರಾದರು.

ಈ ಪ್ರಾಚೀನಾಚಾರ್ಯರ ಮಾರ್ಗವನ್ನವಲಂಬಿಸಿ ನಾವಾದರೂ ಭಸ್ಮಸ್ನಾನ ನಿಷ್ಠರಾಗಿ ಅದರ ಸಮುಚಿತ ಲಾಭವನ್ನು ಪಡೆದು ಧನ್ಯರಾಗೋಣ.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೬ ಆಗಸ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೭

ನಮಃ ಶಿವಾಯೇತಿ ಭಸ್ಮ ಕೃತ್ವಾ ಸಪ್ತಾಭಿಮಂತ್ರಿತಂ ।
ಉದ್ಧೂಲಯೇತ್ತೇನ ದೇಹಂ ತ್ರಿಪುಂಡ್ರಂ ಚಾಪಿ ಧಾರಯೇತ್

(ಸಿ. ಶಿ. ೭–೨೮)

ನಮಃ ಶಿವಾಯ ಎಂಬ ಈ ಪಂಚಾಕ್ಷರ ಮಹಾಮಂತ್ರದಿಂದ ಭಸ್ಮವನ್ನು ಏಳು ಸಾರೆ ಅಭಿಮಂತ್ರಿಸಿ, ಶರೀರದ ತುಂಬೆಲ್ಲ ಲೇಪಿಸಿಕೊಳ್ಳಬೇಕು ಹಾಗೂ ತ್ರಿಪುಂಡ್ರವನ್ನು ಧರಿಸಿಕೊಳ್ಳಭೇಕು.

ಸರ್ವಾಂಗೋದ್ಧೂಲನಂ ಚಾಪಿ ನ ಸಮಾನಂ ತ್ರಿಪುಂಡ್ರಕೈಃ ।
ತಸ್ಮಾತ್ರಿಪುಂಡ್ರಮೇವೈಕಂ ಲಿಖೇದುದ್ಧೂಲನಂ ವಿನಾ

(ಸಿ. ಶಿ. ೭–೨೯)

ಭಸ್ಮವನ್ನು ಶರೀರದ ತುಂಬೆಲ್ಲ ಧರಿಸಿಕೊಂಡರೂ ಅದು ಒಂದು ತ್ರಿಪುಂಡ್ರಕ್ಕೆ ಸಮಾನವಾಗಲಾರದು. ಆದ್ದರಿಂದ ಉದ್ಧೂಲನವನ್ನು ಮಾಡಿಕೊಳ್ಳದಿದ್ದರೂ ತ್ರಿಪುಂಡ್ರ ವನ್ನು ಮಾತ್ರ ಅವಶ್ಯವಾಗಿ ಧರಿಸಿಕೊಳ್ಳಬೇಕು.

ತ್ರಿಪುಂಡ್ರಂ ಧಾರಯೇನ್ನಿತ್ಯಂ ಭಸ್ಮನಾ ಸಜಲೇನ ಹಿ ।
ಸ್ಥಾನೇಷು ಪಂಚದಶಸು ಶರೀರೇ ಸಾಧಕೋತ್ತಮಃ

(ಸಿ. ಶಿ. ೭–೩೦)

ಶ್ರೇಷ್ಠಸಾಧಕನು ಜಲಮಿಶ್ರಿತವಾದ ಭಸ್ಮದಿಂದ ತನ್ನ ಶರೀರದ ಹದಿನೈದು ಸ್ಥಾನಗಳಲ್ಲಿ ಪ್ರತಿದಿವಸ ತ್ರಿಪುಂಡ್ರವನ್ನು ಧರಿಸಿಕೊಳ್ಳಬೇಕು.

ಉತ್ತಮಾಂಗೇ ಲಲಾಟೇ ಚ ಶ್ರವಣದ್ವಿತಯೇ ತಥಾ ।
ಗಲೇ ಭುಜದ್ವಯೇ ಚೈವ ಹೃದಿ ನಾಭೌ ಚ ಪೃಷ್ಠಕೇ

ಬಾಹು ಯುಗ್ಮೇ ಕಕುದ್ದೇಶೇ ಮಣಿಬಂಧದ್ವಯೇ ತಥಾ ।
ತ್ರಿಪುಂಡ್ರಂ ಭಸ್ಮನಾಧಾರ್ಯಂ ಮೂಲಮಂತ್ರೇಣ ಸಾಧಕೈಃ

ಸಾಧಕನು ತನ್ನ ಶರೀರದ (೧) ಮಸ್ತಕ, (೨) ಹಣೆ, (೩–೪) ಎರಡುಕಿವಿಗಳು, (೫) ಕಂಠ, (೬–೭) ಎರಡುಭುಜಗಳು, (೮) ಹೃದಯ (೯) ನಾಭಿ, (೧೦) ಬೆನ್ನು, (೧೧–೧೨) ಎರಡು ಬಾಹುಗಳು, (೧೩) ಹೆಗಲು, (೧೪–೧೫) ಎರಡು ಮುಂಗೈಗಳು ಹೀಗೆ ಈ ಹದಿನೈದು ಸ್ಥಾನಗಳಲ್ಲಿ ಪಂಚಾಕ್ಷರಮಂತ್ರ ಪುರಃ ಸರವಾಗಿ ತ್ರಿಪುಂಡ್ರವನ್ನು ಧರಿಸಿಗೊಳ್ಳಬೇಕು.

ವಾಮಹಸ್ತತಲೇ ಭಸ್ಮಕ್ಷಿಪ್ತ್ವಾಽಽಚ್ಛಾದ್ಯಾನ್ಯ ಪಾಣಿನಾ ।
ಅಗ್ನಿರಿತ್ಯಾದಿ ಮಂತ್ರೇಣ ಸ್ಪೃಶನ್ ವಾರಾಽಭಿಮಂತ್ರ್ಯ ಚ

ತ್ರಿಪುಂಡ್ರಮುಕ್ತಸ್ಥಾನೇಷು ದದ್ಯಾತ್ಸಜಲ ಭಸ್ಮನಾ ।
ಶಿವಂ ಶಿವಂಕರಂ ಶಾಂತಂ ಸಪ್ರಾಪ್ನೋತಿ ನ ಸಂಶಯಃ

(ಸಿ. ಶಿ. ೭.೩೩–೩೪)

ಎಡಗೈಯಲ್ಲಿ ಭಸ್ಮವನ್ನಿಟ್ಟುಕೊಂಡು ಬಲಗೈಯಿಂದ ಅದನ್ನು ಮುಚ್ಚಿ=ಅಗ್ನಿರಿತಿಭಸ್ಮ ವಾಯುರಿತಿ ಭಸ್ಮ ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ''ಎಂಬ ಈ ಮಂತ್ರವನ್ನುಚ್ಚರಿಸುತ್ತ ಭಸ್ಮವನ್ನು ಮುಟ್ಟಿ, ಉದಕದಿಂದ ೭ಸಾರೆ ಅಭಿಮಂತ್ರಿಸಿ, ಜಲಮಿಶ್ರಿತವಾದ ಭಸ್ಮದಿಂದ ಹದಿನೈದು ಸ್ಥಾನಗಳಲ್ಲಿ ತ್ರಿಪುಂಡ್ರವನ್ನು ಧರಿಸಿಕೊಳ್ಳಬೇಕು. ಈ ರೀತಿ ಶ್ರದ್ಧೆಯಿಂದ ಪ್ರತಿದಿವಸ ತ್ರಿಪುಂಡ್ರವನ್ನು ಧರಿಸಿಕೊಳ್ಳುವ ಸಾಧಕನು ನಿಶ್ಚಯವಾಗಿ ಕಲ್ಯಾಣಕರನೂ, ಶಾಂತನೂ ಆದ ಶಿವನನ್ನೇ ಹೊಂದುತ್ತಾನೆ. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಭಸ್ಮೋದ್ಧೂಲನ :

ಭಸ್ಮಧಾರಣ ವಿಧಿಯಲ್ಲಿ ಭಸ್ಮಸ್ನಾನದ ನಂತರ ಬರುವ ಎರಡನೇ ಹಂತವೇ ಭಸ್ಮೋದ್ಧೂಲನವು. ಉದ್ಧೂಲನವೆಂದರೆ ಲೇಪನವೆಂದರ್ಥ. ಆದ ಕಾರಣ ಮೈಗೆಲ್ಲ ಭಸ್ಮವನ್ನು ಲೇಪಿಸಿಕೊಳ್ಳುವುದೇ ಭಸ್ಮೋದ್ಧೂಲನವು. ಸಪ್ತಜನ್ಮಗಳ ದೋಷನಿವೃತ್ತಿಗಾಗಿ ಆ ಭಸ್ಮವನ್ನು ಮೊದಲು ಏಳುಸಾರೆ ''ನಮಃ ಶಿವಾಯ'' ಎಂಬ ಈ ಪಂಚಾಕ್ಷರ ಮಹಾ ಮಂತ್ರದಿಂದ ಅಭಿಮಂತ್ರಿಸಿ; ನಂತರ ಅಂಗೈಗೆಲ್ಲ ಭಸ್ಮವನ್ನು ಹಚ್ಚಿಕೊಂಡು ಅದನ್ನು ಸರ್ವಾಂಗಕ್ಕೂ ಚನ್ನಾಗಿ ಲೇಪಿಸಿಕೊಳ್ಳಬೇಕು ಶರೀರಕ್ಕೆ ಲೇಪಿಸಿಕೊಳ್ಳುವ ಉತ್ಕೃಷ್ಟ ವಸ್ತುವೇ ಭಸ್ಮವೆಂಬುದನ್ನು ಜಗತ್ತಿಗೆ ತಿಳಿಯಪಡಿಸುವದಕ್ಕಾಗಿ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಭಸ್ಮಸ್ನಾನದ ನಂತರ ಭಸ್ಮೋದ್ಧೂಲನವನ್ನು ಪ್ರತಿಪಾದಿಸಿದ್ದಾರೆ.

ಭಸ್ಮಸ್ನಾನ–ಭಸ್ಮೋದ್ಧೂಲನ ಹಾಗೂ ಭಸ್ಮ ಸೇವನೆಯಿಂದ ಶರೀರದ ಪರಮಾಣುಗಳೂ ಪರಿವರ್ತನೆಯಾಗುತ್ತವೆ. ಬೃಹಜ್ಜಾಬಾಲೋಪನಿಷತ್ತಿನಲ್ಲಿ ಹರಿಯು ಈ ಭಸ್ಮೋದ್ಧೂಲನದಿಂದಲೇ ಶುಭ್ರವರ್ಣದವನಾದನೆಂಬ ರೋಚಕ ಕಥೆಯು ವರ್ಣಿಸಲ್ಪಟ್ಟಿದೆ. ಕಾರಣ ಕಪ್ಪುಬಣ್ಣದ ವ್ಯಕ್ತಿಗಳು ಈ ಭಸ್ಮೋದ್ಧೂಲನದಿಂದಲೇ ತಕ್ಕಮಟ್ಟಿಗೆ ಶುಭ್ರರಾಗುವ ಸಾಧ್ಯತೆ ಇದೆ. ಆದಕಾರಣ ನಿರುಪಯುಕ್ತವಾದ ಪೌಡರಿನ ಉದ್ಧೂಲನಕ್ಕಿಂತಲೂ ಭಸ್ಮೋದ್ಧೂಲನವೇ ಶ್ರೇಷ್ಠವಾದದ್ದು. ಇದರಿಂದ ಮಾನಸಿಕ ಪರಿಶುದ್ಧಿಯೂ ಉಂಟಾಗುವುದು.

ತ್ರಿಪುಂಡ್ರದ ಮಹತ್ವ :

ಭಸ್ಮಧಾರಣ ವಿಧಿಯಲ್ಲಿ ಕೊನೆಯದೂ ಹಾಗೂ ಅತಿ ಮಹತ್ವಪೂರ್ಣವೂ ಆದ ಹಂತವೇ ತ್ರಿಪುಂಡ್ರಧಾರಣವು ಅಂತೆಯೇ ಪೂಜ್ಯರು–

''ಸರ್ವಾಂಗೋದ್ಧೂಲನಂ ಚಾಪಿ ನ ಸಮಾನಂ ತ್ರಿಪುಂಡ್ರಕೈಃ''

(ಸಿ. ಶಿ. ೭–೨೯)

ಸರ್ವಾಂಗೋದ್ಧೂಲನವೂ ಒಂದು ತ್ರಿಪುಂಡ್ರಕ್ಕೆ ಸಮಾನವಾಗಲಾರದೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಆದ್ದರಿಂದ ಭಸ್ಮಸ್ನಾನ ಹಾಗೂ ಭಸ್ಮೋದ್ಧೂಲನವನ್ನು ಮಾಡದಿದ್ದರೂ ತ್ರಿಪುಂಡ್ರಧಾರಣೆಯನ್ನು ಮಾತ್ರ ಅವಶ್ಯವಾಗಿ ಮಾಡಲೇಬೇಕು.

ತ್ರಿಪುಂಡ್ರ ಧಾರಣ ವಿಧಿ :

''ತ್ರಿಪುಂಡ್ರಂ ಧಾರಯೇನ್ನಿತ್ಯಂ ಭಸ್ಮನಾ ಸಜಲೇನಹಿ'' ಎಂಬ ಮಹಾಚಾರ್ಯರ ಆದೇಶದಂತೆ ಜಲಮಿಶ್ರಿತ ಭಸ್ಮದಿಂದಲೇ ತ್ರಿಪುಂಡ್ರವನ್ನು ಧರಿಸಬೇಕು. ಆದಕಾರಣ ಮೊದಲು ಎಡ ಅಂಗೈಯಲ್ಲಿ ಭಸ್ಮದ ಪುಡಿಯನ್ನು ತೆಗೆದುಕೊಂಡು–

''ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮವ್ಯೋಮೇತಿ ಭಸ್ಮ ಭಸ್ಮೇತಿ ಭಸ್ಮ ಸರ್ವಗ್ಂ ಹ ವಾ ಇದಂ ಭಸ್ಮ ಮನ ಇತ್ಯೇತಾನಿ ಚಕ್ಷೂಗ್ಂಷಿ ಭಸ್ಮಾನಿ''

ಎಂಬ ಈ ಅಥರ್ವ ಶಿಖ ಮಂತ್ರದಿಂದ ಅಭಿಮಂತ್ರಿಸಿ ನಂತರ–

''ಮಾನಸ್ತೋಕೆ ತನಯೇ ಮಾನ ಆಯುಷಿ ಮಾನೋಗೋಷು ಮಾನೋ ಅಶ್ವೇಷು ರೀರಿಷಃ । ವೀರನ್ಮಾನೋ ರುದ್ರ ಭಾಮಿತೋ ವಧೀರ್ಹ ವಿಷ್ಮಂತೋ ನಮಸಾ ವಿಧೇಮ ತೇ ॥''

ಈ ಮಂತ್ರದಿಂದ ಜಲವನ್ನು ಬೆರಸಿ ಮಿಶ್ರಣ ಮಾಡಬೇಕು. ನಂತರ ಅದರಲ್ಲಿ ಪಂಚಕೋಣವನ್ನು ಬರೆದು ಅದರಲ್ಲಿ ಪ್ರಣವ ಸಹಿತವಾದ ಪಂಚಾಕ್ಷರಗಳನ್ನು ತುಂಬಿ, ಎಂಟುಸಾರೆ ಮೂಲಮಂತ್ರದಿಂದ ಅಭಿಮಂತ್ರಿಸಿ ಕೆಳಗೆ ಬರೆದ ಮಂತ್ರಗಳನ್ನು ಉಚ್ಚರಿಸುತ್ತ–

(೧) ಓಂ ಶಿವಾಯ ನಮಃ (ಮಸ್ತಕದಲ್ಲಿ)
(೨) ಓಂ ಮಹೇಶ್ವರಾಯನಮಃ (ಹಣೆಯಲ್ಲಿ)
(೩–೪) ಓಂ ರುದ್ರಾಯ ನಮಃ (ಕಿವಿಗಳಲ್ಲಿ)
(೫) ಓಂ ಶ್ರೀಕಂಠಾಯ ನಮಃ (ಕಂಠದಲ್ಲಿ)
(೬–೭) ಓಂ ಶಂಭವೇ ನಮಃ (ಭುಜಗಳಲ್ಲಿ)
(೮) ಓಂ ಈಶ್ವರಾಯ ನಮಃ (ಹೃದಯದಲ್ಲಿ)
(೯) ಓಂ ಮಹಾದೇವಾಯ ನಮಃ (ನಾಭಿಯಲ್ಲಿ)
(೧೦) ಓಂ ಪಶುಪತಯೇ ನಮಃ (ಬೆನ್ನಿನಲ್ಲಿ)
(೧೧–೧೨) ಓಂ ಶಂಕರಾಯ ನಮಃ (ಮೊಳಕೈಯಲ್ಲಿ)
(೧೩) ಓಂ ವೃಷಭಾಯ ನಮಃ (ಹೆಗಲಿನಲ್ಲಿ)
(೧೪–೧೫) ಓಂ ಪರಮಾತ್ಮನೇ ನಮಃ (ಮುಂಗೈಯಲ್ಲಿ)

ಈ ರೀತಿ ಶ್ರೀ ಜಗದ್ಗುರು ರೇಣುಕರು ಉಪದೇಶಿಸಿದ ಹದಿನೈದು ಪ್ರಮುಖ ಸ್ಥಾನಗಳಲ್ಲಿ ತ್ರಿಪುಂಡ್ರ ಧಾರಣೆಯನ್ನು ಮಾಡಿಕೊಳ್ಳಬೇಕು.

ತ್ರಿಪುಂಡ್ರ ಧಾರಣೆಯ ವಿಭಿನ್ನಸ್ಥಾನಗಳು:

ದ್ವಾತ್ರಿಂಶತ್ಸ್ಥಾನಕೇ ವಾಥ ಷೋಡಶಸ್ಥಾನಕೇ ತಥಾ ।
ಅಷ್ಟಸ್ಥಾನೇ ತಥಾ ಚೈವ ಪಂಚಾಸ್ಥಾನೇ ಚ ಯೋಜಯೇತು ॥

(ಶಿವ. ಪು. ಚಂದ್ರಾಜ್ಞಾನಾಗಮ ಕ್ರಿ. ಸಾ.೬–೪೪)

ಎಂಬ ಈ ಚಂದ್ರಜ್ಞಾನಾಗಮದ ಹಾಗೂ ಶಿವಮಹಾಪುರಾಣದ ಈ ವಾಕ್ಯದಲ್ಲಿ ಮೂವತ್ತೆರಡು, ಹದಿನಾರು, ಎಂಟು ಮತ್ತು ಐದು ಹೀಗೆ ವಿಕಲ್ಪದಿಂದ ತ್ರಿಪುಂಡ್ರ ಧಾರಣೆಯ ಸ್ಥಾನಗಳು ಪ್ರತಿಪಾದಿಸಲ್ಪಟ್ಟಿವೆ. ಅದರ ಪ್ರಕಾರ-

ಉತ್ತಮಾಂಗೇ ಲಲಾಟೇಚ ಕರ್ಣಯೋರ್ನೇತ್ರಯೋರ್ದ್ವಯೋಃ ।
ನಾಸಾವಕ್ತ್ರಗಲೇಷ್ವೇವಮಂ ಸದ್ವಯಮನಂತರಂ ॥
ಕೂರ್ಪರೇ ಮಣಿಬಂಧೇಚ ಹೃದಯೇ ಪಾರ್ಶ್ವಯೋರ್ದ್ವಯೋಃ ।
ನಾಭೌ ಗುಹ್ಯದ್ವಯೇ ಚೈವ ಊರ್ವೋಃ ಸ್ಫಿಗ್ಬಿಂಬ ಜಾನುಷು ।
ಜಂಘಾದ್ವಯೇ ಪಾದಯೋಶ್ಚ ದ್ವಾತ್ರಿಂಶತ್ ಸ್ಥಾನಮುತ್ತಮಂ ॥
(ಶಿವ. ಪು. ವಿದ್ಯೇ ೨೪; ೯೮-೧೦೦ ಚಂದ್ರಜ್ಞಾನಾಗಮ ಕ್ರಿ.ಪಾ. ೬, ೪೫-೪೬)

(೧) ಶಿರಸ್ಸು, (೨ )ಹಣೆ, (೩-೪ ) ಎರಡು ಕಿವಿಗಳು, (೫-೬ ) ಎರಡೂ ಕಣ್ಣುಗಳು, (೭-೮ ) ಎರಡೂ ಮೂಗಿನ ಹೊಳ್ಳೆ, (೯) ಬಾಯಿ. (೧೦)ಕಂಠ, (೧೧-೧೨ ) ಎರಡೂ ಹೆಗಲುಗಳು, (೧೩-೧೪ ) ಎರಡೂ ಮೊಳಕೈಗಳು, (೧೫-೧೬ )ಎರಡೂ ಮುಂಗೈಗಳು, (೧೭) ಹೃದಯ, (೧೮-೧೯ ) ಎರಡೂ ಪಕ್ಕಡಿಗಳು, (೨೦) ನಾಭಿ, (೨೧) ಗುದ (೨೨ )ಲಿಂಗ, (೨೩-೨೪) ಎರಡೂ ತೊಡೆಗಳು, (೨೫-೨೬) ಎರಡೂ ನಿತಂಬಗಳು, (೨೭-೨೮) ಎರಡೂ ಮೊಳಕಾಲು, (೨೯-೩೦ ) ಎರಡೂ ಮೊಳಕಾಲ ಪಿಂಡಗಳು ಮತ್ತು (೩೧-೩೨) ಎರಡೂ ಪಾದಗಳು ಹೀಗೆ ಇವು ತ್ರಿಪುಂಡ್ರ ಧಾರಣೆಯ ಮೂವತ್ತೆರಡು ಸ್ಥಾನಗಳು. ಇನ್ನು-

ವಿದಧ್ಯಾತ್ ಷೋಡಶಸ್ಥಾನೇ ತ್ರಿಪುಂಡ್ರಂ ಚ ಸಮಾಹಿತಃ ।
ಶೀರ್ಷಕೇ ಚ ಲಲಾಟೇ ಚ ಕಂಠೇ ಚಾಂಸದ್ವಯೇಭುಜೇ ॥
ಕೂರ್ಪರೇ ಮಣಿಬಂಧೇ ಚ ಹೃದಯೇ ನಾಭಿಪಾರ್ಶ್ವಯೋಃ ।
ಪೃಷ್ಠೆ ಚೈವಂ ಪ್ರತಿಷ್ಠಾಯ ಜಪೇತ್ತತ್ರಾಧಿದೈವತಂ ॥
(ಶಿವ. ಪು. ವಿ. ೨೪, ೧೦೩-೧೦೪. ಚಂದ್ರಜ್ಞಾ.ಕ್ರಿ. ಪಾ. ೬, ೪೮-೪೯)

(೧) ಶಿರಸ್ಸು, (೨)ಹಣೆ, (೩) ಕಂಠ, (೪-೫ ) ಎರಡು ಹೆಗಲು, (೬-೭) ಎರಡು ಭುಜಗಳು, (೮-೯) ಎರಡು ಮೊಳಕೈ, (೧೦-೧೧) ಎರಡು ಮುಂಗೈ (೧೨) ಹೃದಯ, (೧೩) ನಾಭಿ (೧೪-೧೫) ಎರಡೂ ಪಕ್ಕಡಿ, ಮತ್ತು (೧೬) ಬೆನ್ನು ಹೀಗೆ ತ್ರಿಪುಂಡ್ರ ಧಾರಣೆಯ ಇವು ಹದಿನಾರು ಸ್ಥಾನಗಳು. ಅದರಂತೆ-

ಶಿರಃಸ್ಥಾನಂ ಲಲಾಟಂ ಚ ಕರ್ಣದ್ವಯಮನಂತರಂ ।
ಅಂಸಯುಗ್ಮಂ ಚ ಹೃದಯಂ ನಾಭಿರಿತ್ಯಷ್ಟಮಂ ಭವೇತ್ ॥
(ಚಂದ್ರಜ್ಞಾ. ಕ್ರಿ.ಪಾ. ೬-೫೪)

(೧) ಶಿರಸ್ಸು, (೨) ಹಣೆ, (೩-೪) ಎರಡು ಕಿವಿಗಳು, (೫-೬) ಎರಡು ಹೆಗಲು ಗಳು, (೭) ಹೃದಯ ಮತ್ತು (೮) ನಾಭಿ ಹೀಗೆ ಇವು ತ್ರಿಪುಂಡ್ರ ಧಾರಣೆಯ ಎಂಟು ಸ್ಥಾನಗಳು. ಇದೇ ಪ್ರಕಾರ-

ಅಥವಾ ನಿಟಿಲಂ ಬಾಹೂ ಹೃದಯಂ ನಾಭಿರೇವಕ ।
ಭಸ್ಮಸ್ಥಾನಾನಿ ಕಥ್ಯಂತೆ ಪಂಚಬ್ರಹ್ಮಾಣಿ ದೇವತಾಃ ॥

(೧) ಹಣೆ, (೨–೩) ಭುಜಗಳು (೪) ಹೃದಯ ಮತ್ತು (೫) ನಾಭಿ ಇವು ತ್ರಿಪುಂಡ್ರಧಾರಣೆಯ ಪಂಚಸ್ಥಾನಗಳು.

ಈ ರೀತಿಯಾದ ತ್ರಿಪುಂಡ್ರ, ಧಾರಣೆಯ ಸ್ಥಾನಬೇಧಗಳು ಬೃಹಜ್ಜಾಬಾಲೋಪನಿಷತ್ತಿನ ಚತುರ್ಥಬ್ರಾಹ್ಮಣ ೧೨–೩೬ ಶ್ಲೋಕಗಳಲ್ಲಿಯೂ ವಿಸ್ತುತವಾಗಿ, ಪ್ರತಿಪಾದಿಸಲ್ಪಟ್ಟಿದೆಯಲ್ಲದೇ ಆಯಾ ಸ್ಥಾನದಲ್ಲಿ ಧರಿಸುವುದರಿಂದ ಆಯಾ ಅಂಗಜನಿತ ಪಾಪಗಳು ದೂರವಾಗುವವೆಂಬುದಾಗಿಯೂ ನಿರೂಪಿಸಲಾಗಿದೆ. ಹೀಗೆ ಹೆಚ್ಚು–ಹೆಚ್ಚು ಸ್ಥಾನದಲ್ಲಿ ತ್ರಿಪುಂಡ್ರವನ್ನು ಧರಿಸುವುದು ಹೆಚ್ಚು ಲಾಭಕಾರಿಯಾದ್ದರಿಂದ ಸರ್ವರೂ ತಮಗೆ ಅನುಕೂಲವೆನಿಸಿದ ರೀತಿಯಲ್ಲಿ ಮೂವತ್ತೆರಡು, ಹದಿನಾರು, ಹದಿನೈದು, ಎಂಟು ಹಾಗೂ ಐದು ಸ್ಥಾನಗಳಲ್ಲಿ ತ್ರಿಪುಂಡ್ರವನ್ನು ಅವಶ್ಯವಾಗಿ ಧರಿಸಬೇಕು. ಕೊನೆಯ ಪಕ್ಷ ಹಣೆಯಲ್ಲಿಯಾದರೂ ಧರಿಸಲೇಬೇಕು. ಇಲ್ಲವಾದರೆ

ಏಷಾಂ ವಪುರ್ಮನುಷ್ಯಾಣಾಂ ತ್ರಿಪುಂಡ್ರೇಣ ವಿನಾ ಸ್ಥಿತಂ ।
ಶ್ಮಶಾನ ಸದೃಶಂ ತಸ್ಮಾನ್ನಪ್ರೇಕ್ಷ್ಯಂ ಪುಣ್ಯಕೃಜ್ಜನೈಃ ॥
ಧಿಗ್ಭಸ್ಮರಹಿತಂ ಭಾಲಂ ಧಿಗ್ಗ್ರಾಮಮಶಿವಾಲಯಂ ।
ಧಿಗನೀಶಾರ್ಚನಂ ಜನ್ಮ ದಿಗ್ವಿದ್ಯಾಮಶಿವಾಶ್ರಯಾಂ ॥

(ಕ್ರಿಯಾಸಾರ, ಉಪದೇಶ ೮; ಪುಟ ೮೪)

ಎಂಬ ಈ ವಾಯವೀಯ ಸಂಹಿತೆಯ ವಚನವನ್ನುದಾಹರಿಸುತ್ತ ಶ್ರೀ ನೀಲಕಂಠ ಶಿವಾಚಾರ್ಯರು–''ತ್ರಿಪುಂಡ್ರವಿಲ್ಲದವನ ದೇಹವು ಶ್ಮಶಾನ ಸದೃಶವಾದದ್ದು. ಆದ್ದರಿಂದ ಪುಣ್ಯಜೀವಿಗಳು ಅಂತಹ ವ್ಯಕ್ತಿಗಳ ಮುಖವನ್ನೇ ನೋಡಕೂಡದು. ಶಿವಜ್ಞಾನ ಕೊಡದ ವಿದ್ಯೆ, ಶಿವನನ್ನು ಪೂಜಿಸದ ಜನ್ಮ ಮತ್ತು ಶಿವಾಲಯವಿಲ್ಲದ ಊರಿಗೆ ಧಿಕ್ಕಾರವಿರುವಂತೆ ತ್ರಿಪುಂಡ್ರವಿರದವನ ಹಣೆಗೂ ಧಿಕ್ಕಾರವಿರಲಿ'' ಎಂಬುದಾಗಿ ಶಪಿಸಿದ್ದಾರೆ.

ಹೀಗೆ ಮಹಾನುಭಾವಿಗಳ ಶಾಪಹೊಂದಿ ಜನ್ಮವನ್ನೇ ಹಾಳುಮಾಡಿಕೊಳ್ಳುವುದಕ್ಕಿಂತ ತ್ರಿಪುಂಡ್ರಧಾರಿಗಳಾಗಿ ಗುರುಗಳ ಮತ್ತು ಶಿವನ ಅನುಗ್ರಹವನ್ನು ಪಡೆದು ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಬೇಕು.

**ತ್ರಿಪುಂಡ್ರರೇಖೆಗಳ ರಹಸ್ಯಾರ್ಥ :**

ನಾವು ಧರಿಸುವ ತ್ರಿಪುಂಡ್ರದಲ್ಲಿ ಮೂರು ಅಡ್ಡರೇಖೆಗಳಿರುತ್ತವೆ. ಈ ರೇಖೆಗಳ ರಹಸ್ಯಾರ್ಥವನ್ನರಿತಾಗ. ಅದರ ಧಾರಣೆಯಲ್ಲಿ ಇನ್ನೂ ಶ್ರದ್ಧೆ ಹೆಚ್ಚುವ ಕಾರಣ ಆಗಮೋಕ್ತವಾದ ಅದರ ರಹಸ್ಯಾರ್ಥವನ್ನಿಲ್ಲಿ ವಿವೇಚಿಸೋಣ.

''ತ್ರಿಪುಂಡ್ರಂಕಾರಯೇದ್ಧೀಮಾನ್ ಬ್ರಹ್ಮವಿಷ್ಣುಶಿವಾತ್ಮಕಂ''

ಎಂಬ ಚಂದ್ರಜ್ಞಾನಾಗಮದ ವಚನಾನುಸಾರವಾಗಿ ಭಸ್ಮದ ತ್ರಿರೇಖೆಗಳು ಸೃಷ್ಟಿ ಕರ್ತನಾದ ಬ್ರಹ್ಮ ಪಾಲನಕರ್ತನಾದ ವಿಷ್ಣು ಮತ್ತು ಸಂಹಾರಕಾರಿಯಾದ ಶಿವನ ಪ್ರತೀಕ

ಗಳಾಗಿವೆ. ಈ ಮೂರು ದೇವರಲ್ಲಿ ಯಾರಲ್ಲಿಯೇ ಶ್ರದ್ಧೆ ಇದ್ದರೂ ಅವಶ್ಯವಾಗಿ ತ್ರಿಪುಂಡ್ರಧಾರಿಗಳಾಬೇಕು. ಇದು ಶೈವವೈಷ್ಣವಾದಿಗಳ ಒಂದು ಸಮನ್ವಯದ ಪ್ರತೀಕವು. ಇವುಗಳ ವಿಸ್ತೃತ ವಿವೇಚನೆ ಹೀಗಿದೆ–

ತ್ರಿಪುಂಡ್ರದ ಮೊದಲನೇ ರೇಖೆಯು ಗಾರ್ಹಪತ್ಯ ಅಗ್ನಿ, ಅಕಾರ, ರಜೋಗುಣ, ಭೂಲೋಕ, ದೇಹಾತ್ಮಾ ಕ್ರಿಯಾಶಕ್ತಿ ಋಗ್ವೇದ, ಪ್ರಾತಃಕಾಲೀನ ಸವನ (ಹವನ) ಮತ್ತುಮಹೇಶ್ವರ ದೇವರ ಸ್ವರೂಪವಾಗಿದೆ.

ದ್ವಿತೀಯ ರೇಖೆಯು ದಕ್ಷಿಣಾಗ್ನಿ, ಉಕಾರ, ಸತ್ತ್ವಗುಣ, ಅಂತರಿಕ್ಷ ಅಂತರಾತ್ಮಾ ಯಜುರ್ವೇದ, ಮಧ್ಯಾಹ್ನ ಸವನ ಮತ್ತುಸದಾ ಶಿವನ ಸ್ವರೂಪವಾದದ್ದು.

ಮೂರನೆಯ ರೇಖೆಯು ಆಹವನೀಯ ಅಗ್ನಿ, ಮಕಾರ, ತಮೋಗುಣ, ಸ್ವರ್ಗ ಲೋಕ, ಪರಮಾತ್ಮಾ ಜ್ಞಾನಶಕ್ತಿ, ಸಾಮವೇದ ಸಾಯಾಹ್ನ ಹವನ ಮತ್ತುಮಹಾದೇವನ ಸ್ವರೂಪವಾಗಿದೆ.

ಈ ರೀತಿಯ ತ್ರಿಪುಂಡ್ರದ ವರ್ಣನೆಯ ತಾತ್ಪರ್ಯವೇನೆಂದರೆ ವಿಧಿವತ್ತಾಗಿ ಶ್ರದ್ಧೆಯಿಂದ ಈ ತ್ರಿಪುಂಡ್ರವನ್ನು ಧರಿಸಿದರೆ ಅವನು ತ್ರಿವೇದ ಜ್ಞಾನ ಸಂಪನ್ನನೂ, ಸತ್ತ್ವಾದಿ ಗುಣಗಳನ್ನು ಮೀರಿದವನೂ, ತ್ರಿಸಂಧ್ಯಾಶೀಲನೂ ಆಗುವನಲ್ಲದೇ ಅವನ ಕ್ರಿಯಾ, ಇಚ್ಛಾ ಮತ್ತು ಜ್ಞಾನಶಕ್ತಿಗಳು ಜಾಗ್ರತಗಳಾಗಿ ಅವನೊಬ್ಬ ಜಗತ್ತಿಗೆ ಸನ್ಮಾರ್ಗದರ್ಶಕ ಆದರ್ಶ ವ್ಯಕ್ತಿಯಾಗಿ ಪರಿಣಮಿಸುತ್ತಾನೆ. ಈ ತಿರ್ಯಕ್ ತ್ರಿಪುಂಡ್ರದ ಮಹತ್ವವವು–

ಸಮಸ್ತ ತೀರ್ಥೌಘಮಯೀ ಚ ಕಾಶೀ
ವಿಶ್ವೇಶ್ವರಃ ಸರ್ವಸುರೋತ್ತಮಃ ಸ್ಯಾತ್ ।
ಸಮಸ್ತತತ್ತ್ವೈಕರಸಾ ವಿಭೂತಿಸ್ತಥೈವ
ಪುಂಡ್ರೋಽಯಮಯಂ ತ್ರಿಪುಂಡ್ರಃ ॥

(ಕ್ರಿಯಾಸಾರ ಉಪ. ೮ ; ಪುಟ ೮೭)

ಶಿವರಹಸ್ಯವೆಂಬ ಮಹಾನ್ ಗ್ರಂಥದ ಈ ಪದ್ಯದಲ್ಲಿ ಎಲ್ಲ ತೀರ್ಥಗಳಲ್ಲಿ ಕಾಶಿಯು ಶ್ರೇಷ್ಠವಾಗಿರುವಂತೆ, ಸಕಲ ದೇವತೆಗಳಲ್ಲಿ ವಿಶ್ವೇಶ್ವರನು ಉತ್ತಮನಾಗಿರು ವಂತೆ, ಎಲ್ಲ ತತ್ತ್ವಗಳ ಸಾರವೇ ವಿಭೂತಿಯಾಗಿರುವಂತೆ, ಎಲ್ಲ ಪುಂಡ್ರಗಳಲ್ಲಿ ಈ ತಿರ್ಯಕ್ ತ್ರಿಪುಂಡ್ರವೇ ಶ್ರೇಷ್ಠವಾದದ್ದೆಂಬುದಾಗಿ ಪ್ರತಿಪಾದಿಸಲಾಗಿದೆ. ಆದಕಾರಣ ಊರ್ಧ್ವ ಪುಂಡ್ರವನ್ನು ಧರಿಸದೇ ತ್ರಿರ್ಯಕ್ ತ್ರಿಪುಂಡ್ರವನ್ನೇ ಧರಿಸಬೇಕು.

ತ್ರಿರ್ಯಕ್ ತ್ರಿಪುಂಡ್ರಧಾರಣೆಯ ರಹಸ್ಯ :

ವೈಷ್ಣವರು ಊರ್ಧ್ವಪುಂಡ್ರವನ್ನು ಶೈವ–ವೀರಶೈವರು ತ್ರಿರ್ಯಕ್ ತ್ರಿಪುಂಡ್ರ ವನ್ನು ಧರಿಸುವ ರೂಢಿಯು ಲೋಕದಲ್ಲಿ ಬೆಳೆದುಬಂದಿದೆ ; ಆದರೆ ಇವೆರಡರಲ್ಲಿ ಯಾವದು ಸರಿ ? ಎಂಬ ಪ್ರಶ್ನೆಯು ಉದ್ಭವಿಸುವುದು. ಕೆಲವು ಜನರು ಊರ್ಧ್ವ (ಉದ್ದ) ಪುಂಡ್ರದ ಸಮರ್ಥನೀಯ ವಚನಗಳನ್ನೂ, ಮತ್ತೆ ಕೆಲವರು ತ್ರಿರ್ಯಕ್

(ಅಡ್ಡ) ತ್ರಿಪುಂಡ್ರದ ಪ್ರಮಾಣಗಳನ್ನು ತಮ್ಮ ತಮ್ಮ ಪಕ್ಷದ ಸಮರ್ಥನೆಗಾಗಿ ಉದಾಹರಿಸ ಬಹುದು. ಆದರೆ ಕೂರ್ಮಪುರಾಣದ–

ಸ್ರಷ್ಟಾ ಸೃಷ್ಟಿಚ್ಛಲೇನಾಹ ತ್ರಿಪುಂಡ್ರಸ್ಯ ಪ್ರಶಸ್ತತಾಂ ।
ಸಸರ್ಜ ಸ ಲಲಾಟಂ ಹಿ ತಿರ್ಯಕ್ ನೋರ್ಧ್ವಂ ನ ವರ್ತುಲಂ ॥
ತಿರ್ಯಗ್ಗ್ರೇಖಾಃ ಪ್ರಕಾಶಂತೇ ಲಲಾಟೇ ಸರ್ವದೇಹಿನಾಂ ।
ತಥಾಪಿ ಮಾನವಾಃ ಮೂರ್ಖಾ ನ ಕುರ್ವಂತಿ ತ್ರಿಪುಂಡ್ರಕಂ ॥
ನ ತದ್ಧ್ಯಾನಂ ನತದ್ದಾನಂ ನತದ್‌ಜ್ಞಾನಂ ನತತ್ತಪಃ ।
ವಿನಾ ತಿರ್ಯಕ್ ತ್ರಿಪುಂಡ್ರಾಂಕಂ ವಿಪ್ರೇಣ ಯದನುಷ್ಠಿತಂ ॥

(ಕ್ರಿಯಾಸಾರ ಉಪ ೮, ಪುಟ ೮೧)

ಈ ವಚನವನ್ನವಲೋಕಿಸಿದಾಗ ಎಲ್ಲರೂ ಹಣೆಯಲ್ಲಿ ಅಡ್ಡವಾಗಿಯೇ ತ್ರಿಪುಂಡ್ರ ವನ್ನು ಧರಿಸಬೇಕೆಂಬ ರಹಸ್ಯಾರ್ಥದ ಅರಿವಾಗುತ್ತದೆ. ಇದರ ತಾತ್ಪರ್ಯವೇನೆಂದರೆ– ಸೃಷ್ಟಿಕರ್ತನಾದ ಬ್ರಹ್ಮನು ಮನುಷ್ಯರೆಲ್ಲರ ಹಣೆಯನ್ನು ಉದ್ದ ಇಲ್ಲವೆ ವರ್ತುಲಾಕಾರ ಮಾಡದೇ ಅಡ್ಡವಾಗಿಯೇ ಮಾಡಿದ್ದಾನೆ. ಇಷ್ಟೇ ಅಲ್ಲ ; ಕಣ್ಣಿನ ಹುಬ್ಬುಗಳನ್ನು ಮೇಲಕ್ಕೇರಿಸಿದಾಗ ಹಣೆಯಲ್ಲಿ ಸ್ವಾಭಾವಿಕವಾಗಿ ಅಡ್ಡರೇಖೆಗಳೇ ಮೂಡುತ್ತವೆಯೇ ವಿನಾ ಉದ್ದ ಇಲ್ಲವೇ ಗುಂಡುರೇಖೆಗಳು ಮೂಡುವುದಿಲ್ಲ. ಇದನ್ನರಿಯದ ಮೂರ್ಖ ಮಾನವರು ತಮಗೆ ತಿಳಿದರೀತಿಯಲ್ಲಿ ಕೆಲವರು ಕೇವಲ ಉರ್ಧ್ವಪುಂಡ್ರವನ್ನು ಮತ್ತೆ ಕೆಲವರು ಕೇವಲ ಗುಂಡು ಚಂದನವನ್ನೇ ಧರಿಸುತ್ತಾರೆ. ಇದು ಸರಿಯಲ್ಲ.

ಹೀಗೆ ಅಡ್ಡವಾದ ತ್ರಿಪುಂಡ್ರವನ್ನು ಧರಿಸದೇ ಮಾಡಿದ ಧ್ಯಾನ, ದಾನ, ತಪಸ್ಸು ಮತ್ತು ಜ್ಞಾನಾದಿಗಳು ವ್ಯರ್ಥಗಳಾಗುತ್ತವೆ. ಕಾರಣ ಬ್ರಹ್ಮನ ಸೃಷ್ಟಿಯ ಸಹಜವಾದ ನಿಯಮವನ್ನನುಸರಿಸಿ ಎಲ್ಲರೂ ಹಣೆಯಲ್ಲಿ ಅಡ್ಡವಾಗಿಯೇ ತ್ರಿಪುಂಡ್ರವನ್ನು ಧರಿಸ ಬೇಕು. ಈ ರೀತಿ ತ್ರಿಪುಂಡ್ರ ಧಾರಿಯಾದ ವ್ಯಕ್ತಿಯು–

''ಶಿವಂ ಶಿವಂಕರಂ ಶಾಂತಂ ಸಪ್ರಾಪ್ನೋತಿ ನಸಂಶಯಃ''

ಎಂಬ ಶ್ರೀ ಜಗದ್ಗುರು ರೇಣುಕರ ಉಪದೇಶದಂತೆ ಅಂತ್ಯದಲ್ಲಿ ಶಿವಸಾಯುಜ್ಯವನ್ನೇ ಪಡೆಯುತ್ತಾನೆ.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೭ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೮

ಮಧ್ಯಾಂಗುಲಿತ್ರಯೇಣೈವ ಸ್ವದಕ್ಷಿಣಕರಸ್ಯತು ।
ಷಡಂಗುಲಾಯತಂ ಮಾನಮಪಿ ವಾ ಲಿಕಮಾನಕಂ

ನೇತ್ರಯುಗ್ಮಪ್ರಮಾಣೇನ ಫಾಲೇ ದದ್ಯಾ ತ್ರಿಪುಂಡ್ರಕಂ ।
ಮಧ್ಯಮಾನಾಮಿಕಾಂಗುಷ್ಠೈರನುಲೋಮವಿಲೋಮತಃ

ಧಾರಯೇದ್ಯಸ್ತ್ರಿಪುಂಡ್ರಾಂಕಂ ಸ ರುದ್ರೋ ನಾತ್ರ ಸಂಶಯಃ ।
ಋಜು ಶ್ವೇತಮನುವ್ಯಾಪ್ತಂ ಸ್ನಿಗ್ಧಂ ಶೋತ್ರಪ್ರಮಾಣಕಂ

(ಸಿ. ಶಿ. ೭.೩೫-೩೭)

ನಮ್ಮ ಬಲಗೈಯ ನಡುವಿನ ಮೂರು ಬೆರಳುಗಳಿಂದ ಆರು ಅಂಗುಲ ಉದ್ದ ವಾಗಲಿ, ಹಣೆಯ ಪ್ರಮಾಣದಲ್ಲಾಗಲಿ ಮತ್ತು ಎರಡೂ ನೇತ್ರಗಳ ಕಡೆದಂಡೆಯ ಪ್ರಮಾಣದಲ್ಲಾಗಲಿ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಬೇಕು. ಅಥವಾ ಬಲಗೈಯ ಮಧ್ಯಮಾ, ಅನಾಮಿಕಾ ಹಾಗೂ ಅಂಗುಷ್ಟ ಈ ಮೂರು ಬೆರಳುಗಳಿಂದಲಾದರೂ ಅನುಲೋಮ-ವಿಲೋಮ ಪದ್ಧತಿಯಂತೆ ಎರಡೂ ಕಿವಿಗಳ ಪ್ರಮಾಣದಲ್ಲಿ ಸರಳವೂ, ಶುಭ್ರವೂ, ಮತ್ತುನುಣುಪೂ ಆದ ತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಬೇಕು. ಈ ರೀತಿ ತ್ರಿಪುಂಡ್ರವನ್ನು ಧರಿಸಿದವನು, ಸಾಕ್ಷಾತ್ ರುದ್ರನೇ ಆಗಿರುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವದಿಲ್ಲ

ಏವಂ ಸಲ್ಲಕ್ಷಣೋಪೇತಂ ತ್ರಿಪುಂಡ್ರಂ ಸರ್ವಸಿದ್ಧಿದಂ ।
ಪ್ರಾತಃಕಾಲೇ ಚ ಮಧ್ಯಾಹ್ನೇ ಸಾಯಾಹ್ನೇ ಚ ತ್ರಿಪುಂಡ್ರಕಂ
ಕದಾಚಿದ್ಭಸ್ಮನಾ ಕುರ್ಯಾತ್ ಸ ರುದ್ರೋ ನಾತ್ರ ಸಂಶಯಃ ।

(ಸಿ. ಶಿ. ೭-೩೮)

ಹೀಗೆ ಸಲ್ಲಕ್ಷಣದಿಂದ ಕೂಡಿದ ಈ ತ್ರಿಪುಂಡ್ರವನ್ನು ಪ್ರಾತಃಕಾಲ, ಮದ್ಯಾಹ್ನ ಮತ್ತು ಸಾಯಂಕಾಲ ಹೀಗೆ ಮೂರೂ ಸಮಯದಲ್ಲಿ; ಇಲ್ಲವೇ ಯಾವುದೊಂದು ಸಮಯದಲ್ಲಿ ಧರಿಸಿದರೆ ಅವನು ರುದ್ರ ಸ್ವರೂಪನೇ ಆಗುತ್ತಾನೆ.

ಏವಂ ವಿಧಂ ವಿಭೂತ್ಯಾಹಿ ಕುರುತೇ ಯಸ್ತ್ರಿಪುಂಡ್ರಕಂ ।
ಸರೌದ್ರ ಧರ್ಮಸಂಯುಕ್ತಸ್ತ್ರಯೀಮಯ ಇತಿ ಶ್ರುತಃ

(ಸಿ. ಶಿ. ೭-೩೯)

ಪೂರ್ವೋಕ್ತವಿಧಿಯಿಂದ ತ್ರಿಪುಂಡ್ರವನ್ನು ಧರಿಸಿದರೆ ''ಯ ಇದಂ ತ್ರಿಪುಂಡ್ರಂ ಧರತೇ'' ಎಂಬ ಶ್ರುತಿ ವಾಕ್ಯದ ಪ್ರಮಾಣದಂತೆ ಅವನು ಶಿವಸ್ವರೂಪನೂ ಮತ್ತು ವೇದ ಸ್ವರೂಪನೂ ಆಗುತ್ತಾನೆ.

ತ್ರಿಪುಂಡ್ರರಚನಾ ಪ್ರಕಾರ :

ತ್ರಿಪುಂಡ್ರಧಾರಣೆಯ ವಿಧಿ–ವಿಧಾನಗಳನ್ನು ತಿಳಿಸಿದ ನಂತರ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಅದರ ಉಭಯವಿಧ ಪ್ರಕಾರ, ಲಕ್ಷಣ ಮತ್ತು ಫಲವನ್ನು ಬೋಧಿಸುತ್ತಿದ್ದಾರೆ.

ಭಸ್ಮದ ತ್ರಿಪುಂಡ್ರವನ್ನು ಧರಿಸುವಾಗ ಬಲಗೈಯ ಮಧ್ಯದ ಮೂರು ಅಂದರೆ ತೋರ್ಬೆರಳು, ನಡುವಿನ ಬೆರಳು ಮತ್ತು ಉಂಗುರ ಬೆರಳು (ತರ್ಜನೀ–ಮಧ್ಯಮಾ–ಅನಾಮಿಕಾ) ಈ ಮೂರು ಬೆರಳಿಗೆ ಜಲಮಿಶ್ರಿತ ಭಸ್ಮವನ್ನು ಲೇಪಿಸಿಕೊಂಡು ನಂತರ ಮಸ್ತಕ–ಹಣೆ ಮುಂತಾದ ಸ್ಥಾನಗಳಲ್ಲಿ ತ್ರಿಪುಂಡ್ರವನ್ನು ಧರಿಸುವುದು ಮೊದಲನೇ ಪ್ರಕಾರವು.

ಇನ್ನು ಅನಾಮಿಕಾ, ಮಧ್ಯಮಾ ಮತ್ತು ಅಂಗುಷ್ಠ ಈ ಮೂರು ಬೆರಳುಗಳಿಂದ ಅನುಲೋಮ–ವಿಲೋಮ ಪದ್ಧತಿಯಂತೆ ಧರಿಸುವುದು ಎರಡನೇ ಪ್ರಕಾರವು. ಎರಡನೇ ಪ್ರಕಾರವಾಗಿ ಭಸ್ಮವನ್ನು ಧರಿಸುವಾಗ "ಮಧ್ಯಮಾನಾಮಿಕಾಭ್ಯಾಂ ಅನುಲೋಮತಃ ಪ್ರದಕ್ಷಿಣತಃ ರೇಖಾದ್ವಯಂ ತನ್ಮಧ್ಯೇ ಅಂಗುಷ್ಠೇನ ವಿಲೋಮತಃ, ಅಪ್ರದಕ್ಷಿಣತಃ, ಏಕಾಂರೇಖಾಂ ರಚಯೇತ್" ಎಂಬ ಶ್ರೀಮನ್ನಿರಂಜನ ಮರಿತೋಂಟದಾರ್ಯರ ತತ್ತ್ವಪ್ರದೀಪಿಕಾ ವ್ಯಾಖ್ಯಾನಾನುಸಾರವಾಗಿ ಬಲಗೈಯ ಮಧ್ಯಮಾ ಮತ್ತು ಅನಾಮಿಕಾ ಬೆರಳುಗಳಿಂದ ಹಣೆಯಲ್ಲಿ ಎಡದಿಂದ ಬಲಗಡೆಗೆ ಎರಡು ರೇಖೆಗಳನ್ನು ಪ್ರದಕ್ಷಿಣೆಯ ರೂಪದಲ್ಲಿ ಧರಿಸಿ ನಂತರ ಹೆಬ್ಬೆರಳಿನಿಂದ ಬಲದಿಂದ ಎಡಕ್ಕೆ ಮೊದಲಿನ ಎರಡೂ ರೇಖೆಗಳ ಮಧ್ಯದಲ್ಲಿ ಧರಿಸಬೇಕು. ಇದುವೇ ಅನುಲೋಮ ವಿಲೋಮ ಪದ್ಧತಿಯು. ಇದು ಶಿವಪುರಾಣದಲ್ಲಿಯೂ–

ಮಧ್ಯಮಾನಾಮಿಕಾಂಗುಲ್ಯಾ ಮಧ್ಯೇತು ಪ್ರತಿಲೋಮತಃ।
ಅಂಗುಷ್ಠೇನ ಕೃತಾ ರೇಖಾ ತ್ರಿಪುಂಡ್ರಾಖ್ಯಾಭಿಧೀಯತೇ ॥

(ಶಿವ ಪು. ವಿದ್ಯೇ ೨೪, ೮೬.೮೭)

ಈ ರೀತಿ ಉಕ್ತವಾಗಿದೆ. ಈ ಎರಡನೇ ಪ್ರಕಾರವಾಗಿ ಧರಿಸುವುದು ಸರ್ವೋತ್ಕೃಷ್ಟವಾದದ್ದು. ಈ ರೀತಿ ಧರಿಸುವುದು ಯಾರಿಗೆ ಕಠಿಣವೆನಿಸುವುದೋ ಅವರು ಮೊದಲಿನ ಸರಳ ರೀತಿಯನ್ನೇ ಅನುಸರಿಸಬೇಕು.

ತ್ರಿಪುಂಡ್ರದ ಲಕ್ಷಣ ಹಾಗೂ ಪ್ರಮಾಣ :

ಪೂಜ್ಯರು ತ್ರಿಪುಂಡ್ರದ ಲಕ್ಷಣವನ್ನು ಪ್ರತಿಪಾದಿಸುತ್ತ– "ಋಜುಶ್ವೇತಮನುವ್ಯಾಪ್ತಂ ಸ್ನಿಗ್ಧಂ" ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಆದ ಕಾರಣ ನಾವು ಧರಿಸುವ ಭಸ್ಮವು ಸರಳರೇಖೆಯಲ್ಲಿರಬೇಕಲ್ಲದೇ ಶುಭ್ರವೂ, ನಿಬಿಡವೂ ಮತ್ತು ನುಣುಪಾಗಿಯೂ ಇರಬೇಕು. ಕೆಲವು ಜನರು ಅತಿಸೂಕ್ಷ್ಮವಾಗಿ ಕಡ್ಡಿಯಿಂದ ಬರೆದಂತೆ ತಿಳಿವಾದ ರೇಖೆಗಳನ್ನು ಧರಿಸುತ್ತಾರೆ. ಇದು ಶಾಸ್ತ್ರಸಮ್ಮತವಾದದ್ದಲ್ಲ. ಆದ್ದರಿಂದ ನಮ್ಮ ಬೆರಳುಗಳು ಎಷ್ಟು ದಪ್ಪವಾಗಿರುತ್ತವೆಯೋ ಭಸ್ಮದ ರೇಖೆಗಳೂ ಅಷ್ಟೇ ದಪ್ಪವಾಗಿರಬೇಕು. ಆ ರೇಖೆಗಳನ್ನು ಅಳುಕಿಸಿ ಸಣ್ಣ ಪ್ರಮಾಣದವುಗಳನ್ನು ಮಾಡಕೂಡದು.

ಹಣೆಯಲ್ಲಿ ಧರಿಸುವ ತ್ರಿಪುಂಡ್ರದ ಪ್ರಮಾಣ ಅರ್ಥಾತ್ ಅಳತೆಯು ಷಡಂಗುಲ, ಅಲಿಕಮಾನಕ, ನೇತ್ರಯುಗ್ಮ ಪ್ರಮಾಣ ಮತ್ತು ಶ್ರೋತ್ರ ಪ್ರಮಾಣಕ ವೆಂಬುದಾಗಿ ನಾಲ್ಕು ವಿಧವಾಗಿ ಉಪದೇಶಿಸಲ್ಪಟ್ಟಿದೆ. ಇವುಗಳಲ್ಲಿ ಆರು ಅಂಗುಲ ಅಗಲವಾಗಿ ಧರಿಸುವುದೇ ಷಡಂಗುಲ ಪ್ರಮಾಣವು. ಇನ್ನು ಹಣೆಯು ಎಷ್ಟು ಅಗಲವಾಗಿದೆಯೋ ಅಷ್ಟು ಅಗಲವಾಗಿ ಧರಿಸುವುದೇ ಅಲಿಕಮಾನಕವು. ಒಂದು ಕಣ್ಣಿನ ಕೊನೆಯ ಭಾಗದಿಂದ ಮತ್ತೊಂದು ಕಣ್ಣಿನ ಕೊನೆಯ ಭಾಗದವರೆಗೆ ಇರುವ ಹಣೆಯ ಅಗಲದ ತುಂಬೆಲ್ಲ ಧರಿಸುವುದೇ ನೇತ್ರಯುಗ್ಮ ಪ್ರಮಾಣವು. ಇನ್ನು ಕೊನೆಯದಾಗಿ ಒಂದು ಕಿವಿಯಿಂದ ಮತ್ತೊಂದು ಕಿವಿಯವರೆಗೆ ಮುಟ್ಟುವ ರೀತಿಯಲ್ಲಿ ಹಣೆಯಲ್ಲಿ ವಿಶಾಲವಾಗಿ ತ್ರಿಪುಂಡ್ರವನ್ನು ಧರಿಸುವುದೇ ಶ್ರೋತ್ರಪ್ರಮಾಣಕವು.

ಈ ರೀತಿ ಚತುರ್ವಿಧ ಪ್ರಮಾಣಗಳಲ್ಲಿ ಯಾವುದಾದರೊಂದು ಪ್ರಮಾಣವನ್ನನುಸರಿಸಿ ತ್ರಿಪುಂಡ್ರವನ್ನು ಧರಿಸಿದರೆ ಸರ್ವಸಿದ್ಧಿಗಳು ಪ್ರಾಪ್ತವಾಗುತ್ತವೆ.

**ತ್ರಿಪುಂಡ್ರಧಾರಣೆಯ ಕಾಲ :**

''ಪ್ರಾತಃಕಾಲೇ ಮಧ್ಯಾಹ್ನೇ ಸಾಯಾಹ್ನೇ ಚ ತ್ರಿಪುಂಡ್ರಕಂ''

ಎಂಬ ಮಹಾಚಾರ್ಯರ ಆದೇಶದಂತೆ ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲ ಹೀಗೆ ಪ್ರತಿದಿವಸ ತಪ್ಪದೇ ಮೂರು ವೇಳೆ ವಿಧ್ಯುಕ್ತವಾಗಿ ತ್ರಿಪುಂಡ್ರವನ್ನು ಧರಿಸಿಕೊಳ್ಳಬೇಕು. ಒಂದುವೇಳೆ ಮೂರೂ ಕಾಲದಲ್ಲಿ ಅನುಕೂಲವಾಗದೇ ಇದ್ದಾಗ ಯಾವದೊಂದು ಸಮಯದಲ್ಲಾದರೂ ತಪ್ಪದೇ ಧರಿಸಬೇಕು.

**ತ್ರಿಪುಂಡ್ರಧಾರಣೆಯ ಫಲ :**

ಏವಂ ವಿಧಂ ವಿಭೂತ್ಯಾಹಿ ಕುರುತೇ ಯಸ್ತ್ರಿ ಪುಂಡ್ರಕಂ ।
ಸ ರೌದ್ರಧರ್ಮ ಸಂಯುಕ್ತಸ್ತ್ರಯೀಮಯ ಇತಿ ಶ್ರುತಃ ॥

(ಸಿ. ಶಿ. ೭–೩೯)

ಎನ್ನುವ ಶ್ರೀ ಜಗದ್ಗುರು ರೇಣುಕರ ವಚನದಂತೆ ಶ್ರೀ ವಿಭೂತಿಯ ತ್ರಿಪುಂಡ್ರ ಧಾರಣೆಯಿಂದ ಸಾಧಕನಿಗೆ ರುದ್ರಪದವಿಯೇ ಪ್ರಾಪ್ತವಾಗುತ್ತದೆ.

''ಯ ಇದಂ ತ್ರಿಪುಂಡ್ರಂ ಧರತೇ ಸ ವೇದತ್ರಯಧಾರೀ
ಭವತಿ, ಸ ಸಂತತಂ ತ್ರೇತಾಗ್ನಿರ್ಭವತಿ, ಸ ಪುಷ್ಕರತ್ರಯ
ಸ್ನಾತೋ ಭವತಿ ಯಸ್ತ್ರಿಪುಂಡ್ರಧಾರೀ ಪುರುಷಃ ಸ ರುದ್ರಃ''

ಎಂಬ ಈ ಶ್ರುತಿವಾಕ್ಯವಾದರೂ ತ್ರಿಪುಂಡ್ರ ಧಾರಣೆಯ ಅನೇಕ ಅವಾಂತರ ಫಲಗಳನ್ನು ಬೋಧಿಸಿ, ಕೊನೆಗೆ ಸಾಧಕನು ರುದ್ರರೂಪನೇ ಆಗುತ್ತಾನೆ; ಎಂಬುದಾಗಿ ಪ್ರತಿಪಾದಿಸುತ್ತದೆ.

**ತ್ರಿಪುಂಡ್ರಧಾರಿಯ ಸತ್ಕಾರದಿಂದ ದುರಿತ ಕ್ಷಯ :**

ತ್ರಿಪುಂಡ್ರವನ್ನು ಧರಿಸುವುದರ ಜೊತೆಗೆ ತ್ರಿಪುಂಡ್ರಧಾರಿಗಳನ್ನು ಸತ್ಕರಿಸುವದೂ ವೀರಶೈವರ ಅತಿಥ್ಯಕರ್ಮವಾಗಿದೆ. ಆದಕಾರಣ ಭಸ್ಮನಿಷ್ಠರೂ ತ್ರಿಪುಂಡ್ರಧಾರಿಗಳೂ

ಆದ ಗುರು–ಜಂಗಮರು ಮನೆಗೆ ಬಂದರೆ ಅವರ ಪಾದ ಪ್ರಕ್ಷಾಲನೆಯನ್ನು ಮನೆಗೆಲ್ಲ ಪ್ರೋಕ್ಷಿಸಿ ಅವರನ್ನು ಸತ್ಕರಿಸಿದ್ದಾದರೆ ಗೃಹಸ್ಥರ ಸಕಲ ಪಾಪಗಳು ದೂರಾಗಿ ಪೂತಾತ್ಮ ರಾಗುತ್ತಾರೆ. ಎಂಬುದನ್ನು–

ತ್ರಿಪುಂಡ್ರಧಾರಿಣಃ ಪಾದೌ ಪ್ರಕ್ಷಾಲಯತಿ ಯಃ ಪುಮಾನ್ ।
ಸರ್ವಪಾತಕಯುಕ್ತೋಽಪಿ ಸ ಸದ್ಯಃ ಪೂಯತೇ ನರಃ ॥

(ಕ್ರಿಯಾಸಾರ ಉಪ. ೮, ಪುಟ ೭೯)

ಸೌರಸಂಹಿತೆಯ ಪ್ರಮಾಣವಚನವನ್ನು ಉದಾಹರಿಸುತ್ತ ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರ ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾರೆ

''ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವತೇ''

ತ್ರಿಪುಂಡ್ರವನ್ನು ನಿಂದಿಸಿದರೆ ಪರಮಾತ್ಮನನ್ನೇ ನಿಂದಿಸಿದಂತೆ ಎಂಬ ಈ ಪ್ರಮಾಣ ವಚನದಿಂದ ತ್ರಿಪುಂಡ್ರವು ಶಿವನ ಸ್ವರೂಪವೆಂಬುದು ಸಿದ್ಧವಾಗುತ್ತದೆ. ಆದಕಾರಣ ತ್ರಿಪುಂಡ್ರಧಾರಿಗಳೆಲ್ಲರೂ ಶಿವಸ್ವರೂಪರೇ. ಹೀಗೆ ತ್ರಿಪುಂಡ್ರಧಾರಿಗಳಾದ ಮಹಾತ್ಮ ರನ್ನು ಸತ್ಕರಿಸಿದಾಗ ಸಾಕ್ಷಾತ್ ಶಿವನನ್ನೇ ಸತ್ಕರಿಸಿದಂತಾಗುವ ಕಾರಣ ಮನುಷ್ಯನು ಸಕಲ ದೋಷ ನಿರ್ಮುಕ್ತನಾಗಿ ಶಿವಾನುಗ್ರಹವನ್ನು ಪಡೆಯುವನು.

ಇದೂ ಅಲ್ಲದೇ ಕೇವಲ ತ್ರಿಪುಂಡ್ರಧಾರಿಯ ಮುಖವನ್ನು ಅವಲೋಕಿಸುವ ವ್ರತವನ್ನು ಪರಿಪಾಲಿಸುವವರಿಗೆ ಐಶ್ವರ್ಯ ಪ್ರಾಪ್ತಿಯಾಗುವುದೆಂಬ ವಿಷಯದಲ್ಲಿ ಅನೇಕ ಕಥೆಗಳು ಪ್ರಾಚೀನ ಪುರಾಣ ಸಾಹಿತ್ಯದಲ್ಲಿ ದೊರೆಯುತ್ತವೆ. ಅಂತಹ ಕಥೆಗಳು ಇಂದು ನಮಗೆಲ್ಲ ಕಾಲ್ಪನಿಕಗಳಾಗಿ ತೋರಿದರೂ ಆ ವ್ರತವನ್ನು ನಿಷ್ಠೆಯಿಂದ ಪರಿ ಪಾಲಿಸುವವರಿಗೆ ಇಂದಿಗೂ ಫಲವು ಪ್ರಾಪ್ತಿಯಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಶ್ರೀ ಜಗದ್ಗುರು ರೇಣುಕಾಚಾರ್ಯರು ಉಪದೇಶಿಸಿದ ಈ ತ್ರಿಪುಂಡ್ರದ ಮಹತ್ತ್ವವನ್ನು ಪ್ರತಿಯೊಬ್ಬರೂ ಮನವರಿಕೆ ಮಾಡಿಕೊಂಡು ಅದನ್ನು ನಿಷ್ಠೆಯಿಂದ ಧರಿಸಿದರೆ ಐಹಿಕ ಐಶ್ವರ್ಯದ ಪ್ರಾಪ್ತಿಯ ಜೊತೆಗೆ ಅಂತ್ಯದಲ್ಲಿ ಶ್ರೀರುದ್ರತ್ವವೇ ಲಭಿಸುವುದು.

ಓಂ ಶಾಂತಿಃ ಶಾಂತಿಃ ಶಾಂತಿ

ದಿನಾಂಕ ೨೮ ಆಗಷ್ಟ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೯

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ದೇವಾಃ ಶಕ್ರಪುರೋಗಮಾಃ ।
ತ್ರಿಪುಂಡ್ರಂ ಧಾರಯಂತ್ಯೇವ ಭಸ್ಮನಾ ಪರಿಕಲ್ಪಿತಂ (ಸಿ. ಶಿ. ೭–೪೦)

ಬ್ರಹ್ಮನೂ, ವಿಷ್ಣುವೂ, ರುದ್ರನೂ ಮತ್ತು ಇಂದ್ರಾದಿದೇವತೆಗಳೂ ಸಹ ಭಸ್ಮದ ತ್ರಿಪುಂಡ್ರವನ್ನು ಧರಿಸುವವರಾಗಿದ್ದಾರೆ.

ವಸಿಷ್ಠಾದ್ಯಾಮಹಾಭಾಗಾ ಮುನಯಃ ಶ್ರುತಿಕೋವಿದಾಃ।
ಧಾರಯಂತಿ ಸದಾಕಾಲಂ ತ್ರಿಪುಂಡ್ರಂ ಭಸ್ಮನಾ ಕೃತಂ (ಸಿ. ಶಿ. ೭–೪೧)

ವೇದಬಲ್ಲಿದರೂ ಆಚಾರಶೀಲರೂ ಆದ ವಶಿಷ್ಠಾದಿ ಮಹರ್ಷಿಗಳೂ ಸದಾ ಕಾಲದಲ್ಲಿ ಭಸ್ಮದ ತ್ರಿಪುಂಡ್ರವನ್ನು ಧರಿಸಿಗೊಳ್ಳುತ್ತಾರೆ.

ಶೈವಾಗಮೇಷು ವೇದೇಷು ಪುರಾಣೇಷ್ವಖಿಲೇಷು ಚ ।
ಸ್ಮೃತೀತಿಹಾಸಕಲ್ಪೇಷು ವಿಹಿತಂ ಭಸ್ಮಪುಂಡ್ರಕಂ (ಸಿ. ಶಿ. ೭–೪೨)

ಕಾಮಿಕಾದಿ ವಾತುಲಾಂತಗಳಾದ ೨೮ ಶೈವಾಗಮಗಳಲ್ಲಿ ನಾಲ್ಕು ವೇದಗಳಲ್ಲಿ ಸಮಸ್ತ ಪುರಾಣಗಳಲ್ಲಿ ಸ್ಮೃತಿ ಶಾಸ್ತ್ರಗಳಲ್ಲಿ ಇತಿಹಾಸ ಗ್ರಂಥಗಳಲ್ಲಿ ಮತ್ತು ಕಲ್ಪಶಾಸ್ತ್ರ ಗಳಲ್ಲಿ ತ್ರಿಪುಂಡ್ರಧಾರಣೆಯು ಪ್ರತಿಪಾದಿಸಲ್ಪಟ್ಟಿದೆ.

ಧಾರಣೀಯಂ ಸಮಸ್ತಾನಾಂ ಶೈವಾನಾಂ ಚ ವಿಶೇಷತಃ ।
ನಾಸ್ತಿಕೋ ಭಿನ್ನಮರ್ಯಾದೋ ದುರಾಚಾರಪರಾಯಣಃ ॥
ಭಸ್ಮ ತ್ರಿಪುಂಡ್ರಧಾರೀ ಚೇನ್ಮುಚ್ಯತೇ ಸರ್ವಕಿಲ್ಬಿಷೈಃ (ಸಿ. ಶಿ. ೭–೪೩)

ಶಿವಭಕ್ತರಾದವರು ಈ ಭಸ್ಮ ತ್ರಿಪುಂಡ್ರವನ್ನು ವಿಶೇಷವಾಗಿ ಧರಿಸಿಕೊಳ್ಳಬೇಕು. ಇನ್ನು ನಾಸ್ತಿಕನೂ, ಮರ್ಯಾದಾಶೂನ್ಯನೂ ದುರಾಚಾರಿ ಮನುಷ್ಯನೂ ಸಹ ಈ ಭಸ್ಮ ತ್ರಿಪುಂಡ್ರಧಾರಣೆಯಿಂದ ಸಕಲ ಪಾಪ ನಿರ್ಮುಕ್ತನಾಗಿ ಪರಿಶುದ್ಧನಾಗುತ್ತಾನೆ.

ಭಸ್ಮ ತ್ರಿಪುಂಡ್ರದ ಪ್ರಾಚೀನತೆ :

ಪರಶಿವನು ಎಲ್ಲ ದೇವರ ದೇವನಾಗಿರುವುದರಿಂದ ಅವನಿಗೆ ''ಮಹಾದೇವ'' ನೆಂಬ ಅನ್ವರ್ಥಕ ನಾಮವಿದೆ. ಎಲ್ಲರಿಗೂ ಎಲ್ಲವನ್ನು ದಯಪಾಲಿಸಿ ತನಗೆ ಏನಿಲ್ಲದಂತೆ ಇರುವುದೇ ಅವನ ಮಹತ್ವಕ್ಕೆ ಕಾರಣವಾಗಿದೆ. ಅಂತೆಯೇ ಪುಷ್ಪದಂತ ಕವಿಯು–

ಮಹೋಕ್ಷಃ ಖಟ್ವಾಂಗಂ ಪರಶುರಜಿನಂ ಭಸ್ಮ ಫಣಿನಃ
ಕಪಾಲಂ ಚೇತೀಯತ್ತವ ವರದ ತಂತ್ರೋಪಕರಣಂ ।
ಸುರಾಸ್ತಾಂ ತಾಮೃದ್ಧಿಂ ವಿದಧತಿ ಭವದ್ಭ್ರೂಪ್ರಣಿಹಿತಾಂ
ನ ಹಿಸ್ವಾತ್ಮಾರಾಮಂ ವಿಷಯ ಮೃಗತೃಷ್ಣಾ ಭ್ರಮಯತಿ ॥

ಎಂಬ ಈ ಶ್ಲೋಕದಲ್ಲಿ ಮುದಿ ಎತ್ತು, ಕಾಪಾಲಶಸ್ತ್ರ, ಕೊಡಲಿ, ಮೃಗಚರ್ಮ, ಭಸ್ಮ

ಸರ್ಪ ಮತ್ತು ಬ್ರಹ್ಮಕಪಾಲಗಳೆಂಬ ಏಳು ಸಾಧನಗಳಿಂದ ಯುಕ್ತನಾದ ಶಿವನು ಆಪಾತತಃ ದರಿದ್ರನಂತೆ ತೋರಿದರೂ ಎಲ್ಲ ದೇವತೆಗಳಿಗೆ ಸಕಲ ಸಂಪತ್ತನ್ನು ದಯಪಾಲಿಸಿದ ಮಹಾನ್ ಐಶ್ವರ್ಯಶಾಲಿ ಎಂಬುದಾಗಿ ಪ್ರತಿಪಾದಿಸಿದ್ದಾನೆ.

ಆದ್ದರಿಂದ ಪದ-ಪ್ರತಿಷ್ಠೆ, ವಿಜಯ ಮುಂತಾದವುಗಳ ಅಪೇಕ್ಷೆಯುಳ್ಳ ಬ್ರಹ್ಮ ವಿಷ್ಣು ರಾಮ, ಕೃಷ್ಣ ಹಾಗೂ ಇಂದ್ರಾದಿ ದೇವತೆಗಳು ಶಿವನನ್ನೇ ಆರಾಧಿಸಿ ಅವನ ಅನುಗ್ರಹದಿಂದಲೇ ತಮ್ಮ ತಮ್ಮ ಸ್ಥಾನಮಾನಗಳನ್ನು ಪಡೆದಿರುವ ವಿಷಯವು ಅನೇಕ ಪುರಾಣಾದಿಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಸತ್ಯಂ ಶೌಚಂ ಜಪೋ ಹೋಮಸ್ತೀರ್ಥಂ ದೇವಾದಿ ಪೂಜನಂ ।
ತಸ್ಯ ವ್ಯರ್ಥಮಿದಂ ಸರ್ವಂ ಯಸ್ತ್ರಿಪುಂಡ್ರಂ ನ ಧಾರಯೇತ್ ॥

(ಕ್ರಿಯಾಸಾರ ಉಪ ೮, ಪುಟ ೬೦)

ಎಂಬ ಈ ನಾರದೀಯ ಸ್ಮೃತಿ ಪ್ರಮಾಣದಂತೆ ತ್ರಿಪುಂಡ್ರಧಾರಣೆ ಇಲ್ಲದೇ ಮಾಡಿದ ಜಪ, ಹೋಮ, ದೇವತಾರ್ಚನೆಗಳು ನಿರರ್ಥಕಗಳಾಗುವವು. ಆದ್ದರಿಂದ ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳು ಶಿವಾರಾಧನೆಯನ್ನು ಮಾಡಿ ಶಿವಾನುಗ್ರಹವನ್ನು ಪಡೆದ ಕಾರಣ ಅವರೆಲ್ಲರೂ ತ್ರಿಪುಂಡ್ರಧಾರಿಗಳೇ ಆಗಿದ್ದರೆಂಬುದನ್ನು ಪೂಜ್ಯರು ಇಲ್ಲಿ ಪ್ರತಿಪಾದಿಸಿ ತ್ರಿಪುಂಡ್ರ ಧಾರಣೆಯ ಪ್ರಾಚೀನತೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಕೇವಲ ದೇವತೆಗಳಷ್ಟೇ ಅಲ್ಲ ಸಕಲ ಶಾಸ್ತ್ರಬಲ್ಲಿದರೂ ಸದಾಚಾರ ಶೀಲರೂ ಆದ ವಸಿಷ್ಠ ವಾಮದೇವ ಮುಂತಾದ ಮಹರ್ಷಿಗಳೆಲ್ಲರೂ ಶಿವಭಕ್ತರೇ ಆದ್ದರಿಂದ ಅವರಾದರೂ ತ್ರಿಪುಂಡ್ರ ಧಾರಣೆಯಿಂದಲೇ ತಪಃಸಿದ್ಧರಾಗಿ ಲೋಕಮಾನ್ಯರಾಗಿ ಹೋಗಿದ್ದಾರೆ. ಆದ್ದರಿಂದ ''ಮಹಾಜನೋ ಏನಗತಃ ಸ ಪಂಥಾಃ'' ಎಂಬ ಅಭಿಯುಕ್ತಿಯಂತೆ ದೊಡ್ಡವರು ನಡೆದ ಮಾರ್ಗದಲ್ಲಿಯೇ ಕಿರಿಯರು ಕ್ರಮಿಸುವುದು ಶ್ರೇಯಸ್ಕರವು.

ರಾಮ-ಕೃಷ್ಣ ಮುಂತಾದ ದೇವತೆಗಳೇ ತ್ರಿಪುಂಡ್ರಧಾರಿಗಳಾಗಿ ಶಿವನನ್ನು ಪೂಜಿಸಿ ತಮ್ಮ ಸ್ಥಾನ-ಮಾನಗಳನ್ನು ಪಡೆದಿರುವ ಕಾರಣ ಆ ರಾಮಕೃಷ್ಣಾದಿ ದೇವತೆಗಳ ಭಕ್ತರೂ ಸಹ ತಮ್ಮ ದೇವರ ದೇವನಾದ ಶಿವನನ್ನು ಆರಾಧಿಸಿ ಶಿವನಿಗೆ ಅತ್ಯಂತ ಪ್ರಿಯವಾದ ಭಸ್ಮ ತ್ರಿಪುಂಡ್ರವನ್ನು ಧರಿಸಿ ಪ್ರೇಯ ಹಾಗೂ ಶ್ರೇಯ ಫಲಗಳನ್ನು ಪಡೆದು ಧನ್ಯರಾಗಬೇಕು.

**ತ್ರಿಪುಂಡ್ರಧಾರಣೆಯು ವೇದಾಗಮ ಸಮ್ಮತವು :**

ಭಾರತ ದೇಶದ ಎಲ್ಲ ಧರ್ಮ-ದರ್ಶನಗಳ ಸಂಸ್ಕೃತಿಗೆ ವೇದಾಗಮಗಳೇ ಮೂಲ ಸ್ರೋತಗಳು. ಅಂತೆಯೇ ಯಾವುದೇ ಧರ್ಮದವರು ತಮ್ಮ ಧರ್ಮದ ತತ್ತ್ವಗಳನ್ನು ಪ್ರತಿಪಾದಿಸುವಾಗ ವೇದಾಗಮಗಳ ಪ್ರಮಾಣಗಳನ್ನು ಉದಾಹರಿಸಿ ಅದನ್ನು ಸ್ಥಿರಗೊಳಿಸುವರು. ಅದರಂತೆ ಸನಾತನವಾದ ವೀರಶೈವ ಧರ್ಮ ತತ್ತ್ವಗಳಿಗೂ ವೇದಾಗಮಗಳೇ ಮೂಲಗಳು. ಅಂತೆಯೇ ನಮ್ಮ ಪ್ರಾಚೀನ ಆಚಾರ್ಯರು ಈ ಧರ್ಮದ ತತ್ತ್ವಗಳನ್ನು ಪ್ರತಿಪಾದಿಸುವಾಗ ಪ್ರಸಂಗಾನುಸಾರವಾಗಿ ವೇದ-ಆಗಮ-ಪುರಾಣಾದಿಗಳ ಪ್ರಮಾಣಗಳನ್ನು ತಮ್ಮ ತಮ್ಮ ಗ್ರಂಥಗಳಲ್ಲಿ ಹೇರಳವಾಗಿ ಪ್ರತಿ ಪಾದಿಸಿದ್ದಾರೆ.

ಈ ಆಚಾರ್ಯ ಪದ್ಧತಿಯನ್ನು ಅನುಸರಿಸಿಯೇ ಹನ್ನೆರಡನೇ ಶತಮಾನದಲ್ಲಿ ಆಗಿ ಹೋದ ಅನೇಕ ಶಿವಶರಣರು ತಮ್ಮ ಕನ್ನಡ ವಚನಗಳಲ್ಲಿ ವೇದಾಗಮ ಪುರಾಣಾದಿಗಳ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿದ್ದು ಇಂದು ನಾವು ಕಾಣುತ್ತೇವೆ. ಆದ್ದರಿಂದ ವೀರಶೈವ ಧರ್ಮದರ್ಶನಕ್ಕೆ ಮೂಲಸಾಹಿತ್ಯವೆಂದರೆ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಆಗಮಗಳು ಹಾಗೂ ವೇದಾದಿಗಳೆಂಬುದನ್ನು ಯಾರೂ ಮರೆಯಬಾರದು.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಶಿವನ ಆದೇಶಾನುಸಾರವಾಗಿ ಭೂಲೋಕದಲ್ಲಿ ಅವತರಿಸಿ ಆ ವೇದಾಗಮ ಸಮ್ಮತವಾದ ಸಮನ್ವಯ ಸ್ವರೂಪವಾದ ವೀರಶೈವ ಸಿದ್ಧಾಂತವನ್ನೇ ಋಷಿ ಪುಂಗವನಾದ ಅಗಸ್ತ್ಯನಿಗೆ ಉಪದೇಶಿಸಿದರು. ಆ ಉಪದೇಶವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ಸಂಗ್ರಹಿಸಿ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ರಚಿಸಿರುವುದರಿಂದ ಪ್ರಾಚೀನ ವೇದಾಗಮಗಳಲ್ಲಿಯ ಸಮಗ್ರ ವೀರಶೈವ ಸಿದ್ಧಾಂತವನ್ನು ನಾವು ಇಂದು ಸಿದ್ಧಾಂತ ಶಿಖಾಮಣಿಯೊಂದರಲ್ಲಿಯೇ ಕಾಣುತ್ತೇವೆ. ಆದ ಕಾರಣ ಆ ವೇದಾಗಮಗಳ ನಂತರ ಸಿದ್ಧಾಂತ ಶಿಖಾಮಣಿಯೇ ವೀರಶೈವರ ಧರ್ಮ ಗ್ರಂಥವು.

ಇಲ್ಲಿಯವರೆಗೆ ಉಪದೇಶ ಮಾಡಿದ ಭಸ್ಮಧಾರಣಸ್ಥಲದ ಸಕಲ ವಿಷಯಗಳು ವೇದ–ಆಗಮ–ಉಪನಿಷತ್ ಪುರಾಣ ಸ್ಮೃತಿ ಇತಿಹಾಸ ಮತ್ತು ಕಲ್ಪಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಅವೆಲ್ಲವುಗಳ ಸಾರವನ್ನು ಸಂಗ್ರಹಿಸಿ ಬರೆದ ಶ್ರೀ ಶಿವಯೋಗಿ ಶಿವಾಚಾರ್ಯರು ಎಂತಹ ಅಗಾಧಪಾಂಡಿತ್ಯವನ್ನು ಹೊಂದಿದವರೆಂಬುದು ತಿಳಿದು ಬರುತ್ತದೆ.

ಸಿದ್ಧಾಂತಶಿಖಾಮಣಿಯ ನಂತರ ರಚಿತಗಳಾದ ಶ್ರೀಕರಭಾಷ್ಯ ಕ್ರಿಯಾಸಾರ, ವೀರಶೈವಾನಂದ ಚಂದ್ರಿಕಾ, ಲಿಂಗಧಾರಣಚಂದ್ರಿಕಾ ಮತ್ತು ಇವಟೂರಿ ನಂದಿಕೇಶ್ವರ ಶಾಸ್ತ್ರಿಗಳಿಂದ ರಚಿತವಾದ ''ವೀರಶೈವಾಷ್ಟಾವರಣ ಪ್ರಮಾಣಾಷ್ಟಕಾಭರಣಂ'' ಮುಂತಾದ ಅನೇಕ ಗ್ರಂಥಗಳಲ್ಲಿ ಭಸ್ಮಧಾರಣೆಯ ಬಗ್ಗೆ ಸಾಕಷ್ಟು ಪ್ರಾಚೀನ ಪ್ರಮಾಣಗಳು ನಿರೂಪಿಸಲಾಗಿವೆ. ಅಪೇಕ್ಷೆಯುಳ್ಳವರು ಆಯಾ ಗ್ರಂಥಗಳನ್ನು ಅಭ್ಯಸಿಸಿ ಮನವರಿಕೆ ಮಾಡಿಕೊಳ್ಳಬಹುದು.

**ತ್ರಿಪುಂಡ್ರದಿಂದ ಕಿಲ್ಬಿಷಕ್ಷಯ :**

ಹೀಗೆ ಅತಿ ಪ್ರಾಚೀನವೂ, ವೇದಾಗಮ ಸಮ್ಮತವೂ, ದೇವ–ಮುನಿಗಳಿಂದ ಪರಿಗೃಹಿತವೂ ಆದ ತ್ರಿಪುಂಡ್ರಧಾರಣೆಯು ನಮ್ಮ ಸಕಲ ಪಾಪಗಳನ್ನು ಕ್ಷಯಗೊಳಿಸಿ ನಾಸ್ತಿಕರನ್ನು ಪರಮ ಆಸ್ತಿಕರನ್ನಾಗಿ ಮಾಡುವುದು. ಅಂತೆಯೇ ಪೂಜ್ಯರು–

ನಾಸ್ತಿಕೋ ಭಿನ್ನಮರ್ಯಾದೋ ದುರಾಚಾರಪರಾಯಣಃ ।
ಭಸ್ಮತ್ರಿಪುಂಡ್ರಧಾರೀ ಚೇನ್ಮುಚ್ಯತೇ ಸರ್ವಕಿಲ್ಬಿಷೈಃ ॥

ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಜಗತ್ತಿನಲ್ಲಿ ನಾಸ್ತಿಕ ಹಾಗೂ ದುರಾಚಾರಿಗಳ ಸಂಖ್ಯೆಯು ಬೆಳೆಯುತ್ತಿದೆ. ಇದನ್ನು ಉಪಶಮನಗೊಳಿಸುವ ಏಕಮೇವ ದಿವ್ಯೌಷಧವೆಂದರೆ ತ್ರಿಪುಂಡ್ರಧಾರಣೆಯು. ಶಿವನ ಅಂಗ ಭೂಷಣವಾದ ಈ ಭಸ್ಮವು ಯಾರ ಅಂಗಕ್ಕೆ ಸೋಂಕುವುದೋ ಅವರೆಲ್ಲರೂ ಪೂತಾತ್ಮರೇ ಆಗುವರು. ಇದಕ್ಕೊಂದು ಪ್ರಾಚೀನ ದೃಷ್ಟಾಂತವನ್ನುದಾಹರಿಸೋಣ–

ಅತಿ ಪ್ರಾಚೀನ ಕಾಲದಲ್ಲಿ ಬ್ರಾಹ್ಮಣನೋರ್ವನು ತನ್ನ ವರ್ಣಾಶ್ರಮೋಚಿತಗಳಾದ ವಿಹಿತ ಕರ್ಮಗಳನ್ನಾಚರಿಸದೇ ದುರ್ಮಾರ್ಗಿಯಾದಕಾರಣ ಮರಣದ ನಂತರ ಬ್ರಹ್ಮರಾಕ್ಷಸನಾದನು. ಈ ಬ್ರಹ್ಮರಾಕ್ಷಸನು ಅತ್ತಿತ್ತ ಸಂಚರಿಸುತ್ತ ಕ್ರೌಂಚವೆಂಬ ಹೆಸರಿನ ವನಕ್ಕೆ ಬಂದನು. ಅಲ್ಲಿ ಓರ್ವ ಶಿವಭಕ್ತನು ಭಸ್ಮಸ್ನಾನ–ಭಸ್ಮೋದ್ಧೂಲನ ಹಾಗೂ ತ್ರಿಪುಂಡ್ರಧಾರಿಯಾಗಿ ಶಿವಧ್ಯಾನದಲ್ಲಿ ಮಗ್ನನಾಗಿದ್ದನು.

ಆ ಬ್ರಹ್ಮರಾಕ್ಷಸನು ಇವನನ್ನು ನೋಡಿ ಸಂತುಷ್ಟಚಿತ್ತನಾಗಿ ಭಕ್ಷಿಸಲು ಧಾವಿಸಿದನು. ಆದರೂ ಆ ಭಕ್ತನು ನಿಶ್ಚಲವಾಗಿಯೇ ಕುಳಿತಿದ್ದನು. ರಾಕ್ಷಸನು ಬಂದು ಇವನ ಅಂಗಸ್ಪರ್ಶವನ್ನು ಮಾಡಿದನು. ಆಗ ಭಕ್ತನ ಅಂಗಕ್ಕೆ ಲಿಪ್ತವಾದ ದಿವ್ಯ ಭಸ್ಮವು ಈ ಬ್ರಹ್ಮರಾಕ್ಷಸ ಶರೀರಕ್ಕೆ ಸೋಂಕಿದೊಡನೆ ಅವನ ಹಿಂದಿನ ಅನೇಕ ಪಾಪಗಳೆಲ್ಲ ಉರಿದುಹೋಗಿ ದಿವ್ಯಾತ್ಮನಾದನು.

ಆಗ ಅಚ್ಚರಿಗೊಂಡ ಆ ಬ್ರಹ್ಮರಾಕ್ಷಸನು ಅಲ್ಪ ಸಮಯದಲ್ಲಿಯೇ ತನಗುಂಟಾದ ಈ ಪರಿವರ್ತನೆಯ ಕಾರಣವೇನೆಂದು ಕೇಳಲು ಆ ಶಿವಭಕ್ತನು ಇದೆಲ್ಲ ಭಸ್ಮದ ಪ್ರತಾಪವೆಂಬುದಾಗಿ ನಿರೂಪಿಸಿದನು. ಶಿವಭಕ್ತನ ಅಂಗಭಸ್ಮ ಸ್ಪರ್ಶದಿಂದ ಪರಿಶುದ್ಧವಾದ ಆ ಬ್ರಹ್ಮರಾಕ್ಷಸನು ತನ್ನ ಹೀನ ಜನ್ಮವನ್ನು ಕಳೆದುಕೊಂಡು ಶಿವಧಾಮವನ್ನೈದಿದನು.

ಈ ತೆರನಾಗಿ ಭಸ್ಮತ್ರಿಪುಂಡ್ರದ ಮಹಿಮೆಯು ಅಪಾರವಾಗಿದೆ. ಇದರಲ್ಲಿಯಾರು ಎಷ್ಟು ಶ್ರದ್ಧೆಯನ್ನು ವಹಿಸುವರೋ ಅವರು ಅಷ್ಟೊಂದು ಅಧಿಕ ಫಲವನ್ನು ಪಡೆದುಕೊಳ್ಳುವರು. ಕಾರಣ ಪೂಜ್ಯ ಪಾದರಾದ ಶ್ರೀ ಜಗದ್ಗುರು ರೇಣುಕರು ಮಹಾಮಹಿಮನಾದ ಆಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತಮಾನವರಿಗೆಲ್ಲ ಭಸ್ಮದ ಮಹಿಮೆಯನ್ನು ತಿಳಿಯಪಡಿಸಿದ್ದಾರೆ. ಪೂಜ್ಯರ ಈ ಉಪದೇಶದಲ್ಲಿ ಶ್ರದ್ಧಾಳುಗಳಾಗಿ ಅವರು ತಿಳಿಸಿದ ರೀತಿಯಲ್ಲಿ ಭಸ್ಮವನ್ನು ಸ್ವತಃ ನಿರ್ಮಾಣಮಾಡಿಕೊಂಡು ಭಸ್ಮಸ್ನಾನ, ಭಸ್ಮೋದ್ಧೂಲನ ಹಾಗೂ ತ್ರಿಪುಂಡ್ರಧಾರಿಗಳಾಗಿ ನಮ್ಮ ದುರಿತಗಳನ್ನೆಲ್ಲ ದೂರೀಕರಿಸಿಕೊಂಡು ಪೂತಾತ್ಮರಾಗಿ ಇಹದಲ್ಲಿ ಸುಖವನ್ನು ಪಡೆದು ಪರದಲ್ಲಿ ಸದ್ಗತಿಯನ್ನು ಪಡೆಯೋಣ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ''ಗ್ರಂಥದ
ಸಪ್ತಮ ಪರಿಚ್ಛೇದದ ಭಸ್ಮಧಾರಣಸ್ಥಲ ಪೂರ್ಣವಾದುದು.



ಆಶೀರ್ವಚನ-೧

# ರುದ್ರಾಕ್ಷಧಾರಣಸ್ಥಲ

ಭಸ್ಮನಾ ವಿಹಿತಸ್ನಾನಸ್ತ್ರಿಪುಂಡ್ರಾಂಕಿತಮಸ್ತಕಃ ।
ಶಿವಾರ್ಚನಪರೋ ನಿತ್ಯಂ ರುದ್ರಾಕ್ಷಮಪಿ ಧಾರಯೇತ್ ॥ ೧ ॥

ಭಸ್ಮಧಾರಣಸ್ಥಲದಲ್ಲಿ ಹೇಳಲ್ಪಟ್ಟ ವಿಧಿಗನುಸಾರವಾಗಿ, ಭಸ್ಮಸ್ನಾನ ಮಾಡಿ, ತ್ರಿಪುಂಡ್ರ ವನ್ನು ಧರಿಸಿದ ಶಿವಪೂಜಕನಾದ ಸಾಧಕನು, ನಿತ್ಯದ ಶಿವಪೂಜಾ ವೇಳೆಯಲ್ಲಿ ರುದ್ರಾಕ್ಷ ವನ್ನು ಸಹ ಧರಿಸಬೇಕು.

ರುದ್ರಾಕ್ಷಧಾರಣಾದೇವಮುಚ್ಯಂತೇ ಸರ್ವಪಾತಕೈಃ ।
ದುಷ್ಟಚಿತ್ತಾ ದುರಾಚಾರಾ ದುಷ್ಪ್ರಜ್ಞಾ ಅಪಿ ಮಾನವಾಃ ॥ ೨ ॥

ದುಷ್ಟಚಿತ್ತವುಳ್ಳ, ದುರಾಚಾರಿಗಳಾದ ಮತ್ತು ಹೀನ ಬುದ್ಧಿಯುಳ್ಳ ಮಾನವರೂ ಕೂಡ ಈ ರುದ್ರಾಕ್ಷಗಳನ್ನು ಧರಿಸಿದ ಮಾತ್ರದಿಂದ ಸರ್ವವಿಧ ಪಾತಕಗಳಿಂದ ನಿರ್ಮುಕ್ತ ರಾಗುತ್ತಾರೆ.

ರುದ್ರಾಕ್ಷಧಾರಣವು ನಿತ್ಯಕರ್ಮವು :

ವೀರಶೈವ ಸಿದ್ಧಾಂತದಲ್ಲಿ ಇಷ್ಟಲಿಂಗಧಾರಣ ಹಾಗೂ ಅದರ ಪೂಜೆಯೇ ನಿತ್ಯ ಕರ್ಮವು. ಈ ನಿತ್ಯಕರ್ಮಕ್ಕೆ ಅಂಗಕರ್ಮಗಳಾಗಿ ಭಸ್ಮ ಮತ್ತು ರುದ್ರಾಕ್ಷ ಧಾರಣಗಳು ಪ್ರತಿಪಾದಿಸಲ್ಪಟ್ಟಿವೆ. ನಿತ್ಯಕರ್ಮದಂತೆ ಅಂಗಕರ್ಮಗಳೂ ಸಹ ನಿತ್ಯಗಳಾದ್ದರಿಂದ, ಲಿಂಗಧಾರಿಯಾದ ಶಿವಭಕ್ತನು ಭಸ್ಮವನ್ನು ಧರಿಸಿಕೊಂಡಂತೆ ರುದ್ರಾಕ್ಷಧಾರಣವನ್ನೂ ಸಹ ಮಾಡಿಕೊಳ್ಳಲೇಬೇಕು. ಅಂತೆಯೇ ಪರಮ ಪೂಜ್ಯರಾದ ಶ್ರೀ ಜಗದ್ಗುರು ರೇಣುಕರು "ಶಿವಾರ್ಚನಪರೋ ನಿತ್ಯಂ ರುದ್ರಾಕ್ಷಮಪಿ ಧಾರಯೇತ್" ಎಂಬುದಾಗಿ ಶಿವ ಪೂಜಕನಿಗೆ ರುದ್ರಾಕ್ಷಧಾರಣವು ನಿತ್ಯಕರ್ಮವೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಗುರ್ವಾದೇವ ರೂಪವಾದ ಈ ರುದ್ರಾಕ್ಷಧಾರಣವನ್ನು ಮಾಡಿಕೊಳ್ಳದೇ ಲಿಂಗಪೂಜಾದಿ ಗಳನ್ನು ಮಾಡಿದ್ದಾದರೆ, ಆ ಪೂಜಾಫಲವೇ ದೊರೆಯಲಾರದು. ಅಂತೆಯೇ–

ಅರುದ್ರಾಕ್ಷಧರೋ ಭೂತ್ವಾ ಯತ್ಕಿಂಚಿತ್ಕರ್ಮ ವೈದಿಕಂ ।
ಕುರ್ಯಾದ್ವಿಪ್ರಸ್ತು ಯೋ ಮೋಹಾನ್ನಾಸಾವಾಪ್ನೋತಿ ತತ್ಫಲಂ ॥

ಎಂಬ ಲಿಂಗಪುರಾಣದ ಈ ಶ್ಲೋಕವನ್ನು ಉದಾಹರಿಸುತ್ತ ಶ್ರೀ ಮರಿ ತೋಂಟದಾರ್ಯರು ವೀರಶೈವಾನಂದ ಚಂದ್ರಿಕೆಯಲ್ಲಿ–ಸ್ನಾನ, ದಾನ, ಪೂಜೆ, ಜಪ–ಹೋಮ, ಪ್ರಾಯಶ್ಚಿತ್ತ, ಶ್ರಾದ್ಧ ಮೊದಲಾದ ಯಾವುದೇ ನಿತ್ಯ ಇಲ್ಲವೇ ನೈಮಿತ್ತಿಕ ಕರ್ಮಗಳನ್ನಾಚರಿಸುವಾಗ, ರುದ್ರಾಕ್ಷಧಾರಣವನ್ನು ಮಾಡಿಕೊಳ್ಳದಿದ್ದರೆ, ಆ ಕರ್ಮ ಗಳೆಲ್ಲ ನಿಷ್ಫಲಗಳಾಗಿ, ಕರ್ಮ ಮಾಡುವವನಿಗೆ ಯಾವ ಫಲವೂ ಪ್ರಾಪ್ತವಾಗಲಾರ ದೆಂಬುದನ್ನು ಪ್ರತಿಪಾದಿಸಿದ್ದಾರೆ.

''ನಿತ್ಯ ಸದಾ ಯಾವದಾಯುಃ'' ಎಂಬ ಉಕ್ತಿಗನುಸಾರವಾಗಿ ದೇಹದಲ್ಲಿ ಪ್ರಾಣ ಇರುವವರೆಗೆ ತಪ್ಪದೇ ಮಾಡಬೇಕಾದ ಕರ್ಮವೇ ನಿತ್ಯ ಕರ್ಮವಾದ್ದರಿಂದ ಪೂಜ್ಯ ರಿಂದ ನಿತ್ಯಕರ್ಮರೂಪವಾಗಿ ಉಪದೇಶಿಸಲ್ಪಟ್ಟ ರುದ್ರಾಕ್ಷಧಾರಣವನ್ನು ಮಾನವ ರೆಲ್ಲರೂ ಮಾಡಿಕೊಳ್ಳಬೇಕಲ್ಲದೇ, ಲಿಂಗಾರ್ಚನ ತತ್ಪರರಾದ ವೀರಶೈವರು ಆ ಲಿಂಗ ಪೂಜೆಯ ವೇಳೆಯಲ್ಲಿ ಶಿವನ ಮೈ ಬೆಳಗಾದ ಭಸ್ಮವನ್ನು ಮೈತುಂಬ ಧರಿಸಿಕೊಂಡಂತೆ, ಸರ್ವಾಂಗದಲ್ಲಿ ರುದ್ರಾಕ್ಷಧಾರಣವನ್ನೂ ಮಾಡಿಕೊಳ್ಳಬೇಕು.

ರುದ್ರಾಕ್ಷಧಾರಣದಿಂದ ಚಿತ್ತ ಶುದ್ಧಿ :

''ಪ್ರಯೋಜನಮನುದ್ದಿಶ್ಯ ನ ಮಂದೋऽಪಿ ಪ್ರವರ್ತತೇ'' ಎಂಬ ವ್ಯಾವಹಾರಿಕ ನುಡಿಯಂತೆ, ಪ್ರಯೋಜನವಿಲ್ಲದೇ ಯಾರೂ ಯಾವ ಕಾರ್ಯವನ್ನೂ ಮಾಡಲಾರರು. ಹಾಗಾದರೆ ರುದ್ರಾಕ್ಷಧಾರಣದ ಪ್ರಯೋಜನವೇನು ? ಎಂಬ ಪ್ರಶ್ನೆಯುದ್ಭವಿಸಿದಾಗ– ''ರುದ್ರಾಕ್ಷಧಾರಣಾದೇವ ಮುಚ್ಯಂತೇ ಸರ್ವಪಾತಕೈಃ'' ರುದ್ರಾಕ್ಷವನ್ನು ಧರಿಸಿದ ಮಾತ್ರ ದಿಂದಲೇ ಮನುಷ್ಯರು ಸರ್ವವಿಧ ಪಾತಕಗಳಿಂದಲೂ ವಿನಿರ್ಮುಕ್ತರಾಗುವರೆಂಬುದಾಗಿ ಶ್ರೀ ಜಗದ್ಗುರು ರೇಣುಕರು ಮಹಾಮಹಿಮನಾದ ಶ್ರೀ ಅಗಸ್ತ್ಯನನ್ನು ಕುರಿತು ಉಪದೇಶಿಸಿದ್ದಾರೆ.

''ಪಾತಯತೀತಿ ಪಾತಕಂ'' ಎಂಬ ವ್ಯುತ್ಪತ್ತಿಯ ಮೇರೆಗೆ, ನಮ್ಮನ್ನು ಪತಿತರನ್ನಾಗಿ ಮಾಡುವುದಾವುದೋ ಅದೇ ಪಾತಕವು. ಮನುಷ್ಯನು ತಾನೇ ಮಾಡಿದ ದುಷ್ಕರ್ಮಗಳ ಫಲದಿಂದ ಪತಿತನಾಗುತ್ತಾನೆ. ''ಪಾಪಾನುಗುಣದಿಂದೆ ಗಿಡ-ಮರ-ಕ್ರಿಮಿಗಳ ರೂಪಾಗಿ'' ಎಂಬ ಈ ಪದ್ಯದಲ್ಲಿ ಶ್ರೀ ನಿಜಗುಣ ಶಿವಯೋಗಿಗಳು ಮನುಷ್ಯನ ಪತನದ ಕ್ರಮವನ್ನು ಬಹು ಮಾರ್ಮಿಕವಾಗಿ ಉಪದೇಶಿಸಿದ್ದಾರೆ.

ಒಂದು ಬಹು ಎತ್ತರದ ಮಹಡಿಯ ಮನೆಯನ್ನು ಪಾವಟಿಗೆಗಳ ಸಹಾಯದಿಂದ ಏರಿ ಕೊನೆಯ ಮೆಟ್ಟಲಲ್ಲಿ ನಿಂತ ಮನುಷ್ಯನು, ಒಂದು ವೇಳೆ ಕಾಲುಜಾರಿ ಬಿದ್ದದ್ದಾದರೆ, ಅವೇ ಪಾವಟಿಗೆಗಳಿಂದ ಉರುಳುತ್ತ–ಉರುಳುತ್ತ ಎಲ್ಲಕ್ಕೂ ಕೆಳಗೆ ಬಂದು ಬೀಳುವಂತೆ, ಅನೇಕ ಜನ್ಮಗಳ ಪುಣ್ಯವಿಶೇಷದಿಂದ ಬಹುಶ್ರೇಷ್ಠವಾದ ಮನುಷ್ಯ ಜನ್ಮವೆಂಬ ಎತ್ತರದ ಮಹಡಿಯ ಮಹಲನ್ನು ಏರಿದ ಜೀವಾತ್ಮನು, ಅಲ್ಲಿ ಬಹಳ ಸಾವಧಾನದಿಂದ ವರ್ತಿಸ ಬೇಕಾಗುತ್ತದೆ. ಒಂದು ವೇಳೆ ಅಲ್ಲಿ ಅಲ್ಲ–ಸಲ್ಲದ ಶಾಸ್ತ್ರನಿಷಿದ್ಧ ವ್ಯವಹಾರಗಳನ್ನೆಸಗಿದ್ದಾ ದರೆ, ಅಲ್ಲಿಂದ ಜಾರಿ ಪಶು–ಪಕ್ಷಿ–ಮರ ಮುಂತಾದ ಹೀನ ಯೋನಿಗಳಲ್ಲಿ ಬಂದು ಬೀಳಬೇಕಾಗುತ್ತದೆ. ಹೀಗೆ ಜೀವಾತ್ಮನ ಅಧಃಪತನಕ್ಕೆ ಅವನ ನಿಷಿದ್ಧಾಚರಣೆಯೇ ಕಾರಣವಾಗುತ್ತದೆ.

ನಿಷಿದ್ಧ ಕಾರ್ಯದಲ್ಲಿ ಪ್ರವೃತ್ತಿಯು ಸಹಜವಾಗಿಯೇ ಅಧಿಕವಾಗಿರುವುದು. ಅಂತೆಯೇ ಸುರಾಪಾನ, ಪರಸ್ತ್ರೀಗಮನ, ಸ್ತೇಯ ಮುಂತಾದ ನಿಷಿದ್ಧ ಕರ್ಮಗಳಲ್ಲಿಯೇ ಮನುಷ್ಯನ ಸಹಜ ಪ್ರವೃತ್ತಿಯು ಕಂಡುಬರುತ್ತದೆ. ಇವುಗಳಿಂದ ಕ್ಷಣಿಕವಾದ ಮಾನಸಿಕ ತೋಷ ಉಂಟಾಗುವದೇನೋ ನಿಜ; ಆದರೆ ಆ ದುಷ್ಕರ್ಮಗಳ ಫಲವು ಮಹಾ ಭಯಾನಕವಾಗಿರುತ್ತದೆ.

ಪ್ರಜ್ಞಾಹೀನನಾಗಿ ದುರ್ಜನರ ಸಹವಾಸದಲ್ಲಿ ಬಿದ್ದು ಮಾಡಬಾರದ ಮಹಾ ಪಾತಕಗಳನ್ನು ಮಾಡಿ ಕೊನೆಗೆ ಪ್ರಜ್ಞೆ ಬಂದಾಗ ಪಶ್ಚಾತ್ತಾಪವನ್ನು ಅನುಭವಿಸುತ್ತ ಹೀನ ಯೋನಿಗಳಲ್ಲಿ ಜನ್ಮತಾಳುವ ಈ ಅಪಾಯದಿಂದ ಪಾರಾಗುವ ಉಪಾಯವೇನು ? ಎಂಬುದಾಗಿ ಚಿಂತಿಸುವವರನ್ನು ಕುರಿತು, ಶ್ರೀ ಜಗದ್ಗುರು ರೇಣುಕರು ಅಪ್ಪಣೆ ಕೊಡಿಸಿದ್ದೇನೆಂದರೆ–ದುಷ್ಟಚಿತ್ತರೂ, ದುರಾಚಾರಿಗಳೂ ಮತ್ತು ದುಷ್ಪ್ರಜ್ಞರೂ ಆದ ಮನುಷ್ಯರು ರುದ್ರಾಕ್ಷಧಾರಣ ಮಾತ್ರದಿಂದ ಸರ್ವಪಾತಕ ವಿನಿರ್ಮುಕ್ತರಾಗುವರೆಂಬು ದಾಗಿ ಅಭಯ ವಚನವನ್ನಿತ್ತಿದ್ದಾರೆ.

''ಪಾಪಂ ತು ಪಾತಕಂ'' ಎಂಬ ಕೋಶದ ವಚನದಂತೆ, ಪಾಪ ಮತ್ತು ಪಾತಕ ಇವೆರಡೂ ಪರ್ಯಾಯ ಶಬ್ದಗಳು. ಪಾತಕವು ಮನುಷ್ಯನ ಅಧಃಪತನಕ್ಕೆ ಕಾರಣವಾದ್ದ ರಿಂದ ಅದನ್ನು ''ಪಾತಕ''ವೆಂದು ಕರೆದಂತೆ, ''ಪಿಬತಿ=ಭಕ್ಷಯತಿ ಕರ್ತಾರಂ ಇತಿ= ಪಾಪಂ'' ಎಂಬ ವ್ಯುತ್ಪತ್ತಿಯ ಮೇರೆಗೆ ತನ್ನನ್ನು ಉತ್ಪನ್ನ ಮಾಡಿದವನನ್ನೇ ತಿಂದು ಹಾಕುವುದರಿಂದ ದುಷ್ಕರ್ಮವನ್ನು ''ಪಾಪ''ವೆಂಬುದಾಗಿಯೂ ಕರೆದಿದ್ದಾರೆ. ಮನುಷ್ಯನು ತಾನೇ ಮಾಡಿದ ಪಾಪದ ಪರಿಣಾಮವಾಗಿ ವಿನಾಶವಾಗುವುದನ್ನು ಲೋಕ ದಲ್ಲಿ ನೋಡುತ್ತಿದ್ದೇವೆ.

ಯಾವಚ್ಚ ಪಾಪಂ ದೇಹೇ ತಾವತ್ಸಿದ್ಧಿರ್ನ ಜಾಯತೇ ।
ಗತೇ ಚ ಪಾತಕೇ ತಸ್ಯ ಸರ್ವಂ ಚ ಸಫಲಂ ಭವೇತ್ ॥

(ಶಿವಪುರಾಣ ರುದ್ರ, ಸಂ. ಸೃಷ್ಟಿಖಂಡ, ೧೨–೨೦)

ಎಂಬ ಶಿವಮಹಾಪುರಾಣದ ವಚನದಂತೆ, ಮನುಷ್ಯನ ವಿನಾಶ ಹಾಗೂ ಪತನಗಳಿಗೆ ಕಾರಣೀಭೂತವಾದ ಈ ಪಾಪ ಇಲ್ಲವೇ ಪಾತಕದ ನಿವೃತ್ತಿಯಾಗದೇ ಮನುಷ್ಯನ ಯಾವ ಶುಭಕಾಮನೆಗಳೂ ಸಿದ್ಧಿಸಲಾರವು.

ಮನುಷ್ಯನ ಕೃತಿಯು ಅವನ ವಿಚಾರಾಧೀನವಾಗಿರುತ್ತದೆ. ಕೆಟ್ಟ ಕಾರ್ಯವನ್ನು ಎಸಗುವ ಪೂರ್ವದಲ್ಲಿ ಕೆಟ್ಟ ಯೋಚನೆಗಳು ಮನಸ್ಸಿನಲ್ಲಿ ಸುಳಿಯುತ್ತವೆ. ಹೀಗೆ ದುಷ್ಟ ಚಿತ್ತನಾದವನೇ ದುರಾಚಾರಿಯಾಗುವನು. ದುರಾಚಾರಿಯು ತನ್ನ ಹೀನಗಳಾದ ಆಚರಣೆಗಳಿಂದ ಪ್ರಜ್ಞೆ ಅರ್ಥಾತ್ ಸಾರಾಸಾರ ವಿವೇಕವನ್ನು ಕಳೆದುಕೊಂಡು ದುಷ್ಪ್ರಜ್ಞ ನೆನಿಸಿಕೊಳ್ಳುವನು. ಮನುಷ್ಯ ಜೀವನದ ಜೀವಾಳವಾದ ಪ್ರಜ್ಞೆ (ವಿವೇಕಬುದ್ಧಿ)ಯನ್ನು ಕಳೆದುಕೊಂಡವನು ವಿನಾಶೋನ್ಮುಖನಾಗುತ್ತಾನೆ.

ಕೆಟ್ಟ ಯೋಚನೆಗಳಿಗೆ ಕೆಟ್ಟವರ ಸಂಗವೇ ಕಾರಣವು. ಅಂತೆಯೇ– ''ಸಂಗದಿಂದ ಕಾಮ, ಕಾಮದಿಂದ ಕ್ರೋಧ, ಕ್ರೋಧದಿಂದ ಸಮ್ಮೋಹ, ಸಮ್ಮೋಹದಿಂದ ಸ್ಮೃತಿ ವಿಭ್ರಮ, ಸ್ಮೃತಿಭ್ರಂಶದಿಂದ ಬುದ್ಧಿನಾಶ ಮತ್ತು ಬುದ್ಧಿನಾಶದಿಂದ ಸರ್ವನಾಶ''ವೆಂಬ ವಿಚಾರವನ್ನು ಗೀತೆಯ ಎರಡನೇ ಅಧ್ಯಾಯದಲ್ಲಿ ಬಹು ಅನುಭವಪೂರ್ಣವಾಗಿ ಪ್ರತಿಪಾದಿಸಲಾಗಿದೆ.

ಈ ಎಲ್ಲ ವಿಚಾರಗಳನ್ನವಲೋಕಿಸಿದಾಗ, ನಮ್ಮ ಮನೋಬುದ್ಧಿಗಳ ಶುದ್ಧಿಯೇ ನಮ್ಮ ಸದ್ಗತಿಗೆ ನಾಂದಿ–ಎಂಬುದಾಗಿ ತಿಳಿದುಬರುತ್ತದೆ. ಇವುಗಳ ಶುದ್ಧಿಗಾಗಿ ಶಾಸ್ತ್ರ

ಗಳಲ್ಲಿ ಜಪ, ತಪ ಮುಂತಾದ ಉಪಾಯಗಳು ಹೇರಳವಾಗಿ ಹೇಳಲ್ಪಟ್ಟಿವೆ. ಆದರೆ ಅವೆಲ್ಲವುಗಳಲ್ಲಿ ರುದ್ರಾಕ್ಷಧಾರಣವೇ ಸುಲಭ ಸಾಧನವೆಂಬುದು ಶ್ರೀ ಜಗದ್ಗುರು ರೇಣುಕರ ಆದೇಶವಾಗಿದೆ. ಅಂತೆಯೇ ಶ್ರೀ ಮರಿ ತೋಂಟದಾರ್ಯರು–

''ರುದ್ರಾಕ್ಷಧಾರಣಸ್ಯಾಪಿ ಸಕಲಮಹಾಪಾತಕೋಪಪಾತಕ ನಿವರ್ತಕತ್ವೇನ ಚಿತ್ತ ಶುದ್ಧಿದ್ವಾರಾ ಬ್ರಹ್ಮವಿದ್ಯಾಂಗತ್ವ ಸಕಲ ಶ್ರುತಿ–ಸ್ಮೃತಿ–ಪುರಾಣಾಗಮೇಷು ಬಹುಶಃ ಪ್ರತಿಪಾದಿತಮಿತಿ ಮುಮುಕ್ಷುಭಿರ್ವೀರಶೈವೈಸ್ತದ್ಧಾರಣಮವಶ್ಯಂ ಕರ್ತವ್ಯಂ''.

(ವೀರಶೈವಾನಂದ ಚಂದ್ರಿಕಾ ವಾದಕಾಂಡ ಪುಟ ೧೫೭)

ಈ ರೀತಿಯಾಗಿ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ : ರುದ್ರಾಕ್ಷಧಾರಣ ದಿಂದ ಮನುಷ್ಯನ ಪಾತಕ, ಉಪಪಾತಕ ಮತ್ತು ಮಹಾಪಾತಕಗಳು ನಿವೃತ್ತಿಯಾಗಿ ಚಿತ್ತವು ಪರಿಶುದ್ಧವಾಗುವದು; ಅಲ್ಲದೇ ಸಾಧಕನು ಲಿಂಗಾಂಗ ಸಾಮರಸ್ಯರೂಪವಾದ ಬ್ರಹ್ಮವಿದ್ಯೆಗೆ ಅಧಿಕಾರಿಯಾಗುವನು. ಹೀಗೆ ರುದ್ರಾಕ್ಷಧಾರಣವು ಬ್ರಹ್ಮವಿದ್ಯೆಯ ಅಂಗ ವೆಂಬುದಾಗಿ ಎಲ್ಲ ಶ್ರುತಿ–ಸ್ಮೃತಿ–ಪುರಾಣಾದಿಗಳಲ್ಲಿ ಅನೇಕ ಕಡೆಗಳಲ್ಲಿ ಪ್ರತಿಪಾದಿತ ವಾಗಿರೋಣದರಿಂದ, ಮುಮುಕ್ಷುಗಳಾದ ವೀರಶೈವರು ಅಂತಃಕರಣಶುದ್ಧಿಗಾಗಿ ಅವಶ್ಯ ವಾಗಿ ರುದ್ರಾಕ್ಷಧಾರಣವನ್ನು ಮಾಡಿಕೊಳ್ಳಬೇಕು.

ರುದ್ರಾಕ್ಷಧಾರಿಯು ಸಾಕ್ಷಾತ್ ರುದ್ರನು :

ರುದ್ರನ ನೇತ್ರಜಲದಿಂದ ಉತ್ಪನ್ನಗಳಾಗಿರೋಣದರಿಂದ ರುದ್ರಾಕ್ಷಗಳೆಂದು ಪ್ರಸಿದ್ಧವಾದ ಇವುಗಳು ರುದ್ರನಷ್ಟೇ ಸಾಮರ್ಥ್ಯವನ್ನು ಪಡೆದಿರುತ್ತವೆ. ಅಂತೆಯೇ ಇವು ಗಳನ್ನು ಧರಿಸಿದವನ ದೇಹವು ದೇವಾಲಯದಂತೆ ಪವಿತ್ರವೂ ಮತ್ತು ಆ ಜೀವಾತ್ಮನು ಶಿವನಂತೆ ಪೂಜ್ಯನೂ ಆಗುವನು. ಆದ್ದರಿಂದ ಶ್ರೀ ನೀಲಕಂಠ ಶಿವಾಚಾರ್ಯರು–

ಯಸ್ಯ ದೇಹೇ ಭವೇದೇಕೋ ರುದ್ರಾಕ್ಷಃ ಶಿವಭಾವಕಃ ।
ಶಿವಾಲಯಂ ತು ತದ್ದೇಹಂ ಸಾಕ್ಷಾಚ್ಛಂಭುಃ ಶಿವಃ ಸ್ವಯಃ ॥

(ಕ್ರಿಯಾಸಾರ ೧೧ – ೩೩೩)

ಎಂಬುದಾಗಿ ರುದ್ರಾಕ್ಷಿಯ ಮಹಿಮೆಯನ್ನು ವರ್ಣಿಸಿದ್ದಾರೆ.

ಅತ್ಯಂತ ಪ್ರಾಚೀನಕಾಲದಲ್ಲಿ ಸಿಂಧ ದೇಶದೊಳಗೆ ''ಭ್ರೂಚಕ್ರ''ವೆಂಬ ಪಟ್ಟಣ ವಿತ್ತು, ಅಲ್ಲಿ ''ಸುಪ್ರದೀಪ''ನೆಂಬ ಓರ್ವ ಶಿವಭಕ್ತನಿದ್ದನು. ಶಿವಪೂಜಾ ಪ್ರಿಯನೂ, ಅನ್ನದಾನಿಯೂ ಆದ ಅವನು ತನ್ನ ಮನೆಯಲ್ಲಿಯ ಪ್ರಾಣಿಗಳನ್ನೇ ಮೊದಲುಗೊಂಡು ಎಲ್ಲ ಜನರಿಗೆ ರುದ್ರಾಕ್ಷಧಾರಣೆ ಮಾಡಿಸಿದ್ದನಲ್ಲದೇ, ರುದ್ರಾಕ್ಷಧಾರಿಗಳಿಗೆ ಮಾತ್ರ ಅನ್ನದಾನವನ್ನು ಮಾಡುವ ಒಂದು ಕಠೋರ ನಿಯಮವನ್ನೂ ಪರಿಪಾಲಿಸುತ್ತಿದ್ದನು.

ಒಂದು ಸಾರೆ ಇವನ ನಿಯಮವನ್ನು ಭಂಗಮಾಡುವ ಉದ್ದೇಶದಿಂದ ಯೋಗ ಸಿದ್ಧಿಯನ್ನು ಪಡೆದ. ಆದರೆ, ರುದ್ರಾಕ್ಷಗಳನ್ನು ಧರಿಸದಿರುವ ಸಂನ್ಯಾಸಿಯೋರ್ವನು ಭಿಕ್ಷೆಗಾಗಿ ಬಂದು ಬಾಗಿಲಲ್ಲಿ ನಿಂತು ಭಿಕ್ಷೆಯನ್ನು ಬೇಡಿದನು. ಈತನ ಶರೀರದ ಮೇಲೆ ರುದ್ರಾಕ್ಷವು ಇಲ್ಲದ್ದರಿಂದ ಮನೆಯವರು ಭಿಕ್ಷೆಯನ್ನು ನೀಡದೇ ಮುಂದೆ ಹೋಗಲು

ಹೇಳಿದರು. ಆಗ ಕ್ರುದ್ಧನಾದ ಯೋಗಿಯು ಕರ್ಕಶ ಶಬ್ದಗಳಿಂದ ಮನೆಯವರನ್ನು ಹಳಿಯತೊಡಗಿದನು. ಭಿಕ್ಷುಕನ ಈ ಅವ್ಯವಹಾರವನ್ನು ಸಹಿಸದ ಸುಪ್ರದೀಪನ ಮಕ್ಕಳು ಆ ಸಂನ್ಯಾಸಿಯ ಕೈಯಲ್ಲಿಯ ಬಡಿಗೆಯನ್ನು ತೆಗೆದುಕೊಂಡು ಅವನನ್ನು ಚೆನ್ನಾಗಿ ಬಡಿದು ಅಂಗಳದಿಂದ ಹೊರನೂಕಿದರು.

ಅಪಮಾನಿತನಾದ ಸಂನ್ಯಾಸಿಯು ಆ ದೇಶದ ರಾಜನಲ್ಲಿಗೆ ಹೋಗಿ ದೂರು ಹೇಳಿದನು. ಆಗ ರಾಜನು ಅವನನ್ನು ಕರೆಯಿಸಿ ಭಿಕ್ಷೆಗಾಗಿ ಬಂದ ಈ ಯೋಗಿ ಸಂನ್ಯಾಸಿಯನ್ನು ಬಡಿಯುವುದು ಉಚಿತವೇ ? ಎಂದು ವಿಚಾರಿಸಿದನು. ಆಗ ಆ ಶಿವಭಕ್ತನು–''ನ ಸಂನ್ಯಾಸೋ ಭವೇದ್ರಾಜನ್ ವಿನಾ ರುದ್ರಾಕ್ಷಧಾರಣಂ'' ''ಹೇ ರಾಜನ್–ರುದ್ರಾಕ್ಷವನ್ನು ಧರಿಸದವನು ಸಂನ್ಯಾಸಿಯೇ ಆಗಲಾರನು ಮತ್ತು ಯೋಗಿಯೂ ಆಗಲಾರನು. ಇವನ ಕೊರಳಲ್ಲಿ ಒಂದು ರುದ್ರಾಕ್ಷವೂ ಇರದ ಕಾರಣ ಈತನು ಸಂನ್ಯಾಸಿಯೇ ಅಲ್ಲ''ವೆಂಬುದಾಗಿ ಉತ್ತರಿಸಿದನು.

ಈ ಗೃಹಸ್ಥನ ಮಾತನ್ನು ಕೇಳಿ ಕ್ರುದ್ಧನಾದ ಯೋಗಿಯು–''ಎಲೋ ! ರುದ್ರಾಕ್ಷವನ್ನು ಧರಿಸದವನು ಯೋಗಿ ಅಲ್ಲವೆನ್ನುವೆಯಾ ? ನೋಡು ನನ್ನ ಯೋಗಸಾಮರ್ಥ್ಯವನ್ನು''–ಎಂದು ಹೇಳ ಹೇಳುತ್ತಲೇ ಆ ತನ್ನ ಯೋಗ ಸಾಮರ್ಥ್ಯದಿಂದ ಆಕಾಶಗಾಮಿಯಾಗಿ ಸ್ವರ್ಗಕ್ಕೆ ಹೋಗಿ ಕಲ್ಪವೃಕ್ಷದ ಪುಷ್ಪಗಳನ್ನು ತಂದು ತೋರಿಸಿ, ''ನಿನ್ನ ರುದ್ರಾಕ್ಷ ಧಾರಣದ ಮಹಿಮೆಯನ್ನು ತೋರಿಸು'' ಎಂದನು.

ಆಗ ಆ ಸುಪ್ರದೀಪನು ತನ್ನ ಮನೆಯಲ್ಲಿಯ ಬೆಕ್ಕನ್ನು ತರಿಸಿ, ''ನೀನು ಸ್ವರ್ಗಕ್ಕೆ ಹೋಗಿ ಕಲ್ಪವೃಕ್ಷದ ಟೊಂಗೆಯನ್ನು ತೆಗೆದುಕೊಂಡು ಬಾ''–ಎಂದು ಹೇಳಿ ಅದನ್ನು ಆಕಾಶಕ್ಕೆ ತೂರಿದನು. ಕೂಡಲೇ ಆಕಾಶದಲ್ಲಿ ಒಂದು ವಿಮಾನವು ನಿರ್ಮಾಣಗೊಂಡಿತು. ರುದ್ರಾಕ್ಷಧಾರಿಯಾದ ಬೆಕ್ಕು ಅದರಲ್ಲಿ ಕುಳಿತು ಸ್ವರ್ಗಕ್ಕೆ ಹೋಗಿ ಸ್ವಲ್ಪ ಕಾಲದಲ್ಲಿಯೇ ಕಲ್ಪವೃಕ್ಷದ ಟೊಂಗೆಯನ್ನು ತೆಗೆದುಕೊಂಡು ಬಂದಿತು. ನೆರೆದ ಜನರಿಗೆಲ್ಲ ಅಚ್ಚರಿಯುಂಟಾಯಿತು. ಆಗ ಆ ಶಿವಭಕ್ತನು ಬೆಕ್ಕನ್ನುದ್ದೇಶಿಸಿ ಹೇಳಿದ್ದೇನೆಂದರೆ– ''ನೀನು ಸ್ವರ್ಗಕ್ಕೆ ಹೋದಾಗ ಅಲ್ಲಿ ನಡೆದ ಘಟನೆಯನ್ನೆಲ್ಲ ವರ್ಣಿಸಿ ಈ ಜನರಿಗೆಲ್ಲ ತಿಳುವಳಿಕೆ ಮಾಡಿಕೊಡು'' ಎಂದಕೂಡಲೇ ಆ ಬೆಕ್ಕು ಹೇಳತೊಡಗಿತು–ನಾನು ಸ್ವರ್ಗಕ್ಕೆ ಹೋದ ಕೂಡಲೇ ನನ್ನನ್ನು ಕಂಡಾಕ್ಷಣ ದೇವೇಂದ್ರನು ತನ್ನ ಆಸನದಿಂದ ಇಳಿದು ಬಂದು ನನಗೆ ನಮಸ್ಕರಿಸಿ ಪೂಜೆಯನ್ನು ಮಾಡಿದನಲ್ಲದೇ, ತನ್ನ ಆಭರಣಗಳನ್ನೆಲ್ಲ ನನಗೆ ತೊಡಿಸಿ ಐರಾವತದ ಮೇಲೆ ಕೂಡ್ರಿಸಿ ಉತ್ಸವ ಮಾಡಿದನು. ದೇವೇಂದ್ರನು ಮಾಡಿದ ಈ ವಿಧಿಯನ್ನು ಕಂಡು ಆಶ್ಚರ್ಯಚಕಿತಳಾದ ಇಂದ್ರಾಣಿಯಾದ ಶಚೀದೇವಿಯು– ''ಮಾರ್ಜಾರೋಽಯಮಿಮಾಂ ಪೂಜಾಂ ಕಥಮರ್ಹತಿ ದೇವಪ'' ಹೇ ದೇವೇಶನೇ ! ಬೆಕ್ಕನ್ನು ಈ ರೀತಿಯಾಗಿ ಸತ್ಕರಿಸುವುದೇ ? ಇದರ ರಹಸ್ಯ ವೇನು ? ಎಂಬುದಾಗಿ ಪ್ರಶ್ನಿಸಿದಳು. ಆಗ ದೇವೇಂದ್ರನು–

ಬಿಭರ್ತ್ಯಯಂ ವರಂ ಪುಣ್ಯಂ ರುದ್ರಾಕ್ಷಂ ರುದ್ರಭೂಷಣಂ ।
ಸ ಏವ ಧನ್ಯಃ ಪೂಜ್ಯೋಽಪಿ ಸರ್ವೈರ್ದೇವೈಶ್ಚ ಮಾನುಷೈಃ ॥

(ಕ್ರಿಯಾಸಾರ, ೧೧–೧೩೧, ಪುಟ ೧೫೩)

''ಹೇ ಶಚೀದೇವಿಯೇ ! ಇದು ಪುಣ್ಯಪ್ರದವಾದ ರುದ್ರಾಕ್ಷವನ್ನು ಧರಿಸಿರುತ್ತದೆ. ರುದ್ರಾಕ್ಷವು ಶ್ರೀ ರುದ್ರನ ಆಭೂಷಣವು. ಇದನ್ನು ಧರಿಸಿದವನೂ ರುದ್ರನಂತೆ ಪೂಜೆ ಗೊಳ್ಳುತ್ತಾನೆ. ಅಂತೆಯೇ ಇದನ್ನು ಪೂಜ್ಯ ಬುದ್ಧಿಯಿಂದ ಪೂಜಿಸಿದ್ದೇನೆ'' ಎಂಬುದಾಗಿ ತಿಳಿಸಿ ರುದ್ರಾಕ್ಷ ಮಹಿಮೆಯ ಅನೇಕ ಕಥೆಗಳನ್ನು ತನ್ನ ಹೆಂಡತಿಗೆ ಹೇಳಿದನು. ಆಗ ಅವಳೂ ಭಕ್ತಿಯುಳ್ಳವಳಾಗಿ ನನಗೆ ವಂದಿಸಿ ನನ್ನನ್ನು ತನ್ನ ತೊಡೆಯಮೇಲೆ ಕೂಡ್ರಿಸಿ ಕೊಂಡು ಪ್ರೀತಿಸಿದಳು. ಕೊನೆಗೆ ದೇವೇಂದ್ರನೇ ಕಲ್ಪವೃಕ್ಷದ ಟೊಂಗೆಯನ್ನು ತರಿಸಿ ಅದನ್ನು ವಿಮಾನದಲ್ಲಿ ಇರಿಸಿ ಕಳಿಸಿದ್ದಾನೆ.

ಬೆಕ್ಕಿನ ಈ ಮಾತುಗಳನ್ನು ಕೇಳಿ ನಡೆದ ಘಟನೆಯನ್ನು ಕಣ್ಣಾರೆ ಕಂಡ ಆ ದೇಶದ ರಾಜ ಮತ್ತು ಪ್ರಜರೆಲ್ಲರೂ ರುದ್ರಾಕ್ಷದಲ್ಲಿ ನಿಷ್ಠೆಯುಳ್ಳವರಾಗಿ, ಸುಪ್ರದೀಪನಿಂದ ರುದ್ರಾಕ್ಷವನ್ನು ಪಡೆದು ಧರಿಸಿಕೊಂಡರಲ್ಲದೇ, ಆ ಯೋಗಿ ಸಂನ್ಯಾಸಿಯೂ ನಾಚಿ ಕೊಂಡು ತನ್ನ ಅಹಂಕಾರವನ್ನು ತ್ಯಜಿಸಿ ಭಯ-ಭಕ್ತಿಯಿಂದ ರುದ್ರಾಕ್ಷಧಾರಣವನ್ನು ಮಾಡಿಕೊಂಡನು.

ಶ್ರೀಸ್ಕಂದ ಮಹಾಪುರಾಣದಲ್ಲಿಯ ಈ ಕಥೆಯನ್ನು ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ ಕ್ರಿಯಾಸಾರ ಗ್ರಂಥದ ಹನ್ನೊಂದನೇ ಉಪದೇಶದಲ್ಲಿ ಪ್ರತಿಪಾದಿಸಿದ್ದಾರೆ. ಈ ಕಥೆಯ ತಾತ್ಪರ್ಯವನ್ನವಲೋಕಿಸಿದಾಗ, ರುದ್ರಾಕ್ಷವನ್ನು ಧರಿಸಿ ದವರಾರೇ ಇದ್ದರೂ ಆ ರುದ್ರಾಕ್ಷದ ಮಹಿಮೆಯಿಂದ ಅವರು ಪಾಪನಿರ್ಮುಕ್ತರಷ್ಟೇ ಅಲ್ಲ, ರುದ್ರನಂತೆ ಲೋಕಪೂಜ್ಯರೂ ಆಗುತ್ತಾರೆ ಎಂಬುದು ತಿಳಿದುಬರುತ್ತದೆ.

**ರುದ್ರಾಕ್ಷಧಾರಣದಿಂದ ಉತ್ಕೃಷ್ಟ ಜನ್ಮ ಪ್ರಾಪ್ತಿ :**

ಹೀನ ಯೋನಿಯಲ್ಲಿ ಜನಿಸಿದ ಪ್ರಾಣಿಗಳು ರುದ್ರಾಕ್ಷಧಾರಣ ಮಾತ್ರದಿಂದಲೇ ಉತ್ಕೃಷ್ಟ ಜನ್ಮಗಳನ್ನು ಪಡೆಯುವರೆಂಬ ವಿಷಯವನ್ನು ಶ್ರೀ ನೀಲಕಂಠ ಶಿವಾಚಾರ್ಯರೇ ಮತ್ತೊಂದು ಕಥೆಯಿಂದ ತಿಳಿಯಪಡಿಸಿದ್ದಾರೆ. ಅದೇನೆಂದರೆ–

ಆಂಧ್ರಪ್ರದೇಶದ ನಂದಿಗ್ರಾಮವೆಂಬಲ್ಲಿ ''ಮಹಾನಂದಾ'' ಎಂಬ ಹೆಸರಿನ ಸರ್ವಾಂಗ ಸುಂದರಿಯಾದ ವಾರಾಂಗನೆ ಇದ್ದಳು. ಅವಳಲ್ಲಿ ಮಣಿಖಚಿತವಾದ ವಾಹನ ಛತ್ರ-ಚಾಮರಗಳು, ಬಂಗಾರದ ಪಾದುಕೆಗಳು, ಬೆಲೆಬಾಳುವ ಬಟ್ಟೆಗಳು, ಸುಕೋಮಲಗಳಾದ ಸುಪ್ಪತ್ತಿಗೆಗಳು, ನೂರಾರು ಗೋವುಗಳು, ನಾನಾವಿಧ ಸುಗಂಧ ದ್ರವ್ಯಗಳು, ಬೆಲೆಬಾಳುವ ಆಭೂಷಣಗಳು ಮತ್ತು ಕೋಟ್ಯಾನುಕೋಟಿ ಸ್ವರ್ಣ ನಾಣ್ಯ ಗಳಿದ್ದವು. ಇಷ್ಟೆಲ್ಲ ಭೋಗ-ಭಾಗ್ಯಗಳಿಂದೊಡಗೂಡಿ ವೇಶ್ಯಾವೃತ್ತಿಯಲ್ಲಿ ಅವಳು ಕಾಲ ಕಳೆಯುತ್ತಿದ್ದರೂ–

ಶಿವಪೂಜಾರತಾ ನಿತ್ಯಂ ಸತ್ಯಧರ್ಮಪರಾಯಣಾ ।
ಸದಾ ಶಿವಕಥಾಸಕ್ತಾ ಶಿವನಾಮ ಜಪೋತ್ಸುಕಾ ।
ಶಿವಭಕ್ತಜನಾನ್ ದೃಷ್ಟ್ವಾ ಪ್ರಣಮ್ಯತಿ ಸದಾ ಮುದಾ ॥

(ಕ್ರಿಯಾಸಾರ ೧೦-೨೦-೨೧, ಪುಟ ೧೪೩)

ಶಿವಪೂಜಾನಿಷ್ಠಳೂ, ಸತ್ಯಧರ್ಮನಿರತಳೂ, ಶಿವಕಥಾಶ್ರವಣದಲ್ಲಿ ಪ್ರೀತಿಯುಳ್ಳವಳೂ ಮತ್ತು ಶಿವನಾಮಜಪದಲ್ಲಿ ಆಸಕ್ತಳೂ ಆಗಿದ್ದಳು. ಶಿವಭಕ್ತರು ಯಾರೇ ಕಂಡರೂ ಅವರಿಗೆ ಭಕ್ತಿಯಿಂದ ನಮಿಸುತ್ತಿದ್ದಳು.

ಅವಳು ತನ್ನ ವಿನೋದಕ್ಕಾಗಿ ತನ್ನ ನಾಟ್ಯಮಂಟಪದಲ್ಲಿ ಒಂದು ಮಂಗ ಹಾಗೂ ಒಂದು ಹುಂಜವನ್ನು ಸಾಕಿದ್ದಳು. ಅವುಗಳನ್ನು ರುದ್ರಾಕ್ಷಗಳ ಕುಂಡಲ ಹಾಗೂ ಹಾರಗಳಿಂದ ಅಲಂಕರಿಸಿ, ಅನೇಕ ಭಕ್ತಿಯ ಹಾಡುಗಳನ್ನು ಹಾಡುತ್ತ ಚಪ್ಪಾಳೆ ತಟ್ಟುತ್ತ, ಅವುಗಳನ್ನು ಕುಣಿಸುತ್ತಿದ್ದಳು. ಅವುಗಳ ಆ ಕುಣಿತವನ್ನು ನೋಡಿ ತನ್ನ ಸಖಿಯರಿಂದೊಡಗೂಡಿ ಅಟ್ಟಹಾಸದಿಂದ ನಗುತ್ತಿದ್ದಳು. ಇವೆರಡರ ನೃತ್ಯಗಳು ನೋಡುವವರಿಗೆ ಆಶ್ಚರ್ಯವನ್ನುಂಟು ಮಾಡುತ್ತಿದ್ದವು.

ಕಾಲಾಂತರದಲ್ಲಿ ಅವೆರಡೂ ನಿವಾಸಿಸುವ ಸ್ಥಾನಕ್ಕೆ ಬೆಂಕಿ ಹತ್ತಿ ಮೃತವಾದವು. ಮರಣಕಾಲದವರೆಗೆ ರುದ್ರಾಕ್ಷಧಾರಿಗಳಾದ್ದರಿಂದ ಮಂಗವು ಕಾಶ್ಮೀರ ದೇಶದ ಭದ್ರಸೇನ ಮಹಾರಾಜನಾಗಿಯೂ, ಹುಂಜವು ಅವನ ಮಂತ್ರಿಯ ಮಗನಾಗಿಯೂ ಜನಿಸಿದವು. ಆ ರಾಜಕುಮಾರನಿಗೆ ''ಸುಧರ್ಮ'' ಮತ್ತು ಮಂತ್ರಿಕುಮಾರನಿಗೆ ''ತಾರಕ'' ಎಂಬುದಾಗಿ ನಾಮಕರಣ ಮಾಡಿದರು.

ಸ್ವರೂಪ ಸುಂದರರಾದ ಇವರೀರ್ವರೂ ಬೆಳೆದು ದೊಡ್ಡವರಾದಂತೆ ಸ್ವರ್ಣ ರತ್ನ ಖಚಿತಗಳಾದ ಆಭರಣಗಳನ್ನು ಧರಿಸದೇ, ಪೂರ್ವಜನ್ಮದ ಸಂಸ್ಕಾರದ ಬಲದಿಂದ ರುದ್ರಾಕ್ಷಗಳಲ್ಲಿಯೇ ಪ್ರೀತಿಯುಳ್ಳವರಾಗಿ ರುದ್ರಾಕ್ಷಗಳ ಕಂಠಮಾಲೆ, ರುದ್ರಾಕ್ಷಗಳ ಕಂಕಣ ಮತ್ತು ಕುಂಡಲಗಳನ್ನು ಧರಿಸುತ್ತ, ಶಿವಪೂಜಾಸಕ್ತರಾಗಿ, ಭೋಗಭೂಮಿಯಲ್ಲಿಯೂ ಯೋಗಜೀವನವನ್ನು ಕಳೆಯತೊಡಗಿದರು. ಇದರ ರಹಸ್ಯವೇನೆಂದು ತಿಳಿಯಲು, ಭದ್ರಸೇನ ಮಹಾರಾಜನು ತನ್ನ ರಾಜ್ಯದಲ್ಲಿಯ ಋಷಿಪುಂಗವರನ್ನು ವಿಚಾರಿಸಲಾಗಿ, ಇವರ ಪೂರ್ವಜನ್ಮದ ವೃತ್ತಾಂತವನ್ನು ತಿಳಿಯಪಡಿಸಿದರು. ರುದ್ರಾಕ್ಷಧಾರಣದ ಫಲದಿಂದ ಮಂಗ, ಹುಂಜಗಳು ಈ ಶ್ರೇಷ್ಠ ಜನ್ಮದಲ್ಲಿ ಬಂದದ್ದನ್ನು ತಿಳಿದು ಆ ರಾಜ್ಯದವರೆಲ್ಲರೂ ರುದ್ರಾಕ್ಷದಲ್ಲಿ ಭಕ್ತಿಯುಳ್ಳವರಾಗಿ ಎಲ್ಲರೂ ರುದ್ರಾಕ್ಷಧಾರಣವನ್ನು ಮಾಡಿಕೊಂಡರು. ಆ ಈರ್ವರೂ ಕುಮಾರರು ಶಿವಧ್ಯಾನಾದಿಗಳಲ್ಲಿಯೇ ತಮ್ಮ ಕಾಲವನ್ನು ಕಳೆಯುತ್ತ ಶಿವಸಾಯುಜ್ಯವನ್ನು ಹೊಂದಿದರು.

ಆ ಮಹಾನಂದಾ ಹೆಸರಿನ ವೇಶ್ಯೆಯು ನಿವಾಸಮಾಡಿದ ಆ ನಂದಿ ಗ್ರಾಮವೇ ಇಂದು ''ಮಹಾನಂದಿ'' ಎಂಬ ಹೆಸರಿನ ಪವಿತ್ರ ಕ್ಷೇತ್ರವಾಗಿ ಪರಿಣಮಿಸಿದೆ. ಈ ಕ್ಷೇತ್ರವು ಶ್ರೀಶೈಲದ ಮಾರ್ಗದಲ್ಲಿ ಬರುತ್ತದೆ. ಆಂಧ್ರ ಪ್ರದೇಶದ ''ನಂದ್ಯಾಲ'' ಎಂಬ ರೇಲ್ವೇ ಸ್ಟೇಷನ್ನಿನಿಂದ ಸ್ವಲ್ಪ ದೂರದ ಅಡವಿಯಲ್ಲಿ ಇದೆ. ಅಲ್ಲೊಂದು ಅತಿ ಶುದ್ಧ ಜಲದ ಕುಂಡವಿದೆ. ಅದರ ಪಕ್ಕದಲ್ಲಿಯೇ ಆ ಮಹಾನಂದೆಯು ಪೂಜಿಸಿದ ಪ್ರಾಚೀನ ಶಿವ ದೇವಾಲಯವಿದೆ. ಶ್ರೀಶೈಲ ಯಾತ್ರೆಗೆ ಹೋದ ಪ್ರತಿಯೊಬ್ಬ ಯಾತ್ರಿಕರೂ ಪ್ರಾಯಃ ''ಮಹಾನಂದಿ'' ಕ್ಷೇತ್ರಕ್ಕೆ ಹೋಗಿ ಬರುತ್ತಾರೆ.

ಒಂದು ವೇಶ್ಯಾಲಯವು ಇಂದು ಪವಿತ್ರಕ್ಷೇತ್ರವಾಗಿ ಪರಿಣಮಿಸಬೇಕಾದರೆ, ರುದ್ರಾಕ್ಷದ ಮಹಿಮೆ ಎಷ್ಟಿದೆ ಎಂಬುದು ತಿಳಿದುಬರುತ್ತದೆ. ಅಂತೆಯೇ ದುಷ್ಟಚಿತ್ತನೇ ಇರಲಿ, ದುರಾಚಾರಿಯೇ ಇರಲಿ ಅಥವಾ ದುಷ್ಪ್ರಜ್ಞನೇ ಇರಲಿ, ರುದ್ರಾಕ್ಷಧಾರಣದಿಂದ ಅವನು ಪವಿತ್ರಾತ್ಮನಾಗುತ್ತಾನೆ–ಎಂದು ಉಪದೇಶಿಸಿದ ಶ್ರೀ ಜಗದ್ಗುರು ರೇಣುಕರ ಉಪದೇಶವು ನಿಜವಾಗಿಯೂ ಸತ್ವಶಾಲಿಯಾಗಿದೆ.

ಹೀಗೆ ಅಂತಃಕರಣವನ್ನು ಶುದ್ಧಗೊಳಿಸುವ, ಹೀನಜನ್ಮಗಳನ್ನು ನಿವಾರಿಸುವ, ಸರ್ವಪಾತಕಗಳನ್ನು ಪ್ರಶಮನಗೊಳಿಸುವ ಈ ರುದ್ರಾಕ್ಷಗಳನ್ನು ಧರಿಸುವುದು ವೀರಶೈವರಿಗೆ ನಿತ್ಯಕರ್ಮವಾಗಿದೆ. ಅಂತೆಯೇ ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡಿರುವಂತೆ ರುದ್ರಾಕ್ಷಗಳನ್ನೂ ಧರಿಸಬೇಕು.

ಈ ರೀತಿಯಾಗಿ ರುದ್ರಾಕ್ಷದ ಪಾವನವಾದ ಮಹಿಮೆಯನ್ನು ಪ್ರಾರಂಭದಲ್ಲಿ ಪರಿಚಯಿಸಿಕೊಟ್ಟ ಪೂಜ್ಯ ಜಗದ್ಗುರುಗಳು ಶ್ರೀ ಅಗಸ್ತ್ಯಮಹರ್ಷಿಯನ್ನು ಕುರಿತು ಅವುಗಳ ಉತ್ಪತ್ತಿಯನ್ನು ಇನ್ನು ಮುಂದೆ ನಿರೂಪಿಸುತ್ತಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೦ ಆಗಷ್ಟ್, ೧೯೯೦

(ಸ್ಥಾನ ಶಿವಾನುಭವ ಮಂಗಲ ಭವನ ಸೋಲಾಪೂರ)



ಆಶೀರ್ವಚನ-೨

ಪುರಾ ತ್ರಿಪುರಸಂಹಾರೇ ತ್ರಿನೇತ್ರೋ ಜಗತಾಂ ಪತಿಃ ।
ಉದಪಶ್ಯತ್ಪುರಾಂ ಯೋಗಮುನ್ಮೀಲಿತವಿಲೋಚನಃ ॥ ೩ ॥

ತ್ರಿನೇತ್ರಧಾರಿಯಾದ ಶಿವನು ತ್ರಿಪುರಾಸುರರನ್ನು ಸಂಹಾರ ಮಾಡುವ ಸಮಯದಲ್ಲಿ ತನ್ನ ಮೂರೂ ಕಣ್ಣುಗಳನ್ನು ತೆರೆದುಕೊಂಡು ಮೇಲ್ಮುಖವಾಗಿ ಆಕಾಶದಲ್ಲಿದ್ದ ತ್ರಿಪುರಗಳ ಕೀಲನ್ನು ನೋಡುತ್ತಿದ್ದನು.

ನಿಪೇತುಸ್ತಸ್ಯ ನೇತ್ರೇಭ್ಯೋ ಬಹವೋ ಜಲಬಿಂದವಃ ।
ತೇಭ್ಯೋ ಹಿ ರುದ್ರಾಕ್ಷಾ ರುದ್ರಾಕ್ಷಾ ಇತಿ ಕೀರ್ತಿತಾಃ ॥ ೪ ॥

ಹೀಗೆ ನೋಡುತ್ತಿರುವ ಶಿವನ ಮೂರೂ ಕಣ್ಣುಗಳಿಂದ ಬಹಳಷ್ಟು ನೀರಿನ ಹನಿಗಳು ಉದುರಿದವು. ಮುಂದೆ ಆ ಹನಿಗಳಿಂದಲೇ ರುದ್ರಾಕ್ಷಗಳು ಉತ್ಪನ್ನವಾದವು. ಅವುಗಳೇ ರುದ್ರಾಕ್ಷಗಳೆಂಬುದಾಗಿ ಪ್ರಸಿದ್ಧವಾದವು.

ರುದ್ರಾಕ್ಷಧಾರಣದಿಂದ ಸಕಲ ದೋಷಗಳು ನಿವೃತ್ತವಾಗುತ್ತವೆ ಎಂಬುದನ್ನು ತಿಳಿಸಿದ ನಂತರ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಸದ್ಯಃ ಪಾವನಗಳಾದ ಆ ರುದ್ರಾಕ್ಷಗಳ ಉತ್ಪತ್ತಿಯ ವಿಷಯದಲ್ಲಿ ಪ್ರಾಚೀನವಾದ ತ್ರಿಪುರಾಸುರರ ಸಂಹಾರದ ಘಟನೆಯೊಂದನ್ನು ಇಲ್ಲಿ ಸೂತ್ರರೂಪವಾಗಿ ಉಪದೇಶಿಸಿದ್ದಾರೆ. ತ್ರಿಪುರ ಸಂಹಾರದ ಕಥೆಯನ್ನು ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ ಬಹು ವಿಸ್ತಾರ ವಾಗಿ ನಿರೂಪಿಸಲಾಗಿದೆ. ವಾಚಕರ ಮನಸ್ತೃಪ್ತಿಗಾಗಿ ಆ ಕಥಾಭಾಗವನ್ನೇ ಇಲ್ಲಿ ಸಂಕ್ಷೇಪ ವಾಗಿ ಪ್ರಸ್ತಾಪಿಸುತ್ತೇವೆ.

ತ್ರಿಪುರಾಸುರರು ಹಾಗೂ ಅವರ ತಪಸ್ಸು :

ಪೂರ್ವದಲ್ಲಿ ಅತಿ ಪ್ರಸಿದ್ಧವಾದ ತಾರಕಾಸುರನೆಂಬ ರಾಕ್ಷಸನಿಗೆ ''ತಾರಕಾಕ್ಷ'', ''ವಿದ್ಯುನ್ಮಾಲಿ'' ಮತ್ತು ''ಕಮಲಾಕ್ಷ''ರೆಂಬ ಮೂರು ಜನ ಬಲಶಾಲಿಗಳಾದ ಪುತ್ರ ರಿದ್ದರು. ತಾರಕಾಸುರನ ಉಪಟಳ ಹೆಚ್ಚಾದಾಗ, ಶ್ರೀ ಷಣ್ಮುಖಸ್ವಾಮಿಯು ಅವತರಿಸಿ ಅವನನ್ನು ಸಂಹಾರ ಮಾಡಿದನು. ತಂದೆಯು ಮಡಿದ ನಂತರ ಭಯಗೊಂಡ ಅವನ ಆ ಮೂರೂ ಜನ ಮಕ್ಕಳು ತಪಸ್ಸನ್ನು ಮಾಡಿ ಅಮರರಾಗಬೇಕೆಂದು ವಿಚಾರಿಸಿ, ಭೋಗ ಜೀವನವನ್ನು ತ್ಯಾಗಮಾಡಿ, ಮೇರು ಪರ್ವತದ ಗುಹೆಯಲ್ಲಿ ವಾಸಮಾಡಿ, ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ, ಚಳಿಗಾಲದಲ್ಲಿ ತೊಯ್ದ ಬಟ್ಟೆಯನ್ನುಟ್ಟು ಒಂದೇ ಕಾಲಿನ ಮೇಲೆ ನಿಂತು ನೂರಾರು ವರ್ಷಗಳವರೆಗೆ ಅತ್ಯಂತ ಕಠೋರವಾದ ತಪಸ್ಸನ್ನಾಚರಿಸ ತೊಡಗಿದರು.

ಬ್ರಹ್ಮನಿಂದ ವರದಾನ :

ಇವರ ಅತ್ಯುಗ್ರವಾದ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಪ್ರತ್ಯಕ್ಷನಾಗಿ, ನಿಮಗೆ ಏನು ವರಬೇಕು ? ಎಂಬುದಾಗಿ ಕೇಳಲು, ಆ ರಾಕ್ಷಸರು, ನಾವು ಸದಾ ಅಮರರಾಗಿರುವಂತೆ

ಅನುಗ್ರಹಿಸಬೇಕೆಂದು ಬೇಡಿಕೊಂಡರು. ಆಗ ಬ್ರಹ್ಮನು, ಎಲೈ ದೈತ್ಯಶ್ರೇಷ್ಠರೇ ! ಮರಣವೆಂಬುದು ದೇಹದ ಸಹಜವಾದ ಧರ್ಮವು. ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ, ಕಾರಣ, ಅದೊಂದನ್ನು ಬಿಟ್ಟು ಬೇಕಾದ್ದನ್ನು ಬೇಡಬಹುದು–ಎಂದನು. ಆಗ ಯೋಚನೆಗೊಳಗಾದ ಆ ತಾರಕ ಸುತರು ಬಹಳಷ್ಟು ವಿಚಾರಿಸಿ, ಈ ರೀತಿಯಾಗಿ ಕೇಳಿಕೊಂಡರು–''ನಮಗೆ ಪ್ರತಿಯೊಬ್ಬರಿಗೂ ಪ್ರತ್ಯೇಕವಾದ ಮೂರು ನೂತನ ಪಟ್ಟಣಗಳ ನಿರ್ಮಾಣವಾಗಬೇಕು. ಅವುಗಳು ಕ್ರಮವಾಗಿ ಸ್ವರ್ಣ, ಬೆಳ್ಳಿ ಮತ್ತು ಉಕ್ಕಿನಿಂದ ನಿರ್ಮಾಣಗೊಂಡು ಅಭೇದ್ಯಗಳಾಗಿರಬೇಕು. ಆ ತ್ರಿಪುರಗಳು ಆಕಾಶ ಮಂಡಲದಲ್ಲಿ ಯಾವಾಗಲೂ, ಯಾರ ದೃಷ್ಟಿಗೂ ಬೀಳದಂತೆ, ಮೋಡಗಳೋಪಾದಿಯಲ್ಲಿ ಸದಾ ತಿರುಗುತ್ತಿರಬೇಕು. ಬೇರೆ ಬೇರೆ ಕಕ್ಷೆಯಲ್ಲಿ ತಿರುಗುತ್ತಿರುವ ಈ ಪಟ್ಟಣಗಳು ಒಂದು ಸಾವಿರ ವರ್ಷಕ್ಕೊಂದು ಸಾರೆ ಒಂದು ಕ್ಷಣಕಾಲ ಮಾತ್ರ ಒಂದೆಡೆ ಕೂಡಬೇಕು. ಆ ಸಮಯದಲ್ಲಿ ಸರ್ವದೇವರ ದೇವನು, ಯಾರೂ ಎಂದೂ ಕಾಣದಿರುವ ಹಾಗೂ ಕೇಳದಿರುವ ರಥವನ್ನೇರಿ ಅಂತಹದೇ ಆದ ಒಂದೇ ಬಾಣದಿಂದ ಹೊಡೆದಾಗ ಮಾತ್ರ ನಾವು ಸಾಯಬೇಕು.''

ಶಿವನೇ ಸರ್ವದೇವರ ದೇವನಾದ್ದರಿಂದ, ತಾವು ಶಿವನಲ್ಲಿ ಅನನ್ಯ ಶ್ರದ್ಧೆಯುಳ್ಳವರಾಗಿರೋಣದರಿಂದ, ಶಿವನು ನಮ್ಮನ್ನು ಎಂದೂ ಕೊಲ್ಲಲಾರನು. ಆದ್ದರಿಂದ ನಾವು ಸದಾ ಅಮರರಾಗಿಯೇ ಉಳಿಯುತ್ತೇವೆ–ಎಂಬುದಾಗಿ ವಿಚಾರಿಸಿದ ಆ ತಾರಕಾಸುರನ ಮಕ್ಕಳು ಈ ರೀತಿಯಾಗಿ ಬ್ರಹ್ಮನಲ್ಲಿ ವರವನ್ನು ಬೇಡಿದರು.

ಇವರ ಈ ಬೇಡಿಕೆಯ ಪ್ರಕಾರ ಬ್ರಹ್ಮನು ದೈತ್ಯಶಿಲ್ಪಿಯಾದ ''ಮಯ''ನಿಗೆ ಆಜ್ಞಾಪಿಸಿ ಚಿನ್ನ, ಬೆಳ್ಳಿ ಮತ್ತು ಉಕ್ಕಿನಿಂದ ಮೂರು ಪಟ್ಟಣಗಳನ್ನು ನಿರ್ಮಾಣಗೊಳಿಸಿ ಇವರಿಗೆ ಅನುಗ್ರಹಿಸಿದನು. ಅಂದಿನಿಂದ ಈ ಮೂವರೂ ''ತ್ರಿಪುರಾಸುರ''ರೆಂಬುದಾಗಿ ಲೋಕದಲ್ಲಿ ಪ್ರಖ್ಯಾತರಾದರು.

**ತ್ರಿಪುರಗಳಲ್ಲಿಯ ದಿನಚರ್ಯೆ:**

ಮಯನಿಂದ ನಿರ್ಮಿಸಲ್ಪಟ್ಟ ಈ ತ್ರಿಪುರಗಳು ಸ್ವರ್ಗಕ್ಕಿಂತಲೂ ಸುಮನೋಹರವಾಗಿದ್ದವು. ನೋಡಿದಲ್ಲೆಲ್ಲ ಶಿವದೇವಾಲಯಗಳು ಕಂಗೊಳಿಸುತ್ತಿದ್ದವಲ್ಲದೇ ಆ ನಗರ ನಿವಾಸಿಗಳು ಧರ್ಮಪರಾಯಣರೂ ನೀತಿ ನಿಷ್ಠರೂ ಆಗಿದ್ದರು. ಈ ತ್ರಿಪುರಗಳ ಅಧಿಪತಿಗಳಾದ ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿಗಳೂ ಸಹ ಧರ್ಮಪರಾಯಣರೂ ನೀತಿ ನಿಷ್ಠರೂ, ಶಿವಭಕ್ತಿ ಸಂಪನ್ನರೂ ಆಗಿ ಅಧಿಕಾಧಿಕ ಪುಣ್ಯವನ್ನೇ ಸಂಪಾದಿಸಿ ಸುಖಜೀವನವನ್ನು ಸಾಗಿಸತೊಡಗಿದರು.

**ತ್ರಿಪುರಾಸುರರಿಂದ ದೇವತೆಗಳ ತೇಜೋವಧೆ :**

ತಮ್ಮ ದೈನಂದಿನ ಉತ್ತಮ ಕರ್ಮಗಳಿಂದ ತ್ರಿಪುರಾಸುರರು ತೇಜಸ್ವಿಗಳಾಗತೊಡಗಿದರಲ್ಲದೇ, ಭೂಲೋಕದಲ್ಲಿ ನಡೆಯುವ ಯಜ್ಞಯಾಗಾದಿಗಳ ಹವಿರ್ಭಾಗಗಳನ್ನೂ ಇವರೇ ಸ್ವೀಕರಿಸತೊಡಗಿದರು. ಸ್ವರ್ಗ–ಮರ್ತ್ಯ–ಪಾತಾಳಗಳ ಶಾಸನವೂ ಇವರ ಅಧೀನವಾಯಿತು. ಇದರಿಂದಾಗಿ ಇಂದ್ರಾದಿ ದೇವತೆಗಳು ಕ್ರಮೇಣ ತೇಜೋಹೀನರಾಗಿ ಕಂಗೆಟ್ಟು, ಕೊನೆಗೆ ಬ್ರಹ್ಮನಿಗೆ ಮೊರೆಹೊಕ್ಕರು.

ತನಗೆ ಶರಣಾಗತರಾದ ದೇವತೆಗಳನ್ನುದ್ದೇಶಿಸಿ ಬ್ರಹ್ಮನು, ಎಲೈ ದೇವತೆಗಳಿರಾ ! "ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ" ತಾನೇ ಬೆಳೆಸಿದ ವಿಷವೃಕ್ಷವನ್ನು ತಾನೇ ಕತ್ತರಿಸುವುದು ನೀತಿಯಲ್ಲ, ತಾರಕಾಸುರನ ಸುತರಿಗೆ ನಾನೇ ತ್ರಿಪುರಗಳನ್ನು ದಯಪಾಲಿಸಿರುವೆನು. ಆದ್ದರಿಂದ ಅವರನ್ನು ನಾನು ಸಂಹರಿಸಲು ಸಾಧ್ಯವಿಲ್ಲ, ಕಾರಣ ನೀವೆಲ್ಲರೂ ಶಿವನನ್ನೇ ಪ್ರಾರ್ಥಿಸಿರಿ ಎಂಬುದಾಗಿ ಆದೇಶವಿತ್ತನು.

**ದೇವತೆಗಳ ಶಿವಶರಣಾಗತಿ :**

ಬ್ರಹ್ಮನ ಆದೇಶದಂತೆ ದೇವತೆಗಳೆಲ್ಲರೂ ಶಿವನ ಸನ್ನಿಧಾನಕ್ಕೆ ಹೋಗಿ–

ನಮೋ ಹಿರಣ್ಯಗರ್ಭಾಯ ಸರ್ವಸೃಷ್ಟಿ ವಿಧಾಯಿನೇ ।
ನಮಃ ಸ್ಥಿತಿಕೃತೇ ತುಭ್ಯಂ ವಿಷ್ಣವೇ ಪ್ರಭವಿಷ್ಣವೇ ।
ನಮೋ ಹರಸ್ವರೂಪಾಯ ಭೂತಸಂಹಾರಕಾರಿಣೇ ।
ನಿರ್ಗುಣಾಯ ನಮಸ್ತುಭ್ಯಂ ಶಿವಾಯಾಮಿತತೇಜಸೇ ॥

ಹೀಗೆ ನಾನಾ ವಿಧವಾಗಿ ಸ್ತೋತ್ರ ಮಾಡಿದರು. ದೇವತೆಗಳ ಭಕ್ತಿಗೆ ಪ್ರಸನ್ನನಾದ ಶಿವನು– ಸ್ತುತಿಸಿದ ಕಾರಣವೇನೆಂದು ಕೇಳಲಾಗಿ, ದೇವತೆಗಳು ತ್ರಿಪುರಾಸುರರಿಂದ ತಮಗುಂಟಾದ ಹಾನಿಯ ಕಥೆಯನ್ನೆಲ್ಲ ವಿವರಿಸಿದರು. ಆಗ ಶಿವನು–ಎಲೈ ದೇವತೆಗಳಿರಾ ತ್ರಿಪುರಾಸುರರು ಸದ್ಯಃ ವೇದವಿಹಿತ ಕರ್ಮಗಳನ್ನೇ ಆಚರಿಸುತ್ತಾ ಪುಣ್ಯಶಾಲಿಗಳಾಗಿರುವರು. ಯಾರು ಪುಣ್ಯ ಕರ್ಮದಲ್ಲಿ ತೊಡಗಿರುವರೋ ಅವರನ್ನು ಸಂಹರಿಸುವ ಸಾಮರ್ಥ್ಯವು ನನಗೂ ಇರುವುದಿಲ್ಲ, ಆದಕಾರಣ ಇದರ ಬಗ್ಗೆ ಏನಾದರೂ ಯುಕ್ತಿಯನ್ನು ಸಾಧಿಸಲು ನೀವೆಲ್ಲ ವಿಷ್ಣುವಿಗೆ ಶರಣಾಗಿರಿ–ಎಂಬುದಾಗಿ ಆದೇಶವಿತ್ತನು.

**ವಿಷ್ಣುವಿನ ಮಾಯಾಜಾಲ :**

ಶಿವನ ಆದೇಶದಂತೆ ದೇವತೆಗಳೆಲ್ಲ ವೈಕುಂಠಕ್ಕೆ ಹೋಗಿ ವಿಷ್ಣುವನ್ನು ಪ್ರಾರ್ಥಿಸಿದರು. ಆಗ ಶ್ರೀವಿಷ್ಣುವು ಪ್ರಸನ್ನನಾಗಿ ಪ್ರಾರ್ಥನೆಯ ಪ್ರಯೋಜನವೇನೆಂದು ಕೇಳಲು ತ್ರಿಪುರಾಸುರರ ತೇಜೋವೃದ್ಧಿಯ ಹಾಗೂ ತಮಗಾಗುತ್ತಿರುವ ತೇಜೋವಧೆಯ ವಿಷಯವನ್ನೆಲ್ಲ ವಿಸ್ತಾರವಾಗಿ ತಿಳಿಸಿದರು. ಆಗ ವಿಷ್ಣುವು–ಧರ್ಮ ನಿರತರಾದವರನ್ನು ಅಭಿಚಾರಾದಿಗಳಿಂದ ಕೊಲ್ಲಲು ಖಂಡಿತವಾಗಿಯೂ ಸಾಧ್ಯವಿಲ್ಲ, ತ್ರಿಪುರ ನಿವಾಸಿಗಳೆಲ್ಲರೂ ಧರ್ಮನಿಷ್ಠರಾಗಿದ್ದಾರೆ. ಎಲ್ಲಿಯವರೆಗೆ ವೇದವಿಹಿತಗಳಾದ ಧರ್ಮಗಳು ನಡೆಯುತ್ತವೆಯೋ, ಎಲ್ಲಿಯವರೆಗೆ ಶಂಕರನ ಪೂಜೆಯು ಆಗುತ್ತಿರುವುದೋ, ಎಲ್ಲಿಯವರೆಗೆ ಪವಿತ್ರವಾದ ಕೆಲಸಗಳು ನಡೆಯುತ್ತವೆಯೋ, ಅಲ್ಲಿಯವರೆಗೆ ಇವರ ನಾಶವಾಗಲಾರದು ಎಂದು ಮನಸ್ಸಿನಲ್ಲಿ ಆಲೋಚಿಸಿ, ತ್ರಿಪುರಾಸುರರನ್ನು ಧರ್ಮಭ್ರಷ್ಟರನ್ನಾಗಿ ಮಾಡುವುದಕ್ಕಾಗಿ ತನ್ನ ಶರೀರದಿಂದ ಒಬ್ಬ ಮಾಯಾ ಪುರುಷನನ್ನು ನಿರ್ಮಿಸಿ, ಅವನಿಗೆ ಸನಾತನ ಧರ್ಮಕ್ಕೆ ವಿರುದ್ಧವಾದ ಅಧರ್ಮ ಶಾಸ್ತ್ರವನ್ನು ಉಪದೇಶಿಸಿ, ಈ ಶಾಸ್ತ್ರವನ್ನು ತ್ರಿಪುರದಲ್ಲಿ ಪ್ರಚಾರಮಾಡಿ, ಅಲ್ಲಿಯ ರಾಜ ಹಾಗೂ ಪ್ರಜೆಗಳೆಲ್ಲರೂ ಅಧರ್ಮಿಗಳಾಗುವಂತೆ ಪ್ರಯತ್ನಿಸು–ಎಂದು ಆದೇಶವಿತ್ತು ಕಳುಹಿಸಿಕೊಟ್ಟನು.

ಈ ಮಾಯಾವಿಯಾದ ಯತಿಯು ತನ್ನಂತೆ ಮಾಯಾವಿಗಳಾದ ನಾಲ್ಕು ಜನ ಶಿಷ್ಯರಿಂದೊಡಗೂಡಿ ತ್ರಿಪುರವನ್ನು ಪ್ರವೇಶಿಸಿ ಅಲ್ಲಿಯ ಸುಂದರ ಉದ್ಯಾನದಲ್ಲಿ ತನ್ನ ಬಿಡಾರವನ್ನು ಹೂಡಿದನು. ಇವನ ಶಿಷ್ಯರು ದಿನಾಲು ಊರಲ್ಲಿ ತಿರುಗಾಡಿ ತಮ್ಮ ಗುರುವಿನ ಮಹಿಮೆಯನ್ನೂ ಹಾಗೂ ಹೊಸ ಧರ್ಮದ ವಿಚಾರಗಳನ್ನೂ ಜನರಲ್ಲಿ ಪ್ರಚಾರಗೊಳಿಸತೊಡಗಿದರು. ಇವರಿಗೆ ಸಹಾಯಕನಾಗಲು ಶ್ರೀ ಹರಿಯು ನಾರದನನ್ನೂ ಅಲ್ಲಿಗೆ ಕಳುಹಿಸಿದನು.

ಈ ಮಾಯಾ ಯತಿಯಿಂದ ನಾರದನು ಮೊದಲು ದೀಕ್ಷೆಯನ್ನು ಹೊಂದಿ ತ್ರಿಪುರಾಸುರರ ಬಳಿ ಹೋಗಿ ಹೀಗೆ ಉಪದೇಶಿಸಿದನು–

ಹೇ ತಾರಕಾಸುರ ಸುತರೇ ! ಭಾಗ್ಯವೇ ಬಾಗಿಲಿಗೆ ಬಂದಂತೆ ನಿಮ್ಮ ಊರಿಗೆ ಓರ್ವ ಮಹಾನ್ ಯತಿವರ್ಯನು ಬಂದಿದ್ದಾನೆ. ಅವನೊಂದು ಹೊಸ ಧರ್ಮವನ್ನು ಕಂಡು ಹಿಡಿದಿದ್ದಾನೆ. ಆ ಧರ್ಮದ ಪ್ರಕಾರ ಸ್ನಾನ–ಸಂಧ್ಯಾವಂದನೆ–ಶಿವಪೂಜಾದಿಗಳನ್ನು ಮಾಡುವ ಅವಶ್ಯಕತೆ ಇಲ್ಲ; ಪುಣ್ಯ–ಪಾಪ–ಸ್ವರ್ಗ–ನರಕಗಳೆಲ್ಲ ಸುಳ್ಳು. ಇಲ್ಲಿ ನಾವು ಅನುಭವಿಸುವ ಕಷ್ಟವೇ ನರಕವು. ಇಲ್ಲಿಯ ಐಶ್ವರ್ಯ ಭೋಗವೇ ಸ್ವರ್ಗವು. ನ್ಯಾಯ–ಅನ್ಯಾಯಗಳನ್ನು ವಿಚಾರಮಾಡದೇ ಧನವನ್ನು ಸಂಗ್ರಹಿಸಿ ಸುಖಪಡುವುದೇ ಜಾಣತನವು. ದೇಹವನ್ನು ದಂಡಿಸಿ ದೇವತಾರ್ಚನೆಯನ್ನು ಮಾಡುವುದು ದಡ್ಡ ಜೀವಿಗಳ ಕೆಲಸ. ಈ ಪೂಜಾ ಪಾಠಗಳು ಜೀವನವಿರುವವರೆಗೆ ಮುಗಿಯುವವುಗಳಲ್ಲ. ನಿರುದ್ಯೋಗಿಗಳು ಮಾಡುವ ಈ ಕಾರ್ಯದಿಂದ ನಾನೂ ಬೇಸತ್ತು ಈ ಹೊಸ ಧರ್ಮದಲ್ಲಿ ದೀಕ್ಷೆಯನ್ನು ಪಡೆದಿದ್ದೇನೆ. ಈ ಧರ್ಮದಲ್ಲಿ ದೀಕ್ಷೆಯನ್ನು ಹೊಂದಿದರೆ ನೀವು ಇಲ್ಲಿಯವರೆಗೆ ಮಾಡಿರುವಂತೆ ಕಷ್ಟಕರಗಳಾದ ತಪಸ್ಸನ್ನು ಇನ್ನು ಮುಂದೆ ಮಾಡುವ ಅವಶ್ಯಕತೆ ಇರುವುದಿಲ್ಲ.

ಮನಸ್ಸಿಗೆ ರುಚಿಸುವ ನಾರದನ ಈ ಮಾತುಗಳನ್ನು ಕೇಳಿ ಮನಸೋತ ತ್ರಿಪುರಾಸುರರು, ಮಾಯಾವಿ ಯತಿಯಿಂದ ದೀಕ್ಷೆಯನ್ನು ಪಡೆದು, ಧರ್ಮಾಚರಣೆಗಳನ್ನು ತ್ಯಜಿಸಿ, ಮನಬಂದಂತೆ ದುರಾಚಾರಿಗಳೂ, ದುರ್ಮಾರ್ಗಿಗಳೂ ಆಗಿ ಆಚರಿಸತೊಡಗಿದರು. ''ಯಥಾ ರಾಜಾ ತಥಾ ಪ್ರಜಾಃ'' ಎನ್ನುವಂತೆ ತ್ರಿಪುರಗಳ ಪ್ರಜೆಗಳೆಲ್ಲರೂ ಈ ಯತಿಯ ಶಿಷ್ಯರಾದರು. ತ್ರಿಪುರಗಳಲ್ಲಿಯ ದೇವಾಲಯಗಳೆಲ್ಲ ಹಾಳು ಬಿದ್ದವು. ದೇವತಾರ್ಚನೆ ಜಪ–ತಪಾದಿಗಳು ಮಾಯವಾದವು. ರಾಜಾ ಮತ್ತು ಪ್ರಜೆಗಳು ಸ್ವೇಚ್ಛಾಚಾರಿಗಳಾದರು. ಹೀಗೆ ಪಟ್ಟಣಿಗರೆಲ್ಲರೂ ಸಂಪೂರ್ಣವಾಗಿ ತಮ್ಮ ತಮ್ಮ ಧರ್ಮಗಳಲ್ಲಿ ಪರಾಙ್ಮುಖರಾದ ಮೇಲೆ ಅಧರ್ಮವು ಅಲ್ಲಿ ಪ್ರಬಲಗೊಂಡಿತು.

ಈ ರೀತಿ ತ್ರಿಪುರವು ವಿಷ್ಣುವಿನ ಮೋಹಪಾಶಕ್ಕೆ ಸಿಲುಕಿಹೋಯಿತು. ದೈತ್ಯರೆಲ್ಲರೂ ಶಿವಪೂಜೆಯನ್ನು ತೊರೆದರು. ಸ್ತ್ರೀಯರ ಶೀಲವೆಲ್ಲವೂ ಹಾಳಾಯಿತು. ದುರಾಚಾರವು ಬಲವಾಗಿ ಬೇರೂರಿತು. ಆಗ ಶ್ರೀಹರಿಯು ಕೃತ ಕೃತ್ಯನಾದವನಂತೆ ಎಲ್ಲ ದೇವತೆಗಳನ್ನೂ ಕರೆದುಕೊಂಡು ಶಿವನಲ್ಲಿಗೆ ಹೋಗಿ, ತ್ರಿಪುರಾಸುರರು ಧರ್ಮಭ್ರಷ್ಟರಾಗಿರುವ ವಿಷಯವನ್ನು ನಿವೇದಿಸಿಕೊಂಡನು.

ತ್ರಿಪುರಸಂಹಾರ ಲೀಲೆ :

ಅಧರ್ಮಿಗಳನ್ನು ನಾಶಗೊಳಿಸಲು ಮತ್ತು ಧರ್ಮಿಷ್ಠರನ್ನು ರಕ್ಷಿಸಲು ಶಿವನು ಇಪ್ಪತ್ತೈದು ಲೀಲೆಗಳನ್ನು ಮಾಡಿರುವುದುಂಟು. ಅವುಗಳಲ್ಲಿ ತ್ರಿಪುರಸಂಹಾರ ಲೀಲೆಯೂ ಒಂದು. ಅಧರ್ಮಿಗಳೂ, ಲೋಕಕಂಟಕರೂ ಆದ ತ್ರಿಪುರ ಸಂಹಾರಕ್ಕಾಗಿ ಶಿವನು–

ರಥಃ ಕ್ಷೋಣೀ ಯಂತಾ ಶತಧೃತಿರಗೇಂದ್ರೋ ಧನುರಥೋ
ರಥಾಂಗೇ ಚಂದ್ರಾರ್ಕೌ ರಥಚರಣಪಾಣಿಃ ಶರ ಇತಿ ।
ದಿಧಕ್ಷೋಸ್ತೇ ಸ್ತೇ ಕೋಽಯಂ ತ್ರಿಪುರತೃಣಮಾಡಂಬರ ವಿಧಿ–
ರ್ವಿಧೇಯೈಃ ಕ್ರೀಡಂತ್ಯೋ ನ ಖಲು ಪರತಂತ್ರಾಃ ಪ್ರಭುಧಿಯಃ ॥

(ಮಹಿಮ್ನಸ್ತೋತ್ರ ೧೮)

ಪುಷ್ಪದಂತ ಕವಿಯು ವರ್ಣಿಸಿದಂತೆ, ಬಹು ವಿಸ್ತಾರವಾದ ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡನು. ಸೂರ್ಯ–ಚಂದ್ರರೇ ಆ ರಥದ ಗಾಲಿಗಳಾಗಿದ್ದವು. ನಾಲ್ಕು ವೇದ ಗಳೇ ಕುದುರೆಗಳಾದವು. ಸಾವಿರ ಹೆಡೆಗಳಿಂದ ಶೋಭಿಸುವ ಆದಿಶೇಷನೇ ಆ ರಥಕ್ಕೆ ಬಿಗಿಯುವ ಹಗ್ಗವಾದನು. ಚತುರ್ಮುಖ ಬ್ರಹ್ಮನೇ ಸಾರಥಿಯಾದನು. ಮೇರು ಪರ್ವತವೇ ಧನುಸ್ಸಾಯಿತು. ವಾಸುಕಿಯೇ ಅದರ ಸಿಂಜಿನಿಯಾಯಿತು. ಮಹಾವಿಷ್ಣುವೇ ಬಾಣವಾದನು. ಅಗ್ನಿದೇವನು ಆ ಬಾಣದ ಅಲಗಾದನು. ಹೀಗೆ ಬಹು ವಿಚಿತ್ರಗಳಾದ ಸಾಮಗ್ರಿಗಳಿಂದೊಡಗೂಡಿದ ರಥವನ್ನು ಶಿವನು ಏರುತ್ತಲೇ ಭೂಮಿಯು ನಡುಗಿತು, ಪರ್ವತಗಳೆಲ್ಲಾ ಅಲ್ಲಾಡಿಹೋದವು.

ಶಿವನು ರಥವನ್ನೇರಿ ಕುಳಿತಮೇಲೆ ಬ್ರಹ್ಮನು ಆ ರಥವನ್ನು ವಾಯುವೇಗದಿಂದ ತ್ರಿಪುರಗಳತ್ತ ಕೊಂಡೊಯ್ದನು. ಆಕಾಶ ಮಂಡಲದಲ್ಲಿಯ ತ್ರಿಪುರಗಳ ಸಂಹಾರಕ್ಕಾಗಿ ಶಿವನು ತದೇಕ ದೃಷ್ಟಿಯಿಂದ ಒಂದು ಸಾವಿರ ವರ್ಷಗಳವರೆಗೆ ಗುರಿಸಾಧಿಸತೊಡಗಿ ದನು. ಆದರೂ ತ್ರಿಪುರರು ಶಿವನ ದೃಷ್ಟಿಗೆ ಬೀಳಲೇ ಇಲ್ಲ. ಇದಕ್ಕೆ ಕಾರಣವೇನೆಂದು ವಿಚಾರಿಸುತ್ತಿರಲು–

ಭೋ ಭೋ ನ ಯಾವದ್ಭಗವನ್ನರ್ಚಿತೋಽಸೌ ವಿನಾಯಕಃ ।
ಪುರಾಣಿ ಜಗದೀಶೇಶ ಸಾಂಪ್ರತಂ ನ ಹನಿಷ್ಯತಿ ॥

(ಶಿವ. ಪು. ರುದ್ರ. ಸಂ. ೧೦–೬)

ಹೇ ಸ್ವಾಮಿಯೇ ! ವಿಘ್ನೇಶ್ವರನನ್ನು ಎಲ್ಲಿಯವರೆಗೆ ಪೂಜಿಸುವದಿಲ್ಲವೋ ಅಲ್ಲಿಯವರೆಗೆ ತ್ರಿಪುರಗಳನ್ನು ಸಂಹರಿಸಲು ಸಾಧ್ಯವಿಲ್ಲವೆಂಬುದಾಗಿ ಆಕಾಶವಾಣಿಯಾಯಿತು.

ಆಗ ಶಿವನು ಪಾರ್ವತಿಯಿಂದೊಡಗೂಡಿ ವಿಘ್ನೇಶ್ವರನ ಪೂಜೆಯನ್ನು ವಿಧಿ ವತ್ತಾಗಿ ಆಚರಿಸಲು ತಾರಕಾಸುರನ ಮಕ್ಕಳ ಆ ತ್ರಿಪುರಗಳು ಅಂತರಿಕ್ಷದಲ್ಲಿ ಆಕಸ್ಮಿಕವಾಗಿ ಒಂದೆಡೆ ಸೇರಿರುವುದನ್ನು ಕಂಡನು. ಕೂಡಲೇ ಶಿವನು ರೌದ್ರಾವೇಷವನ್ನು ತಾಳಿ ದಿವ್ಯ ವಾದ ಆ ಧನುಸ್ಸನ್ನೆಳೆದು ಕಿವಿಗಳು ಕಿವುಡಾಗುವಷ್ಟು ಬಹಳ ಅಸಾಧ್ಯವಾಗಿ ಶಬ್ದವಾಗು

ವಂತೆ ಹೆದೆಯನ್ನು ಝೇಂಕಾರ ಮಾಡಿ, ತನ್ನ ಹೆಸರನ್ನು ಎತ್ತಿಹೇಳಿ, ಆ ತ್ರಿಪುರಗಳ ಹೆಸರನ್ನೂ ಗಟ್ಟಿಯಾಗಿ ಕೂಗಿ ಕರೆದು, ಕೋಟಿಸೂರ್ಯರಂತೆ ಜಾಜ್ವಲ್ಯಮಾನವಾಗಿ ಬೆಳಗುತ್ತಿರುವ ಬಾಣವನ್ನು ಆ ತ್ರಿಪುರಗಳ ಮೇಲೆ ಪ್ರಯೋಗಿಸಿದನು.

ಪಾಪವನ್ನು ಪರಿಹರಿಸುವಂಥಾ ಅಗ್ನಿಯೇ ಅಲಗಾಗಿ ವಿಷ್ಣುಮಯವಾಗಿರುವ ಆ ಬಾಣವು ಬಹಳವಾಗಿ ಬೆಳಗುತ್ತ, ಆ ತ್ರಿಪುರ ನಿವಾಸಿಗಳಾದ ದೈತ್ಯರನ್ನು ಸುತ್ತುವರೆಯಿತು. ಆಗ ಆ ದೈತ್ಯರು ತಮ್ಮ ಮುಂದಿನ ಜನ್ಮಗಳಲ್ಲಿಯೂ ತಾವು ಶಿವಭಕ್ತರೇ ಆಗುವಂತೆ ಅನುಗ್ರಹಿಸಲು ಶಿವನನ್ನು ಪ್ರಾರ್ಥಿಸಿದರು. ಶಿವನು ತಥಾಸ್ತು ಎನ್ನುತ್ತಲೇ ಅವರು ತ್ರಿಪುರ ಸಹಿತವಾಗಿ ಸುಟ್ಟು ಭಸ್ಮವಾಗಿ ಭೂಮಿಗುರುಳಿದರು.

**ರುದ್ರಾಕ್ಷಗಳ ಉತ್ಪತ್ತಿ :**

ಈ ರೀತಿಯಾಗಿ ತ್ರಿಪುರಾಸುರರನ್ನು ಭಸ್ಮಮಾಡಿ ದೇವತೆಗಳಿಗೆ ಬಂದೊದಗಿದ ವಿಪತ್ತನ್ನು ಶಿವನು ದೂರಮಾಡಿ, ಜಗತ್ತಿಗೆ ಮಂಗಲವನ್ನುಂಟುಮಾಡಿದನು. ಶಿವನು ಈ ಲೀಲೆಯನ್ನು ಮಾಡುವಾಗ ತ್ರಿಪುರಗಳ ಮೇಲೆ ಗುರಿಯನ್ನು ಸಾಧಿಸಲು ಒಂದು ಸಾವಿರ ವರ್ಷಗಳವರೆಗೆ ತನ್ನ ಮೂರೂ ಕಣ್ಣುಗಳನ್ನು ತೆರೆದು ಆಕಾಶದಲ್ಲಿ ಮೇಲ್ಮುಖವಾಗಿ ಸದಾ ನೋಡುತ್ತಿರುವಾಗ, ಅವನ ಮೂರೂ ಕಣ್ಣುಗಳ ಕೆಲವು ನೀರಿನ ಹನಿಗಳು ಭೂಮಿಯ ಮೇಲೆ ಬಿದ್ದವು. ಶ್ರೀ ರುದ್ರನ ನೇತ್ರದಿಂದ ಬಿದ್ದ ಆ ಜಲಬಿಂದುಗಳಿಂದಲೇ ಭೂಮಿಯ ಮೇಲೆ ಕೆಲವು ವೃಕ್ಷಗಳು ಉತ್ಪತ್ತಿಯಾದವು. ರುದ್ರನ ಅಕ್ಷಜಲದಿಂದ ಉತ್ಪನ್ನವಾದ ಅವುಗಳಿಗೆ ''ರುದ್ರಾಕ್ಷ ವೃಕ್ಷ''ವೆಂಬ ಹೆಸರು ಪ್ರಾಪ್ತವಾಯಿತು. ಆ ವೃಕ್ಷಗಳ ಬೀಜಗಳೇ ರುದ್ರಾಕ್ಷಗಳು. ಅಂತೆಯೇ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು–

''ತೇಭ್ಯೋ ಜಾತಾ ಹಿ ರುದ್ರಾಕ್ಷಾ ರುದ್ರಾಕ್ಷಾ ಇತಿ ಕೀರ್ತಿತಾಃ ''

ಎಂಬುದಾಗಿ ಉಪದೇಶಿದ್ದಾರೆ.

''ದುಃಖಾಶ್ರು'' ''ಆನಂದಾಶ್ರು'' ಮತ್ತು ''ಯೋಗಾಶ್ರು'' ಎಂದು ಕಣ್ಣೀರು ಮೂರು ವಿಧವಾಗಿರುತ್ತದೆ. ಸಂಸಾರದ ನಾನಾ ವಿಧ ತಾಪಗಳಿಂದ ಬೆಂದ ಜೀವಿಗಳ ಕಣ್ಣಿನಿಂದ ದುಃಖಾಶ್ರುಗಳು ಹೊರಡುತ್ತವೆ. ಅಭಿಲಾಷಿತ ವಸ್ತುವಿನ ಪ್ರಾಪ್ತಿಯಿಂದ ಆವಿರ್ಭವಿಸುವ ಅಶ್ರುಗಳೇ ಆನಂದಾಶ್ರುಗಳು. ಇನ್ನು ಯೋಗಾಭ್ಯಾಸವನ್ನು ಮಾಡುವಾಗ, ತ್ರಾಟಕದ ಮಾಧ್ಯಮದಿಂದ ಮುದ್ರೆಗಳನ್ನು ಸಾಧಿಸುವಾಗ ಪ್ರಾರಂಭಿಕ ಅವಸ್ಥೆಯಲ್ಲಿ ನೇತ್ರದಿಂದ ನೀರುಗಳು ಬರುವುದುಂಟು. ಇವುಗಳನ್ನು ಯೋಗಾಶ್ರುಗಳೆನ್ನುವರು. ಈ ತ್ರಿವಿಧ ಅಶ್ರುಗಳಲ್ಲಿ ಆಯಾ ವ್ಯಕ್ತಿಯ ಸಂಕಲ್ಪ ಶಕ್ತಿಯು ಅಡಗಿರುವುದರಿಂದ, ಅವುಗಳು ಆ ವ್ಯಕ್ತಿಯ ಸಂಕಲ್ಪಾನುಸಾರವಾಗಿ ಕೆಲಸಮಾಡುತ್ತವೆ. ಅಂತೆಯೇ ಲೋಕದಲ್ಲಿ ಮನಸ್ತಾಪಗೊಂಡ ವ್ಯಕ್ತಿಯು ತನಗೆ ಸಂತಾಪವನ್ನುಂಟು ಮಾಡಿದ ವ್ಯಕ್ತಿಯನ್ನುದ್ದೇಶಿಸಿ ಕಣ್ಣೀರನ್ನೂ ಸುರಿಸಿದರೆ ಆ ತಾಪ ಕೊಟ್ಟ ವ್ಯಕ್ತಿಗೆ ಅನಿಷ್ಟವಾಗುತ್ತದೆಂಬ ಲೋಕಾನುಭವವು ಸರ್ವತ್ರ ಪ್ರಚಾರದಲ್ಲಿ ಇದೆ. ಆದ್ದರಿಂದ ಪರರನ್ನು ಪೀಡಿಸುವ ಯಾವ ಕಾರ್ಯವನ್ನೂ ಮಾಡಬಾರದೆಂಬುದಾಗಿ ನೀತಿಶಾಸ್ತ್ರವಿದೆ.

ಹೀಗೆ ಸಾಮಾನ್ಯ ಜೀವಿಗಳ ಅಶ್ರುಗಳಲ್ಲಿಯೇ ಇಂತಹ ಸಾಮರ್ಥ್ಯವಿರುವಾಗ, ಜಗದ್ರಕ್ಷಕನಾದ ಶಿವನ ಆ ಯೋಗಾಶ್ರುಗಳು ನೆಲಕ್ಕೆ ಬಿದ್ದಾಗ, ದುಷ್ಟಶಕ್ತಿಯಿಂದ ರಕ್ಷಿಸುವ ಸಾಮರ್ಥ್ಯವುಳ್ಳ ರುದ್ರಾಕ್ಷಗಳು ಉತ್ಪನ್ನವಾದವು- ಎಂಬಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಶಿವನ ಆ ಯೋಗಾಶ್ರುಗಳು ನೆಲಕ್ಕೆ ಬೀಳುವಾಗ ಶಿವನ ಮನಸ್ಸಿನಲ್ಲಿ ದುಷ್ಟರನ್ನು ಸಂಹರಿಸುವ ಮತ್ತು ಶಿಷ್ಟರನ್ನು ಪರಿಪಾಲಿಸುವ ಸಂಕಲ್ಪವಿದ್ದ ಕಾರಣ, ಆ ಜಲಬಿಂದುವಿನಿಂದ ಉತ್ಪನ್ನವಾದ ಆ ರುದ್ರಾಕ್ಷ ಬೀಜಗಳಲ್ಲಿಯೂ ಶಿವನ ಸಂಕಲ್ಪ ಶಕ್ತಿಯು ಅಡಕವಾಗಿರುತ್ತದೆ.

ರುದ್ರಾಕ್ಷಗಳ ಈ ನಿಗೂಢ ತತ್ತ್ವವನ್ನರಿತ ವೀರಶೈವ ಆಚಾರ್ಯರು, ಸಾಧಕನ ಸಂರಕ್ಷಕಗಳಾದ್ದರಿಂದ, ಇವುಗಳನ್ನು ಅಷ್ಟಾವರಣದಲ್ಲಿ ಪರಿಗಣಿಸಿದ್ದಾರೆ. ಹೀಗೆ ರುದ್ರಾಕ್ಷದ ಉತ್ಪತ್ತಿಯ ಕಥೆಯನ್ನು ನಿರೂಪಿಸಿದ ಪೂಜ್ಯರು ಅವುಗಳ ಭೇದವನ್ನು ಪ್ರತಿಪಾದಿಸುತ್ತಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೧ ಆಗಸ್ಟ್, ೧೯೯೦

(ಸ್ಥಾನ ಶಿವಾನುಭವ ಮಂಗಲ ಭವನ ಸೋಲಾಪೂರ)



ಆಶೀರ್ವಚನ-೩

ರುದ್ರನೇತ್ರಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾಃ ।
ಅಷ್ಟತ್ರಿಂಶತ್ಪ್ರಭೇದೇನ ಭವಂತ್ಯುತ್ಪತ್ತಿಭೇದತಃ ॥ ೫ ॥

ರುದ್ರಭಗವಂತನ ನೇತ್ರಗಳಿಂದುದಯಿಸಿದ ರುದ್ರಾಕ್ಷಗಳು, ಜಗತ್ತಿನ ಜೀವಿಗಳನ್ನು ಪವಿತ್ರಗೊಳಿಸುವಂತಹವುಗಳಾಗಿವೆ. ಈ ರುದ್ರಾಕ್ಷಗಳು ಉತ್ಪತ್ತಿಯ ಭೇದದಿಂದ ಮೂವತ್ತೆಂಟು ಪ್ರಕಾರಗಳಾಗಿರುತ್ತವೆ.

ನೇತ್ರಾತ್ ಸೂರ್ಯಾತ್ಮನಃ ಶಂಭೋಃ ಕಪಿಲಾ ದ್ವಾದಶೋದಿತಾಃ ।
ಶ್ವೇತಾಃ ಷೋಡಶ ಸಂಜಾತಾಃ ಸೋಮರೂಪಾದ್ವಿಲೋಚನಾತ್ ॥ ೬ ॥

ಪರಮಾತ್ಮನ ಸೂರ್ಯನೇತ್ರದಿಂದ ಕಂದುಬಣ್ಣದ ಹನ್ನೆರಡು ಪ್ರಕಾರದ ಹಾಗೂ ಚಂದ್ರನೇತ್ರದಿಂದ ಬಿಳಿಬಣ್ಣದ ಹದಿನಾರು ಪ್ರಕಾರದ ರುದ್ರಾಕ್ಷಗಳು ಉತ್ಪನ್ನಗಳಾದವು.

ಕೃಷ್ಣಾದ್ದಶವಿಧಾ ಜಾತಾ ವಹ್ನಿರೂಪಾದ್ವಿಲೋಚನಾತ್ ।
ಏವಮುತ್ಪತ್ತಿಭೇದೇನ ರುದ್ರಾಕ್ಷಾ ಬಹುಧಾ ಸ್ಮೃತಾಃ ॥ ೭ ॥

ಪರಮಾತ್ಮನ ಅಗ್ನಿನೇತ್ರದಿಂದ ಕಪ್ಪುಬಣ್ಣದ ಹತ್ತು ಪ್ರಕಾರದ ರುದ್ರಾಕ್ಷಗಳು ಉತ್ಪನ್ನಗಳಾದವು. ಹೀಗೆ ಉತ್ಪತ್ತಿಯ ಭೇದದಿಂದ ರುದ್ರಾಕ್ಷಗಳು ಅನೇಕ ವಿಧಗಳಾಗಿ ಹೇಳಲ್ಪಟ್ಟಿವೆ.

ರುದ್ರಾಕ್ಷ ಶಬ್ದದ ಅನ್ವರ್ಥಕತೆ :

ವ್ಯವಹಾರದ ಅನುಕೂಲತೆಗಾಗಿ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಹಾಗೂ ವಸ್ತುಗಳಿಗೆ ನಾಮಕರಣ ಮಾಡುವ ಪದ್ಧತಿಯುಂಟು. ಇವುಗಳಲ್ಲಿ ಕೆಲವು ನಾಮಗಳು ಯೌಗಿಕಾರ್ಥವುಳ್ಳವುಗಳೂ, ಕೆಲವೊಂದು ರೂಢಾರ್ಥವುಳ್ಳವುಗಳೂ ಆಗಿರುತ್ತವೆ. ಪ್ರಕೃತದ ಈ ''ರುದ್ರಾಕ್ಷ''ವೆಂಬ ಹೆಸರು ರುದ್ರನೇತ್ರ ಸಮುತ್ಪನ್ನಗಳೆಂಬ ಅರ್ಥವನ್ನು ಸೂಚಿಸುವುದರಿಂದ, ಇದು ಯೌಗಿಕಾರ್ಥವನ್ನು ಹೊಂದಿದ ಅನ್ವರ್ಥಕ ನಾಮಧೇಯವಾಗಿದೆ. ಪರಮಾತ್ಮನ ನೇತ್ರಗಳಲ್ಲಿ ಪಾಪ ಪರಿಹಾರಕ ಸಾಮರ್ಥ್ಯವಿರುವಂತೆ, ಈ ರುದ್ರಾಕ್ಷಗಳೂ ಲೋಕಪಾವನಗಳಾಗಿವೆ. ಅಂತೆಯೇ ಶ್ರೀ ಜಗದ್ಗುರು ರೇಣುಕರು–''ರುದ್ರನೇತ್ರ ಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾಃ'' ಎಂಬುದಾಗಿ ಉಪದೇಶಿಸಿದ್ದಾರೆ.

ಶಿವನನ್ನು ಅನನ್ಯ ಭಾವನೆಯಿಂದ ಪೂಜಿಸುವ ಅನೇಕ ಮಹಾನುಭಾವರಿಗೆ ನೇತ್ರ ಪರುಷ, ಹಸ್ತ ಪರುಷ, ವಾಕ್‌ಪರುಷ ಮುಂತಾದ ಸಿದ್ಧಿಗಳು ಪ್ರಾಪ್ತವಾಗಿರುತ್ತವೆ. ಈ ಸಿದ್ಧಿಗಳ ಮಹಿಮೆಯಿಂದಲೇ ಅವರು ನೋಟ, ಸ್ಪರ್ಶ ಮತ್ತು ವಾಣಿಯ ಮುಖಾಂತರ ಲೋಕದ ಜನರನ್ನು ಉದ್ಧರಿಸುತ್ತಾರೆ. ಅಂತೆಯೇ ಶ್ರೀ ನಿಜಗುಣ ಶಿವಯೋಗಿಗಳು–

"ನೋಡಿ ಕೆಲರಂ, ಮಾತನಾಡಿ ಕೆಲರಂ, ಮುಟ್ಟಿ ಕೆಲರಂ, ಮಿಗೆ ದೇವರಾಗಿ ಮಾಳ್ಪ ಆಚಾರ್ಯ ಶರಣಾಗು" ಎಂಬುದಾಗಿ ತಮ್ಮ ಸದ್ಗುರುಗಳನ್ನು ಸ್ತುತಿಸಿದ್ದಾರೆ. ಶಿವೋಪಾಸನೆಯನ್ನು ಮಾಡಿದ ಮಹಾನುಭಾವಿಗಳಲ್ಲಿಯೇ ಇಂತಹ ಸಾಮರ್ಥ್ಯವಿರುವಾಗ ಸಾಕ್ಷಾತ್ ಶಿವನ ನೇತ್ರಗಳಿಂದ ಉತ್ಪನ್ನಗಳಾದ ರುದ್ರಾಕ್ಷಗಳಲ್ಲಿ ಅದಾವ ಸಾಮರ್ಥ್ಯವಿರಲಿಕ್ಕಿಲ್ಲ? ಅಂತೆಯೇ ರುದ್ರಾಕ್ಷಗಳನ್ನು ರುದ್ರಸ್ವರೂಪಗಳನ್ನಾಗಿಯೇ ಭಾವಿಸಬೇಕು.

**ಶಿವನು ಸರ್ವವ್ಯವಹಾರ ಸಾಕ್ಷಿಯು :**

ಉತ್ಪತ್ತಿಯ ಭೇದದಿಂದ ರುದ್ರಾಕ್ಷಗಳು ಮೂವತ್ತೆಂಟು ಪ್ರಕಾರಗಳಾಗಿವೆ ಎಂದು ಶ್ರೀ ಜಗದ್ಗುರುಗಳು ಅಪ್ಪಣೆಕೊಡಿಸಿದ್ದಾರೆ. ಇವುಗಳ ಇಷ್ಟೊಂದು ಪ್ರಭೇದಕ್ಕೆ ಮೂಲ ಕಾರಣಗಳೆಂದರೆ ಶಿವನ ನೇತ್ರಗಳೇ. "ಸಹಸ್ರಾಕ್ಷಃ ಸಹಸ್ರಪಾತ್" ಎಂಬ ವೇದ ಮಂತ್ರವು ವಿರಾಡ್ರೂಪನಾದ ಪರಶಿವನಿಗೆ ಸಾವಿರಾರು ಕಣ್ಣುಗಳಿವೆ ಎಂಬುದಾಗಿ ವರ್ಣಿಸುತ್ತದೆ. ಇನ್ನು ಪುರಾಣ ಸಾಹಿತ್ಯದಲ್ಲಿ ಶಿವನನ್ನು ತ್ರ್ಯಂಬಕ, ತ್ರಿನೇತ್ರ ಮತ್ತು ಮುಕ್ಕಣ್ಣ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ. ಹಾಗಾದರೆ ಪರಮಾತ್ಮನು ತ್ರಿನೇತ್ರನೇ ? ಅಥವಾ ಸಹಸ್ರನೇತ್ರನೇ ? ಎಂಬ ಜಿಜ್ಞಾಸೆಯುಂಟಾಗುವುದು. ಇದರ ಸಮಾಧಾನವೇನೆಂದರೆ, ಪರಮಾತ್ಮನು ಸಹಸ್ರಾಕ್ಷನೂ ಅಹುದು, ತ್ರಿನೇತ್ರನೂ ಅಹುದು. ಇಲ್ಲಿಯ ಸಹಸ್ರಶಬ್ದವು ಕೇವಲ ಸಹಸ್ರ ಸಂಖ್ಯಾವಾಚಕವಲ್ಲ, ಆದರೆ ಅಸಂಖ್ಯಾರ್ಥಕ. ಪರಮಾತ್ಮನು ಸರ್ವಜೀವಿಗಳ ಹೃದಯದಲ್ಲಿ ನಿವಾಸಿಸಿರುವುದರಿಂದ ಎಲ್ಲ ಜೀವರಾಶಿಗಳನ್ನೂ, ಅಂತರ್ಯಾಮಿಯಾಗಿ ನೋಡುತ್ತಾನೆ. ಅಂತೆಯೇ ಅವನನ್ನು ಸಹಸ್ರಾಕ್ಷನೆಂಬುದಾಗಿ ಕರೆಯಲಾಗಿದೆ.

ಪರಮಾತ್ಮನ ಅನೇಕ ಲೀಲಾವಿಗ್ರಹಗಳಲ್ಲಿ ರುದ್ರರೂಪವೂ ಒಂದಾಗಿದೆ. ಜಗತ್ತಿನ ಸಂಹಾರಕ್ಕಾಗಿ ಶಿವನು ಈ ರೂಪವನ್ನು ತಾಳಿದ್ದಾನೆ. ಈ ರುದ್ರರೂಪನಾದ ಶಿವನು ಮುಕ್ಕಣ್ಣನಾಗಿರುವನು. ಇವನ ಮೂರು ಕಣ್ಣುಗಳೆಂದರೆ ಸೂರ್ಯ, ಚಂದ್ರ ಹಾಗೂ ಅಗ್ನಿಗಳು. ನಾವು ಮಾಡುವ ಪ್ರತಿಯೊಂದು ವ್ಯವಹಾರವನ್ನೂ ಅವನು ಸೂರ್ಯ ಮತ್ತು ಚಂದ್ರನೇತ್ರಗಳಿಂದ ಅವಲೋಕಿಸುವನು. ಅರ್ಥಾತ್ ನಾವು ಹಗಲು ಮತ್ತು ರಾತ್ರಿಗಳಲ್ಲಿ ಮಾಡುವ ಪ್ರತಿಯೊಂದು ವ್ಯವಹಾರಕ್ಕೆ ಶಿವನು ಸಾಕ್ಷಿಯಾಗಿರುತ್ತಾನೆ ಎಂಬ ಭಾವವು. ಆದ್ದರಿಂದ ಪ್ರತಿಯೊಬ್ಬರೂ ಈ ಎಚ್ಚರಿಕೆಯುಳ್ಳವರಾದರೆ, ಯಾರೂ ದುರ್ವ್ಯವಹಾರಗಳನ್ನು ಮಾಡಲಾರರು.

**ರುದ್ರಾಕ್ಷಗಳ ಪ್ರಭೇದಗಳು :**

ಹೀಗೆ ತ್ರಿನೇತ್ರಧಾರಿಯಾದ ಶ್ರೀ ರುದ್ರನು ತನ್ನ ಸೂರ್ಯ ಹಾಗೂ ಚಂದ್ರ ನೇತ್ರಗಳನ್ನು ಜಗತ್ತಿನ ಪ್ರಕಾಶಕ್ಕಾಗಿ ಸದಾ ತೆರೆದಿಟ್ಟಿದ್ದರೂ, ಅಗ್ನಿನೇತ್ರವನ್ನು ಮಾತ್ರ ಸದಾ ಮುಚ್ಚಿರುತ್ತಾನೆ. ಜಗತ್ತಿನ ಸಂಹಾರಕಾಲದಲ್ಲಿ ಮಾತ್ರ ಅದನ್ನು ತೆರೆಯುವನು. ತ್ರಿಪುರಗಳನ್ನು ದಹನಮಾಡುವ ಸಂದರ್ಭದಲ್ಲಿ ಈ ಮೂರನೇ ಅಗ್ನಿನೇತ್ರವನ್ನೂ ಪರಮಾತ್ಮನು ತೆರೆದ ಕಾರಣ, ಈ ಮೂರೂ ನೇತ್ರಗಳಿಂದ ಜಲಬಿಂದುಗಳು ಭೂಮಿಗೆ ಬಿದ್ದು, ಅವುಗಳಿಂದಲೇ ರುದ್ರಾಕ್ಷ ವೃಕ್ಷಗಳಾದವೆಂಬ ಕಥೆಯನ್ನು ಈ ಪೂರ್ವದಲ್ಲಿ ಆಲಿಸಿದ್ದೇವೆ.

''ಅಷ್ಟತ್ರಿಂಶತ್ಪ್ರಭೇದೇನ ಭವಂತ್ಯುತ್ಪತ್ತಿಭೇದತಃ'' ಎಂಬ ಪೂಜ್ಯಪಾದರ ಉಪದೇಶದಂತೆ ಶ್ರೀ ರುದ್ರಾಕ್ಷಗಳು ಮೂವತ್ತೆಂಟು ಪ್ರಕಾರಗಳಾಗಿರುತ್ತವೆ. ಇವುಗಳಲ್ಲಿ ಶಿವನ ಸೂರ್ಯರೂಪ ನೇತ್ರದಿಂದ ಕಪಿಲ ಬಣ್ಣದ ಹನ್ನೆರಡು, ಚಂದ್ರರೂಪ ನೇತ್ರದಿಂದ ಬಿಳಿಯ ಬಣ್ಣದ ಹದಿನಾರು ಮತ್ತು ಅಗ್ನಿರೂಪ ನೇತ್ರದಿಂದ ಕಪ್ಪು ಬಣ್ಣದ ಹತ್ತು–ಹೀಗೆ ಒಟ್ಟು ಮೂವತ್ತೆಂಟು ತರಹದ ರುದ್ರಾಕ್ಷಗಳು ಉತ್ಪನ್ನಗಳಾಗಿವೆ.

ಶಿವನ ಸೂರ್ಯ ನೇತ್ರ, ಹಾಗೂ ತಜ್ಜನ್ಯ ರುದ್ರಾಕ್ಷ್ಯಗಳು :

''ನೇತ್ರಾತ್ ಸೂರ್ಯಾತ್ಮನಃ ಶಂಭೋಃ ಕಪಿಲಾ ದ್ವಾದಶೋದಿತಾಃ'' ಎಂಬ ಶ್ರೀ ಜಗದ್ಗುರು ರೇಣುಕರ ಉಪದೇಶದಂತೆ, ಶಿವನ ಸೂರ್ಯನೇತ್ರದಿಂದ ಕಪಿಲ ವರ್ಣದ ಹನ್ನೆರಡು ಪ್ರಕಾರದ ರುದ್ರಾಕ್ಷಗಳು ಉತ್ಪನ್ನಗಳಾದವೆಂಬುದು ತಿಳಿದುಬರುತ್ತದೆ. ಸೂರ್ಯನೇತ್ರದಿಂದ ಹನ್ನೆರಡೇ ವಿಧಗಳಾದ ರುದ್ರಾಕ್ಷಗಳಾಗಲು ಕಾರಣವೇನೆಂಬುದನ್ನು ವಿಚಾರಿಸೋಣ–

''ಸರತಿ ಆಕಾಶೇ ಇತಿ, ಯದ್ವಾ ಸುವತಿ-ಕರ್ಮಣಿ ಲೋಕಂ ಪ್ರೇರಯತಿ ಇತಿ ಸೂರ್ಯಃ'' ಎಂಬ ವ್ಯುತ್ಪತ್ತಿಯ ಮೇರೆಗೆ, ''ಸೃ-ಗತೌ, ಸೂ ಪ್ರೇರಣೇ ವಾ''–''ಸೃ'' ಎಂಬ ಗತ್ಯರ್ಥಕ ಅಥವಾ ''ಸೂ'' ಎಂಬ ಪ್ರೇರಣಾರ್ಥಕ ಧಾತುವಿನಿಂದ ''ಸೂರ್ಯ'' ಶಬ್ದವು ನಿಷ್ಪನ್ನವಾಗಿದೆ. ಆಕಾಶದಲ್ಲಿ ಸಂಚರಿಸುವದರಿಂದ ಅಥವಾ ತಾನು ಉದಿತನಾಗಿ ಜೀವಿಗಳನ್ನು ತಮ್ಮ ತಮ್ಮ ಕರ್ಮಗಳಲ್ಲಿ ಪ್ರೇರೇಪಿಸುವುದರಿಂದ, ಆತನನ್ನು ಸೂರ್ಯನೆಂದು ಕರೆಯಲಾಗಿದೆ. ಸೂರ್ಯೋದಯವಾದೊಡನೆ ಜೀವರಾಶಿಗಳೆಲ್ಲ ಎಚ್ಚರಗೊಂಡು ತಮ್ಮ ತಮ್ಮ ವ್ಯವಹಾರದಲ್ಲಿ ತೊಡಗುವುದರಿಂದ, 'ಕರ್ಮ ಪ್ರೇರಕನು' ಎಂಬ ಅರ್ಥವು ಸೂರ್ಯನಿಗೆ ಸಮಂಜಸವಾಗಿ ತೋರುತ್ತದೆ. ಅಂತೆಯೇ ''ಲೋಕದ ಚೇಷ್ಟೆಗೆ ರವಿ ಬೀಜವಾದಂತೆ'' ಎಂಬುದಾಗಿ ಅಕ್ಕಮಹಾದೇವಿಯು ನುಡಿದದ್ದುಂಟು.

ಕೋಶಗಳಲ್ಲಿ ಸೂರ್ಯನಿಗೆ ಅನೇಕ ನಾಮಗಳಿವೆ. ಅವುಗಳಲ್ಲಿ ''ಅಂದ್ವಾದಶಾತ್ಮಾ'' ಎಂಬುದೊಂದು ಪ್ರಸಿದ್ಧನಾಮವಿದೆ. ''ದ್ವಾದಶ ಆತ್ಮಾನೋ ಮೂರ್ತಯಃ ಯಸ್ಯ ಸಃ ದ್ವಾದಶಾತ್ಮಾ'' ಅಂದರೆ ಈತನು ಹನ್ನೆರಡು ಮೂರ್ತಿ ಅಥವಾ ಹನ್ನೆರಡು ಕಲೆಗಳಿಂದ ಕೂಡಿಸುವುದರಿಂದ, ಇವನನ್ನು ''ದ್ವಾದಶಾತ್ಮಾ'' ಎಂದು ಕರೆಯಲಾಗಿದೆ. ಅಂತೆಯೇ ಯೋಗಶಾಸ್ತ್ರದ ''ಸೂರ್ಯನಮಸ್ಕಾರ''ವೆಂಬ ಆಸನದಲ್ಲಿ ಸೂರ್ಯನ ಒಂದೊಂದು ಮೂರ್ತಿಗೆ ಒಂದೊಂದರಂತೆ ಹನ್ನೆರಡು ನಮಸ್ಕಾರದ ವಿಧಾನಗಳು ಪ್ರತಿಪಾದಿತಗಳಾಗಿವೆ. ಶ್ರೀ ನಗೇಂದ್ರನಾಥ ಮತ್ತು ವಿಶ್ವನಾಥವಾಸು ಎಂಬುವರು ಹಿಂದೀ ವಿಶ್ವಕೋಶದಲ್ಲಿ– (೧) ವಿಸ್ಪಷ್ಟಾ, (೨) ಪರಮಾ, (೩) ವಿದ್ಯಾ, (೪) ಜ್ಯೋತಿರ್ಭಾ (೫) ಶಾಶ್ವತೀ, (೬) ಸ್ಫುಟಾ, (೭) ಕೈವಲ್ಯ, (೮) ಜ್ಞಾನ, (೯) ಅವಿರ್ಭೂ, (೧೦) ಪ್ರಕಾಮ್ಯ, (೧೧) ಸಂಬಿತ್ ಮತ್ತು (೧೨) ಬೋಧ ಅಥವಾ ಅವಗತಿ (ಭಾಗ ೨೪, ಪುಟ ೪೦೪–೪೦೫) ಎಂಬುದಾಗಿ ಸೂರ್ಯನ ಹನ್ನೆರಡು ಸ್ವರೂಪಗಳ ಹನ್ನೆರಡು ನಾಮಗಳನ್ನು ಉಲ್ಲೇಖಿಸಿದ್ದಾರೆ.

ಹೀಗೆ ಪರಮಾತ್ಮನ ಸೂರ್ಯನೇತ್ರದ ಹನ್ನೆರಡು ಮೂರ್ತಿಗಳಿಂದ ಒಂದೊಂದ ರಂತೆ ಹನ್ನೆರಡು ಪ್ರಕಾರದ ಕಪಿಲ ವರ್ಣದ ರುದ್ರಾಕ್ಷಗಳು ಉತ್ಪನ್ನಗಳಾದವೆಂಬು ದಾಗಿ ತಿಳಿಯಬೇಕು.

ಸಿದ್ಧಾಂತ ಶಿಖಾಮಣಿಯ ಸಂಸ್ಕೃತ ವ್ಯಾಖ್ಯಾನಕಾರರಾದ ಶ್ರೀ ಮರಿ ತೋಂಟದಾರ್ಯರಾದರೂ ''ಸೂರ್ಯನೇತ್ರಸ್ಯ ತಾಪಿನ್ಯಾದಿದ್ವಾದಶಃ ಕಲಾತ್ಮಕತ್ವಾತ್'' ಎಂಬುದಾಗಿ ಹೇಳಿ, ಸೂರ್ಯನು ದ್ವಾದಶಾತ್ಮನಾಗಿರುವುದರಿಂದಲೇ, ಅವನಿಂದ ದ್ವಾದಶ (ಹನ್ನೆರಡು) ವಿಧ ರುದ್ರಾಕ್ಷಗಳು ಉತ್ಪನ್ನಗಳಾಗಿವೆ ಎಂದು ಸಮರ್ಥಿಸಿದ್ದಾರೆ.

**ಶಿವನ ಸೋಮನೇತ್ರ, ಹಾಗೂ ತಜ್ಜನ್ಯ ರುದ್ರಾಕ್ಷಗಳು :**

''ಶ್ವೇತಾ ಷೋಡಶ ಸಂಜಾತಾಃ ಸೋಮರೂಪಾದ್ವಿಲೋಚನಾತ್'' ಎಂಬ ಪೂಜ್ಯರ ಉಪದೇಶದಂತೆ, ಶಿವನ ಸೋಮನೇತ್ರದಿಂದ ಬಿಳಿ ಬಣ್ಣದ ಹದಿನಾರು ತರಹದ ರುದ್ರಾಕ್ಷಗಳು ಉತ್ಪನ್ನಗಳಾದವೆಂಬುದಾಗಿ ತಿಳಿಯುವದು. ಇಲ್ಲಿ ಹದಿನಾರು ಪ್ರಕಾರ ವೇಕೆ ? ಎಂಬುದನ್ನು ಪರ್ಯಾಲೋಚಿಸೋಣ– ''ಸೂತೇ ಅಮೃತಂ ಇತಿ ಸೋಮಃ'' ಎಂಬ ವ್ಯುತ್ಪತ್ತಿಯ ಮೇರೆಗೆ ಅಮೃತಪ್ರಾಯವಾದ ಬೆಳದಿಂಗಳನ್ನು ಸುರಿಸುವುದರಿಂದ ಚಂದ್ರನಿಗೆ ''ಸೋಮ''ನೆಂಬ ನಾಮವು ಪ್ರಾಪ್ತವಾಗಿದೆ.

ಶ್ರೀ ಅಮರಸಿಂಹನು ಚಂದ್ರನಿಗೆ–ಹಿಮಾಂಶು, ಚಂದ್ರಮಾ, ಚಂದ್ರ, ನಿಶಾಪತಿ, ಸೋಮ, ಕಲಾನಿಧಿ ಮೊದಲಾದ ಇಪ್ಪತ್ತು ಪರ್ಯಾಯ ನಾಮಗಳನ್ನು ಬರೆದಿದ್ದಾನೆ. ಇವುಗಳಲ್ಲಿ ''ಕಲಾನಿಧಿ'' ಎಂಬ ಹೆಸರು ನಮ್ಮ ಪ್ರಕೃತ ಸಂದರ್ಭಕ್ಕೆ ಉಪಯುಕ್ತವಾಗಿದೆ. ''ಕಲಾಃ ನಿಧೀಯಂತೇ ಅತ್ರ ಇತಿ ಕಲಾನಿಧಿಃ'' ಎಂಬ ವ್ಯುತ್ಪತ್ತಿಯ ಮೇರೆಗೆ, 'ಅಂಶಗಳ ಭಂಡಾರ' ಎಂಬ ಅರ್ಥವಾಗುವುದು. ಚಂದ್ರನಲ್ಲಿ ಹದಿನಾರು ಅಂಶಗಳು ಅಥವಾ ಕಲೆಗಳು ಇವೆ ಎಂಬುದು ಸುಪ್ರಸಿದ್ಧವಾಗಿದೆ. ಅಮಾವಾಸ್ಯೆಯ ದಿವಸ ಸಂಪೂರ್ಣ ಕಲಾಹಿನನಾದ ಚಂದ್ರನು ಶುಕ್ಲಪಕ್ಷದ ಪ್ರತಿಪದೆಯಿಂದ ಒಂದೊಂದು ಕಲೆಯಂತೆ ಬೆಳೆಯುತ್ತ ಪೂರ್ಣಿಮೆಯ ದಿವಸ ಪೂರ್ಣ ಕಲಾಭರಿತನಾಗು ವುದನ್ನು ನಾವೆಲ್ಲ ಪ್ರತ್ಯಕ್ಷವಾಗಿ ನೋಡುತ್ತೇವೆ.

ಹಿಂದೀ ವಿಶ್ವಕೋಶದಲ್ಲಿ– (೧) ಪೂಷಾ (೨) ಯಶಾ, (೩) ಸುಮನಸಾ, (೪) ರತಿ, (೫) ಪ್ರಾಪ್ತಿ, (೬) ಧೃತಿ, (೭) ಋದ್ಧಿ (೮) ಸೌಮ್ಯಾ, (೯) ಮರೀಚಿ, (೧೦) ಅಂಶುಮಾಲಿನೀ, (೧೧) ಅಂಗಿರಾ, (೧೨) ಶಶಿನೀ, (೧೩) ಛಾಯಾ, (೧೪) ಸಂಪೂರ್ಣ ಮಂಡಲಾ, (೧೫) ತುಷ್ಟಿ ಮತ್ತು (೧೬) ಅಮೃತಾ (ಭಾಗ–೭, ಪುಟ, ೧೪೬–೧೪೭) ಈ ರೀತಿಯಾಗಿ ಚಂದ್ರನ ಹದಿನಾರು ಕಲೆಗಳು ಪ್ರತಿಪಾದಿಸಲ್ಪಟ್ಟಿವೆ.

ಈ ಎಲ್ಲ ಕಲೆಗಳೂ ತಿಥಿಯ ಭೇದದಿಂದ ಸ್ತ್ರೀಯರ ವಿಭಿನ್ನ ಅಂಗಗಳಲ್ಲಿ ಇರುವ ವೆಂಬುದಾಗಿ ಕಾಮಶಾಸ್ತ್ರದಲ್ಲಿ ನಿರೂಪಿಸಲಾಗಿದೆ. ಈ ಷೋಡಶ ಕಲೆಗಳಿಂದ ಕೂಡಿ ಸ್ಫುರದ್ರೂಪಿಯಾದ ಚಂದ್ರನು ನೋಡಲು ಅತ್ಯಂತ ಆಕರ್ಷಣೀಯನಾಗಿದ್ದನು. ದೇವತೆಗಳ ಗುರುವಾದ ಬೃಹಸ್ಪತಿಯ ಹತ್ತಿರ ಈತನು ಅಭ್ಯಾಸ ಮಾಡುವಾಗ ಬೃಹಸ್ಪತಿಯ ಪತ್ನಿಯಾದ ''ತಾರಾ''ದೇವಿಯು ಈತನಲ್ಲಿ ಅನುರಕ್ತಳಾದಳು. ಅವಳ

ಅನುರಾಗಕ್ಕೊಳಗಾದ ಚಂದ್ರನು ಗುರು ಭಾರ್ಯಾತಲ್ಪಗಮನವನ್ನು ಮಾಡುತ್ತಾನೆ. ಇದನ್ನು ತಿಳಿದ ಬೃಹಸ್ಪತಿಯು ''ಯಾವ ಕಲೆಗಳ ಕಾರಣದಿಂದ ನನ್ನ ಹೆಂಡತಿಯ ಪಾತಿವ್ರತ್ಯವನ್ನು ಭಂಗ ಮಾಡಿರುವೆಯೋ, ಆ ಕಲೆಗಳೆಲ್ಲ ನಶಿಸಿ ಹೋಗಲಿ'' ಎಂಬುದಾಗಿ ಶಾಪವನ್ನಿತ್ತನು. ಗುರುಶಾಪಗ್ರಸ್ತನಾದ ಚಂದ್ರನ ಕಲೆಗಳು ದಿನ ದಿನಕ್ಕೆ ಕ್ಷೀಣವಾಗುತ್ತ ಹದಿನೈದು ಕಲೆಗಳೆಲ್ಲ ನಷ್ಟವಾದವು. ಇನ್ನು ಉಳಿದೊಂದು ಕಲೆಯು ನಷ್ಟವಾದರೆ ತಾನು ಸರ್ವನಾಶವಾಗುವೆನೆಂಬ ಭಯದಿಂದ ಚಂದ್ರನು ಶಿವನಿಗೆ ಶರಣಾಗತನಾದನು. ಲೋಕಕಲ್ಯಾಣಾರ್ಥವಾಗಿ ಆ ಉಳಿದೊಂದು ಕಲೆಯನ್ನು ಶಿವನು ತನ್ನ ಜಡೆಯಲ್ಲಿ ಧರಿಸಿ ಅದನ್ನು ಅಮೃತರೂಪವನ್ನಾಗಿ ಮಾಡಿದನು. ಅಂತೆಯೇ ಚಂದ್ರನ್ನ ಹದಿನಾರನೆಯ ಕಲೆಗೆ ''ಅಮೃತಕಲಾ'' ಎಂಬ ಹೆಸರು ಬಂದಿತು. ಇದುವೇ ಶಿವನ ಚಂದ್ರಧರ ಲೀಲೆಯು.

ಪರಮಾತ್ಮನ ಅನುಗ್ರಹದಿಂದ ಉಳಿದ ಅಮೃತ ಕಲೆಯಿಂದಲೇ ಚಂದ್ರನು ಬೆಳೆಯತೊಡಗಿದನು. ಆದರೂ ಗುರುವಿನ ಶಾಪವು ಅಮೋಘವಾದದ್ದರಿಂದ ಪುನಃ ಕ್ಷಯಿಸತೊಡಗಿದನು. ಹೀಗೆ ಶುಕ್ಲ ಪಕ್ಷದಲ್ಲಿ ವೃದ್ಧಿ ಹಾಗೂ ಕೃಷ್ಣ ಪಕ್ಷದಲ್ಲಿ ಕ್ಷಯವು ಅನಾದಿಕಾಲದಿಂದ ನಡೆದಿದೆ ಎಂಬ ಪೌರಾಣಿಕ ಕಥೆಯುಂಟು.

ಈ ರೀತಿಯಾಗಿ ಪರಮಾತ್ಮನ ನೇತ್ರರೂಪನಾದ ಚಂದ್ರನು ಹದಿನಾರು ಕಲೆಗಳಿಂದ ಯುಕ್ತನಾಗಿರೋಣದರಿಂದ ಮತ್ತು ಚಂದ್ರನು ಶುಭ್ರನಾಗಿರುವುದರಿಂದ; ಒಂದೊಂದು ಕಲೆಗೆ ಒಂದೊಂದು ರುದ್ರಾಕ್ಷದಂತೆ, ಬಿಳಿ ಬಣ್ಣದ ಹದಿನಾರು ರುದ್ರಾಕ್ಷಗಳು ಶಿವನ ಸೋಮನೇತ್ರದಿಂದ ಉತ್ಪನ್ನಗಳಾದವೆಂಬುದಾಗಿ ಭಾವಿಸಬೇಕು. ಇದೇ ಮಾತನ್ನೇ ಶ್ರೀ ಮರಿತೋಂಟದಾರ್ಯರು– ''ತನ್ನೇತ್ರಸ್ಯ ಅಮೃತಾದಿ ಷೋಡಶಕಲಾತ್ಮಕತ್ವಾತ್'' ಎಂಬುದಾಗಿ ಸಮರ್ಥಿಸಿದ್ದಾರೆ.

ಶಿವನ ವಹ್ನಿ ನೇತ್ರ ಹಾಗೂ ತಜ್ಜನ್ಯ ರುದ್ರಾಕ್ಷಗಳು :

''ಕೃಷ್ಣಾ ದಶವಿಧಾ ಜಾತಾ ವಹ್ನಿ ರೂಪಾದ್ವಿಲೋಚನಾತ್'' ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ, ಶಿವನ ವಹ್ನಿನೇತ್ರದಿಂದ ಕಪ್ಪು ಬಣ್ಣದ ಹತ್ತು ಪ್ರಕಾರದ ರುದ್ರಾಕ್ಷಗಳು ಉತ್ಪನ್ನಗಳಾಗಿವೆ ಎಂಬುದು ತಿಳಿದುಬರುವುದು. ''ವಹತಿ ಹವ್ಯಂ ಇತಿ ವಹ್ನಿಃ'' ಎಂಬ ವ್ಯುತ್ಪತ್ತಿಯ ಮೇರೆಗೆ, ದೇವತೆಗಳನ್ನುದ್ದೇಶಿಸಿ ಕೊಡಲ್ಪಟ್ಟ ಹವಿರ್ಭಾಗವನ್ನು ಆಯಾ ದೇವತೆಗಳಿಗೆ ಮುಟ್ಟಿಸೋಣದರಿಂದ, ಅಗ್ನಿಗೆ ''ವಹ್ನಿ'' ಎಂಬ ಹೆಸರು ಪ್ರಾಪ್ತವಾಗಿದೆ.

ಶ್ರೀ ಅಮರಸಿಂಹನು ಅಗ್ನಿ, ವೈಶ್ವಾನರ, ವಹ್ನಿ, ವೀತಿಹೋತ್ರ ಮೊದಲಾದ ಅಗ್ನಿಯ ಮೂವತ್ತುನಾಲ್ಕು ಪರ್ಯಾಯ ನಾಮಗಳನ್ನು ಬರೆದಿದ್ದಾನೆ. ಈ ವಹ್ನಿಗೆ–

(೧) ಧೂಮ್ರ, (೨) ಅರ್ಚಿ, (೩) ಊಷ್ಮಾ, (೪) ಜಲಿನೀ, (೫) ಜ್ವಾಲಿನೀ, (೬) ವಿಸ್ಫುಲಿಂಗಿನೀ, (೭) ಸುಶ್ರೀಃ, (೮) ಸುರೂಪಾ, (೯) ಕಪಿಲಾ ಮತ್ತು (೧೦) ಹವ್ಯಕವ್ಯವಹಾ ಎಂಬ ಹತ್ತು ಅವಯವಗಳು ಅಥವಾ ಕಲೆಗಳಿರುತ್ತವೆ ಎಂಬುದಾಗಿ ಹಿಂದೀ ವಿಶ್ವಕೋಶದಲ್ಲಿ ಪ್ರತಿಪಾದಿಸಲಾಗಿದೆ. (ನೋಡಿರಿ ಭಾಗ–೧, ಪುಟ ೧೦೭)

ಶ್ರೀ ಮರಿತೋಂಟದಾರ್ಯರಾದರೂ–''ತನ್ನೇತ್ರಸ್ಯ ಧೂರ್ಮಾರ್ಚಿಃಪ್ರಭೃತಿ ದಶ ಕಲಾತ್ಮಕತ್ವಾತ್'' ಎಂಬುದಾಗಿ ಅಗ್ನಿಯ ಹತ್ತು ಕಲೆಗಳನ್ನು ನಿರೂಪಿಸಿರುವರು.

ಶಿವನ ಈ ವಹ್ನಿನೇತ್ರವು ಈ ಹತ್ತು ಕಲೆಗಳಿಂದ ಕೂಡಿಕೊಂಡಿರುವುದರಿಂದ ಒಂದೊಂದರಂತೆ ಕಪ್ಪು ಬಣ್ಣದ ಹತ್ತು ಪ್ರಕಾರದ ರುದ್ರಾಕ್ಷಗಳು ಉತ್ಪನ್ನಗಳಾದವು. ಈ ರೀತಿಯಾಗಿ ಉತ್ಪತ್ತಿಯ ಭೇದದಿಂದ ರುದ್ರಾಕ್ಷಗಳು ಮೂವತ್ತೆಂಟು ಪ್ರಕಾರಗಳಾಗಿವೆ ಎಂಬುದಾಗಿ ಪೂಜ್ಯರು ರುದ್ರಾಕ್ಷಗಳ ಪ್ರಭೇದವನ್ನು ಪ್ರತಿಪಾದಿಸಿದ್ದಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧ ಸೆಪ್ಟೆಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ ಸೋಲಾಪೂರ)



ಅಚ್ಛಿದ್ರಂ ಕನಕಪ್ರಖ್ಯಮನನ್ಯಧೃತಮುತ್ತಮಮ್ ।
ರುದ್ರಾಕ್ಷಂ ಧಾರಯೇತ್ ಪ್ರಾಜ್ಞಃ ಶಿವಪೂಜಾಪರಾಯಣಃ ॥ ೮ ॥

ಹುಳಮುಟ್ಟಿ ತೂತು ಬೀಳದಿರುವ, ಬಂಗಾರದ ಕಾಂತಿಯಂತೆ ಕಾಂತಿಯುಳ್ಳ, ಬೇರೆ ಯವರು ಧರಿಸದೇ ಇರುವ ಅರ್ಥಾತ್ ಹೊಸದಾದ, ರುದ್ರಾಕ್ಷವು ಶ್ರೇಷ್ಠವಾದದ್ದು. ಶಿವಪೂಜಾ ತತ್ಪರನಾದ ಬುದ್ಧಿವಂತನು ಅಂತಹ ಹೊಸ ರುದ್ರಾಕ್ಷವನ್ನೇ ಧರಿಸಬೇಕು.

ಯಥಾಸ್ಥಾನಂ ಯತಾವಕ್ತ್ರಂ ಯಥಾಯೋಗಂ ಯಥಾವಿಧಿ ।
ರುದ್ರಾಕ್ಷಧಾರಣಂ ವಕ್ಷ್ಯೇ ರುದ್ರಸಾಯುಜ್ಯಸಿದ್ಧಯೇ ॥ ೯ ॥

ಶಿವಸಾಯುಜ್ಯರೂಪ ಮುಕ್ತಿಯ ಪ್ರಾಪ್ತಿಗಾಗಿ ಯಾವ ಯಾವ ಸ್ಥಾನದಲ್ಲಿ ಎಷ್ಟೆಷ್ಟು ಮುಖದ ಎಷ್ಟೆಷ್ಟು ರುದ್ರಾಕ್ಷಗಳನ್ನು ಧರಿಸಬೇಕೆಂಬುದರ ಬಗ್ಗೆ ವಿಧಿಗನುಸಾರವಾಗಿ ಹೇಳುತ್ತೇನೆ ಚಿತ್ತವಿಟ್ಟು ಆಲಿಸು.

ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ ।
ದ್ವಿ–ತ್ರಿ–ದ್ವಾದಶವಕ್ತ್ರಾಣಿ ಶಿರಸಿ ತ್ರೀಣಿ ಧಾರಯೇತ್ ॥ ೧೦ ॥

ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿ ನಿತ್ಯಮೇಕಾದಶಾನನಾನ್ ।
ದಶಸಪ್ತಪಂಚವಕ್ತ್ರಾನ್ ಷಟ್ ಷಟ್ ಕರ್ಣದ್ವಯೇ ವಹೇತ್ ॥ ೧೧ ॥

ಷಡಷ್ಟವದನಾನ್ ಕಂಠೇ ದ್ವಾತ್ರಿಂಶದ್ಧಾರಯೇತದಾ ।
ಪಂಚಾಶದ್ಧಾರಯೇದ್ವಿದ್ವಾನ್ ಚತುರ್ವಕ್ತ್ರಾಣಿ ವಕ್ಷಸಿ ॥ ೧೨ ॥

ತ್ರಯೋದಶಮುಖಾನ್ಬಾಹ್ವೋರ್ಧರೇತ್ ಷೋಡಶ ಷೋಡಶ ।
ಪ್ರತ್ಯೇಕಂ ದ್ವಾದಶ ವಹೇನ್ನ ವಾಸ್ಯಾನ್ಮಣಿಬಂಧಯೋಃ ॥ ೧೩ ॥

ಚತುರ್ದಶಮುಖಂ ಯಜ್ಞಸೂತ್ರಮಷ್ಟೋತ್ತರಂ ಶತಂ ।
ಧಾರಯೇತ್ ಸರ್ವಕಾಲಂ ತು ರುದ್ರಾಕ್ಷಂ ಶಿವಪೂಜಕಃ ॥ ೧೪ ॥

ಒಂದು ಮುಖದ ಒಂದು ರುದ್ರಾಕ್ಷವನ್ನು ಶಿಖಾಸ್ಥಾನದಲ್ಲಿ, ಎರಡು, ಮೂರು ಮತ್ತು ಹನ್ನೆರಡು ಮುಖಗಳುಳ್ಳ, ಒಂದೊಂದರಂತೆ ಮೂರು ರುದ್ರಾಕ್ಷಗಳನ್ನು ತಲೆಯ ಮೇಲೆ, ಹನ್ನೊಂದು ಮುಖದ ಮೂವತ್ತಾರು ರುದ್ರಾಕ್ಷಗಳನ್ನು ತಲೆಯ ಮೇಲೆ ನೆತ್ತಿಯ ಸುತ್ತಲೂ ಧರಿಸಬೇಕು. ಅದರಂತೆ ಹತ್ತು, ಏಳು ಮತ್ತು ಐದು ಮುಖದ ಎರಡೆರಡು ರುದ್ರಾಕ್ಷ ಗಳಂತೆ ಪ್ರತಿಯೊಂದು ಕಿವಿಯಲ್ಲಿ ಆರಾರು ರುದ್ರಾಕ್ಷಗಳನ್ನು ಧಾರಣಮಾಡಿಕೊಳ್ಳ ಬೇಕು. ಇದೇ ಪ್ರಕಾರ ಆರು ಮತ್ತು ಎಂಟು ಮುಖದ ಹದಿನಾರು, ಹದಿನಾರರಂತೆ ಒಟ್ಟು ಮೂವತ್ತೆರಡು ರುದ್ರಾಕ್ಷಗಳ ಕಂಠಮಾಲೆಯನ್ನು ಕೊರಳಲ್ಲಿ ಧರಿಸಬೇಕು. ನಾಲ್ಕು ಮುಖದ ಐವತ್ತು ರುದ್ರಾಕ್ಷಗಳನ್ನು ಎದೆಯ ಮೇಲೆ ಧರಿಸಬೇಕು. ಹದಿಮೂರು

ಮುಖದ ಹದಿನಾರು–ಹದಿನಾರು ರುದ್ರಾಕ್ಷಗಳನ್ನು ಎರಡೂ ರಟ್ಟೆಗಳಲ್ಲಿ ಧಾರಣ ಮಾಡಬೇಕು. ಒಂಭತ್ತು ಮುಖಗಳುಳ್ಳ ಹನ್ನೆರಡು–ಹನ್ನೆರಡು ರುದ್ರಾಕ್ಷಗಳನ್ನು ಎರಡೂ ಮುಂಗೈಗಳಲ್ಲಿ ಧರಿಸಬೇಕು. ಹದಿನಾಲ್ಕು ಮುಖದ ಒಂದು ನೂರಾ ಎಂಟು ರುದ್ರಾಕ್ಷಗಳ ಒಂದು ಯಜ್ಞೋಪವೀತವನ್ನು ಧಾರಣ ಮಾಡಬೇಕು. ಶಿವಪೂಜಾತತ್ಪರ ನಾದ ಶಿವಭಕ್ತನು ಪ್ರತಿದಿವಸ ಈ ಶಾಸ್ತ್ರೋಕ್ತ ವಿಧಿಯಂತೆ ರುದ್ರಾಕ್ಷಗಳನ್ನು ಧರಿಸಬೇಕು.

**ಉತ್ತಮ ರುದ್ರಾಕ್ಷದ ಪರೀಕ್ಷೆ :**

ಶಿವಪೂಜಾ ಪರಾಯಣನಾದವನು ಸುಪರೀಕ್ಷಿತಗಳಾದ ಉತ್ತಮ ರುದ್ರಾಕ್ಷಗಳನ್ನೇ ಧರಿಸಬೇಕೆಂಬುದಾಗಿ ತಿಳಿಯಪಡಿಸಲುದ್ಯುಕ್ತರಾದ ಶ್ರೀ ಜಗದ್ಗುರು ರೇಣುಕರು– ''ಅಚ್ಛಿದ್ರಂ ಕನಕಪ್ರಖ್ಯಮನನ್ಯಧೃತಮುತ್ತಮಂ'' ಎಂಬುದಾಗಿ ಉತ್ತಮ ರುದ್ರಾಕ್ಷದ ಲಕ್ಷಣ ವನ್ನು ನಿರೂಪಿಸಿದ್ದಾರೆ. ಪೂಜ್ಯರ ಉಪದೇಶದಂತೆ– ಹುಳುಕಡಿದು ತೂತು ಬೀಳ ದಿರುವ, ಒರೆಗಲ್ಲಿಗೆ ತಿಕ್ಕಿದಾಗ ಬಂಗಾರದ ರೇಖೆಯಂತೆ ರೇಖೆಬೀಳುವ ಮತ್ತು ಬೇರೊಬ್ಬರು ಧರಿಸದಿರುವ ಹೊಸ ರುದ್ರಾಕ್ಷಗಳೇ ಉತ್ತಮಗಳಾದವುಗಳು. ಅಂತಹ ರುದ್ರಾಕ್ಷಗಳನ್ನೇ ಧಾರಣಮಾಡಬೇಕು.

ಮನುಷ್ಯನ ಒಳ್ಳೆಯ ಹಾಗೂ ಕೆಟ್ಟ ಸಂಸ್ಕಾರಗಳ ಪ್ರಭಾವವು ಅವನು ಬಳಸುವ ವಸ್ತುಗಳ ಮೇಲೆಯೂ ಬೀಳುವುದೆಂಬ ಮಾತು ಶಾಸ್ತ್ರ ಸಮ್ಮತವೂ, ವೈಜ್ಞಾನಿಕವೂ ಆಗಿದೆ. ಅಂತೆಯೇ ನಮಗೆ ಪೂಜ್ಯರೂ, ನಮಗಿಂತ ಉತ್ಕೃಷ್ಟ ಸಂಸ್ಕಾರವುಳ್ಳವರೂ ಆದ ಗುರು–ಹಿರಿಯರು ಉಪಯೋಗಿಸಿದ ರುದ್ರಾಕ್ಷಗಳನ್ನು ಉಪಯೋಗಿಸಬಹುದೇ ವಿನಹ, ನಮಗಿಂತಲೂ ಹೀನ ಸಂಸ್ಕಾರಿಗಳು ಧರಿಸಿದ ರುದ್ರಾಕ್ಷಗಳನ್ನು ಧರಿಸಬಾರದು. ಅಂತೆಯೇ ಯಾರೂ ಧರಿಸದ ಹೊಸ ರುದ್ರಾಕ್ಷಗಳನ್ನೇ ಧರಿಸಬೇಕೆಂಬುದಾಗಿ ಶ್ರೀ ರೇಣುಕರು ಆದೇಶವಿತ್ತಿದ್ದಾರೆ.

> ತಾಮ್ರಾಃ ಸ್ನಿಗ್ಧಾ ದೃಢಾ ಸ್ಥೂಲಾಃ ಕಂಟಕೈಃ ಸಹಿತಾಃ ಶುಭಾಃ ।
> ಕ್ರಿಮಿದಷ್ಟಂ ಛಿನ್ನ ಭಿನ್ನಂ ಕಂಟಕೈರ್ಹೀನಮೇವ ಚ ॥
> ವ್ರಣಯುಕ್ತಮಯುಕ್ತಂ ಚ ಷಡ್ರುದ್ರಾಕ್ಷಾನ್ ವಿವರ್ಜಯೇತ್ ।

(ಶಿವಮಹಾ ಪು. ವಿ. ಸಂ. ೨೩/೨೧,೨೨ ; ಕ್ರಿಯಾಸಾರ ೯/೧೧–೧೩
ವೀರಶೈವಾನಂದಚಂದ್ರಿಕಾ ವಾ. ಕಾಂಡ ಪುಟ ೧೫೮–೧೫೯)

ಅಂದರೆ–ತಾಮ್ರವರ್ಣದ, ನುಣುಪಾದ, ಗಟ್ಟಿಯಾಗಿರುವ, ದಪ್ಪಗಾತ್ರದ, ಏಣು ಗಳಿಂದ ಕೂಡಿದ ರುದ್ರಾಕ್ಷಗಳು ಶುಭವಾದವುಗಳು ಅರ್ಥಾತ್ ಧರಿಸಲು ಯೋಗ್ಯ ವಾಗಿರುತ್ತವೆ. ಆದರೆ ಹುಳುಹತ್ತಿದ, ಒಡೆದ, ಏಣುಗಳಿಲ್ಲದ ಮತ್ತು ಅಂಕು ಡೊಂಕಾಗಿರುವ ರುದ್ರಾಕ್ಷಗಳನ್ನು ಧರಿಸಕೂಡದೆಂಬುದಾಗಿ ಶ್ರೀ ಶಿವಮಹಾಪುರಾಣ, ಕ್ರಿಯಾಸಾರ ಮತ್ತು ವೀರಶೈವಾನಂದ ಚಂದ್ರಿಕಾದಿ ಗ್ರಂಥಗಳಲ್ಲಿ ಯೋಗ್ಯಾಯೋಗ್ಯ ರುದ್ರಾಕ್ಷಗಳ ಲಕ್ಷಣಗಳನ್ನು ತಿಳಿಯಪಡಿಸಿ, ಸುಲಕ್ಷಣವುಳ್ಳ ರುದ್ರಾಕ್ಷಗಳನ್ನೇ ಧರಿಸ ಬೇಕೆಂದು ಉಪದೇಶವಿತ್ತಿದ್ದಾರೆ.

**ರುದ್ರಾಕ್ಷದ ಗಾತ್ರ, ಹಾಗೂ ಧಾರಣೆಯ ಮಹಿಮೆ :**

ಧಾತ್ರೀ ಫಲಪ್ರಮಾಣಂ ಯಚ್ಛ್ರೇಷ್ಠಮೇತದುದಾಹೃತಂ ।
ಬದರೀಫಲಮಾತ್ರಂ ತು ಮಧ್ಯಮಂ ಸಂಪ್ರಕೀರ್ತಿತಂ ॥
ಅಧಮಂ ಚಣಮಾತ್ರಂ ಸ್ಯಾತ್ಪ್ರಕ್ರಿಯೈಷಾ ಪರೋಚ್ಯತೇ ।
(ಶಿವಮಹಾಪುರಾಣ, ವಿ. ಸ. ೨೫ ನೆಯ ಅಧ್ಯಾಯ, ೧೪–೧೫)

ಶಿವಮಹಾಪುರಾಣದ ಶ್ರೀ ವ್ಯಾಸಮಹರ್ಷಿಯ ಈ ಉಕ್ತಿಯಂತೆ ನೆಲ್ಲಿಕಾಯಿ ಗಾತ್ರದ ರುದ್ರಾಕ್ಷಗಳು ಶ್ರೇಷ್ಠವಾದವುಗಳು. ಬದರೀ ಬೀಜದ ಗಾತ್ರದವುಗಳು ಮಧ್ಯಮ ವಾದವುಗಳು ಮತ್ತು ಕಡಲೆಕಾಳಿನ ಗಾತ್ರದ ರುದ್ರಾಕ್ಷಗಳು ಅಧಮಗಳಾಗಿರುತ್ತವೆ. ಆದ್ದರಿಂದ ದೊಡ್ಡ ಗಾತ್ರದ ರುದ್ರಾಕ್ಷಗಳನ್ನು ಧರಿಸುವದು ಅಧಿಕ ಫಲಕಾರಿಯಾದ್ದರಿಂದ ಧಾತ್ರೀಫಲ (ನೆಲ್ಲಿಕಾಯಿ) ಗಾತ್ರದ ರುದ್ರಾಕ್ಷಗಳನ್ನೇ ಧರಿಸಬೇಕೆಂಬುದಾಗಿ ತಿಳಿದು ಬರುತ್ತದೆ. ಇನ್ನು ಅದೇ ವ್ಯಾಸರೇ–

ಯಥಾ ಯಥಾ ಲಘುಃ ಸ್ಯಾದ್ವೈತಥಾಧಿಕಫಲಪ್ರದಃ ।
ಏಕೈಕತಃ ಫಲಂ ಪ್ರೋಕ್ತಂ ದಶಾಂಶೈರಧಿಕಂ ಬುಧೈಃ ॥
(ಶಿವ ಪು. ವಿ. ಸಂ. ೨೫ ನೇ ಅ. ೧೬)

ರುದ್ರಾಕ್ಷದ ಗಾತ್ರವು ಅತಿ ಚಿಕ್ಕದಾದಂತೆ ಹೆಚ್ಚಿನ ಫಲಕಾರಿ ಎಂಬುದಾಗಿಯೂ ಈ ಶ್ಲೋಕದಲ್ಲಿ ತಿಳಿಸಿರುತ್ತಾರೆ. ಅವರ ಉಪದೇಶದ ನಿಷ್ಕರ್ಷವೇನೆಂದರೆ–ಅತೀ ದೊಡ್ಡ ಗಾತ್ರದ ಹಾಗೂ ಅತೀ ಸಣ್ಣ ಗಾತ್ರದ ರುದ್ರಾಕ್ಷಗಳನ್ನು ಧರಿಸಿದ್ದಾದರೆ ಅಧಿಕಾಧಿಕ ಫಲಗಳು ಪ್ರಾಪ್ತವಾಗುತ್ತವೆ. ಕಾರಣ ಪ್ರತಿಯೊಬ್ಬರೂ ಸುಲಕ್ಷಣಗಳಾದ ಅತಿ ದೊಡ್ಡ ಗಾತ್ರದ ಇಲ್ಲವೇ ಅತಿ ಸಣ್ಣ ಗಾತ್ರದ ರುದ್ರಾಕ್ಷಗಳನ್ನು ಧಾರಣಮಾಡಿಕೊಳ್ಳಬೇಕು. ಇಂದಿನ ಕಾಲದಲ್ಲಿ ಈ ಎರಡೂ ಗಾತ್ರದ ರುದ್ರಾಕ್ಷದ ಬೆಲೆಯು ಆಕಾಶದೆತ್ತರಕ್ಕೇರಿದೆ. ಅಷ್ಟೊಂದು ಹಣಕೊಟ್ಟು ಖರೀದಿಸಲು ಅಸಮರ್ಥರಾದವರು ತಮ್ಮ ಯೋಗ್ಯತೆಗೆ ತಕ್ಕಂತೆ ಮಧ್ಯಮ ಗಾತ್ರದ ರುದ್ರಾಕ್ಷಗಳನ್ನಾದರೂ ಧರಿಸಬಹುದು. ಆದರೆ ರುದ್ರಾಕ್ಷ ವನ್ನು ಧರಿಸದೇ ಯಾರೂ ಇರಕೂಡದು. ಯಾಕೆಂದರೆ–

ಶಿವನಾಮ ವಿಭೂತಿಶ್ಚ ತಥಾ ರುದ್ರಾಕ್ಷ ಏವ ಚ ।
ಏತತ್ತ್ರಯಂ ಮಹಾಪುಣ್ಯಂ ತ್ರಿವೇಣಿಸದೃಶಂ ಸ್ಮೃತಂ ॥

ವಿಭೂತಿರ್ಯಸ್ಯ ನೋ ಭಾಲೇ ನಾಂಗೇ ರುದ್ರಾಕ್ಷಧಾರಣಂ ।
ನಾಸ್ಯೇ ಶಿವಮಯೀ ವಾಣೀ ತಂ ತ್ಯಜೇದಧಮಂ ಯಥಾ ॥
(ಶಿವ ಪು. ವಿ. ಸ. ೨೩ ಅಧ್ಯಾಯ ೧೦, ೧೩)

ಶಿವನಾಮ ಉಚ್ಚಾರಣೆ, ವಿಭೂತಿ ಮತ್ತು ರುದ್ರಾಕ್ಷಗಳು ಪುಣ್ಯಪ್ರದವಾದ ತ್ರಿವೇಣೀ ಸಂಗಮವಿದ್ದಂತೆ, ವಿಭೂತಿ–ರುದ್ರಾಕ್ಷಧಾರಿಗಳಾಗಿ ಯಾರು ಶಿವನಾಮ ಸ್ಮರಣೆಯನ್ನು ಮಾಡುವರೋ ಅವರಿಗೆ ತ್ರಿವೇಣಿ ಸಂಗಮದ ಸ್ನಾನದ ಫಲವು ಪ್ರಾಪ್ತವಾಗುವುದು. ಇನ್ನು ಇದಕ್ಕೆ ವಿಪರೀತವಾಗಿ ವಿಭೂತಿ ರುದ್ರಾಕ್ಷಗಳನ್ನು ಧರಿಸದ ಮತ್ತು ಶಿವನಾಮವನ್ನು

ಸ್ಮರಿಸದವನು ಅಂತ್ಯಜನಿದ್ದಂತೆ; ಅವನನ್ನು ಯಾರೂ ಮುಟ್ಟಲೂಬಾರದೆಂಬುದಾಗಿ ಶ್ರೀ ವ್ಯಾಸಮಹರ್ಷಿಗಳು ಶಿವಮಹಾಪುರಾಣದಲ್ಲಿ ಪ್ರತಿಪಾದಿಸಿದ್ದಾರೆ. ಈ ಮಹರ್ಷಿಗಳ ಈ ಮಾರ್ಮಿಕ ವಚನದತ್ತ ಲಕ್ಷ್ಯಕೊಟ್ಟು; ''ರುದ್ರಾಕ್ಷಂ ಧಾರಯೇತ್ ಪ್ರಾಜ್ಞಃ ಶಿವಪೂಜಾ ಪರಾಯಣಃ'' ಎಂದು ಆಚಾರ್ಯೋಪದೇಶವನ್ನು ಅನುಲಕ್ಷಿಸಿ ಶಿವಪೂಜಾ ನಿರತರಾದ ಪ್ರತಿಯೊಬ್ಬರೂ ರುದ್ರಾಕ್ಷವನ್ನು ಧರಿಸಬೇಕು.

**ರುದ್ರಾಕ್ಷದ ಮುಖಗಳು ಮತ್ತು ಅವುಗಳ ಮಹಿಮೆ :**

ರುದ್ರಾಕ್ಷ ಜಾಬಾಲೋಪನಿಷತ್ತು, ಶಿವಮಹಾಪುರಾಣ, ಸಿದ್ಧಾಂತಶಿಖಾಮಣಿ ಕ್ರಿಯಾಸಾರ ಮುಂತಾದ ಸಮಸ್ತ ಪ್ರಾಚೀನ ಸಾಹಿತ್ಯದಲ್ಲಿ ರುದ್ರಾಕ್ಷಗಳಿಗೆ ಒಂದರಿಂದ ಹದಿನಾಲ್ಕರವರೆಗೆ ಮುಖಗಳಿರುವವೆಂಬುದಾಗಿ ನಿರೂಪಿಸಲಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ಎರಡು ಮುಖಗಳಿಂದ ಹದಿನಾಲ್ಕು ಮುಖದವರೆಗಿನ ರುದ್ರಾಕ್ಷಗಳು ದೊರೆಯುತ್ತವೆ. ಒಂದು ಮುಖದ ರುದ್ರಾಕ್ಷದ ಉತ್ಪತ್ತಿಯು ಅತ್ಯಂತ ವಿರಳವಾದ್ದರಿಂದ ಸಹಜವಾಗಿ ಸರ್ವರಿಗೂ ದೊರೆಯಲಾರದು. ಅತ್ಯಂತ ದುರ್ಮಿಳ ದುರ್ಲಭವಾದ ಒಂದು ಮುಖದ ರುದ್ರಾಕ್ಷದ ಮಹಿಮೆಯು ಅಪಾರವಾಗಿರುವುದರಿಂದ ಅದನ್ನು ಕೊಂಡುಕೊಂಡು ಧರಿಸುವ ಹವ್ಯಾಸವು ಸರ್ವರಿಗೂ ಆಗುವದುಂಟು. ಆದರೆ ವಾಸ್ತವಿಕವಾದ ಒಂದು ಮುಖದ ರುದ್ರಾಕ್ಷವು ಸಿಗದೇ, ಕೃತ್ರಿಮವಾದ ರುದ್ರಾಕ್ಷಗಳಿಗೆ ಭಾವುಕರು ಬಲಿಯಾಗುತ್ತಿದ್ದಾರೆ. ಕಾರಣ ಇಂದಿನ ಪರಿಸ್ಥಿತಿಯಲ್ಲಿ ಅದರ ಹವ್ಯಾಸವನ್ನು ತ್ಯಾಗಮಾಡುವುದೇ ಸುಖಕರವೆಂದು ತಿಳಿಸಬಯಸುತ್ತೇವೆ. ಇನ್ನು ಶಾಸ್ತ್ರೋಕ್ತವಿಧಿಗನುಸಾರವಾಗಿ ಆಯಾ ಮುಖದ ರುದ್ರಾಕ್ಷಗಳ ಸ್ವರೂಪ ಹಾಗೂ ಅವುಗಳ ಮಹಿಮೆಯನ್ನವಲೋಕಿಸೋಣ :

**ಒಂದು ಮುಖದ ರುದ್ರಾಕ್ಷ :**

ಏಕವಕ್ತ್ರಂ ತು ರುದ್ರಾಕ್ಷಂ ಪರತತ್ತ್ವಸ್ವರೂಪಕಂ ।
ತದ್ಧಾರಣಾತ್ ಪರೇ ತತ್ತ್ವೇ ಲೀಯತೇ ವಿಜಿತೇಂದ್ರಿಯಃ ॥

(ರುದ್ರಾಕ್ಷ ಜಾಬಾಲೋಪನಿಷತ್ ೨–೧)

ಏಕವಕ್ತ್ರಃ ಶಿವಃ ಸಾಕ್ಷಾದ್ಭುಕ್ತಿಮುಕ್ತಿಫಲಪ್ರದಃ ।
ತಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾಂ ವ್ಯಪೋಹತಿ ॥

ಯತ್ರ ಸಂಪೂಜಿತಸ್ತತ್ರ ಲಕ್ಷ್ಮೀರ್ದೂರತರಾ ನ ಹಿ ।
ನಶ್ಯಂತ್ಯುಪದ್ರವಾಃ ಸರ್ವೇ ಸರ್ವಕಾಮಾ ಭವಂತಿ ಹಿ ॥

(ಶಿವಮಹಾಪುರಾಣ ವಿ. ಸಂ. ೨೫ ಅಧ್ಯಾಯ, ೬೪–೬೫)

ಈ ಉಪನಿಷತ್ ಹಾಗೂ ಶಿವಪುರಾಣದ ಆಧಾರದಿಂದ–ಒಂದು ಮುಖದ ರುದ್ರಾಕ್ಷವು ಪರತತ್ತ್ವ ಸ್ವರೂಪವಾದದ್ದು, ಇದರ ದರ್ಶನಮಾತ್ರದಿಂದ ಬ್ರಹ್ಮಹತ್ಯಾದಿ ಪಾತಕಗಳು ನಿವಾರಣೆಯಾಗುವವು. ಪ್ರತಿನಿತ್ಯ ಇದನ್ನು ಪೂಜಿಸಿದವರ ಮನೆಯಲ್ಲಿ ಅಖಂಡ ಲಕ್ಷ್ಮೀ ನಿವಾಸವಾಗುವದು. ಇದನ್ನು ಮಸ್ತಕದ ಶಿಖಾಸ್ಥಾನದಲ್ಲಿ ಧರಿಸುವ ವಿಧಾನವಿದೆ. ಹಾಗೆ ಧರಿಸಿದ್ದಾದರೆ, ಉಪದ್ರವಗಳೆಲ್ಲಾ ನಾಶವಾಗಿ ಇಷ್ಟಾರ್ಥಗಳೆಲ್ಲ ಪ್ರಾಪ್ತವಾಗುವ

ವಲ್ಲದೇ, ಕೊನೆಗೆ ಆತನು ಜಿತೇಂದ್ರಿಯನಾಗಿ ಪರಶಿವಬ್ರಹ್ಮದಲ್ಲಿ ಲೀನನಾಗುವನು. ಹೀಗೆ ಈ ಒಂದು ಮುಖದ ರುದ್ರಾಕ್ಷವು ಭಕ್ತಿ–ಮುಕ್ತಿ ಫಲಪ್ರದವಾಗಿದೆ.

ಎರಡು ಮುಖದ ರುದ್ರಾಕ್ಷ :

ದ್ವಿವಕ್ತ್ರಂ ತು ಮುನಿಶ್ರೇಷ್ಠ ಚಾರ್ಧನಾರೀಶ್ವರಾತ್ಮಕಂ ।
ಧಾರಣಾದರ್ಧನಾರೀಶಃ ಪ್ರೀಯತೇ ತಸ್ಯ ನಿತ್ಯಶಃ ॥

(ರುದ್ರಾಕ್ಷ ಜಾಬಾಲೋಪನಿಷತ್ ೨–೨)

ದ್ವಿವಕ್ತ್ರೋ ದೇವದೇವೇಶಃ ಸರ್ವಕಾಮಫಲಪ್ರದಃ ।
ವಿಶೇಷತಃ ಸ ರುದ್ರಾಕ್ಷೋ ಗೋವಧಂ ನಾಶಯೇದ್ಧ್ರುವಂ

(ಶಿವ ಪು. ವಿ. ಸಂ. ೨೫ ಅ. ೬೬)

ಎರಡು ಮುಖದ ರುದ್ರಾಕ್ಷವು ದೇವದೇವನಾದ ಮಹಾದೇವನ ಅರ್ಧನಾರೀಶ್ವರ ಸ್ವರೂಪವಾದದ್ದು. ಇದರ ಧಾರಣದಿಂದ ಗೋಹತ್ಯೆಯನ್ನು ಮಾಡಿದ ಮಹಾಪಾತಕವು ನಿವೃತ್ತಿಯಾಗಿ ಅರ್ಧನಾರೀಶ್ವರನಾದ ಶಿವನ ಅನುಗ್ರಹವು ಪ್ರಾಪ್ತವಾಗುವುದಲ್ಲದೇ ಸಕಲ ಮನೋರಥಗಳೂ ಸಿದ್ಧಿಸುವವು.

ಮೂರು ಮುಖದ ರುದ್ರಾಕ್ಷ :

ತ್ರಿಮುಖಂ ಚೈವ ರುದ್ರಾಕ್ಷಮಗ್ನಿತ್ರಯಸ್ವರೂಪಕಂ ।
ತದ್ಧಾರಣಾಚ್ಚ ಹುತಭುಕ್ತಸ್ಯ ತುಷ್ಯತಿ ಸರ್ವದಾ ॥

(ರುದ್ರಾಕ್ಷ ಜಾಬಾಲೋ ೨–೩)

ತ್ರಿವಕ್ತ್ರೋ ಯೋ ಹಿ ರುದ್ರಾಕ್ಷಃ ಸಾಕ್ಷಾತ್ಸಾಧನದಸ್ಸದಾ ।
ತತ್ಪ್ರಭಾವಾದ್ಭವೇಯುರ್ವೈ ವಿದ್ಯಾಃ ಸರ್ವಾಃ ಪ್ರತಿಷ್ಠಿತಾಃ ॥

(ಶಿವ ಪು. ವಿ ಸಂ. ೨೫. ಅ. ೬೭)

ಮೂರು ಮುಖದ ರುದ್ರಾಕ್ಷವು ಗಾರ್ಹಪತ್ಯ, ದಕ್ಷಿಣ ಮತ್ತು ಆಹವನೀಯ ಎಂಬ ಅಗ್ನಿತ್ರಯದ ಸ್ವರೂಪವಾಗಿದೆ. ಇದರ ಧಾರಣದಿಂದ ಅಗ್ನಿದೇವನ ಕೃಪೆಯು ಪ್ರಾಪ್ತ ವಾಗುವುದರ ಜೊತೆಗೆ ಸಕಲ ವಿದ್ಯೆಗಳೂ ಲಭಿಸುವವು.

ನಾಲ್ಕು ಮುಖದ ರುದ್ರಾಕ್ಷ :

ಚತುರ್ಮುಖಂ ತು ರುದ್ರಾಕ್ಷಂ ಚತುರ್ವಕ್ತ್ರಸ್ವರೂಪಕಂ ।
ತದ್ಧಾರಣಾಚ್ಚತುರ್ವಕ್ತ್ರಃ ಪ್ರೀಯತೇ ತಸ್ಯ ನಿತ್ಯದಾ

(ರುದ್ರಾಕ್ಷ ಜಾಬಾಲೋ ೨–೪)

ಚತುವಕ್ತ್ರಃ ಸ್ವಯಂ ಬ್ರಹ್ಮಾ ನರಹತ್ಯಾಂ ವ್ಯಪೋಹತಿ ।
ದರ್ಶನಾತ್ಸ್ಪರ್ಶನಾತ್ಸದ್ಯಶ್ಚತುರ್ವರ್ಗಫಲಪ್ರದಃ ॥

(ಶಿವ ಪು. ವಿ. ಸ. ೨೫ ಅ. ೬೮)

ನಾಲ್ಕು ಮುಖದ ರುದ್ರಾಕ್ಷವು ಚತುರ್ಮುಖನೂ, ಸೃಷ್ಟಿಕರ್ತನೂ ಆದ ಬ್ರಹ್ಮನ ಸ್ವರೂಪವಾದದ್ದು. ಇದರ ದರ್ಶನ, ಸ್ಪರ್ಶನ ಮತ್ತು ಧಾರಣದಿಂದ ನರಹತ್ಯಾ ರೂಪ

ವಾದ ಮಹಾಪಾತಕವು ಪ್ರಶಮನಗೊಂಡು, ಆ ಬ್ರಹ್ಮನ ಅನುಗ್ರಹದಿಂದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಲಭಿಸುವವು.

ಐದು ಮುಖದ ರುದ್ರಾಕ್ಷ :

ಪಂಚವಕ್ತ್ರಂ ತು ರುದ್ರಾಕ್ಷಂ ಪಂಚಬ್ರಹ್ಮಸ್ವರೂಪಕಂ ।
ಪಂಚವಕ್ತ್ರಃ ಸ್ವಯಂ ಬ್ರಹ್ಮಾ ಪುಂಹತ್ಯಾಂ ಚ ವ್ಯಪೋಹತಿ ॥
(ರುದ್ರಾಕ್ಷ ಜಾಬಾಲೋ ೨-೫)

ಪಂಚವಕ್ತ್ರಃ ಸ್ವಯಂ ರುದ್ರಃ ಕಾಲಾಗ್ನಿರ್ನಾಮತಃ ಪ್ರಭುಃ ।
ಸರ್ವಮುಕ್ತಿಪ್ರದಶ್ಚೈವ ಸರ್ವಕಾಮಫಲಪ್ರದಃ ॥

ಅಗಮ್ಯಾಗಮನಂ ಪಾಪಮಭಕ್ಷ್ಯಸ್ಯ ಚ ಭಕ್ಷಣಂ ।
ಇತ್ಯಾದಿ ಸರ್ವಪಾಪಾನಿ ಪಂಚವಕ್ತ್ರೋ ವ್ಯಪೋಹತಿ ॥
(ಶಿವ ಪು. ವಿ. ಸಂ. ೨೫ ಅ. ೬೯-೭೦)

ಐದು ಮುಖದ ರುದ್ರಾಕ್ಷವು ಪಂಚಮುಖನಾದ ಸದಾಶಿವನ ಸ್ವರೂಪವಾದದ್ದು. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಇವುಗಳೇ ಶಿವನ ಪಂಚಮುಖಗಳು. ಈ ಪಂಚಮುಖಗಳುಳ್ಳ ಸದಾಶಿವನನ್ನು ಪಂಚಬ್ರಹ್ಮನೆಂತಲೂ, ಕಾಲಾಗ್ನಿರುದ್ರನೆಂತಲೂ ಕರೆಯುವರು. ಹೀಗೆ ಪಂಚಬ್ರಹ್ಮ ಅಥವಾ ಕಾಲಾಗ್ನಿರುದ್ರ ಸ್ವರೂಪವಾದ ಈ ಐದು ಮುಖದ ರುದ್ರಾಕ್ಷವನ್ನು ಧರಿಸುವುದರಿಂದ ನರಹತ್ಯಾ ದೋಷವು ನಿವೃತ್ತಿಯಾಗುವುದಲ್ಲದೇ, ಅಗಮ್ಯ (ಸೇರಬಾರದಂತಹ)ಳಾದ ಸ್ತ್ರೀಯನ್ನು ಭೋಗಿಸುವುದು ಮತ್ತು ತಿನ್ನಬಾರದ ಮಾಂಸ ಮುಂತಾದವುಗಳನ್ನು ತಿನ್ನುವುದರಿಂದುಂಟಾದ ಪಾಪಗಳು ನಾಶವಾಗಿ, ಸರ್ವ ಮನೋರಥಗಳೂ ಪೂರ್ಣವಾಗಿ, ಕೊನೆಗೆ ಮುಕ್ತಿಯು ಪ್ರಾಪ್ತವಾಗುವುದು.

ಆರು ಮುಖದ ರುದ್ರಾಕ್ಷ :

ಷಡ್ವಕ್ತ್ರಮಪಿ ರುದ್ರಾಕ್ಷಂ ಕಾರ್ತಿಕೇಯಾಧಿದೈವತಂ ।
ತದ್ಧಾರಣಾನ್ಮಹಾಶ್ರೀಃ ಸ್ಯಾನ್ಮಹದಾರೋಗ್ಯಮುತ್ತಮಂ ॥

ಮತಿವಿಜ್ಞಾನಸಂಪತ್ತಿ ಶುದ್ಧಯೇ ಧಾರಯೇತ್ ಸುಧೀಃ ।
ವಿನಾಯಕಾಧಿದೈವಂ ಚ ಪ್ರವದಂತಿ ಮನೀಷಿಣಃ ॥
(ರುದ್ರಾಕ್ಷ ಜಾಬಾಲೋ ೨, ೬-೭)

ಷಡ್ವಕ್ತ್ರಃ ಕಾರ್ತಿಕೇಯಸ್ತು ಧಾರಣಾದ್ದಕ್ಷಿಣೇ ಭುಜೇ ।
ಬ್ರಹ್ಮಹತ್ಯಾದಿಕೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ।
(ಶಿವ ಪು. ವಿ. ಸ ೨೫ ಅ. ೭೧)

ಆರು ಮುಖದ ರುದ್ರಾಕ್ಷಕ್ಕೆ ಷಣ್ಮುಖನು ಅಧಿದೇವತೆಯು. ಬೇರೆಡೆಯಲ್ಲಿ ಗಣಪತಿಯು ಇದರ ಅಧಿದೇವತೆ ಎಂಬುದಾಗಿ ಹೇಳಲ್ಪಟ್ಟಿದೆ. ಇದನ್ನು ಬಲಭುಜದಲ್ಲಿ

ಧರಿಸುವುದರಿಂದ ಬ್ರಹ್ಮಹತ್ಯಾ ಪಾಪವು ನಿವೃತ್ತವಾಗುವುದು. ಇದರ ಧಾರಣದಿಂದ ಮಹತ್ತರ ಸಂಪತ್ತು ಹಾಗೂ ಮಹದಾರೋಗ್ಯವು ಲಭಿಸುವುದಲ್ಲದೇ ಮನೋ–ಬುದ್ಧಿಗಳು ಪರಿಶುದ್ಧಗಳಾಗುವವು. ಹೀಗೆ ಇದರಿಂದ ಇಷ್ಟಾರ್ಥ ಸಿದ್ಧಿಯ ಜೊತೆಗೆ ಅಂತಃಕರಣದ ಶುದ್ಧಿಯೂ ಉಂಟಾಗುವದು.

ಏಳು ಮುಖದ ರುದ್ರಾಕ್ಷ :

ಸಪ್ತವಕ್ತ್ರಂ ತು ರುದ್ರಾಕ್ಷಂ ಸಪ್ತಮಾತ್ರಾಧಿದೈವತಂ ।
ತದ್ಧಾರಣಾನ್ ಮಹಾಶ್ರೀಃ ಸ್ಯಾನ್ಮಹದಾರೋಗ್ಯಮುತ್ತಮಂ ॥
ಮಹತೀ ಜ್ಞಾನಸಂಪತ್ತಿಃ ಶುಚಿರ್ಧಾರಣತಃ ಸದಾ ।

(ರುದ್ರಾಕ್ಷ ಜಾಬಾಲೋ ೨–೮)

ಸಪ್ತವಕ್ತ್ರೋ ಮಹೇಶಾನಿ ಹ್ಯನಂಗೋ ನಾಮ ನಾಮತಃ ।
ಧಾರಣಾತ್ತಸ್ಯ ದೇವೇಶಿ ದರಿದ್ರೋಽಪೀಶ್ವರೋ ಭವೇತ್ ॥

(ಶಿವ ಪು. ವಿ. ಸ. ೨೫ ಅ. ೭೨)

ಏಳು ಮುಖದ ರುದ್ರಾಕ್ಷಕ್ಕೆ–ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ ಮತ್ತು ಚಾಮುಂಡಾ ಎಂಬ ಹೆಸರಿನ ಸಪ್ತಮಾತೃಕೆಯರೇ ಅಧಿದೇವತೆಗಳು. ಈ ರುದ್ರಾಕ್ಷಧಾರಣದಿಂದ ಆರೋಗ್ಯ ಪ್ರಾಪ್ತವಾಗುವುದಲ್ಲದೇ ಭೌತಿಕ ಸಂಪತ್ತು ಹಾಗೂ ಜ್ಞಾನಸಂಪತ್ತುಗಳೆರಡೂ ಲಭಿಸುವವು. ಈ ರುದ್ರಾಕ್ಷಕ್ಕೆ ಅನಂಗನೆಂಬ ಹೆಸರೂ ಇದೆ. ದರಿದ್ರನನ್ನು ಶ್ರೀಮಂತನನ್ನಾಗಿಸುವ ಸಾಮರ್ಥ್ಯವೂ ಇದರಲ್ಲಿದೆ.

ಎಂಟು ಮುಖದ ರುದ್ರಾಕ್ಷ :

ಅಷ್ಟವಕ್ತ್ರಂ ರುದ್ರಾಕ್ಷಂ ಅಷ್ಟಮಾತ್ರಾಧಿದೈವತಂ ।
ವಸ್ವಷ್ಟಕಪ್ರಿಯಂ ಚೈವ ಗಂಗಾಪ್ರೀತಿಕರಂ ತಥಾ ।
ತದ್ಧಾರಣಾದಿ ಮೇ ಪ್ರೀತಾ ಭವೇಯುಃ ಸತ್ಯವಾದಿನಃ ॥

(ರುದ್ರಾಕ್ಷ ಜಾಬಾಲೋ ೨–೯,೧೦)

ರುದ್ರಾಕ್ಷಶ್ಚಾಷ್ಟವಕ್ತ್ರಶ್ಚ ವಸುಮೂರ್ತಿಶ್ಚ ಭೈರವಃ ।
ಧಾರಣಾತ್ತಸ್ಯ ಪೂರ್ಣಾಯುರ್ಮೃತೋ ಭವತಿ ಶೂಲಭೃತ್ ॥

(ಶಿವ ಪು. ವಿ. ಸಂ ೨೫ ಅ. ೭೩)

ಎಂಟು ಮುಖದ ರುದ್ರಾಕ್ಷವು ಅಷ್ಟವಸುಗಳ ಸ್ವರೂಪವಾದದ್ದಲ್ಲದೇ ಭೈರವಾತ್ಮಕವೂ ಆಗಿರುವದು. ಇದರ ಧಾರಣದಿಂದ ಅಷ್ಟವಸುಗಳ ಹಾಗೂ ಗಂಗಾದೇವಿಯ ಅನುಗ್ರಹವಾಗುವುದು. ಈ ರುದ್ರಾಕ್ಷವನ್ನು ಧರಿಸಿದವನು ದೀರ್ಘಾಯುವುಳ್ಳವನಾಗುವನಲ್ಲದೇ, ಮರಣಾನಂತರ ಶಿವಸಾಯುಜ್ಯವನ್ನು ಹೊಂದುವನು. ಇದು ಗುರುತಲ್ಪಗಮನ ಮುಂತಾದ ಮಹಾಪಾತಕಗಳನ್ನು ದೂರೀಕರಿಸುವ ಸಾಮರ್ಥ್ಯವುಳ್ಳದ್ದಾಗಿದೆ ಎಂಬುದನ್ನು ಶ್ರೀ ಅಪ್ಪಯ್ಯ ದೀಕ್ಷಿತರು ಶಿವಾರ್ಚನಾ ಚಂದ್ರಿಕೆಯಲ್ಲಿ ನಿರೂಪಿಸಿರುವರು.

**ಒಂಭತ್ತು ಮುಖದ ರುದ್ರಾಕ್ಷ :**

ನವವಕ್ತ್ರಂ ತು ರುದ್ರಾಕ್ಷಂ ನವಶಕ್ತ್ಯಧಿದೈವತಂ ।
ತಸ್ಯ ಧಾರಣಮಾತ್ರೇಣ ಪ್ರೀಯಂತೇ ನವಶಕ್ತಯಃ ॥
(ರುದ್ರಾಕ್ಷ ಜಾಬಾಲೋ ೨-೧೧)

ಭೈರವೋ ನವವಕ್ತ್ರಶ್ಚ ಕಪಿಲಶ್ಚ ಮಹಾಮುನಿಃ ।
ದುರ್ಗಾ ವಾ ತದಧಿಷ್ಠಾತ್ರೀ ನವರೂಪಾ ಮಹೇಶ್ವರೀ ॥

ತಂ ಧಾರಯೇದ್ವಾಮಹಸ್ತೇ ರುದ್ರಾಕ್ಷಂ ಭಕ್ತಿತತ್ಪರಃ ।
ಸರ್ವೇಶ್ವರೋ ಭವೇನ್ನೂನಂ ಮಮ ತುಲ್ಯೋ ನ ಸಂಶಯಃ ॥
(ಶಿವ ಪು. ವಿ. ಸಂ. ೨೫ ಅ. ೭೪, ೭೫)

ನವವಕ್ತ್ರಂ ವಾಮಕರೇ ಧೃತಂ ಚ ಲಕ್ಷಕೋಟಿಮಹಾಪಾತಕ ದೋಷಹರಂ ।
(ಶಿವಾರ್ಚನಾ ಚಂದ್ರಿಕಾ, ಪುಟ. ೧೫)

ಒಂಭತ್ತು ಮುಖದ ರುದ್ರಾಕ್ಷಕ್ಕೆ ದುರ್ಗಾದಿ ನವಶಕ್ತಿಯರು, ಭೈರವ ಮತ್ತು ಕಪಿಲ ಮಹರ್ಷಿ ಇವರೆಲ್ಲ ಅಧಿದೇವತೆಗಳಾಗಿರುತ್ತಾರೆ. ಈ ರುದ್ರಾಕ್ಷವನ್ನು ಎಡಗೈಯಲ್ಲಿ ಧರಿಸಿದ್ದಾದರೆ, ಅವನು ಪರಮಾತ್ಮನಂತೆ ಸರ್ವೇಶ್ವರನಾಗುವನು. ಇದರ ಧಾರಣದಿಂದ ಕೋಟಿ-ಕೋಟಿ ಮಹಾಪಾತಕಾದಿ ದೋಷಗಳೂ ನಿವಾರಣೆಯಾಗುವವು.

**ಹತ್ತು ಮುಖದ ರುದ್ರಾಕ್ಷ :**

ದಶವಕ್ತ್ರಂ ರುದ್ರಾಕ್ಷಂ ಯಮದೈವತ್ಯಮೀಶ್ವರಂ ।
ದರ್ಶನಾಚ್ಛಾಂತಿಜನಕಂ ಪಾಪಾನಾಂ ನಾತ್ರ ಸಂಶಯಃ ॥
(ರುದ್ರಾಕ್ಷ ಜಾಬಾಲೋ ೨-೧೨)

ದಶವಕ್ತ್ರೋ ಮಹೇಶಾನಿ ಸ್ವಯಂ ದೇವೋ ಜನಾರ್ದನಃ ।
ಧಾರಣಾತ್ತಸ್ಯ ದೇವೇಶಿ ಸರ್ವಾನ್ ಕಾಮಾನವಾಪ್ನುಯಾತ್ ॥
(ಶಿವ ಪು. ವಿ. ಸಂ. ೨೫ ಅ. ೭೬)

ದಶವಕ್ತ್ರಂ ಗ್ರಹ-ಪಿಶಾಚ-ವೇತಾಳ-ಬ್ರಹ್ಮರಾಕ್ಷಸ-ಸರ್ಪ-ಸಿಂಹ-
ವ್ಯಾಘ್ರಾದಿಭಯಹರಂ ।
(ಶಿವಾರ್ಚನಾ ಚಂದ್ರಿಕಾ ಪುಟ ೧೫)

ಹತ್ತು ಮುಖದ ರುದ್ರಾಕ್ಷಕ್ಕೆ ಯಮ ಹಾಗೂ ವಿಷ್ಣುಗಳು ಅಧಿದೇವತೆಗಳಾಗಿರುತ್ತಾರೆ. ಇದರ ದರ್ಶನ ಮಾತ್ರದಿಂದ ಪಾಪಗಳೆಲ್ಲ ಪ್ರಶಮನಗೊಳ್ಳುವವು. ಇದರ ಧಾರಣ ದಿಂದ ಗ್ರಹ-ಪಿಶಾಚ-ವೇತಾಳ-ಬ್ರಹ್ಮರಾಕ್ಷಸ-ಸರ್ಪ-ಸಿಂಹ ಮುಂತಾದವುಗಳ ಭಯವು ದೂರಾಗುವುದರ ಜೊತೆಗೆ ಸರ್ವಕಾಮನೆಗಳೂ ಕೈಸೇರುವವು.

ಏಕಾದಶ ಮುಖದ ರುದ್ರಾಕ್ಷ :

ಏಕಾದಶಮುಖಂ ತ್ವಕ್ಷಂ ರುದ್ರೈಕಾದಶದೈವತಂ ।
ತದಿದಂ ದೈವತಂ ಪ್ರಾಹುಃ ಸದಾ ಸೌಭಾಗ್ಯವರ್ಧನಂ ॥
(ರುದ್ರಾಕ್ಷ ಜಾಬಾಲೋ ೨–೧೩)

ಏಕಾದಶಮುಖೋ ಯಸ್ತು ರುದ್ರಾಕ್ಷಃ ಪರಮೇಶ್ವರಿ ।
ಸ ರುದ್ರೋ ಧಾರಣಾತ್ತಸ್ಯ ಸರ್ವತ್ರ ವಿಜಯೀ ಭವೇತ್ ॥
(ಶಿವ ಪು. ವಿ. ಸಂ. ೨೫ ಅ. ೭೭)

ಏಕಾದಶವಕ್ತ್ರಂ ಶಿಖಾಯಾಂ ಧೃತಂ ಸಹಸ್ರಾಶ್ವಮೇಧ ಶತವಾಜಪೇಯ–
ಶತಸಹಸ್ರಗೋದಾನ ಫಲಪ್ರದಂ ಚ ।
(ಶಿವಾರ್ಚನಾ ಚಂದ್ರಿಕಾ ಪುಟ ೧೫)

ಹನ್ನೊಂದು ಮುಖದ ರುದ್ರಾಕ್ಷಕ್ಕೆ ಏಕಾದಶ ರುದ್ರರೇ ಅಧಿದೇವತೆಗಳು. ಸೌಭಾಗ್ಯ ದಾಯಕವೂ, ವಿಜಯಪ್ರದವೂ ಆದ ಈ ರುದ್ರಾಕ್ಷವನ್ನು ಶಿಖೆಯಲ್ಲಿ ಧರಿಸಿದ್ದಾದರೆ ಸಾವಿರ ಅಶ್ವಮೇಧಯಾಗ, ನೂರು ವಾಜಪೇಯಯಾಗ ಮತ್ತು ಸಹಸ್ರಗೋದಾನದ ಫಲವು ದೊರೆಯುವುದು ಇದನ್ನು ಧರಿಸಿದವನು ಕೊನೆಗೆ ಸಾಕ್ಷಾತ್ ರುದ್ರರೂಪನೇ ಆಗುವನು.

ಹನ್ನೆರಡು ಮುಖದ ರುದ್ರಾಕ್ಷ :

ರುದ್ರಾಕ್ಷಂ ದ್ವಾದಶಮುಖಂ ಮಹಾವಿಷ್ಣುಸ್ವರೂಪಕಂ ।
ದ್ವಾದಶಾದಿತ್ಯರೂಪಂ ಚ ಬಿಭರ್ತ್ಯೇವ ಹಿ ತತ್ಪರಃ ॥
(ರುದ್ರಾಕ್ಷ ಜಾಬಾಲೋ ೨–೧೪)

ದ್ವಾದಶಾಸ್ಯಂ ತು ರುದ್ರಾಕ್ಷಂ ಧಾರಯೇತ್ಕೇಶದೇಶಕೇ ।
ಆದಿತ್ಯಾಶ್ಚೈವ ತೇ ಸರ್ವೇ ದ್ವಾದಶೈವ ಸ್ಥಿತಾಸ್ತಥಾ ॥
(ಶಿವ ಪು. ವಿ. ಸಂ. ೨೫ ಅ. ೭೮)

ದ್ವಾದಶವಕ್ತ್ರಂ ಕಂಠದೇಶೇ ಧೃತಂ ಬಹು–ದಕ್ಷಿಣ ಗೋಮೇಧಾಶ್ವ
ಮೇಧಫಲಪ್ರದಮೈಶ್ವರ್ಯಾಭಿವೃದ್ಧಿಕಾರಿ, ದಾಂಷ್ಟ್ರಿ–ಶೃಂಗಿ–
ಚೋರಾಗ್ನಿ–ಭಯಹರಂ ಸರ್ವಪಾಪಕ್ಷಯಕರಂ ಚ ।
(ಶಿವಾರ್ಚನಾ ಚಂದ್ರಿಕಾ ಪುಟ. ೧೫)

ಹನ್ನೆರಡು ಮುಖದ ರುದ್ರಾಕ್ಷವು ದ್ವಾದಶ ಸೂರ್ಯ ಅಥವಾ ಮಹಾವಿಷ್ಣು ಸ್ವರೂಪ ವಾದದ್ದು, ಇದನ್ನು ಶಿಖೆಯಲ್ಲಿ ಧರಿಸುವ ವಿಧಾನವಿದೆ. ಇದನ್ನು ಕಂಠದಲ್ಲಿ ಧರಿಸಿದ್ದಾದರೆ ಗೋಮೇಧ ಹಾಗೂ ಅಶ್ವಮೇಧ ಯಾಗಗಳ ಫಲವು ಲಭಿಸುವುದು. ಐಶ್ವರ್ಯಾಭಿ ವೃದ್ಧಿಕಾರಿಯಾದ ಈ ರುದ್ರಾಕ್ಷದ ಧಾರಣದಿಂದ ಸಿಂಹ, ಹುಲಿ, ಆನೆ, ಕಾಡುಕೋಣ ಮುಂತಾದ ಕ್ರೂರ ಪ್ರಾಣಿಗಳ ಭಯವು ಉಂಟಾಗಲಾರದು. ಅದರಂತೆ ಇದು ಸರ್ವ ಪಾಪಕ್ಷಯಕಾರಿಯೂ ಆಗಿರುತ್ತದೆ.

**ಹದಿಮೂರು ಮುಖದ ರುದ್ರಾಕ್ಷ :**

ತ್ರಯೋದಶಮುಖಂ ತ್ವಕ್ಷಂ ಕಾಮದಂ ಸಿದ್ಧಿದಂ ಶುಭಂ ।
ತಸ್ಯ ಧಾರಣಮಾತ್ರೇಣ ಕಾಮದೇವಃ ಪ್ರಸೀದತಿ

(ರುದ್ರಾಕ್ಷ ಜಾಬಾಲೋ ೨–೧೫)

ತ್ರಯೋದಶಮುಖೋ ವಿಶ್ವೇದೇವಸ್ತದ್ಧಾರಣಾನ್ನರಃ ।
ಸರ್ವಾನ್ ಕಾಮಾನವಾಪ್ನೋತಿ ಸೌಭಾಗ್ಯಂ ಮಂಗಲಂ ಲಭೇತ್ ॥

(ಶಿವ ಪು. ವಿ. ಸಂ. ೨೫, ಅ. ೭೯)

ತ್ರಯೋದಶವಕ್ತ್ರಮತುಲಭೋಗಪ್ರದಂ ರಸಸಾಧನಧಾತುವಾದ ॥
ಘಟಿಕಾದಿ ಸಿದ್ಧಿಕರಂ ಪಿತೃ–ಮಾತೃ–ಭ್ರಾತೃ–ಸ್ತ್ರೀವಧ–ದೋಷಹರಂ ॥

(ಶಿವಾರ್ಚನಾ ಚಂದ್ರಿಕಾ ಪು. ೧೫)

ಹದಿಮೂರು ಮುಖದ ರುದ್ರಾಕ್ಷವು ಕಾಮದೇವ ಹಾಗೂ ವಿಶ್ವೇದೇವ ಸ್ವರೂಪವಾಗಿದೆ. ಅತುಲ ಭೋಗಪ್ರದವಾದ ಇದರ ಧಾರಣದಿಂದ ಸಕಲ ಸೌಭಾಗ್ಯ ಹಾಗೂ ಮಂಗಲ ಪರಂಪರೆಗಳು ದೊರೆಯುವವು. ಇದರಿಂದ ರಸಸಿದ್ಧಿ ಮತ್ತು ವಾಕ್‌ಸಿದ್ಧಿಗಳು ಲಭಿಸುವವು. ಇದು ಮಾತೃ, ಪಿತೃ, ಭ್ರಾತೃ ಮತ್ತು ಸ್ತ್ರೀವಧ ಜನ್ಯದೋಷಗಳನ್ನು ಪರಿಹರಿಸುವುದು.

**ಹದಿನಾಲ್ಕು ಮುಖದ ರುದ್ರಾಕ್ಷ :**

ಚತುರ್ದಶಮುಖಂ ಚಾಕ್ಷಂ ರುದ್ರನೇತ್ರಸಮುದ್ಧವಂ ।
ಸರ್ವವ್ಯಾಧಿಹರಂ ಚೈವ ಸರ್ವದಾರೋಗ್ಯಮಾಪ್ನುಯಾತ್ ॥

(ರುದ್ರಾಕ್ಷ ಜಾಬಾಲೋ ೨–೧೬)

ಚತುರ್ದಶಮುಖೋ ಯೋ ಹಿ ರುದ್ರಾಕ್ಷಃ ಪರಮಃ ಶಿವಃ ॥
ಧಾರಯೇನ್ಮೂರ್ಧ್ನಿ ತಂ ಭಕ್ತ್ಯಾ ಸರ್ವಪಾಪಂ ಪ್ರಣಶ್ಯತಿ ॥

(ಶಿವ ಪು. ವಿ. ಸಂ. ೨೫ ಅ. ೮೦)

ಚತುರ್ದಶವಕ್ತ್ರಂ ಸರ್ವಕಾರ್ಯಸಿದ್ಧಿಕರಂ ಸಕಲವ್ಯಾಧಿ ಪಾಪಹರಂ ।

(ಶಿವಾರ್ಚನಾ ಚಂದ್ರಿಕಾ ಪು. ೧೫)

ರುದ್ರನೇತ್ರ ಸಮುದ್ಭೂತವಾದ ಹದಿನಾಲ್ಕು ಮುಖದ ರುದ್ರಾಕ್ಷವು ಸಾಕ್ಷಾತ್ ಪರಶಿವ ಸ್ವರೂಪವಾದದ್ದು. ಸರ್ವರೋಗ ನಿವಾರಕವೂ, ಆರೋಗ್ಯಪ್ರದವೂ ಆದ ಈ ರುದ್ರಾಕ್ಷವನ್ನು ಮಸ್ತಕದಲ್ಲಿ ಧರಿಸಿದರೆ, ಸಕಲ ವಿಧ ಪಾಪಗಳೂ ಪ್ರಶಮನಗೊಳ್ಳುವವು. ಇದರ ಧಾರಣದಿಂದ ಸಕಲ ಸಿದ್ಧಿಗಳೂ ಪ್ರಾಪ್ತವಾಗುವವು.

ಈ ಪ್ರಕಾರವಾಗಿ ರುದ್ರಾಕ್ಷ ಜಾಬಾಲೋಪನಿಷತ್, ಶಿವಮಹಾಪುರಾಣ ಮತ್ತು ಶಿವಾರ್ಚನಾ ಚಂದ್ರಿಕಾ ಮುಂತಾದ ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ವಿಭಿನ್ನ ಮುಖವುಳ್ಳ ರುದ್ರಾಕ್ಷಗಳ ಮಹಿಮೆಯು ವರ್ಣಿಸಲ್ಪಟ್ಟಿದೆ. ಮುಖಗಳ ವೈಶಿಷ್ಟ್ಯದಿಂದ

ಫಲಗಳಲ್ಲಿ ತಾರತಮ್ಯ ಕಂಡುಬಂದರೂ, ಜೀವಿಗಳ ಪಾಪವನ್ನು ಪ್ರಶಮನಗೊಳಿಸಿ ಇಷ್ಟಾರ್ಥವನ್ನು ಕೊಡುವ ಸಾಮರ್ಥ್ಯವು ಎಲ್ಲ ರುದ್ರಾಕ್ಷಗಳಿಗೂ ಇರುತ್ತದೆ.

ಇಲ್ಲಿ ವರ್ಣಿಸಲ್ಪಟ್ಟ ರುದ್ರಾಕ್ಷದ ಮಹಿಮೆಯನ್ನವಲೋಕಿಸಿದಾಗ, ಬುದ್ಧಿಶಾಲಿಗಳಿಗೆ ಅತಿಶಯೋಕ್ತಿ ಎಂದೆನಿಸಬಹುದು. ಆದರೆ ಭಾವನಾಮಯ ಜೀವಿಗಳಿಗೆ ಈಗಲೂ ಫಲದಾಯಕಗಳಾಗಿವೆ. ವೀರಶೈವರ ಅಷ್ಟಾವರಣಗಳಲ್ಲೊಂದಾದ ರುದ್ರಾಕ್ಷದ ಬಗ್ಗೆ ತಾರ್ಕಿಕವಾಗಿ ಚರ್ಚಿಸುವುದಕ್ಕಿಂತಲೂ ಭಾವಪೂರ್ಣವಾಗಿ ಯೋಚಿಸುವುದೇ ಒಳಿತು. ''ಯಥಾ ಭಾವಃ ತಥಾ ಭವತಿ'' ಎಂಬ ಉಕ್ತಿಗನುಸಾರವಾಗಿ ರುದ್ರಾಕ್ಷಧಾರಣದಲ್ಲಿ ಯಾರು ಎಷ್ಟೆಷ್ಟು ಭಾವಜೀವಿಗಳಾಗುವರೋ ಅವರಿಗೆ ಅಷ್ಟಷ್ಟು ಹೆಚ್ಚಿನ ಫಲಗಳು ದೊರೆಯುವವು.

ರುದ್ರಾಕ್ಷಧಾರಿಗಳು ಪಾಲಿಸಬೇಕಾದ ಪಥ್ಯಗಳು :

ರೋಗಿಯು ರೋಗ ನಿವೃತ್ತಿಗಾಗಿ ಔಷಧವನ್ನು ಸೇವಿಸುವುದರ ಜೊತೆಗೆ ಕೆಲವೊಂದು ಪಥ್ಯವನ್ನು ಪಾಲಿಸಬೇಕಾದುದು ಪ್ರಾಚೀನ ಆಯುರ್ವೇದ ಶಾಸ್ತ್ರದ ಪದ್ಧತಿಯಾಗಿದೆ. ಯಾರು ಎಷ್ಟು ಚೆನ್ನಾಗಿ ಪಥ್ಯವನ್ನು ಪರಿಪಾಲಿಸುವರೋ ಅವರಿಗೆ ಆ ಔಷಧವು ಅಷ್ಟು ಹೆಚ್ಚು ಫಲಕಾರಿಯಾಗುವುದು. ಪಥ್ಯವನ್ನು ಪರಿಪಾಲಿಸದಿದ್ದರೆ ರೋಗದ ನಿವೃತ್ತಿಗೆ ಹೆಚ್ಚಿನ ಕಾಲ ತೆಗೆದುಕೊಳ್ಳಬಹುದು. ಅದರಂತೆ ಸಕಲ ದೋಷ ನಿವಾರಕವಾದ ರುದ್ರಾಕ್ಷವನ್ನು ಧರಿಸುವವರೂ ಆಹಾರ–ವ್ಯವಹಾರದಲ್ಲಿ ಪಥ್ಯವನ್ನು ಪರಿಪಾಲಿಸಬೇಕಾಗುವುದು. ಅದನ್ನೇ ಉಪನಿಷತ್ತು ಹೀಗೆ ಹೇಳಿದೆ–

ಮದ್ಯಂ ಮಾಂಸಂ ಚ ಲಶುನಂ ಪಲಾಂಡುಂ ಶೀಘ್ರುಮೇವ ಚ ।
ಶ್ಲೇಷಾತ್ಮಕಂ ವಿಡ್ವರಾಹಮಭಕ್ಷ್ಯಂ ವರ್ಜಯೇನ್ನರಃ ॥

(ರುದ್ರಾಕ್ಷ ಜಾಬಾಲೋ ೨–೧೭)

ಅಂದರೆ ಅಪೇಯವಾದ ಮಧ್ಯಪಾನವನ್ನು ತ್ಯಾಗಮಾಡಬೇಕು; ಮತ್ತು ಅಭಕ್ಷ್ಯವಾದ ಇಲಿ, ಹಂದಿ ಮುಂತಾದ ಯಾವುದೇ ಪ್ರಾಣಿಯ ಮಾಂಸವನ್ನೂ ಸಹ ತಿನ್ನಬಾರದು. ಇನ್ನು ಶಾಖಾಹಾರದಲ್ಲಿಯೂ ಬೆಳ್ಳುಳ್ಳಿ, ಉಳ್ಳಾಗಡ್ಡಿ (ನೀರುಳ್ಳೆ), ನುಗ್ಗೆಕಾಯಿ, ದೊಡ್ಡ ಚೆಳ್ಳು, ಬೊಂಕೆ ಮುಂತಾದ ತಾಮಸಗಳಾದ ಸಸ್ಯಾಹಾರವನ್ನೂ ತ್ಯಾಗ ಮಾಡಬೇಕು. ಸಾತ್ವಿಕವೂ, ಶುದ್ಧವೂ ಆದ ಆಹಾರವನ್ನು ಸೇವಿಸುತ್ತ ಭಾವಜೀವಿಗಳಾಗಿ ಈ ರುದ್ರಾಕ್ಷಗಳಲ್ಲಿ ತಮಗೆ ದೊರೆತ ಯಾವುದೇ ರುದ್ರಾಕ್ಷವನ್ನು ಧರಿಸಿದರೂ ಅವರಿಗೆ ಉತ್ತಮ ಫಲಗಳು ಪ್ರಾಪ್ತಿಯಾಗುವಲ್ಲಿ ಸಂದೇಹವಿರುವುದಿಲ್ಲ.

ರುದ್ರಾಕ್ಷಧಾರಣದ ಶಾಸ್ತ್ರೀಯ ವಿಧಿ ಹಾಗೂ ಸ್ಥಾನಗಳು :

ಅತ್ಯಂತ ಪ್ರಾಚೀನ ಕಾಲದಲ್ಲಿ ಸನತ್ಕುಮಾರನೆಂಬ ಬ್ರಹ್ಮನ ಮಾನಸ ಪುತ್ರನು ಕಾಲಾಗ್ನಿ ರುದ್ರನ ಬಳಿಗೆ ಹೋಗಿ– ''ಅಧೀಹಿ ಭಗವನ್ ರುದ್ರಾಕ್ಷಧಾರಣವಿಧಿಂ''–ಹೇ ಭಗವಂತನೇ ರುದ್ರಾಕ್ಷಧಾರಣದ ವಿಧಿಯನ್ನು ನಿರೂಪಿಸು–ಎಂಬುದಾಗಿ ವಿಜ್ಞಾಪಿಸಿಕೊಂಡಾಗ, ಕಾಲಾಗ್ನಿ ರುದ್ರನು ನಿದಾಘ, ಜಡಭರತ, ದತ್ತಾತ್ರೇಯ, ಕಾತ್ಯಾಯನ, ಭಾರದ್ವಾಜ, ಕಪಿಲ, ವಸಿಷ್ಠ, ಪಿಪ್ಪಲಾದ ಮುಂತಾದ ಮಹರ್ಷಿಗಳನ್ನುದ್ದೇಶಿಸಿ ಅದರ

ವಿಧಿಯನ್ನು ಚೆನ್ನಾಗಿ ನಿರೂಪಿಸಿದ ವಿಷಯವು ರುದ್ರಾಕ್ಷ ಜಾಬಾಲೋಪನಿಷತ್ತಿನಲ್ಲಿ ಕಂಡುಬರುತ್ತದೆ.

ಪ್ರಕೃತದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರು ಮಹಾಮಹಿಮನಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಉಪದೇಶಿಸಿದ ರುದ್ರಾಕ್ಷಧಾರಣ ವಿಧಿಯನ್ನು ಪರ್ಯಾಲೋಚಿಸೋಣ.

ಯಥಾಸ್ಥಾನಂ ಯಥಾವಕ್ತ್ರಂ ಯಥಾಯೋಗಂ ಯಥಾವಿಧಿ ।
ರುದ್ರಾಕ್ಷಧಾರಣಂ ವಕ್ಷ್ಯೇ ರುದ್ರಸಾಯುಜ್ಯಸಿದ್ಧಯೇ ॥

ಹೇ ಅಗಸ್ತ್ಯನೇ ಯಾವ ಸ್ಥಾನದಲ್ಲಿ ಎಷ್ಟು ಮುಖದ ಎಷ್ಟು ರುದ್ರಾಕ್ಷಗಳನ್ನು ಧರಿಸಿದ್ದಾದರೆ ರುದ್ರಸಾಯುಜ್ಯವು ಪ್ರಾಪ್ತವಾಗುವುದೋ ಆ ವಿಧಾನವನ್ನು ನಿನಗೆ ತಿಳಿಸುತ್ತೇನೆ; ಎಂಬುದಾಗಿ ಮೊದಲು ಮಹರ್ಷಿಗೆ ಆ ವಿಧಾನದ ಫಲವನ್ನುಪದೇಶಿಸಿ ಇನ್ನು ವಿಧಿಯನ್ನು ನಿರೂಪಿಸುತ್ತಾರೆ.

ಶಿವಪೂಜಾ ಪರಾಯಣನಾದ ಶಿವಭಕ್ತನು ತನ್ನ ಇಷ್ಟಲಿಂಗಪೂಜೆಯನ್ನು ಮಾಡುವಾಗ, ಮಸ್ತಕದ ಶಿಖಾಸ್ಥಾನದಲ್ಲಿ ಒಂದು ಮುಖದ ಒಂದು ರುದ್ರಾಕ್ಷವನ್ನು ಧರಿಸಬೇಕು. ಅದರಂತೆ ಎರಡು, ಮೂರು ಮತ್ತು ಹನ್ನೆರಡು ಮುಖಗಳುಳ್ಳ ಒಂದೊಂದರಂತೆ ಮೂರು ರುದ್ರಾಕ್ಷಗಳನ್ನು ತಲೆಯ ಮೇಲೆ ಧರಿಸಬೇಕು. ಹನ್ನೊಂದು ಮುಖದ ಮೂವತ್ತಾರು ರುದ್ರಾಕ್ಷಗಳನ್ನು ಮಸ್ತಕದ ಮೇಲೆ–ನೆತ್ತಿಯ ಸುತ್ತಲೂ ಧರಿಸಬೇಕು. ಹತ್ತು, ಏಳು ಮತ್ತು ಐದು ಮುಖದ ಎರಡೆರಡು ರುದ್ರಾಕ್ಷಗಳಂತೆ ಪ್ರತಿಯೊಂದು ಕಿವಿಯಲ್ಲಿ ಆರಾರು ರುದ್ರಾಕ್ಷಗಳನ್ನು ಧಾರಣಮಾಡಬೇಕು. ಆರು ಮತ್ತು ಎಂಟು ಮುಖದ ಹದಿನಾರು–ಹದಿನಾರು ರುದ್ರಾಕ್ಷಗಳಂತೆ ಒಟ್ಟು ಮೂವತ್ತೆರಡು ರುದ್ರಾಕ್ಷಗಳ ಒಂದು ಕಂಠಮಾಲೆಯನ್ನು ಕೊರಳಲ್ಲಿ ಧರಿಸಬೇಕು. ನಾಲ್ಕು ಮುಖದ ಐವತ್ತು ರುದ್ರಾಕ್ಷಗಳನ್ನು ಎದೆಯ ಮೇಲೆ ಧಾರಣಮಾಡಬೇಕು. ಹದಿಮೂರು ಮುಖದ ಹದಿನಾರು–ಹದಿನಾರು ರುದ್ರಾಕ್ಷಗಳನ್ನು ಎರಡೂ ರಟ್ಟೆಗಳಲ್ಲಿ ಧರಿಸಬೇಕು. ಒಂಬತ್ತು ಮುಖದ ಹನ್ನೆರಡು–ಹನ್ನೆರಡು ರುದ್ರಾಕ್ಷಗಳನ್ನು ಎರಡೂ ಮುಂಗೈಯಲ್ಲಿ ಧಾರಣ ಮಾಡಬೇಕು. ಇದರಂತೆ ಹದಿನಾಲ್ಕು ಮುಖಗಳುಳ್ಳ ಒಂದುನೂರಾ ಎಂಟು ರುದ್ರಾಕ್ಷ ಗಳ ಒಂದು ಮಾಲೆಯನ್ನು ಯಜ್ಞೋಪವೀತದಂತೆ ಬಗಲಲ್ಲಿ ಧರಿಸಬೇಕು. ಈ ರೀತಿಯಾದ ಶಾಸ್ತ್ರೋಕ್ತವಿಧಿಗನುಸಾರವಾಗಿ ಶಿವಪೂಜಾ ತತ್ಪರನಾದ ಸಾಧಕನು ಪ್ರತಿದಿವಸ ತಪ್ಪದೇ ಧರಿಸಿ ಪೂಜಿಸಿದ್ದಾದರೆ, ಅವನ ಸಕಲ ದೋಷಗಳೂ ನಿವಾರಣೆಗೊಂಡು, ಕೊನೆಗೆ ರುದ್ರಸಾಯುಜ್ಯವು ಪ್ರಾಪ್ತವಾಗುವುದೆಂಬುದಾಗಿ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಅಪ್ಪಣೆಯನ್ನು ಕೊಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕರು ಉಪದೇಶಿಸಿದ ರುದ್ರಾಕ್ಷ ಧಾರಣದ ಈ ಪದ್ಧತಿಯನ್ನೇ ಅನೇಕ ಶರಣರು ಅನುಸರಿಸಿ ಆಚರಿಸಿ ಕೊನೆಗೆ ತಮ್ಮ ಮಾತಿನಲ್ಲಿ–

ಏಕಮುಖದ ರುದ್ರಾಕ್ಷಿಯನೊಂದನೇ ಪಶ್ಚಿಮದಲ್ಲಿ ಧರಿಸುವರು,
ದ್ವಿತ್ರಿದ್ವಾದಶಮುಖದ ಮೂರು ಮಣಿಯ ಮೂರ್ಧ್ನಿಯಲ್ಲಿ ಧರಿಸುವುದಯ್ಯಾ.

ಏಕಾದಶಮುಖದ ಮೂವತ್ತಾರು ಮಣಿಯ ಶಿರಬಳಸಿ ಧರಿಸುವುದಯ್ಯಾ.
ಐದು, ಏಳು, ಹತ್ತು ಮುಖದ ರುದ್ರಾಕ್ಷಿಯಂ ಒಂದೊಂದನಾಗಲಿ,
ದ್ವಿಕರ್ಣದಲ್ಲಿ ಧರಿಸುವುದಯ್ಯಾ.
ಷಡಷ್ಟಮುಖದ ರುದ್ರಾಕ್ಷಿಯ ದ್ವಾತ್ರಿಂಶತ್ ಕಂಠದಲ್ಲಿ ಧರಿಸುವುದಯ್ಯಾ.
ಚತುರ್ಮುಖದ ರುದ್ರಾಕ್ಷಿಯ ಐವತ್ತುನಾಲ್ಕು ಉರಮಾಲೆಯಾಗಿ
ಧರಿಸುವುದಯ್ಯಾ.
ತ್ರಯೋದಶಮುಖದ ರುದ್ರಾಕ್ಷಿಯ ಷೋಡಶ ಷೋಡಶವ,
ಬಾಹುಗಳಲ್ಲಿ ಧರಿಸುವುದಯ್ಯಾ.
ನವಮುಖದ ರುದ್ರಾಕ್ಷಿಯ ದ್ವಾದಶ ದ್ವಾದಶಮಂ ಮಣಿಬಂಧಗಳಲ್ಲಿ
ಧರಿಸುವುದಯ್ಯಾ.
ಚತುರ್ದಶ ಮುಖದ ರುದ್ರಾಕ್ಷಿ ಅಷ್ಟೋತ್ತರಶತವ ಯಜ್ಞೋಪವೀತವಾಗಿ
ಧರಿಸುವುದಯ್ಯಾ.
ಇಂತರಿದು, ರುದ್ರಾಕ್ಷಿಯ ಧರಿಸಿದ ಮಹೇಶ್ವರನ
ಹೆಜ್ಜೆ ಹೆಜ್ಜೆಗೆ ಅಶ್ವಮೇಧದ ಯಜ್ಞದ ಫಲವಪ್ಪುದು
ತಪ್ಪದಯ್ಯಾ ಸೌರಾಷ್ಟ್ರ ಸೋಮೇಶ್ವರ ॥

(ವೀರಶೈವ ಚಿಂತಾಮಣಿ, ಪುಟ ೧೫೮-೧೫೯)

ಈ ರೀತಿಯಾಗಿ ಹೇಳಿದ್ದಾರೆ.

**ವಿಶೇಷ ವಿಚಾರ :**

ಇಂದಿನ ಪರಿಸ್ಥಿತಿಯಲ್ಲಿ ವಿಭಿನ್ನ ಮುಖಗಳ ರುದ್ರಾಕ್ಷಗಳ ಬೆಲೆಯು ವಿಪರೀತ ಮತ್ತು ಅವುಗಳು ಅಷ್ಟೊಂದು ಸಂಖ್ಯೆಯಲ್ಲಿ ದೊರೆಯುವುದೂ ದುರ್ಲಭವಾಗಿದೆ. ಆದರೆ ಐದು ಮುಖದ ರುದ್ರಾಕ್ಷಗಳು ಹೇರಳವಾಗಿ ದೊರೆಯುತ್ತವೆಯಲ್ಲದೇ, ಅವುಗಳ ಬೆಲೆಯಾದರೂ ಬಹಳ ಕಡಿಮೆ. ಕಾರಣ ನೆಲ್ಲಿಕಾಯಿ ಗಾತ್ರದ ಐದು ಮುಖದ ರುದ್ರಾಕ್ಷಗಳನ್ನೇ ಆಯಾ ಅಂಗಗಳಿಗೆ ಹೇಳಿದ ಸಂಖ್ಯೆಯ ಮಾಲೆಗಳನ್ನು ಮಾಡಿಕೊಂಡು ಧರಿಸಿಕೊಳ್ಳಬಹುದು. ಈ ರುದ್ರಾಕ್ಷಮಾಲೆಗಳನ್ನು ಹೆಣೆಯುವಾಗ-

''ತನ್ಮುಖೇ ಮುಖಂ ತತ್ಪುಚ್ಛೇ ಪುಚ್ಛಂ''

(ಅಕ್ಷಮಾಲಾ ಉ. ಪುಟ. ೪೨೦)

ಎಂಬ ಈ ಅಕ್ಷಮಾಲಾ ಉಪನಿಷತ್ತಿನ ಉಕ್ತಿಯಂತೆ, ರುದ್ರಾಕ್ಷದ ಮುಖಕ್ಕೆ ಮುಖ ಹಾಗೂ ಪುಚ್ಛಕ್ಕೆ ಪುಚ್ಛವನ್ನು ಕೂಡಿಸಿ ಹೆಣೆಯಬೇಕು. ಈ ರೀತಿಯಾಗಿ ಐದು ಮುಖದ ರುದ್ರಾಕ್ಷಗಳನ್ನಾದರೂ ಧರಿಸಿ, ಇಷ್ಟಲಿಂಗಪೂಜೆಯನ್ನು ಮಾಡಿಕೊಂಡರೆ, ಪೂರ್ವೋಕ್ತ ಫಲಗಳೆಲ್ಲವೂ ಪ್ರಾಪ್ತವಾಗುವವು.

**ರುದ್ರಾಕ್ಷಧಾರಣದಿಂದ ಷಡಧ್ವಶುದ್ಧಿ :**

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಉಪದೇಶಿಸಿದ ಪ್ರಕಾರ, ಆಯಾ ಸ್ಥಾನದಲ್ಲಿ ರುದ್ರಾಕ್ಷಧಾರಣವನ್ನು ಮಾಡಿಕೊಂಡಾಗ ಷಡಧ್ವಗಳ ಶುದ್ಧಿಯಾಗುವುದೆಂಬ ಭಾವವನ್ನು ಶ್ರೀ ಮರಿತೊಂಟದಾರ್ಯರು-

ಅಯಂ ಭಾವಃ ಶುದ್ಧ ಮಿಶ್ರಸಂಕೀರ್ಣಭುವನಾಧೀಶಶಿವಾಷ್ಟ ವಿದ್ಯೇಶ್ವರ ಶತರುದ್ರ ಸಂಖ್ಯಾತ ಯಜ್ಞೋಪವೀತಧಾರಣೇನ ಭುವನಾಧ್ವಶುದ್ಧಿಃ । ವರ್ಣ ಸಂಖ್ಯಾತವ ಕ್ಷೋಮಾಲಯಾ ವರ್ಣಾಧ್ವಶುದ್ಧಿಃ । ಪದಸಂಖ್ಯಾತ ಮಣಿಬಂಧ ಬಾಹು ಕಂಠಮಾಲಯಾ ಪದಾಧ್ವಶುದ್ಧಿಃ । ಷಡಂಗ–ಪಂಚಬ್ರಹ್ಮ– ಪ್ರಣವಮಂತ್ರ ಸಂಖ್ಯಾತಕರ್ಣಾ ಭರಣೇನ ಮಂತ್ರಾಧ್ವಶುದ್ಧಿಃ । ಶಿವ–ಶಕ್ತ್ಯಾತ್ಮಕಕರ್ಣಾಭರಣೇನ ವಾತತ್ಸಂಖ್ಯಾತಮಸ್ತ ಕಮಾಲಯಾ ತತ್ತ್ವಾಧ್ವಶುದ್ಧಿಃ । ಅಷ್ಟತ್ರಿಂಶತ್ಕಲಾಪೂರ್ಣ ಸೋಮ ಸೂರ್ಯಾಗ್ನಿ ಲಕ್ಷಣಶಿರೋರಂಧ್ರಮಾಲಯಾ ಕಲಾಧ್ವಶುದ್ಧಿಃ । ಏವಂರೂಪ– ಷಡಧ್ವಕಾರಣೀ ಭೂತ–ಪರಶಿವ ಬ್ರಹ್ಮಮಯ ಶಿಖಾಗತೈಕ ರುದ್ರಾಕ್ಷಧಾರಣೇನ ಪರಶಿವಸ್ವರೂಪ ಏವ, ''ಯೋ ರುದ್ರಾಕ್ಷಂ ಧತ್ತೇ ಸ ಸತ್ಯಂ ಪರಮಃ ಶಿವಃ, ಸ ಸತ್ಯಂ ಪರಮಃ ಶಿವ ಇತಿ ಶ್ರುತೇಃ''.

(ತತ್ತ್ವಪ್ರದೀಪಿಕಾ ವ್ಯಾಖ್ಯಾ ಪುಟ ೧೧೬, ವಾರದ ಪ್ರಕಾಶನ ಸೊಲ್ಲಾಪುರ)

ಈ ರೀತಿಯಾಗಿ ನಿರೂಪಿಸಿದ್ದಾರೆ.

ತಾತ್ಪರ್ಯವೇನೆಂದರೆ– ವೀರಶೈವ ಸಿದ್ಧಾಂತದಲ್ಲಿ ಶಿವದೀಕ್ಷೆಯನ್ನು ಮಾಡುವಾಗ ಅಂಗ–ಲಿಂಗಗಳೆರಡನ್ನೂ ಸಂಸ್ಕರಿಸಲಾಗುವುದು. ಅಲ್ಲಿ ಬರುವ ಅನೇಕ ಸಂಸ್ಕಾರಗಳಲ್ಲಿ ಷಡಧ್ವನ್ಯಾಸ (ಷಡಧ್ವಶುದ್ಧಿ)ವೂ ಒಂದು ಮಹತ್ತ್ವಪೂರ್ಣವಾದ ಸಂಸ್ಕಾರವು. ವರ್ಣ, ಪದ, ಮಂತ್ರ, ಕಲಾ, ತತ್ತ್ವ ಮತ್ತು ಭುವನಗಳೇ ಷಡಧ್ವಗಳು. ಇವುಗಳಲ್ಲಿ ಮೊದಲಿನ ಮೂರು ಶಬ್ದಾಧ್ವಗಳೆಂತಲೂ, ಕೊನೆಯ ಮೂರು ಅರ್ಥಾಧ್ವಗಳೆಂತಲೂ ಪ್ರತಿಪಾದಿಸಲ್ಪಡುತ್ತವೆ. ಈ ಷಡಧ್ವಗಳು ಶಿವನ ವಿಭಿನ್ನ ಸ್ವರೂಪಗಳು. ದೀಕ್ಷೆಯನ್ನು ಹೊಂದುವ ಜೀವಾತ್ಮನ ಶರೀರದಲ್ಲಿ ಸಂಸ್ಕಾರ ವಿಶೇಷದಿಂದ ಇವುಗಳನ್ನು ಸಂಬಂಧ ಗೊಳಿಸುವುದೇ ಷಡಧ್ವನ್ಯಾಸವು. ಅಂತೆಯೇ ಸದ್ಗುರುಗಳು ಕ್ರಿಯಾದೀಕ್ಷಾಂತರ್ಗತ ವಾದ ಸ್ವಸ್ತಿಕಾರೋಹಣ ದೀಕ್ಷೆಯನ್ನು ಮಾಡುವಾಗ, ತಾಯಿಯ ಗರ್ಭದಿಂದ ಉತ್ಪನ್ನ ವಾದ ಶರೀರದ ಮಾಂಸ ಪಿಂಡತ್ವವನ್ನು ನಿವೃತ್ತಿಗೊಳಿಸಲೋಸುಗ, ಆಪಾದ ಮಸ್ತಕ ಪರ್ಯಂತರ ಆರುಸ್ಥಾನಗಳಲ್ಲಿ ಸಂಹಾರ ಕ್ರಮದಿಂದ ಷಡಧ್ವನ್ಯಾಸವನ್ನೂ, ಮಂತ್ರ ಪಿಂಡತ್ವ ಪ್ರಾಪ್ತಿಗಾಗಿ ಉತ್ಪತ್ತಿ ಕ್ರಮದಿಂದ ಆಮಸ್ತಕ ಪಾದಪರ್ಯಂತವಾಗಿ ಷಡಂಗ ಗಳಲ್ಲಿ ಷಡಧ್ವನ್ಯಾಸವನ್ನೂ ಮಾಡುತ್ತಾರೆ. ಈ ಷಡಧ್ವನ್ಯಾಸ ಸಂಸ್ಕಾರದಿಂದ ದೀಕ್ಷಿತನಿಗೆ, ಮಾಂಸ ಪಿಂಡತ್ವವು ನಿವೃತ್ತವಾಗಿ, ಮಂತ್ರಪಿಂಡತ್ವ ಪ್ರಾಪ್ತವಾಗುವುದು. ಇದೊಂದು ಭಾವನಾತ್ಮಕ ಸಂಸ್ಕಾರ. ತನ್ನ ಶರೀರದಲ್ಲಿ ಷಡಧ್ವಗಳಿವೆ ಎಂಬ ಭಾವವು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ಅವನ ಶರೀರವು ಮಂತ್ರಪಿಂಡವೇ. ಈ ಭಾವವು ಸಾಧಕ ನಲ್ಲಿ ಸದಾ ಉಳಿಯಲೆಂಬ ಉದ್ದೇಶದಿಂದ ಪೂಜ್ಯರಾದ ಶ್ರೀ ರೇಣುಕರು ಆಯಾ ಅಧ್ವಗಳ ಸಂಖ್ಯೆಯ ರುದ್ರಾಕ್ಷಗಳನ್ನು ಶರೀರದ ಆರು ಅಂಗಗಳಲ್ಲಿ ಧರಿಸಿಕೊಳ್ಳಲು ಉಪದೇಶಿಸಿದ್ದಾರೆ. ಅವರ ಉಪದೇಶಾನುಸಾರವಾಗಿ ಶುದ್ಧ–ಮಿಶ್ರ–ಸಂಕೀರ್ಣ ಭುವನಗಳಿಗೆ ಎಂಟು ಜನ ಶಿವನ ವಿದ್ಯೇಶ್ವರರು ಹಾಗೂ ನೂರು ಜನ ರುದ್ರರು ಅಧಿಪತಿಗಳಾಗಿರುತ್ತಾರೆ. ಇವರ ದ್ಯೋತಕವಾಗಿ ಒಂದು ನೂರ ಎಂಟು ರುದ್ರಾಕ್ಷಗಳ ಒಂದು ಸರವನ್ನು ಯಜ್ಞೋಪವೀತದಂತೆ ಧರಿಸಿದರೆ ದೇಹದಲ್ಲಿ ಭುವನಾಧ್ವನ್ಯಾಸವು.

''ಅ'' ಕಾರದಿಂದ ''ಕ್ಷ'' ಕಾರದವರೆಗೆ ಐವತ್ತುಅಕ್ಷರಗಳಿರುವುದರಿಂದ, ಎದೆಯ ಮೇಲೆ ಐವತ್ತು ರುದ್ರಾಕ್ಷಗಳ ಒಂದು ಮಾಲೆಯನ್ನು ಧರಿಸೋಣದರಿಂದ ವರ್ಣಾಧ್ವ ನ್ಯಾಸವು. ಮುಂಗೈ, ರಟ್ಟೆ ಮತ್ತು ಕಂಠಗಳಲ್ಲಿ ಒಟ್ಟು ಎಂಭತ್ತೆಂಟು ರುದ್ರಾಕ್ಷಗಳನ್ನು ವ್ಯೋಮವ್ಯಾಪಿ ಮತ್ತು ವ್ಯೋಮರೂಪ ಮೊದಲಾದ ಎಂಭತ್ತೆಂಟು ಪದಗಳ ಪ್ರತೀಕ ವಾಗಿ ಧರಿಸುವುದರಿಂದ ಪದಧ್ವನ್ಯಾಸವು. ಎರಡೂ ಕಿವಿಗಳಲ್ಲಿ ಧರಿಸಲ್ಪಡುವ ಹನ್ನೆರಡು ರುದ್ರಾಕ್ಷಗಳು ನ, ಮಃ, ಶಿ, ವಾ, ಯ, ಎಂಬ ಪಂಚಾಕ್ಷರ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನಗಳೆಂಬ ಪಂಚಬ್ರಹ್ಮಮಂತ್ರ ಹಾಗೂ ಪ್ರಣವ– ಹೀಗೆ ಒಟ್ಟು ಹನ್ನೆರಡು ಮಂತ್ರಗಳ ಪ್ರತೀಕವಾಗಿರುವುದರಿಂದ ಮಂತ್ರಾಧ್ವನ್ಯಾಸವು. ಶಿವತತ್ತ್ವಾದಿ ಪೃಥಿವೀ ತತ್ತ್ವಾಂತಗಳಾದ ಮೂವತ್ತಾರು ತತ್ತ್ವಗಳ ಪ್ರತೀಕವಾಗಿ ಶಿರಸ್ಸಿ ನಲ್ಲಿ ಧರಿಸಿದ ಮೂವತ್ತಾರು ರುದ್ರಾಕ್ಷಗಳಿಂದ ತತ್ತ್ವಾಧ್ವನ್ಯಾಸವು. ತಲೆಯಲ್ಲಿ ಧರಿಸಲ್ಪಡುವ ಮೂರು ರುದ್ರಾಕ್ಷಗಳು ಸೂರ್ಯ, ಚಂದ್ರ ಮತ್ತು ಅಗ್ನಿಯ ಪ್ರತೀಕ ಗಳಾಗಿರುತ್ತವೆ. ಇವುಗಳಲ್ಲಿ ಸೂರ್ಯನಿಗೆ ಹನ್ನೆರಡು ತಲೆ, ಚಂದ್ರನಿಗೆ ಹದಿನಾರು ತಲೆ ಮತ್ತು ಅಗ್ನಿಗೆ ಹತ್ತು ತಲೆಗಳಿರುತ್ತವೆ. ಹೀಗೆ ಒಟ್ಟು ಮೂರು ರುದ್ರಾಕ್ಷಗಳಲ್ಲಿ ಮೂವತ್ತೆಂಟು ತಲೆಗಳಿರುವುದರಿಂದ ಇವುಗಳ ಧಾರಣದಿಂದ ಕಲಾಧ್ವನ್ಯಾಸವೂ ಆಗುವುದು.

ಇನ್ನು, ಈ ಎಲ್ಲ ಅಧ್ವಗಳಿಗೆ ಮೂಲಕಾರಣೀಭೂತನಾದ ಪರಶಿವನ ಪ್ರತೀಕ ವಾಗಿ ಶಿಖಾಸ್ಥಾನದಲ್ಲಿ ಒಂದು ಮುಖದ ಒಂದು ರುದ್ರಾಕ್ಷವನ್ನು ಧರಿಸುವುದರಿಂದ, ''ಯೋ ರುದ್ರಾಕ್ಷಂ ಧತ್ತೇ ಸ ಸತ್ಯಂ ಪರಮಃ ಶಿವಃ, ಸ ಸತ್ಯಂ ಪರಮಃ ಶಿವಃ'' ಎಂಬ ಉಪನಿಷದ್ವಾಕ್ಯಾನುಸಾರವಾಗಿ, ಅವನು ಸಾಕ್ಷಾತ್ ಶಿವಸ್ವರೂಪನೇ ಆಗುತ್ತಾನೆ. ಹೀಗೆ ವಿಧಿವತ್ತಾದ ರುದ್ರಾಕ್ಷಧಾರಣದಿಂದ ಶರೀರದಲ್ಲಿ ಷಡಧ್ವನ್ಯಾಸ ಅರ್ಥಾತ್ ಷಡಧ್ವ ಶುದ್ಧಿಯಾಗಿ, ಧಾರಕನ ಶರೀರದ ಮಾಂಸಪಿಂಡಭಾವವು ತೊಲಗಿ, ಮಂತ್ರಪಿಂಡ ಭಾವವಾವರಿಸಿ, ಅವನು ಸಾಕ್ಷಾತ್ ಶಿವಸ್ವರೂಪನಾಗುವನು.

ಆದಕಾರಣ, ಶ್ರೀ ಜಗದ್ಗುರು ರೇಣುಕರ ಉಪದೇಶದಂತೆ, ಶಾಸ್ತ್ರೋಕ್ತವಿಧಿಗನು ಸಾರವಾಗಿ, ಭಾವಪೂರ್ಣವಾಗಿ, ರುದ್ರಾಕ್ಷಧಾರಣವನ್ನು ಮಾಡಿಕೊಂಡು, ಇಷ್ಟಲಿಂಗ ಪೂಜಾರೂಪವಾದ ನಿತ್ಯಕರ್ಮವನ್ನು ತಪ್ಪದೇ ಮಾಡಿ, ಪ್ರಾಣ–ಭಾವಲಿಂಗಗಳ ಅನುಸಂಧಾನವನ್ನು ಸಾಧಿಸಿ, ಶಿವಸಾಯುಜ್ಯವನ್ನು ಪಡೆಯಬೇಕು.

ರುದ್ರಾಕ್ಷ ಧಾರಣವಿಧಿ :

ಶಿವಪೂಜಕನು ದೇಶಕಾಲಗಳನ್ನು ಸಂಕೀರ್ತಿಸಿ, ''ಮಮ ಶಿವಜ್ಞಾನ ಸಂಪತ್ತ್ಯರ್ಥಂ ರುದ್ರಾಕ್ಷಧಾರಣಂ ಕರಿಷ್ಯೇ'' ಎಂಬುದಾಗಿ ಸಂಕಲ್ಪವನ್ನು ಮಾಡಿ, ತಾನು ಧರಿಸುವ ಎಲ್ಲ ರುದ್ರಾಕ್ಷಗಳನ್ನೂ ತೆಗೆದುಕೊಂಡು ಭಕ್ತಿಯಿಂದ ಪೂಜಿಸಿ–

ರುದ್ರಾಕ್ಷವೃಕ್ಷಬೀಜಾಯ ಭೂತಿಸಂಭೂತಿಹೇತವೇ ।
ನೇತ್ರತ್ರಯಾಯ ರುದ್ರಾಯ ನಮೋ ಲೋಕಹಿತಾರ್ಥಿನೇ ॥

ಈ ಮಂತ್ರವನ್ನು, ಪಠಿಸುತ್ತ ರುದ್ರಾಕ್ಷಗಳಿಗೆ ನಮಸ್ಕರಿಸಿ, ಮುಂದೆ ಹೇಳುವ ಮಂತ್ರಗಳನ್ನು ಹೇಳುತ್ತ ರುದ್ರಾಕ್ಷಗಳನ್ನು ಆಯಾ ಸ್ಥಾನದಲ್ಲಿ ಧರಿಸಿಕೊಳ್ಳಬೇಕು.

| ಮಂತ್ರಗಳು | ಸ್ಥಾನಗಳು | ಮಣಿಸಂಖ್ಯೆ |
|---|---|---|
| ಓಂ ಸದಾಶಿವಾಯ ನಮಃ | ಶಿಖಾಸ್ಥಾನದಲ್ಲಿ | ೧ |
| ಓಂ ವಹ್ನಿ ಸೂರ್ಯಸೋಮಾಧಿಪಾಯ ನಮಃ | ಶಿರಸ್ಸಿನಲ್ಲಿ | ೩ |
| ಓಂ ಷಟ್ತ್ರಿಂಶತತ್ತ್ವಾತ್ಮನೇ ನಮಃ | ಮಸ್ತಕದಲ್ಲಿ | ೩೬ |
| ಓಂ ಷಡ್ಬ್ರಹ್ಮಣೇ ನಮಃ | ಬಲಗಿವಿಯಲ್ಲಿ | ೬ |
| ಓಂ ಅಷ್ಟಮೂರ್ತ್ಯಾತ್ಮನೇ ನಮಃ | ಎಡಗಿವಿಯಲ್ಲಿ | ೬ |
| ಓಂ ತ್ರ್ಯಂಬಕಕಲಾತ್ಮನೇ ನಮಃ | ಕಂಠದಲ್ಲಿ | ೩೨ |
| ಓಂ ಶ್ರೀಕಂಠಾದಿಮೂರ್ತ್ಯಾತ್ಮನೇ ನಮಃ | ಎದೆಯಲ್ಲಿ | ೫೦ |
| ಓಂ ಸುಖಾಸನಾದಿಷೋಡಶಮೂರ್ತ್ಯಾತ್ಮಕಾಯ ಶ್ರೀಕಂಠಾಯ ನಮಃ | ಬಲತೋಳಿನಲ್ಲಿ | ೧೬ |
| ಓಂ ಸೋಮಕಲಾತ್ಮಕಾಯ ಶ್ರೀ ಸೋಮನಾಥಾಯ ನಮಃ | ಎಡತೋಳಿನಲ್ಲಿ | ೧೬ |
| ಓಂ ದ್ವಾದಶಾದಿತ್ಯಾತ್ಮನೇ ಶ್ರೀ ಮಹಾದೇವಾಯ ನಮಃ | ಬಲಮುಂಗೈಯಲ್ಲಿ | ೧೨ |
| ಓಂ ಕೇಶವಾದಿಮೂರ್ತ್ಯಧಿಪಾಯ ಶ್ರೀ ಮದುಮಾಪತಯೇ ನಮಃ | ಎಡಮುಂಗೈಯಲ್ಲಿ | ೧೨ |
| ಓಂ ಶತರುದ್ರವಿದ್ಯೇಶ್ವರಾತ್ಮನೇ ಶ್ರೀ ವಿಶ್ವೇಶ್ವರಾಯ ನಮಃ | ಯಜ್ಞೋಪವೀತ | ೧೦೮ |

ಹೀಗೆ "ಧಾರಯೇತ್ ಸರ್ವಕಾಲಂ ತು ರುದ್ರಾಕ್ಷಂ ಶಿವಪೂಜಕಃ" ಎಂಬ ಶ್ರೀ ಜಗದ್ಗುರು ರೇಣುಕರ ಆದೇಶದಂತೆ, ಸರ್ವಾಂಗಗಳಲ್ಲಿ ರುದ್ರಾಕ್ಷಗಳನ್ನು ಧರಿಸಿಕೊಳ್ಳುವಾಗ, ಮೇಲೆ ಹೇಳಿದ ಮಂತ್ರಗಳನ್ನು ಪಠಿಸುತ್ತ ಆಯಾ ಸ್ಥಾನಗಳಲ್ಲಿ ರುದ್ರಾಕ್ಷಗಳನ್ನು ಧಾರಣ ಮಾಡಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ಸೆಪ್ಟೆಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ ಸೋಲಾಪೂರ)



ಏವಂ ರುದ್ರಾಕ್ಷಧಾರೀ ಯಃ ಸರ್ವಕಾಲೇ ತು ವರ್ತತೇ
ತಸ್ಯ ಪಾಪಕಥಾ ನಾಸ್ತಿ ಮೂಢಸ್ಯಾಪಿ ನ ಸಂಶಯಃ ॥ ೧೫ ॥

ಪೂರ್ವದಲ್ಲಿ ಹೇಳಿದ ಶಾಸ್ತ್ರೀಯ ಪದ್ಧತಿಗನುಸಾರವಾಗಿ, ರುದ್ರಾಕ್ಷಗಳನ್ನು ಧರಿಸಿದ ಮನುಷ್ಯನು ಮೂರ್ಖನಾಗಿದ್ದರೂ, ಅವನು ಯಾವಾಗಲೂ ರುದ್ರಾಕ್ಷಧಾರಿಯಾಗಿದ್ದರೆ, ಅವನಿಗೆ ಯಾವ ಪಾಪದ ಲೇಪವೂ ಆಗಲಾರದು. ಈ ವಿಷಯದಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಬ್ರಹ್ಮಹಾ ಮದ್ಯಪಾಯೀ ಚ ಸ್ವರ್ಣಹೃದ್ಗುರುತಲ್ಪಗಃ ।
ಮಾತೃಹಾ ಪಿತೃಹಾ ಚೈವ ಭ್ರೂಣಹಾ ಕೃತಘಾತಕಃ ॥
ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ ॥ ೧೬ ॥

ಬ್ರಹ್ಮಹತ್ಯೆ, ಮದ್ಯಪಾನ, ಸ್ವರ್ಣಹರಣ, ಗುರುಪತ್ನೀ ಗಮನ, ಮಾತೃಹತ್ಯೆ, ಗರ್ಭಹತ್ಯೆ ಮತ್ತು ವಿಶ್ವಾಸ ಘಾತಕಗಳೆಂಬ ಮಹಾಪಾತಕಗಳನ್ನಾಚರಿಸಿದ ಕಡುಪಾಪಿಯಾದರೂ, ರುದ್ರಾಕ್ಷವನ್ನು ಧರಿಸೋಣದರಿಂದ, ಅವನು ಸರ್ವಪಾಪವಿನಿರ್ಮುಕ್ತನಾಗುತ್ತಾನೆ.

ದರ್ಶನಾತ್ಸ್ಪರ್ಶನಾಚ್ಚೈವ ಸ್ಮರಣಾದಪಿ ಪೂಜನಾತ್ ।
ರುದ್ರಾಕ್ಷಧಾರಣಾಲ್ಲೋಕೇ ಮುಚ್ಯಂತೇ ಪಾತಕೈರ್ಜನಾಃ ॥ ೧೭ ॥

ಪಾವನಗಳಾದ ರುದ್ರಾಕ್ಷಗಳನ್ನು ನೋಡುವುದರಿಂದಲೂ, ಮುಟ್ಟುವುದರಿಂದಲೂ, ಸ್ಮರಿಸುವುದರಿಂದಲೂ, ಪೂಜಿಸುವದರಿಂದಲೂ, ಅದರಂತೆ ಧಾರಣಮಾಡಿಕೊಳ್ಳುವುದರಿಂದಲೂ, ಜಗತ್ತಿನಲ್ಲಿಯ ಜನರು ಸರ್ವ ಪಾಪಗಳಿಂದಲೂ ವಿನಿರ್ಮುಕ್ತರಾಗುತ್ತಾರೆ.

ಬ್ರಾಹ್ಮಣೋವಾಂತ್ಯಜೋ ವಾಪಿ ಮೂರ್ಖೋವಾ ಪಂಡಿತೋಽಪಿ ವಾ ।
ರುದ್ರಾಕ್ಷಧಾರಣಾದೇವ ಮುಚ್ಯಂತೇ ಸರ್ವಪಾತಕೈಃ ॥ ೧೮ ॥

ಬ್ರಾಹ್ಮಣನಾಗಲಿ, ಚಾಂಡಾಲನಾಗಲಿ, ಮೂರ್ಖನಾಗಲಿ, ಪಂಡಿತನೇ ಆಗಿರಲಿ, ರುದ್ರಾಕ್ಷವನ್ನು ಧರಿಸೋಣದರಿಂದಲೇ, ಅವರು ಸರ್ವಪಾಪವಿನಿರ್ಮುಕ್ತರಾಗುತ್ತಾರೆ. ಈ ರುದ್ರಾಕ್ಷಧಾರಣ ವಿಷಯದಲ್ಲಿ ವರ್ಣಾಶ್ರಮಗಳ ತಾರತಮ್ಯವೇ ಇಲ್ಲ; ಅಂದರೆ ಎಲ್ಲರಿಗೂ ಧಾರಣಾಧಿಕಾರವುಂಟು.

**ರುದ್ರಾಕ್ಷಧಾರಣದಿಂದ ಪಾತಕಗಳ ನಿವೃತ್ತಿ :**

ರುದ್ರನೇತ್ರ ಸಂಜಾತಗಳಾದ, ಪಾವನಗಳಾದ, ರುದ್ರಾಕ್ಷಗಳನ್ನು ಪೂರ್ವದಲ್ಲಿ ಹೇಳಿದ ಶಾಸ್ತ್ರೀಯ ವಿಧಿಗನುಸಾರವಾಗಿ ಯಾರು ಸರ್ವಕಾಲದಲ್ಲಿಯೂ ಧರಿಸಿಕೊಳ್ಳುತ್ತಾರೆಯೋ, ಅವರು ಮೂಢರೇ ಆಗಿದ್ದರೂ, ಅವರಿಗೆ ಪಾಪವೇ ಸ್ಪರ್ಶವಾಗುವದಿಲ್ಲ, ಎಂಬುದಾಗಿ ಉಪದೇಶಿಸಿದ ಶ್ರೀ ಜಗದ್ಗುರು ರೇಣುಕಾಚಾರ್ಯರು– "ರುದ್ರಾಕ್ಷ

ಧಾರಣಾಲ್ಲೋಕೇ ಮುಚ್ಯಂತೇ ಸರ್ವಪಾತಕೈಃ'' ಅಂದರೆ, ಬ್ರಹ್ಮಹತ್ಯಾ-ಮದ್ಯಪಾನ ಮುಂತಾದ ಅನೇಕ ಪಾತಕಗಳಿಂದಲೂ, ರುದ್ರಾಕ್ಷಧಾರಿಯು ನಿರ್ಮುಕ್ತನಾಗುತ್ತಾ ನೆಂಬುದಾಗಿ ಉಪದೇಶಿಸಿದ್ದನ್ನು ನೋಡಿದರೆ, ಇದರ ಧಾರಣದ ಮರ್ಮವು ತಿಳಿದು ಬರುತ್ತದೆ. ಇಲ್ಲಿ ಪ್ರಸಂಗಾನುಸಾರವಾಗಿ ಪಾತಕಗಳ ಸ್ವರೂಪವನ್ನು ಸ್ಮೃತಿಗ್ರಂಥಗಳ ಆಧಾರದಿಂದ ವಿಚಾರಿಸಿ, ಅವುಗಳ ಪರಿಹಾರೋಪಾಯದ ಬಗ್ಗೆ ಪರ್ಯಾ ಲೋಚಿಸೋಣ.

**ಪಾತಕಗಳು :**

''ಪಾತಯತಿ=ಅಧೋ ಗಮಯತಿ, ದುಷ್ಕ್ರಿಯಾಕಾರಿಣಮಿತಿ=ಪಾತಕಂ'' ಎಂಬ ವ್ಯುತ್ಪತ್ತಿಯ ಮೇರೆಗೆ, ದುಷ್ಕರ್ಮವನ್ನು ಮಾಡಿದವನನ್ನು ಅಧೋಗತಿಗೆ ಒಯ್ಯುವ ಪಾಪಗಳನ್ನು ''ಪಾತಕ''ವೆಂಬುದಾಗಿ ಕರೆದಿದ್ದಾರೆ. ಈ ಪಾತಕವು (೧) ಅತಿಪಾತಕ, (೨) ಮಹಾಪಾತಕ, (೩) ಅನುಪಾತಕ, (೪) ಉಪಪಾತಕ, (೫) ಸಂಕರೀಕರಣ, (೬) ಅಪಾತ್ರೀಕರಣ, (೭) ಜಾತಿ ಭ್ರಂಶಕರಣ, (೮) ಮಲಾವಹ ಮತ್ತು (೯) ಪ್ರಕೀರ್ಣಕ ಎಂಬುದಾಗಿ ಒಂಭತ್ತು ವಿಧವಾಗಿರುತ್ತದೆ.

**ಅತಿಪಾತಕ :**

ಅತಿಶಯವಾದ ಪಾತಕವೇ ಅತಿಪಾತಕವು. ಅಂದರೆ ಅತಿ ದೊಡ್ಡದಾದ ಪಾಪ ವೆಂದರ್ಥ. ''ಮಾತೃ-ದುಹಿತೃ-ಸ್ನುಷಾಗಮನಂ ಪುಂಸಾಂ; ಪುತ್ರ-ಪಿತೃ-ಶ್ವಶುರ ಗಮನಂ ಸ್ತ್ರೀಣಾಂ'' ಎಂಬ ಕೋಶದ ವಾಕ್ಯಾನುಸಾರವಾಗಿ, ಪುರುಷರು ತನ್ನ ತಾಯಿ, ತಂಗಿ ಅಥವಾ ಸೊಸೆಯಂದಿರ ಜೊತೆಗೆ, ಅದರಂತೆ ಸ್ತ್ರೀಯರು ತನ್ನ ಮಗ, ತಂದೆ ಅಥವಾ ಮಾವನ ಜೊತೆಗೆ ಭೋಗವನ್ನು ಮಾಡಿದರೆ, ಅದರಿಂದ ಉತ್ಪನ್ನವಾದ ಬಹು ದೊಡ್ಡದಾದ ಪಾಪಕ್ಕೆ ''ಅತಿ ಪಾತಕ''ವೆನ್ನುವರು.

**ಮಹಾಪಾತಕಗಳು :**

''ಮಹತ್=ಅತಿಶಯಂ ಪಾತಕಂ=ಮಹಾಪಾತಕಂ'' ಎಂಬ ವ್ಯುತ್ಪತ್ತಿಯ ಮೇರೆಗೆ, ದೊಡ್ಡದಾದ ಪಾಪವನ್ನು ಮಹಾಪಾತಕವೆನ್ನುವರು.

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಮಹಾಂತಿ ಪಾತಕಾನ್ಯಾಹುಃ ಸಂಸರ್ಗಶ್ಚಾಪಿ ತೈಃ ಸಹ ॥

(ಮನುಸ್ಮೃತಿ ೧೧-೫೫)

ಎಂಬ ಈ ಸ್ಮೃತಿವಾಕ್ಯದಲ್ಲಿ, ಮನು ಮಹರ್ಷಿಯು-(೧) ಬ್ರಹ್ಮಹತ್ಯ, (೨) ಮದ್ಯ ಪಾನ, (೩) ಕಳ್ಳತನ, (೪) ಗುರುಪತ್ನೀಗಮನಗಳೆಂಬ ನಾಲ್ಕು ನಿಷಿದ್ಧ ವ್ಯವಹಾರಗಳನ್ನು ಮಹಾಪಾತಕಗಳೆಂದು ಪರಿಗಣಿಸಿರುವನಲ್ಲದೇ, ಈ ಪಾತಕಿಗಳ ಸಹವಾಸವನ್ನು ಮಾಡುವುದೂ ಸಹ ಐದನೇ ಮಹಾಪಾತಕವೆಂದು ಹೇಳಿದ್ದಾನೆ. ಹೀಗೆ ಇವು ಐದೂ ಮಹಾಪಾತಕಗಳೆಂದು ಕರೆಯಿಸಿಕೊಳ್ಳಲ್ಪಡುತ್ತವೆ.

ಬ್ರಹ್ಮಹತ್ಯೆ :

"ಬ್ರಹ್ಮ ಜಾನಾತೀತಿ ಬ್ರಾಹ್ಮಣಃ" ಎಂಬ ವ್ಯುತ್ಪತ್ತಿಗನುಸಾರವಾಗಿ, ಬ್ರಹ್ಮಜ್ಞಾನ ಸಂಪನ್ನನಾದ ಬ್ರಾಹ್ಮಣನ ಪ್ರಾಣಾಪಹರಣವೇ ಬ್ರಹ್ಮಹತ್ಯೆಯು. ರಾಗ-ದ್ವೇಷ ಗಳಿಂದಾಗಲಿ, ಪ್ರಮಾದದಿಂದಲೇ ಆಗಲಿ, ಸ್ವಪ್ರವೃತ್ತಿಯಿಂದಾಗಲಿ ಅಥವಾ ಅನ್ಯರ ಪ್ರೇರಣೆಯಿಂದಾಗಲಿ, ಇದು ಸಂಭವಿಸಬಹುದು. ವೇದಾಧ್ಯಯನವನ್ನು ಮಾಡಿದ ಬ್ರಹ್ಮಜ್ಞಾನ ಸಂಪನ್ನನಾದ ವ್ಯಕ್ತಿಯು ಏನಾದರೂ ಅಪರಾಧವನ್ನು ಎಸಗಿದಾಗ ಅವನನ್ನು ಸಂಹರಿಸಲೇಬೇಕಾದ ಪ್ರಸಂಗ ಬಂದು, ಸಂಹರಿಸಿದರೂ, ಹಾಗೆ ಸಂಹರಿಸಿದವನಿಗೆ ಬ್ರಹ್ಮಹತ್ಯಾಪಾತಕವು ಪ್ರಾಪ್ತವಾಗುವದೆಂಬ ವಿಷಯವು, ನಮ್ಮ ಪ್ರಾಚೀನವಾದ ಪುರಾಣ ಸಾಹಿತ್ಯದಿಂದ ಕಂಡುಬರುತ್ತದೆ. ಹೇಗೆಂದರೆ-

ಸೃಷ್ಟಿಕರ್ತನಾದ ಬ್ರಹ್ಮನ ಶಿರಸ್ಸನ್ನು ಕತ್ತರಿಸಿದ ಕಾರಣದಿಂದ ಕಾಲ ಭೈರವನಿಗೆ ಬ್ರಹ್ಮಹತ್ಯಾ ಪಾತಕವು ಪ್ರಾಪ್ತವಾಯಿತೆಂಬ ಕಥೆಯು ಶ್ರೀ ಕಾಶಿ ಖಂಡದ ೩೦ ಮತ್ತು ೩೧ನೇ ಅಧ್ಯಾಯದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಒಂದಾನೊಂದು ಸಮಯದಲ್ಲಿ ಮೇರು ಪರ್ವತದ ಶಿಖರದ ಮೇಲೆ ಕುಳಿತಿರುವ ಬ್ರಹ್ಮದೇವರ ಬಳಿ ಅನೇಕ ಮಹರ್ಷಿಗಳು ಬಂದು ಪ್ರಶ್ನಿಸುತ್ತಾರೆ-"ಹೇ ಬ್ರಹ್ಮನೇ ! ಈ ಪ್ರಪಂಚದಲ್ಲಿ ಅವಿನಾಶಿಯೂ, ಶ್ರೇಷ್ಠವೂ ಆದ ಪರಮತತ್ತ್ವವು ಯಾವುದು ?" ಎಂದು. ಆಗ ಬ್ರಹ್ಮನು-"ಎಲೈ ಮುನಿಗಳಿರಾ ! ಈ ಪ್ರಪಂಚದಲ್ಲಿ ಪರಮ ತತ್ತ್ವ ವೆಂದರೆ ನಾನೇ. ಈ ಪ್ರಪಂಚದ ಉತ್ಪತ್ತಿ-ಸ್ಥಿತಿ-ಲಯಗಳನ್ನು ನಾನೇ ಮಾಡುತ್ತೇ ನೆಂದು" ಗರ್ವದಿಂದ ನುಡಿದನು. ಬ್ರಹ್ಮನ ಈ ನುಡಿಗಳನ್ನು ಕೇಳಿ ಇವನ ದುರಹಂಕಾರ ವನ್ನು ದೂರ ಮಾಡುವುದಕ್ಕಾಗಿ, ವಿಷ್ಣು ಪರಮಾತ್ಮ ಅಲ್ಲಿ ಪ್ರಕಟವಾಗಿ, ಎಲೋ ಬ್ರಹ್ಮನೇ ! ನೀನು ಕೇವಲ ಸೃಷ್ಟಿಕರ್ತನು; ನಾನು ಅದರ ಪರಿಪಾಲಕನು. ಇದರ ಸಂಹಾರಕನು ಶ್ರೀ ರುದ್ರನು. ಅವನೇ ನಮ್ಮಿರ್ವರಿಗಿಂತ ದೊಡ್ಡವನು. ನಾನು ಹೇಳುವ ಈ ಮಾತು ದಿಟವೋ ಸುಳ್ಳೋ ಎಂಬ ಬಗ್ಗೆ ವೇದಗಳನ್ನೇ ಕೇಳು-ಎಂದು ನುಡಿಯಲು, ಆಗ ನಾಲ್ಕು ವೇದಗಳೂ ವಿಷ್ಣುವಿನ ಮಾತು ಸತ್ಯವೆಂಬುದಾಗಿ ಸಮರ್ಥಿಸಿದವು.

ಮದಾಂಧನಾದ ಬ್ರಹ್ಮನಿಗೆ ವೇದಗಳ ನುಡಿಯೂ ರುಚಿಸಲಿಲ್ಲ, ಬದಲಾಗಿ ವೇದ ಗಳನ್ನು ನಿಂದಿಸತೊಡಗಿದನು. ಇದೇ ಸಂದರ್ಭದಲ್ಲಿ ಶಿವನು ಅಲ್ಲಿ ಪ್ರಕಟನಾಗಲು, ವಿಷ್ಣುವೇ ಮೊದಲಾದ ದೇವತೆಗಳು ಹಾಗೂ ಮಹರ್ಷಿಗಳೆಲ್ಲ ಆಸನದಿಂದೆದ್ದು ಶಿವನಿಗೆ ನಮಸ್ಕರಿಸಿದರು. ಬ್ರಹ್ಮನು ಮಾತ್ರ ತನ್ನ ಆಸನವನ್ನು ಬಿಟ್ಟು ಮೇಲಕ್ಕೇಳಲೂ ಇಲ್ಲ ಮತ್ತು ನಮಸ್ಕರಿಸಲೂ ಇಲ್ಲ, ಅದಕ್ಕೆ ವಿಪರೀತವಾಗಿ, ಶಿವನ ವೇಷಭೂಷಣಗಳನ್ನು ನಿಂದಿಸುತ್ತಾ, ಗಹಗಹಿಸಿ ನಗತೊಡಗಿದನು. ಆಗ ಶಿವನು ಉಗ್ರರೂಪವನ್ನು ತಾಳಲು, ಆ ದೇಹದಿಂದ ಭೈರವನು ಉತ್ಪನ್ನನಾಗಿ ಶಿವನನ್ನು ನಿಂದಿಸಿದ ಬ್ರಹ್ಮನ ಐದನೇ ತಲೆಯನ್ನು ಉಗುರಿನಿಂದ ಕತ್ತರಿಸಿ ಹಾಕಿದನು. ಆಗ, ದೂರಗೊಂಡ ಅಹಂಕಾರವುಳ್ಳ ಬ್ರಹ್ಮನು, ಶಿವನಿಗೆ ಶರಣಾಗತನಾಗಲು, ಶಿವನು ಬ್ರಹ್ಮನನ್ನು ಅನುಗ್ರಹಿಸಿದನು.

ಇತ್ತ ಬ್ರಹ್ಮನ ಶಿರಸ್ಸನ್ನು ಕತ್ತರಿಸಿದ ಪರಿಣಾಮವಾಗಿ, ಭೈರವನಿಗೆ ಬ್ರಹ್ಮಹತ್ಯಾ ಮಹಾಪಾತಕವು ಬಂದು ಆವರಿಸಿತು. ಕೂಡಲೇ ಭೈರವನ ದೇಹವೆಲ್ಲ ಕಪ್ಪಿಟ್ಟಿತಲ್ಲದೆ, ಆ ಬ್ರಹ್ಮಕಪಾಲವು ಇವನ ಕೈಗೆ ಬಿಗಿಯಾಗಿ ಅಂಟಿಕೊಂಡಿತು. ಇದನ್ನು ನೋಡಿದ ಭೈರವನು ಭಯಗೊಂಡು, ಇದರ ವಿಮೋಚನೆಯ ಉಪಾಯವನ್ನು ಕೇಳಲು, ಆಗ, ಶಿವನು–''ಎಲೈ ಕಾಲಭೈರವನೇ ! ನಿನಗೆ ಸದ್ಯಃ ಬ್ರಹ್ಮಹತ್ಯಾ ಪಾಪವು ಆವರಿಸಿದೆ; ಇದರ ನಿವೃತ್ತಿಗಾಗಿ ನೀನು ಭಿಕ್ಷಾಟನೆಯನ್ನು ಮಾಡಬೇಕು. ಈ ಕಪಾಲವು ನಿನ್ನ ಕೈಯಿಂದ ತಾನಾಗಿಯೇ ಯಾವಾಗ ಕಳಚಿ ಬೀಳುವುದೋ, ಆಗ, ಈ ದೋಷವು ನಿವೃತ್ತ ವಾಯಿತೆಂದು ತಿಳಿ'' ಎಂಬುದಾಗಿ ಹೇಳಿದನು.

ಶಿವನ ಅಪ್ಪಣೆಯಂತೆ, ಭೈರವನು, ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದು ಕೊಂಡು, ಸಕಲ ಲೋಕಗಳಲ್ಲಿ ಭಿಕ್ಷೆಯನ್ನು ಬೇಡುತ್ತಾ, ವೈಕುಂಠಕ್ಕೆ ಬರುತ್ತಾನೆ. ಅಲ್ಲಿ ಶ್ರೀ ಮಹಾಲಕ್ಷ್ಮೀದೇವಿಯೂ ಭಿಕ್ಷೆಯನ್ನು ನೀಡುವಳು. ಈ ರೀತಿಯಾಗಿ ಭಿಕ್ಷಾಟನೆ ಯನ್ನು ಮಾಡುತ್ತ, ಎಲ್ಲಿ ಹೋದರೂ ಕಪಾಲವು ಕೈಯಿಂದ ಕೆಳಗೆ ಬೀಳಲಿಲ್ಲ. ಕೊನೆಗೆ ಶಿವಕ್ಷೇತ್ರವಾದ ವಾರಾಣಸಿಗೆ ಬರಲು, ಆ ಸೀಮೆಯೊಳಗೆ ಪಾದಾರ್ಪಣ ಮಾಡಿ ದೊಡನೆಯೇ, ಬ್ರಹ್ಮಕಪಾಲವು ಕೆಳಗೆ ಬಿದ್ದು ಹೋಯಿತಲ್ಲದೇ, ಬ್ರಹ್ಮಹತ್ಯಾ ದೋಷವೂ ನಿವಾರಣೆಯಾಯಿತು. ಅಂತೆಯೇ ಅಂದಿನಿಂದ ಕಾಲಭೈರವನು ಕಾಶಿ ಯಲ್ಲಿಯೇ ನಿವಾಸಿಸುವವನಾದನು. ಹೀಗೆ ಕಾಶೀವಾಸವು ಬ್ರಹ್ಮಹತ್ಯಾದೋಷವನ್ನು ನಿವಾರಿಸುವದಾಗಿ ಕಾಶೀ ಖಂಡದಲ್ಲಿ ನಿರೂಪಿತವಾಗಿದೆ. ಅಂತೆಯೇ ಈಗಲೂ ಭಕ್ತರು ಅನೇಕ ವ್ರತನೇಮಾದಿಗಳನ್ನು ಮಾಡುತ್ತ, ತಮ್ಮೆಲ್ಲ ದೋಷ ಪರಿಹಾರಕ್ಕಾಗಿ, ಕಾಶೀ ವಾಸವನ್ನು ಮಾಡುವ ಪದ್ಧತಿಯುಂಟು.

ಇದೇ ಪ್ರಕಾರ, ಶ್ರೀರಾಮಚಂದ್ರನು, ವೇದಪಾಠಿಯೂ, ಪುಲಸ್ತ್ಯವಂಶದ ಶ್ರೇಷ್ಠ ಬ್ರಾಹ್ಮಣನೂ ಆದ ಶ್ರೀ ರಾವಣನನ್ನು ಕೊಂದ ಕಾರಣ, ಅವನಿಗಾದರೂ ಬ್ರಹ್ಮಹತ್ಯಾ ದೋಷವು ಪ್ರಾಪ್ತವಾಗಲು, ಮುಂದೆ ಈ ದೋಷ ನಿವೃತ್ತಿಗಾಗಿಯೇ ಸಮುದ್ರ ದಡದಲ್ಲಿ ಮಳಲಿನ ಶಿವಲಿಂಗವನ್ನು ಮಾಡಿ, ಪೂಜಿಸಿ, ಋಷಿಗಳಿಂದ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಿಸಿದನೆಂಬ ಐತಿಹ್ಯವೂ ಉಂಟು. ಶ್ರೀ ತುಲಸೀದಾಸರು ರಾಮಚರಿತ ಮಾನಸದಲ್ಲಿ, ಸೇತುವೆಯ ನಿರ್ಮಾಣಕ್ಕಾಗಿ ರಾಮೇಶ್ವರಲಿಂಗವು ಸ್ಥಾಪಿತ ವಾಯಿತೆಂಬುದಾಗಿ ಬರೆದಿರುವರು. ಒಟ್ಟಿನಲ್ಲಿ ಹೇಳುವುದೇನೆಂದರೆ, ಬ್ರಹ್ಮಹತ್ಯಾದಿ ದೋಷಗಳು ದೇವತೆಗಳನ್ನೇ ಬಿಟ್ಟಿಲ್ಲವೆಂದ ಬಳಿಕ, ಮನುಷ್ಯರನ್ನು ಬಿಡುವುದೇ ? ಅವುಗಳ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಎಂದೂ ಬಿಡಲಾರವು.

**ಬ್ರಹ್ಮಹತ್ಯೆಗೆ ಸಮಾನಗಳಾದ ಅನುಪಾತಕಗಳು :**

ಅನೃತಂ ಚ ಸಮುತ್ಕರ್ಷೇ ರಾಜಗಾಮಿ ಚ ಪೈಶುನಂ ।
ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ ॥

(ಮನುಸ್ಮೃತಿ ೧೧೫೬)

ತನ್ನಲ್ಲಿ ಉತ್ಕೃಷ್ಟತೆ ಇರದಿದ್ದರೂ, ಮತ್ತೊಬ್ಬರ ಎದುರಿಗೆ ಆತ್ಮ ಪ್ರಶಂಸೆಯನ್ನು ಮಾಡಿಕೊಳ್ಳುವುದು, ರಾಜನಿಗೆ ಸುಳ್ಳುಚಾಡಿ ಹೇಳಿ ಯಾರನ್ನಾದರೂ ಕೊಲ್ಲಿಸುವುದು ಮತ್ತು ಗುರುಗಳಿಗೆ ಸುಳ್ಳು ಹೇಳುವುದು–ಇವು ಮೂರೂ ಬ್ರಹ್ಮಹತ್ಯಾ ಮಹಾಪಾತಕ್ಕೆ ಸಮಾನವಾದವುಗಳಾದ್ದರಿಂದ ''ಪಾತಕಂ=ಬ್ರಹ್ಮಹತ್ಯಾದಿ, ತತ್‌ಸದೃಶಂ=ಅನುಪಾತಕಂ'' ಎಂಬ ವ್ಯುತ್ಪತ್ತಿಯ ಮೇರೆಗೆ, ಇವುಗಳನ್ನು ಅನುಪಾತಕಗಳೆಂದು ಕರೆಯುವರು. ಆದ್ದರಿಂದ, ಆತ್ಮಪ್ರಶಂಸೆ, ಚಾಡಿ ಹೇಳಿ ಯಾರನ್ನಾದರೂ ಕೊಲ್ಲಿಸುವುದು ಹಾಗೂ ಗುರುಗಳಿಗೆ ಸುಳ್ಳು ಹೇಳುವುದರಿಂದಲೂ ಬ್ರಹ್ಮಹತ್ಯಾದೋಷ ಬರುವುದರಿಂದ, ಇವು ತನ್ನಿಂದ ಘಟಿಸದಂತೆ ಎಚ್ಚರಿಕೆಯನ್ನು ವಹಿಸಬೇಕು.

ಸುರಾಪಾನ :

''ಸುರಾಂ ನ ಪಿಬೇತ್'' ಮದ್ಯಪಾನವನ್ನು ಮಾಡಕೂಡದೆಂಬುದಾಗಿ ವೇದಾಜ್ಞೆ ಇರುವುದು. ಈ ಆಜ್ಞೆಯನ್ನು ಮೀರಿ ಸುರಾಪಾನ ಮಾಡುವುದೂ ಒಂದು ಮಹಾಪಾತಕವೇ. ಮಧ್ಯಪಾನವನ್ನು ಮಾಡುವುದರಿಂದ ಮನುಷ್ಯನ ಬುದ್ಧಿಶಕ್ತಿಯು ಕ್ಷೀಣವಾಗಿ, ಅದರಲ್ಲಿಯ ಉದಾತ್ತ ವಿಚಾರಗಳೆಲ್ಲ ತೊಲಗಿ, ಹೀನ ವಿಚಾರಗಳುದ್ಭವಿಸುವವು. ಇದರಿಂದಲೇ ಮನುಷ್ಯನು ಕ್ರಮಶಃ ಪತಿತನಾಗಿ ಅನೇಕ ನಿಷಿದ್ಧ ವ್ಯವಹಾರಗಳಲ್ಲಿ ತೊಡಗುವನು. ಈ ಸುರಾಪಾನದ ಪರಿಣಾಮವಾಗಿಯೇ ಬಹುಜನರು ಆರೋಗ್ಯ–ಐಶ್ವರ್ಯಗಳೆಲ್ಲವನ್ನೂ ಹಾಳು ಮಾಡಿಕೊಂಡು, ಉಭಯಲೋಕ ಭ್ರಷ್ಟರಾಗುತ್ತಿರುವ ಅದೆಷ್ಟೋ ಜನರನ್ನು ಸದ್ಯಃ ಕಾಣುತ್ತಿದ್ದೇವೆ. ಮನುಷ್ಯ ದೇಹದಲ್ಲಿರುವ ಅಮೂಲ್ಯ ವಸ್ತುವೇ ಬುದ್ಧಿಯು. ಈ ಬುದ್ಧಿಯನ್ನೇ ಹಾಳುಮಾಡುವ ಸುರಾಪಾನ ರೂಪವಾದ ದುಶ್ಚಟದಿಂದ ಪ್ರತಿಯೊಬ್ಬರೂ ದೂರವಿರಲು ಯತ್ನಿಸಬೇಕು.

ಸುರಾಪಾನಕ್ಕೆ ಸಮಾನಗಳಾದ ಅನುಪಾತಕಗಳು :

ಬ್ರಹ್ಮೋಜ್ಝತಾ ವೇದನಿಂದಾ ಕೌಟಸಾಕ್ಷ್ಯಂ ಸುಹೃದ್ವಧಃ ।
ಗರ್ಹಿತಾನಾದ್ಯಯೋರ್ಜಗ್ಧಿಃ ಸುರಾಪಾನಸಮಾನಿ ಷಟ್ ॥

(ಮನುಸ್ಮೃತಿ ೧೧–೫೭)

(೧) ಮಾಡಿದ ವೇದಾಧ್ಯಯನವನ್ನು ಪುನಃ ಪುನಃ ಆವೃತ್ತಿಯನ್ನು ಮಾಡದ ಕಾರಣ ಎಲ್ಲವನ್ನೂ ಮರೆತು ಬಿಡುವದು, (೨) ಕುತ್ಸಿತ ಶಾಸ್ತ್ರಗಳನ್ನು ಶ್ರವಣಮಾಡಿ ವೇದಗಳನ್ನು ನಿಂದಿಸುವುದು, (೩) ಕೋರ್ಟು–ಕಚೇರಿಗಳ ವ್ಯವಹಾರದಲ್ಲಿ ಸುಳ್ಳುಸಾಕ್ಷಿಯನ್ನು ಹೇಳುವುದು, (೪) ಗೆಳೆಯನನ್ನು ವಂಚಿಸಿ ಕೊಲ್ಲುವುದು, (೫) ನಿಷಿದ್ಧಗಳೂ, ತಿನ್ನಲು ಅಯೋಗ್ಯಗಳೂ ಆದ ಲಶುನ (ಬಳ್ಳೊಳ್ಳಿ), ಪುರೀಷಾ (ಮಲ) ಮುಂತಾದವುಗಳ ಭಕ್ಷಣ ಇವು ಆರೂ ಸುರಾಪಾನಕ್ಕೆ ಸಮಾನಗಳಾಗಿರುತ್ತವೆ. ಇವುಗಳನ್ನು ಅನುಪಾತಕಗಳೆಂದು ಕರೆಯುವರು. ಆದ್ದರಿಂದ ಸುರಾಪಾನವೆಂಬ ಮಹಾಪಾತಕದಿಂದ ದೂರವಿರಲು ಅಪೇಕ್ಷೆಯುಳ್ಳವರು, ತಾವು ಮಾಡಿದ ವೇದಾದಿ ಶಾಸ್ತ್ರಾಧ್ಯಯನವನ್ನು ಮರೆಯಕೂಡದು; ವೇದಾದಿಶಾಸ್ತ್ರಗಳನ್ನು ನಿಂದಿಸಕೂಡದು; ಸುಳ್ಳುಸಾಕ್ಷಿಗಳನ್ನು ಹೇಳಬಾರದು; ಗೆಳೆಯರನ್ನು ಮೋಸಗೊಳಿಸಿ ಕೊಲ್ಲಬಾರದು; ಶಾಸ್ತ್ರ ನಿಷಿದ್ಧಗಳಾದ ಬಳ್ಳೊಳ್ಳಿ, ಮಲಾದಿಗಳನ್ನು ಭಕ್ಷಿಸಕೂಡದು.

**ಸ್ತೇಯ :**

ಅನ್ಯರ ದ್ರವ್ಯವನ್ನು ಅಪಹರಿಸುವುದು ''ಸ್ತೇಯ''ವೆನಿಸುವುದು. ತನ್ನ ಉಪಜೀವನಕ್ಕೆ ಬೇಕಾಗುವ ಧನವನ್ನು ತಾನು ಶ್ರಮವಹಿಸಿ ದುಡಿದು ಸಂಪಾದಿಸುವುದು ಶಾಸ್ತ್ರೋಚಿತವಾದ ಮಾರ್ಗವು. ಹೀಗೆ ಪರಿಶ್ರಮದಿಂದ ಸಂಪಾದಿಸಿದ ಧನವನ್ನು ಅನ್ಯಾಯಕ್ಕಾಗಿ ಖರ್ಚುಮಾಡಲು ಮನಸ್ಸು ಒಪ್ಪಲಾರದು. ಕಳ್ಳತನ ಮುಂತಾದ ವ್ಯವಹಾರದಿಂದ ಅನಾಯಾಸವಾಗಿ ಬಂದ ಧನವನ್ನು ಮನುಷ್ಯನು ಅನೀತಿಗಾಗಿ ಬಳಸುವದುಂಟು. ಹೀಗೆ ಅನೀತಿಯತ್ತ ಪ್ರವೃತ್ತನಾದವನು, ಪತಿತನಾಗುವುದರಲ್ಲಿ ಸಂದೇಹವಿಲ್ಲ, ಅಂತೆಯೇ ಮನುಷ್ಯನನ್ನು ಈ ಪತನದಿಂದ ರಕ್ಷಿಸಲು ಶಾಸ್ತ್ರಗಳು ಅಸ್ತೇಯ ವ್ರತವನ್ನು ಬೋಧಿಸಿವೆ.

**ಸ್ತೇಯಕ್ಕೆ ಸಮಾನವಾದ ಅನುಪಾತಕಗಳು :**

ನಿಕ್ಷೇಪಸ್ಯಾಪಹರಣಂ ನರಾಶ್ವರಜತಸ್ಯ ಚ
ಭೂಮಿವಜ್ರಮಣೀನಾಂ ಚ ರುಕ್ಮಸ್ತೇಯಸಮಂ ಸ್ಮೃತಂ ॥

(ಮನುಸ್ಮೃತಿ ೧೧–೫೮)

ಭೂಮಿಯಲ್ಲಿಯ ಸಂಪತ್ತನ್ನಪಹರಿಸುವುದು, ಮನುಷ್ಯ, ಕುದುರೆ, ಬೆಳ್ಳಿ, ಭೂಮಿ ಮತ್ತು ವಜ್ರದ ಮಣಿಗಳನ್ನು ಅಪಹರಿಸುವುದು ಸಹ ಸ್ವರ್ಣ ಸ್ತೇಯಕ್ಕೆ ಸಮಾನವಾಗಿರುತ್ತವೆ; ಅಂತೆಯೇ ಇವುಗಳನ್ನು ಅನುಪಾತಕಗಳೆಂದು ಕರೆದಿರುವರು. ಅಸ್ತೇಯ ವ್ರತವನ್ನು ಪರಿಪಾಲಿಸುವವರು ಈ ಅನುಪಾತಕಗಳೂ ತಮ್ಮಿಂದ ಸಂಭವಿಸದಂತೆ ಎಚ್ಚರಿಕೆಯನ್ನು ವಹಿಸಬೇಕು.

**ಗುರುಪತ್ನೀ ಗಮನ :**

ಗುರುವಿನ ಹೆಂಡತಿಯಲ್ಲಿ ಅನುರಕ್ತನಾಗಿ ಅವಳೊಡನೆ ಕೂಡುವುದೇ ಗುರುಪತ್ನೀ ಗಮನವು. ಇದು ಅತ್ಯಂತ ನಿಂದನೀಯವಾದ್ದರಿಂದ, ಮಹಾಪಾತಕಗಳಲ್ಲಿ ಪರಿಗಣಿಸಲ್ಪಟ್ಟಿದೆ. ಇದೊಂದು ಕಾಮವಾಸನೆಯ ಅತಿರೇಕ ಸ್ಥಿತಿಯು. ಸಾಮಾನ್ಯವಾದ ಕಾಮವೇ ನರಕದ ಮಹಾದ್ವಾರವೆಂದು ಕರೆಯಿಸಿಕೊಂಡಾಗ, ಈ ಮಹಾ ಕಾಮಕ್ಕೆ ಮಹಾ ನರಕವೇ ಗತಿಯು. ಕ್ಷಣಕಾಲ ಸುಖದಾಭಾಸವನ್ನು ತೋರಿಸಿ, ಅನಂತಕಾಲದ ವರೆಗೆ ದುಃಖವನ್ನು ಕೊಡುವ ಈ ಕಾಮವು ಉಲ್ಬಣಗೊಳ್ಳದಂತೆ ವಿವೇಕಿಗಳಾಗಿರಬೇಕು. ಚಂದ್ರನು ಈ ವಿವೇಕವನ್ನು ಕಳೆದುಕೊಂಡು ಗುರುಪತ್ನಿಯ ಗಮನವನ್ನು ಮಾಡಿದ ದುಷ್ಕರ್ಮದ ಫಲವನ್ನು ಇಂದಿಗೂ ಅನುಭವಿಸುತ್ತಿದ್ದಾನೆ.

**ಗುರುಪತ್ನೀ ಗಮನಕ್ಕೆ ಸಮಾನಗಳಾದ ಅನುಪಾತಕಗಳು :**

ರೇತಃಸೇಕಃ ಸ್ವಯೋನೀಷು ಕುಮಾರೀಷ್ವಂತ್ಯಜಾಸು ಚ ।
ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಗುರುತಲ್ಪಸಮಂ ವಿದುಃ ॥

(ಮನುಸ್ಮೃತಿ, ೧೧–೫೯)

ಒಡಹುಟ್ಟಿದ ಅಕ್ಕ–ತಂಗಿಯರನ್ನೂ, ಲಗ್ನವಾಗದಿರುವ ಯಾವದೇ ಕುಮಾರಿಯರನ್ನೂ, ಚಾಂಡಾಲ ಸ್ತ್ರೀಯರನ್ನೂ ಗೆಳತಿಯರನ್ನೂ ಮತ್ತು ಮಗನ ಹೆಂಡತಿ (ಸೊಸೆ)

ಯನ್ನೂ ಭೋಗಿಸುವುದು ಗುರುಪತ್ನೀಗಮನಕ್ಕೆ ಸಮಾನವಾದುದು. ಕಾರಣ, ಇಂತಹ ಅಪಚಾರಗಳು ತನ್ನಿಂದ ಜರುಗದಂತೆ ಲಕ್ಷ್ಯವಹಿಸುವದು ಪ್ರತಿಯೊಬ್ಬರ ಆದ್ಯ ಕರ್ತವ್ಯವು.

ಉಪಪಾತಕಗಳು :

ಗೋವಧೋಽಯಾಜ್ಯಸಂಯಾಜ್ಯಪಾರದಾರ್ಯಾತ್ಮವಿಕ್ರಯಾಃ ।
ಗುರುಮಾತೃಪಿತೃತ್ಯಾಗಃ ಸ್ವಾಧ್ಯಾಯಾಗ್ನ್ಯೋಃ ಸುತಸ್ಯ ಚ ॥
..........................................................
ಧಾನ್ಯಕುಪ್ಯಪಶುಸ್ತೇಯಂ ಮದ್ಯಪಸ್ತ್ರೀನಿಷೇವಣಂ ।
ಸ್ತ್ರೀಶೂದ್ರವಿಟ್‌ಕ್ಷತ್ರವಧೋ ನಾಸ್ತಿಕ್ಯಂ ಚೋಪಪಾತಕಂ ॥
(ಮನುಸ್ಮೃತಿ, ೧೧; ೬೦–೬೭)

ಗೋಹತ್ಯೆ, ಅಯೋಗ್ಯರನ್ನು ಪೂಜಿಸುವುದು, ಪರಸ್ತ್ರೀಗಮನ, ತನ್ನನ್ನು ಮಾರಿಕೊಳ್ಳು ವದು, ತಾಯಿ–ತಂದೆ ಹಾಗೂ ಗುರುಸೇವೆಯನ್ನು ಮಾಡದಿರುವದು, ಸ್ವಾಧ್ಯಾಯ ಮತ್ತುನಿತ್ಯಕರ್ಮದ ತ್ಯಾಗ, ಮಕ್ಕಳ ಪಾಲನೆ–ಪೋಷಣೆಯನ್ನು ಮಾಡದಿರುವಿಕೆ, ಕನ್ಯಾ ಪ್ರದೂಷಣ, ವ್ರತಲೋಪ, ಕೆರೆ–ಉದ್ಯಾನ–ಹೆಂಡತಿ ಮತ್ತು ಮಕ್ಕಳನ್ನು ಮಾರಿ ಕೊಳ್ಳುವಿಕೆ, ಬಂಧುಗಳ ಪರಿತ್ಯಾಗ, ವೇತನವನ್ನು ತೆಗೆದುಕೊಂಡು ವಿದ್ಯಾದಾನ ಮಾಡು ವದು, ವೇತನವನ್ನು ಕೊಟ್ಟು ಅಧ್ಯಯನ ಮಾಡುವದು, ಮಾರಾಟಕ್ಕೆ ನಿಷಿದ್ಧವಾದ ಎಳ್ಳು–ತುಪ್ಪ–ಹಾಲು ಮುಂತಾದವುಗಳನ್ನು ಮಾರುವುದು, ಹೆಂಡತಿಯನ್ನು ವೇಶ್ಯಾ ವೃತ್ತಿಯಲ್ಲಿ ತೊಡಗಿಸಿ ಉಪಜೀವನವನ್ನು ನಡೆಸುವುದು, ಮಾಟ ಮುಂತಾದ ಅಭಿಚಾರ ಕರ್ಮಗಳಿಂದ ಕೊಲ್ಲುವುದು, ಮಂತ್ರ ಮತ್ತುವನಸ್ಪತಿಗಳ ಮೂಲಕ ವಶೀಕರಣ ಮಾಡಿ ಕೊಳ್ಳುವುದು, ಉರುವಲಿಗಾಗಿ ಹಸಿ ಗಿಡಗಳನ್ನು ಕಡಿಯುವುದು, ಕೇವಲ ತನಗಾಗಿ ಅಡಿಗೆಯನ್ನು ಮಾಡಿಕೊಂಡು ಉಣ್ಣುವುದು, ನಿಂದ್ಯಗಳಾದ ಲಶುನಾದಿಗಳನ್ನು ಅನಿಚ್ಛೆ ಯಿಂದಲಾದರೂ ಸೇವಿಸುವುದು, ಋಣವನ್ನು ತೀರಿಸದಿರುವುದು, ಧಾನ್ಯ, ತಾಮ್ರ ಮುಂತಾದ ಲೋಹ ಮತ್ತು ಪಶುಗಳ ಕಳವು ಮಾಡುವಿಕೆ, ಮದ್ಯಪಾನ ಮಾಡಿದ ಸ್ತ್ರೀಯ ಸಂಸರ್ಗ, ಸ್ತ್ರೀ–ಶೂದ್ರ–ವೈಶ್ಯ ಹಾಗೂ ಕ್ಷತ್ರಿಯರ ವಧೆ ಹಾಗೂ ನಾಸ್ತಿಕತೆ– ಇವೆಲ್ಲವುಗಳೂ ಉಪಪಾತಕಗಳೆಂಬುದಾಗಿ ಶ್ರೀ ಮನುಮಹರ್ಷಿಯು ಪ್ರತಿಪಾದಿಸಿ ದ್ದಾನೆ.

ಜಾತಿಭ್ರಂಶಕರಣ :

ಬ್ರಾಹ್ಮಣಸ್ಯ ರುಜಃಕೃತ್ಯಾ ಘ್ರಾತಿರಘ್ರೇಯಮದ್ಯಯೋಃ ।
ಜೈಹ್ಮ್ಯಂ ಚ ಮೈಥುನಂ ಪುಂಸಿ ಜಾತಿಭ್ರಂಶಕರಂ ಸ್ಮೃತಂ ॥
(ಮನುಸ್ಮೃತಿ ೧೧–೬೮)

ದಂಡಾದಿಗಳಿಂದ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನನ್ನು ಪೀಡಿಸುವುದು, ಅತ್ಯಂತ ದುರ್ಗಂಧಯುಕ್ತಗಳಾದ ಮದ್ಯ–ಪುರೀಷ ಮುಂತಾದವುಗಳನ್ನು ಮೂಸಿಸುವುದು, ಕುಟಿಲವಾಗಿ ವರ್ತಿಸುವುದು ಮತ್ತು ಪುರುಷರ ಮುಖಾದಿಗಳಲ್ಲಿ ಮೈಥುನ ಕ್ರಿಯೆ

ಯನ್ನಾಚರಿಸುವುದು ಇವುಗಳನ್ನು ಜಾತಿ ಭ್ರಂಶಕರವಾದ ಪಾತಕವೆನ್ನುವರು. ಇಂತಹ ಕ್ರಿಯೆಗಳನ್ನಾಚರಿಸುವುದರಿಂದ ಉತ್ಕೃಷ್ಟ ಕುಲದವನೂ ಪತಿತನಾಗುತ್ತಾನೆ.

ಸಂಕರೀಕರಣ :

ಖರಾಶ್ವೋಷ್ಟ್ರಮೃಗೇಭಾನಾಮಜಾವಿಕವಧಸ್ತಥಾ ।
ಸಂಕರೀಕರಣಂ ಜ್ಞೇಯಂ ಮೀನಾಹಿಮಹಿಷಸ್ಯ ಚ ॥

(ಮನುಸ್ಮೃತಿ ೧೧–೬೯)

ಕತ್ತೆ, ಕುದುರೆ, ಒಂಟೆ, ಚಿಗರೆ, ಆನೆ, ಆಡು, ಹೋತ, ಮೀನು, ಸರ್ಪ, ಕೋಣ ಮುಂತಾದವುಗಳನ್ನು ಕೊಲ್ಲುವುದೇ ಸಂಕರೀಕರಣ ಪಾತಕವು. ''ಅಸಂಕರಃ ಸಂಕರಃ ಕ್ರಿಯತೇಽನೇನೇತಿ ಸಂಕರೀಕರಣಂ'' ಎಂಬ ಚ್ವಿಃ ಸಮಾಸಾನುಸಾರವಾಗಿ, ಜಾತಿ ಸಂಕರರಲ್ಲದವರನ್ನು ಈ ಪಾತಕವು ಜಾತಿ ಸಂಕರರನ್ನಾಗಿ ಮಾಡುವುದರಿಂದ ಇದನ್ನು ಸಂಕರೀಕರಣವೆಂದು ಕರೆದಿದ್ದಾರೆ.

ಅಪಾತ್ರೀಕರಣ :

ನಿಂದಿತೇಭ್ಯೋ ಧನಾದಾನಂ ವಾಣಿಜ್ಯಂ ಶೂದ್ರಸೇವನಂ ।
ಅಪಾತ್ರೀಕರಣಂ ಜ್ಞೇಯಮಸತ್ಯಸ್ಯ ಚ ಭಾಷಣಂ ॥

(ಮನುಸ್ಮೃತಿ ೧೧–೭೦)

ನಿಂದನೀಯರಿಂದ ಧನವನ್ನು ಗ್ರಹಿಸುವುದು, ವ್ಯಾಪಾರ ಮಾಡುವುದು, ಹೀನ ವ್ಯಕ್ತಿಗಳ ಸೇವೆಮಾಡುವುದು ಮತ್ತು ಸುಳ್ಳು ಹೇಳುವುದು ಈ ಎಲ್ಲ ವ್ಯವಹಾರಗಳೂ, ಮನುಷ್ಯನ ಯೋಗ್ಯತೆಯನ್ನು ಕೆಳಮಟ್ಟಕ್ಕೆ ತರುವುದರಿಂದ ಇವುಗಳನ್ನು ಅಪಾತ್ರೀಕರಣವೆನ್ನುವರು.

ಮಲಾವಹ :

ಕ್ರಿಮಿಕೀಟವಯೋಹತ್ಯಾ ಮದ್ಯಾನುಗತಭೋಜನಂ ।
ಫಲೈಧಃ ಕುಸುಮಸ್ತೇಮಧೈರ್ಯಂ ಚ ಮಲಾವಹ ॥

(ಮನುಸ್ಮೃತಿ ೧೧–೭೧)

ಹೇನು, ಕುರಿ ಮುಂತಾದ ಕ್ಷುದ್ರ ಜಂತುಗಳಾದ ಕ್ರಿಮಿಗಳು, ಇವುಗಳಿಗಿಂತಲೂ ಸ್ಥೂಲಾಕಾರದ ಜಂತುಗಳಾದ ಕೀಟಗಳ ಮತ್ತು ಗುಬ್ಬಿ, ಪಾರಿವಾಳ ಮುಂತಾದ ಪಕ್ಷಿಗಳನ್ನು ಕೊಲ್ಲುವುದು, ಮದ್ಯಸಂಸ್ಪೃಷ್ಟವಾದ ಶಾಖಾಹಾರ ಅನ್ನವನ್ನು ಉಣ್ಣುವುದು, ಹಣ್ಣು ಕಟ್ಟಿಗೆ, ಹೂವುಗಳನ್ನು ಕಳವು ಮಾಡುವುದು ಮತ್ತು ಅಲ್ಪಹಾನಿಯುಂಟಾದಾಗ ಅತ್ಯಂತ ಭಯಗೊಂಡು ದೈರ್ಯವನ್ನು ಕಳೆದುಕೊಳ್ಳುವುದು–ಇವೆಲ್ಲವುಗಳೂ ಮನುಷ್ಯನ ಮನಸ್ಸಿಗೆ ಮಲದೋಷವನ್ನುಂಟುಮಾಡುವದರಿಂದ ಇವುಗಳನ್ನು ಮಲಾವಹ ಪಾತಕಗಳೆಂದು ಕರೆದಿದ್ದಾರೆ.

ಪ್ರಕೀರ್ಣಕ :

ಶಾಸ್ತ್ರದ ಆಧಾರವಿಲ್ಲದ, ಆದರೂ ನ್ಯಾಯಾಧೀಶರು ನಿರ್ಣಯಿಸಬೇಕಾದ ವ್ಯಾಜ್ಯಕ್ಕೆ ಪ್ರಕೀರ್ಣಕವೆನ್ನುವರು. ಆಧಾರವಿಲ್ಲದ ನ್ಯಾಯಗಳನ್ನು ಹೂಡಿ ಅನ್ಯರ ಆಸ್ತಿಪಾಸ್ತಿಗಳನ್ನು ಅಪಹರಿಸಬೇಕೆಂಬ ಭಾವನೆಯಾದರೂ ಒಂದು ಪಾತಕವಾಗಿದೆ.

ಮಾತಾ-ಪಿತೃಹತ್ಯೆ :

"ಮಾತೃದೇವೋ ಭವ" "ಪಿತೃದೇವೋ ಭವ" ಎಂಬುದಾಗಿ, ವೇದಗಳು, ತಂದೆ-ತಾಯಿಗಳನ್ನು ದೇವರೆಂಬುದಾಗಿ ಬೋಧಿಸಿರುತ್ತವೆ. ಜನ್ಮಕ್ಕೆ ಕಾರಣೀಭೂತರೂ, ನಮ್ಮ ಪಾಲನೆ-ಪೋಷಣೆಯನ್ನು ಮಾಡಿದವರೂ ಆದ ತಂದೆ-ತಾಯಿಗಳ ಸೇವೆಯನ್ನು ಮಾಡಿ ಪಿತೃಋಣದಿಂದ ಮುಕ್ತರಾಗುವುದರ ಬದಲು ಅನೇಕ ಜನ ದುರ್ಮಾರ್ಗಿಗಳು ಮಾತಾ-ಪಿತೃಗಳನ್ನೇ ಕೊಲ್ಲುವುದನ್ನು ಆಗಾಗ ಕಾಣುತ್ತೇವೆ. ಇದೂ ಸಹ ಪಾತಕವೇ ಆಗಿದೆ.

ಭ್ರೂಣಹತ್ಯೆ :

"ಭ್ರೂಣ"ವೆಂದರೆ "ಗರ್ಭ" ಅಥವಾ "ಶಿಶು" ಎಂದರ್ಥ. ಆದ್ದರಿಂದ ಗರ್ಭಪಾತ ಮಾಡಿಸುವುದಾಗಲಿ, ಶಿಶುಗಳನ್ನು ಕೊಲ್ಲುವುದಾಗಲಿ, ಇವೆರಡನ್ನೂ "ಭ್ರೂಣ ಹತ್ಯೆ" ಎಂಬುದಾಗಿ ಕರೆಯುವರು. ನಿರಪರಾಧಿಗಳಾದ ನವಜಾತ ಶಿಶುಗಳನ್ನಾಗಲಿ, ಗರ್ಭಸ್ಥ ಶಿಶುಗಳನ್ನಾಗಲಿ ಕೊಲ್ಲುವುದು ಮಹಾನ್ ಅಪರಾಧವು. ಈ ಶಿಶು ಹತ್ಯಾ ರೂಪವಾದ ಮಹಾಪಾಪದಿಂದಲೇ ಬಲಶಾಲಿಯಾದ ಕಂಸನು ಹತನಾದನೆಂಬ ಕಥೆಯು ಭಾಗವತದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಗರ್ಭಪಾತವು ಮಹಾಪಾತಕವೆಂದು ಸಾರಿದ ನಮ್ಮ ದೇಶದಲ್ಲಿಯೇ ಜನಸಂಖ್ಯೆಯನ್ನು ನಿಯಂತ್ರಿಸುವುದಕ್ಕಾಗಿ ಸರಕಾರವೇ ಇಂದು ಗರ್ಭಪಾತವನ್ನು ಮಾಡಿಸುತ್ತಿದೆ. ಇದು ನಿರ್ದುಷ್ಟವಾದ ಮಾರ್ಗವಲ್ಲ. ದಂಪತಿಗಳು ಸಂಯಮಶೀಲರಾದರೆ ಜನ ಸಂಖ್ಯೆಯ ನಿಯಂತ್ರಣವಾಗುವುದಲ್ಲದೇ ಪಾತಕ ದೋಷದ ಸ್ಪರ್ಶವೂ ಆಗಲಾರದು. ಕಾರಣ ಸಮಸ್ತ ಭಾರತೀಯರೂ, ಈ ನಿಂದನೀಯ ಮಾರ್ಗವನ್ನು ತ್ಯಜಿಸಿ ಪ್ರಾಚೀನವಾದ ಋಷಿಗಳ ಮಾರ್ಗವನ್ನು ಅನುಸರಿಸುವುದು ಶ್ರೇಷ್ಠವು. ಇಲ್ಲವಾದರೆ ನಮ್ಮ ನೈತಿಕ ಬಲವು ಕುಂದಿ ದೇಶವು ಸತ್ತ್ವಹೀನವಾಗುವುದರಲ್ಲಿ ಸಂದೇಹವಿಲ್ಲ

ಘಾತಕ :

ವಿಶ್ವಾಸವನ್ನು ಹನನ ಮಾಡುವವನನ್ನು ಘಾತಕನೆನ್ನುವರು. ಲೌಕಿಕ ಇಲ್ಲವೇ ಪಾರಲೌಕಿಕ ವ್ಯವಹಾರಕ್ಕೆ ವಿಶ್ವಾಸವೇ ಮುಖ್ಯವಾದುದು. ಹೀಗೆ ವಿಶ್ವಾಸ ಮಾಡಿದ ವ್ಯಕ್ತಿಯ ಧನ ಇಲ್ಲವೇ ಪ್ರಾಣವನ್ನು ಹರಣ ಮಾಡುವುದು ಘಾತಕತನವು ಈ ರೀತಿ ವರ್ತಿಸಿದ್ದಾದರೆ ಜಗತ್ತಿನಲ್ಲಿ ವಿಶ್ವಾಸವೇ ಉಳಿಯದಂತಾಗುವುದು. ಆಗ ಪ್ರತಿಯೊಂದು ವ್ಯವಹಾರದಲ್ಲಿಯೂ ಪ್ರತಿಯೊಬ್ಬರ ಬಗ್ಗೆ ಸಂದೇಹವು ಪ್ರಾಪ್ತವಾಗಲು ಜಗತ್ತಿನ ವ್ಯವಸ್ಥೆಯೇ ನಶಿಸಿಹೋಗುವ ಪ್ರಸಂಗವು ಬಂದೊದಗುವುದು. ಆದಕಾರಣ ಘಾತಕ ತನವೂ ಪಾತಕವೆಂಬುದಾಗಿ ಪರಿಗಣಿಸಲ್ಪಟ್ಟಿದೆ. ಈ ಘಾತಕತನದ ಅನರ್ಥವನ್ನರಿತ ಪ್ರತಿಯೊಬ್ಬರೂ ವಿಶ್ವಾಸವನ್ನು ಕಾಪಾಡಿಕೊಂಡು ಹೋಗಲು ಪ್ರಯತ್ನಶೀಲ ರಾಗಬೇಕು.

ಹೀಗೆ ಇಲ್ಲಿಯವರೆಗೆ ಹೇಳಲ್ಪಟ್ಟ ಸಕಲ ಪಾತಕಗಳ ಫಲವಾಗಿ ಮನುಷ್ಯನು ಹೀನಾತಿ-ಹೀನಯೋನಿಗಳಲ್ಲಿ ಜನ್ಮತಾಳಿ, ತಾನು ಮಾಡಿದ ಕರ್ಮದ ಫಲವನ್ನು ಅವಶ್ಯವಾಗಿ ಅನುಭವಿಸಬೇಕಾಗುತ್ತದೆ. ಅಂತೆಯೇ-

''ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ'' ಎಂದಿದೆ ಶಾಸ್ತ್ರವು.

ಮಹಾಪಾತಕಜಂ ಚಿಹ್ನಂ ಸಪ್ತಜನ್ಮಸು ಜಾಯತೇ ।
ಬಾಧತೇ ವ್ಯಾಧಿರೂಪೇಣ ತಸ್ಯ ಕೃಚ್ಛ್ರಾದಿಭಿಃ ಸಮಃ ॥

(ಶಾತಾತಪೀಯ ಕರ್ಮವಿಪಾಕ)

ಎಂಬ ಕರ್ಮ ವಿಪಾಕಶಾಸ್ತ್ರ ಪ್ರಮಾಣಾನುಸಾರವಾಗಿ, ಮಹಾಪಾತಕಗಳಿಂದುಂಟಾದ ಪಾಪವು, ಏಳು ಜನ್ಮಗಳವರೆಗೆ ಹಿಂಬಾಲಿಸಿ, ಅನೇಕ ರೋಗಗಳ ರೂಪದಲ್ಲಿ ಪಾತಕಿಯನ್ನು ಪೀಡಿಸುತ್ತದೆ. ಅದರ ನಿವಾರಣೆಗಾಗಿ ಕೃಚ್ಛ್ರ ಮುಂತಾದ ಪ್ರಾಯಶ್ಚಿತ್ತಗಳನ್ನು ಮಾಡಬೇಕಾಗುವುದು. ಹೀಗೆ ಅನೇಕ ವಿಧ ಪಾತಕಗಳಿಗೆ ಅನೇಕ ವಿಧಗಳಾದ ಪ್ರಾಯಶ್ಚಿತ್ತ ಕರ್ಮಗಳು ಮನುಸ್ಮೃತಿಯ ಹನ್ನೊಂದನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿವೆ. ಆದರೆ ಪೂಜ್ಯ ಪಾದರಾದ ಶ್ರೀ ಜಗದ್ಗುರು ರೇಣುಕರು–

''ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ'' ಎಂಬುದಾಗಿ ಉಪದೇಶಿಸಿರುವುದರಿಂದ, ಪೂರ್ವದಲ್ಲಿ ಹೇಳಿದ ಎಲ್ಲ ಪಾತಕಗಳ ಪರಿಹಾರಕ್ಕೆ ರುದ್ರಾಕ್ಷಧಾರಣವೊಂದೇ ಸಾಕು. ಇಷ್ಟೊಂದು ಸಾಮರ್ಥ್ಯವು ಇವುಗಳಲ್ಲಡಗಿದೆ. ಜೀವಂತ ಇರುವಾಗ, ಅಷ್ಟೇ ಅಲ್ಲ ಮೃತನಾದಾಗಲೂ, ದೇಹಕ್ಕೆ ರುದ್ರಾಕ್ಷ ಸಂಬಂಧವಾದರೂ ಸಾಕು, ಸಕಲ ಪಾತಕಗಳೂ ಪರಿಹಾರವಾಗಿ, ಆ ಜೀವನು ರುದ್ರಲೋಕವನ್ನು ಹೊಂದುವನೆಂಬ ವಿಷಯದಲ್ಲಿ ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದ ಹನ್ನೊಂದನೇ ಉಪದೇಶದಲ್ಲಿ ಮನೋಹರವಾದ ಒಂದು ದೃಷ್ಟಾಂತವನ್ನು ನಿರೂಪಿಸಿದ್ದಾರೆ.

ಒಂದು ಸಾರೆ ಯಮನು ಚಿತ್ರಗುಪ್ತರನ್ನು ಕರೆದುಕೊಂಡು ಭಯಭೀತನಾಗಿ ಓಡುತ್ತ ಕೈಲಾಸಕ್ಕೆ ಬಂದು ಶಿವನಿಗೆ ನಮಸ್ಕರಿಸಿ ಬೇಡಿಕೊಂಡನು–ಹೇ ಪ್ರಭೋ ! ನೀನು ನಿರ್ವಹಿಸಿಕೊಟ್ಟ ಸ್ಥಾನದಲ್ಲಿ ಆಸೀನನಾಗಿ ಬಹುಕಾಲದಿಂದ ವ್ಯವಹಾರವನ್ನು ಧರ್ಮಕ್ಕನುಗುಣವಾಗಿ ನೋಡಿಕೊಳ್ಳುತ್ತಲಿದ್ದೇನೆ. ಲೋಕದಲ್ಲಿಯ ಪುಣ್ಯವಂತರನ್ನು ಪುರಸ್ಕರಿಸುವುದಕ್ಕಾಗಿ ಹಾಗೂ ಪಾಪಿಗಳನ್ನು ನಿಗ್ರಹಿಸುವುದಕ್ಕಾಗಿ ಸ್ವರ್ಗ–ನರಕಗಳನ್ನು ನೀನು ನಿರ್ಮಾಣ ಮಾಡಿದ್ದೀಯೆ. ನಿನ್ನ ಆಜ್ಞೆಯನ್ನು ಪರಿಪಾಲಿಸುವ ನಾನು ಪುಣ್ಯಜೀವಿಗಳನ್ನು ಸ್ವರ್ಗಕ್ಕೂ ಮತ್ತು ಪಾಪಿಗಳನ್ನು ನರಕಕ್ಕೂ ಕಳುಹಿಸಿ, ಅವರಿಗೆ ತಕ್ಕ ಪುರಸ್ಕಾರ ಹಾಗೂ ಶಿಕ್ಷೆಗಳನ್ನು ಮಾಡುತ್ತಾ ಬಂದಿರುತ್ತೇನೆ. ಆದರೆ ಎಂದೂ ಘಟಿಸದ ಆಶ್ಚರ್ಯಕರ ಘಟನೆಯೊಂದು ಇಂದು ಜರುಗಿದೆ–ಅದೇಂದರೆ–

ಕಲಿಂಗ ದೇಶದಲ್ಲಿ ''ವ್ಯಾಘ್ರ''ವೆಂಬ ಪಟ್ಟಣವಿದೆ. ಅಲ್ಲಿ ಜಾಮಿತ್ರನೆಂಬ ಓರ್ವ ಕಡುಪಾಪಿಯು ಇರುತ್ತಿದ್ದನು. ಇವನ ತಾಯಿಯು ವ್ಯಭಿಚಾರಿಣಿಯಾಗಿದ್ದಳು. ಈತನು ಬಾಲಕನಿರುವಾಗಲೇ ತಾಯಿ ತೀರಿಕೊಂಡಳು. ಇವನ ತಂದೆ ಜಾರ ಲಂಪಟನಾಗಿದ್ದರಿಂದ, ಇವನು ಜಾರ ಸ್ತ್ರೀಯರ ಮನೆಯಲ್ಲಿಯೇ ಬೆಳೆದು ದೊಡ್ಡವನಾದನು. ತಾರುಣ್ಯಾವಸ್ಥೆಗೆ ಬಂದಾಗ ಇವನಾದರೂ ವಿಷಯ ಲಂಪಟನಾಗಿ ವೇಶ್ಯೆಯರ ಸಂಗದಲ್ಲಿಯೇ ಕಾಲ ಕಳೆಯತೊಡಗಿದನು. ವೇಶ್ಯೆಯರಿಗೆ ಕೊಡುವ ಧನದ ನಿಮಿತ್ತವಾಗಿಯೇ ಒಂದು ದಿನ ತಂದೆಯನ್ನೇ ಕೊಂದು ಹಾಕಿದನು. ಚೌರ ವೃತ್ತಿಯಿಂದ ಕಾಲ

ಕಳೆಯುವ ಇವನು ಒಂದು ಸಾರೆ ನಗರ ರಕ್ಷಕರ ಕೈಗೆ ಸಿಕ್ಕು, ಅವರ ಹೊಡೆತವನ್ನು ತಾಳಲಾರದೇ ಮೃತನಾದನು. ಸ್ಥೂಲದೇಹವನ್ನು ತ್ಯಾಗಮಾಡಿದ ಈ ಕಡು ಪಾತಕಿ ಯನ್ನು ನನ್ನ ದೂತರು ನರಕಕ್ಕೆ ತೆಗೆದುಕೊಂಡು ಹೋಗಿ ಚಿತ್ರಗುಪ್ತರು ಬರೆದಿಟ್ಟ ಲೆಕ್ಕಕ್ಕನುಗುಣವಾಗಿ ಅವನಿಗೊಂದು ಯಾತನಾಶರೀರವನ್ನು ಕೊಟ್ಟು ಈಗ ನಾಲ್ಕು ದಿನ ಗಳಲ್ಲಿ ನರಕದಲ್ಲಿ ಅವನಿಗೆ ಕಠೋರವಾದ ಶಿಕ್ಷೆಯನ್ನು ವಿಧಿಸುತ್ತಿದ್ದರು. ಆದರೆ ಇಂದು ಒಮ್ಮಿಂದೊಮ್ಮೆಲೇ ಕೆಲ ಜನ ಶಿವಗಣರು ಯಮಲೋಕಕ್ಕೆ ಬಂದು ನನ್ನನ್ನೂ ಹಾಗೂ ನನ್ನ ದೂತರನ್ನೂ ಚನ್ನಾಗಿ ಬಡಿದು ಆ ಪಾಪಿಯನ್ನು ನರಕದಿಂದ ಬಿಡಿಸಿಕೊಂಡು ಶಿವ ಲೋಕಕ್ಕೆ ತೆಗೆದುಕೊಂಡು ಬಂದಿದ್ದಾರೆ. ಆ ಪಾಪಿಯು ಕೈಲಾಸಕ್ಕೆ ಬರುವ ಯಾವ ಪುಣ್ಯ ವನ್ನೂ ಮಾಡಿಲ್ಲ. ಹೀಗೆ ನೀನು ಪಾಪಿಗಳ ಪಕ್ಷಪಾತಿಯಾದರೆ, ಮುಂದೆ ಧರ್ಮಾ ಧರ್ಮದ ವ್ಯವಸ್ಥೆ ಹೇಗೆ ಎಂಬುದಾಗಿ ಯಮನು ಬೇಡಿಕೊಂಡನು.

ಆಗ ಶಿವನು ಅಲ್ಲಿಯೇ ಇದ್ದ ಭೈರವನತ್ತ ಹೊರಳಿ, ಹೀಗಾಗಲು ಕಾರಣವೇನೆಂದು ಪ್ರಶ್ನಿಸಲು; ಭೈರವನು ಒಂದು ವಿಸ್ಮಯಕರವಾದ ಘಟನೆಯನ್ನು ಹೇಳತೊಡಗಿದನು. ಚಕ್ರವಾಕ ರಾಜನ ಮಗಳಾದ ಸರ್ವಾಂಗ ಸುಂದರಿಯು ಮಂಗಲ ಸ್ನಾನವನ್ನು ಮಾಡಿ ತನ್ನ ಉದ್ಯಾನಕ್ಕೆ ಬಂದು ಕೂದಲುಗಳನ್ನು ಒಣಗಿಸಿಕೊಳ್ಳುವಾಗ ತನ್ನ ಕೊರಳಲ್ಲಿಯ ಒಂದು ಮನೋಹರವಾದ ಹವಳದ ಹಾರವನ್ನು ಮಲ್ಲಿಗೆಯ ಬಳ್ಳಿಯ ಮೇಲೆ ಇರಿಸಿ ದ್ದಳು. ಆ ಕೆಂಪು ಮಣಿಗಳು ಗುಂಪಾಗಿದ್ದುದರಿಂದ, ದೂರಕ್ಕೆ ಮಾಂಸದ ಮುದ್ದೆಯಂತೆ ತೋರುತಿದ್ದವು. ಆಕಾಶದಲ್ಲಿ ಹಾರಾಡುವ ಕಾಗೆಯೊಂದು ಅದನ್ನು ಮಾಂಸವೆಂದು ಭ್ರಮಿಸಿ ತೆಗೆದುಕೊಂಡು ಹಾರಿಹೋಯಿತು. ಮುಂದೆ ಅದಕ್ಕೆ ಯಥಾರ್ಥದ ಅರಿವಾದೊಡನೆ ತನ್ನ ಕಾಲಲ್ಲಿ ಹಿಡಿದ ಸರವನ್ನು ಬಿಟ್ಟುಬಿಟ್ಟಿತು. ಕಾಗೆಯಿಂದ ಬಿಡಲ್ಪಟ್ಟ ಆ ಹಾರವು ಇಂದು ಆ ಜಾಮಿತ್ರನ ಮೃತದೇಹದ ಮೇಲೆ ಬಿದ್ದಿದೆ. ಆ ಹಾರದ ಮಧ್ಯ ದಲ್ಲಿ ಒಂದು ರುದ್ರಾಕ್ಷ ಮಣಿ ಇತ್ತು. ಅದು ಅವನ ಮಸ್ತಕಕ್ಕೆ ಸ್ಪರ್ಶವಾಗಿರೋಣದ ರಿಂದ, ಅವನ ಪಾತಕಗಳೆಲ್ಲ ಕ್ಷಣಾರ್ಧದಲ್ಲಿ ದಹಿಸಿಹೋಗಿವೆ. ಹೀಗೆ ಪಾಪನಿರ್ಮುಕ್ತ ನಾದ ಅವನ ಜೀವಾತ್ಮನನ್ನು ಯಮದೂತರು ಇನ್ನೂ ಯಾತನೆಯನ್ನು ಕೊಡುವುದನ್ನು ನೋಡಿ ನಮ್ಮ ಗಣರು ಯಮನನ್ನೂ ಹಾಗೂ ಅವನ ದೂತರನ್ನೂ ಶಿಕ್ಷಿಸಿ, ಆ ಜಾಮಿತ್ರ ನನ್ನು ಕೈಲಾಸಕ್ಕೆ ತೆಗೆದುಕೊಂಡು ಬಂದಿದ್ದಾರೆ.

ಭೈರವನ ಈ ನುಡಿಗಳನ್ನು ಕೇಳಿ ಯಮನು ಪ್ರಶ್ನಿಸುತ್ತಾನೆ–

ಹೇ ಪ್ರಭೋ ! ಜೀವವುಳ್ಳ ದೇಹಕ್ಕೆ ರುದ್ರಾಕ್ಷಗಳ ಸಂಬಂಧವಾದಾಗ ಅವನಿಗೆ ಸದ್ಗತಿಯಾಗಬಹುದಲ್ಲದೇ, ಮೃತದೇಹಕ್ಕೆ ಸಂಬಂಧವಾದಾಗ ಫಲ ಪ್ರಾಪ್ತಿಯಾಗು ವುದು ಹೇಗೆ ? ಯಮನ ಈ ಪ್ರಶ್ನೆಗೆ ಭೈರವನು–

ಅಸ್ಥಿಕೇಶಾದಿ ಗಂಗಾಯಾಂ ಮೃತಾನಾಂ ಬಹುಕಾಲತಃ ।
ಪತಿತಂ ಯದಿ ವೈ ಶೀಘ್ರಂ ಕೈಲಾಸಂ ಯಾಂತಿ ವೈ ಯಮ ॥

(ಕ್ರಿಯಾಸಾರ ೧೧–೧೬ಳ ಪುಟ ೧೫ಲ)

ಸತ್ತ ವ್ಯಕ್ತಿಯ ಎಲುಬು, ಕೂದಲು ಮತ್ತು ಸುಟ್ಟ ಬೂದಿಯನ್ನು, ಅವನು ಸತ್ತ ಅನೇಕ ದಿನಗಳ ನಂತರವೂ ಗಂಗಾ ಮುಂತಾದ ಪವಿತ್ರ ನದಿಗಳಲ್ಲಿ ಕೂಡಿಸಿದಾಗ, ಹೇಗೆ ಅವನಿಗೆ ಸದ್ಗತಿ ದೊರೆಯುವುದೋ, ಅದರಂತೆ, ಮೃತ ದೇಹದ ಮೇಲೆ ಶಿವ ಚಿಹ್ನೆಗಳಾದ ಭಸ್ಮ-ರುದ್ರಾಕ್ಷಗಳು ಇದ್ದರೂ, ಅವನಿಗೆ ಸದ್ಗತಿ ದೊರೆಯುವುದು ಎಂಬುದಾಗಿ ಸಮರ್ಪಕವಾಗಿ ಉತ್ತರಿಸಿ-

ಅದ್ಯಪ್ರಭೃತಿ ರುದ್ರಾಕ್ಷಧಾರಿಣೋ ಮಮ ವಲ್ಲಭಾನ್ ।
ದೂರಾದ್ದೃಷ್ಟ್ವಾ ಯಮ ಭಯಾನ್ನತ್ವಾ ತಾನ್ ಮನಸಾ ವ್ರಜ ॥

(ಕ್ರಿಯಾಸಾರ ೧೧-೧೬೮ ಪುಟ ೧೫೪)

ಹೇ ಯಮ ! ಇಂದಿನಿಂದ ರುದ್ರಾಕ್ಷಧಾರಿಗಳನ್ನು ನೀನು ಮುಟ್ಟಕೂಡದು. ಅವರಿಗೆ ದೂರದಿಂದಲೇ ಮನಸಾ ನಮಸ್ಕರಿಸು; ಅವರ ಮೇಲೆ ನಿನ್ನ ಅಧಿಕಾರವು ನಡೆಯಲಾರದು ಎಂಬುದಾಗಿ ಉಪದೇಶಿಸಿ ಕಳುಹಿದನು.

ಅಂದಿನಿಂದ ಯಮನು ಶಿವನ ಪ್ರೀತಿಯ ಚಿಹ್ನೆಗಳಾದ ಭಸ್ಮ ರುದ್ರಾಕ್ಷಗಳನ್ನು ಧರಿಸಿದವರ ಗೊಡವೆಯನ್ನೇ ಬಿಟ್ಟಿರುವನಲ್ಲದೇ, ತನ್ನ ದೂತರನ್ನು ಕುರಿತು ಉಪದೇಶಿಸಿದ್ದೇನೆಂದರೆ-

ಯಸ್ಯಾಂಗೇ ನಾಸ್ತಿ ರುದ್ರಾಕ್ಷಸ್ತ್ರಿಪುಂಡ್ರಂ ಭಾಲಪಟ್ಟಕೇ ।
ಮುಖೇ ಪಂಚಾಕ್ಷರಂ ನಾಸ್ತಿ ತಮಾನಯ ಯಮಾಲಯಂ ॥

(ಶಿವ ಪು. ವಿ. ಸಂ. ೨೫ ಅ. ೫೧)

ಯಾರ ದೇಹದ ಮೇಲೆ ಭಸ್ಮ-ರುದ್ರಾಕ್ಷಗಳಿಲ್ಲವೋ ಮತ್ತು ಮುಖದಲ್ಲಿ ಪಂಚಾಕ್ಷರ ಮಹಾಮಂತ್ರದ ಪಠಣವಿರುವದಿಲ್ಲವೋ ಅವರನ್ನು ಮಾತ್ರ ಯಮಾಲಯಕ್ಕೆ ತರಬೇಕೆಂಬುದಾಗಿ ತಿಳಿಸಿದ್ದಾನೆ.

ಹೀಗೆ ಉಪನಿಷತ್, ಪುರಾಣ ಮೊದಲಾದ ಪ್ರಾಚೀನ ಸಾಹಿತ್ಯದಲ್ಲಿ ರುದ್ರಾಕ್ಷಗಳ ಮಹಿಮೆಯು ಅಪಾರವಾಗಿ ವರ್ಣಿಸಲ್ಪಟ್ಟಿದೆ. ಈ ಪ್ರಾಚೀನ ಸಾಹಿತ್ಯವನ್ನು ಅಭ್ಯಸಿಸಿ ಆಚರಿಸಿ, ಅನುಭವಿಸಿದ ಶ್ರೀ ಬಸವೇಶ್ವರರಾದರೂ-

ಅಯ್ಯಾ, ರುದ್ರಾಕ್ಷಿಯಿಂದೆ ಪರಿದೆನು ಭವಪಾಶಂಗಳ;
ಅಯ್ಯಾ, ರುದ್ರಾಕ್ಷಿಯಿಂದೆ ಮುರಿದೆನು ತನುಗುಣಾದಿಗಳ;
ಅಯ್ಯಾ, ರುದ್ರಾಕ್ಷಿಯಿಂದೆ ಒರಸಿದೆನು ಮಹಾಮಾಯೆಯ;
ಅಯ್ಯಾ, ರುದ್ರಾಕ್ಷಿಯಿಂದೆ ಕಳೆದೆನು ಪಂಚಮಹಾಪಾತಕವ;
ಅಯ್ಯಾ, ಕೂಡಲಸಂಗಮದೇವ,
ಶ್ರೀ ಮಹಾರುದ್ರಾಕ್ಷಿಯಿಂದೆ ಗೆಲಿದೆನಯ್ಯಾ ಸಕಲದುರಿತಂಗಳನು.

(ವೀರಶೈವ ಚಿಂತಾಮಣಿ ಪುಟ ೧೬೦)

ತಮ್ಮ ಈ ಅನುಭವದ ನುಡಿಯಲ್ಲಿ ರುದ್ರಾಕ್ಷಧಾರಣದಿಂದಾಗುವ ಪಾತಕಗಳ ನಿವೃತ್ತಿಯನ್ನು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಇದೇ ಪ್ರಕಾರ-

ಎಸೆವ ಹಲವು ಮುಖದ ಭೇದವರಿದು ಧರಿಸೆ,
ಬ್ರಹ್ಮಹತ್ಯ ಪಶುವಿಘಾತ ಭ್ರೂಣಹತ್ಯ ಪಾಪನಾಶನಂ
ಒಸೆದು ಚಿತ್ತಶುದ್ಧಿಯಿಂದೆ ಧರಿಸಿದಾತ ರುದ್ರನೆಂದು
ವಸುಧೆಯೊಳಗೆ ಸಾರುತಿಹುದು ವೇದವಾಕ್ಯವು.

(ವೀರವೈವ ಚಿಂತಾಮಣಿ ಪುಟ ೧೫೫–೧೫೬)

ಈ ಕನ್ನಡ ಕವಿಯಾದರೂ–ವಿಭಿನ್ನ ಮುಖಗಳ ರುದ್ರಾಕ್ಷಗಳ ಧಾರಣದ ಪದ್ಧತಿಯನ್ನರಿತು ಧರಿಸಿದ್ದಾದರೆ ಬ್ರಹ್ಮಹತ್ಯೆ, ಭ್ರೂಣಹತ್ಯೆ ಮುಂತಾದ ಪಾತಕಾದಿಗಳು ನಶಿಸಿ, ಚಿತ್ತವು ಪರಿಶುದ್ಧವಾಗುವ ವಿಷಯವು ವೇದಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿದೆ ಎಂಬುದನ್ನು ನಿರೂಪಿಸಿದ್ದಾನೆ.

ಈ ರೀತಿಯಾದ ಈ ಎಲ್ಲ ಪ್ರಾಮಾಣಿಕ ವಚನಗಳನ್ನವಲೋಕಿಸಿದಾಗ, ರುದ್ರಾಕ್ಷ ಧಾರಣವು, ಸರ್ವಪಾತಕಗಳ ಪ್ರಾಯಶ್ಚಿತ್ತವೆಂಬುದಾಗಿ ತಿಳಿದುಬರುತ್ತದೆ. ಯಾವುದೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ವ್ಯಕ್ತಿಯು, ಇನ್ನು ಮುಂದೆ ನಾನು ಇಂತಹ ಪಾಪ ಕೃತ್ಯಗಳನ್ನು ಮಾಡುವದಿಲ್ಲವೆಂಬುದಾಗಿ ನಿರ್ಣಯಿಸಿ, ಪಶ್ಚಾತ್ತಾಪಗೊಂಡು ಪುನೀತನಾಗಬೇಕು. ಅದೇ ಪ್ರಕಾರ ರುದ್ರಾಕ್ಷ ಮುಂತಾದ ಶಿವಲಾಂಛನವನ್ನು ಧರಿಸಿದ ಬಳಿಕ ತನ್ನಿಂದ ಯಾವುದೇ ಪಾಪಕೃತ್ಯವು ಜರುಗದಂತೆ ಎಚ್ಚರಿಕೆಯನ್ನು ವಹಿಸಬೇಕು.

ರುದ್ರಾಕ್ಷದ ದರ್ಶನ-ಸ್ಪರ್ಶನಾದಿಗಳಿಂದ ಪಾತಕ ನಿವೃತ್ತಿ :

ಇಲ್ಲಿಯವರೆಗೆ ರುದ್ರಾಕ್ಷಧಾರಣದಿಂದಾಗುವ ಪಾತಕಗಳ ನಿವೃತ್ತಿಯನ್ನು ತಿಳಿಯಪಡಿಸಿದ ಪೂಜ್ಯಪಾದರು–

ದರ್ಶನಾತ್ ಸ್ಪರ್ಶನಾಚ್ಚೈವ ಸ್ಮರಣಾದಪಿ ಪೂಜನಾತ್ ।
ರುದ್ರಾಕ್ಷಧಾರಣಾಲ್ಲೋಕೇ ಮುಚ್ಯಂತೇ ಪಾತಕೈರ್ಜನಾಃ ॥

ಎಂಬ ಈ ಶ್ಲೋಕದಲ್ಲಿ, ರುದ್ರಾಕ್ಷದ ಧಾರಣದಿಂದಷ್ಟೇ ಅಲ್ಲ, ಅದರ ದರ್ಶನ, ಸ್ಪರ್ಶನ, ಪೂಜನ ಮತ್ತುಸ್ಮರಣಮಾತ್ರದಿಂದಲೂ ಪಾತಕಗಳು ನಿವೃತ್ತಿಯಾಗುತ್ತವೆಂಬುದನ್ನು ಸದ್ಯಃ ಅಪ್ಪಣೆ ಕೊಡಿಸುತ್ತಿದ್ದಾರೆ.

ಪಾವನಗಳಾದ ವಸ್ತುಗಳು ಸರ್ವವಿಧದಿಂದಲೂ ಮನುಷ್ಯನನ್ನು ಪವಿತ್ರಗೊಳಿಸುತ್ತವೆ. ಯಾರಿಗೆ ರುದ್ರಾಕ್ಷವನ್ನು ಧರಿಸುವ ಸಾಮರ್ಥ್ಯವಿಲ್ಲವೋ, ಅವರು ಅದನ್ನು ಭಕ್ತಿಯಿಂದ ದರ್ಶನಮಾಡಿದರೆ, ಸ್ಪರ್ಶನ ಮಾಡಿದರೆ, ಪೂಜಿಸಿದರೆ ಅಥವಾ ಸ್ಮರಿಸಿದರೂ ಸಾಕು, ಅವರಿಗೆ ಧಾರಣದ ಫಲಗಳೇ ಪ್ರಾಪ್ತವಾಗುತ್ತವೆ.

ಒಂದು ಮುಖದ ರುದ್ರಾಕ್ಷದ ಮಹಿಮೆಯು ಬಹುವಾಗಿ ವರ್ಣಿಸಲ್ಪಟ್ಟಿದೆ. ಆ ರುದ್ರಾಕ್ಷವು ದುರ್ಮಿಳವಾದ್ದರಿಂದ ಸರ್ವರೂ ಅದನ್ನು ಧರಿಸಲು ಸಾಧ್ಯವಿರುವುದಿಲ್ಲ, ಕಾರಣ ಅದು ಎಲ್ಲಿ ಇದೆಯೋ ಅಲ್ಲಿಗೇ ಹೋಗಿ ಅದರ ದರ್ಶನ ಮಾಡಿದರೆ ಅಥವಾ ಅದರ ಸ್ಪರ್ಶನದ ಸೌಭಾಗ್ಯ ದೊರೆತು ಅದನ್ನು ಸ್ಪರ್ಶಿಸಿದರೆ, ಇಲ್ಲವೇ ಪೂಜಿಸಿದರೆ, ಅದರ ಧಾರಣದ ಫಲವೇ ಪ್ರಾಪ್ತವಾಗುತ್ತದೆ. ಒಂದು ವೇಳೆ ಇನ್ನು ಅದನ್ನು ದರ್ಶನ

ಮಾಡಿಕೊಳ್ಳುವ ಭಾಗ್ಯವಿರದಿದ್ದರೂ ಕೇವಲ ಮನಸ್ಸಿನಿಂದ ಅದನ್ನು ಸ್ಮರಿಸಿದರೂ ಸಹ ಅದೇ ಪುಣ್ಯವು ಪ್ರಾಪ್ತವಾಗುತ್ತದೆ.

ಅಂತೆಯೇ–''ತದ್ರುದ್ರಾಕ್ಷೇ ವಾಗ್ವಿಷಯೇ ಕೃತೇ ದಶಗೋಪ್ರದಾನೇನ ಯತ್ ಫಲಮವಾಪ್ನೋತಿ ತತ್ಫಲಮಶ್ನುತೇ'' ಎಂಬ ರುದ್ರಾಕ್ಷಜಾಬಾಲೋಪನಿಷತ್ತಿನಲ್ಲಿಯೂ– ಬಾಯಿಂದ ''ರುದ್ರಾಕ್ಷ'' ಎಂಬ ಶಬ್ದವನ್ನುಚ್ಚರಿಸಿದ ಮಾತ್ರದಿಂದ ಹತ್ತು ಗೋದಾನದ ಫಲವು ಪ್ರಾಪ್ತವಾಗುವದೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ.

ಇದನ್ನೇ ಕನ್ನಡ ಕವಿಯೋರ್ವನು–

ಸ್ಮರಿಸೆ ದುರಿತ ಹರಿವುದೀಕ್ಷಿಸಲ್ಕೆ ಕರ್ಮವಳಿವುದೊಲಿದು
ಸ್ಪರ್ಶನವನು ಮಾಡೆ ಜನ್ಮಪಾಶ ಪರಿವುದು.
ಧರಿಸೆ ರುದ್ರಪದವಿಯರಿದು ಧರಿಸಿ ಜಪಿಸೆ ಸದ್ಯೋನ್ಮುಕ್ತಿ
ಪರಮ ವೀರಶೈವ ಮತದ ಮೂಲಭೂಷಣ.

(ವೀರಶೈವಚಿಂತಾಮಣಿ, ಪುಟ ೧೫೫)

ಈ ರೀತಿಯಾಗಿ ರುದ್ರಾಕ್ಷದ ಸ್ಮರಣ, ಸ್ಪರ್ಶನ, ಧಾರಣಾದಿಗಳಿಂದ ದೊರೆಯುವ ಫಲಗಳನ್ನು ಪ್ರತಿಪಾದಿಸಿದ್ದಾನೆ. ಈ ಎಲ್ಲ ಪ್ರಮಾಣಗಳನ್ನವಲೋಕಿಸಿದಾಗ ರುದ್ರಾಕ್ಷವು ಸರ್ವಥಾ ಸತ್ತ್ವಶಾಲಿ ಎಂಬುದು ತಿಳಿದುಬರುತ್ತದೆ.

ರುದ್ರಾಕ್ಷಧಾರಣಕ್ಕೆ ವರ್ಣಾಶ್ರಮ ಭೇದವಿಲ್ಲ :

ಬ್ರಾಹ್ಮಣೋವಾಂತ್ಯಜೋ ವಾಪಿ ಮುರ್ಖೋ ವಾ ಪಂಡಿತೋಽಪಿ ವಾ ।
ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕ್ಯೆಃ ॥

ಎಂಬ ಈ ಪದ್ಯದಲ್ಲಿ ಶ್ರೀ ಜಗದ್ಗುರು ರೇಣುಕರು ರುದ್ರಾಕ್ಷಧಾರಣಕ್ಕೆ ವರ್ಣಾಶ್ರಮಗಳ ಭೇದವನ್ನು ಪ್ರಬಲವಾಗಿ ಖಂಡಿಸಿದ್ದಾರೆ. ಬ್ರಾಹ್ಮಣನಿಂದ ಅಂತ್ಯಜನವರೆಗೆ ಮೂರ್ಖ ನಿಂದ ಪಂಡಿತನವರೆಗೆ, ಯಾರಾದರೂ ಇದನ್ನು ಧರಿಸಿಕೊಳ್ಳಬಹುದು.

ಮನುಷ್ಯರ ದೃಷ್ಟಿಯಲ್ಲಿ ವರ್ಣಾಶ್ರಮಗಳ ಭೇದವಿದೆಯೇ ವಿನಾ, ಭಗವಂತನ ಸೃಷ್ಟಿಯಲ್ಲಿ ನಾವೆಲ್ಲ ಸಮಾನರು. ಭಕ್ತಿಯುಳ್ಳವರು ಯಾರಾದರೂ ಧರಿಸಬಹುದು. ಭಗವಂತನಿಗೆ ಭಕ್ತಿಯು ಪ್ರಿಯವಾದದ್ದೇ ಹೊರತು, ಜಾತಿಯು ಪ್ರಿಯವಾದದ್ದಲ್ಲ. ಇದೇ ಮಾತನ್ನೇ ಶ್ರೀ ಸ್ವತಂತ್ರ ಸಿದ್ಧಲಿಂಗೇಶ್ವರರು–

ಬ್ರಾಹ್ಮಣ, ಅಂತ್ಯಜ, ಮೂರ್ಖ, ಪಂಡಿತ,
ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿಯಾದಡಾಗಲಿ,
ರುದ್ರಾಕ್ಷಿಯನೊಲಿದು ಧರಿಸುವುದು ಕಾಣಿರಣ್ಣಾ
ಮತ್ತೆ ಜಪಕಾಲ, ತಪಕಾಲದಲ್ಲಿ ಜಪವ ಮಾಡುವವರು
ದೇವಪೂಜೆಯಲ್ಲಿ ಶ್ರೀ ರುದ್ರಾಕ್ಷಿಯನೊಲಿದು ಧರಿಸುವುದು ಕಾಣಿರಣ್ಣಾ,
ಶ್ರೀ ರುದ್ರಾಕ್ಷಿಯ ಧರಿಸಿದ ಪರಮಾತ್ಮನು
ಹೆಜ್ಜೆ ಹೆಜ್ಜೆಗೆ ಅಶ್ವಮೇಧ ಶತಯಾಗದ ಫಲವ ಪಡೆದು

ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಕೂಡಿ
ಸುಖಿಸಿಹನು ಕಾಣಿರಣ್ಣಾ.

(ವೀರಶೈವ ಚಿಂತಾಮಣಿ ಪುಟ ೧೬೨)

ಈ ವಚನದಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆದಕಾರಣ, ಶ್ರೀ ಜಗದ್ಗುರು ರೇಣುಕರ ಆದೇಶದಂತೆ, ಸಕಲ ವರ್ಣಾಶ್ರಮದವರೂ ರುದ್ರಾಕ್ಷಧಾರಣವನ್ನು ಮಾಡಿಕೊಂಡು, ಅದರ ಉತ್ಕೃಷ್ಟವಾದ ಫಲವನ್ನು ಪಡೆದು ಧನ್ಯರಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩ ಸೆಪ್ಟೆಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ ಸೋಲಾಪೂರ)

■■

ಆಶೀರ್ವಚನ-೬

ರುದ್ರಾಕ್ಷಧಾರಣದಿಂದ ಪುಣ್ಯಪ್ರಾಪ್ತಿ :

ನಮ್ಮ ಜೀವನದ ಸುಖ-ದುಃಖಗಳಿಗೆ ಪುಣ್ಯ-ಪಾಪಗಳೇ ಮೂಲಗಳು. ಮನುಷ್ಯನು ತನ್ನೆಲ್ಲ ದುಃಖಗಳನ್ನು ಕಳೆದುಕೊಂಡು ಸದಾ ಸುಖಿಯಾಗಿರಬೇಕೆಂಬುದಾಗಿ ವಿಚಾರಿಸುತ್ತಾನೆ. ಈ ಸ್ಥಿತಿಯು ದೊರೆಯಲು ಸರ್ವಪಾಪ ಕ್ಷಯವಾಗಿ ಸರ್ವೋತ್ಕೃಷ್ಟ ವಾದ ಪುಣ್ಯೋದಯವಾಗಬೇಕು. ಇದಕ್ಕಾಗಿ ಧರ್ಮಶಾಸ್ತ್ರಗಳಲ್ಲಿ ಅನೇಕ ವ್ರತ ನಿಯಮಾದಿಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ರುದ್ರಾಕ್ಷಧಾರಣವೂ ಒಂದು ಅತಿ ಮಹತ್ವಪೂರ್ಣವಾದ ವ್ರತವಾಗಿದೆ. ಇಲ್ಲಿಯವರೆಗೆ ಪೂಜ್ಯರಾದ ಶ್ರೀ ಜಗದ್ಗುರು ರೇಣುಕರು ರುದ್ರಾಕ್ಷಧಾರಣದಿಂದ ಪಾಪಕ್ಷಯವಾಗುವುದೆಂಬುದನ್ನು ಉಪದೇಶಿಸಿ, ಸದ್ಯಃ ಅದರಿಂದಲೇ ಸರ್ವೋತ್ಕೃಷ್ಟ ಪುಣ್ಯದ ಪ್ರಾಪ್ತಿಯಾಗುವದೆಂಬುದನ್ನು-

ಗವಾಂ ಕೋಟಿಪ್ರದಾನಸ್ಯ ಯತ್ಫಲಂ ಭುವಿ ಲಭ್ಯತೇ ।
ತತ್ಫಲಂ ಲಭತೇ ಮರ್ತ್ಯೋ ನಿತ್ಯಂ ರುದ್ರಾಕ್ಷಧಾರಣಾತ್ ॥

ಈ ರೀತಿಯಾಗಿ ಉಪದೇಶಿಸಿದ್ದಾರೆ. ಅಂದರೆ, ನಿತ್ಯವೂ ತಪ್ಪದೇ ರುದ್ರಾಕ್ಷವನ್ನು ಧರಿಸಿದ್ದಾದರೆ, ಒಂದು ಕೋಟಿ ಗೋದಾನದ ಫಲವು ಪ್ರಾಪ್ತವಾಗುತ್ತದೆ. ಅನೇಕ ವಿಧ ಗಳಾದ ದಾನಗಳಲ್ಲಿ ಗೋದಾನಕ್ಕೆ ಅತ್ಯಂತ ಪ್ರಾಶಸ್ತ್ಯವಿದೆ.

ಅದರ ರಹಸ್ಯವೇನೆಂದರೆ-ಯಮಲೋಕದ ದ್ವಾರದಲ್ಲಿರುವ ''ವೈತರಣೀ'' ನದಿಯನ್ನು ಸುಖವಾಗಿ ದಾಟಬೇಕಾದರೆ ಕರುವಿನಿಂದೊಡಗೂಡಿದ ಕೃಷ್ಣವರ್ಣದ ಆಕಳನ್ನು ದಾನ ಮಾಡಬೇಕೆಂಬುದಾಗಿ ಶುದ್ಧಿತತ್ತ್ವದಲ್ಲಿ ಪ್ರತಿಪಾದಿಸಲಾಗಿದ್ದು ಆ ಸಮಯದಲ್ಲಿ-

ಯಮದ್ವಾರೇ ಮಹಾಘೋರೇ ತಪ್ತಾ ವೈತರಣೀ ನದೀ ।
ತಾಂ ಚ ತರ್ತುಂ ದದಾಮ್ಯೇನಾಂ ಕೃಷ್ಣಾಂ ವೈತರಣೀಂ ಚ ತಾಂ ॥

(ವಾಚಸ್ಪತ್ಯಂ ಪುಟ ೪೮೭೨)

ಈ ಮಂತ್ರವನ್ನು ಪಠಿಸುವದಾಗಿ ಹೇಳಲಾಗಿದೆ.

ವೈತರಣೀ ನದಿಯ ಸ್ವರೂಪ ಹಾಗೂ ಉತ್ಪತ್ತಿ :

ನದೀ ವೈತರಣೀ ನಾಮ ದುರ್ಗಂಧಾ ರುಧಿರಾವಹಾ ।
ಉಷ್ಣತೋಯಾ ಮಹಾವೇಗಾ ಅಸ್ಥಿಕೇಶತರಂಗಿಣೀ ॥

(ವಾಚಸ್ಪತ್ಯಂ, ಪುಟ ೪೮೭೧)

ಶ್ರೀ ಜಮದಗ್ನಿ ಮಹರ್ಷಿಯು ಪ್ರಾಯಶ್ಚಿತ್ತ ವಿವೇಕದಲ್ಲಿ ವೈತರಣೀ ನದಿಯ ಸ್ವರೂಪ ವನ್ನು ಈ ರೀತಿಯಾಗಿ ವಿವರಿಸಿದ್ದಾನೆ-

ಎಲಬು–ಕೂದಲು ಮತ್ತು ರಕ್ತದಿಂದ ಕೂಡಿದ, ದುರ್ಗಂಧಯುಕ್ತವಾದ, ಅತ್ಯಂತ ವೇಗವುಳ್ಳ ಹಾಗೂ ಕುದಿಯುವ ನೀರುಳ್ಳ ನದಿಯೇ ವೈತರಣಿಯು. ಇದು ಯಮಲೋಕದ ಮಹಾದ್ವಾರದಲ್ಲಿದೆ. ಪಾಪಿಗಳು ಇದನ್ನು ದಾಟಿಯೇ ಯಮಲೋಕ ವನ್ನು ತಲುಪಬೇಕಾಗುತ್ತದೆ. ''ವಿಗತಾ ತರಣಿರ್ಯತ್ರ, ಸಾ ವೈತರಣೀ'' ಎಂಬ ವ್ಯುತ್ಪತ್ತಿಯ ಮೇರೆಗೆ, ನೌಕೆ, ರಥ, ವಿಮಾನ ಮುಂತಾದ ಯಾವುದೇ ವಾಹನದ ಮೂಲಕ ಈ ನದಿಯನ್ನು ದಾಟಲು ಬರುವುದಿಲ್ಲ. ಅಂತೆಯೇ ''ವಿತರಣೇನ ದಾನೇನ ಲಂಘ್ಯತೇ ಇತಿ ವೈತರಣೀ'' ಎಂಬ ವ್ಯುತ್ಪತ್ತಿಯ ಮೇರೆಗೆ, ಉತ್ಕೃಷ್ಟವಾದ ಗೋದಾನದ ಪುಣ್ಯ ವಿಶೇಷದಿಂದಲೇ ಈ ನದಿಯನ್ನು ಸುಗಮವಾಗಿ ದಾಟಬಹುದು.

ಕಾಲಿಕಾ ಪುರಾಣದ ಹದಿನೆಂಟನೇ ಅಧ್ಯಾಯದಲ್ಲಿ ಈ ನದಿಯ ಉತ್ಪತ್ತಿ ಕಥೆಯು ಹೀಗೆ ವರ್ಣಿಸಲ್ಪಟ್ಟಿದೆ–

ಶಿವನ ಪತ್ನಿಯಾದ ಸತೀ ದೇವಿಯು ದಕ್ಷಬ್ರಹ್ಮನ ಯಾಗದಲ್ಲಿ ಮಡಿದ ನಂತರ, ಅವಳ ವಿಯೋಗದಿಂದ ಶಿವನು ದುಃಖಾಶ್ರುಗಳನ್ನು ಸುರಿಸತೊಡಗಿದನು. ಶಿವನ ದುಃಖದ ಕಣ್ಣೀರು ಭೂಮಿಗೆ ಬಿದ್ದರೆ ಭೂಮಂಡಲವೇ ಭಸ್ಮವಾಗುವುದೆಂಬ ಭಯ ದಿಂದ ದೇವತೆಗಳೆಲ್ಲ ಕೂಡಿ ಶನಿದೇವನನ್ನು ಪ್ರಾರ್ಥಿಸುತ್ತಾರೆ–ಹೇ ಶನೈಶ್ಚರನೇ ! ಈ ಪೂರ್ವದಲ್ಲಿ ಒಂದು ನೂರು ವರ್ಷದ ಮಳೆ ನೀರು ಭೂಮಿಗೆ ಬೀಳದಂತೆ ತಡೆಹಿಡಿದು ಅನಾವೃಷ್ಟಿಯನ್ನುಂಟುಮಾಡಿದ ಸಾಮರ್ಥ್ಯ ನಿನ್ನದಾಗಿದೆ. ಇಷ್ಟು ಜಲರಾಶಿಯನ್ನು ತಡೆದು, ಅದನ್ನು ಒಣಗಿಸುವ ಸಾಮರ್ಥ್ಯವು ಮತ್ತಾರಲ್ಲಿಯೂ ಇಲ್ಲ. ಸದ್ಯಃ ನೀನು ಶಿವನ ದುಃಖದ ಕಣ್ಣೀರು ಭೂಮಿಗೆ ಬೀಳದಂತೆ ತಡೆಹಿಡಿಯಬೇಕು.

ದೇವತೆಗಳ ಈ ಪ್ರಾರ್ಥನೆಯನ್ನು ಮನ್ನಿಸಿದ ಶನಿದೇವನು, ದೇವತೆಗಳ ಮಾಯಾಜಾಲದ ಪರಿಣಾಮವಾಗಿ, ಶಿವನಿಗೆ ಕಾಣದಂತೆ, ಅವನ ಸಮೀಪದಲ್ಲಿಯೇ ಕುಳಿತು, ಅವನ ಅಶ್ರುಗಳನ್ನು ಹಿಡಿದಿಡತೊಡಗಿದನು. ಅಪಾರವಾಗಿ ಹರಿದು ಬರುವ ಆ ಅಶ್ರುವನ್ನು ತನ್ನಲ್ಲಿ ಧರಿಸುವುದು ಅಸಾಧ್ಯವಾದಾಗ, ಜಲಧರವೆಂಬ ಗಿರಿಯಲ್ಲಿ ಸುರವಿದನು. ಜಲಸಮುದ್ರದ ಪಶ್ಚಿಮದಲ್ಲಿರುವ ಈ ಪರ್ವತಕ್ಕೂ ಆ ಅಶ್ರುಜಲವನ್ನು ಧರಿಸಿಕೊಳ್ಳುವದಾಗಲಿಲ್ಲ. ಆಗ ಪರ್ವತವು ಸೀಳಿಬಿಡುತ್ತದೆ. ಕೂಡಲೇ ಪರ್ವತದಿಂದ ಹರಿದು ಬಂದ ಅಶ್ರುಜಲವು ಸಮುದ್ರವನ್ನು ಹೊಕ್ಕು, ಅದನ್ನೂ ಭೇದಿಸಿ, ಜಲ ಸಮುದ್ರದ ಪೂರ್ವದಿಕ್ಕಿನಲ್ಲಿ ಹರಿಯತೊಡಗಿತು. ಪರ್ವತ ಹಾಗೂ ಸಮುದ್ರವನ್ನು ಭೇದಿಸಿ ಬರುವುದರೊಳಗಾಗಿ ಅದರಲ್ಲಿಯ ಅತಿ ದಾಹಕ ಶಕ್ತಿಯು ಕಡಿಮೆಯಾಯಿತು. ಆದರೂ ಅದರಲ್ಲಿಯ ಉತ್ತಪ್ತಸ್ಥಿತಿಯು ಹಾಗೇ ಉಳಿದಿದೆ. ಇದುವೇ ವೈತರಣೀ ನದಿಯು. ಇದು ಎರಡು ಯೋಜನೆ (೪ ಮೈಲು) ವಿಸ್ತಾರವಾಗಿದೆ. ಇದು ಯಮಲೋಕ ವನ್ನು ಸುತ್ತುವರಿದಿರುವುದರಿಂದ, ಯಮಲೋಕದ ಕಂದಕದಂತಿದೆ. ಅನೇಕ ಕ್ರೂರ ಗಳಾದ ಜಲಚರ ಪ್ರಾಣಿಗಳಿಂದ ಕೂಡಿದ ಈ ನದಿಯು ಮಹಾ ಭಯಾನಕವಾಗಿದೆ. ಗೋದಾನವನ್ನು ಮಾಡಿದವನು ಇದನ್ನು ಸುಗಮವಾಗಿ ದಾಟಬಲ್ಲನೆಂಬುದಾಗಿ ಧರ್ಮ ಶಾಸ್ತ್ರಗಳು ಪ್ರತಿಪಾದಿಸಿರುವುದರಿಂದ, ಮೃತ್ಯು ಸನ್ನಿಹಿತವಾದ ಕಾಲದಲ್ಲಿ ಈ ದಾನವನ್ನು ಮಾಡುವ ಪದ್ಧತಿಯುಂಟು.

ರುದ್ರಾಕ್ಷಧಾರಣದಿಂದ ಕೋಟಿ ಗೋದಾನ ಪುಣ್ಯ :

ಹೀಗೆ ಒಂದು ಗೋದಾನದ ಫಲವು ಇಷ್ಟೊಂದು ಇರುವಾಗ, ಕೋಟಿ ಗೋದಾನದ ಫಲವು ಎಷ್ಟಾಗಲಿಕ್ಕಿಲ್ಲ ? ಅಷ್ಟೊಂದು ಫಲವು ಕೇವಲ ರುದ್ರಾಕ್ಷಧಾರಣದಿಂದ ಪ್ರಾಪ್ತವಾಗುತ್ತದೆಂದ ಬಳಿಕ, ರುದ್ರಾಕ್ಷದ ಮಹಿಮೆಯನ್ನು ವರ್ಣಿಸಲು ಸಾಧ್ಯವೇ ?

ದೇಹಾತ್ಮಬುದ್ಧಿಜಂ ಪಾಪಂ ನ ತದ್ಗೋವಧಕೋಟಿಭಿ ಃ ।
ಆತ್ಮಾಹಂ ಬುದ್ಧಿಜಂ ಪುಣ್ಯಂ ನ ಭೂತೋ ನ ಭವಿಷ್ಯತಿ ॥

ಅಂದರೆ—ದೇಹವೇ ತಾನೆಂದು ದೃಢವಾಗಿ ನಂಬಿದರೆ ಕೋಟಿ ಗೋವುಗಳನ್ನು ಕೊಂದ ಪಾಪವು ಪ್ರಾಪ್ತವಾಗುತ್ತದೆ. ಆತ್ಮವೇ ತಾನೆಂದು ತಿಳಿದರೆ ಆ ಪುಣ್ಯಕ್ಕೆ ಸರಿಸಾಟಿಯೇ ಇಲ್ಲ—ಎಂಬ ಈ ವಚನದಂತೆ, ತನ್ನಾತ್ಮವನ್ನೇ ಮೊದಲುಗೊಂಡು ಪ್ರಪಂಚವೆಲ್ಲವನ್ನೂ ರುದ್ರಸ್ವರೂಪವಾಗಿ ತಿಳಿದ ಈ ರುದ್ರ ದೃಷ್ಟಿ ಎಂಬ ತಾತ್ತ್ವಿಕ ರುದ್ರಾಕ್ಷವನ್ನು ಧರಿಸಿದಾಗ, ಅಪರಿಮಿತ ಪುಣ್ಯ ಪ್ರಾಪ್ತಿಯಾಗುತ್ತಿರುವಾಗ, ಆ ದಿವ್ಯದೃಷ್ಟಿಯ ಪ್ರತೀಕವಾದ ಈ ಭೌತಿಕ ರುದ್ರಾಕ್ಷವನ್ನು ಧರಿಸಿದಾಗ ಕೋಟಿ ಗೋದಾನ ಫಲವು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ.

ಅಂತೆಯೇ, ''ತದ್ರುದ್ರಾಕ್ಷೇ ಶಿರಸಿ ಧಾರ್ಯಮಾಣೇ ಕೋಟಿಗೋ ಪ್ರದಾನಫಲಂ ಭವತಿ'' (ರುದ್ರಾಕ್ಷ ಜಾಬಾಲೋಪನಿಷತ್ ೩–೧) ಅಂದರೆ, ''ರುದ್ರಾಕ್ಷ''ವನ್ನು ಮಸ್ತಕದಲ್ಲಿ ಧರಿಸಿದರೆ ಕೋಟಿ ಗೋದಾನ ಪುಣ್ಯವು ಪ್ರಾಪ್ತವಾಗುವದೆಂಬ ವಿಷಯವು ಉಪನಿಷತ್ತಿನಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ.

ರುದ್ರಾಕ್ಷಧಾರಣದಿಂದ ಗಂಗಾಸ್ನಾನಫಲ :

''ಗಂಗಾ ಪಾಪಂ ಹರತಿ'' ಎಂಬ ಉಕ್ತಿಯಂತೆ, ಗಂಗೆಯು ಪಾಪನಾಶಿನೀ—ಎಂಬ ವಿಷಯವು ಸುಪ್ರಸಿದ್ಧವೇ ಸರಿ. ಆ ಗಂಗೆಯಲ್ಲಿ ಸ್ನಾನಮಾಡಬೇಕಾದರೆ ಗಂಗೋತ್ರಿ, ಹೃಷಿಕೇಶ, ಹರಿದ್ವಾರ, ಕಾಶಿ ಮುಂತಾದ ಪವಿತ್ರ ಕ್ಷೇತ್ರಗಳಿಗೆ ಹೋಗಿ ಗಂಗಾಸ್ನಾನವನ್ನು ಮಾಡಲು ಅಸಮರ್ಥರಾದ ಭಾವುಕ ಭಕ್ತರು ಒಂದು ರುದ್ರಾಕ್ಷ ಮಣಿಯನ್ನು ಮಸ್ತಕದ ಮೇಲೆ ಧರಿಸಿಕೊಂಡು ತನ್ನ ಮನೆಯಲ್ಲಿಯ ನೀರಿನಿಂದಲೇ ಸ್ನಾನ ಮಾಡಿದರೂ ಅವರಿಗೆ ಗಂಗಾಸ್ನಾನದ ಫಲವು ಪ್ರಾಪ್ತವಾಗುತ್ತದೆ—ಎಂಬ ವಿಷಯವನ್ನು ಶ್ರೀ ನೀಲಕಂಠ ಶಿವಾಚಾರ್ಯರು—

ಮೂರ್ಧ್ನಿ ವಿನ್ಯಸ್ಯ ರುದ್ರಾಕ್ಷಂ ಯಃ ಸ್ನಾತಿ ಮತಿಮಾನ್ನರ ಃ ।
ಗಂಗಾಸ್ನಾನಫಲಂ ತಸ್ಯ ಜಾಯತೇ ನಾತ್ರ ಸಂಶಯಃ ॥
(ಕ್ರಿಯಾಸಾರ ೧೦–೧೨, ಪುಟ ೧೪೩)

ಎಂಬ ಈ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ಹೀಗೆ ಬಹು ಪುಣ್ಯಪ್ರದಗಳಾದ, ಮಹಿಮಾನ್ವಿತಗಳಾದ ರುದ್ರಾಕ್ಷಗಳನ್ನು ಯಾರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಧರಿಸುವರೋ ಅವರಿಗೆ ಹೆಚ್ಚು–ಹೆಚ್ಚು ಪುಣ್ಯವು ಪ್ರಾಪ್ತವಾಗುತ್ತದೆ.

ರುದ್ರರ ಸಂಖ್ಯೆಯಲ್ಲಿ ರುದ್ರಾಕ್ಷಧಾರಣೆ :

ಶಾಸ್ತ್ರಗಳಲ್ಲಿ ರುದ್ರರ ಸಂಖ್ಯೆಯು ಶತ (ನೂರು) ಎಂಬುದಾಗಿ ವರ್ಣಿಸಲ್ಪಟ್ಟಿರೋಣದರಿಂದ, ಶರೀರದ ಮೇಲೆ ಒಂದುನೂರಾ ಎಂಟು ರುದ್ರಾಕ್ಷಗಳನ್ನು ಸದಾ ಧರಿಸಿರುವುದು ಸರ್ವೋತ್ತಮವು. ಇನ್ನೂ ಹೆಚ್ಚಿನ ಅನುಕೂಲತೆಯುಳ್ಳವರು ಪೂಜಾ ಕಾಲದಲ್ಲಿ ರುದ್ರಾಕ್ಷದ ಕಂಚುಕ ಮತ್ತು ರುದ್ರಾಕ್ಷದ ಕಿರೀಟಗಳನ್ನು ಮಾಡಿ ಧರಿಸಿಕೊಳ್ಳಬೇಕಲ್ಲದೇ, ಪೂಜಾ ಗೃಹದಲ್ಲಿ ರುದ್ರಾಕ್ಷದ ಮಂಟಪವನ್ನೂ ಮಾಡಿಕೊಳ್ಳಬಹುದು.

ಈ ರೀತಿಯಾಗಿ ಶತ ಹಾಗೂ ಸಹಸ್ರ ಸಂಖ್ಯೆಯಲ್ಲಿ ರುದ್ರಾಕ್ಷಧಾರಣ ಮಾಡಿಕೊಳ್ಳುವುದು ವಿಶೇಷ ಫಲಪ್ರದವೆಂಬುದನ್ನು ತಿಳಿದುಕೊಳ್ಳಬೇಕು.

ರುದ್ರಾಕ್ಷಧಾರಣದಿಂದ ಅಪಮೃತ್ಯು ನಿವಾರಣೆ :

ಮನುಷ್ಯ ಜೀವನದಲ್ಲಿ ನಾನಾವಿಧಗಳಾದ ವಿಪತ್ತುಗಳು ಬಂದೊದಗುವುದುಂಟು. ''ರಕ್ಷಂತಿ ಪುಣ್ಯಾನಿ ಪುರಾಕೃತಾನಿ'' ಎಂಬ ಉಕ್ತಿಯಂತೆ, ಒಮ್ಮೊಮ್ಮೆ ವಿಪತ್ತುಗಳಲ್ಲಿ ಅಸಹಾಯಕ ಸ್ಥಿತಿಯು ಬಂದೊದಗಿದಾಗ, ನಮ್ಮ ಸುಕೃತಗಳೇ ನಮ್ಮನ್ನು ರಕ್ಷಿಸುತ್ತವೆ. ರುದ್ರಾಕ್ಷಧಾರಣದಿಂದ ವಿಶಿಷ್ಟ ಪುಣ್ಯ ಪ್ರಾಪ್ತಿಯಾಗುವುದರಿಂದ, ಈ ಪುಣ್ಯ ವಿಶೇಷದಿಂದಲೇ ಬಹು ದೊಡ್ಡ ಕುತ್ತುಗಳಿಂದಲೂ ಪಾರಾಗಬಹುದು. ''ಕ್ರಿಯಾಸಾರ'' ದಲ್ಲಿ ಈ ವಿಷಯಕವಾದ ಒಂದು ಮಾರ್ಮಿಕ ಕಥೆಯನ್ನು ಶ್ರೀ ನೀಲಕಂಠಶಿವಾಚಾರ್ಯರು ನಿರೂಪಿಸಿದ್ದಾರೆ. ಅದನ್ನೇ ಸಂಕ್ಷೇಪವಾಗಿ ವಿವರಿಸೋಣ–

ಬಹು ಪ್ರಾಚೀನ ಕಾಲದಲ್ಲಿ ''ಮಕರ''ವೆಂಬ ರಾಜ್ಯದಲ್ಲಿ ಅದೇ ಹೆಸರಿನ ಪಟ್ಟಣ ಒಂದಿತ್ತು. ಅಲ್ಲಿ ವಸುಗುಪ್ತನೆಂಬ ಬ್ರಾಹ್ಮಣನಿದ್ದನು. ಅವನಿಗೆ ಐದು ಜನ ಗಂಡು ಮಕ್ಕಳಿದ್ದರು. ಅವರಲ್ಲಿ ಕಿರಿಯ ಮಗನ ಹೆಸರು ''ಶಾಂತ''ನೆಂದಿತ್ತು. ಅವನು ಒಂದು ಸಾರೆ ಗೆಳೆಯರ ಜೊತೆಗೆ ಮಣ್ಣಿನಲ್ಲಿ ಆಡುತ್ತಿರುವಾಗ ಒಂದು ರುದ್ರಾಕ್ಷವು ಪ್ರಾಪ್ತವಾಯಿತು. ಅದರ ಮೇಲೆ ಪ್ರೀತಿಯುಂಟಾದ ಶಾಂತನು ತನ್ನ ಕೊರಳಲ್ಲಿ ಧರಿಸಿಕೊಂಡನು. ಅಂದಿನಿಂದ ಅವನ ಜೀವನದಲ್ಲಿ ಬಹಳಷ್ಟು ಪರಿವರ್ತನೆಯುಂಟಾಯಿತು. ಅವನು ಯಾರ ಜೊತೆಗೂ ಮಾತನಾಡದೇ ಸದಾ ಮೌನವಾಗಿದ್ದು ಶಿವಚಿಂತನೆಯಲ್ಲಿ ಕಾಲ ಕಳೆಯತೊಡಗಿದನು.

ಇವನ ಈ ವ್ಯವಹಾರದಿಂದ ಮನೆಯವರಿಗೆ ಬೇಸರಿಕೆಯಾಗತೊಡಗಿತು. ಅಂತೆಯೇ ಲೌಕಿಕ ಜೀವನಕ್ಕೆ ಈತನು ಉಪಯುಕ್ತನಲ್ಲನೆಂದು ತಿಳಿದು ಎಲ್ಲರೂ ತಿರಸ್ಕಾರ ದೃಷ್ಟಿಯಿಂದ ನೋಡತೊಡಗಿದರು.

ಕೇರಳ ದೇಶದ ರಾಜನೊಬ್ಬನು ತನ್ನ ಆರಾಧ್ಯಳಾದ ಕಾಲಿಕಾದೇವಿಗೆ ಪ್ರತಿವರ್ಷ ಒಬ್ಬ ಬ್ರಾಹ್ಮಣ ಬಾಲಕನನ್ನು ಬಲಿಕೊಡುತ್ತಿದ್ದನು. ತನ್ನ ರಾಜ್ಯದಲ್ಲಿ ಎಲ್ಲಿಯೂ ಬಾಲಕರು ದೊರೆಯದಿದ್ದಾಗ, ಆ ರಾಜನು ''ಮಕರ'' ರಾಜ್ಯಕ್ಕೆ ದೂತರನ್ನು ಕಳುಹಿಸಿದ್ದನು. ಆ ದೂತರು ಹುಡುಕುತ್ತ ''ಮಕರ'' ಪಟ್ಟಣಕ್ಕೆ ಬಂದರು. ಅಲ್ಲಿಯ ಆ ವಸುಗುಪ್ತ ಬ್ರಾಹ್ಮಣನು ತನ್ನ ಚಿಕ್ಕಮಗನಾದ ''ಶಾಂತ''ನನ್ನು ಮಾರಿಕೊಂಡನು. ದೂತರು ಆ ಬಾಲಕನನ್ನು ತಂದು ರಾಜನಿಗೆ ಒಪ್ಪಿಸಿದರು. ದೇವಿಗೆ ಬಲಿಕೊಡುವ

ಮುಹೂರ್ತದಲ್ಲಿ ಬಾಲಕನಿಗೆ ಮಂಗಲಸ್ನಾನಮಾಡಿಸಿ, ಮಂಗಲ ವಸ್ತ್ರಾದಿಗಳಿಂದ ಅಲಂಕರಿಸಿ, ದೇವಿಯ ಮಂದಿರಕ್ಕೆ ಕೊಂಡೊಯ್ಯುತ್ತಾರೆ. ಪುರೋಹಿತರು ಸಂಕಲ್ಪಾದಿ ಗಳನ್ನು ಮಾಡಿ ಬಲಿಕೊಡಲು ಇವನ ಮೈಮೇಲಿನ ಬಟ್ಟೆಗಳನ್ನು ಕಳಚಿದಾಗ ಅವನ ಕಂಠದಲ್ಲಿಯ ರುದ್ರಾಕ್ಷ ಮಣಿಯನ್ನು ಕಂಡ ಕಾಲಿಕಾದೇವಿಯು ಅವನನ್ನು ಸಾಕ್ಷಾತ್ ರುದ್ರನೆಂದು ಭಾವಿಸಿ–

ದೃಷ್ಟ್ವೈನಂ ಶಾಂತಿಕಂ ಕಾಲೀ ಧೃತರುದ್ರಾಕ್ಷಭೂಷಣಂ ।
ಭೀತಾ ಪ್ರಣಮ್ಯ ಮನಸಾ ಸಹಸೋತ್ಥಾಯ ಸಾ ಪುನಃ ॥
ಹತ್ವಾ ಪುರೋಹಿತಂ ಕೋಪಾತ್ ಪಪೌ ರಕ್ತಂ ದುರಾತ್ಮನಃ

(ಕ್ರಿಯಾಸಾರ ೧೧–೧೯೭–೧೯೮)

ಭೀತಿಯಿಂದ ನಮಸ್ಕರಿಸಿ, ಇವನನ್ನು ಕೊಲ್ಲಲುದ್ಯುಕ್ತನಾದ ಪುರೋಹಿತನ ಮೇಲೆ ಕ್ರುದ್ಧ ಳಾಗಿ, ಅವನ ರಕ್ತವನ್ನೇ ಹೀರಿ ಕೊಂದುಹಾಕಿದಳಲ್ಲದೇ, ವಧೆಗಾಗಿ ತಂದ ಶಾಂತನತ್ತ ಹೊರಳಿ, ಏನು ವರಬೇಕು ? ಎಂಬುದಾಗಿ ಕೇಳಿದಳು. ಆಗ ಶಾಂತನು ಧೀರ ಹಾಗೂ ಪ್ರಶಾಂತ ಮನಸ್ಸಿನಿಂದಲೇ ಹೇಳುತ್ತಾನೆ–''ಹೇ ಭಗವತಿಯೇ ! ಈ ನರಬಲಿಯನ್ನು ತ್ಯಾಗಮಾಡು, ಇದಿಲ್ಲದೇ ರಾಜನಿಗೆ ಅಭೀಷ್ಟಸಿದ್ಧಿಯನ್ನು ದಯಪಾಲಿಸು'' ಎಂದನು. ಶಾಂತನ ಈ ಪ್ರಾರ್ಥನೆಯನ್ನು ಕೇಳಿದ ದೇವಿಯು ರಾಜನತ್ತ ಹೊರಳಿ, ಹೇ ರಾಜನ್ ! ರುದ್ರಾಕ್ಷಧಾರಿಯಾದ ಈತನು ಸಾಕ್ಷಾತ್ ರುದ್ರನಾಗಿದ್ದಾನೆ. ಇವನು ಸದ್ಯಃ ಲೋಕ ಪೂಜ್ಯನು. ಕಾರಣ ಪಾಣಿಗ್ರಹಣ ವಿಧಿಯಿಂದ ನಿನ್ನ ಮಗಳನ್ನು ಇವನಿಗೆ ಕೊಟ್ಟು ಮದು ವೆಯನ್ನು ಮಾಡಿ ಇವನಲ್ಲಿ ಅನನ್ಯ ಶ್ರದ್ಧೆಯುಳ್ಳವನಾಗು; ಅಂದರೆ ನಿನ್ನ ಅಭೀಷ್ಟಗಳೆಲ್ಲ ಸಿದ್ಧಿಸುವವು. ಇಂತಹ ಪುಣ್ಯಾತ್ಮನನ್ನು ಕೊಲ್ಲಲುದ್ಯುಕ್ತನಾದ ಕಾರಣದಿಂದಲೇ ಪುರೋಹಿ ತನು ನನ್ನ ಕೋಪದ ಜ್ವಾಲೆಗೆ ತುತ್ತಾದನಲ್ಲದೇ, ಇವನ ಪರಿವಾರದವರೆಲ್ಲ ಮೃತರಾಗಿ ದ್ದಾರೆ. ಮನೆಯೂ ಸಹ ಸುಟ್ಟುಹೋಗಿದೆ. ಈ ಬಾಲಕನನ್ನು ಮಾರಿಕೊಂಡ ಇವನ ತಂದೆತಾಯಿಗಳು ಹಾಗೂ ಸಹೋದರರೂ ಕುಷ್ಟರೋಗಿಗಳಾಗಿ ಅನ್ನ–ನೀರುಗಳಿಲ್ಲದೇ ಅಲೆಯುತ್ತಿದ್ದಾರೆ.

ದೇವಿಯ ಈ ನುಡಿಗಳನ್ನು ಕೇಳಿ ರಾಜನು ಆತನಲ್ಲಿ ಭಯ–ಭಕ್ತಿಯುಳ್ಳವನಾಗಿ ತನ್ನ ಮಗಳನ್ನು ಕೊಟ್ಟು, ಮದುವೆಯನ್ನು ಮಾಡಿದನಲ್ಲದೇ, ತನ್ನ ರಾಜ್ಯಭಾರವನ್ನೂ ಅವನಿಗೇ ವಹಿಸಿಕೊಟ್ಟನು.

ಒಂದು ರುದ್ರಾಕ್ಷಧಾರಣದ ಇಷ್ಟೊಂದು ಮಹಿಮೆಯನ್ನರಿತ ಆ ಶಾಂತನು ತನ್ನ ಶರೀರದ ಮೇಲೆ ದಿನಾಲು ಸಾವಿರಾರು ರುದ್ರಾಕ್ಷಗಳನ್ನು ಧರಿಸಿಕೊಂಡು ಪತ್ನೀ ಸಮೇತ ನಾಗಿ ದೇವಿಯಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿ ಕಾಲ ಕಳೆಯತೊಡಗಿದನು. ಕೆಲವು ಕಾಲದ ನಂತರ ಇವನ ತಂದೆ–ತಾಯಿ ಹಾಗೂ ಸೋದರರು ಭಿಕ್ಷೆಗಾಗಿ ಅಲೆಯುತ್ತ ಇವನ ರಾಜ್ಯಕ್ಕೆ ಬಂದಾಗ, ಅವರನ್ನು ಗುರುತಿಸಿ, ಕರೆತಂದು ಮಂಗಲ ಸ್ನಾನ ಮಾಡಿಸಿ, ಎಲ್ಲರಿಗೂ ರುದ್ರಾಕ್ಷಧಾರಣವನ್ನು ಮಾಡಿಸಿದನು. ಆ ರುದ್ರಾಕ್ಷ ಮಹಿಮೆಯಿಂದಲೇ ಅವರು ಕಾಲಾನಂತರದಲ್ಲಿ ಕುಷ್ಟರೋಗವನ್ನು ಕಳೆದುಕೊಂಡು ಸ್ವಸ್ಥರಾಗಿ ರುದ್ರಾಕ್ಷದಲ್ಲಿ

ನಿಷ್ಠೆಯುಳ್ಳವರಾದರು. ಹೀಗೆ ರುದ್ರಾಕ್ಷದ ಮಹಿಮೆಯು ಅಪಾರವಾಗಿರುವುದರಿಂದ ಯಾರು ಎಷ್ಟು ಶ್ರದ್ಧೆಯುಳ್ಳವರಾಗುವರೋ ಅಷ್ಟೊಂದು ಫಲವನ್ನು ಪಡೆಯಬಲ್ಲರು.

ಮರಣಕಾಲದಲ್ಲಿ ರುದ್ರಾಕ್ಷೋಪಚಾರ :

ಮೃತಿಕಾಲೇ ತು ರುದ್ರಾಕ್ಷಂ ನಿಷ್ಪೀಡ್ಯ ಸಹ ವಾರಿಣಾ ।
ಯಃ ಪಿಬೇಚ್ಚಿಂತಯನ್ ರುದ್ರಂ ರುದ್ರಲೋಕಂ ಸ ಗಚ್ಛತಿ ॥

ಎಂಬ ಪೂಜ್ಯಪಾದ ಶ್ರೀ ಜಗದ್ಗುರು ರೇಣುಕರ ಆದೇಶದಂತೆ, ಮರಣ ಕಾಲದಲ್ಲಿ ರುದ್ರಾಕ್ಷ ತೊಳೆದ ನೀರನ್ನು ರುದ್ರಧ್ಯಾನಮಾಡುತ್ತ ಪಾನಮಾಡಿದರೆ ರುದ್ರಲೋಕವೇ ಪ್ರಾಪ್ತವಾಗುತ್ತದೆ.

ಮನುಷ್ಯನ ಮರಣದ ಸಮಯವು ಬಹು ಮಹತ್ವಪೂರ್ಣವಾದುದು. "ಅಂತೇ ಯಾ ಮತಿಃ ಸಾ ಗತಿಃ " ಎಂಬ ಉಕ್ತಿಗನುಸಾರವಾಗಿ, ಮನೋವೃತ್ತಿಯೇ ಮುಂದಿನ ಗತಿಯ ಮೂಲ ಕಾರಣವು. ದೇಹವನ್ನು ತ್ಯಜಿಸುವಾಗ ಜೀವಾತ್ಮನು ಹೇಗೆ ಚಿಂತಿಸುವನೋ ಹಾಗೆಯೇ ಆಗುವನು. ಸಂಸಾರವನ್ನು ಸ್ಮರಿಸುತ್ತ ಸತ್ತರೆ ಪುನಃ ಸಂಸಾರದಲ್ಲಿ ಜನ್ಮ ತಾಳುತ್ತಾನೆ. ಭಗವಂತನನ್ನು ಸ್ಮರಿಸುತ್ತ ದೇಹವನ್ನು ತ್ಯಾಗಮಾಡಿದರೆ ಭಗವದ್ರೂಪನೇ ಆಗುತ್ತಾನೆ.

ದುಃಖಪ್ರದವಾದ ಸಂಸಾರದಿಂದ ಪಾರಾಗಿ ಶಿವಸಾಯುಜ್ಯವನ್ನು ಪಡೆಯುವುದೇ ಮನುಷ್ಯ ಜನ್ಮದ ಮುಖ್ಯ ಗುರಿಯು. ಅಂತ್ಯ ಕಾಲದಲ್ಲಿ ದೇವರನ್ನು ಸ್ಮರಿಸಿದರೆ ಸದ್ಗತಿಯಾಗುವುದೇನೋ ನಿಜ; ಆದರೆ ಅಂತ್ಯ ಕಾಲದಲ್ಲಿ ಆ ಬುದ್ಧಿ ಬರಬೇಕಾದರೆ ಜೀವನದುದ್ದಕ್ಕೂ ಪ್ರಯತ್ನಿಸಬೇಕಾಗುವುದು. "ಜನಮ ಜನಮ ಮುನಿ ಯತನ ಕರಾಹಿ ಅಂತ ರಾಮ ಕಹಿ ಆವತ ನಾಹಿ" ಎಂಬ ತುಲಸೀದಾಸರ ಉಕ್ತಿಯಂತೆ, ಈ ರೀತಿ ಪ್ರಯತ್ನಿಸಿದವರೂ ಸಹ ಒಮ್ಮೊಮ್ಮೆ ಕೊನೆಯ ಗಳಿಗೆಯಲ್ಲಿ ದೇವರನ್ನು ಮರೆತು ಸಾಂಸಾರಿಕ ವಿಷಯಗಳನ್ನು ಚಿಂತಿಸಿ, ಪುನಃ ಸಂಸಾರದಲ್ಲಿ ಜನ್ಮ ತಾಳುವ ಪ್ರಸಂಗ ಹೊಂದುವುದುಂಟು.

ಜಡಭರತನು ರಾಜ್ಯವೆಲ್ಲವನ್ನೂ ತ್ಯಜಿಸಿ ತಪಸ್ವಿವೇಷವನ್ನು ಧರಿಸಿ, ಸರ್ವ ಸಂಗ ಪರಿತ್ಯಾಗಿಯಾಗಿ ಅಡವಿಯಲ್ಲಿ ಪರ್ಣ ಕುಟೀರವನ್ನು ರಚಿಸಿಕೊಂಡು, ಭಗವಂತನ ಸ್ಮರಣದಲ್ಲಿಯೇ ಕಾಲ ಕಳೆಯುತ್ತಿದ್ದರೂ, ಕೊನೆಯ ಗಳಿಗೆಯಲ್ಲಿ ಒಂದು ಚಿಗರಿಯ ಮರಿಯಲ್ಲಿ ಅತಿ ಸ್ನೇಹ ಉಂಟಾಗಿದ್ದರ ಕಾರಣ, ಚಿಗರಿಯನ್ನೇ ಸ್ಮರಿಸುತ್ತ ಪ್ರಾಣತ್ಯಾಗ ಮಾಡಿದನಂತೆ; ಅದರ ಪರಿಣಾಮವಾಗಿ ಅವನು ಚಿಗರಿಯಾಗಿ ಜನ್ಮ ತಾಳಿದನೆಂಬ ಕಥೆಯು ಭಾಗವತದಲ್ಲಿ ವರ್ಣಿಸಲ್ಪಟ್ಟಿದೆ.

ಒಬ್ಬ ಮನುಷ್ಯನು ಫೋಟೋ ತೆಗೆಸಿಕೊಳ್ಳುವುದಕ್ಕಾಗಿ ಎರಡು ಮೂರು ತಾಸುಗಳಿಂದ ತನ್ನನ್ನಲಂಕರಿಸಿಕೊಂಡು ಸ್ಟುಡಿಯೋಕ್ಕೆ ಹೋದನಂತೆ. ಅಲ್ಲಿ ಫೋಟೋಗ್ರಾಫರ ಹೇಳಿದಂತೆ ಸರಿಯಾಗಿ ಕುಳಿತುಕೊಂಡ. ಇನ್ನೇನು ಫೋಟೋ ತೆಗೆಯಲು ರೆಡಿ ಎಂದು ಆದೇಶ ಕೊಟ್ಟು ಕ್ಲಿಕ್ ಮಾಡುವ ಸಮಯಕ್ಕೆ ಕಣ್ಣು ಮುಚ್ಚಿಕೊಂಡನಂತೆ. ಆಗ ಬರುವ ಫೋಟೋ ಎಂತಹದು ? ಕುರುಡ ಫೋಟೋ ಅಲ್ಲವೇ ? ವ್ಯಕ್ತಿಯು ಕುರುಡ

ನಲ್ಲವೇನೋ ನಿಜ; ಆದರೆ ಫೋಟೋ ತೆಗೆಯುವ ವೇಳೆಯಲ್ಲಿ ಕಣ್ಣು ಮುಚ್ಚಿದ ಪರಿಣಾಮವಾಗಿ ಕುರುಡ ಫೋಟೋ ಬರುವಂತೆ ನಾವು ಜೀವನದುದ್ದಕ್ಕೂ ಒಳ್ಳೆಯ ದನ್ನೇ ಚಿಂತಿಸಿದ್ದರೂ, ಕೊನೆಯ ವೇಳೆಯಲ್ಲಿ ಮನೋವೃತ್ತಿಯು ಮಲಿನವಾದರೆ ದುರ್ಗತಿಯೇ ಉಂಟಾಗುವುದು. ಕೊನೆಯ ಮನೋವೃತ್ತಿಯ ಮೇಲಿಂದಲೇ ಮನುಷ್ಯನ ಮುಂದಿನ ಗತಿಯು ನಿಶ್ಚಿತವಾಗುವುದು. ಆದಕಾರಣ, ಮೃತ್ಯು ಸನ್ನಿಹಿತ ವಾದ ಕಾಲದಲ್ಲಿ ಸಂಸಾರದ ಎಲ್ಲ ವಿಚಾರಗಳನ್ನೂ ಮರೆತು ಭಗವಂತನ ಸ್ಮರಣೆಯಲ್ಲಿರ ಬೇಕು.

ಅಂತೆಯೇ ಮರಣ ಕಾಲದಲ್ಲಿ ಬಹು ಪುಣ್ಯಪ್ರದವಾದ ರುದ್ರಾಕ್ಷವನ್ನು ತೊಳೆದು, ರುದ್ರನನ್ನು ಸ್ಮರಿಸುತ್ತ ಆ ರುದ್ರಾಕ್ಷೋದಕವನ್ನು ಪಾನ ಮಾಡಿದರೆ, ಅವನಿಗೆ ರುದ್ರಲೋಕವು ಪ್ರಾಪ್ತವಾಗುತ್ತದೆಂಬುದಾಗಿ ಶ್ರೀ ಜಗದ್ಗುರುಗಳು ಉಪದೇಶ ವಿತ್ತಿದ್ದಾರೆ. ಅಂತಿಮ ಸಮಯದಲ್ಲಿ ಮಾಡುವ ಈ ರುದ್ರಾಕ್ಷೋಪಚಾರದಿಂದ ಮನುಷ್ಯ ನಿಗೆ ಸದ್ಗತಿಯು ಪ್ರಾಪ್ತವಾಗುತ್ತದೆ.

ಇದರ ಮರ್ಮವನ್ನರಿತ ಪ್ರತಿಯೊಬ್ಬರೂ ಮರಣಾಸನ್ನನಾದ ವ್ಯಕ್ತಿಗೆ ಸ್ನಾನ ಮಾಡಿಸಿ ಮೈ ತುಂಬ ಭಸ್ಮವನ್ನು ಧರಿಸಿ, ಅವನಿಂದ ಶಿವಧ್ಯಾನವನ್ನು ಮಾಡಿಸುತ್ತ ರುದ್ರಾಕ್ಷೋದಕವನ್ನು ಅವಶ್ಯವಾಗಿ ಪಾನ ಮಾಡಿಸಬೇಕು. ಈ ರುದ್ರಾಕ್ಷೋದಕದಲ್ಲಿ (ರುದ್ರಾಕ್ಷ ತೊಳೆದ ನೀರಿನಲ್ಲಿ) ರಕ್ತದ ಒತ್ತಡವನ್ನು ನಿಯಂತ್ರಿಸುವ ಸಾಮರ್ಥ್ಯವಿರುವ ಕಾರಣ, ಇದನ್ನು ಜೀವನ ಕಾಲದಲ್ಲಿ ಪ್ರತಿ ದಿವಸ ಪಾನಮಾಡುತ್ತಿದ್ದರೆ ದೇಹಾ ರೋಗ್ಯವೂ ಚೆನ್ನಾಗಿರುತ್ತದೆ.

ಒಂದು ಸ್ವಚ್ಛವಾದ ಪಾತ್ರೆಯಲ್ಲಿ ಸ್ವಲ್ಪು ನೀರನ್ನು ಹಾಕಿ ಅದರಲ್ಲಿ ರುದ್ರಾಕ್ಷವನ್ನು ಇರಿಸಿ, ರಾತ್ರಿಯಲ್ಲಿ ಆ ಪಾತ್ರೆಯ ಬಾಯನ್ನು ಮುಚ್ಚಿ ಇಡಬೇಕು. ಪ್ರತಿದಿನ ಪ್ರಾತಃ ಕಾಲದಲ್ಲಿ ಸ್ನಾನಾದಿಗಳ ನಂತರ ಶಿವಧ್ಯಾನ ಮಾಡುತ್ತ ಆ ಪಾತ್ರೆಯಲ್ಲಿಯ ರುದ್ರಾಕ್ಷೋದಕವನ್ನು ಪಾನ ಮಾಡುತ್ತಿದ್ದರೆ, ಒಳ್ಳೆಯ ದೇಹಾರೋಗ್ಯದ ಜೊತೆಗೆ ಮಾನಸಿಕ ನೆಮ್ಮದಿಯೂ ಪ್ರಾಪ್ತವಾಗುವುದು.

ಹೀಗೆ ದೈಹಿಕ–ಮಾನಸಿಕ ಆರೋಗ್ಯಗಳನ್ನು ದಯಪಾಲಿಸುವ, ಕೊನೆಗೆ ಸದ್ಗತಿ ಯನ್ನೇ ಪ್ರಾಪ್ತಿ ಮಾಡಿಸಿಕೊಡುವ ರುದ್ರಾಕ್ಷಗಳನ್ನು ಪ್ರತಿಯೊಬ್ಬರೂ ಧರಿಸಿಕೊಂಡು ಅದರ ಉಚಿತಗಳಾದ ಲಾಭಗಳನ್ನು ಪಡೆದು, ತನ್ನ ಜೀವನವನ್ನು ಸಾರ್ಥಕಗೊಳಿಸಿ ಕೊಳ್ಳಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೪ ಸೆಪ್ಟೆಂಬರ್, ೧೯೯೦
(ಸ್ಥಳ ಶಿವಾನುಭವ ಮಂಗಲ ಭವನ ಸೋಲಾಪೂರ)



ಭಸ್ಮೋದ್ಧೂಳಿತಸರ್ವಾಂಗಾ ಧೃತರುದ್ರಾಕ್ಷಮಾಲಿಕಾಃ ।
ಯೇ ಭವಂತಿ ಮಹಾತ್ಮಾನೋ ರುದ್ರಾಸ್ತೇ ನಾತ್ರ ಸಂಶಯಃ ॥ ೨೧ ॥

ಯಾವ ಮಹಾತ್ಮರು ಸರ್ವಾಂಗದಲ್ಲಿ ಭಸ್ಮವನ್ನು ಧರಿಸಿಕೊಂಡು, ರುದ್ರಾಕ್ಷ ಮಾಲೆಗಳಿಂದ ಅಲಂಕೃತರಾಗಿರುತ್ತಾರೆಯೋ ಅವರು ಸಾಕ್ಷಾತ್ ರುದ್ರರೇ ಆಗಿರುತ್ತಾರೆ. ಇದರಲ್ಲಿ ಯಾವ ಸಂದೇಹವಿರುವುದಿಲ್ಲ.

ನಿತ್ಯಾನಿ ಕಾಮ್ಯಾನಿ ನಿಮಿತ್ತಜಾನಿ
ಕರ್ಮಾಣಿ ಸರ್ವಾಣಿ ಸದಾಪಿ ಕುರ್ವನ್ ।
ನ ಭಸ್ಮರುದ್ರಾಕ್ಷಧರೋ ಯದಿ ಸ್ಯಾತ್
ದ್ವಿಜೋ ನ ತಸ್ಯಾಸ್ತಿ ಫಲೋಪಪತ್ತಿಃ ॥ ೨೨ ॥

ಯಾವ ದ್ವಿಜನು ಯಾವಾಗಲೂ ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಾದಿಕರ್ಮಗಳನ್ನು ತಪ್ಪದೇ ಮಾಡುತ್ತಿದ್ದರೂ, ಒಂದು ವೇಳೆ ಭಸ್ಮ-ರುದ್ರಾಕ್ಷಗಳನ್ನು ಧರಿಸಿಕೊಂಡಿರದಿದ್ದರೆ, ಅವನಿಗೆ ಆ ಕರ್ಮಗಳ ಫಲಗಳು ದೊರೆಯಲಾರವು.

ಸರ್ವೇಷು ವರ್ಣಾಶ್ರಮಸಂಗತೇಷು
ನಿತ್ಯಂ ಸದಾಚಾರಪರಾಯಣೇಷು ।
ಶ್ರುತಿಸ್ಮೃತಿಭ್ಯಾಮಿಹ ಚೋದ್ಯಮಾನೋ
ವಿಭೂತಿರುದ್ರಾಕ್ಷಧರಃ ಸಮಾನಃ ॥ ೨೩ ॥

ಬ್ರಾಹ್ಮಣಾದಿ ವರ್ಗಗಳಲ್ಲಿಯೂ, ಬ್ರಹ್ಮಚರ್ಯಾದ್ಯಾಶ್ರಮಗಳಲ್ಲಿಯೂ ಇದ್ದುಕೊಂಡು, ಯಾವಾಗಲೂ ಸದಾಚಾರ ಪರಾಯಣರಾಗಿರುವ ಜನರಲ್ಲಿ, ಯಾವನು ವಿಭೂತಿ ರುದ್ರಾಕ್ಷಗಳನ್ನು ಧರಿಸಿಕೊಂಡಿರುವನೋ ಅವನೊಬ್ಬನೇ ಗೌರವಾನ್ವಿತನೂ, ವೇದ ಶಾಸ್ತ್ರಾದಿಗಳಿಂದ ಹೊಗಳಲ್ಪಡುವವನೂ ಆಗಿರುತ್ತಾನೆ.

**ರುದ್ರಾಕ್ಷಧಾರಿಯ ಕರ್ಮಗಳೇ ಫಲಕಾರಿಗಳು :**

ಭಸ್ಮ ಹಾಗೂ ರುದ್ರಾಕ್ಷಗಳು ಶಿವನ ಪ್ರಿಯಗಳಾದ ಆಭೂಷಣಗಳು. ಇವುಗಳನ್ನು ಯಾರು ಯಾವಾಗಲೂ ದೇಹದ ಮೇಲೆ ಧರಿಸಿಕೊಂಡಿರುತ್ತಾರೆಯೋ, ಅವರೆಲ್ಲರೂ ''ರುದ್ರಾಸ್ತೇ ನಾತ್ರ ಸಂಶಯಃ'' ಅಂದರೆ ಸಾಕ್ಷಾತ್ ರುದ್ರರೇ ಆಗಿರುತ್ತಾರೆಂಬುದಾಗಿ ಶ್ರೀ ಜಗದ್ಗುರು ರೇಣುಕರು ಅಪ್ಪಣೆಯನ್ನು ಕೊಡಿಸಿ, ಇನ್ನು ಮುಂದೆ ನಿತ್ಯನೈಮಿತ್ತಿಕಾದಿ ಪ್ರತಿಯೊಂದು ಕರ್ಮಗಳನ್ನೂ ಮಾಡುವಾಗ ಈ ಭಸ್ಮ ರುದ್ರಾಕ್ಷಗಳನ್ನು ಅವಶ್ಯವಾಗಿ ಧರಿಸಬೇಕು. ಇಲ್ಲವಾದರೆ ''ನ ತಸ್ಯಾಸ್ತಿ ಫಲೋಪಪತ್ತಿಃ'' ಆ ಪೂಜಕನಿಗೆ ಫಲ ಪ್ರಾಪ್ತಿಯಾಗುವುದಿಲ್ಲವೆಂಬುದಾಗಿ ಎಚ್ಚರಿಕೆಯನ್ನು ಕೊಟ್ಟಿದ್ದಾರೆ.

ಹೊಲದಲ್ಲಿಯ ಪೈರು ಸುರಕ್ಷಿತವಾಗಿ ಬೆಳೆದು ರೈತನಿಗೆ ದೊರೆಯಬೇಕಾದರೆ ಹೊಲದ ಸುತ್ತಲೂ ರಕ್ಷಣೆಯ ಬೇಲಿಯು ಅವಶ್ಯವಿರುವಂತೆ, ಸಾಧಕನಿಗೆ ಪೂಜಾ ಫಲವು ದೊರೆಯಬೇಕಾದರೆ, ಅವನ ರಕ್ಷಾ ಕವಚಗಳಾದ ಭಸ್ಮ ರುದ್ರಾಕ್ಷಗಳ ಧಾರಣವು ಅತ್ಯವಶ್ಯಕವಾದದ್ದು. ಅಂತೆಯೇ ವೀರಶೈವ ಧರ್ಮದ ಅಷ್ಟಾವರಣಗಳಲ್ಲಿ ಭಸ್ಮ-ರುದ್ರಾಕ್ಷಗಳೂ ಆವರಣ (ರಕ್ಷಾ ಕವಚ)ಗಳಾಗಿ ಪರಿಗಣಿಸಲ್ಪಟ್ಟಿರುತ್ತವೆ. ಕವಚವನ್ನು ಧರಿಸದ ಸೈನಿಕನು ಶತ್ರುಗಳ ಶಸ್ತ್ರಗಳಿಂದ ಬೇಗನೇ ಆಹತನಾಗುವಂತೆ, ಭಸ್ಮ-ರುದ್ರಾಕ್ಷಾದಿ ಆವರಣ ಶೂನ್ಯನಾದ ಸಾಧಕನ ಪೂಜಾಫಲವು ಆಸುರೀ ಶಕ್ತಿಗಳಿಂದ ಅಪಹರಿಸಲ್ಪಡುತ್ತದೆ. ಅಂತೆಯೇ ಪೂಜಾಕಾಲದಲ್ಲಿ ದಿಗ್ಬಂಧನವನ್ನು ಮಾಡುವ ಪದ್ಧತಿಯೂ ಉಂಟು.

**ಎಲ್ಲ ವರ್ಣಾಶ್ರಮಗಳಲ್ಲಿ ರುದ್ರಾಕ್ಷಧಾರಿಯೇ ಶ್ರೇಷ್ಠನು :**

ನಮ್ಮ ಹಿಂದೂ ಸಂಸ್ಕೃತಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣಗಳೂ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಹಾಗೂ ಸನ್ಯಾಸಿ ಎಂಬ ನಾಲ್ಕು ಆಶ್ರಮಗಳೂ ಆಚರಣೆಯಲ್ಲಿರುತ್ತವೆ. ಇವುಗಳಲ್ಲಿ ಯಾವ ವರ್ಣದವರು ಶ್ರೇಷ್ಠರು ? ಹಾಗೂ ಯಾವ ಆಶ್ರಮದವರು ಶ್ರೇಷ್ಠರು ? ಎಂಬುದನ್ನು ನಿರ್ಣಯಿಸುವುದು ಅಷ್ಟೊಂದು ಸುಲಭವಾದ ಮಾತಲ್ಲ, ಆದರೆ-

ಸರ್ವೇಷು ವರ್ಣಾಶ್ರಮಸಂಗತೇಷು ।
..........................................
ವಿಭೂತಿ-ರುದ್ರಾಕ್ಷಧರಃ ಸಮಾನಃ ॥

ಎಂಬ ಈ ಶ್ಲೋಕದಲ್ಲಿ ಶ್ರೀ ಜಗದ್ಗುರು ರೇಣುಕರು ಶಿವನ ಲಾಂಛನಗಳಾದ ಭಸ್ಮ-ರುದ್ರಾಕ್ಷಗಳನ್ನು ಧರಿಸಿದ ವ್ಯಕ್ತಿಯು ಯಾವ ವರ್ಣದವನೇ ಇರಲಿ, ಯಾವ ಆಶ್ರಮದವನೇ ಇರಲಿ, ಅವನೇ ಶ್ರೇಷ್ಠನು-ಎಂಬುದಾಗಿ ನಿರ್ಣಯವನ್ನು ಕೊಟ್ಟಿದ್ದಾರೆ. ಜನ್ಮ ಮಾತ್ರದಿಂದ ಯಾರೂ ಶ್ರೇಷ್ಠರಾಗಲಾರರು. ಆದರೆ ಆಚರಣೆಯಿಂದಲೇ ಎಲ್ಲರೂ ಶ್ರೇಷ್ಠರಾಗಬಲ್ಲರೆಂಬುದನ್ನು ಪೂಜ್ಯರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

**ವರ್ಣಭೇದದ ಮೂಲ ರಹಸ್ಯ :**

''ವರ್ಣಾಃಸ್ಯುಬ್ರಾಹ್ಮಣಾದಯಃ'' ಎಂಬ ಕೋಶೋಕ್ತಿಯಂತೆ, ಇಲ್ಲಿಯ ''ವರ್ಣ'' ಶಬ್ದವು ಜಾತಿ ಸೂಚಕವಾಗಿದೆ.

''ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ'' (ಗೀತಾ)

ಎಂಬ ಗೀತೋಕ್ತಿಯಂತೆ, ವ್ಯಕ್ತಿಯಲ್ಲಿಯ ಗುಣ ಹಾಗೂ ಅವನು ಮಾಡುವ ಉದ್ಯೋಗಾದಿಗಳ ಮೂಲಕವಾಗಿ ಹಿಂದೂ ಸಂಸ್ಕೃತಿಯಲ್ಲಿ ವರ್ಣವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರವೆಂಬುದಾಗಿ ನಾಲ್ಕು ಭಾಗದಲ್ಲಿ ವಿಂಗಡಿಸಲ್ಪಟ್ಟಿದೆ. ಈ ವಿಭಾಗವು ಬಹಳಷ್ಟು ವೈಜ್ಞಾನಿಕವಾದದ್ದು.

ಮನುಷ್ಯನ ಜೀವನದಲ್ಲಿ ಜ್ಞಾನ, ಬಲ, ಸಹಕಾರ ಮತ್ತು ಸೇವೆ ಈ ನಾಲ್ಕು ರಂಗಗಳು ಪ್ರಮುಖವಾದವುಗಳು, ಶ್ರೇಷ್ಠವಾದ ಜ್ಞಾನವನ್ನು ಸಂಪಾದಿಸಿ, ಅದನ್ನು ಸಮಾಜದಲ್ಲಿ ನಿರ್ವಂಚನೆಯಿಂದ ಪ್ರಚಾರ ಮಾಡುವವನೇ ಬ್ರಾಹ್ಮಣನು. ಶಾರೀರಿಕ ಬಲವನ್ನು ಸಂಪಾದಿಸಿಕೊಂಡು ಅದರಿಂದ ಗ್ರಾಮ, ಪ್ರದೇಶ ಮತ್ತು ರಾಷ್ಟ್ರವನ್ನು ರಕ್ಷಿಸುವ ಅಭಿಲಾಷೆಯುಳ್ಳವನೇ ಕ್ಷತ್ರಿಯನು. ದೇಶದ ನಾನಾ ಭಾಗಗಳಲ್ಲಿಯ ಜೀವನೋಪಯೋಗಿ ವಸ್ತುಗಳನ್ನು ಸಂಗ್ರಹಿಸಿ, ಪ್ರತಿಯೊಂದು ಗ್ರಾಮದಲ್ಲಿ ಆ ವಸ್ತುಗಳು ಯೋಗ್ಯ ಬೆಲೆಗೆ ದೊರೆಯುವಂತೆ ಪ್ರಯತ್ನಿಸುವ ಸಹಕಾರ ಮನೋಭಾವನೆ ಯುಳ್ಳವನೇ ವೈಶ್ಯನು. ಇನ್ನು ಉಚ್ಚ–ನೀಚವೆಂದು ಭಾವಿಸದೇ ಸೇವಾ ಮನೋಭಾವನೆ ಯಿಂದ ದೈಹಿಕವಾಗಿ ಪರಿಶ್ರಮಿಸುವವನೇ ಶೂದ್ರನು.

ಈ ನಾಲ್ಕು ವರ್ಣಗಳಲ್ಲಿ ಯಾರು ಶ್ರೇಷ್ಠ ? ಯಾರು ಕನಿಷ್ಠ ? ಎಂಬ ವಿಚಾರ ಬಂದಾಗಲೇ ಸಮಾಜದಲ್ಲಿ ಕಲಹಗಳುದ್ಭವಿಸುವವು. ವಾಸ್ತವಿಕವಾಗಿ ಇಲ್ಲಿ ಯಾರೂ ಕನಿಷ್ಠರಲ್ಲ; ಎಲ್ಲರೂ ಸಮಾನರೇ ! ಇವರೆಲ್ಲರನ್ನೂ ಸಮಾನವಾದ ಮನೋಭಾವದಿಂದ ಕಂಡಾಗಲೇ ಸಮಾಜದ ಸ್ವಾಸ್ಥ್ಯವು ಸುಧಾರಿಸುವುದು.

ನಮ್ಮ ಶರೀರದಲ್ಲಿ ಮಸ್ತಕ, ಭುಜ, ಉದರ ಮತ್ತು ಕಾಲುಗಳೆಂಬ ನಾಲ್ಕು ಪ್ರಧಾನ ಅಂಗಗಳಿವೆ. ಇವುಗಳಲ್ಲಿ ಮಸ್ತಕವೇ ಬ್ರಾಹ್ಮಣ, ಭುಜಗಳೇ ಕ್ಷತ್ರಿಯ, ಉದರವೇ ವೈಶ್ಯ ಮತ್ತು ಕಾಲುಗಳೇ ಶೂದ್ರರೆಂದು ಭಾವಿಸೋಣ. ಇವುಗಳಲ್ಲಿ ಮಸ್ತಕವೇ ಶ್ರೇಷ್ಠ, ಕಾಲುಗಳು ಕನಿಷ್ಠಗಳೆಂದು ಹೇಳಿದರೆ ಸಮಂಜಸವಾಗಲಾರದು. ಕಾಲುಗಳು ಶರೀರವನ್ನು ಹೊತ್ತುಕೊಂಡು ವಿದ್ಯಾ ಮಂದಿರಕ್ಕೆ ಹೋಗದಿದ್ದರೆ ಮಸ್ತಕಕ್ಕೆ ಜ್ಞಾನ ಪ್ರಾಪ್ತಿಯಾಗಬಲ್ಲುದೇ ? ಉದರವು ತನ್ನಲ್ಲಿ ಜೀರ್ಣವಾದ ಅನ್ನ ರಸವನ್ನು ಎಲ್ಲ ಅವಯವಗಳಿಗೆ ಸಮಾನವಾಗಿ ಹಂಚದಿದ್ದರೆ ಭುಜ, ಕಾಲು ಮತ್ತು ಮಸ್ತಕಗಳಿಗೆ ಶಕ್ತಿ ಬರುವುದೇ ? ಯಾರಾದರೂ ಬಡಿಗೆಯನ್ನು ತೆಗೆದುಕೊಂಡು ತಲೆಗೆ ಹೊಡೆಯಲು ಬಂದಾಗ ಕೈಗಳು ರಕ್ಷಿಸದಿದ್ದರೆ ತಲೆ ಉಳಿಯಬಲ್ಲುದೇ ? ಕಾಲಲ್ಲಿ ಮುಳ್ಳು ಮುರಿದಾಗ ಕೈಗಳು ಮುಳ್ಳನ್ನು ತೆಗೆದು ರಕ್ಷಿಸದಿದ್ದರೆ ಕಾಲುಗಳು ನಡೆಯಬಲ್ಲವೇ ? ಹೀಗೆಲ್ಲ ನಮ್ಮ ಶರೀರದ ವ್ಯವಹಾರವನ್ನು ನೋಡಿಕೊಂಡಾಗ; ಒಂದು ಅಂಗದ ಸಹಯೋಗ ಮತ್ತೊಂದು ಅಂಗಕ್ಕೆ ಇದೆ ಎಂಬುದಾಗಿ ತಿಳಿದುಬರುತ್ತದೆ.

ಅದರಂತೆ ಸಮಾಜವೆಂಬ ಶರೀರಕ್ಕೆ ಆ ನಾಲ್ಕೂ ವರ್ಣಗಳು ಪ್ರಧಾನಗಳಾದ ಅಂಗಗಳಿದ್ದಂತೆ. ಒಬ್ಬರನ್ನೊಬ್ಬರು ಗೌರವದಿಂದ ಕಂಡಾಗಲೇ ಸಮಾಜದ ಸ್ವಾಸ್ಥ್ಯ ಸರಿ ಯಾಗಿ ಇರಬಲ್ಲುದು. ಇನ್ನೂ ಸ್ವಲ್ಪ ಆಳವಾಗಿ ವಿಚಾರಿಸಿದಾಗ, ಜಗತ್ತಿನ ಪ್ರತಿಯೊಬ್ಬ ಮನುಷ್ಯನೂ ಈ ನಾಲ್ಕು ವರ್ಣಗಳ ಸಂಯುಕ್ತ ರೂಪವೆಂದು ಹೇಳಬಹುದು. ಅಂದರೆ ಬ್ರಾಹ್ಮಣನಲ್ಲಿ ಕ್ಷತ್ರಿಯ, ವೈಶ್ಯ ಮತ್ತು ಶೂದ್ರನ ವ್ಯವಹಾರವೂ, ಕ್ಷತ್ರಿಯನಲ್ಲಿ ಬ್ರಾಹ್ಮಣ, ವೈಶ್ಯ ಹಾಗೂ ಶೂದ್ರನ ವ್ಯವಹಾರವೂ, ವೈಶ್ಯನಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ಶೂದ್ರನ ವ್ಯವಹಾರವೂ, ಅದರಂತೆ ಶೂದ್ರನಲ್ಲಿ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯನ ವ್ಯವಹಾರವೂ ಕಂಡುಬರುತ್ತದೆ.

ಪ್ರಾತಃಕಾಲದಲ್ಲಿ ಶೌಚಾದಿ ಕ್ರಿಯೆಗಳಿಗೆ ಹೋಗಿ ದೇಹವನ್ನು ಸ್ವಚ್ಛಗೊಳಿಸುವಾಗ ಪ್ರತಿಯೊಬ್ಬನೂ ಶೂದ್ರನಾಗಿರುತ್ತಾನೆ. ಇನ್ನು ಸ್ನಾನದ ನಂತರ ದೇವತಾರ್ಚನೆಯನ್ನು ಮಾಡಿ ಜ್ಞಾನಾರ್ಜನೆಯನ್ನು ಮಾಡುತ್ತಿರುವಾಗ ಅವನೇ ಬ್ರಾಹ್ಮಣನಾಗುತ್ತಾನೆ. ಅದರಂತೆ ಕೊಡುವ–ಕೊಳ್ಳುವ ಸಹಯೋಗದ ವ್ಯವಹಾರವನ್ನು ಮಾಡುವಾಗ ಅವನೇ ವೈಶ್ಯನಾಗುವನು. ಇನ್ನು ತನ್ನ ಧನ ಹಾಗೂ ಮಾನದ ಮೇಲೆ ಯಾರಾದರೂ ಆಕ್ರಮಣ ಮಾಡಿದಾಗ ಅವುಗಳ ರಕ್ಷಣೆಗಾಗಿ ಪರಿಶ್ರಮಿಸುತ್ತಿರುವಾಗ ಅವನೇ ಕ್ಷತ್ರಿಯನಾಗುತ್ತಾನೆ. ಹೀಗೆ ಒಬ್ಬನ ಜೀವನದಲ್ಲಿ ಈ ನಾಲ್ಕು ರಂಗಗಳು ಅತ್ಯವಶ್ಯಕಗಳಾಗಿರುವವು. ಇವುಗಳಲ್ಲಿ ಒಂದು ಶ್ರೇಷ್ಠ, ಮತ್ತೊಂದು ಕನಿಷ್ಠವೆಂದು ನಿರ್ಣಯಿಸಕೂಡದು. ಸಮಾಜದ ಸರ್ವಾಂಗೀಣ ಉನ್ನತಿಗೆ ನಾಲ್ಕು ವರ್ಣಗಳ ಸಹಯೋಗವೂ ಪರಮಾವಶ್ಯಕವಾದುದು. ಆದ್ದರಿಂದ ಗುಣ–ಕರ್ಮಗಳ ತಳಹದಿಯ ಮೇಲೆ ನಿಂತಿರುವ ನಾಲ್ಕು ವರ್ಣದವರು ಪರಸ್ಪರ ಕಲಹವನ್ನು ತ್ಯಜಿಸಿ ಸೌಹಾರ್ದದಿಂದ ಬಾಳಲು ಕಲಿಯಬೇಕು.

ಆಶ್ರಮಗಳ ವಿಭಾಗ ಹಾಗೂ ಅದರ ಪ್ರಯೋಜನ :

ನಮ್ಮ ಪ್ರಾಚೀನ ಮಹರ್ಷಿಗಳು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಿ ಎಂಬುದಾಗಿ ಆಶ್ರಮಗಳನ್ನು ನಾಲ್ಕು ಭಾಗವಾಗಿ ವಿಂಗಡಿಸಿದ್ದಾರೆ. ಈ ವಿಭಾಗದಲ್ಲಿ ಮನುಷ್ಯ ಜೀವನದ ಕ್ರಮಿಕ ವಿಕಾಸವು ಅಡಕವಾಗಿದೆ. ಇವುಗಳಲ್ಲಿ ಕ್ರಮವಾಗಿ ಜ್ಞಾನ, ಸಂತಾನ, ವೈರಾಗ್ಯ ಹಾಗೂ ಜ್ಞಾನಗಳು ಪ್ರಾಪ್ತವಾಗುವವು.

ಶೈಶವೇಽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ ॥

ಎಂಬ ರಘುವಂಶ ಮಹಾಕಾವ್ಯದ ಈ ಶ್ಲೋಕದಲ್ಲಿ ಮಹಾಕವಿ ಕಾಳಿದಾಸನು ಇದೇ ವಿಷಯವನ್ನೇ ಪ್ರಸ್ತಾಪಿಸಿದ್ದಾನೆ. ಮನುಷ್ಯನು ತನ್ನ ವಯಸ್ಸಿನ ಇಪ್ಪತ್ತು ಇಲ್ಲವೇ ಇಪ್ಪತ್ತೈದು ವರ್ಷದವರೆಗೆ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸುತ್ತ ಜ್ಞಾನಾರ್ಜನೆಯನ್ನು ಮಾಡಬೇಕು. ಇನ್ನು ''ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ'' ಎಂಬ ಉಪನಿಷದಾದೇಶದಂತೆ, ಇಪ್ಪತ್ತೈದು ವರ್ಷದ ನಂತರ ಸಂತಾನ ಪ್ರಾಪ್ತಿಗಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕು. ತನಗೆ ಒಂದು ಪುತ್ರ ಸಂತಾನವಾದ ಬಳಿಕ ಅವನಿಗೆ ವಿದ್ಯಾಭ್ಯಾಸಾದಿಗಳನ್ನು ಮಾಡಿಸಿ, ವಿವಾಹ ಸಂಸ್ಕಾರವನ್ನು ಮಾಡಿದ ನಂತರ, ತಂದೆಯಾದವನು ಶಬ್ದ–ಸ್ಪರ್ಶಾದಿ ವಿಷಯಗಳಿಂದ ವಿಮುಖನಾಗಿ, ಮನೆತನದ ವ್ಯವಹಾರವನ್ನೆಲ್ಲ ಮಗನಿಗೆ ಒಪ್ಪಿಸಿ ತಾನು ಪತ್ನೀ ಸಮೇತನಾಗಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು. ಅರಣ್ಯದಲ್ಲಿ ಪರ್ಣಕುಟೀರವನ್ನು ನಿರ್ಮಿಸಿಕೊಂಡಾಗಲೀ ಅಥವಾ ಮನೆಯಲ್ಲಿಯೇ ಒಂದು ಸ್ವತಂತ್ರವಾದ ಕೊಠಡಿಯ ವ್ಯವಸ್ಥೆಯನ್ನಾಗಲೀ ಮಾಡಿಕೊಂಡು, ಜಪ–ತಪ–ಸತ್ಕಥಾ ಶ್ರವಣ ಮುಂತಾದವುಗಳನ್ನು ಮಾಡುತ್ತ ಆದರ್ಶಮಯವಾದ ಆಧ್ಯಾತ್ಮಿಕ ಜೀವನವನ್ನು ಸಾಗಿಸಬೇಕು. ಇನ್ನೂ ಕೊನೆಯದಾಗಿ ತಾನು ಮಾಡುವ ಎಲ್ಲ ಕರ್ಮಗಳ ಫಲಗಳನ್ನು ತ್ಯಾಗಮಾಡಿ ಸಂನ್ಯಾಸ ಜೀವನವನ್ನು ಸ್ವೀಕರಿಸಿ, ಶಿವಯೋಗಾದಿಗಳ ಮಾರ್ಗದಿಂದ ದೇಹತ್ಯಾಗ ಮಾಡಬೇಕು.

ಹೀಗೆ ಚತುರ್ವಿಧ ಆಶ್ರಮಗಳನ್ನೂ ಕ್ರಮವಾಗಿ ಸ್ವೀಕರಿಸಿ, ಸಾವಕಾಶವಾಗಿ ತನ್ನ ಜೀವನವನ್ನು ರೂಪಿಸಿಕೊಳ್ಳುವುದು ಕ್ರಮ ವಿಕಾಸವು. ಇದನ್ನು ಪಿಪೀಲಿಕಾ ಮಾರ್ಗ ವೆನ್ನುವರು. ಇನ್ನು "ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್ ಗೃಹಾದ್ವಾವನಾದ್ವಾ'' ಎಂಬ ಪ್ರಮಾಣಾನುಸಾರವಾಗಿ, ಯಾವಾಗ ವೈರಾಗ್ಯ ಪ್ರಾಪ್ತವಾಗು ವುದೋ ಆವಾಗಲೇ ಸಂನ್ಯಾಸವನ್ನು ಗ್ರಹಿಸಬೇಕು. ಇಲ್ಲಿ ಗೃಹಸ್ಥನಾಗಿಯೇ ಅಥವಾ ವಾನಪ್ರಸ್ಥನಾಗಿಯೇ ಸಂನ್ಯಾಸಿಯಾಗಬೇಕೆಂಬ ನಿಯಮವಿರುವುದಿಲ್ಲ. ಯಾವುದೇ ಆಶ್ರಮದಿಂದಲಾದರೂ ಒಮ್ಮೆಲೇ ಸಂನ್ಯಾಸಾಶ್ರಮವನ್ನು ಸ್ವೀಕರಿಸಬಹುದು. ಇದುವೇ ವಿಹಂಗಮ ಮಾರ್ಗವು. ಒಟ್ಟಿನಲ್ಲಿ ಮರಣಾವಧಿಯ ಒಳಗಾಗಿ ಪ್ರತಿಯೊಬ್ಬರೂ ಸಂನ್ಯಾಸ ಸ್ಥಿತಿಯನ್ನು ಪ್ರಾಪ್ತಿಮಾಡಿಕೊಳ್ಳಬೇಕು. ಆಗಲೇ ಆತನಿಗೆ ಮೋಕ್ಷಪ್ರಾಪ್ತಿ ಯಾಗುವುದು.

ಹೀಗೆ ನಮ್ಮ ಪ್ರಾಚೀನ ಮಹರ್ಷಿಗಳು ಮನುಷ್ಯ ಜೀವನದ ವಿಕಾಸವನ್ನು ನಾಲ್ಕು ಮೆಟ್ಟಿಲುಗಳಲ್ಲಿ ವಿಭಾಗಿಸಿದ್ದಾರೆ. ಈ ಪೂರ್ವೋಕ್ತಗಳಾದ ನಾಲ್ಕೂ ವರ್ಣ ಹಾಗೂ ನಾಲ್ಕೂ ಆಶ್ರಮಗಳಲ್ಲಿಯ ಸಾಧಕರಲ್ಲಿ ಯಾರು ವಿಭೂತಿ–ರುದ್ರಾಕ್ಷಗಳನ್ನು ಧರಿಸಿರು ತ್ತಾರೆಯೋ ಅವರು ಯಾವುದೇ ವರ್ಣದವರಿರಲಿ ಅಥವಾ ಯಾವುದೇ ಆಶ್ರಮ ದವರಿರಲಿ, ಅವರಿಗೇನೇ ಗೌರವವನ್ನು ಕೊಡಬೇಕೆಂಬುದಾಗಿ ಪೂಜ್ಯ ಪಾದರಾದ ಶ್ರೀ ಜಗದ್ಗುರು ರೇಣುಕರು ಆದೇಶವಿತ್ತಿದ್ದಾರಲ್ಲದೇ, ಶ್ರುತಿ–ಸ್ಮೃತಿಗಳೂ ಇದನ್ನೇ ಸಮರ್ಥಿಸುತ್ತವೆ–ಎಂಬುದಾಗಿಯೂ ಪ್ರತಿಪಾದಿಸಿದ್ದಾರೆ. ಇನ್ನು ಇದಕ್ಕೆ ವಿಪರೀತವಾಗಿ ಯಾರಾದರೂ ವರ್ತಿಸಿದರೆ–

ನ ದೇಹೇ ಯಸ್ಯ ರುದ್ರಾಕ್ಷಾ ನ ತ್ರಿಪುಂಡ್ರಸ್ಯಧಾರಣಂ ।
ಸ್ಮಶಾನಮೇವ ತದ್ದೇಹಂ ತನ್ಮುಖಂ ಗಿರಿಗಹ್ವರಮ್ ॥

ಎಂಬ ಈ ಪ್ರಮಾಣ ವಚನದಲ್ಲಿ ಭಸ್ಮದ ತ್ರಿಪುಂಡ್ರ, ಹಾಗೂ ರುದ್ರಾಕ್ಷಗಳನ್ನು ಧರಿಸದವನ ದೇಹವು ಸ್ಮಶಾನವಿದ್ದಂತೆ ಹಾಗೂ ಅವನ ಮುಖವೆಂದರೆ ಪರ್ವತದಲ್ಲಿಯ ಗವಿ ಇದ್ದಂತೆ ಎಂಬುದಾಗಿ ಅವನನ್ನು ತಿರಸ್ಕರಿಸಲಾಗಿದೆ. ಕಾರಣ, ವರ್ಣಾಶ್ರಮಗಳ ಭೇದವಿಲ್ಲದೇ ಪ್ರತಿಯೊಬ್ಬರೂ ಈ ಭಸ್ಮ–ರುದ್ರಾಕ್ಷಗಳನ್ನು ಅವಶ್ಯವಾಗಿ ಧರಿಸಿಕೊಳ್ಳ ಬೇಕು. ಅಂದಾಗಲೇನೇ ಅವರ ಪ್ರತಿಯೊಂದು ನಿತ್ಯ ಹಾಗೂ ನೈಮಿತ್ತಿಕಾದಿ ಕರ್ಮಗಳೂ ಫಲಕಾರಿಯಾಗುವವು ಹಾಗೂ ಆ ವ್ಯಕ್ತಿಯೇ ಲೋಕ ಪೂಜ್ಯನಾಗುವನು.

ಓಂ ಶಾಂತಿಃ ಶಾಂತಿಃ ಶಾಂತಿಃ



# ಉಪಸಂಹಾರ

ಇಲ್ಲಿಯವರೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತವಾದ ರುದ್ರಾಕ್ಷ ಧಾರಣಸ್ಥಲದ ಬಗ್ಗೆ ಕೂಲಂಕಷವಾಗಿ ವಿಚಾರಿಸಿದ್ದಾಯಿತು. ಸದ್ಯಃ ರುದ್ರಾಕ್ಷ ಶಬ್ದದ ತಾತ್ತ್ವಿಕಾರ್ಥ ಹಾಗೂ ಅದರ ಧಾರಣೆಯ ರಹಸ್ಯಾರ್ಥವನ್ನಿಲ್ಲಿ ಪರ್ಯಾಲೋಚಿಸೋಣ.

ವೀರಶೈವ ಧರ್ಮದ ಅಷ್ಟಾವರಣವನ್ನು ಅಂತರಂಗ ಅಷ್ಟಾವರಣ ಮತ್ತು ಬಹಿರಂಗ ಅಷ್ಟಾವರಣ ಎಂಬುದಾಗಿ ಎರಡು ವಿಧವಾಗಿ ವಿಂಗಡಿಸಲಾಗಿದೆ. ಸ್ಥೂಲ ಶರೀರಕ್ಕೆ ಸಂಬಂಧಪಡುವವುಗಳು ಬಹಿರಂಗ–ಅಷ್ಟಾವರಣಗಳು. ಅದರಂತೆ, ಸೂಕ್ಷ್ಮ ಶರೀರಕ್ಕೆ ಸಂಬಂಧಪಡುವವುಗಳು ಅಂತರಂಗ ಅಷ್ಟಾವರಣಗಳು.

ರುದ್ರದೃಷ್ಟಿಯ ಪ್ರಾಪ್ತಿಯೇ ಅಂತರಂಗ ರುದ್ರಾಕ್ಷವು :

ಇಲ್ಲಿಯವರೆಗೆ ನಿರೂಪಿಸಲಾದ ಈ ರುದ್ರಾಕ್ಷಗಳು ಸ್ಥೂಲಶರೀರಕ್ಕೆ ಸಂಬಂಧವಾದ ಕಾರಣ ಇವುಗಳು ಬಹಿರಂಗ ಅಷ್ಟಾವರಣದಲ್ಲಿ ಅಂತರ್ಗತವಾಗುತ್ತವೆ. ಹಾಗಾದರೆ ಅಂತರಂಗದಲ್ಲಿ ಧರಿಸುವ ರುದ್ರಾಕ್ಷ ಯಾವುದು ? ಎಂಬ ಜಿಜ್ಞಾಸೆಯುಂಟಾಗುವುದು. ಆದಕಾರಣ ರುದ್ರದೃಷ್ಟಿಯೇ ಅಂತರಂಗ ರುದ್ರಾಕ್ಷವು, ಅರ್ಥಾತ್–

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ (ಗೀತಾ ೫–೧೮)

ಎಂಬ ಗೀತೋಕ್ತಿಯಂತೆ, ಬ್ರಾಹ್ಮಣನನ್ನೇ ಮೊದಲುಗೊಂಡು ಅಂತ್ಯಜನವರೆಗೆ, ಅದರಂತೆ ಗೋವನ್ನೇ ಮೊದಲು ಮಾಡಿಕೊಂಡು ಶ್ವಾನದವರೆಗೆ ಸಕಲದರಲ್ಲಿ ಪರಮಾತ್ಮನು ನಿವಾಸಿಸಿದ್ದಾನೆ ಎಂಬುದನ್ನು ಅರಿತು, ಸರ್ವರನ್ನೂ ಪ್ರೇಮದಿಂದ ಕಾಣುವ ವಿಶಾಲ ದೃಷ್ಟಿಯೇ ರುದ್ರದೃಷ್ಟಿಯು. ಇಂತಹ ಉದಾತ್ತವಾದ ದಿವ್ಯ ದೃಷ್ಟಿಯನ್ನು ಪ್ರಾಪ್ತಿಮಾಡಿಕೊಳ್ಳುವುದೇ ಅಂತರಂಗ ರುದ್ರಾಕ್ಷಧಾರಣವು.

ಸ್ಥೂಲ ಶರೀರದ ಮೇಲೆ ಅನೇಕ ರುದ್ರಾಕ್ಷಗಳ ಮಾಲೆಯನ್ನು ಧರಿಸುವಂತೆ ''ಯತ್ರ ಯತ್ರ ಮನೋ ಯಾತಿ ತತ್ರ ತತ್ರ ಬ್ರಹ್ಮದರ್ಶನಮ್'' ಎಂಬ ಉಕ್ತಿಯಂತೆ, ಮನಸ್ಸಿನ ಪ್ರತಿಯೊಂದು ವೃತ್ತಿಯಲ್ಲಿ ಆ ರುದ್ರನನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಅಂತರಂಗದ ಅಕ್ಷಮಾಲಾಧಾರಣವು. ಇಂತಹ ಸ್ಥಿತಿಯು ಪ್ರಾಪ್ತವಾದಾಗ ಸಕಲದುರಿತಗಳನ್ನೂ ದಹಿಸಿ ಆತನು ಸದ್ಯೋಮುಕ್ತನಾಗಬಲ್ಲನು. ಅಂತೆಯೇ ತೋಂಟದ ಸಿದ್ಧಲಿಂಗ ಯತೀಶ್ವರರು–

''ತತ್ತ್ವ ಚಿಂತಾಮಣಿಗಳೆಂಬ ರುದ್ರಾಕ್ಷಿಗಳ
ಭಕ್ತಿಭಾವದಲ್ಲಿ ಸರಗೊಳಿಸಿ,
ಯುಕ್ತಿ ವಿಧಾನವಿಡಿದು ಧರಿಸಿ,

ಸದ್ಯೋಮುಕ್ತನಾದೆನಯ್ಯಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.''

ಎಂಬ ವಚನದಲ್ಲಿ ತಾತ್ತ್ವಿಕ ರುದ್ರಾಕ್ಷಗಳ ಮಹತ್ತ್ವವನ್ನರುಹಿದ್ದಾರೆ.

ನಾವು ಬಾಹ್ಯದಲ್ಲಿ ಧರಿಸುವ ರುದ್ರಾಕ್ಷಗಳು ಆ ಅಂತರಂಗದ ತಾತ್ತ್ವಿಕ ರುದ್ರಾಕ್ಷಗಳ ಸಂಕೇತಗಳಾಗಿರುತ್ತವೆ. ಇವುಗಳನ್ನು ಧರಿಸಿದ ಸಾಧಕನು ತನ್ನ ಆಚರಣೆಯನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸಬೇಕು. ಈ ಸಂಕೇತವನ್ನು ಶ್ರೀ ಬಸವೇಶ್ವರರು–

ಹಸ್ತಕಡಗ ಕೈಗಧಿಕ ನೋಡಾ, ಕೊಡಬಹುದು ಕೊಳಲಾಗದು;
ಬಾಹು ಬಳಿ ತೋಳಿಂಗಧಿಕ ನೋಡಾ, ಪರವಧುವನಪ್ಪಲಾಗದು;
ಕರ್ಣಕುಂಡಲ ಕಿವಿಗಧಿಕ ನೋಡಾ, ಶಿವನಿಂದೆಯ ಕೇಳಲಾಗದು;
ಕಂಠಮಾಲೆ ಕೊರಳಿಗಧಿಕ ನೋಡಾ, ಅನ್ಯ ದೈವಕ್ಕೆರಗಲಾಗದು;
ಆಗಳೂ ನಿಮ್ಮುವ ನೆನೆದು ಕೂಡಲಸಂಗಮದೇವಾ,
ನಿಮ್ಮುವನು ಪೂಜಿಸಿ ಸದಾ ಸನ್ನಿಹಿತನಾಗಿಪ್ಪನು ಲಿಂಗಶಿಖಾಮಣಿಯಯ್ಯ !

ಎಂಬ ಈ ವಚನದಲ್ಲಿ ತೋರ್ಪಡಿಸಿದ್ದಾರೆ. ಕಡಗದಂತೆ ಮುಂಗೈಯಲ್ಲಿ ರುದ್ರಾಕ್ಷವನ್ನು ಧರಿಸಿದರೆ ಅನ್ಯರಿಗೆ ತಾನು ಕೊಡಬೇಕಲ್ಲದೇ ಅನ್ಯರಿಂದ ಏನನ್ನೂ ಗ್ರಹಿಸಬಾರದು ಅರ್ಥಾತ್ ಅಪರಿಗ್ರಹಿಯಾಗಿರಬೇಕು. ಬಾಹುಬಳಿಯಂತೆ, ಭುಜಗಳಲ್ಲಿ ರುದ್ರಾಕ್ಷಗಳನ್ನು ಧರಿಸಿದ ಬಳಿಕ ಆ ಭುಜಗಳಿಂದ ಪರಸ್ತ್ರೀ ಹಾಗೂ ಪರಪುರುಷರನ್ನು ಆಲಿಂಗಿಸಕೂಡದು. ಅಂದರೆ ತನ್ನ ಶೀಲವನ್ನು ಕಾಪಾಡಿಕೊಳ್ಳಬೇಕು. ರುದ್ರಾಕ್ಷದ ಕುಂಡಲಗಳನ್ನು ಕಿವಿಯಲ್ಲಿ ಧರಿಸಿದ ಬಳಿಕ ಗುರುಗಳ, ಶಾಸ್ತ್ರಗಳ ಹಾಗೂ ತನ್ನ ಇಷ್ಟದೇವರ ನಿಂದೆಯನ್ನು ಎಂದೂ ಕೇಳಬಾರದು. ಕೊರಳಲ್ಲಿ ರುದ್ರಾಕ್ಷಮಾಲೆಯನ್ನು ಧರಿಸಿದ ಬಳಿಕ ಆ ಕತ್ತು ತನ್ನ ಇಷ್ಟದೇವರ ಹೊರತಾಗಿ ಕಂಡ–ಕಂಡ ದೈವಕ್ಕೆ ಬಾಗಬಾರದು; ಅರ್ಥಾತ್ ಏಕ ದೇವೋಪಾಸನೆಯನ್ನು ಬಲಿಸಿಕೊಳ್ಳಬೇಕು. ಈ ರೀತಿಯಾಗಿ ಚಾರಿತ್ರ್ಯ ನಿರ್ಮಾಣದ ನಿಯಮಗಳನ್ನು ಪರಿಪಾಲಿಸುವ ರುದ್ರಾಕ್ಷ ಧಾರಿಗಳು ಸಾಕ್ಷಾತ್ ರುದ್ರರೇ ಆಗುವರು. ಅಂದರೆ, ಆಸುರೀ ಗುಣಗಳನ್ನು ಕಳೆದುಕೊಂಡು, ದೈವೀಗುಣಗಳನ್ನಳವಡಿಸಿಕೊಂಡುದುದರ, ಇಲ್ಲವೇ ಅಳವಡಿಸಿಕೊಳ್ಳುತ್ತಿರುವುದರ ಸಂಕೇತವೇ ಈ ಬಾಹ್ಯ ರುದ್ರಾಕ್ಷಧಾರಣವು.

ಭಸ್ಮ–ರುದ್ರಾಕ್ಷಗಳ ಧಾರಣದಿಂದ ಹಾಗೂ ಪಂಚಾಕ್ಷರೀ ಮಂತ್ರದ ಜಪದಿಂದ ಪಾತಕಗಳು ನಿವೃತ್ತವಾಗುವವೆಂದು ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರೋಣದರಿಂದ, ಅವುಗಳನ್ನು ಧರಿಸಿಕೊಂಡು ಮಂತ್ರವನ್ನು ಪಠಿಸುತ್ತಾ, ಪಾತಕಗಳನ್ನೂ ಮಾಡಿದರೆ ದೋಷವಿಲ್ಲವೆಂದು ಯಾರೂ ವಿಪರೀತಾರ್ಥವನ್ನು ಭಾವಿಸಕೂಡದು. ಅನ್ಯಥಾ ಈ ಧಾರ್ಮಿಕ ಚಿಹ್ನೆಗಳು ಪಾತಕಗಳ ಲಾಯ್‌ಸನ್ಸ್ ಆಗಿ ಪರಿವರ್ತನೆಗೊಂಡಾವು.

ಇಲ್ಲಿಯವರೆಗೆ ಅರಿತೋ ಅರಿಯದೆಯೋ ಮಾಡಿದ ಪಾತಕಗಳನ್ನು ಇನ್ನು ಮುಂದೆ ನಾನು ಸರ್ವಥಾ ಮಾಡಲಾರೆನೆಂಬ ದೃಢವ್ರತವನ್ನು ಪರಿಪಾಲಿಸುವ ವ್ಯಕ್ತಿಯು ತನ್ನ ಮನಸ್ಸಿಗೆ ಈ ವ್ರತದ ಅರಿವು ಮೇಲಿಂದ ಮೇಲೆ ಆಗಬೇಕೆಂಬ ಉದ್ದೇಶದಿಂದ ಈ

ಧಾರ್ಮಿಕ ಚಿಹ್ನೆಗಳನ್ನು ದೇಹದ ಮೇಲೆ ಧರಿಸಿಕೊಂಡಿರುತ್ತಾನೆ. ಇದುವೇ ಜೀವನವನ್ನು ಸುಧಾರಿಸಿಕೊಳ್ಳುವ ಪರಿಯು. ಇವುಗಳನ್ನು ಧರಿಸಿಯೂ ಪೂರ್ವದ ಸ್ವಭಾವವನ್ನು ಬಿಡದಿದ್ದರೆ ಅದೊಂದು ಹೇಯ ಜೀವನ. ಅಂತೆಯೇ ಅಂಬಿಗರ ಚೌಡಯ್ಯನವರು–

''ವಿಭೂತಿಯನಿಟ್ಟು ರುದ್ರಾಕ್ಷಿಯಂ ಧರಿಸಿ, ಪಂಚಾಕ್ಷರಿಯ ಜಪಿಸಿ,
ಕೃತಾರ್ಥರಾದೆವೆಂಬ ಪಂಚಮಹಾಪಾತಕರು ನೀವು ಕೇಳಿರೋ !
ಅದೆಂತೆಂದೊಡೆ–ವಿಭೂತಿಯನಿಟ್ಟು ವಿಶ್ವಾಸವಿಲ್ಲವಾಗಿ,
ರುದ್ರಾಕ್ಷಿಯ ಧರಿಸಿ ರುದ್ರಗಣಂಗಳನರಿಯರಾಗಿ,
ಪಂಚಾಕ್ಷರಿಯ ಜಪಿಸಿ ಪಂಚಮಹಾಪಾತಕಗಳ ಬಿಡರಾಗಿ
..........................................................................''

ಎಂಬ ಈ ವಚನದಲ್ಲಿ ಅಂಥವರನ್ನು ಕೇವಲ ವೇಷಾಡಂಬರಿಗಳೆಂದು ತಿರಸ್ಕರಿಸಿದ್ದಾರೆ. ಆದ್ದರಿಂದ ವಿಭೂತಿಯನ್ನು ಧರಿಸಿದವನು ತನ್ನ ಇಷ್ಟದೇವರಲ್ಲಿ ಅನನ್ಯ ವಿಶ್ವಾಸವುಳ್ಳವನಾಗಿರಬೇಕು. ರುದ್ರಾಕ್ಷವನ್ನು ಧರಿಸಿದವನು ರುದ್ರಗಣರನ್ನರಿತು ಅವರ ಶೀಲ ಹಾಗೂ ಸ್ವಭಾವಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕು. ಅದರಂತೆ ಪಂಚಾಕ್ಷರೀ ಮಂತ್ರವನ್ನು ಜಪಿಸುವವನು ಪಂಚಮಹಾಪಾತಕಗಳು ತನ್ನಿಂದ ಎಂದೂ ಜರುಗದಂತೆ ಎಚ್ಚರಿಕೆಯನ್ನು ವಹಿಸಬೇಕು. ಈ ರೀತಿಯಾಗಿ ಜೀವನದಲ್ಲಿ ಬದಲಾವಣೆಯಾದಾಗಲೇ ಇವುಗಳ ಧಾರಣದ ಫಲವು ಪ್ರಾಪ್ತಿಯಾಗುವುದು. ಅಂತೆಯೇ ದೇವರ ದಾಸಿಮಾರ್ಯರೂ–

''ಹೊರವೇಷದ ವಿಭೂತಿ ರುದ್ರಾಕ್ಷಿಯ ಪೂಜಿಸಿದಡೇನು ?
ತೆರನನರಿದು ಮರವೆಯ ಕಳೆದು,
ಮಾತಿನಂತೆ ನೀತಿಯುಳ್ಳೊಡೆ ಅವರ ಅಜಾತರೆಂಬೆ.''

ಎಂಬ ಈ ವಚನದಲ್ಲಿ ಅದೇ ಅಭಿಪ್ರಾಯವನ್ನೇ ವ್ಯಕ್ತಪಡಿಸಿ, ಢಾಂಬಿಕ ವೇಷವನ್ನು ಖಂಡಿಸಿದ್ದಾರೆ. ಆದಕಾರಣ, ಭಸ್ಮ–ರುದ್ರಾಕ್ಷ ಮುಂತಾದ ಧಾರ್ಮಿಕ ಚಿಹ್ನೆಗಳನ್ನು ಧರಿಸಿರುವ ಅಥವಾ ಧರಿಸದೇ ಉಪೇಕ್ಷಿಸುವ ವ್ಯಕ್ತಿಗಳು ಅವುಗಳ ಧಾರಣದ ಮರ್ಮವನ್ನರಿತು ಆಚರಣೆಯಲ್ಲಿ ತಂದದ್ದಾದರೆ, ನಿಜವಾಗಿಯೂ ಸಮಾಜವು ಸುಧಾರಣೆಗೊಂಡು ಇಂದಿನ ಈ ಅಧಃಪತನದ ಸ್ಥಿತಿಯು ನಿಂತು, ನಮ್ಮ ದೇಶವು ಜಗತ್ತಿಗೆ ಮಾರ್ಗದರ್ಶನವನ್ನು ಮಾಡಬಲ್ಲ ಆದರ್ಶ ದೇಶವಾಗಬಲ್ಲದು.

ರುದ್ರಾಕ್ಷಧಾರಣದಿಂದ ದೇಹಾರೋಗ್ಯ :

ಈ ಪ್ರಪಂಚದಲ್ಲಿ ಜನ್ಮವೆತ್ತ ಪ್ರತಿಯೊಬ್ಬ ಮನುಷ್ಯನಿಗೂ ಆಧ್ಯಾತ್ಮಿಕ ಪ್ರಗತಿಯ ಜೊತೆಗೆ ಭೌತಿಕ ಉನ್ನತಿಯೂ ಅವಶ್ಯಕ; ಹಾಗೆಯೇ, ಭೌತಿಕ ಜೀವನದಲ್ಲಿ ಶಾರೀರಿಕ ಸ್ವಾಸ್ಥ್ಯವೂ ಬಹಳ ಮಹತ್ವಪೂರ್ಣವಾದದ್ದು. ಆದ್ದರಿಂದಲೇ–''ಶರೀರಮಾದ್ಯಂ ಖಲು ಧರ್ಮಸಾಧನಂ'' ಶರೀರವು ಧರ್ಮಕ್ಕೆ ಮೊದಲ ಸಾಧನ–ಎಂದಿದ್ದಾನೆ ಕಾಳಿದಾಸನು. ಇಲ್ಲಿಯವರೆಗೆ ವರ್ಣಿಸಲ್ಪಟ್ಟ ಈ ರುದ್ರಾಕ್ಷಧಾರಣ ಪ್ರಕ್ರಿಯೆಯಿಂದ ಕೇವಲ ಮಾನಸಿಕ

ಸ್ವಾಸ್ಥ್ಯವಷ್ಟೇ ಅಲ್ಲ, ಶಾರೀರಿಕ ಆರೋಗ್ಯವೂ ಪ್ರಾಪ್ತವಾಗುವದೆಂದು ಆಯುರ್ವೇದ ಶಾಸ್ತ್ರವೂ ಪ್ರತಿಪಾದಿಸುತ್ತದೆ.

ಶರೀರಕ್ಕೆ ಸದಾ ರುದ್ರಾಕ್ಷದ ಸ್ಪರ್ಶವಾಗುತ್ತಿದ್ದರೆ "ರಕ್ತದ ಒತ್ತಡ" ಮತ್ತು "ಹೃದಯ ದೌರ್ಬಲ್ಯ" ಮುಂತಾದ ಇಂದಿನ ಅಸಾಧ್ಯ ರೋಗಗಳು ಸಹಜವಾಗಿ ನಿಯಂತ್ರಿಲ್ಪಡುತ್ತವೆ–ಎಂಬುದನ್ನು ಆಧುನಿಕ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ರುದ್ರಾಕ್ಷದ ಈ ವೈಜ್ಞಾನಿಕ ಲಾಭವನ್ನರಿತ ಹಾಗೂ ಮೇಲೆ ಹೇಳಿದ ರೋಗಕ್ಕೆ ತುತ್ತಾದ ಸರ್ವ ಧರ್ಮದ ಧನಿಕ ವರ್ಗದವರು ದೇಹಾರೋಗ್ಯಕ್ಕಾಗಿ ಇಂದು ರುದ್ರಾಕ್ಷಗಳನ್ನು ಧರಿಸುತ್ತಿರುವುದನ್ನು ಕಾಣುತ್ತೇವೆ. ಹೀಗೆ ದೇಹಾರೋಗ್ಯಕ್ಕಾಗಿ ರುದ್ರಾಕ್ಷಗಳನ್ನು ಧರಿಸುವವರ ಸಂಖ್ಯೆ ದೇಶ–ವಿದೇಶಗಳಲ್ಲಿ ಅಧಿಕವಾಗಿರುವುದರಿಂದ, ರುದ್ರಾಕ್ಷಗಳ ಬೆಲೆಯು ಆಕಾಶವನ್ನು ತಲುಪಿದೆ. ಆರ್ಥಿಕವಾಗಿ ಹಿಂದುಳಿದವರು ಇಂದು ರುದ್ರಾಕ್ಷ ಗಳನ್ನು ಧರಿಸುವುದು ಬಹು ಕಷ್ಟವಾಗಿದೆ. ಕಡಿಮೆ ಬೆಲೆಯ ಸಾಧಾರಣ ರುದ್ರಾಕ್ಷ ಗಳನ್ನು ಧರಿಸಿದರೂ ಆರೋಗ್ಯ ಲಾಭದ ಪ್ರಯೋಜನವು ಸಿದ್ಧಿಸುವುದರಿಂದ ಒಂದು ನೂರಾ ಎಂಟು ರುದ್ರಾಕ್ಷಗಳನ್ನು ಧರಿಸುವುದಾಗದಿದ್ದರೂ, ಒಂದು ರುದ್ರಾಕ್ಷ ವನ್ನಾದರೂ ಪ್ರತಿಯೊಬ್ಬರು ಅವಶ್ಯಕವಾಗಿ ಧರಿಸಬೇಕು.

ರೋಗಗಳಿಗೆ ರುದ್ರಾಕ್ಷೋಪಾಚಾರ :

ನಮ್ಮ ದೇಶದ ಪ್ರಾಚೀನವಾದ ಆಯುರ್ವೇದ ಶಾಸ್ತ್ರದಲ್ಲಿ ಅನೇಕ ರೋಗಗಳ ಮೇಲೆ ರುದ್ರಾಕ್ಷೋಪಚಾರವನ್ನು ಮಾಡುವ ಪದ್ಧತಿಯು ಉಕ್ತವಾಗಿದೆ–ಎಂಬ ವಿಚಾರವನ್ನು ಆಯುರ್ವೇದ ವಿಶಾರದರೂ, ಆಯುರ್ವೇದಾಚಾರ್ಯರೂ ಆದ ಲಿಂ|| ಶ್ರೀ ಷ. ಬ್ರ. ಗುರುದೇವ ಶಿವಾಚಾರ್ಯರು ಹಿರೇಮಠ ಚಿಕ್ಕಮಣ್ಣೂರು–ಇವರು ತಿಳಿಯಪಡಿಸಿ ಕೆಲವು ಉಪಚಾರಗಳನ್ನು–

"ರುದ್ರಾಕ್ಷಗಳನ್ನು ನೀರಿನಲ್ಲಿ ತೇದು ಸ್ವಲ್ಪ ಸೈಂಧವ ಲವಣ ಸೇರಿಸಿ ರೋಗಿಗಳ ನಾಲಿಗೆಗೆ ಲೇಪಿಸಿ, ಬಾಯಿ ತೊಳೆಯುವುದರಿಂದ ಮುಖಶುದ್ಧಿಯಾಗುವುದು. ಕಫಜ್ವರದಲ್ಲಿ ರುದ್ರಾಕ್ಷಗಳನ್ನು ನೀರಿನಲ್ಲಿ ತೇದು, ಶುದ್ಧ ಜೇನುತುಪ್ಪ ಬೆರಸಿ, ಸೇವಿಸಿದರೆ ಕಫ ಪ್ರಕೋಪದ ಭಯವಿರುವುದಿಲ್ಲ. ರುದ್ರಾಕ್ಷ, ಹೇಮಗರ್ಭ ಮಾತ್ರೆ, ಇವುಗಳನ್ನು ಅಲ್ಲದ ರಸದಲ್ಲಿ ತೇದು, ಜೇನುತುಪ್ಪ ಬೆರಸಿ ಮರಣೋನ್ಮುಖನಾದ ರೋಗಿಗೆ ಬಾಯಿ ಹೋದಾಗ್ಗೆ (ಮಾತು ಬಂದ್ ಆದಾಗ) ಸೇವಿಸಲು ಕೊಡಬೇಕು. ಇದು (Coramin Injection) ದಂತೆ ಕೆಲಸ ಮಾಡುತ್ತದೆ." (ಶಿವತತ್ತ್ವ ದರ್ಶನ, ಪುಟ ೮೩) ಈ ರೀತಿಯಾಗಿ ತಿಳಿಯಪಡಿಸಿದ್ದಾರೆ.

ನಿಸರ್ಗದ ವನಸ್ಪತಿಗಳಲ್ಲಿ ಅಪಾರವಾದ ಶಕ್ತಿಯಡಗಿದೆ. ಪಾಶ್ಚಾತ್ಯರ ಔಷಧ ಸೇವನೆಯ ಮೋಹಕ್ಕೊಳಗಾದ ನಾವು ಇಂದು ನಮ್ಮ ಪ್ರಾಚೀನ ಶಾಸ್ತ್ರಗಳನ್ನು ತಿರಸ್ಕರಿಸುತ್ತೇವೆ. ಅದರ ದುಷ್ಪರಿಣಾಮವಾಗಿ ಇಂದು ಹೊಸ ಹೊಸ ಅಸಾಧ್ಯ ರೋಗ ಗಳು ಪ್ರಾದುರ್ಭವಿಸುತ್ತಿವೆ. ರುದ್ರಾಕ್ಷವೂ ಸಹ ಒಂದು ದಿವ್ಯ ವನಸ್ಪತಿಯ ಬೀಜವಾಗಿ ರೋಣದರಿಂದ, ಅದರ ಧಾರಣ ಹಾಗೂ ವಿಭಿನ್ನ ಅನುಪಾನದಿಂದ ಅದನ್ನು ಸೇವಿಸುವುದರಿಂದಲೂ ಮನುಷ್ಯನ ದೇಹದ ಆರೋಗ್ಯವೂ ಸುಧಾರಿಸುವುದು. ಹೀಗೆ

ದೈಹಿಕ ಹಾಗೂ ಮಾನಸಿಕ ಆರೋಗ್ಯವನ್ನು ದಯಪಾಲಿಸಿ, ಮನುಷ್ಯನ ಜೀವನವನ್ನು ಸುಧಾರಿಸಿ, ಕೊನೆಗೆ ಇವನನ್ನು ಮಹಾದೇವನನ್ನಾಗಿ ಮಾಡಬಲ್ಲ ಈ ರುದ್ರಾಕ್ಷಗಳು ಶ್ರೀರುದ್ರನ ವರಪ್ರಸಾದಗಳು. ಇವುಗಳ ಧಾರಣದಿಂದಾಗುವ ಅಂತರಂಗ ಹಾಗೂ ಬಹಿರಂಗದ ಶುದ್ಧಿಯನ್ನರಿತ ವೀರಶೈವ ಧರ್ಮದ ಮೂಲಾಚಾರ್ಯರು ಅಷ್ಟಾವರಣ ಗಳಲ್ಲಿ ಇವುಗಳನ್ನು ಪರಿಗಣಿಸಿದ್ದಾರೆ.

ಇಂತಹ ಮಹಿಮಾಶಾಲಿಗಳಾದ ಈ ರುದ್ರಾಕ್ಷಗಳನ್ನು ಕೇವಲ ವೀರಶೈವರಷ್ಟೇ ಅಲ್ಲ, ಜಗತ್ತಿನ ಸಮಸ್ತ ಮಾನವರೆಲ್ಲ ಧರಿಸಿಕೊಂಡು ಇದರ ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ಲಾಭಗಳನ್ನು ಪಡೆದು ತಮ್ಮ ಜೀವನವನ್ನು ಸಾರ್ಥಕಮಾಡಿಕೊಳ್ಳಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತ ಅಷ್ಟಮ ಪರಿಚ್ಛೇದದಲ್ಲಿಯ 'ರುದ್ರಾಕ್ಷಧಾರಣಸ್ಥಲ' ಆಶೀರ್ವಚನವು ಪೂರ್ಣವಾದುದು.

■■

# ಅಷ್ಟಮ ಪರಿಚ್ಛೇದ

ಆಶೀರ್ವಚನ-೧

## ಪಂಚಾಕ್ಷರಜಪಸ್ಥಲ

ಧೃತಶ್ರೀಭೂತಿರುದ್ರಾಕ್ಷಃ ಪ್ರಯತೋ ಲಿಂಗಧಾರಕಃ ।
ಜಪೇತ್ ಪಂಚಾಕ್ಷರೀವಿದ್ಯಾಂ ಶಿವತತ್ತ್ವ ಪ್ರಬೋಧಿನೀಮ್ ॥ ೧ ॥

ಮಂಗಲಕರಗಳೂ ಸಂಪದ್ದಾಯಿಗಳೂ ಆದ ವಿಭೂತಿ ರುದ್ರಾಕ್ಷಗಳ ಧಾರಣೆಯಿಂದ ಪವಿತ್ರವಾದ ಇಷ್ಟಲಿಂಗಧಾರಕ ಶಿವಭಕ್ತನು ಪರಶಿವ ತತ್ತ್ವವನ್ನು ಪ್ರಕಾಶನಗೊಳಿಸುವ ಪಂಚಾಕ್ಷರಿ ಮಹಾಮಂತ್ರವನ್ನು ಜಪಿಸಬೇಕು.

ಶಿವತತ್ತ್ವಾತ್ ಪರಂ ನಾಸ್ತಿ ಯಥಾ ತತ್ತ್ವಾಂತರಂ ಮಹತ್ ।
ತಥಾ ಪಂಚಾಕ್ಷರೀಮಂತ್ರಾನ್ನಾಸ್ತಿ ಮಂತ್ರಾಂತರಂ ಮಹತ್ ॥ ೨ ॥

ಶಿವತತ್ತ್ವಕ್ಕಿಂತ ಶ್ರೇಷ್ಠವೂ ಮಹಿಮಾನ್ವಿತವೂ ಆದ ಬೇರೊಂದು ತತ್ತ್ವವು ಹೇಗೆ ಇರುವುದಿಲ್ಲವೋ ಹಾಗೆಯೇ ಪಂಚಾಕ್ಷರಿ ಮಂತ್ರಕ್ಕಿಂತಲೂ ಮಹಿಮಾನ್ವಿತವಾದ ಮಂತ್ರವು ಬೇರೊಂದಿರುವುದಿಲ್ಲ.

ಜ್ಞಾತೇ ಪಂಚಾಕ್ಷರೀಮಂತ್ರೇ ಕಿಂ ವಾ ಮಂತ್ರಾಂತರೈ ಫಲಮ್ ।
ಜ್ಞಾತೇ ಶಿವೇ ಜಗನ್ಮೂಲೇ ಕಿಂ ಫಲಂ ದೇವತಾಂತರೈಃ ॥ ೩ ॥

ಜಗತ್ತಿಗೆ ಮೂಲಕಾರಣನಾದ ಶಿವನನ್ನು ತಿಳಿದುಕೊಂಡ ಬಳಿಕ ಬೇರೆ ಬೇರೆ ದೇವರುಗಳನ್ನು ತಿಳಿದುಕೊಳ್ಳುವ ಅವಶ್ಯಕತೆಯು ಇಲ್ಲದಿರುವಂತೆ ಪಂಚಾಕ್ಷರಿ ಮಹಾಮಂತ್ರವನ್ನು ತಿಳಿದುಕೊಂಡ ಬಳಿಕ ಉಳಿದ ಮಂತ್ರಗಳನ್ನು ತಿಳಿದುಕೊಳ್ಳುವುದು ನಿಷ್ಪ್ರಯೋಜಕವಾದುದು.

ಇಷ್ಟಲಿಂಗ, ವಿಭೂತಿ ಮತ್ತು ಪಾವನವಾದ ರುದ್ರಾಕ್ಷಗಳನ್ನು ಶರೀರದ ಮೇಲೆ ಸದಾ ಧರಿಸಿಕೊಂಡಿರುವ ವೀರಶೈವ ಸಾಧಕನು ಶಿವತತ್ತ್ವದ ಜ್ಞಾನಪ್ರಾಪ್ತಿಗಾಗಿ ಪಂಚಾಕ್ಷರಿ ಮಹಾಮಂತ್ರವನ್ನು ಜಪಿಸಬೇಕೆಂದು ತಿಳಿಸುವುದಕ್ಕಾಗಿ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸದ್ಯಃ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರಿಗೆ ಈ ಮಹಾಮಂತ್ರದ ಮಹಿಮೆ ಹಾಗೂ ಜಪವಿಧಾನವನ್ನು ಈ 'ಪಂಚಾಕ್ಷರ ಜಪಸ್ಥಲ'ದಲ್ಲಿ ನಿರೂಪಿಸುತ್ತಲಿದ್ದಾರೆ.

ವೀರಶೈವ ಸಿದ್ಧಾಂತಕ್ಕನುಸಾರವಾಗಿ ಈ ಜಗತ್ತು ತತ್ತ್ವಾತ್ಮಕವಾದದ್ದು. ಆ ತತ್ತ್ವಗಳು ಮೂವತ್ತಾರು ಪ್ರಕಾರಗಳಾಗಿವೆ. ಇವುಗಳಲ್ಲಿ ಶಿವತತ್ತ್ವವು ಮೊದಲನೆಯದಾದರೆ ಭೂಮಿತತ್ತ್ವವೇ ಕೊನೆಯದು. ಹೀಗೆ ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳಲ್ಲಿ ಶಿವತತ್ತ್ವವು ಶ್ರೇಷ್ಠವಾಗಿರುವಂತೆ ಎಲ್ಲ ಮಂತ್ರಗಳಲ್ಲಿ ಪಂಚಾಕ್ಷರಿ ಮಹಾಮಂತ್ರವೇ ಶ್ರೇಷ್ಠವಾದುದಾಗಿದೆ.

ಪರಮಾತ್ಮನಿಗಿರುವ ಸಹಸ್ರನಾಮಗಳಲ್ಲಿ ''ಶಿವ'' ಎಂಬ ನಾಮವು ಮಂಗಲಕರವೂ ಸರ್ವೋತ್ತಮವೂ ಆಗಿದೆ. ಈ ಶಿವನಾಮವು ನಾಲ್ಕು ವೇದಗಳ ಸಾರಸರ್ವಸ್ವವೆಂಬ ವಿಷಯವು–

ವಿದ್ಯಾಸು ಶ್ರುತಿರುತ್ಕೃಷ್ಟಾ, ರುದ್ರೈಕಾದಶಿನೀ ಶ್ರುತೌ ।
ತತ್ರ ಪಂಚಾಕ್ಷರೀ ತಸ್ಯಾಂ ಶಿವ ಇತ್ಯಕ್ಷರದ್ವಯಮ್ ॥

ಎಂಬ ಈ ಪುರಾಣವಚನದಲ್ಲಿ ಸ್ಪಷ್ಟೀಕರಿಸಲಾಗಿದೆ. ಇದರ ತಾತ್ಪರ್ಯವೇನೆಂದರೆ– ಹದಿನೆಂಟು ವಿದ್ಯೆಗಳಲ್ಲಿ ಶ್ರುತಿಯು, ಶ್ರುತಿಯಲ್ಲಿ ಶ್ರೀರುದ್ರವೂ, ಶ್ರೀರುದ್ರದಲ್ಲಿ ಆನೇ ಅನವಾಕವೂ, ಅದರಲ್ಲಿಯೂ ''ನಮಃ ಶಿವಾಯ ಚ'' ಎಂಬ ಪಂಚಾಕ್ಷರವೂ ಮತ್ತು ಆ ಪಂಚಾಕ್ಷರದಲ್ಲಿ ''ಶಿವ'' ಎಂಬ ಎರಡಕ್ಷರಗಳು ಹೀಗೆ ಪೂರ್ವ ಪೂರ್ವಕ್ಕಿಂತಲೂ ಉತ್ತರೋತ್ತರಗಳಾದವುಗಳು ಶ್ರೇಷ್ಠವಾದವುಗಳೆಂಬುದಾಗಿ ತಿಳಿಯಪಡಿಸಿ ಕೊನೆಗೆ ''ಶಿವ'' ಎಂಬೆರಡಕ್ಷರಗಳು ಸರ್ವೋತ್ಕೃಷ್ಟವೆಂದು ತಿಳಿಯಪಡಿಸಲಾಗಿದೆ.

''ಶಿವ'' ಎಂಬ ಎರಡಕ್ಷರಗಳು ನಾಲ್ಕೂ ವೇದಗಳ ಸಾರಸ್ವರೂಪಗಳಾಗಿವೆ. ''(ಶ್+ಇ=ಶಿ, ವ್+ಅ=ವ)=ಶಿವ'' ಈ ಎರಡಕ್ಷರಗಳನ್ನು ವಿಭಜಿಸಿದಾಗ ಎರಡು ಸ್ವರಗಳೂ ಎರಡು ವ್ಯಂಜನಗಳೂ ಕಂಡುಬರುತ್ತವೆ. ಇವುಗಳಲ್ಲಿ 'ಅ' ವರ್ಣದಿಂದ ಋಗ್ವೇದ ಮತ್ತು ಸಾಮವೇದಗಳೂ ಪ್ರಾರಂಭವಾಗುತ್ತವೆ. ಆದ್ದರಿಂದ 'ಅ' ವರ್ಣದಲ್ಲಿ ಈ ಎರಡು ವೇದಗಳ ಸಾರವು ಸಮಾವೇಶಗೊಳ್ಳುತ್ತದೆ. ಇದರಂತೆ 'ಇ' ವರ್ಣದಿಂದ ಋಜುರ್ವೇದದ ಪ್ರಾರಂಭವು ಹಾಗೂ 'ಶ' ಕಾರದಿಂದ ಅಥರ್ವಣವೇದದ ಪ್ರಾರಂಭವಾಗುತ್ತದೆ. ಆದಕಾರಣ 'ಇ' ಕಾರದಲ್ಲಿ ಋಜರ್ವೇದದ ಸಾರವು ಮತ್ತು 'ಶ'ಕಾರದಲ್ಲಿ ಅಥರ್ವಣ ವೇದದ ಸಾರವು ಸಮಾಹಿತವಾಗಿದೆ. ಅದರಂತೆ 'ವ' ಕಾರದಿಂದ ವ್ಯಾಕರಣಶಾಸ್ತ್ರವು ಪ್ರಾರಂಭವಾಗುವ ಕಾರಣ 'ವ' ಕಾರದಲ್ಲಿ ವ್ಯಾಕರಣಶಾಸ್ತ್ರವು ಸಮಾವೇಶಗೊಂಡಿದೆ. ಹೀಗೆ ''ಶಿವ'' ಎಂಬ ಎರಡಕ್ಷರಗಳ ಗರ್ಭದಲ್ಲಿ ವೇದ–ವೇದಾಂಗಗಳ ಸಾರವು ಅಡಕವಾಗಿದೆ. ಇಂತಹ ಈ ಎರಡಕ್ಷರಗಳ ಪಂಚಾಕ್ಷರ ಮಹಾಮಂತ್ರದಲ್ಲಿ ಸನ್ನಿಹಿತವಾಗಿರುವುದರಿಂದ ಈ ಮಂತ್ರವು ಉಳಿದೆಲ್ಲ ಮಂತ್ರಗಳಿಗಿಂತ ಅತ್ಯಂತ ಮಹತ್ತ್ವವುಳ್ಳದ್ದಾಗಿದೆ.

ನಿರ್ಮಲನೂ ಮಂಗಲಕರನೂ ಆದ ಶಿವನನ್ನು ತಿಳಿದುಕೊಂಡ ಬಳಿಕ ಅನ್ಯ ಬ್ರಹ್ಮಾದಿ ದೇವತೆಗಳ ಜ್ಞಾನದ ಅವಶ್ಯಕತೆ ಇಲ್ಲದಿರುವಂತೆ ಪಂಚಾಕ್ಷರ ಮಹಾಮಂತ್ರದ ಜ್ಞಾನವಾದ ಬಳಿಕ ಬೇರೆ ಬೇರೆ ಮಂತ್ರಗಳ ಜ್ಞಾನದ ಅವಶ್ಯಕತೆ ಇರದು. ಹಿಂದೂ ಸಂಸ್ಕೃತಿಯಲ್ಲಿ ಮೂವತ್ತಮೂರು ಕೋಟಿ ದೇವತೆಗಳನ್ನು ಒಪ್ಪಿಕೊಂಡಿದ್ದಾರೆ. ಇವರಲ್ಲಿ ಶಿವ, ಬ್ರಹ್ಮ ಮತ್ತು ವಿಷ್ಣು ಇವರು ಪ್ರಧಾನ ದೇವತೆಗಳಾಗಿರುವರು. ಇವರಲ್ಲಿಯೂ ಬ್ರಹ್ಮ ಮತ್ತು ವಿಷ್ಣು ದೇವತೆಗಳು ಮಾಯಾಧೀನರಾಗಿ ಆಣವಾದಿ ಮಲತ್ರಯಗಳಿಂದ ಯುಕ್ತರಾಗಿರುವರು. ಆದರೆ ಶಿವನು ಮಾತ್ರ ನಿತ್ಯನೂ ನಿರ್ಮಲನೂ ಮಾಯಾಮೋಹ ರಹಿತನೂ ಆಗಿರುವನು. ಅಂತೆಯೇ ಶಿವಜ್ಞಾನವಾದ ಬಳಿಕ ಅನ್ಯದೇವತೆಗಳ ಪರಿಜ್ಞಾನದ ಅವಶ್ಯಕತೆ ಹೇಗೆ ಇರುವುದಿಲ್ಲವೋ ಅದರಂತೆ ಪಂಚಾಕ್ಷರ

ಮಹಾಮಂತ್ರದ ತಿಳುವಳಿಕೆಯಾದ ಮೇಲೆ ಬೇರಾವ ಮಂತ್ರದ ಗೊಡವೆಗೆ ಹೋಗುವ ಅವಶ್ಯಕತೆಯೇ ಇರಲಾರದು. ಆದಕಾರಣ ಇಂತಹ ಸರ್ವಶ್ರೇಷ್ಠವಾದ ಮಹಾಮಂತ್ರವನ್ನೇ ಜಪಿಸಬೇಕಲ್ಲದೆ ಶಿವಭಕ್ತನಾದವನು ಬೇರಾವ ಮಂತ್ರದ ಗೊಡವೆಗೆ ಹೋಗಬಾರದೆಂಬ ವಿಷಯವನ್ನು ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಬಹುಮಾರ್ಮಿಕವಾಗಿ ಇಲ್ಲಿ ತಿಳಿಯಪಡಿಸಿದ್ದಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

## ಆಶೀರ್ವಚನ-೨

ಸಪ್ತಕೋಟಿಷು ಮಂತ್ರೇಷು ಮಂತ್ರಃ ಪಂಚಾಕ್ಷರೋ ಮಹಾನ್ ।
ಬ್ರಹ್ಮವಿಷ್ಣ್ವಾದಿ ದೇವೇಷು ಯಥಾ ಶಂಭುರ್ಮಹತ್ತರಃ ॥ ೪ ॥

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಲ್ಲಿ ಶಿವನು ಸರ್ವೋತ್ತಮನಾಗಿರುವಂತೆ ಏಳು ಕೋಟಿ ಮಂತ್ರಗಳಲ್ಲಿ ಪಂಚಾಕ್ಷರಮಹಾಮಂತ್ರವು ಶ್ರೇಷ್ಠವಾಗಿದೆ.

ಅಶೇಷಜಗತಾಂ ಹೇತುಃ ಪರಮಾತ್ಮಾ ಮಹೇಶ್ವರಃ ।
ತಸ್ಯ ವಾಚಕಮಂತ್ರೋಽಯಂ ಸರ್ವಮಂತ್ರೈಕಕಾರಣಮ್ ॥ ೫ ॥

ಸಕಲ ಬ್ರಹ್ಮಾಂಡಗಳ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ಶಿವನು ಮೂಲಕಾರಣನಾಗಿರುವಂತೆ ಅವನ ವಾಚಕವಾದ ಈ ಪಂಚಾಕ್ಷರ ಮಹಾಮಂತ್ರವು ಸಕಲ ಮಂತ್ರಗಳಿಗೆ ಆದಿಕಾರಣವಾಗಿರುತ್ತದೆ.

ತಸ್ಯಾಭಿದಾನಮಂತ್ರೋಽಯಮಭಿಧೇಯಶ್ಚ ಸಃ ಸ್ಮೃತಃ ।
ಅಭಿದಾನಭಿಧೇಯತ್ವಾತ್ ಮಂತ್ರಾತ್ ಸಿದ್ಧಃ ಪರಃ ಶಿವಃ ॥ ೬ ॥

ಪಂಚಾಕ್ಷರ ಮಹಾಮಂತ್ರವು ಶಿವನನ್ನು ಕರೆಯುವ ಅಭಿಧಾನ (ಹೆಸರು)ವಾಗಿದೆ. ಅಂತೆಯೇ ಶಿವನು ಅದರಿಂದ ಕರೆಯಲ್ಪಡುತ್ತಾನೆ. ಆದ್ದರಿಂದ ಅವನು ಅಭಿಧೇಯನು. ಈ ರೀತಿಯಾಗಿ ಮಂತ್ರ ಮತ್ತು ಶಿವರಲ್ಲಿ ಅಭಿದಾನ–ಅಭಿದೇಯಭಾವ ಸಂಬಂಧವಿರುವುದರಿಂದ ಈ ಮಂತ್ರದಿಂದಲೇ ಪರಶಿವನ ಸಾಕ್ಷಾತ್ಕಾರವಾಗುವುದು.

ನಮಃ ಶಬ್ದಂ ವದೇತ್ ಪೂರ್ವಂ ಶಿವಾಯೇತಿ ತತಃ ಪರಮ್ ।
ಮಂತ್ರಃ ಪಂಚಾಕ್ಷರೋಹ್ಯೇಷಃ ಸರ್ವಶೃತಿಶಿರೋಗತಃ ॥ ೭ ॥

'ನಮಃ ಶಿವಾಯ' ಇದುವೇ ಪಂಚಾಕ್ಷರ ಮಹಾಮಂತ್ರವು. ಇದು ಸಕಲ ವೇದಗಳ ಶಿಖಾಮಣಿಯಾಗಿರುತ್ತದೆ.

ತಮ್ಮ ಇಷ್ಟದೇವರನ್ನು ಅಭಿಮುಖಿಗೊಳಿಸುವುದಕ್ಕಾಗಿ ಪ್ರಾಚೀನ ಮಹರ್ಷಿಗಳು ಬೇರೆ ಬೇರೆ ದೇವತೆಗಳಿಗೆ ಬೇರೆ ಬೇರೆ ಮಂತ್ರಗಳನ್ನು ಕಂಡುಹಿಡಿದಿದ್ದಾರೆ. ಹೀಗೆ ಕಂಡುಹಿಡಿದ ಮಂತ್ರಗಳು ಒಂದಲ್ಲ ಎರಡಲ್ಲ ; ಏಳು ಕೋಟಿ ಎಂಬುದಾಗಿ ಮಂತ್ರ ಶಾಸ್ತ್ರದಲ್ಲಿ ನಿರೂಪಿಸಲಾಗಿದೆ. ಸರ್ವದೇವತೆಗಳಲ್ಲಿ ಶಿವನು ಸರ್ವೋತ್ತಮನಾಗಿರುವಂತೆ ಸಕಲ ಮಂತ್ರಗಳಲ್ಲಿ ಪಂಚಾಕ್ಷರ ಮಹಾಮಂತ್ರವು ಸರ್ವ ಶ್ರೇಷ್ಠವಾದುದೆಂಬುದನ್ನು ಮಹಾಮಹಿಮನಾದ ಅಗಸ್ತ್ಯನಿಗೆ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಇಲ್ಲಿ ಬೋಧಿಸಿದ್ದಾರೆ.

ಸಮಸ್ತ ಬ್ರಹ್ಮಾಂಡಗಳ ಸೃಷ್ಟಿಗೆ ಶಿವನು ಮೂಲ ಕಾರಣನಾಗಿರುವನು. ಈ ಪಂಚಾಕ್ಷರ ಮಹಾಮಂತ್ರವು ಅವನ ಅಭಿಧಾನವಾದ್ದರಿಂದ ಈ ಮಂತ್ರವಾದರೂ ಎಲ್ಲ ಮಂತ್ರಗಳ ಮೂಲವಾಗಿದೆ. ಲೌಕಿಕ ವ್ಯವಹಾರದಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ಒಂದೊಂದು

ಅಭಿದಾನವಿರುವುದುಂಟು (ಹೆಸರು ಇರುವುದುಂಟು). ಆ ಹೆಸರಿನಿಂದ ವ್ಯಕ್ತಿಯನ್ನು ಕರೆದಾಗ ಆತನು ಕರೆದವರತ್ತ ಅಭಿಮುಖನಾಗುತ್ತಾನೆ. ಅದರಂತೆ ಪಂಚಾಕ್ಷರವು ಶಿವನ ಅಭಿಧಾನವಾದ್ದರಿಂದ ಆ ಮಂತ್ರದಿಂದಲೇ ಶಿವನನ್ನು ಅಭಿಮುಖಿಗೊಳಿಸಲು ಸಾಧ್ಯವಾಗುತ್ತದೆ. ಅಂತೆಯೇ ''ಮಂತ್ರಾತ್ ಸಿದ್ಧಃ ಪರಃ ಶಿವಃ'' ಎಂದು ಪೂಜ್ಯಪಾದರು ಉಪದೇಶಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕರು ಉಪದೇಶಿಸಿದಂತೆ 'ನಮಃ' ಎಂಬ ಶಬ್ದವನ್ನು ಮೊದಲು ನುಡಿದು ನಂತರ 'ಶಿವಾಯ' ಎಂಬ ಶಬ್ದವನ್ನು ನುಡಿಯಬೇಕು. ಈ ಎರಡೂ ಶಬ್ದಗಳ ಸಂಯುಕ್ತ ಸ್ವರೂಪವೇ ಪಂಚಾಕ್ಷರ ಮಹಾಮಂತ್ರದ ಸ್ವರೂಪವು. ಈ ಮಂತ್ರದಲ್ಲಿಯ ನಮಃ ಶಬ್ದವು ಜೀವಾತ್ಮನ ವಾಚಕವು ಹಾಗೂ 'ಶಿವ' ಶಬ್ದವು ಪರಮಾತ್ಮನ ವಾಚಕವು. ಇದರಲ್ಲಿಯ 'ಆಯ' ಶಬ್ದವು ಅವೆರಡರ ಅಭೇದವನ್ನು ಭೋದಿಸುವಂತಹದಾಗಿದೆ. ಹೀಗೆ ಜೀವ ಶಿವರ ಅಭೇದವನ್ನು ಬೋಧಿಸುವ ಈ ಮಂತ್ರದ ನಿರಂತರ ಜಪದಿಂದ ಜೀವ ಶಿವರ ಸಾಮರಸ್ಯವು ಸಹಜವಾಗಿ ಸಿದ್ಧವಾಗುತ್ತದೆ. ಈ ರೀತಿಯಾಗಿ ಶಿವ ಜೀವರ ಐಕ್ಯ ಬೋಧಕವಾದ ಈ ಮಹಾಮಂತ್ರವು ಎಲ್ಲ ವೇದಗಳ ಶಿಖಾಮಣಿಯಂತಿದ್ದು ಪಂಚಾಕ್ಷರವೆಂಬ ಪ್ರಖ್ಯಾತಿಯನ್ನು ಪಡೆದಿರುವುದಾಗಿದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೩

ಆದಿತಃ ಪರಿಶುದ್ಧತ್ವಾನ್ಮಲತ್ರಯವಿಯೋಗತಃ ।
ಶಿವ ಇತ್ಯುಚ್ಯತೇ ಶಂಭುಶ್ಚಿದಾನಂದಘನಃ ಪ್ರಭುಃ ॥ ೮ ॥

ಸಚ್ಚಿದಾನಂದಸ್ವರೂಪನೂ ಸರ್ವತಂತ್ರ ಸ್ವತಂತ್ರನೂ ಆದ ಪರಮಾತ್ಮನು ಅನಾದಿಕಾಲ ದಿಂದಲೂ ಆಣವಾದಿ ಮಲತ್ರಯರಹಿತನಾಗಿ ಸದಾ ಪರಿಶುದ್ಧನಾಗಿರುತ್ತಾನೆ. ಅಂತೆಯೇ ಅವನು 'ಶಿವ' ಎಂಬುದಾಗಿ ಕರೆಯಲ್ಪಡುತ್ತಾನೆ.

ಆಸ್ಪದತ್ವಾದಶೇಷಾಣಾಂ ಮಂಗಲಾನಾಂ ವಿಶೇಷತಃ ।
ಶಿವಶಬ್ದಾಭಿಧೇಯೋ ಹಿ ದೇವದೇವಸ್ತ್ರಿಯಂಬಕಃ ॥ ೯ ॥

ದೇವಾಧಿದೇವನೂ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣೀಭೂತನೂ ಅಂತೆಯೇ ಮುಕ್ಕಣ್ಣ ನೆಂದು ಕರೆಯಿಸಿಕೊಳ್ಳುವ ಆ ಪರಮಾತ್ಮನು ಸಮಸ್ತ ಮಂಗಲಗಳಿಗೆ ಆಶ್ರಯನಾಗಿರು ವುದರಿಂದ 'ಶಿವ'ನೆಂಬ ಅನ್ವರ್ಥಕನಾಮದಿಂದ ಕರೆಯಲ್ಪಡುವವನಾಗಿದ್ದಾನೆ.

ಶಿವ ಇತ್ಯಕ್ಷರದ್ವಂದ್ವಂ ಪರಬ್ರಹ್ಮಪ್ರಕಾಶಕಂ ।
ಮುಖ್ಯವೃತ್ತ್ಯಾ ತದನ್ಯೇಷಾಂ ಶಬ್ದಾನಾಂ ಗುಣವೃತ್ತಯಃ ॥ ೧೦ ॥

ಶಿವ ಎಂಬ ಎರಡು ಅಕ್ಷರಗಳು ಸಾಕ್ಷಾತ್ ಪರಶಿವ ಬ್ರಹ್ಮವನ್ನು ತಿಳಿಸುವವುಗಳಾಗಿವೆ. ಇನ್ನುಳಿದ ಪರಮಾತ್ಮನ ನಾಮಗಳು ಮೊದಲು ಅವನ ಗುಣಗಳನ್ನು ನಿರೂಪಿಸಿ ತನ್ಮೂಲಕ ಅವನ ಸ್ವರೂಪವನ್ನು ತಿಳಿಸುವಂತಹುಗಳಾಗಿವೆ. ಆದ್ದರಿಂದ ಪರಮಾತ್ಮನ ನಾಮಗಳಲ್ಲಿ 'ಶಿವ' ಎಂಬ ನಾಮವೇ ಮುಖ್ಯವಾದುದಾಗಿದೆ.

ತಸ್ಮಾನ್ಮುಖ್ಯತರಂ ನಾಮ ಶಿವ ಇತ್ಯಕ್ಷರದ್ವಯಂ ।
ಸಚ್ಚಿದಾನಂದರೂಪಸ್ಯ ಶಂಭೋರಮಿತತೇಜಸಃ ॥ ೧೧ ॥

ಸಚ್ಚಿದಾನಂದಸ್ವರೂಪನೂ ಅಪರಿಮಿತ ತೇಜಸ್ವಿಯೂ ಆದ ಪರಮಾತ್ಮನಿಗೆ 'ಶಿವ' ಎಂಬ ನಾಮವು ಮುಖ್ಯವಾದ ನಾಮವಾಗಿದೆ.

ಪರಶಿವಬ್ರಹ್ಮವನ್ನು ಸ್ತುತಿಸಲು ಶಾಸ್ತ್ರಗಳಲ್ಲಿ ಸಹಸ್ರನಾಮಗಳು ಉಕ್ತವಾಗಿವೆ. ಅವುಗಳಲ್ಲಿ 'ಶಿವ' ಎಂಬ ನಾಮವು ಅತ್ಯಂತ ಮುಖ್ಯವಾದುದು ಎಂಬ ವಿಷಯವನ್ನು ಪೂಜ್ಯಪಾದರು ಅಗಸ್ತ್ಯನಿಗೆ ಅಪ್ಪಣೆ ಕೊಡಿಸಿದ್ದಾರೆ. ಆ ಪರಶಿವ ಬ್ರಹ್ಮವು ಅನಾದಿ ಕಾಲದಿಂದಲೂ ಆಣವಾದಿ ಮಲತ್ರಯಗಳಿಂದ ಮುಕ್ತವಾದುದಾಗಿ ಸದಾ ಪರಿಶುದ್ಧವಾಗಿರುತ್ತದೆ. ಅಲ್ಲದೆ ಸಮಸ್ತಮಂಗಲಗಳಿಗೆ ಆಶ್ರಯವಾಗಿರುತ್ತದೆ. ಅಂತೆಯೇ ಆ ಪರಬ್ರಹ್ಮಕ್ಕೆ 'ಶಿವ' ಎಂಬ ಅಭಿಧಾನವು ಪ್ರಾಪ್ತವಾಗಿದೆ.

ಮಹಾಭಾರತದಲ್ಲಿ ''ಶಿವಮಿಚ್ಛನ್ಮನುಷ್ಯಾಣಾಂ ತಸ್ಮಾದ್ದೇವಃ ಶಿವಃ ಸ್ಮೃತಃ'' (೭-೧೭೩-೯೦) ಎಂಬುದಾಗಿ ಉಕ್ತವಾಗಿದೆ. ತಾತ್ಪರ್ಯವೇನೆಂದರೆ ಸಮಸ್ತ ಮಾನವರಿಗೆ ಕಲ್ಯಾಣವನ್ನು ಬಯಸುತ್ತಿರುವ ಕಾರಣ ಮಹಾದೇವನಿಗೆ ''ಶಿವ''ನೆಂಬ

ನಾಮವು ಪ್ರಾಪ್ತವಾಗಿದೆ. ಸರ್ವಾಂತರ್ಯಾಮಿಯಾದ ಶಿವನು ಮನುಷ್ಯರ ಕಲ್ಯಾಣಕ್ಕಾಗಿ ಪ್ರತಿಕ್ಷಣವೂ ಹಿತಮಾರ್ಗವನ್ನು ಉಪದೇಶಿಸುತ್ತಲೇ ಇರುತ್ತಾನೆ. ಆ ಉಪದೇಶವನ್ನು ಕೇಳಿಯೂ ಕೇಳದಂತೆ ವರ್ತಿಸುತ್ತಿರುವ ಇಂದಿನ ಮನುಷ್ಯರು ಜೀವನದಲ್ಲಿ ಕಲ್ಯಾಣ ಪರಂಪರೆಯನ್ನು ಹೊಂದದೇ ಅನಂತ ದುಃಖವನ್ನು ಅನುಭವಿಸುತ್ತಲಿದ್ದಾರೆ. ಈ ದುಃಖಪರಂಪರೆಯಿಂದ ಪಾರಾಗಬೇಕಾದರೆ ನಮ್ಮ ಹೃದಯದಲ್ಲಿ ಮೂಡಿಬರುವ ಶಿವನ ಅಂತರ್ವಾಣಿಯನ್ನು ಲಕ್ಷ್ಯಗೊಟ್ಟು ಆಲಿಸಿ, ಅದರಂತೆ ಆಚರಿಸಿದಾಗ ಮನುಷ್ಯನು ಅನಂತ ಮಂಗಲ ಪರಂಪರೆಯನ್ನು ಅನುಭವಿಸುವನು.

ಶಿವನು ಕೇವಲ ಮನುಷ್ಯರ ಕಲ್ಯಾಣವನ್ನು ಬಯಸುವವನಲ್ಲ; ಅವನಿಗೆ ಸರ್ವಪ್ರಾಣಿಗಳೂ ಸಮಾನಗಳೇ. ಅಂತೆಯೇ ಅವನು ಪ್ರಾಣಿಮಾತ್ರರ ಕಲ್ಯಾಣವನ್ನು ಬಯಸುವವನು. ಈ ಮಾತನ್ನು ಶಿವನು ಸ್ವತಃ–

ಸಮಾಭವಂತಿ ಮೇ ಸರ್ವೇ ದಾನವಾಶ್ಚಾಮರಾಶ್ಚ ಯೇ ।
ಶಿವೋಽಸ್ಮಿ ಸರ್ವಭೂತನಾಂ ಶಿವತ್ವಂ ತೇನ ಮೇ ಸುರಾಃ ॥

(ಮಹಾಭಾರತ; ೮–೨–೩,೪)

ಈ ರೀತಿಯಾಗಿ ತನ್ನ 'ಶಿವ' ಎಂಬ ಹೆಸರಿನ ಮಹಿಮೆಯನ್ನು ತಾನೇ ದೇವತೆಗಳಿಗೆ ಉಪದೇಶಿಸಿದ್ದಾನೆ. ತಾತ್ಪರ್ಯವೇನೆಂದರೆ–ಎಲೈ ದೇವತೆಗಳೇ, ನನ್ನ ದೃಷ್ಟಿಯಲ್ಲಿ ದೇವ, ದಾನವ ಮತ್ತು ಮಾನವರೆಂಬ ಭೇದಬುದ್ಧಿಯು ಇರುವುದಿಲ್ಲ. ನನಗೆ ಎಲ್ಲರೂ ಸಮಾನರು. ನಾನು ಎಲ್ಲರಿಗೂ ಮಂಗಲವನ್ನೇ ಬಯಸುತ್ತೇನೆ. ಅಂತೆಯೇ ನನ್ನ ಹೆಸರು 'ಶಿವ' ಎಂಬುದಾಗಿದೆ.

ಈ ರೀತಿಯಾಗಿ ಕಲ್ಯಾಣ ಸ್ವರೂಪನೂ ಪ್ರಾಣಿಮಾತ್ರಕ್ಕೆಲ್ಲ ಕಲ್ಯಾಣಕಾರಿಯೂ ಆಗಿರುವ ಕಾರಣ ಪರಬ್ರಹ್ಮಕ್ಕೆ 'ಶಿವ' ಎಂಬ ನಾಮವು ಅನ್ವರ್ಥಕವಾಗಿದೆ. ಅಂತೆಯೇ ಶೃತಿಯಲ್ಲಿ ''ಶಿವ ಏಕೋ ಧ್ಯೇಯಃ ಶಿವಶಂಕರಃ'' (ಅಥರ್ವಶಿಖೋಪನಿಷತ್, ೩) ಮಂಗಲಕರವಾದ ಶಿವನೊಬ್ಬನನ್ನೇ ಧ್ಯಾನಿಸಬೇಕೆಂಬುದಾಗಿ ಪ್ರತಿಪಾದಿಸಲಾಗಿದೆ.

ಇದೂ ಅಲ್ಲದೆ ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧತ್ವ, ಸ್ವತಂತ್ರತ್ವ, ಅಲುಪ್ತಶಕ್ತಿಮತ್ವ ಮತ್ತು ಅನಂತಶಕ್ತಿತ್ವಗಳೆಂಬ ಶಿವಮಯಗಳಾದ ಷಡ್ಗುಣೈಶ್ವರ್ಯಗಳು ಪರಮಾತ್ಮನಲ್ಲಿ ಇರುವ ಕಾರಣ ''ಶಿವಾಃ ಶೋಭನಾಃ ಸರ್ವಜ್ಞತ್ವಾದಯೋ ಗುಣಾ ಅಸ್ಯ ಸಂತೀತಿ ಶಿವಃ'' ಎಂಬ ವ್ಯುತ್ಪತ್ತಿಗನುಸಾರವಾಗಿ ಅವನಿಗೆ ಶಿವನೆಂಬ ನಾಮವು ಪ್ರಾಪ್ತವಾಗಿದೆ.

''ಶೋಭನತ್ವಾತ್ ಶಿವಃ'' ಎಂಬ ವ್ಯುತ್ಪತ್ತಿಯ ಮೇರೆಗೂ 'ಶಿವ' ಶಬ್ದವು ಸಿದ್ಧವಾಗುತ್ತದೆ. ಶೋಭನತ್ವವೆಂದರೆ ಶುದ್ಧವೆಂದರ್ಥ; ಅರ್ಥಾತ್ ಮಲತ್ರಯವಿಲ್ಲದಿರುವಿಕೆ. ಪರಮಾತ್ಮನಿಗೆ ಆಣವಾದಿ ಮಲತ್ರಯಗಳ ಸಂಬಂಧವಿಲ್ಲದಿರುವ ಕಾರಣ ಅವನಿಗೆ 'ಶಿವ' ಎನ್ನಲಾಗಿದೆ.

ಅದರಂತೆ ''ವಷ್ಟೀತಿ ಶಿವಃ'' ಎಂಬುದಾಗಿಯೂ ಶಿವ ಶಬ್ದದ ವ್ಯುತ್ಪತ್ತಿಯುಂಟು. ಮಂಗಲಮಯಗಳಾದ ಇಚ್ಛೆಯುಳ್ಳವನೂ ಎಂದರ್ಥ. ಶಿವನು ಪ್ರಾಣಿಮಾತ್ರಕ್ಕೆಲ್ಲ

ಒಳ್ಳೆಯದನ್ನೇ ಅಪೇಕ್ಷಿಸುವವನಾಗಿದ್ದಾನೆ. ಇದೂ ಅಲ್ಲದೆ 'ವಶ ಕಾಂತೌ' ಎಂಬ ವ್ಯಾಕರಣ ಸೂತ್ರಕ್ಕನುಸಾರವಾಗಿ ಸ್ವಚ್ಛ ಪ್ರಕಾಶ ಸ್ವರೂಪನೂ ಅಥವಾ ಸ್ವಯಂಪ್ರಕಾಶ ಸ್ವರೂಪನೂ ಎಂಬ ಅರ್ಥವಾಗುತ್ತದೆ. ಹೀಗೆ ಅವನು ಸ್ವಯಂ ಪ್ರಕಾಶನಾದ್ದರಿಂದ ಅವನಿಗೆ 'ಶಿವ' ಎಂದು ಕರೆಯಲಾಗಿದೆ.

ಇದೇ ಪ್ರಕಾರವಾಗಿ ''ಸೇತೇಽಸ್ಮಿನ್ ಸರ್ವಮಿತಿ ಶಿವಃ'' ''ಶ್ಯಾಮ್ಯತೀತಿ ಶಿವಃ'' ಎಂಬ ವ್ಯುತ್ಪತ್ತಿಗಳು ಸಂಭವಿಸುತ್ತವೆ. ಇವುಗಳ ಪ್ರಕಾರವಾಗಿ ಶಿವನು ಸರ್ವಾಧಾರನೂ ನಿರ್ವಿಕಾರನೂ ಎಂಬುದಾಗಿ ಸಿದ್ಧವಾಗುತ್ತದೆ. ಹೀಗೆ ಶಿವ ಶಬ್ದದ ವ್ಯುತ್ಪತ್ತಿಗಳನ್ನವ ಲೋಕಿಸಿದಾಗ ಪರಮಾತ್ಮನು ಪ್ರಾಣಿಮಾತ್ರಕ್ಕೆ ಕಲ್ಯಾಣಕಾರಿಯೂ ಉತ್ಕೃಷ್ಟ ಗುಣ ವಿಶೇಷನೂ, ಆನಾದಿಮಲತ್ರಯರಹಿತನೂ, ಇಚ್ಛಾದಿ ಅನಂತ ಶಕ್ತಿಯುಳ್ಳವನೂ, ಸರ್ವಜ್ಞೂ, ಆಧಾರನೂ, ನಿರ್ವಿಕಾರನೂ ಮತ್ತು ಸ್ವಯಂ ಪ್ರಕಾಶ ಸ್ವರೂಪನೆಂಬ ವಿಷಯವು ಸಿದ್ಧವಾಗುತ್ತದೆ. ಅಂತೆಯೇ ಅವನಿಗೆ ಶಿವನೆಂಬ ನಾಮವು ಪ್ರಾಪ್ತವಾಗಿದೆ.

ಅಮರಕೋಶದಲ್ಲಿ ಶಂಭು, ಈಶ, ಪಶುಪತಿ, ಶೂಲಿ ಮತ್ತು ಮಹೇಶ್ವರ ಮುಂತಾದ ನಾಮಗಳು ಪರಮಾತ್ಮನ ಪರ್ಯಾಯ ನಾಮಗಳಾಗಿ ಉಕ್ತವಾಗಿವೆ. ಹೀಗಿರುವಾಗ 'ಶಿವ' ಶಬ್ದಕ್ಕೆ ಇಷ್ಟೊಂದು ಮಹತ್ವ ಏಕೆ ? ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯಪಾದರಾದ ಜಗದ್ಗುರು ಶ್ರೀ ರೇಣುಕರು ಅಪ್ಪಣೆಕೊಡಿಸಿದ್ದಾರೆ- ''ತಸ್ಮಾನ್ಮುಖ್ಯ ತರಂ ನಾಮ ಶಿವ ಇತ್ಯಕ್ಷರದಯಂ'' ಹೇ ಅಗಸ್ತ್ಯ ! ಪರಮಾತ್ಮನಿಗಿರುವ ಸಹಸ್ರನಾಮ ಗಳಲ್ಲಿ 'ಶಿವ' ಎಂಬ ನಾಮವು ಪರಶಿವಬ್ರಹ್ಮದ ಸಾಕ್ಷಾತ್ ಸ್ವರೂಪವನ್ನು ತಿಳಿಸುವುದಾದ ಕಾರಣ ಇದು ಮುಖ್ಯವಾದ ನಾಮವು. ಉಳಿದ ನಾಮಗಳು ಆತನ ಗುಣಗಳನ್ನು ವರ್ಣಿಸಿ ತನ್ಮುಖೇನ ಅವನ ಸ್ವರೂಪವನ್ನು ಬೋಧಿಸುತ್ತವೆ. ಅಂತೆಯೇ ಶಂಭು, ಈಶ ಮತ್ತು ಶೂಲಿ ಮುಂತಾದ ನಾಮಗಳು ಗೌಣ ನಾಮಗಳು. ಶಿವ ನಾಮವು ಮಾತ್ರ ಮುಖ್ಯವಾದುದಾಗಿದೆ. ಈ ಮುಖ್ಯ ನಾಮದಿಂದ ಯುಕ್ತವಾಗಿರುವುದರಿಂದಲೇ ಪಂಚಾಕ್ಷರ ಮಹಾಮಂತ್ರಕ್ಕೆ ಅಧಿಕವಾದ ಮಹತ್ತ್ವವು ಪ್ರಾಪ್ತವಾಗಿದೆ ಎಂಬುದನ್ನು ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಆದಕಾರಣ ಈ ಮಂತ್ರದ ಮಹತ್ವವನ್ನರಿತು ಎಲ್ಲರೂ ಈ ಮಂತ್ರದಲ್ಲಿ ನಿತಾಂತವಾದ ಶ್ರದ್ಧೆಯುಳ್ಳವ ರಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ಸಪ್ಟಂಬರ್, ೧೯೯೦
(ಸ್ಥಳ ಶಿವಾನುಭವ ಮಂಗಲ ಭವನ, ಸೋಲಾಪೂರ)



ಏತನ್ನಾಮಾವಲಂಬೇನ ಮಂತ್ರಃ ಪಂಚಾಕ್ಷರಃ ಸ್ಮೃತಃ ।
ಯಸ್ಮಾದತಃ ಸದಾ ಜಪ್ಯೋ ಮೋಕ್ಷಕಾಂಕ್ಷಿಭಿರಾದರಾತ್ ॥ ೧೨ ॥

ಇಂಥ ಮಹಿಮಾನ್ವಿತವಾದ 'ಶಿವ' ಎಂಬ ನಾಮವು ಪಂಚಾಕ್ಷರ ಮಹಾಮಂತ್ರದಲ್ಲಿ ಅಡಕವಾಗಿರುವುದರಿಂದ ಮೋಕ್ಷಾಪೇಕ್ಷಿಗಳಾದ ಸಾಧಕರು ಯಾವಾಗಲೂ ಈ ಮಹಾಮಂತ್ರವನ್ನು ಆದರಪೂರ್ವಕವಾಗಿ ಜಪಿಸಬೇಕು.

ಯಥಾನಾದಿರ್ಮಹಾದೇವಃ ಸಿದ್ಧಃ ಸಂಸಾರಮೋಚಕಃ ।
ತಥಾ ಪಂಚಾಕ್ಷರೋ ಮಂತ್ರಃ ಸಂಸಾರಕ್ಷಯಕಾರಕಃ ॥ ೧೩ ॥

ಅನಾದಿಯಾದ ಮಹಾದೇವನು ಸಂಸಾರಪಾಶದಿಂದ ಮುಕ್ತಗೊಳಿಸುವನೆಂಬುದಾಗಿ ಪ್ರಸಿದ್ಧವಾಗಿರುವಂತೆ, ಈ ಪಂಚಾಕ್ಷರ ಮಹಾಮಂತ್ರವಾದರೂ ಸಂಸಾರಮೋಚಕ ವಾಗಿರುತ್ತದೆ.

ಪಂಚಭೂತಾನಿ ಸರ್ವಾಣಿ ಪಂಚತನ್ಮಾತ್ರಕಾಣಿ ಚ
ಜ್ಞಾನೇಂದ್ರಿಯಾಣಿ ಪಂಚಾಪಿ ಪಂಚಕರ್ಮೇಂದ್ರಿಯಾಣಿ ಚ ॥ ೧೪ ॥

ಪಂಚಬ್ರಹ್ಮಾಣಿ ಪಂಚಾಪಿ ಕೃತ್ಯಾನಿ ಸಹಕಾರಣೈಃ ।
ಬೋಧ್ಯಾನಿ ಪಂಚಭಿರ್ವರ್ಣೈಃ ಪಂಚಾಕ್ಷರಮಹಾಮನೋಃ ॥ ೧೫ ॥

ಪಂಚ ಮಹಾಭೂತಗಳು, ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚಬ್ರಹ್ಮರು ಮತ್ತು ಪಂಚಕೃತ್ಯಗಳು ಇವೆಲ್ಲ ಈ ಪಂಚಾಕ್ಷರ ಮಹಾಮಂತ್ರದಿಂದಲೇ ಪ್ರಾದುರ್ಭೂತಗಳಾಗಿವೆ. ಪರಮಾತ್ಮನು ಪ್ರಪಂಚದ ಉತ್ಪತ್ತಿಗೆ ಕಾರಣೀಭೂತನಾಗಿರುವಂತೆ ಪಂಚಾಕ್ಷರ ಮಹಾಮಂತ್ರವೂ ಸೃಷ್ಟಿಗೆ ಮೂಲ ಕಾರಣವಾಗಿದೆ.

ಪಂಚಧಾ ಪಂಚಧಾ ಯಾನಿ ಪ್ರಸಿದ್ಧಾನಿ ವಿಶೇಷತಃ ।
ತಾನಿ ಸರ್ವಾಣಿ ವಸ್ತೂನಿ ಪಂಚಾಕ್ಷರಮಯಾನಿ ಹಿ ॥ ೧೬ ॥

ಈ ಪ್ರಪಂಚದಲ್ಲಿ ವಿಶೇಷವಾಗಿ ಐದು ಐದರ ಗುಂಪುಗಳಾಗಿರುವ ವಸ್ತುಗಳೆಲ್ಲವೂ ಪಂಚಾಕ್ಷರ ಮಹಾಮಂತ್ರದಿಂದಲೇ ಪ್ರಾದುರ್ಭವಿಸಿದವುಗಳಾಗಿವೆ.

ಈ ಪಂಚಾಕ್ಷರ ಮಹಾಮಂತ್ರದಲ್ಲಿ ಪರಮಪಾವನವೂ, ಮಂಗಲಮಯವೂ, ಪರಶಿವಬ್ರಹ್ಮದ ವಾಚಕವೂ ಆದ 'ಶಿವ' ಎಂಬ ನಾಮವು ಅಂತರ್ಗತವಾಗಿರುವುದ ರಿಂದ ಮೋಕ್ಷಾಪೇಕ್ಷಿಗಳು ಈ ಮಹಾಮಂತ್ರವನ್ನು ಸದಾ ಜಪಿಸಬೇಕೆಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಉಪದೇಶಿಸಿದ್ದಾರೆ.

ಜೀವಾತ್ಮನು ಪರಮಾತ್ಮನ ಅಂಶನಾಗಿದ್ದರೂ ತನ್ನ ಸಾಂಸಾರಿಕ ವ್ಯವಹಾರದಲ್ಲಿ ಮೂಲರೂಪನಾದ ಪರಶಿವನನ್ನು ಮರೆತುಹೋಗಿದ್ದಾನೆ. ನಿತ್ಯ ಸುಖಸ್ವರೂಪನಾದ

ಪರಶಿವನ ಮರವೆಯಿಂದಾಗಿ ಅನಂತ ದುಃಖಗಳನ್ನನುಭವಿಸುತ್ತಲಿದ್ದಾನೆ. ಪೂಜ್ಯ ಪಾದರು ಉಪದೇಶಿಸಿದ ಪ್ರಕಾರ ಜೀವ ಹಾಗೂ ಐಕ್ಯಬೋಧಕವಾದ ಪಂಚಾಕ್ಷರ ಮಹಾಮಂತ್ರದ ನಿರಂತರ ಮನಸಾತ್ಮಕ ಜಪವನ್ನು ಮಾಡುವುದರಿಂದ ಜೀವನು ಪರಶಿವಸ್ವರೂಪನಾಗುತ್ತಾನೆ.

ಕೀಟೋ ಭ್ರಮರಧ್ಯಾನೇನ ಭ್ರಮರೋ ಭವತಿ ಧ್ರುವಮ್ ।
ಮಾನವಃ ಶಿವಯೋಗೇನ ಶಿವೋ ಭವತಿ ನಿಶ್ಚಯಮ್ ॥

ಎಂಬುದಾಗಿ ಮಹರ್ಷಿ ವ್ಯಾಸರು ಲಿಂಗಪುರಾಣದಲ್ಲಿ ದೃಷ್ಟಾಂತ ಮೂಲಕವಾಗಿ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. ಕೀಟವು ಭ್ರಮರದ ನಿರಂತರ ಚಿಂತನೆಯಿಂದ ಭ್ರಮರವೇ ಆಗುತ್ತಿರುವಾಗ ಜೀವನು ಶಿವಧ್ಯಾನಪೂರ್ವಕ ಈ ಮಹಾಮಂತ್ರವನ್ನು ಜಪಮಾಡಿ ಶಿವನಾಗುವುದರಲ್ಲಿ ಆಶ್ಚರ್ಯವೇನು ?

ಶ್ರೀರಾಮನಿಂದ ವಿಮುಕ್ತಳಾದ ಸೀತೆಯು ಶ್ರೀಲಂಕೆಯ ಅಶೋಕವನದಲ್ಲಿ ಕುಳಿತು ನಿರಂತರವಾಗಿ ಅನನ್ಯ ಮನಸ್ಸಿನಿಂದ ಶ್ರೀರಾಮನನ್ನೇ ಧ್ಯಾನಿಸುತ್ತಿದ್ದಳು. ಹೀಗೆ ಕೆಲಕಾಲ ಕಳೆದ ನಂತರ ಕೀಟ ಭ್ರಮರ ನ್ಯಾಯ ನೆನಪಾಗಿ ಭಯಗೊಂಡು ಒಮ್ಮೆಲೇ ರಾಮ ಧ್ಯಾನವನ್ನು ನಿಲ್ಲಿಸಿ ಸಮೀಪದಲ್ಲಿ ಇದ್ದ 'ತ್ರಿಜಟಾ'ಯೆಂಬ ಹೆಸರಿನ ವಿಶ್ವಾಸ ಪಾತ್ರಳೂ, ವಿದ್ವಾಂಸಳೂ ಆದ ರಾಕ್ಷಸಿಯನ್ನು ಪ್ರಶ್ನಿಸುತ್ತಾಳೆ– ಹೇ ತ್ರಿಜಟೆ ! ಕೀಟವು ಭ್ರಮರವನ್ನು ನಿರಂತರವಾಗಿ ಚಿಂತಿಸಿ ಭ್ರಮರವೇ ಆಗುತ್ತದೆಂಬುದಾಗಿ ತಿಳಿಯ ಪಡಿಸುವ ಭ್ರಮರ–ಕೀಟ ನ್ಯಾಯವು ಶಾಸ್ತ್ರದಲ್ಲಿ ಸುಪ್ರಸಿದ್ಧವಾಗಿದೆ. ಹೀಗಿರುವಾಗ ನಾನು ನಿರೂತರವಾಗಿ ಶ್ರೀರಾಮ ನಾಮವನ್ನು ಜಪಿಸುತ್ತ ಆತನ ಧ್ಯಾನದಲ್ಲಿ ತಲ್ಲೀನಳಾದ ಫಲವಾಗಿ ರಾಮನೇ ಆಗಿಹೋದರೆ ಅಯೋಧ್ಯೆಯ ಶ್ರೀರಾಮನಿಗೆ ಸೀತೆ ಇಲ್ಲದಾಗುತ್ತಾಳಲ್ಲ ? ಕಾರಣ ನಾನು ರಾಮನಾಮವನ್ನು ಸ್ಮರಿಸಲೋ ಬೇಡವೋ ? ಮುಗ್ಧ ಮನಸ್ಸಿನ ಶ್ರೀಸೀತಾದೇವಿ ಈ ಮಾತುಗಳನ್ನು ಆಲಿಸಿದ ತ್ರಿಜಟೆಯು ಮುಗುಳ್ನಗುತ್ತಾ ಹೇ ಸೀತೆ ! ನೀನೇನೂ ಭಯಪಡುವ ಕಾರಣವಿಲ್ಲ, ಶ್ರೀರಾಮನ ವಿರಹದಲ್ಲಿರುವ ನೀನು ಅವನನ್ನೇ ಚಿಂತಿಸುತ್ತಿರುವಂತೆ ನಿನ್ನ ವಿರಹದಲ್ಲಿರುವ ಶ್ರೀರಾಮನು ನಿರಂತರವಾಗಿ ನಿನ್ನನ್ನು ಚಿಂತಿಸುತ್ತಿರಲೇಬೇಕು. ಹೀಗಿರುವಾಗ ಸೀತೆಯು ರಾಮನನ್ನು ಚಿಂತಿಸುತ್ತ ಶ್ರೀರಾಮನಾದರೆ, ಶ್ರೀರಾಮನು ಸೀತೆಯನ್ನು ಚಿಂತಿಸುತ್ತ ಸೀತೆ ಯಾಗುತ್ತಾನೆ. ಆದಕಾರಣ ಪ್ರಪಂಚದಲ್ಲಿ ಪುನಃ ಸೀತಾರಾಮರು ಯಥಾವತ್ತಾಗಿಯೇ ಇರುತ್ತಾರೆ. ತ್ರಿಜಟೆಯ ಈ ಮಾತುಗಳನ್ನು ಕೇಳಿದಾಗ ಸೀತಾದೇವಿಗೆ ಧೈರ್ಯ ಬಂತು.

ನಿರಂತರವಾಗಿ ನಡೆಯುವ ಚಿಂತನೆಯಲ್ಲಿ ಅದ್ಭುತವಾದ ಶಕ್ತಿಯು ಅಡಕ ವಾಗಿರುತ್ತದೆ. ಯುಗ–ಯುಗಗಳಿಂದ ಪರಶಿವನಿಂದ ಪೃಥಕ್ಕಾದ ಜೀವನು ಪುನಃ ಅವನಲ್ಲಿ ಸಮರಸವಾಗಲು ಪಂಚಾಕ್ಷರ ಮಹಾಮಂತ್ರದ ಜಪವು ಅತ್ಯಂತ ಸುಲಭವೂ ಹಾಗೂ ಅಮೋಘವೂ ಆದ ಸಾಧನವಾಗಿದೆ.

ಶ್ರೀ ಜಗದ್ಗುರುಗಳವರು ಈ ಮಹಾಮಂತ್ರದ ಜಪವನ್ನು ಬೋಧಿಸುವಾಗ ''ಸದಾ ಜಪ್ಯೋ ಮೋಕ್ಷಕಾಂಕ್ಷಿಭಿರಾದರಾತ್'' ಎಂಬ ಈ ವಾಕ್ಯದಲ್ಲಿ 'ಆದರಾತ್''

ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಆದರಪೆಂದರೆ ಪೂಜ್ಯ ಭಾವನೆ, ಶ್ರದ್ಧೆ ಎಂಬ ಅರ್ಥವು. ಶ್ರೀಗುರು, ದೇವ, ವೈದ್ಯ ಹಾಗೂ ಮಂತ್ರಗಳಲ್ಲಿ ಯಾರು ಎಷ್ಟೊಂದು ಶ್ರದ್ಧೆಯನ್ನಿಡುವರೋ ಅವರು ಅಷ್ಟೊಂದು ಅಧಿಕವಾದ ಫಲವನ್ನು ಪಡೆಯುವರು. ವಿಶ್ವಾಸ ಹ್ರಾಸವಾದರೆ ಅವೆಲ್ಲ ನಿಷ್ಫಲವಾಗುತ್ತವೆ.

ಒಂದು ಊರಿಗೆ ಒಬ್ಬ ಗುರುಗಳು ಧರ್ಮಪ್ರಚಾರಾರ್ಥ ಬಂದಾಗ ಅನೇಕ ಜನ ಭಕ್ತಾದಿಗಳು ಗುರುಗಳಿಂದ ದೀಕ್ಷೆಯನ್ನು ಪಡೆದುಕೊಳ್ಳುತ್ತಿದ್ದರು. ಅದನ್ನು ಕಂಡ ಆ ಊರಿನ ಈರ್ವರು ವಿಧವಾ ಬ್ರಾಹ್ಮಣಿಯರು ದೀಕ್ಷೆಯನ್ನು ಹೊಂದಿ ಗುರುಮಂತ್ರವನ್ನು ಪಡೆದುಕೊಂಡರು. ಮಂತ್ರೋಪದೇಶದ ವೇಳೆಯಲ್ಲಿ ಶ್ರೀಗುರುಗಳು, ಉಪದೇಶಿಸಿದ ಮಂತ್ರವನ್ನು ಯಾರಿಗೂ ಹೇಳಬಾರದೆಂಬ ಕಟ್ಟಪ್ಪಣೆಯನ್ನು ಮಾಡಿದ್ದರು. ಶ್ರೀ ಗುರುಗಳ ಉಪದೇಶದಲ್ಲಿ ಅತ್ಯಂತ ವಿಶ್ವಾಸವಿಟ್ಟಿರುವ ಆ ಈರ್ವರೂ ವಿಧವೆಯರು ಅನನ್ಯ ಮನಸ್ಕರಾಗಿ ಆ ಮಂತ್ರವನ್ನು ನಿರಂತರವಾಗಿ ಜಪಿಸುತ್ತಿದ್ದರು. ಮಂತ್ರಜಪದ ಪ್ರಭಾವದಿಂದ ಈರ್ವರೂ ದೇವಲೋಕದ ದಿವ್ಯ ವಿಮಾನಾರೂಢರಾಗಿ ಮೇಲಕ್ಕೆ ಹೊರಟಿದ್ದಾರೆ. ಇನ್ನೇನು ದೇವಲೋಕ ಸ್ವಲ್ಪೇ ದೂರದಲ್ಲಿದೆ. ನಾಲ್ಕಾರು ನಿಮಿಷಗಳಲ್ಲಿ ತಲುಪಬಹುದಾಗಿದೆ. ಆಗ ಅವರೀರ್ವರಲ್ಲಿ ಶ್ರೀಗುರುವಿನ ಮಂತ್ರದ ಮಹಿಮೆಯ ಬಗ್ಗೆ ಅತ್ಯಾಶ್ಚರ್ಯವಾಗಿ ಮಂತ್ರಜಪವನ್ನು ನಿಲ್ಲಿಸಿ ಇಬ್ಬರಿಗೂ ಉಪದೇಶಿಸಿದ ಮಂತ್ರವು ಒಂದೇ ಆಗಿದೆಯೋ ಅಥವಾ ಭಿನ್ನಭಿನ್ನವಾಗಿದೆಯೋ ಎಂಬ ಜಿಜ್ಞಾಸೆಯಿಂದ ಚರ್ಚಿಸುತ್ತಾ–ನಿನಗೆ ಉಪದೇಶಿಸಿದ ಮಂತ್ರವಾವುದು ? ಎಂದು ಪರಸ್ಪರರು ಪ್ರಶ್ನಿಸುತ್ತಾರೆ. ಆಗ ಓರ್ವಳು ತನಗೆ ಶ್ರೀಗುರುಗಳು 'ರಂ' ಎಂಬ ಏಕಾಕ್ಷರ ಬೀಜಮಂತ್ರವನ್ನು ಉಪದೇಶಿಸಿದ್ದಾಗಿ ತಿಳಿಸಿದಳು. ಎರಡನೆಯವಳು ತನಗೆ 'ಡೆಂ' ಎಂಬ ಏಕಾಕ್ಷರ ಬೀಜಮಂತ್ರವನ್ನು ಉಪದೇಶಿಸಿರುವುದಾಗಿ ಹೇಳಿದಳು. ಆಗ ಈರ್ವರೂ ತಮ್ಮ ತಮ್ಮ ಮಂತ್ರಾಕ್ಷರಗಳ ಮಹಿಮಾತಿಶಯದ ಆನಂದದಲ್ಲಿ ಆ ಅಕ್ಷರಗಳನ್ನು ಕ್ರಮವಾಗಿ ಜೋರು ಜೋರಾಗಿ ನುಡಿಯತೊಡಗಿದರು. ಕ್ಷಣಕಾಲದಲ್ಲಿಯೇ ಅವರೀರ್ವರ ಮನಸ್ಸಿನಲ್ಲಿ ಆ ಎರಡೂ ಅಕ್ಷರಗಳ ಜೋಡಣೆಯಿಂದಾದ 'ರಂಡೆಂ' ಎಂಬ ಶಬ್ದವು ಸ್ಫುರಣಗೊಂಡಿತು. 'ಹಾ' ಇದೇನಾಶ್ಚರ್ಯ ?ನಮ್ಮೀರ್ವರ ಮಂತ್ರಾಕ್ಷರಗಳನ್ನು ಕೂಡಿಸಿದಾಗ 'ರಂಡೆಂ' ಎಂಬ ಶಬ್ದವಾಯಿತು. ನಾವು ವಿಧವೆಯರಾಗಿರುವುದರಿಂದ ಗುರುಗಳು ನಮಗೆ ಮಂತ್ರವಲ್ಲದ ಮಂತ್ರವನ್ನು ಉಪದೇಶಿಸಿ ನಮ್ಮನ್ನು ಅಪಮಾನಗೊಳಿಸಿದ್ದಾರೆ. ಇವರೆಂಥ ಗುರುಗಳು ? ಎಂಬ ವಿಪರೀತ ಭಾವನೆಯು ಅವರಲ್ಲಿ ಏಕಕಾಲದಲ್ಲಿಯೇ ತಲೆದೋರಿತು. ಗುರು ಹಾಗೂ ಮಂತ್ರದಲ್ಲಿ ಈ ರೀತಿಯಾದ ಅನಾದರ ಭಾವನೆಯುಂಟಾದೊಡನೆ ಅವರಿಬ್ಬರೂ ವಿಮಾನದಿಂದ ಪತಿತರಾದರು.

ಅಕ್ಷರ ಯಾವುದೇ ಇರಬಹುದು. ಅದು ಗುರುಮುಖದಿಂದ ಬಂದಾಗ ಮಂತ್ರವೇ ಆಗಿರುತ್ತದೆ. ಅದರಲ್ಲಿ ಅನಾದರ ಭಾವನೆಯು ಎಂದೂ ಬರಕೂಡದು. ಅನಾದರ ಭಾವ ತಲೆದೋರಿದಾಗ ಅನರ್ಥಗಳೇ ಆಗುತ್ತವೆ. ಕಾರಣ ಗುರುಮಂತ್ರವನ್ನು ಒಬ್ಬರೊಬ್ಬರಿಗೆ ಹೇಳುವುದನ್ನಾಗಲಿ ಅದರ ಬಗ್ಗೆ ಅಶ್ರದ್ಧೆಯನ್ನಾಗಲಿ ಎಂದೂ ತಳೆಯಬಾರದು.

ಶ್ರೀ ಜಗದ್ಗುರು ರೇಣುಕರು ಉಪದೇಶಿಸಿರುವ ಮಂತ್ರವು ಸಾಮಾನ್ಯವಾದುದಲ್ಲ, ಪರಶಿವ ಬ್ರಹ್ಮನನ್ನು ಸಾಕ್ಷಾತ್ ತಿಳಿಸುವ 'ಶಿವ' ಎಂಬ ನಾಮವನ್ನೊಳಗೊಂಡ ಪಂಚಾಕ್ಷರ ಮಹಾಮಂತ್ರವು ಸರ್ವಶ್ರೇಷ್ಠವಾದುದಾಗಿದೆ. ಇದನ್ನು ಅತ್ಯಂತ ಆದರ ಪೂರ್ವಕವಾಗಿ ಜಪಿಸುತ್ತ ಸಾಗಿದರೆ ಜೀವ ಶಿವರ ಐಕ್ಯತೆಯು ಸಿದ್ಧಿಯಾಗಿ ಜೀವಾತ್ಮನು ಸಂಸಾರ ಸಾಗರದಿಂದ ಮುಕ್ತನಾಗುತ್ತಾನೆ.

ಪರಶಿವನಲ್ಲಿ ಸಾಮರ್ಥ್ಯವು ತದ್ವಾಚಕವಾದ ಮಹಾಮಂತ್ರದಲ್ಲಿಯೂ ಇರುತ್ತದೆ. ಅಂತೆಯೇ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಪೂಜ್ಯಪಾದರು ಅನಾದಿಯಾದ ಪರಮಾತ್ಮನು ಶ್ರದ್ಧಾಳುಗಳಾದ ಜೀವಿಗಳ ಮೇಲೆ ಅನುಗ್ರಹಿಸಿ ಅವರನ್ನು ಸಂಸಾರದಿಂದ ಮುಕ್ತಗೊಳಿಸುವಂತೆ ತದ್ವಾಚಕವಾದ ಪಂಚಾಕ್ಷರ ಮಹಾಮಂತ್ರವಾದರೂ ತನ್ನನ್ನು ಅನನ್ಯವಾಗಿ ಮನನ ಮಾಡುವ ಸಾಧಕರ ಸಂಸಾರಪಾಶವನ್ನು ಹರಿದು ಅವರನ್ನು ಮುಕ್ತಾತ್ಮರನ್ನಾಗಿ ಮಾಡುತ್ತದೆ ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ''ಮುಕ್ತಯೇ ಕಲ್ಪಿತೋ ಮನುಃ'' ಎಂಬ ಬ್ರಹ್ಮೋತ್ತರ ಖಂಡದ ಈ ಉಕ್ತಿಯಲ್ಲಿಯೂ ಪಂಚಾಕ್ಷರ ಮಹಾಮಂತ್ರವು ಜೀವಿಗಳಿಗೆ ಮುಕ್ತಿಯನ್ನು ಒದಗಿಸುವುದಕ್ಕಾಗಿಯೇ ಕಲ್ಪಿಸಲ್ಪಟ್ಟಿದೆ ಎಂಬುದಾಗಿ ಹೇಳಲಾಗಿದೆ. ಆದಕಾರಣ ಮುಮುಕ್ಷುಗಳು ಅನನ್ಯ ಗತಿಕರಾಗಿ ಈ ಮಹಾಮಂತ್ರವನ್ನೇ ಶರಣು ಹೋಗಬೇಕು.

ಸಂಸಾರಮೋಚಕವಾದ ಈ ಮಹಾಮಂತ್ರವು ಸಂಸಾರದ ಉತ್ಪತ್ತಿಗೂ ಕಾರಣವಾಗಿದೆಯೆಂಬ ವಿಷಯವನ್ನು ಪೂಜ್ಯರು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದಗಳೆಂಬ ಪಂಚ ತನ್ಮಾತ್ರೆಗಳೂ; ಪೃಥ್ವಿ, ಅಪ್ಪು, ತೇಜ, ವಾಯು ಮತ್ತು ಆಕಾಶಗಳೆಂಬ ಪಂಚಮಹಾಭೂತಗಳೂ; ಘ್ರಾಣ, ರಸನ, ಚಕ್ಷು, ತ್ವಕ್ ಮತ್ತು ಶ್ರವಣೇಂದ್ರಿಯಗಳೆಂಬ ಪಂಚಜ್ಞಾನೇಂದ್ರಿಯಗಳು; ವಾಕ್, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳು; ಸದಾಶಿವ, ಈಶ, ಬ್ರಹ್ಮ ಈಶ್ವರ ಮತ್ತು ಈಶಾನಗಳೆಂಬ ಪಂಚಸಾದಾಖ್ಯಗಳು; ಪಂಚಬ್ರಹ್ಮಗಳ ಪರ್ಯಾಯಗಳಾದ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಮತ್ತು ಪ್ರಸಾದಲಿಂಗಗಳೆಂಬ ಪಂಚಲಿಂಗಗಳು; ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಗಳನ್ನು ನಿರ್ವಹಿಸುವ ಪರಮಾತ್ಮನ ಭವ, ಮೃಡ ಮತ್ತು ಹರ ಮುಂತಾದ ಪಂಚರೂಪಗಳು ಪಂಚಾಕ್ಷರ ಮಹಾಮಂತ್ರದಿಂದಲೇ ಪ್ರಾದುರ್ಭವಿಸಿರುತ್ತವೆ.

ಇಷ್ಟೇ ಅಲ್ಲ ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳೆಂಬ ಪಂಚ ಶಕ್ತಿಗಳು ; ಮನ, ಬುದ್ಧಿ, ಚಿತ್ತು, ಅಹಂಕಾರ ಹಾಗೂ ಪುರುಷಗಳೆಂಬ ಪಂಚತತ್ತ್ವಗಳು ಇದರಂತೆ ಐದೈದು ಪದಾರ್ಥಗಳ ಎಷ್ಟು ಗುಂಪುಗಳಿವೆಯೋ ಅವೆಲ್ಲವುಗಳು 'ಪೂರ್ಣ–ಕುಂಡಲ ನ್ಯಾಯ'ದಂತೆ ಪಂಚಾಕ್ಷರಮಯಗಳೇ ಆಗಿರುತ್ತವೆ. ಸ್ವರ್ಣವೇ ಕುಂಡಲಾಕಾರವನ್ನು ತಾಳಿರುವಂತೆ ಪಂಚಾಕ್ಷರವೇ ಪ್ರಪಂಚಾಕಾರವನ್ನು ತಾಳಿರುತ್ತದೆ.

ಈ ಎಲ್ಲ ವಿಚಾರಗಳನ್ನು ತಿಳಿದಾಗ ಪರಶಿವನಲ್ಲಿರುವ ಸಾಮರ್ಥ್ಯವೆಲ್ಲ ಪಂಚಾಕ್ಷರ ಮಹಾಮಂತ್ರದಲ್ಲಿ ಇದೆ ಎಂಬುದು ಸಿದ್ಧವಾಗುತ್ತದೆ. ಆದಕಾರಣ ಸದ್ಗುರುವಿನಿಂದ ಪ್ರಾಪ್ತವಾದ ಪರಶಿವಸ್ವರೂಪವಾದ ಪಂಚಾಕ್ಷರ ಮಹಾಮಂತ್ರವನ್ನು ಆದರಪೂರ್ವಕ ವಾಗಿ ನಿರಂತರ ಜಪಮಾಡುವುದರಿಂದ ಸಂಸಾರಪಾಶವು ನಿವೃತ್ತವಾಗಿ ಪರಶಿವ ಸ್ವರೂಪದ ಪ್ರಾಪ್ತಿಯಾಗುತ್ತದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೯ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

ಆಶೀರ್ವಚನ-೫

ಓಂಕಾರಪೂರ್ವೋ ಮಂತ್ರೋಽಯಂ ಪಂಚಾಕ್ಷರಮಯಃ ಪರಃ।
ಶೈವಾಗಮೇಷು ವೇದೇಷು ಷಡಕ್ಷರ ಇತಿ ಸ್ಮೃತಃ ॥ ೧೭ ॥

ಪಂಚಾಕ್ಷರವೆಂಬ ಪ್ರಸಿದ್ಧವಾಗಿರುವ ಈ ಶ್ರೇಷ್ಠವಾದ ಮಂತ್ರವೇ ಓಂಕಾರದಿಂದ ಕೂಡಿಕೊಂಡಾಗ ವೇದಾಗಮಗಳಲ್ಲಿ ಅದಕ್ಕೆ ಷಡಕ್ಷರ ಎಂಬುದಾಗಿ ಕರೆಯಲಾಗಿದೆ.

ಮಂತ್ರನ್ಯಾಸಾದಿಭೂತೇನ ಪ್ರಣವೇನ ಮಹಾಮನೋಃ।
ಪ್ರಬೋಧ್ಯತೇ ಮಹಾದೇವಃ ಕೇವಲಶ್ಚಿತ್ಸುಖಾತ್ಮಕಃ ॥ ೧೮ ॥

ಪಂಚಾಕ್ಷರ ಮಹಾಮಂತ್ರದ ಮೊದಲಲ್ಲಿರುವ ಓಂಕಾರದಿಂದ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನು ಬೋಧಿಸಲ್ಪಡುತ್ತಾನೆ.

ಪ್ರಣವೇನೈಕವರ್ಣೇನ ಪರಬ್ರಹ್ಮ ಪ್ರಕಾಶ್ಯತೇ।
ಅದ್ವಿತೀಯಂ ಪರಾನಂದಂ ಶಿವಾಖ್ಯಂ ನಿಷ್ಪ್ರಪಂಚಕಮ್ ॥ ೧೯ ॥

ಅದ್ವಿತೀಯವೂ, ಸಚ್ಚಿದಾನಂದಸ್ವರೂಪವೂ, ಪ್ರಾಪಂಚಿಕ ಭೇದಶೂನ್ಯವೂ ಆದ ಪರಶಿವ ಬ್ರಹ್ಮವು ಓಂಕಾರವೊಂದರಿಂದಲೇ ಪ್ರಕಾಶಿಸಲ್ಪಡುವಂತಹದಾಗಿದೆ.

ಪರಮ್ಮಾತಮನುರ್ಜ್ಞೇಯಂಃ ಸೋಽಹಂ ರೂಪಃ ಸನಾತನಃ।
ಜ್ಞಾಯತೇ ಹಂಸಯೋರ್ಲೋಪಾದೋಮಿತ್ಯೇಕಾಕ್ಷರೋಮನುಃ ॥ ೨೦ ॥

ಸೋಽಹಂ ಎಂಬ ಪ್ರತ್ಯಭಿಜ್ಞಾನರೂಪವಾದ ಸನಾತನ ಮಂತ್ರವು ಶಿವಜೀವರ ಅಭೇದವನ್ನು ಬೋಧಿಸುವ ಮಂತ್ರವಾಗಿದೆ. ಇದರಲ್ಲಿಯ ಉಪಾಧಿರೂಪಗಳಾದ ಸಕಾರ ಮತ್ತು ಹಕಾರಗಳು ಲೋಪವಾಗುತ್ತಿರಲಿಕ್ಕಾಗಿ ಓಂಕಾರವೆಂಬ ಏಕಾಕ್ಷರ ಮಂತ್ರವು ಪ್ರಕಟವಾಗುತ್ತದೆ.

ಪ್ರಣವೇನೈವ ಮಂತ್ರೇಣ ಬೋಧ್ಯತೇ ನಿಷ್ಕಲಃ ಶಿವಃ।
ಪಂಚಾಕ್ಷರೇಣ ಮಂತ್ರೇಣ ಪಂಚಬ್ರಹ್ಮತನುಸ್ತಥಾ ॥ ೨೧ ॥

ಪ್ರಣವ ಮಂತ್ರದಿಂದ ನಿಷ್ಕಲನಾದ ಸಚ್ಚಿದಾನಂದಸ್ವರೂಪನಾದ ಪರಶಿವನ ಬೋಧವಾಗುತ್ತದೆ. ಅದರಂತೆ ಪಂಚಾಕ್ಷರ ಮಂತ್ರದಿಂದ ಸಕಲನಾದ ಪಂಚಬ್ರಹ್ಮ ರೂಪನಾದ ಶಿವನ ತಿಳುವಳಿಕೆ ಉಂಟಾಗುತ್ತದೆ.

ನಿಷ್ಕಲಃ ಸಂವಿದಾಕಾರಃ ಸಕಲೋ ವಿಶ್ವಮೂರ್ತಿತಃ।
ಉಭಯಾತ್ಮಾ ಶಿವೋ ಮಂತ್ರೇ ಷಡಕ್ಷರಮಯೇ ಸ್ಥಿತಃ ॥ ೨೨ ॥

ನಿಷ್ಕಲನಾದ ಶಿವನು ಜ್ಞಾನಸ್ವರೂಪನೂ, ಸಕಲನಾದ ಪರಮಾತ್ಮನು ವಿಶ್ವಸ್ವರೂಪನೂ ಆಗಿರುತ್ತಾನೆ. ಷಡಕ್ಷರ ಮಹಾಮಂತ್ರದಲ್ಲಿ ಪರಮಾತ್ಮನ ಈ ಉಭಯ ಸ್ವರೂಪವು ಸಿದ್ಧವಾಗುತ್ತದೆ.

ಪಂಚಾಕ್ಷರವನ್ನು ಕೊಂಡಾಡಿದ ಪೂಜ್ಯಪಾದರು ಸದ್ಯಃ ಷಡಕ್ಷರ ಮಹಾಮಂತ್ರದ ಸ್ವರೂಪ ಹಾಗೂ ಅದರ ತತ್ತ್ವಾರ್ಥವನ್ನು ಬೋಧಿಸುತ್ತಲಿದ್ದಾರೆ. ಹೇ ಅಗಸ್ತ್ಯ ! ಪಂಚಾಕ್ಷರ ಮಹಾಮಂತ್ರದ ಮೊದಲಿಗೆ ಓಂಕಾರದ ಸಂಬಂಧವಾಗಲು ಅದು ಷಡಕ್ಷರ ವೆಂಬುದಾಗಿ ವೇದಗಳಲ್ಲಿ ಹಾಗೂ ಆಗಮಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಓಂಕಾರಕ್ಕೆ 'ಪ್ರಣವ' ಎಂಬುದಾಗಿಯೂ ಕರೆಯುತ್ತಾರೆ. 'ಶಿವ' ಶಬ್ದವು ಪರಮಾತ್ಮನ ವಾಚಕವಾಗಿರುವಂತೆ ಪ್ರಣವವೂ ಪರಮಾತ್ಮನ ವಾಚಕವಾಗಿದೆ. ಅಂತೆಯೇ ಮಹರ್ಷಿ ಪತಂಜಲಿಯೂ–"ತಸ್ಯವಾಚಕಃ ಪ್ರಣವಃ" (ಯೋ.ಸೂ. ೧–೨೭) ಇಂತೆಂಬ ಸೂತ್ರದಲ್ಲಿ ಪ್ರಣವವು ಪರಶಿವನ ವಾಚಕವೆಂಬುದಾಗಿ ನಿರೂಪಿಸಿದ್ದಾನೆ.

'ಪ್ರಣವ' ಶಬ್ದವು 'ಪ್ರ' ಉಪಸರ್ಗದಿಂದ ಕೂಡಿದ 'ಣು ಸ್ತವನೇ" (ತುದಾದಿ–೧೪೮೬) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಕಾರಣ ಶಿವನನ್ನು ಸ್ತುತಿಸಿದ ಆದ್ಯ ವರ್ಣವೇ ಪ್ರಣವವು. ಅಂತೆಯೇ "ಪ್ರಕರ್ಷೇಣ ಣೂಯತೇ ಇತಿ ಪ್ರಣವಃ" ಎಂಬುದಾಗಿ ಪ್ರಣವದ ವ್ಯುತ್ಪತ್ತಿ ಇದೆ.

ಓಂಕಾರಶ್ಚಾಥ ಶಬ್ದಶ್ಚ ದ್ವಾವಿಮೌ ಬ್ರಹ್ಮಣಃ ಪುರಾ ।
ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾ ಉಭೌ ॥

ಎಂಬ ಈ ಪ್ರಮಾಣ ವಚನದಲ್ಲಿ ಓಂಕಾರ ಹಾಗೂ 'ಅಥ' ಈ ಎರಡು ಶಬ್ದಗಳು ಸೃಷ್ಟಿಯ ಆದಿಯಲ್ಲಿ ಬ್ರಹ್ಮನ ಕಂಠವನ್ನು ಭೇದಿಸಿ ಹೊರಬಂದ ಆದ್ಯ ಮಂಗಲಮಯ ಶಬ್ದಗಳು ಎಂಬುದಾಗಿ ನಮೂದಿಸಲಾಗಿದೆ.

ಪ್ರೋಹಿ ಪ್ರಕೃತಿಜಾತಸ್ಯ ಸಂಸಾರಸ್ಯ ಮಹೋದಧೇಃ ।
ನವಂ ನಾವಾಂತರಮಿತಿ ಪ್ರಣವಂ ವೈ ವಿದುರ್ಬುಧಾಃ ॥

ಪ್ರಃ ಪ್ರಪಂಚೋ ನ ನಾಸ್ತಿ ವೋ ಯುಷ್ಮಾಕಂ ಪ್ರಣವಂ ವಿದುಃ ।
ಪ್ರಕರ್ಷೇಣ ನಯೇದ್ಯಸ್ಮಾನ್ಮೋಕ್ಷಂ ವಾ ಪ್ರಣವಂ ವಿದುಃ ॥

(ಶಿ. ಪು. ವಿದ್ಯೇ. ೧೭,೪–೫)

ಶಿವ ಮಹಾಪುರಾಣದ ಈ ಶ್ಲೋಕಗಳಲ್ಲಿ ಮಹರ್ಷಿ ವ್ಯಾಸರು ಪ್ರಣವ ಶಬ್ದದ ತತ್ತ್ವಾರ್ಥವನ್ನು ಬಹು ಹೃದಯಂಗಮವಾಗಿ ತಿಳಿಯಪಡಿಸಿದ್ದಾರೆ. 'ಪ್ರ' ಎಂದರೆ ಪ್ರಾಕೃತಿಕ ಸಂಸಾರವೆಂಬ ಮಹಾಸಾಗರವು. 'ನವ' ಅದನ್ನು ದಾಟಿಸುವ ಒಂದು ವಿಲಕ್ಷಣವಾದ ನೌಕೆಯು. ಪ್ರಣವವು ಸಂಸಾರ ಸಾಗರವನ್ನು ದಾಟಿಸುವ ಒಂದು ಸುಂದರವಾದ ನೌಕೆ ಎಂಬ ತಾತ್ಪರ್ಯವು.

ಇದರಂತೆ 'ಪ್ರ' ಎಂದರೆ ಪ್ರಪಂಚ. 'ನ' ಎಂದರೆ ಇರುವುದಿಲ್ಲ, 'ವಃ' ಎಂದರೆ ನಿಮಗೆ. ಅಂದರೆ ಪ್ರಣವವನ್ನು ಜಪಿಸುವ ನಿಮಗೆ ಪ್ರಪಂಚವಿಲ್ಲೆಂದು ಅರ್ಥವು. ಅದೇ ಪ್ರಕಾರ "ಪ್ರಕರ್ಷೇಣ ನಯತೀತಿ ಪ್ರಣವಃ" ಅಂದರೆ ಬಲಾತ್ಕಾರವಾಗಿ ಮೋಕ್ಷದತ್ತ ಎಳೆದುಕೊಂಡು ಹೋಗುವುದು ಎಂದರ್ಥ. ಪ್ರಣವವನ್ನು ಜಪಿಸುವವನಿಗೆ ಮೋಕ್ಷವು ಸುನಿಶ್ಚಿತ ಎಂಬ ತಾತ್ಪರ್ಯ. ಅಂತೆಯೇ ಅಂತ್ಯಕಾಲದಲ್ಲಿ 'ಓಂ, ಓಂ, ಓಂ' ಎಂದು

ಉಚ್ಚರಿಸುತ್ತ ಪರಶಿವನನ್ನು ಧ್ಯಾನಿಸುತ್ತ ದೇಹವನ್ನು ತ್ಯಜಿಸುವ ಜೀವನು ಪರಮ ಕೈವಲ್ಯವನ್ನು ಹೊಂದುವನೆಂಬುದಾಗಿ–

ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥

(ಗೀತಾ ೮–೧೩)

ಗೀತೆಯಲ್ಲಿಯೂ ಉಕ್ತವಾಗಿದೆ. ಓಂಕಾರದಲ್ಲಿ ಬರುವ 'ಅ', 'ಉ' ಮತ್ತು 'ಮ' ಎಂಬ ವರ್ಣಗಳು ಕ್ರಮವಾಗಿ ಪರಶಿವನ ಸತ್, ಚಿತ್ ಹಾಗೂ ಆನಂದಗಳ ವಾಚಕಗಳಾಗಿವೆ. ಆದಕಾರಣ ಸಚ್ಚಿದಾನಂದಸ್ವರೂಪವೂ, ಅದ್ವಿತೀಯವೂ, ನಿಷ್ಕಲವೂ ಆದ ಪರಶಿವ ಬ್ರಹ್ಮವು ಪ್ರಣವದಿಂದಲೇ ಪ್ರಕಾಶಿಸಲ್ಪಡುತ್ತದೆ ಎಂಬುದಾಗಿ ಶ್ರೀ ಜಗದ್ಗುರು ರೇಣುಕರು ಅಪ್ಪಣೆ ಕೊಡಿಸಿದ್ದಾರೆ.

ಪ್ರಣವದಲ್ಲಿ ಬರುವ ತಾರ, ದಂಡ, ಕುಂಡಲ, ಅರ್ಧಚಂದ್ರ ಮತ್ತು ಬಿಂದುಗಳೆಂಬ ಪಂಚ ಅವಯವಗಳಿಂದಲೇ ಕ್ರಮವಾಗಿ 'ನ' 'ಮ' 'ಶಿ' 'ವಾ' ಮತ್ತು 'ಯ'ಗಳೆಂಬ ಪಂಚಾಕ್ಷರಗಳು ಪ್ರಾದುರ್ಭವಿಸಿರುವ ಕಾರಣ ಪ್ರಣವವು ಪಂಚಾಕ್ಷರವೆಂಬ ಕಲ್ಪತರುವಿನ ಬೀಜವೆಂಬುದಾಗಿ ಶ್ರೀಮರಿತೋಂಟದಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ತತ್ತ್ವ ಪ್ರದೀಪಿಕಾ (೮–೧೮) ವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಪ್ರಣವ ಹಾಗೂ ಪಂಚಾಕ್ಷರಗಳಲ್ಲಿ ಬೀಜ–ವೃಕ್ಷ ನ್ಯಾಯ ಸಂಬಂಧವಿದೆ.

ಪ್ರತಿಯೊಬ್ಬ ಮನುಷ್ಯನು ಒಂದು ದಿವಸಕ್ಕೆ ಇಪ್ಪತ್ತೊಂದು ಸಾವಿರದಾ ಆರುನೂರು ಸಾರೆ ಶ್ವಾಸಕ್ರಿಯೆಯನ್ನು ಮಾಡುತ್ತಾನೆಂಬುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ. ಜೀವಿಗಳ ಈ ಶ್ವಾಸವು ಪ್ರಾಕೃತಿಕವಾಗಿ 'ಹಂಸಃ' 'ಹಂಸಃ' ಎಂಬುದಾಗಿ ನಡೆಯುತ್ತಿರುತ್ತದೆ. ಸಾಧಕನಾದ ಶಿಷ್ಯನು ಗುರುಸಾನ್ನಿಧ್ಯಕ್ಕೆ ಹೋದಾಗ ಸದ್ಗುರುಗಳು ಅವನಿಗೆ ಮಹಾವಾಕ್ಯವನ್ನು ಉಪದೇಶಿಸಿ ಶಿಷ್ಯನ ಶ್ವಾಸವನ್ನು 'ಸೋಽಹಂ' ರೂಪದಲ್ಲಿ ಸಂಸ್ಕರಿಸುತ್ತಾರೆ. ಅರ್ಥಾತ್ 'ಸಃ' ಅಂದರೆ ಆ ಪರಶಿವ ಬ್ರಹ್ಮನು; 'ಅಹಂ' ಅಂದರೆ ನಾನು. ಹೀಗೆ ಆ ಪರಶಿವ ಬ್ರಹ್ಮವೇ ನಾನೆಂಬುದಾಗಿ ಸದಾಕಾಲದಲ್ಲಿ ಸೋಽಹಂ' 'ಸೋಽಹಂ' ಎಂಬುದಾಗಿ ಅನುಸಂಧಾನ ಮಾಡಲು ಉಪದೇಶಿಸುತ್ತಾನೆ.

ಇಲ್ಲಿ ಬರುವ 'ಸ' ಮತ್ತು 'ಹ' ವರ್ಣಗಳು ಶಿವ ಮತ್ತು ಜೀವರನ್ನು ಪ್ರತಿನಿಧಿಸುವ ಉಪಾಧಿಗಳಾಗಿವೆ. ಇವೆರಡೂ ಉಪಾಧಿಗಳನ್ನು ತ್ಯಾಗಮಾಡಿದಾಗ "ಹಂಸಯೋರ್ಲೋಪಾದೋಮಿತ್ಯೇಕಾಕ್ಷರೋ ಮನುಃ" ಎನ್ನುವ ಆಚಾರ್ಯೋಕ್ತಿಗನುಸಾರವಾಗಿ ಓಂಕಾರ ಮಂತ್ರವು ವ್ಯಕ್ತವಾಗುತ್ತದೆ. ಹೀಗೆ ಈ ಏಕಾಕ್ಷರ ಮಹಾಮಂತ್ರವು ನಿರುಪಾಧಿಕವಾಗಿರುವುದರಿಂದ ನಿಷ್ಕಲ ಪರಶಿವ ಬ್ರಹ್ಮವನ್ನು ಬೋಧಿಸುತ್ತದೆ. ಅಂತೆಯೇ ಅಥರ್ವಶಿಖಾ ಉಪನಿಷತ್ತಿನಲ್ಲಿ–"ಯ ಓಂಕಾರಃ ಸಃ ಪ್ರಣವಃ ಯಃ ಪ್ರಣವಃ ಸಃ ಸರ್ವವ್ಯಾಪೀ........." (೨–೩) ಎಂಬ ಮಂತ್ರದಲ್ಲಿಯೂ ಪರಬ್ರಹ್ಮ ಪ್ರಕಾಶವಾದ ಓಂಕಾರಕ್ಕೆ ಪರಬ್ರಹ್ಮವೆಂಬುದಾಗಿಯೇ ಉಪದೇಶಿಸಲಾಗಿದೆ. ಓಂಕಾರದಿಂದ ನಿಷ್ಕಲ ಪರಬ್ರಹ್ಮವು ಪ್ರಕಾಶಿತವಾದಂತೆ ಪಂಚಾಕ್ಷರದಿಂದ ಪರಶಿವನ

ಸಕಲರೂಪವಾದ ಪಂಚಬ್ರಹ್ಮ ಸ್ವರೂಪವು ಪ್ರತಿಪಾದಿಸಲ್ಪಡುತ್ತದೆ. ಹೀಗೆ ಪ್ರಣವ ಪಂಚಾಕ್ಷರ ಮಹಾಮಂತ್ರದಲ್ಲಿ ಪರಶಿವನ ಸಕಲ-ನಿಷ್ಕಲಗಳೆಂಬ ಉಭಯರೂಪಗಳು ಅಡಕವಾಗಿರುತ್ತವೆ. ಈ ಷಡಕ್ಷರ ಮಹಾಮಂತ್ರವನ್ನು ಶ್ರದ್ಧೆಯಿಂದ ಜಪಿಸುವವರಿಗೆ ಸಗುಣ ಶಿವನ ಅನುಗ್ರಹವೂ ನಿಷ್ಕಲ ಶಿವತತ್ತ್ವ ಪ್ರಾಪ್ತಿರೂಪವಾದ ಕೈವಲ್ಯವು ಸಿದ್ಧಿಸುತ್ತವೆ.

ಪ್ರಣವ ಪಂಚಾಕ್ಷರದಲ್ಲಿರುವ ಈ ಷಡ್ವರ್ಣಗಳು ಷಟ್‌ಚಕ್ರಗಳಲ್ಲಿರುವ ಷಡ್‌ಲಿಂಗಗಳ ಬೀಜಾಕ್ಷರಗಳೆಂಬುದಾಗಿ ಶ್ರೀಮಾಯಿದೇವರು ಅನುಭವ ಸೂತ್ರದಲ್ಲಿ ತಿಳಿಯಪಡಿಸಿದ್ದಾರೆ. ಅವರ ಉಕ್ತಿಗನುಸಾರವಾಗಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ ಮತ್ತು ವಿಶುದ್ಧಿಗಳೆಂಬ ಐದು ಚಕ್ರಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಮತ್ತು ಪ್ರಸಾದಲಿಂಗಗಳು ಸನ್ನಿಹಿತವಾಗಿರುತ್ತವೆ. ಇವುಗಳಿಗೆ ಕ್ರಮವಾಗಿ ನ, ಮ, ಶಿ, ವಾ, ಯ ಈ ವರ್ಣಗಳೇ ಬೀಜಾಕ್ಷರಗಳು ಇನ್ನು ಅಜ್ಞಾಚಕ್ರದಲ್ಲಿರುವ ಮಹಾಲಿಂಗಕ್ಕೆ ಓಂಕಾರವೇ ಬೀಜಾಕ್ಷರವು.

ಈ ಷಡಕ್ಷರವು ಮಹಾಮಂತ್ರವನ್ನು ಗುರೂಪದೇಶಾನುಸಾರವಾಗಿ ಸಾವಧಾನ ಮನಸ್ಸಿನಿಂದ ಜಪಿಸುತ್ತ ಹೋದರೆ ಷೆಟ್‌ಚಕ್ರಗಳು ಕ್ರಿಯಾಶೀಲವಾಗಿ ಅವುಗಳಲ್ಲಿಯ ಷಡ್‌ಲಿಂಗಗಳ ಸ್ವರೂಪಜ್ಞಾನವುಂಟಾಗಿ ಲಿಂಗಾಂಗ ಸಾಮರಸ್ಯ ರೂಪವಾದ ಪರಮ ಕೈವಲ್ಯ ಪ್ರಾಪ್ತಿಯು ಸಿದ್ಧವಾಗುತ್ತದೆಂಬುದೇ ಶ್ರೀ ಮಾಯಿದೇವರ ಹೃದ್ಗತಾಭಿಪ್ರಾಯವು. ಈ ಪ್ರಣವ ಪಂಚಾಕ್ಷರವೇ ವಿಭಿನ್ನ ಬೀಜಾಕ್ಷರಗಳಿಂದ ಕೂಡಿಕೊಂಡಾಗ ಪ್ರಸಾದ ಪಂಚಾಕ್ಷರಿ, ಮಾಯಾ ಪಂಚಾಕ್ಷರಿ, ಸೂಕ್ಷ್ಮ ಪಂಚಾಕ್ಷರಿ, ಸ್ಥೂಲ ಪಂಚಾಕ್ಷರಿ ಮತ್ತು ಮೂಲ ಪಂಚಾಕ್ಷರಿ ಎಂಬ ನಾಮಗಳನ್ನು ಪಡೆಯುತ್ತದೆಂದು ವೀರಶೈವ ಸದಾಚಾರ ಸಂಗ್ರಹದಲ್ಲಿ ನಿರೂಪಿಸಲಾಗಿದೆ. ಇಲ್ಲಿ ಹೇಳಲಾದ ಮೂಲ ಪಂಚಾಕ್ಷರಿಯೇ ಷಡಕ್ಷರ ಮಹಾಮಂತ್ರವು. ಹೀಗೆ ಪರಶಿವನ ಸಗುಣ-ನಿರ್ಗುಣ ಸ್ವರೂಪಗಳೆರಡನ್ನೂ ಪ್ರತಿಪಾದಿಸುವ ಈ ಷಡಕ್ಷರ ಮಹಾಮಂತ್ರವನ್ನು ಗುರೂಪದೇಶದಿಂದ ಪಡೆದು ಸದಾ ಅದನ್ನು ಜಪಿಸಿ ಸಗುಣ ಶಿವನ ಕೃಪೆಯಿಂದ ಅನಂತ ಭೋಗ-ಭಾಗ್ಯಗಳನ್ನು ಪಡೆದು ಕೊನೆಯಲ್ಲಿ ನಿರ್ಗುಣ ಪರಶಿವನ ಕೃಪೆಯಿಂದ ಸಾಮರಸ್ಯರೂಪವಾದ ಮೋಕ್ಷವನ್ನು ಪಡೆಯಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೬

ಮೂಲಂ ವಿದ್ಯಾ ಶಿವಃ ಶೈವಂ ಸೂತ್ರಂ ಪಂಚಾಕ್ಷರಸ್ತಥಾ ।
ಏತಾನಿ ನಾಮಧೇಯಾನಿ ಕೀರ್ತಿತಾನಿ ಮಹಾಮನೋಃ ॥ ೨೩ ॥

ಪಂಚಾಕ್ಷರ ಮಹಾಮಂತ್ರಕ್ಕೆ ಮೂಲ, ವಿದ್ಯಾ, ಶಿವ, ಶೈವಸೂತ್ರ ಮತ್ತು ಪಂಚಾಕ್ಷರ ವೆಂಬ ಪಂಚನಾಮಗಳು ಪ್ರಸಿದ್ಧಗಳಾಗಿವೆ.

ಪಂಚಾಕ್ಷರೀಮಿಮಾಂ ವಿದ್ಯಾಂ ಪ್ರಣವೇನ ಷಡಕ್ಷರೀಮ್ ।
ಜಪೇತ್ ಸಮಾಹಿತೋ ಭೂತ್ವಾ ಶಿವಪೂಜಾ ಪರಾಯಣಃ ॥ ೨೪ ॥

ಶಿವಪೂಜಾನಿಷ್ಠವಾದ ಸಾಧಕನು ಏಕಾಗ್ರಮನಸ್ಸುಳ್ಳವನಾಗಿ ಪ್ರಣವಯುಕ್ತವಾದ ಈ ಪಂಚಾಕ್ಷರ ಮಹಾಮಂತ್ರವನ್ನು ಅರ್ಥಾತ್ ಷಡಕ್ಷರ ಮಹಾಮಂತ್ರವನ್ನು ಜಪಿಸಬೇಕು.

ಪ್ರಾಣಾಯಾಮತ್ರಯಂ ಪ್ರಾಕೃತ್ವಾ ಪ್ರಾಙ್ಮುಖೋದಙ್
ಮುಖೋಽಪಿ ವಾ ।
ಚಿಂತಯನ್ ಹೃದಯಾಂಭೋಜೇ ದೇವದೇವಂ ತ್ರಿಯಂಬಕಮ್ ॥ ೨೫ ॥

ಸರ್ವಾಲಂಕಾರಸಂಯುಕ್ತಂ ಸಾಂಬಂ ಚಂದ್ರಾರ್ಧಶೇಖರಮ್ ।
ಜಪೇದೇತಾಂ ಮಹಾವಿದ್ಯಾಂ ಶಿವರೂಪಮನನ್ಯಧೀಃ ॥ ೨೬ ॥

ಶಿವಪೂಜಾನಿರತನಾದ ಸಾಧಕನು ಪೂರ್ವ ಇಲ್ಲವೆ ಉತ್ತರ ದಿಕ್ಕಿಗೆ ಮುಖಮಾಡಿ ಕುಳಿತು ಕೊಂಡು ತನ್ನ ಹೃದಯಕಮಲದಲ್ಲಿ ಅಲಂಕಾರಯುಕ್ತನಾದ ಉಮಾಸಮೇತನಾದ, ಚಂದ್ರಚೂಡನಾದ, ಮುಕ್ಕಣ್ಣನಾದ ಮತ್ತು ಮಂಗಲಸ್ವರೂಪನಾದ ಮಹಾದೇವನನ್ನು ಧ್ಯಾನಿಸುತ್ತ ಬೇರೊಂದನ್ನು ಚಿಂತಿಸದೆ ಷಡಕ್ಷರ ಮಹಾಮಂತ್ರವನ್ನು ಜಪಿಸಬೇಕು.

ಸಪ್ತಕೋಟಿ ಮಂತ್ರಗಳಲ್ಲಿ ಶ್ರೇಷ್ಠವಾದ ಪಂಚಾಕ್ಷರ ಮಹಾಮಂತ್ರಕ್ಕೆ ಮೂಲ, ವಿದ್ಯಾ, ಶಿವ, ಶೈವಸೂತ್ರ ಮತ್ತು ಪಂಚಾಕ್ಷರಗಳೆಂಬ ಪಂಚನಾಮಗಳು ಪ್ರಸಿದ್ಧಗಳಾಗಿವೆ ಎಂಬ ವಿಚಾರವನ್ನು ಪೂಜ್ಯರಾದ ಶ್ರೀ ಜಗದ್ಗುರು ರೇಣುಕರು ಅಗಸ್ತ್ಯನನ್ನು ಕುರಿತು ಬೋಧಿಸುತ್ತಲಿದ್ದಾರೆ. ಇಲ್ಲಿ ಬಂದಿರುವ ಈ ಪಂಚನಾಮಗಳು ಸಹೇತುಕಗಳಾಗಿವೆ. ತತ್ತ್ವಾತ್ಮಕವಾದ ಪ್ರಪಂಚಕ್ಕೆಲ್ಲ ಪರಶಿವನು ಮೂಲಕಾರಣನಾಗಿರುವಂತೆ ತದ್ವಾಚಕ ವಾದ ಈ ಪಂಚಾಕ್ಷರ ಮಹಾಮಂತ್ರವಾದರೂ ಜಗತ್ತಿನ ಹಾಗೂ ಜಗತ್ತಿನಲ್ಲಿರುವ ವರ್ಣ ಸಮಾಮ್ನಾಯದ ಪ್ರಾದುರ್ಭಾವಕ್ಕೆ ಮೂಲ ಕಾರಣವಾಗಿರುತ್ತದೆ. ಅಂತೆಯೇ ಈ ಮಹಾಮಂತ್ರಕ್ಕೆ ''ಮೂಲಂ'' ಎಂಬ ಹೆಸರು ಪ್ರಾಪ್ತವಾಗಿದೆ.

'ನಮಃ ಶಿವಾಯ' ಎಂಬ ಈ ಪಂಚಾಕ್ಷರ ಮಹಾಮಂತ್ರದ ಪಂಚವರ್ಣಗಳಿಂದ ಕ್ರಮಶಃ ಪಂಚಬ್ರಹ್ಮರು, ಪಂಚತನ್ಮಾತ್ರೆಗಳು, ಪಂಚಮಹಾಭೂತಗಳು, ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚಕರ್ಮೇಂದ್ರಿಯಗಳು ಇದೂ ಅಲ್ಲದೆ ಪ್ರಪಂಚ ದಲ್ಲಿಯ ಪಂಚಕಗಳೆಲ್ಲ ಪ್ರಾದುರ್ಭವಿಸಿವೆ. ಇದೂ ಅಲ್ಲದೆ–

ಸಪ್ತಕೋಟಿ ಮಹಾಮಂತ್ರಾ ರೂಪವಕ್ರೈರನೇಕಧಾ ।
ಪಂಚಾಕ್ಷರೇ ಪ್ರಲೀಯಂತೇ ಪುನಸ್ತಸ್ಮಾದ್ವಿನಿರ್ಗತಾಃ ॥

(ಕ್ರಿಯಾಪಾದ ೮–೪೫)

ಚಂದ್ರಜ್ಞಾನಾಗಮದ ಈ ಉಕ್ತಿಯಲ್ಲಿ ಸಪ್ತಕೋಟಿ ಮಂತ್ರಗಳ ಅವಿರ್ಭಾವ ಹಾಗೂ ವಿಲಯಗಳಿಗೆ ಪಂಚಾಕ್ಷರವೇ ಆಧಾರವೆಂಬುದಾಗಿ ನಿರೂಪಿಸಲಾಗಿದೆ. ಹೀಗೆ ಪ್ರಪಂಚದ ಉತ್ಪತ್ತಿಗೆ ಮತ್ತು ಎಲ್ಲ ಮಂತ್ರಗಳ ಪ್ರಾದುರ್ಭಾವ–ವಿಲಯಗಳಿಗೆ ಈ ಮಂತ್ರವೇ ಮೂಲವಾದ್ದರಿಂದ 'ಮೂಲಂ' ಎಂಬ ನಾಮವು ಪ್ರಾಪ್ತವಾಗಿದೆ. ಪಂಚಾಕ್ಷರ ಮಂತ್ರದ ಸರ್ವಕಾರಣತ್ವ ವಿಷಯವು ಚಂದ್ರಜ್ಞಾನಾಮಗದ ಕ್ರಿಯಾಪದ (೧೪–೪೧)ದಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾಗಿದೆ.

ಈ ಮಹಾಮಂತ್ರವನ್ನು ವಿಧಿವತ್ತಾಗಿ ಜಪಮಾಡುವುದರಿಂದ ಶಿವಜೀವರ ಐಕ್ಯ ಬೋಧಕವಾದ ಶುದ್ಧವಿದ್ಯೆಯು ಉದಯವಾಗುತ್ತದೆ. ಇಂತಹ ವಿದ್ಯೆಯ ಉದಯಕ್ಕೆ ಕಾರಣವಾದ ಮಂತ್ರಕ್ಕೆ 'ವಿದ್ಯಾ' ಎಂಬುದಾಗಿಯೂ ಕರೆಯಲಾಗಿದೆ. ತುಪ್ಪವು ಆಯುಷ್ಯ ವೃದ್ಧಿಗೆ ಕಾರಣವಾಗಿದ್ದರೂ 'ಆಯುರ್ವೈಘೃತಮ್' ಎಂಬ ಉಕ್ತಿಯಲ್ಲಿ ಘೃತವನ್ನೇ ಆಯುಷ್ಯವೆಂದು ಕರೆದಂತೆ ವಿದ್ಯೆಯ ಉದಯಕ್ಕೆ ಕಾರಣವಾದ ಈ ಮಹಾಮಂತ್ರಕ್ಕೂ 'ವಿದ್ಯಾ' ಎಂತಲೇ ಕರೆಯಲಾಗಿದೆ.

ಇದೇ ಪ್ರಕಾರ ಈ ಮಂತ್ರದ ಮನನದಿಂದ ಅನೇಕ ಕಲ್ಯಾಣಪರಂಪರೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಇದಕ್ಕೆ 'ಶಿವ' ಎಂಬ ನಾಮವು ಪ್ರಾಪ್ತವಾಗಿದೆ. ಶಿವನ ಸಂಬಂಧಿಯಾದ ಸರ್ವವಿಷಯವು ಈ ಮಂತ್ರದಲ್ಲಿ ಸೂಕ್ಷ್ಮವಾಗಿ ನಿರೂಪಿಸಿರುವ ಕಾರಣ ಇದಕ್ಕೆ 'ಶೈವಸೂತ್ರ'ವೆನ್ನುವರು. ಇದರಲ್ಲಿ ಐದು ಅಕ್ಷರಗಳಿರುವುದರಿಂದ ಇದಕ್ಕೆ 'ಪಂಚಾಕ್ಷರ'ವೆಂತಲೂ ಕರೆದಿದ್ದಾರೆ.

ಓಂಕಾರವು ಮಂತ್ರದ ಮಸ್ತಕವೆಂಬುದಾಗಿ ಮಂತ್ರಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಅಂತೆಯೇ ಯಾವುದೇ ಮಂತ್ರವನ್ನು ಜಪಿಸಬೇಕಾದರೆ ಅದಕ್ಕೆ ಮೊದಲು ಓಂಕಾರದ ಸಂಬಂಧವನ್ನು ಮಾಡಬೇಕಾಗುವುದು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ''ಪ್ರಣವೇನ ಷಡಕ್ಷರೀಂ ಜಪೇತ್'' ಎಂಬ ಉಕ್ತಿಯಲ್ಲಿ ಪಂಚಾಕ್ಷರಕ್ಕೆ ಪ್ರಣವವನ್ನು ಸಂಬಂಧಿಸಿ ಆ ಪ್ರಣವ ಪಂಚಾಕ್ಷರಿಯನ್ನೇ ಜಪಿಸಬೇಕೆಂದು ಆಜ್ಞಾಪಿಸಿದ್ದಾರೆ.

ಮಂತ್ರವನ್ನು ಗುರೂಪದೇಶವಿಲ್ಲದೆ ಜಪಿಸಬಾರದು. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಸದ್ಗುರುಗಳು ತಮ್ಮ ಶಿಷ್ಯನಿಗೆ ಮಂತ್ರದೀಕ್ಷಾಪುರಸ್ಸರವಾಗಿ ಈ ಮಹಾ ಮಂತ್ರವನ್ನು ಅತ್ಯಂತ ಗುಪ್ತವಾಗಿ ಉಪದೇಶಿಸಿ ಜಪವಿಧಾನವನ್ನು ತಿಳಿಯಪಡಿಸುತ್ತಾರೆ.

ವಿವಾಹಪೂರ್ವದಲ್ಲಿ ಧರಿಸಿದ ಗರ್ಭವು ಜಾರಗರ್ಭವೆಂದು ಲೋಕದಲ್ಲಿ ಮನ್ನಣೆಯನ್ನು ಪಡೆಯದಿರುವಂತೆ ದೀಕ್ಷಾಪೂರ್ವದಲ್ಲಿ ಮಾಡಿದ ಜಪಾದಿಗಳು ಶಿವನ ಮೆಚ್ಚುಗೆಯನ್ನು ಪಡೆಯಲಾರವು. ಆದಕಾರಣ ಪ್ರತಿಯೊಬ್ಬರೂ ತಮ್ಮ ತಮ್ಮ ಕುಲ ಗುರುಗಳಿಂದ ಮಂತ್ರದೀಕ್ಷೆಯನ್ನು ಪಡೆದೇ ಜಪವನ್ನು ಮಾಡಬೇಕು.

ಯಾವುದೇ ಧಾರ್ಮಿಕ ಅನುಷ್ಠಾನವನ್ನು ಆಚರಿಸುವಾಗ ಶಾಸ್ತ್ರೋಕ್ತವಿಧಿಯನ್ನು ಅವಶ್ಯವಾಗಿ ಅನುಸರಿಸಬೇಕಾಗುವುದು. ಜಪಾನುಷ್ಠಾನಕ್ಕಾಗಿ ಶಾಸ್ತ್ರಗಳಲ್ಲಿ ಸ್ಥಾನ, ಆಸನ, ದಿಕ್ಕು, ಪ್ರಾಣಾಯಾಮ, ನ್ಯಾಸ ಮತ್ತುದೇವತಾದಿಗಳ ವಿವರಣೆಯು ನಿರೂಪಿಸಲ್ಪಟ್ಟಿದೆ. ಚಂದ್ರಜ್ಞಾನಾಮಗದಲ್ಲಿ–

ವಾಮದೇವ ಋಷಿಶ್ಚಾಸ್ಯ ಪಂಕ್ತಿಶ್ಛಂದ ಉದಾಹೃತಃ।
ದೇವತಾ ಚ ಶಿವಃ ಸಾಕ್ಷಾತ್ ಪ್ರಣವೋ ಬೀಜ ಉಚ್ಯತೇ ॥
ಉಮಾಶಕ್ತಿರಿತಿ ಪ್ರೋಕ್ತಾನ್ಯಾಸಶ್ಚೈವ ಷಡಕ್ಷರೈಃ।

(ಕ್ರಿಯಾಪಾದ ೮–೧೦)

ಈ ರೀತಿಯಾಗಿ ಷಡಕ್ಷರ ಮಹಾಮಂತ್ರಕ್ಕೆ ವಾಮದೇವನೇ ಋಷಿಯು, ಪಂಕ್ತಿಯೇ ಛಂದಸ್ಸು, ಸದಾಶಿವನೇ ದೇವತೆಯು, ಓಂಕಾರವೇ ಬೀಜವು, ಉಮೆಯೇ ಶಕ್ತಿಯು ಮತ್ತುಶಿವನೇ ಕೀಲಕವೆಂಬುದಾಗಿ ನಿರೂಪಿಸಲಾಗಿದೆ. ಈ ಮಹಾಮಂತ್ರದ ಜಪವನ್ನು ಪ್ರಾರಂಭಿಸುವ ಪೂರ್ವದಲ್ಲಿ ಮೇಲೆ ಹೇಳಿದ ಋಷ್ಯಾದಿಗಳನ್ನು ತನ್ನ ಶರೀರದಲ್ಲಿ ಭಾವನೆಯಿಂದ ನ್ಯಾಸಮಾಡಿಕೊಳ್ಳಬೇಕಾಗುತ್ತದೆ. ಲಿಂಗಧಾರಣ ಚಂದ್ರಿಕೆಯಲ್ಲಿ–

ಋಷಿಂ ಮೂರ್ಧ್ನಿ ಮುಖೇ ಛಂದಃ ದೇವತಾಂ ಹೃದಿ ವಿನ್ಯಸೇತ್ ।
ಆಧಾರೇ ಬೀಜಶಕ್ತಿಂ ಚ ಪಾದಯೋಃ ಕೀಲಕಂ ನ್ಯಸೇತ್ ॥

(ಲಿಂಗ. ಧಾ. ಚಂ. ಪುಟ ೨೩೪)

ಈ ರೀತಿಯಾಗಿ ನ್ಯಾಸ ಪ್ರಕಾರವು ಪ್ರತಿಪಾದಿತವಾಗಿದೆ. ತಾತ್ಪರ್ಯವೇನೆಂದರೆ : ಮಸ್ತಕದಲ್ಲಿ ಋಷಿಯನ್ನು, ಮುಖದಲ್ಲಿ ಛಂದಸ್ಸನ್ನು, ಹೃದಯದಲ್ಲಿ ದೇವತೆಯನ್ನು, ನಾಭಿಯಲ್ಲಿ ಬೀಜವನ್ನು, ಗುಹ್ಯದಲ್ಲಿ ಶಕ್ತಿಯನ್ನು, ಪಾದಗಳಲ್ಲಿ ಕೀಲಕವನ್ನು ಈ ರೀತಿಯಾಗಿ ಋಷ್ಯಾದಿಗಳನ್ನು ಭಾವನೆಯಿಂದ ಶರೀರದ ವಿಭಿನ್ನ ಸ್ಥಾನಗಳಲ್ಲಿ ಸ್ಥಾಪಿಸಿಕೊಳ್ಳುವದೇ ನ್ಯಾಸವು.

ನ್ಯಾಸ ಪ್ರಕಾರವು ಈ ರೀತಿಯಾಗಿದೆ–ತನ್ನ ಬಲಗೈ ಮುಷ್ಠಿಯನ್ನು ಬಿಗಿದು ಅದರ ಅಂಗುಷ್ಠದಿಂದ ಮಸ್ತಕವನ್ನು ಮುಟ್ಟಿ ಅಲ್ಲಿ ಋಷಿಯನ್ನೂ, ಮುಷ್ಟಿಯನ್ನೂ ಬಿಚ್ಚಿ ಅಂಗುಷ್ಠ ಹಾಗೂ ತರ್ಜನಿ ಬೆರಳುಗಳಿಂದ ಮುಖ (ಬಾಯಿ)ವನ್ನು ಮುಟ್ಟಿ ಛಂದಸ್ಸನ್ನು, ಅಂಗುಷ್ಠ ಹಾಗೂ ಮಧ್ಯಮಾ ಬೆರಳುಗಳಿಂದ ಹೃದಯವನ್ನು ಸ್ಪರ್ಶಿಸಿ ಅಲ್ಲಿ ದೇವತೆಯನ್ನು, ಅಂಗುಷ್ಠ ಮತ್ತು ಅನಾಮಿಕೆಗಳಿಂದ ನಾಭಿಯನ್ನು ಸ್ಪರ್ಶಿಸಿ ಅಲ್ಲಿ ಬೀಜವನ್ನೂ, ಅಂಗುಷ್ಠ ಮತ್ತು ಕನಿಷ್ಠಿಕೆಗಳಿಂದ ಗುಹ್ಯವನ್ನು ಸ್ಪರ್ಶಿಸಿ ಅಲ್ಲಿ ಶಕ್ತಿಯನ್ನು ಮತ್ತುಎರಡೂ ಕೈಗಳ ತರ್ಜನಿ ಬೆರಳುಗಳನ್ನು ಹೊರತುಪಡಿಸಿ ಕಟ್ಟಿದ ಮುಷ್ಟಿಗಳಿಂದ ಕ್ರಮವಾಗಿ ಬಲಮುಷ್ಟಿಯನ್ನು ಎಡದಿಂದ ಬಲಕ್ಕೆ, ಎಡಮುಷ್ಟಿಯನ್ನು ಬಲದಿಂದ ಎಡಕ್ಕೆ ಮಸ್ತಕದ ಪರಿಕ್ರಮವನ್ನು ಮಾಡಿ ಬಲತರ್ಜನಿಯಿಂದ ಬಲಪಾದದ ಅಂಗುಷ್ಠವನ್ನು, ಎಡತರ್ಜನಿಯಿಂದ ಎಡಪಾದದ ಅಂಗುಷ್ಠವನ್ನು ಸ್ಪರ್ಶಿಸುತ್ತಎರಡೂ ಪಾದಗಳಲ್ಲಿ ಕೀಲಕದ ನ್ಯಾಸವನ್ನು ಮಾಡಬೇಕು.

ಈ ನ್ಯಾಸಪ್ರಕ್ರಿಯೆಯು ದೇಹನ್ಯಾಸ, ಅಂಗನ್ಯಾಸ ಮತ್ತು ಕರನ್ಯಾಸವೆಂಬುದಾಗಿ ಮೂರುವಿಧವಾಗಿದೆ. ಅದು ಮತ್ತೆ ಸೃಷ್ಟಿನ್ಯಾಸ, ಸ್ಥಿತಿನ್ಯಾಸ ಹಾಗೂ ಸಂಹಾರ ನ್ಯಾಸ ವೆಂದು ಮೂರುವಿಧವಾಗಿದೆ. ಇವುಗಳಲ್ಲಿ ಸೃಷ್ಟಿನಾಸವು ಗೃಹಸ್ಥರಿಗೆ, ಸ್ಥಿತಿ ನ್ಯಾಸವು ಬ್ರಹ್ಮಚಾರಿಗಳಿಗೆ, ಅದರಂತೆ ಸಂಹಾರನ್ಯಾಸವು ಸನ್ಯಾಸಿಗಳಿಗೆ ನಿರೂಪಿತವಾಗಿವೆ. ಆದರೆ ವೀರಶೈವ ಸಿದ್ಧಾಂತದಲ್ಲಿ ಈ ರೀತಿಯಾಗಿ ಆಶ್ರಮಭೇದದಿಂದ ನ್ಯಾಸಭೇದವನ್ನು ಅಂಗೀಕರಿಸಿಲ್ಲ; ಕಾರಣ ಯಾವುದಾದರೊಂದು ನ್ಯಾಸಪದ್ಧತಿಯನ್ನು ತಮ್ಮ ಇಚ್ಛೆಗನುಸಾರವಾಗಿ ಸ್ವೀಕರಿಸಬೇಕೆಂಬುದಾಗಿ ಶ್ರೀ ನೀಲಕಂಠ ಶಿವಾಚಾರ್ಯರು 'ಕ್ರಿಯಾಸಾರ' ಎಂಬ ಗ್ರಂಥದಲ್ಲಿ ಹೇಳಿರುವ ವಿಚಾರವನ್ನು ಬಿಜಾಪೂರದ ಲಿಂ. ಶ್ರೀ. ಷ. ಬ್ರ. ಶಂಭುಲಿಂಗ ಶಿವಾಚಾರ್ಯರು ತಮ್ಮ 'ಅಷ್ಟಾವರಣ ವಿವೇಕ' (ಪುಟ–೯೫) ದಲ್ಲಿ ಪ್ರತಿಪಾದಿಸಿದ್ದಾರೆ. ಈ ನ್ಯಾಸ ವಿಧಾನದಲ್ಲಿ ತಮ್ಮ ತಮ್ಮ ಗುರುಗಳು ಉಪದೇಶಿಸಿದ ಮಾರ್ಗವನ್ನೇ ಪ್ರತಿಯೊಬ್ಬರೂ ಶ್ರದ್ಧೆಯಿಂದ ಸ್ವೀಕರಿಸಬೇಕು.

ಜಪದ ಸ್ಥಾನ ವಿಷಯವಾಗಿ ಆಗಮ ಶಾಸ್ತ್ರದಲ್ಲಿ ಮನೆ, ಆಕಳ ಕೊಟ್ಟಿಗೆ, ಪುಣ್ಯಾರಣ್ಯ, ರಮ್ಯ ಪರ್ವತ, ನದೀತೀರ, ಮತ್ತು ದೇವಾಲಯಗಳು ಉತ್ತರೋತ್ತರ ಶತ, ಸಹಸ್ರ, ಆಯತ, ಲಕ್ಷ ಹಾಗೂ ಕೋಟಿ ಪಟ್ಟು ಹೆಚ್ಚಿನ ಫಲದಾಯಕಗಳೆಂದು ಪ್ರತಿಪಾದಿಸಿ ಪುನಃ–

ಯದಿಷ್ಟಲಿಂಗಂ ಸಂಪಶ್ಯನ್ ವಾಮಹಸ್ತಸ್ಥಿತಂ ಪರಮ್ ।
ಜಪತೇ ತತ್ಫಲಂ ವಕ್ತುಂ ನ ಮಯಾ ಶಕ್ಯತೇ ಗುರೋ

(ಚಂ. ಜ್ಞಾ. ಆ. ಕ್ರಿಯಾಪದ ೮–೭೪)

ಅಂದರೆ ವಾಮಹಸ್ತದಲ್ಲಿರುವ ಇಷ್ಟಲಿಂಗದ ಸಾಕ್ಷಿಯಲ್ಲಿ ಮಾಡಿದ ಜಪದ ಫಲವು ಅಗಣಿತವೆಂಬುದಾಗಿ ನಿರೂಪಿಸಲಾಗಿದೆ. ಆದಕಾರಣ ವೀರಶೈವರು ಮೇಲೆ ಹೇಳಿದ ಯಾವುದೇ ಸ್ಥಾನದಲ್ಲಿ ಜಪಮಾಡಬೇಕಾದರೂ ಇಷ್ಟಲಿಂಗದ ಸಾಕ್ಷಿಯಲ್ಲಿ ಮಾಡುವುದು ಸರ್ವೋತ್ತಮವಾದುದು.

ಜಪಾಭ್ಯಾಸವನ್ನು ಮಾಡುವಾಗ ಕುಳಿತುಕೊಳ್ಳುವ ಆಸನವೂ ಮಹತ್ವಪೂರ್ಣ ವಾದುದು. ಆಸನವಿಲ್ಲದೆ ಬರೀ ನೆಲದಲ್ಲಿ ಕುಳಿತು ಜಪವನ್ನು ಮಾಡಬಾರದು. ಆಸನಕ್ಕಾಗಿ ಕೃಷ್ಣಾಜಿನ, ವ್ಯಾಘ್ರಚರ್ಮ, ಕುಶಾಸನ ಮತ್ತು ಕಂಬಲಾಸನಗಳು ಪ್ರಸಿದ್ಧ ವಾಗಿವೆ. ಇವುಗಳಲ್ಲಿ ''ಸರ್ವಸಿದ್ಧಿಸ್ತು ಕಂಬಲೇ'' ಎಂಬ ಉಕ್ತಿಗನುಸಾರವಾಗಿ ಕಂಬಳಿಯ ಆಸನವು ಎಲ್ಲಕ್ಕೂ ಉತ್ತಮವಾದುದು. ಆದ್ದರಿಂದ ಕಂಬಳಿ ಆಸನವನ್ನು ಹಾಕಿಕೊಂಡು ಅದರ ಮೇಲೆ ಸುಖಾಸನ ಇಲ್ಲವೆ ಸಿದ್ಧಾಸನದಲ್ಲಿ ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖ ವಾಗಿ ಕುಳಿತು ಜಪವನ್ನು ಪ್ರಾರಂಭಿಸಬೇಕು.

ಜಪಾಭ್ಯಾಸಕ್ಕಾಗಿ ಅಂಗುಲಿರೇಖಾ, ಶಂಖಮಣಿ, ಹವಳ, ಸ್ಫಟಿಕ, ಮುತ್ತು, ಸುವರ್ಣಮಣಿ, ಕುಶಗ್ರಂಥಿ (ದರ್ಭೆಯ ಗಂಟು) ಹಾಗೂ ರುದ್ರಾಕ್ಷಿಯ ಮಾಲೆಗಳು ಪ್ರತಿಪಾದಿತವಾಗಿವೆ. ಇವುಗಳಲ್ಲಿ ರುದ್ರಾಕ್ಷಮಾಲೆಯೇ ಸರ್ವಶ್ರೇಷ್ಠವಾದುದು. ಇದರಲ್ಲಿ ಹದಿನೈದು ಮಣಿಗಳ ಮಾಲೆಯಿಂದ ಮಾರಣ, ಉಚ್ಚಾಟನಾದಿ ಅಭಿಚಾರ

ಕ್ರಿಯಾಸಿದ್ಧಿ; ಇಪ್ಪತ್ತೈದು ಮಣಿಗಳ ಮಾಲೆಯಿಂದ ಮುಕ್ತಿ ಪ್ರಾಪ್ತಿ; ಇಪ್ಪತ್ತೇಳು ಮಣಿಗಳ ಮಾಲೆಯಿಂದ ಪುಷ್ಟಿ ವೃದ್ಧಿ ; ಮೂವತ್ತು ಮಣಿಗಳ ಮಾಲೆಯಿಂದ ಧನ ಪ್ರಾಪ್ತಿ ಮತ್ತು ಒಂದುನೂರಾ ಎಂಟು ಮಣಿಗಳ ಮಾಲೆಯಿಂದ ಜಪವನ್ನು ಮಾಡಿದರೆ ಸರ್ವಾರ್ಥ ಸಿದ್ಧಿಯು ಲಭಿಸುವುದು. ಇದೂ ಅಲ್ಲದೆ ರುದ್ರಾಕ್ಷಮಾಲೆಯಿಂದ ಜಪವನ್ನು ಮಾಡುವಾಗ ಅಂಗುಷ್ಠದಿಂದ ಮೋಕ್ಷಶ್ರೀ, ತರ್ಜನಿಯಿಂದ ಶತ್ರುನಾಶ, ಮಧ್ಯಮಾದಿಂದ ಧನಪ್ರಾಪ್ತಿ, ಅನಾಮಿಕಾದಿಂದ ಶಾಂತಿಪ್ರಾಪ್ತಿ ಮತ್ತು ಕನಿಷ್ಠಿಕೆಯಿಂದ ಆಕರ್ಷಣ ಎಂಬುದಾಗಿ ಚಂದ್ರಜ್ಞಾನಾಗಮದ ಕ್ರಿಯಾಪಾದ (೮,೬೫-೭೦)ದಲ್ಲಿ ನಿರೂಪಿಸಲಾಗಿದೆ.

ಜಪಾಭ್ಯಾಸವನ್ನು ಮಾಡುವ ಸಾಧಕನು ಶರೀರದ ಮೇಲೆ ಅಂಗಿ ರುಮಾಲುಗಳನ್ನು ಧರಿಸಿಕೊಂಡು, ಪೂರ್ಣಬೆತ್ತಲೆಯಾಗಿ, ಮುಕ್ತಕೇಶನಾಗಿ, ಮಾತನಾಡುತ್ತ ಎಂದೂ ಜಪವನ್ನು ಮಾಡಕೂಡದು; ಹಾಗೂ ಜಪದ ವೇಳೆಯಲ್ಲಿ ಕಾಮ, ಕ್ರೋಧ, ಮತ್ತು ಮದವೃತ್ತಿಗಳು ಮನಸ್ಸಿನಲ್ಲಿ ಬಾರದಂತೆ ಎಚ್ಚರಿಕೆಯನ್ನು ವಹಿಸಬೇಕು. ಅದರಂತೆ ಆಲಸ್ಯ-ಆಕಳಿಕೆಗಳನ್ನು ವರ್ಜಿಸಬೇಕು. ಅಕಸ್ಮಾತ್ ಕಾಮಾದಿ ವೃತ್ತಿಗಳಾಗಲಿ, ಆಕಳಿಕೆಗಳಾಗಲಿ ತಲೆದೋರಿದರೆ ಅದರ ಶಾಂತಿಗಾಗಿ ಆಚಮನ ಹಾಗೂ ಪ್ರಾಣಾಯಾಮಗಳನ್ನು ಮಾಡಿ ಪುನಃ ಜಪಾಭ್ಯಾಸವನ್ನು ಪ್ರಾರಂಭಿಸಬೇಕು. ಜಪ ಕಾಲದಲ್ಲಿ ಅಕ್ಷರಗಳು ಲೋಪವಾಗದಂತೆ ಎಚ್ಚರಿಕೆ ವಹಿಸಬೇಕು.

ಮೇಲೆ ಹೇಳಿದ ನಿಯಮಗಳನ್ನು ಸರಿಯಾಗಿ ಪರಿಪಾಲಿಸದೆ ಇದ್ದಾಗ ಮೂಕ, ಸುಪ್ತ ಮೃತ, ನಗ್ನ, ವೀರ್ಯಹೀನ, ವೃಥಾಫಲ, ಭುಜಂಗ, ಕೀಲಿತ ಮತ್ತು ಶೂನ್ಯ ಮುಂತಾದ ದೋಷಗಳು ಸಂಭವಿಸುತ್ತವೆ. ಇವುಗಳಲ್ಲಿ ನ್ಯಾಸವಿಲ್ಲದೆ ಮಾಡಿದ ಜಪವು ಮೂಕ, ಆಸನವಿಲ್ಲದಿರೆ ಸುಪ್ತ; ಪ್ರಣವವು ಮಂತ್ರದ ಶಿರಸ್ಸು ಇದ್ದ ಹಾಗೆ. ಒಂದು ವೇಳೆ ಜಪಿಸುವ ಮಂತ್ರವು ಪ್ರಣವ ರಹಿತವಾಗಿದ್ದರೆ ಅದು ಮೃತ; ನಮಃ ಸ್ವಾಃ, ವಷಟ್, ಹೂಂ ಮತ್ತು ಫಟ್ ಮುಂತಾದ ಪಲ್ಲವಿರಹಿತವಾದ ಮಂತ್ರವು ನಗ್ನ. ಅಧಿಕ ವರ್ಣಗಳಾದರೆ ವೀರ್ಯಹೀನ. ಗುರೂಪದೇಶವಿಲ್ಲದಿರೆ ವೃಥಾಫಲ; ಋಷಿ, ದೇವತಾ ಹಾಗೂ ಛಂದೋಹೀನವಾಗಿದ್ದರೆ ಭುಜಂಗ, ಮಧ್ಯದಲ್ಲಿ ಬೀಜಾಕ್ಷರ ರಹಿತವಾಗಿದ್ದರೆ ಕೀಲಿತ, ಜಪಿಸುವ ಮಂತ್ರೋಚ್ಚಾರಣೆಯು ಅನ್ಯರಿಗೆ ಕೇಳಿಸುತ್ತಿದ್ದರೆ ಶೂನ್ಯವೆಂಬುದಾಗಿ ದೋಷಗಳು ಸಂಭವಿಸುತ್ತವೆ (ಲಿಂಗಧಾರಣ ಚಂದ್ರಿಕಾ ಪುಟ ೨೩೪-೨೩೫.)

ಇದಲ್ಲದೆ ಅಭಕ್ತ ಅಕ್ಷರಭ್ರಾಂತ, ಲುಪ್ತ, ಛಿನ್ನ, ಹ್ರಸ್ವ, ದೀರ್ಘ, ಕಥನ ಮತ್ತು ಸ್ವಪ್ನ-ಕಥನಗಳೆಂಬ ದೋಷಗಳು ಸಂಭವಿಸುತ್ತವೆ. ಇವುಗಳಲ್ಲಿ ಮಂತ್ರದ ಬಗ್ಗೆ ಶ್ರದ್ಧೆ ಇರದಿದ್ದರೆ ಅಭಕ್ತ, ಶಿಷ್ಯನ ಪ್ರಮಾದದಿಂದ ಮಂತ್ರಾಕ್ಷರಗಳ ವೈಪರೀತ್ಯವಾದರೆ ಅಕ್ಷರಭ್ರಾಂತ, ಮಂತ್ರಾಕ್ಷರದ ಲೋಪವಾದರೆ ಲುಪ್ತ, ಸಂಯುಕ್ತಾಕ್ಷರದಲ್ಲಿ ಯಾವುದೇ ಅಕ್ಷರ ವಿಭಕ್ತವಾದರೆ ಛಿನ್ನ, ದೀರ್ಘವರ್ಣವನ್ನು ಹ್ರಸ್ವವಾಗಿ ಉಚ್ಚರಿಸಿದರೆ ಹ್ರಸ್ವ, ಹ್ರಸ್ವವರ್ಣವನ್ನು ದೀರ್ಘವಾಗಿ ಉಚ್ಚರಿಸಿದರೆ ದೀರ್ಘ, ಗೋಪನೀಯವಾದ ಗುರುಮಂತ್ರವನ್ನು ಯಾರಿಗಾದರೂ ಹೇಳಿದರೆ ಕಥನ ಮತ್ತು ಸ್ವಪ್ನಾವಸ್ಥೆಯಲ್ಲಿ ಹೇಳಿದರೆ ಸ್ವಪ್ನಕಥನವೆಂಬುದಾಗಿ ಕರೆಯುತ್ತಾರೆ.

ಮೇಲೆ ವರ್ಣಿಸಿದ ದೋಷಗಳಲ್ಲಿ ಅಕ್ಷರಭ್ರಾಂತವೇ ಮೊದಲುಗೊಂಡು ಸ್ವಪ್ನ ಕಥನ ಪರ್ಯಂತರವಾದ ದೋಷಗಳು ಸಂಭವಿಸಿದರೆ ತಮ್ಮ ಗುರುಗಳಿಂದ ಪುನಃ ಉಪದೇಶವನ್ನು ಪಡೆದು ಆ ದೋಷಗಳನ್ನು ನಿವಾರಿಸಿಕೊಳ್ಳಬೇಕು. ಇನ್ನು ಮೊದಲನೆಯದಾಗಿ ಅಭಕ್ತ ದೋಷ ಪ್ರಾಪ್ತವಾದರೆ ತನ್ನಲ್ಲಿಯೇ ಮಂತ್ರದ ಬಗ್ಗೆ ಶ್ರದ್ಧೆಯನ್ನು ಹೆಚ್ಚಿಸಿಕೊಂಡು ಆ ದೋಷವನ್ನು ನಿವೃತ್ತಿಮಾಡಿಕೊಳ್ಳಬೇಕು. ದೋಷಯುಕ್ತವಾದ ಜಪವು ಫಲಕಾರಿಯಾಗದ ಕಾರಣ ಜಪಿಸುವಾಗ ಈ ದೋಷಗಳು ಬಾರದಂತೆ ಪ್ರತಿಯೊಬ್ಬರೂ ಎಚ್ಚರಿಕೆಯನ್ನು ವಹಿಸಬೇಕು.

ಜಪಾಭ್ಯಾಸವನ್ನು ಪ್ರಾರಂಭಿಸುವ ಪೂರ್ವದಲ್ಲಿ ''ಪ್ರಾಣಾಯಾಮತ್ರಯಂ ಕೃತ್ವಾ'' ಎಂಬ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಅಪ್ಪಣೆಯ ಮೇರೆಗೆ ಜಪಾಭ್ಯಾಸಿಯು ವಿಧಿವತ್ತಾಗಿ ಮೂರು ಸಾರೆ ಪ್ರಾಣಾಯಾಮವನ್ನು ಮಾಡಿ, ಹೃದಯ ಕಮಲದಲ್ಲಿ ದೇವಾಧಿದೇವನಾದ ಮಹಾದೇವನನ್ನು ಧ್ಯಾನಿಸುತ್ತ ಅನನ್ಯವಾದ ಮನಸ್ಸಿನಿಂದ ಜಪವನ್ನು ಮಾಡಿದರೆ ಜಪದ ಪೂರ್ಣಫಲವು ಪ್ರಾಪ್ತವಾಗುತ್ತದೆ.

ಅನೇಕ ಜನರು ವಾಣಿಯಿಂದ ಮಂತ್ರವನ್ನು ಜಪಿಸುತ್ತಿದ್ದರೂ ಮನದಲ್ಲಿ ಅನ್ಯಾನ್ಯ ವಿಷಯಗಳನ್ನು ಚಿಂತಿಸುತ್ತಿರುತ್ತಾರೆ. ಇನ್ನೂ ಕೆಲವರು ಮಂತ್ರವನ್ನು ಜಪಿಸುವಾಗ ಮಧ್ಯ ಮಧ್ಯದಲ್ಲಿ ಜಪವನ್ನು ನಿಲ್ಲಿಸಿ ವ್ಯಾವಹಾರಿಕ ಮಾತುಗಳನ್ನು ಆಡತೊಡಗುತ್ತಾರೆ. ಅಂತೆಯೇ ಅಂಥವರ ಪ್ರಗತಿಯು ಕುಂಠಿತವಾಗಿ ಮಾಡಿದ ಪರಿಶ್ರಮವೆಲ್ಲಾ ವ್ಯರ್ಥವಾಗುತ್ತದೆ. ಜಪಾಭ್ಯಾಸದ ವೇಳೆ ಅಲ್ಪದವಾರೂ ಸರಿ, ಅಷ್ಟು ಕಾಲದಲ್ಲಿ ಮಾತ್ರ ಧ್ಯಾನ ಯುಕ್ತವಾಗಿ ಜಪವನ್ನು ಮಾಡಿದರೆ ಸಾಕು. ಅಂತೆಯೇ ಪೂಜ್ಯಪಾದರು ''ಜಪೇದೇತಾಂ ಮಹಾವಿದ್ಯಾಂ ಶಿವರೂಪಮನನ್ಯಧೀಃ'' ಎಂಬುದಾಗಿ ಉಪದೇಶಿಸಿದ್ದಾರೆ. ಆದಕಾರಣ ಪ್ರತಿಯೊಬ್ಬರೂ ಪ್ರಾಣಾಯಾಮ ಪುರಸ್ಸರವಾಗಿ, ದ್ಯಾನಯುಕ್ತವಾಗಿ, ಮಂಗಲಮಯವಾದ ಮಹಾಮಂತ್ರವನ್ನು ಜಪಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



## ಆಶೀರ್ವಚನ-೭

ಜಪಸ್ತು ತ್ರಿವಿಧಃ ಪ್ರೋಕ್ತೋ ವಾಚಿಕೋಪಾಂಶು ಮಾನಸಃ ।
ಶ್ರೂಯತೇ ಯಸ್ತು ಪಾರ್ಶ್ವಸ್ಥೈರ್ಯದಾ ವರ್ಣಸಮನ್ವಯಃ ॥ ೨೭ ॥

ವಾಚಿಕಃ ಸ ತು ವಿಜ್ಞೇಯಃ ಸರ್ವಪಾಪಪ್ರಭಂಜನಃ ।
ಈಷತ್ ಸ್ಪೃಷ್ಟಾಧರಪುಟಂ ಯೋ ಮಂದಮಭಿಧೀಯತೇ ॥ ೨೮ ॥

ಪಾರ್ಶ್ವಸ್ಥೈರಶ್ರುತಃ ಸೋಽಯಮುಪಾಂಶುಃ ಪರಿಕೀರ್ತಿತಃ ।
ಅಸ್ಪೃಷ್ಟಾಧರಮಸ್ಪಂದಿ ಜಿಹ್ವಾಗ್ರಂ ಯೋಽಂತರಾತ್ಮನಾ ।
ಭಾವ್ಯತೇ ವರ್ಣರೂಪೇಣ ಸ ಮಾನಸ ಇತಿ ಸ್ಮೃತಃ ॥ ೨೯ ॥

ಜಪವು ವಾಚಿಕ, ಉಪಾಂಶು ಮತ್ತು ಮಾನಸಿಕವೆಂಬುದಾಗಿ ಮೂರು ಪ್ರಕಾರವಾಗಿರುತ್ತದೆ. ಸಮೀಪದ ವ್ಯಕ್ತಿಗೆ ಸ್ಪಷ್ಟವಾಗಿ ಕೇಳುವ ಹಾಗೆ ಜಪಿಸುವ ಜಪವೇ ವಾಚಕವು. ಈ ಜಪದಿಂದ ತ್ರಿಕರಣಜನ್ಯ ಪಾಪಗಳು ದೂರವಾಗುತ್ತವೆ. ಎರಡೂ ತುಟಿಗಳ ಸಹಾಯದಿಂದ ಮತ್ತೊಬ್ಬರಿಗೆ ಕೇಳದ ಹಾಗೆ ಅತ್ಯಂತ ಸಾವಕಾಶವಾಗಿ ಮಾಡುವ ಮಂತ್ರೋಚ್ಚಾರವೇ ಉಪಾಂಶು ಜಪವು. ಇನ್ನು ತುಟಿ ಹಾಗೂ ನಾಲಿಗೆಗಳನ್ನು ಸ್ವಲ್ಪೂ ಸ್ಪಂದಿಸದೆ ಮನಸ್ಸಿನಲ್ಲಿಯೇ ಮಂತ್ರಾಕ್ಷರಗಳನ್ನು ಭಾವಿಸುತ್ತ ಮಾಡುವ ಜಪವೇ ಮಾನಸಿಕ ಜಪವು.

ಯಾವಂತಃ ಕರ್ಮಯಜ್ಞಾದ್ಯಾ ವ್ರತದಾನತಪಾಂಸಿ ಚ ।
ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೩೦ ॥

ವ್ರತ, ದಾನ ಮತ್ತು ತಪಸ್ಸುಗಳೆಂಬ ಎಲ್ಲ ಪ್ರಕಾರದ ಕರ್ಮಯಜ್ಞಗಳು ಜಪಯಜ್ಞದ ಹದಿನಾರರ ಒಂದು ಭಾಗಕ್ಕೂ ಸಮವಾಗಲಾರವು.

ಮಾಹಾತ್ಮ್ಯಂ ವಾಚಿಕಸ್ಯೈತಜ್ಜಪಯಜ್ಞಸ್ಯ ಕೀರ್ತಿತಂ ।
ತಸ್ಮಾಚ್ಛತಗುಣೋಪಾಂಶುಃ ಸಹಸ್ರೋ ಮಾನಸಃ ಸ್ಮೃತಃ ॥ ೩೧ ॥

ಎಲ್ಲ ಕರ್ಮಯಜ್ಞಗಳಲ್ಲಿ ವಾಚಿಕ ಜಪಯಜ್ಞವು ಶ್ರೇಷ್ಠವಾದದ್ದು. ಅದರ ನೂರುಪಾಲು ಹೆಚ್ಚು ಫಲದಾಯಕವಾದದ್ದು ಉಪಾಂಶು ಜಪವು. ಇನ್ನು ಮಾನಸಿಕ ಜಪವಾದರೋ ಸಾವಿರಪಾಲು ಹೆಚ್ಚು ಫಲಕಾರಿಯಾದದ್ದೆಂಬುದಾಗಿ ಶಾಸ್ತ್ರಗಳಲ್ಲಿ ನಿರೂಪಿಸಲಾಗಿದೆ.

ವಾಚಿಕಾತ್ ತದುಪಾಂಶೋಶ್ಚ ಜಪಾದಸ್ಯ ಮಹಾಮನೋಃ ।
ಮಾನಸೋ ಹಿ ಜಪಃ ಶ್ರೇಷ್ಠೋ ಘೋರಸಂಸಾರನಾಶಕಃ ॥ ೩೨ ॥

ಷಡಕ್ಷರ ಮಹಾಮಂತ್ರದ ವಾಚಿಕ ಮತ್ತು ಉಪಾಂಶು ಜಪಕ್ಕಿಂತಲೂ ಜನನ ಮರಣಾತ್ಮಕವಾದ ಭಯಾನಕ ಸಂಸಾರವನ್ನು ನೀಗಿಸುವ ಮಾನಸಿಕ ಜಪವೇ ಸರ್ವೋತ್ತಮವಾದುದು.

ಏತೇಷ್ವೇತೇನ ವಿಧಿನಾ ಯಥಾಭಾವಂ ಯಥಾಕ್ರಮಂ ।
ಜಪೇತ್ ಪಂಚಾಕ್ಷರೀಮೇತಾಂ ವಿದ್ಯಾಂ ಪಾಶವಿಮುಕ್ತಯೇ ॥ ೩೩ ॥

ಮೇಲೆ ಹೇಳಿದ ತ್ರಿವಿಧ ಜಪವಿಧಾನದಲ್ಲಿ ಕ್ರಮವಾಗಿ ಒಂದೊಂದು ವಿಧಿಯನ್ನು ಆಶ್ರಯಿಸಿ ವಿಧ್ಯುಕ್ತವಾಗಿ ಮತ್ತು ಭಾವಪೂರ್ಣವಾಗಿ ಈ ಮಹಾಮಂತ್ರವನ್ನು ಜಪಿಸಿದರೆ ಸಾಧಕನು ಮಲ, ಮಾಯಾ ಮತ್ತು ಕರ್ಮಗಳೆಂಬ ಪಾಶತ್ರಯಗಳಿಂದ ಮುಕ್ತನಾಗುತ್ತಾನೆ.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ವಾಚಿಕ, ಉಪಾಂಶು ಮತ್ತು ಮಾನಸಿಕ ಎಂಬುದಾಗಿ ಜಪದ ಮೂರು ವಿಧಾನಗಳನ್ನು ಮಹರ್ಷಿ ಅಗಸ್ತ್ಯನನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತ ಮಾನವರಿಗೆ ಉಪದೇಶಿಸಿದ್ದಾರೆ. ನಾವು ಜಪಿಸುವ ಮಂತ್ರಾಕ್ಷರಗಳು ಸುಸ್ಪಷ್ಟವಾಗಿ, ಅನ್ಯರಿಗೆ ಶ್ರವಣ ಗೋಚರವಾಗುತ್ತಿದ್ದರೆ ಅದು ವಾಚಿಕ ಜಪವು. ಈ ಜಪದಿಂದ ಮನುಷ್ಯನ ಸರ್ವವಿಧ ಪಾಪಗಳು ನಾಶವಾಗುತ್ತವೆ. ಸಮೀಪದ ವ್ಯಕ್ತಿಗೆ ಕೇಳದ ಹಾಗೆ ಎರಡೂ ತುಟಿಗಳ ಸಹಾಯದಿಂದ ಮಂದ ಮಂದವಾಗಿ ಉಚ್ಚರಿಸಲ್ಪಡುವ ಜಪವೇ ಉಪಾಂಶು ಜಪವು. ಇನ್ನು ತುಟಿ ಹಾಗೂ ನಾಲಿಗೆಯ ತುದಿಯನು ಸ್ಪಂದಿಸದೆ ಮನಸ್ಸಿನಲ್ಲಿಯೇ ಮಂತ್ರಾಕ್ಷರಗಳನ್ನು ಮನನ ಮಾಡುವುದೇ ಮಾನಸಿಕ ಜಪವು.

'ಯಜ್' ಎಂಬ ಸಂಸ್ಕೃತ ಧಾತುವಿಗೆ ಪೂಜಿಸು ಮತ್ತು ಭಜಿಸು ಎಂಬುದಾಗಿ ಅರ್ಥಗಳಾಗುತ್ತವೆ. ಶರೀರ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳಿಂದ ಇಷ್ಟ ದೇವರನ್ನು ಭಜಿಸುವುದು ಹಾಗೂ ಪೂಜಿಸುವುದೇ ಯಜ್ಞವು. ಸಾಮಾನ್ಯವಾಗಿ ಮನುಷ್ಯನ ಪ್ರವೃತ್ತಿಯ ಅಧೋಮುಖವಾದದ್ದು. ಅಂತೆಯೇ ಅವನು ತನ್ನ ತ್ರಿಕರಣಗಳಿಂದ ನಿಷಿದ್ಧ ವ್ಯವಹಾರಗಳನ್ನು ಆಚರಿಸಿ ಪತಿತನಾಗುತ್ತಾನೆ. ಪತಿತನೂ ಪಾವನನಾಗಬೇಕಾದರೆ ಸತ್ಕರ್ಮಗಳನ್ನು ಆಚರಿಸಬೇಕಾಗುತ್ತದೆ. ಪತಿತನನ್ನು ಪಾವನಗೊಳಿಸುವ ಸತ್ಕರ್ಮಗಳೆಂದರೆ ಯಜ್ಞ, ವ್ರತ, ದಾನ ಹಾಗೂ ತಪಸ್ಸುಗಳು. ಅಂತೆಯೇ ''ಯಜ್ಞೇನ ದಾನೇನ ತಪಸಾಽನಾಶಕೇನ'' ಎಂಬುದಾಗಿ ಶೃತಿಯು ನಿರೂಪಿಸಿದೆ.

ಹವನಕುಂಡದಲ್ಲಿ ದೇವತೆಗಳನ್ನುದ್ದೇಶಿಸಿ ಮಾಡಲ್ಪಡುವ ಹವಿಸ್ಸುಗಳ ಪ್ರದಾನವೇ ಕರ್ಮಯಜ್ಞವು. ಇಂತಹ ಕರ್ಮಯಜ್ಞಗಳು ಜ್ಯೋತಿಷ್ಟೋಮಾದಿ ಭೇದಗಳಿಂದ ನಾನಾ ಪ್ರಕಾರಗಳಾಗಿವೆ. ಈ ಯಜ್ಞಗಳು ಬಹು ಆಯಾಸಸಾಧ್ಯಗಳಲ್ಲದೆ ಕ್ಷಣಿಕವಾದ ಸ್ವರ್ಗಾದಿ ಫಲಪ್ರದಾಯಕಗಳಾಗಿವೆ. ಇದೇ ಪ್ರಕಾರ ಕೃಚ್ಛ್ರ ಚಾಂದ್ರಾಯಣಾದಿ ಕಷ್ಟಸಾಧ್ಯಗಳಾದ ಅನೇಕ ತಪಸ್ಸುಗಳು, ಷೋಡಶ ಪ್ರಕಾರದ ದಾನಗಳು ಮತ್ತು ನಾನಾ ಪ್ರಕಾರದ ವ್ರತಗಳು ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಈ ಎಲ್ಲ ಕರ್ಮಗಳ ಫಲಗಳು ಜಪಯಜ್ಞದ ಫಲದ ಹದಿನಾರರ ಒಂದು ಪಾಲಿಗೆ ಸಮಾನವಾಗಲಾರವು ಎಂಬುದಾಗಿ ಉಪದೇಶಿಸಿದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜಪಯಜ್ಞದ ಮಹತಿಯನ್ನು ಎತ್ತಿ ತೋರಿಸಿದ್ದಾರೆ.

ಉಳಿದ ಕರ್ಮಯಜ್ಞಗಳಲ್ಲಿ ಸಾಧನ ಸಾಮಗ್ರಿಗಳನ್ನು ಸಂಗ್ರಹಿಸುವ ಕಷ್ಟ ಪರಂಪರೆಯು ಇರುತ್ತದೆ. ಆದರೆ ಜಪಯಜ್ಞದಲ್ಲಿ ಅನ್ಯಾನ್ಯ ಸಾಮಗ್ರಿಗಳ ಅವಶ್ಯಕತೆಯೇ ಇರುವುದಿಲ್ಲ. ಇದು ಆಬಾಲ ವೃದ್ಧರಿಗೆಲ್ಲ ಸುಲಭಸಾಧ್ಯವಾದ ಹಾಗೂ ಮಹಾಫಲಕಾರಿ ಯಾದ ಸರಳವಾದ ಯಜ್ಞವು. ಅಂತೆಯೇ ಗೀತೆಯಲ್ಲಿ ''ಯಜ್ಞಾನಾಂ ಜಪ ಯಜ್ಞೋಽಸ್ಮಿ'' ಎಂಬುದಾಗಿ ಭಗವಂತನು ಉಪದೇಶಿಸಿದ್ದಾನೆ. ಈ ಜಪಯಜ್ಞವು ಲೌಕಿಕ ವ್ಯವಹಾರಕ್ಕೆ ಯಾವ ಅಡೆತಡೆಯನ್ನೂ ಉಂಟುಮಾಡುವಂಥದ್ದಲ್ಲ. ಇಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬ ಜೀವಿಗೆ ಲೌಕಿಕ ವ್ಯವಹಾರವು ಪ್ರಧಾನವಾಗಿರುತ್ತದೆ. ಈ ಲೌಕಿಕ ವ್ಯವಹಾರದಿಂದ ಬಿಡುಗಡೆಯನ್ನು ಹೊಂದಿದ ಬಳಿಕ ಆಧ್ಯಾತ್ಮಿಕ ಜೀವನವನ್ನು ಸಾಗಿಸ ಬೇಕೆಂಬುದಾಗಿ ಬಹಳಷ್ಟು ಜನರು ವಿಚಾರಮಾಡುತ್ತಾರೆ. ಆದರೆ ಜೀವವಿರುವವರೆಗೂ ಲೌಕಿಕ ವ್ಯವಹಾರ ತಪ್ಪುವಂಥಾದ್ದಲ್ಲ. ಅಂತೆಯೇ ಜಾಣರು ಲೌಕಿಕದ ಜೊತೆಗೆ ಆಧ್ಯಾತ್ಮ ವನ್ನೂ ಮೈಗೂಡಿಸಿಕೊಳ್ಳುತ್ತಾರೆ. ಆಧ್ಯಾತ್ಮ ಮಾರ್ಗದಲ್ಲಿ ಮುನ್ನಡೆಯುವ ಅಪೇಕ್ಷೆಯುಳ್ಳ ಸಾಧಕರಿಗೆ ಮಂತ್ರಜಪವು ಮೊದಲ ಹೆಜ್ಜೆಯಾಗಿದೆ. ಕಾರಣ ಹೋಗುವಾಗ, ಬರುವಾಗ, ಕುಳಿತಾಗ, ನಿಂತಾಗ ಮತ್ತು ಮನೆಗೆಲಸಗಳನ್ನು ಮಾಡುವಾಗಲೂ ಮಂತ್ರ ಜಪವನ್ನು ಮಾಡಬಹುದು.

ಒಂದು ಸಾರೆ ದತ್ತಾತ್ರೇಯರು ಭಿಕ್ಷೆಗಾಗಿ ಅಲೆಯುತ್ತ ಒಂದು ಮನೆಯ ಅಂಗಳ ದಲ್ಲಿ ನಿಂತು– 'ಭವತೀ ಭಿಕ್ಷಾಂ ದೇಹಿ !' ಎಂದು ಭಿಕ್ಷೆಯನ್ನು ಕೇಳುತ್ತಾರೆ. ಮನೆಯ ಯಜಮಾನಿ ಭತ್ತವನ್ನು ಕುಟ್ಟುವ ಕಾರ್ಯದಲ್ಲಿ ಮಗ್ನಳಾಗಿದ್ದಳಲ್ಲದೆ ನೆರೆಮನೆಯ ಗೆಳತಿಯ ಜೊತೆಗೆ ಯಾವುದೋ ಮಾತಿನಲ್ಲಿ ತನ್ಮಯಳಾಗಿದ್ದಳು. ಅಂತೆಯೇ ಭಿಕ್ಷುಕನ ಧ್ವನಿ ಅವಳಿಗೆ ಕೇಳಬಂದಿರಲಿಲ್ಲ. ಭಿಕ್ಷೆಗೆ ಬಂದ ದತ್ತಾತ್ರೇಯರು ಮಾತಿನಲ್ಲಿ ಮಗ್ನ ವಾಗಿಯೂ ಕಾರ್ಯತತ್ಪರಳಾಗಿದ್ದ ಆ ಯಜಮಾನಿಯ ವ್ಯವಹಾರವನ್ನು ಕಂಡು ಆಶ್ಚರ್ಯಚಕಿತರಾಗಿ ನೋಡುತ್ತ ಅದಾವುದೋ ವಿಚಾರದಲ್ಲಿ ಮುಳುಗಿ ತಾವು ಭಿಕ್ಷೆಗೆ ಬಂದದ್ದನ್ನೇ ಮರೆತುಬಿಟ್ಟರು. ಯಜಮಾನಿಯು ತನ್ನ ಕಾರ್ಯವನ್ನು ಮುಗಿಸಿ ಹೊರಗೆ ನೋಡಿದಾಗ ಓರ್ವ ಯತಿಯು ಭಿಕ್ಷೆಗಾಗಿ ಬಂದದ್ದು ಗೋಚರವಾಯಿತು. ಆಗ ಅವಳು ಅತ್ಯಾದರದಿಂದ ಅದೇ ಆಗ ಕುಟ್ಟಿದ ಅಕ್ಕಿಯನ್ನು ಮೊರದಲ್ಲಿ ಹಾಕಿಕೊಂಡು ಭಿಕ್ಷೆ ನೀಡಲು ಬಂದು, ''ಸ್ವಾಮೀ ! ನಾನು ಕಾರ್ಯಮಗ್ನಳಾದ ಕಾರಣ ತಮ್ಮತ್ತ ಗಮನ ಹರಿಸಲಿಲ್ಲ; ಕ್ಷಮಿಸಿ. ಈ ಭಿಕ್ಷೆಯನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಿ'' ಎಂಬುದಾಗಿ ಬೇಡಿಕೊಂಡಳು. ಆಗ ದತ್ತಾತ್ರೇಯರು– ''ತಾಯೀ ! ನೀನು ಕ್ಷಮೆಯನ್ನು ಯಾಚಿಸಬೇಡ. ಇಂದು ನಾನು ನಿನ್ನನ್ನು ನನ್ನ ಗುರುವನ್ನಾಗಿ ತಿಳಿದುಕೊಂಡಿದ್ದೇನೆ. ನೀನು ಭತ್ತವನ್ನು ಕುಟ್ಟುವಾಗ ನೆರೆಮನೆಯ ಇನ್ನೋರ್ವ ತಾಯಿಯ ಜೊತೆ ಮಾತಿನಲ್ಲಿ ಮಗ್ನ ಳಾಗಿದ್ದೆ. ಆದರೂ ನಿನ್ನ ಕುಟ್ಟುವ ಕ್ರಿಯೆ ನಡೆದೇ ಇತ್ತು. ನೀನು ಮಾತನಾಡುವ ಮಾತು ಗಳು ನಿನ್ನ ಆ ಕುಟ್ಟುವ ಕ್ರಿಯೆಗೆ ಯಾವ ಪ್ರತಿಬಂಧಕವನ್ನೂ ಮಾಡಲಿಲ್ಲ. ಲೌಕಿಕವಾದ ವಾಗ್ ವ್ಯವಹಾರವು ನಮ್ಮ ನಿತ್ಯ ಜೀವನಕ್ಕೆ ಪ್ರತಿಬಂಧಕವಾಗುವುದಿಲ್ಲವೆಂದ ಬಳಿಕ ಪರಮಾತ್ಮನ ನಾಮದ ವಾಚಿಕ ಜಪವು ಅದೆಂತು ಪ್ರತಿಬಂಧಕವಾದೀತು ? ಇದರ ಅರಿವು ನಿನ್ನಿಂದ ನನಗಿಂದು ಆದಕಾರಣ ನಿನ್ನನ್ನು ನನ್ನ ಗುರುವನ್ನಾಗಿ ಭಾವಿಸಿದ್ದೇನೆ''

ಎಂಬುದಾಗಿ ನುಡಿದರು. ಭಿಕ್ಷೆಯನ್ನು ತಂದ ಆ ಹೆಣ್ಣುಮಗಳು ದತ್ತಾತ್ರೇಯರಲ್ಲಿರುವ ಗುಣಗ್ರಾಹಿತ್ವವನ್ನು ಕಂಡು ಬೆರಗಾಗಿ ಅವರ ಜೋಳಿಗೆಯಲ್ಲಿ ಭಿಕ್ಷೆ ನೀಡಿ ತನ್ನನ್ನು ಕೃತಾರ್ಥಳೆಂದು ಭಾವಿಸಿಕೊಂಡಳು. ಮಂತ್ರದ ವಾಚಿಕ ಜಪವು ವ್ಯವಹಾರಕ್ಕೆ ಅಡ್ಡಿಯನ್ನುಂಟು ಮಾಡುವುದಿಲ್ಲವೆಂಬುದನ್ನು ಪ್ರತ್ಯಕ್ಷವಾಗಿ ಅನುಭವಿಸಿದ ದತ್ತಾತ್ರೇಯರು ತಾವೂ ಆ ರೀತಿಯಾಗಿ ಮಾಡುತ್ತ ಅನ್ಯರಿಗೂ ಬೋಧಿಸತೊಡಗಿದರು. ಅಂತೆಯೇ ಬಾಹ್ಯದಲ್ಲಿಯ ಸರ್ವವಿಧವಾದ ಯಜ್ಞಗಳಲ್ಲಿ ಜಪಯಜ್ಞವು ಶ್ರೇಷ್ಠವಾಗಿರುತ್ತದೆ ಎಂಬುದನ್ನರಿತ ಅನೇಕ ಆಚಾರ್ಯರು ಇದಕ್ಕೆ ಬಹು ಮಹತ್ತ್ವವನ್ನು ಕೊಟ್ಟಿದ್ದಾರೆ.

ತ್ರಿವಿಧ ಜಪಗಳಲ್ಲೊಂದಾದ ವಾಚಿಕ ಜಪಯಜ್ಞವನ್ನು ಮಾಡುವ ಸಾಧಕನು ಮೊದಲು ಮೊದಲು ನಿರ್ಜನವಾದ ಪ್ರದೇಶಗಳಲ್ಲಿ ಕುಳಿತುಕೊಂಡು ಮಹಾಮಂತ್ರವನ್ನು ಉಚ್ಚ ಸ್ವರದಲ್ಲಿ ತನಗೆ ಇಂಪಾಗಿ ಕೇಳುವಂತೆ ಉಚ್ಚರಿಸುವ ಅಭ್ಯಾಸವನ್ನು ಮಾಡಬೇಕು. ಇದರಿಂದ ಮನಸ್ಸಿನ ಚಂಚಲತೆಯು ದೂರಾಗಿ ಸಾವಕಾಶವಾಗಿ ಏಕಾಗ್ರತೆಯು ಸಾಧಿಸುತ್ತದೆ. ಹೀಗೆ ಮನಸ್ಸಿನ ಏಕಾಗ್ರತೆಯು ಪ್ರಾಪ್ತವಾದ ನಂತರ ಉಪಾಂಶು ಜಪವನ್ನು ಪ್ರಾರಂಭಿಸಬೇಕು. ಇದು ವಾಚಕ ಜಪಕ್ಕಿಂತಲೂ ನೂರು ಪಾಲು ಅಧಿಕ ಫಲದಾಯಕವಾದುದಾಗಿರುತ್ತದೆ. ಕ್ರಮಶಃ ಈ ಉಪಾಂಶು ಜಪವು ಸಿದ್ಧಿಸಿದ ನಂತರ ಸಾವಕಾಶವಾಗಿ ಮಾನಸಿಕ ಜಪವನ್ನು ಪ್ರಾರಂಭಿಸಬೇಕು. ಈ ಜಪವು ಉಪಾಂಶು ಜಪಕ್ಕಿಂತಲೂ ಸಾವಿರಪಾಲು ಅಧಿಕ ಫಲದಾಯಿಯಾಗಿರುತ್ತದೆ. ಅಂತೆಯೇ ಈ ತ್ರಿವಿಧ ಜಪಗಳಲ್ಲಿ ಮಾನಸಿಕ ಜಪವೇ ಸರ್ವಶ್ರೇಷ್ಠವಾದದ್ದು.

ಪೂಜ್ಯಪಾದರಾದ ರೇಣುಕ ಭಗವತ್ಪಾದರು ಉಪದೇಶಿದ ಈ ತ್ರಿವಿಧ ಜಪ ವಿಧಾನದಲ್ಲಿ ಕ್ರಮವಾಗಿ ವಾಚಿಕ, ಉಪಾಂಶು ಮತ್ತು ಮಾನಸಿಕ ಜಪಗಳನ್ನು ವಿಧಿವತ್ತಾಗಿ ಭಾವಪೂರ್ಣವಾಗಿ ಮಾಡಬೇಕು. ಹೀಗೆ ವಿಧ್ಯುಕ್ತವಾಗಿ ಮಾಡಿದ ಈ ಪಂಚಾಕ್ಷರ ಮಹಾಮಂತ್ರದ ಜಪದಿಂದ ಜೀವಾತ್ಮನ ಪಾಶವು ನಿವೃತ್ತವಾಗಿ ಘೋರತರವಾದ ಸಂಸಾರದಿಂದ ಬಿಡುಗಡೆ ಹೊಂದಿ ಅವನು ಶಿವಸಾಯುಜ್ಯವನ್ನು ಪಡೆಯುವನು.

**ಓಂ ಶಾಂತಿಃ ಶಾಂತಿಃ ಶಾಂತಿಃ**

ದಿನಾಂಕ ೧೨ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



## ಆಶೀರ್ವಚನ-೮

ಅನೇನ ಮೂಲಮಂತ್ರೇಣ ಶಿವಲಿಂಗಂ ಪ್ರಪೂಜಯೇತ್ ।
ನಿತ್ಯ ನಿಯಮಸಂಪನ್ನಃ ಪ್ರಯತಾತ್ಮಾ ಶಿವಾತ್ಮಕ ॥ ೩೪ ॥

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಹಾಗೂ ಸಮಾಧಿಗಳೆಂಬ ಅಷ್ಟಾಂಗ ಯೋಗಸಂಪನ್ನನೂ ಪವಿತ್ರವಾದ ಅಂತಃಕರಣವುಳ್ಳವನೂ, ಶಿವಭಾವಸಂಪನ್ನನೂ ಆದ ಸಾಧಕನು ಪ್ರತಿದಿವಸ ಈ ಪಂಚಾಕ್ಷರ ಮಹಾ ಮಂತ್ರದಿಂದ ತನ್ನ ಇಷ್ಟಲಿಂಗವನ್ನು ವೈಭವಪೂರ್ಣವಾಗಿ ಪೂಜಿಸಬೇಕು.

ಭಕ್ತ್ಯಾ ಪಂಚಾಕ್ಷರೇಣೈವ ಯಃ ಶಿವಂ ಸಕೃದರ್ಚಯೇತ್ ।
ಸೋಽಪಿ ಗಚ್ಛೇಚ್ಛಿವಸ್ಥಾನಂ ಮಂತ್ರಸ್ಯಾಸ್ಯೈವ ಗೌರವಾತ್ ॥ ೩೫ ॥

ಭಕ್ತಿಯುಕ್ತವಾಗಿ ಈ ಪಂಚಾಕ್ಷರಿ ಮಹಾಮಂತ್ರದಿಂದ ಯಾರು ಶಿವನನ್ನು ಒಂದು ಬಾರಿಯಾದರೂ ಪೂಜಿಸುವರೋ ಅವರೂ ಸಹ ಈ ಮಹಾಮಂತ್ರದ ಸಾಮರ್ಥ್ಯದಿಂದ ಶಿವಲೋಕವನ್ನು ಹೊಂದುವರು.

ಅಬ್ಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಷಿತಾಃ ।
ತೇಷಾಮೇತ್ರೈರ್ವ್ರತೈರ್ನಾಸ್ತಿ ಶಿವಲೋಕ ಸಮಾಗಮಃ ॥ ೩೬ ॥

ಜಲಾಹಾರಿಗಳಾಗಿಯೂ, ವಾಯು ಆಹಾರಿಗಳಾಗಿಯೂ ಮತ್ತು ಕೃಚ್ಛ್ರ ಚಾಂದ್ರಾಯಣಾದಿ ಅನ್ಯಾನ್ಯ ವ್ರತಗಳಿಂದಲೂ ಕೃಶಗೊಂಡವರಿಗೆ ಆ ವ್ರತಗಳಿಂದ ಶಿವಲೋಕಪ್ರಾಪ್ತಿಯು ಆಗಲಾರದು.

ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಸ್ತಥಾ ।
ಪಂಚಾಕ್ಷರಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ । ॥ ೩೭ ॥

ಜಗತ್ತಿನಲ್ಲಿ ಮಾಡಲ್ಪಡುವ ನಾನಾವಿಧ ವ್ರತನಿಯಮಗಳು ಯಜ್ಞಯಾಗಗಳು ಹಾಗೂ ತಪಸ್ಸುಗಳೆಲ್ಲವುಗಳು ಪಂಚಾಕ್ಷರಿ ಮಹಾಮಂತ್ರದಿಂದ ಮಾಡಿದ ಶಿವಲಿಂಗ ಪೂಜೆಯ ಕೋಟಿಯ ಒಂದು ಪಾಲಿಗೂ ಸಮಾನವಾಗಲಾರವು.

ಪಂಚಾಕ್ಷರ ಮಹಾಮಂತ್ರದಿಂದ ಶಿವಲಿಂಗವನ್ನು ಪ್ರತಿನಿತ್ಯ ಪೂಜಿಸುವ ಶಿವಭಕ್ತನು ಯಮನಿಯಮಾದಿ ಅಷ್ಟಾಂಗಯೋಗ ಸಂಪನ್ನನಾಗಿರಬೇಕೆಂಬುದನ್ನು ''ನಿಯಮಸಂಪನ್ನಃ'' ಎಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ್ದಾರೆ. ಯೋಗಶಾಸ್ತ್ರದಲ್ಲಿ ಶರೀರ ಹಾಗೂ ಮನೋಬುದ್ಧಿಗಳ ಪರಿಶುದ್ಧತೆಗಾಗಿ– ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಗಳೆಂಬ ಅಷ್ಟಾಂಗ ಯೋಗಗಳನ್ನು ಪ್ರತಿಪಾದಿಸಿದ್ದಾರೆ. ವೀರಶೈವ ಶಿವಯೋಗ ಸಾಧಕರಿಗೆ ಇವುಗಳ ಆಚರಣೆಯೂ ಅವಶ್ಯಕವಾದ್ದರಿಂದ ಅವುಗಳ ಸ್ವರೂಪವನ್ನು ವಿವೇಚಿಸೋಣ.

## ಪಂಚವಿಧ ಯಮಗಳು.

ಮಹರ್ಷಿ ಪತಂಜಲಿಯು– ''ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾ ಪರಿಗ್ರಹಾಃ'' (ಯೋ.ಸೂ. ೨–೩೦) ಈ ಸೂತ್ರದಲ್ಲಿ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮ ಚರ್ಯ ಮತ್ತು ಅಪರಿಗ್ರಹವೆಂಬ ಐದು ಯಮಗಳನ್ನು ನಿರೂಪಿಸಿದ್ದಾನೆ.

೧) ಅಹಿಂಸಾ : ''ತತ್ರಾಹಿಂಸಾ ಸರ್ವಥಾ ಸರ್ವದಾ ಸರ್ವಭೂತಾನಾಮನಭಿ ದ್ರೋಹಃ'' ಅಂದರೆ ಎಂದೂ, ಎಲ್ಲಿಯೂ, ಯಾವ ಪ್ರಾಣಿಗೂ ದ್ರೋಹವನ್ನು ಬಗೆಯ ದಿರುವುದೇ ಅಹಿಂಸೆ ಎಂಬುದಾಗಿ ಭಾಷ್ಯಕಾರನಾದ ವ್ಯಾಸನು ಅಹಿಂಸಾ ಶಬ್ದದ ಅರ್ಥ ವನ್ನು ಪ್ರತಿಪಾದಿಸಿದ್ದಾನೆ. ಇನ್ನು ವೃತ್ತಿಕಾರನಾದ ಭೋಜದೇವನು– ''ತತ್ರ ಪ್ರಾಣ ವಿಯೋಗ ಪ್ರಯೋಜನಂ ವ್ಯಾಪಾರೋ ಹಿಂಸಾ, ಸಾ ಚ ಸರ್ವಾನರ್ಥಹೇತುಃ ತದಭಾವೋಽಹಿಂಸಾ'' ಅಂದರೆ ಯಾವುದೇ ಪ್ರಾಣಿಯ ಪ್ರಾಣವನ್ನು ತೆಗೆಯುವುದು ಹಿಂಸೆಯು. ಇದು ಮಹದನರ್ಥಕಾರಿಯು. ಆದ್ದರಿಂದ ಎಂದೂ ಯಾವುದೇ ಪ್ರಾಣಿಯ ಪ್ರಾಣವನ್ನು ಹಿಂಸಿಸದಿರುವುದೇ ಅಹಿಂಸೆಯೆಂಬುದಾಗಿ ತಿಳಿಯಪಡಿಸಿದ್ದಾನೆ. ಮೀಮಾಂಸಕರು ಯಜ್ಞದಲ್ಲಿ ಕೊಡುವ ಪಶುಬಲಿಯು ಹಿಂಸೆಯಲ್ಲವೆಂದು ಹೇಳಿದರೂ ಯೋಗಶಾಸ್ತ್ರಜ್ಞರು ಅದನ್ನು ಹಿಂಸೆಯೆಂದೇ ಪರಿಗಣಿಸುತ್ತಾರೆ. ಯಜ್ಞದಲ್ಲಿ ಪಶುಹಿಂಸೆ ಯನ್ನು ಮಾಡಿದ ವ್ಯಕ್ತಿಯು ಯಜ್ಞದ ಫಲವಾದ ಸ್ವರ್ಗಸುಖವನ್ನು ಅನುಭವಿಸುವುದರ ಜೊತೆಗೆ ಪ್ರಾಣಹಿಂಸೆಯ ಫಲವಾದ ದುಃಖವನ್ನು ಅನುಭವಿಸಲೇಬೇಕಾಗುತ್ತದೆ. ಅಂತೆಯೇ ಯಾವ ದೋಷವೂ ಇಲ್ಲದ ಯಜ್ಞವೆಂದರೆ ಜಪಯಜ್ಞವೊಂದೇ ಎಂದು ತಿಳಿಯಬೇಕು.

ಸಾಮಾನ್ಯವಾಗಿ ಪ್ರಾಣಿಹಿಂಸೆಯು ಕೃತ, ಕಾರಿತ ಮತ್ತು ಅನುಮೋದಿತವೆಂಬು ದಾಗಿ ಮೂರು ವಿಧವಾಗಿ ಸಂಭವಿಸುತ್ತದೆ. ಪ್ರಾಣಿಯನ್ನು ಸ್ವತಃ ಕೊಂದರೂ, ಅನ್ಯರಿಂದ ಕೊಲ್ಲಿಸಿದರೂ ಅಥವಾ ಕೊಲ್ಲುವವನಿಗೆ ಅನುಮೋದನೆಯನ್ನು ಕೊಟ್ಟರೂ, ಆ ವ್ಯಕ್ತಿಯು ಹಿಂಸಕನೆಂದು ಪರಿಗಣಿಸಲ್ಪಡುತ್ತಾನೆ. ಮನುಷ್ಯನ ಹಿಂಸಾಪ್ರವೃತ್ತಿಗೆ ಲೋಭ, ಕ್ರೋಧ ಮತ್ತು ಮೋಹಗಳೆಂಬ ದುರ್ಗುಣಗಳೇ ಕಾರಣಗಳಾಗಿರುತ್ತವೆ. ಪ್ರಾಣಿಯ ಮಾಂಸ ಚರ್ಮಗಳ ಲೋಭಕ್ಕೊಳಗಾಗಿ ಮನುಷ್ಯನು ಪ್ರಾಣಿಗಳನ್ನು ಹಿಂಸಿಸುತ್ತಾನೆ. ಇನ್ನು ಹಿಂದಿನ ಯಾವುದೇ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಕ್ರೋಧಾವಿಷ್ಟನಾದ ಮನುಷ್ಯನು ಬೇರೊಬ್ಬ ಮನುಷ್ಯನನ್ನು ಕೊಲ್ಲುತ್ತಾನೆ. ಅದರಂತೆ ಯಜ್ಞದಲ್ಲಿ ಪ್ರಾಣಿ ಗಳನ್ನು ಕೊಂದರೆ ಅಥವಾ ದೇವರಿಗೆ ಪ್ರಾಣಿ ಬಲಿಯನ್ನು ಕೊಟ್ಟರೆ ಪುಣ್ಯ ಪ್ರಾಪ್ತ ವಾಗುವುದೆಂಬ ಮೋಹದಿಂದಲೂ ಮನುಷ್ಯನು ಮೂಕ ಪ್ರಾಣಿಗಳನ್ನು ಕೊಲ್ಲುತ್ತಿರು ತ್ತಾನೆ. ಈ ರೀತಿಯಾಗಿ ಲೋಭ, ಕ್ರೋಧ ಮತ್ತು ಮೋಹಗಳಿಗೊಳಗಾಗಿ ಯಾವುದೇ ಪ್ರಾಣಿಯನ್ನು ಸ್ವತಃ ಕೊಂದವನು, ಅನ್ಯರಿಂದ ಕೊಲ್ಲಿಸಿದವನು ಅಥವಾ ಕೊಲ್ಲುವವನಿಗೆ ಅನುಮೋದನೆಯನ್ನು ಕೊಟ್ಟವನು ಇವರೆಲ್ಲರೂ ಹಿಂಸಾದೋಷದಿಂದ ಯುಕ್ತರಾಗಿ ದುಃಖವನ್ನನುಭವಿಸಬೇಕಾಗುತ್ತದೆ. ಕಾರಣ ಸಾಧಕನಾದ ವ್ಯಕ್ತಿಯು ತನ್ನಿಂದ ಯಾವ ವಿಧದಿಂದಲೂ ಪ್ರಾಣಿಹಿಂಸೆಯಾಗದಂತೆ ಎಚ್ಚರಿಕೆಯನ್ನು ವಹಿಸಬೇಕು. ಇದೂ ಅಲ್ಲದೆ

ವಾಣಿಯಿಂದ ಅನ್ಯರಿಗೆ ಅವಾಚ್ಯ ಶಬ್ದಗಳನ್ನು ಪ್ರಯೋಗಿಸುವುದು ಮತ್ತು ಮನದಲ್ಲಿ ಅನ್ಯರ ಅನಿಷ್ಟ ಚಿಂತನೆಗಳನ್ನು ಮಾಡುವುದು– ಇವುಗಳು ಕ್ರಮವಾಗಿ ವಾಚಿಕ ಮತ್ತು ಮಾನಸಿಕ ಹಿಂಸೆಗಳೆಂದು ಕರೆಯಲ್ಪಡುತ್ತವೆ. ಆದಕಾರಣ ಶಾರೀರಿಕ ಹಿಂಸೆಯಿಂದ ಸಾಧಕನು ಜಾಗ್ರತನಾಗಿರುವಂತೆ ವಾಚಿಕ ಮತ್ತು ಮಾನಸಿಕ ಹಿಂಸೆಗಳೂ ತನ್ನಿಂದ ಘಟಿಸ ದಂತೆ ಎಚ್ಚರಿಕೆಯನ್ನು ವಹಿಸಿದಾಗಲೇ ಅವನು ಪರಿಪೂರ್ಣನಾದ ಅಹಿಂಸಕನಾಗು ವನು. ಅಂತೆಯೇ ಈಶ್ವರ ಗೀತೆಯಲ್ಲಿ–

ಕರ್ಮಣಾ ಮನಸಾ ವಾಚಾ ಸರ್ವಭೂತೇಷು ಸರ್ವದಾ ।
ಅಕ್ಲೇಶಜನನಂ ಪ್ರೋಕ್ತಾತ್ವಹಿಂಸಾ ಪರಮರ್ಷಿಭಿಃ ।

(೧೧–೧೪)

ಶರೀರ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳಿಂದ ಯಾವುದೇ ಪ್ರಾಣಿಗೆ ಕ್ಲೇಶ ವನ್ನುಂಟು ಮಾಡದಿರುವುದೇ ಅಹಿಂಸೆ ಎಂಬುದಾಗಿ ಪ್ರತಿಪಾದಿಸಲಾಗಿದೆ.

೨) ಸತ್ಯ : ಸತ್ಯವೆಂದರೆ ಯಥಾರ್ಥವಾಗಿ ನುಡಿಯುವುದು. ಅನ್ಯರನ್ನು ವಂಚಿಸ ದಿರುವ, ಭ್ರಾಂತಿಗೊಳಿಸದಿರುವ, ನಿರರ್ಥಕವಲ್ಲದ ಯಥಾರ್ಥವಾದ ನುಡಿಯೇ ಸತ್ಯ ವಾದ ವಾಣಿಯು. ''ಸತ್ಯಂ ಯಥಾರ್ಥೇ ವಾಙ್ಮನಸಿ'' ಅಂದರೆ ವಾಣಿ ಮತ್ತು ಮನಸ್ಸು ಗಳ ಯಥಾರ್ಥತ್ವವೇ ಸತ್ಯವೆಂಬುದಾಗಿ ಯೋಗಸೂತ್ರದ ಭಾಷ್ಯಕಾರನಾದ ವ್ಯಾಸನು ನಿರೂಪಿಸಿದ್ದಾನೆ. ನೋಡಿರುವದೊಂದು, ಮನಸ್ಸಿನೊಳಗಿರುವುದು ಬೇರೊಂದು, ನುಡಿ ಯುವುದು ಮತ್ತೊಂದಾದರೆ ಸತ್ಯವೆಂದೆನಿಸದು. ವಾಣಿ, ಮನಸ್ಸುಗಳ ಏಕರೂಪತ್ವವೇ ಸತ್ಯವು. ಸತ್ಯವನ್ನು ನುಡಿಯುವುದು ದಶವಿಧ ಧರ್ಮಾಚರಣೆಗಳಲ್ಲೊಂದಾಗಿದೆ. ಸದಾ ಅಸತ್ಯವನ್ನೇ ನುಡಿಯುವ ಅಭ್ಯಾಸವುಳ್ಳ ಜನರಿಗೆ ಸತ್ಯವನ್ನು ನುಡಿಯುವುದು ಕಠಿಣ ವೆಂದೆನಿಸಬಹುದು; ಆದರೆ ಸತತಾಭ್ಯಾಸದಿಂದ ಪ್ರತಿಯೊಬ್ಬರೂ ಸತ್ಯನಿಷ್ಠರಾಗಬಲ್ಲರು. ಮನುಷ್ಯನು ಸ್ವಭಾವತಃ ಸತ್ಯಭಾಷಿಯೇ ಆಗಿರುತ್ತಾನೆ. ಆದರೆ ಆತನ ಮನೋಬುದ್ಧಿಗಳು ವಿಕಾಸವಾದಂತೆಲ್ಲ, ಪರಿಸರದ ಅಸತ್ಯಭಾಷಿಗಳ ಸಂಗದಿಂದ ಅಸತ್ಯಭಾಷಿಯಾಗುವನು. ಅಸತ್ಯ ಭಾಷಣತೆಯು ದುರಭ್ಯಾಸದಿಂದ ಪ್ರಾಪ್ತವಾದ ಕಾರಣ ಅದನ್ನು ಸತ್ಯ ಭಾಷಣದ ಸತತಾಭ್ಯಾಸದಿಂದ ಕಳೆದುಕೊಳ್ಳಬಹುದು. ಸತ್ಯ ನುಡಿಯುವುದು ವಾಙ್ಮಯ ತಪಸ್ಸು. ಸತ್ಯ ನುಡಿಯುವುದಕ್ಕಿಂತ ಶ್ರೇಷ್ಠವಾದ ತಪಸ್ಸು ಬೇರೊಂದಿಲ್ಲ. ಭಗವಂತನು ದಯ ಪಾಲಿಸಿದ ವಾಣಿಯ ದುರುಪಯೋಗವನ್ನು ಮಾಡಿಕೊಂಡಲ್ಲಿ ಮನುಷ್ಯನು ಪಶು, ಪಕ್ಷಿ ಮತ್ತು ಮೃಗಗಳಾಗಿ ಜನಿಸುತ್ತಾನೆಂಬುದಾಗಿ ಮನುಮಹರ್ಷಿಯು ಬೋಧಿಸಿದ್ದಾನೆ. ಆದ ಕಾರಣ ಸಾಧಕನು ಸತತಾಭ್ಯಾಸದಿಂದ ಸತ್ಯವನ್ನೇ ನುಡಿಯುವವನಾಗಬೇಕು.

೩) ಅಸ್ತೇಯ : ''ಸ್ತೇಯಂ ಪರಸ್ವಾಪಹರಣಂ ತದಭಾವೋಽಸ್ತೇಯಮ್'' ಅನ್ಯರ ಧನವನ್ನು ಅಪಹರಿಸುವುದೇ ಸ್ತೇಯ ; ಅದಿಲ್ಲದಿರುವುದೇ ಅಸ್ತೇಯವು. ಸ್ತೇಯ (ಕಳ್ಳತನ)ವು ಅಧರ್ಮವಾದರೆ ಅಸ್ತೇಯವು ಧರ್ಮವೆಂದು ಕರೆಯಿಸಿಕೊಳ್ಳುವುದು. ಅಸ್ತೇಯ ವ್ರತವನ್ನು ಪರಿಪಾಲಿಸುವವನು ಪರಿಶ್ರಮಿಯೂ, ನಿರ್ಭೀತನೂ, ಸ್ವಾವ ಲಂಬಿಯೂ ಹಾಗೂ ಸಂತುಷ್ಟಚಿತ್ತನೂ ಆಗಿರುವನು. ಈ ಸದ್ಗುಣಗಳು ಮನುಷ್ಯನ

ಶಾರೀರಿಕ ಹಾಗೂ ಮಾನಸಿಕ ಆರೋಗ್ಯದ ಕಾರಣಗಳಾಗಿರುವವು. ಅಂತೆಯೇ ಅಸ್ತೇಯಿಯು ಉಭಯವಿಧ ಸ್ವಾಸ್ಥ್ಯವುಳ್ಳವನಾಗಿ ಸುಖಜೀವಿಯಾಗುವನು. ಪರದ್ರವ್ಯಾಪಹಾರಿಯು ಇದಕ್ಕೆ ವಿಪರೀತವಾಗಿ ಉಭಯವಿಧ ಸ್ವಾಸ್ಥ್ಯವನ್ನು ಕಳೆದು ಕೊಂಡು ಕೆಲವೇ ದಿನಗಳಲ್ಲಿ ಅತ್ಯಂತ ದುಃಖಿಯಾಗಿ ನರಳುವನು. ಆದಕಾರಣ ಸಾಧಕನು ಅಸ್ತೇಯ ರೂಪವಾದ ಧರ್ಮವನ್ನು ಪರಿಪಾಲಿಸಬೇಕು.

೪) ಬ್ರಹ್ಮಚರ್ಯ : 'ಬ್ರಹ್ಮಚರ್ಯಂ ಗುಪ್ತೇಂದ್ರಿಯಸ್ಯೋಪಸ್ಥಸ್ಯ ಸಂಯಮಃ' ಗುಪ್ತೇಂದ್ರಿಯವಾದ ಉಪಸ್ಥ ಇಂದ್ರಿಯದ ಸಂಯಮವೇ ಬ್ರಹ್ಮಚರ್ಯವೆಂಬುದಾಗಿ ಭಾಷ್ಯಕಾರನಾದ ವ್ಯಾಸನು ತಿಳಿಯಪಡಿಸಿದ್ದಾನೆ. ಗುಪ್ತೇಂದ್ರಿಯದ ಸಂಯಮವನ್ನು ಮಾಡಿ ಮೈಥುನ ವಿಷಯಕವಾಗಿ ಚಿಂತನೆಯನ್ನು ಮತ್ತು ಮಾತುಗಳನ್ನಾಡುತಿದ್ದರೆ, ಅದು ಪೂರ್ಣ ಬ್ರಹ್ಮಚರ್ಯವೆನಿಸಲಾರದು. ಆದ್ದರಿಂದ ಶರೀರ, ವಾಣಿ ಮತ್ತು ಮನಸ್ಸು ಗಳಿಂದ ಸರ್ವಥಾ ಮೈಥುನ ತ್ಯಾಗವೇ ಬ್ರಹ್ಮಚರ್ಯವೆಂಬುದಾಗಿ–

ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ।
ಸರ್ವತ್ರ ಮೈಥುನತ್ಯಾಗಂ ಬ್ರಹ್ಮಚರ್ಯಂ ಪ್ರಚಕ್ಷತೇ ॥

(ಈಶ್ವರ ಗೀತಾ ; ೧೧–೧೮)

ಈಶ್ವರ ಗೀತೆಯಲ್ಲಿ ಈ ರೀತಿಯಾಗಿ ನಿರೂಪಿಸಲಾಗಿದೆ. ಪ್ರಿಯತಮ ಇಲ್ಲದೆ ಪ್ರೇಯಸಿ ಯನ್ನು ಸ್ಮರಿಸುವುದು, ಅವರ ವಿಷಯಕವಾಗಿಯೇ ಮಾತನಾಡುವುದು, ಅವರೊಂದಿಗೆ ವಿನೋದಕ್ರೀಡೆಯನ್ನಾಡುವುದು, ಪರಸ್ಪರರನ್ನು ಪ್ರೇಕ್ಷಿಸುವುದು, ಪರಸ್ಪರರು ಗುಪ್ತ ವಾಗಿ ಮಾತನಾಡುವುದು, ಮನಸ್ಸಿನಲ್ಲಿ ಸಂಕಲ್ಪಿಸುವುದು, ನಿಶ್ಚಯಿಸುವುದು ಮತ್ತು ಭೋಗಕಾರ್ಯವನ್ನು ಪೂರೈಸುವುದು ಇವು ಮೈಥುನದ ಅಷ್ಟಾಂಗಗಳೆಂದು ಕರೆಯಿಸಿ ಕೊಳ್ಳುವವು. ಈ ಅಷ್ಟವಿಧ ಮೈಥುನದ ತ್ಯಾಗವೇ ಬ್ರಹ್ಮಚರ್ಯವು. ಈ ಬ್ರಹ್ಮಚರ್ಯವು ನೈಷ್ಠಿಕ ಬ್ರಹ್ಮಚರ್ಯ ಮತ್ತು ನುತಬ್ರಹ್ಮಚರ್ಯವೆಂಬುದಾಗಿ ಎರಡು ವಿಧವಾಗಿದೆ. ನೈಷ್ಠಿಕ ಬ್ರಹ್ಮಚಾರಿಯು ಮೇಲೆ ಹೇಳಿದ ಅಷ್ಟವಿಧ ಮೈಥುನಗಳನ್ನು ತನ್ನ ಜೀವನದುದ್ದಕ್ಕೂ ತ್ಯಾಗಮಾಡಿರಬೇಕು. ಇನ್ನು ಗೃಹಸ್ಥಾಶ್ರಮಿಯು ಸಂತಾನಾಪೇಕ್ಷಿ ಯಾಗಿ ಋತುಕಾಲದಲ್ಲಿ ಶಾಸ್ತ್ರವಿಹಿತ ತಿಥಿಗಳಲ್ಲಿ ಮಾತ್ರ ಮೈಥುನವನ್ನಾಚರಿಸಿ, ಉಳಿದ ವೇಳೆಯಲ್ಲಿ ಸಂಯಮದಿಂದ ವರ್ತಿಸುವುದೇ ನುತಬ್ರಹ್ಮಚರ್ಯವು. ಹೀಗೆ ಸಾಧಕನು ಗೃಹಸ್ಥನಾಗಿದ್ದರೆ ನುತ ಬ್ರಹ್ಮಚರ್ಯವನ್ನೂ ಹಾಗೂ ಆತನು ಬ್ರಹ್ಮಚಾರಿ ಅಥವಾ ಸನ್ಯಾಸಿಯಾಗಿದ್ದರೆ, ನೈಷ್ಠಿಕ ಬ್ರಹ್ಮಚರ್ಯವನ್ನೂ ಪರಿಪಾಲಿಸಬೇಕು. ಈ ವಿಧವಾದ ಬ್ರಹ್ಮಚರ್ಯವು ಸಾಧಕನ ಸರ್ವವಿಧವಾದ ಅಭಿವೃದ್ಧಿಗೆ ಕಾರಣವಾಗುತ್ತದೆ.

೫) ಅಪರಿಗ್ರಹ : ಅನ್ಯರ ಧನಾದಿಗಳನ್ನು ಗ್ರಹಿಸುವುದು ಪರಿಗ್ರಹವೆಂಬುದಾಗಿ ಕರೆಯಿಸಿಕೊಂಡರೆ ಅದನ್ನು ಗ್ರಹಿಸದಿರುವಿಕೆಯೇ ಅಪರಿಗ್ರಹವು. ಅಸ್ತೇಯ ಪದದಿಂದ ಚೌರ್ಯಾದಿಗಳಿಂದ ಅನ್ಯರ ದ್ರವ್ಯವನ್ನು ಅಪಹರಿಸಬಾರದೆಂಬುದಾಗಿ ತಿಳಿಸಿ ಸದ್ಯಃ ಅಪರಿಗ್ರಹ ಪದದಿಂದ ದಾನಾದಿಗಳನ್ನೂ ಗ್ರಹಿಸಬಾರದೆಂಬುದಾಗಿ ತಿಳಿಸುತ್ತಾರೆ. ದಾನದ ದ್ರವ್ಯದ ಜೊತೆಗೆ ದಾನಮಾಡುವವನ ದುಷ್ಕೃತವೂ ದಾನವನ್ನು ಗ್ರಹಿಸುವವ

ನಿಗೆ ಪ್ರಾಪ್ತವಾಗುತ್ತದೆ. ಆ ದಾನದ ದ್ರವ್ಯವನ್ನು ಸಾಮಾಜಿಕ ಇಲ್ಲವೆ ಧಾರ್ಮಿಕ ಕಾರ್ಯಗಳಿಗೆ ವಿನಯೋಗಿಸದೆ ಸ್ವಾರ್ಥಕ್ಕಾಗಿ ಉಪಯೋಗಿಸಿದರೆ ದಾನವನ್ನು ತೆಗೆದುಕೊಂಡವನು ಪತಿತನಾಗುತ್ತಾನೆ. ಆದಕಾರಣ ಪರಿಗ್ರಹವು ದೋಷಯುಕ್ತವಾಗಿರೋಣದರಿಂದ ಅದನ್ನು ತ್ಯಜಿಸುವುದೇ ಲೇಸು. ಇನ್ನು ವೃತ್ತಿಕಾರನಾದ ಭೋಜದೇವನು– ''ಅಪರಿಗ್ರಹೋ ಭೋಗಸಾಧನಾ ನಾಮನಂಗೀಕಾರಃ'' (ಯೋ. ಸೂ ವೃತ್ತಿ–೨–೩೦). ಭೋಗಸಾಧನಗಳಾದ ವಿಷಯಗಳನ್ನು ಗ್ರಹಿಸದಿರುವುದೇ ಅಪರಿಗ್ರಹವೆಂಬುದಾಗಿ ಕರೆದಿದ್ದಾನೆ. ಶಬ್ದಸ್ಪರ್ಶಾದಿ ವಿಷಯಗಳು ಅನೇಕ ದೋಷಗಳಿಂದ ಕೂಡಿಕೊಂಡಿರುವುದ ರಿಂದ ಅನ್ಯರ ಧನವನ್ನು ಗ್ರಹಿಸದಿರುವಂತೆ ಶಾಸ್ತ್ರನಿಷದ್ಧ ವಿಷಯಗಳನ್ನು ತ್ಯಜಿಸಿ ದಾಗಲೇ ಅಪರಿಗ್ರಹವು ಪೂರ್ಣವಾಗುವುದು.

ಮೇಲೆ ಹೇಳಿದ ಈ ಅಹಿಂಸಾದಿ ಪಂಚ ಯಮಗಳು ಜಾತಿ, ದೇಶ, ಕಾಲ ಮತ್ತು ಸಮಯಗಳ ಸಾವಚ್ಛಿನ್ನತೆ ಹಾಗೂ ನಿರವಚ್ಛಿನ್ನತೆಯ ಭೇದದಿಂದ ಎರಡು ವಿಧಗಳಾಗಿವೆ. ಮೃಗವನ್ನು ಹೊರತುಪಡಿಸಿ, ಬೇರೆ ಯಾವ ಪ್ರಾಣಿಯನ್ನೂ ಹಿಂಸಿಸುವುದಿಲ್ಲ, ಪವಿತ್ರ ಕ್ಷೇತ್ರಗಳಲ್ಲಿ ಹಿಂಸಿಸುವುದಿಲ್ಲ ಚತುರ್ದಶಿಯಂದು ಹಿಂಸಿಸುವುದಿಲ್ಲ ಮತ್ತು ದೇವರಿ ಗಲ್ಲದೆ ಹಿಂಸಿಸಲಾರೆನು ಎಂಬಿವುಗಳು ಕ್ರಮವಾಗಿ ಜಾತಿ, ದೇಶ,ಕಾಲ ಮತ್ತು ಸಮಯ ಗಳ ಸಾವಚ್ಛಿನ್ನ ಅಹಿಂಸಾವ್ರತವು. ಇನ್ನು ಯಾವುದೇ ಜಾತಿಯ ಪ್ರಾಣಿಯನ್ನು ಯಾವ ದೇಶದಲ್ಲಿಯೂ, ಯಾವ ಕಾಲದಲ್ಲಿಯೂ ಹಾಗೂ ಯಾವ ಪ್ರಯೋಜನಕ್ಕಾಗಿಯೂ ಹಿಂಸಿಸುವುದೇ ಇಲ್ಲ ಎಂಬುದು ನಿರವಚ್ಛಿನ್ನವಾದ ಅಹಿಂಸಾಮಹಾವ್ರತವು. ಇದರಂತೆ ಗೋಬ್ರಾಹ್ಮಣಾದಿಗಳ ಪ್ರಾಣರಕ್ಷಣಾ ವಿಷಯವನ್ನು ಹೊರತುಪಡಿಸಿ ಸತ್ಯವನ್ನು ನುಡಿಯುವುದು ಸಾವಚ್ಛಿನ್ನ ಸತ್ಯವ್ರತವು. ಆದರೆ ಸರ್ವಥಾ ಮಿಥ್ಯಾ ಭಾಷಣವನ್ನು ಮಾಡದಿರುವುದು ಮಹಾ ಸತ್ಯವ್ರತವು. ಇದೇ ಪ್ರಕಾರ ಬರಗಾಲದ ಸಮಯವನ್ನು ಹೊರತುಪಡಿಸಿ ಉಳಿದ ಸಮಯದಲ್ಲಿ ಚೌರ್ಯವನ್ನು ಮಾಡದಿರುವುದು ಅಸ್ತೇಯವ್ರತವು; ಆದರೆ ಯಾವ ಸಮಯದಲ್ಲಿಯೂ ಚೌರ್ಯವನ್ನು ಆದರೆ ಯಾವ ಸಮಯದಲ್ಲಿಯೂ ಚೌರ್ಯವನ್ನು ಮಾಡದೇ ಇರುವುದು ಅಸ್ತೇಯ ಮಹಾವ್ರತವು. ಅದರಂತೆ ಋತುಕಾಲ ವನ್ನು ಹೊರತುಪಡಿಸಿ ಉಳಿದ ಸಯಮದಲ್ಲಿ ಪತ್ನೀಗಮನವನ್ನು ಮಾಡದಿರುವುದು ಸಾವಚ್ಛಿನ್ನ ಬ್ರಹ್ಮಚರ್ಯವ್ರತವು. ಆದರೆ ಋತು ಕಾಲದಲ್ಲಿಯೂ ಪತ್ನೀಗಮನವನ್ನು ಮಾಡದಿರುವುದು ನಿರವಚ್ಛಿನ್ನವಾದ ಬ್ರಹ್ಮಚರ್ಯ ಮಹಾವ್ರತವು. ಇದೇ ಪ್ರಕಾರ ವಾಗಿ ಗುರುದಕ್ಷಿಣೆಯನ್ನು ಕೊಡುವ ಪ್ರಯೋಜನೆಯನ್ನು ಹೊರತುಪಡಿಸಿ ಬೇರಾವ ಕಾರಣಕ್ಕಾಗಿ ಧನವನ್ನು ಗ್ರಹಿಸದಿರುವುದು ಸಾವಚ್ಛಿನ್ನ ಅಪರಿಗ್ರಹ ವ್ರತವು. ಇನ್ನು ಯಾವ ಪ್ರಯೋಜನಕ್ಕಾಗಿಯೂ ಗ್ರಹಿಸದಿರುವುದೇ ನಿರವಚ್ಛಿನ್ನವಾದ ಅಪರಿಗ್ರಹ ಮಹಾವ್ರತವು. ಪತಂಜಲಿ ಮಹರ್ಷಿಯು ನಿರವಚ್ಛಿನ್ನವಾದ ಅಹಿಂಸಾದಿ ಪಂಚ ಮಹಾವ್ರತಗಳನ್ನು ಪರಿಪಾಲಿಸಲು ಆದೇಶವಿತ್ತಿದ್ದಾನೆ. ಈ ಮಹಾವ್ರತಗಳ ಪರಿಪಾಲನೆ ಯಿಂದ ನರಕದ ದ್ವಾರಗಳೆಂದು ಕರೆಯಿಸಿಕೊಳ್ಳುವ ಕಾಮ, ಕ್ರೋಧ ಮತ್ತು ಲೋಭ ಗಳೆಂಬ ದುರ್ಗುಣಗಳು ನಿವೃತ್ತವಾಗುತ್ತವೆ.

## ಪಂಚವಿಧ ನಿಯಮಗಳು

''ಶೌಚ, ಸಂತೋಷ ತಪ, ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ'' (ಯೋ.ಸೂ. ೨–೩೨) ಎಂಬುದಾಗಿ ಮಹರ್ಷಿ ಪತಂಜಲಿಯು ಶೌಚ, ಸಂತೋಷ ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರಪ್ರಣಿಧಾನಗಳೆಂಬ ಪಂಚ ವಿಧವಾದ ನಿಯಮ ಗಳನ್ನು ಪ್ರತಿಪಾದಿಸಿದ್ದಾನೆ.

೧. ಶೌಚ : ಶೌಚವೆಂದರೆ ಶುದ್ಧಿಯು. ಇದು ಬಾಹ್ಯ ಮತ್ತು ಅಭ್ಯಂತರವೆಂಬು ದಾಗಿ ಎರಡು ವಿಧವಾಗಿರುತ್ತದೆ. ಮಣ್ಣು ಮತ್ತು ಜಲಾದಿಗಳಿಂದ ಶರೀರಾದಿಗಳನ್ನು ಶುದ್ಧಗೊಳಿಸಿಕೊಳ್ಳುವುದು ಹಾಗೂ ಹಿತಮಿತವಾದ ಸಾತ್ವಿಕ ಆಹಾರವನ್ನು ಸೇವಿಸುವುದು ಬಾಹ್ಯ ಶೌಚವು. ಇದರಂತೆ ಮೈತ್ರಿ–ಮುದಿತಾದಿಗಳಿಂದ ಮನಸ್ಸಿನ ಮದ ಹಾಗೂ ಅಭಿಮಾನಾದಿ ಮೈಲಿಗೆಯನ್ನು ನಿವಾರಿಸಿಕೊಳ್ಳುವುದು ಅಭ್ಯಂತರ ಶೌಚವು. ಸಾಧಕ ನಾದವನು ಮೇಲೆ ನಿರೂಪಿಸಿದ ರೀತಿಯಲ್ಲಿ ತನ್ನ ಅಂತರಂಗ–ಬಹಿರಂಗಗಳನ್ನು ಸದಾ ಶುಚಿಯಾಗಿ ಇಟ್ಟುಕೊಳ್ಳಬೇಕು.

೨. ಸಂತೋಷ : ತನಗೆ ದೊರೆತ ಭೋಗೋಪಕರಣಗಳಲ್ಲಿಯೇ ಸಮಾಧಾನಿ ಯಾಗಿದ್ದು ಹೆಚ್ಚಿನದನ್ನು ಅಪೇಕ್ಷಿಸದೆ ಇರುವ ಚಿತ್ತವೃತ್ತಿಗೆ ಸಂತೋಷವೆನ್ನುವರು. ಅಂತೆಯೇ ನಿಜಗುಣ ಶಿವಯೋಗಿಗಳು– ''ದೊರೆಯಲೇನದರೊಳು ಪರಿಣತೆದಳೆ ವುದೇ ಚಂದಮಮ'' ಎಂಬುದಾಗಿ ಸಂತೋಷದ ಲಕ್ಷಣವನ್ನು ತಿಳಿಯಪಡಿಸಿದ್ದಾರೆ. ಭೋಗೋಪಕರಣಗಳಿಂದಲೇ ಸಂತೋಷವು ದೊರೆಯುವುದಿಲ್ಲ. ಸಂತೋಷದ ಮೂಲ ಕಾರಣವು ಸಮಾಧಾನವು. ಆದಕಾರಣ ಸಾಧಕನಾದವನು ತನ್ನ ಪ್ರಾರಬ್ಧ ಕರ್ಮಾನುಸಾರವಾಗಿ ದೊರೆತದ್ದರಲ್ಲಿ ಸಮಾಧಾನಿಯಾದರೆ ಮನಸ್ಸು ಸಂತೋಷಗೊಳ್ಳು ವುದಲ್ಲದೆ ಆತನ ಜೀವನವು ಸುಖಮಯವಾಗುವುದು.

೩. ತಪ : ''ತಪೋನಾಮ ಶರೀರಶೋಷಣಮ್'' ಹಸಿವೆ ನೀರಡಿಕೆಗಳನ್ನು ಸಹಿಸೋಣದರಿಂದ, ಕಾಷ್ಠಮೌನ–ಆಕಾರ ಮೌನಾದಿಗಳನ್ನು ಆಚರಿಸುವುದರಿಂದ ಮತ್ತು ಚಾಂದ್ರಾಯಣಾದಿ ವ್ರತಗಳನ್ನು ಪರಿಪಾಲಿಸುವುದರಿಂದ ಉಂಟಾಗುವ ಶರೀರ ಶೋಷಣೆಗೆ ತಪವೆಂದು ಕರೆಯುವರು. ಶ್ರೀ ರೇಣುಕ ಭಗವತ್ಪಾದರು–''ಶಿವಾರ್ಥೇ ದೇಹಸಂಶೋಧಸ್ತಪಃ ಕೃಚ್ಛ್ರಾದಿ ನೋ ಮತಮ್'' (ಸಿ. ಶಿ. ೯–೨೩). ಶಿವಪೂಜೆಗಾಗಿ ಉಪಕರಣಗಳನ್ನು ಅಣಿಮಾಡಿಕೊಳ್ಳುವುದಕ್ಕಾಗಿ ದೇಹವನ್ನು ದಂಡಿಸುವುದೇ ತಪಸ್ಸು. ಕೃಚ್ಛ್ರ ಚಾಂದ್ರಾಯಣಾದಿ ವ್ರತಾಚರಣೆಗಳಿಂದ ದೇಹವನ್ನು ದಂಡಿಸುವುದು ತಪಸ್ಸಲ್ಲ ವೆಂಬುದಾಗಿ ಉಪದೇಶಿಸಿದ್ದಾರೆ. ಆದಕಾರಣ ಅನಾವಶ್ಯಕ ಅತಿ ಉಪವಾಸಾದಿ ಗಳನ್ನಾಚರಿಸಿ ವೀರಶೈವರು ದೇಹಶೋಷಣೆಯನ್ನು ಮಾಡಿಕೊಳ್ಳಬಾರದು.

೪. ಸ್ವಾಧ್ಯಾಯ : ''ಸ್ವಾಧ್ಯಾಯೋ ಮೋಕ್ಷಶಾಸ್ತ್ರಾಣಾಮಧ್ಯಯನಂ ಪ್ರಣವ ಜಪೋ ವಾ'' ಮೋಕ್ಷೋಪದೇಶವನ್ನು ಮಾಡುವ ಶಾಸ್ತ್ರಗಳ ಅಧ್ಯಯನ ಅಥವಾ ಪ್ರಣವ ಜಪಕ್ಕೆ ಸ್ವಾಧ್ಯಾಯವೆನ್ನುವರು. 'ಸ್ವಾಧ್ಯಾಯಾನ್ ಮಾ ಪ್ರಮದಃ' ಎಂಬು ದಾಗಿ ವೇದವೂ ಆದೇಶವನ್ನಿತ್ತಿದೆ. ಆದಕಾರಣ ಸ್ವಾಧ್ಯಾಯವು ನಿತ್ಯಕರ್ಮವಾಗಿದೆ.

ಅಂತೆಯೇ ವೀರಶೈವರು ತಮ್ಮ ಇಷ್ಟಲಿಂಗಪೂಜೆಯನ್ನು ಪೂರೈಸಿದ ಮೇಲೆ ಧರ್ಮಗ್ರಂಥವಾದ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ನಿಯಮಿತವಾಗಿ ಪಾರಾಯಣ ಮಾಡುವುದು ಹಾಗೂ ಅದನ್ನು ಅಭ್ಯಸಿಸಿ ಅದರ ತತ್ತ್ವಗಳನ್ನು ತಿಳಿದುಕೊಂಡು ಆ ತತ್ತ್ವಾಚರಣೆಗಳನ್ನು ಜೀವನದಲ್ಲಿ ಅವಳಡಿಸಿಕೊಳ್ಳುವುದು ಪ್ರತಿಯೊಬ್ಬ ವೀರಶೈವನ ಸ್ವಾಧ್ಯಾಯವು. ಇದನ್ನು ಯಾರೂ ಎಂದೂ ತಪ್ಪಿಸಬಾರದು.

೫. ಈಶ್ವರ ಪ್ರಣಿಧಾನ : ಈಶ್ವರಾರ್ಪಣ ಬುದ್ಧಿಯೇ ಈಶ್ವರ ಪ್ರಣಿಧಾನವು. ತಾನು ಮಾಡುವ ಎಲ್ಲ ಕರ್ಮಗಳನ್ನು ಫಲನಿರಪೇಕ್ಷೆಯಿಂದ ಈಶ್ವರಾರ್ಪಣ ಮಾಡಬೇಕು. ಇದರಿಂದ ಸಾಧಕನು ತಾನು ಮಾಡಿದ ಕರ್ಮಗಳಿಂದ ಲಿಪ್ತನಾಗುವುದಿಲ್ಲ. ಈ ರೀತಿಯಾಗಿ ಈ ಐದು ವಿಧಿರೂಪವಾದ ನಿಯಮಗಳು.

## ಆಸನಗಳು

''ಅಸ್ಯತೇ ಅನೇನೇತಿ ಆಸನಂ'' ಎಂಬ ವ್ಯುತ್ಪತ್ತಿಗನುಸಾರವಾಗಿ ಕುಳಿತುಕೊಳ್ಳುವ ವಿಶಿಷ್ಟ ಪ್ರಕಾರಕ್ಕೆ ಆಸನವೆನ್ನುವರು. ಮಹರ್ಷಿ ಪತಂಜಲಿಯು–''ಸ್ಥಿರ ಸುಖಮಾಸನಮ್'' (ಯೋ. ಸೋ. ೨–೪೬) ಈ ರೀತಿಯಾಗಿ ಆಸನದ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ. ಸ್ಥಿರವಾದದ್ದು ನಿಶ್ಚಲವಾದದ್ದು ಮತ್ತು ಸುಖವನ್ನು ಉಂಟುಮಾಡುವ ಕುಳಿತುಕೊಳ್ಳುವ ಪ್ರಕಾರವೇ ಆಸನವು. ಭಾಷ್ಯಕಾರನಾದ ವ್ಯಾಸನು–ಪದ್ಮಾಸನ, ವೀರಾಸನ, ಭದ್ರಾಸನ, ಸ್ವಸ್ತಿಕಾಸನ, ದಂಡಾಸನ, ಕ್ರೌಂಚನಿಷೀದನ, ಹಸ್ತಿನಿಷೀದನ ಮತ್ತು ಉಷ್ಟ್ರನಿಷೀದನ ಮುಂತಾದ ಯೋಗ ಸಾಧನಕ್ಕೆ ಉಪಯುಕ್ತವಾದ ಅನೇಕ ಆಸನಗಳನ್ನು ಪ್ರತಿಪಾದಿಸಿದ್ದಾನೆ. ಇಲ್ಲಿ ಹೇಳಿರುವ ಎಲ್ಲ ಆಸನಗಳು ಶರೀರದ ಸ್ವಾಸ್ಥ್ಯವರ್ಧನಕ್ಕೆ ಸಹಾಯಕಗಳಾಗಿರುವುದರಿಂದ ಜೊತೆಗೆ ಮಾನಸಿಕ ಸಂತುಲನವನ್ನು ಬೆಳೆಸಿಕೊಳ್ಳಲು ಉಪಯುಕ್ತವಾಗಿರುತ್ತವೆ. ಶಿವಯೋಗವನ್ನು ಸಾಧಿಸುವ ಸಾಧಕನು ತನಗೆ ಅನುಕೂಲವಾದ ರೀತಿಯಲ್ಲಿ ಪದ್ಮಾಸನ, ಸಿದ್ಧಾಸನ ಅಥವಾ ಸುಖಾಸನದಲ್ಲಿ ಕುಳಿತು ಶಿವಪೂಜೆ ಹಾಗೂ ಶಿವಯೋಗಗಳನ್ನು ಮಾಡಬೇಕು.

## ಪ್ರಾಣಾಯಾಮ

ಶಾಸ್ತ್ರೋಕ್ತ ಪದ್ಧತಿಯಂತೆ ಶ್ವಾಸ–ಪ್ರಶ್ವಾಸಗಳ ಸ್ವಾಭಾವಿಕವಾದ ಗತಿಯನ್ನು ತಡೆಯುವುದೇ ಪ್ರಾಣಾಯಾಮವು. ಈ ಪ್ರಾಣಾಯಾಮವನ್ನು ಅಭ್ಯಸಿಸುವ ಪೂರ್ವದಲ್ಲಿ ಆಸನಸಿದ್ಧಿಯು ಪ್ರಾಪ್ತವಾಗಿರಬೇಕು. ಅಂತೆಯೇ ಮಹರ್ಷಿ ಪತಂಜಲಿಯು–''ತಸ್ಮಿನ್ ಸತಿ ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಾಮಃ'' (ಯೋ. ಸೂ. ೨–೪೯) ಎಂಬುದಾಗಿ ನಿರೂಪಿಸಿದ್ದಾನೆ.

ಈ ಪ್ರಾಣಾಯಾಮದಲ್ಲಿ ಪೂರಕ, ಕುಂಭಕ ಮತ್ತು ರೇಚಕಗಳೆಂದು ಮೂರು ಪ್ರಕಾರಗಳಿರುತ್ತವೆ. ಹೊರಗಿನ ಶ್ವಾಸವನ್ನು ಕ್ರಮಬದ್ಧವಾಗಿ ಒಳಗೆ ಎಳೆದುಕೊಳ್ಳುವುದಕ್ಕೆ ಪೂರಕವೆನ್ನುವರು. ಒಳಬಂದ ಆ ಶ್ವಾಸವನ್ನು ಕೆಲವು ಕಾಲದವರೆಗೆ ತಡೆವಾಗ ಅದು ಕುಂಭಕವೆಂದೆನಿಸುವುದು. ಆ ತಡೆದ ಪ್ರಾಣವನ್ನು ಸಾವಕಾಶವಾಗಿ ಹೊರಹಾಕುವುದಕ್ಕೆ ರೇಚಕವೆಂದು ಕರೆಯುತ್ತಾರೆ. ಇವುಗಳ ವಿಶಿಷ್ಟವಾದ ಪದ್ಧತಿಯನ್ನು ಯೋಗಾಚಾರ್ಯ

ರಿಂದ ಸರಿಯಾಗಿ ತಿಳಿದುಕೊಂಡೇ ಅಭ್ಯಾಸ ಮಾಡಬೇಕು. ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವ ಸಾಧಕನಿಗೆ ಪ್ರಾಣಾಯಾಮವು ಅತ್ಯಂತ ಫಲಕಾರಿಯಾಗುವುದು. ಆದಕಾರಣ ಪ್ರತಿಯೊಬ್ಬ ಸಾಧಕನು ಪ್ರಾಣಾಯಾಮ ಪುರಸ್ಸರವಾಗಿಯೇ ಪಂಚಾಕ್ಷರ ಮಹಾಮಂತ್ರದ ಜಪಾಭ್ಯಾಸವನ್ನು ಮಾಡಬೇಕು.

## ಪ್ರತ್ಯಾಹಾರ

ಶ್ರೋತ್ರಾದಿ ಇಂದ್ರಿಯಗಳ ಸ್ವ–ಸ್ವ ವಿಷಯಗಳಿಂದ ವಿಮುಖೀಕರಣವೇ ಪ್ರತ್ಯಾಹಾರವು. ಪ್ರಾಣಾಯಾಮದ ಮುಖಾಂತರ ಚಿತ್ತವು ನಿರೋಧಗೊಂಡಾಗ ಹೊರಗಿನ ಸರ್ವ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಿಂದ ನಿವೃತ್ತವಾಗುತ್ತವೆ. ಆದ್ದರಿಂದ ಚಿತ್ತನಿರೋಧ ಕಾಲದಲ್ಲಿ ಇಂದ್ರಿಯಗಳ ನಿರೋಧಕ್ಕೆ ಬೇರೊಂದು ಉಪಾಯದ ಅವಶ್ಯಕತೆ ಇರುವುದಿಲ್ಲ. ಜೇನುಹುಳಗಳಲ್ಲಿಯ ರಾಜಹುಳವು ಹಾರಿ ಹೋದರೆ ಎಲ್ಲ ಹುಳಗಳು ಹಾರಿಹೋಗುತ್ತವೆ. ಅದು ಕುಳಿತರೆ ಎಲ್ಲವುಗಳೂ ಹೇಗೆ ಕುಳಿತುಕೊಳ್ಳುತ್ತವೆಯೋ ಅದರಂತೆ ಇಂದ್ರಿಯಗಳ ಅಧ್ಯಕ್ಷನಾದ ಮನಸ್ಸು ಪ್ರಾಣಾಯಾಮದ ಮುಖಾಂತರ ಅಂತರ್ಮುಖಗೊಂಡಾಗ ಉಳಿದೆಲ್ಲ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಿಂದ ವಿಮುಖವಾಗುತ್ತವೆ. ಇಂದ್ರಿಯಗಳ ಈ ವಿಷಯ ವೈಮುಖ್ಯತೆಯೇ ಪ್ರತ್ಯಾಹಾರ.

## ಧಾರಣಾ

''ದೇಶಬಂಧಶ್ಚಿತ್ತಸ್ಯಧಾರಣಾ'' (ಯೋ.ಸೂ. ೩–೧) ಎಂಬುದಾಗಿ ಪತಂಜಲಿ ಮಹರ್ಷಿಯು ಧಾರಣದ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ. ಅಂದರೆ ಯಾವುದೇ ಒಂದು ವಿಶಿಷ್ಟ ಸ್ಥಾನದಲ್ಲಿ ಚಿತ್ತವನ್ನು ಸ್ಥಿರಗೊಳಿಸುವುದೇ ಧಾರಣೆಯು. ಯೋಗಶಾಸ್ತ್ರದಲ್ಲಿ ನಾಭಿ, ಹೃದಯ ಮತ್ತು ನಾಸಿಕಾಗ್ರ ಮುಂತಾದ ಶರೀರದ ವಿಶಿಷ್ಟ ಸ್ಥಾನಗಳಲ್ಲಿ ಅಥವಾ ಸೂರ್ಯ, ಚಂದ್ರ ಮತ್ತು ಅಗ್ನಿ ಮುಂತಾದ ಬಾಹ್ಯ ಪದಾರ್ಥಗಳಲ್ಲಿ ಚಿತ್ತವೃತ್ತಿಯನ್ನು ಬಂಧಿಸುವುದಾಗಿ ತಿಳಿಸಿದ್ದಾರೆ. ಈ ರೀತಿಯಾದ ಚಿತ್ತಬಂಧನವೇ ಧಾರಣೆಯು. ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವ ಸಾಧಕನು ತನ್ನ ಚಿತ್ತವನ್ನು ನಾಭಿ, ಹೃದಯ ಇಲ್ಲವೆ ತನ್ನ ವಾಮಹಸ್ತಪೀಠದಲ್ಲಿರಿಸಿದ ಇಷ್ಟಲಿಂಗದಲ್ಲಿ ನೆಲೆಗೊಳಿಸಿ ಧಾರಣಾಯುಕ್ತನಾಗಿರಬೇಕು.

## ಧ್ಯಾನ

''ತತ್ರ ಪ್ರತ್ಯಯೈಕತಾನತಾ ಧ್ಯಾನಮ್'' (ಯೋ. ಸೂ. ೩–೨) ಈ ರೀತಿಯಾಗಿ ಮಹರ್ಷಿಯು ಧ್ಯಾನದ ಲಕ್ಷಣವನ್ನು ತಿಳಿಯಪಡಿಸಿದ್ದಾನೆ. ತಾತ್ಪರ್ಯವೇನೆಂದರೆ– ಪೂರ್ವದಲ್ಲಿ ಹೇಳಿದ ಪ್ರಕಾರ ಯಾವ ದೇಶ–ವಿಶೇಷದಲ್ಲಿ ಚಿತ್ತವು ಬಂಧಿಸಲ್ಪಟ್ಟಿರುವುದೋ ಅಲ್ಲಿಯೇ ನಿರಂತರವಾಗಿ ಧ್ಯೇಯಾಕಾರವೃತ್ತಿಯನ್ನು ಅಖಂಡವಾಗಿ ಪ್ರವಹಿಸುವುದೇ ಧ್ಯಾನವು. ಜಪಾಭ್ಯಾಸವನ್ನು ಮಾಡುವ ಸಾಧಕನು ಧ್ಯಾನಯುಕ್ತನಾಗಿ ಜಪವನ್ನು ಮಾಡಿದರೆ ಅದು ಸಧ್ಯಾನ ಜಪವೆಂದು ಕರೆಯಿಸಿಕೊಳ್ಳುವುದು. ಅಂತೆಯೇ ಶಿವಯೋಗ ಸಾಧಕನು ತನ್ನ ಹಸ್ತ ಪೀಠದಲ್ಲಿರಿಸಿದ ಇಷ್ಟಲಿಂಗದ ಆಕಾರದ ಜ್ಯೋತಿರ್ಲಿಂಗವನ್ನು

ಮೂಲಾಧಾರ, ಹೃದಯ ಅಥವಾ ಭ್ರೂಮಧ್ಯ ಇವುಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿ ನಿರಂತರ ಧ್ಯಾನಗೈಯುತ್ತ ಪಂಚಾಕ್ಷರ ಜಪಾಭ್ಯಾಸವನ್ನು ಮಾಡಬೇಕು.

### ಸಮಾಧಿ

"ತದೇವಾರ್ಥಮಾತ್ರನಿರ್ಭಾಸಂ ಸ್ವರೂಪ ಶೂನ್ಯಮಿವ ಸಮಾಧಿಃ" (ಯೋ. ಸು. ೩–೩) ಇಂತೆಂಬುದಾಗಿ ಮಹರ್ಷಿಯು ಸಮಾಧಿಯ ಲಕ್ಷಣವನ್ನು ನಿರೂಪಿಸಿದ್ದಾನೆ. ಧ್ಯಾನಾಸಕ್ತನಾದ ಸಾಧಕನು ಧ್ಯಾತೃ–ಧ್ಯಾನಗಳನ್ನು ಮರೆತು ಧ್ಯೇಯ ಸ್ವರೂಪನಾದಾಗ ಸಮಾಧಿ ಸ್ಥಿತಿಯು ಪ್ರಾಪ್ತವಾಗುತ್ತದೆ. ನೀರಿನಲ್ಲಿ ಬಿದ್ದ ಲವಣಖಂಡವು ಕಾಲಾಂತರದಲ್ಲಿ ಜಲರೂಪವಾಗಿ ತನ್ನ ಅತಿರಿಕ್ತವಾದ ಅಸ್ತಿತ್ವವನ್ನು ಕಳೆದುಕೊಂಡು ಜಲ ಸ್ವರೂಪವಾಗಿಯೇ ಭಾಸಿಸುವಂತೆ ಧಾನಾಸಕ್ತನಾದ ಸಾಧಕನು ನಿರಂತರವಾದ ಧ್ಯೇಯದ ಚಿಂತನೆಯಿಂದಾಗಿ ಯಾವಾಗ ಧ್ಯೇಯರೂಪನಾಗುವನೋ ಆ ಅವಸ್ಥೆಗೆ ಸಮಾಧಿ ಅವಸ್ಥೆ ಎನ್ನುವರು. ಅಂದರೆ ಧ್ಯಾನದ ಪರಿಪಕ್ವವಾದ ಅವಸ್ಥೆಯೇ ಸಮಾಧಿಯು. ಅಂತೆಯೇ ಸ್ಕಂದ ಪುರಾಣದಲ್ಲಿ–

ಧಾರಣಾ ಪಂಚನಾಡಿಕಾ ಧ್ಯಾನಂ ಸ್ಯಾತ್ ಷಷ್ಠಿನಾಡಿಕಮ್ ।
ದಿನದ್ವಾದಶಕೇನೈವ ಸಮಾಧಿರಭಿಧೀಯತೇ ॥

ಈ ರೀತಿಯಾಗಿ ಧಾರಣಾ, ಧ್ಯಾನ ಮತ್ತು ಸಮಾಧಿಗಳ ವಿಲಕ್ಷಣತೆಯನ್ನು ಸ್ಪಷ್ಟಪಡಿಸ ಲಾಗಿದೆ. ಇದರ ತಾತ್ಪರ್ಯವೇನೆಂದರೆ– ನಾಡಿಗೆ 'ಘಟಿಕಾ' ಎಂದು ಕರೆಯುತ್ತಾರೆ. ಎರಡೂವರೆ ಘಟಿಕಾ (ಘಳಿಗೆ) ಅಂದರೆ ಒಂದು ತಾಸು. ಪಂಚನಾಡಿ ಪರ್ಯಂತವಾಗಿ ಅರ್ಥಾತ್ ಎರಡು ತಾಸುಗಳವರೆಗೆ ಚಿತ್ತವು ಏಕಾಗ್ರವಾಗಿದ್ದರೆ ಅದು 'ಧಾರಣಾ' ಎಂದು ಕರೆಯಿಸಿಕೊಳ್ಳುವುದು. ಇನ್ನು ಅರವತ್ತುನಾಡಿಗಳ ಪರ್ಯಂತವಾಗಿ ಅಂದರೆ ಇಪ್ಪತ್ತ್ನಾಲ್ಕು ತಾಸುಗಳವರೆಗೆ ಚಿತ್ತವೃತ್ತಿಯ ಏಕಾಗ್ರತೆಯನ್ನು ತಾಳಲು 'ಧ್ಯಾನ'ವೆನಿಸಿ ಕೊಳ್ಳುವುದು. ಅದರಂತೆ ಹನ್ನೆರಡು ದಿನಗಳ ಪರ್ಯಂತವಾಗಿ ಚಿತ್ತವೃತ್ತಿಯ ನಿರಂತರ ಏಕಾಗ್ರವಾದರೆ ಅದುವೇ 'ಸಮಾಧಿ'ಯು.

ಸಮಾಧಿಯು ಅಷ್ಟಾಂಗಯೋಗದ ಕೊನೆಯ ಅಂಗವು, ಸಧ್ಯಾನ ಜಪಾಸಕ್ತನಾದ ಸಾಧಕನು ತನ್ನ ನಿರಂತರ ಸಾಧನೆಯ ಫಲಸ್ವರೂಪವಾಗಿ ಸಮಾಧಿಸ್ಥಿತಿಯನ್ನು ಪ್ರಾಪ್ತ ಮಾಡಿಕೊಳ್ಳುತ್ತಾನೆ. ಈ ರೀತಿಯಾಗಿ ಈ ಅಷ್ಟಾಂಗಯೋಗಗಳು ಶಿವಯೋಗಕ್ಕೂ ಸಹಾಯಕಗಳಾಗಿರುವುದರಿಂದ ಪಂಚಾಕ್ಷರ ಜಪಾಭ್ಯಾಸಿಯು ಇವುಗಳನ್ನು ತನ್ನ ಸಾಧನೆ ಯಲ್ಲಿ ಅಳವಡಿಸಿಕೊಳ್ಳಬೇಕೆಂಬುದನ್ನು ಪೂಜ್ಯಪಾದರಾದ ಶ್ರೀ ರೇಣುಕರು "ನಿಯಮ ಸಂಪನ್ನಃ" ಎಂಬುದಾಗಿ ಸೂತ್ರರೂಪದಲ್ಲಿ ಸೂಚಿಸಿದ್ದಾರೆ. ಆಚಾರ್ಯರ ಆದೇಶದಂತೆ ಈ ಅಷ್ಟಾಂಗಗಳನ್ನು ನಿತ್ಯವೂ ಆಚರಿಸುತ್ತ ತನ್ನ ಸ್ಥೂಲ ಮತ್ತು ಸೂಕ್ಷ್ಮ ಶರೀರಗಳಲ್ಲಿಯ ದೋಷಗಳನ್ನು ಕಳೆದುಕೊಂಡು ಸಾಧಕನು ಸ್ಥಿರವಾದ ಚಿತ್ತವುಳ್ಳವನಾಗುತ್ತಾನೆ. ಇಂತಹ ಸ್ಥಿರಚಿತ್ತನೇ ತನ್ನ ಪ್ರಯತ್ನದಿಂದಾಗಿ ಶಿವಾತ್ಮಕನಾಗಬಲ್ಲನು.

ಪಂಚಾಕ್ಷರ ಮಹಾಮಂತ್ರದ ಮಹಿಮೆಯು ಅವರ್ಣನೀಯವಾದುದು. ಭಕ್ತಿ ಸಂಪನ್ನನಾದ ಸಾಧಕನು ಈ ಮಹಾಮಂತ್ರವನ್ನು ಕೇವಲ ಒಂದೇ ಸಾರೆ ಪಠಿಸಿ ಶಿವನನ್ನು

ಪೂಜಿಸಿದ್ದಾದರೆ ಅವನಿಗೂ ಶಿವಸಾಯುಜ್ಯವು ಪ್ರಾಪ್ತವಾಗುತ್ತದೆ. ಈ ಪೂರ್ವದಲ್ಲಿ ಹೇಳಿದ ಅಷ್ಟಾಂಗಸಂಪನ್ನನಾದ ಸಾಧಕನು ಪಡೆದ ಆ ಶಿವಸ್ವರೂಪವನ್ನು ಅಷ್ಟಾಂಗದ ಅಭ್ಯಾಸವನ್ನು ಮಾಡದೇ ಇರುವ ಕೇವಲ ಭಕ್ತಿಸಂಪನ್ನನಾದ ಸಾಧಕನೂ ಪಡೆಯ ಬಲ್ಲನು. ಇಲ್ಲಿ ಅಷ್ಟಾಂಗಯೋಗ ಹಾಗೂ ಶಿವಭಕ್ತಿ ಇವುಗಳೆರಡನ್ನೂ ಹೋಲಿಕೆಗೊಳಿಸಿ ನೋಡಿದಾಗ ಭಕ್ತಿಯೇ ಶ್ರೇಷ್ಠವೆಂಬುದಾಗಿ ತಿಳಿದುಬರುತ್ತದೆ. ಸಾಧ್ಯವಿದ್ದವರು ಯೋಗಾಂಗಗಳನ್ನು ಸಾಧಿಸಿಕೊಂಡು ಪಂಚಾಕ್ಷರ ಮಹಾಮಂತ್ರವನ್ನು ಪಠಿಸುತ್ತ ಇಷ್ಟಲಿಂಗವನ್ನು ಪೂಜಿಸಿ ಶಿವಸ್ವರೂಪವನ್ನು ಪಡೆಯಬಹುದು. ಇನ್ನು ಅದು ಸಾಧ್ಯ ವಾಗದವರು ಕೇವಲ ಭಕ್ತಿಮಾತ್ರದಿಂದ ಆ ಸ್ಥಿತಿಯನ್ನು ಹೊಂದಲು ಸಾಧ್ಯವೆಂಬುದನ್ನು ಪೂಜ್ಯರು– ''ಭಕ್ತ್ಯಾಪಂಚಾಕ್ಷರೇಣೈವ'' ಎಂಬುದಾಗಿ ಉಪದೇಶಿಸಿದ್ದಾರೆ.

ಈ ಲೋಕದಲ್ಲಿ ಅನೇಕ ಜನ ಹಠಯೋಗಿಗಳು ಕೇವಲ ನೀರನ್ನು ಸೇವಿಸಿ, ಮತ್ತೆ ಕೆಲವರು ಕೇವಲ ವಾಯು ಆಹಾರಿಗಳಾಗಿ ಕಠೋರವಾದ ವ್ರತಗಳನ್ನಾಚರಿಸಿ ತಮ್ಮ ಶರೀರಗಳನ್ನು ದಂಡಿಸುತ್ತಿರುವುದನ್ನು ಕಾಣುತ್ತೇವೆ. ಇಂತಹ ಶರೀರ ದಂಡನಾತ್ಮಕವಾದ ವ್ರತಗಳನ್ನಾಚರಿಸುವುದರಿಂದ ಮನುಷ್ಯನ ಮನಸ್ಸಿನಲ್ಲಿ ಸಾತ್ವಿಕ ಭಾವನೆಗಳ ಹೊರತಾಗಿ ರಾಜಸೀ ಹಾಗೂ ತಾಮಸೀ ಭಾವನೆಗಳೇ ಪ್ರಾದುರ್ಭವಿಸಿ ಸಾಧಕನು ಅಭಿಮಾನಿಯೂ ಅಹಂಕಾರಿಯೂ ಆಗುವ ಸಾಧ್ಯತೆ ಇರುತ್ತದೆ. ಈ ಅಭಿಮಾನ ಅಹಂಕಾರಗಳು ಶಿವ ಸ್ವರೂಪವನ್ನು ಹೊಂದಲು ಬಾಧಕಗಳಾಗಿರುತ್ತವೆ. ಅಂತೆಯೇ ಶಿವಭಕ್ತಿಯಿಲ್ಲದ ಮತ್ತು ಪಂಚಾಕ್ಷರ ಮಹಾಮಂತ್ರದ ಜಪಾಭ್ಯಾಸವಿಲ್ಲದ ಈ ಕಠೋರ ವ್ರತಾಚಾರಿಗಳಿಗೆ ಶಿವಲೋಕ ಸಮಾಗಮವು ಅದೆಂದಿಗೂ ಆಗದೆಂಬುದಾಗಿ ಶ್ರೀ ರೇಣುಕರು– ''ತೇಷಾ ಮೇತೈರ್ವ್ರತೈರ್ನಾಸ್ತಿ ಶಿವಲೋಕ ಸಮಾಗಮಃ'' ಹೀಗೆ ಅಪ್ಪಣೆಕೊಡಿಸಿದ್ದಾರೆ.

ಆದಕಾರಣ ತಪಸ್ಸು, ಯಜ್ಞ, ವ್ರತ ಹಾಗೂ ಅತ್ಯಂತ ಕಠಿಣವಾದ ನಿಯಮ ಗಳನ್ನು ಮಾಡುವ ಗೊಡವೆಯನ್ನು ಬಿಟ್ಟು, ಶಿವಭಕ್ತಿಸಂಪನ್ನನಾಗಿ ಪಂಚಾಕ್ಷರ ಮಹಾ ಮಂತ್ರದ ಜಪವನ್ನೇ ಮಾಡುತ್ತ ಹೋದರೆ ಸಾಧಕನು ಏನೆಲ್ಲವನ್ನೂ ಪಡೆಯಲು ಸಮರ್ಥನಾಗುತ್ತಾನೆ. ಏಕೆಂದರೆ ಈ ಉಳಿದೆಲ್ಲ ವ್ರತಗಳು ಪಂಚಾಕ್ಷರ ಮಹಾಮಂತ್ರ ವನ್ನು ಜಪಿಸುತ್ತ ಶಿವಲಿಂಗವನ್ನು ಒಂದು ಸಾರೆ ಪೂಜಿಸಿದರೆ ಪ್ರಾಪ್ತವಾಗುವ ಫಲದ ಕೋಟಿಯಲ್ಲೊಂದು ಪಾಲಿಗೂ ಸಮಾನವಾಗಲಾರವೆಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ. ಅದು ಕಾರಣ ಪ್ರತಿಯೊಬ್ಬ ವೀರಶೈವನು ತನ್ನ ಗುರುವಿನಿಂದ ಪ್ರಾಪ್ತವಾದ ಈ ಮಹಾಮಂತ್ರವನ್ನು ಅತ್ಯಂತ ಭಕ್ತಿಪೂರ್ವಕವಾಗಿ ಪಠಿಸುತ್ತ ತನ್ನ ಇಷ್ಟಲಿಂಗದ ಪೂಜೆಯನ್ನು ಗೈದು ಶಿವ ಸ್ವರೂಪನಾಗಲು ಪ್ರಯತ್ನಿಸಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

## ಆಶೀರ್ವಚನ-೯

ಅಶುದ್ಧೋ ವಾ ವಿಶುದ್ಧೋ ವಾ ಸಕೃತ್ ಪಂಚಾಕ್ಷರೇಣ ಯಃ ।
ಪೂಜಯೇತ್ ಪತಿತೋವಾಽಪಿ ಮುಚ್ಯತೇ ನಾತ್ರ ಸಂಶಯಃ ॥ ೩೮ ॥

ಅಶುದ್ಧನೇ ಆಗಿರಲಿ, ಪರಿಶುದ್ಧನೇ ಆಗಿರಲಿ ಅಥವಾ ವ್ರತಭ್ರಷ್ಟನಾದ ಪತಿತನೇ ಆಗಿರಲಿ ಒಂದು ಸಾರೆ ಈ ಪಂಚಾಕ್ಷರ ಮಹಾಮಂತ್ರವನ್ನು ಪಠಿಸುತ್ತ ಶಿವಲಿಂಗವನ್ನು ಪೂಜಿಸಿದರೆ ಅವನು ಅವಶ್ಯವಾಗಿ ಮುಕ್ತನಾಗುತ್ತಾನೆ. ಇದರಲ್ಲಿ ಯಾವ ಸಂದೇಹವೂ ಇಲ್ಲ.

ಸಕೃದುಚ್ಚಾರಮಾತ್ರೇಣ ಪಂಚಾಕ್ಷರಮಹಾಮನೋಃ ।
ಸರ್ವೇಷಾಮಪಿ ಜಂತೂನಾಂ ಸರ್ವಪಾಪಕ್ಷಯೋ ಭವೇತ್ ॥ ೩೯ ॥

ಈ ಪಂಚಾಕ್ಷರ ಮಹಾಮಂತ್ರವನ್ನು ಒಂದೇ ಒಂದು ಬಾರಿ ಉಚ್ಚರಿಸಿದರೂ ಎಲ್ಲ ಪ್ರಾಣಿಗಳ ಎಲ್ಲ ವಿಧವಾದ ಪಾಪಗಳು ನಾಶವಾಗುತ್ತವೆ.

ಅನ್ಯೇಽಪಿ ಬಹವೋ ಮಂತ್ರಾ ವಿದ್ಯಂತೇ ಸಕಲಾಗಮೇ ।
ಭೂಯೋಭೂಯಃ ಸಮಭ್ಯಾಸಾತ್ ಪುರುಷಾರ್ಥಪ್ರದಾಯಿನಃ ॥ ೪೦ ॥

ಶಿವಾಗಮಗಳಲ್ಲಿ ಈ ಪಂಚಾಕ್ಷರ ಮಹಾಮಂತ್ರಕ್ಕಿಂತಲೂ ಭಿನ್ನವಾದ ಅನೇಕ ಮಂತ್ರಗಳು ಪ್ರತಿಪಾದಿಸಲ್ಪಟ್ಟಿವೆ. ಆದರೆ ಅವೆಲ್ಲವುಗಳು ಮೇಲಿಂದ ಮೇಲೆ ಜಪವನ್ನು ಮಾಡಿದಾಗ ಮಾತ್ರ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡಬಲ್ಲವುಗಳಾಗಿವೆ.

ಏಷ ಮಂತ್ರೋ ಮಹಾಶಕ್ತಿರೀಶ್ವರಪ್ರತಿಪಾದಕಃ ।
ಸಕೃದುಚ್ಚಾರಣಾದೇವ ಸರ್ವಸಿದ್ಧಿಪ್ರದಾಯಕಃ ॥ ೪೧ ॥

ಪರಶಿವನ ಮಹಾತ್ಮೆಯನ್ನು ಪ್ರತಿಪಾದಿಸುವ ಮಹಾಶಕ್ತಿಶಾಲಿಯಾದ ಈ ಪಂಚಾಕ್ಷರ ಮಹಾಮಂತ್ರವು ಒಂದೇ ಬಾರಿ ಉಚ್ಚರಿಸುವುದರಿಂದಲೇ ಸಕಲ ಇಷ್ಟಾರ್ಥಗಳನ್ನು ಕೊಡುವಂತಹದಾಗಿದೆ.

ಇಹಲೋಕದಲ್ಲಿ ಅಷ್ಟಾಂಗಸಂಪನ್ನರಾದ ಯೋಗಿಗಳಿಗಿಂತಲೂ ವಿಷಯಾಸಕ್ತರಾದ ಭೋಗಿಗಳು, ವಿಹಿತಕರ್ಮಗಳನ್ನಾಚರಿಸಿ, ಪವಿತ್ರಾತ್ಮರಾದ ಪರಿಶುದ್ಧಸಾಧಕರಿಗಿಂತ ನಿಷಿದ್ಧ ಕರ್ಮಗಳನ್ನಾಚರಿಸಿ ಮಲಿನಾಂತಃಕರಣಿಗಳಾದ ಪಾಮರಜೀವಿಗಳು ಅಧಿಕ ಸಂಖ್ಯೆಯಲ್ಲಿರುತ್ತಾರೆ. ಯೋಗಿಗಳೂ ಪಾವನಾತ್ಮರೂ ಆದ ಸಾಧಕರು ಪಂಚಾಕ್ಷರ ಮಹಾಮಂತ್ರದಿಂದ ಶಿವಲಿಂಗವನ್ನು ಪೂಜಿಸಿ ಮುಕ್ತಾತ್ಮರಾಗುವುದೇನೂ ಮಹತ್ವದ ವಿಷಯವಲ್ಲ. ಆದರೆ ಈ ಮಹಾಮಂತ್ರವನ್ನು ಒಂದು ಸಾರೆ ಪಠಿಸಿದ ಪತಿತನೂ ಸಹ ಪಾವನನಾಗುತ್ತಾನೆ ಎಂಬ ಮಹತ್ತ್ವದ ವಿಷಯವನ್ನು ಪೂಜ್ಯಪಾದರಾದ ರೇಣುಕರು– "ಪತಿತೋವಾಽಪಿ ಮುಚ್ಯತೇ ನಾತ್ರ ಸಂಶಯಃ" ಈ ರೀತಿಯಾಗಿ ಅಪ್ಪಣೆ

ಕೊಡಿಸಿದ್ದಾರೆ. ಶಿವನು ಸದಾಶುದ್ಧನೂ ಹಾಗೂ ಪವಿತ್ರನೂ ಆಗಿರೋಣದರಿಂದ ಅಶುದ್ಧನೂ ಪತಿತನೂ ಆದ ಜೀವನು ಅವನನ್ನು ಸ್ಪರ್ಶಿಸಿದಾಗ ಮತ್ತು ಅವನ ಮಹಾಮಂತ್ರವನ್ನು ಜಪಿಸಿದಾಗ ಶುದ್ಧನೂ, ಪವಿತ್ರನೂ ಆಗುತ್ತಾನೆ ಎಂಬುವುದರಲ್ಲಿ ಯಾವ ಸಂಶಯವೂ ಇಲ್ಲ.

ಮಂತ್ರವನ್ನು ಜಪಿಸಬೇಕಾದರೆ ಶಾಸ್ತ್ರಗಳಲ್ಲಿ ಅದರ ಅನೇಕ ವಿಧಿ–ವಿಧಾನಗಳು ಪ್ರತಿಪಾದಿಸಲ್ಪಟ್ಟಿವೆ. ಆಯಾ ನಿಯಮಗಳನ್ನು ಪರಿಪಾಲಿಸುತ್ತ ಈ ಮಹಾಮಂತ್ರವನ್ನು ಜಪಿಸಿದರೆ ಜಪದ ಫಲವು ಪ್ರಾಪ್ತವಾಗುವುದೇನೋ ಸಹಜ; ಆದರೆ ಕದಾಚಿತ್ ಯಾವುದೇ ವಿಧಿ–ವಿಧಾನವನ್ನು ಪರಿಪಾಲಿಸದೆ ಮತ್ತು ಯಮ ನಿಯಮಾದಿ ಅಷ್ಟಾಂಗ ಯೋಗರಹಿತನಾದ ಸಾಮಾನ್ಯನಾದ ಮನುಷ್ಯನು ಭಕ್ತಿಯಿಂದ ಈ ಮಹಾಮಂತ್ರವನ್ನು ಜಪಿಸಿದರೆ ಅವನ ಆ ಜಪವು ನಿಷ್ಫಲವಾಗುವುದಿಲ್ಲ.

ಆಗಮ ಶಾಸ್ತ್ರಗಳಲ್ಲಿ ಅನೇಕ ವಿಧವಾದ ಮಂತ್ರಗಳು ಪ್ರತಿಪಾದಿಸಲ್ಪಟ್ಟಿವೆ. ಅವೆಲ್ಲ ಮಂತ್ರಗಳು ಸಿದ್ಧಿಸಬೇಕಾದರೆ ಅವುಗಳ ಪುನಃ ಪುನಃ ಜಪಾಭ್ಯಾಸವು ಅವಶ್ಯಕ ವಾದುದು. ಆದರೆ ಈ ಪಂಚಾಕ್ಷರ ಮಹಾಮಂತ್ರವನ್ನು ಭಕ್ತಿಯಿಂದ ಕೇವಲ ಒಂದೇ ಸಾರೆ ಉಚ್ಚರಿಸಿದರೂ ಫಲವನ್ನು ಕೊಡುವಂತಹದಾಗಿದೆ. ಅಂತೆಯೇ ಈ ಮಹಾಮಂತ್ರ ದಲ್ಲಿ ಅದ್ಭುತವಾದ ಶಕ್ತಿಯು ಅಡಗಿದೆ ಎಂಬುದನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು– ''ಏಷ ಮಂತ್ರೋ ಮಹಾಶಕ್ತಿಃ'' ಎಂಬ ಉಕ್ತಿಯಿಂದ ಸ್ಪಷ್ಟಪಡಿಸಿ ದ್ದಾರೆ. ಇಂತಹ ಅದ್ಭುತವಾದ ಮಹಾಶಕ್ತಿಯಿಂದೊಡಗೂಡಿದ ಈ ಮಹಾಮಂತ್ರವನ್ನು ಹೇಗಾದರೂ ಸರಿ ಜೀವನದಲ್ಲಿ ಒಂದು ಸಾರೆ ಉಚ್ಚರಿಸಿದರೂ ಸರ್ವ ಸಿದ್ಧಿಗಳು ಪ್ರಾಪ್ತ ವಾಗುತ್ತವೆ. ಬೆಂಕಿಯನ್ನು ಅರಿತು ಮುಟ್ಟಿದರೂ ಅರಿಯದೆ ಮುಟ್ಟಿದರೂ ಮುಟ್ಟಿದವ ನನ್ನು ಸುಡುವಂತೆ ಈ ಮಹಾಮಂತ್ರವನ್ನು ಅರಿತಾಗಲಿ ಅರಿಯದೇ ಆಗಲಿ ನುಡಿದರೂ ಅವಶ್ಯ ಫಲಕಾರಿಯಾಗುತ್ತದೆ. ಶ್ರೀ ಷಣ್ಮುಸ್ವಾಮಿಗಳು ಈ ವಿಷಯದಲ್ಲಿ–

''ಅರಿಯದೆ ಒಂದು ವೇಳೆ 'ನಮಃ ಶಿವಾಯ' ಎಂದೊಡೆ,
ಮರೆದು ಮಾಡಿದ ಹಿಂದೇಳು ಜನ್ಮದ,
ಕರ್ಮದ ಕಟ್ಟು ಹರಿದು ಹೋಯಿತ್ತು ನೋಡಾ,
ಅರಿದೊಂದು ವೇಳೆ, 'ಓಂ ನಮಃ ಶಿವಾಯ' ಎಂದಡೆ,
ದುರಿತ ಸಂಕುಳವೆಲ್ಲ ದೂರಾಗಿಹವು ನೋಡಾ,
ಇದು ಕಾರಣ 'ಓಂ ನಮಃ ಶಿವಾಯ,' 'ಓಂ ನಮಃ ಶಿವಾಯ'
ಎಂಬ ಮಂತ್ರವನ್ನು ಜಪಿಸಿ, ನಾನಾ ಭವದ ಬಳ್ಳಿಯ ಬೇರು ಕಿತ್ತೊಗೆದೆನಯ್ಯಾ
ಅಖಂಡೇಶ್ವರಾ.''

ಈ ರೀತಿಯಾಗಿ ಸುಂದರವೂ ಅರ್ಥಪೂರ್ಣವೂ ಆದ ತಮ್ಮ ಅನುಭವದ ವಚನವನ್ನು ಸಾದರಪಡಿಸಿದ್ದಾರೆ.

ಶಿವನಾಮವನ್ನು ಹಾಸ್ಯದಿಂದಾಗಲಿ, ಭಯದಿಂದಾಗಲಿ, ಕ್ರೋಧದಿಂದಾಗಲಿ, ಅಥವಾ ದ್ವೇಷದಿಂದಾಗಲಿ ಪಠಿಸಿದರೂ ಅದು ಫಲಪ್ರದವಾಗುತ್ತದೆಂಬ ವಿಷಯವು

ಶ್ರೀಮದ್ ಭಾಗವತದಲ್ಲಿಯೂ ಪ್ರತಿಪಾದಿತವಾಗಿದೆ. ಆದಕಾರಣ ಮನುಷ್ಯನು ತನ್ನ ಜೀವನದಲ್ಲಿ ಹೇಗಾದರೂ ಸರಿಯೇ; ಒಂದು ಸಾರೆಯಾರೂ ಮಹಾಮಂತ್ರವನ್ನು ಉಚ್ಚರಿಸಿದರೆ ಅವನ ಸರ್ವಪಾತಕಂಗಳು ಪರಿಹಾರವಾಗಿ ಅತ್ಯಂತ ದುರ್ಲಭವಾದ ಶಿವಸಾಯುಜ್ಯವು ಪ್ರಾಪ್ತವಾಗುತ್ತದೆ. ಈ ವಿಷಯದಲ್ಲಿ ಒಂದು ಮನೋಹರವಾದ ಒಂದು ಕಥೆಯುಂಟು. ಅದೇನೆಂದರೆ–

ಒಂದು ಊರಿನಲ್ಲಿ ಶಿವಯೋಗಪ್ಪನೆಂಬ ಹೆಸರಿನ ಓರ್ವ ಶಿವಭಕ್ತನಿದ್ದನು. ಅವನು ಒಳ್ಳೆ ಆಚಾರವಂತನೂ, ಧರ್ಮನಿಷ್ಠನೂ ಆಗಿದ್ದನು. ಅವನು ವರ್ಷದಲ್ಲಿ ಮೂರ್‍ನಾಲ್ಕು ಸಾರೆ ತಮ್ಮ ಮನೆತನದ ಗುರುಗಳಾದ ಶ್ರೀ ಮ. ಘ. ಚ. ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳನ್ನು ಮನೆಗೆ ಆಮಂತ್ರಿಸಿ, ಭಯಭಕ್ತಿಯಿಂದ ಬರಮಾಡಿಕೊಳ್ಳುತ್ತಿದ್ದನು. ಅಂದು ಮನೆಮಂದಿಯೆಲ್ಲ ಸೇರಿ ಸಂಭ್ರಮದಿಂದ ಗುರುಪಾದಪೂಜೆ ನೆರವೇರಿಸಿ ಕ್ರಿಯಾಪಾದೋದಕ ಕರಣಪ್ರಸಾದ ಸ್ವೀಕರಿಸಿ, ಪುನೀತರಾಗುತ್ತಿದ್ದರಲ್ಲದೆ ಗುರುಗಳಿಗೆ ಪಂಚಪಕ್ವಾನ್ನ ಪ್ರಸಾದ ಮಾಡಿಸಿ ಕೈತುಂಬ ಗುರುದಕ್ಷಿಣೆಯಿತ್ತು ಅವರನ್ನು ಬೀಳ್ಕೊಡುವದು ವಾಡಿಕೆಯಾಗಿತ್ತು, ಮನೆಗುರುಗಳಾದ ಪಟ್ಟಾಧ್ಯಕ್ಷರು ಮೇಲಿಂದ ಮೇಲೆ ಮನೆಗೆ ಆಗಮಿಸುತ್ತಿರುವುದರಿಂದ ಶಿವಯೋಗಪ್ಪನ ಮನೆಯಲ್ಲಿ ಅಬಾಲವೃದ್ಧರೆಲ್ಲರೂ ಸಕಾಲಕ್ಕೆ ಲಿಂಗದೀಕ್ಷೆ ಪಡೆದು ಲಿಂಗಧಾರಿಗಳಾಗಿದ್ದರು. ಪ್ರತಿಯೊಬ್ಬರೂ ಲಿಂಗಪೂಜಾನಿಷ್ಠರಾಗಿದ್ದರು. ಆದರೆ ಅವರಿಗೆಲ್ಲ ಅಪವಾದವಾಗಿ ಶಿವಭಕ್ತ ಶಿವಯೋಗಪ್ಪನ ದುರ್ವಿಪಾಕವೇನೋ ಎಂಬಂತೆ ಅವನ ಐದಾರು ಜನ ಮಕ್ಕಳಲ್ಲಿ ಅತಿ ಚಿಕ್ಕವನಾದ ಚಂಡೇಶನೆಂಬ ಹೆಸರಿನ ಮಗನು ಮಾತ್ರ ಲಿಂಗವನ್ನು ಧರಿಸುತ್ತಿರಲಿಲ್ಲ. ಲಿಂಗದೀಕ್ಷೆ ಲಿಂಗಧಾರಣೆಯಂತೂ ದೂರೇ ಉಳಿಯಿತು; ಹಣೆಗೆ ಭಸ್ಮವನ್ನೆಂದೂ ಹಚ್ಚಿದವನಲ್ಲ, ಯಾವ ದೇವರಿಗೂ ಕೈ ಮುಗಿದವನಲ್ಲ. ಬಾಯಿಯಿಂದ ಒಮ್ಮೆಯಾದರೂ ತಪ್ಪಿ ಕೂಡ ಶಿವನಾಮ ಉಚ್ಚರಿಸಿದವನಲ್ಲ. ಇಂಥ ಆ ಮಗನಿಗೆ ಮನೆಯಲ್ಲಿ ನಡೆಯುವ ಪೂಜೆ ಪುನಸ್ಕಾರ, ದೇವರು ದಿಂಡರುಗಳ ದರ್ಶನ, ಗುರುಗಳ ಪಾದ–ಸ್ಪರ್ಶನ.....ಇತ್ಯಾದಿ ಕ್ರಿಯೆಗಳು ವರ್ಜ್ಯವಾಗಿದ್ದವು. ಗುರುಗಳು ಮನೆಗೆ ಆಗಮಿಸುವವರಿದ್ದಾರೆ ಎಂಬ ಸುಳಿವು ಹತ್ತಿದಕೂಡಲೇ ಆತನು ಮುಂಚಿತವಾಗಿಯೇ ಮನೆ ಬಿಡುತ್ತಿದ್ದನು. ಗುರುಗಳ ನಿರ್ಗಮನವಾದ ನಂತರವೇ ಮನೆಯಲ್ಲಿ ಕಾಲು ಹಾಕುತ್ತಿದ್ದನು. ಇಂಥ ಒಬ್ಬ ಭವಿ ಅಷ್ಟೇ ಅಲ್ಲ, ಮಹಾನಾಸ್ತಿಕನಾಗಿದ್ದನವನು. ಇಂಥ ವಿರುದ್ಧ ಬುದ್ಧಿಯ ಮಗನನ್ನು ಹಾದಿಗೆ ತರಬೇಕೆಂದು ಮನೆಮಂದಿಯೆಲ್ಲ ಬಹಳ ಪ್ರಯತ್ನಮಾಡಿ ನಿರುಪಾಯರಾಗಿದ್ದರು. ತನ್ನ ಹೆಸರಿಗೆ ತಕ್ಕಂತೆ ಚಂಡಿಸ್ವಭಾವದವನಾಗಿದ್ದ ಅವನು ಮನೆಯಲ್ಲಿ ಅಷ್ಟೇ ಅಲ್ಲ, ಊರಿನ ಯಾವ ಗುರುಹಿರಿಯರ ಮಾತಿಗೂ ಬೆಲೆಕೊಟ್ಟವನಲ್ಲ; ತನ್ನದನ್ನು ಬಿಟ್ಟವನಲ್ಲ. ಅತ್ಯಂತ ಅಡ್ಡದಾರಿ ಹಿಡಿದ ಅಧರ್ಮಿಯಾದ ಮಗನ ಈ ಉಚ್ಛೃಂಕಲತನವು ಧರ್ಮವಂತನಾದ ಶಿವಯೋಗಪ್ಪನಿಗೆ ಒಂದು ದೊಡ್ಡ ತಲೆನೋವೇ ಆಗಿತ್ತು.

ಒಂದು ದಿನ ಶಿವಭಕ್ತ ಶಿವಯೋಗಪ್ಪನು ಗುರುಗಳಾದ ಶ್ರೀ ಷ. ಬ್ರ. ಪಂಚಾಕ್ಷರ ಶಿವಾಚಾರ್ಯರ ಸಾನ್ನಿಧ್ಯಕ್ಕೆ ಹೋಗಿ ದೀರ್ಘದಂಡವತ್ ಪ್ರಣಾಮಗೈದು ''ಗುರುದೇವಾ! ನನ್ನ ಪೂರ್ವಸಂಚಿತ ಪ್ರಾರಬ್ಧಕರ್ಮದ ಫಲವೇನೋ ಅನ್ನುವಂತೆ ನನ್ನ ಪಾಲಿಗೆ ಎಂದೂ

ಶಿವಾಯ ಹ್ಞೂ, ಅನ್ನು ಏಕೆ ಸುಮ್ಮನೇ ನಿಂತೆ ?' ಎಂದು ಗುರುವಾಣಿಯನ್ನು ಕಿವಿಯಿಂದ ಆಲಿಸುತ್ತಿರುವಂತೆಯೇ ಈ ಬಿಕ್ಕಟ್ಟಿನ ಸ್ಥಿತಿಯನ್ನು ಅರ್ಥಮಾಡಿಕೊಂಡ ಬಲು ಚಂಡಿ ಸ್ವಭಾವದ ಚಂಡೇಶನು ಇಂತೆಂದನು– ''ಜಗದಲ್ಲಿ ಎಲ್ಲಿಯೂ ಯಾರಿಗೂ ಕಾಣಸಿಗದ ಕೇವಲ ಕಾಲ್ಪನಿಕ ವಸ್ತುವಾಗಿದ್ದವನ ಹೆಸರನ್ನು ವಾಸ್ತವವಾದಿಯಾದ ನನ್ನಿಂದ ನುಡಿಸ ಬೇಕೆಂದಿದ್ದೀರಾ ನೀವೆಲ್ಲ ! ಇದು ನನ್ನಿಂದ ಎಂದೆಂದಿಗೂ 'ಸಾಧ್ಯವಿಲ್ಲ', 'ಸಾಧ್ಯವಿಲ್ಲ' ಎಂದು ಚೀರುತ್ತ ಠಣ್ಣನೆ ಜಿಗಿದು ಪಾರಾಗಿ ಓಡಿಹೋಗಬೇಕೆನ್ನುವಷ್ಟರಲ್ಲಿ ಒಳ್ಳೆ ಬ್ರಹ್ಮತೇಜದಿಂದ ಕೂಡಿದ ಯೋಗಾಸನ–ವ್ಯಾಯಾಮಾದಿಗಳಿಂದ ವಜ್ರಕಾಯರಾದ ಗುರುಗಳು ಕ್ಷಣಾರ್ಧದಲ್ಲಿ ಮಿಂಚಿನಂತೆ ನೆಗೆದು ಆ ಉದ್ಧಟ ಪೋರನನ್ನು ಧರಾಶಾಯಿ ಗೊಳಿಸಿ ಶ್ರೀಕೃಷ್ಣನು ನಂದಗೋಕುಲದಲ್ಲಿ ಲೋಕಕಂಟಕವೆನಿಸಿದ ಕಾಳಿಂಗ ಸರ್ಪವನ್ನು ಮರ್ದನಮಾಡಿ ಅದರ ಹೆಡೆಯನ್ನು ಮೆಟ್ಟಿನಿಂತುಕೊಂಡಂತೆ, ಅವರು ಅಲ್ಲಿ ನೆರೆದವ ರೆಲ್ಲ ಮೂಕವಿಸ್ಮಿತರಾಗಿ ನೋಡುತ್ತಿರುವಂತೆಯೇ ಚಂಡೇಶನ ಚಂಡನ್ನು ಭೂಮಿಗೊತ್ತಿ ಅವನ ಮೇಲೆ ಸವಾರಿಹಾಕಿ ಕುಳಿತರು. ಹರೆಯದ ಹುಡುಗ ಅಸಹಾಯಕನಾಗಿ ನೆಲ ಕಚ್ಚಿದ್ದರೂ ಅವನ ಅಹಂಕಾರ ಮಾತ್ರ ನೆಲಕಚ್ಚಿರಲಿಲ್ಲ. ಮತ್ತೆ ಗುರುಗಳು ಅವನ ಎರಡೂ ಕೈಗಳನ್ನು ಹೆಡಮುರಿಗೆ ಕಟ್ಟುವಂತೆ ಹಿಂದಕ್ಕೆಳೆದು ಅವನ ಮುಖವನ್ನು ಬದಿಗೆ ಹೊರಳಿಸಿ ''ಹ್ಞೂಂ ಅನ್ನು; ಇದೀಗ ನಾನು ಹೇಳಿದ ಶಿವನಾಮವನ್ನು ಎಲ್ಲರೂ ಕೇಳುವಂತೆ ಒಂದು ಸಲ ಅಂದು ಬಿಡು; ಇಲ್ಲವಾದರೆ ನೋಡು ಹುಷಾರ್ ! ಇನ್ನೂ ನಿನ್ನ ಪರಿಸ್ಥಿತಿ ಏನೇನಾದೀತು ಚೆನ್ನಾಗಿ ಊಹಿಸು'' ಎಂದು ಗದರಿಸಹತ್ತಿದರು. ಆಗ ಬಲುಹಠಿ ಯಾದ ಹುಡುಗ ಗುರುಗಳ ಆರ್ಭಟಕ್ಕೆ ಅಂಜಿದ್ದರೂ ತನ್ನ ಪಟ್ಟು ಬಿಡದೆ ಏದುಸಿರು ಬಿಡುತ್ತ ಮಾರ್ನುಡಿದ– ''ಎಲೈ ಗುರುಗಳೇ ! ನೀವು ಇವತ್ತು ನನ್ನ ಪ್ರಾಣ ತೆಗೆದು ಕೊಂಡರೂ ಪರವಾಗಿಲ್ಲ, ಆದರೆ ನಾನು ಮಾತ್ರ ನನ್ನ ಬಾಯಿಯಿಂದ 'ಓಂ ನಮಃ ಶಿವಾಯ' ಎಂದು ಅನ್ನಲಾರೆ ಹ್ಞೂಂ.....ತಿಳಿಯಿರಿ'' ಎಂದು ಹೂಂಕಾರಮಾಡುತ್ತ ಉದ್ವೇಗದಿಂದ ತನಗರಿಯದೆಯೇ ನುಡಿದುಬಿಟ್ಟನು. ಆಗ ಪಂಚಾಕ್ಷರ ಶಿವಾಚಾರ್ಯರು ''ಬಿಡು, ಎದ್ದೇಳು ನಮ್ಮ ಕೆಲಸವಾಯಿತು'' ಎಂದು ಚಟಕ್ಕನೆ ಎದ್ದವರೇ ''ಸಾಂಬ ಜಯ ನಮಃ ಪಾರ್ವತೀ ಪತಯೇ ಶಿವ ಹರಹರ ಮಹಾದೇವ'' ಎಂದು ಜಯಘೋಷವನ್ನು ಉಗ್ಘಡಿಸಿದಾಗ ಇಡೀ ಮನೆಯೇ (ಜಯಕಾರದಿಂದ) ಪ್ರತಿಧ್ವನಿಗೊಂಡಿತ್ತು, ಇಷ್ಟೇ ಅಲ್ಲ, ಅಲ್ಲಿ ನಿಂತ ಮನೆಮಂದಿಯೆಲ್ಲ ಹರ್ಷಾತಿರೇಕದಿಂದ ಒಕ್ಕೊರಲಿನಿಂದ ಗುರುಗಳೊಂದಿಗೆ ಜಯಘೋಷಮಾಡಿದಾಗ ನಭೋಮಂಡಲದಲ್ಲಿ ಮಾರ್ದನಿಗೊಂಡ ಆ ಶಿವನ ಜಯಕಾರವು ಸಕಲ ದೇವಲೋಕಗಳಿಗಷ್ಟೇ ಅಲ್ಲ, ಶಿವಲೋಕಕ್ಕೂ ತಲುಪುವಂತಿತ್ತು, ಈ ರೀತಿಯಾಗಿ ಶಿವಭಕ್ತ ಶಿವಯೋಗಿಯ ಪ್ರಾರ್ಥನೆ ಯಂತೆ ಅವನ ಮನೆಗುರುಗಳಾದ ಶ್ರೀ ಷ. ಬ್ರ. ಪಂಚಾಕ್ಷರ ಶಿವಾಚಾರ್ಯ ಸ್ವಾಮಿಗಳು ಆತನ ಉದ್ದಂಡ ಹಾಗೂ ನಾಸ್ತಿಕ ಮಗನ ಮುಖದಿಂದ ಒಂದು ಸಲ ಪಂಚಾಕ್ಷರ ಮಂತ್ರವನ್ನನಿಸುವಲ್ಲಿ ಯಶಸ್ವಿಯಾದರು.

ಈ ಘಟನೆಯಾದ ನಂತರ ಅನೇಕ ದಿನಮಾನಗಳು ಗತಿಸಿದ ಬಳಿಕ ಆ ಚಂಡೇಶನು ಆಯುಷ್ಯ ತೀರಿ ಅಸುನೀಗಿದನು. ನಮ್ಮ ಪ್ರಾಚೀನ ಧಾರ್ಮಿಕ ಪದ್ಧತಿ

ಯಂತೆ ಅವನ ಸ್ಥೂಲ ಶರೀರವನ್ನು ಸಮಾಧಿಗೊಳಿಸಲಾಯಿತು. ಹಾಗೂ ಅವನ ಆತ್ಮವನ್ನು ಸೂಕ್ಷ್ಮ ಶರೀರದೊಂದಿಗೆ ಯಮದೂತರು ಯಮಲೋಕಕ್ಕೆ ಕೊಂಡೊಯ್ದರು. ಯಮಧರ್ಮನು ವಾಡಿಕೆಯಂತೆ ಈ ಜೀವಾತ್ಮನ ಪಾಪ–ಪುಣ್ಯದ ಲೆಕ್ಕಾಚಾರದ ವರದಿ ಒಪ್ಪಿಸಲು ಚಿತ್ರ–ಗುಪ್ತರಿಗೆ ಆಜ್ಞೆಮಾಡಿದನು. ಚಿತ್ರ–ಗುಪ್ತರು ತಮ್ಮ ಖಾತೆ ಬುಕ್ಕನ್ನು ತೆರೆದು ನೋಡಿ– ''ಈ ಜೀವಿಯು ತನ್ನ ಜೀವನದಲ್ಲಿ ಒಂದೇ ಒಂದು ಬಾರಿ ಮಾತ್ರ ಶಿವಪಂಚಾಕ್ಷರ ಮಂತ್ರವನ್ನು ಅದ್ಯಾಗೋ ನುಡಿದಿದ್ದಾನೆ. ಇದರ ಹೊರತಾಗಿ ಯಾವ ಪುಣ್ಯಕರ್ಮವನ್ನೂ ಮಾಡಿದ ದಾಖಲೆಗಳಿಲ್ಲ'' ಎಂಬುದಾಗಿ ತಿಳಿಸಿದರು. ಹಾಗಾದರೆ ಈ ಜೀವನಿಗೆ ಸ್ವರ್ಗ–ನರಕ ಗತಿಗಳಲ್ಲಿ ಯಾವ ಗತಿ ಪ್ರಾಪ್ತವಾಗಬೇಕು ? ಒಂದೇ ಒಂದು ಸಲ ಶಿವಪಂಚಾಕ್ಷರಿ ಮಂತ್ರ ನುಡಿದುದಕ್ಕೆ ಯಾವ ಫಲವಿದೆ ? ಎಂಬ ಪ್ರಶ್ನೆ ಯಮರಾಯನಿಗೆ ಬಗೆಹರಿಯದ ಸಮಸ್ಯೆಯಾಗಿ ತಲೆದೋರಿತು. ಏಕೆಂದರೆ ಇದರ ಉತ್ತರ ಎಷ್ಟು ಯೋಚಿಸಿದರೂ ಯಮದೇವನ ತಲೆಗೆ ಹೊಳೆಯಲೇ ಇಲ್ಲ, ಕಾರಣ ಇದೊಂದು ಸ್ಪೇಶಲ್ ಕೇಸಾಗಿತ್ತು ಯಮನ ಸರ್ವೀಸ್‌ನಲ್ಲಿಯೇ.

ಆಗ ಯಮಧರ್ಮನು ಚಂಡೇಶನ ಆತ್ಮಕ್ಕೆ 'ನಡೆ' ನಿನ್ನ ಸೂಕ್ಷ್ಮ ತನುವಿನೊಂದಿಗೆ ನನ್ನ ವಾಹನವಾದ ಮಹಿಷದ ಮೇಲೆ ನನ್ನ ಹಿಂದುಗಡೆ ಕುಳಿತುಕೋ, ನಿನ್ನ ಸಂಬಂಧೀ ಸಮಸ್ಯೆಯನ್ನು ದೇವತೆಗಳ ಒಡೆಯನಾದ ಇಂದ್ರನ ಹತ್ತಿರ ಹೋಗಿ ಪರಿಹರಿಸಿ ಕೊಳ್ಳುವಾ'' ಎಂದು ಆದೇಶವಿತ್ತನು. ಯಮನ ಈ ಆಜ್ಞೆಗೆ ಆ ಹಠವಾದಿ ಜೀವಾತ್ಮನು ಉತ್ತರಿಸಿದ್ದೇನೆಂದರೆ–'' ಎಲೈ ಪ್ರಳಯಾಂತಕೇಶ್ವರನೇ ! ನನ್ನನ್ನು ಸ್ವರ್ಗದಲ್ಲಾದರೂ ಸೈ, ನರಕದಲ್ಲಾದರೂ ಸೈ ಎಲ್ಲಾದರೂ ಎಸೆದು ಬಿಡು. ನಾನಲ್ಲಿ ನಿಶ್ಚಿಂತೆಯಿಂದ ಇರಲು ಸಿದ್ಧನಿದ್ದೇನೆ. ಆದರೆ ಸಲಾಮು ಹೊಡೆಯುತ್ತ ಇನ್ನೊಬ್ಬರ ಮುಂದೆ ಹೋಗಿ ನಿಲ್ಲುವುದು ನನ್ನಿಂದಾಗದು''. ಆಗ ಯಮಧರ್ಮರಾಯನು ಗದರಿಸುತ್ತ–''ಇದೇನು ಮನಮಾನಿ ನಡೆದುಕೊಳ್ಳಲು ಮರ್ತ್ಯಲೋಕವೆಂದು ತಿಳಿದಿರುವೆಯಾ ? ಈ ನಿನ್ನ ಸಮಸ್ಯೆಗೆ ಪ್ರತ್ಯಕ್ಷ ಪ್ರಮಾಣರೂಪದಲ್ಲಿ ನೀನು ಉಪಸ್ಥಿತನಾಗಿರುವುದು ಬಲು ಅವಶ್ಯಕವಾಗಿರುವುದು. ನನ್ನ ಒಡೆಯನಾದ ಪರಮಾತ್ಮನ ನಾಮವನ್ನು ಉಚ್ಚರಿಸಿದವನೆಂದು ನನ್ನ ಸಮಾನಾಸನ ಕೊಡುತ್ತಿದ್ದೇನೆ ಅರಿತೆಯಾ ? ನಡೆ ಸುಮ್ಮನೆ ನನ್ನ ಹಿಂದೆ ಕುಳಿತುಕೋ'' ಎಂದು ಆಜ್ಞೈಗೈದು ಇಂದ್ರದೇವನ ಬಳಿ ಅಮರಾವತಿ ಪಟ್ಟಣಕ್ಕೆ ಆ ಜೀವನನ್ನು ಕರೆದೊಯ್ದನು.

ದೇವೇಂದ್ರನು ಯಮಧರ್ಮನ ಪ್ರಶ್ನೆ ಕೇಳಿ 'ಇದರಲ್ಲಿ ತನಗೆ ಏನೂ ತಿಳಿಯದೆಂದೂ'' ಇಂಥ ಸಮಸ್ಯೆಗೆ ಕಾರಣೀಭೂತನಾದ ಯಮಧರ್ಮನ ಸಮೀಪ ಮಂಡಿಸಿದ ಆ ಮಹಾನುಭಾವವನ್ನು ಕಂಡು ಭಯಾಶ್ಚರ್ಯಗಳಿಂದ ಕೈಮುಗಿದು ನಿಂತನು. ''ಹಾಗಾದರೆ ಈ ಸಮಸ್ಯೆಯನ್ನು ಜ್ಞಾನೀ ಪುರುಷನಾದ ಬ್ರಹ್ಮದೇವನ ಬಳಿಗೆ ಕೊಂಡೊಯ್ಯುವಾ'' ಎಂದು ಯಮರಾಯನೆಂದಾಗ 'ನಾನೂ ಬರುವೆ' ಎಂದು ಇಂದ್ರದೇವನೂ ಐರಾವತವನ್ನೇರಿ ಬೆಂಬತ್ತಿದನು.

ಬ್ರಹ್ಮದೇವನು ಅವರನ್ನು ಕುರಿತು–''ಎಲೈ ಮಹಿಮರಾದ ಶಚೀಪತಿ ಹಾಗೂ ಯಮಧರ್ಮರೇ ! ನನಗೆ ಜಗತ್ ಸೃಷ್ಟಿ ಮಾಡುವ ಕಾರ್ಯವೊಂದನ್ನು ಬಿಟ್ಟರೆ

ಬೇರೇನೂ ತಿಳಿಯದು. ಶಿವಮಂತ್ರದ ಸಕೃದುಚ್ಚಾರಣೆಯ ಫಲಕುರಿತು ನಾನೂ ಅಜ್ಞನೇ ಆಗಿದ್ದೇನೆ. ಆ ಕಾರಣ ನಾವು ಮೂವರೂ ಕೂಡಿಕೊಂಡು ಸದಾವಕಾಲ ಶಿವನಾಮವನ್ನೇ ಜಪಿಸುತ್ತ ಕಾಲಯಾಪನೆ ಮಾಡುತ್ತಿರುವ ವಿಷ್ಣುಪರಮಾತ್ಮನನ್ನು ಪರಾಮರ್ಶಿಸೋಣ ನಡೆಯಿರಿ'' ಎಂದು ಅಂದನು.

ವೈಕುಂಠದಲ್ಲಿ ಆದಿಶೇಷನ ಮೇಲೆ ಆಸೀನರಾಗಿದ್ದ ಲಕ್ಷ್ಮೀಪತಿಯು ಯಮಧರ್ಮ, ದೇವೇಂದ್ರ, ಹಾಗೂ ಪ್ರಜಾಪಿತ ಬ್ರಹ್ಮದೇವರು ತಮ್ಮ ತಮ್ಮ ವಾಹನಾರೂಢರಾಗಿ ತನ್ನತ್ತ ಬರುವುದನ್ನು ನೋಡಿ ವಿಸ್ಮಯದಿಂದ ಎದ್ದುನಿಂತನು. ಹಾಗೂ ಆ ಮೂವರೂ ತಾವು ತಂದ ಸಮಸ್ಯೆಯ ಉತ್ತರ ಕುರಿತು ಕೇಳಿದಾಗ, ಪದ್ಮನಾಭನು–''ಮಹಿಮಾನ್ವಿತರಾದ ದೇವಾಧಿದೇವ ಬಂಧುಗಳೇ ! ನೀವು ತಿಳಿದಿರು ವಂತೆ ನಾನೇನೋ ವಿಶ್ವನಾಥನೆಂದೆನಿಸಿದ ಶಿವನ ನಾಮಸ್ಮರಣೆಯನ್ನು ಅಹರ್ನಿಸಿ ಮಾಡುತ್ತಿರುತ್ತೇನೆ ಅಷ್ಟೇ. ಆದರೆ ನಾಮೋಚ್ಚರಣೆಯಿಂದಾದ ಪುಣ್ಯದ ಫಲವನ್ನು ಕುರಿತು ನಾನು ಒಮ್ಮೆಯೂ ವಿಚಾರಮಾಡಿಲ್ಲ, ಆದ್ದರಿಂದ ಶಿವನಾಮದ ಫಲವನ್ನು ಕುರಿತು ಸಾಕ್ಷಾತ್ ಶಿವನನ್ನೇ ನಾವೆಲ್ಲರೂ ಕೂಡಿಕೊಂಡು ವಿಚಾರಮಾಡುವಾ ಬನ್ನಿ'' ಎಂದು ವಿನೀತಭಾವದಿಂದ ನುಡಿದನು.

ವೈಕುಂಠಪತಿಯು–ತಮ್ಮಂಥ ದೇವಾಧಿದೇವತೆಗಳ ಜಿಜ್ಞಾಸೆಗೆ ಕಾರಣೀಭೂತ ನಾದ, ಬಹಳ ಹೊತ್ತಿನವರೆಗೆ, ಮಹಿಷಸವಾರಿ ಮಾಡುತ್ತ ಮಹಿಷಪುಚ್ಛಪ್ರತಾಡನದಿಂದ ಬೇಗುದಿಗೊಂಡ ಮರ್ತ್ಯಲೋಕದ ಮಹಾನುಭಾವನಾದ ಜೀವಾತ್ಮನ ಬಾಡಿದ ಮೊಗವನ್ನು ಕಂಡು ''ಈ ಪುಣ್ಯಾತ್ಮನನ್ನು ಇಲ್ಲಿಯ ತನಕ ಬಳಲಿಸಿದುದೇ ಸಾಕು. ಇನ್ನು ಮುಂದೆ ಈತನನ್ನು ಆಂದೋಲಿಕೆಯಲ್ಲಿ ಆಸೀನನನ್ನಾಗಿಸಿ ಆ ಪರಮಾತ್ಮನ ಒಡ್ಡೋಲಗಕ್ಕೆ ನಾವು ನಾಲ್ವರೂ ಕಾಲ್ನಡಿಗೆಯಿಂದ ಆಂದೋಲಿಕಾಧಾರಕರಾಗಿ ಹೋಗೋಣ'' ಎಂದಾಗ ಉಳಿದವರು ಸಹರ್ಷದಿಂದ ಸಮ್ಮತಿಸಿ ಅದರಂತೆ ಪಲ್ಲಕ್ಕಿ ಹೊತ್ತು ನಡೆದರು.

ಕೈಲಾಸದಲ್ಲಿ ತನ್ನ ಗಣಾಧೀಶ್ವರರ ಮಧ್ಯ ಕುಳಿತುಕೊಂಡಿರುವ ಸರ್ವಜ್ಞ ಹಾಗೂ ಸರ್ವೇಶ್ವರನಾದ ಮಹಾದೇವನು ಧ್ಯಾನಾವಸ್ಥೆಯಲ್ಲಿಯೇ ಚತುರ್ದೇವತೆಗಳ ಆಗಮನ ವನ್ನು ಅರಿತುಕೊಂಡು ಆ ಪಲ್ಲಕ್ಕಿಯು ಸಮೀಪ ಬಂದೊಡನೆ ಸ್ವತಃ ಎದ್ದು ಹೋಗಿ ಅತ್ಯಾನಂದದಿಂದ ಅದರಲ್ಲಿ ಕುಳಿತ ಅತಿ ಅಪರೂಪದ ಆತ್ಮನಾದ ಆ ಪುಣ್ಯಾತ್ಮನನ್ನು ಕೈಹಿಡಿದು ಕೆಳಗಿಳಿಸಿ ಅಕ್ಕರೆಯಿಂದ ಅಲಂಗಿಸಿಕೊಂಡನು. ನಂತರ ಆ ಸುರಪುಂಗವರತ್ತ ದೃಷ್ಟಿ ಬೀರಿ ಉಚಿತ ಆಸನ ಗ್ರಹಣಮಾಡಲು ಅಣತಿಮಾಡಿ ಇಲ್ಲಿಯವರೆಗೆ ಬಂದ ಔಚಿತ್ಯವೇನೆಂದು ಕೇಳಿದನು.

ಆಗ ನಾಲ್ವರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡಾದ ಬಳಿಕ ಯಮಧರ್ಮರಾಯನೇ ಎದ್ದು ನಿಂತು–''ಹೇ ಜ್ಞಾನವಿಧಿಯೇ ! ಪ್ರಣವರೂಪನೇ ! ಈ ಮರ್ತ್ಯಲೋಕದ ವಿಚಿತ್ರ ಪ್ರಾಣಿಯು ನಮಗೊಂದು ಸಮಸ್ಯೆಯನ್ನುಂಟು ಮಾಡಿದ್ದಾನೆ. ಅದೇನೆಂದರೆ ಈತ ತನ್ನ ಇಡೀ ಜೀವನದಲ್ಲಿ ಕೇವಲ ಒಂದೇ ಒಂದು ಬಾರಿ ನಿನ್ನ ಪಂಚಾಕ್ಷರಿ ಮಂತ್ರವನ್ನು ಉಚ್ಚರಿಸಿದ್ದಾನೆ. ಕಾರಣ ಅವನ ಈ ಕೃತಿಗೆ ಯಾವ

ಫಲಕಾದಿದೆ ? ಹಾಗೂ ಆತನಿಗೆ ಮರಣೋಪರಾಂತ ಯಾವ ಗತಿ ಪ್ರಾಪ್ತವಾಗಬೇಕು ? ಎಂಬುದು ನನಗೆ ತಿಳಿದಿಲ್ಲ, ಅಷ್ಟೇ ಅಲ್ಲ, ನನ್ನ ಸಂಗಡ ಇಲ್ಲಿಯವರೆಗೆ ಒಳ್ಳೇ ಜಿಜ್ಞಾಸೆಯಿಂದ ಹಾಗೂ ವಿನೀತಭಾವದಿಂದ ಬಂದ ಮಹಿಮಾನ್ವಿತರಿಗೂ ತಿಳಿದಿಲ್ಲ, ಇದನ್ನು ತಿಳಿಯುವುದಕ್ಕಾಗಿಯೇ ಈ ಜೀವಾತ್ಮನೊಂದಿಗೆ ತಮ್ಮ ಸಾನ್ನಿಧ್ಯಕ್ಕೆ ಬಂದಿದ್ದೇವೆ. ದಯವಿಟ್ಟು ಪರಾಂಬರಿಸಬೇಕು'' ಎಂದು ನುಡಿದಾಗ–ಮಹೇಶ್ವರನು ನಗೆಮೊಗದಿಂದ ನಸುನಗುತ್ತ–''ಈ ನಿಮ್ಮ ಪ್ರಶ್ನೆಗೆ ನಾನು ಆಗಲೇ ಉತ್ತರಿಸಿದ್ದೇನೆ. ನನ್ನ ವರ್ತನೆಯಿಂದ ವರ್ತನೋಪದೇಶ ಮಾಡಿದ್ದೇನೆ, ಅರಿತೀರಾ !'' ಎಂದು ಅಂದಾಗ ನಾಲ್ವರೂ ದೇವತೆಗಳು ತಲೆದೂಗಿದರಲ್ಲದೆ ಸಂತೋಷ ಸಾಗರದಲ್ಲಿ ತೇಲಾಡಿದರು. ಈ ರೀತಿಯಾಗಿ ಶಿವಪಂಚಾಕ್ಷರ ಮಂತ್ರದ ಸಕೃದುಚ್ಚಾರದ ಫಲವು ಸಾಕ್ಷಾತ್ ಶಿವನ ಒಲುಮೆ ಪೂರಿತ ಆಲಿಂಗನರೂಪೀ ಶಿವಸಾಯುಜ್ಯವೇ ಆಗಿದೆಯೆಂದು ಲೋಕಕ್ಕೆಲ್ಲ ಸಾರಿ ಹೇಳಿತ್ತು ಈ ಆಖ್ಯಾನ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

## ಆಶೀರ್ವಚನ-೧೦

ಪಂಚಾಕ್ಷರೀಂ ಸಮುಚ್ಚಾರ್ಯ ಪುಷ್ಪಂ ಲಿಂಗೇ ವಿನಿಃಕ್ಷಿಪೇತ್ ।
ಯಸ್ತಸ್ಯ ವಾಜಪೇಯಾನಾಂ ಸಹಸ್ರಫಲಮಿಷ್ಯತೇ ॥ ೪೨ ॥

ಈ ಪಂಚಾಕ್ಷರೀ ಮಹಾಮಂತ್ರವನ್ನು ಉಚ್ಚರಿಸುತ್ತ ಒಂದು ಪುಷ್ಪವನ್ನು ಶಿವಲಿಂಗಕ್ಕೆ ಸಮರ್ಪಿಸಿದರೆ ವಾಜಪೇಯಿ ಯಾಗದ ಸಾವಿರಪಾಲು ಹೆಚ್ಚಿನ ಫಲವು ಪ್ರಾಪ್ತ ವಾಗುತ್ತದೆ.

ಅಗ್ನಿಹೋತ್ರಂ ತ್ರಯೋ ವೇದಾ ಯಜ್ಞಾಶ್ಚ ಬಹುದಕ್ಷಿಣಾಃ ।
ಪಂಚಾಕ್ಷರಜಪಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥ ೪೩ ॥

ಪ್ರತಿನಿತ್ಯ ಪ್ರಾತಃ ಹಾಗೂ ಸಾಯಂಕಾಲಗಳಲ್ಲಿ ಮಾಡುವ ಅಗ್ನಿಹೋತ್ರ ಯಾಗವನ್ನು ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳ ಅಧ್ಯಯನವನ್ನು ಜ್ಯೋತಿಷ್ಟೋಮಾದಿ ಯಜ್ಞಗಳನ್ನೂ ಹಾಗೂ ಹದಿನಾರು ಪ್ರಕಾರದ ಮಹಾದಾನಗಳನ್ನು ಮಾಡಿದರೂ ಕೂಡ ಪಂಚಾಕ್ಷರ ಮಹಾಮಂತ್ರ ಜಪದಿಂದ ಪ್ರಾಪ್ತವಾಗುವ ಫಲದ ಕೋಟಿಯ ಒಂದು ಪಾಲಿಗಾದರೂ ಸಮಾನವಾಗಲಾರವು.

ನಮ್ಮ ದೇಶದ ಸಂಸ್ಕೃತಿಯಲ್ಲಿ ಯುಗಗಳ ಭೇದದಿಂದ ಅನೇಕ ವಿಧವಾದ ವ್ರತಾಚರಣೆಗಳು ಪ್ರತಿಪಾದಿಸಲ್ಪಟ್ಟಿವೆ. ಕೃತಯುಗ, ತ್ರೇತಾಯುಗ ಮತ್ತು ದ್ವಾಪರ ಯುಗಗಳಲ್ಲಿ ದೇವರ ಕೃಪೆಯ ಪ್ರಾಪ್ತಿಗಾಗಿ ಅತ್ಯಂತ ಕಠಿಣತಮವಾದ ತಪಸ್ಸುಗಳನ್ನು, ಯಜ್ಞ ಯಾಗಾದಿಗಳನ್ನು ಮತ್ತು ಕೃಚ್ಛ್ರ-ಚಾಂದ್ರಾಯಣಾದಿ ವ್ರತಗಳನ್ನು ಆಚರಿಸುತ್ತಿದ್ದರು. ಭಗವಂತನ ಒಲುಮೆಗೆ ವ್ರತಾಚರಣೆಗಳಿಗಿಂತಲೂ ಭಕ್ತಿಯು ಪ್ರಮುಖವಾದುದು. ನಾವು ಆಚರಿಸುವ ನಿಯಮವು ಬಹು ಕಷ್ಟಸಾಧ್ಯವಾಗಿದ್ದರೂ ಭಕ್ತಿಯು ಇರದೇ ಇದ್ದರೆ ಅದು ಅಷ್ಟೊಂದು ಫಲಕಾರಿಯಾಗಲಾರದು. ಆದರೆ ಭಕ್ತಿಯಿಂದ ಮಾಡುವ ವ್ರತವು ಚಿಕ್ಕದಾಗಿದ್ದರೂ ಅದು ಮಹಾಫಲವನ್ನು ಕೊಡುವಂತಹುದಾಗುವುದು. ಭಕ್ತಿಯುಕ್ತವಾದ ಸುಲಭ ವ್ರತದಿಂದ ಶಿವನ ಕೃಪೆಯು ದೊರೆಯುವಂತಿದ್ದಾಗ ಅತ್ಯಂತ ಕಠಿಣತಮಗಳೂ, ಬಹು ಅರ್ಥಸಾಧ್ಯಗಳೂ ಆದ ಯಜ್ಞಾದಿಗಳನ್ನು ಮಾಡುವ ಗೊಡವೆಗೆ ಹೋಗುವ ಅವಶ್ಯಕತೆ ಇಲ್ಲವೆಂಬುದನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

ಪೂಜ್ಯರ ಉಪದೇಶದ ಮೇರೆಗೆ ಶಿವಯೋಗವನ್ನು ಸಾಧಿಸುವ ಸಾಧಕನು ಪಂಚಾಕ್ಷರಿ ಮಹಾಮಂತ್ರವನ್ನು ಪಠಿಸುತ್ತ ತನ್ನಿಷ್ಟಲಿಂಗದ ಮೇಲೆ ಒಂದು ಬಿಲ್ವ ದಳವನ್ನಾಗಲಿ ಅಥವಾ ಒಂದು ಪುಷ್ಪವನ್ನೇ ಆಗಲಿ ಇರಿಸಿದರೆ ಅವನಿಗೆ ಸಾವಿರಾರು ವಾಜಪೇಯ ಯಾಗಗಳನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಇಷ್ಟಲಿಂಗ ಪೂಜೆಯೇ ಮುಖ್ಯವಾದ ನಿತ್ಯಕರ್ಮವಾಗಿದೆ. ಭಕ್ತಿಸಂಪನ್ನರಾದ ಸಾಧಕರು .ನೂರೆಂಟು ಇಲ್ಲವೆ ಸಾವಿರದೆಂಟು ಬಿಲ್ವದಳಗಳನ್ನಾಗಲಿ ಅಥವಾ ಪುಷ್ಪಗಳನ್ನಾಗಲಿ ಪಂಚಾಕ್ಷರ ಮಂತ್ರ ಪಠಣ ಪುರಸ್ಸರವಾಗಿ ತಮ್ಮ ಇಷ್ಟಲಿಂಗಕ್ಕೆ

ಅರ್ಪಿಸುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಶಿವನಾಮೋಚ್ಚಾರ ಪೂರ್ವಕವಾಗಿ ಶಿವಲಿಂಗಕ್ಕರ್ಪಿಸಿದ ಪತ್ರಪುಷ್ಪಗಳ ಫಲವು ಅಪಾರವಾದುದು. ಅದರ ಮಹಿಮೆಯನ್ನು ಅನುಭವಿಸಿದವನೇ ಬಲ್ಲನು. ಹಿಂದೊಮ್ಮೆ ಭಗವಂತನಾದ ವಿಷ್ಣುವು ಪ್ರತಿದಿನವೂ ಶಿವಲಿಂಗಕ್ಕೆ ಸಾವಿರ ಕಮಲಗಳನ್ನು ಅರ್ಪಿಸಿ ಪೂಜೆಮಾಡುವ ನಿಯಮವನ್ನು ಕೈಕೊಂಡು ದಿನಾಲೂ ಶಿವಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಿದ್ದನು. ಈ ಪೂಜೆಯು ಹೀಗೆಯೇ ಅವ್ಯಾಹತವಾಗಿ ಅನೇಕ ದಿನಗಳವರೆಗೆ ನಡೆಯಿತು. ಒಂದು ಸಾರೆ ಹರಿಯ ಭಕ್ತಿಯನ್ನು ಪರೀಕ್ಷಿಸುವದಕ್ಕೋಸುಗ ಶಿವನು ಸಹಸ್ರಕಮಲಗಳಲ್ಲಿಯ ಒಂದು ಕಮಲವನ್ನು ಇಲ್ಲ ದಂತಾಗಿ ಮಾಡಿದನು. ದಿನ ನಿತ್ಯದಂತೆ ಶಿವನ ಸಾವಿರ ನಾಮುಗಳನ್ನುಚ್ಚರಿಸುತ್ತ ವಿಷ್ಣುವು ಶಿವಲಿಂಗಕ್ಕೆ ಪುಷ್ಪಗಳನ್ನು ಏರಿಸುತ್ತಿದ್ದಾಗ ಕೊನೆಯದಾದ ಮಂತ್ರಕ್ಕೆ ಒಂದು ಪುಷ್ಪವು ಇಲ್ಲದಂತಾಯಿತು. ಆಗ ಗಾಬರಿಗೊಂಡ ವಿಷ್ಣುವು ಅತ್ತಿತ್ತ ನೋಡಲು ಎಲ್ಲಿಯೂ ಪುಷ್ಪವೂ ಕಾಣಿಸಲಿಲ್ಲ. ಕುಳಿತ ಆಸನದಿಂದ ಎದ್ದುಹೋದರೆ ನಿಯಮಭಂಗವಾಗುವ ದೆಂಬ ಭಯದಿಂದ ವಿಷ್ಣುವು ಆಲೋಚಿಸಿ ಕಮಲದಂತಿದ್ದ ತನ್ನದೊಂದು ನೇತ್ರವನ್ನೇ ಕಿತ್ತು ಶಿವಲಿಂಗಕ್ಕೆ ಕೊನೆಯ ಪುಷ್ಪವನ್ನಾಗಿ ಅರ್ಪಿಸಿದನು. ವಿಷ್ಣುವಿನಲ್ಲಿಯ ಈ ವ್ಯಾಮೋಹಶೂನ್ಯತೆಯನ್ನು ಹಾಗೂ ಅವನಲ್ಲಿಯ ಅಚಲವಾದ ಶ್ರದ್ಧೆಯನ್ನು ನೋಡಿ ಶಿವನು ಸಂತೋಷಗೊಂಡು ಪ್ರತ್ಯಕ್ಷವಾಗಿ ಹರಿಗೆ ''ಕಮಲಾಕ್ಷನಾಗು'' ಎಂಬುದಾಗಿ ಆಶೀರ್ವದಿಸಿ ಸುದರ್ಶನ ಚಕ್ರವನ್ನನುಗ್ರಹಿಸಿದನು. ಹೀಗೆ ಪುಷ್ಪಗಳಿಂದ ಶಿವಲಿಂಗ ವನ್ನು ಪೂಜಿಸಿದ ಫಲವಾಗಿ ಹರಿಯು ಕಮಲಾಕ್ಷನಾದದ್ದು ಹಾಗೂ ಸುದರ್ಶನ ಚಕ್ರ ಧಾರಿಯಾದದ್ದು ಶಿವಮಹಾಪುರಾಣದಲ್ಲಿ ಮತ್ತು ಶಿವಮಹಿಮ್ನ ಸ್ತೋತ್ರ (ಶ್ಲೋಕ–೧೯) ದಲ್ಲಿ ಪ್ರತಿಪಾದಿತವಾಗಿದೆ. ಈ ರೀತಿಯಾಗಿ ಹರಿಬ್ರಹ್ಮಾದಿಗಳು ಪತ್ರ ಪುಷ್ಪಗಳಿಂದ ಶಿವಲಿಂಗವನ್ನು ಪೂಜಿಸಿ ಮಹಿಮಾಶಾಲಿಗಳಾಗಿರೋಣದರಿಂದ ಪರಮಶಿವಭಕ್ತರಾದ ವೀರಶೈವರು ತಮ್ಮ ಇಷ್ಟಲಿಂಗವನ್ನು ಪೂಜಿಸುವಾಗ ಹೆಚ್ಚಿನ ಸಂಖ್ಯೆಯಲ್ಲಿ ಪತ್ರ ಪುಷ್ಪಾದಿಗಳು ದೊರೆಯದಿದ್ದರೂ ಒಂದೇ ಬಿಲ್ವದಳ ಅಥವಾ ಒಂದೇ ಪುಷ್ಪವನ್ನು ಪಂಚಾಕ್ಷರ ಮಹಾಮಂತ್ರಪುರಸ್ಸರವಾಗಿ ತಮ್ಮ ಇಷ್ಟಲಿಂಗಧರಿಸಿ ಶಿವನ ಕೃಪೆಯಿಂದ ಅನೇಕ ಯಜ್ಞಗಳ ಫಲಗಳನ್ನು ಪಡೆಯಬಲ್ಲರು.

ಭಿನ್ನ ಭಿನ್ನ ಸಂಪ್ರದಾಯದವರು ಮಾಡುತ್ತಿರುವ ಅಗ್ನಿಹೋತ್ರಯಾಗ, ಋಕ್, ಯಜುಸ್, ಸಾಮಾದಿ ವೇದಗಳ ಅಭ್ಯಾಸ, ಜ್ಯೋತಿಷ್ಯೋಮಯಾಗ ಮತ್ತು ಹದಿನಾರು ಪ್ರಕಾರದ ಮಹಾದಾನಗಳಿಂದ ಪ್ರಾಪ್ತವಾಗುವ ಪುಣ್ಯಕ್ಕಿಂತಲೂ ಕೇವಲ ಪಂಚಾಕ್ಷರ ಜಪದಿಂದ ದೊರೆಯುವ ಪುಣ್ಯವು ಕೋಟಿಪಾಲು ಅಧಿಕವಾಗಿರುತ್ತದೆಂಬುದನ್ನು ಪೂಜ್ಯ ಪಾದರಾದ ರೇಣುಕ ಭಗವತ್ಪಾದರು ಅಪ್ಪಣೆಕೊಡಿಸಿದ್ದಾರೆ. ಆದ್ದರಿಂದ ಅತಿಸುಲಭವೂ ಸರ್ವರಿಗೆ ಸಾಧ್ಯವೂ ಆದ ಪಂಚಾಕ್ಷರ ಮಹಾಮಂತ್ರದ ಜಪವನ್ನು ಮಾನವಮಾತ್ರ ರೆಲ್ಲರೂ ಮಾಡಿ ಮಹಾದೇವನ ಕೃಪೆಯನ್ನು ಪಡೆದು ಕೃತಾರ್ಥರಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಸಪ್ಟಂಬರ್, ೧೯೯೦

(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



## ಆಶೀರ್ವಚನ-೧೧

ಪುರಾ ಸಾನಂದಯೋಗೀಂದ್ರಃ ಶಿವಜ್ಞಾನಪರಾಯಣಃ ।
ಪಂಚಾಕ್ಷರಂ ಸಮುಚ್ಚಾರ್ಯ ನಾರಕಾನುದತಾರಯತ್ ॥ ೪೪ ॥

ಪೂರ್ವಕಾಲದಲ್ಲಿ ಶಿವಜ್ಞಾನಿಯಾದ ಸಾನಂದ ಗಣೇಶ್ವರನು ಪಂಚಾಕ್ಷರ ಮಹಾಮಂತ್ರವನ್ನು ಉಚ್ಚರಿಸಿ, ಇಪ್ಪತ್ತೆಂಟು ಕೋಟಿ ಪ್ರಕಾರದ ನಾಯಕ ನರಕಿಗಳನ್ನು ಉದ್ಧರಿಸಿದನು.

ಸಿದ್ಧ್ಯಾ ಪಂಚಾಕ್ಷರಸ್ಯಾಸ್ಯ ಶತಾನಂದಃ ಪುರಾ ಮುನಿಃ ।
ನರಕಂ ಸ್ವರ್ಗಮಕರೋತ್ ಸಂಗಿರಸ್ಯಾಪಿ ಪಾಪಿನಃ ॥ ೪೫ ॥

ಪೂರ್ವ ಕಾಲದಲ್ಲಿ ಶತಾನಂದನೆಂಬ ಮಹರ್ಷಿಯು ಈ ಪಂಚಾಕ್ಷರ ಮಹಾಮಂತ್ರದ ಸಿದ್ಧಿಯಿಂದ ಸಂಗಿರನೆಂಬ ಪಾಪಿಯ ಸಲುವಾಗಿ ನರಕವನ್ನೇ ಸ್ವರ್ಗವನ್ನಾಗಿ ಮಾಡಿದನು.

ಉಪಮನ್ಯುಃ ಪುರಾ ಯೋಗೀ ಮಂತ್ರೇಣಾನೇನ ಸಿದ್ಧಿಮಾನ್ ।
ಲಬ್ಧವಾನ್ ಪರಮೇಶಾನಾಚ್ಛೈವಶಾಸ್ತ್ರಪ್ರವಕ್ತೃತಾಮ್ ॥ ೪೬ ॥

ಈ ಪಂಚಾಕ್ಷರ ಮಹಾಮಂತ್ರದಿಂದ ಸಿದ್ಧಿಯನ್ನು ಪಡೆದ ಉಪಮನ್ಯು ಎಂಬ ಹೆಸರಿನ ಶಿವಯೋಗಿಯು ಪೂರ್ವಕಾಲದಲ್ಲಿ ಶಿವನಿಂದ ಶೈವಶಾಸ್ತ್ರದ ಆಚಾರ್ಯ ಪದವಿಯನ್ನು ಪಡೆದುಕೊಂಡನು.

ಶ್ರೀ ಪಂಚಾಕ್ಷರ ಮಹಾಮಂತ್ರದ ಮಹಿಮೆಯು ಅಪಾರವಾದುದು. ಈ ಮಂತ್ರವನ್ನು ಜಪಿಸಿ ಅನೇಕ ಜನರು ಸದ್ಗತಿಯನ್ನು ಪಡೆದಿರುವರಲ್ಲದೆ ಬಹುಜನ ಪಾಪಿಗಳನ್ನೂ ಉದ್ಧರಿಸಿದ ಅನೇಕ ಉದಾಹರಣೆಗಳುಂಟು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಮಂತ್ರದ ಮಹಿಮೆಯನ್ನು ವ್ಯಕ್ತಪಡಿಸುವ ಕೆಲವೊಂದು ಮಹರ್ಷಿಗಳ ಚರಿತ್ರೆಗಳನ್ನು ಇಲ್ಲಿ ಉದಾಹರಿಸಿದ್ದಾರೆ. ಅವರ ಜೀವನಕ್ಕೆ ಸಂಬಂಧಿಸಿದ ಕಥಾಂಶವನ್ನು ಸಂಕ್ಷೇಪದಲ್ಲಿ ವಿವರಿಸಲಾಗುತ್ತಿದೆ.

ಪೂರ್ವಕಾಲದಲ್ಲಿ 'ಪೂರ್ಣವಿತ್ತ'ನೆಂಬ ಮಹರ್ಷಿಗೆ 'ಸಾನಂದ'ನೆಂಬ ಮಗನಿದ್ದನು. ಮಹರ್ಷಿಗಳ ವಂಶದಲ್ಲಿ ಜನಿಸಿದ ಕಾರಣ ಸಾನಂದನು ಸದಾಚಾರಿಯೂ, ಶಿವಪೂಜಾಲೋಲನೂ ಆಗಿದ್ದನು. ಅವನು ತನ್ನ ಮನದಲ್ಲಿ ಪಂಚಾಕ್ಷರ ಮಹಾಮಂತ್ರವನ್ನು ಪಠಿಸುತ್ತಿದ್ದನು. ಆ ಮಂತ್ರ ಜಪದ ಮಹಿಮೆಯಿಂದ ಅಪಾರವಾದ ದೈವೀಶಕ್ತಿ ಸಂಪನ್ನನಾದನು. ಒಂದು ಸಾರೆ ಗರುಡಪುರಾಣದ ಶ್ರವಣ ಮಾಡುತ್ತಿರುವಾಗ ಅಲ್ಲಿ ವರ್ಣಿಸಿದ ನರಕಯಾತನೆಯನ್ನು ಕೇಳಿ ಕಳವಳಗೊಂಡನಲ್ಲದೆ ನಾರಕಿಗಳ ಸಲುವಾಗಿ ದಯಾರ್ದ್ರಹೃದಯವುಳ್ಳವನಾದನು. ಹೇಗಾದರೂ ಮಾಡಿ ಅಲ್ಲಿಯ ಜೀವಿಗಳನ್ನು ಆ ಯಾತನೆಯಿಂದ ಪಾರುಮಾಡಬೇಕೆಂಬ ಉದ್ದೇಶದಿಂದ ಯಮ ಲೋಕಕ್ಕೆ ತೆರಳಿದನು. ಸಾನಂದ ಮಹರ್ಷಿಯು ತನ್ನ ಲೋಕಕ್ಕೆ ಬಂದಿರುವುದನ್ನು ಕಂಡು ಯಮನು ಅತ್ಯಾದರದಿಂದ ಅವನನ್ನು ಬರಮಾಡಿಕೊಂಡು ಅರ್ಘ್ಯ–ಪಾದ್ಯಾದಿಗಳಿಂದ ಉಪಚರಿಸಿ

ಆಗಮನದ ಉದ್ದೇಶವೇನೆಂದು ಕೇಳಿದನು. ಆಗ ಸಾನಂದನು. 'ಹೇ ಯಮನೇ ! ನಾರಕಿಗಳನ್ನು ನೋಡುವುದಕ್ಕಾಗಿ ಬಂದಿದ್ದೇನೆ ; ಅವರನ್ನು ಒಂದು ಸಾರೆ ತೋರಿಸು' ಎಂದನು. ಆಗ ಯಮನು, 'ಹೇ ಮಹರ್ಷಿಯೇ ! ತಮ್ಮಂತಹ ಪುಣ್ಯಾತ್ಮರು ನರಕವನ್ನಾಗಲಿ ನರಕದ ಜೀವಿಗಳನ್ನಾಗಲಿ ನೋಡಬಾರದು' ಎಂಬುದಾಗಿ ವಿನಂತಿಸಿಕೊಂಡನು. ಆಗ ಸಾನಂದನು ತಾನು ನೋಡಲೇಬೇಕೆಂಬುದಾಗಿ ಹಟ ಹಿಡಿದಾಗ ನಿರುಪಾಯನಾಗಿ ಯಮನು ಮಹರ್ಷಿಯನ್ನು ಕರೆದುಕೊಂಡು ನರಕಕ್ಕೆ ಹೋಗಿ ಅಲ್ಲಿಯ ಘೋರ, ಘೋರತಮಗಳಾದ ನಾರಕಿಗಳ ಯಾತನೆಯನ್ನು ತೋರಿಸಿದನು. ದಯಾರ್ದ್ರ ಹೃದಯದ ಸಾನಂದನು ಆ ಯಾತನೆಯನ್ನು ಕಣ್ಣಾರೆ ಕಂಡು ಅತ್ಯಂತ ಕನಿಕರಪಟ್ಟು, ಇವರೆಲ್ಲರೂ ಉದ್ಧಾರವಾಗಲೆಂಬ ಉದ್ದೇಶದಿಂದ ಪಂಚಾಕ್ಷರ ಮಹಾಮಂತ್ರವನ್ನು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಉಚ್ಚರಿಸಿದನು. ಮಹರ್ಷಿಯ ಮುಖಾರವಿಂದದಿಂದ ಹೊರಬಂದ ಮಂತ್ರೋಚ್ಚಾರಣೆಯನ್ನು ಕೇಳಿ ಸಮಾಧಾನ ಚಿತ್ತರಾದ ಆ ಎಲ್ಲ ನಾರಕಿಗಳು ತಮ್ಮ ಮುಖದಿಂದ ಅದೇ ಮಂತ್ರವನ್ನು ಪುನಃ ಪುನಃ ಉಚ್ಚರಿಸುತ್ತ ಪಾಪ ಮುಕ್ತರಾದರಲ್ಲದೆ ನರಕಯಾತನೆಯಿಂದ ಪಾರಾದರು. ಹೀಗೆ ಸಾನಂದ ಯೋಗೀಂದ್ರನು ಒಂದು ಸಾರೆ ಪಂಚಾಕ್ಷರ ಮಹಾಮಂತ್ರವನ್ನುಚ್ಚರಿಸಿ ನಾರಕಿಗಳನ್ನು ಉದ್ಧಾರಮಾಡಿದ ಕಥೆಯು ಅತ್ಯಂತ ಸುಪ್ರಸಿದ್ಧವಾಗಿದೆ.

ಇನ್ನು ಪಂಚಾಕ್ಷರ ಮಹಾಮಂತ್ರದ ಸಿದ್ಧಿಯನ್ನು ಪಡೆದುಕೊಂಡಿದ್ದ ಶತಾನಂದನೆಂಬ ಮಹರ್ಷಿಯು ಸಂಗಿರನೆಂಬ ಅತಿಪಾಪಿಯ ಸಲುವಾಗಿ ನರಕವನ್ನೇ ಸ್ವರ್ಗವನ್ನಾಗಿ ಪರಿವರ್ತಿಸಿದ ವಿಷಯವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು– ''ನರಕಂ ಸ್ವರ್ಗಮಕರೋತ್'' ಎಂಬುದಾಗಿ ಅತ್ಯಂತ ಸೂಚ್ಯವಾಗಿ ತಿಳಿಯಪಡಿಸಿದ್ದಾರೆ.

ಉಪಮನ್ಯು ಎಂಬ ಮಹರ್ಷಿಯೂ ಸಹ ಈ ಪಂಚಾಕ್ಷರ ಮಹಾಮಂತ್ರದ ಮಹಿಮೆಯಿಂದಲೇ ಶ್ರೇಷ್ಠ ಶೈವಾಚಾರ್ಯನಾದ ವಿಷಯವನ್ನು ಪೂಜ್ಯರು ಇಲ್ಲಿ ಉದಾಹರಣರೂಪವಾಗಿ ನಿರೂಪಿಸಿದ್ದಾರೆ. ಉಪಮನ್ಯು ಮಹರ್ಷಿಯ ಕಥೆಯು ಇಂತಿದೆ–ಅತ್ಯಂತ ಪ್ರಾಚೀನ ಕಾಲದಲ್ಲಿ ವೇದಜ್ಞನೂ ಕೀರ್ತಿಶಾಲಿಯೂ ಮತ್ತು ಪರಮ ಶಿವಭಕ್ತನೂ ಆದ ವ್ಯಾಘ್ರಪಾದನೆಂಬ ಋಷಿಯು ಇರುತ್ತಿದ್ದನು. ಅವನಿಗೆ ಉಪಮನ್ಯು ಹಾಗೂ ಧೌಮ್ಯರೆಂಬ ಇಬ್ಬರು ಮಕ್ಕಳಿದ್ದರು. ವ್ಯಾಘ್ರಪಾದ ಮಹರ್ಷಿಯು ಬಲುಬೇಗ ಶಿವಸಾಯುಜ್ಯವನ್ನು ಹೊಂದಿದ ಕಾರಣದಿಂದಾಗಿ ಇವರೀರ್ವರ ಲಾಲನೆ–ಪಾಲನೆಯ ಹೊಣೆಯು ವ್ಯಾಘ್ರಪಾದಮಹರ್ಷಿಯ ಧರ್ಮಪತ್ನಿಯ ಪಾಲಿಗೆ ಬಂದಿತು. ಅವಳು ಬಡತನದ ಸ್ಥಿತಿಯಲ್ಲಿಯೇ ಮಕ್ಕಳನ್ನು ಪರಿಪಾಲಿಸುತ್ತ ಬೇರೆ ಮಹರ್ಷಿಗಳ ಆಶ್ರಮಕ್ಕೆ ಅವರನ್ನು ವಿದ್ಯಾಧ್ಯಯನಕ್ಕಾಗಿ ಕಳಿಸುತ್ತಿದ್ದಳು. ಒಂದು ಸಾರೆ ಬಾಲಕನಾದ ಉಪಮನ್ಯುವು ಆ ಮಹರ್ಷಿಗಳ ಆಶ್ರಮದಲ್ಲಿ ಅಲ್ಲಿಯ ಋಷಿಪುತ್ರರೊಂದಿಗೆ ದುಗ್ಧಪಾನವನ್ನು ಮಾಡಿದನು. ಹಾಲಿನ ಸ್ವಾದವನ್ನನುಭವಿಸಿದ ಅವನು ತನ್ನ ತಾಯಿಯ ಬಳಿಗೆ ಬಂದು ಹಾಲು ಬೇಕೆಂಬುದಾಗಿ ಕೇಳಿದನು. ಆಗ ಅವಳು ತನ್ನ ಮನೆಯಲ್ಲಿ ಗೋಕ್ಷೀರವಿಲ್ಲದಿರೋಣದರಿಂದ ಪ್ರತಿನಿತ್ಯದ ವಾಡಿಕೆಯಂತೆ ಅಕ್ಕಿಯ ಹಿಟ್ಟಿನ ತಿಳಿಯಾದ ಗಂಜಿಯನ್ನೇ ಹಾಲೆಂಬುದಾಗಿ ಹೇಳಿ ಕುಡಿಯಕೊಟ್ಟಳು. ನಿಜವಾದ ಹಾಲಿನ ಸ್ವಾದವನ್ನರಿತ

ಉಪಮನ್ಯುವು ''ಇದು ಹಾಲಲ್ಲ, ನನಗೆ ದಿನಾಲೂ ಇದೇ ರೀತಿಯಾಗಿ ಮೋಸಗೊಳಿಸುತ್ತ ಬಂದಿರುವೆ; ನನಗೆ ಆಕಳ ಹಾಲೇ ಬೇಕು'' ಎಂದು ಹಟ ಹಿಡಿದನು. ಆಗ ಅವನ ತಾಯಿಯು ''ಮಗು ! ನಾವು ಬಡವರಾಗಿದ್ದೇವೆ. ನಮ್ಮ ಆಶ್ರಯದಲ್ಲಿ ಗೋವುಗಳಿಲ್ಲ. ಶಿವನ ಅನುಗ್ರಹವು ನಮ್ಮ ಮೇಲೆ ಎಂದಿಗಾಗುವುದೋ ಅಂದು ನಮಗೆ ಎಲ್ಲ ತರದ ಭೋಗ-ಭಾಗ್ಯಗಳು ದೊರೆಯಲು ಸಾಧ್ಯ. ನೀನು ಒಂದು ವೇಳೆ ತಪಸ್ಸು ಮಾಡಿ ಶಿವಾನುಗ್ರಹವನ್ನು ಪಡೆದುದಾದರೆ ಏನೆಲ್ಲವೂ ದೊರೆಯುವುದು'' ಎಂದು ಹೇಳಿದ ಮಾತುಗಳನ್ನು ಕೇಳಿ ಅವಳ ಆಶೀರ್ವಾದವನ್ನು ಪಡೆದು ಅವಳ ಮಾರ್ಗದರ್ಶನದಂತೆ ಶಿವನನ್ನು ಕುರಿತು ತಪಸ್ಸು ಮಾಡಲು ತೊಡಗಿದನು.

ನಿರ್ಜನವಾದ ಪ್ರದೇಶದಲ್ಲಿ ಏಕಾಗ್ರವಾದ ಮನಸ್ಸಿನಿಂದ ಶಿವಪಂಚಾಕ್ಷರ ಮಹಾಮಂತ್ರವನ್ನು ಜಪಿಸುತ್ತ ಶಿವಧ್ಯಾನದಲ್ಲಿ ತಲ್ಲೀನನಾದನು. ಉಪಮನ್ಯುವಿನ ಈ ತಪಸ್ಸು ಅನೇಕ ಕಾಲದವರೆಗೆ ಅಖಂಡವಾಗಿ ನಡೆಯಿತು. ಅವನ ತಪಸ್ಸಿಗೆ ಮೆಚ್ಚಿದ ಶಿವನು ಅವನನ್ನು ಪರೀಕ್ಷಿಸುವುದಕ್ಕೋಸುಗ ಇಂದ್ರನ ವೇಷದಲ್ಲಿ ಪ್ರತ್ಯಕ್ಷನಾದನು. ಇಂದ್ರನ ವೇಷದಲ್ಲಿದ್ದ ಶಿವನು-''ಹೇ ಉಪಮನ್ಯು ! ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನಗೆ ಸ್ವರ್ಗಲೋಕವನ್ನು ಪ್ರದಾನಮಾಡಿದ್ದೇನೆ, ಏಳು'' ಎಂಬುದಾಗಿ ನುಡಿದನು. ತಪೋಮಗ್ನನಾದ ಉಪಮನ್ಯುವು ಈ ನುಡಿಯನ್ನು ಕೇಳಿ ಎಚ್ಚತ್ತು ಕಣ್ತೆರೆದು ಇಂದ್ರನನ್ನು ನೋಡಿ ''ನಾನು ಶಿವನನ್ನು ಕುರಿತು ತಪಸ್ಸು ಮಾಡುತ್ತಲಿದ್ದೇನೆ. ನನಗೆ ನಿನ್ನ ಸ್ವರ್ಗ ಬೇಕಿಲ್ಲ; ಸ್ವರ್ಗದಲ್ಲಿ ಸುಖೋಪಭೋಗವನ್ನು ಪಡುವುದಕ್ಕಿಂತ ಶಿವನ ದಾಸನಾಗಿರುವುದೇ ನನಗೆ ಮೇಲು. ಆದಕಾರಣ ಅವನು ನನ್ನ ಮೇಲೆ ಅನುಗ್ರಹಿಸುವವರೆಗೆ ಈ ಆಸನವನ್ನು ಬಿಟ್ಟು ಮೇಲೇಳಲಾರೆ. ನೀನು ಇಲ್ಲಿಂದ ತೊಲಗು'' ಎಂಬುದಾಗಿ ಹೇಳಿ ಪುನಃ ಕಣ್ಣುಗಳನ್ನು ಮುಚ್ಚಿಕೊಂಡು ಶಿವಧ್ಯಾನದಲ್ಲಿ ಮಗ್ನನಾದನು. ಉಪಮನ್ಯುವಿನ ಈ ಅಚಲವಾದ ನಿಷ್ಠೆಯನ್ನು ಕಂಡ ಶಿವನು ತನ್ನ ಆ ಮಾಯಾರೂಪವನ್ನು ಬಿಟ್ಟು ನಿಜ ರೂಪದಲ್ಲಿ ಪ್ರಕಟಗೊಂಡು ಉಪಮನ್ಯುವನ್ನು ಆಶೀರ್ವದಿಸಿದನು. ತನ್ನೆದುರಿನಲ್ಲಿ ಶಿವನ ಆ ಸಾಕಾರ ಸ್ವರೂಪವನ್ನು ಕಂಡ ಅವನು ಅನೇಕ ವಿಧವಾಗಿ ಶಿವಸ್ತೋತ್ರಗೈಯ್ಯ ತೊಡಗಿದನು. ಆಗ ಶಿವನು- ''ಹೇ ಉಪಮನ್ಯೋ ! ಹಾಲಿನ ಬಯಕೆಯಿಂದಾಗಿ ನನ್ನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿದೆ; ಅದರ ಫಲವಾಗಿ ನೀನು ಒಂದು ಕಲ್ಪ (೪೩೨ ಕೋಟಿ ಸೌರವರ್ಷ) ಪರ್ಯಂತವಾಗಿ ಗೋಕ್ಷೀರವನ್ನು ಸವಿದು ತೃಪ್ತಿಯನ್ನು ಹೊಂದುವವನಾಗು. ಇದೂ ಅಲ್ಲದೆ ನನ್ನ ವಾಚಕವಾದ ಪಂಚಾಕ್ಷರ ಮಹಾಮಂತ್ರವನ್ನು ಜಪಿಸಿದ ಪುಣ್ಯವಿಶೇಷದ ಫಲವಾಗಿ ಶೈವಸಿದ್ಧಾಂತದ ಮಹಾಚಾರ್ಯನಾಗಿ ಭೂಲೋಕದಲ್ಲಿ ಮಾನವರಿಗೆಲ್ಲ ಶಿವಭಕ್ತಿಯ ಮಹಿಮೆಯನ್ನೂ ಹಾಗೂ ಶಿವ ಪಂಚಾಕ್ಷರ ಮಹಾಮಂತ್ರದ ಮಹತಿಯನ್ನೂ ತಿಳಿಸಿಕೊಡುವವನಾಗು'' ಎಂಬುದಾಗಿ ಆಶೀರ್ವದಿಸಿ ಅಂತರ್ಧಾನನಾದನು.

ಈ ರೀತಿಯಾಗಿ ಶಿವಪಂಚಾಕ್ಷರ ಮಹಾಮಂತ್ರದ ಜಪದ ಫಲವಾಗಿ ಸಾನಂದ ಯೋಗಿಯು ನಾರಕಿಗಳನ್ನು ಉದ್ಧಾರಮಾಡಿದರೆ; ಶತಾನಂದ ಮಹರ್ಷಿಯು ನರಕವನ್ನೇ

ಸ್ವರ್ಗವನ್ನಾಗಿಸಿದನು. ಇನ್ನು ಉಪಮನ್ಯು ಮಹರ್ಷಿಯು ಈ ಮಂತ್ರ ಜಪದ ಮಹಿಮೆಯಿಂದಲೇ ಪರಮಶೈವಾಚಾರ್ಯವಾಗಿ ಪ್ರಖ್ಯಾತಿಯನ್ನು ಹೊಂದಿದನು. ಹೀಗೆ ಈ ಮಹಾಮಂತ್ರದಲ್ಲಿ ಅಪಾರವಾದ ಶಕ್ತಿಯು ಅಡಕವಾಗಿರೋಣದರಿಂದ ಪ್ರತಿಯೊಬ್ಬರೂ ಇದರ ಜಪವನ್ನು ಮಾಡಿ ಶಿವಾನುಗ್ರಹಕ್ಕೆ ಪಾತ್ರರಾಗಬೇಕು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೬ ಸಪ್ಟಂಬರ್, ೧೯೯೦
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

■■

ಆಶೀರ್ವಚನ-೧೨

ವಶಿಷ್ಠವಾಮದೇವಾದ್ಯಾ ಮುನಯೋ ಮುಕ್ತಕಿಲ್ಬಿಷಾಃ ।
ಮಂತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋಽಭವನ್ ॥ ೪೭ ॥

ಪಾಪನಿರ್ಮುಕ್ತರಾದ ವಶಿಷ್ಠವಾಮದೇವಾದಿ ಮಹರ್ಷಿಗಳು ಈ ಪಂಚಾಕ್ಷರಮಹಾಮಂತ್ರ ಜಪದಿಂದ ಅನೇಕ ಸಿದ್ಧಿಗಳನ್ನು ಪಡೆದವರಾಗಿದ್ದರಲ್ಲದೆ ಶಾಪಾನುಗ್ರಹ ಸಮರ್ಥರೂ ಆಗಿದ್ದರು.

ಬ್ರಹ್ಮಾದೀನಾಂ ಚ ದೇವಾನಾಂ ಜಗತ್‌ಸೃಷ್ಟ್ಯಾದಿಕರ್ಮಣಿ ।
ಮಂತ್ರಸ್ಯಾಸ್ಯೈವ ಮಹಾತ್ಮ್ಯಾತ್ ಸಾಮರ್ಥ್ಯಮುಪಜಾಯತೇ ॥ ೪೮ ॥

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಈ ಪಂಚಾಕ್ಷರ ಮಹಾಮಂತ್ರದ ಜಪದ ಪ್ರಭಾವದಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಸಂಹಾರ ಕ್ರಿಯೆಗಳನ್ನು ಮಾಡಲು ಸಮರ್ಥರಾಗಿರುತ್ತಾರೆ.

ಕಿಮಿಹ ಬಹುಭಿರುಕ್ತೈರ್ಮಂತ್ರಮೇವಂ ಮಹಾತ್ಮಾ
ಪ್ರಣವಸಹಿತಮಾದೌ ಯಸ್ತು ಪಂಚಾಕ್ಷರಾಖ್ಯಂ ।
ಜಪತಿ ಪರಮಭಕ್ತ್ಯಾ ಪೂಜಯನ್ ದೇವದೇವಮ್
ಸ ಗತದುರಿತಬಂಧೋ ಮೋಕ್ಷಲಕ್ಷ್ಮೀಂ ಪ್ರಯಾತಿ ॥ ೪೯ ॥

ಈ ಪಂಚಾಕ್ಷರ ಮಹಾಮಂತ್ರದ ವಿಷಯವಾಗಿ ಬಹಳ ಮಾತುಗಳನ್ನಾಡುವುದರಿಂದ ಏನು ಪ್ರಯೋಜನ ? ದೇವಾಧಿದೇವನಾದ ಮಹಾದೇವನನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತ ಯಾವ ಶಿವಭಕ್ತನು ಪ್ರಣವಯುಕ್ತವಾದ ಈ ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವನೋ ಅವನು ಪಾಪಬಂಧನದಿಂದ ಬಿಡುಗಡೆ ಹೊಂದಿ ಮೋಕ್ಷಸಾಮ್ರಾಜ್ಯವನ್ನು ಪಡೆಯುತ್ತಾನೆ.

ಪ್ರಾಚೀನಕಾಲದ ವಶಿಷ್ಠ, ವಾಮದೇವ, ಗೌತಮ, ಶ್ವೇತ, ನಾರದ, ಸನಕ, ಸನಂದನ ಮತ್ತು ಸನತ್ಕುಮಾರ ಮುಂತಾದ ಮಹರ್ಷಿಗಳು ಈ ಪಂಚಾಕ್ಷರ ಮಹಾಮಂತ್ರದಲ್ಲಿ ಅನನ್ಯವಾದ ಶ್ರದ್ಧೆಯುಳ್ಳವರಾಗಿ ಇದನ್ನು ಸದಾ ಜಪಿಸುತ್ತ ಪಾಪ ನಿರ್ಮುಕ್ತರಾಗಿ ತೇಜಸ್ವಿಗಳಾಗಿ ಮಹಾನ್ ಕೀರ್ತಿಯನ್ನು ಪಡೆದರು.

ಇದೂ ಅಲ್ಲದೆ, ಬ್ರಹ್ಮ ವಿಷ್ಣು, ಸೂರ್ಯ ಮತ್ತು ಚಂದ್ರ ಮೊದಲಾದ ದೇವತೆಗಳು ಈ ಪಂಚಾಕ್ಷರ ಮಹಾಮಂತ್ರವನ್ನು ಜಪಿಸಿ ಅದರ ಫಲವಾಗಿಯೇ ಜಗತ್ತಿನ ಸೃಷ್ಟ್ಯಾದಿ ಕರ್ಮಗಳನ್ನು ಮಾಡಲು ಸಮರ್ಥರಾದರು. ಆದಕಾರಣ ಹೆಚ್ಚಿಗೆ ಹೇಳುವುದೇನಿದೆ ? ಪ್ರಣವಯುಕ್ತವಾದ ಪಂಚಾಕ್ಷರ ಮಹಾಮಂತ್ರವನ್ನು ಯಾರು ಜಪಿಸಿದರೂ ಅವರ ದುರಿತಗಳೆಲ್ಲ ದೂರಾಗಿ ದೇವಾಧಿದೇವನಾದ ಮಹಾದೇವನ ಕೃಪೆಯಿಂದ ಮೋಕ್ಷ ಸಂಪತ್ತನ್ನು ಪಡೆಯುವರು ಎಂಬುದನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು

ಅಪ್ಪಣೆ ಕೊಡಿಸಿದ್ದಾರೆ. ಆದಕಾರಣ ಮರ್ತ್ಯಲೋಕದ ಮಾನವರಿಗೆ ಈ ಮಹಾಮಂತ್ರವನ್ನುಳಿದು ಸುಲಭವಾದ ಸದ್ಗತಿಯ ಸಾಧನವು ಬೇರೊಂದಿಲ್ಲ. ಅಂತೆಯೇ ನಿಜಗುಣ ಶಿವಯೋಗಿಗಳು–

''ಕಾಯವಿಡಿದಾತ್ಮರಾಶಿಗೆ ಪರತರ ಮುಕ್ತಿಗು।
ಪಾಯವಿದು ನಿಜ ಶಿವಮಂತ್ರವಣ್ಣಾ ॥ ಪ ॥

ಅವರಿವರೆಂಬುದೇನೋ। ಶಿವ ಶಿವ।
ಭುವನದ ಮಾನವರೊಮ್ಮೆ ತಾವಾಗಲಿ। ಶಿವಮಂತ್ರವಿದನುಸುರೆ।
ಮೋಸದೊಳೊಮ್ಮೆ। ಶಿವಮಂತ್ರವಿದನುಸುರೆ।

ಶ್ಲೋಕ : ಸಕೃದುಚ್ಚಾರಮಾತ್ರೇಣ ಪಂಚಾಕ್ಷರಮಹಾಮನೋಃ।
ಸರ್ವೇಷಾಮಪಿ ಜಂತೂನಾಂ ಸರ್ವಪಾಪಕ್ಷಯೋ ಭವೇತ್ ॥
ಎನಲಾಗಿ। ಇಂತೆನಲಾಗಿ। ಶೃತಿಯೆನಲಾಗಿ
ಹವಣೆಸಬಾರದ ಕಲುಷವಳಿದು ರಾಜಿ।
ಸುವರು ನಿರ್ಮಲತೆಯಿಂದೆನಲಾಗಿ ॥ ೧ ॥

ಈ ರೀತಿಯಾಗಿ ಕೈವಲ್ಯಪದ್ಧತಿಯ ಶಿವಕಾರುಣ್ಯಸ್ಥಲದಲ್ಲಿ ಈ ಪಂಚಾಕ್ಷರ ಮಹಾಮಂತ್ರದ ಮಹತಿಯನ್ನು ಮುಕ್ತಕಂಠದಿಂದ ಕೊಂಡಾಡಿದ್ದಾರೆ.

ನಮ್ಮ ದೇಶದ ಪ್ರಾಚೀನ ಋಷಿಮುನಿಗಳು ಈ ಮಹಾಮಂತ್ರ ಜಪದ ಪ್ರಭಾವದಿಂದಲೇ ಕೀರ್ತಿಶಾಲಿಗಳಾದುದು ಮತ್ತು ಸದ್ಗತಿಯನ್ನು ಹೊಂದಿದುದು ಭಾರತೀಯ ಸಂಸ್ಕೃತಿಯ ಅಭ್ಯಾಸಿಗರಿಗೆ ಅಪರಿಚಿತವಾದ ವಿಷಯವೇನಲ್ಲ.

## ಉಪಸಂಹಾರ

ಇದುವರೆಗೆ ಶ್ರೀಜಗದ್ಗುರು ರೇಣುಕ ಭಗವತ್ಪಾದರಿಂದ ಉಪದೇಶಿಸಲ್ಪಟ್ಟ ಪಂಚಾಕ್ಷರ ಜಪಸ್ಥಲದ ಮಹಿಮೆಯನ್ನವಲೋಕಿಸಿದ್ದಾಯಿತು. ಪೂಜ್ಯರ ಉಪದೇಶದಿಂದ ತಿಳಿದುಬರುವುದೇನೆಂದರೆ ಮಂತ್ರವು ಸಾಧಕನನ್ನು ಸಂರಕ್ಷಿಸುವ ಶ್ರೇಷ್ಠವಾದ ರಕ್ಷಾಕವಚ. ಅಂತೆಯೇ 'ಸಂಕೇತ–ಪದ್ಧತಿ'ಯೆಂಬ ಗ್ರಂಥದಲ್ಲಿ– ''ಮನನಾತ್ ತ್ರಾಣ ಧರ್ಮಾಽಸೌ ಮಂತ್ರೋಽಯಂ ಪರಿಕೀರ್ತಿತಃ'' ಮಾನಸಿಕ ಜಪರೂಪವಾದ ಮನನದಿಂದ ಇದು ಸಾಧಕನನ್ನು ಸಂರಕ್ಷಿಸುವ ಕಾರಣ ಮಂತ್ರಕ್ಕೆ ರಕ್ಷಾಕವಚವೆಂದು ಕರೆಯಲಾಗಿದೆ. ವೇದಾಗಮ ಪ್ರತಿಪಾದಿತವಾದ ಓಂಕಾರ ಸಹಿತವಾದ ಪಂಚಾಕ್ಷರ ಮಹಾಮಂತ್ರವು ವೀರಶೈವರ ಜಪ್ಯಮಂತ್ರವಾಗಿದೆ. ಶಿವನ ಅಭಿಧಾನವಾದ ಈ ಮಂತ್ರದ ಪುನಃ ಪುನಃ ಆವೃತ್ತಿಯಿಂದ ಶಿವನ ಲಕ್ಷ್ಯವನ್ನು ನಮ್ಮತ್ತ ತಿರುಗಿಸಬಹುದು. ''ಪಂಚಾಕ್ಷರಾತ್ ಪರಂ ನಾಸ್ತಿ ಪರಿತ್ರಾಣಂ ಕಲೌಯುಗೇ'' ಎಂಬ ಆಗಮೋಕ್ತಿಗನುಸಾರವಾಗಿ ಈ ಕಲಿಯುಗದಲ್ಲಿ ಈ ಪಂಚಾಕ್ಷರ ಮಹಾಮಂತ್ರದ ಹೊರತಾಗಿ ರಕ್ಷಣೋಪಾಯವು ಬೇರೊಂದಿಲ್ಲ.

ಈ ಮಂತ್ರದ ಮಹಿಮೆಯು ವೇದ, ಆಗಮ, ಪುರಾಣ ಮತ್ತು ಇತಿಹಾಸ ಗ್ರಂಥಗಳಲ್ಲಿ ಅದರಂತೆ ಇತ್ತೀಚಿನ ಆಧುನಿಕ ಸಾಹಿತ್ಯದಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವುದನ್ನು ಕಾಣುತ್ತೇವೆ. 'ಶಿವರಹಸ್ಯ'ದ ಸಪ್ತಮಾಧ್ಯಾಯದಲ್ಲಿ– ''ಶಿವನಾಮವೆಂಬ ಮಣಿಯು ಯಾರ ಕಂಠದಲ್ಲಿ ಸದಾ ವಿರಾಜಿಸುತ್ತಿದೆಯೋ ಅವನು ನೀಲಕಂಠನಿಗೆ ಸಮಾನನಾಗುತ್ತಾನೆ. ಶಿವನಾಮವು ಅಮೃತಕ್ಕೆ ಸಮಾನವಾದುದು. ಈ ನಾಮಾಮೃತವನ್ನು ಪಾನ ಮಾಡಿದವನು ಪುನಃ ಎಂದೂ ತಾಯಿಯ ಸ್ತನಪಾನವನ್ನು ಮಾಡಲಾರನು; ಅರ್ಥಾತ್ ಜನನ ಮರಣಾತ್ಮಕ ಸಂಸಾರ ಚಕ್ರದಲ್ಲಿ ಸಿಲುಕಲಾರನು. ಶಿವನಾಮವು ಕೊಡಲಿಗೆ ಸಮಾನವಾದುದು. ಇದರಿಂದ ಸಂಸಾರವೆಂಬ ವೃಕ್ಷವನ್ನು ಒಂದು ಸಾರೆ ಕಡಿದುಹಾಕಿದರೆ ಅದು ಪುನಃ ಎಂದೆಂದಿಗೂ ಚಿಗುರಲಾರದು. ಶಿವನ ಸರ್ವನಾಮಗಳಲ್ಲಿ ಪಾಪನಾಶಕ ಸಾಮರ್ಥ್ಯವಿದ್ದರೂ 'ಶಿವ' ಎಂಬ ಎರಡಕ್ಷರದ ನಾಮವು ಆ ಎಲ್ಲ ನಾಮಗಳಲ್ಲಿ ಉತ್ಕೃಷ್ಟತೆಯನ್ನು ಪಡೆದಿದೆ.'' ಇಂತೆಂಬುದಾಗಿ ಶಿವನಾಮದ ಮಹಿಮೆಯು ಪ್ರತಿಪಾದಿಸಲ್ಪಟ್ಟಿದೆ. ಸ್ವತಃ ಶಿವನು ಯಮನನ್ನುದ್ದೇಶಿಸಿ ಹೇಳಿದ್ದೇನೆಂದರೆ– ''ಹೇ ಯಮನೇ ! ನನ್ನ ನಾಮವು ಪಾಪವೆಂಬ ಅರಣ್ಯವನ್ನು ಸುಡುವಲ್ಲಿ ದಾವಾನಲೋಪಾದಿಯಲ್ಲಿದೆ. ಕಾಲಾಗ್ನಿಯ ಜ್ವಾಲೆಗಳಿಂದ ಕೋಟಿ ಕೋಟಿ ಪರ್ವತಗಳು ಉರಿದುಹೋಗುವಂತೆ ನನ್ನ ನಾಮರೂಪೀ ಅಗ್ನಿಯಲ್ಲಿ ಕೋಟಿ ಕೋಟಿ ಮಹಾಪಾತಕಗಳು ದಹಿಸಿ ಹೋಗುತ್ತವೆ. ನನ್ನ ನಾಮಸ್ಮರಣೆಯು ನನ್ನ ಸ್ಮರಣೆಗೆ ಸಮಾನವಾದುದಾಗಿದೆ. ಆದ ಕಾರಣ, ನನ್ನ ನಾಮಜಪದಲ್ಲಿ ತಲ್ಲೀನರಾದ ಭಕ್ತರ ಗೊಡವೆಗೆ ನೀನೆಂದಿಗೂ ಹೋಗಬೇಡ. ನಿನ್ನ ಜೀವನದಲ್ಲಿ ಕಲ್ಯಾಣದ ಅಪೇಕ್ಷೆ ನಿನಗಿದ್ದರೆ ಆ ಶಿವಭಕ್ತರನ್ನು ನೀನು ಪೂಜೆಮಾಡು'' ಎಂಬುದಾಗಿ ಶಿವನು ಶಿವರಹಸ್ಯದಲ್ಲಿ ಉಪದೇಶಿಸಿದ್ದಾನೆ.

ಸೌರಪುರಾಣದ ಅರವತ್ತಾಲ್ಕನೆಯ ಅಧ್ಯಾಯದಲ್ಲಿ– ''ಸಾಧಕನು ಬಿಲ್ವವೃಕ್ಷದ ಅಡಿಯಲ್ಲಿ ಕುಳಿತು ಮೂರು ದಿನಗಳ ಪರ್ಯಂತವಾಗಿ ಉಪವಾಸ ವ್ರತವನ್ನಾಚರಿಸುತ್ತ ಪವಿತ್ರವಾದ ಮನಸ್ಸಿನಿಂದ 'ಶಿವ' ಪಂಚಾಕ್ಷರ ಮಹಾಮಂತ್ರವನ್ನು ಒಂದು ಲಕ್ಷ ಸಾರೆ ಜಪಿಸಿದರೆ ಅವನು ಭ್ರೂಣಹತ್ಯಾದಿ ಮಹಾಪಾತಕಗಳಿಂದ ಮುಕ್ತನಾಗುವನು. ಇನ್ನು ಶಿವನ ಈ ನಾಮವನ್ನು ಅಜ್ಞಾನಪೂರ್ವಕವಾಗಿ ಉಚ್ಚರಿಸಿದರೂ ಭೂಲೋಕನಾಥನಾದ ಶಿವನು ಅವನಿಗೂ ಮುಕ್ತಿಯನ್ನು ದಯಪಾಲಿಸುತ್ತಾನೆ. ಪವಿತ್ರವಾದ ನದಿ ಅಥವಾ ಸರೋವರಗಳಲ್ಲಿ ಮುಳುಗಿ ಶಿವಧ್ಯಾನ ಮಾಡುತ್ತ ಈ ಮಹಾಮಂತ್ರವನ್ನು ಕೇವಲ ಎಂಟು ಸಾರೆ ಜಪಿಸುವುದರಿಂದಲೂ ಜಪಿಸುವವನ ಪಾಪಗಳು ದೂರಾಗಿ ಅವನು ಪೂತಾತ್ಮನಾಗುತ್ತಾನೆ'' ಮುಂತಾಗಿ ಈ ಮಂತ್ರದ ಮಹಿಮೆಯು ನಿರೂಪಿ ಸಲ್ಪಟ್ಟಿದೆ.

ಶಿವಮಹಾಪುರಾಣದಲ್ಲಿ ಬ್ರಹ್ಮದೇವನು ಯಮದೂತರಿಗೆ ತಿಳಿಸಿದ್ದೇನೆಂದರೆ– ''ಹೋಗುವಾಗ, ಬರುವಾಗ, ಕುಳಿತಾಗ, ನಿಂತಾಗ ಮತ್ತು ಮಲಗಿದಾಗ ಹೀಗೆ ಅದೇನನ್ನಾದರೂ ಮಾಡುತ್ತ ಹಗಲುರಾತ್ರಿಗಳಲ್ಲಿ ಶಿವಪಂಚಾಕ್ಷರ ಮಹಾಮಂತ್ರವನ್ನು ಜಪಿಸುವವನ ಮೇಲೆ ನಿಮ್ಮ ಅಧಿಕಾರವು ನಡೆಯಲಾರದು. ಈ ಮಹಾಮಂತ್ರವನ್ನು ಜಪಿಸುವವನ ಮುಖವು ಪವಿತ್ರವಾದ ತೀರ್ಥಕ್ಕೆ ಸಮಾನವಾದುದಾಗಿರುತ್ತದೆ. ಆದ

ಕಾರಣ ಅಂಥವರ ಮುಖದರ್ಶನ ಮಾತ್ರದಿಂದ ತೀರ್ಥಸ್ನಾನದ ಫಲವು ಪ್ರಾಪ್ತವಾಗುತ್ತದೆ. ಶರೀರದ ಮೇಲೆ ಶಿವಲಿಂಗ, ಭಸ್ಮ ಮತ್ತು ರುದ್ರಾಕ್ಷಿಗಳನ್ನು ಧರಿಸಿಕೊಂಡು ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವವನ ಕಾಯವು ದಿವ್ಯವಾದ ಕ್ಷೇತ್ರವಿದ್ದಂತೆ; ಅಂತಹ ಶಿವಭಕ್ತನ ಶರೀರದ ದರ್ಶನ ಮಾತ್ರದಿಂದ ದಿವ್ಯಕ್ಷೇತ್ರ ಯಾತ್ರೆಯ ಫಲವು ಪ್ರಾಪ್ತವಾಗುತ್ತದೆ''.

ಪದ್ಮಪುರಾಣದಲ್ಲಿ– ''ಸಜ್ಜನರ ನಿಂದೆ, ಹರಿ– ಹರರ ಭೇದ ಕಲ್ಪನೆ, ಗುರುನಿಂದೆ, ಶ್ರುತಿ–ಶಾಸ್ತ್ರಗಳ ನಿಂದೆ, ದೇವರ ಹೆಸರಿನಲ್ಲಿ ಪಾಪವನ್ನೆಸಗುವುದು, ನಾಮದ ಮಹಿಮೆಯನ್ನು ಕೇಳಿಯೂ ಅದರಲ್ಲಿ ಪ್ರೇಮವನ್ನು ತಾಳದಿರುವುದು, ಅಹಂಕಾರಿ ಮಮಕಾರಿಯಾಗಿರುವುದು, ವ್ರತದಾನಾದಿಗಳಲ್ಲಿ ಅಶ್ರದ್ಧೆಯುಳ್ಳವನಾಗುವುದು, ನಾಮದ ಮಹಿಮೆಯನ್ನು 'ಅರ್ಥವಾದ'ವೆಂದು ಭಾವಿಸುವುದು ಮತ್ತು ನಾಮವಿಮುಖರೂ, ಶ್ರದ್ಧಾರಹಿತರೂ ಆದ ಜನರ ಸಹವಾಸವೆಂಬಿವುಗಳು ನಾಮಾಪರಾಧಗಳೆಂದು ಪರಿಗಣಿಸಲ್ಪಟ್ಟಿವೆ. ಇವುಗಳಲ್ಲಿ ಯಾವುದಾದರೊಂದು ಅಪರಾಧವನ್ನೆಸಗುತ್ತ ಮಹಾಮಂತ್ರದ ಜಪವನ್ನು ಮಾಡಿದರೆ ಅದು ಬೇಗನೆ ಫಲಕಾರಿಯಾಗುವುದಿಲ್ಲ. ಆದ್ದರಿಂದ ಮೇಲೆ ಹೇಳಿದ ಅಪರಾಧಗಳು ಘಟಿಸದಂತೆ ಎಚ್ಚರಿಕೆಯನ್ನು ವಹಿಸಿ ಮಂತ್ರಜಪವನ್ನು ಮಾಡಬೇಕೆಂಬುದಾಗಿ ತಿಳಿಸಲಾಗಿದೆ. ಆಕಸ್ಮಾತ್ತಾಗಿ ಮೇಲೆ ಹೇಳಿದವುಗಳಲ್ಲಿ ಯಾವುದಾದರೊಂದು ಅಪರಾಧವು ಸಂಭವಿಸಿದಾಗ ಪ್ರಾಯಶ್ಚಿತ್ತವನ್ನಾಚರಿಸಿ ಪುನಃ ಜಪಾಭ್ಯಾಸದಲ್ಲಿ ತೊಡಗಿದ ಸಾಧಕನು ನಿಷ್ಕಾಮಿಯಾಗಿದ್ದರೆ ಅಂತಃಕರಣ ಶುದ್ಧಿಯನ್ನು ಹೊಂದಿ ಪರಮ ಕೈವಲ್ಯವನ್ನು ಪಡೆಯುವನು. ಇನ್ನು ಸಾಧಕನು ಸಕಾಮಿಯಾಗಿದ್ದರೆ ಧರ್ಮ, ಅರ್ಥ ಮತ್ತು ಕಾಮಗಳು ಪ್ರಾಪ್ತವಾಗಿ ಕೊನೆಯಲ್ಲಿ ಪರಮಕೈವಲ್ಯವನ್ನು ಹೊಂದುವನು'' ಎಂಬುದಾಗಿ ಪ್ರತಿಪಾದಿಸಲಾಗಿದೆ.

ಬ್ರಹ್ಮವೈವರ್ತಪುರಾಣದ ಬ್ರಹ್ಮಖಂಡದಲ್ಲಿ ಶ್ರೀಕೃಷ್ಣಭಗವಂತನು– ''ಶಿವನಾಮದಲ್ಲಿಯ ಅನುರಾಗದಿಂದಾಗಿ ಆ ನಾಮವನ್ನು ಜಪಿಸುವವನನ್ನು ನಾನು ಸದಾ ಹಿಂಬಾಲಿಸುತ್ತೇನೆ. 'ಶಿವ' ಶಬ್ದವು ಕಲ್ಯಾಣಪ್ರದವಾಗಿದೆ. ಬಂಧು–ಬಾಂಧವರನ್ನು, ಧನ ಕನಕಾದಿಗಳನ್ನು ಕಳೆದುಕೊಂಡ ವ್ಯಕ್ತಿಯು ಶಿವಪಂಚಾಕ್ಷರ ಮಹಾಮಂತ್ರದ ಜಪದಿಂದ ಪುನಃ ಕಲ್ಯಾಣಪರಂಪರೆಯನ್ನು ಹೊಂದುತ್ತಾನೆ. 'ಶಿವ' ಎನ್ನುವ ಎರಡಕ್ಷರಗಳಲ್ಲಿ ಪಾಪನಾಶಕವೂ, ಮುಕ್ತಿದಾಯಕವೂ ಆದ ಅರ್ಥವು ಅಡಗಿಕೊಂಡಿದೆ. ಅಂತೆಯೇ ಕಡುಪಾಪಿಯೂ ಸಹ ಈ ಮಂತ್ರದ ಜಪದಿಂದ ಪಾಪಮುಕ್ತನಾಗಿ ಕೈವಲ್ಯವನ್ನು ಹೊಂದುವನು'' ಮುಂತಾಗಿ ಶಿವನಾಮಯುಕ್ತವಾದ ಪಂಚಾಕ್ಷರ ಮಹಾಮಂತ್ರದ ಮಹತಿಯನ್ನು ಕೊಂಡಾಡಿದ್ದಾನೆ.

ಸೌರಪುರಾಣದ ಅರವತ್ತಾರನೇ ಅಧ್ಯಾಯದಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದವನಾಗಲಿ, ಸೆರೆಗುಡಕನಾಗಲಿ, ಕಳ್ಳನಾಗಲಿ, ಮತ್ತು ಗುರುಪತ್ನಿಗಾಮಿಯೇ ಆಗಿರಲಿ ಅವನು ತನ್ನ ಅಂತ್ಯಸಮಯದಲ್ಲಿ ಈ ಪಂಚಾಕ್ಷರ ಮಹಾಮಂತ್ರವನ್ನುಚ್ಚರಿಸುತ್ತ ಶಿವಧ್ಯಾನದಲ್ಲಿ ಶರೀರವನ್ನು ತ್ಯಾಗಮಾಡಿದರೆ ಅವನಿಗೆ ಶಿವಸಾಯುಜ್ಯವು ಪ್ರಾಪ್ತವಾಗುವುದೆಂಬುದಾಗಿ

ತಿಳಿಸಲಾಗಿದೆ.

ಮನುಷ್ಯನ ಜೀವನದಲ್ಲಿ ಅವನ ಅಂತಿಮ ಸಮಯವು ಬಹಳ ಮಹತ್ತ್ವಪೂರ್ಣವಾದುದು. ಅಂತಿಮ ಗಳಿಗೆಯಲ್ಲಿ ನಮ್ಮ ಬುದ್ಧಿಯು ಏನನ್ನು ಚಿಂತಿಸುತ್ತದೆಯೋ ಅದನ್ನೇ ಹೊಂದುತ್ತದೆ. ಜೀವನದುದ್ದಕ್ಕೂ ಏನನ್ನೇ ಮಾಡಿದ್ದರೂ ಕೊನೆಯ ಗಳಿಗೆಯಲ್ಲಿ ಸತ್ಕರ್ಮವು ಘಟಿಸಿದರೆ ಅದರಿಂದ ಅವನಿಗೆ ಸದ್ಗತಿಯು ಪ್ರಾಪ್ತವಾಗುತ್ತದೆ. ಅಂತೆಯೇ ''ಅಂತೇ ಯಾ ಮತಿಃ ಸಾಗತಿಃ'' ಎಂಬುದಾಗಿ ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಓರ್ವ ವ್ಯಕ್ತಿಯು ತನ್ನ ಶರೀರದ ಛಾಯಾಚಿತ್ರವನ್ನು ತೆಗೆಸಿಕೊಳ್ಳುವುದಕ್ಕಾಗಿ ಉತ್ತಮವಾದ ವೇಷಭೂಷಣಗಳಿಂದಲಂಕೃತನಾಗಿ ಫೋಟೋಗ್ರಾಫರನ ಬಳಿಗೆ ಹೋಗುತ್ತಾನೆ. ಅಲ್ಲಿ ಆ ಫೋಟೋಗ್ರಾಫರನು ಹೇಳಿದಂತೆ ನೀಟಾಗಿ ಕುಳಿತು ಅವನು ರೆಡಿ ಕೊಟ್ಟು ಕ್ಲಿಕ್ ಮಾಡುವಾಗ ಈತನು ಕಣ್ಣುಮುಚ್ಚಿದರೆ ಕುರುಡು ಫೋಟೋ ಬರುವುದಿಲ್ಲವೇ ? ಕ್ಲಿಕ್ ಮಾಡುವ ಪೂರ್ವದಲ್ಲಿ ಕಣ್ಣು ತೆರೆದಿದ್ದರೂ ಕ್ಲಿಕ್ ಮಾಡುವ ಕ್ಷಣದಲ್ಲಿ ಕಣ್ಣುಮುಚ್ಚಿದ ಕಾರಣ ಕುರುಡು ಫೋಟೋ ಬರುವಂತೆ; ಜೀವನದುದ್ದಕ್ಕೂ ನಾಮಸ್ಮರಣೆಯನ್ನು ಮಾಡಿದ್ದರೂ ಅಂತಿಮಕ್ಷಣದಲ್ಲಿ ಅಂದರೆ ಮರಣಕಾಲದಲ್ಲಿ ಆ ನಾಮವನ್ನುಚ್ಚರಿಸದೆ ಬೇರಾವುದೇ ಸಾಂಸಾರಿಕ ವಿಷಯದಲ್ಲಿ ಚಿಂತಾಮಗ್ನನಾದರೆ ಅವನಿಗೆ ಸದ್ಗತಿಯು ಸಿಗದು. ಆದರೆ ಜೀವನದ ತುಂಬೆಲ್ಲ ದುಷ್ಕರ್ಮಗಳನ್ನಾಚರಿಸಿ ಮರಣಕಾಲದಲ್ಲಿ ಮಹಾಮಂತ್ರವನ್ನು ಜಪಿಸಿದ್ದೇ ಆದರೆ ಸದ್ಗತಿಯು ಅವಶ್ಯವಾಗಿ ಪ್ರಾಪ್ತವಾಗುತ್ತದೆ. ಅಂತೆಯೇ ಶಾಸ್ತ್ರಕಾರರು ಜೀವನದ ಕೊನೆಯ ಕ್ಷಣಕ್ಕೆ ಬಹು ಮಹತ್ವವನ್ನು ಕೊಟ್ಟಿದ್ದಾರೆ. ಅಂತಿಮ ಸಮಯದಲ್ಲಿ ಪರಮಾತ್ಮನ ನಾಮವು ಸ್ಮರಣೆಗೆ ಬರಬೇಕೆಂಬುದ್ದೇಶ ದಿಂದಲೇ ಅದರ ಜಪಾಭ್ಯಾಸವನ್ನು ಜೀವನದುದ್ದಕ್ಕೂ ಮಾಡಬೇಕಾಗುತ್ತದೆ.

ತನ್ನ ಭಕ್ತರ ಪಾಪಗಳನ್ನು ಹರಣಮಾಡುವುದರಿಂದ ಶಿವನಿಗೆ ಹರನೆಂಬುದಾಗಿಯೂ ಕರೆಯಲಾಗಿದೆ. ಶಿವನಾಮವನ್ನು ಸ್ಮರಿಸಿದಂತೆ ಹರನಾಮವನ್ನು ಸ್ಮರಿಸಿದಾಗಲೂ ಜೀವಿಗಳು ಪಾಪಮುಕ್ತರಾಗುತ್ತಾರೆ. ಹರನಾಮವನ್ನು ನೇರವಾಗಿ ಉಚ್ಚರಿಸಲಿ ಅಥವಾ 'ಹರ' ಎಂಬೆರಡಕ್ಷರಗಳಿಂದ ಕೂಡಿದ ಬೇರಾವ ಶಬ್ದವನ್ನೇ ಉಚ್ಚರಿಸಲಿ ಅದರಿಂದಲೂ ಪಾಪಿಯು ಪಾಪಮುಕ್ತನಾಗುವನೆಂಬ ವಿಷಯದ ಬಗ್ಗೆ 'ಶಿವರಹಸ್ಯ'ದಲ್ಲಿ ಸ್ವಾರಸ್ಯಪೂರ್ಣವಾದ ಕಥೆಯೊಂದು ಪ್ರತಿಪಾದಿಸಲ್ಪಟ್ಟಿದೆ. ಅದೇನೆಂದರೆ–

ಒಂದು ಗ್ರಾಮದಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದ ಒಬ್ಬ ಮಹಾಪಾಪಿಯು ತನ್ನ ಮರಣದ ಸಮಯದಲ್ಲಿ ಮಕ್ಕಳನ್ನುದ್ದೇಶಿಸಿ– ''ಆಹರ ವಸ್ತ್ರಮ್'' (ಬಟ್ಟೆಯನ್ನು ತೆಗೆದುಕೊಂಡು ಬಾ); ''ಸಂಹರ ಏತೌ'' (ಇವರಿಬ್ಬರನ್ನು ಕೊಲ್ಲು); ''ಪ್ರಹರ, ಪ್ರಹರ'' (ಹೊಡೆ, ಹೊಡೆ) ಮುಂತಾದ ಶಬ್ದಗಳನ್ನುಚ್ಚರಿಸುತ್ತ ಅಸುನೀಗಿದನು. ಆಗ ಆ ಪಾಪಿ ಯನ್ನು ಕೊಂಡೊಯ್ಯಲು ಯಮದೂತರು ಬಂದಾಗ ಶಿವದೂತರು ಅವರನ್ನು ತಡೆದು; ಈತನು ಮರಣಕಾಲದಲ್ಲಿ ಹರನಾಮವನ್ನುಚ್ಚರಿಸಿರೋಣದರಿಂದ ಇವನನ್ನು ಯಮ ಲೋಕಕ್ಕೆ ಬಿಡಲಾರೆವು. ಆಗ ಯಮದೂತರು– ''ಇವನು ಅಂತ್ಯಕಾಲದಲ್ಲಿ

'ಆಹರ', 'ಸಂಹರ' ಮತ್ತು 'ಪ್ರಹರ' ಶಬ್ದಗಳನ್ನು ನುಡಿದಿರುವನೇ ವಿನಃ ಹರನಾಮವನ್ನು ನುಡಿದಿಲ್ಲ; ಆದ್ದರಿಂದ ಈ ಪಾಪಿಯನ್ನು ನಾವು ಯಮಲೋಕಕ್ಕೇನೇ ಕೊಂಡೊಯ್ಯುತ್ತೇವೆ'' ಎಂಬುದಾಗಿ ಪ್ರತಿಭಟಿಸಿದರು. ಈ ರೀತಿಯಾಗಿ ಉಭಯದೂತರಲ್ಲಿಯ ವಿವಾದವು ವಿಕೋಪಕ್ಕೆ ಹೋಗಿ ಕೊನೆಗೆ ಇದರ ಇತ್ಯರ್ಥಕ್ಕಾಗಿ ಎಲ್ಲರೂ ಶಿವನ ಸಾನ್ನಿಧ್ಯ ವನ್ನೈದಿದರು. ಇವರೀರ್ವರ ವಾದ–ವಿವಾದವನ್ನಾಲಿಸಿದ ಶಿವನು ಯಮದೂತರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ– ''ಎಲೈ ಯಮದೂತರೇ ! ಇವನು ಜೀವನದುದ್ದಕ್ಕೂ ಪಾಪಕರ್ಮಗಳನ್ನು ಮಾಡಿರುವುದೇನೋ ನಿಜ; ಆದರೆ ಅಂತ್ಯ ಸಮಯದಲ್ಲಿ ಕೇವಲ ಹರ ನಾಮವನ್ನಷ್ಟೇ ಅಲ್ಲ ಅದಕ್ಕೆ 'ಆ', 'ಸಂ' ಮತ್ತು 'ಪ್ರ'ಗಳೆಂಬ ಉಪಸರ್ಗಗಳನ್ನು ಜೋಡಿಸಿ ನುಡಿದಿದ್ದಾನೆ. ಕೇವಲ 'ಹರ' 'ಹರ' ಎಂದವರ ಪಾಪವನ್ನು ಹರಣಮಾಡುವ ನಾನು, ಅದಕ್ಕೆ ವಿಶಿಷ್ಟವಾಗಿ ಇವನು ಉಪಸರ್ಗಗಳನ್ನು ಜೋಡಿಸಿ ನುಡಿದಿರೋಣದರಿಂದ ಇವನ ಮೇಲೆ ನನ್ನ ಕೃಪೆಯು ಇನ್ನೂ ವಿಶೇಷವಾಗಿ ಆಗಿದೆ; ಆದಕಾರಣ ಇವನು ಯಮಲೋಕವಾಸಕ್ಕೆ ಪಾತ್ರನಲ್ಲ'' ಎಂದು ಹೇಳಿ ಯಮದೂತರನ್ನು ಕಳುಹಿಸಿ ಪಾಪ ಮುಕ್ತನಾದ ಆವನಿಗೆ ಶಿವಲೋಕವನ್ನು ದಯಪಾಲಿಸಿದನು.

ಶಿವನು ಅತ್ಯಂತ ಉದಾರಿಯೂ ಸರಳನೂ ಮತ್ತು ಭೋಳಾಸ್ವಭಾವದನೂ ಆಗಿರೋಣದರಿಂದ ಆ ಭಕ್ತನ ಮುಖದಿಂದ ಬಂದಿರುವ ಅನ್ಯಾರ್ಥಗಳಾದ ಶಬ್ದಗಳಲ್ಲಿಯ 'ಹರ' ಶಬ್ದವನ್ನು ತನ್ನ ನಾಮವೆಂಬುದಾಗಿ ಗ್ರಹಿಸಿ ಅದೆಷ್ಟೋ ಜನರನ್ನು ಅನುಗ್ರಹಿಸಿದ ಕಥೆಗಳು ಹೇರಳವಾಗಿವೆ. ಹೀಗಿರುವಾಗ ಭಕ್ತನಾದವನು ನೇರವಾಗಿ ಅವನ ನಾಮವನ್ನೇ ಜಪಿಸಿದಾಗ ಅವನ ಅನುಗ್ರಹಕ್ಕೆ ಅದೇಕೆ ಪಾತ್ರನಾಗಲಿಕ್ಕಿಲ್ಲ ! ಅಂತೆಯೇ ನಿಜಗುಣ ಶಿವಯೋಗಿಗಳು–

''ಹರನಾಮವನು ಬಿಡದೆ ಜಪಿಸಬಲ್ಲವರ ಭವ ।
ಮರಣ ಮಾಯಾಕರ್ಮ ಮಲಪಾಶ ಬಂಧ ಬಹು ।
ದುರಿತ ಸಂಸಾರ ಸಂತಾಪ ಸಂಚಯಳಿದು
ವರಭೋಗ ಮೋಕ್ಷವಹುದು ॥ ಪ ॥

ಎಂಬುದಾಗಿ ಹರನ ನಾಮಸ್ಮರಣೆಯ ಫಲವನ್ನು ವಿವರಿಸಿದ್ದಾರೆ.

ಕಲಿಯುಗದಲ್ಲಿ ಮಂತ್ರಜಪ ಅಥವಾ ನಾಮಸ್ಮರಣೆಯಿಂದ ಸಕಲ ಇಷ್ಟಾರ್ಥಗಳನ್ನು ಪಡೆಯಬಹುದಾಗಿದೆ. ಇಷ್ಟೇ ಅಲ್ಲ, ಭವಸಾಗರವನ್ನೂ ದಾಟಬಹುದು. ಅಂತೆಯೇ ತುಲಸೀದಾಸರು– ''ನಾಮ ಲೇತ ಭವಸಿಂಧು ಸುಖಾಯೀ'' ಅಂದರೆ ನಾಮಸ್ಮರಣೆ ಮಾತ್ರದಿಂದಲೇ ಭವಸಾಗರವನ್ನು ಶೋಷಿಸಬಹುದೆಂಬುದಾಗಿ ತಿಳಿಸಿದ್ದಾರೆ. ಉಳಿದೆಲ್ಲ ಯುಗಗಳಿಗಿಂತ ಕಲಿಯುಗವು ಕೆಟ್ಟದ್ದೇನೋ ನಿಜ; ಆದರೆ ಈ ಯುಗದಲ್ಲಿ ಅಲ್ಪಾಯಾಸದಿಂದ ಮಹಾಫಲವನ್ನು ಪಡೆಯಬಹುದಾಗಿದೆ. ನಾವು ಮಾಡುವ ನಾಮಸ್ಮರಣರೂಪವಾದ ಧರ್ಮಾಚರಣೆಯು ಚಿಕ್ಕದಾಗಿರಬಹುದು. ಅದರ ಜೊತೆಗೆ ಸಾಧಕನು ಸತ್ಯಪ್ರೇಮಿಯೂ ಶೀಲವಂತನೂ ಆಗಿದ್ದರೆ ನಾಮಸ್ಮರಣೆಯ ಫಲವನ್ನು

ಬಹುಶೀಘ್ರದಲ್ಲಿಯೇ ಪಡೆಯಬಹುದು.

ಅಧರ್ಮಪ್ರಚೋದಕವಾದ ಕಲಿಯುಗವು ಪ್ರಾರಂಭವಾದಾಗ ಮಹರ್ಷಿಗಳೆಲ್ಲ ಗಾಬರಿಗೊಂಡು ಬ್ರಹ್ಮನನ್ನು ಪ್ರಾರ್ಥಿಸಿದರು. ಅವರ ಪ್ರಾರ್ಥನೆಗೆ ಸಂತುಷ್ಟನಾದ ಬ್ರಹ್ಮನು ಪ್ರತ್ಯಕ್ಷನಾಗಿ ''ಎಲೈ ಮಹರ್ಷಿಗಳೇ ! ಕಲಿಯುಗಕ್ಕಾಗಿ ನೀವಾರೂ ಅಂಜುವ ಕಾರಣವಿಲ್ಲ. ಬೇರೆ ಬೇರೆ ಯುಗಗಳಲ್ಲಿ ಯಜ್ಞ ಯಾಗಾದಿ ಕಷ್ಟಸಾಧ್ಯಗಳಾದ ಧರ್ಮಾಚರಣೆಗಳನ್ನು ಆಚರಿಸಿ ಪಡೆಯಬಹುದಾಗಿದ್ದ ಫಲವನ್ನು ಈ ಕಲಿಯುಗದಲ್ಲಿ ಕೇವಲ ಮಂತ್ರಜಪ ಇಲ್ಲವೆ ನಾಮಸ್ಮರಣೆಯಿಂದ ಪಡೆಯಬಹುದಾಗಿದೆ. ಇಂತಹ ಶಕ್ತಿಯು ಕಲಿಯುಗಕ್ಕಿರುವಾಗ ನೀವೇಕೆ ಅಂಜುವಿರಿ ?'' ಎಂಬುದಾಗಿ ಅಭಯ ವಚನ ವನ್ನಿತ್ತು ಅನುಗ್ರಹಿಸಿ ಅಂತರ್ಧಾನನಾದನು. ಆಗ ಮಹರ್ಷಿಗಳೆಲ್ಲ ಸಂತುಷ್ಟ ಚಿತ್ತರಾಗಿ ಕುಣಿದಾಡತೊಡಗಿದರು. ಇವರು ಕುಣಿದಾಡುವ ಸಂದರ್ಭದಲ್ಲಿ ತ್ರಿಲೋಕಸಂಚಾರಿ ಯಾದ ನಾರದನು ಆಕಸ್ಮಿಕವಾಗಿ ಬಂದು ಇವರು ಕುಣಿದಾಡುವ ಪ್ರಯೋಜನವನ್ನು ತಿಳಿದು ತನ್ನ ಮೈಮೇಲಿನ ಬಟ್ಟೆಗಳನ್ನೆಲ್ಲ ಕಳಚಿಹಾಕಿ ದಿಗಂಬರ ರೂಪದಲ್ಲಿ ಬಲಗೈ ಯಿಂದ ಬಾಯಿಯನ್ನು ಮತ್ತು ಎಡಗೈಯಿಂದ ತನ್ನ ಗುಹ್ಯಾಂಗವನ್ನು ಮುಚ್ಚಿಕೊಂಡು ಅವರೊಂದಿಗೆ ಕುಣಿದಾಡತೊಡಗಿದನು. ನಾರದನ ಈ ಅಸಭ್ಯ ವರ್ತನೆಯನ್ನು ಕಂಡು ಮಹರ್ಷಿಗಳೆಲ್ಲ ಆಶ್ಚರ್ಯಚಕಿತರಾಗಿ ''ನೀನು ಅಶಿಷ್ಟನಂತೆ ಹೀಗೇಕೆ ಕುಣಿಯು ತ್ತಿರುವಿ ?'' ಎಂಬುದಾಗಿ ನಾರದನನ್ನು ಪ್ರಶ್ನಿಸಿದರು. ಆಗ ಅವನು ''ಎಲೈ ಮಹರ್ಷಿ ಗಳೇ ! ಕಲಿಯುಗದಲ್ಲಿ ಕೇವಲ ನಾಮಸ್ಮರಣೆಯಿಂದ ಸರ್ವಸಿದ್ಧಿಗಳನ್ನು ಪಡೆಯಬಹು ದೇನೋ ನಿಜ; ಆದರೆ ಅದರ ಜೊತೆಗೆ ಸತ್ಯ ನುಡಿ ಮತ್ತು ಸಚ್ಚಾರಿತ್ರ್ಯಗಳೆಂಬ ಪಥ್ಯ ಗಳನ್ನು ಪಾಲಿಸಬೇಕಾಗುತ್ತದೆ. ಈ ಮರ್ಮವನ್ನು ನಿಮಗೆಲ್ಲ ತಿಳಿಸಲೋಸುಗವಾಗಿ ನಾನು ಕಚ್ಚೆ ಮತ್ತು ಬಾಯಿಗಳನ್ನು ಕೈಗಳಿಂದ ಮುಚ್ಚಿಕೊಂಡು ಸಂಜ್ಞೋಪದೇಶ ಮಾಡಿದ್ದೇನೆ'' ಎಂದು ತಿಳಿಹೇಳಿದನು. ನಾರದನ ಈ ಸಾಂಕೇತಿಕ ಆಚರಣೆಯ ಮರ್ಮವನ್ನರಿತ ಮಹರ್ಷಿಗಳೆಲ್ಲರೂ ಕೃತಜ್ಞತಾಭಾವದಿಂದ ನತಮಸ್ತಕರಾದರು. ಅಂತೆಯೇ ಕನ್ನಡ ನಾಡಿನ ಸರ್ವಜ್ಞಕವಿಯೂ–

''ಕಚ್ಚೆ ಕೈಬಾಯಿಗಳು ಇಚ್ಛೆಯಲ್ಲಿ ಇರುತಿರೆ ।
ಅಚ್ಯುತನಪ್ಪ ಅಜನಪ್ಪ ಲೋಕದೊಳು ।
ನಿಶ್ಚಿಂತನಪ್ಪ ಸರ್ವಜ್ಞ'' ॥

ಎಂಬುದಾಗಿ ಕಲಿಯುಗದಲ್ಲಿ ಆಚರಿಸಬೇಕಾದ ನೀತಿಯನ್ನು ಬಹುಮಾರ್ಮಿಕವಾಗಿ ತಿಳಿಸಿರುತ್ತಾನೆ. ಆದಕಾರಣ ಮಂತ್ರಜಪವನ್ನು ಮಾಡುವವನಾಗಲಿ ಅಥವಾ ನಾಮ ಸ್ಮರಣೆಯನ್ನು ಮಾಡುವವನಾಗಲಿ ಸತ್ಯಭಾಷಿಯೂ, ಶೀಲವಂತನೂ ಆಗಿರಬೇಕು. ಅಂದಾಗಲೇ ಆ ಜಪದ ಫಲವು ಶೀಘ್ರವಾಗಿ ಸಿದ್ಧಿಸುತ್ತದೆ.

ನೀರು ಸದಾ ಅಧೋಮುಖವಾಗಿ ಹರಿಯುತ್ತಿರುವಂತೆ ಮನುಷ್ಯನ ಮನೋವೃತ್ತಿಯೂ ಸಹ ಸಹಜವಾಗಿ ಅಧೋಮುಖವಾಗಿ ಪ್ರವರ್ತಿಸುತ್ತಿರುತ್ತದೆ.

ಯಂತ್ರದ ಸಹಾಯದಿಂದ ನೀರನ್ನು ಊರ್ಧ್ವಮುಖಗೊಳಿಸಲು ಸಾಧ್ಯವಾಗುವಂತೆ ಮಂತ್ರದ ಸಹಾಯದಿಂದ ಮನಸ್ಸಿನ ಅಧಃಪ್ರವೃತ್ತಿಯನ್ನು ಕಡಿಮೆಮಾಡಿ ಊರ್ಧ್ವ ಮುಖಗೊಳಿಸಲು ಶಕ್ಯವಾಗುತ್ತದೆ. ಆದಕಾರಣ ಮನಸ್ಸಿಗೆ ಮಂತ್ರ ಸಂಸ್ಕಾರವನ್ನು ಕೊಟ್ಟು ಅದನ್ನು ನಿರಂತರ ಜಪಾಭ್ಯಾಸದಲ್ಲಿ ತೊಡಗಿಸಿದರೆ ಅದಕ್ಕೊಂದು ಸಾತ್ವಿಕವಾದ ಶಿವಕಳೆಯು ಪ್ರಾಪ್ತವಾಗುತ್ತದೆ. ಈ ಶಿವಕಳಾಸಂಪನ್ನವಾದ ಮನಸ್ಸುಳ್ಳ ಮನುಷ್ಯನು ಶಿವನಂತೆ ಪ್ರಶಾಂತನೂ ಸದಾ ಪ್ರಸನ್ನನೂ ಆಗಿರುತ್ತಾನೆ. ಇಂತಹ ಸಾಧಕನ ಮನಸ್ಸಿನ ಮೇಲೆ ಸಾಂಸಾರಿಕ ಲಾಭಹಾನಿಗಳು ಅಷ್ಟೊಂದು ಪರಿಣಾಮವನ್ನು ಮಾಡಲಾರವು. ಅಷ್ಟೇ ಅಲ್ಲ, ಮಹಾಮಂತ್ರದ ಸತತ ಜಪಾಭ್ಯಾಸದ ಪರಿಣಾಮವಾಗಿ ಸಾಧಕನ ಮಾಂಸಮಯವಾದ ದೇಹವೂ ಮಂತ್ರಮಯವಾಗಿ ಪರಿವರ್ತನಗೊಳ್ಳುತ್ತದೆ. ಹೀಗೆ ಮಂತ್ರಕಾಯನಾದ ಪೂತಾತ್ಮನ ಹಸ್ತ, ಪಾದ ಮತ್ತು ನೇತ್ರಾದಿಗಳಲ್ಲಿ ಅದ್ಭುತವಾದ ಸಾಮರ್ಥ್ಯವು ಪ್ರಾಪ್ತವಾಗುತ್ತದೆ. ಇಂತಹ ವ್ಯಕ್ತಿಗಳ ದರ್ಶನ, ಸ್ಪರ್ಶನ ಮತ್ತು ಸಂಭಾಷಣೆಗಳಿಂದ ದುಷ್ಟಚಿತ್ತರೂ ಸಹ ಶಿಷ್ಟರಾಗಿ ಪರಿವರ್ತನೆಗೊಳ್ಳುತ್ತಾರೆ. ಈ ತೆರನಾಗಿ ಮಹಾಮಂತ್ರದ ಜಪದಿಂದ ತಾನು ಉದ್ಧಾರವಾಗುವುದರ ಜೊತೆಗೆ ಅನ್ಯರನ್ನೂ ಉದ್ಧರಿಸುವ ಸಾಮರ್ಥ್ಯವನ್ನು ಪಡೆಯಬಹುದಾಗಿದೆ.

ಶಿವ ಪಂಚಾಕ್ಷರ ಮಹಾಮಂತ್ರದಲ್ಲಿ ಇಂತಹ ಅದ್ಭುತವಾದ ಸಾಮರ್ಥ್ಯವು ಅಡಕವಾಗಿರೋಣದರಿಂದ ಪ್ರತಿಯೊಬ್ಬ ಸಾಧಕರೂ ತಮ್ಮ ತಮ್ಮ ಗುರುಗಳಿಂದ ಮಂತ್ರ ದೀಕ್ಷೆಯನ್ನು ಪಡೆದು ಜಪಾಭ್ಯಾಸವನ್ನು ಪ್ರಾರಂಭಿಸಬೇಕು. ಗುರೂಪದೇಶ ವನ್ನು ಪಡೆಯದೆ ಮಾಡಿದ ಜಪವು ಫಲಕಾರಿಯಾಗದ ಕಾರಣ ವೀರಶೈವ ಸಿದ್ಧಾಂತದಲ್ಲಿ ದೀಕ್ಷಾ ಸಂಸ್ಕಾರವು ಪ್ರತಿಯೊಬ್ಬರಿಗೂ ಅನಿವಾರ್ಯವಾಗಿ ವಿಧಿಸಲ್ಪಟ್ಟಿದೆ. ಆದಕಾರಣ ಗುರುಗಳಿಂದ ದೀಕ್ಷೆಯನ್ನು ಹೊಂದಿ ಅವರ ಮುಖಾಂತರ ಮಂತ್ರವನ್ನು ಪಡೆದು ಅನನ್ಯವಾದ ಶ್ರದ್ಧೆಯುಳ್ಳವರಾಗಿ ಅದನ್ನು ಜಪಿಸುತ್ತ ತನುಮನಗಳನ್ನು ಶುದ್ಧೀಕರಿಸಿ ಕೊಂಡು ಸದ್ಗತಿಯನ್ನು ಪಡೆಯಲು ಪ್ರಯತ್ನಿಸಬೇಕು.

**ಓಂ ಶಾಂತಿಃ ಶಾಂತಿಃ ಶಾಂತಿಃ**

**ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ''ಗ್ರಂಥದ**
**ಅಷ್ಟಮ ಪರಿಚ್ಛೇದದ ಪಂಚಾಕ್ಷರ ಜಪಸ್ಥಲ ಪೂರ್ಣವಾದುದು.**



# ನವಮ ಪರಿಚ್ಛೇದ

## ಆಶೀರ್ವಚನ-೧

# ಭಕ್ತಮಾರ್ಗಕ್ರಿಯಾಸ್ಥಲ

**ಪೀಠಾಭಿಮಾನಿ ಸದ್ಭಕ್ತರೇ ಮತ್ತು ಮಾತೆಯರೇ !**

ರಾಣೆಬೆನ್ನೂರು ನಗರದ ಮಹಾಜನತೆಯು ಪಂಚಪೀಠಗಳಲ್ಲಿಟ್ಟ ಅಪಾರ ಭಕ್ತಿ-ಗೌರವವನ್ನು ಕಂಡು ಮಹಾಸನ್ನಿಧಿಯವರ ಚಿತ್ತಕ್ಕೆ ಮಹದಾನಂದವಾಗಿದೆ. ನಾವು ಶ್ರೀಮತ್ ಕಾಶೀ ಜ್ಞಾನ ಪೀಠಾರೋಹಣಗೈದು ಇನ್ನೂ ಒಂದು ವರುಷ ಗತಿಸಿಲ್ಲ. ಅಷ್ಟರಲ್ಲೇ ಶ್ರೀ ಕಾಶೀ ಜಗದ್ಗುರುಗಳವರ ಪ್ರಪ್ರಥಮ ಶರನ್ನವರಾತ್ರಿ ದಸರಾ ಮಹೋತ್ಸವವಾದ ಭವ್ಯ ಸಮಾರಂಭವನ್ನು ನಿಮ್ಮ ನಗರದಲ್ಲಿ ಏರ್ಪಡಿಸಿದ್ದೀರಿ. ತನ್ಮೂಲಕ ಧಾರ್ಮಿಕ ಜಾಗೃತಿ ಮೂಡಿಸುವ ಹಾಗೂ ಸಂಸ್ಕೃತಿ ಸೌರಭ ಹರಡುವ ವೈಶಿಷ್ಟ್ಯಪೂರ್ಣ ಕಾರ್ಯಕ್ರಮ ರೂಪಿಸಿದುದು ಈ ನಗರದ ಸದ್ಭಕ್ತರ ಸದಭಿರುಚಿಯನ್ನು ತೋರಿಸುತ್ತದೆ. ನಿಮ್ಮ ಕೋರಿಕೆಯ ಮೇರೆಗೆ ''ಶ್ರೀ ಸಿದ್ಧಾಂತ ಶಿಖಾಮಣಿ'' ಧರ್ಮಗ್ರಂಥದಲ್ಲಿ ಉಲ್ಲೇಖಿತವಾದ ಅಂಗಸ್ಥಲಾಂತರ್ಗತ ''ಭಕ್ತಸ್ಥಲ''ದ ಕೆಲವು ವಿಷಯಗಳನ್ನು ಈ ಧರ್ಮ ವೇದಿಕೆಯ ಮೂಲಕ ಆಶೀರ್ವಚನಗಳ ರೂಪದಲ್ಲಿ ನಿರೂಪಿಸಲಾಗವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಶ್ರೀ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿ ! ಇಂದು ಒಂಭತ್ತನೇ ಪರಿಚ್ಛೇದದಲ್ಲಿರುವ ''ಭಕ್ತಮಾರ್ಗ ಕ್ರಿಯಾ ಸ್ಥಲ''ದ ಬಗ್ಗೆ ಆಶೀರ್ವಚನ ದಯಪಾಲಿಸಲಾಗುವದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಕ್ತಸ್ಥಲಾಂತರ್ಗತವಾದ ಒಂಬತ್ತನೇ ಅವಾಂತರ ಸ್ಥಲದಲ್ಲಿ ಭಕ್ತನ ಲಕ್ಷಣವನ್ನರುಹಿ ಭಕ್ತಿಯ ನವವಿಧಗಳನ್ನು-

ಭೂತಿ ರುದ್ರಾಕ್ಷಸಂಯುಕ್ತೋ ಲಿಂಗಧಾರೀ ಸದಾಶಿವಃ ।
ಪಂಚಾಕ್ಷರಜಪೋದ್ಯೋಗೀ ಶಿವಭಕ್ತಃ ಇತಿ ಸ್ಮೃತಃ ॥

ಶ್ರವಣಂ ಕೀರ್ತನಂ ಶಂಭೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

ಏವಂ ನವವಿಧಾ ಭಕ್ತಿಃ ಪ್ರೋಕ್ತಾ ದೇವೇನ ಶಂಭುನಾ ।
ದುರ್ಲಭಾ ಪಾಪಿನಾಂ ಲೋಕೇ ಸುಲಭಾ ಪುಣ್ಯಕರ್ಮಣಾಮ್ ॥

(ಸಿ. ಶಿ. ೯; ೧-೩)

ಹೀಗೆ ಹೆಸರಿಸಿದ್ದಾರೆ. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಇಷ್ಟಲಿಂಗವನ್ನೂ ಸಹ ತನ್ನ ದೇಹದ ಮೇಲೆ ಸದಾ ಧಾರಣೆ ಮಾಡಿಕೊಂಡು ಶ್ರೀ ಪಂಚಾಕ್ಷರ ಮಹಾಮಂತ್ರದ ಜಪದಲ್ಲಿ ಯಾವಾತನು ತಲ್ಲೀನನಾಗಿರುವನೋ ಅವನೇ ಶಿವಭಕ್ತನೆಂದು ಕರೆಯಿಸಿ ಕೊಳ್ಳುವನು. ಈ ಶಿವಭಕ್ತಿಯು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ ಎಂಬುದಾಗಿ ಒಂಬತ್ತು ವಿಧವಾಗಿ ಕರೆಯಲ್ಪಟ್ಟಿದೆ. ಇಂತಹ ಈ ಭಕ್ತಿಯು ಪುಣ್ಯಾತ್ಮರಿಗೆ ಸುಲಭವೇ ವಿನಃ ಪಾಪಿಗಳಿಗೆ ಅತ್ಯಂತ ದುರ್ಲಭವಾಗಿದೆ.

ಶಿವಸಂಬಂಧವಾದ ತತ್ವಶಾಸ್ತ್ರವನ್ನಾಗಲಿ, ಶಿವಮಹಿಮೆಯ ಕಥೆಗಳನ್ನಾಗಲಿ ಆಲಿಸುವುದು, ಶಿವನ ಸ್ತೋತ್ರವನ್ನು ಮಾಡುವುದು, ಶಿವನ ಮಂಗಲಮಯ ಮೂರ್ತಿ ಯನ್ನು ಧ್ಯಾನಿಸುವುದು, ಪರಮಪಾವನಗಳಾದ ಶಿವನ ಪಾದಸೇವೆಗೈಯ್ಯುವುದು, ಶಿವಲಿಂಗವನ್ನು ಪೂಜಿಸುವುದು, ಶಿವನಿಗೆ ನಮಸ್ಕರಿಸುವುದು, ಶಿವನಲ್ಲಿ ದಾಸ್ಯ ಭಾವನೆ ಯನ್ನು ಹೊಂದುವುದು, ಶಿವನೊಂದಿಗೆ ಸಖ್ಯಭಾವನೆಯನ್ನು ತಾಳುವುದು ಮತ್ತು ಶಿವನಿಗೆ ತನ್ನನ್ನೇ ಸಮರ್ಪಿಸಿಕೊಳ್ಳುವುದು ಇಂತಹ ಒಂಬತ್ತು ವಿಧವಾದ ಭಕ್ತಿಯನ್ನಾಚರಿಸ ಬೇಕಾದರೆ ಪೂರ್ವಾರ್ಜಿತ ಪುಣ್ಯವಿಲ್ಲದೆ ಸುಮ್ಮನೇ ದೊರೆಯಲಾರದು ಎಂಬುದನ್ನು ಪೂಜ್ಯರಿಲ್ಲಿ ಸ್ಪಷ್ಟಪಡಿಸಿದ್ದಾರೆ.

ಶ್ರವಣಭಕ್ತಿ :

''ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿಧಿಧ್ಯಾಸಿತವ್ಯಃ'' ಎಂಬ ಶ್ರುತಿವಚನದಂತೆ ಆತ್ಮದರ್ಶನವನ್ನು ಪಡೆಯಬೇಕಾದರೆ ಮೊದಲು ಶ್ರವಣವನ್ನು ಮಾಡಬೇಕಾಗುವುದು. ಶಿವನ ನಾಮ, ರೂಪ, ಗುಣ, ಪ್ರಭಾವ, ಲೀಲೆ, ತತ್ತ್ವ ಮತ್ತು ರಹಸ್ಯವನ್ನು ಕುರಿತು ಪ್ರತಿಪಾದಿಸುವ ಪ್ರವಚನಾದಿಗಳನ್ನು ಪ್ರೀತಿ ಹಾಗೂ ವಿಶ್ವಾಸ ಪೂರ್ವಕವಾಗಿ ಆಲಿಸುವುದೇ ಶ್ರವಣ ಭಕ್ತಿಯು. ಈ ಶ್ರವಣದ ಲಾಭಕ್ಕಾಗಿ ಶಿವಭಕ್ತಿ ಸಂಪನ್ನರಾದ ಸತ್ಪುರುಷರ ಸಹವಾಸವನ್ನು ನಿರಂತರವಾಗಿ ಮಾಡಬೇಕಾಗುವುದು. ಅಧಿಕಾಧಿಕ ಸಮಯವನ್ನು ಸತ್ಸಂಗದಲ್ಲಿ ಕಳೆದಾಗ ಪ್ರತಿದಿನವೂ ಸಂತರ, ಸದ್ಗುರುಗಳ ಮುಖಾರವಿಂದದಿಂದ ಅಮೃತರೂಪವಾದ ಶಿವಕಥೆಯು ಶ್ರವಣಮಾಡಲು ಪ್ರಾಪ್ತ ವಾಗುವದು. ಈ ಸತ್ಸಂಗ ಹಾಗೂ ಸತ್ಕಥಾ ಶ್ರವಣದಿಂದ ಪತಿತನೂ ಪಾವನ ನಾಗುತ್ತಾನೆ. ಸಾಂಸಾರಿಕ ಮಾತುಗಳನ್ನು ಕೇಳಿ ಕೇಳಿಯೇ ಈ ಜೀವಾತ್ಮನು ಅನಂತಕಾಲ ದಿಂದ ವಿಷಯಾಸಕ್ತನಾಗಿ ತನ್ನ ಅನೇಕ ಜನ್ಮಗಳನ್ನು ನಿರರ್ಥಕ ಗೊಳಿಸಿಕೊಂಡಿದ್ದಾನೆ. ಜನ್ಮತಾಳಿದ ಮಗುವು ಹನ್ನೆರಡು ಇಲ್ಲವೆ ಹದಿಮೂರು ದಿವಸದ್ದಾದಾಗ ಅದಕ್ಕೆ ನಾಮಕರಣ ಸಂಸ್ಕಾರ ವನ್ನು ಮಾಡುತ್ತಾರೆ. ಆಗ ಆ ಮಗುವಿನ ಸೋದರತ್ತೆಯಾದವಳು ಮಗುವಿನ ಕಿವಿಯಲ್ಲಿ 'ಕುಟು ಕುಟು ಕುರ್' ಎಂಬುದಾಗಿ ಧ್ವನಿಮಾಡಿ ವ್ಯವಹಾರಕ್ಕೆ ಅನುಕೂಲವಾಗುವ ಒಂದು ಹೆಸರನ್ನು ಇಡುತ್ತಾಳೆ. ಮುಂದೆ ಎಲ್ಲರೂ ಆ ಮಗುವನ್ನು ಅದೇ ಹೆಸರಿನಿಂದ ಕರೆಯುತ್ತಾ ಹೋಗುತ್ತಾರೆ. ಆ ಹೆಸರನ್ನು ಮೇಲಿಂದ ಮೇಲೆ ಆಲಿಸಿದ ಆ ಮಗುವು ಆ ಹೆಸರಿನ ಬಗ್ಗೆ ಇದು ನನ್ನದೇ ನಾಮ ಎಂಬ ಅಭಿಮಾನವನ್ನು ತಾಳುತ್ತದೆ.

ಈ ತೆರನಾಗಿ ಶ್ರವಣೇಂದ್ರಿಯ ಮುಖಾಂತರವಾಗಿಯೇ ಲೌಕಿಕ ಶಬ್ದಗಳನ್ನು ಕೇಳುತ್ತ, ಕೇಳುತ್ತ ಆ ಜೀವಿಯು ಲೋಕದ ಸಂಬಂಧಗಳನ್ನು ಬೆಳೆಸಿಕೊಳ್ಳುವುದರಲ್ಲಿ ತತ್ಪರನಾಗಿ ತನ್ನ ಸಂಸಾರದ ವ್ಯಾಪ್ತಿಯನ್ನು ಬೆಳೆಸುತ್ತ ಹೋಗುತ್ತಾನೆ. ಈ ಸಂಸಾರ ವ್ಯಾಮೋಹದಲ್ಲಿ ತಲ್ಲೀನನಾದವನು ಆತ್ಮತತ್ತ್ವವನ್ನೇ ಮರೆತು ಲೋಕರಂಜನೆಯಲ್ಲಿಯೇ ನಿಮಗ್ನ–ನಾಗುತ್ತಾನೆ. ಹೀಗೆ ಪರಮಾತ್ಮನ ಚಿಂತನೆಯಿಂದ ದೂರನಾದ ಆ ವ್ಯಕ್ತಿಯು ಪರಮಾತ್ಮನನ್ನೇ ಮರೆತುಬಿಡುತ್ತಾನೆ. ಅದಾವುದೋ ಪುಣ್ಯವಿಶೇಷದ ಪರಿಣಾಮವಾಗಿ ಸತ್ಸಂಗದಲ್ಲಿ ಸಹಭಾಗಿಯಾದಾಗ, ಆತ್ಮ–ಪರಮಾತ್ಮರ ವಿಷಯವಾಗಿ ಕೇಳುವ ಒಂದು ಅವಕಾಶ ದೊರೆತಾಗ, ಆತನ ಮನಸ್ಸಿನಲ್ಲಿ ನಿತ್ಯಾನಿತ್ಯ ಹಾಗೂ ಆತ್ಮಾನಾತ್ಮಗಳೆಂಬ ವಿವೇಕಗಳು ಉದಯವಾಗಿ ಆ ವ್ಯಕ್ತಿಯು ಸದ್ಗತಿಯ ಮಾರ್ಗವನ್ನು ಹಿಡಿಯುತ್ತಾನೆ. ಹೀಗೆ ಶ್ರವಣಭಕ್ತಿಯ ಪರಿಣಾಮವಾಗಿಯೇ ಜೀವಾತ್ಮನು ಪ್ರೇಯೋ ಮಾರ್ಗದಿಂದ ವಿಮುಖನಾಗಿ ಶ್ರೇಯೋಮಾರ್ಗದತ್ತ ಪ್ರವೃತ್ತನಾಗುತ್ತಾನೆ. ಅಂತೆಯೇ ''ಶ್ರವಣಂ ಸರ್ವ ಧರ್ಮೇಭ್ಯೋವರಂ ಮನ್ಯೇ ತಪೋಧನಾಃ'' ಎಂಬುದಾಗಿ ಶ್ರೀ ನಾರದ ಮಹರ್ಷಿಯು ಸನಕಾದಿಗಳನ್ನು ಕುರಿತು ಹೇಳಿದ್ದಾನೆ. ಅಂದರೆ ಅನೇಕ ವಿಧ ಧರ್ಮಾಚರಣೆಗಳಲ್ಲಿ ಶ್ರವಣರೂಪವಾದ ಧರ್ಮಾಚರಣೆಯು ಅತ್ಯಂತ ಶ್ರೇಷ್ಠ ವಾದದ್ದು. ಈ ಶ್ರವಣಭಕ್ತಿಯ ಬಲದಿಂದಲೇ ನಾವು ಕುಳಿತಲ್ಲೇ ನಮ್ಮ ಆರಾಧ್ಯ ದೇವರನ್ನು ಪ್ರಾಪ್ತಮಾಡಿಕೊಳ್ಳಬಹುದು.

ಶ್ರೀ ಜಗದ್ಗುರು ರೇಣುಕರಿಂದ ಅಗಸ್ಯ ಮಹರ್ಷಿಯು, ಶ್ರೀ ಜಗದ್ಗುರು ದಾರುಕರಿಂದ ದಧೀಚಿ ಮಹರ್ಷಿಯು, ಶ್ರೀ ಜಗದ್ಗುರು ಘಂಟಾಕರ್ಣರಿಂದ ವ್ಯಾಸ ಮಹರ್ಷಿಯು, ಶ್ರೀ ಜಗದ್ಗುರು ಧೇನುಕರ್ಣರಿಂದ ಸಾನಂದ ಮಹರ್ಷಿಯು, ಶ್ರೀ ಜಗದ್ಗುರು ವಿಶ್ವಕರ್ಣರಿಂದ ದೂರ್ವಾಸ ಮಹರ್ಷಿಯು, ಶ್ರೀ ಕೃಷ್ಣ ಭಗವಂತ ನಿಂದ ಅರ್ಜುನನು, ಶುಕದೇವನಿಂದ ಪರೀಕ್ಷಿತ ಮಹಾರಾಜನು ಮತ್ತು ಸನತ್ಕುಮಾರ ರಿಂದ ನಾರದ ಮಹರ್ಷಿಯು ಹೀಗೆ ಇವರೆಲ್ಲರೂ ಸದ್ಗುರುವಿನಿಂದ ಉಪದೇಶವನ್ನು ಶ್ರವಣಮಾಡಿ ತಮ್ಮ ಸಂದೇಹಗಳನ್ನು ದೂರಮಾಡಿಕೊಂಡು ಪರಮ ಕೈವಲ್ಯವನ್ನು ಪಡೆದ ವಿಷಯವು ಸರ್ವವಿದಿತವಾಗಿದೆ. ಇದೇ ರೀತಿಯಾಗಿ ಪ್ರತಿಯೊಬ್ಬರೂ ಸಹ ಮಹಾತ್ಮರ ಸಂಗಮಾಡಿ ಶಿವನ ನಾಮ, ರೂಪ, ಗುಣ, ಪ್ರೇಮ, ಪ್ರಭಾವ, ಲೀಲಾ, ಧಾಮ, ರಹಸ್ಯ ಮತ್ತು ತತ್ತ್ವವಿಷಯಕವಾದ ಅಮೃತಸ್ವರೂಪವಾದ ಕಥೆಯನ್ನು ಪ್ರೀತಿ ವಿಶ್ವಾಸಪೂರ್ವಕ ಆಲಿಸಿ ಪ್ರತಿಯೊಬ್ಬರು ತಮ್ಮ ಜೀವನವನ್ನು ಪಾವನವನ್ನಾಗಿ ಮಾಡಿಕೊಳ್ಳಬೇಕು. ಇದುವೇ ಶ್ರವಣಭಕ್ತಿಯ ಸ್ವರೂಪವಾಗಿದೆ.

**ಕೀರ್ತನಭಕ್ತಿ :**

ಈ ನವವಿಧ ಭಕ್ತಿಗಳಲ್ಲಿ ಎರಡನೆಯದಾದ ಭಕ್ತಿಯೇ ಕೀರ್ತನಭಕ್ತಿಯು. ಕೀರ್ತನೆ ಯೆಂದರೆ ಸಂಕೀರ್ತಿಸು, ಸ್ತುತಿಸು, ಗುಣಗಾನಮಾಡು ಮುಂತಾದ ಅರ್ಥಗಳಾಗುವುವು. ಭಕ್ತರ ಎದುರಿನಲ್ಲಿ ಭಾವಪೂರ್ಣವಾಗಿ ಶಿವನ ಚರಿತ್ರೆಯನ್ನು ವಾದ್ಯ, ನೃತ್ಯ, ಸಂಗೀತದೊಂದಿಗೆ ಸ್ತುತಿಸುವುದೇ ಕೀರ್ತನೆ. ಈ ಕೀರ್ತನ ಭಕ್ತಿಯಿಂದಲೂ ಸಹ ಅತ್ಯಂತ

ದುರಾಚಾರಿಯೂ ಕೂಡ ಸದಾಚಾರಿಯಾಗಿ ಪರಿವರ್ತನೆ ಹೊಂದುತ್ತಾನೆ. ಅಂತೆಯೇ ಗೀತೆಯಲ್ಲಿ–

ಅಪಿಚೇತ್ಸುದುರಾಚಾರೋ ಭಜತೇ ಮಾಂ ಅನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋಹಿ ಸಃ ॥

(ಭ. ಗೀತಾ ೯–೩೦)

ಹೀಗೆ ಅದನ್ನು ಸಮರ್ಥಿಸಲಾಗಿದೆ. ಈ ಶಿವಭಜನೆಯಿಂದ ಜೀವಾತ್ಮನು ಬಹು ಬೇಗನೇ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತವಾದ ಶಾಂತಿಯನ್ನು ಪಡೆಯುತ್ತಾನೆ. ಅತಿ ರಹಸ್ಯ ಮಯವಾದ ಶಿವಾದ್ವೈತ ಶಾಸ್ತ್ರವನ್ನಾಗಲೀ ಶಿವಮಹಿಮೆಯ ಕಥೆಯನ್ನಾಗಲೀ ಯಾವನು ಪ್ರೇಮಪೂರ್ವಕವಾಗಿ ನಿಷ್ಕಾಮ ಭಾವನೆಯಿಂದ ಭಕ್ತರಿಗೆ ತಿಳಿಯ–ಪಡಿಸುತ್ತಾನೆಯೋ ಅವನ ಅಂತಹ ಕಾರ್ಯಕ್ಕಿಂತಲೂ ಶ್ರೇಷ್ಠವಾದ ಕಾರ್ಯ ಬೇರೊಂದಿಲ್ಲ. ಇದರಿಂದ ತಾನು ಸದ್ಗತಿಯನ್ನು ಹೊಂದುವುದರ ಜೊತೆಗೆ ಅನ್ಯರನ್ನೂ ಸಹ ಸದ್ಗತಿ ಹೊಂದಿಸುತ್ತಾನೆ. ಅಂತೆಯೇ ಶಿವನಿಗೆ ಇವನಿಗಿಂತಲೂ ಬೇರೊಬ್ಬ ಪ್ರಿಯ ಭಕ್ತನು ಇರುವುದಿಲ್ಲ. ಈ ಕೀರ್ತನ ಭಕ್ತಿಯ ಪರಿಣಾಮವಾಗಿ ಬ್ರಹ್ಮಹತ್ಯೆ, ಪಿತೃವಧೆ, ಗೋವಧೆ, ಗುರುವಧೆ ಮುಂತಾದ–ಮಹಾ ಪಾತಕಗಳಿಂದಲೂ ಜೀವಾತ್ಮನು ಪರಿಶುದ್ಧನಾಗುತ್ತಾನೆ.

ಈ ಘೋರವಾದ ಕಲಿಯುಗದಲ್ಲಿ ಅತೀ ಬೃಹತ್ತರಗಳಾದ ಯಜ್ಞ, ದಾನ, ತಪಸ್ಸುಗಳೆಂಬ ಮಹಾವ್ರತಗಳನ್ನು ಆಚರಿಸುವುದು ಸಾಧ್ಯವಾಗುವುದಿಲ್ಲ. ಅಂತೆಯೇ ''ಕಲೌ ನಾಮ ಸಂಕೀರ್ತನಮ್'' ಎಂಬ ಉಕ್ತಿಗನುಸಾರವಾಗಿ ಈ ಕಲಿಯುಗದ ಜೀವಿಗಳು ಕೇವಲ ಶಿವನ ನಾಮಸಂಕೀರ್ತನವನ್ನು ಮಾಡಿ ಆ ವ್ರತಗಳ ಫಲಗಳನ್ನು ಪಡೆಯಲು ಸಾಧ್ಯವಾಗುವುದು. ನಮ್ಮ ದೇಶದ ಪ್ರಾಚೀನ ಗ್ರಂಥಗಳಲ್ಲಿ ದೊರೆತ ಇತಿಹಾಸದ ಪ್ರಕಾರ ನಾರದ, ವಾಲ್ಮೀಕಿ, ಶುಕದೇವ, ಮುಂತಾದವರಾಗಲಿ ಮತ್ತು ಅರ್ವಾಚೀನ ಸಮಯದ ತುಳಸೀದಾಸ, ಸೂರದಾಸ, ತುಕಾರಾಮ, ಮೀರಾಬಾಯಿ, ಕನಕದಾಸ, ಪುರಂದರದಾಸ ಇವರೆಲ್ಲ ತಮ್ಮ ತಮ್ಮ ಇಷ್ಟದೇವರ ನಾಮ ಸಂಕೀರ್ತನೆ ಯನ್ನು ಮಾಡಿ ಪರಮ ಪದವನ್ನು ಪ್ರಾಪ್ತಮಾಡಿಕೊಂಡಿದ್ದಾರೆ. ಇದೇ ಪ್ರಕಾರವಾಗಿ ದಕ್ಷಿಣಭಾರತದ ಶೈವ ಹಾಗೂ ವೀರಶೈವ ಪರಂಪರೆಯ ಅನೇಕ ಸಂತ ಹಾಗೂ ಶಿವ ಶರಣರು ಶಿವಸಂಕೀರ್ತನೆಯಿಂದಲೇ ತಮ್ಮ ಜೀವನವನ್ನು ಪಾವನಗೊಳಿಸುವುದ ರೊಂದಿಗೆ ಅನಂತ ಜೀವಿಗಳನ್ನೂ ಸಹ ಉದ್ಧಾರಮಾಡಿದ್ದಾರೆ. ''ನಾಮ ಲೇತ ಭವಸಿಂಧು ಸುಖಾಯೀ'' ಎಂಬ ತುಲಸೀದಾಸರ ಉಕ್ತಿಯಂತೆ ಭಗವನ್ನಾಮ ಸಂಕೀರ್ತನೆಯಿಂದ ಭವಸಾಗರವೇ ಒಣಗಿ ಹೋಗುವುದು. ಹೀಗೆ ಕೀರ್ತನ ಭಕ್ತಿಯು ಅಲ್ಪಾಯಾಸದಿಂದ ಮಹಾಫಲವನ್ನು ಕೊಡುವಂತಹುದಾಗಿದೆ. ಕಾರಣ ಪ್ರತಿಯೊಬ್ಬರೂ ಈ ಭಕ್ತಿಯನ್ನಾಶ್ರಯಿಸಿ ಸದ್ಗತಿಯನ್ನು ಪಡೆಯಬೇಕು.

ಸ್ಮರಣಭಕ್ತಿ :

ಸ್ಮರಣವೆಂದರೆ ಸ್ಮರಿಸು, ಧ್ಯಾನಿಸು ಮತ್ತು ಮನನ ಮಾಡುವ ಮುಂತಾದ ಅರ್ಥಗಳಾಗುವುವು. ಶಿವನ ನಾಮ, ರೂಪ, ಗುಣ ಮತ್ತು ಪ್ರಭಾವಾದಿಗಳನ್ನು ಕೀರ್ತನಗಳ ಮಾಧ್ಯಮಗಳಿಂದ ಶ್ರವಣಮಾಡಿದ ನಂತರ ಮನಸ್ಸಿನಲ್ಲಿ ಅವುಗಳನ್ನು ಸದಾ ಚಿಂತಿಸುವುದೇ ಸ್ಮರಣಭಕ್ತಿಯು. ಏಕಾಂತ ಹಾಗೂ ಪವಿತ್ರಸ್ಥಾನದಲ್ಲಿ ಸ್ಥಿರವೂ ಸುಖಕರವೂ ಆದ ಆಸನದಲ್ಲಿ ಕುಳಿತುಕೊಂಡು ಮನಸ್ಸಿನಲ್ಲಿ ಯಾವ ವೈಷಯಿಕ ಭಾವನೆಯೂ ಬರದ ಹಾಗೆ ಎಚ್ಚರವಹಿಸಿ ಪ್ರಶಾಂತವಾದ ಮನಸ್ಸಿನಿಂದ ಶಿವನ ಸಗುಣ, ನಿರ್ಗುಣ ಅಥವಾ ಸಾಕಾರ–ನಿರಾಕಾರ ಸ್ವರೂಪದ ಬಗ್ಗೆ ಚಿಂತನೆಯನ್ನೆಸಗುವುದೇ ಸ್ಮರಣಭಕ್ತಿಯೆನಿಸಿಕೊಳ್ಳುವುದು. ಶಿವಸ್ಮರಣೆಯನ್ನು ಕೇವಲ ಸ್ಥಿರಾಸನದಲ್ಲಿ ಕುಳಿತುಕೊಂಡೇ ಮಾಡಬೇಕೆಂಬ ಕಟ್ಟುಪಾಡುಗಳೇನಿರುವುದಿಲ್ಲ, ಹೋಗುವಾಗ, ಬರುವಾಗ, ಕುಳಿತಾಗ, ನಿಂತಾಗ, ಉಣ್ಣು ವಾಗ ಹೀಗೆ ಶಾರೀರಕವಾದ ಕ್ರಿಯಾಕಲಾಪಗಳು ನಡೆಯುತ್ತಿರುವಾಗಲೂ ಪರಿಶುದ್ಧವಾದ ಮನಸ್ಸಿನಿಂದ ಶಿವಧ್ಯಾನವನ್ನು ಮಾಡಲು ಸದವಕಾಶವಿದೆ.

ಪವಿತ್ರನಾಗಿರಲಿ, ಅಪವಿತ್ರನೇ ಆಗಿರಲಿ, ಎಂತಹುದೇ ಆದ ಅವಸ್ಥೆಯಲ್ಲಿ ಇರಲಿ, ಒಂದು ವೇಳೆ ಅವನು ಶಿವಧ್ಯಾನ–ಶಿವಚಿಂತನೆಗಳನ್ನು ಮಾಡಿದರೆ ಅಂತರಂಗ–ಬಹಿರಂಗಗಳೆರಡರಿಂದಲೂ ಪರಿಶುದ್ಧನಾಗುತ್ತಾನೆ. ಯಾರು ಅನನ್ಯ ಭಾವನೆಯಿಂದ ಶಿವನನ್ನು ಸ್ಮರಿಸುತ್ತಾರೆಯೋ ಅವರು ಭ್ರಮರ–ಕೀಟನ್ಯಾಯದಂತೆ ಶಿವಸ್ವರೂಪರೇ ಆಗಿರುತ್ತಾರೆ. ಕಾಮನೆಯಿಂದಾಗಲಿ, ದ್ವೇಷಭಾವನೆಯಿಂದಾಗಲಿ, ಸ್ನೇಹದಿಂದಾಗಲಿ, ಭಯದಿಂದಾಗಲಿ ಇಲ್ಲವೆ ಭಕ್ತಿಯಿಂದಾಗಲಿ ಇವುಗಳಲ್ಲಿಯ ಯಾವದೊಂದು ವೃತ್ತಿ ಮೂಲಕವೇ ಆಗಲಿ ಶಿವನನ್ನು ಸ್ಮರಿಸಿದ್ದೇ ಆದರೆ ಅವನು ಶಿವಸ್ವರೂಪನೇ ಆಗುತ್ತಾನೆ. ಈ ಸ್ಮರಣಭಕ್ತಿಯಿಂದ ಸದ್ಗತಿಯನ್ನು ಪಡೆದವರು ಅನಂತ ಭಕ್ತರು. ಅವರಲ್ಲಿ ಸನಕಾದಿ ಮಹರ್ಷಿಗಳು, ಧ್ರುವ, ಭೀಷ್ಮ ಮತ್ತು ಕುಂತಿ ಮೊದಲಾದವರು ಪ್ರಸಿದ್ಧರಾಗಿದ್ದಾರೆ. ಆದ್ದರಿಂದ ಶಿವಪ್ರಾಪ್ತಿಯ ಇಚ್ಛೆಯುಳ್ಳ ಸಾಧಕನು ತಾನು ಯಾವುದೇ ಕಾರ್ಯವನ್ನು ಮಾಡುತ್ತಿದ್ದರೂ–ಆಮೆಯು ತನ್ನ ಅಂಡಗಳತ್ತ; ಆಕಳು ತನ್ನ ಕರುವಿನತ್ತ; ಕಾಮಿಯು ತನ್ನ ಕಾಮಿನಿಯತ್ತ; ಲೋಭಿಯು ತನ್ನ ಧನದತ್ತ; ಸದಾ ಲಕ್ಷ್ಯವಿಟ್ಟಂತೆ ಶಿವನತ್ತ ಲಕ್ಷ್ಯವಿಟ್ಟು ಧ್ಯಾನ ಮಾಡಿದರೆ ಅವನು ಶಿವಸ್ವರೂಪವನ್ನೇ ಹೊಂದುವನು.

ಪಾದಸೇವನಭಕ್ತಿ :

ಶಿವನ ಇಲ್ಲವೇ ಸದ್ಗುರುವಿನ ಚರಣ ಕಮಲಗಳಲ್ಲಿ ಅನನ್ಯವಾದ ಭಾವನೆಯನ್ನಿರಿಸಿ ಅವುಗಳನ್ನು ಪೂಜಿಸುವುದು ಮತ್ತು ಪಾದೋದಕವನ್ನು ಸೇವಿಸುವುದೇ ಪಾದಸೇವನ ಭಕ್ತಿಯೆಂಬುದಾಗಿ ಕರೆಯಿಸಿಕೊಳ್ಳುವುದು. ಮನುಷ್ಯನಲ್ಲಿಯ ಅಹಂಕಾರ ಮತ್ತು ಅಭಿಮಾನಾದಿಗಳನ್ನು ನಾಶಗೊಳಿಸಿ, ಭಗವತ್‌ಪ್ರಾಪ್ತಿಯ ಯೋಗ್ಯತೆಯನ್ನು ತಂದು ಕೊಡುವ ಭಕ್ತಿಯೇ ಪಾದಸೇವನ ಭಕ್ತಿಯು. ಶಾಸ್ತ್ರಗಳಲ್ಲಿ ಪಾದಸೇವನ ಭಕ್ತಿಯ ಮಹಿಮೆಯು ಬಹುವಿಧವಾಗಿ ವರ್ಣಿಸಲ್ಪಟ್ಟಿದೆ.

ಶ್ರೀ ಶಂಕರಾಚಾರ್ಯರು–

ಅಪಾರ ಸಂಸಾರಸಮುದ್ರಮಧ್ಯೇ
ಸಮ್ಮಜ್ಜತೋ ಮೇ ಶರಣಂ ಕಿಮಸ್ತಿ।
ಗುರೋ ಕೃಪಾಲೋ ಕೃಪಯಾ ವದೈತದ್
ವಿಶ್ವೇಶಪಾದಾಂಬುಜದೀರ್ಘನೌಕಾ ॥

ಈ ರೀತಿಯಾಗಿ ಪಾದಮಹಿಮೆಯನ್ನು ಕೊಂಡಾಡಿದ್ದಾರೆ. ತಾತ್ಪರ್ಯವೇನೆಂದರೆ, ಅಪಾರವಾದ ಸಂಸಾರ ಸಾಗರದ ಮಧ್ಯದಲ್ಲಿ ಮುಳುಗುತ್ತಿರುವ ಜೀವಿಗಳಿಗೆ ಶಿವನ ಚರಣಕಮಲಗಳೆಂಬ ನೌಕೆಯೇ ಶರಣಾಗತಿಯ ಸ್ಥಾನವಾಗಿದೆ. ಸಾಗರದಲ್ಲಿ ಮುಳುಗು ತ್ತಿರುವ ಮನುಷ್ಯನು ತನ್ನ ಸಮೀಪದಲ್ಲಿ ನೌಕೆ ಬಂದಾಗ ತತ್‌ಕ್ಷಣದಲ್ಲಿಯೇ ಅದನ್ನು ಆಶ್ರಯಿಸುವಂತೆ, ಸಂಸಾರವೆಂಬ ಸಾಗರದಲ್ಲಿ ಮುಳುಗುತ್ತಿರುವ ಜೀವಿಗಳೂ ಸಹ ತಮ್ಮ ಜೀವನವನ್ನು ಉದ್ಧಾರಗೊಳಿಸಿಕೊಳ್ಳುವುದಕ್ಕಾಗಿ ಶಿವನ ಇಲ್ಲವೆ ಸದ್ಗುರುಗಳ ಚರಣಾರ ವಿಂದಗಳೆಂಬ ನೌಕೆಗೆ ಶರಣಾಗುತ್ತಾರೆ.

ಶಿವನ ಇಲ್ಲವೆ ಸದ್ಗುರುಗಳ ಪಾದಕಮಲಗಳ ದರ್ಶನಪಡೆಯುವುದು, ತನ್ನ ಹಸ್ತಗಳಿಂದ ಅವುಗಳನ್ನು ಮುಟ್ಟಿ ಪೂಜಿಸುವುದು. ಪಾದಸೇವೆ ಮಾಡುವುದು, ಪಾದೋದಕ ಸೇವಿಸುವುದು, ಆ ಚರಣಗಳನ್ನು ಮನಸ್ಸಿನಲ್ಲಿ ಚಿಂತಿಸುವುದು, ದೂರ ದಿಂದಲೇ ಮಾನಸಿಕ ಪೂಜೆಮಾಡುವುದು, ಚರಣ ರಜವನ್ನು ತನ್ನ ಮಸ್ತಕದ ಮೇಲೆ ಧರಿಸಿಕೊಳ್ಳುವುದು, ಗುರುಚರಣ ಸ್ಪರ್ಶದಿಂದ ಪವಿತ್ರವಾದ ಭೂಮಿಯ ಬಗ್ಗೆ ಕ್ಷೇತ್ರಭಾವನೆಯನ್ನು ತಾಳುವುದು ಮತ್ತು ಗುರುಚರಣ ಸ್ಪರ್ಶವನ್ನು ಹೊಂದಿದ ಪಾದುಕೆಗಳಲ್ಲಿಯೂ ಸಹ ಶ್ರದ್ಧೆಯನ್ನಿರಿಸುವುದು ಇವೆಲ್ಲವುಗಳು ಪಾದಸೇವನಭಕ್ತಿಯ ಪ್ರಕಾರಗಳಾಗಿರುತ್ತವೆ.

ಪದ್ಯತೇ ಗಮ್ಯತೇ ಇತಿ ಪಾದಃ ಎಂಬ ವ್ಯುತ್ಪತ್ತಿಯ ಪ್ರಕಾರ ಪಾದವೆಂದರೆ ಆಚರಣೆ ಅಥವಾ ನಡತೆ ಎಂದರ್ಥ. ಮನುಷ್ಯನು ಶುಭಾಶುಭ ಸ್ಥಾನಗಳಿಗೆ ಹೋಗಬೇಕಾದರೆ ಪಾದಗಳೇ ಮುಖ್ಯವಾದವುಗಳು. ಯಾವ ಪಾದಗಳು ಸದಾ ಶಾಸ್ತ್ರ ವಿಹಿತ ಮಾರ್ಗದಲ್ಲಿಯೇ ಸುಳಿದಾಡುತ್ತವೆಯೋ ಅಂತಹ ಪಾದಗಳೇ ಪೂಜನೀಯ ವಾದವುಗಳು. ಶಿವನಾಗಲಿ ಸದ್ಗುರುಗಳಾಗಲಿ ಶಾಸ್ತ್ರವಿಹಿತ ಮಾರ್ಗದಲ್ಲಿಯೇ ನಡೆಯುತ್ತಿರುವುದರಿಂದ ಅವರವರ ಪಾದಗಳನ್ನು ಪೂಜಿಸುವುದು ಶಾಸ್ತ್ರ ಸಮ್ಮತ ವಾದುದು. ಅಂತೆಯೇ ಶಾಸ್ತ್ರಗಳಲ್ಲಿ ಪಾದಮಹಿಮೆಯು ಅಪಾರವಾಗಿ ವರ್ಣಿಸಲ್ಪಟ್ಟಿದೆ. ಈ ಪಾದ ಮಹಿಮೆಯನ್ನರಿತವನು ಪಾದದ ಹೊರತಾಗಿ ಬೇರಾವು ದನ್ನು ಅಪೇಕ್ಷಿಸಲಾರ. ಅಂತೆಯೇ ಭಕ್ತಿಭಂಡಾರಿ ಬಸವಣ್ಣನವರು ಬ್ರಹ್ಮ ರುದ್ರಾದಿ ಪದವಿಗಳನ್ನು ತಿರಸ್ಕರಿಸಿ ಕೂಡಲಸಂಗಮದೇವನನ್ನೊಲಿಸಿದ ಶರಣರ ಪಾದವನ್ನೇ ಅನುಗ್ರಹಿಸೆಂಬುದಾಗಿ ಪ್ರಾರ್ಥಿಸಿದ್ದಾರೆ. ಇಂತಹ ಪಾದಸೇವನಾ ರೂಪವಾದ ಭಕ್ತಿಯಿಂದಲೂ ಸಹ ಅನೇಕ ಜನರು ಸದ್ಗತಿಯನ್ನು ಪಡೆದದ್ದುಂಟು. ಕಾರಣ

ಪ್ರತಿಯೊಬ್ಬರೂ ಶಿವನ ಹಾಗೂ ಸದ್ಗುರುಗಳ ಚರಣಗಳಲ್ಲಿ ಶ್ರದ್ಧೆಯನ್ನಿಟ್ಟು ಶಾಸ್ತ್ರೋಕ್ತ ಪದ್ಧತಿಯಂತೆ ಅವುಗಳನ್ನು ಸೇವಿಸಿ ಸದ್ಗತಿಯನ್ನು ಪಡೆಯಬೇಕು.

**ಅರ್ಚನಭಕ್ತಿ :**

ಅರ್ಚನೆಯೆಂದರೆ ಪೂಜೆಯೆಂದರ್ಥ. ತನ್ನ ಇಷ್ಟಲಿಂಗವನ್ನಾಗಲಿ, ಇಷ್ಟದೇವರ ಪ್ರತಿಮೆಗಳನ್ನಾಗಲಿ ಉಪಚಾರಗಳಿಂದ ಪೂಜಿಸುವುದೇ ಅರ್ಚನಭಕ್ತಿಯು. ವೀರಶೈವ ಸಿದ್ಧಾಂತದಲ್ಲಿ ಬಾಹ್ಯಮೂರ್ತಿ ಪೂಜೆಗೆ ಪ್ರಾಶಸ್ತ್ಯವನ್ನು ಕೊಡದೆ ಇಷ್ಟಲಿಂಗ ಪೂಜೆಗೆ ಮಹತ್ವವನ್ನು ಕೊಟ್ಟಿದ್ದಾರೆ. ಪೂಜೋಚಿತಗಳಾದ ಉಪಚಾರಗಳು– ಪಂಚೋಪಚಾರ, ಅಷ್ಟೋಪಚಾರ, ಷೋಡಶೋಪಚಾರ ಮತ್ತು ರಾಜೋಪಚಾರವೆಂಬುದಾಗಿ ಭಿನ್ನ ಭಿನ್ನಗಳಾಗಿರುತ್ತವೆ.

ಅರ್ಪಿಸುವ ಉಪಚಾರಗಳು ಅವರವರ ಶಕ್ತ್ಯಾನುಸಾರವಾಗಿ ನ್ಯೂನಾಧಿಕಗಳಾಗಿ ರುತ್ತವೆ. ಅರ್ಚನೆಯಲ್ಲಿ ಉಪಚಾರಗಳಿಗೆ ಪ್ರಾಧಾನ್ಯತೆಯಿಂದ ಅರ್ಚಿಸುವ ವ್ಯಕ್ತಿಯ ಭಾವನೆಗೆ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಅಂತೆಯೇ ಭಗವದ್ಗೀತೆಯಲ್ಲಿ–

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾಪ್ರಯಚ್ಛತೀ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥

(ಭ. ಗೀ. ೯–೨೬)

ಈ ರೀತಿಯಾಗಿ ಉಪಚರಿಸುವ ವಸ್ತುವಿಗಿಂತಲೂ ಉಪಚಾರಕನ ಭಕ್ತಿಗೆ ಮಹತ್ತ್ವ ಕೊಟ್ಟಿದ್ದನ್ನು ನಾವು ಕಾಣುತ್ತೇವೆ. ಆದ್ದರಿಂದಲೇ ಸುದಾಮನು ಒಣ ಅವಲಕ್ಕಿ ಯನ್ನೂ, ಗಜೇಂದ್ರವು ಒಂದು ಪುಷ್ಪವನ್ನೂ, ದ್ರೌಪದಿಯು ಅಕ್ಷಯ ಪಾತ್ರೆಯಲ್ಲಿ ಉಳಿದಿರುವ ಸೊಪ್ಪಿನ ತಪ್ಪಲನ್ನೂ, ಅದೇ ರೀತಿ ವಿದುರನ ಪತ್ನಿಯು ಬಾಳೆಹಣ್ಣಿನ ಸಿಪ್ಪೆಯನ್ನೂ ಭಗವಂತನಿಗೆ ಅರ್ಪಿಸಿ ಉಪಚರಿಸಿ ಅನುಗ್ರಹವನ್ನು ಪಡೆದ ಕಥೆಗಳು ಪುರಾಣಗಳಲ್ಲಿ ಕೇಳಿಬರುತ್ತವೆ. ಇದೂ ಅಲ್ಲದೆ ರಾಮಾಯಣದಲ್ಲಿ ವೃದ್ಧ ಶಬರಿಯು ಶ್ರೀರಾಮನಿಗೆ ಎಂಜಲು ಬೋರೆಯ ಹಣ್ಣುಗಳನ್ನು ಅರ್ಪಿಸಿ ಆತನ ಅನುಗ್ರಹಕ್ಕೆ ಪಾತ್ರಳಾದ ವಿಷಯವೂ ಪ್ರಸಿದ್ಧವಾಗಿದೆ.

ಹೀಗೆ ಇದೆಲ್ಲವನ್ನೂ ನೋಡಿದಾಗ ಉಪಚಾರದ ಸಾಮಗ್ರಿಗಳಿಗಿಂತಲೂ ಭಗವಂತನಿಗೆ ಭಕ್ತರ ಭಕ್ತಿಯೇ ಪ್ರಿಯವಾದುದೆಂಬುದು ತಿಳಿದುಬರುತ್ತದೆ. ಕಾರಣ ಪ್ರತಿಯೊಬ್ಬರು ತಮ್ಮ ಇಷ್ಟದೇವರನ್ನು ಭಕ್ತಿ ಪರವಶರಾಗಿ ದೊರೆತಷ್ಟು ಉಪಚಾರ ಗಳಿಂದ ಅರ್ಪಿಸಿ ಸದ್ಗತಿಯನ್ನು ಪಡೆಯಬೇಕು. ವೀರಶೈವರು ಸದ್ಗುರುವಿನಿಂದ ಪ್ರಾಪ್ತ ವಾದ ಇಷ್ಟಲಿಂಗದಲ್ಲಿಯೇ ನಿಷ್ಠೆಯನ್ನಿರಿಸಿ ಅದನ್ನೇ ಉಪಚಾರಗಳಿಂದರ್ಚಿಸಿ ತಮ್ಮ ಇಷ್ಟಾರ್ಥವನ್ನು ಪಡೆದುಕೊಳ್ಳಬೇಕು.

**ವಂದನಭಕ್ತಿ :**

ಆರನೆಯದಾದ ಭಕ್ತಿಯೇ ವಂದನ ಭಕ್ತಿಯು. ವಂದನೆಯೆಂದರೆ ವಂದಿಸು, ನಮಸ್ಕರಿಸು ಎಂದರ್ಥ. ತನ್ನ ಇಷ್ಟದೇವರಿಗೆ ಅಥವಾ ತನ್ನ ಸದ್ಗುರುವಿಗೆ ಸಾಷ್ಟಾಂಗ

ಪೂರ್ವಕವಾಗಿ ನಮಸ್ಕರಿಸುವುದೇ ವಂದನ ಭಕ್ತಿಯು. ಶಿವನ ವಾಸ್ತವಿಕ ಸ್ವರೂಪ ವನ್ನರಿತು ಅವನಿಗೆ ನಮಸ್ಕರಿಸಿದಾಗ ನಮಸ್ಕಾರ ಮಾಡಿದ ವ್ಯಕ್ತಿಗೆ ದಶಾಶ್ವಮೇಧ ಯಜ್ಞದ ಫಲಕ್ಕಿಂತಲೂ ಹೆಚ್ಚಿನ ಫಲವು ದೊರಕುವುದು, ಪತಿತನೇ ಆಗಲಿ, ಆರ್ತನೇ ಆಗಲಿ, ಮೂರ್ಛಿತನೇ ಆಗಿರಲಿ, ಒಂದು ವೇಳೆ ಅವನ ಮುಖದಿಂದ 'ಓಂ ನಮಃ ಶಿವಾಯ' ಎಂಬ ಶಿವನಿಗೆ ನಮಸ್ಕಾರದ್ಯೋತಕ ಶಬ್ದವು ಹೊರ ಹೊರಟಾಗ ಆತನು ಸಮಸ್ತಪಾಪಗಳಿಂದ ಮುಕ್ತನಾಗುತ್ತಾನೆ. ವಂದನೆಯು ಏಕಾಂಗ, ತ್ರ್ಯಂಗ, ಪಂಚಾಂಗ, ಸಾಷ್ಟಾಂಗ ಮತ್ತು ಪ್ರದಕ್ಷಿಣೆ ಎಂಬುದಾಗಿ ಹಲವು ರೀತಿಯಾಗಿ ಶಾಸ್ತ್ರಗಳಲ್ಲಿ ವರ್ಣಿಸಲ್ಪಟ್ಟಿದೆ. ಇವೆಲ್ಲವುಗಳಲ್ಲಿ ಮನುಷ್ಯನ ಅಭಿಮಾನವನ್ನು ದೂರಮಾಡುವ ಸಾಷ್ಟಾಂಗ ವಂದನೆಯೇ ಶ್ರೇಷ್ಠವಾದುದು. ಆದ್ದರಿಂದ ಪ್ರತಿಯೊಬ್ಬರು ಸದ್ಗುರುವಿಗೆ ಹಾಗೂ ತನ್ನ ಇಷ್ಟದೇವರಿಗೆ ಸಾಷ್ಟಾಂಗ ಪ್ರಣಾಮವನ್ನು ಸಮರ್ಪಿಸಿ ಅಭಿಮಾನ ಮುಕ್ತರಾಗಿ ಸದ್ಗತಿಯನ್ನು ಹೊಂದಬೇಕು.

ದಾಸ್ಯಭಕ್ತಿ :

ಏಳನೆಯದಾದ ಭಕ್ತಿಯೇ ದಾಸ್ಯಭಕ್ತಿಯು. ಗುರು–ದೇವತೆಗಳಲ್ಲಿರುವ ದಾಸ್ಯ ಭಾವನೆಯೇ ದಾಸ್ಯಭಕ್ತಿಯೆಂಬುದಾಗಿ ಕರೆಯಲ್ಪಡುತ್ತದೆ. ನಾನು ಶಿವನ ಹಾಗೂ ಶಿವಜ್ಞಾನಿಗಳಾದ ಆಚಾರ್ಯರ ಮತ್ತು ಶಿವಶರಣರ ದಾಸನಿದ್ದೇನೆ ಎಂಬ ಭಾವನೆಯಿಂದ ಅವರ ಸೇವೆಗೈಯುವುದೇ ದಾಸ್ಯಭಕ್ತಿಯು. ಆಪ್ತ, ಅಂಗ, ಸ್ಥಾನ ಮತ್ತು ಸದ್ಭಾವ ಎಂಬುದಾಗಿ ಸೇವೆಯ ನಾಲ್ಕು ವಿಧಗಳು ಪ್ರತಿಪಾದಿತಗಳಾಗಿವೆ. ವೀರಶೈವ ಸಿದ್ಧಾಂತದ ಪಂಚ ಆಚಾರಗಳಲ್ಲಿ ಪರಿಗಣಿಸಲ್ಪಟ್ಟ ಭೃತ್ಯಾಚಾರವೂ ದಾಸ್ಯಭಕ್ತಿಯ ಪರಿಚಾಯಕ ವಾಗಿದೆ. ಈ ದಾಸ್ಯಭಕ್ತಿಯ ಪರಿಣಾಮವಾಗಿ ಸಾಧಕನು ತನ್ನಲ್ಲಿಯ ಮೋಹ ಮಮಕಾರ ಗಳಿಂದ ಮುಕ್ತನಾಗುತ್ತಾನೆ. ಆದ್ದರಿಂದ ಈ ಭಕ್ತಿಯೂ ಸಹ ಸಾಧಕನ ಶುದ್ಧೀಕರಣದ ಸುಲಭೋಪಾಯವಾಗಿದೆ. ರಾಮಾಯಣದಲ್ಲಿಯ ಲಕ್ಷ್ಮಣ, ಹನುಮಂತ ಮತ್ತು ಅಂಗದ ಮೊದಲಾದವರು ದಾಸ್ಯಭಕ್ತಿಯ ಆದರ್ಶ ವ್ಯಕ್ತಿಗಳಾಗಿ ಎದ್ದು ಕಾಣುತ್ತಾರೆ. ಆದ್ದರಿಂದ ಗುರುಹಿರಿಯರ, ತಂದೆ–ತಾಯಿಗಳ ಬಗ್ಗೆ ಗೌರವವನ್ನು ತಾಳಿ, ದಾಸ್ಯಭಾವನೆ ಯಿಂದ ಅವರ ಸೇವೆಗೈದು, ಪ್ರತಿಯೊಬ್ಬರು ತಮ್ಮ ಜೀವನವನ್ನು ಪಾವನವಾಗಿ ಮಾಡಿಕೊಳ್ಳಬೇಕು.

ಸಖ್ಯಭಕ್ತಿ :

ಎಂಟನೆಯದಾದ ಭಕ್ತಿಯೇ ಸಖ್ಯ ಭಕ್ತಿಯು. ಇಷ್ಟದೇವರಲ್ಲಿ ಮಿತ್ರತ್ವ ಭಾವನೆ ಯನ್ನು ತಾಳಿ ಉಪಚರಿಸುವುದೇ ಸಖ್ಯ ಭಕ್ತಿಯು. ಮನುಷ್ಯನ ಜೀವನದಲ್ಲಿ ಪ್ರತಿಯೊಬ್ಬರಿಗೂ ಸಖನ ಅವಶ್ಯಕತೆಯು ಇದ್ದೇ ಇರುತ್ತದೆ. ಅದಾರಿಗೂ ಹೇಳದ ತನ್ನ ಗುಟ್ಟನ್ನು ತನ್ನ ಆತ್ಮಸಖನಿಗೆ ಮಾತ್ರ ಸರ್ವರೂ ಹೇಳುತ್ತಾರೆ. ಸಖನೊಂದಿಗೆ ಇಷ್ಟೊಂದು ತಾದಾತ್ಮ್ಯಭಾವವು ಇರುವುದನ್ನು ನಾವು ವ್ಯವಹಾರದಲ್ಲಿ ಕಾಣುತ್ತೇವೆ. ಜಗತ್ತಿನಲ್ಲಿಯ ಜೀವಿಗಳು ಯಾರು ಯಾರ ಸಖರೇ ಆದರೂ ಪರಮ ಸಖರಾರೂ ಆಗುವುದಿಲ್ಲ, ನಿಜ ವಾಗಿ ವಿಚಾರಿಸಿದಾಗ ಜೀವನ ಪರಮ ಸಖನೆಂದರೆ ಶಿವನೇ ಆಗಿದ್ದಾನೆ. "ದ್ವಾ

ಸುಪರ್ಣಾ ಸಯುಜಾ ಸಖಾಯಾ'' ಎಂಬ ಮುಂಡಕೋಪನಿಷತ್ತಿನ ಮಂತ್ರದಲ್ಲಿ ಜೀವ–ಶಿವರನ್ನು ಸಖರ ರೂಪದಲ್ಲಿ ವರ್ಣಿಸಿದ್ದನ್ನು ಕಾಣುತ್ತೇವೆ. ಕಾರಣ ಪ್ರತಿಯೊಬ್ಬರು ಶಿವನನ್ನೇ ತಮ್ಮ ಆತ್ಮಸಖನನ್ನಾಗಿ ತಿಳಿದುಕೊಂಡು ತಮ್ಮಂತರಂಗವನ್ನು ಶಿವನೆದುರು ತೆರೆದಿಟ್ಟು, ಆತನ ಭಕ್ತಿಯನ್ನು ಮಾಡಿ ತಮ್ಮ ಲೋಪದೋಷಗಳನ್ನು ತಿದ್ದಿಕೊಳ್ಳಬೇಕು. ಈ ಸಖ್ಯಭಕ್ತಿಗಾಗಿ ವಿಭೀಷಣ, ಸುಗ್ರೀವ, ಉದ್ಧವ, ಅರ್ಜುನ, ಸುದಾಮಾದಿಗಳ ಉದಾಹರಣೆಗಳು ರಾಮಾಯಣ ಭಾಗವತಾದಿ ಗ್ರಂಥಗಳಲ್ಲಿ ಸುಪ್ರಸಿದ್ಧಗಳಾಗಿವೆ.

ಆತ್ಮನಿವೇದನಭಕ್ತಿ :

ಒಂಬತ್ತನೆಯದಾದ ಭಕ್ತಿಯೇ ಆತ್ಮನಿವೇದನವು. ಪರಮಾತ್ಮನ ತತ್ತ್ವ, ರಹಸ್ಯ, ಪ್ರಭಾವ ಮತ್ತು ಮಹಿಮೆಗಳನ್ನು ತಿಳಿದುಕೊಂಡು ಅಹಂಕಾರ–ಮಮಕಾರಗಳಿಂದ ದೂರನಾಗಿ ತನ್ನ ತನು–ಮನ–ಧನವೆಲ್ಲವನ್ನು ಶ್ರದ್ಧೆ ಹಾಗೂ ಪ್ರೇಮಪೂರ್ವಕವಾಗಿ ಪರಮಾತ್ಮನಿಗೆ ಸಮರ್ಪಿಸುವುದೇ ಆತ್ಮನಿವೇದನ ಭಕ್ತಿಯೆಂಬುದಾಗಿ ಕರೆಯಲ್ಪಡುತ್ತದೆ. ಈ ಭಕ್ತಿಯನ್ನಾಚರಿಸುವ ಸಾಧಕನು ಹಾನಿ–ಲಾಭ, ಜಯ–ಪರಾಜಯ, ಯಶ–ಅಪಯಶ, ಮಾನ–ಅಪಮಾನ ಮತ್ತು ಸುಖ–ದುಃಖಾದಿಗಳ ಬಗ್ಗೆ ವಿಶೇಷ ಆಗ್ರಹವನ್ನು ತಾಳದೆ ಯಾವುದು ದೊರೆತರೂ ಶಿವನ ಪ್ರಸಾದವೆಂದು ಭಾವಿಸಿ ಪ್ರಸನ್ನನಾಗಿರುತ್ತಾನೆ. ನಾನು ಕೇವಲ ನಿಮಿತ್ತಮಾತ್ರನು, ನನ್ನಿಂದ ಆಗುವ ಎಲ್ಲ ವ್ಯವಹಾರಗಳಿಗೆ ಆ ಶಿವನೇ ಪ್ರೇರಕಶಕ್ತಿಯಾಗಿದ್ದಾನೆಂಬ ದೃಢಭಾವನೆಯನ್ನು ಆತನು ತಿಳಿದುಕೊಂಡಿರುತ್ತಾನೆ. ಹೀಗೆ ಯಾವಾತನು ತನ್ನ ಅಸ್ತಿತ್ವವನ್ನಳಿದುಹಾಕಿ ಸರ್ವತೋಭಾವೇನ ಶಿವನನ್ನು ಶರಣು ಹೊಕ್ಕವನೇ ಆತ್ಮನಿವೇದಕ ಭಕ್ತನು. ಇಂತಹ ಭಕ್ತರು ಪರಮಾತ್ಮನಿಗೆ ಅತ್ಯಂತ ಪ್ರಿಯರಾಗಿ ರುತ್ತಾರೆ. ಅಂತೆಯೇ ಭಗವದ್ಗೀತೆಯಲ್ಲಿ–

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

(ಭ. ಗೀತಾ ೧೮–೬೬)

ಎಂಬುದಾಗಿ ಅರ್ಜುನನಿಗೆ ಭಗವಂತನು ಅಭಯವಿತ್ತಿದ್ದನ್ನು ಕಾಣುತ್ತೇವೆ. ಸಂಪೂರ್ಣವಾಗಿ ಸಮರ್ಪಿತರಾದವರ ಸರ್ವಹೊಣೆಯನ್ನು ದೇವರೇ ಹೊರಬೇಕಾಗುತ್ತದೆ. ಗೋಪಿಕಾಸ್ತ್ರೀಯರು, ಬಲಿಚಕ್ರವರ್ತಿ ಮುಂತಾದವರು ಆತ್ಮನಿವೇದನಾ ಭಕ್ತಿಗೆ ಉತ್ಕೃಷ್ಟ ಉದಾಹರಣೆಯಾಗಿದ್ದಾರೆ. ಕಾರಣ ಪ್ರತಿಯೊಬ್ಬರು ತಮ್ಮ ಸರ್ವಸ್ವವನ್ನು ಶಿವನಿಗೆ ಸಮರ್ಪಿಸಿ ಸರ್ವಭಾರದಿಂದ ಮುಕ್ತರಾಗಿ ಪರಮ ಕೈವಲ್ಯವನ್ನು ಪಡೆಯಬೇಕು.

ಈ ತೆರನಾಗಿ ಶ್ರವಣಭಕ್ತಿಯನ್ನೇ ಮೊದಲುಗೊಂಡು ಆತ್ಮನಿವೇದನ ಪರ್ಯಂತವಾದ ನವವಿಧಭಕ್ತಿಗಳನ್ನು ಆಚರಿಸಿದಾಗ ಅವನು ಪರಿಪೂರ್ಣನಾದ ಭಕ್ತನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಈ ನವವಿಧಭಕ್ತಿಗಳು ಸರ್ವೇಸಾಮಾನ್ಯವಾದ ಭಕ್ತಿಗಳು. ವೀರಶೈವ ಸಿದ್ಧಾಂತದಲ್ಲಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸಭಕ್ತಿ ಯೆಂಬುದಾಗಿ ಭಕ್ತಿಯ ಆರು ಭೇದಗಳು ನಿರೂಪಿಸಲ್ಪಟ್ಟಿವೆ. ಮೇಲೆ ವರ್ಣಿಸಿದ ಒಂಬತ್ತು ವಿಧ ಭಕ್ತಿಗಳು ಉದಿಸಬೇಕಾದರೆ ಪೂರ್ವಾರ್ಜಿತ

ಪುಣ್ಯವಿರಬೇಕೆಂಬುದನ್ನು ಪೂಜ್ಯರು ಅಪ್ಪಣೆಕೊಡಿಸಿದ್ದಾರೆ. ಇಷ್ಟನ್ನು ತಿಳಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)

■■

ಆಶೀರ್ವಚನ-೨

# ಭಕ್ತಮಾರ್ಗಕ್ರಿಯಾಸ್ಥಲ

ಧರ್ಮಾಭಿಮಾನಿ ಸದ್ಭಭಕ್ತರೇ !

ನಮ್ಮ ಆರಾಧ್ಯ ಗುರುಗಳಾದ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಭಗವತ್ಪಾದರು ಲಿಂಗೈಕ್ಯರಾಗಿ ಇಂದಿಗೆ ಒಂದು ವರುಷವಾಯಿತು. ೧೯೮೮ ರಲ್ಲಿ ಈ ನಗರದಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯರ ಅದ್ದೂರಿಯ ಅಡ್ಡಪಲ್ಲಕ್ಕಿ ಮಹೋತ್ಸವ ವನ್ನು ಏರ್ಪಡಿಸಿದ ನೆನಪು ಹಸಿರಾಗಿರುವಾಗಲೇ ನಮ್ಮ ಜಗದ್ಗುರುಗಳವರು ಅಗಲಿ ಸಮಾಜವನ್ನು ತಬ್ಬಲಿ ಮಾಡಿದರು. ಮಾತೃ ಹೃದಯದ ಆ ಮಹಾತ್ಮರ ಪ್ರಪ್ರಥಮ ಪುಣ್ಯ ಸ್ಮರಣೋತ್ಸವವು ಇಂದು ಇಲ್ಲಿ ಜರುಗುತ್ತಿರುವುದು ಯೋಗಾಯೋಗ ! ಈ ಧರ್ಮ ಸಭೆಯಲ್ಲಿ ವಿದ್ವಾಂಸರು ಆ ದಿವ್ಯ ಚೇತನದ ಸರಳ ಸಜ್ಜನಿಕೆ ಕುರಿತು ಮಾತನಾಡಿ ಭಕ್ತಿ ಗೌರವ ಸಲ್ಲಿಸಿ ಕೃತಾರ್ಥರಾಗಿದ್ದಾರೆ. ನಾವೂ ಸಹ ಅವರ ದಿವ್ಯ ಸ್ಮರಣೆಯನ್ನು ಮಾಡುತ್ತ ಅವರ ಶ್ರೀಪಾದಂಗಳಿಗೆರಗಿ ನಮ್ಮ ಇಂದಿನ ಆಶೀರ್ವಚನವನ್ನು ದಯಪಾಲಿಸುತ್ತೇವೆ.

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತವಾದ ಭಕ್ತಮಾರ್ಗಕ್ರಿಯಾ ಸ್ಥಲವನ್ನು ಕುರಿತು ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ಕುರಿತು ನವವಿಧ ಭಕ್ತಿಗಳ ಬಗ್ಗೆ ಉಪದೇಶ ಮಾಡಿದ ನಂತರ ಭಕ್ತಿಸಂಪನ್ನನಾದವನು ಮ್ಲೇಚ್ಛನೇ ಇರಲಿ ಅಥವಾ ವಿಪ್ರನೇ ಇರಲಿ ಅವನು ಶಿವನಿಗೆ ಪ್ರಿಯನಾಗುತ್ತಾನೆಂಬುದನ್ನು ತಿಳಿಸಲೋಸುಗ

ಅಧಮೇಚೋತ್ತಮೇ ವಾಪಿ ಯತ್ರಕುತ್ರಚಿದೂರ್ಜಿತಾ ।<br>
ವರ್ತತೇ ಶಾಂಕರೀ ಭಕ್ತಿಃ ಸ ಭಕ್ತ ಇತಿ ಗೀಯತೇ ॥

ಭಕ್ತಿಃ ಸ್ಥಿರೀಕೃತಾ ಯಸ್ಮಿನ್ ಮ್ಲೇಂಚ್ಛೇ ವಾ ದ್ವಿಜಸತ್ತಮೇ ।<br>
ಶಂಭೋಃ ಪ್ರಿಯಃ ಸ ವಿಪ್ರಶ್ಚ ನ ಪ್ರಿಯೋ ಭಕ್ತಿ ವರ್ಜಿತಃ ॥

(ಸಿ.ಶಿ. ೯; ೪–೫)

ಹೀಗೆ ನಿರೂಪಿಸಿದ್ದಾರೆ.

ಅತ್ಯಂತ ನೀಚನೇ ಆಗಿರಲಿ ಅಥವಾ ಉತ್ತಮನೇ ಆಗಿರಲಿ ಇನ್ನೂ ಮತ್ಯಾರೇ ಆಗಿರಲಿ ಅವರಲ್ಲಿ ಘನತರವಾದ ಶಿವಭಕ್ತಿಯಿದ್ದರೆ ಅವನು ಭಕ್ತನೆಂದು ಕರೆಯಿಸಿ ಕೊಳ್ಳುತ್ತಾನೆ. ಶ್ವಪಚನೇ ಆಗಲಿ ಅಥವಾ ಬ್ರಾಹ್ಮಣೋತ್ತಮನೇ ಆಗಲಿ ದೃಢವಾದ ಶಿವಭಕ್ತಿಯುಳ್ಳವನು ಶಿವನಿಗೆ ಪ್ರಿಯನಾಗುವನೇ ವಿನಃ ಭಕ್ತಿವರ್ಜಿತನಾದ ಬ್ರಾಹ್ಮಣನು ಪ್ರಿಯನಾಗಲಾರ ಎಂಬುದು ಉಪಯುಕ್ತ ಆಚಾರ್ಯೋಕ್ತಿಯ ತಾತ್ಪರ್ಯವಾಗಿದೆ. ಶಿವನು

ಜಾತಿಯನ್ನು ಪರೀಕ್ಷಿಸದೆ ಭಕ್ತಿ ಪಾತ್ರವನ್ನು ಪರೀಕ್ಷಿಸುತ್ತಾನೆ. ಆತನಿಗೆ ಬೇಕಾದುದು ಭಕ್ತಿಯೊಂದೇ. ಅಂತೆಯೇ ಆತನನ್ನು ಶರಣರು ಭಕ್ತಿಪ್ರಿಯನೆಂದು ಕರೆದಿದ್ದಾರೆ. ಲೌಕಿಕ ಜೀವನದಲ್ಲಿ ಜಾತಿಗೆ ಪ್ರಾಧಾನ್ಯತೆ ಕೊಟ್ಟಿರುವುದನ್ನು ಕಾಣುತ್ತೇವೆ. ಜಾತಿಗಳಲ್ಲಿ ಉತ್ಕೃಷ್ಟತೆ ಹಾಗೂ ನಿಕೃಷ್ಟತೆಗಳು ಅವರ ಶೀಲ, ವ್ಯವಹಾರಾದಿಗಳ ಆಧಾರದ ಮೇಲೆ ನಿರ್ಧರಿಸಲ್ಪಟ್ಟಿವೆ. ಹೀನ ಕಾರ್ಯವನ್ನು ಮಾಡುವವನು ಶ್ವಪಚನಾದರೆ ವೇದವಿಹಿತ ಧರ್ಮಾಚರಣೆಯನ್ನಾಚರಿಸುವವನು ಬ್ರಾಹ್ಮಣನೆಂದು ಕರೆಯಲ್ಪಡುತ್ತಾನೆ. ಈ ಪರಂಪರೆಯಲ್ಲಿಯ ಜನರು ತಮ್ಮ ಪರಂಪರಾಗತ ಆಚಾರ-ವಿಚಾರಗಳನ್ನು ಅನೂಚಾನವಾಗಿ ಆಚರಿಸುತ್ತ ಬಂದಿದ್ದಾರೆ. ಕೆಲವೊಂದು ಸಂದರ್ಭಗಳಲ್ಲಿ ಸಂಗ ಸಹವಾಸಾದಿಗಳ ಮೂಲಕ ಪರಿವರ್ತನೆಗಳೂ ಸಹ ಉಂಟಾಗುವುದುಂಟು. ಈ ಪರಿವರ್ತನೆಯ ಪರಿಣಾಮವಾಗಿ ಶ್ವಪಚರಾದವರು ಶಾಸ್ತ್ರ ವಿಹಿತಕರ್ಮಗಳನ್ನು ಮತ್ತು ಬ್ರಾಹ್ಮಣರಾದವರು ಶಾಸ್ತ್ರ ನಿಷಿದ್ಧಕರ್ಮಗಳನ್ನು ಆಚರಿಸುವುದು ಕಂಡುಬರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಜಾತಿ ಶ್ರೇಷ್ಠವಾಗಿದ್ದರೂ ಕೃತಿ ಕನಿಷ್ಠವಾಗಿರುವಾಗ ಇಲ್ಲಿ ಜಾತಿಗಿಂತ ಕೃತಿಗೇ ಮಹತ್ವವನ್ನು ಕೊಡಬೇಕಾಗುವುದು. ಹೀನ ಕಾರ್ಯಗಳನ್ನು ಮಾಡುತ್ತ ತನ್ನನ್ನು ಉಚ್ಚಕುಲದವನೆಂದು ಅಭಿಮಾನಿಸಿಕೊಳ್ಳುವುದರಲ್ಲಿ ಅರ್ಥವೇನಿದೆ ? ಶಿವನು ಅಂತರ್ಯಾಮಿಯಾಗಿರುಹುದರಿಂದ ಆತನು ಬಾಹ್ಯಾಡಂಬರದ ವ್ಯವಹಾರಕ್ಕಿಂತ ಅಂತರಂಗದ ಶುದ್ಧಿಯತ್ತ ಲಕ್ಷ್ಯಕೊಡುತ್ತಾನೆ. ಕಾರಣ ಭಕ್ತರಾದವರು ಜಾತಿಯ ಉತ್ಕೃಷ್ಟತೆ-ನಿಕೃಷ್ಟತೆಯ ಬಗ್ಗೆ ದುರಭಿಮಾನವನ್ನು ತಾಳಿ ಜಾತಿಯ ಗಲಭೆಯನ್ನೆಬ್ಬಿಸುವುದನ್ನು ಬಿಟ್ಟು ಭಕ್ತಿಪರವಶರಾಗಿ ಶಿವಾನುಗ್ರಹಕ್ಕೆ ಪಾತ್ರರಾಗಬೇಕು. ಬೇಡರ ಕಣ್ಣಪ್ಪನು ಮ್ಲೇಚ್ಛಜಾತಿಯಲ್ಲಿ ಜನಿಸಿದ್ದರೂ ಶಿವನಿಗೆ ಆತನು ಸಮರ್ಪಿಸುತ್ತಿರುವ ಉಪಚಾರದ ಸಾಮಗ್ರಿಗಳು ಮತ್ತು ಪೂಜಾ ವಿಧಾನವು ಪರಿಶುದ್ಧವಾಗಿರದಿದ್ದರೂ ಆತನ ಭಕ್ತಿಯು ಮಾತ್ರ ಶ್ರೇಷ್ಠಮಟ್ಟದ್ದಾಗಿದ್ದರಿಂದ ಆತನು ಶಿವಾನುಗ್ರಹವನ್ನು ಪಡೆದ ಕಥೆಯು ಸುಪ್ರಸಿದ್ಧವಾಗಿದೆ.

ಇನ್ನು ಪೂಜ್ಯಪಾದರು ಆ ಭಕ್ತಿಯ ಬಾಹ್ಯಾಭ್ಯಂತರ ಭೇದಗಳನ್ನು ತಿಳಿಯಪಡಿಸಲೋಸುಗ ಪುನಃ-

ಸಾ ಭಕ್ತಿರ್ದ್ವಿವಿಧಾ ಜ್ಞೇಯಾ ಬಾಹ್ಯಾಭ್ಯಂತರಭೇದತಃ ।
ಬಾಹ್ಯಾ ಸ್ಥೂಲಾಂತರಾ ಸೂಕ್ಷ್ಮಾ ವೀರಮಾಹೇಶ್ವರಾದೃತಾ ॥

ಸಿಂಹಾಸನೇ ಶುದ್ಧದೇಶೇ ಸುರಮ್ಯೇ ರತ್ನಚಿತ್ರಿತೇ ।
ಶಿವಲಿಂಗಸ್ಯ ಪೂಜಾ ಯಾ ಸಾ ಬಾಹ್ಯಾ ಭಕ್ತಿರುಚ್ಯತೇ ॥

ಲಿಂಗೇ ಪ್ರಾಣಂ ಸಮಾಧಾಯ ಪ್ರಾಣೇ ಲಿಂಗಂ ತು ಶಾಂಭವಮ್ ।
ಸ್ವಸ್ಥಂ ಮನಸ್ತಥಾ ಕೃತ್ವಾ ನ ಕಿಂಚಿಚ್ಚಿಂತಯೇದ್ ಯದಿ ॥
ಸಾಭ್ಯಂತರಾ ಭಕ್ತಿರಿತಿ ಪ್ರೋಚ್ಯತೇ ಶಿವಯೋಗಿಭಿಃ ।
ಸಾ ಯಸ್ಮಿನ್ ವರ್ತತೇ ತಸ್ಯ ಜೀವನಂ ಭ್ರಷ್ಟಬೀಜವತ್ ॥

(ಸಿ.ಶಿ. ೯; ೬-೯)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಶಿವಭಕ್ತಿಯು ಬಾಹ್ಯವೆಂತಲೂ, ಅಭ್ಯಂತರವೆಂತಲೂ ಎರಡು ಪ್ರಕಾರವಾದುದಾಗಿದೆ. ಬಾಹ್ಯ ಭಕ್ತಿಯು ಸ್ಥೂಲರೂಪವಾದುದಾದರೆ ಅಂತರಂಗಭಕ್ತಿಯು ಸೂಕ್ಷ್ಮರೂಪವಾದುದಾಗಿರುತ್ತದೆ. ಬಾಹ್ಯದಲ್ಲಿ ಮನೋಹರವಾದ ಸ್ಥಾನದಲ್ಲಿ ಷಟ್ ಸಮ್ಮಾರ್ಜನೆಯನ್ನು ಮಾಡಿ ಅಂದರೆ ಗೋಮಯ (ಆಕಳ ಶಗಣಿ), ಗೋಕ್ಷೀರ, ಗೋಘೃತ, ಗೋದಧಿ, ಗೋಮೂತ್ರ ಮತ್ತು ಗೋರೋಚನ (ಒಂದು ಸುಗಂಧದ್ರವ್ಯ) ಗಳಿಂದ ನೆಲವನ್ನು ಸಾರಿಸಿ ಪರಿಶುದ್ಧ ಮಾಡಿಕೊಂಡು, ಅದರ ಮೇಲೆ ನವರತ್ನ ಖಚಿತ ಸಿಂಹಾಸನವನ್ನಿಟ್ಟು, ಅಲ್ಲಿ ಕುಳಿತು ವೈಭವದಿಂದ ಇಷ್ಟಲಿಂಗಪೂಜೆ ಮಾಡುವುದೇ ಬಾಹ್ಯಭಕ್ತಿಯೆಂಬುದಾಗಿ ಕರೆಸಿಕೊಳ್ಳುವುದು. ಇನ್ನು ತನ್ನ ಹಸ್ತಪೀಠದಲ್ಲಿಯ ಇಷ್ಟಲಿಂಗದಲ್ಲಿ ಪ್ರಾಣವನ್ನು, ಪ್ರಾಣದಲ್ಲಿ ಶಿವಕಲಾ ಯುಕ್ತವಾದ ಲಿಂಗವನ್ನು ಅಳವಡಿಸಿಕೊಂಡು ಅಂದರೆ ಲಿಂಗ–ಪ್ರಾಣಗಳನ್ನು ಸಮರಸ ಮಾಡಿಕೊಂಡು ತಾನು ಪ್ರಾಣಲಿಂಗಿಯಾಗಿ ಮನಸ್ಸನ್ನು ಸ್ಥಿರಗೊಳಿಸಿಕೊಂಡು, ಮನಸ್ಸಿನಲ್ಲಿ ಬೇರಾವ ವಿಚಾರವೂ ಬಾರದಂತೆ ಎಚ್ಚರಿಕೆವಹಿಸಿ ಮಾಡುವ ಶಿವಭಕ್ತಿಯೇ ಅಭ್ಯಂತರ ಭಕ್ತಿಯೆಂಬುದಾಗಿ ಶಿವಯೋಗಿಗಳಿಂದ ಕರೆಯಲ್ಪಟ್ಟಿದೆ. ಇಂತಹ ಭಕ್ತಿಯುಳ್ಳವನ ಕರ್ಮಬೀಜಗಳೆಲ್ಲ ಹುರಿದುಹೋಗಿ ಆತನು ಪುನರ್ಭವವನ್ನು ಕಳೆದುಕೊಳ್ಳುತ್ತಾನೆ.

ವೀರಶೈವ ಸಿದ್ಧಾಂತದಲ್ಲಿಯ ಲಿಂಗಪೂಜಾ ವಿಧಾನವು ಕ್ರಮಿಕವಿಕಾಸವನ್ನು ತೋರಿಸುವ ವಿಧಾನವಾಗಿದೆ. ಇದರಲ್ಲಿ ಬಾಹ್ಯಶುದ್ಧಿಗೆ ಮೊದಲು ಪ್ರಾಧಾನ್ಯತೆಯನ್ನಿತ್ತು ಬರಬರುತ್ತ ಅಂತರಂಗದ ಪರಿಶುದ್ಧಿಯತ್ತ ಸಾಧಕನ ಲಕ್ಷ್ಯವನ್ನು ಹೊರಳಿಸಲಾಗಿದೆ. ಮೊದಲು ಶಿವಲಿಂಗ ಪೂಜೆಯನ್ನು ಮಾಡುವಾಗ ಸ್ಥಾನಶುದ್ಧಿಯು ಪ್ರಮುಖವಾದುದು. ಅಂತೆಯೇ ತಾನು ಕುಳಿತು ಪೂಜೆಮಾಡುವ ಸ್ಥಾನವನ್ನು ಷಟ್‌ಸಮ್ಮಾರ್ಜನೆಯಿಂದ ಪರಿಶುದ್ಧಗೊಳಿಸಿಕೊಳ್ಳಬೇಕು. ಆ ಸ್ಥಾನದಲ್ಲಿ ತನಗೆ ಕೂಡ್ರುವುದಕ್ಕಾಗಿ ತನ್ನ ಯೋಗ್ಯತೆಗನುಸಾರವಾಗಿ ಪೂಜೆಯ ಪೀಠೋಪಕರಣಗಳನ್ನು ತಯಾರಿಸಿಕೊಂಡು ತನ್ನ ಯೋಗ್ಯತೆಗೆ ತಕ್ಕಂತೆ ಅದನ್ನು ಮತ್ತಷ್ಟು ಅಲಂಕರಿಸಿಕೊಂಡು ಪಂಚವಿಧ, ಅಷ್ಟವಿಧ, ಷೋಡಶೋಪಚಾರ ಅಥವಾ ರಾಜೋಪಚಾರದ ಸಾಮಗ್ರಿಗಳನ್ನು ಸಜ್ಜುಗೊಳಿಸಿಕೊಂಡು ತಾನೊರ್ವನಾಗಲಿ ಅಥವಾ ಶಿವಭಕ್ತಿಸಂಪನ್ನರಾದ ಅನೇಕ ಶಿವಭಕ್ತರನ್ನೊಡಗೂಡಿಕೊಂಡು ಮಹಾರುದ್ರಾಭಿಷೇಕ, ಸಹಸ್ರ, ಲಕ್ಷ ಇಲ್ಲವೆ ಕೋಟಿ ಬಿಲ್ವಾರ್ಚನೆ, ಮಹಾ ಮಂಗಳಾರುತಿ ಮುಂತಾದ ವಿಧಾನಗಳಿಂದ ಅತ್ಯಂತ ವೈಭವಪೂರ್ಣವಾಗಿ ತನ್ನಿಷ್ಟಲಿಂಗವನ್ನರ್ಚಿಸುವುದೇ ಬಾಹ್ಯಭಕ್ತಿಯೆನಿಸಿಕೊಳ್ಳುವುದು. ಈ ಪೂಜಾವಿಧಾನದಲ್ಲಿ ಬಾಹ್ಯ ಸಾಮಗ್ರಿಗಳಿಗೆ ಅತ್ಯಧಿಕ ಮಹತ್ತ್ವವನ್ನು ಕೊಡಲಾಗಿರೋಣದರಿಂದ ಇದು ಬಾಹ್ಯಭಕ್ತಿಯೆಂಬುದಾಗಿ ಕರೆಯಲ್ಪಡುತ್ತದೆ. ಇಂತಹ ಪೂಜಾವಿಧಾನಕ್ಕೆ ಭಕ್ತರು ಆಕರ್ಷಿತರಾಗಿ ಇದರಲ್ಲಿ ಪಾಲ್ಗೊಳ್ಳುತ್ತಾರೆ. ಹೀಗೆ ಆತ್ಮಕಲ್ಯಾಣದ ಜೊತೆಗೆ ಲೋಕಸಂಗ್ರಹವನ್ನೂ ಮಾಡಿ ಜನರಿಗೆ ಭಕ್ತಿಮಾರ್ಗವನ್ನು ತಿಳಿಸಿಕೊಟ್ಟು ಅವರನ್ನು ಆ ಮಾರ್ಗದತ್ತ ಪ್ರವೃತ್ತರನ್ನಾಗಿಸಲು ಇದು ಹೆಚ್ಚು ಉಪಕಾರಿ ಯಾದಕಾರಣ ವೀರಶೈವಧರ್ಮದ ಮಹಾಚಾರ್ಯರು ಹಾಗೂ ಶಿವಾಚಾರ್ಯರು ಇದಕ್ಕೆ ಮಹತ್ವವನ್ನು ಕೊಟ್ಟು ಲೋಕೋದ್ಧಾರ ಕಾರ್ಯವನ್ನು ಮಾಡುತ್ತ ಬಂದಿದ್ದಾರೆ.

ಇಲ್ಲಿಯವರೆಗೆ ವಿವರಿಸಿದ ಬಹಿರಂಗ ಪೂಜೆಯೇ ಮುಖ್ಯಪೂಜೆಯಾಗಿರದೆ ಅಂತರಂಗಪೂಜೆಯು ಅತ್ಯಂತ ಪ್ರಮುಖವಾದುದಾಗಿದೆ. ಈ ಪೂಜೆಯಲ್ಲಿ ಬಾಹ್ಯಾಡಂಬರಕ್ಕೆ ಪ್ರಾಧಾನ್ಯತೆಯನ್ನು ಕೊಡಲಾಗಿರುವುದಿಲ್ಲ. ಶಿವಭಕ್ತನಾದವನು ಸದ್ಗುರುವು ಉಪದೇಶ ಮಾಡಿದ ರೀತಿಯಲ್ಲಿ ತನ್ನ ಇಷ್ಟಲಿಂಗದಲ್ಲಿ ತನ್ನ ಪ್ರಾಣವನ್ನು ಹಾಗೂ ಪ್ರಾಣದಲ್ಲಿ ಶಿವಕಲಾಯುಕ್ತವಾದ ಶಿವಲಿಂಗವನ್ನು ಸಮರಸಮಾಡಿಕೊಂಡು ಪ್ರಾಣಲಿಂಗಿ ಮತ್ತುಲಿಂಗಪ್ರಾಣಿಯಾಗಿ ತದೇಕಚಿತ್ತದಿಂದ ಆ ಲಿಂಗವನ್ನು ಅನುಸಂಧಾನ ಮಾಡುವುದೇ ಅಭ್ಯಂತರ ಅಥವಾ ಅಂತರಂಗ ಭಕ್ತಿಯು. ಶಿವಯೋಗಿಗಳಾದವರು ಇಂತಹ ಶಿವಪೂಜೆಗೆ ಅತ್ಯಧಿಕ ಮಹತ್ವವನ್ನು ಕೊಟ್ಟಿದ್ದಾರೆ. ಈ ವಿಧವಾದ ಲಿಂಗಾರ್ಚನೆಯನ್ನು ಮಾಡಿದಾಗ ಜೀವಿಗಳ ಅನೇಕ ಜನ್ಮಗಳ ಕರ್ಮಬೀಜಗಳು ಹುರಿದುಹೋಗುತ್ತವೆ. ಹುರಿದ ಬೀಜವು ಪುನಃ ಮೊಳಕೆ ಒಡೆದು ಫಲವನ್ನೀಯಲು ಅಸಮರ್ಥವಾಗುವಂತೆ ಈ ಪೂಜಕರ ಕರ್ಮಗಳೂ ಸಹ ಪುನರ್ಜನ್ಮಕ್ಕೆ ಕಾರಣಗಳಾಗ ಲಾರವು. ಅಂದರೆ ಈ ಅಂತರಂಗ ಪೂಜಕನು ಜನನ ಮರಣಾತ್ಮಕವಾದ ಸಂಸಾರಚಕ್ರದಲ್ಲಿ ಸಿಲುಕಿ ಬೀಳಲಾರನೆಂಬುದನ್ನು ಪ್ರತಿಪಾದಿಸಿ ಪೂಜ್ಯಪಾದರು ಅಂತರಂಗ ಶಿವಭಕ್ತಿಯ ಶ್ರೇಷ್ಠತೆಯನ್ನು ಕೊಂಡಾಡಿದ್ದಾರೆ.

ಇನ್ನು ಇಂತಹ ಶಿವಭಕ್ತಿಯು ಸಾಧಕರಿಗೆ ದೊರೆಯಬೇಕಾದರೆ ಶಿವಾನುಗ್ರಹವೇ ಕಾರಣವೆಂಬುದನ್ನು ತಿಳಿಸಲೋಸುಗ ಪೂಜ್ಯಪಾದರು ಮತ್ತೆ-

ಬಹುನಾತ್ರ ಕಿಮುಕ್ತೇನ ಗುಹ್ಯಾದ್ ಗುಹ್ಯತರಾ ಪರಾ ।
ಶಿವಭಕ್ತಿರ್ನಸಂದೇಹಸ್ತಯಾ ಯುಕ್ತೋ ವಿಮುಚ್ಯತೇ ॥

ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥

ಪ್ರಸಾದಪೂರ್ವಿಕಾ ಯೇಯಂ ಭಕ್ತಿರ್ಮುಕ್ತಿವಿಧಾಯಿನೀ ।
ನೈವ ಸಾ ಶಕ್ಯತೇ ಪ್ರಾಪ್ತುಂ ನರೈರೇಕೇನ ಜನ್ಮನಾ ॥

ಅನೇಕ ಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಮ್ ।
ವಿರಕ್ತಾನಾಂ ಪ್ರಬುದ್ಧಾನಾಂ ಪ್ರಸೀದತಿ ಮಹೇಶ್ವರ ಃ ॥

ಪ್ರಸನ್ನೇ ಸತಿ ಮುಕ್ತೋಽಭೂನ್ಮುಕ್ತಃ ಶಿವಸಮೋಭವೇತ್ ।
ಅಲ್ಪಭಕ್ತ್ಯಾಪಿ ಯೋ ಮರ್ತ್ಯಸ್ತಸ್ಯ ಜನ್ಮತ್ರಯಾತ್ಪರಮ್ ॥

ನ ಯೋನಿಯಂತ್ರಪೀಡಾ ವೈ ಭವೇನ್ನೈವಾತ್ರ ಸಂಶಯ ಃ ।
ಸಾಂಗಾ ನ್ಯೂನಾ ಚ ಯಾ ಸೇವಾ ಸಾ ಭಕ್ತಿರಿತಿ ಕಥ್ಯತೇ ॥

(ಸಿ.ಶಿ. ೯; ೧೦–೧೫)

ಈ ವಿಧವಾಗಿ ಉಪದೇಶಿದ್ದಾರೆ. ತಾತ್ಪರ್ಯವೇನೆಂದರೆ, ಈ ಅಂತರಂಗ ಭಕ್ತಿಯ ಬಗ್ಗೆ ಹಲವು ಮಾತುಗಳಿಂದ ಪ್ರಯೋಜನವೇನು ? ಈ ಭಕ್ತಿಯು ಸರ್ವೋತ್ಕೃಷ್ಟ ವಾದುದು ಮತ್ತು ಅತ್ಯಂತ ಗೌಪ್ಯವಾದುದೂ ಆಗಿದೆ. ಈ ಭಕ್ತಿಸಂಪನ್ನನು ಮನ–ಮಾಯಾದಿ ಪಾಶಗಳಿಂಧ ಬಿಡುಗಡೆ ಹೊಂದಿ ಮುಕ್ತಿಯನ್ನು ಪಡೆಯುವುದರಲ್ಲಿ ಯಾವ

ಸಂಶಯವೂ ಇಲ್ಲ. ಈ ಅಂತರಂಗ ಭಕ್ತಿಯು ಸಾಧಕನಲ್ಲಿ ಮೂಡಬೇಕಾದರೆ ಶಿವಾನುಗ್ರಹವೇ ಮೂಲಕಾರಣವು. ಶಿವಾನುಗ್ರಹ ಮತ್ತು ಶಿವಭಕ್ತಿಗಳಲ್ಲಿ ಬೀಜಾಂಕುರ ಸಂಬಂಧವನ್ನು ಪ್ರತಿಪಾದಿಸಲಾಗಿದೆ. ಬೀಜದಿಂದ ಅಂಕುರ, ಅಂಕರದಿಂದ ಪುನಃ ಬೀಜ ಉತ್ಪನ್ನವಾಗುವಂತೆ ಶಿವಾನುಗ್ರಹದಿಂದ ಭಕ್ತಿಯು, ಭಕ್ತಿಯಿಂದ ಮತ್ತೆ ಶಿವಾನುಗ್ರಹವು, ಹೀಗೆ ಇವೆರಡು ಪರಸ್ಪರ ಪೂರಕಗಳಾಗಿರುತ್ತವೆ. ಶಿವಾನುಗ್ರಹದಿಂದ ಲಭಿಸುವ ಮತ್ತು ಮುಕ್ತಿದಾಯಕವಾದ ಈ ಶಿವಭಕ್ತಿಯು ಮನುಷ್ಯರಿಗೆ ಒಂದೇ ಜನ್ಮದಲ್ಲಿ ಪಡೆಯಲಾಗುವುದಿಲ್ಲ. ಅನೇಕ ಜನ್ಮ-ಜನ್ಮಾಂತರಗಳಲ್ಲಿ ಶಿವಧ್ಯಾನ-ಶಿವಪೂಜಾದಿಗಳನ್ನಾಚರಿಸಿ, ಪರಿಶುದ್ಧ ಚಿತ್ತರಾಗಿರುವ, ಶ್ರುತಿ ಹಾಗೂ ಸ್ಮೃತಿಗಳಲ್ಲಿ ಹೇಳಲ್ಪಟ್ಟ ನಿತ್ಯ ಮತ್ತು ನೈಮಿತ್ತಿಕ ಕರ್ಮಗಳನ್ನಾಚರಿಸುವ, ಕಾಮ್ಯಕರ್ಮಗಳಲ್ಲಿ ವೈರಾಗ್ಯಭಾವನೆಯುಳ್ಳ ಮತ್ತು ಶಿವ ಜ್ಞಾನಸಂಪನ್ನರಾದವರಿಗೆ ಶಿವಾನುಗ್ರಹವು ಉಂಟಾಗುವುದು. ಈ ವಿಧವಾಗಿ ಶಿವಾನುಗ್ರಹರೂಪ ಶಿವಪ್ರಸಾದವನ್ನು ಪಡೆದವರಿಗೇನೇ ಈ ಅಂತರಂಗಭಕ್ತಿಯು ದೊರಕೊಳ್ಳುವುದು. ಇಂತಹ ಅಂತರಂಗ ಭಕ್ತಿಗೆ ಶಿವನು ಕೂಡಲೇ ಪ್ರಸನ್ನನಾಗುವನು. ಅವನ ಪ್ರಸನ್ನತೆಯು ಪ್ರಾಪ್ತವಾದೊಡನೆ ಜೀವನು ಶಿವಸಮಾನವಾಗಿ ಮುಕ್ತಿಯನ್ನು ಪಡೆಯುವನು. ಇನ್ನು ಈ ವಿಲಕ್ಷಣವಾದ ಅಂತರಂಗ ಭಕ್ತಿಯಿಲ್ಲದ ಅಲ್ಪ ಭಕ್ತಿ ಸಂಪನ್ನರಾದ ಉಳಿದ ಶಿವಭಕ್ತರಿಗೆ ಮೂರು ಜನ್ಮಗಳ ನಂತರ ಮುಕ್ತಿಯು ಪ್ರಾಪ್ತವಾಗುವದು. ಈ ಪೂರ್ವದಲ್ಲಿ ಹೇಳಲ್ಪಟ್ಟ ನವವಿಧಭಕ್ತಿಗಳಿಂದ ಪರಿಪುಷ್ಟವಾದ ಭಕ್ತಿಯೇ ಪೂರ್ಣ ಭಕ್ತಿಯು. ಅವುಗಳಲ್ಲಿ ಯಾವುದಾದರೊಂದು ನ್ಯೂನವಾದರೆ ಅದಕ್ಕೆ ಅಲ್ಪಭಕ್ತಿಯೆಂದು ಕರೆಯುತ್ತಾರೆ. ಈ ವಿಧವಾಗಿ ನವವಿಧಭಕ್ತಿಗಳಿಂದೊಡಗೂಡಿದ ಪೂರ್ಣ ಭಕ್ತಿಸಂಪನ್ನನಾದ ವೀರಶೈವನಿಗೆ ಒಂದೇ ಜನ್ಮದಲ್ಲಿ ಮುಕ್ತಿ ದೊರೆತರೆ ಈ ಭಕ್ತಿಯಲ್ಲಿ ನ್ಯೂನತೆಯುಳ್ಳ ಇತರ ಶೈವರಿಗೆ ಮೂರು ಜನ್ಮಗಳಲ್ಲಿ ಮುಕ್ತಿದೊರೆಯುವುದಾಗಿ ತಿಳಿದುಕೊಳ್ಳಬೇಕು.

ವೀರಶೈವ ಭಕ್ತನು ಇತರ ಶಿವಭಕ್ತರಿಗಿಂತ ವಿಲಕ್ಷಣನಾದವನೆಂದು ಪೂಜ್ಯರಿಲ್ಲಿ ತಿಳಿಸಿಕೊಟ್ಟಿದ್ದಾರೆ.

ಏಕೇನ ಜನ್ಮನಾಮುಕ್ತಿರ್ವೀರಾಣಾಂತು ಮಹೇಶ್ವರೀ ।
ಇತರೇಷಾಂತು ಶೈವಾನಾಂ ಮುಕ್ತಿರ್ಜನ್ಮತ್ರಯೇ ಭವೇತ್ ॥

(ವೀರಾಗಮ)

ಎಂಬ ಆಗಮೋಕ್ತಿಯಂತೆ ವೀರಶೈವರಾದವರಿಗೆ ಒಂದೇ ಜನ್ಮದಲ್ಲಿ ಮುಕ್ತಿಯು ಹೇಳಲ್ಪಟ್ಟಿದೆ. ಇತರ ಶೈವರಿಗೆ ಅದು ಮೂರು ಜನ್ಮದಲ್ಲಿ ದೊರೆಯುವಂಥಾದ್ದಾಗಿದೆ. ಇತರ ಶೈವರು ಶಿವಲಿಂಗವನ್ನು ವೇದಿಕೆಯ ಮೇಲೆ ಸ್ಥಾಪಿಸಿ ಪೂಜೆಮಾಡಿದರೆ ವೀರಶೈವರಾದವರು ಹೃದಯ ವೇದಿಕೆಯ ಮೇಲೆ ಅದನ್ನು ಸದಾ ಸ್ಥಾಪಿಸಿಕೊಂಡು ಅಹಂಗ್ರಹೋಪಾಸನಾಪದ್ಧತಿಯಂತೆ ಆಂತರಂಗಿಕವಾಗಿ ಆ ಲಿಂಗವನ್ನು ಪೂಜಿಸಿ ಲಿಂಗರೂಪರೇ ಆಗೋಣದರಿಂದ ಅವರಿಗೆ ಇದೇ ಜನ್ಮದಲ್ಲಿ ಲಿಂಗಾಂಗ ಸಾಮರಸ್ಯ ರೂಪವಾದ ಮುಕ್ತಿಯು ದೊರೆಯುವುದುಂಟು. ಇನ್ನು ಇತರ ಶೈವರು ಬಹಿರಂಗದಲ್ಲಿ ಆ ಲಿಂಗವನ್ನಿರಿಸಿ ಪೂಜೆ ಮಾಡೋಣದರಿಂದ ಅಂತಃಕರಣಾದಿಗಳು ಶುದ್ಧವಾಗಿ ಮೂರನೇ

ಜನ್ಮಕ್ಕೆ ಪುನಃ ಆತನು ವೀರಶೈವ ಪದ್ಧತಿಯಂತೆ ಶಿವದೀಕ್ಷಾ ಸಂಪನ್ನನಾಗಿ ಅಂತರಂಗ ಭಕ್ತಿಯನ್ನಾಚರಿಸಿ ಮುಕ್ತಿಯನ್ನು ಪಡೆಯುತ್ತಾನೆ. ಆದ್ದರಿಂದ ಮುಕ್ತಿಗೆ ಅಂತರಂಗ ಶಿವಭಕ್ತಿಯೇ ಮೂಲವೆಂಬುದನ್ನು ಇಲ್ಲಿ ಪೂಜ್ಯರು ತಿಳಿಯಪಡಿಸಿದ್ದಾರೆ.

ಈ ಅಂತರಂಗ ಭಕ್ತಿಯು ದೊರೆಯಬೇಕಾದರೆ ಶಿವಾನುಗ್ರಹವು ಬೇಕು ಎಂಬುದನ್ನು ಈ ಪೂರ್ವದಲ್ಲಿ ತಿಳಿಸೋಣವಾಗಿದೆ. ಶಿವನ ಅನುಗ್ರಹವಿದ್ದಾಗ ಭಕ್ತಿಯೋ ? ಭಕ್ತಿಯಿದ್ದಾಗ ಶಿವನ ಅನುಗ್ರಹವೋ ? ಎಂಬುದೊಂದು ಒಡೆಯಲಾರದ ಒಗಟೇ ಸರಿ. ಆದರೂ ಸಹ ಜೀವಾತ್ಮನಲ್ಲಿಯ ಭಕ್ತಿಯು ಮೊದಲು ಬೇಕಾಗುವುದು. ಏಕೆಂದರೆ ಜೀವನು ಭಕ್ತಿಯನ್ನು ಮಾಡದಿದ್ದರೆ ಶಿವನಿಗೇನೂ ಹಾನಿಯಿಲ್ಲ. ಆದರೆ ಶಿವಾನುಗ್ರಹವಿದ್ದರೆ ಜೀವಾತ್ಮನಿಗೆ ಬಹುದೊಡ್ಡ ಹಾನಿಯು. ಆದಕಾರಣ ಶಿವಾನುಗ್ರಹವನ್ನು ಪಡೆಯುವ ನಿಮಿತ್ತಕ್ಕಾಗಿ ಜೀವಾತ್ಮನು ಶಿವನಲ್ಲಿ ಮೊದಲು ಭಕ್ತಿಯನ್ನಿಡಬೇಕು. ಆ ಭಕ್ತಿಯ ಫಲವಾಗಿ ಶಿವನ ಅನುಗ್ರಹವುಂಟಾಗುವುದು. ಈ ಅನುಗ್ರಹದ ಪರಿಣಾಮವಾಗಿ ಜೀವಿಯಲ್ಲಿ ಇನ್ನೂ ಹೆಚ್ಚಿನ ಭಕ್ತಿಯು ಒಡಮೂಡುವುದು. ಅದರ ಫಲವಾಗಿ ಅಂತರಂಗ ಶಿವನ ಹೆಚ್ಚಿನ ಅನುಗ್ರಹವು ಜೀವಾತ್ಮನಿಗೆ ದೊರೆಯುವುದು. ಇದೇ ಪ್ರಕಾರವಾಗಿ ಭಕ್ತಿಯನ್ನು ಬೆಳೆಸುತ್ತ ಬೆಳೆಸುತ್ತ ಅದರಿಂದ ಪ್ರಾಪ್ತವಾದ ಶಿವಾನುಗ್ರಹದ ಫಲವಾಗಿ ಅಂತರಂಗ ಭಕ್ತಿಯು ಉತ್ಪನ್ನವಾಗುವುದು. ಇದುವೇ ಜೀವಾತ್ಮನ ಮುಕ್ತಿಗೆ ಪರಮಕಾರಣವಾಗಿ ಪರಿಣಮಿಸುವುದು.

ಇನ್ನು ಮುಂದೆ ಜಗದ್ಗುರು ರೇಣುಕ ಭಗವತ್ಪಾದರು ಈ ಭಕ್ತಿಯ ತ್ರೈವಿಧ್ಯವನ್ನು ತಿಳಿಸಲೋಸುಗ–

ಸಾ ಪುನರ್ಭಿದ್ಯತೇ ತ್ರೇಧಾ ಮನೋವಾಕ್ಕಾಯಸಾಧನೈಃ ।
ಶಿವರೂಪಾದಿಚಿಂತಾ ಯಾ ಸಾ ಸೇವಾ ಮಾನಸೀ ಸ್ಮೃತಾ ॥

ಜಪಾದಿ ವಾಚಿಕೀ ಸೇವಾ ಕರ್ಮಪೂಜಾ ಚ ಕಾಯಿಕೀ ।
ಬಾಹ್ಯಮಾಭ್ಯಂತರಂ ಚೈವ ಬಾಹ್ಯಾಭ್ಯಂತರಮೇವ ವಾ ॥

ಮನೋವಾಕ್ಕಾಯಭೇದೈಶ್ಚ ತ್ರಿಧಾ ತದ್ಭಜನಂ ವಿದುಃ ।
ಮನೋ ಮಹೇಶಧ್ಯಾನಾಢ್ಯಂ ನಾನ್ಯಧ್ಯಾನರತಂ ಮನಃ ॥

ಶಿವನಾಮರತಾ ವಾಣೀ ವಾಙ್ಮತಾ ಚೈವ ನೇತರಾ ।
ಲಿಂಗೈಃ ಶಿವಸ್ಯ ಚೋದ್ದಿಷ್ಟೈಸ್ತ್ರಿಪುಂಡ್ರಾದಿಭಿರಂಕಿತಃ ॥

ಶಿವೋಪಚಾರನಿರತಃ ಕಾಯಃ ಕಾಯೋ ನ ಚೇತರಃ ।
ಅನ್ಯಾತ್ಮವಿದಿತಂ ಬಾಹ್ಯಂ ಶಂಭೋರಭ್ಯರ್ಚನಾದಿಕಮ್ ॥

ತದೇವತು ಸ್ವಸಂವೇದ್ಯಮಾಭ್ಯಂತರಮುದಾಹೃತಮ್ ।
ಮನೋ ಮಹೇಶಪ್ರವಣಂ ಬಾಹ್ಯಾಂಭ್ಯಂತರಮುಚ್ಯತೇ ॥

(ಸಿ. ಶಿ. ೯ ; ೧೬–೨೧)

ಈ ವಿಧವಾಗಿ ಉಪದೇಶ ಮಾಡಿದ್ದಾರೆ. ತಾತ್ಪರ್ಯವೇನೆಂದರೆ ಈ ಭಕ್ತಿಯು ಮಾನಸಿಕ ಭಕ್ತಿ, ವಾಚಿಕಭಕ್ತಿ ಮತ್ತು ಕಾಯಿಕಭಕ್ತಿ ಎಂಬುದಾಗಿ ಮೂರು ಪ್ರಕಾರವಾಗಿರುವುದು.

ತನ್ನ ಮನಸ್ಸಿನಲ್ಲಿ ಶಿವನ ಸ್ವರೂಪಾದಿಗಳನ್ನು ಧ್ಯಾನಿಸುವ ಮಾನಸಿಕ ಸೇವೆಯೇ ಮಾನಸಿಕ ಭಕ್ತಿಯೆಂಬುದಾಗಿ ಕರೆಯಲ್ಪಡುವುದು. ತನ್ನ ವಾಣಿಯಿಂದ ಶಿವಪಂಚಾಕ್ಷರ ಮಂತ್ರದ ಜಪ ಅಥವಾ ಶಿವಸ್ತೋತ್ರಾದಿಗಳ ಪಾಠವನ್ನು ಗೈಯ್ಯುವುದೇ ವಾಚಿಕ ಭಕ್ತಿಯೆನ್ನಿಸಿ ಕೊಳ್ಳುವುದು. ಇದೇ ಪ್ರಕಾರವಾಗಿ ಶರೀರದಿಂದ ಮಾಡಲ್ಪಡುವ ಇಷ್ಟಲಿಂಗಪೂಜಾ ರೂಪವಾದ ಸೇವೆಯೇ ಕಾಯಕ ಭಕ್ತಿಯೆಂಬುದಾಗಿ ಕರೆಯಲ್ಪಡುತ್ತದೆ.

ಈ ತ್ರಿಕರಣ ಭಕ್ತಿಯ ಸ್ವರೂಪವನ್ನು ಇನ್ನಷ್ಟು ಸ್ಪಷ್ಟಪಡಿಸುವುದಕ್ಕಾಗಿ ಪೂಜ್ಯರು ಇಲ್ಲಿ ಪುನಃ ಬಾಹ್ಯ, ಅಭ್ಯಂತರ ಮತ್ತು ಬಾಹ್ಯಾಭ್ಯಂತರಯೆಂಬುದಾಗಿ ಅತಿಸೂಕ್ಷ್ಮಗಳಾದ ವಿಧಾನಗಳನ್ನು ನಿರೂಪಿಸಿದ್ದಾರೆ. ಇವುಗಳಲ್ಲಿ ಅನ್ಯರಿಗೆ ತಿಳಿಯುವ ಹಾಗೆ ಮಾಡುವ ಕಾಯಕಪೂಜೆಯು ಬಾಹ್ಯಕಾಯಿಕ ಪೂಜೆಯೆನಿಸಿಕೊಳ್ಳುವುದು. ಅದಾರಿಗೂ ತಿಳಿಯ ದಂತೆ ನಡೆಯುವ ಕಾಯಿಕಪೂಜೆಯು ಅಭ್ಯಂತರಕಾಯಿಕಪೂಜೆಯೆಂಬುದಾಗಿ ಕರೆಯ ಲ್ಪಡುತ್ತದೆ. ಇದೇ ತೆರನಾಗಿ ನಾವು ಮಾಡುವ ಮಂತ್ರಜಪ ಅಥವಾ ಸ್ತೋತ್ರ ಪಾಠಾದಿಗಳು ಅನ್ಯರಿಗೆ ಶ್ರವಣಗೋಚರವಾಗುತ್ತಿದ್ದರೆ ಅದು ಬಾಹ್ಯವಾಚಿಕ ಪೂಜೆಯು. ಇನ್ನು ಕೇವಲ ಆ ಸ್ತೋತ್ರಾದಿಗಳು ತನಗೆ ಮಾತ್ರ ವೇದ್ಯವಾಗುತ್ತಿದ್ದರೆ ಅದಕ್ಕೆ ಅಂತರಂಗ ವಾಚಿಕ ಪೂಜೆಯೆನ್ನುತ್ತಾರೆ. ಇನ್ನು ವಾಮಹಸ್ತಪೀಠದಲ್ಲಿ ಇಷ್ಟಲಿಂಗವನ್ನಿರಿಸಿಕೊಂಡು ಪೂಜೆಗೆ ಕುಳಿತಾಗ ನಮ್ಮ ಮನಸ್ಸು ಇಷ್ಟಲಿಂಗ ಚಿಂತನೆಯಲ್ಲಿ ಆಸಕ್ತವಾಗಿದ್ದರೆ ಅದು ಬಾಹ್ಯಮಾನಸಿಕ ಪೂಜೆಯು. ಅದರಂತೆ ಆ ಮನಸ್ಸೇ ಅಂತರಂಗದ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಚಿಂತನೆಯಲ್ಲಿ ನಿಮಗ್ನವಾಗಿದ್ದರೆ ಅದಕ್ಕೆ ಅಂತರಂಗ ಮಾನಸಿಕ ಪೂಜೆಯೆಂದು ಕರೆಯುತ್ತಾರೆ. ಇನ್ನು ''ಕಾಕಾಕ್ಷಿಗೋಲಕ ನ್ಯಾಯ''ದಂತೆ ಅಂದರೆ ಕಾಗೆಯ ಒಂದೇ ಆದ ಕಣ್ಣಿನಗೋಲಕವು ಎರಡೂ ಕಣ್ಣುಗಳಲ್ಲಿ ಅತ್ತಿತ್ತ ಓಡಾಡಿ ಕೊಂಡಿರುವಂತೆ ಧ್ಯಾನಕ್ಕೆ ಕುಳಿತಿರುವ ವ್ಯಕ್ತಿಯ ಮನಸ್ಸು ಒಮ್ಮೆ ಇಷ್ಟಲಿಂಗ ಧ್ಯಾನದಲ್ಲಿ ಮತ್ತೊಮ್ಮೆ ಅಂತರಂಗದ ಪ್ರಾಣಲಿಂಗ– ಭಾವಲಿಂಗಗಳ ಧ್ಯಾನದಲ್ಲಿ ಕ್ಷಣಕ್ಷಣಕ್ಕೆ ಮನಸ್ಸು ಸ್ಥಾನಪಲ್ಲಟ ಮಾಡುತ್ತಿದ್ದರೆ ಅದಕ್ಕೆ ಬಾಹ್ಯಾಭ್ಯಂತರ ಮಾನಸಿಕ ಪೂಜೆಯೆಂಬು ದಾಗಿ ಕರೆಯುತ್ತಾರೆ.

ಶಿವಧ್ಯಾನದಲ್ಲಿ ಆಸಕ್ತವಾದ ಮನಸ್ಸೇ ನಿಜವಾದ ಮನಸ್ಸು, ಅನ್ಯ ವಿಷಯಾ ಸಕ್ತವಾದ ಮನಸ್ಸು, ಮನಸ್ಸೇ ಅಲ್ಲ, ಶಿವನಾಮವನ್ನು ಜಪಿಸುವ ವಾಣಿಯೇ ನಿಜವಾದ ವಾಣಿಯು. ಅನ್ಯರ ಸ್ತುತಿಯಲ್ಲಾಸಕ್ತವಾದ ವಾಣಿಯು ವಾಣಿಯೇ ಅಲ್ಲ, ಇದೇ ಪ್ರಕಾರ ವಾಗಿ ಶಿವಲಾಂಛನಗಳಾದ ಶಿವಲಿಂಗ, ರುದ್ರಾಕ್ಷಿ, ತ್ರಿಪುಂಡ್ರಧಾರಣೆಗಳನ್ನು ಮಾಡಿದ ದೇಹವೇ ನಿಜವಾದ ದೇಹವು. ಇದಕ್ಕೆ ವ್ಯತಿರಿಕ್ತಗಳಾದ ದೇಹಗಳು, ದೇಹಗಳೇ ಅಲ್ಲ ಎಂಬುದನ್ನು ಪೂಜ್ಯರು ಇಲ್ಲಿ ಒತ್ತಿ ಹೇಳಿದ್ದಾರೆ. ಪೂಜ್ಯರ ಆಶಯದ ಪ್ರಕಾರ ಶರೀರ, ವಾಣಿ ಹಾಗೂ ಮನಸ್ಸುಗಳು ಸಾರ್ಥಕಗಳಾಗಬೇಕಾದರೆ, ಅವುಗಳನ್ನು ಶಿವಸೇವೆಯಲ್ಲಿ ಆಸಕ್ತವಾದ ವಾಣಿ ಹಾಗೂ ಶಿವಧ್ಯಾನದಲ್ಲಿ ತಲ್ಲೀನವಾದ ಮನಸ್ಸು ಇವುಗಳು ಶಿವಕೃಪೆಯಿಂದ ಸಾರ್ಥಕಗಳಾಗಿ ಸಾಧಕನಿಗೆ ಸದ್ಗತಿಯ ಸಾಧನಗಳಾಗಿರುತ್ತವೆ. ಹೀಗೆ ಈ ತ್ರಿಕರಣಗಳು ಯಾರಿಗೆ ಶಿವಪೂಜಾದಿಗಳಿಗೆ ಶ್ರೇಷ್ಠ ಸಾಧನಗಳಾಗುವುವೋ ಅವರು ತಮ್ಮ ಮಾನವ ಜೀವನವನ್ನು ಪಾವನಗೊಳಿಸಿಕೊಂಡು ಪರಮ ಕೈವಲ್ಯವನ್ನು ಪಡೆದು ಕೊಳ್ಳುತ್ತಾರೆ.

ಕಾಯ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳು ಭಗವದರ್ಚನೆಗಾಗಿಯೇ ಮಾನವನಿಗೆ ದೊರೆತವುಗಳಾಗಿವೆ. ಈ ತ್ರಿಕರಣಗಳನ್ನು ಪರಿಶುದ್ಧವಾಗಿಟ್ಟುಕೊಂಡಾಗಲೇ ಅವುಗಳಿಂದ ಶಿವಾರಾಧನೆಯು ಸಾಧ್ಯವಾಗಬಲ್ಲುದಲ್ಲದೆ ಶಿವಕೃಪೆ ಯನ್ನೂ ಸಹ ಪಡೆಯಲನುಕೂಲವಾಗುವುದು. ಅನೇಕ ಜನ್ಮಗಳ ದುಷ್ಟ ಸಂಸ್ಕಾರಗಳ ಮೂಲಕ ಈ ತ್ರಿಕರಣಗಳು ದೋಷಯುಕ್ತಗಳಾಗಿವೆ. ಹೀಗೆ ತ್ರಿಕರಣಗಳ ದೋಷಗಳ ಪರಿಣಾಮ ವಾಗಿಯೇ ಜೀವಿಗಳಿಗೆ ಶಿವನೊಲುಮೆಯುಂಟಾಗದು. ಅಂತೆಯೇ ಜೀವಿಗಳ ಮೂಲಕ ಈ ತ್ರಿಕರಣಗಳು ದೋಷಯುಕ್ತಗಳಾಗಿವೆ. ಹೀಗೆ ತ್ರಿಕರಣಗಳ ದೋಷಗಳ ಪರಿಣಾಮ ವಾಗಿಯೇ ಜೀವಿಗಳಿಗೆ ಶಿವನೊಲುಮೆಯುಂಟಾಗದು. ಅಂತೆಯೇ ನಿಜಗುಣ ಶಿವಯೋಗಿಗಳು 'ಕೈವಲ್ಯಪದ್ಧತಿ'ಯ ನೀತಿಕ್ರಿಯಾಚರ್ಯಸ್ಥಲದಲ್ಲಿ– ''ಎಂತೊಲಿ ವನೋ ತನಗಿನ್ನೆಂತೊಲಿವನೋ ಕರಣತ್ರಯದ ದೋಷಮಿರೆ ಕಂತುಕಾಲಪುರವೈರಿ ಗುರು ಶಂಭುಲಿಂಗಾ'' ಎಂಬ ಈ ಪದ್ಯದಲ್ಲಿ ಕರಣತ್ರಯಗಳ ದೋಷಗಳನ್ನರುಹಿ ಅವುಗಳಿದ್ದರೆ ಹೇಗೆ ತಾನೆ ಶಿವಕೃಪೆಯುಂಟಾದೀತು ? ಎಂಬುದಾಗಿ ಪ್ರಶ್ನಿಸಿದ್ದಾರೆ. ಅಲ್ಲಿ ಅವರೇ ಹೇಳಿದಂತೆ ಪರವಧುವಿನಕೂಟ, ಅನ್ಯರವಿತ್ತಾಪಹರಣ, ಅಭಕ್ಷಸೇವನೆ ಮತ್ತು ಹಿಂಸೆಗಳು, ಕಾಯದಲ್ಲಿಯ ದೋಷಗಳು ಅದರಂತೆ ಪುಸಿ, ಅನುಚಿತನುಡಿ, ನಿಷ್ಠುರತ್ವ, ಪೈಶೂನ್ಯತೆಗಳೆಂಬವುಗಳು ವಾಣಿಯ ದೋಷಗಳು. ಅದೇ ಪ್ರಕಾರವಾಗಿ ಜನರೊಲಿಯದ ಕಾರ್ಯದ ಬಗ್ಗೆ ಅಭಿರುಚಿ, ಅನಿಷ್ಟಚಿಂತನೆ, ಅನ್ಯರ ಧನ–ಸತಿಯರ ಕಾಂಕ್ಷೆ ಇವು ಮನಸ್ಸಿನ ದೋಷಗಳೆಂಬುದಾಗಿ ತಿಳಿಸಿದ್ದಾರೆ.

ಈ ತ್ರಿವಿಧ ದೋಷಗಳಲ್ಲಿ ಶಾರೀರಿಕ ದೋಷದಿಂದ ಪಾಮರಜನ್ಮವೂ, ವಾಣಿಯ ದೋಷದಿಂದ ಪಶುಪಕ್ಷಿಯ ಜನ್ಮವೂ ಮತ್ತು ಮಾನಸಿಕ ದೋಷದಿಂದ ಪಾಪ ಯೋನಿಯು ಪ್ರಾಪ್ತವಾಗುವದೆಂಬುದನ್ನು ಶ್ರೀಮನ್ನಿಜಗುಣ ಶಿವಯೋಗಿಗಳು ತಿಳಿಯ ಪಡಿಸಿದ್ದಾರೆ. ಈ ರೀತಿಯಾಗಿ ಈ ದೋಷಗಳು ಮನುಷ್ಯನ ಪತನಕ್ಕೆ ಕಾರಣ ಗಳಾಗಿರುತ್ತವೆ. ಪೂರ್ವದಲ್ಲಿ ಹೇಳಿದ ತ್ರಿವಿಧಭಕ್ತಿಗಳಿಂದ ಇವುಗಳನ್ನು ಶುದ್ಧೀಕರಿಸಿ ಕೊಂಡಾಗಲೇ ಶಿವಕೃಪೆಯು ಪ್ರಾಪ್ತವಾಗುವದೆಂಬುದನ್ನು ತಿಳಿದುಕೊಂಡು ಪ್ರತಿಯೊಬ್ಬರೂ ತ್ರಿಕರಣಪೂರ್ವಕವಾಗಿ ಬಾಹ್ಯ, ಅಭ್ಯಂತರ ಮತ್ತು ಬಾಹ್ಯಾಭ್ಯಂತರ ಭಕ್ತಿಗಳನ್ನಾಚರಿಸಿ ತಮ್ಮ ಜೀವನವನ್ನು ಪಾವನಮಾಡಿಕೊಳ್ಳಬೇಕೆಂಬುದಾಗಿ ತಿಳಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೦ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)



# ಭಕ್ತಮಾರ್ಗಕ್ರಿಯಾಸ್ಥಲ

ಗುರುಭಕ್ತಿ ಸಂಪನ್ನರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತ್ರಿವಿಧ ಭಕ್ತಿಗಳ ಮಾರ್ಗವನ್ನು ತಿಳಿಯಪಡಿಸಿ ಇನ್ನು ಮುಂದೆ ಪ್ರತಿಯೊಬ್ಬ ಶಿವಭಕ್ತನು ಆಚರಿಸಲೇಬೇಕಾದ ಶಿವಪಂಚ ಯಜ್ಞಗಳನ್ನು ಕುರಿತು–

ಪಂಚಧಾ ಕಥ್ಯತೇ ಸದ್ಭಿಸ್ತದೇವ ಭಜನಂ ಪುನಃ ।
ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂ ಚೇತ್ಯನುಪೂರ್ವಕಮ್ ॥

ಶಿವಾರ್ಥೇ ದೇಹಸಂಶೋಷಸ್ತಪಃ ಕೃಚ್ಛ್ರಾದಿ ನೋ ಮತಮ್ ।
ಶಿವಾರ್ಚಾ ಕರ್ಮ ವಿಜ್ಞೇಯಂ ಬಾಹ್ಯಂ ಯಾಗಾದಿ ನೋಚ್ಯತೇ ॥

ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ವಾ ।
ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಮ್ ॥

ಧ್ಯಾನಂ ಶಿವಸ್ಯ ರೂಪಾದಿಚಿಂತಾ ನಾತ್ಮಾದಿಚಿಂತನಮ್ ।
ಶಿವಾಗಮಾರ್ಥ ವಿಜ್ಞಾನಂ ಜ್ಞಾನಂ ನಾನ್ಯಾರ್ಥವೇದನಮ್ ॥

ಇತಿ ಪಂಚಪ್ರಕಾರೋಽಯಂ ಶಿವಯಜ್ಞಃ ಪ್ರಕೀರ್ತಿತಃ ।
ಅನೇನ ಪಂಚಯಜ್ಞೇನ ಯಃ ಪೂಜಯತಿ ಶಂಕರಮ್ ॥

ಭಕ್ತ್ಯಾ ಪರಮಯಾ ಯುಕ್ತಃ ಸ ವೈ ಭಕ್ತ ಇತೀರಿತಃ ।
ಪೂಜನಾಚ್ಛಿವಭಕ್ತಸ್ಯ ಪುಣ್ಯಾ ಗತಿರವಾಪ್ಯತೇ ॥

(ಸಿ. ಶಿ. ೬; ೨೨–೨೭)

ಈ ವಿಧವಾಗಿ ಉಪದೇಶಿಸಿದ್ದಾರೆ. ಪೂಜ್ಯರ ಉಪದೇಶದ ಪ್ರಕಾರ ವೀರಶೈವ ಸಿದ್ಧಾಂತದಲ್ಲಿ ಪಂಚವಿಧ ಪೂಜಾಪ್ರಕಾರವು ಅಥವಾ ಶಿವಪಂಚಯಜ್ಞವು ಪ್ರತಿಪಾದಿಸಲ್ಪಟ್ಟಿದೆ. ತಪಸ್ಸು, ಕರ್ಮ, ಜಪ, ಧ್ಯಾನ ಮತ್ತು ಜ್ಞಾನವೆಂಬವುಗಳೇ ಪಂಚಯಜ್ಞಗಳು.

೧) ತಪೋಯಜ್ಞ :

ತಪಸ್ಸೆಂದರೆ ಶರೀರವನ್ನು ದಂಡಿಸುವುದು ಎಂದರ್ಥ. ಯೋಗಶಾಸ್ತ್ರದಲ್ಲಿ ಶರೀರ ದಂಡನೆಯ ಅನೇಕ ವಿಧಾನಗಳು ಪ್ರತಿಪಾದಿಸಲ್ಪಟ್ಟಿವೆ. ಅವುಗಳಲ್ಲಿ ಹಸಿವೆ, ನೀರಡಿಕೆ ಮತ್ತು ಶೀತೋಷ್ಣಾದಿ ದ್ವಂದ್ವಗಳನ್ನು ಸಹನಮಾಡುವುದು. ಕಾಷ್ಠಮೌನ, ಆಕಾರಮೌನಗಳನ್ನಾಚರಿಸುವುದು ಹಾಗೂ ಕೃಚ್ಛ್ರ, ಚಾಂದ್ರಾಯಣಾದಿ ವ್ರತಗಳನ್ನು ಪಾಲಿಸುವುದು ಈ ಮುಂತಾದ ಆಚರಣೆಗಳು ಪ್ರಸಿದ್ಧವಾದವುಗಳಾಗಿವೆ.

ತ್ರಿಕರಣಶುದ್ಧಿಗಾಗಿ ತಪಸ್ಸನ್ನಾಚರಿಸುವಾಗ ತನಗುಂಟಾಗುವ ಹಸಿವೆ, ನೀರಡಿಕೆಗಳನ್ನು ಸಹಿಸಿಕೊಳ್ಳಬೇಕಾಗುವುದು. ಯಾವಾಗಲೂ ಅಶನ–ವಸನಗಳ ಆಲೋಚನೆಯಲ್ಲಿ ಮನುಷ್ಯನು ಆತ್ಮಶುದ್ಧಿಯನ್ನು ಸಾಧಿಸಲಾರ, ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು– ''ಊಟಕ್ಕೆ ವಿಷಯಕ್ಕೆ ಮರುಗುತಿಪ್ಪಾತಂಗೆ ಕೂಟವಪ್ಪುದೇ ಗಣ ಪದದೊಳು'' ಎಂಬುದಾಗಿ ಹೇಳಿ ಶಿವಗಣ ಪದವಿಯು ದೊರೆಯಬೇಕಾದರೆ ಅಶನ–ವಸನಗಳ ಚಿಂತೆಯನ್ನು ಬಿಟ್ಟು ಶಿವಚಿಂತನೆಯನ್ನು ಮಾಡಲು ಉಪದೇಶಿಸಿದ್ದಾರೆ. ಆದ್ದರಿಂದ ಸಾಧಕನಾದವನು ಅವುಗಳ ಬಾಧೆಯನ್ನು ಸಹಿಸಲೇಬೇಕಾಗುವುದು. ಇದೇ ರೀತಿಯಾಗಿ ಶರೀರಕ್ಕೆ ಉಂಟಾಗುವ ಶೀತೋಷ್ಣ ದ್ವಂದ್ವಗಳನ್ನೂ ಸಹ ಸಹಿಸಿಕೊಳ್ಳಬೇಕಾಗುವುದು. ಕೆಲವು ಜನ ತಪಸ್ವಿಗಳು ಚಳಿಗಾಲದಲ್ಲಿ ನೀರಿನಲ್ಲಿ ಕುಳಿತು, ಬೇಸಿಗೆಯ ಬಿಸಿಲಿನಲ್ಲಿ ಪಂಚಾಗ್ನಿಗಳ ಮಧ್ಯೆ ಅಂದರೆ ತಾನು ಕುಳಿತ ಸ್ಥಾನದಿಂದ ಐದು ಫೂಟಿನ ಅಂತರದ ಮೇಲೆ ನಾಲ್ಕೂ ದಿಕ್ಕಿಗೆ ನಾಲ್ಕು ಅಗ್ನಿಕುಂಡಗಳನ್ನು ತಯಾರಿಸಿಕೊಂಡು ಅವುಗಳಲ್ಲಿ ಆಕಳಕುಳ್ಳಿನ ಬೆಂಕಿಯನ್ನು ಹೊತ್ತಿಸಿಕೊಂಡು ಈ ನಾಲ್ಕು ಅಗ್ನಿಗಳ ಝಳ ಮತ್ತು ಮೇಲಿನ ಬಿಸಿಲಿನಬೇಗೆ ಹೀಗೆ ಈ ಪಂಚಾಗ್ನಿಗಳ ತಾಪವನ್ನು ಸಹನೆಮಾಡುತ್ತ, ತಪಸ್ಸು ಮಾಡಿದ್ದನ್ನು ಕೇಳುತ್ತೇವೆ. 'ಕುಮಾರಸಂಭವ' ಮಹಾಕಾವ್ಯದಲ್ಲಿ ಕಾಳಿದಾಸನು ಪಾರ್ವತಿಯು ಮಾಡಿದ ತಪಸ್ಸನ್ನು ಇದೇ ರೀತಿಯಾಗಿ ವರ್ಣಿಸಿದ್ದಾನೆ. ಇಂತಹ ತಪಶ್ಚರ್ಯೆಗಳು ಮನುಷ್ಯನ ಸಹನಶಕ್ತಿಯನ್ನು ಬೆಳೆಯಿಸಿಕೊಳ್ಳಲು ಸಹಾಯಕಗಳಾಗಿರುತ್ತವೆ.

ಕೆಲವು ಜನ ತಪಸ್ವಿಗಳು ಈ ದ್ವಂದ್ವ ಸಹನಾತ್ಮಕವಾದ ತಪಸ್ಸನ್ನಾಚರಿಸುವುದರ ಜೊತೆಗೆ ವಾಣಿಯನ್ನು ನಿಯಂತ್ರಣಗೊಳಿಸಿಕೊಳ್ಳುವುದಕ್ಕಾಗಿ ಮೌನವ್ರತವನ್ನೂ ಸಹ ಪರಿಪಾಲಿಸುವುದುಂಟು. ಇದು ಕಾಷ್ಠಮೌನ ಹಾಗೂ ಆಕಾರಮೌನ ಎಂದು ಎರಡು ವಿಧವಾಗಿ ಇರುತ್ತದೆ. ಯಾವುದೇ ಪ್ರಕಾರದ ಚೇಷ್ಟೆಗಳಿಂದಲೂ ತನ್ನ ಇಂಗಿತವನ್ನು ಪ್ರಕಟಪಡಿಸದಿರುವಿಕೆಯೇ ಕಾಷ್ಠಮೌನವು.ಇನ್ನು ಕೇವಲ ವಾಗ್ವ್ಯವಹಾರವನ್ನು ಮಾತ್ರ ನಿರೋಧಿಸುವುದು ಆಕಾರಮೌನವು. ಈ ಆಕಾರಮೌನಿಯು ಅವಶ್ಯಕತೆಯೆನಿಸಿದಾಗ ಬರೆದಾಗಲಿ ಅವಯವಗಳ ಚೇಷ್ಟೆಯಿಂದಾಗಲಿ ತನ್ನ ಇಂಗಿತವನ್ನು ಪ್ರಕಟಪಡಿಸುತ್ತಾನೆ. ಬಾಹ್ಯದಲ್ಲಿ ನೋಡುವವರಿಗೆ, ಆಕಾರದಿಂದ ಮೌನಿಯಂತೆ ತೋರುತ್ತಿದ್ದರೂ, ಮನಸ್ಸಿನ ವ್ಯವಹಾರವು ನಿಲ್ಲದೇ ಇರುವ ಕಾರಣ ಇವನಿಗೆ ಆಕಾರಮೌನಿಯೆಂದು ಕರೆಯುತ್ತಾರೆ. ಮನಸ್ಸಿನ ಇಚ್ಛೆಗಳನ್ನು ನಿಯಂತ್ರಿಸುವುದಕ್ಕಾಗಿಯೇ ಮೌನವ್ರತವನ್ನು ಉಪದೇಶಿಸಲಾಗಿದೆ. ಪ್ರಾರಂಭಿಕಾವಸ್ಥೆಯಲ್ಲಿ ಆಕಾರ ಮೌನದ ಅಭ್ಯಾಸವನ್ನು ಮಾಡುತ್ತ ಕೊನೆಗೆ ಕಾಷ್ಠಮೌನವನ್ನು ಸಾಧಿಸಿ ಮನಸ್ಸು ತನ್ನ ಎಲ್ಲ ಇಚ್ಛೆಗಳನ್ನು ನಿರೋಧಿಸಿಕೊಂಡಾಗ ಆತನು ನಿಜವಾಗಿ ಮೌನಿಯೆಂದು ಕರೆಯಲ್ಪಡುವವನು. ಹೀಗೆ ಮನಸ್ಸಿನ ಮೌನವನ್ನು ಸಾಧಿಸಿದವನೇ ಮುನಿಯು.

ಇದೇ ಪ್ರಕಾರವಾಗಿ ಕೃಚ್ಛ್ರ ಮತ್ತು ಚಾಂದ್ರಾಯಣಗಳೆಂಬ ಅತಿಕಠಿಣಗಳಾದ ವ್ರತಗಳನ್ನು ಪರಿಪಾಲಿಸುವುದೂ ಸಹ ತಪಸ್ಸೆಂಬುದಾಗಿ ಹೇಳಲ್ಪಟ್ಟಿದೆ. ಮನು

ಮಹರ್ಷಿಯು 'ಮನುಸ್ಮೃತಿ' ಗ್ರಂಥದಲ್ಲಿ ಈ ಎರಡೂ ವ್ರತಗಳ ವಿಶ್ಲೇಷಣೆಯನ್ನು ಮಾಡಿರುತ್ತಾನೆ.

ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ ।
ತ್ರ್ಯಹಂ ಪರಂ ಚ ನಾಶ್ನೀಯಾತ್ ಪ್ರಾಜಾಪತ್ಯಂ ಚರೇದ್‌ದ್ವಿಜಃ ॥

(ಮ. ಸ್ಮೃ. ೧೧–೨೧೧)

ಈ ವಿಧವಾಗಿ ಮನುಮಹರ್ಷಿಯು ಕೃಚ್ಛ್ರವ್ರತದ ಸ್ವರೂಪವನ್ನು ತಿಳಿಯಪಡಿಸಿದ್ದಾನೆ. ಈ ವ್ರತದ ಸ್ವರೂಪವನ್ನು ಪರಾಶರ ಮಹರ್ಷಿಯು 'ಮನ್ವರ್ಥಮುಕ್ತಾವಲಿ'ಯೆಂಬ ತಮ್ಮ ಮನುಸ್ಮೃತಿಯ ವ್ಯಾಖ್ಯಾನದಲ್ಲಿ–

ಸಾಯಂ ದ್ವಾತ್ರಿಂಶತಿರ್ಗ್ರಾಸಾಃ ಪ್ರಾತಃ ಷಡ್ವಿಂಶತಿಸ್ತಥಾ ।
ಅಯಾಚಿತೇ ಚತುರ್ವಿಂಶತ್ ಪರಂ ಚಾನಶನಂ ಸ್ಮೃತಮ್ ॥

ಕುಕ್ಕುಟಾಂಡಪ್ರಮಾಣಂಚ ಯಾವಾಂಶ್ಚ ಪ್ರವಿಶೇನ್ಮುಖಮ್ ।
ಏಕಂಗ್ರಾಸಂ ವಿಜಾನೀಯಾಚ್ಛುದ್ಧ್ಯರ್ಥಂ ಗ್ರಾಸಶೋಧನಮ್ ॥

(ಮ. ಸ್ಮೃ. ಮನ್ವರ್ಥ ೧೧–೨೧೧)

ಈ ವಿಧವಾಗಿ ವಿಶ್ಲೇಷಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಕೃಚ್ಛ್ರವ್ರತವನ್ನು ಪರಿಪಾಲಿಸುವ ಸಾಧಕನು ಮೂರುದಿನಗಳವರೆಗೆ ಕೇವಲ ಪ್ರಾತಃಕಾಲದಲ್ಲಿಯೇ ಕೋಳಿಯ ತತ್ತಿಯ ಗಾತ್ರದ ಇಪ್ಪತ್ತಾರು ಅನ್ನದ ತುತ್ತುಗಳನ್ನು ಗ್ರಹಿಸಬೇಕು. ಮುಂದೆ ಮೂರು ದಿನಗಳ ಪರ್ಯಂತರ ಹಗಲೆಲ್ಲ ಉಪವಾಸವಿದ್ದು ಕೇವಲ ಸಾಯಂಕಾಲ ದಲ್ಲಿಯೇ ಕುಕ್ಕುಟಾಂಡ ಪರಿಮಿತದ ಮೂವತ್ತೆರಡು ಅನ್ನದ ತುತ್ತುಗಳನ್ನು ಸ್ವೀಕರಿಸ ಬೇಕು. ಅದರಂತೆ ಮುಂದೆ ಮೂರು ದಿನಗಳವರೆಗೆ ಅಯಾಚಿತ ಅರ್ಥಾತ್ ಬೇಡದೆ ತಾನಾಗಿಯೇ ಬಂದ ಅನ್ನದಲ್ಲಿ ಕುಕ್ಕುಟಾಂಡ ಪರಿಮಿತದ ಇಪ್ಪತ್ನಾಲ್ಕು ತುತ್ತುಗಳನ್ನು ಮಾತ್ರ ಸ್ವೀಕರಿಸಬೇಕು. ಇದರಂತೆ ಮುಂದಿನ ಮೂರು ದಿನಗಳಲ್ಲಿ ಸಂಪೂರ್ಣವಾಗಿ ಉಪವಾಸವನ್ನಾಚರಿಸಬೇಕು. ಇದೇ ಕ್ರಮವನ್ನೇ ಮುಂದುವರೆಸುತ್ತ ಇರುವುದೇ ಕೃಚ್ಛ್ರವ್ರತವು. ಇದಕ್ಕೇನೇ 'ಪ್ರಾಜಾಪತ್ಯ ವ್ರತ'ವೆಂಬುದಾಗಿ ಕೂಡ ಕರೆಯುತ್ತಾರೆ. ಈ ಕೃಚ್ಛ್ರವ್ರತದ ಪರಿಪಾಲನೆಯಿಂದ ಸಾಧಕನ ದೇಹವು ಕೃಶವಾಗುವುದರ ಜೊತೆಗೆ ಪರಿಶುದ್ಧವಾಗುತ್ತದೆ.

ಶರೀರ ಶೋಷಣೆ ಹಾಗೂ ಶುದ್ಧೀಕರಣ ಮಾಡುವ ಮತ್ತೊಂದು ವ್ರತಕ್ಕೇನೇ ಚಾಂದ್ರಾಯಣ ವ್ರತವೆನ್ನುತ್ತಾರೆ. ಮನು ಮಹರ್ಷಿಯು–

ಏಕೈಕಂ ಹ್ರಾಸಯೇತ್ಪಿಂಡಂ ಕೃಷ್ಣೇ ಶುಕ್ಲೇಚ ವರ್ಧಯೇತ್ ।
ಉಪಸ್ಪೃಶಂಸ್ತ್ರಿಷವಣಮೇತಚ್ಚಾಂದ್ರಾಯಣಂ ಸ್ಮೃತಮ್ ॥

(ಮ. ಸ್ಮೃ. ೧೧–೨೨೭)

ಈ ರೀತಿಯಾಗಿ ಆ ವ್ರತದ ವಿಧಾನವನ್ನು ತಿಳಿಸಿದ್ದಾನೆ. ತಾತ್ಪರ್ಯವೇನೆಂದರೆ, ಶುಕ್ಲ ಪಕ್ಷದ ಪ್ರತಿಪದೆಯಿಂದ ಒಂದೊಂದು ತುತ್ತುಗಳನ್ನು ಕ್ರಮವಾಗಿ ಬೆಳೆಸುತ್ತ

ಪೌರ್ಣಿಮೆಯ ದಿನದಂದು ಹದಿನೈದು ತುತ್ತುಗಳ ಭೋಜನವನ್ನು ಮಾಡಬೇಕು. ಅದೇ ಪ್ರಕಾರವಾಗಿ ಮುಂದಿನ ಕೃಷ್ಣ ಪಕ್ಷದಲ್ಲಿ ಪ್ರತಿಪದೆಯಿಂದ ಒಂದೊಂದು ತುತ್ತು ಕಡಿಮೆ ಮಾಡುತ್ತ ಅಮವಾಸ್ಯೆಯ ದಿವಸ ಸಂಪೂರ್ಣವಾಗಿ ಉಪವಾಸವನ್ನಾಚರಿಸುವರು. ಹೀಗೆ ಚಂದ್ರನ ವೃದ್ಧಿ ಮತ್ತು ಹ್ರಾಸದ ಜೊತೆಗೆ ಅನ್ನದ ಕವಲುಗಳ ವೃದ್ಧಿ–ಹ್ರಾಸಗಳನ್ನು ಮಾಡುತ್ತ ಆಚರಿಸುವ ವ್ರತವೇ ಚಾಂದ್ರಾಯಣ ವ್ರತವು.

ಹೀಗೆ ಹಸಿವೆ, ತೃಷೆ ಮತ್ತು ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿಕೊಳ್ಳುವುದು, ಕಾಷ್ಠಮೌನ–ಆಕಾರಮೌನಗಳನ್ನು ಆಚರಿಸುವುದು ಮತ್ತು ಕೃಚ್ಛ್ರ–ಚಾಂದ್ರಾಯಣಾದಿ ವ್ರತಗಳನ್ನು ಪರಿಪಾಲಿಸುವುದು ಇವೇ ಮುಂತಾದ ನಿಯಮಗಳನ್ನು ಪರಿಪಾಲಿಸೋಣದರಿಂದ ಉಂಟಾಗುವ ಶರೀರಶೋಷಣೆಗೇನೆ ತಪಸ್ಸು ಎಂಬುದಾಗಿ ಕರೆದಿದ್ದಾರೆ. ಆದರೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶಿವಪಂಚಯಜ್ಞದಲ್ಲಿ ಹೇಳಿದ ತಪಸ್ಸು ಮೇಲೆ ವರ್ಣಿಸಿದ ತಪಸ್ಸಿಗಿಂತಲೂ ಸ್ವಲ್ಪ ಭಿನ್ನವಾದುದಾಗಿದೆ. ವೀರಶೈವ ಸಾಧಕನು ಇಷ್ಟೊಂದು ಕಷ್ಟ–ಸಾಧ್ಯಗಳಾದ ಅಂತೆಯೇ ಕಠೋರಗಳಾದ ಕೃಚ್ಛ್ರ–ಚಾಂದ್ರಾಯಣಾದಿ ವ್ರತಗಳನ್ನು ಆಚರಿಸಿ ಶರೀರ ಶೋಷಣೆಯನ್ನು ಮಾಡಬೇಕಾಗಿಲ್ಲ. ಆದರೆ ''ಶಿವಾರ್ಥೇ ದೇಹಸಂಶೋಷಃ ತಪಃ ಕೃಚ್ಛ್ರಾದಿ ನೋ ಮತಮ್'' ಎಂಬ ಆಚಾರ್ಯರ ಉಕ್ತಿಗನುಸಾರವಾಗಿ ಶಿವಪೂಜಾ ಸಾಮಗ್ರಿಗಳನ್ನು ಸಂಗ್ರಹಿಸುವಾಗ ಉಂಟಾಗುವ ಕಷ್ಟವನ್ನಾಗಲಿ ಹಾಗೂ ಶಿವಪೂಜಾದಿಗಳನ್ನು ಮಾಡುವಾಗ ಹಾಕಿದ ಪದ್ಮಾಸನಾದಿಗಳಿಂದ ಉಂಟಾಗುವ ತ್ರಾಸನ್ನಾಗಲಿ ಸಹಿಸಿಕೊಳ್ಳುವದೇ ತಪಸ್ಸು. ಇಲ್ಲಿ ಕೃಚ್ಛ್ರ–ಚಾಂದ್ರಾಯಣಾದಿ ವ್ರತಗಳನ್ನು ನಿಷೇಧಿಸಿರೋಣದರಿಂದ ವೀರಶೈವರಿಗೆ ಅವುಗಳನ್ನು ಆಚರಿಸುವ ಅವಶ್ಯಕತೆಯಿರುವುದಿಲ್ಲ.

೨) ಕರ್ಮಯಜ್ಞ :

ಶಿವಪಂಚಯಜ್ಞದಲ್ಲಿ ಎರಡನೆಯದೇ ಕರ್ಮಯಜ್ಞವು. ಕರ್ಮವೆಂದರೆ ಇಲ್ಲಿ ಶಾಸ್ತ್ರವಿಹಿತ ಅನುಷ್ಠಾನವೆಂದರ್ಥ. ಶಾಸ್ತ್ರವಿಹಿತ ಕರ್ಮಗಳು ನಿತ್ಯ, ನೈಮಿತ್ತಿಕ, ಕಾಮ್ಯ ಮತ್ತು ಪ್ರಾಯಶ್ಚಿತ್ತಗಳೆಂಬುದಾಗಿ ಚತುರ್ವಿಧಗಳಾಗಿರುತ್ತವೆ. ಆಯುಷ್ಯ ಪರ್ಯಂತ ತಪ್ಪದೇ ಪ್ರತಿದಿವಸ ಮಾಡುವ ಕರ್ಮಕ್ಕೆ ನಿತ್ಯಕರ್ಮವೆನ್ನುವರು. ಜಯಂತಿ, ಪುಣ್ಯತಿಥಿ ಮುಂತಾದ ನಿಮಿತ್ಯಗಳು ಬಂದೊದಗಿದಾಗ ಮಾತ್ರ ಮಾಡುವ ಕರ್ಮಕ್ಕೆ ನೈಮಿತ್ತಿಕ ಕರ್ಮವೆನ್ನುವರು. ಐಹಿಕ ಹಾಗೂ ಪಾರಲೌಕಿಕ ಕಾಮನೆಗಳ ಪೂರ್ತಿಗಾಗಿ ಆಚರಿಸುವ ಯಜ್ಞಯಾಗಾದಿಗಳಿಗೆ ಕಾಮ್ಯಕರ್ಮವೆನ್ನುವರು. ಇಲ್ಲಿ ಅರಿತೋ ಅರಿಯದೆಯೋ ಉಂಟಾದ ಪಾಪಗಳ ನಿವೃತ್ತಿಗಾಗಿ ಮಾಡುವ ಕರ್ಮಗಳಿಗೆ ಪ್ರಾಯಶ್ಚಿತ್ತ ಕರ್ಮಗಳೆನ್ನುತ್ತಾರೆ. ಇವುಗಳಲ್ಲಿ ನಿತ್ಯಕರ್ಮಗಳನ್ನು ಮಾತ್ರ ಪ್ರತಿಯೊಬ್ಬರೂ ಅವಶ್ಯವಾಗಿ ಆಚರಿಸಬೇಕು. ಇಷ್ಟಲಿಂಗ ಪೂಜೆಯು ವೀರಶೈವರ ನಿತ್ಯ ಕರ್ಮವಾಗಿರುತ್ತದೆ. ಇನ್ನು ವೀರಶೈವರಲ್ಲದವರು ಪ್ರತಿನಿತ್ಯದ ಸಂಧ್ಯಾವಂದನೆಯಲ್ಲಿ ಹೋಮ–ಹವನಾದಿ ಕ್ರಿಯೆಗಳನ್ನು ಮಾಡುತ್ತಿರುತ್ತಾರೆ. ಅವರ ಮುಖ್ಯ ಆರಾಧ್ಯ ದೈವವು ಅಗ್ನಿಯಾಗಿರುವುದರಿಂದ ಅವರಿಗೆ ಅದು ಸರಿಯಾದುದಾದರೂ, ವೀರಶೈವರ ಆರಾಧ್ಯವು ಇಷ್ಟಲಿಂಗವಾಗಿರೋಣದರಿಂದ

ಇಲ್ಲಿ ಲಿಂಗಾರ್ಚನೆಗೇನೆ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಅಂತೆಯೇ ಪೂಜ್ಯರು ಶಿವಲಿಂಗಾರ್ಚನೆಯೇ ಕರ್ಮವಲ್ಲದೆ ಯಜ್ಞಯಾಗಾದಿಗಳಲ್ಲ ಎಂಬುದಾಗಿ ಹೇಳಿ ಶಿವಲಿಂಗಾರ್ಚನೆಯೇ ವೀರಶೈವರ ಕರ್ಮಯಜ್ಞವೆಂಬುದಾಗಿ ಸ್ಪಷ್ಟಪಡಿಸಿದ್ದಾರೆ. ಆದಕಾರಣ ವೀರಶೈವರು ಲಿಂಗಾರ್ಚನೆಯನ್ನು ತಮ್ಮ ಪ್ರಧಾನ ಕರ್ಮವನ್ನಾಗಿ ತಿಳಿದು ಕೊಂಡು ಅದನ್ನೇ ಆಚರಿಸಬೇಕು.

೩) ಜಪಯಜ್ಞ :

ಮೂರನೆಯದಾದ ಯಜ್ಞವೇ ಜಪಯಜ್ಞವು. ಜಪವೆಂದರೆ ಮಂತ್ರದ ಪುನಃ ಪುನರಾವೃತ್ತಿಯು. ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಪ್ರಣವದ ಅಥವಾ ಪಂಚಾಕ್ಷರ ಮಹಾಮಂತ್ರದ ಇಲ್ಲವೇ ಶ್ರೀ ರುದ್ರಾಧ್ಯಾಯಾದಿಗಳ ಪುನಃ ಪುನಃ ಆವೃತ್ತಿ ಯನ್ನೇ ಜಪವೆಂಬುದಾಗಿ ಬೋಧಿಸಿದ್ದಾರೆ. ಇಲ್ಲಿರುವ ಆದಿ ಶಬ್ದದಿಂದ ಪಂಚಬ್ರಹ್ಮ ಮಂತ್ರ ಅಥರ್ವ ಶಿಖೆ ಮೊದಲಾದ ಉಪನಿಷತ್ತುಗಳ ಆವೃತ್ತಿಯನ್ನು ಮಾಡಬೇಕೆಂಬು ದಾಗಿ, ಶ್ರೀಮರಿತೋಂಟದಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ತಮ್ಮ ವ್ಯಾಖ್ಯಾನ ದಲ್ಲಿ ತಿಳಿಯಪಡಿಸಿದ್ದಾರೆ. ಇವೆಲ್ಲವುಗಳ ವಿಧಾನವನ್ನು ಮಾಡುವುದರ ಜೊತೆಗೆ ಹೆಚ್ಚಿನ ವೇದಾಧ್ಯಯನ ಭಾಗವನ್ನು ನಿಷೇಧಿಸಿರುವುದನ್ನು ಸಹ ಇಲ್ಲಿ ಕಾಣುತ್ತೇವೆ. ವೀರಶೈವರಿಗೆ ಕರ್ಮಕಾಂಡ ಬೋಧಕವಾದ ವೇದ ಭಾಗದ ಅಭ್ಯಾಸವು ಅನಾವಶ್ಯಕವೆಂಬುದಾಗಿ ತಿಳಿದುಕೊಳ್ಳಬೇಕು.

ಶಿವಭಕ್ತನು ತನ್ನ ವಾಣಿಯನ್ನು ಪವಿತ್ರಗೊಳಿಸಲೋಸುಗ ಎಲ್ಲ ಮಂತ್ರಗಳ ಮೂಲ ರೂಪವಾದ ಓಂಕಾರವನ್ನು ಅಥವಾ ಓಂಕಾರ ಸಹಿತವಾದ ಪಂಚಾಕ್ಷರ ಮಹಾಮಂತ್ರ ವನ್ನು ಸದಾ ಜಪಿಸುತ್ತಿರಬೇಕು. ಇದೂ ಅಲ್ಲದೆ ತನ್ನ ಇಷ್ಟಲಿಂಗಪೂಜೆಗೆ ಕುಳಿತಾಗ ಇಷ್ಟಲಿಂಗದ ಮೇಲೆ ಜಲಧಾರೆಯನ್ನು ಹಿಡಿದು ಶ್ರೀ ರುದ್ರಾಧ್ಯಾಯದ ಆವೃತ್ತಿಯನ್ನು ಮಾಡಬೇಕು. ತನಗೆ ಅನುಕೂಲವಾದ ರೀತಿಯಲ್ಲಿ ಏಕಾವರ್ತನ ಅಥವಾ ಏಕಾದಶಾವರ್ತನ ಇಲ್ಲವೆ ಅದಕ್ಕೂ ಹೆಚ್ಚಾಗಿ ಶತಾವರ್ತನಾದಿಗಳಿಂದ ಅಭಿಷೇಕವನ್ನು ಮಾಡಬೇಕು. ಶ್ರೀರುದ್ರದ ಆವೃತ್ತಿಯಿಂದ ಆವರ್ತಕನ ದುಃಖ ದಾರಿದ್ರ್ಯಾದಿಗಳು ದೂರವಾಗಿ ಹೋಗುತ್ತವೆ. ಆದಕಾರಣ ತನಗೆ ಸಾಧ್ಯವಾದಷ್ಟು ವೇಳೆ ಪ್ರತಿಯೊಬ್ಬ ವೀರಶೈವರು ಶ್ರೀರುದ್ರದ ಆವೃತ್ತಿಯನ್ನು ಅವಶ್ಯವಾಗಿ ಮಾಡಬೇಕು.

ಪಂಚಾಕ್ಷರ ಮಹಾಮಂತ್ರದ ಹಾಗೂ ಪ್ರಣವ ಜಪದ ಬಗ್ಗೆ ಹೆಚ್ಚಿನ ವಿಷಯವನ್ನು ಪಂಚಾಕ್ಷರಜಪಸ್ಥಲದಲ್ಲಿ ಪ್ರತಿಪಾದಿಸಿರೋಣದರಿಂದ ಜಿಜ್ಞಾಸುಗಳು ಅಲ್ಲಿ ಅದನ್ನು ಅವಲೋಕಿಸಬಹುದು. 'ಜಪತೋನಾಸ್ತಿ ಪಾತಕಮ್' ಎಂಬ ಶಾಸ್ತ್ರೋಕ್ತಿಗನು ಸಾರವಾಗಿ ಈ ಜಪಾಭ್ಯಾಸಕನು ಎಲ್ಲ ಪಾಪಗಳಿಂದ ವಿಮುಕ್ತನಾಗಿ ಅತ್ಯಂತ ಪರಿಶುದ್ಧ ನಾಗುವನು. ಆದಕಾರಣ ಪ್ರತಿಯೊಬ್ಬರೂ ಈ ಜಪಯಜ್ಞವನ್ನು ಅವಶ್ಯವಾಗಿ ಮಾಡಬೇಕು.

೪) ಧ್ಯಾನಯಜ್ಞ :

ನಾಲ್ಕನೆಯದಾದ ಯಜ್ಞವೇ ಧ್ಯಾನಯಜ್ಞ, ಧ್ಯಾನವೆಂದರೆ ಚಿಂತನೆಯೆಂದರ್ಥ.

ಸಂಸಾರದ ಚಿಂತೆಯಲ್ಲಿ ಬೆಂದು ಬಸವಳಿದು ಬೆಂಡಾಗಿ ಹೋಗುತ್ತಿರುವ ಜೀವಿಗಳಿಗೆ ಶಿವಧ್ಯಾನವೇ ಶಾಂತಿಯ ಸಾಧನವಾಗಿದೆ. ಮಹರ್ಷಿ ಪತಂಜಲಿಯು ಪ್ರತಿಪಾದಿಸಿದ ಅಷ್ಟಾಂಗಯೋಗದಲ್ಲಿ ಏಳನೆಯ ಯೋಗಾಂಗವೇ ಧ್ಯಾನವು. ಸಾಧಕನು ತನ್ನ ಕೊನೆಯ ಗುರಿಯಾದ ಸಮಾಧಿಯನ್ನು ಸಾಧಿಸಬೇಕಾದರೆ ಕ್ರಮವಾಗಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಾದಿಗಳ ಮುಖಾಂತರ ತನ್ನ ಶರೀರ, ಇಂದ್ರಿಯ ಹಾಗೂ ಪ್ರಾಣಗಳನ್ನು ಶುದ್ಧೀಕರಿಸಿಕೊಂಡು ಅವುಗಳ ಮೇಲೆ ನಿಯಂತ್ರಣ ಸಾಧಿಸಿದ ನಂತರ ಅದರ ಬಲದಿಂದಲೇ ಅಂತರಿಂದ್ರಿಯವಾದ ಮನಸ್ಸನ್ನು ನಿರೋಧಗೊಳಿಸುವ ಧಾರಣಾದಿಗಳ ಅಭ್ಯಾಸವನ್ನು ಮಾಡಬೇಕಾಗುವುದು. ತನ್ನ ಲಕ್ಷ್ಯವಾದ ಶಿವಚಿಂತನೆಯಲ್ಲಿ ಸಾಧಕನ ಮನಸ್ಸು ಐದು ಘಟಿಕಾ ಪರ್ಯಂತವಾಗಿ ಅಂದರೆ ಎರಡು ಘಂಟೆಗಳವರೆಗೆ ವಿಚಲಿತವಾಗದೆ ಅಖಂಡವಾಗಿ ಶಿವಚಿಂತನೆಯಲ್ಲಿ ತಲ್ಲೀನವಾಯಿತೆಂದರೆ ಅದಕ್ಕೆ ಧಾರಣೆಯೆಂಬುದಾಗಿ ಕರೆಯುತ್ತಾರೆ. ಅದರಂತೆ ಆ ಶಿವಚಿಂತನೆಯೇ ಅರವತ್ತು ಘಟಿಕಾಪರ್ಯಂತರವಾಗಿ ಅಂದರೆ ಇಪ್ಪತ್ನಾಲ್ಕು ಘಂಟೆಗಳವರೆಗೆ ಅಖಂಡವಾಗಿ ಸಾಗಿದರೆ ಅದಕ್ಕೆ 'ಧ್ಯಾನ' ಎಂಬುದಾಗಿ ಕರೆಯುವರು. ಇನ್ನು ಸಾಧಕನ ಚಿತ್ತವು ಹನ್ನೆರಡು ದಿನಗಳ ಪರ್ಯಂತವಾಗಿ ಅಖಂಡವಾದ ಶಿವಚಿಂತನೆಯಲ್ಲಿ ತಲ್ಲೀನವಾಯಿತೆಂದರೆ ಅದಕ್ಕೆ ಸಮಾಧಿ ಸ್ಥಿತಿಯೆನ್ನುತ್ತಾರೆ. ಈ ಧಾರಣೆ, ಧ್ಯಾನ ಮತ್ತು ಸಮಾಧಿಗಳು ಉತ್ತರೋತ್ತರವಾಗಿ ಚಿತ್ತೈಕಾಗ್ರತೆಯ ಪರಿಚಾಯಕಗಳಾಗಿವೆ. ಸಾಧಕನು ಧಾರಣೆ ಯಿಂದ ಧ್ಯಾನ, ಧ್ಯಾನದಿಂದ ಸಮಾಧಿಯತ್ತ ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳುವನು.

ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ ಶಿವಭಕ್ತನು ಶಿವನ ಮಂಗಲಮಯವಾದ ಸ್ವರೂಪದ ಚಿಂತನೆಯಲ್ಲಿ ಇಪ್ಪತ್ನಾಲ್ಕು ಘಂಟೆಗಳ ಕಾಲ ಅಖಂಡ ವಾಗಿ ತಲ್ಲೀನನಾದರೆ ಅದು ಅವನ ಧ್ಯಾನಯಜ್ಞವೆಂದು ಕರೆಯಲ್ಪಡುವುದು. ಈ ಧ್ಯಾನ ದಲ್ಲಿ ಆತ್ಮಚಿಂತನೆಗೆ ಮಹತ್ತ್ವಕೊಡದೆ ಶಿವಚಿಂತನೆಗೇನೆ ಅತ್ಯಧಿಕವಾದ ಮಹತ್ತ್ವವನ್ನು ಕೊಡಲಾಗಿದೆ. ಶಿವಭಕ್ತನಾದವನು ಕ್ರಮವಾಗಿ ತನ್ನ ಸಾಧನೆಯ ಬಲದಿಂದ ಈ ಶಿವಧ್ಯಾನವನ್ನು ಸಾಧಿಸಿಕೊಳ್ಳಬೇಕು.

೫) ಜ್ಞಾನಯಜ್ಞ :

ಶಿವಪಂಚಯಜ್ಞದಲ್ಲಿ ಐದನೆಯದೇ ಜ್ಞಾನ ಯಜ್ಞವು. ಆಗಮಗಳ ಅರ್ಥವನ್ನರಿ ಯುವುದೇ ಇಲ್ಲಿ ಜ್ಞಾನವೆಂದು ಕರೆಯಲ್ಪಡುತ್ತದೆ. ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳನ್ನು ಅಭ್ಯಾಸಮಾಡಿ ಅವುಗಳ ಪರಿಜ್ಞಾನ ಮಾಡಿಕೊಳ್ಳುವುದೇ ಜ್ಞಾನವಲ್ಲದೇ ಅನ್ಯಶಾಸ್ತ್ರಗಳ ಜ್ಞಾನವು ಜ್ಞಾನವಲ್ಲ. ಶಿವನನ್ನರಿಯಲು ಶಿವಾಗಮಗಳೇ ಪ್ರಮುಖವಾದ ಸಾಹಿತ್ಯವು. ಆಗಮಗಳನ್ನೋದದೇ ಶಿವಜ್ಞಾನವನ್ನು ಪಡೆದಿರುವೆನೆಂದು ಯಾರಾದರೂ ಹೇಳಿದರೆ ಅವರ ಮಾತು ಸತ್ಯಕ್ಕೆ ದೂರವಾದುದೆಂದು ತಿಳಿದು ಕೊಳ್ಳಬೇಕು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು– ''ಅವಮತದವರಿವರು ಆಗಮವನುಳಿದು ಜಗದಾದಿ ಲಿಂಗವನು'' ಎಂಬುದಾಗಿ ಶಿವಲಿಂಗ ತತ್ತ್ವವನ್ನು ತಿಳಿದು ಕೊಳ್ಳಲು ಶಿವಾಗಮಗಳೇ ಪ್ರಮುಖಗಳಾದ ಪ್ರಮಾಣಗಳೆಂಬುದಾಗಿ ಖಚಿತಪಡಿಸಿದ್ದಾರೆ.

ಅಂತೆಯೇ ಶಿವಾಗಮಾರ್ಥ ವಿಜ್ಞಾನವೇ ಜ್ಞಾನವು. ಅದುವೇ ಜ್ಞಾನಯಜ್ಞವು ಎಂಬುದಾಗಿ ರೇಣುಕ ಭಗವತ್ಪಾದರು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಕಾರಣ ಪರಶಿವಲಿಂಗ ತತ್ತ್ವವನ್ನು ಅರಿಯಲು ಪ್ರತಿಯೊಬ್ಬರು ಶಿವಾಗಮಗಳನ್ನಭ್ಯಸಿಸಿ, ಶಿವಜ್ಞಾನವನ್ನು ಮಾಡಿಕೊಳ್ಳ ಬೇಕು.

ಮೇಲೆ ವಿವರಿಸಲ್ಪಟ್ಟ ತಪೋಯಜ್ಞ, ಕರ್ಮಯಜ್ಞ, ಜಪಯಜ್ಞ, ಧ್ಯಾನಯಜ್ಞ ಮತ್ತು ಜ್ಞಾನಯಜ್ಞಗಳೆಂಬ ಪಂಚಯಜ್ಞಗಳಿಂದ ಯಾವಾತನು ಶಿವನನ್ನು ಅರ್ಚಿಸುವನೋ ಅವನೇ ಇಲ್ಲಿ ಭಕ್ತನೆಂದು ಹೇಳಲ್ಪಡುವುದು. ಇಂತಹ ಶಿವಭಕ್ತಿಸಂಪನ್ನನಾದವನಿಗೆ ಶಿವಾನುಗ್ರಹದಿಂದ ಶಿವಸಾಯುಜ್ಯವು ಪ್ರಾಪ್ತವಾಗುವುದೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೧ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)



# ಭಕ್ತಮಾರ್ಗಕ್ರಿಯಾಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಮಾರ್ಗಕ್ರಿಯಾಸ್ಥಲದಲ್ಲಿ ಶಿವಭಕ್ತನು ಆಚರಿಸಲೇಬೇಕಾದ ಶಿವಪಂಚಯಜ್ಞಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಶಿವಭಕ್ತನು ಆಚರಿಸಬೇಕಾದ ಕೆಲವೊಂದು ವಿಶಿಷ್ಟ ಆಚರಣೆಗಳನ್ನು–

ಅವಮಾನಾನ್ಮಹಾಘೋರೋ ನರಕೋ ನಾತ್ರ ಸಂಶಯಃ ।
ಶಿವಭಕ್ತೋ ಮಹಾತೇಜಾಃ ಶಿವಭಕ್ತಿಪರಾಙ್ಮುಖಾನ್ ॥

ನ ಸ್ಪೃಶೇನ್ನೈವ ವೀಕ್ಷೇತ ನ ತೈಃ ಸಹ ವಸೇತ್ ಕ್ವಚಿತ್ ।
ಯದಾ ದೀಕ್ಷಾಪ್ರವೇಶಃ ಸ್ಯಾಲ್ಲಿಂಗಧಾರಣಪೂರ್ವಕಃ ॥

ತದಾಪ್ರಭೃತಿ ಭಕ್ತೋಽಸೌ ಪೂಜಯೇತ್ ಸ್ವಾಗಮಸ್ಥಿತಾನ್ ।
ಸ್ವಮಾರ್ಗಾಚಾರನಿರತಾಃ ಸಜಾತೀಯಾ ದ್ವಿಜಾಸ್ತು ಯೇ ॥

ತೇಷಾಂ ಗೃಹೇಷು ಭುಂಜೀತ ನೇತರೇಷಾಂ ಕದಾಚನ ।
ಸ್ವಮಾರ್ಗಾಚಾರವಿಮುಖೈರ್ಭವಿಭಿಃ ಪ್ರಾಕೃತಾತ್ಮಭಿಃ ॥

ಪ್ರೇಷಿತಂ ಸಕಲಂ ದ್ರವ್ಯಮಾತ್ಮಲೀನಮಪಿ ತ್ಯಜೇತ್ ।
ನಾರ್ಚಯೇದನ್ಯದೇವಾಂಸ್ತು ನ ಸ್ಮರೇನ್ನ ಚ ಕೀರ್ತಯೇತ್ ॥

ನ ತನ್ನಿವೇದ್ಯಮಶ್ನೀಯಾಚ್ಛಿವಭಕ್ತೋ ದೃಢವ್ರತಃ ।
ಯದ್ಗೃಹೇಷ್ವನ್ಯದೇವೋಽಸ್ತಿ ತದ್ಗೃಹಾಣಿ ಪರಿತ್ಯಜೇತ್ ॥

ನಾನ್ಯದೇವಾರ್ಚಕಾನ್ ಮರ್ತ್ಯಾನ್ ಪೂಜಾಕಾಲೇ ನಿರೀಕ್ಷಯೇತ್ ।
ಸದಾ ಶಿವೈಕನಿಷ್ಠಾನಾಂ ವೀರಶೈವಾಧ್ವವರ್ತಿನಾಮ್ ॥

(ಸಿ. ಶಿ. ೯; ೨೮–೩೪)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಮಕಲ್ಯಾಣ ಸ್ವರೂಪನಾದ ಶಿವನನ್ನು ಭಯಭಕ್ತಿಯಿಂದ ಪೂಜಿಸಿದರೆ ಸದ್ಗತಿಯೇನೋ ಪ್ರಾಪ್ತ ವಾಗುವುದು. ಆದರೆ ಅಪ್ಪಿ–ತಪ್ಪಿ ಅನವಧಾನದಿಂದಾಗಿ ಆ ಶಿವನಿಗೆ ಅವಮಾನವನ್ನೆಸ–ಗಿದರೆ, ಮಹಾಭಯಂಕರವಾದ ನರಕವೇ ಪ್ರಾಪ್ತವಾಗುವುದು. ಇದರಲ್ಲಿ ಯಾವ ಸಂದೇಹವೂ ಇಲ್ಲ. ಮಹಾತೇಜಸ್ವಿ ಯಾದ ಶಿವಭಕ್ತನು ಶಿವಭಕ್ತರಲ್ಲದವರನ್ನು

ಮುಟ್ಟಕೂಡದು, ನೋಡಕೂಡದೂ ಸಹ, ಇದೂ ಅಲ್ಲದೆ ಅವರೊಂದಿಗೆ ಎಂದೂ ಸಹವಾಸವನ್ನು ಮಾಡಬಾರದು ಎಂಬುದಾಗಿ ಶಿವಭಕ್ತನನ್ನು ಕುರಿತು ಎಚ್ಚರಿಕೆಯ ಮಾತುಗಳನ್ನು ಹೇಳಿದ ಪೂಜ್ಯರು ಪುನಃ ಆತನು ಆಚರಿಸಬೇಕಾದ ನಿಯಮಗಳ ಬಗೆಗೆ ಉಪದೇಶ ಮಾಡುತ್ತ–

ಶಿವಭಕ್ತನು ಯಾವಾಗ ಸದ್ಗುರುವಿನಿಂದ ತ್ರಿವಿಧ ದೀಕ್ಷಾಸಂಸ್ಕಾರಗಳನ್ನು ಹೊಂದಿ ಲಿಂಗಧಾರಣೆಯನ್ನು ಮಾಡಿಕೊಳ್ಳುವನೋ, ಅಂದಿನಿಂದ ತನ್ನಂತೆ ಶಿವಸಂಸ್ಕಾರವನ್ನು ಹೊಂದಿದ ಹಾಗೂ ಶಿವಾಗಮೋಕ್ತ ಆಚಾರಗಳನ್ನು ಪರಿಪಾಲಿಸುತ್ತಿರುವ ತನಗಿಂತಲೂ ಶ್ರೇಷ್ಠರಾದ ಶಿವಭಕ್ತರನ್ನು ಅಥವಾ ಶಿವಶರಣರನ್ನು ಇಲ್ಲವೆ ಶಿವಾಚಾರ್ಯರನ್ನು ವಿಧಿವತ್ತಾಗಿ ಪೂಜಿಸಬೇಕು. ತನ್ನ ಆಚಾರ–ವಿಚಾರಗಳಿಗೆ ಹೊಂದಿಕೆಯಾಗುವ ಶಿವಾಚಾರಸಂಪನ್ನರಾದ ಶಿವಭಕ್ತರೊಂದಿಗೇನೇ ಸಹವಾಸವನ್ನು ಮಾಡಬೇಕು.

ಇದೂ ಅಲ್ಲದೆ ತನ್ನ ಗ್ರಾಮದಲ್ಲಿಯೇ ಆಗಲಿ, ಪರಗ್ರಾಮದಲ್ಲಿಯೇ ಆಗಲಿ ಮತ್ತೊಬ್ಬರ ಮನೆಯಲ್ಲಿ ಊಟ ಮಾಡುವ ಪ್ರಸಂಗ ಬಂದಾಗ ಅವರು ಶಿವಾಚಾರ ಸಂಪನ್ನರಾದ ಭಕ್ತ–ಮಾಹೇಶ್ವರರು ಅಹುದೋ–ಅಲ್ಲವೋ ಎಂಬುದನ್ನು ಖಚಿತ ಪಡಿಸಿಕೊಂಡೇ ಊಟಮಾಡಬೇಕು. ಶಿವಸಂಸ್ಕಾರವಿಲ್ಲದ ಅದಾರ ಮನೆಯಲ್ಲಿಯೂ ಶಿವಭಕ್ತನು ಆಹಾರವನ್ನು ಸೇವಿಸಕೂಡದು.

ವೀರಶೈವಾಚಾರಕ್ಕೆ ವಿಮುಖರಾಗಿರುವ ಅಂತೆಯೇ ದೀಕ್ಷಾದಿ ಸಂಸ್ಕಾರಗಳನ್ನು ಪಡೆಯದ ಮತ್ತು–

ಮದ್ಯಪಾನೀ ಮಾಂಸಭಕ್ಷೀ ಚಾನ್ಯ ದೈವಸ್ಯಪೂಜಕಃ |
ಅಲಿಂಗೀ ಚ ದುರಾಚಾರೀ ಪಂಚೈತೇ ಭವಿನಃ ಸ್ಮೃತಾಃ ||

ಎಂಬ ಪ್ರಮಾಣವಚನದಂತೆ ಮದ್ಯಪಾನ ಮಾಡುವ, ಮಾಂಸವನ್ನು ಭಕ್ಷಿಸುವ, ಅನ್ಯದೇವರನ್ನು ಪೂಜಿಸುವ, ಇಷ್ಟಲಿಂಗವನ್ನು ಧರಿಸದಿರುವ ಮತ್ತು ದುರಾಚಾರಿಯಾದ ಹೀಗೆ ಈ ಐದು ವಿಧ ಲಕ್ಷಣಗಳುಳ್ಳ ಭವಿಗಳಿಂದ ಕೊಡಲ್ಪಟ್ಟ ಅದಾವ ದ್ರವ್ಯಾದಿ ಪದಾರ್ಥಗಳನ್ನು ಶಿವಭಕ್ತನಾದವನು ಗ್ರಹಿಸಕೂಡದು.

ದೃಢತರವಾದ ಶಿವಪೂಜಾವ್ರತವನ್ನು ಸ್ವೀಕರಿಸಿದ ಶಿವಭಕ್ತನು ಶಿವೇತರ ದೇವತೆಗಳನ್ನು ತನ್ನ ಹಸ್ತಗಳಿಂದ ಪೂಜಿಸಕೂಡದು ಮತ್ತು ವಾಣಿಯಿಂದ ಸ್ತುತಿಸ ಕೂಡದು. ಇಷ್ಟೇ ಅಲ್ಲದೆ ಮನಸ್ಸಿನಿಂದ ಧ್ಯಾನಿಸಲೂಬಾರದು. ಅನ್ಯ ದೇವರಿಗೆ ನಿವೇದಿಸಿದ ಅದಾವ ಪದಾರ್ಥವನ್ನೂ ಸ್ವೀಕರಿಸಬಾರದು. ಯಾರ ಮನೆಯಲ್ಲಿ ಶಿವೇತರ ದೇವತೆಗಳ ಪೂಜೆ ನಡೆಯುವುದೋ ಆ ಮನೆಯಲ್ಲಿ ಈ ಶಿವಭಕ್ತನು ಅದೆಂದೂ ಪ್ರವೇಶವನ್ನು ಮಾಡಬಾರದು. ತಾನು ಶಿವಪೂಜೆಯನ್ನು ಮಾಡುವ ಕಾಲದಲ್ಲಿ ಅನ್ಯದೇವಾರ್ಚಕರನ್ನೂ ಸಹ ನೋಡಬಾರದು. ಹೀಗೆ ಮೇಲೆ ಉಪದೇಶಮಾಡಿದ ನಿಯಮಗಳನ್ನು ವೀರಶೈವ ಭಕ್ತರು ಕಟ್ಟುನಿಟ್ಟಾಗಿ ಪರಿಪಾಲಿಸುತ್ತ ಯಾವಾಗಲೂ ಇಷ್ಟಲಿಂಗದ ಪೂಜೆ ಮತ್ತು ಧ್ಯಾನಾದಿಗಳಲ್ಲಿಯೇ ತತ್ಪರರಾಗಬೇಕು ಎಂಬುದಾಗಿ ಪೂಜ್ಯಪಾದರು ಆದೇಶವಿತ್ತಿದ್ದಾರೆ.

ಶಿವನು ಸರ್ವರ ಕಲ್ಯಾಣಕಾರಕನೂ ಆಶುತೋಷನೂ ಆಗಿದ್ದಾನೆ. ಭಕ್ತಿಯಿಂದ ಅವನನ್ನು ಪೂಜಿಸಿದರೆ ಅತಿ ಶೀಘ್ರದಲ್ಲಿಯೇ ಜ್ಞಾನೋದಯವಾಗಿ ಶಿವಭಕ್ತನು ಸದ್ಗತಿಯನ್ನು ಪಡೆಯುವನು. ''ಜ್ಞಾನಮಿಚ್ಛೇತ್ತು ಶಂಕರಾತ್'' ಎಂಬ ಪ್ರಮಾಣವಚನದಂತೆ ಜ್ಞಾನಾಪೇಕ್ಷಿಯು ಶಿವನನ್ನೇ ಪೂಜಿಸಬೇಕು.

ಯದಾಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ।
ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥

(ಶ್ವೇತಾಶ್ವತ ಉ. ೬-೨೦)

ಎಂಬ ಶ್ವೇತಾಶ್ವತರೋಪನಿಷತ್ತಿನ ವಚನದಂತೆ ಶಿವಜ್ಞಾನವನ್ನು ಪಡೆಯದ ಯಾರಾದರೂ ಮುಕ್ತಿಯನ್ನು ಪಡೆದಿದ್ದೇವೆಂದು ಹೇಳಿದರೆ, ಆಕಾಶವನ್ನು ಚಾಪೆಯಂತೆ ಸುತ್ತಿದ್ದೇನೆಂದು ಹೇಳುವವರ ಮಾತು ಎಷ್ಟು ಹಾಸ್ಯಾಸ್ಪದವಾಗುವುದೋ, ಅವರ ಮಾತು ಕೂಡ ಅಷ್ಟೇ ಹಾಸ್ಯಾಸ್ಪದವಾಗುವುದೆಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಜೀವಿಗಳ ಸರ್ವ ದುಃಖಗಳನ್ನು ದೂರಮಾಡಿ ಶಿವಸಾಯುಜ್ಯವನ್ನು ಕರುಣಿಸುವ ಶಿವನನ್ನು ಪೂಜಿಸದೆ ಅದಕ್ಕೆ ವಿಪರೀತವಾಗಿ ಶಿವನಿಗೆ ಯಾರಾದರೂ ಅಪಮಾನವನ್ನೆಸಗಿದರೆ ತಮ್ಮ ದುಷ್ಕರ್ಮದ ಪ್ರತಿಫಲವಾಗಿ ಅವರು ಮಹಾದುರ್ಗತಿಯನ್ನೇ ಹೊಂದುತ್ತಾರೆಂಬುದಾಗಿ ಪೂಜ್ಯರು ಇಲ್ಲಿ ಎಚ್ಚರಿಕೆಯನ್ನಿತ್ತಿದ್ದಾರೆ.

ದಕ್ಷಪ್ರಜಾಪತಿಯು ಬಹುದೊಡ್ಡ ಯಜ್ಞವನ್ನು ರಚಿಸಿ ಶಿವನನ್ನು ಆಮಂತ್ರಿಸದೆ ಅಪಮಾನಗೊಳಿಸಿದ್ದರ ಪರಿಣಾಮವಾಗಿಯೇ ತನ್ನ ಮಗಳ ಆಹುತಿಯನ್ನು ಕಾಣಬೇಕಾಯಿತಷ್ಟೇ ಅಲ್ಲ, ತನ್ನ ತಲೆಯನ್ನು ಕಳೆದುಕೊಂಡು ಕುರಿದಲೆಯನ್ನು ಪಡೆದನೆಂಬ ಕಥೆಯು ಪುರಾಣ ಪ್ರಸಿದ್ಧವಾಗಿದೆ. ಇಲ್ಲಿ ದಕ್ಷನಿಗಿಟ್ಟ ಕುರಿದಲೆಯು ಬುದ್ಧಿಹೀನತೆಯ ಪ್ರತೀಕವಾಗಿದೆ. ಯಾರಾದರೂ ಶಿವನೊಂದಿಗೆ ವೈರಭಾವನೆಯನ್ನು ತಾಳಿ ಆತನನ್ನು ಅಪಮಾನಗೊಳಿಸಲು ಪ್ರಯತ್ನಿಸುತ್ತಿದ್ದರೆ ಅವನನ್ನು ಕುರಿ ಬುದ್ಧಿಯವನೆಂದೇ ತಿಳಿಯಬೇಕು, ಅರ್ಥಾತ್ ಬುದ್ಧಿಹೀನನೆಂಬುದಾಗಿ ಭಾವಿಸಬೇಕು.

ಶಿವದೀಕ್ಷಾಸಂಪನ್ನನಾದ ಶಿವಭಕ್ತನು ಶಿವಭಕ್ತರಲ್ಲದವರೊಡನೆ ನೋಡುವ, ಮುಟ್ಟುವ ಮತ್ತು ಸಹವಾಸ ಮಾಡುವ ಮುಂತಾದ ವ್ಯವಹಾರಗಳನ್ನೂ ಸಹ ಮಾಡಬಾರದು. ಯಾಕೆಂದರೆ ಸಂಸ್ಕಾರಹೀನ ವ್ಯಕ್ತಿಗಳ ಸಹವಾಸದಿಂದ ಶಿವಭಕ್ತನ ಮನಸ್ಸಿನ ಮೇಲೆ ವಿಪರೀತ ಪರಿಣಾಮವಾಗುವ ಸಂಭವವಿರುತ್ತದೆ. ಮನುಷ್ಯನು ಒಳ್ಳೆಯವನಾಗಿ ಅಥವಾ ಕೆಟ್ಟವನಾಗಿ ಬೆಳೆಯಲು ಅವನು ಮಾಡಿದ ಸಹವಾಸವೇ ಮೂಲಕಾರಣವಾಗುವುದು. ಓರ್ವ ಗಿಳಿಯ ವ್ಯಾಪಾರಿಯು ತನ್ನ ಎರಡು ಗಿಳಿಗಳನ್ನು ಬೇರೆ ಬೇರೆಯವರಿಗೆ ಮಾರಿದಾಗ ಅವೆರಡರ ವಾಗ್‌ವ್ಯವಹಾರದಲ್ಲಿ ಅಂತರವನ್ನು ಕಂಡ ದಂತ ಕಥೆಯು ಪ್ರಸಿದ್ಧವಾಗಿದೆ. ಉತ್ತಮ ಸಂಸ್ಕಾರವನ್ನು ಪಡೆದ ಗಿಳಿಯು ವಿನಯವಾಗಿ ಮಾತಾಡುತ್ತಿದ್ದರೆ ಕಟುಕನ ಸಹವಾಸದಲ್ಲಿ ಬೆಳೆದ ಗಿಳಿಯು ಅಪಶಬ್ದಗಳನ್ನು, ಕಟು ಶಬ್ದಗಳನ್ನು ನುಡಿಯುತ್ತಿತ್ತೆಂಬಲ್ಲಿ ಸಹವಾಸವೇ ಮೂಲವೆಂಬುದು ತಿಳಿದುಬರುತ್ತದೆ. ಆದ್ದರಿಂದ ಉತ್ತಮ ಸಂಸ್ಕಾರ ಸಂಪನ್ನ ನಾದ ಸಾಧಕನು ಹೀನ ಸಂಸ್ಕಾರಿಗಳ ಸಹವಾಸವನ್ನು ಅದೆಂದಿಗೂ ಮಾಡಬಾರದು.

ಶಿವಭಕ್ತನಾದವನು ತನ್ನಂತೆ ಸುಸಂಸ್ಕಾರಿಯಾದ ಮತ್ತು ಸಾಧನೆಯಲ್ಲಿ ತನಗಿಂತಲೂ ಮುಂಚೂಣಿಯಲ್ಲಿರುವ ಶ್ರೇಷ್ಠ ವ್ಯಕ್ತಿಗಳನ್ನು ಆದರಿಸಿ ಸೇವಾ ಶುಶ್ರೂಷೆಯನ್ನು ಮಾಡಬೇಕು. ಇದರಿಂದ ಹಿರಿಯರ ಅನುಗ್ರಹದ ಪರಿಣಾಮವಾಗಿ ಈತನ ಶಿವತೇಜಸ್ಸು ಇನ್ನಷ್ಟು ಮತ್ತಷ್ಟು ಹೆಚ್ಚುತ್ತ ಹೋಗುವುದು. ಅನ್ನಪಾನಾದಿಗಳನ್ನು ಸೇವಿಸುವ ಪ್ರಸಂಗ ಬಂದಾಗಲೂ, ಸ್ವಮಾರ್ಗಾಚಾರವಿಮುಖರಾದ ಅಂತೆಯೇ ಮದ್ಯಪಾನ ಮಾಂಸ ಭಕ್ಷಣಾದಿಗಳನ್ನು ಮಾಡುವ ದುರಾಚಾರಿಗಳಾದ ಮತ್ತು ಲಿಂಗಧಾರಣವಿಲ್ಲದ ಭವಿಗಳ ಮನೆಯಲ್ಲಿ ಅದೆಂದೂ ಅನ್ನಪಾನಾದಿಗಳನ್ನು ಸೇವಿಸ ಕೂಡದು.

''ಆಹಾರ ಶುದ್ಧೌ ಸತ್ವಶುದ್ಧಿಃ'' ಎಂಬ ಪ್ರಮಾಣ ವಚನದಂತೆ ಆಹಾರ ಶುದ್ಧವಿದ್ದಾಗಲೇ ಮನಸ್ಸು ಶುದ್ಧವಾಗಬಲ್ಲದು. ಅದು ಶುದ್ಧವಿರದಿದ್ದರೆ ಮನಸ್ಸೂ ಸಹ ಅಶುದ್ಧವಾಗುವುದು. ಆದಕಾರಣ ಸಾಧಕನು ಮನಸ್ಸನ್ನು ದೂಷಿತಗೊಳಿಸುವ ಆಹಾರ ವನ್ನು ಅದೆಂದಿಗೂ ಸೇವಿಸಬಾರದು. ಭವಿಗಳಾದವರು ಅಭಕ್ಷ ಭಕ್ಷಣೆ ಮತ್ತು ಅಪೇಯ ಪಾನಾದಿಗಳಿಂದ ತಾವು ಅಶುದ್ಧರಾಗಿರುವರಷ್ಟೇ ಅಲ್ಲ, ತಮ್ಮ ಸಹವಾಸದಿಂದ ಅನ್ಯರಿಗೂ ಆ ದುಷ್ಟ ಸಂಸ್ಕಾರಗಳನ್ನು ಕೊಟ್ಟು, ಅವರನ್ನೂ ಕೆಡಿಸುವಲ್ಲಿ ಕಾರಣರಾಗುತ್ತಾರೆ. ಅಂತೆಯೇ ಶ್ರೀ ರೇಣುಕ ಭಗವತ್ಪಾದರು ಭವಿಗಳ ಸಹವಾಸವನ್ನು ನಿಷೇಧಿಸಿದ್ದಾರೆ. ಇದೂ ಅಲ್ಲದೆ ಅವರಿಂದ ದೊರೆಯುವ ಪದಾರ್ಥಗಳು ಭೌತಿಕವಾಗಿ ಅದೆಷ್ಟೇ ಮೂಲ್ಯವುಳ್ಳವುಗಳಾಗಿದ್ದರೂ, ಆಧ್ಯಾತ್ಮಿಕ ದೃಷ್ಟಿಯಿಂದ ಅವಲೋಕಿಸಿದಾಗ ಅವುಗಳು ಅತ್ಯಂತ ಮೂಲ್ಯಹೀನವಾದವುಗಳೆಂದು ತಿಳಿದುಕೊಂಡು ಅವೆಲ್ಲವುಗಳನ್ನು ತ್ಯಜಿಸಬೇಕೆಂಬುದಾಗಿಯೂ ತಿಳಿಹೇಳಿದ್ದಾರೆ.

ಇನ್ನು ಶಿವಭಕ್ತನು ತನ್ನ ಇಷ್ಟಲಿಂಗದ ಹೊರತಾಗಿ ಅನ್ಯದೇವರನ್ನೂ ಅರ್ಚಿಸುವ, ಕೀರ್ತಿಸುವ, ಸ್ಮರಿಸುವ ಮತ್ತು ನೈವೇದ್ಯವನ್ನು ಸ್ವೀಕರಿಸುವ ಈ ಎಲ್ಲ ವ್ಯವಹಾರಗಳನ್ನು ತ್ಯಜಿಸಬೇಕೆಂತಲೂ ಪೂಜ್ಯರು ಉಪದೇಶಿಸುವುದರ ಜೊತೆಗೆ ಅನ್ಯದೇವರ ಪೂಜಕರ ಮನೆಯಲ್ಲಿಯೂ ಸಹ ಪ್ರವೇಶಿಸಬಾರದೆಂಬುದಾಗಿ ಒತ್ತಿ ಹೇಳಿರುವುದನ್ನು ಇಲ್ಲಿ ಕಾಣುತ್ತೇವೆ. ತನ್ನ ಇಷ್ಟದೇವರನ್ನು ಬಿಟ್ಟು ಅನ್ಯಾನ್ಯ ದೇವರನ್ನು ಅರ್ಚಿಸುವುದೆಂದರೆ ತನ್ನ ದೇವರಲ್ಲಿ ಅಶ್ರದ್ಧೆಯನ್ನು ತಾಳಿದಂತೆಯೇ ಸರಿ. ಸರ್ವವೆಲ್ಲವನ್ನೂ ಅನುಗ್ರಹಿಸುವ ಶಿವನು, ಇಷ್ಟಲಿಂಗರೂಪದಲ್ಲಿ ತನ್ನ ಹಸ್ತಪೀಠಕ್ಕೆ ಪ್ರಾಪ್ತವಾಗಿರುವಾಗ ಅನ್ಯ ದೇವರತ್ತ ಹೊರಳುವ ಅವಶ್ಯಕತೆಯಾದರೂ ಏನಿದೆ ? ಜಗದಕರ್ತನಾದ ಶಿವನ ಪ್ರತಿರೂಪವಾದ ಇಷ್ಟಲಿಂಗವನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಅನ್ಯದೇವರತ್ತ ಪ್ರವೃತ್ತರಾಗುವವರನ್ನು ಕಂಡು ಶ್ರೀಪ್ರಭುದೇವರು ಅವರನ್ನು ತುಡುಗುಣಿಯೆಂಬುದಾಗಿ ಸಂಬೋಧಿಸಿದ್ದಾರೆ. ಸಾಧಕನು ತನ್ನ ಭಕ್ತಿಯನ್ನು ದೃಢಗೊಳಿಸಿಕೊಳ್ಳಬೇಕಾದರೆ ಏಕದೇವನಿಷ್ಠೆಯನ್ನು ಬೆಳೆಯಿಸಿಕೊಳ್ಳಬೇಕು. ಒಂದೇ ಕಡೆಗೆ ನಿಷ್ಠೆಯಿರದವನ ಸಾಧನೆಯು ಅದೆಷ್ಟು ದಿನ ಸಾಗಿದರೂ ನಿಷ್ಪ್ರಯೋಜಕವೇ ಸರಿ. ನೀರಿಗಾಗಿ ಹಂಬಲಿಸುವ ರೈತನು ತನ್ನ ಹೊಲದಲ್ಲಿ ಒಂದು ಸ್ಥಾನದಲ್ಲಿ ನೂರುಫೂಟು ತಗ್ಗು ತೆಗೆಯದೆ ನೂರು ಸ್ಥಾನಗಳಲ್ಲಿ ಒಂದೊಂದು ಫೂಟಿನ ತಗ್ಗು ತೆಗೆದು ಪರಿಶ್ರಮಿಸಿಯೂ ನೀರನ್ನು ಪಡೆಯದಿರುವಂತೆ,

ಏಕದೇವ ನಿಷ್ಠೆಯಿಲ್ಲದವನ ಭಕ್ತಿಯೂ ಸಹ ಇದೇ ವಿಧವಾಗಿ ನಿಷ್ಫಲವಾಗುವದೆಂಬುದಾಗಿ ತಿಳಿದುಕೊಳ್ಳಬೇಕು.

ವೀರಶೈವ ಧರ್ಮಾನುಯಾಯಿಯಾದ ಶಿವಭಕ್ತನು ತಾನು ಶಿವಪೂಜೆಯನ್ನು ಮಾಡುವಾಗ ಲಿಂಗಭಕ್ತರಲ್ಲದವರ ಮುಖವನ್ನೂ ಸಹ ನಿರೀಕ್ಷಿಸಕೂಡದೆಂಬುದಾಗಿ ಪೂಜ್ಯರು ಆದೇಶವಿತ್ತಿದ್ದಾರೆ. ಇಲ್ಲಿ ಮಾಡಿರುವ ನಿಷೇಧಗಳೆಲ್ಲವೂ ಅನ್ಯ ದೇವರ ಬಗ್ಗೆ ಹೀನ ಭಾವನೆಯನ್ನು ಬೆಳೆಸಲೋಸುಗವಾದವುಗಳಲ್ಲ. ಆದರೆ ತನ್ನ ಇಷ್ಟಲಿಂಗದಲ್ಲಿ ನಿಷ್ಠೆಯನ್ನು ದೃಢಪಡಿಸಲೋಸುಗವೆಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು. ''ನ ಹಿ ನಿಂದಾ ನಿಂದಿತುಂ ಪ್ರವರ್ತತೇ, ಅಪಿತು ವಿಧೇಯಂ ಸ್ತೌತುಮ್'' ಎಂಬ ಪ್ರಮಾಣ ವಚನದಂತೆ ಎಲ್ಲೆಲ್ಲಿ ಇತರ ದೇವತೆಗಳ ನಿರಾಕರಣೆಯು ಮಾಡಲ್ಪಟ್ಟಿರುವುದೋ ಅಲ್ಲೆಲ್ಲ ಇದೇ ರೀತಿಯಾಗಿ ತಿಳಿದುಕೊಳ್ಳಬೇಕು. ಹೀಗೆ ಪೂಜ್ಯರ ಆದೇಶದ ಪ್ರಕಾರ ಶಿವಭಕ್ತನು ಶಿವನಲ್ಲಿ ನಿಷ್ಠೆಯನ್ನು ತಾಳಿ ಅದೆಂದಿಗೂ ಶಿವನಿಂದೆಯನ್ನು ಮಾಡದೆ ಶಿವನಲ್ಲಿಯೇ ಏಕನಿಷ್ಠೆಯನ್ನು ಪಡೆದವನೇ ವೀರಶೈವ ಶಿವಭಕ್ತನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

**ಓಂ ಶಾಂತಿಃ ಶಾಂತಿಃ ಶಾಂತಿಃ**

ದಿನಾಂಕ ೨೨ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)



# ಭಕ್ತಮಾರ್ಗಕ್ರಿಯಾಸ್ಥಲ

ಧರ್ಮಾಸಕ್ತ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಮಾರ್ಗಕ್ರಿಯಾಸ್ಥಲದ ಆಶೀರ್ವಚನಗಳನ್ನು ನೀವೆಲ್ಲ ಆಲಿಸುತ್ತಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸ್ಥಲದಲ್ಲಿ ಅನ್ಯದೇವೋಪಾಸನೆಯನ್ನು ನಿರಾಕರಿಸಿ ಸಾಧಕನ ಭಕ್ತಿಯನ್ನು ದೃಢಪಡಿಸಿದ್ದಾರೆ. ಇನ್ನು ಮುಂದೆಯೂ ಸಹ ಅದೇ ವಿಷಯವನ್ನು ಬೇರೊಂದು ರೀತಿಯಲ್ಲಿ–

ನ ಹಿ ಸ್ಥಾವರಲಿಂಗಾನಾಂ ನಿರ್ಮಾಲ್ಯಾದ್ಯುಪಯುಜ್ಯತೇ ।
ಯತ್ರ ಸ್ಥಾವರಲಿಂಗಾನಾಮಪಾಯಃ ಪರಿವರ್ತತೇ ॥

ಅಥವಾ ಶಿವಭಕ್ತಾನಾಂ ಶಿವಲಾಂಛನಧಾರಿಣಾಮ್ ।
ತತ್ರ ಪ್ರಾಣಾನ್ ವಿಹಾಯಾಪಿ ಪರಿಹಾರಂ ಸಮಾಚರೇತ್ ॥
ಶಿವಾರ್ಥಂ ಮುಕ್ತಜೀವಶ್ಚೇಚ್ಛಿವಸಾಯುಜ್ಯಮಾಪ್ನುಯಾತ್ ॥

ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ।
ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ ಯದ್ಯಕ್ಷಮೋ ಭವೇತ್ ॥

ಯತ್ರ ಚಾಚಾರನಿಂದಾಽಸ್ತಿ ಕದಾಚಿತ್ತತ್ರ ನ ವ್ರಜೇತ್ ।
ಯದ್‌ಗೃಹೇ ಶಿವನಿಂದಾಽಸ್ತಿ ತದ್‌ಗೃಹಾಣಿ ಪರಿತ್ಯಜೇತ್ ॥

ಯಃ ಸರ್ವಭೂತಾಧಿಪತಿಂ ವಿಶ್ವೇಶಾನಂ ವಿನಿಂದತಿ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥

ಶಿವಪೂಜಾಪರೋ ಭೂತ್ವಾ ಪೂರ್ವಕರ್ಮ ವಿಸರ್ಜಯೇತ್ ।
ಅಥವಾ ಪೂರ್ವಕರ್ಮಸ್ಯಾತ್ ಸಾ ಪೂಜಾ ನಿಷ್ಫಲಾಭವೇತ್ ॥

ಉತ್ತಮಾಂ ಗತಿಮಾಶ್ರಿತ್ಯ ನೀಚಾಂ ವೃತ್ತಿಂ ಸಮಾಶ್ರಿತಃ ।
ಆರೂಢಪತಿತೋ ಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥

ಪಂಚಾಕ್ಷರೋಪದೇಶೀ ಚ ನರಸ್ತುತಿಕರೋ ಯದಿ ।
ಸೋಽಲಿಂಗೀ ಸ ದುರಾಚಾರೀ ಕುಕವಿಃ ಸ ತು ವಿಶ್ರುತಃ ॥

ಚರ್ಮಪಾತ್ರೇ ಜಲಂ ತೈಲಂ ನ ಗ್ರಾಹ್ಯಂ ಭಕ್ತಿತತ್ಪರೈಃ ।
ಗೃಹ್ಯತೇ ಯದಿ ಭಕ್ತೇನ ರೌರವಂ ನರಕಂ ವ್ರಜೇತ್ ॥

(ಸಿ. ಶಿ. ೯ ; ೩೫–೪೩)

ಈ ವಿಧವಾಗಿ ಉಪದೇಶಿಸಿದ್ದಾರೆ. [illegible], ವೀರಶೈವ ಸಿದ್ಧಾಂತದಲ್ಲಿ ಪ್ರಸಿದ್ಧಗಳಾದ ಪಂಚಾಚಾರಗಳಲ್ಲಿಯ ಗಣಾಚಾರವನ್ನು ಕುರಿತು ಇಲ್ಲಿ ಉಪದೇಶಿಸಿದ್ದನ್ನು ಕಾಣುತ್ತೇವೆ. ಗಣಾಚಾರವೆಂದರೆ ಶಿವನ ಇಲ್ಲವೆ ಶಿವಭಕ್ತರ ಅವಹೇಳನೆಯನ್ನು ಸಹಿಸದೆ ಅದಕ್ಕೆ ತನ್ನ ಶಕ್ತ್ಯಾನುಸಾರ ಪ್ರತಿಕ್ರಿಯೆಯನ್ನು ಮಾಡುವುದೇ ಆಗಿದೆ. ಅದನ್ನೇ ಪೂಜ್ಯರು ಇಲ್ಲಿ ವಿಧವಿಧವಾಗಿ ವಿವರಿಸಿದ್ದಾರೆ. ಪೂಜ್ಯರ ಉಪದೇಶದ ಪ್ರಕಾರ ಇಷ್ಟಲಿಂಗ ನಿಷ್ಠನಾದ ವೀರಶೈವ ಶಿವಭಕ್ತನು ಇಷ್ಟಲಿಂಗದ ಹೊರತಾಗಿ ಸ್ಥಾವರ ಲಿಂಗಾದಿಗಳ ನಿರ್ಮಾಲ್ಯ ಮತ್ತು ನೈವೇದ್ಯಾದಿಗಳನ್ನು ಎಂದೂ ಗ್ರಹಿಸಬಾರದು. ಆದರೂ ಅಂತಹ ಸ್ಥಾವರ ಶಿವಲಿಂಗಗಳಿಗೆ ಮತ್ತು ಶಿವಲಾಂಛನಧಾರಿಗಳಾದ ಶಿವಭಕ್ತರಿಗೆ ಪರಧರ್ಮೀಯ ರಿಂದ ಯಾವುದೇ ಪ್ರಕಾರದ ಅಪಾಯವು ಬಂದೊದಗಿದಾಗ ಈ ವೀರಶೈವ ಶಿವಭಕ್ತನು ತನ್ನ ಪ್ರಾಣಗಳನ್ನು ಬಲಿಕೊಟ್ಟಾದರೂ ಅವರನ್ನು ಸಂರಕ್ಷಿಸಬೇಕೆಂಬುದಾಗಿ ಪೂಜ್ಯರು ತಿಳಿಯಪಡಿಸಿದ್ದಾರೆ. ಹೀಗೆ ಶಿವಲಿಂಗದ ಇಲ್ಲವೆ ಶಿವಭಕ್ತರ ಸಂರಕ್ಷಣೆಯಲ್ಲಿ ಪ್ರಾಣವನ್ನು ಕಳೆದುಕೊಂಡರೆ ಅದರಿಂದೇನೂ ದುರ್ಗತಿಯುಂಟಾಗುವುದಿಲ್ಲ. ಆದರೆ ಆ ತ್ಯಾಗದ ಪರಿಣಾಮವಾಗಿ ಅವನಿಗೆ ಶಿವಸಾಯುಜ್ಯವೇ ಪ್ರಾಪ್ತವಾಗುವುದು.

ಗಣಾಚಾರದ ಸ್ಪಷ್ಟರೂಪವನ್ನು ವಿವರಿಸುತ್ತ ಪೂಜ್ಯರು– ಶಿವಭಕ್ತನಾದವನು ಶಿವದೂಷಣೆಯನ್ನು ಸಹಿಸಬಾರದು. ಅಕಸ್ಮಾತ್ತಾಗಿ ತನ್ನೆದುರಿಗೆ ಯಾರಾದರೂ ಶಿವದೂಷಣೆಯನ್ನು ಮಾಡುತ್ತಿದ್ದರೆ, ಆ ಶಿವದ್ರೋಹಿಯನ್ನು ಅಲ್ಲಿಂದಲ್ಲೇ ಸಂಹರಿಸ ಬೇಕು ಅಥವಾ ಕಠೋರ ಶಬ್ದಗಳಿಂದ ಶಪಿಸಬೇಕು. ಇವೆರಡನ್ನೂ ಮಾಡುವ ಸಾಮರ್ಥ್ಯವಿರದಿದ್ದರೆ, ಆ ಸ್ಥಾನವನ್ನು ತ್ಯಜಿಸಿ ಬಹುದೂರ ಹೋಗಬೇಕೇ ವಿನಃ ಶಿವದೂಷಣೆ ಕೇಳುತ್ತ ಅಲ್ಲಿಯೇ ಕೂಡ್ರಕೂಡದು–ಎಂಬುದಾಗಿ ಉಪದೇಶಿಸಿದ್ದನ್ನು ಇಲ್ಲಿ ಕಾಣುತ್ತೇವೆ. ದಕ್ಷಪ್ರಜಾಪತಿಯು ಶಿವನಿಂದೆಯನ್ನು ಗೈದಾಗ ಶಿವನ ಜಡೆಯಿಂದ ಉದ್ಭವಿಸಿದ ವೀರಭದ್ರನೆಂಬ ಶಿವಗಣನು ದಕ್ಷಬ್ರಹ್ಮನ ಶಿರವರಿದ ಪ್ರಕರಣವು ಇಲ್ಲಿಯ ಗಣಾಚಾರಕ್ಕೆ ಪ್ರಥಮ ಉದಾಹರಣೆಯೆಂಬುದನ್ನು ಶ್ರೀ ಮರಿತೋಂಟದಾರ್ಯರು ತಾವು ಬರೆದ ಈ ಗ್ರಂಥದ ಸಂಸ್ಕೃತವ್ಯಾಖ್ಯಾನದ ಅವತರಣಿಕೆಯಲ್ಲಿ ತಿಳಿಯಪಡಿಸಿ, ಅದರಂತೆ ಶಿವಭಕ್ತರಿಗೆ ಅಪಾಯವುಂಟಾದಾಗ ಅದನ್ನು ಪ್ರತಿಭಟಿಸಲು ಸಾಧ್ಯವಾಗದೆ ಆ ಸ್ಥಾನವನ್ನೇ ತ್ಯಜಿಸಿದ ಬಗ್ಗೆ ಬಸವೇಶ್ವರರ ಉದಾಹರಣೆಯನ್ನು ತಿಳಿಯಪಡಿಸಿದ್ದಾರೆ. ಕಲ್ಯಾಣದಲ್ಲಿ ಕ್ರಾಂತಿ ಯಾಗಿ ಶಿವಶರಣರ ಕೊಲೆ–ಸುಲಿಗೆ ನಡೆಯುತ್ತಿರುವಾಗ ಅದನ್ನು ಪ್ರತಿಭಟಿಸಲಿಕ್ಕಾಗದ ಬಸವಣ್ಣನವರು ಕಲ್ಯಾಣದಿಂದ ನಿರ್ಗಮಿಸಿ ಕೂಡಲಸಂಗಮಕ್ಕೆ ತೆರಳಿದ ಇತಿಹಾಸವು ಸುಪ್ರಸಿದ್ಧವಾಗಿದೆ.

ಇದೇ ಪ್ರಕಾರವಾಗಿ ಶಿವಾಚಾರದ ದೂಷಣೆಯಾಗುತ್ತಿರುವ ಸ್ಥಾನಕ್ಕೂ ಸಹ ಶಿವಭಕ್ತನು ಅದೆಂದಿಗೂ ಹೋಗಬಾರದು. ಯಾರ ಮನೆಯಲ್ಲಿ ಶಿವನಿಂದೆಯು ಕೇಳಿ ಬರುವುದೋ ಆ ಮನೆಯನ್ನು ತ್ಯಜಿಸಬೇಕೆಂಬುದಾಗಿಯೂ ಪೂಜ್ಯರು ಉಪದೇಶಿಸಿ ದ್ದಾರೆ. ''ಈಶಾನಃ ಸರ್ವವಿದ್ಯಾನಾಂ ಈಶ್ವರಃ ಸರ್ವಭೂತಾನಾಮ್'' ಎಂಬ ಶ್ರುತಿ ವಚನದಂತೆ ಸಕಲಜೀವರಾಶಿಗಳಿಗೆ ಅಧಿಪತಿಯಾಗಿರುವ ಶಿವನನ್ನು ಯಾವಾತನು ನಿಂದಿಸುವನೋ, ಅವನು ಆ ನಿಂದೆಯಿಂದುಂಟಾದ ದೋಷವನ್ನು ದೂರ

ಮಾಡಿಕೊಳ್ಳಲು ಒಂದು ನೂರು ವರ್ಷಗಳ ಪರ್ಯಂತರ ಪ್ರಾಯಶ್ಚಿತ್ತ ಕರ್ಮವನ್ನಾಚರಿಸಿದರೂ ಆ ದೋಷವು ನಿವಾರಣೆಯಾಗಲು ಸಾಧ್ಯವಾಗದು.

ಸಾಮಾನ್ಯ ವ್ಯಕ್ತಿಯನ್ನು ನಿಂದಿಸಿದ ದೋಷವೇ ಭಯಾನಕವಾಗಿರುವಾಗ ಶಿವನಿಂದನೆಯ ದೋಷದ ಬಗ್ಗೆ ಏನು ತಾನೇ ಹೇಳಬಹುದು ! ಅಂದರೆ ಅದು ಅತ್ಯಂತ ಭಯಾನಕವಾಗಿರುವುದೆಂಬ ತಾತ್ಪರ್ಯವು. ಅಂತೆಯೇ ಶ್ರೀ ಮನ್ನಿಜಗುಣ ಶಿವಯೋಗಿಗಳು– ''ನಿಂದಿಸಿ ನುಡಿಯದಿರಾರನು'' ಎಂಬುದಾಗಿ ಹೇಳಿ ಜೀವಾತ್ಮನನ್ನು ಎಚ್ಚರಿಸಿದ್ದಾರೆ. ಪಾಮರ ಜೀವಿಗಳು ಪರನಿಂದೆ ಮಾಡುವುದರಲ್ಲಿಯೇ ತಮ್ಮ ಕಾಲಕಳೆಯುವುದನ್ನು ನೋಡುತ್ತೇವೆ. ಇಲ್ಲಿ ನಿಂದಿಸಿಕೊಂಡವನಿಗೆ ಅದಾವ ಅಪಾಯವೂ ಇಲ್ಲ. ಆದರೆ ನಿಂದೆ ಮಾಡಿದವನಿಗೆ ಮಾತ್ರ ದುರಿತವು ಬಂದೊದಗುವುದು. ಅಂತೆಯೇ ಸಂತರು ನಿಂದಕರನ್ನು ದ್ವೇಷಿಸದೆ ಅವರನ್ನು ಪ್ರೀತಿಸಿರುವುದನ್ನೇ ಕಾಣುತ್ತೇವೆ. ಸಂತ ಕಬೀರದಾಸರು–

ನಿಂದಕ ನಯರೆ ರಾಖಿಯೆ ಅಂಗಣಕುಟಿ ಛವಾಯ್ ।
ಬಿನಪಾನೀ ಸಾಬೂನ ಬನಾ ನಿರ್ಮಲ ಕರೇ ಸುಭಾಯ್ ॥

ಎಂಬುದಾಗಿ ಹೇಳಿ ನಿಂದಕರನ್ನು ತನ್ನಿಂದ ದೂರಗೊಳಿಸದೆ ತನ್ನ ಮನೆಯ ಅಂಗಳದಲ್ಲಿ ಅವರಿಗಾಗಿ ಒಂದು ಕುಟೀರವನ್ನು ನಿರ್ಮಿಸಿಕೊಡಬೇಕೆಂದು ಹೇಳಿದ್ದಾನೆ. ಯಾಕೆಂದರೆ ನಿಂದಕನು ಸಮೀಪದಲ್ಲಿದ್ದರೆ ಪ್ರತಿದಿವಸ ನಿಂದೆಯನ್ನು ಮಾಡಿ ಮಾಡಿ, ನಮ್ಮ ಪಾಪವೆಂಬ ಪಂಕವನ್ನು ನೀರು ಸಾಬೂನುಗಳಿಲ್ಲದೆ ಕೇವಲ ತನ್ನ ನಾಲಿಗೆಯಿಂದಲೇ ತೊಳೆದು ಹಾಕುತ್ತಾನೆ. ಆದ್ದರಿಂದ ಸಂತರು–ಶರಣರು ನಿಂದಕರಿಗೆ ಮಹತ್ತ್ವವನ್ನು ಕೊಟ್ಟಿದ್ದುಂಟು.

ಪರನಿಂದೆಯನ್ನು ಮಾಡುವಂಥ ಮನುಷ್ಯನು ಪಾಮರಯೋನಿಯಲ್ಲಿ ಜನ್ಮತಾಳಬೇಕಾಗುತ್ತದೆ. ಈ ವಿಷಯವನ್ನು ಸ್ಪಷ್ಟಪಡಿಸುತ್ತ ತುಳಸೀದಾಸರು–

ಸಬಕರನಿಂದಾ ಜೋ ನರ ಕರಹೀ ।
ಸೋ ಚಮಗಾದುಡ ಹೋ ಅವತರಹೀ ॥

ಈ ರೀತಿಯಾಗಿ ಹೇಳಿದ್ದಾರೆ. ಯಾವ ಮನುಷ್ಯನು ಯಾವಾಗಲೂ ಅನ್ಯರ ನಿಂದೆಯಲ್ಲಿಯೇ ಕಾಲಕಳೆಯುವನೋ ಅವನು ಮುಂದಿನ ಜನ್ಮದಲ್ಲಿ ತೊಗಲುಬಾವಲಿಯಾಗಿ ಹುಟ್ಟುವನು. ತೊಗಲುಬಾವಲಿಯು ತನ್ನ ಮುಖದಿಂದಲೇ ಮಲವಿಸರ್ಜನೆಯನ್ನು ಮಾಡುವ ಒಂದು ವಿಲಕ್ಷಣ ಪಕ್ಷಿಯಾಗಿದೆ. ಆಹಾರವನ್ನು ಸೇವಿಸುವ ಮುಖದಿಂದಲೇ ಮಲವಿಸರ್ಜನೆಯನ್ನು ಮಾಡುವ ಈ ಪಕ್ಷಿಗಿಂತಲೂ ಹೀನವಾದ ಜೀವಿಯು ಬೇರೊಂದಿರಲಿಕ್ಕಿಲ್ಲ, ತನ್ನ ವಾಣಿಯ ದುರುಪಯೋಗದ ಫಲವನ್ನೇ ಅದು ಈಗ ಈ ವಿಧವಾಗಿ ಅನುಭವಿಸುತ್ತಿದೆ. ಆದುದರಿಂದಲೇ ಶ್ರೀ ಮನ್ನಿಜಗುಣ ಶಿವಯೋಗಿಗಳು– ''ದುರಿತದೊಳಧಿಕವಾವುದು ?'' ಎಂಬುದಾಗಿ ಪ್ರಶ್ನಿಸಿ ಅದಕ್ಕೆ ಉತ್ತರರೂಪವಾಗಿ ''ಪರನಿಂದೆ'' ಎಂಬುದಾಗಿ ತಾವೇ ಹೇಳಿದ್ದಾರೆ. ಹೀಗೆ ಆಚಾರ್ಯರು, ಸಂತರ ಮತ್ತು ಶಿವಯೋಗಿಗಳ ಈ ಎಲ್ಲ ಉಪದೇಶವನ್ನು ಪರ್ಯಾಲೋಚಿಸಿದಾಗ ನಿಂದೆಗಿಂತಲೂ

ಹೀನವಾದ ಕೃತ್ಯವು ಬೇರೊಂದಿರುವುದಿಲ್ಲ. ಆದಕಾರಣ ಶಿವಭಕ್ತನಾದವನು ತಾನು ಯಾರನ್ನೂ ನಿಂದಿಸಬಾರದಷ್ಟೇ ಅಲ್ಲ, ಶಿವನಿಂದಕರ ಸಮೀಪದಲ್ಲಿಯೂ ಸುಳಿಯ ಬಾರದೆಂಬುದಾಗಿ ಶ್ರೀ ರೇಣುಕರು ಅಪ್ಪಣೆ ಯಿತ್ತಿದ್ದಾರೆ.

ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದ ಶಿವಭಕ್ತನು ತನ್ನ ಮೊದಲಿನ ಅನ್ಯದೇವತಾ ಸ್ಮರಣ, ಸಂಧ್ಯಾವಂದನಾದಿ ಪೂರ್ವಕರ್ಮಗಳನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು ಇಷ್ಟಲಿಂಗ ಪೂಜಾರೂಪವಾದ ಕರ್ಮವೊಂದರಲ್ಲಿಯೇ ಆಸಕ್ತನಾಗಿರಬೇಕು. ಒಂದು ವೇಳೆ ಲಿಂಗಪೂಜೆಯ ಜೊತೆಗೆ ಮೊದಲಿನ ಕರ್ಮಗಳನ್ನೂ ಸಹ ಮಾಡುತ್ತಿದ್ದರೆ ಈ ಲಿಂಗಪೂಜಾ ಕರ್ಮವು ನಿಷ್ಫಲವಾಗುವುದು. ಆದ್ದರಿಂದ ಪೂರ್ವ ಕರ್ಮಗಳನ್ನು ತ್ಯಜಿಸಲೇಬೇಕು. ಹಾಗೆ ಮಾಡದಿದ್ದರೆ ಆತನು ಆರೂಢಪತಿತನೆಂದು ಕರೆಯಿಸಿ ಕೊಳ್ಳುವನು. ಉನ್ನತವಾದ ಮಾರ್ಗವನ್ನು ಆಶ್ರಯಿಸಿದ್ದು ಕೆಳಮಟ್ಟದ ಕರ್ಮಗಳನ್ನು ಆಚರಿಸತೊಡಗಿದರೆ ಆತನು ಆರೂಢಪತಿತನಾಗದೆ ಮತ್ತೇನಾಗುವನು ? ಆದಕಾರಣ ಶಿವಲಿಂಗಾರ್ಚನಾರೂಪ ಶ್ರೇಷ್ಠ ಕರ್ಮ ತತ್ಪರನಾದ ಸಾಧಕನು ಸಾಮಾನ್ಯ ಕರ್ಮಗಳತ್ತ ತನ್ನ ಗಮನವನ್ನು ಹರಿಸಕೂಡದು.

ಸದ್ಗುರುವಿನಿಂದ ಪಂಚಾಕ್ಷರ ಮಹಾಮಂತ್ರದ ಉಪದೇಶವನ್ನು ಪಡೆದ ಶಿವಭಕ್ತನು ತನ್ನ ವಾಣಿಯಿಂದ ಶಿವನ ಸ್ತೋತ್ರಾದಿಗಳನ್ನು ಮಾಡಬೇಕೇ ವಿನಃ ಸಾಮಾನ್ಯ ಜನರ ಸ್ತುತಿ ಮೊದಲಾದವುಗಳನ್ನು ಎಂದೆಂದಿಗೂ ಮಾಡಬಾರದು. ಒಂದು ವೇಳೆ ಲೋಕದ ಆಶೆ ಆಮಿಷಕ್ಕೊಳಗಾಗಿ ಮನುಷ್ಯರ ಸ್ತುತಿಯನ್ನು ಮಾಡಿದುದಾದರೆ ಅವನು ಅಲಿಂಗೀ, ದುರಾಚಾರೀ ಮತ್ತು ಕುಕವಿಯೆಂಬುದಾಗಿ ಕರೆಯಲ್ಪಡುತ್ತಾನೆ.

ಪೂಜ್ಯಪಾದರು ಈ ಆಚಾರದ ಬಗ್ಗೆ ತಿಳಿಹೇಳುತ್ತ–ಶಿವಭಕ್ತನಾದವನು ಚರ್ಮದ ಪಾತ್ರೆಯಲ್ಲಿ ಜಲವನ್ನಾಗಲಿ ಮತ್ತು ತೈಲಘೃತಾದಿಗಳನ್ನಾಗಲಿ ಎಂದೂ ಸ್ವೀಕರಿಸ ಕೂಡದು. ಪಾತ್ರವು ಅಶುದ್ಧವಿದ್ದಾಗ ಅದರಲ್ಲಿ ಹಾಕಿದ ದ್ರವ್ಯವೂ ಸಹ ಅಪವಿತ್ರ ವಾಗುವುದು. ಆಚಾರಸಂಪನ್ನರಾದವರಿಗೆ ಅಪವಿತ್ರವಸ್ತುವಿನ ಬಳಕೆಯು ನಿಷೇಧಿ ಸಲ್ಪಟ್ಟಿರೋಣದರಿಂದ ಪಾತ್ರೆಯ ಶುದ್ಧತೆಯ ಬಗ್ಗೆ ಲಕ್ಷ್ಯವಹಿಸಬೇಕೆಂಬುದಾಗಿ ತಿಳಿಹೇಳಿದ್ದಾರೆ. ಸದ್ಗುರುಗಳ ಈ ಆದೇಶವನ್ನು ಮೀರಿ ಒಂದು ವೇಳೆ ಶಿವಭಕ್ತನು ಪದಾರ್ಥವನ್ನು ತರಲು ಚರ್ಮದ ಪಾತ್ರೆಯನ್ನು ಉಪಯೋಗಿಸಿದ್ದೇ ಆದರೆ ಅವನು ಘೋರತರವಾದ ರೌರವ ನರಕವನ್ನೇ ಹೊಂದುವನೆಂಬುದಾಗಿ ಶ್ರೀ ಜಗದ್ಗುರುಗಳು ಸಾಧಕರನ್ನು ಎಚ್ಚರಿಸಿದ್ದಾರೆ. ಪೂಜ್ಯರ ಈ ಎಚ್ಚರಿಕೆಯ ಅಭಿಪ್ರಾಯವೇನೆಂದರೆ ಚರ್ಮದ ಪಾತ್ರೆಯನ್ನು ತಯಾರಿಸಲು ಆಕಳು, ಎತ್ತು ಮುಂತಾದ ಪ್ರಾಣಿಗಳ ಹಿಂಸೆಯನ್ನು ಮಾಡಬೇಕಾಗುವುದು. ಚರ್ಮದ ಪಾತ್ರೆಯನ್ನು ಉಪಯೋಗಿಸುವ ವ್ಯಕ್ತಿಯು ಅಪ್ರತ್ಯಕ್ಷವಾಗಿ ಪ್ರಾಣಿ ಹಿಂಸೆಗೆ ಕಾರಣವಾಗೋಣದರಿಂದ ಹಿಂಸಾಜನ್ಯ ದೋಷಕ್ಕೆ ಈತನೂ ಪಾಲುಗಾರನಾಗುವನು. ಅಂತೆಯೇ ಚರ್ಮದ ಪಾತ್ರೆಯನ್ನು ಉಪಯೋಗಿಸಿ ದರೆ ರೌರವ ನರಕ ಪ್ರಾಪ್ತವಾಗುವುದೆಂಬುದಾಗಿ ಪ್ರತಿಪಾದಿಸಲಾಗಿದೆ. ಆದುಕಾರಣ ಈ ಭಕ್ತಮಾರ್ಗಕ್ರಿಯಾಸ್ಥಲದ ಸಾಧಕನು ಶಿವಸಂಸ್ಕೃತಿಯನ್ನು ಸಂರಕ್ಷಿಸುವ ಕಾರ್ಯದಲ್ಲಿ

ಆತ್ಮಾಹುತಿಯನ್ನಾದರೂ ಮಾಡಲು ಕಟಿಬದ್ಧನಾಗಿದ್ದು, ಶಿವನಿಂದಕರಿಂದ ತಾನು ಅತ್ಯಂತ ದೂರದಲ್ಲಿದ್ದುಕೊಂಡು ಶಿವಪೂಜಾದಿ ಕರ್ಮಗಳನ್ನು ಮಾಡುತ್ತ ಆರೂಢ ಪತಿತನೆಂದು ಕರೆಯಿಸಿಕೊಳ್ಳದೇ ಸದಾ ಶಿವಸ್ತುತಿಗಳಲ್ಲಿಯೇ ತನ್ನ ವಾಣಿಯನ್ನು ಮೀಸಲಾಗಿರಿಸಿಕೊಂಡು, ಚರ್ಮದ ಪಾತ್ರೆಯನ್ನು ಆದೆಂದಿಗೂ ಬಳಕೆಯಲ್ಲಿ ತಾರದೇ ಅತ್ಯಂತ ಪರಿಶುದ್ಧವಾದ ಆಚಾರ–ವಿಚಾರಗಳನ್ನು ಮೈಗೂಡಿಸಿಕೊಂಡು ಶಿವಕೃಪೆಗೆ ಪಾತ್ರನಾಗಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಈ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೩ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)

■■

# ಭಕ್ತಿಮಾರ್ಗಕ್ರಿಯಾಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಮಾರ್ಗಕ್ರಿಯಾಸ್ಥಲದ ಆಶೀರ್ವಚನಗಳನ್ನು ನೀವೆಲ್ಲ ಆಸ್ಥೆವಹಿಸಿ ಆಲಿಸುತ್ತಿದ್ದೀರಿ. ಶಿವಭಕ್ತನು ಆಚರಿಸಬೇಕಾದ ಸದಾಚಾರಗಳ ಬಗ್ಗೆ ಉಪದೇಶಮಾಡುತ್ತಿರುವ ಪೂಜ್ಯರು ಸದ್ಯಃ ಧರ್ಮಶಾಸ್ತ್ರದಲ್ಲಿ ಬೋಧಿಸಲ್ಪಟ್ಟ ಪಂಚಸೂತಕಗಳ ವಿಷಯವಾಗಿ ವೀರಶೈವ ಸಿದ್ಧಾಂತದ ನಿಲುವು ಏನು ಎಂಬುದನ್ನು–

ನ ತಸ್ಯಸೂತಕಂ ಕಿಂಚಿತ್ಪ್ರಾಣಲಿಂಗಾಂಗಸಂಗಿನಃ ।
ಜನ್ಮನೋತ್ಥಂ ಮೃತೋತ್ಥಂ ಚ ವಿದ್ಯತೇ ಪರಮಾರ್ಥತಃ ॥

ಲಿಂಗಾರ್ಚನರತಾಯಾಶ್ಚ ಋತೌ ನಾರ್ಯಾ ನ ಸೂತಕಮ್ ।
ತಥಾ ಪ್ರಸೂತಿಕಾಯಾಶ್ಚ ಸೂತಕಂ ನೈವ ವಿದ್ಯತೇ ॥

ಗೃಹೇ ಯಸ್ಮಿನ್ ಪ್ರಸೂತಾ ಸ್ತ್ರೀ ಸೂತಕಂ ನಾತ್ರ ವಿದ್ಯತೇ ।
ಶಿವಪಾದಾಂಬುಸಂಸ್ಪರ್ಶಾತ್ ಸರ್ವಪಾಪಂ ಪ್ರಣಶ್ಯತಿ ॥

(ಸಿ. ಶಿ. ೯ ; ೪೪–೪೬)

ಈ ತೆರನಾಗಿ ಸ್ಪಷ್ಟಪಡಿಸಿದ್ದಾರೆ. ತಾತ್ಪರ್ಯವೇನೆಂದರೆ–ಪ್ರಾಣಲಿಂಗಾಂಗ ಸಂಗಿಯಾದ ಶಿವಭಕ್ತನಿಗೆ ಜನನ ಸೂತಕ, ಮರಣ ಸೂತಕ, ಜಾತಿಸೂತಕ, ಉಚ್ಛಿಷ್ಟ ಸೂತಕಗಳು ಇರುವುದಿಲ್ಲ. ಇದೇ ಪ್ರಕಾರವಾಗಿ ಲಿಂಗಧಾರಿಯಾಗಿದ್ದು ಲಿಂಗಾರ್ಚನೆಯಲ್ಲಿ ನಿಷ್ಠರಾಗಿರುವ ವೀರಶೈವ ಸ್ತ್ರೀಯರಿಗೆ ಮಾಸಿಕ ರಜೋದರ್ಶನದಿಂದುಂಟಾಗುವ ರಜಸ್ಸೂತಕವಾಗಲಿ ಮತ್ತು ಹೆರಿಗೆಯಿಂದುಂಟಾಗುವ ಪ್ರಸೂತಿಕಾ ಸೂತಕವಾಗಲಿ ಅಥವಾ ಜನನ ಸೂತಕವಾಗಲಿ ಇರುವುದಿಲ್ಲ. ಇಂತಹ ಸೂತಕ ಪ್ರಸಂಗಗಳು ಬಂದಾಗ ಸದ್ಗುರುಗಳ ಪಾದೋದಕದಿಂದ ತನ್ನನ್ನು ಪ್ರೋಕ್ಷಿಸಿಕೊಂಡು ಪರಿಶುದ್ಧರಾಗಬೇಕು ಎಂಬುದಾಗಿ ಪೂಜ್ಯರಿಲ್ಲಿ ಅಪ್ಪಣೆಕೊಡಿಸಿದ್ದಾರೆ.

ಧರ್ಮಶಾಸ್ತ್ರದಲ್ಲಿ ಜನನಸೂತಕ, ಮರಣಸೂತಕ, ರಜಸ್ಸೂತಕ, ಜಾತಿಸೂತಕ ಮತ್ತು ಉಚ್ಛಿಷ್ಟಸೂತಕಗಳೆಂಬ ಪಂಚಸೂತಕಗಳು ಪ್ರತಿಪಾದಿಸಲ್ಪಟ್ಟಿವೆ. ಸೂತಕವೆಂದರೆ ಅಶೌಚ ಅಥವಾ ಅಪವಿತ್ರತೆ ಎಂದರ್ಥ. ಮನೆಯಲ್ಲಿ ಹೆರಿಗೆಯಾದಾಗ ಜನನ ಸೂತಕವೂ. ಯಾರಾದರೂ ನಿಧನರಾದರೆ ಮರಣಸೂತಕವೂ, ಹೆಣ್ಣುಮಕ್ಕಳಿಗೆ ಋತು

ಸ್ರಾವವಾದರೆ ರಜಸ್ಸೂತಕವೂ, ಉಂಡುಬಿಟ್ಟ ಅನ್ನಾದಿಗಳನ್ನು ಸೇವಿಸಿದರೆ ಉಚ್ಛಿಷ್ಟ ಸೂತಕವೂ, ಇದೇ ಪ್ರಕಾರ ಕೆಳದರ್ಜೆಯ ಜಾತಿಯ ಜನರೊಂದಿಗೆ ಸ್ಪರ್ಶವಾದರೆ ಜಾತಿಸೂತಕವೂ ಪ್ರಾಪ್ತವಾಗುದೆಂಬುದಾಗಿ ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಇವುಗಳಲ್ಲಿ ಜನನಸೂತಕಕ್ಕೆ ಹತ್ತು ದಿನಗಳ ಅಶೌಚವನ್ನು, ಮರಣ ಸೂತಕಕ್ಕೆ ಹನ್ನೆರಡು ದಿನಗಳ ಅಶೌಚವನ್ನು ಮತ್ತು ರಜಸ್ಸೂತಕಕ್ಕೆ ಮೂರು ಇಲ್ಲವೆ ನಾಲ್ಕು ದಿನಗಳ ಅಶೌಚವನ್ನು ಹೇಳಲಾಗಿದೆ. ಈ ಅಶೌಚದ ಕಾಲಾವಧಿಯನ್ನು ನಿರ್ಣಯಿಸುವಾಗ ವ್ಯಕ್ತಿಗಳ ಪರಸ್ಪರ ಸಂಬಂಧಗಳ ಮೇಲಿಂದಲೂ ಅಶೌಚದ ದಿನಗಳ ಇತಿಮಿತಿಗಳಲ್ಲಿ ವ್ಯತ್ಯಾಸವನ್ನೂ ಸಹ ಕಾಣಬಹುದು. ಇದರ ವಿಸ್ತೃತವಾದ ತಿಳಿವಳಿಕೆಯುಂಟಾಗ ಬೇಕಾದರೆ ಧರ್ಮಶಾಸ್ತ್ರದಲ್ಲಿ ಪ್ರತಿಪಾದಿತವಾದ ಅಶೌಚ ನಿರ್ಣಯವನ್ನು ಜಿಜ್ಞಾಸುಗಳು ಅವಲೋಕಿಸಬಹುದು.

ವೀರಶೈವ ಸಿದ್ಧಾಂತದಲ್ಲಿ ಶಿವದೀಕ್ಷಾಸಂಸ್ಕಾರ, ಇಷ್ಟಲಿಂಗಧಾರಣೆ ಮತ್ತು ಅದರ ಪೂಜಾದಿಗಳಿಗೆ ಪುರುಷರಂತೆ ಸ್ತ್ರೀಯರೂ ಸಹ ಸಮಾನವಾದ ಅಧಿಕಾರವನ್ನು ಪಡೆದಿದ್ದಾರೆ. ಇಷ್ಟಲಿಂಗಪೂಜೆಯು ನಿತ್ಯಕರ್ಮವಾಗಿರೋಣದರಿಂದ ಅದನ್ನು ಸ್ತ್ರೀ-ಪುರುಷರೆಲ್ಲರೂ ತಮ್ಮ ಜೀವನಪರ್ಯಂತವಾಗಿ ತಪ್ಪದೇ ಮಾಡಬೇಕಾಗುವುದು. ಇಂತಹ ಲಿಂಗಪೂಜಾವ್ರತವನ್ನು ಪ್ರಾರಂಭಿಸಿದ ನಂತರ ಹೆಣ್ಣು ಮಕ್ಕಳಿಗೆ ರಜಸ್ಸೂತಕಾದಿಗಳು ಪ್ರಾಪ್ತವಾಗಲು ಅವರಿಗೆ ಆ ಕಾಲಾವಧಿಯಲ್ಲಿ ಅಶೌಚವು ಪ್ರಾಪ್ತವಾಗುವುದು. ಈ ಅಶೌಚ ಸಮಯದಲ್ಲಿ ಪೂಜಾದಿಗಳು ನಿಷೇಧಿಸಲ್ಪಟ್ಟಿ ರೋಣದರಿಂದ ವೀರಶೈವ ಸ್ತ್ರೀಯರು ಇಷ್ಟಲಿಂಗಪೂಜಾರೂಪ ನಿತ್ಯಕರ್ಮವನ್ನು ಹೇಗೆ ತಾನೆ ಆಚರಿಸಲು ಸಾಧ್ಯವಾಗುವುದು ? ಆಚರಿಸಲು ಹೋದರೆ ಅಶೌಚದೋಷ ; ಬಿಟ್ಟರೆ ನಿತ್ಯಕರ್ಮದ ಲೋಪ; ಹೀಗೆ ಉಭಯಸಂಕಟವು ಪ್ರಾಪ್ತವಾದಾಗ ಪೂಜ್ಯಪಾದ ರಾದ ಆಚಾರ್ಯರು ಪ್ರಾಣಲಿಂಗಧಾರಿಗಳಾದ ವೀರಶೈವರಿಗೆ ಲಿಂಗಧಾರಣೆ ಹಾಗೂ ಲಿಂಗಪೂಜೆಗೆ ಸೂತಕವಿಲ್ಲವೆಂಬುದಾಗಿ ಪ್ರತಿಪಾದಿಸಿದ್ದಾರೆ.

ಅಶೌಚವನ್ನು ಪರಿಪಾಲಿಸುವ ವೈದಿಕ ಬ್ರಾಹ್ಮಣರಲ್ಲಿಯೂ ಕೆಲವೊಂದು ವಿಶಿಷ್ಟ ಪ್ರಸಂಗಗಳಲ್ಲಿ ಅಶೌಚವನ್ನು ನಿಷೇಧಿಸಿ ಪೂಜಾದಿ ಕರ್ಮಗಳನ್ನು ಮಾಡುತ್ತಿರುವ ಬಗ್ಗೆ ಶಾಸ್ತ್ರ ಪ್ರಮಾಣವಿರುವುದನ್ನು ಸಹ ಕಾಣಬಹುದಾಗಿದೆ. ಅಂತೆಯೇ ಶ್ರೀಪತಿ ಪಂಡಿತಾರಾಧ್ಯರು ಶ್ರೀಕರ ಭಾಷ್ಯದಲ್ಲಿ-

ಸ್ವೇಷ್ಟಲಿಂಗೈಕ ಪೂಜಾಯಾಂ ನೈವಾಶೌಚಂ ವಿಧೀಯತೇ ।
ಪೌಂಡರೀಕ ರಜಃ ಸ್ತ್ರೀಣಾಂ ಸ್ವಾಗ್ನಿಹೋತ್ರೇ ಯಥಾ ತಥಾ ॥

ಅಕರಸ್ಪರ್ಶಯೋಗ್ಯಾಪಿ ಯಥಾ ಜಿಹ್ವಾ ಮಹೇಶ್ವರೀ ।
ಮಂತ್ರೋಚ್ಚಾರಣ ಮಾತ್ರಸ್ಯ ಪೂತಾ ಭವತಿ ಭೂತಲೇ ॥

ತಥಾ ಸೂತಕಿನಃ ಶೈವಾಃ ಪೂಜಾಮಾತ್ರಸುನಿರ್ಮಲಾಃ ।
ನಾನ್ಯಸ್ಪರ್ಶಾನುಕೂಲಾಃ ಸ್ಯುರಿತಿ ವೇದಾನುಶಾಸನಮ್ ॥

(ಬ್ರ. ಸೂ. ಶ್ರೀಕರ. ೧-೧-೧)

ಈ ರೀತಿಯಾಗಿ ಸಿದ್ಧಾಂತಾಗಮದ ಪ್ರಮಾಣವನ್ನು ಉದಾಹರಿಸಿ, ಸೂತಕದ ನಿಷೇಧವನ್ನು ಸಮರ್ಥಿಸಿದ್ದಾರೆ. ವೈದಿಕಮಾರ್ಗದಲ್ಲಿ ಕೆಲವರು ಅಹಿತಾಗ್ನಿಗಳಾಗಿ ಅಗ್ನಿಹೋತ್ರ ಕರ್ಮವನ್ನು ಪ್ರತಿದಿನ ತಪ್ಪದೆ ಮಾಡುತ್ತಾರೆ. ಇದೂ ಅಲ್ಲದೆ ದೀರ್ಘ ಕಾಲದವರೆಗೆ ನಡೆಯುವ ಪೌಂಡರೀಕ ಯಾಗಾದಿಗಳನ್ನೂ ಸಹ ಮಾಡುವುದುಂಟು. ಗೃಹಸ್ಥರಾದವರು ಇಂತಹ ಧಾರ್ಮಿಕ ಅನುಷ್ಠಾನಗಳನ್ನು ಮಾಡುವಾಗ ಸಪತ್ನೀಕ ರಾಗಿಯೇ ಮಾಡಬೇಕೆಂಬ ನಿಯಮವಿದೆ. ಹೀಗೆ ಪ್ರತಿದಿವಸದ ಅಗ್ನಿಹೋತ್ರವನ್ನು ಮಾಡುವಾಗ ಅಥವಾ ದೀರ್ಘಕಾಲೀನ ಪೌಂಡರೀಕಾದಿ ಯಾಗಗಳನ್ನು ಮಾಡುವಾಗ ಯಜಮಾನನ ಧರ್ಮಪತ್ನಿಯು ರಜಸ್ವಲೆಯಾದರೂ ಸಹ ಅವಳು ಸಚೇಲ ಸ್ನಾನಮಾಡಿ ಆರ್ದ್ರವಸ್ತ್ರದೊಂದಿಗೆ ಹವನ ಕರ್ಮದಲ್ಲಿ ಭಾಗಿಯಾಗಲು ಧರ್ಮಶಾಸ್ತ್ರವು ಸಮ್ಮತಿಯನ್ನಿತ್ತಿದೆ. ನಿತ್ಯ ಅನುಷ್ಠಾನದ ಲೋಪವಾಗಬಾರದೆಂಬುದೇ ಧರ್ಮಶಾಸ್ತ್ರದ ಆದೇಶದ ತಾತ್ಪರ್ಯವಾಗಿದೆ. ಇದೇ ಪ್ರಕಾರವಾಗಿ ವೀರಶೈವರ ಇಷ್ಟಲಿಂಗ ಪೂಜೆಯು ನಿತ್ಯಕರ್ಮವಾಗಿರೋಣದರಿಂದ ಶಿವದೀಕ್ಷಾ ಸಂಪನ್ನಳಾದ ಹೆಣ್ಣುಮಗಳು ರಜಸ್ಸೂತಕ ಪ್ರಾಪ್ತವಾದಾಗಲೂ, ಸ್ನಾನದಿಂದ ಸುಚಿರ್ಭೂತಳಾಗಿ ಗುರುಜಂಗಮರ ಪಾದೋದಕ ವನ್ನು ಪ್ರೋಕ್ಷಿಸಿಕೊಂಡು ಇಷ್ಟಲಿಂಗ ಪೂಜೆಯನ್ನು ಮಾಡಿದರೆ ಅದಾವ ದೋಷವೂ ಇರುವುದಿಲ್ಲ, ಇಷ್ಟಲಿಂಗ ಪೂಜೆಗೆ ಮಾತ್ರ ಈ ಅಶೌಚವನ್ನು ನಿಷೇಧಿಸಲಾಗಿರೋಣ ದರಿಂದ ಅಷ್ಟನ್ನು ಮಾಡಲು ಅವಳಿಗೆ ಅನುಮತಿಯೇ ವಿನಃ ಬೇರಾವ ವ್ಯವಹಾರಗಳಿಗೆ ಅನುಮತಿಯನ್ನು ಕೊಡಲಾಗಿರುವುದಿಲ್ಲ, ಅಂದರೆ ಅನ್ಯವ್ಯಕ್ತಿಗಳ ಸ್ಪರ್ಶ ಅಥವಾ ಪಾಕಾದಿವ್ಯವಹಾರಗಳನ್ನು ಮಾಡಬಾರದೆಂಬುದೇ ಆಚಾರ್ಯರ ಅಭಿಮತವಾಗಿದೆ. ಇದೇ ಮಾತನ್ನೇ ಸಿದ್ಧಾಂತಾಗಮದ ಮೇಲಿನ ಪ್ರಮಾಣ ವಚನದಲ್ಲಿ ಉದಾಹರಣೆ ಪೂರ್ವಕವಾಗಿ ಸ್ಪಷ್ಟಪಡಿಸಲಾಗಿದೆ. ಬಾಯೊಳಗಿನ ನಾಲಿಗೆಯು ಕರಸ್ಪರ್ಶಕ್ಕೆ ಅಯೋಗ್ಯವಾಗಿದ್ದರೂ ಮಂತ್ರೋಚ್ಚಾರಣೆಗೆ ಸದಾ ಪವಿತ್ರವೇ ಆಗಿರುವಂತೆ ರಜಸ್ವಲೆಯು ಅನ್ಯವ್ಯಕ್ತಿಗಳ ಸ್ಪರ್ಶಕ್ಕೆ ಅಪವಿತ್ರಳಾಗಿದ್ದರೂ ಇಷ್ಟಲಿಂಗ ಪೂಜೆಗೆ ಮಾತ್ರ ಸದಾ ಪವಿತ್ರಳೇ ಆಗಿರುತ್ತಾಳೆ. ಆದ್ದರಿಂದ ಅವಳು ರಜಸ್ವಲೆಯೇ ಆಗಿರಲಿ ಅಥವಾ ಪ್ರಸೂತಳೇ ಆಗಿರಲಿ ಅವಳಿಗೆ ಇಷ್ಟಲಿಂಗ ಪೂಜೆಗೆ ಮಾತ್ರ, ಅದಾವ ಅಶೌಚವೂ ಇರುವುದಿಲ್ಲವೆಂಬುದು ಶಾಸ್ತ್ರಪ್ರಮಾಣಸಿದ್ಧವಾದುದು.

''ನ ಹಿಂಸ್ಯಾತ್ ಸರ್ವಾ ಭೂತಾನಿ'', ''ನ. ಮಾಂಸಮಶ್ನೀಯಾತ್'', ''ನೋಚ್ಛಿಷ್ಟಂ ಕಸ್ಯಚಿತ್ ದದ್ಯಾತ್'' ಮುಂತಾದ ಶಾಸ್ತ್ರೀಯ ಆದೇಶಗಳಲ್ಲಿ ಸಾಮಾನ್ಯ ವಾಗಿ ಪ್ರಾಣಿಹಿಂಸೆ, ಮಾಂಸಭಕ್ಷಣೆ ಮತ್ತು ಉಚ್ಛಿಷ್ಟ ಸೇವನೆಯ ಬಗ್ಗೆ ನಿಷೇಧವನ್ನು ಮಾಡಲಾಗಿದ್ದರೂ ''ಅಗ್ನೀಷ್ಟೋಮೀಯಂ ಪಶುಮಾಲಭೇತ, ಸೋಮೇನೋ ಚ್ಛಿಷ್ಟಮ್'' ಇತ್ಯಾದಿ ವಿಶೇಷಶಾಸ್ತ್ರ ಬೋಧಕ ಪ್ರಮಾಣಗಳನುಸಾರವಾಗಿ ಯಜ್ಞದಲ್ಲಿ ಪಶುಬಲಿ, ಮಾಂಸಭಕ್ಷಣೆ ಮತ್ತು ಉಚ್ಛಿಷ್ಟ ಭಕ್ಷಣೆಗಳು ಪ್ರತಿಪಾದಿಸಲ್ಪಟ್ಟಿರೋಣ ದರಿಂದ ಮೇಲಿನ ಸಾಮಾನ್ಯ ನಿಯಮವು ವಿಶೇಷ ನಿಯಮದಿಂದ ಬಾಧಿತವಾಗಿ ವಿಶೇಷ ನಿಯಮಕ್ಕೆ ಪ್ರಾಧಾನ್ಯತೆ ಬರುವಂತೆ, ಸರ್ವಸಾಮಾನ್ಯ ಸ್ತ್ರೀಯರಿಗೆ ರಜಸ್ಸೂತಕ ಮತ್ತು ಪ್ರಸೂತಿಕಾ ಸೂತಕಗಳು ಪ್ರಾಪ್ತಗಳಾದರೂ, ಲಿಂಗಧಾರಿಗಳಾದ ವೀರಶೈವ ಸ್ತ್ರೀಯರಿಗೆ

ಸೂತಕಗಳಿಲ್ಲವೆಂಬ ವಿಶೇಷಗಳಾದ ಶಾಸ್ತ್ರಪ್ರಮಾಣಗಳು ಪ್ರತಿಪಾದಿಸಲ್ಪಟ್ಟಿರೋಣದ ರಿಂದ ವಿಶೇಷ ನಿಯಮದಿಂದ ಸಾಮಾನ್ಯ ನಿಯಮವು ಬಾಧಿತವಾಗಿ ವೀರಶೈವ ಸ್ತ್ರೀಯರಿಗೆ ಸೂತಕ ನಿಷೇಧವು ಸಿದ್ಧವಾಗುತ್ತದೆ.

ಸಾಮಾನ್ಯವಾಗಿ ವರ್ಷಾಋತುವಿನಲ್ಲಿ ನದಿಗಳಿಗೆ ಹೊಸನೀರು ಬಂದಾಗ ಆ ನೀರು ಬಹಳಷ್ಟು ಮಲಿನವಾಗಿರೋಣದರಿಂದ ಆಗ ನದಿಗೆ ರಜಸ್ಸೂತಕವು ಪ್ರಾಪ್ತವಾಗಿದೆಯೆಂದು ತಿಳಿಸಿ ಧರ್ಮಶಾಸ್ತ್ರದಲ್ಲಿ ನದಿಯ ಆ ಹೊಸನೀರಿನಲ್ಲಿ ಸ್ನಾನ ಮಾಡಬಾರದೆಂಬ ನಿಷೇಧವಿದೆ. ಎಲ್ಲ ನದಿಗಳಿಗೆ ಈ ನಿಮಯವು ಸಂಬಂಧ ಪಡುತ್ತಿದ್ದರೂ ಗಂಗಾನದಿಗೆ ಮಾತ್ರ ಅದು ಸಂಬಂಧಪಡುವುದಿಲ್ಲ. ಗಂಗಾನದಿಯು ಶಿವನ ಜಡೆಯಿಂದ ಬಂದಿರೋಣದರಿಂದ ಶಿವಸಂಗವನ್ನು ಹೊಂದಿದ ಗಂಗೆಗೆ ಈ ಸೂತಕವು ಇಲ್ಲದಿರೋಣದರಿಂದ ವರ್ಷಾಋತುವಿನಲ್ಲಿ ಅರ್ಥಾತ್ ಮಳೆಗಾಲದಲ್ಲಿ ಗಂಗಾನದಿ ಸ್ನಾನವು ನಿಷೇಧಿಸಲ್ಪಟ್ಟಿರುವುದಿಲ್ಲ. ಶಿವಸಂಬಂಧವನ್ನು ಹೊಂದಿದ ಗಂಗಾನದಿಗೆ ಅದೆಂದೂ ರಜಸ್ಸೂತಕವಿಲ್ಲದಿರುವಂತೆ ಲಿಂಗಾಂಗಸಂಗಿಗಳಾದ ವೀರಶೈವ ಸ್ತ್ರೀಯರಿಗೂ ಸಹ ಈ ರಜಸ್ಸೂತಕಾದಿಗಳು ಇಷ್ಟಲಿಂಗ ಪೂಜೆಯಲ್ಲಿ ಪ್ರತಿಬಂಧಕ ಗಳಾಗಲಾರವು ಎಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

ಶ್ರೀ ನಂದಿಕೇಶ್ವರ ಶಿವಾಚಾರ್ಯರು ತಮ್ಮ ''ಲಿಂಗಧಾರಣ ಚಂದ್ರಿಕಾ'' ಗ್ರಂಥದಲ್ಲಿ ಈ ಸೂತಕಾದಿಗಳ ಬಗ್ಗೆ ವಿಚಾರಮಾಡುತ್ತ ಶಿವದೀಕ್ಷಾ ಸಂಪನ್ನಳಾದ ವೀರಶೈವ ಸ್ತ್ರೀಯು ಸದಾ ಪರಿಶುದ್ಧಳೇ ಆಗಿರೋಣದರಿಂದ ಕೇವಲ ಲಿಂಗಪೂಜೆ ಯಲ್ಲಷ್ಟೇ ಏಕೆ ? ಅವಳಿಗೆ ಪಾಕಾದಿ ವ್ಯವಹಾರಗಳನ್ನು ಮಾಡುವಲ್ಲಿ ಅದಾವ ಅಶೌಚವೂ ಬರಲಾರದೆಂಬುದಾಗಿ ತಮ್ಮ ಅಭಿಮತವನ್ನು ವ್ಯಕ್ತಪಡಿಸಿದ್ದಾರೆ. ಈ ಸಂದರ್ಭದಲ್ಲಿ ತಮ್ಮ ಮತವನ್ನು ಸಮರ್ಥಿಸುವುದಕ್ಕಾಗಿ–

ಲಿಂಗಾರ್ಚನರತಾನಾರೀ ಸೂತಕೀ ತು ರಜಸ್ವಲಾ ।
ರವಿರಗ್ನಿರ್ಯಥಾವಾಯುಃ ಕೋಟಿ ಕೋಟಿ ಗುಣಶ್ಶುಚಿಃ ॥

(ವೀರಾಗಮ)

ಯಥಾಹ್ಯಗ್ನಿಸಮಾವೇಶಾನ್ನಾಯೋ ಭವತಿ ಕೇವಲಮ್ ।
ತಥೈವ ಮಮಸಾನ್ನಿಧ್ಯಾನ್ನ ತೇ ಪ್ರಕೃತಿಮಾನುಷಾಃ ॥

(ಪದ್ಮಪುರಾಣ)

ತೈಲಯುಕ್ತಂತು ಕಾರ್ಪಾಸಂ ಜ್ಯೋತಿಸ್ಪರ್ಶಾತ್ ತಥೈವತತ್ ।
ಸ್ನೇಹಯುಕ್ತಸ್ಯ ಸದ್ಭಕ್ತೇರ್ಲಿಂಗಸ್ಪರ್ಶೇನ ಲಿಂಗತಾ ॥

(ಶಿವರಹಸ್ಯ)

ಶೈವಂ ಲಿಂಗಾರ್ಚನಂ ಯಸ್ಯ ಯಸ್ಯಚಾಗ್ನಿಪರಿಗ್ರಹಃ ।
ವಾನಪ್ರಸ್ಥಥೀನಾಂಚ ಶ ರೀರೇ ನಾಸ್ತಿ ಸೂತಕಮ್ ॥

(ಪರಾಶರಸ್ಮೃತಿ)

ಹೀಗೆ ವೀರಾಗಮ, ಪದ್ಮಪುರಾಣ, ಶಿವರಹಸ್ಯ ಮತ್ತು ಪರಾಶರ ಸ್ಮೃತಿಗಳ ಪ್ರಮಾಣ ವಚನಗಳನ್ನು ಉದಾಹರಿಸಿದ್ದಾರೆ. ಇವುಗಳ ತಾತ್ಪರ್ಯವೇನೆಂದರೆ ಸೂರ್ಯ, ಅಗ್ನಿ ಮತ್ತುವಾಯುಗಳು, ಸದಾಶುದ್ಧಗಳಾಗಿರುವಂತೆ ಲಿಂಗಧಾರಿಯಾಗಿ ಲಿಂಗಾರ್ಚನೆಯನ್ನು ಮಾಡುತ್ತಿರುವ ನಾರಿಯೂ ಸಹ ಸೂತಕವರ್ಜಿತಳಾಗಿರುತ್ತಾಳೆ. ಅವಳು ಕೋಟಿಗುಣ ಶುಚಿಯಾಗಿರುತ್ತಾಳೆ. ಅಗ್ನಿಯ ಸಂಪರ್ಕವನ್ನು ಹೊಂದಿದ ಕಬ್ಬಿಣವು ಕೇವಲ ಕಬ್ಬಿಣ ವಾಗಿರದೆ ಅಗ್ನಿಸಮವೇತ ಕಬ್ಬಿಣವಾಗಿರುವಂತೆ ಲಿಂಗಧಾರಿಯಾದ ಹೆಣ್ಣುಮಗಳು ಉಳಿದ ಪ್ರಾಕೃತ ಹೆಣ್ಣುಮಕ್ಕಳಂತೆ ಕೇವಲ ಹೆಣ್ಣುಮಗಳಾಗಿರದೆ ಲಿಂಗಧಾರಿಯಾದ ಹೆಣ್ಣುಮಗಳಾಗಿದ್ದಾಳೆ. ಆದ್ದರಿಂದ ಅಗ್ನಿಯ ಸಂಪರ್ಕದಿಂದ ಕಬ್ಬಿಣವು ಅಗ್ನಿಸ್ವರೂಪ ವನ್ನೇ ತಾಳಿ ವಸ್ತುಗಳನ್ನು ಸುಡುವ ಸಾಮರ್ಥ್ಯವನ್ನು ಹೊಂದಿದಂತೆ, ಲಿಂಗಸಂಬಂಧ ವನ್ನು ಪಡೆದ ಸ್ತ್ರೀಯು ಲಿಂಗಸ್ವರೂಪಳೇ ಆಗಿರುವುದರಿಂದ ಇವಳಿಗೆ ಅದಾವ ಸೂತಕಗಳ ಸ್ಪರ್ಶವಾಗದೆ ಸದಾ ಪವಿತ್ರಳೇ ಆಗಿರುತ್ತಾಳೆ. ಅದೇ ಪ್ರಕಾರವಾಗಿ ಎಣ್ಣೆಯ ಸಂಪರ್ಕವನ್ನು ಹೊಂದಿದ ಅರಳೆಗೆ ಜ್ಯೋತಿಯ ಸ್ಪರ್ಶವಾದೊಡನೆ ಅದು ಜ್ಯೋತಿ ಸ್ವರೂಪವೇ ಆದಂತೆ, ಲಿಂಗದ ಮೇಲೆ ಪ್ರೀತಿಯುಕ್ತನಾದ ಸದ್ಭಕ್ತನಿಗೆ ಲಿಂಗಸಂಬಂಧ ವಾಗಲು ಆತನೂ ಸಹ ಲಿಂಗರೂಪನೇ ಆಗುತ್ತಾನೆ. ಹೀಗೆ ಲಿಂಗರೂಪವಾದವರಿಗೆ ಅದಾವ ಸೂತಕದ ಬಾಧೆಯುಂಟಾಗುವುದಿಲ್ಲ. ಅದರಂತೆ ಇಷ್ಟಲಿಂಗವನ್ನು ಪೂಜಿಸು ವವರಿಗೆ, ಪ್ರತಿದಿವಸ ಅಗ್ನಿಹೋತ್ರಕರ್ಮವನ್ನು ಮಾಡುವವರಿಗೆ, ವಾನಪ್ರಸ್ಥಾಶ್ರಮ ವನ್ನಾಗಲಿ ಅಥವಾ ಸನ್ಯಾಸಾಶ್ರಮವನ್ನಾಗಲಿ ಸ್ವೀಕರಿಸಿದವರಿಗೆ ಯಾವ ಸೂತಕವೂ ಅಂಟಿ ಕೊಳ್ಳಲಾರದು ಎಂಬುದಾಗಿ ಮೇಲಿನ ಪ್ರಮಾಣವಚನಗಳಲ್ಲಿ ಸ್ಪಷ್ಟಪಡಿಸಿದ್ದನ್ನು ಕಾಣುತ್ತೇವೆ. ಈ ಪ್ರಮಾಣಗಳ ಮೂಲಕವಾಗಿಯೇ ಶ್ರೀ ನಂದಿಕೇಶ್ವರ ಶಿವಾಚಾರ್ಯರು ವೀರಶೈವ ಸ್ತ್ರೀಯರಿಗೆ ಸೂತಕವಿಲ್ಲದಿರುವುದನ್ನು ಸಮರ್ಥಿಸಿದ್ದಾರೆ.

ಆದಕಾರಣ ಲಿಂಗಧಾರಿಗಳಾದ ವೀರಶೈವ ಸ್ತ್ರೀಯರಿಗೆ ರಜಸ್ಸೂತಕ ಮತ್ತು ಪ್ರಸೂತಿಕಾ ಸೂತಕಗಳು ಲಿಂಗಪೂಜಾದಿ ಕರ್ಮಗಳಲ್ಲಿ ಪ್ರತಿಬಂಧಕಗಳಾಗುವುದಿಲ್ಲ ವೆಂಬುದನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳಬೇಕು.

ಇದೇ ಪ್ರಕಾರವಾಗಿ ವೀರಶೈವರಿಗೆ ಮರಣ ಸೂತಕವೂ ಸಹ ಇರುವುದಿಲ್ಲ. ಅಂದರೆ ಮನೆಯಲ್ಲಿ ಯಾರಾದರೂ ಲಿಂಗೈಕ್ಯರಾದರೆ ಆ ಲಿಂಗೈಕ್ಯನಾದ ವ್ಯಕ್ತಿಗೆ ಸ್ನಾನಾದಿಗಳನ್ನು ಮಾಡಿಸಿ ಆತನ ಪಾರ್ಥಿವ ದೇಹವನ್ನು ಭಸ್ಮರುದ್ರಾಕ್ಷಿಗಳಿಂದ ಅಲಂಕರಿಸಿ ಅವನ ಕಂಠದಲ್ಲಿರುವ ಲಿಂಗವನ್ನು ಪೂಜಿಸಿ ಪುನಃ ಆತನ ಕಂಠದಲ್ಲಿಯೇ ಕಟ್ಟುತ್ತಾರೆ. ಇದೂ ಅಲ್ಲದೆ ಅಂತ್ಯಕ್ರಿಯೆಯನ್ನು ಮಾಡಿಬಂದ ಬಳಿಕ ಮನೆಯನ್ನು ಸಾರಿಸಿ ಇಲ್ಲವೆ ತೊಳೆದು ಶುಚಿಗೊಳಿಸಿ, ಮನೆಯ ಗುರುಗಳನ್ನು ಬರಮಾಡಿಕೊಂಡು, ಅವರ ಲಿಂಗಪೂಜಾ ಸಮಾರಂಭವನ್ನೇರ್ಪಡಿಸಿ ಪ್ರತಿಯೊಬ್ಬರೂ ಅದರಲ್ಲಿ ಭಾಗಿಗಳಾಗಿ ಪಾದೋದಕ ಪ್ರಸಾದಗಳನ್ನು ಸೇವಿಸಿ ಪುನೀತರಾಗಬೇಕೆಂಬ ನಿಯಮವಿದೆ. ಆದ್ದರಿಂದ ಉಳಿದವರಿಗೆ ಪ್ರಾಪ್ತವಾಗುವ ದ್ವಾದಶದಿನ ಪರಿಮಿತವಾದ ಮರಣಸೂತಕವು ವೀರಶೈವರ ಇಷ್ಟಲಿಂಗ ಪೂಜೆಗೆ ಪ್ರತಿಬಂಧಕವಾಗುವುದಿಲ್ಲ. ಅಂತೆಯೇ ವೀರಶೈವರಿಗೆ ಮರಣಸೂತಕವಿಲ್ಲ ಎಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು.

ಇದೇ ತೆರನಾಗಿ ವೀರಶೈವ ಸಿದ್ಧಾಂತದಲ್ಲಿ ಪಾದೋದಕ–ಪ್ರಸಾದ ಸೇವನೆಯಲ್ಲಿ ಉಚ್ಛಿಷ್ಟ ಸೂತಕವನ್ನೂ ಸಹ ನಿಷೇಧಿಸಲಾಗಿದೆ. ಒಂದು ಪಾತ್ರೆಯಲ್ಲಿಯ ಪೇಯ ಇಲ್ಲವೆ ಖಾದ್ಯ ಪದಾರ್ಥವನ್ನು ಯಾರೊಬ್ಬರು ತೆಗೆದುಕೊಂಡು ಸೇವಿಸಿದರೆ ಆ ಸೇವನೆಯ ನಂತರ ಉಳಿದಿರುವ ಪದಾರ್ಥಕ್ಕೆ ಉಚ್ಛಿಷ್ಟವೆಂದು ಕರೆಯುವರು. ಸರ್ವೇಸಾಮಾನ್ಯವಾಗಿ ಅನ್ಯರ ಭಕ್ಷ್ಯಾವಶೇಷವಾದ ಉಚ್ಛಿಷ್ಟವನ್ನು ಬೇರೆಯವರಾರೂ ಸೇವಿಸಬಾರದೆಂಬ ಸಾಮಾನ್ಯವಾದ ನಿಯಮವುಂಟು. ಆದರೆ ವೀರಶೈವ ಪೂಜಾವಿಧಾನದಲ್ಲಿ ಗುರುವಿನ ಪಾದಪೂಜಾ ಸಮಾರಂಭದಲ್ಲಿ ಅನೇಕ ಜನರು ಸಹಭಾಗಿಗಳಾಗಿ ಗುರುಪಾದ ಪೂಜೆಯ ನಂತರ ಒಂದು ಪಾತ್ರೆಯಲ್ಲಿ ಸಂಗ್ರಹಿತವಾದ ಪಾದೋದಕವನ್ನು ಮೊದಲು ಗುರುಗಳು ಸೇವಿಸಿದ ನಂತರ ಅಲ್ಲಿರುವ ಅನ್ಯಭಕ್ತಾದಿಗಳು ಕ್ರಮವಾಗಿ ಒಬ್ಬರನಂತರ ಒಬ್ಬರಂತೆ ಪ್ರತಿಯೊಬ್ಬರೂ ಆ ಒಂದೇ ಪಾತ್ರೆಯಲ್ಲಿಯ ಪಾದೋದಕವನ್ನು ಸ್ವೀಕರಿಸುತ್ತಾರೆ. ಹೀಗೆ ಸ್ವೀಕರಿಸುವುದು ಉಚ್ಛಿಷ್ಟ ಸ್ವೀಕಾರವಲ್ಲವೇ ? ಇದನ್ನು ಸ್ವೀಕರಿಸುವುದು ಯೋಗ್ಯವೇ ? ಎಂಬ ಪ್ರಶ್ನೆಯು ಉಪಸ್ಥಿತವಾಗಲು ವೀರಶೈವಾಚಾರ್ಯರು ಪಾದೋದಕ ಪ್ರಸಾದಗಳಿಗೆ ಉಚ್ಛಿಷ್ಟ (ಎಂಜಲು) ದೋಷವನ್ನು ಎಣಿಸಬಾರದೆಂಬುದಾಗಿ ಆದೇಶವಿತ್ತಿದ್ದಾರೆ. ಅದೂ ಒಂದು ಗುರು–ಶಿಷ್ಯರ ಸಾಮರಸ್ಯದ ಸಂಕೇತವಾಗಿದೆ. ಆದಕಾರಣ ಈ ಪಾದೋದಕ ಪ್ರಸಾದ ಸೇವನೆಯಲ್ಲಿ ಉಚ್ಛಿಷ್ಟ ದೋಷವಿರುವುದಿಲ್ಲ.

ವೈದಿಕ ಸಂಪ್ರದಾಯದಲ್ಲಿಯೂ ಸಹ ಅಗ್ನಿಸೋಮಯಾಗವನ್ನು ಮಾಡಿ ಯಜ್ಞದ ಕೊನೆಗೆ ಒಂದು ಪಾತ್ರೆಯಲ್ಲಿ ಅವಶಿಷ್ಟವಾಗಿರುವ ಸೋಮರಸವನ್ನು ಯಜ್ಞದಲ್ಲಿ ಸಹಭಾಗಿಗಳಾಗಿರುವ ಋತ್ವಿಜರೆಲ್ಲರೂ ಒಬ್ಬೊಬ್ಬರಾಗಿ ಸ್ವೀಕರಿಸಿದರೂ ಅಲ್ಲಿ ಹೇಗೆ ಉಚ್ಛಿಷ್ಟದೋಷವುಂಟಾಗುವುದಿಲ್ಲವೆಂಬ ಶಾಸ್ತ್ರ ನಿಯಮವಿದೆಯೋ ಅದರಂತೆ ವೀರಶೈವ ಸಿದ್ಧಾಂತದಲ್ಲಿ ಪಾದೋದಕ ಪ್ರಸಾದ ಸೇವನೆಯಲ್ಲಿಯೂ ಉಚ್ಛಿಷ್ಟ ಸೂತಕವಿರುವುದಿಲ್ಲ. ಆದ್ದರಿಂದಲೇ ಸರ್ವಜ್ಞ ಕವಿಯು–

ಗುರುವ ನರನೆಂದವಗೆ । ಹರನ ಶಿಲೆಯೆಂದವಗೆ
ಕರುಣಪ್ರಸಾದವನು ಎಂಜಲೆಂದವಗೆ
ನರಕತಪ್ಪುವುದೆ ? ಸರ್ವಜ್ಞ

ತನ್ನ ಈ ವಚನದಲ್ಲಿ ಗುರುಲಿಂಗಗಳ ಮಹಿಮೆಯನ್ನು ಹೇಳುವುದರ ಜೊತೆಗೆ ಕರುಣ ಪ್ರಸಾದಕ್ಕೆ ಅರ್ಥಾತ್ ಪಾದೋದಕ ಪ್ರಸಾದಗಳಿಗೆ ಎಂಜಲು ದೋಷವು ಅಂದರೆ ಉಚ್ಛಿಷ್ಟ ಸೂತಕವು ಇಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾನೆ. ಆದುದರಿಂದ ವೀರಶೈವ ಸಿದ್ಧಾಂತದ ಪ್ರಕಾರ ಪಾದೋದಕ–ಪ್ರಸಾದ ಸೇವನೆಯಲ್ಲಿ ಉಚ್ಛಿಷ್ಟ ಸೂತಕವಿರುವುದಿಲ್ಲವೆಂಬುದನ್ನು ಸರ್ವರೂ ಖಚಿತಪಡಿಸಿಕೊಳ್ಳಬೇಕು.

ಈ ಪಂಚಸೂತಕಗಳಲ್ಲಿ ಉಳಿದಿರುವ ಸೂತಕವೇ ಜಾತಿಸೂತಕವು. ಯಾವುದೇ ಹೀನಜಾತಿಯಲ್ಲಿ ಜನಿಸಿದ್ದರೂ, ಆತನು ಒಂದು ವೇಳೆ ವೀರಶೈವ ಆಚಾರ್ಯರಿಗೆ ಶರಣಾಗಿ ವಿಧಿವತ್ತಾಗಿ ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದರೆ ಆತನ ಮೊದಲಿನ

ಜಾತಿಯು ಇಲ್ಲದಾಗಿ ಆತನು ಶಿವಭಕ್ತನೇ ಆಗೋಣದರಿಂದ ಪರಂಪರಾಗತ ಶಿವಭಕ್ತರು ಅವನೊಂದಿಗೆ ಯಾವುದೇ ಪ್ರಕಾರದ ಭೇದಭಾವವನ್ನು ಮಾಡಬಾರದೆಂಬುದಾಗಿ ಆಚಾರ್ಯರ ಆದೇಶವಾಗಿದೆ. ಅನೇಕ ಜಾತಿಯ ಕಟ್ಟಿಗೆಗಳನ್ನು ಬೆಂಕಿಯಲ್ಲಿ ಹಾಕುವ ಪೂರ್ವದಲ್ಲಿ ಅವುಗಳನ್ನು ಆಯಾ ಜಾತಿಯಿಂದ ಗುರುತಿಸಲು ಸಾಧ್ಯವಾದರೂ, ಬೆಂಕಿಯಲ್ಲಿ ದಗ್ಧವಾದ ಬಳಿಕ ಅವುಗಳ ಜಾತಿಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ, ಅವು ತಮ್ಮನ್ನು ದಹಿಸಿಕೊಳ್ಳುವುದರ ಜೊತೆಗೆ ಜಾತಿಯನ್ನು ಕಳೆದುಕೊಳ್ಳುತ್ತವೆ. ಇದರಂತೆ ಶಿವದೀಕ್ಷಾಸಂಸ್ಕಾರವನ್ನು ಪಡೆಯುವ ಪೂರ್ವದಲ್ಲಿ ವ್ಯಕ್ತಿಗಳು ಭಿನ್ನ ಭಿನ್ನ ಜಾತಿಯವ ರಾಗಿದ್ದರೂ ಸಂಸ್ಕಾರವನ್ನು ಪಡೆದ ಬಳಿಕ ಅವರ ಆ ಪೂರ್ವದ ಜಾತಿಗಳು ಇಲ್ಲದಾಗಿ ಎಲ್ಲರೂ ಶಿವಭಕ್ತರೆಂಬ ವರ್ಗಕ್ಕೆ ಸೇರಿಕೊಳ್ಳುತ್ತಾರೆ. ಹೀಗೆ ಸಂಸ್ಕಾರ ಹೊಂದಿದ ಬಳಿಕ ಅವರಲ್ಲಿ ಜಾತಿ ಭೇದವನ್ನು ಮಾಡದಿರುವುದೇ ಜಾತಿ ಸೂತಕ ನಿಷೇಧದ ತಾತ್ಪರ್ಯ ವಾಗಿದೆ.

ಈ ವಿಧವಾಗಿ ವೀರಶೈವ ಆಚಾರ್ಯರು ಧರ್ಮಶಾಸ್ತ್ರಕ್ಕನುಗುಣವಾಗಿ ಪಂಚಸೂತಕಗಳನ್ನು ನಿಷೇಧಿಸಿರುವುದನ್ನು ಕಾಣುತ್ತೇವೆ. ಈ ಸೂತಕ ನಿಷೇಧದ ಪ್ರಕರಣವನ್ನು ಭಕ್ತರಾದವರು ಸರಿಯಾಗಿ ಅರ್ಥಮಾಡಿಕೊಂಡು ತಮ್ಮ ನಿತ್ಯಜೀವನ ದಲ್ಲಿ ಪ್ರಸಂಗಾನುಸಾರವಾಗಿ ಅವುಗಳನ್ನು ಆಚರಿಸಿ ಈ ಧರ್ಮ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಹೋಗಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೪ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)

■■

ಆಶೀರ್ವಚನ-೭

# ಭಕ್ತಮಾರ್ಗಕ್ರಿಯಾಸ್ಥಲ

ಜ್ಞಾನಾಸಕ್ತ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತವಾದ ಭಕ್ತಮಾರ್ಗ ಕ್ರಿಯಾಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಇಲ್ಲಿಯವರೆಗೆ ಪಂಚಸೂತಕಗಳ ಬಗ್ಗೆ ಧರ್ಮಶಾಸ್ತ್ರದ ನಿರ್ಣಯವನ್ನು ಆದೇಶವಿತ್ತ ಪೂಜ್ಯರು ಶಿವಭಕ್ತನಾದವನು ತೀರ್ಥಯಾತ್ರೆಯನ್ನು ಮಾಡಬೇಕೋ ಮಾಡಬಾರದೋ ಎಂಬ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಪೂಜ್ಯರು–

ಶಿವಸ್ಥಾನಾನಿ ತೀರ್ಥಾನಿ ವಿಶಿಷ್ಟಾನಿ ಶಿವಾರ್ಚಕಃ ।
ಶಿವಯಾತ್ರೋತ್ಸವಂ ನಿತ್ಯಂ ಸೇವೇತ ಪರಯಾ ಮುದಾ ॥

ಶಿವಕ್ಷೇತ್ರೋತ್ಸವ ಮಹಾಯಾತ್ರಾದರ್ಶನಕಾಂಕ್ಷಿಣಾಮ್ ।
ಮಾರ್ಗೇಽನ್ನಪಾನದಾನಂ ಚ ಕುರ್ಯಾನ್ಮಾಹೇಶ್ವರೋ ಜನಃ ।

ನಾನ್ನತೋಯಸಮಂ ದಾನಂ ನ ಚಾಹಿಂಸಾಪರಂ ತಪಃ ।
ತಸ್ಮಾನ್ಮಾಹೇಶ್ವರೋ ನಿತ್ಯಮನ್ನತೋಯಪ್ರದೋ ಭವೇತ್ ॥

(ಸಿ. ಶಿ. ೯; ೪೭–೪೯)

ಈ ತೆರನಾಗಿ ಉಪದೇಶಿದ್ದಾರೆ. ತಾತ್ಪರ್ಯವೇನೆಂದರೆ, ಇಷ್ಟಲಿಂಗಧಾರಿಯಾದ ಶಿವಭಕ್ತನು ಶಿವನಿವಾಸದ ಶ್ರೇಷ್ಠ ಕ್ಷೇತ್ರಗಳಾದ ಕಾಶಿ, ಕೇದಾರ, ಶ್ರೀಶೈಲ, ರಾಮೇಶ್ವರ ಮೊದಲಾದ ತೀರ್ಥ–ಕ್ಷೇತ್ರಗಳಿಗೆ ಹೋಗಿ ಅಲ್ಲಿಯ ಶಿವತೀರ್ಥಗಳಲ್ಲಿ ಮಂಗಲ ಸ್ನಾನವನ್ನು ಮಾಡಿ ಅಲ್ಲಿ ನಡೆಯುವ ರಥೋತ್ಸವ ಜಾತ್ರೆಗಳಲ್ಲಿ ಸೇವೆಯನ್ನು ಮಾಡಿ ಪರಮ ಸಂತೋಷವನ್ನು ಪಡೆಯಬೇಕು. ಇದೂ ಅಲ್ಲದೆ ಶಿವಕ್ಷೇತ್ರದರ್ಶನಕ್ಕಾಗಿ ಹೊರಟಿರುವ ಯಾತ್ರಾರ್ಥಿಗಳಿಗೆ ಮಾರ್ಗದಲ್ಲಿ ಅನ್ನಛತ್ರ ಅರವಟ್ಟಿಗೆಗಳನ್ನಿಟ್ಟು ಅವರ ಆತಿಥ್ಯವನ್ನು ಸಹ ಮಾಡಬೇಕು. ಅನ್ನಪಾನಾದಿ ದಾನಗಳಿಗೆ ಸಮಾನವಾದ ದಾನವು ಬೇರೊಂದಿರುವುದಿಲ್ಲ, ಅದರಂತೆ ಅಹಿಂಸೆ ಸಮಾನವಾದ ತಪಸ್ಸು ಸಹ ಬೇರಿರುವುದಿಲ್ಲ. ಇದನ್ನರಿತ ಈ ಇಷ್ಟಲಿಂಗಧಾರಿಯಾದ ಶಿವಭಕ್ತನು ತನ್ನ ಶಕ್ತ್ಯಾನುಸಾರವಾಗಿ ಯಾವಾಗಲೂ ಅನ್ನಪಾನಾದಿಗಳ ದಾನವನ್ನು ಮಾಡುತ್ತಲಿರಬೇಕು ಎಂಬುದು ಪೂಜ್ಯಪಾದರ ಉಪದೇಶದ ಆಶಯವಾಗಿದೆ.

ವೀರಶೈವ ಸಿದ್ಧಾಂತದಲ್ಲಿ 'ಉಪಚಾರಪೂಜೆ' ಮತ್ತು 'ಸಮರಸಪೂಜೆ' ಯೆಂಬುದಾಗಿ ಪೂಜೆಯ ಎರಡು ವಿಧಾನಗಳಿವೆ. ಇಷ್ಟಲಿಂಗಪೂಜೆಯು ಸಮರಸಪೂಜೆಯೆಂದು ಕರೆಯಿಸಿಕೊಂಡರೆ, ದೇವಾಲಯಗಳಲ್ಲಿಯ ಸ್ಥಾವರಲಿಂಗ ಪೂಜೆಯು ಉಪಚಾರ

ಪೂಜೆಯೆಂದು ಕರೆಯಲ್ಪಡುತ್ತದೆ. ವ್ಯಾವಹಾರಿಕ ದೃಷ್ಟಿಯಿಂದ ನೋಡಿದಾಗ ಇವೆರಡನ್ನೂ ಮಾಡುವುದು ಉಚಿತವೇ ಸರಿ. ಮನೆಗೆ ಬಂದ ಸೊಸೆಯು ಗಂಡನ ಸೇವೆಯನ್ನು ಮಾಡುವುದರ ಜೊತೆಗೆ ಮನೆಯಲ್ಲಿರುವ ಅತ್ತೆ, ಮಾವ, ಮೈದುನ, ಭಾವ, ಮೊದಲಾದವರ ಉಪಚಾರವನ್ನೂ ಸಹ ಮಾಡಬೇಕಾಗುವುದು. ಗಂಡನ ಸೇವೆಯನ್ನು ಮಾಡುವುದು ಅವಳ ಪ್ರಮುಖ ಧರ್ಮವಾಗಿದ್ದರೂ ಲೋಕರೂಢಿಯನ್ನು ಉಳಿಸಿ ಕೊಂಡು ಹೋಗಲು ಮತ್ತು ಶಿಷ್ಟಾಚಾರವನ್ನು ಪರಿಪಾಲಿಸಲು ಮನೆಯಲ್ಲಿರುವ ಉಳಿದವರ ಸೇವೆಯನ್ನೂ ಸಹ ಆಕೆಯು ಹೇಗೆ ಮಾಡುತ್ತಾಳೆಯೋ ಅದರಂತೆಯೇ ಇಷ್ಟಲಿಂಗಧಾರಿಯಾದ ಶಿವಭಕ್ತನಿಗೆ ಇಷ್ಟಲಿಂಗ ಪೂಜೆಯೇ ಪ್ರಮುಖ ಪೂಜೆ ಯಾಗಿದ್ದರೂ, ಗ್ರಾಮದೇವರ ಇಲ್ಲವೆ ಕ್ಷೇತ್ರಗಳಲ್ಲಿರುವ ಶಿವಪೂಜೆ, ಶಿವದರ್ಶನ ಗಳನ್ನು ಮಾಡುವುದು ಶಿಷ್ಟಾಚಾರವಾಗಿರೋಣದರಿಂದ ಅದನ್ನು ಮಾಡಿದರೆ ಅದಾವ ದೋಷವೂ ಇರುವುದಿಲ್ಲ. ಇಷ್ಟಲಿಂಗ ಪೂಜೆಯು ಸಮರಸಪೂಜೆಯಾದರೆ ದೇವಾಲಯ ಗಳಲ್ಲಿಯ ಶಿವಲಿಂಗ ಪೂಜೆಯು ಉಪಚಾರಪೂಜೆಯೆಂದು ಕರೆಯಿಸಿಕೊಳ್ಳುವುದರ ಕಾರಣದಿಂದ ಪರಸ್ಪರ ವಿರೋಧವೇನೂ ಉಂಟಾಗುವುದಿಲ್ಲ.

ಇನ್ನೊಂದು ರೀತಿಯಿಂದ ವಿಚಾರಿಸಲಾಗಿ ವೀರಶೈವರ ತೀರ್ಥಯಾತ್ರೆಯ ಪ್ರಯೋಜನವು ಕೇವಲ ಕ್ಷೇತ್ರಸ್ಥ ಶಿವಲಿಂಗ ದರ್ಶನವೇ ಆಗಿರದೆ ಕ್ಷೇತ್ರದಲ್ಲಿ ಇಷ್ಟಲಿಂಗ ಪೂಜೆಯನ್ನು ಮಾಡಿಕೊಳ್ಳುವುದೂ ಆಗಿದೆ. ನಾವು ನಮ್ಮ ಮನೆಯಲ್ಲಿ ಇಷ್ಟಲಿಂಗ ಪೂಜೆಯನ್ನು ಮಾಡಿದರೆ ಎಷ್ಟು ಫಲವು ಪ್ರಾಪ್ತಿಯಾಗುವುದೋ, ಅದಕ್ಕಿಂತಲೂ ಹೆಚ್ಚಿನ ಫಲವು ತೀರ್ಥಕ್ಷೇತ್ರಗಳಲ್ಲಿ ಕುಳಿತು ಮಾಡಿದರೆ ಪ್ರಾಪ್ತವಾಗುವುದು. ಪೂಜೆಯ ಫಲದ ಅಭಿವೃದ್ಧಿಯಲ್ಲಿ ಸ್ಥಾನ ಹಾಗೂ ಸಮಯಗಳೂ ಸಹ ವಿಶೇಷ ಸಹಕಾರಿಯಾಗಿ ರುತ್ತವೆಂಬುದನ್ನು ಅಲ್ಲಲ್ಲಿ ಪ್ರತಿಪಾದಿಸಿರುವುದನ್ನು ಕಾಣುತ್ತೇವೆ. ನಾವು ವಾಸಿಸುವ ಮನೆಯು ಭೋಗಭೂಮಿಯೆಂದು ಕರೆಯಿಸಿಕೊಂಡರೆ ದೇವಸ್ಥಾನ, ಮಠ, ನದಿಯ ದಂಡೆ, ಪರ್ವತಶಿಖರ ಮತ್ತು ಜ್ಯೋತಿರ್ಲಿಂಗಗಳ ಸ್ಥಾನಗಳಾದ ಶಿವಕ್ಷೇತ್ರಗಳು ಯೋಗ ಭೂಮಿಗಳೆಂದು ಕರೆಯಲ್ಪಡುತ್ತವೆ. ಭೋಗಭೂಮಿಯಾದ ನಮ್ಮ ಮನೆಯಲ್ಲಿ ನಾವು ಲಿಂಗಪೂಜೆಗೆ ಕುಳಿತಾಗ ನಮ್ಮ ಮನಸ್ಸು ಎಷ್ಟು ಶಾಂತವೂ ಮತ್ತು ಏಕಾಗ್ರವೂ ಆಗುವುದೋ, ಅದರ ಎಷ್ಟೋ ಪಟ್ಟು ಹೆಚ್ಚಿನ ಏಕಾಗ್ರತಾದಿಗಳು ಮೇಲೆ ವಿವರಿಸಿದ ಯೋಗಭೂಮಿಗಳಲ್ಲಿ ಕುಳಿತು ಮಾಡಿದಾಗ ಮನಸ್ಸಿಗೆ ಪ್ರಾಪ್ತವಾಗುವುವು. ಆದಕಾರಣ ವೀರಶೈವಭಕ್ತನು ತೀರ್ಥಕ್ಷೇತ್ರಗಳಿಗೆ ಹೋದಾಗ ಮೊಟ್ಟಮೊದಲು ತನ್ನ ನಿತ್ಯಕರ್ಮವಾದ ಇಷ್ಟಲಿಂಗ ಪೂಜೆಯನ್ನು ವಿಧಿವತ್ತಾಗಿ ಸಮರಸಭಾವದಿಂದ ಗೈದು ನಂತರ ಔಪಚಾರಿಕವಾಗಿ ಕ್ಷೇತ್ರಸ್ಥ ಶಿವಲಿಂಗದ ದರ್ಶನವನ್ನು ಮಾಡಬೇಕು. ಆದರೆ ಇದಕ್ಕೆ ವಿಪರೀತವಾಗಿ ಇಷ್ಟಲಿಂಗವನ್ನು ಮರೆತು–ಕ್ಷೇತ್ರಸ್ಥ ಶಿವದರ್ಶನ ಶಿವಪೂಜಾದಿ ಗಳಲ್ಲಿ ತೊಡಗಿದರೆ ಮಾತ್ರ ಆತನು ಧರ್ಮಾಚರಣೆಯಿಂದ ಭ್ರಷ್ಟನಾಗಿ ನಿಂದೆಗೊಳ ಗಾಗುತ್ತಾನೆ. ಆದಕಾರಣ ವೀರಶೈವ ಭಕ್ತನು ಇಷ್ಟಲಿಂಗ ಪೂಜೆಯನ್ನು ಕ್ಷೇತ್ರಗಳಲ್ಲಿ ಮಾಡುವ ಉದ್ದೇಶವನ್ನಿಟ್ಟುಕೊಂಡು ಕ್ಷೇತ್ರಯಾತ್ರೆಯನ್ನು ಮಾಡುವುದು ಹೆಚ್ಚು ಸೂಕ್ತವಾದುದು. ಅಂತೆಯೇ ಈ ಧರ್ಮದ ಪೀಠಾಚಾರ್ಯರು, ಶಿವಾಚಾರ್ಯರು,

ಶರಣರು ಹಾಗೂ ಭಕ್ತಾದಿಗಳು ಕಾಶಿ ಮುಂತಾದ ಕ್ಷೇತ್ರಗಳಲ್ಲಿ ಶ್ರಾವಣಮಾಸ, ಅಧಿಕಮಾಸ ಮತ್ತು ನವರಾತ್ರೋತ್ಸವ ಮುಂತಾದ ಪರ್ವಕಾಲಗಳಲ್ಲಿ ಇಷ್ಟಲಿಂಗ ಪೂಜೆಯ ವಿಶೇಷ ಅನುಷ್ಠಾನಗಳನ್ನು ಆಚರಿಸುತ್ತ ಬಂದಿರುವ ಪದ್ಧತಿಯು ಇಂದಿಗೂ ರೂಢಿಯಲ್ಲಿದೆ. ಮಹಾ ಶಿವರಾತ್ರಿಯ ಶುಭದಿನದಂದು ಸಹಸ್ರಾರು ಭಕ್ತಾದಿಗಳು ಸಾಮೂಹಿಕ ಶಿವಲಿಂಗಪೂಜೆಯನ್ನು ಮಾಡುವ ಉದ್ದೇಶವನ್ನಿಟ್ಟುಕೊಂಡೇ ಇಂದಿಗೂ ಕಾಶಿಯ ಜಂಗಮವಾಡಿ ಮಹಾಮಠಕ್ಕೆ ಬರುತ್ತಿರುವುದನ್ನು ಕಾಣುತ್ತೇವೆ.

''ದೇಶಕಾಲ ವಸ್ತುಗಳಿಂದೀಶನೊಲಿವನು'' ಎಂಬುದಾಗಿ ಶ್ರೀಮನ್ನಿಜಗುಣ ಶಿವಯೋಗಿಗಳು ಪ್ರತಿಪಾದಿಸಿ ಶಿವಪೂಜೆಗೆ ದೇಶ, ಕಾಲ ವಸ್ತುಗಳ ಪ್ರಾಮುಖ್ಯತೆಯನ್ನು ತಿಳಿಸಿದ್ದಾರೆ. ಆದಕಾರಣ ಭೋಗಭೂಮಿಗಳಾದ ನಮ್ಮ ನಮ್ಮ ಮನೆಗಳಲ್ಲಿ ಇಷ್ಟಲಿಂಗ ಪೂಜೆಯನ್ನು ಮಾಡಿದರೆ ದೊರೆಯುವ ಫಲಕ್ಕಿಂತಲೂ ದ್ವಿಗುಣಿತ ಮತ್ತು ಚತುರ್ಗುಣಿತ ಫಲಗಳು ಕ್ಷೇತ್ರದಲ್ಲಿ ಮಾಡೋಣದರಿಂದ ದೊರೆಯುವವಾದಕಾರಣ ಇದರ ಮಹತ್ತ್ವವನ್ನರಿತ ಶಿವಭಕ್ತನು ಇಷ್ಟಲಿಂಗಪೂಜೆಗಾಗಿಯೇ ಮುಖ್ಯವಾಗಿ ಕ್ಷೇತ್ರಯಾತ್ರೆಯನ್ನು ಮಾಡುವುದು ಶಾಸ್ತ್ರಸಮ್ಮತವಾದುದು.

ಇದೂ ಅಲ್ಲದೆ ಯಾತ್ರೆಯನ್ನು ಮಾಡುವ ಭಕ್ತಾದಿಗಳಿಗೆ ತನ್ನ ಶಕ್ತ್ಯಾನುಸಾರ ಅನ್ನಛತ್ರ ಅರವಟ್ಟಿಗೆಗಳನ್ನಿಟ್ಟು ಜಲದಾನ–ಅನ್ನದಾನಗಳನ್ನು ಅವಶ್ಯವಾಗಿ ಮಾಡಬೇಕು. ಧರ್ಮಶಾಸ್ತ್ರದಲ್ಲಿ ಅನೇಕ ವಿಧಗಳಾದ ದಾನಗಳು ಹೇಳಲ್ಪಟ್ಟಿದ್ದರೂ ಅವುಗಳಲ್ಲಿ ಅನ್ನ ಜಲಗಳ ದಾನಕ್ಕಿಂತ ಮಿಗಿಲಾದ ದಾನವು ಬೇರೊಂದಿರುವುದಿಲ್ಲ. ಅಂತೆಯೇ ಓರ್ವ ಸುಭಾಷಿತಕಾರನು–

ತುರಗಶತಸಹಸ್ರಂ ಗೋಗಜಾನಾಂಚ ಲಕ್ಷಂ,
ಕನಕರಜತಪಾತ್ರಂ ಮೇದಿನೀಂ ಸಾಗರಾಂತಮ್ ॥

ವಿಮಲಕುಲವಧೂನಾಂ ಕೋಟಿಕನ್ಯಾಶ್ಚ ದದ್ಯಾತ್ ।
ನಹಿ ನಹಿ ಸಮಮೇತೈರನ್ನದಾನಂ ಪ್ರಧಾನಮ್ ॥

ಈ ವಿಧವಾಗಿ ಅನ್ನದಾನದ ಮಹಿಮೆಯನ್ನು ಕೊಂಡಾಡಿದ್ದಾನೆ. ತಾತ್ಪರ್ಯವೇನೆಂದರೆ, ಲಕ್ಷಾಂತರ ಕುದುರೆ, ಆನೆ ಮತ್ತು ಗೋವುಗಳ ದಾನ, ಬೆಳ್ಳಿ ಬಂಗಾರ ಪಾತ್ರೆಗಳ ದಾನ, ಸಮುದ್ರಪರ್ಯಂತವಾದ ಭೂದಾನ ಮತ್ತು ಪವಿತ್ರಕುಲಸಂಜಾತೆಯರಾದ ಕೋಟಿ ಕನ್ಯಾದಾನವನ್ನು ಮಾಡಿದರೆ ಯಾವ ಪುಣ್ಯವು ಪ್ರಾಪ್ತವಾಗುವುದೋ, ಅದು ಕೇವಲ ಅನ್ನದಾನವನ್ನು ಮಾಡಿದ ಪುಣ್ಯಕ್ಕೆ ಸರಿಸಮವಾಗಲಾರದು.

ಈ ಪ್ರಪಂಚದೆಲ್ಲಿ ಅನ್ನ–ತೋಯಗಳನ್ನು ಹೊರತುಪಡಿಸಿ ಅದಾವ ವಸ್ತುವಾಹನಗಳನ್ನು ಅದೆಷ್ಟು ಕೊಟ್ಟರೂ ಸಹ ಓರ್ವ ವ್ಯಕ್ತಿಯನ್ನು ಸಂತೃಪ್ತಿಪಡಿಸುವುದು ಅದಾರಿಂದಲೂ ಸಾಧ್ಯವಾಗಿಲ್ಲ ಮತ್ತು ಸಾಧ್ಯವಾಗುವುದೂ ಇಲ್ಲ. ಯಾವ ಪದಾರ್ಥಗಳು ನಮ್ಮ ಒಳಗೆ ಪ್ರವೇಶಿಸುವವೋ ಅವೇ ನಮಗೆ ತೃಪ್ತಿಯನ್ನು ಕೊಡಬಲ್ಲವೇ ವಿನಃ ಹೊರಗಿರುವ ವಸ್ತುಗಳಿಂದ ಮನುಷ್ಯನಿಗೆ ಪೂರ್ಣತೃಪ್ತಿಯು ಸಿಗಲಾರದು. ಹಸಿದ ಮನುಷ್ಯನಿಗೆ ಅನ್ನವನ್ನಿಕ್ಕಿದಾಗ ಆತನು ಅದನ್ನು ಹೊಟ್ಟೆತುಂಬುವವರೆಗೆ ಸೇವಿಸಿ ಕೊನೆಗೆ

ಸಾಕು ಸಾಕೆಂಬ ಸಂತೃಪ್ತಿಯ ಶಬ್ದದ ಉದ್ಗಾರವನ್ನು ತೆಗೆಯುತ್ತಾನೆ. ಇದೇ ಪ್ರಕಾರ ಬಿಸಿಲಿನಲ್ಲಿ ಬೆಂದು ಬಾಯಾರಿದ ವ್ಯಕ್ತಿಗೆ ನೀರು ಹನಿಸಿದಾಗ ಆತನು ಹೊಟ್ಟೆತುಂಬ ಕುಡಿದು ಸಾಕೆಂಬುದಾಗಿ ನುಡಿಯುತ್ತಾನೆ. ಹೀಗೆ ಅನ್ನ ನೀರುಗಳನ್ನು ಹೊರತುಪಡಿಸಿ ಗಜ, ತುರಗ, ಗೋವು, ವಸ್ತು-ವಾಹನ, ಭೂಮಿ ಮತ್ತು ಕನ್ಯಾದಿಗಳನ್ನು ಅದೆಷ್ಟು ಕೊಟ್ಟರೂ ಆ ವಸ್ತುಗಳು ಹೊರಗೆ ಉಳಿಯುವವೇ ವಿನಃ ತನ್ನೊಳಗೆ ಪ್ರವೇಶಿಸಲಾರವು. ಅಂತೆಯೇ ಅವುಗಳನ್ನು ಎಷ್ಟು ಕೊಟ್ಟರೂ ತೆಗೆದುಕೊಳ್ಳುವವರ ಮನಸ್ಸಿನಲ್ಲಿ ಸಾಕು ಸಾಕೆಂಬ ಸಂತೃಪ್ತಿಯ ಭಾವನೆಯು ಉಂಟಾಗುವುದಿಲ್ಲ. ಈ ರಹಸ್ಯವನ್ನು ಕೂಲಂಕಷವಾಗಿ ವಿಚಾರಮಾಡಿಯೇ ಎಲ್ಲ ದಾನಕ್ಕಿಂತಲೂ ಅನ್ನ ತೋಯಗಳ ದಾನವು ಮಿಗಿಲಾದುದೆಂಬುದಾಗಿ ಪ್ರತಿಪಾದಿಸಲಾಗಿದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸಹ 'ಅಹಿಂಸೆಗೆ ಸಮವಾದ ತಪಸ್ಸು ಬೇರೊಂದಿಲ್ಲ ಮತ್ತು ಅನ್ನತೋಯದಾನಕ್ಕಿಂತ ಮಿಗಿಲಾದ ದಾನ ಬೇರೊಂದಿಲ್ಲ' ಎಂಬುದಾಗಿ ಹೋಲಿಕೆಯನಿತ್ತು ಅನ್ನದಾನದ ಮಹತಿಯನ್ನು ವಿವರಿಸಿ ಪ್ರತಿದಿನ ಅನ್ನ ತೋಯ ದಾನವನ್ನು ಮಾಡಬೇಕೆಂಬ ವಿಧಾನವನ್ನೂ ಸಹ ಇಲ್ಲಿ ವಿವರಿಸಿದ್ದನ್ನು ಕಾಣುತ್ತೇವೆ. ಕಾರಣ ಶಿವಭಕ್ತರು ಕ್ಷೇತ್ರ ಯಾತ್ರಾರ್ಥಿಗಳಿಗೆ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಅನ್ನ ತೋಯಗಳ ದಾನವನ್ನು ಅವಶ್ಯವಾಗಿ ಮಾಡಬೇಕು.

ಈ ಭಕ್ತಮಾರ್ಗಕ್ರಿಯಾಸ್ಥಲದಲ್ಲಿ ಪೂಜ್ಯಪಾದರು ಶಿವಭಕ್ತನು ಆಚರಿಸಲೇ ಬೇಕಾದ ಧಾರ್ಮಿಕ ಆಚಾರ-ವಿಚಾರಗಳ ಬಗ್ಗೆ ಸವಿಸ್ತಾರವಾಗಿ ತಿಳಿಯಪಡಿಸಿ ಇನ್ನು ಮುಂದೆ ಶಿವಭಕ್ತನು ಆಚರಿಸಬೇಕಾದ ಸಾಮಾಜಿಕಗಳಾದ ಕೆಲವು ನಿಯಮಗಳನ್ನು ತಿಳಿಸಲೋಸುಗ

ಸ್ವಮಾರ್ಗಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾವ್ರತೀ ।
ದದ್ಯಾತ್ ತೇಭ್ಯಃ ಸಮಾದದ್ಯಾತ್ ಕನ್ಯಾಂ ಕುಲಸಮುದ್ಭವಾಮ್ ॥

ಏವಮಾಚಾರಸಂಯುಕ್ತೋ ವೀರಶೈವೋ ಮಹಾವ್ರತೀ ।
ಪೂಜಯೇತ್ ಪರಯಾ ಭಕ್ತ್ಯಾ ಗುರುಂ ಲಿಂಗಂ ಚ ಸಂತತಮ್ ॥

(ಸಿ. ಶಿ. ೯ ; ೫೦-೫೧)

ಈ ರೀತಿಯಾಗಿ ಉಪದೇಶಿಸಿದ್ದಾರೆ. ನಿತ್ಯ ಶಿವಾಚಾರ ವ್ರತ ಸಂಪನ್ನನಾದ ಶಿವಭಕ್ತನು ತನ್ನ ಮನೆಯಲ್ಲಿಯ ಕನ್ಯೆಯರನ್ನು ಕೊಡುವ ಪ್ರಸಂಗ ಬಂದಾಗ ಮತ್ತು ಬೇರೆಯವರಿಂದ ತನ್ನ ಮನೆಗೆ ಕನ್ಯೆಯರನ್ನು ತೆಗೆದುಕೊಳ್ಳುವ ಪ್ರಸಂಗ ಬಂದಾಗ ಅವರ ಆಚಾರ ವಿಚಾರಗಳತ್ತ ಲಕ್ಷ್ಯವಹಿಸಬೇಕೆಂಬುದಾಗಿ ಪೂಜ್ಯರು ಆದೇಶವಿತ್ತಿದ್ದಾರೆ. ನಮ್ಮ ವಂಶದಲ್ಲಿ ಜನಿಸಲಿರುವ ಮಕ್ಕಳು ಆಚಾರಸಂಪನ್ನರಾಗಿರಬೇಕೆಂಬ ಅಭಿಲಾಷೆಯಿದ್ದರೆ, ನಾವು ವಿವಾಹ ಸಂಸ್ಕಾರದಲ್ಲಿಯೇ ಮೊದಲು ಎಚ್ಚರಿಕೆಯನ್ನು ವಹಿಸಬೇಕು. ವರ ಹಾಗೂ ಕನ್ಯೆಯರು ಸುಶೀಲರೂ, ಸದಾಚಾರಿಗಳೂ ಆಗಿದ್ದರೆ ಅವರ ಸಂತತಿಯೂ ಸಹ ಅಂತಹದೇ ಸಂಸ್ಕಾರವುಳ್ಳದ್ದಾಗುವುದು. ರಾಷ್ಟ್ರಕ್ಕೆ ಉತ್ತಮ ಪ್ರಜೆಯನ್ನು ಕೊಡ ಬೇಕಾದರೆ ನಾವು ಮೊದಲು ಉತ್ತಮರಾಗಬೇಕಾಗುವುದು.

ಸಮಾಜದಲ್ಲಿಯ ಇಂದಿನ ಅಸಭ್ಯವರ್ತನೆಗಳ ಪರಿಣಾಮವಾಗಿಯೇ ನಮ್ಮ ದೇಶದ ಪ್ರಜೆಯು ಆಚಾರ-ವಿಚಾರಗಳಲ್ಲಿ ಆಸ್ಥೆಯನ್ನು ತಾಳದೇ ಅನೀತಿ ಅನ್ಯಾಯ ಗಳತ್ತ ಪ್ರವೃತ್ತನಾಗಿ ತಾನು ಪತಿತನಾಗುವದರ ಜೊತೆಗೆ, ನಮ್ಮ ದೇಶದ ಘನತೆ ಗೌರವ ಗಳಿಗೆ ಕುಂದು ತರುತ್ತಿರುವುದನ್ನೂ ಕಾಣುತ್ತೇವೆ. ಇವೆಲ್ಲವುಗಳ ಸುಧಾರಣೆಯಾಗಲು ಆ ಮೂಲ ಪರಿವರ್ತನವು ಅವಶ್ಯಕವಾದುದು. ಇಂದು ನಾವು ಸೇವಿಸಿದ ಆಹಾರವೇ ರಸ, ರಕ್ತಾದಿ ಸಪ್ತಧಾತುಗಳ ರೂಪದಲ್ಲಿ ಪರಿವರ್ತನೆಯಾಗಿ ಕೊನೆಗೆ ತಂದೆತಾಯಿಗಳ ರೇತೋರಕ್ತಗಳ ಒಂದುಗೂಡುವಿಕೆಯಿಂದಲೇ ಸಂತತಿಯು ಉತ್ಪನ್ನವಾಗುವುದೆಂಬುದು ವೈಜ್ಞಾನಿಕ ಸತ್ಯವಾದ ಮಾತು. ಹೀಗಿರುವಾಗ ನಿಷಿದ್ಧ ಪದಾರ್ಥವನ್ನು ಸೇವಿಸಿ ಸತ್ಸಂತಾನವನ್ನು ಅಪೇಕ್ಷಿಸಿದರೆ ಅದು ಹೇಗೆ ತಾನೆ ದೊರೆಯಬಲ್ಲುದು ? ಬೀಜದಂತೆಯೇ ಫಲಬರುವುದು ಪ್ರಕೃತಿ ಸಿದ್ಧವಾದುದು. ಬೇವಿನ ಬೀಜವನ್ನು ಬಿತ್ತಿ ಮಾವಿನ ಹಣ್ಣನ್ನಪೇಕ್ಷಿಸುವುದು ಎಷ್ಟೊಂದು ಅಪ್ರಸ್ತುತವೋ, ಹಾಗೆಯೇ ನಾವು ಆಚಾರವಂತ ರಾಗಿರದೇ ಆಚಾರ ಸಂಪನ್ನವಾದ ಸಂತತಿಯನ್ನಪೇಕ್ಷಿಸುವುದು ಅಷ್ಟೇ ಅಪ್ರಾಸಂಗಿಕ ವಾದುದು. ಆದಕಾರಣ ವೈವಾಹಿಕ ಸಂಬಂಧವನ್ನು ಮಾಡುವಾಗ ಕುಲಕ್ರಮಾಗತ ಗಳಾದ ಆಚಾರ, ವಿಚಾರ ಹಾಗೂ ಸಭ್ಯತೆಗಳನ್ನು ಪರೀಕ್ಷಿಸುವುದು ಅತ್ಯಾವಶ್ಯಕ ವಾದುದು.

ನಮ್ಮ ದೇಶದ ಪ್ರಾಚೀನ ಪದ್ಧತಿಯಲ್ಲಿ ವರ, ಕನ್ಯೆಯರ ಪರಸ್ಪರ ಗುಣಮೇಳನೆ ಯನ್ನು ನೋಡಿ ವಿವಾಹ ಸಂಸ್ಕಾರವನ್ನು ಮಾಡುವ ರೂಢಿಯಿದೆ. ಇತ್ತೀಚೆಗೆ ಗುಣ ಪರೀಕ್ಷಿಸುವ ರೂಢಿಯು ಕಡಿಮೆಯಾಗಿ ಹಣಪರೀಕ್ಷಿಸುವ ಹವ್ಯಾಸವು ಹೆಚ್ಚಾಗುತ್ತಲಿದೆ. ಈ ಅರ್ಥಲೋಲುಪತೆಯ ಕಾರಣವಾಗಿಯೇ ಪ್ರತಿಯೊಂದು ಸಮಾಜದಲ್ಲಿ ಆತ್ಮಹತ್ಯೆ, ಕೊಲೆ ಮತ್ತು ಸಂಬಂಧ ವಿಚ್ಛೇದನಗಳಂತಹ ಅನರ್ಥ ಪರಂಪರೆಯು ಭೂತಾಕಾರ ವಾಗಿ ಬೆಳೆಯುತ್ತಲಿದೆ. ಇದರಿಂದ ಸಮಾಜದಲ್ಲಿ ದಿನೇ ದಿನೇ ಅಶಾಂತಿಯ ವಾತಾವರಣವು ಪಸರಿಸುತ್ತಲಿದೆ. ವರದಕ್ಷಿಣೆಯಂತಹ ಕರ್ಕರೋಗ (ಕ್ಯಾನ್ಸರ್)ಕ್ಕೆ ಸರಕಾರದ ಕಾನೂನೆಂಬ ಸತ್ವಹೀನ ಔಷಧಿಯು ಅದಾವ ಪರಿಣಾಮವನ್ನೂ ಮಾಡುತ್ತಿಲ್ಲ. ಮತ್ತೊಬ್ಬರು ಹಾಕಿದ ನಿಯಮಗಳಿಂದ ನಮ್ಮನ್ನು ಸುಧಾರಿಸಿಕೊಳ್ಳುವುದ ಕ್ಕಿಂತಲೂ ನಾವೇ ಮಾಡಿಕೊಂಡ ನಿಯಮಗಳಿಂದ ನಮ್ಮನ್ನು ನಾವು ಸುಧಾರಿಸಿ ಕೊಳ್ಳುವುದು ಲೇಸು. ಆದ್ದರಿಂದ ಸಮಾಜದಲ್ಲಾಗುತ್ತಿರುವ ಈ ದುಷ್ಪರಿಣಾಮ ಗಳ ನಿವೃತ್ತಿಗಾಗಿಯೇ ಪ್ರತಿಯೊಬ್ಬ ವ್ಯಕ್ತಿಯು ಎಚ್ಚರಾಗಬೇಕಾಗಿದೆ. ಆಧುನಿಕಗಳಾದ ಅಸಭ್ಯ ವರ್ತನೆಗಳನ್ನು ಕಡಿಮೆ ಮಾಡಿಕೊಂಡು ನಮ್ಮ ದೇಶದ ಪ್ರಾಚೀನವಾದ ಸಭ್ಯವರ್ತನೆಗೆ ಶರಣಾಗತರಾದಾಗಲೇ ಆಮೂಲ ಪರಿವರ್ತನೆಯು ಉಂಟಾಗಲು ಸಾಧ್ಯವಾಗುವುದು.

ಮುಂದಾಗಬಹುದಾದ ಅನರ್ಥಗಳನ್ನು ಆಲೋಚಿಸಿಯೇ ಪೂಜ್ಯಪಾದರು ಇಲ್ಲಿ ವರ-ಕನ್ಯೆಯರ ಸಂಬಂಧವನ್ನು ಮಾಡುವಾಗ ಆಚಾರ-ವಿಚಾರಗಳಿಗೆ ಆದ್ಯತೆಯನ್ನು ಕೊಡಬೇಕೆಂಬುದಾಗಿ ಆದೇಶವಿತ್ತಿದ್ದಾರೆ. ವೀರಶೈವ ಧರ್ಮದಲ್ಲಿ ಜಂಗಮ ಮತ್ತು ಪಂಚಮ ಎಂಬ ಎರಡು ವಂಶಗಳು ಶಿವಸೃಷ್ಟಿಯ ಆದಿಕಾಲದಿಂದ ಬಂದವುಗಳಾಗಿವೆ. ಇವುಗಳಲ್ಲಿ ಜಂಗಮರು ಗುರುಪರಂಪರೆಗೆ, ಪಂಚಮರು ಶಿಷ್ಯಪರಂಪರೆಗೆ ಸೇರಿದವರಾಗಿ ದ್ದಾರೆ. ಅಂದಿನಿಂದ ಇಂದಿನವರೆಗೆ ಈ ಗುರು-ಶಿಷ್ಯಪರಂಪರೆಯು

ಅವ್ಯಾಹತವಾಗಿ ನಡೆದು ಬಂದುದಾಗಿದೆ. ಪಂಚಮ ವಂಶದಲ್ಲಿ ಅವರು ಮಾಡುತ್ತಿರುವ ಉದ್ಯೋಗ–ವ್ಯವಹಾರಗಳ ಮೂಲಕವಾಗಿ ಬಣಜಿಗ, ಗಾಣಿಗ, ಒಕ್ಕಲಿಗ, ಹಡಪಿಗ, ಶಿವಶಿಂಪಿಗ, ಕುಂಬಾರ, ನೇಕಾರ ಮತ್ತು ಬಣಗಾರ ಮೊದಲಾದ ಅನೇಕ ಒಳಪಂಗಡ ಗಳಾಗಿರುವುದನ್ನು ಕಾಣುತ್ತೇವೆ. ಇಂದು ತೋರುವ ಈ ಒಳಭೇದಗಳು ಹಿಂದೊಂದು ಕಾಲದಲ್ಲಿ ಒಂದೇ ಆಗಿದ್ದವೆಂಬುದನ್ನು ಯಾರೂ ಮರೆಯಬಾರದು. ಕಾರಣ ಇಲ್ಲಿರುವ ಭೇದವು ವೃತ್ತಿ ಭೇದವೇ ವಿನಃ ಜಾತಿ ಭೇದವಲ್ಲ. ಆದಕಾರಣ ಶಿಷ್ಯವರ್ಗದ ವೀರಶೈವರು ತಮ್ಮ ಒಳಭೇದಗಳನ್ನು ಮರೆತು ಸಮಾನ ಆಚಾರ–ವಿಚಾರಗಳನ್ನು ಹೊಂದಿದವರೊಂದಿಗೆ ವಿವಾಹ ಸಂಸ್ಕಾರಗಳನ್ನು ಮಾಡಬೇಕು. ವೀರಶೈವೇತರ ರೊಂದಿಗೆ ವಿವಾಹವು ನಿಷೇಧಿಸಲ್ಪಟ್ಟಿದೆಯೇ ವಿನಃ ಅದು ವೀರಶೈವರ ಒಳಪಂಗಡ ಗಳಲ್ಲಿ ನಿಷೇಧಿಸಲ್ಪಟ್ಟಿರುವುದಿಲ್ಲ.

ಇದೇ ಪ್ರಕಾರವಾಗಿ ಜಂಗಮರೂ ಸಹ ಜಂಗಮರೊಂದಿಗೆ ವಿವಾಹ ಸಂಬಂಧ ವನ್ನು ಮಾಡುವಾಗ ಗೋತ್ರ ಸೂತ್ರಗಳನ್ನು ಅರಿತುಕೊಂಡು ಭಿನ್ನಗೋತ್ರದಲ್ಲಿ ವಿವಾಹ ಮಾಡಬೇಕೇ ವಿನಃ ಸಮಾನಗೋತ್ರ ಅರ್ಥಾತ್ ಸಗೋತ್ರದಲ್ಲಿ ವಿವಾಹವನ್ನು ಮಾಡ ಕೂಡದು. ಈ ವಿಧವಾಗಿ ವೀರಶೈವರು ವಂಶಾಭಿವೃದ್ಧಿಗಾಗಿ ವಿವಾಹ ಸಂಸ್ಕಾರವನ್ನು ಮಾಡುವಾಗ ಕುಲ, ಗೋತ್ರ, ಆಚಾರ–ವಿಚಾರಗಳಿಗೆ ಪ್ರಾಧಾನ್ಯತೆಯನ್ನು ಕೊಡಬೇಕೇ ವಿನಃ ಅಧಿಕಾರ, ಅಂತಸ್ತು ಧನಾದಿಗಳಿಗೆ ಅಷ್ಟೊಂದು ಪ್ರಾಮುಖ್ಯತೆಯನ್ನು ಕೊಡ ಕೂಡದು. ಹೀಗೆ ಆಚಾರ್ಯರು ಆದೇಶಿಸಿದ ನಿಯಮಗಳನ್ನು ಅನುಸರಿಸಿದಾಗ ಮಾತ್ರ ನಾವು ಸಶಕ್ತರಾದ ಪ್ರಜೆಗಳನ್ನು ಕೊಟ್ಟು, ರಾಷ್ಟ್ರದ ಸರ್ವಾಂಗೀಣ ಸಮೃದ್ಧಿಯಲ್ಲಿ ಸಹಭಾಗಿ ಯಾಗಲು ಸಾಧ್ಯವಾಗುವುದು. ಈ ಭಕ್ತಮಾರ್ಗಕ್ರಿಯಾಸ್ಥಲದಲ್ಲಿ ನವವಿಧ ಭಕ್ತಿಗಳನ್ನೇ ಮೊದಲು ಮಾಡಿಕೊಂಡು ಇಲ್ಲಿ ಉಪದೇಶಿಸಿದ ಧಾರ್ಮಿಕ ಹಾಗೂ ಸಾಮಾಜಿಕ ನಿಯಮ ಗಳನ್ನು ಕಟ್ಟು–ನಿಟ್ಟಾಗಿ ಪರಿಪಾಲನೆಯನ್ನು ಮಾಡುವವನೇ ಭಕ್ತನೆನಿಸಿಕೊಳ್ಳುವನು. ಇಂತಹ ಈ ಶಿವಭಕ್ತನು ತನ್ನ ನಿತ್ಯ ಪೂಜಾವಿಧಿಯಲ್ಲಿ ತನ್ನ ಇಷ್ಟಲಿಂಗದ ಜೊತೆಗೆ ಗುರು ಪೂಜೆಯನ್ನೂ ಸಹ ತಪ್ಪದೇ ಮಾಡಬೇಕು. ಈ ವಿಧವಾಗಿ ಭಕ್ತನ ಕ್ರಿಯಾಚರಣೆಯನ್ನು ತಿಳಿಯಪಡಿಸುವ ಸ್ಥಲವೇ 'ಭಕ್ತಮಾರ್ಗಕ್ರಿಯಾಸ್ಥಲ' ಎಂಬುದಾಗಿ ತಿಳಿದುಕೊಂಡು ಪ್ರತಿಯೊಬ್ಬ ವೀರಶೈವರು ಅದರಂತೆ ತಮ್ಮ ಆಚಾರ ಪದ್ಧತಿಯನ್ನು ಬೆಳೆಸಿಕೊಳ್ಳಬೇಕೆಂಬು ದಾಗಿ ತಿಳಿಯಪಡಿಸಿ ಈ ಸ್ಥಲದ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೫ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)



ಆಶೀರ್ವಚನ-೧

# ಉಭಯಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಉಪದೇಶಮಾಡಿದ ಶ್ರೀ ಸಿದ್ಧಾಂತ ಶಿಖಾಮಣಿ ಮಹಾ ಗ್ರಂಥದ ಭಕ್ತಸ್ಥಲಾಂತರ್ಗತವಾದ ಭಕ್ತಮಾರ್ಗಕ್ರಿಯಾಸ್ಥಲದ ಬಗ್ಗೆ ಇಲ್ಲಿಯವರೆಗೆ ನೀವೆಲ್ಲ ಆಶೀರ್ವಚನವನ್ನು ಆಲಿಸಿದ್ದೀರಿ. ಸದ್ಯಃ ಭಕ್ತಸ್ಥಲದ ಹತ್ತನೇ ಅವಾಂತರ ಸ್ಥಲವಾದ ಉಭಯಸ್ಥಲವನ್ನು ಕುರಿತು ಪೂಜ್ಯರು ಉಪದೇಶವನ್ನು ಪ್ರಾರಂಭಿಸುತ್ತಿದ್ದಾರೆ. ಇಷ್ಟಲಿಂಗ ಹಾಗೂ ಸದ್ಗುರುವಿನಲ್ಲಿ ಸಮಾನವಾದ ಭಕ್ತಿಯಿರಬೇಕೆಂಬುದನ್ನು ತಿಳಿಸುವ ಸ್ಥಲವೇ ಉಭಯಸ್ಥಲವು. ಅದನ್ನೇ ಪೂಜ್ಯರು–

ಗುರೋರಭ್ಯರ್ಚನೇನಾಪಿ ಸಾಕ್ಷಾದಭ್ಯರ್ಚಿತಃ ಶಿವಃ ।
ತಯೋರ್ನಾಸ್ತಿ ಭಿದಾ ಕಿಂಚಿದೇಕತ್ವಾತ್ ತತ್ತ್ವರೂಪತ ः ॥

ಯಥಾ ದೇವೇ ಜಗನ್ನಾಥೇ ಸರ್ವಾನುಗ್ರಹಕಾರಕೇ ।
ತಥಾ ಗುರುವರೇ ಕುರ್ಯಾದುಪಚಾರಾನ್ ದಿನೇ ದಿನೇ ॥

(ಸಿ.ಶಿ. ೯; ೫೨–೫೩)

ಈ ರೀತಿಯಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸದ್ಗುರುವನ್ನು ಪೂಜಿಸಿದರೆ ಸಾಕ್ಷಾತ್ ಶಿವನೇ ಪೂಜಿಸಲ್ಪಟ್ಟವನಾಗುತ್ತಾನೆ. ಶಿವನೇ ಗುರುರೂಪದಲ್ಲಿ ಅವತಾರ ತಾಳಿರೋಣದರಿಂದ, ವಸ್ತುತಃ ಅವರೀರ್ವರಲ್ಲಿ ಯಾವ ಭೇದವೂ ಇರುವುದಿಲ್ಲ. ಆದುದರಿಂದ ಸರ್ವರನ್ನು ಅನುಗ್ರಹಿಸಲು ಸಮರ್ಥನಾದ ಮತ್ತು ಸಕಲ ಜಗದೊಡೆಯನಾದ ಪರಶಿವನನ್ನು ಭಕ್ತಿಪೂರ್ವಕವಾಗಿ ಪೂಜೋಪಚಾರಗಳಿಂದ ಹೇಗೆ ಉಪಚರಿಸುವರೋ, ಅದೇ ವಿಧವಾಗಿ ಶ್ರೀ ಗುರುವಿಗೂ ಸಹ ಪ್ರತಿದಿನ ಪೂಜೋಪಚಾರ ಸಮರ್ಪಿಸಬೇಕು.

ವೀರಶೈವ ಸಿದ್ಧಾಂತದಲ್ಲಿ ಇಷ್ಟಲಿಂಗವೂ ಹೇಗೆ ಆರಾಧ್ಯವೋ ಅದರಂತೆ ಸದ್ಗುರುವೂ ಸಹ ಆರಾಧ್ಯನಾಗಿದ್ದಾನೆ. ಅಂತೆಯೇ ಇಷ್ಟಲಿಂಗ ಪೂಜೆಗೆ ಮಹತ್ತ್ವವಿರುವಷ್ಟು ಗುರು ಪೂಜೆಗೂ ಸಹ ಮಹತ್ವ ಇರುತ್ತದೆ. ಸದ್ಗುರುಗಳು ನಮ್ಮ ಮನೆಗೆ ದಯಮಾಡಿಸಿದಾಗ ಅಥವಾ ನಾವೇ ಅವರ ಮಠಕ್ಕೆ ಹೋದಾಗ ಹೀಗೆ ಯಾವುದೇ ರೀತಿಯಿಂದ ಗುರುವಿನ ಸಾನ್ನಿಧ್ಯವು ದೊರೆತಾಗ ಶಿಷ್ಯನಾದವನು ಆಗ ಗುರುಪೂಜೆಗೆ ಮಹತ್ತ್ವವನ್ನು ಕೊಡಬೇಕೇ ವಿನಃ ಇಷ್ಟಲಿಂಗ ಪೂಜೆಗಲ್ಲ. ಸದ್ಗುರುವನ್ನು ಭಕ್ತಿಯಿಂದ ಪೂಜಿಸಿದರೆ ಸಾಕ್ಷಾತ್ ಶಿವನನ್ನೇ ಪೂಜಿಸಿದಂತಾಗುವುದು. ಯಾಕೆಂದರೆ ಶಿವನಿಗೂ ಗುರುವಿಗೂ ತತ್ತ್ವತಃ ಯಾವ ಭೇದವೂ ಇರುವುದಿಲ್ಲ. ಅವರೀರ್ವರ

ಸ್ವರೂಪವು ಒಂದೇ ಆಗಿರುತ್ತದೆ. ಆದುದರಿಂದ ಎಷ್ಟು ಉಪಚಾರಗಳಿಂದ ಇಷ್ಟಲಿಂಗವನ್ನು ಪೂಜಿಸುತ್ತೇವೆಯೋ ಅಷ್ಟೆಲ್ಲ ಉಪಚಾರಗಳಿಂದ ಗುರುವಿನ ಪಾದಪೂಜೆಯನ್ನು ಮಾಡಬೇಕು. ಗುರುಪಾದಪೂಜೆಯಿಂದ ದೊರೆತ ಪಾದೋದಕವನ್ನು ಸೇವಿಸಿದರೆ ಅಂದಿನ ಇಷ್ಟಲಿಂಗ ಪೂಜಾಫಲವು ನಮಗೆ ದೊರೆತಂತಾಗುತ್ತದೆ. ಆದುದರಿಂದ ಸದ್ಗುರುಗಳ ಸಾನ್ನಿಧ್ಯದಲ್ಲಿದ್ದಾಗ ತನ್ನದೇ ಆದ ವಿಶೇಷ ಇಷ್ಟಲಿಂಗಪೂಜಾದಿಗಳನ್ನು ಮಾಡುವ ಅವಶ್ಯಕತೆ ಇರುವುದಿಲ್ಲ. ಧರ್ಮಾಚರಣೆಯ ಈ ಮರ್ಮವನ್ನು ಅರಿತು ಪ್ರತಿಯೊಬ್ಬರೂ ಆಚರಿಸಬೇಕು.

ಈ ಪ್ರಪಂಚದಲ್ಲಿ ಎಲ್ಲರಿಗಿಂತಲೂ ದೊಡ್ಡವರು ಯಾರು ? ಎಂಬ ಪ್ರಶ್ನೆಯನ್ನು ಪಾರ್ವತಿಯು ಪರಶಿವನಿಗೆ ಮಾಡಿದಾಗ ಶಿವನು–'ನ ಗುರೋರಧಿಕಮ್' 'ನ ಗುರೋರಧಿಕಮ್' 'ನ ಗುರೋರಧಿಕಮ್' 'ಶಿವಶಾಸನತಃ' 'ಶಿವಶಾಸನತಃ' 'ಶಿವಶಾಸನತಃ' ಅಂದರೆ ಎಲೈ ಪಾರ್ವತಿಯೇ ! ಈ ಪ್ರಪಂಚದಲ್ಲಿ ಗುರುವಿಗಿಂತಲೂ ಅಧಿಕರಾದವರು 'ಬೇರಾರೂ ಇಲ್ಲ', 'ಬೇರಾರೂ ಇಲ್ಲ','ಬೇರಾರೂ ಇಲ್ಲ','ಇದು ಶಿವನ ಆದೇಶವು', 'ಇದು ಶಿವನ ಆದೇಶವು','ಇದು ಶಿವನ ಆದೇಶವು' ಎಂಬುದಾಗಿ ಮೂರು ಸಾರೆ ಉಪದೇಶಿಸಿ ಗುರುವೇ ದೊಡ್ಡವನೆಂಬುದನ್ನು ದೃಢಪಡಿಸಿದ್ದನ್ನು ಕಾಣುತ್ತೇವೆ. ಇದೇ ಪ್ರಕಾರ ಯೋಗ ಶಿಖೋಪನಿಷತ್ತಿನಲ್ಲಿಯೂ–

ನ ಗುರೋರಧಿಕಃ ಕಶ್ಚಿತ್ ತ್ರಿಷುಲೋಕೇಷು ವಿದ್ಯತೇ ।
ದಿವ್ಯಜ್ಞಾನೋಪದೇಷ್ಟಾರಂ ದೇಶಿಕಂ ಪರಮೇಶ್ವರಮ್ ॥
ಪೂಜಯೇತ್ಪರಯಾ ಭಕ್ತ್ಯಾ ತಸ್ಯ ಜ್ಞಾನಫಲಂಭವೇತ್ ।
ಯಥಾ ಗುರುಸ್ತಥೈವೇಶೋ ಯಥೈವೇಶಸ್ತಥಾಗುರುಃ ॥
ಪೂಜನೀಯೋ ಮಹಾಭಕ್ತ್ಯಾ ನ ಭೇದೋ ವಿದ್ಯತೇ ತಯೋಃ ॥

ಈ ವಿಧವಾಗಿ ಉಪದೇಶಿಸಿದ್ದನ್ನು ಕಾಣುತ್ತೇವೆ. ತಾತ್ಪರ್ಯವೇನೆಂದರೆ, ಮೂರೂ ಲೋಕಗಳಲ್ಲಿ ಸದ್ಗುರುವಿಗಿಂತಲೂ ಅಧಿಕರಾದವರು ಬೇರಾರೂ ಇಲ್ಲ. ಸದ್ಗುರುವು ದಿವ್ಯ ಜ್ಞಾನವನ್ನು ಉಪದೇಶಮಾಡಿ ಪರಶಿವ ಬ್ರಹ್ಮತತ್ತ್ವವನ್ನು ತಿಳಿಸುವಂಥವನಾಗಿರುತ್ತಾನೆ. ಆತನನ್ನು ಅನನ್ಯವಾದ ಭಕ್ತಿಯಿಂದ ಪೂಜಿಸಿದರೆ ಲಿಂಗಾಂಗ ಸಾಮರಸ್ಯ ಜ್ಞಾನವೆಂಬ ಫಲವು ಪ್ರಾಪ್ತವಾಗುವುದು. ಗುರುವಿನಂತೆ ಶಿವನು ಮತ್ತು ಶಿವನಂತೆ ಗುರುವು ಹೀಗೆ ಅವರೀರ್ವರ ಸ್ವರೂಪವು ಒಂದೇ ಆಗಿರೋಣದರಿಂದ ಅವರೀರ್ವರಲ್ಲಿ ಯಾವ ಭೇದವನ್ನೂ ಮಾಡದೆ ಪೂಜಿಸಬೇಕು ಎಂಬುದು ಯೋಗಶಿಖೋಪನಿಷತ್ತಿನ ಉಪದೇಶದ ಮಥಿತಾರ್ಥವಾಗಿದೆ. ಆದಕಾರಣ ವೀರಶೈವ ಭಕ್ತರು ಗುರುವಿನಲ್ಲಿ ಮತ್ತು ಶಿವನಲ್ಲಿ ಭೇದವನ್ನು ಕಾಣದೆ ಅವರೀರ್ವರೂ ಒಂದೇ ಎಂಬ ಭಾವನೆಯಿಂದ ತಮ್ಮ ಶ್ರದ್ಧೆಯನ್ನು ಸಮರ್ಪಿಸಬೇಕು.

ಸದ್ಗುರು ಹಾಗೂ ಶಿವರ ಅಭೇದವನ್ನು ಬೋಧಿಸಿದ ಪೂಜ್ಯರು ಸದ್ಗುರುವೆಂದರೆ ಪ್ರತ್ಯಕ್ಷವಾಗಿ ತೋರುವ ಪರಮಾತ್ಮನೆಂದೇ ಬೋಧಿಸುವುದಕ್ಕಾಗಿ ಪುನಃ–

ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ ।
ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥

(ಸಿ.ಶಿ. ೯–೫೮)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನು ಮಾಯಾಶಕ್ತಿ ವಿಶಿಷ್ಟನಾಗಿರೋಣದರಿಂದ ಸರ್ವರಿಗೂ ಆತನು ಪತ್ಯಕ್ಷನಾಗಿ ತೋರಲಾರ. ಆ ಶಿವನೇ ಭಕ್ತರ ಭಕ್ತಿಯನ್ನು ಸ್ವೀಕರಿಸುವುದಕ್ಕಾಗಿ ಗುರುರೂಪದಲ್ಲಿ ದೃಷ್ಟಿಗೋಚರನಾಗುತ್ತಿದ್ದಾನೆ. ಪೂಜ್ಯಪಾದರು ಈ ಮೇಲಿನ ಉಪದೇಶದಲ್ಲಿ ಶಿವನೇ ಗುರುವಾಗಿ ಬಂದಿದ್ದರೂ ಆ ಶಿವಸ್ವರೂಪ ಹಾಗೂ ಗುರುಸ್ವರೂಪಗಳಲ್ಲಿರುವ ವ್ಯತ್ಯಾಸವನ್ನು ಸ್ಪಷ್ಟಪಡಿಸಿದ್ದಾರೆ. ಶಿವನು ಮಾಯಾಶಕ್ತಿ ವಿಶಿಷ್ಟನಾಗಿರುತ್ತಾನೆ. ಅಂತೆಯೇ ಆತನು ಸಗುಣ ಸಾಕಾರ ರೂಪದಿಂದ ಸರ್ವರಿಗೂ ಪ್ರತ್ಯಕ್ಷವಾಗಿ ತೋರಲಾರನು. ಶಿವನ ಆ ಮಾಯಾಶಕ್ತಿಯು ಅತ್ಯಂತ ಪ್ರಬಲವಾಗಿರೋಣದರಿಂದ ಜೀವಿಗಳ ಬುದ್ಧಿಯ ಮೇಲೆ ತನ್ನ ಮಾಯಾಪಾಶವನ್ನು ಬೀಸಿ ಅವರು ಸಾಂಸಾರಿಕ ವಿಷಯ ವ್ಯಾಮೋಹದಲ್ಲಿಯೇ ಇರುವಂತೆ ಮಾಡುತ್ತದೆ. ಆದ್ದರಿಂದ ಮಾಯಾಪಾಶ ಮೋಹಿತರಾದ ಜೀವಿಗಳು ಶಿವನನ್ನು ಕಾಣದೆ ಈ ಪ್ರಪಂಚದಲ್ಲಿ ನಾನಾವಿಧ ದುಃಖಗಳನ್ನು ಅನುಭವಿಸುತ್ತ ಜನನ–ಮರಣಾತ್ಮಕ ಚಕ್ರದಲ್ಲಿ ಸುತ್ತುತ್ತಲಿರುತ್ತಾರೆ. ಜೀವಿಗಳ ಈ ಪರಿತಾಪವನ್ನು ಕಂಡು ಕೃಪೆಗೊಂಡ ಶಿವನು ತನ್ನ ಮಾಯಾಶಕ್ತಿಯನ್ನು ಬಿಟ್ಟು ಜ್ಞಾನಶಕ್ತಿ ವಿಶಿಷ್ಟನಾಗಿ ಗುರುವಾಗಿ ಅವತರಿಸುತ್ತಾನೆ. ಇದನ್ನೇ ''ಸಾಕ್ಷಾತ್ ಭರ್ಗೋ ನರಾಕೃತಿಃ'' ಎಂಬ ಪ್ರಮಾಣ ವಚನವೂ ಸಹ ಸಮರ್ಥಿಸುತ್ತದೆ. ಹೀಗೆ ಗುರುರೂಪದಲ್ಲಿ ಪ್ರತ್ಯಕ್ಷವಾಗಿ ಬಂದ ಆ ಶಿವನು ಭಾವುಕರಾದ ಜೀವಿಗಳಿಗೆ ಶಿವಾದ್ವೈತ ತತ್ತ್ವವನ್ನು ಉಪದೇಶಮಾಡಿ ಅನಾದಿಕಾಲದಿಂದ ಅವರ ಹೃದಯದಲ್ಲಿ ಹುದುಗಿಕೊಂಡಿದ್ದ ಅಜ್ಞಾನವನ್ನು ಕಳೆದು ಅವರನ್ನು ಶಿವಜ್ಞಾನಿಗಳನ್ನಾಗಿ ಮಾಡುತ್ತಾನೆ. ಹೀಗೆ ಗುರುಕೃಪೆಗೆ ಪಾತ್ರರಾದ ಶಿಷ್ಯರು ಸಂಸಾರ ಸಾಗರದಿಂದ ಮುಕ್ತರಾಗಿ ಶಿವಸಾಯುಜ್ಯವನ್ನು ಪಡೆಯುವರು. ಶಿಷ್ಯನ ಸರ್ವವಿಧ ಅಭ್ಯುದಯಕ್ಕಾಗಿ ಸದ್ಗುರುವೇ ಮೂಲಕಾರಣನು. ಅಂತೆಯೇ ಓರ್ವ ಕವಿಯು–

ಮಂತ್ರಮೂಲಂ ಗುರೋರ್ವಾಕ್ಯಮ್ ।
ಪೂಜಾಮೂಲಂ ಗುರೋಃಪಾದಮ್ ।
ಧ್ಯಾನಮೂಲಂ ಗುರೋರ್ಮೂರ್ತಿಃ ।
ಮುಕ್ತಿಮೂಲಂ ಗುರೋಃ ಕೃಪಾ ॥

ಈ ತೆರನಾಗಿ ಗುರುವಿನ ಮಹತಿಯನ್ನು ಕೊಂಡಾಡಿದ್ದಾನೆ. ತಾತ್ಪರ್ಯವೇನೆಂದರೆ, ಶಿಷ್ಯನಾದವನಿಗೆ ಗುರುವಿನ ವಾಕ್ಯವೇ ಮೂಲ ಮಂತ್ರವು. ಗುರುವಿನ ಪಾದಗಳೇ ಪೂಜನೀಯವಾದವುಗಳು. ಗುರುಮೂರ್ತಿಯೇ ಧ್ಯಾನಕ್ಕೆ ಯೋಗ್ಯವಾದುದು. ಅದೇ ರೀತಿ ಕೊನೆಗೆ ಮುಕ್ತಿಯನ್ನು ಪಡೆಯಲು ಗುರುಕೃಪೆಯೇ ಮೂಲಕಾರಣವು. ಹೀಗೆ ಗುರುವಿನ ಹೊರತಾಗಿ ಮತ್ತಾರಿಂದಲೂ ಜೀವನದ ಉದ್ದೇಶವು ಸಫಲವಾಗದ ಕಾರಣ ಪ್ರತಿಯೊಬ್ಬರೂ ಸದ್ಗುರುವಿಗೇನೇ ಶರಣಾಗತರಾಗಬೇಕು. ಶಿವ ಮೊದಲಾದ

ದೇವತೆಗಳು ಶಸ್ತ್ರಧಾರಿಗಳಾಗಿದ್ದು ತಮ್ಮ ಶಸ್ತ್ರಬಲದಿಂದ ಅವರು ಲೋಕಕಂಟಕರಾದ ದುರ್ಜನರನ್ನು ಸಂಹರಿಸುತ್ತ ಬಂದದ್ದನ್ನು ಕೇಳುತ್ತೇವೆ. ಹೀಗೆ ದೇವರಿಂದ ಸಂಹರಿಸಲ್ಪಟ್ಟ ದುಷ್ಟನು ಪುನಃ ತನ್ನ ದುರ್ಬುದ್ಧಿಯನ್ನು ತೆಗೆದುಕೊಂಡು ಜನ್ಮತಾಳುವುದರಿಂದ ಆತ ಮೊದಲಿನಂತೆಯೇ ದುಷ್ಟಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ. ಹೀಗೆ ಅದೆಷ್ಟೋ ಸಾರೆ ಶಸ್ತ್ರಗಳಿಂದ ಸಂಹರಿಸಲ್ಪಟ್ಟರೂ ದುಷ್ಟನು ಪರಿವರ್ತನೆಯಾಗಲು ಸಾಧ್ಯವಾಗುವುದಿಲ್ಲ. ಆದರೆ ಆ ದುಷ್ಟವ್ಯಕ್ತಿಯೇ ಸದ್ಗುರುವಿನ ಮುಂದೆ ಬಂದಾಗ ಅವನಿಗೆ ಸದ್ಗುರುವು ಶಾಸ್ತ್ರೋಪದೇಶವನ್ನು ಮಾಡಿ ಅವನ ಬುದ್ಧಿಯಲ್ಲಿಯ ದುಷ್ಟವೃತ್ತಿಯನ್ನು ದೂರಮಾಡಿ ಆತನನ್ನು ಸಾತ್ವಿಕನನ್ನಾಗಿಯೂ ಮತ್ತು ಶಿವಜ್ಞಾನಿಯನ್ನಾಗಿಯೂ ಮಾಡುತ್ತಾನೆ. ಬುದ್ಧಿ ಪರಿವರ್ತನೆಗೊಂಡ ವ್ಯಕ್ತಿಯನ್ನು ಸಂಹರಿಸುವ ಅವಶ್ಯಕತೆಯಿರುವುದಿಲ್ಲ. ದೇವರ ಶಸ್ತ್ರಪ್ರಹಾರವು ಶರೀರದ ಮೇಲೆ ಪರಿಣಾಮವನ್ನುಂಟುಮಾಡಿದರೆ ಸದ್ಗುರುವಿನ ಉಪದೇಶವೆಂಬ ಶಾಸ್ತ್ರಪ್ರಹಾರವು ಬುದ್ಧಿಯ ಮೇಲೆ ಪರಿಣಾಮವನ್ನು ಮಾಡುತ್ತದೆ. ಬುದ್ಧಿಯು ಪರಿವರ್ತನೆಗೊಂಡರೆ ಮನುಷ್ಯನ ಜೀವನವೇ ಪರಿವರ್ತನಗೊಳ್ಳುವುದು. ಹೀಗೆ ಗುರುವಿನ ಉಪದೇಶದಿಂದ ಪರಿರ್ವರ್ತನೆಗೊಂಡ ಅನೇಕ ಜನರ ಚರಿತ್ರೆಗಳು ಪ್ರಸಿದ್ಧಗಳಾಗಿವೆ. ಉದಾಹರಣೆಗಾಗಿ, ಸುಜ್ಞಾನದೇವರಿಂದ ಮಾತಂಗತಮ್ಮ; ನಾರದನಿಂದ ವಾಲ್ಮೀಕಿ, ಬುದ್ಧನಿಂದ ಅಂಗುಲಿಮಾಲ ಮುಂತಾದವುಗಳನ್ನು ಹೇಳಬಹುದು. ಆದಕಾರಣ ಸದ್ಗುರುವನ್ನು ಪ್ರತ್ಯಕ್ಷವಾಗಿ ತೋರುವ ಪರಮಾತ್ಮನೆಂದೇ ಭಾವಿಸಿ ತನ್ನ ಭಕ್ತಿ ಸಮರ್ಪಣೆಯನ್ನು ಮಾಡಿ ಆತನಿಂದ ಜ್ಞಾನೋಪದೇಶವನ್ನು ಪಡೆದುಕೊಳ್ಳಬೇಕು.

ದಿವ್ಯಜ್ಞಾನೋಪದೇಶವನ್ನು ಮಾಡಿ ಶಿಷ್ಯರನ್ನು ಸಂಸಾರಸಾಗರದಿಂದ ಪಾರು ಮಾಡುವ ಸದ್ಗುರುವೇ ವಂದನೀಯನು. ಆದಕಾರಣ ಸರ್ವತೋಭಾವೇನ ತ್ರಿಕರಣ ಪೂರ್ವಕವಾಗಿ ಆತನ ಸೇವೆಯನ್ನು ಮಾಡಬೇಕೆಂಬುದನ್ನು ತಿಳಿಸಲೋಸುಗವಾಗಿಯೇ ಪೂಜ್ಯರು ಪುನಃ–

ಶಿವಜ್ಞಾನಂ ಮಹಾಘೋರಸಂಸಾರಾರ್ಣವತಾರಕಮ್ ।
ದೀಯತೇ ಯೇನ ಸ ಗುರುಃ ಕಸ್ಯ ವಂದ್ಯೋ ನ ಜಾಯತೇ ॥

ಯತ್ಕಟಾಕ್ಷಕಲಾಮಾತ್ರಾತ್ ಪರಮಾನಂದ ಲಕ್ಷಣಮ್ ।
ಲಭ್ಯತೇ ಶಿವರೂಪತ್ವಂ ಸ ಗುರುಃ ಕೇನ ನಾರ್ಚಿತಃ ॥

ಹಿತಮೇವ ಚರೇನ್ನಿತ್ಯಂ ಶರೀರೇಣ ಧನೇನ ಚ ।
ಆಚಾರ್ಯಸ್ಯೋಪಶಾಂತಸ್ಯ ಶಿವಜ್ಞಾನಮಹಾನಿಧೇಃ ॥

ಗುರೋರಾಜ್ಞಾಂ ನ ಲಂಘೇತ ಸಿದ್ಧಿಕಾಮೀ ಮಹಾಮತಿಃ ।
ತದಾಜ್ಞಾಲಂಘನೇನಾಪಿ ಶಿವಾಜ್ಞಾಚ್ಛೇದಕೋ ಭವೇತ್ ॥

(ಸಿ. ಶಿ. ೯; ೫೫–೫೮)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಮಹಾ ಭಯಾನಕವಾದ ಸಂಸಾರಸಾಗರವನ್ನು ದಾಟಿಸುವ ಶಿವಜ್ಞಾನವು ಯಾರ ಉಪದೇಶದಿಂದ ಪ್ರಾಪ್ತವಾಗು

ವುದೋ ಅಂತಹ ಆ ಸದ್ಗುರು ಯಾರಿಗೆ ತಾನೆ ಪೂಜ್ಯನಲ್ಲ ? ಸರ್ವರಿಗೂ ಪೂಜ್ಯನೆಂದರ್ಥ. ಕೇವಲ ತನ್ನ ಕೃಪಾಕಟಾಕ್ಷಮಾತ್ರದಿಂದಲೇ ಪರಮಾನಂದ ರೂಪವಾದ ಶಿವ ಸ್ವರೂಪವನ್ನು ತಿಳಿಸಿಕೊಡುವ ಸದ್ಗುರುವು ಸಕಲ ಮುಮುಕ್ಷುಗಳಿಂದಲೂ ಪೂಜನೀಯನಾ ದವನಾಗಿರುತ್ತಾನೆ. ಶಿವಜ್ಞಾನದ ಮಹಾನಿಕ್ಷೇಪನೂ ರಾಗದ್ವೇಷಾದಿ ರಹಿತನೂ ಆದ ಸದ್ಗುರುವಿಗೆ ಶಿಷ್ಯನಾದವನು ತನ್ನ ದೇಹ ಹಾಗೂ ಧನದಿಂದ ಯಾವಾಗಲೂ ಹಿತವನ್ನೇ ಉಂಟುಮಾಡಬೇಕು. ಮೋಕ್ಷವೆಂಬ ಸಿದ್ಧಿಯನ್ನು ಪಡೆಯುವ ವಿವೇಕ ಸಂಪನ್ನನಾದ ವ್ಯಕ್ತಿಯು ಸದ್ಗುರುವಿನ ಆಜ್ಞೆಯನ್ನು ಅದೆಂದಿಗೂ ಮೀರಿ ನಡೆಯಬಾರದು.

ಜನನ–ಮರಣ, ಕ್ಷುಧಾ–ತೃಷೆ ಮತ್ತು ಶೋಕ–ಮೋಹಗಳೆಂಬ ಷಡೂರ್ಮಿಗಳಿಂದ ಈ ಸಂಸಾರವೆಂಬ ಸಾಗರವು ಅತ್ಯಂತ ಭಯಾನಕವಾಗಿ ತೋರುತ್ತಿರುತ್ತದೆ. ಇಲ್ಲಿ ಜನ್ಮತಾಳಿದ ಪ್ರತಿಯೊಬ್ಬ ವ್ಯಕ್ತಿಯು ಈ ಊರ್ಮಿಗಳ ಹೊಡೆತಕ್ಕೆ ತಲ್ಲಣಿಸಿ ಹೋಗುತ್ತಿದ್ದಾನೆ. ಈ ಊರ್ಮಿಗಳ ಹೊಡೆತದಿಂದ ಪಾರಾಗಬೇಕಾದರೆ ಅರ್ಥಾತ್ ಇವುಗಳಿಂದ ಮುಕ್ತನಾಗಬೇಕಾದರೆ ಶಿವಜ್ಞಾನವೇ ಪರಮಾವಶ್ಯಕವಾದುದು. ಇಂತಹ ಈ ಶಿವಜ್ಞಾನವು ಸದ್ಗುರುವಿನ ಉಪದೇಶದಿಂದಲೇ ದೊರೆಯುವುದಾಗಿದೆ. ಗುರುವಿನಿಂದ ಈ ಜ್ಞಾನವನ್ನು ಪಡೆಯಬೇಕಾದರೆ ಶಿಷ್ಯನು ವಿನಮ್ರಭಾವದಿಂದ ಮೊದಲು ಆತನಿಗೆ ಶರಣು ಹೋಗಬೇಕಾಗುವುದು. ಅಂತೆಯೇ ಶ್ರೀಮದ್ ಭಗವದ್ಗೀತೆಯಲ್ಲಿ– ''ತದ್ವಿದ್ಧಿ ಪ್ರಣಿಪಾತೇನ'' ಎಂಬುದಾಗಿ ಉಪದೇಶಿಸಲಾಗಿದೆ. ಗುರುಸಾನ್ನಿಧ್ಯಕ್ಕೆ ಹೋದ ಶಿಷ್ಯನು ಮೊದಲು ಸಮರ್ಪಿಸಬೇಕಾದುದು ಪ್ರಣಿಪಾತವು. ಭಾರತೀಯ ಸಂಸ್ಕೃತಿಯಲ್ಲಿ ಪ್ರಣಿಪಾತಕ್ಕೆ ಅರ್ಥಾತ್ ನಮಸ್ಕಾರಕ್ಕೆ ಮಹತ್ತ್ವವನ್ನು ಕೊಡಲಾಗಿದೆ.

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ತಸ್ಯ ವರ್ಧಂತೆ ಆಯುರ್ವಿದ್ಯಾಯಶೋಬಲಮ್ ॥

ಎಂಬ ಈ ನೀತಿಸೂಕ್ತಿಯಲ್ಲಿ, ಗುರುಹಿರಿಯರಿಗೆ ಕೇವಲ ಶ್ರದ್ಧೆಯಿಂದ ನಮಸ್ಕಾರವನ್ನು ಮಾಡುವುದರಿಂದಲೇ ಆಯುಷ್ಯ, ವಿದ್ಯೆ, ಯಶಸ್ಸು ಅರ್ಥಾತ್ ಕೀರ್ತಿ ಮತ್ತು ಬಲಗಳ ಅಭಿವೃದ್ಧಿಯಾಗುವುದೆಂಬುದಾಗಿ ಉಪದೇಶಿಸಲಾಗಿದೆ. ಆದ್ದರಿಂದ ಪೂಜ್ಯಪಾದರು ಗುರುವಂದನೆಯನ್ನಿಲ್ಲಿ ಉಪದೇಶಿದ್ದಾರೆ.

ವಂದನೆಯ ಜೊತೆಗೆ ಗುರುವಿನ ಅರ್ಚನೆಯನ್ನೂ ಸಹ ಶಿಷ್ಯನಾದವನು ಆಚರಿಸಬೇಕು. ಗುರುವಿನ ಪಾದಾರವಿಂದಗಳೇ ಅರ್ಚನೀಯವಾಗಿರುತ್ತವೆ. ಗುರುವಿನ ಅರ್ಚನೆಯನ್ನು ತನು, ಮನ, ಧನಗಳಿಂದ ಮಾಡಬೇಕು. ಗುರುವಿನ ಬಗ್ಗೆ ಅದೆಂದಿಗೂ ಅಹಿತಭಾವನೆಯನ್ನು ತಾಳದೆ ಸದಾ ಆತನಿಗೆ ಹಿತವಾಗುವಂತೆಯೇ ವ್ಯವಹರಿಸಬೇಕು. ಗುರುಸೇವಾಸಕ್ತನಾದ ಶಿಷ್ಯನು ಅದೆಂದಿಗೂ ಗುರುವಿನ ಆಜ್ಞೆಯನ್ನು ಮೀರಕೂಡದು. ಗುರುವಿನ ಆಣತಿಯನ್ನು ಶಿರಸಾ ಪರಿಪಾಲಿಸಿದರೆ ಅವನಿಗೆ ಐಹಿಕ ಹಾಗೂ ಪಾರಲೌಕಿಕ ಅಭ್ಯುದಯಗಳು ಪ್ರಾಪ್ತವಾಗುವವು. ಹೀಗೆ ಗುರುವಿನಾಣತಿಯನ್ನು ಪರಿಪಾಲಿಸಿ

ಶ್ರೇಯಸ್ಸನ್ನು ಪಡೆದವರಲ್ಲಿ–ಸತ್ಯಕಾಮಜಾಬಾಲ, ಉಪಮನ್ಯು, ಏಕಲವ್ಯ ಮತ್ತು ಪದ್ಮಪಾದಾಚಾರ್ಯ ಮುಂತಾದವರ ಚರಿತ್ರೆಗಳು ಪ್ರಸಿದ್ಧವಾದವುಗಳಾಗಿವೆ.

ಈ ರೀತಿಯಾಗಿ ಈ ಉಭಯಸ್ಥಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವನಿಗೂ ಗುರುವಿಗೂ ಅಭಿನ್ನತೆಯನ್ನು ಪ್ರತಿಪಾದಿಸಿ ಗುರುಸೇವೆಯೇ ಶಿವಸೇವೆ ಯೆಂಬುದನ್ನು ಅರುಹಿ ಆ ಸದ್ಗುರುವನ್ನು ವಂದಿಸಿ, ಅರ್ಚಿಸಿ ಮತ್ತು ಆತನ ಆಜ್ಞೆಯನ್ನು ಪರಿಪಾಲಿಸಿ ಗುರುಕೃಪೆಯನ್ನು ಪಡೆದು ಈ ಸಂಸಾರ ಸಾಗರದಿಂದ ಮುಕ್ತರಾಗುವ ಉಪಾಯವನ್ನು ತಿಳಿಯಪಡಿಸಿದ್ದಾರೆಂಬುದಾಗಿ ಉಪದೇಶಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೬ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)



ಆಶೀರ್ವಚನ-೧

# ತ್ರಿವಿಧಸಂಪತ್ತಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಈ ಸ್ಥಲದ ಹನ್ನೊಂದನೆಯದಾದ ಅವಾಂತರ ಸ್ಥಲವೇ ತ್ರಿವಿಧಸಂಪತ್ತಿಸ್ಥಲವು. ಈ ಸ್ಥಲದಲ್ಲಿ ಗುರು, ಲಿಂಗ ಮತ್ತು ಜಂಗಮರಲ್ಲಿ ಸಮಬುದ್ಧಿಯನ್ನಿರಿಸಿಕೊಂಡು ಅವರ ಆರಾಧನೆಯನ್ನು ಮಾಡಬೇಕೆಂದು ಪ್ರತಿಪಾದಿಸುವ ಸ್ಥಲವೇ ತ್ರಿವಿಧ ಸಂಪತ್ತಿಸ್ಥಲವು. ಇದೇ ವಿಷಯವನ್ನೇ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಯಥಾ ಗುರೌ ಯಥಾ ಲಿಂಗೇ ಭಕ್ತಿಮಾನ್ ಪರಿವರ್ತತೇ ।
ಜಂಗಮೇಚ ಯಥಾ ನಿತ್ಯಂ ಭಕ್ತಿಂ ಕುರ್ಯಾದ್ ವಿಚಕ್ಷಣಃ ॥

ಏಕ ಏವ ಶಿವಃ ಸಾಕ್ಷಾತ್ ಸರ್ವಾನುಗ್ರಹಕಾರಕ ಃ ।
ಗುರು ಜಂಗಮ ಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದ ಃ ॥

(ಸಿ.ಶಿ. ೯; ೫೯–೬೦)

ಈ ತೆರನಾಗಿ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ವಿವೇಕ ಸಂಪನ್ನನಾದ ಶಿವಭಕ್ತನು ಗುರುವಿನಲ್ಲಿ ಹಾಗೂ ತನ್ನ ಇಷ್ಟಲಿಂಗದಲ್ಲಿ ಭಕ್ತಿಯನ್ನಿರಿಸಿದಂತೆ ಜಂಗಮನ ಬಗ್ಗೆಯೂ ಅದೇ ಭಾವನೆಯನ್ನು ತಾಳಿಕೊಂಡಿರಬೇಕು. ಶಿವನೇ ಗುರುರೂಪನಾದಂತೆ ಜಂಗಮ ಸ್ವರೂಪನೂ ಆಗಿದ್ದಾನೆ. ಸರ್ವರನ್ನು ಅನುಗ್ರಹಿಸುವ ಶಿವನು ತಾನು ಓರ್ವನೇ ಆಗಿದ್ದರೂ ಗುರು, ಲಿಂಗ ಮತ್ತು ಜಂಗಮರೆಂಬ ತ್ರಿವಿಧ ಸ್ವರೂಪವನ್ನು ತಾಳಿ ಭಕ್ತರ ಭಕ್ತಿಯನ್ನು ಗ್ರಹಿಸಿ ಅವರಿಗೆ ಮುಕ್ತಿಯನ್ನು ಅನುಗ್ರಹಿಸುವವನಾಗಿದ್ದಾನೆ. ಆದಕಾರಣ ಗುರುಲಿಂಗ ಜಂಗಮರಲ್ಲಿ ಭೇದಬುದ್ಧಿಯನ್ನು ತಾಳಬಾರದೆಂಬುದೇ ಪೂಜ್ಯರ ಉಪದೇಶದ ಸಾರವಾಗಿದೆ.

ವೀರಶೈವ ಸಿದ್ಧಾಂತದ ಪ್ರಕಾರ ಗುರು, ಲಿಂಗ, ಜಂಗಮರು ಆರಾಧ್ಯರು ಅರ್ಥಾತ್ ಪೂಜನೀಯರು. ವಿಭೂತಿ, ರುದ್ರಾಕ್ಷ, ಮಂತ್ರಗಳು ಪೂಜೆಯ ಸಾಮಗ್ರಿಗಳು ಮತ್ತು ಪಾದೋದಕ, ಪ್ರಸಾದಗಳು ಪೂಜೆಯ ಫಲಗಳಾಗಿರುತ್ತವೆ. ಏಕದೇವೋಪಾಸನೆಯನ್ನು ಕಟ್ಟುನಿಟ್ಟಾಗಿ ಪ್ರತಿಪಾದಿಸಿದ ಈ ಸಿದ್ಧಾಂತದಲ್ಲಿ ಒಂದರ ಪೂಜೆಯನ್ನು ಹೇಳದೆ ಮೂರರ ಪೂಜೆಯನ್ನು ಹೇಳಿರುವುದು ಸೂಕ್ತವೇ ? ಎಂಬ ಜಿಜ್ಞಾಸೆಯು ವಿಮರ್ಶಕರ ಮನಸ್ಸಿನಲ್ಲಿ ಮೂಡಿಬರಬಹುದು. ಜಿಜ್ಞಾಸುಗಳ ಈ ಜಿಜ್ಞಾಸೆಗೆ ಸಮಾಧಾನ ಮಾಡುವುದಕ್ಕಾಗಿಯೇ ಪೂಜ್ಯಪಾದರು ಗುರು–ಲಿಂಗ–ಜಂಗಮರೆಂದರೆ ಇವರು ಭಿನ್ನ ಭಿನ್ನರಲ್ಲ, ಆದರೆ ಒಬ್ಬನೇ ಆದ ಶಿವನ ಮೂರು

ಸ್ವರೂಪಗಳು ಎಂಬುದಾಗಿ ಇಲ್ಲಿ ತಿಳಿಸಿದ್ದಾರೆ. ಒಂದು ಬಿಲ್ವದಳದಲ್ಲಿ ಮೂರು ಎಲೆಗಳನ್ನು ಕಾಣುತ್ತೇವೆ. ಅದರಲ್ಲಿ ಎಲೆಗಳು ಮೂರಿದ್ದ ಮಾತ್ರಕ್ಕೆ ಅದನ್ನು ಮೂರುಬಿಲ್ವದಳ ಎಂದು ಹೇಳದೆ ಒಂದೇ ಬಿಲ್ವದಳವೆಂದು ಪರಿಗ್ರಹಿಸುವಂತೆ, ಗುರುಲಿಂಗ ಜಂಗಮರು ಮೂರು ಸಂಖ್ಯೆಯಲ್ಲಿ ತೋರುತ್ತಿದ್ದರೂ ತ್ರಿದಳದಿಂದ ಕೂಡಿದ ಬಿಲ್ವದಳದಂತೆ ಒಬ್ಬನೇ ಆದ ಶಿವನ ಮೂರು ಸ್ವರೂಪರಾಗಿದ್ದಾರೆಂದು ಸರ್ವರೂ ತಿಳಿದುಕೊಳ್ಳಬೇಕು.

ಸಂಸಾರದಲ್ಲಿಯ ಜೀವಿಗಳಿಗೆ ಶಿವದೀಕ್ಷಾ ಸಂಸ್ಕಾರವನ್ನು ಕೊಟ್ಟು ಅವರ ಜೀವನವನ್ನು ಪಾವನವನ್ನಾಗಿ ಮಾಡಿ ಅವರಿಗೆ ಪ್ರತ್ಯಕ್ಷದರ್ಶನವನ್ನು ಕೊಡುವುದಕ್ಕಾಗಿ ಶಿವನು ಗುರುವಾಗಿ ಅವತರಿಸಿದಂತೆ, ಭಕ್ತರ ಆತಿಥ್ಯವನ್ನು ಸ್ವೀಕರಿಸಿ ಅವರಿಗೆ ಜ್ಞಾನವನ್ನು ಬೋಧಿಸುವುದಕ್ಕಾಗಿ ಶಿವನು ಜಂಗಮನಾಗಿ ಅವತರಿಸಿದ್ದಾನೆ. ಅಂತೆಯೇ–

ಸರ್ವಲೋಕೋಪಕಾರಾಯ ಯೋ ದೇವಃ ಪರಮೇಶ್ವರ ಃ।
ಚರತ್ಯತಿಥಿರೂಪೇಣ ನಮಸ್ತೇ ಜಂಗಮಾತ್ಮನೇ ॥

ಎಂಬ ಈ ವೀರಾಗಮೋಕ್ತಿಯಲ್ಲಿ ಶಿವನೇ ಭಕ್ತರ ಆತಿಥ್ಯವನ್ನು ಸ್ವೀಕರಿಸಿ ಅವರನ್ನು ಉದ್ಧರಿಸುವುದಕ್ಕಾಗಿ ಜಂಗಮನಾಗಿ ಅವತರಿಸಿರುವುದನ್ನು ಉಪದೇಶಿಸಲಾಗಿದೆ. ಆದಕಾರಣ ವೀರಶೈವ ಭಕ್ತನು ಗುರು–ಲಿಂಗಗಳಲ್ಲಿ ಭಕ್ತಿಯನ್ನಿರಿಸಿದಂತೆ ಜಂಗಮ ನಲ್ಲಿಯೂ ಸಹ ಸಮಾನವಾದ ಭಕ್ತಿಯನ್ನಿರಿಸಬೇಕು.

ಜಂಗಮನೆಂದರೆ, ಚರಲಿಂಗವೆಂದರ್ಥ. ಅಂದರೆ ಸುಳಿದಾಡುವ ಶಿವಲಿಂಗ ವೆಂದು ಭಾವಿಸಬೇಕು. ಇದೇ ವಿಷಯವನ್ನೇ ಪೂಜ್ಯರು–

ಲಿಂಗಂಚ ದ್ವಿವಿಧಂ ಪ್ರೋಕ್ತಂ ಜಂಗಮಾಜಂಗಮಾತ್ಮನಾ ।
ಅಜಂಗಮೇಯಥಾ ಭಕ್ತಿರ್ಜಂಗಮೇ ಚ ತಥಾ ಸ್ಮೃತಾ ॥
ಅಜಂಗಮಂ ತು ಯಲ್ಲಿಂಗಂ ಮೃಚ್ಛಿಲಾದಿವಿನಿರ್ಮಿತಮ್ ।
ತದ್ವರಂ ಜಂಗಮಂ ಲಿಂಗಂ ಶಿವಯೋಗೀತಿ ವಿಶ್ರುತಮ್ ॥
ಅಚರೇ ಮಂತ್ರಸಂಸ್ಕಾರಾಲ್ಲಿಂಗೇ ವಸತಿ ಶಂಕರಃ।
ಸದಾಕಾಲಂ ವಸತ್ಯೇವ ಚರಲಿಂಗೇ ಮಹೇಶ್ವರಃ ॥

(ಸಿ. ಶಿ. ೯; ೭೧–೭೩)

ಈ ವಿಧವಾಗಿ ಉಪದೇಶಿಸಿದ್ದಾರೆ. ಪೂಜ್ಯರ ಉಪದೇಶದ ಪ್ರಕಾರ ಲಿಂಗವು ಜಂಗಮಲಿಂಗವೆಂದು ಮತ್ತು ಅಜಂಗಮಲಿಂಗವೆಂದು ಎರಡು ವಿಧವಾಗಿ ಇರುತ್ತದೆ. ಅಜಂಗಮಲಿಂಗದಲ್ಲಿ ಭಕ್ತಿಯನ್ನಿರಿಸಿದಂತೆ, ಜಂಗಮಲಿಂಗದಲ್ಲಿಯೂ ಸಹ ಭಕ್ತಿಯನ್ನು ಮಾಡಬೇಕು. ಮಣ್ಣು ಶಿಲೆ ಅಥವಾ ಬೇರೆ ಯಾವುದೇ ಪದಾರ್ಥಗಳಿಂದ ನಿರ್ಮಿಸಲ್ಪಟ್ಟ ಶಿವಲಿಂಗಕ್ಕೆ ಅಜಂಗಮಲಿಂಗವೆಂದು ಕರೆಯುವರು. ಮೃಚ್ಛಿಲಾದಿ ಗಳಿಂದ ನಿರ್ಮಿಸಲ್ಪಟ್ಟ ಅಚರಲಿಂಗಗಳಲ್ಲಿ ಮಂತ್ರಸಂಸ್ಕಾರದಿಂದ ಶಿವಸಾನ್ನಿಧ್ಯವು ಪ್ರಾಪ್ತವಾದರೆ, ಚರಲಿಂಗ ವಾದ ಜಂಗಮನಲ್ಲಿ ಶಿವನು ಮಂತ್ರ ಸಂಸ್ಕಾರಗಳನ್ನಪೇಕ್ಷಿಸದೆ ಸದಾ ಸನ್ನಿಹಿತನಾಗಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತಮ್ಮ ಈ ಉಪದೇಶದಲ್ಲಿ ಲಿಂಗಗಳ ಚರ–ಅಚರಸ್ವರೂಪವನ್ನು ತಿಳುಹಿಸಿ ಚರಲಿಂಗವಾದ ಜಂಗಮನ ವೈಶಿಷ್ಟ್ಯವನ್ನು ಪ್ರತಿಪಾದಿಸಿದ್ದಾರೆ. ನಾವು ಹಸ್ತಪೀಠದಲ್ಲಿರಿಸಿಕೊಂಡು ಪೂಜಿಸುವ ಲಿಂಗವು ಅಜಂಗಮ ಲಿಂಗವು ಅರ್ಥಾತ್ ಅಚರಲಿಂಗವು. ಇದು ಸ್ವತಂತ್ರವಾಗಿ ಎಲ್ಲಿಯೂ ಸುಳಿದಾಡುವುದಿಲ್ಲ ಮತ್ತು ಯಾರಿಗೂ ಏನನ್ನೂ ಬೋಧಿಸುವುದಿಲ್ಲ. ಆದರೆ ಶಿವಯೋಗ ಸಿದ್ಧಿಯನ್ನು ಪಡೆದ ಜಂಗಮನು ಸುಳಿದಾಡುವ ಶಿವಲಿಂಗವೇ ಆಗಿದ್ದಾನೆ.

ದೇವಸ್ಥಾನದಲ್ಲಿ ಸ್ಥಾಪಿಸಬೇಕಾದ ಶಿವಲಿಂಗವೇ ಆಗಿರಲಿ ಅಥವಾ ದೀಕ್ಷೆಯಲ್ಲಿ ಕೊಡಲ್ಪಡುವ ಇಷ್ಟಲಿಂಗವೇ ಆಗಿರಲಿ, ಇವರೆಡೂ ಶಿಲೆಗಳಿಂದ ನಿರ್ಮಿಸಲ್ಪಟ್ಟವುಗಳಾಗಿರುತ್ತವೆ. ಈ ಶಿಲಾಮಯ ಶಿವಲಿಂಗಗಳಲ್ಲಿಯ ಶಿಲಾತ್ವವನ್ನು ದೂರೀಕರಿಸಿ ಶಿವತ್ತ್ವವನ್ನು ಪ್ರತಿಷ್ಠಾಪಿಸಲು ಆಗಮೋಕ್ತಗಳಾದ ಅನೇಕ ವಿಧಿ ವಿಧಾನಗಳನ್ನು ಆಚರಿಸಬೇಕಾಗುತ್ತದೆ. ಅಂತೆಯೇ ಆಗಮಿಕರು ಜಲಾಧಿವಾಸ, ಧಾನ್ಯಾಧಿವಾಸ, ಪಂಚಾಮೃತಾಭಿಷೇಕ ಮತ್ತು ರುದ್ರಾಭೀಷೇಕಾದಿಗಳಿಂದ ಆ ಲಿಂಗಗಳಲ್ಲಿಯ ಜಡತ್ವವನ್ನು ದೂರೀಕರಿಸಿ ಅವುಗಳಲ್ಲಿ ಶಿವಕಲೆಗಳನ್ನು ಸಂಯೋಜಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿದಾಗ, ಅವುಗಳು ಪೂಜನೀಯಗಳಾಗುತ್ತವೆ. ಶಿಲಾನಿರ್ಮಿತಗಳಾದ ಆ ಲಿಂಗಗಳಲ್ಲಿ ಶಿವಸಾನ್ನಿಧ್ಯವು ಪ್ರಾಪ್ತವಾಗಬೇಕಾದರೆ ಮೇಲೆ ವಿವರಿಸಿದ ಪ್ರಕಾರ ಮಂತ್ರ ಸಂಸ್ಕಾರವನ್ನು ಮಾಡಬೇಕಾಗುವುದು. ಆದರೆ ಜಂಗಮಲಿಂಗವೆಂದು ಕರೆಯಿಸಿಕೊಳ್ಳುವ ಶಿವಯೋಗಿಯಲ್ಲಿ ಶಿವನು ಸದಾ ಸನ್ನಿಹಿತನಾಗಿರುತ್ತಾನೆ. ಅಂತೆಯೇ ಶಿವಪೂಜಾಸಕ್ತನಾದ ಶಿವಭಕ್ತನು ಶಿವನನ್ನು ಇಷ್ಟಲಿಂಗರೂಪದಲ್ಲಿ ಪೂಜಿಸಿದರೂ ಆ ಶಿವನನ್ನು ಸಂತೃಪ್ತಿಪಡಿಸಬೇಕಾದರೆ ಜಂಗಮಾರಾಧನೆಯನ್ನು ಮಾಡಬೇಕಾಗುವುದು.

''ಲಿಂಗಮುಖಂ ವೈ ಜಂಗಮಃ'' ಎಂಬ ಉಕ್ತಿಗನುಸಾರವಾಗಿ ಲಿಂಗದ ಮುಖವು ಜಂಗಮನಾಗಿದ್ದಾನೆ. ಗಿಡದ ಬೇರಿಗೆ ನೀರುಣಿಸಿದರೆ ಆ ಗಿಡದ ಪ್ರತಿಯೊಂದು ಶಾಖೆ ಪ್ರಶಾಖೆಗಳು ಪ್ರಫುಲ್ಲಿತವಾಗುವಂತೆ ಲಿಂಗಮುಖವಾದ ಜಂಗಮನಿಗೆ ತೃಪ್ತಿಪಡಿಸಿದರೆ ಲಿಂಗರೂಪನಾದ ಶಿವನು ಸಂತೃಪ್ತನಾಗುತ್ತಾನೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಲಿಂಗಕ್ಕೆ ಕೊಟ್ಟ ಮಹತ್ವವನ್ನು ಜಂಗಮಕ್ಕೂ ಕೊಡಲಾಗಿದೆ. ಭಕ್ತಿಭಂಡಾರಿ ಬಸವಣ್ಣನವರೂ ಸಹ–

> ಮರಕ್ಕೆ ಬಾಯಿಬೇರೆಂದು ತಳಕ್ಕೆ ನೀರೆರದರೆ ಮೇಲೆ ಪಲ್ಲವಿಸಿತ್ತು
> ನೋಡಾ । ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ
> ನೀಡಿದರೆ ಮುಂದೆ ಸಕಲ ಪದಾರ್ಥವನೀವನು ! ಆ ಜಂಗಮವ
> ಹರನೆಂದು ಕಂಡು ನರನೆಂದು ಭಾವಿಸಿದರೆ ನರಕ ತಪ್ಪದು ಕಾಣಾ
> ಕೂಡಲಸಂಗಮದೇವಾ !

ತಮ್ಮ ಈ ವಚನದಲ್ಲಿ ಅದೇ ಭಾವವನ್ನು ವ್ಯಕ್ತಪಡಿಸಿ ಅಚರಲಿಂಗಕ್ಕಿಂತಲೂ ಚರಲಿಂಗವೆಂದು ಕರೆಯಲ್ಪಡುವ ಜಂಗಮನ ಮಹತಿಯನ್ನು ಕೊಂಡಾಡಿದ್ದಾರೆ. ಕಾರಣ ಜಂಗಮರನ್ನು ಶ್ರದ್ಧೆಯಿಂದ ಕಂಡು ಆದರಿಸಿ ಅನುಗ್ರಹವನ್ನು ಪಡೆದುಕೊಳ್ಳಬೇಕು.

ಈ ಲೋಕದಲ್ಲಿ ತಾನು ಸಂಪಾದಿಸಿದ ಕೆಲವು ಅಂಶವನ್ನು ದಾನಮಾಡಬೇಕೆಂಬುದಾಗಿ ಧರ್ಮಶಾಸ್ತ್ರದ ಆದೇಶವಿರುತ್ತದೆ. ಆ ದಾನವನ್ನು ಮಾಡುವಾಗಲೂ ಸಹ ಪಾತ್ರಾಪಾತ್ರತೆಯನ್ನು ಪರೀಕ್ಷಿಸಿ ಮಾಡುವುದು ಸರ್ವೋತ್ತಮವಾದುದು. ಅಪ್ಪಿ ತಪ್ಪಿ ಅಪಾತ್ರದಲ್ಲಿ ದಾನಗೈದರೆ ಅದು ಸದ್ಗತಿಗೆ ಕಾರಣವಾಗದೆ ದುರ್ಗತಿಯನ್ನೇ ಉಂಟುಮಾಡುವುದು. ಹೀಗಿರುವಾಗ ದಾನಕ್ಕೆ ಪಾತ್ರರಾರು ? ಯಾರಿಗೆ ದಾನವನ್ನು ಮಾಡಬೇಕು ? ಎಂಬ ಪ್ರಶ್ನೆ ಉದ್ಭವಿಸಿದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಶಿವಯೋಗಿನಿ ಯದ್ದತ್ತಂ ತದಕ್ಷಯ ಫಲಂ ಭವೇತ್ ।
ತಸ್ಮಾತ್ ಸರ್ವಪ್ರಯತ್ನೇನ ತಸ್ಮೈ ದೇಯಂ ಮಹಾತ್ಮನೇ ॥

ಯತ್ಫಲಂ ಲಭತೇ ಜಂತುಃ ಪೂಜಯಾ ಶಿವಯೋಗಿನಃ ।
ತದಕ್ಷಯಮಿತಿ ಪ್ರೋಕ್ತಂ ಸಕಲಾಗಮಪಾರಗೈಃ ॥

(ಸಿ. ಶಿ. ೯ ; ೬೪–೬೫)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವಜ್ಞಾನಿಯಾದ ಜಂಗಮನಿಗೆ ಮಾಡಲ್ಪಟ್ಟ ದಾನವು ಶಾಶ್ವತವಾದ ಫಲವನ್ನು ಕೊಡುವುದು. ಆದ್ದರಿಂದ ಏನೆಲ್ಲ ಪ್ರಯತ್ನ ಮಾಡಿಯಾದರೂ ಮಹಿಮಾಶಾಲಿಯಾದ ಆ ಶಿವಯೋಗಿಗೆ ದಾನವನ್ನು ಮಾಡಬೇಕು. ಸಕಲಶಾಸ್ತ್ರ ಪಾರಂಗತರಾದ ವಿದ್ವಾಂಸರು ಜಂಗಮಾರಾಧನೆಯಿಂದ ಪ್ರಾಪ್ತವಾಗುವ ಫಲವು ಅಕ್ಷಯವೆಂಬುದಾಗಿ ಬೋಧಿಸಿದ್ದಾರೆ. ಯೋಗಜಾಗಮದಲ್ಲಿ–

ದರ್ಶನಾದರ್ಚನಾತ್ತಸ್ಯ ತ್ರಿಸಪ್ತಕುಲಸಂಯುತಾಃ ।
ಜನಾಃ ಮುಕ್ತಿಪದಂ ಯಾಂತಿ ಕಿಂ ಪುನಸ್ತತ್ಪರಾಯಣಾಃ ॥

(ಯೋಗಜಾಗಮ)

ಈ ರೀತಿಯಾಗಿ ಜಂಗಮಾರಾಧನೆಯ ಫಲವನ್ನು ವಿವರಿಸಲಾಗಿದೆ. ಈ ಉಕ್ತಿಯಂತೆ ಜಂಗಮನ ದರ್ಶನ ಮಾಡುವುದರಿಂದ ಮತ್ತು ಆತನನ್ನು ಅರ್ಚಿಸುವುದರಿಂದ ಇಪ್ಪತ್ತೊಂದು ತಲೆಮಾರಿನವರೆಗೆ ಆ ವಂಶದವರು ಮೋಕ್ಷವನ್ನು ಪಡೆಯುತ್ತಾರೆ. ಇನ್ನು ಭಕ್ತಿಯಿಂದ ಸದಾ ತಮ್ಮ ಮನಸ್ಸನ್ನೇ ಜಂಗಮಕ್ಕೆ ಸಮರ್ಪಿಸಿದವರಿಗೆ ಅದೆಂತಹ ಫಲವುಂಟಾಗಲಿಕ್ಕಿಲ್ಲ? ಅರ್ಥಾತ್ ಬಹುದೊಡ್ಡದಾದ ಫಲವು ಸಿಗುವುದೆಂಬ ತಾತ್ಪರ್ಯವು.

ಹೀಗೆ ಜಂಗಮನಿಗೆ ಮಾಡಿದ ದಾನ ಹಾಗೂ ಪೂಜೆಯ ಫಲವನ್ನು ವಿವರಿಸಿದ ಪೂಜ್ಯರು ಜಂಗಮನಿಗೆ ಅದೆಂದೂ ಅವಮಾನ ಮಾಡಬಾರದೆಂಬುದನ್ನು ತಿಳಿಸುವುದಕ್ಕಾಗಿಯೇ–

ನಾವಮನ್ಯೇತ ಕುತ್ರಾಪಿ ಶಿವಯೋಗಿನಮಾಗತಮ್ ।
ಅವಮಾನಾದ್ಭವೇತ್ತಸ್ಯ ದುರ್ಗತಿಶ್ಚ ನ ಸಂಶಯಃ ॥

ಶಿವಯೋಗೀ ಶಿವಃ ಸಾಕ್ಷಾದಿತಿ ಕೈಂಕರ್ಯಭಕ್ತಿತಃ ।
ಪೂಜಯೇದಾದರೇಣೈವ ಯಥಾ ಲಿಂಗಂ ಯಥಾ ಗುರುಃ ॥

(ಸಿ. ಶಿ. ೯ ; ೬೬–೬೭)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಪೂಜ್ಯರ ಆದೇಶದ ಪ್ರಕಾರ ತನ್ನ ಮನೆಗೆ ಬಂದ ಶಿವಯೋಗಿಯನ್ನು ಬಹಿರಂಗದಲ್ಲಿಯೇ ಆಗಲಿ ಅಥವಾ ಅಂತರಂಗದಲ್ಲಿಯೇ ಆಗಲಿ ಅದೆಂದೂ ಅವಮಾನಮಾಡಕೂಡದು. ಹಾಗೇನಾದರೂ ಯಾರಾದರೂ ಅವಮಾನ ಮಾಡಿದರೆ, ಅವನಿಗೆ ನಿಸ್ಸಂದೇಹವಾಗಿ ದುರ್ಗತಿಯೇ ಪ್ರಾಪ್ತವಾಗುವುದು. ಆದಕಾರಣ ಶಿವಭಕ್ತನು ಶಿವಯೋಗಿಯಾದ ಜಂಗಮನನ್ನು ಸಾಕ್ಷಾತ್ ಶಿವನೆಂದೇ ಭಾವಿಸಿ, ಆತನಲ್ಲಿ ಕಿಂಕರತ್ವದಿಂದ ವರ್ತಿಸಬೇಕು. ಗುರುವನ್ನು ಲಿಂಗವನ್ನು ಭಕ್ತಿಯಿಂದ ಆರಾಧಿಸುವಂತೆ ಈ ಜಂಗಮನನ್ನೂ ಸಹ ಅದೇ ವಿಧವಾಗಿ ಆರಾಧಿಸಿ ಆತನ ಅನುಗ್ರಹವನ್ನು ಪಡೆಯಬೇಕೆಂಬುದು ಶ್ರೀ ಜಗದ್ಗುರು ರೇಣುಕರ ಆಶಯವಾಗಿದೆ.

ಈ ತ್ರಿವಿಧ ಸಂಪತ್ತಿಸ್ಥಲದಲ್ಲಿ ಉಪದೇಶ ಮಾಡಿದ ಆಚಾರ್ಯರ ಆಶೀರ್ವಚನ ವನ್ನು ಅವಲೋಕಿಸಿದಾಗ ಗುರು, ಲಿಂಗ ಮತ್ತು ಜಂಗಮರ ಮಹತಿಯು ಸಮಾನವಾಗಿ ತೋರಿಬರುತ್ತದೆ. ಸಂಖ್ಯೆಯಲ್ಲಿ ಇವರು ಮೂರಾಗಿ ತೋರುತ್ತಿದ್ದರೂ ತತ್ತ್ವತಃ ಇವರು ಒಂದೇ ಎಂಬುದು ತಿಳಿದುಬರುತ್ತದೆ. ಒಬ್ಬನೇ ಆದ ಶಿವನು ಗುರುವಾಗಿ ದೀಕ್ಷೆಯನ್ನಿತ್ತು, ಲಿಂಗವಾಗಿ ನಿರಂತರ ಪೂಜೆಗೊಂಡು ಮತ್ತು ಜಂಗಮವಾಗಿ ಶಿವಾದ್ವೈತ ಜ್ಞಾನವನ್ನು ಬೋಧಿಸಿ ಶಿವಭಕ್ತನನ್ನು ಉದ್ಧರಿಸುತ್ತಿದ್ದಾನೆ. ಹೀಗೆ ಮಾಡುವ ಕಾರ್ಯಗಳು ಭಿನ್ನಗಳಾಗಿರೋಣದರಿಂದ ಭಿನ್ನ ಭಿನ್ನ ನಾಮಗಳು ಬಂದಿವೆಯೇ ವಿನಃ ಸ್ವರೂಪದಲ್ಲಿ ಯಾವ ಭೇದವೂ ಇರುವುದಿಲ್ಲ. ಆದ್ದರಿಂದ ಇಲ್ಲಿಯವರೆಗೆ ಗುರು ಮತ್ತು ಲಿಂಗವನ್ನು ಪೂಜಿಸುತ್ತ ಬಂದಂತೆ ಇನ್ನು ಮುಂದೆ ಜಂಗಮನನ್ನೂ ಸಹ ಶಿವಭಕ್ತನಾದವನು ಪ್ರತಿದಿವಸ ಪೂಜಿಸಬೇಕು. ತನಗೆ ಸಾಧ್ಯವಾದ ಮಟ್ಟಿಗೆ ಜಂಗಮನಿಗೆ ಮಾನ–ಮರ್ಯಾದೆಗಳನ್ನು ಕೊಡಬೇಕೇ ವಿನಃ ಅವಮಾನವನ್ನು ಮಾತ್ರ ಅದೆಂದಿಗೂ ಮಾಡಬಾರದು. ಅಂತೆಯೇ–

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿಕೊಂಬಂತೆ
ಉರಿವ ಕೆಂಡವಕೊಂಡು ಮಂಡೆಯ ಸಿಕ್ಕ ಬಿಡಿಸಿಕೊಂಬಂತೆ
ಹುಲಿಯಮೀಸೆಯ ಹಿಡಿದುಕೊಂಡು ಒಲಿದು ಉಯ್ಯಾಲೆಯಾಡುವಂತೆ
ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದಡೆ ಸುಣ್ಣದ ಹರಳ
ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

ಎಂಬ ವಚನದಲ್ಲಿ ಸಾಮಾನ್ಯವಾಗಿ ಗೌರವ ಕೊಡಬೇಕಾಗಿರುವ ಶರಣರೊಂದಿಗೆ ಸರಸ ವಾಡಿದರೆ ಅರ್ಥಾತ್ ಅತಿಸಲುಗೆಯಿಂದ ನಡೆದುಕೊಂಡರೆ ಎಂತಹ ಅನರ್ಥವಾಗುವು ದೆಂಬುದನ್ನು ಅನೇಕ ಉದಾಹರಣೆಗಳ ಮೂಲಕ ತಿಳಿಸಿರುವುದನ್ನು ಇಲ್ಲಿ ಕಾಣುತ್ತೇವೆ. ಸಲುಗೆಯಿಂದ ನಡೆದುಕೊಂಡರೆ ಇಷ್ಟೊಂದು ಅನರ್ಥವುಂಟಾಗುತ್ತಿರುವಾಗ ಶಿವಜ್ಞಾನಿ ಯಾದ ಜಂಗಮನಿಗೆ ಅಪಮಾನವೆಸಗಿದರೆ ಅದೆಂತಹ ಅನರ್ಥವುಂಟಾಗಲಿಕ್ಕಿಲ್ಲ ? ಆದುದರಿಂದ ಜಂಗಮನ ಅಪಮಾನವನ್ನು ಯಾರೂ ಮಾಡಬಾರದು.

ಪೂಜ್ಯ ಪಾದರಾದ ಆಚಾರ್ಯರು ಗುರು–ಲಿಂಗ–ಜಂಗಮರನ್ನು ಸಂಪತ್ತು ಎಂಬುದಾಗಿ ಬೋಧಿಸಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಪ್ರತಿಯೊಬ್ಬ ವ್ಯಕ್ತಿಯ

ಮನಸ್ಸಿನಲ್ಲಿ ವಿಪತ್ತಿನ ಮತ್ತು ಸಂಪತ್ತಿನ ಪ್ರಾಪ್ತಿಯ ಅಭಿಲಾಷೆಯಿರುವುದು ಸಹಜ. ಸಂಪತ್ತು ಎಲ್ಲರಿಗೂ ಬೇಕು. ವಿಪತ್ತು ಮಾತ್ರ ಅದಾರಿಗೂ ಬೇಕಾಗಿರುವುದಿಲ್ಲ. ಆದರೆ ಯಾವುದಕ್ಕೆ ಸಂಪತ್ತೆಂದು ಕರೆಯಬೇಕು. ಯಾವುದನ್ನು ವಿಪತ್ತೆಂದು ತಿಳಿಯಬೇಕು ಎಂಬುದರ ವಿವೇಕವು ಸರ್ವರಿಗೂ ಇರಲಾರದು. ಸಾಮಾನ್ಯವಾಗಿ ಲೋಕದಲ್ಲಿ ಭೂಮಿ, ಸೀಮೆ, ಧನ-ಧಾನ್ಯ ಮತ್ತು ಐಶ್ವರ್ಯಾದಿಗಳಿಗೆ ಸಂಪತ್ತೆಂಬುದಾಗಿ ಕರೆಯುತ್ತಾರೆ. ಆದರೆ ಆಚಾರ್ಯರ ದೃಷ್ಟಿಯಲ್ಲಿ ಇವೆಲ್ಲವುಗಳು ವಿಪತ್ತುಗಳೇ ಆಗಿರುತ್ತವೆ. ಯಾವುದರಿಂದ ಜೀವಿಯು ಸದಾ ದುಃಖವನ್ನನುಭವಿಸುತ್ತಾನೆಯೋ ಅದುವೇ ವಿಪತ್ತು. ಇನ್ನು ಯಾವುದರಿಂದ ಸದಾ ಸುಖ-ಸಮಾಧಾನವನ್ನು ಪಡೆಯುತ್ತಾನೆಯೋ ಅದುವೇ ಸಂಪತ್ತು. ಲೋಕದಲ್ಲಿಯ ಭೂಮಿ-ಸೀಮೆ ಮೊದಲಾದ ಐಶ್ವರ್ಯಗಳು ಸಾಮಾನ್ಯವಾಗಿ ಸಂಪತ್ತೆಂಬುದಾಗಿ ತೋರಿದರೂ ಅವುಗಳು ದುಃಖದಾಯಕಗಳಾಗಿರೋಣದರಿಂದ ಅವುಗಳನ್ನು ವಿವೇಕಿಗಳು ವಿಪತ್ತೆಂಬುದಾಗಿ ಭಾವಿಸುತ್ತಾರೆ. ಶ್ರೀ ಪ್ರಭುದೇವರು-

ಹೇಮ ನಿನ್ನದಲ್ಲ
ಭೂಮಿ ನಿನ್ನದಲ್ಲ
ಕಾಮಿನಿ ನಿನ್ನವಳಲ್ಲ
ಇವು ಜಗಕಿಕ್ಕಿದ ವಿಧಿ
ನಿನ್ನದೆಂಬುದು ಜ್ಞಾನರತ್ನ ನೋಡಾ
ಇಂತಪ್ಪ ಜ್ಞಾನರತ್ನವನು ನೀನು ಧರಿಸಿದೆಯಾದೊಡೆ
ನಿನ್ನಿಂದಧಿಕ
ಸಿರಿವಂತರಿಲ್ಲ ಕಾಣಾ ಗುಹೇಶ್ವರ

ಎಂಬ ತಮ್ಮ ಈ ವಚನದಲ್ಲಿ ಭೂಮಿ-ಹೇಮಾದಿಗಳಿಗೆ ವಿಧಿ ಅರ್ಥಾತ್ ವಿಪತ್ತೆಂಬುದಾಗಿ ಸಂಬೋಧಿಸಿ ಜ್ಞಾನಕ್ಕೇನೇ ಸಂಪತ್ತೆಂಬುದಾಗಿ ತಿಳಿಸಿದ್ದನ್ನು ಕಾಣುತ್ತೇವೆ. ಹೀಗೆ ಆಚಾರ್ಯರ ಹಾಗೂ ಶರಣರ ವಿಚಾರವನ್ನು ನೋಡಿದಾಗ ಸಂಸಾರದ ಭೋಗ-ಭಾಗ್ಯಗಳೆಲ್ಲವೂ ವಿಪತ್ತುಗಳು. ಆದರೆ ಆರಾಧ್ಯದೇವರು ಹಾಗೂ ಅವರ ಪೂಜೆ ಧ್ಯಾನಾದಿಗಳೇ ಸಂಪತ್ತುಗಳೆಂಬುದಾಗಿ ತಿಳಿದು ಬರುತ್ತದೆ.

ಒಂದು ಸಾರೆ ಶ್ರೀರಾಮಚಂದ್ರನು ಹನುಮಂತನೊಡನೆ ಚರ್ಚೆ ಮಾಡುತ್ತಿರುವಾಗ ''ಹೇ ಹನುಮಂತ ! ಈ ಪ್ರಪಂಚದಲ್ಲಿ ಸಂಪತ್ತು ಮತ್ತು ವಿಪತ್ತುಗಳೆಂದು ಯಾವುದಕ್ಕೆ ಕರೆಯಬೇಕು ?'' ಎಂಬುದಾಗಿ ಪ್ರಶ್ನಿಸಿದನು. ಆಗ ಬುದ್ಧಿವಂತರಲ್ಲಿ ವರಿಷ್ಠನಾದ ಹನುಮಂತನು- ''ವಿಪದ್ವಿಸ್ಮರಣಂ ವಿಷ್ಣೋಃ ಸಂಪನ್ನರಾಯಣ ಸ್ಮೃತಿಃ'' ಅರ್ಥಾತ್ ದೇವರನ್ನು ಸ್ಮರಿಸುವುದೇ ಸಂಪತ್ತು, ಆತನನ್ನು ಮರೆಯುವುದೇ ವಿಪತ್ತು ಎಂಬುದಾಗಿ ತಿಳಿಯಪಡಿಸಿದ್ದಾನೆ. ಒಟ್ಟಿನಲ್ಲಿ ಆರಾಧ್ಯ ದೇವರು ಹಾಗೂ ಅವರ ಸ್ಮರಣೆಯೇ ಸಂಪತ್ತೆಂಬುದಾಗಿ ಸರ್ವರೂ ತಿಳಿದುಕೊಳ್ಳಬೇಕು.

ವೀರಶೈವ ಸಿದ್ಧಾಂತದಲ್ಲಿ ಗುರು–ಲಿಂಗ–ಜಂಗಮರು ಆರಾಧ್ಯರಾಗಿರೋಣದರಿಂದ ಈ ಮೂವರು ಮತ್ತು ಅವರ ಸೇವೆಯು ವೀರಶೈವರ ಅಮೂಲ್ಯವಾದ ಸಂಪತ್ತಾಗಿರುತ್ತದೆ. ಇದೇ ಪ್ರಕಾರ–

ಗುರೌ ದೇವೇ ಸಮಾಬುದ್ಧಿರ್ಯಥಾಽಸೌ ಶಿವಯೋಗಿನಿ ।
ಸೈಷಾ ತ್ರಿವಿಧ ಸಂಪತ್ತಿಃ ಸಂವಿತ್ಸಾಮ್ರಾಜ್ಯಶಾಲಿನಾಮ್ ॥

ವಾತುಲಾಗಮದ ಈ ಉಕ್ತಿಯಲ್ಲಿ ಶಿವಜ್ಞಾನವೆಂಬ ಸಾಮ್ರಾಜ್ಯವನ್ನು ಪಡೆದವರಿಗೆ ಗುರು–ಲಿಂಗ–ಜಂಗಮರೇ ಸಂಪತ್ತೆಂಬುದಾಗಿ ತಿಳಿಸೋಣವಾಗಿದೆ. ಹೀಗೆ ಆಧ್ಯಾತ್ಮಿಕ ಸಂಪತ್ತೆಂದು ಸಂಬೋಧಿಸಲಾಗಿರುವ ಗುರು–ಲಿಂಗ–ಜಂಗಮರಲ್ಲಿ ಪ್ರತಿಯೊಬ್ಬ ವೀರಶೈವರು ಸಮಬುದ್ಧಿಯನ್ನು ತಾಳಿ ಯಥೋಚಿತವಾದ ಅವರ ಸೇವಾದಿಗಳನ್ನು ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ತಿಳಿಯಪಡಿಸಿ ಈ ತ್ರಿವಿಧ ಸಂಪತ್ತಿಸ್ಥಲದ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೭ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)

■■

ಆಶೀರ್ವಚನ-೧೦

# ಚತುರ್ವಿಧಸಾರಾಯಸ್ಥಲ

ಧರ್ಮಾಭಿಮಾನಿಗಳೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತವಾದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಈ ಸ್ಥಲದ ಹನ್ನೆರಡನೆಯ ಅವಾಂತರ ಸ್ಥಲವೇ ಚತುರ್ವಿಧಸಾರಾಯಸ್ಥಲವು 'ಸಾರಾಯ' ಎಂದರೆ ''ಸಾರ'' ಎಂದರ್ಥ. ಈ ಸಂಸಾರವೆಲ್ಲವೂ ಬಹುಪಾಲು ಅಸಾರವಾಗಿರುವಾಗ ಅದರಲ್ಲಿರುವ ಚತುರ್ವಿಧ ಸಾರವನ್ನು ತಿಳಿಸುವ ಸ್ಥಲವೇ 'ಚತುರ್ವಿಧಸಾರಾಯಸ್ಥವು'. ಈ ಪೂರ್ವದಲ್ಲಿ ತಿಳಿಸಲ್ಪಟ್ಟ ಗುರು–ಲಿಂಗ ಮತ್ತು ಜಂಗಮರನ್ನು ಆರಾಧಿಸುವದು ಹಾಗೂ ಅವರ ಪಾದೋದಕ ಪ್ರಸಾದವನ್ನು ಸೇವಿಸುವುದು ಹೀಗೆ ಈ ನಾಲ್ಕು ವೀರಶೈವ ಸಾಧಕನ ಜೀವನದ ಮುಖ್ಯಸಾರಗಳಾಗಿವೆ. ಅಂದರೆ ಗುರುಸೇವೆ, ಲಿಂಗಪೂಜೆ, ಜಂಗಮಾರಾಧನೆ ಮತ್ತು ಈ ಮೂವರ ಪಾದೋದಕ ಪ್ರಸಾದವನ್ನು ಸೇವಿಸುವುದು ಈ ನಾಲ್ಕು ವಿಧ ವ್ಯವಹಾರಗಳು ಜೀವನದ ಮುಖ್ಯಸಾರಗಳಾಗಿರುತ್ತವೆ. ಇವನ್ನುಳಿದ ಅನ್ಯ ವ್ಯವಹಾರ ಗಳೆಲ್ಲ ಅಸಾರಗಳೆಂಬುದಾಗಿ ತಿಳಿದುಕೊಳ್ಳಬೇಕು.

ಈ ಹಿಂದಿನ ಸ್ಥಲದಲ್ಲಿ ಗುರು–ಲಿಂಗ–ಜಂಗಮರ ಹಾಗೂ ಅವರ ಸೇವೆಯ ಬಗ್ಗೆ ತಿಳಿಸಿರೋಣದರಿಂದ ಪ್ರಕೃತವಾದ ಸ್ಥಲದಲ್ಲಿ ಅವರ ಪಾದೋದಕ ಪ್ರಸಾದ ಸೇವನೆಯ ಮಹತ್ವವನ್ನು ಕುರಿತು ವಿವರಿಸಲಾಗುತ್ತದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪಾದೋದಕ ಪ್ರಸಾದಗಳ ಮಹತಿಯನ್ನು ವಿವೇಚಿಸುತ್ತ–

ಪಾದೋದಕಂ ಯಥಾ ಭಕ್ತ್ಯಾ ಸ್ವೀಕರೋತಿ ಮಹೇಶಿತುಃ।
ತಥಾ ಶಿವಾತ್ಮನೋರ್ನಿತ್ಯಂ ಗುರುಜಂಗಮಯೋರಪಿ ॥

ಸರ್ವಮಂಗಲಮಾಂಗಲ್ಯಂ ಸರ್ವಪಾವನ ಪಾವನಮ್ ।
ಸರ್ವಸಿದ್ಧಿಕರಂ ಪುಂಸಾಂ ಶಂಭೋಃ ಪಾದಾಂಬುಧಾರಣಮ್ ।

ಶಿರಸಾ ಧಾರಯೇದ್ಯಸ್ತು । ಪತ್ರಂ ಪುಷ್ಪಂ ಶಿವಾರ್ಪಿತಮ್ ॥
ಪ್ರತಿಕ್ಷಣಂ ಭವೇತ್ ತಸ್ಯ ಪೌಂಡರೀಕಕ್ರಿಯಾಫಲಮ್ ॥

(ಸಿ. ಶಿ. ೯ ; ೬೮–೭೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವಭಕ್ತನಾದವನು ತನ್ನ ಇಷ್ಟ ಲಿಂಗದ ಪಾದೋದಕವನ್ನು ಪ್ರತಿನಿತ್ಯ ಸೇವಿಸುವಂತೆ, ಗುರು ಹಾಗೂ ಜಂಗಮರ ಪಾದೋದಕವನ್ನೂ ಸಹ ಸ್ವೀಕರಿಸಬೇಕು. ಗುರು–ಲಿಂಗ–ಜಂಗಮರ ಪಾದೋದಕವು ಈ ಪ್ರಪಂಚದಲ್ಲಿಯ ಎಲ್ಲ ಮಂಗಲಪದಾರ್ಥಕ್ಕಿಂತಲೂ ಮಂಗಲರೂಪವಾಗಿದೆ.

ಪಾವನಕ್ಕಿಂತಲೂ ಪಾವನವಾಗಿದೆ. ಅಂತೆಯೇ ಸರ್ವಸಿದ್ಧಿಗಳನ್ನು ಅನುಗ್ರಹಿಸುವಂತಹದೂ ಆಗಿದೆ. ಆದಕಾರಣ ಯಾವ ಶಿವಭಕ್ತನು ಶಿವನಿಗರ್ಪಿತವಾದ ಪತ್ರ ಪುಷ್ಪಾದಿರೂಪವಾದ ಶಿವನಿರ್ಮಾಲ್ಯವನ್ನು ತನ್ನ ಮಸ್ತಕದ ಮೇಲೆ ಭಕ್ತಿಯಿಂದ ಧರಿಸಿಕೊಳ್ಳುವನೋ ಅವನಿಗೆ ಒಂದು ಪೌಂಡರೀಕಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಈ ಉಪದೇಶವನ್ನು ಪರ್ಯಾಲೋಚಿಸಿದಾಗ ಪಾದೋದಕದ ಮಹತಿಯು ಎಷ್ಟೆಂಬುದು ತಿಳಿದುಬರುತ್ತದೆ. ಪಾದೋದಕ ಶಬ್ದದಲ್ಲಿಯ ಒಂದೊಂದು ಅಕ್ಷರಗಳು ಅದರ ಮಹತಿಯನ್ನು ಕೊಂಡಾಡುತ್ತವೆ.

ಪಾಕಾರಂ ಪರಮಜ್ಞಾನಂ ದೋಕಾರಂ ದೋಷನಾಶನಮ್ ।
ದಕಾರಂ ದಹ್ಯತೇ ಜನ್ಮ ಕಕಾರಂ ಕರ್ಮನಾಶನಮ್ ॥

ಎಂಬ ಈ ಅಭಿಯುಕ್ತೋಕ್ತಿಯಲ್ಲಿ 'ಪಾ' ಎಂದರೆ ಪರಮಜ್ಞಾನವನ್ನು ಕೊಡುವ, 'ದೋ' ಎಂದರೆ ದೋಷನಾಶವನ್ನು ಮಾಡುವ, 'ದ' ಎಂದರೆ ಜನ್ಮ ಮರಣಗಳನ್ನು ದಹಿಸುವ ಮತ್ತು 'ಕ' ಎಂದರೆ ಕರ್ಮವನ್ನು ನಾಶಮಾಡುವ ತತ್ತ್ವವೇ ಪಾದೋದಕವು. ವೀರಶೈವ ಧರ್ಮದಲ್ಲಿ ಪೂಜ್ಯರೆಂದು ಪ್ರತಿಪಾದಿಸಲ್ಪಟ್ಟ ಗುರು–ಲಿಂಗ ಮತ್ತು ಜಂಗಮರ ಪಾದೋದಕವನ್ನು ಪ್ರತಿಯೊಬ್ಬ ಶಿವಭಕ್ತನು ಭಕ್ತಿಯಿಂದ ಸೇವಿಸಬೇಕು. ನಮ್ಮ ಮನೆಯ ಅಂಗಳದಲ್ಲಿ ಹಚ್ಚಿರುವ ವೃಕ್ಷಕ್ಕೆ ಪ್ರತಿದಿವಸ ನೀರನ್ನು ಎರೆಯುತ್ತ ಹೋದಂತೆ ಅದು ಹೇಗೆ ದಿನೇ ದಿನೇ ಅಭಿವೃದ್ಧಿಗೊಳ್ಳುವುದೋ ಅದರಂತೆ ಗುರು–ಲಿಂಗ–ಜಂಗಮರ ಪಾದೋದಕವನ್ನು ದಿನಂಪ್ರತಿ ಸೇವಿಸುತ್ತ ಹೋಗೋಣದರಿಂದ ಭಕ್ತಿಯು ಕ್ಷಣೇ ಕ್ಷಣೇ ಅಭಿವೃದ್ಧಿಗೊಳ್ಳುವುದು.

ಈ ಪ್ರಪಂಚದಲ್ಲಿ ಮಂಗಲಕರಗಳೂ, ಪಾವನಗಳೂ ಮತ್ತು ಸಿದ್ಧಿಯನ್ನು ಅನುಗ್ರಹಿಸುವ ಅನೇಕ ವಸ್ತುಗಳು ಇರುತ್ತವೆ. ಆದರೆ ಪಾದೋದಕಕ್ಕೆ ಸಮಾನವಾದ ಮಂಗಲವಸ್ತುವಾಗಲೀ ಮತ್ತು ಇದಕ್ಕೆ ಸಮಾನವಾದ ಪಾವನ ಪದಾರ್ಥವಾಗಲಿ, ಅದರಂತೆ ಇದಕ್ಕೆ ಸರಿಸಾಟಿಯಾದ ಸಿದ್ಧಿದಾಯಕವಸ್ತುವು ಬೇರೊಂದಿಲ್ಲವೆಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು. ಅಂತೆಯೇ ಎಂತಹದೇ ಅಶುಚಿಯು ಪ್ರಾಪ್ತವಾದಾಗ ಗುರುಜಂಗಮರ ಧೂಳೋದಕವನ್ನು ಪ್ರೋಕ್ಷಿಸಿಕೊಂಡು, ಪಾದೋದಕವನ್ನು ಸೇವಿಸಿ ಶುಚಿಯಾಗುವ ವಿಧಾನವು ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿದೆ. ವೀರಶೈವ ಪರಂಪರೆಯಲ್ಲಿ ಪಾದೋದಕವನ್ನು ತಯಾರುಗೊಳಿಸುವ ಒಂದು ವಿಲಕ್ಷಣವಾದ ವಿಧಿಯು ಪ್ರತಿಪಾದಿಸಲ್ಪಟ್ಟಿದೆ. ಗುರು ಇಲ್ಲವೆ ಜಂಗಮರ ಪಾದಪೂಜೆಯನ್ನು ವಿಧಿವತ್ತಾಗಿ ಮಾಡಿ ಅವರ ಅಂಗುಷ್ಠದಲ್ಲಿ ರುದ್ರನನ್ನೂ, ತರ್ಜನಿಯಲ್ಲಿ ಶಂಕರನನ್ನೂ; ಮಧ್ಯಮಿಯಲ್ಲಿ ಮಹಾದೇವನನ್ನು, ಅನಾಮಿಕೆಯಲ್ಲಿ ತ್ರ್ಯಂಬಕನನ್ನೂ, ಕನಿಷ್ಠಿಕೆಯಲ್ಲಿ ಈಶಾನನನ್ನು, ಪಾದದ ಮೇಲ್ಭಾಗದಲ್ಲಿ ಕಪರ್ದಿಯನ್ನೂ, ಪಾದದ ತಳದಲ್ಲಿ ಸದಾಶಿವನನ್ನೂ, ಹಿಮ್ಮಡಿಯಲ್ಲಿ ರುದ್ರ ಮತ್ತು ಭರ್ಗರನ್ನೂ, ಹೀಗೆ ಪಾದದ ಬೆರಳು ಮತ್ತು ಉಳಿದ ಭಾಗಗಳಲ್ಲಿ ಶಿವನ ಅನೇಕ ಮೂರ್ತಿಗಳನ್ನು ಭಾವಿಸಬೇಕು. ತದನಂತರ

ಪಾದದ ಕನಿಷ್ಠಿಕೆಯಿಂದ ಮೊದಲ್ಗೊಂಡು ಅಂಗುಷ್ಠ ಪರ್ಯಂತಗಳಾದ ಎರಡೂ ಪಾದಗಳ ಬೆರಗಳುಗಳ ಮೇಲೆ ಕ್ರಮವಾಗಿ ನ, ಮ, ಶಿ, ವಾ, ಮತ್ತು ಯ ಎಂಬ ಪಂಚಾಕ್ಷರಗಳ ಸಂಬಂಧವನ್ನು ಮಾಡಬೇಕು, ಆಮೇಲೆ ಭಸ್ಮ, ಗಂಧ, ಪತ್ರಿ, ಪುಷ್ಪಾದಿ ಉಪಚಾರಗಳಿಂದ ಪಾದಗಳನ್ನು ಪೂಜಿಸಿ ಮಹಾಮಂಗಳಾರತಿ, ಪುಷ್ಪಾಂಜಲಿಗಳು ಮುಗಿದ ನಂತರ ನೈವೇದ್ಯವನ್ನು ಸಮರ್ಪಿಸಿ ಮತ್ತು ನಮಸ್ಕರಿಸಿ ಪಾದದ ಮೇಲಿನ ನಿರ್ಮಾಲ್ಯವೆಲ್ಲವನ್ನೂ ತೆಗೆದು ತನ್ನ ಮಸ್ತಕದ ಮೇಲೆ ಸ್ಪರ್ಶಮಾಡಿಕೊಂಡು ಬೇರೊಂದು ತಟ್ಟೆಯಲ್ಲಿ ಸಂಗ್ರಹಿಸಿ ಇಡಬೇಕು. ಆಮೇಲೆ ಪಾದದ ಅಂಗುಷ್ಠದ ಕೆಳಗೆ ಪಾದೋದಕ ಪಾತ್ರವನ್ನಿರಿಸಿ ಈ ಮೊದಲೇ ತಯಾರಿಸಿ ಇಟ್ಟುಕೊಂಡ ಗುರುಪಾದೋದಕವನ್ನು ಅಂಗುಷ್ಠಗಳ ಮೇಲೆ ಅಭಿಷೇಕ ಮಾಡಿ ಕೆಳಗಿನ ಪಾತ್ರೆಯಲ್ಲಿ ಸಂಗ್ರಹಿಸಿಕೊಳ್ಳಬೇಕು. ಹೀಗೆ ಸಂಗ್ರಹಿತವಾದ ಆ ಪಾದೋದಕವೇ ಕ್ರಿಯಾಪಾದೋದಕವೆಂಬುದಾಗಿ ಕರೆಯಲ್ಪಡುವುದು, ಇದಕ್ಕೇನೇ ಕರುಣಾಮೃತ ಎಂಬುದಾಗಿಯೂ ಹೇಳುವರು.

ಹೀಗೆ ಶಾಸ್ತ್ರೋಕ್ತ ಪದ್ಧತಿಯಂತೆ ತಯಾರಾದ ಆ ಪಾದೋದಕವನ್ನು ಆ ಪೂಜಾ ಸಮಾರಂಭದಲ್ಲಿ ಸಮ್ಮಿಲಿತರಾದ ಪ್ರತಿಯೊಬ್ಬರೂ ತಮ್ಮ ಇಷ್ಟಲಿಂಗದ ಮೇಲೆ ಮೂರು ಸಾರೆ ಎರೆದು ಅಂಗೈಯಲ್ಲಿ ಆ ಪಾದೋದಕದ ಒಂದು ದ್ರವಬಿಂದುವೂ ಸಹ ಉಳಿಯದಂತೆ ಸೇವಿಸಬೇಕು. ಅದನ್ನು ಸೇವಿಸುವಾಗ ಬಾಯಿಯಿಂದ ಶಬ್ದವಾಗದ ಹಾಗೆ ಎಚ್ಚರಿಕೆಯನ್ನು ವಹಿಸಬೇಕು. ಹೀಗೆ ಗುರುವಿನ ಪಾದಪೂಜೆಯಿಂದ ದೊರೆತರೆ ಇದಕ್ಕೆ ಗುರುಪಾದೋದಕವೆಂದೂ ಜಂಗಮನ ಪಾದಪೂಜೆಯಿಂದ ದೊರೆತರೆ ಜಂಗಮ ಪಾದೋದಕವೆಂದೂ, ಮತ್ತು ಇಷ್ಟಲಿಂಗದ ಪೂಜೆಯಿಂದ ದೊರೆತರೆ ಅದಕ್ಕೆ ಲಿಂಗಪಾದೋದಕವೆಂದೂ ಕರೆಯುವರು. ಇವುಗಳಿಗೇನೇ ಕ್ರಮವಾಗಿ ದೀಕ್ಷಾ ಪಾದೋದಕ, ಶಿಕ್ಷಾಪಾದೋದಕ ಮತ್ತು ಜ್ಞಾನಪಾದೋದಕವೆಂಬುದಾಗಿ ಚಂದ್ರಜ್ಞಾನಾ ಗಮದಲ್ಲಿ ಪ್ರತಿಪಾದಿಸಿರುವುದನ್ನು ಕಾಣಬಹುದು.

ಸಪ್ತಸಾಗರ ಪರ್ಯಂತಂ ತೀರ್ಥಸ್ನಾನಫಲಂ ಸದಾ
ಗುರೋರಂಘ್ರಿಪಯೋಬಿಂದುಸಹಸ್ರಾಂಶಂ ನ ಪೂರಯೇತ್

(ಕ್ರಿ. ಪಾ. ೫–೧೮ ಚಂದ್ರಜ್ಞಾನಾಗಮ)

ಎಂಬ ಚಂದ್ರಜ್ಞಾನಾಗಮೋಕ್ತಿಯಲ್ಲಿ ಪಾದೋದಕದ ಮಹಿಮೆಯು ಅಪಾರವಾಗಿ ವರ್ಣಿಸಲ್ಪಟ್ಟಿದೆ. ಸಪ್ತಸಾಗರ ಪರ್ಯಂತವಾಗಿರುವ ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡಿದರೆ ಯಾವ ಫಲವು ಪ್ರಾಪ್ತವಾಗುವುದೋ ಅದು ಗುರುಲಿಂಗ ಜಂಗಮರ ಪಾದೋದಕದ ಒಂದು ಬಿಂದುವಿನ ಸಹಸ್ರಾಂಶಕ್ಕೂ ಸಮವಾಗಲಾರದು. ಅಂದರೆ ಸಕಲ ತೀರ್ಥಗಳಲ್ಲಿ ಸ್ನಾನಮಾಡೋಣದರಿಂದ ಪ್ರಾಪ್ತವಾಗುವ ಫಲಕ್ಕಿಂತ ಈ ಪಾದೋದಕವನ್ನು ಸೇವಿಸಿದ ಫಲವು ಅತ್ಯಧಿಕವಾದುದೆಂಬುದಾಗಿ ಸರ್ವರು ತಿಳಿದುಕೊಳ್ಳಬೇಕು. ಗುರುಜಂಗಮರ ಈ ಪಾದಮಹಿಮೆಯನ್ನು ಅರಿತುಕೊಂಡೇ ವೀರಶೈವಭಕ್ತರು ಗಂಗಾ ಮುಂತಾದ ಪವಿತ್ರ ನದಿಗಳಲ್ಲಿ ಸ್ನಾನ ಮಾಡುವಾಗ ಗುರು–ಜಂಗಮರ ಪಾದಗಳನ್ನು ತಮ್ಮ ಮಸ್ತಕದ ಮೇಲಿರಿಸಿಕೊಂಡು ಸ್ನಾನ ಮಾಡುವ

ಶ್ರೇಷ್ಠ ಪದ್ಧತಿಯು ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಎಲ್ಲರ ಪಾಪವನ್ನು ದೂರ ಮಾಡುವ ಸಾಮರ್ಥ್ಯವು ಗಂಗಾ ಮುಂತಾದ ತೀರ್ಥಗಳಿಗಿದ್ದರೆ ಆ ತೀರ್ಥಗಳ ಪಾಪವನ್ನು ದೂರಮಾಡುವ ಸಾಮರ್ಥ್ಯವು ಗುರು–ಜಂಗಮರ ಪಾದದಲ್ಲಿರುತ್ತದೆ ಯೆಂಬುದನ್ನು ಶಾಸ್ತ್ರಗಳು ವರ್ಣಿಸಿರುತ್ತವೆ. ಅಂತೆಯೇ–

''ಅಡಸಠ ತೀರಥ ಗುರು ಚರಣ ಫಿರಭೀ ಹೋತ ಅಖಂಡ''

ಎಂಬ ಹಿಂದೀ ಕವಿಯ ಉಕ್ತಿಗನುಸಾರವಾಗಿ ಗುರುಜಂಗಮರ ಪಾದದಲ್ಲಿಯೇ ಅಷ್ಟಾಷಷ್ಟಿ ತೀರ್ಥಗಳು ಇರುತ್ತವೆ ಎಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು.

ಈ ಗುರು–ಲಿಂಗ–ಜಂಗಮರ ಪಾದೋದಕವು ಎಷ್ಟು ಮಹಿಮಾಶಾಲಿ ಯೆಂಬುದನ್ನು ಚಂದ್ರಜ್ಞಾನಾಗಮದ–

ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನತೇಜಸಃ
ಗುರೋಃ ಪಾದೋದಕಂ ಚಿತ್ರಂ ಸಂಸಾರದ್ರುಮನಾಶನಮ್

(ಕ್ರಿ. ಪಾ. ೫–೧೬)

ಈ ಉಕ್ತಿಯಲ್ಲಿ ಸ್ಪಷ್ಟಪಡಿಸಲಾಗಿದೆ. ಆ ಪಾದೋದಕವು ಪಾಪವೆಂಬ ಪಂಕವನ್ನು ಒಣಗಿಸುವಂಥಾದ್ದು ಜ್ಞಾನವೆಂಬ ತೇಜವನ್ನು ಉದ್ದೀಪನಗೊಳಿಸುವಂಥಾದ್ದು ಮತ್ತು ಸಂಸಾರವೆಂಬ ವೃಕ್ಷವನ್ನು ನಾಶಗೊಳಿಸುವಂತಹದು ಆಗಿದೆ. ಇದೊಂದು ಆಶ್ಚರ್ಯವೇ ಸರಿ. ಪಾದೋದಕವೆಂದರೆ ಪಾದಜಲವು–ಜಲದಿಂದ ಕೆಸರನ್ನು ಒಣಗಿಸುವುದಾಗಲೀ, ದೀಪವನ್ನು ಪ್ರದ್ದೀಪನಗೊಳಿಸುವುದಾಗಲಿ ಗಿಡವನ್ನು ನಾಶಮಾಡುವುದಾಗಲಿ ಆಗುವುದಿಲ್ಲ. ಆದರೆ ಅದೇ ಜಲವೇ ಗುರುಪಾದವನ್ನು ಸೋಂಕಿದಾಗ ಅದರಲ್ಲಿ ಇಂತಹ ವಿಲಕ್ಷಣವಾದ ಮಹಾತ್ಮ್ಯವು ಉಂಟಾಗುವುದೆಂಬುದನ್ನು ಆಗಮದಲ್ಲಿ ನಿರೂಪಿಸಲಾಗಿದೆ.

ಮಹಾರಾಷ್ಟ್ರದ ಸಂತರಾದ ಮನ್ಮಥಸ್ವಾಮಿಗಳವರು–

ಕಾಶೀ ಮೇಲಿಯಾ ಮುಕ್ತಿದೇತ । ಸದ್ಭಾವೇ ಸೇವಿತಾ ಶ್ರೀಗುರು ತೀರ್ಥ
ತೋ ಸಹಜ ಹೋಯ ಜೀವನ್ಮುಕ್ತ। ತೀರ್ಥ ಮಾಹಾತ್ಮ್ಯಐಸೇಹೇ ॥
ಗಂಗಾತೀರ್ಥೀ ಏಕ ಅವಗುಣ । ಖೋಲೀ ಜಾತಾ ಜಾಯಬುಡುವನ ।
ಗುರುತೀರ್ಥ ನ ಬುಡವೀ ಮೌಷ್ಠಿಣೂನ । ತರುನೀ ಜಾತೀ ಕೈಲಾಸೀ ॥
ದ್ವಾದಶಲಿಂಗಾ ಕರಿತಾ ಪರಿಕ್ರಮಾ । ಪರಿಗುರುತೀರ್ಥಾಚಾನಯೇ ಮಹಿಮಾ ।
ಜೇಣೇ ಪಾವಿಜೇಸ್ವಯೇ ಪರಬ್ರಹ್ಮಾ। ತ್ಯಾಚೀಸರೀ ಕೋಣ ಕರೀ ? ॥

(ಪರಮರಹಸ್ಯ ೨ ; ೪೮–೫೦)

ಈ ರೀತಿಯಾಗಿ ಪಾದೋದಕದ ಮಹಿಮೆಯನ್ನು ಕೊಂಡಾಡಿದ್ದಾರೆ. ತಾತ್ಪರ್ಯ ವೇನೆಂದರೆ, ಕಾಶೀ ಕ್ಷೇತ್ರವು ತನ್ನಲ್ಲಿ ಮರಣಹೊಂದಿದವರಿಗೆ ಮುಕ್ತಿಯನ್ನು ಕೊಟ್ಟರೆ ಗುರುಪಾದ ತೀರ್ಥವು ತನ್ನನ್ನು ಸೇವಿಸಿದ ಮಾತ್ರಕ್ಕೆ ಸದ್ಗತಿಯನ್ನು ಕೊಡುವಂತಹ ದಾಗಿದೆ. ಗಂಗೆಯು ತೀರ್ಥವೆಂದು ಪ್ರಸಿದ್ಧವಾಗಿದ್ದರೂ ಅದರ ಆಳವಾದ ಜಲದಲ್ಲಿ ಪ್ರವೇಶಿಸಿ ದಾಗ ಅದೆಷ್ಟೋ ಜನರು ಮುಳುಗಿ ಸತ್ತದ್ದುಂಟು. ಆದರೆ ಗುರುಪಾದ

ತೀರ್ಥವು ಆದಾರನ್ನೂ ಮುಳುಗಿಸದೇ ಸಂಸಾರ ಸಾಗರದಿಂದ ದಾಟಿಸಿ ಶಿವ ಸಾಯುಜ್ಯವನ್ನು ಕೊಡುವಂತಹದಾಗಿದೆ. ಇದೂ ಅಲ್ಲದೇ ದ್ವಾದಶ ಜ್ಯೋತಿರ್ಲಿಂಗಗಳ ಪರಿಕ್ರಮೆಯನ್ನು ಮಾಡಿದರೆ ಯಾವ ಫಲಪ್ರಾಪ್ತಿಯಾಗುವುದೋ ಅದು ಗುರುಪಾದೋದಕ ಸೇವೆಯ ಫಲಕ್ಕೆ ಅದೆಂದೂ ಸರಿಸಾಟಿಯಾಗಲಾರದು. ಹೀಗೆ ಮನ್ಮಥಸ್ವಾಮಿಗಳವರು ಕಾಶೀಮರಣ, ಗಂಗಾಸ್ನಾನ ಮತ್ತು ದ್ವಾದಶ ಜ್ಯೋತಿರ್ಲಿಂಗ ಗಳ ಯಾತ್ರೆಯನ್ನು ಮಾಡುವುದಕ್ಕಿಂತಲೂ ಗುರು–ಲಿಂಗ–ಜಂಗಮರ ಪಾದೋದಕ ವನ್ನು ಸೇವಿಸಿ ಅದಕ್ಕಿಂತಲೂ ಹೆಚ್ಚಿನದಾದ ಮಹಾಫಲವನ್ನು ಪರಿಶ್ರಮವಿಲ್ಲದೇ ಅತ್ಯಲ್ಪಕಾಲ ದಲ್ಲಿಯೇ ಪಡೆಯಬಹುದೆಂಬುದಾಗಿ ತಿಳುಹಿಸಿ ಪಾದೋದಕದ ಮಹಿಮೆ ಯನ್ನು ಎತ್ತಿ ತೋರಿಸಿದ್ದಾರೆ.

ವೀರಶೈವ ಸಿದ್ಧಾಂತದಲ್ಲಿ ಪಾದೋದಕವನ್ನು ಒಂದು ರಕ್ಷಾಕವಚವನ್ನಾಗಿ ಪರಿಗಣಿಸಲಾಗಿದೆ. ಯಾವ ಶಿವಭಕ್ತರು ಗುರು–ಲಿಂಗ–ಜಂಗಮರ ಪಾದೋದಕವನ್ನು ಭಕ್ತಿಯಿಂದ ಪ್ರತಿದಿವಸ ಸೇವಿಸುತ್ತಾರೆಯೋ ಅವರ ಸ್ಥೂಲ ಸೂಕ್ಷ್ಮ ಶರೀರಗಳು ಪರಿಶುದ್ಧಗಳಾಗಿ ಅವರ ದುರ್ಮಾರ್ಗ ಪ್ರವೃತ್ತಿಯು ತಡೆಯಲ್ಪಡುತ್ತದೆ. ಹೀಗೆ ಸಾಧಕನನ್ನು ಸರ್ವವಿಧವಾಗಿ ಸಂರಕ್ಷಿಸೋಣದರಿಂದ ಇದಕ್ಕೆ ಆವರಣ ಅರ್ಥಾತ್ ರಕ್ಷಾಕವಚವೆಂದು ಕರೆಯಲಾಗಿದೆ.

ಈ ವಿಧವಾಗಿ ಪಾದೋದಕದ ಮಹಿಮೆ ಹಾಗೂ ಅದರ ಸೇವನ ವಿಧಿಯನ್ನು ಪ್ರತಿಪಾದಿಸಿದ ಪೂಜ್ಯರು ಇನ್ನು ಪ್ರಸಾದವನ್ನು ಕುರಿತು–

ಭುಂಜೀಯಾದ್ ರುದ್ರಭುಕ್ತಾನ್ನಂ ರುದ್ರಪೀತಂ ಜಲಂ ಪಿಬೇತ್ ।
ರುದ್ರಾಘ್ರಾತಂ ಸದಾ ಜಿಘ್ರೇದಿತಿ ಜಾಬಾಲಿಕೀ ಶ್ರುತಿಃ ॥

ಅರ್ಪಯಿತ್ವಾ ನಿಜೇಲಿಂಗೇ ಪತ್ರಂ ಪುಷ್ಪಂ ಫಲಂ ಜಲಮ್ ।
ಅನ್ನಾದ್ಯಂ ಸರ್ವಭೋಜ್ಯಂಚ ಸ್ವೀಕುರ್ಯಾದ್ ಭಕ್ತಿಮಾನ್ನರಃ ॥

ಗುರುತ್ವಾತ್ ಸರ್ವಭೂತಾನಾಂ ಶಂಭೋರಮಿತತೇಜಸಃ ।
ತಸ್ಮೈ ನಿವೇದಿತಂ ಸರ್ವಂ ಸ್ವೀಕಾರ್ಯಂ ತತ್ಪರಾಯಣೈಃ ॥

ಯೇ ಲಿಂಗಧಾರಿಣೋಲೋಕೇ ಯೇ ಶಿವೈಕಪರಾಯಣಾಃ ।
ತೇಷಾಂತು ಶಿವನಿರ್ಮಾಲ್ಯಮುಚಿತಂ ನಾನ್ಯಜಂತುಷು ॥

ಅನ್ನಜಾತೇ ತು ಭಕ್ತೇನ ಭುಜ್ಯಮಾನೇ ಶಿವಾರ್ಪಿತೇ ।
ಸಿಕ್ಥೇ ಸಿಕ್ಥೇ,ಽಶ್ವಮೇಧಸ್ಯ ಯತ್ಫಲಂ ತದವಾಪ್ಯತೇ ।

(ಸಿ. ಶಿ. ೯ ; ೭೧–೭೫)

ಈ ತೆರನಾಗಿ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರು, ಲಿಂಗ ಜಂಗಮರಿಗೆ ಸಮರ್ಪಿಸಿ ಉಳಿದಿರುವ ಅನ್ನಕ್ಕೆ ಪ್ರಸಾದವೆಂಬುದಾಗಿ ಕರೆಯುತ್ತಾರೆ. ರುದ್ರಭುಕ್ತವಾದ ಅನ್ನವನ್ನು, ರುದ್ರಪೀತವಾದ ಜಲವನ್ನು ಮತ್ತು ರುದ್ರಾಘ್ರಾತವಾದ ಪುಷ್ಪಾದಿ ಸುಗಂಧ ದ್ರವ್ಯಗಳನ್ನು ಶಿವಭಕ್ತನಾದವನು ಸದಾ ಆಘ್ರಾಣಿಸಬೇಕೆಂಬುದಾಗಿ ಜಾಬಾಲ

ಶ್ರುತಿಯಲ್ಲಿ ಪ್ರತಿಪಾದಿಸಲಾಗಿದೆ. ಅಂದರೆ ಶಿವಲಿಂಗಕ್ಕೆ ಅರ್ಪಿಸಿದ ಪ್ರಸಾದವನ್ನೇ ಶಿವಭಕ್ತನು ಭುಂಜಿಸಬೇಕು. ಇದೇ ಪ್ರಕಾರ ಪಾದೋದಕವನ್ನೂ ಸಹ ಶಿವಾರ್ಪಿತ ಮಾಡಿಯೇ ಗ್ರಹಿಸಬೇಕು. ಅದರಂತೆ ತಾನು ಉಪಯೋಗಿಸಬೇಕಾಗಿರುವ ಕುಸುಮಾದಿ ಸುಗಂಧ ದ್ರವ್ಯಗಳನ್ನೂ ಸಹ ಶಿವಲಿಂಗಕ್ಕೆ ಅರ್ಪಿಸಿ ಅದನ್ನು ಪ್ರಸಾದರೂಪವಾಗಿಯೇ ಆಘ್ರಾಣಿಸಬೇಕು.

ಶಿವಲಿಂಗಕ್ಕೆ ಇಂತಹ ಪದಾರ್ಥವನ್ನೇ ಅರ್ಪಿಸಬೇಕೆಂಬ ನಿಯಮವೇನಿಲ್ಲ. ಅದು ಎಲೆಯೇ ಆಗಿರಬಹುದು, ಪುಷ್ಪವೇ ಆಗಿರಬಹುದು, ಜಲವೇ ಆಗಿರಬಹುದು ಅಥವಾ ಫಲವೇ ಆಗಿರಬಹುದು, ಇವುಗಳಲ್ಲಿ ಯಾವುದನ್ನು ಸೇವಿಸಬೇಕಾಗಿದೆಯೋ ಅದೆಲ್ಲವನ್ನೂ ಮೊದಲು ತನ್ನ ಇಷ್ಟಲಿಂಗಕ್ಕೆ ಸಮರ್ಪಿಸಬೇಕು. ಇದೂ ಅಲ್ಲದೆ ತಾನು ಸೇವಿಸಬೇಕಾಗಿರುವ ಅನ್ನಾದಿ ಭಕ್ಷ–ಭೋಜ್ಯ ಪದಾರ್ಥಗಳನ್ನೂ ಸಹ ಇಷ್ಟಲಿಂಗಕ್ಕೆ ಅರ್ಪಿಸಿ ಅದನ್ನು ಪ್ರಸಾದವನ್ನಾಗಿ ಪರಿವರ್ತಿಸಿಕೊಂಡು ಸ್ವೀಕರಿಸಬೇಕು ಎಂಬುದಾಗಿ ಪೂಜ್ಯರು ಆದೇಶವಿತ್ತಿದ್ದಾರೆ. ಲಿಂಗಾರ್ಪಿತವಾಗುವ ಪೂರ್ವದಲ್ಲಿ ಆ ವಸ್ತುಗಳು ಪದಾರ್ಥಗಳೆಂಬುದಾಗಿ ಕರೆಯಿಸಿಕೊಳ್ಳುತ್ತಿದ್ದರೂ ಶಿವಲಿಂಗಕ್ಕೆ ಸಮರ್ಪಿಸಿದ ನಂತರ ಅವುಗಳು ಪ್ರಸಾದಗಳೆಂಬುದಾಗಿ ಕರೆಯಲ್ಪಡುತ್ತವೆ. ಯಾವ ವಸ್ತುವಿನ ಮೇಲೆ ನನ್ನದೆಂಬ ಭಾವನೆಯಿರುವುದೋ ಅದಕ್ಕೆ ಪದಾರ್ಥವೆಂದು ಕರೆಯುವರು. ಇನ್ನು ಯಾವುದರ ಮೇಲಿನ ನನ್ನದೆಂಬ ಭಾವನೆಯು ಇಲ್ಲದಾಗಿದೆಯೋ ಅದುವೆ ಪ್ರಸಾದವೆಂಬುದಾಗಿ ಕರೆಯಲ್ಪಡುತ್ತದೆ. ಗುರು–ಲಿಂಗ–ಜಂಗಮರಿಗೆ ಅರ್ಪಿಸುವ ಪೂರ್ವದಲ್ಲಿ ಆ ವಸ್ತುಗಳ ಮೇಲೆ ನನ್ನದೆಂಬ ಭಾವನೆಯು ಅರ್ಪಿಸುವ ವ್ಯಕ್ತಿಯ ಮನಸ್ಸಿನಲ್ಲಿರುತ್ತದೆ. ಆದರೆ ಅರ್ಪಣೆಯಾದ ಬಳಿಕ ಅದು ಗುರುಪ್ರಸಾದ, ಲಿಂಗಪ್ರಸಾದ ಮತ್ತು ಜಂಗಮಪ್ರಸಾದ ಎಂಬುದಾಗಿ ಕರೆಯಲ್ಪಡೋಣದರಿಂದ ಆಗ ಅವುಗಳಲ್ಲಿಯ ಸಮರ್ಪಕನ ನನ್ನದೆಂಬ ಭಾವನೆಯು ಇಲ್ಲವಾಗಿರುವುದನ್ನು ಪ್ರತಿಯೊಬ್ಬರೂ ಅನುಭವಿಸುವುದುಂಟು ಹೀಗೆ ಸಂಸಾರಕ್ಕೆ ಕಾರಣಗಳಾದ ನಾನು ನನ್ನದೆಂಬ ಭಾವನೆಗಳನ್ನು ಕಳೆದುಕೊಳ್ಳುವುದ ಕ್ಕಾಗಿಯೇ ಈ ಪ್ರಸಾದ ಸೇವನ ವಿಧಿಯು ಇಲ್ಲಿ ಪ್ರತಿಪಾದಿತವಾಗಿದೆ.

''ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಮ್'' ಎಂಬ ಶ್ರುತಿ ವಚನದ ಮೇರೆಗೆ ಈ ಚರಾಚರ ಪ್ರಪಂಚದಲ್ಲಿ ಸರ್ವಕ್ಕೂ ದೊಡ್ಡವನಾದವನು ಪರಶಿವನೇ ಆಗಿರುತ್ತಾನೆ. ಅವನು ಸಚ್ಚಿದಾನಂದಸ್ವರೂಪನೂ ಆಗಿರುತ್ತಾನೆ. ಇಂತಹ ಆ ಪರಶಿವನೇ ಗುರು–ಲಿಂಗ–ಜಂಗಮ ರೂಪದಲ್ಲಿ ನಮ್ಮ ಎದುರಿನಲ್ಲಿ ಉಪಸ್ಥಿತವಾಗಿ ರುವಾಗ ನಾವು ಸೇವಿಸುವ ಪ್ರತಿಯೊಂದು ಪದಾರ್ಥವನ್ನೂ ಆತನಿಗೆ ಸಮರ್ಪಿಸಿ ಅದನ್ನು ಪ್ರಸಾದರೂಪವಾಗಿ ಸೇವಿಸಬೇಕೆಂಬುದು ಆಚಾರ್ಯರ ಆದೇಶವಾಗಿದೆ.

ಈ ಪ್ರಪಂಚದಲ್ಲಿ ಯಾರು ಇಷ್ಟಲಿಂಗಧಾರಿಗಳಾಗಿರುವರೋ ಮತ್ತು ಗುರು–ಜಂಗಮರಲ್ಲಿ ಅನನ್ಯವಾದ ಭಕ್ತಿಸಂಪನ್ನರಾಗಿದ್ದು ಅವರ ಪೂಜಾದಿಗಳಲ್ಲಿ ಸದಾ ಆಸಕ್ತರಾಗಿರುವರೋ, ಅವರೇ ಈ ಪ್ರಸಾದವನ್ನು ಸ್ವೀಕರಿಸಲು ಯೋಗ್ಯರಾಗಿರುತ್ತಾರೆ.

ಗುರು–ಜಂಗಮರಲ್ಲಿ ಭಕ್ತಿಯಿಲ್ಲದ ಹಾಗೂ ಅವರ ಪೂಜಾದಿ ಸೇವೆಗಳನ್ನು ಅದೆಂದೂ ಮಾಡದಿರುವ ಪಾಮರ ಜೀವಿಗಳಿಗೆ ಇಂತಹ ಶಿವಪ್ರಸಾದವು ಅದೆಂದಿಗೂ ದೊರೆಯ ಲಾರದು. ಕಾರಣ ಶಿವಭಕ್ತನು ಸದಾ ಗುರು–ಲಿಂಗ–ಜಂಗಮರಲ್ಲಿ ಭಕ್ತಿಸಂಪನ್ನ ನಾಗಿ ಅವರ ಪ್ರಸಾದವನ್ನು ಸೇವಿಸಬೇಕು.

ಯಾವ ಶಿವಭಕ್ತನು ಇಷ್ಟಲಿಂಗಧಾರಿಯಾಗಿದ್ದು ಲಿಂಗಾರ್ಪಿತವಾದ ಪ್ರಸಾದವನ್ನು ಪ್ರತಿದಿವಸ ಸೇವಿಸುವನೋ, ಅವನು ಸೇವಿಸುತ್ತಿರುವ ಆ ಪ್ರಸಾದದ ಒಂದೊಂದು ಅಗುಳಿನಲ್ಲಿ ಒಂದೊಂದು ಅಶ್ವಮೇಧಯಾಗದ ಫಲವನ್ನು ಕೊಡುವ ಸಾಮರ್ಥ್ಯವಿರುವ ದೆಂಬುದಾಗಿ ಪೂಜ್ಯರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಶಿವಪ್ರಸಾದವನ್ನು ಸ್ವೀಕರಿಸುವ ಈ ವಿಧಿಯು ''ತ್ವಾದತ್ತೇಭಿರುದ್ರಶಂತಮೇಭಿಃ'' ಎಂಬ ಋಗ್ವೇದದ ಈ ಮಂತ್ರದಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ. ಮಂತ್ರಾರ್ಥವೇನೆಂದರೆ, ಹೇ ರುದ್ರನೇ ನೀನು ಸ್ವೀಕರಿಸಿ ಅನುಗ್ರಹಿಸಿರುವ ಪ್ರಸಾದವು ಸುಖಕರವೂ ಭವರೋಗದ ಔಷಧಿಯೂ ಆಗಿರುತ್ತದೆ. ಇಂತಹ ಈ ನಿನ್ನ ಪ್ರಸಾದವನ್ನು ಯಾವ ಶಿವಭಕ್ತನು ಸೇವಿಸುವನೋ ಅವನು ಅಹಂಕಾರ– ಮಮಕಾರ ರಹಿತನೂ, ಪಾಪನಿರ್ಮುಕ್ತನೂ, ಭಕ್ತಿ ಸಂಪನ್ನನೂ ಮತ್ತು ಮೇಧಾವಿಯೂ ಆಗುತ್ತಾನೆ.

ಇದೇ ಪ್ರಕಾರವಾಗಿ ''ರುದ್ರೇಣಾತ್ತಮಮೃತಮ್'' ಎಂಬ ಯಜುರ್ವೇದದ ಮಂತ್ರದಲ್ಲಿಯೂ ಸಹ ರುದ್ರನಿಗೆ ಅರ್ಥಾತ್ ಇಷ್ಟಲಿಂಗಕ್ಕೆ ಅರ್ಪಿಸಿದ ಪ್ರಸಾದವು ಅಮೃತಸದೃಶವಾದುದು, ಇದನ್ನು ದೇವತೆಗಳೂ ಸಹ ಸೇವಿಸಲು ಅಪೇಕ್ಷೆ ಪಡುವರು ಎಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಹೀಗೆ ಈ ಪ್ರಸಾದ ಮಹಿಮೆಯು ಅಪಾರವಾದುದು.

ಮನುಷ್ಯನ ಆಧ್ಯಾತ್ಮಿಕ ಪ್ರಗತಿಗೆ ಆತನ ಮನಸ್ಸಿನ ಪರಿಶುದ್ಧಿಯು ಅತ್ಯಾವಶ್ಯಕ ವಾದುದು. ಮನಸ್ಸು ಪರಿಶುದ್ಧವಾಗಬೇಕಾದರೆ, ಆಹಾರ ಶುದ್ಧಿಯೇ ಮುಖ್ಯವಾದುದು. ಅಂತೆಯೇ ಛಾಂದೋಗ್ಯ ಉಪನಿಷತ್ತಿನ– ''ಆಹಾರ ಶುದ್ಧೌ ಸತ್ತ್ವಶುದ್ಧಿಃ, ಸತ್ತ್ವಶುದ್ಧೌ ಧ್ರುವಾಸ್ಮೃತಿಃ, ಸ್ಮೃತೇರ್ಲಾಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ'' ಎಂಬ ಈ ಮಂತ್ರ ದಲ್ಲಿ ಆಹಾರ ಶುದ್ಧಿಯಿಂದ ಮನಸ್ಸಿನ ಶುದ್ಧಿಯು, ಮನಸ್ಸಿನ ಶುದ್ಧಿಯಿಂದ ನಿಶ್ಚಲವಾದ ಜ್ಞಾನವು ಮತ್ತು ಆ ನಿಶ್ಚಲ ಜ್ಞಾನದಿಂದಲೇ ಹೃದಯ ಗ್ರಂಥಿಯ ಛೇದನವಾಗಿ ಆತನಿಗೆ ಮೋಕ್ಷವು ಲಭಿಸುವುದೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಹೀಗೆ ಪರಂಪರೆಯಿಂದ ಆಹಾರ ಶುದ್ಧಿಯೇ ಮೋಕ್ಷದ ಸಾಧನವೆಂಬುದಾಗಿ ತಿಳಿದುಬರುತ್ತದೆ. ಶಿವಭಕ್ತನಾದವನು ಮುಕ್ತಿಯ ಚಿಂತನೆಯನ್ನು ಮಾಡದೇ ಪ್ರತಿನಿತ್ಯ ಗುರು–ಲಿಂಗ–ಜಂಗಮರ ಪ್ರಸಾದವನ್ನು ಸೇವಿಸುತ್ತ ಹೋದರೆ ಆ ಕೈವಲ್ಯವು ತಾನೇ ಕೈಸೇರುವುದು, ಇದನ್ನೇ ಪ್ರಭುದೇವರು–

ಅಮೃತಸಾಗರದೊಳಗಿದ್ದು ಆಕಳ ಚಿಂತೆಯೇಕೆ ?
ಮೇರುಮಂದಿರದೊಳಗಿದ್ದು ಜರಗತೊಳೆವ ಚಿಂತೆಯೇಕೆ ?
ಶ್ರೀಗುರುವಿನೊಳಗಿದ್ದು ಮುಕ್ತಿಯ ಚಿಂತೆಯೇಕೆ ?

ಪ್ರಸಾದದೊಳಗಿದ್ದು ಮುಕ್ತಿಯ ಚಿಂತೆಯೇಕೆ ?
ಕರಸ್ಥಲದೊಳಗೆ ಲಿಂಗವಿದ್ದ ಬಳಿಕ ಮತ್ತಿನ್ನಾವ ಚಿಂತೆಯೇಕೆ
ಹೇಳಾ ಗುಹೇಶ್ವರಾ ?

ತಮ್ಮ ಈ ವಚನದಲ್ಲಿ ಇನ್ನಷ್ಟು ಸ್ಪಷ್ಟಪಡಿಸಿರುವುದನ್ನು ಕಾಣುತ್ತೇವೆ. ಕ್ಷೀರಸಾಗರ ಅರ್ಥಾತ್ ಅಮೃತಸಮಾನ ಹಾಲಿನ ಸಮುದ್ರದಲ್ಲಿ ವಾಸಿಸುವ ವ್ಯಕ್ತಿಯು ಆಕಳ ಚಿಂತೆಯನ್ನು ಮಾಡದಿರುವಂತೆ; ಮೇರುಮಂದಿರ ಅರ್ಥಾತ್ ಹೇಮಾದ್ರಿಯ ಮಂದಿರದಲ್ಲಿ ವಾಸಮಾಡಿದವನು ಮಣ್ಣುಮಿಶ್ರಿತ ಬಂಗಾರವನ್ನು ತೊಳೆಯುವ ಗೊಡವೆಗೆ ಹೋಗದಿರುವಂತೆ, ಗುರುವಿನ ಸಾನ್ನಿಧ್ಯದಲ್ಲಿಯೇ ಸದಾ ನಿವಾಸ ಮಾಡುವವನು ತತ್ತ್ವಜ್ಞಾನ ಪ್ರಾಪ್ತಿಯು ತನಗೆ ಆಗುವುದೋ ಇಲ್ಲವೋ ಎಂಬ ಚಿಂತೆಮಾಡದಿರುವಂತೆ, ಕರಸ್ಥಲದೊಳಗೆ ಇಷ್ಟಲಿಂಗವಿದ್ದ ಬಳಿಕ ಬೇರೆ ದೇವರ ಚಿಂತೆಯನ್ನು ಮಾಡುವ ಆವಶ್ಯಕತೆಯು ಇಲ್ಲದಿರುವಂತೆ ಇದೇ ಪ್ರಕಾರ ಪ್ರತಿನಿತ್ಯ ಗುರು ಲಿಂಗ ಜಂಗಮರ ಪ್ರಸಾದವನ್ನು ಸೇವಿಸುತ್ತಿರಲಿಕ್ಕಾಗಿ ಮುಕ್ತಿಯ ಬಗ್ಗೆ ಚಿಂತೆಯನ್ನು ಮಾಡುವ ಅವಶ್ಯಕತೆಯೇ ಇರುವುದಿಲ್ಲ. ಅಂದರೆ ಪ್ರಸಾದಸೇವಿಯಾದ ಭಕ್ತನು ಅಂತಃಕರಣ ಶುದ್ಧಿ ಪೂರ್ವಕವಾಗಿ ಮುಕ್ತಿಯನ್ನು ಅವಶ್ಯವಾಗಿ ಪಡೆಯುವನೆಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು. ಈ ವಿಧವಾಗಿ ಪ್ರಸಾದ ಸೇವನೆಯು ಮುಕ್ತಿಯ ಪರಮ ಸಾಧನವಾಗಿದೆ.

ಈ ಪೂರ್ವದಲ್ಲಿ ಹೇಳಿರುವಂತೆ ಮನಶುದ್ಧಿಗೆ ಆಹಾರ ಶುದ್ಧಿಯು ಕಾರಣವಾಗಿರುವುದರಿಂದ ಆ ಆಹಾರವು ಶುದ್ಧವಾಗಬೇಕಾದರೆ ಗುರು–ಲಿಂಗ–ಜಂಗಮರಿಗೆ ಸಮರ್ಪಿಸಬೇಕಾಗುವುದು. ಆಹಾರದಲ್ಲಿಯ ಅತಿ ದೊಡ್ಡ ದೋಷವೆಂದರೆ ಅದರ ಬಗ್ಗೆ ಇರುವ ನನ್ನದೆಂಬ ಭಾವನೆ. ಈ ನನ್ನದೆಂಬ ಭಾವನೆಗೇನೇ ಶಾಸ್ತ್ರಕಾರರು ಸಂಸ್ಕೃತದಲ್ಲಿ ಮಮಕಾರವೆಂಬುದಾಗಿ ಕರೆದಿದ್ದಾರೆ. ಈ ಮಮಕಾರವೇ ಸಂಸಾರಬಂಧನದ ಮೂಲ ಕಾರಣವು. ಅಂತೆಯೇ ''ಮಮೇತಿ ಬದ್ಧ್ಯತೇ ಜಂತುಃ'' ಎಂಬುದಾಗಿ ಹೇಳಿದ್ದಾರೆ. ನನ್ನದೆಂಬ ಭಾವನೆಯೇ ಜೀವಿಗಳನ್ನು ಬಂಧನಕ್ಕೊಳಗುಮಾಡುತ್ತದೆ. ನಿಜಗುಣ ಶಿವಯೋಗಿಗಳೂ ಸಹ ''ಮಮಕಾರದಿಂದ ಮಿಕ್ಕಿನ ಬಂಧಗಳುಂಟೇ ?'' ಎಂಬುದಾಗಿ ಹೇಳಿ ಇದೇ ಮಾತನ್ನೇ ದೃಢಪಡಿಸಿದ್ದಾರೆ.

ಈ ಸಂಸಾರದಲ್ಲಿ ನನ್ನದು ನನ್ನದು ಎಂಬ ಅಭಿಮಾನವನ್ನು ತಾಳುತ್ತಲೇ ಜೀವಿಗಳೆಲ್ಲ ಈ ಸಂಸಾರ ಚಕ್ರದಲ್ಲಿ ಸಿಲುಕಿಕೊಳ್ಳುತ್ತಾರೆ. ಇದಾವುದೂ ನನ್ನದಲ್ಲವೆಂಬ ಭಾವನೆಯು ಒಡಮೂಡಿದೊಡನೆ ಮುಕ್ತಿಯನ್ನು ಪಡೆದುಕೊಳ್ಳುವರು. ವಾಸ್ತವಿಕವಾಗಿ ವಿಚಾರ ಮಾಡಲಾಗಿ ತೋರುವ ಈ ಪ್ರಪಂಚವೆಲ್ಲ ಈಶ್ವರನದೇ ಆಗಿದೆ. ಆದರೂ ಜೀವಿಗಳು ನನ್ನದು ನನ್ನದು ಎಂಬುದಾಗಿ ವೃಥಾ ಅಭಿಮಾನವನ್ನು ಪಡುತ್ತಿರುತ್ತಾರೆ. ಈ ಅಭಿಮಾನ ವನ್ನು ಬಿಡಿಸುವುದೇ ಪ್ರಸಾದ ಸೇವನೆಯ ಪರಮಗುರಿಯಾಗಿದೆ. ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲಿ ಶಿವಪ್ರಸಾದ ಬುದ್ಧಿಯುಂಟಾದಾಗ ಅದರ ಮೇಲಿನ ನನ್ನದೆಂಬ ಭಾವನೆಯು ಸಹಜವಾಗಿಯೇ ನಿವೃತ್ತವಾಗುವುದು. ಹೀಗೆ ಸಾಧಕನಿಗೆ ಅತ್ಯಂತ ಸುಲಭ ರೀತಿಯಲ್ಲಿ ಸಂಸಾರದಿಂದ ಮುಕ್ತಿಯನ್ನು ಕೊಡುವ

ಸಾಮರ್ಥ್ಯವು ಈ ಪ್ರಸಾದದಲ್ಲಿರೋಣದರಿಂದ–ಇದರ ಸೇವನೆಯ ಫಲವನ್ನು ಅದಾವ ಯಜ್ಞಯಾಗಾದಿಗಳ ಫಲಕ್ಕೂ ಹೋಲಿಸಲಾಗುವುದಿಲ್ಲವೆಂಬುದನ್ನು ಪೂಜ್ಯರು ಇಲ್ಲಿ ಸ್ಪಷ್ಟಪಡಿಸಿರುವುದನ್ನು ಕಾಣುತ್ತೇವೆ.

ಈ ಶಿವಪ್ರಸಾದದ ಅರ್ಥಾತ್ ಶಿವನಿರ್ಮಾಲ್ಯದ ಸೇವನೆಯ ಅಧಿಕಾರವು ಯಾರಿಗೆ ಇದೆ ? ಎಂಬುದನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ–

ನಿರ್ಮಾಲ್ಯಂ ನಿರ್ಮಲಂ ಶುದ್ಧಂ ಶಿವೇನ ಸ್ವೀಕೃತಂ ಯತಃ ।
ನಿರ್ಮಲೈಸ್ತತ್ಪರೈರ್ಧಾರ್ಯಂ ನಾನ್ಯೈಃ ಪ್ರಾಕೃತಜಂತುಭಿಃ ॥

ಶಿವಭಕ್ತಿವಿಹೀನಾನಾಂ ಜಂತೂನಾಂ ಪಾಪಕರ್ಮಣಾಮ್ ।
ವಿಶುದ್ಧೇ ಶಿವನಿರ್ಮಾಲ್ಯೇ ನಾಧಿಕಾರೋಽಸ್ತಿ ಕುತ್ರಚಿತ್ ॥

ಶಿವಲಿಂಗಪ್ರಸಾದಸ್ಯ ಸ್ವೀಕಾರಾದ್ಯತ್ಫಲಂ ಭವೇತ್ ।
ತಥಾ ಪ್ರಸಾದ ಸ್ವೀಕಾರಾದ್ ಗುರುಜಂಗಮಯೋರಪಿ ॥

ತಸ್ಮಾದ್ ಗುರುಂ ಮಹಾದೇವಂ ಶಿವಯೋಗಿನಮೇವ ಚ ।
ಪೂಜಯೇತ್ ತತ್ಪ್ರಸಾದಾನ್ನಂ ಭುಂಜೀಯಾತ್ ಪ್ರತಿವಾಸರಮ್ ॥

(ಸಿ. ಶಿ. ೯ ; ೭೬–೭೯)

ಈ ವಿಧವಾಗಿ ಪುನಃ ಪೂಜ್ಯರು ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾವ ಪದಾರ್ಥವನ್ನು ಶಿವನು ಸ್ವೀಕರಿಸುವನೋ ಅದಕ್ಕೆ ಶಿವನಿರ್ಮಾಲ್ಯವೆಂದು ಕರೆಯುವರು. ಅದು ಅತ್ಯಂತ ನಿರ್ಮಲವಾದುದಾಗಿರುತ್ತದೆ. ಈ ನಿರ್ಮಲವಾದ ಶಿವ ನಿರ್ಮಾಲ್ಯವನ್ನು ಸ್ವೀಕರಿಸಬೇಕಾದರೆ, ಸ್ವೀಕರಿಸುವ ವ್ಯಕ್ತಿಯೂ ಸಹ ನಿರ್ಮಲನೇ ಆಗಿರಬೇಕು. ನಿರ್ಮಾಲ್ಯವೆಂದರೆ, ಪ್ರಸಾದವೆಂದೇ ಅರ್ಥ. ಶಿವಭಕ್ತಿರಹಿತರೂ, ಪಾಪಕರ್ಮಿಗಳೂ ಆದ ಜೀವಿಗಳಿಗೆ ಈ ಪರಿಶುದ್ಧವಾದ ಶಿವನಿರ್ಮಾಲ್ಯವನ್ನು ಸ್ವೀಕರಿಸುವ ಅಧಿಕಾರ ವಿರುವುದಿಲ್ಲ. ತನ್ನ ಇಷ್ಟಲಿಂಗಕ್ಕೆ ಅರ್ಪಿಸಿದ ನಿರ್ಮಾಲ್ಯವನ್ನು ಅರ್ಥಾತ್ ಪ್ರಸಾದವನ್ನು ಸ್ವೀಕರಿಸುವುದರಿಂದ ಯಾವ ಫಲವು ಪ್ರಾಪ್ತವಾಗುವುದೋ ಅಂತಹದೇ ಆದ ಫಲವು ಗುರು ಹಾಗೂ ಜಂಗಮರ ಪ್ರಸಾದವನ್ನು ಸ್ವೀಕರಿಸಿದಾಗಲೂ ಪ್ರಾಪ್ತವಾಗುತ್ತದೆ. ಆದ ಕಾರಣ ಶಿವಭಕ್ತನಾದವನು ಇಷ್ಟಲಿಂಗವನ್ನು ಅರ್ಚಿಸುವುದರ ಜೊತೆಗೆ ಗುರು ಜಂಗಮರನ್ನೂ ಸಹ ಆರಾಧಿಸಿ ಅವರಿಗೆ ಉಣಬಡಿಸಿ ಅವರಿಂದ ಪ್ರಾಪ್ತವಾದ ಪ್ರಸಾದಾನ್ನವನ್ನು ಪ್ರತಿದಿನವೂ ಭುಂಜಿಸಬೇಕು–ಎಂಬುದು ಆಚಾರ್ಯರ ಉಪದೇಶದ ಮಥಿತಾರ್ಥವಾಗಿದೆ.

ಶಿವಭಕ್ತನ ಮನಸ್ಸಿನ ನಿರ್ಮಲತೆಗೆ ಕಾರಣವಾದುದೇ ನಿರ್ಮಾಲ್ಯವು. ಆದಕಾರಣ ಶಿವಭಕ್ತನು ಪ್ರತಿದಿವಸ ಶಿವನಿರ್ಮಾಲ್ಯವನ್ನು ಸೇವಿಸಬೇಕು. ಧರ್ಮ ಶಾಸ್ತ್ರದ ಪ್ರಾಯಶ್ಚಿತ್ತಕಾಂಡಾದಿಗಳಲ್ಲಿ ಶಿವನಿರ್ಮಾಲ್ಯವನ್ನು ಸೇವಿಸಿದವನು 'ಕೃಚ್ಛ್ರ' ವ್ರತವನ್ನು ಆಚರಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂಬುದಾಗಿ ಪ್ರತಿಪಾದಿಸಿ

ರೋಣದರಿಂದ ಶಿವಭಕ್ತನಿಗೆ ನಿರ್ಮಾಲ್ಯಸೇವನೆಯು ಅದು ಹೇಗೆ ತಾನೇ ಇಲ್ಲಿ ಉಪದೇಶಿಸಲ್ಪಟ್ಟಿದೆ ? ಎಂಬ ಪ್ರಶ್ನೆಯು ಜಿಜ್ಞಾಸುಗಳ ಮನಸ್ಸಿನಲ್ಲಿ ಮೂಡಿಬರಬಹುದು. ಅದರ ಪರಿಹಾರ ವೆಂತೆಂದರೆ 'ವೀರಶೈವ ಚಿಂತಾಮಣಿ' ಮತ್ತು 'ವೀರಶೈವಾನಂದ ಚಂದ್ರಿಕಾ' ಮುಂತಾದ ಗ್ರಂಥಗಳಲ್ಲಿ–

ದೇವಸ್ವಂ ದೇವತಾದ್ರವ್ಯಂ ನೈವೇದ್ಯಂ ಚ ನಿವೇದಿತಮ್ ।
ಚಂಡದ್ರವ್ಯಂ ಬಹಿಃಕ್ಷಿಪ್ತಂ ನಿರ್ಮಾಲ್ಯಂ ಷಡ್ವಿಧಂ ಭವೇತ್ ॥
(ವೀ. ಚಿ. ಪುಟ–೧೧೨)

ಹೀಗೆ ನಿರ್ಮಾಲ್ಯವನ್ನು ಆರು ವಿಧವಾಗಿ ಪ್ರತಿಪಾದಿಸಲಾಗಿದೆ. ದೇವಸ್ವ, ದೇವತಾದ್ರವ್ಯ, ನೈವೇದ್ಯ, ನಿವೇದಿತ, ಚಂಡದ್ರವ್ಯ ಮತ್ತು ಬಹಿಃಕ್ಷಿಪ್ತಗಳೇ ಆ ನಿರ್ಮಾಲ್ಯದ ಆರುಪ್ರಕಾರಗಳು. ಇವುಗಳಲ್ಲಿ ದೇವರನ್ನುದ್ದೇಶಿಸಿ ಅಥವಾ ದೇವರಿಗಾಗಿ ಕೊಡಲ್ಪಟ್ಟ ಗ್ರಾಮ, ಭೂಮಿ, ದಾಸಿ ಮತ್ತು ದಾಸ ಇವುಗಳಿಗೆ 'ದೇವಸ್ವ'ವೆಂದು ಕರೆಯುವರು. ಇನ್ನು ಬೆಳ್ಳಿ, ಬಂಗಾರ ಮತ್ತು ರತ್ನಾದಿಗಳಿಗೆ ದೇವತಾದ್ರವ್ಯವೆನ್ನುವರು. ಇನ್ನು ದೇವರಿಗೆ ಅರ್ಪಿಸುವುದಕ್ಕಾಗಿ ತಯಾರಿಸಿಟ್ಟಿರುವ ಪತ್ರ, ಪುಷ್ಪ, ಜಲ, ಫಲ ಮತ್ತು ಅನ್ನಾದಿಗಳಿಗೆ 'ನೈವೇದ್ಯ'ವೆಂದು ಕರೆಯುತ್ತಾರೆ. ಅದೇ ಪ್ರಕಾರವಾಗಿ ಶಿವೋಪಭುಕ್ತಗಳಾದ ಗಂಧ, ಪುಷ್ಪ, ಫಲ, ಅನ್ನಾದಿಗಳು 'ನಿವೇದಿತ'ಗಳೆಂದು ಕರೆಯಲ್ಪಡುತ್ತವೆ. ಇದರಂತೆ ದೇವಾಲಯದಲ್ಲಿರುವ ಚಂಡೇಶನೆಂಬ ಶಿವಗಣನಿಗೆ ಸಮರ್ಪಿತವಾದ ದ್ರವ್ಯವೇ 'ಚಂಡದ್ರವ್ಯ'ವು. ಇದೇ ರೀತಿಯಾಗಿ ಪಿಶಾಚಾದಿ ಆಸುರೀ ಶಕ್ತಿಗಳನ್ನುದ್ದೇಶಿಸಿ ಮನೆಯಿಂದ ಹೊರಗೆ ಒಗೆಯಲ್ಪಟ್ಟ ಪದಾರ್ಥಗಳಿಗೆ 'ಬಹಿಃಕ್ಷಿಪ್ತ' ಗಳೆಂದು ಕರೆಯುವರು. ಈ ಆರುವಿಧಗಳಾದ ನಿರ್ಮಾಲ್ಯಗಳಲ್ಲಿ 'ದೇವಸ್ವ' ದೇವತಾದ್ರವ್ಯ ಮತ್ತು ನೈವೇದ್ಯಗಳು ದೇವರಿಗಾಗಿಯೇ ಕೊಡಲ್ಪಟ್ಟಿರೋಣದರಿಂದ, ಅವುಗಳಲ್ಲಿ ಮತ್ತಾರಿಗೂ ಅಧಿಕಾರವಿರುವುದಿಲ್ಲ. ಅಂತೆಯೇ ಹಿಂದಿನಕಾಲದಲ್ಲಿ ರಾಜ–ಮಹಾರಾಜರು ಭೂಮಿ–ಸೀಮೆಗಳನ್ನು, ವಸ್ತು–ವಾಹನಾದಿಗಳನ್ನು ದೇವಾಲಯಕ್ಕೆ ಸಮರ್ಪಿಸಿ ಆ ದೇವಾಲಯದ ಮುಂಭಾಗದಲ್ಲಿ ದಾನಶಾಸನವನ್ನು ಬರೆದಿಡುವ ಪದ್ಧತಿ ರೂಢಿಯಲ್ಲಿತ್ತು. ಸದ್ಯಃ ದೊರೆತಿರುವ ಎಲ್ಲ ದಾನಶಾಸನಗಳಲ್ಲಿ ಒಂದು ಎಚ್ಚರಿಕೆಯ ಮಾತನ್ನು ಸರ್ವತ್ರ ಗಮನಿಸಬಹುದು. ಅದೇನೆಂದರೆ–ದೇವಾಲಯಕ್ಕೆ ತಾನೇ ಕೊಟ್ಟಿರಲಿ ಅಥವಾ ಅನ್ಯರೇ ಕೊಟ್ಟಿರಲಿ, ಆ ದೇವಸ್ವ ಹಾಗೂ ದೇವತಾದ್ರವ್ಯಗಳನ್ನು ಅಪಹರಿಸಿದ್ದೇ ಆದರೆ ಅಪಹರಿಸಿದವನು– ''ಷಷ್ಟಿ ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ'' ಎಂಬ ಪ್ರಮಾಣವಚನದಂತೆ ಅರವತ್ತು ಸಾವಿರ ವರ್ಷಗಳವರೆಗೆ ಮಲದಲ್ಲಿಯ ಕ್ರಿಮಿಯಾಗಿ ಕಾಲ ಕಳೆಯುವನು. ದಾನ ಶಾಸನದಲ್ಲಿಯ ಈ ಎಚ್ಚರಿಕೆಯ ಮಾತಿನಿಂದ ದೇವಸ್ವ ದೇವತಾದ್ರವ್ಯಾದಿಗಳನ್ನು ಯಾರೂ ತೆಗೆದುಕೊಳ್ಳಬಾರದೆಂಬುದು ಸ್ಪಷ್ಟವಾಗುತ್ತದೆ.

ಶಿವದೇವಾಲಯದಲ್ಲಿ ದೇವಸ್ಥಾನದ ಹೊರಬದಿಗೆ ಚಂಡೇಶನೆಂಬ ಶಿವಗಣನನ್ನು ಸ್ಥಾಪಿಸುವ ಪದ್ಧತಿಯಿರುತ್ತದೆ. ಈತನು ದೇವಸ್ಥಾನಕ್ಕೆ ಬಂದಂತಹ ಭಕ್ತಾದಿಗಳ ಹಾಜರಿಯನ್ನು ತೆಗೆದುಕೊಳ್ಳುತ್ತಾನೆಂದು ಪರಂಪರಾಗತ ನಂಬಿಕೆಯಾಗಿದೆ. ಈ

ಚಂಡೇಶನು ಸದಾ ಕಣ್ಣುಮುಚ್ಚಿ ಶಿವಧ್ಯಾನದಲ್ಲಿ ಕುಳಿತಿರುತ್ತಾನಾದ್ದರಿಂದ, ದೇವರ ದರ್ಶನಕ್ಕಾಗಿ ಬಂದ ಭಕ್ತರು ಆತನ ಎದುರಿನಲ್ಲಿ ಬಂದು ಚಪ್ಪಾಳೆಯನ್ನು ತಟ್ಟಿ ತಮ್ಮ ಉಪಸ್ಥಿತಿಯನ್ನು ಕೊಟ್ಟು, ಮುಖ್ಯದೇವರ ದರ್ಶನಕ್ಕೆ ಹೋಗುವ ಪದ್ಧತಿಯನ್ನು ದಕ್ಷಿಣ ಭಾರತದಲ್ಲಿಯ ದೊಡ್ಡ ದೊಡ್ಡ ಮಂದಿರಗಳಲ್ಲಿ ಕಾಣುವುದುಂಟು. ಹೀಗೆ ಭಕ್ತರ ಉಪಸ್ಥಿತಿಯನ್ನು ತೆಗೆದುಕೊಳ್ಳುವ ಚಂಡೇಶನಿಗಾಗಿ ಅರ್ಪಿತವಾದ ಪದಾರ್ಥಕ್ಕೆ 'ಚಂಡದ್ರವ್ಯ'ವೆಂದು ಕರೆಯುತ್ತಾರೆ. ಈ ಚಂಡದ್ರವ್ಯವನ್ನೂ ಸಹ ಶಿವಭಕ್ತರಿಗೆ ಸ್ವೀಕರಿಸುವ ಅಧಿಕಾರವಿಲ್ಲ.

ಇದೇ ಪ್ರಕಾರವಾಗಿ ಭೂತ, ಪ್ರೇತ ಮತ್ತು ಪಿಶಾಚಾದಿಗಳನ್ನುದ್ದೇಶಿಸಿ ಮನೆ ಇಲ್ಲವೆ ಪೂಜಾ ಮಂಟಪದ ಹೊರಭಾಗದಲ್ಲಿ ಒಗೆಯಲ್ಪಟ್ಟ ಪತ್ರ, ಪುಷ್ಪ ಮತ್ತು ಅನ್ನಾದಿಗಳಿಗೆ ಬಹಿಃಕ್ಷಿಪ್ತಗಳೆಂದು ಕರೆಯುವರು. ಶಿವಭಕ್ತನಾದವನು ಈ ಬಹಿಃಕ್ಷಿಪ್ತ ಪದಾರ್ಥಗಳನ್ನೂ ಸಹ ಸ್ವೀಕರಿಸಕೂಡದು. ಷಡ್ವಿಧ ನಿರ್ಮಾಲ್ಯಗಳಲ್ಲಿ ಇನ್ನು ಉಳಿದಿರುವುದೇ 'ನಿವೇದಿತ ನಿರ್ಮಾಲ್ಯ'ವು. ತನ್ನ ಇಷ್ಟದೇವರಿಗೆ ಅರ್ಪಿಸಿರುವ ಪತ್ರ, ಪುಷ್ಪ, ಫಲ ಅನ್ನಾದಿಗಳೇ ನಿವೇದಿತ ನಿರ್ಮಾಲ್ಯಗಳು. ಈ ನಿರ್ಮಾಲ್ಯವನ್ನು ಸ್ವೀಕರಿಸಲು ಆದಾವ ದೋಷವೂ ಇರುವುದಿಲ್ಲ. ಇದನ್ನು ಹೊರತುಪಡಿಸಿ ಉಳಿದ ಐದು ವಿಧಗಳಾದ ನಿರ್ಮಾಲ್ಯಗಳನ್ನು ಸ್ವೀಕರಿಸಿದ್ದೇ ಆದರೆ ಅದರ ದೋಷ ನಿವೃತ್ತಿಗಾಗಿ 'ಕೃಚ್ಛ್ರ'ವ್ರತವನ್ನಾಚರಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುವುದೆಂಬುದನ್ನು ಸರ್ವರೂ ತಿಳಿದು ಕೊಳ್ಳಬೇಕು.

ವೀರಶೈವ ಸಿದ್ಧಾಂತದಲ್ಲಿ ಪೂಜನೀಯರೆಂದು ಪರಿಗಣಿಸಲ್ಪಟ್ಟಿರುವ ಗುರು–ಲಿಂಗ–ಜಂಗಮಾದಿಗಳಿಗೆ ಪತ್ರ–ಪುಷ್ಪ–ಅನ್ನಾದಿಗಳನ್ನು ಸಮರ್ಪಿಸಿ ಅವರಿಂದ ಭಕ್ತಾವಶೇಷವಾದ ನಿವೇದಿತ ನಿರ್ಮಾಲ್ಯವನ್ನು ಪ್ರತಿದಿನವೂ ಸಹ ತಪ್ಪದೇ ಸ್ವೀಕರಿಸಿ ಮನಸ್ಸನ್ನು ನಿರ್ಮಲಗೊಳಿಸಿಕೊಂಡು ಶಿವಜ್ಞಾನಕ್ಕೆ ಪಾತ್ರರಾಗಬೇಕು. ಮಹಾಭಾರತದ ಅನುಶಾಸನ ಪರ್ವದಲ್ಲಿ ದೂರ್ವಾಸ ಮಹರ್ಷಿಗಳ ಭುಕ್ತಾವಶೇಷವಾದ ಪ್ರಸಾದವನ್ನು ಸರ್ವಾಂಗದಲ್ಲಿ ಲೇಪಿಸಿಕೊಂಡ ಕಾರಣದಿಂದಾಗಿ ಕೃಷ್ಣಪರಮಾತ್ಮನು ವಜ್ರಕಾಯ ನಾಗಿದ್ದನೆಂಬ ಕಥೆಯು ಬಹುರೋಚಕವಾಗಿ ಪ್ರತಿಪಾದಿತವಾಗಿದೆ. ಆದರೆ ಶ್ರೀಕೃಷ್ಣನು ಆ ದೂರ್ವಾಸನ ಪ್ರಸಾದವನ್ನು ಸರ್ವಾಂಗಕ್ಕೆ ಲೇಪಿಸಿಕೊಂಡಿದ್ದರೂ, ತನ್ನ ಪಾದತಲಕ್ಕೆ ಲೇಪಿಸಿಕೊಳ್ಳದ ಕಾರಣದಿಂದಾಗಿ ಅಷ್ಟುಮಾತ್ರ ಅಂಗವು ವಜ್ರವಾಗದಿರೋಣದರಿಂದ ವ್ಯಾಧನ ಬಾಣದಿಂದ ಅಲ್ಲಿಯೇ ಹತನಾಗಿ ಪ್ರಾಣಬಿಟ್ಟನೆಂಬ ವಿಷಯವು ಸರ್ವವಿದಿತವಾಗಿದೆ.

ವೀರಶೈವ ಸಿದ್ಧಾಂತದಲ್ಲಿ ಪ್ರಸಾದವೂ ಸಹ ಒಂದು ರಕ್ಷಾಕವಚವೆಂಬುದಾಗಿ ಹೇಳಲ್ಪಟ್ಟಿದೆ. ಆಚಾರ್ಯರ ಆದೇಶದ ಪ್ರಕಾರ ಯಾವ ಶಿವಭಕ್ತನು ಗುರು–ಲಿಂಗ–ಜಂಗಮರ ಪ್ರಸಾದವನ್ನು ಪ್ರತಿದಿವಸ ಸ್ವೀಕರಿಸುವನೋ, ಪ್ರಸಾದಸೇವನೆಯ ಪರಿಣಾಮವಾಗಿ ಅವನ ಮನಸ್ಸು ಸದಾ ಪ್ರಸನ್ನವಾಗಿರುತ್ತದೆ. ಮನಸ್ಸಿನ ಪ್ರಸನ್ನತೆಯೇ ಮುಕ್ತಿಯ ಅಮೋಘವಾದ ಸಾಧನವಾಗಿರುತ್ತದೆ. ಆದಕಾರಣ ವೀರಶೈವ ಶಿವಭಕ್ತರು

ಗುರು–ಲಿಂಗ–ಜಂಗಮರನ್ನು ವಿಧಿವತ್ತಾಗಿ ಭಕ್ತಿಯಿಂದ ಆರಾಧಿಸಿ ಅವರ ಪಾದೋದಕ ಪ್ರಸಾದಗಳನ್ನು ಸೇವಿಸಿ ಶಿವಸಾಯುಜ್ಯವನ್ನು ಪಡೆಯಬೇಕು. ಹೀಗೆ ಗುರು–ಲಿಂಗ–ಜಂಗಮರ ಅರ್ಚನೆ ಮತ್ತು ಅವರ ಪಾದೋದಕ ಪ್ರಸಾದ ಸೇವನೆ ಎಂಬ ನಾಲ್ಕು ವಿಧಗಳಾದ ಧಾರ್ಮಿಕ ಆಚರಣೆಯು ವೀರಶೈವರ ಜೀವನದ ಸಾರ ಸರ್ವಸ್ವವಾಗಿವೆ. ಈ ನಾಲ್ಕು ಪ್ರಮುಖ ಆಚರಣೆಗಳೇ ಜೀವನದ ಸಾರವೆಂಬುದಾಗಿ ತಿಳಿಯಪಡಿಸುವ ಸ್ಥಲವೇ ಚತುರ್ವಿಧಸಾರಾಯಸ್ಥಲವು ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೮ ಸಪ್ಟೆಂಬರ, ೧೯೯೦
(ಸ್ಥಾನ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)

■■

ಆಶೀರ್ವಚನ-೧

## ಸೋಪಾಧಿ-ನಿರುಪಾಧಿ-ಸಹಜದಾನಸ್ಥಲಗಳು

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲಾಂತರ್ಗತವಾದ ಚತುರ್ವಿಧಸಾರಾಯ ಸ್ಥಲದ ಬಗ್ಗೆ ಇಲ್ಲಿಯವರೆಗೆ ನೀವೆಲ್ಲ ಆಶೀರ್ವಚನವನ್ನು ಆಲಿಸಿದ್ದೀರಿ. ಇನ್ನು ಮುಂದೆ ಈ ಭಕ್ತಸ್ಥಲದ ಹದಿಮೂರು-ಹದಿನಾಲ್ಕು ಮತ್ತು ಹದಿನೈದನೆಯ ಅವಾಂತರ ಸ್ಥಲಗಳಾದ 'ಸೋಪಾಧಿಕದಾನ', 'ನಿರುಪಾಧಿಕದಾನ' ಮತ್ತು 'ಸಹಜದಾನ'ಗಳ ಬಗ್ಗೆ ವಿವೇಚಿಸೋಣ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ದಾನದ ಸ್ವರೂಪ ಹಾಗೂ ಅದರ ಪ್ರಕಾರಗಳನ್ನು ವಿವರಿಸುತ್ತ-

ಶಿವಲಿಂಗೇ ಶಿವಾಚಾರ್ಯೇ ಶಿವಯೋಗಿನಿ ಭಕ್ತಿಮಾನ್ ।
ದಾನಂ ಕುರ್ಯಾದ್ ಯಥಾಶಕ್ತಿ ತತ್‌ಪ್ರಸಾದಯುತಃ ಸದಾ ॥

ದಾನಂ ಚ ತ್ರಿವಿಧಂ ಪ್ರೋಕ್ತಂ ಸೋಪಾಧಿ ನಿರುಪಾಧಿಕಮ್ ।
ಸಹಜಂ ಚೇತಿ ಸರ್ವೇಷಾಂ ಸರ್ವತಂತ್ರವಿಶಾರದೈಃ ॥

ಫಲಾಭಿಸಂಧಿಸಂಯುಕ್ತಂ ದಾನಂ ಯದ್ವಿಹಿತಂ ಭವೇತ್ ।
ತತ್ ಸೋಪಾಧಿಕಮಾಖ್ಯಾತಂ ಮುಮುಕ್ಷುಭಿರನಾದೃತಮ್ ॥

(ಸಿ. ಶಿ. ೯; ೮೦-೮೨)

ಈ ತೆರನಾಗಿ ಬೋಧಿಸಿದ್ದಾರೆ. ಮಾನವ ಸಮಾಜಕ್ಕಾಗಿ ಬೋಧಮಾಡಿದ ದಶವಿಧ ಧರ್ಮಗಳಲ್ಲಿ ದಾನವೂ ಕೂಡ ಒಂದಾಗಿರುತ್ತದೆ. ಸ್ವತ್ವ ನಿವೃತ್ತಿಪೂರ್ವಕ ಸತ್ ಪಾತ್ರದಲ್ಲಿ ಧನಾದಿಗಳನ್ನು ಸಮರ್ಪಿಸುವುದೇ ದಾನವು. ಶಿವಭಕ್ತನಾದವನು ಶಿವಲಿಂಗಕ್ಕೆ, ಶಿವಾಚಾರ್ಯರಿಗೆ ಮತ್ತು ಶಿವಯೋಗಿಗೆ ತನ್ನ ಶಕ್ತಿ-ಭಕ್ತಿಗನುಸಾರವಾಗಿ ಯಾವಾಗಲೂ ದಾನವನ್ನು ಮಾಡುತ್ತಿರಬೇಕು. ಹೀಗೆ ಕೊಡಲ್ಪಡುವ ಈ ದಾನವು 'ಸೋಪಾಧಿಕದಾನ', 'ನಿರುಪಾಧಿಕದಾನ' ಮತ್ತು 'ಸಹಜದಾನ' ಎಂಬುದಾಗಿ ಮೂರು ವಿಧವಾಗಿ ಇರುತ್ತದೆ ಎಂಬುದನ್ನು ಶಿವಾಗಮ ತಜ್ಞರು ಪ್ರತಿಪಾದಿಸಿದ್ದಾರೆ. ಸದ್ಯಃ ಇವುಗಳಲ್ಲಿ ಸೋಪಾಧಿಕ ದಾನವನ್ನು ಕುರಿತು ವಿಚಾರಿಸೋಣ.

ಸೋಪಾಧಿಕದಾನಸ್ಥಲ :

ಪ್ರತಿಫಲದ ಅಪೇಕ್ಷೆಯಿಂದ ಮಾಡಲ್ಪಡುವ ದಾನವೇ ಸೋಪಾಧಿಕದಾನವೆಂಬುದಾಗಿ ಕರೆಯಲ್ಪಡುತ್ತದೆ. ಈ ದಾನವು ಅಷ್ಟೊಂದು ಪ್ರಶಸ್ತವಲ್ಲದಿರೋಣದರಿಂದ ಮುಮುಕ್ಷುಗಳಾದವರು ಇದನ್ನು ಆದರಿಸುವುದಿಲ್ಲ. ''ಪ್ರಯೋಜನ ಮನುದ್ದಿಶ್ಯ ಮಂದೋಽಪಿ ನ ಪ್ರವರ್ತತೇ'' ಎಂಬ ಲೋಕೋಕ್ತಿಯಂತೆ ಪ್ರತಿಯೊಬ್ಬ ಮನುಷ್ಯನು

ಯಾವುದೇ ಕಾರ್ಯವನ್ನು ಆಚರಿಸುವಾಗ ಮೊದಲು ಅದರ ಫಲದ ಬಗ್ಗೇನೇ ವಿಚಾರಿಸುತ್ತಾನೆ. ಮನುಷ್ಯನ ಪ್ರವೃತ್ತಿಯು ಸ್ವಾಭಾವಿಕವಾಗಿ ಫಲಾತ್ಮಕವಾಗಿರೋಣದರಿಂದಲೇ ಪ್ರತಿಯೊಂದು ಲೌಕಿಕ ಇಲ್ಲವೆ ಪಾರಲೌಕಿಕ ಕರ್ಮಗಳಿಗೆ ಫಲವನ್ನು ಬೋಧಿಸಿರುವುದನ್ನು ಕಾಣುತ್ತೇವೆ. ಲಾಭವು ಸರ್ವ ಜೀವಿಗಳನ್ನು ತನ್ನತ್ತ ಆಕರ್ಷಿಸುತ್ತ ಬಂದಿರುತ್ತದೆ. ಹೀಗಾಗಿ ಪ್ರತಿಯೊಂದು ಕ್ಷೇತ್ರದಲ್ಲಿ ಮನುಷ್ಯನು ವ್ಯಾಪಾರಿ ದೃಷ್ಟಿಕೋನವುಳ್ಳವನಾಗಿದ್ದಾನೆ. ಅವನು ಏನೇ ಮಾಡಿದರೂ ಅವನಿಗೆ ಪ್ರತಿಫಲ ಬೇಕೇಬೇಕು. ಈ ತೆರನಾಗಿ ಮನುಷ್ಯ ಬುದ್ಧಿಯು ಲಾಭ–ಲೋಭಗಳಿಂದ ಆಕ್ರಾಂತವಾಗಿರುತ್ತದೆ.

ಫಲಾಪೇಕ್ಷೆ ಎಂಬ ಲೋಭವು ಯಾರ ಮನಸ್ಸಿನಲ್ಲಿರುವುದೋ ಅವನು ಯಾವುದೇ ಕಾರ್ಯವನ್ನು ಮಾಡುತ್ತಿರುವಾಗ ಆ ಫಲಾಪೇಕ್ಷೆಯೆಂಬ ಮನೋವೃತ್ತಿಯು ಆಗಾಗ ಮನಸ್ಸಿನಲ್ಲಿ ಉದ್ಭವಿಸುತ್ತಲೇ ಇರುತ್ತದೆ. ಹೀಗೆ ಕಾರ್ಯವನ್ನು ಮಾಡುವ ಮನುಷ್ಯನ ಮನಸ್ಸಿನಲ್ಲಿ ಈ ಫಲಾಭಿಲಾಷೆಯ ವೃತ್ತಿಯು ಉದ್ಭವಿಸೋಣದರಿಂದ ಅವನು ಮಾಡುತ್ತಿರುವ ಕಾರ್ಯವು ಸಂಪೂರ್ಣವಾದ ಮನೋಯೋಗದಿಂದ ಸಂಭವಿಸಲಾರದು. ಈ ರೀತಿಯಾಗಿ ಪೂರ್ಣಮನೋಯೋಗವಿಲ್ಲದ ಕಾರಣದಿಂದಲೇ ಆ ಕಾರ್ಯವು ಅಷ್ಟೊಂದು ಸುಚಾರು ರೂಪಾಗಿ ಸಂಭವಿಸಲಾರದು. ಅಂತೆಯೇ ಇಂತಹ ಯಾವುದೇ ಕಾರ್ಯವಿದ್ದರೂ ಅದನ್ನು ಮುಮುಕ್ಷುಗಳಾದವರು ಆದರಿಸಬಾರದು.

''ತೇನ ತ್ಯಕ್ತೇನ ಭುಂಜೀಥಾಃ'' ಎಂಬ ಈಶಾವಾಸ್ಯ ಉಪನಿಷತ್ತಿನ ಉಕ್ತಿಯಂತೆ ಪ್ರತಿಯೊಬ್ಬ ಮನುಷ್ಯನು ಏನನ್ನೇ ಉಪಭೋಗಿಸಬೇಕಾದರೂ ಅದರಲ್ಲಿಯ ಕೆಲ ಅಂಶವನ್ನು ಅವಶ್ಯವಾಗಿ ದಾನಮಾಡಬೇಕಾಗುವುದು. ದಾನ ಮಾಡುವುದರಿಂದ ಮನುಷ್ಯನ ಸಂಕುಚಿತ ಹಾಗೂ ಸ್ವಾರ್ಥ ಭಾವನೆಗಳು ಕಡಿಮೆಯಾಗುತ್ತ ನಿಸ್ವಾರ್ಥ ಹಾಗೂ ಸಮಷ್ಟಿ ಭಾವನೆಗಳು ಉದ್ಭವಿಸುತ್ತವೆ. ಹೀಗೆ ಈ ದಾನರೂಪೀ ಧರ್ಮವು ಮನುಷ್ಯನ ಆಧ್ಯಾತ್ಮಿಕ ಪ್ರವೃತ್ತಿಗೆ ಕಾರಣವಾಗಿರುವುದರಿಂದ ಇದನ್ನು ಧರ್ಮವನ್ನಾಗಿ ಪರಿಗಣಿಸಿದ್ದಾರೆ. ತಾನು ಕಷ್ಟಪಟ್ಟು ಸಂಪಾದಿಸಿದ ಧನ, ಧಾನ್ಯ, ವಸ್ತ್ರ–ವಾಹನಾದಿ ಪ್ರತಿಯೊಂದು ಪದಾರ್ಥವನ್ನೂ ಮನುಷ್ಯನು ದಾನ ಮಾಡಬಹುದು. ಈ ದಾನವನ್ನು ಮಾಡುವುದರಿಂದ ನಾವು ಅಪೇಕ್ಷಿಸದೇ ಇದ್ದರೂ ಅದರ ಫಲವು ನಮಗೆ ದೊರತೇ ದೊರೆಯುವುದು. ಹೀಗಿದ್ದರೂ ಬಹುಪಾಲು ಜನರು ಮೊದಲು ಪ್ರತಿಫಲದ ಆಲೋಚನೆಯನ್ನು ಮಾಡಿಯೇ ದಾನಾದಿಗಳನ್ನು ಮಾಡುತ್ತಾರೆ. ಪ್ರತಿಫಲಾಪೇಕ್ಷೆಯುಳ್ಳ ದಾನವು ಸಾಮಾನ್ಯ ಜನರಿಗೆ ಅಭೀಷ್ಟವಾದರೂ ಮುಮುಕ್ಷುಗಳಿಗೆ ಇದು ಪ್ರಿಯಕರವಾದುದಾಗಿರುವುದಿಲ್ಲ. ಮುಮುಕ್ಷುಗಳಾದವರಿಗೆ ಐಹಿಕ ಇಲ್ಲವೆ ಪಾರಲೌಕಿಕಗಳಾದ ಯಾವುದೇ ಫಲದ ಅಭಿಲಾಷೆಯು ಅವರ ಮನಸ್ಸಿನಲ್ಲಿ ಇರುವುದಿಲ್ಲ. ಆದ್ದರಿಂದಲೇ ಈ ಸೋಪಾಧಿಕ ದಾನವು ಅಷ್ಟೊಂದು ಪ್ರಶಸ್ತವಲ್ಲವೆಂಬುದು ಅವರ ಅಭಿಮತವಾಗಿದೆ. ಮುಮುಕ್ಷುಗಳಿಂದ ಈ ದಾನವು ಅನಾದೃತವಾಗಿದ್ದರೂ ಸಾಮಾನ್ಯ ಜನರನ್ನು ಧರ್ಮಮಾರ್ಗದತ್ತ ಪ್ರವರ್ತಿಸಲು ಇದು ಸಹಕಾರಿಯಾಗಿರೋಣದರಿಂದ ಇದನ್ನೂ ಸಹ ಧರ್ಮವೆಂದೇ ಪರಿಗಣಿಸಲಾಗಿದೆ. ಹೀಗೆ ದಾನದ ಮೊದಲನೇ ಅವಸ್ಥೆಯೇ ಸೋಪಾಧಿಕದಾನವು ಎಂಬುದಾಗಿ ಸರ್ವರೂ ತಿಳಿದುಕೊಳ್ಳಬೇಕು.

ನಿರುಪಾಧಿಕದಾನಸ್ಥಲ :

ಲೌಕಿಕ ಇಲ್ಲವೆ ಪಾರಲೌಕಿಕವಾದ ಯಾವುದೇ ಫಲದ ಅಪೇಕ್ಷೆಯಿಲ್ಲದೆ ಮಾಡಲ್ಪಡುವ ದಾನವೇ ನಿರುಪಾಧಿಕ ದಾನವು. ಅದನ್ನೇ ಪೂಜ್ಯರು–

ಫಲಾಭಿಸಂಧಿನಿರ್ಮುಕ್ತಮೀಶ್ವರಾರ್ಪಿತಕಾಂಕ್ಷಿತಮ್ ।
ನಿರುಪಾಧಿಕಮಾಖ್ಯಾತಂ ದಾನಂ ದಾನವಿಶಾರದೈಃ ॥

(ಸಿ. ಶಿ. ೯–೮೩)

ಈ ವಿಧವಾಗಿ ಉಪದೇಶಿಸಿದ್ದಾರೆ. ತುಚ್ಛವಾದ ಯಾವುದೊಂದು ಫಲವು ತನಗೆ ದೊರೆಯಬೇಕೆಂಬ ಅಪೇಕ್ಷೆಯನ್ನಿರಿಸದೇ ಈಶ್ವರಾರ್ಪಿತಬುದ್ಧಿಯಿಂದ ಕೊಡಲ್ಪಡುವ ದಾನಕ್ಕೆ ದಾನತತ್ತ್ವದಲ್ಲಿ ಬಲ್ಲಿದರಾದವರು 'ನಿರುಪಾಧಿಕದಾನ' ಎಂಬುದಾಗಿ ಕರೆಯುತ್ತಾರೆ. 'ನಿಷ್ಕಾಮ ದಾನ' ಎಂಬುದು ಇದರ ಇನ್ನೊಂದು ಹೆಸರಾಗಿದೆ.

ಲೋಕ–ಲೋಕಾಂತರ ಫಲಗಳ ಅಪೇಕ್ಷೆಯು ಮನುಷ್ಯನನ್ನು ಪುನಃ ಸಂಸಾರ ಬಂಧನದಲ್ಲಿ ಕಟ್ಟಿಹಾಕುತ್ತದೆ. ಆದ್ದರಿಂದ ಮುಮುಕ್ಷುಗಳಾದವರು ಯಾವುದೇ ಪ್ರತಿಫಲವನ್ನಪೇಕ್ಷಿಸದೆ ಕೇವಲ ಈಶ್ವರಾರ್ಪಣ ಬುದ್ಧಿಯಿಂದ ದಾನ–ಧರ್ಮಾದಿ ಗಳನ್ನು ಮಾಡುತ್ತಲಿರುತ್ತಾರೆ. ಹೀಗೆ ಪ್ರತಿಫಲದ ಅಪೇಕ್ಷೆಯಿಲ್ಲದೆ ಮಾಡುತ್ತಿರುವ ಈ ದಾನಕ್ಕೆ 'ನಿರಪಾಧಿಕ ದಾನ' ಎಂಬುದಾಗಿ ಕರೆಯುವರು. ಈಶ್ವರಾರ್ಪಣೆಯನ್ನು ಹೊರತುಪಡಿಸಿ ಬೇರಾವ ಕಾಮನೆಯು ಇಲ್ಲಿ ಇಲ್ಲದಿರೋಣದರಿಂದ ಇದಕ್ಕೆ 'ನಿಷ್ಕಾಮದಾನ' ಎಂಬುದಾಗಿಯೂ ಕರೆಯುತ್ತಾರೆ. ''ಕರ್ಮಣ್ಯೇವಾಧಿಕಾರಸ್ತೆ ಮಾ ಫಲೇಷು ಕದಾಚನ'' ಎಂಬ ಗೀತೋಕ್ತಿಯಲ್ಲಿಯೂ ಈ ನಿಷ್ಕಾಮ ಭಾವನೆಯು ಪ್ರತಿಪಾದಿತವಾಗಿದೆ. ಕರ್ಮವನ್ನಾಚರಿಸುವುದು ಜೀವಿಯ ಅಧಿಕಾರವಾದರೆ ಫಲವನ್ನು ದಯಪಾಲಿಸುವುದು ಈಶ್ವರನ ಅಧಿಕಾರ ಇಲ್ಲವೆ ಕರ್ತವ್ಯವಾಗಿದೆ. ಹೀಗಿದ್ದರೂ ಜೀವಿಯು ತನ್ನ ಅಧಿಕಾರ ಕಕ್ಷೆಯನ್ನು ಮೀರಿ ಹೋಗುವ ಅನೇಕ ಪ್ರಸಂಗಗಳನ್ನು ಕಾಣುತ್ತೇವೆ. ಯಾವ ಕರ್ಮವನ್ನಾಚರಿಸಿ ಯಾವ ಫಲವನ್ನು ಬೇಡಿಕೊಳ್ಳಬೇಕೆಂಬ ಪರಿಪೂರ್ಣ ಜ್ಞಾನವು ಜೀವಿಗೆ ಇರುವುದಿಲ್ಲ. ಅಂತೆಯೇ ಪರಮಾತ್ಮನು– 'ನೀನು ಕೇವಲ ಕರ್ಮವನ್ನಾಚರಿಸು. ನಾನು ನಿನಗೆ ಯೋಗ್ಯವಾದ ಫಲವನ್ನು ದಯಪಾಲಿ ಸುತ್ತೇನೆಂಬುದಾಗಿ ಭಗವಂತನು ಅಭಯವಚನವಿತ್ತಿದ್ದಾನೆ. ಹೀಗಿದ್ದರೂ ಜೀವಿಗಳು ತಮ್ಮ ಅಲ್ಪ ಬುದ್ಧಿಗೆ ತಕ್ಕಂತೆ ಕರ್ಮದ ಫಲಗಳನನ್ನು ಅಪೇಕ್ಷಿಸಿ ಅನರ್ಥಕ್ಕೊಳಗಾದ ಅನೇಕ ಜನರ ಚರಿತ್ರೆಗಳನ್ನು ನಾವು ಕೇಳುತ್ತೇವೆ.

ಹಿರಣ್ಯಕಶ್ಯಪು, ಭಸ್ಮಾಸುರ ಮತ್ತು ತ್ರಿಪುರಾಸುರಾದಿಗಳು ಅತ್ಯಂತ ಕಠೋರವಾದ ತಪಸ್ಸನ್ನಾಚರಿಸಿ ಅದರ ಪ್ರತಿಫಲವನ್ನು ಪರಮಾತ್ಮನಿಂದ ಬೇಡಿ ಪಡೆದುಕೊಂಡರೂ ಅದು ಅವರಿಗೆ ಸುಖದಾಯಕವಾಗಲಿಲ್ಲವೆಂಬುದು ಸರ್ವರಿಗೂ ತಿಳಿದ ವಿಷಯವಾಗಿದೆ. ಅದ್ದರಿಂದ ಭಕ್ತನಾದವನು ತಾನೇ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಈಶ್ವರಾರ್ಪಣ ಬುದ್ಧಿಯಿಂದ ದಾನಾದಿಧರ್ಮಗಳನ್ನಾಚರಿಸಿದಾಗ ಈಶ್ವರನು ಭಕ್ತರಿಗೆ ಕೊಡಬೇಕಾದ ಯೋಗ್ಯ ಫಲವನ್ನು ಕೊಟ್ಟೇ ಕೊಡುತ್ತಾನೆ. ಈಶ್ವರನು ಸರ್ವಜ್ಞನಾಗಿರುವುದರಿಂದ

ಭಕ್ತನ ಹಿತ–ಅಹಿತಗಳ ಬಗ್ಗೆ ಎಷ್ಟೊಂದು ತಿಳಿದುಕೊಂಡಿರುವನೋ, ಅಲ್ಪಜ್ಞನಾದ ಈ ಭಕ್ತನು ತನ್ನದೇ ಆದ ಹಿತಾಹಿತಗಳ ಬಗ್ಗೆ ಅಷ್ಟೊಂದು ತಿಳಿದುಕೊಂಡವನಾಗಿರುವುದಿಲ್ಲ. ಆದ್ದರಿಂದ ಶಿವಭಕ್ತನು ತನ್ನ ಬುದ್ಧಿಯಿಂದ ತನಗೆ ಯೋಗ್ಯವಾದುದು ಯಾವುದೆಂದು ತಾನೇ ನಿರ್ಣಯಿಸದೇ ಈ ನಿರ್ಣಯದ ಭಾರವನ್ನು ಈಶ್ವರನಿಗೇ ಬಿಟ್ಟುಕೊಟ್ಟು, ತನ್ನ ಪ್ರತಿಯೊಂದು ಧರ್ಮಾಚರಣೆಯನ್ನು ಈಶ್ವರಾರ್ಪಣಬುದ್ಧಿಯಿಂದಲೇ ಮಾಡುತ್ತಲಿರಬೇಕು. ಅಂದಾಗಲೇ ಆ ಭಕ್ತನ ಸರ್ವಾಂಗೀಣ ವಿಕಾಸವಾಗುವುದು. ಅಂತೆಯೇ ಪೂಜ್ಯಪಾದರು ದಾನಾದಿಗಳನ್ನು ಮಾಡುವಾಗ ಯಾವುದೇ ಪ್ರತಿಫಲದ ಅಪೇಕ್ಷೆಯನ್ನು ಮಾಡದೇ ಈಶ್ವರಾರ್ಪಣಬುದ್ಧಿಯಿಂದ ಮಾಡಲ್ಪಡುವ ದಾನಕ್ಕೇನೇ 'ನಿರುಪಾಧಿಕ ದಾನ' ಇಲ್ಲವೆ 'ನಿಷ್ಕಾಮದಾನ' ಎಂಬುದಾಗಿ ಕರೆಯುತ್ತಾರೆ.

ಸಹಜದಾನಸ್ಥಲ :

ನಾನು ಕೊಡುತ್ತೇನೆ, ಈತನು ತೆಗೆದುಕೊಳ್ಳುತ್ತಾನೆ ಮತ್ತು ಇದು ಕೊಡುವ ವಸ್ತು ಎಂಬ ತ್ರಿಪುಟಿಗಳ ಭಾವನೆಯಿಲ್ಲದೆ ಸಹಜವಾಗಿ ಮಾಡಲ್ಪಡುವ ದಾನವೇ ಸಹಜದಾನವು. ಅದನ್ನೇ ಪೂಜ್ಯಪಾದರು–

ಅದಾತೃದಾತೃದೇಯಾನಾಂ ಶಿವಭಾವಂ ವಿಚಿಂತಯನ್ ।
ಆತ್ಮನೋಽಕರ್ತೃಭಾವಂ ಚ ಯದ್ದತ್ತಂ ಸಹಜಂ ಭವೇತ್ ॥

ಸಹಜಂ ದಾನಮುತ್ಕೃಷ್ಟಂ ಸರ್ವದಾನೋತ್ತಮೋತ್ತಮಮ್ ।
ಶಿವಜ್ಞಾನಪ್ರದಂ ಪುಂಸಾಂ ಜನ್ಮರೋಗ ನಿವರ್ತಕಮ್ ॥

ಶಿವಾಯ ಶಿವಭಕ್ತಾಯ ದೀಯತೇ ಯದಿ ಕಿಂಚನ ।
ಭಕ್ತ್ಯಾ ತದಪಿ ವಿಖ್ಯಾತಂ ಸಹಜಂ ದಾನಮುತ್ತಮಮ್ ॥

(ಸಿ. ಶಿ. ೯; ೮೪–೮೬)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ದಾನವನ್ನು ಸ್ವೀಕರಿಸುವವನು, ದಾನವನ್ನು ಮಾಡತಕ್ಕವನು ಹಾಗೂ ದಾನಮಾಡಲ್ಪಡುವ ವಸ್ತು ಇವುಗಳೆಲ್ಲ ಶಿವಸ್ವರೂಪಿಗಳೆಂದು ಭಾವಿಸಿ ತನ್ನಲ್ಲಿ ಅಕರ್ತೃತ್ವ ಭಾವನೆಯನ್ನು ತಾಳಿ ಮಾಡಲ್ಪಡುವ ದಾನವೇ ಸಹಜದಾನವೆಂಬುದಾಗಿ ಕರೆಯಲ್ಪಡುತ್ತದೆ. ಈ ಹಿಂದೆ ಹೇಳಿದ ಸೋಪಾಧಿ–ನಿರುಪಾಧಿ ದಾನಗಳಿಗಿಂತಲೂ ಈ ಸಹಜದಾನವು ಉತ್ಕೃಷ್ಟವಾದುದಾಗಿದೆ. ಈ ದಾನದ ಪರಿಣಾಮವಾಗಿಯೇ ಶಿವಭಕ್ತನು ಜನನ–ಮರಣಾತ್ಮಕವಾದ ಸಂಸಾರ ರೋಗವನ್ನು ನಿವಾರಣೆಗೊಳಿಸುವ ಶಿವತಾದಾತ್ಮ್ಯ ಜ್ಞಾನವನ್ನು ಪಡೆದುಕೊಳ್ಳುತ್ತಾನೆ. ಶಿವನಿಗೆ ಇಲ್ಲವೆ ಶಿವಭಕ್ತನಿಗೆ ಅತ್ಯಂತ ಭಕ್ತಿಯಿಂದ ಏನನ್ನೇ ಕೊಟ್ಟರೂ ಅದಕ್ಕೂ ಸಹ ಸಹಜ ದಾನವೆಂದೇ ಕರೆಯುತ್ತಾರೆ ಎಂಬುದು ಪೂಜ್ಯಪಾದರ ಆಶಯವಾಗಿದೆ.

ಲೌಕಿಕ ಇಲ್ಲವೆ ಪಾರಲೌಕಿಕ ಯಾವುದೇ ವ್ಯವಹಾರವಾಗಬೇಕಾದರೆ ತ್ರಿಪುಟಿಗಳ ಅವಶ್ಯಕತೆ ಇದ್ದೇ ಇರುತ್ತದೆ. ಆದರೆ ಯಾವ ವ್ಯವಹಾರದಲ್ಲಿ ತ್ರಿಪುಟಿಗಳಿದ್ದರೂ ತ್ರಿಪುಟಿ ಭಾವನೆಯಿರುವುದಿಲ್ಲವೋ ಅದಕ್ಕೇನೇ ಸಹಜ ವ್ಯವಹಾರವೆಂದು ಕರೆಯುತ್ತಾರೆ.

ದಾನರೂಪ ವ್ಯವಹಾರವು ನಡೆಯಬೇಕಾದರೆ ದಾನ ಮಾಡುವ ವ್ಯಕ್ತಿ, ದಾನ ತೆಗೆದುಕೊಳ್ಳುವ ವ್ಯಕ್ತಿ ಮತ್ತು ದಾನದ ವಸ್ತು ಈ ತ್ರಿಪುಟಿಗಳ ಅವಶ್ಯಕತೆ ಇರುತ್ತದೆ. ಇವುಗಳಲ್ಲಿ ಯಾವುದೊಂದು ಇರದಿದ್ದರೂ ದಾನರೂಪೀ ವ್ಯವಹಾರವು ಸಂಭವಿಸ ಲಾರದು. ದಾನ ಕೊಡುವಂಥ ವ್ಯಕ್ತಿಯ ಮನಸ್ಸಿನಲ್ಲಿ ನಾನು ಕೊಡುತ್ತಿದ್ದೇನೆ, ಈತನು ತೆಗೆದುಕೊಳ್ಳುತ್ತಿದ್ದಾನೆ ಮತ್ತು ಇದು ಕೊಡುವ ವಸ್ತು ಎಂಬ ತ್ರಿಪುಟಿ ಭಾವನೆಯು ಬಂದದ್ದಾದರೆ ಅದಕ್ಕೆ ಅಸಹಜದಾನವೆಂದು ಕರೆಯಲಾಗುವುದು. ಒಂದುವೇಳೆ ಈ ಭಾವನೆಯು ತೋರದೆ ಸಹಜವಾಗಿ ಕ್ರಿಯೆಯು ಸಂಭವಿಸಿದರೆ ಅದಕ್ಕೇನೇ ಸಹಜದಾನವೆನ್ನುವರು.

ಓರ್ವ ವ್ಯಕ್ತಿಯು ತನ್ನ ಬಲಗೈಯೊಳಗಿನ ಒಂದು ವಸ್ತುವನ್ನು ಎಡಗೈಯಲ್ಲಿಟ್ಟಾಗ ಅಲ್ಲಿ ಎರಡೂ ಕೈಗಳು ತನ್ನವುಗಳೇಯಾದ್ದರಿಂದ ಮತ್ತು ಕೈಯೊಳಗಿನ ವಸ್ತುವೂ ಸಹ ತನ್ನದಾಗಿರೋಣದರಿಂದ ಇಲ್ಲಿ ಕೊಟ್ಟೆ, ತೆಗೆದುಕೊಂಡೆ ಎಂಬ ಭಾವನೆಯಿಲ್ಲದೇ ವ್ಯವಹಾರವು ನಡೆಯುತ್ತಿರುವುದು ಸರ್ವಾನುಭವ ಸಿದ್ಧವಾದುದು. ಇದೇ ರೀತಿಯಾಗಿ ಶಿವಭಕ್ತನಾದವನು ಇಂತಹ ಸಮಷ್ಟಿ ಭಾವನೆಯಿಂದೊಡಗೂಡಿ ದಾನಾದಿಗಳನ್ನಾಚರಿಸಿ ದರೆ ಅದಕ್ಕೇನೇ 'ಸಹಜದಾನ'ವೆಂದು ಕರೆಯಬೇಕು. ಈ ದಾನವು ಉಳಿದೆರಡು ದಾನಗಳಿಗಿಂತಲೂ ಸರ್ವಶ್ರೇಷ್ಠವಾದುದಾಗಿದೆ. ಈ ದಾನದ ಫಲವಾಗಿಯೇ ದಾನಿಯು ಶಿವಜ್ಞಾನವನ್ನು ಪಡೆದು ಜನ್ಮ ಮರಣಾತ್ಮಕ ರೋಗದಿಂದ ನಿವೃತ್ತನಾಗುತ್ತಾನೆ.

ಸಹಜ ದಾನಿಯಾದ ಶಿವಭಕ್ತನಲ್ಲಿ 'ದಾತಾ ಭೋಕ್ತಾ ಸ್ವಯಂ ಶಿವಃ' ಎಂಬ ಉತ್ಕೃಷ್ಟ ಭಾವನೆಯು ಇರುವುದರಿಂದಲೇ ಅವನಿಗೆ ಶಿವಜ್ಞಾನವು ಉಂಟಾಗುವುದು. ಶಿವಭಕ್ತನಾದವನು ಇಂತಹ ಭಾವನೆಯಿಂದೊಡಗೂಡಿಕೊಂಡೇ ಗುರು–ಲಿಂಗ–ಜಂಗಮಾದಿಗಳಿಗೆ ದಾನವನ್ನು ಮಾಡುತ್ತಲಿರಬೇಕು. ಗೀತಾ ಮುಂತಾದ ಶಾಸ್ತ್ರಗಳಲ್ಲಿ ಸಕಾಮ ಮತ್ತು ನಿಷ್ಕಾಮ ದಾನಗಳ ಬಗ್ಗೆ ಉಲ್ಲೇಖ ಬಂದಿರುವುದನ್ನು ಕಾಣುತ್ತೇವೆ. ಆದರೆ ಈ ಸಹಜದಾನದ ಪರಿಕಲ್ಪನೆಯು ಶ್ರೀ ಸಿದ್ಧಾಂತ ಶಿಖಾಮಣಿಯ ವೈಶಿಷ್ಟ್ಯ ವಾಗಿದೆ.

ಹೀಗೆ ಸಹಜದಾನದ ಬಗ್ಗೆ ಉಪದೇಶ ಮಾಡಿದ ಪೂಜ್ಯರು ಇನ್ನೂ ಮುಂದೆ ಶಿವಪೂಜೆ ಮತ್ತು ಶಿವಯೋಗಿಯ ಆರಾಧನೆಯ ಮಹತ್ತ್ವವನ್ನು ತಿಳಿಯಪಡಿಸ ಲೋಸುಗ ಪುನಃ–

ದಾನಾತ್ ಸ್ವರ್ಣಸಹಸ್ರಸ್ಯ ಸತ್ಪಾತ್ರೇ ಯತ್ಫಲಂ ಭವೇತ್ ।
ಏಕಪುಷ್ಪಪ್ರದಾನೇನ ಶಿವೇ ತತ್ಫಲಮಿಷ್ಯತೇ ॥

ಶಿವ ಏವ ಪರಂ ಪಾತ್ರಂ ಸರ್ವವಿದ್ಯಾನಿಧಿರ್ಗುರುಃ ।
ತಸ್ಮೈದತ್ತಂ ತು ಯತ್ಕಿಂಚಿತ್ತದನಂತ ಫಲಂ ಭವೇತ್ ॥

ಶಿವಯೋಗೀ ಶಿವಃ ಸಾಕ್ಷಾಚ್ಛಿವಜ್ಞಾನಮಹೋದಧಿಃ ।
ಯತ್ಕಿಂಚಿದ್ದೀಯತೇ ತಸ್ಮೈ ತದ್ದಾನಂ ಪಾರಮಾರ್ಥಿಕಮ್ ॥

ಶಿವಯೋಗೀ ಮಹತ್ಪಾತ್ರಂ ಸರ್ವೇಷಾಂ ದಾನಕರ್ಮಣಿ ।
ತಸ್ಮಾನ್ನಾಸ್ತಿ ಪರಂ ಕಿಂಚಿತ್ಪಾತ್ರಂ ಶಾಸ್ತ್ರ ವಿಚಾರತಃ ॥
ಭಿಕ್ಷಾ ಮಾತ್ರ ಪ್ರದಾನೇನ ಶಾಂತಾಯ ಶಿವಯೋಗಿನೇ ।
ಯತ್ಫಲಂ ಲಭ್ಯತೇ ನೈತದ್ ಯಜ್ಞಕೋಟಿ ಶತೈರಪಿ ॥
ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ ।
ತತ್‌ತೃಪ್ತ್ಯಾತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಮ್ ॥
ತಸ್ಮಾತ್ಸರ್ವ ಪ್ರಯತ್ನೇನ ಯೇನಕೇನಾಪಿ ಕರ್ಮಣಾ ।
ತೃಪ್ತಿಂ ಕುರ್ಯಾತ್ ಸದಾಕಾಲಮನ್ನಾದ್ಯೈಃ ಶಿವಯೋಗಿನಃ ॥
ನಿರುಪಾಧಿಕಚಿದ್ರೂಪಪರಾನಂದಾತ್ಮವಸ್ತುನಿ ।
ಸಮಾಪ್ತಂ ಸಕಲಂ ಯಸ್ಯ ಸ ದಾನೀ ಶಂಕರಃ ಸ್ವಯಮ್ ॥

(ಸಿ. ಶಿ. ೯; ೮೭–೯೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸತ್ಪಾತ್ರನಾದವನಿಗೆ ಒಂದು ಸಾವಿರ ಬಂಗಾರದ ನಾಣ್ಯಗಳನ್ನು ದಾನ ಮಾಡಿದರೆ ಯಾವ ಫಲವು ಪ್ರಾಪ್ತ ವಾಗುವುದೋ ಅಂಥ ಪುಣ್ಯವು ಶಿವನಿಗೆ ಒಂದು ಪುಷ್ಪವನ್ನು ಸಮರ್ಪಿಸಿದ ಮಾತ್ರಕ್ಕೆ ಪ್ರಾಪ್ತವಾಗುವುದು. ಈ ಜಗತ್ತಿನಲ್ಲಿ ಸರ್ವ ವಿದ್ಯೆಗಳಿಗೆ ನಿಧಿಯು ಅಂತೆಯೇ ಸರ್ವರಿಗೆಲ್ಲ ಗುರುಸ್ಥಾನದಲ್ಲಿರುವ ಶಿವನೋರ್ವನೇ ಸರ್ವೋತ್ಕೃಷ್ಟನಾದ ಸುಪಾತ್ರನಾಗಿದ್ದಾನೆ. ಆದಕಾರಣ ಅವನಿಗೆ ಕೊಡಲ್ಪಟ್ಟ ದಾನವು ಅನಂತಫಲವನ್ನು ಕೊಡುವಂತಹದಾಗಿ ರುತ್ತದೆ. ಇನ್ನು ಶಿವಜ್ಞಾನ ಸಂಪನ್ನನಾದ ಶಿವಯೋಗಿಯೂ ಸಹ ಸಾಕ್ಷಾತ್ ಶಿವಸ್ವರೂಪನೇ ಆಗಿರೋಣದರಿಂದ ಆ ಶಿವಯೋಗಿಗೆ ಏನನ್ನೇ ದಾನರೂಪವಾಗಿ ಅರ್ಪಿಸಿದರೂ ಅದು ಅಪರಿಮಿತ ಫಲದಾಯಕವಾದ ಸಹಜ ದಾನವೇ ಆಗಿರುತ್ತದೆ. ದಾನವನ್ನು ತೆಗೆದು ಕೊಳ್ಳುವ ವಿಷಯದಲ್ಲಿ ಶಿವಯೋಗಿಯ ಹೊರತಾಗಿ ಬೇರಾರೂ ಸುಪಾತ್ರರಲ್ಲ. ಅವನೋರ್ವನೇ ಮಹಾಪಾತ್ರನು. ಈ ವಿಚಾರವು ಶಾಸ್ತ್ರಸಮ್ಮತ ವಾಗಿರುತ್ತದೆ. ಶಾಂತ ಸ್ವರೂಪನಾದ ಇಂಥ ಶಿವಯೋಗಿಗೆ ಒಂದು ತುತ್ತು ಭಿಕ್ಷಾನ್ನವನ್ನು ದಾನ ಮಾಡಿದಾಗ ಅದರಿಂದ ಬರುವ ಪುಣ್ಯವು ಒಂದು ನೂರು ಕೋಟಿ ಯಜ್ಞಗಳನ್ನು ಮಾಡಿದ ಪುಣ್ಯಕ್ಕಿಂತಲೂ ಮಿಗಿಲಾಗುವುದು.

ಶಿವಯೋಗಿಯು ಶಿವಸ್ವರೂಪನಾಗಿರೋಣದರಿಂದ ಇವನು ಸಂತೃಪ್ತನಾದರೆ ಸಾಕ್ಷಾತ್ ಶಿವನೇ ಸಂತೃಪ್ತನಾಗುವನು. ಶಿವನು ಸಂತೃಪ್ತನಾದಾಗ ಅವನಲ್ಲಡಗಿರುವ ಸಮಸ್ತ ಚರಾಚರ ಪ್ರಪಂಚವೆಲ್ಲವೂ ತೃಪ್ತವಾಗುವದು. ಹೀಗೆ ಶಿವಯೋಗಿಯ ಸಂತೃಪ್ತಿಯು ಶಿವನ ಸಂತೃಪ್ತಿಗೆ ಕಾರಣವಾಗಿರೋಣದರಿಂದ ಓರ್ವ ಶಿವಯೋಗಿಯನ್ನು ಸಂತೃಪ್ತಿ ಪಡಿಸಿದ ಪುಣ್ಯಕ್ಕೆ ಒಂದು ನೂರು ಕೋಟಿ ಯಾಗಗಳ ಪುಣ್ಯವು ಸರಿಸಾಟಿ ಯಾಗಲಾರ ದೆಂಬ ಆಚಾರ್ಯರ ಉಪದೇಶದಲ್ಲಿ ಅತಿಮಹತ್ವಪೂರ್ಣವಾದ ರಹಸ್ಯವು ಅಡಕವಾಗಿ ರುತ್ತದೆ. ಆದ್ದರಿಂದ ಪ್ರತಿಯೊಬ್ಬರೂ ಏನೆಲ್ಲ ಪ್ರಯತ್ನವನ್ನು ಮಾಡಿ ಶಿವಯೋಗಿಗೆ ಅನ್ನಾದಿಗಳನ್ನು ಸಮರ್ಪಿಸಿ ತೃಪ್ತಿಪಡಿಸಬೇಕು. ಹೀಗೆ ಶಿವ ಹಾಗೂ

ಶಿವಯೋಗಿಗಳನ್ನು ಸಂತೃಪ್ತಿಪಡಿಸುವುದು ಸಹಜದಾನವಾದ್ದರಿಂದ ಗುರು–ಲಿಂಗ–ಜಂಗಮ ಸ್ವರೂಪನಾದ ಶಿವನಿಗೆ ತನ್ನ ತನು–ಮನ–ಧನಾದಿಗಳನ್ನು ಸಮರ್ಪಿಸಿದ್ದೇ ಆದರೆ ಅದುವೇ ಸರ್ವೋತ್ಕೃಷ್ಟವಾದ ಸಹಜದಾನವಾಗುವುದು. ಇಂಥ ಸಹಜ ದಾನಿಯು ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆ.

ಈ ವಿಧವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ದಾನಕ್ಕೆ ಸುಪಾತ್ರರಾದ ಶಿವ ಹಾಗೂ ಶಿವಯೋಗಿಗಳಿಗೆ ದಾನ ಮಾಡಿದ ಫಲಶ್ರುತಿಯನ್ನು ಪ್ರತಿಪಾದಿಸಿದ ನಂತರ ಈ ಭಕ್ತಸ್ಥಲದ ಸಹಜದಾನಿಯು ಮುಂದಿನದಾದ ಮಾಹೇಶ್ವರಸ್ಥಲವನ್ನು ಹೇಗೆ ಪ್ರವೇಶಿಸುತ್ತಾನೆ ಎಂಬ ವಿಷಯವನ್ನು–

ಉಕ್ತಾಖಿಲಾಚಾರಪರಾಯಣೋಽಸೌ
ಸದಾವಿತನ್ವನ್ ಸಹಜಂತು ದಾನಮ್ ।
ಬ್ರಹ್ಮಾದಿಸಂಪತ್ಸು ವಿರಕ್ತಚಿತ್ತೋ
ಭಕ್ತೋ ಹಿ ಮಾಹೇಶ್ವರತಾಮುಪೈತಿ ॥

(ಸಿ. ಶಿ. ೯ ; ೯೫)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಭಕ್ತಸ್ಥಲದಲ್ಲಿ ಇಲ್ಲಿಯವರೆಗೆ ಉಪದೇಶಮಾಡಿದ ಪಿಂಡಸ್ಥಲವನ್ನೇ ಮೊದಲು ಮಾಡಿಕೊಂಡು ಸಹಜದಾನಸ್ಥಲ ದವರೆಗಿನ ಎಲ್ಲ ಸ್ಥಲಗಳ ಆಚರಣೆಯನ್ನು ಆಚರಿಸುತ್ತ ಸದಾಕಾಲದಲ್ಲಿ ಸಹಜದಾನ ಮಾಡುವುದರಲ್ಲಿ ಅಭಿರುಚಿಯುಳ್ಳವನಾಗಿ ಬ್ರಹ್ಮ ವಿಷ್ಣು ಮೊದಲಾದ ಪದವಿಗಳಲ್ಲಿ ನಿರಾಸಕ್ತನಾದ ಅಂತೆಯೇ ವಿರಕ್ತಿ ಭಾವವನ್ನೊಳಗೊಂಡ ಭಕ್ತನೇ ಮುಂದೆ ಮಾಹೇಶ್ವರ ಸ್ಥಿತಿಯನ್ನು ಹೊಂದುವವನು ಎಂದು ಅಪ್ಪಣೆಕೊಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೨ ಸಪ್ಟೆಂಬರ, ೧೯೯೦
(ಸ್ಥಾ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಮಂಟಪ,
ದೊಡ್ಡಪೇಟೆ ಬಸವೇಶ್ವರ ದೇವಸ್ಥಾನ, ರಾಣೇಬೆನ್ನೂರು)

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ
ನವಮ ಪರಿಚ್ಛೇದವು ಪೂರ್ಣವಾದುದು.



# ದಶಮ ಪರಿಚ್ಛೇದ

ಆಶೀರ್ವಚನ-೧

## ಮಾಹೇಶ್ವರಸ್ಥಲ

ಸಮಸ್ತ ಸದ್ಭಕ್ತರೇ ಹಾಗೂ ತಾಯಂದಿರೇ !

ಇಂದು ಶ್ರಾವಣಮಾಸದ ಮೊದಲನೇ ಸೋಮವಾರ. ಶ್ರವಣ ಮಾಡುವುದಕ್ಕಾಗಿಯೇ ಮೀಸಲಾಗಿರುವ ಮಾಸವೆಂದರೆ, ಶ್ರಾವಣಮಾಸ, ಮನುಷ್ಯನು ಯಾವಾಗಲೂ ತನ್ನ ಕಿವಿಗಳಿಂದ ಮಂಗಳಮಯ ಶಬ್ದಗಳನ್ನೇ ಕೇಳುತ್ತಿರಬೇಕು ಅಂತೆಯೇ ಉಪನಿಷತ್ತು– ''ಭದ್ರಂ ಕರ್ಣೇಭಿಃ ಶೃಣುಯಾಮದೇವಾಃ'' ಎಂಬುದಾಗಿ ಉಪದೇಶಿಸಿದೆ. ಜೀವನ ಇರುವವರೆಗೆ ಕಿವಿಗಳಿಂದ ಮಂಗಲಮಯ ಶಬ್ದಗಳನ್ನೇ ಕೇಳಬೇಕು. ಕಣ್ಣುಗಳಿಂದ ಮಂಗಲಮಯ ರೂಪುಗಳನ್ನೇ ನೋಡಬೇಕು. ಈ ರೀತಿಯಾಗಿ ತನ್ನ ಇಂದ್ರಿಯಗಳನ್ನು ಯಾವನು ಸದುಪಯೋಗಪಡಿಸಿಕೊಳ್ಳುವನೋ ಅವನು ಶತಾಯುಷಿಯಾಗುವನು. ''ಶತಾಯುರ್ವೈ ಪುರುಷಃ'' ಎಂಬ ಶಾಸ್ತ್ರೋಕ್ತಿಗನುಸಾರವಾಗಿ ಕಲಿಯುಗದಲ್ಲಿ ಮನುಷ್ಯನ ಆಯುಃಪ್ರಮಾಣವು ಶತವರ್ಷವೆಂಬುದಾಗಿ ಹೇಳಲ್ಪಟ್ಟಿದ್ದರೂ ಎಲ್ಲರೂ ಶತಾಯುಷಿಗಳಾಗುವುದಿಲ್ಲ. ಆಚಾರ–ವಿಚಾರ ನಿಯಮ ಸಂಪನ್ನರಾದ ಕೆಲವೇ ಜನರು ಶತಾಯುಷಿಗಳಾಗಿ ಬಾಳುತ್ತಾರೆ. ಆಯುಷ್ಯದುದ್ದಕ್ಕೂ ನಾವು ನಿರೋಗಿಯಾಗಬೇಕಿದ್ದರೆ ನಮ್ಮ ಮನ ಬುದ್ಧಿಗಳನ್ನು ಶುದ್ಧವಾಗಿಟ್ಟುಕೊಳ್ಳಬೇಕು. ಬುದ್ಧಿಯು ಸದಾ ಶುದ್ಧವಾಗಿರಬೇಕೆಂದರೆ, ನಿರಂತರವಾಗಿ ಸತ್ಸಂಗದಲ್ಲಿ ಪಾಲುಗೊಂಡು ಸದ್ಗುರುವಿನ ಉಪದೇಶಾಮೃತವನ್ನು ಕೇಳುತ್ತಲಿರಬೇಕು. ಸತ್ಸಂಗದಲ್ಲಿ ಪಾಲುಗೊಳ್ಳುವ ಭಾಗ್ಯವು ಸರ್ವರಿಗೂ ಲಭ್ಯವಾಗಲಾರದು. ತಮ್ಮ ತಮ್ಮ ವ್ಯಾಪಾರ ಉದ್ಯೋಗಗಳಲ್ಲಿ ಅತ್ಯಂತ ವ್ಯಸ್ತರಾಗಿರುವ ಬಹಳಷ್ಟು ಜನರಿಗೆ ಸತ್ಸಂಗಕ್ಕಾಗಿ ಸಮಯವೇ ದೊರೆಯುವುದಿಲ್ಲ. ಒಂದು ವೇಳೆ ಸದ್ಗುರುಗಳ ಉಪದೇಶಾಮೃತವನ್ನು ಕೇಳದೇ ಹೋದರೆ ಅಂಥವರಿಗೆ ಈ ಸಂಸಾರದಿಂದ ಮುಕ್ತಿಯು ಎಂದಿಗೂ ದೊರೆಯಲಾರದು. ಅಂತೆಯೇ ನಾಗಪೂರ ನಗರದ ವೀರಶೈವ ಸಮಾಜದವರು ಶ್ರಾವಣಮಾಸದ ನಿಮಿತ್ತವಾಗಿ ಪ್ರಾತಃಕಾಲ ಇಷ್ಟಲಿಂಗ ಮಹಾ ಪೂಜೆ ಹಾಗೂ ಸಾಯಂಕಾಲ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನದ ಕಾರ್ಯಕ್ರಮವನ್ನು ಆಯೋಜಿಸಿದ್ದಾರೆ.

ಶ್ರೀ ಸಿದ್ಧಾಂತ ಶಿಖಾಮಣಿಯು ಭಾರತೀಯ ದಾರ್ಶನಿಕ ಕ್ಷೇತ್ರದಲ್ಲಿ ಒಂದು ಉದ್ಗ್ರಂಥವಾಗಿ ಪರಿಗಣಿಸಲ್ಪಟ್ಟಿದೆ. ಜಗತ್ತಿನ ಎಲ್ಲ ಸಿದ್ಧಾಂತಗಳಿಗೆ ಇದು ಶಿಖಾಮಣಿಯೋಪಾಧಿಯಲ್ಲಿ ಇದೆ. ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿರುವ ತತ್ತ್ವ ಸಿದ್ಧಾಂತವು ಖಂಡನ ಮಂಡನಾತ್ಮಕವಾಗಿ ಇರದೇ ಸಮನ್ವಯಾತ್ಮಕವಾಗಿದೆ. ದ್ವೈತ, ದ್ವೈತಾದ್ವೈತ

ಗಳ ಸಮನ್ವಯ ಸ್ವರೂಪವನ್ನು ಇಲ್ಲಿ ಕಾಣಬಹುದು. ಸಾಧಕನಾದ ಜೀವಾತ್ಮನಿಗೆ ಪ್ರಾರಂಭಿಕಾವಸ್ಥೆಯಲ್ಲಿ ಭೇದಬುದ್ಧಿ ಅರ್ಥಾತ್ ದ್ವೈತಭಾವನೆ ಇರುತ್ತದೆ. 'ಈಶ್ವರನು ದೊಡ್ಡವನಿದ್ದಾನೆ, ನಾನು ಸಣ್ಣವನಿದ್ದೇನೆ. ಅವನು ಪೂಜ್ಯನಾಗಿದ್ದಾನೆ. ನಾನು ಪೂಜಕ ನಾಗಿದ್ದೇನೆ' ಎಂಬ ಭೇದಭಾವನೆ ಪ್ರಾಥಮಿಕಾವಸ್ಥೆಯಲ್ಲಿ ಎಲ್ಲರಿಗೂ ಇದ್ದೇ ಇರುತ್ತದೆ. ಭೇದವೇ ಇರದೇ ಹೋಗಿದ್ದರೆ ಅಭೇದವನ್ನು ಸಾಧಿಸುವ ಗೊಡವೆಯಾದರೂ ಏಕೆ ಇರುತ್ತಿತ್ತು? ಅಂತೆಯೇ ಮೊದ ಮೊದಲು ಭಕ್ತ ಮತ್ತು ಭಗವಂತನಲ್ಲಿ ಭೇದಭಾವನೆ ಇದ್ದು ನಂತರ ಸಾವಕಾಶವಾಗಿ ಉಪಾಸನೆಯ ಮಹಿಮೆಯಿಂದ ಭೇದಾಭೇದ ಭಾವನೆಯು ತೋರಿ ಕೊನೆಗೆ ಅಭೇದ ಸ್ಥಿತಿಯೇ ಉಳಿಯುತ್ತದೆ. ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಈ ಸಮನ್ವಯ ಸಿದ್ಧಾಂತವನ್ನು ಉಪದೇಶ ಮಾಡಿದ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದಲ್ಲಿ ಮುಖ್ಯವಾಗಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂಬುದಾಗಿ ಸಾಧಕನ ಆರು ಅವಸ್ಥೆಗಳು ಸೂಕ್ಷ್ಮಾತಿ ಸೂಕ್ಷ್ಮವಾಗಿ ಪ್ರತಿಪಾದಿಸಲ್ಪಟ್ಟಿವೆ. ಈ ಆರು ಅವಸ್ಥೆಗಳಲ್ಲಿ ನಾವು ಸದ್ಯಃ ಮಾಹೇಶ್ವರ ಸ್ಥಲ ವನ್ನು ಕುರಿತು ನಿಮ್ಮೆಲ್ಲರಿಗೆ ತಿಳಿಯಪಡಿಸುತ್ತೇವೆ.

''ಶೈವೀ ಭಕ್ತಿಃ ಸಮುತ್ಪನ್ನಾ ಯಸ್ಯಾಸೌ ಭಕ್ತ ಉಚ್ಯತೆ'' (೫–೨೬) ಎಂಬ ಶ್ರೀ ಸಿದ್ಧಾಂತ ಶಿಖಾಮಣಿಯ ಉಕ್ತಿಗನುಸಾರವಾಗಿ ಶಿವನಲ್ಲಿ ಯಾರು ಶ್ರದ್ಧೆಯಿಂದ ವರ್ತಿಸುತ್ತಾರೋ, ಅವರು ಭಕ್ತರೆಂಬುದಾಗಿ ಕರೆಯಲ್ಪಡುತ್ತಾರೆ. ವೀರಶೈವ ಸಿದ್ಧಾಂತ ದಲ್ಲಿ ಭಕ್ತಿಯನ್ನು ಆರು ಪ್ರಕಾರವಾಗಿ ಅಂಗೀಕರಿಸಿದ್ದಾರೆ. ಅದರಲ್ಲಿ ಮೊದಲನೆಯ ಭಕ್ತಿಯೇ ಶ್ರದ್ಧಾಭಕ್ತಿಯು. ಯಾರನ್ನು ನಾವು ಪೂಜಿಸುತ್ತೇವೆಯೋ ಅವರ ಬಗ್ಗೆ ನಮ್ಮಲ್ಲಿ ಶ್ರದ್ಧೆಯು ಅವಶ್ಯವಾಗಿ ಇರಬೇಕು. ಶ್ರದ್ಧಾವಿಹೀನವಾದ ಪೂಜೆಯು ನಿಷ್ಫಲವಾಗುತ್ತದೆ. ಅಂತೆಯೇ ಮೊದಲನೆಯ ಭಕ್ತಿಯೇ ಶ್ರದ್ಧಾ ಭಕ್ತಿಯು, ಈ ಭಕ್ತಿಸಂಪನ್ನನಾದ ಸಾಧಕನೇ ಭಕ್ತನೆಂದು ಕರೆಯಿಸಿಕೊಳ್ಳುತ್ತಾನೆ. ''ಪೂಜ್ಯೇಷು ಅನುರಾಗೋ ಭಕ್ತಿಃ'' ಎಂಬ ಉಕ್ತಿಗನು ಸುರವಾಗಿ ನಮಗಿಂತಲೂ ದೊಡ್ಡವರಾದ ತಂದೆ–ತಾಯಿಗಳ ಮೇಲೆ, ಗುರುಗಳ ಮೇಲೆ ಅಥವಾ ಇಷ್ಟದೇವರ ಮೇಲೆ ಮಾಡುವ ಪ್ರೇಮವೇ ಭಕ್ತಿಯು. ಹೀಗೆ ಭಕ್ತಿ ಸಂಪನ್ನ ನಾದ ಈ ಭಕ್ತನು ಭಕ್ತಸ್ಥಲವನ್ನು ದಾಟಿ ಮಾಹೇಶ್ವರಸ್ಥಲವನ್ನು ಹೇಗೆ ಪ್ರವೇಶಿಸುತ್ತಾನೆ ಎಂಬುದಾಗಿ ಶ್ರೀ ಅಗಸ್ತ್ಯ ಮಹರ್ಷಿಯು

ಭಕ್ತಸ್ಥಲಂ ಸಮಾಖ್ಯಾತಂ ಭವತಾ ಗಣನಾಯಕ ।
ಕೇನ ವಾ ಧರ್ಮಭೇದೇನ ಭಕ್ತೋ ಮಾಹೇಶ್ವರೋಭವೇತ್ ॥

(ಸಿ. ಶಿ. ೧೦–೧)

ಎಂಬುದಾಗಿ ಶ್ರೀ ರೇಣುಕ ಭಗವತ್ಪಾದರಿಗೆ ಪ್ರಶ್ನಿಸುತ್ತಾನೆ. ಯಾವ ಆಚಾರದ ಭೇದ ದಿಂದ ಭಕ್ತನು ಮಾಹೇಶ್ವರನಾಗಬಲ್ಲನು? ಒಂದು ವಸ್ತುವು ತನ್ನ ಮೊದಲಿನ ನಾಮವನ್ನು ಬಿಟ್ಟು ಬೇರೊಂದು ನಾಮವನ್ನು ಪಡೆಯಬೇಕಾದರೆ ಅದರ ಸ್ವರೂಪದಲ್ಲಿ ಪರಿವರ್ತನೆ ಯಾಗಲೇಬೇಕು. ನೀರನ್ನು ಒಲೆಯ ಮೇಲಿಟ್ಟು ಕಾಯಿಸುತ್ತ ಹೋದಂತೆ ಯಾವಾಗ ಆ

ನೀರು ಒಂದುನೂರು ಡಿಗ್ರಿಯವರೆಗೆ ತಾಪಮಾನವನ್ನು ಹೊಂದುತ್ತದೆಯೋ ಆವಾಗ ಅದು ತನ್ನ ಜಲಸ್ವರೂಪವನ್ನು ತ್ಯಜಿಸಿ ಬಾಷ್ಪರೂಪವನ್ನು ತಾಳಿ ಊರ್ಧ್ವಗಾಮಿಯಾಗುತ್ತದೆ. ಹೇಗೆ ನೀರು ಅಗ್ನಿಯಸ್ಪರ್ಶ ಅಥವಾ ಸಂಬಂಧದಿಂದ ಬಾಷ್ಪರೂಪವನ್ನು ತಾಳುತ್ತದೆಯೋ ಅದರಂತೆ ಭಕ್ತಸ್ಥಲದಲ್ಲಿಯ ಸಾಧಕನು ಆ ಸ್ಥಲದಲ್ಲಿ ಉಪದೇಶಿಸಲ್ಪಟ್ಟ ಹದಿನೈದು ಅವಾಂತರ ಸ್ಥಲಗಳಲ್ಲಿಯ ಆಚರಣೆಗಳನ್ನು ಆಚರಿಸುತ್ತ ಆಚರಿಸುತ್ತ ಕೊನೆಯದಾದ ಸಹಜ ದಾನ ಸ್ಥಿತಿಯನ್ನು ತಲುಪಿದಾಗ ಅವನು ಭಕ್ತಸ್ಥಲವನ್ನು ದಾಟಿ ಮಾಹೇಶ್ವರ ಸ್ಥಲವನ್ನು ಪ್ರವೇಶಿಸುತ್ತಾನೆ. ಅಂತೆಯೇ ಶ್ರೀ ರೇಣುಕ ಭಗವತ್ಪಾದರು–

''ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।
ಬ್ರಹ್ಮಾದಿ ಸ್ಥಾನ ವಿಮುಖೋ । ಭಕ್ತೋ ಮಾಹೇಶ್ವರಃಸ್ಮೃತಃ''

(ಸಿ. ಶಿ ೧೦–೨)

ಎಂಬುದಾಗಿ ಉಪದೇಶಿಸಿದ್ದಾರೆ. ಭಕ್ತಸ್ಥಲದಲ್ಲಿಯ ಸಾಧಕನು ಅಲ್ಲಿಯ ಆಚರಣೆಗಳನ್ನು ಆಚರಿಸುತ್ತ ಸದಾ ಭಕ್ತನಾಗಿಯೇ ಇರುವುದಿಲ್ಲ. ಆದರೆ ಈ ಭಕ್ತಾವಸ್ಥೆಯು ಪರಿಪಕ್ವಗೊಂಡು ಮಾಹೇಶ್ವರ ಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ.

ಮೊದಲನೇ ವರ್ಗದ ವಿದ್ಯಾರ್ಥಿಯು ಗುರುಸಾನ್ನಿಧ್ಯದಲ್ಲಿ ವರ್ಷಪರ್ಯಂತರವಾಗಿ ಅಭ್ಯಾಸಮಾಡುತ್ತ ವರ್ಷಾಂತ್ಯದಲ್ಲಿ ಪರೀಕ್ಷೆಗೆ ಕೂಡ್ರುತ್ತಾನೆ. ಆ ಪರೀಕ್ಷೆಯಲ್ಲಿ ಅವನು ಸರಿಯಾಗಿ ಬರೆದರೆ ಮಾತ್ರ ಉತ್ತೀರ್ಣನಾಗಿ ಮುಂದಿನ ತರಗತಿಗೆ ಹೋಗಬಲ್ಲನು. ಒಂದು ವೇಳೆ ಪರೀಕ್ಷೆಯಲ್ಲಿ ಸರಿಯಾಗಿ ಬರೆಯದಿದ್ದರೆ ಅವನು ಮತ್ತೆ ಅದೇ ವರ್ಗದಲ್ಲಿಯೇ ಉಳಿಯುವಂತೆ, ಭಕ್ತಸ್ಥಲದಲ್ಲಿಯ ಎಲ್ಲ ಸಾಧಕರೂ ಮಾಹೇಶ್ವರ ಸ್ಥಲವನ್ನು ತಲುಪಿಯೇತೀರುವರೆಂದು ಹೇಳಲಾಗುವುದಿಲ್ಲ, ಆದರೆ ಕೆಲವೊಬ್ಬರು ಮಾತ್ರ ಮುಂದಿನ ಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುತ್ತಾರೆ. ಅಂದರೆ ಮಾಹೇಶ್ವರ ಸ್ಥಿತಿಯನ್ನು ಪಡೆಯುತ್ತಾನೆ. ಮಾಹೇಶ್ವರ ಸ್ಥಿತಿಯನ್ನು ಪಡೆದುಕೊಳ್ಳಲು ಭಕ್ತನಾದವನು ಸಹಜ ದಾನದಲ್ಲಿ ನಿಷ್ಣಾತನಾಗಬೇಕಾಗುವುದು.

ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಕಾರ ದಾನವು ಸೋಪಾಧಿ, ನಿರುಪಾಧಿ ಮತ್ತು ಸಹಜವೆಂಬುದಾಗಿ ಮೂರು ಪ್ರಕಾರವಾಗಿರುತ್ತದೆ. ಫಲಾಪೇಕ್ಷೆಯಿಂದ ಮಾಡುವ ದಾನವು ಸೋಪಾಧಿಕ ದಾನವು. ಫಲಾಪೇಕ್ಷೆಯಿಲ್ಲದೆ, ನಿಷ್ಕಾಮಭಾವನೆಯಿಂದ ಮಾಡುವ ದಾನವು ನಿರುಪಾಧಿಕದಾನವು. ಇನ್ನು ಫಲಾಫಲಗಳ ವಿಚಾರವನ್ನು ಮಾಡದೆ, ಕೊಡುವ ಹಾಗೂ ತೆಗೆದುಕೊಳ್ಳುವ ವ್ಯಕ್ತಿಗಳಲ್ಲಿಯ ಭೇದಭಾವವನ್ನು ಮರೆತು ಸಹಜ ಭಾವನೆಯಿಂದ ಮಾಡುವ ದಾನವೇ ಸಹಜದಾನವು. ಅಂದರೆ ಓರ್ವ ವ್ಯಕ್ತಿಯು ತನ್ನ ಬಲಗೈಯಲ್ಲಿಯ ವಸ್ತುವನ್ನು ಎಡಗೈಯಲ್ಲಿ ಇಟ್ಟಾಗ ಅಥವಾ ಎಡಗೈಯಲ್ಲಿ ಹಿಡಿದ ವಸ್ತುವನ್ನು ಬಲಗೈಯಲ್ಲಿ ಇಟ್ಟಾಗ ಆ ಎರಡೂ ಕೈಗಳು ತನ್ನವುಗಳೇಯಾದ್ದರಿಂದ ಕೊಟ್ಟೆ–ತೆಗೆದುಕೊಂಡನೆಂಬ ಭಾವವು ಆ ವ್ಯಕ್ತಿಯಲ್ಲಿ ಹೇಗೆ ಬರುವುದಿಲ್ಲವೋ ಅದರಂತೆ ಸರ್ವರಲ್ಲಿ ತನ್ನ ಆತ್ಮವನ್ನೇ ಕಾಣುವ ದೃಷ್ಟಿಯುಳ್ಳ ಸಾಧಕನು ಯಾರಿಗೆ ಏನನ್ನೇ ಕೊಟ್ಟರೂ ನಾನು ಮತ್ತೊಬ್ಬರಿಗೆ ಕೊಟ್ಟೆನೆಂಬ ಭಾವವು ಅವನಲ್ಲಿ ಉದಯ

ವಾಗುವುದಿಲ್ಲ. ಇಂತಹ ಸಹಜಸ್ಥಿತಿಯನ್ನು ಭಕ್ತನು ಯಾವಾಗ ಹೊಂದುತ್ತಾನೆಯೋ ಆಗಲೇ ಅವನು ಮಾಹೇಶ್ವರನೆಂದು ಕರೆಯಿಸಿಕೊಳ್ಳುತ್ತಾನೆ.

ಭಕ್ತಿಯು ಫಲದ್ರೂಪವಾಗಬೇಕಾದರೆ ಒಂದೇ ಇಷ್ಟದೇವರಲ್ಲಿ ಅದನ್ನು ಸ್ಥಿರಗೊಳಿಸಬೇಕು. ಭೂಮಿಯಲ್ಲಿಯ ನೀರನ್ನು ತೆಗೆಯಬೇಕಾದರೆ ಹೇಗೆ ಒಂದೇ ಸ್ಥಾನದಲ್ಲಿ ನೂರಾರು ಫೂಟುಗಳವರೆಗೆ ಅಗೆಯುತ್ತ ಹೋಗಬೇಕೋ– ಹಾಗೆ ಒಂದೇ ದೇವರಲ್ಲಿ ಅನಂತ ದಿನಗಳವರೆಗೆ ಭಕ್ತಿಯನ್ನು ಮಾಡಬೇಕು. ವೀರಶೈವರ ಇಷ್ಟದೇವರೆಂದರೆ ಇಷ್ಟಲಿಂಗವೇ. ಗುರುಗಳಿಂದ ದೀಕ್ಷಾಪೂರ್ವಕವಾಗಿ ಆ ಇಷ್ಟಲಿಂಗವನ್ನು ಪಡೆದು ಅದರಲ್ಲಿಯೇ ನಿಷ್ಠೆಯುಳ್ಳವನಾಗಿ ಅನನ್ಯಭಾವನೆಯಿಂದ ಪೂಜಿಸುತ್ತ ಹೋದರೆ ಆ ಭಕ್ತಿಯೇ ಉತ್ಕರ್ಷವನ್ನು ಹೊಂದಿ ಭಕ್ತನನ್ನು ಮಾಹೇಶ್ವರಸ್ಥಲಕ್ಕೆ ತಲುಪಿಸುತ್ತದೆ. ಅಂತೆಯೇ ರೇಣುಕ ಭಗವತ್ಪಾದರು–

'ಭಕ್ತೇರ್ಯದಾ ಸಮುತ್ಕರ್ಷೋ ಭವೇದ್ ವೈರಾಗ್ಯಗೌರವಾತ್ ।
ತದಾ ಮಾಹೇಶ್ವರಃ ಪ್ರೋಕ್ತೋ ಭಕ್ತಃ ಸ್ಥಿರವಿವೇಕವಾನ್ ॥

(ಸಿ. ಶಿ. ೧೦–೩)

ಎಂಬುದಾಗಿ ಉಪದೇಶಿಸಿದ್ದಾರೆ. ಭಕ್ತನಲ್ಲಿಯ ಭಕ್ತಿಯು ಅವನಲ್ಲಿಯ ವೈರಾಗ್ಯಾದಿ ಉತ್ಕೃಷ್ಟ ಗುಣಗಳಿಂದ ಯಾವಾಗ ಉತ್ಕರ್ಷವನ್ನು ಪಡೆಯುತ್ತದೆಯೋ ಆವಾಗ ಅವನಲ್ಲಿಯ ಶ್ರದ್ಧಾಭಕ್ತಿಯೇ ನಿಷ್ಠಾಭಕ್ತಿಯಾಗಿ ಪರಿವರ್ತನೆಗೊಳ್ಳುತ್ತದೆ. 'ನಿಶ್ಚಯೇನ ತಿಷ್ಠತಿ ಇತಿ ನಿಷ್ಠಾ' ಅಂದರೆ ನಿರಂತರವಾಗಿ ಒಂದೇ ಇಷ್ಟದೇವರಲ್ಲಿ ಮಾಡುವ ಭಕ್ತಿಯೇ ನಿಷ್ಠಾ ಭಕ್ತಿಯು. ತೈಲಧಾರೆಯು ಅಖಂಡವಾಗಿ ಒಂದೇ ಸ್ಥಾನದ ಮೇಲೆ ಬೀಳುತ್ತಿರುವಂತೆ, ತನ್ನ ಇಷ್ಟಲಿಂಗದಲ್ಲಿ ಅಖಂಡವಾದ ಮನೋವೃತ್ತಿಯನ್ನು ಇಡುವುದೇ ನಿಷ್ಠಾಭಕ್ತಿಯು.

ವಿದ್ಯುತ್ ಸಂಚಯ ಕೇಂದ್ರ, ಅರ್ಥಾತ್ ಪಾವರ್‌ಹೌಸ್‌ದಿಂದ ಅಖಂಡವಾದ ಸಂಬಂಧವು ನಮ್ಮ ಮನೆಯೊಳಗಣ ಬಲ್ಬು, ಪಂಖಾ, ಟಿ. ವಿ., ರೇಡಿಯೋ, ಮೈಕ್ರೋಫೋನ್, ಫ್ರಿಜ್, ಗ್ರೈಂಡರ್, ಕೂಲರ್ ಇತ್ಯಾದಿ ವಿದ್ಯುದುಪಕರಣಗಳೊಂದಿಗೆ ಇದ್ದಾಗ ನಾವು ಅವುಗಳಿಂದ ಬೆಳಕು, ಗಾಳಿ, ಶಬ್ದ, ಚಿತ್ರ ಮುಂತಾದವುಗಳನ್ನು ಪಡೆದು ಆನಂದಿಸುತ್ತೇವೆ. ಒಂದು ವೇಳೆ ವಿದ್ಯುತ್‌ಕೇಂದ್ರದ ಸಂಬಂಧವು ಮಧ್ಯದಲ್ಲಿ ನಿಂತು ಹೋದರೆ ನಮ್ಮ ಯಂತ್ರಗಳೆಲ್ಲ ನಿಷ್ಕ್ರಿಯಗಳಾಗಿ ಅಂಧಃಕಾರದಲ್ಲಿ ಕಷ್ಟಮಯವಾಗಿ ಕಾಲ ಕಳೆಯಬೇಕಾಗುತ್ತದೆ. ಅದರಂತೆ ಪರಶಿವನು ಸತ್–ಚಿತ್–ಆನಂದರೂಪನೂ, ಶಾಂತ ಸ್ವರೂಪನೂ ಆಗಿರುವುದರಿಂದ ಅಖಂಡವಾದ ಭಕ್ತಿಯಿಂದ ಯಾರು ಆತನ ಜೊತೆಗೆ ಸಂಬಂಧವನ್ನು ಮಾಡುತ್ತಾರೆಯೋ, ಅವರು ತಮ್ಮ ನಿತ್ಯ ಜೀವನದಲ್ಲಿ ಆನಂದವನ್ನು ಹಾಗೂ ಶಾಂತಿಯನ್ನು ಪಡೆಯುತ್ತಾರೆ. ಯಾವಾಗ ಆ ಪರಶಿವನ ಸಂಬಂಧವು ಭಗ್ನವಾಗುತ್ತದೆಯೋ ಆಗ ಅವರು ತಮ್ಮ ಜೀವನದಲ್ಲಿ ದುಃಖವನ್ನು , ಅಶಾಂತಿಯನ್ನು ಅನುಭವಿಸುತ್ತಾರೆ.

ಸುಷುಪ್ತಿ ಅಥವಾ ಗಾಢನಿದ್ರಾ ಅವಸ್ಥೆಯಲ್ಲಿ ಪ್ರತಿಯೊಬ್ಬ ಜೀವಾತ್ಮನು ಪರಮಾತ್ಮನ ಜೊತೆಗೆ ಸಮರಸವಾಗೋಣದರಿಂದ ಪ್ರತಿಯೊಬ್ಬರಿಗೂ ಆ ಅವಸ್ಥೆಯಲ್ಲಿ ಆನಂದಾನುಭೂತಿಯೇ ಆಗುತ್ತದೆ. ಅಂತೆಯೇ ಶಂಕರಾಚಾರ್ಯರು– ''ಸುಷುಪ್ತ್ಯೈಕ ಸಿದ್ಧಃ ಶಿವಃ ಕೇವಲೋಽಹಂ'' ಎಂಬುದಾಗಿ ಉಪದೇಶಿಸಿದ್ದಾರೆ. ಅಂದರೆ ಸುಷುಪ್ತಾವಸ್ಥೆಯಲ್ಲಿ ಪ್ರತಿಯೊಬ್ಬ ಜೀವಾತ್ಮನು ಶಿವನೊಂದಿಗೆ ಸಮರಸನಾಗಿ ಆನಂದಾನುಭೂತಿಯನ್ನು ಪಡೆಯುತ್ತಾನೆ. ಈ ಅವಸ್ಥೆಯಲ್ಲಿ ಸುಖಸಾಧನೀಭೂತಗಳಾದ ಬೇರಾವ ಉಪಾಧಿಗಳೂ ಇರುವುದಿಲ್ಲ. ಆದರೂ ಪ್ರತಿಯೊಬ್ಬರೂ ಆನಂದವನ್ನು ಅನುಭವಿಸುತ್ತಾರೆ. ಇದರಿಂದ ಅಲ್ಲಿ ಅನುಭವಿಸುವ ಆನಂದವು ವೈಷಯಿಕ ಆನಂದವಾಗಿರದೆ ಆತ್ಮಾನಂದವೇ ಆಗಿರುತ್ತದೆ. ಇಂತಹ ಆತ್ಮಾನುಭೂತಿ ಹಾಗೂ ಆತ್ಮಾನಂದವನ್ನು ಪಡೆಯಲಿಕ್ಕೆ ಇಷ್ಟಲಿಂಗೋಪಾಸನೆಯು ಪ್ರಾಥಮಿಕ ಹೆಜ್ಜೆಯಾಗಿರುತ್ತದೆ. ಸಾಧಕರು ಕ್ರಮವಾಗಿ ತಮ್ಮ ತಮ್ಮ ಇಷ್ಟಲಿಂಗದಲ್ಲಿ ನಿಷ್ಠಾಭಕ್ತಿ ಸಂಪನ್ನರಾದಾಗ ಮಾಹೇಶ್ವರರೆಂಬುದಾಗಿ ಕರೆಯಲ್ಪಡುತ್ತಾರೆ. ಮಾಹೇಶ್ವರ ಸ್ಥಲದಲ್ಲಿಯ ಭಕ್ತಿಯೇ ನಿಷ್ಠಾಭಕ್ತಿಯು.

ಸ್ವಾತೀ ನಕ್ಷತ್ರದಲ್ಲಿಯ ಎಲ್ಲಾ ಮಳೆಹನಿಗಳು ಮುತ್ತಾಗಲಾರವು. ಆದರೆ ಸಮುದ್ರದೊಳಗಿನ ಸಿಂಪೆಯೊಳಗೆ ಬಿದ್ದ ಸ್ವಾತೀಮಳೆ ಹನಿಗಳು ಮಾತ್ರ ಮುತ್ತಾಗಬಲ್ಲವು. ಅಂತೆಯೇ ರಾಜಾಭರ್ತೃಹರಿಯು–''ಸ್ವಾತ್ಯಾಂ ಸಾಗರಶುಕ್ತಿ ಮಧ್ಯಪತಿತಂ ತನ್ಮೌಕ್ತಿಕಂ ಜಾಯತೇ'' ಎಂಬುದಾಗಿ 'ನೀತಿಶತಕ'ದಲ್ಲಿ ಉಪದೇಶಿಸಿದ್ದಾನೆ. ಒಮ್ಮೆ ಮುತ್ತಾದ ಆ ನೀರು ಮತ್ತೆಮರಳಿ ನೀರಾಗದಂತೆ ನಿಷ್ಠಾಸ್ವರೂಪವನ್ನು ತಾಳಿದ ಆ ಭಕ್ತಿಯು ಮತ್ತೆ ಪುನಃ ಎಂದೂ ವಿಚಲಿತವಾಗುವುದಿಲ್ಲ. ಇಂತಹ ಅವಿಚಲವಾದ ನಿಷ್ಠಾಭಕ್ತಿಸಂಪನ್ನನೇ ಮಾಹೇಶ್ವರನು. ಮಾಹೇಶ್ವರ ಸ್ಥಲದ ಸಾಧಕನ ಭಕ್ತಿಯು ಇಷ್ಟಲಿಂಗವನ್ನು ಹೊರತು ಪಡಿಸಿ ಅದು ಬೇರೆಡೆ ಹರಿಯುವುದಿಲ್ಲ. ಸ್ಥಿರಭಕ್ತಿ ಸಂಪನ್ನನಾದ ಉತ್ಕೃಷ್ಟವಾದ ವೈರಾಗ್ಯವು, ಸ್ಥಿರವಾದ ವಿವೇಕವು ಪ್ರಾಪ್ತವಾಗುತ್ತದೆ. ಅಂತೆಯೇ ಶ್ರೀ ರೇಣುಕ ಭಗವತ್ಪಾದರು ಅಗಸ್ತ್ಯನ ಪ್ರಶ್ನೆಗೆ ಉತ್ತರಿಸುತ್ತ–

ಭಕ್ತೇರ್ಯದಾ ಸಮುತ್ಕರ್ಷೋ ಭವೇದ್ ವೈರಾಗ್ಯಗೌರವಾತ್ ।
ತದಾಮಾಹೇಶ್ವರಃ ಪ್ರೋಕ್ತೋ ಭಕ್ತಃ ಸ್ಥಿರವಿವೇಕವಾನ್ ॥

(ಸಿ. ಶಿ. ೧೦–೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಅಂದರೆ ಉತ್ಕೃಷ್ಟ ಭಕ್ತಿಸಂಪನ್ನನೂ ವೈರಾಗ್ಯಾದಿ ಗುಣಯುಕ್ತನೂ ಸ್ಥಿರವಿವೇಕಿಯೂ ಆದ ಭಕ್ತನೇ ಮಾಹೇಶ್ವರನೆಂಬುದಾಗಿ ಕರೆಯಲ್ಪಡುತ್ತಾನೆ.

ಭಕ್ತಸ್ಥಲದ ಸಾಧಕನು ಇಷ್ಟಲಿಂಗವನ್ನು ಪೂಜಿಸುವಾಗ ಇಷ್ಟಲಿಂಗದಲ್ಲಿಯ ಪ್ರೀತಿಯ ಜೊತೆಗೆ ಅನ್ಯಸಾಂಸಾರಿಕ ವಸ್ತುಗಳಲ್ಲಿಯೂ ಕೂಡ ಅಭೀಪ್ಸೆಯನ್ನು ಹೊಂದಿರುತ್ತಾನೆ. ಅಂತೆಯೇ ಇಷ್ಟವನ್ನು ಪೂಜಿಸಿ ಅನೇಕ ಇಷ್ಟಾರ್ಥಗಳನ್ನು ಕೂಡ ಬೇಡಿಕೊಳ್ಳುತ್ತಾನೆ. ಆದರೆ ಮಾಹೇಶ್ವರನು ವಿರಾಗಿಯೂ ಸ್ಥಿರವಿವೇಕಿಯೂ ಆಗಿರುವುದರಿಂದ ಯಾವ ಸಾಂಸಾರಿಕ ವಸ್ತುಗಳ ಅಭಿಲಾಷೆಯಿಲ್ಲದವನಾಗಿ ಈಶ್ವರನಿಗಾಗಿಯೇ

ಈಶ್ವರನನ್ನು ಪ್ರೀತಿಸುತ್ತಿರುತ್ತಾನೆ. ಹೀಗೆ ದೇವರಿಗಾಗಿಯೇ ದೇವರನ್ನು ಪ್ರೀತಿಸುವ ಸಾಧಕನೇ ಮಾಹೇಶ್ವರನು.

ಒಬ್ಬ ಮಹಾರಾಜನು ಅತ್ಯಂತ ವಯೋವೃದ್ಧನಾಗಿದ್ದನು. ತನ್ನ ತರುವಾಯ ಈ ಸಿಂಹಾಸನಕ್ಕೆ ಯೋಗ್ಯ ಉತ್ತರಾಧಿಕಾರಿಯಾಗಿ ಯಾರನ್ನು ನೇಮಿಸಿಕೊಳ್ಳ ಬೇಕೆಂಬುದಾಗಿ ಆಲೋಚಿಸತೊಡಗಿನು. ಕೊನೆಗೊಂದು ದಿನ ಒಂದು ನಿರ್ಣಯಕ್ಕೆ ಬಂದು ನಾಳೆ ಸೂರ್ಯೋದಯದಿಂದ ಸೂರ್ಯಾಸ್ತದೊಳಗಾಗಿ ಯಾರು ನನ್ನನ್ನು ಬಂದು ಮುಟ್ಟು ತ್ತಾರೆಯೋ ಅವರನ್ನೇ ನಾನು ನನ್ನ ರಾಜ ಸಿಂಹಾಸನದ ಉತ್ತಾರಾಧಿಕಾರಿಯನ್ನಾಗಿ ಮಾಡಿಕೊಳ್ಳುತ್ತೇನೆಂಬುದಾಗಿ ಇಡೀ ರಾಜ್ಯದಲ್ಲೆಲ್ಲ ಡಂಗುರ ಸಾರಿಸಿದನು. ಮರುದಿವಸ ಬ್ರಾಹ್ಮೀ ಮುಹೂರ್ತದಲ್ಲಿ ರಾಜನು ತನ್ನ ವಿಶಾಲವಾದ ಒಂದು ಉದ್ಯಾನದಲ್ಲಿ ಸಿಂಹಾಸನಾರೂಢನಾಗಿ ತನ್ನ ಉತ್ತರಾಧಿಕಾರಿಯ ಪ್ರತೀಕ್ಷೆ ಮಾಡುತ್ತ ಕುಳಿತು ಕೊಂಡನು. ಈ ರಾಜ್ಯದಲ್ಲಿಯ ಪ್ರಜರೆಲ್ಲ ರಾಜನು ಸಾರಿಸಿದ ಡಂಗುರವನ್ನು ಕೇಳಿ ಬಹಳಷ್ಟು ಆನಂದಿತರಾದರು. ರಾಜ್ಯ ಸಿಂಹಾಸನವನ್ನು ಪಡೆಯುವುದು ಅದೆಷ್ಟು ಸರಳ ! ಕೇವಲ ರಾಜನನ್ನು ಸ್ಪರ್ಶಿಸಿದ ಮಾತ್ರಕ್ಕೆ ನಾವು ಚಕ್ರವರ್ತಿಯಾಗುತ್ತೇವಲ್ಲ! ಎಂಬ ಆನಂದವೇ ಆನಂದ ಪ್ರಜರಿಗೆಲ್ಲ, ಎಲ್ಲರೂ ರಾಜನನ್ನು ಮುಟ್ಟುವ ತಯಾರಿಯಲ್ಲಿ ತೊಡಗಿದರು. ಸೂರ್ಯೋದಯವಾಗುವುದೊಂದೇ ತಡ, ಪ್ರತಿಯೊಬ್ಬ ಪ್ರಜೆಯು ರಾಜನು ಕುಳಿತ ಉದ್ಯಾನದತ್ತ ಧಾವಿಸತೊಡಗಿದರು. ಉದ್ಯಾನವನ್ನು ಪ್ರವೇಶಿಸಿದಾಗ ಎಲ್ಲ ಕಡೆಗೆ ನಾನಾ ಪ್ರಕಾರದ ಪೇಯದಂಗಡಿಗಳು, ಮಿಠಾಯಿಯಂಗಡಿಗಳು, ರಂಗುರಂಗಿನ ಬಟ್ಟೆಯ ಅಂಗಡಿಗಳು, ಸುವರ್ಣ ಹಾಗೂ ರತ್ನದ ಅಂಗಡಿಗಳು ವಿರಾಜಿಸುತ್ತಿದ್ದವು. ನೋಡಿದವರ ಮನಸ್ಸನ್ನು ಸೆಳೆಯುವ, ವಿವಿಧ ಪ್ರಲೋಭನೆಯನ್ನುಂಟುಮಾಡುವ ದೃಶ್ಯಗಳೇ ತುಂಬಿದ್ದವು. ಮತ್ತೊಂದು ಆಶ್ಚರ್ಯದ ಸಂಗತಿಯೆಂದರೆ ಪ್ರತಿಯೊಂದು ಅಂಗಡಿಗಳ ಮುಂಭಾಗದಲ್ಲಿ–'ಇಲ್ಲಿ ಇಂದು ಪ್ರತಿಯೊಂದು ವಸ್ತುವೂ ವಿನಾಮೂಲ್ಯವಾಗಿ ದೊರೆ ಯುತ್ತದೆ' ಎಂಬ ನಾಮಫಲಕಗಳು ನೇತು ಹಾಕಲ್ಪಟ್ಟಿದ್ದವು. ಆ ಬೋರ್ಡುಗಳನ್ನು ನೋಡಿದ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಈ ವಸ್ತುಗಳನ್ನು ಸಂಗ್ರಹಿಸಬೇಕೆಂಬ ಆಶಾಭಾವನೆಯು ಅಂಕುರಿಸತೊಡಗಿತು. ಕೇಳುವುದೇನು ? ಕೆಲವರು ಪೇಯದಂಗಡಿ ಗಳಲ್ಲಿ, ಕೆಲವರು ಭಕ್ಷ್ಯ ಭೋಜನಗಳಂಗಡಿಗಳಲ್ಲಿ ಮತ್ತೆ ಕೆಲವರು ವಸ್ತ್ರಗಳಂಗಡಿ ಗಳಲ್ಲಿ ಇನ್ನು ಕೆಲವರು ಸುವರ್ಣರತ್ನದಂಗಡಿಗಳಲ್ಲಿ ನಾ ಮುಂದೆ ತಾ ಮುಂದೆ ಎಂದು ನುಗ್ಗಿದರು. ಅಂಗಡಿಗಳನ್ನು ಪ್ರವೇಶಿಸಿದ ಈ ಜನರಲ್ಲಿ ಕೆಲವರು ಭಕ್ಷ್ಯಭೋಜನಗಳಲ್ಲಿ ವ್ಯಸ್ತವಾಗಿದ್ದರೆ, ಮತ್ತೆ ಕೆಲವರು ವಸ್ತ್ರಾಲಂಕಾರಗಳನ್ನು ಸಂಗ್ರಹಿಸಿ ತಮ್ಮ ತಮ್ಮ ಮನೆಗಳನ್ನು ತುಂಬುವ ಕಾರ್ಯದಲ್ಲಿ ತಲ್ಲೀನರಾದರು. ರಾಜನೇ ಇರಿಸಿದ ಈ ಭಕ್ಷ್ಯಭೋಜ್ಯ ಪದಾರ್ಥಗಳಲ್ಲಿ ಆಸಕ್ತರಾದ ಜನರು ರಾಜನನ್ನೇ ಮರೆತು ಬಿಟ್ಟಿದ್ದರು. ಸೂರ್ಯಾಸ್ತವಾದರೂ ಯಾರೂ ರಾಜನ ಕಡೆಗೆ ಲಕ್ಷ್ಯಗೊಡಲಿಲ್ಲ, ಆಗ ಅತ್ಯಂತ ಕ್ರುದ್ಧನಾದ ಮಹಾರಾಜನು ತನ್ನ ಪ್ರಧಾನಮಂತ್ರಿಯನ್ನು ಕರೆದು ಇದೇನಾಶ್ಚರ್ಯ ! ನಮ್ಮ ರಾಜ್ಯದಲ್ಲಿ ಒಬ್ಬ ಪ್ರಜೆಯೂ ಇಲ್ಲವೆ ? ಸೂರ್ಯಾಸ್ತನಾಗುವ ವರೆಗೆ ಪ್ರತೀಕ್ಷೆ ಮಾಡಿದರೆ ಒಬ್ಬರೂ ನನ್ನ ಕಡೆಗೆ ಸುಳಿಯಲಿಲ್ಲ ಇದರ ಕಾರಣವೇನು ? ಎಂದು

ಗರ್ಜಿಸಿದನು. ಆಗ ಮಂತ್ರಿವರ್ಯನು–''ಪ್ರಭುಗಳು ಶಾಂತರಾಗಬೇಕು. ಇಂದು ಈ ಉದ್ಯಾನದಲ್ಲಿ ಅನೇಕ ಅಂಗಡಿಗಳನ್ನು ಪುಕ್ಕಟೆಯಾಗಿ ಇರಿಸಿದ ಕಾರಣ ವಿಷಯಾಸಕ್ತರಾದ ಜನರು ಆ ವಿಷಯಗಳ ಸಂಗ್ರಹಣೆಯಲ್ಲಿಯೇ ತೊಡಗಿರೋಣ ದರಿಂದ ನಿಮ್ಮವರೆಗೆ ಬರಲು ಅವರಿಗಾಗಲಿಲ್ಲ'' ಎಂದು ಹೇಳಿದನು. ಆಗ ರಾಜನು ಶಾಂತನಾಗದೇ ಮತ್ತಷ್ಟು ಕ್ರುದ್ಧನಾಗಿ ''ಸೈನಿಕರ ಮುಖಾಂತರ ಎಲ್ಲರನ್ನೂ ಎಳೆತರಿಸು, ಅವರು ಸಂಗ್ರಹಿಸಿದ ಸಾಮಗ್ರಿಗಳೆಲ್ಲವನ್ನೂ ಮರಳಿ ತರಿಸು ಮತ್ತು ಪ್ರತಿಯೊಬ್ಬರನ್ನು ಹಗ್ಗದಿಂದ ಗಿಡಕ್ಕೆ ಕಟ್ಟಿ ಅವರ ಚರ್ಮ ಸುಲಿಯುವ ಹಾಗೆ ಬಾರಕೋಲಿನಿಂದ ಹೊಡೆಯಬೇಕೆ''ಂದು ಆಜ್ಞಾಪಿಸಿದನು. ರಾಜಾಜ್ಞೆಯಂತೆ ಮಂತ್ರಿಯು ಸೈನಿಕರಿಂದ ಎಲ್ಲರನ್ನೂ ಎಳೆತರಿಸಿ ಹೊಡೆಯಿಸಲಾರಂಭಿಸಿದಾಗ, ಎಲ್ಲರಿಗೂ ಪಶ್ಚಾತ್ತಾಪವಾಯಿತು. ನಾವು ಈ ಕ್ಷುದ್ರ ಸಾಮಗ್ರಿಗಳ ವ್ಯಾಮೋಹವನ್ನು ಬಿಟ್ಟು ನೇರವಾಗಿ ರಾಜನನ್ನೇ ಸ್ಪರ್ಶಿಸಿದ್ದರೆ ಈ ರಾಜ್ಯದ ಚಕ್ರವರ್ತಿಯಾಗುತ್ತಿದ್ದೆವಲ್ಲಾ ! ನಾವು ಸಂಗ್ರಹಿಸಿದ ವಸ್ತುಗಳೂ ನಮ್ಮಲ್ಲಿ ಉಳಿಯಲಿಲ್ಲ, ಮೇಲೆ ಬಾರಕೋಲಿನ ಏಟೂ ತಪ್ಪಲಿಲ್ಲಾ ಎಂದು ಮನದಲ್ಲಿಯೇ ಮರಗುತ್ತ ದುಃಖಿಸತೊಡಗಿದರು. ವಿಷಯಾಸಕ್ತನಾದ ಪ್ರತಿಯೊಬ್ಬ ಜೀವಾತ್ಮನ ಕಥೆಯೇ ಇಂಥಾದ್ದು. ಪರಮಾತ್ಮನು ಈ ಸಂಸಾರದಲ್ಲಿ ಮನುಷ್ಯರನ್ನು ಕಳಿಸಿದ್ದಾದರೂ ಏತಕ್ಕೆ ? ಶಬ್ದ–ಸ್ಪರ್ಶಾದಿ ವಿಷಯಗಳನ್ನನುಭವಿಸುವುದೇ ಮನುಷ್ಯ ಜೀವನದ ಗುರಿಯಲ್ಲ. ಎಂಭತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ ವಿಲಕ್ಷಣನಾದ ಈ ಮನುಷ್ಯನು ಉಳಿದೆಲ್ಲ ಪ್ರಾಣಿಗಳಂತೆ ಸ್ರಕ್–ಚಂದನ–ವನಿತಾದಿ ವಿಷಯಗಳಲ್ಲಿ ಆಸಕ್ತನಾಗದೆ, ಮನಸಾರೆ ತನ್ನನ್ನು ಮುಟ್ಟಿ ಪೂಜಿಸಿ, ತನ್ನ ಸ್ವರೂಪವನ್ನು ಪಡೆಯಲೆಂಬ ಉದ್ದೇಶದಿಂದ ಪರಮಾತ್ಮನು ಮನುಷ್ಯಜನ್ಮವನ್ನು ದಯಪಾಲಿಸಿದ್ದಾನೆ. ಆದರೆ ಮನುಷ್ಯರಾದ ಎಷ್ಟು ಜನರಿಗೆ ಈ ಅರಿವು ಇದೆ ? ಎಲ್ಲದಕ್ಕೂ ವೇಳೆಯನ್ನು ಮೀಸಲಾಗಿರಿಸುವ ಈ ಮನುಷ್ಯನಿಗೆ ದೇವರಿಗಾಗಿಯೇ ವೇಳೆ ಇಲ್ಲ. ಇವನಿಗೆ ಈಶ್ವರನಿಗಿಂತ ಇತರ ವಸ್ತುಗಳ ಮೋಹವೇ ಅಧಿಕವಾಗಿದೆ. ಇಂತಹ ಮನುಷ್ಯರಿಗೆ ಪಾಮರರೆಂಬುದಾಗಿ ಕರೆಯುತ್ತಾರೆ. ಇನ್ನು ವಿಷಯಗಳ ಪ್ರಾಪ್ತಿಗಾಗಿ ದೇವರನ್ನು ಭಜಿಸುವವನು ಸಾಮಾನ್ಯ ಭಕ್ತನೆಂದು ಕರೆಯಲ್ಪಡುತ್ತಾನೆ. ಅದರಂತೆ ವಿಷಯಗಳನ್ನು ಪ್ರೀತಿಸುವುದರ ಜೊತೆಗೆ ದೇವರನ್ನೂ ಪ್ರೀತಿಸುವವನು ಭಕ್ತನೆಂದೆನಿಸಿಕೊಳ್ಳುತ್ತಾನೆ. ಅದೇ ರೀತಿ ವಿಷಯ ವ್ಯಾಮೋಹವನ್ನು ತೊರೆದು ಅತ್ಯಂತ ನಿಷ್ಠೆಯಿಂದ ಕೇವಲ ತನ್ನ ಇಷ್ಟದೇವರನ್ನೇ ಪ್ರೀತಿಸುವವನು ಮಾಹೇಶ್ವರನೆನಿಸುವನು. ಹೀಗೆ ಭಕ್ತಮತ್ತುಮಾಹೇಶ್ವರರಲ್ಲಿಯ ಅಂತರವನ್ನು ಅರಿಯಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ಆಗಷ್ಟ್, ೧೯೬೧

(ಸ್ಥಾನ ನಾಗಪುರ)



ಆಶೀರ್ವಚನ-೨

# ಮಾಹೇಶ್ವರಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಭಕ್ತಸ್ಥಲದ ಸಾಧಕನು ಅದಾವ ಯೋಗ್ಯತೆಯಿಂದ ಮಾಹೇಶ್ವರ ಸ್ಥಿತಿಯನ್ನು ತಲುಪುತ್ತಾನೆ ? ಎಂಬ ಅಗಸ್ತ್ಯ ಮಹರ್ಷಿಯ ಪ್ರಶ್ನೆಗೆ ಉತ್ತರಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।
ಬ್ರಹ್ಮಾದಿಸ್ಥಾನವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥

(ಸಿ. ಶಿ. ೧೦–೨)

ಎಂಬುದಾಗಿ ಉಪದೇಶಿಸಿದ್ದಾರೆ ಬ್ರಹ್ಮವಿಷ್ಣು ಮೊದಲಾದ ಪದವಿಗಳ ಬಗ್ಗೆ ನಿಸ್ಪೃಹನಾಗಿ ಶಿವನಲ್ಲಿಯೇ ಅತ್ಯಂತ ಆಸಕ್ತನಾದ ಮತ್ತು ಸಹಜದಾನದಲ್ಲಿ ನಿಷ್ಣಾತನಾದ ಭಕ್ತನೇ ಮಾಹೇಶ್ವರನೆಂಬುದಾಗಿ ಕರೆಯಲ್ಪಡುತ್ತಾನೆ. ಸಹಜದಾನ ನಿಷ್ಣಾತತ್ವವೇ ಮಾಹೇಶ್ವರನ ಅಸಾಧಾರಣವಾದ ಲಕ್ಷಣವು. ದಾತೃತ್ವವು ಮನುಷ್ಯನ ಔನ್ನತ್ಯವನ್ನು ತಿಳಿಯಪಡಿಸುತ್ತದೆ. ಮನುಷ್ಯನ ಉನ್ನತಿಗೆ ದಾನವೇ ಮೂಲವು. ಅಂತೆಯೇ ಉಪನಿಷತ್ತಿನಲ್ಲಿ ಒಂದು ಸುಂದರವಾದ ಕಥೆ ಇದೆ.

ಒಂದಾನೊಂದು ಸಮಯದಲ್ಲಿ ಬ್ರಹ್ಮದೇವರ ಹತ್ತಿರ ದೇವ, ದಾನವ ಮತ್ತು ಮಾನವರು ಒಮ್ಮೆಲೇ ಹೋಗಿ ನಮ್ಮೆಲ್ಲರಿಗೂ ಒಂದೇ ಉಪದೇಶವನ್ನು ಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಒಂದೇ ಸಮಯದಲ್ಲಿ ಒಬ್ಬನಿಗೆ ಉಪದೇಶ ಮಾಡುವುದು ಸರಳ ಆದರೆ ಅನೇಕರಿಗೆ ಏಕಕಾಲದಲ್ಲಿ ಉಪದೇಶ ಮಾಡುವುದು ಕಠಿಣ. ಏಕೆಂದರೆ ಪ್ರತಿಯೊಬ್ಬರ ಬುದ್ಧಿ ವಿಚಾರ ಭಿನ್ನ ಭಿನ್ನವಾಗಿರುತ್ತವೆ. ಪರಂತು ಬ್ರಹ್ಮದೇವನು ದೇವ, ದಾನವ ಹಾಗೂ ಮಾನವರನ್ನು ಕುರಿತು ದ–ದ–ದ ಎಂಬುದಾಗಿ ಒಂದೇ ಅಕ್ಷರರೂಪದ ಉಪದೇಶವನ್ನು ಮಾಡಿದನು. ಆಗ ದೇವತೆಗಳು 'ದ' ಈ ಅಕ್ಷರದ ಅರ್ಥವೇನು ? ಎಂದು ವಿಚಾರಿಸಲಾಗಿ ಬ್ರಹ್ಮದೇವನು ಭೋಗಾಸಕ್ತರಾದ ದೇವತೆಗಳನ್ನು ಉದ್ದೇಶಿಸಿ 'ದ' ಎಂದರೆ 'ದಮ' ಎಂಬುದಾಗಿ ತಿಳಿಯಪಡಿಸಿದನು. ಅರ್ಥಾತ್ ನೀವುಗಳು ಅತಿಯಾಗಿ ಇಂದ್ರಿಯಲೋಲುಪರಾಗದೆ ಇಂದ್ರಿಯನಿಗ್ರಹವುಳ್ಳವರಾಗಿರೆಂದು ಉಪದೇಶಿಸಿದನು. ಆಗ ದಾನವರು ಹಾಗಾದರೆ ನಮಗಾಗಿ 'ದ'ದ ಅರ್ಥವೇನು ? ಎಂಬುದಾಗಿ ಕೇಳಿದರು. ಆಗ ಬ್ರಹ್ಮದೇವರು ಅತ್ಯಂತ ಕ್ರೂರ ಸ್ವಭಾವದ ದಾನವರನ್ನು ಸುಧಾರಿಸಲೋಸುಗ ನೀವು 'ದ' ಶಬ್ದದ ಅರ್ಥವನ್ನು 'ದಯಾ' ಎಂದು ಪರಿಗ್ರಹಿಸಬೇಕು. ನೀವೆಲ್ಲಾ ಪ್ರಾಣಿಮಾತ್ರರಲ್ಲಿ ದಯಾ–ಧರ್ಮ

ಉಳ್ಳವರಾಗಿರೆಂದು ಉಪದೇಶಿಸಿದನು. ಕೊನೆಯದಾಗಿ ಮಾನವರು ಬ್ರಹ್ಮದೇವರನ್ನು ವಿಚಾರಿಸುತ್ತಾರೆ– ಪ್ರಭೋ ! ನಮಗಾಗಿ. 'ದ' ಶಬ್ದದ ಅರ್ಥವೇನು ? ಆಗ ಬ್ರಹ್ಮದೇವನು ಹಸನ್ಮುಖನಾಗಿ 'ದತ್ತ' ಎಂಬುದಾಗಿ ಉಪದೇಶಿಸಿದನು. ಅಂದರೆ ನೀವು ಕೊಡುವಂಥವರಾಗಿರಿ ಅರ್ಥಾತ್ ಧಾನಮಾಡುವಂಥವರಾಗಿರಿ. ಮನುಷ್ಯನು ಸ್ವಭಾವತಃ ಲೋಭಗುಣ ವಿಶಿಷ್ಟನಾಗಿರುವುದರಿಂದ ಆ ಲೋಭವೇ ಸಕಲಪಾಪಗಳಿಗೆ ಮೂಲವಾಗಿರುತ್ತದೆ. ಅಂತೆಯೇ ತುಲಸೀದಾಸರು–'ಲೋಭ ಪಾಪಕಾ ಬಾಪ ಬಖಾನಾ, ದಾನ–ಧರ್ಮಕಾ ಮೂಲ' ಎಂದು ಹೇಳಿದ್ದಾರೆ. ಅಂದರೆ ಲೋಭವೇ ಪಾಪಕ್ಕೆ ಮೂಲಕಾರಣವು ಹಾಗೂ ದಾನವು ಧರ್ಮಕ್ಕೆ ಮೂಲವಾಗಿರುತ್ತದೆ. ಲೋಭವು ಬಹುದೊಡ್ಡ ದುರ್ಗುಣವು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು ''ಕಡುಲೋಭದಿಂದ ದುರ್ಗುಣಮನ್ಯ ಮುಂಟೇ ?'' ಎಂಬುದಾಗಿ ಪ್ರಶ್ನಿಸಿದ್ದಾರೆ.

ಲೋಭಿಯಾದ ಮನುಷ್ಯನು ತನಗಾಗಿ ದ್ರವ್ಯವನ್ನು ಖರ್ಚುಮಾಡುವುದಿಲ್ಲ ವೆಂದಾಗ ಅನ್ಯರಿಗಾಗಿ ಹೇಗೆ ಖರ್ಚುಮಾಡಿಯಾನು ? ಅಂತೆಯೇ ಆತನು ಇಹ ದಲ್ಲಿಯೂ ಸುಖಿಯಾಗಿರಲಾರ, ಪರಲೋಕದಲ್ಲಿಯೂ ಸುಖವನ್ನು ಹೊಂದಲಾರ. ಅಂತೆಯೇ ''ಲುನಾತಿ ಉಭೌ ಲೋಕೌ ಇತಿ ಲೋಭಃ'' ಎಂಬುದಾಗಿ ಲೋಭ ಶಬ್ದದ ವ್ಯಾಖ್ಯಾನವನ್ನು ಮಾಡಿದ್ದಾರೆ. ಅಂದರೆ ಉಭಯಲೋಕಗಳ ಸುಖಗಳನ್ನು ಕತ್ತರಿಸಿ ಹಾಕುವ ದುರ್ಗಣವೇ ಲೋಭವು. ಸಂಪತ್ತು ಇದ್ದಾಗ್ಯೂ ದ್ರವ್ಯದ ಮೇಲೆ ಅತಿಯಾಗಿ ಲೋಭಿಯಾದ ಮನುಷ್ಯನು ಆ ದ್ರವ್ಯವನ್ನು ತನಗಾಗಿ ಖರ್ಚು ಮಾಡದ ಕಾರಣ ಇಹದಲ್ಲಿ ಕಷ್ಟವನ್ನು ಅನುಭವಿಸುತ್ತಾನೆ. ಅದರಂತೆ ಅನ್ಯರಿಗೂ ದಾನ ಮಾಡದ ಕಾರಣ ಪುಣ್ಯದ ಅಭಾವದಿಂದಾಗಿ ಪರಲೋಕದಲ್ಲಿಯೂ ಸುಖವನ್ನು ಅನುಭವಿಸದೇ ದುಃಖ ವನ್ನೇ ಅನುಭವಿಸುತ್ತಾನೆ. ಈ ತೆರನಾಗಿ ಲೋಭಿಯಾದವನು ಉಭಯ ಲೋಕಗಳ ಸುಖ ದಿಂದ ವಂಚಿತನಾಗುತ್ತಾನೆ. ಆದಕಾರಣ ತಾನು ಇಹಪರಗಳಲ್ಲಿ ಸುಖಿಯಾಗಬೇಕಾದರೆ ಮನುಷ್ಯನು ದಾನರೂಪವಾದ ಧರ್ಮವನ್ನು ಆಶ್ರಯಿಸಬೇಕು.

ನಾವು ಸಂಪಾದಿಸಿದ ದ್ರವ್ಯಕ್ಕೆ ನಾವೊಬ್ಬರೇ ಹಕ್ಕುದಾರರು ಎಂಬುದಾಗಿ ಯಾರಾದರೂ ತಿಳಿದುಕೊಂಡಿದ್ದರೆ ಅದು ಬಹುದೊಡ್ಡ ತಪ್ಪು. ಶಾಸ್ತ್ರದಲ್ಲಿ ನಾವು ಗಳಿಸಿದ ದ್ರವ್ಯಕ್ಕೆ ನಾಲ್ಕು ಜನ ದಾಯಾದಿಗಳಿರುತ್ತಾರೆಂದು ತಿಳಿಯಪಡಿಸಿದ್ದಾರೆ. ಅವುಗಳಲ್ಲಿ ಮೊದಲನೆಯ ದಾಯಾದಿ ಧರ್ಮ, ಎರಡನೆಯವನು ರಾಜ, ಮೂರನೆಯವನು ಕಳ್ಳ ಮತ್ತು ನಾಲ್ಕನೆಯದು ಅಗ್ನಿ, ಇವುಗಳಲ್ಲಿ ಧರ್ಮವು ಜ್ಯೇಷ್ಠ ಹಾಗೂ ಶ್ರೇಷ್ಠವಾದದ್ದು. ಪ್ರತಿಯೊಬ್ಬ ಮನುಷ್ಯನ ಎದುರಿಗೆ ಧರ್ಮವು ಮೊಟ್ಟಮೊದಲು ಮುಂದೆ ಬಂದು ತನ್ನ ಹಕ್ಕನ್ನು ಬೇಡುತ್ತದೆ. ಆದರೆ ಮನುಷ್ಯನು ಧರ್ಮವನ್ನು ತಿರಸ್ಕರಿಸುತ್ತಾನೆ. ಧರ್ಮಕ್ಕಾಗಿ ಕೊಡಬೇಕೆನ್ನುವ ವಿಚಾರ ಮನುಷ್ಯನ ಮನದಲ್ಲಿ ಸಹಜವಾಗಿ ಬರುವುದಿಲ್ಲ. ಎರಡನೆಯ ದಾಗಿ ರಾಜನು ಮುಂದೆ ಬಂದು ನಿಲ್ಲುತ್ತಾನೆ. ಸದ್ಯಃ ರಾಜನೆಂದರೆ ಆದಾಯ ತೆರಿಗೆಯ ಅಧಿಕಾರಿಯೆಂದೇ ಭಾವಿಸಬೇಕು. ಕೆಲವೊಬ್ಬರು ಅವರಿಗೂ ನಿಲುಕದ ಹಾಗೆ ಧನವನ್ನು ಬಹುದೂರದಲ್ಲಿ ತಮ್ಮ ಬುದ್ಧಿಮತ್ತೆಯಿಂದ ಸುರಕ್ಷಿತವಾಗಿ ಇರಿಸಿಕೊಳ್ಳುತ್ತಾರೆ. ಇಂಥವರ ಮನೆಗೆ ಮೂರನೆಯ ದಾಯಾದಿಯಾದ ಕಳ್ಳನು ಕನ್ನಹಾಕಿ ಧನವನ್ನು ದೋಚಿಕೊಂಡು

ಹೋಗಲು ಹವಣಿಸುತ್ತಾನೆ. ಅದರಲ್ಲಿಯೂ ಬುದ್ಧಿವಂತರಾದ ಕೆಲವರು ಕಳ್ಳರಿಗೂ ಸಿಗದ ಹಾಗೆ ರಕ್ಷಿಸಿಕೊಳ್ಳುವುದುಂಟು. ಹೀಗೆ ಮೂರು ಜನ ದಾಯಾದಿಗಳಿಗೆ ಮೋಸ ಮಾಡಿದವರ ಸಂಪತ್ತು ಕೊನೆಗೊಮ್ಮೆ ಅಗ್ನಿಗೆ ಆಹುತಿಯಾಗಿ ಸರ್ವನಾಶವಾಗುವು ದುಂಟು. ಎಲ್ಲರಿಂದ ಪಾರಾದರೂ ಅಗ್ನಿಯಿಂದ ಪಾರಾಗುವುದು ಬಹು ಕಠಿಣ. ಆದಕಾರಣ ನಮ್ಮ ಸಂಪತ್ತಿಗೆ ಕೊಳ್ಳೆ,ಕಳ್ಳ ಮತ್ತು ರಾಜರಿಂದ ಬಾಧೆ ತಗಲಬಾರದೆಂಬ ಇಚ್ಛೆಯಿದ್ದಲ್ಲಿ ದಾನದ ಮಾರ್ಗವನ್ನು ಪ್ರತಿಯೊಬ್ಬರೂ ಅವಲಂಬಿಸಬೇಕು.

ಈ ಜನ್ಮದಲ್ಲಿ ನಾವು ಸುಖಿಗಳೂ, ಸಂಪತ್ ಶಾಲಿಗಳೂ ಆಗಿದ್ದೇವೆಂದರೆ ಅದು ಹಿಂದಣ ಜನ್ಮದಲ್ಲಿ ಮಾಡಿದ ದಾನದ ಫಲವೆಂದೇ ಭಾವಿಸಬೇಕು. ಅದರಂತೆ ಮುಂದೆ ಮತ್ತೆ ನಾವು ಸುಖಿಗಳಾಗಿರಬೇಕಾದರೆ ಇಂದು ನಾವು ಪುನಃ ದಾನವನ್ನು ಮಾಡಲೇ ಬೇಕು. ಭಿಕ್ಷೆಗಾಗಿ ಮನೆ ಮನೆ ಅಲೆಯುವ ಭಿಕ್ಷುಕರು ಕೇವಲ ಭಿಕ್ಷೆ ಬೇಡುವುದಕ್ಕಾಗಿ ಸಂಚರಿಸುವುದಿಲ್ಲ, ಆದರೆ ನೀವೆಲ್ಲ ಕೊಡದೇ ನನ್ನ ಹಾಗೇ ಆಗದೆ ಕೊಟ್ಟು ನಿಮ್ಮಂತೆ ಆಗಿರೆಂಬುದಾಗಿ ತಿಳಿಯಪಡಿಸುವುದಕ್ಕಾಗಿ ಸಂಚರಿಸುತ್ತಿರುತ್ತಾನೆ. ಇದನ್ನೇ ಒಬ್ಬ ಸುಭಾಷಿತಕಾರನು ಈ ರೀತಿಯಾಗಿ ಹೇಳಿದ್ದಾನೆ–

ಗೃಹಂ ಗೃಹಮಟನ್ ಭಿಕ್ಷುಃ ಶಿಕ್ಷ್ಯತೇ ನ ತು ಯಾಚ್ಯತೇ ||
ಅದತ್ವಾ ಮಾದೃಶೋ ಮಾ ಭೂಃ ದತ್ವಾ ಚ ತ್ವಾದೃಶೋಭವ ||

ದಾನಮಾಡದೇ ನನ್ನಂತೆ ನೀವು ಭಿಕ್ಷುಕರಾಗದೇ ದಾನಮಾಡಿ ನಿಮ್ಮಂತೆ ನೀವು ಶ್ರೀಮಂತರಾಗಿರೆಂಬುದೇ ಆ ಭಿಕ್ಷುಕನ ಸಂದೇಶವು. ಈ ಜನ್ಮದಲ್ಲಿ ದಾನವನ್ನು ಮಾಡದೇ ಹೋದರೆ ಮುಂದಣ ಜನ್ಮದಲ್ಲಿ ದಾರಿದ್ರ್ಯವು ನಿಶ್ಚಿತವಾದದ್ದು.

ಒಂದಾನೊಂದು ಊರಿನಲ್ಲಿ ಒಬ್ಬ ಧನಾಢ್ಯನಿದ್ದನು ಆತನಲ್ಲಿ ಧನವು ಹೇರಳ ವಾಗಿತ್ತು ಆದರೆ ಆತ ಸಂಸ್ಕಾರಶೂನ್ಯನಾಗಿದ್ದನು. ಯಾರಿಗೂ ಎಂದೂ ಏನನ್ನೂ ಕೊಟ್ಟವನೇ ಅಲ್ಲ ಆತ. ಇವನ ಭಯಕ್ಕಾಗಿ ಒಬ್ಬ ಭಿಕ್ಷುಕನೂ ಆತನ ಓಣಿಯಲ್ಲಿಯೂ ಸುಳಿಯುತ್ತಿರಲಿಲ್ಲ, ಈತನಿಗಿರುವ ಒಬ್ಬನೇ ಒಬ್ಬ ಮಗನಿಗೆ ಸಂಸ್ಕಾರ ಸಂಪನ್ನರಾದ ಮನೆಯ ಕನ್ಯೆಯನ್ನು ತೆಗೆದು ಲಗ್ನ ಮಾಡಿದರು. ಮನೆಗೆ ಬಂದ ಸೊಸೆಯು ಅತಿಥಿ ಸತ್ಕಾರ ಮಾಡುವ ಅಭಿಲಾಷೆಯುಳ್ಳವಳಾದರೂ, ಅತ್ತೆ–ಮಾವಂದಿರ ಭಯದಿಂದ ಅದಾವುದೂ ಅವಳಿಂದ ಜರುಗದಂತಾಯಿತು. ಹೀಗೆಯೇ ಅನೇಕ ದಿನಗಳು ಗತಿಸಿ ಹೋದವು. ಒಂದಾನೊಂದು ದಿವಸ ಓರ್ವ ಭಿಕ್ಷುಕನು ಈ ಶ್ರೀಮಂತನ ದ್ವಾರದಲ್ಲಿ ಬಂದು 'ಭವತೀ ಭಿಕ್ಷಾಂದೇಹಿ' ಎಂಬುದಾಗಿ ಯಾಚಿಸಿದನು. ಸೊಸೆಗೆ ಬಹಳಷ್ಟು ಸಂತೋಷವಾಯಿತು. ಇಷ್ಟು ವರ್ಷಗಳಲ್ಲಿ ಒಮ್ಮೆಯಾದರೂ ನನ್ನ ಕೈಗಳಿಂದ ಅತಿಥಿ ಸೇವೆಯನ್ನು ಮಾಡುವ ಭಾಗ್ಯವು ಪ್ರಾಪ್ತವಾಯಿತಲ್ಲ! ಎಂದು ಒಳಗೊಳಗೇ ಆನಂದ ಪಟ್ಟಳು. ಮನೆಗೆ ಭಿಕ್ಷುಕ ಬರಬೇಕಾದರೂ ಭಾಗ್ಯ ಬೇಕು. ನೀಡುವ ಭಾವನೆ ಮನದಲ್ಲಿ ಬಂದಿದ್ದರೂ ಮನೆಯಲ್ಲಿ ಅತ್ತೆ ಇರುವುದರಿಂಧ ನೀಡುವ ಧೈರ್ಯ ಅವಳಿಗಾಗಲಿಲ್ಲ, ಎಷ್ಟೋ ಹೊತ್ತಿನವರೆಗೆ ತಮ್ಮ ಬಾಗಿಲಲ್ಲಿ ನಿಂತಿರುವ ಆ ಭಿಕ್ಷುಕನನ್ನು ನೋಡಿ ಕನಿಕರ ಭಾವದಿಂದ ''ಹೇ ! ಅತಿಥಿ ದೇವಾ ! ಮುಂದಿನ ಮನೆಗೆ ಹೋಗಿ !'' ಎಂದಳು.

''ಏನು ನಿಮ್ಮ ಮನೆಯಲ್ಲಿ ಅನ್ನವಿಲ್ಲವೇ ?'' ಭಿಕ್ಷುಕನು ವಿಚಾರಿಸಿದನು.

''ಇದೆ ! ಆದರೆ ಅದು ಹಳಸಿದೆ'' ಎಂಬುದಾಗಿ ಉತ್ತರಿಸಿದಳು.

''ಇರಲಿ, ಹಳಸಿದ್ದೇ ನೀಡಮ್ಮಾ ನಾನೆಲ್ಲಿ ಬಿಸಿಯದನ್ನು ಬೇಡುತ್ತಿದ್ದೇನೆ ?'' ಎಂದು ಭಿಕ್ಷುಕ ನುಡಿದ.

''ಹೇ ಅತಿಥಿದೇವಾ ! ಅದಾದರೂ ಸ್ವಲ್ಪೇ ಇದೆ ಕಾರಣ ಮುಂದಿನ ಮನೆಗೆ ಹೋಗು'' ಎಂದು ಆಕೆ ನುಡಿದಳು. ಭಿಕ್ಷುಕ ಮುಂದಿನ ಮನೆಗೆ ಹೋದ. ಅತ್ತೆಯು ಸೊಸೆಯ ಈ ಮಾತುಗಳನ್ನು ಕೇಳಿ ಕಿಡಿ ಕಿಡಿಯಾದಳು. ಮನೆಗೆ ಯಜಮಾನ ಬಂದೊಡನೆ ಸೊಸೆಯ ರಾದ್ಧಾಂತವನ್ನೆಲ್ಲ ತಿಳಿಯಪಡಿಸಿ ''ಇವಳು ಭಿಕ್ಷುಕನಿಗೆ ನಮ್ಮ ಮನೆಯಲ್ಲಿ ತಂಗುಳ ಅನ್ನವಿದೆ. ಅದೂ ಕೂಡಾ ಸ್ವಲ್ಪೇ ಇದೆ, ಕಾರಣ ಮುಂದಿನ ಮನೆಗೆ ಹೋಗು ಎಂಬುದಾಗಿ ನುಡಿದು ನಮ್ಮ ಮನೆಯ ಮರ್ಯಾದೆಯನ್ನು ಕಡಿಮೆ ಮಾಡಿದ್ದಾಳೆ. ಕಾರಣ ಇವಳನ್ನು ಇವಳ ತವರುಮನೆಗೆ ಅಟ್ಟಿಬಿಡಿ. ನಮ್ಮ ಮಗನಿಗೆ ಮತ್ತೊಂದು ಲಗ್ನ ಮಾಡೋಣ'' ಎಂದಳು. ಹೆಂಡತಿಯ ಮಾತನ್ನು ಆಲಿಸಿದ ಮಾವನು ಸೊಸೆಯನ್ನು ಸಮೀಪದಲ್ಲಿ ಕರೆದು– ''ಅಮ್ಮಾ ! ನೀನು ನಮ್ಮ ಮನೆಗೆ ಬಂದಾಗಿನಿಂದ ಒಮ್ಮೆಯೂ ನಿನಗೆ ತಂಗುಳ ಅನ್ನವನ್ನು ಕೊಟ್ಟಿಲ್ಲ, ನಾವೂ ಸಹ ಅಂಥಾದ್ದನ್ನು ಊಟ ಮಾಡಿಲ್ಲ, ಪ್ರತಿದಿನ ಬಿಸಿ ಆಹಾರವನ್ನೇ ನಾವೆಲ್ಲ ಸೇವಿಸುತ್ತಿದ್ದೇವೆ. ಹೀಗಿರುವಾಗ ಆ ಭಿಕ್ಷುಕನಿಗೆ ನಮ್ಮ ಮನೆಯಲ್ಲಿ ತಂಗುಳನ್ನವಿದೆಯೆಂದು ಹೇಗೆ ತಾನೆ ಹೇಳಿದೆ ? ಆಗ ವಿಚಾರ ಸಂಪನ್ನಳಾದ ಸೊಸೆಯು ಮಾವನನ್ನು ಕುರಿತು– ''ಪೂಜ್ಯ ಮಾವನವರೇ ! ಬೆಳಿಗ್ಗೆ ಮಾಡಿದ ಅನ್ನವು ಸಾಯಂಕಾಲಕ್ಕೆ ತಂಗುಳಾಗುತ್ತದೆ. ನಿಮ್ಮ ಮನೆಯಲ್ಲಿ ತುಂಬಿ ತುಳುಕುತ್ತಿರು. ಈ ಧನಧಾನ್ಯಗಳು ಹಿಂದಣ ಜನ್ಮದ ಪುಣ್ಯ ಕರ್ಮಗಳ ಫಲಗಳಾಗಿವೆ. ಅಂದಾಗ್ಗ ಅವು ತಂಗುಳಲ್ಲವೆ ? ಈ ಜನ್ಮದಲ್ಲಿ ನೀವು ಹೊಸದಾಗಿ ಪುಣ್ಯವನ್ನೇ ಮಾಡುತ್ತಿಲ್ಲವಾದ್ದರಿಂದ ಪ್ರಾಕ್ತನ ಕರ್ಮದಫಲವು ಮುಕ್ತಾಯದ ಸ್ಥಿತಿ ಯಲ್ಲಿಯೇ ಇದೆ. ಅಂದರೆ ಈ ಸಂಪತ್ತು ಬಹುದಿನ ಸ್ಥಿರವಾಗಿ ಉಳಿಯಲಾರದು''ಎಂದಳು. ಸೊಸೆಯ ಈ ಆಧ್ಯಾತ್ಮಿಕ ವಿಚಾರವನ್ನು ಕೇಳಿದಾಗ ಅತ್ತೆಮಾವಂದಿರಿಗೆ ಜ್ಞಾನೋದಯವಾಯಿತು. ಆಗ ಅವರು ಮನೆಯ ಕಾರುಭಾರವನ್ನೆಲ್ಲಸೊಸೆಗೆಒಪ್ಪಿಸಿಎಲ್ಲರೂ ಧರ್ಮಮಾರ್ಗಿಗಳಾದರು.

ಮನುಷ್ಯರಲ್ಲಿ ಎಲ್ಲಿಯವರೆಗೆ ದಾನಮಾಡುವ ಭಾವನೆಯು ಉದಿತವಾಗುವುದಿಲ್ಲವೋ ಅಲ್ಲಿಯವರೆಗೆ ಅವರು ಸುಧಾರಿಸಲು ಶಕ್ಯವಾಗುವುದಿಲ್ಲ. ಅಂತೆಯೇ ಬ್ರಹ್ಮದೇವನು ಮನುಷ್ಯರನ್ನು ಉದ್ದೇಶಿಸಿ 'ದ' ಎಂದರೆ 'ದತ್ತ' ಅರ್ಥಾತ್ ದಾನ ಮಾಡಿರಿ ಎಂದು ಉಪದೇಶಿಸಿದ್ದಾನೆ. ದಾನಮಾಡದ ಹೊರತಾಗಿ ಮನುಷ್ಯನ ಮನವು ವಿಶಾಲವಾಗಲಾರದು. ಮನವು ವಿಶಾಲವಾಗದೆ ಬ್ರಹ್ಮಜ್ಞಾನವು ಅದೆಂತು ಸಾಧ್ಯವಹುದು ? ಆದಕಾರಣ ಕೃಪಣನಾದ ಮನುಷ್ಯನು ಯಾವ ಕಾಲಕ್ಕೂ ಬ್ರಹ್ಮಜ್ಞಾನಿಯಾಗಲಾರನು. ಪರಶಿವ ಬ್ರಹ್ಮವು ಅತ್ಯಂತ ವಿಶಾಲವಾಗಿರುವುದರಿಂದ ಅದನ್ನರಿಯಲು ಮನಸ್ಸಾದರೂ ಅಷ್ಟೇ ವಿಶಾಲವಾಗಿರಬೇಕು ತಾನೇ ! ದಾನರೂಪೀ ಧರ್ಮದ ಅಂತಿಮ ಫಲವು ಪರಶಿವಬ್ರಹ್ಮಜ್ಞಾನವೇ ಆಗಿದೆ.

ನಾವು ಉಪಭೋಗಿಸುವ ಪ್ರತಿಯೊಂದು ವಸ್ತುವನ್ನು ಭಗವದರ್ಪಣ ಮಾಡಿ ಅದನ್ನು ಪ್ರಸಾದರೂಪವಾಗಿ ಸೇವಿಸಬೇಕೆಂಬುವ ಈ ಪರಂಪರೆಯು ಭಾರತೀಯ ಸಂಸ್ಕೃತಿಯಲ್ಲಿ ಅತ್ಯಂತ ಪ್ರಾಚೀನವಾದುದು. ಅಂತೆಯೇ ಈಶಾವಾಸ್ಯೋಪನಿಷತ್ತಿನಲ್ಲಿ 'ತೇನ ತ್ಯಕ್ತೇನ ಭುಂಜೀಥಾಃ' ಎಂಬುದಾಗಿ ಉಪದೇಶಿಸಲ್ಪಟ್ಟಿದೆ. ಅಂದರೆ ತ್ಯಾಗ ಪೂರ್ವಕವಾಗಿಯೇ ಉಪಭೋಗಮಾಡಬೇಕೇ ವಿನಃ ಕೇವಲ ಭೋಗಿಯಾಗಿರ ಬಾರದು. ಯಾವಾತನು ಭೋಗ್ಯಪದಾರ್ಥಗಳನ್ನು ಭಗವದರ್ಪಣ ಮಾಡದೆ ಅತಿಥಿ ಅಭ್ಯಾಗತರಿಗೆ ಸಮರ್ಪಿಸದೆ ಕೇವಲ ತಾನೋರ್ವನೇ ಭುಂಜಿಸುತ್ತಾನೆಯೋ ಅವನು ಪಾಪಾತ್ಮನಾಗಿ ಕೊನೆಗೆ ನರಕಭಾಜನನಾಗುತ್ತಾನೆ. ಅಂತೆಯೇ ಭಗವದ್ಗೀತೆಯಲ್ಲಿ– 'ಭುಂಜತೇ ತೇತ್ವಘಂ ಪಾಪಾ ಏ ಪಚಂತ್ಯಾತ್ಮಕಾರಣಾತ್' ಎಂಬುದಾಗಿ ಉಪದೇಶಿ ಸಲ್ಪಟ್ಟಿದೆ. ಕೇವಲ ತನಗಾಗಿ ಅನ್ನವನ್ನು ಬೇಯಿಸಿಕೊಂಡು ತಿನ್ನುವವನು ಪಾಪಿಯಾಗಿ ರುತ್ತಾನೆ. ಇದೆಲ್ಲವನ್ನು ಪರ್ಯಾಲೋಚಿಸಿದಾಗ ತ್ಯಾಗಕ್ಕೆ ಇರುವ ಮಹತ್ವವು ಮತ್ತಾವುದಕ್ಕೂ ಇಲ್ಲ.

ಮನುಷ್ಯನು ತ್ಯಾಗಭಾವನೆಯನ್ನು ಅಳವಡಿಸಿಕೊಳ್ಳಲು ಕ್ರಮವಾಗಿ ದಾನಗುಣ ವನ್ನೇ ಬೆಳೆಸಿಕೊಳ್ಳಬೇಕು. ನಾವು ಯಾರಿಗಾದರೂ ಏನನ್ನಾದರೂ ಕೊಟ್ಟರೆ ಅದು ಅನ್ಯರಿಗೆ ಹೋಯಿತಲ್ಲ ಎಂದು ತಿಳಿದುಕೊಳ್ಳುವುದು ಸರಿಯಲ್ಲ. ಅದು ತನಗಾಗಿಯೇ ಮೀಸಲಾಗಿರುವಂಥದ್ದು. ಅಂತೆಯೇ ಸರ್ವಜ್ಞಕವಿಯು–

''ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ ।
ಕೊಟ್ಟಿದ್ದು ಕೆಟ್ಟಿತೆನಬೇಡ ಅದು ಮುಂದೆ ।
ಕಟ್ಟಿಹುದು ಬುತ್ತಿ ಸರ್ವಜ್ಞ ॥''

ಎಂಬುದಾಗಿ ದಾನದ ಮಹತಿಯನ್ನು ಬಹುಮಾರ್ಮಿಕವಾಗಿ ಉಪದೇಶಿಸಿದ್ದಾನೆ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ದಾನದ ತ್ರಿವಿಧ ಸ್ವರೂಪವನ್ನು ತಿಳಿಸಿ ಅವುಗಳಲ್ಲಿ ಸಹಜದಾನದ ಶ್ರೇಷ್ಠತೆಯನ್ನು ಪ್ರತಿಪಾದಿಸಿದ್ದಾರೆ. ಸೋಪಾಧಿ ನಿರುಪಾಧಿದಾನಗಳ ವಿಚಾರಗಳು ಅನ್ಯಾನ್ಯ ಗ್ರಂಥ ಗಳಲ್ಲಿ ದೊರೆಯುವುದುಂಟು. ಆದರೆ ಸಹಜದಾನವೆಂಬುದು ಮಾತ್ರ ಶ್ರೀ ಮಹಾ ಚಾರ್ಯರ ಅಮೂಲ್ಯಕೊಡುಗೆಯಾಗಿದೆ. ಸಹಜದಾನವನ್ನು ಮಾಡುವಾಗ ಕೊಡು ವವನೂ ಶಿವನೇ; ತೆಗೆದುಕೊಳ್ಳುವವನೂ ಶಿವನೇ; ಕೊಡುಕೊಳ್ಳುವ ವಸ್ತುವಾದರೂ ಶಿವರೂಪವೇ ಎನ್ನುವ ಶಿವಮಯಭಾವದಲ್ಲಿ ಸಹಜವಾಗಿ ನಡೆಯುವ ದಾನಕ್ಕೆ ಸಹಜದಾನವೆಂದು ಕರೆಯುತ್ತಾರೆ. ಅಂತೆಯೇ ಮಹಾಚಾರ್ಯರು–

ಅದಾತೃದಾತೃದೇಯಾನಾಂ ಶಿವಭಾವಂ ವಿಚಿಂತಯನ್ ।
ಆತ್ಮನೋಽಕರ್ತೃಭಾವಂಚ ಯದ್ದತ್ತಂ ಸಹಜಂ ಭವೇತ್ ॥

(ಸಿ. ಶಿ. ೯–೮೪)

ಈ ರೀತಿಯಾಗಿ ಸಹಜವಾನದ ಲಕ್ಷಣವನ್ನು ಸ್ಪಷ್ಟೀಕರಿಸಿದ್ದಾರೆ. ಅಂದರೆ ಸರ್ವತ್ರ ಶಿವಾತ್ಮಭಾವನೆಯಲ್ಲಿ ಕರ್ತೃತ್ವಭಾವನೆಯನ್ನು ತ್ಯಜಿಸಿ ಮಾಡುವ ದಾನವೇ ಸಹಜ

ದಾನವು. ಇದು ಎಲ್ಲ ದಾನಗಳಲ್ಲಿ ಉತ್ತಮೋತ್ತಮವಾದುದು. ಇದರಿಂದ ಶಿವಜ್ಞಾನದ ಪ್ರಾಪ್ತಿಯು ಸಹ ಉಂಟಾಗುವುದು. ಇಂತಹ ದಾನದಲ್ಲಿ ನಿಷ್ಣಾತನಾದ ಸರ್ವಾತ್ಮ ಭಾವನೆಯುಳ್ಳ ಸದ್ಭಕ್ತನೇ ಮಾಹೇಶ್ವರ ಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ. ಮಹೇಶ್ವರ ಅರ್ಥಾತ್ ಪರಶಿವನಲ್ಲಿ ನಿತಾಂತವಾದ ನಿಷ್ಠೆಯುಳ್ಳವನೇ ಮಾಹೇಶ್ವರನು. ಶಿವನು ಸರ್ವರಿಗೂ ಪೂಜ್ಯನಾಗಿದ್ದಾನೆ, ಈ ಪೂಜ್ಯತೆಗೆ ಕಾರಣ ಅವನಲ್ಲಿರುವ ವೈರಾಗ್ಯಾದಿಗಳೇ. ಇಂತಹ ಮಹೇಶ್ವರದಲ್ಲಿ ನಿಷ್ಠಾಭಕ್ತಿ ಸಂಪನ್ನನಾದವನೇ ಮಾಹೇಶ್ವರನು. ಇದುವೇ ಈ ಮಾಹೇಶ್ವರನ ಹೆಗ್ಗಳಿಕೆ. ಇಷ್ಟನ್ನೇ ನಿರೂಪಿಸಿ ಇಂದಿನ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಅಗಷ್ಟ್, ೧೯೯೧
(ಸ್ಥಾನ ನಾಗಪುರ)

■■

ಆಶೀರ್ವಚನ-೧

# ಮಾಹೇಶ್ವರಪ್ರಶಂಸಾಸ್ಥಲ

ಧರ್ಮಾಸಕ್ತ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ಉದ್ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಮಾಹೇಶ್ವರಸ್ಥಲದಲ್ಲಿ ಅವಾಂತರ ಸ್ಥಲಗಳ ನಾಮನಿರ್ದೇಶನವನ್ನು ಮಾಡುತ್ತ ಕ್ರಮವಾಗಿ ಅವುಗಳ ಸ್ವರೂಪವನ್ನು ಪೂಜ್ಯರು–

ಮಾಹೇಶ್ವರಸ್ಥಲಂ ವಕ್ಷೇ ಯಥೋಕ್ತಂ ಶಂಭುನಾ ಪುರಾ ।
ಮಾಹೇಶ್ವರಪ್ರಶಂಸಾದೌ ಲಿಂಗನಿಷ್ಠಾ ತತಃ ಪರಮ್ ॥

ಪೂರ್ವಾಶ್ರಯನಿರಾಸಶ್ಚ ತಥಾದ್ವೈತನಿರಾಕೃತಿಃ ।
ಆಹ್ವಾನವರ್ಜನಂ ಪಶ್ಚಾದಷ್ಟಮೂರ್ತಿ ನಿರಾಕೃತಿಃ ॥

ಸರ್ವಗತ್ವ ನಿರಾಸಶ್ಚ ಶಿವತ್ತ್ವಂ ಶಿವಭಕ್ತಯೋಃ ॥
ಏವಂ ನವವಿಧಂ ಪ್ರೋಕ್ತಂ ಮಾಹೇಶ್ವರ ಮಹಾಸ್ಥಲಮ್ ॥

ಆದಿತಃ ಕ್ರಮಶೋ ವಕ್ಷ್ಯೇ ಸ್ಥಲಭೇದಸ್ಯ ಲಕ್ಷಣಮ್ ।
ಸಮಾಹಿತೇನ ಮನಸಾ ಶ್ರೂಯತಾಂ ಭವತಾ ಮುನೇ ॥

(ಸಿ. ಶಿ. ೧೦ ; ೪–೭)

ಈ ವಿಧವಾಗಿ ನಿರೂಪಿಸಿದ್ದಾರೆ. ಹೇ ಅಗಸ್ತ್ಯಮಹರ್ಷಿಯೇ ! ಈ ಮಾಹೇಶ್ವರಸ್ಥಲದಲ್ಲಿ ಒಂಭತ್ತು ಅವಾಂತರಸ್ಥಲಗಳಿರುತ್ತವೆ. ಅವಾವುವೆಂದರೆ– ಮಾಹೇಶ್ವರ ಪ್ರಶಂಸಾಸ್ಥಲ, ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯನಿರಸನಸ್ಥಲ, ಅದ್ವೈತನಿರಸನಸ್ಥಲ, ಆಹ್ವಾನವಿಸರ್ಜನ ಸ್ಥಲ, ಅಷ್ಟಮೂರ್ತಿನಿರಸನಸ್ಥಲ, ಸರ್ವಗತ್ವನಿರಸನಸ್ಥಲ, ಶಿವಜಗನ್ಮಯಸ್ಥಲ ಮತ್ತು ಭಕ್ತದೇಹಿಲಿಂಗಸ್ಥಲ ಇವುಗಳೇ ಮಾಹೇಶ್ವರಸ್ಥಲದ ಒಂಭತ್ತು ಅವಾಂತರಸ್ಥಲಗಳು. ಪೂಜ್ಯಪಾದರು ಇವುಗಳ ಸ್ವರೂಪ ವಿಶ್ಲೇಷಣೆಯನ್ನು ಕ್ರಮವಾಗಿ ಮಾಡುವುದಕ್ಕಾಗಿಯೇ ಮೊದಲು ಮಾಹೇಶ್ವರನ ಪ್ರಶಂಸೆಯನ್ನು ಮಾಡಿದ್ದಾರೆ.

ಈ ಗ್ರಂಥದ ಮಾಹೇಶ್ವರಸ್ಥಲದಲ್ಲಿ ಮಾಹೇಶ್ವರನ ಪ್ರಶಂಸೆಯನ್ನು ಮಾಡುತ್ತ ಪೂಜ್ಯಪಾದರು ಅವನ ಲಕ್ಷಣವನ್ನು–

ವಿಶ್ವಸ್ಮಾದಧಿಕೋರುದ್ರೋ ವಿಶ್ವಾನುಗ್ರಹಕಾರಕಃ ।
ಇತಿ ಯಸ್ಯ ಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಃ ಸ್ಮೃತಃ ॥

(ಸಿ. ಶಿ. ೧೦–೮)

ಈ ರೀತಿಯಾಗಿ ನಿರೂಪಿಸಿದ್ದಾರೆ. ಮಹೇಶನ ಇನ್ನೊಂದು ಹೆಸರು ರುದ್ರನೆಂಬುದಾಗಿ ಇದೆ. ತ್ರಿಮೂರ್ತಿಗಳ ಹೆಸರನ್ನು ಹೇಳುವಾಗ ಬ್ರಹ್ಮ, ವಿಷ್ಣು , ಮಹೇಶ ಅಥವಾ ಬ್ರಹ್ಮ, ವಿಷ್ಣು, ರುದ್ರ ಎಂಬುದಾಗಿ ಹೇಳುವುದುಂಟು. ಅಂದರೆ ಮಹೇಶನೇ ರುದ್ರ ಎಂಬ ಅರ್ಥ. ಅಂತೆಯೇ ಪೂಜ್ಯಪಾದರು ಇಲ್ಲಿ ರುದ್ರನ ಸ್ವರೂಪವನ್ನು ವಿವರಿಸುತ್ತ ಅವನನ್ನು ''ವಿಶ್ವಸ್ಮಾದ್ ಅಧಿಕಃ'' ಅಂದರೆ ವಿಶ್ವಕ್ಕಿಂತಲೂ ದೊಡ್ಡವನೆಂಬುದಾಗಿ ಹೇಳಿದ್ದಾರೆ. ಇಲ್ಲಿ 'ವಿಶ್ವ' ಎಂಬ ಶಬ್ದಕ್ಕೆ ಪ್ರಪಂಚವೆಂತಲೂ ನಾರಾಯಣನೆಂತಲೂ ಅರ್ಥಗಳಾಗುತ್ತವೆ. ಅಂದರೆ ರುದ್ರನು ಪ್ರಪಂಚ ಹಾಗೂ ನಾರಾಯಣರಿಗಿಂತಲೂ ದೊಡ್ಡವನಾಗಿದ್ದಾನೆ ಎಂಬ ತಾತ್ಪರ್ಯವು.

ವಿಷ್ಣುವು ಸೃಷ್ಟಿಯನ್ನು ಪರಿಪಾಲಿಸಿದರೆ ರುದ್ರನು ಅದನ್ನು ಸಂಹರಿಸುತ್ತಾನೆ. ಅಂತೆಯೇ 'ರೋದಯತಿ ಇತಿ ರುದ್ರಃ' ಸಂಹಾರ ಸಮಯದಲ್ಲಿ ಎಲ್ಲರನ್ನೂ ಅಳುಸುವುದರಿಂದ ಇವನಿಗೆ ರುದ್ರನೆಂದು ಕರೆದಿದ್ದಾರೆ. ಯಾರ ಮನೆಯಲ್ಲಿಯೇ ಮೃತ್ಯು ಸಂಭವಿಸಿದರೂ ಅಲ್ಲಿ ರೋದನ ಧ್ವನಿಯು ಕೇಳಿ ಬರುತ್ತದೆ. ಅಳುಸುವ ಈ ದೇವನು ಕೇವಲ ಅಳುಸುವುದೇ ಇಲ್ಲ. ಆದರೆ 'ರುದ್=ದುಃಖಂ ದ್ರಾವಯತಿ ಇತಿ ರುದ್ರಃ' ಎಂಬ ವ್ಯುತ್ಪತ್ತಿಗನುಸಾರವಾಗಿ ತನ್ನ,ಭಕ್ತರ ಸಕಲ ದುಃಖಗಳನ್ನು ದೂರಮಾಡುವ ದೇವರೇ ರುದ್ರನು. ಅಂತೆಯೇ 'ಶ್ರೀರುದ್ರ'ದ ಪಠಣ–ಪಾರಾಯಣಾದಿಗಳನ್ನು ಮಾಡುವುದರಿಂದ ಭಕ್ತನ ಸಮಸ್ತ ದುಃಖಗಳು ದೂರವಾಗುತ್ತವೆ. ಆದಕಾರಣ ಸಮಸ್ತ ದುಃಖಗಳ ನಿವಾರಣೆಗಾಗಿ ಪ್ರತಿಯೊಬ್ಬ ವೀರಶೈವನು ತನ್ನ ಇಷ್ಟಲಿಂಗದ ಮೇಲೆ ಜಲಧಾರೆಯನ್ನು ಹಿಡಿದು ಶ್ರೀ ರುದ್ರವನ್ನು ಪಠಿಸುತ್ತ ಅಭಿಷೇಕವನ್ನು ಮಾಡಿದರೆ ಸಮಸ್ತ ದುಃಖಮುಕ್ತನಾಗಿ ಪರಮಾನಂದವನ್ನು ಪಡೆಯುವನು.

ಮೃತ್ಯುವು ಪ್ರಕೃತಿಯ ಸಹಜವಾದ ಧರ್ಮವು. ಪ್ರತಿಯೊಬ್ಬರಿಗೆ ಮೃತ್ಯುವನ್ನು ತಂದೊಡ್ಡುವ ರುದ್ರನು ನಮ್ಮ ಮೇಲೆ ಅನುಗ್ರಹವನ್ನೇ ಮಾಡುತ್ತಾನೆಂಬುದಾಗಿ ತಿಳಿಯಬೇಕು. ಹುಟ್ಟಿದವರೆಲ್ಲರೂ ಸಾಯದೇ ಹಾಗೇ ಉಳಿದಿದ್ದರೆ ಈ ಜಗತ್ತಿನ ಸ್ಥಿತಿ ಏನಾಗುತ್ತಿತ್ತು ? ಅದೆಷ್ಟೋ ಜನ ಸಾಯುತ್ತಿದ್ದರೂ ಹೊಸದಾಗಿ ಹುಟ್ಟಿಬಂದವರಿಗೆ ಸ್ಥಳವೇ ದೊರೆಯದಿರುವ ಇಂದಿನ ಪರಿಸ್ಥಿತಿಯಲ್ಲಿ ಅವರೆಲ್ಲ ಹಾಗೇ ಇದ್ದಿದ್ದರೇ ಎಂತಹ ಸ್ಥಿತಿಪ್ರಾಪ್ತವಾಗುತ್ತಿತ್ತು? ಆದಕಾರಣ ಸಂಹಾರಕಾರ್ಯವನ್ನೆಸಗುವ ರುದ್ರನು ಈ ಲೋಕಕ್ಕೆ ಅನುಗ್ರಹವನ್ನೇ ಮಾಡಿದ್ದಾನೆ. ಶಿವನು ಸೃಷ್ಟಿ, ಸ್ಥಿತಿ, ಸಂಹಾರ ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಕೃತ್ಯ ಸಂಪನ್ನನಾಗಿದ್ದಾನೆ. ಶಿವನ ಈ ಪಂಚಕೃತ್ಯಗಳು ಲೋಕಕಲ್ಯಾಣಕಾರಿಗಳೇ ಆಗಿವೆ. ಒಂದು ಮನೆಯಲ್ಲಿ ಒಂದು ಮಗು ಜನಿಸಿದರೆ ಜನಸಾಮಾನ್ಯರು ಅದನ್ನು ಈಶ್ವರ ಅನುಗ್ರಹವೆಂದು ಭಾವಿಸುತ್ತಾರೆ. ಆದರೆ ಮನೆಯಲ್ಲಿ ಯಾರಾದರೂ ಮಡಿದಾಗ ಅದನ್ನು ಈಶ್ವರಾನುಗ್ರಹವೆಂದು ಭಾವಿಸುವುದಿಲ್ಲ. ಆದರೆ ಶಾಸ್ತ್ರಗಳು ಮಾತ್ರ ಜನನ ಮರಣಗಳೆರಡನ್ನೂ ಶಿವಾನುಗ್ರಹವೆಂಬುದಾಗಿಯೇ ಭಾವಿಸಬೇಕೆಂದು ಉಪದೇಶಿಸುತ್ತವೆ. ಸುಖವನ್ನು ಮಾತ್ರ ಈಶ್ವರಾನುಗ್ರಹವೆಂದು ಭಾವಿಸದೇ ದುಃಖವನ್ನೂ ಸಹ ಆತನ ಅನುಗ್ರಹವೆಂದೇ ಭಾವಿಸಬೇಕು. ಶಿವನು ಜೀವಿಗಳಿಗೆ ದುಃಖವನ್ನು ಕೊಡುವ ಉದ್ದೇಶವೇನೆಂದರೆ, ಅವರನ್ನು ತನ್ನತ್ತ ಅಭಿಮುಖರನ್ನಾಗಿ ಮಾಡುವುದೇ ಆಗಿದೆ. ಸುಖಬಂದಾಗ

ಜೀವಾತ್ಮನು ಪರಮಾತ್ಮನನ್ನು ಮರೆತುಬಿಡುತ್ತಾನೆ. ಆದರೆ ದುಃಖದಲ್ಲಿ ಮಾತ್ರ ಕ್ಷಣ ಕ್ಷಣಕ್ಕೂ ಆತನ ಸ್ಮರಣೆಮಾಡುತ್ತಿರುತ್ತಾನೆ. ಅಂತೆಯೇ ಓರ್ವ ಹಿಂದೀ ಸಂತ ಕವಿಯು–

ದುಃಖಮೇ ಸುಮಿರನ ಸಬಕರ್ರೈ ಸುಖಮೆ ಕರ್‍ಯೆನಕೋಯ್ ।
ಜೋ ಸುಖಮೇ ಸುಮಿರನ ಕರ್‍ಯೆ ಸೋ ದುಃಖ ಕಾಹೇ ಕೋ ಹೋಯ್ ? ॥

ಈ ರೀತಿಯಾಗಿ ಉಪದೇಶಿಸಿದ್ದಾರೆ.

ಸಂಸಾರದಲ್ಲಿ ಸಾಸಿವೆಯಷ್ಟು ಸುಖವಿದ್ದರೆ ಸಾಗರದಷ್ಟು ದುಃಖವಿದೆ. ಯುಗ ಯುಗಗಳಿಂದ ಪ್ರಪಂಚದತ್ತ ಮುಖವಾಗಿ ಹರಿಯುತ್ತಿರುವ ಜೀವಾತ್ಮರನ್ನು ತನ್ನತ್ತ ಆಕರ್ಷಿಸಿಕೊಳ್ಳುವದಕ್ಕಾಗಿ ಶಿವನು ಪ್ರಪಂಚದಲ್ಲಿ ನಾನಾ ಪ್ರಕಾರದ ದುಃಖಗಳನ್ನು ಒಡ್ಡಿದ್ದಾನೆ. ಸಾಂಸಾರಿಕ ದುಃಖತಪ್ತನಾದ ಜೀವನು ನಿಶ್ಚಯವಾಗಿ ಪರಮಾತ್ಮನತ್ತ ಅಭಿಮುಖನಾಗುತ್ತಾನೆ.

ಒಬ್ಬಾನೊಬ್ಬ ರಾಜನು ಶತ್ರುರಾಜರಿಂದ ಆಕ್ರಮಿಸಲ್ಪಟ್ಟು ಪರಾಭವಗೊಂಡು ಕೊನೆಗೆ ರಾಜ್ಯಭ್ರಷ್ಟನಾದನು. ತನ್ನ ಪ್ರಾಣ ಉಳಿಸಿಕೊಳ್ಳುವುದಕ್ಕಾಗಿ ಪಲಾಯನ ಮಾಡಿ ಒಂದು ಗವಿಯಲ್ಲಿ ಅವಿತು ಕುಳಿತುಕೊಂಡನು. ಆ ಗುಹೆಯ ಮುಂಭಾಗದಲ್ಲಿ ಒಂದು ಹೆದ್ದಾರಿ ಇತ್ತು. ಅನೇಕ ಪ್ರಜರು ಆ ದಾರಿಯಿಂದ ಹೋಗಿ ಬರುವುದನ್ನು ಈತ ನೋಡಿದನು. ತನ್ನ ಪ್ರಜರು ತನ್ನತ್ತ ಬರಬೇಕಾದರೆ ಏನು ಮಾಡಬೇಕು ? ಎಂಬುದಾಗಿ ಆಲೋಚಿಸತೊಡಗಿದನು. ಅವನಲ್ಲಿ ಅಮೂಲ್ಯವಾದ ಮೂರು ರತ್ನಗಳಿದ್ದವು. ಆಗ ಅವನು ಯೋಚಿಸಿದ್ದೇನೆಂದರೆ ಜನರು ಈ ದಾರಿಯಿಂದ ಹೋಗುವಾಗ ಒಂದು ರತ್ನ ವನ್ನು ಅವರ ಮುಂದೆ ಚೆಲ್ಲಬೇಕು. ಆಗ ಈ ರತ್ನವನ್ನು ಕಂಡ ಪ್ರಜರು ಇದು ನಮ್ಮ ರಾಜನ ರತ್ನವೆಂಬುದಾಗಿ ಗುರುತಿಸಿ ನನ್ನ ಸಮೀಪ ಬರಬಹುದು. ಹೀಗೆ ಪ್ರಜರನ್ನು ನನ್ನತ್ತ ಬರಮಾಡಿಕೊಂಡು ಅವರ ಸಹಾಯದಿಂದ ಕಳೆದುಹೋದ ರಾಜ್ಯವನ್ನು ಮತ್ತೆ ಸಂಪಾದಿಸಬಹುದು ಎಂಬುದಾಗಿ ವಿಚಾರಿಸಿದನು. ಈರ್ವರು ಯುವಕರು ಆ ದಾರಿಯಲ್ಲಿ ಬರುತ್ತಿರುವುದನ್ನು ಕಂಡು ತಾನು ಅವಿತುಕೊಂಡೇ ಆ ರತ್ನವನ್ನು ರಸ್ತೆಯ ಮೇಲೆ ಎಸೆದನು. ರತ್ನವನ್ನು ಕಂಡ ಯುವಕರು ನಾ ಮುಂದೆ ತಾ ಮುಂದೆ ಎಂದು ಧಾವಿಸಿ ಬಂದು ರತ್ನ ಪ್ರಾಪ್ತಿಗಾಗಿ ಕಲಹ ಮಾಡತೊಡಗಿದರು. ಕೊನೆಗೆ 'ಜಿಸಕೀ ಲಾಠೀ ಉಸಕೀ ಭೈಂಸ್' ಎಂಬ ಉಕ್ತಿಯಂತೆ, ಅವರೀರ್ವರಲ್ಲಿ ಶಕ್ತಿಸಂಪನ್ನನಾದವನು ಆ ರತ್ನವನ್ನು ಪಡೆದು ಆನಂದಿಸಿ ಮನೆಗೆ ಹೋದರೆ ಇನ್ನೋರ್ವನು ಅಳುತ್ತ ತನ್ನ ಮನೆಯತ್ತ ತೆರಳಿ ದನು. ಆದರೆ ಈ ಅಮೂಲ್ಯವಾದ ರತ್ನ ಯಾರದು ? ಎಂಬ ವಿಚಾರವೇ ಅವರಿಗೆ ಹೊಳೆಯಲಿಲ್ಲ, ಇದೇ ಪ್ರಕಾರವಾಗಿ ಆ ರಾಜನು ತನ್ನಲ್ಲಿಯ ಉಳಿದೆರಡು ರತ್ನಗಳನ್ನೂ ಎಸೆದು ನೋಡಿದಾಗ ಯಾರೂ ತನ್ನತ್ತ ಬರಲಿಲ್ಲ, ಎಲ್ಲರೂ ರತ್ನಕ್ಕಾಗಿಯೇ ಬಡಿದಾಡು ವವರು. ಈ ಅಮೂಲ್ಯವಾದ ರತ್ನ ಯಾರದು ಎಂಬ ವಿಚಾರವು ಯಾರ ಮನದಲ್ಲೂ ಹೊಳೆಯಲಿಲ್ಲ, ಕೊನೆಗೆ ನಿರಾಶನಾದ ಆ ಮಹಾರಾಜನು ತನ್ನ ರತ್ನಗಳನ್ನೆಲ್ಲ ಕಳೆದು ಕೊಂಡು ಕ್ರೋಧಾವಿಷ್ಟನಾಗಿ ಕೈಯಲ್ಲಿ ಒಂದು ಕವಣೆಕಲ್ಲನ್ನು ಹಿಡಿದು ಇನ್ನು ಯಾರಾದರೂ ಈ ರಸ್ತೆಯಲ್ಲಿ ಬಂದರೆ ಅವರಿಗೆ ಈ ಕಲ್ಲಿನಿಂದಲೇ ಹೊಡೆಯ

ಬೇಕೆಂಬುದಾಗಿ ಹವಣಿಸಿ ಕುಳಿತುಕೊಂಡನು. ಅಷ್ಟರಲ್ಲಿ ಬೇರೆ ಯುವಕರೀರ್ವರು ಆ ದಾರಿಯಲ್ಲಿ ಬರುವುದನ್ನು ಕಂಡು ಅದರಲ್ಲಿ ಓರ್ವನ ತಲೆಗೆ ಗುರಿಯಿಟ್ಟು ರಾಜನು ಜೋರಾಗಿ ಕಲ್ಲನ್ನು ಒಗೆದನು. ಕಲ್ಲಿನ ಪೆಟ್ಟಿಗೆ ಆ ದಾರಿಹೋಕನ ತಲೆ ಒಡೆದು ರಕ್ತ ಸ್ರವಿಸತೊಡಗಿತು. ಆಗ ಆತನು–ಎಲೋ ಯಾರವನು, ನನ್ನ ತಲೆಗೆ ಕಲ್ಲೆಸೆದವನು ? ಎಂಬುದಾಗಿ ಅರಚುತ್ತ ಅತ್ತಿತ್ತ ಹುಡುಕಾಡುತ್ತ ಗವಿಯ ಕಡೆಗೆ ಬಂದಾಗ ಅಲ್ಲಿ ತಮ್ಮ ದೊರೆಯನ್ನು ಕಂಡು ಆಶ್ಚರ್ಯಚಕಿತನಾದನು. ''ಇದೇನು ಮಹಾರಾಜರೇ ನನಗೆ ಕಲ್ಲೊಗೆದವರು ಯಾರು ?'' ಎಂದು ಕೇಳಿದಾಗ ಮಹಾರಾಜರು ನಸುನಗುತ್ತ ''ಹೌದು ನಿನಗೆ ಕಲ್ಲೊಗೆದವರು ನಾವೇ !'' ನನ್ನ ಪ್ರಜರನ್ನು ನನ್ನತ್ತ ಆಕರ್ಷಿಸಲು ಅಮೂಲ್ಯ ರತ್ನಗಳನ್ನೊಗೆದಾಗ ಇದನ್ನು ಒಗೆದವರು ಯಾರು ಎಂಬುದಾಗಿ ಯಾರೂ ವಿಚಾರಿಸಲಿಲ್ಲ. ಆದರೆ ಕಲ್ಲಿನಿಂದ ಒಗೆದಾಗ ಮಾತ್ರ ನನ್ನ ಪ್ರಜೆಯಾದ ನೀನು ನನ್ನನ್ನು ಹುಡುಕುತ್ತ ನನ್ನ ಸಮೀಪಕ್ಕೆ ಬಂದೆ ಎಂದು ತಿಳಿಹೇಳಿದನು.

ಹೀಗೆ ಪರಮಾತ್ಮನು ಪ್ರಪಂಚದಲ್ಲಿ ಸುಖ ಸಮೃದ್ಧಿಯನ್ನು ಕೊಟ್ಟಾಗ ಸುಖದ ಬೆನ್ನು ಹತ್ತಿ ಹೋಗುವ ಈ ಜೀವಿಗಳು ಪರಮಾತ್ಮನನ್ನು ಮರೆತುಬಿಡುತ್ತಾರೆ. ತನ್ನನ್ನು ಮರೆತು ಸಂಸಾರದಲ್ಲಿ ಮರಳಿ ಮರಳಿ ಬರುತ್ತಿರುವ ಜೀವಿಗಳನ್ನು ತನ್ನತ್ತ ಬರಮಾಡಿಕೊಳ್ಳುವುದಕ್ಕಾಗಿ ಶಿವನು ಸಂಸಾರದಲ್ಲಿ ನಾನಾ ದುಃಖಗಳನ್ನು ತಂದೊಡ್ಡಿದ್ದಾನೆ. ಆದ್ದರಿಂದ ದುಃಖಗಳು ಶಿವನ ಅನುಗ್ರಹಗಳೆಂದೇ ಭಾವಿಸಬೇಕು. ಅಂತೆಯೇ ಅಕ್ಕಮಹಾದೇವಿಯು ಚೆನ್ನಮಲ್ಲಿಕಾರ್ಜುನನನ್ನು ಕುರಿತು ಬೇಡದೆ–

ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ
ಬೇಡಿದೊಡೆ ಇಕ್ಕದಂತೆ ಮಾಡಯ್ಯ
ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ
ನೆಲಕ್ಕೆ ಬಿದ್ದೊಡೆ, ನಾನೆತ್ತಿಕೊಂಬುದಕ್ಕೆ ಮುನ್ನವೆ ಶುನಿ ಎತ್ತಿಕೊಂಬಂತೆ
ಮಾಡಯ್ಯ ಚೆನ್ನಮಲ್ಲಿಕಾರ್ಜುನಯ್ಯ.

ಈ ರೀತಿಯಾಗಿ ಅನಂತ ದುಃಖ ಪರಂಪರೆಯನ್ನೇ ಬೇಡಿಕೊಂಡಿದ್ದಾಳೆ . ಮಹಾಭಾರತದ ಯುದ್ಧ ಪರಿಸಮಾಪ್ತಿಯ ನಂತರ ಶ್ರೀಕೃಷ್ಣನು ಕುಂತಿಯನ್ನುದ್ದೇಶಿಸಿ ''ನಿನಗೇನು ಬೇಕು?'' ಎಂಬುದಾಗಿ ಪ್ರಶ್ನಿಸಲು ಆಗ ಕುಂತೀದೇವಿಯು– 'ಹೇ ಭಗವಂತಾ ! ಇಲ್ಲಿಯವರೆಗೆ ಅನೇಕ ದುಃಖಗಳು ಬಂದಂತೆ ಇನ್ನು ಮುಂದಾದರೂ ಅಂಥ ಕಷ್ಟ ಪರಂಪರೆಯನ್ನೇ ಕರುಣಿಸು' ಎಂದು ಬೇಡಿಕೊಂಡಳು. ಆಗ ಶ್ರೀ ಕೃಷ್ಣನು ಆಶ್ಚರ್ಯಚಕಿತನಾಗಿ ''ಇದೇನು ಇಲ್ಲಿಯವರೆಗೆ ದುಃಖವನ್ನನುಭವಿಸಿದ್ದು ಸಾಕಾಗಲಿಲ್ಲವೆ ? ಮತ್ತೇಕೆ ದುಃಖವನ್ನು ಬೇಡಿಕೊಳ್ಳುತ್ತಿರುವೆ ?'' ಎನ್ನಲು ಕುಂತಿಯು ''ಭಗವಂತನೇ ನಮ್ಮ ಜೀವನದಲ್ಲಿ ಕಷ್ಟಗಳು ಬಂದಾಗಲೆಲ್ಲ ನಿನ್ನನ್ನು ಸ್ಮರಿಸಿದ ಮಾತ್ರಕ್ಕೆ ನೀನು ದಯಮಾಡಿಸಿ ನಮ್ಮೆಲ್ಲರನ್ನು ಸಂರಕ್ಷಿಸಿರುವೆ. ಹೀಗೆ ಮೇಲಿಂದ ಮೇಲೆ ನೀನು ದರ್ಶನವಿತ್ತು ಅನುಗ್ರಹಿಸಿದ ಕಾರಣ ಪದೇ ಪದೇ ನಿನ್ನ ದರ್ಶನದ ಅಭಿಲಾಷೆಗಾಗಿ ನಾನು ಹೀಗೆ ಕೇಳಿಕೊಳ್ಳುತ್ತಿದ್ದೇನೆ'' ಎಂದಳು.

ದುಃಖಗಳು ಬಂದಾಗ ಮನುಷ್ಯನ ಮನಸ್ಸು ದ್ರವೀಭೂತವಾಗುತ್ತದೆ. ಆಗ ಅದು ಬೇಗನೇ ಈಶ್ವರಾಕಾರವಾಗಿ ಪರಿವರ್ತಿಸಲ್ಪಡುತ್ತದೆ. ಆದರೆ ಸುಖಾವಸ್ಥೆಯಲ್ಲಿ ಮನಸ್ಸು ಘನೀಭೂತವಾಗಿರೋಣದರಿಂದ ಅದರಲ್ಲಿ ಬೇಗನೇ ದೇವರಾಕಾರವಾಗುವುದಿಲ್ಲ. ತನಗೆ ಅನೇಕ ಕಷ್ಟ–ಪರಂಪರೆಗಳು ಬಂದಾಗ ದೇವರ ಮುಂದೆ ಕುಳಿತು ಕಣ್ಣೀರು ಸುರಿಸಿ ಶೋಕಿಸಿದರೂ ಅದೊಂದು ಯೋಗವಾಗಿಯೇ ಪರಿವರ್ತಿಸುತ್ತದೆ. ಅಂತೆಯೇ ಅರ್ಜುನನು ಶ್ರೀ ಕೃಷ್ಣನ ಮುಂದೆ ಶೋಕಿಸತೊಡಗಿದ ಗೀತೆಯ ಮೊದಲನೆಯ ಅಧ್ಯಾಯವು ವಿಷಾದಯೋಗವೆಂದು ಕರೆಯಲ್ಪಟ್ಟಿರುತ್ತದೆ. ಸಾಮಾನ್ಯ ವ್ಯಕ್ತಿಗಳ ಮುಂದೆ ಅಳುವುದಕ್ಕಿಂತ ದೇವರ ಮುಂದೆ ಕುಳಿತು ಅತ್ತಾಗ ಆ ದುಃಖಮುಖೇನ ಭಕ್ತ ಹಾಗೂ ಭಗವಂತರ ಸಂಬಂಧವಾಗುವುದರಿಂದ ಅದು ಯೋಗವಲ್ಲದೆ ಮತ್ತೇನು ? ಅಂತೆಯೇ ಶ್ರೀ ರೇಣುಕ ಭಗವತ್ಪಾದರು ಜಗತ್ತಿನ ಜೀವಿಗಳನ್ನು ಅಳಿಸುವುದರ ಮೂಲಕ ಜೀವಿಗಳ ದುಃಖವನ್ನು ದೂರಮಾಡುವ ರುದ್ರನು ವಿಶ್ವಾನುಗ್ರಾಹಕನೆಂಬುದಾಗಿ ಉಪದೇಶಿಸಿದ್ದಾರೆ. ಆಚಾರ್ಯರ ಉಪದೇಶಾನುಸಾರವಾಗಿ ಯಾವ ಸಾಧಕನು ರುದ್ರನಿಂದೊದಗಿದ ರೋದನೆಯನ್ನು ಕೂಡ ಅವನ ಅನುಗ್ರಹವೆಂಬುದಾಗಿ ಭಾವಿಸಿ, ಆ ರುದ್ರನಲ್ಲಿ ಅರ್ಥಾತ್ ಮಹೇಶನಲ್ಲಿ ಸ್ಥಿರವಾದ ಬುದ್ಧಿಯುಳ್ಳವನೇ ಮಾಹೇಶ್ವರನು.

ಮಾಹೇಶ್ವರನ ಯೋಗ್ಯತೆಯನ್ನು ಪುನಃ ವಿವರಿಸುತ್ತ ಶ್ರೀ ರೇಣುಕ ಭಗವತ್ಪಾದರು–

ಬ್ರಹ್ಮಾದ್ಯೈರ್ಮಲಿನಪ್ರಾಯೈರ್ನಿರ್ಮಲೇ ಪರಮೇಶ್ವರೇ ।
ಸಾಮ್ಯೋಕ್ತಿಂ ಯೋ ನ ಸಹತೇ ಸ ವೈ ಮಾಹೇಶ್ವರಾಭಿಧಃ ॥

(ಸಿ. ಶಿ. ೧೦–೯)

ಬ್ರಹ್ಮನೇ ಮೊದಲಾದ ಎಲ್ಲ ದೇವತೆಗಳಲ್ಲಿ ಒಂದಿಲ್ಲೊಂದು ಬಗೆಯ ದೋಷಗಳು ಕಂಡು ಬರುತ್ತವೆ. ಆದರೆ ಶಿವನು ನಿರ್ಮಲನೂ, ನಿರ್ದುಷ್ಟನೂ (ದೋಷರಹಿತನೂ) ಆಗಿರುತ್ತಾನೆ. ಶಿವಭಕ್ತನಾದವನು ತನ್ನ ಇಷ್ಟದೇವರಾದ ಶಿವನ ಸರಿಸಮಾನರಾದವರು ಬೇರಾರೂ ಇಲ್ಲ ಎಂಬ ಭಾವನೆಯುಳ್ಳವರಾಗಿರಬೇಕು. ಅಂದಾಗಲೇ ಅವನು ಮಾಹೇಶ್ವರನೆಂದೆನಿಸಿಕೊಳ್ಳುವನು. 'ದೇವನೊಬ್ಬ ನಾಮ, ಹಲವು' ಎಂಬ ಸಿದ್ಧಾಂತ ವಿದ್ದಾಗಲೂ ಅನೇಕ ನಾಮುಗಳಿಂದ ಪೂಜಿಸಲ್ಪಡುವ ದೇವನೊಬ್ಬನೇನೋ ನಿಜ. ಆದರೆ ನಾವು ಮಾಡುವ ಭಕ್ತಿಯು ಹಲವು ಕಡೆ ಹರಿದು ಹಂಚಿಹೋದಾಗ ಅದು ಫಲಕಾರಿಯಾಗಲಾರದು. ಆದಕಾರಣ ತನಗೆ ಇಷ್ಟವಾದ ಒಂದೇ ನಾಮ, ಒಂದೇ ರೂಪದಲ್ಲಿ ನಿಷ್ಠೆಯನ್ನು ಹೊಂದಬೇಕು. ಮಾಹೇಶ್ವರ ಸ್ಥಲದ ಸಾಧಕನು ತನ್ನ ಇಷ್ಟಲಿಂಗರೂಪವಾದ ಪರಶಿವನಲ್ಲಿಯೇ ನಿತಾಂತ ನಿಷ್ಠೆಯುಳ್ಳವನಾಗಿರುತ್ತಾನೆ. ಸಕಲ ಅನಿಷ್ಟಗಳನ್ನು ದೂರ ಮಾಡುವ ಇಷ್ಟಾರ್ಥವನ್ನು ಅನುಗ್ರಹಿಸುವ ಇಷ್ಟಲಿಂಗವೇ ನಮ್ಮ ಹಸ್ತಪೀಠದಲ್ಲಿ ಗುರು ಕರುಣೆಯಿಂದ ಪ್ರಾಪ್ತವಾಗಿರುವಾಗ ಅನ್ಯದೇವರನ್ನು ಪೂಜಿಸುವ ಗೊಡವೆ ವೀರಶೈವರಿಗಿರುವುದಿಲ್ಲ. ಅಂತೆಯೇ ಮಾಹೇಶ್ವರನು ತನ್ನ ಇಷ್ಟಲಿಂಗಕ್ಕೆ ಸರಿಸಾಟಿಯಾದ ಬೇರೊಬ್ಬ ದೇವರು ಯಾರೂ ಇಲ್ಲವೆಂಬ ದೃಢಭಾವನೆ ಹೊಂದಿರುತ್ತಾನೆ. ಶ್ರೀ ಪೂಜ್ಯಪಾದರು

ಮಾಹೇಶ್ವರನ ಸ್ವರೂಪವನ್ನು ಮತ್ತಷ್ಟು ತಿಳಿಯಪಡಿಸುತ್ತ ಮುಂದೆ–

ಈಶ್ವರಃ ಸರ್ವಭೂತಾನಾಂ ಬ್ರಹ್ಮಾದೀನಾಂ ಮಹಾನಿತಿ ।
ಬುದ್ಧಿಯೋಗಾತ್ ತದಾಸಕ್ತೋ ಭಕ್ತೋ ಮಾಹೇಶ್ವರಃ ಸ್ಮೃತಃ ॥

ಬ್ರಹ್ಮಾದಿದೇವತಾಜಾಲಂ ಮೋಹಿತಂ ಮಾಯಯಾ ಸದಾ ।
ಅಶಕ್ತಂ ಮುಕ್ತಿದಾನೇತು ಕ್ಷಯಾತಿಶಯ ಸಂಯುತಮ್ ॥

ಅನಾದಿಮುಕ್ತೋ ಭಗವಾನೇಕ ಏವ ಮಹೇಶ್ವರಃ ।
ಮುಕ್ತಿದಶ್ಚೇತಿ ಯೋ ವೇದ ಸ ವೈ ಮಾಹೇಶ್ವರಃ ಸ್ಮೃತಃ ॥

ಕ್ಷಯಾತಿಶಯಸಂಯುಕ್ತಾ ಬ್ರಹ್ಮವಿಷ್ಣ್ವಾದಿ ಸಂಪದಃ ।
ತೃಣವನ್ಮನ್ಯತೇ ಯುಕ್ತ್ಯಾ ವೀರಮಾಹೇಶ್ವರಃ ಸದಾ ॥

(ಸಿ. ಶಿ. ೧೦ ; ೧೦–೧೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ–

ಸೃಷ್ಟಿಕರ್ತನಾದ ಬ್ರಹ್ಮನನ್ನೇ ಮೊದಲುಮಾಡಿಕೊಂಡು ಸಮಸ್ತ ಪ್ರಾಣಿಗಳಿಗೆಲ್ಲ ಪ್ರೇರಣಾದಾಯಿಯಾದ ಮಹೇಶ್ವರನೇ (ಮಹಾನ್) ಶ್ರೇಷ್ಠನಾದವನು ಎಂಬುವ ಸ್ಥಿರ ವಿವೇಕದಿಂದ ಆ ಮಹೇಶ್ವರನಲ್ಲಿಯೇ ಆಸಕ್ತನಾದ ಭಕ್ತನೇ ಮಾಹೇಶ್ವರನು. ಎಲ್ಲ ದೇವತೆಗಳು ಮಾಯಾಧೀನರಾಗಿದ್ದಾರೆ. ಆದರೆ ಶಿವನೊರ್ವನು ಮಾಯೆಯನ್ನು ತನ್ನಾಧೀನದಲ್ಲಿಟ್ಟುಕೊಂಡಿದ್ದಾನೆ. ಅಂತೆಯೇ ಇವನು ಅನಾದಿಮುಕ್ತನು. ಸದಾಮುಕ್ತನಾದವನೇ ಮುಕ್ತಿಯನ್ನನುಗ್ರಹಿಸಬಲ್ಲನು. ಅಂಥ ಸಾಮರ್ಥ್ಯವು ಶಿವನೊರ್ವನಿಗೇ ಪ್ರಾಪ್ತವಾಗಿದೆ. ಬ್ರಹ್ಮ ವಿಷ್ಣು ಮೊದಲಾದ ಪದವಿಗಳು ಕ್ಷಯಾತಿಶಯದೋಷದಿಂದ ಯುಕ್ತವಾಗಿವೆ ಎಂಬುದಾಗಿ ತಿಳಿದು ಆ ಪದವಿಗಳನ್ನು ತೃಣದಂತೆ ತಿರಸ್ಕರಿಸಿ ಮಹೇಶ್ವರನಲ್ಲಿ ಅತಿಶಯ ಭಕ್ತಿಸಂಪನ್ನನಾದ ಮಾಹೇಶ್ವರನಿಗೆ ವೀರಮಾಹೇಶ್ವರನೆಂಬುದಾಗಿ ಕರೆಯುತ್ತಾರೆ. ಹೀಗೆ ಉತ್ಕೃಷ್ಟವಾದ ಯೋಗ್ಯತೆಯಿಂದ ಭಕ್ತನು ಮಾಹೇಶ್ವರನಾಗಿ, ಮಾಹೇಶ್ವರನು ವೀರಮಾಹೇಶ್ವರನಾಗಿ ಮುನ್ನಡೆಯುತ್ತಾನೆ. ವೀರಮಾಹೇಶ್ವರನಲ್ಲಿ ವಿರಕ್ತಿ ಭಾವನೆಗಳು ಎದ್ದು ತೋರುತ್ತವೆ. ಇದುವೇ ಸಾಧಕನ ನಿಜವಾದ ಪ್ರಗತಿ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನಿಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಅಗಷ್ಟ್, ೧೯೬೧
(ಸ್ಥಾನ ನಾಗಪುರ)



ಆಶೀರ್ವಚನ-೨

# ಮಾಹೇಶ್ವರಪ್ರಶಂಸಾಸ್ಥಲ

ಶ್ರದ್ಧಾವಂತ ಮುಮುಕ್ಷುಗಳೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಉಪದೇಶಿಸಿದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಮಾಹೇಶ್ವರಸ್ಥಲದ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಮಹೇಶ್ವರನ ಮೇಲೆ ಅತ್ಯಂತ ನಿಷ್ಠೆಯುಳ್ಳವನೇ ಮಾಹೇಶ್ವರನು. ಅವನೇ ವೈರಾಗ್ಯಾದಿ ಗುಣಸಂಪನ್ನನಾಗಿ ವೀರಮಾಹೇಶ್ವರನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆಂಬ ವಿಷಯವನ್ನು ನಿನ್ನೆ ನೀವೆಲ್ಲಾ ಶ್ರವಣ ಮಾಡಿದ್ದೀರಿ. ಇಂದು ಪುನಃ ಆಚಾರ್ಯವರ್ಯರು ಆ ವೀರಮಾಹೇಶ್ವರನ ಸ್ಥಿತಿಯನ್ನೇ–

ಶಬ್ದಸ್ಪರ್ಶಾದಿಸಂಪನ್ನೇ ಸುಖಲೇಶೇ ತು ನಿಸ್ಪೃಹಃ ।
ಶಿವಾನಂದೇ ಸಮುತ್ಕಂಠೋ ವೀರಮಾಹೇಶ್ವರೋ ಭವೇತ್ ॥

(ಸಿ. ಶಿ. ೧೦–೧೪)

ಈ ರೀತಿಯಾಗಿ ಪುನಃ ಉಪದೇಶಿಸಿದ್ದಾರೆ. ನಿಷ್ಠಾಭಕ್ತಿಯುಳ್ಳವನು ಮಾಹೇಶ್ವರನಾದರೆ, ವೈರಾಗ್ಯಾದಿ ಉತ್ಕೃಷ್ಟಗುಣವುಳ್ಳವನು ವೀರಮಾಹೇಶ್ವರನೆಂದೆನಿಸಿಕೊಳ್ಳುವನು. ಸಾಮಾನ್ಯವಾಗಿ ಮನುಷ್ಯನು ವಿಷಯಾಧೀನನಾಗಿರುತ್ತಾನೆ. ಶಬ್ದ, ಸ್ಪರ್ಶಾದಿ ವಿಷಯಗಳಲ್ಲಿ ಪರಿಪೂರ್ಣ ಸುಖವಿರದೇ ಇದ್ದರೂ ಸುಖಲೇಶವು ಸರ್ವರಿಗೂ ಅನುಭವ ಗೋಚರವಾಗುತ್ತದೆ. ವಿಷಯಗಳಲ್ಲಿಯ ಆ ಕಿಂಚಿತ್ ಆನಂದವಾದರೂ ಆತ್ಮದಿಂದಲೇ ಪ್ರಾಪ್ತವಾಗುತ್ತದೆ. ಪ್ರತಿಯೊಬ್ಬರ ಆತ್ಮವು ಆನಂದ ರೂಪವಾಗಿ ಇರುತ್ತದೆ. ಯಾರು ಎಲ್ಲವನ್ನೂ ಬಿಟ್ಟು ತನ್ನ ಆತ್ಮದ ಸಮೀಪಕ್ಕೆ ಹೋಗುತ್ತಾರೆಯೋ ಅವರು ಪೂರ್ಣವಾದ ಆನಂದವನ್ನು ಅನುಭವಿಸುತ್ತಾರೆ. ಇನ್ನು ತನ್ನ ಆತ್ಮವನ್ನು ಮರೆತು ಅನ್ಯ ವಸ್ತು ಅಥವಾ ವ್ಯಕ್ತಿಗಳ ಸಮೀಪಕ್ಕೆ ಹೋದಾಗ ಅವರಿಂದ ಅಲ್ಪಸುಖವನ್ನು ಪಡೆದರೂ ಅತಿಯಾದ ದುಃಖವನ್ನೇ ಅನುಭವಿಸುತ್ತಾರೆ. ಆದಕಾರಣ ನಿರತಿಶಯ ಆನಂದವನ್ನು ಪಡೆಯಬೇಕಾದರೆ ವೈಷಯಿಕ ಸುಖದಿಂದ ದೂರವಿರಬೇಕಾಗುವುದು. ಇಂದ್ರಿಯಗಳು ಗ್ರಹಗಳಾದರೆ ವಿಷಯಗಳು ಅತಿಗ್ರಹಗಳಾಗಿರುತ್ತವೆ.

ಜನಕ ಮಹಾರಾಜನು ಒಂದಾನೊಂದು ಸಮಯ ಬ್ರಹ್ಮಜ್ಞಾನಿಗಳ ಸಮ್ಮೇಲನವನ್ನು ಕರೆದು, ಸಮ್ಮಿಲಿತರಾದ ಜ್ಞಾನಿಗಳಲ್ಲಿ ಯಾರು ಸರ್ವಶ್ರೇಷ್ಠ ಬ್ರಹ್ಮಜ್ಞಾನಿಯೋ ಅವರಿಗೆ ಸಾವಿರ ಗೋವುಗಳನ್ನು ದಾನಕೊಡುವುದಾಗಿ ಘೋಷಿಸಿದನು. ನಿಮ್ಮಲ್ಲಿ ಯಾರು ಸರ್ವಶ್ರೇಷ್ಠ ಬ್ರಹ್ಮಜ್ಞಾನಿಯೋ ಅವರು ಎದ್ದುನಿಂತು ಸಭೆಯಲ್ಲಿ ಅದನ್ನು

ಸಮರ್ಥಿಸಿಕೊಂಡು ಈ ಗೋವುಗಳನ್ನು ತಮ್ಮ ಆಶ್ರಮಕ್ಕೆ ತೆಗೆದುಕೊಂಡು ಹೋಗಬಹುದು ಎಂಬುದಾಗಿ ಘೋಷಿಸಿದನು. ಆಗ ಅಲ್ಲಿ ಕೂಡಿದವರೆಲ್ಲ ಬ್ರಹ್ಮಜ್ಞಾನಿಗಳೇ ಇದ್ದರೂ ಒಬ್ಬರೂ ಎದ್ದು ನಿಲ್ಲುವ ಸಾಹಸವನ್ನೇ ಮಾಡಲಿಲ್ಲ. ಈ ಸ್ಥಿತಿಯನ್ನು ಕಂಡಾಗ ಜನಕ ಮಹಾರಾಜನ ಮನದಲ್ಲಿ ಇವರೆಲ್ಲರ ಬ್ರಹ್ಮನಿಷ್ಠತ್ವದ ಬಗ್ಗೆ ಸಂದೇಹ ಸುಳಿಯ ತೊಡಗಿತು. ಮಹಾರಾಜರ ಈ ಭಾವನೆಯನ್ನರಿತ ಯಾಜ್ಞವಲ್ಕ್ಯ ಮಹರ್ಷಿಗಳು ಸಭೆಯಲ್ಲಿ ಎದ್ದು ನಿಂತು ತನ್ನೋರ್ವ ಶಿಷ್ಯನನ್ನುದ್ದೇಶಿಸಿ ''ಹೇ ಸೌಮ್ಯ ! ಈ ಗೋವುಗಳನ್ನೆಲ್ಲ ನಮ್ಮ ಆಶ್ರಮಕ್ಕೆ ಹೊಡೆದುಕೊಂಡು ನಡೆ'' ಎಂಬುದಾಗಿ ಆಜ್ಞಾಪಿಸಿದರು. ಆಗ ಉಳಿದೆಲ್ಲ ಮಹರ್ಷಿಗಳು– ''ಏನು ನೀನೋರ್ವನೇ ಬ್ರಹ್ಮಜ್ಞಾನಿಯೋ ? ನಾವು ಬ್ರಹ್ಮಜ್ಞಾನಿಗಳಲ್ಲವೆ ?'' ಮಹರ್ಷಿಗಳ ನುಡಿಗಳನ್ನಾಲಿಸಿದ ಯಾಜ್ಞವಲ್ಕ್ಯರು ''ನಿಮ್ಮ ಬ್ರಹ್ಮನಿಷ್ಠತ್ವದಲ್ಲಿ ವಿಶ್ವಾಸವಿದ್ದರೆ ನೀವಾರೂ ಅದೇಕೆ ತಾನೆ ಎದ್ದು ನಿಲ್ಲಲಿಲ್ಲ ? ನಾನು ಶ್ರೇಷ್ಠ ಬ್ರಹ್ಮಜ್ಞಾನಿಯೆಂಬುದಾಗಿ ಎದ್ದು ನಿಂತಿಲ್ಲ ''ವಯಂ ಗೋಕಾಮಾಃ'' ನಮಗೆ ಆಕಳುಗಳು ಬೇಕಾಗಿವೆ ಅದಕ್ಕಾಗಿ ಅವುಗಳನ್ನು ತೆಗೆದುಕೊಂಡು ಹೋಗುತ್ತಿದ್ದೇವೆ'' ಎಂದರು. ಯಾಜ್ಞವಲ್ಕ್ಯರ ನುಡಿಯನ್ನು ಕೇಳಿ ನಾವು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟೇ ಈ ಗೋವುಗಳನ್ನು ತೆಗೆದುಕೊಂಡು ಹೋಗತಕ್ಕದ್ದು ಎಂದು ಪ್ರತಿಯೊಬ್ಬರು ನಾನಾವಿಧ ಪ್ರಶ್ನೆಗಳನ್ನು ಕೇಳಲು ಪ್ರಾರಂಭಿಸಿದರು. ಎಲ್ಲರ ಪ್ರಶ್ನೆಗಳಿಗೆ ಸಮರ್ಪಕ ಉತ್ತರವನ್ನು ಕೊಡುತ್ತಿದ್ದಾಗ ಜಾರತ್ಕಾರವ ಎಂಬ ಋಷಿಯು ಹೀಗೆ ಪ್ರಶ್ನಿಸಿದನು–''ಕತಿ ಗ್ರಹಾಃ ?'' ''ಕತ್ಯತಿ ಗ್ರಹಾಃ ?'' ಈ ಪ್ರಪಂಚದಲ್ಲಿ ಗ್ರಹಗಳು ಯಾವವು ? ಮತ್ತು ಎಷ್ಟು ? ಅತಿಗ್ರಹಗಳು ಯಾವವು ? ಆಗ ಯಾಜ್ಞವಲ್ಕ್ಯರು ಅಷ್ಟೌಗ್ರಹಾಃ, ಅಷ್ಟಾವತಿ ಗ್ರಹಾಃ, ಅಂದರೆ ಗ್ರಹಗಳು ಎಂಟು ಅತಿಗ್ರಹಗಳೂ ಎಂಟು ಎಂಬುದಾಗಿ ಉತ್ತರಿಸಿ ಅದರ ವಿಶ್ಲೇಷಣೆಯನ್ನು ಹೀಗೆ ಮಾಡಿದ್ದಾರೆ– ಘ್ರಾಣ, ವಾಕ್, ಜಿಹ್ವಾ, ಚಕ್ಷು, ಶ್ರೋತ್ರ, ಮನ, ಹಸ್ತ ಹಾಗೂ ತ್ವಕ್ ಇವು ಎಂಟು ಗ್ರಹಗಳು. ಇವು ತಮ್ಮ ತಮ್ಮ ವಿಷಯಗಳನ್ನು ಗ್ರಹಣ ಮಾಡುವುದರಿಂದ ಇವುಗಳಿಗೆ ಗ್ರಹಗಳೆಂದು ಕರೆಯುತ್ತಾರೆ. ಅದರಂತೆ ಗಂಧ, ವಚನ, ರಸ, ರೂಪ, ಶಬ್ದ, ಕಾಮ, ಕರ್ಮ ಹಾಗೂ ಸ್ಪರ್ಶ ಎಂಬ ಈ ಎಂಟು ವಿಷಯಗಳಿಗೆ ಅತಿಗ್ರಹಗಳೆಂದು ಕರೆಯುತ್ತಾರೆ. ವಿಷಯಗಳು ಇಂದ್ರಿಯಗಳಿಗಿಂತಲೂ ಬಲವಂತವಾಗಿರುವುದರಿಂದ ಇವುಗಳಿಗೆ ಅತಿಗ್ರಹಗಳೆಂದು ಕರೆದಿದ್ದಾರೆ. ಇಂದ್ರಿಯಗಳು ವಿಷಯಗಳನ್ನು ಅನುಭವಿಸಿ ಅನುಭವಿಸಿ ಶಕ್ತಿಹೀನಗಳಾಗುತ್ತವೆ. ಆದರೆ ವಿಷಯಗಳು ಮಾತ್ರ ಸದಾ ಶಕ್ತಿಶಾಲಿಗಳೇ ಆಗಿರುತ್ತವೆ. ಶಬ್ದವನ್ನು ಕೇಳಿ ಕೇಳಿ ಕಿವಿಯು ಕೊನೆಗೊಮ್ಮೆ ಕಿವುಡು ಆಗುವುದು. ಆದರೆ ಶಬ್ದ ಮಾತ್ರ ನಿತ್ಯನೂತನವಾಗಿ ಹಾಗೆಯೇ ಇರುತ್ತದೆ. ಹೀಗೆ ಪ್ರತಿಯೊಂದು ಇಂದ್ರಿಯಗಳಿಗಿಂತಲೂ ವಿಷಯಗಳು ಪ್ರಬಲವಾಗಿರುವುದರಿಂದ ಈ ಅತಿಗ್ರಹಗಳಾದ ವಿಷಯಗಳನ್ನು ಬೆನ್ನು ಹತ್ತಿದ ಮನುಷ್ಯನು ತನ್ನ ಜೀವನದ ಕೊನೆಯ ಗಳಿಗೆಯಲ್ಲಿ ಅನಂತ ದುಃಖವನ್ನೇ ಅನುಭವಿಸಬೇಕಾಗುತ್ತದೆ. ಅಂತೆಯೇ ವೀರ ಮಾಹೇಶ್ವರನು ತಿಲಮಾತ್ರ ಸುಖವನ್ನು ಕೊಡುವ ಶಬ್ದ ಸ್ಪರ್ಶಾದಿ ವಿಷಯಗಳಲ್ಲಿ ನಿಸ್ಪೃಹನಾಗಿ ಅಖಂಡ ಶಿವಾನಂದವನ್ನು ಪಡೆಯುವುದರಲ್ಲಿ ಉತ್ಕಂಠಿತನಾಗಿರುತ್ತಾನೆ. ಅಂತೆಯೇ ಈ ಮಾಹೇಶ್ವರನಿಗೆ 'ವೀರ'ನೆಂಬ ಉಪಾಧಿಯು ಪ್ರಾಪ್ತವಾಗಿದೆ.

ವಿಷಯಗಳು ತನ್ನೆದುರಿಗಿದ್ದಾಗಲೂ ಅವುಗಳ ಬಗ್ಗೆ ಮನದಲ್ಲಿ ವಿರತಿಯನ್ನು ತಾಳುವುದೇ ವೀರವೃತ್ತಿಯು. ಇಂತಹ ವೀರವೃತ್ತಿಯುಳ್ಳ ಮಾಹೇಶ್ವರನೇ ವೀರಮಾಹೇಶ್ವರನು.

ಪ್ರಪಂಚವು ಶಬ್ದ-ಸ್ಪರ್ಶಾದಿ ವಿಷಯಗಳಿಂದ ಪರಿಪೂರ್ಣವಾಗಿದೆ. ಆದರೆ ಪರಮಾತ್ಮನಲ್ಲಿ ಈ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳಾವುವೂ ಇಲ್ಲ. ಅಂತೆಯೇ ಅವನನ್ನು ''ಅಶಬ್ದಂ, ಅಸ್ಪರ್ಶಂ, ಅರೂಪಂ ; ಅವ್ಯಯಂ'' ಎಂಬುದಾಗಿ ಶಾಸ್ತ್ರಗಳು ಪರಮಾತ್ಮನ ಸ್ವರೂಪವನ್ನು ವರ್ಣಿಸಿವೆ. ಪಂಚಮಹಾಭೂತಗಳಲ್ಲಿ ಕೊನೆಯದಾದ ಪೃಥ್ವಿ ತತ್ತ್ವದಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಪಂಚ ವಿಷಯಗಳು ಅನುಭವಕ್ಕೆ ಬರುತ್ತವೆ. ಆದರೆ, ಜಲತತ್ತ್ವದಲ್ಲಿ ಶಬ್ದ, ಸ್ಪರ್ಶ, ರೂಪ, ರಸ ಎಂಬ ನಾಲ್ಕು ವಿಷಯಗಳು ಮಾತ್ರ ಅನುಭವಗೋಚರವಾಗುತ್ತವೆ. ಅಲ್ಲಿ ಗಂಧಾನುಭೂತಿ ಯಾಗುವುದಿಲ್ಲ. ಅದರಂತೆ 'ತೇಜ' ತತ್ತ್ವದಲ್ಲಿ ಶಬ್ದ, ಸ್ಪರ್ಶ ಮತ್ತು ರೂಪಗಳೆಂಬ ವಿಷಯಗಳು ಅನುಭವಕ್ಕೆ ಬರುತ್ತವೆ. ವಾಯುತತ್ತ್ವದಲ್ಲಿ ಶಬ್ದ-ಸ್ಪರ್ಶಗಳೆಂಬ ಕೇವಲ ಎರಡೇ ವಿಷಯಗಳು ಗೋಚರವಾಗುತ್ತವೆ. ಇನ್ನು ಎಲ್ಲಕ್ಕೂ ಮೊದಲಿನದಾದ ಆಕಾಶ ತತ್ತ್ವದಲ್ಲಿ 'ಶಬ್ದ', ವಿಷಯವೊಂದೇ ಇದೆ. ಇನ್ನು ಆ ಆಕಾಶಕ್ಕೆ ಅವಕಾಶ ಕೊಟ್ಟಿರುವ ಪರಮಾತ್ಮನಲ್ಲಿ ಆ 'ಶಬ್ದ' ವಿಷಯ ಕೂಡ ಇಲ್ಲ. ಹೀಗೆ ಪೃಥ್ವಿಯಿಂದ ಆಕಾಶದವರೆಗೆ ನಾವು ಸೂಕ್ಷ್ಮವಾಗಿ ವೀಕ್ಷಿಸುತ್ತ ಬಂದಾಗ ಒಂದೊಂದು ವಿಷಯಗಳು ಕಡಿಮೆಯಾಗುತ್ತ ಆಗುತ್ತ ಪರಮಾತ್ಮ ಸ್ವರೂಪವನ್ನು ತಲುಪಿದಾಗ ಒಂದೂ ವಿಷಯವು ಅಲ್ಲಿ ಅನುಭವಕ್ಕೆ ಬರುವುದಿಲ್ಲ. ಅಂತೆಯೇ ಆ ವಿಷಯರಹಿತನಾದ ಪರಮಾತ್ಮನನ್ನು ಅಶಬ್ದಂ-ಅಸ್ಪರ್ಶಂ ಎಂಬುದಾಗಿ ಶಾಸ್ತ್ರಗಳು ಬೋಧಿಸಿವೆ. ಆ ಪರಮಾತ್ಮನು ಆನಂದರೂಪನಾಗಿದ್ದಾನೆ. ಅವನ ಆನಂದದ ಒಂದು ಕಣವನ್ನು ಪಡೆದುಕೊಂಡ ವಿಷಯಗಳು ಕ್ಷಣಮಾತ್ರ ಆನಂದ ವಾಗಿ ತೋರಿದರೂ ಕೊನೆಗೆ ದುಃಖವನ್ನೇ ತಂದುಕೊಡುತ್ತವೆ. ಅಂತೆಯೇ ಮಾಘ ಕವಿಯು-'ಅಪಾತರಮ್ಯಾ ವಿಷಯಾಃ ಪರ್ಯಂತ ಪರಿತಾಪಿನಃ' ಎಂಬುದಾಗಿ ನಿರೂಪಿಸಿ ದ್ದಾನೆ. ಅಂದರೆ ವಿಷಯಗಳು ತಾತ್ಕಾಲಿಕವಾಗಿ ಸುಖವನ್ನು ಕೊಟ್ಟರೂ ಕೊನೆಗೆ ದುಃಖ ವನ್ನೇ ತಂದೊಡ್ಡುತ್ತವೆ. ಅಂತೆಯೇ ವೀರಮಾಹೇಶ್ವರನು ವಿಷಯಗಳಿಂದ ವಿದೂರ ನಾಗಿರಲು ಸದಾಪ್ರಯತ್ನಿಸುತ್ತಿರುತ್ತಾನೆ. ಸದಾ ಅಂತರ್ಮುಖಿಯಾಗಿ ಆತ್ಮಾನಂದವನ್ನು ಅನುಭವಿಸುವ ಉತ್ಕಂಠತೆಯುಳ್ಳ ವೀರ ಮಾಹೇಶ್ವರನು-

''ಪರಸ್ತ್ರೀ ಸಂಗನಿರ್ಮುಕ್ತಃ ಪರದ್ರವ್ಯಪರಾಙ್ಮುಖಃ'' ।

(ಸಿ. ಶಿ. ೧೦-೧೫)

ಎಂಬ ಆಚಾರ್ಯೋಕ್ತಿಗನುಸಾರವಾಗಿ ಪರಧನ ಪರಸತಿಯಿಂದ ಬಹುದೂರನಾಗಿರು ತ್ತಾನೆ. ಇಲ್ಲಿಯ ಧನ ಮತ್ತು ಸ್ತ್ರೀ ಶಬ್ದಗಳಿಗೆ 'ಪರ' ಎಂಬ ವಿಶೇಷಣವನ್ನು ಹಚ್ಚಲಾಗಿದೆ. ಅಂದರೆ ವೀರಮಾಹೇಶ್ವರನು ಸ್ತ್ರೀಸಂಗ ನಿರ್ಮುಕ್ತನೂ ಧನ ಪರಾಙ್ಮುಖನೂ ಇರ ಬೇಕೆಂಬ ನೇಮವಿರುವುದಿಲ್ಲ. ಗೃಹಸ್ಥಾಶ್ರಮದಲ್ಲಿದ್ದು ಸ್ವಸ್ತ್ರೀ ಮತ್ತು ಸ್ವಧನದಲ್ಲಿ ಮಾತ್ರ ರತಿಯನ್ನು ಹೊಂದಿ ವೀರಮಾಹೇಶ್ವರಸ್ಥಿತಿಯನ್ನು ಪಡೆಯಬಹುದು.

ಷಡ್‌ರಿಪುಗಳಲ್ಲಿಯ ಕಾಮವು ಧರ್ಮವಿರೋಧವಾಗಿರದಿದ್ದರೆ ಅದು ಗ್ರಾಹ್ಯ ವೆಂಬುದಾಗಿ–''ಧರ್ಮಾವಿರುದ್ಧೋಲೋಕೇಽಸ್ಮಿನ್‌ಕಾಮೋಽಸ್ಮಿ ಭರತರ್ಷಭ'' ಎಂಬ ಗೀತೋಕ್ತಿಯಂತೆ ಧರ್ಮಸಮ್ಮತವಾದ ಕಾಮವು ಗೃಹಸ್ಥರಿಗೆ ಗ್ರಾಹ್ಯವಾಗಿದೆ. ಯಾರಿಗೆ ಇಂದ್ರಿಯ ನಿಗ್ರಹವು ಅಸಾಧ್ಯವಾಗಿದೆಯೋ ಅಂಥವರು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ತನ್ನ ಧರ್ಮಪತ್ನಿಯೊಂದಿಗೆ ಕಾಮಸುಖವನ್ನನುಭವಿಸಲು ಧರ್ಮಶಾಸ್ತ್ರದ ಒಪ್ಪಿಗೆ ಇದೆ. ವೀರಮಾಹೇಶ್ವರನಿಗೆ ಸಂಸಾರವನ್ನು ತ್ಯಾಗಮಾಡಬೇಕೆಂಬ ನಿಯಮವಿಲ್ಲ. ಹಾಗಿದ್ದರೆ ಪೂಜ್ಯಪಾದರು 'ಸ್ತ್ರೀಸಂಗ ನಿರ್ಮುಕ್ತಃ' ಎಂಬುದಾಗಿ ಹೇಳುತ್ತಿದ್ದರು. ಆದರೆ ಇಲ್ಲಿ 'ಪರಸ್ತ್ರೀಸಂಗನಿರ್ಮುಕ್ತಃ' ಎಂಬುದಾಗಿ ಉಪದೇಶಿಸಿದ್ದಾರೆ. ಪರಸ್ತ್ರೀಸಂಗವು ದೋಷ ದಾಯಿಯಾಗಿದೆ. ವೀರಮಾಹೇಶ್ವರನ ಅಂತಃಕರಣವು ಅವನ ಅನುಷ್ಠಾನಬಲದಿಂದ ಅತ್ಯಂತ ಪರಿಶುದ್ಧವಾಗಿರೋಣದರಿಂದ ಅವನೆಂದಿಗೂ ಪರಸ್ತ್ರೀಯಾಭಿಲಾಷೆಯನ್ನು ಮಾಡಲಾರನು.

ಕಾಶೀಮಹಾರಾಜನ ದರ್ಬಾರದಲ್ಲಿ ಒಬ್ಬ ಸೇವಕನು ಮಹಾರಾಣಿಯನ್ನು ಕಂಡು, ಅವಳ ಸ್ವುರದ್ರೂಪಕ್ಕೆ ಮರುಳಾಗಿ ಅವಳ ಸಂಗಮಾಡಬೇಕೆಂಬ ಅಭಿಲಾಷೆ ಹೊಂದಿ ದನು. ಅಸಾಧ್ಯವಾದುದನ್ನು ಅಪೇಕ್ಷಿಸಿ ಸುಮ್ಮನೇ ಚಿಂತಿಸತೊಡಗಿದನು. ನಿದ್ರೆ ನೀರಡಿಕೆ ಗಳಿಲ್ಲದೆ ಮಹಾರಾಣಿಯ ವ್ಯಸನದಲ್ಲಿಯೇ ಕ್ಷೀಣಿಸತೊಡಗಿದನು. ಪತಿಯ ಈ ದುರವಸ್ಥೆ ಯನ್ನು ಕಂಡ ಅವನ ಪತ್ನಿಯು ಚಿಂತೆಯ ಕಾರಣವೇನೆಂಬುದಾಗಿ ಕೇಳಿದಳು. ಆಗ ಆ ಸೇವಕನು ತನ್ನ ಮನದಿಂಗಿತವನ್ನು ತಿಳಿಸಿ ಮಹಾರಾಣಿಯು ನನಗೆ ದೊರೆಯದಿದ್ದರೆ ನಾನು ಹೀಗೆಯೇ ಸತ್ತುಹೋಗಿ ಬಿಡುತ್ತೇನೆ ಎಂದು ಹೇಳಿದನು. ಗಂಡನ ಈ ದುರವಸ್ಥೆ ಯನ್ನು ಕಂಡು, ಹೇಗಾದರೂ ಮಾಡಿ ಗಂಡನ ಪ್ರಾಣವನ್ನು ಉಳಿಸಬೇಕೆಂಬುದಾಗಿ ಯೋಚಿಸಿ ಮಹಾರಾಣಿಯ ಸಮೀಪಕ್ಕೆ ಹೋಗಿ ಪರಿಪರಿಯಾಗಿ ಅವಳ ಸೇವೆಗೈದು ಮಹಾರಾಣಿಯನ್ನು ಮೆಚ್ಚಿಸಿಕೊಂಡಳು. ಇವಳ ಸೇವೆಯಿಂದ ಸಂತುಷ್ಟಳಾದ ಮಹಾರಾಣಿಯು–ನಿನಗೇನು ಬೇಕು ಬೇಡು, ಬೇಡಿದ್ದನ್ನು ಕೊಡುತ್ತೇನೆ ಎಂದು ಹೇಳಿದಳು. ಆಗ ಆ ದಾಸಿಯು ತನ್ನ ಗಂಡನ ಅಭಿಲಾಷೆಯನ್ನು ವ್ಯಕ್ತಪಡಿಸಿದಳು. ಈ ಮಾತನ್ನು ಕೇಳಿದ ಮಹಾರಾಣಿಯು ಮೊದಲು ನಕ್ಕು ಕೊನೆಗೆ ಹೀಗೆ ಹೇಳಿದಳು–'ನಿನ್ನ ಗಂಡನ ಜಾತಿ ಹಾಗೂ ಸಂಸ್ಕಾರಗಳು ಹೀನಗಳಾಗಿವೆ. ಇಂತಹ ಸ್ಥಿತಿಯಲ್ಲಿ ಅವನ ಸಂಬಂಧವು ನನ್ನ ಜೊತೆಗೆ ಆಗಲು ಸಾಧ್ಯವಿಲ್ಲ. ಆದರೆ ಅವನು ಗಂಗಾನದಿಯ ದಡದಲ್ಲಿ ಗುಡಿಸಲನ್ನು ಹಾಕಿಕೊಂಡು ಪ್ರತಿದಿನ ಗಂಗೆಯಲ್ಲಿ ಮಿಂದು ಕೇವಲ ಫಲಾಹಾರಿಯಾಗಿ ಪಂಚಾಕ್ಷರ ಮಹಾಮಂತ್ರವನ್ನು ಜಪಿಸುತ್ತ ಹನ್ನೆರಡು ವರ್ಷಗಳ ಪರ್ಯಂತ ತಪಸ್ಸನ್ನಾಚರಿಸಿ ಪರಿಶುದ್ಧನಾದ ಮೇಲೆ ಅದರ ಬಗ್ಗೆ ವಿಚಾರ ಮಾಡುವಾ' ಎಂದು ರಾಣಿ ಹೇಳಿದಳು.

ತನ್ನ ಪತ್ನಿಯ ಮುಖಾಂತರ ಮಹಾರಾಣಿಯ ಸಂದೇಶವನ್ನು ಕೇಳಿದ ಆ ಸೇವಕನು ಗಂಗಾನದೀ ದಡದಲ್ಲಿ ಒಂದು ಗುಡಿಸಲನ್ನು ನಿರ್ಮಿಸಿಕೊಂಡು ಅಲ್ಲಿಯೇ ವಾಸ ಮಾಡಿ ಫಲಾಹಾರಿ, ಜಲಾಹಾರಿಯಾಗಿ ೧೨ ವರ್ಷಗಳ ಕಾಲ ಮಹಾಮಂತ್ರವನ್ನು ನಿರಂತರ ವಾಗಿ ಜಪಿಸುತ್ತ ತಪಸ್ಸನ್ನಾಚರಿಸಿದನು. ಈ ತಪಸ್ಸಿನ ಫಲವಾಗಿ ಅವನು ಪಾಪ ಮುಕ್ತ

ನಾದನಲ್ಲದೆ ಅವನ ಖ್ಯಾತಿಯು ದಶದಿಶೆಗಳಲ್ಲಿ ಹರಡಿತು. ಅನೇಕ ಜನರು ದರ್ಶನಾರ್ಥಿಗಳಾಗಿ ಬಹಳ ದೂರ ದೂರದಿಂದ ಬರತೊಡಗಿದರು. ಈತನ ಖ್ಯಾತಿಯನ್ನು ಕೇಳಿದ ಕಾಶೀ ಮಹಾರಾಜನೂ ಸಹ ತಮ್ಮ ಧರ್ಮಪತ್ನಿ ಸಮೇತರಾಗಿ ಈತನ ದರ್ಶನಕ್ಕೆ ಬಂದರು. ಆಗ ಮಹಾರಾಣಿಯು ಈತನನ್ನು ಗುರುತಿಸಿ–ಓಹೋ ! ನನಗಾಗಿ ತಪಸ್ಸು ಮಾಡಿದವನು ಇವನೇ ಎಂದು ಯೋಚಿಸಿ ಎಲ್ಲರನ್ನೂ ಹೊರಗೆ ಕಳುಹಿಸಿ ಇವನ ಭಾವನೆಗಳನ್ನು ಪರೀಕ್ಷಿಸಲೋಸುಗ–''ಹೇ ಯತಿವರ್ಯರೇ ! ಯಾರಿಗಾಗಿ ನೀವು ತಪಗೈದಿರುವಿರೋ ಆ ಮಹಾರಾಣಿಯು ನಿಮ್ಮೆದುರಿನಲ್ಲಿಯೇ ನಿಂತಿದ್ದಾಳೆ.'' ಎಂಬುದಾಗಿ ಹೇಳಿದಳು–ಮಹಾರಾಣಿಯ ಈ ಮಾತುಗಳನ್ನು ಕೇಳಿ ಇಂದು ಮಹಾ ತಪಸ್ವಿಯಾದ ಆ ಸೇವಕನು ಮಹಾರಾಣಿಗೆ ಸಾಷ್ಟಾಂಗವೆರಗಿ–ಹೇ ತಾಯಿ ! ಕ್ಷುದ್ರ ವಾಸನೆಯುಳ್ಳ ನಾನು ನಿನ್ನ ಉಪದೇಶವನ್ನು ಕೇಳಿ ಅದರಂತೆ ಆಚರಿಸಿ ಇಂದು ಅತ್ಯಂತ ನಿರ್ಮಲನಾಗಿದ್ದೇನೆ. ನನ್ನ ಮನದಲ್ಲಿ ಯಾವ ವಿಷಯ ವಾಸನೆಯೂ ಇರುವುದಿಲ್ಲ. ಕಾಜಿನ ಮಣಿಯನ್ನು ಅಭಿಲಕ್ಷಿಸುವವನಿಗೆ ಚಿಂತಾಮಣಿಯು ದೊರೆತಂತಾಗಿದೆ. ಆದ್ದರಿಂದ ನನ್ನನ್ನು ಮನ್ನಿಸು ಎಂಬುದಾಗಿ ಬೇಡಿಕೊಂಡನು. ತಪಸ್ಸಿನ ಮಹತಿಯನ್ನರಿತ ಮಹಾರಾಣಿಯು ಸಂತುಷ್ಟ ಚಿತ್ತಳಾಗಿ ತನ್ನ ಅರಮನೆಗೆ ತೆರಳಿದಳು.

ಅಂತಃಕರಣ ಪರಿಶುದ್ಧವಾದಾಗ ಪರಸ್ತ್ರೀ, ಪರಧನದ ಅಭಿಲಾಷೆಗಳು ಆ ಮನದಲ್ಲಿ ಒಡಮೂಡಲಾರವು. ವೀರಮಾಹೇಶ್ವರನು ನಿತಾಂತ ನಿರ್ಮಲ ಸ್ವಾಂತನಾಗಿರೋಣವುದರಿಂದ ಪರಸ್ತ್ರೀ ಪರಧನದ ಅಭಿಲಾಷೆಗಳು ಅವನಲ್ಲಿ ಎಂದೂ ಒಡಮೂಡಲಾರವು.

ಈ ವೀರಮಾಹೇಶ್ವರನು ಪರದ್ರವ್ಯದಿಂದ ಪರಾಙ್ಮುಖನಾಗಿ ಸ್ವಕಷ್ಟಾರ್ಜಿತ ಸಂಪತ್ತನ್ನು ಮಾತ್ರ ಉಪಭೋಗಿಸುವನು. ಹಣದ ಬಗ್ಗೆ ಅತಿಯಾಶೆಯನ್ನು ಪಡದೆ ದೊರೆತದ್ದರಲ್ಲಿ ಸಮಾಧಾನಿಯಾಗಿರುವನು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು ''ದೊರೆಯಲೇನದರೊಳು–ಪರಿಣತೆದಳೆವುದೇ ಚಂದಮಮ'' ಎಂಬುದಾಗಿ ನುಡಿದಿದ್ದಾರೆ. ಆಶೆಗೆ ಕೊನೆ ಎಂದೂ ಇರುವುದಿಲ್ಲ. ಅದು ಹಾಗೇ ಬೆಳೆಯುತ್ತಲೇ ಹೋಗುವುದು. ಆಶಾಪಾಶದಿಂದ ಬದ್ಧಿತನಾದ ಪುರುಷನು ಅವುಗಳ ಪೂರ್ತಿಗಾಗಿ ದಶದಿಶೆಗಳಲ್ಲಿ ಸದಾ ಧಾವಿಸುತ್ತಲೇ ಇರುತ್ತಾನೆ. ಅಂತೆಯೇ ಓರ್ವ ಸುಭಾಷಿತಕಾರನು–

ಆಶಾನಾಮ ಮನುಷ್ಯಾಣಾಂ ಕಾಚಿದಾಶ್ಚರ್ಯಶೃಂಖಲಾ ।
ತಯಾ ಬದ್ಧಾಃ ಪ್ರಧಾವಂತಿ ಮುಕ್ತಾಸ್ತಿಷ್ಠಂತಿ ಕುತ್ರಚಿತ್ ॥

ಈ ರೀತಿಯಾಗಿ ಆಶೆಯ ಸ್ವರೂಪವನ್ನು ವಿವರಿಸಿದ್ದಾನೆ. ತಾತ್ಪರ್ಯವೇನೆಂದರೆ–ಆಶೆಯೆಂಬ ಸರಪಳಿಯು ಬಹು ವಿಚಿತ್ರವಾದುದು. ಇದರಿಂದ ಕಟ್ಟಲ್ಪಟ್ಟ ವ್ಯಕ್ತಿಯು ಅತಿಯಾಗಿ ಓಡುವನು, ಆದರೆ ಅದರ ಬಂಧನದಿಂದ ಮುಕ್ತನಾದವನು ಒಂದೆಡೆ ಸ್ಥಿರವಾಗಿ ನಿಂತುಕೊಂಡಿರುತ್ತಾನೆ. ಲೋಕದಲ್ಲಿ ಸಾಮಾನ್ಯವಾಗಿ ಸರಪಳಿಯಿಂದ ಕಟ್ಟಲ್ಪಟ್ಟ ಮನುಷ್ಯನಿಗೆ ಸರಿಯಾಗಿ ನಡೆದಾಡಲೂ ಸಹ ಬರುವುದಿಲ್ಲ. ಆದರೆ ಆಶಾಸರಪಳಿಯಿಂದ ಕಟ್ಟಲ್ಪಟ್ಟರೆ ಅತಿಯಾಗಿ ಓಡುತ್ತಾನೆಂದರೆ ಆಶ್ಚರ್ಯವಲ್ಲದೆ ಮತ್ತೇನು ? ಆಶಾಬಂಧವು

ಬಹುವಿಚಿತ್ರವಾದುದು. ಇದರಿಂದ ಮನುಷ್ಯನು ಅಸ್ಥಿರನಾಗಿರುತ್ತಾನೆ. ಒಂದು ಆಶೆಯನ್ನು ಪೂರ್ಣಗೊಳಿಸುವುದರೊಳಗಾಗಿ ಮುಂದಿನ ಆಶೆಗಳು ಸಾಲಾಗಿ ನಿಂತೇ ಇರುತ್ತವೆ. ಸಮುದ್ರದ ತೆರೆಗಳಿಗೆ ಕೊನೆಯೇ ಇಲ್ಲದಿರುವಂತೆ ಆಶೆಗಳಿಗೂ ಸಹ ಕೊನೆಯೆಂಬುದೇ ಇಲ್ಲ, ಆಯುಷ್ಯದ ನೂರಾರು ವರ್ಷಗಳು ಗತಿಸಿ ಶರೀರವು ಜೀರ್ಣ–ಶೀರ್ಣವಾದರೂ ಆಶೆಯು ಮಾತ್ರ ನಿತ್ಯ ನೂತನವಾಗಿಯೇ ಇರುತ್ತದೆ. ಅಂತೆಯೇ– ''ತೃಷ್ಣಾತಾಕಾ ತರುಣಾಯತೇ'' ಅಂದರೆ ಆ ತೃಷ್ಣೆಗೆ ಅಥವಾ ಆಶೆಗೆ ಮುಪ್ಪೇ ಇಲ್ಲ ಅಂತಲೇ ಜ್ಞಾನಿಗಳು ಇದಕ್ಕೆ 'ಆಶಾ ನಿತ್ಯ ತರುಣೀ' ಎಂದು ಹೇಳಿದ್ದಾರೆ. ಶ್ರೀ ಶಂಕರಾಚಾರ್ಯರು–

ಅಂಗಂ ಗಲಿತಂ ಫಲಿತಂ ಮುಂಡಂ ದಶನವಿಹೀನಂ ಜಾತಂ ತುಂಡಮ್ ।
ವೃದ್ಧೋ ಯಾತಿ ಗೃಹೀತ್ವಾ ದಂಡಂ ತದಪಿ ನ ಮುಂಚತ್ಯಾಶಾಪಿಂಡಮ್ ॥

ಎಂಬುದಾಗಿ ಆಶೆಯ ಸ್ವರೂಪವನ್ನು ವಿವರಿಸಿದ್ದಾರೆ. ಅವಯಗಳು ಜೀರ್ಣ–ಶೀರ್ಣಗಳಾದರೂ, ಕೇಶಗಳು ಶುಭ್ರಗಳಾದರೂ, ಹಲ್ಲುಗಳೆಲ್ಲ ಉದುರಿಹೋದರೂ, ಶರೀರದಲ್ಲಿ ಮುಪ್ಪು ಆವರಿಸಿ ಕೈಯಲ್ಲಿ ಕೋಲು ಹಿಡಿದು ನಡೆಯಲು ಬಾರದ ವೃದ್ಧ ದೇಹದಲ್ಲಿಯೂ ಸಹ ಆಶೆಯು ಮಾತ್ರ ನಿತ್ಯಯೌವನಸ್ಥವಾಗಿಯೇ ಇರುತ್ತದೆ. ಆಶೆಯನ್ನು ತೃಪ್ತಿಗೊಳಿಸುವುದು ಅದಾರಿಂದಲೂ ಸಾಧ್ಯವೇ ಇಲ್ಲ. ಅದೊಂದು ಬ್ರಹ್ಮರಾಕ್ಷಸವಿದ್ದಂತೆ. ಅದರ ಅಭಿಲಾಷೆಯನ್ನು ಪೂರ್ತಿಮಾಡುತ್ತ ಹೋದಂತೆ ಅದು ಮತ್ತಷ್ಟು ವಿಶಾಲಕಾಯ ವಾಗಿಯೇ ಬೆಳೆಯುತ್ತದೆ. ಆದ್ದರಿಂದ ಅದನ್ನು ತೃಪ್ತಿಗೊಳಿಸುವ ಗೊಡವೆಯನ್ನು ಬಿಟ್ಟು ವೀರಮಾಹೇಶ್ವರನು ಅದರ ನಿರೋಧದಲ್ಲಿ ತತ್ಪರನಾಗುತ್ತಾನೆ. 'ಯೋಗಶ್ಚಿತ್ತವೃತ್ತಿನಿರೋಧಃ' ಎಂಬ ಮಹರ್ಷಿ ಪತಂಜಲಿಯ ಯೋಗಸೂತ್ರದಂತೆ ಆ ಚಿತ್ತವೃತ್ತಿಯನ್ನು ನಿರೋಧಿಸಿ ಶಿವಯೋಗಾಸಕ್ತನಾದಾಗಲೇ ಸಾಧಕನಿಗೆ ಸಂತೃಪ್ತಿಯು ಪ್ರಾಪ್ತವಾಗುವುದು. ಕಾರಣ ಪ್ರತಿಯೊಬ್ಬರೂ ಆಶೆಯತ್ತ ಹರಿದುಹೋಗದೆ ಅದನ್ನು ನಿಯಂತ್ರಿಸುವುದರಲ್ಲಿಯೇ ತತ್ಪರರಾಗಿರಬೇಕು.

ಸಾಂಸಾರಿಕ ಅಭಿಲಾಷೆಗಳು ಜೀವಾತ್ಮನನ್ನು ಸಂಸಾರ ಸಾಗರದಲ್ಲಿ ಮುಳುಗಿಸಿದರೆ ಸ್ವಾಧ್ಯಾಯ, ಶಾಸ್ತ್ರಶ್ರವಣ, ಭಗವದಾರಾಧನೆ ಮತ್ತು ಸತ್ಸಂಗಗಳ ಅಭಿಲಾಷೆಯು ಜೀವಾತ್ಮನನ್ನು ಸಂಸಾರ ಸಾಗರದಿಂದ ಮೇಲೆತ್ತಿ ಪರಮಾತ್ಮನೆಡೆಗೆ ಕೊಂಡ್ಯೊಯ್ಯುವುದು. ಆದ್ದರಿಂದ ಯೋಗವೆಂದರೆ ಚಿತ್ತದ ಎಲ್ಲ ವೃತ್ತಿಗಳ ನಿರೋಧವಲ್ಲ. ಸಂಸಾರದತ್ತ ಕೊಂಡೊಯ್ಯುವ ಕ್ಲಿಷ್ಟವೃತ್ತಿಗಳನ್ನು ನಿರೋಧಿಸಿ ಪರಮಾತ್ಮನತ್ತ ಕೊಂಡೊಯ್ಯುವ ಅಕ್ಲಿಷ್ಟವೃತ್ತಿಗಳನ್ನು ಅಂಗೀಕರಿಸುವುದೇ ಯೋಗವು.

ಮನುಷ್ಯನ ಮನಸ್ಸಿನಲ್ಲಿ ಪರದ್ರವ್ಯಾಭಿಲಾಷೆಯು ಒಡಮೂಡಲು ಕಾರಣವಾದರೂ ಏನು ? ಎಂದು ವಿಚಾರಿಸಿದಾಗ ಅರ್ಥೋಪಾರ್ಜನೆಯು ಕಡಿಮೆಯಿದ್ದು ಅಭಿಲಾಷೆಗಳು ಅನಂತಗಳಾದಾಗ ಮನುಷ್ಯನು ಪರದ್ರವ್ಯಾಭಿಲಾಷಿಯಾಗುತ್ತಾನೆ. ಎಂಬುದು ತಿಳಿದುಬರುತ್ತದೆ. ಈ ಅಭಿಲಾಷೆಯಿಂದ ಮನುಷ್ಯನ ಮನಸ್ಸು ದೂಷಿತವಾಗುತ್ತದೆ. ಬಟ್ಟೆದೂಷಿತಗಳಾದರೆ ತೊಳೆದು ಸ್ವಚ್ಛಗೊಳಿಸುತ್ತೇವೆ. ಶರೀರ ದೂಷಿತ

ವಾದರೆ ಮಂಗಲಸ್ನಾನವನ್ನು ಮಾಡುತ್ತೇವೆ. ಆದರೆ ಮನ ಬುದ್ಧಿಗಳು ದೂಷಿತಗಳಾದಾಗ ಶಿವಯೋಗವನ್ನು ಮಾಡಬೇಕಾಗುವುದು. ಅಂತೆಯೇ ಶಿವಯೋಗಾಸಕ್ತನಾದ ವೀರಮಾಹೇಶ್ವರನು ಪರದ್ರವ್ಯ ಪರಾಙ್ಮುಖನಾಗಿ ಸಂತೋಷದ ಜೀವನವನ್ನು ಕಳೆಯುತ್ತಿರುತ್ತಾನೆ.

ವೀರಮಾಹೇಶ್ವರನ ಸ್ವರೂಪವನ್ನು ವಿವರಿಸುತ್ತ ಭಗವತ್ಪಾದ ರೇಣುಕಾಚಾರ್ಯರು–

''ಶಿವಾರ್ಥಕಾರ್ಯಸಂಪನ್ನಃ ಶಿವಾಗಮಪರಾಯಣಃ''

(ಸಿ. ಶಿ. ೧೦–೧೫)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ವೀರಮಾಹೇಶ್ವರನು ಯಾವ ಕಾರ್ಯವನ್ನೇ ಮಾಡಿದರೂ ತನಗಾಗಿ ಮಾಡದೆ ಶಿವನಿಗಾಗಿಯೇ ಮಾಡುತ್ತಿರುತ್ತಾನೆ. ಇವನ ಭಾವನೆಯಲ್ಲಿ ಶಿವನೇ ಪರಿಪೂರ್ಣವಾಗಿ ತುಂಬಿ ಹೋಗಿರುವುದರಿಂದ ಎಲ್ಲರನ್ನೂ ಶಿವಮಯವಾಗಿಯೇ ನೋಡುತ್ತಾನೆ. ಅಂತೆಯೇ ಈತನ ಪ್ರತಿಯೊಂದು ಕಾರ್ಯವು ಶಿವನಿಗಾಗಿಯೇ ಮೀಸಲಾಗಿರುತ್ತದೆ. ಈ ವೀರಮಾಹೇಶ್ವರನು ಶಿವೋಪದಿಷ್ಟಗಳಾದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳ ಅಧ್ಯಯನಶೀಲನಾಗಿರುತ್ತಾನೆ. ಶಿವಾಗಮಗಳು ವೀರಶೈವಸಿದ್ಧಾಂತದ ಮೂಲಸ್ರೋತಗಳು. ಈ ಆಗಮಗಳ ಉತ್ತರಾರ್ಧದಲ್ಲಿ ವೀರಶೈವ ಸಿದ್ಧಾಂತವು ಪ್ರತಿಪಾದಿತವಾಗಿದೆ. ಕಾರಣ ವೀರಶೈವರೆಲ್ಲರೂ ಈ ಶಿವಾಗಮಗಳ ಸ್ವಾಧ್ಯಾಯವನ್ನು ತಪ್ಪದೇ ಮಾಡಬೇಕು. ಇಷ್ಟಲಿಂಗ ಪೂಜೆಯ ನಂತರ ಶಿವಾಗಮ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಪಾರಾಯಣ ಮತ್ತು ಸ್ವಾಧ್ಯಾಯಗಳ ಪರಂಪರೆಯನ್ನು ಬೆಳೆಸಿಕೊಳ್ಳಬೇಕು. ಶಿವಪೂಜೆಯಿಂದ ಅಂತಃಕರಣವು ಪರಿಶುದ್ಧವಾದರೆ ಸ್ವಾಧ್ಯಾಯದಿಂದ ದಿವ್ಯ ಜ್ಞಾನೋದಯವಾಗುತ್ತದೆ. ಆ ದಿವ್ಯ ಜ್ಞಾನದಲ್ಲಿಯೇ ನಾವು ನಮ್ಮ ಆತ್ಮಸ್ವರೂಪವನ್ನು ಅರಿಯಬಹುದು. ಅಂತೆಯೇ ವೀರಮಾಹೇಶ್ವರನು ಪುನಃ ಪುನಃ ಶಿವಾಗಮಗಳ ಪಾರಾಯಣವನ್ನು ಮಾಡುತ್ತಿರುತ್ತಾನೆ. ಪುನಃ ಪುನಃ ಆಚರಿಸುವ ಪಾರಾಯಣ ಸ್ವಾಧ್ಯಾಯಗಳಿಂದ ಗ್ರಂಥಸ್ಥವಾದ ಗೂಢಾರ್ಥವು ಕ್ರಮಶಃ ಅನುಭವ ಗೋಚರವಾಗುತ್ತದೆ.

ಈ ವೀರಮಾಹೇಶ್ವರನು– 'ಶಿವಸ್ತುತಿರಸಾಸ್ವಾದ ಮೋದಮಾನಮನಾಃ ಶುಚಿಃ|' (ಸಿ. ಶಿ. ೧೦–೧೬) ಎಂಬ ಆಚಾರ್ಯೋಕ್ತಿಗನುಸಾರವಾಗಿ ಶಿವಸ್ತುತಿರೂಪವಾದ ರಸಾಸ್ವಾದನೆಯನ್ನು ನಿರಂತರವಾಗಿ ಮಾಡುತ್ತ ಅದರಿಂದಲೇ ಅಮಂದಾನಂದವನ್ನು ಹೊಂದಿ ಶುಚಿಯಾಗಿ ಕಾಲ ಕಳೆಯುತ್ತ ಇರುತ್ತಾನೆ. ಮನುಷ್ಯನ ನಾಲಿಗೆಗೆ ಮಧುರ, ತಿಕ್ತ, ಕಟು ಮತ್ತು ಲವಣ ಮೊದಲಾದ ಷಡ್ರಸಗಳ ಆಸ್ವಾದನೆಯನ್ನು ಮಾಡಿ ಅದರ ಆನಂದವನ್ನು ಅನುಭವಿಸುವ ಅಭ್ಯಾಸವಿದ್ದಷ್ಟು ನಾಮಾಮೃತವನ್ನು ಆಸ್ವಾದಿಸುವ ಅಭ್ಯಾಸವಿರುವುದಿಲ್ಲ. ಅಂತೆಯೇ ಓರ್ವ ಸುಭಾಷಿತಕಾರನು–

ಮೃದ್ವೀಕಾ ರಸಿತಾ ಸಿತಾ ಸಮಸಿತಾ ಸ್ಫೀತಂ ನಿಪೀತಂ ಪಯಃ |
ಸ್ವರಯಾತೇನ ಸುಧಾಪ್ಯಧಾಯಿ ಕತಿಧಾ ರಂಭಾದರಃ ಖಂಡಿತಃ ||

ಸತ್ಯಂ ಬ್ರೂಹಿ ಮದೀಯ ಜೀವ ಭವತಾ ಭೂಯೋ ಭವೇ ಭ್ರಾಮ್ಯತಾ
ಶಿವ ಇತ್ಯಕ್ಷರಯೋರ್ದ್ವಯೋರ್ಮಧುರಿಮೋದ್ಗಾರಃ ಕ್ವಚಿಲ್ಲಕ್ಷಿತಃ ||

ಎಂಬುದಾಗಿ ಹೇಳಿದ್ದಾನೆ. ಇದರ ತಾತ್ಪರ್ಯವೇನೆಂದರೆ– ಎಲೈ ಜೀವಾತ್ಮನೇ ! ಇಹ ಲೋಕದಲ್ಲಿಯ ದ್ರಾಕ್ಷಿ, ಕಲ್ಲುಸಕ್ಕರೆ, ಕ್ಷೀರ, ಮೊದಲಾದ ರಸಗಳನ್ನು ಹೊಟ್ಟೆ ತುಂಬ ಆಸ್ವಾದಿಸಿ ತೃಪ್ತನಾಗಿ ಅದೆಷ್ಟೋ ಸಾರೆ ನೀನು ಢೇಕರಿಸಿದ್ದುಂಟು. ಇದೂ ಸಾಲದೆ ಸ್ವರ್ಗಕ್ಕೆ ಹೋಗಿ ಅಮೃತಪಾನ, ರಂಭಾ ಮೊದಲಾದ ಅಪ್ಸರೆಯರ ಅಧರಾಮೃತವನ್ನೂ ಸಹ ಪಾನ ಮಾಡಿ ಅದೆಷ್ಟೋ ಸಾರೆ ಸುಖಿಸಿರುವೆ. ಆದರೆ ಈ ಭವದಲ್ಲಿ ಮತ್ತೆ ಮತ್ತೆ ತಿರುಗುತ್ತಿರುವ ನೀನು ಒಮ್ಮೆಯಾದರೂ ಶಿವನಾಮಾಮೃತವನ್ನು ಆಕಂಠವಾಗಿ ಆಸ್ವಾದಿಸಿ ಢೇಕರಿಸಿರುವಿಯಾ ? ಎಂಬುದಾಗಿ ಪ್ರಶ್ನೆಮಾಡುತ್ತಾನೆ. ಪುರಂದರದಾಸರೂ ಸಹ– ''ರಾಮನಾಮ ಪಾಯಸಕ್ಕೆ ಕೃಷ್ಣ ನಾಮ ಸಕ್ಕರೆ, ವಿಠಲ ನಾಮ ತುಪ್ಪವ ಸುರಿದು ಬಾಯಿ ಚಪ್ಪರಿಸಿರೋ'' ಎಂಬುದಾಗಿ ನಾಮರಸಾಸ್ವಾದನೆಯ ರೀತಿಯನ್ನು ತಿಳಿಯಪಡಿಸಿದ್ದಾರೆ.

ಶಿವಸ್ತುತಿ ಮತ್ತು ಶಿವನಾಮಜಪಗಳು ಒಂದು ತರಹದ ರಸಗಳೇ ಆಗಿವೆ. ಈ ನಾಮರಸವು ಮಧುರ, ಕಟು, ಆಮ್ಲ, ಕಷಾಯರೂಪವಾಗಿರದೇ ಶಾಂತಸ್ವರೂಪವಾಗಿರುತ್ತದೆ. ನವರಸಗಳಲ್ಲಿ ಶಾಂತರಸವೂ ಕೂಡ ಒಂದು ರಸವಾಗಿ ಪರಿಗಣಿಸಲ್ಪಟ್ಟಿರುತ್ತದೆ. ಶಿವನು ಶಾಂತಸ್ವರೂಪನಾಗಿರೋಣದರಿಂದ ಅವನ ನಾಮ ಸ್ಮರಣೆಯಿಂದ ಪ್ರತಿಯೊಬ್ಬರಿಗೂ ಶಾಂತಿಯ ಪ್ರಾಪ್ತಿಯಾಗುತ್ತದೆ. ಸ್ವಾದಿಷ್ಟವಾದ ಭೋಜನ, ಉತ್ತಮವಾದ ಅಲಂಕಾರಗಳು ಪ್ರಾಪ್ತಗಳಾದಾಗ ಅವುಗಳನ್ನು ಅನುಭವಿಸಿದ ಮನುಷ್ಯನಲ್ಲಿ ಹೇಗೆ ಆನಂದಾಭಿವ್ಯಕ್ತಿಯಾಗುತ್ತದೆಯೋ ಹಾಗೆ ಈ ವೀರಮಾಹೇಶ್ವರನಿಗೆ ಶಿವಸ್ತುತಿ ಹಾಗೂ ಶಿವನಾಮಜಪಗಳಿಂದ ಆನಂದಾನುಭೂತಿಯಾಗುತ್ತದೆ. ಹೀಗೆ ನಾಮಾಮೃತದಿಂದ ಪರಿತೃಪ್ತನಾದ ಅಂತೆಯೇ ಪವಿತ್ರನೂ ಆದ ಮಾಹೇಶ್ವರನೇ ವೀರಮಾಹೇಶ್ವರನೆಂಬುದಾಗಿ ತಿಳಿದುಕೊಳ್ಳಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಅಗಷ್ಟ್, ೧೯೯೧
(ಸ್ಥಾನ ನಾಗಪುರ)

■■

ಆಶೀರ್ವಚನ-೩

# ಮಾಹೇಶ್ವರಪ್ರಶಂಸಾಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಈ ಪವಿತ್ರವಾದ ಶ್ರಾವಣಮಾಸದಲ್ಲಿ ದಿನಾಲೂ ನೀವು ಶ್ರೀ ಸಿದ್ಧಾಂತ ಶಿಖಾಮಣಿಯ ಮಾಹೇಶ್ವರಸ್ಥಲದಲ್ಲಿಯ ಮಾಹೇಶ್ವರಪ್ರಶಂಸೆಯ ಬಗ್ಗೆ ಆಶೀರ್ವಚನ ಗಳನ್ನು ಆಲಿಸುತ್ತ ಬಂದಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಿಮಾ ಶಾಲಿಯಾದ ಅಗಸ್ತ್ಯನನ್ನು ಕುರಿತು ವೀರಮಾಹೇಶ್ವರನ ಸ್ವರೂಪವನ್ನು ತಿಳಿಯ ಪಡಿಸುತ್ತ-

ಶಿವಸ್ತುತಿರಸಾಸ್ವಾದಮೋದಮಾನಮನಾಃ ಶುಚಿಃ ।
ಶಿವೋತ್ಕರ್ಷಪ್ರಮಾಣಾನಾಂ ಸಂಪಾದನಸಮುದ್ಯತಃ ॥
ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶ ಪಂಜರಃ ।
ಅಸ್ಪೃಷ್ಟ ಮದಸಂಬಂಧೋ ಮಾತ್ಸರ್ಯಾವೇಶವರ್ಜಿತಃ ॥

(ಸಿ. ಶಿ. ೧೦ ; ೧೬-೧೭)

ಎಂಬುದಾಗಿ ಆತನ ಸ್ವರೂಪ ಸ್ಥಿತಿಯನ್ನು ವಿವರಿಸಿದ್ದಾರೆ. ಶಿವಸ್ತುತಿಯೆಂದರೆ ವೀರ ಮಾಹೇಶ್ವರನಿಗೆ ಅತಿಸಂತೋಷದಾಯಕ. ಅಂತೆಯೇ ಅವನು ಸದಾ ಶಿವಸ್ತುತಿ ಯಲ್ಲಿಯೇ ರಮಮಾಣನಾಗಿ ಇರುತ್ತಾನೆ. ಶಿವನ ಸ್ತುತಿಯನ್ನು ಅದೆಷ್ಟು ಮಾಡಿದರೂ ಕಡಿಮೆಯೇ. ಶಿವನ ಸಕಲಗುಣಗಳನ್ನು ಸ್ತುತಿಸುವುದು ಆರಿಂದಲೂ ಸಾಧ್ಯವಿಲ್ಲ ಅಂತೆಯೇ ಪುಷ್ಪದಂತ ಕವಿಯು-

ಅಸಿತಗಿರಿಸಮಂ ಸ್ಯಾತ್ ಕಜ್ಜಲಂ ಸಿಂಧು ಪಾತ್ರೇ
ಸುರತರುವರಶಾಖಾ ಲೇಖನೀ ಪತ್ರಮುರ್ವೀ ।
ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ
ತದಪಿ ತವಗುಣಾನಾಮೀಶ ಪಾರಂ ನ ಯಾತಿ ॥

ಶಿವಮಹಿಮ್ನ ಸ್ತೋತ್ರದಲ್ಲಿ ಈ ರೀತಿಯಾಗಿ ಶಿವನ ಮಹಿಮೆಯು ಅವರ್ಣನೀಯ ವೆಂಬುದಾಗಿ ತಿಳಿಸಿದ್ದಾನೆ. ವಿದ್ಯಾಧಿದೇವತೆಯಾದ ಸರಸ್ವತಿಯು ಸಮುದ್ರವನ್ನು ಮಸಿಯ ಪಾತ್ರವನ್ನಾಗಿಸಿಕೊಂಡು ಭೂಮಿಯನ್ನೇ ಕಾಗದವನ್ನಾಗಿ ಮಾಡಿ ಕಲ್ಪವೃಕ್ಷದ ಟೊಂಗೆಯನ್ನು ಲೇಖನಿಯನ್ನಾಗಿ ಮಾಡಿಕೊಂಡು ತನ್ನ ಆಯುಷ್ಯ ಪರ್ಯಂತವಾಗಿ ಬರೆದರೂ ಸಹ ಶಿವನ ಗುಣಗಳ ಮಹಿಮೆಯು ಮುಗಿಯಲಾರದು. ಅಂದಾಗ ಉಳಿ ದವರು ಹೇಗೆ ತಾನೇ ಅವನ ನಾಮ ಮಹಿಮೆಯನ್ನು ಪೂರ್ಣವಾಗಿ ಸ್ತುತಿಸಬಲ್ಲರು ?

ಭಗವಂತನ ನಾಮಸ್ಮರಣೆಯಲ್ಲಿ ಅಪಾರವಾದ ಸಾಮರ್ಥ್ಯವಿದೆ, ದುಷ್ಟರೂ ದುರಾಚಾರಿಗಳೂ ಸಹ ನಾಮಸ್ಮರಣೆಯನ್ನು ಮಾಡಿದರೆ ಆ ನಾಮ ಮಹಿಮೆಯಿಂದ ಅವರು ಶಿಷ್ಟರೂ, ಸಜ್ಜನರೂ ಆಗಿ ಪರಿವರ್ತಿತರಾಗುತ್ತಾರೆ. ಅತಿದುಷ್ಟನಾದ ವಾಲ್ಮೀಕಿಯು ನಾಮಸ್ಮರಣೆಯ ಮಹಿಮೆಯಿಂದಲೇ ಆದಿಕವಿಯೆನಿಸಿ ಸಂಸ್ಕೃತದಲ್ಲಿ 'ರಾಮಾಯಣ' ಮಹಾಕಾವ್ಯವನ್ನು ಬರೆದ ಕಥೆಯು ಜನಜನಿತವಾಗಿದೆ. ಕಲಿಯುಗದಲ್ಲಿ ಮಾತ್ರ ಭಗವನ್ನಾಮಸ್ಮರಣೆಯೇ ಸಂಸಾರ ಸಾಗರವನ್ನು ದಾಟುವ ಅಮೋಘವಾದ ಸಾಧನವಾಗಿದೆ. ಅಂತೆಯೇ ತುಲಸೀದಾಸರು– ''ನಾಮಲೇತ ಭವ ಸಿಂಧು ಸುಖಾಂಯೀ'' ಅಂದರೆ ನಾಮಸ್ಮರಣೆಯು ಭವಸಾಗರವನ್ನು ಒಣಗಿಸುತ್ತದೆಯೆಂಬು ದಾಗಿ ತಿಳಿಸಿದ್ದಾರೆ. ಆದಕಾರಣ ಸದಾ ಸರ್ವದಾ ಇಷ್ಟದೇವರ ನಾಮಸ್ಮರಣೆಯಲ್ಲಿ ಪ್ರತಿ ಯೊಬ್ಬರೂ ಕಾಲಕಳೆಯಬೇಕು. ನಾಮಸ್ಮರಣೆಗಾಗಿ ಶುಚಿ, ಅಶುಚಿಯ ಭಾವನೆಗಳನ್ನು ಮಾಡಕೂಡದು.

ಓರ್ವ ಶೈವಬ್ರಾಹ್ಮಣನು ಶೌಚಕ್ರಿಯೆಯನ್ನು ಮುಗಿಸಿಕೊಂಡು ಜನಿವಾರ (ಯಜ್ಞೋಪವೀತ)ವನ್ನು ಕಿವಿಗೆ ಸುತ್ತಿಕೊಳ್ಳುವದರ ಬದಲಾಗಿ ನಾಲಿಗೆಗೆ ಸುತ್ತಿಕೊಂಡು ಬರುತ್ತಿದ್ದನು. ಈ ದೃಶ್ಯವನ್ನು ಕಂಡ ಓರ್ವ ಶಿವಾಚಾರ್ಯರು ಅವನಿಗೆ ಪ್ರಶ್ನಿಸುತ್ತಾರೆ. 'ಇದೇನು ಕಿವಿಗೆ ಬದಲಾಗಿ ನಾಲಿಗೆಗೆ ಜನಿವಾರವನ್ನು ಸುತ್ತಿಕೊಂಡಿರುವೆ ?' ಆಗ ಬ್ರಾಹ್ಮಣ ಹೇಳಿದನು– 'ನನ್ನ ನಾಲಿಗೆಗೆ ನಿರಂತರ ನಾಮ ಜಪಿಸುವ ಅಭ್ಯಾಸವಾಗಿದೆ ಕಾರಣ ಅದು ಅಶೌಚಪ್ರಸಂಗದಲ್ಲೂ ನಾಮೋಚ್ಚಾರಣೆ ಮಾಡುತ್ತಿರುತ್ತದೆ. ಅಶುಚಿ ಸ್ಥಾನದಲ್ಲಿ ಪರಮಾತ್ಮನ ನಾಮಸ್ಮರಣೆಯನ್ನು ಮಾಡಬಾರದೆಂಬ ಉದ್ದೇಶದಿಂದ ಅದಕ್ಕೆ ಜನಿವಾರವನ್ನು ಸುತ್ತಿದ್ದೇನೆ.' ಬ್ರಾಹ್ಮಣನ ಈ ನುಡಿಯನ್ನು ಕೇಳಿ ಅವರು ಹೇಳುತ್ತಾರೆ– ಭಗವಂತನ ನಾಮವು ಸದಾ ಶುಚಿಯಾಗಿರೋಣದರಿಂದ ಅದನ್ನು ಎಲ್ಲಿ ಉಚ್ಚರಿಸಿದರೂ ಅದು ಅಶುಚಿಯಾಗಲಾರದು. ಇದೂ ಅಲ್ಲದೆ ''ಅಂತೇ ಯಾಮತಿಃ ಸಾ ಗತಿಃ'' ಎಂಬ ಉಕ್ತಿಗನುಸಾರವಾಗಿ ಮರಣಕಾಲದಲ್ಲಿ ಮನುಷ್ಯನ ಮನಸ್ಸಿನ ಸ್ಥಿತಿಯು ಹೇಗಿರುತ್ತದೋ ಹಾಗೆಯೇ ಅವನಿಗೆ ಗತಿಯು ಪ್ರಾಪ್ತವಾಗುತ್ತದೆ. ಮರಣದ ನಿಶ್ಚಿತವಾದ ವೇಳೆಯು ಅದಾರಿಗೂ ಗುರುತಿರುವುದಿಲ್ಲ, ಅಂದಾಗ ಶೌಚಕ್ರಿಯೆಗೆ ಕುಳಿತಾಗ ಮರಣ ಬಂದರೆ ಆಗ ನೀನು ನಾಮಸ್ಮರಣೆ ಮಾಡದೇ ಇದ್ದುದರಿಂದ, ಅಂತ್ಯ ಸಮಯದಲ್ಲಿ ನಾಮಸ್ಮರಣೆ ವಿರಹಿತನಾಗಿ ದೇಹ ತ್ಯಜಿಸಿದಾಗ ಸದ್ಗತಿಯ ಬದಲಾಗಿ ದುರ್ಗತಿಯೇ ಪ್ರಾಪ್ತವಾಗುತ್ತದೆ. ಕಾರಣ ಶುಚಿ–ಅಶುಚಿಯೆಂಬ ಭೇದಭಾವನೆಯನ್ನು ಮಾಡದೆ ಸದಾ ಕಾಲದಲ್ಲಿ ಭಗವಂತನ ನಾಮಸ್ಮರಣೆ ಮಾಡುವುದೇ ಕಲ್ಯಾಣಕಾರಿಯಾದುದು ಎಂದು ತಿಳಿ ಹೇಳಿದರು.

ಭಗವನ್ನಾಮಸ್ಮರಣೆಯ ಮರ್ಮವನ್ನರಿತ ವೀರಮಾಹೇಶ್ವರನು ಕುಳಿತಾಗ, ನಿಂತಾಗ, ಹೋಗುವಾಗ, ಬರುವಾಗ, ಮಲಗುವಾಗ, ಹೇಳುವಾಗ ಹೀಗೆ ಸದಾ ಕಾಲ ದಲ್ಲಿ ನಾಮಸ್ಮರಣೆಯಲ್ಲಿಯೇ ಕಾಲಕಳೆಯುತ್ತಾನೆ. ಶಿವನಾಮಸ್ಮರಣೆಯಿಂದ ಶರೀರಾದಿ ಗಳು ಪವಿತ್ರವಾಗುವುದಷ್ಟೇ ಅಲ್ಲ ಸುತ್ತುಮುತ್ತಲಿನ ಪರಿಸರವೂ ಸಹ ನಿರ್ಮಲ

ವಾಗುತ್ತದೆ. ವ್ಯಷ್ಟಿ ಹಾಗೂ ಸಮಷ್ಟಿನಾಮ ಜಪ ಅಥವಾ ಶಿವಸ್ತುತಿ ಮೊದಲಾದವುಗಳು ಸೃಷ್ಟಿಯ ಪರಿವರ್ತನೆಗೂ ಕೂಡ ಕಾರಣಗಳಾಗಿರುತ್ತವೆ. ಈ ಜಪ ಹಾಗೂ ಸ್ತುತಿಗಳಿಂದ ವ್ಯಕ್ತಿಗಳ ಮೇಲಷ್ಟೇ ಅಲ್ಲ ಭೌತಿಕ ವಸ್ತುಗಳ ಮೇಲೆಯೂ ಸಂಸ್ಕಾರವಾಗುವುದುಂಟು.

ಸದಾ ಶಿವಸ್ತುತಿ ಮತ್ತು ಶಿವನಾಮ ಜಪದಲ್ಲಿ ಸದಾ ತಲ್ಲೀನನಾದ ವೀರ ಮಾಹೇಶ್ವರನು ಶಿವನೇ ಸರ್ವೋತ್ಕೃಷ್ಟನೆಂದು ಪ್ರತಿಪಾದಿಸುವ ಶಾಸ್ತ್ರಪ್ರಮಾಣಗಳನ್ನು ಸಂಶೋಧಿಸುವುದರಲ್ಲಿ ಸದಾ ತತ್ಪರನಾಗಿಯೂ ಇರುತ್ತಾನೆ. ಅದರಂತೆ ಈ ವೀರ ಮಾಹೇಶ್ವರನು ಅಹಂಕಾರ ಮಮಕಾರಶೂನ್ಯನಾಗಿ ಪಂಚಕ್ಲೇಶಗಳಿಂದ ಮುಕ್ತನಾಗಿರುತ್ತಾನೆ. ಅಹಂಕಾರ ಮಮಕಾರಗಳು ನೈಸರ್ಗಿಕವಾಗಿ ಪ್ರತಿಯೊಬ್ಬರ ಅಂತಃಕರಣದಲ್ಲಿ ಒಡಮೂಡುತ್ತವೆ. ಅಂತೆಯೇ ಶ್ರೀ ಶಂಕರಾಚಾರ್ಯರು– 'ಅಹಂ ಮಮೇತಿ ನೈಸರ್ಗಿಕೋಽಯಂ ಲೋಕವ್ಯವಹಾರಃ' ಎಂಬುದಾಗಿ ಹೇಳಿದ್ದಾರೆ. ತಾನು ಅಲ್ಲದ್ದರಲ್ಲಿ ತಾನೆಂದು ಅಭಿಮಾನಿಸುವುದೇ ಅಹಂಕಾರವು. ತನ್ನದಲ್ಲದ್ದನ್ನು ತನ್ನದೆಂದು ಭಾವಿಸುವುದೇ ಮಮಕಾರವು. ಶರೀರಾದಿಗಳಲ್ಲಿ ಜೀವಾತ್ಮನು ತಾನೆಂಬುದಾಗಿಯೂ ಶರೀರಕ್ಕೆ ಸಂಬಂಧಪಟ್ಟವುಗಳಲ್ಲಿ ತನ್ನದೆಂಬ ಭಾವನೆಯನ್ನು ತಾಳುತ್ತಾನೆ. ವಾಸ್ತವಿಕವಾಗಿ ವಿಚಾರಿಸಲಾಗಿ ಶರೀರಾದಿಗಳು ತಾನೂ ಅಲ್ಲ, ಅದಕ್ಕೆ ಸಂಬಂಧಪಟ್ಟವುಗಳು ತನ್ನವುಗಳೂ ಅಲ್ಲ. ಸಮಸ್ತವಾದ ವಿಶ್ವವು ಈಶ್ವರನದಾಗಿದೆ. ಅಂತೆಯೇ ಉಪನಿಷತ್ತು– ''ಈಶಾವಾಸ್ಯಮಿದಂ ಸರ್ವಂ ಯತ್ ಕಿಂಚಜಗತ್ಯಾಂ ಜಗತ್'' ಎಂಬುದಾಗಿ ಉಪದೇಶಿಸಿದೆ. ಈ ಜಗತ್ತಿನಲ್ಲಿ ಇರುವುದೆಲ್ಲವೂ ಈಶ್ವರನದೇ ಆಗಿದೆ. ಆದರೆ ಜೀವಾತ್ಮನು ಮಾತ್ರ ವೃಥಾ ಅಭಿಮಾನಕ್ಕೊಳಗಾಗಿ ಅನಂತ ದುಃಖವನ್ನನುಭವಿಸುತ್ತಾನೆ. ಇವೆಲ್ಲವುಗಳಲ್ಲಿಯ ಅಹಂಕಾರ–ಮಮಕಾರಗಳನ್ನು ತೊರೆದವನೇ ವೀರಮಾಹೇಶ್ವರನು. ಅಂತೆಯೇ ದೇವರ ದಾಸಿಮಾರ್ಯನು ಕೂಡ–

ಇಳೆ ನಿಮ್ಮದಾನ ಬೆಳೆ ನಿಮ್ಮದಾನ
ಎತ್ತು ನಿಮ್ಮದಾನ ಬಿತ್ತು ನಿಮ್ಮದಾನ
ಸುತ್ತಿಸೂಸುವಾ ಗಾಳಿ ನಿಮ್ಮದಾನ
ನಿಮ್ಮದಾನವನುಂಡು ಅನ್ಯರಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ.

ಎಂದು ಬಹುಸ್ವಾರಸ್ಯವಾಗಿ ಸರ್ವವೂ ಶಿವನದೆಂಬ ವಿಷಯವನ್ನು ತಿಳಿಯಪಡಿಸಿ, ಯಾರೂ ಇವುಗಳ ಬಗ್ಗೆ ಅಭಿಮಾನ ಅಹಂಕಾರಗಳನ್ನು ತಾಳಬಾರದೆಂಬುದಾಗಿ ಉಪದೇಶಿಸಿದ್ದಾನೆ. ಈ ಎಲ್ಲ ಪ್ರಮಾಣಗಳಂತೆ ವೀರಮಾಹೇಶ್ವರನು ಅಹಂಕಾರ–ಮಮಕಾರರಹಿತನಾಗಿರುವನಲ್ಲದೆ ಪಂಚಕ್ಲೇಶವಿರಹಿತನೂ ಆಗಿರುತ್ತಾನೆ. ಅಂತೆಯೇ ಅವನಿಗೆ ''ನಿರಸ್ತಕ್ಲೇಶಪಂಜರಃ'' ಎಂಬ ವಿಶೇಷಣವನ್ನು ಕೊಡಲಾಗಿದೆ.

'ಕ್ಲಿಶ್ನಾತಿ ಇತಿ ಕ್ಲೇಶಃ' ಎಂಬ ವ್ಯುತ್ಪತ್ತಿಗನುಸಾರವಾಗಿ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಈ ಕ್ಲೇಶಗಳು ಸದಾ ಜೀವಿಗಳಿಗೆ ದುಃಖವನ್ನುಂಟುಮಾಡುತ್ತಿರುತ್ತವೆ. ಅಂತೆಯೇ ಇವುಗಳಿಗೆ ಕ್ಲೇಶಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಮೊದಲನೆಯದಾದ ಅವಿದ್ಯೆಯೇ ಅಥವಾ ಅಜ್ಞಾನವೇ ಮುಂದಿನ ಕ್ಲೇಶಗಳಿಗೆಲ್ಲ

ಕಾರಣೀಭೂತವಾದದ್ದು. ಇದೊಂದು ನಷ್ಟವಾದರೆ ಉಳಿದೆಲ್ಲ ಕ್ಲೇಶಗಳು ತಾನಾಗಿಯೇ ದೂರವಾಗುತ್ತವೆ. ವೀರಮಾಹೇಶ್ವರನು ತನ್ನ ಹೃದಯದಲ್ಲಿ ಶಿವನ ಅಸ್ತಿತ್ವವನ್ನು ಅರಿತು ಕೊಂಡು ಅಜ್ಞಾನವನ್ನು ದೂರ ಮಾಡಿಕೊಂಡಿರುವ ಕಾರಣ ಅವನಲ್ಲಿ ಅಸ್ಮಿತಾ, ರಾಗ ಮುಂತಾದ ಮುಂದಿನ ಕ್ಲೇಶಗಳು ಸಹಜವಾಗಿಯೇ ದೂರವಾಗಿರುತ್ತವೆ. ಅಂತೆಯೇ ಅವನಿಗೆ 'ನಿರಸ್ತಕ್ಲೇಶಪಂಜರಃ' ಎಂದು ಸಂಬೋಧಿಸಲಾಗಿದೆ.

ಶ್ರೀ ರೇಣುಕ ಭಗವತ್ಪಾದರು ಈ ವೀರಮಾಹೇಶ್ವರನ ಸ್ವರೂಪವನ್ನು ಮತ್ತೆ ವಿಶ್ಲೇಷಿಸುತ್ತ– 'ಅಸ್ಪೃಷ್ಟಮದಸಂಬಂಧೋ ಮಾತ್ಸರ್ಯಾವೇಶವರ್ಜಿತಃ ||' (ಸಿ. ಶಿ. ೧೦–೧೭) ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಅಂದರೆ ಈತನಲ್ಲಿ ಯಾವುದೇ ಪ್ರಕಾರದ ಮದವಾಗಲೀ ಮತ್ತು ಮತ್ಸರಭಾವವಾಗಲೀ ಇರುವುದಿಲ್ಲವೆಂಬ ತಾತ್ಪರ್ಯವು. ಮದವೆಂದರೆ ಒಂದು ಪ್ರಕಾರದ ಅಮಲು ಅಥವಾ ಉನ್ಮಾದ. ಇದು ಅಧಿಕ ಧನ ಬಂದಾಗ, ಹೆಚ್ಚಿನ ವಿದ್ಯೆ ಪ್ರಾಪ್ತವಾದಾಗ, ಉನ್ನತ ಅಧಿಕಾರ ಸಿಕ್ಕಾಗ, ಅತೀ ರೂಪವತಿ ಅಥವಾ ರೂಪವಂತನಾದಾಗ ಮತ್ತು ತಾರುಣ್ಯ ಬಂದೊದಗಿದಾಗ ಮನುಷ್ಯನ ಮನಸ್ಸಿನಲ್ಲಿ ಒಂದು ವಿಲಕ್ಷಣವಾದ ಉನ್ಮಾದವು ಉಂಟಾಗುತ್ತದೆ. ಇದನ್ನೇ ಮದವೆಂದು ಕರೆಯುತ್ತಾರೆ. ಇದುವೇ ಧನಮದ, ವಿದ್ಯಾಮದ, ಅಧಿಕಾರಮದ, ಸೌಂದರ್ಯಮದ ಮತ್ತು ಯೌವನಮದ ಮುಂತಾಗಿ ಅನೇಕ ಪ್ರಕಾರವಾಗಿ ಕರೆಯಿಸಿ ಕೊಳ್ಳುತ್ತದೆ. ಯಾರು ಇವುಗಳ ಕ್ಷಣಿಕತೆಯನ್ನು ಅರಿತುಕೊಳ್ಳುತ್ತಾರೋ ಅವರೆಂದಿಗೂ ಮದಾವಿಷ್ಟರಾಗಲಾರರು. ವೀರಮಾಹೇಶ್ವರನು– ಇವುಗಳ ಕ್ಷಣಿಕತೆಯನ್ನು ಅರಿತವ ನಾಗಿರೋಣದರಿಂದ ಇವುಗಳ ಬಗ್ಗೆ ಈತನ ಮನದಲ್ಲಿ ಅದೆಂದಿಗೂ ಉನ್ಮಾದ ಉಂಟಾಗಲಾರದು. ಈತನಲ್ಲಿ ಮಾತ್ಸರ್ಯವೂ ಸಹ ಇರಲಾರದು. ಮಾತ್ಸರ್ಯವೆಂದರೆ ಅಸಹನೀಯತೆ ಅಥವಾ ಹೊಟ್ಟೆಕಿಚ್ಚು ಎಂದರ್ಥ. ಭೂತಾವೇಶದಂತೆ ಇದು ಒಮ್ಮೊಮ್ಮೆ ಅಜ್ಞ ಜೀವಿಗಳಲ್ಲಿ ಆವಿಷ್ಟವಾಗಿ ಬಹು ಅನರ್ಥವನ್ನುಂಟು ಮಾಡುತ್ತದೆ. ಮಾತ್ಸರ್ಯ ಗುಣದಿಂದ ಅನ್ಯರಿಗಷ್ಟೇ ಅಲ್ಲ, ತನಗೂ ಅನರ್ಥವುಂಟಾಗುವುದುಂಟು.

ಒಂದಾನೊಂದು ಊರಿನಲ್ಲಿ ಈರ್ವರು ಅಜ್ಞರಾದ ತಪಸ್ವಿಗಳು ಒಂದು ನದಿಯ ದಂಡೆಯ ಮೇಲೆ ಪ್ರತಿಸ್ಪರ್ಧಿಗಳಾಗಿ ತಪಸ್ಸು ಮಾಡುತ್ತಿದ್ದರು. ಬಹುದಿನಗಳನಂತರ ಇವರ ತಪಸ್ಸಿಗೆ ಮೆಚ್ಚಿದ ಶಿವನು ಓರ್ವನ ಮುಂದೆ ಪ್ರತ್ಯಕ್ಷನಾಗಿ 'ವರಂ ಬ್ರೂಹಿ' ಎಂದು ನುಡಿದನು. ಆಗ ಆ ತಪಸ್ವಿಯು ಕಣ್ಣು ತೆರೆದು ಶಿವನನ್ನು ಕಂಡು ಆನಂದಿತನಾಗಿ ಹೇ ಭಗವಂತಾ ! ನೀನು ಮೊದಲು ನನ್ನ ಕಡೆಗೆ ಬಂದಿರುವಿಯೋ ? ಅಥವಾ ಅವನ ಕಡೆಗೆ ಹೋಗಿ ಬಂದಿರುವೆಯೋ ? ಎಂಬುದಾಗಿ ಕೇಳಿದನು. ಆಗ ಶಿವನು ಆ ಗೊಡವೆ ನಿನಗೇಕೆ ? ನಿನಗೇನು ಬೇಕಾಗಿದೆ ಬೇಡಿಕೋ ಎಂದನು. ಆಗ ತಪಸ್ವಿಯು ಹೇ ಶಿವನೇ! ನೀನು ಮೊದಲು ಅವನಿಗೆ ವರವನ್ನು ಅನುಗ್ರಹಿಸು ಅವನು ಏನನ್ನು ಬೇಡಿಕೊಳ್ಳು ತ್ತಾನೋ ಅದರ ಎರಡು ಪಟ್ಟು ನನಗೆ ಅನುಗ್ರಹಿಸಬೇಕು. ಆಗ ಶಿವನು 'ತಥಾಸ್ತು' ಎಂಬುದಾಗಿ ಆಶೀರ್ವದಿಸಿ ಮತ್ತೋರ್ವ ತಪಸ್ವಿಯ ಬಳಿಸಾರಿ 'ನಿನ್ನ ತಪಸ್ಸಿಗೆ ಮೆಚ್ಚಿ ದ್ದೇನೆ ನಿನಗೇನು ಬೇಕು ಬೇಡಿಕೋ' ಎಂದನು. ಆಗ ಆತನು ಶಿವನನ್ನು ಪ್ರಶ್ನಿಸುತ್ತಾನೆ 'ಆ

ದಡದ ತಪಸ್ವಿಗೆ ನೀನು ಏನು ಅನುಗ್ರಹಿಸಿ ಬಂದಿರುವೆ ?' ಶಿವನು ಹೇಳಿದ– 'ನೀನು ಬೇಡಿಕೊಂಡ ವರದ ಎರಡು ಪಟ್ಟು ಬೇಕಂತೆ. ಹಾಗಾದರೆ ನಿನಗೇನು ಬೇಕು ಹೇಳು' ಅಂದನು. ಆಗ ಈ ತಪಸ್ವಿಯು ಮನದಲ್ಲಿಯೇ ವಿಚಾರ ಮಾಡತೊಡಗಿದನು. ನಾನು ಏನು ಬೇಡಿಕೊಂಡರೂ ನನ್ನ ಎರಡರಷ್ಟು ಅವನಿಗೆ ದೊರೆಯುತ್ತದೆ ಎಂದಾಗ ನನ್ನ ಎರಡರಷ್ಟು ಲಾಭ ಅವನಿಗಾಗುತ್ತದೆ. ಹೀಗಿದ್ದಾಗ ನಾನು ತಪಸ್ಸು ಮಾಡಿ ಯಾದರೂ ಏನು ಪ್ರಯೋಜನ. ಬೇಡುವುದಾದರೆ ನನ್ನ ಎರಡುಪಟ್ಟು ಅವನಿಗೆ ಹಾನಿ ಯಾಗುವಂತಹ ವರವನ್ನೇ ಬೇಡಬೇಕು ಎಂದು ಮನದಲ್ಲಿ ವಿಚಾರಿಸಿ ಹೀಗೆ ನುಡಿದನು. ಹೇ ಶಿವನೆ ! ನನ್ನ ಒಂದು ಕಣ್ಣು ಕುರುಡಾಗಲಿ, ಒಂದು ಕಾಲು ಕುಂಟಾಗಲಿ ಹಾಗೂ ಒಂದು ಕೈ ಮೊಂಡವಾಗಲಿ ಎಂಬುದಾಗಿ ಕೇಳಿಕೊಂಡನು. ಶಿವನು 'ತಥಾಸ್ತು' ಎಂದ ತಕ್ಷಣ ಇವನು ಒಂದು ಕಣ್ಣಿನಿಂದ ಕುರುಡನಾದರೆ ಮತ್ತೋರ್ವ ತಪಸ್ವಿಯು ಎರಡೂ ಕಣ್ಣಿನಿಂದ ಕುರುಡನಾದನು. ಇವನ ಒಂದು ಕಾಲು ಕುಂಟಾದರೆ ಅವನ ಎರಡೂ ಕಾಲು ಕುಂಟಾದವು. ಇವನ ಒಂದು ಕೈ ಮೊಂಡವಾದರೆ ಅವನ ಎರಡೂ ಕೈಗಳು ಮೊಂಡ ವಾದವು. ನೋಡಿದಿರಾ ಮಾತ್ಸರ್ಯಗುಣದ ಪ್ರಭಾವವನ್ನು. ಈ ದುರ್ಗುಣವಿರುವ ಮನುಷ್ಯನು ಅನ್ಯರಿಗೆ ಹಾನಿಯನ್ನು ಮಾಡಲು ಹೋದರೆ ತಾನೂ ಹಾನಿಗೊಳಗಾಗುವೆ ನೆಂಬ ವಿವೇಕವನ್ನು ಕಳೆದುಕೊಂಡು ಬಿಡುತ್ತಾನೆ. ವೀರಮಾಹೇಶ್ವರನು ಮಾತ್ರ ಸರ್ವತ್ರ ಸಮದೃಷ್ಟಿಯುಳ್ಳವನಾಗಿರೋಣದರಿಂದ ಮಾತ್ಸರ್ಯಾವೇಶರಹಿತನಾಗಿರುತ್ತಾನೆ. ಅಂತೆಯೇ ಇವನು ಆನಂದಮಯನಾಗಿರುವುದರ ಜೊತೆಗೆ ಅನ್ಯರಿಗೂ ಆನಂದವನ್ನೇ ಉಂಟುಮಾಡುತ್ತಾನೆ. ಕಾರಣ ಪ್ರತಿಯೊಬ್ಬರೂ ಇಂತಹ ಸ್ಥಿತಿಯ ಪ್ರಾಪ್ತಿಗಾಗಿಯೇ ಪರಿಶ್ರಮಿಸುತ್ತಿರಬೇಕೆಂಬುದಾಗಿ ತಿಳಿಯಪಡಿಸಿ, ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೭ ಆಗಷ್ಟ್, ೧೯೯೧
(ಸ್ಥಾನ ನಾಗಪುರ)



ಆಶೀರ್ವಚನ-೪

# ಮಾಹೇಶ್ವರಪ್ರಶಂಸಾಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರಾವಣ ಮಾಸದ ನಿಮಿತ್ತವಾಗಿ ನೀವೆಲ್ಲ ಪ್ರತಿದಿನ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ಕುರಿತು ಮಾಹೇಶ್ವರನ ಪ್ರಶಂಸೆಯನ್ನು ಮಾಡುತ್ತ ಅವನ ಉತ್ಕೃಷ್ಟವಾದ ಸ್ಥಿತಿಯನ್ನು–

ನಿರಸ್ತಮದನೋನ್ಮೇಷೋ ನಿರ್ಧೂತಕ್ರೋಧವಿಪ್ಲವಃ ।
ಸದಾಸಂತುಷ್ಟಹೃದಯಃ ಸರ್ವಪ್ರಾಣಿಹಿತೇರತಃ ॥

ನಿವಾರಣಸಮುದ್ಯೋಗೀ ಶಿವಕಾರ್ಯವಿರೋಧಿನಾಂ ।
ಸಹಚಾರೀ ಸದಾಕಾಲಂ ಶಿವೋತ್ಕರ್ಷಾಭಿದಾಯಿಭಿಃ ॥

ಶಿವಾಪಕರ್ಷಸಂಪ್ರಾಪ್ತೌ ಪ್ರಾಣತ್ಯಾಗೇಽಪ್ಯಶಂಕಿತಃ
ಶಿವೈಕನಿಷ್ಠಃ ಸರ್ವಾತ್ಮಾ ವೀರಮಾಹೇಶ್ವರೋ ಭವೇತ್ ॥

(ಸಿ. ಶಿ. ೧೦ ; ೧೮–೨೦)

ಈ ರೀತಿಯಾಗಿ ವರ್ಣಿಸಿದ್ದಾರೆ.

ಈ ವೀರ ಮಾಹೇಶ್ವರನು ಮದ–ಮಾತ್ಸರ್ಯಗಳಿಂದ ವಿರಹಿತನಾಗಿರುವಂತೆ, ಕಾಮಕ್ರೋಧಗಳಿಂದಲೂ ದೂರನಾಗಿರುತ್ತಾನೆ. ಶಾಸ್ತ್ರಗಳಲ್ಲಿ ಕಾಮಕ್ರೋಧಾದಿಗಳು ಅಂತರಂಗದ ಶತ್ರುಗಳೆಂಬುದಾಗಿ ಕರೆಯಲ್ಪಟ್ಟಿವೆ, ಇವು ಸಾಧಕನ ಜ್ಞಾನವನ್ನು ಅಪಹರಿಸಿ ಇವನನ್ನು ನರಕಗಾಮಿಯನ್ನಾಗಿ ಮಾಡುತ್ತವೆ. ಅಂತೆಯೇ ಗೀತೆಯಲ್ಲಿ ಕಾಮ, ಕ್ರೋಧ ಮತ್ತು ಲೋಭಗಳಿಗೆ ನರಕದ ಮಹಾದ್ವಾರಗಳೆಂಬುದಾಗಿ ಕರೆದಿದ್ದಾರೆ. ವಿವೇಕ ದಿಂದ ಸದಾ ಜಾಗೃತನಾದ ಮನುಷ್ಯನು ಇವುಗಳ ಉಪಟಳಕ್ಕೆ ಒಳಗಾಗುವುದಿಲ್ಲ ಅಂತೆಯೇ ಉಪನಿಷತ್ತು– ''ಉತ್ತಿಷ್ಠತ, ಜಾಗ್ರತ''–ಏಳು । ಎದ್ದೇಳು ॥ ಎಂಬುದಾಗಿ ಎಚ್ಚರಿಕೆಯನ್ನಿತ್ತಿದೆ. ಇದನ್ನೇ ಓರ್ವ ಸುಭಾಷಿತಕಾರನು–

ಕಾಮಃ ಕ್ರೋಧಶ್ಚ ಲೋಭಶ್ಚ ದೇಹೇ ತಿಷ್ಠಂತಿ ತಸ್ಕರಾಃ ।
ಜ್ಞಾನರತ್ನಾಪಹಾರಾಯ ತಸ್ಮಾತ್‌ಜಾಗ್ರತ ಜಾಗ್ರತ ॥

ಈ ರೀತಿಯಾಗಿ ವಿವರಿಸಿದ್ದಾನೆ. ಈ ಕಾಮಕ್ರೋಧಾದಿಗಳು ದೇಹದೊಳಗಿನ ಕಳ್ಳರು, ಇವರು ಜ್ಞಾನರತ್ನವನ್ನು ಅಪಹರಿಸಿ ಸಾಧಕನನ್ನು ಪತಿತನನ್ನಾಗಿ ಮಾಡುತ್ತಾರೆ.

ಕಳ್ಳರು ಮನೆಯೊಳಗೆ ಪ್ರವೇಶಿಸದಂತೆ ನೋಡಿಕೊಳ್ಳಬೇಕಾದರೆ ಮನೆಯವರು ಹೇಗೆ ಎಚ್ಚರರಾಗಿರಬೇಕೋ ಹಾಗೆ ದೇಹದೊಳಗಿನ ಕಳ್ಳರು ಜ್ಞಾನರತ್ನವನ್ನು ಅಪಹರಿಸ

ದಿರುವಂತೆ ಸಾಧಕನು ಸದಾ ಜಾಗ್ರತನಾಗಿರಬೇಕು. ಕಾಮಾದಿಗಳನ್ನು ಶತ್ರುಗಳನ್ನಾಗಿ ಭಾವಿಸದೆ, ಅವರೊಡನೆ ಮಿತ್ರರಂತೆ ವ್ಯವಹರಿಸಿದ ಅಸಂಖ್ಯಾತ ಜನರು ಅಸನ್ಮಾರ್ಗಿಗಳಾಗಿ ತಮ್ಮ ಜೀವನವನ್ನು ಹಾಳುಮಾಡಿಕೊಳ್ಳುತ್ತಲಿದ್ದಾರೆ. ಆದರೆ ಈ ವೀರ ಮಾಹೇಶ್ವರನು ಈ ಕಳ್ಳರಿಂದ ಸದಾಜಾಗ್ರತನಾಗಿದ್ದು, ಸಂತುಷ್ಟ ಹೃದಯನಾಗಿ ಸರ್ವ ಪ್ರಾಣಿಗಳ ಹಿತಕ್ಕಾಗಿ ಸದಾ ಶ್ರಮಿಸುತ್ತಿರುತ್ತಾನೆ.

ಕಾಮಾದಿಗಳಿಂದ ನಮ್ಮನ್ನು ನಾವು ರಕ್ಷಿಸಿಕೊಳ್ಳಬೇಕಾದರೆ ಕಾಮಾರಿಯ ಶರಣಾಗತಿ ಹೊಂದಬೇಕು. ಶಿವನ ಶರಣಾಗತಿಯ ಹೊರತಾಗಿ ಮದನಾವೇಶದಿಂದ ಮುಕ್ತಿ ದೊರೆಯಲಾರದು. ಕಾಮದಂತೆ ಕ್ರೋಧವಾದರೂ ಮಹಾನ್ ಅನರ್ಥಕಾರಿಯು. ಒಂದು ಕ್ಷಣಮಾತ್ರ ಶರೀರದಲ್ಲಿ ಆವಿಷ್ಟವಾದ ಕ್ರೋಧವು ಬಹುದೊಡ್ಡ ಅನರ್ಥವನ್ನೇ ಮಾಡಿಹೋಗುತ್ತದೆ. ಒಂದು ಕ್ಷಣದಲ್ಲಿ ಆದ ಆ ಅನರ್ಥವನ್ನು ಸುಧಾರಿಸಲು ಅನೇಕ ವರ್ಷಗಳು ಬೇಕಾಗಬಹುದು. ಮನದಲ್ಲಿ ಕ್ರೋಧಭಾವನೆಯು ಬಂದೊಡನೆ ಶರೀರದ ಸಹಜಸ್ಥಿತಿಯು ಕೆಟ್ಟುಹೋಗುತ್ತದೆ. ಈ ಕ್ರೋಧದ ಪ್ರಭಾವವು ಜಠರ, ಹೃದಯ, ಬುದ್ಧಿ ಇವೆಲ್ಲವುಗಳ ಮೇಲೆ ತೀವ್ರವಾಗಿ ಉಂಟಾಗುತ್ತದೆ. ಮೇಲಿಂದ ಮೇಲೆ ಕ್ರೋಧಾವಿಷ್ಟನಾದ ಮನುಷ್ಯನ ಶಾರೀರಿಕ ಹಾಗೂ ಮಾನಸಿಕ ಸ್ವಾಸ್ಥ್ಯವು ಕೆಡುತ್ತಹೋಗುತ್ತದೆ. ಕ್ರೋಧಾದಿಗಳಿಂದ ನಮ್ಮ ದೇಹದಲ್ಲಿ ಉಂಟಾದ ವಿಕೃತಿಯು ದೂರಾಗಿ ಪುನಃ ಸಹಜಸ್ಥಿತಿಯು ಪ್ರಾಪ್ತವಾಗಬೇಕಾದರೆ, ೨೪ ತಾಸುಗಳ ಅವಧಿಯೇ ಬೇಕಾಗುತ್ತದೆ. ಆದರೆ ನಾವು ಒಂದು ದಿವಸದಲ್ಲಿ ಅದೆಷ್ಟೋಸಾರೆ ಕ್ರೋಧಾವಿಷ್ಟರಾಗುತ್ತೇವೆ ಎಂದಾಗ ಶರೀರದ ಸ್ಥಿತಿಯು ಎಷ್ಟು ತಾನೆ ಕೆಡಲಿಕ್ಕಿಲ್ಲ ? ಇದರ ಬಗ್ಗೆ ಪ್ರತಿಯೊಬ್ಬರೂ ಆಲೋಚಿಸಬೇಕು.

ವೀರಮಾಹೇಶ್ವರನು ಎಂದಿಗೂ ಸಿಟ್ಟಿಗೇಳುವುದಿಲ್ಲ. ಪರಿಸ್ಥಿತಿಯು ಅದೆಷ್ಟೇ ವಿಕೃತಿಹೊಂದಿದ್ದರೂ ಆತನು ಶಾಂತ ಚಿತ್ತನಾಗಿಯೇ ಇರುತ್ತಾನೆ. ಕ್ರೋಧಬಂದಾಗ ನಾವು ಜಾಗ್ರತರಾಗಿದ್ದರೆ ಅದು ನಮ್ಮಲ್ಲಿ ಪ್ರವೇಶಿಸಲಾರದು. ಕೋಧವು ಬರುತ್ತಿದೆ ಎಂದು ತಿಳಿದಾಕ್ಷಣ ಮೊದಲು ಮೌನವನ್ನು ಧರಿಸಬೇಕು. ಆ ಮೇಲೆ ಕೈ ಕಾಲುಗಳಿಗೆ ಶಾಂತವಾಗಿರಲು ಆಜ್ಞಾಪಿಸಬೇಕು. ಹೀಗೆ ಮಾಡಿದಾಗ ಕ್ರೋಧವು ತತ್ಕ್ಷಣ ದೂರವಾಗುವುದು. ಒಂದು ವೇಳೆ ಹೀಗೆ ಮಾಡದೇ ಇದ್ದಾಗ ಕ್ರೋಧವು ಮೊದಲು ಬೈಗಳರೂಪವಾಗಿ ಹೊರಸೂಸುವುದು. ಅಷ್ಟಕ್ಕೂ ಅದಕ್ಕೆ ಸಮಾಧಾನವಾಗದಿದ್ದಾಗ ಕೈಯಲ್ಲಿ ಬಡಿಗೆ ಕಲ್ಲುಗಳನ್ನು ಹಿಡಿದು ಹೊಡೆಯಲು ಧಾವಿಸುವುದು. ಹೀಗೆ ಕ್ರಮವಾಗಿ ಕ್ರೋಧದ ಭಯಾನಕ ರೂಪಗಳು ದೃಷ್ಟಿಗೋಚರಗಳಾಗುವುವು. ಬೆಂಕಿ ಹತ್ತಿದಾಗ ನೀರನ್ನು ಹಾಕಿ ಆರಿಸುವಂತೆ ಮನದಲ್ಲಿ ಕ್ರೋಧಾಗ್ನಿ ಪ್ರಜ್ವಲಗೊಂಡಾಗ ಬಾಯೊಳಗೆ ನೀರನ್ನು ಹಿಡಿದೂ ಸಹ ಅದನ್ನು ಶಾಂತಗೊಳಿಸಬಹುದು.

ಒಂದೂರಿನಲ್ಲಿ ಅತ್ತೆ–ಸೊಸೆಯಂದಿರಿಬ್ಬರು ಯಾವಾಗಲೂ ಜಗಳವಾಡುತ್ತಿದ್ದರು. ಅತ್ತೆ–ಸೊಸೆಯರ ಜಗಳವೆಂದರೆ ಪ್ರತಿಯೊಂದು ಮನೆಯಲ್ಲಿಯೂ ನಡೆಯುವಂಥಾದ್ದು. ಅತ್ತೆಯೇನಾದರೂ ಬೈದರೆ ಸೊಸೆ ಅದಕ್ಕೆ ಪ್ರತ್ಯುತ್ತರವಾಗಿ ಬೈಯ್ಯುತ್ತಿದ್ದಳು. ಹೀಗೆ

ಅವರೀರ್ವರ ಕದನವು ದಿನೇ ದಿನೇ ವರ್ಧಿಸತೊಡಗಿತು. ಒಮ್ಮೆ ಆ ಊರಿಗೆ ಓರ್ವ ತಪಸ್ವಿಗಳಾದ ಶಿವಾಚಾರ್ಯರು ದಯಮಾಡಿಸಿದ್ದರು. ಆ ಊರಿನ ಜನರೆಲ್ಲ ಅವರ ಇಷ್ಟಲಿಂಗ ಮಹಾಪೂಜೆಯಲ್ಲಿ ಪಾಲ್ಗೊಂಡು ಪಾದೋದಕ ಪ್ರಸಾದವನ್ನು ಪಡೆದು ಪುನೀತರಾಗುತ್ತಿದ್ದರು. ಪ್ರತಿದಿನ ಸಾಯಂಕಾಲ ನಡೆಯುವ ಧರ್ಮೋಪದೇಶದಲ್ಲಿಯೂ ಸಹಸ್ರಾರು ಜನ ಪಾಲ್ಗೊಳ್ಳುತ್ತಿದ್ದರು. ಪೂಜ್ಯ ಸ್ವಾಮಿಗಳವರ ಬಿಡುವಿನ ವೇಳೆಯಲ್ಲಿ ಅನೇಕ ಭಕ್ತಾದಿಗಳು ತಮ್ಮ ತಮ್ಮ ಮನೆತನದ ಸಮಸ್ಯೆಗಳನ್ನು ಅವರ ಮುಂದಿಟ್ಟು ಅದಕ್ಕೆ ಯೋಗ್ಯವಾದ ಪರಿಹಾರವನ್ನು ಪಡೆಯುತ್ತಿದ್ದರು. ಅತ್ತೆಯೊಂದಿಗೆ ಸದಾ ಜಗಳಾಡುತ್ತಿದ್ದ ಆ ಸೊಸೆಯು ಒಂದು ದಿನ ಶ್ರೀಗಳ ಸಮೀಪಕ್ಕೆ ಬಂದು, ''ತಮ್ಮಲ್ಲಿ ಜಗಳವಾಗದಂತೆ, ನಮ್ಮ ಅತ್ತೆಯ ಕ್ರೋಧವು ಶಾಂತವಾಗುವಂತೆ ಏನಾದರೊಂದು ಔಷಧವನ್ನಾಗಲೀ ದಯ ಪಾಲಿಸಿ''ರೆಂದು ಕೇಳಿಕೊಂಡಳು. ಆಗ ಆ ಸ್ವಾಮಿಗಳವರು ತಮ್ಮ ಕಮಂಡಲ ದೊಳಗಿನ ನೀರನ್ನು ಮಂತ್ರಿಸಿ ಅವಳ ತಂಬಿಗೆಗೆ ಹಾಕಿ, ''ನೋಡಮ್ಮಾ ನಿಮ್ಮ ಅತ್ತೆಯು ನಿನಗೆ ಬೈಯ್ಯಲು ಪ್ರಾರಂಭಿಸಿದಾಗ ಈ ನೀರನ್ನು ಬಾಯೊಳಗೆ ಹಿಡಿದು ಅವಳ ಬೈಗುಳಗಳು ಮುಗಿಯುವವರೆಗೆ ಆ ನೀರನ್ನು ಉಗುಳದೇ ನುಂಗದೇ ಹಾಗೇ ಹಿಡಿದು ಕೊಂಡು ಮನಸ್ಸಿನಲ್ಲಿ ಪಂಚಾಕ್ಷರಿ ಮಹಾ ಮಂತ್ರವನ್ನು ಜಪಿಸುತ್ತ ಇರು. ನಿಮ್ಮ ಅತ್ತೆಯ ಕ್ರೋಧವು ಶಾಂತವಾದಾಗ ಈ ಮಂತ್ರಪೂರಿತವಾದ ಜಲವನ್ನು ನುಂಗಿಬಿಡು.'' ಎಂದರು. ಗುರುಗಳು ಹೇಳಿದ ಹಾಗೆ ಈ ಮಾತನ್ನು ಅವಳು ಶಿರಸಾವಹಿಸಿ ಪರಿಪಾಲಿಸಿ ದಳು. ಕೆಲವೇ ದಿನಗಳಲ್ಲಿ ಮನೆಯಲ್ಲಿಯ ಕದನ ಮಾಯವಾಯಿತು. ನಾನು ಎಷ್ಟು ಬೈದರೂ ನನ್ನ ಸೊಸೆ ಪ್ರತ್ಯುತ್ತರವಾಗಿ ಒಂದು ಚಕಾರವನ್ನೂ ನುಡಿಯುವುದಿಲ್ಲವಲ್ಲ ಎಂದು ವಿಚಾರಿಸಿದ ಅತ್ತೆಯು ಸೊಸೆಯ ಆಚರಣೆಯಿಂದ ಪ್ರಭಾವಿತಳಾಗಿ ತನ್ನ ಬುದ್ಧಿಯನ್ನು ಪರಿವರ್ತಿಸಿ ಕೊಂಡು ಸೊಸೆಯೊಂದಿಗೆ ಸ್ನೇಹಪೂರ್ವಕವಾಗಿ ವ್ಯವಹರಿಸ ತೊಡಗಿದಳು.

ಕ್ರೋಧವು ಮಾತು ಮಾತಿನಿಂದ ಬೆಳೆಯುತ್ತ ಹೋಗುತ್ತದೆ. ಕಾರಣ ಕ್ರೋಧ ಬಂದಾಗ ಅದನ್ನು ಶಮನಗೊಳಿಸಿಕೊಳ್ಳಲು ಕೆಲವೊಂದು ಸಾಮಾನ್ಯ ನಿಯಮಗಳನ್ನು ಪರಿಪಾಲಿಸಿದರೆ ಸಹಜವಾಗಿ ಕ್ರೋಧದ ಮೇಲೆ ವಿಜಯವನ್ನು ಸಂಪಾದಿಸಬಹುದು. ಆ ಉಪಾಯಗಳಾವುವೆಂದರೆ–ನಮ್ಮ ಮನಸ್ಸಿನಲ್ಲಿ ಕ್ರೋಧಾವೇಶವಾದೊಡನೆ ಮೌನ ಧಾರಣಮಾಡುವುದು, ಪಂಚಾಕ್ಷರ ಮಂತ್ರವನ್ನಾದರೂ ಜಪಿಸುವುದು, ಬಾಯಲ್ಲಿ ನೀರನ್ನು ಹಿಡಿಯುವುದು ಅಥವಾ ಒಂದುನೂರು ಅಂಕಿಗಳನ್ನು ಎಣಿಸುವುದು ಇಂತಹ ಸುಲಭೋಪಾಯಗಳನ್ನು ಆಚರಿಸಿ ಮನೆಯೊಳಗಿನ ಕದನಗಳನ್ನು ಬಗೆಹರಿಸಿ ಕೊಳ್ಳಬಹುದು.

ವೀರಮಾಹೇಶ್ವರನು ಮನದಲ್ಲಿ ಸದಾ ಪರಶಿವನ ಧ್ಯಾನಮಾಡುತ್ತಿರುವುದರಿಂದ ಬಹಿರಂಗದ ಪ್ರಭಾವವು ಆತನ ಮೇಲೆ ಆಗದಿರೋಣದರಿಂದ ಅವನು ಸದಾ ಶಾಂತನಾಗಿರುತ್ತಾನೆ. ಅವನನ್ನು ಕ್ರೋಧವು ಸ್ಪರ್ಶಿಸಲು ಸಾಧ್ಯವಿಲ್ಲವಷ್ಟೇ ಅಲ್ಲ, ಕ್ರೋಧಬಂದವರು ಅವನ ಪ್ರಶಾಂತ ಸ್ವರೂಪದ ದರ್ಶನಮಾಡಿದಾಗ ತಮ್ಮ ಕ್ರೋಧ ವನ್ನೂ ಸಹ ಕಳೆದುಕೊಳ್ಳಬಲ್ಲರು. ಅಂತೆಯೇ ಮಹಾತ್ಮಾ ಗಾಂಧಿಯವರು

ಯಾರಾದರೂ ಒಂದು ಕಪಾಳಿಗೆ ಹೊಡೆದರೆ ಅದಕ್ಕೆ ಪ್ರತಿಯಾಗಿ ಹೊಡೆಯಲು ಹೋಗದೆ ಮತ್ತೊಂದು ಕಪಾಳವನ್ನು ಮುಂದೆ ಮಾಡಬೇಕೆಂದು ಹೇಳಿದ್ದಾರೆ. ಹೊಡೆದವನಿಗೆ ಮತ್ತೆ ಹೊಡೆಯೆಂದು ಮುಂದೆ ನಿಂತಾಗ ಅವನು ಲಜ್ಜಿತನಾಗಿ ತನ್ನ ಕ್ರೋಧವನ್ನೇ ಕಳೆದುಕೊಂಡು ಬಿಡುತ್ತಾನೆ.

ಸದಾ ಸಂತುಷ್ಟ ಹೃದಯದ ವೀರಮಾಹೇಶ್ವರನು ಯಾವಾಗಲೂ ಪ್ರಾಣಿಗಳ ಹಿತವನ್ನೇ ಬಯಸುತ್ತ, ಮಂಗಲಮಯ ಕಾರ್ಯಗಳನ್ನೆಸಗುತ್ತ, ಸಮಾಜದಲ್ಲಿಯ ಅಮಂಗಲ ಪರಂಪರೆಗಳನ್ನು ದೂರಮಾಡುತ್ತ ಶಿವೈಕನಿಷ್ಠನಾಗಿ ಕಾಲಕಳೆಯುತ್ತಿರುತ್ತಾನೆ. ಶಿವನಿಗಾಗಲೀ, ಶಿವಸಂಸ್ಕೃತಿಗಾಗಲೀ ಅಪಕರ್ಷವು ಪ್ರಾಪ್ತವಾದರೆ ಅದನ್ನು ಪರಿಹರಿಸುವ ಪ್ರಸಂಗದಲ್ಲಿ ಪ್ರಾಣದ ಭೀತಿಯನ್ನು ತೊರೆದು ಹೋರಾಡುತ್ತಾನೆ. ಈತನ ಮನೋವೃತ್ತಿಯು ಸದಾ ಬಹುಜನಹಿತಾಯ, ಬಹುಜನ ಸುಖಾಯ ಇರುತ್ತದೆ. ಇಂತಹ ಸರ್ವೋತ್ಕೃಷ್ಟ ಗುಣಗಳಿರುವುದರಿಂದಲೇ ಮಾಹೇಶ್ವರನು ವೀರಮಾಹೇಶ್ವರನೆಂಬುದಾಗಿ ಕರೆಯಲ್ಪಡುತ್ತಾನೆ. ಈ ರೀತಿಯಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಾಹೇಶ್ವರಸ್ಥಲದಲ್ಲಿಯ ಮೊದಲನೆಯ ಅವಾಂತರ ಸ್ಥಲವಾದ ಮಾಹೇಶ್ವರ ಪ್ರಶಂಸಾಸ್ಥಲದ ಬಗ್ಗೆ ನಿರೂಪಿಸಿದ್ದಾರೆ. ಪ್ರತಿಯೊಬ್ಬ ಸಾಧಕರು ಇಂಥ ಉತ್ಕೃಷ್ಟಗುಣಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಪುನೀತರಾಗಬೇಕೆಂದು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೭ ಅಗಷ್ಟ್, ೧೯೯೧
(ಸ್ಥಾನ ನಾಗಪುರ)



ಆಶೀರ್ವಚನ-೧

# ಲಿಂಗನಿಷ್ಠಾಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಈ ಪವಿತ್ರವಾದ ಶ್ರಾವಣಮಾಸದಲ್ಲಿ ಶಿವಪೂಜಾನುಷ್ಠಾನ ಹಾಗೂ ಆಶೀರ್ವಚನ ಸಮಾರಂಭಗಳು ಅವ್ಯಾಹತವಾಗಿ ನಡೆಯುತ್ತ ಬಂದು, ಮಧ್ಯದಲ್ಲಿ ಒಂದು ಸಪ್ತಾಹಕಾಲ ವ್ಯತ್ಯಯ ಉಂಟಾಯಿತು. ಇದರ ಕಾರಣ ನಿಮ್ಮೆಲ್ಲರಿಗೂ ತಿಳಿದೇ ಇದೆ. ಶ್ರೀ ರಂಭಾಪುರಿ ಜಗದ್ಗುರು ಶ್ರೀ ವೀರರುದ್ರಮುನಿ ಶಿವಾಚಾರ್ಯ ಭಗವತ್ಪಾದರು ಲಿಂಗೈಕ್ಯ ರಾದದ್ದರಿಂದ ಶ್ರೀ ಪೀಠದಲ್ಲಿ ನಡೆದ ಸಮಾಧಿ ಸಂಸ್ಕಾರಕ್ಕೆ ಹೋಗಬೇಕಾದ ಪ್ರಸಂಗ ವಿದ್ದಕಾರಣ ಈ ಒಂದು ವಾರಕಾಲ ಶಿವಪೂಜೆ ಹಾಗೂ ಆಶೀರ್ವಚನ ಕಾರ್ಯಕ್ರಮಗಳಲ್ಲಿ ವ್ಯವಧಾನ ಉಂಟಾಯಿತು. ಸದ್ಯಃ ಅದನ್ನೇ ಮುಂದುವರಿಸುತ್ತಿದ್ದೇವೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಿಮಾಶಾಲಿಯಾದ ಅಗಸ್ತ್ಯನನ್ನು ಕುರಿತು ಶ್ರೀಸಿದ್ಧಾಂತ ಶಿಖಾಮಣಿಯ ಮಾಹೇಶ್ವರಸ್ಥಲದಲ್ಲಿಯ ಮಾಹೇಶ್ವರ ಪ್ರಶಂಸಾಸ್ಥಲವನ್ನು ಪೂರ್ಣಗೊಳಿಸಿ ಇಂದು ಲಿಂಗನಿಷ್ಠಾಸ್ಥಲದ ಬಗ್ಗೆ–

ಅಸ್ಯ ಮಾಹೇಶ್ವರಸ್ಯೋಕ್ತಂ ಲಿಂಗನಿಷ್ಠಾಮಹಾಸ್ಥಲಮ್ ।
ಪ್ರಾಣಾತ್ಯಯೇಽಪಿ ಸಂಪನ್ನೇಯದತ್ಯಾಜ್ಯಂ ವಿಧಿಯತೇ ॥
ಅಪಗಚ್ಛತು ಸರ್ವಸ್ವಂ ಶಿರಚ್ಛೇದನಮಸ್ತುವಾ ।
ಮಾಹೇಶ್ವರೋ ನ ಮುಂಚೇತ ಲಿಂಗಪೂಜಾಮಹಾವ್ರತಮ್ ॥

( ಸಿ. ಶಿ. ೧೦ ; ೨೧–೨೨)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಹೇ ಅಗಸ್ತ್ಯ ! ಈ ವೀರಮಾಹೇಶ್ವರನು ಇಷ್ಟಲಿಂಗ ದಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿರುವುದರಿಂದ ಈ ಲಿಂಗಪೂಜಾರೂಪೀ ಮಹಾವ್ರತ ವನ್ನು ಅವನೆಂದಿಗೂ ಬಿಡಲಾರ. ತನ್ನ ಸರ್ವಸ್ವವೂ ಕೈಬಿಟ್ಟು ಹೋದರೂ, ಮೃತ್ಯುವೇ ಪ್ರಾಪ್ತವಾದರೂ, ಅದೆಂತಹ ಆಪತ್ತುಗಳು ಬಂದರೂ ಲಿಂಗಪೂಜಾ ಮಹಾವ್ರತವನ್ನು ತಪ್ಪಿಸದಿರುವುದೇ ಲಿಂಗನಿಷ್ಠೆ.

ಈ ಪ್ರಪಂಚದಲ್ಲಿ ನಿತ್ಯವ್ರತವೆಂತಲೂ ನೈಮಿತ್ತಿಕವ್ರತವೆಂತಲೂ ಅನೇಕ ವಿಧ ವಾದ ವ್ರತಗಳಿವೆ. ಪ್ರತಿನಿತ್ಯ ತಪ್ಪದೇ ಮಾಡುವಂಥ ವ್ರತಗಳಿಗೆ ನಿತ್ಯವ್ರತವೆಂತಲೂ, ನಿಮಿತ್ತ ಬಂದಾಗ ಮಾತ್ರ ಮಾಡುವ ವ್ರತಗಳಿಗೆ ನೈಮಿತ್ತಿಕ ವ್ರತವೆಂತಲೂ ಕರೆಯು ತ್ತಾರೆ. ಇವುಗಳಲ್ಲಿ ಹದಿನಾರು ಸೋಮವಾರವ್ರತ, ವರದಶಂಕರವ್ರತ, ಮಂಗಳ ಗೌರೀವ್ರತ, ಮಹಾಲಕ್ಷ್ಮೀ ವ್ರತ, ಸತ್ಯನಾರಾಯಣವ್ರತ ಮತ್ತುಸಂಕಷ್ಟಿವ್ರತ ಇವುಗಳು

ನೈಮಿತ್ತಿಕ ವ್ರತಗಳೆಂದು ಕರೆಯಲ್ಪಡುತ್ತವೆ. ಆಯಾ ನಿಮಿತ್ತ ಬಂದಾಗ ಜನರು ಇವುಗಳನ್ನು ಆಚರಿಸುತ್ತಾರೆ. ಆದರೆ ಇಷ್ಟಲಿಂಗಪೂಜಾರೂಪ ವ್ರತವು ನಿತ್ಯವ್ರತವಾಗಿ ಪರಿಗಣಿಸಲ್ಪಟ್ಟಿದೆ. ''ನಿತ್ಯಂ ಯಾವದಾಯುಃ'' ಎಂಬ ಪ್ರಮಾಣಕ್ಕನುಸಾರವಾಗಿ ಆಯುಷ್ಯವಿರುವವರೆಗೆ ಎಂದೆಂದೂ ತಪ್ಪದೇ ಪ್ರತಿನಿತ್ಯ ಮಾಡುವ ವ್ರತವೇ ನಿತ್ಯ ವ್ರತವು. ಇದಕ್ಕೇನೇ ನಿತ್ಯಕರ್ಮವೆಂಬುದಾಗಿ ಕರೆಯುತ್ತಾರೆ.

ವೀರಶೈವ ಧರ್ಮದಲ್ಲಿ ಕುಲಗುರುಗಳಾದ ಶಿವಾಚಾರ್ಯರು ತಮ್ಮ ತಮ್ಮ ಶಿಷ್ಯರಿಗೆ ಶಿವದೀಕ್ಷಾ ಸಂಸ್ಕಾರವನ್ನು ಮಾಡುವಾಗ ಶಿಷ್ಯನ ಕೈಗೆ ಕಂಕಣವನ್ನು ಕಟ್ಟಿ ಅವನಿಂದ ಸಂಕಲ್ಪವನ್ನು ಮಾಡಿಸುತ್ತಾರೆ. ದೀಕ್ಷಾಪುರಸ್ಸರವಾಗಿ ಪ್ರಾಪ್ತವಾದ ಇಷ್ಟಲಿಂಗವನ್ನು ನಾನು ಎಂದೂ ದೇಹದಿಂದ ಅಗಲಿಸುವುದಿಲ್ಲ ಮತ್ತು ನಿತ್ಯ ಪೂಜೆಯನ್ನು ತಪ್ಪಿಸುವದಿಲ್ಲ, ನನ್ನ ಆಯುಷ್ಯವಿರುವವರೆಗೆ ಈ ವ್ರತವನ್ನು ಪರಿಪಾಲಿಸುತ್ತೇನೆಂದು ಶಿಷ್ಯನು ಗುರುಗಳಿಗೆ ವಚನವಿತ್ತು ಈ ಇಷ್ಟಲಿಂಗ ಪೂಜಾವ್ರತವನ್ನು ಪ್ರಾರಂಭಿಸುತ್ತಾನೆ. ಈ ಲಿಂಗ ಪೂಜಾ ಮಹಾವ್ರತಕ್ಕೆ 'ಶಾಂಭವವ್ರತ'ವೆಂತಲೂ 'ಮಹಾಪಾಶುಪತವ್ರತ'ವೆಂತಲೂ ಮತ್ತು 'ಶಿರೋವ್ರತ'ವೆಂತಲೂ ಕರೆಯುತ್ತಾರೆ. ದೇಹದ ಮೇಲೆ ಸದಾ ದೇವರನ್ನು ಧರಿಸುವುದು ಇದೇನು ಸಣ್ಣವ್ರತವೇ ? ಉಳಿದ ಸಂಪ್ರದಾಯದಲ್ಲಿ ಯಾರೂ ತಮ್ಮ ಇಷ್ಟದೇವರನ್ನು ದೇಹದ ಮೇಲೆ ಧರಿಸುವುದಿಲ್ಲ, ಗುಡಿಯಲ್ಲಿಯೋ ಅಥವಾ ಜಗುಲಿಯ ಮೇಲೆಯೋ ಸ್ಥಾಪಿಸಿ ಅದನ್ನು ಪೂಜಿಸುತ್ತಾರೆ. ಆದರೆ ವೀರಶೈವನು ತನ್ನ ಇಷ್ಟಲಿಂಗಕ್ಕೆ ತನ್ನ ದೇಹವನ್ನೇ ಜಗುಲಿಯನ್ನಾಗಿ ಮಾಡಿಕೊಂಡಿದ್ದಾನೆ. ಅಂತೆಯೇ ಇಷ್ಟಲಿಂಗಧಾರಿಯ ದೇಹವು ಅದೊಂದು ಪವಿತ್ರವಾದ ಮಂದಿರವಿದ್ದಂತೆ. ಲಿಂಗಧಾರಿಯ ದೇಹವು ಸುಳಿದಾಡುವ ದೇವಾಲಯವಿದ್ದಂತೆ. ದೇವರನ್ನು ದೇಹದ ಮೇಲೆ ಧರಿಸುವ ಸೌಭಾಗ್ಯವು ವೀರಶೈವರ ಹೊರತಾಗಿ ಮತ್ತಾರಿಗೂ ಲಭ್ಯವಾಗಿಲ್ಲ. ಅಂತೆಯೇ ಶಿವಾಗಮಗಳಲ್ಲಿ ವೀರಶೈವನೇ ಸರ್ವೋತ್ತಮನೆಂದು ಸಾರಲ್ಪಟ್ಟಿದೆ. ಪಾರಮೇಶ್ವರಾಗಮದಲ್ಲಿ ಶಿವನು ಪಾರ್ವತಿಯನ್ನು ಕುರಿತು –'ನ ವೀರಶೈವಸದೃಶಂ ಮತಮಸ್ತಿ ಜಗತ್ತ್ರಯೇ' ವೀರಶೈವ ಧರ್ಮಕ್ಕೆ ಸರಿಸಾಟಿಯಾದ ಬೇರೊಂದು ಧರ್ಮವು ಮೂರು ಲೋಕದಲ್ಲಿಯೂ ಇಲ್ಲವೆಂಬುದಾಗಿ ಉಪದೇಶಿಸಿದ್ದಾನೆ. ಇದೇ ವಿಷಯವನ್ನೇ ಶ್ರೀಮನ್ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ–''ಕ್ರಿಮಿಕೀಟಪತಂಗಜಾತಿಯಿಂ ಪಶುಗಳಧಿಕವು। ಆ ಪಶುಗಳಿಂ ಮನುಷ್ಯರಧಿಕರು । ಆ ಮನುಷ್ಯರಿಂದ ದ್ವಿಜರಧಿಕರು । ಆ ದ್ವಿಜರಿಂ ವಿಪ್ರರಧಿಕರು। ಅವರಿಂ ಕೃತಬುದ್ಧಿಗಳಧಿಕರು। ಅವರಿಂ ಸನ್ಯಾಸಿಗಳಧಿಕರು। ಅವರಿಂ ಜ್ಞಾನಿಗಳಧಿಕರು ಆ ಜ್ಞಾನಿಗಳಿಗಿಂತಲೂ । ಶಿವಾರ್ಚಕರಧಿಕರು । ಅವರಿಂ ಲಿಂಗಾಂಗಸಂಗಿಗಳಧಿಕರು । ಆ ಲಿಂಗಾಂಗಸಂಗಿಗಳಿಂ ಷಟಸ್ಥಲಜ್ಞಾನಿಯಾದ ವೀರಶೈವನೇ ಸರ್ವೋತ್ಕೃಷ್ಟನು. ಅವರಿಗೆ ಮೂರು ಲೋಕದಲ್ಲಿಯೂ ಸಮಾನವಿಲ್ಲವಾಗಿ ಮುಮುಕ್ಷುಗಳಿಂ ಷಟ್‌ಸ್ಥಲಜ್ಞಾನಿಗಳಾದ ವೀರಶೈವರೇ ವಂದಿಸಲು ಪೂಜಿಸಲು ಯೋಗ್ಯರಹುದೆಂದು ಕ್ರಿಯಾಪಾದದಲ್ಲಿ ಪ್ರತಿಪಾದ್ಯಮಕ್ಕುಮ್'' ಈ ರೀತಿಯಾಗಿ ಆಗಮ ಸಂದರ್ಭವನ್ನು ವಿವರಿಸುತ್ತ ಆಗಮಗಳಲ್ಲಿಯ ಕ್ರಿಯಾಪಾದದಲ್ಲಿ ವಿವರಿಸಲ್ಪಟ್ಟ ವೀರಶೈವನ ಸರ್ವೋತ್ಕೃಷ್ಟತೆಯನ್ನು ವಿವರಿಸಿದ್ದಾರೆ.

ವೀರಶೈವ ಧರ್ಮದ ಔನ್ನತ್ಯವನ್ನು ಮತ್ತು ಇಷ್ಟಲಿಂಗಧಾರಣೆಯ ಮಹತ್ವವನ್ನರಿಯದ ಕೆಲಜನರು ಗುರುವಿನಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ದೇಹದ ಮೇಲೆ ಧರಿಸದೆ ಭವಿಗಳಂತೆ ಸಂಚರಿಸುತ್ತಿರುತ್ತಾರೆ. ಇಂಥವರು ವ್ರತಭ್ರಷ್ಟರೆಂದು ಕರೆಯಲ್ಪಡುತ್ತಾರೆ. ಇಂಥವರಿಗೆ ಸದ್ಗತಿಯು ಆದೆಂದಿಗೂ ಸಿಗದು. ಅಂತೆಯೇ ವೀರಮಾಹೇಶ್ವರನು ತನಗೆ ಯಾರಾದರೂ ಮರಣದ ಭೀತಿಯನ್ನು ತೋರಿಸಿ ಲಿಂಗಪೂಜಾವ್ರತವನ್ನು ಬಿಡಿಸಲು ಪ್ರಯತ್ನಿಸಿದರೂ ಮರಣಹೊಂದಲು ತಯಾರಾಗುತ್ತಾನೆಯೇ ವಿನಃ ಇಷ್ಟಲಿಂಗ ಪೂಜಾಮಹಾವ್ರತವನ್ನೆಂದಿಗೂ ಬಿಡಲಾರನು. ಮೊಗಲರ ಶಾಸನಕಾಲದಲ್ಲಿ ಮುಸಲ್ಮಾನರು ಅನೇಕ ಹಿಂದುಗಳನ್ನು ಧರ್ಮಾಂತರಗೊಳಿಸುವ ಪ್ರಸಂಗದಲ್ಲಿ ಲಿಂಗನಿಷ್ಠರಾದ ವೀರಶೈವರು ಮತಾಂತರವನ್ನು ಹೊಂದದೆ ಮುಸಲ್ಮಾನರ ಗೋರಿಯಾಕಾರದ ಕರಡಿಗೆಗಳನ್ನು ಧರಿಸಿ ಅದರೊಳಗೆ ಇಷ್ಟಲಿಂಗವನ್ನು ಇಟ್ಟುಕೊಂಡು ತಮ್ಮ ಧರ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ನಮ್ಮ ಪೂರ್ವಜರು ಧರ್ಮವೀರರಾಗಿ ತಮ್ಮ ಧರ್ಮವನ್ನು ಕಾಪಾಡದೇ ಹೋಗಿದ್ದರೆ, ಇಂದು ಈ ಧರ್ಮವಾಗಲೀ ಈ ಧರ್ಮದ ಆಚರಣೆಗಳಾಗಲೀ ಇರುತ್ತಿರಲಿಲ್ಲ. ಯುಗ ಯುಗಗಳಿಂದ ಬಂದ ಈ ನಮ್ಮ ಧರ್ಮವು ಕಾಲಕಾಲಕ್ಕೆ ಪರಧರ್ಮೀಯರ ಆಕ್ರಮಣಕ್ಕೊಳಗಾದರೂ ನಿಷ್ಠಾವಂತರಾದ ಆಚಾರ್ಯರ ಹಾಗೂ ಭಕ್ತಸಮುದಾಯದ ಆಚರಣೆಯಿಂದ ಅದು ಇಂದಿಗೂ ಉಳಿದುಕೊಂಡು ಬಂದಿದೆ. ಇಂತಹ ವೀರಭಕ್ತರ ವಂಶದಲ್ಲಿಂದು ಧರ್ಮಹೇಡಿಗಳು ಜನಿಸಿ ಧರ್ಮಾಚರಣೆಯನ್ನು ಮರೆತು ತಿರುಗುತ್ತಿದ್ದಾರೆ. ಆದ್ದರಿಂದ ಇಂದು ನೀವೆಲ್ಲ ಎಚ್ಚರಾಗಬೇಕು. ಎಂಟು ವರ್ಷದ ಮಗುವನ್ನೇ ಮೊದಲು ಮಾಡಿಕೊಂಡು ಎಂಭತ್ತು ವರ್ಷದ ವೃದ್ಧನ ಪರ್ಯಂತವಾಗಿ ಎಲ್ಲರೂ ಧರ್ಮಪ್ರೇಮಿಗಳಾಗಿ ಧರ್ಮವೀರರಾಗಿ ಧರ್ಮಾಚರಣೆಯನ್ನು ಮಾಡಬೇಕು.

ಇಷ್ಟಲಿಂಗಪೂಜಾಮಹಾವ್ರತಕ್ಕೆ ಯಾವ ಸೂತಕಗಳು ಬಾಧಕಗಳಾಗುವುದಿಲ್ಲ ಅಂತೆಯೇ ಮನೆಯಲ್ಲಿ ಯಾರ ಜನನವೇ ಆಗಿರಲಿ ಅಥವಾ ಯಾರಾದರೂ ಮೃತ್ಯುವನ್ನೇ ಹೊಂದಿರಲಿ ಇಲ್ಲವೆ ಮನೆಯಲ್ಲಿಯ ಹೆಣ್ಣುಮಕ್ಕಳು ರಜಸ್ವಲೆಯರೇ ಆಗಿರಲೀ ಇಂತಹ ಯಾವ ಸೂತಕ ಪ್ರಸಂಗ ಬಂದರೂ ಲಿಂಗಪೂಜಾ ಮಹಾವ್ರತವನ್ನು ಯಾರೂ ತಪ್ಪಿಸಬಾರದು. ಈ ಧರ್ಮದಲ್ಲಿ ಲಿಂಗದೀಕ್ಷಾ ಸಂಸ್ಕಾರವು ಸ್ತ್ರೀ–ಪುರುಷರಿಗೆ ಸಮಾನವಾಗಿ ದೊರೆಯುವುದರಿಂದ ಇಲ್ಲಿಯ ಹೆಣ್ಣುಮಕ್ಕಳಿಗೆ ರಜಸ್ಸೂತಕ ಇಲ್ಲವೆ ಜನನಸೂತಕ ಪ್ರಾಪ್ತವಾದರೂ, ಅವರು ಲಿಂಗಧಾರಣೆಯನ್ನಾಗಲೀ, ಲಿಂಗಪೂಜಾ ಮಹಾವ್ರತವನ್ನಾಗಲೀ ಬಿಡಕೂಡದು. ಶಿವನ ಜಡೆಯಿಂದ ಹರಿದು ಬಂದ ಗಂಗೆಯು ಸದಾಪವಿತ್ರಳಾಗಿರುವಂತೆ ಲಿಂಗಧಾರಿಯಾದ ಸ್ತ್ರೀಯೂ ಸಹ ಪವಿತ್ರಳಾಗಿರುತ್ತಾಳೆ. ಇಷ್ಟಲಿಂಗವು ದೇಹದಿಂದ ದೂರವಾದರೆ ಪ್ರಾಣವನ್ನೇ ತ್ಯಾಗಮಾಡಬೇಕೆಂಬ ನಿಯಮವು ಈ ಧರ್ಮದಲ್ಲಿ ಹೇಳಲ್ಪಟ್ಟಿರೋಣದರಿಂದ ಯಾವ ಕಾಲಕ್ಕೂ ಯಾರೂ ಲಿಂಗವನ್ನು ಬಿಡಕೂಡದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿಯವರೆಗೆ ವೀರಮಾಹೇಶ್ವರನ ಲಿಂಗಪೂಜಾನಿಷ್ಠೆಯನ್ನು ವರ್ಣಿಸಿ ಇನ್ನು ಮುಂದೆ–

ಲಿಂಗಪೂಜಾಮಕೃತ್ವಾ ತು ಏ ನ ಭುಂಜಂತಿ ಮಾನವಾಃ ।
ತೇಷಾಂ ಮಹಾತ್ಮನಾಂ ಹಸ್ತೇ ಮೋಕ್ಷಲಕ್ಷ್ಮೀರುಪಸ್ಥಿತಾ ॥

ಕಿಮನ್ಯೈರ್ಧರ್ಮಕಲಿಲೈಃ ಕೀಕಷಾರ್ಥಪ್ರದಾಯಿಭಿಃ ।
ಸಾಕ್ಷಾನೋಕ್ಷಪ್ರದಃ ಶಂಭೋರ್ಧರ್ಮೋ ಲಿಂಗಾರ್ಚನಾತ್ಮಕಃ ॥

(ಸಿ. ಶಿ. ೧೦; ೨೩–೨೪)

ಹೀಗೆ ಲಿಂಗಪೂಜಾ ಮಹತಿಯನ್ನು ತಿಳಿಯಪಡಿಸಿದ್ದಾರೆ. ವೀರಶೈವನು ಲಿಂಗ ಭೋಗೋಪಭೋಗಿಯಾಗಿರುವುದರಿಂದ, ಇಷ್ಟಲಿಂಗಪೂಜೆಯನ್ನು ಮಾಡದೆ ಮತ್ತು ಆ ಲಿಂಗಕ್ಕೆ ನೈವೇದ್ಯವನ್ನರ್ಪಿಸದೆ ಏನನ್ನೂ ಭುಂಜಿಸುವಂತಿಲ್ಲ, ಇಂತಹ ನಿಯಮವನ್ನು ಕಟ್ಟುನಿಟ್ಟಾಗಿ ಪರಿಪಾಲಿಸಿದವರಿಗೆ ಮೋಕ್ಷಲಕ್ಷ್ಮಿಯು ಸುಲಭವಾಗಿ ಪ್ರಾಪ್ತಳಾಗುತ್ತಾಳೆ ಅರ್ಥಾತ್ ಸದ್ಗತಿಯು ಸುಲಭವಾಗಿ ಸಿದ್ಧಿಸುವುದು. ಅಂತೆಯೇ ಲಿಂಗಪೂಜೆಯನ್ನು ಮಾಡದೆ ಭುಂಜಿಸಲಾರೆ ಎಂಬ ನಿಯಮವನ್ನು ಎಲ್ಲರೂ ಪರಿಪಾಲಿಸಬೇಕು. ಮೋಕ್ಷ ಪ್ರದವಾದ ಇಷ್ಟಲಿಂಗಪೂಜೆಯನ್ನು ಮಾಡದೇ ಅದರ ಪ್ರಸಾದವನ್ನೂ ಸಹ ಸೇವಿಸದೆ, ಮುಕ್ತಿಯು ಸಿಗಲೆಂದರೆ ಅದು ಹೇಗೆ ತಾನೆ ದೊರೆತೀತು? ಲಿಂಗಪ್ರಸಾದವನ್ನು ಪ್ರತಿ ದಿವಸ ಭುಂಜಿಸುವವನ ಮನಸ್ಸು ಸದಾ ಪ್ರಸನ್ನವಾಗಿರುವುದು ಆ ಪ್ರಸನ್ನ ಚಿತ್ತದಲ್ಲಿಯೇ ಲಿಂಗಾಂಗ ಸಾಮರಸ್ಯ ಜ್ಞಾನವುಂಟಾಗಿ ನಿಃಶ್ರೇಯಸವು ಪ್ರಾಪ್ತವಾಗುವುದು. ಅಂತೆಯೇ ಓರ್ವ ಅನುಭಾವಿಯು ''ಪ್ರತಿನಿತ್ಯಪ್ರಸಾದ ಭೋಜಿಯಾಗಿರಲು ಮುಕ್ತಿಯ ಚಿಂತೆಯೇ ಕಯ್ಯಾ'' ಎಂಬುದಾಗಿ ಹೇಳಿದ್ದಾನೆ.

ವೀರಶೈವರ ಮುಖ್ಯ ಧರ್ಮಾಚರಣೆಯೆಂದರೆ ಇಷ್ಟಲಿಂಗಾರ್ಚನೆಯೇ ಆಗಿದೆ. ಅಂತೆಯೇ ಪೂಜ್ಯಪಾದರು– 'ಧರ್ಮೋ ಲಿಂಗಾರ್ಚನಾತ್ಮಕಃ' ಎಂಬುದಾಗಿ ಉಪದೇಶಿಸಿ ದ್ದಾರೆ. ಧರ್ಮಶಾಸ್ತ್ರದಲ್ಲಿ ಅನೇಕ ವಿಧಗಳಾದ ಧರ್ಮಾಚರಣೆಗಳು ಪ್ರತಿಪಾದಿಸಲ್ಪಟ್ಟಿವೆ. ಕ್ಷುದ್ರಫಲಗಳನ್ನು ಕೊಡುವ ಉಳಿದೆಲ್ಲ ವ್ರತಗಳಿಗಿಂತಲೂ ಸಾಕ್ಷಾತ್ ಮೋಕ್ಷವನ್ನೇ ಅನುಗ್ರಹಿಸುವ ಲಿಂಗಪೂಜಾರೂಪವಾದ ಧರ್ಮವೇ ಸರ್ವಶ್ರೇಷ್ಠವಾದದ್ದು. ಹೀಗೆ ಲಿಂಗಧಾರಿಯಾಗಿ ಲಿಂಗಪೂಜಾ ಮಹಾವ್ರತವನ್ನು ಆಚರಿಸುವ ವೀರಶೈವರಿಗೆ ಒಂದೇ ಜನ್ಮದಲ್ಲಿ ಮುಕ್ತಿಯು ದೊರೆಯುವುದು. ಅಂತೆಯೇ ಶಿವಾಗಮದಲ್ಲಿ– ''ಏಕೇನ ಜನ್ಮನಾ ಮುಕ್ತಿಃ ವೀರಾಣಾಂ ತು ಮಹೇಶ್ವರೀ'' ಎಂಬುದಾಗಿ ಉಪದೇಶಿಸಲಾಗಿದೆ. ಲಿಂಗಾಂಗ ಸಂಗಿಯಾಗಿ ಲಿಂಗಪೂಜಾಲೋಲನಾದವನಿಗೆ ಪುನರ್ಜನ್ಮವಿಲ್ಲ, ಅವನ ಈ ಜನ್ಮವೇ ಕೊನೆಯ ಜನ್ಮವು.

ಈ ವೀರಮಾಹೇಶ್ವರನು ತನಗೆ ಬೇಕಾಗುವ ಬಟ್ಟೆ, ಆಭೂಷಣ, ಅನ್ನ, ಔಷಧಿ ಅದಾವುದೇ ವಸ್ತುವಿದ್ದರೂ ಅದನ್ನು ಲಿಂಗಾರ್ಪಿತ ಮಾಡಿಯೇ ಉಪಭೋಗಿಸುತ್ತಾನೆ. ಹೀಗೇ ನಿಯಮಪೂರ್ವಕವಾಗಿ ಲಿಂಗಾರ್ಪಿತವನ್ನು ಮಾಡಿಯೇ ಉಪಭೋಗಿಸುವ ಈ ವೀರಮಾಹೇಶ್ವರನಿಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಅರ್ಪಿತೇನಾನ್ನಪಾನೇನ ಲಿಂಗೇ ನಿಯಮಪೂಜಿತೇ ।
ಯೇ ದೇಹವೃತ್ತಿಂ ಕುರ್ವಂತಿ ಮಹಾಮಾಹೇಶ್ವರಾ ಹಿ ತೇ ॥

(ಸಿ. ಶಿ. ೧೦–೨೫)

ಈ ರೀತಿಯಾಗಿ ಅವನಿಗೆ ಮಹಾಮಾಹೇಶ್ವರನೆಂದು ಕರೆದಿದ್ದಾರೆ.

ಈ ಮಾಹೇಶ್ವರ ಸ್ಥಲದಲ್ಲಿಯ ವಿವೇಚನೆಯತ್ತ ಲಕ್ಷ್ಯಗೊಟ್ಟರೆ ಸೂಕ್ಷ್ಮಾತಿ ಸೂಕ್ಷ್ಮ ವಿಚಾರವು ಅನುಭವಗೋಚರವಾಗುವುದು. ಇಷ್ಟಲಿಂಗದಲ್ಲಿ ನಿಷ್ಠೆಯನ್ನಿಟ್ಟಾಗ ಮಾಹೇಶ್ವರನೆನಿಸಿಕೊಳ್ಳುವನು. ಲಿಂಗಪೂಜಾ ಮಹಾವ್ರತವನ್ನು ಅದೆಂದಿಗೂ ಬಿಡದಂತೆ ಪರಿಪಾಲಿಸಿದಾಗ ವೀರಮಾಹೇಶ್ವರನಾಗುವನು. ಮುಂದೆ ಆ ಲಿಂಗಪೂಜಾ ಮಹಾವ್ರತವನ್ನು ನಿಯಮಪೂರ್ವಕವಾಗಿ ಮಾಡುತ್ತ, ಭಕ್ಷ್ಯ ಭೋಜ್ಯ ಪದಾರ್ಥಗಳನ್ನು ಲಿಂಗಾರ್ಪಿತವನ್ನಾಗಿ ಮಾಡಿ ಭುಂಜಿಸುವ ಅಸಾಧಾರಣ ನಿಯಮವನ್ನು ಪರಿಪಾಲಿಸಿದಾಗ ಅವನೇ ಮಹಾಮಾಹೇಶ್ವರನೆಂದೆನಿಸಿಕೊಳ್ಳುವನು. ಕಾರಣ ಪ್ರತಿಯೊಬ್ಬ ಸಾಧಕರು ತಮ್ಮ ಪ್ರಗತಿಯತ್ತ ಲಕ್ಷ್ಯಗೊಟ್ಟು ಉತ್ತರೋತ್ತರವಾಗಿ ಉನ್ನತಿಯ ಮಾರ್ಗದತ್ತ ಹೋಗಲು ಸಾಧನೆಯನ್ನು ಮಾಡಬೇಕೆಂಬುದಾಗಿ ತಿಳಿಯಪಡಿಸಿ ಇವತ್ತಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೧ ಅಗಷ್ಟ್, ೧೯೯೧
(ಸ್ಥಾನ ನಾಗಪುರ)

■■

# ಲಿಂಗನಿಷ್ಠಾಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರಾವಣಮಾಸದ ನಿಮಿತ್ತವಾಗಿ ನಡೆದುಕೊಂಡು ಬಂದ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳು ಅವ್ಯಾಹತವಾಗಿ ಸಾಗುತ್ತಲಿವೆ. ಈ ಗ್ರಂಥದ ಮಾಹೇಶ್ವರ ಸ್ಥಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಯನ್ನು ಕುರಿತು ಮಾಹೇಶ್ವರನ ಲಿಂಗನಿಷ್ಠೆಯನ್ನು–

ಚಿನ್ಮಯೇ ಶಾಂಕರೇ ಲಿಂಗೇ ಸ್ಥಿರಂ ಯೇಷಾಂ ಮನಸ್ಸದಾ ।
ವಿಮುಕ್ತೇತರಸರ್ವಾರ್ಥಂ ತೇ ಶಿವಾ ನಾತ್ರಸಂಶಯಃ ॥

ಲಿಂಗೇಯಸ್ಯಮನೋ ಲೀನಂ ಲಿಂಗಸ್ತುತಿಪರಾ ಚ ವಾಕ್ ।
ಲಿಂಗಾರ್ಚನಪರೌ ಹಸ್ತೌ ಸ ರುದ್ರೋ ನಾತ್ರಸಂಶಯಃ ॥

(ಸಿ. ಶಿ. ೧೦ ; ೨೬–೨೭)

ಈ ರೀತಿಯಾಗಿ ನಿರೂಪಿಸಿದ್ದಾರೆ. ಚಿನ್ಮಯವಾದ ಇಷ್ಟಲಿಂಗದಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ಬೇರಾವ ಆಶೆ–ಆಮಿಷಗಳಿಲ್ಲದೆ ಯಾರ ಮನಸ್ಸು ಸದಾ ಶಿವನನ್ನೇ ಚಿಂತಿಸುವುದೋ ಅವರು ಶಿವಸ್ವರೂಪರೇ ಆಗುತ್ತಾರೆ. ಮನಸ್ಸು ಲಿಂಗದಲ್ಲಿ ಲಯಗೊಂಡಂತೆ ಬಹಿಃಕರಣಗಳಾದ ವಾಕ್ ಮತ್ತು ಹಸ್ತಗಳು ಶಿವಸ್ತುತಿ ಮತ್ತು ಶಿವಪೂಜೆಯಲ್ಲಿ ತನ್ಮಯಗಳಾದಾಗ ಆ ವ್ಯಕ್ತಿಯು ಶಿವನೆಂಬುವುದರಲ್ಲಿ ಸಂಶಯವಿಲ್ಲ.

ಪ್ರತಿಯೊಬ್ಬ ಜೀವರು ತನ್ನನ್ನು ಆರಾಧಿಸುವುದಕ್ಕಾಗಿ ಶಿವನು ಪ್ರತಿಯೊಬ್ಬರಿಗೆ ತ್ರಿಕರಣಗಳನ್ನು ದಯಪಾಲಿಸಿದ್ದಾನೆ. ತನು, ಮನ ಮತ್ತು ವಾಣಿಗಳೇ ಆ ತ್ರಿಕರಣಗಳು. ಅನೇಕ ಜನರು ಈ ತ್ರಿಕರಣಗಳನ್ನು ಕೇವಲ ಸಾಂಸಾರಿಕ ಸುಖಕ್ಕಾಗಿ ಉಪಯೋಗಿಸಿ ಅದೆಷ್ಟೋ ಸಾರೆ ಜನನ ಮರಣಾತ್ಮಕ ಚಕ್ರದಲ್ಲಿ ಸಿಲುಕುತ್ತಲಿದ್ದಾರೆ. ಈ ಕರಣಗಳನ್ನು ಸಂಸಾರಕ್ಕಾಗಿ ಉಪಯೋಗಿಸಿದಾಗ ಭವಬಂಧನದ ಪ್ರಾಪ್ತಿಯು, ಇವುಗಳನ್ನೇ ಶಿವಾರಾಧನೆಗಾಗಿ ಬಳಸಿಕೊಂಡಾಗ ಸದ್ಗತಿಯು ಪ್ರಾಪ್ತವಾಗುವುದು. ಅಂತೆಯೇ– ''ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ'' ಎಂಬುದಾಗಿ ಜ್ಞಾನಿಗಳು ತಿಳಿಯಪಡಿಸಿದ್ದಾರೆ.

ತ್ರಿಕರಣಗಳಲ್ಲಿ ಅಂತಃಕರಣವಾದ ಮನಸ್ಸಿನ ಪಾತ್ರ ಬಹುಮುಖ್ಯವಾದುದು. ಇಷ್ಟದಲ್ಲಿ ಮನಸ್ಸು ನೆಲೆಗೊಂಡಾಗ ಶರೀರ ಮತ್ತು ವಾಣಿಗಳು ಅದರ ಅನುಕರಣೆಯನ್ನು ಮಾಡುತ್ತವೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಾಹೇಶ್ವರನ ಲಿಂಗನಿಷ್ಠೆಯನ್ನು ಪ್ರತಿಪಾದಿಸುತ್ತ–''ಚಿನ್ಮಯೇ ಶಾಂಕರೇ ಲಿಂಗೇ ಸ್ಥಿರಂ ಯೇಷಾಂ ಮನಸ್ಸದಾ'' (ಸಿ. ಶಿ. ೧೦–೨೬) ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ನಾವು

ಪೂಜಿಸುವ ಇಷ್ಟಲಿಂಗವು ದೃಷ್ಟಿಗೆ ಶಿಲಾಮಯವಾಗಿ ಕಂಡರೂ ವಸ್ತುತಃ ಅದು ಚಿನ್ಮಯವಾದದ್ದು. ವೀರಶೈವ ಸಿದ್ಧಾಂತದಲ್ಲಿ ಜಡವೆಂಬುವುದೇ ಇಲ್ಲ. ಸಂಪೂರ್ಣವಾದ ಸೃಷ್ಟಿಯನ್ನು ವೀರಶೈವರು ಚಿದ್ರೂಪವಾಗಿಯೇ ಭಾವಿಸುತ್ತಾರೆ. ಯಾರ ದೃಷ್ಟಿಯು ಸ್ಥೂಲವಾಗಿದೆಯೋ ಅವರಿಗೆ ಜಗತ್ತು ಸ್ಥೂಲವಾಗಿ ತೋರುತ್ತದೆ. ಸೂಕ್ಷ್ಮ ದೃಷ್ಟಿಯುಳ್ಳವರಿಗೆ ಜಗವಿದೆಲ್ಲವೂ ಲಿಂಗಮಯವು. ಅಗ್ನಿಯ ಸಂಪರ್ಕದಿಂದ ತೃಣವು ಅಗ್ನಿರೂಪವಾಗುವಂತೆ, ಚಿನ್ಮಯಲಿಂಗದ ನಿರಂತರ ಚಿಂತನೆಯಿಂದ ಚಿಂತಕನು ಲಿಂಗರೂಪನೇ ಆಗುತ್ತಾನೆ. ಈ ಲಿಂಗದ ಚಿಂತನೆಯನ್ನು ಮಾಡುತ್ತಿರುವಾಗ ಇಹಲೋಕದ ಇಲ್ಲವೆ ಪರಲೋಕದ ಯಾವ ಸುಖದ ಅಭಿಲಾಷೆಯೂ ಮನದಲ್ಲಿ ಹೊಳೆಯಕೂಡದು. ಹಾಗೇನಾದರೂ ಅಭಿಲಾಷೆಗಳು ತಲೆದೋರಿದಲ್ಲಿ ಶಿವಚಿಂತನೆಯು ಖಂಡಿತವಾಗುತ್ತದೆ. ಅಂತೆಯೇ ಪೂಜ್ಯರು– ''ವಿಮುಕ್ತೇತರ ಸರ್ವಾರ್ಥಮ್'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಮನಸ್ಸು ಸಂಪೂರ್ಣವಾಗಿ ಎಲ್ಲ ಆಶೆ–ಆಮಿಷಗಳನ್ನು ತೊರೆದು ಶಿವಚಿಂತನೆಯಲ್ಲಿಯೇ ಮಗ್ನವಾಗಿರಬೇಕು ಅಂದಾಗ ಆ ಸಾಧಕನು ಶಿವರೂಪನೇ ಆಗುತ್ತಾನೆ.

ವಸ್ತುತಃ ಜೀವನು ಶಿವನ ಅಂಶನೇ ಆಗಿದ್ದಾನೆ. ಇವನು ತನ್ನ ಅಂಶರೂಪವನ್ನು ನೀಗಿ ಪರಿಪೂರ್ಣ ಶಿವಸ್ವರೂಪನಾಗುವವರೆಗೆ ಇವನಿಗೆ ಪೂರ್ಣ ಶಾಂತಿ ದೊರೆಯಲಾರದು. ಸಮುದ್ರದ ನೀರು ಸೂರ್ಯನ ಪ್ರಖರ ಕಿರಣಗಳಿಂದ ಬಾಷ್ಪವಾಗಿ ಮೇಘರೂಪದಲ್ಲಿ ಆಕಾಶದೊಳಗೆ ಸಂಚರಿಸುತ್ತಿದ್ದರೂ ಅದಕ್ಕೆ ಶಾಂತಿ ಇರುವುದಿಲ್ಲ. ಕೊನೆಗೆ ಮಳೆಹನಿಯಾಗಿ ಕೆಳಗೆ ಬಿದ್ದು ಹೊಳೆಹಳ್ಳಗಳ ರೂಪದಲ್ಲಿ ಹರಿಯುತ್ತ ಕೊನೆಗೊಂದು ದಿನ ಸಮುದ್ರವನ್ನು ಸೇರಿದಾಗಲೇ ಅದರ ಗತಿಯು ನಿಲ್ಲುತ್ತದೆ. ಇದರಂತೆ ಪರಮಾತ್ಮನಿಂದ ಅಗಲಿ ಅಂಶರೂಪನಾದ ಈ ಜೀವನಿಗೆ ಎಲ್ಲಿ ಹೋದರೂ, ಏನನ್ನು ಪಡೆದುಕೊಂಡರೂ, ಪರಿಪೂರ್ಣವಾದ ಶಾಂತಿ ಸಿಗುವುದಿಲ್ಲ. ಕೊನೆಗೆ ಚಿನ್ಮಯನಾದ ಶಿವನನ್ನು ಚಿಂತಿಸಿ ತನ್ನ ಅಂಶತ್ವವನ್ನು ಕಳೆದುಕೊಂಡು ಪರಿಪೂರ್ಣ ಶಿವಸ್ವರೂಪವನ್ನು ಹೊಂದಿದಾಗ ಮಾತ್ರ ಈತನಿಗೆ ಪರಿಪೂರ್ಣ ಶಾಂತಿಯು ಲಭಿಸುತ್ತದೆ. ಅಂತೆಯೇ ಪೂಜ್ಯಪಾದರು ಮನಃಪೂರ್ವಕವಾಗಿ ಚಿನ್ಮಯ ಶಿವಲಿಂಗವನ್ನು ಚಿಂತಿಸಬೇಕೆಂಬುದಾಗಿ ಉಪದೇಶಿಸಿದ್ದಾರೆ. ಲಿಂಗಪೂಜೆಯನ್ನು ಮಾಡುವಾಗ–ಮನಸ್ಸು ಲಿಂಗಚಿಂತನೆಯಲ್ಲಿ ತನ್ಮಯವಾಗಿರದಿದ್ದರೆ ಆ ಪೂಜೆಯು ಫಲೀಭೂತವಾಗಲಾರದು.

ಶರೀರವಿದ್ದಡೆ ಮನಸ್ಸನ್ನು ಸ್ಥಿರಗೊಳಿಸುವುದೇ ಸಾಧಕನ ಕರ್ತವ್ಯ. ದೇಹವು ಪೂಜೆಯಲ್ಲಿ ತೊಡಗಿದಾಗ ಮನಸ್ಸು ಆ ಪೂಜೆಯಲ್ಲಿ ಮಗ್ನವಾಗಿದೆಯೆಂದು ಹೇಳುವುದು ಸಾಧ್ಯವಿಲ್ಲ. ಚಪಲವಾದ ಮನಸ್ಸು ಯಾವಾಗಲೂ ಮುಂದೆ ಹಿಂದೆ ಓಡಾಡುತ್ತಲೇ ಇರುತ್ತದೆ. ಶರೀರದ ವೇಗ ಹಾಗೂ ಮನಸ್ಸಿನ ವೇಗಗಳಲ್ಲಿ ಅಜಗಜಾಂತರವಿದೆ. ಭೌತಿಕ ಪ್ರಪಂಚದಲ್ಲಿ ವೈಜ್ಞಾನಿಕ ಚಿಂತನೆಯ ಪ್ರಕಾರ ಅತ್ಯಂತ ವೇಗವಾದದ್ದು ಪ್ರಕಾಶವು. ಇದು ಒಂದು ಸೆಕೆಂಡಿಗೆ ಒಂದು ಲಕ್ಷ ಎಂಭತ್ತಾರು ಸಾವಿರ ಮೈಲುಗಳ ವೇಗದಲ್ಲಿ ಚಲಿಸುತ್ತದೆ. ಸೂರ್ಯೋದಯವಾದನಂತರ ಅವನ ಕಿರಣವು ಪೃಥ್ವಿಯ ಮೇಲೆ ಬೀಳಲು ಎಂಟು ನಿಮಿಷಗಳು ಬೇಕಾಗುವವು. ಆದರೆ ಮನಸ್ಸಿನ ವೇಗವು ಪ್ರಕಾಶ

ಕ್ಕಿಂತಲೂ ಎಷ್ಟೋಪಟ್ಟು ಹೆಚ್ಚಾಗಿರುತ್ತದೆ. ಇದರ ದೃಷ್ಟಿಯಲ್ಲಿ ಶರೀರದ ವೇಗವು ಅತ್ಯಲ್ಪವಾದುದು. ಒಂದು ತಾಸಿಗೆ ಹತ್ತಾರು ಮೈಲು ವೇಗದಲ್ಲಿ ಚಲಿಸುವ ಶರೀರದಲ್ಲಿ ಒಂದು ಸೆಕೆಂಡಿಗೆ ಲಕ್ಷಾವಧಿ ಮೈಲು ಚಲಿಸುವ ಮನಸ್ಸನ್ನು ಪರಮಾತ್ಮನಿರಿಸಿದ್ದಾನೆ. ಅಂತೆಯೇ ಶರೀರಕ್ಕೂ ಮನಸ್ಸಿಗೂ ತಾಳಮೇಳಗಳೇ ಇಲ್ಲ. ಎಲ್ಲಿಯವರೆಗೆ ಇವೆರಡರ ಗತಿಯು ಒಂದಾಗುವುದಿಲ್ಲವೋ ಅಲ್ಲಿಯವರೆಗೆ ಸಾಧನೆಯು ಫಲಕಾರಿಯಾಗಲಾರದು. ಇಲ್ಲಿ ಎರಡರ ಗತಿಯನ್ನು ಸಮಾನಗೊಳಿಸಬೇಕಾದರೆ ಶರೀರವನ್ನು ಮನಸ್ಸಿನ ವೇಗದಲ್ಲಿ ಚಲಿಸುವಂತೆ ಮಾಡುವುದು ಅಸಾಧ್ಯವಾದುದು. ಆದರೆ ಮನಸ್ಸಿನ ವೇಗವನ್ನು ತಡೆದು ಶರೀರದ ಜೊತೆಗೆ ಹೊಂದಿಕೆ ಮಾಡುವುದು ಸಾಧ್ಯವೆಂದೆನಿಸಿದ್ದರೂ ಅದು ಸುಲಭಸಾಧ್ಯ ವಾಗಿರದೆ ಕಷ್ಟಸಾಧ್ಯವಾಗಿರುತ್ತದೆ. ಹೀಗೆ ಮನಸ್ಸಿನ ವೇಗವನ್ನು ತಡೆಯುವ ಕ್ರಿಯೆ ಗೇನೇ ಯೋಗವೆಂದು ಕರೆಯುತ್ತಾರೆ. ಮಾಹೇಶ್ವರನು ಶಿವನ ಚಿಂತನಾರೂಪವಾದ ಶಿವಯೋಗದಿಂದ ಇದನ್ನು ಸಾಧಿಸಿಕೊಳ್ಳಬಲ್ಲನು. ಷಣ್ಮುಖಶಿವಯೋಗಿಗಳೂ ಕೂಡ–

ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ,
ಇಂದ್ರಿಯಂಗಳೆಂಬ ಶಾಖೆ ಶಾಖೆಗೆ ಹಾರಿ,
ವಿಷಯಂಗಳೆಂಬ ಹಣ್ಣುಫಲಂಗಳ ಗ್ರಹಿಸಿ,
ಭವದತ್ತ ಮುಖವಾಗಿ ಹೋಗುತಿದೆ ನೋಡಾ.
ಈ ಮನವೆಂಬ ಮರ್ಕಟನ ನಿಮ್ಮ ನೆನಹೆಂಬ ಪಾಶದಲ್ಲಿ ಕಟ್ಟಿ
ಎನ್ನನುಳುಹಿಕೊಳ್ಳಯ್ಯ ಅಖಂಡೇಶ್ವರಾ।

ಈ ರೀತಿಯಾಗಿ ಮನಸ್ಸಿನ ಚಪಲತೆಯನ್ನು ವಿವರಿಸಿ ಅದನ್ನು ನಿಯಂತ್ರಿಸಬೇಕಾದರೆ ಶಿವನ ಅನುಗ್ರಹ ಹಾಗೂ ಶಿವನ ಧ್ಯಾನಗಳೇ ಬೇಕೆಂಬುದಾಗಿ ತಿಳಿಯಪಡಿಸಿದ್ದಾರೆ.

ಶಿವಪೂಜೆಯಲ್ಲಿ ತೊಡಗಿದಾಕ್ಷಣ ಮನಸ್ಸಿನಲ್ಲಿ ನಾನಾಪ್ರಕಾರದ ಅಭಿಲಾಷೆಗಳು ಒಡಮೂಡುತ್ತವೆ. ಇಂತಹ ಪ್ರಸಂಗದಲ್ಲಿ ಶಿವಚಿಂತನೆಯ ಹೊರತಾಗಿ ಪದಾರ್ಥಗಳ ಚಿಂತನೆಯೇ ಅತ್ಯಧಿಕವಾಗುತ್ತದೆ. ಪದಾರ್ಥಗಳ ಚಿಂತನೆಯು ಪೂರ್ಣವಾಗಿ ತೊಲಗದೆ ಪರಮಾತ್ಮನ ಚಿಂತನೆಯು ಪೂರ್ಣವಾಗಲಾರದು. ಅಂತೆಯೇ ಪೂಜ್ಯಪಾದರು ಪದಾರ್ಥಗಳ ಅಭಿಲಾಷೆಯನ್ನು ತೊರೆದು ಶಿವಲಿಂಗವನ್ನು ಚಿಂತಿಸಬೇಕೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಮನವು ಲಿಂಗಚಿಂತನೆಯಲ್ಲಿ ಮಗ್ನವಾಗಿರುವಂತೆ, ಸಾಧಕನ ವಾಣಿಯು ಶಿವನನ್ನು ಸ್ತುತಿಸುವುದರಲ್ಲಿಯೇ ಹಾಗೂ ಅವನ ಹಸ್ತಗಳು ಶಿವಲಿಂಗ ಪೂಜೆ ಯಲ್ಲಿ ಆಸಕ್ತವಾಗಿರಬೇಕೆಂಬುದಾಗಿಯೂ ಪೂಜ್ಯಪಾದರು ಉಪದೇಶಿಸಿದ್ದಾರೆ. ಶರೀರ ಮತ್ತು ವಾಣಿಗಳನ್ನು ದುರುಪಯೋಗಪಡಿಸಿಕೊಂಡರೆ ಅದರಿಂದ ಅನರ್ಥವೇ ಉಂಟಾಗುತ್ತದೆ. ಆದ್ದರಿಂದ ಶಿವನನ್ನು ಸ್ತುತಿಸಿ ವಾಣಿಯನ್ನು ಮತ್ತು ಶಿವನನ್ನು ಮುಟ್ಟಿ ಅರ್ಚಿಸಿ ಶರೀರವನ್ನು ಶುದ್ಧಮಾಡಿಕೊಳ್ಳಬೇಕು. ಹೀಗೆ ತ್ರಿಕರಣಪೂರ್ವಕವಾಗಿ ಲಿಂಗಾರ್ಚನೆಯಲ್ಲಿ ತಲ್ಲೀನನಾದ ಮಾಹೇಶ್ವರನಿಗೆ ಸ್ವರ್ಗಕ್ಕೆ ಸಾಧನೀಭೂತಗಳಾದ ಅಗ್ನಿಹೋತ್ರಾದಿ ಕರ್ಮಗಳು ಪ್ರಯೋಜನಕಾರಿಗಳಾಗುವುದಿಲ್ಲ. ಅಂತೆಯೇ ಭಗವತ್ಪಾ ದರು–''ಲಿಂಗನಿಷ್ಠಸ್ಯ ಕಿಂ ತಸ್ಯ ಕರ್ಮಣಾ ಸ್ವರ್ಗಹೇತುನಾ'' (ಸಿ. ಶಿ. ೧೦–೨೮)

ಎಂಬುದಾಗಿ ಆದೇಶಿಸಿ ಸ್ವರ್ಗಕ್ಕೆ ಸಾಧನೀಭೂತಗಳಾದ ಬೇರಾವ ಕರ್ಮಗಳನ್ನೂ ಮಾಹೇಶ್ವರನು ಮಾಡಬಾರದೆಂಬುದಾಗಿ ಉಪದೇಶಿಸಿದ್ದಾರೆ.

ಯಜ್ಞ-ಯಾಗಾದಿಗಳ ಪುಣ್ಯದ ಫಲವಾದ ಸ್ವರ್ಗಾದಿಲೋಕಗಳು ಶಾಶ್ವತವಾಗಿ ಇರುವಂಥ ಸ್ಥಾನಗಳಲ್ಲ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬ ಶಾಸ್ತ್ರೋಕ್ತಿಗನುಸಾರವಾಗಿ ಪುಣ್ಯವು ಕ್ಷಯಿಸಿದೊಡನೆ ಸ್ವರ್ಗದಲ್ಲಿಯ ಆ ಜೀವಾತ್ಮನು ಪುನಃ ಮರ್ತ್ಯಲೋಕಕ್ಕೇನೇ ಮರಳಿ ಬರಬೇಕಾಗುತ್ತದೆ. ಹೋಟಲಿನಲ್ಲಿ ಸುಖೋಪ ಭೋಗವನ್ನು ಮಾಡುತ್ತಿರುವ ಮನುಷ್ಯನು ಧನವು ತೀರಿದೊಡನೆ ಆ ಸ್ಥಾನವನ್ನು ಖಾಲೀ ಮಾಡಬೇಕಾಗುತ್ತದೆ. ನಾವಾಗಿ ಖಾಲೀ ಮಾಡದಿದ್ದರೆ ಅರ್ಧಚಂದ್ರಪ್ರಯೋಗದಿಂದ ಹೊರಹಾಕಿಸಿಕೊಳ್ಳಬೇಕಾಗುತ್ತದೆ. ಹೀಗೆ ಸ್ವರ್ಗಾದಿಲೋಕಗಳು ಕ್ಷಯಪತನಾದಿ ದೋಷಗಳಿಂದ ಕೂಡಿಕೊಂಡಿರುವುದರಿಂದ ಮಾಹೇಶ್ವರನು ಅಂತಹ ಕ್ಷುದ್ರಫಲಗಳ ಅಭಿಲಾಷೆಯುಳ್ಳವನಾಗಿ ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಲು ಹೋಗುವುದಿಲ್ಲ. ನಿತ್ಯವೂ ಆನಂದರೂಪವೂ ಆದ ಶಿವಸ್ವರೂಪದ ಪ್ರಾಪ್ತಿಗಾಗಿ ಆತನು ಶಿವಪೂಜೆ ಯಲ್ಲಿಯೇ ತತ್ಪರನಾಗಿರುತ್ತಾನೆ. ಈ ಮಾಹೇಶ್ವರನ ಲಿಂಗನಿಷ್ಠೆಯನ್ನು ಪುನಃ ವಿವರಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು-

ಲಿಂಗನಿಷ್ಠಾಪರಂಶಾಂತಂ ಭೂತಿರುದ್ರಾಕ್ಷಸಂಯುತಮ್ ।
ಪ್ರಶಂಸಂತಿ ಸದಾಕಾಲಂ ಬ್ರಹ್ಮಾದ್ಯಾದೇವತಾ ಮುದಾ ॥

(ಸಿ. ಶಿ. ೧೦-೨೯)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. · ಲಿಂಗನಿಷ್ಠನಾದ ಮಾಹೇಶ್ವರನು ಶಿವನಿಗೆ ಅತ್ಯಂತ ಪ್ರಿಯವಾದ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಶಾಂತವಾಗಿ ಕುಳಿತು ಕೊಂಡಾಗ ಅವನನ್ನು ಕಂಡು ಬ್ರಹ್ಮಾದಿ ದೇವತೆಗಳೂ ಸಹ ಆತನನ್ನು ಪ್ರಶಂಸಿಸುತ್ತಾರೆ.

ಶಿವಲಾಂಛನಗಳಾದ ವಿಭೂತಿ-ರುದ್ರಾಕ್ಷಿಗಳಲ್ಲಿಯೂ ಅಪಾರವಾದ ಶಕ್ತಿಯಡಗಿ ರುತ್ತದೆ. ಶಿವನಿಗೆ ಪ್ರಿಯಗಳಾದ ಈ ಸಾತ್ವಿಕ ಆಭೂಷಣಗಳು ನಮ್ಮ ಮೈಮೇಲೆ ಜೀವನದುದ್ದಕ್ಕೂ ಇರದೇ ಇದ್ದರೂ, ಕೇವಲ ಮರಣಕಾಲದಲ್ಲಿ ಇದ್ದ ಮಾತ್ರಕ್ಕೆ ಸದ್ಗತಿ ಯನ್ನು ಕೊಡಬಲ್ಲವು.

ಒಬ್ಬ ಬೇಟೆಗಾರನು ಬೇಟೆಗಾಗಿ ತನ್ನ ನಾಯಿಯನ್ನು ತೆಗೆದುಕೊಂಡು ಅರಣ್ಯಕ್ಕೆ ಹೋಗಿದ್ದನು. ದಿನವಿಡೀ ತಿರುಗಾಡಿದರೂ ಒಂದು ಬೇಟೆಯೂ ಸಿಗಲಿಲ್ಲ. ಬಹಳಷ್ಟು ದಣಿದು ಮರಳಿ ಬಂದಾಗ ಬಾಯಾರಿಕೆ ಹೆಚ್ಚಾಗಿ ವಿಶ್ರಾಂತಿಗಾಗಿ ಒಂದು ಗಿಡದ ನೆರಳಿ ನಲ್ಲಿ ಕುಳಿತುಕೊಂಡನು. ದಾಹ ಅತ್ಯಧಿಕವಾದ್ದರಿಂದ ಸಮಯಕ್ಕೆ ಸರಿಯಾಗಿ ನೀರು ದೊರೆಯದ ಕಾರಣ ಅವನು ಕುಳಿತಲ್ಲಿಯೇ ಅಸುನೀಗಿದನು. ಅವನು ಕುಳಿತ ಆ ಸ್ಥಾನವು ಸ್ಮಶಾನಭೂಮಿಯಾಗಿತ್ತು. ಇವನನ್ನು ಹಿಂಬಾಲಿಸಿ ಬರುತ್ತಿದ್ದ ನಾಯಿಯು ಸ್ಮಶಾನದಲ್ಲಿ ಬಿದ್ದ ತನ್ನ ಒಡೆಯನ ಶರೀರವನ್ನು ಕಂಡು ಅವನನ್ನು ಎಚ್ಚರಗೊಳಿಸಲೋಸುಗ ತನ್ನ ಕಾಲಿ ನಿಂದ ಅವನ ಹಣೆಯ ಮೇಲೆ ಎಳೆಯತೊಡಗಿತು. ನಾಯಿಯ ಕಾಲಿಗೆ ಹತ್ತಿದ ಹೆಣದ ಬೂದಿಯು ಆ ಬೇಡನ ಹಣೆಯಲ್ಲಿ ವಿರಾಜಿಸತೊಡಗಿತು. ಅಷ್ಟರಲ್ಲಿ ಯಮದೂತರು

ಒಯ್ಯುತ್ತಿರುವ ಇವನ ಜೀವಾತ್ಮನನ್ನು ಶಿವದೂತರು ತಡೆದು ಅವನನ್ನು ಶಿವಲೋಕಕ್ಕೆ ಕೊಂಡೊಯ್ಯಬೇಕಾಗಿದೆಯೆಂದು ಯಮದೂತರಿಗೆ ತಿಳಿಹೇಳಿದರು. ಯಮದೂತರು ಕೇಳದೇ ಇದ್ದಾಗ ಈರ್ವರಲ್ಲಿ ಒಂದು ತರದ ಕದನವೇ ಪ್ರಾರಂಭವಾಯಿತು. ಕೊನೆಗೆ ಶಿವನು ಅಲ್ಲಿ ಪ್ರತ್ಯಕ್ಷನಾಗಿ ನೀವಾರೂ ಕಲಹ ಮಾಡಬೇಡಿ ಅಂತ್ಯಕಾಲದಲ್ಲಿ ಇವನ ಹಣೆಯಮೇಲೆ ಚಿತಾಭಸ್ಮವು ಅಲಂಕೃತವಾಗಿರೋಣದರಿಂದ ಇವನ ಪಾಪಗಳೆಲ್ಲ ದಹಿಸಿ ಇವನು ಪುಣ್ಯ ಜೀವಿಯಾಗಿದ್ದಾನೆ ಮತ್ತು ಕೊನೆಯಲ್ಲಿ ಇವನ ಶರೀರದ ಮೇಲೆ ಶಿವಲಾಂಛನವಿರುವುದರಿಂದ ಇವನು ಶಿವಲೋಕಕ್ಕೆ ಪಾತ್ರನೇ ವಿನಃ ಯಮಲೋಕಕ್ಕೆ ಅಲ್ಲ ಎಂದು ಹೇಳಿ ಬೇಡನಿಗೆ ಶಿವಪದವಿಯನ್ನು ಕರುಣಿಸಿದನೆಂಬ ಕಥೆಯು ಶಿವ ಮಹಾಪುರಾಣದಲ್ಲಿ ಪ್ರತಿಪಾದಿತವಾಗಿದೆ.

ವಿಭೂತಿ, ರುದ್ರಾಕ್ಷಿ ಮೊದಲಾದ ಶಿವಲಾಂಛನಗಳಲ್ಲಿ ಅಪಾರವಾದ ಸಾಮರ್ಥ್ಯ ವಿದ್ದಕಾರಣ ಅವುಗಳು ಜೀವಿತಕಾಲದಲ್ಲಷ್ಟೇ ಅಲ್ಲ ಮರಣೋತ್ತರದಲ್ಲಿ ಧರಿಸಿದರೂ ಕೂಡ ಫಲಕಾರಿಗಳಾಗುತ್ತವೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಪ್ರತಿಯೊಬ್ಬ ವೀರಶೈವನೂ ಧರಿಸುತ್ತಾನಷ್ಟೇ ಅಲ್ಲ, ಆತನು ಲಿಂಗೈಕ್ಯನಾದಾಗ ಭಸ್ಮದಲ್ಲಿಯೇ ಅವನ ದೇಹವನ್ನು ಮುಚ್ಚಿ ರುದ್ರಾಕ್ಷಿಗಳಿಂದ ಅಲಂಕರಿಸಿ ಸಮಾಧಿ ಕ್ರಿಯೆಯನ್ನು ಮಾಡುತ್ತಾರೆ. ಜೀವಂತ ಇರುವವರೆಗೆ ಗಂಗಾಸ್ನಾನವನ್ನು ಮಾಡಿರಲಿ ಮಾಡದೇ ಇರಲಿ ಸತ್ತ ಮನುಷ್ಯನ ಅಸ್ಥಿಗಳನ್ನು ಗಂಗಾ ಮುಂತಾದ ಪವಿತ್ರ ನದಿಗಳಲ್ಲಿ ವಿಸರ್ಜಿಸಿದಾಗಲೂ ಆ ಜೀವಾತ್ಮನಿಗೆ ಸದ್ಗತಿ ದೊರೆಯುವುದೆಂಬುದಾಗಿ ಹಿಂದೂ ಶಾಸ್ತ್ರಗಳು ಪ್ರತಿಪಾದಿಸುತ್ತವೆ.

ಮರಣೋತ್ತರದಲ್ಲಿ ಧರಿಸಿದ ಈ ಶಿವಲಾಂಛನಗಳು ಇಷ್ಟೊಂದು ಫಲಗಳನ್ನು ಕೊಡುತ್ತಿರುವಾಗ ಜೀವಿತಕಾಲದಲ್ಲಿ ಧರಿಸಿದರೆ ಅದೇನಾಗಲಿಕ್ಕಿಲ್ಲ ? ''ಪ್ರಶಂಸಂತಿ ಸದಾಕಾಲಂ ಬ್ರಹ್ಮಾದ್ಯಾದೇವತಾಮುದಾ'' ಎಂಬ ಆಚಾರ್ಯೋಕ್ತಿಗನುಸಾರವಾಗಿ ಶಿವ ಲಾಂಛನಧಾರಿಯಾದ ಶಿವಭಕ್ತನನ್ನು ಬ್ರಹ್ಮಾದಿದೇವತೆಗಳು ಸದಾಕಾಲಕ್ಕೆ ಅತ್ಯಾನಂದ ದಿಂದ ಪ್ರಶಂಸಿಸುತ್ತಾರೆ. ಶಿವಲಾಂಛನಧಾರಿಯಾದ ಶಿವಭಕ್ತನನ್ನು ಕಂಡು ಶಿವನೂ ಸಹ 'ಮದ್ಭಕ್ತಾಃ ಮಮಾಧಿಕಾಃ' ಅಂದರೆ ನನ್ನ ಭಕ್ತರು ನನಗಿಂತಲೂ ಅಧಿಕರು ಎಂಬುದಾಗಿ ಹೊಗಳಿದ್ದುಂಟು. ವಿಶ್ವದ ಕಣ ಕಣದಲ್ಲಿ ತುಂಬಿದ ಆ ಶಿವನನ್ನು ತನ್ನ ಹೃದಯದಲ್ಲಿರಿಸಿ ಕೊಳ್ಳಬೇಕಾದರೆ ಆ ಭಕ್ತನು ಶಿವನಿಗಿಂತ ಅಧಿಕನಲ್ಲವೇ ? ಹೀಗೆ ಶಿವನಂತೆ ಶಿವಭಕ್ತರೂ ಕೂಡ ಜಗತ್ತಿನಲ್ಲಿ ಪೂಜ್ಯತೆಯನ್ನು ಪಡೆಯುತ್ತಾರೆ ಹೀಗೆ ಮಾಹೇಶ್ವರನು ತ್ರಿಕರಣ ಪೂರ್ವಕವಾಗಿ ಇಷ್ಟಲಿಂಗ ಪೂಜೆಯಲ್ಲಿ ಆಸಕ್ತನಾಗಿ ಶಿವಲಾಂಛನಧಾರಿಯಾಗಿ ಶಿವ ನಂತೆಯೇ ಪೂಜ್ಯತೆಯನ್ನು ಪಡೆಯುತ್ತಾನೆಂಬುದಾಗಿ ತಿಳಿಯಪಡಿಸಿ ಪೂಜ್ಯಪಾದರು ಲಿಂಗನಿಷ್ಠಾಸ್ಥಲವನ್ನು ಪೂರ್ಣಗೊಳಿಸುತ್ತಾರೆಂಬಲ್ಲಿಗೆ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯಲಾಗುತ್ತದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೭ ಆಗಷ್ಟ್, ೧೯೯೧

(ಸ್ಥಾನ ನಾಗಪುರ)



ಆಶೀರ್ವಚನ-೧

# ಪೂರ್ವಾಶ್ರಯನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಈ ಪವಿತ್ರವಾದ ಶ್ರಾವಣಮಾಸದಲ್ಲಿ ಪ್ರತಿನಿತ್ಯ ಸಾಯಂಕಾಲದ ಧರ್ಮ ಸಭೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಾಹೇಶ್ವರನ ಕ್ರಮಿಕ ವಿಕಾಸವನ್ನು ನಿರೂಪಿಸುತ್ತಾ ಈ ಸ್ಥಲದಲ್ಲಿಯ ಮಾಹೇಶ್ವರನ ಪ್ರಶಂಸೆ ಮತ್ತು ಲಿಂಗನಿಷ್ಠಾಸ್ಥಲಗಳ ಬಗ್ಗೆ ಸವಿಸ್ತಾರವಾಗಿ ತಿಳುಹಿಸಿ ಸದ್ಯಃ ಪೂರ್ವಾಶ್ರಯನಿರಸನಸ್ಥಲದ ಬಗ್ಗೆ ಅಪ್ಪಣೆ ಕೊಡಿಸುತ್ತಲಿದ್ದಾರೆ. ಪೂರ್ವಾಶ್ರಯ ನಿರಸನವೆಂದರೆ ಪೂರ್ವದಲ್ಲಿಯೇ ತನ್ನ ಆಚಾರ ವಿಚಾರಗಳನ್ನು ಬಿಟ್ಟು, ಅದಕ್ಕೂ ಹೆಚ್ಚಿನ ಮುಂದಿನ ಆಚರಣೆಗಳನ್ನು ಆಚರಿಸುವುದೇ ಪೂರ್ವಾಶ್ರಯ ನಿರಸನವು. ಅರ್ಥಾತ್ ಲಿಂಗನಿಷ್ಠೆಗೆ ಪ್ರತಿಕೂಲಗಳಾದ ಪ್ರಾಕೃತಾಚಾರ ಗಳನ್ನು ಪರಿತ್ಯಜಿಸುವುದೇ ಪೂರ್ವಾಶ್ರಯ ನಿರಸನವು. ಅದನ್ನೇ ಪೂಜ್ಯಪಾದರು–

ಲಿಂಗೈಕ್ಯನಿಷ್ಠಹೃದಯಃ ಸದಾ ಮಾಹೇಶ್ವರೋಜನಃ ।
ಪೂರ್ವಾಶ್ರಯಗತಾನ್ ಧರ್ಮಾಂಸ್ತ್ಯಜೇತ್ ಸ್ವಾಚಾರ ರೋಧಕಾನ್ ॥

ಸ್ವಜಾತಿಕುಲಜಾನ್ ಧರ್ಮಾನ್ ಲಿಂಗನಿಷ್ಠಾವಿರೋಧಿನಃ ।
ತ್ಯಜನ್ ಮಾಹೇಶ್ವರೋಜ್ಞೇಯಃ ಪೂರ್ವಾಶ್ರಯನಿರಾಸಕಃ ॥

(ಸಿ. ಶಿ. ೧೦ ; ೩೦–೩೧)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಕೇವಲ ಇಷ್ಟಲಿಂಗದಲ್ಲಿಯೇ ನಿಷ್ಠೆಯುಳ್ಳ ಮಾಹೇಶ್ವರನು ತನ್ನ ಪೂರ್ವದ ಜಾತಿ ಸಂಬಂಧಗಳಾದ ಸಾಮಾನ್ಯಗಳಾದ ಆಚರಣೆ ಗಳನ್ನು ಮತ್ತು ಜನನ ಮರಣಾದಿ ಸೂತಕಗಳ ಪಾಲನೆಯನ್ನು ತ್ಯಜಿಸಿ ನಾನು ಸದಾ ಪರಿಶುದ್ಧನೆಂಬ ಭಾವನೆಯಿಂದ ಲಿಂಗಪೂಜಾನಿಷ್ಠನಾಗುವುದೇ ಪೂರ್ವಾಶ್ರಯ ನಿರಸನವು.

ಒಂದು ಸ್ಥಲದಿಂದ ಮುಂದಿನ ಮತ್ತೊಂದು ಸ್ಥಲಕ್ಕೆ ಹೋಗಬೇಕಾದರೆ ಆಚಾರ ವಿಚಾರಗಳಲ್ಲಿ ಪರಿವರ್ತನೆಯು ಅಗತ್ಯವಾದುದು. ಮೊದಲನೆಯ ತರಗತಿಯಲ್ಲಿ ಅಕ್ಷರಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಯು ಕೇವಲ ಅಕ್ಷರಗಳನ್ನೇ ತೀಡುತ್ತ ಕುಳಿತರೆ ಅವನು ಅದೆಷ್ಟು ದಿನವಾದರೂ ಅದೇ ತರಗತಿಯಲ್ಲಿಯೇ ಉಳಿಯುತ್ತಾನೆ. ಆದರೆ ಗುರುಗಳು ಹೇಳಿಕೊಟ್ಟ ಅಕ್ಷರಾಭ್ಯಾಸವನ್ನು ಮನನ ಮಾಡಿಕೊಂಡು ಮುಂದಿನ ಶಬ್ದರಚನೆ ಹಾಗೂ ವಾಕ್ಯರಚನೆಯನ್ನು ಕಲಿತಾಗ ಅವನು ಹೇಗೆ ಮುಂದಿನ ತರಗತಿಗೆ ಹೋಗುತ್ತಾನೋ, ಅದರಂತೆ ಈ ಮಾಹೇಶ್ವರನು ಲಿಂಗನಿಷ್ಠೆಗೆ ವಿರೋಧಗಳಾದ

ಸಾಮಾನ್ಯ ಆಚಾರಗಳನ್ನು ಬಿಟ್ಟು ಉತ್ಕೃಷ್ಟ ಆಚರಣೆಗಳನ್ನು ಮಾಡತೊಡಗಿದಾಗ ಅವನು ಪೂರ್ವಾಶ್ರಯನಿರಾಸಕನೆಂದು ಕರೆಯಿಸಿಕೊಳ್ಳುತ್ತಾನೆ.

ಲಿಂಗದೀಕ್ಷೆಯನ್ನು ಪಡೆಯುವ ಪೂರ್ವದಲ್ಲಿ ತಾವು ಮಾಡುತ್ತಿದ್ದ ತಮ್ಮ ತಮ್ಮ ಜಾತಿ–ಮತಗಳ ಆಚರಣೆಗಳನ್ನು ಲಿಂಗದೀಕ್ಷೆಯ ನಂತರ ತ್ಯಾಗಮಾಡಬೇಕಾಗುತ್ತದೆ. ಲಿಂಗದೀಕ್ಷಿತನಾದವನಿಗೆ ಉಳಿದೆಲ್ಲ ಆಚರಣೆಗಳಿಗಿಂತ ಲಿಂಗಾಚಾರವೇ ಶ್ರೇಷ್ಠವಾದದ್ದು. ಕಾರಣ ಆ ಲಿಂಗಾಚಾರವನ್ನು ಪರಿಪಾಲಿಸುತ್ತ ತನ್ನ ಮೊದಲಿನ ಆಚಾರಗಳನ್ನು ಸಂಪೂರ್ಣವಾಗಿ ತ್ಯಜಿಸಿದಾಗ ಅವನು ಪೂರ್ವಾಶ್ರಯ ನಿರಾಸಕನಾಗುವನು. ಬ್ರಾಹ್ಮಣ ಕುಲದಲ್ಲಿ ಜನಿಸಿದ ಬಸವೇಶ್ವರರು ತಾವು ಜನಿಸಿದ ಜಾತಿಯಲ್ಲಿ ಸ್ತ್ರೀ ಪುರುಷರಿಗೆ ಸಮಾನವಾದ ಧರ್ಮ ಸಂಸ್ಕಾರಗಳು ಇಲ್ಲವೆಂಬುದನ್ನು ತಿಳಿದುಕೊಂಡು ನಾನು ಇದೇ ಧರ್ಮದಲ್ಲಿ ಇದ್ದರೆ ಸಾಮಾಜಿಕ ಕ್ರಾಂತಿಯನ್ನು ಮಾಡಲು ಸಾಧ್ಯವಿಲ್ಲವೆಂದು ನಿಶ್ಚಯಿಸಿ ಕೊಂಡು ತನ್ನ ಬ್ರಾಹ್ಮಣ್ಯಧರ್ಮೋಚಿತವಾದ ಉಪನಯನ ಸಂಸ್ಕಾರವನ್ನು ತ್ಯಜಿಸಿ ಕೂಡಲಸಂಗಮ ಕ್ಷೇತ್ರದಲ್ಲಿ ಸಾರಂಗ ಬೃಹನ್ಮಠಾಧ್ಯಕ್ಷರಾದ ಶ್ರೀ ಷ. ಬ್ರ. ಜಾತವೇದ ಮುನಿ ಶಿವಾಚಾರ್ಯರಿಗೆ ಶರಣಾಗತರಾಗಿ ಅವರ ಶಿಷ್ಯತ್ವವನ್ನು ಸ್ವೀಕರಿಸಿ ವೀರಶೈವ ಧರ್ಮೋಚಿತವಾದ ಲಿಂಗದೀಕ್ಷಾ ಸಂಸ್ಕಾರವನ್ನು ಪಡೆದುಕೊಂಡರು. ಲಿಂಗದೀಕ್ಷೆಯನ್ನು ಪಡೆದನಂತರ ತನ್ನ ಪ್ರಾಕ್ತನ ಎಲ್ಲ ಆಚಾರ–ವಿಚಾರಗಳನ್ನು ಬಿಟ್ಟುಕೊಟ್ಟು, ಲಿಂಗನಿಷ್ಠೆ ಯನ್ನೇ ಬೆಳೆಸಿಕೊಂಡು ಅದಕ್ಕೆ ಸಂಬಂಧಗಳಾದ ಪಂಚ ಆಚರಣೆಗಳನ್ನು ಆಚರಿಸುತ್ತ ಕ್ರಮಶಃ ಭಕ್ತಾದಿಸ್ಥಲಗಳನ್ನು ದಾಟಿ ಶರಣಸ್ಥಲದವರೆಗೆ ಸಾಗಿ ಮುಂದೆ ಐಕ್ಯಸ್ಥಲವನ್ನೂ ಸಹ ಪ್ರಾಪ್ತಿಮಾಡಿಕೊಂಡರೆಂಬ ವಿಷಯವು ಪ್ರತಿಯೊಬ್ಬರಿಗೂ ತಿಳಿದಿರುವುದೇ ಆಗಿದೆ. ಪೂರ್ವಾಶ್ರಮವನ್ನು ತ್ಯಾಗಮಾಡದೆ ಸಾಧಕನಾದವನು ತನ್ನ ಜೀವನದಲ್ಲಿ ಪ್ರಗತಿಯನ್ನು ಸಾಧಿಸಲು ಸಾಧ್ಯವಿಲ್ಲ. ತಾನು ಸ್ವೀಕರಿಸಿದ ಆಚಾರ-ವಿಚಾರಗಳಿಗೆ ತನ್ನ ಕುಲಬಾಂಧವರು ವಿರೋಧಿಸತೊಡಗಿದರೆ ಆ ಕುಲಬಾಂಧವರನ್ನೇ ಬಿಡಬೇಕೇ ವಿನಾ ತಾನು ಹಿಡಿದ ಆಚರಣೆಗಳನ್ನು ಬಿಡಕೂಡದು. ನಮ್ಮ ದೇಶದಲ್ಲಿ ಇಂಥ ಅನೇಕ ಉದಾಹರಣೆಗಳು ಕಂಡುಬರುತ್ತವೆ. ಪ್ರಹ್ಲಾದನು ತನ್ನ ನಿಷ್ಠೆಗೆ ಅಡ್ಡ ಬಂದ ತಂದೆಯನ್ನೇ ತ್ಯಾಗಮಾಡಿದನು. ಮೀರಾಬಾಯಿ ಹಾಗೂ ಅಕ್ಕಮಹಾದೇವಿಯರು ತಮ್ಮ ರಾಜ್ಯಮನೆತನಗಳನ್ನೇ ತ್ಯಾಗ ಮಾಡಿದರು. ಅಂತೆಯೇ ಅವರು ತಮ್ಮ ಜೀವನದಲ್ಲಿ ಉನ್ನತವಾದ ಪ್ರಗತಿಯನ್ನು ಸಾಧಿಸಿ ಇಂದು ಸಮಾಜಕ್ಕೆ ಆದರ್ಶಪ್ರಾಯರಾಗಿದ್ದಾರೆ. ಲೌಕಿಕ ಭೋಗಭಾಗ್ಯಗಳು ಸಾಮಾನ್ಯರಿಗೆ ಸಂಪತ್ತಾಗಿ ತೋರುತ್ತಿದ್ದರೂ ಅದು ಸಂಪತ್ತಲ್ಲ, ನಿಜವಾಗಿ ನೋಡಿದರೆ ಅದು ವಿಪತ್ತೇ. ಆದ್ದರಿಂದ ದೇವರನ್ನು ಸ್ಮರಿಸುವುದೇ ಒಂದು ದೊಡ್ಡ ಸಂಪತ್ತು ಭಕ್ತಪ್ರಹ್ಲಾದ, ಅಕ್ಕಮಹಾದೇವಿ ಮತ್ತು ಮೀರಾಬಾಯಿಯವರು ದೇವರನಾಮಸ್ಮರಣ ದಂತಹ ಅಮೋಘವಾದ ಸಂಪತ್ತನ್ನು ಸಂಪಾದಿಸಿದ್ದರಿಂದ ಲೌಕಿಕವಾದ ವಿಪದ್ದಾಯಕ ವಾದ ಈ ಸಂಪತ್ತನ್ನು ತಿರಸ್ಕರಿಸಿಯೇ ಹೋದರು. ಕೇವಲ ಸಂಪತ್ತಿನಿಂದ ಮನುಷ್ಯನು ಸುಖಿಯಾಗಲಾರನು.

ಒಂದು ಊರಿನಲ್ಲಿ ಒಬ್ಬ ವ್ಯಾಪಾರಿಯು ಧನವೇ ಸರ್ವಸುಖಗಳ ಮೂಲ ವೆಂಬುದಾಗಿ ತಿಳಿದುಕೊಂಡು, ಅಹರ್ನಿಶಿ ಸಂಪತ್ತಿನ ಸಂಗ್ರಹದಲ್ಲಿಯೇ ತೊಡಗಿದನು.

ಅಪಾರವಾದ ಸಂಪತ್ತನ್ನೇನೋ ಸಂಪಾದಿಸಿದ. ಆದರೆ ಅದರಿಂದ ಸುಖ–ಶಾಂತಿ ಸಮಾಧಾನಗಳನ್ನೆಂದೂ ಕಾಣಲಿಲ್ಲ. ಸುಖಕ್ಕಾಗಿ ಸಂಪತ್ತನ್ನು ಸಂಗ್ರಹಿಸಿದರೂ ಪುನಃ ದುಃಖವನ್ನೇ ಪಡುವ ಪ್ರಸಂಗ ಬಂದಿತಲ್ಲಾ ಎಂದು ವಿಚಾರಿಸಿ ಸುಖದ ಸಾಧನವನ್ನು ಅರಿಯುವುದಕ್ಕಾಗಿ ತನ್ನಲ್ಲಿರುವ ಧನ–ಕನಕವನ್ನೆಲ್ಲ ಒಂದು ದೊಡ್ಡಗಂಟಿನಲ್ಲಿ ಕಟ್ಟಿಕೊಂಡು, ಒಬ್ಬ ಶಿವಾಚಾರ್ಯರ ಮಠಕ್ಕೆ ಬಂದು ಅವರ ಮುಂದೆ ಆ ಗಂಟನ್ನಿರಿಸಿ ''ಹೇ ಗುರುದೇವಾ ! ಧನದಿಂದ ಸುಖವನ್ನು ಪಡೆಯಬೇಕೆಂಬ ಉದ್ದೇಶದಿಂದ ಅಪಾರ ವಾದ ಧನವನ್ನೇನೋ ಸಂಪಾದಿಸಿದೆ. ಆದರೆ ಇದರಿಂದ ನನಗೆ ಸುಖದ ಬದಲಾಗಿ ದುಃಖವೇ ಪ್ರಾಪ್ತವಾಗಿದೆ. ಆದ್ದರಿಂದ ಇದನ್ನು ತಾವೇ ತೆಗೆದುಕೊಂಡು ನನಗೆ ನಿಜವಾದ ಸುಖಶಾಂತಿಯ ಮಾರ್ಗವನ್ನು ಅರುಹಬೇಕೆ''ಂದು ಬೇಡಿಕೊಂಡನು. ಆಗ ಆ ಶಿವಾಚಾರ್ಯರು ಏನನ್ನೂ ಉತ್ತರಕೊಡದೆ ಅವನು ಮುಂದೆ ಇಟ್ಟ ಸಂಪತ್ತಿನ ಗಂಟನ್ನು ತೆಗೆದುಕೊಂಡು ಪಲಾಯನ ಮಾಡಿದರು. ಗುರುಗಳ ಈ ವಿಚಿತ್ರವಾದ ವರ್ತನೆಯನ್ನು ಕಂಡು ''ಇದೇನಾಶ್ಚರ್ಯ ಸಂಪತ್ತನ್ನು ನಾನು ಅವರಿಗಾಗಿಯೇ ತಂದಿದ್ದರೂ ನನಗೆ ಏನನ್ನೂ ಮಾರ್ಗದರ್ಶನ ಮಾಡದೆ ಇವರು ಓಡಿಹೋದರಲ್ಲ ? ಇನ್ನೇನು ಮಾಡುವುದು ? ಅವರ ಮಾರ್ಗದರ್ಶನ ಸಿಗದೇ ಇದ್ದರೂ ಚಿಂತೆ ಇಲ್ಲ ನನ್ನ ಗಂಟನ್ನು ನಾನು ಮರಳಿ ಪಡೆದುಕೊಳ್ಳಲೇ ಬೇಕು'' ಎಂದು ಯೋಚಿಸಿ ತಾನೂ ಪಲಾಯನ ಮಾಡುತ್ತ ಅವರನ್ನು ಹಿಂಬಾಲಿಸಿದನು. ಗುರುಗಳೂ ಸಹ ಮುಂದೆ ಮುಂದೆ ವೇಗವಾಗಿ ಓಡುತ್ತಿದ್ದರು. ಶಿಷ್ಯನು ಅವರ ಬೆನ್ನುಹತ್ತಿ ತೆವಳುತ್ತ ಓಡಿಬರುತ್ತಿದ್ದನು. ಹತ್ತಾರು ಮೈಲುಗಳವರೆಗೆ ಓಡಿದಾಗ ಹಿಂದೆ ಓಡಿ ಬರುತ್ತಿದ್ದ ಶಿಷ್ಯನು ಅತ್ಯಂತ ದಣಿದಿರುವನೆಂದು ತಿಳಿದು ಗುರುಗಳು ರಸ್ತೆಯ ಬದಿಯಲ್ಲಿರುವ ಒಂದು ಗಿಡದ ಕೆಳಗೆ ಆ ಗಂಟನ್ನು ಇಟ್ಟುಕೊಂಡು ಕುಳಿತರು. ಗುರುಗಳು ಗಿಡದಡಿಯಲ್ಲಿ ಕುಳಿತದ್ದನ್ನು ಕಂಡ ಶಿಷ್ಯನು ಅತ್ಯಂತ ಆನಂದಿತವಾಗಿ ಓಡುತ್ತ ಓಡುತ್ತ ಬಂದು ಗುರುಗಳ ಮುಂದಿದ್ದ ಆ ತನ್ನ ಗಂಟನ್ನು ಎತ್ತಿ ಎದೆಗೆ ಅವಚಿಕೊಂಡು ಸಂತೋಷದ ನಿಟ್ಟುಸಿರನ್ನು ಬಿಟ್ಟನು. ಆಗ ಗುರುಗಳು ಶಿಷ್ಯನಿಗೆ ಕೇಳುತ್ತಾರೆ. ''ಏನಯ್ಯಾ ನಿನಗೆ ಈಗ ಹೇಗೆ ಅನಿಸುತ್ತದೆ ?'' ಎಂದು ಪ್ರಶ್ನಿಸಿದಾಗ, ''ನನಗೀಗ ಅತ್ಯಾನಂದವಾಗಿದೆ'' ಎಂದು ಶಿಷ್ಯ ಉತ್ತರಿಸಿದ. ''ಈ ಆನಂದಕ್ಕೆ ಕಾರಣವೇನು?'' ''ಈ ಗಂಟು ದೊರೆತಿದ್ದೇ ಗುರುದೇವಾ.'' ''ಹಾಗಾದರೆ ಈ ಗಂಟು ಮೊದಲು ನಿನ್ನಲ್ಲೇ ಇತ್ತಲ್ಲ ಆಗೇಕೆ ಈ ಆನಂದ ತೋರಲಿಲ್ಲ ?'' ಎಂದಾಗ ಗಂಟು ಕಳೆದುಹೋಗಿತ್ತು ಅದು ಈಗ ಮರಳಿ ದೊರೆತದ್ದರಿಂದ ಸಂತೋಷವಾಗಿದೆ. ಆಗ ಗುರುಗಳು ತಿಳಿಯಪಡಿಸಿ ದ್ದೇನೆಂದರೆ– ''ಹೇ ಶಿಷ್ಯೋತ್ತಮನೇ ! ಸುಖಶಾಂತಿಗಳು ಸಂಪತ್ತಿನಲ್ಲಿರುವುದಿಲ್ಲ.ಅವು ನಿನ್ನ ಆತ್ಮದಲ್ಲಿಯೇ ಇವೆ. ಅದನ್ನು ಪಡೆಯಬೇಕಾದರೆ ನೀನು ಅಂತರ್ಮುಖಿಯಾಗಬೇಕು. ನಿನ್ನ ಗಂಟು ನಿನಗೆ ಮರಳಿ ಸಿಕ್ಕಾಗ ನಿನ್ನ ವ್ಯಗ್ರವಾದ ಮನಸ್ಸು ಶಾಂತವಾಯಿತು. ಹೀಗೆ ಮನಸ್ಸು ಶಾಂತವಾದಾಗಲೇ ಮನುಷ್ಯನಿಗೆ ಆತ್ಮಸುಖದ ಲಾಭವಾಗುವುದು. ಆದ್ದರಿಂದ ನೀನು ಸದಾ ನಿನ್ನ ಮನಸ್ಸನ್ನು ಶಾಂತವನ್ನಾಗಿಯೂ ಅಂತರ್ಮುಖಿಯನ್ನಾಗಿಯೂ ಇಟ್ಟುಕೊಂಡಾಗ ನಿನಗೆ ಶಾಶ್ವತ ಸುಖಸಮಾಧಾನಗಳು ದೊರೆಯುವವು'' ಎಂಬುದಾಗಿ ತಿಳಿಸಿದರು. ಇದೆಲ್ಲವನ್ನೂ

ಪರ್ಯಾಲೋಚಿಸಿದಾಗ ಅಂತರ್ಮುಖಿಯಾಗಿ ತನ್ನ ಇಷ್ಟದೇವರನ್ನು ಸ್ಮರಿಸುವುದೇ ಬಹುದೊಡ್ಡ ಸಂಪತ್ತು. ಇದನ್ನು ಸಂಪಾದಿಸುವಾಗ ಯಾರೇ ವಿರೋಧವಾಗಿ ಬಂದರೂ ಅವರೆಲ್ಲರನ್ನೂ ಕೂಡ ತ್ಯಜಿಸಲೇಬೇಕು. ಅಂತೆಯೇ ಅಕ್ಕಮಹಾದೇವಿ ಮುಂತಾದವರು ತಮಗೆ ವಿರೋಧವಾದವರನ್ನೆಲ್ಲ ತ್ಯಜಿಸಿ ಪ್ರಖ್ಯಾತರಾದರು. ಅಂತೆಯೇ ಪೂಜ್ಯ ಪಾದರು–

ಶಿವಸಂಸ್ಕಾರಯೋಗೇನ ವಿಶುದ್ಧಾನಾಂ ಮಹಾತ್ಮನಾಮ್ ।
ಕಿಂ ಪೂರ್ವಕಾಲಿಕೈರ್ಧರ್ಮೈಃ ಪ್ರಾಕೃತಾನಾಂ ಹಿತೇ ಮತಾಃ ॥

ಶಿವಸಂಸ್ಕಾರಯೋಗೇನ ಶಿವಧರ್ಮಾನುಷಂಗಿಣಾಮ್ ।
ಪ್ರಾಕೃತಾನಾಂ ನ ಧರ್ಮೇಷು ಪ್ರವೃತ್ತಿರುಪಪದ್ಯತೇ ॥

(ಶಿ. ಶಿ. ೧೦ ; ೩೨–೩೩)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ದೀಕ್ಷಾರೂಪವಾದ ಶಿವಸಂಸ್ಕಾರವನ್ನು ಹೊಂದಿ ಲಿಂಗನಿಷ್ಠೆಯಿಂದ ಪರಿಶುದ್ಧರಾದವರಿಗೆ ಮೊದಲಿನ ನೈಮಿತ್ತಿಕ ಹಾಗೂ ಪ್ರಾಯಶ್ಚಿತ್ತ ಕರ್ಮಗಳನ್ನೂ ಸಹ ಮಾಡುವ ಅವಶ್ಯಕತೆ ಇಲ್ಲ. ಇಷ್ಟಲಿಂಗ ಪೂಜಾರೂಪವಾದ ಆ ನಿತ್ಯಕರ್ಮವೊಂದನ್ನೇ ಅವರು ಆಚರಿಸಿದರೆ ಸಾಕು. ಇಷ್ಟಲಿಂಗಪೂಜೆಯನ್ನಾಚರಿಸು ವಾಗ, ಧರಿಸಿದ ವಿಭೂತಿ ರುದ್ರಾಕ್ಷಿಗಳಿಂದ ಸಕಲ ವಿಧ ಪಾಪಗಳು ನಷ್ಟವಾಗುತ್ತವೆ. ಅಂತೆಯೇ ಪಾಪಶಮನಕ್ಕಾಗಿ ವೀರಶೈವರಿಗೆ ಬೇರೆ ಬೇರೆ ಪ್ರಾಯಶ್ಚಿತ್ತ ಕರ್ಮ ಗಳನ್ನಾಗಲೀ, ಇನ್ನಾವ ನೈಮಿತ್ತಿಕ ಕರ್ಮಗಳನ್ನಾಗಲೀ ಆಚರಿಸುವ ಅವಶ್ಯಕತೆ ಇರುವುದಿಲ್ಲ. ''ಸರ್ವೇಪದಾಃ ಹಸ್ತಿಪದೇ ನಿಮಗ್ನಾಃ'' ಅಂದರೆ ಎಲ್ಲ ಹೆಜ್ಜೆಗಳು ಆನೆಯ ಹೆಜ್ಜೆಯಲ್ಲಿಯೇ ಅಡಗುತ್ತವೆ ಎಂಬ ಉಕ್ತಿಗನುಸಾರವಾಗಿ ಇಷ್ಟಲಿಂಗ ಪೂಜಾರೂಪ ನಿತ್ಯಕರ್ಮದಲ್ಲಿಯೇ ಉಳಿದೆಲ್ಲ ಕರ್ಮಗಳು ಅಡಕವಾಗೋಣದರಿಂದ ಪೂರ್ವಾ ಶ್ರಮದ ಬೇರೆ ಬೇರೆ ಕರ್ಮಗಳನ್ನು ಮಾಹೇಶ್ವರನಾದವನು ಮಾಡಬಾರದೆಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

ಧರ್ಮ, ಜಾತಿ, ವರ್ಣ ಮತ್ತು ಪರಂಪರೆಗಳ ಭೇದದಿಂದ ಮನುಷ್ಯರನ್ನು ಅನೇಕ ವಿಧವಾಗಿ ವಿಂಗಡಿಸಿದ್ದಾರೆ. ಆದರೆ ಪೂಜ್ಯಪಾದರಾದ ರೇಣುಕ ಭಗವತ್ಪಾದರು–

ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾ ಮಾನುಷಾಃ ಸ್ಮೃತಾಃ ।
ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ ॥

(ಸಿ. ಶಿ. ೧೦–೩೪)

ಎಂಬ ತಮ್ಮ ಉಕ್ತಿಯಿಂದ ಮನುಷ್ಯರನ್ನು ವಿಶುದ್ಧರೆಂತಲೂ ಮತ್ತು ಪ್ರಾಕೃತ ರೆಂತಲೂ ಕೇವಲ ಎರಡು ವಿಧವಾಗಿ ವಿಭಜಿಸಿದ್ದಾರೆ

ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದವರು ವಿಶುದ್ಧರು, ಅದನ್ನು ಪಡೆಯದ ವರೆಲ್ಲರೂ ಪ್ರಾಕೃತರು. ವೀರಶೈವ ಧರ್ಮದಲ್ಲಿ ಜನಿಸುವವರೆಲ್ಲರೂ ಶಿವಸಂಸ್ಕಾರವನ್ನು ಹೊಂದಿ ವಿಶುದ್ಧರಾಗಿಯೇ ಜನ್ಮವನ್ನು ಪಡೆಯಬೇಕೆಂಬ ಉದ್ದೇಶದಿಂದ ಶ್ರೀ ಜಗದ್ಗುರು ಪಂಚಾಚಾರ್ಯರು ಈ ಧರ್ಮದಲ್ಲಿ ಗರ್ಭಸ್ಥ ಶಿಶುವಿಗೆ ಲಿಂಗವನ್ನು ಧರಿಸಿ ಅದನ್ನು

(ಶಿಶುವನ್ನು) ಶಿವಸಂಸ್ಕಾರಿಯನ್ನಾಗಿ ಮಾಡಬೇಕೆಂಬ ಧರ್ಮಸಂವಿಧಾನವನ್ನು ಪ್ರತಿಪಾದಿಸಿದ್ದಾರೆ. ಜನ್ಮತಾಳುವ ಶಿಶುವು ಪ್ರಾಕೃತವಾಗಿ ಜನಿಸದೆ ಸುಸಂಸ್ಕೃತವಾಗಿಯೇ ಅರ್ಥಾತ್ ವಿಶುದ್ಧವಾಗಿಯೇ ಜನಿಸಬೇಕೆಂಬುದು ಜಗದಾಚಾರ್ಯರ ಉದ್ದೇಶವು. ಬೇರೆ ಧರ್ಮಗಳಲ್ಲಿ ಶಿಶುವು ಜನಿಸಿದ ಎಂಟನೇ ವರ್ಷಕ್ಕೆ ಸಂಸ್ಕಾರವನ್ನು ಕೊಟ್ಟರೆ ; ವೀರಶೈವ ಧರ್ಮದಲ್ಲಿ ಗರ್ಭದಲ್ಲಿಯ ಎಂಟು ತಿಂಗಳ ಶಿಶುವಿಗೆ ಸಂಸ್ಕಾರವನ್ನು ಕೊಡಲಾಗುತ್ತದೆ. ಈ ಧರ್ಮದ ಈ ಸಂಸ್ಕಾರವಿಧಿಯು ಅತ್ಯಂತ ವೈಜ್ಞಾನಿಕವಾದುದು.

ತಾಯಿಯ ಗರ್ಭದಲ್ಲಿ ಶಿಶುವು ಏಳು ತಿಂಗಳದ್ದಾದಾಗ ಅದಕ್ಕೆ ಜನ್ಮ ಜನ್ಮಾಂತರ ಗಳ ಜ್ಞಾನವಾಗುತ್ತದೆ ಎಂಬ ವಿಷಯವನ್ನು ಅನೇಕ ಜನ ಜ್ಞಾನಿಗಳು ಪ್ರತಿಪಾದಿಸಿದ್ದಾರೆ. ಶಿಶುವಿಗೆ ಹಿಂದಿನ ಅನೇಕ ಜನ್ಮಗಳ ಅರಿವಾಗಿ ತಾನು ಅನುಭವಿಸಿದ ಕಷ್ಟಗಳನ್ನು ಸ್ಮರಿಸಿ, ಮುಂದೆ ಜನನದ ನಂತರವೂ ಕೂಡ ಇಂತಹ ಕಷ್ಟಕೋಟಲೆಗಳನ್ನು ಅನುಭವಿಸ ಬೇಕಾಗುತ್ತದಲ್ಲಾ, ಎಂಬ ಭಯವು ಆ ಶಿಶುವಿನ ಮನಸ್ಸಿನಲ್ಲಿ ಒಡಮೂಡುತ್ತದೆ. ಆದ್ದರಿಂದ ಏಳು ತಿಂಗಳು ಪೂರ್ಣವಾಗಿ ಎಂಟನೇ ತಿಂಗಳು ಪ್ರಾಪ್ತವಾಗುತ್ತಲೇ ದುಃಖಕ್ಕೆ ಭಯಗೊಂಡ ಆ ಶಿಶುವಿನ ಮನಸ್ಸಿನಲ್ಲಿ ಮುಮುರ್ಷು ಭಾವನೆಯು ಅರ್ಥಾತ್ ತೀವ್ರವಾದ ಮರಣದ ಬಯಕೆಯು ಉಂಟಾಗುತ್ತದೆ. ಈ ಪ್ರಬಲವಾದ ಬಯಕೆಯಿದ್ದ ಎಂಟನೇ ತಿಂಗಳಲ್ಲಿ ಅಕಸ್ಮಾತ್ ಶಿಶುವಿನ ಜನನವಾದರೆ ಅದು ಮೃತ್ಯುವನ್ನೇ ಹೊಂದುತ್ತದೆ. ಇದು ಲೋಕಾನುಭವಸಿದ್ಧವಾದದ್ದು. ಏಳು ತಿಂಗಳಲ್ಲಿ ಅಥವಾ ಒಂಭತ್ತು ತಿಂಗಳಲ್ಲಿ ಜನಿಸಿದ ಶಿಶುಗಳು ಬದುಕಬಹುದು. ಆದರೆ ಎಂಟನೇ ತಿಂಗಳಲ್ಲಿ ಜನ್ಮವೆತ್ತ ಶಿಶುಗಳು ಬದುಕಲಾರವು. ದುಃಖಕ್ಕಾಗಿ ಭಯಗೊಂಡಿರುವ ಆ ಮಗುವಿನ ಭಯವನ್ನು ದೂರಮಾಡಿ ಆ ಪಿಂಡಕ್ಕೆ ಸಂಸ್ಕಾರ ಕೊಡುವ ಉದ್ದೇಶದಿಂದ ಎಂಟನೇ ತಿಂಗಳಲ್ಲಿ ತಾಯಿಯ ಗರ್ಭಕ್ಕೆ ಇಷ್ಟಲಿಂಗ ಧರಿಸುತ್ತಾರೆ. ತಾಯಿಯ ದೇಹಕ್ಕೆ ಮಾಡಿದ ಸಂಸ್ಕಾರವು ಗರ್ಭಸ್ಥ ಶಿಶುವಿನ ಮೇಲೆ ಪ್ರಭಾವವನ್ನು ಬೀರುತ್ತದೆ. ಆದ್ದರಿಂದ ಎಂಟು ತಿಂಗಳ ಗರ್ಭವಿದ್ದಾಗ ಪ್ರತಿಯೊಬ್ಬರೂ ಆ ಗರ್ಭಕ್ಕೆ ಕುಲಗುರುಗಳಿಂದ ಇಲ್ಲವೇ ಗ್ರಾಮದ ಹಿರಿಯಮಠಸ್ಥ ಜಂಗಮನಿಂದ (ಮಠದಯ್ಯನಿಂದ) ಲಿಂಗಧಾರಣೆಯನ್ನು ಮಾಡಿಸಿ ಕೊಳ್ಳಬೇಕು. ಮುಂದೆ ಪ್ರಸೂತಿಯಾದ ಬಳಿಕ ಪುನಃ ೫ನೇ ದಿವಸಕ್ಕೆ ಅದೇ ಲಿಂಗವನ್ನು ಮತ್ತೆ ಶುದ್ಧಗೊಳಿಸಿ ಶಿಶುವಿನ ಕಂಠದಲ್ಲಿ ಧರಿಸಬೇಕು. ಹೀಗೆ ವೀರಶೈವ ಸಿದ್ಧಾಂತದಲ್ಲಿ ಗರ್ಭದ ಎಂಟನೆಯ ತಿಂಗಳಲ್ಲಿ ಗರ್ಭಸ್ಥ ಶಿಶುವಿಗೆ ಲಿಂಗಸಂಸ್ಕಾರ ಮಾಡುವ ಪದ್ಧತಿ ಇದೆ. ಜನನವಾದ ಬಳಿಕ ಮಾಡುವ ಸಂಸ್ಕಾರಕ್ಕಿಂತಲೂ ಜನನಪೂರ್ವದ ಸಂಸ್ಕಾರಗಳು ಅತ್ಯಂತ ದೃಢವಾದವುಗಳಾಗಿರುತ್ತವೆ. ಅಂತೆಯೇ ವೀರಶೈವನು ಭವಿಯಾಗಿ ಜನಿಸದೆ ಲಿಂಗಭಕ್ತನಾಗಿಯೇ ಜನಿಸುತ್ತಾನೆ. ಗರ್ಭಸ್ಥ ಶಿಶುವಿನ ಮೇಲೆ ಸಂಸ್ಕಾರದ ಪರಿಣಾಮ ವಾಗುತ್ತದೆ ಎಂಬ ಬಗ್ಗೆ ಮಹಾಭಾರತದಲ್ಲಿ ಸುಪ್ರಸಿದ್ಧವಾದ ಅಭಿಮನ್ಯುವಿನ ಚಕ್ರವ್ಯೂಹ ಪ್ರವೇಶದ ಕಥೆಯೇ ಪ್ರಮಾಣವಾಗಿದೆ. ಆದ್ದರಿಂದ ಗರ್ಭವತಿಯರಾದ ಹೆಣ್ಣುಮಕ್ಕಳು ಪ್ರಸವವಾಗುವವರೆಗೆ ಸತ್ಸಂಗ, ಸತ್ಕಥಾ ಶ್ರವಣಗೆ ಸದ್ಗ್ರಂಥ ಪಾರಾಯಣ ಮುಂತಾದ ಧಾರ್ಮಿಕ ಆಚರಣೆಗಳನ್ನು ಮಾಡುತ್ತಿದ್ದರೆ, ಗರ್ಭಸ್ಥ ಶಿಶುವಿಗೆ ಉತ್ತಮ ಸಂಸ್ಕಾರ ವಾಗುವುದು.

ವೀರಶೈವನಿಗೆ ಮಾತೃಗರ್ಭದಲ್ಲಿ ಪ್ರಾಪ್ತವಾದ ಆ ಲಿಂಗವು ಕೊನೆಗೆ ಆತನು ಭೂಗರ್ಭಕ್ಕೆ ಹೋದರೂ ಅದು ಅವನ ಜೊತೆಗೇ ಇರುತ್ತದೆ. ಇಂಥ ಲಿಂಗನಿಷ್ಠರನ್ನು ಕಂಡೇ ಮಹಾಭಾರತದಲ್ಲಿ ಮಹರ್ಷಿವ್ಯಾಸನು–

ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ ।
ಶವಸ್ಯೋಪರಿ ಲಿಂಗಂಚ ಧ್ರೀಯತೇ ಚ ಪುರಾತನ್ಯೈಃ –।
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವಿತಮ್ ॥

ಈ ರೀತಿಯಾಗಿ ವೀರಶೈವರ ವೈಚಿತ್ರ್ಯತೆಯನ್ನು ಪ್ರತಿಪಾದಿಸಿದ್ದಾನೆ. ಲಿಂಗ ಧಾರಿಗಳಾಗಿ ಜನಿಸಿ, ಜೀವನದುದ್ದಕ್ಕೂ ಅಂಗದ ಮೇಲೆ ಲಿಂಗವನ್ನು ಧರಿಸಿಕೊಂಡಿದ್ದು, ಕೊನೆಗೆ ಆ ಲಿಂಗವನ್ನು ಧರಿಸಿಕೊಂಡೇ ಸಮಾಧಿಯನ್ನು ಹೊಂದುತ್ತಾರೆ. ವೀರಶೈವರ ಈ ಲಿಂಗಭಕ್ತಿಯು ಇತರರಿಗೆ ಆಶ್ಚರ್ಯವನ್ನುಂಟು ಮಾಡದೇ ಇರದು.

ಹೀಗೆ ಶಿವಸಂಸ್ಕಾರವನ್ನು ಹೊಂದಿದವನು ಶುದ್ಧನೆಂತಲೂ, ಯಾವ ಸಂಸ್ಕಾರ ವನ್ನೂ ಹೊಂದದ ಮತ್ತು ಯಾವ ಧರ್ಮದ ಚಿಹ್ನವೂ ದೇಹದ ಮೇಲೆ ಇಲ್ಲದಿರುವ ಮನುಷ್ಯನು ಪ್ರಾಕೃತನೆಂದು ಕರೆಯಿಸಿಕೊಳ್ಳುತ್ತಾನೆ. ಸಂಸ್ಕಾರವನ್ನು ಪಡೆಯದ ಪಶು ಗಳಿಗೆ ಹಾಗೂ ಈ ಪ್ರಾಕೃತರಿಗೆ ಏನು ಅಂತರ ? ಇವರು ಮನುಷ್ಯ ದೇಹಧಾರಿಗಳಾದ ಪಶುಗಳು. ಇಂಥವರನ್ನು ಕಂಡೇ ಜ್ಞಾನಿಗಳು–''ಮನುಷ್ಯ ರೂಪೇಣ ಮೃಗಾಶ್ಚರಂತಿ'' ಎಂಬುದಾಗಿ ಸಂಸ್ಕಾರಹೀನ ಮನುಷ್ಯರನ್ನು ಪಶುಗಳೆಂತಲೇ ಸಂಬೋಧಿಸಿದ್ದಾರೆ. ಆದ್ದರಿಂದ ಮಾಹೇಶ್ವರನಾದವನು ಪ್ರಾಕೃತರ ಸಹವಾಸವನ್ನು ಮಾಡದೆ ಸದಾ ಶಿವಸಂಸ್ಕಾರಿಗಳ ಸಹವಾಸದಲ್ಲಿಯೇ ಇರಬೇಕು, ಇಲ್ಲವಾದರೆ ತನ್ನಲ್ಲಿರುವ ನಿಷ್ಠೆಗೆ ಭಂಗ ಬರುವ ಪ್ರಸಂಗವಿರುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜಗತ್ತಿನಲ್ಲಿಯ ವರ್ಣಾಶ್ರಮ ವ್ಯವಸ್ಥೆಯನ್ನು ತಿಳಿಯಪಡಿಸುತ್ತ ಪುನಃ–

ವರ್ಣಾಶ್ರಮಾದಿಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾ ಮತಾ ।
ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾಽಪರಾ ॥

ಶಿವೋಕ್ತಧರ್ಮನಿಷ್ಠಾ ತು ಶಿವಾಶ್ರಮನಿಷೇವಿಣಾಂ ।
ಶಿವಸಂಸ್ಕಾರ ಹೀನಾನಾಂ ಧರ್ಮಃ ಪೈತಾಮಹಃ ಸ್ಮೃತಃ ॥

(ಸಿ. ಶಿ. ೧೦ ; ೩೫–೩೬)

ಈ ರೀತಿಯಾಗಿ ವಿವರಿಸಿದ್ದಾರೆ. ಈ ಜಗತ್ತಿನಲ್ಲಿ ವರ್ಣಾಶ್ರಮ ವ್ಯವಸ್ಥೆಯು ಎರಡು ವಿಧವಾಗಿದೆ. ಒಂದು ಶಿವನಿಂದ ಉಪದೇಶಿಸಲ್ಪಟ್ಟಿದ್ದು ಇನ್ನೊಂದು ಬ್ರಹ್ಮನಿಂದ ಪ್ರತಿಪಾದಿಸಲ್ಪಟ್ಟಿದ್ದು. ಜನನಪೂರ್ವದಲ್ಲಿಯೇ ಶಿವಸಂಸ್ಕಾರಿಗಳಾದ ವೀರಶೈವರು ಶಿವೋಪದಿಷ್ಟಗಳಾದ ಧರ್ಮಾಚರಣೆಗಳನ್ನು ಆಚರಿಸಬೇಕು. ಉಳಿದವರು ಬ್ರಹ್ಮನಿಂದ ಉಪದೇಶಿಸಲ್ಪಟ್ಟ ವರ್ಣಾಶ್ರಮ ಧರ್ಮಗಳನ್ನು ಪರಿಪಾಲಿಸಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ವರ್ಣಭೇಧವು ಬ್ರಹ್ಮಸೃಷ್ಟಿಯಲ್ಲಿ ಬಂದಿರು

ವಂಥಾದ್ದು. ಈ ಬ್ರಹ್ಮಸೃಷ್ಟಿಯಾಗುವ ಪೂರ್ವದಲ್ಲಿಯೇ ಬ್ರಹ್ಮನಿಗೆ ಸೃಷ್ಟಿಕ್ರಿಯೆಯನ್ನು ತಿಳಿಸುವುದಕ್ಕಾಗಿ ಸ್ವತಃ ಶಿವನಿಂದ ನಿರ್ಮಿಸಲ್ಪಟ್ಟ ಸೃಷ್ಟಿಯೇ ವೀರಶೈವ ಸೃಷ್ಟಿಯು. ಈ ವೀರಶೈವ ಸೃಷ್ಟಿಯಲ್ಲಿ ವರ್ಣಾಶ್ರಮಗಳ ಭೇದವಿರುವುದಿಲ್ಲ. ಅಂತೆಯೇ ಇವರಿಗೆ ಅತಿವರ್ಣಾಶ್ರಮಿಗಳೆಂದು ಕರೆದಿದ್ದಾರೆ. ಶಿವನ ಸೃಷ್ಟಿಯಲ್ಲಿ ಮುಖ್ಯವಾಗಿ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಪಂಚ ಶಿವಗಣರು ಹಾಗೂ ಕಾಲಾರಿ, ಮುಖಾರಿ, ವೇದಾರಿ, ಪುರಾರಿ, ಮತ್ತು ಸ್ಮರಾರಿಗಳೆಂಬ ಐದು ಜನ ಪಂಚಮರು ಉತ್ಪನ್ನರಾದರು. ವೀರ, ನಂದಿ ಮೊದಲಾದ ಶಿವಗಣರ ಸಂತಾನವೇ ಈಗಿರುವ ಮಾಹೇಶ್ವರರು ಅಥವಾ ಜಂಗಮರು. ಅದೇ ಪ್ರಕಾರವಾಗಿ ಕಾಲಾರಿ, ಮುಖಾರಿಗಳೆಂಬ ಪಂಚಮರ ಸಂತಾನವೇ ಇಂದಿನ ಪಂಚಮಸಾಲಿ ಅಥವಾ ಪಂಚಮ ಶೀಲರು. ಇವರಲ್ಲಿ ಜಂಗಮರು ಗುರುಗಳಾಗಿಯೂ ಪಂಚಮರು ಭಕ್ತರಾಗಿಯೂ ಅಥವಾ ಶಿಷ್ಯರಾಗಿಯೂ ನಡೆದುಕೊಂಡು ಬಂದಿದ್ದಾರೆ. ಇಂದಿನ ಪರಿಸ್ಥಿತಿಯಲ್ಲಿ ಭಕ್ತರಲ್ಲಿ ಅಥವಾ ಶಿಷ್ಯರಲ್ಲಿ ಜಾತಿಯ ಅನೇಕ ಒಳಪಂಗಡಗಳನ್ನು ಕಾಣುತ್ತಿದ್ದೇವೆ. ಇವು ಜನ್ಮತಃ ಬಂದವುಗಳಾಗಿರದೇ ಉದ್ಯೋಗ ಮೂಲಕವಾಗಿ ಬಂದಂಥವುಗಳಾಗಿವೆ. ಇಲ್ಲಿ ಎದ್ದು ಕಾಣುವ ಬಣಜಿಗ, ಗಾಣಿಗ, ಹಡಪಿಗ, ಮಡಿವಾಳ, ಕುಂಬಾರ, ನೇಕಾರ ಈ ಎಲ್ಲ ಭೇದಗಳು ಅವರವರ ಉದ್ಯೋಗವನ್ನೇ ಎತ್ತಿತೋರಿಸುತ್ತವೆ. ವಸ್ತುತಃ ಮೂಲದಲ್ಲಿ ಇವರೆಲ್ಲರೂ ಪಂಚಮರೇ ಎಂಬುದನ್ನು ಪ್ರತಿಯೊಬ್ಬರೂ ತಿಳಿದುಕೊಂಡು ಜಾತಿ-ಜಾತಿಗಳಲ್ಲಿ ಕಲಹಗಳನ್ನೆಬ್ಬಿಸದೇ, ನಾವೆಲ್ಲರೂ ಮೂಲತಃ ಒಂದೇ, ನಾವು ಪೂಜಿಸುವಂಥ ಇಷ್ಟಲಿಂಗವೂ ಒಂದೇ ಎಂಬ ಉನ್ನತ ವಿಚಾರವುಳ್ಳವರಾಗಿ ವೀರಶೈವರೆಲ್ಲರೂ ಒಕ್ಕಟ್ಟಿನಿಂದ ಇರುವುದು ಅತ್ಯಾವಶ್ಯವಾಗಿದೆ. ಹೀಗೆ ಈ ಧರ್ಮದಲ್ಲಿ ಲಿಂಗಧಾರಿಗಳೆಲ್ಲರೂ ಆಚಾರ್ಯರಿಂದ ಉಪದಿಷ್ಟವಾದ ಶಿವಧರ್ಮದ ಆಚರಣೆಗಳನ್ನು ಆಚರಿಸಬೇಕೇ ವಿನಃ ಬ್ರಹ್ಮೋಪದಿಷ್ಟವಾದ ಬ್ರಾಹ್ಮಣಾದಿ ವರ್ಣಾಶ್ರಮಗಳ ಧರ್ಮಗಳನ್ನು ಪರಿಪಾಲಿಸುವ ಅವಶ್ಯಕತೆ ಇಲ್ಲ.

ಇನ್ನು ಬ್ರಹ್ಮಸೃಷ್ಟಿಯಲ್ಲಿಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರರಲ್ಲಿ ಯಾರಾದರೂ ಈ ವೀರಶೈವ ಧರ್ಮದಲ್ಲಿ ಶಿವದೀಕ್ಷೆಯನ್ನು ಹೊಂದಿದರೆ, ಅವರು ತಮ್ಮ ಪೂರ್ವದ ಆಶ್ರಮೋಚಿತಗಳಾದ ಧರ್ಮಾಚರಣೆಗಳನ್ನು ತ್ಯಾಗಮಾಡಿ ವೀರಶೈವ ಧರ್ಮಾಚರಣೆಗಳನ್ನೇ ಆಚರಿಸಬೇಕು. ಇದುವೇ ಪೂರ್ವಾಶ್ರಯನಿರಸನ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೭ ಆಗಸ್ಟ್, ೧೯೯೧
(ಸ್ಥಾನ ನಾಗಪುರ)

■■

ಆಶೀರ್ವಚನ-೧

# ಸರ್ವಾದ್ವೈತನಿರಸನಸ್ಥಲ

ಮುಮುಕ್ಷುಗಳೇ !

ಈ ಪವಿತ್ರವಾದ ಶ್ರಾವಣಮಾಸದ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಸಾಯಂಕಾಲೀನ ಧರ್ಮಸಭೆಯಲ್ಲಿ, ದಿನಾಲೂ ನೀವು ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳನ್ನು ಆಲಿಸುತ್ತಿರುವಿರಿ. ಪೂಜ್ಯಪಾದರಾದ ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಯನ್ನು ಕುರಿತು ಸರ್ವಾದ್ವೈತನಿರಸನಸ್ಥಲದ ಬಗ್ಗೆ ಉಪದೇಶಿಸುತ್ತ-

ಪೂಜ್ಯ ಪೂಜಕಯೋರ್ಲಿಂಗಜೀವಯೋರ್ಭೇದವರ್ಜನೇ ।
ಪೂಜಾಕರ್ಮಾದ್ಯಸಂಪತ್ತೇರ್ಲಿಂಗನಿಷ್ಠಾವಿರೋಧತಃ ॥
ಸರ್ವಾದ್ವೈತವಿಚಾರಸ್ಯ ಜ್ಞಾನಾಭಾವೇ ವ್ಯವಸ್ಥಿತೇಃ ।
ಭವೇನ್ಮಾಹೇಶ್ವರಃ ಕರ್ಮೀ ಸರ್ವಾದ್ವೈತನಿರಾಸಕಃ ॥

(ಸಿ. ಶಿ. ೧೦ ; ೩೭–೩೮)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ''ಹೇ ಅಗಸ್ತ್ಯ ! ಮಾಹೇಶ್ವರ ಸ್ಥಲದ ಸಾಧಕನು ನಿಷ್ಠಾಭಕ್ತಿಸಂಪನ್ನನಾಗಿರೋಣದರಿಂದ ಸರ್ವಾದ್ವೈತ ಸ್ಥಿತಿಯು ಈ ನಿಷ್ಠಾಭಕ್ತಿಗೆ ವಿರೋಧ ವಾಗಿರೋಣದರಿಂದ ಅರ್ಥಾತ್ ಸರ್ವತ್ರ ಅದ್ವೈತಭಾವನೆ ಒಡಮೂಡಿದರೆ ಪೂಜ್ಯ–ಪೂಜಕಭಾವವು ಸಂಭವಿಸಲು ಸಾಧ್ಯವಿಲ್ಲ, ಅದು ಭೇದವಿದ್ದಾಗಲೇ ಸಾಧ್ಯ. ಅಂತೆಯೇ ಮಾಹೇಶ್ವರನು ಸರ್ವಾದ್ವೈತ ಭಾವನೆಯನ್ನು ಮಾಡಕೂಡದು. ಹೀಗೆ ಸರ್ವಾದ್ವೈತ ಭಾವನೆಯನ್ನು ನಿರಾಕರಿಸುವ ಸ್ಥಲವೇ ಸರ್ವಾದ್ವೈತನಿರಸನಸ್ಥಲವು.'' ಭಾರತೀಯ ದರ್ಶನ ಪರಂಪರೆಯಲ್ಲಿ ದ್ವೈತ, ಅದ್ವೈತ, ದ್ವೈತಾದ್ವೈತ ಮುಂತಾದ ಸಿದ್ಧಾಂತಗಳು ಪ್ರತಿಪಾದಿಸಲ್ಪಟ್ಟಿವೆ. ಜೀವ ಹಾಗೂ ಈಶ್ವರರಲ್ಲಿ ಸದಾ ಭೇದವನ್ನು ನಿರೂಪಿಸುವ ಸಿದ್ಧಾಂತವು ದ್ವೈತವೆಂತಲೂ, ಇನ್ನು ಸದಾ ಅಭೇದವನ್ನು ಪ್ರತಿಪಾದಿಸುವ ಸಿದ್ಧಾಂತವು ಅದ್ವೈತವೆಂತಲೂ, ಅದರಂತೆ ಭೇದ, ಅಭೇದಗಳೆರಡನ್ನೂ ಅಂಗೀಕರಿಸುವ ಸಿದ್ಧಾಂತಕ್ಕೆ ದ್ವೈತಾದ್ವೈತ ಸಿದ್ಧಾಂತವೆಂದು ಕರೆಯುತ್ತಾರೆ. ಇವುಗಳಲ್ಲಿ ವೀರಶೈವ ಧರ್ಮ ಸಂಸ್ಥಾಪಕ ರಾದ ಶ್ರೀ ಜಗದ್ಗುರು ಪಂಚಾಚಾರ್ಯರು ಕೇವಲ ದ್ವೈತವನ್ನಾಗಲೀ ಅಥವಾ ಕೇವಲ ಅದ್ವೈತವನ್ನಾಗಲೀ ಅಂಗೀಕರಿಸದೆ, ಸಮನ್ವಯ ದೃಷ್ಟಿಯಿಂದ ದ್ವೈತಾದ್ವೈತಗಳೆರಡನ್ನೂ ಸ್ವೀಕರಿಸಿದ್ದಾರೆ. ಪೂಜ್ಯ ಆಚಾರ್ಯರ ವಿಚಾರದಂತೆ ಸಾಧಕನ ಪ್ರಾರಂಭಿಕಾವಸ್ಥೆಯಲ್ಲಿ ದ್ವೈತವು, ಮಧ್ಯದಲ್ಲಿ ದ್ವೈತಾದ್ವೈತವು ಹಾಗೂ ಕೊನೆಗೆ ಅದ್ವೈತವು ಸಮನ್ವಯ ಗೊಳಿಸಲ್ಪಟ್ಟಿದೆ. ಷಟ್‌ಸ್ಥಲಸಿದ್ಧಾಂತದಲ್ಲಿಯ ಮೊದಲಿನ ಎರಡು ಸ್ಥಲಗಳಾದ ಭಕ್ತ ಹಾಗೂ ಮಾಹೇಶ್ವರಸ್ಥಲಗಳಲ್ಲಿ ಸಾಧಕನಲ್ಲಿ ದ್ವೈತ ಭಾವನೆಯು ಸ್ಥಿರವಾಗಿರುತ್ತದೆ.

ಅಂತೆಯೇ ಇಲ್ಲಿ ಮಾಹೇಶ್ವರನಿಗೆ ಅದ್ವೈತಭಾವನೆಯು ಸಲ್ಲದೆಂಬುದಾಗಿ ಉಪದೇಶಿಸಿದ್ದಾರೆ. ಲಿಂಗಪೂಜಾರೂಪೀ ಕರ್ಮದಲ್ಲಿ ನಿಷ್ಠನಾದ ಇವನು ಪೂಜ್ಯ ಪೂಜಕರಲ್ಲಿ ಭೇದವಿಲ್ಲದೇ ಹೋದರೆ ಪೂಜಾಕರ್ಮವೇ ಸಂಭವಿಸಲಾರದು ಮತ್ತು ಪೂಜಾಕ್ರಿಯೆಯನ್ನು ಒಂದು ವೇಳೆ ತ್ಯಾಗ ಮಾಡಿದರೆ, ಅದು ಲಿಂಗನಿಷ್ಠೆಗೆ ವಿರೋಧವಾಗುವುದು. ಹೀಗಾಗಿ ಮಾಹೇಶ್ವರನು ಸರ್ವಾದ್ವೈತ ಭಾವನೆಯನ್ನು ತ್ಯಾಗ ಮಾಡಲೇಬೇಕು. ನಾವು ಮತ್ತೊಬ್ಬರ ಬಗ್ಗೆ ಇರುವ ಪ್ರೇಮ ಅಥವಾ ನಿಷ್ಠೆಗಳನ್ನು ಕೇವಲ ಶಬ್ದಗಳಲ್ಲಿ ಹೇಳಿದರೆ ಸಾಲದು, ಆ ಪ್ರೀತಿಯ ದ್ಯೋತಕವಾಗಿ ಅವರನ್ನು ಸರಿಯಾಗಿ ಉಪಚರಿಸಬೇಕಾಗುವುದು. ಮನೆಗೆ ಬಂದವರಿಗೆ ಸರಿಯಾಗಿ ಉಪಚರಿಸದೆ ನಾವು ನಿಮ್ಮನ್ನು ಪ್ರೀತಿಸುತ್ತೇವೆ, ಪ್ರೇಮ ಮಾಡುತ್ತೇವೆ, ಎಂದು ಹೇಳಿದರೆ ಆ ಶಬ್ದಕ್ಕೆ ಯಾವ ಅರ್ಥವೂ ಇಲ್ಲ. ಉಪಚಾರ ದಿಂದಲೇ ಪ್ರೀತಿಯನ್ನು ವ್ಯಕ್ತಗೊಳಿಸಬೇಕು. ಹಾಗೆ ಮಾಹೇಶ್ವರನಾದವನು ಲಿಂಗ ನಿಷ್ಠನೂ, ಲಿಂಗಪ್ರೇಮಿಯೂ ಆಗಿರುವುದರಿಂದ ನಾನಾವಿಧ ಉಪಚಾರಗಳಿಂದ ತನ್ನ ಇಷ್ಟಲಿಂಗವನ್ನು ಅವನು ಪೂಜಿಸಬೇಕಾಗುತ್ತದೆ. ಆದಕಾರಣ ಅವನು ಅದ್ವೈತ ಭಾವನೆ ಯನ್ನು ಸರ್ವಥಾ ತ್ಯಾಗ ಮಾಡಬೇಕು. ಅದನ್ನೇ ಪೂಜ್ಯರು–

ಪ್ರೇರಕಂ ಶಂಕರಂ ಬುಧ್ವಾ ಪ್ರೇರ್ಯಮಾತ್ಮಾನಮೇವ ಚ ।
ಭೇದಾತ್ ತಂ ಪೂಜಯೇನ್ನಿತ್ಯಂ ನ ಚಾದ್ವೈತಪರೋ ಭವೇತ್ ॥

(ಸಿ. ಶಿ. ೧೦–೩೯)

ಎಂಬುದಾಗಿ ಪುನಃ ಈ ರೀತಿಯಾಗಿ ವಿವರಿಸಿದ್ದಾರೆ. ಶಿವನು ಸರ್ವರ ಪ್ರೇರಕನಾಗಿದ್ದಾನೆ. ''ತೇನ ವಿನಾ ತೃಣಮಪಿ ನ ಚಲತಿ'' ಎಂಬ ಉಕ್ತಿಗನುಸಾರವಾಗಿ ಆತನ ಪ್ರೇರಣೆಯಿಲ್ಲದೇ ಅದಾರೂ ಆದೇನನ್ನೂ ಮಾಡುವಂತಿಲ್ಲ. ಸರ್ವಕ್ಕೂ ಈಶ್ವರನೇ ಪ್ರೇರಕನಾದರೆ ಎಲ್ಲರೂ ಉತ್ತಮ ಕರ್ಮಗಳನ್ನೇ ಮಾಡಬಹುದಾಗಿತ್ತು. ಆದರೆ ಪ್ರಪಂಚದಲ್ಲಿ ಬಹುಪಾಲು ಜನರು ದುಷ್ಕರ್ಮಗಳಲ್ಲಿಯೇ ಪ್ರವೃತ್ತರಾದದ್ದು ಕಂಡುಬರುತ್ತದೆ. ಒಂದು ವೇಳೆ ಆ ದುಷ್ಕರ್ಮಿಗಳ ದುಷ್ಕರ್ಮಗಳಿಗೆ ಈಶ್ವರನೇ ಪ್ರೇರಕನೆಂದು ಒಪ್ಪಿದರೆ ಅವನಿಗೆ ಈಶ್ವರನೆಂದು, ದೇವರೆಂದು ಕರೆಯುವದಾದರೂ ಹೇಗೆ ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಇದಕ್ಕೆ ಉತ್ತರವೇನೆಂದರೆ, ಈಶ್ವರನು ಶುಭ–ಅಶುಭಗಳ ತಾರತಮ್ಯವಿಲ್ಲದೆ ಕೇವಲ ಪ್ರೇರಕ ಶಕ್ತಿಯಾಗಿದ್ದಾನೆ. ಆ ಶಕ್ತಿಯನ್ನು ಸದುಪಯೋಗಪಡಿಸಿಕೊಂಡವರು ಸಜ್ಜನರಾದರೆ, ಅದನ್ನು ದುರುಪಯೋಗಪಡಿಸಿಕೊಂಡವರು ದುರ್ಜನರಾಗುವರು. ಮಳೆಯ ನೀರು ಭೂಮಿಯ ಮೇಲೆ ಸಮಾನವಾಗಿ ಬಿದ್ದರೂ, ಆ ಭೂಮಿಯಲ್ಲಿ ಒಂದು ಕಡೆ ಲಿಂಬೆ, ಮತ್ತೊಂದು ಕಡೆ ಕಬ್ಬು, ಬೇರೊಂದು ಕಡೆ ಮೆಣಸಿನಕಾಯಿ ಹೀಗೆ ಆಯಾ ಬೀಜಗಳನ್ನು ಬಿತ್ತಿದಾಗ ಫಲಗಳು ಬೇರೆ ಬೇರೆಯಾಗಿ ಬರುತ್ತವೆ. ಲಿಂಬೆಯಲ್ಲಿ ಹುಳಿರಸ, ಕಬ್ಬಿನಲ್ಲಿ ಸಿಹಿರಸ, ಮೆಣಸಿನಕಾಯಿಯಲ್ಲಿ ಖಾರ ಈ ರೀತಿಯಾಗಿ ಅವುಗಳ ರಸಗಳೂ ಕೂಡ ಭಿನ್ನ ಭಿನ್ನವಾಗಿರುತ್ತವೆ. ಎಲ್ಲ ಬೆಳೆಗಳಿಗೆ ಮಳೆಯ ನೀರೇ ಕಾರಣವಾಗಿದ್ದರೂ ಅವುಗಳ ಪರಸ್ಪರ ರಸಭೇದಗಳಿಗೆ ಮಳೆಯು ಕಾರಣವಾಗಿರದೆ ಆಯಾ ಬೀಜಗಳ ಗುಣಧರ್ಮಗಳೇ ಕಾರಣವಾಗಿರುತ್ತವೆ. ಅದರಂತೆ ಪ್ರೇರಕನಾದ ಈಶ್ವರನು ಒಬ್ಬನೇ ಆಗಿದ್ದರೂ ಅವನಿಂದ ಪ್ರೇರಣೆಯನ್ನು ಹೊಂದಿದ ಜೀವಿಗಳ

ಅಂತಃಕರಣಗಳು ಹಾಗೂ ಅವುಗಳಲ್ಲಿಯ ಸಂಸ್ಕಾರಗಳು ಭಿನ್ನಭಿನ್ನವಾಗಿರುವುದರಿಂದ ಅವರವರ ಸಂಸ್ಕಾರದಂತೆ ಪ್ರವೃತ್ತಿಯು ಕಂಡುಬರುತ್ತದೆ. ಅಂತೆಯೇ ಶಂಕರಾ ಚಾರ್ಯರು– ''ಈಶ್ವರಃ ಪರ್ಜ್ಯನ್ಯವದ್ ದ್ರಷ್ಟವ್ಯಃ'' ಎಂಬುದಾಗಿ ತಿಳಿಯ ಪಡಿಸಿ ದ್ದಾರೆ. ಈಶ್ವರನು ಮಳೆಯ ನೀರಿದ್ದಂತೆ. ಬೆಳೆಗಳಲ್ಲಿಯ ರಸಭೇದಗಳಿಗೆ ಅವುಗಳ ಬೀಜಗಳೇ ಕಾರಣಗಳು.

ಮನೆಯಲ್ಲಿಯ ಬಲ್ಬು, ಫಂಖಾ, ಟಿ. ವ್ಹಿ, ರೇಡಿಯೋ, ಕೂಲರ್, ಮಿಕ್ಸರ್, ಮುಂತಾದ ಯಂತ್ರಗಳಿಗೆ ಪ್ರೇರಕವಾದ ವಿದ್ಯುತ್ತು ಒಂದೇ ಆಗಿದ್ದರೂ ಎಲ್ಲ ಯಂತ್ರ ಗಳಿಂದ ಒಂದೇ ಕ್ರಿಯೆಯು ಉಂಟಾಗುವುದಿಲ್ಲ, ಬಲ್ಬಿನಿಂದ ಪ್ರಕಾಶ, ಫಂಖಾದಿಂದ ಗಾಳಿ, ಟಿ. ವ್ಹಿಯಿಂದ ಶಬ್ದ ಹಾಗೂ ಚಿತ್ರಗಳು, ರೇಡಿಯೋದಿಂದ ಶಬ್ದ, ಈ ತೆರನಾಗಿ ಬೇರೆ ಬೇರೆ ಕಾರ್ಯಗಳಾಗಲು ಆಯಾ ಯಂತ್ರಗಳ ರಚನೆಗಳೇ ಕಾರಣವಾಗಿವೆ. ಇದೇ ತೆರನಾಗಿ ಪ್ರಪಂಚದಲ್ಲಿಯ ಅನಂತ ಜೀವಿಗಳ ಸಂಸ್ಕಾರಗಳು ಭಿನ್ನ ಭಿನ್ನಗಳಾಗಿ ರೋಣದರಿಂದ ಅವರು ಈಶ್ವರನ ಶಕ್ತಿಯನ್ನು ಪಡೆದು ತಮ್ಮ ತಮ್ಮ ಸಂಸ್ಕಾರದಂತೆ ವರ್ತಿಸುತ್ತಿರೋಣದರಿಂದ ಈಶ್ವರನಿಗೆ ಅದಾವ ದೋಷವನ್ನೂ ಕೊಡಲು ಬರುವುದಿಲ್ಲ.

ದುಷ್ಟನಾದ ಮನುಷ್ಯನು ಈಶ್ವರನ ಶಕ್ತಿಯನ್ನು ಪಡೆದು ದುಷ್ಕರ್ಮಗಳನ್ನೇ ಮಾಡುತ್ತ ಹೋದರೆ ಅವನು ಉದ್ಧಾರವಾಗುವುದಾದರೂ ಹೇಗೆ ? ಎಂಬ ಮತ್ತೊಂದು ಪ್ರಶ್ನೆಯು ಉದ್ಭವಿಸುವುದು. ಮನುಷ್ಯನ ಸತ್ಕರ್ಮ ದುಷ್ಕರ್ಮಗಳಿಗೆ ಅವನ ಸಂಸ್ಕಾರ ಗಳೇ ಕಾರಣಗಳೆಂಬ ವಿಷಯವು ನಿಶ್ಚಿತವಾದದ್ದು. ದುಷ್ಟ ಮನುಷ್ಯನು ಸತ್ಕರ್ಮಗಳನ್ನು ಮಾಡಬೇಕಾದರೆ ಅವನ ಸಂಸ್ಕಾರಗಳಲ್ಲಿ ಪರಿವರ್ತನೆ ಮಾಡಬೇಕಾಗುವುದು. ಈ ಪರಿವರ್ತನೆಯು ಈಶ್ವರನಿಂದಾಗದೆ ಸದ್ಗುರುಗಳಿಂದ ಸಾಧ್ಯವಾಗುವುದು. ಎಂತಹ ದುರ್ಜನನೇ ಇದ್ದರೂ ಸಂತರ ಹಾಗೂ ಸದ್ಗುರುಗಳ ಸಹವಾಸವು ಅವನಿಗೆ ದೊರೆತಾಗ ಕ್ರಮವಾಗಿ ಅವನ ಕುತ್ಸಿತವಾಸನೆ ಹಾಗೂ ಸಂಸ್ಕಾರಗಳು ದೂರಾಗಿ ಉತ್ತಮ ಸಂಸ್ಕಾರ ಗಳು ಅವನ ಮನಸ್ಸಿನಲ್ಲಿ ಒಡಮೂಡುತ್ತವೆ. ಆ ಸಂಸ್ಕಾರಗಳ ಬಲದಿಂದಲೇ ಅವನು ಉತ್ತಮ ಕಾರ್ಯಗಳಲ್ಲಿ ಪ್ರವೃತ್ತನಾಗುವನು. ನಾರದನ ಸಹವಾಸದಿಂದ 'ವಾಲ್ಮೀಕಿಯು', ಬುದ್ಧನ ಸಹವಾಸದಿಂದ 'ಅಂಗುಲಿಮಾಲ' ಮತ್ತು ಸುಜ್ಞಾನದೇವನ ಸಹವಾಸದಿಂದ 'ಮಾತಂಗತಮ್ಮ' ಮುಂತಾದವರು ಪರಿವರ್ತನೆಗೊಂಡ ಉದಾಹರಣೆಗಳು ಸಾಕಷ್ಟಿವೆ. ಇದೆಲ್ಲವನ್ನವಲೋಕಿಸಿದಾಗ ಜೀವಿಗಳ ಸಂಸ್ಕಾರವನ್ನು ಶುದ್ಧಗೊಳಿಸುವವನು ಸದ್ಗುರು ವಾದರೆ, ಆ ಸಂಸ್ಕಾರಗಳಿಗೆ ಚಾಲನೆ ಕೊಡುವವನು ಈಶ್ವರನಾಗಿರುತ್ತಾನೆ. ಅಂತೆಯೇ ಭಾರತೀಯ ಸಂಸ್ಕೃತಿಯಲ್ಲಿ ದೇವರಿಗಿಂತಲೂ ಗುರುವಿನ ಸ್ಥಾನ ಅಧಿಕ ಹಾಗೂ ಉನ್ನತ ವಾಗಿರುತ್ತದೆ.

ಈಶ್ವರನ ಪ್ರೇರಕಶಕ್ತಿಯನ್ನು ಪಡೆದು ವ್ಯವಹರಿಸುವ ಪ್ರತಿಯೊಬ್ಬ ಜೀವನು ತನ್ನಿಂದ ಆಚರಿಸಲ್ಪಡುವ ಆಚರಣೆಗಳತ್ತ ಲಕ್ಷ್ಯವಹಿಸಿ, ಒಂದುವೇಳೆ ಅವುಗಳು ದುರಾಚರಣೆಗಳಾಗಿದ್ದರೆ ನನ್ನ ಸಂಸ್ಕಾರಗಳು ಚೆನ್ನಾಗಿಲ್ಲವೆಂದರಿತುಕೊಂಡು ಅವುಗಳ ಪರಿವರ್ತನೆಗಾಗಿ ಸತ್ಸಂಗವನ್ನು ಮಾಡಬೇಕು. ಹೀಗೆ ಸತ್ಸಂಗದ ಮುಖಾಂತರ ಒಳ್ಳೆಯ

ಸಂಸ್ಕಾರವುಳ್ಳವನಾಗಿ ತಾನು ಮಾಡುವ ಪ್ರತಿಯೊಂದು ಕಾರ್ಯಕ್ಕೆ ಈಶ್ವರನೇ ಪ್ರೇರಕನೆಂದು ತಿಳಿದು, ಆತನು ಪ್ರೇರಕನಾದರೆ ನಾನು ಪ್ರೇರ್ಯನಾಗಿದ್ದೇನೆ ಎಂಬ ಭೇದ ಬುದ್ಧಿಯಿಂದ ಅವನನ್ನು ಆರಾಧಿಸಬೇಕೇ ವಿನಃ ಅವನೊಂದಿಗೆ ಅದ್ವೈತ ವ್ಯವಹಾರವನ್ನು ಮಾಡಕೂಡದು. ಪೂಜ್ಯಪಾದರು ಸರ್ವಾದ್ವೈತ ನಿರಸನೆಯನ್ನು–

ಪತಿಸ್ಸಾಕ್ಷಾನ್ಮಹಾದೇವಃ ಪಶುರೇಷ ತದಾಶ್ರಯಃ ।
ಅನಯೋಃ ಸ್ವಾಮಿಭೃತ್ಯತ್ವಮಭೇದೇ ಕಥಮಿಷ್ಯತೇ ॥

(ಸಿ. ಶಿ. ೧೦–೪೦)

ಹೀಗೆ ಬೇರೊಂದು ರೀತಿಯಾಗಿ ಪ್ರತಿಪಾದಿಸಿದ್ದಾರೆ. ''ಪತಿಂ ವಿಶ್ವಸ್ಯ'' ಎಂಬ ಸ್ಮೃತಿ ವಚನದಂತೆ ಪರಮಾತ್ಮನಿಗೆ 'ಪತಿ'ಯೆಂಬುದಾಗಿ ಕರೆಯುತ್ತಾರೆ. ಅವನ ಆಶ್ರಯದಲ್ಲಿ ಇರುವ ಜೀವನು 'ಪಶು' ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಹೀಗೆ ಶಿವಜೀವರಲ್ಲಿ ಸ್ವಾಮಿ ಭೃತ್ಯಭಾವವಿರುವುದರಿಂದ ಅದ್ವೈತ ಸ್ಥಿತಿಯಲ್ಲಿ ಇದು ಸಂಭವಿಸಲಾರದ ಕಾರಣ ಮಾಹೇಶ್ವರನು ಈಶ್ವರನನ್ನು ತನಗಿಂತ ಭಿನ್ನವಾಗಿಯೇ ಭಾವಿಸಬೇಕೆಂಬುದಾಗಿ ಆಚಾರ್ಯರು ಉಪದೇಶಿಸಿದ್ದಾರೆ. ವೀರಶೈವ ಸಿದ್ಧಾಂತಕ್ಕೆ ಮಹಾಪಾಶುಪತ ಸಿದ್ಧಾಂತ ವೆಂತಲೂ ಕರೆಯುವರು. ಶಿವ–ಜೀವರಲ್ಲಿ ಪತಿ–ಪಶುಭಾವವನ್ನು ಉಪದೇಶಿಸುವ ಸಿದ್ಧಾಂತವೇ ಪಾಶುಪತ ಸಿದ್ಧಾಂತವು. ಜೀವನು ಪಶುವಾದರೆ ಪರಮಾತ್ಮನು ಪಶುಪತಿ ಯಾಗಿರುತ್ತಾನೆ. ಜೀವಾತ್ಮನ ವರ್ತನೆಯು ಪಶುವಿನಂತೆ ಇರುವ ಕಾರಣ ಇವನಿಗೆ ಪಶು ವೆಂದು ಕರೆದಿದ್ದಾರೆ. ಲೋಕದಲ್ಲಿ ಪಶುಗಳನ್ನು ಕೊಟ್ಟಿಗೆಯಲ್ಲಿ ಹಗ್ಗದಿಂದ ಕಟ್ಟಿಹಾಕಿರು ವಂತೆ ಪ್ರತಿಯೊಬ್ಬ ಜೀವಾತ್ಮನು ಆಣವ, ಮಾಯಾ ಮತ್ತು ಕಾರ್ಮಿಕಗಳೆಂಬ ತ್ರಿವಿಧ ಮಲರೂಪ ಪಾಶದಿಂದ ಸಂಸಾರದಲ್ಲಿ ಕಟ್ಟಿಹಾಕಲ್ಪಟ್ಟಿದ್ದಾನೆ. ಅಂತೆಯೇ ಪಾಶಬದ್ಧ ನಾದ ಈ ಜೀವಿಗೆ ಪಶುವೆಂದು ಸಂಬೋಧಿಸಿದ್ದಾರೆ. ಈ ಅದ್ವೈತ ನಿರಸನವನ್ನೇ ಮಾಡುತ್ತ ಪುನಃ ಪೂಜ್ಯರು–

ಸಾಕ್ಷಾತ್ ಕೃತಂ ಪರಂ ತತ್ತ್ವಂ ಯದಾ ಭವತಿ ಬೋಧತಃ ।
ತದಾದ್ವೈತಸಮಾಪತ್ತಿಃ ಜ್ಞಾನಹೀನಸ್ಯ ನ ಕ್ವಚಿತ್ ॥

ಭೇದಸ್ಯ ಕರ್ಮಹೇತುತ್ವಾತ್ ವ್ಯವಹಾರಃ ಪ್ರವರ್ತತೇ ।
ಲಿಂಗಪೂಜಾದಿಕರ್ಮಸ್ಥೋ ನ ಚಾದ್ವೈತಂ ಸಮಾಚರೇತ್ ॥

(ಸಿ. ಶಿ. ೧೦ ; ೪೧–೪೨)

ಎಂಬುದಾಗಿ ಉಪದೇಶಿಸಿದ್ದಾರೆ.

ಮಾಹೇಶ್ವರನ ಈ ಭೇದ ಬುದ್ಧಿಯು ಪರಶಿವನನ್ನು ಸ್ವಾತ್ಮರೂಪದಲ್ಲಿ ಸಾಕ್ಷಾತ್ಕರಿಸಿ ಕೊಳ್ಳುವ ಪರ್ಯಂತವಾಗಿ ಇರುತ್ತದೆ. ಅಭೇದಜ್ಞಾನವಾಗುವವರೆಗೆ ಅದ್ವೈತ ಸ್ಥಿತಿಯು ಪ್ರಾಪ್ತವಾಗುವುದಿಲ್ಲ. ಅದ್ವೈತ ಸ್ಥಿತಿಯನ್ನು ಪ್ರಾಪ್ತಮಾಡಿಕೊಂಡವನಿಂದ ಕ್ರಿಯಾಕರ್ಮ ಗಳು ನಡೆಯುವುದಿಲ್ಲ. ಮಹೇಶ್ವರನಿಗೆ ಲಿಂಗಪೂಜಾರೂಪಿ ಕರ್ಮವನ್ನು ಮಾಡ ಬೇಕಾದ್ದರಿಂದ ಇವನಿಗೆ ಅದ್ವೈತ ಸ್ಥಿತಿಯ ಅವಶ್ಯಕತೆ ಇರುವುದಿಲ್ಲ.

ಅದ್ವೈತ ಸ್ಥಿತಿಯನ್ನು ಪಡೆದವರೂ ಸಹ ಅದನ್ನು ಕ್ರಿಯೆಯಲ್ಲಿ ಇಳಿಸಲು ಬರುವುದಿಲ್ಲ ಅಂತೆಯೇ ''ಕ್ರಿಯಾದ್ವೈತಂ ನ ಸಮಾಚರೇತ್'' ಎಂಬುದಾಗಿ ಹೇಳಲ್ಪಟ್ಟಿದೆ. ವ್ಯವಹಾರದಲ್ಲಿ ಅದ್ವೈತವನ್ನು ಬಳಸಿದರೆ ಬಹಳಷ್ಟು ಅನರ್ಥಗಳುಂಟಾಗುತ್ತವೆ. ಮನೆಯಲ್ಲಿಯ ತಾಯಿ, ತಂಗಿ ಮತ್ತು ಹೆಂಡತಿ ಇವರೆಲ್ಲರೂ ಸ್ತ್ರೀಯರೇ ಆಗಿದ್ದರೂ ಅವರವರ ಜೊತೆಗಿನ ವ್ಯವಹಾರವು ಭಿನ್ನ ಭಿನ್ನವೇ ಆಗಿರುತ್ತದೆ. ಸ್ತ್ರೀಯರೆಲ್ಲರೂ ಒಂದೇ ಎಂಬ ಭಾವನೆಯಿಂದ ಅದ್ವೈತ ವ್ಯವಹಾರವನ್ನು ಮಾಡಿದರೆ ಮಹದನರ್ಥವುಂಟಾಗುತ್ತದೆ. ಆದ್ದರಿಂದ ಅದ್ವೈತಿಗಳೂ ಸಹ ವ್ಯವಹಾರದಲ್ಲಿ ದ್ವೈತವನ್ನು ಪರಿಪಾಲಿಸುತ್ತಾರೆ. ಅಂತೆಯೇ ನಿಜಗುಣರು– ''ಬಳಸದಿರದ್ವೈತವನು ಬಾಹ್ಯದಲಿ'' ಎಂಬುದಾಗಿ ಉಪದೇಶಿಸಿದ್ದಾರೆ.

ಒಂದಾನೊಂದು ಊರಲ್ಲಿ ಒಬ್ಬ ಶಿಷ್ಯನು ಗುರುಗಳ ಪ್ರವಚನವನ್ನು ಕೇಳಲು ಹೋಗುತ್ತಿದ್ದನು. ಅಂದಿನ ಪ್ರವಚನದಲ್ಲಿ ಅದ್ವೈತ ವಿಷಯವನ್ನೇ ಪ್ರತಿಪಾದಿಸುತ್ತ–

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಚೇ ಚ ಪಂಡಿತಾಃ ಸಮದರ್ಶಿನಃ ॥

ಎಂಬ ಗೀತೆಯ ಈ ಶ್ಲೋಕವನ್ನು ಉದಾಹರಿಸಿ, ಪಂಡಿತ ಅಂದರೆ ಜ್ಞಾನಿಯಾದವನು ಬ್ರಾಹ್ಮಣ, ಗೋವು, ಆನೆ, ನಾಯಿ ಮತ್ತು ಚಾಂಡಾಲರಲ್ಲಿ ಸಮದರ್ಶಿಯಾಗಿರುತ್ತಾನೆ. ಇವರೆಲ್ಲರಲ್ಲಿಯೂ ಒಬ್ಬನೇ ಆದ ದೇವನು ವ್ಯಾಪ್ತನಾಗಿದ್ದಾನೆ ಎಂಬ ವಿಷಯವನ್ನು ಗುರುಗಳು ಪ್ರತಿಪಾದಿಸಿದರು. ಈ ಪ್ರವಚನವನ್ನು ಕೇಳಿ ಶಿಷ್ಯನು ಮರಳಿ ಮನೆಗೆ ಬರುತ್ತಿರುವಾಗ ರಸ್ತೆಯೊಳಗೆ ಒಂದು ಮದೋನ್ಮತ್ತವಾದ ಆನೆಯು ತನ್ನ ಸೊಂಡಿಲನ್ನು ಅತ್ತಿತ್ತ ಬೀಸುತ್ತ ಅನೇಕರನ್ನು ಘಾಯಗೊಳಿಸುತ್ತ ಬರುತ್ತಿತ್ತು. ಇದರ ಈ ಸ್ಥಿತಿಯನ್ನು ಕಂಡು ಜನರು ರಸ್ತೆಯನ್ನು ಬಿಟ್ಟು ಓಡಿಹೋಗುತ್ತಿದ್ದರು. ಈ ಶಿಷ್ಯನು ಮಾತ್ರ ಆನೆಯಲ್ಲಿರುವ ಪರಮಾತ್ಮನೇ ನನ್ನಲ್ಲಿದ್ದಾನೆ, ಇದು ನನಗೇನು ಮಾಡುತ್ತದೆ ? ಎಂದು ವಿಚಾರಿಸುತ್ತ ಮಧ್ಯದಾರಿಯಲ್ಲಿಯೇ ಬಂದನು. ಇವನನ್ನು ನೋಡಿದ ಮಾವುತನು ಚೀರಿ ಚೀರಿ ಹೇಳಿ, ದಾರಿಯಿಂದ ದೂರಾಗಲು ಅದೆಷ್ಟೇ ಎಚ್ಚರಿಕೆ ಕೊಟ್ಟರೂ ಈತ ಹಾಗೆಯೇ ಬರುತ್ತಿದ್ದನು. ಇವನು ಆನೆಯ ಸಮೀಪಕ್ಕೆ ಬರುತ್ತಲೇ ಅದು ಇವನನ್ನು ಸೊಂಡಿಲಿಂದ ಹಿಡಿದು ಬೀಸಾಡಿ ಒಗೆದುಬಿಟ್ಟಿತು. ಕೈಕಾಲು ಮುರಿದುಕೊಂಡ ಇವನನ್ನು ಜನರು ದವಾಖಾನೆಯಲ್ಲಿ ಭರ್ತಿಮಾಡಿದರು. ಶಿಷ್ಯನಿಗಾದ ಸ್ಥಿತಿಯನ್ನು ತಿಳಿದ ಗುರುಗಳು ಆತನನ್ನು ಕಾಣಲು ದವಾಖಾನೆಗೆ ಹೋದಾಗ ಶಿಷ್ಯನು ನಡೆದ ಘಟನೆಯನ್ನೆಲ್ಲ ವಿವರಿಸಿ ನಿಮ್ಮ ಅದ್ವೈತ ಪ್ರವಚನವನ್ನು ಕೇಳಿ ನನ್ನ ಗತಿ ಹೀಗಾಗಿದೆ. ಎಂದು ಶೋಕಿಸತೊಡಗಿದನು. ಆಗ ಗುರುಗಳು– ''ಎಲೋ ಮೂರ್ಖನೇ ! ಆನೆಯೊಳಗೆ ಈಶ್ವರನಿದ್ದದ್ದೇನೋ ನಿಜ. ಆದರೆ, ಆನೆಯ ಮೇಲೆ ಕುಳಿತ ಮಾವುತನಲ್ಲಿಯೂ ಈಶ್ವರನಿದ್ದನು. ಆತನ ಎಚ್ಚರಿಕೆಯ ವಾಣಿಯನ್ನು ಕೇಳಿ ನೀನು ದೂರ ಸರಿದಿದ್ದರೆ ಈ ಸ್ಥಿತಿಯು ನಿನಗೆ ಪ್ರಾಪ್ತವಾಗುತ್ತಿದ್ದಿಲ್ಲ''ವೆಂಬುದಾಗಿ ಹೇಳಿ ಇನ್ನು ಮುಂದೆ ವ್ಯವಹಾರದಲ್ಲಿ ಅದ್ವೈತವನ್ನು ಬಳಸಬೇಡವೆಂಬುದಾಗಿ ಎಚ್ಚರಿಕೆಯನ್ನಿತ್ತರು. ಆದ್ದರಿಂದ ವ್ಯವಹಾರದಲ್ಲಿ ಅದ್ವೈತವು

ನಡೆಯುವುದಿಲ್ಲ. ಅಂತೆಯೇ ಪೂಜ್ಯಪಾದರು ಇದೇ ವಿಷಯವನ್ನೇ ಇನ್ನಷ್ಟು ದೃಢಗೊಳಿಸುತ್ತ-

ಪೂಜಾದಿವ್ಯವಹಾರಃಸ್ಯಾದ್ಭೇದಾಶ್ರಯತಯಾ ಸದಾ ।
ಲಿಂಗಪೂಜಾಪರಸ್ತಸ್ಮಾನ್ನಾದ್ವೈತೇ ನಿರತೋ ಭವೇತ್ ॥

(ಸಿ. ಶಿ. ೧೦-೪೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪೂಜಾದಿ ವ್ಯವಹಾರಗಳು ಭೇದ-ಭಾವನೆಯಿಲ್ಲದೆ ಸಂಭವಿಸಲಾರವು. ಮಾಹೇಶ್ವರನು ಲಿಂಗಪೂಜಾಪರನಾದ್ದ ರಿಂದ ಅವನೆಂದೂ ಅದ್ವೈತನಿರತನಾಗಕೂಡದು. ಹೀಗೆ ಮಾಹೇಶ್ವರನ ಪೂಜಾವಿಧಾನ ದಲ್ಲಿ ಅದ್ವೈತಭಾವನೆಯು ಪ್ರತಿಬಂಧಕವಾದ್ದರಿಂದ ಆ ಭಾವನೆಯನ್ನು ಮಾಹೇಶ್ವರನು ತಾಳಬಾರದೆಂಬುದಾಗಿ ತಿಳಿಯಪಡಿಸಿ ಪೂಜ್ಯಪಾದರು ಇಲ್ಲಿಗೆ ಸರ್ವಾದ್ವೈತನಿರಸನ ಸ್ಥಲವನ್ನು ಪೂರ್ಣಗೊಳಿಸಿದ್ದಾರೆ- ಎಂಬುದರೊಂದಿಗೆ ಇಂದಿನ ಆಶೀರ್ವಚನಕ್ಕೆ ವಿರಾಮವೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೮ ಅಗಷ್ಟ್, ೧೯೯೧
(ಸ್ಥಾನ ನಾಗಪುರ)



# ಆಹ್ವಾನನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರಾವಣಮಾಸದ ನಿಮಿತ್ತವಾಗಿ ನೀವೆಲ್ಲ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ಪೂಜ್ಯಪಾದರಾದ ಶ್ರೀ ರೇಣುಕರು ಅಗಸ್ತ್ಯ ಮಹರ್ಷಿಯನ್ನು ಕುರಿತು ಆಹ್ವಾನನಿರಸನಸ್ಥಲದಲ್ಲಿ–

ಲಿಂಗಾರ್ಚನಪರಃ ಶುದ್ಧಃ ಸರ್ವಾದ್ವೈತನಿರಾಸಕಃ ।
ಸ್ವೇಷ್ಟಲಿಂಗೇ ಶಿವಾಕಾರೇ ನತಮಾವಾಹಯೇಚ್ಛಿವಮ್ ॥

ಯದಾಶಿವಕಲಾಯುಕ್ತಂ ಲಿಂಗಂ ದದ್ಯಾನ್ಮಹಾಗುರುಃ ।
ತದಾರಭ್ಯಶಿವಸ್ತತ್ರ ತಿಷ್ಠತ್ಯಾಹ್ವಾನಮತ್ರ ಕಿಮ್ ॥

(ಸಿ. ಶಿ. ೧೦ ; ೪೪–೪೫)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ವೀರಶೈವ ಸಿದ್ಧಾಂತದ ಪ್ರಕಾರ ಗುರುಗಳು ದೀಕ್ಷಾಸಂಸ್ಕಾರವನ್ನು ಮಾಡುವಾಗ ಶಿಷ್ಯನ ಅಂಗಕ್ಕೆ ಹಾಗೂ ಅವನಿಗೆ ಕೊಡಮಾಡುವ ಲಿಂಗಕ್ಕೆ ಸಂಸ್ಕಾರವನ್ನು ಮಾಡಿ ಆ ಲಿಂಗದಲ್ಲಿ ಶಿವಕಲೆಗಳನ್ನು ನಿಯೋಜಿಸಿ ಶಿವಸಾನ್ನಿಧ್ಯ ವನ್ನಲ್ಲಿರಿಸಿ ಶಿಷ್ಯನ ಹಸ್ತಪೀಠಕ್ಕೆ ಆ ಲಿಂಗವನ್ನು ದಯಪಾಲಿಸುತ್ತಾರೆ. ಹೀಗೆ ಒಮ್ಮೆ ಶಿವನನ್ನು ಆಹ್ವಾನಿಸಿ ಕೊಟ್ಟ ಆ ಲಿಂಗದಲ್ಲಿ ಶಿವನ ನಿತ್ಯ ನಿವಾಸವಿರುವುದರಿಂದ ದಿನಾಲೂ ಪುನಃ ಪುನಃ ಆಹ್ವಾನಿಸುವ ಅವಶ್ಯಕತೆ ಇರುವುದಿಲ್ಲವಾದ್ದರಿಂದ ಪೂಜ್ಯರು ಆಹ್ವಾನ ನಿರಸನವನ್ನು ಉಪದೇಶಿಸುತ್ತಿದ್ದಾರೆ.

ಹಿಂದೂ ಸಂಸ್ಕೃತಿಯಲ್ಲಿ ಅನೇಕ ನೈಮಿತ್ತಿಕ ಪೂಜೆಗಳನ್ನು ಮಾಡುವಾಗ ಯಾವ ದೇವರನ್ನು ಪೂಜಿಸಬೇಕಾಗಿರುತ್ತದೆಯೋ, ಆ ದೇವರ ಮೂರ್ತಿಯಲ್ಲಿ ಇಲ್ಲವೇ ವೀಳೆಯದೆಲೆಯ ಮೇಲೆ ಇರಿಸಿದ ಒಂದು ಅಡಿಕೆಯ ಬೆಟ್ಟದಲ್ಲಿ ಮಂತ್ರ ಪುರಸ್ಸರವಾಗಿ ಆವಾಹಿಸಿ ಪೂಜಿಸಿ, ಕೊನೆಗೆ ವಿಸರ್ಜಿಸುವ ಪದ್ಧತಿ ಇದೆ. ಗಣಪತಿ ಪೂಜೆ, ವರದಶಂಕರ ಪೂಜೆ, ಕಲಶ ಪೂಜೆ, ಲಕ್ಷ್ಮೀ ಪೂಜೆ, ಸರಸ್ವತೀ ಪೂಜೆ, ನವಗ್ರಹ ಪೂಜೆ ಮತ್ತು ನಾಂದೀ ಸಮಾರಾಧನ ಪೂಜೆ ಮುಂತಾದ ಪೂಜಾ ವಿಧಾನಗಳನ್ನಾಚರಿಸುವಾಗ ''ಆವಾಹಯಾಮಿ'', ''ಆವಾಹಿತೋ ಭವ'' 'ಸ್ಥಾಪಯಾಮಿ, ಸ್ಥಾಪಿತೋ ಭವ,' 'ಅವಕುಂಠಿತೋ ಭವ' 'ವರದೋಭವ' ಮುಂತಾದ ಮಂತ್ರಗಳಿಂದ ಆಹ್ವಾನಿಸಿ ಪೂಜಿಸಿ ಪೂಜೆ ಮುಗಿದನಂತರ 'ಗಚ್ಚ ಗಚ್ಚ ಸುರಶ್ರೇಷ್ಠ ಪುನರಾಗಮನಾಯ ಚ' ಎಂಬ ಮಂತ್ರವನ್ನು ಪಠಣಮಾಡುತ್ತ ಆ ದೇವರನ್ನು ವಿಸರ್ಜಿಸುತ್ತಾರೆ. ಪೂಜಾರಂಭದಲ್ಲಿ ಭಾವಿಯ ಅಥವಾ ಕೆರೆಯ ನೀರನ್ನು ಒಂದು ಕೊಡದಲ್ಲಿ ತುಂಬಿ ಆ ನೀರಿನಲ್ಲಿ–

'ಗಂಗೇ ಚ ಯಮುನೇಚೈವ ಗೋದಾವರೀಸರಸ್ವತೀ' ।
ನರ್ಮದೇ ಸಿಂಧು ಕಾವೇರೀ ಜಲೇऽಸ್ಮಿನ್ ಸನ್ನಿಧಿಂ ಕುರು ॥

ಎಂಬ ಮಂತ್ರೋಚ್ಚಾರಣೆಯನ್ನು ಮಾಡುತ್ತ ಗಂಗಾ ಮುಂತಾದ ಪವಿತ್ರ ನದಿಗಳನ್ನು ಭಾವನಾತ್ಮಕವಾಗಿ ಆಹ್ವಾನಿಸಿ ಪೂಜಾದಿಗಳನ್ನು ಮಾಡುವ ಪದ್ಧತಿಯನ್ನು ಅನೇಕ ಕಡೆಗಳಲ್ಲಿ ಕಾಣುತ್ತೇವೆ. ಈ ಎಲ್ಲಾ ವಿಧಿವಿಧಾನಗಳಲ್ಲಿ ಆವಾಹನ, ಪೂಜನ ಮತ್ತು ವಿಸರ್ಜನಗಳು ಆಚರಿಸಲ್ಪಡುತ್ತವೆ.

ವೀರಶೈವರ ಇಷ್ಟಲಿಂಗಪೂಜೆಯು ನೈಮಿತ್ತಿಕ ಪೂಜೆಯಾಗಿರದೆ ನಿತ್ಯಪೂಜೆಯಾಗಿರುತ್ತದೆ. ಇಂಥ ಇಷ್ಟಲಿಂಗದಲ್ಲಿ ಒಂದು ವೇಳೆ ಪೂಜಾಕಾಲದಲ್ಲಿ ಶಿವನನ್ನು ಆಹ್ವಾನಿಸಿ ಪೂಜೆಯು ಮುಗಿದನಂತರ ಅವನನ್ನು ವಿಸರ್ಜಿಸಿದರೆ ಉಳಿದ ವೇಳೆಯಲ್ಲಿ ದೇಹದ ಮೇಲೆ ಧರಿಸಿದ ಆ ಲಿಂಗದಲ್ಲಿ ಶಿವನೇ ಇಲ್ಲವಾಗೋಣದರಿಂದ ಆ ಲಿಂಗಧಾರಣೆಯು ನಿಷ್ಪ್ರಯೋಜಕವಾಗುವುದು. ವೀರಶೈವರ ಅಷ್ಟಾವರಣಗಳಲ್ಲಿ ಇಷ್ಟಲಿಂಗವೂ ಒಂದು ಆವರಣ ಅರ್ಥಾತ್ ರಕ್ಷಾಕವಚವಾಗಿರೋಣದರಿಂದ ಅದರಲ್ಲಿ ಶಿವನೇ ಇಲ್ಲದಿದ್ದಾಗ ರಕ್ಷಣೆಯಾಗುವದಾದರೂ ಹೇಗೆ ? ಈ ರೀತಿಯಾಗಿ ಇಷ್ಟಲಿಂಗದಲ್ಲಿ ದಿನಾಲೂ ಆಹ್ವಾನ–ವಿಸರ್ಜನಗಳನ್ನು ಮಾಡಿದರೆ ಅನೇಕ ದೋಷಗಳು ಬಂದೊದಗುತ್ತಿರುವ ಕಾರಣ ಸದ್ಗುರುಗಳು ಒಮ್ಮೆ ಪ್ರಾಣಪ್ರತಿಷ್ಠಾಪನಾಪೂರ್ವಕವಾಗಿ ದಯಪಾಲಿಸಿದ ಇಷ್ಟಲಿಂಗದಲ್ಲಿ ಸದಾ ಶಿವಸಾನ್ನಿಧ್ಯವನ್ನು ಭಾವಿಸಿ, ಈ ಆವಾಹನ ವಿಸರ್ಜನಗಳ ಗೊಡವೆಗೆ ಹೋಗದೆ ಪ್ರತಿನಿತ್ಯವೂ ಆ ಇಷ್ಟಲಿಂಗವನ್ನು ಪೂಜಿಸಬೇಕು.

ವೀರಶೈವರ ಇಷ್ಟಲಿಂಗವೆಂದರೆ ಅವರ ಪ್ರಾಣವಿದ್ದ ಹಾಗೇನೇ. ಅಂತೆಯೇ ಮಹಾಚಾರ್ಯರು– ''ಪ್ರಾಣವದ್ಧಾರಣೀಯಂ ತತ್ ಪ್ರಾಣಲಿಂಗಮಿದಂ ತವ'' (ಸಿ. ಶಿ. ೬–೨೬) ಎಂಬುದಾಗಿ ಲಿಂಗಧಾರಣಸ್ಥಲದಲ್ಲಿ ಉಪದೇಶಿಸಿದ್ದಾರೆ. ಅಂದರೆ ಸಾಧಕನು ತನ್ನ ಇಷ್ಟಲಿಂಗವನ್ನು ತನ್ನ ಪ್ರಾಣವೆಂದು ತಿಳಿದು ಅದನ್ನೆಂದೂ ದೇಹದಿಂದ ಅಗಲಿಸಕೂಡದು. ಒಂದು ವೇಳೆ ದೀಕ್ಷಾ ಹೊಂದಿದ ವೀರಶೈವನು ಆ ಲಿಂಗವನ್ನು ಬಿಟ್ಟರೆ ಅವನು ಪ್ರಾಣವಿಲ್ಲದ ಪ್ರೇತದಂತೆ ಅಶುಚಿಯೂ, ಅಪವಿತ್ರನೂ ಆಗುವನು. ಪ್ರೇತವನ್ನು ಸ್ಪರ್ಶಿಸಿದರೆ ಪುನಃ ಸ್ನಾನಾದಿಗಳಿಂದ ಹೇಗೆ ಶುಚಿರ್ಭೂತರಾಗಬೇಕಾಗುವುದೋ, ಅದರಂತೆ ಇಷ್ಟಲಿಂಗವಿಲ್ಲದವರನ್ನು ಸ್ಪರ್ಶಿಸಿದಾಗಲೂ ಪ್ರೇತ ಸ್ಪರ್ಶದಂತೆ ಅಪವಿತ್ರತೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಯಾರೂ ಇಷ್ಟ ಲಿಂಗವನ್ನು ತ್ಯಜಿಸಿ ವ್ಯವಹರಿಸಕೂಡದು.

ವೀರಶೈವ ಸಾಧಕನಿಂದ ಯಾವುದೇ ಪ್ರಕಾರದ ಪ್ರಮಾದವಾಗಬಾರದೆಂಬ ಉದ್ದೇಶಧಿಂದಲೇ ಮಹಾಚಾರ್ಯರು ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಲು ಅಪ್ಪಣೆ ಕೊಡಿಸಿದ್ದಾರೆ. ನಾವು ಮಾಡುವ ಕಾಯಕ, ವಾಚಿಕ ಮತ್ತು ಮಾನಸಿಕ ಕ್ರಿಯೆಗಳಿಗೆ ಈ ಇಷ್ಟಲಿಂಗವು ಸಾಕ್ಷೀರೂಪವಾಗಿ ಇದೆ ಎಂಬ ಅರಿವು ಇದ್ದಾಗ ಆ ಸಾಧಕನಿಂದ ಅಪರಾಧಗಳು ಸಂಭವಿಸಲಾರವು. ಹೀಗೆ ಸಾಧಕನ ಜೀವನವು ಪ್ರಮಾದರಹಿತವೂ, ಶುದ್ಧವೂ ಆಗಿರಲೆಂಬ ಉದ್ದೇಶದಿಂದ ಜಗದ್ಗುರು ಪಂಚಾಚಾರ್ಯರು ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಲು ಆಜ್ಞಾಪಿಸಿದ್ದಾರೆ–

''ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ (ಸಿ. ಶಿ. ೬–೫೧)
ಎಂಬ ಈ ಪೂಜ್ಯಪಾದ ಶ್ರೀ ರೇಣುಕರ ಉಕ್ತಿಯೇ ಅದಕ್ಕೆ ಪ್ರಮಾಣವು.

ಆಹ್ವಾನ ನಿರಸನೆಯ ವಿಷಯವನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು–

ಸಸಂಸ್ಕಾರೇಷು ಲಿಂಗೇಷು ಸದಾ ಸನ್ನಿಹಿತಃ ಶಿವಃ ।
ತತ್ರಾಹ್ವಾನಂ ನ ಕರ್ತವ್ಯಂ ಪ್ರತಿಪತ್ತಿವಿರೋಧಕಮ್ ॥

(ಸಿ. ಶಿ. ೧೦–೪೬)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ವಿಧಿವತ್ತಾಗಿ ಸಂಸ್ಕಾರವನ್ನು ಮಾಡಿದ ಇಷ್ಟಲಿಂಗದಲ್ಲಿ ಶಿವನು ಸದಾ ಸನ್ನಿಹಿತನಾಗಿಯೇ ಇರುತ್ತಾನೆ. ಹೀಗಿರುವಾಗ ಮತ್ತೆ ಅವನನ್ನು ಆಹ್ವಾನಿಸುವುದು ನಿರರ್ಥಕವಾಗುವುದು. ನಮ್ಮೆದುರಿಗೆ ನಮ್ಮ ಇಷ್ಟ ವಾದ ವ್ಯಕ್ತಿಯು ನಿಂತಿರುವಾಗ ಅವನನ್ನು ಕೂಗಿ ಕೂಗಿ ಕರೆಯುವುದು ಹೇಗೆ ಹಾಸ್ಯಾಸ್ಪದ ವೆನಿಸುವುದೋ, ಹಾಗೆ ಸದಾ ಶಿವನು ಸನ್ನಿಹಿತವಾಗಿರುವ ಇಷ್ಟಲಿಂಗದಲ್ಲಿ ಮತ್ತೆ ಮತ್ತೆ ಆಹ್ವಾನಿಸುವುದು ಹಾಸ್ಯಾಸ್ಪದವಲ್ಲದೆ ಮತ್ತೇನು ? ಒಂದು ವೇಳೆ ಪ್ರತಿದಿನ ಪೂಜಾವೇಳೆ ಯಲ್ಲಿ ಆವಾಹನ ವಿಸರ್ಜನಗಳನ್ನು ಮಾಡತೊಡಗಿದರೆ ಭಕ್ತಿಮಾರ್ಗವು ಖಂಡಿತವಾಗಿ ಸಾಧಕನ ಪ್ರಗತಿಯಾಗುವುದಿಲ್ಲ, ಸಾಧಕನ ಹೃದಯದಲ್ಲಿ ಭಕ್ತಿಯು ಸದಾ ಜಾಗೃತವಾಗಿರ ಬೇಕು. ಹೀಗೆ ಈತನು ಇಷ್ಟಲಿಂಗದಲ್ಲಿ ಸದಾ ಶಿವನ ಅಸ್ತಿತ್ವವನ್ನು ಭಾವಿಸಿ ಜಾಗೃತ ನಾಗಿದ್ದು ಪವಿತ್ರಜೀವನವನ್ನು ಸಾಗಿಸುತ್ತ ನಿರಂತರವಾಗಿ ಲಿಂಗಪೂಜೆಯನ್ನು ಮಾಡಿ ಕೊನೆಗೆ ಇವನು ಲಿಂಗರೂಪವೇ ಆಗಬೇಕಾಗುತ್ತದೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಪ್ರಾಣಹೋದ ಮನುಷ್ಯನಿಗೆ ಲಿಂಗೈಕ್ಯನಾದನೆಂಬ ಶಬ್ದವನ್ನು ಪ್ರಯೋಗಿಸುತ್ತಾರೆ. ಇದರ ತಾತ್ಪರ್ಯವಿಷ್ಟೇ– ಲಿಂಗವನ್ನು ಧರಿಸಿ ಅದನ್ನು ಪೂಜಿಸಿ ಕೊನೆಗೆ ಪೂಜಕನು ಲಿಂಗರೂಪವೇ ಆಗಬೇಕು.

ಈ ಆಹ್ವಾನ ನಿರಸನ ಸ್ಥಲವನ್ನು ಉಪಸಂಹಾರ ಮಾಡುತ್ತ ಪೂಜ್ಯಪಾದರು ಪುನಃ

ನಾಹ್ವಾನಂ ನ ವಿಸರ್ಜಂಚ ಸ್ವೇಷ್ಟಲಿಂಗೇ ತು ಕಾರಯೇತ್ ।
ಲಿಂಗನಿಷ್ಠಾಪರೋ ನಿತ್ಯಮಿತಿ ಶಾಸ್ತ್ರಸ್ಯ ನಿಶ್ಚಯಃ ॥

(ಸಿ. ಶಿ. ೧೦–೪೭)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಲಿಂಗನಿಷ್ಠನಾದ ಮಾಹೇಶ್ವರನು ತನ್ನ ಇಷ್ಟಲಿಂಗದಲ್ಲಿ ಶಿವನ ಆವಾಹನ ವಿಸರ್ಜನಾದಿಗಳನ್ನು ಮಾಡಕೂಡದು. ಸದ್ಗುರುಗಳು ಮೊದಲೇ ಆವಾಹಿಸಿಕೊಟ್ಟ ಆ ಇಷ್ಟಲಿಂಗದಲ್ಲಿ ಶಿವನ ನಿತ್ಯನಿವಾಸವನ್ನು ಭಾವಿಸಿ ನಿಷ್ಠೆಯಿಂದ ಅದನ್ನು ಪೂಜಿಸುತ್ತ ಹೋಗಬೇಕು. ಭಾವನೆಯಲ್ಲಿ ಅಪಾರವಾದ ಸಾಮರ್ಥ್ಯವಿರುವುದು, ಅಂತೆಯೇ ಪ್ರತಿಯೊಂದು ಕ್ರಿಯೆಯನ್ನು ಭಾವಪೂರ್ಣವಾಗಿಯೇ ಆಚರಿಸಬೇಕು. ಭಾವನೆಯಿಲ್ಲದೆ ಮಾಡಿದ ಕ್ರಿಯೆಗಳು ನಿಷ್ಫಲಗಳಾಗುವವು. ಹಸ್ತಪೀಠದಲ್ಲಿ ಇಷ್ಟಲಿಂಗವಿದ್ದು ಕೈಯಲ್ಲಿ ರುದ್ರಾಕ್ಷಮಾಲೆ ಇದ್ದು ಮತ್ತು ಬಾಯಲ್ಲಿ ಶಿವಪಂಚಾಕ್ಷರ ಮಂತ್ರೋಚ್ಚಾರಣೆಯಾಗುತ್ತಲಿದ್ದು ಒಂದು ವೇಳೆ ಮನದಲ್ಲಿ ಭಾವನೆ ಇರದೇ ಹೋದರೆ

ಅದೆಲ್ಲವೂ ಯಾಂತ್ರಿಕವೆಂದೆನಿಸುತ್ತದೆ. ಇಂತಹ ಯಾಂತ್ರಿಕ ಪೂಜೆಯಿಂದ ಅದಾವ ಲಾಭವೂ ಇಲ್ಲ. ಅಂತೆಯೇ ಮಹಾಚಾರ್ಯರು ಮಾಹೇಶ್ವರನ ಭಾವನೆಯನ್ನು ಸದಾ ಜಾಗೃತವಾಗಿ ಇಡುವುದಕ್ಕೋಸ್ಕರ ಆವಾಹನ ವಿಸರ್ಜನಗಳನ್ನು ನಿರಾಕರಿಸಿದ್ದಾರೆ.

ಎಂಭತ್ನಾಲ್ಕು ಲಕ್ಷ ಪ್ರಕಾರದ ಜೀವರಾಶಿಗಳಲ್ಲಿ ಮನುಷ್ಯನು ಮಾತ್ರ ಸಂಸ್ಕಾರ ಗಳನ್ನು ಹೊಂದಿ ಭಾವನಾತ್ಮಕವಾಗಿ ವ್ಯವಹರಿಸಿ ಭಗವದ್ರೂಪವನ್ನು ಪಡೆಯುವ ಸಾಮರ್ಥ್ಯವನ್ನು ಹೊಂದಿದ್ದಾನೆ. ಇಂತಹ ಭಾಗ್ಯವು ಬೇರಾವ ಪ್ರಾಣಿಗಳಿಗೂ ಲಭ್ಯ ವಾಗಿಲ್ಲ. ಅಂತೆಯೇ ಸಕಲ ಶಾಸ್ತ್ರಗಳು ಮನುಷ್ಯಜನ್ಮವೇ ಶ್ರೇಷ್ಠವೆಂಬುದಾಗಿ ಕೊಂಡಾ ಡಿವೆ. ಶಿವನು ಸೃಷ್ಟಿಯನ್ನು ಮಾಡುವಾಗ ಎಂಭತ್ಮೂರು ಲಕ್ಷ ತೊಂಭತ್ತೊಂಭತ್ತು ಸಾವಿರದಾ ಒಂಭತ್ತುನೂರಾ ತೊಂಭತ್ತೊಂಭತ್ತು ಜೀವರಾಶಿಗಳನ್ನು ಸೃಷ್ಟಿಸಿಯೂ ಅವನಿಗೆ ತೃಪ್ತಿಯಾಗಲಿಲ್ಲವಂತೆ. ಈ ಜೀವಿಗಳೆಲ್ಲ ಅಜ್ಞರಾಗಿದ್ದಾರೆ. ಇವರಿಗೆ ನನ್ನನ್ನು ಅರಿಯುವ ಮತ್ತು ಪೂಜಿಸುವ ಸಾಮರ್ಥ್ಯವಿಲ್ಲ. ಆದ್ದರಿಂದ ನನ್ನನ್ನು ಅರಿಯುವ ಜೀವಿ ಯನ್ನು ಸೃಷ್ಟಿಸಬೇಕೆಂಬುದಾಗಿ ಅವನು ಆಲೋಚಿಸಿ, ಕೊನೆಗೆ ಮನುಷ್ಯನನ್ನು ಸೃಷ್ಟಿಸಿದ ನಂತೆ. ಈ ಮನುಷ್ಯನಿಗೆ ಎಲ್ಲ ಪ್ರಾಣಿಗಳಿಗಿಂತಲೂ ಅಧಿಕವಾಗಿ ಒಂದು ನೂರುವರ್ಷ ಆಯುಷ್ಯವನ್ನೂ ಸಹ ದಯಪಾಲಿಸಿದನು. ಈ ನೂರುವರ್ಷ ಅವಧಿಯಲ್ಲಿ ಎಂದಾದರೂ ನನ್ನ ಧ್ಯಾನ ಚಿಂತನೆಗಳನ್ನು ಮಾಡಿ ನನ್ನ ಸ್ವರೂಪವನ್ನು ಹೊಂದ ಲೆಂಬುದೇ ಶಿವನ ಸದಿಚ್ಛೆಯು. ಶಿವನು ಇಚ್ಛಿಸಿದ್ದೊಂದಾದರೆ ಆಗಿದ್ದೇ ಮತ್ತೊಂದು ಎನ್ನು ವಂತೆ ಇವತ್ತಿನ ಸ್ಥಿತಿಯಾಗಿದೆ.

ಅಜ್ಞಗಳಾದ ಉಳಿದ ಪ್ರಾಣಿಗಳು ಶಾಂತಮಯ ಜೀವನವನ್ನು ಸಾಗಿಸುತ್ತಿರುವಾಗ ಸರ್ವಶ್ರೇಷ್ಠನೆಂದು ಕರೆಯಿಸಿಕೊಂಡ ಮನುಷ್ಯನ ಜೀವನವು ಕೋಲಾಹಲಮಯ ವಾಗಿದೆ. ಎಲ್ಲಿ ನೋಡಿದಡಲ್ಲಿ ಅಶಾಂತಿಯ ವಾತಾವರಣ. ಅದಕ್ಕೆ ಕಾರಣರು ಮನುಷ್ಯರೇ. ಒಂದು ಗ್ರಾಮಕ್ಕೆ ಒಬ್ಬ ಸದ್ಗುರುಗಳು ದಯಮಾಡಿಸಿ ಆ ಗ್ರಾಮದ ಜನರಿಗೆ ಪ್ರತಿದಿವಸ ಶಿವಪೂಜಾ ವಿಧಾನವನ್ನು ತಿಳಿಸುತ್ತಾ ಸಾಯಂಕಾಲ ಧರ್ಮಪ್ರವಚನ ವನ್ನು ಮಾಡುತ್ತಿದ್ದರು. ಪ್ರತಿದಿವಸದ ಪ್ರವಚನದಲ್ಲಿ ಈಶ್ವರನ ಅಸ್ತಿತ್ವ ಮತ್ತು ಅವನ ಮಹಿಮೆಗಳ ಬಗ್ಗೆ ಬಹು ಸ್ವಾರಸ್ಯಪೂರ್ಣವಾಗಿ ಪ್ರತಿಪಾದಿಸುತ್ತಿದ್ದರು. ಎಷ್ಟೊಂದು ತಿಳಿಸಿ ಹೇಳಿದರೂ ಜನರಲ್ಲಿಯ ನಾಸ್ತಿಕ ಭಾವನೆ, ಸ್ವೈರಾಚಾರ ಪ್ರವೃತ್ತಿ ಕಡಿಮೆಯಾಗದೇ ಇದ್ದಾಗ, ಅವರು ಬಹಳಷ್ಟು ಬೇಜಾರು ಪಟ್ಟುಕೊಂಡಿದ್ದರು. ಹೀಗೆ ಒಂದು ದಿವಸ ನಿರಾಶರಾಗಿ ಕುಳಿತುಕೊಂಡಾಗ ಒಬ್ಬ ಗೃಹಸ್ಥನು ಬಂದು, ''ಗುರುಗಳೇ ನೀವು ದೇವರ ಬಗ್ಗೆ ಬಹಳಷ್ಟು ಏನೇನೋ ಹೇಳುತ್ತಿದ್ದೀರಿ. ಹಾಗಾದರೆ ಆ ದೇವರಾದರೂ ಎಲ್ಲಿ ಇದ್ದಾನೆ ?'' ಎಂದು ಪ್ರಶ್ನಿಸಿದನು. ಗುರುಗಳಿಗೆ ಹೇಳಿ ಹೇಳಿ ಸಾಕಾಗಿತ್ತು. ಆಗ ಅವರು ಸಿಟ್ಟಿಗೆದ್ದು– 'ಈಶ್ವರನು ಜೇಲಿನಲ್ಲಿದ್ದಾನೆ' ಎಂದು ನುಡಿದರು. ಆಗ ಆ ಮನುಷ್ಯನು, ''ಈಶ್ವರನು ಜೇಲಿನಲ್ಲಿ ಹೋಗಬೇಕಾದರೆ ಅದಾವ ತಪ್ಪನ್ನು ಮಾಡಿದ್ದಾನೆ ?'' ಎಂದು ಮರು ಪ್ರಶ್ನೆ ಮಾಡಿದನು. ಆಗ ಗುರುಗಳು, ''ಮನುಷ್ಯ ಪ್ರಾಣಿಯನ್ನು ಹುಟ್ಟಿಸಿ ಭಗವಂತನು ಬಹು ದೊಡ್ಡ ಅಪರಾಧವನ್ನು ಮಾಡಿದ್ದಾನೆ. ಅದರ ಫಲವಾಗಿ ಅವನಿಗೆ ಜೇಲು ಶಿಕ್ಷೆಯಾಗಿದೆ'' ಎಂದರು.

ದೇವರು ಮನುಷ್ಯನನ್ನು ಏಕೆ ಸೃಷ್ಟಿಸಿದ್ದಾನೆಂಬುದನ್ನೇ ಇಂದು ಮನುಷ್ಯನು ಮರೆತುಬಿಟ್ಟಿದ್ದಾನೆ. ಇವನು ಮನುಷ್ಯ ದೇಹವನ್ನು ಧರಿಸಿಕೊಂಡೂ ಪಶುಗಳಂತೆ ವರ್ತಿಸುತ್ತಿರುವನು. ಮನುಷ್ಯರೆಲ್ಲರೂ ಹೀಗೇ ಇರುತ್ತಾರೆಂದು ಹೇಳಲು ಬರುವುದಿಲ್ಲ, ಸಾವಿರಕ್ಕೊಬ್ಬ, ಲಕ್ಷಕ್ಕೊಬ್ಬ, ಕೋಟಿಗೊಬ್ಬರಾದರೂ ಉತ್ತಮನಾದ ಮನುಷ್ಯನು ಸಿಗಬಹುದು. ಆದರೆ ಹೆಚ್ಚು ಸಂಖ್ಯೆಯಲ್ಲಿ ಜನರು ಅವಿಚಾರಿಗಳೇ ಆಗಿರುತ್ತಾರೆ. ಆದಕಾರಣ ಪ್ರತಿಯೊಬ್ಬ ಮನುಷ್ಯನೂ ದೇವರ ಅಸ್ತಿತ್ವವನ್ನರಿತು ಆತನಲ್ಲಿ ಅನನ್ಯವಾದ ಶ್ರದ್ಧೆಯುಳ್ಳವನಾಗಬೇಕು. ಅಂತೆಯೇ ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು ಮಾಹೇಶ್ವರನ ನಿಷ್ಠಾಭಕ್ತಿಯನ್ನು ಜಗತ್ತಿಗೆ ತಿಳಿಸಿಕೊಡುತ್ತ ಅವನು ತನ್ನ ಇಷ್ಟಲಿಂಗದಲ್ಲಿ ನಿರಂತರ ಶಿವನ ಅಸ್ತಿತ್ವವನ್ನು ಭಾವಿಸಿ ಆವಾಹನ ವಿಸರ್ಜನೆಗಳಿಲ್ಲದೆ ಪೂಜಿಸುತ್ತಾನೆಂಬ ವಿಷಯವನ್ನು ತಿಳಿಯಪಡಿಸಿ, ಜಗತ್ತಿನ ಜನರಿಗೆ ವೀರಶೈವ ಪೂಜಾ ಪದ್ಧತಿಯನ್ನು ತಿಳುಹಿಸಿ ಕೊಟ್ಟಿದ್ದಾರೆಂಬ ವಿಷಯವನ್ನು ಪ್ರತಿಪಾದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೯ ಅಗಷ್ಟ್, ೧೯೬೧
(ಸ್ಥಾನ ನಾಗಪುರ)

■■

ಆಶೀರ್ವಚನ-೧

# ಅಷ್ಟಮೂರ್ತಿನಿರಸನಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹರ್ಷಿ ಅಗಸ್ತ್ಯನನ್ನು ಕುರಿತು ಆಹ್ವಾನನಿರಸನಸ್ಥಲದ ಬಗ್ಗೆ ತಿಳಿಯಪಡಿಸಿ ಸದ್ಯಃ ''ಅಷ್ಟಮೂರ್ತಿನಿರಸನಸ್ಥಲ''ವನ್ನು ಕುರಿತು–

ಯಥಾತ್ಮಶಿವಯೋರೈಕ್ಯಂ ನ ಮತಂ ಕರ್ಮಸಂಗಿನಃ ।
ತಥಾ ಶಿವಾತ್ ಪೃಥ್ವಿವ್ಯಾದೇರದ್ವೈತಮಪಿ ನೇಷ್ಯತೇ ॥

ಪೃಥಿವ್ಯಾದ್ಯಷ್ಟಮೂರ್ತಿತ್ವಮೀಶ್ವರಸ್ಯ ಪ್ರಕೀರ್ತಿತಮ್ ।
ತದಧಿಷ್ಠಾತೃಭಾವೇನ ನ ಸಾಕ್ಷಾದೇಕಭಾವತಃ ॥

(ಸಿ. ಶಿ. ೧೦; ೪೮–೪೯)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಸೂರ್ಯ, ಚಂದ್ರ ಮತ್ತು ಆತ್ಮ ಇವು ಶಿವನ ಅಷ್ಟಮೂರ್ತಿಗಳೆಂದು ಪ್ರಸಿದ್ಧಗಳಾಗಿವೆ. ಅಂದರೆ ಶಿವನು ಎಂಟು ರೂಪದಲ್ಲಿ ವ್ಯಕ್ತವಾಗಿದ್ದಾನೆಂಬ ತಾತ್ಪರ್ಯವು. ಅಂತೆಯೇ ನಮ್ಮ ದೇಶದಲ್ಲಿ ಪಂಚಮಹಾಭೂತಗಳ ಹಾಗೂ ಸೂರ್ಯಚಂದ್ರಾದಿಗಳ ಆರಾಧನೆ ಮಾಡುವ ಪದ್ಧತಿ ಇದೆ. ಪೃಥ್ವಿಯ ಮೇಲೆ ನಾವು ವಾಸಿಸುತ್ತೇವೆ. ನೀರು ನಮ್ಮ ಜೀವನದ ಆಧಾರವಾಗಿದೆ. ಅಗ್ನಿಯಂತೂ ನಮಗೆ ಬೇಕೇ ಬೇಕು. ವಾಯುವಿನಿಂದಲೇ ನಾವು ಉಸಿರಾಡಿಸುತ್ತಿರುತ್ತೇವೆ. ಆಕಾಶದಲ್ಲಿಯೇ ಎಲ್ಲರ ನಿವಾಸವಿದೆ. ಸೂರ್ಯಚಂದ್ರಾದಿಗಳು ಪ್ರಕಾಶವನ್ನೊದಗಿಸುತ್ತಾರೆ. ಶರೀರದಲ್ಲಿ ಆತ್ಮನ ಅಸ್ತಿತ್ವವಿದ್ದ ಕಾರಣ ಶರೀರದ ಸರ್ವ ವ್ಯವಹಾರವು ಸುರಳೀತವಾಗಿ ಸಾಗುತ್ತದೆ. ಹೀಗೆ ಪ್ರತಿಯೊಬ್ಬರ ಬದುಕಿಗೆ ಶಿವನ ಈ ಅಷ್ಟತನುಗಳು ಆಧಾರಗಳಾಗಿವೆ. ಆದಕಾರಣ ಇವುಗಳನ್ನು ಪರಮಾತ್ಮರೂಪಗಳನ್ನಾಗಿ ಭಾವಿಸಿ ಅನಾದಿಕಾಲದಿಂದ ಅವುಗಳನ್ನು ಪೂಜಿಸುತ್ತ ಬಂದಿದ್ದೇವೆ.

ಪ್ರಾರಂಭಿಕಾವಸ್ಥೆಯಲ್ಲಿ ಇದು ಸರಿಯೆಂಬುದಾಗಿ ತೋರಿದರೂ ಸಾಧಕನ ಕೆಲವು ಅವಸ್ಥೆಗಳಲ್ಲಿ ಇದು ಅಷ್ಟೊಂದು ಉಪಯುಕ್ತವಾಗಿ ಕಂಡುಬರುವುದಿಲ್ಲ. ಅಂತೆಯೇ ಪೂಜ್ಯಪಾದರು ಮಾಹೇಶ್ವರ ಸ್ಥಲದ ಸಾಧಕನಿಗೆ ಅಷ್ಟಮೂರ್ತಿ ಪೂಜೆಯು ಸಲ್ಲದೆಂಬುದಾಗಿ ತಿಳಿಸುತ್ತಲಿದ್ದಾರೆ. ಮಾಹೇಶ್ವರನಾದವನು ಇಷ್ಟಲಿಂಗದಲ್ಲಿಯೇ ನಿಷ್ಠೆಯಿಟ್ಟವನಾಗಿ ರೋಣದರಿಂದ ಅವನಿಗೆ ಇಷ್ಟಲಿಂಗ ಪೂಜೆಯೇ ಮುಖ್ಯವಾದದ್ದು. ಒಂದು ವೇಳೆ ಅವನೂ ಸಹ ಸಾಮಾನ್ಯ ಮನುಷ್ಯರಂತೆ ಪೃಥಿವ್ಯಾದಿ ಪಂಚ ಮಹಾಭೂತಗಳನ್ನು ಹಾಗೂ ಸೂರ್ಯಚಂದ್ರಾದಿಗಳನ್ನು ದೇವರೆಂಬುದಾಗಿ ತಿಳಿದು ಪೂಜಿಸಲು ಹೋದರೆ

ಅವನ ನಿಷ್ಠೆಗೆ ಭಂಗ ಬರುತ್ತದೆ. ಆದ್ದರಿಂದ ಪೃಥಿವ್ಯಾದಿಗಳೇ ಸಾಕ್ಷಾತ್ ಈಶ್ವರನಲ್ಲ, ಆದರೆ ಈಶ್ವರನು ಅವುಗಳಿಗೆ ಅಧಿಷ್ಠಾನವಾಗಿದ್ದಾನೆ ಎಂಬುದಾಗಿ ತಿಳಿದುಕೊಂಡು ತನ್ನ ನಿಷ್ಠೆಯನ್ನು ಇಷ್ಟಲಿಂಗದಲ್ಲಿ ಈತನು ಬೆಳೆಸಿಕೊಳ್ಳಬೇಕು.

ಇದೇ ವಿಷಯವನ್ನು ಇನ್ನೂ ಸ್ಪಷ್ಟಗೊಳಿಸುತ್ತ ಶ್ರೀ ರೇಣುಕ ಭಗವತ್ಪಾದರು–

ಪೃಥ್ವ್ಯಾದಿಕಮಿದಂ ಸರ್ವಂ ಕಾರ್ಯಂ ಕರ್ತಾ ಮಹೇಶ್ವರಃ ।
ನೈತತ್ ಸಾಕ್ಷಾನ್ಮಹೇಶೋಽಯಂ ಕುಲಾಲೋ ಮೃತ್ತಿಕಾ ಯಥಾ ॥

(ಸಿ. ಶಿ. ೧೦–೫೦)

ಎಂಬುದಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ–ಸೃಷ್ಟಿಕರ್ತನಾದ ಶಿವ ಹಾಗೂ ಸೃಷ್ಟಿ ಇವೆರಡೂ ಒಂದೇ ಅಲ್ಲ, ಇವುಗಳಲ್ಲಿ ಕಾರ್ಯ, ಕಾರಣ ರೂಪವಾದ ಭೇದವಿದೆ. ಪೃಥಿವ್ಯಾದಿ ಭೂತಾದಿಗಳು ಕಾರ್ಯವಾದರೆ ಮಹೇಶ್ವರನು ಕರ್ತೃವಾಗಿ ದ್ದಾನೆ. ಲೋಕದಲ್ಲಿಯೂ ಕೂಡ ಕಾರ್ಯ ಮತ್ತು ಕರ್ತೃವಿನಲ್ಲಿ ಭೇದವು ಕಂಡು ಬರುತ್ತದೆ. ಮಡಿಕೆಯು ಕಾರ್ಯವಾದರೆ ಕುಲಾಲನು ಕರ್ತೃವಾಗಿದ್ದಾನೆ. ಅವರಿಬ್ಬರಲ್ಲಿ ಅಭೇದವು ಸಂಭವಿಸದಿರುವಂತೆ ಶಿವನಿಗೂ ಹಾಗೂ ಅವನ ಅಷ್ಟಮೂರ್ತಿಗಳಿಗೂ ಅಭೇದವಿರಲಾರದು. ಈಶ್ವರನು ಅವೆಲ್ಲವುಗಳಿಗೆ ಅಧಿಷ್ಠಾನವಾಗಿರೋಣದರಿಂದ ಅವುಗಳು ಪೂಜ್ಯಗಳಾಗಿ ತೋರಿದರೂ ಅವುಗಳೇ ಸಾಕ್ಷಾತ್ ದೇವರುಗಳಲ್ಲ. ಈಶ್ವರನು ಪ್ರತ್ಯಕ್ಷವಾಗಿ ಅನುಭವಗೋಚರವಾಗದೇ ಇದ್ದಾಗ ಅವನು ಸೃಷ್ಟಿಸಿದ ಈ ಕಾರ್ಯ ಪ್ರಪಂಚವನ್ನು ಕಂಡು ಅನುಮಾನ ಪ್ರಮಾಣದಿಂದ ಅವನ ಅಸ್ತಿತ್ವವನ್ನು ಊಹಿಸಲು ಬರುತ್ತದೆ. ದೂರದಲ್ಲಿ ತೋರುವ ಹೊಗೆಯನ್ನು ನೋಡಿ ''ಯತ್ರ ಯತ್ರ ಧೂಮಃ ತತ್ರ ತತ್ರವಹ್ನಿಃ'' ಎಂಬ ವ್ಯಾಪ್ತಿಯಿಂದ ಕಾಣದಿರುವ ಅಗ್ನಿಯನ್ನು ಊಹಿಸುತ್ತೇವೆ. ಇಲ್ಲಿ ಅಗ್ನಿ ಯಿಂದಲೇ ಹೊಗೆಯು ಜನಿಸುತ್ತದೆ. ಆದ್ದರಿಂದ ಹೊಗೆ ಅಗ್ನಿಗಳಲ್ಲಿ ಜನ್ಯ–ಜನಕ ಭಾವ ಸಂಬಂಧವಿದೆ. ಜನ್ಯವಾದ ಹೊಗೆಯು ಕಂಡಾಗ ಅದರ ಜನಕವಾದ ಅಗ್ನಿಯ ಅಸ್ತಿತ್ವವು ಅಲ್ಲಿ ಇದೆಯೆಂಬ ಅನುಮಾನ ಜ್ಞಾನವು ಉಂಟಾಗುತ್ತದೆ. ಅದೇ ಪ್ರಕಾರ ಈ ವಿಶಾಲ ವಾದ ಸೃಷ್ಟಿಯು ಈಶ್ವರನ ಹೊರತಾಗಿ ಬೇರೆ ಯಾರಿಂದಲೂ ಉತ್ಪನ್ನವಾಗಲು ಸಾಧ್ಯವಿಲ್ಲದ್ದರಿಂದ ಈ ಪ್ರಪಂಚವನ್ನು ನೋಡಿ ಈಶ್ವರನ ಅನುಮಾನ ಮಾಡಬೇಕಾಗು ತ್ತದೆ. ಪ್ರಪಂಚದ ಯಾವ ಜೀವಿಗಳಿಂದಲೂ ಪಂಚಮಹಾಭೂತಾದಿಗಳ ನಿರ್ಮಾಣವು ಸಾಧ್ಯವಿಲ್ಲ, ಬಹಳವಾದರೆ ಈ ಜೀವಿಗಳು ಮಣ್ಣು, ಕಲ್ಲು, ನೀರುಗಳನ್ನು ತೆಗೆದುಕೊಂಡು ಮನೆ, ಮಠ ಮಂದಿರಾದಿಗಳನ್ನು ನಿರ್ಮಿಸಬಹುದೇ ವಿನಾ ಮಣ್ಣು ಕಲ್ಲುಗಳನ್ನು ನಿರ್ಮಿಸಲಾರರು. ಅಂತೆಯೇ– ''ಕಲೆಯನ್ನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೇ ?'' ಎಂದಿದ್ದಾನೆ ಕನ್ನಡದ ಮಹಾಕವಿ ಕುವೆಂಪು. ಆದ್ದರಿಂದ ಈ ವಿಶಾಲವಾದ ಸೃಷ್ಟಿಯ ಕರ್ತೃವು ಶಿವನಲ್ಲದೆ ಬೇರೊಬ್ಬನಲ್ಲ. ಹೀಗೆ ಈ ಸೃಷ್ಟಿಯು ಶಿವನ ಕಾರ್ಯವೇ ವಿನಾ ಸಾಕ್ಷಾತ್ ಶಿವಸ್ವರೂಪವಲ್ಲ ಎಂಬ ಭೇದಬುದ್ಧಿಯನ್ನು ಮಾಹೇಶ್ವರನು ತಾಳಿರಬೇಕು. ಅಂದಾಗಲೇ ಅವನ ಲಿಂಗ ನಿಷ್ಠೆಯು ಸ್ಥಿರಗೊಳ್ಳುವುದು. ಪೃಥಿವ್ಯಾದ್ಯಷ್ಟತನುಗಳನ್ನು ಶಿವನೆಂದು ಭಾವಿಸಿದರೆ ಅವೆಲ್ಲವುಗಳನ್ನು ಪೂಜೆಮಾಡಬೇಕಾಗುತ್ತದೆ. ಹಾಗೆ ಎಲ್ಲ ವನ್ನೂ ಪೂಜಿಸುತ್ತ ಹೋದರೆ ಲಿಂಗನಿಷ್ಠೆಗೆ ವ್ಯತ್ಯಯ ಬಂದೊದಗುತ್ತದೆ. ಅಂತೆಯೇ

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಾಹೇಶ್ವರ ಸ್ಥಲದ ಸಾಧಕನನ್ನುದ್ದೇಶಿಸಿ ಅಷ್ಟಮೂರ್ತಿ ನಿರಸನವನ್ನು ಪ್ರತಿಪಾದಿಸಿದ್ದಾರೆ.

ಪೂಜ್ಯಪಾದರು ಪರಮಾತ್ಮ ಹಾಗೂ ಪ್ರಪಂಚಗಳ ಸ್ವರೂಪವನ್ನು ವಿವರಿಸುತ್ತ ಅವುಗಳಲ್ಲಿಯ ಸಂಬಂಧವನ್ನು–

ಪೃಥಿವ್ಯಾದ್ಯಾತ್ಮಪರ್ಯಂತಪ್ರಪಂಚೋಹ್ಯಷ್ಟಧಾ ಸ್ಥಿತಃ ।
ತನುರೀಶಸ್ಯ ಚಾತ್ಮಾಯಂ ಸರ್ವತತ್ತ್ವನಿಯಾಮಕಃ ॥

ಶರೀರಭೂತಾದೇತಸ್ಮಾತ್ ಪ್ರಪಂಚಾತ್ ಪರಮೇಷ್ಠಿನಃ ।
ಆತ್ಮಭೂತಸ್ಯ ದೇವಸ್ಯ ನಾಭೇದೋ ನ ಪೃಥಕ್ ಸ್ಥಿತಿಃ ॥

(ಸಿ. ಶಿ. ೧೦; ೫೧–೫೨)

ಈ ರೀತಿಯಾಗಿ ತಿಳಿಯಪಡಿಸಿದ್ದಾರೆ. ಪೃಥಿವ್ಯಾದ್ಯಷ್ಟತತ್ತ್ವ ಮತ್ತು ಈಶ್ವರನಲ್ಲಿಯ ಸಂಬಂಧವು ಅತ್ಯಂತ ಅಭೇದ ರೂಪವಾದದ್ದೂ ಅಲ್ಲ ಹಾಗೂ ಅತ್ಯಂತ ಭೇದರೂಪ ವಾದದ್ದೂ ಸಹ ಅಲ್ಲ. ಆದರೆ ಶರೀರ ಆತ್ಮಗಳಂತೆ ಭೇದಾಭೇದ ರೂಪವಾದದ್ದು.

ಶರೀರವು ಆತ್ಮವಲ್ಲ, ಆತ್ಮವು ಶರೀರವಲ್ಲ. ಆದರೆ ಶರೀರವಿಲ್ಲದೆ ಆತ್ಮನ ಪ್ರಾಕಟ್ಯ ವಾಗದು. ಜೀವಾತ್ಮನ ಎಲ್ಲ ವ್ಯವಹಾರಗಳೂ ಶರೀರ ಮುಖಾಂತರವೇ ನಡೆಯುತ್ತವೆ. ಹೀಗೆ ಪಂಚಭೂತಾದಿಗಳು ಪರಮಾತ್ಮನ ಶರೀರಗಳಾಗಿವೆ. ದೇಹದಲ್ಲಿಯ ಆತ್ಮದಂತೆ ಪರಮಾತ್ಮನು ಪ್ರಪಂಚದಲ್ಲಿ ವ್ಯಾಪ್ತನಾಗಿದ್ದಾನೆ. ಈ ರೀತಿಯಾಗಿ ಪರಮಾತ್ಮ ಹಾಗೂ ಪ್ರಪಂಚದ ಮಧ್ಯದಲ್ಲಿ ಭೇದಾಭೇದ ಸಂಬಂಧವನ್ನು ತಿಳಿದುಕೊಂಡು ಪ್ರಪಂಚವು ಸಾಕ್ಷಾತ್ ಪರಮಾತ್ಮನಲ್ಲ ಎಂಬ ವಿಚಾರವನ್ನು ಮಾಹೇಶ್ವರನು ಸ್ಥಿರಗೊಳಿಸಿಕೊಳ್ಳಬೇಕು.

ಪರಮಾತ್ಮನ ಅಷ್ಟಮೂರ್ತಿಗಳಲ್ಲಿ ಪೃಥಿವ್ಯಾದಿ ಪಂಚಮಹಾಭೂತಗಳು ಸೂರ್ಯ ಮತ್ತು ಚಂದ್ರ ಏಳು ತನುಗಳು ಪರಮಾತ್ಮನಿಗಿಂತಲೂ ಭಿನ್ನವಾಗಿರಬಹುದು. ಆದರೆ ಆತ್ಮವು ಶಿವನ ಅಂಶವಾಗಿರೋಣದರಿಂದ ಅದು ಹೇಗೆ ಭಿನ್ನವಾಗಿರಲು ಸಾಧ್ಯ ? ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯಪಾದರು–

ಅಚೇತನತ್ವಾತ್ ಪೃಥಿವ್ಯಾದೇರಜ್ಞತ್ವಾದಾತ್ಮನಸ್ತಥಾ ।
ಸರ್ವಜ್ಞಸ್ಯ ಮಹೇಶಸ್ಯ ನೈಕರೂಪತ್ವಮಿಷ್ಯತೇ ॥

(ಸಿ. ಶಿ. ೧೦–೫೩)

ಎಂಬುದಾಗಿ ಉತ್ತರಿಸಿದ್ದಾರೆ. ಪೃಥಿವ್ಯಾದಿಗಳು ಅಚೇತನಗಳಾಗಿರುವಂತೆ ಜೀವಾತ್ಮನು ಅಜ್ಞನಾಗಿದ್ದಾನೆ, ಅರ್ಥಾತ್ ಅಲ್ಪಜ್ಞನಾಗಿದ್ದಾನೆ. ಇವೆಲ್ಲವುಗಳಿಗಿಂತ ವಿಲಕ್ಷಣನಾದ ಈಶ್ವರನು ಸರ್ವಜ್ಞನಾಗಿದ್ದಾನೆ. ಜಡಗಳಾದ ಪೃಥಿವ್ಯಾದಿಗಳೊಂದಿಗೆ ಸರ್ವಜ್ಞನಾದ ಶಿವನ ಏಕರೂಪತ್ವವು ಸಂಭವಿಸದಿರುವಂತೆ ಅಲ್ಪಜ್ಞನಾದ ಜೀವಾತ್ಮನಿಗೂ ಹಾಗೂ ಸರ್ವಜ್ಞನಾದ ಪರಮಾತ್ಮನಿಗೂ ಏಕರೂಪತ್ವವು ಸಂಭವಿಸಲಾರದು.

ಚೇತನ ಅಚೇತನಗಳಲ್ಲಿ ಸರ್ವಜ್ಞ ಅಲ್ಪಜ್ಞರಲ್ಲಿ ಸಾಮರಸ್ಯವು ಸಂಭವಿಸುವುದಿಲ್ಲ. ಸಮಾನತೆಯಿದ್ದಾಗಲೇ ಸಾಮರಸ್ಯವು ಸಂಭವಿಸುವುದು. ನೀರಿನಲ್ಲಿ ನೀರು, ಹಾಲಿನಲ್ಲಿ

ಹಾಲು ಸಮರಸಗಳಾಗುವವು. ಆದರೆ ಹಾಲಿನಲ್ಲಿ ನೀರು ತೋರಿಕೆಗೆ ಸಮರಸವಾಗಿ ಕಂಡರೂ ಹಂಸಪಕ್ಷಿಯು ತನ್ನ ಚುಂಚನ್ನು ಆ ಜಲಮಿಶ್ರಿತ ಹಾಲಿನಲ್ಲಿಟ್ಟಾಗ ಹಾಲು ನೀರುಗಳು ಪುನಃ ಬೇರ್ಪಡುತ್ತವೆ. ಅಂತೆಯೇ ಲೋಕದಲ್ಲಿ 'ಹಂಸಕ್ಷೀರ ನ್ಯಾಯವು' ಪ್ರಸಿದ್ಧವಾಗಿದೆ. ಹೀಗೆ ಭಿನ್ನಧರ್ಮೀಯಗಳಾದ ಎರಡು ವಸ್ತುಗಳು ಸಮರಸವಾಗದಿರುವಂತೆ ಪೃಥಿವ್ಯಾದಿಗಳು ಜಡಗಳಾದ್ದರಿಂದ ಅವುಗಳು ಪರಮಾತ್ಮನ ರೂಪಗಳಾಗಲಾರವು. ಇನ್ನು ಆತ್ಮನು ಚೇತನನಾಗಿದ್ದರೂ ಅವನು ಅಲ್ಪಜ್ಞನಾಗಿದ್ದಾನೆ, ಪರಮಾತ್ಮನಾದರೋ ಸರ್ವಜ್ಞನಾಗಿರುವನು. ಹೀಗೆ ಜೀವಾತ್ಮ–ಪರಮಾತ್ಮರಲ್ಲಿಯೂ ಅಲ್ಪಜ್ಞತ್ವ ಸರ್ವಜ್ಞತ್ವಗಳೆಂಬ ತಾರತಮ್ಯ ಭಾವಗಳಿರುವುದರಿಂದ ಅವರೀರ್ವರಲ್ಲಿ ಸಾಮರಸ್ಯವು ಸಂಭವಿಸದು. ಪರಮಾತ್ಮನಲ್ಲಿ ಜೀವಾತ್ಮನು ಸಮರಸನಾಗಬೇಕಾದರೆ ಆತನು ತನ್ನ ಅಲ್ಪಜ್ಞತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ.

''ದ್ವಾಸುಪರ್ಣಾ ಸಯುಜಾ ಸಖಾಯಾ'' ಎಂಬ ಮುಂಡಕೋಪನಿಷತ್ತಿನ ಈ ಮಂತ್ರದಲ್ಲಿ ಜೀವಾತ್ಮ ಹಾಗೂ ಪರಮಾತ್ಮರ ಭೇದವನ್ನೇ ಪ್ರತಿಪಾದಿಸಿ ಜೀವಾತ್ಮನನ್ನು ಕರ್ಮಫಲದ ಭೋಕ್ತೃವನ್ನಾಗಿಯೂ ಪರಮಾತ್ಮನನ್ನು ಅದರ ಸಾಕ್ಷಿಯನ್ನಾಗಿಯೂ ಪ್ರತಿಪಾದಿಸಲ್ಪಟ್ಟಿದೆ. ''ಯತ್ರ ಜೀವಃ ತತ್ರ ಶಿವಃ'' ಎಂಬ ಉಕ್ತಿಗನುಸಾರವಾಗಿ ಪ್ರತಿಯೊಬ್ಬ ಜೀವಾತ್ಮನ ಹೃದಯದಲ್ಲಿ ಪರಮಾತ್ಮನು ಸಾಕ್ಷೀರೂಪವಾಗಿ ಕುಳಿತಿದ್ದಾನೆ. ಹಾಗೂ ಆತನು ಸರ್ವಜ್ಞನಾಗಿದ್ದರಿಂದಲೇ ಎಲ್ಲ ಜೀವಿಗಳ ಅಂತಸ್ಥವನ್ನು ಅರಿತವನಾಗಿ ಅವರವರ ಕರ್ಮ ಫಲಗಳನ್ನು ಅವರವರಿಗೆ ದಯಪಾಲಿಸುತ್ತಾನೆ. ಹೀಗೆ ಜೀವಾತ್ಮ ಪರಮಾತ್ಮರಲ್ಲಿ ಭೇದವಿರುವುದರಿಂದ ಅವರೀರ್ವರಲ್ಲಿ ಸಮರಸತೆ ಸಲ್ಲದು. ಜೀವಾತ್ಮನು ತನ್ನ ಅಲ್ಪಜ್ಞತ್ವ ಮತ್ತು ಅಲ್ಪಕರ್ತೃತ್ವವನ್ನು ಕಳೆದುಕೊಂಡಾಗ ಅವನು ಪರಮಾತ್ಮ ಸ್ವರೂಪನಾಗುವನೇನೋ ನಿಜ. ಆದರೆ ಮಾಹೇಶ್ವರಸ್ಥಲದ ಸಾಧಕನಿಗೆ ಆ ಸ್ಥಿತಿಯು ಇನ್ನೂ ಬಹುದೂರದಲ್ಲಿದೆ. ಇವನಿನ್ನೂ ಎರಡನೇ ಮೆಟ್ಟಲಲ್ಲಿದ್ದಾನೆ. ಇನ್ನೂ ನಾಲ್ಕು ಮೆಟ್ಟಲುಗಳನ್ನೇರಿದಾಗ ಆ ಸ್ಥಿತಿಯನ್ನು ಪಡೆಯಬಲ್ಲನು. ಅಂತೆಯೇ ಪೂಜ್ಯಪಾದರು ಪೃಥಿವ್ಯಾದಿಗಳು ಪರಮಾತ್ಮನಿಗಿಂತಲೂ ಭಿನ್ನವಿರುವಂತೆ ಜೀವಾತ್ಮನೂ ಸಹ ಪರಮಾತ್ಮನಿ ಗಿಂತಲೂ ಭಿನ್ನನಾಗಿದ್ದಾನೆಂಬ ವಿಷಯವನ್ನು ತಿಳಿಯಪಡಿಸಿದ್ದಾರೆ.

ಪೂಜ್ಯಪಾದರು ಪುನಃ–

ಇತಿ ಯಶ್ಚಿಂತಯೇನ್ನಿತ್ಯಂ ಪೃಥ್ವ್ಯಾದೇರಷ್ಟಮೂರ್ತಿತಃ ।
ವಿಲಕ್ಷಣಂ ಮಹಾದೇವಂ ಸೋಽಷ್ಟಮೂರ್ತಿನಿರಾಸಕಃ ॥

(ಸಿ. ಶಿ. ೧೦–೫೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಆತ್ಮರೆಂಬ ಈ ಅಷ್ಟಮೂರ್ತಿಗಳಿಗಿಂತಲೂ ಪರಮಾತ್ಮನು ಭಿನ್ನವಾಗಿದ್ದಾನೆಂಬುದಾಗಿ ನಿರಂತರವಾಗಿ ಚಿಂತಿಸುವ ಈ ಮಾಹೇಶ್ವರನೇ ಅಷ್ಟಮೂರ್ತಿ ನಿರಾಸಕನೆಂದು ಕರೆಯಲ್ಪಡುತ್ತಾನೆ.

ಹಸ್ತಪೀಠದಲ್ಲಿಯ ಇಷ್ಟಲಿಂಗವನ್ನು ಎಲ್ಲಿಯವರೆಗೆ ಶಿವರೂಪವೆಂದು ದೃಢವಾಗಿ ತಿಳಿದುಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಬ್ರಹ್ಮಾಂಡವೆಲ್ಲವನ್ನು ಶಿವರೂಪವನ್ನಾಗಿ ತಿಳಿದುಕೊಳ್ಳುವುದು ಅದ್ಹೇಗೆ ಸಾಧ್ಯ? ಇಷ್ಟಲಿಂಗದಲ್ಲಿ ದೇವರು ಕಾಣದವರಿಗೆ ಬ್ರಹ್ಮಾಂಡದಲ್ಲಿಯೂ ಕಾಣಲಾರ. ಅಂತೆಯೇ ಜಗದ್ಗುರು ರೇಣುಕ ಭಗವತ್ಪಾದರು ಇಷ್ಟಲಿಂಗದಲ್ಲಿಯೇ ಸಾಧಕನ ನಿಷ್ಠೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ದೃಢಪಡಿಸುವುದಕ್ಕಾಗಿ ಈ ಅಷ್ಟಮೂರ್ತಿನಿರಸನಸ್ಥಲವನ್ನು ಪ್ರತಿಪಾದಿಸಿದ್ದಾರೆ ಎಂಬಲ್ಲಿಗೆ ಇಂದಿನ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೦ ಅಗಷ್ಟ್, ೧೯೯೧
(ಸ್ಥಾನ ನಾಗಪುರ)



ಆಶೀರ್ವಚನ-೧

# ಸರ್ವಗತ್ವನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಶ್ರೀ ಸಿದ್ಧಾಂತ ಶಿಖಾಮಣಿಯ ಮಾಹೇಶ್ವರ ಸ್ಥಲವನ್ನು ಪ್ರತಿಪಾದಿಸುತ್ತ ಇಂದು ಅದರಲ್ಲಿಯ ಸರ್ವಗತ್ವನಿರಸನಸ್ಥಲದ ಬಗ್ಗೆ–

ಸರ್ವಗತ್ವೇ ಮಹೇಶಸ್ಯ ಸರ್ವತ್ರಾರಾಧನಂ ಭವೇತ್ ।
ನ ಲಿಂಗಮಾತ್ರೇ ತನ್ನಿಷ್ಠೋ ನ ಶಿವಂ ಸರ್ವಗಂ ಸ್ಮರೇತ್ ॥

ಸರ್ವಗೋऽಪಿ ಸ್ಥಿತಃ ಶಂಭುಃ ಸ್ವಾಧಾರೇ ಹಿ ವಿಶೇಷತಃ ।
ತಸ್ಮಾದನ್ಯತ್ರ ವಿಮುಖಃ ಸ್ವೇಷ್ಟಲಿಂಗೇ ಯಜೇಚ್ಛಿವಮ್ ॥

(ಸಿ. ಶಿ. ೧೦ ; ೫೫–೫೬)

ಎಂಬುದಾಗಿ ಉಪದೇಶಿಸಿದ್ದಾರೆ. ಸಾಮಾನ್ಯವಾಗಿ ಈಶ್ವರನು ಸರ್ವತ್ರ ವ್ಯಾಪಕನಾಗಿದ್ದರೂ ಅವನ ಆರಾಧನೆಯನ್ನು ಮಾತ್ರ ಒಂದೇ ಸ್ಥಾನದಲ್ಲಿ ಮಾಡಬೇಕೇ ವಿನಾ ಎಲ್ಲಕಡೆ ಮಾಡುತ್ತ ಹೋಗಬಾರದೆಂದು ತಿಳಿಸುವ ಸ್ಥಲವೇ ಸರ್ವಗತ್ವನಿರಸನಸ್ಥಲವು. ''ಲಿಂಗ ಮಧ್ಯೇ ಜಗತ್ಸರ್ವಮ್'' ''ಸರ್ವಂ ಖಲ್ವಿದಂ ಬ್ರಹ್ಮ'' ಮುಂತಾದ ಪ್ರಮಾಣ ವಾಕ್ಯಗಳಲ್ಲಿ ಪರಶಿವನ ವ್ಯಾಪಕ ಸ್ವರೂಪವನ್ನು ತಿಳಿಯಪಡಿಸಲಾಗಿದೆ. ಅಂತೆಯೇ ''ದೇವರು ಎಲ್ಲಿ ಇದ್ದಾನೆ ?'' ಎಂಬ ಪ್ರಶ್ನೆಗೆ 'ದೇವರು ಎಲ್ಲಿತಾನೇ ಇಲ್ಲ ?' ಎಂಬ ಪ್ರತಿ ಪ್ರಶ್ನೆಯೇ ಅದರ ಉತ್ತರವಾಗಿದೆ. ಅಂದರೆ ಈಶ್ವರನು ಅಣು ರೇಣು ತೃಣ ಕಾಷ್ಠಗಳಲ್ಲಿ ವ್ಯಾಪ್ತನಾಗಿದ್ದಾನೆ. ಹೀಗೆ ಆತನು ಸರ್ವವ್ಯಾಪಕನಾಗಿದ್ದರೂ ಅವನ ಆರಾಧನೆಯನ್ನು ಸರ್ವತ್ರ ಮಾಡುವುದು ಯೋಗ್ಯವಲ್ಲ. ಆತನ ಅಭಿವ್ಯಕ್ತಿಸ್ಥಾನವಾದ ಇಷ್ಟಲಿಂಗದಲ್ಲಿಯೇ ಆತನನ್ನು ಆರಾಧಿಸಬೇಕು. ಗೋವಿನ ಶರೀರದ ಪ್ರತಿಯೊಂದು ರಕ್ತಕಣದಲ್ಲಿ ಹಾಲಿನ ಅಂಶವಿದ್ದರೂ ಆ ಹಾಲು ಎಲ್ಲ ಕಡೆಯಿಂದಲೂ ಅಭಿವ್ಯಕ್ತವಾಗದೆ ಕೇವಲ ಕೆಚ್ಚಲಿನಿಂದಲೇ ಅಭಿವ್ಯಕ್ತವಾಗುವಂತೆ,ಸರ್ವತ್ರವ್ಯಾಪಕನಾದ ಶಿವನ ಮುಖ್ಯ ಅಭಿವ್ಯಕ್ತಿಸ್ಥಾನವೇ ಇಷ್ಟಲಿಂಗವಾದ್ದರಿಂದ ಮಾಹೇಶ್ವರನಾದವನು ಇಷ್ಟಲಿಂಗದಲ್ಲಿಯೇ ಶಿವನನ್ನು ಆರಾಧಿಸಬೇಕು.

ಇದೇ ವಿಷಯವನ್ನೇ ಇನ್ನಷ್ಟು ಸ್ಪಷ್ಟಗೊಳಿಸಲೋಸುಗ ಪೂಜ್ಯಪಾದರು–

ಶಿವಃಸರ್ವಗತಶ್ಚಾಪಿ ಸ್ವಾಧಾರೇ ವ್ಯಜ್ಯತೇ ಭೃಶಮ್ ।
ಶಮೀಗರ್ಭೇ ಯಥಾವಹ್ನಿರ್ವಿಶೇಷೇಣ ವಿಭಾವ್ಯತೇ ॥

ಸರ್ವಗತ್ವಂ ಮಹೇಶಸ್ಯ ಸರ್ವಶಾಸ್ತ್ರವಿನಿಶ್ಚಿತಮ್ ।
ತಥಾಪ್ಯಾಶ್ರಯಲಿಂಗಾದೌ ಪೂಜಾರ್ಥಮಧಿಕಾಸ್ಥಿತಿಃ ॥

(ಸಿ. ಶಿ. ೧೦ ; ೫೭-೫೮)

ಎಂಬುದಾಗಿ ಉಪದೇಶಿಸಿದ್ದಾರೆ. ಶಿವನು ''ಆಕಾಶವತ್ ಸರ್ವಗತಶ್ಚ ನಿತ್ಯಃ''. ಮುಂತಾದ ಶಾಸ್ತ್ರಪ್ರಮಾಣಗಳಿಂದ ಪರಮಾತ್ಮನು ಸರ್ವವ್ಯಾಪಕನೆಂಬುದಾಗಿ ಸಿದ್ಧವಾದರೂ ಆತನ ವಿಶೇಷ ಆಧಾರಸ್ಥಾನವಾದ ಇಷ್ಟಲಿಂಗದಲ್ಲಿಯೇ ಆತನನ್ನು ಆರಾಧಿಸುವುದು ಹೆಚ್ಚು ಸೂಕ್ತವಾದದ್ದು. ಎಲ್ಲ ಕಟ್ಟಿಗೆಗಳಲ್ಲಿ ಅಗ್ನಿಯ ಅಸ್ತಿತ್ವವಿದ್ದರೂ ಶಮಿ ವೃಕ್ಷದಲ್ಲಿ ಅದು ವಿಶೇಷವಾಗಿರುತ್ತದೆ. ಅಂತೆಯೇ ಪ್ರಾಚೀನಕಾಲದಲ್ಲಿ ಅರಣಿಮಂಥನದಿಂದ ಅಗ್ನಿಯನ್ನು ಪ್ರಕಟಿಸುವಾಗ ಶಮಿ ವೃಕ್ಷದ ಅರಣಿಗಳನ್ನೇ ಉಪಯೋಗಿಸುತ್ತಿದ್ದರು. ಶಮಿ ವೃಕ್ಷವು ಅಗ್ನಿಯ ವಿಶೇಷ ಪ್ರಾಕಟ್ಯ ಸ್ಥಾನವಾಗಿರುವಂತೆ, ಇಷ್ಟಲಿಂಗವು ಶಿವನ ವಿಶೇಷ ಪ್ರಾಕಟ್ಯ ಸ್ಥಾನವಾಗಿದೆ. ಅಂತೆಯೇ ಮಾಹೇಶ್ವರನು ತನ್ನ ಇಷ್ಟಲಿಂಗದಲ್ಲಿಯೇ ನಿಷ್ಠೆಯನ್ನು ಬೆಳೆಸಿಕೊಂಡು ಅದನ್ನೇ ಪೂಜಿಸಬೇಕು.

ನಿರ್ಗುಣ ನಿರಾಕಾರನಾದ ಶಿವನನ್ನು ಪೂಜಿಸುವ ಅಭ್ಯಾಸವು ಪ್ರಾಯಃ ಎಲ್ಲರ ಮನಸ್ಸಿಗೂ ಇರುವುದಿಲ್ಲ. ಮನಸ್ಸಿನ ಎಲ್ಲ ವ್ಯವಹಾರಗಳು ಸಾಕಾರವನ್ನೇ ಅವಲಂಬಿಸಿರುತ್ತವೆ. ಆದ್ದರಿಂದ ಬಹಿರ್ಮುಖವಾಗಿ ಹತ್ತು ಹಲವು ಕಡೆ ಹರಿದು ಹೋಗುತ್ತಿರುವ ಮನಸ್ಸನ್ನು ಒಂದೇ ಕಡೆ ಕೇಂದ್ರೀಕೃತಗೊಳಿಸುವುದಕ್ಕಾಗಿ ವೀರಶೈವ ಆಚಾರ್ಯರು ಸಾಧಕನ ಹಸ್ತಪೀಠದಲ್ಲಿ ಇಷ್ಟಲಿಂಗವನ್ನು ದಯಪಾಲಿಸಿದ್ದಾರೆ. ಮನೋವೃತ್ತಿಯನ್ನು ಮೊದಲು ಬಾಹ್ಯದ ಇಷ್ಟಲಿಂಗದಲ್ಲಿ ಸ್ಥಿರಗೊಳಿಸಿ ನಂತರ ಆ ಮನೋವೃತ್ತಿಯನ್ನೇ ಅಂತರ್ಮುಖಗೊಳಿಸಿಕೊಂಡು, ಅಂತರಂಗದಲ್ಲಿಯ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಪೂಜೆಯನ್ನು ಸಾಧಕನು ಮಾಡಬೇಕಾಗುತ್ತದೆ. ತನ್ನ ಚಿದ್ರೂಪದ ಚಿಂತನೆಯೇ ಪ್ರಾಣಲಿಂಗಾರ್ಚನೆಯಾದರೆ ಶಿವೋऽಹಂ ಭಾವನೆಯಿಂದ ತನ್ನ ಆತ್ಮವನ್ನೇ ಶಿವಸ್ವರೂಪವನ್ನಾಗಿ ಭಾವಿಸಿ ಅನುಸಂಧಾನಿಸುವುದೇ ಭಾವಲಿಂಗಾರ್ಚನೆಯು. ಮನೋವೃತ್ತಿಯು ಅಂತರ್ಮುಖವಾಗದ ಹೊರತು ಪ್ರಾಣಲಿಂಗ-ಭಾವಲಿಂಗಾರ್ಚನೆಗಳು ಸಂಭವಿಸಲಾರವು. ಅಂತೆಯೇ ಈ ಮನೋವೃತ್ತಿಯನ್ನು ಮೊದಲು ಬಾಹ್ಯದಲ್ಲಿ ಸ್ಥಿರಗೊಳಿಸಿ ನಂತರ ಅಂತರಂಗದಲ್ಲಿ ತೆಗೆದುಕೊಂಡು ಹೋಗಬೇಕು. ನಾವು ಕನ್ನಡಿಯನ್ನು ನೋಡಿದಾಗ ನಮ್ಮ ದೃಷ್ಟಿ ಶಕ್ತಿಯು ಅದಕ್ಕೆ ಪ್ರತಿಫಲಿತವಾಗಿ ಪರಾವರ್ತನೆಗೊಂಡು ನಮ್ಮ ಮುಖವನ್ನೇ ಗ್ರಹಿಸುವಂತೆ ಹಸ್ತಪೀಠದ ಇಷ್ಟಲಿಂಗದಲ್ಲಿ ದೃಷ್ಟಿಯನ್ನು ಸ್ಥಿರಗೊಳಿಸಿ ನಂತರ ಅಂತಃಕರಣ ವೃತ್ತಿಯನ್ನು ಅಂತರ್ಮುಖಗೊಳಿಸಲು ಬರುತ್ತದೆ. ಆ ಅಂತರ್ಮುಖ ವೃತ್ತಿಯಲ್ಲಿ ಅಂತರಂಗದ ಪ್ರಾಣ ಹಾಗೂ ಭಾವಲಿಂಗಗಳ ಸಾಕ್ಷಾತ್ಕಾರವನ್ನು ಪಡೆದ ಸಾಧಕನು ನಂತರ ಸರ್ವತ್ರ ಶಿವನನ್ನು ಕಾಣಬಹುದು. ದೃಷ್ಟಿಯು ಶಿವಮಯವಾಗದೆ ಸೃಷ್ಟಿಯು ಶಿವಮಯವಾಗಿ ತೋರದು. ಆದ್ದರಿಂದ ಇಷ್ಟಲಿಂಗದಲ್ಲಿ ಮೊದಲು ದೃಷ್ಟಿಯನ್ನು ಸ್ಥಿರಗೊಳಿಸದೇ ಸೃಷ್ಟಿಯಲ್ಲಿ ಶಿವನನ್ನು ಕಾಣಲು ಸಾಧ್ಯವಿಲ್ಲ. ಅಂತೆಯೇ ಪೂಜ್ಯಪಾದರು ಈ ಮಾಹೇಶ್ವರಸ್ಥಲದ ಸಾಧಕನಿಗೆ ಶಿವನ ಸರ್ವಗತತ್ವವನ್ನು ನಿರಾಕರಿಸಿ ಇಷ್ಟಲಿಂಗದಲ್ಲಿಯೇ ಅವನನ್ನು ಅರ್ಚಿಸಲು ಉಪದೇಶಿಸಿದ್ದಾರೆ.

ಪೂಜ್ಯ ಆಚಾರ್ಯರು ಇಷ್ಟಲಿಂಗವೇ ಶಿವನ ಮಂಗಲಮಯ ಮೂರ್ತಿಯೆಂಬುದನ್ನು ಮತ್ತಷ್ಟು ದೃಢಗೊಳಿಸುವುದಕ್ಕಾಗಿ–

ನಿತ್ಯಂ ಭಾಸಿ ತದೀಯಸ್ತ್ವಂ ಯಾತೇ ರುದ್ರ ಶಿವಾ ತನೂಃ ।
ಅಘೋರಾऽಪಾಪಕಾಶೀತಿ ಶ್ರುತಿರಾಹ ಸನಾತನೀ ॥

(ಸಿ. ಶಿ. ೧೦–೫೯)

ಈ ಶ್ಲೋಕದಲ್ಲಿ ವೇದಮಂತ್ರವನ್ನು ಉದಾಹರಿಸಿ ಉಪದೇಶಿಸಿದ್ದಾರೆ. ವೀರಶೈವರು ಪೂಜಿಸುವ ಇಷ್ಟಲಿಂಗವು ಶಿವನ ಮಂಗಲಮಯ ಶರೀರವು. ಈ ವಿಷಯವು ಯಜುರ್ವೇದದ– ''ಯಾತೇರುದ್ರಃ ಶಿವಾತನೂರಘೋರಾऽಪಾಪಕಾಶಿನೀ'' ಎಂಬ ಶ್ರೀ ರುದ್ರದ ಮಂತ್ರದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಇದರ ಅರ್ಥವೇನೆಂದರೆ– ಭೋ ರುದ್ರ=ಎಲ್ಲೈರುದ್ರನೇ, ತೇ=ನಿನ್ನ, ಶಿವಾ=ಮಂಗಲ ಸ್ವರೂಪವಾದ, ಯಾ ತನೂಃ= ಯಾವ ಲಿಂಗರೂಪವಾದ ಶರೀರವಿದೆಯೋ ಅದು, ಅಘೋರಾ=ಶಾಂತಸ್ವರೂಪವಾದದ್ದು ಅಪಾಪಕಾಶಿನೀ=ಪುಣ್ಯವಂತರ ದೇಹದ ಮೇಲೆ ಕಂಗೊಳಿಸುವಂಥಾದ್ದು ಎಂಬುದಾಗಿ ಯಜುರ್ವೇದ ಮಂತ್ರವು ಇಷ್ಟಲಿಂಗದ ಸ್ವರೂಪವನ್ನು ಪ್ರತಿಪಾದಿಸಿದೆ. ಇದೇ ಪ್ರಕಾರವಾಗಿ ''ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ'' ಎಂಬ ಋಗ್ವೇದದ ಮಂತ್ರದಲ್ಲಿಯೂ ಸಹ ಇಷ್ಟಲಿಂಗ ಸ್ವರೂಪವು ಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿದೆ. ವೇದ ವಾಙ್ಮಯದಲ್ಲಿ ಇಷ್ಟಲಿಂಗಕ್ಕೆ 'ಪವಿತ್ರ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಅದು ಸ್ವತಃ ಪವಿತ್ರವಾಗಿದ್ದು ತನ್ನನ್ನು ಧರಿಸಿದವರನ್ನು ಸದಾ ಪವಿತ್ರವನ್ನಾಗಿ ಮಾಡುವ ಕಾರಣ ಅದಕ್ಕೆ ಪವಿತ್ರ ಎಂಬುದಾಗಿ ಕರೆದಿದ್ದಾರೆ. ಆಗಮ ಗ್ರಂಥಗಳಲ್ಲಿ ಇದಕ್ಕೆ ಲಿಂಗ, ಇಷ್ಟ ಲಿಂಗ ಎಂಬ ಹೆಸರುಗಳು ಬಂದಿವೆ. ಹೀಗೆ ವೀರಶೈವರ ಇಷ್ಟಲಿಂಗವು ಹಾಗೂ ಅದನ್ನು ಧರಿಸುವ ವಿಧಾನವು ವೇದಾಗಮ ಸಮ್ಮತವಾಗಿದೆಯೆಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು. ಲಿಂಗಧಾರಣೆಯ ವಿಚಾರವು ವೇದಮಂತ್ರದಲ್ಲಿ ಬಂದಿರೋಣದರಿಂದ ಈ ವೀರಶೈವ ಸಿದ್ಧಾಂತವು ಅತ್ಯಂತ ಪ್ರಾಚೀನವೆಂಬುದು ಸಿದ್ಧವಾಗುತ್ತದೆ.

ಈ ಪ್ರಾಚೀನವಾದ ವೇದಾಗಮ ವಾಙ್ಮಯದ ಅಧ್ಯಯನವಿಲ್ಲದ ಅಲ್ಪಮತಿಗಳು ವೀರಶೈವರ ಪ್ರಾಚೀನ ಇತಿಹಾಸವನ್ನು ತಿರುಚಿ ಹೇಳುವ ದುಸ್ಸಾಹಸವನ್ನೂ ಮಾಡುತ್ತಿರುವುದು ವಿದ್ವಾಂಸರಿಗೆ ಅಚ್ಚರಿಯನ್ನುಂಟು ಮಾಡುತ್ತದೆ. ಆದಕಾರಣ ವೀರಶೈವರ ಈ ಇಷ್ಟಲಿಂಗಧಾರಣೆ ಹಾಗೂ ಅದರ ಪೂಜಾಪರಂಪರೆಯು ಸನಾತನವಾದದ್ದೆಂಬುದಾಗಿ ಎಲ್ಲರೂ ತಿಳಿದುಕೊಳ್ಳಬೇಕು. ಭೂಮಿಯ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸುವ ಪದ್ಧತಿಯು ಎಷ್ಟು ಪ್ರಾಚೀನವಾದದ್ದೋ, ದೇಹದ ಮೇಲೆ ಇಷ್ಟಲಿಂಗವನ್ನು ಧರಿಸುವ ಪದ್ಧತಿಯು ಕೂಡಾ ಅಷ್ಟೇ ಪ್ರಾಚೀನವಾದುದು. ವೀರಶೈವ ಶಿವಾಚಾರ್ಯರು ಹಾಗೂ ಮಹಾಚಾರ್ಯರು ಭೂಮಿಗೂ ಲಿಂಗವನ್ನು ಧರಿಸಿದ್ದಾರೆ ಹಾಗೂ ಭೂಮಿಯ ಮೇಲಿನ ಜೀವಿಗಳಿಗೂ ಕೂಡಾ ಲಿಂಗವನ್ನು ಧರಿಸಿದ್ದಾರೆ. ಈ ಲಿಂಗ ಧರಿಸುವ ಹಕ್ಕು ಇವರನ್ನುಳಿದು ಬೇರೆ ಇನ್ನಾರಿಗೂ ಇರುವುದಿಲ್ಲ.

ಹೀಗೆ ಗುರುಪರಂಪರೆಯಿಂದ ಪ್ರಾಪ್ತವಾದ ಇಷ್ಟಲಿಂಗವು ಉಪಯುಕ್ತ ವೇದ ಮಂತ್ರಗಳ ಪ್ರಕಾರ ಶಿವನ ಮಂಗಲಮಯ ಸ್ವರೂಪವಾದ್ದರಿಂದ ಮಾಹೇಶ್ವರ ನಾದವನು ಅಲ್ಲಿ ಇಲ್ಲಿ ಎಲ್ಲಿಯೂ ತನ್ನ ನಿಷ್ಠೆಯನ್ನು ಅಪವ್ಯಯಗೊಳಿಸದೆ ಇಷ್ಟಲಿಂಗ ದಲ್ಲಿಯೇ ಸ್ಥಿರಗೊಳಿಸಬೇಕೆಂಬುದು ಪೀಠಾಚಾರ್ಯರ ಆದೇಶವಾಗಿದೆ. ಅಂತೆಯೇ ರೇಣುಕ ಭಗವತ್ಪಾದರು–

ತಸ್ಮಾತ್ ಸರ್ವಪ್ರಯತ್ನೇನ ಸರ್ವಸ್ಥಾನಪರಾಙ್ಮುಖಃ ।
ಸ್ವೇಷ್ಟಲಿಂಗೇ ಮಹಾದೇವಂ ಪೂಜಯೇತ್ ಪೂಜಕೋತ್ತಮಃ ॥

ಶಿವಸ್ಯ ಸರ್ವಗತ್ವೇಽಪಿ ಸರ್ವತ್ರ ರತಿವರ್ಜಿತಃ ।
ಸ್ವೇಷ್ಟಲಿಂಗೇ ಯಜನ್ ದೇವಂ ಸರ್ವಗತ್ವನಿರಾಸಕಃ ॥

(ಸಿ. ಶಿ. ೧೦ ; ೬೦–೬೧)

ಎಂಬುದಾಗಿ ಸರ್ವಗತ್ವನಿರಸನಸ್ಥಲದ ಸಾರಸರ್ವಸ್ವವನ್ನು ಇಲ್ಲಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ– ಶಿವನು ಆಕಾಶದಂತೆ ಸರ್ವತ್ರವ್ಯಾಪಕನಾಗಿದ್ದರೂ ಮಾಹೇಶ್ವರನು ಮಾತ್ರ ಬೇರೆಲ್ಲ ಸ್ಥಾನಗಳಿಂದ ಪರಾಙ್ಮುಖನಾಗಿ ಅನ್ಯ ಯಾವ ಸ್ಥಾನ ದಲ್ಲಿಯೂ ತನ್ನ ರತಿಯನ್ನು ಅರ್ಥಾತ್ ಭಕ್ತಿಯನ್ನು ಬೆಳೆಯಿಸದೆ, ಅತ್ಯಂತ ಪ್ರಯತ್ನ ಪೂರ್ವಕವಾಗಿ ತನ್ನೆಲ್ಲ ನಿಷ್ಠೆಯನ್ನು ಇಷ್ಟಲಿಂಗದಲ್ಲಿಯೇ ಇರಿಸಿ, ಅದನ್ನೇ ಅನನ್ಯಭಾವ ದಿಂದ ಆರಾಧಿಸಬೇಕು. ಮಾಹೇಶ್ವರನ ಈ ತೆರನಾದ ಪೂಜೆಯೇ ಉತ್ತಮ ಪೂಜೆ ಯೆಂಬುದಾಗಿ ಆಚಾರ್ಯರು ಆದೇಶಿಸಿದ್ದಾರೆ.

ಇಲ್ಲಿ ಸರ್ವಗತನಾದ ಶಿವನನ್ನು ಬೇರೆ ಎಲ್ಲಿಯೂ ಪೂಜಿಸದೆ ಇಷ್ಟಲಿಂಗದಲ್ಲಿಯೇ ಪೂಜಿಸಲು ಆಜ್ಞಾಪಿಸಿದ ಆಚಾರ್ಯರ ಆದೇಶವು ಮಾಹೇಶ್ವರನಲ್ಲಿಯ ಲಿಂಗದ ಅತಿರತಿ ಯನ್ನು ಅಭಿವ್ಯಕ್ತಗೊಳಿಸುತ್ತದೆ ಎಂಬಲ್ಲಿಗೆ ಸರ್ವಗತನಿರಸನಸ್ಥಲವನ್ನು ಕುರಿತ ಆಶೀರ್ವಚನವು ಪೂರ್ಣಗೊಳ್ಳುತ್ತದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೧ ಆಗಷ್ಟ್, ೧೯೬೧
(ಸ್ಥಾನ ನಾಗಪುರ)



ಆಶೀರ್ವಚನ-೧

# ಶಿವಜಗನ್ಮಯಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಈ ಹಿಂದೆ ಶಿವನ ಪೂಜೆಯನ್ನು ಎಲ್ಲ ಕಡೆ ಮಾಡದೇ ಇಷ್ಟಲಿಂಗದಲ್ಲಿಯೇ ಮಾಡಬೇಕೆಂಬುದನ್ನು ಸರ್ವಗತನಿರಸನಸ್ಥಲದಲ್ಲಿ ಪ್ರತಿಪಾದಿಸಿ ಇಂದು ಶಿವನ ಅಸ್ತಿತ್ವವನ್ನು ಸರ್ವತ್ರ ಭಾವಿಸಬೇಕೆಂಬುದನ್ನು ತಿಳಿಸಲೋಸುಗ 'ಶಿವ ಜಗನ್ಮಯಸ್ಥಲ'ವನ್ನು ಪ್ರಾರಂಭಿಸುತ್ತಿದ್ದಾರೆ. ಈ ಸ್ಥಲದಲ್ಲಿಯ–

ಯಸ್ಮಾದೇತತ್ ಸಮುತ್ಪನ್ನಂ ಮಹಾದೇವಾಚ್ಚರಾಚರಮ್ ।
ತಸ್ಮಾದೇತನ್ನಭಿದ್ಯೇತ ಯಥಾ ಕುಂಭಾದಿಕಂ ಮೃದಃ ॥

ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನಭಿದ್ಯತೇ ।
ಫೇನೋರ್ಮಿಬುದ್ಬುದಾಕಾರಂ ಯಥಾ ಸಿಂಧೋರ್ನಭಿದ್ಯತೇ ॥

ಯಥಾ ತಂತುಭಿರುತ್ಪನ್ನಃ ಪಟಸ್ತಂತುಮಯಃ ಸ್ಮೃತಃ ।
ತಥಾ ಶಿವಾತ್ ಸಮುತ್ಪನ್ನಂ ಶಿವ ಏವ ಚರಾಚರಮ್ ॥

(ಸಿ. ಶಿ. ೧೦ ; ೬೩–೬೫)

ಈ ಆಚಾರ್ಯೋಕ್ತಿಯಿಂದ ಶಿವನು ಜಗತ್ತಿನ ತುಂಬೆಲ್ಲ ವ್ಯಾಪಕನಾಗಿದ್ದಾನೆಂಬುದು ಸಿದ್ಧವಾಗುತ್ತದೆ. ಒಂದು ಕಾರ್ಯವು ಉತ್ಪನ್ನವಾಗಬೇಕಾದರೆ ಉಪಾದಾನ ಕಾರಣ, ನಿಮಿತ್ತ ಕಾರಣ ಮತ್ತು ಸಹಕಾರೀ ಕಾರಣಗಳು ಬೇಕಾಗುತ್ತವೆ. ಮಣ್ಣಿನ ಕೊಡವನ್ನು ತಯಾರಿಸುವಾಗ ಕುಂಬಾರನು ನಿಮಿತ್ತ ಕಾರಣನು. ಮಣ್ಣು ಉಪಾದಾನ ಕಾರಣವು. ಅದರಂತೆ ದಂಡ–ಚಕ್ರಾದಿಗಳು ಸಹಕಾರಿ ಕಾರಣಗಳಾಗಿರುತ್ತವೆ. ಹೀಗೆ ಒಂದು ಘಟ ವನ್ನು ತಯಾರಿಸಬೇಕಾದರೆ ಲೋಕದಲ್ಲಿ ಈ ಮೂರು ಕಾರಣಗಳ ಅವಶ್ಯಕತೆ ಇರುತ್ತದೆ. ಆದರೆ ಪ್ರಪಂಚ ಅಥವಾ ಜಗತ್ತು ಎಂಬ ಕಾರ್ಯವು ಉತ್ಪನ್ನವಾಗಬೇಕಾದರೆ ಸೃಷ್ಟಿಯ ಪೂರ್ವದಲ್ಲಿ ಶಿವನ ಹೊರತಾಗಿ ಬೇರಾವ ಸಾಮಗ್ರಿಗಳಿರಲಿಲ್ಲ. ಅಂತೆಯೇ ಉಪನಿಷತ್ತಿನಲ್ಲಿ ''ಸದೇವ ಸೌಮ್ಯ ಇದಮಗ್ರ ಆಸೀತ್'' ಎಂಬುದಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಪಂಚದ ಉತ್ಪತ್ತಿಯಲ್ಲಿ ಉಪಾದಾನ ಹಾಗೂ ನಿಮಿತ್ತ ಕಾರಣಗಳು ಬೇರೆ ಬೇರೆಯಾಗಿರದೆ ಶಿವನೊಬ್ಬನೇ ಎಲ್ಲವೂ ಆಗಿದ್ದಾನೆ. ''ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ'' । ಎಂಬ ಶ್ರುತಿ ಪ್ರಮಾಣದಂತೆ ತೆರಣೆಯ ಹುಳುವು ಅರ್ಥಾತ್ ಜೇಡರ ಹುಳುವು ತನ್ನ ಬಲೆಯನ್ನು ನಿರ್ಮಿಸಿಕೊಳ್ಳಲು ಬೇರೆಲ್ಲಿಂದಲೂ ಎಳೆಗಳನ್ನು ತಾರದೆ, ತನ್ನ ದೇಹದಿಂದಲೇ ಎಳೆಗಳನ್ನು ತೆಗೆದು ಬಲೆಯನ್ನು ನಿರ್ಮಾಣಗೊಳಿಸುತ್ತದೆ. ಆ ಬಲೆಯ ಉಪಾದಾನ ಕಾರಣ ಹಾಗೂ ನಿಮಿತ್ತ ಕಾರಣಗಳೆರಡೂ ತಾನೇ ಆಗಿರುವಂತೆ ಪ್ರಪಂಚಕ್ಕೆ

ಪರಮಾತ್ಮನೊರ್ವನೇ ನಿಮಿತ್ತ ಹಾಗೂ ಉಪಾದಾನ ಕಾರಣಗಳೆರಡೂ ಆಗಿರುತ್ತಾನೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಸೃಷ್ಟಿಗಾಗಿ ಶಿವನನ್ನು ಅಭಿನ್ನ ನಿಮಿತ್ತೋಪಾದನ ಕಾರಣನೆಂಬುದಾಗಿ ಸ್ವೀಕರಿಸಿದ್ದಾರೆ. ಶಿವನು ಶಕ್ತಿವಿಶಿಷ್ಟನಾಗಿರುವುದರಿಂದ ಅವನಲ್ಲಿಯ ಶಕ್ತಿಯು ಉಪಾದಾನ ಕಾರಣವಾದರೆ, ಅವನ ಚೇತನಾಂಶವು ನಿಮಿತ್ತಕಾರಣವಾಗಿರುತ್ತದೆ. ಈ ರೀತಿಯಾಗಿ ಅವನೊರ್ವನೇ ಪ್ರಪಂಚದ ಕಾರಣನು. ಆದ್ದರಿಂದ ಮಣ್ಣಿನಿಂದುತ್ಪನ್ನವಾದ ಮಡಿಕೆಯು ಮಣ್ಣಿನಿಂದ ಭಿನ್ನವಾಗಿರದಂತೆ, ಶಕ್ತಿವಿಶಿಷ್ಟನಾದ ಶಿವನಿಂದ ಉತ್ಪನ್ನವಾದ ಈ ಪ್ರಪಂಚವು ಶಿವನಿಗಿಂತಲೂ ಭಿನ್ನವಾಗಿರುವುದಿಲ್ಲ ಅರ್ಥಾತ್ ಶಿವ ಸ್ವರೂಪವೇ ಆಗಿರುವುದು.

ಸಮುದ್ರದಲ್ಲಿ ತೋರುವ ನೆರೆ-ತೊರೆಗಳು ಸಮುದ್ರಕ್ಕಿಂತಲೂ ಭಿನ್ನವಾಗಿರದಂತೆ ಮತ್ತು ತಂತುಗಳಿಂದ ಉತ್ಪನ್ನವಾದ ಪಟವು ತಂತುಗಳಿಂದ ಭಿನ್ನವಾಗಿರದಂತೆ, ಅರ್ಥಾತ್ ತಂತುಮಯವೇ ಆಗಿರುವಂತೆ ಶಿವತತ್ತ್ವದಿಂದ ಸಮುತ್ಪನ್ನವಾದ ಈ ಪ್ರಪಂಚವು ಶಿವಸ್ವರೂಪವೇ ಆಗಿದೆ ಎಂಬುದನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅನೇಕ ಯುಕ್ತಿ ದೃಷ್ಟಾಂತಗಳ ಮುಖಾಂತರವಾಗಿ ಶಿವನ ಜಗನ್ಮಯತ್ವವನ್ನು ತಿಳಿಯಪಡಿಸಿದ್ದಾರೆ.

ವೀರಶೈವ ಸಿದ್ಧಾಂತದ ಸೃಷ್ಟಿ ಪ್ರಕ್ರಿಯೆಯನ್ನು ಪ್ರತಿಪಾದಿಸುತ್ತ ಪೂಜ್ಯಪಾದರು-

ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ ಯಥಾ ಭಾತಿ ಪಟಃ ಸ್ವಸ್ಯಪ್ರಸಾರಣಾತ್ ॥

ತಸ್ಮಾಚ್ಛಿವಮಯಂ ಸರ್ವಂ ಜಗದೇತಚ್ಚರಾಚರಮ್ ।
ತದಭಿನ್ನತಯಾ ಭಾತಿ ಸರ್ಪತ್ವಮಿವ ರಜ್ಜುತಃ ॥

ರಜ್ಜೌ ಸರ್ಪತ್ವವದ್ ಭಾತಿ ಶುಕ್ತೌ ರಜತತತ್ತ್ವವತ್ ।
ಚೋರತ್ವವಚ್ಚಾಪಿ ಸ್ಥಾಣೌ ಮರೀಚ್ಯಾಂಚ ಜಲತ್ವವತ್ ॥
ಗಂಧರ್ವಪುರವದ್ವ್ಯೋಮ್ನೀ ಸಚ್ಚಿದಾನಂದಲಕ್ಷಣೇ ।
ನಿರಸ್ತಭೇದ ಸದ್ಭಾವೇ ಶಿವೇ ವಿಶ್ವಂ ವಿರಜಾತೇ ॥

(ಸಿ. ಶಿ. ೧೦ ; ೬೬-೬೯)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನಲ್ಲಿ ಅವಿನಾಭಾವ ಸಂಬಂಧದಿಂದಿರುವ ಶಕ್ತಿಯು ವಿಕಸನಗೊಂಡಾಗ ಪ್ರಪಂಚದ ಉತ್ಪತ್ತಿಯಾಗುತ್ತದೆ ಹಾಗೂ ಅದು ಸಂಕೋಚಗೊಂಡಾಗ ಈ ಜಗತ್ತು ವಿಲಯವಾಗುತ್ತದೆ. ಸರ್ಕಸ್ಸಿನ ತಂಬುವಿನ ಬಟ್ಟೆಯನ್ನು ಪಸರಿಸಿದಾಗ ಅದು ತುಂಬುವಿನ ಆಕಾರವನ್ನು ಹೊಂದುತ್ತದೆ. ಅದನ್ನು ಸುತ್ತಿಯಿಟ್ಟಾಗ ಅದು ವಿಲಯವಾಗುತ್ತದೆ. ಹೇಗೆ ಬಟ್ಟೆಯ ವಿಕಾಸ ಹಾಗೂ ಸಂಕೋಚಗಳಿಂದ ತಂಬುವಿನ ಸೃಷ್ಟಿ ಹಾಗೂ ವಿಲಯಗಳಾಗುತ್ತವೆಯೋ ಅದರಂತೇನೇ ಶಿವನ ಶಕ್ತಿಯ ವಿಕಾಸ ಹಾಗೂ ಸಂಕೋಚಗಳಿಂದ ಸೃಷ್ಟಿ ಮತ್ತು ವಿಲಯಗಳುಂಟಾಗುತ್ತವೆ. ಈ ರೀತಿಯಾಗಿ ಜಗತ್ತಿನ ಆವಿರ್ಭಾವ ಹಾಗೂ ವಿಲಯಗಳಿಗೆ ಶಿವನೇ ಉಪಾದಾನ ಮತ್ತು ನಿಮಿತ್ತ ಕಾರಣಗಳೆರಡೂ ಆಗಿರೋಣದರಿಂದ ಶಿವನಿಂದ ಉತ್ಪನ್ನವಾದ ಜಗತ್ತು ಶಿವಮಯವೇ ಆಗಿರುತ್ತದೆ.

ಮಂದಾಂಧಕಾರದಲ್ಲಿ ಹಗ್ಗವು ಹಾವಾಗಿ ತೋರುವಂತೆ ಕಳ್ಳನ ಭೀತಿಯುಳ್ಳ ಮನುಷ್ಯನಿಗೆ ಮೋಟುಮರವು ಕಳ್ಳನಾಗಿ ತೋರುವಂತೆ ಮತ್ತು ಆಕಾಶದಲ್ಲಿಯ ಮೋಡಗಳು ಗಂಧರ್ವ ನಗರವಾಗಿ ತೋರುವಂತೆ, ಅಜ್ಞರಾದ ಜೀವಿಗಳಿಗೆ ಶಿವನೇ ಪ್ರಪಂಚ ರೂಪವಾಗಿ ತೋರುತ್ತಿದ್ದಾನೆ. ಈ ಶಿವಜಗನ್ಮಯಸ್ಥಲವನ್ನು ಉಪಸಂಹಾರಗೊಳಿಸುತ್ತ ಪೂಜ್ಯಪಾದರು–

ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥

(ಸಿ. ಶಿ. ೧೦–೭೦)

ಈ ರೀತಿಯಾಗಿ ದೃಷ್ಟಾಂತಪೂರ್ವಕವಾಗಿ ನಿರೂಪಿಸಿದ್ದಾರೆ. ಬೇರು, ಬೊಡ್ಡೆ, ಟೊಂಗೆ, ಎಲೆ, ಹೂವು ಮತ್ತು ಕಾಯಿಗಳಿಂದ ಒಂದು ಮರವು ಕಂಗೊಳಿಸುವುದನ್ನು ನಾವು ನೋಡುತ್ತೇವೆ. 'ಮರ' ಎಂಬ ಶಬ್ದವನ್ನು ಪ್ರಯೋಗ ಮಾಡಿದಾಗ ಆ ಎಲ್ಲ ಅವಯವಗಳಿಂದ ಕೂಡಿದ ವಿಶಾಲವಾದ ಗಿಡದ ಬೋಧವಾಗುತ್ತದೆ. ಇಲ್ಲಿ ಟೊಂಗೆ, ಬೊಡ್ಡೆ ಮುಂತಾದವುಗಳು ಆ ಗಿಡಕ್ಕಿಂತ ಬೇರೆಯಾಗಿರದೆ ಗಿಡಮಯಗಳೇ ಆಗಿರುವಂತೆ, ಸೃಷ್ಟಿಯಲ್ಲಿಯ ಪೃಥ್ವಿ, ಅಪ್ಪು, ತೇಜ, ವಾಯು ಮತ್ತು ಆಕಾಶಗಳೆಂಬ ಪಂಚಮಹಾ ಭೂತಗಳು ಹಾಗೂ ಅವುಗಳಿಂದ ನಿರ್ಮಾಣಗೊಂಡ ಭೌತಿಕ ಪ್ರಪಂಚವು ಶಿವಮಯವೇ ಆಗಿರುತ್ತದೆ.

ಈ ಭೂತ–ಭೌತಿಕ ಪ್ರಪಂಚವು ಶಿವಮಯವಾಗಿದೆಯೆಂಬುದನ್ನು ತಿಳಿಸುವ ಸಂಕೇತಕ್ಕಾಗಿ ದಕ್ಷಿಣ ಭಾರತದ ಶಿವಕಂಚಿಯಲ್ಲಿ 'ಪೃಥ್ವಿಲಿಂಗ' ಜಂಬುಕೇಶ್ವರದಲ್ಲಿ ಅಪ್‌ಲಿಂಗ, ಅರುಣಾಚಲದಲ್ಲಿ ತೇಜೋಲಿಂಗ, ಕಾಳಹಸ್ತಿಯಲ್ಲಿ ವಾಯುಲಿಂಗ ಮತ್ತು ಚಿದಂಬರದಲ್ಲಿ ಆಕಾಶಲಿಂಗಗಳು ಸುಪ್ರಸಿದ್ಧಗಳಾಗಿವೆ. ಇದೂ ಅಲ್ಲದೆ ಸಾಕ್ಷಾತ್ ಮಹಾಭೂತಗಳನ್ನೇ ಭಗವಂತನ ರೂಪದಲ್ಲಿ ಪೂಜೆಮಾಡುವ ಪದ್ಧತಿಯು ಭಾರತ ದೇಶದಲ್ಲಿ ಅನಾದಿಕಾಲದಿಂದಲೂ ನಡೆದು ಬಂದಿದೆ. ಮನುಷ್ಯನ ದೇಹದಲ್ಲಿ ಕರ–ಚರಣಾದ್ಯವಯವಗಳು ಭಿನ್ನ ಭಿನ್ನಗಳಾಗಿದ್ದರೂ ಅವುಗಳಿಂದ ಕೂಡಿದ ಶರೀರವು ಒಂದೇಯಾಗಿರುವಂತೆ ಭೂತ ಹಾಗೂ ಭೌತಿಕ ಪ್ರಪಂಚವು ಭಿನ್ನಭಿನ್ನವಾಗಿದ್ದರೂ ಅವೆಲ್ಲವುಗಳು ಒಬ್ಬನೇ ಆದ ಶಿವನ ಸ್ವರೂಪಗಳು, ಹೀಗೆ ಜಗತ್ತಿನ ಎಲ್ಲಸ್ವರೂಪವನ್ನು ಶಿವನೊರ್ವನೇ ತಾಳಿದ್ದಾನೆ. ದೇವ, ದಾನವ, ಗಂಧರ್ವ, ಮನುಷ್ಯ ಪಶು–ಪಕ್ಷಿ ಮುಂತಾದವುಗಳೆಲ್ಲವು ಅವನ ಸ್ವರೂಪಗಳೇ ಆಗಿರುತ್ತವೆ. ಅವನ ಹೊರತಾಗಿ ಇಲ್ಲಿ ಬೇರಾವುದೂ ಇಲ್ಲ, ಅವನೇ ಸರ್ವವೂ ಆಗಿದ್ದಾನೆ ಎಂಬ ಭಾವನೆಯನ್ನು ಮಾಹೇಶ್ವರನಾದವನು ತಾಳಿಕೊಂಡು ಪೂಜೆಯನ್ನು ಮಾತ್ರ ಇಷ್ಟಲಿಂಗದಲ್ಲಿಯೇ ಆಚರಿಸಬೇಕು. ಹೀಗೆ ಜಗತ್ತಿನ ತುಂಬೆಲ್ಲ ಶಿವನನ್ನು ಭಾವಿಸುವದೇ ಶಿವಜಗನ್ಮಯ ಸ್ಥಲವು ಎಂಬುದನ್ನು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

(ನಾಗಪುರ, ೧ ಸಪ್ಟೆಂಬರ್ ೯೯೧)



ಆಶೀರ್ವಚನ-೧

# ಭಕ್ತದೇಹಿಕಲಿಂಗಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಭಾರತೀಯ ಸಿದ್ಧಾಂತಗಳಿಗೆಲ್ಲ ಮುಕುಟಮಣಿಯಂತಿರುವ ಅಂತೆಯೇ ಶ್ರೀ ಸಿದ್ಧಾಂತ ಶಿಖಾಮಣಿಯೆಂಬ ನಾಮದಿಂದ ಪ್ರಖ್ಯಾತವಾಗಿರುವ ಗ್ರಂಥರಾಜದ ಮಾಹೇಶ್ವರ ಸ್ಥಲದ ಬಗ್ಗೆ ಪೂಜ್ಯಪಾದರು ಉಪದೇಶವನ್ನು ಮಾಡುತ್ತ ಈ ಸ್ಥಲದಲ್ಲಿ ಕೊನೆಯ ಅವಾಂತರ ಸ್ಥಲವಾದ ಭಕ್ತದೇಹಿಕ ಲಿಂಗಸ್ಥಲವನ್ನು ಕುರಿತು ವಿವರಿಸುತ್ತಾನೆ.

ವೇದ ವೇದಾಂತವಾಕ್ಯಾರ್ಥಸಂಧಾನಾತೀತವರ್ತನಃ ।
ಭಕ್ತಭಾವಪರಾನಂದೋ ಭಕ್ತಭಾವೈಕಗೋಚರಃ ॥

ಶಿವನು ವೇದವೇದಾಂತ ವಾಕ್ಯಗಳಿಗೆ ಅಗೋಚರನಾಗಿದ್ದರೂ, ಭಕ್ತರ ಭಾವಕ್ಕೆ ಆನಂದಿತ ನಾಗಿ ಅವರ ಭಾವದಲ್ಲಿಯೆ ಅವನು ಗೋಚರಿಸುತ್ತಾನೆ ಎಂಬುದಾಗಿ ಉಪರ್ಯುಕ್ತ ಯೋಗಜ ಆಗಮದ ಮಂತ್ರದಲ್ಲಿ ಪ್ರತಿಪಾದಿಸಲಾಗಿದೆ. ಈ ಆಗಮೋಕ್ತಿಯನ್ನೇ ಆಧಾರ ವಾಗಿಟ್ಟುಕೊಂಡು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಭಕ್ತದೇಹಿಕ ಲಿಂಗಸ್ಥಲವು ನಿರೂಪಿತ ವಾಗಿದೆ. ಭಕ್ತನ ಹೃದಯವೇ ಭಗವಂತನ ನಿವಾಸಸ್ಥಾನವೆಂಬುದನ್ನು ಸಾದರಪಡಿಸುವ ಸ್ಥಲವೇ ಭಕ್ತದೇಹಿಕಲಿಂಗಸ್ಥಲವು. ಇದನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಸಮಸ್ತಜಗದಾತ್ಮಾಽಪಿ ಶಂಕರಃ ಪರಮೇಶ್ವರಃ ।
ಭಕ್ತಾನಾಂ ಹೃದಯಾಂಭೋಜೇ ವಿಶೇಷೇಣ ವಿರಾಜತೇ ॥

ಕೈಲಾಸೇ ಮಂದರೇ ಚೈವ ಹಿಮಾದ್ರೌ ಕನಕಾಚಲೇ ।
ಹೃದಯೇಷು ಚ ಭಕ್ತಾನಾಂ ವಿಶೇಷೇಣ ವ್ಯವಸ್ಥಿತಃ ॥

(ಸಿ. ಶಿ. ೧೦ ; ೭೧–೭೨)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಪರಮಾತ್ಮನು ವ್ಯಾಪಕನಾಗಿರೋಣದರಿಂದ ಅವನು ಜಗತ್ತಿನ ಕಣಕಣಗಳಲ್ಲಿ ತುಂಬಿಕೊಂಡಿದ್ದಾನೆ. ಹೀಗೆ ಆತನು ಸರ್ವತ್ರ ವ್ಯಾಪಕ ನಾಗಿದ್ದರೂ 'ಕೈಲಾಸ ಪರ್ವತ' ಮಂದಾರ ಪರ್ವತ, ಹಿಮಾಲಯ, ಮೇರು ಪರ್ವತ ಹಾಗೂ ಭಾವನಾಯುಕ್ತರಾದ ಭಕ್ತರ ಹೃದಯಗಳು ಆತನ ಪ್ರಾಕಟ್ಯದ ವಿಶೇಷ ಸ್ಥಾನ ಗಳಾಗಿವೆ. ಕೈಲಾಸ ಮತ್ತು ಹಿಮಾಲಯಾದಿಗಳಿಗೆ ಹೋಗುವುದಾಗಲೀ ಅವುಗಳನ್ನು ಆರೋಹಿಸುವುದಾಗಲೀ ಸರ್ವರಿಗೂ ಸಾಧ್ಯವಾಗದ ಮಾತು. ಅಂತೆಯೇ ಭಗವಂತನು ಎಲ್ಲರಿಗೂ ಅನುಕೂಲವಾಗುವುದಕ್ಕಾಗಿ ಭಕ್ತರ ಹೃದಯದಲ್ಲಿಯೂ ತನ್ನ ನಿವಾಸವನ್ನು ಗೈದಿದ್ದಾನೆ. ''ಅಕ್ಕೇಚೇನ್ಮಧುವಿಂದ್ಯೇತ ಕಿಮರ್ಥಂ ಪರ್ವತಂ ವ್ರಜೇತ್'' ಅಂದರೆ ಮನೆಯ ಹಿತ್ತಲದಲ್ಲಿಯೇ ಜೇನು ದೊರೆಯುತ್ತಿರುವಾಗ ಅದನ್ನು ಪಡೆಯಲು ಪರ್ವತಕ್ಕೆ

ಏಕೆ ಹೋಗಬೇಕು ? ಎಂಬ ಸುಭಾಷಿತೋಕ್ತಿಯಂತೆ ಕೈಲಾಸಾದಿ ಪರ್ವತಗಳಲ್ಲಿರುವ ಶಿವನು ಪ್ರತಿಯೊಬ್ಬರ ಹೃದಯದಲ್ಲಿಯೇ ಸನ್ನಿಹಿತವಾಗಿರುವಾಗ ಸಮೀಪದ ಹೃದಯವನ್ನು ಬಿಟ್ಟು, ಆ ಪರ್ವತಾದಿಗಳಿಗೆ ಹೋಗುವ ಅವಶ್ಯಕತೆಯೇನು ?

ಹೃದಯಮಂದಿರವು ಪ್ರತಿಯೊಬ್ಬರಿಗೂ ಅತಿ ಸಮೀಪವಾದದ್ದಾದರೂ, ಜೀವಾತ್ಮನ ಪ್ರವೃತ್ತಿಯು ಅನಾದಿಕಾಲದಿಂದ ಬಹಿರ್ಮುಖವಾಗಿರೋಣದರಿಂದ, ಅವನು ಅಂತರಂಗವನ್ನು ಬಿಟ್ಟು ಬಹಿರಂಗದಲ್ಲಿಯೇ ಸಂಚರಿಸಿ ಬಳಲಿ ಬೆಂಡಾಗುತ್ತಲಿದ್ದಾನೆ. ಅಂತೆಯೇ ಇಂತಹ ಜೀವಿಗಳನ್ನು ಕಂಡೇ ಅಕ್ಕಮಹಾದೇವಿಯು–

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು,
ಇರುಳು ನಾಲ್ಕುಜಾವ ವ್ಯಸನಕ್ಕೆ ಕುದಿವರು,
ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ,
ತಮ್ಮೊಳಗಿರ್ದ ಮಹಾಘನವನು ಅರಿಯದೆ
ಕೆಟ್ಟರಯ್ಯ ಚೆನ್ನಮಲ್ಲಿಕಾರ್ಜುನ

ಈ ರೀತಿಯಾಗಿ ತನ್ನ ಕಳವಳವನ್ನು ವ್ಯಕ್ತಪಡಿಸಿದ್ದಾಳೆ. ಅಶನ–ವ್ಯಸನಗಳಿಗಾಗಿ ಅದೆಷ್ಟೋ ಜನ್ಮಗಳನ್ನು ಹಾಳುಮಾಡಿಕೊಂಡಿದ್ದರೂ ಮತ್ತೆ ಅತ್ತಲೇ ಪ್ರವೃತ್ತರಾಗುತ್ತಿರುವ ಜೀವಿಗಳಿಗೆ ತನ್ನ ಹೃದಯಸ್ಥ ಘನಲಿಂಗದ ಅರಿವಾಗುವುದು ಸಾಧ್ಯವಿಲ್ಲ. ಅಂತಲೇ ಶ್ರೀ ಮನ್ನಿಜಗುಣ ಶಿವಯೋಗಿಗಳು– ''ಊಟಕ್ಕೆ ವಿಷಯಕ್ಕೆ ಮರುಗುತಿಪ್ಪಾತಂಗೆ ಕೂಟವಪ್ಪುದೇ ಘನಪದದೊಳು ?'' ಎಂಬುದಾಗಿ ಪ್ರಶ್ನಿಸಿದ್ದಾರೆ. ಸಾಂಸಾರಿಕ ವಾಸನೆಗಳನ್ನು ಕಡಿಮೆಮಾಡಿಕೊಂಡಾಗಲೇ ಜೀವಾತ್ಮನ ಬಹಿರ್ಮುಖ ಪ್ರವೃತ್ತಿಯು ತೊಲಗಿ ಅವನು ಅಂತರ್ಮುಖಿಯಾಗಲು ಸಾಧ್ಯ. ಅಂತರ್ಮುಖಿಯಾಗದೇ ಹೃದಯಸ್ಥನಾದ ಶಿವನನ್ನು ಅನುಭವಿಸಲು ಸಾಧ್ಯವಾಗುವುದಿಲ್ಲ.

ಭಾರತೀಯ ಸಂಸ್ಕೃತಿಯಲ್ಲಿ ಪ್ರತಿಯೊಬ್ಬ ಮಾನವನು ತನ್ನ ಜೀವಿತದ ಕೊನೆಯ ಭಾಗದಲ್ಲಾದರೂ ವಾಸನಾದಿರಹಿತನಾಗಿ ಸದ್ಗತಿಯನ್ನು ಪಡೆಯಲೆಂಬ ಉದ್ದೇಶದಿಂದಲೇ ನಾಲ್ಕು ಆಶ್ರಮಗಳ ವ್ಯವಸ್ಥೆಯನ್ನು ಮಾಡಿದ್ದಾರೆ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಗಳೇ ಆ ನಾಲ್ಕು ಆಶ್ರಮಗಳು. ಆಯಾಯ ಆಶ್ರಮಕ್ಕೆ ತಕ್ಕಂತೆ ತನ್ನ ಜೀವನವನ್ನು ರೂಪಿಸಿಕೊಂಡು ವರ್ತಿಸಿದಾಗ ಮಾತ್ರ ಮನುಷ್ಯಜೀವನದ ಸಾಫಲ್ಯವನ್ನು ಮಾಡಿಕೊಳ್ಳಲು ಸಾಧ್ಯ. ಅಂತೆಯೇ ಕವಿಕುಲ ಲಲಾಮನಾದ ಕಾಳಿದಾಸನು–

ಶೈಶವೇಽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಮ್ ॥

ಎಂಬುದಾಗಿ ನಾಲ್ಕೂ ಆಶ್ರಮಗಳ ವಿಧಾನವನ್ನು ವರ್ಣಿಸಿದ್ದಾನೆ. ಬ್ರಹ್ಮಚರ್ಯಾವಸ್ಥೆಯಲ್ಲಿ ವಿದ್ಯಾಧ್ಯಯನವನ್ನು ಮಾಡಿ ತಾರುಣ್ಯಾವಸ್ಥೆಯಲ್ಲಿ ವಂಶಾಭಿವೃದ್ಧಿಗಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ತನ್ನ ಸಂತತಿಯು ತನ್ನ ಲೌಕಿಕ ವ್ಯವಹಾರಗಳನ್ನು ಮಾಡಲು ಸಮರ್ಥವಾದಾಗ ಲೌಕಿಕ ಜೀವನದ ಎಲ್ಲ ಜವಾಬ್ದಾರಿಯನ್ನು ಮಕ್ಕಳಿಗೆ ವಹಿಸಿಕೊಟ್ಟು ವನಗಳಲ್ಲಿ ಕಂದ ಮೂಲಗಳನ್ನು ಸೇವಿಸುತ್ತ ವಾನಪ್ರಸ್ಥ ಜೀವನವನ್ನು ಸಾಗಿಸಿ ಕೊನೆಗೆ

ಸರ್ವಸಂಗಪರಿತ್ಯಾಗವನ್ನು ಮಾಡಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಯೋಗಾಭ್ಯಾಸ ಮಾಡುತ್ತ ಶರೀರವನ್ನು ತ್ಯಜಿಸುವುದೇ ನಿಜವಾದ ಜೀವನಕ್ರಮವು. ಇಂದು ಈ ಕ್ರಮವು ಲುಪ್ತವಾಗುತ್ತ ನಡೆದಿದೆ. ಒಬ್ಬ ಮನುಷ್ಯನು ಬ್ರಹ್ಮಚರ್ಯಾವಸ್ಥೆಯನ್ನು ದಾಟಿ ಒಮ್ಮೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿದನೆಂದರೆ ತನ್ನ ಕೊನೆಯ ಉಸಿರಿನವರೆಗೆ ಗೃಹಸ್ಥ ನಾಗಿಯೇ ಉಳಿಯುತ್ತಾನೆ. ತನ್ನ ಮನಸ್ಸಿನ ವಾಸನೆಗಳನ್ನು ಆಚರಿಸದೇ ಅರ್ಥಾತ್ ವಾಸನಾಮುಕ್ತನಾಗದೇ ತನ್ನ ಹೃದಯಸ್ಥ ಶಿವನನ್ನು ಅರಿಯಲು ಸಾಧ್ಯವಾಗುವುದಿಲ್ಲ.

ತನ್ನಲ್ಲಿಯ ಶಿವನನ್ನು ಅರಿಯಲು ಬಹುದೂರ ಸಂಚರಿಸಬೇಕಾಗಿಲ್ಲ. ಆದರೂ ದೇವರಿಗಾಗಿ ಬಹುದೂರ ದೂರ ಅಲೆಯುತ್ತಿರುವ ಜೀವಿಗಳನ್ನು ಕಂಡಾಗ ಇವರೆಲ್ಲರೂ ಎಚ್ಚರದಪ್ಪಿದ್ದಾರೆ ಎಂಬುದು ಜ್ಞಾನಿಗಳಿಗೆ ಅರಿವಾಗುವುದು– ಒಂದು ಊರಿನಲ್ಲಿ ಒಬ್ಬ ಸೆರೆಗುಡಕನು ಆಕಂಠವಾಗಿ ಸುರಾಪಾನವನ್ನು ಮಾಡಿ ಮೈಮೇಲಿನ ಎಚ್ಚರಿಕೆಯನ್ನು ಕಳೆದುಕೊಂಡು ಜೋಲಿಹೊಡೆಯುತ್ತ ಹೇಗೋತಾನೆ ತನ್ನ ಮನೆಯ ಅಂಗಳದವರೆಗೆ ತಲುಪಿದನು. ತನ್ನ ಮನೆಯನ್ನು ಗುರುತಿಸುವಷ್ಟು ಪ್ರಜ್ಞೆ ಅವನಿಗುಳಿದಿರಲಿಲ್ಲ. ಆಗ ಆತನು ದಾರಿಹೋಕರನ್ನು ಕುರಿತು ''ಅಯ್ಯಾ ಯಾರಾದರೂ ನನ್ನನ್ನು ನನ್ನ ಮನೆಗೆ ಮುಟ್ಟಿಸುವಿರಾ ?'' ಎಂಬುದಾಗಿ ಬೇಡಿಕೊಳ್ಳುತ್ತಿದ್ದನು. ಆಗ ಜನರು ಅವನ ಸಮೀಪಕ್ಕೆ ಬಂದು ಇಗೋ ನೋಡು ನಿನ್ನೆದುರಿನಲ್ಲಿಯೇ ನಿನ್ನ ಮನೆ ಇದೆಯೆಂದು ಎಷ್ಟು ಸಾರೆ ಹೇಳಿದರೂ, ಮದ್ಯದ ಅಮಲೇರಿದ ಅವನಿಗೆ ತಿಳಿದುಕೊಳ್ಳಲು ಸಾಧ್ಯವಾಗದೆ ಮತ್ತೆ ಮತ್ತೆ ಮೊದಲಿನಂತೆಯೇ ಕೇಳಿಕೊಳ್ಳುತ್ತಿದ್ದನು. ಜನರು ಹೇಳಿ ಹೇಳಿ ಬೇಸತ್ತರು. ಅದೇ ಸಮಯಕ್ಕೆ ಓರ್ವ ಶಿವಾಚಾರ್ಯರು ಅದೇ ಮಾರ್ಗವಾಗಿ ದಯಮಾಡಿಸುತ್ತಿರುವುದನ್ನು ಕಂಡು ಅಲ್ಲಿ ಕೂಡಿದ ಜನರೆಲ್ಲ ಅವರ ಬಳಿಗೆ ಹೋಗಿ, ''ನೋಡಿ ಬುದ್ಧಿ ಈತನೊಬ್ಬ ಸೆರೆ ಗುಡುಕ, ಕುಡಿದ ಅಮಲಿನಲ್ಲಿ ನಿಂತಿದ್ದಾನೆ. ತನ್ನ ಮನೆಯನ್ನೇ ಗುರುತಿಸುವಷ್ಟು ಪ್ರಜ್ಞೆ ಇವನಿಗೆ ಉಳಿದಿಲ್ಲ. ಎದುರಿಗೇನೇ ಮನೆಯಿದೆ ಎಂದು ಹೇಳಿದರೂ ನಮ್ಮ ಮಾತನ್ನು ಸಹ ಕೇಳಲೊಲ್ಲ, ಕಾರಣ ತಾವೇ ಇವನಿಗೆ ಬೋಧಿಸಿರಿ'' ಎಂಬುದಾಗಿ ಕೇಳಿಕೊಂಡರು. ಆಗ ಆ ಗುರುಗಳು ಅವನಿಗೆ ಉಪದೇಶ ಮಾಡುವ ಗೊಡವೆಗೆ ಹೋಗದೆ ಒಂದು ಕಾರುಗಾಡಿಯನ್ನು ತರಿಸಿ ಅದರಲ್ಲಿ ಆತನನ್ನು ಕೂಡ್ರಿಸಿಕೊಂಡು ಅವನ ಅಮಲು ಇಳಿಯುವವರೆಗೆಅನೇಕ ಕಡೆ ಸುತ್ತಾಡಿ ಕೊನೆಗೆ ಅವನ ಮನೆಯ ಮುಂದೆ ಗಾಡಿಯನ್ನು ತಂದು ನಿಲ್ಲಿಸಿ, ಇಗೋ ಇದೇ ನಿನ್ನ ಮನೆ ಒಳಗೆ ಹೋಗು ಎಂದು ಹೇಳಿದಾಗ ಎಚ್ಚರ ಗೊಂಡಿದ್ದ ಆ ಮನುಷ್ಯನು ಗುರುಗಳಿಗೆ ನಮಸ್ಕರಿಸಿ ''ನೋಡಿದಿರಾ ನನ್ನ ಮನೆ ಎಷ್ಟು ದೂರ ಇದೆ. ಅವರೆಲ್ಲ ಇಲ್ಲಿಯವರೆಗೆ ನನ್ನನ್ನು ಕರೆದುಕೊಂಡು ಬರದೆ ಎಲ್ಲಿಯೋ ನನ್ನ ಮನೆಯನ್ನು ತೋರಿಸುತ್ತಿದ್ದರು''. ಎಂಬುದಾಗಿ ಹೇಳಿ ಗುರುಗಳಿಗೆ ಕೃತಜ್ಞತೆಯನ್ನರ್ಪಿಸಿ ಮನೆಯೊಳಗೆ ಹೋದನಂತೆ. ಅಜ್ಞ ಜೀವಿಗಳ ಸ್ಥಿತಿಯೂ ಹೀಗೆಯೇ ಆಗಿದೆ. ದೇವರಿ ಗಾಗಿ ಅದೆಲ್ಲಿಯೇ ತಿರುಗಾಡಿದರೂ ಕೊನೆಗೆ ತನ್ನ ಹೃದಯ ಮಂದಿರಕ್ಕೇನೇ ಎಲ್ಲರೂ ಬರಬೇಕಾಗುವುದು. ಕೊನೆಗೆ ಅಲ್ಲಿಗೆ ಬರುವದಿದ್ದಾಗ ಅತ್ತಲಿತ್ತ ತಿರುಗಾಡಿ ಬರುವುದಕ್ಕಿಂತ ನೇರವಾಗಿ ಬರುವುದೇ ಶ್ರೇಷ್ಠವಾದ ವಿಧಾನವು. ಅದು ವಿಷಯವಿಮುಖವಾದ ಧೀರ–ಧೀಮಂತ ವ್ಯಕ್ತಿಗಳಿಗೆ ಮಾತ್ರ ಸಾಧ್ಯ.

ಭಕ್ತರಾದವರು ಅದೆಷ್ಟೋ ಸಾರೆ ತಮಗೆ ಇಷ್ಟ ಬಂದ ದೇವಾಲಯಗಳಿಗೆ ದೇವರ ದರ್ಶನಕ್ಕಾಗಿ ಹೋಗುತ್ತಾರೆ. ಅಲ್ಲಿ ಪೂಜಾದಿಗಳನ್ನು ಮಾಡಿಸಿ ಮಹಾ ಮಂಗಳಾರತಿಯನ್ನು ಮಾಡುವಾಗ ದೇವರಿಗೆ ಬೆಳಗಿದ ಆರತಿಯ ತಟ್ಟೆಯನ್ನು ಪೂಜಾರಿಯು ಭಕ್ತರೆಲ್ಲರ ಎದುರಿಗೆ ತೆಗೆದುಕೊಂಡು ಹೋಗುತ್ತಾನೆ. ಆಗ ಭಕ್ತಾದಿಗಳು ಆ ಜ್ಯೋತಿಗೆ ನಮಸ್ಕರಿಸಿ ಆ ತಟ್ಟೆಯಲ್ಲಿ ತಮ್ಮ ಭಕ್ತ್ಯಾನುಸಾರವಾಗಿ ಕಾಣಿಕೆಗಳನ್ನು ಅರ್ಪಿಸುತ್ತಾರೆ. ಇಲ್ಲಿ ಪೂಜಾರಿಯು ಆರತಿಯ ತಟ್ಟೆಯನ್ನು ಭಕ್ತರ ಮುಂದೆ ತಂದದ್ದು ಅವರಿಂದ ದಕ್ಷಿಣೆಯನ್ನು ಆಕರಿಸುವುದಕ್ಕಾಗಿ ಅಲ್ಲ. ಆದರೆ ಯಾವ ದೇವರ ದರ್ಶನಕ್ಕಾಗಿ ನೀವು ಈ ದೇವಸ್ಥಾನಕ್ಕೆ ಬಂದಿರುವಿರೋ ಆ ದೇವನು ನಿಮ್ಮ ಹೃದಯ ಮಂದಿರದಲ್ಲಿದ್ದಾನೆ ಎಂಬುದನ್ನು ನಿಮಗೆ ತಿಳುಹಿಸಿ ನಿಮ್ಮ ಹೃದಯಸ್ಥ ದೇವರಿಗೆ ಬೆಳಗುವುದಕ್ಕಾಗಿ ಆ ತಟ್ಟೆಯನ್ನು ನಿಮ್ಮ ಮುಂದೆ ತರುತ್ತಾನೆ. ಇಂದಿನ ಪೂಜಾರಿಗಳಿಗಾಗಲೀ ಅಥವಾ ಆ ಪೂಜಾರಿಗಳ ಮುಂದೆ ನಿಲ್ಲುವ ಭಕ್ತರಿಗಾಗಲೀ ಇದರ ಮರ್ಮವು ಅದೆಷ್ಟು ತಿಳಿದಿದೆ ? ಅಂತೆಯೇ ಜಗದ್ಗುರು ರೇಣುಕ ಭಗವತ್ಪಾದರು ಎಲ್ಲರಿಗೂ ಸುಲಭವಾದ ಹೃದಯ ಮಂದಿರವೇ ಶಿವನ ಪ್ರಾಕಟ್ಯಸ್ಥಾನವೆಂಬುದಾಗಿ ತಿಳಿಯಪಡಿಸಿದ್ದಾರೆ.

ಶಿವನು ಸರ್ವವ್ಯಾಪಕನಾಗಿರುವುದರಿಂದಲೇ ಭಕ್ತರ ಹೃದಯದಲ್ಲಿಯೂ ಅವನ ನಿವಾಸವಿದೆ. ಹೀಗೆ ಹೃದಯದಲ್ಲಿ ದೇವರ ಪ್ರಾಕಟ್ಯದ ಅನುಭವವನ್ನು ಮಾಡಿಕೊಂಡ ಭಕ್ತನ ದೇಹವೂ ಕೂಡ ಒಂದು ಪವಿತ್ರವಾದ ಮಂದಿರವೇ ಆಗಿರುತ್ತದೆ. ದೇವರಿಗಾಗಿ ಹೊರಗಿನ ಮಂದಿರಗಳನ್ನು ನಿರ್ಮಾಣಗೊಳಿಸುವುದಕ್ಕಿಂತ ಹೃದಯ ಮಂದಿರದಲ್ಲಿಯೇ ಅವನನ್ನು ಆರಾಧಿಸಿ ತನ್ನ ದೇಹವನ್ನೇ ದೇಗುಲವನ್ನಾಗಿ ಮಾಡಿಕೊಳ್ಳಬೇಕು. ಈ ಪದ್ಧತಿಯು ಸಾಮಾಜಿಕ ಸುಧಾರಣೆಯಲ್ಲಿ ಶ್ರೇಷ್ಠವಾದುದಾಗಿದೆ. ಅಂತೆಯೇ ಓರ್ವ ಹಿಂದಿ ಕವಿಯು–''ಮಂದಿರ ತೋಡೋ ಮಸ್ಜಿದ ತೋಡೋ ಲೇಕಿನ್ ಕಿಸೀಕಾ ದಿಲ್ ಮತ್ ತೋಡೋ'' ಎಂಬುದಾಗಿ ಹೇಳಿದ್ದಾನೆ. ಇಲ್ಲಿ ಮಂದಿರ ಮಸೀದೆಗಳನ್ನು ಕೆಡಹುವ ಕಟ್ಟುವ ವಿಚಾರವು ಪ್ರಧಾನವಾಗಿರದೇ ಅವರಡಕ್ಕಿಂತಲೂ ಹೃದಯ ಮಂದಿರವೇ ಶ್ರೇಷ್ಠವಾದುದು. ಆದ್ದರಿಂದ ಅದಕ್ಕೆ ಯಾರೂ ಧಕ್ಕೆ ಮಾಡಬಾರದು ಎಂಬುದಾಗಿ ತಿಳಿಸಿ, ಪ್ರತಿಯೊಬ್ಬರೂ ಹೃದಯಸ್ಥ ಭಗವಂತನನ್ನು ಆರಾಧಿಸಿ ಪರಸ್ಪರ ಪ್ರೀತಿ–ವಾತ್ಸಲ್ಯದಿಂದಿರಬೇಕೆಂಬ ಸಂದೇಶವೇ ಮುಖ್ಯವಾದುದು. ಇದೇ ವಿಷಯವನ್ನೇ ವಿವರಿಸುತ್ತಾ ಪೂಜ್ಯರು–

ಸರ್ವಾತ್ಮಾऽಪಿ ಪರಿಚ್ಛಿನ್ನೋ ಯಥಾ ದೇಹೇಷು ವರ್ತತೇ ।
ತಥಾ ಸ್ವಕೀಯಭಕ್ತೇಷು ಶಂಕರೋ ಭಾಸತೇ ಸದಾ ॥
ನಿತ್ಯಂ ಭಾತಿ ತ್ವದೀಯೇಷು ಯಾತೇ ರುದ್ರ ಶಿವಾ ತನೂಃ ।
ಅಘೋರಾऽಪಾಪಕಾಶೀತಿ ಶ್ರುತಿರಾಹ ಸನಾತನೀ ॥

(ಸಿ. ಶಿ. ೧೦ ; ೭೩–೭೪)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ವಸ್ತುತಃ ಪರಮಾತ್ಮನು ಅಪರಿಚ್ಛಿನ್ನನಾಗಿದ್ದರೂ ಭಕ್ತಿ ಸಂಪನ್ನರಾದ ಭಕ್ತರ ಹೃದಯದಲ್ಲಿ ಭಾಸಿತನಾಗುತ್ತಾನೆ. ಇದನ್ನೇ ಯಜುರ್ವೇದದ ಮಂತ್ರವು ಸಮರ್ಥಿಸುವುದನ್ನು ಪುನಃ ಪೂಜ್ಯರು ಜ್ಞಾಪಿಸಿ

ಕೊಡುತ್ತಲಿದ್ದಾರೆ. ರುದ್ರನ ಮಂಗಲಮಯವಾದ ಶಾಂತಸ್ವರೂಪವು ಪ್ರಾಣಲಿಂಗ–ಭಾವಲಿಂಗಗಳ ರೂಪದಲ್ಲಿ ಪಾಪವಿರಹಿತರಾದ ಭಕ್ತರ ಹೃದಯ ಕಮಲದಲ್ಲಿ ಸದಾ ಪ್ರಕಾಶಮಾನವಾಗಿ ತೋರುತ್ತಲಿರುತ್ತದೆ. ತನ್ನ ಹೃದಯದಲ್ಲಿ ಪರಮಾತ್ಮನ ನಿವಾಸ ವಿದ್ದರೂ ಯೋಗ್ಯತೆ ಇಲ್ಲದೇ ಅವನನ್ನು ಅರಿಯಲಾಗುವುದಿಲ್ಲ. ಅಂತೆಯೇ–

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಹೃದಯಸ್ಥ ಭಗವಂತನ ಪ್ರಾಕಟ್ಯಕ್ಕೆ ಬೇಕಾಗುವ ಅಂತರಂಗ ಬಹಿರಂಗ ಯೋಗ್ಯತೆಯನ್ನು ಕುರಿತು–

ವಿಶುದ್ಧೇಷು ವಿರಕ್ತೇಷು ವಿವೇಕಿಷು ಮಹಾತ್ಮಸು ।
ಶಿವಸ್ತಿಷ್ಠತಿ ಸರ್ವಾತ್ಮಾ ಶಿವಾಲಾಂಚನಧಾರಿಷು ॥

ನಿತ್ಯಂ ಸಂತೋಷಯುಕ್ತಾನಾಂ ಜ್ಞಾನನಿರ್ಧೂತಕರ್ಮಣಾಮ್ ।
ಮಾಹೇಶ್ವರಾಣಾಮಂತಸ್ಥೋ ವಿಭಾತಿ ಪರಮೇಶ್ವರಃ ॥

(ಸಿ. ಶಿ. ೧೦ ; ೭೫–೭೬)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಅಂತರಂಗ ಬಹಿರಂಗಗಳನ್ನು ಶುದ್ಧಮಾಡಿ ಕೊಂಡಿರುವ, ಅಂತೆಯೇ ಇಹಲೋಕ ಪರಲೋಕಗಳ ಸುಖಗಳಲ್ಲಿ ನಿಸ್ಪೃಹರಾಗಿರುವ, ನಿತ್ಯಾನಿತ್ಯ ವಸ್ತುಗಳ ವಿವೇಕವನ್ನು ಪಡೆದಿರುವ, ವಿಶಾಲ ಹೃದಯಿಗಳಾದ ಮತ್ತು ಶಿವ ಲಾಂಛನಗಳಾದ ವಿಭೂತಿ, ರುದ್ರಾಕ್ಷಿಗಳನ್ನು ಧಾರಣ ಮಾಡಿಕೊಂಡಿರುವ, ಸದಾ ಸಂತುಷ್ಟ ಹೃದಯರಾಗಿರುವ ಮತ್ತು ಶಿವಜ್ಞಾನದಿಂದ ಕರ್ಮದಕೋಟಲೆಗಳನ್ನು ಕಳೆದು ಕೊಂಡಿರುವ ಮಹಾತ್ಮರ ಹೃದಯದಲ್ಲಿ; ನಿರ್ಮಲವಾದ ದರ್ಪಣದಲ್ಲಿ ಮುಖದ ಪ್ರತಿಬಿಂಬವು ಸ್ಪಷ್ಟವಾಗಿ ತೋರುವಂತೆ ಶಿವನು ಪ್ರಸ್ಫುರಿಸುತ್ತಾನೆ.

ಅಂತರಂಗದ ಯೋಗ್ಯತೆಗಳು ಶಿವಸಾಕ್ಷಾತ್ಕಾರಕ್ಕೆ ಸಹಾಯಕಗಳಾಗಿರುವಂತೆ ಬಹಿರಂಗದಲ್ಲಿಯ ಭಸ್ಮರುದ್ರಾಕ್ಷಾದಿ ಶಿವಲಾಂಛನಗಳೂ ಕೂಡ ಸಹಾಯಕಗಳಾಗಿರು ತ್ತವೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಲಿಂಗ, ಭಸ್ಮ ಮತ್ತು ರುದ್ರಾಕ್ಷಿಗಳ ಧಾರಣೆಗೆ ಬಹುಮಹತ್ವ ಕೊಡಲಾಗಿದೆ. ಇವುಗಳು ಸದಾ ದೇಹದ ಮೇಲಿದ್ದಾಗ ಮನಸ್ಸಿನಲ್ಲಿ ರಜ, ತಮ ಗುಣಗಳು ಬಾರದೆ ಸದಾ ಸತ್ವಗುಣವೇ ಶಿವಭಕ್ತನ ಹೃದಯದಲ್ಲಿ ರಾರಾಜಿಸುತ್ತದೆ. ಈ ಸತ್ವಗುಣದ ಪ್ರಭಾವದಿಂದಲೇ ಸಾಧಕನು ತನ್ನಂತರಂಗದಲ್ಲಿ ಶಿವನನ್ನು ಸಾಕ್ಷಾತ್ಕರಿಸಿ ಕೊಳ್ಳುವನು.

ವೇಷ–ಭೂಷಣಗಳ ಪ್ರಭಾವದಿಂದಲೂ ಮನುಷ್ಯನು ಉತ್ತಮ ಹಾಗೂ ನಿಕೃಷ್ಟ ಕರ್ಮಗಳನ್ನು ಎಸಗುವುದುಂಟು. ಓರ್ವ ಹೆಣ್ಣು ಮಗಳು ಅತ್ಯಂತ ಸುಂದರವಾದ ಮುತ್ತಿನ ಬಳೆಗಳನ್ನು ಮಾಡಿಸಿ ತನ್ನ ಕೈಗೆ ಅಲಂಕರಿಸಿಕೊಂಡಳು. ಅವಳ ಕೈಯಲ್ಲಿ ಆ ಬಳೆಗಳು ಅಪ್ರತಿಮವಾಗಿ ತೋರತೊಡಗಿದವು. ಆಗ ಅವಳ ಮನಸ್ಸಿನಲ್ಲಿ ಈ ಬಳೆ ಗಳನ್ನು ಊರಿನ ಜನರಿಗೆ ತೋರಿಸಿ ಬರಬೇಕೆಂಬ ಇಚ್ಛೆಯುಂಟಾಯಿತು. ಆಗ ತನ್ನ ಮನೆ ಯನ್ನು ಬಿಟ್ಟು ಅನೇಕ ಜನರ ಮನೆಗಳಿಗೆ ಕೈ ಬೀಸುತ್ತ ಹೋಗಿ ಅವರ ಜೊತೆಗೆ ತನ್ನ ಕೈಗಳನ್ನು ಮುಂದೆ ಮುಂದೆ ಮಾಡಿ ಮಾತನಾಡುತ್ತಿದ್ದಳು. ಹೀಗೆ ಅದೆಷ್ಟೋ ಮನೆಗಳನ್ನು ತಿರುಗಾಡಿದರೂ ಯಾರ ಲಕ್ಷ್ಯವೂ ಆ ಬಳೆಗಳ ಕಡೆಗೆ ಹೋಗದಿರೋಣದರಿಂದ ಆ

ಬಳೆಗಳ ಬಗ್ಗೆ ಇವಳಿಗೆ ಯಾರೂ ಏನನ್ನೂ ಕೇಳಲಿಲ್ಲ, ಆಗ ಇವಳಿಗೆ ಆ ಆಭೂಷಣದಿಂದ ಮನಸ್ಸಿಗೆ ಸಂತೋಷದ ಬದಲಾಗಿ ಅಸಮಾಧಾನವೇ ಉಂಟಾಯಿತು. ಈ ಅಸಮಾಧಾನಕ್ಕೆ ಕಾರಣವಾದದ್ದು ಅವಳಲ್ಲಿಯ ರಜೋಗುಣವು. ರಜೋಗುಣದಿಂದ ಉತ್ಪನ್ನವಾದ ಅಭಿಮಾನ ಅಹಂಕಾರಾದಿಗಳು ಯಾವಾಗಲೂ ಮತ್ತೊಬ್ಬರಿಂದ ಸ್ತುತಿ ಹಾಗೂ ಪ್ರಶಂಸೆಗಳನ್ನೇ ಅಪೇಕ್ಷಿಸುತ್ತಿರುತ್ತವೆ. ಅನ್ಯರಿಂದ ಪ್ರಾಪ್ತವಾಗುವ ಸ್ತುತಿಯೇ ಅಹಂಕಾರದ ಆಹಾರವು. ಅನ್ಯರ ಸ್ತುತಿಯು ದೊರೆಯದೇ ಇದ್ದಾಗ ಅಭಿಮಾನವು ವಿಕ್ಷಿಪ್ತ ರೂಪವನ್ನು ತಾಳಿ ಅನರ್ಥವನ್ನೇ ಎಸಗುವುದು. ತಾನು ತೊಟ್ಟ ಬಳೆಯ ಬಗ್ಗೆ ಯಾರಿಂದಲೂ ಪ್ರಶಂಸೆ ದೊರೆಯದ ಕಾರಣ ಈ ವೃದ್ಧೆಯಲ್ಲಿಯ ಅಭಿಮಾನವು ಸಂತೋಷದ ಬದಲಾಗಿ ಕ್ರೋಧ ರೂಪವನ್ನು ತಾಳಿತು. ಅದೇ ಆಗ ಸಾಯಂಕಾಲದ ಸಮಯ, ಆ ಮುದುಕಿ ಕೈಯಲ್ಲೊಂದು ಕಡ್ಡಿಡಬ್ಬಿ (ಬೆಂಕಿಪೊಟ್ಟಣ)ಯನ್ನು ಹಿಡಿದು ಕೊಂಡು ಊರಹೊರಗೆ ಹೋಗಿ ಅಲ್ಲಿರುವ ಬಣಿವೆಯೊಂದಕ್ಕೆ ಬೆಂಕಿಯನ್ನಿಟ್ಟಳು ಕ್ಷಣಾರ್ಧದಲ್ಲಿ ಆ ಬೆಂಕಿಯು ವಿರಾಡ್ರೂಪವನ್ನು ತಾಳಿದಾಗ ಅದನ್ನಾರಿಸಲು ಊರಿನ ಜನರೆಲ್ಲ ನೀರು ತುಂಬಿದ ಕೊಡಗಳನ್ನು ಹೊತ್ತು ಧಾವಿಸಿ ಬಂದರು. ಜನರೆಲ್ಲ ಅಗ್ನಿ ಯನ್ನಾರಿಸುತ್ತಿರುವಾಗ ಅಲ್ಲಿಯೇ ಕುಳಿತ ಆ ಮುದುಕಿಯ ಹತ್ತಿರ ಒಬ್ಬ ಹೆಣ್ಣುಮಗಳು ಬಂದು ಆ ಬೆಂಕಿಯ ಬೆಳಕಿನಲ್ಲಿ ಹೊಳೆಯುತ್ತಿರುವ ಮುದುಕಿಯ ಮುತ್ತಿನ ಬಳೆಗಳನ್ನು ಕಂಡು, ಏನಜ್ಜೀ ನಿನ್ನ ಬಳೆಗಳು ಎಷ್ಟು ಸುಂದರವಾಗಿವೆ ? ಇವುಗಳನ್ನು ಎಲ್ಲಿ ಮಾಡಿಸಿ ರುವೆ ? ಎಂಬುದಾಗಿ ಪ್ರಶ್ನಿಸಿದಳು. ಬಳೆಯ ಬಗ್ಗೆ ಕೇಳಿದ ಪ್ರಶ್ನೆಯನ್ನು ಆಲಿಸಿ ಮುದುಕಿಯ ಮನಸ್ಸಿನಲ್ಲಿ ಸಂತೋಷದ ಅಲೆಗಳು ಮೂಡಿಬಂದವು. ಆಗ ಆ ಸಂತೋಷದ ಭರದಲ್ಲಿ : ಏನೇ ನಿನ್ನೆ ಮನೆಗೆ ಬಂದಾಗ ಈ ಬಳೆಯ ವಿಷಯವಾಗಿ ಕೇಳಿದ್ದರೆ ನಾನೇಕೆ ಈ ಬಣಿವೆಗೆ ಬೆಂಕಿ ಹಚ್ಚುತ್ತಿದ್ದೆ? ಎಂದು ಉದ್ಗರಿಸಿದಳು. ಆಗ ಇವಳೇ ಅಪರಾಧಿ ಎಂದು ಜನರಿಗೆ ತಿಳಿದಾಗ ಅಗ್ನಿಯಿಂದುಂಟಾದ ಹಾನಿಯ ಹಣವನ್ನು ಅವಳಿಂದ ತುಂಬಿಸಿಕೊಂಡರು. ನೋಡಿದಿರಾ ರಜೋಗುಣದ ಮಹಿಮೆಯನ್ನು ? ಮನುಷ್ಯ ಸಾತ್ವಿಕನಾಗಬೇಕಾದರೆ, ಸಾತ್ವಿಕ ವೇಷ–ಭೂಷಣಗಳ ಅವಶ್ಯಕತೆ ಇದೆ. ಅಂತೆಯೇ ಪೂಜ್ಯಪಾದರು ಶಿವಭಕ್ತನಿಗೆ ಶಿವಲಾಂಛನಗಳು ಬೇಕೆಂಬುದನ್ನು ನಿರೂಪಿಸಿ ದ್ದಾರೆ. ಹೀಗೆ ಶಿವಲಾಂಛನಧಾರಿಗಳೂ, ವಿಶುದ್ಧ ಹೃದಯರೂ ಆದ ಶಿವಭಕ್ತರ ಹೃದಯ ದಲ್ಲಿ ಶಿವನು ಪ್ರಾಕಟ್ಯವನ್ನು ಹೊಂದುವನು.

ಈ ರೀತಿಯಾಗಿ ಸಹಜದಾನದಿಂದ ಪ್ರಾರಂಭಗೊಂಡ ಮಾಹೇಶ್ವರನ ಜೀವನವು ಅರ್ಥಾತ್ ಅವನ ಸ್ಥಿತಿಯು ಲಿಂಗನಿಷ್ಠಾದಿಗುಣಗಳಿಂದ ಉತ್ತರೋತ್ತರವಾಗಿ ಪ್ರಗತಿ ಯನ್ನು ಹೊಂದುತ್ತ ಪೂರ್ವಾಶ್ರಯ ಮತ್ತು ಸರ್ವಾದ್ವೈತ ನಿರಸನಗಳನ್ನು ಮಾಡಿ, ತನ್ನಿಷ್ಟಲಿಂಗದಲ್ಲಿ ಪ್ರತಿದಿವಸ ಶಿವನ ಆವಾಹನೆ–ವಿಸರ್ಜನೆಗಳನ್ನು ಮಾಡದೇ ಅದರಲ್ಲಿ ಶಿವನ ನಿತ್ಯ ನಿವಾಸ ವನ್ನು ನಂಬಿ, ಶಿವನ ಅಷ್ಟತನುಗಳು ಸಾಕ್ಷಾತ್ ಶಿವನೆಂದು ಭಾವಿಸದೆ, ಶಿವನು ಸರ್ವತ್ರ ವ್ಯಾಪಕನಾಗಿದ್ದರೂ ಕೇವಲ ತನ್ನಿಷ್ಟಲಿಂಗದಲ್ಲಿಯೇ ನಿಷ್ಠೆಯನ್ನು ಬೆಳೆಸಿಕೊಂಡು, ತನ್ನ ಹೃದಯ ಮಂದಿರವನ್ನು ಶಿವಪ್ರಾಕಟ್ಯದ ಕೇಂದ್ರ ಬಿಂದುವನ್ನಾಗಿ ಭಾವಿಸಿ, ಭಕ್ತದೇಹಿಕ ಲಿಂಗಸ್ಥಲವನ್ನು ತಲುಪಿದಾಗ ಪೂರ್ಣಗೊಳ್ಳುತ್ತದೆ.

''ಶಿವ ಏಕೋ ಧ್ಯೇಯಃ ಶಿವಂಕರಃ ಸರ್ವಮನ್ಯತ್ ಪರಿತ್ಯಜ್ಯ'' ಅಂದರೆ ಕಲ್ಯಾಣ ಕಾರಿಯಾದ ಶಿವನೋರ್ವನೇ ಧ್ಯಾನಯೋಗ್ಯನು. ಕಾರಣ ಎಲ್ಲವನ್ನು ಪರಿತ್ಯಜಿಸಿ ಅವನೋರ್ವನನ್ನೇ ಧ್ಯಾನಿಸಬೇಕು ಎನ್ನುವ ಶ್ರುತಿವಚನದಂತೆ ನಿಜೇಷ್ಟ ಲಿಂಗದಲ್ಲಿಯೇ ರತಿಯನ್ನು ಹೊಂದಿ ಅನನ್ಯಭಾವದಿಂದ ಅದನ್ನು ಪೂಜಿಸುತ್ತ ವಿಶ್ವವ್ಯಾಪಕನಾದ ಶಿವನನ್ನು ತನ್ನ ಹೃದಯದಲ್ಲಿ ಧ್ಯಾನಿಸುತ್ತ ವಿಶ್ವವನ್ನೇ ಶಿವಮಯವನ್ನಾಗಿ ತಿಳಿದುಕೊಳ್ಳುವ ಯೋಗ್ಯತೆಯನ್ನು ಪಡೆದು ಈ ಮಾಹೇಶ್ವರನು ಮುಂದಿನದಾದ ಪ್ರಸಾದಿಸ್ಥಲವನ್ನು ತಲುಪುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಾಹೇಶ್ವರ ಸ್ಥಲದ ಸಕಲ ಅವಾಂತರ ಸ್ಥಲಗಳ ಬಗ್ಗೆ ಉಪದೇಶಿಸಿದ ಮರ್ಮವನ್ನು ಸಾಧಕನು ಸಾವಧಾನವಾಗಿ ಅಭ್ಯಸಿಸಿ ಆ ಸ್ಥಿತಿಯನ್ನು ಪ್ರಾಪ್ತಿಮಾಡಿಕೊಳ್ಳಲು ಪ್ರಯತ್ನಿಸಬೇಕು.

ಪೂಜ್ಯಪಾದರು ಈ ಮಾಹೇಶ್ವರ ಸ್ಥಲವನ್ನು ಪೂರ್ಣಗೊಳಿಸುತ್ತ ಪುನಃ–

ಅನ್ಯತ್ರ ಶಂಭೋರತಿಮಾತ್ರಶೂನ್ಯೋ
ನಿಜೇಷ್ಟಲಿಂಗೇ ನಿಯತಾಂತರಾತ್ಮಾ|
ಶಿವಾತ್ಮಕಂ ವಿಶ್ವಮಿದಂ ವಿಬುಧ್ಯನ್
ಮಾಹೇಶ್ವರೋಽಸೌ ಭವತಿ ಪ್ರಸಾದಿ ||

(ಸಿ. ಶಿ. ೧೦–೭೭)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ–ಶಿವನು ಸರ್ವವ್ಯಾಪಕ ನಾಗಿದ್ದರೂ, ಮಾಹೇಶ್ವರನು ಸರ್ವತ್ರ ಶಿವರತಿ ಮಾಡದೇ ತನ್ನ ಇಷ್ಟಲಿಂಗದಲ್ಲಿಯೇ ಆ ರತಿಯನ್ನು ಬೆಳೆಯಿಸಿಕೊಳ್ಳಬೇಕು. ಪೂಜಾರೂಪ ರತಿಯನ್ನು ಇಷ್ಟಲಿಂಗದಲ್ಲಿ ಸೀಮಿತ ಗೊಳಿಸಿದ್ದರೂ ಶಿವನನ್ನು ವಿಶ್ವದ ತುಂಬೆಲ್ಲ ಭಾವಿಸಬೇಕು. ಹೀಗೆ ವಿಶ್ವದಲ್ಲೆಲ್ಲ ಶಿವ ಭಾವನೆಯನ್ನು ಹೊಂದಿ, ಇಷ್ಟಲಿಂಗದಲ್ಲಿ ನಿಷ್ಠೆಯನ್ನು ತಾಳಿ, ತನ್ನ ಹೃದಯ ಮಂದಿರದಲ್ಲಿ ಶಿವನ ಪ್ರಾಕಟ್ಯದ ಯೋಗ್ಯತೆಯನ್ನು ಪಡೆದ ಆ ಮಾಹೇಶ್ವರನೇ ಮುಂದೆ ಪ್ರಸಾದಿ ಎಂಬುದಾಗಿ ಕರೆಯಲ್ಪಡುತ್ತಾನೆ. ನೀವೆಲ್ಲ ಈ ಮಾಹೇಶ್ವರನ ಸ್ಥಿತಿಯನ್ನು ಪಡೆಯು ವಂತಾಗಲಿ ಎಂಬುದಾಗಿ ಹರಸಿ, ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ ದಶಮ
ಪರಿಚ್ಛೇದವು ಪೂರ್ಣವಾದುದು.

ದಿನಾಂಕ ೨ ಸಪ್ಟೆಂಬರ್, ೧೯೯೧
(ಸ್ಥಾನ ನಾಗಪುರ)

■■

# ಏಕಾದಶ ಪರಿಚ್ಛೇದ

## ಆಶೀರ್ವಚನ-೧

# ಪ್ರಸಾದಿಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಈ ಪವಿತ್ರವಾದ ಶ್ರಾವಣ ಮಾಸದಲ್ಲಿ ದಾರ್ಶನಿಕ ಕ್ಷೇತ್ರದಲ್ಲಿ ಮಹಾನ್ ಗ್ರಂಥವಾಗಿರುವ ಶ್ರೀ ಸಿದ್ಧಾಂತ ಶಿಖಾಮಣಿಯ ತತ್ತ್ವಜ್ಞಾನವನ್ನು ಕುರಿತು ನೀವೆಲ್ಲ ಶ್ರದ್ಧೆಯಿಂದ ಆಲಿಸುತ್ತ ಬಂದಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಮಾಹೇಶ್ವರ ಸ್ಥಲದ ಬಗ್ಗೆ ಸಂಪೂರ್ಣವಾಗಿ ತಿಳಿಯಪಡಿಸಿದ ನಂತರ, ಈ ಮಾಹೇಶ್ವರ ಸ್ಥಲದ ಸಾಧಕನೇ ಮುಂದೆ ಪ್ರಸಾದಿ ಆಗುತ್ತಾನೆಂಬುದಾಗಿ ಅಪ್ಪಣೆ ಕೊಡಿಸಿದ್ದನ್ನಾಲಿಸಿದ ಅಗಸ್ತ್ಯ ಮಹರ್ಷಿಯು ಪೂಜ್ಯರನ್ನು ಕುರಿತು–

ಉಕ್ತೋ ಮಾಹೇಶ್ವರಃ ಸಾಕ್ಷಾಲ್ಲಿಂಗನಿಷ್ಠಾದಿಧರ್ಮವಾನ್ ।
ಕಥಮೇಷಃ ಪ್ರಸಾದೀತಿ ಕಥ್ಯತೇ ಗಣನಾಯಕ ॥

(ಸಿ.ಶಿ. ೧೧–೧)

ಈ ರೀತಿಯಾಗಿ ಪ್ರಶ್ನಿಸುತ್ತಾನೆ. ತಾತ್ಪರ್ಯವೇನೆಂದರೆ, ಈ ಮೊದಲು ಹೇಳಲ್ಪಟ್ಟ ಲಿಂಗ ನಿಷ್ಠಾ ಮೊದಲಾದ ಧರ್ಮಾಚರಣೆಸಂಪನ್ನನಾದ ಮಾಹೇಶ್ವರನು ಅದಾವ ವೈಶಿಷ್ಟ್ಯದ ಪರಿಣಾಮವಾಗಿ 'ಪ್ರಸಾದಿ' ಎಂಬುದಾಗಿ ಕರೆಯಲ್ಪಡುತ್ತಾನೆ ? ಈ ಪ್ರಶ್ನೆಗೆ ಉತ್ತರವಾಗಿ ಪೂಜ್ಯಪಾದರು–

ಲಿಂಗನಿಷ್ಠಾದಿಭಾವೇನ ಧ್ವಸ್ತಪಾಪನಿಬಂಧನಃ ।
ಮನಃಪ್ರಸಾದಯೋಗೇನ ಪ್ರಸಾದೀತ್ಯೇಷ ಕಥ್ಯತೇ ॥

(ಸಿ.ಶಿ. ೧೧–೨)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಸಾಧಕನು ತನ್ನ ಇಷ್ಟಲಿಂಗದಲ್ಲಿ ನಿತಾಂತ ನಿಷ್ಠೆಯುಳ್ಳವನಾದ್ದರಿಂದ ಅವನ ಪಾಪ ಬಂಧನಗಳೆಲ್ಲ ಕಳಚಿಹೋಗಿ ಯಾವಾಗ ಮನಸ್ಸಿನಲ್ಲಿ ಪ್ರಸನ್ನತೆಯು ಒಡಮೂಡುತ್ತದೆಯೋ, ಆಗ ಆತನು ಪ್ರಸಾದಿ ಎಂದು ಕರೆಯಲ್ಪಡುತ್ತಾನೆ. ಸದಾ ಪ್ರಸನ್ನಚಿತ್ತತೆಯೇ ಪ್ರಸಾದಿಯ ಪ್ರಮುಖವಾದ ಲಕ್ಷಣವು.

ವೀರಶೈವ ಸಿದ್ಧಾಂತದಲ್ಲಿ ಸಾಧಕನಲ್ಲಿಯ ಭಕ್ತಿಯು ವಿಕಾಸಗೊಂಡಂತೆ ಅವನ ಸ್ಥಿತಿಯಲ್ಲಿ ವಿಕಾಸವು ಕಂಡುಬರುವುದು. ಈ ಸಿದ್ಧಾಂತದಲ್ಲಿ ಹೇಳಲಾಗಿರುವ ಆರು ವಿಧ ಭಕ್ತಿಗಳಲ್ಲಿ ಮೂರನೆಯದಾದ ಭಕ್ತಿಯೇ 'ಅವಧಾನ ಭಕ್ತಿ'ಯು. ಇದು ಪ್ರಸಾದಿ ಸ್ಥಲದ

ಸಾಧಕನಲ್ಲಿ ಇರುವಂಥಾದ್ದಾಗಿದೆ. ಮೊದಲನೆಯದಾದ ಶ್ರದ್ಧಾ ಭಕ್ತಿಯು ವಿಕಾಸಗೊಂಡು ನಿಷ್ಠಾಭಕ್ತಿಯಾಗಿ ಪರಿವರ್ತಿಸುತ್ತದೆ. ಮುಂದೆ ಆ ನಿಷ್ಠಾಭಕ್ತಿಯೇ ವಿಕಾಸಗೊಂಡು ಅವಧಾನರೂಪವನ್ನು ತಾಳುತ್ತದೆ. 'ಅವಧಾನ' ಎಂದರೆ ಸಾವಧಾನತೆ–ಜಾಗ್ರತೆ ಎಂದರ್ಥ. ಸದಾ ಜಾಗೃತನಾಗಿರುವ ಸಾಧಕನೇ ಪ್ರಸಾದಿಯಾಗಬಲ್ಲನು. ಬಹುತೇಕ ವಾಗಿ ಮನುಷ್ಯನು ಜಾಗೃತನಾಗಿರುವದು ವಿರಳ, ಅವನು ಒಂದಿಲ್ಲೊಂದು ಆಲೋಚನೆ ಯಲ್ಲಿ ಮಗ್ನನಾಗಿರುತ್ತಾನೆ. ಅಂತೆಯೇ ಶಾಸ್ತ್ರಕಾರರು–ಜಾಗ್ರತೆಯಲ್ಲಿಯ ಜಾಗ್ರತೆ, ಜಾಗ್ರತೆಯಲ್ಲಿಯ ಸ್ವಪ್ನ ; ಜಾಗ್ರತೆಯಲ್ಲಿಯ ಸುಷುಪ್ತಿ ಎಂಬುದಾಗಿ ಜಾಗ್ರತಾವಸ್ಥೆಯನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. ಆತ್ಮದ ಅರಿವಿನಲ್ಲಿರುವುದು ಜಾಗ್ರತದೊಳಗಿನ ಜಾಗ್ರತವಾದರೆ, ಮನೋರಾಜ್ಯವು (ಕಲ್ಪನಾವಿಲಾಸ) ಜಾಗ್ರತೆಯಲ್ಲಿಯ ಸ್ವಪ್ನವೆಂಬು ದಾಗಿ ಕರೆಯಲ್ಪಡುತ್ತದೆ. ಇನ್ನು ಯಾವದೋ ಕಾರಣದಿಂದಾಗಿ ದಿಙ್ಮೂಢನಾಗಿ ಕುಳಿತಿರುವದು ಜಾಗ್ರತೆಯಲ್ಲಿಯ ಸುಷುಪ್ತಿಯು. ಸಾಮಾನ್ಯವಾಗಿ ಮನುಷ್ಯನು ನೋಡಲು ಎಚ್ಚರವಿದ್ದಂತೆ ತೋರುತ್ತಿದ್ದರೂ ಆತನು ನಿಜವಾಗಿ ಎಚ್ಚರವಾಗಿರದೆ ಯಾವದೋ ಒಂದು ಕಲ್ಪನಾ ವಿಲಾಸದಲ್ಲಿ ಮುಳುಗಿ ಹೋಗಿರುತ್ತಾನೆ. ಮನುಷ್ಯನ ಈ ಮಾನಸಿಕ ವಿಕಾರವನ್ನು ದೂರಮಾಡಿ ಮನಸ್ಸನ್ನು ಪರಿಶುದ್ಧಗೊಳಿಸಿ ಅದನ್ನು ಸದಾ ಪ್ರಸನ್ನತೆಯಿಂದ ಇಡುವ ಸ್ಥಲವೇ 'ಪ್ರಸಾದಿಸ್ಥಲವು'. ಅಂತೆಯೇ ಪೂಜ್ಯಪಾದರು– 'ಮನಃಪ್ರಸಾದಯೋಗೇನ ಪ್ರಸಾದೀತ್ಯೇಷ ಕಥ್ಯತೇ' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಯಾರ ಮನಸ್ಸಿನಲ್ಲಿ ಸದಾ ಪ್ರಸನ್ನತೆಯಿರುವದೋ ಅವನೇ ಪ್ರಸಾದಿ. ಪ್ರಸನ್ನತೆಯು ಮನಸ್ಸಿನ ಒಂದು ಉತ್ಕೃಷ್ಟವಾದ ಗುಣವು.

ಮನಸ್ಸಿನ ಪ್ರಸನ್ನತೆಯೇ ಆರೋಗ್ಯದ ಮೂಲಸೂತ್ರವು. ಮನಸ್ಸಿನಲ್ಲಿ ಅಸಂತೋಷ, ಅಸಮಾಧಾನತೆಗಳು ತಾಂಡವವಾಡತೊಡಗಿದರೆ ಅನಾರೋಗ್ಯಕ್ಕೆ ಆಮಂತ್ರಣವಿತ್ತಂತೆ. ಸದಾ ಪ್ರಸನ್ನಚಿತ್ತನಾಗಿರುವ ವ್ಯಕ್ತಿಯ ಸಮೀಪದಲ್ಲಿ ರೋಗವು ಸುಳಿದಾಡಲು ಸಾಧ್ಯವಿಲ್ಲ. ಮನುಷ್ಯನಿಗೆ ಪ್ರಾಪ್ತವಾಗುವ ರೋಗಗಳಲ್ಲಿ ವಾತ, ಪಿತ್ತ ಹಾಗೂ ಕಫಗಳೆಂಬ ತ್ರಿದೋಷಜನ್ಯ ರೋಗಗಳಿಗಿಂತಲೂ ಮನೋಜನ್ಯ ರೋಗಗಳ ಸಂಖ್ಯೆಯು ಅಧಿಕವಾದುದು. ನೂರಕ್ಕೆ ತೊಂಭತ್ತರಷ್ಟು ರೋಗಗಳು ಮನೋಜನ್ಯ ಗಳೆಂಬುದಾಗಿ ವಿಜ್ಞಾನಿಗಳ ಅಭಿಪ್ರಾಯವು. ಅಂತೆಯೇ ನಿರಾಮಯ ಜೀವನ ಸಾಗಿಸಲು ಪ್ರತಿಯೊಬ್ಬರೂ ತಮ್ಮ ತಮ್ಮ ಮನಸ್ಸನ್ನು ಸದಾ ಪ್ರಸನ್ನವಾಗಿರಿಸಲು ಪ್ರಯತ್ನಿಸಬೇಕು. ಎಲ್ಲರ ಮನಸ್ಸು ಸದಾ ಏಕೆ ತಾನೇ ಪ್ರಸನ್ನವಾಗಿ ಇರಲಾರದು ? ಎಂಬ ಪ್ರಶ್ನೆಗೆ ಅವರವರ ಮನಸ್ಸಿನಲ್ಲಿ ತುಂಬಿಕೊಂಡಿರುವ ಅತೃಪ್ತವಾಸನೆಗಳೇ ಕಾರಣಗಳು ಎಂದು ಉತ್ತರಿಸ ಬಹುದು. ಮನಸ್ಸಿನ ಎಲ್ಲ ವಾಸನೆಗಳನ್ನು ತೃಪ್ತಿಪಡಿಸುವುದು ಯಾರಿಂದಲೂ ಸಾಧ್ಯವಿಲ್ಲ. ಹಟಮಾರಿಯಾದ ಮಗುವನ್ನು ಸಮಾಧಾನಗೊಳಿಸುವುದು ಎಷ್ಟೊಂದು ದುಸ್ತರವೋ ಈ ಮನಸ್ಸನ್ನು ಸಮಾಧಾನಗೊಳಿಸುವುದೂ ಸಹ ಅಷ್ಟೇ ದುಸ್ತರವಾದುದು. ಅಂತೆಯೇ ಗೀತೆ ಯಲ್ಲಿ ಭಗವಂತನು–''ಚಂಚಲವಾದ ಮನಸ್ಸನ್ನು ನಿಗ್ರಹಿಸುವದೆಂದರೆ ವಾಯುವನ್ನು ನಿಗ್ರಹಿಸುವಷ್ಟೇ ದುಷ್ಕರ''ವೆಂಬುದಾಗಿ ತಿಳಿಯಪಡಿಸಿದ್ದಾನೆ. ಯಾವುದಾದರೊಂದು ವಸ್ತುವು ಮನಸ್ಸಿಗೆ ಬೇಕೆನಿಸಿದಾಗ ಅದು ದೊರೆಯುವವರೆಗೆ ಮನಸ್ಸು ವ್ಯಗ್ರವಾಗಿರುತ್ತದೆ.

ಅಪೇಕ್ಷಿತವಾದ ವಸ್ತುವು ದೊರೆತಾಗ ಆ ಒಂದು ಕ್ಷಣ ಮನಸ್ಸು ಸಮಾಧಾನಗೊಂಡರೂ, ಮರುಕ್ಷಣದಲ್ಲಿ ಬೇರೊಂದು ವಸ್ತುವಿನ ಬಯಕೆಯಲ್ಲಿ ಪುನಃ ವ್ಯಗ್ರವಾಗುತ್ತದೆ. ಅಂತೆಯೇ ಈ ಜಗತ್ತಿನಲ್ಲಿಯ ಎಲ್ಲ ಭೋಗ ಭಾಗ್ಯಗಳನ್ನು ಒಬ್ಬನಿಗೇ ಕೊಡಮಾಡಿದರೂ ಅವನು ಸಂತೃಪ್ತನಾಗಲಾರ. ಆದ್ದರಿಂದ ಪ್ರಪಂಚದ ಅದಾವ ವಸ್ತುವನ್ನು ಕೊಟ್ಟರೂ ಮನಸ್ಸು ಪರಿಪೂರ್ಣವಾಗಿ ತೃಪ್ತವಾಗಲಾರದು. ಇನ್ನು ಮನಸ್ಸಿಗೆ ಪರಿಪೂರ್ಣ ತೃಪ್ತಿದೊರೆಯ ಬೇಕಾದರೆ ಅದಕ್ಕೆ ಪರಮಾತ್ಮನ ಪ್ರಾಪ್ತಿಯ ಹೊರತಾಗಿ ಬೇರಾವ ಉಪಾಯವಿಲ್ಲ.

ಓರ್ವ ಚಕ್ರವರ್ತಿ ಮಹಾರಾಜನು ಅತ್ಯಂತ ಉದಾರಿಯಾಗಿ ಪ್ರತಿದಿವಸ ಅನೇಕ ಜನ ಯಾಚಕರಿಗೆ ಭಿಕ್ಷೆಯನ್ನು ಕೊಡುತ್ತಿದ್ದನು. ಅವನದೊಂದು ವಿಶಿಷ್ಟವಾದ ನಿಯಮ ವಿತ್ತು. ಅದೇನೆಂದರೆ, ಮೊದಲನೆಯ ಭಿಕ್ಷುಕನು ಏನನ್ನು, ಎಷ್ಟನ್ನು ಕೇಳುತ್ತಾನೆಯೋ ಅಷ್ಟೆಲ್ಲ ಕೊಟ್ಟು ಅವನನ್ನು ತೃಪ್ತಿಪಡಿಸುವುದು. ರಾಜನ ಈ ನಿಯಮವನ್ನರಿತು ಅನೇಕ ಜನ ಭಿಕ್ಷುಕರು ತಾವು ಮೊದಲನೆಯ ಭಿಕ್ಷುಕರಾಗಲು ಹವಣಿಸುತ್ತಿದ್ದರು. ರಾಜನ ಈ ದಿನಚರಿಯು ನಡೆಯುತ್ತಿದ್ದಾಗ ಒಂದು ದಿನ ಓರ್ವ ಭಿಕ್ಷುಕನು ರಾಜ ದರ್ಬಾರದಲ್ಲಿ ಪ್ರಥಮ ಭಿಕ್ಷುಕನಾಗಿ ಬಂದು ''ಭಿಕ್ಷಾಂ ದೇಹಿ'' ಎಂಬುದಾಗಿ ಯಾಚಿಸಿದನು. ಅಂದಿನ ಆ ಪ್ರಥಮ ಭಿಕ್ಷುಕನ ಧ್ವನಿಯನ್ನು ಆಲಿಸಿದ ಸೇವಕರು ಆತನಲ್ಲಿಗೆ ಬಂದು ನಿನಗೇನು ಬೇಕು ? ಎಷ್ಟು ಬೇಕು ? ಎಂಬುದಾಗಿ ತಮ್ಮ ಪದ್ಧತಿಯಂತೆ ಕೇಳಿದರು. ಇಂದು ಪ್ರಥಮ ಭಿಕ್ಷುಕನಾಗಿ ಬಂದ ಯಾಚಕನು ಹಿಂದೆಲ್ಲ ಬಂದು ಹೋದವರಂತಾಗಿರದೆ ವಿಲಕ್ಷಣ ನಾಗಿದ್ದನು. ಅಂತೆಯೇ ಆತನು ಹೀಗೆ ನುಡಿದನು–''ನನಗೇನು ಬೇಕು, ಎಷ್ಟು ಬೇಕು ಎಂಬುವದಕ್ಕಿಂತಲೂ ನೀವು ಏನನ್ನು, ಎಷ್ಟನ್ನು ಕೊಡುವಿರೋ ಅಷ್ಟನ್ನು ನಾನು ಪಡೆದು ಕೊಂಡು ಹೋಗುತ್ತೇನೆ'' ಎಂದನು. ಆಗ ರಾಜಭಟರು ಇದು ನಮ್ಮ ರಾಜಾಜ್ಞೆಗೆ ವಿಪರೀತ ವಾದುದು. ಕಾರಣ ನಿನಗೇನು ಬೇಕು, ಎಷ್ಟು ಬೇಕು ಅದನ್ನೆಲ್ಲ ಬೇಡಲೇಬೇಕು ಎಂಬುದಾಗಿ ನುಡಿದರು. ಆಗ ಆ ಯಾಚಕನು ರಾಜಭಟರ ಬಲುಮೆಯನ್ನು ಕಂಡು ನಸುನಕ್ಕು, ''ಆಗಲಿ, ಇಗೋ ನನ್ನ ಕೈಯಲ್ಲಿ ಇದೊಂದು ಪುಟ್ಟ ಜೋಳಿಗೆ ಇದೆ, ಇದು ತುಂಬುವವರೆಗೆ ನೀವು ಏನುಬೇಕಾದ್ದನ್ನು ಹಾಕಬಹುದು'' ಎಂದನು. ಯಾಚಕನ ಈ ಮಾತನ್ನು ಕೇಳಿ ರಾಜಭಟರು ಈ ಸಣ್ಣ ಜೋಳಿಗೆಯನ್ನು ದವಸ–ಧಾನ್ಯಗಳಿಂದ ತುಂಬುವದಕ್ಕಿಂತ ಮುತ್ತುರತ್ನಗಳಿಂದ ತುಂಬೋಣವೆಂದು ವಿಚಾರಿಸಿ ರಾಜನ ಬೊಕ್ಕಸ ದಿಂದ ಬೆಲೆಬಾಳುವ ಮುತ್ತು–ರತ್ನಗಳನ್ನು ಒಂದು ಬುಟ್ಟಿಯಲ್ಲಿ ತುಂಬಿತಂದು ಜೋಳಿಗೆ ಯಲ್ಲಿ ಸುರುವಿದರು. ಜೋಳಿಗೆಯೇನೂ ತುಂಬಿದ ಹಾಗೆ ಕಾಣಲಿಲ್ಲ. ಪುನಃ ಮತ್ತೊಂದು ಬುಟ್ಟಿಯನ್ನು ತಂದು ಸುರುವಿದರು. ಹೀಗೆ ಇಡೀ ಖಜಾನೆಯೇ ಖಾಲಿಯಾದರೂ ಜೋಳಿಗೆಯೇನೂ ತುಂಬಲಿಲ್ಲ. ಈ ಅತ್ಯಾಶ್ಚರ್ಯ ಘಟನೆಯನ್ನು ಆಲಿಸಿದ ಮಹಾ ರಾಜನು ಆ ಜೋಳಿಗೆಯನ್ನು ನೋಡುವದಕ್ಕಾಗಿ ಭಿಕ್ಷುಕನತ್ತ ಧಾವಿಸಿ ಬಂದ. ನೋಡಲು ಅತೀ ಚಿಕ್ಕದಾದ ಜೋಳಿಗೆ ಆದರೆ ಇದು ತುಂಬದಿರಲು ಕಾರಣವೇನು ? ಎಂಬುದಾಗಿ ಆಲೋಚಿಸಿ ಆಲೋಚಿಸಿ, ಕೊನೆಗೆ ಭಿಕ್ಷುಕನನ್ನೇ ಕೇಳಿದ–ಇದು ಎಂತಹ ಜೋಳಿಗೆ ಎಂದು. ಆಗ ಭಿಕ್ಷುಕನು–''ದೊರೆಗಳೇ ! ಇದು ಬಟ್ಟೆಯ ಜೋಳಿಗೆಯಲ್ಲ, ಮನುಷ್ಯನ

ಮನಸ್ಸೆಂಬ ಜೋಳಿಗೆಯಿದು. ಇದರಲ್ಲಿ ಇಡೀ ವಿಶ್ವವನ್ನೇ ಹಾಕಿದರೂ ಇದೆಂದಿಗೂ ತುಂಬಲಾರದು'' ಎಂದನು. ಆಗ ರಾಜನು ''ಹಾಗಾದರೆ ಈ ಜೋಳಿಗೆ ತುಂಬುವ ದಾದರೂ ಏತರಿಂದ ?'' ಎಂದು ಕೇಳಿದನು. ಆಗ ಆ ಯಾಚಕನು– ''ಎಲೈ ಮಹಾರಾಜರೇ ! ಇದು ಪರಮಾತ್ಮನೋರ್ವನಿಂದಲೇ ತುಂಬುವದೇ ವಿನಃ ಬೇರಾವುದರಿಂದಲೂ ತುಂಬಲಾರದು'' ಎಂದನು. ಭಿಕ್ಷುಕನ ಈ ಮಾತನ್ನು ಕೇಳಿದ ಮಹಾರಾಜನಿಗೆ ಮನಸ್ಸಿನ ಹಸಿವನ್ನಡಗಿಸುವ ಉಪಾಯವು ಹೊಳೆಯಿತು.

ಯಾರ ಮನಸ್ಸಿನಲ್ಲಿ ಪರಮಾತ್ಮನ ಚಿಂತನೆ ಅಹರ್ನಿಶ ನಡೆಯುತ್ತದೆಯೋ ಅವನೇ ಸದಾ ಸಂತುಷ್ಟನಾಗಿರಬಲ್ಲನು. ಪರಮಾತ್ಮನಲ್ಲಿ ನಿಮಗ್ನವಾದ ಮನಸ್ಸುಳ್ಳವನು ತನ್ನ ಪ್ರಾರಬ್ಧಕ್ಕನುಸಾರವಾಗಿ ಪ್ರಾಪ್ತಗಳಾದ ಸಾಂಸಾರಿಕ ವಿಷಯಗಳು ಅದೆಷ್ಟೇ ಇದ್ದರೂ ಅಷ್ಟರಲ್ಲಿಯೇ ತೃಪ್ತಿಹೊಂದುವವನು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿ ಗಳು–''ದೊರೆಯಲೇನದರೊಳು ಪರಿಣತೆದಳೆವುದೇ ಚಂದಮಮ'' ಎಂಬುದಾಗಿ ತಿಳಿ ಹೇಳಿದ್ದಾರೆ. ದೊರೆತದ್ದರಲ್ಲಿ ಸಮಾಧಾನ ಪಟ್ಟುಕೊಂಡಾಗಲೇ ನಮ್ಮ ಜೀವನವು ಸುಖಿಯಾಗಬಲ್ಲದು. ದೊರೆತದ್ದರಲ್ಲಿ ಸಂತುಷ್ಟಿಯನ್ನು ಹೊಂದದ ಮನುಷ್ಯನು ಸದಾ ದುಃಖಿಯಾಗಿಯೇ ಕಾಲಕಳೆಯಬೇಕಾಗುತ್ತದೆ.

ವೀರಶೈವ ಆಚಾರ್ಯರು ಸಾಧಕನನ್ನು ಸದಾ ಸಂತುಷ್ಟನನ್ನಾಗಿಡುವುದಕ್ಕಾಗಿಯೇ ಪ್ರಸಾದಿಸ್ಥಲವನ್ನು ಉಪದೇಶಿಸಿದ್ದಾರೆ. ಮನಸ್ಸನ್ನು ಆಮೂಲವಾಗಿ ಪರಿವರ್ತನೆ ಗೊಳಿಸದೆ ಅದರಲ್ಲಿ ಪ್ರಸನ್ನತೆಯನ್ನು ತುಂಬಲು ಸಾಧ್ಯವಿಲ್ಲ. ಆದ್ದರಿಂದ ಮನಸ್ಸಿನ ಉತ್ಪತ್ತಿಯ ಮೂಲ ಕಾರಣದಲ್ಲಿಯೇ ಬದಲಾವಣೆಯನ್ನು ಮಾಡಬೇಕಾಗುವುದು. ''ಅನ್ನಮಯಂ ಹಿ ಸೌಮ್ಯ ಮನಃ'' ಎಂಬ ಛಾಂದೋಗ್ಯ ಉಪನಿಷತ್ತಿನ ವಚನದಂತೆ ಅನ್ನವೇ ಮನಸ್ಸಿನ ಉತ್ಪತ್ತಿಯ ಮೂಲ ಕಾರಣವು. ನಾವು ಸೇವಿಸಿದ ಅನ್ನದ ಕೊನೆಯ ದಾದ ಸೂಕ್ಷ್ಮ ಪರಿಣಾಮವೇ ಮನಸ್ಸು. ಪ್ರಾಣಗಳು ಜೀವಿಸಿಕೊಂಡಿರಬೇಕಾದರೆ ನೀರಿನ ಅವಶ್ಯಕತೆಯಿರುವಂತೆ, ಮನಸ್ಸಿನ ಬದುಕಿಗೆ ಅನ್ನವೇ ಮೂಲ. ಸರಿಯಾಗಿ ಅನ್ನವನ್ನು ಕೊಡದೇ ಹೋದರೆ ಮನಸ್ಸು ತನ್ನ ಸ್ಮರಣಶಕ್ತಿಯನ್ನು ಕಳೆದುಕೊಳ್ಳುತ್ತದೆ.

ಓರ್ವ ಋಷಿಕುಮಾರನು ಗುರುಕುಲದಲ್ಲಿ ಸಕಲ ವಿದ್ಯೆಗಳನ್ನು ಕಲಿತು ತನ್ನ ಆಶ್ರಮಕ್ಕೆ ಮರಳಿ ಬಂದಾಗ ಆತನ ತಂದೆ ಎಲೈ ಪುತ್ರನೇ ! ನೀನು ಗುರುಕುಲದಲ್ಲಿ ಏನೇನು ಕಲಿತುಬಂದೆ ? ಎಂಬುದಾಗಿ ಪ್ರಶ್ನಿಸಿದನು. ಆಗ ಋಷಿಕುಮಾರನು–ವೇದ, ವೇದಾಂತ, ಪುರಾಣ ಮತ್ತು ಆಗಮಾದಿಗಳನ್ನು ಕಂಠಪಾಠ ಮಾಡಿದ್ದೇನೆಂಬುದಾಗಿ ಉತ್ತರಿಸಿದನಲ್ಲದೆ ಕೆಲವೊಂದು ಮಂತ್ರಗಳನ್ನು ಅತ್ಯಂತ ಶುದ್ಧವಾಗಿ ಪಠಿಸಿತೋರಿಸಿದನು. ಆಗ ತಂದೆಯು ಸಂತುಷ್ಟನಾಗಿ ಮಗನಿಗೆ ಹೇಳಿದ–ನೋಡು ಸದ್ಯಃ ನಿನ್ನ ಮನಸ್ಸಿನಲ್ಲಿ ಸ್ಮರಣಶಕ್ತಿ ಚೆನ್ನಾಗಿ ಇದೆ. ನೀನು ಸರಿಯಾಗಿ ಆಹಾರ ಸೇವಿಸುತ್ತಿದ್ದರೆ ಈ ಸ್ಮೃತಿಶಕ್ತಿಯು ಉಳಿಯುವುದು. ಇಲ್ಲವಾದರೆ ಕ್ರಮಶಃ ಕ್ಷೀಣವಾಗುವುದು. ತಂದೆಯ ಈ ಮಾತನ್ನು ಕೇಳಿ ಪುತ್ರನು ಇದನ್ನು ನಾನು ನಂಬಲಾರೆ. ನಾನು ಕಂಠಪಾಠ ಮಾಡಿದ್ದನ್ನು ಅದೆಂದಿಗೂ ಮರೆಯಲಾರೆ. ಆಹಾರವನ್ನು ಸೇವಿಸದಿದ್ದರೂ ನನ್ನ ಸ್ಮೃತಿಶಕ್ತಿಯು ಯಥಾವತ್ತಾಗಿಯೇ

ಉಳಿಯುತ್ತದೆಯೆಂಬುದಾಗಿ ವಾದಿಸಿದ. ಆಗ ಆತನ ತಂದೆಯು ತಾನು ಹೇಳಿದ್ದನ್ನು ಅವನಿಗೆ ಮನದಟ್ಟಾಗಿಸುವುದಕ್ಕೋಸ್ಕರ ಮಗನಿಗೆ ಆಹಾರದ ಪ್ರಮಾಣವನ್ನು ಕಡಿಮೆ ಮಾಡುತ್ತಮಾಡುತ್ತಕೊನೆಗೊಂದು ವಾರ ಸಂಪೂರ್ಣ ಆಹಾರವಿಲ್ಲದೇ ಕೇವಲ ನೀರನ್ನು ಕುಡಿಸಿ ಉಪವಾಸವನ್ನು ಮಾಡಿಸಿದನು. ಹೀಗೆ ಅವನನ್ನು ಉಪವಾಸವಾಗಿಟ್ಟು ಮಂತ್ರೋಚ್ಚಾರಣೆಯನ್ನು ಮಾಡಲು ಹೇಳಿದಾಗ ಅವನ ಸ್ಮೃತಿಶಕ್ತಿಯು ಕಡಿಮೆಯಾಗಿದ್ದರಿಂದ ಸರಿಯಾಗಿ ಮಂತ್ರೋಚ್ಚಾರಣೆ ಮಾಡಲು ಆಗಲಿಲ್ಲ. ಆಗ ಮಗನಿಗೆ ತಂದೆಯ ಮಾತು ಅನುಭವಕ್ಕೆ ಬಂದಿತು. ಕೊನೆಗೆ ದಿನಾಲೂ ಸ್ವಲ್ಪು ಸ್ವಲ್ಪು ಆಹಾರವನ್ನು ಸೇವಿಸುತ್ತ ಹೋಗಿ ತನ್ನ ಸ್ಮೃತಿಶಕ್ತಿಯನ್ನು ಪುನಃ ಪಡೆದುಕೊಂಡಾಗ ಪೂರ್ವದಂತೆ ಮಂತ್ರಗಳನ್ನು ಕಂಠಪಾಠ ಹೇಳಲು ಸಮರ್ಥನಾದನು. ಹೀಗೆ ಉಪನಿಷತ್ತಿನಲ್ಲಿ ಅನ್ನವೇ ಮನಸ್ಸಿನ ಮೂಲವೆಂಬುದನ್ನು ಪ್ರಯೋಗಾತ್ಮಕವಾಗಿ ತಿಳಿಯಪಡಿಸಲಾಗಿದೆ. ಇಂದು ನಾವು ಸೇವಿಸಿದ ಅನ್ನವೇ ಸಪ್ತ–ಧಾತುಗಳ ರೂಪದಲ್ಲಿ ಪರಿವರ್ತನೆ ಹೊಂದುತ್ತ ಕೊನೆಗೆ ಅತಿಸೂಕ್ಷ್ಮವಾದ ಅನ್ನದ ಅಣು ಪರಿಣಾಮವೇ ಮನಸ್ಸಾಗಿ ಪರಿವರ್ತಿಸುತ್ತದೆ. ಆದ್ದರಿಂದ ಎಂತಹ ಆಹಾರವನ್ನು ಸೇವಿಸುತ್ತೇವೆಯೋ ಮನಸ್ಸೂ ಸಹ ಅಂತಹದೇ ಆಗುತ್ತದೆ.

ಆಹಾರವು ಸಾತ್ವಿಕ, ರಾಜಸಿಕ ಮತ್ತುತಾಮಸಿಕ ಎಂಬುದಾಗಿ ಮೂರು ಪ್ರಕಾರವಾಗಿರುತ್ತದೆ. ಶೀಘ್ರವಾಗಿ ಪಚನವಾಗುವ, ಮನಸ್ಸಿನಲ್ಲಿ ಸತ್ತ್ವಗುಣವನ್ನು ಉಂಟು ಮಾಡಬಲ್ಲ ಹಾಲು, ಹಣ್ಣು, ಕಾಯಿಪಲ್ಯ, ಮೊಳಕೆ ಒಡೆದ ಕಾಳು, ಉಪ್ಪು–ಖಾರ ಕಡಿಮೆಯಿದ್ದ ಆಹಾರ ಇವೆಲ್ಲವುಗಳು ಸಾತ್ವಿಕವೆಂಬುದಾಗಿ ಪರಿಗಣಿಸಲ್ಪಟ್ಟಿವೆ. ಇನ್ನು ಮನಸ್ಸಿನಲ್ಲಿ ರಜೋಗುಣವನ್ನು ಬೆಳೆಸಬಲ್ಲ ಅತೀ ಖಾರ, ಅತೀ ಹುಳಿ, ಅತೀ ಉಷ್ಣ ಹಾಗೂ ಅತ್ಯಧಿಕ ಮಸಾಲೆಯುಳ್ಳ ಖಾದ್ಯ ಪದಾರ್ಥಗಳು ಮತ್ತು ಮಾಂಸ ಮುಂತಾದವುಗಳು ರಾಜಸಿಕ ಆಹಾರಗಳೆಂದು ಕರೆಸಿಕೊಳ್ಳುತ್ತವೆ. ಇನ್ನು ಅದರಂತೆ ಮನಸ್ಸಿನಲ್ಲಿ ತಮೋಗುಣವನ್ನುಂಟು ಮಾಡುವ ತಂಗುಳ ಅಡಿಗೆ, ಅತ್ಯಂತ ಶುಷ್ಕವಾದ ಹಾಗೂ ಹಳಸಿದ ಅಡಿಗೆ ಮತ್ತುಮದಿರಾ ಇವುಗಳು ತಾಮಸಿಕ ಆಹಾರವೆಂದು ಹೇಳಲ್ಪಡುತ್ತವೆ. ಸಾಧಕನಾದವನು ರಾಜಸೀ ಹಾಗೂ ತಾಮಸೀ ಆಹಾರಗಳನ್ನು ಪರಿತ್ಯಜಿಸಿ ಸದಾ ಸಾತ್ವಿಕ ಆಹಾರವನ್ನು ಸೇವಿಸುವವನಾಗಬೇಕು. ವೀರಶೈವ ಸಿದ್ಧಾಂತದಲ್ಲಿ ತಾನು ಸೇವಿಸುವ ಆ ಸಾತ್ವಿಕ ಆಹಾರವನ್ನು ತನ್ನ ಇಷ್ಟಲಿಂಗಕ್ಕೆ ನೈವೇದ್ಯವನ್ನಾಗಿ ಅರ್ಪಿಸಿ ಅದನ್ನು ಪ್ರಸಾದವನ್ನಾಗಿ ಪರಿವರ್ತಿಸಿಕೊಂಡು ಸೇವಿಸಬೇಕೆಂಬುದಾಗಿ ಹೇಳಲ್ಪಟ್ಟಿದೆ. ಅಂತೆಯೇ ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು–

ನೈರ್ಮಲ್ಯಂ ಮನಸೋ ಲಿಂಗಂ ಪ್ರಸಾದ ಇತಿ ಕಥ್ಯತೇ ।
ಶಿವಸ್ಯ ಲಿಂಗರೂಪಸ್ಯ ಪ್ರಸಾದಾದೇವ ಸಿದ್ಧ್ಯತಿ ॥
ಶಿವಪ್ರಸಾದಂ ಯದ್‌ದ್ರವ್ಯಂ ಶಿವಾಯ ವಿನಿವೇದಿತಮ್ ।
ನಿರ್ಮಾಲ್ಯಂ ತತ್ತುಶೈವಾನಾಂ ಮನೋ ನೈರ್ಮಲ್ಯಕಾರಣಮ್ ॥

(ಸಿ.ಶಿ. ೧೧ ; ೬–೭)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಮನಸ್ಸಿನ ನೈರ್ಮಲ್ಯವೇ ಪ್ರಸಾದವು. ಮನಸ್ಸಿನ ಈ

ನಿರ್ಮಲತೆಯು ಶಿವಪ್ರಸಾದದ ಸೇವನೆಯಿಂದ ಪ್ರಾಪ್ತವಾಗುತ್ತದೆ. ಆದಕಾರಣ ಪ್ರತಿಯೊಬ್ಬರೂ ತಾವು ಸೇವಿಸುವ ಆಹಾರವನ್ನು ತಮ್ಮ ಇಷ್ಟದೇವರಿಗೆ ಅರ್ಥಾತ್ ಇಷ್ಟಲಿಂಗಕ್ಕೆ ಸಮರ್ಪಿಸಿಯೇ ಸ್ವೀಕರಿಸಬೇಕು. ದೇವರಿಗೆ ನೈವೇದ್ಯ ಸಮರ್ಪಿಸುವ ದೆಂದರೆ ದೇವರಿಗೆ ಉಣಿಸುವುದೆಂದರ್ಥವಲ್ಲ, ಆ ಪದಾರ್ಥದಲ್ಲಿಯ ದೋಷವನ್ನು ದೂರಮಾಡಿಕೊಳ್ಳುವುದೇ ನೈವೇದ್ಯ ಸಮರ್ಪಣೆಯ ಮುಖ್ಯ ಉದ್ದೇಶ. ದೇವರು ನಿತ್ಯ ತೃಪ್ತನಾಗಿರೋಣದರಿಂದ ಅವನಿಗೆ ಯಾವ ಭೋಗ್ಯಪದಾರ್ಥಗಳ ಅವಶ್ಯಕತೆಯು ಇರುವುದಿಲ್ಲ, ಪ್ರಪಂಚದ ಜೀವಿಗಳ ಸಲುವಾಗಿಯೇ ಆ ಪರಮಾತ್ಮನು ಎಲ್ಲ ವಿಧ ಭೋಗಭಾಗ್ಯಗಳನ್ನು ಸೃಜಿಸಿದ್ದಾನೆ. ನಾವು ಸಂಪಾದಿಸಿದ ಅನ್ನದಲ್ಲಿ ನಮ್ಮ ದುಡಿಮೆ ಯಲ್ಲಿಯ ಕಳ್ಳತನ, ಸುಳ್ಳತನ ಮುಂತಾದ ಅನೇಕ ದೋಷಗಳ ಪರಿಣಾಮವಾಗಿ ಆಹಾರವು ದೂಷಿತವಾಗಿರುತ್ತದೆ. ಇಂಥ ದೂಷಿತವಾದ ಅನ್ನವನ್ನು ದೇವರಿಗೆ ನೈವೇದ್ಯವನ್ನಾಗಿ ಸಮರ್ಪಿಸಿದಾಗ ದೇವರು ಆ ಅನ್ನವನ್ನು ಸೇವಿಸದೆ ಅದರಲ್ಲಿಯ ದೋಷವನ್ನು ಮಾತ್ರ ಗ್ರಹಿಸಿ ಆ ಪರಿಶುದ್ಧವಾದ ಅನ್ನವನ್ನು ಪ್ರಸಾದವನ್ನಾಗಿ ಮಾಡಿ ನಮಗೇನೇ ದಯಪಾಲಿ ಸುತ್ತಾನೆ.

ನಿಸರ್ಗ ಹಾಗೂ ಪರಮಾತ್ಮರಲ್ಲಿ ವಸ್ತುಗಳಲ್ಲಿಯ ದೋಷವನ್ನು ದೂರೀಕರಿಸಿ, ಅದನ್ನು ಪರಿಶುದ್ಧಗೊಳಿಸುವ ಸಹಜವಾದ ಗುಣವಿರುತ್ತದೆ. ತೋಟದಲ್ಲಿ ಹಚ್ಚಿದ ಹೂವಿನ ಗಿಡಗಳಿಗೆ ಮತ್ತು ಹಣ್ಣಿನ ಮರಗಳಿಗೆ ನಾವು ದುರ್ಗಂಧಯುಕ್ತವಾದ ಗೊಬ್ಬರ ವನ್ನು ಹಾಕಿ ಕೊಳಚೆಯಾದ ನೀರನ್ನೇ ಅವುಗಳಿಗೆ ಎರೆದರೂ ಪ್ರಕೃತಿಯಲ್ಲಿಯ ಆ ವನಸ್ಪತಿ ಗಳು ಅಂತಹ ದೂಷಿತವಾದ ವಸ್ತುಗಳನ್ನು ಸೇವಿಸಿದರೂ ಅದಕ್ಕೆ ಪ್ರತಿಯಾಗಿ ನಮಗೆ ಸುಗಂಧವಾದ ಪುಷ್ಪಗಳನ್ನು ಮತ್ತು ಮಧುರ, ರಸಭರಿತ ಫಲಗಳನ್ನು ಕೊಡುತ್ತಿರುವುದನ್ನು ನಾವು ಪ್ರತಿಯೊಬ್ಬರೂ ಅನುಭವಿಸುತ್ತಿದ್ದೇವೆ. ಮನುಷ್ಯನು ಮಾಡಿದ ದುರ್ಗಂಧವನ್ನು ಸುಗಂಧವಾಗಿ ಪರಿವರ್ತಿಸುವ ಸಾಮರ್ಥ್ಯವು ಪ್ರಕೃತಿಯಲ್ಲಿರುವಂತೆ ಪರಮಾತ್ಮನಲ್ಲಿಯೂ ಸಹ ಮನುಷ್ಯರ ದೋಷವನ್ನು ದೂರಮಾಡುವ ಸಾಮರ್ಥ್ಯವಿರುತ್ತದೆ. ಅಂತೆಯೇ ಅರ್ಥೋಪಾರ್ಜನೆಯಲ್ಲಿ ಉಂಟಾದ ದೋಷಗಳ ದೂಷಿತ ಪರಿಣಾಮವು ನಾವು ಉಪಭೋಗಿಸುವ ಅನ್ನಾದಿಗಳಲ್ಲಿರುವುದರಿಂದ ಆ ಎಲ್ಲ ಭೋಗ್ಯ ಪದಾರ್ಥಗಳನ್ನು ನಮ್ಮ ಇಷ್ಟದೇವರಿಗೆ ಸಮರ್ಪಿಸಿದಾಗ ಆ ದೇವರು ಆ ವಸ್ತುಗಳಲ್ಲಿಯ ದೂಷಿತಾಂಶವನ್ನು ಸ್ವೀಕರಿಸಿ ಅವುಗಳನ್ನು ಪ್ರಸಾದವನ್ನಾಗಿ ಪರಿವರ್ತಿಸುತ್ತಾನೆ. ಹೀಗೆ ಶಿವಾರ್ಪಿತವಾದ ಆ ವಸ್ತುಗಳು ಶಿವನಿರ್ಮಾಲ್ಯಗಳೆಂದು ಕರೆಯಿಸಿಕೊಳ್ಳುತ್ತವೆ. ಅವುಗಳ ಸೇವನೆಯಿಂದ ಮನಸ್ಸು ನಿರ್ಮಲವಾಗುತ್ತದೆಯಾದ್ದರಿಂದ ಆ ಶಿವಾರ್ಪಿತ ವಸ್ತುಗಳಿಗೆ ಶಿವನಿರ್ಮಾಲ್ಯ ಗಳೆಂದು ಕರೆಯುವರು. ಈ ಶಿವನಿರ್ಮಾಲ್ಯವು ಶಿವಭಕ್ತರ ಮನಸ್ಸಿನ ನಿರ್ಮಲತೆಗೆ ಕಾರಣವಾಗಿರುತ್ತದೆ.

ಮಾಹೇಶ್ವರಸ್ಥಲದ ಸಾಧಕನು ಯಾವಾಗ ಪ್ರತಿನಿತ್ಯ ಶಿವಪ್ರಸಾದವನ್ನು ಸೇವಿಸುವ ವ್ರತವನ್ನು ಅತ್ಯಂತ ಅವಧಾನಪೂರ್ವಕವಾಗಿ ಪರಿಪಾಲಿಸುವನೋ ಆವಾಗ ಅವನು 'ಪ್ರಸಾದಿ' ಎಂಬುದಾಗಿ ಕರೆಯಲ್ಪಡುವನು. ''ಅನ್ನಂ ಬ್ರಹ್ಮೇತಿ ವ್ಯಜಾನಾತ್'' ಎಂಬ ಉಪನಿಷದ್ ವಾಕ್ಯಪ್ರಮಾಣದಂತೆ ಅನ್ನವೂ ಸಹ ಪರಬ್ರಹ್ಮರೂಪವೇ ಆಗಿದೆ.

ಆದಕಾರಣ ಪ್ರತಿಯೊಬ್ಬರೂ ಅನ್ನದ ಬಗ್ಗೆ ಪೂಜ್ಯ ಬುದ್ಧಿಯನ್ನು ತಾಳಬೇಕು. ಅಡಿಗೆಯನ್ನು ತಯಾರಿಸಿದ ನಂತರ ಅದನ್ನು ದೇವತಾ ಭಾವನೆಯಿಂದ ಪೂಜಿಸಿ, ನಂತರ ದೇವರಿಗೆ ನೈವೇದ್ಯ ಮಾಡಿ ಪ್ರಸಾದರೂಪವಾಗಿ ತನಗೆ ದೊರೆತದ್ದನ್ನು ಸ್ವಲ್ಪವೂ ಕೆಡಿಸದೆ ಎಲ್ಲವನ್ನೂ ಶ್ರದ್ಧೆಯಿಂದ ಸೇವಿಸಬೇಕು. ಅಂದಾಗ ಮಾತ್ರ ನಾವು ಅನ್ನಬ್ರಹ್ಮವನ್ನು ಆರಾಧಿಸಿದಂತಾಗುವುದು. ಇತ್ತೀಚಿನ ದಿನಮಾನಗಳಲ್ಲಿ ಸರ್ವತ್ರ ಅನ್ನಬ್ರಹ್ಮದ ಅವಹೇಳ ನವು ಕಂಡುಬರುತ್ತದೆ. ಎಡೆಮಾಡಿಕೊಂಡ ಅನ್ನದಲ್ಲಿ ಅರ್ಧಮರ್ಧವನ್ನು ತಿಂದು ಉಳಿದ ಎಂಜಲು ಅನ್ನವನ್ನು ಹೊರಗೆ ಎಸೆದುಬಿಡುವ ಒಂದು ಅನಿಷ್ಟ ಪರಂಪರೆಯು ನಮ್ಮ ದೇಶದಲ್ಲಿ ಈಗ ಪ್ರಾರಂಭವಾಗಿದೆ. ಇತ್ತೀಚೆಗೆ ಕುಳಿತು ಉಣ್ಣುವ ಪದ್ಧತಿಯೂ ಲೋಪವಾಗಿ ಪಶುಗಳಂತೆ ತಿರುಗಾಡಿ ತಿನ್ನುವ ಪ್ರವೃತ್ತಿಯು ಬೆಳೆಯುತ್ತಿರುವುದನ್ನು ನೋಡಿದಾಗ ನಾವೇ ನಮ್ಮ ಸಂಸ್ಕೃತಿಯನ್ನು ಹಾಳುಮಾಡುತ್ತಿರುವೆವಲ್ಲ ! ಎಂಬುದಾಗಿ ಖೇದವಾಗುತ್ತದೆ. ಈ ಪದ್ಧತಿಯನ್ನು ಹೀಗೆಯೇ ಬೆಳೆಯಬಿಟ್ಟರೆ ಭಾರತ ದೇಶಕ್ಕೆ ಬಹುದೊಡ್ಡ ಕಲಂಕವು ಪ್ರಾಪ್ತವಾಗುವುದು. ಅಂತೆಯೇ ನಮ್ಮ ಭಾರತೀಯ ತತ್ತ್ವಶಾಸ್ತ್ರ ಗ್ರಂಥಗಳಲ್ಲಿ ಊಟವನ್ನೂ ಸಹ ಒಂದು ಯಜ್ಞವನ್ನಾಗಿ ಪರಿಭಾವಿಸಿದ್ದಾರೆ. ಯಜ್ಞಕುಂಡ ದಲ್ಲಿ ಸಂಸ್ಥಾಪಿಸಿದ ಅಗ್ನಿಯೊಳಗೆ ಹವಿಸ್ಸನ್ನರ್ಪಿಸುವಾಗ ದೇವರ ನಾಮೋಚ್ಚಾರಣೆ ಯೊಂದಿಗೆ ಸ್ವಾಹಾಕಾರ ಮಾಡುವುದನ್ನು ಕಾಣುತ್ತೇವೆ. ಹೊರಗೆ ಯಜ್ಞ ಕುಂಡದಲ್ಲಿ ಅಗ್ನಿ ಇರುವಂತೆ ಪ್ರತಿಯೊಬ್ಬ ಮನುಷ್ಯನ ಉದರದಲ್ಲಿ ಪರಮಾತ್ಮನೇ 'ವೈಶ್ವಾನರ' ಅಗ್ನಿರೂಪ ದಲ್ಲಿ ವಿರಾಜಿಸುತ್ತಿದ್ದಾನೆ. ನಾವು ಆಹಾರವನ್ನು ಸೇವಿಸುವಾಗ ನಮಗಾಗಿ ಸೇವಿಸುತ್ತೇವೆ ಎಂಬ ಭಾವನೆಯನ್ನು ಬಿಟ್ಟು, ಉದರಸ್ಥ ಅಗ್ನಿರೂಪಿ ಭಗವಂತನಿಗೆ ಸಮರ್ಪಿಸುತ್ತಿದ್ದೇವೆ ಎಂಬ ಭಾವನೆಯಿಂದ ಭೋಜನ ಮಾಡಿದಾಗ ಅದೂ ಕೂಡ ಒಂದು ಯಜ್ಞವಾಗುತ್ತದೆ ಯೆಂಬುದಾಗಿ ಗೀತೆಯಲ್ಲಿ ಭಗವಂತನು ಉಪದೇಶಿಸಿದ್ದಾನೆ.

ಯಜ್ಞ ಅಥವಾ ಪೂಜಾದಿಗಳನ್ನು ಮಾಡುವ ಮನುಷ್ಯನು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಅವುಗಳಲ್ಲಿ ಪಾಲುಗೊಳ್ಳುವಂತೆ ಊಟ ಮಾಡುವಾಗಲೂ ಸಹ ಆ ಶುಚಿತ್ವವನ್ನು ಕಾಪಾಡಿಕೊಂಡಾಗಲೇ ನಮ್ಮ ಊಟವೂ ಸಹ ಒಂದು ಯಜ್ಞವಾಗಲು ಸಾಧ್ಯ. ಶಾಸ್ತ್ರವಿಹಿತ ಪದ್ಧತಿಯಂತೆ ಸರಿಯಾಗಿ ಊಟಮಾಡಲು ಬಾರದ ಮನುಷ್ಯನಿಗೆ ಪರಬ್ರಹ್ಮ–ಪರಮಾತ್ಮನ ಜ್ಞಾನವಾದರೂ ಹೇಗೆ ಬಂದೀತು ? ಅನ್ನಬ್ರಹ್ಮದ ಉಪಾಸನೆ ಯನ್ನು ಸರಿಯಾಗಿ ಮಾಡಬಲ್ಲವನೇ ಪರಬ್ರಹ್ಮ ಜ್ಞಾನವನ್ನು ಪಡೆಯಬಲ್ಲನು. ಅನ್ನದ ಹಾಗೂ ಭೋಜನದ ಮಹತಿಯನ್ನು ಜನತೆಗೆ ತಿಳಿಸಲೋಸುಗ ಶ್ರೀ ಸಿದ್ಧಾಂತ ಶಿಖಾಮಣಿ ಯಲ್ಲಿ ಪ್ರಸಾದಿಸ್ಥಲವನ್ನು ಉಪದೇಶಿಸಲಾಗಿದೆ. ವೀರಶೈವ ಸಿದ್ಧಾಂತದ ದೀಕ್ಷಾವಿಧಾನ ಗಳಲ್ಲಿ 'ಪ್ರಸಾದಿ ದೀಕ್ಷೆ'ಯೂ ಸಹ ಒಂದು ಮಹತ್ತ್ವಪೂರ್ಣವಾದ ಸಂಸ್ಕಾರವಾಗಿದೆ. ಈ ಸಂಸ್ಕಾರವನ್ನು ಪಡೆದ ಸಾಧಕನು ತನ್ನ ಜೀವನದ ತುಂಬೆಲ್ಲ ಅನ್ನದ ಬಗ್ಗೆ ಅದೆಂದೂ ಅವಹೇಳನವಾಗದಂತೆ ಅವಧಾನವನ್ನು ವಹಿಸುತ್ತಾನೆ. ಈತನು ಆಹಾರವನ್ನು ಸೇವಿಸು ವಾಗ ತನ್ನ ಇಷ್ಟದೇವರಿಗೆ ಸಮರ್ಪಿತವಾದ ಆ ಪ್ರಸಾದದ ಒಂದು ಅನ್ನದ ಕಣವನ್ನೂ ಸಹ ಹಾಳುಮಾಡದೆ ಅದರಲ್ಲಿ ನಿತಾಂತವಾದ ಪೂಜ್ಯ ಭಾವನೆಯಿಂದ ಎಲ್ಲವನ್ನು ಸೇವಿಸುತ್ತಾನೆ. ಇಂತಹ ಪ್ರಸಾದಸೇವನೆಯ ಪದ್ಧತಿಯಿಂದಲೇ ಮನಸ್ಸು ಉತ್ತರೋತ್ತರ

ವಾಗಿ ಪ್ರಸನ್ನವಾಗುತ್ತ ಸಾಗುವುದು. ಹೀಗೆ ಮನಸ್ಸನ್ನು ಶುದ್ಧಗೊಳಿಸಬೇಕಾದರೆ ಅನ್ನವು ಪರಿಶುದ್ಧವಾಗಿರಬೇಕು. ಆ ಅನ್ನವು ಪರಿಶುದ್ಧವಾಗಬೇಕಾದರೆ ಅದು ಶಿವನಿಗೆ ನಿವೇದಿಸಲ್ಪಟ್ಟಿರಬೇಕು. ಈ ರೀತಿಯಾಗಿ ಶಿವಾರ್ಪಿತವಾದ ಪ್ರಸಾದವನ್ನು ಸೇವಿಸಿ ಸದಾ ಪ್ರಸನ್ನಚಿತ್ತನಾದ ಸಾಧಕನೇ ಪ್ರಸಾದಿಯು ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩ ಸಪ್ಟೆಂಬರ್, ೧೯೯೧
(ಸ್ಥಾನ ನಾಗಪುರ)

■■

ಆಶೀರ್ವಚನ-೨

# ಪ್ರಸಾದಿಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಪ್ರಸಾದಿಸ್ಥಲವನ್ನು ನಿರೂಪಿಸುತ್ತ–

ಅನ್ನಶುದ್ಧ್ಯಾಹಿ ಸರ್ವೇಷಾಂ ತತ್ತ್ವಶುದ್ಧಿರುದಾಹೃತಾ ।
ವಿಶುದ್ಧಮನ್ನಜಾತಂ ಹಿ ಯಚ್ಛಿವಾಯ ಸಮರ್ಪಿತಮ್ ॥

ತದೇವ ಸರ್ವಕಾಲಂ ತು ಭುಂಜಾನೋ ಲಿಂಗತತ್ಪರಃ ।
ಮನಃಪ್ರಸಾದಮತುಲಂ ಲಭತೇ ಜ್ಞಾನಕಾರಣಮ್ ॥

(ಸಿ. ಶಿ. ೧೧ ; ೯–೧೦)

ಈ ರೀತಿಯಾಗಿ ಉಪದೇಶಿಸಿದ್ದಾರೆ. ನಾವು ಸೇವಿಸುವ ಅನ್ನವು ಪರಿಶುದ್ಧವಾಗಿದ್ದರೆ ಅದರಿಂದ ನಿರ್ಮಾಣಗೊಳ್ಳುವ ಎಲ್ಲರ ಮನಸ್ಸೂ ಸಹ ಪರಿಶುದ್ಧವಾಗಬಲ್ಲದು. ಅನ್ನವು ಪರಿಶುದ್ಧವಾಗಬೇಕಾದರೆ ನಾವು ಸೇವಿಸುವ ಮೊದಲು ಅದನ್ನು ಶಿವನಿಗೆ ಸಮರ್ಪಿಸ ಬೇಕಾಗುವುದು. ಲಿಂಗನಿಷ್ಠನಾದ ಮಾಹೇಶ್ವರನು ತಾನು ಭುಂಜಿಸುವ ಸಕಲ ಪದಾರ್ಥ ಗಳನ್ನು ತನ್ನಿಷ್ಟಲಿಂಗಕ್ಕೆ ಸಮರ್ಪಿಸಿ ಅದನ್ನು ಪ್ರಸಾದರೂಪದಲ್ಲಿ ಸೇವಿಸುತ್ತಾನೆ. ಹೀಗೆ ಪ್ರತಿದಿವಸ ಪ್ರಸಾದವನ್ನು ಸೇವಿಸುವುದರಿಂದ ಅವನ ಮನಸ್ಸು ಸದಾ ಪ್ರಸನ್ನವಾಗಿರುತ್ತದೆ. ಇಂತಹ ಪ್ರಸನ್ನಚಿತ್ತವೇ ಜ್ಞಾನಪ್ರಾಪ್ತಿಗೆ ಸಾಧನವಾಗುವುದು.

ಮನುಷ್ಯನ ಜೀವನದಲ್ಲಿ ಮನಸ್ಸಿನ ಶಾಂತಿಯು ಪರಮಾವಶ್ಯಕವಾದುದು. ದಿನಂಪ್ರತಿ ನಾವು ಮಾಡುತ್ತಿರುವ ಲೌಕಿಕ ಮತ್ತು ಅಲೌಕಿಕ ವ್ಯವಹಾರಗಳೆಲ್ಲ ಮನಸ್ಸಿನ ಸಮಾಧಾನಕ್ಕಾಗಿಯೇ ಇರುತ್ತವೆ. ಮನಸ್ಸನ್ನು ಸಮಾಧಾನಗೊಳಿಸುವುದಕ್ಕೋಸುಗ ಕೆಲವರು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಪಂಚ ವಿಷಯಗಳ ಬೆನ್ನುಹತ್ತಿ ಅನೇಕಸಾರೆ ಅವುಗಳನ್ನು ಅನುಭವಿಸಿಯೂ ಸಹ ಪರಿಪೂರ್ಣವಾದ ಸಮಾಧಾನವನ್ನು ಹೊಂದದೆ ಅವುಗಳಿಂದ ವಿರತರಾಗಿ ಪುನಃ ಮನಸ್ಸಿನ ಸಮಾಧಾನಕ್ಕಾಗಿ ಪರಿತಪಿಸು ವುದುಂಟು. ಪ್ರಪಂಚದ ಈ ಎಲ್ಲ ವ್ಯವಹಾರವನ್ನು ಕಂಡಾಗ ಸುಖ–ಶಾಂತಿಗಳ ಸ್ಥಾನವಾ ದರೂ ಯಾವುದು ? ಎಂಬ ಜಿಜ್ಞಾಸೆಯು ಕೆಲವು ಜನರ ಮನಸ್ಸಿನಲ್ಲಿ ಮೂಡಿ ಬರುವುದು. ಶಾಂತಿ ಸಮಾಧಾನಗಳು ಹೊರಗಿನಿಂದ ದೊರೆಯುವ ವಸ್ತುಗಳಲ್ಲ, ಅವು ನಮ್ಮಲ್ಲಿಯೇ ಇವೆ, ನಮ್ಮ ಆತ್ಮ ಸ್ವರೂಪಗಳೇ ಆಗಿವೆ. ಅದನ್ನರಿಯುವ ನಮ್ಮ ಮನಸ್ಸು ಸ್ಥಿರವಿಲ್ಲದ ಕಾರಣ ನಮ್ಮಲ್ಲಿಯೇ ಇದ್ದದ್ದನ್ನು ನಾವು ಅರಿತುಕೊಳ್ಳಲು ಸಾಧ್ಯವಾಗಿಲ್ಲ. ಮನಸ್ಸನ್ನು ಸುಧಾರಿಸುವುದಕ್ಕಾಗಿ ಪ್ರಾಣಾಯಾಮ, ಧ್ಯಾನ–ಧಾರಣಾದಿ ಅನೇಕ ಉಪಾಯಗಳು ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟಿದ್ದರೂ ಅವೆಲ್ಲಕ್ಕಿಂತಲೂ ಪೂರ್ವದಲ್ಲಿ ನಾವು ಮನಸ್ಸಿನ

ನಿರ್ಮಾಣಕ್ಕೆ ಕಾರಣವಾದ ಆಹಾರದ ಕಡೆಗೆ ಲಕ್ಷ್ಯಕೊಡುವುದು ಅವಶ್ಯಕವಾಗಿದೆ. ಯಾರಿಗೆ ಯೋಗ್ಯವಾದ ಮತ್ತು ಪ್ರಮಾಣಕ್ಕೆ ತಕ್ಕಂತೆ ಆಹಾರವನ್ನು ಸೇವಿಸುವ ಕಲೆಯು ಅವಗತವಾಗುವುದೋ, ಅವರೇ ಯೋಗಶಾಸ್ತ್ರದ ಅಧಿಕಾರಿಯಾಗಬಲ್ಲರು ಎಂಬ ಮಹತ್ತ್ವಪೂರ್ಣವಾದ ವಿಷಯವನ್ನು ಪ್ರತಿಪಾದಿಸಲೋಸುಗವಾಗಿಯೇ ಆಚಾರ್ಯರು ಪ್ರಸಾದಿಸ್ಥಲವನ್ನು ಪ್ರಾರಂಭಿಸಿದ್ದಾರೆ. ಇದೇ ಮಾತನ್ನು ಭಗವದ್ಗೀತೆಯಲ್ಲಿ ಭಗವಂತನೂ ಸಹ ''ಯುಕ್ತಾಹಾರವಿಹಾರಸ್ಯ'' ಮುಂತಾಗಿ ನಿರೂಪಿಸಿದ್ದಾನೆ. ಸರಿಯಾಗಿ ಉಣ್ಣಲು ಬಲ್ಲವನೇ ಯೋಗಿಯಾಗಬಲ್ಲನು ಎಂಬ ಮಾತನ್ನು ಕೇಳಿದಾಗ, ಬಹಳ ಜನರಿಗೆ ಆಶ್ಚರ್ಯವಾಗಬಲ್ಲದು. ಇದೇನು ನಮಗೇನು ಉಣ್ಣಲು ಬರುವುದಿಲ್ಲವೇ ? ಎಂಬ ಭಾವನೆಯೂ ಸಹ ಅನೇಕ ಜನರಲ್ಲಿ ಮೂಡಿರಬಹುದು. ನೂರಕ್ಕೆ ಎಂಭತ್ತರಷ್ಟು ಜನರಿಗೆ ಊಟದ ಕಲೆಯೇ ಗುರುತಿಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ''ಊಟ ಬಲ್ಲವನಿಗೆ ರೋಗವಿಲ್ಲ'' ಎಂಬ ನಾಡನುಡಿಯು ಇಂದು ಅದೆಷ್ಟು ಜನರ ಜೀವನದಲ್ಲಿ ಸಾರ್ಥಕವಾಗಿರುವುದುಂಟು ? ಇಂದು ನಿರ್ಮಾಣಗೊಳ್ಳುತ್ತಿರುವ ಹೊಸ ಹೊಸ ಚಿಕಿತ್ಸಾಲಯಗಳು, ಹೊಸ ಹೊಸ ಆಧುನಿಕ ಚಿಕಿತ್ಸಾ ಉಪಕರಣಗಳನ್ನು ನೋಡಿದಾಗ ರೋಗಗಳ ಸಂಖ್ಯೆ ಬೆಳೆಯುತ್ತಿರುವುದು ಕಂಡುಬರುತ್ತದೆ. ಮೊದಲಿನ ಕಾಲದಲ್ಲಿ ಒಬ್ಬ ವೈದ್ಯನೇ ಸಂಪೂರ್ಣ ಶರೀರದ ಚಿಕಿತ್ಸೆಯನ್ನು ಮಾಡುತ್ತಲಿದ್ದ, ಇಂದು ಬೆಳೆಯುತ್ತಿರುವ ರೋಗಗಳ ಆಧಿಕ್ಯದಿಂದಾಗಿ ಒಂದೊಂದು ಅವಯವಕ್ಕೆ ಒಬ್ಬೊಬ್ಬ ವೈದ್ಯನು ನಿರ್ಮಾಣಗೊಳ್ಳುತ್ತಲಿದ್ದಾನೆ. ಸದ್ಯ ಎಲ್ಲ ಅವಯವಗಳಿಗೆ ಒಬ್ಬ ವೈದ್ಯನಿದ್ದಂತೆ, ಹಲ್ಲುಗಳ ಚಿಕಿತ್ಸೆಗೂ ಒಬ್ಬನೇ ವೈದ್ಯನಿದ್ದಾನೆ. ಆದರೆ ಇನ್ನೂ ಕೆಲವು ದಿನಗಳು ಗತಿಸಿದ ನಂತರ ಮೂವತ್ತೆರಡು ಹಲ್ಲುಗಳ ಚಿಕಿತ್ಸೆಗಾಗಿ ಮೂವತ್ತೆರಡು ಜನ ವೈದ್ಯರು ಬೇಕಾಗುವರೇನೋ ಎಂಬ ಭೀತಿಯ ವಾತಾವರಣವು ಕಂಡುಬರುತ್ತದೆ. ಇದೆಲ್ಲವನ್ನು ನೋಡಿದಾಗ ರೋಗಗಳ ಸಂಖ್ಯೆ ಮತ್ತು ರೋಗಿಗಳ ಸಂಖ್ಯೆ ಬೆಳೆಯುತ್ತಿರುವುದು ತಿಳಿದುಬರುತ್ತದೆ. ಉದರದ ಅಜೀರ್ಣತೆಯೇ ಎಲ್ಲ ರೋಗಗಳ ಮೂಲವು. ಆದಕಾರಣ ಯುಕ್ತಾಹಾರಿಯಾದಾಗ ಮಾತ್ರ ಮನುಷ್ಯನ ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳೆರಡೂ ಸ್ವಸ್ಥವಾಗಿರಬಲ್ಲವು.

ದೇಹ ಹಾಗೂ ಮನಸ್ಸುಗಳ ಸ್ವಾಸ್ಥ್ಯದ ಕಡೆಗೆ ಲಕ್ಷ್ಯವಿಲ್ಲದ ಇಂದಿನ ಮನುಷ್ಯನು ಏನು ತಿನ್ನಬೇಕು! ಎಂತಹ ವಿಚಾರವನ್ನು ಮಾಡಬೇಕು ? ಎಂಬ ಪರಿಜ್ಞಾನವಿಲ್ಲದವನಾಗಿದ್ದಾನೆ. ಅಂತೆಯೇ ಕೆಲವು ಜನರು ತಮ್ಮ ಉದರವನ್ನು ಜಠರಾಗ್ನಿರೂಪ ಪರಮಾತ್ಮನ ನಿವಾಸಮಂದಿರವೆಂದು ಭಾವಿಸದೇ ಕಸದ ಬುಟ್ಟಿಯೆಂಬುದಾಗಿ ತಿಳಿದುಕೊಂಡಿದ್ದಾರೆ. ಏನು ತಿನ್ನಬೇಕು ? ಏನು ಕುಡಿಯಬೇಕು ? ಎಂಬ ಪ್ರಜ್ಞೆಯೇ ಇತ್ತೀಚಿನ ಜನಗಳಲ್ಲಿ ತೋರಿ ಬರುತ್ತಿಲ್ಲ, ಆರೋಗ್ಯ ಶಾಸ್ತ್ರದ ಪ್ರಕಾರ, ಉದರರ್ಧ ಅನ್ನ, ಅದರರ್ಧ ನೀರು ಮತ್ತು ಉಳಿದ ಅರ್ಧದ ಅರ್ಧ ಭಾಗವನ್ನು ಹವೆಗಾಗಿ ಖಾಲೀ ಬಿಡಬೇಕೆಂಬುದು ನಿಯಮ. ಆದರೆ ಕೆಲವು ಜನರು ಮಾತ್ರ ಎಲ್ಲವನ್ನೂ ಅನ್ನದಿಂದಲೇ ತುಂಬಿ ಆರೋಗ್ಯವನ್ನು ಹಾಳುಮಾಡಿಕೊಳ್ಳುತ್ತಾರೆ.

ಓರ್ವ ವ್ಯಕ್ತಿಯು ಒಂದು ಸಮಾರಂಭದ ಅತಿಥಿಯಾಗಿ ಹೋಗಿ ಅಲ್ಲಿರುವ ಪಂಚ ಪಕ್ವಾನ್ನಗಳನ್ನು ಕಂಡು ಊಟಕ್ಕೆ ಕುಳಿತಾಗ ಅತ್ಯಾಶೆಯಿಂದ ಆ ಮಧುರ ಪದಾರ್ಥವನ್ನು

ಅತಿಯಾಗಿ ಸೇವಿಸಿದ. ಸೇವಿಸುವಾಗಲೇನೋ ಆನಂದವನ್ನನುಭವಿಸುತ್ತಿದ್ದ. ಆದರೆ ಅತಿಯಾಗಿ ಸೇವಿಸಿದ್ದರ ಪರಿಣಾಮವಾಗಿ ಉದರಶೂಲೆಯು ಪ್ರಾರಂಭವಾಯಿತು. ಅದರ ನಿವಾರಣೆಗಾಗಿ ಓರ್ವ ವೈದ್ಯನ ಬಳಿಗೆ ಹೋದನು. ಆಗ ವೈದ್ಯರು ಒಂದು ಮಾತ್ರೆಯನ್ನು ಕೊಟ್ಟು ಇದನ್ನು ನುಂಗಿ ಒಂದು ಗ್ಲಾಸು ನೀರುಕುಡಿ ಎಲ್ಲವೂ ಸರಿಹೋಗುತ್ತದೆ ಎಂದರು. ಆಗ ಆ ಮನುಷ್ಯನು ನನ್ನ ಹೊಟ್ಟೆಯಲ್ಲಿ ಈ ಮಾತ್ರೆ, ಮತ್ತು ಒಂದು ಗ್ಲಾಸು ನೀರು ಹಿಡಿಯುವಷ್ಟು ಸ್ಥಳಾವಕಾಶವಿದ್ದರೆ ಇನ್ನೊಂದು ಉಂಡಿಯನ್ನೇ ಸೇವಿಸುತ್ತಿದ್ದೆನಲ್ಲಾ ಎಂದನಂತೆ. ನೋಡಿದಿರಾ ! ಊಟದ ಅತಿಯಾಶೆಯನ್ನು ! ಅನ್ನ ತನ್ನದಿರಲಿ ಅಥವಾ ಅನ್ಯರದೇ ಇರಲಿ, ಪ್ರಮಾಣಮೀರಿ ಸೇವಿಸಿದಾಗ ಅನರ್ಥವನ್ನೇ ಅನುಭವಿಸಬೇಕಾಗು ವುದು.

ನಮ್ಮ ಮನೆಗೆ ನಾವು ಯಾರನ್ನಾದರೂ ಊಟಕ್ಕಾಗಿ ಕರೆದಾಗ ಅವರು ಹೊಟ್ಟೆ ತುಂಬ ಉಂಡನಂತರವೂ ಅವರಿಗೆ ಒತ್ತಾಯದಿಂದ ಮತ್ತೆ ಮತ್ತೆ ನೀಡುವ ಒಂದು ಪದ್ಧತಿಯು ನಮ್ಮ ದೇಶದಲ್ಲಿ ರೂಢಿಯಲ್ಲುಂಟು. ಆದರೆ ಇದರಿಂದ ಉಣ್ಣಿಸುವವನ ಅಹಂಕಾರಕ್ಕೆ ತೃಪ್ತಿ ಸಿಗಬಹುದಲ್ಲದೆ ಉಂಡವನ ಉದರಕ್ಕೆ ತೃಪ್ತಿಸಿಗಲಾರದು. ಅಂತೆಯೇ ಸುಭಾಷಿತಕಾರರು– ''ಅತಿ ಸರ್ವತ್ರ ವರ್ಜಯೇತ್'' ಎಂಬುದಾಗಿ ಉಪದೇಶಿಸಿದ್ದಾರೆ. ಹಿಂದೊಮ್ಮೆ ಆಯುರ್ವೇದದ ಆಚಾರ್ಯನೊಬ್ಬ ತನ್ನ ಶಿಷ್ಯ ಸಮೂಹಕ್ಕೆಲ್ಲ ವನಸ್ಪತಿ ಗಳಲ್ಲಿಯ ಗುಣಧರ್ಮಗಳನ್ನು ಅವುಗಳಿಂದ ಉಂಟಾಗುವ ರೋಗನಿವಾರಣೆಯನ್ನು ತಿಳಿಯಪಡಿಸಿ ಒಂದು ದಿನ ಎಲ್ಲರನ್ನೂ ಪರೀಕ್ಷಿಸುವದಕ್ಕಾಗಿ ಕೋರರುಕ್ ? ಅಂದರೆ 'ಯಾವನು ನಿರೋಗಿಯು' ಎಂಬುದಾಗಿ ಪ್ರಶ್ನಿಸಿದನು. ಆಗ ಅವನ ಅನೇಕ ಜನ ಶಿಷ್ಯರಲ್ಲಿ ಕೆಲವರು 'ಚ್ಯವನಪ್ರಾಶ'ವನ್ನು ಸೇವಿಸಿದವನು ನಿರೋಗಿಯು, ಮತ್ತೋರ್ವನು 'ತ್ರಿಫಳಾಚೂರ್ಣ'ವನ್ನು ಸೇವಿಸಿದವನು ನಿರೋಗಿಯು; ಇನ್ನೊಬ್ಬನು 'ಚಂದ್ರಪ್ರಭಾ ಬಟಿ'ಯನ್ನು ಸೇವಿಸಿದವನು ನಿರೋಗಿಯು ಮುಂತಾದ ಉತ್ತರಗಳನ್ನು ಹೇಳಿದ್ದನ್ನು ಕೇಳಿ ಇವೆಲ್ಲವುಗಳು ಸರಿಯಾದ ಉತ್ತರಗಳಲ್ಲ ಎಂಬುದಾಗಿ ವಿಚಾರಿಸುತ್ತಿರುವಾಗಲೇ ಮತ್ತೋರ್ವ ಜಾಣನಾದ ಶಿಷ್ಯನು ಗುರುಗಳ ಪ್ರಶ್ನೆಗೆ–ಹಿತಭುಕ್, ಮಿತಭುಕ್, ಋತು ಭುಕ್ ಎಂಬುದಾಗಿ ಉತ್ತರಿಸಿದನು. ತಾತ್ಪರ್ಯವೇನೆಂದರೆ, ಹಿತವಾಗಿ, ಮಿತವಾಗಿ ಮತ್ತು ಋತುಮಾನಕ್ಕನುಸಾರವಾಗಿ ಆಹಾರವನ್ನು ಸೇವಿಸುವವನೇ ನಿರೋಗಿಯಾಗಿರಬಲ್ಲನು. ಶಿಷ್ಯನ ಈ ಉತ್ತರವನ್ನು ಕೇಳಿ ಗುರುಗಳು ಅತ್ಯಂತ ಸಂತುಷ್ಟಚಿತ್ತರಾಗಿ ನೀನೇ ನಿಜವಾದ ಚಿಕಿತ್ಸಕನಾಗಬಲ್ಲೆ ಎಂದು ಅನುಗ್ರಹಿಸಿದರು.

ವೀರಶೈವ ಆಚಾರ್ಯರು ಅನ್ನವನ್ನು ಕೇವಲ ಹಿತಮಿತವಾಗಿ ಸೇವಿಸುವದನ್ನಷ್ಟೇ ಹೇಳದೆ ಅದನ್ನು ಪ್ರಸಾದವನ್ನಾಗಿಸಿಕೊಂಡು ಸೇವಿಸಲು ಉಪದೇಶಿಸಿದ್ದಾರೆ. ಇಷ್ಟ ದೇವರಿಗೆ ಸಮರ್ಪಿಸಿದ ಅನ್ನವೇ ಪ್ರಸಾದವು. ಬಾಹ್ಯ ದೃಷ್ಟಿಯಿಂದ ಅವಲೋಕಿಸಿದಾಗ ಅನ್ನ ಹಾಗೂ ಪ್ರಸಾದಗಳ ವ್ಯತ್ಯಾಸವು ಸಾಮಾನ್ಯವಾಗಿ ತೋರದಿರಬಹುದು. ಆದರೆ ಸೂಕ್ಷ್ಮವಾಗಿ ಅವಲೋಕಿಸಿದಾಗ ಆ ಎರಡರಲ್ಲಿರುವ ಮಹದಂತರವು ಕಂಡುಬರುವುದು. ದೇವರಿಗೆ ಸಮರ್ಪಿಸುವ ಪೂರ್ವದಲ್ಲಿ ಆ ಪದಾರ್ಥದ ಮೇಲೆ ಜೀವಾತ್ಮರ ನನ್ನದೆಂಬ ಭಾವನೆಯು ಇರುತ್ತದೆ. ದೇವರಿಗೆ ಸಮರ್ಪಿಸಿದ ನಂತರ ಆ ಭಾವನೆಯು

ದೂರವಾಗುವುದು. ತಾತ್ಪರ್ಯವೇನೆಂದರೆ, 'ನನ್ನ ಹಣ್ಣು', 'ನನ್ನ ಕಾಯಿ' ಎಂಬುದಾಗಿ ನಾವು ಮೊದಲು ಹೇಳುತ್ತಿದ್ದರೂ ಅವೇ ಹಣ್ಣು–ಕಾಯಿಗಳನ್ನು ದೇವರಿಗೆ ಸಮರ್ಪಿಸಿದ ನಂತರ ಅವುಗಳ ಬಗ್ಗೆ 'ದೇವರ ಪ್ರಸಾದ' ಎಂಬುದಾಗಿ ವ್ಯವಹರಿಸುವುದನ್ನು ಕಾಣುತ್ತೇವೆ. ಹೀಗೆ ನನ್ನದೆಂಬ ಭಾವನೆಯು ಅಳಿದುಹೋದಾಗ ಅದು ಪ್ರಸಾದವಾಗಿ ಪರಿಣಮಿ ಸುತ್ತದೆ. ಇಂತಹ ಪ್ರಸಾದದ ಸೇವನೆಯೇ ಮನಸ್ಸಿನ ಪ್ರಸನ್ನತೆಯ ಮೂಲ ಕಾರಣವು. ಯಾವ ಪದಾರ್ಥದ ಬಗ್ಗೆ ಪ್ರಸಾದ ಭಾವನೆಯು ಉತ್ಪನ್ನವಾಗಿರುತ್ತದೆಯೋ ಅದು ಪ್ರಮಾಣದಲ್ಲಿ ಕಡಿಮೆ ದೊರೆತರೂ ಅತೃಪ್ತಿಯಾಗದೆ ಎಲ್ಲರೂ ಸಂತೃಪ್ತರೇ ಆಗುತ್ತಾರೆ. ಕಡಿಮೆ ಪ್ರಮಾಣದಲ್ಲಿದ್ದರೂ ಪರಿಪೂರ್ಣ ತೃಪ್ತಿಯನ್ನು ಕೊಡುವುದು ಪ್ರಸಾದದ ವೈಶಿಷ್ಟ್ಯ ವಾಗಿದೆ. ಗುರುಗಳ ಇಲ್ಲವೆ ದೇವರ ಪ್ರಸಾದ ರೂಪದಲ್ಲಿ ದೊರೆತ ಒಂದು ಕಲ್ಲುಸಕ್ಕರೆಯ ಹಳಕೂ ಸಹ ತೃಪ್ತಿಯನ್ನು ಕೊಡುತ್ತಿರುವುದನ್ನು ಕಾಣುತ್ತೇವೆ. ಪ್ರಸಾದ ದಿಂದ ದೊರೆಯುವ ತೃಪ್ತಿಯು ಬೇರಾವ ಪದಾರ್ಥದಿಂದಲೂ ದೊರೆಯಲು ಸಾಧ್ಯವಿಲ್ಲ. ಅಂತೆಯೇ ಜಗದ್ಗುರು ರೇಣುಕ ಭಗವತ್ಪಾದರು ಉಪಭೋಗಿಸುವ ಸರ್ವ ವಸ್ತುಗ್ಗಳನ್ನು ಪ್ರಸಾದವ ನ್ನಾಗಿ ಪರಿವರ್ತಿಸಿಕೊಂಡು ಸೇವಿಸುವ ವಿಧಾನವನ್ನಿಲ್ಲಿ ತಿಳಿಸಿಕೊಡುತ್ತಲಿದ್ದಾರೆ.

ನಮ್ಮ ಉಪಭೋಗಕ್ಕಾಗಿ ಉಪಯೋಗಿಸುತ್ತಿರುವ ಪ್ರತಿಯೊಂದು ವಸ್ತುವನ್ನು ಸಹ ಶಿವಾರ್ಪಣ ಮಾಡಿಯೇ ಉಪಭೋಗಿಸಬೇಕೆಂಬುದನ್ನು ಪುನಃ ತಿಳಿಯಪಡಿಸುತ್ತ ಪೂಜ್ಯ ಪಾದರು–

ಆತ್ಮಭೋಗಾಯ ನಿಯತಂ ಯದ್ಯದ್‌ದ್ರವ್ಯಂ ಸಮಾಹಿತಮ್ ।
ತತ್ತತ್ ಸಮರ್ಪ್ಯದೇವಾಯ ಭುಂಜೀತಾತ್ಮವಿಶುದ್ಧಯೇ ॥

ನಿತ್ಯಸಿದ್ಧೇನ ದೇವೇನ ಭಿಷಜಾ ಜನ್ಮರೋಗಿಣಾಮ್ ।
ಯದ್ಯತ್ ಪ್ರಸಾದಿತಂ ಭುಕ್ತ್ವಾ ತತ್ತಜ್ಜನ್ಮರಸಾಯನಮ್ ॥

(ಸಿ. ಶಿ. ೧೧ ; ೧೧–೧೨)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತನ್ನ ಉಪಭೋಗಕ್ಕಾಗಿ ಸಂಗ್ರಹಿಸಲ್ಪಟ್ಟ ಸಕಲ ಪದಾರ್ಥಗಳನ್ನು ತನ್ನ ಇಷ್ಟದೇವರಿಗೆ ಸಮರ್ಪಿಸಿಯೇ ಸೇವಿಸಬೇಕು. ಹೀಗೆ ಪ್ರತಿದಿವಸ ಲಿಂಗಭೋಗೋಪಭೋಗಿಯಾಗಿ ಜೀವನ ಸಾಗಿಸುತ್ತಿದ್ದರೆ ಪ್ರಸಾದ ಸೇವನೆಯ ಪರಿಣಾಮವಾಗಿ ಮನಸ್ಸು ಸಹಜವಾಗಿಯೇ ಪರಿಶುದ್ಧವಾಗುತ್ತದೆ. ಸತ್ಯನೂ ನಿತ್ಯನೂ ಆದ ಶಿವನಿಗೆ ವೈದ್ಯನಾಥನೆಂಬ ಬಿರುದು ಉಂಟು. ಸಾಮಾನ್ಯವಾದ ವೈದ್ಯನು ತನ್ನ ಔಷಧಿ ಯಿಂದ ವಾತ–ಪಿತ್ತಾದಿ ತ್ರಿದೋಷಜನ್ಯ ರೋಗಗಳನ್ನು ದೂರ ಮಾಡುತ್ತಾನೆ. ಆದರೆ ವೈದ್ಯರ ರಾಜನಾದ ಶಿವನು ತನ್ನ ಪ್ರಸಾದರೂಪೀ ಔಷಧದಿಂದ ಜನನ–ಮರಣ ರೂಪೀ ಭವರೋಗವನ್ನೇ ತೊಡೆದುಹಾಕುತ್ತಾನೆ. ಆದ್ದರಿಂದ ಶಿವನಿಗೆ ಸಮರ್ಪಿಸಲ್ಪಟ್ಟ ಪ್ರಸಾದವು ಒಂದು ದಿವ್ಯ ರಸಾಯನೌಷಧವೇ ಸರಿ. ಶಿವಪ್ರಸಾದವನ್ನು ಸೇವಿಸುವುದ ರಿಂದ ಮನುಷ್ಯನ ಆರೋಗ್ಯವೂ ಸುಧಾರಿಸುವುದಲ್ಲದೆ ಅಂತಃಕರಣವೂ ಸಹ ಪರಿಶುದ್ಧ ವಾಗುವುದು. ಈ ಪ್ರಸಾದರೂಪಿ ಔಷಧವು ಜೀವಾತ್ಮನ ತ್ರಿವಿಧ ತಾಪಗಳನ್ನು ಶಮನ ಗೊಳಿಸುವುದು.

ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತಾಪತ್ರಯಗಳು ಮನುಷ್ಯ ನನ್ನು ಸದಾಕಾಲದಲ್ಲಿ ದಹಿಸುತ್ತಲಿರುತ್ತವೆ. ಈ ತಾಪತ್ರಯಗಳಿಂದ ಮುಕ್ತರಾಗಲು ಶಿವಪ್ರಸಾದವೇ ಒಂದು ದಿವ್ಯೌಷಧವು. ಪ್ರತಿನಿತ್ಯ ಪ್ರಸಾದವನ್ನು ಸೇವಿಸುವವನ ಮನಸ್ಸು ಸಾತ್ವಿಕತೆಯನ್ನು ತಾಳಿ ಜ್ಞಾನೋದಯಕ್ಕೆ ಸಾಧನವಾಗಿ ಪರಿವರ್ತಿಸುತ್ತದೆ. ಪ್ರಸಾದ ಸೇವನೆ ಯಿಂದ ನಾನಾ ಪ್ರಕಾರದ ದೋಷಗಳು ದೂರವಾಗುತ್ತವೆ. ಪ್ರಸಾದ ಸೇವನೆಯ ಪರಿಣಾಮವಾಗಿಯೇ ಸಾಧಕನು ದಿವ್ಯ ಜ್ಞಾನವನ್ನು ಸಂಪಾದಿಸಿ ತನ್ನಲ್ಲಿ ಅನಾದಿಕಾಲ ದಿಂದ ಹುದುಗಿಕೊಂಡಿರುವ ಮೋಹವನ್ನು ನಷ್ಟಗೊಳಿಸಿಕೊಳ್ಳುತ್ತಾನೆ. ಹೀಗೆ ಮೋಹದಿಂದ ಮುಕ್ತನಾಗಿ ವಿರಕ್ತಿಯೆಂಬ ಸಂಪತ್ತನ್ನು ಪಡೆದು ಮಹದಾನಂದವನ್ನು ಪಡೆಯುವವನಾಗುವನು. ಇಂತಹ ಶಿವಪ್ರಸಾದವು ಪಾಪಾತ್ಮರಿಗೆ ದೊರೆಯುವುದು ದುರ್ಲಭವಾದರೂ ಪುಣ್ಯ ಜೀವಿಗಳಿಗೆ ಸುಲಭವಾಗಿ ಪ್ರಾಪ್ತವಾಗುತ್ತದೆ. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ, ವಸಿಷ್ಠ ಮುಂತಾದ ತಪಸ್ವಿಗಳೂ ಶಿವಪ್ರಸಾದದಿಂದಲೇ ಸಿದ್ಧಿಯನ್ನು ಪಡೆದಂಥವರಾಗಿರುತ್ತಾರೆ. ಅಂತೆಯೇ ಜೀವನದಲ್ಲಿ ಸಕಲವಿಧ ಸಿದ್ಧಿಗಳನ್ನು ಪಡೆಯಲಪೇಕ್ಷಿಸುವವನು ಪ್ರತಿನಿತ್ಯ ಪ್ರಸಾದ ಸೇವನೆಯ ವ್ರತವನ್ನು ತಪ್ಪದೇ ಆಚರಿಸಬೇಕೆಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–'ಶಿವಸ್ವೀಕೃತಮ ನ್ನಾದ್ಯಂ ಸ್ವೀಕಾರ್ಯಂ ಸಿದ್ಧಿಕಾಂಕ್ಷಿಭಿಃ' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಪ್ರಸಾದದ ಮಹಿಮೆಯನ್ನು ಅದೆಷ್ಟು ವರ್ಣಿಸಿದರೂ ಕಡಿಮೆಯೇ. ಮಾಂಸಪಿಂಡವಾದ ದೇಹವನ್ನು ವಜ್ರಮಯವನ್ನಾಗಿ ಮಾಡುವ ಸಾಮರ್ಥ್ಯವು ಪ್ರಸಾದದಲ್ಲಿ ಉಂಟು. ಹರಿವಂಶ ಪುರಾಣದಲ್ಲಿ ಇದರ ಒಂದು ಸುಂದರವಾದ ದೃಷ್ಟಾಂತವು ಹೀಗಿದೆ.

ಕ್ರೋಧಾವತಾರಿಯಾದ ದೂರ್ವಾಸ ಮಹರ್ಷಿಯು–ಒಮ್ಮೆ ದ್ವಾರಕಾ ಪಟ್ಟಣಕ್ಕೆ ಹೋಗಿ ಆ ನಗರದ ಮುಖ್ಯಬೀದಿಯಲ್ಲಿ ಸಂಚರಿಸುತ್ತಾ–'ಈ ಊರಿನಲ್ಲಿ ನನ್ನನ್ನು ಅತಿಥಿಯನ್ನಾಗಿ ಸೇವಿಸುವವರು ಯಾರಾದರೂ ಇದ್ದೀರಾ ?' ಎಂಬುದಾಗಿ ಕೂಗುತ್ತ ಸಂಚರಿಸತೊಡಗಿದರು. ದ್ವಾರಕೆಯ ಜನರಲ್ಲಿ ಅತಿಥಿ ಸೇವೆಯನ್ನು ಮಾಡುವ ಭಾವನೆ ಯಿದ್ದರೂ ಈತನ ಕ್ರೋಧಮಯ ಸ್ವಭಾವದಿಂದಾಗಿ ಯಾರೂ ಈತನ ಸಮೀಪ ಸುಳಿಯ ಲಿಲ್ಲ. ಯಾರಿಂದಲೂ ಆತಿಥ್ಯ ಸಿಗದೇ ಇದ್ದಾಗ ದೂರ್ವಾಸನು ಮತ್ತಷ್ಟು ಕ್ರುದ್ಧನಾದನು. ಇನ್ನೇನು ಊರಿಗೇನೇ ಶಾಪ ಕೊಡುತ್ತಾನೋ ಏನೋ ಅನ್ನುವಷ್ಟರಲ್ಲಿ ದ್ವಾರಕಾಧೀಶ ನಾದ ಶ್ರೀಕೃಷ್ಣ ಭಗವಂತನು ಮಹರ್ಷಿಯ ಎದುರಿನಲ್ಲಿ ಬಂದು ನಮ್ಮ ಅರಮನೆಗೆ ತಾವು ಅತಿಥಿಯಾಗಿ ದಯಮಾಡಿಸಬೇಕೆಂದು ಬೇಡಿಕೊಂಡನು. ಆಗ ದೂರ್ವಾಸನು ನನ್ನನ್ನು ಕರೆದುಕೊಂಡು ಹೋಗಲು ಒಂದು ರಥವನ್ನು ತೆಗೆದುಕೊಂಡು ಬಾ ಎಂಬುದಾಗಿ ಆಜ್ಞಾಪಿಸಿದನು. ಮಹರ್ಷಿಯ ಆಜ್ಞೆಯಾಗುವದಷ್ಟೇ ತಡ ಶ್ರೀಕೃಷ್ಣನು ಜೋಡುಗುದು ರೆಯ ಒಂದು ರಥವನ್ನು ತೆಗೆದುಕೊಂಡು ಬಂದನು. ಆ ರಥವನ್ನು ನೋಡಿ ದೂರ್ವಾ ಸನು–'ನಾನು ಕುದುರೆಗಳಿಂದ ಎಳೆಯಲ್ಪಡುವ ರಥದಲ್ಲಿ ಕೂಡ್ರಲಾರೆ' ಈ ರಥವನ್ನು ಪತ್ನೀಸಮೇತನಾಗಿ ನೀನೇ ಎಳೆದುಕೊಂಡು ಹೋದರೆ ಮಾತ್ರ ತಾನು ಇದರಲ್ಲಿ ಕೂಡ್ರುವೆ ನೆಂಬುದಾಗಿ ಹೇಳಿದನು. ಶ್ರೀಕೃಷ್ಣನು ಅದನ್ನೂ ಒಪ್ಪಿ ಮಹರ್ಷಿಯನ್ನು ರಥದಲ್ಲಿ ಕೂಡ್ರಿಸಿ ರುಕ್ಮಿಣಿಯೊಂದಿಗೆ ರಥವನ್ನು ಎಳೆಯುತ್ತ ನಡೆದನು. ದಾರಿಯುದ್ದಕ್ಕೂ

ಮಹರ್ಷಿಯು ಅವರೀರ್ವರನ್ನು ಚಾಟಿಯಿಂದ ಅನೇಕ ಪೆಟ್ಟುಗಳನ್ನು ಹಾಕಿದರೂ ಅವರೀರ್ವರೂ ಸಹಿಸಿಕೊಂಡು ರಥವನ್ನು ಅರಮನೆಗೆ ತೆಗೆದುಕೊಂಡು ಬಂದರು. ಮಹರ್ಷಿಯಾದ ದೂರ್ವಾಸನಿಗೆ ಅಭ್ಯಂಗಸ್ನಾನವನ್ನು ಮಾಡಿಸಿ, ಶಿವಪೂಜೆಯ ವ್ಯವಸ್ಥೆ ಯನ್ನು ಮಾಡಿಸಿ ಪ್ರಸಾದವೇನಾಗಬೇಕೆಂದು ಕೇಳಿಕೊಂಡನು. ಆಗ ದೂರ್ವಾಸನು ಸುಡು ಸುಡುವ ಖೀರನ್ನು ಮಾಡಿಕೊಂಡು ಬರಲು ಹೇಳಿದನು. ಮಹರ್ಷಿಯ ಪೂಜೆ ಮುಗಿಯುತ್ತಲೇ ಶ್ರೀಕೃಷ್ಣನು ಸುಡುವ ಖೀರನ್ನು ತಂದು ಮುಂದಿರಿಸಿದನು. ಅದನ್ನು ಮುಟ್ಟಿನೋಡಿದ ದೂರ್ವಾಸನು 'ಇಗೋ ಇದನ್ನು ನಿನ್ನ ಸರ್ವಾಂಗಕ್ಕೆಲ್ಲ ಲೇಪಿಸಿಕೋ !' ಎಂದು ಆಜ್ಞಾಪಿಸಿದನು. ಮಹರ್ಷಿಯ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವದಕ್ಕಾಗಿ ಶ್ರೀಕೃಷ್ಣನು ತನ್ನ ಅಂಗಕ್ಕೆಲ್ಲ ಲೇಪಿಸಿಕೊಂಡರೂ ಅಂಗಾಲಿಗೆ ಮಾತ್ರ ಲೇಪಿಸಿಕೊಂಡಿರಲಿಲ್ಲ. ಇದನ್ನು ತಿಳಿದ ದೂರ್ವಾಸನು–ಪ್ರಸಾದಲಿಪ್ತವಾದ ನಿನ್ನ ಸರ್ವಾಂಗವು ವಜ್ರಮಯವಾದರೂ ಅಂಗಾಲಿಗೆ ಲೇಪಿಸಿಕೊಳ್ಳದ ಕಾರಣ, ಅದು ಹಾಗೇ ಚರ್ಮಮಯವಾಗಿ ಉಳಿಯುವುದು. ಕಾಲಾಂತರದಲ್ಲಿ ನಿನಗೆ ಮೃತ್ಯುವು ಅಂಗಾಲಿನ ಮೂಲಕವಾಗಿ ಆಗುವುದು ಎಂಬುದಾಗಿ ಗದರಿಸಿದನು. ಎಲ್ಲರಿಗೂ ತಿಳಿದಹಾಗೆ ಶ್ರೀಕೃಷ್ಣನ ಮೃತ್ಯುವು ಒಬ್ಬ ವ್ಯಾಧನ ಬಾಣದ ಏಟು ಅಂಗಾಲಿಗೆ ಬಿದ್ದಾಗಲೇ ಸಂಭವಿಸಿತು. ಶಿವನ ಪ್ರಸಾದದಲ್ಲಿ ಎಷ್ಟೊಂದು ಮಹತ್ವವಿದೆ ಎಂಬುದನ್ನು ಅರಿತು ಪ್ರತಿಯೊಬ್ಬರೂ ಅದನ್ನು ಅನುಭವಿಸಬೇಕಾಗಿದೆ.

ಜನ್ಮರಸಾಯನವಾದ ಈ ಪ್ರಸಾದದಿಂದ ಪುನಃ ಯಾವ ಯಾವ ಲಾಭಗಳಾಗುತ್ತವೆ ಎಂಬುದನ್ನು ಪೂಜ್ಯಪಾದರು–

ಆರೋಗ್ಯಕಾರಣಂ ಪುಂಸಾಮಂತಃಕರಣಶುದ್ಧಿದಮ್ ।
ತಾಪತ್ರಯಮಹಾರೋಗಸಮುದ್ಧರಣಭೇಷಜಮ್ ॥
ವಿದ್ಯಾವೈಶದ್ಯಕರಣಂ ವಿನಿಪಾತವಿಘಾತನಮ್ ।
ದ್ವಾರಂ ಜ್ಞಾನಾವತಾರಸ್ಯ ಮೋಹಚ್ಛೇದಸ್ಯ ಕಾರಣಮ್ ॥
ವೈರಾಗ್ಯಸಂಪದೋ ಮೂಲಂ ಮಹಾನಂದಪ್ರವರ್ಧನಮ್ ।
ದುರ್ಲಭಂ ಪಾಪಚಿತ್ತಾನಾಂ ಸುಲಭಂ ಶುದ್ಧಕರ್ಮಣಾಮ್ ॥
ಅದೃತಂ ಬ್ರಹ್ಮವಿಷ್ಣ್ವಾದ್ಯೈರ್ವಸಿಷ್ಠಾದ್ಯೈಶ್ಚ ತಾಪಸೈಃ ।
ಶಿವಸ್ವೀಕೃತಮನ್ನಾದ್ಯಂ ಸ್ವೀಕಾರ್ಯಂ ಸಿದ್ಧಿಕಾಂಕ್ಷಿಭಿಃ ॥

(ಸಿ. ಶಿ. ೧೧ ; ೧೩–೧೬)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನ ಇಲ್ಲವೇ ಇಷ್ಟಲಿಂಗದ ಪ್ರಸಾದವನ್ನು ಪ್ರತಿದಿವಸ ತಪ್ಪದೇ ಸ್ವೀಕರಿಸುವುದರಿಂದ ಆರೋಗ್ಯವು ಸುಧಾರಿಸುತ್ತದಲ್ಲದೇ ಅಂತಃಕರಣವು ಪರಿಶುದ್ಧವಾಗುತ್ತದೆ. ತಾಪತ್ರಯಗಳೆಂಬ ಮಹಾರೋಗವನ್ನು ನಿವಾರಿಸುವ ದಿವ್ಯೌಷಧವೇ ಪ್ರಸಾದವು. ಪ್ರಸಾದ ಸೇವನೆಯಿಂದ ಶುದ್ಧವಿದ್ಯೆಯ ಪ್ರಾಪ್ತಿಯಾಗುವುದು. ಪ್ರಸಾದದಿಂದ ಎಲ್ಲ ವಿಧ ದೋಷಗಳು ನಾಶವಾಗುತ್ತವೆ. ಶಿವಜ್ಞಾನವು ಪ್ರಾಪ್ತವಾಗುತ್ತದೆ. ಅಜ್ಞಾನವು ನಾಶವಾಗುತ್ತದೆ. ಮನದಲ್ಲಿ

ವೈರಾಗ್ಯದ ಉದಯವಾಗುತ್ತದೆ. ನಿತ್ಯಾನಂದವು ಪ್ರಾಪ್ತವಾಗುತ್ತದೆ. ಪಾಪಿಗಳಿಗೆ ಇದು ದುರ್ಲಭವಾದರೂ ಪುಣ್ಯಜೀವಿಗಳಿಗೆ ಸುಲಭವಾಗಿರುತ್ತದೆ. ಬ್ರಹ್ಮ ವಿಷ್ಣ್ವಾದಿ ದೇವತೆಗಳು ಮತ್ತು ವಸಿಷ್ಠಾದಿ ಮಹರ್ಷಿಗಳು ಶಿವಪ್ರಸಾದದಿಂದಲೇ ಸಿದ್ಧಿಯನ್ನು ಪಡೆದುಕೊಂಡವರಾಗಿದ್ದಾರೆ. ಆದಕಾರಣ ಸಿದ್ಧಿಯ ಅಪೇಕ್ಷೆಯುಳ್ಳವರು ಶಿವನಿಗೆ ಸಮರ್ಪಿಸಿದ ಅನ್ನಾದಿ ಪ್ರಸಾದವನ್ನೇ ಸ್ವೀಕರಿಸಬೇಕು.

ದೇವರಿಗೆ ಮಾಡುವ ನೈವೇದ್ಯವು ಪಕ್ವಾನ್ನವೇ ಇರಬೇಕೆಂಬ ನಿಯಮವೇನಿಲ್ಲ, ಯಾವದೇ ಪದಾರ್ಥವನ್ನಾದರೂ ದೇವರಿಗೆ ನೈವೇದ್ಯವಾಗಿ ಸಮರ್ಪಿಸಬಹುದು. ಅಂತೆಯೇ ರೇಣುಕ ಭಗವತ್ಪಾದರು–

ಪತ್ರಂ ಪುಷ್ಪಂ ಫಲಂ ತೋಯಂ ಯಚ್ಛಿವಾಯ ನಿವೇದಿತಮ್ ।
ತತ್ತತ್ ಸ್ವೀಕಾರಯೋಗೇನ ಸರ್ವಪಾಪಕ್ಷಯೋ ಭವೇತ್ ॥

(ಸಿ. ಶಿ. ೧೧–೧೭)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಮನುಷ್ಯನಿಗೆ ಕೆಲವು ವಿಶಿಷ್ಟ ಖಾದ್ಯ ಪದಾರ್ಥಗಳಲ್ಲಿ ಅಭಿರುಚಿಯಿರುವಂತೆ, ದೇವರಿಗೆ ಯಾವದೇ ವಿಶಿಷ್ಟ ಪದಾರ್ಥದಲ್ಲಿ ಅಭಿರುಚಿ ಇರುವುದಿಲ್ಲ, ಭಕ್ತನು ಭಕ್ತಿಯಿಂದ ಸಮರ್ಪಿಸಿದ ಎಲೆ, ಹೂ, ಹಣ್ಣು ಮತ್ತು ಜಲ ಇವುಗಳಲ್ಲಿ ಯಾವುದಿದ್ದರೂ ಭಗವಂತನು ಸ್ವೀಕರಿಸುತ್ತಾನೆ. ಬಹಳಷ್ಟು ಜನರು ಪ್ರತಿದಿವಸ ತಾವು ಉಣ್ಣುವ ಸಾಮಾನ್ಯವಾದ ಆಹಾರವನ್ನು ದೇವರಿಗೆ ಅದು ಹೇಗೆ ನೈವೇದ್ಯ ತೋರಿಸಬೇಕೆಂಬ ಸಂಶಯದಿಂದ ಕೇವಲ ಸಕ್ಕರೆ ಹಾಲನ್ನು ಮಾತ್ರ ನೈವೇದ್ಯವನ್ನಾಗಿ ಸಮರ್ಪಿಸುವುದುಂಟು. ಈ ಪದ್ಧತಿಯು ಸರಿಯಾದದ್ದಲ್ಲ, ತಾವು ಸೇವಿಸುವ ಕಜ್ಜಾಯ–ಕಾಯಿಪಲ್ಯಗಳನ್ನು ಸಹ ದೇವರಿಗೆ ನೈವೇದ್ಯವನ್ನಾಗಿ ಸಮರ್ಪಿಸಿ ಅದನ್ನು ಭಗವಂತನ ಪ್ರಸಾದವೆಂದು ತಿಳಿದು ಸೇವಿಸಬೇಕು. ಹೀಗೆ ತಾನು ಸೇವಿಸುವ ಆಹಾರವನ್ನು ಭಗವದರ್ಪಣಮಾಡಿ ಸೇವಿಸುವುದರಿಂದ ಸಾಧಕನ ಸರ್ವಪಾಪಗಳು ಕ್ಷಯಿಸಿ ಹೋಗುತ್ತವೆ.

ಭಗವದ್ಗೀತೆಯಲ್ಲಿ ಭೋಜನವನ್ನು ಒಂದು ಯಜ್ಞವನ್ನಾಗಿ ಪ್ರತಿಪಾದಿಸಲಾಗಿದೆ. ಯಜ್ಞಕುಂಡದಲ್ಲಿ ಹವಿಸ್ಸನ್ನು ಸಮರ್ಪಿಸುವಾಗ ಭಗವಂತನ ಹೆಸರನ್ನು ಹೇಳಿ ಸ್ವಾಹಾಕಾರವನ್ನು ಮಾಡುವಂತೆ ಸಾಧಕನು ಊಟ ಮಾಡುವಾಗ ಪ್ರತಿಯೊಂದು ತುತ್ತಿಗೆ ಭಗವಂತನ ನಾಮಸ್ಮರಣೆಯನ್ನು ಮಾಡುತ್ತ ಊಟಮಾಡಿದರೆ, ಅದು ಒಂದು ಯಜ್ಞ ಮಾಡಿದಷ್ಟು ಪುಣ್ಯವನ್ನು ದೊರಕಿಸಿಕೊಡುತ್ತದೆ. ಅನ್ಯರಿಗೆ ಉಣಬಡಿಸಿದರೆ ಹೇಗೆ ಪುಣ್ಯ ಪ್ರಾಪ್ತವಾಗುವುದೋ ಹಾಗೆ ಶಾಸ್ತ್ರವಿಹಿತ ಪದ್ಧತಿಯಿಂದ ತಾನೇ ಅನ್ನವನ್ನು ಸೇವಿಸಿದರೂ ಅದು ಪುಣ್ಯದಾಕಯವಾಗುತ್ತದೆ. ಈ ಪುಣ್ಯದ ಪರಿಣಾಮವಾಗಿಯೇ ಸಾಧಕನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆಂಬುದಾಗಿ ಶ್ರೀ ಜಗದ್ಗುರು ರೇಣುಕಭಗವತ್ಪಾದರು ಅಪ್ಪಣೆ ಕೊಡಿಸಿದ್ದಾರೆ.

ಈ ವಿಧವಾದ ಪ್ರಸಾದ ಸೇವನೆಯು ಶಿವಾಗಮದಲ್ಲಿ–

ಗುರುಜಂಗಮಲಿಂಗಾನಾಂ ನಿರ್ಮಾಲ್ಯಂ ಭುಕ್ತಿಮುಕ್ತಿದಮ್ ।
ಸದ್ಯೈವಾನುಭವೇದ್ದೇವಿ ! ಪ್ರಸಾದವ್ರತಮುತ್ತಮಮ್ ॥

ಹೀಗೆ ಪ್ರಸಾದವ್ರತವೆಂಬುದಾಗಿ ತಿಳಿಯಪಡಿಸಲಾಗಿದೆ. ಅನೇಕ ವಿಧವಾದ ವ್ರತಗಳಲ್ಲಿ ಪ್ರಸಾದಸೇವನೆಯೂ ಸಹ ವೀರಶೈವರ ಒಂದು ವಿಶಿಷ್ಟ ವ್ರತವಾಗಿದೆ. ವೀರಶೈವ ಸಾಧಕರು ಗುರು–ಲಿಂಗ–ಜಂಗಮರ ಪೂಜಾ ವ್ರತವನ್ನು ಪರಿಪಾಲಿಸುವಂತೆ ಪ್ರಸಾದ ಸೇವನೆಯ ವ್ರತವನ್ನು ಪಾಲಿಸಬೇಕು. ಈ ವ್ರತವೂ ನಿತ್ಯವ್ರತವಾದ್ದರಿಂದ ನಿತ್ಯವೂ ಗುರು–ಲಿಂಗ–ಜಂಗಮರ ಪೂಜೆಯನ್ನು ಮಾಡಿ ಅವರಿಗೆ ಭಕ್ಷ್ಯ–ಭೋಜ್ಯ ಪದಾರ್ಥಗಳನ್ನು ಸಮರ್ಪಿಸಿ ಅವರಿಂದ ಕೊಡಮಾಡಿದ ಶುದ್ಧ–ಸಿದ್ಧ–ಪ್ರಸಿದ್ಧ ಪ್ರಸಾದಗಳನ್ನು ಪಡೆದು ತಮ್ಮ ತ್ರಿಕರಣಗಳನ್ನು ಪರಿಶುದ್ಧ ಮಾಡಿಕೊಳ್ಳಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೪ ಸಪ್ಟೆಂಬರ, ೧೯೯೧
(ಸ್ಥಾನ ನಾಗಪುರ)



ಆಶೀರ್ವಚನ-೧

# ಗುರುಮಾಹಾತ್ಮ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ವೀರಶೈವ ಸಿದ್ಧಾಂತದಲ್ಲಿ ಲಿಂಗಪೂಜೆಗೆ ಇರುವಷ್ಟು ಮಹತ್ತ್ವವು ಗುರು ಪೂಜೆಗೂ ಇರುತ್ತದೆ. ಆದ್ದರಿಂದ ಲಿಂಗಪ್ರಸಾದವನ್ನು ಸೇವಿಸುವಂತೆ ಗುರು ಪ್ರಸಾದವನ್ನೂ ಸಹ ಸಾಧಕನು ಸೇವಿಸಬೇಕು ಎಂಬುದಾಗಿ ಉಪದೇಶಿಸುವುದಕ್ಕಾಗಿಯೇ ಪೂಜ್ಯಪಾದರು ಗುರುಮಾಹಾತ್ಮ್ಯಸ್ಥಲವನ್ನು ಪ್ರಾರಂಭಿಸುತ್ತಿದ್ದಾರೆ.

ಯಥಾ ಶಿವಪ್ರಸಾದಾನ್ನಂ ಸ್ವೀಕಾರ್ಯಂ ಲಿಂಗತತ್ಪರೈಃ ।
ತಥಾ ಗುರೋಃ ಪ್ರಸಾದಾನ್ನಂ ತಥೈವ ಶಿವಯೋಗಿನಾಮ್ ॥

ಗುರುರೇವಾತ್ರ ಸರ್ವೇಷಾಂ ಕಾರಣಂ ಸಿದ್ಧಿಕರ್ಮಣಾಮ್ ।
ಗುರುರೂಪೋ ಮಹಾದೇವೋ ಯತಃ ಸಾಕ್ಷಾದುಪಸ್ಥಿತಃ ॥

(ಸಿ. ಶಿ. ೧೧ ; ೧೮–೧೯)

ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಈ ಉಪದೇಶದಂತೆ ಮನುಷ್ಯನ ಸರ್ವವಿಧ ಸಿದ್ಧಿಗಳಿಗೆ ಅರ್ಥಾತ್ ಭೋಗಮೋಕ್ಷಗಳ ಪ್ರಾಪ್ತಿಗೆ ಗುರುವೇ ಕಾರಣನಾಗಿರುವನು. ಸದ್ಗುರುವಿನ ಅನುಗ್ರಹವಿಲ್ಲದೆ ಐಹಿಕ ಭೋಗಭಾಗ್ಯಗಳಾಗಲೀ ಪಾರಮಾರ್ಥಿಕ ಮೋಕ್ಷವಾಗಲೀ ದೊರೆಯಲಾರದು. ಸಾಕ್ಷಾತ್ ಪರಮಾತ್ಮನೇ ಗುರುರೂಪವನ್ನು ತಾಳಿರುವ ಕಾರಣ ಸದ್ಭಕ್ತರಿಗೆ ಉಭಯವಿಧ ಸಿದ್ಧಿಯನ್ನು ದಯಪಾಲಿಸುವುದರಲ್ಲಿ ಅವನು ಸಮರ್ಥನಾಗಿರುತ್ತಾನೆ. ವೀರಶೈವ ಸಾಧಕನು ಗುರು ಹಾಗೂ ಲಿಂಗಗಳಲ್ಲಿ ನಿಷ್ಠೆಯನ್ನಿಟ್ಟಿರುವಂತೆ ಜಂಗಮನಲ್ಲಿಯೂ ನಿಷ್ಠೆಯುಳ್ಳವನಾಗಿರಬೇಕು. ಅಂತೆಯೇ ಈ ಸಿದ್ಧಾಂತದಲ್ಲಿ ಗುರು, ಲಿಂಗ ಮತ್ತು ಜಂಗಮರು ಆರಾಧ್ಯರೆಂಬುದಾಗಿ ಪರಿಗಣಿಸಲ್ಪಟ್ಟಿದ್ದಾರೆ. ಸ್ಥೂಲವಾಗಿ ಇವು ಮೂರಾಗಿ ತೋರುತ್ತಿದ್ದರೂ ತತ್ತ್ವತಃ ಮೂರೂ ಒಂದೇ ಆಗಿರುತ್ತವೆ. ಅಂತೆಯೇ ''ಏಕಮೂರ್ತಿಃ ತ್ರಯೋಭಾಗಃ'' ಎಂಬುದಾಗಿ ಹೇಳಲ್ಪಟ್ಟಿದೆ. ಒಂದು ಬಿಲ್ವದಳದಲ್ಲಿ ಮೂರು ದಳಗಳಿದ್ದರೂ ಅದು ಒಂದು ಬಿಲ್ವದಳವೆಂಬುದಾಗಿ ಪರಿಗಣಿಸಲ್ಪಡುವಂತೆ, ಗುರು, ಲಿಂಗ ಮತ್ತು ಜಂಗಮರು ಸಹ ಒಂದೇ ಎಂಬುದಾಗಿ ಪರಿಗಣಿಸಲ್ಪಟ್ಟಿವೆ. ಅಂತೆಯೇ ಮಹಾರಾಷ್ಟ್ರದ ಸಂತರಾದ ಮನ್ಮಥಸ್ವಾಮಿಗಳವರು–ಗುರು ಆಣಿ ಲಿಂಗ ಜಂಗಮಾಚಿ ಸೇವಾ । ದೇಯೀ ಮಜ ದೇವಾ ಜನ್ಮೋಜನ್ಮೀ ॥ ಎಂಬುದಾಗಿ ಶಿವನಲ್ಲಿ ಪ್ರಾರ್ಥಿಸಿ ಕೊಂಡಿದ್ದಾರೆ. ತಾತ್ಪರ್ಯವೇನೆಂದರೆ–ನನಗೆ ಪ್ರತಿಯೊಂದು ಜನ್ಮದಲ್ಲಿಯೂ ಗುರು–ಲಿಂಗ–ಜಂಗಮರ ಸೇವೆಯು ದೊರೆಯಬೇಕೆಂಬುದಾಗಿ ಕೇಳಿಕೊಳ್ಳುವದರ ಮೂಲಕ ಸಮಾಜಕ್ಕೆ ಅವುಗಳ ಮಹತ್ತ್ವವನ್ನು ತಿಳಿಯಪಡಿಸಿ ಅವುಗಳನ್ನು ಆರಾಧಿಸಬೇಕೆಂಬ ಸೂಕ್ಷ್ಮ ವಿಚಾರವನ್ನು ತಿಳಿಯಪಡಿಸಿದ್ದಾರೆ.

ಭಾರತೀಯ ಸಂಸ್ಕೃತಿಯಲ್ಲಿ ಗುರುವಿಗೆ ಅತ್ಯಂತ ಮಹತ್ತ್ವದ ಸ್ಥಾನವನ್ನು ಕೊಡಲಾಗಿದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರೂ ಸಹ ಗುರುವನ್ನು ಪ್ರತ್ಯಕ್ಷ ಪರಮಾತ್ಮನೆಂದು ತಿಳಿದುಕೊಳ್ಳಬೇಕೆಂದುದಾಗಿ ಅಪ್ಪಣೆ ಕೊಡಿಸಿದ್ದಾರೆ. ನಿರ್ಗುಣ ನಿರಾಕಾರನಾದ ಪರಮಾತ್ಮನು ಸಗುಣ ಸಾಕಾರರೂಪವನ್ನು ತಾಳಿ ಗುರು ರೂಪದಲ್ಲಿ ಪ್ರಕಟವಾಗುತ್ತಾನೆ. ಅಂತೆಯೇ ಗುರುವಿನಲ್ಲಿ ಹಾಗೂ ದೇವರಲ್ಲಿ ಮಹದಂತರವನ್ನು ಕಾಣಲಾಗುವುದಿಲ್ಲ ಇದೇ ಮಾತನ್ನೇ ಪೂಜ್ಯಪಾದರು–

ನಿಷ್ಕಲೋ ಹಿ ಮಹಾದೇವೋ ನಿತ್ಯಜ್ಞಾನಮಹೋದಧಿಃ ।
ಸಕಲೋ ಗುರುರೂಪೇಣ ಸರ್ವಾನುಗ್ರಾಹಕೋ ಭವೇತ್ ॥

ಯಶ್ಶಿವಃ ಸ ಗುರುರ್ಜ್ಞೇಯೋ ಯೋ ಗುರುಃ ಸ ಶಿವಃ ಸ್ಮೃತಃ ।
ನ ತಯೋರಂತರಂ ಕುರ್ಯಾತ್ ಜ್ಞಾನಾವಾಪ್ತೌ ಮಹಾಮತಿಃ ॥

ಹಸ್ತಪಾದಾದಿ ಸಾಮ್ಯೇನ ನೇತರೈಃ ಸದೃಶಂ ವದೇತ್ ।
ಆಚಾರ್ಯಂ ಜ್ಞಾನದಂ ಶುದ್ಧಂ ಶಿವರೂಪತಯಾ ಸ್ಥಿತಮ್ ॥

(ಸಿ. ಶಿ. ೧೧ ; ೨೦–೨೨)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಪೂಜ್ಯಪಾದರ ಉಪದೇಶದಂತೆ ನಿತ್ಯಜ್ಞಾನದ ಮಹಾಸಾಗರನೂ, ನಿರಾಕಾರನೂ ಆದ ಪರಮಾತ್ಮನೇ ಸರ್ವರನ್ನು ಅನುಗ್ರಹಿಸುವುದಕ್ಕಾಗಿ ಸಗುಣ ರೂಪವನ್ನು ತಾಳಿ ಗುರುವಾಗಿ ಬಂದಿದ್ದಾನೆ. ಆದ್ದರಿಂದ ಶಿವನೇ ಗುರುವು, ಗುರುವೇ ಶಿವನು. ಅವರೀರ್ವರಲ್ಲಿಯಾವ ಭೇದವೂ ಇರುವುದಿಲ್ಲ. ಆದ್ದರಿಂದ ಜಿಜ್ಞಾಸುವಾದ ಸಾಧಕನು ತನಗೆ ಜ್ಞಾನೋದಯವನ್ನುಂಟುಮಾಡಿಕೊಡುವ ಗುರುವನ್ನು ಸಾಕ್ಷಾತ್ ಶಿವನೆಂಬುದಾಗಿ ಭಾವಿಸಬೇಕು. ಉಳಿದ ಮನುಷ್ಯರಂತೆ ಗುರುವೂ ಸಹ ತೋರಿಕೆಗೆ ಸಮಾನವಾಗಿ ಕಂಡರೂ ಗುರುವನ್ನು ಇತರರೊಂದಿಗೆ ಸಾಮ್ಯವಾಗಿ ತಿಳಿದುಕೊಳ್ಳಬಾರದು. ಅಂತೆಯೇ ವಚನಕಾರರು–

''ಗುರುವ ನರನೆಂದವಗೆ ನಾಯಕನರಕ ತಪ್ಪದು'' ಎಂಬುದಾಗಿ ಹೇಳಿದ್ದಾರೆ. ಜ್ಞಾನೋಪದೇಶವನ್ನು ಮಾಡುವ ಸದ್ಗುರುವನ್ನು ಶಿವನೆಂಬುದಾಗಿ ಭಾವಿಸಿದಾಗಲೇ ಜ್ಞಾನವನ್ನು ಸಂಪಾದಿಸಬಹುದು. ಅನ್ಯಥಾ ಅದೆಂದಿಗೂ ಸಾಧ್ಯವಾಗಲಾರದು. ಶಾರೀರಿಕ ದೃಷ್ಟಿಯಿಂದ ಗುರುವಿಗೂ ಹಾಗೂ ಇತರರಿಗೂ ಭೇದವು ತೋರದೇ ಇದ್ದರೂ ಅವರಲ್ಲಿರುವ ಉತ್ಕೃಷ್ಟ ಜ್ಞಾನದಿಂದಾಗಿ ಗುರುವು ಇತರರಿಗಿಂತ ವಿಲಕ್ಷಣವಾಗಿ ತೋರುತ್ತಾನೆ. ಆದ್ದರಿಂದ–

ಆಚಾರ್ಯಸ್ಯಾವಮಾನೇನ ಶ್ರೇಯಃ ಪ್ರಾಪ್ತಿರ್ವಿಹನ್ಯತೇ ।
ತಸ್ಮಾನ್ನಿಃಶ್ರೇಯಸಪ್ರಾಪ್ತ್ಯೈ ಪೂಜಯೇತ್ ತಂ ಸಮಾಹಿತಃ ॥

(ಸಿ. ಶಿ. ೧೧–೨೩)

ಎಂಬ ಪೂಜ್ಯರ ಉಪದೇಶದಂತೆ ಮುಕ್ತಿಕಾಂಕ್ಷಿಯಾದವನು ತನ್ನ ನಡೆ–ನುಡಿಗಳಲ್ಲಿ ಅದೆಂದಿಗೂ ಗುರುವಿನ ಅಪಮಾನವಾಗದಂತೆ ಜಾಗ್ರತೆಯಿಂದ ವ್ಯವಹರಿಸಬೇಕು. ಅಪ್ಪಿತಪ್ಪಿ ಗುರುವಿಗೆ ಅಪಮಾನವೆಸಗಿದರೆ ಆ ವ್ಯಕ್ತಿಯ ಶ್ರೇಯೋಮಾರ್ಗವು

ಕುಂಠಿತವಾಗುತ್ತದೆ. ಇದೆಲ್ಲವನ್ನು ಪರ್ಯಾಲೋಚಿಸಿಯೇ ನಿಶ್ರೇಯಸಾಭಿಲಾಷಿಯು ಸದಾ ಗುರುವಿಗೆ ಗೌರವವನ್ನು ಕೊಟ್ಟು ಆತನನ್ನು ಆರಾಧಿಸಬೇಕು. ಗುರುವಿನ ಆರಾಧನೆಯನ್ನು ಮಾಡದೆ ಆರಾಧನಾ ಕ್ರಿಯೆಯು ಪೂರ್ಣವಾಗಲಾರದು. ಎಷ್ಟೆಲ್ಲ ದೇವರನ್ನು ಪೂಜಿಸಿದರೂ ಪೂಜೆ ಪೂರ್ಣವಾಗುವುದಿಲ್ಲ, ಅದು ಗುರುಪೂಜೆಯಿಂದೇ ಪೂರ್ಣವಾಗುವುದು. ಅಂತೆಯೇ ಶ್ರೀ ರೇಣುಕ ಭಗವತ್ಪಾದರು–

ಗುರುಭಕ್ತಿವಿಹೀನಸ್ಯ ಶಿವಭಕ್ತಿರ್ನ ಜಾಯತೇ ।
ತತಶ್ಶಿವೇ ಯಥಾ ಭಕ್ತಿಃ ತಥಾಭಕ್ತಿರ್ಗುರಾವಪಿ ॥

(ಸಿ. ಶಿ. ೧೧–೨೪)

ಎಂಬುದಾಗಿ ನಿರೂಪಿಸಿದ್ದಾರೆ. ಗುರುಭಕ್ತಿಯಿಲ್ಲದವನಿಗೆ ಶಿವಭಕ್ತಿಯೂ ಸಹ ಸಂಭವಿಸಲಾರದು ಎಂಬುದು ಆಚಾರ್ಯರ ಆದೇಶ. ಇದನ್ನೇ ಬಸವಣ್ಣನವರು, ''ಶಿವಪಥವನರಿವೊಡೆ ಗುರುಪಥವೇ ಮೊದಲು'' ಎಂಬುದಾಗಿ ನುಡಿದಿದ್ದಾರೆ. ಭಕ್ತನಾದವನು ಸದ್ಗುರುವಿಗೆ ಶರಣಾಗತನಾಗದೆ ಹಾಗೆಯೇ ಶಿವನನ್ನು ಪೂಜಿಸಲು ಹೋದರೆ ಅವನಿಗೆ ಅದೆಂದಿಗೂ ಶಿವಕೃಪೆಯಾಗದು. ಅನಾದಿಗಳಾದ ಆಣವಾದಿ ಮಲಯುಕ್ತನಾದ ಜೀವಾತ್ಮನು ಗುರುವಿನಿಂದ ಶಿವದೀಕ್ಷೆಯನ್ನು ಪಡೆದು ಪರಶುದ್ಧನಾದಾಗಲೇ ಶಿವನನ್ನು ಪೂಜಿಸುವ ಹಾಗೂ ಶಿವನ ಕೃಪೆಯನ್ನು ಪಡೆಯುವ ಅಧಿಕಾರಿಯಾಗಬಲ್ಲನು. ಮೈತುಂಬ ಕೆಸರು ಬಳಿದುಕೊಂಡ ಒಂದು ಮಗುವು ತನ್ನ ಮನೆಯೊಳಕ್ಕೆ ಬರುತ್ತಿರುವಾಗ ಅಕಸ್ಮಾತ್ ಎದುರಿಗೆ ಆತನ ತಂದೆಯು ಕಂಡರೆ ಆ ಮಗುವು ಅಪ್ಪಾ ! ಎಂದು ತಂದೆಯತ್ತ ಧಾವಿಸಿದರೆ, ತಂದೆಯಾದವನು ಆ ಮಗುವನ್ನು ತನ್ನ ಸಮೀಪಕ್ಕೆ ಕರೆದುಕೊಳ್ಳದೆ ನೀನು ನಿನ್ನ ತಾಯಿಯ ಬಳಿಗೆ ಹೋಗು ಎಂಬುದಾಗಿ ಕಳಿಸುವುದುಂಟು. ಅದೇ ಮಗುವು ಹಾಗೆಯೇ ತಾಯಿಯ ಬಳಿಗೆ ಹೋದಾಗ ಆ ತಾಯಿಯು ಆ ಮಗುವಿಗೆ ನಿನ್ನ ತಂದೆಯ ಬಳಿಗೆ ಹೋಗು ಎಂದು ಕಳಿಸುವುದನ್ನು ನಾವೆಲ್ಲಿಯೂ ಕಾಣಲಾರೆವು. ತಾಯಿಯಾದವಳು ಮಗುವಿನ ಅಂಗ ಮಾಲಿನ್ಯವನ್ನು ತೊಳೆದು ಅದನ್ನು ಶುದ್ಧಗೊಳಿಸಿ ತಂದೆಯ ಬಳಿಗೆ ಕಳಿಸಿದಾಗ ತಂದೆಯು ಆ ಮಗುವನ್ನು ವಾತ್ಸಲ್ಯದಿಂದ ಎತ್ತಿ ಮುದ್ದಾಡುವಂತೆ, ಗುರುವಿಗೆ ಶರಣಾಗತನಾಗಿ ತನ್ನ ಆಣವಾದಿ ಮಲಗಳನ್ನು ದೀಕ್ಷಾ ವಿಧಾನದಿಂದ ಕಳೆದುಕೊಂಡು ಪರಿಶುದ್ಧನಾದಾಗ ಶಿವನ ಕೃಪೆಯನ್ನು ಪಡೆದುಕೊಳ್ಳುತ್ತಾನೆ. ಅಂತೆಯೇ ಪೂಜ್ಯರು ಗುರುಕೃಪೆಯಿಲ್ಲದೆ ಶಿವಕೃಪೆಯುಂಟಾಗದೆಂಬುದಾಗಿ ನಿರೂಪಣೆಗೈದಿದ್ದಾರೆ.

ಈ ರೀತಿಯಾಗಿ ವೀರಶೈವ ಸಿದ್ಧಾಂತದಲ್ಲಿ ಸಾಧಕನು ಲಿಂಗ ಪ್ರಸಾದವನ್ನು ಸೇವಿಸುವುದರ ಜೊತೆಗೆ ಗುರು ಮತ್ತು ಜಂಗಮರ ಪ್ರಸಾದವನ್ನು ಸೇವಿಸಿ ಮನಸ್ಸನ್ನು ಪರಿಶುದ್ಧವಾಗಿಸಿಕೊಳ್ಳಬೇಕೆಂಬ ಉದ್ದೇಶಕ್ಕಾಗಿಯೇ ಈ ಗುರುಮಹಾತ್ಮ್ಯಸ್ಥಲದಲ್ಲಿ ಗುರುವಿನ ಅತ್ಯಂತ ಮಹತಿಯನ್ನು ಪೂಜ್ಯಪಾದರು ತಿಳಿಸಿಕೊಟ್ಟಿದ್ದಾರೆಂಬಲ್ಲಿಗೆ ಇಂದಿನ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೫ ಸಪ್ಟೆಂಬರ, ೧೯೯೧

(ಸ್ಥಾನ ನಾಗಪುರ)



ಆಶೀರ್ವಚನ-೧

# ಲಿಂಗಮಾಹಾತ್ಮ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಪ್ರಸಾದಿಸ್ಥಲದಲ್ಲಿಯ ಗುರುಮಹಾತ್ಮ್ಯಸ್ಥಲವನ್ನು ನೀವೆಲ್ಲ ಶ್ರವಣಮಾಡಿದ್ದೀರಿ. ಇಂದು ಪೂಜ್ಯಪಾದರು ಲಿಂಗಮಹಾತ್ಮ್ಯಸ್ಥಲವನ್ನು ಕುರಿತು ಉಪದೇಶಿಸುತ್ತಿದ್ದಾರೆ. ನಾವು ನಿತ್ಯ ಆರಾಧಿಸುವ ದೇವರ ಮಹಿಮೆಯು ನಮಗೆ ತಿಳಿಯದೇ ಇದ್ದಾಗ ನಮ್ಮ ಭಕ್ತಿಯು ಅಲ್ಲಿ ವಿಶೇಷವಾಗಿ ಬೆಳೆಯಲು ಸಾಧ್ಯವಾಗುವುದಿಲ್ಲ. ಅಂತೆಯೇ ವೀರಶೈವರಿಗೆ ಪರಮ ಆರಾಧ್ಯವಾದ ಇಷ್ಟಲಿಂಗದ ಮಹಿಮೆಯನ್ನು ತಿಳಿಯಪಡಿಸುವುದಕ್ಕಾಗಿಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಲಿಂಗಮಹಾತ್ಮ್ಯಸ್ಥಲವನ್ನು ಪ್ರಾರಂಭಿಸುತ್ತ-

ಗುರುಮಾಹಾತ್ಮ್ಯಯೋಗೇನ ನಿಜಜ್ಞಾನಾತಿರೇಕತಃ ।
ಲಿಂಗಸ್ಯಾಪಿ ಚ ಮಾಹಾತ್ಮ್ಯಂ ಸರ್ವೋತ್ಕೃಷ್ಟಂ ವಿಭಾವ್ಯತೇ ॥

ಶಿವಸ್ಯ ಬೋಧಲಿಂಗಂ ಯದ್ ಗುರುಬೋಧಿತಚೇತಸಾ ।
ತದೇವ ಲಿಂಗಂ ವಿಜ್ಞೇಯಂ ಶಾಂಕರಂ ಸರ್ವಕಾರಣಮ್ ॥

(ಸಿ. ಶಿ. ೧೧; ೨೫-೨೬)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಗುರವಿನ ಮಹಿಮೆಯನ್ನು ತಿಳಿದು ಆ ಗುರುವಿನಲ್ಲಿ ಅನನ್ಯವಾದ ಶ್ರದ್ಧೆಯುಳ್ಳವನಿಗೆ ಸದ್ಗುರುವಿನ ಉಪದೇಶದಿಂದ ಉತ್ಕೃಷ್ಟವಾದ ಜ್ಞಾನೋದಯವು ಉಂಟಾಗುತ್ತದೆ. ಆ ಜ್ಞಾನದ ಪರಿಣಾಮವಾಗಿಯೇ ತಾನು ಆರಾಧಿಸುವ ಇಷ್ಟಲಿಂಗವೂ ಸಹ ಸರ್ವೋತ್ಕೃಷ್ಟವಾದುದು ಎಂಬ ಅರಿವು ಒಡಮೂಡುತ್ತದೆ. ಲಿಂಗವು ಜಗತ್ತಿನ ಉತ್ಪತ್ತಿ ಸ್ಥಿತಿ ಹಾಗೂ ಲಯಗಳಿಗೆಲ್ಲ ಕಾರಣವಾಗಿರುತ್ತದೆ. ಅಂತೆಯೇ ಪೂಜ್ಯರು ಅದನ್ನು ''ಸರ್ವಕಾರಣಮ್'' ಎಂಬುದಾಗಿ ತಿಳಿಯಪಡಿಸಿದ್ದಾರೆ. ಉಪನಿಷತ್ತಿನಲ್ಲಿ ಯಾವುದು ಬ್ರಹ್ಮವೆಂಬುದಾಗಿ ಕರೆಯಲ್ಪಡುತ್ತದೆಯೋ, ಅದನ್ನೇ ಶಿವಾಗಮಗಳು ಲಿಂಗವೆಂಬುದಾಗಿ ಪ್ರತಿಪಾದಿಸಿರುತ್ತವೆ. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು ''ಆವ ಮತದವರರಿವರ ಆಗಮವನುಳಿದು ಜಗದಾದಿಲಿಂಗವನು'' ಎಂಬುದಾಗಿ ಹೇಳಿ ಲಿಂಗತತ್ತ್ವವನರಿಯಲು ಆಗಮ ಶಾಸ್ತ್ರಕ್ಕೇನೇ ಶರಣಾಗತರಾಗಬೇಕೆಂಬುದಾಗಿ ತಿಳಿಯಪಡಿಸಿದ್ದಾರೆ. ಆಗಮ ಶಾಸ್ತ್ರದ ಅರಿವಿಲ್ಲದವರಿಗೆ ಲಿಂಗ ತತ್ತ್ವದ ಪರಿಪೂರ್ಣ ಜ್ಞಾನವು ಅದೆಂದಿಗೂ ಆಗಲಾರದು.

ಶಿವಾಗಮಗಳು ಸ್ವತಃ ಶಿವನಿಂದಲೇ ಉಪದೇಶಿಸಲ್ಪಟ್ಟಿವೆ. ಶಿವನ ಮಹಿಮೆಯನ್ನು ಶಿವನು ತಿಳಿದಷ್ಟು ಅನ್ಯರ್ಯಾರೂ ತಿಳಿದಿರಲು ಸಾಧ್ಯವಿಲ್ಲ. ಅಂತೆಯೇ ಸ್ವತಃ ಶಿವನಿಂದಲೇ ಉಪದೇಶಿಸಲ್ಪಟ್ಟ ಶಿವಾಗಮಗಳಲ್ಲಿಯ ಜ್ಞಾನವನ್ನು ಅವಗತ ಮಾಡಿಕೊಳ್ಳದೆ ಲಿಂಗತತ್ತ್ವ

ವನ್ನು ಅರಿಯಲು ಸಾಧ್ಯವಿಲ್ಲ. ಶಿವಾಗಮಗಳನ್ನು ಸ್ವತಃ ಅಭ್ಯಸಿಸುವುದು ಎಲ್ಲರಿಗೂ ಸಾಧ್ಯವಿಲ್ಲದ ಕಾರಣ ಶಿವಾಗಮಜ್ಞಾನ ಸಂಪನ್ನನಾದ ಸದ್ಗುರುವಿಗೆ ಶರಣಾಗತರಾಗಿ ಆತನ ಉಪದೇಶಾಮೃತದ ಮೂಲಕವಾಗಿ ಶಿವನ ಚಿನ್ಮಯರೂಪವಾದ ಲಿಂಗತತ್ತ್ವವನ್ನು ಅರಿತುಕೊಳ್ಳಬೇಕೆಂಬುದಾಗಿ ಪೂಜ್ಯಪಾದರು ಉಪದೇಶಿಸುತ್ತ ಆ ಲಿಂಗತತ್ತ್ವದ ಸ್ವರೂಪವನ್ನು–

ಪರಂ ಪವಿತ್ರಮಮಲಂ ಲಿಂಗಂ ಬ್ರಹ್ಮ ಸನಾತನಮ್ ।
ಶಿವಾಭಿಧಾನಂ ಚಿನ್ಮಾತ್ರಂ ಸದಾನಂದಂ ನಿರಂಕುಶಮ್ ॥

ಕಾರಣಂ ಸರ್ವಲೋಕಾನಾಂ ವೇದಾನಾಮಪಿ ಕಾರಣಮ್ ।
ಪೂರಣಂ ಸರ್ವತತ್ತ್ವಸ್ಯ ಕಾರಣಂ ಜನ್ಮವಾರಿಧೇಃ ॥

ಜ್ಯೋತಿರ್ಮಯನಿರ್ದೇಶ್ಯಂ ಯೋಗಿನಾಮಾತ್ಮನಿ ಸ್ಥಿತಮ್ ।
ಕಥಂ ವಿಜ್ಞಾಯತೇ ಲೋಕೇ ಮಹಾಗುರುದಯಾಂ ವಿನಾ ॥

(ಸಿ. ಶಿ. ೧೧ ; ೨೭–೨೯)

ಈ ರೀತಿಯಾಗಿ ವಿವರಿಸಿದ್ದಾರೆ. ಸನಾತನವಾದ ಈ ಪರಬ್ರಹ್ಮಲಿಂಗವು ಪರಮ ಪವಿತ್ರವಾದುದು. ಈ ಜಗತ್ತಿನಲ್ಲಿ ಕೆಲವು ವಸ್ತುಗಳು ಕಾರಣಾಂತರದಿಂದ ಅಪವಿತ್ರಗಳು, ಅಶುದ್ಧಗಳು ಆಗುವುದುಂಟು. ಅವುಗಳನ್ನು ಸಂಸ್ಕಾರ ಮೂಲಕವಾಗಿ ಶುದ್ಧಗೊಳಿಸುವ ಪದ್ಧತಿಯು ಲೋಕದಲ್ಲಿ ಇದೆ. ನಾವು ಉಪಯೋಗಿಸುವ ಬಟ್ಟೆಗಳು ಮಲಿನಗಳಾದಾಗ ಅವುಗಳನ್ನು ತೊಳೆದು ಸ್ವಚ್ಛಗೊಳಿಸಿಕೊಳ್ಳುತ್ತೇವೆ. ಪಾತ್ರೆಗಳು ಮಲಿನಗೊಂಡಾಗ ಬೂದಿ ಇಲ್ಲವೆ ಮಣ್ಣುಗಳಿಂದ ತಿಕ್ಕಿ ತೊಳೆದು ಶುದ್ಧಗೊಳಿಸಿಕೊಳ್ಳುತ್ತೇವೆ. ಹೀಗೆ ಪುನಃ ಪುನಃ ಅಶುದ್ಧಗೊಳ್ಳುವ ವಸ್ತ್ರ ಮುಂತಾದ ಪದಾರ್ಥಗಳನ್ನು ವಿಭಿನ್ನ ಉಪಾಯಗಳಿಂದ ಶುದ್ಧಗೊಳಿಸಿಕೊಳ್ಳುತ್ತೇವೆ. ಆದರೆ ಪರಬ್ರಹ್ಮಲಿಂಗವು ಅದೆಂದಿಗೂ ಮಲಿನವಾಗದೇ ಸದಾ ಪರಿಶುದ್ಧವಾಗಿಯೇ ಇರುತ್ತದೆ. ಇದೂ ಅಲ್ಲದೆ ಆ ಪವಿತ್ರವಾದ ಲಿಂಗವನ್ನು ಗುರುದೀಕ್ಷಾಪೂರ್ವಕವಾಗಿ ದೇಹದ ಮೇಲೆ ಧರಿಸಿಕೊಂಡಾಗ ಈ ಶರೀರವೂ ಸಹ ಸದಾ ಪವಿತ್ರವಾಗಿಯೇ ಇರುತ್ತದೆ. ಅಂತೆಯೇ ಇಷ್ಟಲಿಂಗಧಾರಿಗೆ ಜನನ–ಮರಣ ಮತ್ತು ರಜಸ್ಸೂತಕಗಳು ಅಂಟಿಕೊಳ್ಳಲಾರವೆಂಬುದಾಗಿಯೂ ಪೂಜ್ಯಪಾದರು ಉಪದೇಶಿಸಿದ್ದುಂಟು. ಪವಿತ್ರವಾದ ವಸ್ತುವಿನ ಸಂಬಂಧವು ಸದಾ ಉಂಟಾದಾಗ ಅಪವಿತ್ರ ವಸ್ತುವೂ ಸಹ ಪವಿತ್ರವಾಗಿಯೇ ಮಾರ್ಪಡುವುದು. ಪವಿತ್ರವಾದ ಗಂಗಾ ಪ್ರವಾಹದಲ್ಲಿ ಸಾಮಾನ್ಯವಾದ ಹೊಳೆ–ಹಳ್ಳಗಳು ಕೂಡಿಕೊಂಡಾಗ ಅವೂ ಸಹ ಗಂಗೆಯಂತೆಯೇ ಪವಿತ್ರವಾಗುವುದನ್ನು ನಾವು ನೋಡುತ್ತಿದ್ದೇವೆ. ಪ್ರಪಂಚದ ಉಳಿದೆಲ್ಲ ಪವಿತ್ರಗಳಾದ ವಸ್ತುಗಳಿಗಿಂತಲೂ ಈ ಪರಬ್ರಹ್ಮಲಿಂಗವು ಹೆಚ್ಚು ಪವಿತ್ರವಾಗಿರುವುದರಿಂದ ಇದನ್ನು ಪರಮ ಪವಿತ್ರವೆಂಬುದಾಗಿ ಪೂಜ್ಯಪಾದರು ನಿರೂಪಿಸಿದ್ದಾರೆ. ಅಂತೆಯೇ ಋಗ್ವೇದದಲ್ಲಿ ಈ ಲಿಂಗವನ್ನು ಪವಿತ್ರವೆಂಬ ಶಬ್ದದಿಂದಲೇ ಪ್ರತಿಪಾದಿಸಲಾಗಿದೆ. ಈ ಲಿಂಗತತ್ತ್ವವನ್ನೇ ಶಿವಯೆಂಬುದಾಗಿಯೂ ಕರೆಯುವುದುಂಟು. ಅದು ಸದಾ ಜ್ಞಾನರೂಪವೂ ಮತ್ತು ಆನಂದರೂಪವೂ ಆಗಿರುತ್ತದೆ. ಶಿವನೇ ಸರ್ವರ ಮೇಲೆ ಶಾಸನಮಾಡುವವನಾಗಿರುವುದ

ರಿಂದ ಅವನ ಮೇಲೆ ಶಾಸನಮಾಡುವವರು ಬೇರೊಬ್ಬರಾರೂ ಇಲ್ಲದಿರುವುದರಿಂದ ಆತನನ್ನು ನಿರಂಕುಶನೆಂಬುದಾಗಿ ಪ್ರತಿಪಾದಿಸಲಾಗಿದೆ. ಈ ಶಿವನೇ ಸಕಲ ಲೋಕಾಂತರಗಳಿಗೆಲ್ಲ ಕಾರಣೀಭೂತನಾಗಿರುತ್ತಾನೆ. ಅವನಿಂದಲೇ ಸಮಸ್ತ ವಿಶ್ವವು ನಿರ್ಮಾಣಗೊಂಡಿರುತ್ತದೆ. ಈ ಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷಗಳೆಂಬ ಈ ನಾಲ್ಕು ಮುಖಗಳಿಂದ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳೆಂಬ ನಾಲ್ಕು ವೇದಗಳು, ಅದರಂತೆ ಆತನ ಈಶಾನವೆಂಬ ಐದನೆಯ ಮುಖದಿಂದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳು ಉದಿತಗಳಾಗಿರುತ್ತವೆ. ಈ ಪರಶಿವ ಲಿಂಗವು ಸರ್ವತ್ರ ಪರಿಪೂರ್ಣವಾಗಿರುವುದು. ಪ್ರಪಂಚದ ಉಳಿದೆಲ್ಲ ಅಪೂರ್ಣಗಳಾದ ವಸ್ತುಗಳಿಗೆ ಇದರಿಂದಲೇ ಪೂರ್ಣತ್ವವು ದೊರೆಯುವಂಥಾದ್ದಾಗಿದೆ. ಈ ಲಿಂಗತತ್ತ್ವದ ಚಿಂತನೆಯಿಂದಲೇ ಜನನ ಮರಣಾತ್ಮಕವಾದ ಸಮುದ್ರವನ್ನು ದಾಟಬಹುದಾಗಿದೆ. ಇದು ಸ್ವಯಂಜ್ಯೋತಿ ಸ್ವರೂಪವಾದುದು. ಈ ಲಿಂಗತತ್ತ್ವವನ್ನು ಯಥಾವತ್ತಾಗಿ ತಿಳಿಸಲು ಶಾಸ್ತ್ರಗಳೂ ಸಹ ಸಮರ್ಥಗಳಾಗಲಾರವು. ಅಂತೆಯೇ ಈ ಶಿವತತ್ತ್ವವನ್ನು ಅನಿರ್ದೇಶ್ಯವೆಂಬುದಾಗಿ ಪೂಜ್ಯರು ಪ್ರತಿಪಾದಿಸಿದ್ದಾರೆ. ಅಂತೆಯೇ ಶ್ರೀ ಮನ್ನಿಜಗುಣ ಶಿವಯೋಗಿಗಳು ಈ ಜ್ಯೋತಿರ್ಲಿಂಗವನ್ನು ಕುರಿತು–''ಮಾತುಮನಂಗಳಿಂದತತ್ತ ಮೀರಿದ ಸಾತಿಶಯದ ನಿರುಪಾಧಿಕ ನಿರ್ಮಲ ಜ್ಯೋತಿ ಬೆಳಗುತಿದೆ, ವಿಮಲಪರಂಜ್ಯೋತಿ ಬೆಳಗುತಿದೆ'' ಎಂಬುದಾಗಿ ಹಾಡಿ ಹೊಗಳಿದ್ದಾರೆ. ಈ ಜ್ಯೋತಿರ್ಲಿಂಗ ತತ್ತ್ವವು ಶಾಸ್ತ್ರಗಳಿಗೆ ಅಗೋಚರವಾಗಿದ್ದರೂ, ಯೋಗಿಗಳಿಗೆ ಅನುಭವಗೋಚರವಾದುದಾಗಿದೆ. ಇದು ಪ್ರತಿಯೊಬ್ಬರ ಅಂತರಂಗದಲ್ಲಿ ಜ್ಯೋತಿರ್ಲಿಂಗ ರೂಪದಲ್ಲಿ ಸದಾ ವಿರಾಜಿಸುತ್ತಿದ್ದರೂ, ಸಾಮಾನ್ಯರಾದ ಜನರಿಗೆ ಇದರ ಅರಿವು ಉಂಟಾಗುವುದಿಲ್ಲ. ಅಂತರ್ಮುಖಿಗಳಾದ ಶಿವಯೋಗಿಗಳು ಈ ಲಿಂಗತತ್ತ್ವವನ್ನು ತಮ್ಮ ದೇಹದಲ್ಲಿಯ ಮೂಲಾಧಾರ, ಹೃದಯ ಮತ್ತು ಭ್ರೂಮಧ್ಯಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಅಂತೆಯೇ ಶ್ರೀರೇಣುಕ ಭಗವತ್ಪಾದರು ಲಿಂಗಧಾರಣಸ್ಥಲದಲ್ಲಿ–

ಆಧಾರೇ ಕನಕಪ್ರಖ್ಯಂ ಹೃದಯೇ ವಿದ್ರುಮಪ್ರಭಮ್ ।
ಭ್ರೂಮಧ್ಯೇ ಸ್ಫಟಿಕಚ್ಛಾಯಂ ಲಿಂಗಂ ಯೋಗೀ ವಿಭಾವಯೇತ್ ॥

(ಸಿ. ಶಿ. ೬–೪೦)

ಈ ರೀತಿಯಾಗಿ ಅಂತರಂಗದಲ್ಲಿಯ ಜ್ಯೋತಿರ್ಲಿಂಗಗಳ ಸ್ಥಾನ ಹಾಗೂ ಸ್ವರೂಪಗಳ ಬಗ್ಗೆ ವಿವರಿಸಿದ್ದಾರೆ. ಅಂತರಂಗದಲ್ಲಿಯ ಈ ಜ್ಯೋತಿರ್ಲಿಂಗಗಳನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಶಿವಯೋಗವನ್ನು ಸಾಧಿಸಬೇಕಾಗುವುದು. ಇಷ್ಟಲಿಂಗಪೂಜೆಯು ಶಿವಯೋಗದ ಒಂದು ಸಾಧನವಾಗಿದೆ. ನಾನಾವಿಧ ಉಪಚಾರಗಳಿಂದ ಲಿಂಗಪೂಜೆಯನ್ನು ಅತ್ಯಂತ ವೈಭವಯುತವಾಗಿ ಮಾಡಿದ ಮಾತ್ರಕ್ಕೆ ಆ ಪೂಜೆಯು ಪೂರ್ಣಪೂಜೆಯೆಂದೆನಿಸಿಕೊಳ್ಳದು. ಈ ವೈಭವದ ಪೂಜೆಯ ನಂತರವಾಗಲಿ ಅಥವಾ ಮೊದಲಾಗಲಿ ಇಷ್ಟಲಿಂಗದ ಜೊತೆಗೆ ದೃಷ್ಟಿಯೋಗವನ್ನು ಸಾಧಿಸಬೇಕಾಗುವುದು. ಹಸ್ತಪೀಠದಲ್ಲಿ ಇಷ್ಟಲಿಂಗವನ್ನಿರಿಸಿಕೊಂಡು ಥಳಥಳಿಸುವ ಆ ಲಿಂಗದಲ್ಲಿ ಏಕಾಗ್ರದೃಷ್ಟಿಯನ್ನಿಟ್ಟು

ಅಂತರಂಗದ ಭ್ರೂಮಧ್ಯಾದಿ ಸ್ಥಾನಗಳತ್ತ ಮನಸ್ಸನ್ನು ಹರಿಸಿ ಅಲ್ಲಿಯೇ ಅದನ್ನು ಕೇಂದ್ರೀಕರಿಸಿದಾಗ ಹಸ್ತಪೀಠದಲ್ಲಿ ಕಂಗೊಳಿಸುವ ಇಷ್ಟಲಿಂಗ ಆಕಾರದ ಜ್ಯೋತಿರ್ಲಿಂಗವನ್ನು ಆ ಸ್ಥಾನಗಳಲ್ಲಿ ಸಾಕ್ಷಾದನುಭವಿಸಲು ಸಾಧ್ಯವಾಗುವುದು. ಅಂತೆಯೇ ಪೂಜ್ಯಪಾದರು ಈ ಲಿಂಗ ತತ್ತ್ವವನ್ನು ವಿವರಿಸುತ್ತ– ''ಯೋಗಿನಾಂ ಆತ್ಮನಿ ಸ್ಥಿತಮ್'' ಎಂಬುದಾಗಿ ತಿಳಿಸಿದ್ದಾರೆ. ಈ ಜ್ಯೋತಿರ್ಲಿಂಗವು ಎಲ್ಲರ ಹೃದಯದಲ್ಲಿದ್ದರೂ, ಅದು ಬಹಿರ್ಮುಖಿಗಳಾದ ಸಾಮಾನ್ಯ ಜನರಿಗೆ ಗೋಚರವಾಗದಿದ್ದರೂ, ಅಂತರ್ಮುಖಿಗಳಾದ ಶಿವಯೋಗಿಗಳಿಗೆ ಮಾತ್ರ ಗೋಚರವಾದುದಾಗಿದೆ. ಈ ಅಂತರ್ಲಿಂಗಾನುಸಂಧಾನವನ್ನೇ ವೀರಶೈವ ಆಚಾರ್ಯರು ಪ್ರಾಣಲಿಂಗಾರ್ಚನೆ ಮತ್ತು ಭಾವಲಿಂಗಾರ್ಚನೆ ಎಂಬುದಾಗಿ ವಿವರಿಸಿದ್ದುಂಟು.

ಲಿಂಗತತ್ತ್ವದ ಮಹಿಮೆಯು ಅನಂತವಾದುದು. ಇದರ ಆದಿ, ಮಧ್ಯ ಮತ್ತು ಅಂತ್ಯಗಳನ್ನು ಅರಿಯುವುದು ಸುಲಭವಾದ ಮಾತಲ್ಲ. ದೇವಾನುದೇವತೆಗಳೂ ಸಹ ಈ ಲಿಂಗದ ಮಹಿಮೆಯನ್ನು ಅರಿಯಲು ಅಸಮರ್ಥರಾಗಿರುವುದುಂಟು. ಶ್ರೀವ್ಯಾಸ ಮಹರ್ಷಿಗಳು ಲಿಂಗಮಹಾಪುರಾಣದಲ್ಲಿ ಈ ಲಿಂಗದ ಮಹತಿಯನ್ನು ಅದ್ಭುತವಾಗಿ ವಿವರಿಸಿದ್ದಾರೆ–ಹಿಂದೊಮ್ಮೆ ಪರಮಾತ್ಮನು ಬ್ರಹ್ಮ ಹಾಗೂ ವಿಷ್ಣುಗಳಿಗೆ ಜಗತ್ತಿನ ಸೃಷ್ಟಿ ಹಾಗೂ ಪಾಲನೆಯ ಅಧಿಕಾರವನ್ನು ಕೊಟ್ಟು, ನಿಮ್ಮ ನಿಮ್ಮ ಪಾಲಿನ ಕರ್ತವ್ಯವನ್ನು ಮಾಡಿರೆಂಬುದಾಗಿ ಆಜ್ಞಾಪಿಸಿದನು. ಆಗ ಅವರೀರ್ವರು ತಮ್ಮ ತಮ್ಮ ಪಾಲಿನ ಕರ್ತವ್ಯದಲ್ಲಿ ತತ್ಪರರಾಗದೆ, ನಾ ಹೆಚ್ಚು ನೀ ಹೆಚ್ಚು ಎಂಬುದಾಗಿ ಕಲಹ ಮಾಡತೊಡಗಿದರು. ಆಗ ಇವರೀರ್ವರ ಕಲಹವನ್ನು ದೂರ ಮಾಡುವುದಕ್ಕಾಗಿ ಪರಶಿವನು ಅವರೀರ್ವರ ಮಧ್ಯದಲ್ಲಿ ಒಂದು ದಿವ್ಯವಾದ ಜ್ಯೋತಿರ್ಲಿಂಗರೂಪದಲ್ಲಿ ಪ್ರಕಟಗೊಂಡು ಆಕಾಶವಾಣಿಯಿಂದ ಹೇಳಿದ್ದೇನೆಂದರೆ–''ನಿಮ್ಮೀರ್ವರಲ್ಲಿ ಈ ಲಿಂಗದ ಪಾದ ಇಲ್ಲವೆ ಮಸ್ತಕವನ್ನು ಯಾರು ಬೇಗನೇ ಕಂಡು ಮರಳಿಬರುವರೋ ಅವರೇ ಶ್ರೇಷ್ಠರು''. ಈ ಆಕಾಶವಾಣಿಯನ್ನು ಕೇಳಿದಾಕ್ಷಣ ಬ್ರಹ್ಮನು ಹಂಸಾರೂಢನಾಗಿ ಲಿಂಗಮಸ್ತಕವನ್ನು ಕಾಣಲು ಆಕಾಶದತ್ತ ಹಾರಿದನು. ವಿಷ್ಣು ಪರಮಾತ್ಮನು ಆ ದಿವ್ಯವಾದ ಲಿಂಗದ ಪಾದವನ್ನು ಕಾಣುವುದಕ್ಕಾಗಿ ಪಾತಾಳದತ್ತ ಪ್ರಯಾಣ ಬೆಳೆಸಿದನು. ಹೀಗೆ ಅವರೀರ್ವರು ಸಹಸ್ರ ಸಹಸ್ರ ವರ್ಷಪರ್ಯಂತರವಾಗಿ ತಮ್ಮ ಮಾರ್ಗವನ್ನು ಕ್ರಮಿಸಿದರೂ ಬ್ರಹ್ಮನಿಗೆ ಲಿಂಗಮಸ್ತಕದ ದರ್ಶನವಾಗಲಿಲ್ಲ ಹಾಗೂ ವಿಷ್ಣುವಿಗೆ ಪಾದ ದರ್ಶನವೂ ಆಗಲಿಲ್ಲ. ಕೊನೆಗೆ ಬೇಸತ್ತ ಬ್ರಹ್ಮನು ಲಿಂಗ ಮಸ್ತಕವನ್ನು ನೋಡಿದ್ದೇನೆಂದುದಾಗಿ ಸುಳ್ಳು ಸಾಧಿಸಿದರಾದೀತು ಎಂದು ಯೋಚಿಸಿ ಮರಳಿ ಬರತೊಡಗಿದ. ಬರುವಾಗ ಆ ಸುಳ್ಳಿಗೆ ಸಾಕ್ಷಿಯಾಗಿ ಸ್ವರ್ಗದಲ್ಲಿಯ ಕಾಮಧೇನುವನ್ನು ಕರೆದುಕೊಂಡು ಬಂದನು. ಪಾತಾಳದತ್ತ ಕ್ರಮಿಸುತ್ತಿದ್ದ ವಿಷ್ಣುವೂ ಸಹ ಬೇಸತ್ತು ಕೊನೆಗೆ ತಾನು ಎಲ್ಲಿಯವರೆಗೆ ಹೋಗಿದ್ದನೋ ಆ ಸ್ಥಾನಕ್ಕೆ ಒಂದು ಘಂಟೆಯನ್ನು ಕಟ್ಟಿ ಮೇಲಕ್ಕೆ ಬಂದನು. ಈರ್ವರೂ ಪುನಃ ಒಂದೇ ಸ್ಥಾನದಲ್ಲಿ ಬಂದು ಕೂಡಿದಾಗ, ಬ್ರಹ್ಮನು ಶಿವನಿಗೆ ತಾನು ಲಿಂಗ ಮಸ್ತಕವನ್ನು ಕಂಡು ಬಂದೆನೆಂಬುದಾಗಿ ಸುಳ್ಳು ಹೇಳಿದನು. ಇದಕ್ಕೆ ಸಾಕ್ಷಿಯೇನೆಂದು ಶಿವನು ಕೇಳಲು

ಕಾಮಧೇನುವನ್ನು ಮುಂದು ಮಾಡಿದನು. ಈ ಸನ್ನಿವೇಶದಲ್ಲಿ ಉಭಯ ಸಂಕಟಕ್ಕೊಳಗಾದ ಆ ಕಾಮಧೇನುವು ತನ್ನ ತಲೆಯಿಂದ 'ಹೌದು ! ನೋಡಿದ್ದಾನೆ' ಎಂಬುದಾಗಿ ತಿಳಿಸಿದರೂ ಅದೇ ಕ್ಷಣದಲ್ಲಿ ತನ್ನ ಬಾಲವನ್ನು ಎತ್ತಿ ಅದನ್ನು ಅಲ್ಲಾಡಿಸುತ್ತ, 'ಇವನು ನೋಡಿಲ್ಲ ಎಂಬುದಾಗಿಯೂ ಉಭಯಾತ್ಮಕ ಸಮ್ಮತಿಯನ್ನು ವ್ಯಕ್ತಪಡಿಸಿತು. ಕಾಮಧೇನುವಿನ ಈ ಉಭಯ ಸ್ಥಿತಿಯನ್ನು ಕಂಡ ಶಿವನು ಅದಕ್ಕೆ ಅಪ್ಪಣೆಕೊಡಿಸಿ ದ್ದೇನೆಂದರೆ-''ಎಲೈ ! ಕಾಮಧೇನುವೇ ! ನೀನು ಮಸ್ತಕದಿಂದ ಸುಳ್ಳನ್ನು ಹೇಳಿರುವೆ ಆದ್ದರಿಂದ ಜಗತ್ತಿನಲ್ಲಿ ನಿನ್ನ ಮಸ್ತಕವನ್ನು ಪೂಜಿಸಿದರೆ ಆದಾವ ಪ್ರಯೋಜನವೂ ಸಿದ್ಧಿಸದು. ಆದರೆ ಸತ್ಯವನ್ನು ಸಂಕೇತಿಸಿದ ನಿನ್ನ ಪುಚ್ಛ (ಬಾಲ) ಪೂಜೆಯೇ ಫಲದಾಯಕ ವಾಗಲಿ''.

ಸಂಪೂರ್ಣವಾಗಿ ಸುಳ್ಳನ್ನು ಹೇಳಿದ ಬ್ರಹ್ಮನನ್ನು ಕುರಿತು ಶಿವನು ''ಎಲೈ ! ಚತುರ್ಮುಖನೇ, ಸ್ವಾರ್ಥ ಸಾಧನೆಗಾಗಿ ಸತ್ಯಮಾರ್ಗವನ್ನು ಬಿಟ್ಟು ನೀನು ಅಸತ್ಯವನ್ನು ಅವಲಂಬಿಸಿದ ಕಾರಣ ಜಗತ್ತಿನಲ್ಲಿ ಅದೆಂದಿಗೂ ನಿನ್ನ ಪೂಜೆಯಾಗದಿರಲಿ'' ಎಂಬುದಾಗಿ ಶಾಪವನ್ನಿತ್ತನು. ಆಗ ಶಿವನು ಅಲ್ಲಿಯೇ ಇರುವ ವಿಷ್ಣುವನ್ನು ಕುರಿತು ನೀನು ಶಿವಲಿಂಗದ ಪಾದದರ್ಶನವನ್ನು ಮಾಡಿ ಬಂದೆಯಾ ? ಎಂಬುದಾಗಿ ಪ್ರಶ್ನಿಸಲು ಅವನು ''ಹೇ ಮಹಾದೇವನೆ ! ನಿನ್ನ ಸ್ವರೂಪವು ಅಪಾರ ಹಾಗೂ ಅನಂತವಾದದ್ದು. ನಿನ್ನ ಪಾದ ದರ್ಶನಕ್ಕಾಗಿ ಅದೆಷ್ಟೋ ವರುಷ ನಾನು ಪಾತಾಳದತ್ತ ಪಯಣಿಸಿದರೂ ಪಾದದರ್ಶನ ವಾಗದೆ ಕೊನೆಗೆ ಬೇಸತ್ತು ನಾನು ಹೋದಲ್ಲಿಗೆ ಸಾಂಕೇತಿಕವಾಗಿ ಒಂದು ಘಂಟೆಯನ್ನು ಕಟ್ಟಿ ಬಂದಿರುತ್ತೇನೆ'' ಎಂಬುದಾಗಿ ವಿನಂತಿಸಿಕೊಂಡನು. ಆಗ ಶಿವನು ವಿಷ್ಣುವಿನ ಸತ್ಯವಚನವನ್ನು ಕೇಳಿ ಸಂತುಷ್ಟನಾಗಿ, ''ಹೇ ವಿಷ್ಣುವೇ ! ನೀನು ಸತ್ಯವನ್ನು ನುಡಿದ ಕಾರಣ ಜಗತ್ತಿನಲ್ಲಿ ನನ್ನಂತೆ ನೀನು ಪೂಜ್ಯನಾಗು'', ಎಂಬುದಾಗಿ ಅನುಗ್ರಹಿಸಿದನು. ಆಗ ಅಲ್ಲಿಯೇ ನಿಂತಿದ್ದ ಬ್ರಹ್ಮದೇವನು, ''ಭೋ ! ಮಹಾದೇವನೇ ಎಲ್ಲ ದೇವತೆಗಳು ಪೂಜೆ ಗೊಳ್ಳುತ್ತಿರುವಾಗ ನನ್ನೊರ್ಬನ ಪೂಜೆಯಾಗದಿರುವುದು ನನಗೆ ಅಸಮಾಧಾನವನ್ನು ತಂದು ಕೊಟ್ಟಿದೆ. ಅದ್ದರಿಂದ ನನಗೂ ಎಲ್ಲಿಯಾದರೂ ಒಂದು ಸ್ಥಾನವನ್ನು ದಯಪಾಲಿಸು'' ಎಂದು ಪ್ರಾರ್ಥಿಸಿಕೊಂಡನು. ಹೀಗೆ ಬ್ರಹ್ಮನ ಪ್ರಾರ್ಥನೆಯನ್ನು ಆಲಿಸಿದ ಶಿವನು ''ಎಲೈ ಬ್ರಹ್ಮನೇ ! ಪ್ರತಿಯೊಂದು ಗ್ರಾಮದ ಮಹಾದ್ವಾರದ ಮಧ್ಯ ದಲ್ಲಿ ನಿನಗೆ ಸ್ಥಾನವನ್ನು ಅನುಗ್ರಹಿಸಿದ್ದೇನೆ'' ಎಂದು ನುಡಿದನು. ಯಾವುದೊಂದು ಹೊಸ ಊರನ್ನು ನಿರ್ಮಾಣಗೊಳಿಸುವಾಗ ಊರಿನ ಮಹಾದ್ವಾರದ ಮಧ್ಯದಲ್ಲಿ ಒಂದು ಬ್ರಹ್ಮಶಿಲೆಯನ್ನು ಸ್ಥಾಪಿಸುವ ಪದ್ಧತಿಯುಂಟು, ಅದುವೇ ಬ್ರಹ್ಮವು. ಒಂದು ಸಲ ಸುಳ್ಳು ಹೇಳಿದರೆ ಪರಿಣಾಮವಾಗಿ ಬ್ರಹ್ಮದೇವರಿಗೆ ದಾರಿಹೋಕರು ತುಳಿದಾಡುವ ಸ್ಥಾನವು ಪ್ರಾಪ್ತವಾಯಿತು. ಇದನ್ನರಿತುಕೊಂಡು ಸುಳ್ಳಿನಿಂದ ಎಚ್ಚರವಾಗಿದ್ದು ಸದಾ ಸತ್ಯವನ್ನು ನುಡಿಯಲು ಪ್ರಯತ್ನಿಸಬೇಕು. ಹೀಗೆ ಲಿಂಗಮಹಾಪುರಾಣದಲ್ಲಿ ಲಿಂಗದ ಮಹಿಮೆ ಯನ್ನು ಮಹರ್ಷಿ ವ್ಯಾಸನು ಬಹು ಸುಂದರವಾಗಿ ವಿವರಿಸಿದ್ದಾನೆ. ಇದೇ ವಿಷಯವನ್ನು ಬಸವಣ್ಣನವರು-

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತತ್ತ ನಿಮ್ಮ ಶ್ರೀಮುಕುಟ
ಅಪ್ರಮಾಣ ಅಗಮ್ಯ ಅಗೋಚರ
ಅಪ್ರತಿಮಲಿಂಗವೇ ಕೂಡಲಸಂಗಮದೇವಾ !
ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ

ಎಂಬುದಾಗಿ ಲಿಂಗದ ಅಗೋಚರತ್ವವನ್ನು ತಿಳಿಯಪಡಿಸಿ ಅದುವೇ ಸದ್ಗುರುವಿನ ಕರುಣೆಯಿಂದ ತಮ್ಮ ಕರಸ್ಥಲಕ್ಕೆ ಇಷ್ಟಲಿಂಗರೂಪದಲ್ಲಿ ಪ್ರಾಪ್ತವಾಗಿರುವುದನ್ನು ವಿವರಿಸಿದ್ದಾರೆ. ಪರಾತ್ಪರ ಪರಶಿವಲಿಂಗದ ಮಹಿಮೆಯು ಅಪಾರ ಹಾಗೂ ಅನಂತವಾದುದು. ಈ ಲಿಂಗತತ್ತ್ವವು ಗುರುವಿನ ಅನುಗ್ರಹವಿಲ್ಲದೆ ಎಂತಹ ಪುರುಷರಿಗೂ ತಿಳಿಯಲಸಾಧ್ಯವಾದುದು. ಆ ದಿವ್ಯ ಜ್ಯೋತಿರ್ಲಿಂಗದ ಆದಿ ಅಂತ್ಯಗಳು, ಬ್ರಹ್ಮ ಹಾಗೂ ವಿಷ್ಣುಗಳಿಗೇನೇ ತಿಳಿಯದೇ ಹೋಗಿರುವಾಗ ಉಳಿದ ಸಾಮಾನ್ಯ ಮನುಜರಿಗೆ ಅದು ಹೇಗೆ ತಾನೆ ತಿಳಿಯಲು ಸಾಧ್ಯವಾದೀತು ? ಎಂಬುದನ್ನೇ ಪುನಃ ಪ್ರತಿಪಾದಿಸುತ್ತ ಶ್ರೀಜಗದ್ಗುರು ರೇಣುಕ ಭಗವತ್ಪಾದರು

ಬ್ರಹ್ಮಣಾ ವಿಷ್ಣುನಾ ಪೂರ್ವಂ ಯಲ್ಲಿಂಗಂ ಜ್ಯೋತಿರಾತ್ಮಕಮ್ ।
ಅಪರಿಚ್ಛೇದ್ಯಮಭವತ್ ಕೇನ ವಾ ಪರಿಚೋದ್ಯತೇ ॥

ಬಹುನಾತ್ರ ಕಿಮುಕ್ತೇನ ಲಿಂಗಂ ಬ್ರಹ್ಮ ಸನಾತನಮ್ ।
ಯೋಗಿನೋ ಯತ್ರ ಲೀಯಂತೇ ಮುಕ್ತಪಾಶನಿಬಂಧನಾಃ ॥

ಪೀಠಿಕಾ ಪರಮಾಶಕ್ತಿಃ ಲಿಂಗಂ ಸಾಕ್ಷಾತ್ ಪರಃ ಶಿವಃ ।
ಶಿವಶಕ್ತಿಸಮಾಯೋಗಂ ವಿಶ್ವಂ ಲಿಂಗಂ ತದುಚ್ಯತೇ ॥

ಬ್ರಹ್ಮಾದಯಃ ಸುರಾಃ ಸರ್ವೇ ಮುನಯಃ ಶೌನಕಾದಯಃ ।
ಶಿವಲಿಂಗಾರ್ಚನಾದೇವ ಸ್ವಂ ಸ್ವಂ ಪದಮವಾಪ್ನುಯುಃ ॥

ವಿಶ್ವಾಧಿಪತ್ಯಮೀಶಸ್ಯ ಲಿಂಗಮೂರ್ತೇಃ ಸ್ವಭಾವಜಮ್ ।
ಅನನ್ಯದೇವಸಾದೃಶ್ಯಂ ಶ್ರುತಿರಾಹ ಸನಾತನೀ ॥

(ಸಿ. ಶಿ. ೧೧ ; ೩೦–೩೪)

ಈ ರೀತಿಯಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಲಿಂಗದ ಮಹಿಮೆಯನ್ನು ಅದೆಷ್ಟು ಕೊಂಡಾಡಿದರೂ ಕಡಿಮೆಯೇ. ಪರಬ್ರಹ್ಮಲಿಂಗವು ಸನಾತನವಾದದ್ದು. ಶಿವಯೋಗಿಗಳು ಈ ಲಿಂಗದ ಚಿಂತನೆಯನ್ನು ಮಾಡಿಯೇ ಆಣವಾದಿ ಪಾಶಮುಕ್ತರಾಗಿ ಲಿಂಗರೂಪರಾಗಿದ್ದಾರೆ. ಈ ಪರಬ್ರಹ್ಮಲಿಂಗದ ಪೀಠವು ಶಕ್ತಿಸ್ವರೂಪವಾದದ್ದು. ಮೇಲಿನ ಬಾಣವು ಸಾಕ್ಷಾತ್ ಶಿವಸ್ವರೂಪವಾದುದು. ಹೀಗೆ ಶಿವಶಕ್ತಿಯರ ಅಭಿನ್ನ ಸ್ವರೂಪವೇ ಈ ಶಿವಲಿಂಗವು. ವಿಶ್ವವೆಲ್ಲವೂ ಶಿವಶಕ್ತಿಸ್ವರೂಪವಾಗಿರೋಣದರಿಂದ ಅದು ಲಿಂಗರೂಪವೆಂತಲೇ ಭಾವಿಸಬೇಕು. ಅಂತೆಯೇ ''ಲಿಂಗಮಧ್ಯೇ ಜಗತ್ ಸರ್ವಂ'' ಎಂಬ ಉಕ್ತಿಯು ಪ್ರಸಿದ್ಧವಾಗಿದೆ.

ಬ್ರಹ್ಮಾದಿದೇವತೆಗಳೂ, ಶೌನಕಾದಿ ಮಹರ್ಷಿಗಳೂ ಮತ್ತು ಯಕ್ಷ ಕಿನ್ನರಾದಿಗಳೂ ಸಹ ಈ ಶಿವಲಿಂಗಾರ್ಚನದಿಂದಲೇ ತಮ್ಮ ತಮ್ಮ ಸ್ಥಾನಗಳನ್ನು ಪ್ರಾಪ್ತ ಮಾಡಿಕೊಂಡವರಾಗಿದ್ದಾರೆ. ಈ ಪರಶಿವಲಿಂಗವೇ ಸಮಸ್ತ ವಿಶ್ವದ ಅಧಿಪತಿಯಾಗಿರುವುದು. ಈ ವಿಶ್ವಾಧಿಪತ್ಯವು ಲಿಂಗ ಮೂರ್ತಿಗೆ ಬೇರಾರಿಂದಲೂ ಕೊಡಮಾಡಲ್ಪಟ್ಟದ್ದಲ್ಲ, ಅದು ಸ್ವಾಭಾವಿಕವಾದದ್ದು. ಅಂತೆಯೇ ಶಿವನು ಅನನ್ಯಸದೃಶನಾಗಿದ್ದಾನೆ. ಆದ್ದರಿಂದ ಪರಶಿವಲಿಂಗವು ಸರ್ವೋತ್ಕೃಷ್ಟ ವೆಂಬುದಾಗಿ ಶ್ರುತಿ ಶಾಸ್ತ್ರಗಳು ಘಂಟಾಘೋಷವಾಗಿ ಸಾರುತ್ತಲಿವೆ. ಕಾರಣ ಪ್ರಸಾದಿಸ್ಥಲದ ಸಾಧಕನು ಈ ಲಿಂಗಮಹಿತಿಯನ್ನರಿತು, ಅದರಲ್ಲಿಯೇ ತನ್ನ ಅವಧಾನವನ್ನು ಕೇಂದ್ರೀಕರಿಸಬೇಕೆಂಬುದನ್ನು ತಿಳಿಸುವುದಕ್ಕೋಸುಗವೇ ಪೂಜ್ಯಪಾದರು ಲಿಂಗಮಾಹಾತ್ಮ್ಯಸ್ಥಲವನ್ನು ಉಪದೇಶಿಸಿರುವರೆಂಬಲ್ಲಿಗೆ ಲಿಂಗಮಾಹಾತ್ಮ್ಯಸ್ಥಲವು ಪೂರ್ಣವಾಗುವದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಸೆಪ್ಟೆಂಬರ, ೧೯೯೧
(ಸ್ಥಾನ ನಾಗಪುರ)

■■

ಆಶೀರ್ವಚನ-೧

# ಜಂಗಮಮಾಹಾತ್ಮ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಸಾದಿ ಸ್ಥಲಾಂತರ್ಗತವಾದ ನಾಲ್ಕನೇ ಅವಾಂತರ ಸ್ಥಲವೇ ಜಂಗಮಮಾಹಾತ್ಮ್ಯಸ್ಥಲವು. ಈ ಸ್ಥಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಜಂಗಮನ ಮಹತಿಯನ್ನು ಮನಸಾರೆ ಕೊಂಡಾಡಿದ್ದಾರೆ. ವೀರಶೈವ ಧರ್ಮದಲ್ಲಿ ಗುರು–ಲಿಂಗ ಮತ್ತು ಜಂಗಮ ಇವು ಮೂರು ಪೂಜನೀಯಗಳಾಗಿವೆ. ನೋಡಲು ಮೂರೂ ಬೇರೆ ಬೇರೆಯಾಗಿ ತೋರಿದರೂ ಅವು ಮೂರೂ ಒಂದೇ ಎಂಬುದಾಗಿ ಅದಾರೂ ಮರೆಯಕೂಡದು. ಒಂದು ಬಿಲ್ವದಳದಲ್ಲಿ ಮೂರು ಎಲೆಗಳಿದ್ದರೂ ಅದು ಒಂದೇ ಬಿಲ್ವದಳವಾಗಿರುವಂತೆ, ಓರ್ವನೇ ಆದ ಶಿವನ ಮೂರು ರೂಪಗಳೇ ಈ ಗುರು–ಲಿಂಗ–ಜಂಗಮರು. ಅಂತೆಯೇ ''ಏಕಮೂರ್ತಿಸ್ತ್ರಯೋ ಭಾಗಾಃಗುರುಲಿಂಗಂ ತು ಜಂಗಮಾಃ'' ಎಂಬುದಾಗಿ ಉಪದೇಶಿಸಿದ್ದಾರೆ. ಒಬ್ಬನೇ ಆದ ಆ ಪರಶಿವನು ಗುರುರೂಪವನ್ನು ತಾಳಿ ಸಾಧಕನಿಗೆ ಶಿವದೀಕ್ಷೆಯನ್ನನುಗ್ರಹಿಸುತ್ತಾನೆ. ಆ ಪರಶಿವನೇ ಲಿಂಗರೂಪವಾಗಿ ಸಾಧಕನ ಶರೀರದಮೇಲೆ ಸದಾ ಸನ್ನಿಹಿತನಾಗಿರುತ್ತಾನೆ. ಪುನಃ ಆತನೇ ಜಂಗಮನಾಗಿ ಜ್ಞಾನೋಪದೇಶವನ್ನು ಮಾಡಿ ಜೀವಿಗಳನ್ನು ಸಂಸಾರದಿಂದ ಮುಕ್ತರನ್ನಾಗಿ ಮಾಡುತ್ತಾನೆ. ಹೀಗೆ ಕಾರ್ಯದ ಭಿನ್ನತೆಯ ಮೂಲಕವಾಗಿ ಓರ್ವನೇ ಮೂರು ರೂಪವನ್ನು ತಾಳಿ ಭಕ್ತೋದ್ಧಾರ ಕಾರ್ಯವನ್ನು ಮಾಡುತ್ತಾನೆಂಬುದಾಗಿ ತಿಳಿಯಬೇಕು.

ಜಂಗಮನು ಈ ಜಗವೆಲ್ಲವನ್ನು ಶಿವಸ್ವರೂಪವನ್ನಾಗಿ ತಿಳಿದು ಅಂತಹ ಶಿವಜ್ಞಾನ ವನ್ನೇ ಸರ್ವರಿಗೂ ಬೋಧಿಸುವವನಾಗಿರುತ್ತಾನೆ. ಅಂತೆಯೇ ಪೂಜ್ಯಪಾದರು ಆತನ ಸ್ವರೂಪವನ್ನು–

ಗುರುಶಿಷ್ಯಸಮಾರೂಢಲಿಂಗಮಾಹಾತ್ಮ್ಯಸಂಪದಃ।
ಸರ್ವಂ ಚಿದ್ರೂಪವಿಜ್ಞಾನಾಜ್ಜಂಗಮಾಧಿಕ್ಯಮುಚ್ಯತೇ ॥
ಜಾನಂತ್ಯತಿಶಯಾದ್ ಯೇ ತು ಶಿವಂ ವಿಶ್ವಪ್ರಕಾಶಕಮ್ ।
ಸ್ವಸ್ವರೂಪತಯಾ ತೇ ತು ಜಂಗಮಾ ಇತಿ ಕೀರ್ತಿತಾಃ ॥

(ಸಿ. ಶಿ. ೧೧ ; ೩೫–೩೬)

ಈ ರೀತಿಯಾಗಿ ವಿವರಿಸಿದ್ದಾರೆ. ಗುರು ಹಾಗೂ ಶಿಷ್ಯರೀರ್ವರಿಂದ ಆರಾಧಿಸಲ್ಪಡುವ ಲಿಂಗದ ಮಹಿಮೆಯು ಅಪಾರವಾದುದು. ಅದು ಚಿತ್ಸ್ವರೂಪವಾದುದು. ಚಿದ್ರೂಪ ವಾದ ಆ ಲಿಂಗವು ಜಗತ್ತಿನ ತುಂಬೆಲ್ಲ ವ್ಯಾಪಿಸಿರುವ ಸ್ಥಿತಿಯನ್ನು ಜಂಗಮನು ಅರಿತು ಕೊಂಡಿರುತ್ತಾನೆ. ಅಂತೆಯೇ ಜಂಗಮನು ಜಗವೆಲ್ಲವನ್ನು ಶಿವರೂಪವಾಗಿ ಕಾಣುವ ದಿವ್ಯ

ದೃಷ್ಟಿಯನ್ನು ಪಡೆದುಕೊಂಡವನಾಗಿರುತ್ತಾನೆ. ತನ್ನ ಸ್ವಯಂಪ್ರಕಾಶದಿಂದ ಜಗತ್ತಿಗೇ ಪ್ರಕಾಶವನ್ನು ಕೊಡಬಲ್ಲ ಆ ಪರಾತ್ಪರ ಶಿವನನ್ನು ಈ ಜಂಗಮನು ತನ್ನ ಆತ್ಮವನ್ನಾಗಿ ತಿಳಿದುಕೊಂಡಿರುತ್ತಾನೆ. ಅಂತೆಯೇ ಜಂಗಮನು ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆ. ಈ ಲೋಕದಲ್ಲಿ ಶಿವನನ್ನು ಸಾಕ್ಷಾತ್ ಪೂಜಿಸುವುದು ಅಸಂಭವವಾದರೂ ಶಿವಜ್ಞಾನಿಯಾದ ಓರ್ವ ಜಂಗಮನ ಆರಾಧನೆಯ ಮೂಲಕವಾಗಿ ನಾವು ಶಿವನನ್ನು ಪೂಜಿಸಬಹುದಾಗಿದೆ. ಅಂತೆಯೇ 'ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ' ಎಂಬುದಾಗಿ ಪೂಜ್ಯರು ಉಪದೇಶಿಸಿದ್ದಾರೆ. ಓರ್ವ ಶಿವಜ್ಞಾನಿಯಾದ ಜಂಗಮನನ್ನು ತೃಪ್ತಿಪಡಿಸಿದಾಗ ಸಾಕ್ಷಾತ್ ಶಿವನೇ ಸಂತೃಪ್ತನಾಗುವನೆಂಬುದು ಪೂಜ್ಯರ ಆಶಯವಾಗಿದೆ. ದೃಢವಾದ ಶಿವಜ್ಞಾನ ಸಂಪನ್ನನಾದ ಜಂಗಮನಿಗೆ ಶಿವಯೋಗಿಯೆಂತಲೂ ಕರೆಯುತ್ತಾರೆ. ಜಂಗಮ ಹಾಗೂ ಶಿವಯೋಗಿ ಎಂಬ ಪದಗಳು ಒಂದೇ ಅರ್ಥವನ್ನು ಬೋಧಿಸುವಂಥವುಗಳಾಗಿವೆ.

ಶಿವಯೋಗದ ಮುಖಾಂತರ ಈ ಜಗವೆಲ್ಲವನ್ನು ಶಿವರೂಪವನ್ನಾಗಿ ತಿಳಿದಿರುವ ಜಂಗಮನಿಗೆ ಶಿವಯೋಗಿಯೆಂಬುದಾಗಿ ಕರೆಯುತ್ತಾರೆ. ಅದನ್ನೇ ಪೂಜ್ಯರು–

ಯೇ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ ।
ನಿರ್ಧೂತಮಲಸಂಸ್ಪರ್ಶಾಸ್ತೇ ಸ್ಮೃತಾಃ ಶಿವಯೋಗಿನಃ ॥

ಘೋರಸಂಸಾರತಿಮಿರಪರಿಧ್ವಂಸನಕಾರಣಮ್ ।
ಯೇಷಾಮಸ್ತಿ ಶಿವಜ್ಞಾನಂ ತೇ ಮತಾಃ ಶಿವಯೋಗಿನಃ ॥

ಜಿತಕಾಮಾ ಜಿತಕ್ರೋಧಾ ಮೋಹಗ್ರಂಥಿವಿಭೇದಿನಃ ।
ಸಮಲೋಷ್ಟಾಶ್ಮಕನಕಾಃ ಸಾಧವಃ ಶಿವಯೋಗಿನಃ ॥

ಸಮಾಃ ಶತ್ರೌ ಚ ಮಿತ್ರೇ ಚ ಸಾಕ್ಷಾತ್‌ಕೃತಶಿವಾತ್ಮಕಾಃ ।
ನಿಸ್ಪೃಹಾ ನಿರಹಂಕಾರಾ ವರ್ತಂತೇ ಶಿವಯೋಗಿನಃ ॥

(ಸಿ. ಶಿ. ೧೧ ; ೩೭–೪೦)

ಈ ರೀತಿಯಾಗಿ ವಿವರಿಸಿದ್ದಾರೆ. ಶಿವನ ಜೊತೆ ನಿರಂತರವಾದ ಸಂಬಂಧವನ್ನು ಕಲ್ಪಿಸುವ ಯೋಗಕ್ಕೆ ಶಿವಯೋಗವೆನ್ನುವರು. ಈ ಯೋಗವನ್ನು ಸಾಧಿಸಿಕೊಂಡವನೇ ಶಿವಯೋಗಿಯು. ಯಾರು ಶಿವನೊಂದಿಗೆ ಸದಾ ಸಂಬಂಧವನ್ನು ಸ್ಥಾಪಿಸಿಕೊಳ್ಳುವರೋ ಅವರು ಶಿವಸ್ವರೂಪರೇ ಆಗುತ್ತಾರೆ. ನಮ್ಮ ಮನೆಯೊಳಗಿನ ವಿದ್ಯುದ್ದೀಪಗಳು ಮನೆ ತುಂಬ ಪ್ರಕಾಶವನ್ನು ಕೊಡಬೇಕಾದರೆ, ವಿದ್ಯುಚ್ಛಕ್ತಿ ಕೇಂದ್ರದೊಡನೆ ಸಂಪರ್ಕವನ್ನು ಹೊಂದುವುದು ಅವಶ್ಯಕವಾಗಿರುವಂತೆ ಶಿವನಲ್ಲಿಯ ದಿವ್ಯ ಜ್ಞಾನಾದಿಗಳನ್ನು ಪ್ರಾಪ್ತ ಮಾಡಿಕೊಳ್ಳಲು ಸಾಧಕನು ಸದಾ ಶಿವಸಂಬಂಧವನ್ನಿಟ್ಟುಕೊಳ್ಳಬೇಕಾಗುವುದು. ನಮ್ಮ ದೇಶದ ಪ್ರಾಚೀನರಾದ ಕಪಿಲ, ಕಣಾದ, ಪತಂಜಲಿ ಮತ್ತು ವ್ಯಾಸ ಮುಂತಾದ ಮಹರ್ಷಿಗಳು ವಿರಚಿಸಿರುವ ಶಾಸ್ತ್ರಗಳು ಶಿವನ ಧ್ಯಾನದಿಂದಲೇ ಸುಲಭವಾಗಿ ಅವರಿಗೆ ಪ್ರಾಪ್ತಗಳಾದವು.

ಶಿವಯೋಗದ ಮೂಲಕ ಶಿವನೊಂದಿಗೆ ತಾದಾತ್ಮ್ಯವನ್ನು ಹೊಂದಿರುವ ಶಿವಯೋಗಿಯು ಆಣವಾದಿ ಮಲತ್ರಯಗಳಿಂದ ಸಂಪೂರ್ಣ ಮುಕ್ತನಾಗಿ ತಾನು ಸ್ವತಃ ಶಿವಸ್ವರೂಪನಾಗುವದರ ಜೊತೆಗೆ ಸಮಸ್ತ ವಿಶ್ವವೆಲ್ಲವನ್ನೂ ಚಿದ್ರೂಪ ಶಿವನನ್ನಾಗಿ ಕಾಣುತ್ತಿರುತ್ತಾನೆ. ಶಿವಯೋಗದಿಂದ ಪ್ರಾಪ್ತವಾದ ಶಿವಜ್ಞಾನದ ಪ್ರಭಾವದಿಂದ ಘೋರ ವಾದ ಅಜ್ಞಾನರೂಪಿ ಅಂಧಕಾರದಿಂದ ಈತನು ಮುಕ್ತನಾಗಿರುತ್ತಾನೆ. ಅಂತೆಯೇ ಈ ಶಿವಯೋಗಿಯು ಕಾಮಕ್ರೋಧಾದಿಗಳನ್ನು ಗೆದ್ದವನಾಗಿ ಮೋಹವೆಂಬ ಹೃದಯಗ್ರಂಥಿ ಯಿಂದ ಬಿಡುಗಡೆ ಹೊಂದಿದವನಾಗಿ ನಿರ್ದ್ವಂದ್ವವಾದ ಜೀವನವನ್ನು ಸಾಗಿಸುತ್ತಿರುತ್ತಾನೆ. ಸಮದೃಷ್ಟಿಯನ್ನು ಸಾಧಿಸಿಕೊಂಡ ಈ ಶಿವಯೋಗಿಯು ಭೌತಿಕ ವೈಭವದ ಆಮಿಷ ಕ್ಕೊಳಗಾಗದೆ ಪರರದ್ರವ್ಯವನ್ನು ಲೋಷ್ಟ ಅಂದರೆ ಮಣ್ಣಿನ ಹೆಂಟೆಗೆ ಸಮವಾಗಿ ಭಾವಿಸಿ, ನಿಸ್ಪೃಹವಾದ ಜೀವನವನ್ನು ಸಾಗಿಸುತ್ತಿರುತ್ತಾನೆ. ಶಿವಸಾಕ್ಷಾತ್ಕಾರವನ್ನು ಹೊಂದಿದ ಈ ಶಿವಯೋಗಿಯು ಶತ್ರು ಮಿತ್ರರೆಂಬ ಭೇದವಿಲ್ಲದೆ ಸರ್ವರಲ್ಲಿ ಸಮಾನವಾದ ವ್ಯವಹಾರ ವನ್ನು ಮಾಡುತ್ತಿರುತ್ತಾನೆ. ಅಂತೆಯೇ ಈ ಶಿವಯೋಗಿಯು ನಿಸ್ಪೃಹನೂ, ನಿರಹಂಕಾ ರಿಯೂ ಆಗಿದ್ದು, ಜಗತ್ತಿನಲ್ಲಿ ಸರ್ವರಿಗೂ ಪೂಜ್ಯನಾಗಿರುತ್ತಾನೆ. ಈ ರೀತಿಯಾದ ಅನಂತ ಸದ್ಗುಣಗಳ ಆಗರವೇ ಆಗಿರುವ ಆ ಶಿವಯೋಗಿಯು ಸಾಕ್ಷಾತ್ ಶಿವನೇ ಆಗಿದ್ದಾ ನೆಂಬುದನ್ನು ತಿಳಿಯಪಡಿಸುತ್ತ–

ದುರ್ಲಭಂ ಹಿ ಶಿವಜ್ಞಾನಂ ದುರ್ಲಭಂ ಶಿವಚಿಂತನಮ್ ।
ಯೇಷಾಮೇತದ್ ದ್ವಯಂ ಚಾಸ್ತಿ ತೇ ಹಿ ಸಾಕ್ಷಾಚ್ಛಿವಾತ್ಮಕಾಃ ॥

ಪಾದಾಗ್ರರೇಣವೋ ಯತ್ರ ಪತಂತಿ ಶಿವಯೋಗಿನಾಮ್ ।
ತದೇವ ಸದನಂ ಪುಣ್ಯಂ ಪಾವನಂ ಗೃಹಮೇಧಿನಾಮ್ ॥

ಸರ್ವಸಿದ್ಧಿಕರಂ ಪುಂಸಾಂ ದರ್ಶನಂ ಶಿವಯೋಗಿನಾಮ್ ।
ಸ್ಪರ್ಶನಂ ಪಾಪಶಮನಂ ಪೂಜನಂ ಮುಕ್ತಿಸಾಧನಮ್ ॥

ಮಹತಾಂ ಶಿವತಾತ್ಪರ್ಯವೇದಿನಾಮನುಮೋದಿನಾಮ್ ।
ಕಿಂ ವಾ ಫಲಂ ನ ಸಿದ್ಧ್ಯೇತ ಸಂಪರ್ಕಾಚ್ಛಿವಯೋಗಿನಾಮ್ ॥

(ಸಿ. ಶಿ. ೧೧ ; ೪೧–೪೪)

ಈ ರೀತಿಯಾಗಿ ಪೂಜ್ಯಪಾದರು ಅಪ್ಪಣೆಯಿತ್ತಿದ್ದಾರೆ. ಶಿವನೇ ಸರ್ವೋತ್ತಮನೆಂಬ ಜ್ಞಾನವನ್ನು ಪಡೆಯುವುದಾಗಲೀ, ನಾನು ಶಿವಸ್ವರೂಪನೇ ಆಗಿದ್ದೇನೆಂಬ ಶಿವಚಿಂತನೆ ಯನ್ನು ಮಾಡುವುದಾಗಲೀ, ಅತ್ಯಂತ ದುರ್ಲಭವಾದವುಗಳು. ಮಾನವರಿಗೆ ಸಹಜ ದುರ್ಲಭಗಳಾದ ಈ ಶಿವಜ್ಞಾನ ಶಿವಚಿಂತನೆಗಳನ್ನು ಶಿವಯೋಗಿಯು ಸಹಜವಾಗಿ ಪ್ರಾಪ್ತಮಾಡಿಕೊಂಡಿರೋಣದರಿಂದ ಅವನು ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆ. ಇಂತಹ ಮಹಿಮಾಶಾಲಿಗಳಾದ ಶಿವಯೋಗಿಗಳ ಪಾದಧೂಳಿಯೂ ಸಹ ಪರಮ ಪಾವನ ವಾಗಿರುತ್ತದೆ. ಆ ಪಾವನವಾದ ಶಿವಯೋಗಿಗಳ ಪಾದಧೂಳಿಯು ಯಾವುದೇ ಒಬ್ಬ ಗೃಹಸ್ಥನ ಮನೆಗೆ ತಾಗಿದಾಗ, ಆ ಗೃಹವೂ ಸಹ ಪಾವನವಾಗುತ್ತದೆಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಅಪ್ಪಣೆಯಿತ್ತಿದ್ದಾರೆ. ಶಿವಯೋಗಿಗಳ

ದರ್ಶನವೂ ಸರ್ವಸಿದ್ಧಿಯನ್ನುಂಟುಮಾಡುವಂಥಾದ್ದಾಗಿದೆ. ಅವರ ಪಾದಸ್ಪರ್ಶದಿಂದ ಪಾಪಗಳೆಲ್ಲವೂ ಶಮನಗೊಳ್ಳುತ್ತವೆ. ಇನ್ನು ಮನಸಾರೆ ಮುಟ್ಟಿ ಪಾದಪೂಜೆಯನ್ನು ಗೈದರೆ ಅದುವೇ ಮುಕ್ತಿಯ ಸಾಧನವಾಗಿ ಪರಿಣಮಿಸುತ್ತದೆ.

ಶಿವರಹಸ್ಯವನ್ನು ತಿಳಿದಿರುವ ಶಿವಸುಖದ ಅನುಭವವನ್ನು ಹೊಂದಿರುವ ಮಹಾ ಮಹಿಮಾಶಾಲಿಗಳಾದ ಶಿವಯೋಗಿ ಸ್ವರೂಪರಾದ ಜಂಗಮರ ಸಾನ್ನಿಧ್ಯವು ಪ್ರಾಪ್ತವಾಗಿರಲು ಅದಾವ ಫಲವು ತಾನೆ ಸಿದ್ಧಿಸಲಾರದು ? ಅರ್ಥಾತ್ ಸಕಲಸಿದ್ಧಿಗಳು ಸಹಜವಾಗಿ ಪ್ರಾಪ್ತವಾಗುವವೆಂಬ ತಾತ್ಪರ್ಯವು. ಆದ್ದರಿಂದ ವೀರಶೈವರು ಗುರು ಹಾಗೂ ಲಿಂಗಗಳಲ್ಲಿ ಭಯಭಕ್ತಿಯನ್ನು ಹೊಂದಿರುವಂತೆ ಆ ಜಂಗಮನ ಬಗ್ಗೆಯೂ ಆದರ ಭಾವನೆಯನ್ನು ತಾಳಿದವರಾಗಿರಬೇಕು. ಜಂಗಮರ ಈ ಮಹಾತ್ಮ್ಯವನ್ನರಿತೇ ಈ ಧರ್ಮದಲ್ಲಿ ಜಂಗಮಾರಾಧನೆಗೆ ಅನಾದಿಕಾಲದಿಂದಲೂ ಮಹತ್ತ್ವವು ಪ್ರಾಪ್ತವಾಗಿರುತ್ತದೆ. ಇದೆಲ್ಲವನ್ನು ಪರ್ಯಾಲೋಚಿಸಿ ಪ್ರತಿಯೊಬ್ಬರೂ ಗುರು–ಲಿಂಗ–ಜಂಗಮರೊಂದಿಗೆ ಗೌರವದಿಂದ ವರ್ತಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಸೆಪ್ಟೆಂಬರ, ೧೯೯೧
(ಸ್ಥಾನ ನಾಗಪುರ)

■■

ಆಶೀರ್ವಚನ-೧

# ಭಕ್ತಮಾಹಾತ್ಮ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಇಲ್ಲಿಯವರೆಗೆ ನೀವೆಲ್ಲಾ ಗುರುವಿನ ಮಹಿಮೆಯನ್ನು, ಲಿಂಗದ ಮಹಿಮೆಯನ್ನೂ ಹಾಗೂ ಜಂಗಮದ ಮಹತಿಯನ್ನೂ ಆಲಿಸಿದವರಾಗಿದ್ದೀರಿ. ಈ ಗುರು–ಲಿಂಗ–ಜಂಗಮರಲ್ಲಿ ಅನನ್ಯ ಭಕ್ತಿಯನ್ನಿರಿಸಿದ ಭಕ್ತನ ಮಹಿಮೆಯಾದರೂ ಕಡಿಮೆಯಾದುದೇನಲ್ಲ. ಅಂತೆಯೇ ಪೂಜ್ಯಪಾದರು ಈ ಭಕ್ತಮಹಾತ್ಮ್ಯಸ್ಥಲದಲ್ಲಿ ಭಕ್ತಿ ಹಾಗೂ ಭಕ್ತನ ಮಹತಿಯನ್ನು–

ಗುರೋರ್ಲಿಂಗಸ್ಯ ಮಾಹಾತ್ಮ್ಯಕಥನಾಚ್ಛಿವಯೋಗಿನಾಮ್ ।
ಸಿದ್ಧಂ ಭಕ್ತಸ್ಯ ಮಾಹಾತ್ಮ್ಯಂ ತಥಾಪ್ಯೇಷ ಪ್ರಶಸ್ಯತೇ ॥

ಯೇ ಭಜಂತಿ ಮಹಾದೇವಂ ಪರಮಾತ್ಮಾನಮವ್ಯಯಮ್ ।
ಕರ್ಮಣಾ ಮನಸಾ ವಾಚಾ ತೇ ಭಕ್ತಾ ಇತಿ ಕೀರ್ತಿತಾಃ ॥

ದುರ್ಲಭಾ ಹಿ ಶಿವೇ ಭಕ್ತಿಃ ಸಂಸಾರಭಯತಾರಿಣೀ ।
ಸಾ ಯತ್ರ ವರ್ತತೇ ಸಾಕ್ಷಾತ್ ಸ ಭಕ್ತಃ ಪರಿಗೀಯತೇ ॥

(ಸಿ.ಶಿ. ೧೧ ; ೪೫–೪೭)

ಈ ರೀತಿಯಾಗಿ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರು–ಲಿಂಗ–ಜಂಗಮರ ಮಹತಿಯನ್ನರಿತು ಅವರಲ್ಲಿ ಅಸಾಧಾರಣ ಭಕ್ತಿಯಿಂದ ನಡೆದುಕೊಳ್ಳುವ ಭಕ್ತನ ಮಹಿಮೆಯಾದರೂ ಸಣ್ಣದೇನಲ್ಲ. ಅಂತೆಯೇ ಶಾಸ್ತ್ರಗಳು ಭಕ್ತನ ಮಹತಿಯನ್ನೂ ಕೂಡ ಕೊಂಡಾಡುತ್ತವೆ. ಭಕ್ತನಿದ್ದಾಗಲೇ ಭಗವಂತನಿಗೆ ಮಹತ್ವ. ಭಕ್ತನೇ ಇರದಿದ್ದರೆ ಭಗವಂತನ ಮಹಿಮೆಯಾದರೂ ಅದು ಹೇಗೆ ತಾನೆ ತಿಳಿದೀತು ? ಅಂತೆಯೇ ಭಗವಂತನಾದರೂ 'ಮದ್ಭಕ್ತಾಃ ಮಮಾಧಿಕಾಃ' ಅಂದರೆ ನನ್ನ ಭಕ್ತರಾದವರು ನನಗಿಂತಲೂ ಹೆಚ್ಚಿನವರಾಗಿದ್ದಾರೆಂದು ಮುಕ್ತಕಂಠದಿಂದ ಕೊಂಡಾಡಿದ್ದಾನೆ. ಅನೇಕ ಶಾಸ್ತ್ರಸಿದ್ಧಾಂತಗಳ ಮುಖಾಂತರವಾಗಿ ನಾಸ್ತಿಕವಾದವನ್ನು ಖಂಡಿಸಿ ದೇವರ ಅಸ್ತಿತ್ವವನ್ನು ಸಾಧಿಸುವ ವಿದ್ವಾಂಸ ಭಕ್ತರೂ ಕೂಡ ನಮ್ಮ ದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಆಗಿಹೋಗಿದ್ದಾರೆ. ಇವರಲ್ಲಿ ನ್ಯಾಯಶಾಸ್ತ್ರದ ಮೂರ್ಧನ್ಯ ವಿದ್ವಾಂಸನಾದ ಉದಯನಾಚಾರ್ಯನೂ ಒಬ್ಬನಾಗಿದ್ದಾನೆ.

ಉದಯನಾಚಾರ್ಯನು 'ಪುರಿ ಕ್ಷೇತ್ರ'ದಲ್ಲಿ ಅಂದರೆ ಜಗನ್ನಾಥಪುರಿ ಕ್ಷೇತ್ರದಲ್ಲಿ ನಿವಾಸಮಾಡಿಕೊಂಡು ಪ್ರತಿದಿವಸ ತಪ್ಪದೆ ಜಗನ್ನಾಥಸ್ವಾಮಿಯ ದರ್ಶನಕ್ಕೆ ಹೋಗಿ ಬರುತ್ತಿದ್ದನು. ಒಂದು ದಿವಸ ದರ್ಶನಾರ್ಥಿಯಾಗಿ ಹೋದಾಗ, ಮಂದಿರದ ಮಹಾದ್ವಾರವು ಮುಚ್ಚಲ್ಪಟ್ಟಿತ್ತು, ಅದನ್ನು ಕಂಡು ಭಗವಂತನ ಮೇಲೆ ಕ್ರುದ್ಧನಾದ ಉದಯ

ನಾಚಾರ್ಯನು ನಾಸ್ತಿಕರನ್ನು ಖಂಡಿಸಿ ನಿನ್ನ ಅಸ್ತಿತ್ವವನ್ನು ಸಿದ್ಧಮಾಡುವುದು ನನ್ನ ಕೈಯಲ್ಲಿರುವಾಗ ನಾನು ಬಂದಾಗ ನೀನು ಬಾಗಿಲ ಮುಚ್ಚಿಕೊಂಡು ಕುಳಿತಿರುವಿ ಎಂದಬಳಿಕ ಇನ್ನು ಮೇಲೆ ನಿನ್ನ ಅಸ್ತಿತ್ವದ ಸಿದ್ಧಿಗಾಗಿ ನಾನೆಂದಿಗೂ ಹೋರಾಡಲಾರೆ. ಇಗೋ ಹೊರಟೆ ಎಂಬುದಾಗಿ ನುಡಿದು, ಮರಳಿ ನಡೆದಾಗ ಜಗನ್ನಾಥ ಮಂದಿರದ ಮಹಾದ್ವಾರವು ತನ್ನಿಂದ ತಾನೇ ತೆರೆಯಲ್ಪಟ್ಟಿತಂತೆ. ಹೊರಳಿ ನೋಡಿದಾಗ ಮಂದಿರದಲ್ಲಿ ಪ್ರಸನ್ನ ಮುಖ ಮುದ್ರೆಯ ಜಗನ್ನಾಥನು ಕಂಗೊಳಿಸುತ್ತಿದ್ದನು. ಆಗ ದೇವರ ಪ್ರತ್ಯಕ್ಷ ದರ್ಶನವನ್ನು ಮಾಡಿಕೊಂಡ ಉದಯನಾಚಾರ್ಯನು ಪುಲಕಿತನಾಗಿ ದೇವರಲ್ಲಿ ಅತ್ಯಾಸಕ್ತಚಿತ್ತವುಳ್ಳವನಾದನು. ಭಕ್ತ–ಭಗವಂತರಲ್ಲಿಯ ಇಂಥ ಅನೇಕ ವಿರಸ–ಸರಸ ವ್ಯವಹಾರಗಳು ಪ್ರಾಚೀನ ಸಾಹಿತ್ಯದಲ್ಲಿ ಕಂಡುಬರುವವು. ಅಂತೆಯೇ ಭಗವಂತನ ಅಸ್ತಿತ್ವವು ಭಕ್ತನ ಕೈಯಲ್ಲಿ ಇದೆ ಎಂದು ತಿಳಿದುಬರುತ್ತದೆ. ಅಂತೆಯೇ ಪೂಜ್ಯಪಾದರಾದ ಶ್ರೀರೇಣುಕರು ಗುರುಲಿಂಗ ಜಂಗಮರನ್ನು ಆರಾಧಿಸುವ ಭಕ್ತನೂ ಸಹ ಅಸಾಧಾರಣನೆಂಬುದಾಗಿ ಪ್ರತಿಪಾದಿಸಿದ್ದಾರೆ.

ಭಕ್ತನಾದವನು ತ್ರಿಕರಣ ಪೂರ್ವಕವಾಗಿ ಭಗವಂತನನ್ನು ಭಜಿಸುವಂಥವನಾಗಿರುತ್ತಾನೆ. ತನ್ನ ಆರಾಧ್ಯವಾದ ಇಷ್ಟಲಿಂಗವನ್ನು ಹಸ್ತದಿಂದ ಮುಟ್ಟಿ ಪೂಜಿಸಿ, ಪ್ರಾಣಲಿಂಗರೂಪವಾದ ಆತನನ್ನು ಮನಸಾ ಧ್ಯಾನಿಸಿ ಆತನ ಮಹಿಮೆಯನ್ನು ಅನೇಕ ಸ್ತುತಿಗಳ ರೂಪದಲ್ಲಿ ವರ್ಣಿಸಿ ಹೀಗೆ ಕಾಯೇನ–ವಾಚಾ–ಮನಸಾ ತ್ರಿಕರಣಪೂರ್ವಕವಾಗಿ ಶಿವನನ್ನು ಆರಾಧಿಸುತ್ತಾನೆ. ಹೀಗೆ ತಮ್ಮ ಇಷ್ಟವನ್ನು ತ್ರಿಕರಣ ಪೂರ್ವಕವಾಗಿ ಭಜಿಸುವುದೇ ನಿಜವಾದ ಭಕ್ತಿಯು. ಈ ತೆರನಾದ ತ್ರಿಕರಣ ಭಕ್ತಿಸಂಪನ್ನನಾದವನೇ ಭಕ್ತನೆಂಬುದಾಗಿ ಕರೆಯಲ್ಪಡುತ್ತಾನೆ. ಸಾಂಸಾರಿಕ ಸಮಗ್ರ ಭಯಗಳನ್ನು ದೂರಮಾಡುವ ಶಿವನ ಈ ಭಕ್ತಿಯು ಸರ್ವರಿಗೂ ಸುಲಭವಾದುದಲ್ಲ. ಇಂಥ ದುರ್ಲಭವಾದ ಭಕ್ತಿಸಂಪನ್ನನೇ ನಿಜವಾದ ಭಕ್ತನು. ಜನನ–ಮರಣಾತ್ಮಕವಾದ ಭವರೋಗದಿಂದ ಮುಕ್ತಿಯನ್ನು ಕೊಡುವಂತಹದು ಭಕ್ತಿಯೇ ಆಗಿರುತ್ತದೆ. ಭಕ್ತಿವಿರಹಿತನಾದವನು ಅದೆಷ್ಟು ಶಾಸ್ತ್ರಗಳನ್ನು ಅಭ್ಯಾಸಮಾಡಿದ್ದರೂ ಯಜ್ಞಯಾಗಾದಿಗಳನ್ನು ಆಚರಿಸುತ್ತಿದ್ದರೂ ಅವೆಲ್ಲ ನಿಷ್ಫಲಗಳಾಗಿರುತ್ತವೆಯೆಂಬುದನ್ನು ಪೂಜ್ಯಪಾದರು–

ಕಿಂ ವೇದೈಃ ಕಿಂ ತತಃ ಶಾಸ್ತ್ರೈಃ ಕಿಂ ಯಜ್ಞೈಃ ಕಿಂ ತಪೋವ್ರತೈಃ ।
ನಾಸ್ತಿ ಚೇಚ್ಛಾಂಕರೀ ಭಕ್ತಿರ್ದೇಹಿನಾಂ ಜನ್ಮರೋಗಿಣಾಮ್ ॥

ಶಿವಭಕ್ತಿವಿಹೀನಸ್ಯ ಸುಕೃತಂ ಚಾಪಿ ನಿಷ್ಫಲಮ್ ।
ವಿಪರೀತಫಲಂ ಚ ಸ್ಯಾದ್ ದಕ್ಷಸ್ಯಾಪಿ ಮಹಾಧ್ವರೇ ॥

(ಸಿ.ಶಿ. ೧೧ ; ೪೮–೪೯)

ಈ ವಿಧವಾಗಿ ವರ್ಣಿಸಿದ್ದಾರೆ. ತಾತ್ಪರ್ಯವೇನೆಂದರೆ–ಚತುರ್ವೇದ ಪಂಡಿತನಾಗಿದ್ದರೂ ಸಕಲಶಾಸ್ತ್ರ ಪಾರಂಗತನಾಗಿದ್ದರೂ ನಾನಾವಿಧಗಳಾದ ಯಜ್ಞಯಾಗಾದಿಗಳನ್ನು ಅತ್ಯಂತ ಕಠೋರಗಳಾದ ತಪಸ್ಸುಗಳನ್ನು, ಆಚರಿಸುತ್ತಿದ್ದರೂ ಅವನು ಶಿವಭಕ್ತಿಶೂನ್ಯನಾಗಿದ್ದರೆ ಅವೆಲ್ಲವುಗಳು ನಿರರ್ಥಕಗಳಾಗುತ್ತವೆ. ಇಷ್ಟೇ ಅಲ್ಲ ಒಮ್ಮೊಮ್ಮೆ ವಿಪರೀತ ಫಲಗಳನ್ನೂ ಸಹ ಉಂಟುಮಾಡುವುದುಂಟು.

ದಕ್ಷನೆಂಬ ಪ್ರಜಾಪತಿಯು ಒಂದಾನೊಂದು ಸಮಯ ತನ್ನ ಅರಮನೆಯಲ್ಲಿ ಒಂದು ಬೃಹತ್ತರವಾದ ಯಜ್ಞವನ್ನು ಆಚರಿಸುತ್ತಿದ್ದನು. ಈ ಯಜ್ಞಕ್ಕೆ ಶಿವನೋರ್ವನನ್ನುಳಿದು ಉಳಿದೆಲ್ಲ ದೇವತೆಗಳನ್ನು ಆಹ್ವಾನಿಸಿದ್ದನು. ಶಿವನಿಗೆ ಅಪಮಾನವನ್ನು ಮಾಡುವುದಕ್ಕಾಗಿಯೇ ಈ ಮಹಾಯಜ್ಞವನ್ನು ಹಮ್ಮಿಕೊಂಡಿದ್ದನು. ದಕ್ಷನ ಪುತ್ರಿಯೂ ಶಿವನ ಅರ್ಧಾಂಗಿನಿಯೂ ಆದ ಸತೀ ದೇವಿಯು ಆ ಯಜ್ಞಮಂಟಪಕ್ಕೆ ಆಹ್ವಾನವಿಲ್ಲದೇ ಆಗಮಿಸಿ ಅಪಮಾನಿತಳಾಗಿ ಕೊನೆಗೆ ಈ ಯಜ್ಞಕುಂಡದಲ್ಲಿ ತನ್ನನ್ನು ಆಹುತಿಯಾಗಿ ಸಮರ್ಪಿಸಿಕೊಂಡಳು. ಈ ವಾರ್ತೆಯು ನಂದೀಶ್ವರನಿಂದ ಶಿವನಿಗೆ ತಿಳಿದಾಗ ಆವನು ಕ್ರುದ್ಧನಾಗಿ ತನ್ನ ತಲೆಯನ್ನು ಝಾಡಿಸಿದಾಗ, ಜಡೆಯು ಬಿಚ್ಚಿ ವೀರಭದ್ರನು ಅವತರಿಸಿದನು. ಶಿವನ ಅಣತಿಯಂತೆ ಶಿವಸುತನಾದ ವೀರಭದ್ರನು ದಕ್ಷನ ಯಜ್ಞವನ್ನು ಧ್ವಂಸಗೊಳಿಸಿ ಅಲ್ಲಿರುವ ದೇವತೆಗಳೆಲ್ಲರ ಮುಖಭಂಗಮಾಡಿ ದಕ್ಷನ ಶಿರವನ್ನು ಹರಿದು ಕೊನೆಗೆ ಕುರಿತಲೆಯನಿಟ್ಟನೆಂಬ ಕಥೆಯು ಸುಪ್ರಸಿದ್ಧವಾದುದಾಗಿದೆ. ಹೀಗೆ ಶಿವನಲ್ಲಿ ಭಕ್ತಿಯಿಲ್ಲದೆ ಮಾಡಿದ ಆ ಯಜ್ಞವು ಉತ್ತಮ ಫಲವನ್ನು ಕೊಡದೆ ವಿಪರೀತವಾದ ಫಲವನ್ನು ಕೊಟ್ಟದ್ದು ಸರ್ವರಿಗೂ ವಿದಿತವಾದುದೇ ಸರಿ. ಆದ್ದರಿಂದ ಪೂಜ್ಯರ ಅಪ್ಪಣೆಯ ಪ್ರಕಾರ, ವೇದಾಭ್ಯಾಸವನ್ನೇ ಮಾಡಲಿ, ಶಾಸ್ತ್ರಗಳ ಪಾಂಡಿತ್ಯವನ್ನೇ ಪಡೆದುಕೊಂಡವನಾಗಿರಲಿ ಯಜ್ಞಾದಿಗಳನ್ನು ಆಚರಿಸುವವರೇ ಆಗಿರಲಿ, ಕಠೋರಗಳಾದ ತಪಸ್ಸುಗಳನ್ನಾಚರಿಸುವವರೇ ಆಗಿರಲಿ, ಇವರೆಲ್ಲರಿಗೂ ಶಿವಭಕ್ತಿಯು ಅವಶ್ಯಕವೆಂಬುದಾಗಿ ತಿಳಿದುಕೊಳ್ಳಬೇಕು.

ಶಿವಭಕ್ತಿಯುಳ್ಳ ಮನುಷ್ಯನು ಆಕಸ್ಮಾತ್ತಾಗಿ ಅನವಧಾನತೆಯ ಮೂಲಕ ಪಾಪಕೃತ್ಯಗಳನ್ನೆಸಗಿದರೂ ತನ್ನಲ್ಲಿಯ ಶಿವಭಕ್ತಿಯ ಪ್ರಭಾವದಿಂದ ಆತನು ಆ ಪಾಪದಿಂದ ಮುಕ್ತನಾಗುತ್ತಾನೆಂಬ ವಿಷಯವನ್ನು–

ಅತ್ಯಂತಪಾಪಕರ್ಮಾಽಪಿಶಿವಭಕ್ತ್ಯಾ ವಿಶುಧ್ಯತಿ ।
ಚಂಡೋ ಯಥಾ ಪುರಾ ಭಕ್ತ್ಯಾ ಪಿತೃಹಾಽಪಿ ಶಿವೋಽಭವತ್ ॥

ಸುಕೃತಂ ದುಷ್ಕೃತಂ ಚಾಪಿ ಶಿವಭಕ್ತಸ್ಯ ನಾಸ್ತಿ ಹಿ ।
ಶಿವಭಕ್ತಿವಿಹೀನಾನಾಂ ಕರ್ಮಪಾಶನಿಬಂಧನಮ್ ॥

ಶಿವಾಶ್ರಿತಾನಾಂ ಜಂತೂನಾಂ ಕರ್ಮಣಾ ನಾಸ್ತಿಸಂಗಮಃ ।
ವಾಜಿನಾಂ ದಿನನಾಥಸ್ಯ ಕಥಂ ತಿಮಿರಜಂ ಭಯಮ್ ॥

ನಿರೋದ್ಧುಂ ನ ಕ್ಷಮಂ ಕರ್ಮ ಶಿವಭಕ್ತಾನ್ ವಿಶೃಂಖಲಾನ್ ।
ಕಥಂ ಮತ್ತಗಜಾನ್ ರುಂಧೇಚ್ಛೃಂಖಲಾ ಬಿಸತಂತುಜಾ ॥

(ಸಿ.ಶಿ. ೧೧ ; ೫೦–೫೩)

ಈ ರೀತಿಯಾಗಿ ಪೂಜ್ಯಪಾದರು ಅಪ್ಪಣೆಕೊಡಿಸಿದ್ದಾರೆ. ಶಾಸ್ತ್ರದಲ್ಲಿ ವಿಹಿತ ಮತ್ತು ನಿಷಿದ್ಧವೆಂಬುದಾಗಿ ಕರ್ಮಗಳು ಎರಡು ವಿಧವಾಗಿ ಇರುತ್ತವೆ. ವಿಹಿತ ಕರ್ಮವನ್ನೆಸಗಿದರೆ ಪುಣ್ಯಪ್ರಾಪ್ತಿಯು, ನಿಷಿದ್ಧಕರ್ಮವನ್ನೆಸಗಿದರೆ ಪಾಪಪ್ರಾಪ್ತಿಯೆಂಬುದು ಸಾಮಾನ್ಯವಾದ

ನಿಯಮ. ಒಮ್ಮೊಮ್ಮೆ ನಮ್ಮ ಭಾವನೆಯು ಪರಿಶುದ್ಧವಿಲ್ಲದಿರುವಾಗ ಸುಕೃತವನ್ನು ಮಾಡಿದರೂ ಅನರ್ಥವಾಗುವಂತೆ, ಭಾವನೆಯು ಪರಿಶುದ್ಧವಾಗಿರುವಾಗ ಕದಾಚಿತ್ ನಿಷಿದ್ಧಕರ್ಮವು ಉಂಟಾದರೂ ಅದರಿಂದ ದುರಿತವುಂಟಾಗುವುದಿಲ್ಲವೆಂಬುದನ್ನು ಪೂಜ್ಯರು ಇಲ್ಲಿ ತಿಳಿಯಪಡಿಸಿ, ಕರ್ಮಕ್ಕಿಂತಲೂ ಭಾವವು ಪ್ರಧಾನವಾದುದೆಂಬುದನ್ನು ಬೋಧಿಸಿದ್ದಾರೆ. ಪೂರ್ವಕಾಲದಲ್ಲಿ ಚಂಡನೆಂಬ ಭಕ್ತನು ತಂದೆಯನ್ನು ಕೊಂದರೂ ಆತನಿಗೆ ಪಿತೃಹತ್ಯಾದೋಷವು ಬಾರದೆ ಆತನಿಗೆ ಗಣಪದವಿಯು ಪ್ರಾಪ್ತವಾಯಿತೆಂಬ ಕಥೆಯು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಶಿವಭಕ್ತನಾದವನಿಗೆ ಸುಕೃತ–ದುಷ್ಕೃತಗಳು ಅಂಟಿಕೊಳ್ಳುವುದಿಲ್ಲ. ಶಿವಭಕ್ತಿರಹಿತನಾದವನೇ ಕರ್ಮಪಾಶದಲ್ಲಿ ಸಿಲುಕಿಕೊಳ್ಳುತ್ತಾನೆ. ಶಿವಭಕ್ತನು ಅತ್ಯಂತ ಸಾತ್ವಿಕ ಪ್ರವೃತ್ತಿಯುಳ್ಳವನಾಗಿರೋಣದರಿಂದ ಅವನಿಂದ ಬುದ್ಧಿಪೂರ್ವಕವಾಗಿ ದುಷ್ಕೃತ್ಯಗಳು ಸಂಭವಿಸುವುದಿಲ್ಲ. ತಿಳಿದೋ ತಿಳಿಯದೆಯೋ ಆಕಸ್ಮಾತ್ತಾಗಿ ದುಷ್ಕರ್ಮ ಘಟಿಸಿದರೂ ಅವನಲ್ಲಿಯ ಪ್ರಗಾಢವಾದ ಶಿವಭಕ್ತಿಯ ಕಾರಣದಿಂದಾಗಿ ಅವುಗಳು ಆತನಿಗೆ ಲಿಪ್ತವಾಗಲಾರವು. ಜಗತ್ತಿಗೆ ಪ್ರಕಾಶವನ್ನು ದಯಪಾಲಿಸುವ ಸೂರ್ಯ ನಾರಾಯಣನ ಅಶ್ವಗಳಿಗೆ ಕತ್ತಲೆಯು ಅದೆಂದೂ ಆವರಿಸದಿರುವಂತೆ ಪರಮಪವಿತ್ರನೂ ಜ್ಞಾನಸ್ವರೂಪಿಯೂ ಆದ ಪರಶಿವನನ್ನು ಸದಾ ಆಶ್ರಯಿಸಿರುವ ಶಿವಭಕ್ತನಿಗೂ ಸಹ ಅದಾವ ದುಷ್ಕೃತ್ಯವೂ ಆವರಿಸಲಾರದು.

ಶಿವದೀಕ್ಷಾ ಸಂಸ್ಕಾರದಿಂದ ಮಲತ್ರಯಗಳನ್ನು ನಾಶಮಾಡಿಕೊಂಡ ಶಿವಭಕ್ತನಿಗೆ ಅದಾವ ಕರ್ಮವು ತಾನೆ ಬಂಧಿಸಲ್ಪಡಬಹುದು ? ಮದೋನ್ಮತ್ತವಾದ ಗಜೇಂದ್ರನನ್ನು ಅತ್ಯಂತ ಸುಕೋಮಲವಾದ ಕಮಲದ ತಂತುಗಳಿಂದ ನಿರ್ಮಿಸಲ್ಪಟ್ಟ ಸರಪಳಿಯು ಕಟ್ಟಿಹಾಕಲು ಅಸಮರ್ಥವಾಗಿರುವಂತೆ ಪರಮಪಾವನನಾದ ಶಿವಭಕ್ತನನ್ನು ಅದಾವ ದುಷ್ಕೃತ್ಯವೂ ಬಂಧಿಸಲಾರದು. ಅಂತೆಯೇ ಶಿವಭಕ್ತನೇ ಸರ್ವೋತ್ತಮನೆಂಬುದನ್ನು ಪೂಜ್ಯಪಾದರು–

ಬ್ರಾಹ್ಮಣಃ ಕ್ಷತ್ರಿಯೋ ವಾಽಪಿ ವೈಶ್ಯೋ ವಾ ಶೂದ್ರ ಏವ ವಾ ।
ಅಂತ್ಯಜೋ ವಾ ಶಿವೇ ಭಕ್ತಃ ಶಿವವನ್ಮಾನ್ಯ ಏವ ಸಃ ॥

ಶಿವಭಕ್ತಿಸಮಾವೇಶೇ ಕ್ವ ಜಾತಿಪರಿಕಲ್ಪನಾ ।
ಇಂಧನೇಷ್ವಗ್ನಿದಗ್ಧೇಷು ಕೋ ವಾ ಭೇದಃ ಪ್ರಕೀರ್ತ್ಯತೇ ॥

ಶುದ್ಧಾ ನಿಯಮಸಂಯುಕ್ತಾಃ ಶಿವಾರ್ಪಿತಫಲಾಗಮಾಃ ।
ಅರ್ಚಯಂತಿ ಶಿವಂ ಲೋಕೇ ವಿಜ್ಞೇಯಾಸ್ತೇ ಗಣೇಶ್ವರಾಃ ॥

(ಸಿ.ಶಿ. ೧೧ ; ೫೪–೫೬)

ಈ ತೆರನಾಗಿ ವಿವರಿಸಿದ್ದಾರೆ. ಶಿವಭಕ್ತಿಯನ್ನು ಮಾಡುವ ಹಕ್ಕು ಅವರಿಗೇ ಇವರಿಗೇ ಎಂದು ಸಿಮೀತವಾಗಿರದೆ ಪ್ರತಿಯೊಬ್ಬರಿಗೂ ಸಹಜವಾಗಿಯೇ ಪ್ರಾಪ್ತವಾಗಿದೆ. ಶಿವಭಕ್ತನಾದವನು ಬ್ರಾಹ್ಮಣನೇ ಆಗಿರಲಿ, ಕ್ಷತ್ರಿಯನೇ ಆಗಿರಲಿ, ವೈಶ್ಯನೇ ಅಥವಾ ಶೂದ್ರನೇ ಆಗಿರಲಿ, ಅವನು ಶಿವಸ್ವರೂಪನೆಂಬುದಾಗಿ ತಿಳಿದುಕೊಳ್ಳಬೇಕೆಂಬುದಾಗಿ ಪೂಜ್ಯ

ಪಾದರು ಇಲ್ಲಿ ಆದೇಶವಿತ್ತಿದ್ದಾರೆ. ಅಂತೆಯೇ ನಮ್ಮ ದೇಶದಲ್ಲಿ ಪ್ರತಿಯೊಂದು ವರ್ಣದಲ್ಲಿಯೂ ಕೂಡ ಶ್ರೇಷ್ಠಾತಿಶ್ರೇಷ್ಠರಾದ ಶಿವಭಕ್ತರಾಗಿರುವುದನ್ನು ಕಾಣುತ್ತೇವೆ. ಶಿವಭಕ್ತರಲ್ಲಿ ಜಾತಿಭೇದವನ್ನು ಮಾಡಕೂಡದೆಂಬುದು ಜಗದ್ಗುರುಗಳ ಆದೇಶವಾಗಿದೆ. ಕಟ್ಟಿಗೆಗಳು ಅನೇಕ ಜಾತಿಯವುಗಳಾಗಿದ್ದರೂ ಅವುಗಳಿಗೆ ಅಗ್ನಿ ಸಂಬಂಧವಾಗಿ ಅವು ದಹಿಸಿದ ಬಳಿಕ ಅದರಿಂದ ತಯಾರಾದ ಅಗ್ನಿಯಲ್ಲಿ ಕಾಷ್ಠಜಾತಿಭೇದಮಾಡಲು ಆದಾರಿಂದಲೂ ಸಾಧ್ಯವಾಗುವುದಿಲ್ಲ, ಅದರಂತೆ ಬೇರೆ ಬೇರೆ ಜಾತಿಯವರಿಗೆ ಶಿವದೀಕ್ಷಾ ಸಂಸ್ಕಾರವನ್ನು ಮಾಡುವುದರಿಂದ ಅವರ ಪೂರ್ವದ ಜಾತಿ ಸಂಸ್ಕಾರಗಳೆಲ್ಲ ದಹಿಸಿ ಅವರು ಪರಿಶುದ್ಧರಾಗುತ್ತಾರೆ. ಹೀಗೆ ಸಂಸ್ಕಾರ ಹೊಂದಿದವರಲ್ಲಿ ಭೇದಭಾವನೆಯನ್ನು ಮಾಡಲಾಗುವುದಿಲ್ಲ, ಈ ತೆರನಾಗಿ ಶಿವಸಂಸ್ಕಾರವನ್ನು ಹೊಂದಿ ಶಿವಭಕ್ತಿಸಂಪನ್ನನಾದವನು ಶೂದ್ರನೇ ಆಗಿರಲಿ ಅಥವಾ ಬ್ರಾಹ್ಮಣನೇ ಆಗಿರಲಿ ಅವರೀರ್ವರೂ ಶಿವಭಕ್ತರೆಂದೇ ಪರಿಗಣಿಸಲ್ಪಡುತ್ತಾರೆ. ಅದರಲ್ಲಿ ಬ್ರಾಹ್ಮಣ ಶಿವಭಕ್ತವ, ಅಂತ್ಯಜ ಶಿವಭಕ್ತ ಎಂದು ಭೇದ ಮಾಡಲು ಬರುವುದಿಲ್ಲ. ಸಮಾಜದಲ್ಲಿಯ ಜಾತಿಮೂಲಕವಾದ ಭೇದ ಭಾವನೆಯನ್ನು ಶ್ರೀ ಜಗದ್ಗುರು ಪಂಚಾಚಾರ್ಯರು ಶಿವದೀಕ್ಷಾ ಹಾಗೂ ಶಿವಭಕ್ತಿಯ ಮಾಧ್ಯಮದಿಂದ ದೂರಮಾಡಲು ಅನಾದಿ ಕಾಲದಿಂದಲೂ ಪ್ರಯತ್ನಮಾಡುತ್ತಲೇ ಬಂದಿದ್ದಾರೆ. ಭಕ್ತಿಸಿದ್ಧಾಂತವು ಸಮಾನತೆಯ ಮಹಾಮಾರ್ಗವನ್ನು ಪ್ರತಿಪಾದಿಸುವಂಥದ್ದಾಗಿದೆ. ಈ ಸಿದ್ಧಾಂತದಲ್ಲಿ ವಿಷಮತೆಗೆ ಅವಕಾಶವಿಲ್ಲ, ಅಂತೆಯೇ ಜಾತಿಭೇದವನ್ನೂ ತೊಡೆದುಹಾಕುವ ಶಿವಭಕ್ತಿಪಥವು ಅತ್ಯಂತ ಶ್ರೇಷ್ಠವಾದುದು. ಹೀಗೆ ನಮ್ಮ ದೇಶದಲ್ಲಿ ಅನಾದಿಕಾಲದಿಂದ ಇರುವ ಜಾತಿಯ ಭೇದ ಭಾವನೆಯನ್ನು ದೂರಮಾಡಲು ಶ್ರೀ ಜಗದ್ಗುರು ಪಂಚಾಚಾರ್ಯರು ಶಿವಭಕ್ತಿಯ ಮುಖಾಂತರ ದೂರಮಾಡಿದ್ದಾರೆ, ದೂರಮಾಡುತ್ತಲೂ ಇದ್ದಾರೆ. ಆದ್ದರಿಂದ ಸರ್ವಜಾತಿಯವರಿಗೆ ಶಿವ ಭಕ್ತಿಯಲ್ಲಿ ಸಮಾನವಾದ ಹಕ್ಕನ್ನು ಪ್ರಪ್ರಥಮವಾಗಿ ದಯಪಾಲಿಸಿದವರು ಈ ಪಂಚಾ ಚಾರ್ಯರು. ಹನ್ನೆರಡನೇ ಶತಮಾನದ ಶಿವಶರಣರೂ ಸಹ ಹಾಗೆಯೇ ಮುಂದುವರಿಸಿ ಕೊಂಡು ಬಂದರೆಂಬುದು ಒಂದು ಸಂತೋಷದ ಸಂಗತಿಯೇ ಸರಿ.

ಆಚಾರ್ಯರು ಉಪದೇಶಿಸಿದ ಭಕ್ತಿ ಸಿದ್ಧಾಂತದ ಪ್ರಕಾರವಾಗಿ ಈ ಮಾರ್ಗದಲ್ಲಿ ಶಿವದೀಕ್ಷೆಯನ್ನು ಹೊಂದಿ ಕಾಯೇನ ವಾಚಾ ಮನಸಾ ಪರಿಶುದ್ಧರೂ, ಅತ್ಯಂತ ಕಠಿಣವಾದ ಈ ಶಿವವ್ರತವನ್ನು ನಿಯಮದಿಂದ ಪರಿಪಾಲಿಸುವವರೂ, ತಮ್ಮಿಂದ ಆಚರಿಸಲ್ಪಟ್ಟ ಶುಭಾಶುಭ ಫಲಗಳನ್ನು ಶಿವಾರ್ಪಿತವೆಂದು ಭಾವಿಸುವವರೂ, ದೇಹದ ಮೇಲೆ ಸದಾ ಇಷ್ಟಲಿಂಗವನ್ನು ಧರಿಸಿಕೊಂಡು, ಅದರ ಪೂಜೆಯನ್ನು ಮಾಡುವದರ ಜೊತೆಗೆ ಅಂತ ರಂಗದಲ್ಲಿಯ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಅನುಸಂಧಾನವನ್ನು ಮಾಡುತ್ತ ಶಿವನಾಗಿ ಶಿವನನ್ನು ಪೂಜಿಸು, ರುದ್ರನಾಗಿ ರುದ್ರನನ್ನು ಅರ್ಚಿಸು ಎಂಬ ಆಗಮೋಕ್ತಿ ಗಳಂತೆ ಶಿವಸ್ವರೂಪರಾಗಿ ಶಿವನನ್ನು ಸದಾ ಅರ್ಚಿಸುತ್ತ ಶಿವದೃಷ್ಟಿ ಸಂಪನ್ನರೂ ಆದ ಈ ಶಿವಭಕ್ತರು ರುದ್ರಗಣರೆಂದೇ ಅರ್ಥಾತ್ ಶಿವಗಣರೆಂದೇ ಭಾವಿಸಬೇಕೆಂಬುದಾಗಿ ಪೂಜ್ಯಪಾದರೂ ಆದೇಶವಿತ್ತಿದ್ದಾರೆ. ಹೀಗೆ ಶಿವಭಕ್ತಿಯ

ಮುಖಾಂತರ ಪ್ರತಿಯೊಬ್ಬರೂ ಶಿವಸ್ವರೂಪರೇ ಆಗೋಣದರಿಂದ ಶಿವಭಕ್ತಿಯು ಶ್ರೇಷ್ಠವಾದುದಲ್ಲದೆ ಇಂತಹ ಭಕ್ತಿಸಂಪನ್ನನಾದ ಶಿವಭಕ್ತನೂ ಸಹ ಶ್ರೇಷ್ಠನೆಂಬುದನ್ನು ತಿಳಿದುಕೊಳ್ಳಬೇಕೆಂಬುದೇ ಈ ಭಕ್ತ ಮಹಾತ್ಮ್ಯಸ್ಥಲದ ತಾತ್ಪರ್ಯವೆಂಬುದನ್ನು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮಗೈಯ್ಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧ ಎಪ್ರಿಲ್, ೧೯೬೨
(ಸ್ಥಾನ ನಾಗಪೂರ)

■■

ಆಶೀರ್ವಚನ-೧

# ಶರಣಮಹಾತ್ಮ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಸಾದಿಸ್ಥಲಾಂತರ್ಗತಗಳಾದ ಗುರು ಮಾಹಾತ್ಮ್ಯ ಸ್ಥಲ, ಲಿಂಗಮಾಹಾತ್ಮ್ಯಸ್ಥಲ, ಜಂಗಮಮಾಹಾತ್ಮ್ಯಸ್ಥಲ ಮತ್ತು ಭಕ್ತಮಾಹಾತ್ಮ್ಯ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸಿದ್ದೀರಿ. ಸದ್ಯಃ ಶರಣಮಾಹಾತ್ಮ್ಯಸ್ಥಲವನ್ನು ಕುರಿತು ವಿವೇಚಿಸೋಣ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾ ಶಾಲಿಯಾದ ಅಗಸ್ತ್ಯಮಹರ್ಷಿಯನ್ನು ಉದ್ದೇಶಿಸಿ–

ಗುರುಲಿಂಗಾದಿಮಾಹಾತ್ಮ್ಯಬೋಧನಾನ್ವೇಷಣಸಂಗತಃ।
ಸರ್ವಾತ್ಮನಾ ಶಿವಾಪತ್ತಿಃ ಶರಣಸ್ಥಾನಮುಚ್ಯತೇ ॥
ಬ್ರಹ್ಮಾದಿವಿಬುಧಾನ್ ಸರ್ವಾನ್ ಮುಕ್ತ್ವಾ ಪ್ರಾಕೃತವೈಭವಾನ್ ।
ಪ್ರಪದ್ಯತೇ ಶಿವಂ ಯತ್ತು ಶರಣಂ ತದುದಾಹೃತಮ್ ॥

(ಸಿ.ಶಿ. ೧೧ ; ೫೭–೫೮)

ಎಂಬುದಾಗಿ ಉಪದೇಶಿಸಿದ್ದಾರೆ. ವೀರಶೈವ ಧರ್ಮದಲ್ಲಿ ಪೂಜನೀಯರೆಂದು ಕರೆಸಿ ಕೊಂಡಿರುವ ಗುರು–ಲಿಂಗ–ಜಂಗಮರ ಮಾಹಾತ್ಮ್ಯವನ್ನು ತಿಳಿದು, ಓರ್ವನಾದ ಶಿವನೇ ಈ ಮೂರು ವಿಧವಾಗಿ ಅವತರಿಸಿ ಲೋಕಕಲ್ಯಾಣವನ್ನು ಮಾಡುತ್ತಿರುವುದನ್ನು ಅರಿತು ಆ ಶಿವನನ್ನು ಕುರಿತು ಸರ್ವಭಾವದಿಂದ ಶರಣಾಗತನಾದವನಿಗೆ 'ಶರಣ' ಎಂಬುದಾಗಿ ಕರೆಯುತ್ತಾರೆ. ಹಿಂದೂ ಸಂಸ್ಕೃತಿಯಲ್ಲಿ ಒಪ್ಪಿಕೊಂಡಿರುವ ಬ್ರಹ್ಮ–ವಿಷ್ಣು–ಆದಿ ಮೂವತ್ತೂರು ಕೋಟಿ ದೇವತೆಗಳೆಲ್ಲ ಪ್ರಾಕೃತಿಕವಾದ ಸಂಪತ್ತನ್ನು ಪಡೆದವರಾಗಿ ದ್ದಾರೆ. ಶಿವನೋರ್ವನೇ ಅಪ್ರಾಕೃತ ಸಂಪತ್‌ಶಾಲಿಯು. ಅಂತೆಯೇ 'ಶಿವ ಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ ಪರಿತ್ಯಜ್ಯ' ಎಂಬುದಾಗಿ ಶ್ರುತಿಯು ಶಿವನೋರ್ವನನ್ನೇ ಧ್ಯಾನಿಸಬೇಕೆಂಬುದಾಗಿ ಪ್ರತಿಪಾದಿಸಿರುವುದನ್ನರಿತು ಯಾವಾತನು ಶಿವನೋರ್ವನೇ ತನ್ನ ರಕ್ಷಕನೆಂದರಿತು ಆತನ ಮೊರೆಹೋಗುವನೋ, ಅವನಿಗೇನೇ ಶರಣನೆಂಬುದಾಗಿ ಕರೆಯುತ್ತಾರೆ. ತನ್ನ ಅಂತಃಕರಣದಲ್ಲಿಯ ಅಹಂಭಾವವನ್ನು ಸಂಪೂರ್ಣವಾಗಿ ತೊರೆದು ಶರಣಾಗತನಾದವನೇ ಶರಣನೆಂಬ ತಾತ್ಪರ್ಯವು.

ಪಾರಮಾರ್ಥಿಕ ಮಾರ್ಗದಲ್ಲಿ ಮುನ್ನಡೆಯುವಾಗ ನನ್ನ ಸಾಧನೆಯ ಸಾಮರ್ಥ್ಯ ದಿಂದ ನಾನು ಮುನ್ನಡೆಯುತ್ತಿದ್ದೇನೆ ಎಂಬುದಾಗಿ ಕೆಲವು ಸಾಧಕರು ಅಹಂಭಾವನೆ ಯಿಂದ ಕೂಡಿದವರಾಗಿರುತ್ತಾರೆ. ಇನ್ನು ಕೆಲವರು ನನ್ನ ಪಾರಮಾರ್ಥಿಕ ಪ್ರಗತಿಗೆ ಶಿವನ ಅಪಾರವಾದ ಅನುಗ್ರಹವೇ ಕಾರಣವಲ್ಲದೆ ಬೇರಾವುದೂ ಕಾರಣವಲ್ಲವೆಂಬುದಾಗಿ

ತಿಳಿದು ಸಂಪೂರ್ಣ ಅಹಂಭಾವಶೂನ್ಯರಾದವರೇ ಶರಣರು. ಅಂತೆಯೇ ಪೂಜ್ಯ ಪಾದರು–'ಸರ್ವಾತ್ಮನಾ ಶಿವಾಪತ್ತಿಃ' ಎಂಬುದಾಗಿ ಶರಣನ ಲಕ್ಷಣವನ್ನು ನಿರೂಪಿಸಿದ್ದಾರೆ. ಶರೀರ–ವಾಣಿ ಮತ್ತು ಮನಗಳೆಂಬ ತ್ರಿಕರಣಪೂರ್ವಕವಾಗಿ ಶಿವನಿಗೆ ಶರಣಾಗತನಾದ ವನೇ ಶರಣನು. ಎಲ್ಲ ದೇವತೆಗಳಿಂದ ಆರಾಧಿಸಲ್ಪಟ್ಟವನೇ ಶಿವನು. ಅವನೇ ನನ್ನ ಆರಾಧ್ಯನಾಗಿರುವಾಗ ಅನ್ಯಾನ್ಯ ದೇವತೆಗಳನ್ನು ಆರಾಧಿಸುವ ಅವಶ್ಯಕತೆ ಇಲ್ಲವೆಂಬು ದಾಗಿ ತಿಳಿದ ಆ ಶರಣನು ಬೇರಾವ ದೇವತೆಗಳನ್ನು ಉಪಾಸನೆಯನ್ನು ಮಾಡದೆ, ಶಿವೋಪಾಸನೆಯಲ್ಲಿಯೇ ತಲ್ಲೀನನಾಗಿರುತ್ತಾನೆ. ಅಂತೆಯೇ ಕರ್ನಾಟಕದಲ್ಲಿ ಆಗಿ ಹೋದ ಅನೇಕ ಶಿವಶರಣರು ಇಷ್ಟಲಿಂಗವನ್ನು ಅಲಕ್ಷಿಸಿ, ಅನ್ಯಾನ್ಯ ದೇವರನ್ನು ಆರಾಧಿಸುವುದನ್ನು ಕುರಿತು ತಮ್ಮ ವಚನಗಳಲ್ಲಿ ಅತ್ಯಂತ ಕಠೋರವಾಗಿ ಪ್ರತಿಪಾದಿಸಿದ್ದನ್ನು ಕಾಣುತ್ತೇವೆ. ಅದೇ ತೆರನಾಗಿ ಮಹಾರಾಷ್ಟ್ರದ ಸಂತರಾದ ಮನ್ಮಥಸ್ವಾಮಿಯವರೂ ಸಹ–'ಶಿವಭಕ್ತಾಚೇ ಕುಳೀಜನ್ಮನೀ ಕರಂಟಾ ನ ಭಜೇ ಚೋರಟಾ ಶಂಕರಾಸೀ' । ಈ ರೀತಿಯಾಗಿ ಅತ್ಯಂತ ಕಠೋರವಾಗಿ ನುಡಿದದ್ದನ್ನು ಕಾಣುತ್ತೇವೆ. ಶಿವಭಕ್ತರ ಕುಲದಲ್ಲಿ ಜನ್ಮತಾಳಿ ಯಾವನು ಶಿವನ ಆರಾಧನೆಯನ್ನು ಮಾಡುವುದಿಲ್ಲವೋ ಮತ್ತು ಶಿವಲಾಂಛನ ಗಳಾದ ಭಸ್ಮ–ರುದ್ರಾಕ್ಷಾದಿಗಳನ್ನು ಧರಿಸುವುದಿಲ್ಲವೋ ಅಂಥವನನ್ನು ಕುರಿತು ಚೋರ–ಚಾಂಡಾಲನೆಂಬುದಾಗಿ ಭರ್ತ್ಸನೆಯನ್ನು ಮಾಡಿದ್ದಾರೆ.

ಸಾಧನೆಯನ್ನು ಮಾಡುವಾಗ ಏಕದೇವತಾನಿಷ್ಠೆಯು ಇರದೇ ಹೋದರೆ ಅದು ಅಷ್ಟೊಂದು ಫಲಕಾರಿಯಾಗಲಾರದು. ನೂರಾರು ಸ್ಥಾನಗಳಲ್ಲಿ ಒಂದೊಂದು ಫೂಟಿನ ತಗ್ಗು ತೆಗೆಯುವದಕ್ಕಿಂತ ಒಂದೇ ಸ್ಥಳದಲ್ಲಿ ಅಷ್ಟು ತಗ್ಗು ಹಾಕಿದಾಗ ನಿರ್ಮಲವಾದ ಜಲವನ್ನು ಪಡೆಯಲು ಹೇಗೆ ಸಾಧ್ಯವಾಗುವುದೋ, ಅದರಂತೆ ಸಾಧಕನಾದರೂ ಏಕದೇವತಾ ನಿಷ್ಠೆಯಿಂದಲೇ ಬಹುಬೇಗ ಸಿದ್ಧಿಯನ್ನು ಪಡೆಯಲು ಸಾಧ್ಯವಾಗುವುದು. ಅನೇಕ ದೇವೋಪಾಸನೆಯು ಉಪಾಸನಾಮಾರ್ಗದಲ್ಲಿಯ ವ್ಯಭಿಚಾರ ಎಂಬುದಾಗಿ ಕರೆಯಲ್ಪಡುತ್ತದೆ. ಅಂತೆಯೇ ಸಾಧಕನು ಏಕನಿಷ್ಠನಾಗಿರಬೇಕು. ಹೀಗೆ ಏಕನಿಷ್ಠನಾದ ಸಾಧಕನೇ ಶರಣನು. ಅಂತೆಯೇ ಪೂಜ್ಯಪಾದರು–

ಶರಣ್ಯಃ ಸರ್ವಭೂತಾನಾಂ ಶಂಕರಃ ಶಶಿಶೇಖರಃ ।
ಸರ್ವಾತ್ಮನಾ ಪ್ರಪನ್ನಸ್ತಂ ಶರಣಾಗತ ಉಚ್ಯತೇ ॥

ವಿಮುಕ್ತಭೋಗಲಾಲಸ್ಯೋ ದೇವತಾಂತರನಿಸ್ಪೃಹಃ ।
ಶಿವಮಭ್ಯರ್ಥಯನ್ ಮೋಕ್ಷಂ ಶರಣಾರ್ಥೀತಿ ಗೀಯತೇ ॥

(ಸಿ.ಶಿ. ೧೧ ; ೫೯–೬೦)

ಈ ರೀತಿಯಾಗಿ ಶರಣನ ಬಗ್ಗೆ ವಿಶೇಷವಾಗಿ ನಿರೂಪಿಸಿದ್ದಾರೆ. ಪೂಜ್ಯರ ಈ ಉಪದೇಶ ದಲ್ಲಿ ಶರಣ, ಶರಣಾಗತ ಮತ್ತು ಶರಣಾರ್ಥಿ ಎಂಬ ಪದಪ್ರಯೋಗಗಳನ್ನು ಕಾಣುತ್ತೇವೆ. ಈ ಶಬ್ದಗಳು ಪರ್ಯಾಯವಾಚಿಗಳಾಗಿದ್ದರೂ ಶರಣನ ಸ್ಥಿತಿಯನ್ನು ವಿಶ್ಲೇಷಣಗೊಳಿಸು ವಲ್ಲಿ ಹೆಚ್ಚಿನ ಸಹಾಯಕಗಳಾಗಿರುತ್ತವೆ. ಚಂದ್ರಚೂಡನಾದ ಶಿವನು ಸರ್ವಪ್ರಾಣಿಗಳಿಗೆ ಶರಣ್ಯನಾಗಿದ್ದಾನೆ. ಅರ್ಥಾತ್ ಶರಣಾಗತರಕ್ಷಕನಾಗಿದ್ದಾನೆ. ಇದನ್ನರಿತು ಶಿವನಲ್ಲಿ

ಸರ್ವಥಾ ಪ್ರಪತ್ತಿಯನ್ನು ಹೊಂದಿದವನಿಗೆ ಶರಣಾಗತನೆಂಬುದಾಗಿ ಕರೆಯುತ್ತಾರೆ. ಶರಣಾಗತನೆಂದರೆ ಸರ್ವಥಾ ಶರಣುಹೋದವನೆಂದರ್ಥ. ಶಿವನ ಅನೇಕ ಲೀಲೆಗಳಲ್ಲಿ ಆತನ ಶರಣಾಗತರಕ್ಷಕತ್ವವು ಕಂಡುಬರುವುದುಂಟು. ಗುರುಪತ್ನೀ ಗಮನ ದೋಷದಿಂದ ಶಾಪಗ್ರಸ್ತನಾದ ಚಂದ್ರನು ಕ್ಷಯರೋಗಪೀಡಿತನಾಗಿ ವಿನಾಶೋನ್ಮುಖಾವಸ್ಥೆಯಲ್ಲಿ ಶಿವನಿಗೆ ಶರಣಾಗತನಾದಾಗ ಆತನ ಅಂತಿಮಕಲೆಯನ್ನು ತನ್ನ ಮಸ್ತಕದಲ್ಲಿ ಧರಿಸಿ ಚಂದ್ರನಿಗೆ ಜೀವದಾನವನ್ನು ಕೊಟ್ಟು, ಶಿವನು ಚಂದ್ರಚೂಡನಾದದ್ದು ಸರ್ವವಿದಿತವೇ ಸರಿ. ಇಂಥ ಅನೇಕ ಪ್ರಸಂಗಗಳನ್ನು ಶಿವನ ಅನಂತ ಲೀಲೆಗಳಲ್ಲಿ ಕಾಣಬಹುದು. ಅಂತೆಯೇ ಶಿವನಿಗೆ ಶರಣ್ಯನೆಂಬುದಾಗಿ ಕರೆದಿದ್ದಾರೆ. ''ಶರಣೇ ಸಾಧುಃ ಶರಣ್ಯಃ'' ಎಂಬ ವ್ಯುತ್ಪತ್ತಿಗನುಸಾರವಾಗಿ ಶರಣಾಗತರನ್ನು ಪೊರೆಯುವವನು ಎಂದರ್ಥವಾಗುವದು. ಶಿವನ ಈ ಶರಣಾಗತವಾತ್ಸಲ್ಯತ್ವವನ್ನರಿತು ಶಿವನಿಗೆ ಶರಣುಹೋದವನೇ ಶರಣಾಗತ ನೆಂದು ಕರೆಯಲ್ಪಡುತ್ತಾನೆ.

ಸಾಂಸಾರಿಕ ವಿಷಯಭೋಗದಲ್ಲಿ ಆಸಕ್ತಿಯನ್ನು ತಾಳದೆ, ಬೇರಾವ ದೇವರಲ್ಲಿ ಭಕ್ತಿ ವಿಶ್ವಾಸವನ್ನು ಹೊಂದದೆ ಶಿವನಿಂದಲೇ ಮೋಕ್ಷವನ್ನಪೇಕ್ಷಿಸುವ ಶರಣನೇ 'ಶರಣಾರ್ಥೀ' ಎಂದು ಕರೆಯಲ್ಪಡುತ್ತಾನೆ. 'ಅರ್ಥ್ಯತೇ ಇತಿ ಅರ್ಥೀ' ಅಂದರೆ ಅಪೇಕ್ಷಿಸುವವನು ಎಂದರ್ಥ. ಅಪೇಕ್ಷೆಯ ವಿಷಯಗಳು ಬೇರೆ ಬೇರೆಗಳಾಗಿರುತ್ತವೆ. ಧನವನ್ನಪೇಕ್ಷಿಸುವವ ನಿಗೆ ಧನಾರ್ಥಿ, ವಿದ್ಯೆಯನ್ನಪೇಕ್ಷಿಸುವವನು ವಿದ್ಯಾರ್ಥಿ, ಮೋಕ್ಷವನ್ನಪೇಕ್ಷಿಸುವವನು ಮೋಕ್ಷಾರ್ಥಿ. ಅದರಂತೆ ಮೋಕ್ಷಾಪೇಕ್ಷಿಯಾಗಿ ಶಿವನಿಗೆ ಶರಣಾಗತನಾದವನಿಗೆ ಶರಣಾರ್ಥಿಯೆಂಬುದಾಗಿ ಕರೆಯುವರು. ಶಿವನನ್ನು ಆರಾಧಿಸುವವರು ಶಿವನನ್ನು ಕುರಿತು ಏನನ್ನು ಬೇಡಬೇಕೆಂಬುದನ್ನು ಇಲ್ಲಿ ಪೂಜ್ಯಪಾದರು ಸ್ಪಷ್ಟಪಡಿಸಿದ್ದಾರೆ. ಶಿವನು ವೈರಾಗ್ಯದ ಖಣಿಯೂ, ಜ್ಞಾನದ ನಿಧಿಯೂ ಆಗಿದ್ದಾನೆ. ಅಂತೆಯೇ ಅವನಿಂದ ಸಾಂಸಾರಿಕ ಭೋಗಸಾಮಗ್ರಿಗಳನ್ನಪೇಕ್ಷಿಸದೆ ಜ್ಞಾನ–ವೈರಾಗ್ಯಗಳನ್ನೇ ಬೇಡಿಕೊಳ್ಳ ಬೇಕು. ಇದನ್ನರಿತ ಶರಣನು ಭೋಗಸಾಮಗ್ರಿಗಳಲ್ಲಿ ನಿಸ್ಪೃಹನಾಗಿ ಶಿವನನ್ನು ಕುರಿತು ಮೋಕ್ಷವನ್ನೇ ಅಭ್ಯರ್ಥಿಸೋಣದರಿಂದ ಇವನಿಗೆ ಶರಣಾರ್ಥೀ ಎನ್ನುತ್ತಾರೆ.

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬುದಾಗಿ ನಾಲ್ಕು ವಿಧ ಪುರುಷಾರ್ಥ ಗಳನ್ನು ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಇವುಗಳಲ್ಲಿ ಧರ್ಮ, ಅರ್ಥ, ಕಾಮಗಳು ಒಂದಿಲ್ಲೊಂದು ದೋಷಗಳಿಂದ ಯುಕ್ತಗಳಾಗಿವೆ. ಆದ್ದರಿಂದ ಇವುಗಳಿಗೆ ಪರಮಪುರು ಷಾರ್ಥಗಳೆಂದು ಕರೆಯಲಾಗಿಲ್ಲ. ಧರ್ಮವು ಸಕಾಮದೋಷದಿಂದ, ಅರ್ಥವು ಲೋಭ ದೋಷದಿಂದ ಮತ್ತು ಕಾಮವು ಮೋಹದೋಷದಿಂದ ದೂಷಿತಗಳಾಗಿರುತ್ತವೆ. ಧರ್ಮ ಕಾರ್ಯಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸುವಾಗ, ಲೋಕ ಲೋಕಾಂತರಗಳ ಅಪೇಕ್ಷೆಯೆಂಬ ಕಾಮನೆಯು ಮನದಲ್ಲಿ ಪ್ರವೇಶಿಸುವುದು. ಆ ಕಾಮನಾಪೂರ್ತಿಗಾಗಿ ಪುಣ್ಯಸಂಪಾದಿಸಿದ ಪುಣ್ಯಜೀವಿಯು ತಾನು ಸಂಪಾದಿಸಿದ ಸಕಾಮಪುಣ್ಯದ ಫಲವಾಗಿ ಸ್ವರ್ಗಾದಿ ಲೋಕಗಳಲ್ಲಿ ಹೋಗಿ ಅಲ್ಲಿಯ ದೈವೀಭೋಗ ಸುಖಗಳನ್ನನುಭವಿಸಿ ಪುಣ್ಯವು ಕ್ಷಯಗೊಂಡಾಗ ಮತ್ತೆ ಮರ್ತ್ಯಲೋಕಕ್ಕೆ ಮರಳಿ ಬರಬೇಕಾಗುವದು. ಹೀಗೆ ಸಕಾಮ ದಿಂದ ಕೂಡಿದ ಧರ್ಮವು ಜೀವಾತ್ಮನನ್ನು ಜನನ ಮರಣಾತ್ಮಕ ಚಕ್ರದಲ್ಲಿ ಪುನಃ ಪುನಃ

ತಂದೊಡ್ಡುವುದರಿಂದ ಧರ್ಮವು ಸಕಾಮದೋಷದಿಂದ ದುಷ್ಟವಾಗಿದೆಯೆಂದು ತಿಳಿದುಬರುತ್ತದೆ. ಅದೇ ತೆರನಾಗಿ ಅರ್ಥವು ಲೋಭದೋಷದಿಂದ ದೂಷಿತವಾಗಿರುತ್ತದೆ. ಅರ್ಥ ಅನರ್ಥಕಾರಿಯಲ್ಲ, ಆದರೆ ಅರ್ಥದ ಬಗ್ಗೆ ಇರುವ ಕಡುಲೋಭವು ಮಹಾನ್ ಅನರ್ಥಕಾರಿಯಾಗಿರುತ್ತದೆ. ಅಂತೆಯೇ ನಿಜಗುಣರು ಕಡುಲೋಭದಿಂದ ದುರ್ಗುಣಮನ್ಯಮುಂಟೆ ? ಎಂಬುದಾಗಿ ಪ್ರಶ್ನಿಸಿದ್ದಾರೆ. ಲೋಭಾವಿಷ್ಟನಾದ ಮನುಷ್ಯನು ಅರ್ಥಾರ್ಜನೆಯ ಪ್ರಯೋಜನವನ್ನರಿಯದೆ ಕೇವಲ ಅರ್ಥವನ್ನೇ ಸಂಗ್ರಹಿಸುವುದರಲ್ಲಿ ತೊಡಗಿ ಅತಿಯಾದ ಅರ್ಥವನ್ನು ಸಂಗ್ರಹಿಸಿ ಕೊನೆಗೆ ಅನರ್ಥವನ್ನನುಭವಿಸುವುದನ್ನು ಲೋಕದಲ್ಲಿ ಕಾಣುತ್ತೇವೆ. ಆದ್ದರಿಂದ ಅರ್ಥವು ಲೋಭದೋಷದಿಂದ ಯುಕ್ತವಾಗಿದೆ. ಇದೇ ತೆರನಾಗಿ ಕಾಮ ಪುರುಷಾರ್ಥವೂ ಸಹ ಮೋಹದೋಷದಿಂದೊಡಗೂಡಿದೆ. ಮೋಹಾವಿಷ್ಟನಾದ ಮನುಷ್ಯನಿಗೆ ಕಾಮವು ಪುರುಷಾರ್ಥವಾಗದೆ ಕಾಮವಾಸನೆಯಾಗಿ ಪರಿವರ್ತಿಸುತ್ತದೆ. ಈ ಕಾಮವಾಸನೆಯಿಂದ ಕೂಡಿದ ಮನುಷ್ಯನು ಸದಾ ಅತೃಪ್ತನಾಗಿದ್ದು, ವಾಸನಾತೃಪ್ತಿಗಾಗಿ ಹಂಬಲಿಸುತ್ತಿರುತ್ತಾನೆ. ಎಂದೂ ತೃಪ್ತವಾಗದ ಇಚ್ಛೆಗೆ ವಾಸನೆಯೆಂದು ಕರೆಯುತ್ತಾರೆ. ಈ ವಾಸನಾಯುಕ್ತನಾದ ಮನುಷ್ಯನು ತನ್ನ ಸಂಪೂರ್ಣವಾದ ಆಯುಷ್ಯವನ್ನೇ ಕಾಮಭೋಗದಲ್ಲಿಯೇ ಕಳೆದರೂ, ಕೊನೆಯ ಗಳಿಗೆಯಲ್ಲಿಯೂ ಅತೃಪ್ತಸ್ಥಿತಿಯಲ್ಲಿಯೇ ಇರುತ್ತಾನೆ. ಅಂತೆಯೇ ಯಯಾತಿ ಮಹಾರಾಜನು ''ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ'' ಎಂಬುದಾಗಿ ತನ್ನ ಅನುಭವದ ನುಡಿಯನ್ನು ನುಡಿದಿದ್ದಾನೆ. ವಿಷಯೋಪಭೋಗದಿಂದ ಕಾಮವು ಅದೆಂದಿಗೂ ತೃಪ್ತವಾಗಲಾರದು ಎಂಬುದು ಯಯಾತಿಯ ಅಭಿಮತವಾಗಿರುತ್ತದೆ. ಹೀಗೆ ಕಾಮವು ಮೋಹದೋಷದಿಂದ ಕೂಡಿರೋಣದರಿಂದ ಇದೂ ಸಹ ಪರಮಪುರಷಾರ್ಥವಾಗಲಾರದು. ಶರಣಸ್ಥಲದ ಸಾಧಕನು ಈ ಮೂರು ಪುರುಷಾರ್ಥಗಳಲ್ಲಿಯ ದೋಷವನ್ನರಿತು ಅವುಗಳನ್ನಪೇಕ್ಷಿಸದೆ ಪರಮ ಪುರುಷಾರ್ಥವಾದ ಮೋಕ್ಷವನ್ನೇ ಶಿವನಿಂದ ಅಪೇಕ್ಷಿಸುವ ಕಾರಣದಿಂದಾಗಿ ಇವನಿಗೆ ಶರಣಾರ್ಥಿ ಎಂಬುದಾಗಿ ಪೂಜ್ಯರು ಸಂಬೋಧಿಸಿದ್ದಾರೆ. ಯಾವ ಸ್ಥಾನವನ್ನು ಪಡೆದನಂತರ ಈ ಜನನ ಮರಣಾತ್ಮಕ ಚಕ್ರವು ನಿಲ್ಲುವದೋ, ಅದೇ ಪರಂಧಾಮವು. ಅದಕ್ಕೇನೇ ಮೋಕ್ಷವೆಂಬುದಾಗಿ ಕರೆಯುತ್ತಾರೆ. ಅಂತೆಯೇ ಒಬ್ಬ ಹಿಂದೀ ಕವಿಯು 'ಬೈಠನಾ ಹೋ ತೋ ಐಸಾ ಬೈಠೋ ಕೋಯೀ ನ ಕಹೇ ಉಠ್' ಅಂದರೆ ಯಾರೂ ಎಬ್ಬಿಸದ ಸ್ಥಾನದಲ್ಲಿ ಕುಳಿತುಕೊಳ್ಳಬೇಕು ಎಂಬುದು ಆ ಕವಿಯ ಆಶಯವು. ಯಾರೂ ಎಬ್ಬಿಸದ ಸ್ಥಾನವೆಂದರೆ ಮೋಕ್ಷವು.

ಮಲತಾಯಿಯಾದ ಸುರುಚಿಯ ಕಠೋರ ವಚನದಿಂದಾಗಿ ತಂದೆಯಾದ ಉತ್ತಾನಪಾದರಾಜನ ತೊಡೆಯಿಂದಿಳಿಸಲ್ಪಟ್ಟ ಧ್ರುವನು ತನ್ನ ತಾಯಿಯಾದ ಸುನೀತಿಯ ಉಪದೇಶದ ಮೇರೆಗೆ ಭಗವಂತನನ್ನು ಕುರಿತು ತಪಸ್ಸನ್ನಾಚರಿಸಿ ಯಾರೂ ಎಬ್ಬಿಸದ ಧ್ರುವ ಪದವಿಯನ್ನು ಪಡೆದ ಕಥೆಯು ಸರ್ವವಿದಿತವಾಗಿದೆ. ಶಾಸ್ತ್ರೀಯದೃಷ್ಟಿಯಿಂದ ಧ್ರುವ ಪದವಿಯು ಪರಂಧಾಮವೇನಲ್ಲ, ಅದನ್ನು ಸಾಪೇಕ್ಷಧ್ರುವ ಎಂಬುದಾಗಿ ಒಪ್ಪಬಹುದು. ಮುಕ್ತಿಯು ಮಾತ್ರ ನಿರಪೇಕ್ಷ ಧ್ರುವಸ್ಥಾನವಾಗಿರುವುದರಿಂದ ಶರಣ

ನಾದವನು ಅದನ್ನೇ ಅಪೇಕ್ಷಿಸುತ್ತಾನೆ. ಶರಣಾಗತವತ್ಸಲನಾದ ಶಿವನು ತನಗೆ ಶರಣಾಗತರಾದವರಿಗೆ ಕಲ್ಪವೃಕ್ಷಪ್ರಾಯನಾಗಿದ್ದಾನೆ. ಅಂತೆಯೇ ಪೂಜ್ಯಪಾದರು–

ಯೇ ಪ್ರಪನ್ನಾ ಮಹಾದೇವಂ ಮನೋವಾಕ್ಕಾಯಕರ್ಮಭಿಃ ।
ತೇಷಾಂತು ಕರ್ಮಜಾತೇನ ಕಿಂ ವಾ ದೇವಾದಿತರ್ಪಣೈಃ ॥

ಸರ್ವೇಷಾಮಪಿ ಯಜ್ಞಾನಾಂ ಕ್ಷಯಃ ಸ್ವರ್ಗಃ ಫಲಾಯತೇ ।
ಅಕ್ಷಯಂ ಫಲಮಾಪ್ನೋತಿ ಪ್ರಪನ್ನಃ ಪರಮೇಶ್ವರಮ್ ॥

ಪ್ರಪನ್ನಪಾರಿಜಾತಸ್ಯ ಭವಸ್ಯ ಪರಮಾತ್ಮನಃ ।
ಪ್ರಪತ್ಯಾ ಕಿಂ ನ ಜಾಯೇತ ಪಾಪಿನಾಮಪಿ ದೇಹಿನಾಮ್ ॥

(ಸಿ.ಶಿ. ೧೧ ; ೬೧–೬೩)

ಈ ರೀತಿಯಾಗಿ ಪುನಃ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನು ಭಕ್ತಕಲ್ಪದ್ರುಮವಾಗಿರೋಣದರಿಂದ ಯಾರು ತನ್ನ ಮನೋವಾಕ್ಕಾಯ ಕರ್ಮಗಳಿಂದ ಶಿವನಿಗೆ ಸಂಪೂರ್ಣವಾಗಿ ಶರಣಾಗತರಾಗಿರುವರೋ, ಅವರು ಬೇರಾವ ದೇವರನ್ನುದ್ದೇಶಿಸಿ ತರ್ಪಣಾದಿ ಕರ್ಮಗಳನ್ನು ಮಾಡುವ ಅವಶ್ಯಕತೆಯಿರುವುದಿಲ್ಲ. ಸರ್ವ ವಿಧಗಳಾದ ಸಕಾಮಯಜ್ಞಗಳ ಫಲವು ಸ್ವರ್ಗವೇ ಆಗಿರುತ್ತದೆ. ಇದಾದರೋ ಕ್ಷಯ–ಪತನಾದಿ ದೋಷಗಳಿಂದ ಕೂಡಿಕೊಂಡಿರುತ್ತದೆ. ಅಂತೆಯೇ ತಾನು ಮಾಡಿದ ಕರ್ಮಫಲವು ಕ್ಷಯಗೊಂಡಾಗ ಸ್ವರ್ಗದಲ್ಲಿರುವವನು ಪುನಃ ಭೂಲೋಕಕ್ಕೆ ಮರಳಿ ಬರಬೇಕಾಗುವುದು. ಆದರೆ ಶಿವಾರಾಧನೆಯು ಅಕ್ಷಯವಾದ ಫಲವನ್ನು ಕೊಡುವಂಥಾದ್ದು. ಅಂತೆಯೇ ಪ್ರತಿಯೊಬ್ಬರೂ ಅನ್ಯಾಸಕ್ತಿಯನ್ನು ತೊರೆದು ಶಿವನಲ್ಲಿಯೇ ಪರಿಪೂರ್ಣಾಸಕ್ತಿಯನ್ನು ತಳೆಯಬೇಕೆಂಬುದಾಗಿ ಪೂಜ್ಯರು ಇಲ್ಲಿ ತಿಳಿಯಪಡಿಸಿದ್ದಾರೆ. ಶಿವನಿಗೆ ಶರಣಾಗತನಾದ ಸಾಧಕನು ಕಡುಪಾಪಿಯಾಗಿದ್ದರೂ, ಅವನನ್ನೂ ಉದ್ಧರಿಸುವ ಸಾಮರ್ಥ್ಯವು ಶಿವನಿಗಿರುತ್ತದೆ.

ಓರ್ವ ಕಡುಪಾಪಿಯು ತಾನು ತನ್ನ ಪಾಪದಿಂದ ಪ್ರಾಯಶ್ಚಿತ್ತಗೊಂಡು ಪತಿತ ಪಾವನನಾದ ಪರಮಾತ್ಮನಿಗೆ ಶರಣಾಗತನಾಗಿ ಪಾಪಮುಕ್ತನಾಗಬೇಕೆಂಬ ಉದ್ದೇಶದಿಂದ ಪರಮಾತ್ಮನ ಸಾನ್ನಿಧ್ಯಕ್ಕೆ ತೆರಳಿದನು. ಪರಮಾತ್ಮನು ನಾಲ್ಕು ದ್ವಾರವುಳ್ಳ ಒಂದು ಮಹಾ ಮಂದಿರದಲ್ಲಿ ಮುಹೂರ್ತಮಾಡಿದ್ದನು. ಆ ಮಂದಿರದ ಮೂರು ಮಹಾದ್ವಾರಗಳು ತೆರೆದವುಗಳಾಗಿದ್ದು ಒಂದು ಮಾತ್ರ ಮುಚ್ಚಲ್ಪಟ್ಟಿತ್ತು. ತೆರೆಯಲ್ಪಟ್ಟ ಮೂರು ಮಹಾದ್ವಾರಗಳ ಮೇಲೆ ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಫಲಕಗಳು ಹಾಕಲ್ಪಟ್ಟಿದ್ದವು. ಪ್ರತಿಯೊಂದು ದ್ವಾರದ ಮುಂಭಾಗದಲ್ಲಿ ಒಬ್ಬೊಬ್ಬ ದ್ವಾರಪಾಲನು ನೇಮಿಸಲ್ಪಟ್ಟಿದ್ದನು. ಈ ಮಹಾಪಾಪಿಯೂ ಒಂದು ದ್ವಾರದ ಬಳಿ ಸಾಗಿದಾಗ ದ್ವಾರಪಾಲನು ಆತನನ್ನು ತಡೆದು–ನೀನೇನು ಭಗವದ್ಭಕ್ತನೋ ? ಎಂಬುದಾಗಿ ಪ್ರಶ್ನಿಸಿದನು. ಆಗ ಪಾಪಿಯು 'ನಾನು ಭಕ್ತನಲ್ಲ' ಎಂದು ಉತ್ತರಿಸಿದನು. ಆಗ ದ್ವಾರಪಾಲನು ''ಹಾಗಾದರೆ ನಿನಗೆ ಈ ದ್ವಾರದಲ್ಲಿ ಪ್ರವೇಶವಿಲ್ಲ ಮುಂದೆ ಸಾಗು'' ಎಂದು ಆದೇಶವಿತ್ತನು. ಆಗ

ಪಾಪಿಯು ಮತ್ತೊಂದು ದ್ವಾರದಿಂದ ಒಳಪ್ರವೇಶಿಸಲು ಯತ್ನಿಸಿದಾಗ ಅಲ್ಲಿಯ ದ್ವಾರಪಾಲನು ಆತನನ್ನು ತಡೆದು–''ನೀನೇನು ವೈರಾಗ್ಯಶಾಲಿಯೋ ?'' ಎಂಬುದಾಗಿ ಪ್ರಶ್ನಿಸಿದನು. ''ಛೇ ! ನನಗೆಲ್ಲಿಯದು ವೈರಾಗ್ಯ, ನಾನು ವೈರಾಗ್ಯಶಾಲಿಯಲ್ಲ'' ಎಂದು ಉತ್ತರಿಸಿದ್ದನ್ನು ಕೇಳಿ ಆ ದ್ವಾರಪಾಲನು, ''ಹಾಗಾದರೆ ಈ ದ್ವಾರದಿಂದ ನಿನಗೆ ಪ್ರವೇಶಿಸಲು ಸಾಧ್ಯವಿಲ್ಲ ಮುಂದೆ ಸಾಗು'' ಎಂದು ಆದೇಶವಿತ್ತನು. ಆಗ ಪಾಪಿಯು ಮತ್ತೊಂದು ದ್ವಾರದಿಂದ ಒಳ ಹೋಗಲು ಪ್ರಯತ್ನಿಸಿದಾಗ ಅಲ್ಲಿಯ ದ್ವಾರಪಾಲನು ಅವನನ್ನು ತಡೆದು–''ನೀನೇನು ಆತ್ಮಜ್ಞಾನಿಯೋ ?'' ಎಂದು ಪ್ರಶ್ನಿಸಿದನು. ''ಊಂಹ್ಞೂ ನನಗೆಲ್ಲಿಯ ಜ್ಞಾನ ? ನಾನೊಬ್ಬ ಕಡುಪಾಪಿಯು'' ಎಂದುತ್ತರಿಸಿದನು. ''ಹಾಗಾದರೆ, ನಿನಗಿಲ್ಲಿ ಪ್ರವೇಶವಿಲ್ಲ ನಡೆ.'' ದ್ವಾರಪಾಲನ ಈ ಮಾತನ್ನು ಕೇಳಿ ಆ ಪಾಪಿಯು ಮುಂದೆಹೋದಾಗ ಅಲ್ಲೊಂದು ಮುಚ್ಚಿದ ಬಾಗಿಲವನ್ನು ಕಂಡು ಕ್ರುದ್ಧನಾಗಿ ಚೀರಾಡತೊಡಗಿದನು–''ಏನು ಭಕ್ತಿ–ಜ್ಞಾನ–ವೈರಾಗ್ಯವಂತರಿಗೇನೇ ಶಿವಸಾನ್ನಿಧ್ಯದಲ್ಲಿ ಅವಕಾಶ ದೊರೆಯುತ್ತಿದ್ದರೆ ಪರಮಾತ್ಮನಿಗೆ 'ಪತಿತ–ಪಾವನ' ಎಂಬ ನಾಮವು ಉಚಿತವಾದುದೇ, ? ಎಲೈ ಪರಮಾತ್ಮನೇ ! ಪತಿತರನ್ನು ಪಾವನರನ್ನಾಗಿಯಾದರೂ ಮಾಡು ಇಲ್ಲವೆ ಪತಿತ–ಪಾವನ ಎಂಬ ನಿನ್ನ ನಾಮವನ್ನಾದರೂ ತೊರೆದುಬಿಡು.'' ಪಾಪಿಯ ಈ ಚೀರಾಟವನ್ನು ಕೇಳಿ ಆ ದ್ವಾರಪಾಲರು ಪ್ರಸ್ತುತ ವಿಷಯವನ್ನು ಪರಮಾತ್ಮನಲ್ಲಿ ಅರಿಕೆಮಾಡಿಕೊಂಡರು. ಆಗ ಪಾಪಿಯ ಪ್ರಾಮಾಣಿಕತೆಯನ್ನು ಕಂಡ ಪರಮಾತ್ಮನು ಮುಚ್ಚಿದ ನಾಲ್ಕನೆಯ ಮಹಾ ದ್ವಾರವನ್ನು ತೆರೆದು ಆ ಪತಿತನನ್ನು ಪಾವನಗೊಳಿಸಿ ಶಿವಸಾಯುಜ್ಯವನ್ನಿತ್ತನು. ಅಂದಿನಿಂದ ಆ ಮಹಾದ್ವಾರದ ಮೇಲೆ– 'ಪತಿತ ದ್ವಾರ' ಎಂಬ ಫಲಕವು ಹಾಕಲ್ಪಟ್ಟಿತು. ಅಂತೆಯೇ ಪರಮಾತ್ಮನಿಗೆ ಪತಿತ ಪಾವನನೆಂಬ ಬಿರುದು ಸಾರ್ಥಕವಾಗಿದೆ.

ಪಾಪಿಯಾದವನನ್ನು ಪರಮಾತ್ಮನು ಅದು ಹೇಗೆ ತಾನೆ ಮುಕ್ತಗೊಳಿಸಬಲ್ಲನು ? ಎಂಬ ಪ್ರಶ್ನೆಯು ಉದ್ಭವಿಸಬಹುದು. ಇಲ್ಲಿ ಶಾಸ್ತ್ರೀಯವಾದ ರಹಸ್ಯವೇನೆಂದರೆ, 'ಅಧರ್ಮಃಕ್ಷರತಿ ಕೀರ್ತನಾತ್' ಎಂಬ ಶಾಸ್ತ್ರಾದೇಶಾನುಸಾರವಾಗಿ ತಾನು ಮಾಡಿದ ಪಾಪ ವನ್ನು ಒಪ್ಪಿಕೊಂಡು ಅದನ್ನು ಅನ್ಯರೆದುರು ಕೀರ್ತಿಸಿದಾಗ ಅರ್ಥಾತ್ ಹೇಳಿದಾಗ ಅವನು ಆ ಪಾಪದಿಂದ ಮುಕ್ತನಾಗುತ್ತಾನೆ. ಪಾಪಿಯಾದವನು ತನ್ನನ್ನು ಪಾಪಿಯನ್ನಾಗಿ ತಿಳಿದುಕೊಳ್ಳದಿದ್ದರೆ ಅವನೆಂದೂ ಪಾಪದಿಂದ ಮುಕ್ತನಾಗಲಾರನು. ಪಾಪವನ್ನೊಪ್ಪಿ ಕೊಂಡು ತನಗೆ ಶರಣಾಗತರಾದವರನ್ನು ಪರಮಾತ್ಮನು ಅವಶ್ಯವಾಗಿ ಉದ್ಧರಿಸುತ್ತಾನೆ. ಪರಮಾತ್ಮನಿಗೆ ಶರಣಾಗತನಾದವನ ಜನ್ಮವೇ ಸಾರ್ಥಕವಾದ ಜನ್ಮವು. ಅನ್ಯರ ಜನ್ಮವು ನಿರರ್ಥಕವಾದುದು ಎಂಬುದನ್ನು ತಿಳಿಯಪಡಿಸುತ್ತ ಪೂಜ್ಯಪಾದರು–

ಪ್ರಪನ್ನಾನಾಂ ಮಹಾದೇವೋ ಪರಿಪಕ್ವಾಂತರಾತ್ಮನಾಮ್ ।
ಜನ್ಮೈವ ಜನ್ಮ ನಾನ್ಯೇಷಾಂ ವೃಥಾ ಜನನಸಂಗಿನಾಮ್ ॥

ದುರ್ಲಭಂ ಮಾನುಷಂ ಪ್ರಾಪ್ಯ ಜನನಂ ಜ್ಞಾನಸಾಧನಮ್ ।
ಯೇ ನ ಜಾನಂತಿ ದೇವೇಶಂ ತೇಷಾಮಾತ್ಮಾ ನಿರರ್ಥಕಃ ॥

ತತ್ಕುಲಂ ಹಿ ಸದಾ ಶುದ್ಧಂ ಸಫಲಂ ತಸ್ಯ ಜೀವಿತಮ್ ।
ಯಸ್ಯ ಚಿತ್ತಂ ಶಿವೇ ಸಾಕ್ಷಾತ್ ವಿಲೀನಮಬಹಿರ್ಮುಖಮ್ ॥

(ಸಿ.ಶಿ. ೧೧ ; ೬೪–೬೬)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಮನುಷ್ಯ ಜನ್ಮದ ಮುಖ್ಯ ಗುರಿಯೇ ಶಿವಶರಣಾಗತಿ. ಮನುಷ್ಯ ಜನ್ಮವನ್ನು ಪಡೆದೂ ಸಹ ಯಾರು ಶಿವನಿಗೆ ಶರಣಾಗತರಾಗುವುದಿಲ್ಲವೋ ಅವನ ಜನ್ಮವು ಜನ್ಮವೇ ಅಲ್ಲ. ಅರ್ಥಾತ್ ನಿರರ್ಥಕವಾದ ಜೀವನವೆಂಬ ತಾತ್ಪರ್ಯವು. ಮನುಷ್ಯ ಜನ್ಮವು ಲಭಿಸುವುದೇ ದುರ್ಲಭವು. ಅದು ಸಿಕ್ಕಾಗ ಶಿವಶರಣಾಗತಿಯನ್ನು ಹೊಂದಿ ಅದನ್ನು ಸಾರ್ಥಕಗೊಳಿಸಿಕೊಳ್ಳಬೇಕು. ಈ ಜಗತ್ತನ್ನು ಬಿಡುವಾಗ ತಾನು ಮಾಡಿದ ಪುಣ್ಯಪಾಪಗಳನ್ನಾಗಲೀ ಅಥವಾ ತಾನು ಸಂಪಾದಿಸಿದ ಜ್ಞಾನವನ್ನಾಗಲೀ ತನ್ನ ಜೊತೆಗೆ ಕೊಂಡೊಯ್ಯಬಲ್ಲನೇ ವಿನಃ ಬೇರಾವುದನ್ನೂ ಒಯ್ಯಲಾರನು. ತನ್ನ ಜೊತೆಗೆ ಬರುವ ಜ್ಞಾನವನ್ನು ತನ್ನ ಜೀವನದ ಕೊನೆಯುಸಿರಿನವರೆಗೂ ಸಂಪಾದಿಸದೇ ಇದ್ದರೆ ಆ ಜನ್ಮವನ್ನು ನಿರರ್ಥಕವೆಂದಲ್ಲದೆ ಮತ್ತೇನು ತಿಳಿದುಕೊಳ್ಳುವುದು ?

ಯಾವಾತನು ತನ್ನ ಬಹಿರ್ಮುಖವಾದ ಚಿತ್ತವನ್ನು ಅಂತರ್ಮುಖಗೊಳಿಸಿ ಅದನ್ನು ಸಾಕ್ಷಾತ್ ಶಿವನಲ್ಲಿ ಸಮಾಹಿತಗೊಳಿಸುವನೋ ಅವನ ಜೀವನವೇ ಸಫಲವಾಗುವುದು. ಇಂತಹ ಶಿವಜ್ಞಾನ ಸಂಪನ್ನನಾದವನು ತಾನೋರ್ವನೇ ಅಲ್ಲ ತನ್ನ ಕುಲವನ್ನೇ ಉದ್ಧಾರಗೊಳಿಸುವನು. ಹೀಗೆ ಶಿವನಲ್ಲಿ ಶರಣಾಗತಿಯನ್ನು ಹೊಂದಿದ ಶರಣನ ಮಹಿಮೆಯನ್ನು ವರ್ಣಿಸಿದ ಪೂಜ್ಯರು, ಪ್ರತಿಯೊಬ್ಬರು ಶಿವಶರಣಾಗತಿಯನ್ನು ಹೊಂದಬೇಕೆಂಬುದನ್ನು ಇಲ್ಲಿ ಆದೇಶಿಸಿದ್ದಾರೆ. ಕಾರಣ ಪ್ರತಿಯೊಬ್ಬ ಮನುಷ್ಯನು ಶಿವಶರಣಾಗತಿಯನ್ನು ಹೊಂದಿ ತನ್ನ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂಬುದಾಗಿ ತಿಳಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ಏಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



ಆಶೀರ್ವಚನ-೧

# ಪ್ರಸಾದಮಾಹಾತ್ಮ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಸಾದಿಸ್ಥಲಾಂತರ್ಗತವಾದ ಅಂತಿಮ ಅವಾಂತರ ಸ್ಥಲವೇ ಪ್ರಸಾದ ಮಾಹಾತ್ಮ್ಯ ಸ್ಥಲವು. ಈ ಪ್ರಸಾದಿ ಸ್ಥಲದ ಪ್ರಾರಂಭದಲ್ಲಿ ಪ್ರಸಾದಿಯ ಬಗ್ಗೆ ವಿವೇಚನೆ ಮಾಡಲಾಗಿದ್ದು ಸದ್ಯಃ ಪ್ರಸಾದದ ಬಗ್ಗೆ ಪ್ರತಿಪಾದಿಸಲಾಗುವುದು. ಇಲ್ಲಿ ಪ್ರಸಾದವೆಂದರೆ ಶಿವಾನುಗ್ರಹವೆಂಬರ್ಥ. ಸಾಧಕನಾದವನು ಕೇವಲ ತನ್ನ ಸಾಧನೆಯ ಸಾಮರ್ಥ್ಯದಿಂದ ಕೈವಲ್ಯವನ್ನು ಪಡೆಯಲಾರ. ಆತನ ಸಾಧನೆಯ ಜೊತೆಗೆ ಶಿವಾನುಗ್ರಹವೂ ಪರಮಾವಶ್ಯಕವಾದುದು. ಇದನ್ನು ತಿಳಿಸುವುದಕ್ಕಾಗಿಯೇ ಇಲ್ಲಿ ಪ್ರಸಾದ ಮಾಹಾತ್ಮ್ಯಸ್ಥಲವನ್ನುಉಪದೇಶಿಸಿದ್ದಾರೆಪೂಜ್ಯಪಾದರಾದ ಶ್ರೀ ರೇಣುಕಾಚಾರ್ಯರು ಅಗಸ್ತ್ಯನನ್ನುದ್ದೇಶಿಸಿ–

ಗುರುಲಿಂಗಾದಿಮಾಹಾತ್ಮ್ಯವಿಶೇಷಾನುಭವಸ್ಥಿತಿಃ।
ಯಸ್ಮಾಚ್ಛಿವಪ್ರಸಾದಾತ್ಸ್ಯಾತ್ತದಸ್ಯ ಮಹಿಮೋಚ್ಯತೇ॥

ಸದಾ ಲಿಂಗೈಕನಿಷ್ಠಾನಾಂ ಗುರುಪೂಜಾನುಷಂಗಿಣಾಮ್ ।
ಪ್ರಪನ್ನಾನಾಂ ವಿಶುದ್ಧಾನಾಂ ಪ್ರಸೀದತಿ ಮಹೇಶ್ವರಃ॥

ಪ್ರಸಾದೋಽಪಿ ಮಹೇಶಸ್ಯ ದುರ್ಲಭ ಃ ಪರಿಕೀರ್ತ್ಯತೇ ।
ಘೋರಸಂಸಾರಸಂತಾಪನಿವೃತ್ತಿರ್ಯೇನ ಜಾಯತೇ॥

(ಸಿ.ಶಿ. ೧೧ ; ೬೭–೬೯)

ಈ ರೀತಿಯಾಗಿ ಪ್ರಸಾದ ಮಹಿಮೆಯನ್ನು ಉಪದೇಶಿಸಿದ್ದಾರೆ. ಶಿವಾನುಗ್ರಹ ರೂಪವಾದ ಪ್ರಸಾದವು ಯಾರಿಗೆ ಪ್ರಾಪ್ತವಾಗಿದೆಯೋ ಅವರಿಗೇನೇ ಗುರುಮಹಿಮೆ, ಲಿಂಗ ಮಹಿಮೆ, ಭಕ್ತಮಹಿಮೆ ಮತ್ತು ಶರಣ ಮಹಿಮೆಗಳು ಅನುಭವ ಗೋಚರಗಳಾಗುವವು. ಆದ್ದರಿಂದ ಇಲ್ಲಿ ಆ ಪ್ರಸಾದ ಮಹಿಮೆಯನ್ನು ಪೂಜ್ಯರು ಉಪದೇಶಿಸಲು ಪ್ರಾರಂಭಿಸಿದ್ದಾರೆ.

ಲಿಂಗದಲ್ಲಿ ಸದಾ ನಿಷ್ಠೆಯುಳ್ಳ ಗುರುಪೂಜಾ ತತ್ಪರರಾದ ಮತ್ತು ಅನನ್ಯ ಭಾವನೆಯಿಂದ ಶಿವನನ್ನೇ ಮೊರೆಹೊಕ್ಕವರಿಗೆ ಶಿವಾನುಗ್ರಹವು ಪ್ರಾಪ್ತವಾಗುವುದು. ಅಂಥವರ ಮೇಲೆಯೇ ಶಿವನು ಪ್ರಸನ್ನನಾಗುತ್ತಾನೆ. ಮೇಲೆ ವಿವರಿಸಿದ ಯೋಗ್ಯತೆಗಳಿಲ್ಲದವರಿಗೆ ಈ ಶಿವಪ್ರಸಾದವು ಅತ್ಯಂತ ದುರ್ಲಭವಾದುದು. ಶಿವಪ್ರಸಾದವು ಪ್ರಾಪ್ತವಾಗದೆ ಈ ಘೋರವಾದ ಸಂಸಾರದಿಂದ ಮುಕ್ತಿಯು ಸಮನಿಸಲಾರದು.

ಸಂಸಾರವು ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತ್ರಿವಿಧ ತಾಪಗಳಿಂದ ಕೂಡಿರುವಂಥಾದ್ದಾಗಿದೆ. ಅಂತೆಯೇ ಇದು ಘನ ಘೋರವಾದದ್ದು. ಸದಾ ಜೀವಿಗಳನ್ನು ಪೀಡಿಸುತ್ತಿರುವ ಈ ಭಯಾನಕಗಳಾದ ತ್ರಿತಾಪಗಳಿಂದ ಮುಕ್ತನಾಗ ಬೇಕಾದರೆ ಶಿವಾನುಗ್ರಹವೇ ಅಮೋಘವಾದ ಸಾಧನವು. ಹಾಗಾದರೆ ಈ ಶಿವಾನುಗ್ರಹವು ದೊರೆಯುವ ಪರಿಯೆಂತು ? ಎಂಬುದಾಗಿ ವಿಚಾರಿಸಲಾಗಿ ಪೂಜ್ಯಪಾದರು–

ಯಜ್ಞಾಸ್ತಪಾಂಸಿ ಮಂತ್ರಾಣಾಂ ಜಪಶ್ಚಿಂತಾ ಪ್ರಬೋಧನಮ್ ।
ಪ್ರಸಾದಾರ್ಥಂ ಮಹೇಶಸ್ಯ ಕೀರ್ತಿತಾನಿ ನ ಸಂಶಯಃ ॥

ಪ್ರಸಾದಮೂಲಾ ಸರ್ವೇಷಾಂ ಭಕ್ತಿರವ್ಯಭಿಚಾರಿಣೀ ।
ಶಿವಪ್ರಸಾದಹೀನಸ್ಯ ಭಕ್ತಿಶ್ಚಾऽಪಿ ನ ಸಿದ್ಧ್ಯತಿ ॥

(ಸಿ.ಶಿ. ೧೧ ; ೨೦–೨೧)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವಾನುಗ್ರಹವನ್ನು ಪಡೆಯಬೇಕಾದರೆ ಸಾತ್ವಿಕಗಳಾದ ಯಜ್ಞಗಳನ್ನು, ತಪಸ್ಸನ್ನು, ಮಂತ್ರಜಪವನ್ನು,ಇವುಗಳ ಜೊತೆಗೇನೇ ಶಾಸ್ತ್ರ ಚಿಂತನೆ ಮತ್ತು ಧ್ಯಾನಾದಿಗಳನ್ನು ಮಾಡಿ ಶಿವಜ್ಞಾನವನ್ನು ಪ್ರಾಪ್ತಮಾಡಿಕೊಳ್ಳಬೇಕಾಗುವುದು. ಸಾತ್ವಿಕ ಗಳಾದ ಯಜ್ಞ–ದಾನಾದಿಗಳು ಶಿವಾನುಗ್ರಹದ ಸಾಧನಗಳೆಂಬುದನ್ನು–''ತಮೇವಂ ವೇದಾನುವಚನೇನ ಬ್ರಾಹ್ಮಣಾ ವಿದಿಶಂತಿ ಯಜ್ಞೇನ ದಾನೇನ ತಪಸಾ ನಾಶಕೇನ'' ಈ ಶ್ರುತಿವಾಕ್ಯವೂ ಸಹ ಸಮರ್ಥಿಸಿರುತ್ತದೆ.

ಇಲ್ಲಿ ಉಪದೇಶಿಸಲ್ಪಟ್ಟ ಯಜ್ಞ–ತಪ–ಮಂತ್ರ–ಜಪ ಚಿಂತನ ಹಾಗೂ ಪ್ರಬೋಧನಗಳು ಕ್ರಮವಾಗಿ ಬಹಿರಂಗದಿಂದ ಅಂತರಂಗದತ್ತ ಕರೆದೊಯ್ಯುವ ಸಾಧನ ಗಳಾಗಿವೆ. ಈ ರೀತಿ ಇವೆಲ್ಲವುಗಳು ಶಿವಾನುಗ್ರಹವನ್ನು ಪಡೆಯುವ ಸಾಧನಗಳೆನ್ನಿಸಿವೆ. ಇವುಗಳಲ್ಲಿ ಯಾವುದನ್ನೂ ಅವಲಂಬಿಸದೆ ಸುಮ್ಮನೆ ಶಿವಾನುಗ್ರಹವನ್ನು ಪಡೆಯಲಾಗುವು ದಿಲ್ಲ. ಯಜ್ಞಾದಿ ಸಾಧನಗಳಿಂದ ಶಿವಭಕ್ತಿಯನ್ನು ಮಾಡುತ್ತ ಹೋದರೆ ಅವನ ಮೇಲೆ ಶಿವಾನುಗ್ರಹವಾಗಿ ಅವನಲ್ಲಿಯ ಶಿವಭಕ್ತಿಯು ಮತ್ತಷ್ಟು ಇನ್ನಷ್ಟು ದೃಢಗೊಳ್ಳುತ್ತ ಹೋಗುತ್ತದೆ. ಈ ಶಿವಪ್ರಸಾದವನ್ನು ಪಡೆದವನು ಎಲ್ಲಿಯೇ ಇದ್ದರೂ ಯಾರೇ ಆಗಿದ್ದರೂ ಅವನಿಗೆ ಸದ್ಗತಿಯು ಪ್ರಾಪ್ತವಾಗುವುದು. ಅಂತೆಯೇ ಪೂಜ್ಯಪಾದರು–

ಗರ್ಭಸ್ಥೋ ಜಾಯಮಾನೋ ವಾ ಜಾತೋ ವಾ ಬ್ರಾಹ್ಮಣೋऽಥವಾ ।
ಅಂತ್ಯಜೋ ವಾಪಿ ಮುಚ್ಯೇತ ಪ್ರಸಾದೇ ಸತಿ ಶಾಂಕರೇ ॥

(ಸಿ.ಶಿ. ೧೧–೨೨)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಶಿವಾನುಗ್ರಹವನ್ನು ಪಡೆದವರಲ್ಲಿ ವಯಸ್ಸು ಹಾಗೂ ಜಾತಿಗಳ ತಾರತಮ್ಯವಿರುವುದಿಲ್ಲ. ಗರ್ಭಸ್ಥವಾದ ಶಿಶುವಾಗಿರಲಿ, ನವಜಾತ ಮಗು ವಾಗಿರಲಿ ಅವನು ಬ್ರಾಹ್ಮಣನೇ ಆಗಿರಲಿ ಅಥವಾ ಅಂತ್ಯಜನೇ ಆಗಿರಲಿ, ಅವನ ಮೇಲೆ ಶಿವಾನುಗ್ರಹವಾದರೆ ಅವನು ಅವಶ್ಯವಾಗಿ ಮುಕ್ತನಾಗುತ್ತಾನೆ. ಇಷ್ಟೇ ಅಲ್ಲ, ಲೋಕ ಪಾಲಕರಾದ ಬ್ರಹ್ಮ–ವಿಷ್ಣ್ವಾದಿದೇವತೆಗಳೂ ಸಹ ತಮ್ಮ ತಮ್ಮ ಪದವಿಗಳನ್ನು ಪಡೆದಿರುವುದು ಶಿವ ಪ್ರಸಾದದಿಂದಲೇ ಎನ್ನುವುದನ್ನು ಪೂಜ್ಯರು–

ಬ್ರಹ್ಮಾದ್ಯಾ ವಿಬುಧಾಃ ಸರ್ವೇ ಸ್ವಸ್ವಸ್ಥಾನನಿವಾಸಿನ ಃ ।
ನಿತ್ಯಸಿದ್ಧಾಃ ಭವಂತ್ಯೇವ ಪ್ರಸಾದಾತ್ಪಾರಮೇಶ್ವರಾತ್ ॥

(ಸಿ.ಶಿ. ೧೧–೭೩)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ಬ್ರಹ್ಮ–ವಿಷ್ಣ್ವಾದಿದೇವತೆಗಳು ಶಿವಾರಾಧನೆ ಯನ್ನು ಮಾಡಿ ಶಿವಾನುಗ್ರಹವನ್ನು ಪಡೆದ ಪ್ರಸಂಗಗಳು ಪುರಾಣಾದಿಗಳಲ್ಲಿ ಉಲ್ಲೇಖಿ ಸಲ್ಪಟ್ಟಿರುತ್ತವೆ. ಶಿವಾನುಗ್ರಹದಿಂದ ಕೇವಲ ಅಶಾಶ್ವತಗಳಾದ ಸ್ಥಾನ–ಮಾನಗಳ ಪ್ರಾಪ್ತಿ ಯಷ್ಟೇ ಅಲ್ಲ ಸರ್ವವನ್ನೂ ಶಿವಮಯವನ್ನಾಗಿ ಕಾಣುವ ದಿವ್ಯ ದೃಷ್ಟಿಯು ಪ್ರಾಪ್ತವಾಗುತ್ತದೆಯೆಂಬ ವಿಷಯವನ್ನು ಪೂಜ್ಯಪಾದರು–

ಪ್ರಸಾದೇ ಶಾಂಭವೇ ಸಿದ್ಧೇ ಪರಮಾನಂದಕಾರಣೇ ।
ಸರ್ವಂ ಶಿವಮಯಂ ವಿಶ್ವಂ ದೃಶ್ಯತೇ ನಾತ್ರಸಂಶಯಃ ॥

(ಸಿ.ಶಿ. ೧೧–೭೪)

ಎಂಬುದಾಗಿ ಬೋಧಿಸಿದ್ದಾರೆ. ಶಿವಾನುಗ್ರಹವು ಪರಮಾನಂದದಾಯಕವಾಗಿರುತ್ತದೆ. ಇಂತಹ ಪ್ರಸಾದವನ್ನು ಪಡೆದವನಿಗೆ ದೃಷ್ಟಿಯೂ ಸಹ ಶಿವಮಯವಾಗೋಣದರಿಂದ ಅವನು ವಿಶ್ವವೆಲ್ಲವನ್ನು ಶಿವರೂಪವನ್ನಾಗಿಯೇ ಕಾಣುತ್ತಾನೆ. ಇದುವೇ ಶಿವಾನುಗ್ರಹದ ಪರಮ ಪ್ರಯೋಜನವು.

ಸಾಂಸಾರಿಕ ಜೀವಿಗಳೆಲ್ಲ ತಮ್ಮ ಕರ್ಮಬಂಧನಕ್ಕೊಳಗಾಗಿ ಸಂಸಾರ ಚಕ್ರದಲ್ಲಿ ಪುನಃ ಪುನಃ ಸುತ್ತುತ್ತಲಿರುತ್ತಾರೆ. ಈ ಕರ್ಮಚಕ್ರದಿಂದ ಪಾರಾಗಬೇಕಾದರೂ ಶಿವಾನುಗ್ರಹವೇ ಬೇಕಾಗುವುದು ಎಂಬುದನ್ನು ಪೂಜ್ಯಪಾದರು–

ಸಂಸಾರಚಕ್ರನಿರ್ವಾಹನಿಮಿತ್ತಂ ಕರ್ಮ ಕೇವಲಮ್ ।
ಪ್ರಸಾದೇನ ವಿನಾ ಶಂಭೋರ್ನಕಸ್ಯಾಪಿ ನಿವರ್ತತೇ ॥

(ಸಿ.ಶಿ. ೧೧–೭೫)

ಈ ರೀತಿಯಾಗಿ ವಿವರಿಸಿ ಪ್ರಸಾದದ ಅಪಾರವಾದ ಮಹಿಮೆಯನ್ನು ಪುನಃ–

ಬಹುನಾತ್ರ ಕಿಮುಕ್ತೇನ ನಾಸ್ತಿನಾಸ್ತಿಜಗತ್ತ್ರಯೇ ।
ಸಮಾನಮಧಿಕಂ ಚಾಪಿ ಪ್ರಸಾದಸ್ಯ ಮಹೇಶಿತು ಃ ॥

ಶಿವಪ್ರಸಾದೇ ಸತಿ ಯೋಗಭಾಜಿ ಸರ್ವಂ ಶಿವೈಕಾತ್ಮತಯಾ ವಿಭಾತಿ ।
ಸ್ವಕರ್ಮಮುಕ್ತಃ ಶಿವಭಾವಿತಾತ್ಮಾ ಸ ಪ್ರಾಣಲಿಂಗೀತಿ ನಿಗದ್ಯತೇಽಸೌ ॥

(ಸಿ.ಶಿ. ೧೧ ; ೭೬–೭೭)

ಈ ತೆರನಾಗಿ ವಿವರಿಸಿದ್ದಾರೆ. ಮೂರೂ ಲೋಕಗಳಲ್ಲಿ ಶಿವಪ್ರಸಾದಕ್ಕೆ ಸಮಾನವಾದ ಬೇರೊಂದು ಉಪಾಯವಿಲ್ಲ, ಇದಕ್ಕಿಂತಲೂ ಮೇಲಾದುದು ಮತ್ತಾವುದೂ ಇಲ್ಲ. ಈ ಪ್ರಸಾದದ ಮಹಿಮೆಯನ್ನು ಕುರಿತು ಅದೆಷ್ಟು ಹೇಳಿದರೂ ಕಡಿಮೆಯೇ. ಶಿವಪ್ರಸಾದ ವನ್ನು ಪ್ರಾಪ್ತಿಮಾಡಿಕೊಂಡ ಶಿವಯೋಗಿಯು ಈ ಸಕಲ ಜಗತ್ತನ್ನು ಶಿವಾಭಿನ್ನವಾಗಿಯೇ ನೋಡುತ್ತಾನೆ. ತನ್ನನ್ನೂ ಜಗವೆಲ್ಲವನ್ನೂ ಶಿವಮಯವನ್ನಾಗಿ ಅರಿತಿರುವ ಪ್ರಸಾದಿಸ್ಥಲದ

ಸಾಧಕನು ಸರ್ವಕರ್ಮವಿಮುಕ್ತನಾಗಿ ಮುಂದೆ ಪ್ರಾಣಲಿಂಗಿಯೆಂಬುದಾಗಿ ಕರೆಸಿಕೊಳ್ಳು ತ್ತಾನೆ. ಪ್ರಸಾದಿಸ್ಥಲದ ಪರಿಪೂರ್ಣಾವಸ್ಥೆಯೇ ಪ್ರಾಣಲಿಂಗಿಸ್ಥಲವು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪ್ರಸಾದಿಸ್ಥಲದಲ್ಲಿ ಉಪದೇಶಿಸಿದ ಸರ್ವ ವಿಷಯಗಳನ್ನು ಮನನ ಮಾಡಿಕೊಂಡು ಸರ್ವರೂ ಇಂತಹ ಸ್ಥಿತಿಯನ್ನು ಪ್ರಾಪ್ತ ಮಾಡಿಕೊಳ್ಳುವಂತಾಗ ಲೆಂಬುದಾಗಿ ಅನುಗ್ರಹಿಸಿ ಪ್ರಸಾದಿಸ್ಥಲದ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

**ಓಂ ಶಾಂತಿಃ ಶಾಂತಿಃ ಶಾಂತಿಃ**

**ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಗ್ರಂಥದ**
**ಹನ್ನೊಂದನೇ ಪರಿಚ್ಛೇದವು ಪೂರ್ಣವಾದುದು.**

ದಿನಾಂಕ ೩ ಎಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಕಾಶೀಜಂಗಮವಾಡಿಮಠ ವಾರಾಣಸಿ.)



# ದ್ವಾದಶ ಪರಿಚ್ಛೇದ

**ಆಶೀರ್ವಚನ-೧**

## ಪ್ರಾಣಲಿಂಗಿಸ್ಥಲ

ಜಿಜ್ಞಾಸು ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯೊಳಗಿನ ಪ್ರಸಾದಿಸ್ಥಲದ ವಿಷಯವಾಗಿ ಆಶೀರ್ವಚನಗಳನ್ನು ನೀವೆಲ್ಲ ಆಲಿಸಿದ್ದೀರಿ. ಭಕ್ತನಾದವನು ಲೌಕಿಕ ಹಾಗೂ ಪಾರ ಲೌಕಿಕ ಧ್ಯೇಯವನ್ನು ಪ್ರಾಪ್ತಮಾಡಿಕೊಳ್ಳಬೇಕಾದರೆ, ಶಿವಾನುಗ್ರಹವು ಅವಶ್ಯಕ ವಾದುದು. ಶಿವನ ಅನುಗ್ರಹವಿಲ್ಲದೆ ಕೇವಲ ನಮ್ಮ ಜಪತಪಾದಿ ಸಾಧನಗಳ ಬಲದಿಂದ ಜೀವನದ ಗುರಿಯನ್ನು ಮುಟ್ಟಬಲ್ಲೆನೆಂಬ ಅಭಿಮಾನವು ಯಾವನ ಮನಸ್ಸಿನಲ್ಲಾದರೂ ಬಂದರೆ, ಅವನು ಈ ಅಹಂಕಾರದ ಪರಿಣಾಮವಾಗಿ ಅದೆಂದೂ ಗುರಿಯನ್ನು ತಲುಪ ಲಾರನು. ತನ್ನ ಸಾಧನೆಯ ಜೊತೆಗೆ ಈಶ್ವರನ ಅಪಾರವಾದ ಅನುಗ್ರಹದ ಲಾಭ ವಾದಾಗ ಮಾತ್ರ ಸಾಧಕನ ಸಾಧನೆಯು ಸಫಲವಾಗುವುದು.

ಶಿವಾನುಗ್ರಹದಿಂದ ಯಾರ ದೃಷ್ಟಿಯು ಶಿವಸ್ವರೂಪವಾಗಿದೆಯೋ ಅಂತಹ ಸಾಧಕನಿಗೆ ವಿಶ್ವವೆಲ್ಲ ಶಿವಮಯವಾಗಿಯೇ ತೋರುವುದು. ಹೀಗೆ ಮನಸ್ಸಿನಲ್ಲಿ ಪ್ರಸನ್ನತೆಯನ್ನು ಸಾಧಿಸಿಕೊಂಡು 'ಪ್ರಸಾದಿ' ಎಂದು ಕರೆಯಲ್ಪಡುವ ಸಾಧಕನೇ ಮುಂಬರುವ ಪ್ರಾಣಲಿಂಗಿ ಸ್ಥಲವನ್ನು ಪ್ರವೇಶಿಸುತ್ತಾನೆ. ಹೀಗೆ ಪ್ರಾಣಲಿಂಗಿ ಸ್ಥಲವನ್ನು ಪ್ರವೇಶಿಸಿದವನಿಗೆ 'ಪ್ರಾಣಲಿಂಗಿ' ಎಂಬುದಾಗಿ ಕರೆಯುವರು.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಈ ಉಪದೇಶವನ್ನು ಶ್ರವಣ ಮಾಡುತ್ತಿರುವ ಅಗಸ್ತ್ಯ ಮಹರ್ಷಿಯು–

ಭಕ್ತೋ ಮಾಹೇಶ್ವರಶ್ಚೇತಿ ಪ್ರಸಾದೀತಿ ನಿಬೋಧಿತಃ ।
ಏಕ ಏವ ಕಥಂ ಚೈಷಃ ಪ್ರಾಣಲಿಂಗೀತಿ ಕಥ್ಯತೇ ॥

(ಸಿ. ಶಿ. ೧೨–೧)

ಈ ರೀತಿಯಾಗಿ ಪ್ರಶ್ನಿಸುತ್ತಾನೆ. ''ಹೇ ಗಣೇಶ್ವರನೆ ! ಒಬ್ಬನೇ ಆದ ವ್ಯಕ್ತಿಯು ಭಕ್ತನಾಗಿ, ನಂತರ ಮಾಹೇಶ್ವರನಾಗಿ ತದನಂತರ ಪ್ರಸಾದಿಯಾಗಿ ಪುನಃ ಆತನೇ ಅದು ಹೇಗೆ ತಾನೆ ಪ್ರಾಣಲಿಂಗಿಯಾಗುತ್ತಾನೆ ?'' ಅಗಸ್ತ್ಯನ ಈ ಪ್ರಶ್ನೆಗೆ ಉತ್ತರರೂಪವಾಗಿ ಪೂಜ್ಯಪಾದರು–

ಭಕ್ತೋ ಮಾಹೇಶ್ವರಶ್ಚೈಷ್ವ ಪ್ರಸಾದೀತಿ ಚ ಕೀರ್ತಿತಃ ।
ಕರ್ಮಪ್ರಾಧಾನ್ಯಯೋಗೇನ ಜ್ಞಾನಯೋಗೋಽಸ್ಯ ಕಥ್ಯತೇ ॥

(ಸಿ. ಶಿ. ೧೨–೨)

''ಹೇ ಅಗಸ್ತ್ಯನೇ, ಒಬ್ಬನೇ ಸಾಧಕನು ಬಹಿರಂಗದ ಪೂಜಾ ಕರ್ಮಾದಿಗಳ ಪ್ರಾಧಾನ್ಯತೆಯ ಮೂಲಕವಾಗಿ ಭಕ್ತ, ಮಾಹೇಶ್ವರ ಮತ್ತು ಪ್ರಸಾದಿ ಎಂಬುದಾಗಿ ಕರೆಯಲ್ಪಟ್ಟ, ಆ ಸಾಧಕನೇ ಜ್ಞಾನಯೋಗದ ಪ್ರಾಮುಖ್ಯತೆಯ ಮೂಲಕವಾಗಿ ಪ್ರಾಣಲಿಂಗಿಯೆಂಬುದಾಗಿ ಕರೆಯಲ್ಪಡುತ್ತಾನೆ.''

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಷಟ್‌ಸ್ಥಲ ಸಿದ್ಧಾಂತವು ಎರಡು ವಿಧವಾಗಿ ವಿಂಗಡಿಸಲ್ಪಡುತ್ತದೆ. ಇದರಲ್ಲಿ ಭಕ್ತಮಾಹೇಶ್ವರ ಮತ್ತುಪ್ರಸಾದಿ ಈ ಮೂರು ಸ್ಥಲಗಳು ಕರ್ಮಪ್ರಧಾನವಾದವುಗಳಾದರೆ, ಮುಂದಿನ ಪ್ರಾಣಲಿಂಗಿ, ಶರಣ ಮತ್ತು ಐಕ್ಯಸ್ಥಲಗಳು ಜ್ಞಾನಪ್ರಧಾನವಾದವುಗಳಾಗಿರುತ್ತವೆ. ವೀರಶೈವ ಸಿದ್ಧಾಂತದಲ್ಲಿ ಜ್ಞಾನಕರ್ಮ ಸಮುಚ್ಚಯವಾದವನ್ನು ಸ್ವೀಕರಿಸಲಾಗಿದೆ. ಕೇವಲ ಕರ್ಮದಿಂದ ಅಥವಾ ಬರೀ ಜ್ಞಾನದಿಂದ ಮುಕ್ತಿಯು ಸಿಗುವುದೆಂಬ ವಿಚಾರವು ಈ ಸಿದ್ಧಾಂತದಲ್ಲಿ ಮಾನ್ಯವಾದುದಲ್ಲ. ಆದರೆ ಉಭಯ ಸಮನ್ವಯತೆಗೆ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಕರ್ಮಯೋಗದಲ್ಲಿ ನಿಷ್ಣಾತನಾಗಿ ಪ್ರಸಾದಿಸ್ಥಲದವರೆಗೆ ಬಂದಿರುವ ಆ ಸಾಧಕನೇ ಕರ್ಮಯೋಗದ ಜೊತೆಗೆ ಯಾವಾಗ ಜ್ಞಾನಯೋಗವನ್ನು ಸಮನ್ವಯಿಸಿಕೊಳ್ಳುವನೋ ಅವನೇ ಪ್ರಾಣಲಿಂಗಿಯಾಗುವನು. ಅಂತೆಯೇ ಸದ್ಯಃ ಪೂಜ್ಯಪಾದರು ಆ ಪ್ರಾಣಲಿಂಗಿಯ ಜ್ಞಾನಯೋಗ ಸ್ವರೂಪವನ್ನು–

ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ।
ತದ್ರೂಪಲಿಂಗವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ ॥

(ಸಿ. ಶಿ. ೧೨–೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿದ್ರೂಪವಾದ ಪರಬ್ರಹ್ಮ ಲಿಂಗವು ಪ್ರಾಣರೂಪೀ ಶಕ್ತಿಯಿಂದ ಯುಕ್ತವಾಗಿರೋಣದರಿಂದ ಆದಕ್ಕೆ ಪ್ರಾಣ ಲಿಂಗವೆಂಬುದಾಗಿ ಕರೆಯುತ್ತಾರೆ. ಇಂತಹ ಪ್ರಾಣಲಿಂಗ ಸ್ವರೂಪವನ್ನು ತಿಳಿದುಕೊಂಡಿರುವ ಸಾಧಕನೇ ಪ್ರಾಣಲಿಂಗಿಯು.

ಪ್ರಾಣಲಿಂಗಿಸ್ಥಲಂ ಚೈತತ್ಪಂಚಸ್ಥಲಸಮನ್ವಿತಂ ।
ಪ್ರಾಣಲಿಂಗಿಸ್ಥಲಂ ಚಾದೌ ಪ್ರಾಣಲಿಂಗಾರ್ಚನಂ ತತಃ ॥

ಶಿವಯೋಗಸಮಾಧಿಶ್ಚ ತತೋ ಲಿಂಗನಿಜಸ್ಥಲಂ ।
ಅಂಗಲಿಂಗಿಸ್ಥಲಂ ಚಾಥ ಕ್ರಮಾದೇಷಾಂ ಭಿದೋಚ್ಯತೇ ॥

(ಸಿ. ಶಿ. ೧೨ ; ೪–೫)

ಎಂಬ ಉಕ್ತಿಯಂತೆ ಈ ಪ್ರಾಣಲಿಂಗಿ ಸ್ಥಲದಲ್ಲಿ 'ಪ್ರಾಣಲಿಂಗಿಸ್ಥಲ', 'ಪ್ರಾಣಲಿಂಗಾರ್ಚನಸ್ಥಲ,' 'ಶಿವಯೋಗಸಮಾಧಿಸ್ಥಲ', 'ಲಿಂಗನಿಜಸ್ಥಲ' ಮತ್ತು 'ಅಂಗಲಿಂಗಸ್ಥಲ'ವೆಂಬುದಾಗಿ ಐದು ಅವಾಂತರಸ್ಥಲಗಳುಂಟು. ಇವುಗಳ ಸ್ವರೂಪಗಳನ್ನು ಕ್ರಮವಾಗಿ ವಿವರಿಸುತ್ತಾರೆ.

ಪ್ರಾಣರೂಪೀ ಶಕ್ತಿಯಿಂದ ವಿಶಿಷ್ಟವಾದ ಪರಬ್ರಹ್ಮವೇ ಪ್ರಾಣಲಿಂಗವೆಂಬುದಾಗಿ ಕರೆಯಲ್ಪಡುತ್ತದೆ. ಈ ಪ್ರಾಣಲಿಂಗದ ಸ್ವರೂಪವನ್ನು ಜ್ಞಾನಮಾರ್ಗದಿಂದ ತಿಳಿದು

ಕೊಳ್ಳಲು ಬರುವಂತೆ, ಯೋಗಮಾರ್ಗದಿಂದಲೂ ಸಹ ಅರಿಯಲು ಅವಕಾಶವಿದೆ. ಯೋಗ ಮಾರ್ಗದಿಂದ ಅದನ್ನರಿಯುವುದಕ್ಕಾಗಿ ಸಾಧಕನು ಪ್ರಾಣಾಯಾಮ ಪ್ರಕ್ರಿಯೆಯನ್ನು ತಿಳಿದುಕೊಂಡವನಾಗಿರಬೇಕು. ಪ್ರಾಣಾಯಾಮ ಕ್ರಿಯೆಯ ಮೂಲಕ ಶಿವ ಯೋಗಿಗಳು ಪ್ರಾಣಲಿಂಗವನ್ನು ಹೇಗೆ ಅರಿತುಕೊಳ್ಳುತ್ತಾರೆಂಬುದನ್ನು ಪೂಜ್ಯರು–

ಪ್ರಾಣಾಪಾನಸಮಾಘಾತಾತ್ ಕಂದಮಧ್ಯಾದ್ಯದುತ್ಥಿತಮ್ ।
ಪ್ರಾಣಲಿಂಗಂ ತದಾಖ್ಯಾತಂ ಪ್ರಾಣಾಪಾನನಿರೋಧಿಭಿಃ ॥

(ಸಿ. ಶಿ. ೧೨–೬)

ಈ ಬಗೆಯಾಗಿ ಉಪದೇಶಿಸಿದ್ದಾರೆ. ಯೋಗಶಾಸ್ತ್ರದಲ್ಲಿ ಶರೀರದಲ್ಲಿ ಸಂಚರಿಸುವ ವಾಯುವನ್ನು ಪ್ರಾಣ, ಅಪಾನ, ಉದಾನ, ವ್ಯಾನ ಮತ್ತು ಸಮಾನ ಎಂಬುದಾಗಿ ಐದು ವಿಧವಾಗಿ ವಿಂಗಡಿಸಿದ್ದಾರೆ. ವಾಯುವು ಒಂದೇಯಾಗಿದ್ದರೂ ವಿಭಿನ್ನ ಸ್ಥಾನ ಹಾಗೂ ವಿಭಿನ್ನ ಕ್ರಿಯೆಗಳ ಮೂಲಕ ಶರೀರಸ್ಥ ವಾಯುವಿಗೆ ಐದು ಹೆಸರುಗಳು ಬಂದಿವೆ. 'ಹೃದಿ ಪ್ರಾಣ', ಅಂದರೆ ಹೃದಯದಲ್ಲಿದ್ದುಕೊಂಡು ನಾಸಿಕಪರ್ಯಂತವಾಗಿ ಸಂಚರಿಸುವ ವಾಯುವಿಗೆ ಪ್ರಾಣವಾಯುವೆಂಬುದಾಗಿ ಕರೆಯುತ್ತಾರೆ. ಈ ಪ್ರಾಣವಾಯುವು ಒಂದು ದಿವಸಕ್ಕೆ ಇಪ್ಪತ್ತೊಂದು ಸಾವಿರದಾ ಆರುನೂರು (೨೧,೬೦೦) ಸಾರೆ ಶ್ವಾಸೋಚ್ಛ್ವಾಸ ಮುಖಾಂತರವಾಗಿ ನಾಸಿಕದಿಂದ ಹೃದಯಪರ್ಯಂತವಾಗಿ ಸಂಚರಿಸುತ್ತಿರುತ್ತದೆ. ಈ ಪ್ರಾಣವಾಯುವಿನ ಸಂಚಾರದಿಂದಲೇ ಶರೀರವು ಜೀವಂತವಾಗಿರುತ್ತದೆ. ಈ ಪ್ರಾಣ ವಾಯುವಿನ ಸಂಚಾರ ಬಂದಾದಾಗ ಜೀವಾತ್ಮನು ಮೃತನೆಂದು ತಿಳಿಯಲ್ಪಡುತ್ತಾನೆ. ಇನ್ನು 'ಗುದೇಽ ಪಾನ' ಅಂದರೆ, ಅಪಾನವಾಯುವು ಗುದಸ್ಥಾನದಲ್ಲಿ ನಿವಾಸಿಸುತ್ತಿದ್ದು, ಮಲ ಮೂತ್ರಗಳನ್ನು ಹೊರಗೆ ತಳ್ಳುವ ಕಾರ್ಯವನ್ನು ಮಾಡುತ್ತಿರುತ್ತದೆ. ಈ ವಾಯುವು ದುರ್ಬಲವಾದಾಗ ಮಲಮೂತ್ರ ವಿಸರ್ಜನೆಗಳಲ್ಲಿ ಆತಂಕವುಂಟಾಗುತ್ತದೆ. 'ಸಮಾನೋ ನಾಭಿಮಂಡಲೇ' ಸಮಾನವೆಂಬ ವಾಯುವು ನಾಭಿಸ್ಥಾನದಲ್ಲಿದ್ದುಕೊಂಡು ಅನ್ನರಸವಾದ ರಕ್ತವನ್ನು ಸರ್ವ ಅವಯವಗಳಿಗೆ ಸಮಪ್ರಮಾಣದಲ್ಲಿ ಹಂಚುವ ಕಾರ್ಯವನ್ನು ಮಾಡುತ್ತದೆ. ಅಂತೆಯೇ ಇದರ ಹೆಸರು ಸಮಾನವೆಂಬುದಾಗಿ ಇರುತ್ತದೆ. 'ವ್ಯಾನಃ ಸರ್ವಶರೀರಗಃ' ವ್ಯಾನ ವಾಯುವು ಶರೀರದಲ್ಲಿಯ ಪ್ರತಿಯೊಂದು ನರನಾಡಿಯಲ್ಲಿ ಸಂಚರಿಸಿ ರಕ್ತಾಭಿಸರಣ ಕ್ರಿಯೆಯನ್ನು ಸಮತೋಲವಾಗಿ ಕಾಪಾಡುತ್ತದೆ. ಈ ವಾಯುವು ವಿಕೃತಗೊಂಡಾಗ ಮನುಷ್ಯನು 'ರಕ್ತ ಒತ್ತಡ' ಅರ್ಥಾತ್ ಬ್ಲಡ್‌ಪ್ರೆಶರ್ ರೋಗದಿಂದ ಬಳಲಬೇಕಾಗುತ್ತದೆ. 'ಉದಾನಃ ಕಂಠದೇಶಸ್ಥಃ' ಉದಾನವಾಯುವು ಪ್ರತಿಯೊಬ್ಬರ ಕಂಠಸ್ಥಾನದಲ್ಲಿದ್ದುಕೊಂಡು ಸೀನು, ಢೇಕರಿಕೆಗಳ ಮುಖಾಂತರವಾಗಿ ಶರೀರದಲ್ಲಿಯ ದೂಷಿತತ್ತ್ವವನ್ನು ಹೊರ ಹಾಕುವ ಕಾರ್ಯವನ್ನು ಮಾಡುತ್ತಿರುತ್ತದೆ. ಹೀಗೆ ಒಂದೇ ವಾಯುವು ಶರೀರದ ಭಿನ್ನ ಭಿನ್ನ ಸ್ಥಾನದಲ್ಲಿದ್ದುಕೊಂಡು ವಿಭಿನ್ನ ಕ್ರಿಯೆಗಳಿಗೆ ಕಾರಣವಾಗಿರೋಣದರಿಂದ ಬೇರೆ ಬೇರೆ ಹೆಸರುಗಳನ್ನು ಪಡೆದುಕೊಂಡಿರುತ್ತದೆ.

ಪ್ರಕೃತ ಪ್ರಸಂಗದಲ್ಲಿ ಶ್ರೀ ರೇಣುಕ ಭಗವತ್ಪಾದರು ವಿಶಿಷ್ಟವಾದ ಪ್ರಾಣಾಯಾಮ ವಿಧಾನಮೂಲಕ ಪ್ರಾಣಲಿಂಗದ ಸ್ವರೂಪವನ್ನು ತಿಳಿಯಪಡಿಸುತ್ತಾರೆ.

ಪೂಜ್ಯರ ಉಪದೇಶದ ಪ್ರಕಾರ ಶಿವಯೋಗ ಸಾಧಕನು ದೀರ್ಘಪ್ರಾಣಾಯಾಮದ ಮೂಲಕ ತನ್ನ ಪ್ರಾಣವಾಯುವನ್ನು ಗುದಸ್ಥಾನದಲ್ಲಿರುವ ಅಪಾನವಾಯುಪರ್ಯಂತ ವಾಗಿ ಕೊಂಡೊಯ್ದು, ಅಲ್ಲಿ ಅವೆರಡರ ಸಂಘಟನೆ ಮಾಡಿದಾಗ ಆ ಸಂಘಟನೆಯಿಂದ ಒಂದು ಜ್ಯೋತಿಯು ಉತ್ಪನ್ನವಾಗುತ್ತದೆ. ಆ ಜ್ಯೋತಿಯೇ ಪ್ರಾಣಲಿಂಗವು. ಉದಾಹರಣಾರ್ಥವಾಗಿ ಗ್ಯಾಸ್ ಶೇಗಡಿಯ ಬಟನ್ನನ್ನು ಆನ್ ಮಾಡಿ ಒಂದು ದೀಪದ ಕಡ್ಡಿಯನ್ನು ಕೊರೆದು ಅದರ ಮೇಲೆ ಹಿಡಿದಾಗ ಅಲ್ಲಿ ಜ್ಯೋತಿಯು ಪ್ರಜ್ವಲಿಸುವಂತೆ, ಅಪಾನ ವಾಯುವಿಗೆ ಪ್ರಾಣವಾಯುವಿನ ಸಂಘಟನೆಯಾದಾಗ ಅಲ್ಲಿಯೂ ಒಂದು ಪ್ರಕಾರದ ಜ್ಯೋತಿಯು ಪ್ರಜ್ವಲಿತವಾಗುತ್ತದೆ. ಊರ್ಧ್ವಮುಖಿಯಾಗಿರುವ ಆ ಜ್ಯೋತಿಯು ಹೃದಯಸ್ಥಾನದಲ್ಲಿ ಬಂದು ನೆಲೆಗೊಳ್ಳುತ್ತದೆ. ಇದಕ್ಕೇನೇ ಶಿವಯೋಗಿಗಳು ಪ್ರಾಣಲಿಂಗವೆಂದು ಕರೆಯುತ್ತಾರೆ.

ಪ್ರಾಣೋ ಯತ್ರ ಲಯಂ ಯಾತಿ ಭಾಸ್ಕರೇ ತುಹಿನಂ ಯಥಾ ।
ತತ್ಪ್ರಾಣಲಿಂಗಮುದ್ದಿಷ್ಟಂ ತದ್ಧಾರೀ ಸ್ಯಾತ್ ತದಾಕೃತಿಃ ॥

(ಸಿ. ಶಿ. ೧೨–೭)

ಎಂಬ ಶ್ರೀ ಆಚಾರ್ಯರ ಉಪದೇಶದ ಪ್ರಕಾರ ಹೃದಯದಲ್ಲಿಯ ಆ ಜ್ಯೋತಿಯು ಪ್ರಾಣವಾಯುವಿನ ಸಹಾಯದಿಂದ ನಿರಂತರವಾಗಿ ಬೆಳಗುತ್ತಿರುತ್ತದೆ. ಅಂತೆಯೇ ಈ ಜ್ಯೋತಿಗೆ ಪ್ರಾಣಲಿಂಗವೆಂದು ಹೆಸರು. ಚಳಿಗಾಲದಲ್ಲಿ ನಸುಕಿನೊಳಗೆ ಹುಲ್ಲಿನ ಮೇಲೆ ಮಂಜಿನ ಹನಿಗಳನ್ನು ಕಾಣುತ್ತೇವೆ. ಸೂರ್ಯೋದಯವಾಗುವವರೆಗೆ ಕಾಣುತ್ತಿರುವ ಆ ಜಲಕಣಗಳು ಸೂರ್ಯೋದಯವಾದಾಗ, ಸೂರ್ಯನ ಆ ಪ್ರಖರ ತೇಜದಲ್ಲಿ ಹೇಗೆ ಅಡಗಿಹೋಗುತ್ತವೆಯೋ, ಹಾಗೆ ಹೃದಯದಲ್ಲಿ ಪ್ರಕಟಗೊಂಡ ಈ ಜ್ಯೋತಿಯಲ್ಲಿ ಪ್ರಾಣವಾಯುವೂ ಸಹ ವಿಲೀನವಾಗುತ್ತಿರುತ್ತದೆ. ಹೀಗೆ ಪ್ರಾಣವಾಯುವಿನ ಸಹಾಯ ದಿಂದ ನಿರಂತರವಾಗಿ ಪ್ರಜ್ವಲಿಸುವ ಆ ಜ್ಯೋತಿರ್ಲಿಂಗವೇ ವೀರಶೈವ ಸಿದ್ಧಾಂತದಲ್ಲಿ ಪ್ರಾಣಲಿಂಗವೆಂಬುದಾಗಿ ಕರೆಯಲ್ಪಟ್ಟಿರುತ್ತದೆ. ಇಂತಹ ಪ್ರಾಣಲಿಂಗದ ಸ್ವರೂಪವನ್ನು ಅರಿತು ಅದರ ಧ್ಯಾನದಲ್ಲಿಯೇ ತೊಡಗಿರುವ ಸಾಧಕನು 'ಪ್ರಾಣಲಿಂಗಿ' ಎಂದು ಕರೆಯಲ್ಪಡುತ್ತಾನೆ.

ಹೃದಯದಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವ ಈ ಜ್ಯೋತಿಯ ಅನುಭವವು ಸಾಮಾನ್ಯ ಜನರಿಗೆ ಆಗಲಾರದು. ಈ ಪ್ರಾಣಲಿಂಗದ ಅನುಭವವನ್ನು ಪಡೆಯುವು ದಕ್ಕಾಗಿ ಯೋಗಮಾರ್ಗ ಹಾಗೂ ಜ್ಞಾನಮಾರ್ಗಗಳನ್ನು ಅವಲಂಬಿಸಬೇಕಾಗುತ್ತದೆ. ಯೋಗಮಾರ್ಗದಲ್ಲಿ ಈ ಮೊದಲು ತಿಳಿಸಿದಂತೆ, ಗುರುಮುಖೇನ ಪ್ರಾಣಾಪಾನಗಳ ಸಂಘಟನೆಯ ವಿಶೇಷ ಪ್ರಾಣಾಯಾಮ ಪದ್ಧತಿಯನ್ನು ಅರಿತು ಅದರಂತೆ ಆಚರಿಸಿ ಪ್ರಾಣಲಿಂಗದ ಅನುಭವವನ್ನು ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇನ್ನು ಈ ಯೋಗ ಮಾರ್ಗವನ್ನು ಸಾಧಿಸದೇ ಇದ್ದವರು ಜ್ಞಾನಮಾರ್ಗದಿಂದ ತನ್ನ ಆತ್ಮವು ಪ್ರಕಾಶ ರೂಪವೂ ಅರ್ಥಾತ್ ಚಿದ್ರೂಪವೂ ಆಗಿರುತ್ತದೆಂಬುದನ್ನು ಅರಿತು, ಅದರ ಚಿಂತನೆ ಯನ್ನು ನಿರಂತರವಾಗಿ ಮಾಡುತ್ತಿರಬೇಕು.

ಜ್ಞಾನಿನಾಂ ಯೋಗಯುಕ್ತಾನಾಮಂತಃ ಸ್ಫುರತಿ ದೀಪವತ್ ।
ಚಿದಾಕಾರಂ ಪರಬ್ರಹ್ಮಲಿಂಗಮಜ್ಞೈರ್ನ ಭಾವ್ಯತೇ ॥

(ಸಿ. ಶಿ. ೧೨–೮)

ಎಂಬ ಆಚಾರ್ಯರ ಉಪದೇಶದ ಮೇರೆಗೆ ಯೋಗಮಾರ್ಗದಲ್ಲಿ ಪ್ರವೀಣರಾದವರು ತಮ್ಮ ಹೃದಯದಲ್ಲಿ ಆ ಪ್ರಜ್ವಲಿಸುವ ಜ್ಯೋತಿರ್ಲಿಂಗವನ್ನು ಅನುಭವಿಸುತ್ತಿರುತ್ತಾರೆ. ಹೊರಗಿನ ಪ್ರಕಾಶವನ್ನು ಸಾಮಾನ್ಯರು ಚರ್ಮಚಕ್ಷುವಿನಿಂದ ಪ್ರತ್ಯಕ್ಷವಾಗಿ ನೋಡುತ್ತಿರುವಂತೆ, ಯೋಗಿಗಳು ತಮ್ಮ ಅಂತರಂಗದಲ್ಲಿ ಪ್ರಜ್ವಲಿಸುತ್ತಿರುವ ಆ ಜ್ಯೋತಿರ್ಲಿಂಗವನ್ನೂ ಸಹ ಪ್ರತ್ಯಕ್ಷವಾಗಿ ಅನುಭವಿಸುತ್ತಿರುತ್ತಾರೆ. ಮನೋವೃತ್ತಿಯು ಬಹಿರ್ಮುಖವಾದಾಗ ಬಾಹ್ಯಪ್ರಪಂಚದ ಅನುಭವವಾಗುವಂತೆ, ಅದು ಅಂತರ್ಮುಖವಾದಾಗ ಅಂತಸ್ಥಿತವಾದ ಜ್ಯೋತಿಯನ್ನು ಅನುಭವಿಸಲು ಸಾಧ್ಯವಾಗುತ್ತದೆ. ಅಂತೆಯೇ ಪ್ರಾಣಲಿಂಗಿಸ್ಥಲವನ್ನು ಹೊಂದಿದ ಸಾಧಕನು ಅಂತರ್ಮುಖವೃತ್ತಿಯುಳ್ಳವನಾಗಿ ಆ ಪ್ರಾಣಲಿಂಗದ ಅನುಭೂತಿಯನ್ನು ಪಡೆದುಕೊಳ್ಳುತ್ತಾನೆ.

ಈ ಪ್ರಾಣಲಿಂಗದ ಸ್ವರೂಪ ಹಾಗೂ ಮಹತ್ತ್ವವನ್ನು ವರ್ಣಿಸುತ್ತ ಶ್ರೀ ಜಗದ್ಗುರು ರೇಣುಕಾಚಾರ್ಯರು–

ಅಂತಃ ಸ್ಥಿತಂ ಪರಂ ಲಿಂಗಂ ಜ್ಯೋತಿರೂಪಂ ಶಿವಾತ್ಮಕಮ್ ।
ವಿಹಾಯ ಬಾಹ್ಯಲಿಂಗಸ್ಥಾ ವಿಮೂಢಾ ಇತಿ ಕೀರ್ತಿತಾಃ ॥

(ಸಿ. ಶಿ. ೧೨–೯)

ಈ ತೆರನಾಗಿ ಅಪ್ಪಣೆಕೊಡಿಸಿದ್ದಾರೆ. ವೀರಶೈವ ಸಿದ್ಧಾಂತದಲ್ಲಿ ಇಷ್ಟಲಿಂಗಧಾರಣೆ ಹಾಗೂ ಅದರ ಅರ್ಚನೆಯೇ ಅಂತಿಮವಾದುದಲ್ಲ. ಅದರ ಜೊತೆಗೆ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಅರಿವನ್ನು ಮಾಡಿಕೊಂಡು ಅವುಗಳನ್ನು ಅರ್ಚಿಸಿ ಕೊನೆಗೆ 'ಶಿವೋಽಹಂ' ಭಾವನೆಯಲ್ಲಿ ನೆಲೆಗೊಳ್ಳುವುದೇ ವೀರಶೈವರ ಮುಖ್ಯವಾದ ಗುರಿ. ಹೀಗಿರುವಾಗ ವೀರಶೈವ ಸಾಧಕನು ಅಂತರಂಗದಲ್ಲಿಯ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಕಡೆಗೆ ಗಮನವನ್ನು ಹರಿಸದೆ, ಇಡೀ ಜೀವನವನ್ನೆಲ್ಲ ಕೇವಲ ಬಾಹ್ಯವಾದ ಇಷ್ಟಲಿಂಗ ಪೂಜೆಯಲ್ಲಿಯೇ ಕಳೆದರೆ ಅದು ಮೂಢತನವಾಗುವುದು. ಹಾಗೆ ಮಾಡುವವರನ್ನು ಕುರಿತು 'ವಿಮೂಢಾಃ' ಎಂಬ ಶಬ್ದ ಪ್ರಯೋಗವನ್ನು ಮಾಡಿದ್ದಾರೆ. ಮನೆಯ ಯಜಮಾನನು ಮಕ್ಕಳು ಸುಧಾರಿಸಬೇಕೆಂಬ ಉದ್ದೇಶದಿಂದ ಕರ್ತವ್ಯಪರಾಯಣರಾಗದೇ ಇರುವ ಮಕ್ಕಳನ್ನು ಉದ್ದೇಶಿಸಿ ಮೂಢರೇ ! ಮೂರ್ಖರೇ ! ಎಂಬುದಾಗಿ ಶಬ್ದ ಪ್ರಯೋಗ ಮಾಡುವುದನ್ನು ಕಾಣುತ್ತೇವೆ. ತಂದೆಯ ಈ ಬೈಗುಳಗಳ ಹಿಂದೆ ಮಕ್ಕಳನ್ನು ತಿದ್ದುವ ಉದಾತ್ತ ಭಾವನೆ ಇದೆಯೇ ವಿನಃ ಬೇರಾವ ಭಾವನೆ ಇರುವುದಿಲ್ಲ. ಅದರಂತೆ ಇಲ್ಲಿಯೂ ಸಹ ಪೂಜ್ಯ ಜಗದ್ಗುರುಗಳು ಪ್ರಾಣಲಿಂಗ ಭಾವಲಿಂಗಗಳತ್ತ ಮನವನ್ನು ಹರಿಸದವರನ್ನು ಕುರಿತು 'ಮೂಢಾಃ' ಎಂಬ ಶಬ್ದ ಪ್ರಯೋಗವನ್ನು ಮಾಡಿದ್ದಾರೆ.

ಪೂಜ್ಯರ ಆದೇಶದಂತೆ ಸಾಧಕನು ಇಷ್ಟಲಿಂಗ ಉಪಾಸನೆಯ ಜೊತೆ ಜೊತೆಗೆ ಅಂತರ್ಮುಖಿಯಾಗಿ ಪ್ರಾಣಲಿಂಗೋಪಾಸನೆಯನ್ನೂ ಸಹ ಮಾಡಬೇಕು. ಒಂದು ಅಂಧಕಾರದ ಗುಹೆಯೊಳಗೆ ಪ್ರವೇಶಿಸಬೇಕಾದರೆ ಕೈಯಲ್ಲಿ ದೀಪದ ಅವಶ್ಯಕತೆ ಇರುವಂತೆ, ಅಂತರಂಗವೆಂಬ ಹೃದಯಕುಹರದಲ್ಲಿ ಪ್ರವೇಶಿಸಿ ಪ್ರಾಣಲಿಂಗವನ್ನು ಪೂಜಿಸಲಿಕ್ಕೆ ಇಷ್ಟಲಿಂಗವು ದೀವಿಗೆಯೋಪಾದಿಯಲ್ಲಿ ಸಹಾಯಕವಾಗಿರುತ್ತದೆ. ಇಷ್ಟಲಿಂಗವನ್ನು ಪೂಜಿಸುವ ಸಾಧಕನು ತನ್ನ ವಾಮಹಸ್ತ ಪೀಠದಲ್ಲಿ ಇಷ್ಟಲಿಂಗವನ್ನಿರಿಸಿ ಕೊಂಡು ನಿರ್ನಿಮೇಷ ದೃಷ್ಟಿಯಿಂದ ಆ ಲಿಂಗವನ್ನು ವೀಕ್ಷಿಸುತ್ತ ತನ್ನ ಮನೋವೃತ್ತಿ ಯನ್ನು ಮಾತ್ರ ಹೃದಯದತ್ತ ಹರಿಯಬಿಟ್ಟಾಗ, ಅವನಿಗೆ ಹಸ್ತಪೀಠದಲ್ಲಿಯ ಇಷ್ಟ ಲಿಂಗಾಕಾರದ ಒಂದು ಜ್ಯೋತಿಯು ಹೃದಯಮಂದಿರದಲ್ಲಿ ಕಂಗೊಳಿಸುವುದು. ಹೀಗೆ ಇಷ್ಟಲಿಂಗದ ಪೂಜೆಯನ್ನು ಗೈಯ್ಯುತ್ತ ಅಂತರಂಗದಲ್ಲಿ ಪ್ರಾಣಲಿಂಗಾನುಸಂಧಾನವನ್ನು ಮಾಡುವ ಸಾಧಕನೇ ಪ್ರಾಣಲಿಂಗಿ ಎಂಬುದಾಗಿ ಅಪ್ಪಣೆಕೊಡಿಸಿ ಇಂದಿನ ಆಶೀರ್ವಚನ ವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೪ ಏಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ)



ಆಶೀರ್ವಚನ-೨

# ಪ್ರಾಣಲಿಂಗಿಸ್ಥಲ

ಜಿಜ್ಞಾಸು ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ 'ಪ್ರಾಣಲಿಂಗಿ'ಸ್ಥಲದ ಮೇಲೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು-

ಅಂತಃಸ್ಥಿತಂ ಪರಂ ಲಿಂಗಂ ಜ್ಯೋತಿರೂಪಂ ಶಿವಾತ್ಮಕಮ್ ।
ವಿಹಾಯ ಬಾಹ್ಯಲಿಂಗಸ್ಥಾ ವಿಮೂಢಾ ಇತಿ ಕೀರ್ತಿತಾಃ ॥

(ಸಿ. ಶಿ. ೧೨-೯)

ಈ ಶ್ಲೋಕದಲ್ಲಿ ಅಂತರಂಗದಲ್ಲಿರುವ ಜ್ಯೋತಿಸ್ವರೂಪವಾದ ಪ್ರಾಣಲಿಂಗವನ್ನು ದುರ್ಲಕ್ಷಿಸಿ ಕೇವಲ ಬಾಹ್ಯಲಿಂಗದ ಪೂಜೆಯಲ್ಲಿಯೇ ಆಸಕ್ತರಾದವರನ್ನು ಕುರಿತು ವಿಮೂಢರೆಂಬುದಾಗಿ ಕರೆದಿದ್ದಾರೆ. ಇಲ್ಲಿ ಬಾಹ್ಯ ಲಿಂಗವೆಂದರೆ ಇಷ್ಟಲಿಂಗವೋ ಅಥವಾ ಮಂದಿರದಲ್ಲಿರುವ ಸ್ಥಾವರಲಿಂಗವೋ ? ಎಂಬುದರ ಬಗ್ಗೆ ವಿವೇಚನೆಯನ್ನು ಮಾಡಿದ ಶ್ರೀ ಮರಿತೋಂಟದಾರ್ಯರು ಈ ಗ್ರಂಥದ ಮೇಲೆ ಬರೆದ ಸಂಸ್ಕೃತ ವ್ಯಾಖ್ಯಾನದಲ್ಲಿ-

''ಅತ್ರ ಬಾಹ್ಯಲಿಂಗಂ ಇಷ್ಟಲಿಂಗಾತಿರಿಕ್ತಂ ಪ್ರಾಕೃತಲಿಂಗಪರಂ, ಇಷ್ಟಲಿಂಗಸ್ಯ ಚಿದಾನಂದಘನತ್ವೇನ ಆಂತರತ್ವಾದಿತಿ''

ಈ ರೀತಿಯಾಗಿ ವಿವರಿಸಿದ್ದಾರೆ. ಇವರ ಈ ವಿವೇಚನೆಯ ಪ್ರಕಾರ ಬಾಹ್ಯ ಲಿಂಗವೆಂದರೆ ಇಷ್ಟಲಿಂಗವನ್ನು ಹೊರತುಪಡಿಸಿ ಮಂದಿರಾದಿಗಳಲ್ಲಿರುವ ಸ್ಥಾವರಲಿಂಗಗಳೆಂಬುದೇ ಅರ್ಥವು. ಅಂತೆಯೇ ಬಾಹ್ಯವೆಂದರೆ ತನ್ನ ಶರೀರಕ್ಕಿಂತಲೂ ಹೊರಗಿನದು ಎಂದರ್ಥ. ಪ್ರಾಣಲಿಂಗ ಹಾಗೂ ಭಾವಲಿಂಗಗಳ ದೃಷ್ಟಿಯಿಂದ ಇಷ್ಟಲಿಂಗವು ಬಾಹ್ಯಲಿಂಗವೆಂಬುದಾಗಿ ತೋರುತ್ತಿದ್ದರೂ, ಅದು ಸರ್ವಥಾ ಬಾಹ್ಯವಾದುದಲ್ಲ. ಇಷ್ಟಲಿಂಗವು ಅಂತರ್ಲಿಗಾನುಸಂಧಾನಕ್ಕೆ ಸಹಾಯಕವಾದುದಾಗಿದೆ. ಸಾಧಕನು ತನ್ನ ಮನೋವೃತ್ತಿಯನ್ನು ಪ್ರಾಣಲಿಂಗದತ್ತ ಹರಿಸಬೇಕಾದರೆ ತನ್ನ ವಾಮಹಸ್ತ ಪೀಠದಲ್ಲಿ ಇಷ್ಟಲಿಂಗವನ್ನಿರಿಸಿಕೊಂಡು ಅದರಲ್ಲಿಯೇ ದೃಷ್ಟಿಯನ್ನಿಟ್ಟು 'ತ್ರಾಟಕ' ಯೋಗವನ್ನು ಮಾಡುತ್ತ ಮುದ್ರಾದಿಗಳ ಸಹಾಯದಿಂದ ತನ್ನ ಮನೋವೃತ್ತಿಯನ್ನು ಪ್ರಾಣಲಿಂಗದ ಕಡೆಗೆ ಕೊಂಡೊಯ್ಯುತ್ತಾನೆ. ಹೀಗೆ ಇಷ್ಟಲಿಂಗವು ಸರ್ವಥಾ ಶರೀರದಿಂದ ಬಾಹ್ಯದಲ್ಲಿರದೆ ಸರ್ವದಾ ಶರೀರದ ಮೇಲೆಯೇ ಇದ್ದುದಾಗಿದೆ. ಅಂತರ್ಲಿಂಗಾನುಸಂಧಾನಕ್ಕೆ ಸಹಾಯಕವೂ ಆದುದಾದ್ದರಿಂದ ಇದನ್ನು ಬಾಹ್ಯಲಿಂಗವೆಂಬುದಾಗಿ ಪರಿಗಣಿಸಲಾಗುವುದಿಲ್ಲ. ಆದ್ದರಿಂದ ಪೂಜ್ಯಪಾದರು ಇಲ್ಲಿ ಪ್ರಯೋಗಿಸಿದ ಬಾಹ್ಯಲಿಂಗವೆಂಬ

ಶಬ್ದಕ್ಕೆ ಇಷ್ಟಲಿಂಗಾತಿರಿಕ್ತಗಳಾದ ಸ್ಥಾವರಲಿಂಗಗಳೆಂದೇ ಅರ್ಥಮಾಡಿಕೊಳ್ಳುವುದು ಅತ್ಯಂತ ಸೂಕ್ತವಾದುದು.

ಸ್ಥೂಲವಾದ ದೃಷ್ಟಿಯಿಂದ ವಿಚಾರಿಸಲಾಗಿ ವೀರಶೈವರು ದೇಹದ ಮೇಲೆ ನಿರಂತರವಾಗಿ ಧರಿಸಿಕೊಂಡಿರುವ ಇಷ್ಟಲಿಂಗ ಹಾಗೂ ಮಂದಿರಗಳಲ್ಲಿ ಸ್ಥಾಪಿತಗೊಂಡ ಶಿವಲಿಂಗಗಳಿಗೆ ಬಾಹ್ಯಲಿಂಗವೆಂಬುದಾಗಿ ತಿಳಿದುಕೊಳ್ಳಬಹುದು. ಆದರೆ ಬಾಹ್ಯದಲ್ಲಿ ಇರುವ ಈ ಎರಡೂ ಲಿಂಗಗಳಲ್ಲಿ ದೇಹದ ಮೇಲೆ ಧರಿಸುವ ಲಿಂಗಕ್ಕೆ ಇಷ್ಟ ಲಿಂಗವೆಂತಲೂ, ಮಂದಿರದಲ್ಲಿರುವ ಶಿವಲಿಂಗಗಳಿಗೆ ಸ್ಥಾವರಲಿಂಗಗಳೆಂತಲೂ ಕರೆಯುವುದುಂಟು. ಇಷ್ಟಲಿಂಗವೆಂದರೆ 'ಇಷ್ಟಾರ್ಥಪ್ರದಾಯಕಂ ಇಷ್ಟಲಿಂಗಮ್' ಎಂಬ ವ್ಯಾಖ್ಯಾನಾನುಸಾರವಾಗಿ, ಪೂಜಕನ ಸಕಲ ಮನೋಭೀಷ್ಟಗಳನ್ನು ಪೂರೈಸುವ ಲಿಂಗವೇ ಇಷ್ಟಲಿಂಗವು. ಇದು ಕೇವಲ ದೇಹದ ಮೇಲೆ ಧರಿಸುವ ಲಿಂಗಕ್ಕೆ ಮಾತ್ರ ಅನ್ವಯವಾಗುತ್ತದೆ. ಸ್ಥಾವರಲಿಂಗಾದಿಗಳಲ್ಲಿ ಇದು ಅನ್ವಯವಾಗಲಾರದು. ಆದ್ದರಿಂದ ದೇಹದ ಮೇಲೆ ಧರಿಸುವ ಲಿಂಗಕ್ಕೆ ಮಾತ್ರ ಇಷ್ಟಲಿಂಗವೆಂಬ ಪದಪ್ರಯೋಗ ವಾಗುವುದು.

ಈ ವಿಷಯದಲ್ಲಿ ಒಂದು ಜಿಜ್ಞಾಸೆಯು ಸರ್ವರ ಮನದಲ್ಲಿ ಮೂಡಬಹು ದಾಗಿದೆ. ಅದೇನೆಂದರೆ, ಇಷ್ಟಾರ್ಥವನ್ನು ದಯಪಾಲಿಸುವ ಸಾಮರ್ಥ್ಯವು ಮಂದಿರ ಗಳಲ್ಲಿ ಸ್ಥಾಪಿತಗಳಾದ ಶಿವಲಿಂಗಗಳಲ್ಲಿಯೂ ಕಂಡುಬರುವುದು. ಅನೇಕ ಭಕ್ತಾದಿಗಳು ತಮ್ಮ ಗ್ರಾಮದಲ್ಲಿರುವ ಶಿವಲಿಂಗಗಳಿಗೆ ಅಥವಾ ತೀರ್ಥಕ್ಷೇತ್ರಗಳಲ್ಲಿರುವ ಜ್ಯೋತಿ ರ್ಲಿಂಗಗಳಿಗೆ ಹರಕೆಯನ್ನು ಹೊತ್ತು ಅವುಗಳನ್ನು ಪೂಜಿಸಿ ತಮ್ಮ ಇಷ್ಟಾರ್ಥವನ್ನು ಪೂರ್ತಿ ಮಾಡಿಕೊಂಡಿದ್ದನ್ನು ಕಾಣಬಹುದು. ಹೀಗೇ ಇಷ್ಟಾರ್ಥ ಪ್ರದಾಯಕವಾದ ಸಾಮರ್ಥ್ಯವು ಮಂದಿರಗಳಲ್ಲಿರುವ ಶಿವಲಿಂಗಗಳಲ್ಲಿಯೂ ಇರುವುದೆಂಬುದು ಸರ್ವಾನುಭವಸಿದ್ಧವಾಗಿರುವಾಗ ಅವುಗಳಿಗೆ ಇಷ್ಟಲಿಂಗವೆಂಬ ಪದಪ್ರಯೋಗವನ್ನು ಮಾಡದೆ ದೇಹದ ಮೇಲೆ ಧರಿಸುವ ಲಿಂಗಕ್ಕೆ ಮಾತ್ರ ಇಷ್ಟಲಿಂಗವೆಂಬ ಪದವನ್ನು ಪ್ರಯೋಗಿಸುವುದು ಅದು ಹೇಗೆ ತಾನೆ ಸೂಕ್ತವಾದುದು ?

ಮನುಷ್ಯನ ಇಷ್ಟಾರ್ಥವು ಎರಡು ವಿಧವಾಗಿ ಇರುತ್ತದೆ. ಮೊದಲನೆಯದು, ಲೌಕಿಕವಾದ ಭೋಗಭಾಗ್ಯವು, ಎರಡನೆಯದು, ನಿಶ್ರೇಯಸ್ ಅರ್ಥಾತ್ ಮೋಕ್ಷವು. ಇವೆರಡರಲ್ಲಿ ಮುಖ್ಯ ಇಷ್ಟಾರ್ಥವೆಂದರೆ ನಿಶ್ರೇಯಸವೇ, ಅರ್ಥಾತ್ ಮುಕ್ತಿಯೇ ಆಗಿದೆ. ಮಂದಿರಸ್ಥ ಶಿವಲಿಂಗಗಳಲ್ಲಿ ಲೌಕಿಕ ಇಷ್ಟಾರ್ಥವನ್ನು ಪೂರ್ತಿಮಾಡುವ ಸಾಮರ್ಥ್ಯವಿದ್ದರೂ ಮುಕ್ತಿರೂಪವಾದ ಪರಮ ಇಷ್ಟಾರ್ಥವನ್ನು ಅವುಗಳು ಪೂರ್ತಿ ಮಾಡಲು ಸಾಧ್ಯವಿಲ್ಲ. ವೀರಶೈವ ಸಿದ್ಧಾಂತದಲ್ಲಿ ಮುಕ್ತಿಯೆಂದರೆ ಲಿಂಗಾಂಗ ಸಾಮರಸ್ಯ ರೂಪವಾದುದು. ವೀರಶೈವರು ತಮ್ಮ ವಾಮಹಸ್ತಪೀಠದಲ್ಲಿ ಇರಿಸಿಕೊಂಡು ಪೂಜಿಸುವ ಇಷ್ಟಲಿಂಗವು ತಮ್ಮ ಆತ್ಮದ ಪ್ರತಿರೂಪವೆಂದು ಭಾವಿಸಿ ಅದನ್ನು ಅಹಂಗ್ರಹರೂಪವಾಗಿ ಉಪಾಸಿಸುತ್ತಾರೆ. ಹೀಗೆ ಇಷ್ಟಲಿಂಗೋಪಾಸನೆಯು ಲಿಂಗಾಂಗಸಾಮರಸ್ಯ ರೂಪ ಸಾಯುಜ್ಯವನ್ನು ಪಡೆಯಲು ಸಾಧಕವಾಗಿರುತ್ತದೆ. ಅಂತೆಯೇ ಇಷ್ಟಲಿಂಗೋ

ಪಾಸನೆಯು ನಿಶ್ರೇಯಸರೂಪ ಮುಕ್ತಿಯನ್ನು ಅನುಗ್ರಹಿಸಲು ಸಮರ್ಥವಾಗಿರುತ್ತದೆ. ಇನ್ನು ಮಂದಿರಾದಿಗಳಲ್ಲಿ ಸಂಸ್ಥಾಪಿಸಲ್ಪಟ್ಟ ಶಿವಲಿಂಗಗಳ ಪೂಜೆಯನ್ನು ಭಕ್ತನಾದವನು ತನ್ನಾತ್ಮ ರೂಪವನ್ನಾಗಿ ಭಜಿಸಲಾರನು. ಆದರೆ ತನಗಿಂತಲೂ ಭಿನ್ನವಾದ ಒಂದು ದಿವ್ಯರೂಪದಲ್ಲಿ ಅದನ್ನು, ಆರಾಧಿಸುತ್ತಾನೆ. ಅಂತೆಯೇ ಸ್ಥಾವರಲಿಂಗಪೂಜೆಯು ಪ್ರತೀಕೋಪಾಸನಾ ರೂಪವಾದುದು. ಆದ್ದರಿಂದಲೇ ಈ ಉಪಾಸನೆಯಿಂದ ಲಿಂಗಾಂಗ ಸಾಮರಸ್ಯರೂಪವಾದ ಮುಕ್ತಿಯು ದೊರೆಯಲಾರದು. ಹೀಗೆ ಪರಮ ಇಷ್ಟವಾದ ಲಿಂಗಾಂಗಸಾಮರಸ್ಯ ರೂಪವಾದ ಪರಮ ಸಾಯುಜ್ಯವು ಇಷ್ಟಲಿಂಗೋಪಾಸನೆಯಿಂದ ದೊರೆಯುವ ಕಾರಣ ಈ ಲಿಂಗಕ್ಕೆ ಇಷ್ಟ ಲಿಂಗವೆಂಬುದಾಗಿ ಕರೆದುದು ಸಾರ್ಥಕ ವಾಗಿದೆ. ಆದ ಕಾರಣ ಸ್ಥಾವರಲಿಂಗಕ್ಕೆ ಇಷ್ಟಲಿಂಗವೆಂಬುದಾಗಿ ಸಂಬೋಧಿಸುವುದು ಸೂಕ್ತವಾಗಲಾರದು.

ಅನುಭವಸೂತ್ರದಲ್ಲಿ ಶ್ರೀ ಮಾಯಿದೇವರು–'ಇಷ್ಟಿಃ ಪೂಜಾ ತಯಾ ನಿತ್ಯಂ ಇಷ್ಟಂ ಪೂಜಿತಮಾದರಾತ್ ಇಷ್ಟಲಿಂಗಮಿತಿ ಪ್ರೋಕ್ತಮ್' ಈ ರೀತಿಯಾಗಿ ಇಷ್ಟಲಿಂಗ ಶಬ್ದವನ್ನು ಅಸಾಧಾರಣ ರೀತಿಯಲ್ಲಿ ವಿವರಿಸಿದ್ದಾರೆ. ಇದರ ಅರ್ಥವೇನೆಂದರೆ, ಇಷ್ಟಿಃ ಎಂದರೆ ನಿತ್ಯ ಪೂಜೆ, ತಯಾ=ಆ ಪೂಜೆಯಿಂದ, ನಿತ್ಯಂ=ಪ್ರತಿದಿವಸ, ಆದರಾತ್= ಅತ್ಯಂತ ಆದರ ಭಾವನೆಯಿಂದ, ಇಷ್ಟಂ=ಪೂಜಿಸಲ್ಪಡುವ, ಲಿಂಗಂ=ಲಿಂಗವೇ ಇಷ್ಟಲಿಂಗವು. ತಾತ್ಪರ್ಯವೇನೆಂದರೆ, ಸಾಧಕನಿಂದ ಪ್ರತಿನಿತ್ಯ ಆದರದಿಂದ ತಪ್ಪದೇ ಪೂಜಿಸಲ್ಪಡುವ ಲಿಂಗವೇ ಇಷ್ಟಲಿಂಗವು. ವೀರಶೈವ ಸಿದ್ಧಾಂತದಲ್ಲಿ ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡಿರಬೇಕೆಂಬ ಕಟ್ಟು ನಿಯಮವಿರೋಣದರಿಂದ ಸಾಧಕನು ಎಲ್ಲಿಗೇ ಹೋದರೂ ಅವನ ಇಷ್ಟಲಿಂಗವು ಅವನ ಜೊತೆಯಲ್ಲಿಯೇ ಇರೋಣದರಿಂದ ಅವನ ನಿತ್ಯ ಪೂಜೆಗೆ ಅದಾವ ಬಾಧೆಯೂ ಉಂಟಾಗಲಾರದು. ಇನ್ನು ಒಂದು ಮಂದಿರದಲ್ಲಿ ಸ್ಥಾಪಿತವಾದ ಶಿವಲಿಂಗವನ್ನು ಪೂಜಿಸಲು ಒಬ್ಬ ಅರ್ಚಕ ನನ್ನು ನಿಯುಕ್ತಗೊಳಿಸಿದ್ದರೂ ಕಾಲಾಂತರದಲ್ಲಿ ಕಾರಣಾಂತರಗಳಿಂದ ಅವನಿಗೆ ಬೇರೊಂದು ಊರಿಗೆ ಹೋಗುವ ಪ್ರಸಂಗ ಬಂದಾಗ ಆ ಪೂಜೆಯನ್ನು ಮತ್ತೊಬ್ಬರ್ವನಿಗೆ ವಹಿಸಿಕೊಡುವುದನ್ನು ಕಾಣುತ್ತೇವೆ. ಹೀಗಾಗಿ ಒಬ್ಬನೇ ಆದ ವ್ಯಕ್ತಿಯಿಂದ ಪ್ರತಿನಿತ್ಯ ಸ್ಥಾವರಲಿಂಗ ಪೂಜೆಯನ್ನು ನೆರವೇರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ದೇಹದ ಮೇಲೆ ಧರಿಸುವ ಲಿಂಗವೇ ಇಷ್ಟಲಿಂಗವೆಂಬುದಾಗಿ ತಿಳಿದುಬರುತ್ತದೆ. ಈ ಇಷ್ಟಲಿಂಗ ವನ್ನು ಸಾಧಕನು ತನ್ನ ಪ್ರಾಣದೋಪಾದಿಯಲ್ಲಿ ನಿರಂತರವಾಗಿ ಧರಿಸಿಕೊಂಡಿರುತ್ತಾನೆ. ಅಂತೆಯೇ ಇದು ಸಾಧಕನ ಪ್ರಾಣಲಿಂಗವೂ ಅಹುದು. ಗುರುಗಳು ಕ್ರಿಯಾ ದೀಕ್ಷೆಯನ್ನು ಮಾಡಿ ಶಿಷ್ಯನ ಹಸ್ತಪೀಠದಲ್ಲಿ ಇಷ್ಟಲಿಂಗವನ್ನು ದಯಪಾಲಿಸುವಾಗ ಶಿಷ್ಯನ ಪ್ರಾಣ ವನ್ನು ಆತನ ಲಿಂಗದಲ್ಲಿ ಹಾಗೂ ಲಿಂಗವನ್ನು ಆತನ ಪ್ರಾಣದಲ್ಲಿ ಸಮನ್ವಯಗೊಳಿಸಿ ಲಿಂಗವನ್ನು ದಯಪಾಲಿಸಿ–

ಪ್ರಾಣವದ್ಧಾರಣೀಯಂ ತತ್ ಪ್ರಾಣಲಿಂಗಮಿದಂ ತವ ।
ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ॥

(ಸಿ. ಶಿ. ೬–೨೬)

ಈ ರೀತಿಯಾಗಿ ಉಪದೇಶಿಸುತ್ತ "ಎಲೈ ಶಿಷ್ಯನೇ ! ನಿನಗೆ ದಯಪಾಲಿಸಿದ ಈ ಇಷ್ಟ ಲಿಂಗವು ನಿನ್ನ ಪ್ರಾಣಶಕ್ತಿಸಮವೇತವಾಗಿರುವುದರಿಂದ ಇದು ನಿನ್ನ ಪ್ರಾಣ ಲಿಂಗವೇ ಆಗಿರುವುದು. ಇದನ್ನು ಎಂದೂ ಯಾವ ಕಾಲಕ್ಕೂ ದೇಹದಿಂದ ಅಗಲಿಸಬೇಡ. ಸದಾ ನಿನ್ನ ದೇಹದಲ್ಲಿ ಪ್ರಾಣದೋಪಾದಿಯಲ್ಲಿ ಧರಿಸಿಕೊಂಡಿರು" ಎಂದು ವಿವರಿಸಿದ್ದಾರೆ. ಹೀಗೆ ಇಷ್ಟಲಿಂಗವು ಸಾಧಕನ ಪ್ರಾಣಶಕ್ತಿವಿಶಿಷ್ಟವಾಗಿರೋಣದರಿಂದ ಇದು ಬಾಹ್ಯ ಲಿಂಗವಾದುದಲ್ಲ. ಆದ್ದರಿಂದ ಬಾಹ್ಯಲಿಂಗವೆಂದರೆ ಇಷ್ಟಲಿಂಗವ್ಯತಿ ರಿಕ್ತವಾದ ಮಂದಿರಾದಿಗಳಲ್ಲಿ ಇರುವ ಸ್ಥಾವರಲಿಂಗವೆಂದೇ ಅರಿಯಬೇಕು.

ಶಿವಯೋಗಸಿದ್ಧಿಯನ್ನು ಪಡೆದವರೂ ಸಹ ಇಷ್ಟಲಿಂಗವನ್ನು ತ್ಯಜಿಸಕೂಡದು. ಏಕೆಂದರೆ ಪೂಜ್ಯಪಾದರಾದ ಶ್ರೀ ರೇಣುಕರು– 'ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್' ಈ ತೆರನಾಗಿ ಆದೇಶಿಸಿದ್ದಾರೆ. ಜ್ಞಾನಯೋಗ ಶಿವಯೋಗ ಗಳನ್ನು ಸಿದ್ಧಿಸಿಕೊಂಡರೂ ಸಹ 'ಧರ್ಮೋ ಲಿಂಗಾರ್ಚನಾತ್ಮಕಃ' ಎಂಬ ಆಚಾರ್ಯರ ಆದೇಶವನ್ನು ಅರಿತುಕೊಂಡು, ಇಷ್ಟಲಿಂಗಾರ್ಚನಾರೂಪವಾದ ಧರ್ಮವನ್ನು ತ್ಯಜಿಸ ಕೂಡದು. ಹಾಗೆ ಯಾರಾದರೂ ತ್ಯಜಿಸಿದ್ದರೆ ಅಥವಾ ತ್ಯಜಿಸಬಹುದಾಗಿ ಉಪದೇಶಿಸು ತ್ತಿದ್ದರೆ ಅವರಿಗೆ ವೀರಶೈವಧರ್ಮದ ಸೂಕ್ಷ್ಮಮರ್ಮದ ಅರಿವಿಲ್ಲವೆಂದೇ ತಿಳಿಯಬೇಕು.

ಶಿವಯೋಗ ಸಾಧಕನು ತನ್ನ ವಾಮಹಸ್ತಪೀಠದಲ್ಲಿ ಇಷ್ಟಲಿಂಗವನ್ನಿರಿಸಿಕೊಂಡು ಲಿಂಗಾಂಗ ಸಾಮರಸ್ಯಾನುಸಂಧಾನವನ್ನು ಮಾಡುತ್ತಿರುವಾಗ ಅವನ ದೇಹದ ಆಕೃತಿಯು ಪಂಚಸೂತ್ರ ಲಿಂಗಾಕಾರವಾಗಿಯೇ ತೋರುತ್ತಿರುತ್ತದೆ. ಶಾಸ್ತ್ರಗಳಲ್ಲಿ ಉಪದೇಶಿಸಿದ 'ಶಿವೋ ಭೂತ್ವಾ ಶಿವಂ ಯಜೇತ್', 'ರುದ್ರೋ ಭೂತ್ವಾ ರುದ್ರಮರ್ಚಯೇತ್' ಈ ಪ್ರಮಾಣವಚನಾನುಸಾರವಾಗಿ, ಶಿವನಾಗಿಯೇ ಶಿವನನ್ನು ಪೂಜಿಸುವ ಸ್ಥಿತಿಯನ್ನು ಸಾಧಕನು ಪಡೆದಿರುತ್ತಾನೆ. ಆದ್ದರಿಂದ ಇತರ ಶಿವಲಿಂಗಗಳ ಪೂಜೆಗಿಂತಲೂ ವೀರಶೈವರ ಇಷ್ಟಲಿಂಗ ಪೂಜೆಯು ವಿಶಿಷ್ಟವಾದುದಾಗಿದೆ. ಶ್ರೀ ಗುರುವು ದೀಕ್ಷೆಯ ಸಮಯದಲ್ಲಿ ತನ್ನ ಯೋಗಶಕ್ತಿಯಿಂದ ಶಿಷ್ಯನ ಪಶ್ಚಿಮ ಶಿಖಾಚಕ್ರದಲ್ಲಿರುವ ಚಿತ್ಕಲೆ ಯನ್ನು ಆಕರ್ಷಿಸಿ ಇಷ್ಟಲಿಂಗದಲ್ಲಿರಿಸಿ, ಆ ಇಷ್ಟಲಿಂಗವನ್ನು ಶಿಷ್ಯನ ವಾಮಹಸ್ತ ಪೀಠದಲ್ಲಿರಿಸುತ್ತಾನೆ. ಹೀಗೆ ಶಿಷ್ಯನ ಚಿತ್ಕಲಾವಿಶಿಷ್ಟವಾದ ಆ ಇಷ್ಟಲಿಂಗವು ಅವನ ಆತ್ಮ ಸ್ವರೂಪವೇ ಆಗಿರೋಣದರಿಂದ ಅದು ಅವನ ಪ್ರಾಣಲಿಂಗವೂ ಅಹುದು.

ಇಷ್ಟಲಿಂಗವನ್ನು ತನ್ನ ಆತ್ಮರೂಪವನ್ನಾಗಿ ಭಾವಿಸಿ ಅರ್ಚಿಸುವ ಸಾಧಕನು ಅಂತ–ರಂಗಸ್ಥವಾದ ಪ್ರಾಣಲಿಂಗವನ್ನು ಪೂಜಿಸುವ ಸಾಮರ್ಥ್ಯವನ್ನು ಪಡೆದು ಪ್ರಾಣಲಿಂಗಿ ಅವಸ್ಥೆಯನ್ನು ಪ್ರಾಪ್ತಮಾಡಿಕೊಳ್ಳಬಲ್ಲನು. ಇಷ್ಟಲಿಂಗದಲ್ಲಿ ಅನಾಸಕ್ತನಾದವನಿಗೆ ಪ್ರಾಣಲಿಂಗ ಉಪಾಸನೆಯು ಸಂಭವಿಸಲಾರದು. ತನ್ನ ವಾಮಹಸ್ತಪೀಠದಲ್ಲಿ ಇಷ್ಟಲಿಂಗ ವನ್ನಿರಿಸಿಕೊಂಡು ತ್ರಾಟಕ ಯೋಗದ ಸಹಾಯದಿಂದ ಸಂಪೂರ್ಣ ಮನೋವೃತ್ತಿಯನ್ನು ಇಷ್ಟಲಿಂಗದಲ್ಲಿ ಕೇಂದ್ರೀಕರಿಸಿ ಪುನಃ ಆ ಮನೋವೃತ್ತಿಯನ್ನು ಮುದ್ರೆಗಳ ಸಹಾಯ ದಿಂದ ಹೃದಯ ಪರ್ಯಂತವಾಗಿ ತೆಗೆದುಕೊಂಡು ಹೋಗಿ ಆ ಹೃದಯ ಪೀಠ ದಲ್ಲಿ ಇಷ್ಟಲಿಂಗಾಕಾರದ ಜ್ಯೋತಿರ್ಲಿಂಗವನ್ನು ಅನುಸಂಧಾನಿಸುವುದೇ ಪ್ರಾಣಲಿಂಗಾನು

ಸಂಧಾನವು. ಹೀಗೆ ಅಂತರಂಗದ ಪ್ರಾಣಲಿಂಗದತ್ತ ಪಯಣಿಸಲು ಇಷ್ಟಲಿಂಗವು ಅತ್ಯಂತ ಸಹಾಯಕವಾಗಿರುತ್ತದೆ.

ಸಂವಿಲ್ಲಿಂಗಪರಾಮರ್ಶೀ ಬಾಹ್ಯವಸ್ತುಪರಾಙ್ಮುಖಃ ।
ಯಃ ಸದಾ ವರ್ತತೇ ಯೋಗೀ ಪ್ರಾಣಲಿಂಗೀ ಸ ಉಚ್ಯತೇ ॥

(ಸಿ. ಶಿ. ೧೨–೧೦)

ಎಂಬ ಉಕ್ತಿಯಂತೆ ಅಂತರ್ಮುಖವೃತ್ತಿಯನ್ನು ಸಾಧಿಸಿದ ಶಿವಯೋಗಿಯು ಬಾಹ್ಯ ವಸ್ತುಗಳಿಂದ ವಿಮುಖನಾಗಿ ಆ ಚಿದ್ರೂಪವಾದ ಪ್ರಾಣಲಿಂಗವನ್ನೇ ಸದಾ ಚಿಂತಿಸುತ್ತಿರುವಾಗಿರೋಣದಿಂದ ಅವನಿಗೆ ಪ್ರಾಣಲಿಂಗಿಯೆಂಬುದಾಗಿ ಕರೆಯುತ್ತಾರೆ. ಪ್ರಾಣಲಿಂಗೋಪಾಸನೆಯು ಬಲಿಯಬೇಕಾದರೆ ಬಾಹ್ಯವಸ್ತುಪರಾಙ್ಮುಖತೆಯು ಅತ್ಯಂತ ಅವಶ್ಯವಾಗಿರುತ್ತದೆ. ಅಂತೆಯೇ ಪೂಜ್ಯಪಾದರು–

ಮಾಯಾವಿಕಲ್ಪಜಂ ವಿಶ್ವಂ ಹೇಯಂ ಸಂಚಿತ್ಯ ನಿತ್ಯಶಃ ।
ಚಿದಾನಂದಮಯೇ ಲಿಂಗೇ ವಿಲೀನಃ ಪ್ರಾಣಲಿಂಗವಾನ್ ॥

(ಸಿ. ಶಿ. ೧೨–೧೧)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಪ್ರಪಂಚವು ಮಾಯಾಮಯವಾದುದು. ಆದ್ದರಿಂದ ಮನುಷ್ಯನು ಬಹಿರ್ಮುಖವಾದಾಗ ಅವನ ಮನದಲ್ಲಿ ಪ್ರಾಪಂಚಿಕ ವಿಷಯಗಳ ಬಗ್ಗೆ ಮೋಹವು ಉತ್ಪನ್ನವಾಗುತ್ತದೆ. ತಾನು ಸಂಗ್ರಹಿಸಿರುವ ಪ್ರತಿಯೊಂದು ವಸ್ತುಗಳ ಮೇಲೆ ಮಮತ್ತ್ವವು ಆವರಿಸುವುದು. ಈ ಮಮತ್ತ್ವಬುದ್ಧಿಯೇ ಮೋಹವು. ಈ ತೆರನಾದ ಮಮತ್ತ್ವಬುದ್ಧಿಯು ಹೇಯವಾಗಿರುತ್ತದೆ. ಆದ್ದರಿಂದ ಅಂತರ್ಮುಖನಾದ ಸಾಧಕನು ಪ್ರಾಪಂಚಿಕ ಮಮತ್ತ್ವ ಬುದ್ಧಿಯನ್ನು ತ್ಯಜಿಸಿ, ಚಿದಾನಂದ ರೂಪವಾದ ಪ್ರಾಣಲಿಂಗದಲ್ಲಿಯೇ ವಿಲೀನಗಳಾದ ಮನೋವೃತ್ತಿಗಳುಳ್ಳವನಾಗಿ ಪ್ರಾಣಲಿಂಗಿಸ್ಥಲವನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ. 'ಪ್ರಾಣಲಿಂಗ' ಶಬ್ದವನ್ನು ಇನ್ನಷ್ಟು ಸ್ಪಷ್ಟಗೊಳಿಸುತ್ತ ಜಗದ್ಗುರು ರೇಣುಕಾಚಾರ್ಯರು–

ಸತ್ತಾಪ್ರಾಣಮಯೀ ಶಕ್ತಿಃಸದ್ರೂಪಂ ಪ್ರಾಣಲಿಂಗಕಮ್ ।
ತತ್ಸಾಮರಸ್ಯವಿಜ್ಞಾನಾತ್ ಪ್ರಾಣಲಿಂಗೀತಿ ಕಥ್ಯತೇ ॥

(ಸಿ. ಶಿ. ೧೨–೧೨)

ಈ ವಿಧವಾಗಿ ಉಪದೇಶಿಸಿದ್ದಾರೆ. ಪ್ರತಿಯೊಬ್ಬರ ಅಂತಃಕರಣದಲ್ಲಿ 'ಅಹಮಸ್ಮಿ'– 'ನಾನು ಇದ್ದೇನೆ' ಎಂಬ ಏನು ಸ್ಫೂರ್ತಿ ಇದೆಯೋ, ಇದಕ್ಕೇನೇ ಪ್ರಾಣಮಯೀ ಶಕ್ತಿಯೆಂದು ಕರೆಯುತ್ತಾರೆ. ಈ ಪ್ರಾಣಮಯೀ ಶಕ್ತಿವಿಶಿಷ್ಟವಾದ ಅಂತರಂಗದ ಜ್ಯೋತಿರ್ಲಿಂಗಕ್ಕೆ ಪ್ರಾಣಲಿಂಗವೆಂಬುದಾಗಿ ಕರೆಯುವುದುಂಟು. ಹೀಗೆ 'ಚಿದ್ರೂಪೋಽಹಂ' ಎಂಬ ಸಾಮರಸ್ಯರೂಪವಾದ ಜ್ಞಾನವನ್ನು ಪ್ರಾಪ್ತಿಮಾಡಿಕೊಂಡವನೇ ಪ್ರಾಣಲಿಂಗಿಯೆಂಬುದಾಗಿ ಕರೆಯಲ್ಪಡುವನು. ಈ ರೀತಿಯಾಗಿ ಪ್ರಾಣಲಿಂಗ ಸ್ವರೂಪ

ವನ್ನು ತಿಳಿದುಕೊಂಡ ಬಳಿಕ ಅದರ ಆರಾಧನೆಯ ವಿಧಾನವನ್ನು ಮುಂದೆ ಪೂಜ್ಯರು ಉಪದೇಶಿಸುವವರಿದ್ದಾರೆ ಎಂಬಲ್ಲಿಗೆ ಇಂದಿನ ಆಶೀರ್ವಚನವನ್ನು ಪೂರ್ಣ ಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೫ ಎಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೧

# ಪ್ರಾಣಲಿಂಗಾರ್ಚನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನಿನ್ನಿನ ಆಶೀರ್ವಚನದಲ್ಲಿ ಪ್ರಾಣಲಿಂಗ ಸ್ವರೂಪದ ಬಗ್ಗೆ ತಿಳಿದುಕೊಂಡವರಾಗಿದ್ದೀರಿ. 'ಅಹಂ ಚಿದ್ರೂಪಃ' ನಾನು ಚಿದ್ರೂಪನಾಗಿದ್ದೇನೆ. ಈ ರೀತಿಯಾಗಿ ಅಹಂ ಬೋಧಯುಕ್ತವಾದ ಜ್ಯೋತಿಯೇ ಪ್ರಾಣಲಿಂಗವು. ಈ ಪ್ರಾಣಲಿಂಗದ ಅರ್ಚನೆಯನ್ನು ಅದು ಹೇಗೆ ತಾನೆ ಮಾಡಬೇಕು ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯ ಜಗದ್ಗುರುಗಳವರು–

ಅಂತರ್ಗತಂ ಚಿದಾಕಾರಂ ಲಿಂಗಂ ಶಿವಮಯಂ ಪರಮ್ ।
ಪೂಜ್ಯತೇ ಭಾವಪುಷ್ಪೈರ್ಯತ್ ಪ್ರಾಣಲಿಂಗಾರ್ಚನಂ ಹಿ ತತ್ ॥

(ಸಿ. ಶಿ. ೧೨–೧೩)

ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಹೃದಯಕಮಲದಲ್ಲಿ ವಿರಾಜಮಾನವಾದ ಆ ಚಿದ್ರೂಪಶ್ರೇಷ್ಠ ಪ್ರಾಣಲಿಂಗದ ಪೂಜೆಯನ್ನು ಭಾವಮಯ ಪುಷ್ಪಗಳಿಂದ ಅರ್ಚಿಸುವುದೇ ಪ್ರಾಣಲಿಂಗಾರ್ಚನೆಯು. ಇಷ್ಟಲಿಂಗ ಪೂಜೆಯು ಬಾಹ್ಯ ಉಪಚಾರಗಳಿಂದ ಹೇಗೆ ಮಾಡಲ್ಪಡುವುದೋ ಹಾಗೆ ಈ ಪ್ರಾಣಲಿಂಗಾರ್ಚನೆಗೆ ಭಾವಮಯ ಸಾಮಗ್ರಿಗಳ ಅವಶ್ಯಕತೆ ಇರುತ್ತದೆ.

ಒಬ್ಬ ಮನುಷ್ಯನಿಗೆ ಸ್ವಪ್ನದಲ್ಲಿ ಸರ್ಪವು ಬೆನ್ನುಹತ್ತಿ ಕೊನೆಗೆ ಆತನನ್ನು ಕಚ್ಚಿಬಿಟ್ಟಿತು. ಆ ಸರ್ಪದ ವಿಷದಿಂದ ಮೂರ್ಛಿತನಾಗಿ ಕೆಳಗೆ ಬಿದ್ದ. ಈ ಅವಸ್ಥೆಯೊಳಗೆ ಅವನು ಅತ್ಯಂತ ಗಾಬರಿಯಾಗಿದ್ದನು. ಅಂತೆಯೇ ಸ್ವಪ್ನಕಳೆದು ಎಚ್ಚರಾದನು. ಎಚ್ಚರತ್ತ ಕೂಡಲೇ ಅಲ್ಲಿ ಸರ್ಪಾದಿಗಳು ಇಲ್ಲದಿದ್ದರೂ ಅವನ ಮನಸ್ಸಿನಲ್ಲುಂಟಾದ ಭಯ ಕಂಪನಾದಿಗಳು ಹೋಗಿರಲಿಲ್ಲ. ಆ ಭಯಭೀತಾವಸ್ಥೆಯಲ್ಲಿಯೇ ಓಡುತ್ತ ಓಡುತ್ತ ಓರ್ವ ವೈದ್ಯನ ಕಡೆಗೆ ಹೋದ. ಅಲ್ಲಿ ವೈದ್ಯನನ್ನು ಕಂಡು 'ನನಗೆ ಹಾವು ಕಚ್ಚಿದೆ ಔಷಧ ಕೊಡಿ' ಎಂದ. ವೈದ್ಯರು ಅವನ ದೇಹವನ್ನೆಲ್ಲ ಪರೀಕ್ಷಿಸಿದಾಗ ಹಾವು ಕಚ್ಚಿದ್ದಾಗಲೀ ವಿಷ ಏರಿದ್ದಾಗಲೀ ಕಂಡು ಬರಲಿಲ್ಲ. ಆಗ ವೈದ್ಯರು ಕೇಳುತ್ತಾರೆ, ''ನಿನಗೆ ಸರ್ಪ ಎಲ್ಲಿ ಕಚ್ಚಿದೆ?'' ಎಂದು. ಆಗ ಆತನು, ''ವೈದ್ಯರೆ, ನಾನು ಮಲಗಿದಾಗ ಒಂದು ಸ್ವಪ್ನವನ್ನು ಕಂಡೆ. ಆ ಸ್ವಪ್ನದಲ್ಲಿ ಒಂದು ಭಯಾನಕ ಕಾಳಿಂಗ ಸರ್ಪವು ಕಾಣಿಸಿಕೊಂಡಿತು. ಅದನ್ನು ಕಂಡು ಭಯಭೀತನಾಗಿ ನಾನು ಓಡುತ್ತಿರುವಾಗ ಅದು ಬೆನ್ನುಹತ್ತಿ ಬಂದು ಕಚ್ಚಿದೆ.'' ಎಂಬುದಾಗಿ ಸ್ವಪ್ನಾವಸ್ಥೆಯಲ್ಲಿ ನಡೆದ ಘಟನೆಯನ್ನು ವಿವರಿಸಿದ. ಆಗ ವೈದ್ಯರು ನಿನಗೆ ಸರ್ಪ ಕಚ್ಚಿದ್ದು ಸ್ವಪ್ನಾವಸ್ಥೆಯಲ್ಲಿ, ಆದರ ಉಪಚಾರಕ್ಕಾಗಿ ನೀನು ಸ್ವಪ್ನದಲ್ಲಿಯ ವೈದ್ಯರ ಕಡೆಗೆ ಹೋಗಬೇಕಾಗಿತ್ತು, ಸ್ವಪ್ನದ ಸರ್ಪದಂಶಕ್ಕೆ ನಮ್ಮಿಂದ ಉಪಚರಿಸಲಾಗುವುದಿಲ್ಲ

ಎಂಬುದಾಗಿ ಹೇಳಿಕಳುಹಿಸಿದರಂತೆ. ಹಾಗೆ ಅಂತರ್ಲಿಂಗಾರ್ಚನೆಗೆ ಅಂತರಂಗದ ಸಾಮಗ್ರಿಗಳು ಬೇಕೇ ವಿನಃ ಬಹಿರಂಗದ ಸಾಮಗ್ರಿಗಳು ಉಪಯೋಗವಾಗಲಾರವು. ಪೂಜ್ಯಪಾದರಾದ ರೇಣುಕ ಭಗವತ್ಪಾದರು–

ಅಂತಃಪವನಸಂಸ್ಪೃಷ್ಟೇ ಸುಸೂಷ್ಮಾಂಬರಶೋಭಿತೇ ।
ಮೂರ್ಧನ್ಯಚಂದ್ರವಿಗಲತ್ಸುಧಾಸೇಕಾತಿಶೀತಲೇ ॥

ಬದ್ಧೇಂದ್ರಿಯನವದ್ವಾರೇ ಬೋಧದೀಪೇ ಹೃದಾಲಯೇ ।
ಪದ್ಮಪೀಠೇ ಸಮಾಸೀನಂ ಚಿಲ್ಲಿಂಗಂ ಶಿವವಿಗ್ರಹಮ್ ।
ಭಾವಯಿತ್ವಾ ಸದಾಕಾಲಂ ಪೂಜಯೇದ್ ಭಾವವಸ್ತುಭಿಃ ॥

(ಸಿ. ಶಿ. ೧೨ ; ೧೪–೧೫)

ಈ ರೀತಿಯಾಗಿ ಪ್ರಾಣಲಿಂಗಸ್ವರೂಪವನ್ನು ವಿವರಿಸಿ ಅದನ್ನು ಭಾವಮಯ ವಸ್ತುಗಳಿಂದ ಸದಾಕಾಲದಲ್ಲಿ ಪೂಜಿಸಬೇಕೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಅವರ ಈ ಉಪದೇಶದ ಪ್ರಕಾರ ಶಿವಯೋಗಿಯು ತನ್ನ ನವದ್ವಾರಗಳನ್ನು ಬಂಧಿಸಿಕೊಂಡು ಧ್ಯಾನಸ್ಥನಾಗಿ ಕುಳಿತಾಗ ಆತನ ಬ್ರಹ್ಮರಂಧ್ರದಲ್ಲಿರುವ ಚಂದ್ರಮಂಡಲದಿಂದ ಅಮೃತ ಬಿಂದುವಿನ ವರ್ಷಾವವಾಗಿ ಅತೀ ಶೀತಲವಾದ ಆತನ ಹೃದಯಾಕಾಶದಲ್ಲಿ ಶಿವಜ್ಞಾನ ರೂಪವಾದ ಜ್ಯೋತಿಯು ಪ್ರಕಾಶಮಾನವಾಗಿ ತೋರುತ್ತದೆ. ಅದು ಶರೀರಾಂತರ್ಗತ ಪ್ರಾಣವಾಯುವಿನಿಂದ ವ್ಯಾಪ್ತವಾಗಿರುತ್ತದೆ. ಹೀಗೆ ಅಂತರಂಗದಲ್ಲಿ ತೋರುವ ಆ ಪ್ರಕಾಶದ ಬೆಳಕಿನಲ್ಲಿ ಆತನ ಹೃದಯಸ್ಥ ದ್ವಾದಶದಲಕಮಲ ಕರ್ಣಿಕೆಯಲ್ಲಿ ಮಂಗಲ ಮಯವೂ ಚಿದ್ರೂಪವೂ ಆದ ಪ್ರಾಣಲಿಂಗವೂ ವಿರಾಜಿಸುತ್ತಿರುವುದು ಅನುಭವ ಗೋಚರವಾಗುವುದು. ಈ ಪ್ರಾಣಲಿಂಗವನ್ನು ಮುಂದೆ ವಿವರಿಸುವ ಭಾವಮಯ ಸಾಮಗ್ರಿಗಳಿಂದ ಪೂಜಿಸುವುದೇ ಪ್ರಾಣಲಿಂಗಾರ್ಚನೆಯು. ಆ ಭಾವ ಸಾಮಗ್ರಿಗಳ ವಿಷಯವಾಗಿ ಪೂಜ್ಯಪಾದರು–

ಕ್ಷಮಾಽಭಿಷೇಕಸಲಿಲಂ ವಿವೇಕೋ ವಸ್ತ್ರಮುಚ್ಯತೇ ।
ಸತ್ಯಮಾಭರಣಂ ಪ್ರೋಕ್ತಂ ವೈರಾಗ್ಯಂ ಪುಷ್ಪಮಾಲಿಕಾ ॥

ಗಂಧಃ ಸಮಾಧಿಸಂಪತ್ತಿರಕ್ಷತಾ ನಿರಹಂಕೃತಿಃ ।
ಶ್ರದ್ಧಾಧೂಪೋ ಮಹಾಜ್ಞಾನಂ ಜಗದ್ಭಾಷಿ ಪ್ರದೀಪಿಕಾ ॥

ಭ್ರಾಂತಿಮೂಲಪ್ರಪಂಚಸ್ಯ ನಿವೇದ್ಯಂ ತನ್ನಿವೇದನಮ್ ।
ಮೌನಂ ಘಂಟಾಪರಿಸ್ಪಂದಸ್ತಾಂಬೂಲಂ ವಿಷಯಾರ್ಪಣಮ್ ॥

ವಿಷಯಭ್ರಾಂತಿರಾಹಿತ್ಯಂ ತತ್ಪ್ರದಕ್ಷಿಣಕಲ್ಪನಾ ।
ಬುದ್ಧೇಸ್ತದಾತ್ಮಿಕಾ ಶಕ್ತಿರ್ನಮಸ್ಕಾರಕ್ರಿಯಾ ಮತಾ ॥

ಏವಂ ವಿಧೈರ್ಭಾವಶುದ್ಧೈರುಪಚಾರೈರದೂಷಿತೈಃ ।
ಪ್ರತ್ಯುನ್ಮುಖಮನಾ ಭೂತ್ವಾ ಪೂಜಯೇಲ್ಲಿಂಗಮಾಂತರಮ್ ॥

(ಸಿ. ಶಿ. ೧೨ ; ೧೬–೨೦)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ಪ್ರಾಣಲಿಂಗದ ಅಭಿಷೇಕಕ್ಕಾಗಿ ಕ್ಷಮಾಗುಣವೇ ಶುದ್ಧ ಜಲವಾಗಿರುತ್ತದೆ. ಕ್ಷಮಾ ಅಥವಾ ಕ್ಷಮೆಯೆಂದರೆ ಸಹಿಸಿಕೊಳ್ಳುವುದು. ಪ್ರತಿಕ್ರಿಯೆಯನ್ನು ಮಾಡುವ ಸಾಮರ್ಥ್ಯವಿದ್ದರೂ ಆ ರೀತಿ ಪ್ರತಿಕ್ರಿಯೆ ಮಾಡದೆ ತಾಳಿಕೊಳ್ಳುವುದಕ್ಕೆ ಕ್ಷಮೆಯೆಂದು ಕರೆಯುತ್ತಾರೆ. ಇದೂ ಒಂದು ಸದ್ಗುಣವು ವಿರೋಧಕ್ಕೆ ಪ್ರತಿವಿರೋಧ ಮಾಡುತ್ತ ಹೋದರೆ ದ್ವೇಷ ಬೆಳೆಯುತ್ತ ಹೋಗುವುದು. ಈ ದ್ವೇಷದಿಂದ ವ್ಯಕ್ತಿಯ ಅಥವಾ ಸಮಾಜದ ಪ್ರಗತಿಯು ಕುಂಠಿತವಾಗುವುದು. ಕ್ಷಮೆ ಯಿರದಿದ್ದರೆ ದ್ವೇಷಕ್ಕೆ ಪ್ರತಿ ದ್ವೇಷ ಸಾಧಿಸುವಲ್ಲಿಯೇ ದೈಹಿಕ, ಬೌದ್ಧಿಕ ಹಾಗೂ ಆರ್ಥಿಕ ಬಲಗಳು ಹ್ರಾಸವಾಗುತ್ತವೆ. ಕ್ಷಮಾಗುಣ ರಹಿತನಾದ ವ್ಯಕ್ತಿಯು ಈ ಮೂರು ಬಲಗಳನ್ನು ನಿರರ್ಥಕಗೊಳಿಸಿಕೊಂಡು ಕೊನೆಗೆ ನಿರಾಶನಾಗುತ್ತಾನೆ. ಆದ್ದರಿಂದ ವ್ಯಕ್ತಿಯ ಹಾಗೂ ಸಮಾಜದ ವಿಕಾಸಕ್ಕೆ ಕ್ಷಮೆಯ ಅವಶ್ಯಕತೆ ಇರುತ್ತದೆ. ಅಂತರಂಗ ಸಾಧನೆಯಲ್ಲಿ ಪ್ರವೃತ್ತನಾದವನಿಗೆ ಪ್ರಪ್ರಥಮವಾಗಿ ಬೇಕಾಗುವ ಸದ್ಗುಣವೇ ಕ್ಷಮೆಯು. ಅಂತೆಯೇ ಪೂಜ್ಯಪಾದರು ಕ್ಷಮಾಗುಣಕ್ಕೆ ಅಭಿಷೇಕಜಲವೆಂದು ಭಾವಿಸಲು ಉಪದೇಶಿಸಿದ್ದಾರೆ.

ಇನ್ನು ಅಭಿಷೇಕದ ನಂತರ 'ವಿವೇಕೋ ವಸ್ತ್ರಮುಚ್ಯತೇ' ಎಂಬುದಾಗಿ ಉಪದೇಶಿಸಿ ಅಭಿಷಿಕ್ತವಾದ ಪ್ರಾಣಲಿಂಗವನ್ನು ನಿರ್ದ್ರವಗೊಳಿಸಲು ವಿವೇಕವೆಂಬ ವಸ್ತ್ರವನ್ನು ಉಪಯೋಗಿಸಲು ನಿರ್ದೇಶಿಸಿದ್ದಾರೆ. ಅಲ್ಲಿ ವಿವೇಕವೇ ವಸ್ತ್ರವೆಂಬ ಅರ್ಥವು. ವಿವೇಕವು ನಿತ್ಯಾನಿತ್ಯವಸ್ತುವಿವೇಕವೆಂತಲೂ ಮತ್ತು ಆತ್ಮಾನಾತ್ಮವಸ್ತುವಿವೇಕ ವೆಂತಲೂ ಎರಡು ವಿಧವಾಗಿರುತ್ತದೆ ಸದಾ ಅನಿತ್ಯ ಹಾಗೂ ಅನಾತ್ಮವಸ್ತುಗಳ ಚಿಂತನೆ ಯಲ್ಲಿಯೇ ಮನಸ್ಸು ತೊಡಗಿದರೆ, ಆ ಮನಸ್ಸಿಗೆ ಅಂತರಂಗ ಪ್ರವೃತ್ತಿಯು ಸಮನಿಸದು. ಅಂತೆಯೇ ಪ್ರಾಣಲಿಂಗಾರ್ಚನೆಯಲ್ಲಿ ತೊಡಗಬೇಕಾದರೆ ಅನಿತ್ಯ ಅನಾತ್ಮವಸ್ತುಗಳ ಚಿಂತನೆಯನ್ನು ದೂರೀಕರಿಸಬೇಕಾಗುತ್ತದೆ. ಈ ವಿವೇಕದಿಂದ ಸಾಧಕನು ಅನಿತ್ಯ ಹಾಗೂ ಅನಾತ್ಮ ವಸ್ತುಗಳ ಮೇಲಿನ ಅಭಿಮಾನ ಹಾಗೂ ಅಹಂಕಾರಗಳನ್ನು ದೂರೀಕರಿಸಿ ಕೊಂಡು ಆತ್ಮನಿಷ್ಠನಾಗುತ್ತಾನೆ. ಶರೀರವನ್ನೇ ಮೊದಲುಗೊಂಡು ಅಹಂಕಾರ ಪರ್ಯಂತ ಗಳಾದ ಎಲ್ಲ ತತ್ತ್ವಗಳು ಅನಾತ್ಮರೂಪವಾದವುಗಳು ಎಂಬುದಾಗಿ ತಿಳಿದುಕೊಂಡು, ಅವೆಲ್ಲವುಗಳಿಗಿಂತ ವಿಲಕ್ಷಣವಾದ ಸಚ್ಚಿದಾನಂದಸ್ವರೂಪವಾದ ತತ್ತ್ವವೇ ಆತ್ಮತತ್ತ್ವ ವೆಂಬುದಾಗಿ ಅರಿಯುವುದೇ ಆತ್ಮಾನಾತ್ಮವಿವೇಕವು. ಇಂತಹ ವಿವೇಕವನ್ನು ಸಾಧಿಸಿ ಕೊಂಡಾಗಲೇ ಸಾಧಕನಲ್ಲಿ ಆತ್ಮನಿಷ್ಠೆಯು ಬೆಳೆದು ಅವನು ತನ್ನ ಆತ್ಮದ ಚಿದ್ರೂಪ ಚಿಂತನಾರೂಪವಾದ ಪ್ರಾಣಲಿಂಗಾರ್ಚನೆಯಲ್ಲಿ ಪ್ರವೃತ್ತನಾಗಬಲ್ಲನು. ಅಂತೆಯೇ ಪೂಜ್ಯಪಾದರು ಪ್ರಾಣ ಲಿಂಗಾರ್ಚನೆಯಲ್ಲಿ ವಿವೇಕವು ವಸ್ತ್ರರೂಪವಾಗಿದೆಯೆಂದು ವಿವರಿಸಿದ್ದಾರೆ. ಲಿಂಗದ ಮೇಲಿನ ಜಲಬಿಂದುಗಳನ್ನು ಒರೆಸಿಹಾಕಲು ವಸ್ತ್ರವು ಸಹಾಯಕ ವಾಗಿರುವಂತೆ, ಅನಾತ್ಮವಸ್ತುಗಳನ್ನು ಆತ್ಮವಸ್ತುವಿನಿಂದ ಬೇರ್ಪಡಿಸಿ, ಅವುಗಳ ಮೋಹ ವನ್ನು ನಿವಾರಿಸುವಲ್ಲಿ ವಸ್ತ್ರದೋಪಾದಿಯಲ್ಲಿ ಸಹಾಯಕವಾಗಿರೋಣದರಿಂದ ವಿವೇಕಕ್ಕೆ ವಸ್ತ್ರವೆಂಬುದಾಗಿ ವಿವರಿಸಿದ್ದಾರೆ.

'ಸತ್ಯಮಾಭರಣಂ ಪ್ರೋಕ್ತಮ್' ಎಂಬ ಆಚಾರ್ಯೋಕ್ತಿಯಂತೆ ಪ್ರಾಣಲಿಂಗಕ್ಕೆ ಸತ್ಯವೇ ಆಭೂಷಣವು. 'ಸತ್ಯಂವದ' ಎಂಬುದಾಗಿ ವೇದದ ಆದೇಶವಿದೆ. ಮನುಷ್ಯನು

ಸ್ವಭಾವತಃ ಸತ್ಯವಾದಿಯಾಗಿದ್ದರೂ, ಪರಿಸ್ಥಿತಿ ಪ್ರಸಂಗಗಳ ಮೂಲಕವಾಗಿ ಅಸತ್ಯ ಭಾಷಿಯಾಗುತ್ತಾನೆ. ಆ ಅಸತ್ಯ ಭಾಷಣವೇ ಅಧಿಕಾಭ್ಯಾಸವಾಗಿ ಕೊನೆಗೆ ಸತ್ಯ ಮಾತನಾಡುವುದು ಅಸಾಧ್ಯವೇ ಎಂಬಷ್ಟು ಸ್ಥಿತಿಯನ್ನು ತಲುಪುತ್ತಾನೆ. ಇದೇ ರೀತಿಯಾಗಿ ಅಸತ್ಯವನ್ನು ಮಾತನಾಡುತ್ತ ಹೋಗಿ ಅಂತರಂಗದ ಸ್ವಾಭಾವಿಕ ಸೌಂದರ್ಯವನ್ನು ಕಳೆದುಕೊಳ್ಳುತ್ತಾನೆ. ಆದ್ದರಿಂದ ಸತ್ಯನಿಷ್ಠತೆಯು ಒಂದು ಸುಂದರವಾದ ಆಭರಣ ವಿದ್ದಂತೆ. ಎಲ್ಲ ಧರ್ಮಗಳಿಗೆ ಸತ್ಯವೇ ಮೂಲಕಾರಣವಾಗಿದೆ. ಸತ್ಯಕ್ಕಿಂತ ಶ್ರೇಷ್ಠವಾದ ತಪಸ್ಸು ಬೇರೆ ಇರುವುದಿಲ್ಲ, ಎಲ್ಲ ಲೋಕಗಳಲ್ಲಿ ಸತ್ಯವೇ ವಿಜಯಶಾಲಿಯಾಗುವುದು. ಮನುಷ್ಯನ ಸರ್ವವಿಧ ಅಭ್ಯುದಯವು ಸತ್ಯದಲ್ಲಿಯೇ ನಿಹಿತವಾಗಿದೆ. ಅಸತ್ಯವನ್ನು ಮಾತನಾಡುವ ಅಭ್ಯಾಸ ಅಧಿಕವಾಗಿದ್ದರೆ, ಕ್ರಮವಾಗಿ ಅಭ್ಯಾಸದ ಬಲದಿಂದ ಅಸತ್ಯ ವಾಗಿ ಮಾತನಾಡುವ ಪ್ರವೃತ್ತಿಯನ್ನು ಕಡಿಮೆ ಮಾಡಿಕೊಂಡು ಮನುಷ್ಯನು ಸತ್ಯನಿಷ್ಠ ನಾಗಬಲ್ಲನು. ಕೌರವರು ಹಾಗೂ ಪಾಂಡವರು ಗುರುಕುಲದಲ್ಲಿ ಅಭ್ಯಾಸ ಮಾಡುತ್ತಿರು ವಾಗ ಗುರುಗಳಾದ ದ್ರೋಣಾಚಾರ್ಯರು 'ಸತ್ಯಂ ವದ' ಎಂಬ ವೇದವಾಕ್ಯವನ್ನು ಉಪದೇಶಿಸಿ ನಾಳೆ ಅದನ್ನು ಅಭ್ಯಾಸ ಮಾಡಿಕೊಂಡು ಬನ್ನಿ ಎಂಬುದಾಗಿ ಆದೇಶ ಮಾಡುತ್ತಾರೆ. ಮರುದಿವಸ ಎಲ್ಲರೂ ಆ ಶಬ್ದವನ್ನು ಕಂಠಸ್ಥಮಾಡಿ ಗುರುಗಳಿಗೆ ತಮ್ಮ ಅಭ್ಯಾಸವನ್ನು ಒಪ್ಪಿಸಿದರು. ಆದರೆ ಯುಧಿಷ್ಠಿರನು ಮಾತ್ರ ಸುಮ್ಮನೆ ಕುಳಿತಿದ್ದನ್ನು ನೋಡಿ ಗುರುಗಳು ಕೇಳಿದರು–''ಏನು ಯುಧಿಷ್ಠಿರಾ ! ನಿನಗೆ ಈ ಒಂದು ಉಕ್ತಿಯು ಅಭ್ಯಾಸವಾಗಿಲ್ಲವೇ ?'' ಆಗ ಯುಧಿಷ್ಠಿರನು ''ಗುರುಗಳೇ ಅಭ್ಯಾಸ ಮಾಡುತ್ತಲಿದ್ದೇನೆ ಆದರೆ ಇನ್ನೂ ಪೂರ್ಣವಾಗಿಲ್ಲ'' ಹೀಗೆ ಅನೇಕ ದಿನಗಳು ಕಳೆದನಂತರ ಒಂದ ದಿನ ''ಗುರುಗಳೇ, ಇಂದು ನನ್ನ ಅಭ್ಯಾಸವು ಪೂರ್ಣವಾಗಿದೆ'' ಎಂದು ಹೇಳಿದನು. ''ಇಷ್ಟು ದಿನ ಅದು ಹೇಗೆ ನೀನು ಅಭ್ಯಾಸಮಾಡಿದಿ ?'' ಎಂದು ಗುರುಗಳು ಕೇಳಿದಾಗ ಯುಧಿಷ್ಠಿರನು ''ಗುರುಗಳೇ ! ನಾನು ಮೊದಲು ಬಹಳಷ್ಟು ಅಸತ್ಯವನ್ನೇ ಮಾತನಾಡುತ್ತಿದ್ದೆನು. ತಾವು 'ಸತ್ಯಂ ವದ' ಅರ್ಥಾತ್ ಸತ್ಯ ನುಡಿಯುವ ಅಭ್ಯಾಸ ಮಾಡಿಕೊಂಡು ಬರಲು ಉಪದೇಶಿಸಿದ ನಂತರ ಅಸತ್ಯದ ಪ್ರಮಾಣವನ್ನು ಪ್ರತಿ ದಿವಸ ಕಡಿಮೆ ಮಾಡುತ್ತ ಇಂದು ಅಸತ್ಯ ಪ್ರವೃತ್ತಿಯನ್ನು ಸಂಪೂರ್ಣವಾಗಿ ಬಿಟ್ಟು ನಾನು ಸತ್ಯಭಾಷಿಯಾಗಿರುತ್ತೇನೆ'' ಎದನು. ಅಭ್ಯಾಸಬಲದಿಂದಲೇ ಮನುಷ್ಯನು ಅಸತ್ಯ ಭಾಷಿಯಾಗಿರುವದರಿಂದ ಅದನ್ನು ಸತತಾಭ್ಯಾಸದ ಮೂಲಕವೇ ಕಳೆದುಕೊಳ್ಳಲು ಸಾಧ್ಯವಾಗಿರುತ್ತದೆ. ಹೀಗೆ ಶಾಸ್ತ್ರವಚನಗಳನ್ನು ಆಚರಣೆಗಳ ಮೂಲಕ ಅಭ್ಯಾಸ ಮಾಡುವ ಮನುಷ್ಯನು ತನ್ನ ಜೀವನದಲ್ಲಿ ಉಜ್ವಲ ಭವಿಷ್ಯವನ್ನು ಪ್ರಾಪ್ತಿಮಾಡಿ ಕೊಳ್ಳುವನು. ಅಸತ್ಯವನ್ನು ನುಡಿಯುವ ಮನುಷ್ಯನು ಅದೆಷ್ಟು ಅಲಂಕಾರಗಳನ್ನು ಧರಿಸಿಕೊಂಡರೂ ಅವು ಅವನಿಗೆ ಬಹಿರಂಗವಾಗಿ ಶೋಭೆಯನ್ನು ತಂದು ಕೊಡಬಲ್ಲವೇ ವಿನಃ ಅಂತರಂಗದ ಶಾಂತಿಯನ್ನು ತಂದು ಕೊಡಲಾರವು. ಆದ್ದರಿಂದ ಪ್ರಾಣ ಲಿಂಗಾರ್ಚನೆಯಲ್ಲಿ ಸತ್ಯವೇ ಆ ಲಿಂಗಕ್ಕೆ ಧರಿಸುವ ಆಭರಣವೆಂಬುದಾಗಿ ಆಚಾರ್ಯರು ಉಪದೇಶಿಸಿದ್ದಾರೆ. ಇದರಿಂದ ಪ್ರಾಣಲಿಂಗಾರ್ಚನೆಗೆ ಸತ್ಯಸಂಧತೆಯು ಅತ್ಯಾವಶ್ಯಕ ವೆಂಬುದು ಕಂಡುಬರುತ್ತದೆ. ಆಭರಣವು ಸೌಂದರ್ಯವರ್ಧನೆಗೆ ಸಾಧನವಾಗಿರುವಂತೆ

ಸತ್ಯನಿಷ್ಠತೆಯಿಂದ ಪ್ರಾಣಲಿಂಗಾರ್ಚನೆಯ ವೈಭವವು ವೃದ್ಧಿಂಗತವಾಗೋಣದರಿಂದ ಪೂಜ್ಯಪಾದರು ಸತ್ಯವನ್ನು ಪ್ರಾಣಲಿಂಗದ ಆಭರಣವೆಂಬುದಾಗಿ ಉಪದೇಶಿಸಿದ್ದಾರೆ.

ಇಷ್ಟಲಿಂಗಕ್ಕೆ ರುದ್ರಾಕ್ಷ, ಸ್ಫಟಿಕ ಮತ್ತು ರತ್ನದ ಮಾಲೆಗಳನ್ನು ಅಲಂಕಾರವಾಗಿ ತೊಡಿಸುವಂತೆ, ಪ್ರಾಣಲಿಂಗಾರ್ಚನೆಯಲ್ಲಿ ಸತ್ಯಸಂಧತೆಯೇ ಶ್ರೇಷ್ಠವಾದ ಆಭರಣವು. ಸತ್ಯನಿಷ್ಠನಾದ ವ್ಯಕ್ತಿಯು ಪ್ರಾಣಲಿಂಗಾರ್ಚಕನಾಗಬಲ್ಲನೆಂಬುದು ಮಹಾಚಾರ್ಯರ ಅಭಿಮತವಾಗಿರುವುದು. ಸುವರ್ಣಾಲಂಕಾರಕ್ಕಿಂತಲೂ ಸದ್ಗುಣಾಲಂಕಾರವು ಅತ್ಯುತ್ಕೃಷ್ಟವಾದುದು. ಅಂತೆಯೇ 'ಗುಣಾಃ ಪೂಜಾಸ್ಥಾನಮ್ ಗುಣಿಷು ನ ಚ ಲಿಂಗಂ ನ ಚ ವಯಃ' ಎಂಬುದಾಗಿ ಹಿರಿಯರ ಉಪದೇಶವಿದೆ. ಸತ್ಯವನ್ನು ನುಡಿಯುವಾಗ ಅನೇಕ ತೊಂದರೆಗಳು ಬಂದರೂ ಅವುಗಳನ್ನು ಲೆಕ್ಕಿಸದೆ ಸತ್ಯನಿಷ್ಠನಾದಾಗ ಮಾತ್ರ ಸಾಧಕನು ಪ್ರಾಣಲಿಂಗಾರ್ಚನಾ ಸಾಮರ್ಥ್ಯವನ್ನು ಪಡೆಯಬಹುದು. ಹೀಗೆ ಸತ್ಯದ ಮಹತ್ತ್ವವನ್ನು ತಿಳಿಯಪಡಿಸಿ, ಪೂಜ್ಯ ಜಗದ್ಗುರುಗಳವರು 'ವೈರಾಗ್ಯಂ ಪುಷ್ಪಮಾಲಿಕಾ' ಎಂಬುದಾಗಿ ಉಪದೇಶಿಸಿದ್ದಾರೆ.

ಸಕಲ ಸುಖದ ಮೂಲವೇ ವೈರಾಗ್ಯವು. ಐಹಿಕ ಮತ್ತು ಪಾರಲೌಕಿಕಗಳಾದ ಕ್ಷಣಿಕ ಸುಖಗಳಲ್ಲಿ ಆಸಕ್ತನಾದವನು ಕ್ಷಣ ಕ್ಷಣದಲ್ಲಿ ಅನಂತ ದುಃಖವನ್ನೇ ಅನುಭವಿಸುತ್ತಾನೆ. ಶಬ್ದಸ್ಪರ್ಶಾದಿ ವಿಷಯಗಳು ಆಪಾತತಃ ಸುಖವನ್ನು ಕೊಟ್ಟರೂ, ಜೀವನದುದ್ದಕ್ಕೂ ಅನಂತ ದುಃಖಗಳನ್ನೇ ಕೊಡುವವುಗಳಾಗಿವೆ. ಈ ಸುಖಗಳ ಅಭಿಲಾಷೆಯುಳ್ಳ ಮನುಷ್ಯನು ಸದಾ ಬಹಿರ್ಮುಖಿಯೇ ಆಗಿರುತ್ತಾನೆ. ಇವುಗಳಲ್ಲಿ ಅನಾಸಕ್ತಿಯನ್ನು ತೋರದೆ ಅರ್ಥಾತ್ ವೈರಾಗ್ಯವನ್ನು ತಾಳದೆ ಅಂತರ್ಮುಖ ಪ್ರವೃತ್ತಿಯು ಬೆಳೆಯಲು ಸಾಧ್ಯವಾಗುವುದಿಲ್ಲ. ಅಂತರ್ಮುಖ ಪ್ರವೃತ್ತಿಯನ್ನು ಸಾಧಿಸದೆ ಪ್ರಾಣಲಿಂಗಾರ್ಚನೆಯು ಸಾಧಿಸದು. ಅಂತೆಯೇ ಪೂಜ್ಯಪಾದರು ಸಾಧಕನಿಗೆ ವೈರಾಗ್ಯದ ಅವಶ್ಯಕತೆಯನ್ನು ವಿವರಿಸುತ್ತ, ಆ ವೈರಾಗ್ಯವೆಂಬ ಸದ್ಗುಣವನ್ನು ಪ್ರಾಣಲಿಂಗಕ್ಕೆ ಧರಿಸುವ ಪುಷ್ಪಮಾಲೆಯೆಂಬುದಾಗಿ ವಿವರಿಸಿದ್ದಾರೆ. ಪುಷ್ಪಮಾಲೆಯು ತಾನು ಇರುವಲ್ಲಿ ತನ್ನ ಸುತ್ತಮುತ್ತಲಿರುವ ಪರಿಸರವನ್ನು ಸುಗಂಧಮಯವನ್ನಾಗಿ ಮಾಡುವಂತೆ, ವೈರಾಗ್ಯವೆಂಬ ಸದ್ಗುಣಯುಕ್ತವಾದ ಪ್ರಾಣಲಿಂಗಾರ್ಚಕನು ತನ್ನ ಜೀವನವನ್ನು ವಿಷಯವಾಸನಾ ರೂಪವಾದ ದುರ್ಗಂಧದಿಂದ ಮುಕ್ತಗೊಳಿಸಿಕೊಂಡು, ವೈರಾಗ್ಯವೆಂಬ ಸುಗಂಧದಿಂದ ಪರಿಪೂರ್ಣವನ್ನಾಗಿ ರೂಪಿಸಿಕೊಳ್ಳುತ್ತಾನೆ. ಆದ್ದರಿಂದ ಪ್ರಾಣಲಿಂಗಾರ್ಚನೆಗೆ ವಿಷಯವೈರಾಗ್ಯವು ಒಂದು ಶ್ರೇಷ್ಠವಾದ ಸಾಧನವಾಗಿದೆ. ವಿಷಯಾಸಕ್ತತೆಯು ದುರ್ಗಂಧಮಯವಾದ ಜೀವನವಿದ್ದಂತೆ. ಪ್ರತಿಕ್ಷಣ ವಿಷಯ ಭೋಗದಲ್ಲಿಯೇ ಆಸಕ್ತರಾದವರಿಗೆ ಅದರ ದುರ್ಗಂಧತೆಯ ಅರಿವಾಗಲಾರದು. ಒಮ್ಮೆ ಓರ್ವ ಆಗರ್ಭ ಶ್ರೀಮಂತನು ಶಿವಯೋಗಸಿದ್ಧರಾದ ಶಿವಾಚಾರ್ಯರೋರ್ವರಿಗೆ ಬಿನ್ನಹಕ್ಕಾಗಿ ನಿಮಂತ್ರಣಕೊಟ್ಟಿದ್ದನು. ಗುರುಗಳು ತನ್ನ ಮನೆಗೆ ದಯಮಾಡಿಸುತ್ತಿರುವುದರಿಂದ ಮನೆಯನ್ನು ಸುಣ್ಣಬಣ್ಣಗಳಿಂದ ಸಾರಿಸಿ, ಸುಗಂಧದ್ರವ್ಯಗಳನ್ನು ಪ್ರೋಕ್ಷಿಸಿ ಅಲಂಕೃತಗೊಳಿಸಿದ್ದನು. ಮನೆಯೆಲ್ಲ ಸುಗಂಧಭರಿತವಾಗಿದ್ದರೂ, ಮನೆಯ ಯಜಮಾನನ ಅಂತಃಕರಣವು ವಿಷಯ ವಾಸನೆಯೆಂಬ ದುರ್ಗಂಧದಿಂದ ತುಂಬಿಹೋಗಿತ್ತು. ಆಮಂತ್ರಣದ ಮೇರೆಗೆ ಮನೆಗೆ ದಯ

ಮಾಡಿಸಿದ ಗುರುಗಳು ಕ್ಷಣಕಾಲ ವಿಶ್ರಮಿಸಿ, ಮನೆಯ ವಾತಾವರಣವನ್ನೆಲ್ಲ ತಿಳಿದು ಕೊಂಡು ವಸ್ತ್ರದಿಂದ ಮೂಗು ಮುಚ್ಚಿಕೊಂಡು ಕುಳಿತರು. ಗುರುಗಳು ಮೂಗು ಮುಚ್ಚಿಕೊಂಡದ್ದನ್ನು ನೋಡಿ, ಆ ಮನೆಯ ಯಜಮಾನನಿಗೆ ಆಶ್ಚರ್ಯವಾಯಿತು. ಆಗ ಆತನು ಅವರಿಗೆ ವಿನಮ್ರವಾಗಿ ಕೇಳಿದ, ''ಗುರುದೇವಾ ! ಇಷ್ಟು ಸ್ವಚ್ಛ ಹಾಗೂ ಸುಗಂಧಮಯವಾಗಿರುವ ಮನೆಯಲ್ಲಿ ತಮಗೆ ದುರ್ಗಂಧವು ಎಲ್ಲಿಂದ ತಾನೆ ಬರುತ್ತಲಿದೆ ?'' ಆಗ ಗುರುಗಳು ಹೇಳಿದ್ದೇನೆಂದರೆ, ''ನಿನ್ನ ಮನಸ್ಸು ದುರ್ವಾಸನೆ ಯಿಂದ ತುಂಬಿಕೊಂಡಿರುತ್ತದೆ.'' ಶ್ರೀಮಂತನಿಗೆ ಶಿವಾಚಾರ್ಯರ ಮಾತಿನ ಅರ್ಥವಾಗ ಲಿಲ್ಲ, ಆಗ ಆತನು, ''ಗುರುದೇವಾ ! ನನಗೆ ಯಾವ ವಾಸನೆಯೂ ಬರುತ್ತಿಲ್ಲವಲ್ಲ ?'' ಅಂದನು. ಆಗ ಗುರುಗಳು ಆತನಿಗೆ ಅನುಭವ ಮಾಡಿಕೊಡುವುದಕ್ಕಾಗಿ, ಅವನನ್ನು ಕರೆದುಕೊಂಡು ಊರ ಹೊರಗಿನ ಚಮಗಾರಕೇರಿಗೆ ಹೋದರು. ಅಲ್ಲಿಯ ಆ ಚಮ್ಮಾರರು ಅನೇಕ ಪ್ರಾಣಿಗಳ ಹಸೀ ತೊಗಲನ್ನು ಮನೆಯ ತುಂಬ ಹರವಿಕೊಂಡು ತಮ್ಮ ಕೆಲಸದಲ್ಲಿ ಮಗ್ನರಾಗಿದ್ದರು. ಆ ಚಮ್ಮಾರ ಕೇರಿಗೆ ಹೋದೊಡನೆ ಅಲ್ಲಿಯ ದುರ್ವಾಸನೆಯು ಸಹನವಾಗದೇ ಆ ಗುರುಗಳ ಜೊತೆಗೆ ಬಂದ ಶ್ರೀಮಂತನು ಗಟ್ಟಿಯಾಗಿ ತನ್ನ ಮೂಗನ್ನು ಮುಚ್ಚಿಕೊಂಡನು. ಆಗ ಗುರುಗಳು ಅವನನ್ನು ಉದ್ದೇಶಿಸಿ ಕೇಳುತ್ತಾರೆ– 'ಏನಯ್ಯಾ ! ನೀನು ಹೀಗೇಕೆ ಮೂಗು ಮುಚ್ಚಿಕೊಂಡಿರುವಿ ?' ಎಂದರು. ಆಗ ಆತನು ''ಗುರುದೇವಾ, ಈ ಚರ್ಮದ ದುರ್ವಾಸನೆ ನನಗೆ ಸಹಿಸಲಾಗದು. ಅಂತೆಯೇ ಮೂಗು ಮುಚ್ಚಿಕೊಂಡಿರುವೆ'' ಎಂದನು. ಆಗ ಗುರುವರ್ಯರು, ''ಇದೋ ನೋಡು ! ಈ ಮನೆಯಲ್ಲಿಯೇ ಅಹರ್ನಿಶ ನಿವಾಸಿಸುತ್ತಿರುವ ಈ ಚಮ್ಮಾರರಲ್ಲಿ ಒಬ್ಬರೂ ಮೂಗು ಮುಚ್ಚಿಕೊಂಡಿಲ್ಲ ಮತ್ತೇನು ಅವರಿಗೆ ವಾಸನೆ ಬರುವುದಿಲ್ಲವೋ ?'' ಎಂದು ಕೇಳಿದಾಗ ಶ್ರೀಮಂತನು, ''ಗುರುದೇವಾ, ಇವರೆಲ್ಲ ಈ ದುರ್ವಾಸನೆಯಲ್ಲಿಯೇ ಇದ್ದು ಇದ್ದು ಅಭ್ಯಾಸವಾಗಿರುವುದರಿಂದ ಅವರಿಗೆ ಆ ದುರ್ವಾಸನೆಯ ಭಾಸವಾಗುವುದಿಲ್ಲ.'' ಎಂದನು. ಶ್ರೀಮಂತನ ಈ ಮಾತನ್ನು ಕೇಳಿದೊಡನೆ ಗುರುಗಳು ಅನ್ನುತ್ತಾರೆ. ಸದಾ ದುರ್ವಾಸನೆಯಲ್ಲಿರುವವನಿಗೆ ಆ ದುರ್ವಾಸನೆಯು ದುರ್ವಾಸನೆಯಾಗಿ ತೋರ ದಿರುವಂತೆ, ನೀನು ಸದಾ ವಿಷಯವಾಸನೆಯಲ್ಲಿರುವುದರಿಂದ ನಿನಗೆ ಆ ವಿಷಯದ ದುರ್ಗಂಧತೆಯ ಅರಿವಾಗುತ್ತಿಲ್ಲ ಎಂಬುದಾಗಿ ಉಪದೇಶಿಸಿ, ವಿಷಯವಾಸನೆಯ ದುರ್ವಾಸನೆಯನ್ನು ಅರಿವು ಮಾಡಿಕೊಟ್ಟರು.

ಶಬ್ದಸ್ಪರ್ಶಾದಿ ವಿಷಯಗಳೆಲ್ಲಾ ಸಾಧಕನ ಅಂತಃಕರಣದಲ್ಲಿ ಅತ್ಯಾಸಕ್ತಿರೂಪವಾದ ವಾಸನೆಯನ್ನು ನಿರ್ಮಿಸಿ, ಆತನನ್ನು ಸಂಸಾರದತ್ತ ನೂಕುತ್ತವೆ. ಸಂಸಾರದಿಂದ ವಿಮುಖ ನಾಗದೆ ಪ್ರಾಣಲಿಂಗಾರ್ಚನೆಯು ಸಂಭವಿಸಲಾರದು. ಆದ್ದರಿಂದ ಪ್ರಾಣಲಿಂಗಾರ್ಚಕ ನಿಗೆ ವಿಷಯ ವಿರಕ್ತಿಯು ಅತ್ಯಾವಶ್ಯಕವೆಂಬುದನ್ನು ತಿಳಿಯಪಡಿಸುವುದಕ್ಕಾಗಿಯೇ ಪೂಜ್ಯಪಾದರು 'ವೈರಾಗ್ಯಂ ಪುಷ್ಪಮಾಲಿಕಾ' ಎಂಬುದಾಗಿ ಉಪದೇಶಿಸಿದ್ದಾರೆ. ಇದೇ ವಿಷಯವನ್ನು ಮುಂದುವರೆಸುತ್ತ 'ಗಂಧಃ ಸಮಾಧಿಸಂಪತ್ತಿಃ' ಎಂಬುದಾಗಿ ಬೋಧಿಸಿ ದ್ದಾರೆ. ಹೊರಗಿನ ಇಷ್ಟಲಿಂಗಕ್ಕೆ ಚಂದನದ ಕೊರಡನ್ನು ತೇದು ತೇದು ಗಂಧವನ್ನು ತೆಗೆದು ಸಮರ್ಪಿಸುವುದು ಸರ್ವರಿಗೂ ವಿದಿತವಾದ ವಿಷಯವು. ಅಂತರಂಗದ ಪ್ರಾಣಲಿಂಗಕ್ಕೆ ಈ ಶ್ರೀಗಂಧದ ಲೇಪನವು ಸಂಭವಿಸಲಾರದು. ಅಂತೆಯೇ ಪೂಜ್ಯರು

ಸಮಾಧಿಸ್ಥಿತಿಯನ್ನೇ ಪ್ರಾಣಲಿಂಗದ ಗಂಧವನ್ನಾಗಿ ಬೋಧಿಸಿದ್ದಾರೆ. ಮನಸ್ಸಿನಲ್ಲಿಯ ಪ್ರಪಂಚಾಕಾರದ ವೃತ್ತಿಗಳನ್ನು ದೂರಮಾಡಿ ನಿರಂತರ ಪ್ರಾಣ ಲಿಂಗಾರ್ಚನೆಯ ಅನುಸಂಧಾನರೂಪವಾದ ಏಕಾಗ್ರತೆಯನ್ನು ಸಾಧಿಸಿ ಮನಸ್ಸನ್ನು ಸಮಾಹಿತಗೊಳಿಸಿ ಕೊಳ್ಳುವುದೇ ಅರ್ಥಾತ್ ಸಮಾಧಿಸ್ಥವನ್ನಾಗಿ ರೂಪಿಸಿಕೊಳ್ಳುವುದೇ ಪ್ರಾಣಲಿಂಗಕ್ಕೆ ಗಂಧಲೇಪನವಿದ್ದಂತೆ. ಲಿಂಗಕ್ಕೆ ಲೇಪಿಸಿದ ಗಂಧವು ಸದಾ ಲಿಂಗಕ್ಕೆ ಅಂಟಿಕೊಂಡಿರು ವಂತೆ, ಸಮಾಧಿಸ್ಥಿತಿಯಲ್ಲಿ ಮನಸ್ಸು ಪ್ರಾಣಲಿಂಗ ಚಿಂತನೆಯಲ್ಲಿ ಲಿಪ್ತವಾಗಿರುತ್ತದೆ. ಅಂತೆಯೇ ಪೂಜ್ಯಪಾದರು ಸಮಾಧಿಸ್ಥಿತಿಯನ್ನು ಗಂಧಲೇಪನವನ್ನಾಗಿ ಉಪದೇಶಿಸಿ ದ್ದಾರೆ.

ಗಂಧೋಪಚಾರದ ನಂತರ ಬರುವ ಉಪಚಾರವೇ ಅಕ್ಷತೋಪಚಾರ. ಪ್ರಾಣ ಲಿಂಗದ ಅಕ್ಷತೆಯ ಬಗ್ಗೆ ವಿವರಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು 'ಅಕ್ಷತಾ ನಿರಹಂಕೃತಿಃ' ಎಂಬುದಾಗಿ ಬೋಧಿಸಿದ್ದಾರೆ. ಲೌಕಿಕ ಇಲ್ಲವೆ ಅಲೌಕಿಕವಾದ ಯಾವುದೇ ಕಾರ್ಯವನ್ನು ಸಾಧಿಸಿ ಸಫಲತೆಯನ್ನು ಪಡೆದಾಗ ಅಹಂಕಾರ ಭಾವನೆಯು ಬರುವುದು ಸಹಜವಾದುದು. ಅಹಂಕಾರದಿಂದ ಮನುಷ್ಯನು ತಾನು ಸಾಧಿಸಿದ ಉನ್ನತವಾದ ಸ್ಥಿತಿಯಿಂದ ಪತಿತನಾಗುವ ಭಯವಿರುತ್ತದೆ. ಅಂತೆಯೇ ಸಾಧಕನಿಗೆ ಅಹಂಕಾರವು ಶೋಭಿಸಲಾರದು. ದುಸ್ಸಾಧ್ಯವಾದ ಸಮಾಧಿಯನ್ನು ಸಾಧಿಸಿಕೊಂಡೆನೆಂಬ ಅಭಿಮಾನ-ಅಹಂಕಾರಗಳು ಸಾಧಕನಲ್ಲಿ ತಲೆದೋರಿದರೆ, ಅವನ ಸಾಧನೆಯು ಕುಂಠಿತಗೊಳ್ಳುವ ದಲ್ಲದೆ ಅದರಿಂದ ಚ್ಯುತನಾಗುವ ಸಾಧ್ಯತೆಯೂಉಂಟು. ಆದ್ದರಿಂದ ಸಾಧಕನು ತನ್ನ ಸ್ಥಿತಿಯಿಂದ ಚ್ಯುತನಾಗಬಾರದೆಂಬುದನ್ನು ತಿಳಿಸಲೋಸುಗವೇ ನಿರಹಂಕಾರವನ್ನು ಅಕ್ಷತೆಯನ್ನಾಗಿ ಉಪದೇಶಿಸಿದ್ದಾರೆ. ಬಾಹ್ಯಲಿಂಗಕ್ಕೆ ಗಂಧದ ಮೇಲೆ ಅಕ್ಷತೆಯನ್ನಿರಿಸಿ ದಂತೆ, ಸಾಧಕನು ತನ್ನ ಸಮಾಧಿಸ್ಥಿತಿಯ ಅಭಿಮಾನವನ್ನು ತಾಳದೆ ನಿರಭಿಮಾನತೆಯಿಂದ ವರ್ತಿಸುವುದೇ ಪ್ರಾಣಲಿಂಗಕ್ಕೆ ಅಕ್ಷತಸಮರ್ಪಣವಿದ್ದಂತೆ. ಅಹಂಕಾರವು ಅನೇಕ ಅನರ್ಥಗಳ ಮೂಲವಾಗಿರುತ್ತದೆ. ಈ ಅಹಂಕಾರವನ್ನು ದೂರಮಾಡಿಕೊಳ್ಳಲು ಸಮರ್ಪಣಾ ಭಾವನೆಯನ್ನು ಸಾಧಿಸಿಕೊಳ್ಳುವುದು ಅತ್ಯಾವಶ್ಯಕವಾದುದು. ಏನನ್ನೇ ಸಾಧಿಸಿದರೂ ಅದೆಲ್ಲ ಶಿವಾನುಗ್ರಹವೆಂಬ ಭಾವನೆಯನ್ನು ತಾಳಿದಾಗ ಸಾಧಕನು ನಿರಹಂಕಾರಿಯಾಗಿರಲು ಸಾಧ್ಯವಾಗುತ್ತದೆ. ಹೀಗೆ ಸಾಧಿಸಿಕೊಂಡ ನಿರಂಹಕಾರ ಸ್ಥಿತಿಯೇ ಪ್ರಾಣಲಿಂಗಕ್ಕೆ ಸಮರ್ಪಿಸುವ ಅಕ್ಷತೆಯೆಂಬುದಾಗಿ ತಿಳಿದುಕೊಳ್ಳಬೇಕು.

ಪೂಜ್ಯಪಾದರು ಪ್ರಾಣಲಿಂಗಾರ್ಚನಾ ಸಂಬಂಧಿ ಉಪಚಾರವನ್ನು ಮುಂದುವರೆ ಸುತ್ತ ''ಶ್ರದ್ಧಾ ಧೂಪೋ ಮಹಾಜ್ಞಾನಂ ಜಗದ್ಭಾಸಿ ಪ್ರದೀಪಿಕಾ'' ಎಂಬುದಾಗಿ ಪ್ರಾಣಲಿಂಗಾರ್ಚನೆಯಲ್ಲಿ ಶ್ರದ್ಧೆಯೇ ಧೂಪವೆಂತಲೂ, ಮಹಾಜ್ಞಾನವೇ ದೀಪ ವೆಂತಲೂ ಬೋಧಿಸಿದ್ದಾರೆ. ಲೌಕಿಕ ಇಲ್ಲವೆ ಪಾರಲೌಕಿಕ ವ್ಯವಹಾರಗಳಿಗೆ ಶ್ರದ್ಧೆಯೇ ಆಧಾರಭೂತವಾದುದು. ಯಾವುದೇ ಕಾರ್ಯವನ್ನು ಮಾಡುವಾಗ ಶ್ರದ್ಧಾಪೂರ್ವಕ ವಾಗಿ ಮಾಡಿದರೆ ಅದು ಬೇಗನೇ ಫಲಕಾರಿಯಾಗುವುದು. ಧೂಪದಿಂದ ಬಹಿರಂಗ ವಾತಾವರಣವು ಪರಿಶುದ್ಧವಾಗುವಂತೆ ಶ್ರದ್ಧೆಯಿಂದ ಅಂತಃಕರಣವು ಪರಿಶುದ್ಧಗೊಳ್ಳು ವುದು. ಸಾಧಕನ ಅಂತರಂಗದಲ್ಲಿ ಉದ್ಭವಿಸಿದ ದಿವ್ಯ ಶಿವನ ಚಿದ್ರೂಪಜ್ಞಾನವೇ

ದೀಪವೆಂಬುದಾಗಿ ಪೂಜ್ಯಭಗವತ್ಪಾದರು ಉಪದೇಶಿಸಿದ್ದಾರೆ. ಹೊರಗಿನ ಪ್ರಪಂಚವನ್ನು ಪ್ರಕಾಶಿಸಲು ದೀಪದ ಅವಶ್ಯಕತೆಯಿರುವಂತೆ, ಅಂತರಂಗದ ಪ್ರಾಣಲಿಂಗವನ್ನು ಅರಿಯಲು ಜ್ಞಾನದೀಪವು ಪರಮಾವಶ್ಯಕವಾದುದು. ಅಂತೆಯೇ ಇಲ್ಲಿ ಜ್ಞಾನಕ್ಕೇನೇ ದೀಪವೆಂಬುದಾಗಿ ಸಂಬೋಧಿಸಿದ್ದಾರೆ.

ಈ ರೀತಿಯಾಗಿ ಅಂತರಂಗದ ಧೂಪ–ದೀಪಗಳ ಪರಿಜ್ಞಾನವನ್ನು ಮಾಡಿಕೊಟ್ಟ ಪೂಜ್ಯಪಾದರು ನೈವೇದ್ಯದ ಸ್ವರೂಪವನ್ನು ತಿಳಿಯಪಡಿಸುತ್ತ–

'ಭ್ರಾಂತಿಮೂಲಪ್ರಪಂಚಸ್ಯ ನಿವೇದ್ಯಂ ತನ್ನಿವೇದನಮ್' ಎಂಬುದಾಗಿ ಬೋಧಿಸಿದ್ದಾರೆ. ಪ್ರಪಂಚವೆಲ್ಲವೂ ಈಶನಿರ್ಮಿತವಾದುದು. ಅಂತೆಯೇ ಅದು ಈಶ್ವರನದೇ ಆಗಿದೆ. ಹೀಗಿದ್ದರೂ ಈ ಜಗತ್ತಿನಲ್ಲಿ ಜನಿಸಿದ ಪ್ರತಿಯೊಂದು ಜೀವಿಯು ಪ್ರಪಂಚದಲ್ಲಿಯ ಕೆಲವೊಂದು ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು ಅವುಗಳ ಮೇಲೆ ನನ್ನದೆಂಬ ಭಾವನೆಯನ್ನು ತಾಳಿಕೊಂಡು, ಅಹರ್ನಿಶಿ ಆ ಮೋಹ– ಮಮಕಾರದಲ್ಲಿಯೇ ಅನಂತದುಃಖವನ್ನು ಅನುಭವಿಸುತ್ತಿರುತ್ತದೆ. ತನ್ನದಲ್ಲದ' ವಸ್ತುವನ್ನು ತನ್ನದೆಂಬುದಾಗಿ ಭಾವಿಸುವುದಕ್ಕೆ 'ಭ್ರಾಂತಿ'ಯೆಂಬುದಾಗಿ ಕರೆದಿದ್ದಾರೆ. ಈ ಭ್ರಾಂತಿ ದೂರಾಗದೇ ಅದಾರಿಗೂ ಮನಸ್ಸಿಗೆ ಶಾಂತಿ ಸಮನಿಸದು. ಅಂತೆಯೇ ಪೂಜ್ಯಪಾದರು ನನ್ನದೆಂಬ ಭ್ರಾಂತಿಯನ್ನೇ ಪ್ರಾಣಲಿಂಗಕ್ಕೆ ನೈವೇದ್ಯವನ್ನಾಗಿ ಅರ್ಪಿಸಲು ಉಪದೇಶಿಸಿದ್ದಾರೆ. ನಾವು ಯಾವುದೇ ವಸ್ತುವನ್ನು ದೇವರಿಗೆ ನೈವೇದ್ಯವನ್ನಾಗಿ ಸಮರ್ಪಿಸಿದಾಗ, ಅದರಲ್ಲಿಯ ನನ್ನದೆಂಬ ಭಾವನೆಯನ್ನು ತ್ಯಾಗಮಾಡುತ್ತೇವೆ. ಅಂದಾಗಲೇ ಅದು ನೈವೇದ್ಯ ಅಥವಾ ಪ್ರಸಾದವೆಂಬುದಾಗಿ ಕರೆಯಿಸಿಕೊಳ್ಳಲ್ಪಡುತ್ತದೆ. ಹಾಗೆ ಅಲ್ಪಸ್ವಲ್ಪ ಪದಾರ್ಥಗಳನ್ನು ಪರಮಾತ್ಮನಿಗೆ ಸಮರ್ಪಿಸುವ ಸಾಧಕನು, ಸಂಪೂರ್ಣ ಪ್ರಪಂಚದಲ್ಲಿರುವ ನನ್ನದೆಂಬ ಭಾವನಾರೂಪವಾದ ಭ್ರಾಂತಿಯನ್ನು ಯಾವಾಗ ಸಮರ್ಪಿಸಲು ಅರ್ಹನಾಗುತ್ತಾನೆಯೋ, ಅವನೇ ಪ್ರಾಣಲಿಂಗಾರ್ಚನೆಗೆ ಯೋಗ್ಯನಾಗುವನು ಎಂಬುದನ್ನು ತಿಳಿಯಪಡಿಸುವುದಕ್ಕಾಗಿಯೇ ಇಂಥ ವಿಲಕ್ಷಣ ನೈವೇದ್ಯಪ್ರಕ್ರಿಯೆಯನ್ನು ಪೂಜ್ಯರು ಇಲ್ಲಿ ಉಪದೇಶಿಸಿದ್ದಾರೆ. ಹೀಗೆ ಪ್ರಪಂಚದ ಮೇಲಿನ ಸಂಪೂರ್ಣ ಮಮಕಾರ ಭಾವನೆಯನ್ನು ಕಳೆದುಕೊಂಡು ಇದೆಲ್ಲವೂ ಈಶ್ವರನ ಪ್ರಸಾದವೆಂಬುದಾಗಿ ಭಾವಿಸುವುದೇ ಪ್ರಾಣಲಿಂಗಾರ್ಚಕನ ನೈವೇದ್ಯಸಮರ್ಪಣ ಎಂಬುದಾಗಿ ತಿಳಿದುಕೊಳ್ಳತಕ್ಕದ್ದು. ಕಾರಣ ಶಿವಯೋಗಸಾಧಕನು ಪ್ರತಿದಿನ ಈ ರೀತಿಯಾಗಿ ಮಮಕಾರಭಾವನೆಯನ್ನು ಸಮರ್ಪಿಸುತ್ತಹೋದರೆ, ಅವನ ಈ ಸಾಧನೆಯು ದಿನೇ ದಿನೇ ಬಲಿದು, ಕೊನೆಗೊಂದು ದಿನ ನಿರ್ಭ್ರಾಂತನಾಗಿ ಶಿವ ಸ್ವರೂಪವನ್ನು ಹೊಂದಬಲ್ಲನು. ಈ ರೀತಿಯಾದ ಪ್ರಾಣಲಿಂಗಾರ್ಚನೆಯನ್ನು ಪ್ರತಿಯೊಬ್ಬರೂ ಸಾಧಿಸುತ್ತಿರಬೇಕೆಂಬುದಾಗಿ ಉಪದೇಶಿಸಿ ಇಂದಿನ ಆಶೀರ್ವಚನಕ್ಕೆ ವಿರಾಮನೀಡುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬, ೭ ಎಪ್ರಿಲ್ ೧೯೯೨

(ಜ್ಞಾನಮಂದಿರ ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಪ್ರಾಣಲಿಂಗಾರ್ಚನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಈಗಾಗಲೇ ನೀವು ಎರಡು ದಿನಗಳಿಂದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಪ್ರಾಣಲಿಂಗಿಸ್ಥಲದ ಅವಾಂತರಸ್ಥಲವಾದ ಪ್ರಾಣಲಿಂಗಾರ್ಚನಾಸ್ಥಲವನ್ನು ಕುರಿತು ಆಶೀರ್ವಚನವನ್ನು ಶ್ರವಣ ಮಾಡುತ್ತಲಿದ್ದೀರಿ. ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಪ್ರಾಣಲಿಂಗಾರ್ಚನೆಯಲ್ಲಿ ಉಪಯೋಗಿಸಲ್ಪಡುವ ಧೂಪ, ದೀಪ ಮತ್ತು ನೈವೇದ್ಯ ಮುಂತಾದ ಅಂತರಂಗ ಉಪಚಾರಗಳ ಬಗ್ಗೆ ಬಹು ಮಾರ್ಮಿಕವಾಗಿ ಉಪದೇಶ ಮಾಡಿ ಇನ್ನು ಮುಂದೆ ಉಳಿದ ಉಪಚಾರಗಳನ್ನು ಕುರಿತು ಉಪದೇಶ ಮಾಡುತ್ತ–

ಮೌನಂ ಘಂಟಾಪರಿಸ್ಪಂದಸ್ತಾಂಬೂಲಂ ವಿಷಯಾರ್ಪಣಮ್ ।
ವಿಷಯಭ್ರಾಂತಿರಾಹಿತ್ಯಂ ತತ್ಪ್ರದಕ್ಷಿಣಕಲ್ಪನಾ ।
ಬುದ್ಧೇಸ್ತದಾತ್ಮಿಕಾ ಶಕ್ತಿರ್ನಮಸ್ಕಾರಕ್ರಿಯಾ ಮತಾ ॥

(ಸಿ. ಶಿ. ೧೨; ೧೮–೧೯)

ಈ ರೀತಿಯಾಗಿ ತಿಳಿಯಪಡಿಸಿದ್ದಾರೆ. ಪ್ರಾಣಲಿಂಗಾರ್ಚನೆಯಲ್ಲಿ ಮೌನವಾಗಿರುವುದೇ ಘಂಟಾನಾದವು ಎಂಬುದು ಆಚಾರ್ಯರ ಆದೇಶವು. ನಾವು ಬಹಿರಂಗಲಿಂಗಾರ್ಚನೆಯನ್ನು ಮಾಡುವಾಗ ಘಂಟಾನಾದವನ್ನು ಮಾಡುತ್ತೇವೆ. ಆ ಸಮಯದಲ್ಲಿ–

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ಭಕ್ತ್ಯಾ ಸರ್ವೋಪದ್ರವನಾಶನಮ್ ॥

ಎಂಬ ಮಂತ್ರವನ್ನು ಪಠಿಸುತ್ತೇವೆ. ಆಸುರೀ ಶಕ್ತಿಗಳ ನಾಶವಾಗಿ, ದೈವೀಶಕ್ತಿಗಳ ಆವಾಹನವಾಗಿ ಸಾಧಕನ ಸರ್ವ ಉಪದ್ರವಗಳು ದೂರವಾಗಬೇಕೆಂಬುದೇ ಘಂಟಾನಾದದ ಮುಖ್ಯ ತಾತ್ಪರ್ಯವಾಗಿರುತ್ತದೆ. ಅಂತೆಯೇ ಪೂಜೆಯಲ್ಲಿ ಘಂಟೆ–ಜಾಗಟೆ ಮತ್ತು ಶಂಖ ಮುಂತಾದ ಮಂಗಲಧ್ವನಿಗಳನ್ನು ಮಾಡುವ ಪರಿಪಾಠವಿರುತ್ತದೆ. ಈ ಧ್ವನಿಗಳನ್ನು ಹೊರಡಿಸಿದಾಗ, ನಮ್ಮ ಪರಿಸರದಲ್ಲಿರುವ ವಿಘ್ನಕಾರಿಗಳಾದ ಆಸುರೀ ಶಕ್ತಿಗಳು ನಮ್ಮಿಂದ ಬಹುದೂರ ನಿರ್ಗಮಿಸಿ, ನಮ್ಮ ಪೂಜೆಯು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳಬಲ್ಲದು. ಅಂತೆಯೇ ವಿಘ್ನವಿನಾಶಕ್ಕಾಗಿ ಘಂಟಾನಾದವು ಅತ್ಯಾವಶ್ಯಕವಾದುದು. ಬಹಿರಂಗದ ವಿಘ್ನವಿನಾಶಕ್ಕೆ ಘಂಟಾನಾದವು ಕಾರಣವಾಗಿರುವಂತೆ ಅಂತರಂಗದ ವಿಘ್ನವಿನಾಶಕ್ಕೆ ಮೌನವೇ ಪರಮಸಾಧನವಾಗಿರುತ್ತದೆ. ಅಂತೆಯೇ ಪೂಜ್ಯರು ಪ್ರಾಣಲಿಂಗಾರ್ಚನೆಯಲ್ಲಿ ಮೌನಾಚರಣೆಯನ್ನು ಘಂಟಾನಾದವನ್ನಾಗಿ ಉಪದೇಶಿಸಿದ್ದಾರೆ.

ಮೌನವೆಂದರೆ, ಮನಸ್ಸಿನ ಸರ್ವ ಇಚ್ಛೆಗಳ ಉಪಶಮನವೇ ಆಗಿರುತ್ತದೆ. ನಮ್ಮ ಮನಸ್ಸಿನಲ್ಲಿ ಯಾವುದೊಂದು ಇಚ್ಛೆಯುಂಟಾದಾಗ ಅದನ್ನು ನಾವು ನಮ್ಮ ವಾಣಿಯ ಮುಖಾಂತರ ಅಭಿವ್ಯಕ್ತಮಾಡುತ್ತೇವೆ. ವಾಣಿಯು ಇಚ್ಛಾಭಿವ್ಯಕ್ತಿಯ ಸುಲಭ ಸಾಧನ ವಾಗಿರುತ್ತದೆ. ವಾಣಿಯ ಅವರೋಧವಾಗಿ ಮೂಕರಾಗಿರುವ ಕೆಲಜನರು ತಮ್ಮ ಮನೋಬಯಕೆಯನ್ನು ಲೇಖನ ಮೂಲಕ ಇಲ್ಲವೆ ಕೈಸನ್ನೆ, ಕಣ್ಸನ್ನೆ ಮುಂತಾದ ದೈಹಿಕ ಸಂಕೇತಗಳ ಮೂಲಕ ವ್ಯಕ್ತಪಡಿಸುವುದುಂಟು. ನಾವು ಮಾಡುತ್ತಿರುವ ಸಾಧನೆಯಲ್ಲಿ ಹೊರಗಿನ ವಿಘ್ನಗಳಿಗಿಂತಲೂ ಮನಸ್ಸಿನ ಸಂಕಲ್ಪ–ವಿಕಲ್ಪಗಳೇ ಮಹಾನ್ ವಿಘ್ನ ಗಳಾಗಿರುತ್ತವೆ. ಮನಸ್ಸು ಮೌನವಾಗದೇ ಸಕಲ ವಿಘ್ನಗಳ ಉಪಶಮನವಾಗಲು ಸಾಧ್ಯವಿಲ್ಲ. ಅಂತೆಯೇ ಮನಸ್ಸಿನ ಮೌನವನ್ನು ಸಾಧಿಸುವುದಕ್ಕಾಗಿ ಸಾಧಕರು ಪ್ರಾರಂಭಿಕಾವಸ್ಥೆಯಲ್ಲಿ ವಾಣಿಯ ಮೌನವನ್ನು ಅಭ್ಯಸಿಸುತ್ತಾರೆ. ಮೌನವು ಎರಡು ವಿಧವಾದುದು. ಮೊದಲನೆಯದು ಆಕಾರಮೌನವೆಂತಲೂ, ಎರಡನೆಯದು ಕಾಷ್ಠ ಮೌನವೆಂತಲೂ ಕರೆಯಿಸಿಕೊಳ್ಳುವುದು. ವಾಣಿಯ ಅವರೋಧವನ್ನು ಮಾಡಿಕೊಂಡು ಸುಮ್ಮನೆ ಇರುವ ಸ್ಥಿತಿಗೆ ಆಕಾರಮೌನವೆಂದು ಕರೆಯುತ್ತಾರೆ. ಈ ಅವಸ್ಥೆಯಲ್ಲಿ ಸಾಧಕನು ತನ್ನ ಮನೋಬಯಕೆಗಳನ್ನು ವೈಖರಿಯ ಮುಖಾಂತರವಾಗಿ ಅಭಿವ್ಯಕ್ತಮಾಡದಿದ್ದರೂ ಲೇಖನ ಹಾಗೂ ಸನ್ನೆಗಳ ಮುಖಾಂತರ ತನ್ನ ಅಭಿಪ್ರಾಯವನ್ನು ವ್ಯಕ್ತಮಾಡುವ ಸಾಧ್ಯತೆಯಿರುತ್ತದೆ. ಎರಡನೆಯದಾದ ಕಾಷ್ಠಮೌನ ಸ್ಥಿತಿಯಲ್ಲಿ ಸಾಧಕನು ತನ್ನ ವಾಣಿಯ ಜೊತೆಗೆ ಮನೋವೃತ್ತಿಗಳನ್ನು ನಿರೋಧ ಮಾಡಿರುವುದರಿಂದ ಅದಾವ ಕಾರಣಕ್ಕೂ ಆತನ ಮನೋಬಯಕೆಯು ಪ್ರಕಟವಾಗುವುದಿಲ್ಲ. ಹೀಗೆ ಕಾಷ್ಠಮೌನಸ್ಥಿತಿಯೇ ವಾಸ್ತವಿಕವಾದ ಮೌನವು. ಇಂತಹ ಮನೋವೃತ್ತಿಯ ಮೌನವನ್ನು ಸಾಧಿಸಿದವರಿಗೇನೇ ಮುನಿಗಳೆಂದು ಕರೆಯುತ್ತಾರೆ. ಪ್ರಾಣಲಿಂಗೋಪಾಸನೆಯಲ್ಲಿ ಈ ಮುನಿ ಅವಸ್ಥೆಯು ಪರಮಾವಶ್ಯಕವೆಂಬುದನ್ನು ತಿಳಿಯಪಡಿಸುವುದಕ್ಕಾಗಿಯೇ ಪೂಜ್ಯಪಾದರು ಮೌನ ವನ್ನು ಘಂಟಾನಾದವೆಂಬುದಾಗಿ ಉಪದೇಶಿಸಿದ್ದಾರೆ.

ಶ್ರೀ ಸಿದ್ಧಾಂತ ಶಿಖಾಮಣಿಯ ಭಾಷ್ಯಕಾರರಾದ ಶ್ರೀ ಮರಿತೋಂಟದಾರ್ಯರು ಮೌನದ ಪ್ರಯೋಜನವನ್ನು ವಿವರಿಸುತ್ತ 'ಅನಾಹತನಾದಾನುಸಂಧಾನಹೇತುತ್ವಾತ್' ಎಂಬುದಾಗಿ ವಿವರಿಸಿದ್ದಾರೆ. ನಾದವು ಎರಡು ವಿಧವಾದುದು. ಮೊದಲನೆಯದು ಆಹತನಾದ, ಎರಡನೆಯದು ಅನಾಹತನಾದ. ಎರಡು ವಸ್ತುಗಳ ಸಂಘಟನೆಯಿಂದ ಹೊರಡುವ ನಾದಕ್ಕೆ ಆಹತನಾದವೆಂದು ಕರೆಯುತ್ತಾರೆ. ಘಂಟೆ, ಜಾಗಟೆ, ಭೇರಿ, ಮೃದಂಗ, ವೀಣೆ, ಚಪ್ಪಾಳೆ ಮುಂತಾದವುಗಳಿಂದ ಹೊರಡುವ ನಾದವು ಸಂಘಟನ ಮೂಲಕವಾಗಿರೋಣದರಿಂದ ಇದು ಆಹತನಾದವು. ಸಾಧಕನು ತನ್ನ ಸಕಲೇಂದ್ರಿಯ ದ್ವಾರಗಳನ್ನು ನಿರೋಧಿಸಿಕೊಂಡು, ಮನೋವೃತ್ತಿಗಳನ್ನು ತಡೆದು, ಮೌನವಾಗಿ ಕುಳಿತಾಗ ಅವನಂತರಂಗದಲ್ಲಿ ಒಂದು ವಿಲಕ್ಷಣವಾದ ನಾದಾನುಭೂತಿಯುಂಟಾಗು ವುದು. ಆ ನಾದಕ್ಕೆ ಅನಾಹತನಾದವೆಂಬುದಾಗಿ ಕರೆಯುತ್ತಾರೆ. ಸಾಧಕನು ಮೌನವನ್ನು ಸಾಧಿಸಿ ದಂತೆ ಅನಾಹತನಾದಾನುಭೂತಿಯು ಬೆಳೆಯುತ್ತ ಹೋಗುವುದು. ಈ ಅನಾಹತ ನಾದವೇ ಪ್ರಾಣಲಿಂಗಾರ್ಚನೆಯಲ್ಲಿ ಘಂಟಾನಾದವಾಗಿ ಪರಿಣಮಿಸುವುದು. ಇಷ್ಟಲಿಂಗ

ಪೂಜೆಯಲ್ಲಿ ಆಹತನಾದದ ಘಂಟಾನಾದವಾದರೆ ಪ್ರಾಣಲಿಂಗಾರ್ಚನೆಯಲ್ಲಿ ಅನಾಹತ ನಾದರೂಪ ಘಂಟಾನಾದವೆಂಬುದನ್ನು ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕಭಗವತ್ಪಾದರು ಪ್ರಾಣಲಿಂಗಾರ್ಚನೆಯ ಉಪಚಾರ ಗಳನ್ನು ವಿವರಿಸುತ್ತ ಈ ಮುಂದೆ 'ತಾಂಬೂಲಂ ವಿಷಯಾರ್ಪಣಮ್' ಎಂಬುದಾಗಿ ನಿರೂಪಿಸಿದ್ದಾರೆ. ಶಬ್ದ ಸ್ಪರ್ಶಾದಿ ವಿಷಯಗಳನ್ನು ಸಮರ್ಪಿಸುವುದೇ ತಾಂಬೂಲವು. ತಾಂಬೂಲದಲ್ಲಿ ಎಲೆ, ಅಡಿಕೆ, ಸುಣ್ಣ ಇವು ಪ್ರಮುಖವಾದ ಪದಾರ್ಥಗಳಾಗಿರುವಂತೆ, ವ್ಯವಹಾರದಲ್ಲಿ ಪ್ರಮಾಣ, ಪ್ರಮೇಯ ಮತ್ತು ಪ್ರಮಾತೃಗಳು ಪ್ರಮುಖವಾದವು ಗಳಾಗಿವೆ. ಶಾಸ್ತ್ರದಲ್ಲಿ ಈ ಮೂರಕ್ಕೆ ತ್ರಿಪುಟಿಯೆಂದು ಕರೆಯುತ್ತಾರೆ. ಈ ತ್ರಿಪುಟಿ ಯಿದ್ದಾಗಲೇ ಯಾವುದೇ ವ್ಯವಹಾರವು ಪೂರ್ಣವಾಗುವದು. ಶಬ್ದ ಸ್ಪರ್ಶಾದಿ ವಿಷಯ ಗಳನ್ನು ಅರಿಯುವ ಜ್ಞಾನೇಂದ್ರಿಯಗಳಿಗೆ ಪ್ರಮಾಣಗಳೆಂದು ಕರೆಯುತ್ತಾರೆ. ಶಬ್ದವನ್ನರಿಯಲು ಕರ್ಣೇಂದ್ರಿಯವು ಪ್ರಮಾಣವು, ಸ್ಪರ್ಶವನ್ನರಿಯಲು ತ್ವಗಿಂದ್ರಿ ಯವು ಪ್ರಮಾಣವು, ರೂಪವನ್ನರಿಯಲು ನೇತ್ರೇಂದ್ರಿಯವು ಪ್ರಮಾಣವು, ರಸವನ್ನರಿ ಯಲು ರಸನೇಂದ್ರಿಯವು ಪ್ರಮಾಣವು, ಗಂಧವನ್ನರಿಯಲು ಘ್ರಾಣೇಂದ್ರಿಯವು ಪ್ರಮಾಣವಾಗಿರುತ್ತದೆ. ಈ ಪ್ರಮಾಣಗಳಿಂದ ಗ್ರಹಿಸಲ್ಪಡುವ ಶಬ್ದಾದಿ ವಿಷಯಗಳಿಗೆ ಪ್ರಮೇಯಗಳೆಂದು ಕರೆಯುತ್ತಾರೆ. ಇನ್ನು ಕರಣಾದಿ ಪ್ರಮಾಣಗಳ ಮುಖಾಂತರವಾಗಿ ಶಬ್ದಾದಿ ಪ್ರಮೇಯಗಳನ್ನು ಉಪಭೋಗಿಸುವ ಜೀವಾತ್ಮನಿಗೆ 'ಪ್ರಮಾತೃ' ಎಂಬುದಾಗಿ ಕರೆಯುತ್ತಾರೆ. ಹೀಗೆ ಈ ತ್ರಿಪುಟಿಗಳ ಮೂಲಕ ಪ್ರತಿಯೊಬ್ಬರ ವ್ಯವಹಾರವು ನಡೆದಿರು ತ್ತದೆ. ಈ ತ್ರಿಪುಟಿಗಳಲ್ಲಿ ಯಾವುದೊಂದರ ಕೊರತೆಯಾದರೂ ಆ ವ್ಯವಹಾರವು ಪೂರ್ಣವಾಗಲಾರದು.

ಉದಾಹರಣೆಗಾಗಿ, ಓರ್ವ ಜನ್ಮಾಂಧ ವ್ಯಕ್ತಿಯ ಮುಂದೆ ಒಂದು ಸುಂದರ ಸ್ವರೂಪವು ಬಂದರೂ ಅದರ ಅರಿವು ಆತನಿಗೆ ಆಗುವುದಿಲ್ಲ. ಇಲ್ಲಿ ಪ್ರಮಾತೃ ಹಾಗೂ ಪ್ರಮೇಯಗಳಿದ್ದರೂ ಪ್ರಮಾಣವಾದ ಚಕ್ಷುರಿಂದ್ರಿಯವು ಇಲ್ಲದಿರುವುದರಿಂದ ರೂಪದ ಜ್ಞಾನವು ಉಂಟಾಗಲಾರದು. ಇದೇ ರೀತಿ ತ್ರಿಪುಟಿಗಳಲ್ಲಿ ಯಾವುದೊಂದರ ಅಭಾವವಿದ್ದರೂ ಜ್ಞಾನವೂ ಸಂಭವಿಸಲಾರದೆಂದು ತಿಳಿದುಕೊಳ್ಳಬೇಕು. ಪ್ರಾಣ ಲಿಂಗಾರ್ಚನೆಯಲ್ಲಿ ಪ್ರಮಾತೃ–ಪ್ರಮಾಣ ಸಹಿತವಾಗಿ ಪ್ರಮೇಯಗಳಾದ ಶಬ್ದಾದಿ ವಿಷಯಗಳನ್ನು ಸಮರ್ಪಿಸುವುದೇ ತಾಂಬೂಲಾರ್ಪಣೆಯು. ಪ್ರಮೇಯಗಳಾದ ಶಬ್ದಾದಿ ವಿಷಯಗಳನ್ನು ಪ್ರಮಾಣಗಳಾದ ಶ್ರೋತ್ರಾದಿ ಇಂದ್ರಿಯಗಳಲ್ಲಿ ವಿಲೀನ ಗೊಳಿಸಿ ಆ ಶ್ರೋತ್ರಾದಿ ಪ್ರಮಾಣಗಳನ್ನು ಪ್ರಮಾತೃವಿನಲ್ಲಿ ವಿಲೀನಗೊಳಿಸಬೇಕು. ಹೀಗೆ ಪ್ರಮೇಯ ಪ್ರಮಾಣಗಳನ್ನು ತನ್ನಲ್ಲಿ ವಿಲೀನಗೊಳಿಸಿಕೊಂಡ ಪ್ರಮಾತೃವನ್ನು ಪ್ರಾಣಲಿಂಗರೂಪವಾದ ಪರಮಾತ್ಮನಲ್ಲಿ ಸಮರ್ಪಿಸುವುದೇ ವಿಷಯ ಸಮರ್ಪಣ ರೂಪವಾದ ತಾಂಬೂಲವು. ಅಂದರೆ, ಪ್ರಾಣಲಿಂಗಾರ್ಚನೆಯಲ್ಲಿ ಸಾಧಕನಿಗೆ ಶಬ್ದಾದಿ ವಿಷಯಗಳತ್ತ ಪ್ರವೃತ್ತಿಯು ನಿಂತು, ಆತನು ಸದಾ ಪ್ರಾಣಲಿಂಗಾಸಕ್ತನೇ ಆಗಿರುತ್ತಾನೆ. ಹೀಗೆ ಪ್ರಾಣಲಿಂಗಾರ್ಚಕನ ಮನಸ್ಸು ವಿಷಯವಾಸನಾರಹಿತವಾಗಿರುತ್ತದೆಂಬ ತಾತ್ಪರ್ಯವು.

ಪ್ರಾಣಲಿಂಗಾರ್ಚನೆಯ ಉಪಚಾರವನ್ನು ಮುಂದುವರೆಸುತ್ತ ಪೂಜ್ಯಪಾದರು 'ವಿಷಯಭ್ರಾಂತಿರಾಹಿತ್ಯಂ ತತ್ಪ್ರದಕ್ಷಿಣಕಲ್ಪನಾ' ಎಂಬುದಾಗಿ ಬೋಧಿಸುತ್ತ ಪ್ರದಕ್ಷಿಣೆಯು ಒಂದು ವಿಧವಾದ ನಮಸ್ಕಾರವು. ತನ್ನ ಆರಾಧ್ಯ ದೇವರನ್ನು ಮಧ್ಯ ದಲ್ಲಿರಿಸಿಕೊಂಡು ಅದರ ಸುತ್ತಲೂ ಶ್ರದ್ಧೆಯಿಂದ ಸುತ್ತುವರೆಯುವುದಕ್ಕೆ ಪ್ರದಕ್ಷಿಣಾ ನಮಸ್ಕಾರವೆಂದು ಕರೆಯುತ್ತಾರೆ. ಶ್ರೀ ಅಪ್ಪಯ್ಯ ದೀಕ್ಷಿತರು 'ಶಿವಾರ್ಚನ ಚಂದ್ರಿಕಾ' ಎಂಬ ಗ್ರಂಥದಲ್ಲಿ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಿಗಳ ಸಲುವಾಗಿ ಈ ಪ್ರದಕ್ಷಿಣೆಯ ವಿವಿಧ ಭೇದಗಳನ್ನು ವಿವರಿಸಿದ್ದಾರೆ. ದೇವ ಮಂದಿರವನ್ನು ಸಂಪೂರ್ಣ ವಾಗಿ ಸುತ್ತುವರಿದು ಮಾಡುವ ಪ್ರದಕ್ಷಿಣೆಯು ಎಲ್ಲ ಆಶ್ರಮದವರಿಗೆ ವಿಹಿತವೆಂಬು ದನ್ನು ಅವರೇ ಬೋಧಿಸಿದ್ದಾರೆ. ಸಾಮಾನ್ಯವಾಗಿ ಮನುಷ್ಯನ ಮನಸ್ಸು, ಶಬ್ದ ಸ್ಪರ್ಶಾದಿ ವಿಷಯಗಳಲ್ಲಿಯೇ ಸುಖವಿದೆಯೆಂಬುದಾಗಿ ಭ್ರಮಿಸಿ ಯಾವಾಗಲೂ ಅವುಗಳನ್ನೇ ಸುತ್ತುವರಿಯುತ್ತಿರುತ್ತದೆ, ಅರ್ಥಾತ್ ಚಿಂತಿಸುತ್ತಿರುತ್ತದೆ. ವಿಷಯ ಚಿಂತನಾರೂಪವಾದ ಭ್ರಾಂತಿಯು ದೂರವಾಗಿ, ಮನಸ್ಸಿನಲ್ಲಿ ಪ್ರಾಣಲಿಂಗಚಿಂತನೆ ಪ್ರಾರಂಭವಾಯಿತೆಂದರೆ ಅದೇ ಪ್ರಾಣಲಿಂಗದ ವಾಸ್ತವಿಕವಾದ ಪ್ರದಕ್ಷಿಣೆಯು. ವಿಷಯಗಳನ್ನು ಸುತ್ತುವರೆಯುವ ಮನಸ್ಸು ಅವುಗಳ ಭ್ರಾಂತಿಯನ್ನು ಬಿಟ್ಟು, ಪ್ರಾಣಲಿಂಗವನ್ನು ಸುತ್ತುವರೆಯಲು ಪ್ರಾರಂಭಿಸುತ್ತದೆ. ಅಂತೆಯೇ ಪೂಜ್ಯಪಾದರು ವಿಷಯಭ್ರಾಂತಿಯನ್ನು ನಿವೃತ್ತಿ ಮಾಡಿಕೊಳ್ಳುವುದೇ ಪ್ರಾಣಲಿಂಗದ ಪ್ರದಕ್ಷಿಣೆಯೆಂಬುದಾಗಿ ಬಹುಮಾರ್ಮಿಕವಾಗಿ ಉಪದೇಶಿಸಿದ್ದಾರೆ.

ಪ್ರಾಣಲಿಂಗಾರ್ಚನೆಯ ಕೊನೆಯ ಉಪಚಾರವಾದ ನಮಸ್ಕಾರದ ಬಗ್ಗೆ ಉಪದೇಶಿಸುತ್ತ ಪೂಜ್ಯಪಾದರು 'ಬುದ್ಧೇಸ್ತದಾತ್ಮಿಕಾ ಶಕ್ತಿರ್ನಮಸ್ಕಾರ ಕ್ರಿಯಾ ಮತಾ ।' ಈ ರೀತಿಯಾಗಿ ವಿವರಿಸಿದ್ದಾರೆ. ಯಾವುದೇ ಕ್ರಿಯಾಕಲಾಪಗಳನ್ನು ಎಸಗುವಾಗ ಅಹಂ ಅಹಂ ಎಂಬುದಾಗಿ ಅಹಂಕರಿಸುವ ಬುದ್ಧಿವೃತ್ತಿಯು, ಈ ಅಭಿಮಾನವನ್ನು ಬಿಟ್ಟು, ಪ್ರಾಣಲಿಂಗದೊಡನೆ ಸಮರಸವಾಗುವುದೇ ಪ್ರಾಣಲಿಂಗಾರ್ಚನೆಯಲ್ಲಿಯ ನಮಸ್ಕಾರ ಕ್ರಿಯೆಯು. ಪ್ರಾಣಲಿಂಗವನ್ನು ಅರ್ಚಿಸಿ, ಪ್ರಾಣಲಿಂಗಸ್ವರೂಪವಾಗುವುದೇ ಈ ಅರ್ಚನೆಯ ಫಲವೆಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಕ್ಷಮಾಭಿಷೇಕವನ್ನೇ ಮೊದಲುಗೊಂಡು ಬುದ್ಧಿಯ ತಾದಾತ್ಮ್ಯರೂಪವಾದ ನಮಸ್ಕಾರ ಕ್ರಿಯಾಪರ್ಯಂತ ಗಳಾದ ವಿಲಕ್ಷಣ ಅಂತರಂಗ ಸಾಮಗ್ರಿಗಳಿಂದ ಪ್ರಾಣಲಿಂಗವನ್ನು ಪೂಜಿಸುವುದೇ ಪ್ರಾಣಲಿಂಗಾರ್ಚನೆಯು ಎಂಬುದಾಗಿ ಉಪದೇಶಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕೊನೆಯದಾಗಿ–

ಏವಂವಿಧೈರ್ಭಾವಶುದ್ಧೈರುಪಚಾರೈರದೂಷಿತೈಃ ।
ಪ್ರತ್ಯುನ್ಮುಖಮನಾ ಭೂತ್ವಾ ಪೂಜಯೇಲ್ಲಿಂಗಮಾಂತರಮ್ ॥

(ಸಿ. ಶಿ. ೧೨,೨೦)

ಈ ತೆರನಾಗಿ ಬೋಧಿಸಿದ್ದಾರೆ. ಪ್ರಾಣಲಿಂಗಾರ್ಚನೆಗೆ ಪರಿಶುದ್ಧ ಭಾವನಾ ರೂಪಗಳಾದ ಉಪಚಾರಗಳೇ ಮುಖ್ಯವಾದ ಸಾಮಗ್ರಿಗಳು. ಈ ಪೂಜಾ ಸಾಹಿತ್ಯವನ್ನು ಸಂಗ್ರಹಿಸ

ಬೇಕಾದರೆ ಸಾಧಕನು ಅಂತರ್ಮುಖಿಯಾಗಬೇಕಾಗುತ್ತದೆ. ಬಾಹ್ಯಲಿಂಗ ಪೂಜೆಯನ್ನು ಮಾಡುವಾಗ ಪೂಜಕನು ಪೂರ್ವ ಇಲ್ಲವೆ ಉತ್ತರಾಭಿಮುಖವಾಗಿ ಕೂಡ್ರಲು ಶಾಸ್ತ್ರದಲ್ಲಿ ಉಪದೇಶಿಸಿಲ್ಪಟ್ಟಿದೆ. ಆದರೆ ಪ್ರಾಣಲಿಂಗಾರ್ಚನೆಯಲ್ಲಿ ಸಾಧಕನು ಅಂತರಾಭಿ ಮುಖವಾಗಿ ಕೂಡ್ರಬೇಕೆಂಬುದನ್ನು 'ಪ್ರತ್ಯುನ್ಮುಖಮನಾ ಭೂತ್ವಾ' ಎಂದು ಪೂಜ್ಯರು ಸೂಚಿಸಿದ್ದಾರೆ.

ಪ್ರಾಣಲಿಂಗಿಸ್ಥಲದ ಸಾಧಕನು ತನ್ನ ಹೃದಯಪೀಠದಲ್ಲಿ ವಿರಾಜಮಾನವಾದ ಜ್ಯೋತಿಸ್ಸ್ವರೂಪವಾದ ಪ್ರಾಣಲಿಂಗವನ್ನು ಪ್ರತಿದಿನ ಕ್ಷಮೆಯೆಂಬ ಜಲದಿಂದ ಮಜ್ಜನ ಗೈದು, ವಿವೇಕವೆಂಬ ವಸ್ತ್ರದಿಂದ ದ್ರವತೆಗೆದು (ಒರೆಸಿ), ಸತ್ಯವೆಂಬ ಆಭರಣದಿಂದ ಅಲಂಕರಿಸಿ, ವೈರಾಗ್ಯವೆಂಬ ಪುಷ್ಪಮಾಲೆಯನ್ನು ತೊಡಿಸಿ, ಸಮಾಧಿಸ್ಥಿತಿ ಎಂಬ ಗಂಧವನ್ನು ಧರಿಸಿ, ನಿರಹಂಕಾರವೆಂಬ ಅಕ್ಷತೆಯನ್ನಿಟ್ಟು, ಶ್ರದ್ಧೆಯೆಂಬ ಧೂಪವನ್ನು ಸಮರ್ಪಿಸಿ, ಜಗತ್ತನ್ನು ಬೆಳಗುವ ಮಹಾಜ್ಞಾನವೆಂಬ ದೀಪವನ್ನು ಬೆಳಗಿ, ಪ್ರಪಂಚ ಭ್ರಾಂತಿಯೆಂಬ ನೈವೇದ್ಯವನ್ನು ಅರ್ಪಿಸಿ, ಮೌನವೆಂಬ ಘಂಟಾನಾದವನ್ನು ಮಾಡಿ, ಶಬ್ದ ಸ್ಪರ್ಶಾದಿ ವಿಷಯಗಳೆಂಬ ತಾಂಬೂಲವನ್ನಿತ್ತು, ವಿಷಯನಿರ್ಭ್ರಾಂತಿಯೆಂಬ ಪ್ರದಕ್ಷಿಣೆ ಯನ್ನು ಹಾಕಿ ಹಾಗೂ ಬುದ್ಧಿಯ ಸಮರ್ಪಣಾರೂಪವಾದ ನಮಸ್ಕಾರಗೈದು ಪ್ರಾಣ ಲಿಂಗಾರ್ಚನೆ ಮಾಡಬೇಕೆಂದು ಮಹಾಚಾರ್ಯರು ಉಪದೇಶಿಸಿದ್ದಾರೆ.

ಈ ಲಿಂಗಾರ್ಚನೆಯಲ್ಲಿ ಉಪದೇಶಿಸಿದ ಉಪಚಾರ ಸಾಮಗ್ರಿಗಳು ಆಂತರಂಗಿಕ ಗಳಾದ್ದರಿಂದ, ಇವನ್ನು ಸಂಪಾದಿಸಬೇಕಾದರೆ ಸಾಧಕನು ಅಂತರ್ಮುಖಿಯಾಗಬೇಕಾಗು ತ್ತದೆ. ಕಾರಣ ಪ್ರತಿಯೊಬ್ಬರೂ ತಮ್ಮ ಇಷ್ಟಲಿಂಗ ಪೂಜೆಯನ್ನು ಪೂರೈಸಿದ ನಂತರ ಕೆಲ ಸಮಯ ಅಂತರ್ಮುಖಿಯಾಗಿದ್ದುಕೊಂಡು, ಈ ಮೊದಲು ಉಪದೇಶಿಸಿದ ಪರಿಶುದ್ಧ ಗಳಾದ ಭಾವಸಾಮಗ್ರಿಗಳಿಂದ ಪ್ರಾಣಲಿಂಗಾರ್ಚನೆಯನ್ನು ಗೈಯ್ಯುವ ಸಾಮರ್ಥ್ಯವನ್ನು ಪ್ರತಿಯೊಬ್ಬರೂ ಅಳವಡಿಸಿಕೊಳ್ಳಬೇಕೆಂಬುದಾಗಿ ಅನುಗ್ರಹಿಸಿ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ಏಪ್ರಿಲ್, ೧೯೯೨

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



# ಶಿವಯೋಗಸಮಾಧಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನಿನ್ನೆಯ ಪರ್ಯಂತ ಪ್ರಾಣಲಿಂಗಾರ್ಚನಾ ವಿಷಯಕವಾಗಿ ಆಶೀರ್ವಚನವನ್ನು ಆಲಿಸಿದ್ದೀರಿ. ಪ್ರಾಣಲಿಂಗಾರ್ಚಕನು ಉತ್ತಮೋತ್ತಮಗಳಾದ ಸದ್ಗುಣಗಳನ್ನು ಸಂಗ್ರಹಿಸಿ, ಅವುಗಳ ಮುಖಾಂತರ ಪ್ರಾಣಲಿಂಗಾರ್ಚನೆಯನ್ನು ಗೈದು, ಮುಂದೆ ಶಿವಯೋಗ ಸಮಾಧಿಯನ್ನು ಸಾಧಿಸುತ್ತಾನೆಂಬ ವಿಷಯವನ್ನು ಪ್ರತಿಪಾದಿಸುವುದ ಕ್ಕಾಗಿಯೇ ಶ್ರೀ ಜಗದ್ಗುರು ರೇಣುಕಾಚಾರ್ಯರು–

ಅಂತಃಕ್ರಿಯಾರತಸ್ಯಾಸ್ಯ ಪ್ರಾಣಲಿಂಗಾರ್ಚನಕ್ರಮೈಃ ।
ಶಿವಾತ್ಮಧ್ಯಾನಸಂಪತ್ತಿಃ ಸಮಾಧಿರಿತಿ ಕಥ್ಯತೇ ॥

(ಸಿ. ಶಿ. ೧೨–೨೧)

ಈ ರೀತಿಯಾಗಿ ಶಿವಯೋಗಸಮಾಧಿಸ್ಥಲವನ್ನು ಪ್ರಾರಂಭಿಸುತ್ತಿದ್ದಾರೆ. ಶಿವ ಜೀವ ಸಾಮರಸ್ಯಾನುಸಂಧಾನುರೂಪ ಸಮಾಧಿಗೆ ಶಿವಯೋಗಸಮಾಧಿಯೆಂದು ಕರೆಯು ತ್ತಾರೆ. ಮಹರ್ಷಿ ಪತಂಜಲಿಯು 'ಯೋಗಃ ಚಿತ್ತವೃತ್ತಿನಿರೋಧಃ' ಎಂಬುದಾಗಿ ಉಪದೇಶಿಸಿ, ಚಿತ್ತವೃತ್ತಿಗಳನ್ನು ನಿರೋಧಿಸುವುದಕ್ಕೆ ಯೋಗವೆಂಬುದಾಗಿ ಕರೆದಿದ್ದಾನೆ. ಚಿತ್ತವೃತ್ತಿಯು ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ ಮತ್ತು ಸ್ಮೃತಿ ಎಂಬುದಾಗಿ ಐದು ವಿಧವಾಗಿರುತ್ತದೆ. ಇದು ಪುನಃ ಕ್ಲಿಷ್ಟ, ಹಾಗೂ ಅಕ್ಲಿಷ್ಟವೆಂಬುದಾಗಿ ಎರಡು ಪ್ರಕಾರವಾಗುವುದು. ಹೀಗೆ ಒಟ್ಟು ಐದು ಕ್ಲಿಷ್ಟವೃತ್ತಿಗಳು ಹಾಗೂ ಐದು ಅಕ್ಲಿಷ್ಟ ವೃತ್ತಿಗಳೆಂದು ವೃತ್ತಿಯು ಹತ್ತುವಿಧವಾಗುವುದು. ಕ್ಲೇಶದಾಯಕಗಳಾದ ವೃತ್ತಿಗಳಿಗೆ ಕ್ಲಿಷ್ಟವೃತ್ತಿಗಳೆಂಬುದಾಗಿ ಕರೆಯುತ್ತಾರೆ. ಆದ್ದರಿಂದ ಪತಂಜಲಿ ಮಹರ್ಷಿಯು ಈ ಕ್ಲಿಷ್ಟವೃತ್ತಿಗಳನ್ನು ನಿರೋಧಿಸಿ, ಅಕ್ಲಿಷ್ಟವೃತ್ತಿಗಳ ಅನುಸಂಧಾನ ಮುಖಾಂತರ ಯೋಗ ವನ್ನು ಸಾಧಿಸುವ ವಿಧಾನವನ್ನು ಯೋಗಶಾಸ್ತ್ರದಲ್ಲಿ ಉಪದೇಶಿಸಿದ್ದಾನೆ. ಶ್ರೀ ಜಗದ್ಗುರು ರೇಣುಕಭಗವತ್ಪಾದರು ಶಿವಯೋಗ ಸಮಾಧಿಯನ್ನು ಸಾಧಿಸುವ ಒಂದು ಅಪೂರ್ವ ವಿಧಾನವನ್ನು ಬೋಧಿಸುತ್ತ–

ಸರ್ವತತ್ತ್ವೋಪರಿಗತಂ ಸಚ್ಚಿದಾನಂದಭಾಸುರಮ್ ।
ಸ್ವಪ್ರಕಾಶಮನಿರ್ದೇಶ್ಯಮವಾಙ್ಮನಸಗೋಚರಮ್ ॥

ಉಮಾಖ್ಯಯಾ ಮಹಾಶಕ್ತ್ಯಾ ದೀಪಿತಂ ಚಿತ್ಸ್ವರೂಪಯಾ ।
ಹಂಸರೂಪಂ ಪರಾತ್ಮಾನಂ ಸೋಽಹಂಭಾವೇನ ಭಾವಯೇತ್ ।
ತದೇಕತಾನತಾಸಿದ್ಧಿಃ ಸಮಾಧಿಃ ಪರಮೋ ಮತಃ ॥

(ಸಿ. ಶಿ. ೧೨ ; ೨೨–೨೪)

ಈ ವಿಧವಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಪೃಥ್ವೀತತ್ತ್ವವನ್ನೇ ಮೊದಲು ಮಾಡಿಕೊಂಡು, ಶಿವತತ್ತ್ವ ಪರ್ಯಂತಗಳಾದ ಮೂವತ್ತಾರು ತತ್ತ್ವಗಳನ್ನು ವೀರಶೈವ ಸಿದ್ಧಾಂತದಲ್ಲಿ ಸ್ವೀಕರಿಸಲಾಗಿರುತ್ತದೆ. ಪರಾತ್ಪರ ಶಿವನು ಈ ತತ್ತ್ವಗಳಿಗಿಂತಲೂ ಮೀರಿ ನಿಂತವನಾಗಿರುತ್ತಾನೆ. ಅಂತೆಯೇ ಅವನಿಗೆ 'ವಿಶ್ವೋತ್ತೀರ್ಣ'ನೆಂಬುದಾಗಿ ಕರೆಯುತ್ತಾರೆ. ವಿಶ್ವೋತ್ತೀರ್ಣನಾದ ಅವನು ಮೂವತ್ತಾರು ತತ್ತ್ವಗಳ ರೂಪದಲ್ಲಿ ವಿಶ್ವರೂಪನೂ ಆಗಿರುತ್ತಾನೆ. ಶಿವಯೋಗಸಮಾಧಿಯನ್ನು ಸಾಧಿಸುವ ಸಾಧಕನು ವಿಶ್ವೋತ್ತೀರ್ಣನಾದ ಆ ಪರಶಿವನೊಂದಿಗೆ ತನ್ನ ಆತ್ಮವನ್ನು ತಾದಾತ್ಮ್ಯ ರೂಪದಲ್ಲಿ ಚಿಂತಿಸುವ ಯೋಗವನ್ನೇ ಇಲ್ಲಿ ಶಿವಯೋಗಸಮಾಧಿಯನ್ನಾಗಿ ಉಪದೇಶಿಸಿದ್ದಾರೆ. ವಿಶ್ವೋತ್ತೀರ್ಣವಾದ ಆ ಪರಾತ್ಪರ ತತ್ತ್ವವು ಸಚ್ಚಿದಾನಂದಸ್ವರೂಪವೂ, ಸ್ವಪ್ರಕಾಶವೂ, ಅನಿರ್ದೇಶ್ಯವೂ, ವಾಣಿ ಮನಗಳಿಗೆ ಅಗೋಚರವೂ ಆಗಿರುತ್ತದೆ. ಈ ಮಹಾಲಿಂಗತತ್ತ್ವವು ಚಿದ್ರೂಪವಾದ ಉಮಾಶಕ್ತಿ ಸಮವೇತವಾಗಿರುತ್ತದೆ. ಪರಮಹಂಸರೂಪವಾದ ಈ ಪರಾತ್ಪರ ತತ್ತ್ವವನ್ನು 'ಸೋಽಹಂ' ಅಂದರೆ ನಾನು ಆ ತತ್ತ್ವರೂಪವೇ ಆಗಿದ್ದೇನೆ ಎಂಬ ಭಾವನೆಯಿಂದ ಗೈಯುವ ಆತ್ಮ ಪರಮಾತ್ಮರ ಐಕ್ಯ ಚಿಂತನೆಯೇ ಶ್ರೇಷ್ಠವಾದ ಶಿವಯೋಗಸಮಾಧಿಯು.

ಪರಾತ್ಪರ ಸ್ವರೂಪವಾದ ಮಹಾಲಿಂಗತತ್ತ್ವವು ವಾಣಿಮನಗಳಿಗೆ ಅಗೋಚರವೆಂಬುದಾಗಿ ಪೂಜ್ಯಪಾದರು ಇಲ್ಲಿ ಉಪದೇಶಿಸಿದ್ದಾರೆ. ವಾಣಿಮನಗಳಿಗೆ ಅಗೋಚರವೆಂದರೆ, ಅಶುದ್ಧಗಳಾದ ವಾಣಿ-ಮನಗಳಿಗೆ ಅಗೋಚರವೆಂಬ ಭಾವವು. ಆದರೆ ಪರಿಶುದ್ಧಗಳಾದ ವಾಣಿ-ಮನಗಳು ಅತದ್‌ವ್ಯಾವೃತ್ತಿ ರೂಪವಾದ ಒಂದು ವಿಲಕ್ಷಣ ಪದ್ಧತಿಯಿಂದ ವಾಣಿಯು ಆ ತತ್ತ್ವವನ್ನು ವರ್ಣಿಸಬಲ್ಲದು ಮತ್ತು ಮನಸ್ಸು ಅದನ್ನು ಮನನ ಮಾಡಬಲ್ಲದು. ಒಂದು ವೇಳೆ ಆ ಪರತತ್ತ್ವವು ವಾಣಿ-ಮನಗಳಿಗೆ ಅತ್ಯಂತ ಅಗೋಚರವೇ ಆಗಿದ್ದರೆ, ಅದರ ಬಗ್ಗೆ ಚಿಂತನೆಯು ನಿರರ್ಥಕವೇ ಆಗುತ್ತಿತ್ತು. ಅಂತೆಯೇ ಅಶುದ್ಧವಾದ ಮನಕ್ಕೆ ಅದು ಅಗೋಚರವೆಂಬುದಾಗಿ ತಿಳಿಯಬೇಕು. ವಿಷಯಾಸಕ್ತವಾದ ಮನಸ್ಸಿಗೆ ಪರಮಾತ್ಮನು ಅಗೋಚರನಾಗಿದ್ದಾನೆ. ಅಂಧಕಾರ ಆವರಿಸಿದೊಡನೆ ದೃಷ್ಟಿಯು ನಿಷ್ಕ್ರಿಯವಾಗುವಂತೆ, ವ್ಯಸನಾಧೀನವಾದ ಮನಸ್ಸು ಪರಮಾತ್ಮಚಿಂತನಾ ರೂಪವಾದ ದೃಷ್ಟಿಯನ್ನು ಕಳೆದುಕೊಳ್ಳುತ್ತದೆ. ಆದರೆ ವ್ಯಸನಮುಕ್ತವಾದ, ಅಂತೆಯೇ ಪರಿಶುದ್ಧವಾದ ಮನಸ್ಸು ಪರಮತತ್ತ್ವವನ್ನು ಅರಿಯುವ ಸಾಮರ್ಥ್ಯವನ್ನು ಹೊಂದಿರುತ್ತದೆ. 'ಉಮಾ'ಯೆಂಬ ಚಿಚ್ಛಕ್ತಿಯಿಂದ ಯುಕ್ತವಾದ ಆ ಮಹಾಲಿಂಗತತ್ತ್ವಕ್ಕೆ ಯೋಗಶಾಸ್ತ್ರದಲ್ಲಿ 'ಹಂಸ' ಎಂಬುದಾಗಿ ಕರೆದಿದ್ದಾರೆ. ಹಂಸ ಪಕ್ಷಿಯು ಮಾನಸ ಸರೋವರದಲ್ಲಿ ವಾಸಮಾಡುತ್ತಿರುವಂತೆ, ಮಹಾಲಿಂಗರೂಪವಾದ ಈ ಹಂಸವು ಭಕ್ತರ ಮನಸ್ಸೆಂಬ ಸರೋವರದಲ್ಲಿ ಸದಾ ವಿಹರಿಸುವಂಥಾದ್ದಾಗಿದೆ. ಅಂತೆಯೇ ಆ ತತ್ತ್ವವನ್ನು 'ಹಂಸ'ವೆಂಬುದಾಗಿ ಕರೆದಿದ್ದಾರೆ. ಈ ಶ್ರೇಷ್ಠವಾದ ಹಂಸವನ್ನು ತಿಳಿದವರಿಗೆ 'ಪರಮಹಂಸ'ರೆಂದು ಕರೆಯುತ್ತಾರೆ. ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು ಆ ಹಂಸದ ಚಿಂತನೆಯನ್ನು 'ಸೋಽಹಂ' ರೂಪದಲ್ಲಿ ಮಾಡುವುದಾಗಿ ತಿಳಿಸಿದ್ದಾರೆ. ಅಜ್ಞರಾದ ಜೀವಿಗಳು ಆ ಪರಮಹಂಸ ತತ್ತ್ವವನ್ನು

ಮರೆತು ಸದಾ 'ಅಹಂ' 'ಅಹಂ' ಎಂಬುದಾಗಿ ವ್ಯವಹರಿಸುತ್ತ ಸಂಸಾರ ಬಂಧನದಲ್ಲಿ ಬದ್ಧಿತರಾಗಿರುತ್ತಾರೆ. ಆದರೆ ಶಿವಯೋಗಸಮಾಧಿ ಸಾಧಕರು 'ಸೋऽಹಂ' 'ಸೋऽಹಂ' ಎಂಬುದಾಗಿ, ಆ ಪರಮಹಂಸರೂಪವಾದ ಮಹಾಲಿಂಗ ತತ್ತ್ವದೊಡನೆ ತನ್ನ ಆತ್ಮವನ್ನು ಸಮರಸಭಾವದಿಂದ ಚಿಂತಿಸುತ್ತ, ಶಿವಯೋಗಸಮಾಧಿಯನ್ನು ಪಡೆದು ಸಂಸಾರದಿಂದ ಮುಕ್ತರಾಗುತ್ತಾರೆ. ಪರಮತತ್ತ್ವವನ್ನು ಮರೆತು ಸದಾ 'ಅಹಂ' 'ಅಹಂ' ಎಂದು ಅಹಂಕರಿಸುವ ಜೀವಿಗಳು 'ವರ್ಣಾಧ್ವ'ವೆಂಬ ಪಾಶದಲ್ಲಿ ಬಂಧಿತರಾಗುತ್ತಾರೆ. ಶ್ರೀ ಸಿದ್ಧಾಂತ ಶಿಖಾಮಣಿಯ ಭಾಷ್ಯಕಾರರಾದ ಶ್ರೀ ಮರಿತೋಂಟದಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಈ ವಿಷಯವನ್ನು ಬಹು ಸುಂದರವಾಗಿ ವಿವೇಚಿಸಿದ್ದಾರೆ. ಅಧ್ವಗಳು– ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ಭುವನಾಧ್ವ, ತತ್ತ್ವಾಧ್ವ ಮತ್ತು ಕಲಾಧ್ವವೆಂಬು ದಾಗಿ ಆರು ಪ್ರಕಾರವಾಗಿರುತ್ತವೆ. ಅಧ್ವ ಎಂದರೆ 'ಮಾರ್ಗ' ಎಂದರ್ಥ. ಪರಮ ತತ್ತ್ವವನ್ನು ತಿಳಿದುಕೊಳ್ಳಲು ಇವು ಆರು ಮಾರ್ಗಗಳಾಗಿರುತ್ತವೆ. ಈ ಅಧ್ವಗಳು ಅಶುದ್ಧಗಳಾಗಿದ್ದರೆ ಜೀವಾತ್ಮರನ್ನು ಬಂಧನಗೊಳಿಸುತ್ತವೆ. ಅವು ಶುದ್ಧಗಳಾದಾಗ ಮುಕ್ತಿಯ ಸಾಧನಗಳಾಗಿರುತ್ತವೆ. 'ಅ' ಕಾರದಿಂದ 'ಹ' ಕಾರ ಪರ್ಯಂತಗಳಾದ ವರ್ಣಗಳೇ ವರ್ಣಾಧ್ವವು. ಈ ವರ್ಣಾಧ್ವದಿಂದ ಬಂಧಿತನಾದ ಜೀವಾತ್ಮನು ಸದಾ ಕಾಲದಲ್ಲಿ 'ಅಹಂ' 'ಅಹಂ' ಎಂಬುದಾಗಿ ಅಹಂಕರಿಸುತ್ತ ಜಾಗ್ರತ್ ಮತ್ತು ಸ್ವಪ್ನಾವಸ್ಥೆಗಳಲ್ಲಿ ಅಭಿಮಾನಿಸುತ್ತಿರುತ್ತಾನೆ. ಈ ಪ್ರಕಾರದ ಅಭಿಮಾನವೇ ಬಂಧನಕಾರಿ ಯಾಗುವುದು. ಇದರಿಂದ ಮುಕ್ತರಾಗಲು 'ಸೋऽಹಂ' ಭಾವನೆಯು ಪರಮಾವಶ್ಯಕ ವಾದುದು. 'ಅಹಂ' ಎಂದು ಅಭಿಮಾನಿಸುವಾಗ ಅದು ವ್ಯಷ್ಟಿರೂಪವಾಗಿದ್ದು ಕೇವಲ ತನ್ನ ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳಿಗೆ ಸೀಮಿತವಾಗಿರುತ್ತದೆ. ಅದೇ 'ಸೋऽಹಂ' ರೂಪವನ್ನು ತಾಳಿದಾಗ ಸಮಷ್ಟಿ ಸ್ವರೂಪವನ್ನು ತಾಳಿಮುಕ್ತಿಗೆ ಸಾಧನವಾಗಿರುತ್ತದೆ. ಯಾರಲ್ಲಿ ವ್ಯಷ್ಟಿ ಅಹಂ, ಭಾವವಿದೆಯೋ, ಅವನು ಜೀವ ಭಾವವುಳ್ಳವನು.' ಇನ್ನು ಸಮಷ್ಟಿ ಭಾವವನ್ನು ತಾಳಿದವನು ಪರಮಾತ್ಮನೆಂದು ಕರೆಸಿಕೊಳ್ಳುತ್ತಾನೆ. 'ಅಹಂ' ಎಂಬ ವ್ಯಷ್ಟಿ ಅಭಿಮಾನ ಮೂಲಕವಾಗಿಯೇ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ರಾಗ–ದ್ವೇಷಾದಿ ವಿಕಾರಗಳು ನಿರ್ಮಾಣಗಳಾಗುತ್ತವೆ. ಈ ವಿಕಾರಗಳ ಮೂಲಕವೇ ಪ್ರತಿಕೂಲ ಹಾಗೂ ಅನುಕೂಲ ಜ್ಞಾನಗಳು ಸಂಭವಿಸುವವು. ರಾಗವಿದ್ದವರ ಜೊತೆಗೆ ಅನುಕೂಲ ವ್ಯವಹಾರ, ದ್ವೇಷ ವಿದ್ದವರ ಜೊತೆಗೆ ಪ್ರತಿಕೂಲ ವ್ಯವಹಾರ. ಈ ಅನುಕೂಲ–ಪ್ರತಿಕೂಲ ವ್ಯವಹಾರ ಗಳಿಂದಲೇ ಪುಣ್ಯ–ಪಾಪಗಳು ಸಂಭವಿಸುವವು. ಈ ಪುಣ್ಯ–ಪಾಪಗಳೇ ಜೀವಾತ್ಮನ ಜನನ ಮರಣಗಳಿಗೆ ಕಾರಣೀಭೂತಗಳಾಗಿರುತ್ತವೆ. ಹೀಗೆ ವ್ಯಷ್ಟಿಭಾವವು ಕ್ರಮಶಃ ಅನೇಕ ಅನರ್ಥ ಪರಂಪರೆಗಳನ್ನು ಉದ್ಭವಿಸಿ ಜೀವಿಯ ಜನನ–ಮರಣಕ್ಕೆ ಕಾರಣ ವಾಗುತ್ತವೆ ಈ ವ್ಯಷ್ಟಿ ಭಾವವಳಿದು 'ಸೋऽಹಂ' ಎಂಬ ಸಮಷ್ಟಿಭಾವವು ಸಂಜನಿಸಿದಾಗ, ಆತನಲ್ಲಿ ಭೇದ ಜ್ಞಾನವೆಲ್ಲ ನಿವೃತ್ತವಾಗೋಣದರಿಂದ ಅನುಕೂಲ–ಪ್ರತಿಕೂಲ ಜ್ಞಾನಗಳು (ಭಾವನೆಗಳು) ಉಂಟಾಗಲಾರವು. ಅಂತೆಯೇ ಸರ್ವತ್ರ ತನ್ನ ಸ್ವರೂಪ ವನ್ನೇ ಕಾಣುವ ಆತನಿಗೆ ರಾಗ–ದ್ವೇಷಾದಿಗಳು ಉಂಟಾಗ ಲಾರವು. ಈ ರಾಗ– ದ್ವೇಷಾದಿಗಳ ಅಭಾವದಿಂದಲೇ ಅವನಿಂದ ಪುಣ್ಯವಾಗಲೀ ಅಥವಾ ಪಾಪವಾಗಲಿ ಉತ್ಪನ್ನವಾಗಲಾರವು. ಈ ತೆರನಾಗಿ ಪುಣ್ಯ–ಪಾಪಗಳೇ

ನಿವೃತ್ತಗಳಾದಾಗ ಅವನಿಗೆ ಜನ್ಮ-ಮರಣಗಳಾದರೂ ಹೇಗೆ ತಾನೆ ಸಂಭವಿಸಬಲ್ಲವು ? ಇಂತು 'ಸೋಽಹಂ' ಎಂಬ ಸಮಷ್ಟಿಭಾವವು ಸಂಸಾರದ ಸರ್ವ ಬಂಧನಗಳಿಂದ ಮುಕ್ತಿಯನ್ನು ದಯಪಾಲಿಸು ವಂತಹದಾಗಿದೆ.

ಸಮಷ್ಟಿಸ್ವರೂಪವಾದ ಈ 'ಸೋಽಹಂ' ಭಾವವು ತೈಲ ಧಾರೆಯಂತೆ ಮನಸ್ಸಿನಲ್ಲಿ ಯಾವಾಗ ಅಖಂಡ ಸ್ವರೂಪವನ್ನು ತಾಳುವುದೋ, ಆವಾಗ ಸಾಧಕನಿಗೆ ಶಿವಯೋಗ ಸಮಾಧಿಯು ಪ್ರಾಪ್ತವಾಗುವುದು. ಅಂದರೆ 'ಸೋಽಹಂ' ಭಾವನೆಯಿಂದ ಆ ಪ್ರಾಣ ಲಿಂಗವನ್ನು ಅಖಂಡವಾಗಿ ಚಿಂತಿಸುವುದೇ ಶಿವಯೋಗ ಸಮಾಧಿಯು. ಪೂಜ್ಯಪಾದ ರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು-ಪ್ರಾಣಲಿಂಗಾರ್ಚಕರು ಶಿವಯೋಗ ಸಮಾಧಿಯನ್ನು ಪಡೆಯುವ ವಿಷಯವನ್ನು ಕುರಿತು ಉಪದೇಶಿಸುತ್ತ-

ಪರಬ್ರಹ್ಮಮಹಾಲಿಂಗಂ ಪ್ರಾಣೋ ಜೀವಃ ಪ್ರಕೀರ್ತಿತಃ ।
ತದೇಕಭಾವಮನನಾತ್ ಸಮಾಧಿಸ್ಥಃ ಪ್ರಕೀರ್ತಿತಃ ॥

(ಸಿ. ಶಿ. ೧೨-೨೪)

ಈ ರೀತಿಯಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ, 'ಪ್ರಾಣ' ಈ ಶಬ್ದದ ಅರ್ಥವು ಜೀವವೆಂತಲೂ 'ಲಿಂಗ' ಎಂಬ ಶಬ್ದದ ಅರ್ಥವು ಪರಬ್ರಹ್ಮ ಸ್ವರೂಪವಾದ ಮಹಾಲಿಂಗವೆಂತಲೂ ಪೂಜ್ಯರು ಇಲ್ಲಿ ಬೋಧಿಸಿದ್ದಾರೆ. ಅಂದರೆ ಜೀವರೂಪನಾದ ನಾನು ಶಿವರೂಪನೇ ಆಗಿದ್ದೇನೆ ಎಂಬ ನಿರಂತರ ಚಿಂತನೆಯೇ ಪ್ರಾಣ ಲಿಂಗಾರ್ಚನೆಯು. ವೀರಶೈವ ಸಿದ್ಧಾಂತದಲ್ಲಿ ಪರಶಿವ ಬ್ರಹ್ಮಕ್ಕೆ ಲಿಂಗ ಅಥವಾ ಮಹಾಲಿಂಗವೆಂದು ಕರೆಯುತ್ತಾರೆ. ಅದರಂತೆ ಪ್ರಾಣವೆಂದರೆ ಜೀವಾತ್ಮನು ಈ ತೆರನಾಗಿ ಪ್ರಾಣ ಹಾಗೂ ಲಿಂಗಗಳ ಏಕತ್ವಾನುಸಂಧಾನ ಇಲ್ಲವೆ ಐಕ್ಯಾನುಸಂಧಾನವೇ ಶಿವಯೋಗ ಸಮಾಧಿಯು. ಮನಸ್ಸಿನ ಅನ್ಯಾಕಾರ ವೃತ್ತಿಗಳನ್ನು ದೂರಮಾಡಿ ತದಾಕಾರ ವೃತ್ತಿಯನ್ನಭ್ಯಸಿಸುತ್ತ ಯಾವಾಗ ಮನಸ್ಸು ಸಂಪೂರ್ಣವಾಗಿ ಧ್ಯೇಯ ಸ್ವರೂಪವನ್ನು ಹೊಂದುವುದೋ ಆಗಲೇ ಸಾಧಕನು ಸಮಾಧಿ ಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುವನು. ಸಮಾಧಿ ಸ್ಥಿತಿಯನ್ನು ಸಾಧಿಸುವಾಗ ಅನ್ಯಾಕಾರ ವೃತ್ತಿಗಳು ಉದ್ಭವಿಸುತ್ತಿದ್ದರೆ, ಅವುಗಳನ್ನು ದೂರೀಕರಿಸಿ ಪುನಃ ಪುನಃ ತದೇಕರೂಪವಾಗಿ ಚಿಂತಿಸುವ ಕ್ರಿಯೆಗೆ ಮನನವೆಂಬುದಾಗಿ ಕರೆಯುತ್ತಾರೆ. 'ಸೋಽಹಂ' 'ಸೋಽಹಂ' ಎಂಬುದಾಗಿ ಧ್ಯಾನಿಸುವ ಸಾಧಕನ ಮನದಲ್ಲಿ ಒಮ್ಮೊಮ್ಮೆ 'ಅಹಂ' 'ಅಹಂ' ಎಂಬ ವ್ಯಷ್ಟಿ ಭಾವವು ಬರುತ್ತಿದ್ದರೆ, ಆ ಅಹಂ ಭಾವವನ್ನು 'ಸೋಽಹಂ' ಎಂಬ ಸಮಷ್ಟಿ ಭಾವದ ಮನನದಿಂದ ದೂರಮಾಡಿ ನಿದಿಧ್ಯಾಸ ಸ್ಥಿತಿ ಯನ್ನು ಪ್ರಾಪ್ತಮಾಡಿಕೊಳ್ಳುವುದೇ ಶಿವಯೋಗಸಮಾಧಿಯು. ಪ್ರತಿಯೊಬ್ಬ ಶಿವ ಯೋಗಸಾಧಕನು ಇಂತಹ ಸಮಾಧಿ ಸ್ಥಿತಿಯ ಪ್ರಾಪ್ತಿಗಾಗಿ, ಪ್ರತಿನಿತ್ಯ ಪ್ರಯತ್ನಿಸ ಬೇಕೆಂದು ತಿಳಿಯಪಡಿಸಿ, ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೯ ಎಪ್ರಿಲ್ ೧೯೯೨

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



ಆಶೀರ್ವಚನ-೨

# ಶಿವಯೋಗಸಮಾಧಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನಿನ್ನೆಯ ದಿನ ನೀವೆಲ್ಲ ಪ್ರಾಣ ಮತ್ತು ಲಿಂಗಗಳ ಅರ್ಥವನ್ನು ತಿಳಿದುಕೊಂಡು ಅವುಗಳ ಐಕ್ಯಾನುಸಂಧಾನವೇ ಸಮಾಧಿಯೆಂಬುದಾಗಿ ಶ್ರವಣ ಮಾಡಿದ್ದೀರಿ. ಈ ಸಮಾಧಿಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳಲು ಷಟ್‌ಚಕ್ರಗಳನ್ನು ದಾಟಿ ಸಹಸ್ರದಲ ಕಮಲದ ಮಧ್ಯದಲ್ಲಿ ವಿರಾಜಿಸುವ ಚಂದ್ರಬಿಂಬದ ಕೇಂದ್ರಬಿಂದುವಿನಲ್ಲಿ ಶಿವ ಸ್ವರೂಪವನ್ನು ಧ್ಯಾನಿಸುವ ಶಿವಯೋಗವಿಧಾನವನ್ನು ಜಗದ್ಗುರು ರೇಣುಕ ಭಗವತ್ಪಾದರು–

ಅಂತಃ ಷಟ್‌ಚಕ್ರರೂಢಾನಿ ಪಂಕಜಾನಿ ವಿಭಾವಯೇತ್ ।
ಬ್ರಹ್ಮಾದಿಸ್ಥಾನಭೂತಾನಿ ಭ್ರೂಮಧ್ಯಾಂತಾನಿ ಮೂಲತಃ ॥

ಭ್ರೂಮಧ್ಯಾದೂರ್ಧ್ವಭಾಗೇತು ಸಹಸ್ರದಲಮಂಬುಜಮ್ ।
ಭಾವಯೇತ್ತತ್ರ ವಿಮಲಂ ಚಂದ್ರಬಿಂಬಂ ತದಂತರೇ ॥

ಸೂಕ್ಷ್ಮರಂಧ್ರಂ ವಿಜಾನೀಯಾತ್ ತತ್‌ಕೈಲಾಸಪದಂ ವಿದುಃ ।
ತತ್ರಸ್ಥಂ ಭಾವಯೇಚ್ಛಂಭುಂ ಸರ್ವಕಾರಣಕಾರಣಮ್ ॥

(ಸಿ. ಶಿ. ೧೨ ; ೨೫–೨೭)

ಎಂಬುದಾಗಿ ಬೋಧಿಸಿದ್ದಾರೆ. ಇದು ಶಿವಯೋಗಸಮಾಧಿ ಪ್ರಕ್ರಿಯೆಯು. ಪ್ರತಿಯೊಬ್ಬ ವ್ಯಕ್ತಿಯ ಸೂಕ್ಷ್ಮ ಶರೀರದಲ್ಲಿ ಷಟ್‌ಚಕ್ರಗಳಿದ್ದು, ಅವುಗಳತ್ತ ಚಿತ್ತವನ್ನು ಹರಿಸಿದಾಗ ಪ್ರತಿಯೊಬ್ಬರಿಗೆ ಅವುಗಳ ಪರಿಕಲ್ಪನೆಯುಂಟಾಗುವುದು. ಸದಾಕಾಲದಲ್ಲಿ ಬಹಿರಂಗ ವ್ಯವಹಾರದಲ್ಲಿಯೇ ಮಗ್ನರಾಗಿರುವ ಸಾಮಾನ್ಯ ಜನರಿಗೆ ಶಿವಯೋಗಿಗಳು ಬೋಧಿಸುವ ಈ ಷಟ್‌ಚಕ್ರಗಳು ಕಾಲ್ಪನಿಕಗಳಾಗಿ ತೋರಬಹುದು. ಆದರೆ ಅಂತರ್ಮುಖಿಯಾಗಿ ಸಾಧನೆಯನ್ನು ಪ್ರಾರಂಭಿಸಿದಾಗ, ಪ್ರತಿಯೊಬ್ಬರಿಗೂ ಅವುಗಳ ಅನುಭವವು ಉಂಟಾಗುವುದು. ನಮ್ಮಲ್ಲಿಯೇ ಇರುವ ವಸ್ತುಗಳು, ನಾವು ಅತ್ತ ಲಕ್ಷ್ಯಗೊಡದೇ ಇದ್ದಾಗ, ನಮ್ಮಲ್ಲಿ ಇದ್ದೂ ಅವು ನಮಗೆ ತೋರಲಾರವು. ಎಷ್ಟೋ ಸಾರೆ ಯಾವುದೊಂದು ಮಹತ್ತ್ವಪೂರ್ಣವಾದ ವಸ್ತುವನ್ನು ತನ್ನ ಮನೆಯಲ್ಲಿಯೇ ಇಟ್ಟು ಮರೆತಿರುವ ವ್ಯಕ್ತಿಯು, ಗಡಿಬಿಡಿಯಲ್ಲಿ ಅತ್ತಿತ್ತ ಹುಡುಕಾಡಿದರೂ, ಎಲ್ಲಿಯೂ ಸಿಗದೇ ಇದ್ದಾಗ, ಒಂದು ಸ್ಥಾನದಲ್ಲಿ ಶಾಂತವಾಗಿ ಕುಳಿತು ಆ ವಸ್ತುವಿನ ಬಗ್ಗೆ ಸಮಾಧಾನದಿಂದ ಚಿಂತನೆ ಮಾಡಿದಾಗ, ಆ ವಸ್ತುವನ್ನಿಟ್ಟ ಸ್ಥಾನದ ಸ್ಮೃತಿಯಾಗಿ ಆ ವ್ಯಕ್ತಿಯು ಆ ವಸ್ತುವನ್ನು ಪಡೆದುಕೊಂಡು ಸಂತುಷ್ಟನಾಗುವುದನ್ನು ಅನೇಕ ಕಡೆಗಳಲ್ಲಿ ಕಾಣುತ್ತೇವಲ್ಲದೆ ಇಂತಹ

ಅನುಭವಗಳು ಲೋಕದಲ್ಲಿ ಪ್ರತಿಯೊಬ್ಬರಿಗೆ ಆಗುವುದುಂಟು. ಅದರಂತೆ ಪ್ರತಿಯೊಬ್ಬ ವ್ಯಕ್ತಿಯ ಸೂಕ್ಷ್ಮಶರೀರದಲ್ಲಿ ಷಟ್‌ಚಕ್ರಗಳು ವಿರಾಜಮಾನವಾಗಿದ್ದರೂ, ಸಾಮಾನ್ಯ ಸಂಸಾರಿಕನಾದ ಜೀವಿಯು ಅವುಗಳತ್ತ ಗಮನಹರಿಸದ ಕಾರಣ ಅವುಗಳಿದ್ದೂ ಅವನಿಗೆ ಇಲ್ಲದಂತೆಯೇ ಆಗಿರುತ್ತವೆ. ಒಬ್ಬ ಅಂತರ್ಮುಖಿಯಾದ ಶಿವಯೋಗಿಯು ಮನಸ್ಸಿನ ಬಹಿಃ–ಪ್ರವೃತ್ತಿಯನ್ನೆಲ್ಲ ನಿರೋಧಿಸಿ, ಅಂತರಂಗದತ್ತ ಆ ಮನೋವೃತ್ತಿಯನ್ನು ಪ್ರವೃತ್ತ ಗೊಳಿಸಿದಾಗ, ಅವನಿಗೆ ಅಂತರಂಗದ ಪರಿಪೂರ್ಣ ಜ್ಞಾನವುಂಟಾಗುವುದು. ಓರ್ವ ಸಾಮಾನ್ಯ ವ್ಯಕ್ತಿಯು ತನ್ನ ಕಣ್ಣುಗಳಿಂದ ತನ್ನ ಬಾಹ್ಯ ಶರೀರ ಮತ್ತು ಸುತ್ತಮುತ್ತಲಿನ ಜಗತ್ತನ್ನು ಸಹಜವಾಗಿ ನೋಡುವಂತೆ ಶಿವಯೋಗಿಯು ತನ್ನ ಸಾತ್ವಿಕ ಮನೋದೃಷ್ಟಿ ಯಿಂದ ತನ್ನ ಅಂತರಂಗ ಹಾಗೂ ಅಲ್ಲಿಯ ಎಲ್ಲ ವಸ್ತುಗಳನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲನು.

ಈ ವಿಧವಾಗಿ ಅಂತರಂಗದ ಸಾಕ್ಷಾತ್ಕಾರಕ್ಕೆ ಮನಸ್ಸಿನ ಅಂತರ್ಮುಖ ಪ್ರವೃತ್ತಿಯು ಮುಖ್ಯವಾದುದು. ಇಂತಹ ಅಂತರ್ಮುಖ ಸಾಧನೆಯಿಂದ ಶಿವಯೋಗವನ್ನು ಸಾಧಿಸಿದ ಶಿವಯೋಗಿಗೆ ಅನುಭವಗೋಚರವಾಗುವ ಷಟ್‌ಚಕ್ರಗಳ ಸ್ವರೂಪವನ್ನು ಪೂಜ್ಯ ಪಾದರು ಇಲ್ಲಿ ವಿವರಿಸಿದ್ದಾರೆ. ಪೂಜ್ಯರ ಉಪದೇಶದಂತೆ, ಗುದಸ್ಥಾನದ ಆಧಾರ ಚಕ್ರದಲ್ಲಿ ನಾಲ್ಕು ದಳದ ಕಮಲವು, ಗುಹ್ಯಸ್ಥಾನದ ಸ್ವಾಧಿಷ್ಠಾನ ಚಕ್ರದಲ್ಲಿ ಆರು ದಳದ ಕಮಲವು, ನಾಭಿಸ್ಥಾನದ ಮಣಿಪೂರ ಚಕ್ರದಲ್ಲಿ ಹತ್ತು ದಳದ ಕಮಲವು, ಹೃದಯ ಸ್ಥಾನದ ಅನಾಹತ–ಚಕ್ರದಲ್ಲಿ ಹನ್ನೆರಡು ದಳದ ಕಮಲವು, ಕಂಠ ಸ್ಥಾನದ ವಿಶುದ್ಧಿ ಚಕ್ರದಲ್ಲಿ ಹದಿನಾರು ದಳದ ಕಮಲವು ಮತ್ತು ಭ್ರೂಮಧ್ಯದ ಆಜ್ಞಾಚಕ್ರದಲ್ಲಿ ಎರಡು ದಳದ ಕಮಲವು ಇರುವುದಾಗಿ ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕು. ಪ್ರಾರಂಭದಲ್ಲಿ ಇವುಗಳ ಸಾಕ್ಷಾತ್ ಅನುಭವವು ಆಗದೇ ಇರೋಣದರಿಂದ ಪೂಜ್ಯರು 'ವಿಭಾವ ಯೇತ್' ಅಂದರೆ ಅವುಗಳನ್ನು ಭಾವಿಸಬೇಕು ಎಂದು ಹೇಳಿದ್ದಾರೆ. ಸ್ಥೂಲ ಶರೀರ ದಲ್ಲಿರುವ ಗುದ, ಗುಹ್ಯ, ನಾಭಿ, ಹೃದಯ, ಕಂಠ ಮತ್ತು ಭ್ರೂಮಧ್ಯಗಳೆಂಬ ಕೇಂದ್ರಗಳು ಪ್ರತಿಯೊಬ್ಬರಿಗೆ ಅನುಭವಗೋಚರಗಳಾಗಿರುತ್ತವೆ. ಆಯಾಯ ಕೇಂದ್ರ ದಲ್ಲಿ ಮೇಲೆ ವಿವರಿಸಿದ ಆಯಾಯ ದಳದ ಕಮಲಗಳನ್ನು ಭಾವನಾತ್ಮಕವಾಗಿ ಭಾವಿಸಿ, ನಿರಂತರವಾಗಿ ಆಯಾ ಕೇಂದ್ರಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಿದಾಗ ಅಲ್ಲಲ್ಲಿಯ ಕಮಲಗಳನ್ನು ಹಾಗೂ ಅಲ್ಲಿಯ ಅಧಿಷ್ಠಾತೃದೇವತೆಗಳನ್ನು ಸಾಕ್ಷಾತ್ಕರಿಸಿಕೊಳ್ಳ ಬಹುದು. ಮೂಲಾಧಾರದಿಂದ ಆಜ್ಞಾಪರ್ಯಂತಗಳಾದ ಷಟ್‌ಚಕ್ರಗಳಲ್ಲಿ ಕ್ರಮವಾಗಿ ನಕಾರ, ಮಕಾರ, ಶಿಕಾರ, ವಕಾರ, ಯಕಾರ ಮತ್ತು ಪ್ರಣವಗಳೆಂಬ ಬೀಜಾಕ್ಷರಗಳನ್ನು ಅದರಂತೆ ಬ್ರಹ್ಮಾದಿ ದೇವತೆಗಳನ್ನು ಭಾವಿಸಿ ಧ್ಯಾನಿಸಬೇಕು.

ಈ ತೆರನಾಗಿ ಶಿವಯೋಗಮಾರ್ಗದಿಂದ ಷಟ್‌ಚಕ್ರಗಳನ್ನು ದಾಟಿ ತನ್ನ ಮನೋವೃತ್ತಿಯನ್ನು ಭ್ರೂಮಧ್ಯದ ಊರ್ಧ್ವಭಾಗದಲ್ಲಿ ಅಂದರೆ ತನ್ನ ಮಸ್ತಕದಲ್ಲಿ ಸಹಸ್ರದಲದ ಕಮಲವನ್ನು ಭಾವಿಸಬೇಕೆಂಬುದಾಗಿ ಪೂಜ್ಯ ಜಗದ್ಗುರುಗಳವರು ಉಪದೇಶಿಸಿದ್ದಾರೆ. ಆ ಸಹಸ್ರದಲಕಮಲದ ಮಧ್ಯದಲ್ಲಿ ಒಂದು ಸುನಿರ್ಮಲವಾದ ಚಂದ್ರಬಿಂಬವನ್ನು ಸಹ ಭಾವಿಸಬೇಕು. ಆ ಚಂದ್ರಬಿಂಬದ ಮಧ್ಯದಲ್ಲಿ ಅತ್ಯಂತ ಸೂಕ್ಷ್ಮವಾದ ಒಂದು ರಂಧ್ರವಿದೆ. ಆ ರಂಧ್ರಕ್ಕೇನೇ ಶ್ರೀ ಜಗದ್ಗುರು ರೇಣುಕ

ಭಗವತ್ಪಾದರು ಕೈಲಾಸವೆಂಬುದಾಗಿ ಉಪದೇಶಿಸಿದ್ದಾರೆ. ಆ ಕೈಲಾಸ ಪರ್ವತದ ಮೇಲೆ ಸರ್ವಕ್ಕೂ ಕಾರಣೀಭೂತನಾದ, ಸರ್ವರಿಗೂ ಶುಭವನ್ನೇ ಉಂಟುಮಾಡುವ ಶಿವನನ್ನು ಭಾವಿಸಿ ಧ್ಯಾನ ಮಾಡಬೇಕು. ಅತ್ಯುನ್ನತವಾದ ಹಿಮಾಲಯ ಪರ್ವತದಲ್ಲಿ ಕೈಲಾಸ ಶಿಖರವು ಇನ್ನೂ ಉನ್ನತಸ್ಥಾನದಲ್ಲಿ ಇರುವುದಾಗಿ ಕಾಣುತ್ತೇವೆ. ಪುರಾಣಾದಿಗಳಲ್ಲಿ ಶಿವನು ಕೈಲಾಸದಲ್ಲಿರುವನೆಂಬುದಾಗಿ ಮಹರ್ಷಿಗಳು ವರ್ಣಿಸಿದ್ದಾರೆ. ಕೈಲಾಸವು ಬಹಿರಂಗದಲ್ಲಿರುವಂತೆ ಅಂತರಂಗದಲ್ಲಿಯೂ ಇದೆ ಎಂಬುದನ್ನು ಶಿವಯೋಗಿಗಳು ಕಂಡು ಹಿಡಿದಿದ್ದಾರೆ. 'ಯದ್ ಯದ್ ಬ್ರಹ್ಮಾಂಡೇ, ತತ್ ತತ್ ಪಿಂಡಾಂಡೇ' ಎಂಬ ಉಕ್ತಿಗನುಸಾರವಾಗಿ ಬ್ರಹ್ಮಾಂಡದಲ್ಲಿರುವುದೆಲ್ಲವೂ ಪ್ರತಿಯೊಬ್ಬರ ಪಿಂಡಾಂಡದಲ್ಲಿ ಇರುವಂತಹದಾಗಿದೆ. ಆದರೆ ಪ್ರತಿಯೊಬ್ಬ ವ್ಯಕ್ತಿಗಳು ಅಂತರ್ಮುಖಿಗಳಾಗಿ ತಮ್ಮಂತ ರಂಗದತ್ತ ಮನಸ್ಸನ್ನು ಪ್ರವೃತ್ತಗೊಳಿಸದ ಕಾರಣದಿಂದಾಗಿ, ತಮ್ಮಲ್ಲಿಯ ಈ ಕೈಲಾಸ ವನ್ನಾಗಲೀ ಕೈಲಾಸದಲ್ಲಿಯ ಶಿವನನ್ನಾಗಲೀ ಅರಿಯಲಾರರು. ಬಹಿರಂಗದಲ್ಲಿ ಅತ್ಯಂತ ಕಠಿಣವಾದ ಯಾತ್ರೆಯನ್ನು ಮಾಡಿ ಪರ್ವತಾರೋಹಿಗಳು ಕೈಲಾಸ ಶಿಖರವನ್ನು ತಲುಪುವಂತೆ, ಶಿವಯೋಗಿಗಳು ಅಧೋಮುಖವಾದ ಮನೋವೃತ್ತಿಯನ್ನು ಆಧಾರ ಚಕ್ರದಿಂದ ಬ್ರಹ್ಮರಂಧ್ರಪರ್ಯಂತವಾಗಿ ಅದನ್ನು ಊರ್ಧ್ವಮುಖಗೊಳಿಸಿ ಅಲ್ಲಿಯ ಕೈಲಾಸ ಶಿಖರದಲ್ಲಿ ಶಿವನನ್ನು ಸಾಕ್ಷಾತ್ಕರಿಸಿಕೊಂಡು ಪ್ರಶಾಂತಚಿತ್ತರಾಗಿ ಸಮಾಧಿ ಸ್ಥಿತಿಯನ್ನು ಪಡೆದುಕೊಳ್ಳುತ್ತಾರೆ.

'ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ' ಎಂಬ ಉಕ್ತಿಗನುಸಾರವಾಗಿ ಸಾತ್ವಿಕ ಅಂತಃ ಕರಣದ ಮನುಷ್ಯನ ಮನೋವೃತ್ತಿಯು ಊರ್ಧ್ವಮುಖವಾಗಿರುತ್ತದೆ. ನೀರನ್ನು ಒಂದು ಪಾತ್ರೆಯಲ್ಲಿ ಹಾಕಿ ಅದನ್ನು ಕಾಯಿಸುತ್ತಹೋದಂತೆ ಅದು ೧೦೦ ಡಿಗ್ರಿ ಸೆಂಟಿ ಗ್ರೇಡ್‌ದವರೆಗೆ ಕಾಯ್ದನಂತರ ಅದು ಬಾಷ್ಪವಾಗಿ ಊರ್ಧ್ವಗಾಮಿಯಾಗುವಂತೆ ತಪೋಮಯ ಜೀವನದಿಂದ ಸಾತ್ವಿಕವಾದ ಅಂತಃಕರಣವೂ ಸಹ ಊರ್ಧ್ವಮುಖ ವಾಗುವುದು. ಇಂತಹ ಊರ್ಧ್ವಮುಖವೃತ್ತಿಯ ಸಾಧಕನು ಆಧಾರಚಕ್ರದಿಂದ ಸಹಸ್ರಾರದಳಕಮಲಪರ್ಯಂತವಾಗಿ ಕ್ರಮಿಸಿ ಅಲ್ಲಿಯ ಕೈಲಾಸ ಶಿಖರದಲ್ಲಿಯ ಶಿವಸಾಕ್ಷಾತ್ಕಾರವನ್ನು ಪಡೆದು, ಸಮಾಧಿಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ. ಹೀಗೆ ಸಮಾಧಿಸ್ಥನಾದ ಶಿವಯೋಗಿಯು ಹೊರಗಿನ ವಿಶ್ವವೆಲ್ಲವನ್ನೂ ಮರೆತು ಅಂತರಂಗದ ಆತ್ಮಾನಂದದಲ್ಲಿ ತಲ್ಲೀನನಾಗುತ್ತಾನೆ. ಇದಕ್ಕೆ ಪ್ರತಿಕೂಲವಾಗಿ ಬಹಿರ್ಮುಖನಾದ ವ್ಯಕ್ತಿಗೆ ಪ್ರಪಂಚಾನುಭೂತಿಯಾಗುತ್ತದೆ ಎಂಬ ವಿಷಯವನ್ನು ಪೂಜ್ಯಪಾದರು–

ಬಹಿರ್ವಾಸನಯಾ ವಿಶ್ವಂ ವಿಕಲ್ಪಾರ್ಥಂ ಪ್ರಕಾಶತೇ ।
ಅಂತರ್ವಾಸಿತಚಿತ್ತಾನಾಮಾತ್ಮಾನಂದಃ ಪ್ರಕಾಶತೇ ॥

(ಸಿ. ಶಿ. ೧೭–೨೮)

ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾರ ಮನಸ್ಸು ಶಬ್ದ–ಸ್ಪರ್ಶಾದಿ ವಿಷಯವಾಸನೆಯಿಂದ ಯುಕ್ತವಾಗಿರುತ್ತದೆಯೋ, ಅಂಥವರಿಗೆ ಅನೇಕ ವಿಕಲ್ಪಾತ್ಮಕವಾದ ಈ ಪ್ರಪಂಚವು ಅನುಭವಗೋಚರವಾಗುವುದು. ಇನ್ನು ಶುಭ

ವಾಸನೆಗಳಿಂದ ಸಾತ್ವಿಕವಾದ ಶಿವಯೋಗಿಗಳ ಅಂತಃಕರಣವು ಅಂತರ್ಮುಖ ವಾಗೋಣದರಿಂದ ಬಹಿರಂಗ ಪ್ರಪಂಚವನ್ನು ಮರೆತು ಅದು ಆತ್ಮಾನಂದವನ್ನು ಅನುಭವಿಸುವುದು.

'ಪರಾಂಚಿಖಾನಿ ವ್ಯತೃಣತ್ ಸ್ವಯಂಭೂಃ' ಎಂಬ ಉಪನಿಷತ್ ಪ್ರಮಾಣದಂತೆ ಸಾಮಾನ್ಯವಾಗಿ ಎಲ್ಲ ಜೀವಿಗಳ ಇಂದ್ರಿಯಗಳನ್ನು ಸೃಷ್ಟಿಕರ್ತನಾದ ಬ್ರಹ್ಮನು ಬಹಿರ್ಮುಖವಾಗಿ ಮಾಡಿರೋಣದರಿಂದ ಪ್ರತಿಯೊಬ್ಬರ ಪ್ರವೃತ್ತಿಯು ಬಹಿರ್ಮುಖ ವಾಗಿಯೇ ಇರುತ್ತದೆ. ಇನ್ನು ಸಹಸ್ರ ಸಹಸ್ರ ಜೀವಿಗಳಲ್ಲಿ ಯಾರೊಬ್ಬ ಧೀರಪುರುಷನು ತನ್ನ ಶಿವಯೋಗಬಲದಿಂದ ಪ್ರಾಪಂಚಿಕ ವಾಸನೆಗಳನ್ನು ದೂರಮಾಡಿಕೊಂಡು ಸಾತ್ವಿಕನಾಗಿ ಅಂತರ್ಮುಖನಾಗುತ್ತಾನೆಯೋ, ಅವನೋರ್ವನೇ ಆತ್ಮಾನಂದವನ್ನು ಪಡೆಯಬಲ್ಲನು. ಅಂತರ್ಮುಖವಾಗದೇ ಅದಾರೂ ಆನಂದಾನುಭೂತಿಯನ್ನು ಪಡೆಯ ಲಾರರು. ಸುಷುಪ್ತಾವಸ್ಥೆಯಲ್ಲಿ ಅರ್ಥಾತ್ ಗಾಢವಾದ ನಿದ್ರಾವಸ್ಥೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಬಹಿರಂಗ ಪ್ರಪಂಚವೆಲ್ಲವನ್ನೂ ಮರೆತು, ಅಂತರ್ಮುಖವಾಗೋಣದರಿಂದ ಪ್ರತಿಯೊಬ್ಬರಿಗೂ ಆ ಅವಸ್ಥೆಯಲ್ಲಿ ಆನಂದಾನುಭೂತಿಯೇ ಆಗುತ್ತದೆ. ಅಂತರ್ಮುಖ ವಾಗದೆ, ಅಧಿಕಕಾಲ ಆನಂದಾನುಭೂತಿಯನ್ನು ಪಡೆಯಲು ಸಾಧ್ಯವಿಲ್ಲವೆಂಬ ವಿಷಯವು ಪ್ರತಿಯೊಬ್ಬರಿಗೂ ಸುಷುಪ್ತಾವಸ್ಥೆಯಿಂದ ತಿಳಿದುಬರುತ್ತದೆ. ಅಂತೆಯೇ ಶಂಕರಾಚಾರ್ಯರು 'ಸುಷುಪ್ತ್ಯೇಕಸಿದ್ಧಃ ಶಿವಃ ಕೇವಲೋಽಹಂ' ಎಂಬ ತಮ್ಮ ಉಕ್ತಿಯಲ್ಲಿ ಸುಷುಪ್ತಾವಸ್ಥೆಯಲ್ಲಿ ಪ್ರತಿಯೊಬ್ಬ ಜೀವರು ಶಿವರೂಪವನ್ನೇ ಅನುಭವಿಸುತ್ತಿರುತ್ತಾರೆಂಬ ವಿಷಯವನ್ನು ಪ್ರತಿಪಾದಿಸಿದ್ದಾರೆ. ಸುಷುಪ್ತಿಯು ಕರ್ಮಾಧೀನವಾದ ಅವಸ್ಥೆಯು. ಅಂತೆಯೇ ನಾವು ಅಪೇಕ್ಷೆಪಟ್ಟಾಗ ಅದನ್ನು ಪಡೆಯಲಾರೆವು. ಶಿವಯೋಗವು ಸ್ವಪುರು ಷಾರ್ಥಸಾಧ್ಯವಾದ್ದರಿಂದ, ಅದರ ಬಲದಿಂದ ಜಾಗ್ರತಾವಸ್ಥೆಯಲ್ಲಿಯೇ ಶಿವ ಯೋಗಿಯು ಅಂತರ್ಮುಖವಾಗಿ ತಾನು ಅಪೇಕ್ಷಿಸಿದಷ್ಟು ಕಾಲ ಆತ್ಮಾನಂದವನ್ನು ಅನುಭವಿಸ ಬಲ್ಲನು.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕಭಗವತ್ಪಾದರು ಮನೋವೃತ್ತಿಯನ್ನು ಅಂತರ್ಮುಖಗೊಳಿಸುವ ಒಂದು ಶಿವಯೋಗವಿಧಾನವನ್ನು–

ಆತ್ಮಾರಣಿಸಮುತ್ಥೇನ ಪ್ರಮೋದಮಥನಾತ್ಸುಧೀಃ ।
ಜ್ಞಾನಾಗ್ನಿನಾ ದಹೇತ್ಸರ್ವಂ ಪಾಶಜಾಲಂ ಜಗನ್ಮಯಮ್ ॥

(ಸಿ. ಶಿ. ೧೨–೨೯)

ಈ ರೀತಿಯಾಗಿ ತಿಳಿಯಪಡಿಸಿದ್ದಾರೆ. ಮನಸ್ಸಿನ ಬಹಿಃಪ್ರವೃತ್ತಿಗೆ ಕಾರಣೀಭೂತಗಳಾದ ಸಾಂಸಾರಿಕ ವಾಸನೆಗಳನ್ನು ಎಲ್ಲಿಯವರೆಗೆ ಸಾಧಕನು ನಿವೃತ್ತಿಗೊಳಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಆತನಿಗೆ ಆತ್ಮಾನಂದಾನುಭೂತಿಯು ಉಂಟಾಗಲಾರದು. ಆಕಾಶದಲ್ಲಿ ಹಾರಾಡುತ್ತಿರುವ ಗಾಳೀಪಟದ ದಾರವನ್ನು ನಾವು ಸಡಿಲುಬಿಟ್ಟಂತೆ ಅದು ನಮ್ಮಿಂದ ಬಹುದೂರದವರೆಗೆ ಹೋಗುವುದು. ಆ ಪಟವನ್ನು ನಮ್ಮ ಸಮೀಪಕ್ಕೆ ತೆಗೆದುಕೊಳ್ಳ ಬೇಕಾದರೆ, ಅದಕ್ಕೆ ಕಟ್ಟಿದ ಆ ದಾರವನ್ನು ಸಾವಕಾಶವಾಗಿ ನಮ್ಮತ್ತ ಎಳೆಯುತ್ತ

ಹೋದಂತೆ, ಅದು ನಮ್ಮ ಸಮೀಪಕ್ಕೆ ಬರುವುದು ಸರ್ವರಿಗೂ ಅನುಭವ ಗೋಚರವಾದ ವಿಷಯ. ಅದರಂತೆ ಈ ವಿಶಾಲವಾದ ವಿಶ್ವದಲ್ಲಿ ಶಬ್ದ ಸ್ಪರ್ಶಾದಿ ವಿಷಯಗಳನ್ನು ಅನುಭವಿಸುವ ಸಾಂಸಾರಿಕ ಮನವು ಆ ವ್ಯಕ್ತಿಯಿಂದ ಬಹುದೂರ ವಿಹರಿಸುತ್ತ ಹೋಗುವುದು. ಈ ಮನವೆಂಬ ಪಟದ ಬಹಿಃಪ್ರವೃತ್ತಿಯನ್ನು ನಿಯಂತ್ರಿಸ ಬೇಕಾದರೆ ಶಿವಯೋಗವು ಶ್ರೇಷ್ಠಸಾಧನವಾಗಿದೆ. ಅಂತೆಯೇ ಪೂಜ್ಯರು ಆದೇಶಿಸಿದ ಪ್ರಕಾರ ಆತ್ಮವೆಂಬ ಅರಣಿಯನ್ನು ಪ್ರಮೋದವೆಂಬ ವೃತ್ತಿಯಿಂದ ಮಥಿಸಿದಾಗ ಜ್ಞಾನವೆಂಬ ಅಗ್ನಿಯು ವುತ್ಪನ್ನವಾಗುವುದು. ಈ ಜ್ಞಾನಾಗ್ನಿಯಿಂದ ಸಾಂಸಾರಿಕ ವಾಸನಾ ರೂಪಗಳಾದ ಪಾಶಜಾಲಗಳೆಲ್ಲ ದಹಿಸಿಹೋಗಿ ಶಿವಯೋಗಿಯು ಆತ್ಮಾನಂದದಲ್ಲಿ ತಲ್ಲೀನನಾಗುವನು.

ಪೂರ್ವಕಾಲದಲ್ಲಿ ಅರಣಿಮಂಥನದಿಂದ ಅಗ್ನಿಯನ್ನು ಪ್ರಕಟಗೊಳಿಸುವ ಪದ್ಧತಿಯು ಪ್ರಚಲಿತದಲ್ಲಿತ್ತು. ಎರಡು ಶಮಿ ಕೊರಡುಗಳನ್ನು ಒಂದರ ಮೇಲೊಂದಿರಿಸಿ ಅವುಗಳನ್ನು ಮಥಿಸುತ್ತ ಹೋದಂತೆ ಕೆಲಕಾಲದ ನಂತರ ಅಗ್ನಿಯು ಉತ್ಪನ್ನವಾಗುತ್ತಿತ್ತು. ಕಾಲಕ್ರಮೇಣ ಚಕಮಕೀ ಕಲ್ಲಿನ ಮೇಲೆ ದೂದಿಅರಳಿಯನ್ನಿಟ್ಟು, ಒಂದು ಉಕ್ಕಿನ ತುಂಡಿನಿಂದ ಜೋರಾಗಿ ಹೊಡೆದು ಅಗ್ನಿಯನ್ನು ಪ್ರಕಟಿಸುವ ಪದ್ಧತಿಯು ಪ್ರಾರಂಭವಾಯಿತು. ಸದ್ಯದ ಕಾಲದಲ್ಲಿ ಕಡ್ಡೀಡಬ್ಬಿ ಮತ್ತು ಲೈಟರ್‌ಗಳ ಮುಖಾಂತರ ಅಗ್ನಿಯನ್ನು ಪ್ರಕಟಗೊಳಿಸುವ ಪದ್ಧತಿಯು ರೂಢಿಯಲ್ಲಿ ಇದೆ. ಒಟ್ಟಿನಲ್ಲಿ ಎರಡು ವಸ್ತುಗಳ ಘರ್ಷಣೆಯಿಂದ ಅಗ್ನಿ ಉತ್ಪನ್ನವಾಗುತ್ತದೆಯೆಂಬ ವಿಷಯವು ಸರ್ವೇಸಾಮಾನ್ಯವಾದುದು. ಉತ್ಪನ್ನವಾದ ಅಗ್ನಿಯು ತನ್ನ ಸಮೀಪದಲ್ಲಿಯ ವಸ್ತು ಗಳನ್ನು ದಹಿಸುವಂತೆ, ಆತ್ಮಾರಣಿಯಲ್ಲಿ ಉತ್ಪನ್ನವಾದ ಜ್ಞಾನಾಗ್ನಿಯು ಸಾಧಕನಲ್ಲಿಯ ಮಲ–ಮಾಯಾದಿಪಾಶ ಗಳನ್ನು ಸುಟ್ಟು ಹಾಕುತ್ತದೆ. ಅಂತೆಯೇ ಗೀತೆಯಲ್ಲಿಯೂ ಸಹ–

'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ' ಎಂಬುದಾಗಿ ಉಪದೇಶಿಸಲಾಗಿದೆ. ಹೀಗೆ ಜ್ಞಾನಾಗ್ನಿಯಿಂದ ಮಲ–ಮಾಯಾದಿ ಕರ್ಮಗಳನ್ನು ದಹಿಸಿಕೊಂಡ ಶಿವಯೋಗಿಯು ಆತ್ಮಾನಂದದಲ್ಲಿಯೇ ತಲ್ಲೀನವಾಗಿ ಸಮಾಧಿಸ್ಥಿತಿಯನ್ನು ಹೊಂದುತ್ತಾನೆ. 'ಅಕ್ಕೇಚೇನ್ಮಧುವಿಂದ್ಯೇತ ಕಿಮರ್ಥಂ ಪರ್ವತಂ ವ್ರಜೇತ್' ಅಂದರೆ ಮನೆಯ ಹಿತ್ತಲಲ್ಲಿಯೇ ಜೇನುತುಪ್ಪವು ಸಿಗುತ್ತಿರಲಾಗಿ ಅದನ್ನು ಹುಡುಕಲು ಪರ್ವತಕ್ಕೆ ಏಕೆ ತಾನೆ ಹೋಗಬೇಕು ? ಎಂಬ ನೀತಿವಚನದಂತೆ ಆತ್ಮನೇ ಆನಂದರೂಪನಾಗಿದ್ದು ಅತಿಸಮೀಪದ ಆ ಆನಂದವು ದೊರೆಯುತ್ತಿರುವಾಗ ಅದನ್ನು ಮರೆತು ಸಾಂಸಾರಿಕ ವಿಷಯಗಳಲ್ಲಿ ಸುಖವನ್ನು ಹುಡುಕುವುದೆಂದರೆ ಅರಣ್ಯದಲ್ಲಿ ಜೇನುತುಪ್ಪವನ್ನು ಹುಡುಕಾಡಿದಂತೆಯೇ. ಅನ್ಯರ ಅವಲಂಬನೆಯಿಲ್ಲದೆ ತನ್ನಲ್ಲಿಯೇ ದೊರೆಯುವ ಆನಂದವನ್ನು ಮರೆತು ಸಾಂಸಾರಿಕ ಜೀವಿಗಳು ಪರಾವಲಂಬಿಗಳಾಗಿ ಅನಂತ ದುಃಖ ವನ್ನು ಅನುಭವಿಸುವುದನ್ನು ನಾವು ಸರ್ವತ್ರ ಕಾಣುತ್ತೇವೆ. ಜೀವಿಗಳ ಈ ಸಾಂಸಾರಿಕ ದುಃಖವನ್ನು ದೂರಮಾಡಲೋಸುಗವಾಗಿಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾ ದರು ಈ ಪ್ರಾಣಲಿಂಗಿ ಸ್ಥಲದಲ್ಲಿ ಶಿವಯೋಗಸಮಾಧಿಯ ವಿಧಾನವನ್ನು ಬಹು

ಮಾರ್ಮಿಕವಾಗಿ ಉಪದೇಶಿಸಿದ್ದಾರೆ. ಪೂಜ್ಯರ ಉಪದೇಶದ ಮೇರೆಗೆ ಶಿವಯೋಗ ಸಮಾಧಿಯ ಮೂಲಕ ಆತ್ಮಾನಂದವನ್ನು ಪಡೆದು ಸರ್ವರೂ ಸುಖಿಗಳಾಗ ಬೇಕೆಂದು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ಏಪ್ರಿಲ್ ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)

■■

ಆಶೀರ್ವಚನ-೩

# ಶಿವಯೋಗಸಮಾಧಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನಿನ್ನೆಯದಿನ ಆತ್ಮಜ್ಞಾನರೂಪೀ ಅಗ್ನಿಯಿಂದ ಮನಸ್ಸಿನಲ್ಲಿಯ ಸಾಂಸಾರಿಕ ವಾಸನಾ ಬೀಜಗಳನ್ನು ಹೇಗೆ ದಹಿಸಬೇಕೆಂಬ ವಿಷಯದ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸಿದವರಾಗಿರುತ್ತೀರಿ. ಶಿವಯೋಗಸಮಾಧಿಯಿಂದ ಆತ್ಮಾನಂದಾನುಭೂತಿಯನ್ನು ಪಡೆಯುವ ಇಚ್ಛೆಯು ಅನೇಕರಿಗೆ ಇದ್ದರೂ ಸಹ, ಅವರು ಈ ಮಾರ್ಗದತ್ತ ಪ್ರವೃತ್ತ ರಾಗುವುದಿಲ್ಲ, ಇನ್ನು ಪ್ರವೃತ್ತರಾದ ಅನೇಕರು ಅದರಲ್ಲಿ ಸಫಲತೆಯನ್ನು ಪಡೆಯದಿರಲು ಕಾರಣವೇನೆಂಬ ಪ್ರಶ್ನೆಯು ಸಮುದ್ಭವಿಸಿದಾಗ ಅದರ ಸಮಾಧಾನಕ್ಕಾಗಿ ಪೂಜ್ಯಪಾದ ರಾದ ರೇಣುಕಭಗವತ್ಪಾದರು–

ಸಂಸಾರವಿಷವೃಕ್ಷಸ್ಯ ಪಂಚಕ್ಲೇಶಪಲಾಶಿನಃ ।
ಛೇದನೇ ಕರ್ಮಮೂಲಸ್ಯ ಪರಶುಃ ಶಿವಭಾವನಾ ॥

(ಸಿ. ಶಿ. ೧೨–೩೦)

ಎಂಬುದಾಗಿ ಬೋಧಿಸಿದ್ದಾರೆ. ಪ್ರತಿಯೊಬ್ಬ ಜೀವಿಯು ಅವಿದ್ಯಾದಿ ಪಂಚಕ್ಲೇಶಗಳಿಂದ ಆಕ್ರಾಂತನಾಗಿರೋಣದರಿಂದ ಈ ಶಿವಯೋಗ ಮಾರ್ಗದಲ್ಲಿ ಸಹಜವಾಗಿ ಆತನು ಪ್ರವೃತ್ತನಾಗಲಾರನು. ಹಾಗೂ ಹೀಗೂ ಪ್ರವೃತ್ತನಾದರೂ, ಈ ಕ್ಲೇಶಗಳನ್ನು ದೂರ ಮಾಡಿ ಕೊಳ್ಳದೆ ಆತನು ಶಿವಯೋಗದಲ್ಲಿ ಸಫಲತೆಯನ್ನು ಪಡೆಯಲಾರನು. ಒಂದು ಗಿಡವು ಅನೇಕ ಎಲೆಗಳಿಂದ ಕೂಡಿಕೊಂಡಿರುವಂತೆ, ಈ ಸಂಸಾರವೆಂಬ ವಿಷವೃಕ್ಷಕ್ಕೆ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಪಂಚಕ್ಲೇಶಗಳೇ ಪಲ್ಲವಗಳಾಗಿರು ತ್ತವೆ. ಈ ಸಂಸಾರ ವೃಕ್ಷಕ್ಕೆ ನಾವು ಮಾಡಿದ ಶುಭಾಶುಭಕರ್ಮಗಳೇ ಮೂಲ ಕಾರಣ. ಈ ಕರ್ಮಮೂಲವಾದ ಸಂಸಾರ ವೃಕ್ಷವನ್ನು ಶಿವಭಾವನೆಯೆಂಬ ಅರ್ಥಾತ್ ಶಿವೋಽಹಂ ಭಾವನೆ ಎಂಬ ಪರಶು (ಕೊಡಲೆ)ವಿನಿಂದ ಕತ್ತರಿಸಿ ಹಾಕಬೇಕೆಂಬುದಾಗಿ ಪೂಜ್ಯರು ಆದೇಶಿಸಿದ್ದಾರೆ.

ಪೂರ್ವೋಕ್ತಗಳಾದ ಅವಿದ್ಯಾದಿಗಳಿಗೆ ಇಲ್ಲಿ ಪೂಜ್ಯರು ಕ್ಲೇಶವೆಂಬುದಾಗಿ ತಿಳಿಯಪಡಿಸಿದ್ದಾರೆ. 'ಕ್ಲಿಶ್ನಾತಿ ಇತಿ ಕ್ಲೇಶಃ' ಜೀವಾತ್ಮನನ್ನು ಅತಿಯಾಗಿ ದುಃಖಕ್ಕೀಡು ಮಾಡೋಣದರಿಂದ ಇವುಗಳಿಗೆ ಕ್ಲೇಶಗಳೆಂದು ಕರೆಯುತ್ತಾರೆ. ಈ ಐದು ಕ್ಲೇಶಗಳಲ್ಲಿ ಮೊದಲನೆಯದಾದ ಕ್ಲೇಶವೇ ಅವಿದ್ಯೆಯು. ಯೋಗಸೂತ್ರಭಾಷ್ಯದಲ್ಲಿ 'ಅವಿದ್ಯಾ ಚತುಷ್ಪದಾ' ಎಂಬುದಾಗಿ ಪ್ರತಿಪಾದಿಸಲಾಗಿದೆ. ಅವಿದ್ಯೆಯು ಒಂದೇ ಆಗಿದ್ದರೂ ಅದು ನಾಲ್ಕು ಪ್ರಕಾರವಾಗಿ ಮನುಷ್ಯನಿಗೆ ದುಃಖವನ್ನು ಕೊಡುತ್ತದೆ. 'ಅನಿತ್ಯಾಶುಚಿ–ದುಃಖಾ ನಾತ್ಮಸು ನಿತ್ಯಶುಚಿಸುಖಾತ್ಮಖ್ಯಾತಿರವಿದ್ಯಾ' ಎಂಬುದಾಗಿ ಯೋಗಶಾಸ್ತ್ರದಲ್ಲಿ

ಪ್ರತಿಪಾದಿಸಿದ್ದಾರೆ. ಅನಿತ್ಯವಸ್ತುವಿನಲ್ಲಿ ನಿತ್ಯಬುದ್ಧಿ, ಅಶುಚಿವಸ್ತುವಿನಲ್ಲಿ ಶುಚಿಬುದ್ಧಿ, ದುಃಖದಲ್ಲಿ ಸುಖಬುದ್ಧಿ ಮತ್ತು ಅನಾತ್ಮವಸ್ತುವಿನಲ್ಲಿ ಆತ್ಮಬುದ್ಧಿಯನ್ನುಂಟುಮಾಡಿ ಅವಿದ್ಯೆಯು ನಾಲ್ಕು ವಿಧವಾಗಿ ಜೀವಿಗಳಿಗೆ ಕ್ಲೇಶವನ್ನು ಕೊಡುತ್ತದೆ.

ತ್ರಿಕಾಲಾಬಾಧಿತವಾದ ವಸ್ತುವಿಗೆ 'ನಿತ್ಯವೆಂಬುದಾಗಿ ಕರೆಯುತ್ತಾರೆ. ಅದು ಮೂರೂ ಕಾಲದಲ್ಲಿ ಒಂದೇ ರೀತಿಯಾಗಿರುತ್ತದೆ. ಅದರಲ್ಲಿ ಯಾವ ಪರಿವರ್ತನೆಗಳೂ ಆಗುವುದಿಲ್ಲ. ಅಂತಹ ತತ್ತ್ವವೆಂದರೆ ಕೇವಲ ಪರಶಿವತತ್ತ್ವವೊಂದೇ. ಪರಂತು ಅಜ್ಞನಾದ ಜೀವನು ಪರಮತತ್ತ್ವವನ್ನು ನಿತ್ಯವೆಂಬುದಾಗಿ ತಿಳಿಯದೆ ಕ್ಷಣ ಕ್ಷಣಕ್ಕೆ ಪರಿವರ್ತನೆಗೊಳ್ಳುವ ಪ್ರಪಂಚವನ್ನೇ ನಿತ್ಯವನ್ನಾಗಿ ತಿಳಿಯುತ್ತಾನೆ. ಇದರಿಂದಾಗಿ ಅದರಲ್ಲಿ ಪರಿವರ್ತನೆಯುಂಟಾದಾಗ ದುಃಖವನ್ನನುಭವಿಸುತ್ತಾನೆ ಪ್ರಪಂಚದ ಪ್ರತಿಯೊಂದು ವಸ್ತುಗಳು ಅಸ್ತಿ, ಜಾಯತೇ, ವಿವರ್ಧತೇ, ವಿಪರಿಣಮತೇ, ಅಪಕ್ಷೀಯತೇ ಹಾಗೂ ವಿನಶ್ಯತಿ ಎಂಬ ಷಡ್‌ವಿಧ ವಿಕಾರಗಳಿಂದ ಕೂಡಿಕೊಂಡಿರುವಂಥವುಗಳಾಗಿವೆ. ಅಂತೆಯೇ ಅವುಗಳು ಅನಿತ್ಯಗಳೆಂದು ಕರೆಯಿಸಿಕೊಳ್ಳುತ್ತವೆ. ಸ್ವಭಾವತಃ ಅನಿತ್ಯವಾದವುಗಳನ್ನು ಅಜ್ಞನು ನಿತ್ಯವೆಂಬುದಾಗಿ ಭಾವಿಸೋಣದರಿಂದ ಅವುಗಳಲ್ಲಿ ಯಾವುದೇ ವಿಕೃತಿಯುಂಟಾದಾಗ ದುಃಖವನ್ನನುಭವಿಸುತ್ತಾನೆ. ಹೀಗೆ ಅವಿದ್ಯೆಯು ಅನಿತ್ಯವಸ್ತುವಿನಲ್ಲಿ ನಿತ್ಯಬುದ್ಧಿಯನ್ನುಂಟುಮಾಡಿ, ಸಂಸಾರದಲ್ಲಿಯ ಪ್ರತಿಯೊಬ್ಬ ಜೀವಿಗಳಿಗೆ ಅನಂತ ದುಃಖವನ್ನು ಅನಂತಕಾಲದಿಂದ ಕೊಡುತ್ತಲೇ ಬಂದಿರುತ್ತದೆ. ಆದ್ದರಿಂದ ಶಾಸ್ತ್ರದಲ್ಲಿ ಈ ಅವಿದ್ಯೆಗೆ ಕ್ಲೇಶವೆಂಬುದಾಗಿ ಕರೆದಿದ್ದಾರೆ.

ಇನ್ನು ಅಶುಚಿಯಲ್ಲಿ ಶುಚಿಬುದ್ಧಿಯನ್ನು ತಾಳುವುದೂ ಸಹ ಒಂದು ಪ್ರಕಾರದ ಅವಿದ್ಯೆಯೇ. ಶುಚಿಯೆಂದರೆ ಪವಿತ್ರ–ಶುದ್ಧ ಎಂದರ್ಥ. ಅಶುಚಿಯೆಂದರೆ ಅಪವಿತ್ರ–ಅಶುದ್ಧ ಎಂಬುದಾಗಿ ತಿಳಿದುಕೊಳ್ಳಬೇಕು. ಪ್ರತಿಯೊಬ್ಬರ ಶರೀರವು ಸ್ವಭಾವತಃ ಅಶುಚಿಯಾದದ್ದು. ಆದರೂ ಅಜ್ಞರಾದ ಜೀವಿಗಳು ಶರೀರವೇ ತಾವೆಂದು ಭಾವಿಸಿ ಅದನ್ನು ಶುಚಿಯೆಂಬುದಾಗಿ ವಿಪರೀತವಾಗಿ ತಿಳಿದುಕೊಳ್ಳುತ್ತಾರೆ. ಈ ವಿಪರೀತ ಭಾವನೆಯೂ ಸಹ ಮನುಷ್ಯನಿಗೆ ದುಃಖವನ್ನು ಕೊಡದೇ ಇರಲಾರದು. ಶರೀರದ ಅಶುಚಿತ್ವ ವಿಷಯವಾಗಿ ಯೋಗಶಾಸ್ತ್ರದಲ್ಲಿ–

ಸ್ಥಾನಾತ್ ಬೀಜಾದುಪಷ್ಟಂಭಾನ್ನಿಃಸ್ಯಂದಾನ್ನಿಧನಾದಪಿ ।
ಕಾಯಮಾಧೇಯಶೌಚತ್ವಾತ್ ಪಂಡಿತಾ ಹ್ಯಶುಚಿಂ ವಿದುಃ ॥

(ಯೋಗಸೂತ್ರ, ಭಾಷ್ಯ ೨–೫)

ಈ ರೀತಿಯಾಗಿ ನಿರೂಪಿಸಲಾಗಿದೆ. ತಾತ್ಪರ್ಯವೇನೆಂದರೆ, ಸ್ಥಾನ, ಬೀಜ, ಉಪಷ್ಟಂಭ, ಸ್ಯಂದನ ಮತ್ತು ನಿಧನ ಎಂಬ ಐದು ಕಾರಣಗಳಿಂದ ಶರೀರವು ಅಶುಚಿಯೆಂಬುದಾಗಿ ತಿಳಿಯಪಡಿಸಲಾಗಿದೆ. ಶರೀರವು ಉತ್ಪನ್ನವಾಗುವ ಸ್ಥಾನವೆಂದರೆ ಮಾತೆಯ ಉದರವು. ಅದು ಮಲಮೂತ್ರಾದಿಗಳಿಂದ ತುಂಬಿಕೊಂಡಿರೋಣದರಿಂದ ದೇಹದ ಜನ್ಮಸ್ಥಾನವು ಅಶುಚಿ ಅರ್ಥಾತ್ ಅಪವಿತ್ರವೇ ಆಗಿದೆ. ಇದೇ ರೀತಿಯಾಗಿ ಶರೀರದ ಉತ್ಪತ್ತಿಗೆ ಮೂಲಕಾರಣಗಳಾದ ರೇತೋರಕ್ತಗಳೆಂಬ ಬೀಜಗಳೂ ಸಹ ಅಪವಿತ್ರಗಳೇ ಆದಂಥವುಗಳಾಗಿವೆ. ಈ ರೇತೋರಕ್ತಗಳು ಸೇವಿಸಿದ ಅನ್ನದ ವಿಕಾರಗಳು. ನಾವು

ಸೇವಿಸಿದ ಅನ್ನ–ಜಲಗಳು ಶರೀರದಲ್ಲಿ ರಸ, ರಕ್ತ–ಮಾಂಸ–ಮಜ್ಜಾ, ಮೇದಸ್ಸು, ಅಸ್ಥಿ ಮತ್ತು ಶುಕ್ರ ಅಥವಾ ಶೋಣಿತಗಳೆಂಬ ಸಪ್ತಧಾತುಗಳ ರೂಪದಲ್ಲಿ ಪರಿವರ್ತನೆಗೊಳ್ಳು ತ್ತವೆ. ಹೀಗೆ ಅನ್ನದ ಕೊನೆಯ ಪರಿಣಾಮಗಳಾದ ರೇತೋರಕ್ತಗಳೇ ಶರೀರೋತ್ಪತ್ತಿಯ ಮೂಲಬೀಜವು. ಇವು ಅನ್ನದ ವಿಕಾರಗಳಾದ್ದರಿಂದ ಅಶುಚಿಯಾದವುಗಳೇ. ಒಂದು ಪಾತ್ರೆಯಲ್ಲಿ ಅನ್ನವನ್ನು ತಯಾರಿಸಿ ಇಟ್ಟಾಗ ತತ್ಕಾಲದಲ್ಲಿ ಅದು ಶುದ್ಧವಾಗಿ, ಶುಚಿಯಾಗಿ ತೋರುತ್ತಿದ್ದರೂ ಕಾಲಾಂತರದಲ್ಲಿ ಅಶುಚಿರೂಪವನ್ನು ತಾಳಿಕೊಳ್ಳುತ್ತದೆ. ಮೊದಲನೆಯ ದಿನ ಅನ್ನದ ಶುದ್ಧತೆ ಹಾಗೂ ಸುಗಂಧತೆಯನ್ನು ಅನುಭವಿಸಿ ಆನಂದಿತನಾದ ವ್ಯಕ್ತಿಯ ಮುಂದೆ ಎರಡು–ಮೂರುದಿನಗಳ ನಂತರ ಹಳಸಿಹೋದ ಅದೇ ಅನ್ನವನ್ನು ತಂದಿರಿಸಿದಾಗ ಅದರ ದುರ್ವಾಸನೆಯನ್ನು ಸಹಿಸದೇ ಅವನು ಮೂಗುಮುಚ್ಚಿಕೊಂಡು ಆ ಅನ್ನವನ್ನು ದೂರ ಸರಿಸುತ್ತಾನೆ. ಈ ತೆರನಾಗಿ ಪಕ್ವವಾದ ಅನ್ನವು ಎರಡು ಮೂರು ದಿನಗಳಲ್ಲಿ ಅಪವಿತ್ರತೆಯನ್ನು ತಾಳುತ್ತಿರುವಾಗ ಸೇವಿಸಿದ ಅನ್ನದ ಕೊನೆಯ ಪರಿಣಾಮಗಳಾದ ರೇತೋರಕ್ತಗಳಾದರೂ ಅದು ಹೇಗೆ ತಾನೆ ಪವಿತ್ರಗಳಾದವು ? ಆದ್ದರಿಂದ ಶರೀರೋತ್ಪತ್ತಿಗೆ ಮೂಲ ಕಾರಣಗಳಾದ ರೇತೋರಕ್ತ ಗಳೆಂಬ ಬೀಜಗಳೇ ಅಶುಚಿಗಳಾಗಿರುವಾಗ ಅವುಗಳಿಂದುತ್ಪನ್ನವಾದ ಈ ದೇಹವು ಅದೆಂತು ಶುಚಿಯಾಗಿ ಇರಬಲ್ಲದು ? ಆದ್ದರಿಂದ ಶರೀರವು ಅಶುಚಿಯೆಂಬುದಾಗಿ ತಿಳಿದುಕೊಳ್ಳಬೇಕು.

ಇನ್ನು ಶರೀರದ ಉಪಷ್ಟಂಭವು ಸಹ ಅಶುಚಿಯಾದುದೇ ಆಗಿದೆ. ಉಪ ಷ್ಟಂಭವೆಂದರೆ ಆಧಾರವೆಂದರ್ಥ. ಶರೀರಕ್ಕೆ ಈ ಪೂರ್ವದಲ್ಲಿ ವರ್ಣಿಸಿದ ರಸ–ರಕ್ತಾದಿಗಳೆಂಬ ಸಪ್ತಧಾತುಗಳೇ ಆಧಾರವಾದವುಗಳು. ಈ ಸಪ್ತಧಾತುಗಳು ಕ್ಷೀಣ ಗೊಂಡಾಗ ಮನುಷ್ಯನು ನಿಸ್ತೇಜನೂ, ದುರ್ಬಲನೂ ಆಗುತ್ತಾನೆ. ಅವುಗಳು ದೇಹದಲ್ಲಿ ತುಂಬಿಕೊಂಡಿರುವಾಗ ಸಶಕ್ತನೂ, ತೇಜಸ್ವಿಯೂ ಆಗಿ ತೋರುತ್ತಾನೆ. ಹೀಗೆ ಶರೀರಕ್ಕೆ ಆಧಾರಗಳಾದ ಈ ಸಪ್ತ ಧಾತುಗಳು, ಅನ್ನದ ವಿಕಾರಗಳೇ ಆದ್ದರಿಂದ ಇವುಗಳು ಅಶುಚಿಗಳಾದವುಗಳೇ. ಈ ವಿಧವಾಗಿ ಶರೀರದ ಉಪಷ್ಟಂಭ ಅರ್ಥಾತ್ ಆಧಾರಗಳೇ ಅಶುಚಿಗಳಾಗಿರುವಾಗ ಶರೀರವೆಂತು ಶುಚಿಯೆನಿಸಬಲ್ಲದು ?

ಇದರಂತೆ ಶರೀರದಿಂದ ನಿಃಸ್ಯಂದಿಸುವ ಅರ್ಥಾತ್ ಹೊರಬೀಳುವ ಮಲ ಮೂತ್ರ–ಬೆವರು–ಕಫ–ಜೊಲ್ಲು, ಪಿಚ್ಚು ಮತ್ತು ಸಿಂಬಳ ಮೊದಲಾದವುಗಳು ಅಶುಚಿಗಳಾದ ಪದಾರ್ಥಗಳೇ ಆಗಿವೆ. ಈ ಅಶುಚಿ ಪದಾರ್ಥಗಳು ಶರೀರದಿಂದ ಯಾವಾಗಲೂ ಹೊರ ಹೊರಡುತ್ತಿರುವುದರಿಂದ ಶರೀರದ ತುಂಬೆಲ್ಲ ಇವೇ ತುಂಬಿ ಕೊಂಡಿರುತ್ತವೆ. ಶರೀರದಿಂದ ನಿಃಸ್ಯಂದಿಸುವ ಈ ವಸ್ತುಗಳೇ ಅಶುಚಿಗಳಾಗಿರುವಾಗ ಅವುಗಳಿಂದ ತುಂಬಿರುವ ಈ ಶರೀವು ಅದೆಂತು ಶುಚಿಯೆನಿಸಬಲ್ಲುದು ? ಅಂತೆಯೇ 'ಸ್ವಭಾವದುರ್ಗಂಧಮಿದಂ ಶರೀರಮ್' ಎಂಬುದಾಗಿ ಹೇಳಿದ್ದಾರೆ. ಶರೀರವು ಸ್ವಭಾವತಃ ಅಶುಚಿ ಹಾಗೂ ದುರ್ಗಂಧಮಯವಾಗಿರುವಂಥಾದ್ದು. ಸ್ವಾಭಾವಿಕವಾದ ಇದರ ದುರ್ಗಂಧತೆಯನ್ನು ಮುಚ್ಚುವುದಕ್ಕಾಗಿಯೇ ಮನುಷ್ಯನು ಮೇಲಿಂದ ಮೇಲೆ ಇದನ್ನು ತೊಳೆಯುತ್ತ ಒರೆಸುತ್ತ ಸುಗಂಧ ದ್ರವ್ಯಗಳಿಂದ ಸಂಸ್ಕರಿಸುತ್ತಲೇ ಇರುತ್ತಾನೆ.

ನಾನಾವಿಧ ಮಲಗಳಿಂದ ತುಂಬಿಕೊಂಡ ಈ ದೇಹದ ಮೇಲೆ ಪರಮಾತ್ಮನು ಚರ್ಮವೆಂಬ ಆಚ್ಛಾದನೆಯನ್ನು ತೊಡಿಸಿರುವುದರಿಂದ ಅದೆಲ್ಲವೂ ಮುಚ್ಚಿಹೋಗಿದೆ. ಒಂದು ವೇಳೆ ಪರಮಾತ್ಮನು ಈ ದೇಹಕ್ಕೆ ಚರ್ಮವನ್ನು ತೊಡಿಸದೇ ಹೋಗಿದ್ದರೆ ಮನುಷ್ಯನಿಗೆ ತನ್ನದೇಹದ ರಕ್ಷಣೆಯನ್ನು ಮಾಡಿಕೊಳ್ಳುವುದೇ ಕಷ್ಟವಾಗುತ್ತಿತ್ತು. ಅಂತೆಯೇ ಒಬ್ಬ ಸುಭಾಷಿತಕಾರನು 'ಯದಂತಸ್ತದ್ಬಹಿರ್ಭವೇತ್ ದಂಡಮಾದಾಯ ಲೋಕೋಽಯಂ ಶುನಃಕಾಕಾಂಶ್ಚವಾರಯೇತ್' ಎಂಬುದಾಗಿ ತಿಳಿಯಪಡಿಸಿದ್ದಾನೆ. ತಾತ್ಪರ್ಯವೇನೆಂದರೆ, ದೇಹದ ಮೇಲೆ ಚರ್ಮದ ಆವರಣವಿಲ್ಲದಿದ್ದರೆ ತನ್ನ ದೇಹದ ಮಾಂಸ ಭಕ್ಷಣೆಗಾಗಿ ತನ್ನತ್ತಧಾವಿಸಿ ಬರುತ್ತಿರುವ ನಾಯಿ, ನರಿ, ಕಾಗೆ ಮುಂತಾದ ಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಪ್ರತಿಯೊಬ್ಬರು ಯಾವಾಗಲೂ ಕೈಯಲ್ಲೊಂದು ಬಡಿಗೆಯನ್ನು ಹಿಡಿದುಕೊಂಡೇ ತಿರುಗಾಡಬೇಕಾಗುತ್ತಿತ್ತು. ಹೀಗೆ ಶರೀರವು ಅಶುಚಿಯೂ ದುರ್ಗಂಧ ಮಯವೂ ಆಗಿದ್ದರೂ ಅವಿದ್ಯಾಮೋಹದಿಂದ ಆವೃತನಾದ ಜೀವಾತ್ಮನು ಇದರ ಅಶುಚಿತ್ವದ ಬಗ್ಗೆ ವಿವೇಕವಿಲ್ಲದವನಾಗಿ ದೇಹವನ್ನು ಮೋಹಿಸುತ್ತಾನೆ. ಹೀಗೆ ದೇಹದಿಂದ ನಿಃಸ್ಯಂದಿಸುವ ಅರ್ಥಾತ್ ಸ್ರವಿಸುವ ಮಲಮೂತ್ರಾದಿಗಳಿಂದ ಈ ಶರೀರವು ಅಶುಚಿಯೆಂಬುದಾಗಿ ತಿಳಿದುಬರುತ್ತದೆ.

ಇದೇ ರೀತಿಯಾಗಿ ಶರೀರಕ್ಕೆ ಕೊನೆಗೆ ಮರಣವೆಂಬ ಅವಸ್ಥೆಯು ಪ್ರಾಪ್ತವಾಗುವುದು. ಜನನ–ಮರಣಗಳು ಶರೀರದ ಸ್ವಾಭಾವಿಕವಾದ ಧರ್ಮಗಳು. ಶರೀರದಲ್ಲಿ ಪ್ರಾಣವಿರುವವರೆಗೆ ಅದು ಆಪಾತತಃ ಮಂಗಲವಾಗಿ ತೋರಿದರೂ ಪ್ರಾಣ ನಿರ್ಗಮಿಸಿದ ನಂತರ ಅಮಂಗಲವೂ, ಅಶುಚಿಯೂ ಆಗಿ ತೋರ್ಪಡುವುದು. ಪ್ರಾಣ ಹೋದ ಶರೀರವನ್ನು ಮುಟ್ಟಿದರೆ ಅಶೌಚ ಪ್ರಾಪ್ತವಾಗೋಣದರಿಂದ ಅದನ್ನು ದೂರಮಾಡಿಕೊಳ್ಳಲು ಮಂಗಲಸ್ನಾನ ಮಾಡಬೇಕಾಗುವುದು. ಅಂತ್ಯಕ್ರಿಯೆಗೆ ಹೋದ ಜನರು ಸಚೇಲ ಅರ್ಥಾತ್ ವಸ್ತ್ರಸಹಿತವಾಗಿ ಸ್ನಾನಮಾಡಿಕೊಂಡು ಶುದ್ಧಿಯಾಗುವದನ್ನು ಲೋಕದಲ್ಲಿ ಕಾಣುತ್ತೇವೆ. ಪವಿತ್ರವಾದ ವಸ್ತುವಿನ ಸಾನ್ನಿಧ್ಯದಲ್ಲಿ ಅಪವಿತ್ರವಾದ ವಸ್ತುವು ಪವಿತ್ರವಾಗಿ ತೋರುವುದು. ಪವಿತ್ರ ವಸ್ತುವಿನ ಸಂಬಂಧ ತಪ್ಪಿದಾಗ ಅಪವಿತ್ರವು ಅಪವಿತ್ರವಾಗಿಯೇ ತೋರುತ್ತದೆ. ಹೀಗೆ ಶರೀರದ ಜನ್ಮಸ್ಥಾನವಾದ ತಾಯಿಯ ಉದರ, ಶರೀರದ ಉತ್ಪತ್ತಿಗೆ ಮೂಲಬೀಜಗಳಾದ ರೇತೋರಕ್ತಗಳು, ಶರೀರಕ್ಕೆ ಆಧಾರಗಳಾದ ರಕ್ತಮಾಂಸಾದಿಗಳು, ಶರೀರದಿಂದ ಹೊರಹೊರಡುತ್ತಿರುವ ಮಲಮೂತ್ರಾದಿಗಳು ಮತ್ತು ಕೊನೆಗೆ ಶರೀರಕ್ಕುಂಟಾಗುವ ಮರಣ ಇವೆಲ್ಲವುಗಳನ್ನು ಪರ್ಯಾಲೋಚಿಸಿದಾಗ ಶರೀರವು ಅಶುಚಿಯಾದುದೆಂಬುದು ಸರ್ವರಿಗೂ ಅನುಭವ ಗೋಚರವಾದುದು. ಈ ಎಲ್ಲ ಕಾರಣಗಳಿಂದ ಶರೀರವು ಅಶುಚಿಯಾಗಿದ್ದರೂ ಅವಿದ್ಯೆಯಿಂದ ಆವೃತನಾದ ಜೀವಾತ್ಮನು, ಶರೀರದ ಈ ಅಶುಚಿತ್ವವನ್ನು ಮರೆತು ಅದನ್ನು ಶುಚಿಯೆಂಬುದಾಗಿ ಭ್ರಾಂತಿಸಿ, ನಿರಂತರ ಅದನ್ನೇ ಮೋಹಿಸಿ ದುಃಖವನ್ನನುಭವಿಸುತ್ತಾನೆ. ಹೀಗೆ ಅವಿದ್ಯಾರೂಪವಾದ ಕ್ಲೇಶವು ಅಶುಚಿ ವಸ್ತುವಿನಲ್ಲಿ ಶುಚಿಭ್ರಾಂತಿಯನ್ನುಂಟುಮಾಡಿ, ಜೀವಿಗಳಿಗೆ ಸದಾ ಕ್ಲೇಶವನ್ನುಂಟುಮಾಡುತ್ತಿರುತ್ತದೆ.

ಇದೇ ಪ್ರಕಾರವಾಗಿ ಈ ಅವಿದ್ಯೆಯು ದುಃಖರೂಪವಾದ ವಸ್ತುಗಳಲ್ಲಿ ಸುಖಬುದ್ಧಿಯನ್ನುಂಟುಮಾಡಿಯೂ ಜೀವಿಗಳಿಗೆ ದುಃಖವನ್ನುಂಟುಮಾಡುತ್ತಿರುತ್ತದೆ. ಅವಿದ್ಯೆ

ಯಿಂದ ಆವೃತನಾದ ಜೀವನು ದುಃಖರೂಪಗಳಾದ ಶಬ್ದಸ್ಪರ್ಶಾದಿ ವಿಷಯಗಳನ್ನು ಸುಖರೂಪಗಳೆಂಬುದಾಗಿ ಭ್ರಮಿಸಿ ಸದಾ ಅವುಗಳ ಬೆನ್ನುಹತ್ತಿಯೇ ತಿರುಗುತ್ತಿರುತ್ತಾನೆ. 'ಆಪಾತ ರಮ್ಯಾಃ ವಿಷಯಾಃ ಪರ್ಯಂತ ಪರಿತಾಪಿನಃ' ಎಂಬ ಮಹಾಕವಿ ಭಾರವಿಯ ಉಕ್ತಿಗನುಸಾರವಾಗಿ ವಿಷಯಗಳು ತಾತ್ಕಾಲಿಕ ಸುಖವನ್ನು ಕೊಟ್ಟರೂ ಅನಂತ ಕಾಲದ ವರೆಗೆ ದುಃಖವನ್ನೇ ಕೊಡುವಂತಹವುಗಳಾಗಿವೆ. ಆದ್ದರಿಂದಲೇ ಭರ್ತೃಹರಿಯೂ ಸಹ ''ಭೋಗೇ ರೋಗಭಯಮ್'' ಅಂದರೆ ವಿಷಯಭೋಗದಫಲ ರೋಗವೆಂಬುದಾಗಿ ತಿಳಿಸಿದ್ದಾನೆ. ಈ ತೆರನಾಗಿ ವಿಷಯ ಸುಖದ ಅಂತಿಮ ಪರಿಣಾಮವು ದುಃಖವೇ ಆಗಿರುತ್ತದೆ. ಹೀಗಿದ್ದರೂ ಅವಿದ್ಯಾ ಮೋಹಿತನಾದ ಜೀವಿಯು ದುಃಖ ರೂಪವಾದ ವಿಷಯಗಳನ್ನು ಸುಖವೆಂದು ಭ್ರಮಿಸಿ ಕೊನೆಗೆ ಅನಂತ ದುಃಖವನ್ನೇ ಅನುಭವಿಸು ತ್ತಿರುತ್ತಾನೆ.

ಇದೇ ಪ್ರಕಾರವಾಗಿ ಈ ಅವಿದ್ಯೆಯು ಅನಾತ್ಮ ವಸ್ತುವಿನಲ್ಲಿ ಆತ್ಮಬುದ್ಧಿಯನ್ನುಂಟು ಮಾಡಿ ಜೀವಿಗಳಿಗೆ ನಾನಾವಿಧ ದುಃಖವನ್ನು ಕೊಡುತ್ತಿರುತ್ತದೆ. ಸ್ಥೂಲ ಶರೀರವನ್ನು ಮೊದಲುಗೊಂಡು ಬುದ್ಧಿಪರ್ಯಂತಗಳಾದ ಎಲ್ಲ ತತ್ತ್ವಗಳು ಅನಾತ್ಮರೂಪವಾದವುಗಳು. ಹೀಗಿದ್ದರೂ ಅಜ್ಞರಾದ ಜೀವಿಗಳು ಶರೀರಾದಿಗಳನ್ನೇ ಆತ್ಮವೆಂಬುದಾಗಿ ಭಾವಿಸಿ ವ್ಯವಹರಿಸುತ್ತಾರೆ. ಆತ್ಮವಲ್ಲದ್ದನ್ನು ಆತ್ಮವೆಂದು ಭಾವಿಸಿದವನಿಗೆ ಅದು ಹೇಗೆ ತಾನೆ ಸುಖ ಸಿಗಬಲ್ಲದು ? ವಸ್ತುತಃ ಶರೀರ, ಇಂದ್ರಿಯ, ಪ್ರಾಣ, ಮನ ಮತ್ತು ಬುದ್ಧಿಗಳು ಅನಾತ್ಮ ಗಳಾಗಿದ್ದರೂ, ಅವುಗಳನ್ನು ಆತ್ಮವೆಂಬುದಾಗಿ ಭ್ರಮಿಸುವುದೇ ಅವಿದ್ಯೆಯು. ಹೀಗೆ ಭ್ರಮಿಸುವ ಜೀವನು ಸದಾ ದುಃಖವನ್ನೇ ಅನುಭವಿಸುತ್ತಿರುತ್ತಾನೆ. ಆದ್ದರಿಂದ ಅವಿದ್ಯೆಯು ಎಲ್ಲ ಕ್ಲೇಶಗಳ ಮೂಲವು. ಈ ತೆರನಾಗಿ ಅನಿತ್ಯದಲ್ಲಿ ನಿತ್ಯಬುದ್ಧಿಯನ್ನೂ, ಅಶುಚಿಯಲ್ಲಿ ಶುಚಿಬುದ್ಧಿಯನ್ನೂ, ದುಃಖದಲ್ಲಿ ಸುಖಬುದ್ಧಿಯನ್ನು ಮತ್ತು ಅನಾತ್ಮದಲ್ಲಿ ಆತ್ಮ ಬುದ್ಧಿಯನ್ನು ಉಂಟುಮಾಡಿ, ಅವಿದ್ಯೆಯು ಸಕಲ ಜೀವಿಗಳಿಗೆ ನಾಲ್ಕೂ ನಿಟ್ಟಿನಿಂದ ಮಹಾದುಃಖವನ್ನೇ ಕೊಡುತ್ತಿರೋಣದರಿಂದ ಅವಿದ್ಯೆಯು ಪಂಚಕ್ಲೇಶಗಳಲ್ಲಿ ಮೊದಲನೆ ಕ್ಲೇಶವಾಗಿದೆ. ಇದೇ ಉಳಿದೆಲ್ಲ ಕ್ಲೇಶಗಳಿಗೂ ಸಹ ಮೂಲ ಕಾರಣವಾಗಿದೆ. ಈ ಕ್ಲೇಶ ದೂರವಾಗಬೇಕಾದರೆ ಶಿವಯೋಗವೇ ಒಂದು ಶ್ರೇಷ್ಠ ಉಪಾಯವು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಯೋಗ ಸಮಾಧಿಯಿಂದುಂಟಾದ ಶಿವ ಭಾವನೆಯಿಂದ ಪಂಚಕ್ಲೇಶಾತ್ಮಕವಾದ ಸಂಸಾರ ವಿಷವೃಕ್ಷವನ್ನು ಕತ್ತರಿಸಿ ಹಾಕಬೇಕೆಂಬು ದಾಗಿ ಉಪದೇಶಿಸಿದ್ದಾರೆ. ಇಂದು ನಾವು ಪಂಚಕ್ಲೇಶಗಳಲ್ಲೊಂದಾದ ಅವಿದ್ಯಾವಿಷಯಕ ವಾಗಿ ವಿಸ್ತಾರವಾಗಿ ವಿವೇಚಿಸಿದ್ದಾಯಿತು. ಉಳಿದಕ್ಲೇಶಗಳ ವಿಷಯವಾಗಿ ನಾಳೆ ವಿವೇಚಿಸೋಣವೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ಎಪ್ರಿಲ್ ೧೯೯೨

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



# ಶಿವಯೋಗಸಮಾಧಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನಿನ್ನೆಯದಿನ ನೀವೆಲ್ಲ ಪಂಚಕ್ಲೇಶಗಳಲ್ಲೊಂದಾದ ಅವಿದ್ಯಾವಿಷಯಕವಾಗಿ ವಿಸ್ತಾರ ಪೂರ್ವಕವಾಗಿ ಆಲಿಸಿದ್ದೀರಿ. ಅವಿದ್ಯೆಯೇ ಉಳಿದೆಲ್ಲ ಕ್ಲೇಶಗಳಿಗೆ ಮೂಲವು. ಅವಿದ್ಯೆಯೊಂದಿದ್ದರೆ ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳು ತಾವಾಗಿಯೇ ಬರುತ್ತವೆ. ಲೌಕಿಕ ಜೀವನದಲ್ಲಿ ಓರ್ವ ಹಿತಶತ್ರುವು ನಮ್ಮ ಸಮೀಪದಲ್ಲೇ ಇದ್ದು ನಮಗೆ ಹಿತವನ್ನುಂಟುಮಾಡಿದ ಹಾಗೆ ನಟಿಸಿ ಮಹಾದುಃಖವನ್ನೇ ಕೊಡುವಂತೆ, ಅವಿದ್ಯೆಯು ಅನಾದಿಕಾಲದಿಂದ ಜೀವಿಯ ಅಂತಃಕರಣದಲ್ಲಿ ವಾಸಮಾಡಿ ಸಂಸಾರದಲ್ಲಿ ಕ್ಷಣಿಕ ಸುಖವನ್ನು ತೋರಿಸಿ ಅನಂತಕಾಲದವರೆಗೆ ದುಃಖವನ್ನೇ ಕೊಡುತ್ತಿರುತ್ತದೆ. ಅವಿದ್ಯೆಯ ಸ್ವರೂಪ ಹಾಗೂ ಸ್ವಭಾವಗಳ ಅರಿವಿಲ್ಲದ ಅಜ್ಞ ಜೀವಿಗಳು ಅವಿದ್ಯಾಧೀನರಾಗಿ ಅನಂತದುಃಖಗಳನ್ನೇ ಅನುಭವಿಸುತ್ತಿರುತ್ತಾರೆ. ಈ ಅಜ್ಞರ ಅಜ್ಞಾನವನ್ನು ದೂರ ಮಾಡುವುದಕ್ಕಾಗಿಯೇ ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು ಈ ಪ್ರಾಣ ಲಿಂಗಿಸ್ಥಲದಲ್ಲಿ ಶಿವಯೋಗಸಮಾಧಿಯನ್ನು ಕುರಿತು ಉಪದೇಶಿಸುತ್ತಿದ್ದಾರೆ. ಪೂಜ್ಯರು ಉಪದೇಶಿಸಿದ ಈ ಶಿವಯೋಗಸಮಾಧಿಯಿಂದಲೇ ಪ್ರತಿಯೊಬ್ಬರೂ ಪಂಚಕ್ಲೇಶ ಗಳಿಂದ ಮುಕ್ತರಾಗುವರು.

ಜೀವಾತ್ಮನು ಅಂತಃಕರಣವನ್ನು ಆವರಿಸಿರುವ ಈ ಅವಿದ್ಯೆಯು ಇಂದು ನಿನ್ನೆಯದಲ್ಲ. ಇದು ಸೃಷ್ಟಿಯ ಆರಂಭದಿಂದಲೇ ಜೀವಿಯನ್ನು ಬೆನ್ನಟ್ಟಿಕೊಂಡು ಬಂದಿದೆ. ಇದು ಇಂತಹ ದಿನವೇ ಬಂದಿದೆಯೆಂಬುದನ್ನು ಹೇಳಲಾರಾರಿಂದಲೂ ಸಾಧ್ಯವಾಗದ್ದರಿಂದ ಶಾಸ್ತ್ರಕಾರರು ಈ ಅವಿದ್ಯೆಯನ್ನು ಅನಾದಿಯೆಂಬುದಾಗಿ ಕರೆ ದಿದ್ದಾರೆ. ಇದು ಅನಾದಿಯಾಗಿದ್ದರೂ ಅನಂತವಾದುದೇನಲ್ಲ. ಇದನ್ನು ಅಂತ್ಯಗೊಳಿಸಲು ಸಾಧ್ಯವಿದೆ. ಇದನ್ನು ಅಂತ್ಯಗೊಳಿಸಲು ಶಿವಭಾವನೆಯೇ ಮೂಲವೆಂಬುದಾಗಿ ರೇಣುಕ ಭಗವತ್ಪಾದರು ಉಪದೇಶಿಸಿದ್ದಾರೆ. ಈ ಸಕಲ ಅನರ್ಥಕ್ಕೆ ಕಾರಣೀಭೂತವಾದುದೇ ಈ ಅವಿದ್ಯೆಯು. ಇದರಿಂದಲೇ ಮುಂದಿನ ಕ್ಲೇಶಾದಿಗಳು ಉತ್ಪನ್ನಗಳಾಗುತ್ತವೆ. ಅಂತೆಯೇ ಯೋಗ ಸೂತ್ರ ಭಾಷ್ಯಕಾರರು 'ಅವಿದ್ಯಾ ಕ್ಷೇತ್ರಮುತ್ತರೇಷಾಮ್' ಅಂದರೆ ಮುಂದಿನ ಅಸ್ಮಿತಾದಿಗಳಿಗೆ ಅವಿದ್ಯೆಯೇ ಪ್ರಸವಭೂಮಿ ಎಂಬುದಾಗಿ ಉಪದೇಶಿಸಿದ್ದಾರೆ.

ಈ ಅವಿದ್ಯೆಯಿಂದ ಉತ್ಪನ್ನವಾದ ಎರಡನೆಯ ಕ್ಲೇಶವೇ ಅಸ್ಮಿತೆಯು. ಆತ್ಮಬುದ್ಧಿ ಗಳ ತಾದಾತ್ಮ್ಯದಿಂದ 'ಅಹಂ' 'ಅಹಂ' ಎಂದು ಅಹಂಕರಿಸುವುದೇ ಅಸ್ಮಿತೆಯು. ಅಂತೆಯೇ ಮಹರ್ಷಿ ಪತಂಜಲಿಯು– 'ದೃಗ್ ದರ್ಶನಶಕ್ತ್ಯೋರೇಕಾತ್ಮತೇವಾಸ್ಮಿತಾ' (ಯೋ. ಸೂ : ೨–೬) ಎಂಬುದಾಗಿ ಅಸ್ಮಿತೆಯ ಲಕ್ಷಣವನ್ನು ನಿರೂಪಿಸಿದ್ದಾನೆ. ದೃಕ್ ಶಕ್ತಿ

ಎಂದರೆ ಪುರುಷ ಅಥವಾ ಆತ್ಮವು. ದರ್ಶನ ಶಕ್ತಿಯೆಂದರೆ ಬುದ್ಧಿಯು. ಪುರುಷನು ಚಿದ್ರೂಪನಾಗಿರೋಣದರಿಂದ ಅವನು ದೃಷ್ಟೃ (ದೃಷ್ಟಾ) ಆಗಿದ್ದಾನೆ. ಪ್ರಪಂಚದ ದರ್ಶನಕ್ಕೆ ಬುದ್ಧಿಯೇ ಮುಖ್ಯದ್ವಾರವಾಗಿರೋಣದರಿಂದ, ಅದಕ್ಕೆ ದರ್ಶನ ಶಕ್ತಿಯೆಂಬುದಾಗಿ ಕರೆಯುತ್ತಾರೆ. ಹೀಗೆ ಪರಸ್ಪರ ಭಿನ್ನಗಳಾದ ಚಿಜ್ಜಡರೂಪಗಳಾದ ಆತ್ಮ–ಬುದ್ಧಿಗಳ ತಾದಾತ್ಮ್ಯದಿಂದ ಪ್ರತೀಯಮಾನವಾದ ಅಹಂಕಾರವೇ ಅಸ್ಮಿತೆಯು. ಹೀಗೆ ಆತ್ಮಬುದ್ಧಿಯೊಂದಿಗೆ ತಾದಾತ್ಮ್ಯವನ್ನು ಹೊಂದಿದಾಗ ಸುಖ–ದುಃಖಗಳ ಭೋಗವನ್ನು ಆತನು ಅನುಭವಿಸಬೇಕಾಗುವುದು. ಯದ್ಯಪಿ ಸುಖದುಃಖಗಳ ಭೋಗವು ಬುದ್ಧಿಯ ಧರ್ಮವಾಗಿದ್ದರೂ, ಆ ಬುದ್ಧಿಯೊಂದಿಗೆ ತಾದಾತ್ಮ್ಯವನ್ನು ಹೊಂದಿದ ಪುರುಷನಿಗೂ ಅರ್ಥಾತ್ ಆತ್ಮನಿಗೂ ಸಹ ಸುಖದುಃಖಗಳು ಸಂಭವಿಸದೇ ಇರಲು ಸಾಧ್ಯವಿಲ್ಲ. ಹೀಗೆ ಅಹಂಕಾರ ರೂಪವಾದ ಅಸ್ಮಿತೆಯು ಆತ್ಮನಿಗೆ ಬುದ್ಧಿಯೊಂದಿಗೆ ತಾದಾತ್ಮ್ಯವನ್ನುಂಟು ಮಾಡಿ ಸದಾ ಕ್ಲೇಶವನ್ನು ಕೊಡುತ್ತಿರುತ್ತದೆ. ಅಂತೆಯೇ ಅಸ್ಮಿತೆಯು ಕ್ಲೇಶವೆಂಬುದಾಗಿ ಪರಿಗಣಿಸಲ್ಪಟ್ಟಿರುತ್ತದೆ. ಈ ಅಹಂಕಾರದಿಂದಲೇ ಆತ್ಮನು ಅಹಮಸ್ಮಿ (ನಾನು ಇದ್ದೇನೆ), ಅಹಂ ಸುಖೀ (ನಾನು ಸುಖವಾಗಿದ್ದೇನೆ), 'ಅಹಂ ದುಃಖೀ' (ನಾನು ದುಃಖಿಯಾಗಿದ್ದೇನೆ), ಅಹಂ ಕರ್ತಾ (ನಾನು ಕರ್ತೃವಾಗಿದ್ದೇನೆ) ಮತ್ತು 'ಅಹಂ ಭೋಕ್ತಾ' (ನಾನು ಭೋಕ್ತೃ ಆಗಿದ್ದೇನೆ) ಎಂಬುದಾಗಿ ವ್ಯವಹರಿಸುತ್ತಾನೆ.

ಅಹಂಕಾರವು ಅನ್ಯರಿಂದ ದೊರೆಯುವ ಮಾನ, ಸನ್ಮಾನ ಮತ್ತು ಸ್ತುತಿಗಳಿಂದ ಬದುಕಿಕೊಂಡಿರುತ್ತದೆ. ಈ ಮಾನ–ಸನ್ಮಾನಗಳು ಯಾವಾಗಲೂ ಸಿಗಲಾರವು. ಎಂದು ಅವು ಸಿಗುವುದಿಲ್ಲವೋ ಅಂದು ಅಹಂಕಾರಕ್ಕೆ ಪೆಟ್ಟು ತಗಲಿ ಅದು ಜೀವಾತ್ಮನಿಗೆ ದುಃಖವನ್ನುಂಟುಮಾಡುತ್ತದೆ. ಸ್ತುತಿಯು ಅಹಂಕಾರದ ಆಹಾರವು, ಅದರಿಂದ ಅಹಂಕಾರಕ್ಕೆ ಆನಂದವುಂಟಾಗುವುದು. ಆದರೆ ಯಾರಾದರೂ ನಿಂದೆ ಮಾಡಿದಾಗ ಅಹಂಕಾರಕ್ಕೆ ದುಃಖವುಂಟಾಗುವುದು. ಈ ಪ್ರಪಂಚದಲ್ಲಿ ಸ್ತುತಿಮಾಡುವವರಿಗಿಂತ ನಿಂದೆ ಮಾಡುವವರೇ ಅಧಿಕವಾಗಿರುವಾಗ, ಅಹಂಕಾರವು ಸದಾದುಃಖವನ್ನೇ ಅನುಭವಿಸುತ್ತಿರುತ್ತದೆ. ಹೀಗೆ ಆತ್ಮನಿಗೆ ನಿರಂತರವಾಗಿ ದುಃಖವನ್ನು ಕೊಡುವುದರ ಮೂಲಕ ಆತ್ಮನಿಗೆ ಸದಾಕ್ಲೇಶವನ್ನು ಕೊಡುವ ಈ ಅಸ್ಮಿತಾರೂಪವಾದ ಅಹಂಕಾರವು ಸಹ ಒಂದು ಕ್ಲೇಶವೆಂಬುದಾಗಿ ಶಾಸ್ತ್ರಕಾರರು ಪರಿಗಣಿಸಿದ್ದಾರೆ.

ಇನ್ನು ಮೂರನೆಯದಾದ ಕ್ಲೇಶವೇ ರಾಗವು. ಸುಖ–ಭೋಗದನಂತರ ಅಂತಃ ಕರಣದಲ್ಲಿ ಉಳಿದುಕೊಂಡಿರುವ ಅಭಿಲಾಷಾ ವಿಶೇಷವೇ ರಾಗವು. ಅಂತೆಯೇ ಪತಂಜಲಿ ಮಹರ್ಷಿಯು 'ಸುಖಾನುಶಯೀ ರಾಗಃ' (ಯೋ. ಸೂ. ೨–೭) ಎಂಬುದಾಗಿ ರಾಗದ ಲಕ್ಷಣವನ್ನು ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ತಾನು ಪೂರ್ವದಲ್ಲಿ ಅನುಭವಿಸಿದ ಸುಖದ ಸ್ಮೃತಿಯುಂಟಾಗಿ ತೃಷ್ಣಾಭಾವವೇ ರಾಗವು. ಮನುಷ್ಯನು ಯಾವಾಗ ಎಂತಹ ಸುಖವನ್ನು ಅನುಭವಿಸುತ್ತಾನೆಯೋ ಆಗ ಅವನ ಮನಸ್ಸಿನಲ್ಲಿ ಆ ಸುಖದ ಸಂಸ್ಕಾರ ಮತ್ತು ಆ ಸುಖಕ್ಕೆ ಕಾರಣೀಭೂತಗಳಾದ ಸಾಧನಗಳ ಸಂಸ್ಕಾರವು ಉಂಟಾಗುತ್ತವೆ. ಕಾಲಾಂತರದಲ್ಲಿ ಆ ಸಂಸ್ಕಾರದಿಂದ ಪೂರ್ವಾನುಭೂತವಾದ ಸುಖದ ಮತ್ತು ಸುಖ–ಸಾಧನದ ಸ್ಮೃತಿಯುಂಟಾಗುವುದು. ಆ ಸ್ಮೃತಿಯಿಂದಲೇ ಪೂರ್ವಾನು

ಭೂತ ಸುಖ ಹಾಗೂ ಅದಕ್ಕೆ ಕಾರಣಗಳಾದ ಸಾಧನಗಳು ಪುನಃ ಬೇಕು ಎಂಬ ಅಭಿಲಾಷೆಯೇ ರಾಗವು.

ಮನಸ್ಸು ಕ್ಯಾಮರಾದಲ್ಲಿನ ಫಿಲ್ಮ ಇದ್ದಹಾಗೆ. ಯಾವುದೊಂದು ದೃಶ್ಯವನ್ನು ಗ್ರಹಿಸಿತೆಂದರೆ ಅದು ಅದರಲ್ಲಿ ಶಾಶ್ವತವಾಗಿ ಉಳಿದುಬಿಡುತ್ತದೆ. ಆ ಫಿಲ್ಮಿನಿಂದ ಅದೆಷ್ಟೋ ಫೋಟೋಗಳನ್ನು ಮುದ್ರಿಸಿಕೊಳ್ಳಬಹುದು. ಹಾಗೇನೇ ಒಮ್ಮೆ ಮನಸ್ಸಿನ ಮೇಲೆ ಒಂದು ಚಿತ್ರವು ಬಿಂಬಿಸಿತೆಂದರೆ ಅದು ಅಳಿಸದೆ ಸದಾ ಸಂಸ್ಕಾರ ರೂಪವಾಗಿ ಅಲ್ಲಿ ಉಳಿದುಕೊಂಡುಬಿಡುತ್ತದೆ. ಹೀಗೆ ಕಂಡ, ಕೇಳಿದ ಎಲ್ಲ ಸಂಸ್ಕಾರಗಳು ಮನಸ್ಸಿನಲ್ಲಿ ಸದಾಕಾಲದಲ್ಲಿದ್ದು ಅವುಗಳು ಸ್ಮೃತಿಗಳಿಗೆ ಕಾರಣಗಳಾಗುತ್ತವೆ. ಅಂತೆಯೇ ''ಸಂಸ್ಕಾರ ಜನ್ಯಂ ಜ್ಞಾನಂ ಸ್ಮೃತಿಃ'' ಎಂಬುದಾಗಿ ಶಾಸ್ತ್ರಕಾರರು ಸ್ಮೃತಿಯ ಲಕ್ಷಣವನ್ನು ಪ್ರತಿಪಾದಿಸಿದ್ದಾರೆ. ಮನಸ್ಸಿನ ಮೇಲೆ ಒಮ್ಮೆ ಉಂಟಾದ ಸಂಸ್ಕಾರವು ಅನಂತಕಾಲದ ವರೆಗೆ ಪುನಃ ಪುನಃ ಸ್ಮೃತಿಯನ್ನುಂಟುಮಾಡುತ್ತಲೇ ಇರುತ್ತದೆ. ಮನಸ್ಸು ತನಗುಂಟಾದ ಸುಖ ಸಂಸ್ಕಾರಗಳನ್ನು ಸುರಕ್ಷಿತವಾಗಿಟ್ಟುಕೊಂಡು, ಸ್ಮೃತಿಯ ಮೂಲಕ ಪೂರ್ವಾನು ಭೂತ ಸುಖವನ್ನು ಪುನಃ ಪುನಃ ಅನುಭವಿಸಬೇಕೆಂಬ ಅಭಿಲಾಷೆಯನ್ನು ಮತ್ತೆ ಮತ್ತೆ ತಾಳುತ್ತಿರುತ್ತದೆ. ಇಂತಹ ಅಭಿಲಾಷೆಯೇ ರಾಗವು. ಇದು ಯಾವಾಗಲೂ ಪೂರ್ವಾನು ಭೂತ ಸುಖದ ಬೆನ್ನು ಹತ್ತಿಯೇ ತಿರುಗುತ್ತಿರುತ್ತದೆ. ಅದೆಷ್ಟು ಸಾರೆ ಸುಖವನ್ನು ಅನುಭವಿಸಿದರೂ ಮನಸ್ಸಿಗೆ ಪರಿಪೂರ್ಣವಾದ ತೃಪ್ತಿಯಾಗಲಾರದು. ಅಂತೆಯೇ ಜೀವನದ ಕೊನೆಯಗಳಿಗೆಯಲ್ಲಿ ಉಳಿದ ಮನಸ್ಸಿನಲ್ಲಿಯ ರಾಗದಿಂದಾಗಿಯೇ ಜೀವಿಗಳು ಈ ಸಂಸಾರಸಾಗರದಲ್ಲಿಯೇ ಪುನಃ ಪುನಃ ಜನ್ಮಗಳನ್ನು ತಾಳುತ್ತಲೇ ಇರುತ್ತಾರೆ. ಆದ್ದರಿಂದಲೇ ನಿಜಾನುಭವಿಗಳಾದ ನಿಜಗುಣ ಶಿವಯೋಗಿಗಳು 'ರಾಗದಿಂ ಬೇರಿನ್ನು ಭವಬೀಜಮುಂಟೆ' ಎಂಬುದಾಗಿ ರಾಗವೇ ಭವಬಂಧನಕ್ಕೆ ಕಾರಣವೆಂಬುದಾಗಿ ನಿರೂಪಿಸಿದ್ದಾರೆ.

ಜೀವಿಗಳು ಭವದಲ್ಲಿ ಬರಬೇಕಾದರೆ ರಾಗವೊಂದಿದ್ದರೆ ಸಾಕು. ಯಾವುದೊಂದು ಸ್ಥಾನಕ್ಕೆ ಅಥವಾ ಯಾರೊಬ್ಬ ವ್ಯಕ್ತಿಯ ಕಡೆಗೆ ಓರ್ವನು ಪುನಃ ಪುನಃ ಹೋಗುತ್ತಿದ್ದರೆ ಅವನಿಗೆ ಆ ವಸ್ತು ಹಾಗೂ ವ್ಯಕ್ತಿಯ ವಿಷಯದಲ್ಲಿ ರಾಗ–ಅನುರಾಗಗಳು ಇವೆ ಎಂಬುದನ್ನು ತಿಳಿದುಕೊಳ್ಳಬೇಕು. ಸಂಸಾರದಲ್ಲಿಯ ಈ ರಾಗದಿಂದ ಮುಕ್ತರಾಗುವುದ ಕ್ಕಾಗಿ ಪರಮಾತ್ಮನು ಪ್ರತಿಯೊಬ್ಬ ಮನುಷ್ಯರಿಗೆ ಒಂದು ನೂರು ವರ್ಷ ಆಯುಷ್ಯವನ್ನು ದಯಪಾಲಿಸಿದ್ದಾನೆ. ಈ ಅವಧಿಯಲ್ಲಿ ರಾಗದ ಸ್ವರೂಪವನ್ನರಿತು ರಾಗದಿಂದ ಮುಕ್ತರಾಗಲು ಸಾಧ್ಯವಿದೆ. ಆದರೆ ಇದು ಎಲ್ಲರಿಗೂ ಸಾಧ್ಯವಾಗುವ ವಿಷಯವಲ್ಲ. ಆಯುಷ್ಯ ಗತಿಸುತ್ತ ಹೋದಂತೆ ಕೊನೆ ಕೊನೆಗೆ ಸಂಸಾರದಲ್ಲಿಯ ಅನುರಾಗವನ್ನು ಬಿಟ್ಟು ಅದನ್ನು ಪರಮಾತ್ಮನಲ್ಲಿಟ್ಟು ಮುಕ್ತರಾಗಬೇಕಾಗಿದ್ದ ಜೀವಿಗಳು, ಅದಕ್ಕೆ ವಿಪರೀತವಾಗಿ ಮುಪ್ಪಾವಸ್ಥೆಯಲ್ಲಿ ಇನ್ನೂ ಹೆಚ್ಚು ಹೆಚ್ಚು ಅನುರಾಗಿಗಳಾಗಿ ಶರೀರವನ್ನು ತ್ಯಜಿಸೋಣದ ರಿಂದ ಆ ಅವಶಿಷ್ಟರಾಗದ ಅನುಭವಕ್ಕಾಗಿ ಪುನಃ ಪುನಃ ಸಂಸಾರದಲ್ಲಿ ಹುಟ್ಟಿ ಬರುತ್ತಿರುತ್ತಾರೆ. ಅಂತೆಯೇ ರಾಗವೇ ಭವಕ್ಕೆ ಬೀಜವೆಂಬುದು ನಿಜಗುಣರ ನಿರ್ಣಯವಾಗಿದೆ.

ಸಂಸಾರದ ಮೇಲಿನ ಇಂತಹ ರಾಗದಿಂದಲೇ ಪ್ರತಿಯೊಬ್ಬ ಜೀವಿಯು ಅಲ್ಪ ಸುಖವನ್ನನುಭವಿಸಿ ಅನಂತ ಹಾನಿಗೊಳಗಾಗುವುದನ್ನು, ದಿನವಿಡೀ ಕಾಣುತ್ತಲೇ ಇರುತ್ತೇವೆ. ಓರ್ವ ಸುಭಾಷಿತಕಾರನು ಈ ರಾಗದ ಮಹಿಮೆಯನ್ನು ಹೃದಯಂಗಮ ವಾಗಿ ವರ್ಣಿಸುತ್ತ–

ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಮ್
ಭಾಸ್ವಾನುದೇಷ್ಯತಿ ಹಸಿಷ್ಯತಿ ಪಂಕಜಶ್ರೀಃ ।
ಇತ್ಥಂ ವಿಚಿಂತಯತಿ ಕೋಶಗತೇ ದ್ವಿರೇಫೇ
ಹಾ ಹಂತ ! ಹಂತ ! ನಲಿನೀಂ ಗಜ ಉಜ್ಜಹಾರ ॥

ಈ ರೀತಿಯಾಗಿ ತಿಳಿಯಪಡಿಸಿದ್ದಾನೆ. ಕಮಲದ ಮೇಲೆ ಅತ್ಯಂತ ಅನುರಾಗಿಯಾದ ಒಂದು ಭ್ರಮರವು, ಸಾಯಂಕಾಲದಲ್ಲಿ ತಾನು ದಿನಾಲೂ ಕಮಲದ ಮಕರಂದ ವನ್ನೀಂಟಲು ಬರುತ್ತಿದ್ದ ಸರೋವರಕ್ಕೆ ಬಂದು, ವಿಕಸಿತವಾದ ಕಮಲದಲ್ಲಿ ಕುಳಿತು ಮಕರಂದವನ್ನು ಆಸ್ವಾದಿಸತೊಡಗಿತು. ಮಕರಂದದ ಆಸ್ವಾದನೆಯಲ್ಲಿ ಅದು ಮಗ್ನವಾಗಿರುವಾಗ ಸಾಯಂಕಾಲದ ಸಮಯವಾದ್ದರಿಂದ ಕಮಲವು ತನ್ನ ದಳಗಳನ್ನು ಸಾವಕಾಶವಾಗಿ ಮುಕುಲಿತಗೊಳಿಸಿಕೊಂಡಿತು (ಮುಚ್ಚಿಕೊಂಡಿತು). ಕಮಲವನ್ನು ಭೇದಿಸಿ ಹೊರಗೆ ಬರುವ ಸಾಮರ್ಥ್ಯವಿದ್ದರೂ, ಕಮಲದ ಮೇಲಿನ ರಾಗದಿಂದಾಗಿ ಆ ಭ್ರಮರವು ಕಮಲವನ್ನು ಭೇದಿಸದೆ ಅಲ್ಲಿಯೇ ಕುಳಿತುಕೊಂಡು– 'ಕೆಲ ಸಮಯದ ನಂತರ ರಾತ್ರಿಯು ಗಮಿಸಿಹೋಗುವುದು, ಸೂರ್ಯನು ಉದಯವಾಗುವನು. ಆ ಸೂರ್ಯೋದಯದ ವೇಳೆಯಲ್ಲಿ ಈ ಮುಕುಲಿತವಾದ ಕಮಲವು ಪುನಃ ವಿಕಸಿತ ವಾಗುವುದು. ಆಗ ನಾನು ಈ ಕಮಲದಿಂದ ಹಾಯಾಗಿ ಹೊರಹೋಗಬಲ್ಲೆನು' ಎಂಬುದಾಗಿ ವಿಚಾರಿಸುತ್ತ ಕುಳಿತಿರುವಾಗ, ಒಂದು ಮದೋನ್ಮತ್ತವಾದ ಆನೆಯು ಜಲಕ್ರೀಡೆಗಾಗಿ ಅದೇ ಸರೋವರಕ್ಕೆ ಬಂದು ಜಲದಲ್ಲಿ ವಿಹರಿಸುತ್ತ, ಅಲ್ಲಿಯ ಕಮಲದ ದೇಟುಗಳನ್ನು ತನ್ನ ಸೊಂಡಿಲಿನಿಂದ ಕಿತ್ತು ಕಿತ್ತು ಬಿಸುಟತೊಡಗಿತು. ಈ ಭ್ರಮರವು ಕುಳಿತ ಕಮಲವೂ ಸಹ ಕಿತ್ತೆಸೆಯಲ್ಪಟ್ಟುದಾದ್ದರಿಂದ ನೀರಿನಿಂದ ಹೊರಬಿದ್ದ ಆ ಕಮಲವು ಅರಳಲೇ ಇಲ್ಲ. ಒಳಗೆ ಕುಳಿತ ಭ್ರಮರವು ಕಮಲದ ವಿಕಾಸದ ಪ್ರತೀಕ್ಷೆಯಲ್ಲಿಯೇ ಕಾಲದ ಗಣನೆ ಮಾಡುತ್ತಮಾಡುತ್ತ ಅಲ್ಲಿಯೆಅಸುವನ್ನು ನೀಗಿತು.ಈ ಸಾಂಕೇತಿಕವಾದ ಉದಾಹರಣೆಯು ಜೀವಿಗಳಲ್ಲಿಯ ರಾಗದ ಪರಿಣಾಮವನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಸಾಂಸಾರಿಕ ವಿಷಯಗಳಲ್ಲಿ ರಾಗಿಯಾದ ಜೀವನು ಅದೆಷ್ಟೋ ಸಾರೆ ಹುಟ್ಟುತ್ತಲೇ ಸಾಯುತ್ತಲೇ ಇರುತ್ತಾನೆ. ಈ ತೆರನಾಗಿ ರಾಗವು ಜೀವಿಗಳ ಮನದಲ್ಲಿ ವಿಷಯಾಸಕ್ತಿಯನ್ನು ಹುಟ್ಟಿಸಿ, ಆ ವಿಷಯ ಸಂಗದಿಂದ ಅಲ್ಪಸುಖವನ್ನು ಕೊಟ್ಟು, ಅನಂತ ಕಾಲದವರೆಗೆ ದುಃಖವನ್ನೇ ಕೊಡುತ್ತಿರೋಣದರಿಂದ ಪೂಜ್ಯಪಾದರಾದ ಜಗದ್ಗುರು ರೇಣುಕ ಭಗವತ್ಪಾದರು ರಾಗವನ್ನು ಕ್ಲೇಶವೆಂಬುದಾಗಿ ತಿಳಿಯಪಡಿಸಿದ್ದಾರೆ.

ಪಂಚಕ್ಲೇಶಗಳಲ್ಲಿ ನಾಲ್ಕನೆಯದಾದ ಕ್ಲೇಶವೇ ದ್ವೇಷವು. ದ್ವೇಷದ ಲಕ್ಷಣವನ್ನು ಪತಂಜಲಿ ಮಹರ್ಷಿಗಳು 'ದುಃಖಾನುಶಯೀ ದ್ವೇಷಃ (ಯೋ. ಸೂ. ೨–೮) ಈ

ರೀತಿಯಾಗಿ ಪ್ರತಿಪಾದಿಸಿದ್ದಾರೆ. ತಾನು ಅನುಭವಿಸಿದ ದುಃಖ ಹಾಗೂ ದುಃಖಕ್ಕೆ ಸಾಧನೀಭೂತಗಳಾದ ವ್ಯಕ್ತಿ ಅಥವಾ ವಸ್ತುವಿನ ಬಗ್ಗೆ ಮನಸ್ಸಿನಲ್ಲುಂಟಾಗುವ ಕ್ರೋಧಭಾವನೆಗೆ ದ್ವೇಷವೆಂಬುದಾಗಿ ಕರೆದಿದ್ದಾರೆ. ಈ ದ್ವೇಷವು ರಾಗದ ಮತ್ತೊಂದು ರೂಪವೇ ಆಗಿದೆ. ರಾಗಕ್ಕೆ ಪ್ರತಿಬಂಧನೆಯುಂಟಾದಾಗ, ಮನುಷ್ಯನ ಮನಸ್ಸಿನಲ್ಲಿ ತತ್ಕ್ಷಣ ಕ್ರೋಧವು ಪ್ರಾದುರ್ಭವಿಸುವುದು. ಅಂತೆಯೇ ರಾಗದ್ವೇಷಗಳಿಗೆ ದ್ವಂದ್ವ ಗಳೆಂದು ಕರೆದಿದ್ದಾರೆ. ಹಸಿವೆ–ತೃಷೆ, ಜನನ–ಮರಣ ಮತ್ತು ರಾಗ–ದ್ವೇಷ ಇವುಗಳಿಗೆ ಶಾಸ್ತ್ರಕಾರರು ದ್ವಂದ್ವಗಳೆಂದು ಕರೆದಿದ್ದಾರೆ. ಅಂದರೆ ಇವುಗಳು ಒಂದೊಂದಾಗಿ ಇರದೆ ಪ್ರಾಯಃ ಎರಡೂ ಕೂಡಿಕೊಂಡೇ ಇರುತ್ತವೆ. ಆದ್ದರಿಂದ ಪಂಚಕ್ಲೇಶಗಳನ್ನು ಪ್ರತಿಪಾದಿಸುವಾಗ ರಾಗದ ನಂತರದಲ್ಲಿಯೇ ದ್ವೇಷವನ್ನು ಪ್ರತಿಪಾದಿಸಿದ್ದಾರೆ. ಒಂದು ನಾಣ್ಯಕ್ಕೆ ಎರಡು ಮುಖಗಳಿದ್ದಂತೆ, ರಾಗದ್ವೇಷಗಳೂ ಸಹ ಒಂದಕ್ಕೊಂದು ಸಂಬಂಧಿ ಗಳಾಗಿವೆ. ಒಂದು ವಿಷಯದಲ್ಲಿ ಮೊದಲು ರಾಗವುಂಟಾಗಿ ನಂತರ ಸಾವಕಾಶವಾಗಿ ಆ ವಿಷಯದ ಬಗ್ಗೆ ದ್ವೇಷವೂ ಸಹ ಸಂಭವಿಸುವುದುಂಟು. ದ್ವೇಷದಿಂದಲೂ ಸಹ ಜೀವಿಯು ಅನಂತ ದುಃಖಗಳನ್ನನುಭವಿಸುತ್ತಾನೆ. ದ್ವೇಷವು ಜ್ವಲನಾತ್ಮಕವಾದುದು. ಅಗ್ನಿಯು ತನ್ನ ಸಮೀಪದ ವಸ್ತುಗಳನ್ನು ಸುಟ್ಟುಹಾಕುವಂತೆ, ಕ್ರೋಧಾಗ್ನಿಯು ಯಾರಲ್ಲಿ ಸಂಭವಿಸುವುದೋ ಅವನನ್ನೇ ಸುಟ್ಟುಹಾಕುತ್ತದೆ. ಕ್ರೋಧಾವಿಷ್ಟನಾದ ವ್ಯಕ್ತಿಯ ಅಂಗ–ಪ್ರತ್ಯಂಗಗಳು ತಪ್ತವಾಗುತ್ತವೆ. ಕ್ರೋಧಾವಿಷ್ಟನಾದ ವ್ಯಕ್ತಿಯು ಆ ಆವೇಶದಲ್ಲಿ ಇನ್ನೊಬ್ಬರಿಗೆ ಹಾನಿಯನ್ನುಂಟುಮಾಡುವ ಪೂರ್ವದಲ್ಲಿ, ತನಗೇ ದೊಡ್ಡ ಹಾನಿ ಯನ್ನುಂಟುಮಾಡಿಕೊಳ್ಳುತ್ತಾನೆ. ಮನೆಗೆ ಹತ್ತಿದ ಬೆಂಕಿಯು ಮುಂಚೆ ಆ ಮನೆಯನ್ನು ಸುಟ್ಟು ನಂತರ ನೆರೆಮನೆಗೆ ತಾಗುವಂತೆ, ಕ್ರೋಧಾಗ್ನಿಯೂ ಸಹ ಮೊದಲು ಕ್ರುದ್ಧನನ್ನು ದಹಿಸಿ ನಂತರ ಬೇರೆಯವರಿಗೆ ದುಃಖವನ್ನುಂಟುಮಾಡುತ್ತದೆ. ಅಂತೆಯೇ ಶಾಸ್ತ್ರಕಾರರು 'ದ್ವೇಷ ತನ್ನ ವೈರಿ ಶಾಂತಿ ಪರರ ವೈರಿ' ಎಂಬುದಾಗಿ ಹೇಳಿರುತ್ತಾರೆ. ದ್ವೇಷಿಯಾದ ಮನುಷ್ಯನು ತಾನು ದುಃಖಪಡುವುದಲ್ಲದೆ ಅನ್ಯರನ್ನೂ ದುಃಖಕ್ಕೀಡುಮಾಡುತ್ತಾನೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ದ್ವೇಷವನ್ನೂ ಸಹ ಕ್ಲೇಶ ರೂಪವಾಗಿ ಪರಿಗಣಿಸಿದ್ದಾರೆ. ಈ ದ್ವೇಷದಿಂದ ಮುಕ್ತರಾಗಬೇಕಾದರೆ ಭೇದಜ್ಞಾನವನ್ನು ದೂರಮಾಡುವ ಶಿವಾದ್ವೈತ ಜ್ಞಾನವನ್ನು ಸಂಪಾದಿಸಬೇಕೆಂಬುದಾಗಿ ತಿಳಿಯಪಡಿಸಿ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ಏಪ್ರಿಲ್ ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



ಆಶೀರ್ವಚನ -೫

# ಶಿವಯೋಗಸಮಾಧಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶಿವಯೋಗ ಸಮಾಧಿಗೆ ವಿಘ್ನರೂಪಗಳಾದ ಪಂಚಕ್ಲೇಶಗಳ ವಿಷಯವಾಗಿ ಎರಡು ದಿನಗಳಿಂದ ಆಶೀರ್ವಚನವನ್ನು ಆಲಿಸುತ್ತ ಬಂದಿದ್ದೀರಿ. ಈ ಪಂಚಕ್ಲೇಶ ಗಳಲ್ಲಿ ಐದನೆಯ ಹಾಗೂ ಕೊನೆಯದಾದ ಕ್ಲೇಶವೇ ಅಭಿನಿವೇಶವು. ಮಹರ್ಷಿ ಪತಂಜಲಿಗಳು– 'ಸ್ವರಸವಾಹೀವಿದುಷೋऽಪಿ ತಥಾ ರೂಢೋऽಭಿನಿವೇಶಃ' (ಯೋ. ಸೂ. ೨–೯) ಎಂಬುದಾಗಿ ಅಭಿನಿವೇಶದ ಲಕ್ಷಣವನ್ನು ಪ್ರತಿಪಾದಿಸಿದ್ದಾರೆ. ತಾತ್ಪರ್ಯ ವೇನೆಂದರೆ, ಅನೇಕ ಜನ್ಮಗಳಲ್ಲಿ ಅನುಭವಿಸಿದ ಮರಣ ದುಃಖದಿಂದುಂಟಾದ ಸಂಸ್ಕಾರಕ್ಕೆ ಸ್ವರಸ ಎಂಬುದಾಗಿ ಕರೆಯುತ್ತಾರೆ.

ಆ ಸಂಸ್ಕಾರದಿಂದುಂಟಾಗುವ ಮರಣಭಯವೇ ಅಭಿನಿವೇಶವು. ಸದ್ಯಃ ಜೀವಂತನಾಗಿರುವ ಪ್ರತಿಯೊಬ್ಬ ಜೀವಿಯು ತನ್ನ ಮರಣಕ್ಕಾಗಿ ಭಯಪಡುತ್ತಾನೆ. ಏಕೆಂದರೆ, ಹಿಂದಿನ ಅನೇಕ ಜನ್ಮಗಳಲ್ಲಿ ಮರಣದಿಂದುಂಟಾದ ತ್ರಾಸನ್ನು ಅನು ಭವಿಸಿರೋಣದರಿಂದ ಅದರ ಸಂಸ್ಕಾರವು ಮನದಲ್ಲಿರುತ್ತದೆ. ಆ ಸಂಸ್ಕಾರದಿಂದಲೇ ಪ್ರತಿಯೊಬ್ಬರೂ ಮರಣಕ್ಕಾಗಿ ಭೀತಿಪಡುತ್ತಾರೆ. ಸಾವಿರಾರು ಚೇಳುಗಳು ಓರ್ವನಿಗೆ ಏಕಕಾಲದಲ್ಲಿಯೇ ಕುಟುಕಿದಾಗ ಆಗುವ ವೇದನೆಯಷ್ಟು ವೇದನೆಯು ಮರಣ ಕಾಲದಲ್ಲಿ ಆಗುವುದೆಂಬುದಾಗಿ ಜ್ಞಾನಿಗಳು ಪ್ರತಿಪಾದಿಸಿದ್ದಾರೆ. ಸಂಪ್ರಜ್ಞಾತ ಸಮಾಧಿ ಯನ್ನು ಪಡೆದ ಶಿವಯೋಗಿಗಳನ್ನು ಹೊರತುಪಡಿಸಿ ಉಳಿದ ಪ್ರತಿಯೊಬ್ಬರಿಗೂ ಈ ಮರಣ ತ್ರಾಸವು ತಪ್ಪಿದ್ದಲ್ಲ. ಇಂತಹ ಮರಣ ತ್ರಾಸವೇ ಅಭಿನಿವೇಶವು.

ಜನನ–ಮರಣಗಳು ಶರೀರದ ಸಹಜಗಳಾದ ಧರ್ಮಗಳು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಜಾತಸ್ಯ ಹಿ ಧ್ರುವೋಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ಜಂತುರ್ಮರಣಜನ್ಮಾಭ್ಯಾಂ ಪರಿಭ್ರಮತಿ ಚಕ್ರವತ್ ॥

(ಸಿ. ಶಿ. ೫–೬೪)

ಎಂಬುದಾಗಿ ನಿರೂಪಿಸಿದ್ದಾರೆ. ಜನನದ ನಂತರ ಮರಣ, ಮರಣದ ನಂತರ ಜನನ, ಹೀಗೆ ಇವು ಚಕ್ರದೋಪಾದಿಯಲ್ಲಿ ನಿರಂತರವಾಗಿ ಸಂಭವಿಸುವ ಕ್ರಿಯೆಗಳು. ಈ ಚಕ್ರದಲ್ಲಿ ಪ್ರತಿಯೊಬ್ಬ ಜೀವಿಯು ಸಿಲುಕಿಕೊಂಡಿದ್ದಾನೆ. ಅನೇಕ ಜನ್ಮಗಳಲ್ಲಿ ಈ ದುಃಖವನ್ನು ಅನುಭವಿಸಿದ ಕಾರಣದಿಂದಲೇ ಮೃತ್ಯುವಿನ ಹೆಸರನ್ನು ಕೇಳಿದಮಾತ್ರಕ್ಕೆ ಜನರು ಗಾಬರಿಗೊಳ್ಳುತ್ತಾರೆ. ಮರಣದುಃಖವು ಹೇಗಿರುತ್ತದೆಂಬುದು ಜೀವಿತವಾಗಿರುವ

ವ್ಯಕ್ತಿಗೆ ಸದ್ಯಃ ಅನುಭವವಿಲ್ಲದಿದ್ದರೂ ಹಿಂದಿನ ಅನುಭವದಿಂದುಂಟಾದ ಸಂಸ್ಕಾರ ಮೂಲಕವಾಗಿ ಈಗ ಭಯಪಡುತ್ತಾನೆ. ಲಕ್ಷ ಲಕ್ಷಸಾರೆ ಅನುಭವಿಸಿದ ಆ ಮರಣ ದುಃಖವು ಜೀವಿಯ ಅಂತಃಕರಣದಲ್ಲಿ ದೃಢವಾದ ಸಂಸ್ಕಾರವನ್ನು ಮಾಡಿರುತ್ತದೆ. ಅಂತೆಯೇ ಜೀವಿಯು ಮರಣದಿಂದ ಭಯಪಡುತ್ತಾನೆ. ಆದ ಕಾರಣ ನನಗೆ ಮರಣವೇ ಬರಬಾರದೆಂದು ಇಚ್ಛಿಸುತ್ತಾನೆ. ಆದರೆ ಮರಣವು ಶರೀರದ ಸಹಜವಾದ ಧರ್ಮವು. ನನಗದು ಬೇಡವೆಂದರೆ ಬಿಡಲಾರದು. ಮೃತ್ಯುವಿನಷ್ಟು ಶಾಶ್ವತವಾದದ್ದು ಬೇರೆ ಯಾವುದೂ ಇರುವುದಿಲ್ಲ, ಮನುಷ್ಯನು ತನ್ನ ಜೀವನದಲ್ಲಿ ವಿದ್ಯೆ, ಐಶ್ವರ್ಯ ಮತ್ತು ಅಧಿಕಾರಾದಿಗಳನ್ನು ತನ್ನ ಭಾಗ್ಯಾನುಸಾರವಾಗಿ ಪಡೆಯಬಹುದು ಅಥವಾ ಪಡೆಯದೇ ಇರಬಹುದು. ಆದರೆ ಮೃತ್ಯುವನ್ನು ಮಾತ್ರ ಅವಶ್ಯವಾಗಿ ಪಡೆದೇ ತೀರುತ್ತಾನೆ. ಏಕೆಂದರೆ, ಮೃತ್ಯುವು ಒಂದು ಧ್ರುವ-ಸತ್ಯವಾಗಿರುತ್ತದೆ. ಮೃತ್ಯುವಿಗಾಗಿ ಅಂಜಿ ಅದೆಲ್ಲಿ ಓಡಿ ಹೋಗಿಯೂ ಆದರಿಂದ ಉಳಿಯುವುದು ಅದಾರಿಂದಲೂ ಸಾಧ್ಯವಿಲ್ಲ.

ಓರ್ವ ಬಾದಶಹನು ತನ್ನ ಹಂಸತೂಲಿಕಾ ಪರ್ಯಂಕದಲ್ಲಿ ಸುಖವಾಗಿ ನಿದ್ರಿಸುತ್ತಿರುವಾಗ ನಸುಕಿನಲ್ಲಿ ಅವನೊಂದು ಕನಸು ಕಂಡ. ಕನಸಿನಲ್ಲಿ ಕಪ್ಪು ಬಣ್ಣದ ದೀರ್ಘದಂತದ ಕರಾಳವಾದ ಒಂದು ಭಯಾನಕ ರೂಪವು ಕಾಣಿಸಿಕೊಂಡು ಹೇಳಿದ್ದೇನೆಂದರೆ- ''ಎಲೈ ರಾಜನೇ ! ನಾಳೆ ಸಾಯಂಕಾಲ ಐದು ಘಂಟೆಗೆ ನಾನು ನಿನ್ನನ್ನು ಕರೆದೊಯ್ಯಲು ಬರುತ್ತೇನೆ ತಯಾರಿಯಲ್ಲಿರು''. ಆ ಭಯಾನಕ ಆಕೃತಿಯ ಈ ನುಡಿಯನ್ನು ಕೇಳಿದೊಡನೆ ಭಯಭೀತನಾದ ರಾಜನು ಥಕ್ಕನೇ ಎಚ್ಚರಗೊಂಡು ಕಣ್ಣು ತೆರೆದನು. ಆಗ ನಸುಕಿನ ೪ ಗಂಟೆಯಾಗಿತ್ತು, ಕನಸಿನ ದೃಶ್ಯದಿಂದ ಗಾಬರಿಗೊಂಡ ರಾಜನು ಪ್ರಾತಃಕಾಲ ರಾಜಜ್ಯೋತಿಷಿಯನ್ನು ಕರೆಯಿಸಿ ಈ ಸ್ವಪ್ನದ ಅರ್ಥವೇನೆಂದು ಕೇಳಿದನು. ಆಗ ರಾಜಜ್ಯೋತಿಷಿಯು- ''ಮಹಾರಾಜರೇ ! ಕಪ್ಪು ಆಕೃತಿಯೆಂದಾಗ ಅದು ಮರಣದ ಹೊರತು ಬೇರೊಂದಲ್ಲ, ಅದು ಸಾಯಂಕಾಲಕ್ಕೆ ಐದು ಘಂಟೆಗೆ ಬರುವುದಾಗಿ ಸಂಕೇತಿಸಿರೋಣದರಿಂದ ಅಷ್ಟರೊಳಗಾಗಿ ತಾವು ಈ ಸ್ಥಾನದಿಂದ ಬಹುದೂರ ನಿರ್ಗಮಿಸಬೇಕು. ನಸುಕಿನ ಈ ಕನಸು ಸತ್ಯವಾಗದೇ ಇರದು'' ಎಂಬುದಾಗಿ ನುಡಿದನು.

ಜ್ಯೋತಿಷಿಯ ಈ ನುಡಿಯನ್ನು ಕೇಳಿದೊಡನೆ ತನ್ನ ಮರಣವಾರ್ತೆಯಿಂದ ಭಯಭೀತನಾದ ಮಹಾರಾಜನು ಕೂಡಲೇ ಪಟ್ಟದ ಕುದುರೆಯನ್ನೇರಿ ನಾಗಾಲೋಟ ದಿಂದ ಧಾವಿಸುತ್ತ ಸಾಯಂಕಾಲದೊಳಗಾಗಿ ತನ್ನ ರಾಜ್ಯದ ಸೀಮೆಯನ್ನು ದಾಟಿ ಹೋದನು. ಆಗ ರಾಜನಿಗೆ ಸ್ವಲ್ಪು ಸಮಾಧಾನವೆನಿಸಿತು. ಆಗ ಸಾಯಂಕಾಲ ೫ ಗಂಟೆಯಾಗುವ ವೇಳೆಯದು. ಇನ್ನೇನು ನಾನು ಮೃತ್ಯುವನ್ನು ಬಹುದೂರದಲ್ಲಿ ಬಿಟ್ಟುಬಂದಿದ್ದೇನೆ ಎಂಬುದಾಗಿ ಆಲೋಚಿಸಿ ಧೈರ್ಯಗೊಂಡು ಕುದುರೆಯಿಂದಿಳಿದು, ಒಂದು ಸರೋವರದ ದಂಡೆಯಲ್ಲಿರುವ ಒಂದು ವಿಶಾಲ ವೃಕ್ಷದ ಕೆಳಗೆ ವಿಶ್ರಮಿಸಿ ಕ್ಷಣ ಕಾಲ ಹಾಯಾಗಿ ಕಣ್ಣುಮುಚ್ಚಿದನು. ಆ ಕ್ಷಣದಲ್ಲಿಯೇ ತನ್ನ ಹೆಗಲಮೇಲೆ ಅದಾರೋ ಕೈಯಿರಿಸಿದಂತಾಯಿತು. ಗಾಬರಿಗೊಂಡ ರಾಜನು ಕಣ್ತೆರೆದು ಹೊರಳಿ ನೋಡಿದಾಗ ಯಾವುದನ್ನು ಸ್ವಪ್ನದಲ್ಲಿ ಕಂಡಿದ್ದನೋ ಅದೇ ಆಕೃತಿಯು ಪ್ರತ್ಯಕ್ಷವಾಗಿ ನಿಂತು

ಕೊಂಡಿತ್ತು, ಆಗ ಆಶ್ಚರ್ಯಗೊಂಡ ರಾಜನು ನೀನು ಯಾರು ? ಎಂದು ಕೇಳಿದಾಗ ''ನಾನು ಅವನೇ ನಿನ್ನೆ ನಸುಕಿನಲ್ಲಿ ನಿನ್ನನ್ನು ಎಚ್ಚರಿಸಿದವನು. ನಿನ್ನನ್ನು ಕರೆದೊಯ್ಯಲು ಬಂದ ಮೃತ್ಯುದೇವತೆಯು''. ಈ ನುಡಿಯನ್ನು ಆಲಿಸಿದ ರಾಜನು ''ನೀನು ಅಲ್ಲಿ ಬರುವವನಿದ್ದೇ ಇಲ್ಲಿ ಹೇಗೆ ಬಂದೆ ?'' ಎಂದು ಪ್ರಶ್ನಿಸಿದಾಗ ''ಎಲೈ ರಾಜನೇ ನಾನು ಅಲ್ಲೇ ಇಲ್ಲೆ ಎಂದು ಹೇಳಿರಲಿಲ್ಲ ಕೇವಲ ನಿನ್ನನ್ನೊಯ್ಯಲು ಬರುತ್ತೇನೆಂದು ತಿಳಿಸಿದ್ದೆನಷ್ಟೇ. ಅರಮನೆಯ ಸುಪ್ಪತ್ತಿಗೆಯ ಮೇಲೆ ಹಾಯಾಗಿ ಮಲಗಿದ್ದ ನಿನ್ನನ್ನು ಮರಣದ ಸ್ಥಾನವಾದ ಈ ಮರದೆಡೆಗೆ ಹೇಗೆ ಕರೆದುಕೊಂಡು ಬರಬೇಕೆಂಬುದೇ ನನ್ನ ಚಿಂತೆಯಾಗಿತ್ತು, ನಿನ್ನ ಪಟ್ಟದ ಕುದುರೆಯು ಆ ಕಾರ್ಯವನ್ನು ಮಾಡಿ ನನಗೆ ಸಹಕಾರಿ ಯಾಯಿತು'' ಎಂಬುದಾಗಿ ನುಡಿದ ಆ ಮೃತ್ಯುದೇವತೆಯು ಕುದುರೆಯ ಬೆನ್ನನ್ನು ತಟ್ಟಿ ರಾಜನ ಪ್ರಾಣವನ್ನು ತೆಗೆದುಕೊಂಡು ಹೋಯಿತು. ಮರಣದಿಂದ ಅಂಜಿ ಓಡಿದ ರಾಜನು ಮರಣವಿದ್ದಲ್ಲಿಗೇ ಹೋದನೇ ವಿನಃ ಅದರಿಂದ ಪಾರಾಗಲಿಲ್ಲ, ಆದ್ದರಿಂದ ಮರಣದಿಂದ ದೂರಓಡಿಹೋಗಲು ಆದಾರಿಂದಲೂ ಸಾಧ್ಯವಿಲ್ಲ.

ಶಾಸ್ತ್ರದಲ್ಲಿ ಪ್ರತಿಪಾದಿಸಿದ ಷಡ್‌ಭಾವ ವಿಕಾರಗಳಲ್ಲಿ ಕೊನೆಯದಾದ ವಿಕಾರವೇ ವಿನಶ್ಯತಿ. ಅದೆಷ್ಟು ಪ್ರಯತ್ನ ಮಾಡಿದರೂ ವಿನಶ್ಯತಿ ವಿಕಾರದಿಂದ ಪಾರಾಗಲು ಸಾಧ್ಯವಿಲ್ಲ, ಯೋಗಿಯೇ ಇರಲಿ, ಭೋಗಿಯೇ ಇರಲಿ ಒಂದಿಲ್ಲೊಂದು ದಿನ ಎಲ್ಲರೂ ಶರೀರವನ್ನು ತ್ಯಜಿಸಲೇಬೇಕಾಗುವುದು. ಯೋಗಸಾಮರ್ಥ್ಯದಿಂದ ದೀರ್ಘಜೀವಿ ಯಾಗಬಹುದೇ ವಿನಃ ಅಮರನಾಗಲು ಸಾಧ್ಯವಿಲ್ಲ, ಹನುಮಂತ, ಅಶ್ವತ್ಥಾಮ, ಮಾರ್ಕಂಡೇಯ ಮುಂತಾದವರು ಚಿರಂಜೀವಿಗಳೆಂಬುದಾಗಿ ಕರೆಸಿಕೊಂಡಿದ್ದಾರೆ. ಚಿರಂಜೀವಿಯೆಂದರೆ ಬಹುಕಾಲ ಜೀವಿಸುವವನು ಎಂದರ್ಥ. ನೂರಾರೋ ಇಲ್ಲವೆ ಸಾವಿರಾರೋ ವರ್ಷ ಮಾತ್ರ, ಕೊನೆಗೊಂದು ದಿನ ಅವರೂ ದೇಹವನ್ನು ಬಿಟ್ಟವರೇ. ಅದೆಷ್ಟೋ ಜನ ಯೋಗಿಗಳೂ, ಸಿದ್ಧರೂ ತಮ್ಮ ಯೋಗಸಾಮರ್ಥ್ಯದಿಂದ ಸತ್ತವರನ್ನೂ ಬದುಕಿಸಿದರೆಂಬುದಾಗಿ ಪವಾಡಗಳನ್ನು ಕೇಳುತ್ತೇವೆ. ಸತ್ತವರನ್ನು ಬದುಕಿಸುವ ಸಾಮರ್ಥ್ಯವಿದ್ದವರೂ ಸಹ ಒಂದು ದಿನ ಕಾಲವಶರಾದದ್ದನ್ನು ನಾವೆಲ್ಲ ಕೇಳಿದ್ದೇವೆ, ಕಾಣುತ್ತಲಿದ್ದೇವೆ. ಅಂತೆಯೇ 'ಕಾಲೋ ಜಗದ್ಭಕ್ಷಕಃ' ಎಂಬುದಾಗಿ ಹೇಳಿದ್ದಾರೆ. ಮೃತ್ಯುವಿನಿಂದ ಕೆಲವು ಜನ ಸತ್ತರೆ ಮರಣದ ಭೀತಿಯಿಂದಲೇ ಕೆಲವು ಜನರು ಸಾಯು ತ್ತಾರೆ. ಮೃತ್ಯುವಿಗಿಂತಲೂ ಮೃತ್ಯುವಿನ ಭೀತಿಯಿಂದ ಸಾಯುವವರೇ ಬಹಳ. ಹೀಗೆ ಮರಣ ಭೀತಿಯು ಪ್ರತಿಯೊಬ್ಬರಿಗೆ ದುಃಖವನ್ನೇ ಕೊಡೋಣದರಿಂದ ಈ ದುಃಖ ದಾಯಿಯಾದ ಮರಣಭೀತಿಗೆ ಅಭಿನಿವೇಶವೆಂದು ಹೇಳಿದ್ದಾರೆ. ಇದೂ ಸಹ ಪಂಚ ಕ್ಲೇಶಗಳಲ್ಲೊಂದಾಗಿದೆ.

ಈ ತೆರನಾಗಿ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಈ ಪಂಚಕ್ಲೇಶಗಳು ಜೀವಾತ್ಮನಿಗೆ ಒಂದಿಲ್ಲೊಂದು ವಿಧವಾದ ಕ್ಲೇಶವನ್ನೇ ಅರ್ಥಾತ್ ದುಃಖವನ್ನೇ ಕೊಡುತ್ತಿರೋಣದರಿಂದ ಇವುಗಳಿಗೆ ಪಂಚಕ್ಲೇಶಗಳೆಂದು ಕರೆದಿದ್ದಾರೆ. ಸಂಸಾರವೆಂಬ ವಿಷವೃಕ್ಷಕ್ಕೆ ಈ ಪಂಚಕ್ಲೇಶಗಳೇ ಪಲ್ಲವಗಳಾಗಿವೆ. ಅನಂತಜನ್ಮಗಳಲ್ಲಿ ಈ ಪಂಚಕ್ಲೇಶಗಳಿಂದ ಪೀಡಿತರಾಗುತ್ತಿರುವ ಜೀವಿಗಳನ್ನು ಈ ಕ್ಲೇಶಗಳಿಂದ ಮುಕ್ತರನ್ನಾಗಿ

ಮಾಡುವ ಉದ್ದೇಶದಿಂದಲೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪ್ರಾಣ ಲಿಂಗಿಸ್ಥಲದಲ್ಲಿ ಶಿವಯೋಗ ಸಮಾಧಿಯನ್ನು ಉಪದೇಶಿಸುತ್ತ ಈ ಸಂಸಾರ ವೃಕ್ಷವನ್ನು ಕತ್ತರಿಸಿಹಾಕಲು 'ಶಿವೋಽಹಂ' ಭಾವನೆಯೇ ಒಂದು ಕೊಡಲಿಯೆಂಬುದಾಗಿ ಉಪದೇಶಿಸಿದ್ದಾರೆ. 'ಶಿವೋಽಹಂ' ನಾನು ಶಿವಸ್ವರೂಪನೇ ಆಗಿದ್ದೇನೆ ಎಂಬುದಾಗಿ ನಿರಂತರವಾಗಿ ಭಾವಿಸುವ ಶಿವಭಾವನೆಯಿಂದ ಸಾಧಕನ ಮನಸ್ಸಿನಲ್ಲಿ ಆತ್ಮತತ್ತ್ವವು 'ಶರೀರಾದಿಗಳಿಂದ' ವಿಲಕ್ಷಣವಾದುದು ಎಂಬ ಜ್ಞಾನವು ಉತ್ಪನ್ನವಾಗುವುದು. ಇಂತಹ ಆತ್ಮಜ್ಞಾನಿಗಳಿಗೆ ಈ ಪಂಚವಿಧವಾದ ಕ್ಲೇಶಗಳು ಅದಾವ ರೀತಿಯ ದುಃಖವನ್ನೂ ಸಹ ಉಂಟು ಮಾಡಲಾರವು. ಶರೀರಾದಿಗಳಲ್ಲಿ ನಾನು ನನ್ನದೆಂಬ ಅಭಿಮಾನವನ್ನು ತಾಳಿದವರಿಗೆ ಮಾತ್ರ ಪಂಚಕ್ಲೇಶಗಳ ಪೀಡೆಯು ತಪ್ಪಿದ್ದಲ್ಲ. ಇದರಿಂದ ದೂರಾಗಲು ಶಿವಭಾವನೆಯೊಂದೇ ಪರಮ ಸಾಧನವು. ಇದೇ ವಿಷಯವನ್ನೇ ಇನ್ನಷ್ಟು ಸ್ಪಷ್ಟಪಡಿಸಲು ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಅಜ್ಞಾನರಾಕ್ಷಸೋನ್ಮೇಷಕಾರಿಣಃ ಸಂಹೃತಾತ್ಮನಃ ।
ಶಿವಧ್ಯಾನಂ ತು ಸಂಸಾರತಮಸಶ್ಚಂಡಭಾಸ್ಕರಃ ॥

(ಸಿ. ಶಿ. ೧೨–೩೧)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಆತ್ಮವನ್ನು ಆವರಿಸಿದ ಅಜ್ಞಾನವೆಂಬ ರಾಕ್ಷಸನ ಕಣ್ಣು ತೆರೆಸಿದ ಸಂಸಾರವೆಂಬ ತಮಸ್ಸನ್ನು ದೂರಮಾಡಲು ಶಿವಧ್ಯಾನವು ಒಂದು ಪ್ರಚಂಡವಾದ ಸೂರ್ಯನೋಪಾದಿಯಲ್ಲಿ ಇರುತ್ತದೆಂಬುದಾಗಿ ಪೂಜ್ಯರ ಆಶಯ ವಾಗಿದೆ. ಮಧ್ಯಾಹ್ನದಲ್ಲಿ ಪ್ರಚಂಡವಾದ ಸೂರ್ಯಪ್ರಕಾಶದೆದುರು ಕತ್ತಲೆಯು ಹೇಳಹೆಸರಿಲ್ಲದಾಗುವಂತೆ ಶಿವಧ್ಯಾನಾಸಕ್ತನಾದ ಶಿವಯೋಗಿಯ ಹೃದಯದಲ್ಲಿ ಅಜ್ಞಾನವು ಕಿಂಚಿತ್ತಾದರೂ ಉಳಿಯಲು ಸಾಧ್ಯವಿಲ್ಲ. ಅಂತೆಯೇ ಅವಿದ್ಯಾದಿ ಪಂಚಕ್ಲೇಶ ಗಳಿಂದ ಮುಕ್ತರಾಗಲು ಶಿವಯೋಗಸಮಾಧಿಯಲ್ಲಿ ಉಪದೇಶಿಸಿದ ಶಿವಭಾವನೆ ಶಿವಧ್ಯಾನಾದಿಗಳೇ ಅಮೋಘಸಾಧನಗಳೆಂಬುದಾಗಿ ಅರಿತುಕೊಂಡು ಅವುಗಳ ಮೂಲಕ ಶಿವಯೋಗಸಮಾಧಿಯನ್ನು ಪಡೆದು ಸುಖಿಗಳಾಗಿರೆಂಬುದಾಗಿ ಆಶೀರ್ವದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಏಪ್ರಿಲ್ ೧೯೯೨
(ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



ಆಶೀರ್ವಚನ -೧

# ಲಿಂಗನಿಜಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಾಣಲಿಂಗಿಸ್ಥಲಾಂತರ್ಗತವಾದ ಶಿವಯೋಗ ಸಮಾಧಿ ಸ್ಥಲದ ಬಗ್ಗೆ ಇಲ್ಲಿಯವರೆಗೆ ನೀವೆಲ್ಲ ಆಶೀರ್ವಚನವನ್ನು ಆಲಿಸಿದವರಾಗಿದ್ದೀರಿ. ಈ ಸ್ಥಲದ ನಂತರ ಬರುವ ಅವಾಂತರ ಸ್ಥಲವೇ ಲಿಂಗನಿಜಸ್ಥಲವು. ಪರಾತ್ಪರವಾದ ಪರಶಿವಬ್ರಹ್ಮಲಿಂಗವು ಮಹಾಲಿಂಗರೂಪದಲ್ಲಿ ತನ್ನಲ್ಲಿಯೇ ಇದೆಯೆಂಬುದನ್ನು ತಿಳಿಸುವ ಸ್ಥಲವೇ ಲಿಂಗನಿಜಸ್ಥಲವು. ಅರ್ಥಾತ್ ಪರಶಿವಲಿಂಗವನ್ನು ತನ್ನ ನಿಜರೂಪವನ್ನಾಗಿ ಈ ಸ್ಥಲದಲ್ಲಿ ಬೋಧಿಸಲಾಗಿದೆ. ಪ್ರತಿಯೊಬ್ಬರ ನಿಜಸ್ವರೂಪವು ಲಿಂಗ ರೂಪವೇ ಆಗಿದೆ. ಇದರ ಪರಿಜ್ಞಾನವಿಲ್ಲದ ಮೂಲಕ ಜೀವಿಗಳು ಬಹಿರ್ಮುಖರಾಗಿ ಭ್ರಮಿಸಿ ಹೊರಗೆ ಆ ಲಿಂಗತತ್ತ್ವವನ್ನು ಕಾಣದೆ, ಸಂಸಾರಾಸಕ್ತರಾಗಿ ಅನಂತ ದುಃಖಗಳನ್ನೇ ಅನುಭವಿಸುತ್ತಿರು ತ್ತಾರೆ. ಹೀಗೆ ಬಹಿರಂಗದಲ್ಲಿ ಭ್ರಮಿಸಿ ದುಃಖಕ್ಕೀಡಾದ ಜೀವಿಗಳ ಮನೋವೃತ್ತಿಯನ್ನು ಅಂತರ್ಮುಖಗೊಳಿಸಲೋಸುಗ ಯೋಗಶಾಸ್ತ್ರವು ನಿರ್ಮಾಣವಾಗಿದೆ. ಯೋಗ ಶಾಸ್ತ್ರದ ಪ್ರಣೇತೃವಾದ ಮಹರ್ಷಿ ಪತಂಜಲಿಯು– ''ಯೋಗಃ ಚಿತ್ತವೃತ್ತಿ ನಿರೋಧಃ'' ಎಂಬುದಾಗಿ ಯೋಗದ ಲಕ್ಷಣವನ್ನು ಪ್ರತಿಪಾದಿಸಿ ದ್ದಾನೆ. ಮನಸ್ಸಿನ ಎಲ್ಲ ವೃತ್ತಿಗಳನ್ನು ನಿರೋಧಿಸುವುದು ಯೋಗವಲ್ಲ, ಆದರೆ ಕ್ಲೇಶದಾಯಕಗಳಾದ ಕ್ಲಿಷ್ಟವೃತ್ತಿಗಳನ್ನು ಮಾತ್ರ ನಿರೋಧಿಸುವುದೇ ಯೋಗವು. ಚಿತ್ತ ವೃತ್ತಿಯೂ ಸಹ ಪ್ರಮಾಣವೃತ್ತಿ ವಿಪರ್ಯಯ ವೃತ್ತಿ ವಿಕಲ್ಪವೃತ್ತಿ ನಿದ್ರಾವೃತ್ತಿ ಮತ್ತು ಸ್ಮೃತಿವೃತ್ತಿಯೆಂಬುದಾಗಿ ಐದು ಪ್ರಕಾರವಾಗಿರು ತ್ತದೆ. ಇದರಲ್ಲಿ ಪುನಃ ಕ್ಲಿಷ್ಟ–ಅಕ್ಲಿಷ್ಟ ಭೇದದಿಂದ ಒಟ್ಟು ಚಿತ್ತವೃತ್ತಿಯು ಹತ್ತು ಪ್ರಕಾರವಾಗಿರುತ್ತದೆ.

'ಕ್ಲೇಶಮೂಲಾ ಕ್ಲೇಶಫಲಾಚವೃತ್ತಿಃ ಕ್ಲಿಷ್ಟಾ' ಅಂದರೆ ಯಾವ ವೃತ್ತಿಯು ಕ್ಲೇಶ ಮೂಲವೂ, ಕ್ಲೇಶಫಲದಾಯಕವೂ ಆಗಿರುತ್ತದೆಯೋ ಅದಕ್ಕೆ ಕ್ಲಿಷ್ಟವೃತ್ತಿಯೆಂಬುದಾಗಿ ಕರೆಯುತ್ತಾರೆ. ಇನ್ನು ಕ್ಲೇಶಕ್ಕೆ ಹಾಗೂ ಕ್ಲೇಶಫಲಕ್ಕೆ ಕಾರಣೀಭೂತವಲ್ಲದ ವೃತ್ತಿಯು ಅಕ್ಲಿಷ್ಟವೃತ್ತಿಯು. ಯಾವ ವೃತ್ತಿಗಳಿಂದ ನಮಗೆ ಕ್ಲೇಶವುಂಟಾಗುವುದೋ ಆ ವೃತ್ತಿಗಳನ್ನು ನಿರೋಧಿಸಬೇಕೆಂಬುದೇ ಪತಂಜಲಿ ಮಹರ್ಷಿಗಳ ಆಶಯವಾಗಿದೆ. ಪ್ರಮಾಣ ಜ್ಞಾನಕ್ಕೆ ಕಾರಣವಾದ ವೃತ್ತಿಗೆ ಪ್ರಮಾಣವೃತ್ತಿಯೆಂಬುದಾಗಿ ಕರೆಯುತ್ತಾರೆ. ಪಂಚಜ್ಞಾನೇಂದ್ರಿಯ ಹಾಗೂ ಮನಸ್ಸೆಂಬ ಆರು ಪ್ರಮಾಣಗಳ ಮೂಲಕವಾಗಿ ಇದು ಆರು ವಿಧವಾಗಿರುತ್ತದೆ. ಪ್ರಪಂಚ ವಿಷಯಕವಾದ ಪ್ರಮಾಣಜ್ಞಾನದಿಂದ ಮನುಷ್ಯನಿಗೆ ನಿರಂತರವಾಗಿ ಕ್ಲೇಶವೇ ಉಂಟಾಗುವುದು. ಅಂತೆಯೇ ಈ ಜ್ಞಾನಕ್ಕೆ ಕ್ಲಿಷ್ಟಪ್ರಮಾಣಜ್ಞಾನವೆಂಬುದಾಗಿ ತಿಳಿದುಕೊಳ್ಳಬೇಕು. ಇನ್ನು ಆತ್ಮಸಾಕ್ಷಾತ್ಕಾರರೂಪವಾದ ಪ್ರಮಾಣಜ್ಞಾನದಿಂದ

ಪ್ರತಿಯೊಬ್ಬರಿಗೂ ಆನಂದವೇ ಪ್ರಾಪ್ತವಾಗೋಣದರಿಂದ ಆ ಪ್ರಮಾಣಜ್ಞಾನಕ್ಕೆ ಅಕ್ಲಿಷ್ಟ ಪ್ರಮಾಣಜ್ಞಾನವೆಂದು ಅರಿಯಬೇಕು. ಹೀಗೆ ಆತ್ಮಜ್ಞಾನಾಕಾರವೃತ್ತಿಯು ಅಕ್ಲಿಷ್ಟ ಪ್ರಮಾಣವೃತ್ತಿಯು. ಪ್ರಪಂಚಾಕಾರವೃತ್ತಿಯು ಕ್ಲಿಷ್ಟಪ್ರಮಾಣವೃತ್ತಿಯು. ಮಹರ್ಷಿ ಪತಂಜಲಿಗಳ ಆದೇಶದಂತೆ ಕ್ಲಿಷ್ಟಕಾರಿಯಾದ ಪ್ರಪಂಚವಿಷಯಕ ಪ್ರಮಾಣಜ್ಞಾನ ರೂಪವಾದ ವೃತ್ತಿಯನ್ನು ಯೋಗಸಾಧಕನು ತಡೆಯಬೇಕಾಗುವುದು.

ವಿಪರ್ಯಯ ಅಥವಾ ವಿಪರೀತ ಜ್ಞಾನಕ್ಕೆ ಕಾರಣವಾದ ವೃತ್ತಿಯೇ ವಿಪರ್ಯಯ ವೃತ್ತಿಯು. ಈ ವೃತ್ತಿಮೂಲಕವಾಗಿ ಜೀವಿಯು ಇದ್ದ ವಸ್ತುವನ್ನು ಮರೆತು ಇಲ್ಲದ ವಸ್ತುವಿನ ಜ್ಞಾನವನ್ನು ಹೊಂದುತ್ತಾನೆ. ಹಗ್ಗದಲ್ಲಿ ತೋರುವ ಹಾವು, ಮೋಟು ಮರದಲ್ಲಿ ತೋರುವ ಕಳ್ಳ ಇವೆಲ್ಲ ವಿಪರ್ಯಯ ಜ್ಞಾನದ ಉದಾಹರಣೆಗಳು. ಇಂತಹ ವಿಪರ್ಯಯ ವೃತ್ತಿಯಿಂದ ಜೀವಿಯು ದುಃಖವನ್ನೇ ಅನುಭವಿಸುತ್ತಾನೆ. ಅಂತೆಯೇ ಇದಕ್ಕೆ 'ಕ್ಲಿಷ್ಟ ವಿಪರ್ಯಯವೃತ್ತಿ' ಎಂದು ಕರೆಯುತ್ತಾರೆ. ಒಂದು ಪಾಷಾಣ ಖಂಡದಲ್ಲಿ ನಿರ್ಮಿತವಾದ ವಿಗ್ರಹದಲ್ಲಿ ದೇವತ್ವಬುದ್ಧಿಯನ್ನು ತಾಳುವುದೂ ಕೂಡ ಒಂದು ವಿಧ ವಿಪರ್ಯಯವೃತ್ತಿಯೇ ಆಗಿದೆ. ಆದರೆ ಶಿಲಾ ವಿಗ್ರಹದಲ್ಲಿ ಶಿವತತ್ತ್ವ ಭಾವನೆಯಿಂದ ಆರಾಧಿಸಿದಾಗ ಆರಾಧಕನಿಗೆ ಸುಖ–ಸಮಾಧಾನಗಳು ಪ್ರಾಪ್ತವಾಗೋಣದರಿಂದ ಈ ವಿಪರ್ಯಯವೃತ್ತಿಗೆ ಅಕ್ಲಿಷ್ಟವೆಂಬುದಾಗಿ ಕರೆಯುವರು. ಈ ವೃತ್ತಿಮೂಲಕವಾಗಿಯೇ ಸಾಧಕನು ಕ್ರಮಶಃ ಸ್ಥೂಲದಿಂದ ಸೂಕ್ಷ್ಮ ತತ್ತ್ವದ ಕಡೆಗೆ ಗಮನಿಸಲು ಅನುಕೂಲ ವಾಗುವುದು. ಅಂತೆಯೇ ರಜ್ಜುಸರ್ಪಾತ್ಮಕವಾದ ಕ್ಲಿಷ್ಟ ವಿಪರ್ಯಯವೃತ್ತಿಯನ್ನು ಯೋಗಿಯಾದವನು ನಿರೋಧಿಸಬೇಕೆಂಬುದಾಗಿ ಪತಂಜಲಿಯ ಆಶಯವಾಗಿದೆ.

ಅದರಂತೆ ವಿಕಲ್ಪವೃತ್ತಿಯಾದರೂ ಕ್ಲಿಷ್ಟಾಕ್ಲಿಷ್ಟ ಭೇದದಿಂದ ಎರಡು ವಿಧ ವಾಗಿರುವುದು. ವಿಕಲ್ಪವೆಂದರೆ ಒಂದು ತರಹದ ಮನೋರಾಜ್ಯವೇ. ಮನಸ್ಸು ಯಾವಾಗಲೂ ಏನನ್ನಾದರೂ ಚಿಂತಿಸುತ್ತಲೇ ಇರುತ್ತದೆ. ಸಂಸಾರ ವಿಷಯಕವಾದ ವಿಕಲ್ಪವೃತ್ತಿಯು ಮನುಷ್ಯನಿಗೆ ದುಃಖದಾಯಿಯಾಗಿರುವುದು. ಅಂತೆಯೇ ಸಂಸಾರಿಕ ಮನೋರಾಜ್ಯರೂಪವಾದ ವಿಕಲ್ಪವೃತ್ತಿಗೆ ಕ್ಲಿಷ್ಟ ವಿಕಲ್ಪವೃತ್ತಿಯೆಂಬುದಾಗಿ ಕರೆಯುವರು. ಇಂತಹ ವಿಕಲ್ಪದಿಂದ ಅನೇಕ ಜನರು ಅನರ್ಥಕ್ಕೊಳಗಾಗುವುದನ್ನು ಕಾಣುತ್ತಿರುತ್ತೇವೆ.

ವಿಷ್ಣುಶರ್ಮನೆಂಬ ಓರ್ವ ಬಡಬ್ರಾಹ್ಮಣನು ದಿನಾಲೂ ಭಿಕ್ಷೆಯನ್ನು ಬೇಡಿ ತನ್ನ ಹೊಟ್ಟೆ ಹೊರೆಯುತ್ತಿದ್ದನು. ತಾನು ಉಂಡು ಉಳಿದ ಹಿಟ್ಟನ್ನು ಒಂದು ಬಟ್ಟೆಯಲ್ಲಿ ಕಟ್ಟಿ ಜಂತಿಗೆ ನೇತುಹಾಕಿದ್ದನು. ಒಮ್ಮೆ ಆ ಹಿಟ್ಟಿನ ಕೆಳಗೆ ಹೊರಸು ಹಾಕಿಕೊಂಡು ಮಲಗಿ ದಾಗ ಆ ಹಿಟ್ಟನ್ನು ನೋಡುತ್ತಿದ್ದಂತೆಯೇ ಅವನ ಮನಸ್ಸಿನಲ್ಲೊಂದು ಮನೋರಾಜ್ಯವು ಪ್ರಾರಂಭವಾಯಿತು. ಆಗ ಅವನು ಆಲೋಚಿಸಿದ್ದೇನೆಂದರೆ, ದೇಶದಲ್ಲಿ ದುರ್ಭಿಕ್ಷೆ ಯುಂಟಾಗಿ ಎಲ್ಲಿಯೂ ಆಹಾರಧ್ಯಾನ ಸಿಗದೇ ಇದ್ದಾಗ, ನನ್ನ ಈ ಹಿಟ್ಟಿಗೆ ಸಹಸ್ರಾರು ರೂಪಾಯಿಗಳು ದೊರೆಯುವವು. ಅದರಿಂದ ನಾನೊಬ್ಬ ಶ್ರೀಮಂತನಾಗುವೆ. ಆ ಹಣದಿಂದ ಬೇರೆ ಬೇರೆ ವ್ಯಾಪಾರಮಾಡಿ, ಇನ್ನೂ ಹೆಚ್ಚಿನ ಹಣವನ್ನು ಸಂಪಾದಿಸುವೆ, ಕ್ರಮೇಣ ನಾನೋರ್ವ ಲಕ್ಷಾಧೀಶನಾಗುವೆ. ಶ್ರೀಮಂತ ಮನೆತನದ ಕನ್ಯೆಯೊಂದಿಗೆ

ವಿವಾಹವಾಗಿ ಸುಖಮಯ ಜೀವನಸಾಗಿಸುವೆ. ಕಾಲಾಂತರದಲ್ಲಿ ನಾಲ್ಕಾರು ಮಕ್ಕಳಾಗುವವು. ನಾನೊಮ್ಮೆ ವ್ಯಾಪಾರದಲ್ಲಿ ಮಗ್ನನಾಗಿ ಕುಳಿತಾಗ ನನ್ನೋರ್ವ ಚಿರಂಜೀವನು ಮನೆಗೆ ಬಾ ಎಂದು ಪದೇ ಪದೇ ಕರೆಯತೊಡಗುವನು. ವ್ಯಾಪಾರದಲ್ಲಿ ನಿಮಗ್ನನಾದ ನಾನು ಮಗನ ಆ ದುರಾಗ್ರಹವನ್ನು ಕಂಡು ಕ್ರುದ್ಧನಾಗಿ ಮಗನನ್ನು ಹೀಗೆ ಒದೆಯುವೆನೆಂಬುದಾಗಿ ಕಾಲುಜಾಡಿಸಿ ಒದೆದಾಗ, ಆ ಒದೆತ ಮೇಲೆ ಕಟ್ಟಿದ ಹಿಟ್ಟಿನಗಂಟಿಗೆ ತಗುಲಿ ಗಂಟೆಲ್ಲ ಬಿಚ್ಚಿ ಮೈತುಂಬ ಹಿಟ್ಟಾಯಿತು. ಹಿಟ್ಟು ಬಿದ್ದೊಡನೆ ಅವನ ಮನೋರಾಜ್ಯವೆಲ್ಲ ಮಾಯವಾಯಿತು. ಇಂತಹ ಕಾಲ್ಪನಿಕ ಮನೋವೃತ್ತಿಗಳಿಗೇನೇ ವಿಕಲ್ಪವೃತ್ತಿಗಳೆಂದು ಕರೆಯುವರು. ಇಂತಹ ವಿಕಲ್ಪವೃತ್ತಿಯು ಜೀವಿಗಳಿಗೆ ಕ್ಲೇಶದಾಯಕವಾದ್ದರಿಂದ ಇದಕ್ಕೆ 'ಕ್ಲಿಷ್ಟ ವಿಕಲ್ಪ ವೃತ್ತಿ' ಎಂದು ಕರೆಯುತ್ತಾರೆ.

ಇನ್ನು ಮಠ–ಮಂದಿರಗಳನ್ನು ಕಟ್ಟಿಸುವ, ಅನ್ನಛತ್ರ, ಅರವಟ್ಟಿಗೆಗಳನ್ನಿಡುವ ಮನೋರಾಜ್ಯವಾಗುತ್ತಿದ್ದರೆ ಅದು ಕ್ಲೇಶದಾಯಕವಲ್ಲದ ಮೂಲಕ ಅದಕ್ಕೆ 'ಅಕ್ಲಿಷ್ಟ ವಿಕಲ್ಪವೃತ್ತಿ'ಯೆಂಬುದಾಗಿ ಕರೆಯುತ್ತಾರೆ. ಮಹರ್ಷಿ ಪತಂಜಲಿಯ ಆದೇಶದಂತೆ ಯೋಗಸಾಧಕನು ಕ್ಲಿಷ್ಟವಾದ ವಿಕಲ್ಪವೃತ್ತಿಯನ್ನು ತಡೆದು ಯೋಗಸಾಧನೆಯಲ್ಲಿ ತೊಡಗಬೇಕಾಗುವುದು. ಇನ್ನು ನಾಲ್ಕನೆಯದಾದ ವೃತ್ತಿಯೇ ನಿದ್ರಾವೃತ್ತಿ. ನಿದ್ರಾ ಯೆಂದರೆ ಇಲ್ಲಿ ಸ್ವಪ್ನವೆಂದರ್ಥ. ಸ್ವಪ್ನವು ಸುಸ್ವಪ್ನ ಹಾಗೂ ದುಃಸ್ವಪ್ನ ಎಂಬುದಾಗಿ ಎರಡು ವಿಧವಾಗಿ ಇರುತ್ತದೆ. ಸ್ವಪ್ನಗಳು ನಮ್ಮ ಇಚ್ಛೆ ಹಾಗೂ ಪ್ರಯತ್ನಗಳ ಆಧೀನವಲ್ಲದಿದ್ದರೂ ಜಾಗೃತಾವಸ್ಥೆಯಲ್ಲಿ ಯಾವ ವಿಷಯವನ್ನು ಕುರಿತು ಅಧಿಕಾಧಿಕ ಚಿಂತನೆ ನಡೆಯುತ್ತದೆಯೋ, ಆದೇ ವಿಷಯಕವಾಗಿ ಸ್ವಪ್ನಗಳು ಬೀಳುವುದು ಸಹಜ. ಇದಕ್ಕೆ ಅಪವಾದವಾಗಿಯೂ ಕೆಲವು ಸ್ವಪ್ನಗಳು ಬೀಳಬಹುದು. ಸಾಂಸಾರಿಕ ವ್ಯವಹಾರಗಳನ್ನು ಮಾಡುವ ಸ್ವಪ್ನಗಳು ಕ್ಲೇಶದಾಯಕಗಳು. ಜಾಗೃತದಲ್ಲಿಯ ಆ ವ್ಯವಹಾರಗಳು ಕ್ಲೇಶವನ್ನೇ ಕೊಡುತ್ತಿರೋಣದರಿಂದ ಅಂತಹ ಸ್ವಪ್ನಗಳೇ ಬಿದ್ದಾಗ ಅವುಗಳಿಂದಲೂ ಸಹ ಜೀವಿಯು ದುಃಖವನ್ನು ಅನುಭವಿಸುವನು. ರಾಗದ್ವೇಷ ಮೂಲಕವಾದ ವ್ಯವಹಾರವು ಜಾಗೃತಾವಸ್ಥೆದ್ದೇ ಇರಲಿ, ಇಲ್ಲವೆ ಸ್ವಾಪ್ನಿಕವಾಗಿಯೇ ಇರಲಿ, ಅದು ಕ್ಲೇಶದಾಯಿಯೆಂಬುದು ಸರ್ವಾನುಭವಸಿದ್ಧವಾದುದು. ಸಾಂಸಾರಿಕ ರಾಗದ್ವೇಷಗಳಿಲ್ಲದ ಸ್ವಾಧ್ಯಾಯ, ಶಿವಪೂಜೆ, ಶಿವಧ್ಯಾನಾತ್ಮಕಗಳಾದ ಸ್ವಪ್ನಗಳು ಕ್ಲೇಶದಾಯಕವಲ್ಲದ್ದರಿಂದ ಇವುಗಳಿಗೆ ಸುಸ್ವಪ್ನಗಳೆಂದು ಕರೆಯುವರು. ಇಂತಹ ಸ್ವಪ್ನಗಳು ಮೇಲಿಂದಮೇಲೆ ಬೀಳಬೇಕಾದರೆ ಜಾಗೃತಾವಸ್ಥೆಯಲ್ಲಿ ಅಂತಹ ವ್ಯವಹಾರಗಳನ್ನು ಅಧಿಕಾಧಿಕವಾಗಿ ಮಾಡಿದಾಗಲೇ ಸಾಧ್ಯವಾಗುವುದು. ವೀರವಿರಾಗಿಣಿಯಾದ ಅಕ್ಕಮಹಾದೇವಿಯು ಹಗಲಿನಲ್ಲಿ ಮಲ್ಲಿಕಾರ್ಜುನನ ಚಿಂತನೆಯಲ್ಲಿಯೇ ಕಾಲಕಳೆಯುತ್ತ ಆತನನ್ನೇ ತನ್ನ ಪತಿಯನ್ನಾಗಿ ವರಿಸುವ ವಿಚಾರವನ್ನೇ ಮಾಡುತ್ತಿದ್ದಳಾದ್ದರಿಂದ ಆಕೆಗೆ ಸ್ವಪ್ನಗಳೂ ಸಹ ಅಂತಹವುಗಳೇ ಬೀಳುತ್ತಿದ್ದವು. ಅಂತೆಯೇ ತಾನೊಂದು ಕಂಡ ಕನಸನ್ನು–

''ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದು ಕನಸ ಕಂಡೆ
ಅಕ್ಕಿಯಡಕೆ ತೆಂಗಿನಕಾಯಿ ಕಂಡೆ, ಚಿಕ್ಕ ಚಿಕ್ಕ ಜಡೆಗಳ
ಸುಲಿಪಲ್ಲಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವಾ !

ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು''

ಈ ರೀತಿಯಾಗಿ ವರ್ಣಿಸಿದ್ದಾಳೆ. ಅಂತೆಯೇ ನಿರಂತರವಾಗಿ ಪರಮಾತ್ಮನ ಚಿಂತನೆಯನ್ನು ಮಾಡುತ್ತಿದ್ದರೆ ಸಾಂಸಾರಿಕಗಳೂ, ದುಃಖದಾಯಿಗಳೂ ಆದ ಸ್ವಪ್ನಗಳಿಗೆ ಅವಕಾಶಗಳೇ ಇರುವುದಿಲ್ಲ. ಅವುಗಳು ಸಹಜವಾಗಿ ನಿರೋಧಿಸಲ್ಪಡುತ್ತವೆ. ಕ್ಲಿಷ್ಟ ನಿದ್ರಾವೃತ್ತಿಯನ್ನು ನಿರೋಧಿಸಬೇಕೆಂಬ ಮಹರ್ಷಿ ಪತಂಜಲಿಯ ಆಶೆಯು ಇದೇ ರೀತಿಯಾಗಿದೆ.

ಇನ್ನು ಐದನೆಯದಾದ ವೃತ್ತಿಯೇ ಸ್ಮೃತಿವೃತ್ತಿಯು. ಸಂಸ್ಕಾರಜನ್ಯ ಜ್ಞಾನವೇ ಸ್ಮೃತಿಯು. ಇದಾದರೂ ಕ್ಲಿಷ್ಟ–ಅಕ್ಲಿಷ್ಟವೆಂದು ಎರಡು ವಿಧ. ತನಗೆ ಅನುಕೂಲವಾದ ವ್ಯಕ್ತಿಯ ಮಿಲನದ ಸ್ಮೃತಿಯು ಸುಖದಾಯಕವಾಗಿ ತೋರುವುದು. ಇದಕ್ಕೆ ವಿಪರೀತ ವಾಗಿ ಪ್ರತಿಕೂಲವಾದ ವ್ಯಕ್ತಿಯ ಸ್ಮೃತಿಯು ದುಃಖದಾಯಿಯಾಗಿ ತೋರುವುದು. ಪ್ರಪಂಚದಲ್ಲಿ ಓರ್ವವ್ಯಕ್ತಿಯು ಎಷ್ಟೇ ಅನುಕೂಲನಾಗಿದ್ದರೂ ಒಂದಿಲ್ಲೊಂದು ದಿನ ಪ್ರತಿಕೂಲನಾಗುವುದು ಸಹಜವಾದುದು. ಆದ್ದರಿಂದ ಸಾಂಸಾರಿಕ ವಸ್ತು ಹಾಗೂ ವ್ಯಕ್ತಿಗಳ ಸ್ಮೃತಿಯು ಮನುಷ್ಯನಿಗೆ ದುಃಖದಾಯಿಯಾಗಿರುತ್ತದೆ. ಇನ್ನು ತನ್ನ ಆತ್ಮವನ್ನು ಪರಮಾತ್ಮ ರೂಪವನ್ನಾಗಿ ಚಿಂತಿಸಿ, ಅದರ ಸಂಸ್ಕಾರದಿಂದ ನನ್ನ ಆತ್ಮವು ಪರಮಾತ್ಮ ರೂಪ ವಾಗಿದೆ ಎಂಬ ಸ್ಮೃತಿವೃತ್ತಿಯು ಆತ್ಮವಿಷಯಕವಾದ್ದರಿಂದ, ಆತ್ಮವು ಸುಖ ರೂಪವು ಆದ್ದರಿಂದ ಇಂತಹ ಸ್ಮೃತಿಯು ಸುಖದಾಯಕವಾಗಿರುವುದು. ಇದಕ್ಕೇನೆ ಅಕ್ಲಿಷ್ಟ ಸ್ಮೃತಿವೃತ್ತಿ ಎನ್ನುವರು. ಶ್ರೀಮನ್ನಿಜಗುಣ ಶಿವಯೋಗಿಗಳು– 'ಸ್ಮೃತಿಮಾತ್ರ ದಿಂದೆ ಸಂಸ್ಮೃತಿಬಂಧವಳಿದು' ಎಂಬ ತಮ್ಮ ಅನುಭವಪೂರ್ಣವಾದ ವಚನದಲ್ಲಿ, ಆತ್ಮ ಸ್ಮೃತಿಯು ಸಂಸಾರ ದುಃಖವನ್ನು ದೂರಮಾಡುವಂತಹದೆಂಬುದಾಗಿ ವಿವರಿಸಿದ್ದಾರೆ. ಅಂತೆಯೇ ಮಹರ್ಷಿ ಪತಂಜಲಿಯಾದರೂ ಸಾಂಸಾರಿಕ ಸ್ಮೃತಿವೃತ್ತಿಯನ್ನು ನಿರೋಧಿಸ ಬೇಕೆಂಬುದಾಗಿ ಉಪದೇಶಿಸಿದ್ದಾನೆ.

ಯೋಗಸಾಧಕನಾದ ಒಬ್ಬ ಯೋಗಿಯು ಮಹರ್ಷಿಯ ಉಪದೇಶದ ಮೇರೆಗೆ ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ ಮತ್ತು ಸ್ಮೃತಿಗಳೆಂಬ ಐದು ವಿಧವಾದ ಮನೋವೃತ್ತಿಗಳಲ್ಲಿ ಕ್ಲಿಷ್ಟಗಳಾದ ಈ ವೃತ್ತಿಗಳನ್ನು ತಡೆಯುವ ಕ್ರಿಯೆಗೆ ಯೋಗವೆಂಬು ದಾಗಿ ಕರೆಯುವರು. ಈ ಯೋಗವು ಹಠ, ಮಂತ್ರ, ಲಯ, ರಾಜ ಹಾಗೂ ಶಿವ ಯೋಗಾದಿಗಳೆಂಬುದಾಗಿ ಅನೇಕ ಪ್ರಕಾರವಾಗಿರುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿ ಯಲ್ಲಿ ಉಪದೇಶಿಸಿದ ಯೋಗವು ಶಿವಯೋಗವಾಗಿದೆ. ಈ ಶಿವಯೋಗದ ಮೂಲಕ ವಾಗಿಯೇ ಸಾಧಕನು ಲಿಂಗನಿಜಸ್ಥಲವನ್ನು ಪ್ರವೇಶಿಸಬಲ್ಲನು. ಅಂತೆಯೇ ಪೂಜ್ಯಪಾದ ರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಸ್ವಾಂತಸ್ಥಶಿವಲಿಂಗಸ್ಯ ಪ್ರತ್ಯಕ್ಷಾನುಭವಸ್ಥಿತಿಃ ।
ಯಸ್ಯೈವ ಪರಲಿಂಗಸ್ಯ ನಿಜಮಿತ್ಯುಚ್ಯತೇ ಬುಧೈಃ ॥

(ಸಿ. ಶಿ. ೧೨–೩೨)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿ ಪರಮಾತ್ಮನ ನಿವಾಸವಿದೆ. ಆಸ್ವಾಂತಸ್ಥ ಪರಮಾತ್ಮನಿಗೇನೆ ವೀರಶೈವಾಚಾರ್ಯರು ಲಿಂಗವೆಂಬುದಾಗಿ ಕರೆದಿದ್ದಾರೆ. ಶಿವಯೋಗಮಾರ್ಗದಿಂದ ಓರ್ವ ಯೋಗಿಯು ಅಂತರ್ಮುಖಿನಾಗಿ ತನ್ನ ಅಂತರಂಗದಲ್ಲಿಯ ಆ ಲಿಂಗತತ್ತ್ವವನ್ನು ಪ್ರತ್ಯಕ್ಷವಾಗಿ ಅನುಭವಿಸಬಲ್ಲನು. ಹೀಗೆ ಪರಾತ್ಪರ–ಪರಬ್ರಹ್ಮಲಿಂಗವನ್ನು ತನ್ನ ನಿಜರೂಪವನ್ನಾಗಿ ತಿಳಿಯುವುದೇ ಲಿಂಗನಿಜಸ್ಥಲವು. 'ಬೀಜೇ ಯಥಾಂಕುರಃ ಸಿದ್ಧಃ ತಥಾತ್ಮನಿ ಶಿವಸ್ಥಿತಃ' ಎಂಬ ಆಚಾರ್ಯರ ಉಪದೇಶಾನುಸಾರವಾಗಿ ಬೀಜದಲ್ಲಿ ಮೊಳಕೆ ಇರುವಂತೆ, ಪ್ರತಿಯೊಬ್ಬರ ಹೃದಯದಲ್ಲಿಯೂ ಪರಶಿವಲಿಂಗದ ನಿತ್ಯ ನಿವಾಸವಿದೆ. ಹೀಗಿದ್ದರೂ ಮನುಷ್ಯನ ಮನೋವೃತ್ತಿಯು ಸದಾ ಬಹಿರ್ಮುಖವಾಗಿರೋಣದರಿಂದ ಸಾಮಾನ್ಯ ವಾದ ಜೀವಿಯು ಆ ಲಿಂಗತತ್ತ್ವವನ್ನು ಅರಿಯಲಾರನು. ಅದನ್ನರಿಯಲು ಪ್ರತಿ ಯೊಬ್ಬರೂ ಯೋಗಮಾರ್ಗವನ್ನನುಸರಿಸಬೇಕು. ಅಂತೆಯೇ "ಕಶ್ಚಿದ್ಧೀರಃ ಪ್ರತ್ಯಗಾತ್ಮಾ ನಮೈಕ್ಷತ್ । ವ್ಯಾವೃತ್ತಚಕ್ಷುಃ ಅಮೃತತ್ತ್ವಮಿಚ್ಛನ್" ॥ ಎಂಬ ಉಪನಿಷದ್ವಚನದಲ್ಲಿ ಅಮೃತತ್ತ್ವಾಪೇಕ್ಷಿಯೂ ಅಂತರ್ಮುಖಿಯೂ ಆದಯಾರೊಬ್ಬ ಧೀರನು ಮಾತ್ರ ಆತ್ಮ ತತ್ತ್ವವನ್ನು ಅರಿಯಬಲ್ಲನೆಂಬುದಾಗಿ ತಿಳಿಸಲಾಗಿದೆ. ಇಂತಹಃ ಅಂತರ್ಮುಖ ವ್ಯಕ್ತಿತ್ವದ ವ್ಯಕ್ತಿಯು ಲಕ್ಷಕ್ಕೋರ್ವನು ಸಿಗಬಲ್ಲನು. ಉಳಿದೆಲ್ಲ ಅನಂತ ಜೀವಿಗಳು ಬಹಿರ್ಮುಖ ರಾಗಿ ಆತ್ಮಸ್ವರೂಪವನ್ನು ಮರೆತು ಕ್ಷಣಿಕ ಸುಖದಲ್ಲಿಯೇ ಆನಂದ ಪಡೆಯುತ್ತಿದ್ದಾರೆ.

ಓರ್ವ ವ್ಯಕ್ತಿಯು ತನ್ನ ಕೈಯಲ್ಲಿ ಲಕ್ಷಾಂತರ ಬೆಲೆಬಾಳುವ ರತ್ನವನ್ನು ಹಿಡಿದು ಕೊಂಡು ತನ್ನ ಮಾಲಿಕನು ಹೇಳಿದ ಸ್ಥಾನಕ್ಕೆ ಒಯ್ದು ಮುಟ್ಟಿಸುವುದಕ್ಕಾಗಿ ಓಡುತ್ತ ಹೊರಟಿದ್ದ. ದಾರಿಯಲ್ಲಿ ಕಾಲು ಜಾರಿಬಿದ್ದಾಗ ಕೈಯೊಳಗಿನ ರತ್ನ ಕಳಚಿ ಅದೆಲ್ಲೋ ಕಳೆದು ಹೋಯಿತು. ಬಿದ್ದಪೆಟ್ಟಿನಿಂದಾಗಿ ಆತ ಕ್ಷಣಕಾಲ ಮೂರ್ಛಿತನಾದ. ಎಚ್ಚರಾಗಿ ಕಣ್ಣು ತೆರೆದಾಗ ಅವನ ಕೈಯಿದ್ದಲ್ಲಿಯೇ ಒಂದು ೧೦ ರೂಪಾಯಿಯ ನೋಟು ಬಿದ್ದಿತ್ತು. ಆಗ ಅವನು ಆ ನೋಟನ್ನು ಕೈಯಲ್ಲಿ ತೆಗೆದುಕೊಂಡು ಅತ್ಯಂತ ಆನಂದಿತನಾಗಿ ಮುನ್ನಡೆದ. ನೋಟು ದೊರೆತ ಆನಂದದಲ್ಲಿ ಲಕ್ಷಾಂತರ ಬೆಲೆಬಾಳುವ ರತ್ನವನ್ನೇ ಮರೆತುಬಿಟ್ಟ. ಈ ನಿರ್ಲಕ್ಷ್ಯತೆಯಿಂದಾಗಿ ಅವನು ಮಾಲಿಕನಿಂದ ಶಿಕ್ಷೆಗೊಳಗಾಗಬೇಕಾ ಯಿತು. ಅದರಂತೆ ಅಜ್ಞರಾದ ಜೀವಿಗಳು ಬಹಿರಂಗದ ಕ್ಷಣಿಕ ವಿಷಯಸುಖದಲ್ಲಿ ಅಂತರಂಗದ ಅಮೂಲ್ಯವಾದ ಆತ್ಮತತ್ತ್ವವನ್ನೇ ಮರೆತು ಪ್ರತಿನಿತ್ಯ ಯಮಶಿಕ್ಷೆಗೊಳ ಗಾಗುತ್ತಲಿದ್ದಾರೆ. ಆದ್ದರಿಂದ ವಿವೇಕಿಯಾದವನು ಆಚಾರ್ಯರ ಉಪದೇಶಾನುಸಾರವಾಗಿ ಶಿವಯೋಗಮಾರ್ಗದಿಂದ ಸ್ವಾಂತಸ್ಥ ಶಿವಲಿಂಗವನ್ನು ನಿಜ ಸ್ವರೂಪವನ್ನಾಗಿ ತಿಳಿದು ಸುಖಿಸಬೇಕೆಂಬುದಾಗಿ ಆಶೀರ್ವದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಮತ್ತು ೧೫ ಎಪ್ರಿಲ್ ೧೯೯೨

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



ಆಶೀರ್ವಚನ -೨

# ಲಿಂಗನಿಜಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಪ್ರಾಣಲಿಂಗಿಸ್ಥಲಾಂತರ್ಗತವಾದ ಲಿಂಗ ನಿಜಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನವನ್ನಾಲಿಸುತ್ತಿದ್ದೀರಿ. ನಿನ್ನೆಯ ದಿನ ನಾವು ಅಪ್ಪಣೆಕೊಡಿಸಿದ ಪ್ರಕಾರ ಲಿಂಗವೇ ತನ್ನ ನಿಜಸ್ವರೂಪವೆಂಬುದಾಗಿ ಬೋಧಿಸುವ ಸ್ಥಲವೇ ಲಿಂಗನಿಜಸ್ಥಲವು. ಇದನ್ನು ಪ್ರತ್ಯಕ್ಷವಾಗಿ ಅನುಭವಿಸುವ ಯೋಗಿಗೆ 'ಲಿಂಗನಿಜ ಸ್ಥಲೀ' ಎಂಬುದಾಗಿ ಕರೆಯುತ್ತಾರೆ. ಆ ಪರಾತ್ಪರ ಪರಬ್ರಹ್ಮ ಲಿಂಗಸ್ವರೂಪವನ್ನು ಪ್ರತಿಪಾದಿಸುತ್ತ–

ಬ್ರಹ್ಮವಿಷ್ಣ್ವಾದಯೋ ದೇವಾಃ ಸರ್ವೇ ವೇದಾದಯಸ್ತಥಾ ।
ಲೀಯಂತೇ ಯತ್ರ ಗಮ್ಯಂತೇ ತಲ್ಲಿಂಗಂ ಬ್ರಹ್ಮಕೇವಲಮ್ ॥

(ಸಿ. ಶಿ. ೧೨–೩೩)

ಈ ತೆರನಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಉಪದೇಶಿಸಿದ್ದಾರೆ. ಬ್ರಹ್ಮಾದಿ ದೇವತೆಗಳು ಮತ್ತು ವೇದಾದಿ ಶಾಸ್ತ್ರಗಳು ಯಾವುದರಿಂದ ಉತ್ಪನ್ನವಾಗುತ್ತವೆಯೋ ಮತ್ತು ಕೊನೆಗೆ ಎಲ್ಲಿ ಲಯವನ್ನು ಹೊಂದುತ್ತವೆಯೋ ಆ ಪರಬ್ರಹ್ಮತತ್ತ್ವಕ್ಕೆ ಲಿಂಗವೆಂಬುದಾಗಿ ಕರೆಯುತ್ತಾರೆ. ''ನಿಶ್ವಸಿತಮೇತದೃಗ್ವೇದಃ ಯಜುರ್ವೇದಃ ಸಾಮ ವೇದಃ ಅಥರ್ವಣವೇದಃ'' ಎಂಬ ಉಕ್ತಿಗನುಸಾರವಾಗಿ ಸದಾಶಿವನ ಪಂಚಮುಖಗಳಲ್ಲಿ ಸದ್ಯೋಜಾತ, ವಾಮದೇವ, ಅಘೋರ ಮತ್ತು ತತ್ಪುರುಷಗಳೆಂಬ ಮುಖಗಳ ನಿಶ್ವಾಸದಿಂದ ನಾಲ್ಕು ವೇದಗಳು. ಅದರಂತೆ ಐದನೆಯದಾದ ಈಶಾನ ಮುಖದಿಂದ ಇಪ್ಪತ್ತೆಂಟು ಶಿವಾಗಮಗಳು ಉತ್ಪನ್ನಗಳಾಗಿರುವುದಾಗಿ ತಿಳಿದು ಬರುತ್ತದೆ. ಅದರಂತೆ 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ' ಎಂಬ ಶಾಸ್ತ್ರೋಕ್ತಿಯಂತೆ ಬ್ರಹ್ಮವಿಷ್ಣ್ವಾದಿ ದೇವತೆಗಳ ಉತ್ಪತ್ತಿಗೂ ಸಹ ಶಿವನೇ ಕಾರಣನಾಗಿದ್ದಾನೆ. ಅಂತೆಯೇ ಈ ಪರಶಿವ ಲಿಂಗವು ಸಕಲ ದೇವತೆಗಳ ಹಾಗೂ ಸಕಲ ಶಾಸ್ತ್ರಗಳ ಉಗಮಸ್ಥಾನವಾಗಿದೆ. ವಸ್ತುಗಳು ಯಾವುದರಿಂದ ಉತ್ಪನ್ನಗಳಾಗುತ್ತವೆಯೋ ಕೊನೆಗೆ ಅವುಗಳು ಅಲ್ಲಲ್ಲಿಯೇ ಲಯಗಳಾಗುವವು. ಹೀಗೆ ಪರಶಿವನಿಂದ ಉತ್ಪನ್ನಗಳಾದವುಗಳೆಲ್ಲ ಕೊನೆಗೆ ಅಲ್ಲಿಯೇ ಲಯಗಳಾಗುತ್ತವೆ. ಈ ತೆರನಾಗಿ ಎಲ್ಲದರ ಲಯ–ಗಮನಗಳಿಗೆ ಕಾರಣವಾದ್ದರಿಂದ ಪರಶಿವಬ್ರಹ್ಮವನ್ನು ವೀರಶೈವ ಸಿದ್ಧಾಂತದಲ್ಲಿ ಲಿಂಗವೆಂಬುದಾಗಿ ಕರೆದಿದ್ದಾರೆ. ಇದೇ ವಿಷಯವನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಚಿದಾನಂದಮಯಃ ಸಾಕ್ಷಾಚ್ಛಿವ ಏವ ನಿರಂಜನಃ ।
ಲಿಂಗಮಿತ್ಯುಚ್ಯತೇ ನಾನ್ಯದ್ ಯತಃ ಸ್ಯಾದ್ವಿಶ್ವಸಂಭವಃ ॥

(ಸಿ. ಶಿ. ೧೨–೩೪)

ಈ ರೀತಿಯಾಗಿ ಬೋಧಿಸಿದ್ದಾರೆ. ಶಿವನು ಚಿದಾನಂದಮಯನೂ, ನಿರಂಜನನೂ ಆಗಿದ್ದಾನೆ. ಚಿದಾನಂದಮಯನೆಂದರೆ ಸದ್ರೂಪ, ಚಿದ್ರೂಪ ಹಾಗೂ ಆನಂದರೂಪ ನೆಂದರ್ಥ. ಇಲ್ಲಿ ಪ್ರಯೋಗಿಸಲ್ಪಟ್ಟ ಮಯಟ್ ಪ್ರತ್ಯಯವು ವಿಕಾರಾರ್ಥವಾಗಿರದೇ ಸ್ವರೂಪಾರ್ಥವಾಗಿರುತ್ತದೆ. ಶಿವನು ಸದ್‌ವಿಕಾರ, ಚಿದ್‌ವಿಕಾರ, ಆನಂದವಿಕಾರ ನಾಗಿರದೆ, ಸದ್‌ರೂಪ, ಚಿದ್‌ರೂಪ ಮತ್ತು ಆನಂದರೂಪನಾಗಿರುವನೆಂಬ ತಾತ್ಪರ್ಯವು.

ಶಿವನು ಸಚ್ಚಿದಾನಂದರೂಪನಾಗಿರುವಂತೆ ನಿರಂಜನನೂ ಆಗಿದ್ದಾನೆ. ಅಂಜನ ವೆಂದರೆ ಕಾಳಿಕೆ ಎಂದರ್ಥ. ಕಾಳಿಕೆ ಇದು ಕಲಂಕದ ಪ್ರತೀಕ, ಶಿವನು ನಿರಂಜನನಾಗಿ ದ್ದಾನೆಂದರೆ ಅವನಿಗೆ ಯಾವುದೇ ಪ್ರಕಾರದ ಕಲಂಕವಿಲ್ಲೆಂಬುದಾಗಿ ತಿಳಿದುಕೊಳ್ಳಬೇಕು. ಇಂತಹ ನಿಷ್ಕಲಂಕನೂ, ಚಿದಾನಂದನೂ ಆದ ಆ ಶಿವನಿಂದ ಈ ಸಚರಾಚರ ವಿಶ್ವ ವೆಲ್ಲವೂ ಉತ್ಪನ್ನವಾಗೋಣದರಿಂದ ಪುನಃ ಅಲ್ಲಿಯೇ ವಿಲಯವನ್ನು ಹೊಂದೋಣದ ರಿಂದ ಆ ಶಿವನಿಗೆ ಲಿಂಗವೆಂಬುದಾಗಿ ಸಂಬೋಧಿಸಲಾಗಿದೆ. ಈ ಲಿಂಗತತ್ತ್ವವನ್ನೇ ಇನ್ನಷ್ಟು ಸ್ಪಷ್ಟಪಡಿಸುತ್ತ ಪೂಜ್ಯಪಾದರು–

ಬಹುನಾತ್ರ ಕಿಮುಕ್ತೇನ ಲಿಂಗಮಿತ್ಯುಚ್ಯತೇ ಬುಧೈಃ ।
ಶಿವಾಭಿದಂ ಪರಂ ಬ್ರಹ್ಮ ಚಿದ್ರೂಪಂ ಜಗದಾಸ್ಪದಮ್ ॥

(ಸಿ. ಶಿ. ೧೨–೩೫)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ಹೆಚ್ಚಿಗೆ ಹೇಳುವುದೇನಿದೆ. ! ಈ ಜಗಕ್ಕೆಲ್ಲ ಆಧಾರ ಭೂತವಾದ ಮತ್ತು ಚಿದ್ರೂಪವಾದ ಆ ಪರಶಿವ ಬ್ರಹ್ಮಕ್ಕೇನೇ ಆಗಮಶಾಸ್ತ್ರಜ್ಞರು 'ಲಿಂಗ'ವೆಂಬುದಾಗಿ ಸಂಬೋಧಿಸಿದ್ದಾರೆ. ಹೀಗೆ ಲಿಂಗದಲ್ಲಿಯೇ ಹುಟ್ಟಿ, ಲಿಂಗದಲ್ಲಿಯೇ ಲಯಗೊಳ್ಳುತ್ತಿರುವ ಸಾಮಾನ್ಯರಾದ ಜೀವಿಗಳು ಆ ಲಿಂಗತತ್ತ್ವದ ಅರಿವಿಲ್ಲದೆಯೇ ಅನಂತದುಃಖಗಳನ್ನನುಭವಿಸುತ್ತಲಿದ್ದಾರೆ. ವಸ್ತುವು ನಮ್ಮಲ್ಲಿದ್ದರೂ ನಾವು ಮರೆತಿರು ವಾಗ ನಮಗೆ ಅದನ್ನರಿಯಲು ಮತ್ತೊಬ್ಬರ ಬೋಧೆಯು ಅವಶ್ಯಕವಾದುದು.

ಓರ್ವ ಗಸ್ತಿ ಹೊಡೆಯುವ ಮನುಷ್ಯನು ಕೈಯಲ್ಲಿ ಕಂದೀಲು ಹಿಡಿದುಕೊಂಡು ಮಧ್ಯರಾತ್ರಿಯಲ್ಲಿ ಊರೆಲ್ಲ ಸುತ್ತುತ್ತಿದ್ದ. ಚಳಿಗಾಲದ ಸಮಯ, ಚಳಿಯಿಂದ ನಡುಗು ತ್ತಿದ್ದ. ಆತನಿಗೆ ತಂಬಾಕು ಸೇದಬೇಕೆಂಬ ಅಭಿಲಾಷೆಯುಂಟಾಯಿತು. ಕಿಸೆಯಲ್ಲಿ ಕೈ ಹಾಕಿದಾಗ ಚಿಲುಮೆ (ಮುಶೆ) ಹಾಗೂ ತಂಬಾಕುಗಳು ದೊರೆತವು. ಆದರೆ ಬೆಂಕಿಯ ಪೊಟ್ಟಣ (ಕಡ್ಡಿಡಬ್ಬಿ)ವು ಸಿಗಲಿಲ್ಲ. ಅತ್ತಿತ್ತ ನೋಡಿದಾಗ ಒಂದು ಮನೆಯ ಕಟ್ಟೆಯ ಮೇಲೆ ಓರ್ವ ವ್ಯಕ್ತಿಯು ಕಂಬಳಿಹೊದ್ದುಕೊಂಡು ಮಲಗಿದ್ದನ್ನು ಕಂಡನು. ಹೋಗಿ ಆತನನ್ನು ಎಬ್ಬಿಸಿ ತಂಬಾಕು ಸೇದಲು ಕಡ್ಡಿಡಬ್ಬಿಯನ್ನು ಕೊಡು ಎಂದು ಕೇಳಿದನು. ನಿದ್ರೆಯಿಂದೆದ್ದ ಆ ವ್ಯಕ್ತಿಯು ಇವನತ್ತ ಹಾಗೂ ಇವನ ಕೈಯಲ್ಲಿಯ ಕಂದೀಲಿನತ್ತನೋಡಿ ಏನಯ್ಯಾ ಕೈಯಲ್ಲಿ ಕಂದೀಲು ಹಿಡಿದುಕೊಂಡು ಬೆಂಕಿಪೊಟ್ಟಣಕ್ಕಾಗಿ ನನ್ನನ್ನು ಎಬ್ಬಿಸಿದೆಯಾ ? ಕಂದೀಲಿನ ಗ್ಲಾಸನ್ನು ಮೇಲಕ್ಕೆ ಎಬ್ಬಿಸಿದ್ದರೇ ಅಲ್ಲಿಯೇ ನಿನಗೆ ಬೆಂಕಿದೊರೆಯುತ್ತಿತ್ತಲ್ಲಾ ! ಆಗ ಗಸ್ತಿಯವನಿಗೆ ತನ್ನಲ್ಲಿಯೇ ಇರುವ ಬೆಂಕಿಯ ಅರಿವಾಗಿ

ಆನಂದಿತನಾದನಂತೆ. ಹೀಗೆ ಲಿಂಗತತ್ತ್ವವು ಪ್ರತಿಯೊಬ್ಬರ ಅಂತರಂಗದಲ್ಲಿ ವಿರಾಜಿಸುತ್ತಿದ್ದರೂ ಅದರತ್ತ ನಿರ್ಲಕ್ಷ ಮಾಡಿರೋಣದರಿಂದ ಅದು ಇದ್ದೂ ಇಲ್ಲದಂತಾಗಿದೆ. ಸದ್ಗುರುವಿನ ಉಪದೇಶದ ಮುಖಾಂತರ ಅದರ ಅರಿವಾದಾಗ ಪ್ರತಿಯೊಬ್ಬರಿಗೂ ಆನಂದವಾಗುವುದರಲ್ಲಿ ಸಂದೇಹವಿಲ್ಲ. ಅಂತೆಯೇ ಪೂಜ್ಯಪಾದರು ಆ ಲಿಂಗತತ್ತ್ವವನ್ನು ಇನ್ನೂ ಸ್ಪಷ್ಟವಾಗಿ ತಿಳಿಸುವುದಕ್ಕೋಸುಗ–

ವೇದಾಂತವಾಕ್ಯಜಾಂ ವಿದ್ಯಾಂ ಲಿಂಗಮಾಹುಸ್ತಥಾऽಪರೇ ।
ತದಸದ್ ಜ್ಞೇಯರೂಪತ್ವಾಲ್ಲಿಂಗಸ್ಯ ಬ್ರಹ್ಮರೂಪಿಣಃ ॥

(ಸಿ. ಶಿ. ೧೨–೩೬)

ಈ ತೆರನಾಗಿ ಅಪ್ಪಣೆಕೊಡಿಸಿದ್ದಾರೆ. ವೇದಾಂತ ಶಾಸ್ತ್ರದಲ್ಲಿ ಜ್ಞಾನಕ್ಕೇನೇ ಪರಮಾತ್ಮನೆಂಬುದಾಗಿ ಕರೆದಿದ್ದಾರೆ. ಇದು ಸರಿಯಾದುದಲ್ಲ. ಪರಮಾತ್ಮನು ಜ್ಞೇಯನಾಗಿದ್ದಾನೆ. ಜ್ಞಾನವು ಆತನನ್ನು ಅರಿಯುವ ಸಾಧನವಾಗಿದೆ. ಹೀಗಿರುವಾಗ ಸಾಧನೆಯನ್ನೇ ಸಾಧ್ಯವನ್ನಾಗಿ ಪ್ರತಿಪಾದಿಸುವುದು ಅಷ್ಟೊಂದು ಸೂಕ್ತವಾದುದಲ್ಲ. ಅಂತೆಯೇ ಲಿಂಗರೂಪವಾದ ಪರಬ್ರಹ್ಮವು ಜ್ಞೇಯರೂಪವಾಗಿದೆಯೆಂಬುದಾಗಿ ಪೂಜ್ಯಪಾದರು ಅಪ್ಪಣೆಕೊಡಿಸಿದ್ದಾರೆ. ಇದೇ ವಿಷಯವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತ–

ಅವ್ಯಕ್ತಂ ಲಿಂಗಮಿತ್ಯಾಹುರ್ಜಗತಾಂ ಮೂಲಕಾರಣಮ್ ।
ಲಿಂಗೀ ಮಹೇಶ್ವರಶ್ಚೇತಿ ಮತಮೇತದಸಂಗತಮ್ ॥

(ಸಿ. ಶಿ. ೧೨–೩೭)

ಈ ತೆರನಾಗಿ ಬೋಧಿಸಿದ್ದಾರೆ. ಸಾಂಖ್ಯ ಸಿದ್ಧಾಂತದಲ್ಲಿ ಪ್ರಪಂಚದ ಉತ್ಪತ್ತಿ ಹಾಗೂ ಲಯಗಳಿಗೆ ಕಾರಣೀಭೂತವಾದ ಪ್ರಕೃತಿಗೇನೇ ಲಿಂಗವೆಂಬುದಾಗಿ ಮತ್ತು ಮಹೇಶ್ವರನಿಗೆ ಲಿಂಗೀ ಎಂಬುದಾಗಿ ಕರೆದಿದ್ದಾರೆ. ಇದು ಕೂಡ ಸೂಕ್ತವಾದುದಲ್ಲ. ಯಾವುದೊಂದು ಸೃಷ್ಟಿಯಾಗಬೇಕಾದರೆ, ಉಪಾದಾನಕಾರಣ ಹಾಗೂ ನಿಮಿತ್ತಕಾರಣಗಳು ಬೇಕಾಗುವವು. ಸಾಂಖ್ಯ ಹಾಗೂ ವೇದಾಂತಶಾಸ್ತ್ರಗಳಲ್ಲಿ ಪ್ರಕೃತಿ ಮತ್ತು ಮಾಯೆಗಳನ್ನು ಕ್ರಮವಾಗಿ ಸೃಷ್ಟಿಗೆ ಉಪಾದಾನಕಾರಣಗಳನ್ನಾಗಿ ಒಪ್ಪಿ, ಪುರುಷ ಮತ್ತು ಪರಮಾತ್ಮರನ್ನು ಕ್ರಮಶಃ ನಿಮಿತ್ತಕಾರಣರನ್ನಾಗಿ ಒಡಂಬಟ್ಟಿದ್ದಾರೆ. ಆದರೆ ವೀರಶೈವ ಸಿದ್ಧಾಂತದಲ್ಲಿ ಶಕ್ತಿವಿಶಿಷ್ಟನಾದ ಶಿವನನ್ನು ಅಭಿನ್ನನಿಮಿತ್ತೋಪಾದಾನ ಕಾರಣನನ್ನಾಗಿ ಸ್ವೀಕರಿಸಲಾಗಿದೆ. ಜೇಡರ ಹುಳವು ತಾನು ಹೆಣೆದ ಬಲೆಗೆ ತಾನೇ ಉಪಾದಾನ ಹಾಗೂ ನಿಮಿತ್ತ ಕಾರಣವಾಗಿರುವಂತೆ ಈ ಪ್ರಪಂಚದ ಉತ್ಪತ್ತಿಗೆ ಶಿವನೋರ್ವನೇ ಉಪಾದಾನನೂ ಅಹುದು. ನಿಮಿತ್ತನೂ ಅಹುದು, ಶಿವನಲ್ಲಿರುವ ಶಕ್ತಿಯು ಶಿವನಿಗಿಂತ ಭಿನ್ನವಾಗಿಲ್ಲವಾದ್ದರಿಂದ ಅವೆರಡೂ ಒಂದೇ ತತ್ತ್ವವಾಗಿವೆ. ಹೀಗಿರುವಾಗ ಶಕ್ತಿವಿಶಿಷ್ಟವಾದ ಶಿವನಿಗೇನೇ ಲಿಂಗವೆನ್ನಬೇಕೇ ವಿನಃ ಜಡವೂ ಅವ್ಯಕ್ತವೂ ಆದ ಪ್ರಕೃತಿಗೆ ಲಿಂಗವೆಂಬುದಾಗಿ ಹೇಳುವ ಸಾಂಖ್ಯ ಸಿದ್ಧಾಂತವು ಅಷ್ಟೊಂದು ಸೂಕ್ತವಲ್ಲವೆಂಬುದೇ ಶ್ರೀ ಜಗದ್ಗುರು ರೇಣುಕಾಚಾರ್ಯರ ಅಭಿಮತವಾಗಿದೆ. ಹೀಗೆ ಪರಶಿವಲಿಂಗಸ್ವರೂಪವನ್ನು ಸಾಂಖ್ಯ ಹಾಗೂ ವೇದಾಂತಾಭಿಮತ ಲಿಂಗಕ್ಕಿಂತಲೂ ಭಿನ್ನವೆಂಬುದಾಗಿ ಪ್ರತಿಪಾದಿಸಿ ಆ ಮಹಾಲಿಂಗದ ಮಹಾ ಜ್ಯೋತಿಸ್ಸ್ವರೂಪವನ್ನು–

ನ ಸೂರ್ಯೋ ಭಾತಿ ತತ್ರೇಂದುರ್ನ ವಿದ್ಯುದ್ವಹ್ನಿಕಾಂತಯಃ ।
ನ ತಾರಕಃ ಮಹಾಲಿಂಗೇ ದ್ಯೋತಮಾನೇ ಪರಾತ್ಪರೇ ॥

(ಸಿ. ಶಿ. ೧೨–೩೮)

ಈ ರೀತಿಯಾಗಿ ಪೂಜ್ಯಪಾದರು ವಿವರಿಸಿದ್ದಾರೆ. ಈ ಜಗತ್ತಿನಲ್ಲಿ ವಸ್ತುಗಳನ್ನು ಪ್ರಕಾಶಗೊಳಿಸಲೋಸುಗ ಸೂರ್ಯ, ಚಂದ್ರ, ವಿದ್ಯುತ್ತು, ಅಗ್ನಿ ಮತ್ತು ತಾರೆಗಳ ಪ್ರಕಾಶವನ್ನು ಉಪಯೋಗಿಸಿ ವ್ಯವಹರಿಸುವುದನ್ನು ಕಾಣುತ್ತೇವೆ. ಮೇಲೆ ನಿರೂಪಿಸಿದ ಈ ಎಲ್ಲ ಪ್ರಕಾಶಗಳಲ್ಲಿ ಸೂರ್ಯನೇ ಪ್ರಬಲ ಪ್ರಕಾಶರೂಪನಾಗಿದ್ದಾನೆ. ಸೂರ್ಯೋದಯವಾಯಿತೆಂದರೆ ಆತನ ಆ ಪ್ರಖರ ತೇಜಸ್ಸಿನಲ್ಲಿ ನಕ್ಷತ್ರಗಳ, ಚಂದ್ರನ, ವಿದ್ಯುತ್ತಿನ ಹಾಗೂ ಅಗ್ನಿಯ ಪ್ರಕಾಶಗಳೆಲ್ಲ ನಿಸ್ತೇಜಗಳಾಗಿ ಇದ್ದರೂ ಇಲ್ಲದಂತಾಗಿ ಬಿಡುತ್ತವೆ. ಇನ್ನು ಮಹಾಲಿಂಗದ ಸ್ವಯಂಪ್ರಕಾಶರೂಪವಾದ ಆ ತೇಜಸ್ಸಿನ ಮುಂದೆ ಸೂರ್ಯ ಪ್ರಕಾಶವೂ ಸಹ ನಿಸ್ತೇಜಗೊಳ್ಳುವುದು. ಅಂತೆಯೇ ಶಾಸ್ತ್ರದಲ್ಲಿ ಆತ್ಮ ಪ್ರಕಾಶವನ್ನು ವರ್ಣಿಸುವಾಗ 'ಕೋಟಿಸೂರ್ಯ ಸಮಪ್ರಭಃ' ಎಂಬುದಾಗಿ ಪ್ರತಿ ಪಾದಿಸಿರುವುದನ್ನು ಕಾಣುತ್ತೇವೆ. ಅಂತೆಯೇ ಆತ್ಮಜ್ಞಾನಕ್ಕಾಗಿ ಸೂರ್ಯ, ಚಂದ್ರ, ವಿದ್ಯುತ್ತು ಅಗ್ನಿ ಮತ್ತು ನಕ್ಷತ್ರಾದಿಗಳ ಪ್ರಕಾಶದ ಅವಶ್ಯಕತೆ ಇರುವುದಿಲ್ಲ. ಆತ್ಮ ಪ್ರಕಾಶದಿಂದಲೇ ಆತ್ಮವನ್ನು ಅರಿಯಬೇಕಾದ್ದರಿಂದ ಉಳಿದೆಲ್ಲ ಪ್ರಕಾಶಗಳು ನಿಷ್ಪ್ರಯೋಜಕಗಳಾದವುಗಳು. ಹೀಗೆ ಸ್ವಯಂಪ್ರಕಾಶರೂಪವಾದ ಮಹಾಲಿಂಗದ ಪ್ರಕಾಶವನ್ನೇ ಪಡೆದು ಪ್ರಪಂಚದ ಎಲ್ಲ ಪ್ರಕಾಶಗಳು ಪ್ರಕಾಶರೂಪಗಳಾಗಿವೆ ಎಂಬುದನ್ನು ತಿಳಿಯಪಡಿಸಲೋಸುಗ ಪೂಜ್ಯರು–

ಜ್ಯೋತಿರ್ಮಯಂ ಪರಂ ಲಿಂಗಂ ಶ್ರುತಿರಾಹ ಶಿವಾತ್ಮಕಮ್ ।
ತಸ್ಯ ಭಾಸಾ ಸರ್ವಮಿದಂ ಪ್ರತಿಭಾತಿ ನ ಸಂಶಯಃ ॥

(ಸಿ. ಶಿ. ೧೨–೩೯)

ಈ ತೆರನಾಗಿ ನಿರೂಪಿಸಿದ್ದಾರೆ. ಸನಾತನವಾದ ಶ್ರುತಿಯಲ್ಲಿ ಪರಶಿವಲಿಂಗವನ್ನು ಜ್ಯೋತಿರ್ಮಯವನ್ನಾಗಿ ಪ್ರತಿಪಾದಿಸಲಾಗಿದೆ. ಈ ಪ್ರಪಂಚಕ್ಕೆ ಮೂಲಜ್ಯೋತಿ ಯೆಂದರೆ ಆಲಿಂಗವೇ. ಆ ಲಿಂಗದ ಜ್ಯೋತಿಯನ್ನೇ ಪಡೆದು ಸೂರ್ಯಚಂದ್ರಾದಿಗಳು ಸಹ ಜ್ಯೋತಿರೂಪವಾಗಿ ಕಂಗೊಳಿಸುತ್ತಲಿದ್ದಾರೆ. ಹೀಗೆ ಜ್ಯೋತಿಸ್ವರೂಪವಾದ ಆ ಪರಶಿವಬ್ರಹ್ಮವು ಲಿಂಗವೇ ವಿನಃ ಬೇರಾವುದೂ ಲಿಂಗಪದವಾಚ್ಯವಲ್ಲವೆಂಬುದನ್ನು ನಿಖರವಾಗಿ ತಿಳಿಯಪಡಿಸುತ್ತ–

ಲಿಂಗಾನ್ನಾಸ್ತಿ ಪರಂ ತತ್ತ್ವಂ ಯದಸ್ಮಾಜ್ಜಾಯತೇ ಜಗತ್ ।
ಯದೇತದ್ರೂಪತಾಂ ಧತ್ತೇ ಯದತ್ರ ಲಯಮಶ್ನುತೇ ॥

ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಮ್ ।
ನಿಜರೂಪಮಿತಿ ಧ್ಯಾನಾತ್ ತದವಸ್ಥಾ ಪ್ರಜಾಯತೇ ॥

(ಸಿ. ಶಿ. ೧೨ ; ೪೦–೪೧)

ಈ ವಿಧವಾಗಿ ಪೂಜ್ಯಪಾದರು ಅಪ್ಪಣೆಕೊಡಿಸಿದ್ದಾರೆ. ಈ ಪ್ರಪಂಚದಲ್ಲಿ ಲಿಂಗತತ್ತ್ವಕ್ಕಿಂತಲೂ ಶ್ರೇಷ್ಠವಾದ ಬೇರೊಂದು ತತ್ತ್ವವಿಲ್ಲ. ಈ ಚರಾಚರ ವಿಶ್ವವೆಲ್ಲ ಈ ಲಿಂಗತತ್ತ್ವದಿಂದಲೇ ಉತ್ಪನ್ನವಾಗಿದೆ. ಆ ಲಿಂಗತತ್ತ್ವದಲ್ಲಿಯೇ ಇರುವಂಥಾದ್ದಾಗಿದೆ. ಕೊನೆಗೆ ಅಲ್ಲಿಯೇ ಇದೆಲ್ಲ ಲಯಗೊಳ್ಳುವುದು. ಅಂತೆಯೇ ಆ ಪರಬ್ರಹ್ಮಕ್ಕೆ ಲಿಂಗವೆಂಬುದಾಗಿ ಕರೆಯಲಾಗಿದೆ. ಅದು ಸಚ್ಚಿದಾನಂದ ಸ್ವರೂಪವಾದುದು. ಅಂತಹ ಆ ಲಿಂಗಸ್ವರೂಪವನ್ನೇ ತನ್ನ ನಿಜಸ್ವರೂಪವನ್ನಾಗಿ ಭಾವಿಸಿ ಯಾರು ನಿರಂತರ ತದ್ಧ್ಯಾನಾಸಕ್ತರಾಗುತ್ತಾರೆಯೋ, ಅವರು ಆ ನಿಜಲಿಂಗಸ್ವರೂಪರೇ ಆಗುತ್ತಾರೆ. ಇಂತಹ ಲಿಂಗನಿಜಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುವುದೇ ಶಿವಯೋಗ ಸಾಧಕನ ಜೀವನದ ಗುರಿಯಾಗಿದೆಯೆಂಬುದನ್ನು ಅಪ್ಪಣೆಕೊಡಿಸಿ ಇಂದಿನ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

**ಓಂ ಶಾಂತಿಃ ಶಾಂತಿಃ ಶಾಂತಿಃ**

ದಿನಾಂಕ ೧೬ ಎಪ್ರಿಲ್ ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)



ಆಶೀರ್ವಚನ-೧

# ಅಂಗಲಿಂಗಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಾಣಲಿಂಗಿಸ್ಥಲಾಂತರ್ಗತವಾದ ಅಂತಿಮ ಅವಾಂತರ ಸ್ಥಲವೇ 'ಅಂಗಲಿಂಗಸ್ಥಲವು'. ಈ ಸ್ಥಲದಲ್ಲಿ ಅಂಗ ಹಾಗೂ ಲಿಂಗಗಳ ವಾಸ್ತವಿಕ ಸ್ವರೂಪವನ್ನು ತಿಳಿಯಪಡಿಸಿ ಅವೆರಡರ ಅಭೇದಚಿಂತನವು ನಿರೂಪಿ ಸಲ್ಪಟ್ಟಿದೆ. ಅದನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಜ್ಞಾನಮಂಗಮಿತಿ ಪ್ರಾಹುರ್ಜ್ಞೇಯಂ ಲಿಂಗಂ ಸನಾತನಮ್ ।
ವಿದ್ಯತೇ ತದ್ದ್ವಯಂ ಯಸ್ಯ ಸೋಽಂಗಲಿಂಗೀತಿ ಕೀರ್ತಿತಃ ॥

(ಸಿ. ಶಿ. ೧೨–೪೨)

ಈ ರೀತಿಯಾಗಿ ವಿವರಿಸಿದ್ದಾರೆ. ಜ್ಞಾನಕ್ಕೆ ಅಂಗವೆಂಬುದಾಗಿಯೂ, ಸನಾತನವಾದ ಜ್ಞೇಯಕ್ಕೆ ಲಿಂಗವೆಂಬುದಾಗಿಯೂ ಕರೆಯುತ್ತಾರೆ. ಇಲ್ಲಿ ಜ್ಞಾನವೆಂದರೆ ಜ್ಞಾನವುಳ್ಳ ಜೀವಾತ್ಮನೆಂದರ್ಥ. ಅಂಗ ಶಬ್ದವು ವೀರಶೈವ ಸಿದ್ಧಾಂತದ ಒಂದು ಪಾರಿಭಾಷಿಕ ಶಬ್ದವಾಗಿದೆ. ಸಾಮಾನ್ಯತಃ ಅಂಗಶಬ್ದಕ್ಕೆ 'ಶರೀರ' ಎಂಬುದಾಗಿ ತಿಳಿಯುತ್ತಾರೆ. ಆದರೆ ಇಲ್ಲಿ 'ಅಂಗ'ವೆಂದರೆ ಶರೀರವಾಗಿರದೆ 'ಶರೀರೀ' ಅರ್ಥಾತ್ 'ಜೀವಿ'ಯೆಂಬುದಾಗಿ ತಿಳಿದುಕೊಳ್ಳಬೇಕು. ಜೀವಿಯಾದರೂ ಸಾಮಾನ್ಯ ಜೀವಿಯಾಗಿರದೆ ಶುದ್ಧಜೀವಿ ಎಂದರ್ಥ. ಮಲತ್ರಯಗಳನ್ನು ನಾಶಮಾಡಿಕೊಂಡು ಪರಶಿವತತ್ತ್ವವನ್ನು ಪಡೆಯುವ ಉತ್ಕಟ ಜಿಜ್ಞಾಸೆಯುಳ್ಳ ಜೀವನೇ ಅಂಗಪದವಾಚ್ಯನು. 'ಅಂ ಗಚ್ಛತಿ ಇತಿ ಅಂಗಃ' ಎಂಬ ವ್ಯುತ್ಪತ್ತಿಗನುಸಾರವಾಗಿ ಜ್ಞಾನ ಹಾಗೂ ಯೋಗ ಸಮಾಧಿಗಳ ಮೂಲಕ ಪರಮಾತ್ಮ ತತ್ತ್ವವನ್ನು ಪ್ರಾಪ್ತಿಮಾಡಿಕೊಳ್ಳುವ ಸಾಮರ್ಥ್ಯವುಳ್ಳ ಸಾಧಕನೇ 'ಅಂಗ' ಎಂಬುದಾಗಿ ತಿಳಿಯಬೇಕು. ಈ ಅಂಗನಿಂದ ಪ್ರಾಪ್ತಿ ಮಾಡಿಕೊಳ್ಳಲ್ಪಡುವ ಪರಮ ತತ್ತ್ವವೇ ಲಿಂಗವು. ಈ ತೆರನಾಗಿ ಅಂಗ ಹಾಗೂ ಲಿಂಗಗಳ ಸ್ವರೂಪವನ್ನು ತಿಳಿದುಕೊಂಡ ಪ್ರಾಣಲಿಂಗಸ್ಥಲದ ಸಾಧಕನಿಗೆ 'ಅಂಗಲಿಂಗಿ' ಎಂಬುದಾಗಿ ಕರೆಯೋಣವಾಗಿದೆ. ಹೀಗೆ ಅಂಗಲಿಂಗಗಳ ಚಿಂತನೆಯನ್ನು ಮಾಡಿ ಅಂಗಲಿಂಗಿ ಸ್ಥಿತಿಯನ್ನು ಪ್ರಾಪ್ತ ಮಾಡಿ ಕೊಳ್ಳುವುದೇ ಪ್ರತಿಯೊಬ್ಬರ ಜೀವನೋದ್ದೇಶವಾಗಿದೆ.

ನಾವು ಯಾರಿಗಾದರೂ ನೀನು ಯಾರು ? ಎಂಬುದಾಗಿ ಪ್ರಶ್ನಿಸಿದಾಗ ಆತನು ತನ್ನ ಪರಿಚಯವನ್ನು ಹೇಳುವುದಕ್ಕೋಸ್ಕರ ತಂದೆತಾಯಿಗಳ ಹೆಸರುಗಳನ್ನಾಗಲಿ ಮನೆತನದ ಹೆಸರನ್ನಾಗಲಿ ತನ್ನ ಊರಿನ ಹೆಸರನ್ನಾಗಲೀ ಹೇಳಿ ಪರಿಚಯಿಸಲು ಪ್ರಯತ್ನಿಸುತ್ತಾನೆ. ಇವೆಲ್ಲವುಗಳು ಜೀವಿಯ ನಿಜವಾದ ಪರಿಚಯಕ್ಕೆ ಸಾಧನಗಳಾಗಲಾರವು. ಜೀವನು ಎಲ್ಲಿಂದ ಬಂದಿರುವನೋ ಆ ಸಂಬಂಧವನ್ನು ಹೇಳುವುದು ಮುಖ್ಯವಾದುದು.

''ತದಂಶೋ ಜೀವನಾಮಕಃ'' ಎಂಬ ಆಚಾರ್ಯೋಕ್ತಿಯಂತೆ ಪ್ರತಿಯೊಬ್ಬ ಜೀವಿಯು ಶಿವನ ಅಂಶನಾಗಿದ್ದಾನೆ. ಜೀವಿಗಳಾಗಿ ಜನಿಸುವ ಪೂರ್ವದಲ್ಲಿ ಪ್ರತಿಯೊಬ್ಬರೂ ಪರಮಾತ್ಮಸ್ವರೂಪರೇ ಆಗಿರುತ್ತಾರೆ. ಪರಮಾತ್ಮನಿಂದ ಅಗಲಿ ಬಂದ ಈ ಜೀವಿಗೆ ಪ್ರತಿ ದಿವಸ ಸ್ವಲ್ಪು ವೇಳೆ ಅವಶ್ಯವಾಗಿ ಬೇಕೇಬೇಕು. ಪರಮಾತ್ಮನ ಸಂಬಂಧವಿಲ್ಲದೇ ಈ ಜೀವಿಯು ಬದುಕಿಕೊಂಡಿರಲು ಸಾಧ್ಯವೇ ಇಲ್ಲ. ಅಂತೆಯೇ ಗಾಢನಿದ್ರಾವಸ್ಥೆಯಲ್ಲಿ ಈ ಜೀವಿಯು ತನ್ನ ಮೂಲ ಸ್ವರೂಪವಾದ ಪರಮಾತ್ಮ ತತ್ತ್ವದೊಂದಿಗೆ ತಾದಾತ್ಮ್ಯವನ್ನು ಹೊಂದೋಣದರಿಂದಲೇ ಆ ಅವಸ್ಥೆಯಲ್ಲಿ ಎಲ್ಲರೂ ಅಚ್ಚಸುಖಿಗಳಾಗಿರುತ್ತಾರೆ. ಅಂತೆಯೇ ಈ ಸುಷುಪ್ತಿ ಅವಸ್ಥೆಯು ಮುಕ್ತಿಯ ಸ್ಯಾಂಪಲ್ (Sample) ಅವಸ್ಥೆಯಾಗಿರುತ್ತದೆ.

ಸುಷುಪ್ತಾವಸ್ಥೆಯಲ್ಲಿ ಸುಮಾರು ೬ ರಿಂದ ೮ ಗಂಟೆಗಳವರೆಗೆ ಪ್ರತಿಯೊಬ್ಬರೂ ನಿದ್ರಾನಂದವನ್ನು ಅನುಭವಿಸುತ್ತಾರೆ. ಇಷ್ಟು ವೇಳೆಯವರೆಗೆ· ಜೀವಿಯು ಅದಾವ ಸಾಂಸಾರಿಕ ವಿಷಯದೊಂದಿಗೆ ಸಮರಸನಾಗಿರಲು ಸಾಧ್ಯವಿಲ್ಲ. ಜೀವಿಯು ಪರಮಾತ್ಮನ ಅಂಶವಾಗಿರೋಣದರಿಂದಲೇ ಪ್ರತಿದಿನ ತನ್ನ ಮೂಲಸ್ವರೂಪದೊಂದಿಗೆ ಸಮರಸನಾಗಲು ಅಪೇಕ್ಷಿಸುತ್ತಾನೆ. ಸುಷುಪ್ತಾವಸ್ಥೆಯು ಜೀವಿಯ ಸ್ವಾಧೀನಾವಸ್ಥೆಯಲ್ಲ. ಅದು ಅವನ ಕರ್ಮಾಧೀನಾವಸ್ಥೆಯು. ಅಂತೆಯೇ ಆ ಪರಮಾತ್ಮ ಸಾಮರಸ್ಯ ಸುಖಾನುಭೂತಿಯನ್ನು ತನ್ನ ಸ್ವಾಧೀನಪಡಿಸಿಕೊಳ್ಳಬೇಕಾದರೆ ಶಿವಯೋಗ ಮಾರ್ಗವನ್ನೇ ಅವನು ಅವಲಂಬಿಸಬೇಕಾಗುವುದು. ಅಂಗಲಿಂಗಿಸ್ಥಲವನ್ನೇ ಇನ್ನಷ್ಟು ವಿಶದಪಡಿಸುವುದಕ್ಕಾಗಿ ಶ್ರೀ ಜಗದ್ಗುರು ರೇಣುಕರು–

ಅಂಗೇ ಲಿಂಗಂ ಸಮಾರೂಢಂ ಲಿಂಗೇ ಚಾಂಗಮುಪಸ್ಥಿತಮ್ ।
ಏತದಸ್ತಿದ್ವಯಂ ಯಸ್ಯ ಸ ಭವೇದಂಗಲಿಂಗವಾನ್ ॥

(ಸಿ. ಶಿ. ೧೨–೪೩)

ಈ ವಿಧವಾಗಿ ಉಪದೇಶಿಸಿದ್ದಾರೆ. ಅಂಗದಲ್ಲಿ ಮತ್ತು ಲಿಂಗದಲ್ಲಿ ಅಂಗವನ್ನು ಈ ತೆರನಾಗಿ ಪರಸ್ಪರ ಸಾಮರಸ್ಯ ಭಾವನೆಯಿಂದ ಚಿಂತಿಸುವವನೇ ಅಂಗಲಿಂಗಿ ಎಂಬುದಾಗಿ ಕರೆಯಲ್ಪಡುವನು. ಲಿಂಗತತ್ತ್ವವು ವ್ಯಾಪಕವಾದುದರಿಂದ ಅದರಲ್ಲಿ ಅಂಗವು ಇರುವುದು ಸಂಭವಿಸಿದರೂ, ಪರಿಚ್ಛಿನ್ನವಾದ ಅಂಗತತ್ತ್ವದಲ್ಲಿ ವ್ಯಾಪಕವಾದ ಲಿಂಗ ತತ್ತ್ವವು ಅದು ಹೇಗೆ ತಾನೇ ಇರಬಲ್ಲದು ? ಎಂಬ ಪ್ರಶ್ನೆ ಉದ್ಭವಿಸಿದರೆ ಆಕಾಶದಲ್ಲಿ ಘಟವು ಮತ್ತು ಆ ಘಟದಲ್ಲಿ ಆಕಾಶವು ಇರುವುದು ಹೇಗೆ ಸಂಭವಿಸುವುದೋ ಹಾಗೆ ಅಂಗಲಿಂಗಗಳ ಪರಸ್ಪರ ಅಸ್ತಿತ್ವವಿರುವುದರಿಂದ ಅದಾವ ತೊಂದರೆಯೂ ಇರಲಾರದು. ಯಾವುದು ಸರ್ವವ್ಯಾಪಕವಾಗಿದೆಯೋ ಅದು ಎಲ್ಲದರಲ್ಲಿಯೂ ಇರುತ್ತದೆ. ಅಂತಲೇ ಪೂಜ್ಯರು ಅಂಗಲಿಂಗಗಳ ಪರಸ್ಪರ ಸಾಮರಸ್ಯ ಚಿಂತನೆಯನ್ನು ಉಪದೇಶಿಸಿದ್ದಾರೆ. ಈ ಸಾಮರಸ್ಯವು ದೃಢವಾಗಬೇಕಾದರೆ ನಿರಂತರವಾಗಿ ಆ ಭಾವನೆಯನ್ನು ಮಾಡುತ್ತ ಇರಬೇಕೆಂಬುದನ್ನು ಪೂಜ್ಯರು ಪುನಃ–

ಜ್ಞಾತ್ವಾ ಯಃ ಸತತಂ ಲಿಂಗಂ ಸ್ವಾಂತಸ್ಥಂ ಜ್ಯೋತಿರಾತ್ಮಕಮ್ ।
ಪೂಜಯೇದ್ಭಾವಯೇನ್ನಿತ್ಯಂ ತಂ ವಿಂದ್ಯಾದಂಗಲಿಂಗಿನಮ್ ॥

(ಸಿ. ಶಿ. ೧೨–೪೪)

ಈ ತೆರನಾಗಿ ತಿಳಿಯಪಡಿಸಿದ್ದಾರೆ. ಅಂಗದಲ್ಲಿ ಲಿಂಗವಿದೆ, ಲಿಂಗದಲ್ಲಿ ಅಂಗವಿದೆ ಎಂಬ ಸಾಮರಸ್ಯ ಜ್ಞಾನವಾದ ಮಾತ್ರಕ್ಕೆ ಸಾಧನೆಯು ಪೂರ್ಣವಾಗಲಾರದು. ಆ ಜ್ಞಾನವು ದೃಢಗೊಳ್ಳಬೇಕಾಗುವುದು. ಅಂತೆಯೇ ಪೂಜೆ ಹಾಗೂ ಚಿಂತನೆಗಳು ಅವಶ್ಯಕವಾದವು ಗಳು. ತನ್ನೊಳಗೆ ಜ್ಯೋತಿರೂಪವಾದ ಪ್ರಾಣಲಿಂಗವಿದೆಯೆಂಬ ಅರಿವುಂಟಾದ ಬಳಿಕ ಈ ಪೂರ್ವದಲ್ಲಿ ತಿಳಿಯಪಡಿಸಿದ ಕ್ಷಮಾ ಮತ್ತು ವಿವೇಕಾದಿ ಅಂತರಂಗ ಪೂಜಾ ದ್ರವ್ಯಗಳಿಂದ ಆ ಪ್ರಾಣಲಿಂಗಾರ್ಚನೆಯನ್ನು ಗೈಯ್ಯ ಬೇಕಲ್ಲದೆ ಅಂಗಲಿಂಗಗಳ ಐಕ್ಯಾನು ಸಂಧಾನರೂಪವಾದ ಭಾವನೆಯನ್ನು ಬೆಳೆಸಿಕೊಳ್ಳಬೇಕು.

ಭಕ್ತಿಯಿಂದಲೇ ಮುಕ್ತಿಯನ್ನು ಪ್ರತಿಪಾದಿಸುವ ವೀರಶೈವ ಸಿದ್ಧಾಂತದಲ್ಲಿ ಈ ಪ್ರಾಣಲಿಂಗಿಸ್ಥಲದ ಸಾಧಕನಿಗೆ ಅನುಭವ ಭಕ್ತಿಯನ್ನು ಪ್ರತಿಪಾದಿಸಲಾಗಿದೆ. ವ್ಯವಹಾರ ದಲ್ಲಿ ಕಣ್ಣು–ಕಿವಿಗಳಿಂದ ರೂಪ ಮತ್ತು ಶಬ್ದಗಳನ್ನು ಪ್ರತ್ಯಕ್ಷವಾಗಿ ಅನುಭವಮಾಡಿ ಕೊಳ್ಳುವಂತೆ, ತನ್ನ ಪರಿಶುದ್ಧವಾದ ಮನೋವೃತ್ತಿಯಿಂದ ಪ್ರಾಣಲಿಂಗವನ್ನು ಸಾಕ್ಷಾತ್ಕರಿಸಿ ಕೊಳ್ಳುವುದೇ ಅನುಭವಭಕ್ತಿಯು. ಭ್ರಮರದ ನಿರಂತರ ಚಿಂತನೆಯಿಂದ ಒಂದು ಕೀಟವು ಭ್ರಮರವಾಗಿ ಮಾರ್ಪಡುವಂತೆ, ಲಿಂಗ ಚಿಂತನೆಯಲ್ಲಿ ನಿರತನಾದ ಅಂಗನು ಕೊನೆಗೆ ಲಿಂಗರೂಪನೇ ಆಗುವನು. ಮುಕ್ತಿಯ ಅಪೇಕ್ಷೆಯುಳ್ಳವರಿಗೆ ಲಿಂಗವೇ ಪರಂಧಾಮವೆಂಬುದನ್ನು ತಿಳಿಸಲೋಸುಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಜ್ಞಾಯತೇ ಲಿಂಗಮೇವೈಕಂ ಸರ್ವೇಃ ಶಾಸ್ತ್ರೈಃ ಸನಾತನೈಃ ।
ಬ್ರಹ್ಮೇತಿ ವಿಶ್ವಧಾಮೇತಿ ವಿಮುಕ್ತೇಃ ಪದಮಿತ್ಯಪಿ ॥

ಮುಕ್ತಿರೂಪಮಿದಂ ಲಿಂಗಮಿತಿ ಯಸ್ಯ ಮನಸ್ಥಿತಿಃ ।
ಸ ಮುಕ್ತೋ ದೇಹಯೋಗೇಽಪಿ ಸ ಜ್ಞಾನೀ ಸ ಮಹಾಗುರುಃ ॥

(ಸಿ. ಶಿ. ೧೨ ; ೪೫–೪೬)

ಈ ತೆರನಾಗಿ ಬೋಧಿಸಿದ್ದಾರೆ. ಸನಾತನಗಳಾದ ವೇದ, ಆಗಮ ಮತ್ತು ಸಕಲ ಶಾಸ್ತ್ರಗಳು ಲಿಂಗತತ್ತ್ವವನ್ನೇ ಪ್ರಾಮುಖ್ಯವಾಗಿ ಪ್ರತಿಪಾದಿಸಿವೆ. ಆ ಲಿಂಗತತ್ತ್ವಕ್ಕೆ ಬ್ರಹ್ಮವೆಂತಲೂ, ವಿಶ್ವಧಾಮವೆಂತಲೂ, ಮುಕ್ತಿಯ ಪದವೆಂತಲೂ ಕರೆಯಲಾಗಿದೆ. ಈ ಹೆಸರುಗಳು ಭಿನ್ನ ಭಿನ್ನಗಳಾಗಿದ್ದರೂ 'ಏಕಂ ಸದ್‌ವಿಪ್ರಾ ಬಹುಧಾ ವದಂತಿ' ಎಂಬ ಪ್ರಮಾಣೋಕ್ತಿಯಂತೆ ಮೂಲ ತತ್ತ್ವವು ಒಂದೇ ಆಗಿರುತ್ತದೆ. ಈ ಲಿಂಗತತ್ತ್ವವನ್ನು ಮುಕ್ತಿಯ ಧಾಮವನ್ನಾಗಿ ಯಾರು ತಿಳಿದುಕೊಳ್ಳುತ್ತಾರೆಯೋ, ಅವರು ದೇಹಧಾರಿಗಳಾಗಿದ್ದರೂ, ಮುಕ್ತರೇ ಆಗಿರುತ್ತಾರೆ. ಲಿಂಗತತ್ತ್ವವನ್ನು ತಿಳಿದವನೇ ಪರಮಜ್ಞಾನಿಯು, ಅವನೇ ಮಹಾ ಗುರುವು. ಅಂತರಂಗದಲ್ಲಿಯ ಲಿಂಗತತ್ತ್ವವನ್ನು ಅರಿತು ಅನುಭವಿಸುವವನಿಗೆ ಮೋಕ್ಷ ಪ್ರಾಪ್ತವಾದರೆ, ಅದನ್ನರಿಯದ ವಿಮೂಢರಿಗೆ ಸಂಸಾರಬಂಧನವೇ ಗತಿಯೆಂಬುದನ್ನು ತಿಳಿಸಲೋಸುಗ ಪೂಜ್ಯರು ಪುನಃ–

ಅನಾದಿನಿಧನಂ ಲಿಂಗಂ ಕಾರಣಂ ಜಗತಾಮಿತಿ ।
ಯೇ ನ ಜಾನಂತಿ ತೇ ಮೂಢಾ ಮೋಕ್ಷಮಾರ್ಗಬಹಿಷ್ಕೃತಾಃ ॥

(ಸಿ. ಶಿ. ೧೨–೪೭)

ಈ ವಿಧವಾಗಿ ಉಪದೇಶಿಸಿದ್ದಾರೆ. ಲಿಂಗವು ಅನಾದಿರೂಪವಾದುದು. ಅಂತೆಯೇ ಇದಕ್ಕೆ ಜನನವಿಲ್ಲ, ಆದುದರಿಂದಲೇ ಇದು 'ಅನಿಧನಂ' ಅಂದರೆ ಮರಣರಹಿತವಾದುದು. ಜನನವೇ ಇಲ್ಲವೆಂದ ಬಳಿಕ ಮರಣವೆಲ್ಲಿಂದುಂಟಾಗುವುದು ? ಅಂತೆಯೇ ಪರಶಿವ ಲಿಂಗವೂ ಜನನ ಮರಣರಹಿತವಾದ್ದರಿಂದ ಅದಕ್ಕೆ ಅನಾದಿನಿಧನವೆಂಬುದಾಗಿ ಕರೆದಿದ್ದಾರೆ.

ನ್ಯಾಯಶಾಸ್ತ್ರದಲ್ಲಿ ಒಂದು ವಸ್ತುವಿನ ಅಭಾವವನ್ನು ಪ್ರಾಗಭಾವ. ಪ್ರಧ್ವಂಸಾ ಭಾವ, ಅನ್ಯೋನ್ಯಾಭಾವ ಮತ್ತು ಅತ್ಯಂತಾಭಾವವೆಂಬುದಾಗಿ ನಾಲ್ಕು ವಿಧವಾಗಿ ಪ್ರತಿಪಾದಿಸಲ್ಪಟ್ಟಿದೆ. ಈ ಚತುರ್ವಿಧ ಅಭಾವಗಳು ಪರಶಿವಲಿಂಗಕ್ಕೆ ಸಂಭವಿಸಲಾರವು. ವಸ್ತುವಿನ ಉತ್ಪತ್ತಿಗಿಂತಲೂ ಪೂರ್ವದಲ್ಲಿ ಅದರ ಪ್ರಾಗಭಾವವಿರುತ್ತದೆ. ಪರಬ್ರಹ್ಮ ಲಿಂಗವು ಸದಾಕಾಲದಲ್ಲಿ ಇರುವುದಾದ್ದರಿಂದ ಅದಕ್ಕೆ ಉತ್ಪತ್ತಿ ಇಲ್ಲ. ಅಂತೆಯೇ ಅಲ್ಲಿ ಪ್ರಾಗಭಾವವು ಸಂಭವಿಸಲಾರದು. ಉತ್ಪನ್ನವಾದ ಒಂದು ಘಟವು ಒಡೆದು ಹೋದಾಗ ಅದಕ್ಕೆ ಪ್ರದ್ವಂಸಾಭಾವವೆನ್ನುವರು. ಪರಶಿವಲಿಂಗವು ಅದೆಂದೂ ನಷ್ಟವಾಗದ್ದರಿಂದ ಅಲ್ಲಿ ಪ್ರಧ್ವಂಸಾಭಾವವೂ ಸಹ ಸಂಭವಿಸಲಾರದು. ಅದರಂತೆ ಘಟವು ಪಟವಲ್ಲ ಪಟವು ಘಟವಲ್ಲ ಎಂಬುದಾಗಿ ಪರಸ್ಪರ ಭೇದವನ್ನು ಪ್ರತಿಪಾದಿಸುವ ಅಭಾವಕ್ಕೆ ಅನ್ಯೋನ್ಯಾಭಾವವೆಂದು ಕರೆಯುವರು. ಈ ಅಭಾವವನ್ನು ಹೇಳಲು ಪರಸ್ಪರ ಭಿನ್ನಗಳಾದ ಎರಡು ವಸ್ತುಗಳು ಬೇಕಾಗುವವು. ವಿಶ್ವವೆಲ್ಲವೂ ಲಿಂಗರೂಪವೇಯಾದ್ದ ರಿಂದ ಲಿಂಗವನ್ನು ಹೊರತುಪಡಿಸಿ ಬೇರೊಂದು ವಸ್ತುವಿಲ್ಲದ್ದರಿಂದ ಇಲ್ಲಿ ಅನ್ಯೋನ್ಯಾ ಭಾವವನ್ನೂ ಸಹ ಹೇಳಲು ಬರುವಂತಿಲ್ಲ. ಇನ್ನು ಕೊನೆಯದಾದ ಅಭಾವವೇ ಅತ್ಯಂತಾಭಾವವು. ತ್ರಿಕಾಲದಲ್ಲಿ ಇಲ್ಲದ್ದಕ್ಕೆ ಅತ್ಯಂತಾಭಾವವೆನ್ನುವರು. ಗಗನ ಕುಸುಮ, ಬಂಜೆಯ ಮಗ (ವಂಧ್ಯಾಪುತ್ರ) ಇವೆಲ್ಲವುಗಳು ಅದಕ್ಕೆ ಉದಾಹರಣೆಗಳು. ಪರಶಿವ ಲಿಂಗವು ತ್ರಿಕಾಲಾಬಾಧಿತವಾದ್ದರಿಂದ ಅದಕ್ಕೆ ಅತ್ಯಂತಾಭಾವವನ್ನು ಹೇಳಲು ಸಾಧ್ಯ ವಿಲ್ಲ. ಒಂದು ವೇಳೆ ಅದಕ್ಕೆ ಅತ್ಯಂತಾಭಾವವನ್ನು ಹೇಳಿದ್ದರೆ ಈ ಪ್ರಪಂಚದಲ್ಲಿ ಅದಾವುದೂ ಭಾವರೂಪವಾಗಿ ತೋರಲಾರದು. ಎಲ್ಲ ಅಭಾವಗಳಿಗೆ ಲಿಂಗವೇ ಸಾಕ್ಷಿಯಾಗಿರೋಣದರಿಂದ ಲಿಂಗಕ್ಕೆ ಯಾವ ಅಭಾವವನ್ನೂ ಹೇಳಲಾಗದು.

ರಂಗಮಂಟಪದಲ್ಲಿ ಒಂದು ನಾಟಕವು ಪ್ರಾರಂಭವಾಗುವ ಪೂರ್ವದಲ್ಲಿ ದೀಪಗಳನ್ನು ಹಚ್ಚಿರುತ್ತಾರೆ. ಆ ದೀಪದ ಪ್ರಕಾಶದಲ್ಲಿಯೇ ನಾಟಕವೆಲ್ಲ ನಡೆದು ಹೋಗುವುದು. ನಾಟಕವು ಮುಗಿದು ಎಲ್ಲರೂ ಮಲಗಿಕೊಂಡರೂ ಆ ದೀಪಗಳು ಹಾಗೇ ಇರುವಂತೆ, ಪರಮಾತ್ಮನ ಪ್ರಕಾಶದಲ್ಲಿಯೇ ಈ ಸಂಸಾರನಾಟಕದ ಎಲ್ಲ ವ್ಯವಹಾರಗಳು ನಡೆಯುತ್ತವೆ. ಈ ವ್ಯವಹಾರಗಳೆಲ್ಲಾ ಮುಗಿದರೂ ಪರಮಾತ್ಮ ಪ್ರಕಾಶವು ಲುಪ್ತವಾಗುವುದಿಲ್ಲ, ಅದು ಹಾಗೆಯೇ ಇರುತ್ತದೆ. ಹೀಗೆ ವಿಶ್ವದ ವ್ಯವಹಾರ ಕ್ಕೆಲ್ಲ ಸದಾ ಸಾಕ್ಷಿಯಾಗಿರೋಣದರಿಂದಲೇ ಪರಶಿವಲಿಂಗಕ್ಕೆ ಅನಾದಿನಿಧನ ವೆಂಬುದಾಗಿ ಕರೆದಿದ್ದಾರೆ. ಇಂಥ ಈ ಲಿಂಗತತ್ತ್ವವೇ ಈ ಚರಾಚರ ಜಗತ್ತಿನ ಉತ್ಪತ್ತಿ ಸ್ಥಿತಿ ಮತ್ತು ವಿಲಯಗಳಿಗೆ ಕಾರಣವೂ ಆಗಿರುತ್ತದೆ. ಇಂತಹ ಪರಬ್ರಹ್ಮಲಿಂಗವನ್ನು ಯಾರು ತನ್ನಾತ್ಮ ರೂಪವಾಗಿ ತಿಳಿದುಕೊಳ್ಳುವುದಿಲ್ಲವೋ ಅಂಥವರನ್ನು ಪೂಜ್ಯಪಾದರು ಮೂಢಾಃ

ಎಂದು ಕರೆದಿದ್ದಾರೆ. ಮೋಹಗ್ರಸ್ತವಾದ ಬುದ್ಧಿಯುಳ್ಳವರೇ ಮೂಢರು. ಸಾಂಸಾರಿಕ ವ್ಯಾಮೋಹದಲ್ಲಿ ಸಿಲುಕಿಕೊಂಡ ಈ ಮೂಢರು ಮುಕ್ತಿಯನ್ನು ಕಾಣದೆ ಪುನಃ ಪುನಃ ಸಂಸಾರದಲ್ಲಿಯೇ ಸುತ್ತುತ್ತಿರುತ್ತಾರೆ.

ಈ ಭವಚಕ್ರದಿಂದ ಪಾರಾಗಲು ಲಿಂಗಾಂಗಸಾಮರಸ್ಯ ಚಿಂತನೆಯೇ ಪರಮೋಪಾಯವಾಗಿದೆ. ಹೀಗೆ ಪ್ರಾಣಲಿಂಗಿಸ್ಥಲದ ಸ್ವರೂಪವನ್ನು ವಿಶದಪಡಿಸುತ್ತ ಕೊನೆಯದಾಗಿ ಪೂಜ್ಯಪಾದರು–

ಯಃ ಪ್ರಾಣಲಿಂಗಾರ್ಚನಭಾವಪೂರ್ವೈರ್ಧರ್ಮೈರುಪೇತಃ ಶಿವಭಾವಿತಾತ್ಮಾ।
ಸ ಏವ ತುರ್ಯಃ ಪರಿಕೀರ್ತಿತೋಽಸೌ ಸಂವಿದ್ವಿಪಾಕಾಚ್ಛರಣಾಭಿಧಾನಃ ॥
(ಸಿ. ಶಿ. ೧೨–೪೮)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಪ್ರಾಣಲಿಂಗಿಸ್ಥಲದಲ್ಲಿ ಉಪದೇಶಿಸಿದ ಅರ್ಚನಾ ಸಾಮಗ್ರಿಗಳಿಂದ ಭಾವಪೂರ್ಣವಾಗಿ ಪ್ರಾಣಲಿಂಗಾರ್ಚನೆಯನ್ನು ಮಾಡಿದಾಗ ಕ್ರಮಶಃ ಸಾಧಕನು ಶಿವಭಾವ ಸಂಪನ್ನನಾಗಿ ಅವನೇ 'ತೂರ್ಯ'ನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಒಂದು ಘಟವು ನೀರಿನಿಂದ ಪರಿಪೂರ್ಣವಾಗಿ ತುಂಬಿರುವಂತೆ, ಈತನು ಶಿವಭಾವನೆಯಿಂದ ಪರಿಪೂರ್ಣನಾಗಿರುತ್ತಾನೆ. ಪ್ರಾಣಲಿಂಗಿಸ್ಥಲದ ಈ ಅವಸ್ಥೆಯು ಪರಿಪಕ್ವಗೊಂಡಾಗ ಈ ಪ್ರಾಣಲಿಂಗಿಯೇ ಶರಣನೆಂಬುದಾಗಿ ಕರೆಯಿಸಿ ಕೊಳ್ಳುವನು. ಹೀಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಅತಿ ಮಹತ್ತ್ವಪೂರ್ಣವೂ ಯೋಗಾಭ್ಯಾಸಗಮ್ಯವೂ ಆದ ಪ್ರಾಣಲಿಂಗಿಸ್ಥಲದಲ್ಲಿ ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಪ್ರಾಣಲಿಂಗಿಸ್ಥಲ, ಪ್ರಾಣಲಿಂಗಾರ್ಚನಸ್ಥಲ, ಶಿವಯೋಗ ಸಮಾಧಿಸ್ಥಲ, ಲಿಂಗನಿಜಸ್ಥಲ ಮತ್ತು ಅಂಗಲಿಂಗಸ್ಥಲಗಳೆಂಬ ಪಂಚವಿಧ ಅವಾಂತರ ಸ್ಥಲಗಳನ್ನು ಅತಿ ವಿಸ್ತಾರವಾಗಿ ಮಹರ್ಷಿಅಗಸ್ತ್ಯನನ್ನು ಕುರಿತು ಉಪದೇಶಿಸಿದ್ದಾರೆ. ಅದನ್ನು ಸಾಧಿಸಿ ಪ್ರಾಣಲಿಂಗಾನುಭವವನ್ನು ಮಾಡಿಕೊಂಡಾಗ ಸಾಧಕನು 'ಪ್ರಾಣ ಲಿಂಗೀ' ಎಂಬುದಾಗಿ ಕರೆಯಿಸಿಕೊಳ್ಳುವನು. ಈ ಅವಸ್ಥೆಯು ಪುನಃ ಪರಿಪಕ್ವಗೊಂಡಾಗ ಅವನೇ 'ಶರಣ'ನೆಂಬುದಾಗಿ ಸಂಬೋಧಿಸಲ್ಪಡುವನು. ಶ್ರೀ ಮಹಾಚಾರ್ಯರು ಉಪದೇಶಿಸಿದ ಈ ಉಪದೇಶವನ್ನು ಸರಿಯಾಗಿ ತಿಳಿದುಕೊಂಡು ಸರ್ವರೂ ಆ ಶಿವಯೋಗದತ್ತ ಪ್ರವೃತ್ತರಾಗಿರೆಂಬುದಾಗಿ ಆಶೀರ್ವದಿಸಿ ಈ ಕೊನೆಯದಾದ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೭ ಎಪ್ರಿಲ್ ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)

ಇಂತು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಪ್ರಾಣಲಿಂಗಿಸ್ಥಲವನ್ನು ಪ್ರತಿ ಪಾದಿಸುವ ಹನ್ನೆರಡನೇ ಪರಿಚ್ಛೇದವು ಪೂರ್ಣವಾದುದು.



# ತ್ರಯೋದಶ ಪರಿಚ್ಛೇದ

## ಆಶೀರ್ವಚನ-೧

## ಶರಣಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಷಟ್‌ಸ್ಥಲದೊಳಗಿನ ಭಕ್ತ, ಮಾಹೇಶ್ವರ, ಪ್ರಸಾದಿ ಮತ್ತು ಪ್ರಾಣಲಿಂಗಿಯೆಂಬ ನಾಲ್ಕು ಸ್ಥಲಗಳ ಹಾಗೂ ಅವುಗಳಲ್ಲಿಯ ಅವಾಂತರ ಸ್ಥಲಗಳ ವಿಚಾರವನ್ನು ನೀವೆಲ್ಲಾ ಇಲ್ಲಿಯವರೆಗೆ ಆಸ್ಥೆವಹಿಸಿ ಆಲಿಸಿದ್ದೀರಿ. ಸದ್ಯಃ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹರ್ಷಿಯಾದ ಅಗಸ್ತ್ಯನನ್ನು ಕುರಿತು ಮುಂದಿನದಾದ ಶರಣಸ್ಥಲದ ವಿಚಾರವನ್ನು ತಿಳಿಯಪಡಿಸುತ್ತಿದ್ದಾರೆ. ಜಿಜ್ಞಾಸು ಆದ ಅಗಸ್ತ್ಯನು ಶ್ರೀ ಜಗದ್ಗುರುಗಳನ್ನು ಕುರಿತು–

ಮಾಹೇಶ್ವರಃ ಪ್ರಸಾದೀತಿ ಪ್ರಾಣಲಿಂಗೀತಿ ಬೋಧಿತ ః ।
ಕಥಮೇಷ ಸಮಾಧಿಷ್ಮ ః ಪುನಃ ಶರಣಸಂಜ್ಞಕ ః ॥

(ಸಿ. ಶಿ. ೧೩–೧)

ಈ ರೀತಿಯಾಗಿ ಪ್ರಶ್ನೆ ಮಾಡಿದವನಾಗುತ್ತಾನೆ. ''ಹೇ ಗುರುವರ್ಯರಾದ ರೇಣುಕರೇ ! ಇಲ್ಲಿಯವರೆಗೆ ತಾವುಗಳು ಮಾಹೇಶ್ವರನ ಬಗ್ಗೆ, ಪ್ರಸಾದಿಯ ಬಗ್ಗೆ ಮತ್ತು ಪ್ರಾಣಲಿಂಗಿ ಸ್ಥಲದ ಸಾಧಕನ ಬಗ್ಗೆ ವಿಸ್ತಾರವಾಗಿ ಉಪದೇಶಿಸಿದ್ದೀರಿ. ಈ ಪ್ರಾಣಲಿಂಗಿ ಸ್ಥಲದ ಸಾಧಕನೆ ಅದು ಹೇಗೆ ತಾನೇ ಮುಂದೆ ಶರಣನೆಂಬುದಾಗಿ ಕರೆಯಿಸಿಕೊಳ್ಳುವನು ದಯವಿಟ್ಟು ತಾವುಗಳು ಉಪದೇಶಿಸಬೇಕು.'' ಮಹರ್ಷಿಯಾದ ಅಗಸ್ತ್ಯನ ವಿನಂತಿಯನ್ನು ಆಲಿಸಿದ ಪೂಜ್ಯಪಾದರು–

ಅಂಗಲಿಂಗೀ ಜ್ಞಾನರೂಪಃ ಸತೀ ಜ್ಞೇಯಃ ಶಿವಃ ಪತಿಃ ।
ಯತ್‌ಸೌಖ್ಯಂ ತತ್ ಸಮಾವೇಶೇ ತದ್ವಾನ್ ಶರಣನಾಮವಾನ್ ॥

(ಸಿ. ಶಿ. ೧೩–೨)

ಈ ರೀತಿಯಾಗಿ ಉಪದೇಶಗೈದಿದ್ದಾರೆ. ''ಹೇ ಅಗಸ್ತ್ಯನೇ ! ಪ್ರಾಣಲಿಂಗಿಸ್ಥಲದ ಸಾಧಕನು ಉಪಾಸ್ಯನಾದ ಶಿವನನ್ನು ತನ್ನ ಪತಿಯನ್ನಾಗಿ ಮತ್ತು ಉಪಾಸಕನಾದ ತನ್ನನ್ನು ಆತನ ಸತಿಯನ್ನಾಗಿ ಭಾವಿಸಿ ಒಂದು ಅಲೌಕಿಕವಾದ ಸತಿಪತಿಭಾವದಿಂದ ಆನಂದವನ್ನು ಯಾವಾಗ ಅನುಭವಿಸತೊಡಗುವನೋ ಆಗ ಆ ಪ್ರಾಣಲಿಂಗಿಯೇ ಶರಣನೆಂಬುದಾಗಿ ಕರೆಯಲ್ಪಡುತ್ತಾನೆ.''

ಶರಣಸ್ಥಲದಲ್ಲಿಯ ಸಾಧಕನಲ್ಲಿರುವ ಭಕ್ತಿಗೆ ಆನಂದಭಕ್ತಿಯೆಂಬುದಾಗಿ ಕರೆದಿದ್ದಾರೆ. ಈ ಅಲೌಕಿಕ ಸತಿಪತಿಭಾವದಿಂದ ಉಂಟಾಗುವ ಆನಂದವಾದರೋ ಲೋಕ

ವಿಲಕ್ಷಣವಾದುದಾಗಿದೆ. ಒಂದು ಮನೆಯೊಳಗೆ ನಿವಾಸಿಸುವ ಪರಿವಾರದ ಸದಸ್ಯರಲ್ಲಿ ಪರಸ್ಪರ ಒಂದಿಲ್ಲೊಂದು ವಿಧವಾದ ಸಂಬಂಧವು ಇದ್ದೇ ಇರುತ್ತದೆ. ಅಲ್ಲಿರುವ ಪಿತಾ–ಪುತ್ರ, ಭ್ರಾತೃ–ಭ್ರಾತೃ ಮತ್ತು ಭಗಿನಿ–ಭ್ರಾತೃ ಮುಂತಾದ ಅನೇಕ ಲೌಕಿಕ ಸಂಬಂಧ ಗಳಲ್ಲಿ ಪತಿ–ಪತ್ನಿ ಸಂಬಂಧವು ಅತ್ಯಂತ ನಿಕಟವಾದುದಾಗಿದೆ. ಪತಿಗೆ ಪತ್ನಿಯ ಮೇಲೆ ಮತ್ತು ಪತ್ನಿಗೆ ಪತಿಯ ಮೇಲೆ ಇರುವಷ್ಟು ಪರಸ್ಪರ ಪ್ರೇಮವು ಬೇರೆ ಸಂಬಂಧಗಳಲ್ಲಿ ಇರುವುದಿಲ್ಲ. ಅಂತೆಯೇ ಈ ಸಂಬಂಧಕ್ಕೆ ಅತ್ಯಂತ ಘನಿಷ್ಠ ಸಂಬಂಧವೆಂದು ಕರೆಯು ತ್ತಾರೆ. ಪತ್ನಿಯಾದವಳು ಕೇವಲ ಒಂದು ಭೋಗ್ಯ ವಸ್ತು ವಾಗಿರದೇ ಷಡ್‌ಗುಣಗಳಿಂದ ಕೂಡಿದ ಸಹಧರ್ಮಚಾರಿಣಿಯಾಗಿರುತ್ತಾಳೆ. ಅಂತೆಯೇ ಸುಭಾಷಿತಕಾರನು, ''ಷಡ್ ಧರ್ಮಯುಕ್ತಾ ಕುಲ ಧರ್ಮಪತ್ನೀ'' ಎಂಬುದಾಗಿ ಹೇಳಿದ್ದಾನೆ. ಪತ್ನಿಯಾದವಳು ಉಣ ಬಡಿಸುವಾಗ ತಾಯಿಯಂತೆ ವರ್ತಿಸುತ್ತಾಳೆ. ಮನೆಗೆಲಸ ಮಾಡುವಾಗ ದಾಸಿಯಾಗಿ ಸಹಕರಿಸುತ್ತಾಳೆ, ಗೂಢಾಲೋಚನೆಯ ವೇಳೆಯಲ್ಲಿ ಮಂತ್ರಿಯಂತೆ ವ್ಯವಹರಿಸುತ್ತಾಳೆ. ಶಯನದಲ್ಲಿ ರಂಭೆಯಂತೆಯು, ಕ್ಷಮೆಯಲ್ಲಿ ಭೂದೇವಿಯಂತೆ ವರ್ತಿಸುತ್ತಾಳೆ.

ಭೋಜ್ಯೇಷು ಮಾತಾ, ಕರಣೇಷು ದಾಸೀ, ಕಾರ್ಯೇಷು ಮಂತ್ರಿ ।
ರೂಪೇಷು ಲಕ್ಷ್ಮೀ, ಶಯನೇಷು ರಂಭಾ, ಕ್ಷಮಯಾ ಧರಿತ್ರೀ ।
ಷ್ಯಾಡ್ಗುಣ್ಯಭಾರ್ಯಾಃ ಕುಲಮುದ್ಧರಂತಿ ॥

ಹೀಗೆ ಆರು ತೆರನಾದ ಉತ್ಕೃಷ್ಟಗುಣಗಳಿಂದ ಕೂಡಿದವಳಾಗಿರುತ್ತಾಳೆ.

ಅಂತೆಯೇ ಲೌಕಿಕದಲ್ಲಿ ಇರುವ ಎಲ್ಲ ಸಂಬಂಧಗಳಿಗಿಂತ ಸತಿಪತಿ ಸಂಬಂಧವು ವಿಲಕ್ಷಣವೂ, ಮಹತ್ವಪೂರ್ಣವೂ ಆಗಿದೆ. ಅಂತೆಯೇ ಪೂಜ್ಯಪಾದರು ಭಕ್ತ ಹಾಗೂ ಭಗವಂತರಲ್ಲಿ ಸತಿಪತಿಭಾವವನ್ನು ತಿಳಿಯಪಡಿಸಿ, ಅದರ ಮುಖೇನ ಶರಣಸ್ಥಲದ ಮಹತ್ವ ವನ್ನು ವಿವರಿಸತೊಡಗಿದ್ದಾರೆ. ಈ ಶರಣಸ್ಥಲದಲ್ಲಿ ನಾಲ್ಕು ಅವಾಂತರ ಸ್ಥಲಗಳಿವೆ.

ಸ್ಥಲಮೇತತ್ಸಮಾಖ್ಯಾತಂ ಚತುರ್ಧಾ ಧರ್ಮಭೇದತಃ ।
ಆದೌ ಶರಣಮಾಖ್ಯಾತಂ ತತಸ್ತಾಮಸವರ್ಜನಮ್ ॥

ತತೋ ನಿರ್ದೇಶಮುದ್ದಿಷ್ಟಂ ಶೀಲಸಂಪಾದನಂ ತತಃ ।
ಕ್ರಮಾಲ್ಲಕ್ಷಣಮೇತೇಷಾಂ ಕಥಯಾಮಿ ನಿಶಾಮ್ಯತಾಮ್ ॥

(ಸಿ. ಶಿ. ೧೩ ; ೩–೪)

ಎಂಬ ಆಚಾರ್ಯೋಕ್ತಿಯಂತೆ ಆ ಅವಾಂತರಸ್ಥಲಗಳೇ ಶರಣಸ್ಥಲ, ತಾಮಸನಿರಸನಸ್ಥಲ, ನಿರ್ದೇಶಸ್ಥಲ ಮತ್ತು ಶೀಲಸಂಪಾದನಸ್ಥಲಗಳೆಂಬುದಾಗಿವೆ. ಇವುಗಳಲ್ಲಿ ಮೊದಲನೆಯ ದಾದ ಶರಣಸ್ಥಲವನ್ನು ವಿಶೇಷವಾಗಿ ತಿಳಿಯಪಡಿಸಲೋಸುಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಸತೀವ ರಮಣೇ ಯಸ್ತು ಶಿವೇ ಶಕ್ತಿಂ ವಿಭಾವಯನ್ ।
ತದನ್ಯವಿಮುಖಃ ಸೋಽಯಂ ಜ್ಞಾತಃ ಶರಣನಾಮವಾನ್ ॥

(ಸಿ. ಶಿ. ೧೩–೫)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಪತ್ನಿಗೆ ಸರ್ವವಿಧವಾದ ಸುಖವನ್ನು ಕೊಡುವವನೇ ಪತಿಯು. ಭಗವಂತನಾದರೂ ತನ್ನ ಭಕ್ತರಿಗೆ ಸರ್ವತೋ ಮುಖೀನ ಆನಂದವನ್ನು ದಯಪಾಲಿಸೋಣದರಿಂದ, ಅವನಾದರೂ ಈ ಜೀವಿಗಳ ಪತಿಯೇ ಆಗಿರುತ್ತಾನೆ. ಲೌಕಿಕ ಪತಿಗಿಂತಲೂ ಅಲೌಕಿಕಪತಿಯಾದ ಪರಮಾತ್ಮನ ಸ್ಥಿತಿಯು ವಿಲಕ್ಷಣವಾಗಿರುತ್ತದೆ. ಲೌಕಿಕದಲ್ಲಿಯ ಪತಿಪತ್ನಿಯರ ಸಂಬಂಧವು ಶಾಶ್ವತವಾದು ದಾಗಿರುವುದಿಲ್ಲ, ಋಣಾನುಸಂಬಂಧದಿಂದ ಕೂಡಿದ ಅವರು ಋಣಸಮಾಪ್ತ ವಾದೊಡನೆ ಅಗಲಿ ಹೋಗುವುದನ್ನು ಕಾಣುತ್ತೇವೆ. ಲೋಕದಲ್ಲಿಯ ಪತಿಯು ಆಯುಷ್ಯ ತೀರಿ ಮರಣ ಹೊಂದಿದಾಗ ಆತನ ಪತ್ನಿಯು ವಿಧವೆಯಾಗಿ ತನ್ನ ಸೌಭಾಗ್ಯವೆಲ್ಲವನ್ನು ಕಳೆದುಕೊಳ್ಳುವುದನ್ನು ಲೋಕದಲ್ಲಿ ಕಾಣುತ್ತೇವೆ. ಲೋಕದ ಜನರು ಅಂತಹವರನ್ನು ಯಾವ ಮಂಗಲಪ್ರಸಂಗದಲ್ಲಿಯೂ ಮುಂದೆ ಹೋಗಲು ಬಿಡುವುದಿಲ್ಲ. ಶಿವನೆಂಬ ಪತಿಯು ಅಜರನು. ಅಮರನು, ಆಗಿರೋಣದರಿಂದ ಅವನನ್ನು ಪತಿಯನ್ನಾಗಿ ಭಾವಿಸಿದ ಸಾಧಕನಿಗೆ ಅದೆಂದು ವೈಧವ್ಯ ಸ್ಥಿತಿಯು ಪ್ರಾಪ್ತವಾಗಲಾರದು. ಅಂತೆಯೇ ಅಕ್ಕಮಹಾ ದೇವಿಯು–''ಸಾವಕೆಡುವ ಗಂಡರೊನ್ನೋದು ಒಲೆಯಲ್ಲಿ ಇರಿಸವ್ವಾ'' ಯೆಂಬುದಾಗಿ ಸಾವ ಹಾಗೂ ಕೆಡುವ ಗಂಡರನ್ನು ಕುರಿತು ತನ್ನ ವಾಸ್ತವವಾದ ನಿಲುವನ್ನು ಸಮಾಜಕ್ಕೆ ತಿಳಿಯಪಡಿಸಿ ಚನ್ನಮಲ್ಲಿಕಾರ್ಜುನನೇ ತನ್ನ ಗಂಡನೆಂಬುದನ್ನು ಸ್ಪಷ್ಟಪಡಿಸಿದ್ದಾಳೆ.

ಹೀಗೆ ಪರಮಾತ್ಮನನ್ನೇ ತನ್ನ ಪತಿಯನ್ನಾಗಿ ನಂಬಿ ತನ್ನನ್ನು ಆವನ ಸತಿಯನ್ನಾಗಿ ನಿಶ್ಚಯಿಸಿ ಆವನ್ನಲ್ಲದ ಬೇರೊಂದು ಕಡೆಗೆ ಲಕ್ಷ್ಯವನ್ನು ಹರಿಸದೇ ತದೇಕಚಿತ್ತನಾಗಿರುವ ಸಾಧಕನನ್ನೇ ಶರಣನೆಂಬುದಾಗಿ ಕರೆದಿದ್ದಾರೆ. ಈ ತೆರನಾದ ಭಾವನೆಯು ಕಾಮದ ಮೇಲೆ ವಿಜಯವನ್ನು ಸಂಪಾದಿಸುವ ಒಂದು ಅಮೋಘವಾದ ಸಾಧನವಾಗಿರುತ್ತದೆ. ಅಜೇಯ ವಾದ ಕಾಮನನ್ನು ಜಯಿಸಲು ಇದೊಂದು ಅತ್ಯಂತ ಸರಳವಾದ ಉಪಾಯವಾಗಿರುತ್ತದೆ. ಹೀಗೆ ತನ್ನ ಹಾಗೂ ಶಿವನಲ್ಲಿ ಸತಿಪತಿಭಾವವನ್ನು ತಾಳಿದ ಶರಣಸ್ಥಲದ ಸಾಧಕನು ತನ್ನಲ್ಲಿರುವ ಕಾಮಭಾವನೆಗಳ ಮೇಲೆ ವಿಜಯವನ್ನು ಸಾಧಿಸಿಕೊಂಡು ಅತ್ಯುನ್ನತವಾದ ಸ್ಥಾನವನ್ನು ಪಡೆದುಕೊಳ್ಳುತ್ತಾನೆ. ಅಕ್ಕಮಹಾದೇವಿ ಮತ್ತು ಮೀರಾಬಾಯಿಯರಂತಹ ಉತ್ಕೃಷ್ಟ ಸ್ತ್ರೀ ಸಮಾಜವು ಈಶ್ವರನನ್ನು ಪತಿಯನ್ನಾಗಿ ತಿಳಿದುಕೊಂಡರೆ, ಅಷ್ಟೊಂದು ಆಶ್ಚರ್ಯವೇನು ಅನ್ನಿಸುವುದಿಲ್ಲ. ಆದರೆ ಒಬ್ಬ ಪುರುಷನು ತನ್ನನ್ನು ಪರಮಾತ್ಮನ ಸತಿಯ ನ್ನಾಗಿ ಭಾವಿಸಿದರೆ ಎಲ್ಲರಿಗೂ ಆಶ್ಚರ್ಯವಾಗುವುದು. ಒಬ್ಬ ಪುರುಷನು ಪತ್ನಿ ಹೇಗಾಗ ಬಲ್ಲನು ಎಂಬುದೇ ಈ ಆಶ್ಚರ್ಯಕ್ಕೆ ಕಾರಣವು. ಲೌಕಿಕ ದೃಷ್ಟಿಯಿಂದ ಪುರುಷನು ಪತ್ನಿಯೆನ್ನಿಸಿಕೊಳ್ಳುವುದು ಅಷ್ಟೊಂದು ಸಮಂಜಸವಾಗಿ ತೋರದಿದ್ದರೂ ಆಧ್ಯಾತ್ಮಿಕ ದೃಷ್ಟಿಯಲ್ಲಿ ಅದು ಸಹಜವಾಗಿ ಸಂಭವಿಸುತ್ತದೆ. ಆಧ್ಯಾತ್ಮಿಕ ವಿಚಾರದಲ್ಲಿ ಪರಮಾತ್ಮ ನೊರ್ವನೇ ಪತಿಯಾಗಿರುವನು, ಉಳಿದ ಜೀವಿಗಳೆಲ್ಲಾ ಆತನ ಸತಿಗಳಾಗಿರುತ್ತಾರೆ. ಒಬ್ಬ ಸಾಧಕನು ತನ್ನನ್ನು ಈಶ್ವರನ ಪತ್ನಿಯನ್ನಾಗಿ ಭಾವಿಸುತ್ತಿದ್ದರೆ, ಅವನು ಪರಮಾತ್ಮನ ಅತ್ಯಂತ ನಿಕಟವರ್ತಿಯಾಗಿದ್ದಾನೆಂದು ಭಾವಿಸಬೇಕು. ಲೌಕಿಕ ಜೀವನದಲ್ಲಿ ಸತಿಪತಿಗಳು ಹೇಗೆ ಅತ್ಯಂತ ನಿಕಟವರ್ತಿಯಾಗಿರುತ್ತಾರೆಯೋ, ಅದರಂತೆ ಈ ಸತಿಭಾವದ ಸಾಧಕನು ಸಹ ಪರಮಾತ್ಮನಿಗೆ ಅತ್ಯಂತ ಸಮೀಪದವನಾಗಿರುತ್ತಾನೆ.

ಒಬ್ಬ ಪತಿವ್ರತೆಯಾದ ಹೆಣ್ಣುಮಗಳು ತನ್ನ ಪತಿಯ ಮೇಲೆ ಹೇಗೆ ಏಕನಿಷ್ಠಳಾಗಿರುತ್ತಾಳೋ, ಅದರಂತೆ ಈ ಶರಣಸ್ಥಲದ ಸಾಧಕನು ಸಹ ಶಿವನಲ್ಲಿ ತದೇಕನಿಷ್ಠನಾಗಿರುತ್ತಾನೆ. ಇಂತಹ ಸ್ಥಿತಿಸಂಪನ್ನ ಸಾಧಕನೇ ಶರಣನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಸೊನ್ನಲಗಿಯ ಸಿದ್ಧರಾಮೇಶ್ವರನು ಶಿವಯೋಗ ಸಾಧಿಸುತ್ತಿರುವಾಗ ಓರ್ವ ಹೆಣ್ಣುಮಗಳು ಅವರ ಯೋಗಮಂದಿರದ ಮುಂಭಾಗದಲ್ಲಿ ಪ್ರತಿದಿನ ಬ್ರಾಹ್ಮೀ ಮುಹೂರ್ತದಲ್ಲಿ ಕಸಗೂಡಿಸಿ, ಥಳಿ ಹೊಡೆದು, ರಂಗವಲ್ಲಿಯಿಂದ ಅಂಗಳವನ್ನು ಅಲಂಕರಿಸುತ್ತಿದ್ದಳು. ಈ ತೆರನಾದ ಇವಳ ಸೇವೆ ಬಹುದಿನಗಳವರೆಗೆ ಅವ್ಯಾಹತವಾಗಿ ನಡೆಯುತ್ತಲೇ ಇತ್ತು. ಈ ಸೇವೆಯನ್ನು ಮಾಡುವವರಾರು ? ಅವರ ಮನದ ಇಚ್ಛೆಯಾದರು ಏನಿದೆ ? ಯೆಂಬುದನ್ನು ತಿಳಿದುಕೊಳ್ಳುವದಕ್ಕಾಗಿ ಒಂದು ದಿನ ಶ್ರೀ ಸಿದ್ಧಾರಾಮೇಶ್ವರರು ಬೇಗನೆ ಹೊರಬಂದರು. ಆ ಸಮಯದಲ್ಲಿ ಓರ್ವ ಹೆಣ್ಣುಮಗಳು ರಂಗವಲ್ಲಿಯನ್ನು ಹಾಕುತ್ತಿರುವುದನ್ನು ಕಂಡು ನಿನಗೇನು ಬೇಕಾಗಿದೆಯೆಂದು ಪ್ರಶ್ನಿಸಿದರು. ಆಗ ಆ ಹೆಣ್ಣುಮಗಳು ''ನಿಮ್ಮೊಡನೆ ವಿವಾಹವಾಗುವ ಬಯಕೆಯಿದೆ, ಅದನ್ನು ಈಡೇರಿಸಿಕೊಡಬೇಕೆ''ಂದು ಬೇಡಿಕೊಂಡಳು. ಆಗ ಶ್ರೀ ಸಿದ್ಧರಾಮೇಶ್ವರರು ''ಅಮ್ಮಾ ! ಒಂದು ಸ್ತ್ರೀ ಮತ್ತೊಂದು ಸ್ತ್ರೀಯೊಡನೆ ಲಗ್ನವಾಗಿರುವುದನ್ನು ಎಲ್ಲಿಯಾದರೂ ಕೇಳಿರುವಿಯಾ ? ನಾನು ಲಿಂಗವನ್ನೇ ಪತಿಯನ್ನಾಗಿ ಭಾವಿಸಿ ನಾನು ಅದರ ಸತಿಯಾಗಿ ಶರಣಸ್ಥಲದಲ್ಲಿ ಕಾಲಕಳೆಯುತ್ತಿದ್ದೇನೆ ಹೀಗಿರುವಾಗ ನಮ್ಮೀರ್ವ-ರ ವಿವಾಹವಾದರು ಹೇಗಾಗುವುದು ?'' ಎಂದರು. ಈ ತೆರನಾಗಿ ಉದಾತ್ತ ಭಾವನೆಯಿಂದ ಅವರು ಕಾಮವನ್ನು ಗೆದ್ದ ಚರಿತೆಯು ಸುಪ್ರಸಿದ್ಧವಾಗಿದೆ. ಅಂತೆಯೇ ಶರಣಸ್ಥಿತಿಯಲ್ಲಿ ಇಂತಹ ಸತಿಪತಿಭಾವವನ್ನು ತಾಳಿ ಲೌಕಿಕ ಕ್ಷಣಿಕ ಸುಖದತ್ತ ಲಕ್ಷ್ಯ ಹರಿಸದೆ ಅಕ್ಷಯವಾದ ಪರಮಾತ್ಮನ ಆನಂದವನ್ನು ಪ್ರಾಪ್ತಿಮಾಡಿಕೊಳ್ಳುವ ಅತ್ಯಂತ ಮಹತ್ವಪೂರ್ಣ ಮಾರ್ಗವನ್ನು ಪೂಜ್ಯಪಾದರು ಈ ಶರಣಸ್ಥಲದಲ್ಲಿ ಉಪದೇಶಿಸಿದ್ದಾರೆ. ಈ ಸ್ಥಲದ ಮಹತ್ವವನ್ನು ಇನ್ನಷ್ಟು ಮತ್ತಷ್ಟು ದೃಢಪಡಿಸಲೋಸುಗ ಪೂಜ್ಯಪಾದರು–

ಪರಿಜ್ಞಾತೇ ಶಿವೇ ಸಾಕ್ಷಾತ್ ಕೋ ವಾನ್ಯಮಭಿಕಾಂಕ್ಷ್ಯತಿ ।
ನಿಧಾನೇ ಮಹತಿ ಪ್ರಾಪ್ತೇ ಕಃ ಕಾಚಂ ಯಾಚತೇಽನ್ಯತಃ ॥

(ಸಿ. ಶಿ. ೧೩–೬)

ಯೆಂಬುದಾಗಿ ಪುನಃ ಉಪದೇಶಿಸಿದ್ದಾರೆ. ಅಕ್ಷಯವಾದ ಅಮೂಲ್ಯವಾದ ರತ್ನ ಸಂಪತ್ತಿಯು ಪ್ರಾಪ್ತವಾದ ವ್ಯಕ್ತಿಯು ಹೇಗೆ ಗಾಜಿನ ಆಭರಣಗಳನ್ನು ಅಪೇಕ್ಷಿಸುವದಿಲ್ಲವೋ ಅದರಂತೆ ಶಿವನನ್ನು ಪತಿಭಾವದಿಂದ ಪ್ರಾಪ್ತಮಾಡಿಕೊಂಡ ಶರಣಸ್ಥಲದ ಸಾಧಕನು ಸಹ ಲೌಕಿಕವಾದ ಅದಾವ ಅಭಿಲಾಷೆಯನ್ನೂ ತಾಳಿಕೊಂಡಿರುವುದಿಲ್ಲ. ಯಾರ ಅಸ್ತಿತ್ವದಿಂದ ಈ ಜಗತ್ತಿಗೆ ಅಸ್ತಿತ್ವವು ಪ್ರಾಪ್ತವಾಗಿದೆಯೋ, ಯಾರ ಪ್ರಕಾಶದಿಂದ ಈ ಜಗವೆಲ್ಲವೂ ಬೆಳಗುತ್ತದೆಯೋ ಮತ್ತು ಯಾರ ಆನಂದವನ್ನು ಪಡೆದು ಈ ಪ್ರಪಂಚವೆಲ್ಲಾ ಆನಂದಮಯವಾಗಿ ತೋರುತ್ತಿರುವುದೋ, ಅಂತಹ ಸಚ್ಚಿದಾನಂದ ಸ್ವರೂಪನಾದ ಪರಶಿವನನ್ನು ಪತಿಯನ್ನಾಗಿ ಪಡೆದ ಶರಣನಿಗೆ ಅದಾವ ಸಾಂಸಾರಿಕ ಇಚ್ಛೆ ತಾನೆ ಉದ್ಭವಿಸೀತು ? ಅನೇಕ ಜನ ಭಕ್ತರು ದೇವರೆಡೆ ಹೋಗಿ ದೇವರನ್ನು ಪೂಜಿಸಿ ಧನ, ಕನಕಾದಿಗಳನ್ನೂ, ವಸ್ತುವಾಹನಗಳನ್ನೂ ಮತ್ತು ಅಧಿಕಾರ ಅಂತಸ್ತುಗಳನ್ನೂ ಬೇಡಿ

ಕೊಳ್ಳುತ್ತಾರೆ. ಆದರೆ ಶರಣಸ್ಥಲದ ಸಾಧಕನು ಮಾತ್ರ ಇಂತಹ ಸಾಮಾನ್ಯ ವಸ್ತುಗಳ ಮೋಹ ವಿಲ್ಲದ ವನಾಗಿರೋಣದರಿಂದ ಅವನಿಗೆ ಇವಾವ ವಸ್ತುಗಳ ಲೋಭವು ಅರ್ಥಾತ್ ಬಯಕೆಯು ಸಂಭವಿಸಲಾರದು. ಪ್ರಾಪಂಚಿಕವಾದ ಅದಾವ ವಸ್ತುವು ಶಾಶ್ವತ ವಾದುದಲ್ಲ ಹಾಗೂ ಅದರಿಂದ ದೊರೆಯುವ ಆನಂದವಾದರೂ ಕ್ಷಣಿಕವಾದುದೆಂಬ ವಿವೇಕವು ಈತನ ಅಂತಃಕರಣದಲ್ಲಿ ಸದಾ ಜಾಗ್ರತವಾಗಿರೋಣದರಿಂದ, ಕ್ಷಣಿಕ ಸುಖದತ್ತ ಆತನು ಮನಸ್ಸನ್ನು ಹರಿಬಿಡಲಾರ. ಬಹುಬೆಲೆಬಾಳುವ ರತ್ನವು ತನ್ನಲ್ಲಿರುವ ವ್ಯಕ್ತಿಯು ಕಾಜಿನ ಮಣಿಗಾಗಿ ತಡವರಿಸಬಹುದೇ ! ಸಾಂಸಾರಿಕ ಸಂಪತ್ತಿಗಿಂತಲೂ ಭಗವತ್ ಭಕ್ತಿರೂಪವಾದ ಸಂಪತ್ತೇ ಅತ್ಯಧಿಕವಾದುದು.

ರುದ್ರರೂಪನು, ಬುದ್ಧಿವಂತನು ಆದ ಹನುಮಂತನನ್ನು ಒಮ್ಮೆ ಯಾರೋ ಪ್ರಶ್ನಿಸಿದರಂತೆ– ಈ ಪ್ರಪಂಚದಲ್ಲಿ ಸಂಪತ್ತು ಅಂದರೆ ಯಾವುದು ಮತ್ತು ವಿಪತ್ತು ಅಂದರೆ ಯಾವುದು ? ಈ ಪ್ರಶ್ನೆಗೆ ಉತ್ತರವನ್ನೀಯುತ್ತ ಹನುಮಂತನು– ''ದೇವರನ್ನು ಸ್ಮರಿಸು ವುದೇ ಸಂಪತ್ತು, ಆತನನ್ನು ಮರೆಯುವುದೇ ವಿಪತ್ತು''ಯೆಂಬುದಾಗಿ ಉತ್ತರಿಸಿದನಂತೆ. ನೋಡಿದಿರಾ, ಸದಾಸುಖವನ್ನು ಕೊಡುವ ನಿಜವಾದ ಸಂಪತ್ತೆಂದರೆ ತನ್ನ ಇಷ್ಟವನ್ನು ಸ್ಮರಿಸುವುದಾಗಿದೆ. ಅಂತೆಯೇ ಶರಣಸ್ಥಲದ ಸಾಧಕನು ಶಿವನನ್ನು ತನ್ನ ಪತಿಯನ್ನಾಗಿ ಭಾವಿಸಿ ತಚ್ಚಿಂತನ, ತದ್‌ಧ್ಯಾನಗಳಲ್ಲಿಯೇ ತೊಡಗಿರೋಣದರಿಂದ ಆತನಿಗೆ ಬೇರಾವುದ ರಲ್ಲಿಯೂ ಅಭಿರುಚಿ ಇರದು. ಇದೇ ವಿಷಯವನ್ನೇ ಇನ್ನಷ್ಟು ಸ್ಪಷ್ಟಪಡಿಸುತ್ತ ಪೂಜ್ಯಪಾದ ರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಶಿವಾನಂದಂ ಸಮಾಸಾದ್ಯ ಕೋ ವಾನ್ಯಮುಪತಿಷ್ಠತೇ ।
ಗಂಗಾಮೃತಂ ಪರಿತ್ಯಜ್ಯ ಕಃ ಕಾಂಕ್ಷೇನ್ಮೃಗತೃಷ್ಣಿಕಾಮ್ ॥

(ಸಿ. ಶಿ. ೧೩–೭)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಉಸುಕಿನ ಪ್ರದೇಶದಲ್ಲಿ ಮಧ್ಯಾಹ್ನದ ಬಿಸಿಲು ಬಿದ್ದಾಗ ಆ ಬಿಸಿಲಿನ ಝಳವು ದೂರದಿಂದ ನೀರಿನಂತೆ ತೋರು ತ್ತದೆ. ಅಡವಿಯಲ್ಲಿಯ ಚಿಗರೆಗಳು ಇದರ ವಿವೇಕ ಇಲ್ಲದ್ದರಿಂದ ನೀರೆಂಬುದಾಗಿ ಭಾವಿಸಿ ಓಡುವುದನ್ನು ಕಾಣುತ್ತೇವೆ. ಹೀಗೆ ಆ ಬಿಸಿಲಿನ ಝಳವು ಮೃಗಗಳಿಗೆ ನೀರಾಗಿ ತೋರಿದ್ದ ರಿಂದ ಅದನ್ನು ಮೃಗಜಲ, ಮೃಗ ಮರೀಚಿಕಾ ಮತ್ತು ಮೃಗತೃಷ್ಣಿಕಾ ಮುಂತಾದ ಪರ್ಯಾಯ ಶಬ್ದಗಳಿಂದ ಕರೆಯುತ್ತಾರೆ. ಓರ್ವ ನೀರಡಿಸಿದ ವ್ಯಕ್ತಿಗೆ ಅಮೃತ ಸದೃಶವಾದ ಗಂಗಾಜಲವು ದೊರೆತಾಗ, ಆ ಗಂಗಾಜಲವನ್ನು ಬಿಟ್ಟು, ಆ ಮೃಗಜಲವನ್ನು ಬುದ್ಧಿವಂತನಾದವನು ಬೆನ್ನುಹತ್ತಬಹುದೇ ಅರ್ಥಾತ್ ಹೇಗೆ ಅದನ್ನು ಹಿಂಬಾಲಿಸುವುದಿಲ್ಲವೋ, ಅದರಂತೆ ಈ ಶರಣಸ್ಥಲದ ಸಾಧಕನು ಶಿವನಲ್ಲಿ ಪತಿಭಾವನೆಯನ್ನು ತಾಳಿ ಶಿವಾನಂದವನ್ನು ಪಡೆದು ಕೊಂಡಿರುವಾಗ ಅವನ ಮನದಲ್ಲಿ ಬೇರೆ ಅದಾವ ಅಭಿಲಾಷೆಯು ಉದಿಸಲಾರದು.

ಅಜ್ಞಾನವೆಂಬ ಅಂಧಕಾರವನ್ನು ದೂರಮಾಡಿಕೊಳ್ಳಲು ಶಿವಜ್ಞಾನದ ಹೊರತಾಗಿ ಬೇರೊಂದು ಸಾಧನೆಯಿಲ್ಲ. ಇದನ್ನೇ ಸ್ಪಷ್ಟಪಡಿಸುತ್ತ ಪೂಜ್ಯರು–

ಸಂಸಾರತಿಮಿರಚ್ಛೇದೇ ವಿನಾ ಶಂಕರಭಾಸ್ಕರಮ್ ।
ಪ್ರಭವಂತಿ ಕಥಂ ದೇವಾಃ ಖದ್ಯೋತಾ ಇವದೇಹಿನಾಮ್ ॥

(ಸಿ. ಶಿ. ೧೩–೮)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಘನಘೋರವಾದ ಕತ್ತಲೆಯು ದೂರವಾಗಬೇಕಾದರೆ, ಪ್ರಖರ ಪ್ರಕಾಶದ ಭಾಸ್ಕರನ ಉದಯವು ಅವಶ್ಯಕವಾದುದು. ಸೂರ್ಯಪ್ರಕಾಶವಿಲ್ಲದೆ ಮಿಂಚುಹುಳದ ಅಲ್ಪಪ್ರಕಾಶದಿಂದ ಆ ಕತ್ತಲೆಯು ಅದೆಂದು ದೂರಾಗಲಾರದು. ಇದೇ ತೆರನಾಗಿ ಅಹಂಕಾರ ಮಮಕಾರ ರೂಪವಾದ ಸಂಸಾರದ ಕತ್ತಲೆಯು ದೂರವಾಗಬೇಕಾದರೆ ಶಿವನ ಹೊರತಾಗಿ ಬೇರಾರಿಂದಲೂ ಸಾಧ್ಯವಿಲ್ಲ. ಸರ್ವರ ಅಜ್ಞಾನವನ್ನು ದೂರಮಾಡುವ ದೇವನೇ ಶಿವನು. ಅಂತೆಯೇ ''ಜ್ಞಾನಮಿಚ್ಛೇತ್ತು ಶಂಕರಾತ್'' ಯೆಂಬುದಾಗಿ ಉಪದೇಶಿಸಲಾಗಿದೆ. ಸರ್ವರಿಗೂ ಸುಖದಾಯಕನಾದ ಶಂಕರನನ್ನು ಆರಾಧಿಸಿಯೇ ಬ್ರಹ್ಮ ಮತ್ತು ವಿಷ್ಣು ಮೊದಲಾದ ದೇವತೆಗಳು ತಮ್ಮ–ತಮ್ಮ ಸ್ಥಾನಗಳನ್ನು ಪಡೆದುಕೊಂಡಿರುವರಲ್ಲದೇ ತಮ್ಮ ಮೇಲೆ ಬಂದಿರುವ ಅನೇಕ ವಿಪತ್ತುಗಳನ್ನು ಸಹ ದೂರಮಾಡಿಕೊಂಡಿರುತ್ತಾರೆ. ಇದರ ಅನೇಕ ಉದಾಹರಣೆಗಳು ವಿಭಿನ್ನ ಪುರಾಣಗಳಲ್ಲಿ ದೊರೆಯುವಂಥವುಗಳಾಗಿವೆ-ಹೀಗೆ ಸರ್ವರ ಮೇಲೆ ಅನುಗ್ರಹವನ್ನು ದಯಪಾಲಿಸುತ್ತಿರುವ ಶಿವನನ್ನೇ ತನ್ನ ಪತಿಯನ್ನಾಗಿ ಭಾವಿಸಿದ ಶರಣಸ್ಥಲದ ಸಾಧಕನಿಗೆ ಶಿವನ ಹೊರತಾಗಿ ಬೇರಾವ ದೇವರ ಪೂಜೆಯು ಅವಶ್ಯಕವಾದುದಲ್ಲ. ಈ ತೆರನಾಗಿ ಸರ್ವ ದೇವತೆಗಳಿಂದ ವಿಮುಖನಾಗಿ ಕೇವಲ ಶಿವನತ್ತ ಸಮ್ಮುಖನಾದ ಸಾಧಕನೇ ಶರಣನೆಂಬುದಾಗಿ ತಿಳಿದುಕೊಳ್ಳಬೇಕು. ಇದನ್ನೇ ಮತ್ತಷ್ಟು ಸ್ಪಷ್ಟಪಡಿಸುತ್ತ ಪೂಜ್ಯರು–

ಸಂಸಾರಾರ್ತಃ ಶಿವಂ ಯಾಯಾದ್ ಬ್ರಹ್ಮಾದ್ಯೈಃ ಕಿಂ ಫಲಂ ಸುರೈಃ ।
ಚಕೋರಸ್ತೃಷಿತಃ ಪಶ್ಯೇಚ್ಚಂದ್ರಂ ಕಿಂ ತಾರಕಾ ಅಪಿ ॥

(ಸಿ. ಶಿ. ೧೩–೯)

ಈ ವಿಧವಾಗಿ ಬೋಧಿಸಿದ್ದಾರೆ. ಶಿವನಿಗೆ ಶರಣಾಗತನಾಗದ ಹೊರತು ಸಂಸಾರ ದುಃಖದಿಂದ ಅದಾರು ಮುಕ್ತರಾಗಲು ಸಾಧ್ಯವಿಲ್ಲ. ಆದ್ದರಿಂದ ಬೇರೆ ಬೇರೆ ದೇವರನ್ನು ಮನಸ್ಸಿನಲ್ಲಿ ಭಾವಿಸುವುದಕ್ಕಿಂತ ಶಿವನಿಗೇನೇ ಶರಣಾಗತರಾಗಬೇಕು. ಚಂದ್ರ ಕಿರಣದಲ್ಲಿಯ ಅಮೃತವನ್ನು ಸದಾ ಸೇವಿಸುತ್ತ ಬಂದಿರುವ ಚಕೋರ ಪಕ್ಷಿಯು ಚಂದ್ರನ ಉದಯವನ್ನೇ ನಿರೀಕ್ಷಿಸುತ್ತಾ ಕೂಡ್ರುವುದೇ ವಿನಃ ಆಕಾಶದಲ್ಲಿಯ ನಕ್ಷತ್ರಗಳತ್ತ ಅದು ಗಮನಹರಿಸದು. ಚಕೋರ ಪಕ್ಷಿಯ ಅಭಿಲಾಷೆಯನ್ನು ಪೂರ್ಣ ಮಾಡುವಲ್ಲಿ ಚಂದ್ರಮನೇ ಸಮರ್ಥನಾಗಿರುವಂತೆ, ಸಂಸಾರದಲ್ಲಿ ದುಃಖಿಗಳಾದ ಜೀವಿಗಳ ದುಃಖವನ್ನು ದೂರಮಾಡಿ ಸದಾ ಆನಂದವನ್ನು ದಯಪಾಲಿಸುವಲ್ಲಿ ಶಿವನೋರ್ವನೇ ಸಮರ್ಥನೇ ವಿನಃ ಬೇರಾರು ಸಮರ್ಥರಲ್ಲರೆಂಬ ದೃಢವಾದ ಭಾವನೆಯಿಂದ ಶಿವನೋರ್ವನನ್ನೇ ಪತಿಯನ್ನಾಗಿ ನಂಬಿದ ಸಾಧಕನೇ ಶರಣನೆಂಬುದಾಗಿ ತಿಳಿದುಕೊಳ್ಳಬೇಕು.

ಈ ಸಂಸಾರದಲ್ಲಿ ಶಿವನು ಸುಖಕ್ಕಿಂತ ದುಃಖವನ್ನೇ ಅಧಿಕವಾಗಿರಿಸಿದ್ದಾನೆ. ಇದರ ಮುಖ್ಯವಾದ ಪ್ರಯೋಜನವೆಂದರೆ, ಜೀವಿಗಳನ್ನು ತನ್ನತ್ತ ಆಕರ್ಷಿಸುವುದೇ ಆಗಿದೆ.

ದುಃಖಗಳು ಆವರಿಸದ ವಿನಃ ಆದಾರೂ ದೇವರ ಬಳಿ ಹೋಗಲಾರರು ಅಂತೆಯೇ ಓರ್ವ ಹಿಂದೀ ಕವಿಯು–

ದುಃಖಮೇ ಸುಮಿರನ ಸಬಕರೇ । ಸುಖಮೇ ಕರೇ ನ ಕೋಯ ॥
ಯದಿ ಸುಖಮೇ ಸುಮಿರನ ಕರೇ ದುಃಖಕಾಹೇಕೋಹೋಯ ॥

ಈ ರೀತಿಯಾಗಿ ಹೇಳಿದ್ದಾನೆ. ತಾತ್ಪರ್ಯವೇನೆಂದರೆ, ದುಃಖ ಬಂದಾಗ ಎಲ್ಲರೂ ದೇವರನ್ನು ನೆನೆಸುತ್ತಾರೆ. ಆದರೆ ಸುಖ ಬಂದೊಡನೆ ಆತನನ್ನು ಮರೆತುಬಿಡುತ್ತಾರೆ. ಒಂದು ವೇಳೆ ಸುಖವಿದ್ದಾಗಲೂ ದೇವರನ್ನು ಸ್ಮರಿಸುತ್ತಿದ್ದರೆ ದುಃಖವಾದರು ಏಕೆ ಬರುತ್ತಿತ್ತು? ಯೆಂಬುದು ಈ ಕವಿಯ ಆಶಯವಾಗಿದೆ. ಸಂಸಾರದಲ್ಲಿಯ ದುಃಖವನ್ನು ಸಾಧಕನಾದವನು ಈಶ್ವರನ ಅನುಗ್ರಹವೆಂದೇ ಭಾವಿಸಬೇಕು. ಸಂಸಾರದಲ್ಲಿಯ ದುಃಖಗಳೇ ದೇವರ ಭಕ್ತಿಗೆ ಮೂಲಗಳಾಗಿವೆ. ಅಂತೆಯೇ ದುಃಖಿಯಾದ ಪ್ರತಿಯೊಬ್ಬನು ಅನನ್ಯಗತಿಕನಾಗಿ ದೇವರಿಗೇನೇ ಶರಣುಹೋಗುತ್ತಾನೆ. ಆದ್ದರಿಂದಲೇ ಭಗವದ್ಗೀತೆ ಯಲ್ಲಿಯು ಸಹ ಭಕ್ತರ ಪ್ರಕಾರವನ್ನು ವಿವರಿಸುವಾಗ ಆರ್ತಭಕ್ತನನ್ನೇ ಪ್ರಥಮ ಭಕ್ತನನ್ನಾಗಿ ಪರಿಗಣಿಸಲಾಗಿದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ದುಃಖಿಯಾದ ಮನುಷ್ಯನು ಶಿವನನ್ನೇ ಶರಣು ಹೋಗಬೇಕು ಎಂಬುದಾಗಿ ತಿಳಿಯಪಡಿಸಿ ಕೊನೆಯದಾಗಿ ಅದನ್ನೇ–

ಶಿವ ಏವ ಸಮಸ್ತಾನಾಂ ಶರಣ್ಯಃ ಶರಣಾರ್ಥಿನಾಮ್ ।
ಸಂಸಾರೋರಗದಷ್ಟಾನಾಂ ಸರ್ವಜ್ಞಃ ಸರ್ವದೋಷಹಾ ॥

ಶಿವಜ್ಞಾನೇ ಸಮುತ್ಪನ್ನೇ ಪರಾನಂದಃ ಪ್ರಕಾಶತೇ ।
ತದಾಸಕ್ತಮನಾ ಯೋಗೀ ನಾನ್ಯತ್ರ ರಮತೇ ಸುಧೀಃ ॥

ತಸ್ಮಾತ್ ಸರ್ವಪ್ರಯತ್ನೇನ ಶಂಕರಂ ಶರಣಂ ಗತಃ ॥
ತದನಂತಸುಖಂ ಪ್ರಾಪ್ಯ ಮೋದತೇ ನಾನ್ಯ ಚಿಂತಯಾ ॥

(ಸಿ. ಶಿ. ೧೩; ೧೦–೧೨)

ಈ ರೀತಿಯಾಗಿ ಬೋಧಿಸಿದ್ದಾರೆ. ಜನನ ಮರಣಾತ್ಮಕವಾದ ಸಂಸಾರ ರೋಗದಿಂದ ಪೀಡಿತರಾದವರಿಗೆ ಅವರ ಆ ಎಲ್ಲ ದೋಷಗಳನ್ನು ದೂರಮಾಡಲು ಸಮರ್ಥನು, ಸರ್ವಜ್ಞನು ಆದ ಶಿವನಿಗೇನೇ ಪ್ರತಿಯೊಬ್ಬರು ಶರಣುಹೋಗಬೇಕು. ಆವ ನೋರ್ವನೇ ಶರಣಾಗತ ರಕ್ಷಕನಾಗಿದ್ದಾನೆ. ಹೀಗೆ ಅನನ್ಯ ಭಾವದಿಂದ ಶರಣು ಹೋದ ಶರಣನಿಗೆ ಶಿವಜ್ಞಾನವು ಸಮುತ್ಪನ್ನವಾಗಿ ಅದರಿಂದ ಅವನಿಗೆ ಪರಮಾನಂದ ಪ್ರಾಪ್ತವಾಗು ವುದು. ಈ ತೆರನಾಗಿ ಪರಮಾನಂದವನ್ನು ಪಡೆದ ಶರಣನು ಶಿವನಲ್ಲಿಯೇ ಆಸಕ್ತವಾದ ಚಿತ್ತವುಳ್ಳವನಾಗುವನಲ್ಲದೇ ಬೇರಾವ ವಿಷಯದಲ್ಲಿ ಅವನ ಮನಸ್ಸು ಸಮಾಧಾನ ಹೊಂದಲಾರದು. ಹೀಗೆ ಶರಣಸ್ಥಲದ ಸಾಧಕನು ಅನಂತ ಪ್ರಯತ್ನಗಳನ್ನು ಮಾಡಿ ಶಿವನಿಗೇನೇ ಶರಣಾಗತನಾಗಿ ಬೇರೆಲ್ಲಿಯೂ ಚಿತ್ತವನ್ನು ಹರಿಸದೆ ಅನನ್ಯ ಭಾವದಿಂದ ಆ ಶಿವಾನಂದವನ್ನೇ ಆಸ್ವಾದಿಸುತ್ತಾ ಆನಂದವಾಗಿರುತ್ತಾನೆ. ಹೀಗೆ ಆನಂದ ಭಕ್ತಿಯಿಂದ

ಶಿವಾನಂದವನ್ನು ಪಡೆದು ಆ ಶಿವನನ್ನು ತನ್ನ ಪತಿಯನ್ನಾಗಿ ಭಾವಿಸಿ ತದೇಕಚಿತ್ತನಾಗಿರುವ ಸಾಧಕನಿಗೆ ಪೂಜ್ಯಪಾದರು ಶರಣನೆಂಬುದಾಗಿ ಸಂಬೋಧಿಸಿದ್ದಾರೆ. ಇಂತಹ ಶರಣ ಸ್ಥಿತಿಯು ಸರ್ವ ಶ್ರೋತೃವರ್ಗಕ್ಕೆ ಪ್ರಾಪ್ತವಾಗಲೆಂಬುದಾಗಿ ಅನುಗ್ರಹಿಸಿ ಇಂದಿನ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೮ ಎಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)

■■

ಆಶೀರ್ವಚನ-೧

# ತಾಮಸನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವಾದ ಶ್ರೀ ಸಿದ್ಧಾಂತ ಶಿಖಾಮಣಿಯ ಶರಣಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಇದರ ಮೊದಲನೇ ಅವಾಂತರಸ್ಥಲವಾದ ಶರಣಸ್ಥಲದ ಬಗ್ಗೆ ವಿವೇಚಿಸಲಾಗಿದೆ. ಇಂದು ಅದರ ಎರಡನೇ ಅವಾಂತರಸ್ಥಲವಾದ ತಾಮಸನಿರಸನಸ್ಥಲದ ಬಗ್ಗೆ ಪರ್ಯಾಲೋಚಿಸೋಣ. ಪೂಜ್ಯಪಾದರು–

ಶಿವಾಸಕ್ತಪರಾನಂದಮೋದಿನಾ ಗುರುಣಾ ಯತಃ ।
ನಿರಸ್ಯಂತೇ ತಮೋಭಾವಾಃ ಸ ತಾಮಸನಿರಾಸಕಃ ॥

(ಸಿ. ಶಿ. ೧೩–೧೩)

ಈ ರೀತಿಯಾಗಿ ಶರಣನ ತಾಮಸನಿರಾಸಕತ್ವ ಸ್ವರೂಪವನ್ನು ವಿವರಿಸಿದ್ದಾರೆ. ಅವರ ಉಕ್ತಿಯಂತೆ ಯಾವಾತನು ತಮೋಗುಣದ ಪರಿಣಾಮಗಳಾದ ನಿದ್ರಾ, ಆಲಸ್ಯ, ಕಲಹ ಮತ್ತು ಮೋಹಾದಿ ವಿಕಾರಗಳನ್ನು ನಿವಾರಣ ಮಾಡಿಕೊಳ್ಳುತ್ತಾನೆಯೋ, ಅಂತಹ ಶರಣನಿಗೇನೇ ತಾಮಸನಿರಾಸಕನೆಂಬುದಾಗಿ ಕರೆಯುತ್ತಾರೆ.

ಶರಣಸ್ಥಲದ ಸಾಧಕನು ಶಿವನಲ್ಲಿಯೇ ಸದಾ ಆಸಕ್ತವಾದ ಮನಸ್ಕನಾಗಿರೋಣದರಿಂದ ಆತನ ಮನಸ್ಸಿಗೆ ಸದಾ ಪರಮಾನಂದಾನುಭೂತಿಯೇ ಆಗುತ್ತಿರುತ್ತದೆ. ಇಂತಹ ಆನಂದಾನುಭವದಲ್ಲಿ ತಲ್ಲೀನನಾದ ಆತನಿಗೆ ತಮೋಗುಣದ ವಿಕಾರಗಳಾದ ನಿದ್ರಾ, ಆಲಸ್ಯ ಮತ್ತು ಕಲಹಾದಿಗಳು ಆವನ ಮೇಲೆ ಯಾವ ಪರಿಣಾಮವನ್ನೂ ಬೀರಲಾರವು. ಕದಾಚಿತ್ ಶರೀರದ ಗುಣಧರ್ಮಾನುಸಾರವಾಗಿ ಆ ತಮೋಗುಣದ ವಿಕಾರಗಳು ಇವನ ಮೇಲೆ ಆಕ್ರಮಣವನ್ನು ಮಾಡಿದರೂ ಅವುಗಳನ್ನು ಆತನು ತನ್ನ ವಿವೇಕದಿಂದ ಸಹಜವಾಗಿ ದೂರಮಾಡಿಕೊಳ್ಳುತ್ತಾನೆ. ಅಂತೆಯೇ ಈತನಿಗೆ ತಾಮಸ ನಿರಾಸಕನೆಂಬುದಾಗಿ ಕರೆದಿದ್ದಾರೆ.

ಶರಣಸ್ಥಲವನ್ನು ತಲುಪಿದರೂ ಸಹ ತಮೋವಿಕಾರಗಳು ಈತನನ್ನು ಕಾಡಬಹುದೇ ? ಎಂಬ ಪ್ರಶ್ನೆಯು ಉದ್ಭವಿಸುವುದು ಸಹಜ. ಆದರೆ ಶರೀರಧಾರಿಯಾದ ಪ್ರತಿಯೊಬ್ಬನಲ್ಲಿಯೂ ಪ್ರಕೃತಿಜನ್ಯಗಳಾದ ಗುಣಗಳು ಅವಶ್ಯವಾಗಿರುತ್ತವೆ. ಪ್ರಕೃತಿಯಲ್ಲಿ ಸತ್ತ್ವ, ರಜ ಮತ್ತು ತಮಗಳೆಂಬ ಮೂರು ಗುಣಗಳಿರುವವು. ಈ ಮೂರು ಗುಣಗಳ ಸಾಮ್ಯಾವಸ್ಥೆಗೇನೇ ಪ್ರಕೃತಿಯೆಂಬುದಾಗಿ ಶಾಸ್ತ್ರಕಾರರು ಕರೆದಿದ್ದಾರೆ. ಮನುಷ್ಯ ದೇಹ

ದಲ್ಲಿ ಈ ತ್ರಿಗುಣಗಳಾಗಲೀ, ವಾತ-ಪಿತ್ತ ಮತ್ತು ಕಫಗಳೆಂಬ ತ್ರಿದೋಷಗಳಾಗಲೀ ಸಾಮ್ಯಾವಸ್ಥೆಯಲ್ಲಿ ಇರುವುದಿಲ್ಲ. ಇವುಗಳ ವಿಷಮಾವಸ್ಥೆಯ ಪರಿಣಾಮವಾಗಿ ಮನುಷ್ಯನ ಪ್ರಕೃತಿಯು ವಿಕೃತಾವಸ್ಥೆಯನ್ನು ಹೊಂದುವಂಥಾದ್ದಾಗುತ್ತದೆ. ಮನುಷ್ಯನ ಅಂತಃಕರಣ ದಲ್ಲಿಯ ಈ ತ್ರಿಗುಣಗಳಲ್ಲಿ ಯಾವುದಾದರೊಂದು ಗುಣಗಳ ಪ್ರಾಬಲ್ಯವಿದ್ದು ಉಳಿದೆರಡು ಗುಣಗಳು ಅದರ ಅಧೀನದಲ್ಲಿ ಇರುತ್ತವೆ. ಉದಾಹರಣಾರ್ಥವಾಗಿ ಒಂದು ವ್ಯಕ್ತಿಯಲ್ಲಿ ಸತ್ವಗುಣವು ಅಧಿಕವಾಗಿದ್ದರೆ ಉಳಿದೆರಡು ರಜ, ತಮಗುಣಗಳು ಆ ಸತ್ವ ಗುಣದ ಅಧೀನದಲ್ಲಿರುತ್ತವೆ. ಇದರಂತೆ ರಜೋಗುಣದ ಪ್ರಾಬಲ್ಯವಿದ್ದಲ್ಲಿ ಸತ್ವ-ತಮೋ ಗುಣಗಳು ಆ ರಜೋಗುಣದ ಅಧೀನದಲ್ಲಿರುತ್ತವೆ. ಹಾಗೆಯೇ ತಮೋಗುಣದ ಪ್ರಾಬಲ್ಯವಿದ್ದಲ್ಲಿ ಸತ್ತ್ವ ಹಾಗೂ ರಜೋಗುಣಗಳು ಆ ತಮೋಗುಣದ ಅಧೀನದಲ್ಲಿದ್ದು ತಮ್ಮ ಕಾರ್ಯಗಳನ್ನು ಮಾಡುತ್ತವೆ.

ಶರಣಸ್ಥಲದಲ್ಲಿಯ ಸಾಧಕನ ಮನಸ್ಸಿನಲ್ಲಿ ಸತ್ತ್ವಗುಣದ ಪ್ರಾಬಲ್ಯವಿದ್ದು ರಜ ಹಾಗೂ ತಮೋಗುಣಗಳು ಅಲ್ಪ ಪ್ರಮಾಣದಲ್ಲಿ ಆತನ ಅಂತಃಕರಣದಲ್ಲಿರುತ್ತವೆ. ಸಾತ್ವಿಕ ನಾದ ವ್ಯಕ್ತಿಯಲ್ಲಿ ಇರುವ ಈ ಅಲ್ಪಪ್ರಮಾಣದ ರಜೋ ತಮೋಗುಣಗಳು ತಮ್ಮ ಅಲ್ಪ ಪ್ರಮಾಣದ ಪ್ರಭಾವವನ್ನುಂಟು ಮಾಡದೇ ಇರಲಾರವು. ಹಾವಿನ ಹಲ್ಲಿನಲ್ಲಿ, ಚೇಳಿನ ಕೊಂಡಿಯಲ್ಲಿ ವಿಷವಿರುವುದು ಸರ್ವಶ್ರುತವಾದುದು. ವಿಷ ಒಂದೇ ಆದರೂ ಹಾವಿನ ವಿಷವು ಅತಿ ತೀಕ್ಷ್ಣವಾದುದಾದರೆ, ಚೇಳಿನ ವಿಷವು ಅಲ್ಪಪ್ರಮಾಣದಲ್ಲಿಯಾದರೂ ದುಷ್ಪ್ರಭಾವವನ್ನು ಮಾಡಿಯೇ ಮಾಡುತ್ತದೆ. ಹಾವು ಕಚ್ಚಿದವನಿಗೆ ಮರಣದಂಥಾ ದೊಡ್ಡ ಅಪಘಾತವುಂಟಾದರೆ, ಚೇಳು ಕಡಿದವನಿಗೆ ಪ್ರಾಣ ಹಾನಿಯಾಗದಿದ್ದರೂ ಅವನು ಸ್ವಸ್ಥ ನಾಗಿ ಒಂದು ಸ್ಥಾನದಲ್ಲಿ ಕೂಡ್ರದೆ ಅದರ ವೇದನೆಯಿಂದ ಬಳಲುವುದು ಮಾತ್ರ ತಪ್ಪುವುದಿಲ್ಲ. ಚೇಳಿನ ವಿಷವು ಅತ್ಯಂತ ಭಯಾವಹ ಅಲ್ಲದಿದ್ದರೂ ಅಲ್ಪ ಪ್ರಮಾಣದಲ್ಲಿ ತನ್ನ ದುಷ್ಪ್ರಭಾವವನ್ನು ಮಾಡುವುದನ್ನು ಕಾಣುತ್ತೇವೆ. ಅದರಂತೆ ಶರಣಸ್ಥಲದಲ್ಲಿ ಸಾತ್ವಿಕ ಜೀವನವನ್ನು ಸಾಗಿಸುತ್ತಿರುವ ಶರಣನ ಮನದಲ್ಲಿರುವ ಅಲ್ಪಪ್ರಮಾಣದ ರಜ-ತಮೋ ಗುಣಗಳೂ ತಮ್ಮ ದುಷ್ಪ್ರಭಾವವನ್ನು ಆಗಾಗ್ಗೆ ತೋರಿಸುತ್ತಲೇ ಇರುತ್ತವೆ. ಮನಸ್ಸಿನ ಮೇಲೆ ಇವುಗಳ ಪ್ರಭಾವವುಂಟಾದಾಗ ಸಾಧಕನು ಪಥಭ್ರಷ್ಟನಾಗುವ ಸಂಭವವಿರುವುದು. ಅಂತಹ ಸಂದರ್ಭಗಳು ಬಂದೊದಗಿದಾಗ ಆ ಗುಣ ಪ್ರಭಾವದೊಂದಿಗೆ ತಾನು ಹರಿದು ಹೋಗದೆ ಎಚ್ಚರನಾಗಿ ಆ ಪ್ರಭಾವವನ್ನು ದೂರಮಾಡಿಕೊಳ್ಳಲು ಪ್ರಯತ್ನಿಸಿದಾಗಲೇ ಸಾಧಕನ ಸಾಧನೆಯು ಮುಂದೆ ಸಾಗುವುದು. ಅಂತೆಯೇ ಪೂಜ್ಯಪಾದರು ಈ ತೆರನಾಗಿ ತನ್ನ ತಾಮಸ ಪ್ರಭಾವವನ್ನು ದೂರಮಾಡಿಕೊಳ್ಳಲು ಪ್ರಯತ್ನಿಸುವ ಶರಣಸ್ಥಲದ ಸಾಧಕ ನಿಗೆ ತಾಮಸನಿರಾಸಕನೆಂಬುದಾಗಿ ಕರೆದಿದ್ದಾರೆ.

ನಮ್ಮ ದೇಶದ ಅನೇಕ ಶರಣರು ಹಾಗೂ ಸಂತರು ತಮ್ಮ ಅನುಭವದ ನುಡಿಗಳಲ್ಲಿ ತಮ್ಮ ತಮ್ಮ ಅಂತಃಕರಣದಲ್ಲಿಯ ದೋಷಗಳನ್ನು-

೧) ಎನ್ನ ಚಿತ್ತ ಅತ್ತಿಯಹಣ್ಣು ನೋಡಯ್ಯ
ಒಳಗೆ ನೋಡಿದರೆ ಹುರುಳಿಲ್ಲವಯ್ಯ....... ಬಸವೇಶ್ವರ

೨) ಮನವೆಂಬ ಮರ್ಕಟವು ತನುವೆಂಬ ವೃಕ್ಷವನೇರಿ
.................... ಷಣ್ಮುಖ ಶಿವಯೋಗಿ

೩) ಮನವೆಂಬ ಮರ್ಕಟನ ತಡೆಯಲಾರೆನು ದೇವಾ
...................... ಸರ್ಪಭೂಷಣ ಶಿವಯೋಗಿ

೪) ಬುರಾ ಜೋ ದೇಖನ ಮೈ ಚಲಾ ಬುರಾ ಮಿಲಿಯಾ ನ ಕೋಯ್ ।
ಜೋ ದಿಲ ಖೋಜೋ ಅಪನಾ ಮುಝುಸಾ ಬುರಾ ನ ಕೋಯ್ ॥
................................ ಸಂತ ಕಬೀರದಾಸ

ಈ ರೀತಿಯಾಗಿ ಸಮಾಜದ ಮುಂದೆ ಎತ್ತಿಹೇಳಿರುವುದನ್ನು ಕಾಣುತ್ತೇವೆ. ಅನ್ಯರೆದುರಿಗೆ ತಮ್ಮ ದೋಷಗಳನ್ನು ಹೇಳಿಕೊಳ್ಳುವುದೆಂದರೆ ಆ ದೋಷಗಳನ್ನು ದೂರಮಾಡಿಕೊಳ್ಳುವ ಒಂದು ಉಪಾಯವೇ ಆಗಿದೆ. ನಮ್ಮ ದೋಷಗಳನ್ನು ಪ್ರಕಟಪಡಿಸದೇ ಇದ್ದಾಗ, ಅವು ನಮ್ಮಲ್ಲಿಯೇ ಉಳಿದುಕೊಳ್ಳುತ್ತವೆ. ಅವುಗಳನ್ನು ಪ್ರಕಟಪಡಿಸಿದಾಗ ಅವು ಸಹಜವಾಗಿ ದೂರವಾಗುತ್ತವೆ. ತಮ್ಮ ದೋಷಗಳನ್ನು ಪ್ರಕಟಪಡಿಸುವ ಸಾಮರ್ಥ್ಯವು ಎಲ್ಲರಿಗೂ ಇರುವುದಿಲ್ಲ, ಎಲ್ಲರೂ ಅನ್ಯರ ದೋಷವನ್ನು ಹೇಳುವವರೇ ವಿನಃ ತಮ್ಮ ದೋಷವನ್ನು ಹೇಳುವವರ ಸಂಖ್ಯೆ ಅತಿ ವಿರಳ. ದೇವರ ಮುಂದೆ, ಸದ್ಗುರುಗಳ ಮುಂದೆ ಮತ್ತು ಸಮಾಜದ ಮುಂದೆ ತಮ್ಮ ದೋಷಗಳನ್ನು ಎತ್ತಿ ಹೇಳಿದವರೇ ಸಂತರು, ಶರಣರು ಎನಿಸಿಕೊಂಡಿದ್ದಾರೆ. ಅಂತೆಯೇ ಮೇಲೆ ಉದಾಹರಿಸಿದ ಸಂತರ ಹಾಗೂ ಶರಣರ ವಚನ ಗಳಲ್ಲಿ ಆ ಭಾವನೆಗಳನ್ನು ಕಾಣುತ್ತೇವೆ. ಈ ತೆರನಾಗಿ ಶರಣನಾದವನು ತನ್ನ ಮನೋ ಪಟಲದ ಮೇಲೆ ಆಗಾಗ ಎದ್ದುಕಾಣುವ ರಜ–ತಮೋಗುಣಗಳ ಕಲಂಕವನ್ನು ಸದಾ ದೂರಮಾಡಿಕೊಳ್ಳುವ ಪ್ರಯತ್ನದಲ್ಲಿರುತ್ತಾನೆ. ಇಂತಹ ಪ್ರಯತ್ನಶೀಲನಾದ ಶರಣನಿಗೇನೇ ತಾಮಸನಿರಾಸಕನೆಂದು ಕರೆದಿದ್ದಾರೆ.

ತಮೋಗುಣದಿಂದ ಉಂಟಾಗುವ ದುಷ್ಪರಿಣಾಮಗಳಾವುವು. ಆ ತಮೋಗುಣವನ್ನು ಏಕೆ ತಾನೆ ನಿರಸನ ಮಾಡಿಕೊಳ್ಳಬೇಕು ಎಂಬ ಜಿಜ್ಞಾಸೆಯುದಿಸಿದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಯಸ್ಯ ಜ್ಞಾನಂ ತಮೋಮಿಶ್ರಂ ನ ತಸ್ಯ ಗತಿರಿಷ್ಯತೇ ।
ಸತ್ತ್ವಂ ಹಿ ಜ್ಞಾನಯೋಗಸ್ಯ ನೈರ್ಮಲ್ಯಂ ವಿದುರುತ್ತಮಾಃ ॥

(ಸಿ. ಶಿ. ೧೩–೧೪)

ಈ ವಿಧವಾಗಿ ಉಪದೇಶಿಸಿದ್ದಾರೆ. ಯಾವಾತನ ಜ್ಞಾನವು ನಿರ್ಮಲವಾಗಿರದೆ ತಮೋಗುಣ ಮಿಶ್ರವಾಗಿರುತ್ತದೆಯೋ, ಅಂಥವನಿಗೆ ಸಂಸಾರಬಂಧನವಲ್ಲದೆ ಮುಕ್ತಿಯು ಪ್ರಾಪ್ತಿಯಾಗುವುದಿಲ್ಲ. ಶುದ್ಧವಾದ ಸತ್ವಗುಣವೇ ಜ್ಞಾನಯೋಗಕ್ಕೆ ನಿರ್ಮಲವಾದ ಸಾಧನವಾದ್ದರಿಂದ ಶರಣನಾದವನು ತನ್ನಲ್ಲಿಯ ಅವಶಿಷ್ಟವಾದ ತಮೋಗುಣವನ್ನು ನಿರಾಕರಿಸಿಕೊಳ್ಳಬೇಕೆಂದು ಭಗವತ್ಪಾದರ ಆಶಯವಾಗಿದೆ. ಆದ್ದರಿಂದ ಶರಣನು ತಾಮಸ ನಿರಾಸವನ್ನು ಮಾಡಿಕೊಳ್ಳಲೇಬೇಕಾಗುವುದು. ಮಾದಕ ಪದಾರ್ಥಗಳನ್ನು ಸೇವಿಸಿದ ವ್ಯಕ್ತಿಯು ಲೌಕಿಕ ಜೀವನದಲ್ಲಿ ಅನರ್ಥವನ್ನು ಅನುಭವಿಸಿ ಪ್ರಗತಿಯನ್ನು ಸಾಧಿಸದಿರು

ವಂತೆ ತಮೋಗುಣಯಾದ ಶರಣನ ಪ್ರಗತಿಯೂ ಸಹ ಆಗುವುದಿಲ್ಲವೆಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು.

ಒಂದಾನೊಂದು ಸಮಯದಲ್ಲಿ ನಾಲ್ಕು ಜನ ಮಿತ್ರರು ನೌಕಾಯಾನ ಮುಖಾಂತರ ಪ್ರಯಾಗ ಕ್ಷೇತ್ರದಿಂದ ಕಾಶೀ ಕ್ಷೇತ್ರಕ್ಕೆ ಹೋಗುವುದಾಗಿ ನಿಶ್ಚಯಿಸಿ ಪೌರ್ಣಿಮೆಯ ಬೆಳದಿಂಗಳಲ್ಲಿ ಪ್ರಯಾಗದ ತ್ರಿವೇಣಿ ಸಂಗಮಕ್ಷೇತ್ರಕ್ಕೆ ಬಂದು ಒಂದು ಸುಂದರವಾದ ನೌಕೆಯಲ್ಲಿ ಕುಳಿತು ಪ್ರಯಾಣವನ್ನು ಬೆಳೆಸಿದರು. ಅವರು ನಾಲ್ವರೂ ನೌಕೆಯಲ್ಲಿ ಕೂಡ್ರುವ ಮೊದಲು ಯಥೇಚ್ಛವಾಗಿ ಭಾಂಗ ಸೇವಿಸಿ ಅದರ ಅಮಲಿನಲ್ಲಿಯೇ ನೌಕೆಯನ್ನೇರಿ ಇಬ್ಬಿಬ್ಬರು ಪಾಳೆಯ ಪ್ರಕಾರ ಹುಟ್ಟು ಹಾಕತೊಡಗಿದರು. ರಾತ್ರಿಯೆಲ್ಲ ಹುಟ್ಟು ಹಾಕುತ್ತಲೇ ಇದ್ದರು. ಬೆಳಗಿನ ಬ್ರಾಹ್ಮೀ ಮುಹೂರ್ತವೇಳೆಗೆ ಅವರ ಭಾಂಗಿನ ಅಮಲು ಕಡಿಮೆಯಾಗಿತ್ತು, ಆಗ ಎಚ್ಚರಾಗಿ ನಾವು ಎಲ್ಲಿಗೆ ಬಂದಿದ್ದೇವೆ ? ಎಂಬುದಾಗಿ ನೋಡಲಾಗಿ ಅವರು ಎಲ್ಲಿಂದ ಹೊರಟಿದ್ದರೋ ಅಲ್ಲಿಯೇ ಇದ್ದರು. ಒಂದು ಸ್ವಲ್ಪವೂ ಸಹ ಅವರ ನೌಕೆ ಮುಂದೆ ಸಾಗಿರಲಿಲ್ಲ, ಇದೇನಾಶ್ಚರ್ಯ ? ನಾವು ನಾಲ್ವರೂ ಬೆಳಗಾಗುವವರೆಗೆ ಹುಟ್ಟು ಹಾಕಿದರೂ ಈ ನೌಕೆ ಏಕೆ ಮುಂದೆ ಸಾಗಿಲ್ಲ? ಎಂಬುದಾಗಿ ಪರೀಕ್ಷಿಸಲಾಗಿ ದಡಕ್ಕೆ ಕಟ್ಟಿದ ನೌಕೆಯ ಹಗ್ಗವನ್ನು ಬಿಚ್ಚಿರಲಿಲ್ಲವೆಂಬುದು ತಿಳಿದುಬಂತು. ಇವರು ನೌಕಾರೋಹಣ ಮಾಡುವಾಗ ಭಾಂಗಿನ ಅಮಲಿನಿಂದಾಗಿ ತಮ್ಮ ಬುದ್ಧಿಗೆ ತಮೋಗುಣವು ಆವರಿಸಿರೋಣದರಿಂದ ಈ ಗತಿಯುಂಟಾಗಿದೆಯೆಂಬುದು ತಿಳಿದು ಅವರಿಗೆ ಪಶ್ಚಾತ್ತಾಪವಾಯಿತು. ಬುದ್ಧಿಯನ್ನಾವರಿಸಿದ ತಮೋಗುಣವು ನಮ್ಮ ಪ್ರಗತಿಗೆ ಅಡ್ಡ ಬರುತ್ತದೆಂಬುದು ಈ ದೃಷ್ಟಾಂತದಿಂದ ತಿಳಿದುಬರುತ್ತದೆ. ಇದೇ ಪ್ರಕಾರವಾಗಿ ಸಾಧಕನ ಮನದಲ್ಲಿ ತಮೋಗುಣದ ಅಂಶವಿದ್ದರೆ ಅದು ಆತನ ಸದ್ಗತಿಯ ಮಾರ್ಗದಲ್ಲಿ ಪ್ರತಿಬಂಧಕವಾಗೋಣದರಿಂದ ಅದನ್ನು ನಿರಾಕರಿಸಿಕೊಳ್ಳಬೇಕೆಂಬುದೇ ಪೂಜ್ಯರ ಉಪದೇಶದ ಆಶಯವಾಗಿದೆ.

ಶ್ರೀಮದ್‌ಭಗವದ್ಗೀತೆಯಲ್ಲಿಯೂ ಸಹ ಸತ್ವ, ರಜ ಹಾಗೂ ತಮೋಗುಣಗಳ ವಿಷಯಕವಾಗಿ ವಿಸ್ತಾರವಾಗಿ ಪ್ರತಿಪಾದಿಸಲಾಗಿದೆ. ಅಲ್ಲಿಯೂ ಸಹ ತಮೋಗುಣವು ಆಧ್ಯಾತ್ಮಿಕ ಪ್ರಗತಿಗೆ ಪ್ರತಿಬಂಧಕವೆಂಬುದಾಗಿ ನಿರೂಪಿಸಲಾಗಿದೆ. ಈ ಗುಣಗಳ ವೃದ್ಧಿಗೆ ನಾವು ಸೇವಿಸುವ ಆಹಾರವೇ ಮೂಲಕಾರಣವು. ರೂಕ್ಷ ಹಾಗೂ ತಂಗುಳ ಆಹಾರವನ್ನು ಸೇವಿಸೋಣದರಿಂದ ಮನುಷ್ಯನ ಅಂತಃಕರಣದಲ್ಲಿ ತಮೋಗುಣವು ಬೆಳೆಯುತ್ತ ಹೋಗುತ್ತದೆ. ಆದ್ದರಿಂದ ತಮೋಗುಣನಿರಸನ ಮಾಡಿಕೊಳ್ಳಬೇಕೆನ್ನುವವರು ಸಾತ್ವಿಕ ಹಾಗೂ ತಾಜಾ ಆಹಾರವನ್ನು ಅತ್ಯಧಿಕವಲ್ಲದ ಹಾಗೆ ಸೇವಿಸಬೇಕು.

ತಮೋಗುಣವು ಬಂಧನಕಾರಕವಾದುದು. ಅಜ್ಞಾನದಿಂದುತ್ಪನ್ನವಾದ ಈ ಗುಣವು ಅಜ್ಞಾನದ ಅಭಿವೃದ್ಧಿಗೆ ಪುನಃ ಕಾರಣವಾಗುವುದು. ತಮೋಗುಣವು ಬೆಳೆದಂತೆಲ್ಲ ಅಜ್ಞಾನವೂ ಸಹ ಬೆಳೆಯುತ್ತಲೇ ಹೋಗುತ್ತದೆ. ಎಲ್ಲರನ್ನೂ ಸಂಮೋಹಿತಗೊಳಿಸುವುದೇ ಈ ಗುಣವಾಗಿದೆ. ತನ್ನ ವಶೀಭೂತರಾದ ಜೀವಿಗಳನ್ನು ಪ್ರಮಾದ, ಆಲಸ್ಯ ಮತ್ತು ನಿದ್ರೆಯೆಂಬ ಮೂರು ಪಾಶಗಳಿಂದ ಕಟ್ಟಿಹಾಕುತ್ತದೆ. ಶಾಸ್ತ್ರವಿಹಿತವಾದ ನಿಯಮವನ್ನು

ಉಲ್ಲಂಘಿಸುವುದಕ್ಕೆ ಪ್ರಮಾದವೆಂದು ಕರೆಯುತ್ತಾರೆ. ಈ ಪ್ರಮಾದಕ್ಕೊಳಗಾದ ಮನುಷ್ಯನು ತನ್ನ ನಿತ್ಯ ನಿಯಮದಿಂದ ಚ್ಯುತನಾಗುತ್ತಾನೆ. ಅಂತೆಯೇ ಶ್ರುತಿಮಾತೆಯು ''ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್'' ಎಂಬುದಾಗಿ ಉಪದೇಶಿಸಿದ್ದಾಳೆ.

ಪ್ರಮಾದವು ಒಂದು ಭಯಾನಕ ದುರ್ಗುಣವಾಗಿದೆ. ಒಮ್ಮೆ ಮನುಷ್ಯನು ಅದರ ಅಧೀನನಾದರೆ ಪುನಃ ಪುನಃ ಮಾಡಿದ ತಪ್ಪುಗಳನ್ನು ಮಾಡುತ್ತಲೇ ಇರುತ್ತಾನೆ. ಇಂದು ಮಾಡಬೇಕಾದ ಕಾರ್ಯವನ್ನು ನಾಳೆ ಮಾಡಿದರಾಯಿತು ಎಂಬ ಭಾವನೆಯೇ ಪ್ರಮಾದವು. ಆದ್ದರಿಂದ ಇಂದಿನ ಕಾರ್ಯವನ್ನು ಇಂದೇ ಮಾಡಬೇಕೇ ವಿನಃ ನಾಳೆಯೆಂದು ಮುಂದೂಡಬಾರದು. ಅಂತೆಯೇ ''ಶ್ವಃಕರ್ತವ್ಯಂ ಅದ್ಯಕುರ್ವೀತ'' ಎಂಬುದಾಗಿ ಸಂಸ್ಕೃತ ನೀತಿಕಾರರು ಹೇಳಿದರೆ ಅದನ್ನೇ ಹಿಂದಿಯೊಳಗೆ 'ಕಲ್ ಕರೇಸೊ ಆಜ ಕರ್'' ಎಂಬುದಾಗಿ ನಿರ್ದೇಶಿಸಿದ್ದಾರೆ. ತಮೋಗುಣದ ಇನ್ನೊಂದು ಪರಿಣಾಮವೇ ಆಲಸ್ಯವು. ಇದು ಮನುಷ್ಯನ ಅಂತಃಶತ್ರುವಾಗಿದೆ ಅಂತೆಯೇ–'ಆಲಸ್ಯಂಹಿ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ' ಎಂಬುದಾಗಿ ಸುಭಾಷಿತಕಾರರು ಉಪದೇಶಿಸಿದ್ದಾರೆ. ಅದನ್ನೇ ಇನ್ನೋರ್ವ ಸುಭಾಷಿತಕಾರರು–

ಅಲಸಸ್ಯ ಕುತೋ ವಿದ್ಯಾ ಅವಿದ್ಯಸ್ಯ ಕುತೋ ಧನಮ್ ।
ಅಧನಸ್ಯ ಕುತೋ ಮಿತ್ರಂ ಅಮಿತ್ರಸ್ಯ ಕುತಃ ಸುಖಮ್ ॥

ಈ ವಿಧವಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಲಸಿಯಾದ, ಮನುಷ್ಯನಿಗೆ ವಿದ್ಯೆಯು ಪ್ರಾಪ್ತವಾಗಲಾರದು. ವಿದ್ಯೆಯಿಲ್ಲದವನಿಗೆ ಧನವು ದೊರೆಯಲಾರದು. ಧನವಿಲ್ಲದವನಿಗೆ ಮಿತ್ರರಿರಲಾರರು. ಮಿತ್ರರಿಲ್ಲದವನಿಗೆ ಸುಖವು ಸಹ ದೊರೆಯಲಾರದು. ಹೀಗೆ ಜೀವನದಲ್ಲಿಯ ಸುಖವು ಸಿಗದೇ ಇರಲು ಆಲಸ್ಯವೇ ಕಾರಣಯೆಂಬುದಾಗಿ ತಿಳಿಯಪಡಿಸಿದ್ದಾರೆ.

ಓರ್ವ ಅತಿ ಆಲಿಸಿಯಾದ ಮನುಷ್ಯನು ಬೋರೆ ಹಣ್ಣಿನಗಿಡದ ಬುಡದಲ್ಲಿ ಮಲಗಿದ್ದನು. ಗಿಡದಲ್ಲಿಯ ಪಕ್ವವಾದ ಅನೇಕ ಹಣ್ಣುಗಳು ಗಿಡದಿಂದ ಕಳಚಿ ಅವನ ಸುತ್ತಮುತ್ತಲೂ ಬಿದ್ದಿದ್ದವು. ಅದೇ ವೇಳೆಯಲ್ಲಿ ಓರ್ವ ಕುದುರೆಸವಾರನು ಈತನ ಪಕ್ಕದ ಬೀದಿಯಲ್ಲಿ ಹೊರಟಿದ್ದನು. ಈ ಮಲಗಿದ ವ್ಯಕ್ತಿಯು ಆತನನ್ನು ಕೂಗಿ ಕರೆದಾಗ ಕುದುರೆ ಸವಾರನು ನೆಲದ ಮೇಲೆ ಬಿದ್ದುಕೊಂಡ ಈತನನ್ನು ನೋಡಿ ಕನಿಕರಹುಟ್ಟಿ ಬಹುಶಃ ಈತನಿಗೆ ಏಳಲು ಬಾರದಾಗಿದೆಯೋ ಏನೋ ಎಂದು ಊಹಿಸಿ ಅವನಿಗೆ ಸಹಾಯ ಮಾಡಲು ಬಳಿ ಬಂದನು. ಆಗ ಮಲಗಿದ ವ್ಯಕ್ತಿಯನ್ನುದ್ದೇಶಿಸಿ ''ಏನಯ್ಯಾ ! ನಿನ್ನನ್ನು ಎಬ್ಬಿಸಬೇಕೋ'' ಎಂಬುದಾಗಿ ಪ್ರಶ್ನಿಸಿದನು. ಆಗ ಆ ವ್ಯಕ್ತಿಯು ''ನನ್ನನ್ನು ಎಬ್ಬಿಸಬೇಡಿ ನನ್ನ ಪಕ್ಕದಲ್ಲಿ ಬಿದ್ದಿರುವ ಬೋರೆ ಹಣ್ಣನ್ನು ನನ್ನ ಬಾಯಲ್ಲಿ ಹಾಕಿಹೋಗಿ'' ಎಂದು ಅಂದನು. ಆತನ ಮಾತನ್ನು ಕೇಳಿ ಈತನು ಪರಮ ಆಲಸಿಯಾಗಿದ್ದಾನೆಂದು ತಿಳಿದು ''ಎಲೋ ! ನಿನ್ನ ಬಾಯಲ್ಲಿ ಬೋರೆ ಹಣ್ಣನ್ನು ಹಾಕಬಹುದು ಆದರೆ ಅದನ್ನು ತಿನ್ನುವವರಾರು ? ಪಕ್ಕದಲ್ಲಿ ಬಿದ್ದ ಬೋರೆ ಹಣ್ಣನ್ನು ಎತ್ತಿಕೊಳ್ಳಲಾರದಷ್ಟು ಆಲಸಿಯಾದ ನೀನು ಈ ಜಗತ್ತಿನಲ್ಲಿ ಇದ್ದರೇನು ಸತ್ತರೇನು'' ಎಂದು ಭರ್ತ್ಸನೆ ಮಾಡಿ ಹೊರಟುಹೋದ.

ಈ ಜಗತ್ತಿನಲ್ಲಿ ನಾವು ಸುಖವನ್ನನುಭವಿಸಬೇಕಾದರೆ ಆಲಸ್ಯವನ್ನು ತೊರೆದು ಪ್ರಯತ್ನಶೀಲರಾಗಬೇಕು. ಸಿಂಹವು ಮೃಗರಾಜನೆಂದು ಕರೆಸಿಕೊಂಡಿದ್ದರೂ ತನ್ನ ಆಹಾರಕ್ಕಾಗಿ ಅದಕ್ಕೂ ಸಹ ಪ್ರಯತ್ನ ಮಾಡಲೇಬೇಕಾಗುತ್ತದೆ. ಬೇಟೆಯಾಡದೇ ಕೇವಲ ಬಾಯ್ತೆರೆದು ಕುಳಿತರೆ ಬೇಟೆಯು ಅದರ ಬಾಯಲ್ಲಿ ಬಂದು ಬೀಳುವುದಿಲ್ಲ. ಅಂತೆಯೇ– ಸುಭಾಷಿತಕಾರರು ''ನ ಹಿ ಸುಪ್ತಸ್ಯ ಸಿಂಹಸ್ಯ ಪ್ರವಿಶಂತಿ ಮುಖೇ ಮೃಗಾಃ'' ಎಂಬುದಾಗಿ ಹೇಳಿದ್ದಾರೆ. ಯಾವ ಮನುಷ್ಯನು ಪ್ರಯತ್ನಶೀಲನೋ ಅವನೇ ಆಲಸ್ಯದಿಂದ ದೂರವಿರಲು ಸಾಧ್ಯ. ಆಲಸ್ಯವು ನಮ್ಮಲ್ಲಿ ಪ್ರವೇಶಿಸಿತೆಂದರೆ ನಮ್ಮ ಮೇಲೆ ತಮೋಗುಣದ ಅಧಿಕಾರವು ನಡೆಯುತ್ತದೆ ಎಂದು ತಿಳಿಯಬೇಕು. ಆದ್ದರಿಂದ ಆಲಸ್ಯಕ್ಕೆ ಅವಕಾಶವನ್ನು ಕೊಡಕೂಡದು.

ತಮೋಗುಣದ ಮೂರನೆಯ ಪಾಶವೇ ನಿದ್ರೆಯು. ಜೀವನದಲ್ಲಿ ನಿದ್ರೆಯು ಅತ್ಯಾವಶ್ಯಕವಾದುದು. ಶಾರೀರಿಕ ಹಾಗೂ ಮಾನಸಿಕವಾಗಿ ಪರಿಶ್ರಮಿಸಿದ ಮನುಷ್ಯನಿಗೆ ಸುಮಾರು ಐದಾರು ಗಂಟೆಗಳ ಕಾಲ ವಿಶ್ರಾಮ ಅವಶ್ಯವಾಗಿ ಬೇಕೆ ಬೇಕು. ದಣಿದು ಮಲಗುವವರು ಕೆಲವರಾದರೆ ಏನೂ ಕೆಲಸವೇ ಇಲ್ಲವೆಂಬುದಾಗಿ ನಿದ್ರೆಬಾರದಿದ್ದರೂ ಮಲಗುವವರು ಮತ್ತೆ ಕೆಲವರಿರುತ್ತಾರೆ. ಈ ಅಸ್ವಾಭಾವಿಕ ನಿದ್ರೆಯನ್ನೇ ಶಾಸ್ತ್ರಕಾರರು ನಿಷೇಧಿಸಿದ್ದಾರೆ. ಇದುವೇ ತಮೋಗುಣದ ಪರಿಣಾಮವು. ಯಾವ ಕಾರ್ಯವನ್ನೂ ಮಾಡದೆ ಹಗಲುರಾತ್ರಿಗಳೆನ್ನದೆ ಮಲಗಿಕೊಳ್ಳುವ ಮನುಷ್ಯನು ಸ್ವಲ್ಪೇ ದಿನಗಳಲ್ಲಿ ರೋಗಿಯಾಗುತ್ತಾನೆ. ಆದ್ದರಿಂದ ಶಿವಯೋಗಾಸಕ್ತನಾದ ಶರಣನು ಅಸ್ವಾಭಾವಿಕ ನಿದ್ರೆಯ ಅಧೀನವಾಗದೆ ಆರೋಗ್ಯಕ್ಕೆ ಅನುಕೂಲವಾದ ನಿದ್ರೆಯನ್ನನುಭವಿಸಿದ ನಂತರ ಉಳಿದೆಲ್ಲ ಸಮಯದಲ್ಲಿ ಜಾಗೃತನಾಗಿದ್ದು ಶಿವಯೋಗವನ್ನು ಸಾಧಿಸುತ್ತಿರಬೇಕು. ಇದೂ ಅಲ್ಲದೆ ನನ್ನಿಂದ ಪ್ರಮಾದವೇನಾದರೂ ಆಗುತ್ತಿದೆಯಾ ? ನಾನೇನು ಆಲಸಿಯಾಗಿದ್ದೇನೆಯೋ ? ನಾನು ಅಸ್ವಾಭಾವಿಕ ನಿದ್ರಾಸಕ್ತನಾಗಿದ್ದೇನೆಯೋ ? ಮುಂತಾಗಿ ತನ್ನನ್ನೇ ತಾನು ಪ್ರಶ್ನಿಸಿಕೊಂಡು ಆತ್ಮನಿರೀಕ್ಷಣೆಯನ್ನು ಮಾಡಿಕೊಳ್ಳುತ್ತಲಿರಬೇಕೆಂಬುದಾಗಿ ತಿಳಿಸುವುದಕ್ಕಾಗಿಯೇ ಪೂಜ್ಯಪಾದರು ಈ ತಾಮಸನಿರಸನಸ್ಥಲವನ್ನು ಬೋಧಿಸಿದ್ದಾರೆ. ಅತ್ಯಂತ ಸಾತ್ವಿಕನಾದ ಶರಣನಲ್ಲಿಯೂ ಅತ್ಯಲ್ಪ ಪ್ರಮಾಣದಲ್ಲಿರುವ ತಮೋಗುಣವು ಯಾವಾಗಲಾದರೂ ತನ್ನ ಪ್ರಭಾವವನ್ನು ತೋರಿಸಿಯೇ ತೀರುತ್ತದಾದ್ದರಿಂದ ಶರಣನನ್ನು ಇಲ್ಲಿ ಎಚ್ಚರಗೊಳಿಸಿದ್ದಾರೆ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ಏಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)

■■

ಆಶೀರ್ವಚನ-೨

## ತಾಮಸನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನೀವೆಲ್ಲ ನಿನ್ನೆಯಿಂದ ಶರಣಸ್ಥಲದ ಎರಡನೆಯ ಅವಾಂತರ ಸ್ಥಲವಾದ ತಾಮಸ ನಿರಸನಸ್ಥಲದ ಬಗ್ಗೆ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಈ ತಾಮಸನಿರಸನಸ್ಥಲದಲ್ಲಿ ತಮೋಗುಣಜನ್ಯಗಳಾದ ಪ್ರಮಾದ, ಆಲಸ್ಯ ಮತ್ತು ನಿದ್ರೆಗಳೆಂಬ ದುರ್ಗುಣಗಳ ದುಷ್ಪ್ರಭಾವವು ಹೇಗೆ ಆಗುವುದೆಂಬುದನ್ನು ತಿಳಿಯಪಡಿಸಿ ಶರಣಸ್ಥಲದ ಸಾಧಕನು ಅವುಗಳಿಂದ ಸದಾ ಜಾಗ್ರತನಾಗಿರ ಬೇಕೆಂಬು ದನ್ನು ಉಪದೇಶಿಸಿ ಸದ್ಯಃ ಸಾತ್ವಿಕಗುಣದ ಪರಿಣಾಮಗಳಾದ ಶಮದಮಾದಿಗಳನ್ನು ಬೆಳಸಿಕೊಳ್ಳಬೇಕೆಂಬುದನ್ನು

ಶಮೋ ದಮೋ ವಿವೇಕಶ್ಚ ವೈರಾಗ್ಯಂ ಪೂರ್ಣಭಾವನಾ ।
ಕ್ಷಾಂತಿಃ ಕಾರುಣ್ಯ ಸಂಪತ್ತಿಃ ಶ್ರದ್ಧಾ ಸತ್ಯಸಮುದ್ಭವಾ ॥
ಶಿವಭಕ್ತಿಃ ಪರೋ ಧರ್ಮಃ ಶಿವಜ್ಞಾನಸ್ಯ ಬಾಂಧವಾಃ ।
ಏತೈರ್ಯುಕ್ತೋ ಮಹಾಯೋಗೀ ಸಾತ್ವಿಕಃ ಪರಿಕೀರ್ತಿತಃ ॥

(ಸಿ. ಶಿ. ೧೩; ೧೫-೧೬)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಂತರಿಂದ್ರಿಯನಿಗ್ರಹ, ಬಹಿರಿಂದ್ರಿಯನಿಗ್ರಹ, ನಿತ್ಯಾನಿತ್ಯ ವಸ್ತು ವಿವೇಕ, ವಿಷಯವೈರಾಗ್ಯ, ಅಖಂಡಧ್ಯಾನ, ಸಹನೆ, ಭೂತದಯೆ, ನಿಜವಸ್ತುವಿನಲ್ಲಿ ವಿಶ್ವಾಸ, ಶಿವಭಕ್ತಿ ಮತ್ತು ಉತ್ತಮ ಶಿವಾಚಾರವೆಂಬ ಈ ಹತ್ತು ಸದ್ಗುಣಗಳನ್ನು ಬೆಳೆಸಿಕೊಂಡವನೇ ಸಾತ್ವಿಕನೆಂಬುದಾಗಿ ಪರಿಗಣಿಸಲ್ಪಡುತ್ತಾನೆ. ಈ ಹತ್ತುಗುಣಗಳು ಶಿವಜ್ಞಾನಕ್ಕೆ ಮತ್ತು ಶಿವಯೋಗಕ್ಕೆ ಅತ್ಯಂತ ಸಹಾಯಕವಾದವುಗಳು. ಅಂತೆಯೇ ಇವುಗಳಿಗೆ ಶಿವಜ್ಞಾನದ ಬಂಧುಗಳೆಂದು ಕರೆದಿದ್ದಾರೆ. ಈ ಸಾತ್ವಿಕ ಗುಣಗಳಿಗೆ ಶ್ರೀ ಭಗವದ್ಗೀತೆಯಲ್ಲಿ ದೈವೀ ಸಂಪತ್ತು ಎಂಬುದಾಗಿ ಉಪದೇಶಿಸಿದ್ದುಂಟು.

ಶಾಸ್ತ್ರಕಾರರು ದೈವೀ ಸಂಪತ್ತು ಮತ್ತು ಆಸುರೀ ಸಂಪತ್ತೆಂಬುದಾಗಿ ಸಂಪತ್ತಿನ ಎರಡು ವಿಧಗಳನ್ನು ತಿಳಿಸಿದ್ದಾರೆ. ಮೇಲೆ ವರ್ಣಿಸಿದ ಸದ್ಗುಣಗಳಿಗೆ ವಿಪರೀತವಾದ ಗುಣಗಳಿಗೇನೇ ಆಸುರೀ ಗುಣಗಳು ಅಥವಾ ಆಸುರೀ ಸಂಪತ್ತೆಂಬುದಾಗಿ ತಿಳಿದುಕೊಳ್ಳ ಬೇಕು. ಪ್ರಪಂಚದಲ್ಲಿಯ ಕೆಲವು ಜನರಲ್ಲಿ ದೈವೀಗುಣಗಳನ್ನು ಕಂಡರೆ ಮತ್ತೆ ಕೆಲವರಲ್ಲಿ ಆಸುರೀ ಗುಣಗಳನ್ನು ಕಾಣುತ್ತೇವೆ. ದೈವೀಗುಣಗಳನ್ನು ಸಂಪಾದನೆ ಮಾಡಿದ ಮನುಷ್ಯನು ದೇವತ್ವವನ್ನು ಸಂಪಾದಿಸಿದರೆ ಆಸುರೀ ಗುಣಗಳ ಪರಿಣಾಮವಾಗಿ ಆತನು ಅಸುರನೆಂದು ಕರೆಯಿಸಿಕೊಳ್ಳುವನು. ಮನುಷ್ಯನು ತನಗಿಚ್ಛೆ ಬಂದ ಹಾಗೆ ಈ ಎರಡು

ವಿಧ ಮಾರ್ಗಗಳಲ್ಲಿ ಯಾವುದಾದರೊಂದು ಮಾರ್ಗವನ್ನು ಹಿಡಿದು ಕ್ರಮಿಸಲು ಆತನು ಸ್ವತಂತ್ರನಾಗಿದ್ದಾನೆ. ಮನುಷ್ಯ ಜನ್ಮವೆಂದರೆ ಒಂದು ರೇಲ್ವೆಜಂಕ್ಶನ್ ಇದ್ದಹಾಗೆ ಜಂಕ್ಶನ್‌ನಿಂದ ಹಲವು ಕಡೆ ಮಾರ್ಗಗಳು ಹೋಗಿರುವುದನ್ನು ಕಾಣುತ್ತೇವೆ. ಅಲ್ಲಿ ಬಂದೇ ಓರ್ವ ಮನುಷ್ಯನು ತಾನು ಯಾವ ಕಡೆಯ ಟಿಕೆಟ್ಟನ್ನು ಪಡೆದುಕೊಂಡಿರುವನೋ ಆ ಗಾಡಿಯಿಂದ ಆ ಮಾರ್ಗದತ್ತ ಹೋಗುವಂತೆ, ಮಾನವನೂ ಸಹ ದೈವೀಗುಣಗಳೆಂಬ ಟಿಕೆಟ್ಟನ್ನು ಪಡೆದು ದೇವತ್ವದ ಕಡೆಗೆ ಅಥವಾ ಆಸುರೀಗುಣಗಳೆಂಬ ಟಿಕೆಟ್ಟನ್ನು ಪಡೆದು ಆಸುರತ್ವದ ಕಡೆಗೆ ಹೋಗಲು ಸ್ವತಂತ್ರನಾಗಿದ್ದಾನೆ. ಪ್ರಪಂಚದ ಬಹುಸಂಖ್ಯಾತ ಜನರು ಅಸುರೀಮಾರ್ಗದತ್ತ ಹೋಗಿ ಅನಂತದುಃಖವನ್ನನುಭವಿಸುತ್ತಿರುವುದನ್ನು ಕಂಡು ಪರಮದಯಾಳುಗಳಾದ ನಮ್ಮ ದೇಶದ ಆಚಾರ್ಯರು, ಮಹರ್ಷಿಗಳು ಮತ್ತು ಸಂತಮಹಾತ್ಮರು ಮನುಷ್ಯನನ್ನು ಎಚ್ಚರಿಸಿ ಆತನನ್ನು ದೈವೀ ಮಾರ್ಗದತ್ತ ಹೋಗಲು ಅನಾದಿಕಾಲದಿಂದಲೂ ಪ್ರೇರೇಪಿಸುತ್ತ ಬಂದಿದ್ದಾರೆ.

ಈ ಪ್ರಪಂಚದಲ್ಲಿ ಜನ್ಮಪಡೆದ ಪ್ರತಿಯೊಬ್ಬನೂ ತನ್ನ ಜೀವನವನ್ನು ಪಾವನ ಗೊಳಿಸಲೋಸುಗ ಆಸುರೀಮಾರ್ಗವನ್ನು ತ್ಯಜಿಸಿ ದೈವೀಮಾರ್ಗದಲ್ಲಿಯೇ ಮುನ್ನಡೆಯ ಬೇಕು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ತಾಮಸನಿರಸನಸ್ಥಲದಲ್ಲಿ ತಮೋಗುಣವನ್ನು ದೂರಮಾಡಿಕೊಂಡು ಶಮಾದಿ ಸದ್ಗುಣಗಳನ್ನೂ ಅಳವಡಿಸಿ ಕೊಂಡವನೇ ಸಾತ್ವಿಕನೆಂಬುದಾಗಿ ಉಪದೇಶಿಸಿದ್ದಾರೆ. ಸಾಧಕನು ಸಾತ್ವಿಕನಾದಾಗಲೇ ಆತನಿಗೆ ಆತ್ಮಜ್ಞಾನೋದಯವಾಗುವುದಲ್ಲದೆ ಅದು ಸುಸ್ಥಿರವೂ ಆಗುವುದು. ಲೋಕದಲ್ಲಿ ನಾವು ಸಂಪಾದಿಸಿದ ಭೌತಿಕಸಂಪತ್ತನ್ನು ಬೇರೊಬ್ಬರು ಭಾಗೀದಾರರಾಗಿಯೋ ಅಥವಾ ಬಲಾತ್ಕಾರವಾಗಿಯೋ ಕಸಿದುಕೊಳ್ಳಬಹುದು. ಆದರೆ ಶಮದಮಗಳೆಂಬ ಈ ಉತ್ಕೃಷ್ಟ ವಾದ ದೈವೀ ಸಂಪತ್ತು ಅದಾರಿಂದಲೂ ಅಪಹರಿಸಲ್ಪಡ ಲಾರದು. ಪೂಜ್ಯರು ಉಪದೇಶಿಸಿದ ಈ ದೈವೀ ಸಂಪತ್ತಿನಲ್ಲಿ ಮೊದಲನೇ ಸಂಪತ್ತೇ ಶಮವು. ಶಮವೆಂದರೆ ಅಂತರಿಂದ್ರಿಯ ನಿಗ್ರಹ ಎಂದರ್ಥ. ಅದರಂತೆ ದಮವೆಂದರೆ ಬಹಿರಿಂದ್ರಿಯ ನಿಗ್ರಹವು. ಇವೆರಡೂ ಪರಸ್ಪರ ಸಾಪೇಕ್ಷವಾದವುಗಳು. ಮನಸ್ಸಿನ ಇಚ್ಛೆ ಯಂತೆಯೇ ಬಹಿರಿಂದ್ರಿಯ ಗಳು ಕಾರ್ಯ ಮಾಡುವುದನ್ನು ಕಾಣುತ್ತೇವೆ. ಅಂತೆಯೇ ಮನಸ್ಸಿಗೆ ಇಂದ್ರಿಯಾಧ್ಯಕ್ಷ ವೆಂಬುದಾಗಿ ಕರೆದಿದ್ದಾರೆ. ಮನಸ್ಸಿಗೆ ನೋಡಬೇಕೆನಿಸಿದಾಗ, ನೇತ್ರೇಂದ್ರಿಯವು ತನ್ನ ಕಾರ್ಯದಲ್ಲಿ ಪ್ರವೃತ್ತವಾಗುವುದು. ಅದಕ್ಕೆ ಕೇಳಬೇಕೆನಿಸಿದಾಗ, ಶ್ರೋತ್ರೇಂದ್ರಿಯವು ತನ್ನ ವ್ಯವಹಾರದಲ್ಲಿ ಪ್ರವೃತ್ತವಾಗುವದು. ಹೀಗೆ ಮನಸ್ಸಿನ ಇಚ್ಛೆಯಂತೆಯೇ ಪಂಚ ಜ್ಞಾನೇಂದ್ರಿಯಗಳು ಪಂಚ ಕರ್ಮೇಂದ್ರಿಯಗಳು ತಮ್ಮ ತಮ್ಮ ವಿಷಯ ವ್ಯವಹಾರದಲ್ಲಿ ತೊಡಗುತ್ತವೆ. ಈ ಹತ್ತು ಇಂದ್ರಿಯಗಳ ಮುಖಾಂತರ ಮನಸ್ಸು ಯಾವಾಗಲೂ ಒಂದಿಲ್ಲೊಂದು ವಿಧವಾದ ಸುಖ–ದುಃಖವನ್ನು ಅನುಭವಿಸುತ್ತಲೇ ಇರುತ್ತದೆ.

ಶಬ್ದಸ್ಪರ್ಶಾದಿ ವಿಷಯಗಳನ್ನು ಮನಸ್ಸಿಗೆ ಮುಟ್ಟಿಸುವ ಕಾರ್ಯವನ್ನು ಈ ಇಂದ್ರಿಯಗಳೇ ಮಾಡುತ್ತವೆ. ಮನಸ್ಸಿನ ಇಚ್ಛೆಯ ನಿರೋಧವಾಗದೆ, ಇಂದ್ರಿಯಗಳ ವಿಷಯಾಭಿಮುಖ ಪ್ರವೃತ್ತಿಯು ನಿಲ್ಲಲಾರದು. ಆದ್ದರಿಂದಲೇ ಅಂತರಿಂದ್ರಿಯ

ನಿಗ್ರಹರೂಪವಾದ ಶಮವನ್ನು ಕುರಿತು ಮೊದಲು ಉಪದೇಶ ಮಾಡಿದ್ದಾರೆ. ಕಾರಣ ಸಾಧಕನು ಮೊದಲು ಅಂತರಿಂದ್ರಿಯ ನಿಗ್ರಹದತ್ತ ಲಕ್ಷ ಕೊಡಬೇಕು. ಮನಸ್ಸನ್ನು ನಿಯಂತ್ರಣಗೊಳಿಸಲು ಬುದ್ಧಿಯನ್ನು ಉಪಯೋಗಿಸಬೇಕಾಗುವುದು. ಬುದ್ಧಿಯ ನಿರ್ಣಯವಿಲ್ಲದೆ ಮನಸ್ಸು ಯಾವುದನ್ನೂ ಕಾರ್ಯಗತಗೊಳಿಸಲು ಸಾಧ್ಯವಾಗುವುದಿಲ್ಲ. ಮನಸ್ಸಿನ ಮೇಲೆ ಬುದ್ಧಿಯ ನಿಯಂತ್ರಣವಿದ್ದರೂ ಒಮ್ಮೊಮ್ಮೆ ಅತಿ ಚುರುಕಾದ ಮನಸ್ಸು ಬುದ್ಧಿಯನ್ನೂ ಸಹ ತನ್ನತ್ತ ಹೊರಳಿಸಿಕೊಳ್ಳುತ್ತದೆ. ತನಗೆ ಅನುಕೂಲವಾಗುವ ಹಾಗೆ ಬುದ್ಧಿಯಿಂದ ನಿರ್ಣಯವನ್ನೂ ಪಡೆಯುತ್ತದೆ. ಕಚೇರಿಯಲ್ಲಿ ಕೆಲಸಮಾಡುವ ಓರ್ವ ಸಿಪಾಯಿಯು ತನ್ನ ಮೇಲಧಿಕಾರಿಯನ್ನು ತನ್ನ ಅಂಕಿತದಲ್ಲಿ ಇಟ್ಟುಕೊಂಡು ಅವನಿಂದ ತನಗೆ ಬೇಕಾದ ಹಾಗೆ ಕಾರ್ಯಗಳನ್ನು ಮಾಡಿಸಿಕೊಳ್ಳುವುದನ್ನು ಹಲವಾರು ಕಡೆಗೆ ಕಾಣುತ್ತೇವೆ. ಮೇಲಧಿಕಾರಿಯು ಲಂಚಗುಳಿಯಾಗಿದ್ದು ವಿವೇಕಹೀನನಾಗಿದ್ದರೆ ಇಂತಹ ಅನರ್ಥಗಳು ಸಂಭವಿಸುವುದು ಸಹಜ. ಆದರೆ ಆತನು ನಿಸ್ಪೃಹನೂ, ನಿಷ್ಠುರನೂ ಆಗಿದ್ದರೆ ನ್ಯಾಯದಂತೆ ನಿರ್ಣಯಕೊಡಬಲ್ಲನು. ಹಾಗೆಯೇ ಯಾರ ಬುದ್ಧಿಯು ವಿವೇಕವನ್ನು ಕಳೆದುಕೊಂಡಿರುತ್ತದೆಯೋ ಅಂತಹ ಬುದ್ಧಿಯೇ ಮನಸ್ಸಿನಂತೆ ನಿರ್ಣಯ ಕೊಡುವುದು. ಇನ್ನು ಬುದ್ಧಿಯು ಸಾರಾಸಾರ ವಿವೇಕಸಂಪನ್ನವಾಗಿದ್ದರೆ ಅದರಿಂದ ಮನಸ್ಸಿನ ಮೇಲೆ ನಿಯಂತ್ರಣ ಮಾಡಲು ಸಾಧ್ಯವಾಗುವುದು. ಮನಸ್ಸನ್ನು ನಿಯಂತ್ರಣದಲ್ಲಿಡುವುದಕ್ಕಾಗಿಯೇ ಭಗವಂತನು ಪ್ರತಿಯೊಬ್ಬರಿಗೂ ಬುದ್ಧಿಯನ್ನು ಅನುಗ್ರಹಿಸಿದ್ದಾನೆ. ಯಾರ ಬುದ್ಧಿಯು ಸಾರಾಸಾರ ವಿವೇಕಸಂಪನ್ನವಾಗಿರುತ್ತದೆಯೋ ಅಂಥವರು ಮನಸ್ಸಿನ ಮೇಲೆ ನಿಯಂತ್ರಣವನ್ನು ಮಾಡಿ ಶಮೆಗುಣವನ್ನು ಸಂಪಾದಿಸಲು ಸಾಧ್ಯವಾಗುವುದು. ಒಂದು ವೇಳೆ ಬುದ್ಧಿಯಲ್ಲಿ ಆ ವಿವೇಕ ಸಾಮರ್ಥ್ಯವಿರದಿದ್ದರೆ ಅದು ಮನಸ್ಸಿನಂತೆಯೇ ನಿರ್ಣಯವನ್ನು ಕೊಟ್ಟು ಮನುಷ್ಯನ ಅಧಃಪತನಕ್ಕೆ ಕಾರಣವಾಗುತ್ತದೆ. ಹೀಗೆ ವಿಕೃತವಾದ ಮನಸ್ಸು ಬುದ್ಧಿಯನ್ನೂ ಸಹ ವಿಕೃತಗೊಳಿಸಬಲ್ಲದು. ಈ ತೆರನಾಗಿ ಬುದ್ಧಿಯು ವಿಕೃತಗೊಂಡರೆ ಮನುಷ್ಯನ ಸರ್ವನಾಶವಲ್ಲದೆ ಬೇರಾವ ಫಲವಿಲ್ಲ. ಬುದ್ಧಿಗೆ ಒಳ್ಳೆಯ ಸಂಸ್ಕಾರವನ್ನು ಕೊಟ್ಟು ಅದನ್ನು ವಿವೇಕಸಂಪನ್ನವಾಗಿರಿಸಿಕೊಂಡು ಅದರ ಸಹಾಯದಿಂದ ಮನಸ್ಸನ್ನು ನಿಗ್ರಹಿಸುವುದೇ ಶಮೆಯೆಂಬುದಾಗಿ ತಿಳಿದುಕೊಳ್ಳಬೇಕು.

ಇನ್ನು ಎರಡನೆಯ ಸದ್ಗುಣವೇ ದಮವು. ಬಾಹ್ಯಗಳಾದ ಪಂಚಜ್ಞಾನೇಂದ್ರಿಯಗಳನ್ನು ಹಾಗೂ ಪಂಚಕರ್ಮೇಂದ್ರಿಯಗಳನ್ನು ನಿಗ್ರಹಿಸುವುದಕ್ಕೆ ದಮವೆಂಬುದಾಗಿ ಕರೆದಿದ್ದಾರೆ. ಅಂತರಿಂದ್ರಿಯ ನಿಗ್ರಹವಿದ್ದಾಗಲೇ ಬಹಿರಿಂದ್ರಿಯ ನಿಗ್ರಹವನ್ನು ಸಾಧಿಸಲು ಸಾಧ್ಯವಾಗುವುದು. ಅಂತೂ ಇವೆರಡೂ ಪರಸ್ಪರ ಸಹಕಾರಿಗಳು, ಶಮೆಯಿಂದ ದಮೆಯ ಸಿದ್ಧಿ, ದಮೆಯಿಂದ ಶಮೆಯ ಸಿದ್ಧಿ, ನಾವು ಬಹಿರಿಂದ್ರಿಯಗಳ ದ್ವಾರಗಳನ್ನು ಮುಚ್ಚಿದಾಗ ಮನಸ್ಸು ಹೊರಗಿನ ಹೊಸ ವಿಷಯದೊಂದಿಗೆ ಸಂಪರ್ಕವನ್ನು ಪಡೆಯದಿದ್ದರೂ ಪೂರ್ವಾನುಭೂತವಾದ ವಿಷಯಸುಖದ ಮೆಲಕುಹಾಕುವುದನ್ನು ಮಾತ್ರ ಬಿಡುವದಿಲ್ಲ. ಈ ವಿಧವಾದ ಭೂತ ಹಾಗೂ ಭವಿಷತ್ತಿನ ವಿಷಯಕವಾದ ಮಾನಸಿಕ ಚಿಂತನೆಗೆ ಮನೋರಾಜ್ಯವೆಂಬುದಾಗಿ ಕರೆದಿದ್ದಾರೆ. ಇಂತಹ ಸಂದರ್ಭದಲ್ಲಿ ಬುದ್ಧಿಯು ಜಾಗೃತವಾಗಿದ್ದು ಮನಸ್ಸಿನ ಮನೋರಾಜ್ಯಕ್ಕೆ ಅವಕಾಶ ಕೊಡದೇ ಇದ್ದಾಗ ಮನಸ್ಸು ಶಮೆಗುಣ

ಯುಕ್ತವಾಗಿ ದಮೆಗೆ ಸಹಕಾರಿಯಾಗುವುದು. ಹೀಗೆ ಶಮೆ–ದಮೆಗಳ ಪರಸ್ಪರ ಸಂಬಂಧ ವನ್ನರಿತು ಶರಣನು ಉಭಯಗುಣ ಸಂಪನ್ನನಾಗಿರಬೇಕು.

ಇನ್ನು ಮೂರನೆಯ ಗುಣವೇ ವಿವೇಕವು. ಇದು ನಿತ್ಯಾನಿತ್ಯ ವಿವೇಕವೆಂತಲೂ ಆತ್ಮಾನಾತ್ಮವಿವೇಕವೆಂತಲೂ ಎರಡು ವಿಧವಾಗಿರುತ್ತದೆ. ಈ ಉಭಯವಿಧ ವಿವೇಕ ವಿದ್ದಾಗಲೇ ಸಾಧಕನು ಶಮೆ–ದಮೆ ಸಂಪನ್ನನಾಗಲು ಸಾಧ್ಯವಾಗುವುದು. ವಿವೇಕದ ಪರಿಣಾಮವಾಗಿಯೇ ಸಾಧಕನು ಅನಾತ್ಮ ಹಾಗೂ ಅನಿತ್ಯ ವಸ್ತುಗಳಲ್ಲಿ ಪ್ರವೃತ್ತವಾಗುವ ಮನಸ್ಸನ್ನು ತಡೆಯಲು ಸಾಧ್ಯವಾಗುತ್ತದೆ. ಯಾವಾಗ ಮನಸ್ಸು ನಿತ್ಯ ಹಾಗೂ ಆತ್ಮವಸ್ತುವಿನಲ್ಲಿ ಆಸಕ್ತವಾಗುವುದೋ ಆಗ ತನ್ನ ಚಾಂಚಲ್ಯಗುಣವನ್ನು ಕಳೆದುಕೊಂಡು ಅದು ಸ್ಥಿರತೆಯನ್ನು ಹೊಂದುವುದು. ಸಣ್ಣ ಮಗುವಿನ ಮುಂದೆ ಅನೇಕ ಆಟಿಗೆಯ ಸಾಮಾನುಗಳನ್ನಿಟ್ಟಾಗ ಅದು ಕೆಲವು ವೇಳೆ ಒಂದು ಆಟಿಗೆಯೊಂದಿಗೆ ಮತ್ತೆಕೆಲವು ವೇಳೆ ಮತ್ತೊಂದು ಆಟಿಗೆಯೊಂದಿಗೆ ಹೇಗೆ ಕ್ಷಣ ಕ್ಷಣಕ್ಕೆ ಅವುಗಳನ್ನು ಬದಲಿಸಿ ಆಡುತ್ತದೆ. ಆದರೆ ಆ ಮಗುವಿನ ಮುಂದೆ ಒಂದೇ ಆಟಿಗೆಯ ಸಾಮಾನಿದ್ದರೆ ಅದರೊಂದಿಗೇನೇ ಹೇಗೆ ಆಡುತ್ತ ಕೂಡುವುದೋ ಹಾಗೆ ವಿವೇಕಿಯಾದವನು ಅನಂತ ಅನಾತ್ಮ ಪದಾರ್ಥಗಳನ್ನು ತೊರೆದು ಒಂದೇಯಾದ ಹಾಗೂ ನಿತ್ಯವಾದ ಆತ್ಮದೊಂದಿಗೆ ಸದಾ ರಮಿಸುತ್ತಿರುತ್ತಾನೆ. ಹೀಗೆ ಆತ್ಮರತಿಯಾದ ಶರಣನಿಗೆ ಸಹಜವಾಗಿಯೇ ಅಂತರಿಂದ್ರಿಯ ಹಾಗೂ ಬಹಿರಿಂದ್ರಿಯಗಳ ಬಾಹ್ಯಪ್ರವೃತ್ತಿಯು ನಿಂತುಹೋಗಿ ಅವನು ಶಮೆ–ದಮೆಯುಳ್ಳವನಾಗುತ್ತಾನೆ. ಅಂತೆಯೇ ವಿವೇಕವು ಶಮೆ–ದಮೆಗಳ ಸಾಧನವೆಂಬುದಾಗಿ ಕರೆಯಲಾಗುವುದು.

ಇದೇ ರೀತಿಯಾಗಿ ನಾಲ್ಕನೆಯದಾದ ಸದ್ಗುಣಕ್ಕೆ 'ವೈರಾಗ್ಯ'ವೆಂದು ಕರೆದಿದ್ದಾರೆ. ವಿರತಿ ಹಾಗೂ ವೈರಾಗ್ಯಗಳು ಪರ್ಯಾಯ ಶಬ್ದಗಳು. ಸಾಂಸಾರಿಕ ವಿಷಯಗಳಲ್ಲಿರುವ ಅಭಿಲಾಷೆಯ ನಿಯಂತ್ರಣಕ್ಕೇನೇ 'ವೈರಾಗ್ಯ'ವೆನ್ನುವರು. ವಿಷಯಸುಖವು ಐಹಿಕ, ಪಾರಲೌಕಿಕವೆಂಬುದಾಗಿ ಎರಡು ವಿಧವಾಗಿದೆ. ಈ ಎರಡೂ ವಿಧ ಸುಖದಲ್ಲಿಯ ನಿಸ್ಪೃಹತೆಯೇ ನಿಜವಾದ ವೈರಾಗ್ಯವು. ಅಂತೆಯೇ ಶಾಸ್ತ್ರಕಾರರು ''ಇಹಾಮುತ್ರ ಫಲಭೋಗವಿರಾಗಃ'' ಎಂಬುದಾಗಿ ವಿರಾಗ ಅಥವಾ ವಿರಕ್ತಿಯ ಲಕ್ಷಣವನ್ನು ತಿಳಿಸಿದ್ದಾರೆ. ಆತ್ಮಚಿಂತನೆಯಲ್ಲಿ ಮಗ್ನನಾದವನು ವಿಷಯದಿಂದ ನಿಸ್ಪೃಹನಾಗುವನು. ಹೀಗೆ ನಿಸ್ಪೃಹನಾದವನಿಗೆ ಈ ಜಗತ್ತೆಲ್ಲವೂ ತೃಣವಾಗಿ ತೋರುವುದು. ಅಂಥವನ ಮನಸ್ಸು ಎತ್ತಲೂ ಹರಿಯುವುದಿಲ್ಲ. ಇಂತಹ ನಿಜವಾದ ವಿರಕ್ತಭಾವನೆಯುಳ್ಳವನಿಗೆ ಶಮೆ–ದಮೆ ಗಳು ಸಿದ್ಧಿಸುತ್ತವೆ.

ಇದೇ ತೆರನಾಗಿ ಐದನೆಯದಾದ ಸದ್ಗುಣವೇ 'ಪೂರ್ಣಭಾವನೆಯು'. ಅಂದರೆ ಅಖಂಡ ಧ್ಯಾನವೆಂದರ್ಥ. ನಾವು ಧ್ಯಾನಾಸಕ್ತರಾಗಿ ಕುಳಿತಾಗ ಆ ಧ್ಯಾನವು ಅನೇಕ ಸಾರೆ ಖಂಡಿತವಾಗುವುದುಂಟು. ಶಿವಲಿಂಗದ ಮೇಲೆ ಅಭಿಷೇಕಕ್ಕಾಗಿ ಜಲಧಾರಣ ಪಾತ್ರೆಯನ್ನಿರಿಸಿ ಅದರ ಮೇಲೆ ನೀರನ್ನು ಹಾಕಿದಾಗ ಅದು ಅಖಂಡವಾಗಿ ಬೀಳುವಂತೆ ಯಾರ ಮನಸ್ಸು ಶಿವಚಿಂತನೆಯಲ್ಲಿ ಅಖಂಡವಾಗುವುದೋ ಅದಕ್ಕೇನೇ 'ಪೂರ್ಣ

ಭಾವನೆ' ಎಂದು ಕರೆದಿದ್ದಾರೆ. ಧ್ಯಾನವನ್ನು ಪ್ರಾರಂಭಿಸಿದಾಗಿನಿಂದ ಪರಿಸಮಾಪ್ತಿಯ ವರೆಗೆ ಮಧ್ಯದಲ್ಲಿ ಬೇರೊಂದು ಯಾವ ವಿಷಯದ ಚಿಂತನೆಯಿಲ್ಲದೆ ನಡೆಯುವ ಈಶ್ವರಧ್ಯಾನವೇ ಪೂರ್ಣಭಾವನೆಯು. ಶರಣಸ್ಥಲದ ಸಾಧಕನು ಇಂತಹ ಭಾವನೆಯನ್ನು ಅಳವಡಿಸಿಕೊಂಡಿರಬೇಕಾಗುವುದು.

ಇದರಂತೆ ಆರನೆಯದಾದ ಸದ್ಗುಣವೇ ಕ್ಷಾಂತಿಯು. ಕ್ಷಾಂತಿಯೆಂದರೆ ಕ್ಷಮೆ ಯೆಂದರ್ಥ. ಓರ್ವ ವ್ಯಕ್ತಿಯು ಅಪರಾಧವೆಸಗಿದ ಮತ್ತೋರ್ವ ವ್ಯಕ್ತಿಯನ್ನು ಕ್ಷಮಿಸುವಲ್ಲಿ ಅನೇಕ ಕಾರಣಗಳುಂಟು. ಅವುಗಳೇ ಮೋಹ, ಭಯ ಹಾಗೂ ಸ್ವಾರ್ಥಗಳು. ಮಕ್ಕಳು ಮಾಡಿದ ಅಕ್ಷಮ್ಯ ಅಪರಾಧಗಳನ್ನು ತಂದೆ ತಾಯಿಗಳು ಕ್ಷಮಿಸುವುದನ್ನು ಕಾಣುತ್ತೇವೆ. ಈ ಕ್ಷಮೆಗೆ ಕಾರಣ ಪುತ್ರಮೋಹವು. ಕೆಲವೊಂದು ಸಂದರ್ಭಗಳಲ್ಲಿ ಬಲಿಷ್ಠನಾದ ವ್ಯಕ್ತಿಯು ನಮ್ಮ ಮೇಲೆ ಅಪಚಾರವೆಸಗಿದಾಗ ಅವನ ಮೇಲೆ ಅದಾವ ಪ್ರತಿಕಾರವನ್ನೆಸಗದೆ ಸುಮ್ಮನಿರುತ್ತೇವೆ. ಇಲ್ಲಿ ನಮ್ಮಲ್ಲಿ ಉಂಟಾದ ಕ್ಷಮೆಗೆ ಭಯವೇ ಮುಖ್ಯ ಕಾರಣ ವಾಗಿರುತ್ತದೆ. ಇದರಂತೆ ಅಪರಾಧ ಮಾಡಿದ ವ್ಯಕ್ತಿಗೆ ಪ್ರತಿಕ್ರಿಯೆಯನ್ನು ವ್ಯಕ್ತಮಾಡಿದರೆ ಅವನಿಂದಾಗಬಹುದಾದ ಲಾಭವು ಸಿಗಲಿಕ್ಕಿಲ್ಲವೆಂಬುದಾಗಿ ತಿಳಿದು ಯಾವ ಪ್ರತಿಕಾರ ವನ್ನೂ ವ್ಯಕ್ತಪಡಿಸದ ಕ್ಷಮೆಗೆ ಸ್ವಾರ್ಥ ಮೂಲಕವಾದ ಕ್ಷಮೆಯೆನ್ನುವರು. ಹೀಗೆ ಮೋಹ, ಭಯ ಮತ್ತು ಸ್ವಾರ್ಥಗಳಿಂದಾಗಿ ಉಂಟಾಗುವ ಕ್ಷಮೆಗೆ ನಿಜವಾದ ಕ್ಷಮೆಯೆಂದು ಕರೆಯಲಾರರು. ಅಪರಾಧಿಗೆ ಶಿಕ್ಷೆಯನ್ನು ಕೊಡುವ ಸಾಮರ್ಥ್ಯವಿದ್ದರೂ ಮೋಹ, ಭಯ ಮತ್ತುಸ್ವಾರ್ಥಕ್ಕೊಳಗಾಗದೆ ಕೇವಲ ಈತನು ಇದೊಂದು ಸಾರೆ ಸುಧಾರಿಸಿಕೊಳ್ಳಲಿ ಎಂಬ ಉದ್ದೇಶದಿಂದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸದಿರುವಿಕೆಯೇ ನಿಜವಾದ ಕ್ಷಮೆಯು ಅದುವೇ ಕ್ಷಾಂತಿಯು.

ಓರ್ವ ಶಿವಯೋಗ ಸಾಮರ್ಥ್ಯವನ್ನು ಪಡೆದ ಸದ್ಗುರುಗಳು ಒಂದು ನೌಕೆಯಲ್ಲಿ ಕುಳಿತು ನದಿಯನ್ನು ದಾಟುತ್ತಿರುವಾಗ ಆ ನೌಕೆಯಲ್ಲಿ ಕುಳಿತ ಕೆಲವು ಜನ ದುಷ್ಟರು ಇವರಿಗೆ ನಾನಾ ವಿಧವಾಗಿ ಚೇಷ್ಟೆಗಳನ್ನು ಮಾಡುತ್ತ ಅಪಮಾನಗೊಳಿಸುತ್ತಿದ್ದರು. ಆದರೂ ಅವರು ಸುಮ್ಮನೆ ಕುಳಿತು ಎಲ್ಲವನ್ನೂ ಸಹನಮಾಡಿಕೊಳ್ಳುತ್ತಿದ್ದರು. ದುಷ್ಟರ ಆ ವ್ಯವಹಾರದಿಂದ ಉತ್ತೇಜಿತರಾಗದೆ ಆ ಶಿವಯೋಗಿಗಳು ಸುಮ್ಮನೆ ಕುಳಿತಿದ್ದರೂ ಶಿವನಿಗೆ ಸಹನವಾಗಲಿಲ್ಲವಂತೆ. ಆಗ ಶಿವನು ಅಂತರ್ವಾಣಿಯಿಂದ ಇವರಿಗೆ ಹೇಳಿದ್ದೇನೆಂದರೆ– ''ಈ ದುಷ್ಟರು ಮಾಡುತ್ತಿರುವ ಕುಚೋದ್ಯವು ಅಕ್ಷಮ್ಯವಾಗಿದೆ ಎಲೈ ಶಿವಯೋಗಿಯೇ! ನೀನು ಇಚ್ಛಿಸಿದೆಯಾದರೆ ಈ ನೌಕೆಯನ್ನು ತಿರುವಿಹಾಕಿ ಇವರೆಲ್ಲರನ್ನೂ ಸಂಹರಿಸಿ ನಿನ್ನೋರ್ವನನ್ನು ಸಂರಕ್ಷಿಸುತ್ತೇನೆ ಇದಕ್ಕೆ ನೀನೇನೆನ್ನುವಿ

ಶಿವನ ಈ ಅಂತರ್ವಾಣಿಯನ್ನು ಕೇಳಿದ ಆ ಶಿವಯೋಗಿಯು– ''ಎಲೈ ಭಕ್ತವತ್ಸಲ ನಾದ ಶಿವನೇ! ನೀನು ತಿರುವಿ ಹಾಕುವುದೇ ಆಗಿದ್ದರೆ ಈ ನೌಕೆಯನ್ನು ತಿರುವಿ ಹಾಕದೇ ಇವರ ಬುದ್ಧಿಯನ್ನು ಮಾತ್ರ ತಿರುವಿಹಾಕು'' ಎಂಬುದಾಗಿ ಪ್ರಾರ್ಥಿಸಿಕೊಂಡನು. ನೋಡಿದಿರಾ ! ಶಿವಯೋಗಿಯ ಕ್ಷಮೆಯನ್ನು, ಸಂಹರಿಸುವ ಅಥವಾ ಶಿಕ್ಷಿಸುವ ಸಾಮರ್ಥ್ಯವಿದ್ದರೂ ಸುಧಾರಿಸಿಕೊಳ್ಳಲಿ ಎಂಬ ಉದ್ದೇಶಕ್ಕಾಗಿ ತಾಳುವ ತಾಳ್ಮೆಯೇ

ಕ್ಷಮೆಯು ಅಥವಾ ಕ್ಷಾಂತಿಯು. ದುಷ್ಟರನ್ನು ಕ್ಷಮಿಸುವ ಶಿವಯೋಗಿಯಲ್ಲಿ ಮೋಹ– ಮಮಕಾರಗಳಾಗಲೀ ಅಥವಾ ಭಯ–ಸ್ವಾರ್ಥಾದಿಗಳಾಗಲೀ ಇಲ್ಲದಿರುವುದು ಕಂಡು ಬರುತ್ತದೆ. ಇಂತಹ ಕ್ಷಮೆಯೇ ನಿಜವಾದ ಕ್ಷಮೆಯು. ನಮ್ಮ ದೇಶದ ಹಾಗೂ ಪಾಶ್ಚಾತ್ಯ ರಾಷ್ಟ್ರಗಳ ಅನೇಕ ಸಂತ–ಶರಣರ ಜೀವನ ಚರಿತ್ರೆಗಳಲ್ಲಿ ಅದೆಷ್ಟೋ ಉದಾಹರಣೆಗಳು ಸಿಗುವುದುಂಟು. ಈ ಕ್ಷಮಾಗುಣಕ್ಕಾಗಿ ಮಹಾರಾಷ್ಟ್ರದ ಏಕನಾಥ ಮಹಾರಾಜರು, ಕರ್ನಾಟಕದ ಬಸವಾದಿ ಶರಣರು, ಫಿಲಿಸ್ತೀನ್ ದೇಶದ ದೇವದೂತನಾದ ಏಸುಕ್ರಿಸ್ತ, ಗ್ರೀಸ್ ದೇಶದ ಸಾಕ್ರೆಟೀಸ್ ಮುಂತಾದವರ ಜೀವನದ ಕೆಲವು ಘಟನೆಗಳು ಇದಕ್ಕೆ ಉದಾಹರಣೆಗಳಾಗಿವೆ. ಸಜ್ಜನರು ಅಪರಾಧಿಗಳಿಗೆ ಶಿಕ್ಷೆಯನ್ನು ಕೊಡದೇ ತಾವೇ ಸಹಿಸಿ ಕೊಂಡು ಅವರನ್ನು ಸುಧಾರಿಸಲು ಪ್ರಯತ್ನಿಸುತ್ತಾರೆ.

ಅದರಂತೆ ಏಳನೆಯ ಸದ್ಗುಣವೇ ಕಾರುಣ್ಯ ಸಂಪತ್ತಿಯು. ಪ್ರಾಣಿಮಾತ್ರರಲ್ಲಿರುವ ದಯೆಗೆ ಕಾರುಣ್ಯವೆಂದು ಕರೆಯುವರು. ಇದುವೇ ಕರುಣೆಯು. ಅನ್ಯರು ಅನುಭವಿಸು ತ್ತಿರುವ ದುಃಖವನ್ನು ಕಂಡು ಕಳವಳಗೊಂಡು ಅದನ್ನು ದೂರಮಾಡುವ ಪ್ರವೃತ್ತಿಯೇ ಕಾರುಣ್ಯವು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು 'ಕರುಣವಿರಲಿ ಜೀವ ರೊಳು' ಎಂಬುದಾಗಿ ಹೇಳಿದ್ದರೆ ಬಸವೇಶ್ವರರು– 'ದಯವಿಲ್ಲದ ಧರ್ಮವದಾವು ದಯ್ಯಾ ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ; ದಯವೇ ಧರ್ಮದ ಮೂಲವಯ್ಯಾ, ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ' ಎಂಬುದಾಗಿ ತಮ್ಮ ಅನುಭಾವಪೂರ್ಣ ವಚನದಲ್ಲಿ ದಯೆಯ ಸ್ವರೂಪವನ್ನು ವಿವರಿಸಿದ್ದಾರೆ. ಪ್ರಾಣಿ ಮಾತ್ರರಲ್ಲಿ ದಯಾಭಾವನೆಯಿದ್ದಾಗಲೇ ವ್ಯಕ್ತಿಯ ಹೃದಯವು ವಿಕಾಸವಾಗುತ್ತ ಹೋಗುವುದು. ಹೃದಯ ವೈಶಾಲ್ಯವಿಲ್ಲದೆ ಪರಶಿವಬ್ರಹ್ಮ ತತ್ವಗಳನ್ನು ಅರಿಯುವುದು ಸಾಧ್ಯವಾಗುವುದಿಲ್ಲ. ಹೀಗೆ ಲಿಂಗಾಂಗ ಸಾಮರಸ್ಯರೂಪವಾದ ಐಕ್ಯಸ್ಥಿತಿಯನ್ನು ತಲುಪ ಬೇಕಾದರೆ ಕಾರುಣ್ಯವೂ ಸಹ ಸಹಕಾರಿಯಾದುದಾಗಿದೆ. ಅಂತೆಯೇ ಈ ಶರಣ ಸ್ಥಲದಲ್ಲಿ ಶರಣನನ್ನು ಉದ್ದೇಶಿಸಿ ಈ ವಿಚಾರಗಳು ಹೇಳಲ್ಪಟ್ಟಿವೆ. ಪ್ರಾಣಿಗಳ ಮೇಲಿನ ದಯಾಭಾವನೆಯ ಬಗ್ಗೆ ಶಿಬಿ ಚಕ್ರವರ್ತಿ ಹಾಗೂ ಜೀಮೂತವಾಹನರಂಥ ದಯಾಳುಗಳ ಚರಿತ್ರೆಗಳು ಸುಪ್ರಸಿದ್ಧವಾಗಿವೆ.

ಇನ್ನು ಎಂಟನೆಯ ಸದ್ಗುಣವೇ ಶ್ರದ್ಧಾ. ಶ್ರದ್ಧೆಯೆಂದರೆ ನಂಬಿಕೆ, ವಿಶ್ವಾಸ ಎಂದರ್ಥ. ವಿಶ್ವಾಸವಿದ್ದಾಗಲೇನೇ ವ್ಯವಹಾರವು ನಡೆಯುವುದು. ಪರಸ್ಪರರಲ್ಲಿಯ ವಿಶ್ವಾಸವನ್ನು ಕಳೆದುಕೊಂಡಾಗ ಈ ಜಗದ ವ್ಯವಹಾರವೆಲ್ಲ ಅಸ್ತವ್ಯಸ್ತವಾಗುವುದು. ಓರ್ವ ವ್ಯಕ್ತಿಯು ವಸ್ತುವಿನ ಖರೀದಿಗಾಗಿ ಅಂಗಡಿಗೆ ಹೋದಾಗ ಆತನು ಕೇಳಿದ ವಸ್ತುವನ್ನು, ಅಂಗಡಿಕಾರನು ಆಗಿಂದಾಗಲೇ ತೆಗೆದು ಆತನಿಗೆ ಕೊಡುತ್ತಾನೆ. ಗ್ರಾಹಕನೂ ಸಹ ತತ್‌ಕ್ಷಣದಲ್ಲಿಯೇ ಅದರ ಬೆಲೆಯನ್ನು ಈಯುವುದನ್ನು ಕಾಣುತ್ತೇವೆ. ಆ ಕೊಡಕೊಳ್ಳುವ ವ್ಯವಹಾರದಲ್ಲಿ ಪರಸ್ಪರರು ಪರಸ್ಪರರಲ್ಲಿ ವಿಶ್ವಾಸವನ್ನಿಟ್ಟು ನಡೆದುಕೊಳ್ಳುವುದು. ಕಂಡು ಬರುತ್ತದೆ. ಗ್ರಾಹಕ ಹಾಗೂ ಮಾಲಕರಲ್ಲಿ ಒಂದು ವೇಳೆ ಅವಿಶ್ವಾಸವುಂಟಾಗಿ ನೀನು ಮೊದಲು ದುಡ್ಡುಕೊಡು ಅಂದರೇನೇ ಮಾಲನ್ನು ಕೊಡುತ್ತೇನೆ ಎಂದು ಮಾಲಕನೆಂದರೆ

ಅದರಂತೆ ಮೊದಲು ಮಾಲು ಕೊಡು. ಬಳಿಕ ದುಡ್ಡು ಕೊಡುತ್ತೇನೆ ಎಂದು ಗ್ರಾಹಕನು ವಾದಿಸಿದರೆ ಆ ಕೊಡಕೊಳ್ಳುವ ವ್ಯವಹಾರವು ನಡೆಯಲಾರದು. ಆದ್ದರಿಂದ ಮೊದಲು ಯಾರಾದರೊಬ್ಬರು ವಿಶ್ವಾಸವನ್ನಿಟ್ಟಾಗಲೇ ಮುಂದಿನ ವ್ಯವಹಾರವು ಸುರಳೀತ ವಾಗುವುದು. ವ್ಯವಹಾರದಲ್ಲಿರುವ ಈ ನಂಬುಗೆಗೆ ವಿಶ್ವಾಸವೆಂದು ಕರೆದರೆ ಗುರುಗಳಲ್ಲಿ, ದೇವರಲ್ಲಿ ಮತ್ತು ಶಾಸ್ತ್ರಗಳಲ್ಲಿ ಇರುವ ನಂಬುಗೆಯೇ 'ಶ್ರದ್ಧೆ'ಯೆಂಬುದಾಗಿ ಕರೆಯಲ್ಪಡುತ್ತದೆ. ಗುರು–ದೇವತೆಗಳಲ್ಲಿ ಶಾಸ್ತ್ರೋಪದೇಶದಲ್ಲಿ ಎಂದೂ ಅಶ್ರದ್ಧೆಯನ್ನು ತಾಳಬಾರದು. ಅವರಲ್ಲಿಟ್ಟ ಶ್ರದ್ಧೆಯೇ ನಮ್ಮ ಜ್ಞಾನೋದಯಕ್ಕೆ ಕಾರಣವಾಗುವುದು. ಅಂತೆಯೇ ಗೀತೆಯಲ್ಲಿ 'ಶ್ರದ್ಧಾವಾನ್ ಲಭತೇ ಜ್ಞಾನಮ್' ಎಂಬುದಾಗಿ ಉಪದೇಶಿಸ ಲಾಗಿದೆ. ಅತಃ ಶರಣಸ್ಥಲದ ಸಾಧಕನು ಶ್ರದ್ಧಾವಂತನಾಗಿರಬೇಕು.

ಇನ್ನು ಮುಂದೆ ಒಂಭತ್ತನೆಯ ಸದ್ಗುಣವೇ ಶಿವಭಕ್ತಿಯು. ಶಿವನ ಮೇಲಿರಿಸಿದ ಅನನ್ಯವಾದ ಪ್ರೇಮಕ್ಕೇನೇ ಶಿವಭಕ್ತಿಯೆಂಬುದಾಗಿ ಕರೆಯುತ್ತಾರೆ. ಅಂತೆಯೇ 'ಪೂಜ್ಯೇಷು ಅನುರಾಗೋ ಭಕ್ತಿಃ' ಎಂಬುದಾಗಿ ಭಕ್ತಿಯ ಲಕ್ಷಣವನ್ನು ಉಪದೇಶಿಸ ಲಾಗಿದೆ. ಶರಣನಾದವನು ಅಂಗಸತಿ–ಲಿಂಗಪತಿಯೆಂಬ ಭಾವನೆಯಿಂದೊಡಗೂಡಿ ತನ್ನ ಇಷ್ಟಲಿಂಗ, ಪ್ರಾಣಲಿಂಗ ಹಾಗೂ ಭಾವಲಿಂಗಗಳಲ್ಲಿಯೇ ಅನನ್ಯ ಪ್ರೇಮವನ್ನಿರಿಸಿ ಕೊಂಡು ಆಚರಿಸುವುದೇ ಅವನ ಶಿವಭಕ್ತಿಯು

ಇದರಂತೆ ಹತ್ತನೆಯದಾದ ಸದ್ಗುಣವೇ 'ಪರೋಧರ್ಮ'ವು. ಪರೋಧರ್ಮ ವೆಂದರೆ ಉತ್ಕೃಷ್ಟ ಶಿವಾಚಾರವೆಂದರ್ಥ. ವೀರಶೈವ ಸಿದ್ಧಾಂತದಲ್ಲಿ ಸಾಧಕನು ಶಿವತತ್ತ್ವ ವನ್ನು ಪ್ರಾಪ್ತಿಮಾಡಿಕೊಳ್ಳಲು ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳೆಂಬ ಪಂಚವಿಧ ಉತ್ಕೃಷ್ಟ ಆಚಾರಗಳನ್ನು ಆಚರಿಸಲು ಉಪದೇಶಿಸ ಲಾಗಿದೆ. ಶರಣಸ್ಥಲದ ಸಾಧಕನು ಈ ಐದೂ ಆಚಾರಗಳನ್ನು ಶ್ರದ್ಧೆವಹಿಸಿ ಆಚರಿಸ ಬೇಕಾಗುವುದು.

ಈ ವಿಧವಾಗಿ ಮೇಲೆ ಹೇಳಿದ ಶಮೆ, ದಮೆ, ವಿವೇಕ, ವೈರಾಗ್ಯ, ಪೂರ್ಣ ಭಾವನೆ, ಕ್ಷಮೆ, ಕರುಣೆ, ಶ್ರದ್ಧೆ ಶಿವಭಕ್ತಿ ಮತ್ತು ಪರೋಧರ್ಮಗಳೆಂಬ ದಶವಿಧ ಸದ್ಗುಣಗಳು ಶಿವಜ್ಞಾನೋತ್ಪತ್ತಿಗೆ ಸಹಕಾರಿಗಳಾಗಿರುತ್ತವೆ. ಅಂತೆಯೇ ಶ್ರೀ ರೇಣುಕ ಭಗವತ್ಪಾದರು ಇವುಗಳಿಗೆ ಶಿವಜ್ಞಾನಬಂಧುಗಳೆಂಬುದಾಗಿ ಸಂಬೋಧಿಸಿದ್ದಾರೆ. ಈ ಎಲ್ಲ ಸದ್ಗುಣ ಗಳಿಂದಯುಕ್ತನಾದ ಮಹಾಯೋಗಿಯೇ ಪರಮಸಾತ್ವಿಕನೆಂಬುದಾಗಿ ಕರೆಯಿಸಿ ಕೊಳ್ಳು ವನು. ಸಾಧಕನು ತನ್ನ ಉಪಾಸನೆಯ ಬಲದಿಂದ ಎಷ್ಟೆಷ್ಟು ದೇವರ ಸಮೀಪಕ್ಕೆ ಹೋಗುವನೋ, ಅಷ್ಟಷ್ಟು ಅವನಲ್ಲಿ ದೈವೀಗುಣಗಳು ಅಳವಡುತ್ತ ಹೋಗುವವು. ಶರಣಸ್ಥಲದ ಸಾಧಕನು ತನ್ನ ಮುಂದಿನ ಸ್ಥಲದಲ್ಲಿಯೇ ಶಿವನೊಂದಿಗೆ ಸಮರಸನಾಗುವವ ನಾಗಿರೋಣದರಿಂದ ಅವನಲ್ಲಿ ಅಲ್ಪ–ಸ್ವಲ್ಪ ತಮೋಗುಣಾಂಶವೂ ಇರಕೂಡದೆಂಬ ಉದ್ದೇಶದಿಂದ ಈ ತಾಮಸನಿರಸನಸ್ಥಲದಲ್ಲಿ ಆತನು ಪೂರ್ಣ ಸಾತ್ವಿಕನಾಗಲು ಬೇಕಾಗಿರುವ ದಶವಿಧ ಸದ್ಗುಣಗಳನ್ನು ಪೂಜ್ಯಪಾದರು ಇಲ್ಲಿ ಉಪದೇಶಿಸಿದ್ದಾರೆ. ಇವುಗಳನ್ನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಶರಣನೇ ಪೂರ್ಣಸಾತ್ವಿಕನಾಗಿ

ತಮೋ ಗುಣವನ್ನು ಕಳೆದುಕೊಳ್ಳುವನು. ಆದ್ದರಿಂದ ಪ್ರತಿಯೊಬ್ಬ ಸಾಧಕನು ತನ್ನ ನಿತ್ಯ ಜೀವನದಲ್ಲಿ ಈ ಸದ್ಗುಣಗಳನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೦ ಎಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ.)

■■

ಆಶೀರ್ವಚನ-೩

# ತಾಮಸನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನಿನ್ನೆಯ ಆಶೀರ್ವಚನದಲ್ಲಿ ಶರಣನಲ್ಲಿರಬೇಕಾದ ಹತ್ತು ವಿಧ ಸಾತ್ವಿಕ ಭಾವನೆಗಳ ಅರ್ಥಾತ್ ಸಾತ್ವಿಕ ಗುಣಗಳ ಬಗ್ಗೆ ವಿಸ್ತಾರಪೂರ್ವಕವಾಗಿ ಶ್ರವಣ ಮಾಡಿದ್ದೀರಿ. ಹೀಗೆ ಶುದ್ಧ ಸಾತ್ವಿಕ ಗುಣಸಂಪನ್ನನಾದ ಶರಣನಲ್ಲಿ ಕಾಮ–ಕ್ರೋಧಾದಿ ಅರಿಷಡ್ವರ್ಗಗಳು ಇರುವುದಿಲ್ಲವೆಂಬುದನ್ನು ಪೂಜ್ಯಪಾದರು–

ಕಾಮಕ್ರೋಧಮಹಾಮೋಹಮದಮಾತ್ಸರ್ಯವಾರಣಾಃ।
ಶಿವಜ್ಞಾನಮೃಗೇಂದ್ರಸ್ಯ ಕಥಂ ತಿಷ್ಠಂತಿ ಸನ್ನಿಧೌ ॥

(ಸಿ. ಶಿ. ೧೩–೧೭)

ಈ ವಿಧವಾಗಿ ತಿಳಿಯಪಡಿಸಿದ್ದಾರೆ. ಕಾಮ, ಕ್ರೋಧ, ಮಹಾಮೋಹ, ಲೋಭ, ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್‌ವರ್ಗಗಳು ಪ್ರತಿಯೊಬ್ಬ ಮನುಷ್ಯನನ್ನು ಸದಾ ಪೀಡಿಸುತ್ತಲೇ ಇರುತ್ತವೆ. ಅಂತೆಯೇ ಇವುಗಳಿಗೆ ಅಂತರಂಗದಲ್ಲಿಯ ಅರಿಷಡ್‌ವರ್ಗ ವೆಂಬುದಾಗಿ ತಿಳಿಯಪಡಿಸಿದ್ದಾರೆ. ಶರಣಸ್ಥಲದಲ್ಲಿಯ ತಾಮಸನಿರಸಕನಾದ ಶಿವ ಯೋಗಿಗೆ ಇವುಗಳ ಬಾಧೆ ಇರುವುದಿಲ್ಲವೆಂಬುದನ್ನು ರೂಪಕಾಲಂಕಾರ ಮುಖೇನ ಪೂಜ್ಯಪಾದರು ಇಲ್ಲಿ ವಿವರಿಸಿದ್ದನ್ನು ಕಾಣುತ್ತೇವೆ. ಅವರು ಇಲ್ಲಿ ಕಾಮ–ಕ್ರೋಧಾದಿ ಗಳನ್ನು ಮದೋನ್ಮತ್ತವಾದ ಆನೆಗೆ ಹೋಲಿಸಿ ಶಿವಜ್ಞಾನವನ್ನು ಸಿಂಹವೆಂಬುದಾಗಿ ರೂಪಿಸಿ ದ್ದಾರೆ. ಆನೆಯು ಅದೆಷ್ಟೇ ಬಲಶಾಲಿಯಾಗಿದ್ದರೂ ಮೃಗರಾಜನಾಗಿರುವಂಥ ಸಿಂಹವು ಅದರ ಮೇಲೆ ಜಿಗಿದು ಕುಂಭಸ್ಥಲವನ್ನು ಭೇದಿಸಿ ಬಿಸಿರಕ್ತವನ್ನು ಕುಡಿದು ಆನೆಯನ್ನು ಕ್ಷಣಾರ್ಧದಲ್ಲಿ ಯಮಸದನಕ್ಕಟ್ಟಿಬಿಡುತ್ತದೆ. ಅದರಂತೆ ಶಿವಜ್ಞಾನದ ಮುಂದೆ ಈ ಕಾಮ–ಕ್ರೋಧಾದಿಗಳ ಉಪಟಳವು ನಡೆಯಲಾರದು. ಶರಣಸ್ಥಲದ ಈ ಸಾಧಕನು ಅತ್ಯಂತ ಸಾತ್ವಿಕನಾಗಿದ್ದು ರಜ–ತಮೋಗುಣಗಳನ್ನು ಕಳೆದುಕೊಂಡಿರುವುದರಿಂದ ಶಿವಜ್ಞಾನ ಸಂಪನ್ನನಾಗಿರುತ್ತಾನೆ ಅಂತೆಯೇ ಈತನ ಮನಸ್ಸಿನಲ್ಲಿ ಅರಿಷಡ್‌ವರ್ಗಗಳ ವಿಕಾರವು ಅದೆಂದಿಗೂ ಆಗಲಾರದು. ಸಿಂಹದ ಮೇಲೆ ಆನೆಯ ಪರಾಕ್ರಮವು ನಡೆಯದಿರುವಂತೆ ಈ ಶಿವಜ್ಞಾನ ಸಂಪನ್ನ ಶಿವಯೋಗಿಯ ಮೇಲೆ ಕಾಮಕ್ರೋಧಾದಿಗಳ ಯಾವ ಪರಿಣಾಮವೂ ಉಂಟಾಗುವುದಿಲ್ಲ.

ಶ್ರೀಮದ್ ಭಗವದ್ಗೀತೆಯಲ್ಲಿ ಕಾಮ–ಕ್ರೋಧ ಮತ್ತು ಮೋಹ ಈ ಮೂರು ದುರ್ಗುಣಗಳಿಗೆ ನರಕದ ದ್ವಾರಗಳೆಂಬುದಾಗಿ ಪ್ರತಿಪಾದಿಸಲಾಗಿದೆ. ಅಂದರೆ, ಈ ಮೂರು ದುರ್ಗುಣಕ್ಕೊಳಗಾದ ಮನುಷ್ಯನು ಸದ್ಗತಿಯನ್ನು ಪಡೆಯದೆ ನರಕ

ಭಾಜನನಾಗುತ್ತಾನೆಂದು ತಾತ್ಪರ್ಯವು. ಬೇರೊಬ್ಬ ಸುಭಾಷಿತಕಾರನು ಈ ಮೂರು ದುರ್ಗುಣಗಳನ್ನು ಮಹಾಚೋರನಿಗೆ ಹೋಲಿಸಿದ್ದಾನೆ.

ಕಾಮಃ ಕ್ರೋಧಶ್ಚ ಲೋಭಶ್ಚ ದೇಹೇ ತಿಷ್ಠಂತಿ ತಸ್ಕರಾಃ ।
ಜ್ಞಾನ ರತ್ನಾಪಹಾರಾಯ ತಸ್ಮಾಜ್ಜಾಗ್ರತ ಜಾಗ್ರತ ॥

ಸುಭಾಷಿತಕಾರನ ಈ ಉಕ್ತಿಯಂತೆ ಕಾಮ, ಕ್ರೋಧ ಮತ್ತು ಲೋಭಗಳೆಂಬ ಕಳ್ಳರು ಜ್ಞಾನವೆಂಬ ಅಮೂಲ್ಯ ರತ್ನವನ್ನು ಅಪಹರಿಸುವಂಥವರಾಗಿರುತ್ತಾರೆ. ಆದ್ದರಿಂದ ಸಾಧಕರು ಇಂಥ ಮನೋಗತ ಕಳ್ಳರಿಂದ ಎಚ್ಚರವಿರಬೇಕು. ಇವುಗಳ ವೇಗಕ್ಕೆ ವಶೀಭೂತನಾದ ವ್ಯಕ್ತಿಯು ಅದರಿಂದುಂಟಾದ ಅನರ್ಥದ ನಂತರ ಪಶ್ಚಾತ್ತಾಪ ಪಡೆಯುವುದನ್ನು ಕಾಣುತ್ತೇವೆ. ಇದರಿಂದ ಅವುಗಳು ಆತನ ವಿವೇಕವನ್ನು ಮೊದಲು ಹರಣಮಾಡಿ ಆನಂತರ ಅನರ್ಥವನ್ನುಂಟುಮಾಡುತ್ತವೆಂಬುದು ವಿದಿತವಾಗುತ್ತದೆ. ಆದ್ದರಿಂದ ಸಾಧಕನು ಸದಾ ಎಚ್ಚರಾಗಿದ್ದು ಇವುಗಳ ಆಕ್ರಮಣವು ತನ್ನ ಮೇಲೆ ಆಗದಂತೆ ಕಾಳಜಿ ವಹಿಸಬೇಕು.

ಕಾಮ–ಕ್ರೋಧಾದಿಗಳ ವೇಗವು ಬಿರುಗಾಳಿಯಂತೆ ಇರುತ್ತದೆ. ಬಿರುಗಾಳಿಯಲ್ಲಿ ಸಿಕ್ಕ ಮನುಷ್ಯನು ತಲ್ಲಣಿಸಿ ಹೋಗುವಂತೆ ಇವುಗಳ ಉದ್ವೇಗಕ್ಕೆ ಸಿಕ್ಕ ಮನುಷ್ಯನು ತನ್ನ ವಿವೇಕವನ್ನು ಕಳೆದುಕೊಂಡು ಅಧಃಪತನವನ್ನು ಹೊಂದುತ್ತಾನೆ. ಕಾಮವು ಮನುಷ್ಯನನ್ನು ಸದಾ ಅತೃಪ್ತನನ್ನಾಗಿಸಿ ಅನರ್ಥವನ್ನುಂಟುಮಾಡುತ್ತಿರುತ್ತದೆ. ಕಾಮಿತ ವಿಷಯಗಳನ್ನು ಉಪಭೋಗಿಸಿ ಪರಿಪೂರ್ಣ ತೃಪ್ತರಾದವರು ಪ್ರಪಂಚದಲ್ಲಿ ಯಾರೂ ಇಲ್ಲ. ಆದ್ದರಿಂದ ಕಾಮನೆಯ ಉಪಭೋಗದಿಂದ ಶಾಂತಿಯಾಗದೆ ಅದರ ನಿಗ್ರಹದಿಂದಲೇ ಶಾಂತಿಯನ್ನು ಪಡೆಯಲು ಸಾಧ್ಯವಾಗುತ್ತದೆ. ಅಂತೆಯೇ ಯಯಾತಿ ಮಹಾರಾಜನು–

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥

ಎಂಬುದಾಗಿ ಈ ಶ್ಲೋಕದಲ್ಲಿ ತನ್ನ ಅನುಭೂತಿಯನ್ನು ವ್ಯಕ್ತಪಡಿಸಿದ್ದಾನೆ. ''ಉರಿಯುವ ಅಗ್ನಿಯಲ್ಲಿ ಆಜ್ಯ (ತುಪ್ಪ)ವನ್ನು ಹಾಕಿದರೆ ಆ ಅಗ್ನಿಯು ಮತ್ತಷ್ಟು ಪ್ರಜ್ವಲಗೊಳ್ಳುವಂತೆ ಕಾಮೋಪಭೋಗದಿಂದ ಕಾಮಾಗ್ನಿಯು ಇನ್ನಷ್ಟು ಪ್ರಜ್ವಲಗೊಳ್ಳುವದೇ ವಿನಃ ಶಾಂತವಾಗಲಾರದು ಎಂಬುದು ಯಯಾತಿಯ ಉಕ್ತಿಯ ತಾತ್ಪರ್ಯವಾಗಿದೆ. ಆದ್ದರಿಂದ ಸಾಧಕರು ಇದರಿಂದ ಸದಾ ಎಚ್ಚರವಿರಬೇಕು.

ಅರಿಷಡ್ವರ್ಗಗಳಲ್ಲಿ ಎರಡನೆಯದಾದ ಅರಿಯೇ ಕ್ರೋಧವು. ಇಚ್ಛೆಗೆ ಅಡ್ಡಿಯುಂಟಾದಾಗ ಮನಸ್ಸಿನಲ್ಲಿ ಕ್ರೋಧವೃತ್ತಿಯು ಉತ್ಪನ್ನವಾಗುತ್ತದೆ. ನಮ್ಮಲ್ಲಿ ಉಂಟಾದ ಕ್ರೋಧದಿಂದ ಅನ್ಯರಿಗೆ ಅಧಿಕ ಹಾನಿಯಾಗದೆ ನಮಗೇ ಹಾನಿಯುಂಟಾಗುವುದು. ನಮ್ಮ ಮನೆಗೆ ಹತ್ತಿದ ಬೆಂಕಿಯು ನಮ್ಮ ಮನೆಯನ್ನು ಸುಟ್ಟು ನಂತರ ಅನ್ಯರ ಮನೆಗೆ ತಾಗುವಂತೆ ಕ್ರೋಧಾಗ್ನಿಯು ಮೊದಲು ಕ್ರುದ್ಧನನ್ನೇ ಸುಟ್ಟುಹಾಕುತ್ತದೆ. ಸಿಟ್ಟಿಗೇರಿದ ಮನುಷ್ಯನ ಶರೀರದಲ್ಲಿ ತಾಪಮಾನವು ಹೆಚ್ಚಾದುದು ಕಂಡುಬರುತ್ತದೆ. ಜ್ವರದ ತಾಪದಿಂದ ರಕ್ತಾದಿಗಳು ದಹಿಸುವಂತೆ ಕ್ರೋಧತಾಪದಿಂದಲೂ ಸಹ ಇವು ದಹಿಸುತ್ತವೆ. ಕಟ್ಟಿಗೆಯಲ್ಲಿ

ಹುಟ್ಟಿದ ಅಗ್ನಿಯು ಕಟ್ಟಿಗೆಯನ್ನೇ ಸುಟ್ಟುಹಾಕುವಂತೆ ಮನುಷ್ಯನಲ್ಲಿಯ ಕೋಪಾಗ್ನಿಯು ಅವನನ್ನು ದಹಿಸಿಹಾಕುತ್ತದೆ. ಈ ಕೋಪಾಗ್ನಿ ಉಂಟಾದಾಗ ಮೌನವಾಗಿದ್ದು ಕಣ್ಣುಮುಚ್ಚಿ ಕ್ಷಣಕಾಲ ಶಿವಚಿಂತನೆಯನ್ನು ಗೈದಾಗ ಅದು ತನ್ನಿಂದ ತಾನೇ ಶಮನಗೊಳ್ಳುವುದು. ಈ ರೀತಿಯಾದ ಕೋಪಶಮನದ ಅನೇಕ ಉಪಾಯಗಳ ಮುಖಾಂತರ ಅದರ ಮೇಲೆ ವಿಜಯಸಾಧಿಸಲು ಸಾಧ್ಯವಾಗುವುದು. ಅಂತೆಯೇ ಶರಣನು ಶಿವಧ್ಯಾನ– ಶಿವಜ್ಞಾನಾ ಸಕ್ತನಾಗಿರೋಣದರಿಂದ ಈತನ ಮೇಲೆ ಇದು ಅದಾವ ದುಷ್ಪರಿಣಾಮವನ್ನು ಬೀರಲಾರದು.

ಮುಂದಿನ ದುರ್ಗುಣವೇ ಲೋಭವು. ಐಹಿಕ ಹಾಗೂ ಪಾರಲೌಕಿಕ ಸುಖ ಗಳೆರಡೂ ಜೀವಿಗೆ ಸಿಗದಂತೆ ಮಾಡುವ ದುರ್ಗುಣವೇ ಲೋಭವು. ಅಂತೆಯೇ 'ಲುನಾತಿ ಉಭೌ ಲೋಕೌ ಇತಿ ಲೋಭಃ' ಎಂಬುದಾಗಿ ಲೋಭಶಬ್ದ ಉತ್ಪತ್ತಿಯುಂಟು, ಲೋಭಿಯಾದ ಮನುಷ್ಯನು ದಾನ–ಧರ್ಮಾದಿಗಳನ್ನು ಮಾಡಲಾರ ಮತ್ತು ತನ್ನ ಐಹಿಕ ಸುಖಕ್ಕಾಗಿಯೂ ಧನವನ್ನು ಖರ್ಚು ಮಾಡಲಾರ. ಹೀಗಾಗಿ ಉಭಯ ಲೋಕಗಳ ಸುಖದಿಂದ ವಂಚಿತನಾಗುತ್ತಾನೆ. ಅಂತೆಯೇ ಇದಕ್ಕೆ ದುರ್ಗುಣವೆಂಬುದಾಗಿ ಕರೆ ದಿದ್ದಾರೆ. ಶ್ರೀಮನ್ನಿಜಗುಣ ಶಿವಯೋಗಿಗಳು 'ಕಡುಲೋಭದಿಂದ ದುರ್ಗುಣಮನ್ಯ ಮುಂಟೆ ? ಎಂದು ಪ್ರಶ್ನಿಸಿ ಅದನ್ನು ಮಹಾದುರ್ಗುಣವೆಂಬುದಾಗಿ ಪ್ರತಿಪಾದಿಸಿದ್ದಾರೆ. ಶರಣಸ್ಥಲದ ಶಿವಯೋಗಿಯು ಧನಾದಿಗಳಲ್ಲಿ ನಿಸ್ಪೃಹನಾಗಿರೋಣದರಿಂದ 'ನಿಸ್ಪೃಹಸ್ಯ ತೃಣಂ ಜಗತ್' ಎಂಬ ಉಕ್ತಿಗನುಸಾರವಾಗಿ ಈತನ ಮೇಲೆ ಲೋಭವು ಅದೆಂದೂ ಆಕ್ರಮಿಸಲಾರದು.

ಇದೇ ತೆರನಾಗಿ ಮಹಾಮೋಹವೂ ಸಹ ಒಂದು ದುರ್ಗುಣವೇ ಆಗಿದೆ. ಮಹಾ ಮೋಹವೆಂದರೆ ಅಜ್ಞಾನ ಇಲ್ಲವೆ ಅತ್ಯಾಸಕ್ತಿ ಎಂಬರ್ಥ. ಇದೂ ಸಹ ಮನುಷ್ಯನಿಗೆ ಅನೇಕ ಅನರ್ಥವನ್ನುಂಟುಮಾಡುತ್ತದೆ. ಪ್ರಪಂಚದಲ್ಲಿಯ ವಸ್ತು ಹಾಗೂ ವ್ಯಕ್ತಿಗಳ ಮೇಲೆ ಮೋಹಿಯಾದ ಮನುಷ್ಯನು ಸದಾ ಅದರ ಚಿಂತೆಯಲ್ಲಿ ಕಾಲ ಕಳೆಯುತ್ತ ತನ್ನ ಜೀವನದ ಪರಮ ಲಕ್ಷ್ಯವನ್ನು ಮರೆತು ಪುನಃ ಪುನಃ ಈ ಸಂಸಾರ ಚಕ್ರದಲ್ಲಿ ಸುತ್ತುತ್ತಿರುತ್ತಾನೆ. ಶರಣಸ್ಥಲದ ಸಾಧಕನು ಸದಾ ಶಿವನಲ್ಲಿ ಆಸಕ್ತನಾಗಿರೋಣದರಿಂದ ಇವನ ಮನಸ್ಸಿನ ಮೇಲೆ ಯಾವುದೇ ವಿಷಯದ ಮೋಹವು ಅಂಟಿಕೊಳ್ಳಲು ಸಾಧ್ಯವಾಗುವುದಿಲ್ಲ.

ಇದರಂತೆ ಮದವೂ ಸಹ ದುರ್ಗುಣಗಳಲ್ಲಿ ಪರಿಗಣಿಸಲ್ಪಟ್ಟಿದೆ. ಮದವೆಂದರೆ ಅತಿಯಾದ ದುರಭಿಮಾನ ಅಥವಾ ಗರ್ವವೆಂದರ್ಥ. ಇದು ಅನೇಕ ವಿಧವಾಗಿ ಮನುಷ್ಯನನ್ನು ಕಾಡುತ್ತದೆ. ಶಾಸ್ತ್ರಕಾರರು ಇದನ್ನು ಯೌವ್ವನ, ವಿದ್ಯೆ, ಕುಲ, ಶೀಲ, ಧನ, ರೂಪ, ತಪ ಮತ್ತು ರಾಜ್ಯಗಳೆಂಬುದಾಗಿ ಅಷ್ಟವಿಧವಾಗಿ ವಿಂಗಡಿಸಿದ್ದಾರೆ. ವಿವೇಕವಿಲ್ಲದ ಮನುಷ್ಯನಿಗೆ ಪ್ರಾಪ್ತವಾದ ಈ ಯೌವನಾದಿಗಳು ಮದವನ್ನುಂಟು ಮಾಡುವವು. ಹೀಗೆ ಯೌವನ, ವಿದ್ಯೆಯಾದಿಗಳಿಂದ ಮದೋನ್ಮತ್ತನಾದ ವ್ಯಕ್ತಿಯು ತನ್ನ ಜೀವನದಲ್ಲಿ ಆ ಯೌವನಾದಿಗಳ ಸದುಪಯೋಗವನ್ನು ಮಾಡದೆ ದುರುಪಯೋಗವನ್ನೇ ಮಾಡುತ್ತಿರು ತ್ತಾನೆ. ಅಂತೆಯೇ ಒಬ್ಬ ಸುಭಾಷಿತಕಾರನು–

ವಿದ್ಯಾ ವಿವಾದಾಯ ಧನಂ ಮದಾಯ ಖಲಸ್ಯ, ಶಕ್ತಿ ಪರಪೀಡನಾಯ ।
ಸಾಧೋಸ್ತುಸರ್ವಂ ವಿಪರೀತಮೇತತ್ ಜ್ಞಾನಾಯ, ದಾನಾಯ ಚ ರಕ್ಷಣಾಯ ॥

ಈ ರೀತಿಯಾಗಿ ಸಜ್ಜನ ಹಾಗೂ ದುರ್ಜನನಲ್ಲಿರುವ ವಿದ್ಯಾದಿಗಳ ಪರಿಣಾಮದ ಬಗ್ಗೆ ಸೂಚ್ಯವಾಗಿ ತಿಳಿಯಪಡಿಸಿದ್ದಾನೆ. ವಿವೇಕಿಯಾದವನಲ್ಲಿ ವಿದ್ಯೆ ಇದ್ದರೆ ಅದು ಅನಾವಶ್ಯಕ ವಿವಾದಕ್ಕೆ ಉಪಯೋಗವಾಗದೆ ಅನ್ಯರ ಜ್ಞಾನಾಭಿವೃದ್ಧಿಗೆ ಕಾರಣವಾಗುವುದು. ಸಜ್ಜನನಲ್ಲಿರುವ ಸಂಪತ್ತು ಅಭಿಮಾನಕ್ಕೆ ಆಸ್ಪದ ಕೊಡದೆ ದಾನಾದಿ ಸತ್ಕಾರ್ಯಗಳಿಗೆ ವಿನಿಯೋಗವಾಗುವುದು. ಅದರಂತೆ ಆ ಸಜ್ಜನನಲ್ಲಿರುವ ಯೌವನ ಶಕ್ತಿಯು ಪರರನ್ನು ಪೀಡಿಸಲು ಉಪಯೋಗವಾಗದೆ ಅಸಹಾಯಕರ ಸಂರಕ್ಷಣೆಗೆ ಬಳಕೆಯಾಗುವುದು. ಇದೇ ತೆರನಾಗಿ ಕುಲ, ಶೀಲ, ರೂಪ, ತಪ ಮತ್ತು ರಾಜ್ಯಗಳು ಪ್ರಾಪ್ತವಾದಾಗಲೂ ದುಷ್ಟನು ಅವುಗಳ ಮೇಲೆ ದುರಭಿಮಾನವನ್ನು ತಾಳಿ ಅವುಗಳನ್ನು ದುರುಪಯೋಗಪಡಿಸುವನಲ್ಲದೆ ಸದುಪಯೋಗಪಡಿಸಲಾರ. ಆದರೆ ಇವುಗಳು ಒಬ್ಬ ಸಾತ್ವಿಕ ಸ್ವಭಾವದ ಸಜ್ಜನನಿಗೆ ಪ್ರಾಪ್ತಗಳಾದರೆ ಅವುಗಳಿಂದ ಲೋಕದಲ್ಲಿ ಅವನು ಯಾವ ಅನರ್ಥವನ್ನೂ ಮಾಡದೆ ಸಾರ್ಥಕಪಡಿಸಲು ಪ್ರಯತ್ನಿಸುತ್ತಾನೆ. ಆದ್ದರಿಂದ ಯೌವನಾದಿಗಳು ಕೆಟ್ಟವುಗಳಾಗಿರದೆ ಅವುಗಳನ್ನು ದುರುಪಯೋಗಪಡಿಸಿಕೊಳ್ಳುವ ವ್ಯಕ್ತಿಯೇ ಕೆಟ್ಟವನಾಗಿರುತ್ತಾನೆ. ಶರಣ ಸ್ಥಲದ ಸಾಧಕನು ಅತ್ಯಂತ ಸಾತ್ವಿಕನಾಗಿರೋಣದರಿಂದ ಅವನಿಗೆ ಯೌವ್ವನ, ವಿದ್ಯೆ ಮುಂತಾದವುಗಳು ಪ್ರಾಪ್ತಗಳಾದರೂ ಅದರಿಂದ ಅವನು ಮದೋನ್ಮತ್ತನಾಗುವುದಿಲ್ಲ ಎಂಬುದನ್ನೇ ಪೂಜ್ಯಪಾದರು ಇಲ್ಲಿ ತಿಳಿಯಪಡಿಸಿದ್ದಾರೆ.

ಇನ್ನು ಪ್ರಕೃತ ಪ್ರಸಂಗದಲ್ಲಿ ಕೊನೆಯದಾದ ದುರ್ಗುಣವೇ ಮಾತ್ಸರ್ಯವು. ಅನ್ಯರ ಔನ್ನತ್ಯವನ್ನು ಸಹಿಸಿಕೊಳ್ಳದ ಮನೋವಿಕಾರವೇ ಮಾತ್ಸರ್ಯವು. ಈ ಮಾತ್ಸರ್ಯಗುಣವುಳ್ಳ ವ್ಯಕ್ತಿಯು ತನ್ನ ಹಾಗೂ ಅನ್ಯರ ಪ್ರಗತಿಯನ್ನೂ, ಕಲ್ಯಾಣವನ್ನೂ ಸಾಧಿಸಲಾರನು. ಜಗತ್ತಿನಲ್ಲಿ ಜನ್ಮತಾಳಿದ ಬಳಿಕ ಹೆಚ್ಚು ಹೆಚ್ಚು ಜನರಿಗೆ ಒಳ್ಳೆಯದಾಗುವ ಕಾರ್ಯವನ್ನು ಎಲ್ಲರೂ ಮಾಡಬೇಕು. ಅಂದಾಗಲೇನೇ ಸಮಾಜದ, ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಯಾಗಲು ಸಾಧ್ಯವಾಗುವುದು. ದೇಶವನ್ನಾಳುವ ಮುಖಂಡರಲ್ಲಿ ಮತ್ತು ಜಗತ್ತನ್ನು ಸುಧಾರಿಸುವ ಸಂತರಲ್ಲಿ ಅಕಸ್ಮಾತ್ತಾಗಿ ಈ ಮಾತ್ಸರ್ಯಗುಣ ಉದಿಸಿದರೆ ಸುಂದೋಪಸುಂದನ್ಯಾಯದಂತೆ ಸರ್ವವೂ ವಿನಾಶವಾಗುವುದು. ಇಂತಹ ದುರ್ಭಾವನೆಗಳು ಯಾರಲ್ಲಿಯೂ ಮೂಡಬಾರದೆಂದು ವಿಚಾರಿಸಿಯೇ ಉಪನಿಷತ್ತಿನಲ್ಲಿ–

ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ ದುಃಖಭಾಗ್ಭವೇತ್ ॥

ಎಂಬುದಾಗಿ ಉಪದೇಶಿಸಲಾಗಿದೆ. ಎಲ್ಲರ ಸುಖವನ್ನು, ಎಲ್ಲರ ಆರೋಗ್ಯವನ್ನು, ಎಲ್ಲರ ಕಲ್ಯಾಣವನ್ನು ಬಯಸುವ ಸಮಷ್ಟಿ ಭಾವನೆಯನ್ನು ತಾಳಿದಾಗ ಮಾತ್ರ ಮನುಷ್ಯನು ಮಾತ್ಸರ್ಯಗುಣದಿಂದ ದೂರನಾಗಿರಲು ಸಾಧ್ಯ. ಇಂತಹ ಸಮಷ್ಟಿ ಭಾವನೆಗಳೇ ಮನುಷ್ಯನ ವಿಕಾಸಕ್ಕೆ ಕಾರಣಗಳಾಗುವವು. ಶರಣಸ್ಥಲದ ಸಾಧಕನು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಉನ್ನತ ಸ್ಥಿತಿಯನ್ನು ಪ್ರಾಪ್ತಮಾಡಿಕೊಂಡಿರೋಣದರಿಂದ ಮಾತ್ಸರ್ಯದಂತಹ ಕುತ್ಸಿತ

ಭಾವನೆಗಳು ಆತನಲ್ಲಿ ಎಂದೂ ಒಡಮೂಡುವದಿಲ್ಲ. ಆತನು ಸದಾ ಲೋಕ ಕಲ್ಯಾಣಕ್ಕಾಗಿಯೇ ಪ್ರಯತ್ನಿಸುತ್ತಿರುತ್ತಾನೆ. ಅಂತೆಯೇ ಜಗದ್ಗುರು ರೇಣುಕ ಭಗವತ್ಪಾದರು ಈ ತಾಮಸ ನಿರಸನಸ್ಥಲದಲ್ಲಿ ಶರಣಸ್ಥಲದ ಸಾಧಕನ ಮೇಲೆ ಕಾಮ, ಕ್ರೋಧ, ಲೋಭ, ಮಹಾಮೋಹ ಮತ್ತುಮಾತ್ಸರ್ಯಗಳೆಂಬ ಈ ಅರಿಷಡ್ ವರ್ಗಗಳು ಯಾವ ಪ್ರಭಾವವನ್ನು ಬೀರಲಾರವು ಎಂಬುದನ್ನು ಆನೆ–ಸಿಂಹಗಳ ಉದಾಹರಣೆಯಿಂದ ಬಹುಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ. ಆನೆಯು ಅದೆಷ್ಟೇ ಮದೋನ್ಮತ್ತವಾಗಿದ್ದರೂ ಮೃಗರಾಜನಾದ ಸಿಂಹದ ಮೇಲೆ ವಿಜಯವನ್ನು ಸಂಪಾದಿಸುವುದು ಅಸಾಧ್ಯವಾಗಿರು ವಂತೆ, ಈ ಕಾಮ ಕ್ರೋಧಾದಿಗಳು ಜಗತ್ತಿನ ಎಲ್ಲ ಜೀವಿಗಳನ್ನು ತಿಕ್ಕಿ–ಮುಕ್ಕಿ ಮಣ್ಣು–ಮಸಿ ಮಾಡುತ್ತಿದ್ದರೂ, ಶಿವಜ್ಞಾನ ಸಂಪನ್ನನಾದ ಶಿವಯೋಗನಿಷ್ಠನಾದ ಧೀರ ಸ್ವಭಾವದ ಶರಣಸ್ಥಲದ ಸಾಧಕನ ಮೇಲೆ ಯಾವ ಪರಿಣಾಮವನ್ನೂ ಮಾಡಲಾರವು. ಇಂತಹ ಧೀರರನ್ನುದ್ದೇಶಿಸಿಯೇ ಕವಿಕುಲಗುರು ಕಾಳಿದಾಸನು–

"ವಿಕಾರ ಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತೇ ಏವ ಧೀರಾಃ"

ಎಂಬುದಾಗಿ 'ಕುಮಾರಸಂಭವ' ಮಹಾ ಕಾವ್ಯದಲ್ಲಿ ಪ್ರತಿಪಾದಿಸಿದ್ದಾನೆ. ಮನಸ್ಸನ್ನು ವಿಕೃತಗೊಳಿಸುವ ವಿಷಯಗಳು ತನ್ನೆದುರಿನಲ್ಲಿದ್ದರೂ ಅದರಿಂದ ಯಾರ ಮನಸ್ಸು ವಿಕೃತಿಯನ್ನು ಹೊಂದುವುದಿಲ್ಲವೋ ಅವರಿಗೇನೇ ಧೀರರೆನಬೇಕೆಂಬುದು ಕಾಳಿದಾಸನ ಉಕ್ತಿಯ ತಾತ್ಪರ್ಯವಾಗಿದೆ. ಹೀಗೆ ಶರಣಸ್ಥಲದ ಸಾಧಕನು ಪ್ರಪಂಚದ ಮಧ್ಯದಲ್ಲಿ ತಾನಿದ್ದರೂ ಕೆಸರಿನಲ್ಲಿ ಕಮಲವಿರುವಂತೆ ಈ ಸಾಂಸಾರಿಕ ದೋಷಗಳಿಂದ ನಿರ್ಲಿಪ್ತನಾಗಿ ಮಂಗಲಮಯವಾದ ಜೀವನವನ್ನು ಸಾಗಿಸುತ್ತ ಆನಂದಭಕ್ತಿಯೊಳಗೆ ಸದಾ ವಿಹರಿಸುತ್ತಿರು ತ್ತಾನೆ. ಎಂಬುದಾಗಿ ತಿಳಿಯಪಡಿಸಿ, ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೧ ಎಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ.)



ಆಶೀರ್ವಚನ-೪

# ತಾಮಸನಿರಸನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶರಣಸ್ಥಲದಲ್ಲಿಯ ಅವಾಂತರಸ್ಥಲವಾದ ತಾಮಸನಿರಸನಸ್ಥಲದ ಬಗ್ಗೆ ಮೂರು ದಿನಗಳಿಂದ ನೀವು ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಈ ಸ್ಥಲದಲ್ಲಿಯ ಸಾಧಕನಿಗೆ ಕಾಮಕ್ರೋಧಾದಿ ದುರ್ಗುಣಗಳು ಆವ ಹಾನಿಯನ್ನೂ ಉಂಟುಮಾಡಲಾರವು ಎಂಬುದನ್ನು ತಿಳಿಯಪಡಿಸಿ ಸದ್ಯಃ ರಜೋಗುಣದ ಬಗ್ಗೆ ಹಾಗೂ ರಜೋಗುಣಿಯಾದ ಮನುಷ್ಯನಿಂದ ಉಂಟಾಗುವ ಅನರ್ಥದ ಬಗ್ಗೆ ತಿಳಿಸುವುದಕ್ಕೋಸ್ಕರ ಶ್ರೀ ಜಗದ್ಗುರು ರೇಣುಕರು–

ಯತ್ರ ಕುತ್ರಾಪಿ ವಾ ದ್ವೇಷ್ಟಿ ಪ್ರಪಂಚೇ ಶಿವರೂಪಿಣಿ ।
ಶಿವದ್ವೇಷೀ ಸ ವಿಜ್ಞೇಯೋ ರಜಸಾವಿಷ್ಟಮಾನಸಃ ॥

(ಸಿ. ಶಿ. ೧೩–೧೮)

ಹೀಗೆ ಉಪದೇಶಿಸಿದ್ದಾರೆ. ಈ ಪ್ರಪಂಚವು ಶಿವಸ್ವರೂಪವಾಗಿದ್ದು ಈ ಪ್ರಪಂಚದ ಯಾವುದೇ ವ್ಯಕ್ತಿ ಅಥವಾ ಪದಾರ್ಥದ ಬಗ್ಗೆ ಯಾರದಾದರೂ ಮನಸ್ಸಿನಲ್ಲಿ ದ್ವೇಷ ಭಾವನೆಯುಂಟಾದರೆ ಅವನು ಆ ವ್ಯಕ್ತಿ ಅಥವಾ ವಸ್ತುವನ್ನು ದ್ವೇಷಿಸದೇ ಶಿವನನ್ನೇ ದ್ವೇಷಿಸುತ್ತಾನೆಂದು ತಿಳಿದುಕೊಳ್ಳಬೇಕು. ಈ ದ್ವೇಷ ಬುದ್ಧಿಗೆ ಕಾರಣವಾದುದೇ ರಜೋಗುಣ.

ರಜೋಗುಣಿಯಾದ ಮನುಷ್ಯನ ಮನಸ್ಸಿನಲ್ಲಿ ದ್ವೇಷವು ತುಂಬಿಕೊಂಡಿರುತ್ತದೆ. ಕ್ರೋಧದಂತೆ ದ್ವೇಷವು ತತ್‌ಕ್ಷಣದಲ್ಲಿಯೇ ಪ್ರಕಟವಾಗುವದಲ್ಲ, ಅದು ಒಳಗೇ ಪ್ರಚ್ಛನ್ನವಾಗಿದ್ದು ತನ್ನ ಸೇಡನ್ನು ತೀರಿಸಿಕೊಳ್ಳಲು ಅವಕಾಶವನ್ನು ಕಾಯುತ್ತಿರುತ್ತದೆ. ರಜೋಗುಣಿಯಾದ ಮನುಷ್ಯನು ಸರ್ವರನ್ನೂ ಪ್ರೀತಿಸಲಾರ. ಸಾತ್ವಿಕ ಮನುಷ್ಯನು ಮಾತ್ರ ಸರ್ವರನ್ನೂ ಪ್ರೀತಿಸುತ್ತಾನೆ. ಕಲಹಕ್ಕೆ ಮೂಲಕಾರಣವೆಂದರೆ ಮನುಷ್ಯನ ಬುದ್ಧಿ ಶೂನ್ಯತೆಯೇ ಆಗಿದೆ. ಅಂತೆಯೇ ಚಾಣಕ್ಯನು 'ನಾಸ್ತಿ ಬುದ್ಧಿಮತಾಂ ಶತ್ರುಃ' ಎಂಬುದಾಗಿ ತನ್ನ ನೀತಿಯಲ್ಲಿ ಉಪದೇಶಿಸಿದ್ದಾನೆ. ಅಂದರೆ ಬುದ್ಧಿವಂತನಾದ ಅರ್ಥಾತ್ ವಿವೇಕಿ ಯಾದ ಮನುಷ್ಯನಿಗೆ ಪ್ರಪಂಚದಲ್ಲಿ ಶತ್ರುಗಳೇ ಇರುವುದಿಲ್ಲ. ಅಂತೆಯೇ ನಮ್ಮ ದೇಶದಲ್ಲಿ ಕೆಲವು ಜನರು ಅಜಾತಶತ್ರುಗಳೆಂದೇ ಪ್ರಸಿದ್ಧರಾಗಿದ್ದಾರೆ. ಯಾರ ಮನಸ್ಸಿನಲ್ಲಿ ಅನ್ಯರ ಬಗ್ಗೆ ಶತ್ರುತ್ವ ಭಾವನೆಯು ಜನ್ಮವನ್ನೇ ತಾಳಿಲ್ಲವೋ ಅಂಥವರಿಗೆ 'ಅಜಾತಶತ್ರು' ಯೆಂಬುದಾಗಿ ಕರೆಯುತ್ತಾರೆ. ಕದಾಚಿತ್ ಅನ್ಯರು ಅವರನ್ನು ದ್ವೇಷಿಸಬಹುದು. ಆದರೆ ಅವರು ಮಾತ್ರ ಯಾರನ್ನೂ ಎಂದೂ ದ್ವೇಷಿಸಲಾರರು. ಇವರಲ್ಲಿಯ ಈ ಅಜಾತ ಶತ್ರುತ್ವ ಭಾವನೆಯ ಪರಿಣಾಮವಾಗಿ ಇವರ ಸಮೀಪಕ್ಕೆ ಶತ್ರುತ್ವ ಭಾವನೆಯಿಂದ ಬಂದ

ಮನುಷ್ಯನೂ ಸಹ ತನ್ನ ಆ ದುರ್ಭಾವನೆಯನ್ನು ಕಳೆದುಕೊಳ್ಳುತ್ತಾನೆ. ಕೊಲೆಗಡುಕನಾದ ಅಂಗುಲಿಮಾಲನು ಗೌತಮಬುದ್ಧನ ಸಾನ್ನಿಧ್ಯದಿಂದ ಸಾತ್ವಿಕನಾಗಿ ಪರಿವರ್ತಿತನಾದ ಉದಾಹರಣೆಯು ಸುಪ್ರಸಿದ್ಧವಾದುದಾಗಿದೆ.

ದೃಶ್ಯಮಾನವಾದ ಪ್ರಪಂಚವು ಚಿಚ್ಛಕ್ತಿವಿಶಿಷ್ಟನಾದ ಶಿವನ ಅವಿಕೃತ ಪರಿಣಾಮವಾಗಿರುತ್ತದೆ. ಅರ್ಥಾತ್ ಶಿವಸ್ವರೂಪವೇ ಆಗಿರುತ್ತದೆ. ಹೀಗಿದ್ದರೂ ಈ ಪ್ರಪಂಚವನ್ನು ಸರ್ವರೂ ಪರಮಾತ್ಮರೂಪವನ್ನಾಗಿ ಕಾಣುವುದಿಲ್ಲ. ಇದರ ಪರಿಣಾಮವಾಗಿಯೇ ಸಾಮಾನ್ಯ ಜೀವಿಗಳು ರಜೋಗುಣವಶೀಭೂತರಾಗಿ ಪರಸ್ಪರ ದ್ವೇಷವನ್ನು ಮಾಡುತ್ತಿರುತ್ತಾರೆ. ಪ್ರಪಂಚವು ಶಿವಸ್ವರೂಪವಾಗಿರೋಣದರಿಂದ ಪ್ರಪಂಚದಲ್ಲಿಯ ಯಾರನ್ನು ದ್ವೇಷಿಸಿದರೂ ಶಿವನನ್ನೇ ದ್ವೇಷಿಸಿದಂತೆ ಆಗುತ್ತದೆ. ಜಗತ್ತಿನಲ್ಲಿಯ ಯಾರೊಬ್ಬರ ಬಗ್ಗೆ ದ್ವೇಷಭಾವನೆಯನ್ನು ತಾಳಿದರೂ ಆ ವ್ಯಕ್ತಿಗೆ ಸದ್ಗತಿಯು ಸಹ ದೊರೆಯುವುದಿಲ್ಲವೆಂಬುದಾಗಿ ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಸದ್ಗತಿ ಪ್ರಾಪ್ತವಾಗಬೇಕಾದರೆ ಸರ್ವತ್ರ ಶಿವದೃಷ್ಟಿಬೇಕಾಗುವುದು. ದ್ವೇಷಿಯಾದ ಮನುಷ್ಯನು ತನ್ನ ದ್ವೇಷ್ಯ ವ್ಯಕ್ತಿಯಲ್ಲಿ ಶಿವದೃಷ್ಟಿಯನ್ನೂ ಹೊಂದದ ಕಾರಣ ಅವನಿಗೆ ಸದ್ಗತಿಯು ಅದು ಹೇಗೆ ತಾನೆ ದೊರೆಯಬಲ್ಲದು ?

ಈ ವಿಧವಾಗಿ ರಜೋಗುಣದ ಪರಿಣಾಮವಾದ ದ್ವೇಷದ ಬಗ್ಗೆ ತಿಳಿಯಪಡಿಸಿದ ಪೂಜ್ಯರು ತಮೋಗುಣಿಯಾದ ವ್ಯಕ್ತಿಯಿಂದುಂಟಾಗುವ ಅನರ್ಥವನ್ನು ಕುರಿತು–

ಯೋ ದ್ವೇಷ್ಟಿ ಸಕಲಾನ್ ಲೋಕಾನ್ ಯೋಽಹಂಕುರುತೇ ಸದಾ ।
ಯೋಽಸತ್ಯಭಾವನಾಯುಕ್ತಃ ಸ ತಾಮಸ ಇತಿ ಸ್ಮೃತಃ ॥

(ಸಿ. ಶಿ. ೧೩–೧೯)

ಈ ವಿಧವಾಗಿ ತಿಳಿಹೇಳಿದ್ದಾರೆ. ಜಗತ್ತಿನ ಎಲ್ಲ ಜನರನ್ನು ದ್ವೇಷಿಸುವ, ಸದಾ ಅಹಂಕಾರದಿಂದ ಮೆರೆಯುವ ಮತ್ತು ಅಸತ್ಯವಸ್ತುವಿನ ಧ್ಯಾನಾಸಕ್ತನಾದ ಮನುಷ್ಯನು ತಾಮಸನೂ ಅರ್ಥಾತ್ ತಮೋಗುಣಿಯೆಂಬುದಾಗಿ ಕರೆಯಲ್ಪಡುತ್ತಾನೆ. ತಮೋಗುಣಿಯಾದ ವ್ಯಕ್ತಿಯು ಸಹೃದಯಸಂಪನ್ನನಾಗಿರುವುದಿಲ್ಲ, ಯಾವಾಗಲೂ ಅನ್ಯರ ಜೊತೆಗೆ ಜಗಳವನ್ನೇ ಮಾಡುತ್ತಲಿರುತ್ತಾನೆ ಮತ್ತು ನಾನೇ ಸರ್ವಶ್ರೇಷ್ಠನೆಂಬ ದುರಹಂಕಾರ ಭಾವನೆಯಿಂದ ಮೆರೆಯುತ್ತಿರುತ್ತಾನೆ. ತನ್ನನ್ನು ಶ್ರೇಷ್ಠನೆಂದು ಭಾವಿಸುವುದು ತಪ್ಪೇನಲ್ಲ. 'ತತ್ತ್ವಮಸಿ' ಎಂಬ ಮಹಾವಾಕ್ಯವೂ ಸಹ 'ನೀನು ಪರಮಾತ್ಮರೂಪವೇ ಇರುವಿ' ಎಂಬುದಾಗಿ ತಿಳಿಯಪಡಿಸಿ ಸರ್ವರನ್ನೂ ಶ್ರೇಷ್ಠರನ್ನಾಗಿ ಉಪದೇಶಿಸಿದೆ. ಈ ಮಹಾವಾಕ್ಯದಂತೆ ಸರ್ವವೆಲ್ಲವನ್ನೂ ತನ್ನ ಸ್ವರೂಪವನ್ನಾಗಿ ಭಾವಿಸಿ ತನ್ನನ್ನು ಪರಮಾತ್ಮರೂಪವನ್ನಾಗಿ ತಿಳಿದುಕೊಂಡಾಗ ಅವನಲ್ಲಿ 'ಅಹಂಬ್ರಹ್ಮಾಸ್ಮಿ' ನಾನು ಪರಬ್ರಹ್ಮಸ್ವರೂಪನೇ ಇದ್ದೇನೆ ಎಂಬ ಭಾವನೆಯು ಉತ್ಪನ್ನವಾಗುವುದು. ಇದೂ ಸಹ ಒಂದು ವಿಧವಾದ ಅಹಂಕಾರವೇ. ಆದರೆ ಈ ಅಹಂಕಾರವು ಸಾತ್ವಿಕವೂ ಶಾಸ್ತ್ರಸಮ್ಮತವೂ ಆಗಿರೋಣದರಿಂದ ಇದರಿಂದ ಯಾವ ಅನರ್ಥವೂ ಆಗದೆ ಜೀವಿಗಳಿಗೆ ಸದ್ಗತಿಯುಂಟಾಗುವುದು. ಅಂತೆಯೇ ಇದಕ್ಕೆ ಶುದ್ಧ ಅಥವಾ ನೈತಿಕ ಅಹಂಕಾರ ವೆಂಬುದಾಗಿ ಕರೆಯುತ್ತಾರೆ.

ಇನ್ನು ನಾನು ಅನ್ಯರೆಲ್ಲರಿಗಿಂತಲೂ ದೊಡ್ಡವನಿದ್ದೇನೆ ಎಂಬುದಾಗಿ ಅಹಂಕರಿಸುವುದಕ್ಕೆ 'ಅಶುದ್ಧ ಅಹಂಕಾರ' ಅಥವಾ 'ಅನೈತಿಕ ಅಹಂಕಾರ'ವೆಂಬುದಾಗಿ ಕರೆಯುತ್ತಾರೆ. ಈ ಅಹಂಕಾರವು ಅನರ್ಥಕಾರಿಯಾದುದು. ತನ್ನನ್ನು ದೊಡ್ಡವನೆಂದು ತಿಳಿದುಕೊಳ್ಳುವಲ್ಲಿ ಅನ್ಯರ ಬಗ್ಗೆ ತಿರಸ್ಕಾರ ಭಾವನೆಯು ಎದ್ದು ತೋರುತ್ತದೆ. ಅನ್ಯರನ್ನು ತಿರಸ್ಕಾರ ದೃಷ್ಟಿಯಿಂದ ಕಾಣುವುದು ನೈತಿಕವಾದುದಲ್ಲ. ಅಂತೆಯೇ ಇದಕ್ಕೆ ಅನೈತಿಕ ಅಹಂಕಾರವೆಂಬುದಾಗಿ ಹೇಳುವರು. ಸಾತ್ವಿಕನಾದ ಸಾಧಕನಲ್ಲಿ ಅಪಾಯಕಾರಿಯಲ್ಲದ ನೈತಿಕ ಅಹಂಭಾವನೆಯಿದ್ದರೆ ತಮೋಗುಣಿಯಾದ ಸಾಮಾನ್ಯ ಮನುಷ್ಯನಲ್ಲಿ ಬಹು ಅಪಾಯಕಾರಿಯಾದ ಅನೈತಿಕ ಅಹಂಕಾರವಿರುವುದು. ಅಂತೆಯೇ ಪೂಜ್ಯಪಾದರು ತಮೋಗುಣಜನ್ಯವಾದ ಅಹಂಕಾರವು ಅಯೋಗ್ಯವೆಂಬುದಾಗಿ ಇಲ್ಲಿ ಉಪದೇಶಿಸಿದ್ದಾರೆ. ಈ ಅನೈತಿಕ ಅಹಂಕಾರದಿಂದ ತುಂಬಿಕೊಂಡಿರುವ ಜೀವಾತ್ಮರು ಸಂಸಾರಸಾಗರದಲ್ಲಿ ಮುಳುಗಿಹೋಗುತ್ತಾರೆ. ಯಾರ ಮನಸ್ಸು ಈ ಅಹಂಕಾರದಿಂದ ರಿಕ್ತವಾಗಿರುವುದೋ ಅವರೇ ಈ ಸಂಸಾರ ಸಾಗರವನ್ನು ದಾಟಲು ಸಮರ್ಥರಾಗುವರು.

ಒಂದಾನೊಂದು ಗ್ರಾಮದಲ್ಲಿ ಓರ್ವ ರತ್ನವ್ಯಾಪಾರಿಯಿದ್ದನು. ಅವನು ರತ್ನ ತುಂಬಿದ ಪಿಪಾಯಿಗಳನ್ನು ಹಡಗದಲ್ಲಿರಿಸಿಕೊಂಡು ಸದಾ ಸಮುದ್ರದಲ್ಲಿ ಸಂಚರಿಸುತ್ತ, ದೇಶ ವಿದೇಶಗಳಿಗೆ ಹೋಗಿ ದೊಡ್ಡ ಪ್ರಮಾಣದ ವ್ಯಾಪಾರವನ್ನು ಮಾಡುತ್ತಿದ್ದನು. ಸದಾ ಜಲಸಂಚಾರಿಯಾದ ಈತನಿಗೆ ಈಜಾಡಲು ಮಾತ್ರ ಬರುತ್ತಿದ್ದಿಲ್ಲ. ಒಮ್ಮೆ ಆತನು ತನ್ನ ಕುಲಗುರುಗಳ ದರ್ಶನಕ್ಕೆ ಹೋದಾಗ ಆ ಶಿವಾಚಾರ್ಯರು ಶಿಷ್ಯನ ಯೋಗ ಕ್ಷೇಮವನ್ನು ವಿಚಾರಿಸುತ್ತ ಸಹಜವಾಗಿ ಕೇಳಿದರು–''ಏನಯ್ಯಾ ನೀನು ಸದಾ ಸಾಗರದಲ್ಲಿಯೇ ಸಂಚರಿಸುತ್ತಿರುವಿ. ನಿನಗೆ ಈಜಲು ಬರುತ್ತದೆಯೇ?'' ಆಗ ಆ ವ್ಯಕ್ತಿಯು, ''ಇಲ್ಲ ಗುರುಗಳೇ ಬಾಲ್ಯದಲ್ಲಿ ಅದನ್ನು ಕಲಿಯಲೇ ಇಲ್ಲ. ಸದ್ಯಃ ಕಲಿಯಬೇಕೆಂದರೆ ಅವಕಾಶವೂ ನನಗಿಲ್ಲ'' ಎಂಬುದಾಗಿ ಉತ್ತರಿಸಿದನು. ಆಗ ಆ ಗುರುಗಳು ಶಿಷ್ಯನ ಮೇಲಿನ ದಯಾಭಾವನೆಯಿಂದ ''ನೋಡಪ್ಪಾ ಪ್ರಯಾಣದಲ್ಲಿ ಯಾವಾಗ ಎಂತಹ ದುರ್ಘಟನೆಗಳು ಘಟಿಸುವವೋ ಹೇಳಲು ಬರುವುದಿಲ್ಲ. ಆದ್ದರಿಂದ ನಿನಗೆ ಈಜು ಕಲಿಯಲು ಅವಕಾಶವಿರದಿದ್ದರೆ ಕೊನೆಯ ಪಕ್ಷ ನಿನ್ನ ಹಡಗಿನಲ್ಲಿ ಬಾಯಿಬಂದುಮಾಡಿದ ಎರಡು ಖಾಲೀಪೀಪೆಗಳನ್ನು ಇರಿಸಿಕೊಂಡಿರು. ಹಾಗೇನಾದರೂ ಅಪಘಾತ ಸಂಭವಿಸಿ ಹಡಗು ಮುಳುಗುವ ಪ್ರಸಂಗ ಬಂದಾಗ ಯಾವ ಮೋಹ–ಮಮಕಾರಗಳಿಗೆ ವಶೀಭೂತನಾಗದೇ ಎಲ್ಲವನ್ನೂ ಬಿಟ್ಟು ಕೇವಲ ಖಾಲಿಯಾಗಿರುವ ಆ ಎರಡೂ ಪೀಪೆಗಳನ್ನು ಬಗಲಲ್ಲಿ ಗಟ್ಟಿಯಾಗಿ ಹಿಡಿದುಕೊಂಡು ಸಮುದ್ರದಲ್ಲಿ ಜಿಗಿದುಬಿಡು. ಅಂದರೆ ಅತ್ಯಮೂಲ್ಯವಾದ ನಿನ್ನ ಪ್ರಾಣವನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದು'' ಎಂಬುದಾಗಿ ಅತಿ ಮಾರ್ಮಿಕವಾಗಿ ಉಪದೇಶಮಾಡಿ ಕಳುಹಿಸಿದರು. ಶಿಷ್ಯನಿಗೆ ಗುರುಗಳ ಉಪದೇಶವು ಅತ್ಯಂತ ಮನವರಿಕೆಯಾಯಿತು. ಅಂದೇ ಆತನು ಎರಡು ಖಾಲಿ ಪೀಪೆಗಳನ್ನು ತೆಗೆದುಕೊಂಡು ಅವುಗಳ ಬಾಯಿಗಳನ್ನು ಭದ್ರವಾಗಿ ಬೆಸೆದು ತನ್ನ ಹಡಗಿನಲ್ಲಿರಿಸಿಕೊಂಡು ಪ್ರಯಾಣ ಮಾಡತೊಡಗಿದ. ಹೀಗೆ ಪ್ರಯಾಣವನ್ನು ಮಾಡುತ್ತಿರುವಾಗ ಒಂದಾನೊಂದು ದಿವಸ ಸಮುದ್ರದಲ್ಲಿ ಚಂಡಮಾರುತವು ಭಯಾನಕವಾಗಿ ಬೀಸತೊಡಗಿತು. ರತ್ನಗಳ

ಪೀಪೆಗಳಿಂದ ತುಂಬಿದ ಈತನ ಹಡಗು ಅತ್ತಿತ್ತ ಹೊಯ್ದಾಡಿ ನೀರಿನಿಂದ ತುಂಬಿಕೊಳ್ಳ ತೊಡಗಿತು. ಆಗ ಈತನಿಗೆ ಗುರುಗಳು ಹೇಳಿದ ಉಪದೇಶವು ನೆನಪಾಗಿ ತನ್ನ ಪ್ರಾಣವನ್ನು ಉಳಿಸಿಕೊಳ್ಳಲೋಸುಗ ಖಾಲಿ ಪೀಪೆಗಳನ್ನು ತನ್ನ ಬಗಲಲ್ಲಿ ಹಿಡಿದುಕೊಂಡು ಇನ್ನೇನು ಸಾಗರದಲ್ಲಿ ಧುಮುಕಬೇಕೆನ್ನುವಷ್ಟರಲ್ಲಿ ಅಪಾರವಾದ ಸಂಪತ್ತಿನಿಂದ ತುಂಬಿದ ರತ್ನಭರಿತ ಗಳಾದ ಪೀಪೆಗಳತ್ತ ಲಕ್ಷ್ಯಹೋಯಿತು. ಆ ರತ್ನಗಳಲ್ಲಿರುವ ಮೋಹದಿಂದಾಗಿ ನಾನು ಖಾಲಿ ಪೀಪೆಗಳನ್ನು ತೆಗೆದುಕೊಂಡು ಹೋಗಿ ಏನು ಮಾಡಲಾಗುವುದು ? ಕೊನೆಗೆ ಎಲ್ಲವನ್ನೂ ತೆಗೆದುಕೊಂಡು ಹೋಗುವುದು ಸಾಧ್ಯವಾಗದಿದ್ದರೂ ಒಂದಾದರೂ ತುಂಬಿದ ಪೀಪೆಯನ್ನು ತೆಗೆದುಕೊಂಡು ಹೋಗಬೇಕೆಂಬ ಮೋಹವು ಉಂಟಾಯಿತು. ಆಗ ಆತನು ತಾನು ಹಿಡಿದುಕೊಂಡಿದ್ದ ಖಾಲಿ ಪೀಪೆಗಳನ್ನು ಅಲ್ಲಿಯೇ ಬಿಟ್ಟು, ತುಂಬಿದ ಒಂದು ಪೀಪೆಯನ್ನು ತೆಗೆದುಕೊಂಡು ಸಮುದ್ರದಲ್ಲಿ ಧುಮುಕಿದನು. ಆಗ ಆತನು ಆ ಪೀಪೆಯೊಂದಿಗೆ ಮುಳುಗಿ ಸಮುದ್ರದ ತಳವನ್ನು ಸೇರಿದನು.

ಗುರುಗಳು ಖಾಲಿ ಪೀಪೆಗಳನ್ನು ತೆಗೆದುಕೊಂಡು ಸಮುದ್ರದಲ್ಲಿ ಜಿಗಿಯೆಂದು ಹೇಳಿದರೆ, ಈತನು ತುಂಬಿದ ಪೀಪೆ ತೆಗೆದುಕೊಂಡು ಜಿಗಿದು ತನ್ನ ಅಮೂಲ್ಯವಾದ ಜೀವವನ್ನು ಕಳೆದುಕೊಂಡಂತೆ, ಈ ಸಂಸಾರ ಸಾಗರದಲ್ಲಿ ಸದಾ ಸಂಚರಿಸುತ್ತಿರುವ ಈ ಜೀವಿಗಳನ್ನು ಉದ್ಧಾರ ಮಾಡುವುದಕ್ಕಾಗಿಯೇ ಶ್ರೀ ರೇಣುಕ ಭಗವತ್ಪಾದರು ಅಂತಃಕರಣವನ್ನು ಅಹಂಕಾರದಿಂದ ರಿಕ್ತಮಾಡಿಕೊಂಡಿರಲು ಉಪದೇಶಿಸಿದ್ದಾರೆ. ಯಾರ ಮನಸ್ಸಿನಲ್ಲಿ ಅಭಿಮಾನ ಅಹಂಕಾರಾದಿಗಳು ಇರುವುದಿಲ್ಲವೋ ಅವರು ಮಾತ್ರ ಈ ಸಂಸಾರ ಸಾಗರವನ್ನು ದಾಟಿ ಲಿಂಗಾಂಗಸಾಮರಸ್ಯರೂಪವಾದ ಪರಮ ಕೈವಲ್ಯವನ್ನು ಪಡೆಯಲು ಸಾಧ್ಯವಾಗುವುದು. ಇಲ್ಲದೆ ಹೋದರೆ ಸಂಸಾರ ಸಾಗರದಲ್ಲಿ ಮುಳುಗುವ ಹೊರತು ಬೇರಾವಗತಿಯಿಲ್ಲ. ಸಾತ್ವಿಕನಾದ ವ್ಯಕ್ತಿಯು ಶಿವಜ್ಞಾನಿಯಾಗಿ ಸದ್ಗತಿಯನ್ನು ಪಡೆದರೆ ತಾಮಸೀ ವ್ಯಕ್ತಿಯು ಅಹಂಕಾರಿಯಾಗಿ ದುರ್ಗತಿಯನ್ನು ಹೊಂದುತ್ತಾನೆ.

ತಮೋಗುಣಿಯು ಅಹಂಕಾರಿಯಾಗಿರುವುದರ ಜೊತೆಗೆ ಅಸತ್ಯ ಭಾವನೆ ಯಿಂದಲೂ ಸಹ ಕೂಡಿಕೊಂಡಿರುತ್ತಾನೆಂದು ಪೂಜ್ಯರು ಇಲ್ಲಿ ಅಪ್ಪಣೆಕೊಡಿಸಿದ್ದಾರೆ. ಅಸತ್ಯ ಭಾವನೆಯಿಂದಲೇ ಅಸತ್ಯವಸ್ತುಗಳ ಅಥವಾ ಅನಾತ್ಮವಸ್ತುಗಳ ಚಿಂತನೆಯೆಂದರ್ಥ. ಸಾಮಾನ್ಯ ಮನುಷ್ಯನು ಸದಾ ಅನಾತ್ಮ ಪದಾರ್ಥಗಳೊಂದಿಗೆ ವ್ಯವಹರಿಸುತ್ತ ಅವುಗಳ ಲ್ಲಿಯೇ ಆಸಕ್ತನಾಗಿ ಹಗಲು ರಾತ್ರಿಗಳೆನ್ನದೆ ಅವುಗಳ ಚಿಂತೆಯಲ್ಲಿಯೇ ಕಾಲ ಕಳೆಯುತ್ತಾನೆಯೇ ವಿನಃ ಶಿವಚಿಂತನೆ–ಶಿವಧ್ಯಾನಕ್ಕೆ ಅವನಿಗೆ ವೇಳೆಯೇ ಸಿಗುವುದಿಲ್ಲ. ಮನುಷ್ಯನು ತನ್ನ ಕೊನೆಯುಸಿರೆಳೆಯುವಾಗ ಯಾವುದನ್ನು ಧ್ಯಾನಿಸುತ್ತಾನೆಯೋ ಅದನ್ನೇ ಮರುಜನ್ಮದಲ್ಲಿ ಪಡೆದುಕೊಳ್ಳುತ್ತಾನೆ. ಹೀಗೆ ಯುಗ ಯುಗಗಳಲ್ಲಿಯ ಅನಂತಾನಂತ ಜನ್ಮಗಳಲ್ಲಿ ಜಡಗಳಾದ ಅಂತೆಯೇ ಅನಾತ್ಮಗಳಾದ ವಸ್ತುಗಳ ಚಿಂತನೆಯಲ್ಲಿಯೇ ಕಾಲಕಳೆದಿದ್ದರೂ ಅದರಿಂದ ಬೇಸರಿಸದೆ ಮತ್ತೆ ಅತ್ತಲೇ ಸಾಗುತ್ತಿರುವ ಜೀವನನ್ನು ಎಚ್ಚರಿಸುವುದಕ್ಕಾಗಿಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತಮೋಗುಣದ ದುಷ್ಪರಿಣಾಮವನ್ನಿಲ್ಲಿ ತಿಳಿಯಪಡಿಸಿದ್ದಾರೆ.

ಯಾವಾತನು ಯಾವಾಗಲೂ ಎಲ್ಲರನ್ನೂ ದ್ವೇಷಿಸುವನೋ ಎಲ್ಲರಿಗಿಂತಲೂ ನಾನೇ ದೊಡ್ಡವನೆಂಬ ಅನೈತಿಕ ಅಹಂಕಾರದಿಂದ ತುಂಬಿಕೊಂಡಿರುವನೋ ಮತ್ತು ಸದಾ ಅನಾತ್ಮವಸ್ತುಗಳ ಚಿಂತೆಯಲ್ಲಿಯೇ ಕಾಲಕಳೆಯುತ್ತಾನೆಯೋ ಅಂತಹ ವ್ಯಕ್ತಿಗೆ ತಾಮಸ ನೆಂಬುದಾಗಿ ಪೂಜ್ಯರು ನಿರೂಪಿಸಿದ್ದಾರೆ.

ಈ ತೆರನಾಗಿ ತಮೋಗುಣದ ದುಷ್ಪರಿಣಾಮದ ಬಗ್ಗೆ ಉಪದೇಶಮಾಡಿದ ಪೂಜ್ಯರು ಆ ತಮೋಗುಣವನ್ನು ನಿರಸನಗೊಳಿಸಲು ಶಿವಜ್ಞಾನವೇ ಅಮೋಘವಾದ ಉಪಾಯವೆಂಬುದನ್ನು ತಿಳಿಸಲೋಸುಗ–

ತಮೋಮೂಲಾ ಹಿ ಸಂಜಾತಾ ರಾಗದ್ವೇಷಾದಿಪಾದಪಾ ಃ।
ಶಿವಜ್ಞಾನಕುಠಾರೇಣ ಛೇದ್ಯಂತೇ ಹಿ ನಿರಂತರಮ್ ॥

ಶಿವಜ್ಞಾನೇ ಸಮುತ್ಪನ್ನೇ ಸಹಸ್ರಾದಿತ್ಯಸನ್ನಿಭೇ।
ಕುತಸ್ತಮೋವಿಕಾರಾ ಃ ಸ್ಯುರ್ಮಹತಾಂ ಶಿವಯೋಗಿನಾಮ್ ॥

(ಸಿ.ಶಿ. ೧೩ ; ೨೦–೨೧)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ–ಸಂಸಾರದಲ್ಲಿಯ ರಾಗದ್ವೇಷಾದಿ ಗಳಿಗೆ ಅವರವರ ಅಂತಃಕರಣದಲ್ಲಿಯ ತಮೋಗುಣವೇ ಮೂಲಕಾರಣವಾದುದು. ಈ ತಮೋಗುಣವೆಂಬ ಬೇರಿನ ಮೇಲೆ ಬೆಳೆದು ನಿಂತಿರುವ ರಾಗ–ದ್ವೇಷಾದಿಗಳೆಂಬ ಮಹಾನ್ ವೃಕ್ಷಗಳನ್ನು ಶಿವಜ್ಞಾನವೆಂಬ ಹದನವಾದ ಕುಠಾರದಿಂದ ಕತ್ತರಿಸಿಹಾಕಬೇಕು. ಸಾವಿರಾರು ಸೂರ್ಯರ ಪ್ರಕಾಶಕ್ಕೆ ಸಮಾನವಾಗಿರುವ ಶಿವಜ್ಞಾನವು ಸಮುತ್ಪನ್ನವಾದಾಗ ಈ ತಮೋಗುಣವಾಗಲೀ ಮತ್ತು ತಮೋಗುಣದ ವಿಕಾರಗಳಾಗಲೀ ಒಂದೂ ಉಳಿಯದೇ ಅಳಿದುಹೋಗುತ್ತವೆ.

ಶರಣಸ್ಥಲದಲ್ಲಿಯ ತಾಮಸನಿರಸನಸ್ಥಲವನ್ನು ಪೂಜ್ಯರು ಇಲ್ಲಿಯೂ ಸಹ ರೂಪಕಾ ಲಂಕಾರ ಮುಖೇನ ತಿಳಿಯಪಡಿಸಿದ್ದಾರೆ. ಇಲ್ಲಿ ತಮೋಗುಣಕ್ಕೆ ಬೇರನ್ನು ರಾಗದ್ವೇಷಾದಿ ಗಳಿಗೆ ಗಿಡಗಳನ್ನು ಮತ್ತು ಶಿವಜ್ಞಾನಕ್ಕೆ ಕೊಡಲಿಯನ್ನು ಹೋಲಿಸಿರುವುದನ್ನು ಕಾಣು ತ್ತೇವೆ. ಮನುಷ್ಯನ ಅಂತಃಕರಣದಲ್ಲಿ ರಾಗ–ದ್ವೇಷಾದಿಗಳೆಂಬ ವೃಕ್ಷಗಳು ಬೆಳೆದು ನಿಲ್ಲಲು ಆ ವ್ಯಕ್ತಿಯಲ್ಲಿಯ ತಮೋಗುಣವೇ ತಾಯಿಬೇರಾಗಿರುತ್ತದೆ. ಬೆಳೆದುನಿಂತ ವನವನ್ನು ಸಮೂಲವಾಗಿ ಸಂಹಾರಮಾಡಬೇಕಾದರೆ ಹದನವಾದ ಕೊಡಲಿಯು ಹೇಗೆ ಬೇಕಾಗು ವುದೋ ಹಾಗೆ ತಮೋಗುಣದಿಂದ ಬೆಳೆದುನಿಂತಿರುವ ರಾಗ–ದ್ವೇಷಾದಿಗಳನ್ನು ತೊಡೆದುಹಾಕಲು ಶಿವಜ್ಞಾನವೇ ಅಮೋಘವಾದ ಸಾಧನವಾಗಿರುತ್ತದೆ. ಶಿವಜ್ಞಾನ ಸಂಪನ್ನನಾದ ಶಿವಯೋಗಿಯ ಅಂತಃಕರಣದಲ್ಲಿಯ ತಮೋಗುಣವೇ ನಾಶವಾಗಿ ಹೋದಾಗ ರಾಗ–ದ್ವೇಷಾದಿಗಳು ಸಹಜವಾಗಿಯೇ ಇಲ್ಲದಾಗಿ ಹೋಗುತ್ತವೆ. ಅರ್ಥಾತ್ ಶಿವಜ್ಞಾನಿಯಲ್ಲಿ ರಾಗ–ದ್ವೇಷಾದಿಗಳೇ ಇರುವುದಿಲ್ಲವೆಂಬ ತಾತ್ಪರ್ಯವು.

ಸೂರ್ಯೋದಯವಾಗುವವರೆಗೆ ಈ ಜಗತ್ತನ್ನು ಕತ್ತಲೆಯು ಆವರಿಸಿರುತ್ತದೆ. ಆದರೆ ಸೂರ್ಯೋದಯದೊಡನೆ ಅದು ಹೇಗೆ ಇಲ್ಲದಂತಾಗುವುದೋ ಅದರಂತೆ ಶಿವಜ್ಞಾನ ವೆಂಬ ಸೂರ್ಯೋದಯವಾಗುವವರೆಗೆ ತಮೋಗುಣವೆಂಬ ಕತ್ತಲೆಯು ಜೀವಿಗಳ

ಹೃದಯವನ್ನು ಆವರಿಸಿಕೊಂಡಿದ್ದು ಶಿವಜ್ಞಾನದೊಡನೆ ಅದೂ ಸಹ ಇಲ್ಲದಂತಾಗುತ್ತದೆ. ಇಲ್ಲಿ ಶಿವಜ್ಞಾನಕ್ಕೆ ಸಹಸ್ರಾದಿತ್ಯರ ಉಪಮೆಯನ್ನು ಕೊಟ್ಟಿದ್ದಾರೆ. ಒಬ್ಬ ಸೂರ್ಯನು ಉದಯವಾದಾಗ ಇಷ್ಟೊಂದು ಪ್ರಕಾಶವಾಗುತ್ತಿರಲು ಇನ್ನು ಸಹಸ್ರ ಆದಿತ್ಯರು ಉದಯಿಸಲಾಗಿ ಎಷ್ಟು ತಾನೆ ಪ್ರಕಾಶವುಂಟಾಗಲಿಕ್ಕಿಲ್ಲ? ಅಂತಹ ಪ್ರಬಲ ಪ್ರಕಾಶವಿರುವಾಗ ಅಲ್ಪವಾದ ತಮೋಗುಣವಾಗಲೀ ಅದರ ವಿಕಾರಗಳಾಗಲೀ ಶಿವಯೋಗಿಯ ಮನಸ್ಸಿನಲ್ಲಿ ಅದು ಹೇಗೆ ತಾನೆ ಉಳಿದಾವು ?

ಈ ತೆರನಾಗಿ ಶರಣಸ್ಥಲದ ಶಿವಯೋಗಿಯು ತನ್ನಲ್ಲುಂಟಾದ ಶಿವಜ್ಞಾನದ ಪ್ರಭಾವದಿಂದ ತನ್ನೆಲ್ಲ ರಜ–ತಮೋಗುಣಗಳ ವಿಕಾರಗಳನ್ನೆಲ್ಲ ಇಲ್ಲದನ್ನಾಗಿ ಮಾಡಿಕೊಂಡು ಸರ್ವರಲ್ಲಿ ಸಮಭಾವನೆಯಿಂದ ವ್ಯವಹರಿಸುತ್ತ ಯಾರೊಬ್ಬರ ಮೇಲೆಯೂ ರಾಗ–ದ್ವೇಷಾದಿಗಳನ್ನು ಮಾಡದೆ ಸದಾ–ಸಂತುಷ್ಟ ಹೃದಯನಾಗಿದ್ದು ಶಿವಯೋಗದಲ್ಲಿ ತಲ್ಲೀನನಾಗಿ ಸರ್ವಜೀವಿಗಳ ಕಲ್ಯಾಣಕ್ಕಾಗಿ ಅಹರ್ನಿಶೆ ಕಾರ್ಯಗೈಯ್ಯುತ್ತ ತನ್ನ ಕಾಲ ಯಾಪನೆಯನ್ನು ಮಾಡುತ್ತಾನೆಂಬುದನ್ನು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೨ ಎಪ್ರಿಲ್, ೧೯೯೨

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ . ವಾರಾಣಸಿ.)



ಆಶೀರ್ವಚನ-೧

# ನಿರ್ದೇಶಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶರಣಸ್ಥಲದಲ್ಲಿಯ ತಾಮಸನಿರಸನಸ್ಥಲದ ನಂತರ ಬರುವಂತಹ ಮೂರನೆಯದಾದ ಅವಾಂತರಸ್ಥಲವೇ ನಿರ್ದೇಶಸ್ಥಲವು. ನಿರ್ದೇಶವೆಂದರೆ ತೋರಿಸು, ತಿಳಿಸು ಎಂದರ್ಥ. ಸದ್ಗುರುವಿನ ಮಾರ್ಗದರ್ಶನವಿಲ್ಲದೆ ಅದಾರೂ ಆಧ್ಯಾತ್ಮಿಕ ಮಾರ್ಗದಲ್ಲಿ ಪ್ರಗತಿಯನ್ನು ಸಾಧಿಸಲಾರರು. ಆ ವಿಷಯವನ್ನೇ ನಿರೂಪಿಸುವುದಕ್ಕಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಿರ್ದೇಶಸ್ಥಲವನ್ನು ಪ್ರಾರಂಭಿಸಿದ್ದಾರೆ. ವಿಷಯವಸ್ತುವನ್ನು ಸ್ಪಷ್ಟಪಡಿಸಲು ಅವರು–

ನಿರಾಕೃತ್ಯ ತಮೋಭಾಗಂ ಸಂಸಾರಸ್ಯ ಪ್ರವರ್ತಕಮ್ ।
ನಿರ್ದಿಶ್ಯತೇ ತು ಯದ್‌ಜ್ಞಾನಂ ಸ ನಿರ್ದೇಶ ಇತಿ ಸ್ಮೃತ ঃ ॥

(ಸಿ.ಶಿ. ೧೩–೨೨)

ಹೀಗೆ ಆದೇಶವಿತ್ತಿದ್ದಾರೆ. ಸಂಸಾರದ ಪ್ರವೃತ್ತಿಗೆ ಮೂಲಕಾರಣವಾದ ತಮೋಗುಣವನ್ನು ನಿರಾಕರಿಸುವ ಜ್ಞಾನಕ್ಕೇನೇ ಇಲ್ಲಿ ನಿರ್ದೇಶ ಎಂಬುದಾಗಿ ಕರೆದಿದ್ದಾರೆ. ಇಂತಹ ಜ್ಞಾನವನ್ನು ಹಾಗೂ ಜ್ಞಾನಬೋಧಿಸುವ ಆಚಾರ್ಯರ ಬಗ್ಗೆ ಉಪದೇಶಿಸುವ ಸ್ಥಲವೇ ನಿರ್ದೇಶಸ್ಥಲವು. ಸದ್ಗುರುವಿನ ಉಪದೇಶದ ವಿನಃ ಅದಾರಿಗೂ ಜ್ಞಾನವು ದೊರೆಯುವುದಿಲ್ಲವೆಂಬುದನ್ನು ತಿಳಿಯಪಡಿಸುವುದಕ್ಕಾಗಿ ಜಗದ್ಗುರು ರೇಣುಕ ಭಗವತ್ಪಾದರು–

ಗುರುರೇವ ಪರಂ ತತ್ತ್ವಂ ಪ್ರಕಾಶಯತಿ ದೇಹಿನಾಮ್ ।
ಕೋ ವಾ ಸೂರ್ಯಂ ವಿನಾ ಲೋಕೇ ತಮಸೋ ವಿನಿವರ್ತಕಃ ॥

(ಸಿ.ಶಿ. ೧೩–೨೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಶ್ರೇಷ್ಠವಾದ ಆತ್ಮ ತತ್ತ್ವವನ್ನು ತಿಳಿಸಿಕೊಟ್ಟು ಅಜ್ಞರನ್ನು ಸುಜ್ಞರನ್ನಾಗಿ ಮಾಡುವಾತನೇ ಸದ್ಗುರು. ಜಗತ್ತಿಗೆ ಆವರಿಸಿದ ಕತ್ತಲೆಯನ್ನು ಸೂರ್ಯನ ಹೊರತಾಗಿ ಅದಾರಿಂದಲೂ ದೂರಮಾಡಲು ಹೇಗೆ ಸಾಧ್ಯವಿಲ್ಲವೋ, ಅದರಂತೆ ಸದ್ಗುರುವಿನ ಹೊರತಾಗಿ ಶಿಷ್ಯನ ತಮೋಗುಣರೂಪೀ ಅಜ್ಞಾನವನ್ನು ದೂರೀಕರಿಸಿ ಶ್ರೇಷ್ಠವಾದ ಆತ್ಮತತ್ತ್ವವನ್ನು ಬೋಧಿಸುವುದು ಬೇರೆಯವರಾರಿಂದಲೂ ಸಾಧ್ಯವಿಲ್ಲ, ಅಂತೆಯೇ ಪ್ರತಿಯೊಬ್ಬರೂ ಸದ್ಗುರುವಿಗೆ ಶರಣಾಗತರಾಗಲೇಬೇಕು.

ಪ್ರಕೃತ ವಿಷಯವನ್ನೇ ಮತ್ತಷ್ಟು ದೃಢಪಡಿಸುವುದಕ್ಕಾಗಿ ಬೇರೊಂದು ಉದಾಹರಣೆಯ ಮೂಲಕ ಪೂಜ್ಯರು–

ಅಂತರೇಣ ಗುರುಂ ಸಿದ್ಧಂ ಕಥಂ ಸಂಸಾರನಿಷ್ಕೃತಿಃ ।
ನಿದಾನಜ್ಞಂ ವಿನಾ ವೈದ್ಯಂ ಕಿಂ ವಾ ರೋಗೋ ನಿವರ್ತತೇ ॥

(ಸಿ.ಶಿ. ೧೩–೨೪)

ಹೀಗೆ ಉಪದೇಶಿಸಿದ್ದಾರೆ. ರೋಗದ ಕಾರಣವನ್ನು ಬಲ್ಲ ಅನುಭವಿಯಾದ ವೈದ್ಯನ ವಿನಃ ರೋಗವು ನಿವೃತ್ತವಾಗಲಾರದಂತೆ ಅನುಭವಸಿದ್ಧನಾದ ಸದ್ಗುರುವಿನ ಹೊರತಾಗಿ ಈ ಜನನ–ಮರಣಾತ್ಮಕವಾದ ಸಂಸಾರವನ್ನು ನಿವಾರಿಸಲು ಆದಾರಿಂದಲೂ ಸಾಧ್ಯವಾಗದು.

'ಶರೀರಂ ವ್ಯಾಧಿ ಮಂದಿರಮ್' ಎಂಬ ಉಕ್ತಿಗನುಸಾರವಾಗಿ ಶರೀರದಲ್ಲಿ ನಾನಾ ಪ್ರಕಾರದ ರೋಗಗಳುಂಟಾಗುವುದನ್ನು ಎಲ್ಲರೂ ಅನುಭವಿಸುತ್ತಿರುತ್ತಾರೆ. ರೋಗಿಯಾದ ಮನುಷ್ಯನು ರೋಗದ ಬಾಧೆಯನ್ನು ತಾಳದೆ ಚಿಕಿತ್ಸೆಗಾಗಿ ವೈದ್ಯನ ಬಳಿಸಾರಿದಾಗ ಅನುಭವಿಯಾದ ವೈದ್ಯನು ಆತನನ್ನು ಪರೀಕ್ಷಿಸಿ ಈ ರೋಗವಾವುದು ? ಈ ರೋಗಕ್ಕೆ ಕಾರಣವೇನು ? ಇದು ಯಾವ ಔಷಧಿಯಿಂದ ನಿವಾರಣವಾಗುವುದು ಎಂಬುದೆಲ್ಲವನ್ನು ಕೂಲಂಕಷವಾಗಿ ಕಂಡುಹಿಡಿದು ಉಪಚರಿಸಿದಾಗ ರೋಗವು ಹೇಗೆ ನಿವೃತ್ತ ವಾಗುವುದೋ, ಅದೇ ಪ್ರಕಾರವಾಗಿ ಭವರೋಗಪೀಡಿತನಾದ ಜೀವಿಯು ಶಿವಯೋಗ ಶಿವಜ್ಞಾನಗಳಿಂದ ಸಿದ್ಧಾವಸ್ಥೆಯನ್ನು ಪಡೆದ ಸದ್ಗುರುವಿಗೆ ಶರಣಾಗತನಾದಾಗ ಆತನ ಉಪದೇಶಾಮೃತವನ್ನು ಆಲಿಸಿ ತಾನೂ ಸಹ ಆ ಶಿವಾದ್ವೈತಜ್ಞಾನವನ್ನು ಪಡೆದು ಭವರೋಗದಿಂದ ಮುಕ್ತನಾಗುವನು.

ಶಾಸ್ತ್ರಕಾರರು ಭವಕ್ಕೂ ರೋಗವೆಂಬುದಾಗಿ ನಿರ್ದೇಶಿಸಿರೋಣದರಿಂದ ಆ ಭವರೋಗವನ್ನು ದೂರಮಾಡುವ ಸದ್ಗುರುವಿಗೆ ಭವರೋಗವೈದ್ಯನೆಂಬುದಾಗಿ ಕರೆದಿದ್ದಾರೆ. ಅಂತೆಯೇ ಪೂಜ್ಯಪಾದರು ಸದ್ಗುರುವನ್ನು ವೈದ್ಯರಿಗೆ ಉಪಮಿಸಿ ಇಲ್ಲಿ ಉಪದೇಶ ಮಾಡಿದ್ದಾರೆ. ರೋಗದ ನಿದಾನವನ್ನರಿಯದ ಅನೇಕ ಜನರು ತಮ್ಮನ್ನು ತಾವು ವೈದ್ಯರೆಂಬುದಾಗಿ ಹೇಳಿಕೊಳ್ಳುತ್ತಿರುವಂತೆ, ಗುರುತ್ವ ಲಕ್ಷಣವಿಲ್ಲದ ಬಹುಜನರು ತಮ್ಮನ್ನು ಗುರುಗಳೆಂದು ಹೇಳಿಕೊಳ್ಳುತ್ತಾರೆ. ಅಂತಹ ವೈದ್ಯರಿಂದಾಗಲಿ ಮತ್ತು ನಾಮಧಾರಿ ಗುರುಗಳಿಂದಾಗಲಿ ಲೋಕಕಲ್ಯಾಣವಾಗುವುದಿಲ್ಲ.

ಒಂದು ಊರಿನಲ್ಲಿ ಆಕಸ್ಮಿಕವಾಗಿ ಒಬ್ಬ ಮನುಷ್ಯನ ಮರಣವಾರ್ತೆಯು ಪಸರಿಸಿತು. ಆಗ ಆ ಊರಿನಲ್ಲಿದ್ದ ಒಬ್ಬ ವೈದ್ಯನು ತನ್ನ ಸಹಾಯಕನನ್ನು ವಿಚಾರಿಸಿದನಂತೆ–ಏನಯ್ಯಾ ! ಆ ವ್ಯಕ್ತಿ ನಮ್ಮಿಂದ ಔಷಧವನ್ನೇ ತೆಗೆದುಕೊಂಡಿಲ್ಲ ಅಂದಾಗ ಅದು ಹೇಗೆ ತಾನೆ ಸತ್ತನು ? ಈ ವೈದ್ಯನು ರೋಗವನ್ನು ನಿವಾರಿಸದೆ ರೋಗಿಯನ್ನೇ ನಿವಾರಿಸುತ್ತಿದ್ದನೆಂಬುದು ತಿಳಿದುಬರುತ್ತದೆ. ಇಂತಹ ವೈದ್ಯರನ್ನು ಕಂಡೇ ಓರ್ವ ಸುಭಾಷಿತಕಾರನು–

ವೈದ್ಯರಾಜ ! ನಮಸ್ತುಭ್ಯಂ ಯಮರಾಜ ಸಹೋದರ ।
ಯಮಸ್ತು ಹರತಿ ಪ್ರಾಣಾನ್ ತ್ವಂತು ಪ್ರಾಣಾನ್ ಧನಾನಿ ಚ ॥

ಎಂಬುದಾಗಿ ವ್ಯಂಗ್ಯವಾಗಿ ಹೇಳಿದ್ದಾನೆ. ನಿದಾನವನ್ನರಿಯದ ವೈದ್ಯರಿಂದ ಉಪಚಾರ ಪಡೆದವನು ತನ್ನ ಧನ, ಪ್ರಾಣಗಳೆರಡನ್ನೂ ಕಳೆದುಕೊಳ್ಳುವಂತೆ ಯೋಗ್ಯನಲ್ಲದ ಗುರುವನ್ನಾಶ್ರಯಿಸಿದ ಶಿಷ್ಯನ ಗತಿಯೂ ಸಹ ಇದೇ ತೆರನಾಗುವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪೂರ್ವದಲ್ಲಿ ಸದ್ಗುರುವನ್ನು ಉತ್ತಮನಾದ ವೈದ್ಯನಿಗೆ ಹೋಲಿಸಿ ಈ ಮುಂದೆ ಮತ್ತೊಂದು ರೀತಿಯಲ್ಲಿ ಗುರುವಿನ ಮಹತಿಯನ್ನು–

ಅಜ್ಞಾನಮಲಿನಂ ಚಿತ್ತದರ್ಪಣಂ ಯೋ ವಿಶೋಧಯೇತ್ ।
ಪ್ರಜ್ಞಾವಿಭೂತಿಯೋಗೇನ ತಮಾಹುರ್ಗುರುಸತ್ತಮಮ್ ॥

(ಸಿ.ಶಿ. ೧೩–೨೫)

ಈ ವಿಧವಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ–ಮನುಷ್ಯನ ಮನಸ್ಸು ಒಂದು ದರ್ಪಣವಿದ್ದಂತೆ. ದರ್ಪಣವು ಸ್ವಚ್ಛವಾಗಿದ್ದರೆ ಮುಖದ ಪ್ರತಿಬಿಂಬವು ಸ್ಪಷ್ಟವಾಗಿ ತೋರುವುದು. ಒಂದು ವೇಳೆ ಅದನ್ನು ಧೂಳು ಆವರಿಸಿದ್ದರೆ ಅದರಲ್ಲಿ ಮುಖದ ಪ್ರತಿಬಿಂಬವು ಮೂಡಿಬರುವುದಿಲ್ಲ, ನಮ್ಮ ಮುಖದ ಪ್ರತಿಬಿಂಬವು ಅದರಲ್ಲಿ ಸರಿಯಾಗಿ ಕಾಣಬೇಕಾದರೆ ಕನ್ನಡಿಯ ಮೇಲಿನ ಧೂಳನ್ನೂ ವರೆಸಬೇಕಾಗುವುದು. ಕನ್ನಡಿಗೆ ಧೂಳವಡರುವಂತೆ ಮನುಷ್ಯನ ಚಿತ್ತವೆಂಬ ದರ್ಪಣಕ್ಕೆ ಅಜ್ಞಾನವೆಂಬ ಮಾಲಿನ್ಯವು ಅಂಟಿ ಕೊಂಡಿರುತ್ತದೆ. ಈ ಮನದ ಮಾಲಿನ್ಯವು ತೊಲಗದೆ ಅರ್ಥಾತ್ ಚಿತ್ತಶುದ್ಧವಾಗದೆ ಆತನಿಗೆ ಆತ್ಮಜ್ಞಾನವಾಗಲು ಸಾಧ್ಯವಾಗುವುದಿಲ್ಲ. ಅಶುದ್ಧಚಿತ್ತನಾದ ಸಾಧಕನು ಸದ್ಗುರುವಿಗೆ ಶರಣಾಗತನಾದಾಗ ತತ್ತ್ವಜ್ಞಾನೋಪದೇಶ ಮೂಲಕವಾಗಿ ಶಿಷ್ಯನ ಚಿತ್ತವನ್ನು ಪರಿಶುದ್ಧಗೊಳಿಸುತ್ತಾನೆ. ಹೀಗೆ ವಿವೇಕೋಪದೇಶ ಮೂಲಕ ಶಿಷ್ಯರ ಚಿತ್ತವನ್ನು ಪರಿಶುದ್ಧಗೊಳಿಸುವವನೇ ಗುರು ಶ್ರೇಷ್ಠನೆಂಬುದಾಗಿ ಪೂಜ್ಯಪಾದರು ಇಲ್ಲಿ ವಿವರಿಸಿದ್ದಾರೆ.

ಅಂತರಂಗದಲ್ಲಿಯ ಚಿತ್ತಕ್ಕೆ ಮಾಲಿನ್ಯವೆಲ್ಲಿಂದತಾನೆ ಉಂಟಾಗುವುದು ? ಎಂಬ ಜಿಜ್ಞಾಸೆಯು ಪ್ರಾಯಃ ಉತ್ಪನ್ನವಾಗುವುದು. ನಮ್ಮ ಶರೀರಕ್ಕೆ ಒಂಬತ್ತು ದ್ವಾರಗಳು ಇವೆ. ಈ ದ್ವಾರಗಳ ಮುಖಾಂತರವಾಗಿಯೇ ಮಾಲಿನ್ಯವು ಚಿತ್ತವನ್ನು ತಲುಪುವುದು. ನಮ್ಮ ಮನೆಗೆ ಹಚ್ಚಿದ ಬಾಗಿಲು, ಕಿಡಿಕಿ ಮತ್ತು ಬೆಳಕಿಂಡಿಗಳ ಮುಖಾಂತರ ಧೂಳಿಯು ಮನೆಯೊಳಗೆ ಪ್ರವೇಶಿಸುವಂತೆ ದೇಹದ ನವದ್ವಾರ ಮುಖಾಂತರವಾಗಿಯೇ ಚಿತ್ತದಲ್ಲಿ ಮಾಲಿನ್ಯವು ಸಂಗ್ರಹವಾಗುವುದು. ಪಂಚಜ್ಞಾನೇಂದ್ರಿಯ ಹಾಗೂ ಪಂಚ ಕರ್ಮೇಂದ್ರಿಯಗಳ ಮುಖಾಂತರ ಜೀವಾತ್ಮನು ವೈಷಯಿಕ ಸುಖವನ್ನು ಅನುಭವಿಸುವಾಗ ಅನುಭವಿಸಿದ ವಿಷಯಗಳ ಸಂಸ್ಕಾರವು ಮನಸ್ಸಿನಲ್ಲಿ ಸಂಗ್ರಹವಾಗುತ್ತ ಹೋಗುತ್ತದೆ. ಆ ಸಂಸ್ಕಾರದ ಪರಿಣಾಮವಾಗಿಯೇ ಪುನಃ ಪುನಃ ಆ ವಿಷಯಗಳು ಬೇಕೆನ್ನುವ ಇಚ್ಛೆಯು ಉಂಟಾಗುವುದು. ಹೀಗೆ ಚಿತ್ತದಲ್ಲಿ ಸಂಗ್ರಹಗಳಾದ ಪೂರ್ವಾನುಭೂತ ವಿಷಯ ಸಂಸ್ಕಾರವೇ ಇಲ್ಲಿ ಚಿತ್ತದ ಮಾಲಿನ್ಯವೆಂಬುದಾಗಿ ತಿಳಿಸೋಣವಾಗಿದೆ. ವಿಷಯಗಳ ಕ್ಷಣಿಕತೆ, ಅವುಗಳಿಂದುಂಟಾಗುವ ಅಲ್ಪ ಸುಖ ಹಾಗೂ ಅನಂತ ದುಃಖಗಳ ಬಗ್ಗೆ ವಿವೇಚಿಸದ ಅಜ್ಞ ಜೀವಿಯು ಪುನಃ ಅವುಗಳತ್ತಲೇ ಮುಖವಾಗಿ ಹೋಗುತ್ತಾನೆ. ಆದರೆ ಸದ್ಗುರುವಿಗೆ ಶರಣಾಗತನಾದ ಸಾಧಕನು ಗುರೂಪದೇಶವನ್ನು ಆಲಿಸಿ ನಿತ್ಯಾನಿತ್ಯ, ಆತ್ಮಾನಾತ್ಮವಿವೇಕವನ್ನು ಹೊಂದಿದವನಾಗಿ ಚಿತ್ತಮಾಲಿನ್ಯವನ್ನು ಕಳೆದುಕೊಳ್ಳುತ್ತಾನೆ. ಈ ತೆರನಾಗಿ ತನ್ನ ಉಪದೇಶವೆಂಬ ವಿಭೂತಿಯ ಮೂಲಕ ಶಿಷ್ಯ ಚಿತ್ತವೆಂಬ ದರ್ಪಣವನ್ನು ಪರಿಶುದ್ಧಗೊಳಿ ಸುವವನೇ ಸದ್ಗುರುವೆಂಬುದಾಗಿ ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ಚಿತ್ತವು ನಿರ್ಮಲವಾದರೆ ನಾವು ಇದ್ದಲ್ಲಿಯೇ ನಮ್ಮ ಚಿತ್ತದಲ್ಲಿಯೇ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು.

ಉದಾಹರಣೆಗಾಗಿ, ಇರಾಣ ದೇಶದ ಓರ್ವ ಚಿತ್ರಕಾರನು ಭಾರತಕ್ಕೆ ಬಂದು ಇಲ್ಲಿಯ ಮಹಾರಾಜರು ಏರ್ಪಡಿಸಿದ ಚಿತ್ರಕಲಾ ಸ್ಪರ್ಧೆಯಲ್ಲಿ ಭಾಗವಹಿಸಿದನು. ಮಹಾರಾಜರು ಒಂದು ವಿಶಾಲವಾದ ಭವನದ ಎದುರುಬದುರಿನ ಗೋಡೆಗಳ ಮೇಲೆ ಈರ್ವರೂ ಚಿತ್ರಕಾರರಿಗೆ ಚಿತ್ರ ತೆಗೆಯಲು ಬೇಕಾದ ಎಲ್ಲ ಸಾಮುಗ್ರಿಗಳನ್ನು ಒದಗಿಸಿ ಆದೇಶವಿತ್ತರು. ಒಂದು ತಿಂಗಳಲ್ಲಿ ತಮ್ಮ ಚಿತ್ರಕಲೆಯನ್ನು ಪೂರ್ಣಗೊಳಿಸಬೇಕೆಂತಲೂ ಅವಧಿಯ ನಿರ್ಧಾರಣವನ್ನೂ ಸಹ ಮಾಡಲಾಯಿತು. ಅವರಿಬ್ಬರಿಗೆ ಕೊಡಲಾದ ಅವಧಿ ಮುಗಿದನಂತರ ಚಿತ್ರ ಪರೀಕ್ಷಣೆಗಾಗಿ ಮಹಾರಾಜರು ತಮ್ಮ ಸಿಬ್ಬಂದಿಯೊಂದಿಗೆ ಆಗಮಿಸಿ ಮೊದಲು ತಮ್ಮ ದೇಶದ ಕಲಾಕಾರನ ಚಿತ್ರಕಲೆಯನ್ನು ನೋಡಿ ಸಂತೋಷ ಪಟ್ಟು ಇನ್ನು ಇರಾಣದಿಂದ ಬಂದ ಕಲಾಕಾರನ ಕುಂಚಕಲೆಯನ್ನು ನೋಡಬೇಕೆಂದು ಕುತೂಹಲದಿಂದ ಹೊರಳಿನಿಂತು ಆತನ ಭಿತ್ತಿಯ ಕಡೆಗೆ ಹೊರಟರು. ಆ ಕಲಾಕಾರನು ತನ್ನ ಗೋಡೆಯ ಮುಂದೆ ಒಂದು ಪರದೆಯನ್ನು ಇಳಿಬಿಟ್ಟಿದ್ದನು. ಮಹಾರಾಜರು ಬಂದೊಡನೆ ಪರದೆಯನ್ನು ಸರಿಸಿ ಮಹಾರಾಜರನ್ನು ಸ್ವಾಗತಿಸಿ ತನ್ನ ಕಲೆಯನ್ನು ಪರಿಶೀಲಿಸಲು ವಿನಂತಿಸಿಕೊಂಡನು. ಈತನ ಚಿತ್ರವನ್ನು ನೋಡುತ್ತಲೇ ಮಹಾರಾಜರು ಆಶ್ಚರ್ಯಚಕಿತರಾದರು. ಇದೇನು ಆ ಚಿತ್ರಕಾರ ಗೋಡೆಯ ಮೇಲೆ ಚಿತ್ರವನ್ನು ತೆಗೆದಿದ್ದರೆ ಈತನು ಗೋಡೆಯ ಒಳಗಡೆ ಅಂತಹದೇ ಚಿತ್ರ ತೆಗೆದಿದ್ದಾನಲ್ಲ ! ಎಂದು ಯೋಚಿಸಿ ! ''ಏನಯ್ಯಾ ! ನೀನು ಗೋಡೆಯ ಒಳಗೆ ಹೇಗೆ ಚಿತ್ರವನ್ನು ತೆಗೆದಿದ್ದೀಯಾ ?'' ಎಂದು ಪ್ರಶ್ನಿಸಿದರು. ಆಗ ಆ ಇರಾಣೀ ಕಲಾಕಾರನು ''ಮಹಾರಾಜರೇ ! ನಾನು ಚಿತ್ರವನ್ನು ತೆಗೆಯುವ ಗೊಡೆವೆಗೇ ಹೋಗಿಲ್ಲ, ನನಗೆ ಕೊಟ್ಟ ಗೋಡೆಯ ಒಳಗೆ ಕಾಣುವ ಚಿತ್ರವು ನಿಮ್ಮ ದೇಶದ ಕಲಾಕಾರನ ಚಿತ್ರದ ಪ್ರತಿಬಿಂಬವೇ ಆಗಿದೆ. ಆದರೆ ಆ ಚಿತ್ರ ನನ್ನ ಗೋಡೆಯೊಳಗೆ ಪ್ರತಿಬಿಂಬಿಸಲೋಸುಗ ನಾನು ಈ ಗೋಡೆ ಯನ್ನು ತಿಕ್ಕಿ ತಿಕ್ಕಿ ಕನ್ನಡಿಯನ್ನಾಗಿ ಮಾಡಿದ್ದೇನೆ ಅಷ್ಟೆ'' ಎಂದು ಉತ್ತರಿಸಿದನು. ಇರಾಣೀ ಕಲಾಕಾರನ ಈ ಜಾಣ್ಮೆಯನ್ನು ಕಂಡು ಮಹಾರಾಜನು ಪ್ರಥಮ ಪುರಸ್ಕಾರವನ್ನು ಆತನಿಗೇ ಕೊಟ್ಟನಂತೆ.

ಗೋಡೆಯನ್ನು ತಿಕ್ಕಿ ಅದನ್ನು ಕನ್ನಡಿಯೋಪಾದಿಯಲ್ಲಿ ಮಾಡಿದಾಗ ಎದುರಿಗಿದ್ದ ಚಿತ್ರವು ಅದರಲ್ಲಿ ಪ್ರತಿಫಲಿತವಾದಂತೆ, ಶಿಷ್ಯನ ಚಿತ್ತವೆಂಬ ದರ್ಪಣದ ಮೇಲಿನ ತಮೋಗುಣರೂಪೀ ಧೂಳನ್ನು ಸದ್ಗುರುಗಳು ವಿವೇಕೋಪದೇಶದ ಮೂಲಕ ಕಳೆದು ಹಾಕಲು ಶಿಷ್ಯನಿಗೆ ತನ್ನಲ್ಲಿಯೇ ಇದ್ದ ಆ ಪರಶಿವ ಬ್ರಹ್ಮನ ಸಾಕ್ಷಾತ್ಕಾರವಾಗುವುದು. ಆದ್ದರಿಂದ ಆತ್ಮಸಾಕ್ಷಾತ್ಕಾರಕ್ಕೆ ಚಿತ್ತಶುದ್ಧಿಯೇ ಮೂಲವೆಂಬುದನ್ನು ಸರ್ವರೂ ತಿಳಿದು ಕೊಳ್ಳಬೇಕು.

ಈ ರೀತಿಯಾಗಿ ಗುರುವಿನ ಮಹತ್ವವನ್ನು ತಿಳಿಯಪಡಿಸಿದ ಪೂಜ್ಯರು ಆತನ ಕೃಪಾ ಕಟಾಕ್ಷದಿಂದ ಏನೆಲ್ಲವೂ ಸಾಧ್ಯವಾಗುವುದೆಂಬುದನ್ನು–

ಅಪರೋಕ್ಷಿತತತ್ತ್ವಸ್ಯ ಜೀವನ್ಮುಕ್ತಸ್ವಭಾವಿನಃ।
ಗುರೋಃ ಕಟಾಕ್ಷೇ ಸಂಸಿದ್ಧೇ ಕೋ ವಾ ಲೋಕೇಷು ದುರ್ಲಭಃ ॥
ಕೈವಲ್ಯಕಲ್ಪತರವೋ ಗುರವಃ ಕರುಣಾಲಯಾಃ।
ದುರ್ಲಭಾ ಹಿ ಜಗತ್ಯಸ್ಮಿನ್ ಶಿವಾದ್ವೈತಪರಾಯಣಾಃ॥
(ಸಿ. ಶಿ. ೧೩ ; ೨೬–೨೭)

ಈ ವಿಧವಾಗಿ ವಿವರಿಸಿದ್ದಾರೆ. ಶಿವತತ್ತ್ವವನ್ನು ಸ್ವಸ್ವರೂಪವನ್ನಾಗಿ ಸಾಕ್ಷಾತ್ಕಾರ ಮಾಡಿಕೊಂಡಿರುವ ಮತ್ತು ಜೀವನ್ಮುಕ್ತಿಯ ವಿಲಕ್ಷಣಾನಂದವನ್ನು ಅನುಭವಿಸುತ್ತಿರುವ ಶ್ರೇಷ್ಠನಾದ ಸದ್ಗುರುವಿನ ಕೃಪಾಕಟಾಕ್ಷವು ಪ್ರಾಪ್ತವಾದರೆ ಮೂರು ಲೋಕದಲ್ಲಿಯ ಯಾವ ಪದಾರ್ಥವೂ ದುರ್ಲಭವಾಗಿ ತೋರಲಾರದು. ಅಂದರೆ ಗುರುಕರುಣೆಯಿಂದ ಏನೆಲ್ಲವೂ ದೊರೆಯುವುದೆಂಬ ತಾತ್ಪರ್ಯವು.

ಮನುಷ್ಯನು ತನ್ನ ಜೀವನದಲ್ಲಿ ಏನೇನೋ ಸಂಪಾದಿಸುತ್ತ ಹೋಗುವುದಕ್ಕಿಂತಲೂ ಗುರುಕೃಪೆಯೊಂದನ್ನು ಮಾತ್ರ ಪಡೆಯಲು ಪ್ರಯತ್ನಿಸಬೇಕು. ಅದೊಂದು ದೊರೆತರೆ ಎಲ್ಲವನ್ನೂ ದೊರಕಿಸಿಕೊಳ್ಳಬಹುದು. ಅದೊಂದಿರದೆ ಏನೆಲ್ಲವಿದ್ದರೂ ಆತನ ಜೀವನ ನಿರರ್ಥಕವೆಂಬುದಾಗಿ ಶ್ರೀ ಶಂಕರಾಚಾರ್ಯರು–

ಶರೀರಂ ಸುರೂಪಂ ತಥಾ ವಾ ಕಲತ್ರಂ।
ಧನಂ ಮೇರುತುಲ್ಯಂ ಯಶಶ್ಚಾರುಚಿತ್ರಮ್ ॥
ಗುರೋರಂಘ್ರಿಪದ್ಮೇ ಮನಶ್ಚೇನ್ನಲಗ್ನಂ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥

ಈ ವಿಧವಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ–ಸುಂದರವಾದ ದೇಹ, ಅನುರೂಪಳಾದ ಪತ್ನಿ, ಮೇರು ಪರ್ವತದಷ್ಟು ಸಂಪತ್ತು ಮತ್ತು ದಶದಿಶೆಗಳಲ್ಲಿ ಹರಡಿದ ಧವಲ ಕೀರ್ತಿ ಇವೆಲ್ಲವುಗಳಿದ್ದೂ ಒಂದು ವೇಳೆ ಗುರುಪಾದದಲ್ಲಿ ಭಕ್ತಿಯಿರದಿದ್ದರೆ ಅದೆಲ್ಲವೂ ನಿಷ್ಪ್ರಯೋಜನವು. ಅಂದರೆ ನಿರರ್ಥಕವು. ಮೇಲೆ ವಿವರಿಸಿದವುಗಳಿಗಿಂತಲೂ ಗುರುಪಾದಭಕ್ತಿಯೇ ಶ್ರೇಷ್ಠವಾದುದು. ಅದರಿಂದಲೇ ಗುರುಕೃಪೆಯೂ ಸಹ ದೊರೆಯುವುದು. ಅಂತಹ ಗುರುಕೃಪೆಯೊಂದಿದ್ದರೆ ಏನೆಲ್ಲವನ್ನೂ ಪಡೆಯಬಹುದೆಂಬುದೇ ಶ್ರೀ ಶಂಕರಾಚಾರ್ಯರ ಅಭಿಮತವಾಗಿದೆ.

ಶಿವಯೋಗ ಸಂಸಿದ್ಧರಾದ ಸದ್ಗುರುಗಳು ಕರುಣಾಸಾಗರರೂ ಮತ್ತು ಶಿಷ್ಯರಿಗೆ ಕಲ್ಪವೃಕ್ಷಪ್ರಾಯರೂ ಆಗಿರುತ್ತಾರೆ. ಈ ಜಗತ್ತಿನಲ್ಲಿ ಶಿವಾದ್ವೈತಜ್ಞಾನ ಸಂಪನ್ನರಾದ ಇಂತಹ ಸದ್ಗುರುಗಳು ಸಿಗುವುದು ದುರ್ಲಭವೆಂಬುದನ್ನು ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಇಂತಹ ಯೋಗ್ಯತಾ ಸಂಪನ್ನರಾದ ಸದ್ಗುರುಗಳೆಂದರೆ ಅವರು ಕಲ್ಪವೃಕ್ಷವಿದ್ದಂತೆ. ಕಲ್ಪಿಸಿದ್ದನ್ನು ದಯಪಾಲಿಸುವ ವೃಕ್ಷಕ್ಕೆ ಕಲ್ಪವೃಕ್ಷವೆಂಬುದಾಗಿ ಶಾಸ್ತ್ರಕಾರರು ನಿರೂಪಿಸಿದ್ದಾರೆ. ಸ್ವರ್ಗದಲ್ಲಿಯ ಆ ಕಲ್ಪವೃಕ್ಷವು ಪುಣ್ಯ ಜೀವಿಗಳಿಗೆ ಬೇಕಾದ ಭೋಗಸಾಮಗ್ರಿಯನ್ನು ಒದಗಿಸಬಹುದೇ ವಿನಃ ಮೋಕ್ಷವನ್ನು ಕೊಡುವ ಸಾಮರ್ಥ್ಯವು ಅದಕ್ಕಿರುವುದಿಲ್ಲ. ಆದರೆ ಸದ್ಗುರುವೆಂಬ ಕಲ್ಪವೃಕ್ಷವು ಭೋಗ–ಮೋಕ್ಷ

ಗಳೆರಡನ್ನೂ ಅನುಗ್ರಹಿಸುವಂತಹದಾಗಿದೆ. ಅಂತೆಯೇ ಗುರುಗಳಿಗೆ 'ಕೈವಲ್ಯ ಕಲ್ಪತರವೇ ಕಲ್ಯಾಣಗುರವೇ ನಮಃ' ಎಂಬುದಾಗಿಯೂ ಶ್ರೀಕಂಠ ಶಿವಾಚಾರ್ಯರು ಬ್ರಹ್ಮಸೂತ್ರ ಶ್ರೀಕಂಠಭಾಷ್ಯದ ಮಂಗಲ ಶ್ಲೋಕದಲ್ಲಿ ಮೋಕ್ಷವನ್ನೀಯುವ ಕಲ್ಪವಕ್ಷ ವೆಂಬುದನ್ನಾಗಿ ವಿವರಿಸಿದ್ದಾರೆ.

ಜಗತ್ತಿನಲ್ಲಿ ಗುರುಗಳೆನ್ನುವವರು ಅನೇಕ ಜನರಿರಬಹುದು. ಆದರೆ ಎಲ್ಲರಲ್ಲಿಯೂ ಶಿಷ್ಯರ ತಾಪವನ್ನು ದೂರಮಾಡಿ ಕೈವಲ್ಯವನ್ನನುಗ್ರಹಿಸುವ ಸಾಮರ್ಥ್ಯವಿರುವುದಿಲ್ಲ. ಅಂತೆಯೇ ಜಗದ್ಗುರುಗಳು ಇಲ್ಲಿ 'ದುರ್ಲಭಾಃ' ಎಂಬ ಶಬ್ದಪ್ರಯೋಗವನ್ನು ಮಾಡಿದ್ದಾರೆ. ಶಿವರಹಸ್ಯವೆಂಬ ಮಹಾಗ್ರಂಥದಲ್ಲಿಯೂ–

ಗುರವೋ ಬಹವಸ್ಸಂತಿ ಶಿಷ್ಯವಿತ್ತಾಪಹಾರಕಾಃ।
ಶಿಷ್ಯಹೃತ್ತಾಪಹಾರಸ್ತು ಗುರುರೇಕೋಽಪಿ ದುರ್ಲಭಃ॥

ಈ ರೀತಿಯಾಗಿ ಅಂತಹ ಗುರುವಿನ ದುರ್ಲಭತ್ವವನ್ನು ಪ್ರತಿಪಾದಿಸಲಾಗಿದೆ. ಶಿಷ್ಯರ ವಿತ್ತವನ್ನು ಅಪಹರಿಸುವ ಗುರುಗಳು ಅಸಂಖ್ಯಾತರಾಗಿರುವ ಈ ಜಗತ್ತಿನಲ್ಲಿ ಶಿಷ್ಯನ ಹೃದಯದಲ್ಲಿರುವ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ತಾಪತ್ರಯಗಳನ್ನು ದೂರಮಾಡಿ ಪರಮಕೈವಲ್ಯವನ್ನು ಅನುಗ್ರಹಿಸುವ ಸದ್ಗುರುಗಳು ಅತಿವಿರಳರೇ ಆಗಿದ್ದಾರೆ.

ಈ ರೀತಿಯಾಗಿ ಕರುಣಾಸಾಗರರು ಕೈವಲ್ಯ ಕಲ್ಪತರುವೂ ಶಿವಾದ್ವೈತ ಪರಾಯಣನೂ ಆದ ಸದ್ಗುರುವು ಉಳಿದೆಲ್ಲ ಸಾಮಾನ್ಯ ಗುರುಗಳಿಗಿಂತಲೂ ಹೇಗೆ ಶ್ರೇಷ್ಠನೆಂಬುದನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಕ್ಷೀರಾಬ್ಧಿರಿವ ಸಿಂಧೂನಾಂ ಸುಮೇರುರಿವ ಭೂಭೃತಾಮ್।
ಗ್ರಹಾಣಾಮಿವ ತಿಗ್ಮಾಂಶುರ್ಮಣೀನಾಮಿವ ಕೌಸ್ತುಭಃ॥
ದ್ರುಮಾಣಾಮಿವ ಭದ್ರಶ್ರೀರ್ದೇವಾನಾಮಿವ ಶಂಕರಃ।
ಗುರುಃ ಶಿವಃ ಪರಃ ಶ್ಲಾಘ್ಯೋ ಗುರೂಣಾಂ ಪ್ರಾಕೃತಾತ್ಮನಾಮ್॥

(ಸಿ. ಶಿ. ೧೩; ೨೮–೨೯)

ಎಂಬುದಾಗಿ ಇಲ್ಲಿ ಅನೇಕ ಉದಾಹರಣೆಗಳ ಮೂಲಕ ತಿಳಿಯಪಡಿಸಿದ್ದಾರೆ. ಸಾಗರಗಳಲ್ಲಿ ಕ್ಷೀರಸಾಗರವು, ಪರ್ವತಗಳಲ್ಲಿ ಸುಮೇರು ಪರ್ವತವು, ಗ್ರಹಗಳಲ್ಲಿ ಸೂರ್ಯಗ್ರಹವು, ರತ್ನಗಳಲ್ಲಿ ಕೌಸ್ತುಭಮಣಿಯೂ, ವೃಕ್ಷಗಳಲ್ಲಿ ಚಂದನವೃಕ್ಷವೂ ಮತ್ತು ದೇವತೆಗಳಲ್ಲಿ ಶಿವನೂ ಹೇಗೆ ಸರ್ವೋತ್ತಮರೋ ಹಾಗೆ ಪ್ರಾಕೃತರಾದ ಗುರುಗಳಲ್ಲಿ ಈ ಶಿವಜ್ಞಾನ ಸಂಪನ್ನನಾದ ಸದ್ಗುರುವೇ ಶ್ರೇಷ್ಠನೂ, ಶ್ಲಾಘನೀಯನೂ ಆಗಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ನಿರ್ದೇಶಸ್ಥಲದ ಕೊನೆಯದಾದ ಶ್ಲೋಕಗಳಲ್ಲಿ ಮಾಲೋಪಮಾಲಂಕಾರ ಮುಖೇನ ಅನೇಕ ಉಪಮೆಗಳಿಂದ ಸದ್ಗುರುವಿನ ಹೆಗ್ಗಳಿಕೆಯನ್ನು ಎತ್ತಿತ್ತೋರಿಸಿದ್ದಾರೆ. ಅವರು ಉದಾಹರಿಸಿದ ಉಪಮೆಗಳ ಬಗ್ಗೆ ಒಂದಿಷ್ಟು ವಿಚಾರಿಸೋಣ–ಶಾಸ್ತ್ರಗಳಲ್ಲಿ ಸಾಗರಗಳು ಸಪ್ತವಿಧವಾಗಿ ಪ್ರತಿಪಾದಿಸಲ್ಪಟ್ಟಿವೆ. ಲವಣ,

ಇಕ್ಷು, ಮಧು, ಸರ್ಪಿ (ಘೃತ), ದಧಿ, ಕ್ಷೀರ ಮತ್ತು ಮಧುರಜಲಗಳೆಂಬವುಗಳೇ ಸಪ್ತ ಸಾಗರಗಳು. ಈ ಸಪ್ತಸಾಗರಗಳಲ್ಲಿ ಕ್ಷೀರಸಾಗರವು ಶ್ರೇಷ್ಠವಾಗಿರುವಂತೆ, ಸುಮೇರು, ಹಿಮಾಲಯ, ಮಲಯ, ಮಂದರಾಚಲ, ವಿಂಧ್ಯ, ಮೈನಾಕ, ಶ್ರೀಶೈಲ ಮತ್ತು ಕೈಲಾಸ ಗಳೆಂಬ ಅಷ್ಟಪರ್ವತಗಳಲ್ಲಿ ಸುಮೇರುಪರ್ವತವು ಹೇಗೆ ಶ್ರೇಷ್ಠವಾದುದೋ, ಅದರಂತೆ ರವಿ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತುಗಳೆಂಬ ನವಗ್ರಹಗಳಲ್ಲಿ ಸೂರ್ಯನು ಹೇಗೆ ಶ್ರೇಷ್ಠವಾಗಿದ್ದಾನೆಯೋ, ಅದರಂತೆ ಕಾಲಕೂಟವಿಷ, ಕಾಮಧೇನು, ಲಕ್ಷ್ಮೀ, ಧನ್ವಂತರಿ, ಚಂದ್ರ, ಪಾರಿಜಾತವೃಕ್ಷ, ಉಚ್ಚೈಶ್ರವಸ್, ಐರಾವತ, ಸುರೆ, ಶಾರ್ಙ್ಗಧನುಷ್, ಶಂಖ, ಕಲ್ಪವೃಕ್ಷ, ಕೌಸ್ತುಭ, ಅಮೃತಗಳೆಂಬ ಕ್ಷೀರಸಾಗರ ಮಂಥನದಿಂದುದಯಿಸಿದ ಚತುರ್ದಶರತ್ನಂಗಳಲ್ಲಿ ಕೌಸ್ತುಭಮಣಿಯು ಹೇಗೆ ಶ್ರೇಷ್ಠ ವಾಗಿದೆಯೋ, ಅದರಂತೆ ಎಲ್ಲ ಗಿಡಗಳಲ್ಲಿ ಶ್ರೀಗಂಧದ ಗಿಡವು ಶ್ರೇಷ್ಠವಾದಂತೆ ಮತ್ತು ಮೂವತ್ಮೂರು ಕೋಟಿ ದೇವತೆಗಳಲ್ಲಿ ಶಿವನು ಸರ್ವೋತ್ತಮನಾಗಿರುವಂತೆ, ಈ ಪ್ರಪಂಚ ದಲ್ಲಿಯ ಪ್ರಾಕೃತರಾದ ಗುರುಗಳಿಗಿಂತಲೂ ಶರಣಸ್ಥಲವನ್ನು ತಲುಪಿ ಶಿವಜ್ಞಾನ ಸಂಪನ್ನ ನಾದ ಸದ್ಗುರುವೇ ಶ್ರೇಷ್ಠನೆಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಶರಣಸ್ಥಲದಲ್ಲಿಯ ಈ ನಿರ್ದೇಶಸ್ಥಲದಲ್ಲಿ ಗುರುವಿನ ಲಕ್ಷಣ ಹಾಗೂ ಆ ಗುರುವಿನ ಮಹತಿಯ ಬಗ್ಗೆ ವಿಶೇಷವಾಗಿ ಕೊಂಡಾಡಿದ್ದನ್ನು ಕಾಣುತ್ತೇವೆ. ಗುರುತ್ವವು ಪ್ರಾಪ್ತವಾಗ ಬೇಕಾದರೆ ಭಕ್ತಸ್ಥಲದಿಂದ ಪ್ರಾರಂಭಗೊಂಡು ಶರಣಸ್ಥಲ ಪರ್ಯಂತವಾಗಿ ಉಪದೇಶಿ ಸಿದ ಯೋಗ್ಯತೆಗಳನ್ನು ಪ್ರಾಪ್ತಮಾಡಿಕೊಂಡು ಮುಂದಿನ ಐಕ್ಯ ಸ್ಥಿತಿಯನ್ನು ಅನುಭವಿಸುವ ಯೋಗ್ಯತೆಯುಳ್ಳವನೇ ಸದ್ಗುರುವಾಗಲು ಸಾಧ್ಯವೆಂಬುದನ್ನು ತಿಳಿಯಪಡಿಸುವದಕ್ಕಾ ಗಿಯೇ ಶ್ರೀ ಜಗದ್ಗುರು ರೇಣುಕ ಭಗತ್ಪಾದರು ಇಲ್ಲಿ ನಿರ್ದೇಶ ಸ್ಥಲವನ್ನು ಪ್ರತಿಪಾದಿಸಿ ದ್ದಾರೆ ಎಂಬಲ್ಲಿಗೆ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೩ ಎಪ್ರಿಲ್, ೧೯೯೨
(ಜ್ಞಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ)



ಆಶೀರ್ವಚನ-೧

# ಶೀಲಸಂಪಾದನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶರಣಸ್ಥಲದಲ್ಲಿಯೇ ಕೊನೆಯದಾದ ಅವಾಂತರ ಸ್ಥಲವೇ ಶೀಲಸಂಪಾದನ ಸ್ಥಲವು. ಶೀಲವೆಂದರೇನು ? ಸಾಧಕನಿಗೆ ಅದರ ಅವಶ್ಯಕತೆ ಏಕೆ ? ಮುಂತಾದ ವಿಷಯಗಳ ಬಗ್ಗೆ ಈ ಸ್ಥಲದಲ್ಲಿ ವಿವೇಚಿಸಲಾಗಿದೆ. ಶ್ರೀಜಗದ್ಗುರು ರೇಣುಕಭಗತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಶೀಲಸಂಪಾದನಸ್ಥಲದ ಬಗ್ಗೆ–

ಜಿಜ್ಞಾಸಾ ಶಿವತತ್ತ್ವಸ್ಯ ಶೀಲಮಿತ್ಯುಚ್ಯತೇ ಬುಧೈ ಃ ।
ನಿರ್ದೇಶ್ಯಯೋಗಾದಾರ್ಯಾಣಾಂ ತದ್ವಾನ್ ಶೀಲೀತಿಕಥ್ಯತೇ ॥

(ಸಿ. ಶಿ. ೧೩–೩೦)

ಹೀಗೆ ಉಪದೇಶಮಾಡಿದ್ದಾರೆ. ಪೂಜ್ಯರ ಉಪದೇಶದ ಪ್ರಕಾರ, ಶಿವತತ್ತ್ವವನ್ನು ತಿಳಿದು ಕೊಳ್ಳಬೇಕೆನ್ನುವ ಉತ್ಕಟವಾದ ಬಯಕೆಯೇ ಶೀಲವು. ಸದ್ಗುರುಗಳ ಉಪದೇಶವನ್ನು ಆಲಿಸಿ ಯಾರಲ್ಲಿ ಈ ಶಿವತತ್ತ್ವ ಜಿಜ್ಞಾಸೆಯು ಉಂಟಾಗವುದೋ ಅಂತಹವನಿಗೆ ಶೀಲೀ ಅಥವಾ 'ಶೀಲವಂತ' ಎಂಬುದಾಗಿ ಕರೆಯುತ್ತಾರೆ.

ಮನುಷ್ಯರ ಮನಸ್ಸಿನಲ್ಲಿ ತಿಳಿದುಕೊಳ್ಳುವ ಬಯಕೆಯು ಇದ್ದೇ ಇರುತ್ತದೆ. ಲೌಕಿಕಗಳಾದ ಉಳಿದೆಲ್ಲ ಜ್ಞಾನಗಳ ಬಯಕೆಗಳಿಗಿಂತಲೂ ಶಿವತತ್ತ್ವ ಜಿಜ್ಞಾಸಾ ರೂಪವಾದ ಬಯಕೆಯು ಸರ್ವಶ್ರೇಷ್ಠವಾಗಿದೆ. ಇಂತಹ ತತ್ತ್ವ ಜಿಜ್ಞಾಸೆಯು ಆಚಾರ್ಯರ ಉಪದೇಶವನ್ನು ಆಲಿಸಿದಾಗಲೇ ಉಂಟಾಗುವುದು.

ಮಹರ್ಷಿವ್ಯಾಸನು ಬರೆದ ಬ್ರಹ್ಮಸೂತ್ರಗಳಲ್ಲಿ ಮೊದಲನೆಯದೇ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬುದು. ಅಂದರೆ ವಿವೇಕ, ವೈರಾಗ್ಯ, ಶಮಾದಿ ಷಟ್ಕಸಂಪತ್ತಿಮತ್ತು ಮುಮುಕ್ಷುತಾ ಎಂಬ ಸಾಧನ ಚತುಷ್ಟಯಗಳು ಪ್ರಾಪ್ತವಾದನಂತರ ಪರಶಿವ ಬ್ರಹ್ಮದ ಜಿಜ್ಞಾಸೆಯನ್ನು ಮಾಡುವ ಯೋಗ್ಯತೆಯು ಮನುಷ್ಯನಿಗೆ ಬಂದೊದಗುತ್ತದೆ. ಈ ಸಾಂಸಾರಿಕ ಬಂಧನದಿಂದ ಮುಕ್ತಿಯನ್ನು ಹೊಂದಬೇಕೆನ್ನುವ ಉತ್ಕಟವಾದ ಬಯಕೆಯುಳ್ಳವನೇ ಈ ತತ್ತ್ವಜಿಜ್ಞಾಸೆಯತ್ತ ಹೊರಳುವನು. ಉಳಿದ ಕೋಟ್ಯನುಕೋಟಿ ಜನರು ಭೌತಿಕ ಜಿಜ್ಞಾಸೆಯಲ್ಲಿಯೇ ತಮ್ಮ ಆಯುಷ್ಯವನ್ನು ಹಾಳುಮಾಡಿಕೊಳ್ಳುತ್ತಾರೆ. ಮನುಷ್ಯ ಜೀವನವನ್ನು ಸಾರ್ಥಕ ಮಾಡಿಕೊಳ್ಳಲು ಶಿವತತ್ತ್ವ ಜಿಜ್ಞಾಸೆಯನ್ನು ಮಾಡಬೇಕೆಂಬುದನ್ನು ತಿಳಿಸುವುದಕ್ಕಾಗಿಯೇ ಶ್ರೀ ಜಗದ್ಗುರು ರೇಣುಕರು ಈ ಶೀಲಸಂಪಾದನ ಸ್ಥಲವನ್ನು ಪ್ರಾರಂಭಿಸಿದ್ದಾರೆ.

ಪೂಜ್ಯರ ಉಪದೇಶದ ಪ್ರಕಾರ ಶಿವತತ್ತ್ವದ ಜಿಜ್ಞಾಸೆಯೇ ಇಲ್ಲಿ ಶೀಲವೆಂಬು ದಾಗಿ ಕರೆಯಲ್ಪಟ್ಟಿದೆ. ವೀರಶೈವ ಸಿದ್ಧಾಂತದಲ್ಲಿ ಸಂಪೂರ್ಣವಾದ ವಿಶ್ವವು ತತ್ತ್ವಾತ್ಮಕ ವಾದುದು. ಶಿವತತ್ತ್ವವನ್ನು ಮೊದಲುಗೊಂಡು ಪೃಥ್ವೀತತ್ತ್ವ ಪರ್ಯಂತರವಾಗಿ ಮೂವತ್ತಾರು ತತ್ತ್ವಗಳು ಇಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಶಿವನು ಮೊದಲನೆಯ ತತ್ತ್ವವಾದರೆ ಪೃಥ್ವಿಯು ಕೊನೆಯ ತತ್ತ್ವವಾಗಿದೆ. ಈ ಶಿವತತ್ತ್ವವನ್ನು ತಿಳಿದುಕೊಂಡೇ ಅನೇಕ ಜನರು ಲಿಂಗಾಂಗ ಸಾಮರಸ್ಯರೂಪವಾದ ಐಕ್ಯ ಸ್ಥಿತಿಯನ್ನು ಪ್ರಾಪ್ತಮಾಡಿಕೊಂಡಿರುತ್ತಾರೆ. ಹೀಗೆ ಪರಮಕೈವಲ್ಯವನ್ನು ಪ್ರಾಪ್ತಮಾಡಿಕೊಡುವ ಶಿವತತ್ತ್ವ ಜಿಜ್ಞಾಸೆಯೇ ಶೀಲವು. ಇದು ಉಳ್ಳವನೇ ಶೀಲೀ, ಶೀಲವಾನ್ ಅಥವಾ ಶೀಲವಂತನೆಂಬುದಾಗಿ ಕರೆಯಿಸಿಕೊಳ್ಳುತ್ತಾರೆ.

ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳೆಂಬ ಪಂಚವಿಧ ಆಚಾರಗಳಲ್ಲಿ ಆಯಾ ಆಚಾರಕ್ಕೆ ತಕ್ಕಂತೆ ಬೇರೆ ಬೇರೆ ಅವಾಂತರ ಆಚಾರಗಳು ಪ್ರತಿಪಾದಿತಗಳಾಗಿವೆ. ಇವು ಗಳಲ್ಲಿ ನಾಲ್ಕನೆಯದಾದ ಗಣಾಚಾರದಲ್ಲಿ ೬೪ (ಅರವತ್ನಾಲ್ಕು) ಪ್ರಕಾರದ ಅವಾಂತರ ಆಚಾರಗಳು ಪ್ರತಿಪಾದಿಸಲ್ಪಟ್ಟಿವೆ. ಅಲ್ಲಿ ಅವುಗಳಿಗೆ ಶೀಲಗಳೆಂಬುದಾಗಿ ಕರೆಯುತ್ತಾರೆ. ಅಂದರೆ ೬೪ ಶೀಲಗಳಿಂದ ಕೂಡಿರುವುದೇ ಗಣಾಚಾರವೆಂಬ ತಾತ್ಪರ್ಯವು. ಇಲ್ಲಿ ಶೀಲ ಶಬ್ದದ ಅರ್ಥವನ್ನು ಉತ್ತಮ ಆಚರಣೆಯೆಂಬುದಾಗಿ ಹೇಳಲಾಗಿದೆ. ಪರಂಪರೆಯಿಂದ ಈ ಶೀಲಾಚಾರಗಳನ್ನು ಕಾಪಾಡಿಕೊಂಡು ಬಂದವರಿಗೂ ಸಹ ಶೀಲವಂತರೆಂದು ಕರೆಯುವ ರೂಢಿಯು ಸಮಾಜದಲ್ಲಿ ಕಂಡುಬರುತ್ತದೆ. ಯಾವ ಮನೆತನದಲ್ಲಿ ಈ ಉತ್ತಮ ಆಚರಣೆಗಳನ್ನು ಪರಂಪರೆಯಿಂದ ಆಚರಿಸುತ್ತ ಬಂದಿರುವರೋ ಆ ಮನೆತನದವರಿಗೆ 'ಶೀಲವಂತ'ರೆಂಬ ಉಪನಾಮ ಅರ್ಥಾತ್ ಅಡ್ಡಹೆಸರು ಬಂದಿರುವುದನ್ನು ಕಾಣುತ್ತೇವೆ. ಚಂದ್ರಜ್ಞಾನಾಗಮದ ಕ್ರಿಯಾಪಾದದ ೯ನೇ ಪಟಲದಲ್ಲಿ ಈ ಎಲ್ಲ ಆಚಾರಗಳ ಹಾಗೂ ಶೀಲಗಳ ವಿಸ್ತೃತವಾದ ವಿಶ್ಲೇಷಣೆ ಮಾಡಲಾಗಿದೆ. ಜಿಜ್ಞಾಸುಗಳು ಅಲ್ಲಿ ಅವಲೋಕಿಸ ಬಹುದು.

ಪ್ರಕೃತವಾದ ಈ ಶರಣಸ್ಥಲದಲ್ಲಿ ಶೀಲ ಶಬ್ದದ ಅರ್ಥವನ್ನು 'ಶಿವತತ್ತ್ವದ ಜಿಜ್ಞಾಸೆ' ಯೆಂಬುದಾಗಿ ತಿಳಿದುಕೊಳ್ಳಬೇಕು. ಇಂತಹ ಶೀಲವುಳ್ಳವನೇ ಶೀಲಿಯು. ಈ ಶೀಲ ಶಬ್ದದ ಅರ್ಥವನ್ನು ಮತ್ತಷ್ಟು ವಿವರಿಸುತ್ತ–

ಪ್ರಪನ್ನಾರ್ತಿಹರೇ ದೇವೇ ಪರಮಾತ್ಮನಿ ಶಂಕರೇ।
ಭಾವಸ್ಯ ಸ್ಥಿರತಾಯೋಗಃ ಶೀಲಮಿತ್ಯುಚ್ಯತೇ ಬುಧೈಃ॥

(ಸಿ. ಶಿ. ೧೩–೩೧)

ಈ ವಿಧವಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ. ಮೊರೆಹೊಕ್ಕವರ ಮನೋವ್ಯಥೆಯನ್ನು ಪರಿಹರಿಸುವ ಪರಬ್ರಹ್ಮಸ್ವರೂಪನಾದ ಶಿವನಲ್ಲಿ ತನ್ನ ಮನಸ್ಸನ್ನು ನಿಶ್ಚಲಗೊಳಿಸುವು ದಕ್ಕೆಯೂ ಶೀಲವೆಂಬುದಾಗಿ ತಿಳಿದುಕೊಳ್ಳಬೇಕು. ಪ್ರಾರಂಭಿಕಾವಸ್ಥೆಯಲ್ಲಿ ಶಿವಜಿಜ್ಞಾಸಾ ರೂಪವಾದ ಶೀಲವಿದ್ದರೆ ಅದು ಕಾಲಾಂತರದಲ್ಲಿ ಸಾಧನೆಯ ಪರಿಣಾಮವಾಗಿ ಶಿವ ಭಾವಾತ್ಮಕವಾಗಿ ಪರಿವರ್ತನೆಗೊಳ್ಳುವುದು. ಸ್ಥೂಲವಾದ ವಸ್ತುಗಳನ್ನು ಇಂದ್ರಿಯಗಳು

ಗ್ರಹಿಸಿದರೆ ಅತೀಂದ್ರಿಯವೂ. ಅತಿಸೂಕ್ಷ್ಮವೂ ಆದ ತತ್ತ್ವವನ್ನು ಭಾವನೆಯು ಗ್ರಹಿಸುವುದು.

''ಭಾವೋ ಮಾನಸಚೇಷ್ಟಾತ್ಮಾ ಪರಿಪೂರ್ಣಃ ಶಿವಾಶ್ರಯಃ''

(ಸಿ. ಶಿ. ౧೬-೬೭)

ಎಂಬ ಆಚಾರ್ಯೋಪದೇಶದಂತೆ ಪರಿಪೂರ್ಣವಾಗಿ ಶಿವನನ್ನೇ ಆಶ್ರಯಿಸಿಕೊಂಡಿರುವ ಮನಸ್ಸಿನ ವೃತ್ತಿಯೇ ಭಾವನೆಯು. ಇಂತಹ ಪರಿಶುದ್ಧವಾದ ಭಾವನೆಯಿಂದಲೇ ಪರಮಾತ್ಮನನ್ನು ಅರಿಯಲು ಸಾಧ್ಯವಾಗುವುದು. ಯಾರು ಸರ್ವತೋಭಾವೇನ ಶಿವನಿಗೆ ಶರಣಾಗತರಾಗುವರೋ ಅವರ ಎಲ್ಲ ದೋಷ ಹಾಗೂ ದುಃಖಗಳು ಪರಿಹಾರ ಗೊಳ್ಳುವವು. 'ಹರತಿ ಇತಿ ಹರಃ' ಎಂಬ ವ್ಯುತ್ಪತ್ತಿಗನುಸಾರವಾಗಿ ಭಕ್ತರ ಪರಿತಾಪಗಳನ್ನು ಪರಿಹರಿಸುವವನೇ ಹರನು. ಅಂತೆಯೇ ಶಿವನಿಗೆ 'ಶಂಕರ'ನೆಂಬ ಇನ್ನೊಂದು ನಾಮವು ಇದೆ. ಶಂ=ಸುಖಮ್, ಕರೋತಿ ಇತಿ ಶಂಕರಃ ಎಂಬ ವ್ಯುತ್ಪತ್ತಿಯಿಂದ ಆ ಅರ್ಥವು ಅಭಿವ್ಯಕ್ತವಾಗುತ್ತದೆ. ಸುಖಕರನೂ, ದುಃಖಹರನೂ, ಮಂಗಲಕರನೂ ಆದ ಶಿವನನ್ನು ತನ್ನ ಅಂತರಂಗದಲ್ಲಿ ಸದಾ ಧ್ಯಾನಿಸುವುದೇ ಮುಖ್ಯವಾದ ಶೀಲವು.

ನಾವು ಯಾರನ್ನು ಅತಿಯಾಗಿ ಪ್ರೀತಿಸುತ್ತೇವೆಯೋ ಅವರನ್ನು ನಮ್ಮ ಮನಸ್ಸಿನಲ್ಲಿಟ್ಟುಕೊಂಡು ಸದಾ ಅವರ ಚಿಂತನೆಯನ್ನು ಮಾಡುತ್ತಲಿರುತ್ತೇವೆ. ಪಾಮರರಾದ ಜೀವಿಗಳು ಮನಸ್ಸಿನ ತುಂಬೆಲ್ಲ ವಿಷಯಗಳನ್ನೇ ತುಂಬಿಕೊಂಡು ಪರಮಾತ್ಮನಿಗಾಗಿ ಎಳ್ಳಷ್ಟೂ ಅವಕಾಶಕೊಡದೆ ಈ ಸಂಸಾರ ಚಕ್ರದಲ್ಲಿ ತಿರುಗುತ್ತಲಿರುತ್ತಾರೆ. ಸಾಧಕರಾದವರು ತಮ್ಮ ಮನಸ್ಸಿನಲ್ಲಿ ಪರಮಾತ್ಮನಿಗಾಗಿಯೂ ಸಹ ಸ್ವಲ್ಪಿಲ್ಲಾ ಸ್ವಲ್ಪು ಸ್ಥಾನವನ್ನು ಕೊಟ್ಟು ಆತನ ಚಿಂತನೆಯನ್ನು ಮಾಡುತ್ತಿರುತ್ತಾರೆ. ನಮ್ಮ ಪ್ರೀತಿ ಪ್ರೇಮಗಳು ಯಾರ ಮೇಲಿರುತ್ತವೆಯೋ ಅವರಿಗಾಗಿ ನಮ್ಮಲ್ಲಿ ಯಾವಾಗಲೂ ಸ್ಥಾನ-ಮಾನಗಳಿರುತ್ತವೆ. ಮನೆಯಲ್ಲಿ ಬೇಕಾದಷ್ಟು ಅಡ್ಡಿ-ಅಡಚಣೆಗಳು ಇದ್ದರೂ ತನಗೆ ಪರಮಪ್ರಿಯನಾದ ಓರ್ವ ವ್ಯಕ್ತಿಯು ಮನೆಗೆ ಬಂದಾಗ ಅವನಿಗಾಗಿ ನಾವು ಎಲ್ಲ ಅನುಕೂಲತೆಗಳನ್ನು ಮಾಡಿ ಕೊಡುತ್ತೇವೆ. ಇದು ಆತನ ಮೇಲಿನ ಅಧಿಕ ಪ್ರೇಮವನ್ನು ತೋರಿಸುತ್ತದೆ.

ಒಮ್ಮೆ ರಾಮಕೃಷ್ಣ ಪರಮಹಂಸರು ತಮ್ಮ ಪ್ರಿಯ ಶಿಷ್ಯನಾದ ಸ್ವಾಮಿ ವಿವೇಕಾನಂದರೊಂದಿಗೆ ಓರ್ವ ಭಕ್ತರ ಮನೆಗೆ ಊಟಕ್ಕಾಗಿ ಹೋಗಿದ್ದರು. ಅಲ್ಲಿ ಪರಮಹಂಸರು ಯಥೇಷ್ಟವಾಗಿ ಭೋಜನಮಾಡಿ ಶಿಷ್ಯನಿಗೆ ಹೇಳಿದರಂತೆ, ''ನೋಡು ವಿವೇಕಾ ! ಇಂದು ನಾನು ಇಷ್ಟು ಆಹಾರ ಸೇವಿಸಿದ್ದೇನೆ ಇನ್ನು ಮೇಲೆ ನನ್ನ ಹೊಟ್ಟೆಯಲ್ಲಿ ಒಂದು ಅನ್ನದ ಅಗಳೂ ಸಹ ಹೋಗಲು ಅವಕಾಶವಿಲ್ಲ.'' ಹೀಗೆ ಅನ್ನುತ್ತ ಊಟಮುಗಿಸಿ ಇನ್ನೂ ಆಸನದ ಮೇಲೆ ಕುಳಿತಿರುವಾಗಲೇ ಪಕ್ಕದ ಮನೆಯ ಓರ್ವ ಭಕ್ತಳು ಒಂದು ತಟ್ಟೆಯಲ್ಲಿ ಆದೇ ಆಗ ತಯಾರಿಸಿದ ಬಿಸಿ ಬಿಸಿ ಜಿಲೇಬಿಯ ನಾಲ್ಕೈದು ಗಾಲಿಗಳನ್ನು ತಂದು ಪರಮಹಂಸರ ಮುಂದಿರಿಸಿ ಭಯಭಕ್ತಿಯಿಂದ ನಮಸ್ಕರಿಸಿ ''ಪೂಜ್ಯರೇ ! ತಮಗಾಗಿಯೇ ಇವುಗಳನ್ನು ತಯಾರಿಸಿ ತಂದಿದ್ದೇನೆ ಸೇವಿಸಿ ಅನುಗ್ರಹಿಸಿರಿ'' ಎಂಬುದಾಗಿ ಪ್ರಾರ್ಥಿಸಿದಳು. ಆಗ ಪರಮಹಂಸರು ತತ್‌ಕ್ಷಣ ತಟ್ಟೆಯನ್ನು ಕೈಗೆತ್ತಿಕೊಂಡು ಅದರಲ್ಲಿಯ ಎಲ್ಲಾ ಜಿಲೇಬಿಗಳನ್ನು

ತಿಂದು ವಿವೇಕನತ್ತನೋಡಿದರು. ಗುರುಗಳ ಈ ವ್ಯವಹಾರವನ್ನು ಕಂಡು ಆಶ್ಚರ್ಯಚಕಿತ ರಾದ ವಿವೇಕಾನಂದರು ''ಗುರೂಜೀ ! ಈಗ ತಾನೇ ನೀವು ಹೊಟ್ಟೆಯಲ್ಲಿ ಒಂದಗಳು ಅನ್ನಕ್ಕೂ ಸಹ ಸ್ಥಾನವಿಲ್ಲೆಂದು ಹೇಳಿದ್ದಿರಿ, ಹೀಗಿರುವಾಗ ಈ ನಾಲ್ಕೈದು ಜಿಲೇಬಿಗಳಿಗೆ ಸ್ಥಳವೆಲ್ಲಿಂದ ಬಂತು ?'' ಎಂಬುದಾಗಿ ಕೇಳಿದರು. ವಿವೇಕಾನಂದರ ಈ ಮಾತನ್ನು ಕೇಳಿ ಪರಮಹಂಸರು ನಕ್ಕು ''ವಿವೇಕಾ ! ಕಲಕತ್ತಾ ನಗರದಲ್ಲಿಯ ಬೀದಿಗಳು ಜನಸಂದಣಿ ಯಿಂದ ತುಂಬಿಕೊಂಡು, ಹೋಗಲು ಸ್ಥಳಾವಕಾಶ ಇಲ್ಲದಿರುವಾಗಲೂ ಅಕಸ್ಮಾತ್ತಾಗಿ ರಾಜ್ಯಪಾಲರ ಕಾರು (ಗವರ್ನರರ ಗಾಡಿ) ಬಂತೆಂದೊಡೆ ರಸ್ತೆಯೆಲ್ಲವೂ ಖಾಲಿಯಾಗಿ ಅಲ್ಲಿ ನಡೆದಾಡುವ ಜನರಾಗಲೀ, ವಾಹನಗಳಾಗಲೀ ಅಕ್ಕ–ಪಕ್ಕಕ್ಕೆ ಸರಿದು ಆ ಗಾಡಿಗೆ ಹೋಗಲು ಅವಕಾಶ ನೀಡುವಂತೆ ನಾನು ಸೇವಿಸಿದ ಜಿಲೇಬಿಗೆ ಹೊಟ್ಟೆಯಲ್ಲಿ ಅವಕಾಶ ದೊರಕಿದೆ. ಖಾದ್ಯ ಪದಾರ್ಥಗಳಲ್ಲಿ ನನಗೆ ಜಿಲೇಬಿಯೆಂದರೆ 'ಗವರ್ನರರ ಗಾಡಿ' ಇದ್ದಂತೆ.'' ಎಂದು ಹೇಳಿದರು.

ಯಾವುದೊಂದು ವಸ್ತು ಅಥವಾ ವ್ಯಕ್ತಿಯ ಮೇಲೆ ಪ್ರಗಾಢವಾದ ಪ್ರೇಮವಿರುವ ದನ್ನು ಈ ಘಟನೆ ಎತ್ತಿತೋರಿಸುತ್ತದೆ. ಅದರಂತೆ ಶರಣಸ್ಥಲದ ಸಾಧಕನು ತನ್ನ ಮನಸ್ಸಿನಲ್ಲಿ ತನಗೆ ಪರಮಪ್ರಿಯವಾದ ಪರಮಾತ್ಮನಿಗೆ ಅವಕಾಶ ಮಾಡಿಕೊಟ್ಟು ಅವನಲ್ಲಿಯೇ ತನ್ನ ಭಾವನೆಯನ್ನು ಸ್ಥಿರಗೊಳಿಸಿ ಶೀಲಸಂಪಾದಕನೆಂದು ಕರೆಯಲ್ಪಡುತ್ತಾನೆ. ಈ ಶರಣನ ಮನಸ್ಸಿನ ಮತ್ತಷ್ಟು, ಪ್ರಗಾಢತೆಯನ್ನು ಪೂಜ್ಯಪಾದರು–

ಶೀಲಂ ಶಿವೈಕವಿಜ್ಞಾನಂ ಶಿವಧ್ಯಾನೈಕತಾನತಾ ।
ಶಿವಪ್ರಾಪ್ತಿಸಮುತ್ಕಂಠಾ ತದ್ಯೋಗೀ ಶೀಲವಾನ್ ಸ್ಮೃತಃ ॥

(ಸಿ. ಶಿ. ೧೩–೩೨)

ಈ ತೆರನಾಗಿ ಪುನಃ ತಿಳಿಯಪಡಿಸಿದ್ದಾರೆ. ಶಿವನೋರ್ವನನ್ನೇ ಅರಿಯುವುದು, ಶಿವ ನೋರ್ವನನ್ನೇ ಧ್ಯಾನಿಸುವುದು ಮತ್ತು ಶಿವನನ್ನು ಪಡೆಯುವುದರಲ್ಲಿಯೇ ಉತ್ಸುಕ ನಾಗಿರುವುದು ಇವೆಲ್ಲವುಗಳು ಶೀಲದ ಲಕ್ಷಣಗಳು. ಈ ಲಕ್ಷಣಗಳಿಂದ ಲಕ್ಷಿತನಾದವನೇ ಶೀಲ ವಂತನು. ಇಂತಹ ಶೀಲವಂತನಿಗೆ ಶಿವಸಾಕ್ಷಾತ್ಕಾರವಾಗುವುದೇ ವಿನಃ ಅನವಧಾನ ಚಿತ್ತವುಳ್ಳವನಿಗೆ ಅದೆಂದಿಗೂ ಆಗಲಾರದು.

ಒಂದು ಗ್ರಾಮದಲ್ಲಿ ಚಿಕಿತ್ಸಕ ಬುದ್ಧಿಯ ಓರ್ವ ವ್ಯಕ್ತಿಯು ಆ ಊರಿನ ಮಠಾಧಿಪತಿ ಗಳಾದ ಶಿವಾಚಾರ್ಯರ ಬಳಿಗೆ ಹೋಗಿ ''ನೀವು ಶಿವನನ್ನು ಕಂಡಿದ್ದೀರಾ ?'' ಎಂದು ಪ್ರಶ್ನಿಸಿ ದನು. ಆಗ ಅವರು ''ಅಹುದು ಕಂಡಿದ್ದೇನೆ'' ಎಂದು ಉತ್ತರಿಸಿದರು. ಆಗ ಆ ವ್ಯಕ್ತಿಯು ''ನೀವು ಕಂಡ ಶಿವನನ್ನು ನನಗೆ ತೋರಿಸಬಲ್ಲಿರಾ?'' ಎಂದು ಮರು ಪ್ರಶ್ನಿಸಿದಾಗ ''ತೋರಿಸುತ್ತೇವೆ ನಡೆ'' ಎಂದರು. ಆಗ ಆ ಶಿವಾಚಾರ್ಯರು ಈತನನ್ನು ಕರೆದುಕೊಂಡು ಒಂದು ಅಡವಿಗೆ ಹೋಗಿ ಅಲ್ಲಿ ಹರಿಯುತ್ತಿರುವ ನದಿಯಲ್ಲಿ ಸ್ನಾನಮಾಡಲು ಆತನನ್ನು ಕರೆದುಕೊಂಡು ಹೋಗಿ ಆತನು ನೀರಿನಲ್ಲಿ ಮುಳುಗಿ ಏಳುವಾಗ ಆತ ಮೇಲೆ ಏಳದಂತೆ ತಮ್ಮ ಎರಡೂ ಕೈಗಳಿಂದ ಬಲವಾಗಿ ಅದುಮಿ ಹಿಡಿದರು. ಅವನು ಮೇಲೇಳಲು ಪ್ರಯತ್ನಿಸಿದಾಗಲೆಲ್ಲ ಪುನಃ ಪುನಃ ಕೆಳಗೆ ಅದುಮುತ್ತಿದ್ದರು. ಉಸಿರಿಗಾಗಿ

ಚಡಪಡಿಸುತ್ತಿರುವ ಆತನ ಸ್ಥಿತಿಯನ್ನು ಕಂಡು ಕೈಬಿಟ್ಟರು. ಮೇಲೆದ್ದ ಆ ಯುವಕ ''ಇದೆ ಏನು ದೇವರನ್ನು ತೋರಿಸುವ ಪದ್ಧತಿ ?'' ಎಂದು ಕ್ರುದ್ಧನಾಗಿ ನುಡಿದಾಗ, ಗುರುಗಳು ಸಮಾಧಾನಚಿತ್ತರಾಗಿ ಅವನನ್ನು ಪ್ರಶ್ನಿಸಿದರು. ''ನಿನ್ನನ್ನು ನಾವು ನೀರಿನಲ್ಲಿ ಅದುಮುತ್ತಿರುವಾಗ ನಿನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆಯು ಪ್ರಬಲವಾಗಿತ್ತು ?'' ''ನನಗೆ ಉಸಿರಾಡಿಸಲು ಹವೆಯು ದೊರಕೀತೆಂಬ ಒಂದೇ ಒಂದು ವಿಚಾರವು ಮನದಲ್ಲಿ ತುಂಬಿಕೊಂಡಿತ್ತೇ ಹೊರತಾಗಿ ಬೇರಾವ ಇಚ್ಛೆಯು ಇರಲಿಲ್ಲ'' ಎಂಬುದಾಗಿ ಆ ಯುವಕನು ಉತ್ತರಿಸಿದನು. ಆತನ ವಿಚಾರವನ್ನು ಕೇಳಿ ಗುರುಗಳು ಆತನಿಗೆ ತಿಳಿ ಹೇಳಿದ್ದೇನೆಂದರೆ–'ನೀರಿನಲ್ಲಿ ಮುಳುಗಿದಾಗ ನಿನ್ನ ಮನಸ್ಸಿನಲ್ಲಿ ಹವೆಯೊಂದೇಬೇಕೆಂಬ ವ್ಯಾಕುಲತೆಯು ವ್ಯಾಪಿಸಿದ್ದಂತೆ ಯಾವಾಗದೇವರ ವಿಷಯದಲ್ಲಿ ಇಂತಹ ತೀವ್ರ ವ್ಯಾಕುಲತೆಯು ನಿನ್ನಲ್ಲಿ ಮೂಡಿಬರುವುದೋ ಆಗತಾನೆ ನೀನು ಶಿವಸಾಕ್ಷಾತ್ಕಾರವನ್ನು ಪಡೆಯಲು ಅರ್ಹನಾಗುವಿ' ಎಂಬುದಾಗಿ ಬೋಧಿಸಿದರು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶೀಲವಂತನ ಯೋಗ್ಯತೆಯನ್ನು ಮತ್ತಷ್ಟು ಸ್ಪಷ್ಟಪಡಿಸುವುದಕ್ಕಾಗಿ ಪುನಃ–

ಶಿವಾದನ್ಯತ್ರ ವಿಜ್ಞಾನೇ ವೈಮುಖ್ಯಂ ಯಸ್ಯ ಸುಸ್ಥಿರಮ್ ।
ತದಾಸಕ್ತಮನೋವೃತ್ತಿಸ್ತಮಾಹುಃ ಶೀಲಭಾಜನಮ್ ॥

(ಸಿ. ಶಿ. ೧೩–೩೩)

ಹೀಗೆ ನಿರೂಪಿಸಿದ್ದಾರೆ. ಯಾವ ಶರಣನಿಗೆ ಶಿವನ ಹೊರತು ಬೇರಾವ ದೇವತೆಗಳಲ್ಲಿ ಆಸಕ್ತಿ ಇರುವುದಿಲ್ಲವೋ ಮತ್ತು ಶಿವಲಿಂಗ ಒಂದರಲ್ಲಿಯೇ ತದೇಕಚಿತ್ತನಾಗಿರುವನೋ ಅಂತಹ ಶರಣನಿಗೆ ಶೀಲಭಾಜನನೆಂಬುದಾಗಿ ಕರೆಯುತ್ತಾರೆ. ಸಾಧಕನಲ್ಲಿ ಯಾವಾಗಲೂ ಏಕಾಗ್ರಚಿತ್ತತೆಯು ಅವಶ್ಯಕವಾದುದು. ಚಿತ್ತದಲ್ಲಿ ಏಕಾಗ್ರತೆಯು ಬಾರದೆ ಸಾಧಕನು ಗುರಿಯನ್ನು ಸಾಧಿಸಲಾರ. ಈ ರೀತಿಯಾಗಿ ಶರಣನ ಏಕಾಗ್ರಚಿತ್ತತೆಯನ್ನು ನಿರೂಪಿಸುವ ಸ್ಥಲವೇ ಶೀಲಸಂಪಾದನಸ್ಥಲವು.

ಪೂಜ್ಯಪಾದರು ಶೀಲದ ವಿಷಯಕವಾಗಿ ಇಲ್ಲಿಯವರೆಗೆ ದಾರ್ಶನಿಕ ವಿಚಾರಗಳನ್ನು ನಿರೂಪಿಸಿ ಸದ್ಯಃ ಆ ವಿಷಯವನ್ನು ಇನ್ನಷ್ಟು ಹೃದಯಂಗಮವಾಗಿ ತಿಳಿಸಲೋಸುಗ ಲೌಕಿಕ ಉದಾಹರಣೆಯ ಮೂಲಕವಾಗಿ ಪುನಃ–

ಪತಿವ್ರತಾಯಾ ಯಚ್ಛೀಲಂ ಪತಿರಾಗಾತ್ ಪ್ರಶಸ್ಯತೇ ।
ತಥಾ ಶಿವಾನುರಾಗೇಣ ಸುಶೀಲೋಭಕ್ತ ಉಚ್ಯತೇ ।

ಪತಿಂ ವಿನಾ ಯಥಾ ಸ್ತ್ರೀಣಾಂ ಸೇವಾನ್ಯಸ್ಯ ತು ಗರ್ಹಣಾ ।
ಶಿವಂ ವಿನಾ ತಥಾನ್ಯೇಷಾಂ ಸೇವಾ ನಿಂದ್ಯಾ ಕೃತಾತ್ಮನಾಮ್ ॥

(ಸಿ. ಶಿ. ೧೩ ; ೩೪–೩೫)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತನ್ನ ಪತಿಯ ಮೇಲಣ ಪ್ರೀತಿಯಿಂದ ಸತಿಯ ಪಾತಿವ್ರತ್ಯವು ಹೆಚ್ಚುವಂತೆ ಶಿವನ ಮೇಲಿನ ಅತಿಶಯವಾದ ಪ್ರೀತಿಯಿಂದ ಶರಣನ

ಶೀಲವು ಹೆಚ್ಚುವುದು. ಪತಿವ್ರತಾ ಸ್ತ್ರೀಯರಿಗೆ ತನ್ನ ಪತಿಯನ್ನು ಹೊರತುಪಡಿಸಿ ಪರಪುರುಷರನ್ನು ಪ್ರೀತಿಸುವುದು ಹೇಗೆ ನಿಂದನೆಗೆ ಒಳಗಾಗುವುದೋ ಅದರಂತೆ ಶೀಲ ಸಂಪನ್ನನಾದ ಶರಣನು ಶಿವನ ಹೊರತಾಗಿ ಅನ್ಯ ದೇವತೆಗಳನ್ನು ಭಜಿಸತೊಡಗಿದರೆ, ಆತನೂ ಸಹ ಅಪವಾದಕ್ಕೆ ಗುರಿಯಾಗುವನು. ಪತಿವ್ರತೆಯು ಪರಪುರುಷರನ್ನು ಪ್ರೀತಿಸ ದಂತೆ ಶೀಲಸಂಪನ್ನನಾದ ಶರಣನು ತನ್ನ ಇಷ್ಟ, ಪ್ರಾಣ ಹಾಗೂ ಭಾವಲಿಂಗಗಳ ಹೊರತಾಗಿ ಬೇರಾವ ದೇವರನ್ನೂ ಭಜಿಸುವುದಿಲ್ಲ. ಅಂತೆಯೇ ಈತನಿಗೆ ಶೀಲವಾನ್, ಶೀಲವಂತ ಎಂಬುದಾಗಿ ಕರೆದಿದ್ದಾರೆ.

ಷಟ್‌ಸ್ಥಲದಲ್ಲಿಯ ಈ ಶರಣಸ್ಥಲವು ಸತಿ–ಪತಿನ್ಯಾಯದಿಂದ ಕೂಡಿದುದಾಗಿದೆ. 'ಶರಣ ಸತಿ ಲಿಂಗ ಪತಿ' ಇದು ಈ ಸ್ಥಲದ ಗುಟ್ಟಾಗಿದೆ. ಪತಿವ್ರತೆಯಾದ ಹೆಣ್ಣುಮಗಳು ತನ್ನ ಯಾವುದೇ ಸ್ವಾರ್ಥಮನೋಭಾವನೆಯನ್ನಿಟ್ಟುಕೊಳ್ಳದೆ ಕೇವಲ ಪತಿಯ ಸಂತೋಷ ಕ್ಕಾಗಿಯೇ ಹಗಲಿರುಳು ಹವಣಿಸುತ್ತಿರುತ್ತಾಳೆ. ಆತನ ಊಟ–ಉಡಿಗೆಯ ಬಗ್ಗೆ ಸದಾ ಕಾಳಜಿ ವಹಿಸುತ್ತಾಳೆ. ಇಷ್ಟೇ ಅಲ್ಲ ಅವಳ ತನ್ಮಯತೆಯನ್ನು ನೋಡಿದರೆ ನಿಜವಾಗಿಯೂ ಇವಳು ಅವನ ಅರ್ಧಾಂಗಿಯೆಂಬುದು ತಿಳಿದುಬರುತ್ತದೆ. ಹೀಗಿದ್ದಾಗಲೇ ಅವಳು ಪತಿಯ ಪ್ರೇಮಕ್ಕೆ ಕಾರಣಳಾಗುವಳು. ಇದೇ ತೆರನಾಗಿ ಶರಣಸ್ಥಲದ ಈ ಶೀಲ ಸಂಪನ್ನ ನಾದ ಸಾಧಕನು ತಾನು ಏನನ್ನೇ ಮಾಡಿದರೂ ತನ್ನ ಇಷ್ಟ ದೇವರಿಗಾಗಿಯೇ ಎಂಬ ಭಾವವು ಆತನಲ್ಲಿ ತುಂಬಿಕೊಂಡಿರುತ್ತದೆ. ತನ್ನ ಪ್ರತಿಯೊಂದು ಚೇಷ್ಟೆಗಳು ಶಿವನಕೃಪಾ ಪ್ರಾಪ್ತಿಗಾಗಿಯೇ ಎಂಬ ದೃಢಭಾವನೆಯು ಆತನಲ್ಲಿರುವುದು. ಈ ವಿಧವಾಗಿ ಶಿವನಲ್ಲಿ ಅನನ್ಯ ಭಕ್ತಿಯನ್ನು ತಾಳಿದ ಈ ಶರಣನು ಶಿವನಲ್ಲದ ಬೇರಾವ ದೇವರನ್ನೂ ಪೂಜಿಸ ಕೂಡದೆಂಬ ಪೂಜ್ಯಪಾದರ ಆದೇಶದಲ್ಲಿ ಅನ್ಯ ದೇವರ ಬಗ್ಗೆ ತಿರಸ್ಕಾರ ಭಾವನೆಯಿದೆ ಯೆಂದು ಯಾರೂ ಯೋಚಿಸಬಾರದು. ಇಲ್ಲಿ ಅನ್ಯದೇವತಾ ಪೂಜೆಯನ್ನು ವ್ಯಾವರ್ತಿ ಸಿರುವುದು ಆ ದೇವತೆಗಳ ನಿಕೃಷ್ಟತೆಯನ್ನು ಪ್ರತಿಪಾದಿಸುವುದಕ್ಕಲ್ಲ. ಆದರೆ ತನ್ನ ಇಷ್ಟ ದೇವರಲ್ಲಿ ನಿಷ್ಠೆಯನ್ನು ಬೆಳೆಸುವುದಕ್ಕಾಗೆಂಬುದನ್ನು ಸರ್ವರೂ ಅರ್ಥಮಾಡಿಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಹೀಗೆ ಈ ಶರಣಸ್ಥಲದಲ್ಲಿಯ ಶೀಲ ಸಂಪಾದನೆಯ ಬಗ್ಗೆ ದಾರ್ಶನಿಕವಾಗಿಯೂ, ಲೌಕಿಕವಾಗಿಯೂ ತಿಳಿಯಪಡಿಸಿ ಈ ಸ್ಥಲ ವನ್ನು ಉಪಸಂಹಾರಗೊಳಿಸುತ್ತ ಕೊನೆಗೆ–

ಬಹುನಾತ್ರ ಕಿಮುಕ್ತೇನ ಶಿವಜ್ಞಾನೈಕನಿಷ್ಠತಾ ।
ಶೀಲಮಿತ್ಯುಚ್ಯತೇ ಸದ್ಭಿಃ ಶೀಲವಾಂಸ್ತತ್ಪರೋ ಮತಃ ॥

ಶಿವಾತ್ಮಬೋಧೈಕರತಃ ಸ್ಥಿರಾಶಯಃ ಶಿವಂ ಪ್ರಪನ್ನೋ ಜಗತಾಮಧೀಶಮ್ ।
ಶಿವೈಕನಿಷ್ಠಾಹಿತಶೀಲಭೂಷಣಃ ಶಿವೈಕ್ಯವಾನೇಷ ಹಿ ಕಥ್ಯತೇ ಬುಧೈಃ ॥

(ಸಿ. ಶಿ. ೧೩; ೩೭–೩೭)

ಈ ತೆರನಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ–ಶೀಲಸಂಪಾದನ ಸ್ಥಲದ ಬಗ್ಗೆ ಇಲ್ಲಿಯವರೆಗೆ ಉಪದೇಶಿಸಿದ್ದೇ ಸಾಕಷ್ಟಾಗಿದೆ. ಇನ್ನು ಹೆಚ್ಚಿಗೆ ಹೇಳುವುದರಲ್ಲಿ ಫಲ ವೇನು? ಶ್ರೀಗುರು ಉಪದೇಶಿಸಿದ ಶಿವಜ್ಞಾನವೊಂದರಲ್ಲೇ ಶ್ರದ್ಧೆಯನ್ನಿಟ್ಟಿರುವುದೇ

ಶೀಲವು. ಆ ಶೀಲವುಳ್ಳವನೇ ಶೀಲವಂತ. ಈ ವಿಧವಾದ ಶೀಲದ ಬಗ್ಗೆ [1]ಶಿವ ಮಹಾ ಪುರಾಣ, [2]ಕೂರ್ಮಪುರಾಣ, [3]ವಾತುಲಾಗಮ ಮತ್ತು [4]ಲಿಂಗಪುರಾಣಾದಿಗಳ ಲ್ಲಿಯೂ ಸಹ ಪ್ರತಿಪಾದಿಸಿದ್ದನ್ನು ಕಾಣುತ್ತೇವೆ.

ಇಲ್ಲಿ ಉದಾಹರಿಸಲ್ಪಟ್ಟಿರುವ ಪುರಾಣ ಹಾಗೂ ಶಿವಾಗಮಗಳಲ್ಲಿಯ ಉಕ್ತಿಗಳು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಉಪದೇಶಿಸಲ್ಪಟ್ಟ ಶೀಲಸಂಪಾದನಸ್ಥಲದ ಶ್ಲೋಕಾರ್ಥ ವನ್ನೇ ದೃಢಪಡಿಸುವಂಥವುಗಳಾಗಿವೆ. ಹೀಗೆ ಈ ಸ್ಥಲದಲ್ಲಿ ಉಪದೇಶಿಸಿದ ಶೀಲದ ಪ್ರಕಾರ ಶರಣಸ್ಥಲದ ಸಾಧಕನು ಶಿವನು ತನಗೆ ರಕ್ಷಕನೇ ಹೊರತು ಮತ್ತೊಬ್ಬ ದೇವರಿಲ್ಲ ವೆಂದು ದೃಢವಾಗಿ ನಂಬಿ ಆತನಿಗೇನೇ ಮೊರೆಹೊಕ್ಕು ಅವನೇ ನನ್ನ ಪತಿಯು ನಾನು ಅವನ ಸತಿಯೆಂಬುದಾಗಿ ದೃಢ ಭಾವನೆಯನ್ನು ತಾಳಿ, ಶಿವನಲ್ಲಿಯೇ ಏಕ ನಿಷ್ಠಾರೂಪ ವಾದ ಶೀಲವನ್ನೇ ತನ್ನ ಅಲಂಕಾರವನ್ನಾಗಿರಿಸಿಕೊಂಡ ಈ ಶರಣನೇ ಮುಂದೆ ಐಕ್ಯಸ್ಥಲ ವನ್ನು ಪಡೆಯುವವನಾಗುವನು ಎಂಬುದನ್ನು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೪ ಎಪ್ರಿಲ್, ೧೯೯೨
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ ವಾರಾಣಸಿ.)

ಇಂತು ಶ್ರೀ ಸಿದ್ಧಾಂತ ಶಿಖಾಮಣಿಯ ಹದಿಮೂರನೆಯ ಪರಿಚ್ಛೇದವು ಪರಿ ಪೂರ್ಣವಾದುದು.

■■

---

೧. ವ್ರತಂ ಶಿವೈಕವಿಷಯಂ ನಿಯಮಶ್ಚ ಸನಾತನ : ।
ಶೀಲಮಿತ್ಯುಚ್ಯತೇ ಸದ್ಭಿಃ ಯೇನ ಶೀಲೀ ಭವೇತ್ ಪುಮಾನ್ ॥

೨. ಪರಸ್ಯ ಶಿವತತ್ತ್ವಸ್ಯ ಜಿಜ್ಞಾಸಾಮಧಿಕೃತ್ಯ ಯತ್ ।
ಈಕ್ಷಣಾಸು ಚ ವೈರಾಗ್ಯಂ ತಚ್ಛೀಲಂ ಪರಮಂ ಸ್ಮೃತಮ್ ॥

೩. ನಧ್ಯಾಯೇನ್ನಸ್ಮರೇದನ್ಯಂ ನ ಪಶ್ಯೇಚ್ಛೃಣುಯಾನ್ನ ಚ ।
ಯದ್‌ಗೃಹೇಽಪ್ಯನ್ಯದೇವೋಽಸ್ತಿ ತದ್ ಗೃಹಾಣಿ ಪರಿತ್ಯಜೇತ್ ॥
ಶಿವಾದನ್ಯಂ ನ ಸೇವೇಹಮಿತಿಯಚ್ಛಾಸ್ಥಯಾ ಸದಾ ।
ಶಿವಮೇವ ನಿಸೇವೇತ ತದೇತಚ್ಛೀಲಮುತ್ತಮಮ್ ॥
ವಿಶ್ವಮೇತದಶೇಷಂಚ ಶಿವಯಿತ್ಯವಧಾರಿತಾ ।
ಯಾ ಭಾತಿ ಸುದೃಢಾ ಬುದ್ಧಿಸ್ತದೇತಚ್ಛೀಲಮುತ್ತಮಮ್ ।

೪. ಶಿವ ಏವ ಸ್ವಯಂ ಜ್ಯೋತಿರ್ನಾನ್ಯತ್ ಕಿಂಚನ ವಿದ್ಯತೇ ।
ಇತಿಯಚ್ಚ ಸ್ಥಿರೀಭಾಸಸ್ತಚ್ಛೀಲಂ ಪರಮಂವಿದು : ॥

# ಚತುರ್ದಶ ಪರಿಚ್ಛೇದ

ಆಶೀರ್ವಚನ-೧

## ಐಕ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಷಟ್‌ಸ್ಥಲಗಳಲ್ಲಿ ಆರನೆಯದಾದ ಸ್ಥಲವೇ ಐಕ್ಯಸ್ಥಲವು. ಮಹರ್ಷಿಯಾದ ಅಗಸ್ತ್ಯನು ಶರಣಸ್ಥಲದ ಉಪದೇಶವನ್ನು ಆಲಿಸಿದ ನಂತರ ಆ ಶರಣನೇ ಅದು ಹೇಗೆ ತಾನೇ ಐಕ್ಯಸ್ಥಲಿಯಾಗುತ್ತಾನೆ ? ಎಂಬುದನ್ನು–

ತಾಮಸತ್ಯಾಗಸಂಬಂಧಾನ್ನಿರ್ದೇಶಾಚ್ಛೀಲತಸ್ತಥಾ ।
ಶರಣಾಖ್ಯಸ್ಯ ಭೂಯೋಽಸ್ಯ ಕಥಮೈಕ್ಯನಿರೂಪಣಮ್ ॥

(ಸಿ. ಶಿ. ೧೪–೧)

ಈ ರೀತಿಯಾಗಿ ಪ್ರಶ್ನಿಸುತ್ತಾನೆ. ತಾಮಸತ್ಯಾಗದಿಂದ ಮೊದಲುಗೊಂಡು ಶೀಲ ಸಂಪಾದನೆಯವರೆಗಿರುವ ಅಂತಃಕರಣದ ಯೋಗ್ಯತೆಯನ್ನು ಪಡೆದುಕೊಂಡ ಆ ಶರಣಸ್ಥಲದ ಸಾಧಕನು ಅದಾವ ಕಾರಣದಿಂದ ಐಕ್ಯನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ? ಎಂಬುದು ಅಗಸ್ತ್ಯನ ಪ್ರಶ್ನೆಯ ತಾತ್ಪರ್ಯವಾಗಿದೆ. ಅಗಸ್ತ್ಯನ ಈ ಪ್ರಶ್ನೆಗೆ ಉತ್ತರ ರೂಪವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಪ್ರಾಣಲಿಂಗಾದಿಯೋಗೇನ ಸುಖಾತಿಶಯಮೇಯಿವಾನ್ ।
ಶರಣಾಖ್ಯಃ ಶಿವೇನೈಕ್ಯಭಾವನಾದೈಕ್ಯವಾನ್ ಭವೇತ್ ॥

(ಸಿ. ಶಿ. ೧೪–೨)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ,ಶರಣಸ್ಥಲದ ಸಾಧಕನು ತನ್ನಂತರಂಗದಲ್ಲಿಯ ಪ್ರಾಣಲಿಂಗದ ಅನುಸಂಧಾನವನ್ನು ಸದಾಗೈಯುತ್ತಾನೆ. ಅದರಲ್ಲಿಯೇ ಅತಿಶಯ ಆನಂದವನ್ನನುಭವಿಸುತ್ತ ಆ ಜ್ಯೋತಿರ್ಲಿಂಗದೊಂದಿಗೆ ಯಾವಾಗ ಸಾಮರಸ್ಯವನ್ನು ಹೊಂದುವನೋ ಆಗ ಆತನಿಗೆ ಐಕ್ಯಸ್ಥಲಿ ಎಂಬುದಾಗಿ ಕರೆಯೋಣವಾಗುವುದು. 'ಏಕಸ್ಯಭಾವಃ ಐಕ್ಯಮ್' ಅಂದರೆ ಎಲ್ಲ ಭೇದಭಾವನೆಗಳನ್ನು ತೊರೆದು ಸಾಮರಸ್ಯ ಭಾವನೆಯನ್ನು ಅಳವಡಿಸಿಕೊಳ್ಳುವುದೇ ಐಕ್ಯಸ್ಥಿತಿಯು. ಭಗವಂತನೊಂದಿಗೆ ಐಕ್ಯಾನುಸಂಧಾನವನ್ನು ಏಕೆ ತಾನೇ ಮಾಡಬೇಕು ? ಆತನನ್ನು ಭಿನ್ನನಾಗಿಟ್ಟು ಪೂಜಿಸಿದರೆ ಸಾಲದೇ ? ಎಂಬ ಪ್ರಶ್ನೆಯು ಸರ್ವೇಸಾಮಾನ್ಯವಾಗಿ ಉದ್ಭವಿಸುವುದು ಸಹಜ. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು 'ಭುಕ್ತಿಸುಖವು ಸಂಸಾರದೊಳುಂಟು ಮುಕ್ತಿಯನರಸಲದರೊಳೇನುಂಟು' ? ಎಂಬುದಾಗಿ ಸಾಮಾನ್ಯ ಜನರ ಅಭಿಪ್ರಾಯವನ್ನೇ ಈ ರೀತಿಯಾಗಿ ವ್ಯಕ್ತಪಡಿಸಿದ್ದಾರೆ. ಈಶ್ವರನನ್ನು ಭಿನ್ನನನ್ನಾಗಿ

ಭಾವಿಸಿ ಆತನನ್ನು ಅನನ್ಯಭಕ್ತಿಯಿಂದ ಆರಾಧಿಸಿ ಅನಂತಭೋಗಭಾಗ್ಯಗಳನ್ನು ಪಡೆಯಬಹುದೇನೋ ನಿಜ. ಆದರೆ ಆ ಕ್ಷಣಿಕವಾದ ಐಶ್ವರ್ಯಸುಖದಿಂದ ಪರಮ ಸುಖವು ಲಭಿಸಲಾರದು. ಈಶ್ವರನ ಜೊತೆಗೆ ಐಕ್ಯರೂಪವಾದ ಸಾಮರಸ್ಯ ಸಂಪತ್ತನ್ನು ಸಂಪಾದಿಸಿದವನು ಶಾಶ್ವತವಾದ ಶಾಂತಿಯನ್ನು ಪಡೆಯುವನು. ಆದ್ದರಿಂದ ಈಶ್ವರನನ್ನು ಭಿನ್ನನನ್ನಾಗಿ ಭಾವಿಸಿ ಆರಾಧಿಸುವುದಕ್ಕಿಂತಲೂ ಸಮರಸಭಾವದಿಂದ ಐಕ್ಯವನ್ನು ಸಂಪಾದಿಸುವುದೇ ಜೀವನದ ಪರಮಗುರಿಯಾಗಿರೋಣದರಿಂದ ಪೂಜ್ಯ ಪಾದರು ಐಕ್ಯಸ್ಥಲದ ನಿರೂಪಣೆಯನ್ನು ಪ್ರಾರಂಭಿಸಿದ್ದಾರೆ.

ಪ್ರತಿಯೊಬ್ಬ ಜೀವಿಯು ತನ್ನ ಜೀವನದಲ್ಲಿ ತನ್ನಿಂದ ಅಗಲಿಹೋಗುವ ನಾನಾ ವಿಧ ಸಂಪತ್ತನ್ನು ಅನೇಕಸಾರೆ ಸಂಪಾದಿಸುತ್ತಾನೆ ಹಾಗೂ ಅವುಗಳನ್ನು ಕಳೆದೂ ಕೊಳ್ಳುತ್ತಾನೆ. ಹೀಗೆ ಅದೆಷ್ಟೋ ಸಾರೆ ನಡೆದುಕೊಂಡು ಬಂದುದಾಗಿದೆ. ಆದರೆ ಈಗ ಇಂತಹ ಸಂಪತ್ತನ್ನು ಸಂಪಾದಿಸಬೇಕಾಗಿದೆ. ಒಮ್ಮೆ ಅದರ ಪ್ರಾಪ್ತಿಯಾದನಂತರ ಅದೆಂದೂ ನಮ್ಮನ್ನು ಅಗಲಿರಬಾರದು. ಹೀಗೆ ಅಗಲಲಾರದ ಸಂಪತ್ತೆಂದರೆ ಸಮರಸ ಸಂಪತ್ತೇ ಆಗಿದೆ. ಇದಕ್ಕೇನೆ ಐಕ್ಯ ಸಂಪತ್ತೆಂದೂ ಕರೆಯುವರು. ಈಶ್ವರನಿಂದ ಭಿನ್ನರಾದ ಜೀವಿಗಳಿಗೆ ಪದೇ ಪದೇ ಮೃತ್ಯುವಿನ ಭಯವಿರುತ್ತದೆ. ಆದರೆ ಈಶ್ವರನೊಂದಿಗೆ ಸಾಮರಸ್ಯವನ್ನು ಸಂಪಾದಿಸಿದ ಐಕ್ಯಸ್ಥಲದ ಸಾಧಕನು ಮೃತ್ಯುಭಯದಿಂದ ಪಾರಾಗಿ ಅಮೃತತ್ತ್ವ ಸ್ಥಿತಿಯಲ್ಲಿ ವಿರಾಜಮಾನನಾಗುತ್ತಾನೆ. ಜೀವ ಜೀವಿಗಳ ಸಾಮರಸ್ಯಕ್ಕಿಂತಲೂ ಜೀವ–ಶಿವರ ಸಾಮರಸ್ಯವು ಚಿರಸ್ಥಾಯಿಯಾದುದು. ಲೌಕಿಕ ಜೀವನದಲ್ಲಿ ಜೀವ–ಜೀವರ ಸಾಮರಸ್ಯವನ್ನು ಸಾಧಿಸುವುದಕ್ಕಾಗಿಯೇ 'ವಿವಾಹ' ಎನ್ನುವ ಸಂಸ್ಕಾರವನ್ನು ಸಮಾಜವು ರೂಢಿಸಿಕೊಂಡು ಬಂದಿದೆ. ಈ ಸಂಸ್ಕಾರದಿಂದ ಎಲ್ಲಿಯೋ ಜನಿಸಿದ ಎರಡು ಜೀವಿಗಳು ಅತ್ಯಂತ ನಿಕಟವರ್ತಿಗಳಾಗಿ ಸಾಮರಸ್ಯಮಯ ಜೀವನವನ್ನು ಸಾಗಿಸಲು ಪ್ರಯತ್ನಿಸುತ್ತವೆ. ಆದರೂ ಕೆಲವರೇ ಮಾತ್ರ ಕೊನೆಯವರೆಗೆ ಸಾಮರಸ್ಯದಿಂದಿರುವರು. ಆದರೆ ಅತ್ಯಧಿಕ ಸಂಖ್ಯೆಯಲ್ಲಿ ವಿರಸತೆಯನ್ನೇ ಕಾಣುವ ಪ್ರಸಂಗಗಳು ಬಂದೊದಗುತ್ತವೆ. ಇದಕ್ಕೆ ಕಾರಣವೇನೆಂದರೆ, ಎರಡು ಜೀವಿಗಳಲ್ಲಿ ಪರಸ್ಪರ ಸ್ವಾರ್ಥಭಾವನೆ ಇರುವುದ ರಿಂದ ತನ್ನ ಸ್ವಾರ್ಥಕ್ಕೆ ಧಕ್ಕೆಯುಂಟಾಗುವ ಪ್ರಸಂಗ ಬಂದಾಗ ಜೀವ–ಜೀವಿಗಳ ಸಾಮರಸ್ಯವು ಕೆಟ್ಟು ಅವರೀರ್ವರಲ್ಲಿ ವಿರಸತೆ ಉಂಟಾಗುವುದು. ಶಿವನು ಸಂಪೂರ್ಣ ನಿಸ್ವಾರ್ಥಿಯಾಗಿರೋಣದರಿಂದ ತನ್ನೊಂದಿಗೆ ಸಮರಸನಾಗಬಂದ ಜೀವಿಯನ್ನು ತನ್ನಂತೇನೇ ಮಾಡಿಕೊಳ್ಳೋಣದರಿಂದ ಇಲ್ಲಿಯ ಸಾಮರಸ್ಯಕ್ಕೆ ಅದಾವ ತೊಂದರೆಯೂ ಉಂಟಾಗಲಾರದು. 'ಬ್ರಹ್ಮವಿದ್ ಬ್ರಹ್ಮೈವಭವತಿ' ಎಂಬ ಪ್ರಮಾಣವಾಕ್ಯಕ್ಕನು ಸಾರವಾಗಿ ಶಿವನೊಂದಿಗೆ ಸಮರಸವಾಗ ಹೋದ ಜೀವನು ಪರಮಸಾಮರಸ್ಯ ರೂಪವಾದ ಶಿವಸ್ವರೂಪನೇ ಆಗುತ್ತಾನೆ. ಸರ್ವನದಿಗಳು ತಮ್ಮ ನಾಮರೂಪಗಳನ್ನು ಕಳೆದುಕೊಂಡು ಸಮುದ್ರದಲ್ಲಿ ಸಮರಸವಾಗುವಂತೆ, ಶಿವನೊಂದಿಗೆ ಐಕ್ಯಾನುಸಂಧಾನ ಮಾಡುವ ಸರ್ವಜೀವಿಗಳು ತಮ್ಮ ನಾಮರೂಪಗಳನ್ನು ಕಳೆದುಕೊಂಡು ಶಿವಸಾಮರಸ್ಯ ರೂಪವಾದ ಐಕ್ಯಸ್ಥಿತಿಯನ್ನು ಹೊಂದುತ್ತವೆ.

ಶ್ರೀ ಸಿದ್ಧಾಂತ ಶಿಖಾಮಣಿಯ ಈ ಐಕ್ಯಸ್ಥಲವು ನಾಲ್ಕು ಅವಾಂತರಸ್ಥಲಗಳಿಂದ ಕೂಡಿದುದಾಗಿದೆ. ಅದನ್ನೇ ಪೂಜ್ಯರು–

ಐಕ್ಯಸ್ಥಲಮಿದಂ ಪ್ರೋಕ್ತಂ ಚತುರ್ಧಾ ಮುನಿಪುಂಗವ ।
ಐಕ್ಯಮಾಚಾರಸಂಪತ್ತಿರೇಕಭಾಜನಮೇವ ಚ ॥
ಸಹಭೋಜನಮಿತ್ಯೇಷಾಂ ಕ್ರಮಾಲ್ಲಕ್ಷಣಮುಚ್ಯತೇ (ಸಿ. ಶಿ. ೧೪–೩)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಇಲ್ಲಿ ಬರುವ ಅವಾಂತರ ಸ್ಥಲಗಳೆಂದರೆ ಐಕ್ಯಸ್ಥಲ, ಆಚಾರಸಂಪತ್ತಿಸ್ಥಲ, ಏಕಭಾಜನಸ್ಥಲ ಮತ್ತು ಸಹಭೋಜನಸ್ಥಲಗಳಾಗಿವೆ. ಇನ್ನು ಇವುಗಳ ಕ್ರಮವಾದ ಲಕ್ಷಣ ಹಾಗೂ ಸ್ವರೂಪಗಳನ್ನು ಪೂಜ್ಯಪಾದರು–

ವಿಷಯಾನಂದಕಣಿಕಾನಿಸ್ಪೃಹೋ ನಿರ್ಮಲಾಶಯಃ ।
ಶಿವಾನಂದಮಹಾಸಿಂಧುಮಜ್ಜನಾದ್ಯೈಕ್ಯಮುಚ್ಯತೇ ॥ (ಸಿ. ಶಿ. ೧೪–೪)

ಈ ವಿಧವಾಗಿ ವಿವರಿಸಿದ್ದಾರೆ. ಐಕ್ಯಸ್ಥಲವನ್ನು ಹೊಂದಬೇಕಾದರೆ ಅವಶ್ಯವಿರುವ ಕೆಲವೊಂದು ವಿಶಿಷ್ಟ ಯೋಗ್ಯತೆಗಳನ್ನು ಇಲ್ಲಿ ವಿವರಿಸಲಾಗಿದೆ. ಅವುಗಳಲ್ಲಿ ಕ್ಷಣಿಕಗಳಾದ ವೈಷಯಿಕ ಸುಖದ ನಿಸ್ಪೃಹತೆಯೇ ಮೊದಲನೆಯದಾಗಿದೆ. ಅಂತೆಯೇ ಪೂಜ್ಯರು 'ವಿಷಯಾನಂದಕಣಿಕಾನಿಸ್ಪೃಹಃ' ಎಂಬುದಾಗಿ ಬೋಧಿಸಿದ್ದಾರೆ. ಶಬ್ದ–ಸ್ಪರ್ಶಾದಿ ಪಂಚವಿಷಯಗಳಿಂದ ಪ್ರತಿಯೊಬ್ಬ ಜೀವಿಗೆ ಸಿಗುವ ಸುಖವು ಅತ್ಯಲ್ಪವೂ ಅಲ್ಪ ಕಾಲಿಕವೂ ಆಗಿರುತ್ತದೆ. ಅಲ್ಪಸುಖವನ್ನು ಕೊಡುವುದರ ಜೊತೆಗೆ ಅನಂತಕಾಲದವರೆಗೆ ಅನಂತ ದುಃಖವನ್ನೂ ಸಹ ಇವು ಉಂಟುಮಾಡುತ್ತವೆ. ಅಂತೆಯೇ ನಿಜಗುಣ ಶಿವಯೋಗಿಗಳು– 'ಬೇಡ ಬೇಡ ಭೋಗದೊಡನಾಟ ನಂಜುವೆರಿಸಿದ ಸವಿಯೂಟ' ಎಂಬುದಾಗಿ ಉಪದೇಶಿಸಿ ವಿಷಯಗಳೆಂದರೆ ವಿಷಮಿಶ್ರಿತ ಪಕ್ವಾನ್ನಗಳೆಂಬುದಾಗಿ ತಿಳಿಹೇಳಿದ್ದಾರೆ. ಅಂತಹ ಪಕ್ವಾನ್ನವನ್ನು ಸೇವಿಸುವಾಗ ನಾಲಿಗೆಗೆ ಮಾಧುರ್ಯದ ಆಸ್ವಾದನೆಯಾದರೂ ಅದರ ಜೊತೆಗೆ ಉದರವನ್ನು ಸೇರಿದ ವಿಷವು ಪ್ರಾಣಹರಣ ವನ್ನು ಮಾಡದೆ ಬಿಡಲಾರದು. ಅದರಂತೆ ವಿಷಯಗಳು ಅಲ್ಪಸುಖದಾಯಕಗಳಾಗಿ ದ್ದರೂ ಅನಂತದುಃಖವನ್ನೇ ಕೊಡುವಂಥವುಗಳಾದ್ದರಿಂದ ಐಕ್ಯಸ್ಥಲದ ಸಾಧಕನು ಈ ವಿಷಯಾನಂದದಿಂದ ನಿಸ್ಪೃಹನಾಗಿರುತ್ತಾನೆ.

ಅನಂತ ಜನ್ಮಗಳಲ್ಲಿ ವಿಷಯ ಸುಖವನ್ನೇ ಅನುಭವಿಸಿದ ಮನಸ್ಸಿಗೆ ಅದುವೇ ಪ್ರಿಯವಾಗಿ ತೋರೋಣದರಿಂದ ಮನಸ್ಸು ಆ ಕಡೆಗೇನೇ ಹರಿಯುವುದು ಸ್ವಾಭಾವಿಕ ವಾದುದು. ಆದರೂ ವಿವೇಕಿಯಾದವನು ವಿಚಾರಪೂರ್ವಕವಾಗಿ ಅದನ್ನು ಆ ಮಾರ್ಗದಿಂದ ನಿವೃತ್ತಿಗೊಳಿಸಿಕೊಳ್ಳಬೇಕು. ಅಂತೇನೇ ಷಣ್ಮುಖ ಶಿವಯೋಗಿಗಳು–

ಮನವೆಂಬ ಮರ್ಕಟವು ತನುವೆಂಬ ವೃಕ್ಷವನೇರಿ
ಇಂದ್ರಿಯಂಗಳೆಂಬ ಶಾಖೆ ಶಾಖೆಗೆ ಹಾರಿ
ವಿಷಯಂಗಳೆಂಬ ಹಣ್ಣುಫಲಂಗಳ ಗ್ರಹಿಸಿ
ಭವದತ್ತ ಮುಖವಾಗಿ ಹೋಗುತಿದೆ ನೋಡಾ

ಈ ಮನವೆಂಬ ಮರ್ಕಟನ ನಿಮ್ಮ ನೆನಹೆಂಬ
ಪಾಶದಲ್ಲಿ ಕಟ್ಟಿ ಎನ್ನನುಳುಹಿಕೊಳ್ಳಯ್ಯ ಅಖಂಡೇಶ್ವರಾ.

ತಮ್ಮ ಈ ಅನುಭವಪೂರ್ಣ ವಚನದಲ್ಲಿ ಮನಸ್ಸಿನ ಮಂಗತನವನ್ನು ವಿವರಿಸಿ ಅದು ಆ ವಿಷಯಚಿಂತನೆಯನ್ನು ಬಿಡಬೇಕಾದರೆ ಪರಮಾತ್ಮನ ಚಿಂತನೆಯೇ ಅಮೋಘವಾದ ಸಾಧನವೆಂಬುದನ್ನು ವಿವರಿಸಿದ್ದಾರೆ. ಐಕ್ಯಸ್ಥಲದ ಸಾಧಕನ ಮನಸ್ಸು ಸದಾ ಲಿಂಗಾಂಗ ಸಾಮರಸ್ಯ ವಿದ್ಯೆಯಲ್ಲಿ ರಮಮಾಣವಾಗಿರೋಣದರಿಂದ ಅದು ಸಹಜವಾಗಿಯೇ ವಿಷಯಾನಂದದಿಂದ ವಿಮುಖವಾಗಿರುತ್ತದೆ.

ಅಜ್ಞ ಜೀವಿಗಳಿಗೆ ವಿಷಯಗಳಲ್ಲಿ ತೋರುವ ಆನಂದಲೇಶವಾದರೂ ವಿಷಯ ಗಳದ್ದಾಗಿರದೆ ಆತ್ಮಸ್ವರೂಪದ್ದೇ ಆಗಿದೆ. ಆತ್ಮದ ಆನಂದಲೇಶವನ್ನು ಪಡೆದು ವಿಷಯಗಳು ಆನಂದರೂಪವಾಗಿ ತೋರುತ್ತವೆ. ಅಂತೆಯೇ–'ಯತ್ಸುಖೇ ನಾನು ಮೋದತೇ......' ಎಂಬ ವಚನದಲ್ಲಿ ರೇಣುಕ ಭಗವತ್ಪಾದರು ಪರಮಾತ್ಮನ ಆನಂದವನ್ನು ಪಡೆದೇ ಪ್ರಪಂಚವು ಆನಂದರೂಪವಾಗಿ ತೋರುವುದನ್ನು ಸೂಚ್ಯವಾಗಿ ತಿಳಿಯಪಡಿಸಿದ್ದಾರೆ. ಮನೆಯಲ್ಲಿ ಮಧುರಗಳಾದ ಖಾದ್ಯಪದಾರ್ಥಗಳನ್ನು ನಿರ್ಮಿಸುವು ದನ್ನು ಕಾಣುತ್ತೇವೆ. ಸ್ವತಃ ಮಾಧುರ್ಯಗುಣವಿಲ್ಲದ ಕಡಲೆಹಿಟ್ಟು, ಗೋದಿಯ ರವೆ ಮುಂತಾದ ಪದಾರ್ಥಗಳಿಗೆ ಮಾಧುರ್ಯಪೂರ್ಣವಾದ ಬೆಲ್ಲ ಇಲ್ಲವೆ ಸಕ್ಕರೆ ಮಿಶ್ರಣ ಮಾಡಿದಾಗ ಬೇಸನ್ ಹಾಗೂ ರವೆಯ ಉಂಡೆಗಳು ಸ್ವಾದಭರಿತಗಳಾಗುವುದನ್ನು ಪ್ರತಿಯೊಬ್ಬರೂ ಅನುಭವಿಸುತ್ತಾರೆ. ಆ ಉಂಡೆಗಳಲ್ಲಿಯ ಮಾಧುರ್ಯವು ಬೆಲ್ಲ–ಸಕ್ಕರೆಗಳದೇ ವಿನಃ ರವೆ–ಕಡ್ಲೆಹಿಟ್ಟುಗಳದಲ್ಲ. ಅದರಂತೆ ವಿಷಯಗಳಲ್ಲಿ ತೋರುವ ಆನಂದವು ಆತ್ಮ–ಪರಮಾತ್ಮರದ್ದೇ ವಿನಃ ವಿಷಯಗಳದ್ದಲ್ಲವೆಂಬುದನ್ನು ಪ್ರತಿ ಯೊಬ್ಬರೂ ತಿಳಿದುಕೊಳ್ಳಬೇಕು.

ನಾವು ಅನುಭವಿಸುತ್ತಿರುವ ವಿಷಯಗಳು ಸದಾ ನಮಗೆ ಸುಖವನ್ನೇ ಕೊಡಲಾರವು. ಅವು ಅನುಕೂಲವಾಗಿ ತೋರಿದಾಗ ಸುಖಗಳಾಗಿ ಪರಿಣಮಿಸುತ್ತವೆ. ಅವೇ ವಿಷಯಗಳು ನಮಗೆ ಪ್ರತಿಕೂಲಗಳಾದಾಗ ದುಃಖದಾಯಕಗಳಾಗುತ್ತವೆ. ಅಂತೇನೇ ಶಾಸ್ತ್ರಕಾರರು ''ಅನುಕೂಲವೇದನೀಯಂ ಸುಖಂ ಪ್ರತಿಕೂಲವೇದನೀಯಂ ದುಃಖಮ್'' ಎಂಬುದಾಗಿ ಸುಖದುಃಖಗಳ ವ್ಯಾಖ್ಯಾನ ಮಾಡಿದ್ದಾರೆ. ವಿಷಯಗಳು ಪ್ರಾರಂಭದಲ್ಲಿ ಅನುಕೂಲವಾಗಿ ತೋರಿ ಕೊನೆಗೊಮ್ಮೆ ಪ್ರತಿಕೂಲಗಳಾಗುವುದು ಖಚಿತ. ಅಂತೆಯೇ ನಿಜಗುಣ ಶಿವಯೋಗಿಗಳು–

ಪಡೆವೆಡೆಯೊಳು ಮೊದಲತ್ಯಾಯಾಸ ।
ನಡುವಿರುತಿಹುದಲೆ ಸುಖದಾಭಾಸ ॥
ಕಡೆಯೊಳು ಹೇಸಿಗೆಮುಸುಕುತ್ತಿಹುದು ।
ಸಿಡಿಮಿಡಿಯಾಗಳೆ ಮನಸ್ಸಿಂಗಹುದು ॥

ಈ ತೆರನಾಗಿ ವಿಷಯದಲ್ಲಿಯ ಅನುಕೂಲ–ಪ್ರತಿಕೂಲತೆಗಳನ್ನು ವಿವರಿಸಿ ವಿಷಯಸುಖದ ಕ್ಷಣಿಕತೆಯನ್ನು ಬಹುಮಾರ್ಮಿಕವಾಗಿ ವಿವರಿಸಿದ್ದಾರೆ. ಸಾಂಸಾರಿಕ

ವಿಷಯಗಳು ಒಮ್ಮೆ ಅನುಕೂಲವಾಗಿ ಮತ್ತೊಮ್ಮೆ ಪ್ರತಿಕೂಲವಾಗಿ ತೋರುವವು. ಆದರೆ ಪರಮಾತ್ಮನು ಅದೆಂದೂ ಪ್ರತಿಕೂಲವಾಗಿ ತೋರಲಾರನು. ಇಂತಹ ಸದಾ ಅನುಕೂಲನೇ ಆಗಿರುವ ಪರಮಾತ್ಮನೊಂದಿಗೆ ಸಾಮರಸ್ಯರೂಪವಾದ ಐಕ್ಯಸ್ಥಿತಿಯನ್ನು ಪಡೆಯಬೇಕಾದರೆ ಅನುಕೂಲ–ಪ್ರತಿಕೂಲಾತ್ಮಕವಾದ ವಿಷಯಾನಂದದಲ್ಲಿ ನಿಸ್ಪೃಹನಾಗಲೇಬೇಕಾಗುವುದು. ಯಾವಾತನು ವಿಷಯಸುಖದ ತ್ಯಾಗವನ್ನು ಮಾಡುವನೋ ಅವನಿಗೇನೇ ಪಾರಮಾರ್ಥಿಕ ಸುಖವು ಪ್ರಾಪ್ತವಾಗುವುದು. ಸತ್ಸಂಗದಲ್ಲಿ ಭಾಗಿಯಾಗಲು ಜನರು ತಮ್ಮ ತಮ್ಮ ಮನೆಗಳನ್ನು ತೊರೆದು ಶಿವಾನುಭವ ಭವನಗಳಿಗೆ ತೆರಳುತ್ತಾರೆ. ಒಂದು ತಾಸಿನವರೆಗೆ ಭೋಗಭೂಮಿಯಾದ ತಮ್ಮ ಮನೆಯನ್ನು ಬಿಟ್ಟು ಈ ಶಿವಾನುಭವದಲ್ಲಿ ಪಾಲ್ಗೊಂಡಾಗ ಶಿವಾನುಭೂತಿಯಾಗುವುದು ಸರ್ವರಿಗೂ ಅನುಭವವೇದ್ಯವೇ ಸರಿ.

ಮನೆಯನ್ನು ತ್ಯಾಗಮಾಡದೇ ಸತ್ಸಂಗದ ಶಿವಾನುಭೂತಿಯಾನಂದವು ತೋರದಿರುವಂತೆ, ಶಬ್ದಾದಿವಿಷಯಗಳಿಂದ ವಿಮುಖನಾಗದೆ ಐಕ್ಯಾನುಭೂತಿಯು ಪ್ರಾಪ್ತವಾಗಲಾರದು. ತ್ಯಾಗದಲ್ಲಿ ಅಪಾರವಾದ ಸಾಮರ್ಥ್ಯವಿರುತ್ತದೆ. ಅಂತೆಯೇ 'ತ್ಯಾಗೇನೈಕೇ ಅಮೃತತ್ವಮಾನಶುಃ' ಎಂಬುದಾಗಿ ಉಪನಿಷತ್ತು ತ್ಯಾಗವನ್ನು, ಅಮೃತತ್ವದ ಸಾಧನವನ್ನಾಗಿ ವಿವರಿಸಿದೆ. ಆದ್ದರಿಂದ ಕ್ಷಣಿಕ ಸುಖದಾಯಕಗಳಾದ ವಿಷಯಗಳನ್ನು ಅವಶ್ಯವಾಗಿ ತ್ಯಜಿಸಲೇಬೇಕಾಗುತ್ತದೆ. ಹೀಗೆ ವಿಷಯವಾಸನೆಯಿಂದ ನಿರ್ಮುಕ್ತನಾದವನು ನಿರ್ಮಲಾಶಯನಾಗುತ್ತಾನೆ. ಅಂದರೆ ಪರಿಶುದ್ಧ ಅಂತಃಕರಣವುಳ್ಳವನಾಗುತ್ತಾನೆ. ವಿಷಯಾಭಿಲಾಷೆಯಿಂದ ಮುಕ್ತವಾದ ಅಂತೆಯೇ ಪರಿಶುದ್ಧವಾದ ಚಿತ್ತವೂ ಶಿವಾನಂದವೆಂಬ ಮಹಾಸಿಂಧುವಿನಲ್ಲಿ ನಿಮಗ್ನವಾಗುತ್ತದೆ. ಚಿತ್ತವು ಬಹಿರ್ಮುಖವಾದಾಗ ಸಂಸಾರ, ಅದೇ ಅಂತರ್ಮುಖವಾದಾಗ ಆತ್ಮಾನುಭವ. ಈ ತೆರನಾಗಿ ಐಕ್ಯಸ್ಥಲದ ಸಾಧಕನು ವಿಷಯಾನಂದದ ಕ್ಷಣಿಕತೆಯನ್ನರಿತು ಅದರ ಆಶೆಯನ್ನು ತೊರೆದು ಸುನಿರ್ಮಲವಾದ ಅಂತಃಕರಣವುಳ್ಳವನಾಗಿ ಶಿವ ಸಾಮರಸ್ಯಾತ್ಮಕವಾದ ಮಹಾಸಿಂಧುವಿನಲ್ಲಿ ನಿಮಗ್ನನಾಗುತ್ತಾನೆ. ಈ ಸ್ಥಿತಿಗೇನೇ ಐಕ್ಯಸ್ಥಿತಿಯೆಂಬುದಾಗಿ ಕರೆಯುತ್ತಾರೆ. ಈ ಐಕ್ಯಸ್ಥಲದ ಮುಂದಿನ ವಿಷಯವನ್ನು ನಾಳೆಗೆ ವಿವರಿಸೋಣ ವೆಂಬುದಾಗಿ ಆಶೀರ್ವದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೨

# ಐಕ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯ ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವಾದ ಶ್ರೀ ಸಿದ್ಧಾಂತ ಶಿಖಾಮಣಿಯ ಐಕ್ಯಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನವನ್ನಾಲಿಸಿದ್ದೀರಿ. ಈ ಸ್ಥಲದಲ್ಲಿ ಐಕ್ಯಸ್ಥಿತಿಯನ್ನು ತಲುಪಿದ ಶಿವಯೋಗಿಯ ಬಗ್ಗೆ ವಿವರಿಸುತ್ತ ಪೂಜ್ಯಪಾದರು ಪುನಃ–

ನಿರ್ಧೂತ ಮಲಸಂಬಂಧೋ ನಿಷ್ಕಲಂಕಮನೋಗತಃ ।
ಶಿವೋಽಹಮಿತಿ ಭಾವೇನ ನಿರೂಢೋ ಹಿ ಶಿವೈಕ್ಯತಾಮ್ ॥

ಶಿವೇನೈಕ್ಯಂ ಸಮಾಪನ್ನಶ್ಚಿದಾನಂದಸ್ವರೂಪಿಣಾ ।
ನ ಪಶ್ಯತಿ ಜಗಜ್ಜಾಲಂ ಮಾಯಾಕಲ್ಪಿತವೈಭವಮ್ ॥

(ಸಿ. ಶಿ. ೧೪ ; ೫–೬)

ಈ ತೆರನಾಗಿ ವಿವರಿಸಿದ್ದಾರೆ. ಅಂತಃಕರಣದಲ್ಲಿಯ ತ್ರಿವಿಧ ಮಲಸಂಬಂಧಗಳನ್ನು ಸಂಪೂರ್ಣ ದೂರಮಾಡಿಕೊಂಡಿರುವ, ಅಂತೆಯೇ ನಿಷ್ಕಲಂಕವಾದ ಮನಸ್ಸುಳ್ಳ ಶಿವಯೋಗಿಯು ಯಾವಾಗ 'ಶಿವೋಽಹಂ' ಭಾವನೆಯಿಂದೊಡಗೂಡುತ್ತಾನೆಯೋ ಆಗ ಆತನು ಶಿವೈಕ್ಯನೆಂದು ಕರೆಯಿಸಿಕೊಳ್ಳುತ್ತಾನೆ. ಹೀಗೆ ಸಚ್ಚಿದಾನಂದ ರೂಪಿಯಾದ ಶಿವನೊಂದಿಗೆ ಸಾಮರಸ್ಯಾತ್ಮಕವಾದ ಐಕ್ಯಸ್ಥಿತಿಯನ್ನು ಪಡೆದುಕೊಂಡ ಶಿವಯೋಗಿಯು ಶಿವದೃಷ್ಟಿಯನ್ನೇ ಪಡೆದುಕೊಂಡಿರೋಣದರಿಂದ ಈ ಮಾಯಾಕಲ್ಪಿತವಾದ ಜಗತ್ತನ್ನು ಕಾಣದೆ ಸರ್ವತ್ರ ಶಿವಸ್ವರೂಪವನ್ನೇ ಕಾಣುತ್ತಿರುತ್ತಾನೆ. ಇಂತಹ ಸ್ಥಿತಿಯೇ ಐಕ್ಯಸ್ಥಿತಿಯು.

ಮನುಷ್ಯನ ಸದ್ಗತಿ–ದುರ್ಗತಿಗಳಿಗೆ ಅವರವರ ಭಾವನೆಗಳೇ ಕಾರಣಗಳಾಗುವವು. ಸಾಂಸಾರಿಕ ಭಾವನೆಗಳಿಂದ ಜೀವನು ಸಂಸಾರದಲ್ಲಿ ಸಿಲುಕಿ ಕೊಂಡರೆ, ಅದೇ ಶಿವೋಽಹಂ ಭಾವನೆಯಿಂದ ಅವನು ಸಂಸಾರದಿಂದ ವಿಮುಕ್ತನಾಗಿ ಶಿವಸಾಯುಜ್ಯವನ್ನು ಪಡೆಯುವನು. ಸಾಮಾನ್ಯವಾದ ಜೀವಿಯು ಆಣವಾದಿ ಮಲತ್ರಯಗಳಿಂದ ಆವೃತನಾಗಿರೋಣದರಿಂದ ಆತನ ಪ್ರವೃತ್ತಿಯು ಸಂಸಾರದ ಕಡೆಗೇನೇ ಅಭಿಮುಖವಾಗಿರುತ್ತದೆ. ತನ್ನ ವ್ಯಾಪಕ ಸ್ವರೂಪವನ್ನು ಮರೆಯಿಸಿ ತನ್ನಲ್ಲಿ ಅಣುಭಾವವನ್ನು ಉಂಟುಮಾಡುವ ಮಲವೇ ಆಣವ ಮಲವು. ಈ ಮಲದ ಆವರಣದಿಂದಾಗಿ ಜೀವಾತ್ಮನು ಅಣುಭಾವವನ್ನು ಪಡೆದವನಾಗಿರುತ್ತಾನೆ. ಗುರೂಪ ದೇಶ ಹಾಗೂ ಶಾಸ್ತ್ರಾಭ್ಯಾಸದ ಮುಖಾಂತರವಾಗಿ ಯಾವಾಗ ಈತನು 'ಶಿವೋಽಹಂ' ಎಂಬುದಾಗಿ

ಚಿಂತನೆಯನ್ನು ಪ್ರಾರಂಭಿಸುತ್ತಾನೆಯೋ ಆಗ ಇವನಲ್ಲಿಯ ಆಣವ ಮಲವು ನಿವೃತ್ತವಾಗಿ 'ಶಿವೋಽಹಂ' ಭಾವನೆಯು ಬಲಗೊಳ್ಳುವುದು. ಈ ಭಾವನೆಯುಳ್ಳ ಸಾಧಕನು ನಿಷ್ಕಲಂಕನೆಂದು ಕರೆಯಲ್ಪಡುತ್ತಾನೆ. ಮನಸ್ಸಿನಲ್ಲಿರುವ ರಾಗದ್ವೇಷಾದಿ ಪಂಚಕ್ಲೇಶಗಳು ಮತ್ತು ಕಾಮಕ್ರೋಧಾದಿ ಅರಿಷಡ್ವರ್ಗಗಳು ಮನಸ್ಸಿನಲ್ಲಿರುವ ಕಲಂಕಗಳೆಂದು ಕರೆಯಲ್ಪಟ್ಟಿವೆ. 'ಶಿವೋಽಹಂ' ಭಾವನೆಯುಳ್ಳವನಿಗೆ ಇವಾವ ಕಲಂಕಗಳು ಇರುವುದಿಲ್ಲ. ಅಂತೆಯೇ ಅವನನ್ನು ಪೂಜ್ಯರು 'ನಿಷ್ಕಲಂಕಮನೋಗತಃ' ಎಂಬುದಾಗಿ ಕರೆದಿದ್ದಾರೆ.

ಮನುಷ್ಯನು ಯಾವುದರ ಜೊತೆಗೆ ತಾದಾತ್ಮ್ಯಚಿಂತನೆಯನ್ನು ಮಾಡುವನೋ ಅವನು ಅದರ ಸ್ವರೂಪವನ್ನೇ ತಾಳುತ್ತಾನೆ. ಒಂದು ಕೀಟವು ನಿರಂತರವಾದ ಭ್ರಮರಧ್ಯಾನದಿಂದ ತಾನು ಭ್ರಮರವೇ ಆಗುವಂತೆ, ಶರಣಸ್ಥಲದ ಸಾಧಕನೂ ಸಹ ಅಖಂಡವಾದ 'ಶಿವೋಽಹಂ' ಭಾವನೆಯಿಂದ ಶಿವನೊಂದಿಗೆ ಸಮರಸನಾಗಿ ಐಕ್ಯನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಜಗತ್ತಿನಲ್ಲಿ ಸಾಮಾನ್ಯ ಜೀವಿಗಳೊಂದಿಗೆ ತಾದಾತ್ಮ್ಯವನ್ನು ಹೊಂದಿದ ಅನೇಕ ಜೀವಿಗಳು ಅಂತತಃ ಅನಂತ ದುಃಖವನ್ನೇ ಹೊಂದುತ್ತಾರೆ. ಆದರೆ ಪರಮಾತ್ಮನು ಪರಮಾನಂದಸಾಗರನಾಗಿರೋಣದರಿಂದ ಆತನೊಂದಿಗೆ ತಾದಾತ್ಮ್ಯವನ್ನು ಪಡೆದವರ್ಯಾರೂ ದುಃಖಿಗಳಾಗದೆ ಪರಮಾನಂದ ಸ್ವರೂಪರೇ ಆಗಿದ್ದಾರೆ. ಹೀಗೆ ಪರಶಿವನ ಪರಮಾನಂದದಲ್ಲಿ ನಿಮಗ್ನರಾದವರು ಸರ್ವತ್ರ ಆ ಪರಶಿವನನ್ನೇ ಕಾಣುವರೇ ವಿನಃ ಈ ಜಗಜ್ಜಾಲವನ್ನು ಕಾಣಲಾರರು.

ಜಾಗ್ರತ ಮತ್ತು ಸ್ವಪ್ನಾವಸ್ಥೆಗಳಲ್ಲಿ ವ್ಯವಹರಿಸುತ್ತಿರುವ ಒಬ್ಬ ಸಾಮಾನ್ಯನಾದ ಜೀವಿಯು ಗಾಢನಿದ್ರಾವಸ್ಥೆಯನ್ನು ತಲುಪಿದಾಗ ಈ ದೃಶ್ಯವಾದ ಜಗತ್ತಾವುದೂ ಆತನಿಗೆ ಗೋಚರವಾಗುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಸಾಂಸಾರಿಕ ವಿಷಯಗಳಲ್ಲಿ ವಿಹರಿಸುವ ಆತನ ಮನೋಬುದ್ಧಿಗಳು ಸುಷುಪ್ತಿಯ ಸುಖಾನುಭವದಲ್ಲಿ ಮುಳುಗಿರುವುದೇ ಆಗಿದೆ. ನಿದ್ರಾನಂದದ ಅಮಲಿನಲ್ಲಿಯೇ ಒಬ್ಬ ಸಾಮಾನ್ಯ ಜೀವಿಯು ಪ್ರಪಂಚವನ್ನೇ ಮರೆಯುತ್ತಿರುವಾಗ ಶಿವಾನಂದದೊಡನೆ ಸಾಮರಸ್ಯವನ್ನು ಪಡೆದ ಐಕ್ಯಸ್ಥಲಿಯು ಅದು ಹೇಗೆ ತಾನೆ ಪ್ರಪಂಚವನ್ನು ಕಾಣಬಲ್ಲ ? ಅಂತೆಯೇ ಪೂಜ್ಯಪಾದರು 'ನಪಶ್ಯತಿ ಜಗಜ್ಜಾಲಂ ಮಾಯಾ ಕಲ್ಪಿತವೈಭವಮ್' ಎಂಬುದಾಗಿ ಉಪದೇಶಿಸಿದ್ದಾರೆ.

ಓರ್ವ ಜ್ಞಾನಿಗೆ ಜ್ಞಾನವಾದೊಡನೆ ಪ್ರಪಂಚದಲ್ಲಿಯ ಪಂಚಮಹಾಭೂತಗಳಲ್ಲಿ ಅದಾವ ಪರಿವರ್ತನೆಯೂ ಆಗುವುದಿಲ್ಲ. ಅವೆಲ್ಲ ಮೊದಲಿನಂತೆಯೇ ಇರುತ್ತವೆ. ಆದರೆ ಜ್ಞಾನಿಯ ದೃಷ್ಟಿಯಲ್ಲಿ ಪರಿವರ್ತನೆಯಾಗಿರೋಣದರಿಂದ ಆತನು ಈ ಪಂಚಮಹಾಭೂತಗಳನ್ನೂ ಹಾಗೂ ಭೌತಿಕವಾದ ಪ್ರಪಂಚವನ್ನೂ ಭೂತ–ಭೌತಿಕವೆಂಬುದಾಗಿ ನೋಡದೆ ಪರಮಾತ್ಮರೂಪವನ್ನಾಗಿ ಕಾಣುತ್ತಿರುತ್ತಾರೆ. ಅಂತೆಯೇ 'ಯಥಾದೃಷ್ಟಿಃ ತಥಾ ಸೃಷ್ಟಿಃ' ಎಂಬುದಾಗಿ ಜ್ಞಾನಿಗಳು ನುಡಿದಿರುವರು. ಶಿವಯೋಗಿಯು ಸೃಷ್ಟಿಯ ಪರಿವರ್ತನೆಯ ಗೊಡವೆಗೆ ಹೋಗದೆ ದೃಷ್ಟಿಯ ಪರಿವರ್ತನೆಯಲ್ಲಿ ತಲ್ಲೀನನಾಗುತ್ತಾನೆ. ದೃಷ್ಟಿಯು ಪರಿವರ್ತಿತವಾದರೆ ಸೃಷ್ಟಿಯು ತನ್ನಿಂದ ತಾನೆ ಪರಿವರ್ತಿತವಾಗುವುದು.

ಯಾವ ಬಣ್ಣದ ಕನ್ನಡಕವನ್ನು ಧರಿಸುವನೋ ವಸ್ತುವು ಅದೇ ಬಣ್ಣದಲ್ಲಿ ಕಾಣುವಂತೆ ಶಿವ ಕನ್ನಡಕವನ್ನು ಧರಿಸಿದ ಶಿವಯೋಗಿಯು ಈ ಪ್ರಪಂಚವೆಲ್ಲವನ್ನು ಶಿವರೂಪ ವನ್ನಾಗಿಯೇ ಕಾಣುತ್ತಾನೆ. ಆತನಿಗೆ ಸರ್ವತ್ರ ಶಿವನ ಹೊರತಾಗಿ ಬೇರಾವುದೂ ಅನುಭವಗೋಚರವಾಗುವುದಿಲ್ಲ. 'ಆತ್ಮವತ್‌ಸರ್ವಭೂತಾನಿಯಃಪಶ್ಯತಿ ಸ ಪಂಡಿತಃ' ಎಂಬ ಉಕ್ತಿಗನುಸಾರವಾಗಿ ಈ ಐಕ್ಯಸ್ಥಲದ ಸಾಧಕನು ಸಚ್ಚಿದಾನಂದ ರೂಪವಾದ ತನ್ನ ಆತ್ಮವನ್ನು ತಾನು ಕಾಣುತ್ತಿರುವಂತೆ ಪ್ರಪಂಚವೆಲ್ಲವನ್ನು ಕಾಣುತ್ತಿರ್ರೋಣದರಿಂದ ಅವನಿಗೆ ವಿಶ್ವವೆಲ್ಲವೂ ಆತ್ಮರೂಪವಾಗಿಯೂ ಶಿವರೂಪವಾಗಿಯೂ ಕಾಣುತ್ತಿರ್ರೋಣದ ರಿಂದ ಈ ಮಾಯಿಕವಾದ ಭೇದಪ್ರಪಂಚವು ಆತನಿಗೆ ತೋರುವುದಿಲ್ಲವೆಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ. ಈ ಮಾಯಾ ಪ್ರಪಂಚವು ಅದು ಹೇಗೆ ತಾನೆ ವಿಲಯವಾಗುವುದೆಂಬ ವಿಷಯವನ್ನು ಪುನಃ ದೃಷ್ಟಾಂತ ಮೂಲಕವಾಗಿ–

ಬ್ರಹ್ಮಾಂಡಬುದ್‌ಬುದೋದ್ಭೇದವಿಜೃಂಭೀ ತತ್ತ್ವವೀಚಿಮಾನ್ ।
ಮಾಯಾಸಿಂಧುರ್ಲಯಂ ಯಾತಿ ಶಿವೈಕ್ಯವಡವಾನಲೇ ॥

(ಸಿ. ಶಿ. ೧೪–೭)

ಈ ವಿಧವಾಗಿ ಉಪದೇಶಿಸಿದ್ದಾರೆ. ವಡವಾಗ್ನಿಯಲ್ಲಿ ಸಮುದ್ರವು ವಿಲಯವಾಗುವಂತೆ ಶಿವೈಕ್ಯಭಾವನೆಯೆಂಬ ಜ್ಞಾನಾಗ್ನಿರೂಪವಾದ ವಡವಾನಲ ಪ್ರಪಂಚರೂಪವಾದ ಮಾಯಾಸಮುದ್ರವು ವಿಲಯವಾಗುವುದೆಂಬುದನ್ನು ಪೂಜ್ಯರು ಇಲ್ಲಿ ತಿಳಿಯ ಪಡಿಸಿದ್ದಾರೆ. ವಡವಾನಲವು ಅಗ್ನಿಯ ಒಂದು ಪ್ರಕಾರವಾಗಿದೆ. ಭೂತಾಗ್ನಿ, ದಿವ್ಯಾಗ್ನಿ, ಆಕರಜಾಗ್ನಿ, ಜಠರಾಗ್ನಿ, ವಡವಾಗ್ನಿ ಮತ್ತು ಜ್ಞಾನಾಗ್ನಿ ಎಂಬುದಾಗಿ ಶಾಸ್ತ್ರಗಳಲ್ಲಿ ಅಗ್ನಿಯ ಪ್ರಕಾರಗಳು ಹೇಳಲ್ಪಟ್ಟಿವೆ. ಪ್ರತಿನಿತ್ಯ ನಾವು ಬಳಸುವ ಅಗ್ನಿಗೆ ಭೂತಾಗ್ನಿ ಇಲ್ಲವೆ ಭೌತಿಕಾಗ್ನಿ ಎಂದು ಕರೆಯುವರು. ಆಕಾಶದಲ್ಲಿ ಕೋಲ್ಮಿಂಚಿನ ರೂಪದಲ್ಲಿ ಸಿಡಿಲಿನ ರೂಪದಲ್ಲಿ ಹೊರಹೊಮ್ಮುವ ಅಗ್ನಿಗೆ ದಿವ್ಯಾಗ್ನಿಯೆನ್ನುವರು. ಆಕರ ಎಂದರೆ ಕಣಿವೆ ಗಳು. ಇಲ್ಲಿ ಹೊರಡುವ ಸುವರ್ಣಕ್ಕೆ ಆಕರಜಾಗ್ನಿಯೆನ್ನುತ್ತಾರೆ. ಸುವರ್ಣವು ಅಗ್ನಿರೂಪ ವಾದುದು ಅಂತೆಯೇ ಅದು ಸುಟ್ಟುಹೋಗುವುದಿಲ್ಲ. ಸುವರ್ಣವನ್ನು ಅಗ್ನಿಯಲ್ಲಿ ಕಾಯಿಸಿದಾಗ ಅದರಲ್ಲಿ ಮಿಶ್ರವಾಗಿರುವ ಅದಕ್ಕಿಂತ ಭಿನ್ನವಾದ ಧಾತುಗಳು ಸುಟ್ಟುಹೋದರೂ ಸುವರ್ಣವು ಸುಡದೇ ಇರುವುದಾಗಿ ತೋರುತ್ತದೆ. ಅಗ್ನಿಯು ತನಗಿಂತ ಭಿನ್ನವಾದ ಪದಾರ್ಥಗಳನ್ನು ಸುಟ್ಟುಹಾಕುವುದೇ ವಿನಃ ಅಗ್ನಿಯು ಅಗ್ನಿಯನ್ನೇ ಸುಡಲಾರದು. ಅಂತೆಯೇ ಬಂಗಾರವು ಅಗ್ನಿಯಲ್ಲಿಟ್ಟರೂ ಸುಟ್ಟುಹೋಗದ ಕಾರಣದಿಂದಾಗಿ ಅದಕ್ಕೂ ಸಹ ಅಗ್ನಿಯೆಂಬುದಾಗಿ ಕರೆದಿದ್ದಾರೆ. ಸುವರ್ಣವು (ಬಂಗಾರವು) ಆಕರಗಳಲ್ಲಿ ಜನಿಸಿದ ಕಾರಣ ಅದಕ್ಕೆ ಆಕರಜಾಗ್ನಿಯೆಂದು ಕರೆದಿದ್ದಾರೆ. ಪ್ರತಿಯೊಬ್ಬ ಮನುಷ್ಯನ ಉದರದಲ್ಲಿದ್ದು ಸೇವಿಸಿದ ಅನ್ನಜಲಗಳನ್ನು ಪಾಕಗೊಳಿಸುವ ಅಗ್ನಿಯೇ ಜಠರಾಗ್ನಿಯು. ಅನಂತ ಜನ್ಮಗಳಿಂದ ಬಂದಿರುವ ಅಜ್ಞಾನವೆಂಬ ಕತ್ತಲೆಯನ್ನು ಹೊಡೆದು ಹಾಕುವ ಅಗ್ನಿಯೇ ಜ್ಞಾನಾಗ್ನಿಯು. ಅದರಂತೆ ಸಾಗರದಲ್ಲಿ ಉತ್ಪನ್ನವಾಗುವ ಅಗ್ನಿಗೆ ವಡವಾಗ್ನಿಯೆಂಬುದಾಗಿ ಕರೆಯುತ್ತಾರೆ. ಸಾಗರದಲ್ಲಿಯ ವಡವಾಗ್ನಿಯು

ಪ್ರಕಟಗೊಂಡಾಗ ಅನಂತ ನೊರೆ–ತೆರೆ–ಬುದ್ಬುದಗಳಿಂದ ವಿಜೃಂಭಿಸುವ ಆ ಸಾಗರವು ವಡವಾನಲದ ಮಹಾಜ್ವಾಲೆಯಲ್ಲಿ ವಿಲಯವಾಗುವುದು. ಅದರಂತೆ ಲಿಂಗಾಗ ಸಾಮರಸ್ಯರೂಪವಾದ ಶಿವೈಕ್ಯಜ್ಞಾನವನ್ನು ಪಡೆದುಕೊಂಡ ಐಕ್ಯಸ್ಥಲದ ಶಿವಯೋಗಿಗೆ ಅನಂತಭುವನಬ್ರಹ್ಮಾಂಡಗಳಿಂದೊಡಗೂಡಿದ ಈ ಮಾಯಾ ಸಮುದ್ರವೂ ಸಹ ಆತನ ಜ್ಞಾನಾಗ್ನಿಯಲ್ಲಿ ವಿಲೀನವಾಗೋಣದರಿಂದ ಈ ಭೂತ–ಭೌತಿಕ ಪ್ರಪಂಚವು ಆತನ ಅನುಭವಕ್ಕೆ ಬಾರದೆ ಆ ಶಿವಯೋಗಿಯು ಸದಾ–ಸರ್ವದಾ ಶಿವಸ್ವರೂಪಾನುಭವನ್ನೇ ಪಡೆದವನಾಗಿರುತ್ತಾನೆ. ವಡವಾಗ್ನಿಯಲ್ಲಿ ಸಾಗರವು ಲಯವಾಗುವಂತೆ, ಐಕ್ಯಸ್ಥಲಿಯ ಶಿವೈಕ್ಯರೂಪವಾದ ಜ್ಞಾನಾಗ್ನಿಯಲ್ಲಿ ಈ ಪ್ರಪಂಚವೆಲ್ಲ ಮಾಯಾಸಾಗರವು ವಿಲೀನ ವಾಗುತ್ತದೆಂಬುದನ್ನು ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು ದೃಷ್ಟಾಂತ ಮೂಲಕವಾಗಿ ಇಲ್ಲಿ ಅಪ್ಪಣೆಕೊಡಿಸಿದ್ದಾರೆ.

ಈ ಸಂಸಾರರೂಪಿ ಸಾಗರದಲ್ಲಿ ಯಾವಾತನು ಮುಳುಗುತ್ತಾನೆಯೋ ಅವನು ಮಾಯಾಪಾಶದಲ್ಲಿ ಸಿಲುಕಿ ಬೀಳುತ್ತಾನೆ. ಇಲ್ಲಿಯ ಮಾಯಾಪಾಶಗಳೆಂದರೆ ರಾಗ–ದ್ವೇಷಗಳೇ ಆಗಿವೆ. ಇವುಗಳೇ ಜೀವಾತ್ಮನನ್ನು ಕಟ್ಟಿ ಹಾಕುತ್ತವೆ. ಸುಖವನ್ನು ಕೊಟ್ಟು ಜೀವಾತ್ಮನನ್ನು ಕಟ್ಟಿಹಾಕುವುದು ರಾಗವಾದರೆ, ದುಃಖವನ್ನು ಕೊಟ್ಟು ಬಂಧನಕ್ಕೊಳಗು ಮಾಡುವಂಥಾದ್ದು ದ್ವೇಷವು. ಸಂಸಾರ ಸಾಗರವನ್ನು ದಾಟಲು ಶಿವನಿಂದ ಅನು ಗ್ರಹಿಸಲ್ಪಟ್ಟ ಮನಸ್ಸು ಅಥವಾ ಬುದ್ಧಿಯೆಂಬ ಹಡಗಕ್ಕೆ ರಾಗದ್ವೇಷಗಳೆಂಬ ಛಿದ್ರಗಳು ಬಿದ್ದಿರೋಣದರಿಂದ ಅವುಗಳ ಮುಖಾಂತರವಾಗಿಯೇ ಈ ಸಂಸಾರ ಸಾಗರವು ನಮ್ಮೆಲ್ಲರ ಮನೋಬುದ್ಧಿಗಳನ್ನು ಪ್ರವೇಶಿಸಿದೆ. ಒಂದೇ ಛಿದ್ರವಿದ್ದ ಹಡಗವು ನೀರು ಹೊಕ್ಕು ಮುಳುಗಿ ಹೋಗುತ್ತಿರುವಾಗ ಎರಡು ಛಿದ್ರಗಳುಳ್ಳ ಈ ನಮ್ಮ ನೌಕೆಯು ಮುಳುಗದೆ ಅದು ಹೇಗೆ ತಾನೆ ಇರಬಲ್ಲದು ? ರಾಗದ್ವೇಷಗಳೆಂಬ ಈ ಛಿದ್ರಗಳನ್ನು ಮುಚ್ಚಿಹಾಕಲು 'ಶಿವೋऽಹಂ' ಭಾವನೆಯು ಸಹಕಾರಿಯಾಗುವುದು. ಈ ಭಾವನೆಯ ಪರಿಣಾಮವಾಗಿ ಈತನಿಗೆ ಸರ್ವತ್ರ ಶಿವದೃಷ್ಟಿ ಪ್ರಾಪ್ತವಾಗುವುದರಿಂದ ಸರ್ವರನ್ನೂ ಶಿವರೂಪವಾಗಿ ಕಾಣುತ್ತಾನೆ. ಪ್ರಚಂಡವಾದ ವಡವಾಗ್ನಿಯಲ್ಲಿ ಮಹಾಸಾಗರವು ಶೋಷಣೆಗೊಳ್ಳುವಂತೆ ಈ ದಿವ್ಯವಾದ ಶಿವಜ್ಞಾನರೂಪೀ ಅಗ್ನಿಯಲ್ಲಿ ಮಾಯಾ ಸಮುದ್ರವು ಇಲ್ಲದಂತಾಗುತ್ತದೆ. ಹೀಗೆ ಪೂಜ್ಯರು ಲಿಂಗಾಂಗ ಸಾಮರಸ್ಯರೂಪವಾದ ಶಿವಜ್ಞಾನವನ್ನು ವಡವಾನಲಕ್ಕೆ ಹೋಲಿಸಿ ಮಾಯಾಸಾಗರದ ನಿವೃತ್ತಿಯ ಉಪಾಯ ವನ್ನು ತಿಳಿಸಿದ್ದಾರೆ. ಆದ್ದರಿಂದ ಸಾಧಕನು ಸದಾ ಶಿವಭಾವನೆಯಿಂದೊಡಗೂಡಿ ಕೊಂಡಿರಬೇಕು.

ಈ ತೆರನಾಗಿ ಮಾಯೆಯಿಂದ ಮುಕ್ತನಾದವನಿಗೆ ಸರ್ವತ್ರ ಶಿವಾದ್ವೈತ ದೃಷ್ಟಿಯೇ ಪ್ರಾಪ್ತವಾಗುವುದೆಂಬುದನ್ನು ತಿಳಿಸುವುದಕ್ಕಾಗಿ ಪೂಜ್ಯರು–

ಮಾಯಾಶಕ್ತಿತಿರೋಧಾನಾಚ್ಛಿವೇ ಭೇದವಿಕಲ್ಪನಾ ।
ಆತ್ಮನಸ್ತದ್ವಿನಾಶೇ ತು ನಾದ್ವೈತಾತ್ಕಿಂಚಿದಿಷ್ಯತೇ ॥ (ಸಿ. ಶಿ. ೧೪–೮)

ಎಂಬುದಾಗಿ ನಿರೂಪಿಸಿದ್ದಾರೆ. ಪ್ರತಿಯೊಬ್ಬ ಮನುಷ್ಯನ ಬುದ್ಧಿಯ ಮೇಲೆ ಮಾಯಾ ಶಕ್ತಿಯು ವ್ಯಾಪಿಸಿಕೊಂಡಿರುವುದರಿಂದ ಶಿವಜೀವರಲ್ಲಿ ಬೇಧಭಾವನೆಯು ಉತ್ಪನ್ನ ವಾಗಿದೆ. ಆತ್ಮಜ್ಞಾನದಿಂದ ಅದು ಅಳಿದುಹೋದಾಗ ಶಿವಜೀವರ ಭೇದವೂ ಅಳಿದುಹೋಗಿ ಅವರೀರ್ವರಲ್ಲಿ ಅದ್ವೈತ ಸ್ಥಿತಿಯು ಪ್ರಾಪ್ತವಾಗುವುದು. ಶಿವನ ಈ ಮಾಯಾಶಕ್ತಿಯ ಜಾಲದಿಂದ ಪಾರಾಗಬೇಕಾದರೆ ಶಿವನಿಗೇನೇ ಶರಣಾಗತರಾಗಬೇಕು. ಶಿವನಿಂದ ದೂರಹೋದವರೆಲ್ಲ ಅವನ ಮಾಯಾಜಾಲದಲ್ಲಿ ಮತ್ತಷ್ಟು ಇನ್ನಷ್ಟು ಸಿಲುಕಿ ಬೀಳುತ್ತಾರೆ. ಶ್ರೀಮದ್ ಭಗವದ್ಗೀತೆಯಲ್ಲಿಯೂ ಸಹ ''ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ'' ಎಂಬುದಾಗಿ ಹೇಳಿ ಮಾಯಾಪಾಶದಿಂದ ಹೊರ ಬರಲು ಭಗವತ್‌ಪ್ರಪತ್ತಿಯೇ ಅಮೋಘ ಸಾಧನವೆಂಬುದಾಗಿ ತಿಳಿಯಪಡಿಸಲಾಗಿದೆ.

ಜಾಲಗಾರನು ಮೀನು ಹಿಡಿಯಲು ನದಿಗೆ ಹೋಗಿ ತನ್ನ ಜಾಲವನ್ನು ಬೀಸಿದಾಗ ಅಲ್ಲಿಯ ಮೀನುಗಳು ಅಂಜಿ ದೂರಪಲಾಯನ ಮಾಡುತ್ತವೆ. ಅವುಗಳಲ್ಲಿ ನಾಲ್ಕಾರು ಮೀನುಗಳು ಮಾತ್ರ ಆತನಿಂದ ದೂರಹೋಗದೆ ಅವನ ಕಾಲಿನ ಸುತ್ತುಮುತ್ತು ಅಲ್ಲಿಯೇ ಸುಳಿದಾಡುತ್ತಿದ್ದವು. ಆಗ ಅಲ್ಲಿ ಘಟಿಸಿದ ಆಶ್ಚರ್ಯವೇನೆಂದರೆ ಆತನಿಂದ ದೂರ ಪಲಾಯನಗೈದ ಮೀನುಗಳೆಲ್ಲ ಆತನ ಜಾಲದಲ್ಲಿ ಸಿಲುಕಿಬಿದ್ದಿದ್ದವು. ಆದರೆ ಅವನ ಸುತ್ತಮುತ್ತ ಸುಳಿದಾಡುತ್ತಿರುವ ಮೀನುಗಳು ಮಾತ್ರ ಸುರಕ್ಷಿತವಾಗಿದ್ದವು. ಇದೇ ರೀತಿಯಾಗಿ ಶಿವಧ್ಯಾನ ಶಿವಚಿಂತನೆ ಮಾಡದವರು ಅರ್ಥಾತ್ ಶಿವನಿಂದ ದೂರ ಹೋದವರು ಮೋಹಮಾಯಾ ಪಾಶದಲ್ಲಿ ಸಿಲುಕಿಕೊಳ್ಳುತ್ತಾರೆ. ಆದರೆ ಸದಾಕಾಲ ಶಿವಪೂಜೆ–ಶಿವಧ್ಯಾನ ಶಿವಚಿಂತನೆಯಲ್ಲಿ ಕಾಲಕಳೆಯುವರು ಅರ್ಥಾತ್ ಸದಾ ಶಿವ ಸಾಮೀಪ್ಯವನ್ನು ಸಾಧಿಸಿದವರು ಆ ಮಾಯಾಮೋಹಪಾಶದಲ್ಲಿ ಸಿಲುಕಿಕೊಳ್ಳಲಾರರು.

ಶಿವಧ್ಯಾನಾದಿಗಳಿಂದ ವಿರಹಿತವಾಗಿರುವುದೇ ಶಿವನಿಂದ ದೂರವಾದಂತೆ. ಶಿವಧ್ಯಾನಾದಿಗಳಲ್ಲಿ ತೊಡಗಿಕೊಂಡಿರುವುದೇ ಶಿವನ ಸಮೀಪ ಇದ್ದಂತೆ. ಶರೀರವು ದೇವರಮುಂದೆ ಕುಳಿತಿದ್ದರೂ ಎಷ್ಟೋ ಸಂದರ್ಭಗಳಲ್ಲಿ ಮನಸ್ಸು ಅನ್ಯವಿಷಯಾಸಕ್ತ ವಾಗಿರುವುದು ಎಲ್ಲರಿಗೂ ಅನುಭವಗೋಚರವಾದುದೇ. ಇಂತಹ ಸ್ಥಿತಿಯಲ್ಲಿ ಅದೆಷ್ಟು ಕಾಲ ದೇವರ ಮುಂದೆ ಕುಳಿತರೂ ಆವ ಪ್ರಯೋಜನವೂ ಆಗಲಾರದು. ಆದಕಾರಣ ಶರೀರವಿದ್ದಲ್ಲಿ ಮನಸ್ಸಿದ್ದಾಗಲೇ ಆ ಕಾರ್ಯದ ಪ್ರಯೋಜನಸಿದ್ಧಿಯಾಗುವುದು. ಶಿವಯೋಗಸಾಧಕನು ತ್ರಿಕರಣಪೂರ್ವಕವಾಗಿ ಶಿವಸಾನಿಧ್ಯವನ್ನು ಸಾಧಿಸಿಕೊಂಡಿರುತ್ತಾ ನಾದ್ದರಿಂದ ಆತನು ಶಿವನ ಮಾಯಾ ಜಾಲದಿಂದ ಮುಕ್ತನಾಗಿ ಎಲ್ಲ ಭೇದಗಳನ್ನು ತೊಡೆದುಹಾಕಿ ಶಿವಸಾಯುಜ್ಯವನ್ನು ಸಾಧಿಸಿಕೊಳ್ಳುತ್ತಾನೆ.

ವೀರಶೈವ ಸಿದ್ಧಾಂತದಲ್ಲಿ ಶಿವನಿಗೆ 'ಪತಿ'ಯೆಂತಲೂ ಜೀವನಿಗೆ 'ಪಶು' ವೆಂತಲೂ ಸಂಬೋಧಿಸಲಾಗಿದೆ. ಹೀಗೆ ಪತಿತ್ವ, ಪಶುತ್ವರೂಪ ಧರ್ಮಗಳು ಪರಸ್ಪರ ಭಿನ್ನ ವಾಗಿರುವಾಗ ಈ ಪಶುಪತಿಗಳ ಅದ್ವೈತಸ್ಥಿತಿಯು ಅದು ಹೇಗೆ ತಾನೆ ಸಿದ್ಧಿಸಬಲ್ಲದು? ಎಂಬ ಸಂಭಾವಿತ ಪ್ರಶ್ನೆಯನ್ನು ದೂರೀಕರಿಸುವುದಕ್ಕಾಗಿಯೇ ಪೂಜ್ಯರು ಪುನಃ–

ಪಶುತ್ವಂಚ ಪತಿತ್ವಂಚ ಮಾಯಾ ಮೋಹವಿಕಲ್ಪಿತಮ್ ।
ತಸ್ಮಿನ್ಪ್ರಲಯಮಾಪನ್ನೇ ಕಃಪಶುಃ ಕೋ ನು ವಾ ಪತಿಃ ॥ (ಸಿ. ಶಿ ೧೮-೯)

ಎಂಬುದಾಗಿ ಬೋಧಿಸಿದ್ದಾರೆ. ಸಾಂಸಾರಿಕ ಜೀವಿಗಳು ಮಾಯಾ ಮೋಹಕ್ಕೊಳಗಾದಾಗ ಆಣವ, ಮಾಯೀಯ ಮತ್ತು ಕಾರ್ಮಿಕಗಳೆಂಬ ತ್ರಿವಿಧಪಾಶಗಳಿಂದ ಕಟ್ಟಲ್ಪಟ್ಟವರಾಗಿ ಪಶುಗಳೆಂದು ಕರೆಯಲ್ಪಡುತ್ತಾರೆ. ಜಗತ್ತಿನಲ್ಲಿಯ ಎಮ್ಮೆ, ಆಕಳು ಮುಂತಾದ ಪಶುಗಳು ಜ್ಞಾನಹೀನಗಳಾಗಿ ಮಾಡಿದ ತಪ್ಪುಗಳನ್ನೇ ಪುನಃ ಪುನಃ ಮಾಡುತ್ತ ಅನೇಕ ಪೆಟ್ಟುಗಳನ್ನು ತಿನ್ನುತ್ತ ಅತ್ತಿತ್ತ ತಿರುಗಾಡುವುದನ್ನು ಕಾಣುತ್ತೇವೆ. ಇದೇ ರೀತಿಯಾಗಿ ಅಜ್ಞರಾದ ಜೀವಿಗಳೂ ಸಹ ಅನಂತ ಅಪರಾಧಗಳನ್ನೆಸಗುತ್ತ ಪಶುಗಳಂತೆ ಜನನ-ಮರಣ ಚಕ್ರದಲ್ಲಿ ಸುತ್ತುತ್ತಿರುತ್ತಾರೆ. ಅಂತೆಯೇ ಶಾಸ್ತ್ರದಲ್ಲಿ ಇಂತಹ ಜೀವಿಗಳಿಗೆ 'ಪಶು' ಎಂಬುದಾಗಿ ಸಂಬೋಧಿಸಿದ್ದುಂಟು. ನೀತಿಕಾರನಾದ ಭರ್ತೃಹರಿಯೂ ಸಹ-

ಆಹಾರ ನಿದ್ರಾ ಭಯ ಮೈಥುನಂಚ ।
ಸಾಮಾನ್ಯಮೇತತ್ ಪಶುಭಿರ್ನರಾಣಾಮ್ ॥
ಧರ್ಮೋ ಹೀ ತೇಷಾಮಧಿಕೋ ವಿಶೇಷೋ ।
ಧರ್ಮೇಣ ಹೀನಃ ಪಶುಭಿಸ್ಸಮಾನಃ ॥

ಎಂಬುದಾಗಿ ತಿಳಿಸಿದ್ದಾನೆ. ಮನುಷ್ಯಜನ್ಮದಲ್ಲಿ ಬಂದು ಮನುಷ್ಯೋಚಿತಗಳಾದ ಧರ್ಮಾಚರಣೆಗಳನ್ನು ಮಾಡದಿದ್ದರೆ ಅವನನ್ನು ಹೇಗೆ ತಾನೆ ಮನುಷ್ಯನೆಂಬುದಾಗಿ ಕರೆಯಬೇಕು ? ಇಂತಹ ಧರ್ಮಭ್ರಷ್ಟರನ್ನು ಬಾಲ-ಕೋಡುಗಳಿಲ್ಲದ ದ್ವಿಪಾದಪಶು ಯೆಂಬುದಾಗಿಯೂ ಜ್ಞಾನಿಗಳು ಕರೆದಿದ್ದಾರೆ.

ಮನುಷ್ಯ ಜೀವಿಗಳನ್ನು ಸುಧಾರಿಸುವುದಕ್ಕಾಗಿಯೇ ಭಗವಂತನು ಒಂದು ನೂರು ವರ್ಷ ಆಯುಷ್ಯವನ್ನು ಕೊಟ್ಟಿದ್ದಾನೆ. ಈ ಅವಧಿ ಮುಗಿಯುವುದರೊಳಗಾಗಿ ತನ್ನ ಮನೋಬುದ್ಧಿಗಳಲ್ಲಿಯ ದೋಷಗಳನ್ನು ತಿದ್ದಿಕೊಂಡು ಪರಿಶುದ್ಧನಾಗಿ ಪರಮಾತ್ಮ ಸ್ವರೂಪವನ್ನು ಪಡೆಯಬೇಕಾಗುವುದು. ಆದರೆ ಅದೆಷ್ಟೋ ಜೀವಿಗಳು ಇಂತಹ ಅಮೂಲ್ಯವಾದ ಅವಕಾಶಗಳನ್ನು ವ್ಯರ್ಥವಾಗಿ ಕಳೆದುಕೊಂಡು ಪಶುಗಳಂತಲೇ ವ್ಯವಹರಿಸಿ ಪುನಃ ಪುನಃ ಪತಿತರಾಗುತ್ತಿರುತ್ತಾರೆ. ಯಾವಾಗ ಈ ಜೀವಿಯು ಸದ್ಗುರುವಿನ ಕೃಪಾಕಟಾಕ್ಷಕ್ಕೆ ಪಾತ್ರನಾಗಿ ಆತನು ಹೇಳಿದ ಧರ್ಮಾಚರಣೆಗಳನ್ನಾಚರಿಸಿ ಪರಿಶುದ್ಧ ನಾಗಿ ಶ್ರೀ ಸದ್ಗುರುವಿನ ಉಪದೇಶಾಮೃತವನ್ನು ಶ್ರವಣಮಾಡಿ ಶಿವ-ಜೀವರ ಐಕ್ಯರೂಪವಾದ ಬೋಧವನ್ನು ಪಡೆದು ಮಾಯಾ ಮೋಹಗಳಿಂದ ನಿರ್ಮುಕ್ತ ನಾಗುತ್ತಾನೆಯೋ ಆಗ ಅವನಲ್ಲಿಯ ಪಶುತ್ವವು ನಿವೃತ್ತವಾಗಿ ಪತಿರೂಪನೇ ಆಗುತ್ತಾನೆ. ಹೀಗೆ ಜೀವನು ಶಿವಸ್ವರೂಪನಾದಾಗ ಶಿವಾದ್ವೈತಸ್ಥಿತಿಯು ಆತನಿಗೆ ಪ್ರಾಪ್ತ ವಾಗಿರೋಣದರಿಂದ ಅಂತಹ ಅವಸ್ಥೆಯಲ್ಲಿ ನಾನು ಪಶು, ಆತನು ಪತಿಯೆಂಬ ಭೇದ ಕಲ್ಪನೆಗೆ ಎಳ್ಳಷ್ಟು ಅವಕಾಶವೇ ಇರುವುದಿಲ್ಲ. ಈ ತೆರನಾಗಿ ಪಶುತ್ವ-ಪತಿತ್ವ ಭಾವನೆ ಯನ್ನು ಕಳೆದುಕೊಂಡು ಲಿಂಗಾಂಗಸಾಮರಸ್ಯ ಸ್ವರೂಪವನ್ನು ಪಡೆದುಕೊಂಡವನೇ ಐಕ್ಯ

ಸ್ಥಲಿಯು ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೩

# ಐಕ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಐಕ್ಯಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಎಲ್ಲ ವಿಧ ಭೇದ ಭಾವನೆಗಳನ್ನು ದೂರಮಾಡಿಕೊಂಡು ಶಿವಸಾಮರಸ್ಯಾತ್ಮಕ ಶಿವಾದ್ವೈತ ಸ್ಥಿತಿಯನ್ನು ಪಡೆಯುವುದೇ ಐಕ್ಯಸ್ಥಿತಿಯು. ಐಕ್ಯ ಸ್ಥಿತಿಯನ್ನೇ ತಿಳಿಸುವುದಕ್ಕಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ–

ಘೋರಸಂಸಾರಸರ್ಪಸ್ಯ ಭೇದವಲ್ಮೀಕಶಾಯಿನಃ ।
ಬಾಧಕಂ ಪರಮಾದ್ವೈತ ಭಾವನಾ ಪರಮೌಷಧಮ್ ॥

(ಸಿ. ಶಿ. ೧೪–೧೦)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ–ಜಡ, ಜಡಗಳ ಭೇದ, ಜೀವ–ಜೀವರ ಭೇದ, ಜೀವ–ಜಡಗಳ ಭೇದ, ಜೀವ–ಈಶ್ವರರ ಭೇದ ಮತ್ತು ಜಡ–ಈಶ್ವರರ ಭೇದ ಎಂಬುದಾಗಿ ಶಾಸ್ತ್ರಕಾರರು ಭೇದವನ್ನು ಐದು ವಿಧವಾಗಿ ವಿವರಿಸಿದ್ದಾರೆ. ಸರ್ಪವು ಹುತ್ತಿನಲ್ಲಿ ಅಡಗಿಕೊಂಡಿರುವಂತೆ, ಭಯಾನಕವಾದ ಈ ಸಂಸಾರವೆಂಬ ಸರ್ಪವು ಈ ಪಂಚವಿಧ ಭೇದಗಳೆಂಬ ಹುತ್ತಿನಲ್ಲಿ ಅವಿತುಕೊಂಡಿರುತ್ತದೆ. ಹುತ್ತವನ್ನು ಒಡೆದು ಹಾಕಿದಾಗಲೇ ಸರ್ಪವನ್ನು ಸಂಹರಿಸಲು ಸಾಧ್ಯವಾಗುವಂತೆ, ಈ ಪಂಚವಿಧ ಭೇದಗಳನ್ನು ಪರಮಾದ್ವೈತ ಭಾವನೆಯಿಂದ ದೂರಮಾಡಿಕೊಂಡಾಗಲೇ ಈ ಸಂಸಾರವೆಂಬ ಸರ್ಪವು ಇಲ್ಲದಾಗುವುದು ಎಂಬುದಾಗಿ ಉದಾಹರಣೆಯಿಂದ ಇಲ್ಲಿ ತಿಳಿಸಲಾಗಿದೆ.

ಸಂಸಾರವೆಂದರೆ ಬಾಹ್ಯದಲ್ಲಿ ತೋರುವ ಭೌತಿಕ ಪ್ರಪಂಚವಲ್ಲ ಅದಕ್ಕೆ ಸೃಷ್ಟಿಯೆನ್ನುತ್ತಾರೆ. ಸೃಷ್ಟಿಯು ಈಶ ನಿರ್ಮಿತವಾದುದು. ತನ್ನವಲ್ಲದ ಸೃಷ್ಟಿಯ ಕೆಲ ವಸ್ತು ಹಾಗೂ ವ್ಯಕ್ತಿಗಳ ಮೇಲೆ ನನ್ನದೆಂಬ ಅಭಿಮಾನವೇ ಸಂಸಾರವು. ಈ ಅಭಿಮಾನದಿಂದಾಗಿಯೇ ಜೀವಿಗಳು ಅನಂತ ಜನ್ಮಗಳಲ್ಲಿ ಅಗಣಿತ ದುಃಖಗಳನ್ನು ಅನುಭವಿಸುತ್ತ ಬಂದಿದ್ದಾರೆ. ಅಭಿಮಾನವಶೀಭೂತರಾಗಿಯೇ ಇವರು ಸಂಸಾರದ ಬಂಧನಕ್ಕೊಳಗಾಗುತ್ತಾರೆ. ಈ ಅಭಿಮಾನದಿಂದ ಬಿಡುಗಡೆ ಹೊಂದುವುದೇ ಮುಕ್ತಿಯ ಮೂಲಸಾಧನವು. ಅಂತೆಯೇ ''ಮಮೇತಿ ಬಧ್ಯತೇ ಜಂತುರ್ನಮಮೇತಿ ವಿಮುಚ್ಯತೇ'' ಎಂಬುದಾಗಿ ಉಪದೇಶಿಸಿದ್ದಾರೆ. ವ್ಯಷ್ಟಿ ಮಮಕಾರವು ಬಂಧನಕ್ಕೆ ಕಾರಣವಾದರೆ ಸಮಷ್ಟಿ ಮಮಕಾರವು ಮುಕ್ತಿಯ ಸಾಧನವಾಗುವುದು. ಆದ್ದರಿಂದ ನಾನು ನನ್ನದೆಂಬ ಭಾವನೆಯನ್ನು ಬಿಡಲಾಗದಿದ್ದರೆ ಸರ್ವವೆಲ್ಲವೂ ನಾನೇ ಮತ್ತು ಸರ್ವವೆಲ್ಲವೂ ನನ್ನದೇ ಎಂಬ ಅದರ ಸಮಷ್ಟಿರೂಪವನ್ನಾದರೂ ತಾಳಬೇಕು. ಇಂಥ ಸಮಷ್ಟಿ ಭಾವನೆ

ಯುಳ್ಳವರನ್ನು 'ವಿಶ್ವಕುಟುಂಬಿಗಳು' ಅಥವಾ 'ಮಹಾತ್ಮರು' ಎಂಬುದಾಗಿ ಕರೆಯುತ್ತಾರೆ. ಇಂತಹ ವಿಶ್ವಕೌಟುಂಬಿಕ ಭಾವನೆಯಿಂದಲೇ ಪರಮಾದ್ವೈತ ಭಾವನೆಯನ್ನು ತಾಳಲು ಬರುತ್ತದೆ. ಯಾವಾಗ ಸಾಧಕನು ಈ ವಿಧವಾಗಿ ಪರಮಾದ್ವೈತ ಭಾವನೆಯನ್ನು ತಾಳುವನೋ ಆಗ ಅನಾದಿಕಾಲದಿಂದ ಬಂದಿರುವ ಅವನಲ್ಲಿಯ ಭೇದ ಬುದ್ಧಿಯು ಇಲ್ಲದಂತಾಗಿ ಐಕ್ಯಸ್ಥಿತಿಯನ್ನು ಪಡೆದುಕೊಳ್ಳುವನು.

''ಪಿಂಡೇ ಪಿಂಡೇ ಮತಿರ್ಭಿನ್ನಾ'' ಎನ್ನುವ ಉಕ್ತಿಯಂತೆ ಜೀವಿಗಳಿಗೆ ಎಷ್ಟು ಶರೀರಗಳೋ ಅಷ್ಟು ಇಂದ್ರಿಯಗಳೂ, ಮನಸ್ಸುಗಳೂ ಹಾಗೂ ಬುದ್ಧಿಗಳೂ ಭಿನ್ನ ಭಿನ್ನಗಳೇ ಆಗಿರುತ್ತವೆ. ಒಬ್ಬರಂತೆ ಇನ್ನೊಬ್ಬರ ಶರೀರವಾಗಲೀ, ಇಂದ್ರಿಯಗಳಾಗಲೀ, ಮನೋಬುದ್ಧಿಗಳಾಗಲೀ ಇರುವುದಿಲ್ಲ. ಹೀಗಿರುವಾಗ, ಅದ್ವೈತವನ್ನು ಹೇಗೆ ತಾನೆ ಸಾಧಿಸಲು ಸಾಧ್ಯ ? ಭಿನ್ನ ಭಿನ್ನಗಳಾದ ಎರಡು ಘಟಗಳನ್ನು ಅವುಗಳಿಗೆ ಯಾವ ಧಕ್ಕೆಯನ್ನೂ ಹಚ್ಚದೆ ಅವುಗಳನ್ನು ಒಂದುಗೂಡಿಸುವುದು ಯಾರಿಂದ ತಾನೆ ಸಾಧ್ಯ ? ಹಾಗೆಯೇ ಈ ಸಮಸ್ತ ಜೀವಿಗಳ ಶರೀರಾದಿಗಳೊಂದಿಗೆ ಅದ್ವೈತವನ್ನು ಸಾಧಿಸುವುದೂ ಸಹ ಅಸಂಭವವೇ ಆಗಿದೆ ಎಂಬುದಾಗಿ ಕೆಲವು ಜನರು ತರ್ಕವನ್ನು ತಂದೊಡ್ಡಬಹುದು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅದ್ವೈತವನ್ನು ಸಾಧಿಸಲು ಹೇಳಿದ್ದು ಶರೀರಾದಿಗಳೊಂದಿಗಲ್ಲ, ಆತ್ಮ ಆತ್ಮಗಳೊಂದಿಗೇ ಎಂಬುದನ್ನು ತಿಳಿದುಕೊಳ್ಳಬೇಕು.

ಪ್ರತಿಯೊಬ್ಬ ಜೀವಿಗಳಿಗೆ ದೊರೆತಿರುವ ಈ ಶರೀರಾದಿಗಳು ಅವರವರ ಶುಭಾಶುಭ ಕರ್ಮಗಳ ಫಲಗಳಾಗಿರುತ್ತವೆ. ಜೀವಿಗಳ ಕರ್ಮಗಳು ಭಿನ್ನ ಭಿನ್ನಗಳಾಗಿರುವಾಗ ಅವುಗಳಿಂದ ಉಂಟಾಗಿರುವ ಶರೀರಾದಿಗಳೂ ಸಹ ಭಿನ್ನ ಭಿನ್ನಗಳೇ ಆಗಿರುತ್ತವೆ. ಆದರೆ ಅವೆಲ್ಲವುಗಳಲ್ಲಿ ಅನುಸ್ಯೂತವಾಗಿರುವ ಆತ್ಮತತ್ತ್ವವು ಮಾತ್ರ ಒಂದೇ ಆಗಿರುತ್ತದೆ. ಓರ್ವ ತೋಟಗಾರನು ತನ್ನ ತೋಟದಲ್ಲಿಯ ವಿವಿಧ ಬಣ್ಣಗಳಿಂದ ಕೂಡಿದ ಬೇರೆ ಬೇರೆ ಹೂವುಗಳನ್ನು ಕೂಡಿಸಿ ಒಂದು ಪುಷ್ಪಮಾಲೆಯನ್ನು ನಿರ್ಮಾಣಮಾಡುತ್ತಾನೆ. ಈ ಮಾಲೆಯಲ್ಲಿಯ ಪುಷ್ಪಗಳು ಪರಸ್ಪರ ಭಿನ್ನವಾಗಿದ್ದರೂ ಅವೆಲ್ಲವುಗಳಲ್ಲಿ ಒಂದೇ ಒಂದಾದ ಸೂತ್ರವು ಅನುಸ್ಯೂತವಾಗಿರುವಂತೆ ಸೂತ್ರಾತ್ಮನೆಂದು ಕರೆಯಲ್ಪಡುವ ಆತ್ಮತತ್ತ್ವವು ಮಾತ್ರ ಎಲ್ಲದರಲ್ಲಿ ಒಂದೇ ಆಗಿದೆ. ಆದ್ದರಿಂದ ಇಲ್ಲಿ ಅದ್ವೈತ ಭಾವನೆಯನ್ನು ತಾಳುವುದು ಶರೀರಾದಿಗಳ ದೃಷ್ಟಿಯಿಂದಲ್ಲ, ಆದರೆ ಆತ್ಮದೃಷ್ಟಿಯಿಂದ ಎಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು. ನೀರಿನಲ್ಲಿ ನೀರನ್ನು ಮತ್ತು ಹಾಲನ್ನು ಬೆರೆಸಿದಾಗ ಅವೆರಡೂ ಸಮರಸವಾಗುವಂತೆ, ಆತ್ಮ ಪರಮಾತ್ಮಗಳೆರಡೂ ಸಚ್ಚಿದಾನಂದ ಸ್ವರೂಪಗಳೇ ಆಗಿರೋಣದರಿಂದ ಅವೆರಡರ ಸಾಮರಸ್ಯಾತ್ಮಕವಾದ ಅದ್ವೈತ ಸ್ಥಿತಿಗೆ ಅದಾವ ಅಡ್ಡಿ ಆತಂಕಗಳಿರುವುದಿಲ್ಲ. ಇಂತಹ ಆತ್ಮ-ಪರಮಾತ್ಮರ ಸಾಮರಸ್ಯಾತ್ಮಕ ಅದ್ವೈತ ಸ್ಥಿತಿಯನ್ನು ಪ್ರಾಪ್ತಮಾಡಿಕೊಂಡಾಗ ಸರ್ವವಿಧ ಭೇದಗಳು ಇಲ್ಲದಾಗುವವು.

ಪ್ರಪಂಚದಲ್ಲಿಯ ಭೇದವನ್ನು ದೂರ ಮಾಡಲು ಈ ಪ್ರಪಂಚವನ್ನು ನಾಶಗೊಳಿಸುವ ಅವಶ್ಯಕತೆಯಿರುವುದಿಲ್ಲ. ಎರಡು ಘಟಗಳನ್ನು ಒಡೆಯದೆ ಅವೆರಡರಲ್ಲಿಯ

ಆಕಾಶವು ಒಂದೇಯೆಂಬುದಾಗಿ ತಿಳಿದುಕೊಳ್ಳಲು ಬರುವಂತೆ ಅನಂತ ಜೀವಿಗಳ ಶರೀರಾದಿಗಳಿಗೆ ಯಾವ ಧಕ್ಕೆಯನ್ನೂ ಉಂಟುಮಾಡದೆ ಅವುಗಳಲ್ಲಿಯ ಆತ್ಮವು ಒಂದೇ ಎಂಬ ಅದ್ವೈತ ಭಾವನೆಯನ್ನು ತಾಳಲು ಬರುತ್ತದೆ. ಆದ್ದರಿಂದ ಪ್ರಪಂಚದಲ್ಲಿಯ ಭೇದವನ್ನು ದೂರಮಾಡಲು ಅದಾವ ಬಾಹ್ಯಕ್ರಿಯೆಯ ಅವಶ್ಯಕತೆ ಇರುವುದಿಲ್ಲ. ಅದರ ನಿವಾರಣೆಗಾಗಿ ಭಾವನಾತ್ಮಕ ಪ್ರಕ್ರಿಯೆಯು ಶ್ರೇಷ್ಠವಾದುದು. ಆತ್ಮ ಪರಮಾತ್ಮರ ಅಭೇದ ಭಾವನೆಯನ್ನು ತಾಳಿ ಭೇದರೂಪೀ ಹುತ್ತವನ್ನು ಒಡೆದು ಹಾಕಿ ಸಂಸಾರವೆಂಬ ಸರ್ಪವನ್ನು ನಷ್ಟಗೊಳಿಸಿ ನಿರ್ದ್ವಂದ್ವ ಸ್ಥಿತಿಯಲ್ಲಿರುವುದೇ ಐಕ್ಯಸ್ಥಿತಿಯೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೪

# ಐಕ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸರ್ವ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥ ರತ್ನದ ಐಕ್ಯಸ್ಥಲವನ್ನು ಕುರಿತು ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಪೂಜ್ಯ ಪಾದರು ನಾನಾ ಭೇದಗಳಿಂದೊಡಗೂಡಿದ ಈ ಸಂಸಾರ ಸಾಗರವನ್ನು ದಾಟಬೇಕಾದರೆ ಅದ್ವೈತ ಭಾವನೆಯೆಂಬ ಹಡಗವನ್ನು ಆಶ್ರಯಿಸಬೇಕೆಂಬುದನ್ನು–

ಭೇದಬುದ್ಧಿಸಮುತ್ಪನ್ನಮಹಾಸಂಸಾರಸಾಗರಮ್ ।
ಅದ್ವೈತಬುದ್ಧಿಪೋತೇನ ಸಮುತ್ತರತಿ ದೇಶಿಕಃ ॥

(ಸಿ. ಶಿ. ೧೪–೧೧)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಸಾಗರವನ್ನು ದಾಟಬೇಕಾದರೆ ಹಡಗವನ್ನು ಹೇಗೆ ಆಶ್ರಯಿಸಬೇಕಾಗುವುದೋ, ಹಾಗೆ ಈ ಭೇದರೂಪಿ ಸಂಸಾರ ಸಾಗರದಿಂದ ಪಾರಾಗಲು ಶಿವಾದ್ವೈತ ಭಾವನಾರೂಪವಾದ ಹಡಗವನ್ನು ದೇಶಿಕೋತ್ತಮನು ಆಶ್ರಯಿಸಿ ಪಾರಾಗುತ್ತಾನೆಂಬುದನ್ನು ದೃಷ್ಟಾಂತಪೂರ್ವಕವಾಗಿ ಪೂಜ್ಯರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಈ ದೃಶ್ಯವಾದ ಪ್ರಪಂಚದಲ್ಲಿ ಅನೇಕ ವಿಧವಾದ ಭೇದಗಳನ್ನು ನಾವು ಕಾಣುತ್ತೇವೆ. ಶಾಸ್ತ್ರಕಾರರು ಈ ಲೌಕಿಕ ಭೇದವನ್ನು– ''ಜೀವ–ಜೀವರ ಭೇದ, ಜೀವ–ಜಡಗಳ ಭೇದ, ಜಡ–ಈಶ್ವರ ಭೇದ, ಜೀವ–ಈಶ್ವರರ ಭೇದ ಮತ್ತು ಜಡ–ಜಡಗಳ ಭೇದ''ವೆಂಬುದಾಗಿ ಐದು ವಿಧವಾಗಿ ನಿರೂಪಿಸಿದ್ದಾರೆ. ಭೇದರೂಪ ವಾದುದೆಲ್ಲವೂ ಸಂಸಾರವು, ಪರಮಾತ್ಮನು ಮಾತ್ರ ಅಭೇಧರೂಪನಾಗಿದ್ದಾನೆ. ಅವನಲ್ಲಿ ಯಾವುದೇ ಪ್ರಕಾರವಾದ ಭೇದವನ್ನು ಮಾಡಲಿಕ್ಕಾಗುವುದಿಲ್ಲ. ಪರಿಚ್ಛಿನ್ನ ವಸ್ತುಗಳಲ್ಲಿ ಭೇದವನ್ನು ಕಲ್ಪಿಸುವುದು ಸಾಧ್ಯವೇ ವಿನಃ ಅಪರಿಚ್ಛಿನ್ನವಾದ ಪರಮಾತ್ಮನಲ್ಲಿ ಭೇದ ವನ್ನು ಕಲ್ಪಿಸಲಾಗುವುದಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಅಖಂಡಗಳಾದ ಪಂಚ ಮಹಾ ಭೂತಗಳನ್ನೇ ಖಂಡ–ಖಂಡವಾಗಿ ಮಾಡುವುದು ಅಸಾಧ್ಯವಾಗಿರುವಾಗ ಪರಮಾತ್ಮ ನಲ್ಲಿ ಖಂಡಭಾವನೆಯೂ ಸಹ ಅದು ಹೇಗೆ ತಾನೇ ಸಾಧ್ಯವಾಗಬಲ್ಲುದು ?

ಅಣ್ಣ–ತಮ್ಮಂದಿರು ಪಿತ್ರಾರ್ಜಿತವಾದ ಭೂಮಿ–ಸೀಮೆಯನ್ನು ಹಂಚಿಕೊಳ್ಳು ವಾಗ ಅಖಂಡವಾದ ಭೂಮಿಯನ್ನು ಖಂಡಗೊಳಿಸಲು ಸಾಧ್ಯವಾಗದೇ ಭೂಮಿಯ ಮೇಲೆಯೇ ಕೇವಲ ಮಣ್ಣಿನ ಬದುವನ್ನು ಹಾಕಿ ವಿಭಾಗಿಸುವುದನ್ನು ಕಾಣುತ್ತೇವೆ.

ಇಂತಹ ವಿಭಾವನೆಗಳು ಅದೆಷ್ಟೋ ಸಾರೆ ಆಗುತ್ತವೆ. ಅಲ್ಲದೇ ತಾವು ಮಾಡಿಕೊಂಡ ಖಂಡ-ಖಂಡವಾದ ಭೂಮಿಗೆ ಅದೆಷ್ಟೋ ಜನರು ನನ್ನದೆಂಬುದಾಗಿ ಅಭಿಮಾನಿಸಿ ಆನಂದ ಪಡುವುದನ್ನು ಕಾಣುತ್ತೇವೆ. ಆದರೆ ಇದೆಲ್ಲವೂ ಅವರವರ ಮಾನಸಿಕ ಭ್ರಮೆಯೇ ವಿನಃ ವಾಸ್ತವಿಕವಾದುದಲ್ಲ. ಅಂತೆಯೇ-

''ಭೂಮ್ಯೋ ಹಸಂತಿ ಮಮ ಭೂಮಿರಿತಿ ಬ್ರೂವಾಣಮ್'' ಎಂಬುದಾಗಿ ಓರ್ವ ಸುಭಾಷಿತಕಾರನು 'ಇದು ನನ್ನ ಭೂಮಿ' 'ಇದು ನಿನ್ನ ಭೂಮಿ' ಎಂಬುವವರನ್ನು ಕಂಡು ಭೂಮಿಯು ನಗುತ್ತಿದೆ ಎಂಬುದಾಗಿ ಹೇಳಿದ್ದಾನೆ. ಪರಮಾತ್ಮನ ಸಂಕಲ್ಪದಿಂದ ಉತ್ಪನ್ನಗಳಾದ ಪಂಚಮಹಾಭೂತಗಳನ್ನೇ ಖಂಡ-ಖಂಡವಾಗಿಸುವುದು ಅಸಾಧ್ಯ ವಾದಾಗ ಸರ್ವಕಾರಣನಾದ ಆ ಪರಶಿವ ಪರಮಾತ್ಮನಲ್ಲಿ ಭಿನ್ನ-ಭಿನ್ನತೆಯನ್ನು ಮಾಡುವುದು ಅದಾರಿಂದಲೂ ಸಾಧ್ಯವಿಲ್ಲ.

ಸಂಸಾರವೆಂದರೆ ಈ ದೃಶ್ಯಮಾನವಾದ ಜಗತ್ತಲ್ಲ. ಈ ಜಗತ್ತಿನ ಮೇಲಿರುವ ನಾನು-ನನ್ನದೆನ್ನುವ ಭಾವನೆಯೇ ಈ ಸಂಸಾರವು. ಈ ಅಹಂಮಮ ರೂಪವಾದ ಸಂಸಾರವು ಇಂದು ನಿನ್ನೆಯದಲ್ಲ ಅನಾದಿ ಕಾಲದಿಂದಲೂ ಬಂದುದಾಗಿದೆ. ಮನುಷ್ಯನು ದೈನಂದಿನ ವ್ಯವಹಾರದಲ್ಲಿ ತನಗಿಟ್ಟಿರುವ ಹೆಸರನ್ನು ಬಳಸದೇ ಇರಬಹುದು. ಆದರೆ ನಾನು-ನನ್ನದು ಎಂಬ ಶಬ್ದಗಳನ್ನು ಬಳಸದೇ ವ್ಯವಹರಿಸುವುದು ಬಹು ಕಠಿಣ ವಾದುದು. ನೀವು ಯಾರದಾದರೂ ಮನೆಗೆ ಹೋದಾಗ ಆ ಮನೆಯ ಬಾಗಿಲು ಮುಚ್ಚಿದ್ದರೆ ನೀವು ಕಾಲಿಂಗ್ ಬೆಲ್ ಮಾಡಿಯೋ ಅಥವಾ ಕದವನ್ನು ತಟ್ಟಿಯೋ ಮನೆಯೊಳಗಿನವರಿಗೆ ನೀವು ಬಂದಿರುವುದಾಗಿ ಸೂಚಿಸುತ್ತೀರಿ. ಆಗ ಒಳಗಿನವರು ಬಾಗಿಲವನ್ನು ತೆರೆಯದೇ 'ನೀವು ಯಾರು ?' ಎಂದು ಪ್ರಶ್ನಿಸಿದಾಗ ನೀವು ಹೇಳುವ ಉತ್ತರ 'ನಾನು' ಎಂಬುದಾಗಿರುತ್ತದೆ. ನಿಮ್ಮ ಧ್ವನಿಯನ್ನು ಅವರು ಗುರುತಿಸದೇ ಇದ್ದಾಗ 'ನಾನು ಅಂದರೆ ಯಾರು' ಎಂಬುದಾಗಿ ಪುನಃ ಪ್ರಶ್ನಿಸಿದಾಗ ಆಗ ನೀವು ನಿಮ್ಮ ಅಂಕಿತವನ್ನು ಹೇಳುತ್ತೀರಿ. ಈ ವ್ಯವಹಾರವನ್ನು ನೋಡಿದಾಗ ಅಂಕಿತ ನಾಮವನ್ನು ಬಿಟ್ಟು ವ್ಯವಹರಿಸಲು ಬರುತ್ತಿದ್ದರೂ ಸರ್ವನಾಮವಾದ 'ನಾನು' ಎಂಬುದನ್ನು ಬಿಟ್ಟು ವ್ಯವಹರಿಸುವುದು ಕಠಿಣವೆಂಬುದು ಸರ್ವಾನುಭವವೇದ್ಯವೇ ಸರಿ. ತಂದೆ-ತಾಯಿಗಳು ಇಟ್ಟ ಅಂಕಿತನಾಮವು ಜನನದ ಹನ್ನೆರಡು ಅಥವಾ ಹದಿಮೂರು ದಿವಸಕ್ಕೆ ಪ್ರಾಪ್ತವಾಗುತ್ತದೆ. ಆದರೆ 'ನಾನು' ಎಂಬ ಸರ್ವನಾಮವು ನಮ್ಮ ಸೂಕ್ಷ್ಮ ಶರೀರದ ಜೊತೆಗೇನೇ ಅನಂತ ಯುಗ-ಯುಗಗಳಿಂದ ಬಂದುದಾಗಿದೆ.

ಇಲ್ಲಿ ಬಳಸಿರುವ ನಾನು ಎಂಬ ಶಬ್ದವು ವ್ಯಾಕರಣದೃಷ್ಟ್ಯಾ ಸರ್ವನಾಮ ವೆಂಬುದಾಗಿ ಕರೆಯಿಸಿಕೊಳ್ಳುತ್ತಿದ್ದರೂ ಶಾಸ್ತ್ರದೃಷ್ಟಿಯಿಂದ ಇದಕ್ಕೆ ಅಹಂಕಾರ ವೆಂಬುದಾಗಿ ಕರೆಯುತ್ತಾರೆ. 'ನಾನು' ಎಂಬುದು ಅಹಂಕಾರವಾದರೆ ನನ್ನದೆಂಬುದೇ ಮಮಕಾರವು. ಎಣ್ಣೆ ಅಥವಾ ತುಪ್ಪದ ಒಂದು ದೀಪವನ್ನು ಹಚ್ಚಿದಾಗ ಇಲ್ಲಿ ಊರ್ಧ್ವಮುಖವಾಗಿ ಉರಿಯುತ್ತಿರುವ ಒಂದು ಜ್ವಾಲೆಯನ್ನು ಹಾಗೂ ಅದರ ಸುತ್ತ-ಮುತ್ತಲು ಪಸರಿಸಿರುವ ಬೆಳಕನ್ನು ಕಾಣುತ್ತೇವೆ. ಇಲ್ಲಿ ದೀಪದ ಕುಡಿಯಂತೆ

ಅಹಂಕಾರವಾದರೆ, ಅದರ ಸುತ್ತಲೂ ಪಸರಿಸಿರುವ ಪ್ರಕಾಶದಂತೆ ಮಮಕಾರವಿರುತ್ತದೆ. ಓರ್ವ ವ್ಯಕ್ತಿಯು ಒಂದು ಸ್ಥಾನದಲ್ಲಿ ನಾನು ಎಂದು ಅಹಂಕರಿಸುತ್ತ ಕುಳಿತಿದ್ದರೂ ಅವನ ಮಮಕಾರದ ಸಾಮಗ್ರಿಗಳಾದ ಮನೆ–ಮಠ, ಹೊಲ ಇವೆಲ್ಲವುಗಳು ದೂರ–ದೂರದ ವರೆಗೆ ದೀಪದ ಬೆಳಕಿನಂತೆ ಪಸರಿಸಿಕೊಂಡಿರುತ್ತವೆ. ದೀಪ–ದೀಪದ ಪ್ರಕಾಶಗಳಿಗೆ ಯಾವ ಸಂಬಂಧವಿದೆಯೋ ಅದೇ ಸಂಬಂಧವು ಅಹಂಕಾರ ಮಮಕಾರಗಳಿಗೆ ಇರುವುದೆಂಬುದಾಗಿ ಸರ್ವರೂ ತಿಳಿದುಕೊಳ್ಳಬೇಕು. ಮನುಷ್ಯನ ಮಮಕಾರವು ಸೀಮಿತವಾದುದಲ್ಲ. ಅದು ಕಾಲ–ಕಾಲಕ್ಕೆ ಹಾಗೆಯೇ ಬೆಳೆಯುತ್ತಲೇ ಇರುತ್ತದೆ. ಮಮಕಾರದ ವಿಷಯಗಳಾದ ವಸ್ತುಗಳು, ಸ್ಥಾನಗಳು ಮೇಲಿಂದ ಮೇಲೆ ಬದಲಾಗುತ್ತ ಇರುತ್ತವೆ. ಒಂದು ವಸ್ತುವಿನಿಂದ ಮತ್ತೊಂದು ವಸ್ತುವಿನೆಡೆಗೆ ಸದಾ ಸಂಚರಿಸುತ್ತ ಇರುವ ಈ ಮಮಕಾರವು ಯುಗ–ಯುಗಗಳಿಂದ ಜೀವಾತ್ಮನನ್ನು ಬೆಂಬತ್ತಿ ಬಂದುದಾಗಿದೆ. ಪ್ರತಿಯೊಬ್ಬ ಜೀವಾತ್ಮನು ಈ ಅಹಂಕಾರ ಮಮಕಾರಗಳೆಂಬ ಸಂಸಾರ ಸಾಗರದಲ್ಲಿ ಸಿಲುಕಿಕೊಂಡು ಸದಾ ದುಃಖವನ್ನೇ ಅನುಭವಿಸುತ್ತಿರುವುದನ್ನು ಕಂಡು ಜೀವಾತ್ಮನು ಈ ಸಂಸಾರಕ್ಕೆ ಅವನ ಭೇದಬುದ್ಧಿಯೇ ಕಾರಣವಾಗಿರುವುದರಿಂದ ಆ ಭೇದಬುದ್ಧಿಯನ್ನು ದೂರ ಮಾಡುವುದಕ್ಕಾಗಿಯೇ ಈ ಐಕ್ಯಸ್ಥಲದಲ್ಲಿ ಅದ್ವೈತ ಬುದ್ಧಿಯನ್ನು ಉಪದೇಶಿಸಿದ್ದಾರೆ. ಸರ್ವವೆಲ್ಲವೂ ಶಿವರೂಪವಾದುದೆಂಬ ಭಾವನೆಯನ್ನು ತಾಳಿದಾಗ ಈ ಭಾವನೆಯ ಬಲದಿಂದಲೇ ಭೇದಬುದ್ಧಿಯು ನಿವೃತ್ತವಾಗಿ ಅದ್ವೈತ ಸ್ಥಿತಿಯು ಪ್ರಾಪ್ತವಾಗುವುದು. ಈ ಅದ್ವೈತ ಸ್ಥಿತಿಯೇ ಐಕ್ಯಸ್ಥಿತಿಯು.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಾದ್ವೈತ ಭಾವನೆಯಿಂದ ಸಂಸಾರವು ಹೇಗೆ ನಿವೃತ್ತವಾಗುವುದೆಂಬುದನ್ನು ಪುನಃ–

ಅಜ್ಞಾನತಿಮಿರೋದ್ರಿಕ್ತಾ ಕಾಮರಕ್ಷಃ ಕ್ರಿಯಾಕರೀ ।
ಸಂಸಾರಕಾಲರಾತ್ರಿಸ್ತು ನಶ್ಯೇದದ್ವೈತಭಾನುನಾ ॥ (ಸಿ. ಶಿ. ೧೪–೧೨)

ಎಂಬುದಾಗಿ ಕತ್ತಲೆ–ಸೂರ್ಯರ ದೃಷ್ಟಾಂತ ಮೂಲಕವಾಗಿ ತಿಳಿಯಪಡಿಸಿದ್ದಾರೆ. ಅಜ್ಞಾನ ರೂಪವಾದ ಗಾಢಾಂಧಕಾರದಿಂದ ಹುಟ್ಟಿ ಕಾಮವ್ಯಾಪಾರ ರೂಪವಾದ ರಾಕ್ಷಸ ಕೃತ್ಯವನ್ನು ಮಾಡುತ್ತಿರುವ ಈ ಸಂಸಾರವೆಂಬ ಕಾಳರಾತ್ರಿಯು ಶಿವಾದ್ವೈತ ಜ್ಞಾನವೆಂಬ ಸೂರ್ಯನ ಉದಯವಾಗಲು ಒಡನೆಯೇ ಅಳಿದು ಹೋಗುವುದೆಂಬುದಾಗಿ ಪೂಜ್ಯರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಈ ಪೂರ್ವದಲ್ಲಿ ಸಂಸಾರಕ್ಕೆ ಸಾಗರದ ಉಪಮಾನವನ್ನು ಕೊಡಲಾಗಿತ್ತು, ಸದ್ಯಃ ಕಾಲರಾತ್ರಿಯ ಉಪಮಾನವನ್ನು ಕೊಡಲಾಗಿದೆ. ಹಗಲು ಮನುಷ್ಯನನ್ನು ಅಶನಾಧೀನನನ್ನಾಗಿ ಮಾಡಿದರೆ, ರಾತ್ರಿಯು ವ್ಯಸನಾಧೀನನನ್ನಾಗಿ ಮಾಡುತ್ತದೆ. ಹೀಗೆ ಅಶನ–ವ್ಯಸನಗಳಿಗೆ ಅಧೀನನಾದ ಮನುಷ್ಯನು ಶಿವಾದ್ವೈತ ತತ್ತ್ವವನ್ನು ತಿಳಿಯಲಾರನು. ಅಂತೆಯೇ ಅಕ್ಕ ಮಹಾದೇವಿಯು–

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು
ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು

ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ
ತಮ್ಮೊಳಗಿರ್ದ ಮಹಾಘನವನ್ನು ಅರಿಯದೇ
ಕೆಟ್ಟರಯ್ಯ ಚೆನ್ನಮಲ್ಲಿಕಾರ್ಜುನ ॥

ಎಂಬ ತನ್ನಯ ಈ ವಚನದಲ್ಲಿ ಆಶನ–ವ್ಯಸನಾಧೀನರಾದ ಜೀವಿಯ ಸ್ಥಿತಿಯನ್ನು ಬಹು ಹೃದಯಂಗಮವಾಗಿ ಚಿತ್ರಿಸಿದ್ದಾಳೆ. ಊರಿನ ಎಲ್ಲರ ಬಟ್ಟೆಗಳನ್ನು ತೊಳೆಯುವ ಹವ್ಯಾಸದಲ್ಲಿ ತೊಡಗಿದ ಅಗಸನೋರ್ವನು ಬಿಸಿಲಿನಲ್ಲಿ ಬೆಂದು ಬಾಯಾರಿದರೂ ತೊಳೆಯುವ ಕೆಲಸವನ್ನು ಬದಿಗಿರಿಸಿ ನೀರನ್ನು ಕುಡಿಯದೇ ನೀರಿನಲ್ಲಿಯೇ ನೀರಡಸಿ ಸತ್ತಂತೆ, ಅಶನ–ವ್ಯಸನಾಧೀನನಾದ ಜೀವಿಯು ತನ್ನಂತರಂಗದ ಆತ್ಮವನ್ನರಿಯದೇ ಜನನ ಮರಣಾತ್ಮಕವಾದ ಚಕ್ರದಲ್ಲಿಯೇ ಸಿಲುಕಿಕೊಂಡಿದ್ದಾನೆ. ಆತ್ಮತತ್ತ್ವವನ್ನರಿಯುವ ಜಿಜ್ಞಾಸುವು ಈ ಆಶನ–ವ್ಯಸನ ಪ್ರವೃತ್ತಿಯನ್ನು ಕಳೆದುಕೊಳ್ಳಲು ಪ್ರಯತ್ನಿಸಬೇಕು. ಕತ್ತಲೆಯಲ್ಲಿ ಮನುಷ್ಯನು ನಿಷಿದ್ಧ ಮಾರ್ಗದತ್ತ ಪ್ರವೃತ್ತನಾಗುವಂತೆ ಅಜ್ಞಾನಾಂಧ ಕಾರದಲ್ಲಿ ಮುಳುಗಿದ ಜೀವಿಯು ಸಹ ವಿಷಯಾಭಿಮುಖನಾಗುತ್ತಾನೆಂಬುದನ್ನು ಇಲ್ಲಿ ತಿಳಿಯಪಡಿಸಿ ಅದರಿಂದ ಪಾರಾಗುವ ಮಾರ್ಗವನ್ನು ಇಲ್ಲಿ ಉಪದೇಶಿಸಿದ್ದಾರೆ.

ಸಾಂಸಾರಿಕ ಜೀವಿಗಳು ಕಾಲರಾತ್ರಿಯಲ್ಲಿ ಮೋಹನಿದ್ರಾವಶೀಭೂತರಾಗಿ ವಿಷಯಾಭಿಮುಖರಾಗುತ್ತಿದ್ದರೆ ಯೋಗಿಗಳು ಯೋಗಬಲದಿಂದ ಮೋಹನಿದ್ರಾ ಮುಕ್ತರಾಗಿ ಎಚ್ಚರಾಗಿ ಇರುತ್ತಾರೆ. ಅಂತೆಯೇ ಭಗವದ್ಗೀತೆಯಲ್ಲಿ ''ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ'' ಎಂಬುದಾಗಿ ಯೋಗಿಗಳ ಎಚ್ಚರ ಸ್ಥಿತಿಯನ್ನು ಕುರಿತು ಉಪದೇಶಿಸಲಾಗಿದೆ. ಸರ್ವಸಾಮಾನ್ಯ ಜೀವಿಗಳು ಯಾವ ವಿಷಯದಲ್ಲಿ ನಿದ್ರಿತರಾಗಿರುತ್ತಾರೆಯೋ ಆ ವಿಷಯದಲ್ಲಿ ಯೋಗಿಗಳು ಎಚ್ಚರಾಗಿರು ತ್ತಾರೆ ಎಂಬುದು ಭಗವಂತನ ಉಕ್ತಿಯ ತಾತ್ಪರ್ಯವಾಗಿದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸಂಸಾರಕ್ಕೆ ಕಾಳರಾತ್ರಿ ಎಂಬುದಾಗಿ ಸಂಬೋಧಿಸಿದ್ದಾರೆ. ಈ ಕಾಳರಾತ್ರಿಯು ಅಜ್ಞಾನವೆಂಬ ಅಂಧಕಾರದಿಂದ ತುಂಬಿಕೊಂಡಿದೆ. ಹೀಗೆ ಅಜ್ಞಾನಾ ವೃತವಾದ ಜೀವಿಯ ಅಂತಃಕರಣದಲ್ಲಿ ವಾಸನಾರೂಪಿ ರಾಕ್ಷಸಿಯ ಘೋರ ನೃತ್ಯವು ಪ್ರಾರಂಭವಾಗುತ್ತದೆ. ಯಾವುದಕ್ಕೆ ಎಂದೂ ತೃಪ್ತಿಯಾಗುವುದಿಲ್ಲವೋ ಅದಕ್ಕೆ ರಾಕ್ಷಸ ಎಂಬುದಾಗಿ ಕರೆಯುತ್ತಾರೆ. ವಾಸನೆಗೆ ತೃಪ್ತಿ ಎಂಬುವುದೇ ಇರುವುದಿಲ್ಲ. ಅಂತೆಯೇ ಭರ್ತೃಹರಿಯು–''ಭೋಗಾ ನ ಭುಕ್ತಾಃ ವಯಮೇವ ಭುಕ್ತಾಃ'' ಎಂಬುದಾಗಿ ನುಡಿದಿದ್ದಾನೆ. 'ವಿಷಯಗಳನ್ನು ನಾನು ಭುಂಜಿಸಲಿಲ್ಲ, ವಿಷಯಗಳೇ ನನ್ನನ್ನು ಭುಂಜಿಸಿದವು' ಎಂಬುದು ಭರ್ತೃಹರಿಯ ಮಂತವ್ಯವಾಗಿದೆ.

ಯಯಾತಿ ಎಂಬ ರಾಜನು ಸಹ ತನ್ನ ಆಯುಷ್ಯ ಇರುವವರೆಗೆ ವಿಷಯಗಳನ್ನು ಉಪಭೋಗಿಸಿಯೂ ಅತೃಪ್ತನಾಗಿ ಪುನಃ ತನ್ನ ಮಕ್ಕಳ ಆಯುಷ್ಯವನ್ನು ಪಡೆದು ಆ ಆಯುಷ್ಯದಲ್ಲಿಯೂ ವಿಷಯೋಪಭೋಗದಿಂದ ತೃಪ್ತನಾಗದೇ ಹೋಗಿ ಅವನೂ ಸಹ–

ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥

ಈ ರೀತಿಯಾಗಿ ತನ್ನ ಅನುಭವವನ್ನು ವ್ಯಕ್ತಪಡಿಸಿದ್ದಾನೆ. ಧಗಧಗಿಸುವ ಅಗ್ನಿಕುಂಡದಲ್ಲಿ ಹವಿಸ್ಸು ಹಾಗೂ ಸಮಿತ್ತುಗಳನ್ನು ಹಾಕಿ ಆ ಅಗ್ನಿಯನ್ನು ಆರಿಸುವುದು ಹೇಗೆ ಅಸಾಧ್ಯವಾದುದೋ ಹಾಗೆಯೇ ವಾಂಛಿತ ವಿಷಯಗಳ ಉಪಭೋಗವನ್ನು ಮಾಡಿ ಕಾಮಾಗ್ನಿಯನ್ನು ಉಪಶಮನಗೊಳಿಸುವುದು ಸಹ ಹಾಗೇ ಅಸಾಧ್ಯವಾದುದು. ಇದರ ಉಪಶಮನಕ್ಕೆ ವಿವೇಕವೇ ಅಮೋಘವಾದ ಸಾಧನವು. ರಾತ್ರಿ ಇರುವವರೆಗೆ ರಾಕ್ಷಸರ ವ್ಯವಹಾರ ಇರುವಂತೆ, ಅಜ್ಞಾನಾಂಧಕಾರರೂಪವಾದ ಕಾಳರಾತ್ರಿ ಇರುವವರೆಗೆ ಕಾಮರೂಪಿ ರಾಕ್ಷಸನ ರಾಕ್ಷಸೀ ವ್ಯವಹಾರವು ಇದ್ದೇ ಇರುತ್ತದೆ. ಸೂರ್ಯೋದಯ ವಾದೊಡನೆ ಕತ್ತಲೆ ಹರಿದು ರಾಕ್ಷಸೀ ವ್ಯವಹಾರವು ನಿಲ್ಲುವಂತೆ, ಶಿವಾದ್ವೈತ ಜ್ಞಾನರೂಪ ವಾದ ಸೂರ್ಯೋದಯವಾದಾಗ ಅಜ್ಞಾನರೂಪಿ ಕಾಳರಾತ್ರಿಯು ನಷ್ಟವಾಗಿ ವಾಸನಾರೂಪಿ ರಾಕ್ಷಸವು ಮಾಯವಾಗುವುದು.

ಈ ಶಿವಾದ್ವೈತ ಜ್ಞಾನರೂಪೀ ಸೂರ್ಯೋದಯವಾಗುವುದಕ್ಕೋಸುಗ 'ಶಿವೋಽಹಂ' ಎಂಬ ಭಾವನೆಯನ್ನು ನಿರಂತರವಾಗಿ ಮಾಡುತ್ತಿರಬೇಕು. ಈ ಭಾವನೆಯ ಪರಿಣಾಮವಾಗಿ ಶಿವಯೋಗಿಯು ವಿಶ್ವವೆಲ್ಲವನ್ನು ಶಿವರೂಪವನ್ನಾಗಿ ಕಾಣತೊಡಗುವನು. ಇಂತಹ ಶಿವಾದ್ವೈತ ಜ್ಞಾನದಿಂದಲೇ ಸಂಸಾರವೆಂಬ ಕಾಳ ರಾತ್ರಿಯು ನಷ್ಟವಾಗುವುದು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶಿವಾದ್ವೈತ ಭಾವನೆಯೇ ಮುಕ್ತಿಯ ಶ್ರೇಷ್ಠವಾದ ಉಪಾಯ ಎಂಬುದನ್ನು ಪುನಃ–

ತಸ್ಮಾದದ್ವೈತಭಾವಸ್ಯ ಸದೃಶೋ ನಾಸ್ತಿಯೋಗಿನಾಮ್ ।
ಉಪಾಯೋ ಘೋರಸಂಸಾರಮಹಾತಾಪನಿವೃತ್ತಯೇ ॥

(ಸಿ. ಶಿ. ೧೪–೧೩)

ಈ ರೀತಿಯಾಗಿ ಶ್ರುತಪಡಿಸಿದ್ದಾರೆ. ಭಯಾನಕವಾದ ಸಂಸಾರದ ಬೇಗೆಯನ್ನು ಕಳೆದುಕೊಳ್ಳುವುದಕ್ಕೆ ಶಿವಾದ್ವೈತ ಭಾವನೆಗೆ ಸಮಾನವಾದ ಬೇರೊಂದು ಉಪಾಯವು ಇರುವುದಿಲ್ಲವೆಂಬುದು ಪೂಜ್ಯರ ಉಪದೇಶದ ತಾತ್ಪರ್ಯವಾಗಿದೆ.

ಘೋರವೆಂದರೆ ಭಯಾನಕ ಎಂದರ್ಥ. ಪೂಜ್ಯಪಾದರು ಸಂಸಾರಕ್ಕೆ ಘೋರ ವೆಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಈ ಸಂಸಾರವು ಪ್ರತಿಯೊಬ್ಬರನ್ನು ಅಂಜಿಸುತ್ತಲೇ ಇರುತ್ತದೆ. ಎಲ್ಲಿ ದ್ವೈತವಿದೆಯೋ ಅಲ್ಲಿ ಭಯವು ಕಟ್ಟಿಟ್ಟದ್ದೇ. ಅಂತೆಯೇ ಶ್ರುತಿಯಲ್ಲಿ ''ದ್ವಿತೀಯಾದ್ವೈ ಭಯಂಭವತಿ'' ಎಂಬುದಾಗಿ ಉಪದೇಶಿಸಲಾಗಿದೆ. ಮನುಷ್ಯನು ಯಾವಾಗಲೂ ಅನ್ಯರಿಂದ ಭಯಭೀತನಾಗುತ್ತಾನೆ. ವಿನಃ ತನ್ನಿಂದ ತಾನು ಭಯಭೀತ ನಾಗುವುದಿಲ್ಲ. ಆದ್ದರಿಂದ ಶಿವಯೋಗಿಯಾದವನು ಶಿವಾದ್ವೈತ ಭಾವನೆ ಯನ್ನು ಅನುಸಂಧಾನಮಾಡಿ ದ್ವೈತಭಾವನೆಯನ್ನು ಕಳೆದುಕೊಳ್ಳುತ್ತಾನೆ. ದ್ವೈತ ಭಾವನೆಯು ನಿವೃತ್ತವಾಯಿತೆಂದರೆ ಎಲ್ಲ ಭಯಗಳು ತನ್ನಿಂದ ತಾನೇ ದೂರವಾಗುವವು. ಆದಕ್ಕಾಗಿಯೇ ಈ ಘೋರವಾದ ಸಂಸಾರದ ಮಹಾತಾಪದ ನಿವೃತ್ತಿಗೆ ಶಿವಾದ್ವೈತ ಭಾವನೆಯೇ ಶ್ರೇಷ್ಠ ಉಪಾಯವೆಂಬುದಾಗಿ ಪೂಜ್ಯರು ಅಭಿಪ್ರಾಯಪಟ್ಟಿದ್ದಾರೆ.

ಅದ್ವೈತ ಭಾವನೆಯ ಮಹತಿಯನ್ನೇ ಇನ್ನಷ್ಟು ಮತ್ತಷ್ಟು ವಿಸ್ತಾರಗೊಳಿಸುತ್ತ ಪೂಜ್ಯಪಾದರು–

ಅದ್ವೈತಭಾವನಾಜಾತಂ ಕ್ಷಣಮಾತ್ರೇಽಪಿ ಯತ್ಸುಖಮ್ ।
ತತ್ಸುಖಂ ಕೋಟಿವರ್ಷೇಣ ಪ್ರಾಪ್ಯತೇ ನೈವ ಭೋಗಿಭಿಃ ॥

(ಸಿ. ಶಿ. ೧೪–೧೪)

ಈ ತೆರನಾಗಿ ಆದೇಶವಿತ್ತಿದ್ದಾರೆ. ಒಂದು ಕ್ಷಣಕಾಲ ಅದ್ವೈತ ಭಾವನೆಯನ್ನು ತಾಳುವುದರಿಂದ ಉಂಟಾಗುವ ಯಾವ ಆನಂದವುಂಟೋ ಅಂತಹ ಆನಂದವು ರಾಜ್ಯ ಭೋಗವನ್ನು ಅನುಭವಿಸುವ ಭೋಗಿಗಳಿಗೆ ಒಂದು ಕೋಟಿ ವರ್ಷದಲ್ಲಿಯೂ ಲಭಿಸಲಾರದು. ಪೂಜ್ಯರ ಈ ಆದೇಶವನ್ನು ಅನುಲಕ್ಷಿಸಿದಾಗ ಶಿವಾದ್ವೈತ ಭಾವನೆಯ ಮಹತಿಯು ಎಷ್ಟೆಂಬುದು ತಿಳಿದುಬರುತ್ತದೆ. ಅಂತೆಯೇ ಶಿವಯೋಗಿಗಳು ವೈಷಯಿಕ ಭೋಗದತ್ತ ಲಕ್ಷ್ಯ ಹರಿಸದೇ ಮನದಲ್ಲಿ ಶಿವಾದ್ವೈತ ಭಾವನೆಯನ್ನು ತಾಳಿ ಅಪಾರವಾದ ಶಾಂತಿಯನ್ನು ಅನುಭವಿಸುತ್ತಾರೆ. ಹೀಗೆ ಐಕ್ಯಸ್ಥಲದ ಶಿವಯೋಗಿಯ ಐಕ್ಯ ಸ್ಥಿತಿಯ ಬಗ್ಗೆ ಸವಿಸ್ತಾರವಾಗಿ ಉಪದೇಶಿಸಿದ ಪೂಜ್ಯಪಾದರು ಈ ಅವಾಂತರ ಸ್ಥಲವನ್ನು ಪೂರ್ಣಗೊಳಿಸುತ್ತ–

ಚಿತ್ತವೃತ್ತಿಸಮಾಲೀನಜಗತಃ ಶಿವಯೋಗಿನಃ ।
ಶಿವಾನಂದಪರಿಸ್ಫೂರ್ತಿರ್ಮುಕ್ತಿರಿತ್ಯಭಿಧೀಯತೇ ॥

(ಸಿ. ಶಿ. ೧೪–೧೫)

ಈ ತೆರನಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ತನ್ನ ಮನೋ ವ್ಯಾಪಾರದಲ್ಲಿ ಸಕಲ ಜಗತ್ತು ಅಡಗಿಹೋಗಿರುವ ಶಿವಯೋಗಿಗೆ ಶಿವಾದ್ವೈತ ಭಾವನೆ ಯಿಂದ ಉಂಟಾಗುವ ಆನಂದಾಭಿವ್ಯಕ್ತಿಯೇ ಮುಕ್ತಿ ಎಂಬುದಾಗಿ ಕರೆಯಲ್ಪಡುತ್ತದೆ. ಭೋಗ್ಯ ವಸ್ತುಗಳಿಂದ ತನ್ನ ಚಿತ್ತವನ್ನು ನಿವೃತ್ತಮಾಡಿಕೊಂಡ ಶಿವಯೋಗಿಗೆ ಶಿವಾನಂದ ಸ್ಫುರಣ ಉಂಟಾಗುವುದು. ಆ ಸ್ಫುರಣದಲ್ಲಿಯೇ ಶಿವಯೋಗಿಯು ತಲ್ಲೀನನಾಗುತ್ತಾನೆ. ಆತನ ಈ ಪ್ರಶಾಂತ ಸ್ಥಿತಿಯೇ ಮುಕ್ತಿ ಕೈವಲ್ಯವೆಂಬುದಾಗಿ ಕರೆಯಲ್ಪಡುತ್ತದೆ. ಯಾವ ದ್ವೈತ ಭಾವನೆಯೂ ಇಲ್ಲದೇ ಏಕಾಕಿತನದ ಸ್ಥಿತಿಯು ಆತನಿಗೆ ಪ್ರಾಪ್ತವಾಗಿರುವುದರಿಂದ ಇದಕ್ಕೆ ಐಕ್ಯಸ್ಥಿತಿ ಅಥವಾ ಐಕ್ಯಸ್ಥಲ ಎಂಬುದಾಗಿ ಕರೆಯುತ್ತಾರೆ. ಇಂತಹ ಐಕ್ಯಸ್ಥಿತಿಯು ಸರ್ವರಿಗೂ ಉಂಟಾಗಲಿ ಎಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೬ ಜುಲೈ ೧೯೯೨ -
(ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೧

# ಆಚಾರಸಂಪತ್ತಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ-

ಶಿವಾದ್ವೈತ ಭಾವನೆಯಿಂದ ಭೇದ ಬುದ್ಧಿಯು ನಷ್ಟವಾಗಿ ಶಿವಸ್ವರೂಪದೊಂದಿಗೆ ಸಮರಸ ಭಾವವನ್ನು ಹೊಂದುವ ಸ್ಥಿತಿಯೇ ಐಕ್ಯಸ್ಥಿತಿ ಎಂಬುದಾಗಿ ಈ ಹಿಂದೆ ನೀವೆಲ್ಲ ಶ್ರವಣ ಮಾಡಿದ್ದೀರಿ. ಐಕ್ಯ ಸ್ಥಲದ ಎರಡನೆಯ ಅವಾಂತರ ಸ್ಥಲವೇ ಆಚಾರಸಂಪತ್ತಿ ಸ್ಥಲವು. ಈ ಸ್ಥಲದಲ್ಲಿ ಜ್ಞಾನಿಯ ಆಚಾರ–ವಿಚಾರಗಳ ಬಗ್ಗೆ ವಿವೇಚಿಸಲಾಗಿದೆ. ಜ್ಞಾನದ ನಂತರವೂ ಪ್ರಾರಬ್ಧಕರ್ಮವು ಅವಶಿಷ್ಟವಾಗಿರುವುದರಿಂದ ಅದು ಪರಿಸಮಾಪ್ತಿ ಯಾಗುವವರೆಗೆ ಜ್ಞಾನಿಯ ದೈನಂದಿನ ಕ್ರಿಯೆಗಳು ನಡೆಯುತ್ತಲೇ ಇರುತ್ತವೆ. ಜ್ಞಾನದಿಂದ ಸಂಚಿತ ಆಗಾಮಿ ಕರ್ಮಗಳು ನಷ್ಟಗಳಾದರೂ ಪ್ರಾರಬ್ಧವು ಮಾತ್ರ ನಾಶವಾಗದು. ಈ ಕರ್ಮದ ಉಪಭೋಗವನ್ನು ಜ್ಞಾನಿ–ಅಜ್ಞಾನಿಗಳೀರ್ವರೂ ಅನುಭವಿಸಲೇ ಬೇಕಾಗುತ್ತದೆ. ಕೈಯಿಂದ ಒಗೆದ ಕಲ್ಲು ಅದರ ವೇಗ ಇರುವವರೆಗೆ ಮುಂದೆ ಸಾಗುತ್ತಲೇ ಇರುವಂತೆ, ಪ್ರಾರಬ್ಧಕರ್ಮ ಇರುವವರೆಗೆ ದೇಹಯಾತ್ರೆಯು ನಿಲ್ಲುವುದಿಲ್ಲ. ಹೀಗೆ ಶಿವಜ್ಞಾನ ಸಂಪನ್ನನಾದ ಶಿವಯೋಗಿಯು ತನ್ನ ಜೀವಿತಾವಧಿಯಲ್ಲಿ ಯಾವ ರೀತಿಯಾದ ಆಚಾರ–ವಿಚಾರವುಳ್ಳವನಾಗಿರುತ್ತಾನೆ ಅವನಿಂದ ಆಚರಿಸಲ್ಪಟ್ಟ ಶುಭಾಶುಭ ಕರ್ಮಗಳ ಲೇಪವು ಆತನಿಗೆ ಆಗುವುದೇ ಇಲ್ಲವೋ ಎಂಬುದನ್ನು ತಿಳಿಸುವುದಕ್ಕಾಗಿಯೇ ಪೂಜ್ಯಪಾದರು–

> ಶಿವೈಕಭಾವನಾಪನ್ನಶಿವತ್ವೋ್ ದೇಹವಾನಪಿ ।
> ದೇಶಿಕೋ ಹಿ ನ ಲಿಪ್ಯೇತ ಸ್ವಾಚಾರ್ಯೈಃ ಸೂತಕಾದಿಭಿಃ ॥

(ಸಿ. ಶಿ. ೧೪–೧೬)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ಶಿವಜ್ಞಾನ ಸಂಪನ್ನನಾದ ಶಿವಯೋಗಿಯು ಶಿವಸ್ವರೂಪನೇ ಆಗಿರುವುದರಿಂದ ಆತನು ದೇಹಧಾರಿಯಾಗಿದ್ದರೂ ದೇಹಾಭಿಮಾನ ಶೂನ್ಯನಾಗಿರುತ್ತಾನೆ. ಅಂತೆಯೇ ಆತನು ತನ್ನಿಂದ ಆಚರಿಸಲ್ಪಟ್ಟ ಶುಭಾಶುಭ ಕರ್ಮ ಗಳ ಫಲದಿಂದ ಲಿಪ್ತನಾಗುವುದಿಲ್ಲ. ಸೂರ್ಯ ಹಾಗೂ ಅಗ್ನಿಯು ಸರ್ವರಸಗಳನ್ನು ಭುಂಜಿಸಿದರೂ ಹೇಗೆ ಅಲಿಪ್ತವಾಗಿರುತ್ತವೋ ಅದರಂತೆ ಶಿವಯೋಗಿಯು ಸರ್ವ ವಿಷಯಗಳನ್ನು ಭುಂಜಿಸಿದರೂ ನಿರ್ಲಿಪ್ತನೇ ಆಗಿರುತ್ತಾನೆ ಎಂಬುದನ್ನು ಶಿವರಹಸ್ಯ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ನಾವು ವಾಸಿಸುವ ಭೂಮಿಗೆ ಕರ್ಮಭೂಮಿ ಎಂಬುದಾಗಿ ಕರೆದಿದ್ದಾರೆ. ಇಲ್ಲಿ ವಾಸಿಸುವ ಪ್ರತಿಯೊಬ್ಬ ದೇಹಧಾರಿಯು ಒಂದಿಲ್ಲೊಂದು ಕರ್ಮವನ್ನು ಮಾಡುತ್ತಲೇ ಇರಬೇಕಾಗುವುದು. ಅಜ್ಞಾನಿಯು ಮಾಡುವ ಕರ್ಮವಿಧಾನಕ್ಕಿಂತಲೂ ಜ್ಞಾನಿಯು

ಮಾಡುವ ಕರ್ಮ ಪದ್ಧತಿಯು ವಿಲಕ್ಷಣವಾಗಿರುತ್ತದೆ. ಅಜ್ಞಾನಿಯು ದೇಹ, ಕರಣ ಮತ್ತು ಕರ್ಮಗಳ ಅಭಿಮಾನವನ್ನು ತಾಳಿದವನಾಗಿ ಕರ್ಮವನ್ನು ಮಾಡುತ್ತಿರುತ್ತಾನೆ. ಅವನಲ್ಲಿರುವ ಅಭಿಮಾನದಿಂದಲೇ ಅವನಿಗೆ ಕರ್ಮಫಲದ ಲೇಪವಾಗುವುದು. ಆದರೆ ಜ್ಞಾನಿಯು ಅದಾವುದರ ಅಭಿಮಾನವಿಲ್ಲದೇ ಮತ್ತು ಕರ್ತೃತ್ವ ಭಾವನೆಯೂ ಇಲ್ಲದೇ ಕರ್ಮವನ್ನು ಆಚರಿಸುತ್ತಿರುವುದರಿಂದ ಆತನಿಗೆ ಶುಭಾಶುಭ ಕರ್ಮ ಫಲಗಳ ಲೇಪ ವಾಗುವದಿಲ್ಲ. ನಾಟಕದಲ್ಲಿ ರಾಮನ ಪಾತ್ರಾಭಿನಯವನ್ನು ಮಾಡುವ ಓರ್ವ ಕಲಾಕಾರನು ಪ್ರೇಕ್ಷಕರ ಮುಂದೆ ತನ್ನ ಕುಶಲ ಅಭಿನಯವನ್ನು ವ್ಯಕ್ತಪಡಿಸುವಾಗ ಸುಖ–ದುಃಖ ಪ್ರಸಂಗಗಳಿಂದ ಪ್ರೇಕ್ಷರನ್ನು ಸುಖಿ–ದುಃಖಿಗಳನ್ನಾಗಿ ಮಾಡುತ್ತಿದ್ದರೂ ತಾನು ಮಾತ್ರ ಆ ಸುಖ–ದುಃಖಗಳಿಂದ ಅಂತರಂಗದಲ್ಲಿ ನಿರ್ಲಿಪ್ತನೇ ಆಗಿರುತ್ತಾನೆ. ಅದರಂತೆ ಜ್ಞಾನಿಯಾದವನು ಕರ್ತೃತ್ವ ಭಾವನೆಯಿಂದ ಕರ್ಮವನ್ನು ಆಚರಿಸದೇ ಅಭಿನೇತೃತ್ತ್ವ ಭಾವನೆಯಿಂದ ಆಚರಿಸುತ್ತಿರೋಣದರಿಂದ ಆತನು ಆಯಾ ಕರ್ಮಫಲ ಗಳಿಂದ ಅಸಂಗಿಯೂ, ಅಲಿಪ್ತನೂ ಆಗಿರುತ್ತಾನೆ.

ಕರ್ಮಗಳನ್ನು ಮಾಡಿಯೂ ಕರ್ಮಗಳ ಫಲದಿಂದ ಅಲಿಪ್ತನಾಗಿದ್ದರೆ ಅವನಿಗೇನೇ ಕುಶಲಕರ್ಮಿ ಎಂಬುದಾಗಿ ಕರೆಯುತ್ತಾರೆ. ಹೀಗೆ ಕೌಶಲ್ಯಪೂರ್ವಕವಾಗಿ ಕರ್ಮಗಳನ್ನು ಆಚರಿಸುವ ಪದ್ಧತಿಗೆ ಗೀತೆಯಲ್ಲಿ 'ಯೋಗ' ಎಂಬುದಾಗಿ ಕರೆಯುತ್ತಾರೆ. ''ಯೋಗಃ ಕರ್ಮಸು ಕೌಶಲಮ್'' ಎಂಬುದೇ ಆ ಗೀತೋಕ್ತಿಯು. ಜಲದಲ್ಲಿಯೇ ಜನಿಸಿದ ತಾವರೆಯು ಜಲದಿಂದ ಅಲಿಪ್ತವಾಗಿರುವಂತೆ ಪ್ರಪಂಚದಲ್ಲಿರುವ ಶಿವಯೋಗಿಯು ಪ್ರಪಂಚದಿಂದ ಅಲಿಪ್ತನಾಗಿರುತ್ತಾನೆ. ತೆಂಗಿನಕಾಯಿಯಲ್ಲಿಯ ಕೊಬ್ಬರಿಯು ಒಣಗಿ ಗಿಟುಗವಾದಾಗ ಅದು ಹೊರಗಿನ ಚಿಪ್ಪಿಗೆ ಅಂಟಿಕೊಂಡಿರದೆ ಅದರೊಳಗಿದ್ದೂ ಅದರಿಂದ ಹೇಗೆ ಪ್ರಥಕ್ಕಾಗಿರುತ್ತದೋ ಹಾಗೆಯೇ ಜ್ಞಾನಿಯಾದವನು ದೇಹ–ಕರಣಾದಿಗಳ ಮಧ್ಯದಲ್ಲಿದ್ದೂ ಅವುಗಳಿಂದ ವ್ಯವಹರಿಸುತ್ತಿದ್ದರೂ ಅವುಗಳ ಮೇಲೆ ಅಭಿಮಾನ ಇಲ್ಲದಿರುವುದರಿಂದ ಗಿಟಗದಂತೆ ಅಲಿಪ್ತನಾಗಿರುತ್ತಾನೆ. ಅಜ್ಞಾನಿಯಾದ ಮನುಷ್ಯನು ಹಸಿಯ ತೆಂಗಿನಕಾಯಿದ್ದಂತೆ. ಅದರಲ್ಲಿರುವ ಕೊಬ್ಬರಿಯು ಹೊರಗಿನ ಚಿಪ್ಪಿಗೆ ಅಂಟಿಕೊಂಡಿರುವಂತೆ ಈತನು ತನು–ಕರಣಾದಿಗಳೊಂದಿಗೆ ಹೊಂದಿ ಕೊಂಡಿರೋಣದರಿಂದ ಅವುಗಳಿಂದುಂಟಾದ ಶುಭಾ–ಶುಭ ಕರ್ಮಗಳ ಫಲ ಭೋಗಿಯಾಗುತ್ತಾನೆ.

ಸಂಕಲ್ಪ ಪೂರ್ವಕವಾಗಿ ಮಾಡಿದ ಕರ್ಮಗಳು ಫಲಪ್ರದಗಳಾಗುವವೇ ವಿನಃ ಸಂಕಲ್ಪವಿಲ್ಲದೇ ಸಹಜವಾಗಿ ಜನಿಸಿದ ಕರ್ಮಗಳು ಫಲದಾಯಕಗಳಾಗಲಾರವು. ಅಜ್ಞಾನಿಯು ಸಂಕಲ್ಪ ಪೂರ್ವಕವಾಗಿ ಕರ್ಮಗಳನ್ನು ಮಾಡಿದರೆ ಜ್ಞಾನಿಗೆ ಅದಾವ ಸಂಕಲ್ಪವೂ ಇಲ್ಲದೇ ಕರ್ಮಗಳು ಘಟಿಸುವವು. ಅಂತೆಯೇ ಅಜ್ಞಾನಿಯಂತೆ ಜ್ಞಾನಿಯು ಕರ್ಮಫಲ ಸಂಗಿಯಾಗಲಾರನು.

ತೋರುವ ಈ ವಿಶ್ವವು ಒಂದು ರಂಗಭೂಮಿಯಾಗಿದೆ. ಈ ಪ್ರಪಂಚದ ಸೃಷ್ಟಿಯನ್ನು ಮಾಡಿದ ಪರಮಾತ್ಮನೂ ಸಹ ಒಬ್ಬ ಶ್ರೇಷ್ಠ ನಟನೇ ಆಗಿದ್ದಾನೆ. ಅಂತೆಯೇ

ಅವನಿಗೆ 'ನಟರಾಜ' ಎಂಬುದಾಗಿ ಕರೆದಿದ್ದಾರೆ. ವಿಶ್ವದ ಈ ವ್ಯವಹಾರವೆಲ್ಲವೂ ಅವನದೊಂದು ಲೀಲಾನಾಟಕ. ಇಷ್ಟೆಲ್ಲವನ್ನು ಮಾಡಿದರೂ ನಾನು ಮಾಡಿದೆನೆಂಬ ಅಭಿಮಾನ ಅಹಂಕಾರಗಳ ಲವಲೇಶವೂ ಆತನಲ್ಲಿಲ್ಲ. ಅಂತೆಯೇ ಆತನು ಸದಾ ಆನಂದರೂಪನಾಗಿ ಇದ್ದಾನೆ. ಪರಮಾತ್ಮನ ಈ ವಿಶಾಲ ನಾಟಕದಲ್ಲಿ ತಾನೊಂದು ಪಾತ್ರವನ್ನು ಅಭಿನಯಿಸುವ ಅಜ್ಞಜೀವಿಯು ಮಾತ್ರ. ಅನೇಕ ಅಭಿಮಾನ-ಅಹಂಕಾರಗಳಿಂದ ವ್ಯಾಪ್ತನಾಗಿ ಸದಾ ದುಃಖಿತನಾಗಿಯೇ ಇರುತ್ತಾನೆ. ಪ್ರತಿ ಕ್ಷಣ-ಕ್ಷಣಕ್ಕೂ ನಾನು ಮಾಡಿದೆ, ನಾನು ಮಾಡಿದೆ ಎಂಬುದಾಗಿ ತೋರುವ ಅವನಲ್ಲಿಯ ಅಭಿಮಾನವೇ ಅವನ ದುಃಖಕ್ಕೆ ಮೂಲ ಕಾರಣವಾಗಿರುತ್ತದೆ. ಪ್ರಚಾರ-ಪ್ರಸಾರಗಳಿಲ್ಲದೆ ಕಾರ್ಯವನ್ನು ಮಾಡುವ ಪದ್ಧತಿಯು ಜೀವನಿಗೆ ತಿಳಿದಿಲ್ಲ. ಆತನು ಯಾವುದೇ ಸಣ್ಣ-ಪುಟ್ಟ ಕಾರ್ಯಗಳನ್ನು ಮಾಡಿದರೂ ಅದರ ಪ್ರಚಾರ-ಪ್ರಸಾರದಲ್ಲಿಯೂ ತನ್ನ ಶಕ್ತಿಯನ್ನು ಹ್ರಾಸ ಮಾಡಿಕೊಳ್ಳುತ್ತಾನೆ. ಪ್ರಚಾರ ಮಾಡದೆ ಕಾರ್ಯವನ್ನೆಸಗುವ ಕೌಶಲ್ಯವನ್ನು ಇಂದು ಪ್ರತಿಯೊಬ್ಬರೂ ಕಲಿಯುವ ಅವಶ್ಯಕತೆಯಿದೆ. ಈ ಗುಣವನ್ನು ಪ್ರಕೃತಿ ಹಾಗೂ ಪರಮಾತ್ಮನಿಂದಲೇ ಕಲಿಯಬೇಕು. ಪ್ರಕೃತಿಯು ಮೌನವಾಗಿದ್ದೇ ಎಲ್ಲವನ್ನೂ ಸಾಧಿಸುತ್ತದೆ. ಭೂಮಿಯಲ್ಲಿ ನಾವು ಬೀಜವನ್ನು ಬಿತ್ತಿದಾಗ ಕೆಲವು ಕಾಲದ ನಂತರ ಆ ಬೀಜವು ಅಂಕುರಿಸಿ ಬೆಳೆದು ಹೆಮ್ಮರವಾಗಿ ಅನಂತ ಕಾಲದವರೆಗೆ ಪುಷ್ಪ, ಫಲ ಮತ್ತು ನೆರಳನ್ನು ನಿರಂತರವಾಗಿ ಜನರಿಗೆ ಕೊಡುತ್ತಿದ್ದರೂ ನಾನಿಷ್ಟೆಲ್ಲ ಕೊಡುತ್ತಿದ್ದೇನೆಂಬ ಒಂದು ಶಬ್ದವನ್ನೂ ಸಹ ನಾವು ಕೇಳುವುದಿಲ್ಲ. ಇಂತಹ ವಿಶಾಲವಾದ ವಿಶ್ವವನ್ನು ರಚಿಸಿಯೂ ಸಹ ಪರಮಾತ್ಮನು ಮೌನಿಯಾಗಿದ್ದಾನೆ. ಅದರಂತೆ ಶಿವಯೋಗಿಯು ತನ್ನೆಲ್ಲ ಮಾನಸಿಕ ವೃತ್ತಿಗಳಲ್ಲಿ ಮೌನವನ್ನು ಸಾಧಿಸಿ ಮುನಿಯಾಗಿರುವುದರಿಂದ ಪ್ರಕೃತಿ ಪರಮಾತ್ಮರಂತೆ ಆತನು ಅಲಿಪ್ತನೇ ಆಗಿರುತ್ತಾನೆ. ಮನುಷ್ಯನಿಗೆ ಮೌನದ ಮರ್ಮವೇ ಅರ್ಥವಾಗಿಲ್ಲ. ಆತನು ಯಾವಾಗಲೂ ಚೀರುತ್ತಾ, ಒದರುತ್ತ, ಅಳುತ್ತ, ನಗುತ್ತಲೇ ಇರುತ್ತಾನೆ. ಇನ್ನು ಕೆಲವರು ನಿದ್ರೆಯಲ್ಲಿಯೂ ಸಹ ಬಡಬಡಿಸುತ್ತಲೇ ಇರುತ್ತಾರೆ. ನಿದ್ರೆಯಲ್ಲಿ ಮೌನನಾಗದ ಈ ಮನುಷ್ಯ ಎಚ್ಚರಿಕೆಯಲ್ಲಿ ಅದು ಹೇಗೆ ತಾನೇ ಮೌನಿಯಾದಾನು ?

ಮನುಷ್ಯನು ಅಚ್ಚ ಸುಖಿಯಾಗಬೇಕಾದರೆ ಪ್ರಪಂಚದಲ್ಲಿದ್ದೂ ಇಲ್ಲದಿರುವ ಕಲೆಯನ್ನು ಸಾಧಿಸಿಕೊಳ್ಳಬೇಕಾಗುವುದು. ಉತ್ತರ ಪ್ರದೇಶದ ಹಿಂದೀ ಸಂತ ಕವಿಯಾದ ತುಲಸೀದಾಸರು-

ತುಲಸೀ ಜಗಮೆ ಯ್ಯೊ ರಹೋ, ಜ್ಯೆಸೆ ರಸನಾ ಮುಖಮಾಹಿ ।
ಖಾತೀ ಘೀ ಔರ್ ತೇಲ ನಿತ, ಫಿರ್ ಭೀ ಚಿಕನೀ ನಾಹಿ ॥

ಈ ರೀತಿಯಾಗಿ ಬದುಕುವ ಕಲೆಯನ್ನು ಬೋಧಿಸಿದ್ದಾರೆ. ಮನುಷ್ಯನ ಬಾಯಲ್ಲಿರುವ ನಾಲಿಗೆಯು ದಿನಾಲೂ ಎಣ್ಣೆ, ತುಪ್ಪಗಳನ್ನು ಭುಂಜಿಸುತ್ತಿದ್ದರೂ ಅವುಗಳ ಜಿಗುಟುತನವನ್ನು ತನ್ನ ಮ್ಯೆಗೆ ಹೇಗೆ ಅಂಟಿಸಿಕೊಳ್ಳದೇ ಇರುತ್ತದೆಯೋ ಹಾಗೆಯೇ ಜ್ಞಾನಿಯಾದವನು ಶುಭಾ-ಶುಭ ಕರ್ಮಗಳನ್ನು ಆಚರಿಸಿಯೂ ಅಲಿಪ್ತನಾಗಿರುತ್ತಾನೆ.

ಕಬೀರದಾಸನೂ ಸಹ ತನ್ನ ಜೀವನದುದ್ದಕ್ಕೂ ದೇಹ, ಮನ, ಬುದ್ಧಿಗಳನ್ನು ಉಪಯೋಗಿಸಿಕೊಂಡು ವ್ಯವಹರಿಸಿದರೂ ಅವುಗಳನ್ನು ಪರಿಶುದ್ಧವಾಗಿ ಇಟ್ಟು ಕೊಂಡಿದ್ದನೆಂಬುದು ಅವನ ಉಕ್ತಿಯಿಂದ ಕಂಡುಬರುತ್ತದೆ. ''ಜ್ಯೋ ಕಿ ತ್ಯೋ ದರಿ ದೀನೀ ಚದರಿಯಾ'' ಇದು ಕಬೀರನ ಉಕ್ತಿಯಾಗಿದೆ. ಕಬೀರದಾಸನು ತನ್ನ ಮರಣದ ಸಮಯದಲ್ಲಿ ಈ ಉಕ್ತಿಯನ್ನು ಪರಮೇಶ್ವರನನ್ನು ಉದ್ದೇಶಿಸಿ ಹೇಳಿದ್ದಾನೆ. 'ಹೇ ಪರಮಾತ್ಮನೇ ನೀನು ಕೊಟ್ಟ ಚಾದರನ್ನು ನೀನು ಕೊಡುವಾಗ ಹೇಗೆ ಕೊಟ್ಟಿದ್ದೆಯೋ ಹಾಗೆಯೇ ನಿನಗೆ ಪ್ರತಿಯಾಗಿ ಸಮರ್ಪಿಸುತ್ತಿದ್ದೇನೆ ಎಂಬುದು ಕಬೀರೋಕ್ತಿಯ ಅರ್ಥವಾಗಿದೆ. ಕಬೀರದಾಸನು ಪರಮಾತ್ಮನಿಂದ ಪ್ರಾಪ್ತಗಳಾದ ದೇಹ–ಮನ– ಬುದ್ಧಿ ಗಳನ್ನು ಜೀವನದುದ್ದಕ್ಕೂ ಬಳಸಿಯೂ ಅವುಗಳನ್ನು ಅಷ್ಟೇ ಶುದ್ಧ ಹಾಗೂ ಅಷ್ಟೇ ಪವಿತ್ರವಾಗಿ ಪ್ರತಿ ಸಮರ್ಪಣ ಮಾಡಿರಬೇಕಾದರೆ ಆತನ ಜೀವನ ಶೈಲಿಯು ಎಷ್ಟು ಪರಿಶುದ್ಧವಾಗಿರಬೇಕೆಂಬುದನ್ನು ಊಹಿಸಬೇಕಾಗುವುದು. ಸಾಮಾನ್ಯ ಜೀವಿಗಳಾ ದರೋ ಈ ತನು–ಮನ–ಬುದ್ಧಿಗಳನ್ನು ತನಗೆ ದೊರೆತ ನೂರು ವರುಷಗಳಲ್ಲಿ ಎಷ್ಟು ಕೆಡಿಸಬೇಕೋ ಅಷ್ಟು ಕೆಡಿಸಿ ಅವುಗಳನ್ನು ಅಮಂಗಲಗಳನ್ನಾಗಿ ಮಾಡಿ ಬಿಡುವುದನ್ನು ಕಾಣುತ್ತೇವೆ.

ಒಂದು ಊರಿನಲ್ಲಿ ಇಬ್ಬರು ಹೆಣ್ಣು ಮಕ್ಕಳು ಅನ್ಯೋನ್ಯ ಗೆಳತಿಯರಾಗಿ ಕಾಲ ಕಳೆಯುತ್ತಿದ್ದರು. ಒಮ್ಮೆ ಸಮೀಪದ ಊರಿನ ಜಾತ್ರೆಗೆ ಹೋಗುವ ಪ್ರಸಂಗ ಬಂದಾಗ ಅವರೀರ್ವರಲ್ಲಿ ಓರ್ವಳಿಗೆ ಹೊಸವಸ್ತ್ರ ಇರಲಿಲ್ಲ. ಆಗ ಮತ್ತೋರ್ವಳು ತನ್ನ ಹೊಸದೊಂದು ರೇಶ್ಮೆಯ ಸೀರೆಯನ್ನು ಅವಳಿಗೆ ಉಡಲಿಕ್ಕೆ ಕೊಟ್ಟು ಜಾತ್ರೆಗೆ ಕರೆದುಕೊಂಡು ಹೋದಳು. ಜಾತ್ರೆಯ ಗದ್ದಲದಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಅಗಲಿದರು. ಗೆಳತಿಯು ಕೊಟ್ಟ ಹೊಸ ರೇಶ್ಮೆಸೀರೆಯನ್ನುಟ್ಟ ಆ ಹೆಣ್ಣುಮಗಳು ಎಲ್ಲೆಡೆ ತಿರುಗಾಡಿ ಮನೆಗೆ ಬರುವಾಗ ತನ್ನಲ್ಲಿರುವ ಕೆಲವು ಹಣದಿಂದ ಮಿಠಾಯಿ ಖರೀದಿಸಲು ಹೋಗಿ ಅಂಗಡಿಯಲ್ಲಿಯ ಜಿಲೇಬಿ, ಚಕ್ಕಲಿ, ಬಜಿ, ಮುಂತಾದವುಗಳನ್ನು ಖರೀದಿಸಿ ಕೈಚೀಲವಿಲ್ಲದ್ದರಿಂದ ಸೀರೆಯ ಉಡಿಯಲ್ಲಿಯೇ ಎಲ್ಲವನ್ನೂ ಹಾಕಿಸಿಕೊಂಡು ಮನೆಗೆ ಬಂದಳು. ಮನೆಗೆ ಬರುವಷ್ಟರಲ್ಲಿ ಆ ಸೀರೆಯ ತುಂಬೆಲ್ಲ ಜಿಬಟು ಎಣ್ಣೆ ಅಂಟಿಕೊಂಡಿತ್ತು. ಗೆಳತಿಗೆ ಆ ಸೀರೆಯನ್ನು ಮರಳಿ ಕೊಟ್ಟಾಗ ಅದರ ಸ್ಥಿತಿಯನ್ನು ಕಂಡ ಆ ಹೆಣ್ಣುಮಗಳು ಇನ್ನೆಂದೂ ಈಕೆಗೆ ಉತ್ತಮ ವಸ್ತ್ರವನ್ನು ಕೊಡಬಾರದೆಂಬ ಪಶ್ಚಾತ್ತಾಪವಾಯಿತು. ವಸ್ತ್ರದ ಮಹತ್ವವನ್ನರಿಯದ ಹೆಣ್ಣುಮಗಳು ವಸ್ತ್ರವನ್ನು ಮಲಿನ ಗೊಳಿಸಿದಂತೆ, ಪರಮಾತ್ಮನ ಪ್ರಾಪ್ತಿಗಾಗಿ ದೊರೆತ ದೇಹ–ಮನ–ಬುದ್ಧಿಗಳನ್ನು ಪರಮಾತ್ಮನ ಪೂಜಾದಿಗಳಿಗೆ ಉಪಯೋಗಿಸದೆ ಸಾಂಸಾರಿಕ ಭೋಗಕ್ಕಾಗಿ ಬಳಸಿ ಅದೆಷ್ಟೋ ಜೀವಿಗಳು ಮಲಿನಾತ್ಮರಾಗಿಯೇ ದೇಹವನ್ನು ತ್ಯಜಿಸುತ್ತಾರೆ. ಇಂತಹ ಅಜ್ಞ ಜೀವಿಗಳಿಗೆ ಬೋಧಿಸುವದಕ್ಕಾಗಿಯೇ ಕಬೀರನು ಆ ರೀತಿಯಾಗಿ ತಿಳಿಯಪಡಿಸಿದ್ದಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಭಾವ ಸಂಪನ್ನನಾದ ದೇಶಿ ಕೋತ್ತಮನಿಗೆ ಕರ್ಮಲೇಪವಾಗುವುದಿಲ್ಲವೆಂಬುದನ್ನು ತಿಳಿಸುವುದರ ಜೊತೆಗೆ ಆತನಿಗೆ

ಪಂಚಸೂತಕಗಳ ಸಂಬಂಧವಿಲ್ಲವೆಂಬುದನ್ನೂ ಸಹ–''ದೇಶಿಕೋ ಹಿ ನ ಲಿಪ್ಯೇತ ಸ್ವಾಚಾರ್ಯೈಸ್ಸೂತಕಾದಿಭಿಃ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಶಾಸ್ತ್ರದಲ್ಲಿ ಜನನ ಸೂತಕ, ಮರಣ ಸೂತಕ, ರಜಸ್ಸೂತಕ, ಉಚ್ಛಿಷ್ಟ ಸೂತಕ ಮತ್ತು ಜಾತಿಸೂತಕ ಎಂಬುದಾಗಿ ಪಂಚಸೂತಕಗಳು ಪ್ರತಿಪಾದಿಸಲ್ಪಟ್ಟಿವೆ. ಧರ್ಮಶಾಸ್ತ್ರದ ಪ್ರಕಾರ ಈ ಸೂತಕಗಳು ಬಂದೊದಗಿದಾಗ ದೇವ ಪೂಜಾದಿ ಕರ್ಮಗಳನ್ನು ಮಾಡಬಾರದೆಂಬುದೊಂದು ವಿಧಾನವಾಗಿದೆ. ಸಾಮಾನ್ಯ ವ್ಯಕ್ತಿಗೆ ಈ ಸೂತಕಗಳು ನಿಷಿದ್ಧಗಳಾಗಿದ್ದರೂ ಶಿವಜ್ಞಾನ ಸಂಪನ್ನನಾದ ಶಿವಯೋಗಿಗೆ ಅದಾವ ಸೂತಕವು ಬಾಧಕವಾಗಲಾರದೆಂಬುದು ಆಚಾರ್ಯರ ಆದೇಶವಾಗಿದೆ. ಶಾಸ್ತ್ರಗಳ ವಿಧಿ ನಿಷೇಧಗಳು ಶಿವಾದ್ವೈತ ಜ್ಞಾನಿಗಳಿಗೆ ಅನ್ವಯಿಸಲಾರವು. ಆತನ ಚಿತ್ತವು ಶಿವಸಾಮರಸ್ಯದ ಆನಂದಾನುಭೂತಿಯಲ್ಲಿ ತಲ್ಲೀನವಾಗಿರೋಣದರಿಂದ ಆತನು ಹೀಗೆಯೇ ವರ್ತಿಸಬೇಕೆಂಬ ಕಟ್ಟಳೆಗಳು ಆತನ ಮೇಲೆ ಹೇರಲ್ಪಡುವುದಿಲ್ಲ, ಕೃಷ್ಣನು ಭೋಗಿಯಾಗಿದ್ದರೂ, ಶುಕನು ತ್ಯಾಗಿಯಾಗಿದ್ದರೂ, ರಾಮ ಮತ್ತು ಜನಕರು ರಾಜರಾಗಿದ್ದರೂ ಇವರೆಲ್ಲರೂ ಜ್ಞಾನಿಗಳೆಂಬುದು ಶಾಸ್ತ್ರಕಾರರ ಅಭಿಮತವಾಗಿದೆ. ನೋಡಲಿಕ್ಕೆ ಅವರ ಬಾಹ್ಯ ವ್ಯವಹಾರಗಳು ಭಿನ್ನ-ಭಿನ್ನವಾಗಿ ತೋರುತ್ತಿದ್ದರೂ ಅಂತರಂಗದ ಸ್ಥಿತಿಯು ಎಲ್ಲರದೂ ಒಂದೇ ತೆರನಾಗಿತ್ತು. ಆದ್ದರಿಂದ ಜ್ಞಾನಿಯು ಬಾಹ್ಯ ವ್ಯವಹಾರವು ಹೀಗೆಯೇ ಇರಬೇಕೆಂಬ ನಿರ್ಬಂಧತೆಗಳು ಇರುವುದಿಲ್ಲವೆಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಅಂತೆಯೇ ಪೂಜ್ಯಪಾದರು ಶಿವೈಕ್ಯ ಸ್ಥಿತಿಯನ್ನು ಪಡೆದ ಶಿವಯೋಗಿಗೆ ಸೂತಕಗಳ ಸಂಬಂಧವಾಗಲಿ, ಶುಭಾಶುಭ ಕರ್ಮಗಳ ಲೇಪವಾಗಲಿ ಇಲ್ಲವೆಂಬುದನ್ನು ನಿರೂಪಿಸಿದ್ದಾರೆಂಬಲ್ಲಿಗೆ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೭ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪುರ)



ಆಶೀರ್ವಚನ-೨

## ಆಚಾರಸಂಪತ್ತಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಐಕ್ಯಸ್ಥಲದ ಅವಾಂತರ ಸ್ಥಲಗಳನ್ನು ಕುರಿತು ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಯನ್ನು ಕುರಿತು ಉಪದೇಶಿಸುತ್ತ ಆಚಾರ ಸಂಪತ್ತಿ ಸ್ಥಲವನ್ನುದ್ದೇಶಿಸಿ ಬೋಧಿಸುತ್ತಿದ್ದಾರೆ. ಶಿವೈಕ್ಯಸ್ಥಿತಿಯನ್ನು ಪಡೆದ ಶಿವಯೋಗಿಯಿಂದ ಸುಕೃತ ದುಷ್ಕೃತಗಳು ಆಚರಿಸಲ್ಪಟ್ಟರೂ ಅವುಗಳ ಲೇಪವೂ ಸಹ ಈತನಿಗೆ ಆಗುವುದಿಲ್ಲ ವೆಂಬುದನ್ನು-

ಶಿವಾದ್ವೈತಪರಿಜ್ಞಾನೇ ಸ್ಥಿತೇ ಸತಿ ಮನಸ್ವಿನಾಮ್ ।
ಕರ್ಮಣಾ ಕಿಂ ನು ಭಾವ್ಯಂ ಸ್ಯಾದಕೃತೇನ ಕೃತೇನ ವಾ ॥

(ಸಿ. ಶಿ. ೧೪-೧೭)

ಈ ತೆರನಾಗಿ ಬೋಧಿಸಿದ್ದಾರೆ. ಶಿವನೊಂದಿಗೆ ಸಮರಸ ಭಾವವನ್ನು ಪಡೆದ ಶಿವಯೋಗಿಯು ಶಿವಸ್ವರೂಪನೇ ಆಗಿರುವುದರಿಂದ ಇಂತಹ ಮನಸ್ವಿಯಿಂದ ಯಾವುದೇ ಪ್ರಕಾರದ ಶುಭ-ಅಶುಭ ಕರ್ಮಗಳು ಉಂಟಾದರೂ ಅವುಗಳ ಫಲಗಳಿಂದ ಈತನು ಅಲಿಪ್ತನಾಗಿರುತ್ತಾನೆ. ಅಂತೆಯೇ ಕೃಷ್ಣ ಪರಮಾತ್ಮನು ಮಹಾ ಭಾರತ ಯುದ್ಧವನ್ನು ಅರ್ಜುನನಿಂದ ಮಾಡಿಸುವ ಪೂರ್ವದಲ್ಲಿ ಆತನಿಗೆ ಆತ್ಮಜ್ಞಾನ 'ವನ್ನುಪದೇಶಿಸಿ ಆತನನ್ನು ಜ್ಞಾನಿಯನ್ನಾಗಿಸಿ ಅವನಿಂದ ಯುದ್ಧ ಮಾಡಿಸಿದ್ದನ್ನು ಕಾಣುತ್ತೇವೆ. ಜ್ಞಾನಿಯು 'ಅಹಂ-ಮಮ' ಎಂಬ ಅಹಂಕಾರ-ಮಮಕಾರಗಳಿಂದ ಮುಕ್ತನಾಗಿರೋಣದರಿಂದ ಅಹಂಕಾರ-ಮಮಕಾರ ರಾಹಿತ್ಯತೆಯೇ ಅಸಂಗ ಸ್ಥಿತಿಯಾದ ಕಾರಣ ಜ್ಞಾನಿಗೆ ಶುಭಾಶುಭಗಳ ಲೇಪವಾಗುವುದಿಲ್ಲ.

ಯಾವುದೊಂದು ವ್ಯಕ್ತಿ ಅಥವಾ ಸ್ಥಾನದ ವಿಷಯದಲ್ಲಿ ನಮ್ಮ ಮನಸ್ಸಿನಲ್ಲಿರುವ ಅಭಿಮಾನವೇ ನಮ್ಮ ಸುಖ-ದುಃಖಗಳಿಗೆ ಕಾರಣವಾಗುತ್ತದೆ. ಸಾಮಾನ್ಯ ಜೀವಿಗಳು ಇಂತಹ ಅಭಿಮಾನವನ್ನು ಹೊಂದಿರುವುದರಿಂದ ಅವರ ಜೀವನದಲ್ಲಿ ಅನೇಕ ಮಾನಸಿಕ ಏರಿಳಿತಗಳನ್ನು ಕಾಣಬಹುದು. ಒಂದು ಸಾರೆ ಒಬ್ಬ ವೈದ್ಯರ ಬಳಿ ಓರ್ವ ವ್ಯಾಪಾರಿಯು ಬಲವಾದ ರಕ್ತದೊತ್ತಡದಿಂದ ಪೀಡಿತನಾಗಿ ಚಿಕಿತ್ಸೆಗಾಗಿ ಬಂದ. ವೈದ್ಯರು ಅದೆಷ್ಟೋ ಔಷಧೋಪಚಾರ ಮಾಡಿದರೂ ಆತನ ರಕ್ತ ಒತ್ತಡದ ಪ್ರಮಾಣವು ಕಡಿಮೆಯಾಗಲಿಲ್ಲ. ಕೆಲವು ದಿನಗಳ ನಂತರ ಮತ್ತೋರ್ವ ವ್ಯಾಪಾರಿಯು ಅಂತಹದೇ ರೋಗಗ್ರಸ್ಥನಾಗಿ ಅದೇ ವೈದ್ಯರ ಬಳಿಗೆ ಬಂದ. ವೈದ್ಯರು ಅವನಿಗೂ ಉಪಚಾರ ಮಾಡಿದರೂ ಆತನು ಗುಣಮುಖವಾಗಲಿಲ್ಲ. ಒಮ್ಮೆ ವೈದ್ಯರು ಇಬ್ಬರನ್ನೂ ಪ್ರತ್ಯೇಕವಾಗಿ ಕೂಡ್ರಿಸಿಕೊಂಡು ಮಾನಸಿಕ ಒತ್ತಡದ ಕಾರಣವೇನು ? ಎಂಬುದಾಗಿ ಪ್ರಶ್ನಿಸಿದರು. ಆಗ -ಓರ್ವ ವ್ಯಾಪಾರಿಯು ಹೇಳಿದ್ದೇನೆಂದರೆ-''ನನ್ನ ಕಿರಾಣಿ ಅಂಗಡಿಯೆದುರಿಗೆ ಮತ್ತೋರ್ವನ

ಕಿರಾಣಿ ಅಂಗಡಿ ಇದೆ. ಆತನ ಅಂಗಡಿಯಲ್ಲಿ ಗಿರಾಕಿಗಳು ಹೆಚ್ಚುತ್ತಿರುವುದನ್ನು ನೋಡಿ, ಅದನ್ನು ಸಹಿಸಲಾಗದೇ ನಾನು ಈ ಮಾನಸಿಕ ಒತ್ತಡಕ್ಕೆ ಗುರಿಯಾಗಿದ್ದೇನೆ'' ಎಂಬುದಾಗಿ ಹೇಳಿದ. ವೈದ್ಯರು ಇನ್ನೋರ್ವ ವ್ಯಾಪಾರಿಯನ್ನು ಸಂದರ್ಶಿಸಿ ಅವನನ್ನು ವಿಚಾರಿಸಲಾಗಿ ಅವನೂ ಇದೇ ತೆರನಾಗಿ ಉತ್ತರಿಸಿದ. ವೈದ್ಯರಿಗೆ ಇವರಿಬ್ಬರ ರೋಗದ ಕಾರಣವೇನೆಂಬುದು ತಿಳಿಯಿತು. ಇವರೀರ್ವರಿಗೆ ಔಷಧವನ್ನು ಎಷ್ಟು ಕೊಟ್ಟರೂ ಪ್ರಯೋಜನವಿಲ್ಲವೆಂಬುದನ್ನು ಅರಿತು ಅವರೀರ್ವರನ್ನು ಕರೆದು ನೀವು ಒಂದು ವಾರ ಪರ್ಯಂತರ ನಿಮ್ಮ-ನಿಮ್ಮ ಅಂಗಡಿಗಳಲ್ಲಿ ಕೂಡ್ರದೇ, ಅವನ ಅಂಗಡಿಯಲ್ಲಿ ನೀನು, ನಿನ್ನ ಅಂಗಡಿಯಲ್ಲಿ ಅವನು ಕುಳಿತುಕೊಳ್ಳಿರೆಂಬುದಾಗಿ ತಿಳಿಸಿದರು. ಅವರು ಅದೇ ರೀತಿಯಾಗಿ ವ್ಯವಹರಿಸಿದಾಗ ಅವರೀರ್ವರ ರಕ್ತ ಒತ್ತಡವು ನೈಜ ಸ್ಥಿತಿಗೆ ಬಂದು ನಿಂತಿತು. ಅವರೀರ್ವರೂ ಪರಸ್ಪರರ ಅಂಗಡಿಗಳಲ್ಲಿ ಕುಳಿತಾಗ ತಮ್ಮ-ತಮ್ಮ ಅಂಗಡಿಗಳಲ್ಲಿ ಗಿರಾಕಿಗಳ ಸಂದಣಿಯನ್ನು ಕಂಡು ಸಂತುಷ್ಟರಾಗಿ ಮಾನಸಿಕ ಒತ್ತಡದಿಂದ ಪಾರಾದರು. ಇಲ್ಲಿ ಈರ್ವರೂ ವ್ಯಾಪಾರಿಗಳ ರಕ್ತ ಒತ್ತಡದ ಏರು-ಪೇರುಗಳಿಗೆ ಅವರಲ್ಲಿರುವ ನನ್ನದೆನ್ನುವ ಅಭಿಮಾನವೇ ಕಾರಣವೆನ್ನುವುದು ಸ್ಪಷ್ಟವಾಗುತ್ತದೆ. ಸಾಮಾನ್ಯ ಮನುಷ್ಯರ ಮನಸ್ಸಿನ ಸ್ಥಿತಿಯೇ ಇಂತಹದ್ದು.

ಪೂಜ್ಯಪಾದರು ಮನಸ್ವಿಗಳಾದ ಶಿವಯೋಗಿಗಳ ಸ್ಥಿತಿಯನ್ನಿಲ್ಲಿ ವಿವರಿಸಿದ್ದಾರೆ. ಪ್ರಶಸ್ತವಾದ ಮನಸ್ಸುಳ್ಳವರಿಗೆ 'ಮನಸ್ವಿ' ಎಂಬುದಾಗಿ ಕರೆಯುತ್ತಾರೆ. ಮನಸ್ಸಿನಂತೆ ದೃಷ್ಟಿ, ದೃಷ್ಟಿಯಂತೆ ಸೃಷ್ಟಿ, ಯಾರ ಮನಸ್ಸು ಹೇಗಿದೆಯೋ ಅವರು ಸೃಷ್ಟಿಯನ್ನು ಅದೇ ರೀತಿಯಾಗಿ ನೋಡುತ್ತಾರೆ. ಮನಸ್ವಿಗಳ ಮನಸ್ಸು ಪರಿಶುದ್ಧವಾಗಿರುವುದರಿಂದ ಅವರ ದೃಷ್ಟಿಯೂ ಸಹ ಪರಿಪೂತವೇ ಆಗಿರುತ್ತದೆ. ಇದರ ಪರಿಣಾಮವಾಗಿ ಅವರು ಸರ್ವತ್ರ ಶಿವದೃಷ್ಟಿಯನ್ನು ಹೊಂದಿದವರಾಗಿ ಪ್ರಪಂಚವೆಲ್ಲವನ್ನೂ ಶಿವಮಯವಾಗಿ ಕಾಣುತ್ತಿರುವುದರಿಂದ ಮನಸ್ಸಿನ ಅಭಿಮಾನಾದಿಗಳಿಗೆ ಅಲ್ಲಿ ಅವಕಾಶ ಇಲ್ಲದಿರುವುದ ರಿಂದ ಅವರು ಯಾವ ಕರ್ಮಫಲದಿಂದಲೂ ಲಿಪ್ತರಾಗುವುದಿಲ್ಲ. ಯಾರಿಗೆ ಕರ್ಮಾಭಿಮಾನವಿದೆಯೋ ಅವರಿಗೆ ತಾನೇ ಪುಣ್ಯ-ಪಾಪಗಳು ಅಂಟಿಕೊಳ್ಳುವವು. ಈ ತೆರನಾಗಿ ಪುಣ್ಯ ಪಾಪಗಳನ್ನು ಹೊಂದಿದವರೇ ಸುಖ-ದುಃಖಗಳನ್ನು ಅನುಭವಿಸ ಬೇಕಾಗುತ್ತದೆ. ಪುಣ್ಯ-ಪಾಪಗಳನ್ನು ಸಂಗ್ರಹಿಸುವುದೂ ಮನಸ್ಸೇ ಮತ್ತು ಅವುಗಳ ಫಲಗಳಾದ ಸುಖ-ದುಃಖಗಳನ್ನು ಅನುಭವಿಸುವುದೂ ಸಹ ಮನಸ್ಸೇ ಆಗಿರುತ್ತದೆ. ಆತ್ಮವು ಮಾತ್ರ ಈ ಎಲ್ಲ ವ್ಯವಹಾರಕ್ಕೆ ಸಾಕ್ಷಿಭೂತವಾದುದು. ಜ್ಞಾನಿಯು ಶರೀರ-ಮನ ಮತ್ತು ಬುದ್ಧಿಗಳ ಅಭಿಮಾನವನ್ನು ಬಿಟ್ಟು ಆತ್ಮ ಸ್ಥಿತಿಯಲ್ಲಿರುವುದರಿಂದ ಅವನು ಸಾಕ್ಷಿರೂಪನಾಗಿದ್ದಾನೆ ವಿನಃ ಕರ್ತಾ-ಭೋಕ್ತಾ ಆಗಿರಲಾರನು. ಅಂತೆಯೇ ಮುಕ್ತನಿಗೆ ಯಾವ ಕರ್ಮಫಲ ಭೋಗವು ಇಲ್ಲವೆಂಬುದಾಗಿ ಆಚಾರ್ಯರು ಆದೇಶವಿತ್ತಿದ್ದಾರೆ.

ಈ ಶಿವಾದ್ವೈತ ಜ್ಞಾನಿಯು ಸಮದರ್ಶಿಯಾಗಿರೋಣದರಿಂದಲೂ ಇವನಿಗೆ ಕರ್ಮ ಫಲದ ಭೋಗವು ಆಗುವುದಿಲ್ಲವೆಂಬುದನ್ನು ಪೂಜ್ಯರು ಪುನಃ-

ಶಂಭೋರೇಕತ್ವಭಾವೇನ ಸರ್ವತ್ರ ಸಮದರ್ಶನಃ।
ಕುರ್ವನ್ನಪಿ ಮಹಾಕರ್ಮ ನ ತತ್ಫಲಮವಾಪ್ನುಯಾತ್ ॥

(ಸಿ. ಶಿ. ೧೪–೧೮)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ– ಶಿವಾದ್ವೈತ ಜ್ಞಾನ ಸಂಪನ್ನನಾದ ಶಿವಯೋಗಿಯು ಮಹಾಲಿಂಗದೊಡನೆ ಸಾಮರಸ್ಯವನ್ನು ತಾಳಿರೋಣದ ರಿಂದ ಅವನ ದೃಷ್ಟಿಯಲ್ಲಿ ಆ ಮಹಾಲಿಂಗದ ಹೊರತು ಬೇರಾವುದೂ ತೋರುವುದಿಲ್ಲ. ಇದು ಮಣ್ಣು, ಇದು ಚಿನ್ನ ಎಂಬ ಭೇದ ದೃಷ್ಟಿಯು ಅಳಿದಿರುವುದರಿಂದ ಅವನೂ ಸಹ ಸರ್ವತ್ರ ಸಮದರ್ಶನನಾಗಿದ್ದಾನೆ. ಇಂತಹ ಸಮದೃಷ್ಟಿ ಸಂಪನ್ನನಾದ ಶಿವಯೋಗಿಯು ಅದಾವುದೇ ಮಹತ್ಕರ್ಮವನ್ನಾಚರಿಸಿದರೂ ಅವನಿಗೆ ಅದರ ಫಲವು ಪ್ರಾಪ್ತ ವಾಗಲಾರದು. ಪ್ರಪಂಚವನ್ನು ಸಮವಾಗಿ ಮಾಡುವುದು ಅದಾರಿಂದಲೂ ಸಾಧ್ಯವಿಲ್ಲ. ಅಂತೆಯೇ ನಿಜಗುಣ ಶಿವಯೋಗಿಗಳು ಈ ಪ್ರಪಂಚಕ್ಕೆ 'ವಿಷಮ ಸಂಸಾರ'ವೆಂಬುದಾಗಿ ಕರೆದಿದ್ದಾರೆ. ವಿಷಮತೆಯು ಸಂಸಾರದ ಭೂಷಣವೇ ಆಗಿದೆ. ಈ ವಿಷಮವಾದ ಸಂಸಾರವನ್ನು ಜ್ಞಾನಿಗಳು ತಮ್ಮ ಸಮದೃಷ್ಟಿಯಿಂದ ನೋಡಿದಾಗ ಇದರ ವಿಷಮತೆಯು ಇಲ್ಲದಾಗಿ ಸಮತ್ವಾನುಭೂತಿಯುಂಟಾಗುವುದು. ಶಿವನು ಸಮದೃಷ್ಟಿಯುಳ್ಳವನಾಗಿರು ವಂತೆ, ಶಿವಯೋಗಿಯೂ ಸಹ ಸಮದೃಷ್ಟಿಯುಳ್ಳವನಾಗಿರುವುದರಿಂದ ಆತನು ಶಿವನಂತೆ ಶಾಂತನೂ ಹಾಗೂ ಆನಂದರೂಪನೂ ಆಗಿರುತ್ತಾನೆ. ಪ್ರಪಂಚದಲ್ಲಿಯ ಪ್ರತಿಯೊಬ್ಬ ಜೀವಿಗಳಿಗೂ ಪ್ರಾಪ್ತಗಳಾದ ಶರೀರ, ಇಂದ್ರಿಯ, ಮನ ಹಾಗೂ ಬುದ್ಧಿಗಳು ಭಿನ್ನ–ಭಿನ್ನವಾಗಿರೋಣದರಿಂದ ಅವುಗಳಲ್ಲಿ ವಿಷಮತೆಯು ಕಂಡುಬಂದರೂ ಸರ್ವರ ಆತ್ಮವು ಒಂದೇ ಆಗಿರುವುದರಿಂದ ಆತ್ಮ ದೃಷ್ಟಿಯಿಂದ ಸರ್ವವೂ ಸಮಾನವಾಗಿರುತ್ತದೆ. ಶಿವಯೋಗಿಯು ಆತ್ಮದೃಷ್ಟಿಯನ್ನು ಪಡೆದಿರುವುದರಿಂದಲೇ ಆತನು ಸಮದೃಷ್ಟಿ ಯುಳ್ಳವನು ಎಂಬುದಾಗಿ ಕರೆಸಿಕೊಂಡಿದ್ದಾನೆ. ಅಂತೆಯೇ ಭಗದ್ಗೀತೆಯಲ್ಲಿ–

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ॥

ಎಂಬುದಾಗಿ ಉಪದೇಶಿಸಲಾಗಿದೆ. ವೇದಾಧ್ಯಯನವನ್ನು ಮಾಡಿದ ಹಾಗೂ ವಿನಯಾದಿಗುಣ ಸಂಪನ್ನನಾದ ಬ್ರಾಹ್ಮಣನಲ್ಲಿಯಾಗಲಿ, ಆಕಳು, ನಾಯಿ, ಆನೆ ಮತ್ತು ಚಾಂಡಾಲನಲ್ಲಿಯಾಗಲಿ ಜ್ಞಾನಿಗಳಾದವರು ಭೇದವನ್ನು ಮಾಡದೇ ಸಮದರ್ಶಿ ಗಳಾಗಿರುತ್ತಾರೆ ಎಂಬುದು ಗೀತಾಚಾರ್ಯರ ತಾತ್ಪರ್ಯವಾಗಿದೆ.

ಇಲ್ಲಿ ಸಮದರ್ಶನವೆಂದರೆ ನಾಯಿ, ಆನೆ, ಬ್ರಾಹ್ಮಣ, ಚಾಂಡಾಲ ಇವರೆಲ್ಲರೂ ಸಮಾನರು ಎಂಬುದಾಗಿ ಹೇಳುವುದಲ್ಲ, ಆದರೆ ಇವರೆಲ್ಲರ ಆತ್ಮವು ಸಮಾನವೆಂಬು ದಾಗಿ ತಿಳಿದುಕೊಳ್ಳಬೇಕು. ಭಾವದಲ್ಲೇ ಅದ್ವೈತವನ್ನು ಭಾವಿಸಬೇಕೇ ವಿನಃ ಕ್ರಿಯೆ ಯಲ್ಲಿ ಅದ್ವೈತವನ್ನು ಆಚರಿಸಲು ಬರುವುದಿಲ್ಲ, ಹಾಗೆ ಮಾಡಿದರೆ ಲೋಕಾರೂಢಿಗೆ ವಿರೋಧವಾಗುವುದು. ತನ್ನ ಮಗನ ಹಾಗೂ ತನ್ನ ಮನೆಯಲ್ಲಿಯ ನಾಯಿ ಆತ್ಮವು ಒಂದೇ ಆಗಿದ್ದರೂ ತಂದೆಯು ತಾನು ಉಣ್ಣುವಾಗ ತನ್ನ ಮಗನನ್ನು ಕರೆದುಕೊಂಡು

ಉಣ್ಣುವನೇ ವಿನಃ ನಾಯಿಯ ಜೊತೆಗೆ ಕೂಡಿ ಉಣ್ಣಲಾರ. ನಾಯಿಯನ್ನು ಪುತ್ರನಂತೆ ಪ್ರೀತಿಸಬಹುದೇ ವಿನಃ ಪುತ್ರನಂತೆ ವ್ಯವಹರಿಸಲಾಗುವುದಿಲ್ಲ. ವ್ಯವಹಾರದಲ್ಲಿ ಅದ್ವೈತವನ್ನು ಆಚರಿಸಹೋದರೆ ಮಹದನರ್ಥವೇ ಉಂಟಾಗುವುದು.

ಓರ್ವ ಗುರುಗಳು ಸರ್ವರಲ್ಲಿರುವ ಆತ್ಮವು ಒಂದೇ ಎಂಬುದಾಗಿ ಬೋಧಿಸಿದ್ದನ್ನು ಮನನ ಮಾಡುತ್ತ ಶಿಷ್ಯನೋರ್ವನು ತನ್ನ ನಿವಾಸದತ್ತ ಹೊರಟಿದ್ದನು. ಅವನು ಹೋಗುತ್ತಿರುವ ದಾರಿಯಲ್ಲಿಯೇ ಎದುರಾಗಿ ಒಂದು ಮದೋನ್ಮತ್ತವಾದ ಆನೆಯು ಬರುತ್ತಿತ್ತು. ಆನೆಯ ಮೇಲೆ ಕುಳಿತ ಮಾವುತನು ''ಆನೆಗೆ ಮದವೇರಿದೆ, ಎಲ್ಲರೂ ದೂರ ಸರಿಯಿರಿ'' ಎಂಬುದಾಗಿ ಸರ್ವರನ್ನು ಎಚ್ಚರಿಸುತ್ತಿದ್ದನು. ಮಾವುತನ ಈ ಎಚ್ಚರಿಕೆಯ ಧ್ವನಿಯನ್ನು ಕೇಳಿ ಎಲ್ಲರೂ ರಸ್ತೆಯಿಂದ ಪಕ್ಕಕ್ಕೆ ಸರಿದರೂ ಈ ಶಿಷ್ಯನು ಮಾತ್ರ ಸರಿಯದೆ ಆನೆಗೆ ಎದುರಾಗಿಯೇ ಬರುತ್ತಿದ್ದನು. ಆನೆಯಲ್ಲಿರುವ ಆತ್ಮ ಹಾಗೂ ನನ್ನಲ್ಲಿರುವ ಆತ್ಮ ಒಂದೇ ಆಗಿರುವಾಗ ಭಯ ಪಡುವ ಕಾರಣವೇನು ? ಎಂಬುದಾಗಿ ವಿಚಾರಿಸುತ್ತ ಧೈರ್ಯವಾಗಿ ಎದುರಾಗಿ ಬರುತ್ತಿದ್ದ ಆ ಶಿಷ್ಯನನ್ನು ಕೊಬ್ಬಿದ ಆನೆಯು ತನ್ನ ಸೊಂಡಿಲಲ್ಲಿ ಎತ್ತಿ ದೂರಕ್ಕೆ ಎಸೆದು ಬಿಟ್ಟಿತು. ಕೈಕಾಲು ಮುರಿದುಕೊಂಡು ಶಿಷ್ಯ ಮೂಲೆಗುಂಪಾದನು. ಶಿಷ್ಯನಿಗೆ ಅಪಘಾತವುಂಟಾದದ್ದನ್ನು ತಿಳಿದು ಗುರುಗಳು ಆತನನ್ನು ಕಾಣಲು ಹೋದಾಗ ಏನಾಯಿತು ? ಎಂಬುದಾಗಿ ಅವರು ಪ್ರಶ್ನಿಸಿದರು. ''ಗುರುವೇ, ನಿಮ್ಮ ಉಪದೇಶದ ಫಲ ಇದು'' ಎಂದು ಉತ್ತರಿಸಿದ. ''ನಿನ್ನೆ ತಾನೇ ತಾವು ಉಪದೇಶ ಮಾಡುವಾಗ ಆನೆ, ನಾಯಿ, ಬ್ರಾಹ್ಮಣ ಮತ್ತು ಚಾಂಡಾಲ ಇವರೆಲ್ಲರಲ್ಲಿರುವ ಆತ್ಮ ಒಂದೇ ಎಂಬುದಾಗಿ ಬೋಧಿಸಿದ್ದೀರಿ. ಅದನ್ನೇ ಮನನ ಮಾಡುತ್ತ ರಸ್ತೆಯಲ್ಲಿ ಹೊರ ಟಾಗ ಈ ಅನರ್ಥವು ಸಂಭವಿಸಿತು.'' ''ರಸ್ತೆಯಲ್ಲಿ ಮತ್ತಾರಿಗೂ ಸಂಭವಿಸದ ಈ ಅನರ್ಥ ನಿನ್ನೊಬ್ಬನಿಗೇ ಹೇಗೇ ತಾನೇ ಸಂಭವಿಸಿತು ?'' ಎಂಬುದಾಗಿ ಗುರುಗಳು ಪ್ರಶ್ನಿಸಿದಾಗ ''ಹೇ ಗುರುದೇವ ! ಮಾವುತನು ಹೇಳಿದ ಎಚ್ಚರಿಕೆಯ ಮಾತನ್ನು ಕೇಳಿ ಎಲ್ಲರೂ ದೂರ ಸರಿದರೂ ನಾನು ಮಾತ್ರ ಆನೆಯ ಆತ್ಮ, ನನ್ನ ಆತ್ಮ ಒಂದೇ ಎಂಬುದಾಗಿ ಭಾವಿಸಿ ಮುನ್ನಡೆದುದೇ ಈ ಅನರ್ಥದ ಮೂಲ ಕಾರಣವು.'' ಆಗ ಗುರುಗಳು ''ನೀನು ನನ್ನ ಉಪದೇಶವನ್ನು ಸರಿಯಾಗಿ ಆಲಿಸಿಲ್ಲ. ಆನೆಯೊಳಗೆ ನಿನ್ನ ಆತ್ಮವನ್ನು ಕಂಡೇ ವಿನಃ ಮಾವುತನಲ್ಲಿ ನಿನ್ನ ಆತ್ಮವನ್ನು ಕಾಣಲಿಲ್ಲ. ಹೀಗೆ ಮಾವುತನ ಆದೇಶದ ಅವಹೇಳನವೇ ಈ ಅನರ್ಥದ ಕಾರಣವು'' ಎಂದರು. ಇದು ಕಾರಣ ಸರ್ವರಾತ್ಮವೂ ಒಂದೇ ಆಗಿದ್ದರೂ ತನಗೆ ಯೋಗ್ಯರಾದವರೊಡನೆ ಸಮರಸ ಮಾಡಬೇಕೇ ವಿನಃ ಸರ್ವರೊಡನೆ ಸಮರಸ ಮಾಡಬಾರದು. ಸರ್ವತ್ರ ಭಾವಾದ್ವೈತವನ್ನಾಚರಿಸಿದರೆ ಅದಾವ ಅನರ್ಥವೂ ಆಗುವುದಿಲ್ಲ.

ಭಾವದಲ್ಲಿ ಅದ್ವೈತವು ಶೋಭಿಸುವಂತೆ ವ್ಯವಹಾರದಲ್ಲಿ ವಿಷಮತೆಯೇ ಭೂಷಣಾಸ್ಪದವಾದುದು. ವ್ಯವಹಾರದಲ್ಲಿಯ ಸಮತೆಯು ವಿಘಟನೆಗೆ ನಾಂದಿ ಯಾಗುವುದು. ಅಂತೆಯೇ ಲೋಕದಲ್ಲಿ ಎರಡು ವ್ಯಕ್ತಿಗಳನ್ನು ಒಂದೆಡೆ ಜೋಡಿಸುವಾಗ ಅವರೀರ್ವರಲ್ಲಿ ವಯಸ್ಸು, ಜ್ಞಾನ ಮತ್ತು ಅಧಿಕಾರಗಳಲ್ಲಿ ವಿಷಮತೆಯ ಬಗ್ಗೆ ಕಾಳಜಿ

ವಹಿಸಬೇಕಾಗುತ್ತದೆ. ಲೋಕದಲ್ಲಿ ಸ್ತ್ರೀ ಮತ್ತು ಪುರುಷರಲ್ಲಿ ವಿವಾಹ ಸಂಬಂಧವನ್ನು ಮಾಡುವಾಗ ವಧು–ವರರಲ್ಲಿ ಅಲ್ಪ–ಸ್ವಲ್ಪ ವಿಷಮತೆಯನ್ನು ನೋಡಿಯೇ ವಿವಾಹ ಸಂಸ್ಕಾರ ಮಾಡುತ್ತಾರೆ. ವರನ ವಯಸ್ಸು, ವಿದ್ಯಾ, ಅಧಿಕಾರ ಇವೆಲ್ಲವುಗಳಲ್ಲಿ ವಧುವು ಸ್ವಲ್ಪ ಕಡಿಮೆಯಾಗಿರಬೇಕು. ಅಂದಾಗಲೇ ಅವರೀರ್ವರಲ್ಲಿ ಹೊಂದಾಣಿಕೆಯನ್ನು ಕಾಣಲು ಸಾಧ್ಯವಾಗುವುದು. ಒಂದು ವೇಳೆ ಎಲ್ಲದರಲ್ಲಿ ಈರ್ವರೂ ಸಮಾನವಾಗಿದ್ದರೆ ಅವರ ಬಾಳುವೆಯಲ್ಲಿ ಹೊಂದಾಣಿಕೆಯಾಗುವುದು ಕಡಿಮೆ. ಈರ್ವರೂ ವಿವೇಕ ಸಂಪನ್ನರಾಗಿದ್ದರೆ ಕ್ವಚಿತ್ ಸಾಮರಸ್ಯ ಸಂಭವಿಸಬಹುದು. ಆದರೆ ಸಾರ್ವತ್ರಿಕವಾಗಿ ಸಂಭವಿಸಲಾರದು. ಪ್ರಪಂಚದ ವ್ಯವಹಾರವು ಸುರಳಿತವಾಗಿ ಸಾಗಲೆಂಬುದಾಗಿಯೇ ಪರಮಾತ್ಮನು ಪ್ರಪಂಚವನ್ನು ವಿಷಮವಾಗಿ ಸೃಷ್ಟಿಸಿದ್ದಾನೆ.

ರೇಲ್ವೆ ಹಳಿಯ ಮಧ್ಯದ ಅಂತರವು ಎಲ್ಲಿಯವರೆಗೆ ಸಮಾನವಾಗಿರುತ್ತದೆಯೋ ಅಲ್ಲಿಯವರೆಗೆ ಆ ಎರಡೂ ಹಳಿಗಳು ಒಂದಕ್ಕೊಂದು ಕೂಡಲಾರವು. ಅವುಗಳ ಮಧ್ಯದ ಅಂತರವನ್ನು ಕಡಿಮೆ ಮಾಡಿದಾಗ ಅವೆರಡೂ ಕೂಡುವುದನ್ನು ಕಾಣುತ್ತೇವೆ. ಅದರಂತೆ ಎರಡು ಜೀವಿಗಳ ಸಮ ಬಾಳುವೆಗೆ ಅವರೀರ್ವರಲ್ಲಿಯ ವಿಷಮತೆಯೇ ಪೂರಕವೆಂಬುದಾಗಿ ತಿಳಿದುಕೊಳ್ಳಬೇಕು. ಸೃಷ್ಟಿಯು ವಿಷಮವಾಗಿದ್ದರೂ ದೃಷ್ಟಿಯನ್ನು ಸಮವಾಗಿರಿಸಿಕೊಳ್ಳಬೇಕೆಂಬುದು ಶ್ರೀ ರೇಣುಕ ಭಗವತ್ಪಾದರ ಆಶಯವಾಗಿದೆ. ವಿಷಮತೆ ಯಲ್ಲಿಯೇ ಸಮತೆಯನ್ನು ಕಾಣುವುದೇ ಸಮದೃಷ್ಟಿಯು. ಪ್ರಪಂಚದಲ್ಲಿ ವಿಷಮತೆ ಇದ್ದರೂ ದೃಷ್ಟಿಯು ಸಮತೆಯಿಂದೊಡಗೂಡಿದಾಗ ಪ್ರಪಂಚದ ವಿಷಮತೆಯು ತೋರಲಾರದು. ಇಂತಹ ಸಮದೃಷ್ಟಿ ಸಂಪನ್ನನಾದ ಶಿವಯೋಗಿಗೆ ಅದಾವ ಕರ್ಮವು ಬಂಧನಕಾರಿಯಾಗಲಾರದು. ಆತನು ಲೌಕಿಕ ದೃಷ್ಟಿಯಿಂದ ಕರ್ಮ ಮಾಡುವಂತೆ ತೋರುತ್ತಿದ್ದರೂ ಅಂತರಂಗದಲ್ಲಿ ಅಕರ್ತನೂ, ಅಭೋಕ್ತನೂ ಆಗಿ ಜೀವನ್ಮುಕ್ತಿಯ ಆನಂದವನ್ನು ಅನುಭವಿಸುತ್ತಿರುತ್ತಾನೆ. ಇದುವೇ ಐಕ್ಯಸ್ಥಲೀಯ ಆಚಾರ ಸಂಪತ್ತಿಯು ಎಂಬುದಾಗಿ ತಿಳಿಯಪಡಿಸಿ, ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೮ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪುರ)



ಆಶೀರ್ವಚನ-೩

# ಆಚಾರಸಂಪತ್ತಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಐಕ್ಯಸ್ಥಲಾಂತರ್ಗತವಾದ ಆಚಾರ ಸಂಪತ್ತಿಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನಿನ ಆಶೀರ್ವಚನ ದಲ್ಲಿ ಶಿವಾದ್ವೈತ ಭಾವನೆಯನ್ನು ಹೊಂದಿದ ಶಿವಯೋಗಿಯ ಸಮದೃಷ್ಟಿಯ ಬಗ್ಗೆ ತಿಳಿದುಕೊಂಡವರಾಗಿದ್ದೀರಿ. ಪೂಜ್ಯಪಾದರಾದ ರೇಣುಕರು ಆ ಶಿವಯೋಗಿಯ ಸಮದೃಷ್ಟಿಯ ಬಗ್ಗೆ ಪುನಃ –

ಸುಕೃತೀ ದುಷ್ಕೃತೀ ವಾಪಿ ಬ್ರಾಹ್ಮಣೋವಾಂತ್ಯಜೋಽಪಿ ವಾ ।
ಶಿವೈಕಭಾವಯುಕ್ತಾನಾಂ ಸದೃಶೋ ಭವತಿ ಧ್ರುವಮ್ ॥

(ಸಿ. ಶಿ. ೧೪–೧೯)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ – ಸಮದೃಷ್ಟಿ ಸಂಪನ್ನ ನಾದ ಶಿವಯೋಗಿಗೆ ಪಾಪಿಯೇ ಇರಲಿ, ಪುಣ್ಯಾತ್ಮನೇ ಇರಲಿ, ಬ್ರಾಹ್ಮಣನೇ ಆಗಿರಲಿ, ಅಂತ್ಯಜನೇ ಆಗಿರಲಿ ಇವರೆಲ್ಲರನ್ನೂ ಸಮದೃಷ್ಟಿಯಿಂದ ಕಾಣುವ ಸ್ಥಿತಿಯನ್ನು ಆತನು ಪ್ರಾಪ್ತಮಾಡಿಕೊಂಡಿರುತ್ತಾನೆ.

ಮನುಷ್ಯನಲ್ಲುಂಟಾದ ಕೆಲವೊಂದು ಪರಿವರ್ತನೆಗಳು ದೃಷ್ಟಿಗೋಚರಗಳಾದರೆ ಮತ್ತೆ ಕೆಲವುಗಳು ಸಹಸಾ ಅಗೋಚರಗಳಾಗಿರುತ್ತವೆ. ಯಾತ್ರೆಗಾಗಿ ಹೋದ ಒಬ್ಬ ಮನುಷ್ಯನು ತನ್ನ ಕೇಶಗಳನ್ನು ಇಲ್ಲದಾಗಿಸಿಕೊಂಡು ಬಂದಿದ್ದರೆ ಅವನು ಹೇಳಲಿ, ಹೇಳದೇ ಇರಲಿ ನೋಡಿದವರಿಗೆ ಈತನು ತಿರುಪತಿಗೋ ಅಥವಾ ಪ್ರಯಾಗಕ್ಕೋ ಹೋಗಿ ಬಂದಿದ್ದನೆಂಬ ಕಲ್ಪನೆವುಂಟಾಗುತ್ತದೆ. ಶರೀರದಲ್ಲುಂಟಾದ ಪರಿವರ್ತನೆಯನ್ನು ಕಂಡು ಆತನ ಯಾತ್ರಾದಿಗಳನ್ನು ಗುರುತಿಸುವಂತೆ, ಶರೀರದ ಬಾಹ್ಯಲಕ್ಷಣಗಳಿಂದ ಜ್ಞಾನಿಯನ್ನು ಗುರುತಿಸುವುದು ಸಹಸಾ ಅಸಾಧ್ಯವಾದುದು. ಆದರೆ ವ್ಯಕ್ತಿಯ ಆಚಾರ–ವಿಚಾರ ಹಾಗೂ ಆತನ ದೈನಂದಿನ ದಿನಚರಿಯಿಂದ ಜ್ಞಾನಿ ಹಾಗೂ ಅಜ್ಞಾನಿ ಗಳನ್ನು ಅನುಮಾನದಿಂದ ಗುರುತಿಸಲು ಬರುತ್ತದೆ. ನಮ್ಮ ತಿಳುವಳಿಕೆಯು ನಮ್ಮ ಕ್ರಿಯೆಯಿಂದ ಅಭಿವ್ಯಕ್ತವಾಗುತ್ತದೆ. ನಾವು ಮಾಡುವ ಕ್ರಿಯಾದಿಗಳಿಂದಲೇ ನಾವು ಎಷ್ಟು ಜ್ಞಾನಿಗಳೆಂಬುದನ್ನು ಜಗತ್ತಿಗೆ ತೋರಿಸಿಕೊಡಲು ಸಾಧ್ಯವಾಗುತ್ತದೆ.

ಈ ಜಗತ್ತಿನಲ್ಲಿ ಪಾಪಿಗಳು ಪುಣ್ಯಾತ್ಮರು ಎಲ್ಲರೂ ಇರುತ್ತಾರೆ. ಪುಣ್ಯ–ಪಾಪಗಳು ಅಂತಃಕರಣದ ಧರ್ಮಗಳೆಂಬುದಾಗಿ ಈ ಪೂರ್ವದಲ್ಲಿ ತಿಳಿಸೋಣವಾಗಿದೆ. ಶರೀರವು ಪುಣ್ಯ–ಪಾಪಗಳ ಸಂಪಾದನೆಯ ಸಾಧನವೂ ಹಾಗೂ ಅವುಗಳ ಫಲಗಳಾದ ಸುಖ–ದುಃಖಗಳನ್ನು ಅನುಭವಿಸುವ ಮಾಧ್ಯಮವೂ ಆಗಿರುತ್ತದೆ. ಅಂತೆಯೇ ಶರೀರಕ್ಕೆ 'ಭೋಗಾಯತನ' ಎಂಬುದಾಗಿ ಕರೆದಿದ್ದಾರೆ. ಪುಣ್ಯ–ಪಾಪಗಳನ್ನಾಚರಿಸಲು ಹಾಗೂ

ಅದರ ಫಲವನ್ನು ಅನುಭವಿಸಲು ಮನವೇ ಮುಖ್ಯವಾದುದು. ಕರ್ತೃತ್ವ, ಭೋಕ್ತೃತ್ವ ಭಾವನೆಗಳು ಮನಸ್ಸಿನ ಧರ್ಮಗಳೇ ಆಗಿರುತ್ತವೆ. ವ್ಯಕ್ತಿಯು ಪಾಪಿ ಹಾಗೂ ಪುಣ್ಯಾತ್ಮನೆಂದು ಕರೆಯಿಸಿಕೊಳ್ಳಲು ಆತನ ಮನಸ್ಸೇ ಮೂಲವೆಂಬುದಾಗಿ ಎಲ್ಲರೂ ತಿಳಿದುಕೊಳ್ಳಬೇಕು. ಹೀಗೆ ಮನಸ್ಸಿನ ದೃಷ್ಟಿಯಿಂದ ಪುಣ್ಯಾತ್ಮ–ಪಾಪಾತ್ಮರೆಂಬುದಾಗಿ ಜೀವಿಗಳು ಕರೆಯಿಸಿಕೊಳ್ಳುತ್ತಾರೆ. ಆತ್ಮ ದೃಷ್ಟಿಯಿಂದ ನೋಡಿದಾಗ ಪುಣ್ಯಾತ್ಮ–ಪಾಪಾತ್ಮ ಅಂತ್ಯಜ–ಬ್ರಾಹ್ಮಣ ಇವಾವ ಭೇದಗಳನ್ನು ಕಾಣಲು ಸಾಧ್ಯವಾಗುವುದಿಲ್ಲ. ಅಂತೆಯೇ ಸಮದೃಷ್ಟಿಸಂಪನ್ನನಾದ ಶಿವಯೋಗಿಯ ದೃಷ್ಟಿಯಲ್ಲಿ ಪುಣ್ಯಾತ್ಮ–ಪಾಪಾತ್ಮರೆಂಬ ಭೇದವಿಲ್ಲವೆಂಬುದಾಗಿ ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ನಾವು ಕಟ್ಟಿರುವ ಮನೆ–ಮಠ, ಮಂದಿರ ಮತ್ತು ಪರ್ಣಶಾಲೆಗಳು ಭಿನ್ನ–ಭಿನ್ನಗಳಾಗಿರಬಹುದು. ಅವುಗಳು ಹೆಚ್ಚು ಕಡಿಮೆ ಕಿಮ್ಮತ್ತಿನವುಗಳು ಆಗಿರಬಹುದು ! ಆದರೆ ಇವೆಲ್ಲವುಗಳಲ್ಲಿ ಇರುವ ಆಕಾಶವು ಮಾತ್ರ ಸಮಾನವಾದುದಾಗಿದೆ. ಮನೆ–ಮಠಗಳೆಂಬ ಉಪಾಧಿಗಳಲ್ಲಿ ಪರಸ್ಪರ ಭೇದ ಕಂಡುಬಂದರೂ ಅವೆಲ್ಲವುಗಳಲ್ಲಿ ಉಪಹಿತವಾದ ಆಕಾಶದಲ್ಲಿ ಯಾವ ಬೇಧವನ್ನೂ ಕಾಣಲಾಗುವುದಿಲ್ಲ. ಅಂತೆಯೇ ಪರಮಾತ್ಮನಿಗೆ ಹೋಲಿಕೆಯನ್ನು ಕೊಡುವಾಗ ಪಂಚಮಹಾಭೂತಗಳಲ್ಲಿ ಅತೀ ಸೂಕ್ಷ್ಮವಾದ ಆಕಾಶದ ಹೋಲಿಕೆಯನ್ನೇ ಕೊಡುತ್ತಾರೆ. ''ಆಕಾಶವತ್ ಸರ್ವ ಗತಶ್ಚನಿತ್ಯಃ'' ಎಂಬುದಾಗಿ ಶ್ರುತಿ ಮಾತೆಯೂ ಸಹ ಇದನ್ನೇ ಪ್ರತಿಪಾದಿಸಿದೆ. ಆಕಾಶವು ಶುದ್ಧವೂ, ನಿರ್ಲೇಪವೂ ಆಗಿರುವಂತೆ ಆತ್ಮ–ಪರಮಾತ್ಮರೂ ಸಹ ನಿರ್ಲಿಪ್ತರೇ ಆಗಿರುತ್ತಾರೆ. ಅಶುದ್ಧಿ ಅಪವಿತ್ರತೆಗಳು ಶರೀರ ಮನೋಬುದ್ಧಿಗಳಲ್ಲಿ ಇರುವವಲ್ಲದೆ ಆತ್ಮನಲ್ಲಿ ಇರುವುದಿಲ್ಲ. ಹೀಗೆ ಆತ್ಮಜ್ಞಾನಿಯ ದೃಷ್ಟಿಯಲ್ಲಿ ಪುಣ್ಯಾತ್ಮ ಪಾಪಾತ್ಮರೆಂಬ ಭೇದವಿಲ್ಲವೆಂಬುದನ್ನು ತಿಳಿಯಪಡಿಸಿದ ಪೂಜ್ಯರು ಆತನಿಗೆ ವರ್ಣಾಶ್ರಮ ಧರ್ಮಗಳೂ ಸಹ ಇಲ್ಲವೆಂಬುದನ್ನು –

ವರ್ಣಾಶ್ರಮಸದಾಚಾರೈರ್ಜ್ಞಾನಿನಾಂ ಕಿಂ ಪ್ರಯೋಜನಮ್ ।
ಲೌಕಿಕಸ್ತು ಸದಾಚಾರಃ ಫಲಾಭಾವೇಽಪಿ ಭಾವ್ಯತೇ ॥

(ಸಿ. ಶಿ. ೧೪–೨೦)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಭಾರತೀಯ ಸಂಸ್ಕೃತಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರನೆಂಬ ಚತುರ್ವಿಧ ವರ್ಣಗಳನ್ನು, ಅದರಂತೆ ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ ಮತ್ತು ಸನ್ಯಾಸವೆಂಬ ನಾಲ್ಕು ಆಶ್ರಮಗಳನ್ನು ಪರಿಗಣಿಸಿದ್ದಾರೆ. ಅವರವರು ಆಯಾ ವರ್ಣ ಹಾಗೂ ಆಶ್ರಮ ಧರ್ಮಗಳನ್ನು ನಿಷ್ಠೆಯಿಂದ ಪರಿಪಾಲಿಸ ಬೇಕೆಂಬುದು ಒಂದು ಸಾಮಾನ್ಯವಾದ ನಿಯಮವು. ನಮ್ಮ ಪ್ರಾಚೀನ ಆಚಾರ್ಯರು ಹಾಗೂ ಮಹರ್ಷಿಗಳು ಮಾನವ ಜೀವನವನ್ನು ಈ ಚತುರ್ವಿಧ ಚೌಕಟ್ಟಿನಲ್ಲಿ ವಿಕಾಸಗೊಳಿಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಹೇಳಿರುವ ಚತುರ್ವಿಧ ವರ್ಣಗಳಲ್ಲಿ ಹೆಚ್ಚು ಕಡಿಮೆ ಎಂಬ ಭಾವನೆಯನ್ನು ತಾಳದೇ ಇವೆಲ್ಲವೂ ಪರಸ್ಪರ ಸಹಕಾರಿ ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು ಅಂದಾಗಲೇನೇ ಸಮಾಜದಲ್ಲಿಯ ಕೋಮು ಗಲಭೆಗಳು

ಶಮನಗೊಳ್ಳುವವು. ಇಲ್ಲವಾದರೆ ಇವುಗಳ ವಿಕೃತರೂಪವು ವಿಕಾಸಗೊಂಡು ವಿಶ್ವದಲ್ಲೆಲ್ಲ ಅಶಾಂತಿಯೇ ಪಸರಿಸುವುದು. ಲೌಕಿಕ ಜೀವನದಲ್ಲಿ ಈ ವರ್ಣಾಶ್ರಮ ಧರ್ಮ ಪರಿಪಾಲನೆಯು ಅವಶ್ಯವಾಗಿದ್ದರೂ ಶಿವಾದ್ವೈತಜ್ಞಾನ ಸಂಪನ್ನರಾದ ಶಿವಯೋಗಿಗಳಿಗೆ ಈ ವರ್ಣಾಶ್ರಮ ಧರ್ಮ ಪರಿಪಾಲನೆಯು ಕಡ್ಡಾಯವಾದುದಲ್ಲವೆಂಬುದನ್ನು ಪೂಜ್ಯರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಶಾಸ್ತ್ರ ವಿಹಿತವಾದ ಧರ್ಮಪರಿಪಾಲನೆಯನ್ನು ಮಾಡದೇ ಇದ್ದಾಗ ಪ್ರತ್ಯವಾಯವು ಪ್ರಾಪ್ತವಾಗುವುದಿಲ್ಲವೇ ? ಎಂಬ ಪ್ರಶ್ನೆ ಉದ್ಭವಿಸಲು ಅದಕ್ಕೆ ಉತ್ತರ ರೂಪವಾಗಿ ಶ್ರೀ ಜಗದ್ಗುರು ರೇಣುಕರು –

ನಿರ್ದಗ್ಧಕರ್ಮಬೀಜಸ್ಯ ನಿರ್ಮಲಜ್ಞಾನವಹ್ನಿನಾ ।
ದೇಹಿವದ್ಭಾಸಮಾನಸ್ಯ ದೇಹಯಾತ್ರಾ ತು ಲೌಕಿಕೀ ॥

(ಸಿ. ಶಿ. ೧೪–೨೧)

ಈ ರೀತಿಯಾಗಿ ಸಮಾಧಾನಗೈದಿದ್ದಾರೆ. ನಿರ್ಮಲ ಶಿವಜ್ಞಾನವೆಂಬ ಅಗ್ನಿಯಿಂದ ಸಂಸಾರ ಕಾರಣಗಳಾದ ಪುಣ್ಯ–ಪಾಪಗಳೆಂಬ ಕರ್ಮಬೀಜಗಳನ್ನು ಸುಟ್ಟುಬಿಟ್ಟಿರುವ ಶಿವಜ್ಞಾನಿಯು ದೇಹಧಾರಿಯಂತೆ ತೋರುವವನಾಗಿದ್ದರೂ ಅವನ ದೇಹಸ್ಥಿತಿಯು ಸುಟ್ಟ ಬಟ್ಟೆಯಂತೆ ಆಕಾರಮಾತ್ರವಾಗಿರುವುದು.

ಆ ಜೀವನ್ಮುಕ್ತನ ದೇಹ ವ್ಯಾಪಾರಗಳೆಲ್ಲವೂ ವಿದೇಹ ಕೈವಲ್ಯದ ಪರ್ಯಂತವಾಗಿ ಇರುತ್ತಿರುವವು. ಅದು ಕಾರಣ–'ಅಕರಣೇ ಪ್ರಾತ್ಯವಾಯಃ' ಸಂಬಂಧವು ಅವನಿಗಿರುವದಿಲ್ಲವೆಂಬುದು ಪೂಜ್ಯರ ಉಪದೇಶದ ಆಶಯವಾಗಿದೆ.

ಶಾಸ್ತ್ರದಲ್ಲಿ ಕರ್ಮನಾಶಕ್ಕೆ ಮುಖ್ಯವಾಗಿ ಎರಡು ಮಾರ್ಗಗಳು ಉಪದೇಶಿಸಲ್ಪಟ್ಟಿವೆ. ಮೊದಲನೇಯದು ಭೋಗ, ಎರಡನೇಯದು ಜ್ಞಾನ. ತಾನು ಮಾಡಿದ ಸಂಚಿತ ಕರ್ಮವನ್ನು ಉಪಭೋಗಿಸಬಹುದು, ಇಲ್ಲವೇ ಜ್ಞಾನಾಗ್ನಿಯಿಂದ ದಹಿಸಬಹುದು. ಕರ್ಮಫಲವನ್ನು ಭೋಗಿಸಿಯೇ ಸಮಾಪ್ತ ಮಾಡುವುದು ಅಷ್ಟು ಸುಲಭದ ಮಾತಲ್ಲ. ಪ್ರಾಕ್ತನ ಕರ್ಮಫಲಗಳನ್ನು ಅನುಭವಿಸುತ್ತಿರುವಾಗ ಜೀವಾತ್ಮನು ಪುನಃ ಹೊಸ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಮೊದಲಿನ ಕರ್ಮಗಳು ಸಮಾಪ್ತವಾಗುವುದರೊಳಗಾಗಿ ಪುನಃ ಹೊಸ ಕರ್ಮಗಳು ಭೋಗ ಕೊಡಲು ಸಜ್ಜಾಗಿ ನಿಂತಿರುತ್ತವೆ. ಹೀಗಾಗಿ ಕರ್ಮಫಲಗಳನ್ನು ಭೋಗಿಸಿಯೇ ಈ ಕರ್ಮಕೋಟಲೆಯಿಂದ ಪಾರಾಗುವುದು ಸುಲಭಸಾಧ್ಯವಲ್ಲ. ಅಂತೆಯೇ ಜ್ಞಾನಾಗ್ನಿಯಿಂದಲೇ ಕರ್ಮಗಳನ್ನು ದಹಿಸಬೇಕೆಂಬುದಾಗಿ ಎಲ್ಲ ಶಾಸ್ತ್ರಕಾರರು ಉಪದೇಶಿಸಿದ್ದಾರೆ. ಜ್ಞಾನಿಯ ಸರ್ವ ಸಂಚಿತ ಕರ್ಮಗಳು ಸುಟ್ಟ ಬೀಜದಂತೆ ನಿಷ್ಕ್ರಿಯಗಳಾಗಿರುವುದರಿಂದ ಅವು ಪುನರ್ಜನ್ಮಕ್ಕೆ ಕಾರಣವಾಗುವುದಿಲ್ಲ.

ಯಾವ ಶಿವಯೋಗಿಯು ತನ್ನ ಕರ್ಮಬೀಜಗಳನ್ನು ಜ್ಞಾನಾಗ್ನಿಯಿಂದ ದಗ್ಧ ಮಾಡಿಕೊಂಡಿದ್ದಾನೆಯೋ ಅವನ ದೇಹದ ಸ್ಥಿತಿಯು ಕೇವಲ ನೋಡುವುದಕ್ಕಾಗಿಯೇ

ವಿನಃ ವಾಸ್ತವವಾದುದಲ್ಲ. ಮಡಿಚಿಟ್ಟ ಬಟ್ಟೆಯು ಇಟ್ಟಲ್ಲಿಯೇ ಸುಟ್ಟು ಹೋದಾಗ ಅದು ನೋಡಲಿಕ್ಕೆ ದೂರದಿಂದ ಮಡಿಚಿದ ಬಟ್ಟೆಯಂತೆ ಕಾಣುತ್ತಿದ್ದರೂ ಅದು ಉಪಯೋಗಕ್ಕೆ ಬಾರದಿರುವಂತೆ ಶಿವಜ್ಞಾನಿಯ ಸಂಚಿತ ಕರ್ಮಗಳೂ ಸಹ ಸುಟ್ಟು ಹೋಗಿರುವುದರಿಂದ ಅವುಗಳು ಪುನಃ ಫಲದ್ರೂಪಗಳಾಗಲಾರವು. ಜ್ಞಾನಿಯ ಜೀವನವು ಸಾಮಾನ್ಯರ ಜೀವನದಂತೆ ತೋರಿದರೂ ಅದು ತೋರಿಕೆಯೇ ವಿನಃ ವಾಸ್ತವವಲ್ಲವೆಂಬುದನ್ನೂ ಸರ್ವರೂ ತಿಳಿದುಕೊಳ್ಳಬೇಕು. ಇಂತಹ ಶಿವಜ್ಞಾನಿಯಿಂದ ನಿತ್ಯ ಕರ್ಮಗಳು ಆಚರಿಸಲ್ಪಡದೇ ಇದ್ದರೂ ಆತನಿಗೆ ಅವ ದೋಷವೂ ತಗಲುವುದಿಲ್ಲ. ಈ ಶಿವಜ್ಞಾನಿಯು ತನ್ನ ಶುಭಾಶುಭ ಕರ್ಮಫಲದಿಂದ ಹೇಗೆ ಲಿಪ್ತನಾಗುವುದಿಲ್ಲವೆಂಬುದನ್ನು ಪುನಃ ಬೇರೆ ದೃಷ್ಟಾಂತ ಮೂಲಕವಾಗಿ ಪೂಜ್ಯರು –

> ಶಿವಜ್ಞಾನಸಮಾಪನ್ನಸ್ಥಿರವೈರಾಗ್ಯಲಕ್ಷಣಃ ।
> ಸ್ವಕರ್ಮಣಾ ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥
>
> (ಸಿ. ಶಿ. ೧೪–೨೨)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ಶಿವಾದ್ವೈತ ಜ್ಞಾನದ ಫಲವಾಗಿ ದೃಢತರವಾದ ವೈರಾಗ್ಯವನ್ನು ಹೊಂದಿರುವ ಶಿವಯೋಗಿಯು ತನ್ನ ಇಚ್ಛೆಗೆ ಬಂದ ಕರ್ಮಗಳನ್ನು ಆಚರಿಸುತ್ತಿದ್ದರೂ ನೀರಿನಲ್ಲಿರುವ ತಾವರೆಯು ನೀರಿನಿಂದ ಅಸಂಗವಾಗಿರುವಂತೆ ಈತನು ಕರ್ಮಫಲದಿಂದ ಅಲಿಪ್ತನಾಗಿರುತ್ತಾನೆ. ಶಿವಜ್ಞಾನಿಗೆ ಪ್ರಾಪ್ತವಾದ ವೈರಾಗ್ಯವು ವಿವೇಕ ಮೂಲಕವಾಗಿರೋಣದರಿಂದ ಅದು ದೃಢವಾದುದಾಗಿರುತ್ತದೆ. ಮನುಷ್ಯನಿಗೆ ಕೆಲವೊಂದು ವೇಳೆ ಪ್ರಸಂಗಾನುಸಾರವಾಗಿ ವೈರಾಗ್ಯವು ಉದಯವಾಗುವುದು. ವಿವೇಕ ವಿಲ್ಲದ ಆ ವೈರಾಗ್ಯವು ಅದೃಢವಾದುದಾಗಿರುತ್ತದೆ. ಅಂತಹ ಅಸ್ಥಿರವಾದ ವೈರಾಗ್ಯಕ್ಕೆ ಪುರಾಣವೈರಾಗ್ಯ, ಪ್ರಸೂತಿವೈರಾಗ್ಯ ಮತ್ತುಸ್ಮಶಾನವೈರಾಗ್ಯವೆಂಬುದಾಗಿ ಕರೆಯುತ್ತಾರೆ. ತಾತ್ಕಾಲಿಕಗಳಾದ ಈ ವೈರಾಗ್ಯಗಳು ಸ್ಥಿರವಾಗಿ ಉಳಿಯಲಾರವು.

ಐಹಿಕ ಹಾಗೂ ಪಾರಲೌಕಿಕಗಳಾದ ಸುಖಗಳ ಕ್ಷಣಿಕತೆಯನ್ನರಿತು ವಿವೇಕ ಮೂಲಕವಾಗಿ ಉದ್ಭವಿಸಿದ ವೈರಾಗ್ಯವೇ ಸ್ಥಿರವಾಗಿ ಉಳಿಯುವುದು. ಇಂತಹ ಸ್ಥಿರ ವೈರಾಗ್ಯ ಸಂಪನ್ನನಾದ ಜ್ಞಾನಿಯು ಪುಣ್ಯ ಅಥವಾ ಪಾಪ ಕರ್ಮಗಳನ್ನಾಚರಿಸಿದರೂ ಅವುಗಳ ಲೇಪವು ಅವನಿಗಾಗುವುದಿಲ್ಲ. ಅನ್ಯರ ದೃಷ್ಟಿಯಲ್ಲಿ ಆತನಿಂದ ಆಚರಿಸಲ್ಪಟ್ಟ ಕರ್ಮಗಳು ಶುಭಾಶುಭಗಳಾಗಿ ತೋರಿದರೂ ಆತನ ದೃಷ್ಟಿಯಲ್ಲಿ ಶುಭಾಶುಭ ಭಾವನೆಗಳೇ ಇರುವುದಿಲ್ಲ.

ಇನ್ನು ಜ್ಞಾನಿಗಳಲ್ಲಿ ಅವರು ಆಚರಿಸಿದ ಶುಭಾಶುಭ ಕರ್ಮಗಳ ಫಲಗಳಾದ ಪುಣ್ಯ–ಪಾಪಗಳು ಅವರಲ್ಲಿ ಇರುತ್ತವೆಂಬುದಾಗಿ ಭಾವಿಸಿದರೂ ಅವುಗಳ ಫಲಭೋಗವು ಮಾತ್ರ ಅವರಿಗೆ ಆಗುವುದಿಲ್ಲವೆಂಬ ವಿಷಯವು ಛಾಂದೋಗ್ಯ ಉಪನಿಷತ್ತಿನಲ್ಲಿ ಬೇರೊಂದು ವಿಧವಾಗಿ ಪ್ರತಿಪಾದಿಸಲ್ಪಟ್ಟಿದೆ. ಜ್ಞಾನಿಯು ಪುಣ್ಯ–ಪಾಪಗಳನ್ನು ಅನುಭವಿಸದೇ ಇದ್ದಾಗ ಅವುಗಳನ್ನು ಅನುಭವಿಸುವವರು ಯಾರು ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಇದರ ಸಮಾಧಾನವೆಂದರೆ ಲೋಕದಲ್ಲಿ

ಕೆಲವು ಜನರು ಜ್ಞಾನಿಗಳನ್ನು ಸ್ತುತಿಸುತ್ತಾರೆ ಮತ್ತೆ ಕೆಲವರು ಅವರನ್ನು ನಿಂದಿಸುವುದು ಉಂಟು. ಸ್ತುತಿಸಿದವರು ಪುಣ್ಯಭಾಜನರಾದರೆ ನಿಂದಿಸಿದವರು ಪಾಪಭಾಜನ ರಾಗುತ್ತಾರೆ. ಹೀಗೆ ಜ್ಞಾನಿಯಲ್ಲಿಯ ಪುಣ್ಯ–ಪಾಪಗಳು ಸ್ತುತಿ ನಿಂದೆಗೈದವರ ಪಾಲಾಗಿ ಆತನು ಪುನಃ ನಿರ್ಲಿಪ್ತನಾಗಿ ಉಳಿಯುತ್ತಾನೆ.

ಜ್ಞಾನಿಯ ಪುಣ್ಯ–ಪಾಪಗಳ ವಿಷಯವಾಗಿ ಇಲ್ಲಿ ಎರಡು ವಿಧಾನಗಳು ಪ್ರತಿಪಾದಿಸಲ್ಪಟ್ಟಿವೆ. ಆತನು ವಿಹಿತ ನಿಷಿದ್ಧ ಕರ್ಮಗಳನ್ನಾಚರಿಸಿದರೂ ಆತನಿಗೆ ಪುಣ್ಯ–ಪಾಪಗಳೇ ಉದ್ಭವಿಸುವುದಿಲ್ಲವೆಂಬುದು ಒಂದು ವಿಧವಾದರೆ ಕದಾಚಿತ್ ಅವನಿಂದ ಪುಣ್ಯ–ಪಾಪಗಳು ಉತ್ಪನ್ನವಾಗಿದ್ದರೂ ಅವುಗಳು ಸ್ತುತಿ ನಿಂದಕರಿಗೆ ಹಂಚಿಹೋಗುತ್ತವೆ ಎಂಬುದು ಇನ್ನೊಂದು ವಿಧಾನ. ಈ ಎರಡೂ ದೃಷ್ಟಿಯಿಂದಲೂ ಜ್ಞಾನಿಯು ಸ್ವಕೃತ ಕರ್ಮಫಲಗಳ ಭಾಜನವಾಗುವುದಿಲ್ಲವೆಂಬುದು ಸಿದ್ಧವಾಗುತ್ತದೆ. ಅಂತೆಯೇ ಪೂಜ್ಯಪಾದರು ಕಮಲಪತ್ರದ ಉದಾಹರಣೆಯನ್ನು ಕೊಟ್ಟಿದ್ದಾರೆ. ಪ್ರಾರಬ್ಧಕರ್ಮ ಇರುವವರೆಗೆ ಜ್ಞಾನಿಯು ದೇಹಧಾರಿಯಾಗಿದ್ದು ಜೀವನ್ಮುಕ್ತಿಯ ಆನಂದವನ್ನು ಅನುಭವಿಸುತ್ತ ದೇಹಪಾತವಾದೊಡನೆ ವಿದೇಹ ಕೈವಲ್ಯವನ್ನು ಹೊಂದುವನು. ಹೀಗೆ ಜ್ಞಾನಿಗೆ ಶುಭಾಶುಭ ರೂಪಗಳಾದ ಸಂಚಿತ ಕರ್ಮಗಳು ಇಲ್ಲದಿರುವದರಿಂದ ಆತನು ಪುನರ್ಜನ್ಮರಹಿತವಾದ ಕೈವಲ್ಯವನ್ನು ಹೊಂದುವನೆಂಬು ದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ಜುಲೈ, ೧೯೮೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪುರ)



# ಆಚಾರಸಂಪತ್ತಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಐಕ್ಯಸ್ಥಲಾಂತರ್ಗತವಾದ ಆಚಾರ ಸಂಪತ್ತಿಸ್ಥಲ ವನ್ನು ಕುರಿತು ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಶಿವಜ್ಞಾನ ಸಂಪನ್ನನಾದ ಶಿವಯೋಗಿಯು ಪದ್ಮಪತ್ರದಂತೆ ಅಲಿಪ್ತನಾಗಿರುತ್ತಾನೆಂಬುದನ್ನು ತಿಳಿಸಿದ ಪೂಜ್ಯರು ಸದ್ಯಃ ಆತನು ಸರ್ವತೋಭಾವೇನ ಶಿವಸ್ವರೂಪನೇ ಆಗಿರುತ್ತಾನೆಂಬುದನ್ನು ಪುನಃ –

ಗಚ್ಛಂಸ್ತಿಷ್ಠನ್ ಸ್ವಪನ್‌ವಾಪಿ ಜಾಗ್ರನ್‌ವಾಪಿ ಮಹಾಮತಿಃ ।
ಶಿವಜ್ಞಾನಸಮಾಯೋಗಾಚ್ಛಿವಪೂಜಾಪರಃ ಸದಾ ॥

(ಸಿ. ಶಿ. ೧೪–೨೩)

ಪೂಜ್ಯರು ಈ ತೆರನಾಗಿ ಅಪ್ಪಣೆಕೊಡಿಸಿದ್ದಾರೆ. ಶಿವೈಕ್ಯಭಾವನೆ ಸಂಪನ್ನನಾದ ಶಿವಯೋಗಿಯು ನಡೆದಾಡುವಾಗ, ನಿಂತಾಗ, ನಿದ್ರಿಸುವಾಗ, ಎಚ್ಚರಿದ್ದಾಗ ಮತ್ತು ಇನ್ನಾವ ಕಾರ್ಯವನ್ನು ಮಾಡುತ್ತಿದ್ದಾಗಲೂ ಸಹ ಶಿವಪೂಜಾ ಪರಾಯಣನೇ ಆಗಿರುತ್ತಾನೆ. ಪ್ರತಿಕ್ಷಣದಲ್ಲೂ ಶಿವೋಽಹಂ ಭಾವನೆಯ ಚಿಂತನೆಯೇ ಆತನ ಅಂತಃಕರಣದಲ್ಲಿ ನಡೆದಿರುತ್ತದೆ.

ಶಾಸ್ತ್ರದಲ್ಲಿ ಶಿವಪೂಜಾ ಸಂಬಂಧಗಳಾದ ಅನೇಕ ನಿಯಮಗಳು ಪ್ರತಿಪಾದಿಸಲ್ಪಟ್ಟಿವೆ. ಶಿವದೀಕ್ಷಾಸಂಪನ್ನನಾದ ಓರ್ವ ಸಾಧಕನು ಪೂಜಾದಿಗಳನ್ನು ಮಾಡುವಾಗ ಇಂತಹ ದಿಕ್ಕಿಗೆನೇ ಮುಖ ಮಾಡಿ ಕುಳಿತುಕೊಳ್ಳಬೇಕು, ಇಂತಿಂಥಹ ಆಸನಗಳ ಮೇಲೆಯೇ ಕುಳಿತು ಪೂಜೆ ಮಾಡಬೇಕು. ನಡೆದಾಡುವಾಗ, ನಿದ್ರಿಸುವಾಗ, ಉಣ್ಣುವಾಗ ಮಂತ್ರಜಪವನ್ನು ಮಾಡಬಾರದೆಂಬುದಾಗಿ ನಿರೂಪಿಸಲಾಗಿದೆ. ಸಾಧಕನಿಗೆ ಹೇಳಿದ ಈ ನಿಯಮಗಳು ಸಿದ್ಧಿಯ ಸ್ಥಿತಿಯನ್ನು ಪಡೆದ ಶಿವಯೋಗಿಗೆ ಬಂಧನಕಾರಕಗಳಾಗಲಾರವು. ಆತನ ಚಿತ್ತವು ಸದಾ ಶಿವನಲ್ಲಿಯೇ ಆಸಕ್ತವಾಗಿರುವ ದರಿಂದ ಶಾರೀರಿಕವಾಗಿ ಆತ ಏನೇ ಮಾಡುತ್ತಿದ್ದರೂ ಆತನ ಮನಸ್ಸು ಸದಾ ಶಿವಧ್ಯಾನಾಸಕ್ತನಾಗಿರುವುದರಿಂದ ಆತನಿಗೆ ವಿಧಿ ನಿಷೇಧಗಳ ಕಟ್ಟುಪಾಡುಗಳು ಇರುವುದಿಲ್ಲ. ಅಂತೆಯೇ ಪೂಜ್ಯಪಾದರು, ಶಿವಯೋಗಿಯು ಸರ್ವಾವಸ್ಥೆಯಲ್ಲಿಯೂ ಸದಾ ಶಿವಪೂಜಾಪರನೇ ಆಗಿದ್ದಾನೆಂಬುದಾಗಿ ಉಪದೇಶಿಸಿದ್ದಾರೆ.

ಶ್ರೀ ಶಂಕರಾಚಾರ್ಯರು 'ಶಿವಮಾನಸ ಸ್ತೋತ್ರದಲ್ಲಿ' ಶಿವಯೋಗಿಯ ಸರ್ವ ವ್ಯವಹಾರಗಳು ಶಿವಾರಾಧನೆಗಳೆಂಬುದಾಗಿ ವಿವರಿಸಿದ್ದಾರೆ. ಅವರ ಉಪದೇಶದಂತೆ ಆತ್ಮವೇ ಪರಮಾತ್ಮನು, ಬುದ್ಧಿಯೇ ಗಿರಿಜೆಯು, ಪ್ರಾಣಗಳೇ ಸಹಚರರು, ಶರೀರವೇ ಮಂದಿರವು, ಸಕಲ ವಿಷಯೋಪಭೋಗವೇ ಪೂಜೆಯು, ನಿದ್ರೆಯೇ ಸಮಾಧಿಸ್ಥಿತಿಯು, ಅತ್ತಿತ್ತ ಸುಳಿದಾಡುವುದೆಲ್ಲ ಪ್ರದಕ್ಷಿಣೆಯು, ಮಾತಾಡುವ ಮಾತುಗಳೆಲ್ಲ ಸ್ತೋತ್ರವು

ಹೀಗೆ ವಿವರಿಸುತ್ತ ಕೊನೆಗೆ ಶಿವಯೋಗಿಯ ಪ್ರತಿಯೊಂದು ಕರ್ಮವು ಶಿವಪೂಜೆ ಎಂಬುದಾಗಿ ವಿವರಿಸಿದ್ದಾರೆ. ಮಂದಿರದಲ್ಲಿಯೇ ದೇವರನ್ನು ಕಾಣುವ ಸಾಮಾನ್ಯ ಸಾಧಕನು ಪೂಜೆ, ಸ್ತೋತ್ರ, ಪ್ರದಕ್ಷಿಣಗಳಿಗಾಗಿ ಮಂದಿರಕ್ಕೇನೆ ಹೋಗಬೇಕಾಗುವುದು. ಆದರೆ ತನ್ನ ಹೃದಯ ಮಂದಿರದಲ್ಲಿ ಶಿವನನ್ನು ಆರಾಧಿಸುವ ಶ್ರೇಷ್ಠ ಸಾಧಕನು ಬೇರೆಲ್ಲಿಯೂ ಹೋಗುವ ಅವಶ್ಯಕತೆಗಳಿಲ್ಲ, ಅವನ ಶರೀರ, ವಾಣಿ, ಮನಸ್ಸುಗಳೆಂಬ ತ್ರಿಕರಣಗಳ ಮೂಲಕ ನಡೆಯುವ ಸರ್ವವ್ಯವಹಾರಗಳು ಶಿವಪೂಜೆಗಳಾಗಿ ಪರಿಣಮಿಸುತ್ತವೆ. ಈ ಶಿವಯೋಗಿಯ ದೃಷ್ಟಿಯು ಶಿವಮಯವಾಗಿರುವುದರಿಂದ ಸಮಸ್ತ ಸೃಷ್ಟಿಯನ್ನೆಲ್ಲ ಈತನು ಶಿವಮಯವಾಗಿ ಕಾಣುತ್ತಾನೆ. ಆದ್ದರಿಂದ ಸಾಧನೆಯ ಪ್ರಾರಂಭಾವಸ್ಥೆಯಲ್ಲಿ ನಿಯಮಗಳ ಬಂಧನಗಳೇ ವಿನಃ ಸಿದ್ಧಾವಸ್ಥೆಯನ್ನು ಪಡೆದಾಗ ಅದಾವ ನಿಯಮಗಳ ಬಂಧನಗಳು ಶಿವಯೋಗಿಗೆ ಇರುವುದಿಲ್ಲವೆಂಬುದೇ ಪೂಜ್ಯರ ತಾತ್ಪರ್ಯವಾಗಿದೆ.

ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕರು ಐಕ್ಯಸ್ಥಿತಿಯನ್ನು ಪಡೆದ ಈ ಶಿವಯೋಗಿಯ ಶಿವದರ್ಶನ ಸಂಪತ್ತನ್ನು ಪುನಃ –

ಯದ್ಯತ್ಪಶ್ಯತಿ ಸಾಮೋದಂ ವಸ್ತು ಲೋಕೇಷು ದೇಶಿಕಃ ।
ಶಿವದರ್ಶನಸಂಪತ್ತಿಸ್ತತ್ರ ತತ್ರ ಮಹಾತ್ಮನಃ ॥

(ಸಿ. ಶಿ. ೧೪–೨೪)

ಈ ರೀತಿಯಾಗಿ ವಿವರಿಸಿದ್ದಾರೆ. ಶಿವೈಕ್ಯ ಭಾವನೆಯನ್ನು ಹೊಂದಿದ ಶಿವಯೋಗಿಯು ಅತ್ಯಂತ ಪ್ರೀತಿಪೂರ್ವಕವಾಗಿ ಯಾವ–ಯಾವ ವಸ್ತುಗಳನ್ನು ನೋಡುವನೋ ಅವೆಲ್ಲವುಗಳಲ್ಲಿ ಆತನಿಗೆ ಶಿವದರ್ಶನವೇ ಆಗುತ್ತಿರುವುದು. ದೃಷ್ಟಿಯೇ ಶಿವಮಯವಾಗಿರುವುದರಿಂದ ಸೃಷ್ಟಿಯು ಶಿವಮಯವಾಗಿ ತೋರುವಲ್ಲಿ ಯಾವ ಅಭ್ಯಂತರವೂ ಇಲ್ಲ. ವಸ್ತುತಃ ಸರ್ವತ್ರ ಶಿವನೇ ತುಂಬಿಕೊಂಡಿದ್ದರೂ ಆತನನ್ನು ಕಾಣುವ ದೃಷ್ಟಿಯಿಲ್ಲದ ಕಾರಣ ಬಹುತೇಕ ಜನರು ಶಿವದರ್ಶನ ಶೂನ್ಯರಾಗಿ ಮಾಯಾ ಮೋಹಕ್ಕೆ ಒಳಗಾಗುತ್ತಾರೆ. ಲೋಕದಲ್ಲಿ ಹಗ್ಗವನ್ನು ಕಂಡು ಹಾವೆಂದು, ಕಪ್ಪೆಚಿಪ್ಪನ್ನು ಕಂಡು ಬೆಳ್ಳಿಯೆಂದು, ಮೋಟುಮರವನ್ನು ಕಂಡು ಕಳ್ಳನೆಂದು ಭ್ರಮಿಸುವುದನ್ನು ಕಾಣುತ್ತೇವೆ. ವಸ್ತುತಃ ಅಲ್ಲಿ ಹಾವು, ಬೆಳ್ಳಿ ಮತ್ತು ಕಳ್ಳ ಇಲ್ಲವೇ ಇಲ್ಲ. ಅಲ್ಲಿ ಇರುವುದು ಹಗ್ಗ, ಸಿಂಪಿ ಮತ್ತು ಮೋಟುಮರವೇ. ಆದರೂ ದೃಷ್ಟಿದೋಷದ ಮೂಲಕವಾಗಿ ಇದ್ದದ್ದನ್ನು ಬಿಟ್ಟು ಇಲ್ಲದ್ದನ್ನು ಕಂಡು ಭ್ರಮಿಸುವಂತೆ ಶಿವದೃಷ್ಟಿ ಶೂನ್ಯರಾದ ಜನರು ಶಿವನನ್ನೇ ಪ್ರಾಪಂಚವನ್ನಾಗಿ ಭಾವಿಸುತ್ತಾರೆ. ವಸ್ತುತಃ ಪ್ರಪಂಚವೆಂಬುದೇ ಇಲ್ಲ, ಇದೆಲ್ಲವೂ ಶಿವರೂಪವೇ ಆಗಿದೆ. ಅಂತೆಯೇ ಉಪನಿಷತ್ತಿನಲ್ಲಿ– ''ಸರ್ವಂ ಖಲು ಇದಂ ಬ್ರಹ್ಮ'' ಅಂದರೆ ಸರ್ವವೆಲ್ಲವೂ ಪರಶಿವ ಬ್ರಹ್ಮರೂಪವೇ ಆಗಿರುವುದೆಂಬುದಾಗಿ ಉಪದೇಶಿಸಲ್ಪಟ್ಟಿದೆ. ಶ್ರೀ ಸಿದ್ಧಾಂತ ಶಿಖಾಮಣಿಯ ಹತ್ತನೆಯ ಪರಿಚ್ಛೇದದ 'ಶಿವಜಗನ್ಮಯಸ್ಥಲ' ದಲ್ಲಿ ಭೂತ ಭೌತಿಕ ಪ್ರಪಂಚವೆಲ್ಲವೂ ಶಿವರೂಪವೇ ಆಗಿದೆ ಎಂಬುದನ್ನು ಬಹು ಹೃದಯಂಗಮವಾಗಿ ಪ್ರತಿಪಾದಿಸಲಾಗಿದೆ.

ಪತಂಜಲಿ ಮಹರ್ಷಿಗಳು ಯೋಗಶಾಸ್ತ್ರದಲ್ಲಿ ಶಿವದರ್ಶನಕ್ಕಾಗಿ ಚಿತ್ತವೃತ್ತಿಯ ನಿರೋಧವನ್ನು ವಿವರಿಸಿದ್ದಾರೆ. ಶ್ರೀ ರೇಣುಕರು ಈ ಶಿವಯೋಗದಲ್ಲಿ ಚಿತ್ತವೃತ್ತಿಯ ನಿರೋಧವನ್ನು ಹೇಳದೇ ಆ ವೃತ್ತಿಯು ಹೋದಲ್ಲೆಲ್ಲ ಶಿವನನ್ನೇ ಕಾಣಬೇಕೆಂಬುದಾಗಿ ಉಪದೇಶಿಸಿದ್ದಾರೆ. ಇದು ಒಂದು ಸಹಜವಾದ ಸಮಾಧಿಯೋಗವು. ಮನಸ್ಸನ್ನು ನಿಗ್ರಹಿಸಿ ಸಮಾಧಿಯನ್ನು ಸಾಧಿಸುವಾಗ ಆ ಕ್ಷಣದಲ್ಲಿ ಅದು ಶಾಂತವಾಗಿ ತೋರಿದರೂ ಸಮಾಧಿಯಿಂದ ಉತ್ಥಾನವಾದ ಬಳಿಕ ಕಾಲು ಬಿಚ್ಚಿದ ಕುದುರೆಯಂತೆ, ಅತೀ ಚಂಚಲ ವಾಗಿ ಅತ್ತಿತ್ತ ಓಡಾಡಲು ಪ್ರಾರಂಭಿಸುವುದು. ಆದ್ದರಿಂದ ವೃತ್ತಿ ನಿರೋಧರೂಪವಾದ ಪಾತಂಜಲಿಯ ಯೋಗಕ್ಕಿಂತಲೂ ಸರ್ವತ್ರ ಶಿವಭಾವನೆಯನ್ನು ಮಾಡುವ ಶಿವ ಯೋಗವು ಸರಳವೂ, ಶ್ರೇಷ್ಠವೂ ಆಗಿರುತ್ತದೆ. ಆದ್ದರಿಂದ ಮನಸ್ಸಿನ ಮೇಲೆ ಯಾವುದೇ ಅತಿಯಾದ ಒತ್ತಡವನ್ನು ತೂರದೇ ಅದನ್ನು ಸಹಜವಾಗಿ ಸರ್ವತ್ರ ಶಿವದರ್ಶನದ ಮೂಲಕ ಸಮಾಧಿಯತ್ತ ಕೊಂಡೊಯ್ಯುವ ಶಿವಯೋಗಿಯ ದೃಷ್ಟಿಯು ಶಿವರೂಪವಾಗಿರುವುದರಿಂದ ಆತನು ಸರ್ವತ್ರ ಶಿವದರ್ಶನರೂಪವಾದ ಅಮೋಘ ವಾದ ಸಂಪತ್ತನ್ನು ಪಡೆದು ಅಚ್ಚ ಸುಖಿಯಾಗಿರುತ್ತಾನೆ. ಹೀಗೆ ಶಿವಯೋಗಿಯ ದರ್ಶನ ಸಂಪತ್ತನ್ನು ವಿವರಿಸಿದ ಪೂಜ್ಯರು ಇನ್ನು ಮುಂದೆ ಆತನ ಚಿಂತನ ಸಂಪತ್ತನ್ನು–

ಯದ್ಯಚ್ಚಿಂತಯತೇ ಯೋಗೀ ಮನಸಾ ಶುದ್ಧಭಾವನಃ ।
ತತ್ತಚ್ಛಿವಮಯತ್ವೇನ ಶಿವಧ್ಯಾನಮುದಾಹೃತಮ್ ॥

(ಸಿ. ಶಿ. ೧೪–೨೫)

ಈ ತೆರನಾಗಿ ವಿವರಿಸಿದ್ದಾರೆ. ಶಿವಭಾವನೆಯುಳ್ಳ ಶಿವಯೋಗಿಯು ತನ್ನ ಮನಸ್ಸಿನಿಂದ ಏನನ್ನೇ ಯೋಚಿಸುತ್ತಿದ್ದರೂ ಅದೆಲ್ಲವೂ ಶಿವಧ್ಯಾನವೆಂದೇ ಕರೆಯಲ್ಪಡುತ್ತದೆ. ಭಾವನೆಯೇ ಶಿವರೂಪವಾಗಿರುವಾಗ ಅದರಿಂದ ನಡೆಯುವ ಚಿಂತನೆಗಳೆಲ್ಲ ಶಿವರೂಪದ ಹೊರತಾಗಿ ಬೇರಾವುದೂ ಇರುವುದಿಲ್ಲ. ಹೀಗೆ ಅಂತರಂಗ ಬಹಿರಂಗ ದಲ್ಲಿ ಶಿವಚಿಂತನೆಯನ್ನೇ ಮಾಡುತ್ತಿರುವ ಶಿವಯೋಗಿಯ ಸರ್ವ ಚಿಂತನೆಗಳು ಶಿವಧ್ಯಾನ ವೆಂಬುದಾಗಿಯೇ ಅರಿಯಬೇಕು.

ಶಿವೈಕ್ಯ ಭಾವನೆಯನ್ನು ಹೊಂದಿದ ಶಿವಯೋಗಿಯ ಚಿಂತನ ಸಂಪತ್ತನ್ನು ವಿವರಿಸಿದ ಪೂಜ್ಯರು ಇನ್ನು ಮುಂದೆ ಆತನ ವಾಗ್ವ್ಯವಹಾರವನ್ನು ಕುರಿತು–

ಯತ್ಕಿಂಚಿದ್ಭಾಷಿತಂ ಲೋಕೇ ಸ್ವೇಚ್ಛಯಾ ಶಿವಯೋಗಿನಾ ।
ಶಿವಸ್ತೋತ್ರಮಿದಂ ಸರ್ವಂ ಯಸ್ಮಾತ್ ಸರ್ವಾತ್ಮಕಃ ಶಿವಃ ॥

(ಸಿ. ಶಿ. ೧೪–೨೬)

ಈ ತೆರನಾಗಿ ವಿವರಿಸಿದ್ದಾರೆ. ಶಿವಯೋಗಿಯು ತನ್ನ ಇಚ್ಛಾನುಸಾರವಾಗಿ ಯಾವ ಮಾತುಗಳನ್ನೇ ಮಾತಾಡಿದರೂ ಅವೆಲ್ಲವೂ ಶಿವಸ್ತೋತ್ರಗಳೇ ಆಗಿರುತ್ತವೆಂಬುದು ಪೂಜ್ಯರ ಆಶಯವಾಗಿದೆ. ಮಾತುಗಳು ಸ್ತೋತ್ರವಾಗಿ ಪರಿಣಮಿಸಬೇಕಾದರೆ ಆ ವಾಣಿಯು ಎಷ್ಟು ಸಂಸ್ಕಾರ ಸಂಪನ್ನವಾಗಿದ್ದೆಂಬುದು ತಿಳಿದುಬರುತ್ತದೆ. ಪರಮಾತ್ಮನು ಅನುಗ್ರಹಿಸಿದ ವಾಣಿಯು ಸಾರ್ಥಕವಾಗಬೇಕಾದರೆ ಅದು ಸದಾ ಶಿವಗುಣಗಾನವನ್ನು

ಮಾಡಬೇಕು. ಶಿವಸ್ತೋತ್ರವನ್ನು ಗೈದಾಗಲೇ ವಾಣಿಯು ಶಿವಮಯವಾಗುವುದು. ಓರ್ವ ಸಾಧಕನು ತನ್ನ ವಾಣಿಯಿಂದ ಶಿವನ ಗುಣಗಾನವನ್ನು ಮಾಡುತ್ತಿದ್ದರೆ ಶಿವನ ಉತ್ಕೃಷ್ಟವಾದ ಗುಣಗಳು ಅವನಲ್ಲಿ ಅಳವಡುತ್ತವೆ. ಗುಣಗಳ ವರ್ಣನೆಯೆಂದರೆ ಆ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳುವ ಪ್ರಕ್ರಿಯೆ ಎಂಬುದಾಗಿ ತಿಳಿದುಕೊಳ್ಳಬೇಕು. ಅಂತೆಯೇ ನಮ್ಮ ದೇಶದ ಅನೇಕ ಕವಿಗಳು, ಮಹಾಕವಿಗಳು ದೇವರ ಸ್ತೋತ್ರವನ್ನು ರಚಿಸಿದ್ದುಂಟು. ಸ್ತೋತ್ರವನ್ನು ರಚಿಸಲಿಕ್ಕೆ ಬರುವವರು ಸ್ತೋತ್ರವನ್ನು ರಚಿಸಿ ಅವುಗಳ ಗಾನ ಮಾಡಬಹುದು. ಇನ್ನು ಯಾರಿಗೆ ರಚಿಸಲು ಬರುವುದಿಲ್ಲವೋ ಅವರು ಯಾರಾದರೂ ರಚಿಸಿದ ಸ್ತೋತ್ರವನ್ನು ಭಕ್ತಿಯಿಂದ ಹಾಡಿ ಆ ದೈವೀ ಗುಣಗಳನ್ನು ಪಡೆಯಲು ಬರುತ್ತದೆ.

ಛಂದೋಬದ್ಧವಾಗಿ ರಚಿಸಿದ ಸ್ತೋತ್ರಗಳೇ ಶಿವನಿಗೆ ಪ್ರಿಯವಾಗುತ್ತವೆಂಬುದೇನೂ ನಿಯಮವಿಲ್ಲ. ಶಬ್ದಗಳ ಜೋಡಣೆ ಹೇಗಾದರೂ ಇರಬಹುದು. ಆದರೆ ಅದನ್ನು ಉಚ್ಚರಿಸುವಾಗ ಭಾವಪೂರ್ಣವಾಗಿ ಉಚ್ಚರಿಸಬೇಕು. ಭಾವಪೂರ್ಣನಾದ ವ್ಯಕ್ತಿಯ ವಾಣಿಯಿಂದ ಹೊರಹೊಮ್ಮಿದ ಎಲ್ಲ ಶಬ್ದಗಳು ಸ್ತೋತ್ರಕ್ಕೆ ಸಮಾನವಾದವುಗಳೇ ಆಗಿರುತ್ತವೆ. ಅಂತೆಯೇ 'ಮಂತ್ರವಾಗದ ಅಕ್ಷರವೇ ಇಲ್ಲ' ಎಂಬುದಾಗಿ ಅನುಭವಿಕರು ನುಡಿದಿದ್ದಾರೆ. ಆದಿ ವರ್ಣವಾದ ಓಂಕಾರದಿಂದಲೇ ಎಲ್ಲ ಅಕ್ಷರಗಳು ಜನಿಸಿರುವುದರಿಂದ ಪ್ರತಿಯೊಂದು ಅಕ್ಷರಕ್ಕೂ ಮಹತ್ವವಿದ್ದೇ ಇದೆ. ಇನ್ನು ನಮ್ಮ ಭಾವನೆಯು ಬಲಿತಂತೆಲ್ಲ ಅವುಗಳ ಮಹಿಮೆಯು ಹೆಚ್ಚು–ಹೆಚ್ಚಾಗಿ ಅನುಭವಗೋಚರವಾಗುವವು. ಪರಮಾತ್ಮನು ಶಬ್ದ ಶುದ್ಧಿಯ ಕಡೆಗೆ ಹೆಚ್ಚು ಲಕ್ಷ್ಯ ಕೊಡದೆ ಭಾವಶುದ್ಧತೆಗೆ ಹೆಚ್ಚು ಮಹತ್ತ್ವ ಕೊಡುತ್ತಾನೆ. ಅಂತೆಯೇ ಭಗವಂತನಿಗೆ ಭಾವವಿರದ ಪಂಡಿತರ ಛಂದೋಬದ್ಧವಾದ ಸ್ತೋತ್ರಕ್ಕಿಂತಲೂ ಭಾವವುಳ್ಳ ಭಕ್ತರ ಛಂದೋವಿಹೀನವಾದ ಸ್ತೋತ್ರವೇ ಹೆಚ್ಚು ಪ್ರಿಯಕರವಾಗುವುದು. ಅಂತೆಯೇ ಶಿವಯೋಗಿಯ ಮಾತುಗಳೆಲ್ಲ ಸ್ತೋತ್ರಗಳಾಗುತ್ತವೆಂಬುದಾಗಿ ಪೂಜ್ಯರು ಉಪದೇಶಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕರು ಶಿವಯೋಗಿಯ ವಾಗ್ ವ್ಯವಹಾರದ ಬಗ್ಗೆ ತಿಳಿಯಪಡಿಸಿ ಇನ್ನು ಮುಂದೆ ಕೊನೆಯದಾಗಿ ಅವನ ಪ್ರತಿಯೊಂದು ಕ್ರಿಯೆಗಳೂ ಸಹ ಶಿವಪೂಜೆಯೇ ಆಗಿರುತ್ತವೆಂಬುದನ್ನು–

ಯಾ ಯಾ ಚೇಷ್ಟಾ ಸಮುತ್ಪನ್ನಾ ಜಾಯತೇ ಶಿವಯೋಗಿನಾಮ್ ।
ಸಾ ಸಾ ಪೂಜಾ ಮಹೇಶಸ್ಯ ಸರ್ವದಾ ತದ್ಗತಾತ್ಮನಾಮ್ ॥

(ಸಿ. ಶಿ. ೧೪–೨೭)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವಲಿಂಗದಲ್ಲಿ ತಾದಾತ್ಮ್ಯ ಭಾವನೆಯಿಂದ ಐಕ್ಯಗೊಂಡಿರುವ ಶಿವಯೋಗಿಯ ದೇಹದಲ್ಲಿ ಯಾವ ಯಾವ ಕ್ರಿಯೆಗಳುಂಟಾಗುವವೋ ಅವೆಲ್ಲವೂ ಶಿವಲಿಂಗ ಪೂಜೆಯೇ ಆಗಿರುವವು. ಶರೀರದಿಂದ ಯಾವ ಕ್ರಿಯೆಯು ನಡೆಯುತ್ತಿದೆಯೋ ಅದು ಅಷ್ಟೊಂದು ಮಹತ್ವಪೂರ್ಣವಾದುದಲ್ಲ. ಮನಸ್ಸಿನಿಂದ ಆಚರಿಸಲ್ಪಡುವ ಕ್ರಿಯೆಗಳೇ ಅತೀ ಮಹತ್ವಪೂರ್ಣವಾದವುಗಳು. ನಾವು

ಯಾವಾಗಲೂ ಶರೀರವಿದ್ದಲ್ಲಿ ಇರದೇ ಮನಸ್ಸು ಇದ್ದಲ್ಲಿಯೇ ಇರುತ್ತೇವೆ. ಅಂತೆಯೇ ಶಾರೀರಿಕ ಕ್ರಿಯೆಗಿಂತ ಮಾನಸಿಕ ಕ್ರಿಯೆಯು ಮಹತ್ವಪೂರ್ಣವಾದುದು. ಶಿವಯೋಗಿಯ ಚಿತ್ತವು ಸದಾ ಶಿವನಲ್ಲಿ ತಲ್ಲೀನವಾಗಿರುವುದರಿಂದ ಆವನ ಶರೀರದಿಂದ ಯಾವ ಕ್ರಿಯೆಯು ನಡೆದರೂ ಅದು ಶಿವಪೂಜೆಯೆಂದೇ ಭಾವಿಸಬೇಕು.

ಶಿವಧ್ಯಾನ ಶಿವಚಿಂತನೆಗಳಿಗೆ ಬಾಹ್ಯ ಯಾವ ಕ್ರಿಯಾಕಲಾಪಗಳು ಅಡ್ಡಿ ಯನ್ನುಂಟುಮಾಡಲಾರವು. ಅನ್ಯರ ಜೊತೆಗೆ ಮಾತನಾಡುತ್ತ ಮನೆಗೆಲಸವನ್ನು ಮಾಡಲು ಬರುವಂತೆ ಶಿವಚಿಂತನೆಯನ್ನು ಮಾಡುತ್ತ ಆ ಕೆಲಸಗಳನ್ನು ಮಾಡಲು ಬರುವುದಾದ ಕಾರಣ ಶಿವಯೋಗಿಯಂತೆ ಪ್ರತಿಯೊಬ್ಬರೂ ಶಿವಾಸಕ್ತಚಿತ್ತರಾಗಿ ತಮ್ಮ ಕರ್ತವ್ಯ ಕರ್ಮಗಳನ್ನು ಪರಿಪಾಲಿಸುವುದು ಹೆಚ್ಚು ಸೂಕ್ತವಾದುದು. ಕರ್ತವ್ಯ ಕರ್ಮ ಗಳನ್ನು ಮಾಡುವಾಗ ಶಿವಧ್ಯಾನ ಶಿವಚಿಂತನೆಗಳು ಅಸಾಧ್ಯವೆನಿಸಿದರೆ ಪ್ರಾರಂಭದಲ್ಲಿ ನಾಮಸ್ಮರಣೆಯನ್ನಾದರೂ ಮಾಡುವ ಪರಿಪಾಠವನ್ನು ಹಾಕಿಕೊಳ್ಳಬೇಕು.

ಓರ್ವ ಮನುಷ್ಯನು ಶೌಚಕ್ರಿಯೆಯನ್ನು ಪೂರೈಸಿಕೊಂಡು ಬರುವಾಗ ತನ್ನ ನಾಲಿಗೆಗೆ ಜನಿವಾರವನ್ನು ಸುತ್ತಿಕೊಂಡು ಬರುತ್ತಿದ್ದುದನ್ನು ಓರ್ವ ಶಿವಾಚಾರ್ಯರು ಕಂಡರು. ಅವನನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಶೌಚಕ್ಕೆ ಹೋದಾಗ ಕಿವಿಗೆ ಜನಿವಾರವನ್ನು ಸುತ್ತುವುದು ಪದ್ಧತಿ ಇದೆ. ಆದರೆ ನಾಲಿಗೆಗೆ ಸುತ್ತುವ ಈ ಪದ್ಧತಿಯು ಎಲ್ಲಿಂದ ಬಂತು ಎಂಬುದಾಗಿ ಮನದಲ್ಲಿ ವಿಚಾರಿಸಿ ಆತನನ್ನು ಪ್ರಶ್ನಿಸಿದರು. ನೀನು ಜನಿವಾರವನ್ನು ಕಿವಿಗೆ ಸುತ್ತುವುದನ್ನು ಬಿಟ್ಟು ನಾಲಿಗೆಗೆ ಹೇಗೆ ತಾನೇ ಸುತ್ತಿರುವೆ? ಆಗ ಆ ವ್ಯಕ್ತಿಯು ಪೂಜ್ಯರೇ ! ನನ್ನ ನಾಲಿಗೆಗೆ ಸದಾ ಭಗವಂತನ ನಾಮವನ್ನು ಜಪಿಸುವ ಅಭ್ಯಾಸವಿದೆ ಶೌಚಕ್ಕೆ ಕುಳಿತಾಗ ನಾಮಸ್ಮರಣೆ ಮಾಡುವುದು ಸರಿಯಲ್ಲವೆಂಬುದಾಗಿ ತಿಳಿದು ನಾಲಿಗೆಗೆ ನಾಮಸ್ಮರಣೆ ಮಾಡಲು ಬರಬಾರದೆಂಬ ಉದ್ದೇಶದಿಂದ ಜನಿವಾರವನ್ನು ಸುತ್ತಿದ್ದೇನೆ ಎಂಬುದಾಗಿ ಹೇಳಿದ. ಆಗ ಮಹಾತ್ಮರು ನಿನಗಿರುವ ಅಭ್ಯಾಸವು ಸರಿಯಾಗಿದೆ, ಅಖಂಡವಾಗಿ ನಾಮಸ್ಮರಣೆ ಮಾಡುವವರಿಗೆ ಶುಚಿ– ಅಶುಚಿಗಳ ಭೇದ ಇರುವುದಿಲ್ಲ ನಾಮಸ್ಮರಣೆಯನ್ನು ಯಾವಾಗಲೂ ಮಾಡುತ್ತಲೇ ಇರಬೇಕು. ಮನುಷ್ಯನ ಮರಣದ ಸಮಯವು ಎಂದು ? ಹೇಗೆ ? ಎಂಬುದು ಯಾರಿಗೂ ಗೊತ್ತಿಲ್ಲ, ಆದಕಾರಣ ವಿಧಿ ನಿಷೇಧದ ಗೊಡವೆಗೆ ಹೋಗದೆ ಸದಾ ಭಗವಂತನ ಚಿಂತನೆಯಲ್ಲಿ ತೊಡಗಿರುವುದೇ ಸೂಕ್ತವಾದುದು. ಅಂತ್ಯ ಸಮಯದಲ್ಲಿ ಶಿವಚಿಂತನೆಯೊಂದಿಗೆ ದೇಹವನ್ನು ಬಿಟ್ಟಾಗ ಅವನು ಶಿವನೊಂದಿಗೆ ಸಮರಸ ನಾಗುವನು. ಆದಕಾರಣ ಸದಾ ಸರ್ವದಾ ಶಿವಚಿಂತನೆಯಲ್ಲಿ ಪ್ರತಿಯೊಬ್ಬರೂ ತೊಡಗಿರಬೇಕೆಂಬುದು ಪೂಜ್ಯಪಾದರ ಆದೇಶವಾಗಿದೆ.

ಶಿವಾದ್ವೈತ ಜ್ಞಾನದಲ್ಲಿ ತಲ್ಲೀನನಾದ ಶಿವಯೋಗಿಯು ಪರಿಸ್ಥಿತಿ ಪ್ರಸಂಗಾನು– ಸಾರವಾಗಿ ಅವನ ಶರೀರದಿಂದ ಯಾವ ಕ್ರಿಯಾ ಕಲಾಪಗಳೇ ಆಗುತ್ತಿದ್ದರೂ ಅವುಗಳೆಲ್ಲ ಶಿವಪೂಜೆಗೆ ಸಮಾನವಾದವುಗಳೆಂಬುದಾಗಿ ಪೂಜ್ಯಪಾದರು ಈ ಆಚಾರಸಂಪತ್ತಿ ಸ್ಥಲದಲ್ಲಿ ವಿಸ್ತಾರಪೂರ್ವಕವಾಗಿ ನಿರೂಪಿಸಿದ್ದಾರೆ. ಐಕ್ಯ ಸ್ಥಿತಿಯನ್ನು ಪಡೆದ ಶಿವ

ಯೋಗಿಯು ದೇಹದಲ್ಲಿದ್ದೂ ವಿದೇಹಿಯಾಗಿರುತ್ತಾನೆ. ಅಂತೆಯೇ ಇವನಿಗೆ ಕರ್ತವ್ಯ–ಅಕರ್ತವ್ಯಗಳ ನಿರ್ಬಂಧತೆ ಇರುವುದಿಲ್ಲ, ಸಮದರ್ಶಿಯಾದ ಯಾವ ಕರ್ಮಗಳು ಘಟಿಸಿದರೂ ಅವುಗಳ ಲೇಪವು ಅವನಿಗಾಗುವುದಿಲ್ಲ. ಇವನ ದೃಷ್ಟಿಯಲ್ಲಿ ಸುಕೃತಿ–ದುಷ್ಕೃತಿ, ಬ್ರಾಹ್ಮಣ ಮತ್ತು ಚಾಂಡಾಲನೆಂಬ ಭೇದ–ಭಾವನೆಯು ಇರಲಾರದು. ಈತನಿಗೆ ವರ್ಣಾಶ್ರಮಧರ್ಮ ಪರಿಪಾಲನೆಯ ಕಟ್ಟು ಪಾಡುಗಳಿರುವುದಿಲ್ಲ. ಈತನಲ್ಲುಂಟಾದ ಶಿವಾದ್ವೈತ ಜ್ಞಾನದ ಪರಿಣಾಮವಾಗಿ ಈತನ ಸಂಚಿತ ಕರ್ಮ ಬೀಜಗಳೆಲ್ಲ ದಹಿಸಿ ಹೋಗಿರುವುದರಿಂದ ಈತನಿಗೆ ಪುನರ್ಜನ್ಮಾದಿಗಳಿಲ್ಲ. ಸ್ಥಿರ ವೈರಾಗ್ಯ ಸಂಪನ್ನನಾದ ಈತನು ಪದ್ಮ ಪತ್ರದಂತೆ ಸಂಸಾರದಲ್ಲಿ ಇದ್ದೂ ಇಲ್ಲದ ಹಾಗಿರುತ್ತಾನೆ. ಈ ಶಿವಯೋಗಿಯು ನಡೆದಾಡಿದರೆ ಪ್ರದಕ್ಷಿಣಕ್ರಿಯೆ, ಮಾತನಾಡಿದರೆ ಶಿವಸ್ತೋತ್ರವು, ನಿದ್ರಿಸಿದರೆ ಶಿವಯೋಗ ಸಮಾಧಿಯು ಹೀಗೆ ಈತನ ಶಾರೀರಿಕ ಪ್ರತಿಯೊಂದು ಕ್ರಿಯೆಗಳೂ ಶಿವಪೂಜಾರೂಪಗಳೇ ಆಗಿರುತ್ತವೆ. ಇದುವೇ ಐಕ್ಯಸ್ಥಲೀಯ ಆಚಾರ ಸಂಪತ್ತು. ವಿಧಿನಿಷೇಧಗಳ ಮೇರೆಯನ್ನು ಮೀರಿನಿಂತ ಇವನು ನಿರಂಕುಶಪ್ರಭು. ಇದುವೇ ಮನುಷ್ಯಜೀವನದ ಚರಮಗುರಿ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೦ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪುರ)



ಆಶೀರ್ವಚನ-೧

# ಏಕಭಾಜನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶಿವಜ್ಞಾನ ಸಂಪನ್ನನಾದ ಶಿವಯೋಗಿಯ ಶರೀರದಿಂದಾಗುವ ಎಲ್ಲ ಕ್ರಿಯೆಗಳು ಶಿವಪೂಜಾರೂಪವಾದವುಗಳೇ ಎಂಬುದಾಗಿ ನಿನ್ನಿನ ಆಶೀರ್ವಚನದಲ್ಲಿ ನೀವೆಲ್ಲ ಆಲಿಸಿದ್ದೀರಿ. ಶ್ರೀ ಸಿದ್ಧಾಂತ ಶಿಖಾಮಣಿಯ ಐಕ್ಯಸ್ಥಲಾಂತರ್ಗತವಾದ ಮೂರನೇಯ ಅವಾಂತರಸ್ಥಲವೇ ಏಕಭಾಜನಸ್ಥಲವು. ಇಂದು ಈ ಏಕಭಾಜನಸ್ಥಲದ ಬಗ್ಗೆ ಆಲೋಚಿಸೋಣ. ತನ್ನನ್ನು, ಶಿವನನ್ನು ಹಾಗೂ ಪ್ರಪಂಚವನ್ನು ಏಕರೂಪವಾಗಿ ಭಾವಿಸುವ ಸ್ಥಲವೇ ಏಕಭಾಜನಸ್ಥಲವು. ಅದನ್ನೇ ಪೂಜ್ಯರು–

ವಿಶ್ವಂ ಶಿವಮಯಂ ಚೇತಿ ಸದಾ ಭಾವಯತೋ ಧಿಯಾ ।
ಶಿವೈಕಭಾಜನಾತ್ಮತ್ವಾದೇಕಭಾಜನಮುಚ್ಯತೇ ॥

(ಸಿ. ಶಿ. ೧೪–೨೮)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ಶಿವೈಕ್ಯ ಜ್ಞಾನಸಂಪನ್ನನಾದ ಶಿವಯೋಗಿಯು ತನ್ನನ್ನು, ಶಿವನನ್ನು ಮತ್ತು ಜಗತ್ತನ್ನು ಶಿವಮಯವಾಗಿ ಅರಿಯುತ್ತ ಪ್ರಪಂಚದ ಭೇದವೆಲ್ಲವನ್ನು ಮರೆತು ಅವನಲ್ಲಿಯ ಐಕ್ಯಭಾವನೆಯು ಬಲಿತಾಗ ಅವನು 'ಏಕಭಾಜನಸ್ಥಲ' ಎಂಬುದಾಗಿ ಕರೆಸಿಕೊಳ್ಳುತ್ತಾನೆ.

ಜೀವ, ಈಶ್ವರ ಮತ್ತು ಜಗತ್ತುಗಳೆಂಬ ಈ ತ್ರಿಪದಾರ್ಥಗಳೇ ಚಿಂತನೆಯ ವಿಷಯಗಳಾಗಿವೆ. ನಾನೆಂದರೆ ಯಾರು ? ಜಗತ್ತೆಂದರೆ ಏನು ? ಇದನ್ನು ನಿರ್ಮಿಸಿದವರಾರು ? ಈ ಮೂರು ವಿಧವಾದ ಪ್ರಶ್ನೆಗಳ ಮೇಲೆಯೇ ಎಲ್ಲ ದರ್ಶನ ಶಾಸ್ತ್ರಗಳು ವಿಕಾಸಗೊಂಡಿವೆ. ಕೇಳಲಿಕ್ಕೆ ಈ ಮೂರು ಪದಾರ್ಥಗಳೆಂಬುದಾಗಿ ತೋರುತ್ತಿದ್ದರೂ ಈ ಮೂರರ ಮೂಲವು ಒಂದೇ ಎಂಬುದಾಗಿ ಎಲ್ಲರೂ ತಿಳಿದುಕೊಳ್ಳಬೇಕು. ಸೃಷ್ಟಿಯ ಪೂರ್ವದಲ್ಲಿ ಒಂದೇ ಆಗಿದ್ದ ಪರಶಿವಬ್ರಹ್ಮವು ಸೃಷ್ಟಿ ಕಾಲದಲ್ಲಿ ಜೀವ–ಜಗತ್ತು–ಈಶ್ವರ ರೂಪದಲ್ಲಿ ವಿಕಾಸಗೊಂಡಿದೆ. ಇದೆಲ್ಲವೂ ಆತನ ವಿಕಾಸವೇ ಆಗಿದೆ. ಜೀವನು ಭೋಕ್ತೃ ಆಗಿದ್ದು ಪ್ರಪಂಚವು ಅವನ ಭೋಗ್ಯ ವಸ್ತುವಾಗಿದೆ. ಈಶ್ವರನ ಪ್ರೇರಕ ರೂಪನಾಗಿದ್ದಾನೆ ಮತ್ತು ಸಾಕ್ಷೀ ಸ್ವರೂಪನೂ ಆಗಿದ್ದಾನೆ.

ಈಶ್ವರನ ಪ್ರೇರಣೆಯಿಂದಲೇ ಎಲ್ಲರೂ ಪ್ರೇರಿತವಾಗುತ್ತಿದ್ದರೆ ಕೆಲವರು ಶುಭಕರ್ಮಗಳಲ್ಲಿ ಪ್ರವೃತ್ತರಾದರೆ ಮತ್ತೆ ಕೆಲವರು ಅಶುಭಕರ್ಮಗಳಲ್ಲಿ ಪ್ರವೃತ್ತರಾಗುತ್ತಾರೆ. ಹೀಗಾಗಲು ಕಾರಣವೇನು ? ಈಶ್ವರನೇ ಶುಭಾಶುಭ ಕರ್ಮಗಳಿಗೆ ಪ್ರೇರಕನಾಗಿದ್ದರೆ ಎಲ್ಲರನ್ನು ಶುಭ ಕರ್ಮದಲ್ಲಿಯೇ ಪ್ರೇರೇಪಿಸಬಹುದಾಗಿತ್ತು

ಹಾಗಿದ್ದಾಗ ಯಾರೂ ಅಶುಭ ಮಾರ್ಗದತ್ತ ಪ್ರವೃತ್ತರೇ ಆಗುತ್ತಿದ್ದಿಲ್ಲ. ಶುಭಾಶುಭ ಕರ್ಮಗಳ ವೈಷಮ್ಯಕ್ಕೆ ಈಶ್ವರನೇ ಕಾರಣವೆಂದರೆ ಆತನು ಪಕ್ಷಪಾತಿಯೆಂಬುದಾಗಿ ಕರೆಸಿಕೊಳ್ಳುವನು. ಇಂತಹ ಪಕ್ಷಪಾತ ಭಾವನೆಯುಳ್ಳವನು ಅದು ಹೇಗೆ ತಾನೇ ಈಶ್ವರನಾಗಬಲ್ಲನು ? ಮುಂತಾದ ಹಲವು ಹನ್ನೆರಡು ಪ್ರಶ್ನೆಗಳು ಉದ್ಭವಿಸುವವು. ಎಲ್ಲ ಪ್ರಶ್ನೆಗಳಿಗೆ ಸಮಾಧಾನವೇನೆಂದರೆ ಈಶ್ವರನು ಕೇವಲ ಪ್ರೇರಕನೇ ವಿನಃ ಅವನು ಶುಭಾಶುಭ ಕಾರ್ಯಪ್ರೇರಕನಲ್ಲ. ಭೂಮಿಯಲ್ಲಿ ಬಿತ್ತಿದ ಅನೇಕ ಬೀಜಗಳ ಮೇಲೆ ಮೇಘವು ಮಳೆಯನ್ನು ಸುರಿದಾಗ ಎಲ್ಲವೂ ಅಂಕುರಿಸಿ ಬೆಳೆದು ಫಲಪ್ರದಗಳಾಗಿ ನಿಲ್ಲುತ್ತವೆ. ಆಯಾ ಫಲಗಳ ಸ್ವರೂಪ–ಸ್ವಾದಗಳು ಭಿನ್ನ–ಭಿನ್ನವಾಗಿರುವುದನ್ನು ನಾವೆಲ್ಲ ಅನುಭವಿಸುತ್ತೇವೆ. ಎಲ್ಲ ಬೀಜಗಳು ಅಂಕುರಿಸಲು ಮಳೆನೀರು ಕಾರಣ ವಾದರೂ ಫಲಗಳ ವಿವಿಧ ರಸಗಳಿಗೆ ಅವುಗಳ ಭಿನ್ನ ಭಿನ್ನ ಬೀಜಗಳೇ ಕಾರಣಗಳು.

ವಿದ್ಯುತ್ತಿನಿಂದ ಪ್ರೇರಣೆಗೊಂಡ ಅನೇಕ ವಿದ್ಯುದ್ಯಂತ್ರಗಳು ಒಂದೇ ಸಮಯಕ್ಕೆ ಬೇರೆ–ಬೇರೆ ಕಾರ್ಯನಿರ್ವಹಿಸುವುದನ್ನು ಕಾಣುತ್ತೇವೆ. ಅಲ್ಲಿ ಪ್ರೇರಕಶಕ್ತಿಯಾದ ವಿದ್ಯುತ್ತು ಒಂದೇ ಆಗಿದ್ದರೂ ಅದರಿಂದ ಚಾಲನೆಗೊಂಡ ಯಂತ್ರಗಳ ರಚನೆಗಳು ಭಿನ್ನ–ಭಿನ್ನವಾಗಿರುವುದರಿಂದ ಅವುಗಳಿಂದಾಗುವ ಪ್ರಯೋಜನಗಳೂ ಸಹ ಭಿನ್ನ–ಭಿನ್ನವೇ ಆಗಿರುತ್ತವೆ. ಅದರಂತೆ ಪ್ರೇರಕನಾದ ಈಶ್ವರನು ಒಬ್ಬನೇ ಆಗಿದ್ದರೂ ಪ್ರತಿಯೊಬ್ಬ ಜೀವಿಯ ಕರ್ಮಬೀಜಗಳು ಭಿನ್ನ–ಭಿನ್ನವಾಗಿರುವುದರಿಂದ ಅವರ ಪ್ರವೃತ್ತಿಯು ಸಹ ಭಿನ್ನ–ಭಿನ್ನವೇ ಆಗಿರುತ್ತದೆ. ಈಶ್ವರನು ಸತ್‌ಪ್ರವರ್ತಕನೂ ಅಲ್ಲ ದುಷ್ಟಪ್ರವರ್ತಕನೂ ಅಲ್ಲ ಆತನು ಕೇವಲ ಪ್ರವರ್ತಕನು. ಜೀವಿಗಳ ಸತ್‌ಪ್ರವೃತ್ತಿ ಮತ್ತು ದುಷ್ಟಪ್ರವೃತ್ತಿಗಳಿಗೆ ಅವರವರ ಶುಭ–ಅಶುಭ ಕರ್ಮಗಳೆಂಬ ಬೀಜಗಳೇ ಕಾರಣವೆಂಬುದನ್ನು ತಿಳಿದುಕೊಳ್ಳಬೇಕು.

ಈಶ್ವರನ ಪ್ರೇರಣೆಯನ್ನು ಪಡೆದು ಸಂಸಾರದಲ್ಲಿ ಪ್ರವೃತ್ತರಾದ ಜೀವಿಗಳು ಶುಭ–ಅಶುಭ ಕರ್ಮಗಳನ್ನಾಚರಿಸುತ್ತ ಆ ಕರ್ಮಫಲದ ಸುಖ–ದುಃಖಗಳನ್ನು ಜನ್ಮ ಜನ್ಮಾಂತರಗಳಲ್ಲಿ ಭೋಗಿಸುತ್ತಿರುವುದರಿಂದ ಜೀವಿಗಳಿಗೆ 'ಭೋಕ್ತಾ' ಎಂಬುದಾಗಿ ಕರೆದಿದ್ದಾರೆ. ಇನ್ನು ಪಂಚವಿಷಯಾತ್ಮಕವಾದ ಪ್ರಪಂಚವು ಜೀವನಿಗೆ ಭೋಜ್ಯ ವಾಗಿರುವುದರಿಂದ ಪ್ರಪಂಚಕ್ಕೆ 'ಭೋಜ್ಯ' ಎಂಬುದಾಗಿ ಕರೆದಿದ್ದಾರೆ. ಸಾಮಾನ್ಯರಾದ ಸಾಂಸಾರಿಕ ಜೀವಿಗಳ ದೃಷ್ಟಿಯಲ್ಲಿ ಜೀವ, ಈಶ್ವರ ಮತ್ತು ಪ್ರಪಂಚವೆಂಬ ಭೇದವು ತೋರುತ್ತಿದ್ದರೂ ಐಕ್ಯಸ್ಥಿತಿಯನ್ನು ಪಡೆದ ಶಿವಯೋಗಿಗೆ ಈ ತ್ರಿಪುಟಿ ಭೇದವು ಭೂಷಿತ ವಾಗುವುದಿಲ್ಲ. ಇವನ ದೃಷ್ಟಿಯಲ್ಲಿ ಸರ್ವವೆಲ್ಲವೂ ಒಂದೇ ಶಿವರೂಪವಾಗಿಯೇ ತೋರುತ್ತಿರುತ್ತವೆ. ಅಹಂ, ಇಂದ ಮತ್ತು ತತ್ ಅಂದರೆ ಜೀವ, ಜಗತ್ತು ಮತ್ತು ಈಶ್ವರ. ಈ ಮೂರು ಏಕರೂಪವಾಗಿರುವ ಸ್ಥಿತಿಗೇನೇ ಏಕಭಾಜನಸ್ಥಲವೆಂಬುದಾಗಿ ಕರೆದಿದ್ದಾರೆ. ಈ ಸ್ಥಿತಿಯನ್ನು ಪ್ರಾಪ್ತಮಾಡಿಕೊಂಡಾಗ ನಾನು ಬೇರೆ, ಜಗತ್ತು ಬೇರೆ ಮತ್ತು ಈಶ್ವರ ಬೇರೆ ಎಂಬ ದ್ವೈತ ಭಾವನೆಯು ನಿಶ್ಶೇಷವಾಗಿ ಪರಮಾದ್ವೈತ ಸ್ಥಿತಿಯೇ ಪ್ರಾಪ್ತವಾಗು ವುದು. ಇದಕ್ಕೇನೇ ಜಗದ್ಗುರು ರೇಣುಕ ಭಗವತ್ಪಾದರು ಏಕಭಾಜನಸ್ಥಲವೆಂಬುದಾಗಿ ಸಂಬೋಧಿಸಿದ್ದಾರೆ.

ಇಂತಹ ಸ್ಥಿತಿಯನ್ನು ಪ್ರಾಪ್ತಿಮಾಡಿಕೊಳ್ಳುವುದಕ್ಕಾಗಿ ಸದಾ ಐಕ್ಯಾನುಸಂಧಾನವನ್ನೇ ಮಾಡಿಕೊಳ್ಳಬೇಕಾಗುತ್ತದೆ. ಪ್ರಪಂಚವು ಶಿವಸ್ವರೂಪವಾಗಿದೆ. ಶಿವನಿಗಿಂತಲೂ ಭಿನ್ನವಾದುದೇನೂ ಇಲ್ಲ, ನಾನೂ ಸಹ ಶಿವಸ್ವರೂಪನೇ ಆಗಿದ್ದೇನೆ. ಈ ತೆರನಾದ ಚಿಂತನೆಯೇ ಏಕಭಾಜನಸ್ಥಿತಿಯನ್ನು ತಂದೊದಗಿಸುತ್ತದೆ. ಹೊರಗಿನ ವ್ಯಾವಹಾರಿಕ ಭೇದವು ಹಾಗೆ ತೋರುತ್ತಿದ್ದರೂ ಅಂತರಂಗದಲ್ಲಿಯ ಭಾವನಾತ್ಮಕ ಅದ್ವೈತ ಸ್ಥಿತಿಗೆ ಅದಾವ ಭಾದಕವೂ ಇರುವುದಿಲ್ಲ. ಈ ಏಕಭಾಜನಸ್ಥಲದ ಸ್ವರೂಪವನ್ನು ಮತ್ತಷ್ಟು ವಿವರಿಸುತ್ತ ಪೂಜ್ಯಪಾದರು–

ಸ್ವಸ್ಯ ಸರ್ವಸ್ಯ ಲೋಕಸ್ಯ ಶಿವಸ್ಯಾದ್ವೈತದರ್ಶನಾತ್ ।
ಏಕಭಾಜನಯೋಗೇನ ಪ್ರಸಾದೈಕ್ಯಮತಿರ್ಭವೇತ್ ॥

(ಸಿ. ಶಿ. ೧೪–೨೯)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ಶಿವ, ಜೀವ ಹಾಗೂ ಜಗತ್ತುಗಳ ಐಕ್ಯ ಚಿಂತನೆಯಿಂದ ಮನಸ್ಸಿಗೆ ಪ್ರಸನ್ನತೆಯು ಪ್ರಾಪ್ತವಾಗುವುದು. ದ್ವೈತ ಸ್ಥಿತಿಯಲ್ಲಿರುವಾಗ ಸರ್ವರೂ ಅಸಂತುಷ್ಟತೆ ಅಪ್ರಸನ್ನತೆಗಳನ್ನೇ ಅನುಭವಿಸುತ್ತಾರೆ. ದ್ವೈತ ಭಾವನೆಯು ತೊಲಗದೆ ಪ್ರಸನ್ನತೆಯು ಪ್ರಾಪ್ತವಾಗುವುದಿಲ್ಲ. ಮನಸ್ಸಿನ ಈ ಪ್ರಸನ್ನ ಸ್ಥಿತಿಗೇನೇ 'ಪ್ರಸಾದ' ಎಂಬುದಾಗಿ ಕರೆದಿದ್ದಾರೆ. ಅನ್ಯವ್ಯಕ್ತಿ ಹಾಗೂ ವಸ್ತುಗಳಿಂದ ಮನಸ್ಸಿಗೆ ಪ್ರಸನ್ನತೆಯು ದೊರೆತರೂ ಅದು ಕ್ಷಣಿಕವಾದುದು. ಇದು ಅಲ್ಲದೆ ಅನ್ಯರಿಂದ ನಮಗೆ ಸದಾ ಪ್ರಸನ್ನತೆಯು ಸಿಗಲಾರದು. ಲೋಕದಲ್ಲಿ ಯಾರಿಂದ ನಮಗೆ ಪ್ರಸನ್ನತೆಯು ದೊರೆಯುವುದೋ ಅವರೇ ನಮ್ಮ ಅಪ್ರಸನ್ನತೆಗೂ ಕಾರಣವಾಗಬಹುದು. ಆದ್ದರಿಂದ ಶಾಶ್ವತವಾದ ಪ್ರಸನ್ನತೆಯ ಪ್ರಾಪ್ತಿಗಾಗಿ ಏಕಭಾಜನಸ್ಥಿತಿಯನ್ನು ಪಡೆಯುವುದು ಅನಿವಾರ್ಯವಾದುದು.

ಈ ಏಕಭಾಜನಸ್ಥಿತಿಯನ್ನು ಪಡೆದ ಶಿವಯೋಗಿಗೆ ಪ್ರಸಾದೈಕ್ಯಮತಿಯು ಉದ್ಭವಿಸುವುದೆಂಬುದಾಗಿ ಪೂಜ್ಯರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ. ವೀರಶೈವ ಸಿದ್ಧಾಂತದಲ್ಲಿ ಪಾದೋದಕ ಹಾಗೂ ಪ್ರಸಾದಗಳು ಪೂಜೆಯ ಫಲಗಳೆಂಬುದಾಗಿ ನಿರೂಪಿತವಾಗಿದೆ. ಗುರು, ಲಿಂಗ ಮತ್ತು ಜಂಗಮ ಈ ಮೂರು ಆರಾಧ್ಯಗಳಾಗಿರುವುದರಿಂದ ಇವುಗಳನ್ನು ಆರಾಧಿಸಿದಾಗ ತ್ರಿವಿಧ ಪಾದೋದಕ ಹಾಗೂ ತ್ರಿವಿಧ ಪ್ರಸಾದಗಳು ಪ್ರಾಪ್ತವಾಗುವವು. ಗುರುವಿನ ಪೂಜೆಯಿಂದ ಪ್ರಾಪ್ತವಾದುದು ಗುರುಪಾದೋದಕ ಹಾಗೂ ಗುರುಪ್ರಸಾದವು. ಲಿಂಗಪೂಜೆಯಿಂದ ಪ್ರಾಪ್ತವಾದುದು ಲಿಂಗಪಾದೋದಕ ಮತ್ತು ಲಿಂಗಪ್ರಸಾದವು. ಅದರಂತೆ ಜಂಗಮ ಪೂಜೆಯಿಂದ ದೊರಕುವದು ಜಂಗಮಪ್ರಸಾದ ಮತ್ತು ಜಂಗಮಪಾದೋದಕ. ಇಲ್ಲಿ ಪ್ರತಿಪಾದಿಸಲ್ಪಟ್ಟ ಗುರು–ಲಿಂಗ–ಜಂಗಮರು ಒಬ್ಬನೇ ಆದ ಪರಮಾತ್ಮನ ಸ್ವರೂಪಗಳಾಗಿರುವುದರಿಂದ ಈ ಏಕಭಾಜನಸ್ಥಲದ ಶಿವಯೋಗಿಯು ಅವರನ್ನು ಮೂರು ಎಂಬುದಾಗಿ ಭಾವಿಸದೆ ಒಂದಾಗಿ ಭಾವಿಸುತ್ತಾನೆ. ಆರಾಧ್ಯ ಮೂರ್ತಿಯು ಒಂದಾಗಿರುವಾಗ ಅದರಿಂದ ದೊರೆಯುವ ಪಾದೋದಕ ಪ್ರಸಾದಗಳು ಸಹ ಒಂದೇ ಆಗಿರುತ್ತವೆ.

ಹೀಗೆ ಏಕಭಾಜನಸ್ಥಲಿಯು ಗುರು–ಲಿಂಗ–ಜಂಗಮರ ಪ್ರಸಾದಗಳಲ್ಲಿ ಭೇದಭಾವನೆಯನ್ನು ತಾಳದೆ ಎಲ್ಲವನ್ನು ಏಕರೂಪವಾಗಿ ಭಾವಿಸುತ್ತಾನೆ. ಇಂತಹ ಭಾವನೆಗೇನೇ 'ಪ್ರಸಾದೈಕ್ಯಮತಿ' ಎಂಬುದಾಗಿ ಕರೆದಿದ್ದಾರೆ.

ಪ್ರಪಂಚವೆಲ್ಲವೂ ಶಿವರೂಪ ಎಂಬುದಾಗಿ ಹೇಳಿದಾಗ ಶಿವನಲ್ಲಿ ಪ್ರಪಂಚವೋ, ಪ್ರಪಂಚದಲ್ಲಿ ಶಿವನೋ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಆ ಪ್ರಶ್ನೆಗೆ ಉತ್ತರ ರೂಪವಾಗಿ ಪೂಜ್ಯರು–

ಶಿವೇ ವಿಶ್ವಮಿದಂ ಸರ್ವಂ ಶಿವಃ ಸರ್ವತ್ರ ಭಾಸತೇ ।
ಆಧಾರಾಧೇಯಭಾವೇನ ಶಿವಸ್ಯ ಜಗತಃ ಸ್ಥಿತಿಃ ॥ (ಸಿ. ಶಿ. ೧೪–೩೦)

ಈ ರೀತಿಯಾಗಿ ನಿರೂಪಿಸಿದ್ದಾರೆ. ಶಿವನಲ್ಲಿ ಜಗತ್ತಿದ್ದೆಯಲ್ಲದೆ ಜಗತ್ತಿನ ತುಂಬೆಲ್ಲ ಶಿವನೂ ಇದ್ದಾನೆ. ಪರಸ್ಪರವಾಗಿ ಆಧಾರ– ಆಧೇಯಭಾವ ಸಂಬಂಧದಿಂದ ಶಿವ ಮತ್ತು ಜಗತ್ತುಗಳು ಇರುವುದೆಂಬುದಾಗಿ ತಿಳಿದುಕೊಳ್ಳಬೇಕು. ಆಕಾಶದಲ್ಲಿ ನೀವೋ ನಿಮ್ಮೊಳಗೆ ಆಕಾಶವೋ ಎಂದು ಯಾರಾದರೂ ಪ್ರಶ್ನಿಸಿದಾಗ ನಾವು ಆಕಾಶದಲ್ಲಿದ್ದೇವೆ ನಮ್ಮೊಳಗೂ ಆಕಾಶವಿದೆ ಎಂಬುದಾಗಿ ಉತ್ತರಿಸುವಂತೆ, ಶಿವನಲ್ಲಿ ಜಗತ್ತು ಜಗತ್ತಿನಲ್ಲಿ ಶಿವ ಎಂಬುದಾಗಿ ಪ್ರತಿಪಾದಿಸುವುದೇ ಸೂಕ್ತವಾದುದು. ಇಲ್ಲಿ ಶಿವನಿಗೂ ಹಾಗೂ ಜಗತ್ತಿಗೂ ಇರುವ ಸಂಬಂಧವನ್ನು ಆಧಾರ ಆಧೇಯರೂಪವಾದುದೆಂಬುದಾಗಿ ತಿಳಿಸಲಾಗಿದೆ.

ವ್ಯಾಪಕವಾದ ವಸ್ತುವನ್ನು ಪರಿಚಯಿಸುವಾಗ ಶ್ರುತಿಗಳು ಸಹ ಪರಸ್ಪರ ವಿರೋಧಿ ವಾಕ್ಯಗಳ ಮುಖಾಂತರ ಪರಿಚಯಿಸಿದ್ದನ್ನು ಕಾಣುತ್ತೇವೆ. ಈಶಾವಾಸ್ಯ ಉಪನಿಷತ್ತಿನಲ್ಲಿ ಪರಮಾತ್ಮ ಸ್ವರೂಪವನ್ನು ತಿಳಿಸುವಾಗ–''ಆ ಪರಮಾತ್ಮನು ಅತೀ ದೂರದಲ್ಲಿದ್ದಾನೆ ಮತ್ತು ಅತ್ಯಂತ ಸಮೀಪದಲ್ಲಿದ್ದಾನೆ. ಅವನೊಳಗೆ ಎಲ್ಲವೂ ಇದೆ. ಎಲ್ಲದರೊಳಗೆ ಅವನೂ ಇದ್ದಾನೆ. ಅವನಿಗೆ ಕಾಲುಗಳಿಲ್ಲ ಆದರೂ ವೇಗವಾಗಿ ಓಡುತ್ತಾನೆ, ಅವನಿಗೆ ಕೈಗಳಿಲ್ಲ ಆದರೂ ಎಲ್ಲವನ್ನೂ ಹಿಡಿಯುತ್ತಾನೆ, ಅವನಿಗೆ ಕಣ್ಣುಗಳಿಲ್ಲ ಆದರೂ ಎಲ್ಲವನ್ನೂ ನೋಡುತ್ತಾನೆ'' ಮುಂತಾಗಿ ವರ್ಣಿಸಿದ್ದನ್ನು ಕಾಣುತ್ತೇವೆ. ಇಲ್ಲಿ ವರ್ಣಿಸಿದ್ದನ್ನು ನೋಡಿದಾಗ ಪರಸ್ಪರ ವಿರೋಧ ವಾಕ್ಯಗಳಂತೆ ತೋರುತ್ತವೆ. ಆದರೂ ವ್ಯಾಪಕವಾದ ತತ್ತ್ವವನ್ನು ವರ್ಣಿಸುವಾಗ ಅದು ಹೇಗೆ ವರ್ಣಿಸಿದರೂ ಅದಕ್ಕೆ ಸಮನ್ವಯವಾಗುತ್ತದೆ. ಪ್ರಪಂಚದಲ್ಲಿ ಪರಮಾತ್ಮ ಪರಮಾತ್ಮನಲ್ಲಿ ಪ್ರಪಂಚ ಎಂದು ಹೇಳಿದಾಗ ಆಪಾತತಃ ಪರಸ್ಪರ ವಿರೋಧ ಕಂಡು ಬಂದರೂ ಇಲ್ಲಿ ಯಾವ ವಿರೋಧವೂ ಇರುವುದಿಲ್ಲ, ಪರಮಾತ್ಮನು ಸರ್ವತ್ರ ವ್ಯಾಪಕನಾಗಿರುವುದರಿಂದ ಅವನಲ್ಲಿ ಎಲ್ಲವೂ ಇದೆಯಲ್ಲದೆ, ಅವನೂ ಎಲ್ಲದರಲ್ಲಿಯೂ ಹಾರದ ಮಣಿಗಳಲ್ಲಿಯ ಸೂತ್ರದಂತೆ ಅನುಸ್ಯೂತನಾಗಿದ್ದಾನೆ. ಅಂತೆಯೇ ಆತನಿಗೆ 'ಸೂತ್ರಾತ್ಮ'ನೆಂತಲೂ ಕರೆದಿದ್ದಾರೆ. ಯಾರಾದರೂ ದೇವರು ಎಲ್ಲಿ ಇದ್ದಾನೆ ಎಂಬುದಾಗಿ ಪ್ರಶ್ನಿಸಿದಾಗ ಅದಕ್ಕೆ ಉತ್ತರಿಸದೆ ಅದಕ್ಕೆ ಪ್ರತಿಯಾಗಿ ದೇವರು ಎಲ್ಲಿ ಇಲ್ಲ ? ಎಂಬುದಾಗಿ ಪ್ರಶ್ನಿಸಬೇಕು. ಅಂದರೆ– ಸರ್ವತ್ರ ಆತನು ಇದ್ದಾನೆಂಬುದೇ ತಾತ್ಪರ್ಯವು. ಮರದೊಳಗೆ ಮಂದಾಗ್ನಿಯು ಉರಿಯದೇ ಅಡಗಿರುವಂತೆ, ನೊರೆಹಾಲೊಳಗೆ ತುಪ್ಪವು ಕಂಪಿಲ್ಲದೆ ಅಡಗಿಕೊಂಡಿರು

ವಂತೆ ಅಣು–ರೇಣು ತೃಣಕಾಷ್ಠದಲ್ಲೆಲ್ಲ ಆತನು ಅಡಗಿಕೊಂಡಿದ್ದಾನೆ. ಆತನ ಅಸ್ತಿತ್ವದ ಬಲದಿಂದಲೇ ಸರ್ವವೆಲ್ಲದಕ್ಕೂ ಅಸ್ತಿತ್ವವು ಪ್ರಾಪ್ತವಾಗಿದೆ.

ಈ ಪ್ರಪಂಚದಲ್ಲಿ ಅಸ್ತಿ, ಭಾತಿ, ಪ್ರಿಯ, ನಾಮ ಮತ್ತು ರೂಪಗಳೆಂಬುದಾಗಿ ಪಂಚತತ್ತ್ವಗಳು ಇರುತ್ತವೆ. ಇವುಗಳಲ್ಲಿ ಅಸ್ತಿ, ಭಾತಿ, ಪ್ರಿಯಗಳೆಂಬವುಗಳು ಪರಮಾತ್ಮನ ಸಚ್ಚಿದಾನಂದ ಸ್ವರೂಪದ ಪರಿಚಾಯಕಗಳಾಗಿವೆ. ಈ ಮೂರನ್ನು ಬಿಟ್ಟರೆ ಪ್ರಪಂಚದ ಅದಾವ ಪದಾರ್ಥಕ್ಕೂ ಬೆಲೆಯೇ ಇಲ್ಲ. ಹೀಗೆ ಪರಮಾತ್ಮನ ಆಸ್ತಿತ್ವ ದಿಂದಲೇ ಪ್ರಪಂಚಕ್ಕೆ ಅಸ್ತಿತ್ವವು ಪ್ರಾಪ್ತವಾಗಿದೆ. ಸಮಸ್ತ ಭುವನ ಬ್ರಹ್ಮಾಂಡಗಳನ್ನು ತನ್ನಲ್ಲಿರಿಸಿಕೊಂಡು ತಾನೂ ಪುನಃ ಅವುಗಳಲ್ಲಿರುವುದು ಪರಮಾತ್ಮನ ಒಂದು ವೈಶಿಷ್ಟ್ಯವಾಗಿದೆ. ಈ ತೆರನಾಗಿ ಪ್ರಪಂಚ ಮತ್ತು ಪರಮಾತ್ಮರ ನಡುವೆ ಆಧಾರ–ಆಧೇಯ ರೂಪವಾದ ಸಂಬಂಧವು ಸ್ಪಷ್ಟವಾಗುತ್ತದೆ. ಹೀಗೆ ಪ್ರಪಂಚ ಹಾಗೂ ಪರಮಾತ್ಮರ ಸಂಬಂಧವನ್ನು ವಿವರಿಸಿದ ಪೂಜ್ಯರು ಏಕಭಾಜನಸ್ಥಲದ ಸಾಧಕನಿಗೆ ಪ್ರಪಂಚ ಹಾಗೂ ಪರಮಾತ್ಮರು ಭಿನ್ನವಾಗಿ ತೋರದೇ ಏಕರೂಪವಾಗಿ ತೋರುತ್ತಾರೆಂಬುದನ್ನು ತಿಳಿಸಲೋಸುಗ ಪುನಃ–

ಚಿದೇಕಭಾಜನಂ ಯಸ್ಯ ಚಿತ್ತವೃತ್ತೇಃ ಶಿವಾತ್ಮಕಮ್ ।
ನಾನ್ಯತ್ತಸ್ಯ ಕಿಮೇತೇನ ಮಾಯಾ ಮೂಲೇನ ವಸ್ತುನಾ ॥ (ಸಿ. ಶಿ ೧೪–೩೧)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವನೊಂದಿಗೆ ಐಕ್ಯಭಾವನೆಯನ್ನು ಹೊಂದಿದ ಈ ಅಂತೆಯೇ ಶಿವಾತ್ಮಕವಾದ ಚಿತ್ತವೃತ್ತಿವುಳ್ಳ ಶಿವಯೋಗಿಗೆ ಮಾಯಾಮೂಲಕವಾದ ಈ ಪ್ರಾಪಂಚಿಕ ಭೇದದಿಂದ ಆವ ಪ್ರಯೋಜನವೂ ಇರುವುದಿಲ್ಲ. ಯಾರ ಚಿತ್ತದಲ್ಲಿ ಶಿವನೇ ವ್ಯಾಪಿಸಿರುವನೋ ಅವನಿಗೆ ಬೇರಾವುದೂ ತೋರುವುದಿಲ್ಲ. ನಾವು ಏನನ್ನು ನೋಡುತ್ತೇವೆ, ಹೇಗೆ ನೋಡುತ್ತೇವೆ ಎಂಬುದಕ್ಕೆ ನಮ್ಮ ಮನಸ್ಸಿನ ಸ್ಥಿತಿಯೇ ಕಾರಣವು. ಯಾರ ಹೃದಯದಲ್ಲಿ ನಿರಂತರ ಶಿವನ ಅಸ್ತಿತ್ವದ ಅನುಭೂತಿ ಇದೆಯೋ ಅವರ ಚಿತ್ತದಲ್ಲಿ ತಿಲಮಾತ್ರವೂ ಪ್ರಾಪಂಚಿಕ ಆಸಕ್ತಿಯು ತಲೆದೋರಲಾರದು. ಅಪ್ರಾಪ್ತವಾದ ವಸ್ತುವಿನ ಬಗ್ಗೆ ಪ್ರಾಪ್ತಿಯ ಇಚ್ಛೆಯು ಅಂಕುರಿಸುವುದು– ಎಲ್ಲವೂ ದೊರೆತವನಿಗೆ ಅಂತೆಯೇ ಅತೃಪ್ತನಿಗೆ ಆವುದರ ಸ್ಪೃಹೆಯು ಉಂಟಾಗಲಾರದು. ಹೀಗೆ ಏಕಭಾಜನ ಸ್ಥಲಿಯು ಸರ್ವತ್ರ ತನ್ನ ಸ್ವರೂಪವನ್ನೇ ಕಾಣುತ್ತಾ ಸರ್ವ ವಿಷಯ ವಿಮುಕ್ತನಾಗಿ ಆನಂದರೂಪ ಸ್ಥಿತಿಯಲ್ಲಿ ವರ್ತಿಸುತ್ತಾನೆ.

ಈ ಪ್ರಪಂಚದ ಅಸ್ತಿತ್ವಕ್ಕೆ ಚಿದ್ರೂಪನಾದ ಪರಮಾತ್ಮನೇ ಕಾರಣವೆಂಬುದನ್ನು ತಿಳಿಯಪಡಿಸಲೋಸುಗ ಜಗದ್ಗುರು ರೇಣುಕ ಭಗವತ್ಪಾದರು–

ಚಿತ್ ಪ್ರಕಾಶಯತೇ ವಿಶ್ವಂ ತದ್ವಿನಾ ನಾಸ್ತಿ ವಸ್ತುಹಿ ।
ಚಿದೇಕನಿಷ್ಠಚಿತ್ತಾನಾಂ ಕಿಂ ಮಾಯಾ ಪರಿಕಲ್ಪಿತೈಃ ॥ (ಸಿ. ಶಿ. ೧೪–೩೨)

ಈ ವಿಧವಾಗಿ ಉಪದೇಶಿಸಿದ್ದಾರೆ. ಘಟಪಟಾದಿ ಪ್ರಪಂಚವನ್ನೆಲ್ಲ ಚಿದ್ರೂಪನಾದ ಪರಮಾತ್ಮನೇ ಪ್ರಕಾಶನಗೊಳಿಸುವನು. ಆ ಚಿತ್ ಪ್ರಕಾಶವಿರದಿದ್ದರೆ ಆವ ವಸ್ತುವು

ತೋರಲು ಸಾಧ್ಯವಾಗುತ್ತಿದ್ದಿಲ್ಲ. ನೀರಿನಲ್ಲಿ ಹುಟ್ಟಿದ ನೊರೆ–ತೊರೆಗಳು ನೀರಿನ ರೂಪಗಳೇ ಆಗಿರುವಂತೆ ಚಿದ್ರೂಪನಾದ ಪರಮಾತ್ಮನಲ್ಲಿ ತೋರುವ ಈ ಪ್ರಪಂಚವೆಲ್ಲವೂ ಚಿನ್ಮಯವೇ ಆಗಿದೆ. ಇಂತಹ ಚಿದ್ರೂಪವಾದ ಪರಮಾತ್ಮನೊಂದಿಗೆ ಐಕಭಾಜನಸ್ಥಿತಿಯನ್ನು ಪಡೆದ ಶಿವಯೋಗಿಗೆ ಮಾಯಾಕಲ್ಪಿತ ಭೇದದಿಂದ ಆವ ಪ್ರಯೋಜನವೂ ಇರುವುದಿಲ್ಲ. ಚಿತ್ರಮಂದಿರದಲ್ಲಿ ತೋರುವ ಚಿತ್ರಗಳಿಗೆ ಪ್ರೊಜೆಕ್ಟರ್‌ನಿಂದ ಬರುವ ಪ್ರಕಾಶವೇ ಕಾರಣವಾಗಿರುವಂತೆ, ಈ ಪ್ರಪಂಚವೆಂಬ ಚಿತ್ರದ ಪ್ರತೀತಿಗೆ ಪರಮಾತ್ಮನ ಚಿತ್–ಪ್ರಕಾಶವೇ ಕಾರಣವು. ಪ್ರೊಜೆಕ್ಟರನ ಪ್ರಕಾಶ ವಿರದಿದ್ದರೆ ಚಿತ್ರಗಳೇ ತೋರದಿರುವಂತೆ, ಪರಮಾತ್ಮನ ಪ್ರಕಾಶವಿರದಿದ್ದರೆ ಈ ಪ್ರಪಂಚವಾವುದೂ ತೋರುತ್ತಿರಲಿಲ್ಲ. ಸೂರ್ಯನನ್ನು ಮುಚ್ಚಿದ ಮೋಡಗಳು ಸೂರ್ಯನ ಪ್ರಕಾಶದಿಂದಲೇ ತೋರುತ್ತಿರುವಂತೆ, ಪರಮಾತ್ಮನನ್ನು ಮುಚ್ಚಿ ಹಾಕಿರುವ ಈ ಪ್ರಪಂಚವು ಆತನ ಬೆಳಕಿನಲ್ಲಿಯೇ ತೋರುವಂತಹುದಾಗಿದೆ. ಹೀಗೆ ಪರಮಾತ್ಮನ ಪ್ರಕಾಶವೇ ಪ್ರಪಂಚದ ಪ್ರತೀತಿಗೆ ಕಾರಣವಾಗಿರುತ್ತದೆಂಬುದನ್ನು ತಿಳಿಸಿದ ಪೂಜ್ಯರು ಈ ಐಕಭಾಜನಸ್ಥಲದ ಶಿವಯೋಗಿಯ ಚರಮಾವಸ್ಥೆಯನ್ನು–

ವೃತ್ತಿಶೂನ್ಯೇ ಸ್ವಹೃದಯೇ ಶಿವಲೀನೇ ನಿರಾಕುಲೇ ।
ಯಸ್ಸದಾವರ್ತತೇ ಯೋಗೀ ಸ ಮುಕ್ತೋ ನಾತ್ರ ಸಂಶಯಃ ॥

(ಸಿ. ಶಿ. ೧೪–೩೩)

ಈ ರೀತಿಯಾಗಿ ವಿವರಿಸಿದ್ದಾರೆ. ಬಾಹ್ಯ ವ್ಯವಹಾರಗಳೆಲ್ಲ ಶೂನ್ಯವಾಗಿ ತನ್ನ ಹೃದಯದಲ್ಲಿರುವ ಶಿವನಲ್ಲಿ–ಯಾವಾಗ ಈ ಶಿವಯೋಗಿಯ ಚಿತ್ತವೃತ್ತಿಯು ಸದಾ ಕಾಲದಲ್ಲಿ ಲೀನವಾಗುವುದೋ ಆಗ ತಾನೇ ಅವನು ಜೀವನ್ಮುಕ್ತನೆಂದು ಕರೆಯಿಸಿ ಕೊಳ್ಳುತ್ತಾನೆ. ಚಿತ್ತವು ಬಹಿರ್ಮುಖವಾದಾಗ ಸಂಸಾರ, ಅದು ಅಂತರ್ಮುಖವಾದಾಗ ಮುಕ್ತಿಯು. ಹೀಗೆ ಚಿತ್ತದ ಅಂತರ್ಮುಖತ್ವ, ಬಹಿರ್ಮುಖತ್ವಗಳ ಮೇಲೆಯೇ ಮುಕ್ತಿ ಹಾಗೂ ಸಂಸಾರಗಳನ್ನು ಗುರುತಿಸಲಾಗಿದೆ. ವಿಷಯಗಳ ಚಿಂತನೆಯನ್ನು ಮಾಡುತ್ತ ಚಿತ್ತವು ಸಂಸಾರದತ್ತ ಸಾಗುವುದು. ಅದುವೇ ಅಂತರ್ಮುಖವಾಗಿ ಶಿವಚಿಂತನೆಯಲ್ಲಿ ತೊಡಗಿದಾಗ ಮುಕ್ತಿಮಂದಿರವನ್ನು ತಲುಪುವುದು.

ನಾವು ಯಾರ ಸಮೀಪಕ್ಕೆ ಹೋಗುವೆವೋ ಅವರ ಸ್ವಭಾವದ ಪ್ರಭಾವವು ನಮ್ಮ ಮೇಲೆ ಆಗುವುದು ಸಹಜ. ಪ್ರಪಂಚದ ಸ್ವಭಾವವು ದುಃಖರೂಪವಾಗಿದ್ದರೆ ಪರಮಾತ್ಮನ ಸ್ವಭಾವವು ಆನಂದರೂಪವಾಗಿದೆ. ಅಂತೆಯೇ ಅದೆಷ್ಟು ಕಾಲ ಪ್ರಪಂಚದಲ್ಲಿ ವಾಸಿಸಿದರೂ ಉತ್ತರೋತ್ತರ ದುಃಖಗಳೇ ದೊರೆವುವಲ್ಲದೆ ಸುಖವು ದೊರೆಯಲಾರದು. ಆದ್ದರಿಂದಲೇ ಪೂಜ್ಯಪಾದರು ಪ್ರಪಂಚಾಕಾರದ ಬಹಿರ್ಮುಖ ವೃತ್ತಿಯನ್ನು ಪಡೆದು ಅಂತರಂಗದ ಶಿವಚಿಂತನೆಯಲ್ಲಿ ತೊಡಗಬೇಕೆಂಬುದಾಗಿ ಉಪದೇಶಿಸಿದ್ದಾರೆ. ಶಿವನು ಸಚ್ಚಿದಾನಂದ ಸ್ವರೂಪನಾಗಿರುವುದರಿಂದ ಅವನ ಚಿಂತನೆಯಿಂದ ಅವನ ಆ ಸ್ವರೂಪಗಳೇ ನಮಗೆ ಪ್ರಾಪ್ತವಾಗುವವು.

ಸಮುದ್ರದಲ್ಲಿ ಅಸಂಖ್ಯ ತರಂಗಗಳು ಸದಾ ಉದ್ಭವಿಸುತ್ತಿರುವಂತೆ ನಮ್ಮ ಮನಸ್ಸಿನಲ್ಲಿಯೂ ಸಹ ಅನಂತ ವೃತ್ತಿಗಳೆಂಬ ತರಂಗಗಳು ಏಳುತ್ತಲೇ ಇರುತ್ತವೆ. ಜಾಗ್ರತ್ ಸ್ವಪ್ನಗಳಲ್ಲಿ ನಿರಂತರವಾಗಿ ಏಳುತ್ತಿರುವ ಈ ವೃತ್ತಿಗಳು ಸುಷುಪ್ತಿ ಅವಸ್ಥೆಯಲ್ಲಿ ವಿಲಯಗೊಳ್ಳುವವು. ಗಾಢವಾದ ನಿದ್ರಾವಸ್ಥೆಯಲ್ಲಿ ಮನಸ್ಸಿನ ಎಲ್ಲ ವ್ಯವಹಾರವು ನಿಂತಿರುವುದರಿಂದಲೇ ಪ್ರತಿಯೊಬ್ಬರಿಗೂ ಆನಂದಾನುಭೂತಿ ಉಂಟಾಗುವುದು. ಅಲ್ಲಿ ಏನೂ ಇರದೇ ಇದ್ದರೂ ಸರ್ವರಿಗೂ ಸಮಾನವಾದ ಆನಂದವು ಪ್ರಾಪ್ತವಾಗುವುದು. ಆ ಆನಂದಪ್ರಾಪ್ತಿಗೆ ಚಿತ್ತವೃತ್ತಿಯ ವಿಲಯವೇ ಕಾರಣವಾದುದಾಗಿದೆ. ಇದೇ ತೆರನಾಗಿ ಏಕಭಾಜನಸ್ಥಲದ ಶಿವಯೋಗಿಯು ಬಹಿರ್ಮುಖವಾದ ತನ್ನ ಎಲ್ಲ ವೃತ್ತಿಗಳನ್ನು ನಿರೋಧಿಸಿ ಅಂತರ್ಮುಖವಾದ ವೃತ್ತಿಯಿಂದ ಪರಮಾತ್ಮನನ್ನು ಚಿಂತಿಸುತ್ತ ಅವನ ಆ ವೃತ್ತಿಯು ಅಲ್ಲಿಯೇ ಅಡಗಿತೆಂದರೆ ಅದುವೇ ಅವನ ಜೀವನ್ಮುಕ್ತಿ ಸ್ಥಿತಿಯು. ಇಂತಹ ಸ್ಥಿತಿಯನ್ನು ಪಡೆದುಕೊಂಡಾಗ ಆ ಶಿವಯೋಗಿಯು 'ಏಕಭಾಜನಸ್ಥಲಿ' ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಈ ಸ್ಥಲದ ಶಿವಯೋಗಿಯು ವಿಶ್ವವೆಲ್ಲವನ್ನೂ ಶಿವಮಯವನ್ನಾಗಿ ತನ್ನನ್ನು ಸಹ ಶಿವಸ್ವರೂಪವನ್ನಾಗಿ ತಿಳಿದು ಶಿವ, ಜೀವ, ಜಗತ್ತುಗಳೆಂಬ ಭೇದ ಭಾವನೆಯನ್ನಡಗಿಸಿಕೊಂಡು ಚಿದ್ರೂಪವಾದ ಶಿವನ ಪ್ರಕಾಶದಿಂದಲೇ ಪ್ರಪಂಚವು ಪ್ರಕಾಶಮಾನವಾಗಿ ತೋರುವುದಲ್ಲದೆ ಇದಕ್ಕೆ ಸ್ವತಂತ್ರವಾದ ಪ್ರಕಾಶವಿಲ್ಲವೆಂದು ಅರಿತು ಆ ಶಿವನ ಸಚ್ಚಿದಾನಂದ ಸ್ವರೂಪ ಚಿಂತನೆಯಲ್ಲಿಯೇ ತನ್ನ ಚಿತ್ತವೃತ್ತಿಯನ್ನು ತೊಡಗಿಸಿಕೊಂಡು ಕೊನೆಗೆ ಆ ವೃತ್ತಿಯನ್ನು ಅಲ್ಲಿಯೇ ಲೀನಮಾಡಿಕೊಂಡು ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಅನುಭವಿಸುವ ಶಿವಯೋಗಿಯೇ ಏಕಭಾಜನಸ್ಥಲಿ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೧ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೧

# ಸಹಭೋಜನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಐಕ್ಯಸ್ಥಲಾಂತರ್ಗತಗಳಾದ ಅವಾಂತರ ಸ್ಥಲಗಳನ್ನು ಕುರಿತು ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಐಕ್ಯಸ್ಥಲದ ಕೊನೆಯದಾದ ಅವಾಂತರ ಸ್ಥಲವೇ ಸಹಭೋಜನಸ್ಥಲವು. ಸಹಭೋಜನವೆಂದರೆ ಇತರರೊಡನೆ ಕೂಡಿಕೊಂಡು ಭುಂಜಿಸುವುದೆಂಬುದು ಸಾಮಾನ್ಯವಾದ ಅರ್ಥವಾಗುತ್ತದೆ. ನಮ್ಮ ದೇಶದಲ್ಲಿ ಈ ಸಹಭೋಜನಪದ್ಧತಿಯು ಬಹಳಷ್ಟು ಪ್ರಚಾರದಲ್ಲಿದೆ. ಈ ಸಹ ಭೋಜನವು ಎರಡು ವಿಧವಾಗಿದೆ. ಬೇರೆ ಬೇರೆ ತಟ್ಟೆಗಳಲ್ಲಿ ನೀಡಿಕೊಂಡು ಒಂದೇ ಪಂಕ್ತಿಯಲ್ಲಿ ಸಾಲಾಗಿ ಕುಳಿತುಕೊಂಡು ಉಣ್ಣುವುದೊಂದು ಸಹಭೋಜನವಾದರೆ ಒಂದೇ ತಟ್ಟೆಯಲ್ಲಿ ಅನೇಕ ಜನರು ಕೂಡಿ ಉಣ್ಣುವುದೊಂದು ಇನ್ನೊಂದು ವಿಧವಾದ ಸಹಭೋಜನವಾಗಿದೆ. ಈ ಸಹಭೋಜನದಿಂದ ಪರಸ್ಪರರಲ್ಲಿಯ ಅನ್ಯೋನ್ಯ ಭಾವನೆಗಳು ಪರಸ್ಪರ ಸೌಹಾರ್ದತೆಗಳು ಕಂಡುಬರುತ್ತವೆ. ಒಂದು ಪರಿವಾರದಲ್ಲಿಯ ಗಂಡ-ಹೆಂಡತಿ, ಮಕ್ಕಳು ಸಹಭೋಜನ ಮಾಡುತ್ತಿರುವಂತೆ ಒಂದೇ ಗುರುವಿನ ಅನೇಕ ಶಿಷ್ಯರು ಸಹ ಸಹಭೋಜನ ಮಾಡುವ ಪದ್ಧತಿಯು ರೂಢಿಯಲ್ಲಿದೆ. ಇಂತಹ ಸಹಭೋಜನದಿಂದ ಪರಸ್ಪರ ಭೇದ ಭಾವನೆಗಳು ದೂರಾಗಿ ಐಕ್ಯಭಾವನೆಯು ಒಡಮೂಡುವುದು.

ವೀರಶೈವರ ಪೂಜಾ ಪದ್ಧತಿಯಲ್ಲಿಯೂ ಸಹ ಸಹಭೋಜನದಂತಹ ಪರಿಪಾಠ ವನ್ನು ಕಾಣುತ್ತೇವೆ. ಮನೆಯಲ್ಲಿ ಗುರುಗಳ ಪಾದಪೂಜಾ ಸಮಾರಂಭ ನಡೆದಾಗ ಪಾದಪೂಜೆಯ ನಂತರ ಒಂದು ಪಾತ್ರೆಯಲ್ಲಿ ಸಂಗ್ರಹಿಸಿದ ಪಾದೋದಕವನ್ನು ಪಾದಪೂಜೆಯಲ್ಲಿ ಸಮ್ಮಿಲಿತರಾದ ಪ್ರತಿಯೊಬ್ಬರೂ ಆ ಒಂದೇ ಪಾತ್ರೆಯಿಂದಲೇ ಪಾದೋದಕವನ್ನು ಸೇವಿಸುತ್ತಾರೆ. ಒಬ್ಬರು ಪಾದೋದಕವನ್ನು ಸ್ವೀಕರಿಸಿದ ನಂತರ ಅದರಲ್ಲಿ ಉಚ್ಛಿಷ್ಟ ಭಾವನೆಯನ್ನು ತಾಳದೇ ಪ್ರತಿಯೊಬ್ಬರೂ ಪೂಜ್ಯ ಬುದ್ಧಿಯಿಂದ ಸೇವಿಸುವ ಪದ್ಧತಿಯಿದೆ. ಈ ಎಲ್ಲ ವಿಧಾನಗಳು ವ್ಯಾವಹಾರಿಕ ಕ್ಷೇತ್ರದಲ್ಲಿಯೂ ಮನುಷ್ಯರಲ್ಲಿಯ ಸೌಹಾರ್ದತೆಯನ್ನು ಬೆಳೆಸುವ ಸಾಧನಗಳಾಗಿವೆ. ವ್ಯಾವಹಾರಿಕ ಕ್ಷೇತ್ರದಲ್ಲಿ ಸಹಭೋಜನ ಪದ್ಧತಿಯಿರುವಂತೆ, ಆಧ್ಯಾತ್ಮಿಕ ಕ್ಷೇತ್ರದಲ್ಲೊಂದು ಸಹ ಭೋಜನ ಪದ್ಧತಿಯಿದೆ. ಅದನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸಹಭೋಜನಸ್ಥಲದಲ್ಲಿ-

ಗುರೋಃ ಶಿವಸ್ಯ ಶಿಷ್ಯಸ್ಯಸ್ವ ಸ್ವರೂಪತಯಾ ಸ್ಮೃತಿಃ ।
ಸಹಭೋಜನಮಾಖ್ಯಾತಂ ಸರ್ವಗ್ರಾಸಾತ್ಮಭಾವತಃ ॥ (ಸಿ. ಶಿ. ೧೪–೩೪)

ಈ ರೀತಿಯಾಗಿ ವಿವರಿಸಿದ್ದಾರೆ. ಇಲ್ಲಿಯ ಸಹಭೋಜನವೆಂದರೆ ತಾನು ಮೊದಲು ಭಿನ್ನ–ಭಿನ್ನವಾಗಿ ಅನುಭವಿಸಿದ ಪದಾರ್ಥಗಳನ್ನು ಮರಳಿ ತನ್ನಲ್ಲಿಯೇ ಐಕ್ಯವಾಗಿ ಅರಿಯುವುದು ಎಂದರ್ಥ. ಸಾಧಕನು ಪ್ರಾರಂಭಿಕಾವಸ್ಥೆಯಲ್ಲಿ ತನ್ನನ್ನು ತನ್ನ ಗುರುವಿಗಿಂತಲೂ ತನ್ನ ಆರಾಧ್ಯನಾದ ಶಿವನಿಗಿಂತಲೂ ಭಿನ್ನವಾಗಿ ಭಾವಿಸುತ್ತಿರುತ್ತಾನೆ. ಅವನೇ ಯಾವಾಗ ಐಕ್ಯಸ್ಥಲವನ್ನು ತಲುಪುವನೋ ಆ ಭೇದಗಳಾವವೂ ಉಳಿಯುವುದಿಲ್ಲ. ಹೀಗೆ ತನ್ನ ಗುರು, ತನ್ನ ಆರಾಧ್ಯ ದೇವರನ್ನು ತನ್ನ ಆತ್ಮದೊಂದಿಗೆ ಸಮರಸವಾಗಿ ಭಾವಿಸುವ ಸ್ಥಲವೇ ಸಹಭೋಜನಸ್ಥಲವು, ಅದನ್ನೇ ಪೂಜ್ಯರು–

ಶಿವಂ ವಿಶ್ವಗುರುಂ ಸಾಕ್ಷಾದ್ಯೋಜಯೇನ್ನಿತ್ಯಮಾತ್ಮನಿ ।
ಏಕತ್ವೇನ ಚಿದಾಕಾರೇ ತದಿದಂ ಸಹಭೋಜನಮ್ ॥ (ಸಿ. ಶಿ. ೧೪–೩೫)

ಈ ರೀತಿಯಾಗಿ ವಿವರಿಸಿದ್ದಾರೆ. ಸಾಕ್ಷಾತ್ ಚಿದಾಕಾರನಾದ ತನ್ನಲ್ಲಿ ಶಿವನನ್ನು, ಗುರುವನ್ನು ಮತ್ತ ಜಗತ್ತನ್ನು ಏಕರೂಪದಿಂದ ಯಾವಾಗಲೂ ಸಂಯೋಜಿಸಿ ಅರಿಯುವುದೇ ಸಹಭೋಜನಸ್ಥಲವೆಂಬ ತಾತ್ಪರ್ಯವು. ಶಿಷ್ಯನಾದವನು ಗುರುವಿನ ಉಪದೇಶವನ್ನು ಶ್ರವಣ ಮಾಡಿ ಅದನ್ನೇ ಮನನ ಹಾಗೂ ನಿದಿಧ್ಯಾಸನ ಮಾಡುತ್ತ ಹೋದಂತೆ ಗುರುವಿಗುಂಟಾದ ಅನುಭವವೇ ಶಿಷ್ಯನಿಗೂ ಸಹ ಪ್ರಾಪ್ತವಾಗುತ್ತದೆ. ಹೀಗೆ ಗುರು ಶಿಷ್ಯರ ಅನುಭವಗಳು ಒಂದೇ ಆದಾಗ ಅವರಿಬ್ಬರ ಅನುಭವ ಸಾಮರಸ್ಯದ ಪರಿಣಾಮವಾಗಿ ಅವರೀರ್ವರಲ್ಲಿ ಯಾವ ಭೇದವೂ ಉಳಿಯುವುದಿಲ್ಲ. ಶಿಷ್ಯನು ಸಹ ಐಕ್ಯಸ್ಥಿತಿಯನ್ನು ಪಡೆದಿರುವುದರಿಂದ ಅವರೀರ್ವರಲ್ಲಿ ಬೋಧ್ಯ ಬೋಧಕ ಭಾವವು ಅಳಿದು ಹೋಗಿ ಅವರೀರ್ವರಲ್ಲಿ ಸಾಮರಸ್ಯ ಸ್ಥಿತಿಯು ಉಂಟಾಗುವುದು. ಗುರುವಿನೊಂದಿಗೆ ಐಕ್ಯ ಭಾವನೆಯನ್ನು ತಾಳಿದಂತೆ ಶಿವನೊಂದಿಗೂ ಆತನು ಐಕ್ಯ ಭಾವನೆಯನ್ನು ತಾಳಿರುವುದರಿಂದ ಅವನ ಈ ಸ್ಥಿತಿಗೆ ಸಹಭೋಜನ ಸ್ಥಿತಿಯೆಂಬುದಾಗಿ ಕರೆದಿದ್ದಾರೆ.

ಹೀಗೆ ಸಹಭೋಜನದ ಸ್ವರೂಪವನ್ನು ಅನ್ವಯ ಮಾರ್ಗದಿಂದ ಉಪದೇಶಿಸಿದ ಪೂಜ್ಯರು ಅದನ್ನೇ ಈಗ ವ್ಯತಿರೇಕ ಮಾರ್ಗದಿಂದ–

ಅಯಂ ಶಿವೋ ಗುರುಶ್ಚೈಷ ಜಗದೇತಚ್ಚರಾಚರಂ ।
ಅಹಂ ಚೇತಿ ಮತಿರ್ಯಸ್ಯ ನಾಸ್ತ್ಯಸೌವಿಶ್ವ ಭೋಜಕಃ ॥ (ಸಿ. ಶಿ. ೧೪–೩೬)

ಈ ತೆರನಾಗಿ ಪ್ರತಿಪಾದಿಸಿದ್ದಾರೆ. ಇವನು ಶಿವನು, ಈತನು ಗುರುವು, ಇದು ಜಗತ್ತು ಇವೆಲ್ಲದಕ್ಕಿಂತಲೂ ನಾನು ಒಬ್ಬನು ಭಿನ್ನನಾಗಿದ್ದೇನೆ ಎಂಬ ಭೇದ ಪ್ರತೀತಿಯು ಯಾರಿಗಿರುವುದೋ ಅವರು ಸಹಭೋಜಿ ಅಥವಾ ವಿಶ್ವಭೋಜಿ ಎಂದು ಕರೆಸಿಕೊಳ್ಳಲಾರರು. ಸಹಭೋಜಿ ಸ್ಥಿತಿಯನ್ನು ಪಡೆಯಬೇಕಾದರೆ ಎಲ್ಲ ಭೇದ ಭಾವನೆಗಳು ಕೊನೆಗೊಂಡು ತಾನೇ ತಾನಾಗಿರುವ ಸ್ಥಿತಿಯು ನೆಲೆಗೊಳ್ಳಬೇಕಾಗುವುದು.

ಪ್ರಪಂಚದಲ್ಲಿ ವ್ಯಾವಹಾರಿಕವಾದ ಭೇದವು ಇದ್ದರೂ ಆಧ್ಯಾತ್ಮಿಕವಾದ ಅಭೇದವನ್ನು ಸಾಧಿಸಿಕೊಳ್ಳುವುದೇ ಸಹಭೋಜಕನ ಲಕ್ಷ್ಯವಾಗಿದೆ.

ಒಮ್ಮೆ ಪ್ರಭುರಾಮಚಂದ್ರನ ದರ್ಬಾರಿನಲ್ಲಿ ಹನುಮಂತನು ದರ್ಶನಾರ್ಥಿಯಾಗಿ ಬಂದು ರಾಮನ ದರ್ಶನವನ್ನು ಮಾಡುತ್ತಿದ್ದಾಗ ಶ್ರೀ ರಾಮಚಂದ್ರನು ನೀನು ಯಾರು ? ಎಂಬುದಾಗಿ ಪ್ರಶ್ನಿಸಿದನು. ರಾಮನ ಮುಖದಿಂದ ಹೊರಟ ಈ ಪ್ರಶ್ನೆಯನ್ನು ಆಲಿಸಿದ ಹನುಮನಿಗೆ ಖೇದವೂ, ಆಶ್ಚರ್ಯವೂ ಉಂಟಾಯಿತು. ಇಷ್ಟು ಬೇಗನೇ ರಾಮನು ನನ್ನನ್ನು ಮರೆತನೋ ? ಸೀತೆಯ ಅಪಹರಣದ ನಂತರ ಅವಳನ್ನು ಮೊಟ್ಟ ಮೊದಲು ಗುರುತಿಸಿದವನು ನಾನು, ರಾಮನ ಮುದ್ರಾಉಂಗುರವನ್ನು ಕೊಟ್ಟು ಅವಳಿಗೆ ರಾಮನ ಸಂದೇಶ ಕೊಟ್ಟವನು ನಾನು, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ರಾಮನ ಲಂಕಾವಿಜಯಕ್ಕೆ ಕಾರಣನಾದವನು ನಾನು, ಇಷ್ಟೆಲ್ಲ ಸಹಯೋಗ ಸಹಕಾರ ಮಾಡಿದ ನನ್ನನ್ನು ಅಯೋಧ್ಯೆಯ ಸಿಂಹಾಸನವು ದೊರೆತೊಡನೆ ಪ್ರಭು ರಾಮಚಂದ್ರನಿಗೆ ವಿಸ್ಮೃತಿಯಾಯಿತೇ ? ಮುಂತಾದ ಹಲವು ಹನ್ನೆರಡು ಪ್ರಶ್ನೆಗಳು ಆತನ ಮನಸ್ಸಿನಲ್ಲಿ ಉದ್ಭವಿಸಿತೊಡಗಿದವು. ಎಷ್ಟೇ ಆದರೂ ಹನುಮಂತ ಬುದ್ಧಿವಂತರಲ್ಲಿಯೇ ಅಗ್ರಗಣ್ಯನಾದವನು, ಅಂತೆಯೇ ಸಾವಧಾನ ಚಿತ್ತನಾಗಿ ಮನದಲ್ಲಿ ವಿಚಾರಿಸಿದ. ಪ್ರಭು ರಾಮಚಂದ್ರನಿಗೆ ನನ್ನ ವಿಸ್ಮರಣೆಯೇನೂ ಆಗಿರಲಿಕ್ಕಿಲ್ಲ, ಆದರೆ ನನ್ನನ್ನು ಪರೀಕ್ಷಿಸುವುದಕ್ಕಾಗಿ ಈ ರೀತಿಯಾಗಿ ಪ್ರಶ್ನಿಸಿರಬಹುದು. ಈ ಪ್ರಶ್ನೆಗೆ ಏನೆಂದು ಉತ್ತರಿಸಬೇಕು ಎಂದು ಮನಸ್ಸಿನಲ್ಲಿ ಆಲೋಚಿಸುತ್ತಿರುವಾಗ ಆತನಿಗೆ ಮೂರು ಉತ್ತರಗಳು ದೊರೆತವು. ಅಂತೆಯೇ ಆತನು ಪ್ರಭು ರಾಮನನ್ನುದ್ದೇಶಿ, 'ನೀನು ಯಾರು ?' ಎಂದು ನೀನು ಕೇಳಿರುವ ಪ್ರಶ್ನೆಯು ಶರೀರ ಸಂಬಂಧವಾದದ್ದೋ, ಜೀವ ವಿಷಯಕವಾದದ್ದೋ ಅಥವಾ ಆತ್ಮವಿಷಯಕವಾದದ್ದೋ ಎಂಬುದಾಗಿ ಮರು ಪ್ರಶ್ನಿಸಿ ಅದಕ್ಕೆ ಮೂರು ವಿಧವಾದ ಸಮಾಧಾನವನ್ನು ತಾನೇ ಹೇಳಿದನು. ಹೇ ! ಪ್ರಭುವೇ ಶರೀರ ದೃಷ್ಟಿಯಿಂದ ನಾನು ನಿನ್ನ ದಾಸನಾಗಿದ್ದೇನೆ, ಜೀವದೃಷ್ಟಿಯಿಂದ ನಾನು ನಿನ್ನ ಅಂಶನಾಗಿದ್ದೇನೆ, ಅದೇ ತೆರನಾಗಿ ಆತ್ಮದೃಷ್ಟಿಯಿಂದ ನಾನು ನಿನ್ನ ಸ್ವರೂಪನೇ ಆಗಿದ್ದೇನೆ. ಜ್ಞಾನಿಯಾದ ಹನುಮಂತನ ಈ ಉತ್ತರವನ್ನು ಕೇಳಿ ಪ್ರಭು ರಾಮಚಂದ್ರನಿಗಷ್ಟೇ ಅಲ್ಲ ಒಡ್ಡೋಲಗದಲ್ಲಿಯ ಪಂಡಿತಪಾಮರರಿಗೂ ಅಪಾರವಾದ ಸಂತೋಷವಾಯಿತು.

ಇಲ್ಲಿ ಹನುಮಂತನು ಆತ್ಮದೃಷ್ಟಿಯಿಂದ ತನ್ನಲ್ಲಿ ಹಾಗೂ ಪರಮಾತ್ಮನಲ್ಲಿ ಯಾವ ಭೇದವನ್ನೂ ಕಾಣಲಿಲ್ಲವೆಂಬುದು ಕಂಡುಬರುತ್ತದೆ. ಹೀಗೆ ಗುರು–ಶಿಷ್ಯ, ದೇವ–ಭಕ್ತ ಇವರುಗಳ ಮಧ್ಯದ ಎಲ್ಲ ಭೇದವೂ ಅಳಿದು ಸ್ವರೂಪೈಕ್ಯರೂಪವಾದ ಸಮರಸ ಸ್ಥಿತಿಯು ಪ್ರಾಪ್ತವಾಗಲು ವಿಶ್ವವೆಲ್ಲವನ್ನೂ ತನ್ನ ಸ್ವರೂಪವನ್ನಾಗಿ ಅನುಭವಿಸುವ ಒಂದು ವಿಲಕ್ಷಣವಾದ ಅನುಭೂತಿಯು ಶಿವಾದ್ವೈತ ಜ್ಞಾನಸಂಪನ್ನನಾದ ಶಿವಯೋಗಿಗೆ ಪ್ರಾಪ್ತವಾಗುವುದು. ಅವನಿಗೆ ಪ್ರಾಪ್ತವಾದ ಆ ಸ್ಥಿತಿಯೇ ಸಹಭೋಜನಸ್ಥಿತಿಯು. ಇದಕ್ಕೇನೇ ವಿಶ್ವಭೋಜಕಸ್ಥಿತಿ ಎಂಬುದಾಗಿ ಕರೆಯುತ್ತಾರೆ. ಹೀಗೆ ಶಿವ, ಗುರು, ಪ್ರಪಂಚ ಮತ್ತು ತಾನು ಇವುಗಳ ಭೇದವನ್ನು ದೂರ ಮಾಡಿಕೊಂಡು ಆಧ್ಯಾತ್ಮಿಕ

ಅಭೇದ ರೂಪವಾದ ಸಹಭೋಜನ ಸ್ಥಿತಿಯನ್ನು ಪ್ರಾಪ್ತಿಮಾಡಿಕೊಂಡಾಗ ಶಿವಯೋಗಿಗೆ ಶಾಶ್ವತವಾದ ಆನಂದವು ಪ್ರಾಪ್ತವಾಗುವುದು. ಇಂತಹ ಸಾಮರಸ್ಯೈಕ್ಯಾನಂದವನ್ನು ಅನುಭವಿಸುವುದೇ ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

**ಓಂ ಶಾಂತಿಃ ಶಾಂತಿಃ ಶಾಂತಿಃ**

**ದಿನಾಂಕ ೨೨ ಜುಲೈ ೧೯೬೨**
**(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)**



ಆಶೀರ್ವಚನ-೨

# ಸಹಭೋಜನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿರುವ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥ ರತ್ನದ ಐಕ್ಯಸ್ಥಲಾಂತರ್ಗತವಾದ ಅವಾಂತರ ಸ್ಥಲಗಳನ್ನು ಕುರಿತು ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಈ ಐಕ್ಯಸ್ಥಲದ ಅಂತಿಮ ಅವಾಂತರ ಸ್ಥಲವೇ ಸಹಭೋಜನಸ್ಥಲವು. ಈ ಸ್ಥಲದಲ್ಲಿ ಶಿವಯೋಗಿಯ ಮನೋವೃತ್ತಿಯು ಪರಿಪೂರ್ಣ ಅದ್ವೈತ ಸ್ಥಿತಿಯನ್ನು ಪಡೆದಿರುವುದೆಂಬುದನ್ನು ತಿಳಿಯಪಡಿಸುತ್ತ ಪೂಜ್ಯರು–

ಅಹಂ ಭೃತ್ಯಃ ಶಿವಃ ಸ್ವಾಮೀ ಶಿಷ್ಯೋಽಹಂ ಗುರುರೇವ ವೈ ।
ಇತಿ ಯಸ್ಯ ಮತಿರ್ನಾಸ್ತಿ ಸಚಾದ್ವೈತಪದೇ ಸ್ಥಿತಃ ॥

(ಸಿ. ಶಿ. ೧೪–೩೭)

ಈ ವಿಧವಾಗಿ ಉಪದೇಶಿಸಿದ್ದಾರೆ. ನಾನು ಸೇವಕ, ಶಿವನು ಅಧಿಪತಿಯು, ನಾನು ಶಿಷ್ಯನು, ಇವರು ಗುರುಗಳು ಎಂಬ ಈ ಭೇದ ಬುದ್ಧಿಯು ಯಾವನಲ್ಲಿ ಅಳಿದು ಹೋಗಿದೆಯೋ ಅವನೇ ಶಿವೈಕ್ಯರೂಪವಾದ ಅದ್ವೈತ ಸ್ಥಿತಿಯನ್ನು ಪಡೆದುಕೊಳ್ಳುವನು.

ಸಾಮಾನ್ಯವಾಗಿ ಲೋಕದಲ್ಲಿಯ ಸರ್ವೇಸಾಮಾನ್ಯರ ಮನಸ್ಸಿನಲ್ಲಿ ಸ್ವಾಮಿ–ಸೇವಕ, ಗುರು–ಶಿಷ್ಯ ಭಾವನೆಗಳು ಇದ್ದೇ ಇರುತ್ತವೆ. ಅಂತೆಯೇ ಇವರು ನಮ್ಮ ಮನೆಯ ಗುರುಗಳು, ಇದು ನಮ್ಮ ಮನೆಯ ದೇವರು ಎಂಬುದಾಗಿ ಪ್ರತಿಯೊಬ್ಬರೂ ಭೇದ ರೂಪವಾದ ವ್ಯವಹಾರ ಮಾಡುವುದನ್ನು ಕಾಣುತ್ತೇವೆ. ವ್ಯಾವಹಾರಿಕ ದೃಷ್ಟಿಯಲ್ಲಿ ಇದು ಸೂಕ್ತವೂ ಯೋಗ್ಯವೂ ಆಗಿದೆ. ಪ್ರಾರಂಭಿಕಾವಸ್ಥೆಯಲ್ಲಿ ಈ ಭೇದ ವ್ಯವಹಾರವು ಸಾಧನೆಗೆ ಪೋಷಕವಾಗಿ ತೋರಿದರೂ ಸಾಧನೆಯು ಬಲಿದಂತೆಲ್ಲ ಈ ಭೇದವು ಅಳಿಯುತ್ತ ಹೋಗಬೇಕಾಗಬಹುದು. ಹಾಗೆ ಆಗದೇ ಹೋದಲ್ಲಿ ಸಾಧಕನ ಸಾಧನೆಯಲ್ಲಿ ಪ್ರಗತಿ ಕಂಡುಬರದು. ಶಿವಧ್ಯಾನ, ಶಿವಚಿಂತನೆಗಳನ್ನು ಮಾಡುವ ಉದ್ದೇಶ ಶಿವಚಿಂತನೆ ಮಾಡುವುದೇ ಅಲ್ಲ, ಶಿವಚಿಂತನೆ ಮಾಡುತ್ತ ಮಾಡುತ್ತ ಕೊನೆಗೊಮ್ಮೆ ತಾನೂ ಶಿವಸ್ವರೂಪನಾಗುವುದೇ ಆಗಿದೆ. ಶಿವಚಿಂತನೆ, ಶಿವಧ್ಯಾನ ಮಾಡುವವರ ಮನಸ್ಸಿನಲ್ಲಿ ಸಾವಕಾಶವಾಗಿ ಶಿವಭಾವನೆಯು ದೃಢಗೊಳ್ಳುತ್ತ ಹೋಗುವುದು. ಈ ಭಾವ ಬೆಳೆಯುತ್ತ ಹೋದಂತೆ ತಾನು ಶಿವನ ಸೇವಕನಿದ್ದೇನೆಂಬ ಮೊದಲಿನ ಭೇದಭಾವನೆಯು ಕ್ರಮವಾಗಿ ಇಲ್ಲವಾಗುತ್ತ ಹೋಗುವುದು. ಆರಾಧ್ಯ ಶಿವನ ಹಾಗೂ ತನ್ನಲ್ಲಿಯ ಭೇದವು ಅಳಿದಂತೆ ಗುರು ಶಿಷ್ಯ ಭಾವನೆಯ ಭೇದ ಬುದ್ಧಿಯು

ಸಹ ಕಡಿಮೆಯಾಗುತ್ತ ಹೋಗಿ ಕೊನೆ–ಕೊನೆಗೆ ಸ್ವಾಮಿ–ಭೃತ್ಯ ಮತ್ತು ಗುರು–ಶಿಷ್ಯ ಭಾವನೆಗಳು ನಿಃಶೇಷವಾದಾಗ ಪರಮಾದ್ವೈತ ಸ್ಥಿತಿಯು ಪ್ರಾಪ್ತವಾಗಿ ಆ ಶಿವಯೋಗಿಯು ಸಹಭೋಜನಸ್ಥಲಿ ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ.

ಹೀಗೆ ಶಿವೈಕ್ಯನ ಸಹಭೋಜನಸ್ಥಿತಿಯನ್ನು ವಿವರಿಸಿದ ಪೂಜ್ಯರು ಆತನು ಮುಂದಿನ ಭೂಮಿಕೆಗಳಲ್ಲಿ 'ವಿಶ್ವಹೋಮಿ' ಹೇಗಾಗುತ್ತಾನೆಂಬುದನ್ನು–

ಪರಾಹಂತಾಮಯೇ ಸ್ವಾತ್ಮಪಾವಕೇ ವಿಶ್ವಭಾಸ್ವತಿ ।
ಇದಂತಾಹವ್ಯಹೋಮೇನ ವಿಶ್ವಹೋಮೀತಿ ಕಥ್ಯತೇ ॥ (ಸಿ. ಶಿ. ೧೪–೩೮)

ಈ ವಿಧವಾಗಿ ವಿವರಿಸಿದ್ದಾರೆ. ಪರಾಹಂತಾರೂಪವಾದ ಸ್ವಾತ್ಮಾಗ್ನಿಯಲ್ಲಿ ಅದು–ಇದು ಎಂಬ ಭೇದ ಪ್ರತೀತರೂಪವಾದ ಪ್ರಪಂಚವೆಂಬ ಹೋಮದ್ರವ್ಯವನ್ನು ಹವನ ಮಾಡುವವನೇ 'ವಿಶ್ವಹೋಮಿ' ಎಂಬುದು ಪೂಜ್ಯರ ಉಪದೇಶದ ತಾತ್ಪರ್ಯ ವಾಗಿದೆ. ಲೋಕದಲ್ಲಿ ಹೋಮವನ್ನು ಮಾಡುವಾಗ ಒಂದು ಅಗ್ನಿಕುಂಡವನ್ನು ನಿರ್ಮಾಣ ಮಾಡಿ ಅದರಲ್ಲಿ ಅಗ್ನಿಯನ್ನು ಪ್ರಜ್ವಲಿಸಿ ಆಜ್ಯ, ಸಮಿತ್ತುಗಳಿಂದ ಹೋಮ ಮಾಡುವುದನ್ನು ಕಾಣುತ್ತೇವೆ. ಹೋಮ ಮಾಡುವ ಪೂರ್ವದಲ್ಲಿ ಬೇರೆ, ಬೇರೆ ಜಾತಿಯ ಸಮಿತ್ತುಗಳು ಇದ್ದರೂ ಹೋಮವಾದ ಬಳಿಕ ಅವೆಲ್ಲವೂ ಒಂದೇ ವಿಧವಾದ ಭಸ್ಮರೂಪದಲ್ಲಿ ಪರಿವರ್ತನೆಯಾಗುವುದನ್ನು ಕಾಣುತ್ತೇವೆ. ಹೋಮದ ಉದ್ದೇಶ ಕೇವಲ ಆಜ್ಯ, ಸಮಿತ್ತುಗಳನ್ನು ದಹಿಸುವುದೇ ಅಲ್ಲ. ಆದರೆ ನಮ್ಮೊಳಗಿನ ದ್ವೈತ ಭಾವನೆಗಳೆಂಬ ಸಮಿತ್ತುಗಳನ್ನು ದಹಿಸಿಕೊಳ್ಳುವುದಾಗಿದೆ.

ಸಾಮಾನ್ಯ ಜೀವಿಗಳಲ್ಲಿ 'ಅಹಂತಾ' ಇದ್ದರೆ ಜ್ಞಾನಿಗಳಲ್ಲಿ 'ಪರಾಹಂತಾ' ಇರುತ್ತದೆ. ಅಹಂತತೆಯು ದ್ವೈತಭಾವನೆಗೆ ಮೂಲವಾಗಿದ್ದರೆ ಪರಾಹಂತತೆಯು ಅದ್ವೈತ ಭಾವನೆಯ ನಾಂದಿಯಾಗಿದೆ. ಜೀವಿಗಳಲ್ಲಿಯ ವ್ಯಷ್ಟಿರೂಪವಾದ ಅಹಂತತೆಯು ಅವರ ಬಂಧನಕ್ಕೆ ಕಾರಣವಾದರೆ ಪರಾಹಂತಾ ರೂಪವಾದ ಸಮಷ್ಟಿ ಅಹಂಭಾವವು ಮುಕ್ತಿಯ ಸಾಧನವಾಗಿದೆ. ಅಂತೆಯೇ ಪೂಜ್ಯಪಾದರು–ಪರಾಹಂತಾ ರೂಪವಾದ ಅಗ್ನಿಯಲ್ಲಿ ವಿಶ್ವದ ಭೇದವೆಲ್ಲವನ್ನು ಹವನ ಮಾಡಬೇಕೆಂಬುದಾಗಿ ಉಪದೇಶಿಸಿದ್ದಾರೆ. ಅಗ್ನಿ ಕುಂಡದಲ್ಲಿಯ ಅಗ್ನಿಯ ಸಂಪರ್ಕಕ್ಕೊಳಗಾದ ಎಲ್ಲ ಸಮಿತ್ತುಗಳು ಹೇಗೆ ಅಗ್ನಿ ರೂಪಗಳೇ ಆಗಿರುತ್ತವೆಯೋ ಪರಾಹಂತಾರೂಪವಾದ ಅಗ್ನಿಯಲ್ಲಿ ಸಮರ್ಪಿಸಿದ ಪ್ರಪಂಚದ ದ್ವೈತವೆಲ್ಲವು ಪರಾಹಂತಾ ರೂಪವೇ ಆಗಿರುತ್ತವೆ. ಅಂದರೆ ಈ ವಿಶ್ವ ಹೋಮಿಯ ಸರ್ವವೆಲ್ಲವನ್ನೂ ತನ್ನ ಆತ್ಮ ರೂಪವಾಗಿಯೇ ಭಾವಿಸುತ್ತಾನೆ. ಹೀಗೆ ಸಂಪೂರ್ಣ ವಿಶ್ವವನ್ನು ಅಹಂರೂಪದಲ್ಲಿ ಅನುಭವಿಸುವ ಈ ಶಿವಯೋಗಿಯ ಈ ಅಹಂಭಾವಕ್ಕೆ 'ಪರಾಹಂ' ಅಥವಾ 'ಪರಾಹಂತಾ' ಎಂದು ಕರೆದಿದ್ದಾರೆ. ಇಂತಹ ಪರಾಹಂತಾ ಸಂಪನ್ನನಾದ ಶಿವಯೋಗಿಯೇ 'ವಿಶ್ವಹೋಮಿ' ಎಂಬುದಾಗಿ ಕರೆಯಲ್ಪಡುತ್ತಾನೆ.

ಶಿವೈಕ್ಯಜ್ಞಾನಸಂಪನ್ನನಾದ ಶಿವಯೋಗಿಯ ಪರಾಹಂತಾ ಸ್ವರೂಪವನ್ನು ವಿವರಿಸಿದ ಪೂಜ್ಯರು ಅವನಲ್ಲಿಯ ಆ ಪರಾಹಂತೆಯು ಹೇಗೆ 'ಪೂರ್ಣಹಂತಾ' ಆಗುತ್ತದೆಂಬುದನ್ನು ಪುನಃ–

ಅಹಂ ಶಿವೋ ಗುರುಶ್ಚಾಹಮಹಂ ವಿಶ್ವಂ ಚರಾಚರಂ ।
ಯಯಾ ವಿಜ್ಞಾಯತೇ ಸಮ್ಯಕ್ಪೂರ್ಣಾಹಂತೇತಿ ಸಾ ಸ್ಮೃತಾ ॥

(ಸಿ. ಶಿ. ೧೪-೩೯)

ಈ ವಿಧವಾಗಿ ಉಪದೇಶಿಸಿದ್ದಾರೆ. ಶಿವನೂ ನಾನೇ, ಗುರುವೂ ನಾನೇ, ಚರಾಚರಾತ್ಮಕವಾದ ಪ್ರಪಂಚವೂ ನಾನೇ ಎಂಬುದಾಗಿ ಸರ್ವವೆಲ್ಲವನ್ನೂ ತನ್ನ ಆತ್ಮರೂಪವಾಗಿ ಅನುಭವಿಸುವುದೇ ಪೂರ್ಣಹಂತೆಯು. 'ಅಹಂ' ಎಂಬ ಶಬ್ದವು ಅಕಾರಾದಿ, ಹಕಾರಂತವಾಗಿರುವ ಸಕಲ ಮಾತೃಕಾಕ್ಷರಗಳ ಕ್ರೋಢಿಕಾರ ರೂಪವಾಗಿದ್ದು ಮತ್ತು ಬಿಂದು ಸಮೇತವಾದುದು ಆಗಿದೆ. ಆಗಮ ಸಿದ್ಧಾಂತದಲ್ಲಿ ಶಿವನಿಗೆ ನಾದವೆಂತಲೂ, ಶಕ್ತಿಗೆ ಬಿಂದುವೆಂತಲೂ ಕರೆದಿದ್ದಾರೆ. ವಿಶ್ವದ ಉತ್ಪತ್ತಿಗೆ ಕಾರಣೀಭೂತವಾದ ಆ ಶಕ್ತಿಗೆ ಪರಾಹಂತಾ ಎಂಬುದಾಗಿಯೂ ವಿಮರ್ಶಶಕ್ತಿ ಎಂಬುದಾಗಿಯೂ ಕರೆಯಲ್ಪಡುತ್ತದೆ. ಶಿವೈಕ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯು ಪರಾಹಂತಾ ಅಥವಾ ಪೂರ್ಣಹಂತಾ ಸ್ಥಿತಿಯನ್ನು ಪಡೆದಿರುವುದರಿಂದ ವಿಶ್ವವೆಲ್ಲವನ್ನೂ ತನ್ನ ಆತ್ಮರೂಪವನ್ನಾಗಿ ತಿಳಿಯುವ ಯೋಗ್ಯತೆಯು ಅವನಿಗೆ ಪ್ರಾಪ್ತವಾಗಿರುತ್ತದೆ. ಹೀಗೆ ಅವನಲ್ಲಿರುವ ಸಮಷ್ಟಿ ಅಹಂ ಭಾವವೇ ಪೂರ್ಣಹಂತಾ ಎಂಬುದಾಗಿ ಕರೆಯಲ್ಪಡುತ್ತದೆ. ಈ ಅವಸ್ಥೆಯು ಪ್ರಾಪ್ತವಾದ ಶಿವಯೋಗಿಗೆ ಯಾವ ದ್ವಂದ್ವಗಳ ಕಾಟವೂ ಇರದೇ ನಿರ್ದ್ವಂದ್ವ ಸ್ಥಿತಿಯಲ್ಲಿದ್ದು ಆತನು ಸದಾ ಆನಂದಮಯವಾಗಿ ಇರುತ್ತಾನೆ.

ಈ ಐಕ್ಯಸ್ಥಲದಲ್ಲಿ ಶಿವಯೋಗಿಯ ಅದ್ವೈತ ಸ್ಥಿತಿಯನ್ನೇ ಪೂಜ್ಯಪಾದರು ಮತ್ತೆ ಬೇರೆ ವಿಧವಾಗಿ–

ಆಧಾರವಹ್ನೌ ಚಿದ್ರೂಪೇ ಭೇದಜಾತಂ ಜಗದ್ಧವಿಃ ।
ಜುಹೋತಿ ಜ್ಞಾನಯಜ್ವಾಯಃ ಸ ಜ್ಞೇಯೋ ವಿಶ್ವಹವ್ಯಭುಕ್ ॥

(ಸಿ. ಶಿ. ೧೪-೪೦)

ಹೀಗೆ ಉಪದೇಶಿಸಿದ್ದಾರೆ. ಯಾವಾತನು ಚಿದ್ರೂಪವಾದ ಆಧಾರಾಗ್ನಿಯಲ್ಲಿ ಜಗತ್ತಿನ ಬೇಧ ಸಮೂಹವೆಂಬ ಹವಿಸ್ಸನ್ನು ಅರ್ಪಿಸಿ ಹೋಮ ಮಾಡುವನೋ ಅವನಿಗೆ 'ಜ್ಞಾನಯಜ್ಞದೀಕ್ಷಿತ'ನೆಂತಲೂ 'ವಿಶ್ವಹವ್ಯಭೋಜಿ' ಎಂತಲೂ ಕರೆಯುತ್ತಾರೆ. ಇಂತಹ ಜ್ಞಾನಯಜ್ಞದ ಮುಖಾಂತರ ಯಾರ ಅಹಂಭಾವವು ವಿಶ್ವವ್ಯಾಪಕವಾಗುವುದೋ ಅವರು ತಮ್ಮನ್ನು ವಿಶ್ವರೂಪರಾಗಿ ಭಾವಿಸಿಕೊಳ್ಳುತ್ತಾರೆ. ಈ ವಿಶ್ವಾತ್ಮಕಭಾವನೆಯಿಂದಲೇ ಸಂಕುಚಿತ ಬೇಧಭಾವನೆಗಳು ತೊಲಗುತ್ತವೆ. ಬೇಧಬುದ್ಧಿಯು ತೊಲಗಿದಾಗ ಅನುಕೂಲ ಪ್ರತಿಕೂಲ ಭಾವನೆಗಳು ಸಹ ಇಲ್ಲವಾಗುತ್ತವೆ. ಈ ಅನುಕೂಲ ಪ್ರತಿಕೂಲ ಭಾವನೆಗಳು ತೊಲಗಿದಾಗ ಅವನಿಂದ ಪುಣ್ಯ-ಪಾಪಗಳು ಸಂಭವಿಸಲಾರವು. ಪುಣ್ಯ ಪಾಪಗಳೇ ಇಲ್ಲವೆಂದ ಬಳಿಕ ಜನನ-ಮರಣಾತ್ಮಕ ಸಂಸಾರ ಚಕ್ರವು ಸಹ ಇಲ್ಲವಾಗಿಹೋಗುತ್ತದೆ. ಹೀಗೆ ಶಿವಾದ್ವೈತ ಭಾವನೆಯು ಸಂಸಾರ ಚಕ್ರದಿಂದ ಪಾರಾಗುವ ಶ್ರೇಷ್ಠ ಉಪಾಯವಾಗಿರುವುದರಿಂದ ಅದನ್ನು ಪ್ರಾಪ್ತಿಮಾಡಿ ಕೊಳ್ಳುವ ವಿಧಾನವನ್ನೇ ನಾನಾ ಮಾರ್ಗಗಳ ರೂಪದಲ್ಲಿ ಪೂಜ್ಯರು ಇಲ್ಲಿ ಉಪದೇಶಿಸಿದ್ದಾರೆ.

ಈ ಶಿವಾದ್ವೈತ ಸ್ಥಿತಿಯನ್ನು ಪಡೆದ ಶಿವಯೋಗಿಯಲ್ಲಿ ಅನ್ಯರ ಬಗ್ಗೆ ಸಮಾನುಭೂತಿಯನ್ನು ತಾಳಿದವರಾಗಿರುತ್ತಾರೆ. ಲೌಕಿಕ ಜೀವಿಗಳಲ್ಲಿ ಸಹಾನು ಭೂತಿಯಿದ್ದರೆ ಶಿವಜ್ಞಾನಿಗಳಾದ ಶಿವಯೋಗಿಗಳಲ್ಲಿ ಸಮಾನುಭೂತಿ ಇರುತ್ತದೆ. ಅನ್ಯರು ರೋಗ–ರುಜಿನಗಳಿಂದ, ಹಾನಿ–ಹಳಿವುಗಳಿಂದ ದುಃಖಕ್ಕೀಡಾದಾಗ ಅವರನ್ನು ಮಾತನಾಡಿಸುವುದಕ್ಕೋಸುಗ ಕೆಲವು ಜನರು ಶಿಷ್ಟಾಚಾರಕ್ಕಾಗಿ ಸಮಾಧಾನದ ಮಾತುಗಳನ್ನು ಹೇಳುತ್ತಾರೆ. ಇದಕ್ಕೆ ನಾವು ಸಹಾನುಭೂತಿ ಎಂಬುದಾಗಿ ಕರೆಯುತ್ತೇವೆ. ಇನ್ನು ಅನ್ಯರು ಅನುಭವಿಸುವ ದುಃಖವನ್ನು ಕಂಡು ನಮ್ಮ ಅಂತಃಕರಣದಲ್ಲಿಯೂ ಅದೇ ವಿಧವಾದ ದುಃಖವು ಆವರಿಸಿದರೆ ಅದಕ್ಕೆ ಸಮಾನುಭೂತಿ ಎಂಬುದಾಗಿ ಕರೆಯುವರು.

ಒಮ್ಮೆ ರಾಮಕೃಷ್ಣ ಪರಮಹಂಸರು ಹೂಗ್ಲಿ ನದಿಯಲ್ಲಿ ನೌಕೆಯಲ್ಲಿ ಕುಳಿತು ಹೋಗುತ್ತಿರುವಾಗ ಆಚೆಯ ದಡದಲ್ಲಿ ಕೆಲವು ಜನ ಮೀನುಗಾರರು ಓರ್ವನನ್ನು ಸುತ್ತುವರಿದು ಮನಸ್ಸಿಗೆ ಬಂದಂತೆ ಬಡಿಯುತ್ತಿದ್ದರು. ಆ ದೃಶ್ಯದ ಕಡೆಗೆ ಲಕ್ಷ್ಯ ಹೋದ ಪರಮಹಂಸರು ಕೂಡಲೇ ನೌಕೆಯಲ್ಲಿ ಎದ್ದು ನಿಂತು ''ನನಗೆ ಹೊಡೆಯಬೇಡಿರಿ, ನನಗೆ ಹೊಡೆಯಬೇಡಿರಿ'' ಎಂಬುದಾಗಿ ಕೂಗಾಡತೊಡಗಿದರು. ಪರಮಹಂಸರ ಈ ಆರ್ತಧ್ವನಿಯನ್ನು ಕೇಳಿ ಗಾಬರಿಗೊಂಡ ಪಕ್ಕದಲ್ಲಿಯ ಶಿಷ್ಯರು ''ಪರಮಹಂಸರೇ ನಿಮ್ಮನ್ನು ಯಾರು ಹೊಡೆಯುತ್ತಿದ್ದಾರೆ. ? ಹೀಗೇಕೆ ಸುಮ್ಮನೆ ಕೂಗಾಡುವಿರಿ ?'' ಎಂದು ಪ್ರಶ್ನಿಸಲು ಪರಮಹಂಸರು ಆ ದಡದಲ್ಲಿ ಹೊಡೆಸಿಕೊಳ್ಳುವ ವ್ಯಕ್ತಿಯ ಕಡೆಗೆ ಕೈಮಾಡಿ ತೋರಿಸಿ 'ಆಗೋ ನೋಡಿ, ಅಲ್ಲಿ ನನಗೆ ಹೊಡೆಯುತ್ತಿದ್ದಾರೆ' ಎಂಬುದಾಗಿ ಹೇಳಿದರಂತೆ. ಇದು ಪರಮಹಂಸರ ಸಮಾನುಭೂತಿಯ ಉದಾಹರಣೆಯು. ಅಲ್ಲಿ ಯಾರಿಗೋ ಹೊಡೆಯುತ್ತಿದ್ದಾರೆ ಬಿಡಿಸಿಕೊಳ್ಳಿರಿ ಎಂಬುವುದು ಸಹಾನುಭೂತಿಯಾದರೆ ನನಗೆ ಹೊಡೆಯುತಾತ್ತಾರೆಂಬುದು ಸಮಾನುಭೂತಿಯಾಗಿದೆ. ವಿಶ್ವಶಾಂತಿಗೆ ಸಹಾನು ಭೂತಿಗಿಂತಲೂ ಸಮಾನುಭೂತಿಯು ಹೆಚ್ಚು ಸೂಕ್ತವಾದುದು. ಪರಮಹಂಸರು 'ಪೂರ್ಣಹಂತಾ' ಸ್ಥಿತಿಯನ್ನು ತಲುಪಿದ್ದರಿಂದಲೇ ಅನ್ಯನನ್ನು ತಾನೆಂಬುದಾಗಿ ತಿಳಿಧು ವ್ಯವಹರಿಸಿದ್ದನ್ನು ಕಾಣುತ್ತೇವೆ. ವಿಶ್ವಹವ್ಯಭೋಜಿಯ ಸ್ಥಿತಿಯು ಸಹ ಇದೇ ತೆರನಾಗಿರುತ್ತದೆ.

ಈ ವಿಶ್ವಭೋಜಿಗೆ ವಿಶ್ವದಲ್ಲಿಯ ಬೇಧವು ಅದು ಹೇಗೆ ದೂರಾಗುವುದೆಂಬ ಪ್ರಶ್ನೆಯು ಉದ್ಭವಿಸಿದಾಗ ಅದಕ್ಕೆ ಸಮಾಧಾನರೂಪವಾಗಿ ಪೂಜ್ಯಪಾದರು–

ಚಿದಾಕಾರೇ ಪರಾಕಾಶೇ ಪರಮಾನಂದ ಭಾಸ್ವತಿ ।
ವಿಲೀನಚಿತ್ತವೃತ್ತೀನಾಂ ಕಾ ವಾ ವಿಶ್ವಕ್ರಮಸ್ಥಿತಿಃ ॥ (ಸಿ. ಶಿ. ೧೪–೪೧)

ಹೀಗೆ ಉತ್ತರಿಸಿದ್ದಾರೆ. ಊರ್ಧ್ವ ಹೃದಯಕಮಲದ ನಡುಗಡ್ಡೆಯಲ್ಲಿರುವ ಸೂಕ್ಷ್ಮ ರಂಧ್ರದಲ್ಲಿ ನಿತ್ಯಾನಂದಮಯವಾಗಿ ಹೊಳೆಯುತ್ತಿರುವ ಮಹಾಲಿಂಗವೆಂಬ ಸೂರ್ಯ ನಲ್ಲಿ ಮನೋವ್ಯಾಪಾರವೆಲ್ಲ ಲೀನವಾಗಿರುವ ಈ ಐಕ್ಯಸ್ಥಲದ ಶಿವಯೋಗಿಗೆ ಈ ವಿಶ್ವದ ದ್ವಂದ್ವಾತ್ಮಕ ವ್ಯವಹಾರವು ಅದು ಹೇಗೆ ತಾನೇ ಅನುಭವಗೋಚರವಾದೀತು ? ಆಗುವುದಿಲ್ಲವೆಂಬ ತಾತ್ಪರ್ಯವು.

ವಿಶ್ವದ ವ್ಯವಹಾರವನ್ನು ಇಲ್ಲದಂತೆ ಮಾಡಬೇಕಾದರೆ ಅದನ್ನು ನಷ್ಟ ಮಾಡುವ ಗೊಡವೆಗೆ ಹೋಗದೆ ತನ್ನ ಚಿತ್ತವೃತ್ತಿಯನ್ನೇ ಅದರಿಂದ ಪರಾವರ್ತಿಸಿಕೊಂಡು ಅಂತರ್ಲೀನಗೊಳಿಸಿಕೊಂಡಾಗ ಇರುವ ದ್ವೈತ ವ್ಯವಹಾರವೆಲ್ಲವೂ ಇಲ್ಲದಾಗಿ ಹೋಗುವುದು. ನಾವು ಗಾಢ ನಿದ್ರೆಯಲ್ಲಿರುವಾಗ ನಮ್ಮ ಮನೋವ್ಯಾಪಾರವು ಬಹಿ ರಂಗದಲ್ಲಿ ಇಲ್ಲದಿರುವುದರಿಂದ ದ್ವೈತ ಪ್ರಪಂಚವು ಇದ್ದೂ ಅದು ಹೇಗೆ ಪ್ರತೀತಿ ಆಗದೋ, ಅದರಂತೆ ಅಂತರಂಗದ ಮಹಾಲಿಂಗದಲ್ಲಿ ಚಿತ್ತವಡಗಿದ ಶಿವಯೋಗಿಗೆ ಅದಾವ ದ್ವೈತ ವ್ಯವಹಾರವು ಅನುಭವಕ್ಕೆ ಬರುವುದಿಲ್ಲ. ಶಿವನಿಂದ ಸೃಜಿಸಲ್ಪಟ್ಟ ಈ ಪ್ರಪಂಚವನ್ನು ನಷ್ಟ ಮಾಡುವ ಹಕ್ಕು ಯಾರಿಗೂ ಇರುವುದಿಲ್ಲ. ಪ್ರಪಂಚದ ವ್ಯವಹಾರವು ನಮಗೆ ಬೇಡಾಗಿದ್ದರೆ ಅದರ ನಾಶದ ಗೊಡವೆಗೆ ಹೋಗದೇ, ಚಿತ್ತವೃತ್ತಿಯನ್ನು ಅಂತರ್ಲೀನ ಮಾಡಿಕೊಂಡರೆ ಸಾಕು ಅದು ಇದ್ದೂ ಸಹ ಇಲ್ಲವಾಗಿ ಹೋಗುತ್ತದೆ. ಹೀಗೆ ಶಿವೈಕ್ಯ ಸ್ಥಿತಿಯನ್ನು ಪಡೆದ ಶಿವಯೋಗಿಗೆ ದ್ವೈತ ಪ್ರಪಂಚವು ಬಾಧಿಸಲಾರದು ಎಂದು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೩ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)



ಆಶೀರ್ವಚನ-೩

# ಸಹಭೋಜನಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ದರ್ಶನ ಕ್ಷೇತ್ರದಲ್ಲಿ ಶಿಖಾಮಣಿಯಂತೆ ಕಂಗೊಳಿಸುವ ಈ ಗ್ರಂಥರತ್ನದ ಐಕ್ಯಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಐಕ್ಯಸ್ಥಲದಲ್ಲಿಯ ಅಂತಿಮ ಅವಾಂತರಸ್ಥಲವೇ ಸಹಭೋಜನಸ್ಥಲವು. ಈಗಾಗಲೇ ಈ ಸ್ಥಲದ ಬಗ್ಗೆ ನೀವು ಸಾಕಷ್ಟು ತಿಳಿದು ಕೊಂಡಿದ್ದೀರಿ. ಅದರಲ್ಲಿಯ ವೈಶಿಷ್ಟ್ಯವಾದ ವಿಷಯಗಳನ್ನಿಲ್ಲಿ ಅವಲೋಕಿಸೋಣ.

ಈ ಸ್ಥಲದಲ್ಲಿ ಮುಖ್ಯ ಪ್ರತಿಪಾದ್ಯವಾದ ವಿಷಯವೆಂದರೆ, ಶಿವಯೋಗಿಯ ಅದ್ವೈತ ಸ್ಥಿತಿಯು. ಸಂಸಾರದಲ್ಲಿ ಅತ್ಯಂತ ಅನಾಸಕ್ತಿಯುಳ್ಳ ಶ್ರೇಷ್ಠ ಸಾಧಕರಿಗೇನೇ ಇದನ್ನು ತಿಳಿದುಕೊಳ್ಳಬೇಕೆಂಬ ಬಯಕೆಯುಂಟಾಗುವುದು. ಇದೊಂದು ಅಪೂರ್ವ ವಾದ ಸಂಪತ್ತು ಎಂದೂ ಕ್ಷಯಿಸದೆ ಅಕ್ಷಯವಾದ ತವನಿಧಿಯಿದು. ಇದನ್ನು ಪಡೆದವನೇ ನಿಜವಾದ ಶ್ರೀಮಂತನೂ, ಸುಖಿಯೂ ಆಗುವನು. ಜನಸಾಮಾನ್ಯರಿಗೆ ಈ ಶಿವಾದ್ವೈತ ಜ್ಞಾನದ ಮಹತಿಯ ಅರಿವಿಲ್ಲದ ಕಾರಣ ಕ್ಷಣಿಕವಾದ ಭೌತಿಕ ಸಂಪತ್ತಿನ ಪ್ರಾಪ್ತಿಯಲ್ಲಿಯೇ ತಮ್ಮ ಆಯುಷ್ಯವನ್ನೆಲ್ಲ ಕಳೆದು ಕೊನೆಗೆ ಬರಿಗೈಯಿಂದಲೇ ತೆರಳುತ್ತಾರೆ. ಅಂತೆಯೇ ಕಬೀರನು-''ಮುಠ್ಠೀಬಾಂಧಕೇ ಆಯಾಥಾ ಹಾಥ್ ಪಸಾರಕೇ ಜಾಯೇಗಾ'' ಎಂಬುದಾಗಿ ನುಡಿದಿದ್ದಾನೆ. ಅದೇ ಆಗ ಜನಿಸಿದ ಮಕ್ಕಳ ಕೈಗಳ ಮುಷ್ಟಿಯು ಬಂಧಿತವಾಗಿರುತ್ತದೆ. ಮುಂದೆ ವೃದ್ಧಾಪ್ಯದಲ್ಲಿ ಪ್ರಾಣಬಿಟ್ಟಾಗ ಅವನ ಎರಡೂ ಅಂಗೈಗಳು ತೆರೆದಿರುತ್ತವೆ. ಈ ದೃಶ್ಯವನ್ನು ನೋಡಿದಾಗ ಈ ಜೀವಿಯು ಸಂಸಾರದತ್ತ ಬರುವಾಗ ಏನೋ ಕೈಯಲ್ಲಿ ಹಿಡಿದುಕೊಂಡು ಬಂದಿದ್ದ ಆದರೆ ಹೋಗುವಾಗ ಮಾತ್ರ ಬರಿಗೈಯಿಂದ ಹೊರಟಿದ್ದಾನೆಂಬುದು ಸಾಂಕೇತಿಕವಾಗಿ ತಿಳಿದುಬರುತ್ತದೆ.

ಇಹಲೋಕದಲ್ಲಿ ನಾವು ಜೀವನದುದ್ದಕ್ಕೂ ಗಳಿಸಿದ ಸಂಪತ್ತನ್ನು ಮೃತ್ಯು ದೇವತೆಯು ಒಂದು ಕ್ಷಣದಲ್ಲಿ ಕಸಿದುಕೊಂಡುಬಿಡುತ್ತಾಳೆ. ಹೀಗೆ ಕೊನೆಗೊಂದು ದಿನ ಅನ್ಯರ ಪಾಲಾಗುವ ಸಂಪತ್ತಿನ ಸಂಗ್ರಹದಲ್ಲಿ ಆಯುಷ್ಯವನ್ನೆಲ್ಲ ವ್ಯರ್ಥವಾಗಿ ಕಳೆಯದೇ ಅದಾರಿಂದಲೂ ಮೃತ್ಯುವಿನಿಂದಲೂ ಸಹ ಕಸಿದುಕೊಳ್ಳಲು ಬಾರದಿರುವ ಶಿವಾದ್ವೈತ ಜ್ಞಾನವೆಂಬ ಸಂಪತ್ತನ್ನು ಸಂಪಾದಿಸಿಕೊಂಡು ತಮ್ಮ ತಮ್ಮ ಜೀವನವನ್ನು ಸಾರ್ಥಕ ಗೊಳಿಸಿಕೊಳ್ಳಬೇಕೆಂಬುದೇ ಈ ಸಹಭೋಜನಸ್ಥಲದ ಸಾರವಾಗಿದೆ. ಶರೀರ ಹಾಗೂ

ಶರೀರಕ್ಕೆ ಸಂಬಂಧಪಟ್ಟ ಜಡವಾದ ಭೌತಿಕ ಪ್ರಪಂಚದ ಕಡೆಗೇನೇ ಲಕ್ಷ್ಯವಿರುವ ಜೀವಿಗಳಿಗೆ ಇದು ಅದೆಂದೂ ದೊರೆಯಲಾರದು. ಅಂತೆಯೇ ಶ್ರೀಮನ್ ನಿಜಗುಣ ಶಿವಯೋಗಿಗಳು ''ಮತಿಯುಂಟೇ ಜಡರಿಗೆ ಅದ್ವೈತವನರಿಯಲ್ಕೆ ?'' ಎಂಬುದಾಗಿ ತಮ್ಮ ಪತ್ನಿಯಾದ ಮೈತ್ರೇಯಿಯನ್ನು ಕುರಿತು ಯಾಜ್ಞವಲ್ಕ್ಯರು ಉಪದೇಶಿಸಿದ್ದನ್ನು ತಿಳಿಯಪಡಿಸಿದ್ದಾರೆ.

ಒಮ್ಮೆ ಯಾಜ್ಞವಲ್ಕ್ಯ ಮಹರ್ಷಿಗಳು ವಿಧಿವತ್ ಸನ್ಯಾಸವನ್ನು ಸ್ವೀಕರಿಸ ಬೇಕೆಂದು ಯೋಚಿಸಿ ತಮ್ಮ ಈರ್ವರು ಪತ್ನಿಯರಾದ ಕಾತ್ಯಾಯಿನಿ ಮತ್ತು ಮೈತ್ರೇಯಿ ಯರ ಸಲುವಾಗಿ ತಮ್ಮ ಭೌತಿಕ ಸಂಪತ್ತನ್ನು ಸಮವಾಗಿ ವಿಭಾಗಿಸಿ ಈರ್ವರನ್ನು ಕರೆದು ಆ ಸಂಪತ್ತನ್ನು ಅವರಿಗೆ ಒಪ್ಪಿಸಿ ನಾನು ಸನ್ಯಾಸ ಗ್ರಹಿಸಲು ಹೋಗುತ್ತೇನೆಂದು ಹೇಳಿದರು. ಕಾತ್ಯಾಯಿನಿಯು ತನಗೆ ದೊರೆತ ಸಂಪತ್ತನ್ನು ತೆಗೆದುಕೊಂಡು ಸುಮ್ಮನಿದ್ದರೂ ಮೈತ್ರೇಯಿಯು ಮಾತ್ರ ಸುಮ್ಮನಿರದೆ ನನಗೆ ನೀವು ಬಿಟ್ಟು ಹೋಗುವ ಸಂಪತ್ತಿನಲ್ಲಿ ಪಾಲು ಬೇಕಿಲ್ಲ, ಯಾವುದರ ಪ್ರಾಪ್ತಿಗಾಗಿ ಹೊರಟಿರುವಿರೋ ಅದರಲ್ಲಿ ನನಗೆ ಪಾಲು ಬೇಕು. ಮೈತ್ರೇಯಿಯ ಈ ಮಾತುಗಳನ್ನು ಕೇಳಿ ಯಾಜ್ಞವಲ್ಕ್ಯರು ಸಂತುಷ್ಟಚಿತ್ತರಾಗಿ ಅವಳಿಗೆ ಅದ್ವೈತ ಜ್ಞಾನವನ್ನು ಉಪದೇಶಿಸಿದರು ಎಂಬ ಕಥೆಯು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬಹು ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ಜಡ ಪದಾರ್ಥಗಳಲ್ಲಿ ಆಸಕ್ತರಾದ ಅಂತೆಯೇ ಜಡಬುದ್ಧಿಯ ಜನರಿಗೆ ಈ ಶಿವಾದ್ವೈತಜ್ಞಾನವು ರುಚಿಸುವುದಿಲ್ಲವೆಂಬುದು ನಿಜಗುಣರ ಅಭಿಪ್ರಾಯವಾಗಿದೆ. ಅಂತೆಯೇ ವೀರಶೈವ ಶರಣರು ಸಹ 'ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ' ಎಂಬುದಾಗಿ ಐಕ್ಯಸ್ಥಲಿಯ ದುರ್ಮಿಳತೆಯನ್ನು ಸೂಚಿಸಿದ್ದಾರೆ.

ಕೈಯೊಳಗಿನ ಯಾವುದೊಂದು ವಸ್ತುವನ್ನು ಬಿಟ್ಟುಬಿಡುವುದು ಸರಳವಾದರೂ ಮನದ ಮುಷ್ಟಿಯಲ್ಲಿಯ ವಸ್ತುಗಳನ್ನು ಬಿಡುವುದು ದುಸ್ಸಾಧ್ಯವೇ ಸರಿ. ಮನದ ಮುಷ್ಟಿ ಕಪಿಮುಷ್ಟಿ ಇದ್ದ ಹಾಗೆ. ಮಂಗವನ್ನು ಹಿಡಿಯುವುದಕ್ಕಾಗಿ ಒಂದು ಸಣ್ಣ ಬಾಯಿಯ ಗಡಿಗೆಯಲ್ಲಿ ಕಡಲೆಯನ್ನು ಹಾಕಿ ಆ ಗಡಿಗೆಯನ್ನು ನೆಲದಲ್ಲಿ ಹುಗಿದಿಡುತ್ತಾರೆ. ಕಡಲೆಯ ಆಶೆಗಾಗಿ ಓಡಿ ಬಂದ ಮಂಗವು ಗಡಿಗೆಯ ಬಾಯೊಳಗೆ ಕೈಹಾಕಿ ಹಿಡಿತುಂಬ ಕಡಲೆಯನ್ನು ಹಿಡಿದು ಓಡಿಹೋಗಲು ಪ್ರಯತ್ನಿಸುತ್ತದೆ. ಗಡಿಗೆಯ ಬಾಯಿ ಚಿಕ್ಕದಾಗಿರುವುದರಿಂದ ಮಂಗದ ಬರಿಗೈ ಅದರೊಳಗೆ ಸರಳವಾಗಿ ಹೋಗಿದ್ದರೂ ಮುಷ್ಟಿ ತುಂಬ ಕಡಲೆಯನ್ನು ಹಿಡಿದಾಗ ಅದು ಹೊರಗೆ ಬರಲು ಸಾಧ್ಯವಾಗುವುದಿಲ್ಲ. ಕಡಲೆಯನ್ನು ತೆಗೆದುಕೊಂಡೇ ಹೋಗುವ ಇಚ್ಛೆಯಿಂದ ಮಂಗ ಸೆಣಸಾಡುತ್ತಿರುವಾಗ ಆ ಕಡಲೆ ಇಟ್ಟವನು ಬಂದು ಮಂಗವನ್ನು ಹಿಡಿದುಹಾಕುತ್ತಾನೆ. ಹೀಗೆ ಅಲ್ಪ ಕಡಲೆಯ ಆಶೆಯಿಂದಾಗಿ ತನ್ನ ಸಂಪೂರ್ಣವಾದ ಜೀವನವನ್ನೇ ಮಂಗವು ಬಂಧನಕ್ಕೊಳಗು ಮಾಡಿಕೊಳ್ಳುತ್ತದೆ. ಅದರಂತೆ ಮನಸ್ಸು ಸಹ ಸಂಸಾರಿಕ ಜಡವಸ್ತುಗಳನ್ನು ತನ್ನ ಮುಷ್ಟಿಯಲ್ಲಿ ಹಿಡಿದುಕೊಂಡಿರುವುದರಿಂದಲೇ ಅದು ಪುನಃ ಪುನಃ ಸಂಸಾರದಲ್ಲಿ ತೊಳಲಾಡುತ್ತದೆ. ಅದು ಮುಕ್ತಿಯನ್ನು ಪಡೆಯಬೇಕಾದಲ್ಲಿ ಜಡವಸ್ತುವಿನ ಚಿಂತೆಯನ್ನು

ಬಿಟ್ಟು ಚಿದದ್ವೈತದ ಚಿಂತನೆಯಲ್ಲಿ ತೊಡಗಿದಾಗಲೇ ಸಾಧ್ಯವಾಗುವುದು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸಹಭೋಜನಸ್ಥಲದಲ್ಲಿ ಚಿದದ್ವೈತ ಚಿಂತನೆಯ ಉಪಾಯವನ್ನು ತಿಳಿಯಪಡಿಸಿದ್ದಾರೆ.

ಈ ಸ್ಥಲದ ವಿಶ್ಲೇಷಣೆಯನ್ನು ಮಾಡುತ್ತಾ ಅವರು ಮುಂದೆ ಹೋಗಿ–

ನಿರಸ್ತವಿಶ್ವಸಂಬಾಧೇ ನಿಷ್ಕಲಂಕೇ ಚಿದಂಬರೇ ।
ಭಾವಯೇಲ್ಲೀನಮಾತ್ಮಾನಂ ಸಾಮರಸ್ಯಸ್ವಭಾವತಃ ॥ (ಸಿ. ಶಿ. ೧೪–೪೨)

ಈ ರೀತಿಯಾಗಿ ಉಪದೇಶ ಮಾಡಿದ್ದಾರೆ. ತಾತ್ಪರ್ಯವೇನೆಂದರೆ, ಈ ಸಹಭೋಜನ ಸ್ಥಲದ ಶಿವಯೋಗಿಯು ಜನನ ಮರಣಾದಿ ಸಕಲ ಕ್ಲೇಶ ದೋಷರಹಿತವಾದ ಜ್ಞಾನಾಕಾಶರೂಪವಾದ ಆ ಲಿಂಗತತ್ವದಲ್ಲಿ ತನ್ನನ್ನು ಸ್ವರೂಪಹಾನಿ ವೃದ್ಧಿಗಳಿಲ್ಲದ ಸಜಾತೀಯ ಸಮಾನ ಸಮರಸಭಾವನೆಯಿಂದ ಸ್ಥಿರವಾಗಿ ಅಡಗಿ ಹೋದವನನ್ನಾಗಿ ಭಾವಿಸುತ್ತಾನೆ. ಅಂದರೆ ಆ ಲಿಂಗತತ್ತ್ವವೇ ತಾನೆಂಬುದಾಗಿ ಅರಿತು ಅಲ್ಲಿಯೇ ಮೌನವಾಗುತ್ತಾನೆ. ಆ ಆತ್ಮವಿದ್ಯೆಯು ಸಹಸಾ ಸುಲಭವಾದುದಲ್ಲ, ಅಂತೆಯೇ ಇದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ನಚಿಕೇತನು ಯಮನಲ್ಲಿ ಹೋದಾಗ ಆತ್ಮವಿದ್ಯೆಯನ್ನು ಉಪದೇಶಿಸಲು ಬೇಡಿಕೊಂಡಾಗ ಯಮನು ಅವನಿಗೆ ಆತ್ಮವಿದ್ಯೆಯನ್ನು ಬೋಧಿಸದೇ ಆಯುಷ್ಯ, ಐಶ್ವರ್ಯ, ಅಧಿಕಾರ, ಪುತ್ರ ಪೌತ್ರಾದಿಗಳ ಪ್ರಲೋಭನವನ್ನು ಅವನ ಮುಂದೊಡ್ಡಿದನು. ಅದಾವುದಕ್ಕೂ ನಚಿಕೇತನು ಮನದೂಗದಿರುವಾಗ ಕೊನೆಗೆ ಆತ್ಮವಿದ್ಯೆಯನ್ನು ಉಪದೇಶಿಸಿದನೆಂಬ ಕತೆಯು ಕಠೋಪನಿಷತ್ತಿನಲ್ಲಿ ಸುಪ್ರಸಿದ್ಧವಾಗಿದೆ. ಈ ಕಥಾಸಂದರ್ಭದಿಂದ ತಿಳಿದು ಬರುವುದೇನೆಂದರೆ, ಸಾಂಸಾರಿಕ ಭೋಗ ಭಾಗ್ಯಗಳ ಬಗ್ಗೆ ನಿಸ್ಪೃಹತೆಯನ್ನು ತಾಳದ ವಿನಃ ಈ ಶಿವಾದ್ವೈತ ಜ್ಞಾನವು ಪ್ರಾಪ್ತವಾಗುವುದಿಲ್ಲ.

ಎಂಭತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ ಕೇವಲ ಮನುಷ್ಯನಿಗೆ ಈ ಆತ್ಮವಿದ್ಯೆಯು ಲಭ್ಯವೆಂಬುದಾಗಿ ಸಕಲ ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಇಂತಹ ಆತ್ಮಜ್ಞಾನದ ಅಧಿಕಾರವು ಪ್ರಾಪ್ತವಾಗಿದ್ದರೂ ಸರ್ವ ಮನುಷ್ಯರು ಇತ್ತ ಪ್ರವೃತ್ತರಾಗುವುದಿಲ್ಲ. ಅದಕ್ಕೆ ಕಾರಣ ಅವರಲ್ಲಿರುವ ಪಾಶವೀ ಪ್ರವೃತ್ತಿಗಳೇ ಆಗಿವೆ. ನೋಡಲು ಮನುಷ್ಯರಂತೆ ಕಂಡರೂ ಮನುಷ್ಯತ್ವ ಧರ್ಮವಿಲ್ಲದ ಕಾರಣ ಅಂಥವರು ಮನುಷ್ಯರೂಪೀ ಮೃಗಗಳೆಂಬುದಾಗಿ ಕರೆಯಿಸಿಕೊಂಡಿದ್ದಾರೆ. ದೇವರಿಗೆ ಅರ್ಪಿಸಲು ತೆಂಗಿನಕಾಯಿ ಯನ್ನು ಖರೀದಿಸಲು ಹೋದ ಮನುಷ್ಯನು ಅದನ್ನು ಹಾಗೆ ಖರೀದಿಸಿಕೊಂಡು ಬರದೇ ಸುಲಿಯಿಸಿ, ಬಾರಿಸಿ ಮತ್ತು ಅಲ್ಲಾಡಿಸಿ ನೋಡುವುದನ್ನು ಕಾಣುತ್ತೇವೆ. ಹೊರನೋಟ ದಿಂದ ಅದು ತೆಂಗಿನಕಾಯಿಯಂತೆ ಕಾಣುತ್ತಿದ್ದರೂ ಒಳಗಿನ ಕೊಬ್ಬರಿ ಹಾಗೂ ನೀರುಗಳು ಸರಿಯಾಗಿ ಇವೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುವಂತೆ, ಮನುಷ್ಯ ಆಕೃತಿಯ ಮನುಷ್ಯರನ್ನು ಪರೀಕ್ಷಿಸಿದಾಗ ಕೆಲವೇ ಜನರು ಮಾತ್ರ ಮನುಷ್ಯತ್ವ ಧರ್ಮವುಳ್ಳವರು ಸಿಗಬಹುದು. ಅಂತೆಯೇ ಸಕಲ ಶಾಸ್ತ್ರಕಾರರು ಮನುಷ್ಯ ಸಮಾಜದ ಸುಧಾರಣೆಗಾಗಿ ಯೋಗಾದಿ ಅನೇಕ ಮಾರ್ಗಗಳನ್ನು ಕಂಡುಹಿಡಿದಿದ್ದಾರೆ. ಈ ಮಾರ್ಗಗಳನ್ನು ಅವಲಂಬಿಸಿ ಸಾಧಕನು ತನ್ನ ಶರೀರ, ವಾಣಿ, ಮನಸ್ಸು ಮತ್ತು

ಬುದ್ಧಿಗಳನ್ನು ಪರಿಶುದ್ಧವನ್ನಾಗಿ ಮಾಡಿಕೊಂಡು ಸುರದುರ್ಲಭವಾದ ಆತ್ಮಜ್ಞಾನದ ಪ್ರಾಪ್ತಿಗಾಗಿ ಪ್ರಯತ್ನಿಸಬೇಕು. ನಮ್ಮ ದೇಶದ ಆಚಾರ್ಯರು, ಮಹರ್ಷಿಗಳು, ಸಂತರು ಮತ್ತು ಶರಣರು ತಮ್ಮ ಸಂಪೂರ್ಣವಾದ ಜೀವನವನ್ನೇ ಅದಕ್ಕಾಗಿ ಮುಡುಪಿಟ್ಟು ಅದನ್ನು ಸಾಧಿಸಿಕೊಂಡು ಆ ಜ್ಞಾನವು ಸರ್ವರಿಗೂ ಪ್ರಾಪ್ತವಾಗಲೆಂಬ ಕೃಪಾವಿಶೇಷ ದಿಂದ ಅನಂತ ಶಾಸ್ತ್ರಗಳನ್ನು ರಚಿಸಿ ಮನುಷ್ಯ ಸಮಾಜದ ಮುಂದಿರಿಸಿದ್ದಾರೆ. ಅವುಗಳ ಸ್ವಾಧ್ಯಾಯ ಹಾಗೂ ಚಿಂತನೆಗಳನ್ನು ಮಾಡಿದಾಗ ಅವರು ತಲುಪಿದ ಸ್ಥಿತಿಯನ್ನು ಸರ್ವರೂ ಪಡೆಯಲು ಸಾಧ್ಯವಾಗುವುದು. ಈ ಮಾರ್ಗದಲ್ಲಿ ಆಲಸದೇ ಸದಾ ಪ್ರಯತ್ನ ಶೀಲನಾಗಿರಬೇಕು. ಅಂತೆಯೇ ಶ್ರುತಿಮಾತೆಯು ''ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ'' ಎಂಬುದಾಗಿ ಉಪದೇಶಿಸಿದ್ದಾಳೆ. ಪ್ರಮಾದವೆಂದರೆ ಆಲಸ್ಯ ವೆಂದರ್ಥ. ಯಾವುದಾದರೊಂದು ನಿಯಮವನ್ನು ಮನುಷ್ಯನು ಹಿಡಿದಾಗ ಕೆಲವೊಂದು ಸಂದರ್ಭಗಳಲ್ಲಿ ಆ ನಿಯಮದಿಂದ ಚ್ಯುತವಾಗುವ ಪ್ರಸಂಗಗಳು ಬರುವುದುಂಟು. ಆದರೂ ಆ ನಿಯಮವನ್ನು ತಪ್ಪಿಸಬಾರದೆಂಬುದು ಶಾಸ್ತ್ರದ ಆದೇಶವಾಗಿದೆ. ಒಮ್ಮೆ ನಿಯಮವನ್ನು ತಪ್ಪಿಸುವ ಪರಿಪಾಠವಿದ್ದರೆ ಅದು ಹಾಗೆ ತಪ್ಪುತ್ತಲೇ ಹೋಗುವುದು. ನಮ್ಮ ದೈನಂದಿನ ಜೀವನದಲ್ಲಿ ಉಳಿದೆಲ್ಲ ವ್ಯವಹಾರಗಳಿಗೆ ಸಮಯವನ್ನು ಕಲ್ಪಿಸಿ ಕೊಡುವಂತೆ ಸ್ವಾಧ್ಯಾಯ ಪ್ರವಚನಗಳಿಗೂ ಸಹ ಸಮಯ ನಿರ್ಧಾರ ಮಾಡಿಕೊಂಡಿರ ಬೇಕು. ತಾನೋರ್ವನೇ ಕುಳಿತು ಶಾಸ್ತ್ರ ಗ್ರಂಥಗಳನ್ನು ಅಭ್ಯಸಿಸುತ್ತಿದ್ದರೆ ಅದಕ್ಕೆ ಸ್ವಾಧ್ಯಾಯವೆನ್ನುತ್ತಾರೆ. ಇನ್ನು ತಾನು ತಿಳಿದುಕೊಂಡ ಆ ತತ್ವವನ್ನು ಅನ್ಯರಿಗೆ ಬೋಧಿಸುವುದಕ್ಕೆ ಪ್ರಚನವೆಂಬುದಾಗಿ ಕರೆಯುತ್ತಾರೆ.

ಪ್ರತಿನಿತ್ಯದ ಆಹಾರ ಸೇವನೆಯು ದೈಹಿಕ ಬಲವರ್ಧನೆಗೆ ಕಾರಣವಾದಂತೆ ಸ್ವಾಧ್ಯಾಯ ಪ್ರವಚನಗಳಿಂದ ದೊರೆಯುವ ಅನುಭವದಡಿಗೆಯು ಮನುಷ್ಯನ ಮಾನಸಿಕ ಹಾಗೂ ಬೌದ್ಧಿಕ ಸಾತ್ವಿಕ ಬಲವರ್ಧನೆಗೆ ಕಾರಣವಾಗುತ್ತದೆ. ಒಲೆಯಲ್ಲಿಟ್ಟ ಅಡಿಗೆಯನ್ನು ಉಣ್ಣುವವರು ಕೋಟಿ–ಕೋಟಿ ಜನ ಸಿಗಬಹುದು. ಆದರೆ ತಲೆಯಲ್ಲಿಟ್ಟ ಅನುಭವದಡಿಗೆಯನ್ನು ಉಣ್ಣುವವರು ವಿರಳವೆಂದು ತಿಳಿದೇ ಶಾಸ್ತ್ರವು ಸ್ವಾಧ್ಯಾಯ ಪ್ರವಚನಕ್ಕಾಗಿ ಆದೇಶ ಮಾಡಿದೆ. ಪ್ರಪಂಚದಲ್ಲಿ ವಿದ್ಯೆಗಳು ಅನೇಕವಾಗಿವೆ. ಉಳಿದೆಲ್ಲ ವಿದ್ಯೆಗಳು ಭುಕ್ತಿಯ ಸಾಧನಗಳಾದರೆ ಅಧ್ಯಾತ್ಮ ವಿದ್ಯೆಯೇ ಪರಮುಕ್ತಿಗೆ ಸಾಧನ ವಾದುದು. ಅಂತೆಯೇ ಶ್ರುತಿಯು ''ಸಾ ವಿದ್ಯಾ ಯಾ ವಿಮುಕ್ತಯೇ'' ಎಂಬುದಾಗಿ ಸಾರಿದೆ. ಅಂದರೆ ಮುಕ್ತಿಗೆ ಸಾಧನವಾದ ವಿದ್ಯೆಯೇ ವಿದ್ಯೆಯು ಉಳಿದೆಲ್ಲವುಗಳು ಅವಿದ್ಯೆಗಳೇ ಆಗಿವೆ. ಮುಕ್ತಿಗೆ ಸಾಧನವಾದ ವಿದ್ಯೆಯ ಮಹತಿಯನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸಹ–

ಸೈಷಾ ವಿದ್ಯಾ ಪರಾ ಜ್ಞೇಯಾ ಸತ್ತಾನಂದಪ್ರಕಾಶಿನೀ ।
ಮುಕ್ತಿರಿತ್ಯುಚ್ಯತೇ ಸದ್ಭಿರ್ಜಗನ್ಮೋಹಸವರ್ತಿನೀ ॥ (ಸಿ. ಶಿ. ೧೪–೪೩)

ಈ ರೀತಿಯಾಗಿ ಪ್ರಸ್ತಾಪಿಸಿದ್ದಾರೆ. ಸಚ್ಚಿದಾನಂದ ಸ್ವರೂಪವನ್ನು ಪ್ರಕಾಶಗೊಳಿಸುವ ವಿದ್ಯೆಯೇ ಪರಾವಿದ್ಯೆಯು. ಇದರಿಂದಲೇ ಜಗತ್ತಿನಲ್ಲಿಯ ಭೇದ ಭ್ರಾಂತಿಯು

ದೂರವಾಗುವುದು. ಈ ವಿದ್ಯೆಯಿಂದಲೇ ಪರತರ ಮುಕ್ತಿಯು ಪ್ರಾಪ್ತವಾಗುವುದು. ಈ ವಿದ್ಯೆಯೇ ನಿಜವಾದ ವಿದ್ಯೆಯು. ಇದನ್ನು ಪಡೆದವನ ಜನ್ಮವೇ ಪರಮಪಾವನವು. ಆತ್ಮಜ್ಞಾನಕ್ಕೆ ಸರಿಸಾಟಿಯಾಗುವ ಪವಿತ್ರವಾದ ಬೇರೊಂದು ವಸ್ತುವಿಲ್ಲ. ನಿಷ್ಕಲ ಮತ್ತು ನಿರಂಜನವಾದ ಪರಮತತ್ತ್ವವನ್ನು ಪ್ರತಿಪಾದಿಸಿರುವುದರಿಂದಲೇ ಈ ವಿದ್ಯೆಗೆ ಇಷ್ಟೊಂದು ಪಾವಿತ್ರ್ಯತೆಯು ಪ್ರಾಪ್ತವಾಗುತ್ತದೆ. ಈ ಪಾವನವಾದ ವಿದ್ಯೆಯನ್ನು ಪಡೆದವರೆಲ್ಲರೂ ಪಾವನರೇ. ಈ ವಿದ್ಯೆಯ ಬಲದಿಂದಾಗಿ ಸಾಧಕನು ಸರ್ವ ಬಂಧನಗಳಿಂದ ಮುಕ್ತನಾಗಿ ಪರಮ ಕೈವಲ್ಯವನ್ನು ಪ್ರಾಪ್ತಮಾಡಿಕೊಳ್ಳುವನು. ಈ ಪರಮ ಕೈವಲ್ಯ ಸ್ಥಿತಿಯೇ ಐಕ್ಯ ಸ್ಥಿತಿಯು. ಇದುವೇ ಅಂಗಷಟಸ್ಥಲದಲ್ಲಿಯ ಕೊನೆಯದಾದ ಸ್ಥಿತಿಯು. ಈ ಸ್ಥಿತಿಯನ್ನು ಪಡೆದಾಗ ಅಂಗನು ಲಿಂಗನಾಗಿ, ಜೀವನು ಶಿವನಾಗಿ ಮತ್ತು ಭಕ್ತನು ಭಗವಂತನಾಗಿ ಮಾರ್ಪಡುತ್ತಾನೆ.

ವೀರಶೈವ ಸಿದ್ಧಾಂತದ ಪ್ರಕಾರ ಬಂಧ ಹಾಗೂ ಮುಕ್ತಿಗಳೆಂದರೆ ಶಕ್ತಿಯ ಸಂಕೋಚ–ವಿಕಾಸ ರೂಪಗಳಾಗಿವೆ. ಶಕ್ತಿಯ ಸಂಕೋಚದಿಂದ ಅಂಗನು ಬಂಧನಕ್ಕೊಳಗಾಗುತ್ತಾನೆ. ಅವನಲ್ಲಿಯ ಸಂಕುಚಿತವಾದ ಶಕ್ತಿಯು ಕ್ರಮಶಃ ವಿಕಾಸಗೊಂಡಾಗ ಅದರಿಂದಲೇ ಆತನು ಲಿಂಗಾಂಗ ಸಾಮರಸ್ಯರೂಪವಾದ ಪರಮ ಕೈವಲ್ಯವನ್ನು ಪಡೆಯುವನು. ಇಲ್ಲಿಯ ಷಟ್‌ಸ್ಥಲ ಸೋಪಾನದಲ್ಲಿ ಕ್ರಮಶಃ ಭಕ್ತಿಯ ವಿಕಾಸದಿಂದಾಗಿ ಸಾಧಕನ ಶಕ್ತಿಯ ವಿಕಾಸಸ್ವರೂಪವು ನಿರೂಪಿಸಲ್ಪಟ್ಟಿದೆ. ಶ್ರದ್ಧಾ ಭಕ್ತಿ ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ ಮತ್ತು ಸಮರಸ ಭಕ್ತಿಗಳೆಂಬವುಗಳೇ ಭಕ್ತಿಯ ವಿಕಾಸದ ಸೋಪಾನಗಳಾಗಿವೆ. ಸಾಧಕನು ಕ್ರಮವಾಗಿ ಈ ಭಕ್ತಿಯ ಮೂಲಕವಾಗಿ ಕ್ರಮಶಃ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂಬ ಸ್ಥಿತಿಗಳನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ. ಈ ಪರಂಪರೆಯ ಚರಮ ಸ್ಥಿತಿಯಲ್ಲಿ ಸಾಮರಸ್ಯಾತ್ಮಕವಾದ ಭಕ್ತಿಯಿಂದ ಐಕ್ಯಸ್ಥಿತಿಯನ್ನು ಪಡೆದು ಶಿವಯೋಗಿಯು ಸರ್ವಬಂಧನಗಳಿಂದ ನಿರ್ಮುಕ್ತನಾಗಿ ಪರಮಕೈವಲ್ಯವನ್ನು ಪಡೆಯುವನು ಎಂಬುದಾಗಿ ಐಕ್ಯಸ್ಥಲದ ವಿಷಯವನ್ನು ಪ್ರತಿಪಾದಿಸಿ ಈ ಸ್ಥಲದ ಉಪಸಂಹಾರವನ್ನು–

ಭಕ್ತಾದಿ ನಾಮಾರ್ಪಪರ ಧರ್ಮಯೋಗಾತ್
ಪ್ರಾಪ್ತೈಕಭಾವಃ ಪರಮಾದ್ಭುತೇನ ।
ಶಿವೇನ ಚಿದ್ವ್ಯೋಮಮಯೇನ ಸಾಕ್ಷಾತ್
ಮೋಕ್ಷಶ್ರಿಯೋ ಭಾಜನತಾಮುಪೈತಿ ॥ (ಸಿ. ಶಿ. ೧೪–೪೪)

ಈ ರೀತಿ ಮಾಡಿದ್ದಾರೆ. ಇದರ ತಾತ್ಪರ್ಯವೇನೆಂದರೆ, ಈ ಹಿಂದೆ ಹೇಳಲ್ಪಟ್ಟ ಭಕ್ತಾದಿ ಷಟ್‌ಸ್ಥಲಗಳ ಅವಾಂತರಗಳಾದ ನಾಲ್ವತ್ತಾಲ್ಕು ಸ್ಥಲಗಳಲ್ಲಿ ಹೇಳಲ್ಪಟ್ಟಿರುವ ಸದಾಚಾರಗಳನ್ನು ಅನುಷ್ಠಾನಗೈಯುವುದರಿಂದ ಹೃದಯಕಮಲ ಮಧ್ಯದಲ್ಲಿರುವ ಜ್ಞಾನಾಕಾಶ ಸ್ವರೂಪವೂ, ಪರಮಾಶ್ಚರ್ಯರೂಪವೂ ಆಗಿರುವ ಮಹಾಲಿಂಗದೊಡನೆ ಈ ಪೂರ್ವದಲ್ಲಿ ಹೇಳಿದ ರೀತಿಯಿಂದ ಸಮಾನ ಸಮರಸೈಕ್ಯವನ್ನು ಹೊಂದಿದ ಆ ಶಿವಯೋಗಿಯು ಪರಮ ಮೋಕ್ಷಲಕ್ಷ್ಮೀಯನ್ನು ಪಡೆದು ಅಚ್ಛಸುಖಿಯಾಗಿರುತ್ತಾನೆ–

ಎಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯಮಹರ್ಷಿಗೆ ಬೋಧಿಸಿದರೆಂಬಲ್ಲಿಗೆ ಸಹಭೋಜನಸ್ಥಲವು ಪೂರ್ಣವಾದುದು.

ಐಕ್ಯಸ್ಥಲದಲ್ಲಿಯ ಐಕ್ಯಸ್ಥಲ, ಆಚಾರಸಂಪತ್ತಿಸ್ಥಲ, ಏಕಭಾಜನಸ್ಥಲ ಮತ್ತು ಸಹಭೋಜನಸ್ಥಲಗಳೆಂಬ ನಾಲ್ಕು ಅವಾಂತರಸ್ಥಲಗಳನ್ನು ವಿವರಿಸಿದ ಶ್ರೀ ಸಿದ್ಧಾಂತ ಶಿಖಾಮಣಿಯ ಹದಿನಾಲ್ಕನೆಯ ಪರಿಚ್ಛೇದವು ಪೂರ್ಣವಾದುದು. ಐಕ್ಯ ಸ್ಥಿತಿಯನ್ನು ಪಡೆದಾಗ ಅನೇಕ ಜನ್ಮ ಜನ್ಮಾಂತರಗಳಿಂದ ಸಾಗಿ ಬಂದ ಪ್ರವಾಸವು ಪೂರ್ಣವಾಗಿ ಇನ್ನೆಲ್ಲಿಗೂ ಹೋಗುವ, ಬರುವ ವಿಚಾರವಿಲ್ಲದೆ ಶಿವಯೋಗಿಯು ಅಂತಸ್ಸುಖಿಯಾಗಿ ಅನಂತಾನಂದವನ್ನು ಅನುಭವಿಸುತ್ತಾನೆ. ಇಂತಹ ಸ್ವರೂಪ ಸ್ಥಿತಿಯು ಸರ್ವರಿಗೂ ಪ್ರಾಪ್ತವಾಗಲೆಂಬುದಾಗಿ ಅನುಗ್ರಹಿಸಿ ಈ ಐಕ್ಯಸ್ಥಲದ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ. ೨೪ ಜುಲೈ, ೧೯೯೨
(ಸ್ಥಾನ ಶಿವಾನುಭವ ಮಂಗಲ ಭವನ, ಸೋಲಾಪೂರ)

ಇಂತು ಶ್ರೀ ಸಿದ್ಧಾಂತ ಶಿಖಾಮಣಿಯ ೧೪ನೇ ಪರಿಚ್ಛೇದವು ಪರಿಪೂರ್ಣವಾದುದು.



ಅನುಬಂಧ-೧

## ಪ್ರಕ್ಷಿಪ್ತ ಶ್ಲೋಕಗಳು

ಶಂಭೋರಾಹ್ವಾನಸಂತೋಷಸಂಭ್ರಮೇಣೈವ ದಾರುಕಂ ।
ಉಲ್ಲಂಘ್ಯ ಪಾರ್ಶ್ವಮಗಮಲ್ಲೋಕನಾಥಸ್ಯ ರೇಣುಕಃ ॥ ೧ ॥

ತಮಾಲೋಕ್ಯ ವಿಭುಸ್ತತ್ರ ಸಮುಲ್ಲಂಘಿತದಾರುಕಂ ।
ಮಹಾತ್ಮ್ಯಂ ನಿಜಭಕ್ತಾನಾಂ ದ್ಯೋತಯನ್ನಿದಮಬ್ರವೀತ್ ॥ ೨ ॥

ರೇ ರೇ ರೇಣುಕ ದುರ್ಬುದ್ಧೇ ಕಥಮೇಷ ತ್ವಯಾಽಧುನಾ ।
ಉಲ್ಲಂಘಿತಃ ಸಭಾಮಧ್ಯೇ ಮಮ ಭಕ್ತೋ ಹಿ ದಾರುಕಃ ॥ ೩ ॥

ಲಂಘನಂ ಮಮ ಭಕ್ತಾನಾಂ ಪರಮಾನರ್ಥಕಾರಣಂ ।
ಆಯುಃ ಶ್ರಿಯಂ ಕುಲಂ ಕೀರ್ತಿಂ ನಿಹಂತಿ ಹಿ ಶರೀರಿಣಾಂ ॥ ೪ ॥

ಮಮ ಭಕ್ತಮವಜ್ಞಾಯ ಮಾರ್ಕಂಡೇಯಂ ಪುರಾ ಯಮಃ
ಮತ್ಪಾದತಾಡನಾದಾಸೀತ್ಸ್ಮರಣೀಯಕಲೇವರಃ ॥ ೫ ॥

ಭೃಗೋಶ್ಚ ಶಂಕುಕರ್ಣಸ್ಯ ಮಮ ಭಕ್ತಿಮತೋಸ್ತಯೋಃ ।
ಕೃತ್ವಾಽನಿಷ್ಟಮಭೂದ್ವಿಷ್ಣುರ್ವಿಕೇಶೋ ದಶಯೋನಿಭಾಕ್ ॥ ೬ ॥

ಮದ್ಭಕ್ತೇನ ದಧೀಚೇನ ಕೃತ್ವಾ ಯುದ್ಧಂ ಜನಾರ್ದನಃ ।
ಭಗ್ನ ಚಕ್ರಾಯುದಃ ಪೂರ್ವಂ ಪರಾಭವಮುಪಾಗಮತ್ ॥ ೭ ॥

ಕೃತಾಶ್ವಮೇಧೋ ದಕ್ಷೋಽಪಿ ಮದ್ಭಕ್ತಾಂಶ್ಚ ಗಣೇಶ್ವರಾನ್ ।
ಅವಮತ್ಯ ಸಭಾಮಧ್ಯೇ ಮೇಷವಕ್ತ್ರೋಽಭವತ್ಪುರಾ ॥ ೮ ॥

ಶ್ವೇತಸ್ಯ ಮಮ ಭಕ್ತಸ್ಯ ದುರತಿಕ್ರಮತೇಜಸಃ ।
ಔದಾಸೀನ್ಯೇನ ಕಾಲೋಽಪಿ ಮಯಾ ದಗ್ಧಃ ಪುರಾಽಭವತ್ ॥ ೯ ॥

ಏವಮನ್ಯೇಽಪಿ ಬಹವೋ ಮದ್ಭಕ್ತಾನಾಮತಿಕ್ರಮಾತ್ ।
ಪರಿಭೂತಾ ಹತಾಶ್ಚಾಸನ್ ಭಕ್ತಾಮೇ ದುರತಿಕ್ರಮಾಃ ॥ ೧೦ ॥

ಅವಿಚಾರೇಣ ಮದ್ಭಕ್ತೋ ಲಂಘಿತೋ ದಾರುಕಸ್ತ್ವಯಾ ।
ಏಷ ತ್ವಂ ರೇಣುಕಾನೇನ ಜನ್ಮವಾನ್‌ಭವ ಭೂತಲೇ ॥ ೧೧ ॥

ಇತ್ಯುಕ್ತಃ ಪರಮೇಶೇನ ಭಕ್ತಮಾಹಾತ್ಮ್ಯಶಂಸಿನಾ ।
ಪ್ರಾರ್ಥಯಾಮಾಸ ದೇವೇಶಂ ಪ್ರಣಿಪತ್ಯ ಸ ರೇಣುಕಃ ॥ ೧೨ ॥

ಮಾನುಷೀಂ ಯೋನಿಮಾಸಾದ್ಯ ಮಹಾದುಃಖವಿವರ್ಧಿನೀಂ ।
ಜಾತ್ಯಾಯುರ್ಭೋಗವೈಷಮ್ಯಹೇತುಕರ್ಮೋಪಪಾದಿನೀಂ ॥ ೧೩ ॥

ಸಮಸ್ತದೇವಕೈಂಕರ್ಯಕಾರ್ಪಣ್ಯಪ್ರಸವಸ್ಥಲೀಂ ।
ಮಹಾತಾಪತ್ರಯೋಪೇತಾಂ ವರ್ಣಾಶ್ರಮನಿಯಂತ್ರಿತಾಂ ॥ ೧೪ ॥

ವಿಹಾಯ ತ್ವತ್ಪದಾಂಭೋಜಸೇವಾಂ ಕಿಂ ವಾ ವಸಾಮ್ಯಹಂ ? ।
ಯಥಾಮೇ ಮಾನುಷೋ ಭಾವೋ ನ ಭವೇತ್ ಕ್ಷಿತಿಮಂಡಲೇ ।
ತಥಾ ಪ್ರಸಾದಂ ದೇವೇಶ ವಿದೇಹಿ ಕರುಣಾನಿಧೇ ॥ ೧೫ ॥

ಇತಿ ಸಂಪ್ರಾರ್ಥಿತೋ ದೇವೋ ರೇಣುಕೇನ ಮಹೇಶ್ವರಃ ।
ಮಾ ಭೈಷೀರ್ಮಮ ಭಕ್ತಾನಾಂ ಕುತೋ ಭೀತಿರಿಹೇಷ್ಯತಿ ? ॥ ೧೬ ॥

■■

# ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ ಸಂಪುಟ—೧
## ಶ್ಲೋಕಾರ್ಧಗಳ ಅಕಾರಾದಿ ಪಟ್ಟಿ

೦೦

## ಅಂಗಸ್ಥಲಗಳಿಂದ ಲಿಂಗಸ್ಥಲಗಳೆಡೆಗೆ............!

''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ''ಯ ಮೊದಲ ಸಂಪುಟದಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರು ರಚಿಸಿದ, ವೀರಶೈವ ಧರ್ಮದ ಆಧಾರಗ್ರಂಥವೆನಿಸಿದ 'ಸಿದ್ಧಾಂತ ಶಿಖಾಮಣಿ'ಯ ಸಮಗ್ರ ಪರಿಚಯವಡಗಿದೆ. ವಿದ್ವತ್‌ಪೂರ್ಣ ಉಪೋದ್ಘಾತ ಹಾಗೂ ಪೂರ್ವಪೀಠಿಕಾ ಪ್ರಕರಣವನ್ನು ಅವಲೋಕಿಸಿದ ಸಹೃದಯೀ ಓದುಗರಿಗೆ ಇದು ಮನವರಿಕೆಯಾಗಿದೆ.

'ಸಿದ್ಧಾಂತ ಶಿಖಾಮಣಿ'ಯಲ್ಲಿ ನಿರೂಪಿತ ನೂರೊಂದು ಸ್ಥಲಗಳ ಪರಿಪೂರ್ಣ ಪರಿಚಯವನ್ನು ಸಿದ್ಧಾಂತಾಸಕ್ತ ಕನ್ನಡಿಗರಿಗೆ ಮಾಡಿ ಕೊಡುವ ಸದುದ್ದೇಶದಿಂದ ಶ್ರೀಮತ್ ಕಾಶೀಜಗದ್ಗುರುಗಳವರು ಅಲ್ಲಲ್ಲಿ ಧರ್ಮಸಭೆ, ಸಮ್ಮೇಲನ ಗಳಲ್ಲಿ ದಯಪಾಲಿಸಿದ ಆಶೀರ್ವಚನಗಳೇ ಇಲ್ಲಿ ಸಂಕಲನ ಗೊಂಡಿವೆ. ಮೊದಲ ಸಂಪುಟವು ಜೀವನು ಶಿವನಾಗುವ ಬಗೆಯನ್ನು ಒಳಗೊಂಡ ಅಂಗಸ್ಥಲದ ಅವಾಂತರ ಸ್ಥಲಗಳನ್ನು (೪೪ ಸ್ಥಲಗಳು) ಒಳಗೊಂಡುದು ದನ್ನು ಜಿಜ್ಞಾಸು ಓದುಗರು ಓದಿ ಆನಂದಿಸಿದ್ದೀರಿ. ಮುಂದಿನ ಸಂಪುಟವನ್ನು ಈಗ ಕೈಗೆತ್ತಿಕೊಳ್ಳಿ. ಅಂಗಾಂಗ ಸಾಮರಸ್ಯ ಹೊಂದುವ ಪರಿಯನ್ನು ಪರಿಶೀಲಿಸಿ ಆನಂದಿಸಿ.

ಸಂಪುಟ ೨ರಲ್ಲಿ ಲಿಂಗಸ್ಥಲದ ಐವತ್ತೇಳು ಅವಾಂತರ ಸ್ಥಲಗಳ ಸೋದಾಹರಣ ವಿವರಣೆ ನೀಡಿದುದು ಶ್ರೀ ಕಾಶೀ ಜಗದ್ಗುರು ಮಹಾ ಸನ್ನಿಧಿಯವರ ವಿದ್ವತ್ತಿಗೆ ಹಿಡಿದ ಕನ್ನಡಿ ಯಾಗಿದೆ.

ಅ. ಸಿ. ಹಿರೇಮಠ

# ಅಧ್ಯಾತ್ಮಿಕ ಐಸಿರಿ

ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತ "ಶ್ರೀ ಸಿದ್ಧಾಂತ ಶಿಖಾಮಣಿ"ಯು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದ ಸಾರಸರ್ವಸ್ವವನ್ನು ಒಳಗೊಂಡಿರುವ ವೀರಶೈವ ಸಿದ್ಧಾಂತ ಗ್ರಂಥವಾಗಿದೆ. ಸಂಸ್ಕೃತ ಮೂಲದ ಈ ಕೃತಿಯ ಸಮಗ್ರ ಪರಿಚಯವನ್ನು ಈ ಪ್ರವಚನ ಪ್ರಭೆಯು ಜನಸಾಮಾನ್ಯರಿಗೆ ಮಾಡಿಕೊಡುತ್ತದೆ. "ಜ್ಞಾನನಿಧಿ" ಎನಿಸಿದ ಶ್ರೀಮತ್ ಕಾಶೀ ಜ್ಞಾನ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ಮೂವತ್ತು ವರ್ಷಗಳ ಪರ್ಯಂತ "ಶ್ರೀ ಸಿದ್ಧಾಂತ ಶಿಖಾಮಣಿ"ಯ ಆಮೂಲಾಗ್ರ ಅಧ್ಯಯನ, ಅಧ್ಯಾಪನ, ಸಂಶೋಧನ ಹಾಗೂ ದೇಶದ ಉದ್ದಗಲಕ್ಕೆ ಪ್ರವಚನಗೈದು ಅದರ ಮೂರ್ತಸ್ವರೂಪವನ್ನು ಈ ಕೃತಿಗಳ ಮೂಲಕ ಜ್ಞಾನಪಿಪಾಸುಗಳಿಗೆ ಆಶೀರ್ವದಿಸಿದ್ದಾರೆ. ಸಂದರ್ಭೋಚಿತವಾದ ಯುಕ್ತಿ, ಪ್ರಮಾಣ ಮತ್ತು ಪ್ರಸಂಗಗಳನ್ನು ಹಾಗೂ ವರ್ಣರಂಜಿತ ದೃಷ್ಟಾಂತಗಳನ್ನು ನೀಡುವ ಮೂಲಕ ನಾಡಿನ ಪಂಡಿತ ಪಾಮರರೀರ್ವರು ಮೆಚ್ಚಿ ತಲೆದೂಗುವಂತೆ ಮಾಡಿದ್ದಾರೆ.

ದ್ವೈತ–ಅದ್ವೈತಗಳ ಸಮನ್ವಯ ಸಿದ್ಧಾಂತವು ಈ ಗ್ರಂಥದ ಮೂಲಕ ತನ್ನ ಪ್ರಭಾವಲಯವನ್ನು ಹರಡಿದೆ. ಶ್ರೀ ಶಿವಯೋಗಿ ಶಿವಾಚಾರ್ಯರು ನೂರೊಂದು ಸ್ಥಲಗಳನ್ನು ಮನೋವೈಜ್ಞಾನಿಕ ನೆಲೆಗಟ್ಟಿನಲ್ಲಿ ನಿರೂಪಿಸಿದ್ದಾರೆ. ಈ ನೂರೊಂದು ಸ್ಥಲಗಳು ಅಧ್ಯಾತ್ಮಿಕ ಸೋಪಾನಗಳಾಗಿದ್ದು ಒಂದೊಂದು ಮೆಟ್ಟಿಲುಗಳನ್ನು ಏರುತ್ತ ಸಾಧಕನು ಮನೋವಿಕಾಸವನ್ನು ಸಾಧಿಸಬಹುದಾಗಿದೆ. ವೀರಶೈವನ ಚರಮಗುರಿ "ಲಿಂಗಾಂಗ ಸಾಮರಸ್ಯ"ವನ್ನು ತನ್ಮೂಲಕ ಸುಲಭವಾಗಿ ಸಾಧಿಸಬಹುದು. ಶ್ರೀ ಕಾಶೀ ಜಗದ್ಗುರುಗಳವರ ನೇರ, ಸರಳ ಹಾಗೂ ಸುಂದರ ನಿರೂಪಣೆ ಮನೋಜ್ಞವಾಗಿದ್ದು ಓದುಗನನ್ನು ಸಹಜವಾಗಿ ಓದಿಸಿಕೊಂಡು ಹೋಗುತ್ತದೆ. ಅದುಕಾರಣ ಇದು ಸಂಗ್ರಹಯೋಗ್ಯವಾದ ಅಧ್ಯಾತ್ಮಿಕ ಕೃತಿಯಾಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯು ಮೂಲತಃ ಸಂಸ್ಕೃತ ಭಾಷೆಯಲ್ಲಿದೆ. ಅದನ್ನರಿಯದ ಜ್ಞಾನಪಿಪಾಸುಗಳಿಗೆ ಕಬ್ಬಿಣದ ಕಡಲೆಯಾಗಿದೆ. ಆದರೆ ಮಹಾಸನ್ನಿಧಿಯವರು ದೇಶದಾದ್ಯಂತ ಸಂಚರಿಸಿ ಪ್ರವಚನ–ಆಶೀರ್ವಚನ ನೀಡುವ ಮೂಲಕ ದ್ರಾಕ್ಷಾಫಲವನ್ನಾಗಿಸಿ ನಮಗೆ ಮಹದುಪಕಾರ ಮಾಡಿದ್ದಾರೆ. ಈ ಅಧ್ಯಾತ್ಮಿಕ ಐಸಿರಿ ನಮಗೆ ನಮ್ಮ ಅಧ್ಯಾತ್ಮಿಕ ಬದುಕನ್ನು ಬೆಳಗುವ ಮಹಾನ್ ಕೃತಿಯಾಗಿದೆ.

ರಾಣೆಬೆನ್ನೂರು

ಪ್ರೊ. ಅ. ಸಿ. ಹಿರೇಮಠ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸದಸ್ಯರು

ತ್ವರಿತ ಮುದ್ರಣ, ಗದಗ